# ಸಂಕ್ಷಿಪ್ತ ಕನ್ನಡ ನಿಘಂಟು

(ಕನ್ನಡ – ಕನ್ನಡ)



ಕನ್ನಡ ಸಾಹಿತ್ಯ ಪರಿಷತ್ತು

ಚಾಮರಾಜಪೇಟೆ :: ಬೆಂಗಳೂರು-೧೮

೧೯೭೫

# ಸಂಕ್ಷಿಪ್ತ ಕನ್ನಡ ನಿಘಂಟು

(ಕನ್ನಡ - ಕನ್ನಡ)




ಕನ್ನಡ ಸಾಹಿತ್ಯ ಪರಿಷತ್ತು

ಚಾಮರಾಜಪೇಟೆ · : : ಬೆಂಗಳೂರು-೧೮

೧೯೭೫

SAMKSHIPTA KANNADA NIGHANTU : Abridged Kannada Dictionary Published by Kannada Sahitya Parishat, Bangalore-18. Chief Editor Prof. G. Venkatasubbiah ; First Edition October 1975 ; PP. xvi + 954 ; Price Rs. 5/-

ಎಲ್ಲ ಹಕ್ಕುಗಳನ್ನೂ ಕಾದಿರಿಸಲಾಗಿದೆ

ಮೊದಲನೆಯ ಮುದ್ರಣ : ೧೯೭೫
೫೦,೦೦೦ ಪ್ರತಿಗಳು

ಬೆಲೆ : ಐದು ರೂಪಾಯಿ

ಮುದ್ರಕರು :
ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ
ಕನ್ನಡ ಸಾಹಿತ್ಯ ಪರಿಷತ್ತು, ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ
ಬೆಂಗಳೂರು–೧೮

# ಕನ್ನಡ ನಿಘಂಟು ಸಂಪಾದಕ ಸಮಿತಿ

(೧೯೭೫ನೆಯ ಆಗಸ್ಟ್ ೧ರಂದು ಇದ್ದ ಮೇರೆಗೆ)

**ಅಧ್ಯಕ್ಷರು**

ಪ್ರೊ. ಎಂ. ಮರಿಯಪ್ಪಭಟ್ಟ, ಎಂ.ಎ., ಎಲ್.ಟಿ.

**ಉಪಾಧ್ಯಕ್ಷರು ಮತ್ತು ಪ್ರಧಾನ ಸಂಪಾದಕರು**

ಪ್ರೊ. ಜಿ. ವೆಂಕಟಸುಬ್ಬಯ್ಯ, ಎಂ.ಎ., ಬಿ.ಟಿ.

**ಸದಸ್ಯರು**

ಪ್ರೊ. ಡಿ. ಜವರೇಗೌಡ, ಎಂ.ಎ.

ಪ್ರೊ. ಸ. ಸ. ಮಾಳವಾಡ, ಎಂ.ಎ.

ಶ್ರೀ ಎನ್. ಲಕ್ಷ್ಮೀನಾರಾಯಣರಾವ್, ಎಂ.ಎ.

ಡಾ. ಆರ್. ಸಿ. ಹಿರೇಮಠ, ಎಂ.ಎ., ಪಿಎಚ್.ಡಿ.

ಶ್ರೀ ಬಸವರಾಜ ಕಟ್ಟೀಮನಿ

ಡಾ. ಜಿ. ಎಸ್. ಗಾಯಿ, ಪಿಎಚ್.ಡಿ.

ಡಾ. ಆ. ನೇ. ಉಪಾಧ್ಯೆ, ಎಂ.ಎ., ಪಿಎಚ್.ಡಿ.

ಡಾ. ಹಾ. ಮಾ. ನಾಯಕ, ಎಂ ಎ., ಪಿಎಚ್.ಡಿ.

ಡಾ. ಜಿ. ಎಸ್. ಶಿವರುದ್ರಪ್ಪ, ಎಂ.ಎ., ಪಿಎಚ್.ಡಿ.

ಪದ್ಮಶ್ರೀ.ಡಾ. ಬಿ. ಶಿವಮೂರ್ತಿಶಾಸ್ತ್ರೀ

ಶ್ರೀ ವಿ. ಬಿ. ನಾಯಕ, ಎಂ.ಎ., ಎಲ್ಎಲ್.ಬಿ.,

ಶ್ರೀ ಸಿದ್ಧಯ್ಯ ಪುರಾಣಿಕ, ಐ.ಎ.ಎಸ್.

**ಪರಿಷತ್ತಿನ ಅಧಿಕಾರವರ್ಗ**

ಶ್ರೀ ಜಿ. ನಾರಾಯಣ

ಶ್ರೀ ಜಿ. ಕೆ. ಗುಂಡುರಾವ್

ಶ್ರೀ ವೆಂಕಟೇಶ ಸಾಂಗಲಿ

ಶ್ರೀ ಎನ್. ವರದರಾಜನ್, ಬಿ.ಇ.,ಎ.ಎಂ.ಐ.ಇ.,

ಪ್ರಧಾನ ಸಂಪಾದಕರು

**ಪ್ರೊ. ಜಿ. ವೆಂಕಟಸುಬ್ಬಯ್ಯ, ಎಂ.ಎ., ಬಿ.ಟಿ.**

ಉಪ ಸಂಪಾದಕರು

**ಹಿ. ಚಿ. ಶಾಂತವೀರಯ್ಯ, ಎಂ.ಎ., ಬಿ.ಇಡಿ.**

**ಆರ್. ವಿ. ಕುಲಕರ್ಣಿ, ಎಂ.ಎ., ಬಿ.ಇಡಿ.**

**ಟಿ. ಆರ್. ಮಹದೇವಯ್ಯ, ಎಂ.ಎ.**

ಸಹಾಯಕ ಸಂಪಾದಕರು

**ಮಂಜುಳಾರಾವ್, ಎಂ.ಎ.**

**ಬಿ. ಶಕುಂತಲ, ಎಂ.ಎ.**

**ಟಿ. ತಿಪ್ಪಯ್ಯ, ಎಂ.ಎ.**

# ಅರಿಕೆ

ರಾಜ್ಯಸರ್ಕಾರದ ಸಹಾಯದಿಂದ ಕನ್ನಡ ಸಾಹಿತ್ಯ ಪರಿಷತ್ತು ಒಂದು ದೊಡ್ಡ ಕನ್ನಡ–ಕನ್ನಡ ನಿಘಂಟನ್ನು ತಯಾರಿಸುತ್ತಿರುವುದು ಎಲ್ಲರಿಗೂ ತಿಳಿದ ವಿಷಯವಾಗಿದೆ. ಅದು ಗಾತ್ರದಲ್ಲಿಯೂ ಬೆಲೆಯಲ್ಲಿಯೂ ದೊಡ್ಡದಾಗಿದ್ದು ಜನಸಾಮಾನ್ಯರ ಕೈಗೆ ನಿಲುಕುವುದು ಕಷ್ಟವಾಗುವುದಲ್ಲದೆ, ಪೂರ್ಣವಾಗಿ ಪ್ರಕಟವಾಗಲು ಸಾಕಷ್ಟು ಕಾಲ ಹಿಡಿಯುತ್ತದೆ. ಆದ್ದರಿಂದ ಪರಿಷತ್ತು ತನ್ನ ತ್ರೈವಾರ್ಷಿಕ ಯೋಜನೆಯಲ್ಲಿ ವಿದ್ಯಾರ್ಥಿಗಳಿಗೂ ಶಾಲಾ ಉಪಾಧ್ಯಾಯರಿಗೂ ಮತ್ತು ಸಾಮಾನ್ಯ ಓದುಗರಿಗೂ ಉಪಯುಕ್ತವಾದ ಒಂದು ಸಂಕ್ಷಿಪ್ತ ನಿಘಂಟನ್ನು ಶೀಘ್ರವಾಗಿ ಪ್ರಕಟಿಸಲು ನಿರ್ಧಾರವನ್ನು ಕೈಗೊಂಡಿತು.

ಡೆಮ್ಮಿ ಅಷ್ಟದಳ ಆಕಾರದ ಸುಮಾರು ಒಂದುಸಾವಿರ ಪುಟದ ಸಂಕ್ಷಿಪ್ತ ನಿಘಂಟಿನಲ್ಲಿ ಸುಮಾರು ಒಂದು ಲಕ್ಷ ಶಬ್ದಗಳು ಇರಬೇಕೆಂದೂ ಪ್ರಥಮಮುದ್ರಣದಲ್ಲಿ ಐವತ್ತುಸಾವಿರ ಪ್ರತಿಗಳನ್ನು ಅಚ್ಚುಮಾಡಿಸಿ ಒಂದು ಪ್ರತಿಗೆ ಐದುರೂಪಾಯಿ ಬೆಲೆಯಿಟ್ಟು ಮಾರಾಟ ಮಾಡಬೇಕೆಂದೂ ನಿಶ್ಚಯಿಸಿ ಅದಕ್ಕಾಗಿ ಐದು ಲಕ್ಷ ರೂಪಾಯಿಗಳ ಒಂದು ಯೋಜನೆಯನ್ನು ಪರಿಷತ್ತು ತಯಾರಿಸಿತು. ಈ ಯೋಜನೆಯ ವೆಚ್ಚದ ಅರ್ಧ ಭಾಗದಷ್ಟು ಸಹಾಯಧನವನ್ನು ಪರಿಷತ್ತಿಗೆ ನೀಡಬೇಕೆಂದು ಪ್ರಾರ್ಥಿಸಿ ಇಡೀ ಯೋಜನೆಯನ್ನು ಸರ್ಕಾರಕ್ಕೆ ಕಳಿಸಿಕೊಡಲಾಯಿತು. ರಾಜ್ಯಸರ್ಕಾರವು ಈ ಯೋಜನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಎರಡೂವರೆ ಲಕ್ಷ ರೂಪಾಯಿಗಳ ಸಹಾಯವನ್ನು ನೀಡಿತು. ಸರ್ಕಾರದ ಈ ಉದಾರ ಸಹಾಯದಿಂದ ಪರಿಷತ್ತಿಗೆ ಧೈರ್ಯ ಬಂದು ಅದು ತನ್ನ ಇತರ ಸಂಪನ್ಮೂಲಗಳಿಂದ ಉಳಿದ ಎರಡೂವರೆ ಲಕ್ಷ ರೂಪಾಯಿಗಳನ್ನು ಈ ನಿಘಂಟು ಕಾರ್ಯಕ್ಕೆ ಮೀಸಲಿಟ್ಟು ಕಾರ್ಯವನ್ನು ಆರಂಭಿಸಿತು. ಆ ಸಂದರ್ಭದಲ್ಲಿ, ದೊಡ್ಡ ಕನ್ನಡ–ಕನ್ನಡ ನಿಘಂಟುಸಮಿತಿಯ ಸದಸ್ಯರು ಸಂಕ್ಷಿಪ್ತ ನಿಘಂಟಿನ ಕಾರ್ಯದಲ್ಲಿಯೂ ನೆರವಾಗಬೇಕೆಂದು ಅವರುಗಳನ್ನು ಪ್ರಾರ್ಥಿಸಿಕೊಳ್ಳಲಾಯಿತು. ಎಲ್ಲ ಸದಸ್ಯರೂ ಸಂತೋಷದಿಂದ ಇದಕ್ಕೆ ತಮ್ಮ ಒಪ್ಪಿಗೆ ನೀಡಿ, ಈ ಕಾರ್ಯದಲ್ಲಿ ನೆರವಾದರು.

ಆಗ ನಿಘಂಟುಸಮಿತಿಯ ಅಧ್ಯಕ್ಷರಾಗಿದ್ದ ಡಾ|| ಡಿ. ಎಲ್. ನರಸಿಂಹಾಚಾರ್ ಅವರು ಅನೇಕ ಉಪಯುಕ್ತ ಸಲಹೆಗಳನ್ನು ನೀಡಿದರು. ತರುವಾಯ ಅಧ್ಯಕ್ಷರಾಗಿ ಬಂದ ಪ್ರೊ|| ಕ. ವೆಂ. ರಾಘವಾಚಾರ್ ಅವರೂ ಸಂಪಾದಕರಾದ ಶ್ರೀ ಎನ್. ಬಸವಾರಾಧ್ಯರೂ ಸದಸ್ಯರ ಸಹಕಾರದಿಂದ ಸಂಕ್ಷಿಪ್ತ ನಿಘಂಟಿನ ಕರಡುಪ್ರತಿಯ ಕೆಲವು ಪುಟಗಳನ್ನು ಸಿದ್ಧಪಡಿಸಿಕೊಟ್ಟರು. ಅನಂತರ ಅಧ್ಯಕ್ಷರಾಗಿ ಬಂದ ಪ್ರೊ|| ಎಂ. ಮರಿಯಪ್ಪಭಟ್ಟರು ಈ ಕೆಲಸವನ್ನು ಮುಂದುವರಿಸಿದರು. ಸಮಿತಿಯ ಉಪಾಧ್ಯಕ್ಷರೂ ನಿಘಂಟಿನ ಪ್ರಧಾನಸಂಪಾದಕರೂ ಆದ ಪ್ರೊ|| ಜಿ. ವೆಂಕಟಸುಬ್ಬಯ್ಯನವರು ಉಳಿದ ಬಹುಪಾಲುಕಾರ್ಯವನ್ನು ಉಪಸಂಪಾದಕರ ಮತ್ತು ಸಹಾಯಕ ಸಂಪಾದಕರ ಸಹಕಾರದಿಂದ ಪೂರೈಸಿಕೊಟ್ಟರು. ಪ್ರೊ|| ಜಿ. ವೆಂಕಟಸುಬ್ಬಯ್ಯ

ಪ್ರೋತ್ಸಾಹವನ್ನೂ ನೀಡುತ್ತ ಬಂದಿದ್ದಾರೆ. ಇಲ್ಲದಿದ್ದರೆ ಈ ನಿಘಂಟು ಇಷ್ಟು ಬೇಗ ಸಿದ್ಧಗೊಳ್ಳುವುದು ಕಷ್ಟವಾಗುತ್ತಿತ್ತು.

ಇಲ್ಲಿ ಕೊಟ್ಟಿರುವ ಎಲ್ಲ ಶಬ್ದಗಳನ್ನೂ ಮುಖ್ಯಉಲ್ಲೇಖಗಳನ್ನಾಗಿಯೇ ಮಾಡಿದ್ದರೆ ಈ ನಿಘಂಟನ್ನು ಉಪಯೋಗಿಸುವವರಿಗೆ ಹೆಚ್ಚು ಸುಲಭವಾಗುತ್ತಿತ್ತು ಎಂಬುದೇನೋ ನಿಜ. ಆದರೆ ನಿಘಂಟಿನ ಗಾತ್ರವೂ ಬೆಲೆಯೂ ದುಪ್ಪಟ್ಟಾಗುತ್ತಿದ್ದುವು. ಈಗ ಅಳವಡಿಸಿರುವ ರೀತಿಯಲ್ಲಲ್ಲದೆ ಶಬ್ದಗಳನ್ನು ಬೇರೆಬೇರೆಯಾಗಿಯೇ ರೂಪಿಸಿದ್ದರೆ ಒಟ್ಟು ಸುಮಾರು ಒಂದು ಲಕ್ಷ ಉಲ್ಲೇಖಗಳು ಎಣಿಕೆಗೆ ಸಿಗುತ್ತಿದ್ದುವು. ಈಗ ಎಣಿಸಿದರೆ ೨೪೧೬೭ ಮುಖ್ಯಉಲ್ಲೇಖಗಳೂ ೧೧೧೫೧ ಸಮಾಸಪದಗಳೂ ಇವೆ. ಅಂದರೆ ಒಟ್ಟು ೩೫೩೧೮ ಶಬ್ದಗಳು ಇಲ್ಲಿ ಎಣಿಕೆಗೆ ಸಿಗುತ್ತವೆ ಎಂದಾಯಿತು. ಆಳವಾಗಿ ಪರಿಶೀಲಿಸಿದರೆ ಸುಮಾರು ಒಂದು ಲಕ್ಷ ಶಬ್ದಗಳು ಇಲ್ಲಿ ಅಳವಡಿಕೆಗೊಂಡಿವೆ. ನಿಘಂಟಿನ ಸಂಪೂರ್ಣ ಪ್ರಯೋಜನ ಹೊಂದುವವರು ಇದನ್ನು ನೆನಪಿನಲ್ಲಿಟ್ಟುಕೊಳ್ಳಬೇಕು.

ಈಗ ನಿಘಂಟು ಜನತೆಯ ಮುಂದೆ ಇದೆ. ಇದನ್ನು ಉಪಯೋಗಿಸುವುದಕ್ಕೆ ಮುಂಚೆ ಈ ನಿಘಂಟಿನ ನಿರ್ಮಾಣದಲ್ಲಿ ನಾವು ಅನುಸರಿಸಿರುವ ಕ್ರಮವನ್ನು ಕುರಿತು ಕೆಲವು ವಿವರಣೆಗಳನ್ನು ಕೊಡುವುದು ಉಚಿತವಾಗಿದೆ. ಈ ಮುಂದಿನ ಭಾಗವನ್ನು ಓದಿದ ಬಳಿಕ ಈ ನಿಘಂಟಿನ ಬಳಕೆ ಸುಲಭವೂ ಪ್ರಯೋಜಕವೂ ಆಗುತ್ತದೆ. ಜನಸಾಮಾನ್ಯರಾಗಲಿ ವಿದ್ಯಾರ್ಥಿಗಳಾಗಲಿ ಈ ಭಾಗವನ್ನು ಓದದೆ ಶಬ್ದಗಳಿಗೆ ಅರ್ಥವನ್ನು ಹುಡುಕಹೊರಟರೆ ಸಂಶಯಕ್ಕೆ ಈಡಾಗಬಹುದು. ಆದುದರಿಂದ ಪ್ರಾರಂಭದಲ್ಲಿ ಈ ಭಾಗವನ್ನು ಓದಬೇಕೆಂದು ಎಲ್ಲರಿಗೂ ಸೂಚಿಸಲಾಗಿದೆ. ಇದು ಅವರಿಗೆ ಮಾರ್ಗದರ್ಶಕವಾಗುತ್ತದೆ. ನಿಘಂಟನ್ನು ಉಪಯೋಗಿಸುವವರಿಗೆ ಬಹು ಮುಖ್ಯವಾಗಿ ಗೊತ್ತಿರಬೇಕಾದುವು ಈ ನಿಯಮಗಳು.

## ಈ ನಿಘಂಟನ್ನು ಸಿದ್ಧಪಡಿಸಿರುವ ಕ್ರಮ

೧. ಕರ್ನಾಟಕದಲ್ಲಿ ಜನರು ಮಾತನಾಡುವ ಹಾಗೂ ಬರೆಯುವ ಕನ್ನಡ ಭಾಷೆಯಲ್ಲಿ ಇತರ ಅನೇಕ ಭಾಷೆಯ ಶಬ್ದಗಳು ಬಂದು ಸೇರಿಕೊಂಡಿವೆ. ಅವುಗಳಿಂದ ಕನ್ನಡವು ಶಕ್ತಿಯುಕ್ತವಾಗಿರುವುದಲ್ಲದೆ ಆ ಶಬ್ದಗಳು ಅಚ್ಚಕನ್ನಡ ಶಬ್ದಗಳಷ್ಟೇ ಪ್ರಭಾವಶಾಲಿಯಾಗಿವೆ. ಅವುಗಳನ್ನೂ ಈ ನಿಘಂಟಿನಲ್ಲಿ ಸೇರಿಸಲಾಗಿದೆ.

ಉದಾ : ಹಿಂದಿ : ಅಮಾನಿ. ಪೋರ್ಚುಗೀಸ್ : ಅಲ್ಮೈರ.
ಇಂಗ್ಲಿಷ್ : ಬೀರು. ಮರಾಠಿ : ಉತಾವಳಿ ಇತ್ಯಾದಿ

೨. ಕನ್ನಡ ಕಾವ್ಯ ಪ್ರಯೋಗಗಳಲ್ಲಿ ಕಂಡುಬರುವ, ಹೆಚ್ಚು ಉಪಯೋಗದಲ್ಲಿರುವ ಗಿಡ, ಮರ, ಮೂಲಿಕೆಗಳ ಹೆಸರುಗಳನ್ನು ಈ ನಿಘಂಟಿನಲ್ಲಿ ಸೇರಿಸಲಾಗಿದೆ.

ಉದಾ : ಆಲ
ತೇಗು
ಮತ್ತಿ

೩. ಕನ್ನಡದೇಶದಲ್ಲಿ ಪ್ರಾದೇಶಿಕವಾಗಿ ಮಾತ್ರ ಉಪಯೋಗದಲ್ಲಿರುವ ಅನೇಕ ಶಬ್ದಗಳಿವೆ. ಇಂಥವು ಕೆಲವು ಕೋಶಗಳಲ್ಲಿ ಮಾತ್ರ ಸೇರಿಕೊಂಡಿವೆ. ಅವುಗಳನ್ನು ಈ ನಿಘಂಟಿನಲ್ಲಿ ಕೈಬಿಡಲಾಗಿದೆ. ದೇಶ್ಯ, ಅನ್ಯದೇಶ್ಯ, ಸಂಸ್ಕೃತ ಮುಂತಾಗಿ ವಿವಿಧ ಮೂಲವನ್ನು ಹೊಂದಿರುವ, ಆದರೆ ರೂಪಸಾಮ್ಯವಿರುವ ಶಬ್ದಗಳನ್ನು ಒಂದೇ ಮುಖ್ಯ ಉಲ್ಲೇಖವನ್ನಾಗಿ ಕೊಡಲಾಗಿದೆ.

ಉದಾ : ಕರಿ (ಕ್ರಿ). ೧. ಸುಟ್ಟು ಕರಿಕಾಗು ; ಸೀದುಹೋಗು. ೨. ಹುರಿ ; ಸುಡು. ೩. ಎಣ್ಣೆ ಅಥವಾ ತುಪ್ಪದಲ್ಲಿ ಬೇಯಿಸು. (ನಾ). ೪. ಕರಿಕು ; ಸೀದುಹೋಗುವಿಕೆ. ೫. ಕರಿಯ ಬಣ್ಣ ; ಕಪ್ಪು. ೬. ಅಶುಭ ; ಅಮಂಗಳ. ೭. ಸಸ್ಯಕ್ಕೆ ಬರುವ ಒಂದು ಬಗೆಯ ರೋಗ. ೮. ಆನೆ. ೯. ವಿಷ್ಣು.

ಚರ್ಚು (ಕ್ರಿ). ೧. ಮಗುವನ್ನು ಕಂಕುಳಲ್ಲಿ ಎತ್ತಿಕೊಳ್ಳು. (ನಾ). ೨. ಕ್ರಿಶ್ಚಿಯನ್ನರ ದೇವಾಲಯ.

೪. ಕನ್ನಡ ಗ್ರಂಥಗಳಲ್ಲಿ ಹೆಚ್ಚು ಬಳಕೆಯಲ್ಲಿರುವ ಮತ್ತು ಕೆಲವು ವೇಳೆ ವಿಶೇಷಾರ್ಥವಿರುವ ಸಂಸ್ಕೃತ ಶಬ್ದಗಳನ್ನು ಈ ನಿಘಂಟಿನಲ್ಲಿ ಕಾಣಬಹುದು. ಆದರೆ ಕೇವಲ ಪಾರಿಭಾಷಿಕ ಶಬ್ದಗಳನ್ನು ಇಲ್ಲಿ ಸೇರಿಸಿಲ್ಲ. ವ್ಯಾಕರಣ, ಅಲಂಕಾರ, ಸಂಗೀತ, ನಾಟ್ಯ ಮುಂತಾದ ಶಾಸ್ತ್ರಗಳಿಗೆ ಸಂಬಂಧಿಸಿದ ಶಬ್ದಗಳಿಗೆ ಇತರ ಅರ್ಥಗಳೂ ಇರುವುದಾದರೆ ಅಂಥ ಶಬ್ದಗಳನ್ನು ಸೇರಿಸಿಕೊಳ್ಳಲಾಗಿದೆ. ಅಲ್ಲದೆ ಪ್ರಸಿದ್ಧವಾಗಿರುವ, ಸಾಹಿತ್ಯದಲ್ಲಿ ಆಗಿಂದಾಗ ಉಪಯೋಗವಾಗುವ ಉಪಮೆ, ದೀಪಕ, ರೂಪಕ ಮುಂತಾದ ಶಬ್ದಗಳನ್ನು ಕೊಡಲಾಗಿದೆ.

೫. ಒಂದು ಶಬ್ದಕ್ಕೆ ಅನೇಕ ರೂಪಗಳಿರುವಾಗ ಶಿಷ್ಟರೂಪಗಳನ್ನು ಒಪ್ಪಿಕೊಂಡು ಅತಿ ಗ್ರಾಮ್ಯವಾದ ರೂಪಗಳನ್ನು ಬಿಡಲಾಗಿದೆ.

ಉದಾ : ಕುಳ್ಳು × = ಕುರುಳ್(ಳು)√
ನೆಳ್ಳು × = ನೆರಳ್(ಳು)√

೬. ಒಂದು ಶಬ್ದದ ಹೆಚ್ಚು ಪ್ರಚಲಿತವಾಗಿರುವ ರೂಪಕ್ಕೆ ಅರ್ಥವನ್ನು ಕೊಟ್ಟು ಓದುಗರಿಗೆ ಸೌಲಭ್ಯವನ್ನುಂಟುಮಾಡುವ ದೃಷ್ಟಿಯಿಂದ ಪರ್ಯಾಯಶಬ್ದಗಳಿಗೆ '=' ಚಿಹ್ನೆಯನ್ನು ಹಾಕಿ, ಆ ಎರಡು ರೂಪಗಳಿಗೂ ಭಾಷಾಶಾಸ್ತ್ರದೃಷ್ಟಿಯಿಂದ ಸಂಬಂಧವಿರುವುದನ್ನು ಸೂಚಿಸಲಾಗಿದೆ.

ಉದಾ : ಚುಚ್ಚು ೧. = ಚುರ್ಚು. ೨. ಎತ್ತಿಕಟ್ಟು ; ಪ್ರಚೋದಿಸು. ೩. ರಂಧ್ರಮಾಡು. (ನಾ). ೪. ಇರಿತ ; ತಿವಿತ. ೫. ಬಯ್ಗುಳು ; ನಿಂದೆ.

ಚುರ್ಚು (ಕ್ರಿ). ೧. (ಆಯುಧ, ಮುಳ್ಳು ಮೊದಲಾದುವುಗಳಿಂದ) ತಿವಿ, –ಚುಚ್ಚು. ೨. ಸುಡು ; ದಹಿಸು.

೭. ಒಂದು ಶಬ್ದಕ್ಕೆ ಅರ್ಥಗಳನ್ನು ಸೂಚಿಸುವಾಗ, ಕ್ರಿಯಾವಾಚಕ, ನಾಮವಾಚಕ, ಗುಣವಾಚಕ, ಸರ್ವನಾಮ, ಅವ್ಯಯ, ಪ್ರತ್ಯಯ–ಎಂಬ ಅನುಕ್ರಮವನ್ನು ಅನುಸರಿಸಲಾಗಿದೆ.

ಇಲ್ಲಿ ಊಜು, ಬೀೞ್, ಕೋೞಿ ಎಂಬುವೇ ಮೂಲರೂಪಗಳಾಗಿದ್ದರೂ ಈ ಸಮಾಸಗಳು ನಿರ್ಮಾಣವಾಗುವ ಹೊತ್ತಿಗೆ ಅವು ಸಾಮಾನ್ಯರೇಫದಿಂದ ಕೂಡಿದ್ದುವು, ೞಳಸಹಿತವಾಗಿದ್ದುವು ಎಂದರ್ಥ.

೧೨. ಕಿೞಿದು, ಪೊನ್, ಬಾನ್ ಮುಂತಾದ ಮೂಲಶಬ್ದಗಳಿಗೆ ಸಮಾಸದಲ್ಲಿ ಆದೇಶವಾಗಿ ಬರುವ ಕಿಱು, ಕಿಱು, ಪೊಂ, ಬಾಂ ಮುಂತಾದ ರೂಪಗಳು ಕನ್ನಡದಲ್ಲಿ ಸಹಜವಾಗಿ ಶಬ್ದಗಳಲ್ಲ. ಹಾಗಿದ್ದರೂ ಅನುಕೂಲತೆಯ ದೃಷ್ಟಿಯಿಂದ ಅವುಗಳಿಗೂ ಮುಖ್ಯಉಲ್ಲೇಖಗಳ ಸ್ಥಾನವನ್ನೇ ಕೊಟ್ಟು ಕೆಳಗೆ ಅಕಾರಾದಿಯಾಗಿ ಇತರ ಸಮಾಸಪದಗಳನ್ನು ಸೂಚಿಸಲಾಗಿದೆ.

ಉದಾ : ಪೊಂ (ನಾ). ಹೊನ್ನು ; ಬಂಗಾರ. ~ಬೆಸ = ಚಿನ್ನದ ಕೆಲಸ.

೧೩. ಕನ್ನಡದಲ್ಲಿ ಬಿಂದುಸಹಿತವಾಗಿಯೂ ಬಿಂದುರಹಿತವಾಗಿಯೂ ಇರುವ ಕೆಲವು ಶಬ್ದಗಳಿಗೆ ಸಮಾನವಾದ ಅರ್ಥ ಇರುವುದುಂಟು. ಆ ಬಗೆಯ ಶಬ್ದಗಳನ್ನು ಕೊಡುವಾಗ ಬಿಂದುವಿಗೆ ಕಂಸವನ್ನು ಹಾಕಿ ಎರಡನ್ನೂ ಒಂದೇ ಮುಖ್ಯಉಲ್ಲೇಖವನ್ನಾಗಿ ಮಾಡಲಾಗಿದೆ.

ಉದಾ : ನೂ(ಂ)ಕು
ಮಲ(ಂ)ಗು

ಮತ್ತೆ ಕೆಲವು ಸಂದರ್ಭಗಳಲ್ಲಿ ಬಿಂದುಸಹಿತವಾದ ಶಬ್ದಕ್ಕೂ ಬಿಂದುರಹಿತವಾದ ಶಬ್ದಕ್ಕೂ ಅರ್ಥವ್ಯತ್ಯಾಸವಿರುತ್ತದೆ. ಅಂಥವುಗಳನ್ನು ಬೇರೆಬೇರೆಯಾಗಿಯೇ ಕೊಡಲಾಗಿದೆ.

ಉದಾ : ಅಡಂಗು
ಅಡಗು

೧೪. ಸಮಾಸಪದಗಳನ್ನು ಕೊಡುವಾಗ ಕೇವಲ ಒಂದೇ ಅಕ್ಷರದಲ್ಲಿ ವ್ಯತ್ಯಾಸವಿರುವ ಸಮಾನಾರ್ಥಕ ರೂಪಗಳನ್ನು ಕಂಸದಲ್ಲಿ ಸೇರಿಸಿ ಒಟ್ಟಿಗೆ ಸೂಚಿಸಲಾಗಿದೆ.

ಉದಾ : ಬ್ರಹ್ಮ ~ಚರ್ಯ(ರ್ಯೆ).
ಮಂತಣ ~ಶಾ(ಸಾ)ಲೆ.

೧೫. ರ ಮತ್ತು ಱ : 'ಱ'ದಿಂದ ಕೂಡಿದ ಕನ್ನಡ ಪದಗಳು ಕಾಲಕ್ರಮದಲ್ಲಿ ಸರೇಫವಾಗಿವೆ. ಇಂಥ ಸಂದರ್ಭಗಳನ್ನು ಸೂಚಿಸುವುದಕ್ಕೆ 'ಱ' ದಿಂದ ಕೂಡಿದ ಶಬ್ದಗಳಿಗೆ ಮೂಲಾರ್ಥವನ್ನು ಕೊಟ್ಟಿದೆ. ಸಾಮಾನ್ಯರೇಫದ ಪದಗಳಿಗೆ ಬೇರೆ ಅರ್ಥಗಳಿದ್ದರೆ ಅವುಗಳನ್ನು ಪ್ರತ್ಯೇಕವಾಗಿ ಕೊಟ್ಟು '=' ಚಿಹ್ನೆಯ ಮೂಲಕ ಎರಡು ರೂಪಗಳಿಗೂ ಇರುವ ಭಾಷಾಸಂಬಂಧವನ್ನು ಓದುಗರ ಗಮನಕ್ಕೆ ತಂದಿದೆ. ಇಂಥ ಶಬ್ದಗಳ ಜೊತೆಯಲ್ಲೇ ಆದ ಸಮಾಸಪದಗಳನ್ನು ಕೂಡ ಆಯಾರೂಪಗಳ ಕೆಳಗೆ ಕೊಡಲಾಗಿದೆ.

ಉದಾ (i) : ನೆಱೆ (ಕ್ರಿ). ೧. ಗುಂಪುಸೇರು ; ಒಟ್ಟಾಗು. ೨. ಸಂಭೋಗಿಸು. ೩. ಕೂದಲು ಬೆಳ್ಳಗಾಗು. ೪. = ನೆಱೆ. (ನಾ). ೫. ಸಮೂಹ ; ಗುಂಪು. ೬. ಕೂದಲು ಬೆಳ್ಳಗಾಗುವಿಕೆ. ೭. ಸಮೀಪ ; ಅಕ್ಕಪಕ್ಕ. (ಗು). ೮. ಸಮೀಪದ. ~ಊ(ಯೂ,ವೂ)ರು = ಪಕ್ಕದ ಊರು.

ನೆಱೆ[೨](ರೆ) (ಕ್ರಿ). ೧. ಪೂರ್ಣವಾಗು ; ಪೂರ್ತಿಗೊಳ್ಳು. ೨. ಪ್ರಾಯಕ್ಕೆ ಬರು ; ಋತುಮತಿಯಾಗು. ೩. ಅಧಿಕವಾಗು ; ಹೆಚ್ಚಾಗು ; ಉಕ್ಕು. (ನಾ). ೪. ಮಹಾಪೂರ ; ತುಂಬುಪ್ರವಾಹ. ೫. ಪೂರ್ಣವಾದುದು. (ಅ). ೬. ಚೆನ್ನಾಗಿ ; ಪೂರ್ಣವಾಗಿ. ~ತಿ(ದಿ)ಂಗಳ್ = ಪೂರ್ಣಚಂದ್ರ; ಹುಣ್ಣಿಮೆಯ ಚಂದ್ರ.

ಸಾಮಾನ್ಯರೇಫದ ಮತ್ತು ಶಕಟರೇಫದ ಶಬ್ದಗಳಿಗೆ ಸಮಾನಾರ್ಥಗಳಿದ್ದರೆ ಅವೆರಡನ್ನೂ ಒಟ್ಟಿಗೆಯೇ ಕೊಟ್ಟಿದೆ. ಓದುಗರ ಸೌಲಭ್ಯಕ್ಕಾಗಿ ಶಕಟರೇಫವುಳ್ಳ ಶಬ್ದಗಳಿಗೆ ಸಾಮಾನ್ಯರೇಫವನ್ನು ಕಂಸದಲ್ಲಿ ಸೂಚಿಸಲಾಗಿದೆ.

ಉದಾ (ii) : ಬಱ(ರ)ಡು (ನಾ). ೧. ನಿಸ್ಸಾರವಾದುದು ; ಪೊಳ್ಳು. ೨. ಗೊಡ್ಡು ; ಬಂಜೆತನ. ೩. ಬಯಲು ; ಶೂನ್ಯತೆ.

೧೬. ಳ ಮತ್ತು ೞ : ಳ ಅಥವಾ ೞ ಇವುಗಳಿರುವ ಶಬ್ದಗಳಿಗೂ ಮೇಲಿನ ರ ಮತ್ತು ಱ ನಿಯಮವೇ ಅನ್ವಯವಾಗುತ್ತದೆ.

ಉದಾ (i) : ಕೊಳೆ ೧. = ಕೊೞೆ[೩]. ೨. ಪ್ರಗತಿ ಇಲ್ಲದೆ ಇದ್ದ ಸ್ಥಾನದಲ್ಲಿಯೇ ಇರು. ~ಹಾಕು = ೧. ಕೊಳೆಯುವಂತೆ ಮಾಡು. ೨. ತಡೆದು ನಿಲ್ಲಿಸು ; ಪ್ರಗತಿಯಿಲ್ಲದೆ ಇರಿಸು.

ಕೊೞೆ[೩](ಳೆ) (ಕ್ರಿ). ೧. ಕೆಟ್ಟು ನಾರು. (ನಾ). ೨. ಕೊಳೆತುದು ; ಹೊಲಸು. ~ಪಾ(ವಾ)ವು = ಒಂದು ಜಾತಿಯ ಹಾವು ; ಕೊಳಕು ಮಂಡಲ.

ಉದಾ (ii) : ಗೊೞ(ಳ)ಸು (ನಾ). ಕುಣಿಕೆ ; ಕೊಂಡಿ.

೧೭. ವ್ಯಂಜನಾಂತ, ಉಕಾರಾಂತ ಮತ್ತು ಲಕಾರಸಹಿತ, ಳಕಾರಸಹಿತ ಶಬ್ದಗಳಿಗೆ ಅರ್ಥಸಾಮ್ಯವಿದ್ದಲ್ಲಿ ಒಂದೇ ಮುಖ್ಯಉಲ್ಲೇಖವನ್ನಾಗಿ ಕೊಡಲಾಗಿದೆ.

ಉದಾ : ನವಿಲ್(ಲು) (ನಾ). ಒಂದು ಜಾತಿಯ ಪಕ್ಷಿ ; ಮಯೂರ.

ನಲಿ(ಳಿ)ನ (ನಾ). ತಾವರೆ ; ಕಮಲ.

೧೮. ಅರ್ಥವ್ಯತ್ಯಾಸ ಕಂಡುಬಂದ ಶಬ್ದಗಳನ್ನು ಬೇರೆಬೇರೆಯಾಗಿ ಕೊಟ್ಟು ಅವುಗಳಿಗಿರುವ ಸಂಬಂಧವನ್ನು ಸೂಚಿಸಲಾಗಿದೆ.

ಉದಾ : ಪಾರ್ (ಕ್ರಿ). ೧. ನಿರೀಕ್ಷಿಸು ; ಎದುರುನೋಡು. ೨. ಆಶಿಸು ; ಹಾರೈಸು. ೩. ಲಕ್ಷಿಸು ; ಗಮನಿಸು.

ಪಾರು ೧. = ಪಾರ್. ೨. = ಪಾಱು. (ನಾ). ೩. ದಡ ; ತೀರ. ೪. ಸೂರಿನ ಇಳಿಜಾರು ಭಾಗ.

ನಲ (ನಾ). ೧. ಪೊಳ್ಳಾದ ಬಿದಿರು. ೨. ಕಂಪು ; ವಾಸನೆ. ೩. ನಿಷಧ ದೇಶದ ಒಬ್ಬ ದೊರೆಯ ಹೆಸರು. ೪. ಅರುವತ್ತು ಸಂವತ್ಸರಗಳಲ್ಲಿ ಒಂದು.

ನಳ ೧. = ನಲ. ೨. = ನಲ್ಲಿ.

೧೯. ಙ, ಞ, ಳ, ಱ ---ಈ ಅಕ್ಷರಗಳಿಂದ ಮೊದಲಾಗುವ ಪದಗಳು ಕನ್ನಡದಲ್ಲಿ ಸಿಗುವುದಿಲ್ಲ. ಆದುದರಿಂದ ಈ ಅಕ್ಷರಗಳು ಬೇರೆಯಾಗಿ ಉಲ್ಲೇಖಗೊಂಡಿಲ್ಲ. ಆದರೆ ಉಳಿದ ಅಕ್ಷರಗಳು ಕನ್ನಡ ವರ್ಣಮಾಲೆಯಲ್ಲಿ ಎಷ್ಟನೆಯ ಅಕ್ಷರವಾಗುತ್ತವೆಂಬುದನ್ನು ಸೂಚಿಸುವಾಗ ಇವುಗಳನ್ನು ಗಣನೆಗೆ ತೆಗೆದುಕೊಳ್ಳಲಾಗಿದೆ.

೨೦. ಈ ನಿಘಂಟಿನಲ್ಲಿ ಪದಗಳ ಅಕಾರಾದಿ ಹೀಗಿದೆ.

ಸ್ವರ, ಅನುಸ್ವಾರ, ವಿಸರ್ಗ, ವರ್ಗೀಯಾಕ್ಷರಗಳು ಮತ್ತು ಅವರ್ಗೀಯಾಕ್ಷರಗಳು. ಅವರ್ಗೀಯಾಕ್ಷರಗಳನ್ನು ಕೊಡುವಾಗ ಸಾಮಾನ್ಯರೇಫದ ನಂತರ ಶಕಟರೇಫವನ್ನೂ ಳದ ನಂರ 'ೞ' ವನ್ನು ಕೊಡಲಾಗಿದೆ.

ಉದಾ : ಅ

ಅಂಕ

ಅಂತಃಪುರ

ಅಂತಃಸ್ಥ

ಅಂತಕ

ಅಕಚ

ಅರೋಚಿ

ಅಜ(ರ)

ಅರ್ಕ

ಅಳ್ದಿರ್ದೆ

ಅೞ್(ಳ್,ಳು,ೞು)

೨೧. ವಿರಾಮ ಚಿಹ್ನೆಗಳು : ಇತರ ಚಿಹ್ನೆಗಳು :

ಪೂರ್ಣವಿರಾಮ :—ಮುಖ್ಯಉಲ್ಲೇಖಗಳ ವ್ಯಾಕರಣಸ್ವರೂಪವನ್ನು ನಿರ್ದೇಶಿಸಿದ ಅನಂತರವೂ ಅರ್ಥಚ್ಛಾಯೆಯನ್ನು ತೋರಿಸುವ ೧, ೨, ೩ ಎಂಬ ಸಂಖ್ಯೆಗಳ ಮುಂದೆಯೂ ಒಂದು ಅರ್ಥವು ಪೂರೈಸಿದಾಗಲೂ ಪೂರ್ಣವಿರಾಮವನ್ನು ಬಳಸಲಾಗಿದೆ.

ಉದಾ : ಮೋಡೆ (ನಾ). ದಡ್ಡ ಹೆಂಗಸು.

ಅರ್ಧವಿರಾಮ :—ಒಂದೇ ಬಗೆಯ ಅರ್ಥದ ಛಾಯೆ ಇರುವಾಗ ಎರಡು ಅರ್ಥಗಳ ನಡುವೆ ಈ ಚಿಹ್ನೆಯನ್ನು ಬಳಸಿದೆ.

ಉದಾ : ದುಬಾರಿ (ನಾ). ತುಟ್ಟಿ ; ಹೆಚ್ಚುಬೆಲೆ.

ದುಂಡುಕಂಸ :—ಈ ಚಿಹ್ನೆಯನ್ನು ನಾಲ್ಕು ಕಡೆಗಳಲ್ಲಿ ಉಪಯೋಗಿಸಲಾಗಿದೆ.

(i) ಮುಖ್ಯಉಲ್ಲೇಖಗಳಾದ ಶಬ್ದಗಳು ವ್ಯಾಕರಣದಲ್ಲಿ ಕ್ರಿಯಾಪದ, ನಾಮಪದ, ಗುಣವಾಚಕ, ಅವ್ಯಯ ಮುಂತಾದ ಯಾವ ವಿಭಾಗಕ್ಕೆ ಸೇರಿದೆ ಎಂಬುದನ್ನು ಸೂಚಿಸುವಾಗ—

ಉದಾ : ಬಿಡಾರ (ನಾ). ತಂಗುವ ಸ್ಥಳ.

(ii) ಜ, ಟ ಅಕ್ಷರಗಳ ಮುಂದೆ ಸಾಮಾನ್ಯರೇಫ, ಕುಳ ಅಕ್ಷರಗಳನ್ನು ಸೂಚಿಸುವಾಗ—

ಉದಾ : ಮೂಱು(ರು) (ನಾ). ಒಂದು ಸಂಖ್ಯೆ.
ಮುೞ್ಕು(ಳ್ಕು) (ಕ್ರಿ). ಮುಳುಗು ; ಅಡಗು.

(iii) ಒಂದು ಶಬ್ದವು ಬಿಂದುಸಹಿತವಾಗಿಯೂ ಬಿಂದುರಹಿತವಾಗಿಯೂ ಇದ್ದು ಅದನ್ನು ಒಂದೆಡೆಯಲ್ಲಿಯೇ ಸೂಚಿಸುವಾಗ ಬಿಂದು ವಿಕಲ್ಪವೆಂದು ಸೂಚಿಸಲು—

ಉದಾ : ಮೂ(ಂ)ಕು (ನಾ). ಗಾಡಿ ಹೊಡೆಯುವವನು ಗಾಡಿಯಲ್ಲಿ ಕುಳಿತುಕೊಳ್ಳುವ ಸ್ಥಳ ; ಮೂಕಿ.

(iv) ಪದಗಳಿಗೆ ಅರ್ಥವನ್ನು ಕೊಡುವಾಗ ಅರ್ಥಸ್ಪಷ್ಟತೆಗಾಗಿ ಸೇರಿಸಿದ ಕೆಲವು ಪದಗಳನ್ನು ಕಂಸಗಳೊಳಗೆ ಸೂಚಿಸಲಾಗಿದೆ.

ಉದಾ : ಮೊರೆ (ಕ್ರಿ). ೧. (ತುಂಬಿಯಂತೆ) ಧ್ವನಿಮಾಡು, –ಝೇಂಕರಿಸು. ೨. (ವಾದ್ಯದಂತೆ) ಶಬ್ದಮಾಡು, –ಘೋಷಿಸು.

"~" ಈ ಚಿಹ್ನೆಯು ಬಂದಾಗ ಮುಖ್ಯಉಲ್ಲೇಖಕ್ಕೆ ಮತ್ತೊಂದು ಶಬ್ದ — ಈ ಚಿಹ್ನೆಯ ಮುಂದೆ ಬಂದಿರುವ ಶಬ್ದ — ಸೇರಿ ಸಮಾಸವಾಗಿದೆ ಎಂದರ್ಥ.

ಉದಾ : ಪಸದನ (ನಾ). ೧. ಅಲಂಕಾರ; ಪ್ರಸಾಧನ. ೨. ಆಭರಣ.
~(ಂ)ಕೊ(ಗೊ)ಳ್ = ಅಲಂಕರಿಸಿಕೊಳ್ಳು.

"=" ಒಂದು ಶಬ್ದಕ್ಕೆ ಸಮಾನಾರ್ಥವಿರುವ ಇನ್ನೊಂದು ಶಬ್ದದ ಮುಂದೆಯೂ ಪರ್ಯಾಯಶಬ್ದಗಳ ಮುಂದೆಯೂ ಈ ಚಿಹ್ನೆಯು ಉಪಯೋಗಗೊಂಡಿದೆ.

ಉದಾ : ಪಸಾಯನ = ಪಸಾಯ.

", –" ಒಂದು ಶಬ್ದಕ್ಕೆ ಕೊಡುವ ಅರ್ಥದಲ್ಲಿ ಕೊನೆಯ ಪದದ ಬದಲು ಮತ್ತೊಂದು ಪದವನ್ನು ಸೂಚಿಸುವಾಗ ಈ ಚಿಹ್ನೆಯನ್ನು ಬಳಸಲಾಗಿದೆ. ಅಂದರೆ ', –' ಇರುವ ಸ್ಥಳದಲ್ಲಿ ಹಿಂದಿನ ಅರ್ಥದ ಮೊದಲಭಾಗವನ್ನು ಸೇರಿಸಿಕೊಳ್ಳಬೇಕು.

ಉದಾ : ತೆರೆ ೧. = ತೆಱೆ. (ನಾ). ೨. ಅಲೆ ; ತರಂಗ. ೩. ಚರ್ಮದ ಮುದಿಕೆ, –ಸುಕ್ಕು.

೨೨. ಅಕ್ಷರಗಳ ಗಾತ್ರ :— ಮುಖ್ಯಉಲ್ಲೇಖಗಳನ್ನು ೧೦ ಪಾಯಿಂಟ್ ದಪ್ಪ ಅಕ್ಷರಗಳಲ್ಲೂ ಅರ್ಥಗಳನ್ನು ೧೦ ಪಾಯಿಂಟ್ ಸಣ್ಣ ಅಕ್ಷರಗಳಲ್ಲೂ ಮುದ್ರಿಸಲಾಗಿದೆ.

* * *

ಕೊನೆಯದಾಗಿ ಈ ನಿಘಂಟು ಸಿದ್ಧವಾಗುತ್ತಿದ್ದಾಗ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಜಿ. ನಾರಾಯಣ ಅವರೂ ಮತ್ತು ಕನ್ನಡ-ಕನ್ನಡ ನಿಘಂಟು ಸಮಿತಿಯ ಸದಸ್ಯರೂ ನಿರಂತರವೂ ನಮಗೆ ಕೊಟ್ಟ ಪ್ರೋತ್ಸಾಹಕ್ಕಾಗಿ ನಾವು ಕೃತಜ್ಞರಾಗಿದ್ದೇವೆ.

ನಿಘಂಟು ಕಚೇರಿಯಲ್ಲಿ ತೀವ್ರಗತಿಯಿಂದ ನಿಘಂಟಿನ ಕೆಲಸ ಸಾಗುತ್ತಿದ್ದಾಗ ಕಚೇರಿಯ ಸಿಬ್ಬಂದಿವರ್ಗದವರೆಲ್ಲರೂ ತೋರಿಸಿದ ಕಾರ್ಯದಕ್ಷತೆಯೂ ವಿಶ್ವಾಸವೂ ಕೇವಲ ಕೃತಜ್ಞತೆಯ ಮಾನದಿಂದ ಅಳೆಯಲಾಗದುವಾಗಿವೆ. ಸಂಕ್ಷಿಪ್ತ ಕನ್ನಡ ನಿಘಂಟು ಸಂಪೂರ್ಣವಾಗಿ ಮುದ್ರಣಗೊಂಡು ಓದುಗರ ಕೈಸೇರಿತೆಂಬ ಧನ್ಯತೆಯ ಭಾವದಲ್ಲಿ ನಿಘಂಟು ಕಚೇರಿಯ ಸಂಪಾದಕರುಗಳೂ ಸಿಬ್ಬಂದಿವರ್ಗದವರೂ ಸಂತೃಪ್ತರಾಗಿದ್ದಾರೆ.

ನಿಘಂಟು ಮುದ್ರಣದ ಕಾರ್ಯದಲ್ಲಿ ಬಿ. ಎಂ. ಶ್ರೀ ಅಚ್ಚುಕೂಟದ ಸಿಬ್ಬಂದಿವರ್ಗದವರು ತೋರಿಸಿದ ಅಪೂರ್ವ ಸಹಕಾರಕ್ಕಾಗಿ ನಾವು ಕೃತಜ್ಞರಾಗಿದ್ದೇವೆ.

ಈ ಸಂಕ್ಷಿಪ್ತ ಕನ್ನಡ ನಿಘಂಟಿನ ಉಪಯುಕ್ತತೆ ಹೆಚ್ಚುವಂತೆ ಪ್ರಾಜ್ಞರು ಸಲಹೆಗಳನ್ನು ಕೊಟ್ಟಲ್ಲಿ ಅವುಗಳನ್ನು ಆದರದಿಂದ ಸ್ವಾಗತಿಸುತ್ತೇವೆ.

೨–೧೦–೧೯೭೫
ಬೆಂಗಳೂರು

ಜಿ. ವೆಂಕಟಸುಬ್ಬಯ್ಯ
ಪ್ರಧಾನ ಸಂಪಾದಕ

॥ ಶ್ರೀ ॥

## ಕನ್ನಡ ಸಾಹಿತ್ಯ ಪರಿಷತ್ತಿನ

# ಸಂಕ್ಷಿಪ್ತ ಕನ್ನಡ ನಿಘಂಟು



**ಅ** (ನಾ). ೧. ಕನ್ನಡ ವರ್ಣಮಾಲೆಯ ಮೊದಲನೆಯ ವರ್ಣ. ೨. ವಿಷ್ಣು.

**ಅಂಕ** (ನಾ). ೧. ಕೊಕ್ಕೆ; ಅಂಕುಶ. ೨. ಕೊಂಕು; ಡೊಂಕು. ೩. ಅಂಕವಣಿ; ರಿಕಾಪು. ೪. ತೊಡೆ. ೫. ಗುರುತು; ಚಿಹ್ನೆ. ೬. ಹೆಸರು; ಬಿರುದು. ೭. ಯುದ್ಧ. ೮. ಜಟ್ಟಿ. ೯. ನಾಟಕದಲ್ಲಿ ಒಂದು ವಿಭಾಗ. ೧೦. ಕುಂದು. ೧೧. ಅಂಕೆ; ಸಂಖ್ಯೆ. ೧೨. ಪ್ರಸಿದ್ಧಿ. **~ಗಣಿತ** = ಗಣಿತಶಾಸ್ತ್ರದ ಒಂದು ಭೇದ. **~ಪರದೆ** = ನಾಟಕದ ಅಂಕದ ಕೊನೆಯಲ್ಲಿ ಬಿಡುವ ಪರದೆ. **~ಮಾಲೆ** = ಬಿರುದುಗಳ ಮಾಲೆ. **~ಮಾ(ವಾ)ತು** = ೧. ಯುದ್ಧದ ಮಾತು. ೨. ವೀರವಚನ. **~ವಣಿ(ಣೆ)** = ರಿಕಾಪು. **~ಪ(ವ)ಱೆ(ರೆ)** = ರಣಭೇರಿ.

**ಅಂಕಣ** (ನಾ). ೧. ಮನೆಯ ಎರಡು ಕಂಬಗಳ (ತೊಲೆಗಳ) ನಡುವಿನ ಪ್ರದೇಶ. ೨. ಸ್ಥಳ; ಪ್ರದೇಶ. ೩. ಅರೆ; ಸೆಳೆಖಾನೆ.

**ಅಂಕನ** (ನಾ). ಗುರುತು ಮಾಡುವುದು; ಬರೆ ಹಾಕುವುದು.

**ಅಂಕಿತ** (ನಾ). ೧. ಗುರುತು; ಮುದ್ರಿಕೆ. ೨. ರುಜು; ಸಹಿ. ೩. ಅರ್ಪಣೆ (ಗು). ೪. ಗುರುತುಮಾಡಿದ. **~ನಾಮ** = ಇಟ್ಟ ಅಥವಾ ಕೊಟ್ಟ ಹೆಸರು.

**ಅಂಕು** (ಕ್ರಿ). ೧. ಸೊಟ್ಟಾಗು. (ನಾ). ೨. ಸೊಟ್ಟು. ೩. ನಾಟಕದ ಅಂಕ. **~ಡೊಂಕು** = ವಕ್ರತೆ.

**ಅಂಕುರ** (ನಾ). ೧. ಮೊಳಕೆ. ೨. ಕೂದಲು. ೩. ರಕ್ತ. ೪. ನೀರು. ೫. ಊತ; ಬಾವು. **~ಅರ್ಪಣ** = ೧. ಅಗೆಹಾಕುವುದು. ೨. ಪ್ರಾರಂಭ. **~ಇಸು** = ೧. ಮೊಳೆ; ಮೊಳಕೆಯಾಗು. ೨. ಚಿಗುರು. ೩. ನವಿರೇಳು. ೪. ಏಳಿಗೆಹೊಂದು. **~ಪ(ವ)ಡೆ** = ಮೊಳಕೆಯಾಗು. **~ಏ(ವೇ)ಱು(ರು)** = ರೋಮಾಂಚನವಾಗು.

**ಅಂಕುಶ** (ನಾ). ೧. (ಆನೆಯನ್ನು ಹದ್ದಿನಲ್ಲಿಡಲು ಉಪಯೋಗಿಸುವ) ಒಂದು ಆಯುಧ. ೨. ಗುರುತು.

**ಅಂಕೆ** (ನಾ). ೧. ಆಜ್ಞೆ; ಅಪ್ಪಣೆ. ೨. ಹತೋಟಿ; ಹಿಡಿತ. ೩. ದರ್ಪ; ಠೀವಿ. ೪. ಲೇಪನ. ೫. ಸಂಖ್ಯೆ; ಎಣಿಕೆ. ೬. ಗುರುತು. **~ಗ** = ಗುರುತುಳ್ಳವನು.

**ಅಂಗ** (ನಾ). ೧. ರೀತಿ; ವಿಧ. ೨. ದೇಹ. ೩. ಅವಯವ; ಭಾಗ. ೪. ಒಂದು ದೇಶ. **~ಆ(ವಾ)ನು** = ದೇಹವನ್ನು ತಾಳು; ಧರಿಸು. **~ಇ(ವಿ)ಸು** = ೧. ಒಪ್ಪು; ಸಮ್ಮತಿಸು. ೨. ಇಷ್ಟಪಡು; ಸ್ವೀಕರಿಸು

೩. ಕನಿ; ಮುತ್ತು. ೪. ಕೂಡು; ಸೇರು. ~(ಂ)ಕೊ(ಗೊ)ಳ್ = ಅಂಗೀಕರಿಸು; ಅವಲಂಬಿಸು. ~ಚಿತ್ತ = ಪಾರಿತೋಷಕ; ಉಡುಗೊರೆ. ~ಚೇಷ್ಟೆ = ಅಂಗದ ಚಲನೆ. ~ಛ(ಚ್ಛ)ದನ = ಮೈಹೊದಿಕೆ; ಕವಚ; ಅಂಗಜೋಡು. ~ಜಾಲ = ಅಂಗರಕ್ಷಕ. ~ಜಾವ = ಪಹರೆ. ~(ಂ)ತು(ದು)ಂಬು = ಮೈಯೆಲ್ಲ ತುಂಬು. ~ದಟ್ಟಿ = ಪೂಜ್ಯರಾದವರ ಪಾದವನ್ನು ತೊಳೆದ ಬಳಿಕ, ತನ್ನ ಮೈಮೇಲಿನಿಂದ ತೆಗೆದು ಪಾದದ ಕೆಳಗೆ ಹಾಸುವ ಬಟ್ಟೆ. ~(ಂ)ಪ(ಬ)ಡೆ = ಆಕಾರ ಧರಿಸು. ~ಪಾಳಿ = ಆಲಿಂಗನ. ~ಪ್ರದಕ್ಷಿಣ=ಉರುಳುಸೇವೆ; ದಿಂಡುರುಳು. ~ಭೋಗ = ದೇವರ ವಿಗ್ರಹಕ್ಕೆ ಪರಿಮಳ ದ್ರವ್ಯಗಳನ್ನು ಲೇಪಿಸುವ ಉಪಚಾರ. ~ಮಚ್ಚೆ = ದೇಹದ ಮೇಲಿನ ಗುರುತು; ರುಜುವಾತು. ~ಮರ್ದ(ರ್ದಿ) = ಮೈಯೊತ್ತುವವನು. ~ಮುದ್ರೆ=ಶರೀರದ ರೀತಿ. ~ರಕ್ಷಕ = ಮೈಗಾವಲಿನವನು. ~ರಾಗ = ಮೈಗೆ ಸುಗಂಧ ಲೇಪಿಸಿಕೊಳ್ಳುವುದು. ~ರುಚಿ = ದೇಹದ ಕಾಂತಿ. ~ವಟ್ಟೆ =೧. ಹೊದೆಯುವ ಬಟ್ಟೆ; ವಲ್ಲಿ. ೨. ಮೈಕಟ್ಟು. ೩. ಸೌಂದರ್ಯ. ~ವರ್ಮ = ಕವಚ. ~ವಸ್ತ್ರ = ೧. ಸಣ್ಣ ಬಟ್ಟೆ; ವಲ್ಲಿ. ೨. ಉಪಪತ್ನಿ. ~ವಿಕಾರ = ೧. ಶರೀರದ ವಿರೂಪ. ೨. ರೋಗ. ೩. ಮೂರ್ಛೆ; ಅಪಸ್ಮಾರ. ~ವಿಕ್ಷೇಪ = ಅಂಗಗಳನ್ನು ಚಲಿಸುವುದು; ಅಂಗಚೇಷ್ಟೆ. ~ವಿದ್ಯೆ = ೧. ಪ್ರಧಾನವಿದ್ಯೆಗೆ ಅಂಗವಾದ ವಿದ್ಯೆ. ೨. ಸಾಮುದ್ರಿಕ ಶಾಸ್ತ್ರ. ~ವೈಕಲ್ಯ = ಅಂಗಹೀನತೆ. ~ಶುದ್ಧಿ = ೧. ಶರೀರದ ನೈರ್ಮಲ್ಯ. ೨. ಹೊಡೆತ. ~ಸಂಗ = ಕೂಟ; ಸಂಭೋಗ. ~ಸಂಸ್ಕಾರ=ಅಂಗವನ್ನು ಅಂದಗೊಳಿಸುವ ಸ್ನಾನ ಇತ್ಯಾದಿ. ~ಸಾಧಕ = ೧. ಅಂಗಸಾಧನೆ. ೨. ವ್ಯಾಯಾಮವನ್ನು ಮಾಡುವವನು.

ಅಂಗಜ (ನಾ). ಮನ್ಮಥ; ಅನಂಗ.

ಅಂಗಡಿ (ನಾ). ೧. ಪದಾರ್ಥಗಳನ್ನು ಮಾರುವ ಸ್ಥಳ. ೨. ಆಡಂಬರ. ೩. ಒರಳಿನ ಕುಳಿಯ ಸುತ್ತಲೂ ಇರುವ ಜಾಗ. ~ಕಾ(ಗಾ)ಅ(ರ) = ಅಂಗಡಿಯವ; ವರ್ತಕ. ~ಕೆ(ಗೇ)ರಿ = ಅಂಗಡಿಗಳ ಸಾಲು; ಬೀದಿ. ~ಪ(ವ)ಸರ = ಅಂಗಡಿ ಬೀದಿ.

ಅಂಗಣ (ನಾ). ೧. ಮನೆಗೆ ಸೇರಿರುವ ಆವರಣದ ಬಯಲು; ಮುಂಭಾಗ; ಅಂಗಳ. ೨. ಮಧ್ಯಸ್ಥಳ.

ಅಂಗತ್ತ (ಅ). ಬೆನ್ನು ಕೆಳಗಾಗಿ; ಮುಖ ಮೇಲಾಗಿ.

ಅಂಗದ (ನಾ). ೧. ತೋಳುಬಳೆ. ೨. ವಾಲಿಯ ಮಗ.

ಅಂಗನೆ (ನಾ). ಹೆಂಗುಸು.

ಅಂಗಲ (ಗು). ತೆಳುವಾಗಿ ಹರಡಿದ; ದಟ್ಟವಲ್ಲದ.

ಅಂಗಲಾಚು(ಱ) (ಕ್ರಿ). ಬೇಡು; ಮೊರೆಯಿಡು. ~ಇಕೆ = ಮೊರೆಯಿಡುವಿಕೆ.

ಅಂಗವಣೆ (ನಾ). ೧. ರೀತಿ; ವಿಧಾನ. ೨. ಸಾಹಸ. ೩. ಅಭಿಪ್ರಾಯ. ೪. ಕಾರ್ಯ. ೫. ಬಯಕೆ; ಉದ್ದೇಶ.

ಅಂಗಳ = ಅಂಗಣ.

ಅಂಗಾಡಿ = ಅಂಗಡಿ.

ಅಂಗಾತ = ಅಂಗತ್ತ.

ಅಂಗಾರ (ನಾ) ೧. ಬೆಂಕಿ; ಕೆಂಡ. ೨. ಇದ್ದಲು; ಬೂದಿ; ಇಂಗಾಲ. ೩. ಮಾಧ್ವರು ಹಣೆಯಲ್ಲಿ ಧರಿಸುವ ಇದ್ದಲಿನ ರೇಖೆ. ೪. ಮಂಗಳಗ್ರಹ. ~ಗ್ರಹ = ೧. ಕೆಂಡ. ೨. ಮಂಗಳಗ್ರಹ. ~ಗಂಧಿ = ಇಂಗು. ~ಚೂಡ = ೧. ಪಾರಿವಾಳ. ೨. ಮುಳ್ಳುಮುತ್ತುಗ. ~ಮಣಿ = ಹವಳ. ~ವಲ್ಲರಿ = ೧. ಹೊಂಗೆಮರ.

೨. ಹುಲಿಗಿಲಿಗಿಡ. ~ಹೋ(ವೋ)ಳಿಗೆ =ಕೆಂಡದಮೇಲೆ ಸುಟ್ಟ ರೊಟ್ಟಿ; ಉಬ್ಬು ರೊಟ್ಟಿ.

**ಅಂಗಾರಕ** (ನಾ). ಮಂಗಳಗ್ರಹ.

**ಅಂಗಾಲ್(ಲು)** (ನಾ). ಕಾಲ ಅಡಿ; ಹೆಜ್ಜೆಯ ಕೆಳಭಾಗ.

**ಅಂಗಿ** (ನಾ). ೧. ಕವಚ. (ಗು). ೨. ಅಂಗಗಳುಳ್ಳ. ೩. ಪ್ರಧಾನವಾದ.

**ಅಂಗಿಕೆ(ಗೆ)** (ನಾ). = ಅಂಗಿ.

**ಅಂಗೀಕರಣ** (ನಾ). = ಅಂಗೀಕಾರ.

**ಅಂಗೀಕರಿಸು**(ಕ್ರಿ).೧. ಸ್ವೀಕರಿಸು. ೨. ತಾಳು; ಧರಿಸು. ೩. ಒಪ್ಪು; ಅನುಮತಿಸು.

**ಅಂಗೀಕಾರ** (ನಾ). ಒಪ್ಪಿಗೆ; ಸಮ್ಮತಿ.

**ಅಂಗು** (ನಾ). ೧. ಮರ್ಮ; ಗುಟ್ಟು. ೨. ಒಂದು ಸಿಹಿ ತಿಂಡಿ.

**ಅಂಗುಟ** (ನಾ). = ಅಂಗುಷ್ಠ.

**ಅಂಗುಲ(ಳ)** (ನಾ). ೧. ಬೆರಳು. ೨. ಒಂದು ಇಂಚು.

**ಅಂಗುಲಿ(ಳಿ)** (ನಾ). ೧. ಬೆರಳು. ೨. ಆನೆಯ ಸೊಂಡಿಲಿನ ತುದಿ. ೩. ಗಜಕರ್ಣಿಕೆಗಿಡ. ೪. ಅರಿದಳ. ~ತ್ರಾಣ = ಬೆರಳುಕಾಪು; ಅಂಗುಸ್ತಾನು. ~ಮೋಟನ =ನೆಟಿಕೆ ಮುರಿಯುವುದು.

**ಅಂಗುಲೀಯಕ** (ನಾ). ಉಂಗುರ.

**ಅಂಗುಷ್ಠ** (ನಾ). ಹೆಬ್ಬೆರಳು. ೨. ಹೆಬ್ಬೆರಳಿನ ಅಳತೆ.

**ಅಂಗುಳ್(ಳು)** (ನಾ). ಕಿರುನಾಲಗೆಯ ಪ್ರದೇಶ; ಗಂಟಲ ಮೇಲಟ್ಟ; ತಾಲು. ~ಮುಳ್ = ಕಿರುನಾಲಗೆಯ ರೋಗ.

**ಅಂಗೂರ** (ನಾ). ದ್ರಾಕ್ಷೆ.

**ಅಂಗೂಷ** (ನಾ). ೧. ಮುಂಗುಸಿ. ೨. ಬಾಣ.

**ಅಂಗೆಯ್** (ನಾ). ಕೈಯ ಒಳಭಾಗ; ಕರತಳ.

**ಅಂಗೈ** = ಅಂಗೆಯ್. ~ನೆಲ್ಲಿ = ಸ್ಪಷ್ಟವಾದ ವಿಷಯ; ಕರತಲಾಮಳಕ

**ಅಂಘ್ರಿ** (ನಾ). ೧. ಕಾಲು; ಹೆಜ್ಜೆ. ೨. ಬೇರು. ~ತಲ = ಅಡಿ; ಅಂಗಾಲು. ~ತ್ರಾಣ = ಪಾದರಕ್ಷೆ; ಮೆಟ್ಟು. ~ಫಲ=ಪಿತ್ತಕೋಶ.

**ಅಂಘ್ರಿಪ** (ನಾ). ಬೇರಿನಿಂದ ನೀರು ಕುಡಿಯುವುದು; ಮರ.

**ಅಂಚಲ(ಳ)** (ನಾ). ಸೆರಗು; ಅಂಚು; ಕೊನೆ.

**ಅಂಚಿತ** (ಗು). ೧. ಕಳೆದ. ೨. ಬಾಗಿದ. ೩. ಪೂಜಿಸಲ್ಪಟ್ಟ. ೪. ಸುಂದರ. ೫.ಪ್ರಸಿದ್ಧ. ೬. ಸ್ಪಷ್ಟ.

**ಅಂಚಿರ** (ಗು). ಅಸ್ಥಿರ; ಚಂಚಲ.

**ಅಂಚು** (ನಾ). ೧. ಕೊನೆ; ತುದಿ. ೨. ಸೀರೆ, ಧೋತ್ರಗಳ ಪಡಿ. ~ಕ(ಗ)ಟ್ಟು =೧. ಗಡಿಯನ್ನು ಗುರುತಿಸು; ಬದುಹಾಕು. ೨. ಕರೆಕಟ್ಟು.

**ಅಂಚೆ** (ನಾ).೧. ದಾರಿ; ಮಾರ್ಗ. ೨. ಟಪಾಲು; ಪ್ರಯಾಣ; ಸಾಗಣೆ. ೩. ಅಂಚು; ತುದಿ. ೪. ಹಂಸ. ೫. ಬಟ್ಟೆ. ~ಗಮನೆ = ಹಂಸದ ನಡಗೆಯುಳ್ಳವಳು. ~ಗಾಮಿನಿ =ಸರಸ್ವತಿ. ~ತು(ದು)ಪ್ಪುಳ್ = ಹಂಸದ ಗರಿಯ ತುಪ್ಪಳು. ~ತೇ(ದೇ)ರ = ಬ್ರಹ್ಮ. ~ಪಾ(ವಾ)ಸು=ಹಂಸದ ಗರಿಗಳಿಂದ ಮಾಡಿದ ಹಾಸುಗೆ.

**ಅಂಜನ** (ನಾ). ೧. ಮುಲಾಮು; ಕಾಡಿಗೆ. ೨. ಮಸಿ. ೩. ರಾತ್ರಿ. ೪. ಬೆಂಕಿ. ೫. ಅದ್ಭುತ ಶಕ್ತಿಗಳನ್ನು ಕೊಡುವ ಮುಲಾಮು. ~ಕ್ರಿಯೆ = ಕಾಡಿಗೆ ಹಚ್ಚುವುದು. ~ಸಿದ್ಧಿ = ಅಂಜನ ಉಪಯೋಗದಿಂದ ಆಗುವ ಸಿದ್ಧಿ.

**ಅಂಜನಿಕೆ** (ನಾ). ೧. ಹಲ್ಲಿ. ೨. ಇಲಿ.

**ಅಂಜಮೆ** (ನಾ) ೧. ಅಂಜಿಕೆ; ಭಯ. ೨. ಹೆದರಿಕೆಯಿಲ್ಲದಿರುವುದು.

**ಅಂಜಲಿ(ಳಿ)** ೧. ಬೊಗಸೆ. ೨. ಹಸ್ತವಿನ್ಯಾಸ. ~ಕರಣ =ಕೈಮುಗಿಯುವುದು. ~ಕಾರಿಕೆ = ಕೈ ಮುಗಿದು ಕೊಂಡಿರುವ ಮಣ್ಣಿನ

ಬೊಂಬೆ. ೨. ಮುಟ್ಟಿದರೆ ಮುನಿ; ಮುಟ್ಟಲು ಮುರುಕ. ~ಪುಟ = ಬೊಗಸೆ. ~ಬಂಧ = ಕೈಮುಗಿಯುವುದು ; ನಮಸ್ಕಾರ.

**ಅಂಜು** (ಕ್ರಿ). ೧. ಹೆದರು; ಭಯಪಡು. (ನಾ). ೨. ಹೆದರಿಕೆ. **~ಇಕೆ**=ಹೆದರಿಕೆ ; ಭಯ. **~ಕು(ಗು)ಳಿ** = ಪುಕ್ಕಲು ; ಭೀರು. **~ಪು(ಬು)ರುಕ** = ಅಂಜುಕುಳಿ.

**ಅಂಜುಲಿ(ಳಿ)** (ನಾ). = ಅಂಜಲಿ

**ಅಂಜೂ(ಜು)ರ** (ನಾ). ಅತ್ತಿಯಂತಹ ಒಂದು ಬಗೆಯ ಮರ, –ಹಣ್ಣು.

**ಅಂಟು** (ಕ್ರಿ). ೧. ಮುಟ್ಟು; ತಾಕು. ೨. ಸೇರು; ಕೂಡು. ೩. ಉಂಟಾಗು ; ಒದಗು. ೪. ಸವರು ; ತುರಿಸು. ೫. ನಿಲ್ಲು ; ತಡೆ. (ನಾ). ೬. ಮುಟ್ಟಿದರೆ ತಗಲುವ ಸ್ವಭಾವ ; ಜಿಗುಟು. ೭. ಗೋಂದು. ೮. ಕೊಳೆ. ೯. ಮುಟ್ಟಾಗುವಿಕೆ. ೧೦. ನಾಟಿ ಹಾಕಲು ಉಪಯೋಗಿಸುವ ಸಸ್ಯದ ರೆಂಬೆ. **~ಇಕ್ಕು** = ಅಂಟಿಸು ; ನಾಟಿಹಾಕು ; ಕಸಿಮಾಡು. **~ಇಡು**=ಸೇರಿಸು; ಕೂಡಿಸು. **~ಇಸು** = ೧. ಹತ್ತಿಸು ; ಸೇರಿಸು. ೨. ಬೆಂಕಿ, ದೀಪ ಮೊದಲಾದುವನ್ನು ಹಚ್ಚು. **~ಎಳೆ** = ನೆಯ್ಗೆಯಲ್ಲಿ ಕೂಡಿಸುವ ಎಳೆ. **~ಕ** = ಅಂಟುವವನು ; ಬೆನ್ನು ಹತ್ತಿದರೆ ಬಿಡದವನು. **~ಕಲಿಕೆ(ಗೆ)** = ಸೂತಕ ; ಮುಟ್ಟು. **~ಕೊ(ಗೊ)ಳಿಸು** = ನೆಡು ; ನಾಟಿಸು. **~ಗೋಡೆ** = ಕೂಡುಗೋಡೆ. **~ಜಾಡ್ಯ** = ಅಂಟುರೋಗ, ಸೋಂಕು ರೋಗ.

**ಅಂಡ** (ನಾ). ೧. ತತ್ತಿ ; ಮೊಟ್ಟೆ. ೨. ಬೀಜ ; ವೃಷಣಕೋಶ. ೩. ಕಸ್ತೂರಿ ಮೃಗದ ಕೋಶ. ೪. ವೀರ್ಯ ; ರೇತಸ್ಸು. ೫. ಶಿವ. **~ಆಶಯ** = ಬೀಜಕೋಶ.

**ಅಂಡಕ** (ನಾ) ೧. ತತ್ತಿ ; ಮೊಟ್ಟೆ. ೨. ಬೀಜ. ೩. ಗುಮ್ಮಟ. ೪. ಹುಂಬ. (ಗು). ೫. ಗೊತ್ತಾದ ಆಕಾರವಿಲ್ಲದ. **~ಕಲ್ಲು** = ಕೆತ್ತದಕಲ್ಲು.

**ಅಂಡಗೆ** (ನಾ) ೧. ದೊಡ್ಡ ಮೂಟೆ ; ಪೆಂಟೆ. ೨. ಸುರುಳಿ.

**ಅಂಡಜ** (ನಾ). ೧. ತತ್ತಿಯಿಂದ ಹುಟ್ಟಿ ಬರುವ ಹಕ್ಕಿ, ಹಾವು, ಮೀನು, ಹಲ್ಲಿ ಮೊದಲಾದುವು. ೨. ಬ್ರಹ್ಮ. **~ಅಧಿಪ** =೧. ಸರ್ಪರಾಜ. ೨. ಗರುಡ. **~ತುರಂಗ** = ಪಕ್ಷಿವಾಹನ ; ವಿಷ್ಣು. **~ಧ್ವಜ** = ವಿಷ್ಣು.

**ಅಂಡಲೆ** (ಕ್ರಿ). ೧. ಕಾಡು ; ಪೀಡಿಸು. ೨. ತಿರಸ್ಕರಿಸು. ೩. ಕ್ಲೇಶಪಡು. ೪. ಅಲೆದಾಡು. ೫. ವ್ಯಾಪಿಸು ; ಆವರಿಸು. ೬. ಹಿಮ್ಮೆಟ್ಟು. (ನಾ). ೭. ಕಾಟ ; ಪೀಡೆ. ೮. ಚಿಂತೆ. **~ತ** = ಕ್ಲೇಶ ; ಕೋಟಲೆ.

**ಅಂಡಿಗೆ** (ನಾ). ದೊಡ್ಡಗಂಟು, –ಮೂಟೆ.

**ಅಂಡು** (ಕ್ರಿ). ೧. ಹತ್ತಿರಹೋಗು ; ಸೇರು. ೨. ಹಿಂದೆಗೆ. (ನಾ). ೩. ಹತ್ತಿರ ; ಸಮೀಪ. ೪. ಆಶ್ರಯ. ೫. ನಿತಂಬ. ೬. ಬುಡ ; ತಳ. **~ಇಸು** = ೧. ಹತ್ತಿರ ಹೋಗು ; ಸೇರು. ೨. ಕುಳಿತುಕೊ ; ಆಶ್ರಯವನ್ನು ಪಡೆ. ೩. ಒದಗು ; ಉಂಟಾಗು. ೪. ಹಿಂದೆಗೆ ; ಹಿಮ್ಮೆಟ್ಟು. **~ಗೋಡೆ** = ಆಸರೆಯಾಗಿ ಕಟ್ಟುವ ಗೋಡೆ ; ಈಡುಗೋಡೆ.

**ಅಂಡೆ** (ನಾ).೧.ಸಮೀಪ; ಹತ್ತಿರ. ೨.ಟೊಳ್ಳಾದ ಬಿದಿರಿನ ಪಾತ್ರೆ. ೩. ಮೂಗಿನ ಸೊಳ್ಳೆ. ೪. ಊದುಗೊಳವೆ. ೫. ರಾಶಿ ; ಗುಂಪು.

**ಅಂತ** (ನಾ). ೧. ಕೊನೆ ; ಅವಧಿ. ೨. ಅಂಚು ; ಅರುಗು. ೩. ಮುಗಿತಾಯ ; ಸಾವು. ೪. ಕೀಳು ; ಹೀನ. ೫. ಶೇಷ; ಉಳಿಕೆ. ೬. ವಿಭಾಗ. ೭. ಹತ್ತಿರ. **~ಗಮನ** = ೧. ಕೊನೆಮುಟ್ಟುವಿಕೆ. ೨. ಕೊನೆಯ ಪ್ರಯಾಣ. **~ಕಾ(ಗಾ)ಣ್(ಣು)** = ಕೊನೆಗಾಣು ; ಗುರಿಮುಟ್ಟು. **~ವಾಸ** = (ಊರಿನ) ಸಮೀಪದ ಶಿಬಿರ.

ಅಂತಃಕರಣ (ನಾ). ೧. ಒಳಗಿನ ಇಂದ್ರಿಯ; ಮನಸ್ಸು. ೨. ದಯೆ. ~ಜೀವಿ=ಕರುಣಾಳು. ~ಶುದ್ಧಿ = ಮನಃಶುದ್ಧಿ; ಅಂತರಂಗಶುದ್ಧಿ.

ಅಂತಃಕಲಹ (ನಾ). ಒಳಜಗಳ.

ಅಂತಃಪುರ (ನಾ). ರಾಣಿವಾಸ; ಜನಾನಖಾನೆ.

ಅಂತಃಸ್ಥ (ಗು). ಒಳಗಿನ; ನಡುವಣ.

ಅಂತಕ (ನಾ). ೧. ಯಮ. ೨. ಸಾವು. ೩. ಕೊನೆ. ~ಅನುಗ = ಯಮದೂತ. ~ಅಂತಕ = ಯಮನಿಗೆ ಯಮನಾದವನು; ಶಿವ.

ಅಂತಪ್ಪ (ಗು). ಅಂತಹ; ಅಂಥ; ಆ ಪ್ರಕಾರವಾದ; ಆ ರೀತಿಯ.

ಅಂತರ್ (ಗು). ಒಳಗಿನ.

ಅಂತರ (ನಾ). ೧. ವ್ಯತ್ಯಾಸ; ಭೇದ. ೨. ಮೇರೆ; ಎಲ್ಲೆ. ೩. ಕೆಚ್ಚು; ಸಾಮರ್ಥ್ಯ. ೪. ನಡುವಣ ಭಾಗ. ೫. ಅವಕಾಶ. ೬. ಗುರಿ. ೭. ಒಳಉಡಿಗೆ. ೮. ಮನಸ್ಸು. ೯. ಆತ್ಮ. ~ಇಸು= ೧. ನಿಂತುಹೋಗು. ೨. ಮರೆಯಾಗು. ೩. ಒಳಕ್ಕೆ ಬರು. ೪. ಭೇದಿಸು. ೫. ಬಿಡು. ೬. ತಡಮಾಡು. ೭. ನಷ್ಟವಾಗು. ೮. ಅವಕಾಶ ಮಾಡಿಕೊಂಡು. ೯. ಮರೆಮಾಚು. ~(ಂ)ಕು(ಗು)ಡು =೧. ಗುಟ್ಟನ್ನು ತಿಳಿಸು. ೨. ಅವಕಾಶಕೊಡು. ~ಪಿಶಾಚಿ ಸದ್ಗತಿಕಾಣದ ಪಿಶಾಚಿ. ~ಮಾಡು = ೧. ತಡಮಾಡು. ೨. ಮೇಲಿನ ಚಾವಣಿ.

ಅಂತರಾಯ (ನಾ). ಅಡೆತಡೆ; ವಿಘ್ನ.

ಅಂತರಾಳ (ನಾ). ೧. ನಡುವಿನ ಜಾಗ. ೨. ಆಕಾಶ.

ಅಂತರಿಕ್ಷ (ನಾ). ಆಕಾಶ.

ಅಂತರ್ಧಾನ (ನಾ). ಮಾಯವಾಗುವಿಕೆ; ಅದೃಶ್ಯವಾಗುವಿಕೆ.

ಅಂತರ್ವತ್ನಿ (ನಾ). ಬಸಿರಿ; ಗರ್ಭಿಣಿ.

ಅಂತವುರ (ನಾ). = ಅಂತಃಪುರ.

ಅಂತಸ್ತು (ನಾ). ೧. ಅಟ್ಟ; ಮಹಡಿ. ೨. ತರಗತಿ; ಮಟ್ಟ.

ಅಂತಿಕ (ನಾ). ೧. ಹತ್ತಿರ; ಸಮೀಪ. ೨. ಕೊನೆ.

ಅಂತಿಮ (ಗು). ಕೊನೆಯ.

ಅಂತು (ನಾ). ೧. ಕೊನೆ; ತುದಿ. ೨. ಗುಟ್ಟು; ಮರ್ಮ; ಅಂಗು. (ಅ). ೩. ಹಾಗೆ; ಆ ರೀತಿಯಲ್ಲಿ. ೪. ಒಟ್ಟಿನಲ್ಲಿ.

ಅಂತುಕ (ನಾ). ಕೊನೆ; ಮುಕ್ತಾಯ.

ಅಂತುಟು (ಅ). ೧. ಅಷ್ಟು. ೨. ಹಾಗೆ.

ಅಂತೆ (ಅ). ಹಾಗೆ.

ಅಂತೇವಾಸಿ (ನಾ). ೧. ಶಿಷ್ಯ. ೨. ಚಂಡಾಲ.

ಅಂತ್ಯ (ನಾ). ೧. ಕೊನೆ; ತುದಿ. ೨. ಹೊಲೆಯ. ೩. ಪ್ರಳಯ.

ಅಂತ್ಯಜ (ನಾ). ೧. ಶೂದ್ರ. ೨. ಚಂಡಾಲ.

ಅಂತ್ರ (ನಾ). ಕರುಳು. ~ವೃದ್ಧಿ = ಕರುಳಿನ ಒಂದು ರೋಗ; ಹರ್ನಿಯಾ.

ಅಂದ (ನಾ). ೧. ಚೆಲುವು; ಸೊಬಗು. ೨. ರೀತಿ; ವಿಧ. ೩. ಉದ್ದೇಶ. ೪. ಸ್ವಭಾವ. ~ಅ(ವ)ಳಿ = ರೂಪುಗೆಡು. ~ಇ(ವಿ)ಡು = ಅಲಂಕರಿಸು; ಸಿಂಗರಿಸು. ~ಇ(ವಿ)ಸು = ಅಂದವಾಗಿ ಮಾಡು; ಉತ್ತಮಪಡಿಸು. ~ಏ(ವೇ)ಱು(ರು) = ಸೊಗಸು ಹೆಚ್ಚು. ~(ಂ)ಕೊ(ಗೊ)ಳಿಸು= ಚೆಲುವುಗೊಳಿಸು. ~(ಂ)ಪ(ಬ)ಡೆ = ಚೆಲುವಾಗು; ಸುಂದರವಾಗು. ~(ಂ)ಪೆ(ಬೆ)ಱು(ರು) = ಅಂದಂಬಡೆ. ~ಕೆ(ಗೆ)ಡಿಸು = ವಿರೂಪಗೊಳಿಸು.

ಅಂದಣ = ಅಂದಳ.

ಅಂದಣಿಗ (ನಾ). ಆಹಾರವನ್ನು ಮಾರುವವನು.

ಅಂದಳ(ಲ) (ನಾ). ಪಲ್ಲಕ್ಕಿ; ಮೇನೆ.

ಅಂದಾಜು (ನಾ). ಊಹೆ. ~ಪಟ್ಟಿ = ಲೆಕ್ಕದ ಅಂದಾಜನ್ನು ತಿಳಿಸುವ ಪಟ್ಟಿ.

ಅಂದು (ಕ್ರಿ). ೧. ಎಟುಕು; ನಿಲುಕು.

೨. ಎಟುಕಿಸು. (ನಾ). ೩. ಆ ದಿನ; ಆ ವೇಳೆ. (ಅ). ೪. ಆ ಸಂದರ್ಭದಲ್ಲಿ; ಆ ಪಕ್ಷದಲ್ಲಿ. ~ಇಗ=ಆ ರೀತಿಯಾದವನು. ~ಇಸು =ಎಟುಕಿಸು.

**ಅಂದುಕ** (ನಾ). ೧. ಸರಪಳಿ; ಬೇಡಿ. ೨. ಅಂದುಗೆ.

**ಅಂದುಗೆ** (ನಾ). ಕಾಲಿನ ಕಡಗ; ರುಳಿ.

**ಅಂದೇಶ** (ನಾ). ಕೇಡಾಗುವುದೆಂಬ ಭಯ.

**ಅಂದೋಜಿ** (ನಾ). ನಿಷೇಕ ಪ್ರಸ್ತದ ಮನೆಯಲ್ಲಿಟ್ಟಿರುವ ತಿಂಡಿ.

**ಅಂಧ** (ನಾ). ೧. ಕಣ್ಣುಕಾಣದವನು; ಕುರುಡ; ಕಂಗಳ. ೨. ಕತ್ತಲೆ. ೩. ಕದಡಿದ ನೀರು. ೪. ಒಬ್ಬ ರಾಕ್ಷಸನ ಹೆಸರು. ~ಕಾರ =ಕತ್ತಲೆ. ~ತಮಸ=೧. ದಟ್ಟವಾದ ಕತ್ತಲೆ. ೨.ಅಜ್ಞಾನ. ~ಯಷ್ಟಿ =ಕುರುಡನ ಕೈಗೋಲು. ~ಲಾವುಕನ್ಯಾಯ =ಕುರುಡನಿಗೆ ಲಾವುಗೆ ಹಕ್ಕಿ ಸಿಕ್ಕಿದಂತೆ ಆಕಸ್ಮಿಕ ಘಟನೆ.

**ಅಂಧಕ** =ಅಂಧ.

**ಅಂಬಕ** (ನಾ). ಕಣ್ಣು.

**ಅಂಬಕಳ** (ನಾ). ಅಂಬಲಿ; ಗಂಜಿ.

**ಅಂಬಟ** (ನಾ). ಕ್ಷೌರಿಕ; ನಾಯಿಂದ.

**ಅಂಬಟೆ** (ನಾ). ಉಪ್ಪಿನಕಾಯಿಗೆ ಉಪಯೋಗಿಸುವ ಒಂದು ಹುಳಿಕಾಯಿ.

**ಅಂಬರ** (ನಾ). ೧. ಬಟ್ಟೆ; ಅರಿವೆ. ೨. ಆಕಾಶ. ೩. ಸೊನ್ನೆಯ ಸಂಕೇತ. ೪. ಹತ್ತಿರ. ೫. ಹತ್ತಿ. ~ಅಂಬರ=ಶಿವ. ~ಆಪಗೆ =ಗಂಗೆ. ~ಗಮನ=೧. ಆಕಾಶ ಸಂಚಾರ. ೨. ಆಕಾಶದಲ್ಲಿ ಸಂಚರಿಸುವವನು. ~ಚಿಕುರ=ವ್ಯೋಮಕೇಶ; ಶಿವ. ~ಚುಂಬಿ = ಮುಗಿಲನ್ನು ಮುಟ್ಟುವ. ~ಮಣಿ=ಸೂರ್ಯ.

**ಅಂಬರೀಷ** (ನಾ). ೧. ಹುರಿಯುವ ಓಡು; ಬಾಣಲೆ. ೨. ವಿಷ್ಣು. ೩. ಶಿವ. ೪. ಸೂರ್ಯ. ೫. ಎಳೆಯ ಪ್ರಾಣಿ. ೬. ಒಬ್ಬ ರಾಜನ ಹೆಸರು.

**ಅಂಬಲ** (ನಾ). ೧. ಚಾವಡಿ; ಸಭೆ ಸೇರುವ ಸ್ಥಳ. ೨. ಅಂಗಳ; ಹಜಾರ. ೩. ಅಂಬಲಿ.

**ಅಂಬಲಿ(ಳಿ)** (ನಾ). ಗಂಜಿ; ಕಳಿ.

**ಅಂಬಷ್ಟ** = ಅಂಬಷ್ಠ

**ಅಂಬಷ್ಠ** (ನಾ). ೧. ಮಾವುತ. ೨. ಕ್ಷೌರಿಕ.

**ಅಂಬಷ್ಠೆ** (ನಾ). ೧. ಇರುವಂತಿಗೆ. ೨. ಅಮಟೆ; ಅಂಬಟೆ. ೩. ಅಗಳುಶುಂಠಿ.

**ಅಂಬಳಕ** =ಅಂಬಕಳ.

**ಅಂಬಾರ** (ನಾ). ೧. ಹುಲ್ಲಿನ ಬಣವೆ. ೨. ಧಾನ್ಯದ ರಾಶಿ.

**ಅಂಬಾರಿ** (ನಾ). ೧. ಆನೆಯ ಮೇಲೆ ಕುಳಿತುಕೊಳ್ಳಲು ಹಾಕುವ ಭದ್ರಾಸನ. ೨. ಉಗ್ರಾಣ; ಕಣಜ.

**ಅಂಬಿ** (ನಾ). ದೋಣಿ; ನಾವೆ.

**ಅಂಬಿಗ** (ನಾ). ನಾವೆ ನಡೆಸುವವನು; ಬೆಸ್ತ.

**ಅಂಬು** (ಕ್ರಿ). ೧. ಒಣಗು; ಆರು. (ನಾ). ೨.ಬಾಣ; ಸರಳು. ೩.ನೀರು. ೪.ಮುಡಿವಾಳ. ~ಏಱು =ಬಾಣದ ಹೊಡೆತ; ಗಾಯ. ~ಕಂಟಕ = ಮೊಸಳೆ. ~ಕಂ(ಗಂ)ಡಿ = ಬಂದೂಕು, ಬಾಣ ಮೊದಲಾದವುಗಳಿಂದ ಹೊಡೆಯುವದಕ್ಕಾಗಿ ಮಾಡಿದ ಕೋಟೆಯ ಗೋಡೆಯಲ್ಲಿಯ ರಂಧ್ರ. ~ಕೀಶ =ಕಡಲು ಹಂದಿ; ನೀರಾಮೆ. ~ಕಾ(ಗಾ)ಱ(ರ) =ಚತುರ ಗುರಿಗಾರ. ~ಗುಳ್ಳೆ=ನೀರುಗುಳ್ಳೆ. ~ಗೂಡು=ಬತ್ತಳಿಕೆ. ~ಧರ= ಮೋಡ. ~ನಾಗ= ನೀರಾನೆ. ~ನಿಧಿ= ಅಂಬುಧಿ. ~ಪ್ರಸಾದ =ನೀರನ್ನು ತಿಳಿಮಾಡುವ ಚಿಲ್ಲದ ಬೀಜ. ~ಬೀ(ವೀ)ಡು = ಬತ್ತಳಿಕೆ. ~ರಾಶಿ=ಅಂಬುಧಿ. ~ವಾಹಿನಿ=ನೀರನ್ನು ಎತ್ತುವ ಪಾತ್ರೆ. ~ಸಂಭವ=ಅಂಬುಜ; ಕಮಲ. ~ಸರಣ =ನೀರಿನ ಓಟ. ~ಸರಣಿ =೧. ನೀರದಾರಿ; ಜಲಮಾರ್ಗ. ೨. ದೋಣಿ.

**ಅಂಬುಜ** (ನಾ). ೧. ನೀರಿನಲ್ಲಿ ಹುಟ್ಟಿದ್ದು. ೨. ಕಮಲ. ೩. ಶಂಖ. ೪. ನಿಚುಲವೃಕ್ಷ. **~ಆಕರ** = ಕಮಲದ ಕೊಳ. **~ಆಸನ** =ಬ್ರಹ್ಮ. **~ಉದರ** = ವಿಷ್ಣು. **~ನಾಭ** ವಿಷ್ಣು. **~ನೇತ್ರ** = ವಿಷ್ಣು. **~ಬಂಧು** = ಸೂರ್ಯ.

**ಅಂಬುದ** (ನಾ). ೧. ಮೋಡ. ೨. ಕೊನ್ನಾರಿ ಗೆಡ್ಡೆ. **~ಆಗಮ** = ಮಳೆಗಾಲ. **~ಋತು** ಮಳೆಗಾಲ. **~ಫಲ** = ಆಲಿಕಲ್ಲು. **~ರಥ** = ಇಂದ್ರ.

**ಅಂಬುಧಿ** (ನಾ). ೧. ನೀರು ನಿಲ್ಲುವ ಸ್ಥಳ; ಸಮುದ್ರ. ೨. ನಾಲ್ಕರ ಸಂಕೇತ. ೩. ನೀರಿನ ಪಾತ್ರೆ.

**ಅಂಬುಭೃತ್** (ನಾ). ಮೋಡ.

**ಅಂಬುರುಹ** = ಅಂಬುಜ.

**ಅಂಬೆ**(ನಾ). ೧.ತಾಯಿ. ೨.ಪಾರ್ವತಿ. ೩.ಕರು. ೪. ಹಸು. ೫. ದನಕರುಗಳ ಕೂಗಿನ ಅನುಕರಣ ಧ್ವನಿ. **~ಕ(ಗ)ಲಿಸು** = ಅಂಬೆ ಗಾಲಿಕ್ಕಿಸು. **~ಕಾ(ಗಾ)ಲು** = ಮಂಡಿ ಯೂರಿ ನಡೆಯುವಿಕೆ.

**ಅಂಭೋಜ** (ನಾ). ತಾವರೆ.

**ಅಂಭೋಜಿನಿ** (ನಾ). ೧. ಕಮಲ. ೨. ಕಮಲದ ವನ.

**ಅಂಭೋದ** =ಅಂಬುದ. **~ಕಾಲ** =ಮಳೆಗಾಲ **~ಪಥ** = ಆಕಾಶ. **~ಸ್ವನ** = ಗುಡುಗು.

**ಅಂಭೋಧಿ** = ಅಂಬುಧಿ.

**ಅಂಭೋರುಹ** = ಅಂಬುರುಹ.

**ಅಂಶ** (ನಾ). ೧. ಭಾಗ; ಘಟಕ. ೨. ಅಕ್ಷಾಂಶ ಅಥವಾ ರೇಖಾಂಶ. ೩. ಮೂರರ ಸಂಕೇತ. ೪. ಕೋನದ ಪರಿಮಾಣ; ಡಿಗ್ರಿ. **~ಗಣ** ದ್ರಾವಿಡ ಛಂದಸ್ಸಿನಲ್ಲಿ ಒಂದು ಮಾನ. **~ಪುರುಷ** = ವಿಭೂತಿ ಪುರುಷ.

**ಅಂಶಿ** (ನಾ). ೧. ಪಾಲುಗಾರ. (ಗು). ೨. ಅಂಶ ಗಳನ್ನು ಹೊಂದಿರುವ ೩. ಪ್ರಧಾನವಾದ.

**ಅಂಶಿಕ** (ನಾ). ೧. ಅಂಶ. ೨. ಅಂಶವುಳ್ಳವನು.

**ಅಂಶು** (ನಾ). ೧. ಕಿರಣ. ೨. ಮೊನೆ; ತುದಿ. ೩. ಉಡುಪು. ೪. ಹೆಸರು. ೫. ವೇಗ. **~ಜಾಲ** = ಕಿರಣಗಳ ಸಮೂಹ. **~ಹಸ್ತ** = ಸೂರ್ಯ.

**ಅಂಶುಮಂತ** (ನಾ). ೧. ಸೂರ್ಯ. ೨. ಚಂದ್ರ. ೩. ಪರ್ವತ.

**ಅಂಶುಮತಿ** (ನಾ). ೧. ಯಮುನಾನದಿ. ೨. ಬಂದೆಲಗ. ೩. ಇಂಗು.

**ಅಂಸ** (ನಾ). ೧. ಭುಜ. ೨. ಹೆಗಲ ಎಲುಬು. ೩. ಒಬ್ಬ ರಾಜನ ಹೆಸರು. **~ಕೂಟ** =೧. ಇಣಿ; ಹಿಣಿಲು. ೨. ಹೆಗಲು.

**ಅಕಚ** (ನಾ). ೧.ಕೇತುಗ್ರಹ. (ಗು). ೨. ಕೂದಲಿಲ್ಲದ; ಬೋಳುದಲೆಯ.

**ಅಕಟ** = ಅಕ್ಕಟ. **~ವಿಕಟ** ೧.ಬಹು ದೊಡ್ಡ. ೨. ಘೋರ. ೩. ಅಸಂಬದ್ಧತೆ.

**ಅಕಡಿ** = ಅಕ್ಕಡಿ.

**ಅಕರಣಿ** (ನಾ). ಸೋಲು.

**ಅಕರಾಸ್ತೆ** (ನಾ). ಅಕ್ಕರೆ; ಪ್ರೀತಿ.

**ಅಕರಾಳವಿಕರಾಳ** (ನಾ). ಘೋರ.

**ಅಕರ್ಣ** (ನಾ). ೧. ಹಾವು. (ಗು). ೨. ಕರ್ಣವಿಲ್ಲದ. ೩. ಕರ್ಣನಿಲ್ಲದ.

**ಅಕಲ** (ಗು). ಭಾಗವಿಲ್ಲದ. ಅಖಂಡ.

**ಅಕಲಂಕ** (ಗು). ನಿರ್ದುಷ್ಟ; ನಿರ್ಮಲ.

**ಅಕಲ್ಪಿತ** (ಗು). ೧. ಕಲ್ಪಿತವಲ್ಲದ. ೨. ಅನಿರೀಕ್ಷಿತವಾದ.

**ಅಕಸಾಲೆ** = ಅಕ್ಕಸಾಲೆ.

**ಅಕಸ್ಮಾತ್(ತು)** (ಅ). ಇದ್ದಕ್ಕಿದ್ದಂತೆ; ಹಠಾತ್ತಾಗಿ.

**ಅಕಳಸಕಳ** (ನಾ). ೧. ಚಕ್ಕಲುಗುಳಿ(ಲಿ); (ಅ). ೨. ಅವ್ಯವಸ್ಥಿತವಾಗಿ.

**ಅಕಾರ್ಯ** (ನಾ). ಮಾಡಬಾರದ ಕೆಲಸ.

**ಅಕಾಲ** (ನಾ). ಕಾಲವಲ್ಲದ ಕಾಲ. **~ವರ್ಷ** =೧. ಅಕಾಲದಲ್ಲಿ ಬರುವ ಮಳೆ. ೨. ಒಬ್ಬ ರಾಷ್ಟ್ರಕೂಟ ರಾಜನ ಬಿರುದು.

**ಅಕಿಂಚನ** (ಗು). ಏನೂ ಇಲ್ಲದ (ಬಡವ)

**ಅಕುತೋಭಯ** (ನಾ). ೧. ಮೋಕ್ಷ. (ಗು). ೨. ಎತ್ತಣ ಭಯವೂ ಇಲ್ಲದ. ~ನಿವಾಸ = ಮೋಕ್ಷಸ್ಥಾನ.

**ಅಕುಪ್ಯ** (ನಾ). ಹೀನವಲ್ಲದ ಲೋಹ; ಚಿನ್ನ ಅಥವಾ ಬೆಳ್ಳಿ.

**ಅಕೂಪಾರ** (ನಾ). ೧. ಸಮುದ್ರ. ೨. ದೊಡ್ಡ ಆಮೆ. ೩. ಸೂರ್ಯ. ೪. ಮೊರಡಿ; ಬಂಡೆ.

**ಅಕೃತ್ಯ** (ನಾ). ಕೆಟ್ಟಕೆಲಸ.

**ಅಕೃಷ್ಟ** (ಗು). ಉಳದ; ಬೇಸಾಯಮಾಡದ. ~ಪಚ್ಯ = ಬೇಸಾಯಮಾಡದೆ ಬೆಳೆಯನ್ನು ಕೊಡುವ.

**ಅಕ್ಕ** (ನಾ). ೧. ಹಿರಿಯ ಸಹೋದರಿ. ೨. ಹೆಂಗುಸರನ್ನು ಕರೆಯುವಾಗ ಗೌರವಾರ್ಥವಾಗಿ ಬಳಸುವ ಮಾತು. ೩. ಒಂದು ಬಗೆಯ ಮರ. ~ತಂಗಿಯರ ಹಣ್ಣು = ಪರಂಗಿ ಹಣ್ಣು; ಪಪ್ಪಾಯಿ.

**ಅಕ್ಕಜ** = ಅಚ್ಚಜ. ~(ಂ)ಕೊ(ಗೊ)ಳ್ = ಆಶ್ಚರ್ಯಹೊಂದು. ~(ಂ)ಪ(ಬ)ಡು = ಅಕ್ಕಜಂಗೊಳ್.

**ಅಕ್ಕಟ(ಟಾ)** (ಅ). ಆಶ್ಚರ್ಯ; ವಿಷಾದ, ಅಸೂಯೆಯನ್ನು ಸೂಚಿಸುವ ಉದ್ಗಾರ.

**ಅಕ್ಕಟೆ** (ಅ). ಶ್ರಮವಿಲ್ಲದೆ; ಬಿಟ್ಟಿಯಾಗಿ.

**ಅಕ್ಕಡ** = ಅಕ್ಕಡ.

**ಅಕ್ಕಡಿ** (ನಾ). ೧. ಹೊಲದಲ್ಲಿ ಎರಡು ಸಾಲುಗಳ ಮಧ್ಯೆ ಇತರ ಧಾನ್ಯವನ್ನು ಬೆಳೆಯುವುದಕ್ಕಾಗಿಮಾಡಿದ ಸಾಲು. ೨. ಆ ಸಾಲಿನಲ್ಲಿ ಬಿತ್ತುವ ಧಾನ್ಯ. ೩. ಭೂಮಿಯ ಒಂದು ಅಳತೆ. ೪. ಇಕ್ಕಟ್ಟು. ~ಸಡ್ಡೆ = ಅಕ್ಕಡಿ ಕಾಳನ್ನು ಬಿತ್ತುವ ಸಲಕರಣೆ.

**ಅಕ್ಕಡಿತಕ್ಕಡಿ** (ನಾ). ೧. ತೂಕ ಅಥವಾ ಮಾತಿನಲ್ಲಿ ಮೋಸ. ೨. ಮಾತಿನ ಮಲ್ಲ.

**ಅಕ್ಕಣೆ** (ನಾ). ೧.ಮಗ್ಗದಲ್ಲಿಹಾಸುಹೊಕ್ಕುಗಳ ಹೊಂದಿಕೆ. ೨. ಕಾಳು ತೆಗೆದ ಜೋಳದ ತೆನೆ.

**ಅಕ್ಕದಾಮ** (ನಾ). ಜಪಸರ; ಅಕ್ಷದಾಮ.

**ಅಕ್ಕದಾಳ** (ನಾ). ಪಗಡೆಯ ದಾಳ.

**ಅಕ್ಕಮಾಲೆ** (ನಾ). ಜಪಸರ.

**ಅಕ್ಕಮೆ** = ಅಚ್ಚುಮೆ.

**ಅಕ್ಕರ್** = ಅಚ್ಚುಅರ್.

**ಅಕ್ಕರ** (ನಾ). ೧. ಅಕ್ಷರ. ೨. ಬರವಣಿಗೆ. ೩. ರುಜು. ೪. ವಿದ್ಯೆ. ೫. ಪದ್ಯಜಾತಿಯಲ್ಲಿ ಒಂದು ಬಗೆ. ೬. ಹಣೆಬರೆಹ. ~(ಂ)ಪೊ(ಬೊ)ಯ್ = (ಶಾಸನದ) ಅಕ್ಷರಗಳನ್ನು ಕೆತ್ತು. ~ಇಗ ೧. ಅಕ್ಷರವನ್ನು ಕಲಿತವನು; ಪಂಡಿತ. ೨. ಗಿಳಿ. ~ಕಿ(ಗಿ)ವುಡ = ಅಕ್ಷರವನ್ನು ಕೇಳದವನು; ದಡ್ಡ. ~ಗೊಟ್ಟಿ ವಿದ್ವಾಂಸರ ಸಭೆ. ~ಜಾಣ = ಚತುರನಾದ ವಿದ್ವಾಂಸ. ~ಮಾಲೆ = ಅಕ್ಷರಮಾಲೆ; ವರ್ಣಮಾಲೆ. ~ವಿದ್ಯೆ = ಓದುಬರೆಹ.

**ಅಕ್ಕರೆ**=ಅಚ್ಚುಅರ್. ~ಮಗ =ಮುದ್ದಿನ ಮಗ.

**ಅಕ್ಕಲು** (ನಾ). ಬುದ್ಧಿ; ವಿವೇಕ. **~ಹುಷಾರಿ** = ಬುದ್ಧಿಯ ಪೂರ್ಣ ಸ್ವಸ್ಥತೆ.

**ಅಕ್ಕವೆ** = ಅಚ್ಚುಮೆ.

**ಅಕ್ಕಸ** (ನಾ) ೧. ಕನಿಕರದಿಂದ ಕೂಡಿದುದು; ಕಳವಳ. ೨. ರೋಷ; ಆಕ್ರೋಶ.

**ಅಕ್ಕಸತನ** (ನಾ). ಆಕ್ರೋಶದ ಸ್ವಭಾವ.

**ಅಕ್ಕಸಾಲೆ(ಲಿ)** (ನಾ). ಚಿನ್ನ, ಬೆಳ್ಳಿ ಕೆಲಸ ಮಾಡುವವನು. ~ಇಕೆ = ಅಕ್ಕಸಾಲೆಯ ಕೆಲಸ. ~ಇಗ = ಅಕ್ಕಸಾಲೆ.

**ಅಕ್ಕಳೆ** (ನಾ). ೧. ಜಿರಲೆ. ೨. ಬೇಲಿಯಲ್ಲಿ ಮಾಡಿದ ಸಣ್ಣಬಾಗಿಲು; ಕಡಕಲು.

**ಅಕ್ಕಳ್ಳು** (ನಾ). ಒಂದು ಬಗೆಯ ಅಕ್ಕಿ.

**ಅಕ್ಕಱ್(ಱು)** = ಅಚ್ಚುಅರ್. ~ಗೊ(ಕೊ)ಳ್ = ಪ್ರೀತಿಹೊಂದು.

**ಅಕ್ಕಾಡು** = ಅಚ್ಚಾಡು.

**ಅಕ್ಕಾರು** (ನಾ). ಅಳುವಿನಿಂದ ಗಂಟಲು ಒಣಗು.

ಅಕ್ಕಾಳಿ (ನಾ). ಒಂದು ಬಗೆಯ ಪಾಯಸ.

ಅಕ್ಕಿ (ನಾ). ೧. ಬತ್ತದ ಹೊಟ್ಟು ತೆಗೆದ ಮೇಲೆ ಉಳಿಯುವ ಕಾಳು. ೨. ಅಕ್ಕಿಯಂತಿರುವ ಕಾಳು. ೩. ಮಂತ್ರಾಕ್ಷತೆ. ೪. ರಂಗೋಲಿಯ ಚುಕ್ಕಿ. ೫. ಕಣ್ಣು. ~ಕ(ಗ)ರ್ಚು = ೧. ಅಕ್ಕಿಯನ್ನು ತೊಳೆ. ೨. ಅಕ್ಕಿ ತೊಳೆದ ನೀರು. ೩. ಕಲಗಚ್ಚು. ~ತರಿ = ಅಕ್ಕಿಯ ನುಚ್ಚು, -ರವೆ. ~ತ(ದ)ಳಿ =ಅಕ್ಕಿ ಕುಟ್ಟು. ~ಪಡಿ = ಅಡಿಗೆ ಮಾಡಿಕೊಳ್ಳಲು ಕೊಡುವ ಸಾಮಾನು. ~ಬೋಜ = ಒಂದು ಬಗೆಯ ಮದ್ಯ.

ಅಕ್ಕು (ಕ್ರಿ). ೧. ಹಿಡಿ; ಅಪ್ಪಿಕೊ. ೨. ಯೋಗ್ಯವಾಗು; ಸರಿಹೋಗು. ೩. ಜೀರ್ಣವಾಗು; ಲಯವಾಗು. (ನಾ). ೪. ಲಾಭ; ಸಂಪತ್ತು. ೫. ಇಲಿ.

ಅಕ್ಕುಡ (ನಾ). ಶೂರ; ಸತ್ವಶಾಲಿ.

ಅಕ್ಕುರುಳಿ (ನಾ). ಭಯ; ಅಂಜಿಕೆ.

ಅಕ್ಕುಲ (ನಾ). ಕುಲನಾಶ; ಕುಲಹಾನಿ. ~ಇಗ=ಕುಲಗೇಡಿ. ~ಇಸು =ಅಕ್ಕುಳಿಸು. ~ವಣಿಗ = ಹಕ್ಕುದಾರರಿಲ್ಲದ ಆಸ್ತಿಯನ್ನು ನುಂಗುವವನು.

ಅಕ್ಕುಳಿಕೆ (ನಾ). (ಹೊಟ್ಟೆ) ಒಳಕ್ಕೆ ಕುಗ್ಗುವುದು. ೨. ಚಕ್ಕಳಗುಳಿ.

ಅಕ್ಕುಳಿಸು (ಕ್ರಿ). ೧. (ಹೊಟ್ಟೆ) ಒಳಕ್ಕೆ ಇಳಿ; ಇಳಿಸು. ೨. ಹೆದರು; ಹಿಂದೆಗೆ. ೩.ದುಃಖಿಸು.

ಅಕ್ಕೆ (ನಾ). ೧. ಅಳುವಿಕೆ; ವಿಲಾಪ. ೨.ಲೇಪನ. ~ಬೊಟ್ಟು = ಅಕ್ಷತೆಬೊಟ್ಟು.

ಅಕ್ಪಾಡ (ನಾ). ೧. ಕುಸ್ತಿಯ ಕಣ. ೨. ರಂಗಸ್ಥಳ.

ಅಕ್ಲೀಬ (ನಾ). ಷಂಡನಲ್ಲದವನು; ಸಮರ್ಥ.

ಅಕ್ಷ (ನಾ). ೧. ಪಗಡೆ ಆಟದ ದಾಳ. ೨. ಪಗಡೆಯ ಕಾಯಿ. ೩.ಜೂಜು. ೪. ರಥದ ಅಚ್ಚು. ೫. ರಥ. ೬. ಒಂದು ಬಗೆಯ ಮರ. ೭. ಕಣ್ಣು. ೮. ಇಂದ್ರಿಯ. ೯.ಕವಡೆ. ೧೦. ಮೈಲುತುತ್ತ. ೧೧. ಆತ್ಮ. ೧೨. ಔದಾರ್ಯ. ೧೩. ಪುಷ್ಪಪಾತ್ರೆ. ೧೪. ಗಣಿ. ೧೫. ಹಾವು. ೧೬. ಗರುಡ. ೧೭. ಹುಟ್ಟುಕುರುಡ. ೧೮. (ತೂಕದ) ದಂಡಿಗೆಯ ಮುಳ್ಳು. ~ಅಂತಕ = ಹನುಮಂತ. ~ಆವಳಿ = ಜಪಸರ. ~ಕ್ರೀಡೆ ಪಗಡೆಯ ಆಟ. ~ದರ್ಶಕ = ೧. ನ್ಯಾಯ ಸಮೀಕ್ಷಕ. ೨. ಜೂಜಾಟದ ಮೇಲ್ವಿಚಾರಕ. ~ಧೂರ್ತ = ಜೂಜಿನಲ್ಲಿ ಮೋಸ ಮಾಡುವವನು. ~ಪಟಲ = ೧. ನ್ಯಾಯಸ್ಥಾನ. ೨. ನ್ಯಾಯಸಂಬಂಧವಾದ ಕಾಗದಪತ್ರಗಳ ಭಂಡಾರ. ~ಪಾದ = ೧. ನ್ಯಾಯದರ್ಶನದ ಅನುಯಾಯಿ. ೨. ಗೌತಮ ಋಷಿ. ~ಮಣಿ = ಜಪಮಣಿ. ~ಮಾಲೆ = ಜಪಮಾಲೆ. ~ಸೂತ್ರ = ಜಪಸರ. ~ಹೃದಯ = ಪಗಡೆ ಆಟದ ಗುಟ್ಟು.

ಅಕ್ಷಜ (ನಾ). ೧. ವಜ್ರ. ೨. ಸಿಡಿಲು. ೩. ವಿಷ್ಣು.

ಅಕ್ಷತ (ನಾ). ೧. (ಮೊನೆಮುರಿಯದ) ಅಕ್ಕಿ. ೨. ಮಂತ್ರಾಕ್ಷತೆ. ೩. ಹಣೆಯಲ್ಲಿ ಇಟ್ಟುಕೊಳ್ಳುವ ಬೊಟ್ಟು. (ಗು). ೪. ಮುರಿಯದ; ಮುಕ್ಕಾಗದ. ~ಆರೋಪಣ=ಆಶೀರ್ವದಿಸಿ ಅಕ್ಷತೆ ಹಾಕುವುದು. ~ಧೈರ್ಯ =೧.ಕುಂದದಿರುವ ಧೈರ್ಯ. ೨. ಧೈರ್ಯಗುಂದದ ವ್ಯಕ್ತಿ.

ಅಕ್ಷತೆ = ಅಕ್ಷತ.

ಅಕ್ಷಮ(ಗು). ೧.ಕ್ಷಮೆಯಿಲ್ಲದ. ೨.ಅಸಮರ್ಥ.

ಅಕ್ಷಮ್ಯ (ಗು). ಕ್ಷಮಿಸಲಾಗದ.

ಅಕ್ಷಯ (ನಾ). ೧. ಅರುವತ್ತು ಸಂವತ್ಸರಗಳಲ್ಲಿ ಒಂದು. ೨. ಕಣ್ಣು. ೩. ಕೆಲಸ. ೪. ಮರ. ೫. ಗುಹೆ. ೬. ನಾರಿ. (ಗು). ೭. ಕ್ಷಯವಿಲ್ಲದ; ನಾಶವಿಲ್ಲದ. ~ತೂಣೀರ = ಬರಿದಾಗದ ಬತ್ತಳಿಕೆ. ~ದಾನ = ಶಾಶ್ವತ ಫಲವನ್ನು ಕೊಡುವ ದಾನ. ~ಪದ=ಮೋಕ್ಷ. ~ಪಾತ್ರೆ = ೧. ಬರಿದಾಗದ ಪಾತ್ರೆ. ೨. ಭಿಕ್ಷಾಪಾತ್ರೆ.

**ಅಕ್ಷರ** (ನಾ). ೧. ಅಕಾರ ಮೊದಲಾದ ವರ್ಣ. ೨. ಲಿಪಿ; ಬರೆಹ. ೩. ಪತ್ರ. ೪. ಮಾತು. ೫. ಬ್ರಹ್ಮ. ೬. ಶಿವ. ೭. ವಿಷ್ಣು. ೮. ಮೋಕ್ಷ. ೯. ನೀರು. ೧೦. ಆಕಾಶ. ೧೧. ತಪಸ್ಸು. (ಗು) ೧೨. ನಾಶವಿಲ್ಲದ; ಸ್ಥಿರವಾದ. **~ಅಭ್ಯಾಸ** = ಅಕ್ಷರಗಳನ್ನು ಕಲಿಯುವುದು. **~ಅರ್ಥ** = ಶಬ್ದದ ವಾಚ್ಯಾರ್ಥ. **~ಆತ್ಮಕ** = ಅಕ್ಷರಗಳಿಂದ ಕೂಡಿದ. **~ಕಲ್** = ಅಕ್ಷರವನ್ನು ಬರೆದ ಕಲ್ಲು; ಶಿಲಾಶಾಸನ. **~ಕಾರ್ಖಾನೆ** = ಅಚ್ಚಿನ ಮೊಳೆಗಳನ್ನು ತಯಾರಿಸುವ ಕಾರ್ಖಾನೆ. **~ಕೇವಲಿ(ಳಿ)** = ಒಂದು ವಿದ್ಯೆ. **~ಚಣ** = ಓದುಬರಹದಲ್ಲಿ ಸಮರ್ಥ. **~ಜೀವಕ** = ಬರವಣಿಗೆಯಿಂದ ಜೀವಿಸುವವನು; ಶಾನುಭೋಗ. **~ದಾರಿದ್ರ್ಯ** = ಅಕ್ಷರಜ್ಞಾನವಿಲ್ಲದಿರುವುದು. **~ಪುರುಷ** = ಪರಮಾತ್ಮ. **~ವಿದ್ಯೆ** = ೧. ಓದುಬರೆಹ. ೨. ಬ್ರಹ್ಮವಿದ್ಯೆ. **~ಶತ್ರು** = ೧. ಓದುಬರೆಹ ಬಾರದವನು. ೨. ಓದುಬರೆಹವನ್ನು ದ್ವೇಷಿಸುವವನು. **~ಸಂಕೇತ** = ಒಂದು ಬಗೆಯ ಗೂಢಲಿಪಿ. **~ಸಂಜ್ಞೆ** = ೧. ಅಕ್ಷರಗಳನ್ನು ಗುರುತಿಸುವ ಸಂಕೇತ. ೨. ವ್ಯಂಜನಾಕ್ಷರಗಳಿಂದ ಸಂಖ್ಯೆಯನ್ನು ಸೂಚಿಸುವುದು.

**ಅಕ್ಷರಜ್ಞ** (ನಾ). ಓದುಬರೆಹ ಬಲ್ಲವನು; ವಿದ್ಯಾವಂತ.

**ಅಕ್ಷರಶಃ** (ಅ). ೧. ಒಂದೊಂದು ಅಕ್ಷರವನ್ನೂ ಹಿಡಿದು. ೨. ಪ್ರತಿಯೊಂದು ವಿವರದಲ್ಲೂ.

**ಅಕ್ಷಾಂಶ** (ನಾ). ಅಕ್ಷರೇಖೆಯ ಒಂದು ಭಾಗ; ಭೂಗೋಳದ ಮೇಲೆ ಕಲ್ಪಿಸಿದ ವೃತ್ತ,-ರೇಖೆ. **~ರೇಖೆ** = ಭೂಪಟದಲ್ಲಿ ಸಮಭಾಜಕ ವೃತ್ತಕ್ಕೆ ಸಮಾನಾಂತರವಾಗಿ ಎಳೆದಿರುವ ರೇಖೆ.

**ಅಕ್ಷಾರ** (ನಾ). ೧. ಅಕ್ಷರ; ಲಿಪಿ. (ಗು). ೨. ಉಪ್ಪಿಲ್ಲದ; ಕ್ಷಾರವಿಲ್ಲದ.

**ಅಕ್ಷಿ** (ನಾ). ೧. ಕಣ್ಣು. ೨. ತೂತು. **~ಕರ್ಣ** = ಹಾವು. **~ಕೂಟಕ** = ಕಣ್ಣಿನ ಗುಡ್ಡೆ. **~ಗತ** = ೧. ಕಣ್ಣಿಗೆ ಬಿದ್ದ. ೨. ಕಣ್ಣು ಕುಕ್ಕುವ. **~ತಾರಕ** = ಕಣ್ಣಿನ ಪಾಪೆ, -ಗೊಂಬೆ. **~ಪಕ್ಷ್ಮ** = ಕಣ್ಣುರೆಪ್ಪೆ. **~ಭ್ರಮು** = ೧. ಕಣ್ಣಿನ ಚಲನೆ. ೨. ಕಣ್ಣಿನ ಭ್ರಾಂತಿ. **~ಮೂಲ** = ಕಣ್ಣಿನ ಕುಣಿಕೆ.

**ಅಕ್ಷೀವ(ಬ)** (ನಾ). ೧. ನುಗ್ಗೆಯ ಗಿಡ. ೨. ಉಪ್ಪು. (ಗು). ೩. ಕುಡಿದು ಮತ್ತೇರಿದ,

**ಅಕ್ಷೋಭ** (ನಾ). ೧. ಸ್ಥೈರ್ಯ. ೨. ಆನೆಯನ್ನು ಕಟ್ಟುವ ಕಂಭ. (ಗು). ೩. ಕ್ಷೋಭೆಯಿಲ್ಲದ.

**ಅಕ್ಷೋಹಿಣಿ** (ನಾ). = ಅಕ್ಷೌಹಿಣಿ.

**ಅಕ್ಷೌಹಿಣಿ** (ನಾ).೨೧,೮೭೦ ಆನೆ, ಅಷ್ಟೇ ರಥ, ೬೫,೬೧೦ ಕುದುರೆ ಮತ್ತು ೧,೦೯,೩೫೦ ಕಾಲಾಳುಗಳಿರುವ ಸೈನ್ಯ.

**ಅಖಂಡ** (ಗು). ಕತ್ತರಿಸಿ ಹೋಗದ; ಇಡಿಯಾದ. **~ದೀಪ** = ನಂದಾದೀಪ; ಸದಾ ಉರಿಯುತ್ತಿರುವ ದೀಪ. **~ಪತ್ರ** = ಮರಗೆಣಸು ಮೊದಲಾದುವುಗಳಲ್ಲಿದ್ದಂತೆ ವಿಭಾಗ ಹೊಂದದ ಎಲೆ.

**ಅಖಂಡನ** (ನಾ). ೧. ಖಂಡಿಸದಿರುವಿಕೆ ೨. ಕಾಲ. (ಗು). ೩. ಭಂಗವಾಗದ; ಪೂರ್ಣವಾದ.

**ಅಖರ್ವ** (ಗು). ೧.ಕುಳ್ಳಲ್ಲದ. ೨.ಮಹತ್ತಾದ.

**ಅಖಲ್ಯ** (ನಾ). ೧. ಹೇಡಿ. ೨. ಅಪ್ರಯೋಜಕ.

**ಅಖಾಡ** = ಅಕ್ಖಡ.

**ಅಖಾತ** (ನಾ). ೧. ಕೊಳ; ಸರೋವರ. ೨. ಕೊಲ್ಲಿ. (ಗು). ೩. ಅಗೆಯದ.

**ಅಖಿಲ(ಳ)** (ಗು). ಇಡಿಯಾದ; ಸಮಗ್ರವಾದ; ಕೊರೆಯಿಲ್ಲದ. **~ವೇದಿ** = ಸರ್ವಜ್ಞ.

**ಅಗ** (ನಾ). ೧. ಬೆಟ್ಟ. ೨. ಮರ. ೩. ಹಾವು. ೪. ಸೂರ್ಯ. ೫. ಒಳಗು; ಒಳಗಡೆ.

೬. ಪಾಪ. ~ಅರಿ = ಇಂದ್ರ. ~ಇಂದ್ರ = ಹಿಮಾಚಲ. ~(ಂ)ಕೊ(ಗೊ)ಳ್ = ಒಳಕೊಳ್ಳು; ಸ್ವಾಧೀನಪಡಿಸಿಕೊ. ~ಜಾತೆ = ಪಾರ್ವತಿ. ~ನಿವಾಸಿ = ಶಿವ. ~ಹರ = ಪಾಪಹರ; ಶಿವ.

ಅಗಚಾಟಲು(ಲೆ) (ನಾ). ಆಯಾಸ; ಶ್ರಮ.

ಅಗಟು (ನಾ). ಕಮಟುವಾಸನೆ.

ಅಗಡ(ಡು) (ನಾ). ೧. ತುಂಟ. ೨. ತುಂಟತನ. (ಗು). ೩. ಹಿಡಿತಕ್ಕೆ ಸಿಕ್ಕದ. ~ವಾ(ವಾ)ತು = ಅಪವಾದ; ನಿಂದೆ.

ಅಗಣಿ = ಅಗ್ಗಣಿ.

ಅಗಣಿತ (ನಾ). ೧. ಅಳತೆಗೆ ಮೀರಿದುದು. ೨. ಸಮೂಹ. (ಗು). ೩. ಲೆಕ್ಕವಿಲ್ಲದ.

ಅಗಣ್ಯ (ಗು). ೧. ಎಣಿಸಲಾಗದ; ಅಸಂಖ್ಯಾತ. ೨. ಗಣನೆಗೆ ಬಾರದ.

ಅಗತೆ = ಅಗಟಿತ್ತಿ.

ಅಗತ್ಯ (ನಾ). ೧. ಬೇರೆ ಗತಿಯಿಲ್ಲದ ಸ್ಥಿತಿ. ೨. ಬೇರೆ ಮಾರ್ಗವಿಲ್ಲದಿರುವಿಕೆ. ೩. ಆವಶ್ಯಕತೆ. ೪. ಉತ್ಕಟವಾದ ಆಸೆ. ~ಬೀಳು = ಆವಶ್ಯಕತೆಯುಂಟಾಗು.

ಅಗದ (ನಾ). ೧. ಆರೋಗ್ಯ. ೨. ಔಷಧ. ೩. ವಿಷಕ್ಕೆ ಚಿಕಿತ್ಸೆ ಹೇಳುವ ಶಾಸ್ತ್ರಭಾಗ. (ಗು). ೪. ರೋಗವಿಲ್ಲದ. ~ತಂತ್ರ = ವಿಷಚಿಕಿತ್ಸಾತಂತ್ರ.

ಅಗದಿ(ೀ) (ಅ). ಸಂಪೂರ್ಣವಾಗಿ; ಪೂರ್ತಿಯಾಗಿ.

ಅಗಪೆ (ನಾ). ಚಿಪ್ಪಿನ ಸೌಟು.

ಅಗಮ (ನಾ). ೧. ಬೆಟ್ಟ. ೨. ಮರ. (ಗು). ೩. ಚಲಿಸದ.

ಅಗಮ್ಯ (ಗು). ೧. ಹೋಗಿ ಸೇರಲಾಗದ. ಮುಟ್ಟಲಸಾಧ್ಯವಾದ. ೩. ಬುದ್ಧಿಗೆಟುಕದ. ೪. ಕೂಡಬಾರದ. ~ಗಮನ = ೧. ಹೋಗಬಾರದ ಕಡೆ ಹೋಗುವುದು. ೨. ಕೂಡಬಾರದವರನ್ನು ಕೂಡುವುದು.

ಅಗರು = ಅಗಿಲ್. ~ಗಂಧ = ಅಗಿಲುಗಂಧ. ~ಧೂಪ = ಅಗರಿನ ಧೂಪ. ~ಬತ್ತಿ = ಊದುಬತ್ತಿ.

ಅಗರ್ತೆ = ಅಗಟಿತ್ತಿ.

ಅಗ(ಲ್)ಲು (ಕ್ರಿ). ೧. ಬಿಟ್ಟುಹೋಗು; ತೊರೆ. ೨. ವಿಶಾಲವಾಗು. (ನಾ). ೩. ಊಟದ ತಟ್ಟೆ; ತಾಟು. ~ಇಕ್ಕಿಸು = ಊಟಕ್ಕೆ ತಟ್ಟೆ ಇಡು; ಊಟಕ್ಕೆ ಬಡಿಸು. ~ಇಡು = ಊಟಕ್ಕೆ ತಟ್ಟೆ ಹಾಕು. ~ಔತಣ = ದೊಡ್ಡ ಔತಣ; ಭೂರಿಭೋಜನ. ~ಕೆ = ಬಿಟ್ಟುಹೋಗುವಿಕೆ. ಅಗಲುವಿಕೆ; ವಿಯೋಗ.

ಅಗಲ (ನಾ) ೧. ವಸ್ತುವಿನ ಅಡ್ಡಳತೆ. ೨. ವಿಶಾಲತೆ. ~(ಂ)ಪೆ(ಪೆ)ಡು(ರು) = ಅಗಲವಾಗಿರು. ~ಇಸು = ೧. ಬೇರ್ಪಡಿಸು; ದೂರಮಾಡು. ೨. ಹಿಗ್ಗಲಿಸು; ಹರಡು.

ಅಗಲಿತು(ತ್ತು) (ಗು). ಅಗಲವಾದ.

ಅಗಸ (ನಾ). ೧. ಬಟ್ಟೆ ಮಡಿಮಾಡುವವನು; ಮಡಿವಾಳ; ಅಸಗ ೨. ಒಂದು ಗಿಡಮೂಲಿಕೆ.

ಅಗಸೆ (ನಾ). ೧. ಹೆಬ್ಬಾಗಿಲು; ಮಹಾದ್ವಾರ. ೨. ಒಂದು ಬಗೆಯ ಮರ. ೩. ಒಂದು ಬಗೆಯ ಧಾನ್ಯ. ~ಬಾಗಿಲ್(ಲು) = ಹೆಬ್ಬಾಗಿಲು.

ಅಗಳ್ = ಅಗುಟಿಸ್.

ಅಗಳತೆ = ಅಗಟಿತ್ತಿ.

ಅಗಳಿ = ಅಗ್ಗಣಿ.

ಅಗಳು = ಅಗುಟಿಸ್.

ಅಗಳ್ತೆ = ಅಗಟಿತ್ತಿ.

ಅಗಟಿಸ್ = ಅಗುಟಿಸ್.

ಅಗಟಿತ್ತಿ(ಳ್ತೆ) (ನಾ). ೧. ತೋಡುವುದು; ಅಗೆಯುವುದು. ೨. ಕೋಟೆಯ ಅಗಳು; ಕಂದಕ.

ಅಗಾಡಿ (ನಾ). ೧. ಮುಂಭಾಗ; ಮುಂದುಗಡೆ. ೨. ಕುದುರೆಯ ಮುಂಗಾಲುಗಳ ಹಗ್ಗ.

ಅಗಾಧ (ನಾ). ೧. ಗುಳಿ; ಗುಂಡಿ; ಆಳ. (ಗು). ೨. ಆಳವಾದ. ೩. ಅಸಾಧ್ಯ; ಅತ್ಯಧಿಕವಾದ.

ಅಗಾರ (ನಾ). ಮನೆ; ಬೀಡು.

ಅಗಾವು (ಗು). ಮುಂಗಡವಾಗಿ ಕೊಡುವ.

ಅಗಿ (ಕ್ರಿ). ೧. ಹೆದರು; ಭಯಪಡು ೨. ಹಿಗ್ಗು. ೩. ಜಗಿ. ೪. ತೊನೆದಾಡು. ೫. ವ್ಯಾಪಿಸು. ೬. ಗರ್ಜಿಸು. (ನಾ). ೭. ನಡುಕ.

ಅಗಿಲ್(ಲು) (ನಾ). ಒಂದು ಜಾತಿಯ ಸುಗಂಧದ ಮರ. ~ಇಲಿ = ಅಗಿಲು ಇಲ್ಲದ; ಪರಿಮಳವಿಲ್ಲದ.

ಅಗುಂತಿ (ನಾ). ೧. ಹೆಚ್ಚಳ; ಅತಿಶಯ. ೨. ರಾಶಿ; ಒಟ್ಟಲು. ~ಪ(ವ)ಡೆ = ಹೆಚ್ಚಾಗು; ಸಮೃದ್ಧಿಯಾಗು.

ಅಗುಂದಲೆ (ನಾ). ಅತಿಶಯ; ಹೆಚ್ಚಳ.

ಅಗುಂಬಿಸು (ಕ್ರಿ). ರಾಶಿಮಾಡು; ಒಟ್ಟು.

ಅಗುಚು = ಅಗುರ್ಚು.

ಅಗುಣಿ = ಅಗ್ಗಳಿ.

ಅಗುರ್(ರು) (ಕ್ರಿ). ೧. ಸಾಹಸವನ್ನು ತೋರು. ೨. ಹೆಚ್ಚಾಗು. ೩. ಒಂದು ಜಾತಿಯ ಸುಗಂಧದ ಮರ. ೪. ಸುಗಂಧ. ~ಇಸು = ಸೇರಿಸು; ಕೀಲಿಸು. ~ಚು =ಅಗುರಿಸು.

ಅಗುರ್ವು(ರ್ಬು) (ನಾ). ೧. ಭಯಂಕರತೆ; ಉಗ್ರತೆ. ೨. ಸಾಹಸ; ಪರಾಕ್ರಮ. ೩. ಅತಿಶಯ. ~ಇಸು= ೧. ಭಯಪಡಿಸು; ದಿಗಿಲುಗೊಳಿಸು. ೨. ಭಯಪಡು; ದಿಗಿಲು ಬೀಳು. ೩. ಹೆಚ್ಚಿಸು; ಅತಿಶಯಗೊಳಿಸು. ೪. ಹೆಚ್ಚು; ಅತಿಶಯವಾಗು. ೫. ಹಾರು; ಸ್ಪಂದಿಸು. ~ಕಿ(ಗಿ)ಡು = ಶಕ್ತಿಹೀನವಾಗು. ~ಕೊ(ಗೊ)ಳ್ = ಹೆದರು; ಭಯಪಡು.

ಅಗುಸೆ (ನಾ). ಹೆಬ್ಬಾಗಿಲು; ಮಹಾದ್ವಾರ.

ಅಗುಳಿ = ಅಗ್ಗಳಿ.

ಅಗುಳು = ಅಗುಳ್.

ಅಗುಳ್(ರ್ಳ್, ಳು, ೞು) (ಕ್ರಿ). ೧. ಅಗೆ; ತೋಡು. ೨. ಮುಳುಗು. (ನಾ). ೩. ಕಂದಕ. ೪. ಬೆಂದ ಅಕ್ಕಿಯ ಕಾಳು. ~ಇಸು = ಅಗೆಯಿಸು; ತೋಡಿಸು. ~ಊಟ = (ಮಗುವಿಗೆ) ಅನ್ನಪ್ರಾಶನ. ~ಚು = ಮುಳುಗಿಸು; ಅದ್ದು.

ಅಗೆ (ಕ್ರಿ). ೧. ಬಗಿ; ತೋಡು. (ನಾ). ೨. ಮೊಳಕೆ. ೩. (ನಾಟಿಮಾಡುವ) ಸಸಿ. ೪. ಕೊಂಬೆ. ~ಇ(ಯಿ)ಕ್ಕು = ಒಟ್ಟಲು ಹಾಕು. ~ಎ(ಯೆ)ತ್ತು = ಮೊಳಕೆಯನ್ನು ಕೀಳು. ~ಕಟ್ಟು = ಸಸಿ ಬೆಳೆಯಿಸು; ಮೊಳಕೆಕಟ್ಟು. ~ತೊ(ದೋ)ಱು(ರು) = ಮೊಳೆ; ಅಂಕುರಿಸು. ~ಬಿಡು = ಬೀಜ ಹಾಕು; ಬಿತ್ತು. ~ಪ(ವ)ಡೆ =೧. ಮೊಳಕೆಯನ್ನು ಪಡೆ. ೨. ರೆಂಬೆಬಿಡು. ~ಪೊ(ವೊ)ಯ್ = ಬೀಜವನ್ನು ಬಿತ್ತು. ~ಹುಣ್ಣಿಮೆ(ವೆ) = ವೈಶಾಖಮಾಸದ ಹುಣ್ಣಿಮೆ.

ಅಗೆತ (ನಾ). ೧. ಅಗೆಯುವುದು. ೨. ಭೂಶೋಧನ.

ಅಗೇಡಿ (ನಾ). ಒಟ್ಟಲು; ಪಾತಿ; ಮಡಿ.

ಅಗೌಕಸ (ನಾ). ಮರದಲ್ಲಿ ವಾಸವಾಗಿರುವ ಪ್ರಾಣಿ; ಮಂಗ; ಕೋತಿ.

ಅಗ್ಗ (ನಾ). ೧. ಕಡಿಮೆ ಬೆಲೆ. ೨. ಅಲ್ಪ. ೩. ಬೆಲೆ; ಕ್ರಯ. ೪. ಶ್ರೇಷ್ಠತೆ. ೫. ಸಾಮರ್ಥ್ಯ. ೬. ತುದಿ. ~ಆಳು = ಕೀಳು ಮನುಷ್ಯ. ~(ಂ)ಪೆ(ಬೆ)ಱು(ರು) = ಶ್ರೇಷ್ಠವಾಗು. ~(ಂ)ಮಾಡು = ಹೆಚ್ಚು ಮಾಡು. ~ಪಾಡು = ಮಾನಹೀನತೆ; ಗೌರವಹೀನವಾಗಿರುವಿಕೆ. ~ಸುಗ್ಗಿ = ಪದಾರ್ಥಗಳು ಸುಲಭವಾಗಿ, ಯಥೇಚ್ಛವಾಗಿ ಸಿಕ್ಕುವ ಸ್ಥಿತಿ.

ಅಗ್ಗಂಟು (ನಾ). ಬಿಡಿಸಲಾಗದ ಗಂಟು; ಕಗ್ಗಂಟು.

ಅಗ್ಗಡ = ಅಗ್ಗಲ.

ಅಗ್ಗಡಲ್(ಲು) (ನಾ). ೧. ಆಳವಾದ ಕಡಲು. ೨. ರಕ್ತದ ಸಮುದ್ರ.

ಅಗ್ಗರಣೆ (ನಾ). ೧. ಒಗ್ಗರಣೆ. ೨. ಹಗ್ಗ.

ಅಗ್ಗರಿಸು = ಒಗ್ಗರಿಸು.

ಅಗ್ಗಲ(ಳ) (ನಾ). ೧. ಅಧಿಕತೆ; ಶ್ರೇಷ್ಠತೆ. (ಗು). ೨. ಶ್ರೇಷ್ಠ. ~ಇಸು = ೧. ಹೆಚ್ಚಿಸು; ದೊಡ್ಡದುಮಾಡು. ೨. ಹೆಚ್ಚಾಗು; ದೊಡ್ಡದಾಗು. ೩. ಪ್ರಬಲವಾಗು. ೪. ಹಿಗ್ಗು; ನಲಿ. ೫. ಹರಡು; ವ್ಯಾಪಿಸು. ೬. ಒದಗು; ಉಂಟಾಗು. ~ಕ(ಗ)ಣ್ = ೧. ಹೆಚ್ಚಾದ (ಮೂರನೆಯ) ಕಣ್ಣು. ೨. ವಿಶೇಷ ದೃಷ್ಟಿ. ~ಕ(ಗ)ಣ್ಣ = ಹೆಚ್ಚಾದ (ಮೂರನೆಯ) ಕಣ್ಣುಳ್ಳವನು; ಶಿವ. ~ಪದಾತಿ = ದೊಡ್ಡ ಕಾಲಾಳು ಪಡೆ.

ಅಗ್ಗವಣಿ (ನಾ). ಅರ್ಘ್ಯದ ನೀರು; ಪೂಜೆಯ ನೀರು.

ಅಗ್ಗಳಿಕೆ (ನಾ). ೧. ದೊಡ್ಡಸ್ತಿಕೆ; ಅತಿಶಯ. ೨. ಸಾಮರ್ಥ್ಯ.

ಅಗ್ಗಱಿ(ಳಿ) (ನಾ). ೧. ಕದವನ್ನು ತೆಗೆಯಲಾಗದಂತೆ ತಡೆಯುವ ಅಡ್ಡಮರ; ಲಾಳವಿಂಡಿಗೆ; ತಾಪಾಳ. ೨. ತಮಟೆ ಬಡಿಯುವ ಕೋಲು. ೩. ಆಧಿಕ್ಯ; ಅತಿಶಯ.

ಅಗ್ಗಾಡಿ (ನಾ). ಲಜ್ಜೆಗೆಟ್ಟ ಹೆಂಗಸು.

ಅಗ್ಗಾಯಿತಿ = ಅಗ್ಗಾಯಿಲೆ.

ಅಗ್ಗಾಯಿಲೆ (ನಾ). ಹೆಚ್ಚು ಹಣವನ್ನು ತೆಗೆದುಕೊಳ್ಳುವ ಸೂಳೆ.

ಅಗ್ಗಿ (ನಾ). ೧. ಬೆಂಕಿ. ~ಕೊ(ಗೊ)ಂಡ = ಅಗ್ನಿಕುಂಡ. ~ಮೊಗ = ದೇವತೆ. ~ಬೆ(ವೆ)ಗಡು = ಬೆಂಕಿಯ ಭಯ.

ಅಗ್ಗಿಟಿಕೆ = ಅಗ್ಗಿಷ್ಟಗೆ.

ಅಗ್ಗಿಷ್ಟಗೆ (ನಾ). ೧. ಕೆಂಡವನ್ನು ಇಟ್ಟು ಕಾಯಿಸುವ ಸಾಧನ; ಕುಮುಟಿ. ೨. ಹೋಮಕುಂಡ.

ಅಗ್ಗು = ಅೞ್ಗು.

ಅಗ್ನಿ (ನಾ). ೧. ಬೆಂಕಿ. ೨. ತ್ರೇತಾಯುಗ. ೩. ಜಠರಾಗ್ನಿ. ೪. ಮೂರರ ಸಂಕೇತ. ೫. ಚಿನ್ನ. ೬. ಚಿತ್ರಮೂಲ. ~ಕಾರ್ಯ = ಅಗ್ನಿಪೂಜೆ. ~ಕುಂಡ = ಹೋಮಕ್ಕಾಗಿ ಇರುವ ಬೆಂಕಿಯ ಗುಂಡಿ. ~ಕುಕ್ಕುಟ = ೧. ಬೆಂಕಿಯ ಕಿಡಿ. ೨. ಬೆಂಕಿಯನ್ನು ನುಂಗುವ ಕೋಳಿ. ~ಕೋಣ = ಆಗ್ನೇಯ ದಿಕ್ಕು. ~ಕ(ಗ)ಣ್ಣ = ಶಿವ. ~ಗರ್ಭ = ೧. ಸೂರ್ಯಕಾಂತಮಣಿ. ೨. ಯಜ್ಞದ ಅರಣಿ. ೩. ಶಮಿ. ೪. ಭೂಮಿ. ~ಕೆ(ಗೆ)ಯ್ಯ = ಭಸ್ಮಾಸುರ. ~ಚಿತ್ತು = ನಿತ್ಯವೂ ಅಗ್ನಿಹೋತ್ರ ನಡೆಸುತ್ತಿರುವವನು. ~ಜ್ವಾಲೆ = ೧. ಬೆಂಕಿಯ ಉರಿ. ೨. ಕೆಂಪುಹೂ ಬಿಡುವ ಜಲಪಿಪ್ಪಲಿ ಗಿಡ. ~ತಾರೆ = ಕೃತ್ತಿಕಾನಕ್ಷತ್ರ. ~ದಿಕ್ಕು = ಆಗ್ನೇಯ ದಿಕ್ಕು. ~ದಿಬ್ಯ(ವ್ಯ) = ಅಗ್ನಿಪರೀಕ್ಷೆ. ~ದೀಪನ = ೧. ಬೆಂಕಿಯನ್ನು ಉಜ್ವಲಗೊಳಿಸುವುದು. ೨. ಜಠರಾಗ್ನಿಯನ್ನು ಪುಟಗೊಳಿಸುವುದು. ೩. ಕಡವ ಎಂಬ ಗಿಡ. ~ನಯನ = ಶಿವ. ~ಪರೀಕ್ಷೆ = ೧. ಬೆಂಕಿಯನ್ನು ಹಿಡಿದು ತನ್ನ ಪ್ರಾಮಾಣಿಕತೆಯನ್ನು ಸಿದ್ಧಪಡಿಸುವ ಪರೀಕ್ಷೆ. ೨. ಕಠಿನ ಪರೀಕ್ಷೆ. ~ಪರ್ಣಿ = ಗೇರುಬೀಜ. ~ಪರ್ವತ = ಜ್ವಾಲಾಮುಖಿ. ~ಪುತ್ರಿ = ದ್ರೌಪದಿ. ~ಫಲ = ವಜ್ರ. ~ಬಾಣ = ಆಗ್ನೇಯಾಸ್ತ್ರ. ~ಭವ = ಕುಮಾರಸ್ವಾಮಿ. ~ಮಂಥ = ೧. ಬೆಂಕಿಯನ್ನು ಹುಟ್ಟಿಸುವುದು. ೨. ಒಂದು ಬಗೆಯ ನೆಲ್ಲಿ. ~ಮಾಂದ್ಯ = ಜೀರ್ಣಶಕ್ತಿ ಕುಗ್ಗಿರುವುದು. ~ಮಿತ್ರ = ವಾಯು. ~ಮುಖ = ೧. ದೇವತೆ. ೨. ಬ್ರಾಹ್ಮಣ.

~ಮುಖಿ = ಗೇರುಮರ. ~ವೀರ್ಯ =ಶಿವ. ~ಶಾಮಕ=ಬೆಂಕಿಯನ್ನು ಆರಿಸುವ (ಸಾಧನ). ~ಶಾಲೆ=ಯಜ್ಞಶಾಲೆ. ~ಶಿಖ = ೧. ಬೆಂಕಿಯಂತೆ ತುದಿಯುಳ್ಳದ್ದು. ೨. ಕುಂಕುಮ ಕೇಸರಿ. ೩. ಕುಸುಬೆ ಗಿಡ. ೪. ದೀಪ. ೫. ಆಕಾಶಬಾಣ. ೬. ಚಿನ್ನ. ~ಶಿಖೆ=೧. ಬೆಂಕಿಯ ಉರಿ. ೨. ಕೋಲು ಕುಟುಕನ ಗಿಡ. ೩. ಬೆಣ್ಣೆಬಿದಿರು ಸೊಪ್ಪು. ~ಶೌಚ =೧. ಬೆಂಕಿಯಿಂದ ಶುದ್ಧಿಗೊಳಿಸುವುದು. ೨. ಉಬ್ಬೆಗೆ ಹಾಕಿ ಶುಚಿಮಾಡುವುದು. ~ಸಂಸ್ಕಾರ = ಅಗ್ನಿಗೆ ಸಂಸ್ಕಾರ ಮಾಡುವುದು. ೨. ಅಗ್ನಿಯಿಂದ ಸಂಸ್ಕಾರ ಮಾಡುವುದು; ಸುಡುವುದು. ~ಸರ್ಪ =ಒಂದು ಉಷ್ಣವ್ಯಾಧಿ. ~ಸ್ಫೋಟ= ಸಿಡಿಮದ್ದು. ~ಹೋತ್ರ = ೧. ಅಗ್ನಿಯನ್ನು ಉದ್ದೇಶಿಸಿ ಮಾಡುವ ಹೋಮ. ೨. ಅಗ್ನಿಯನ್ನು ಅನುದಿನವೂ ಕಾಪಾಡಿಕೊಂಡು ಬರುವ ಕರ್ಮ. ೩. ಹೋಮಾಗ್ನಿ.

ಅಗ್ನೀಧ್ರ (ನಾ). ೧. ಋತ್ವಿಕ್ಕು. ೨. ಯಜ್ಞಕರ್ಮ.

ಅಗ್ರ (ನಾ). ೧. ತುದಿ; ಶಿಖರ. ೨. ಮುಂಭಾಗ. ೩. ಪ್ರಾರಂಭ. ೪. ನಗರ ಸಮೀಪ ಪ್ರದೇಶ. ೫. ಸ್ತುತಿ. ೬. ದಾನ. ೭. ಒಂದು ಪಲದ ತೂಕ. ೮. ಬ್ರಾಹ್ಮಣ. ೯. ಒಂದು ಬಗೆಯ ಬಾಯಿಹುಣ್ಣು; ಆಸ್ಯಪಾಕ. (ಗು). ೧೦. ಮುಖ್ಯವಾದ. ೧೧. ಮೊದಲಿನ. ೧೨. ಅತಿಶಯವಾದ. ~ಆಸೀನ =ಮುಂದೆ ಕುಳಿತವನು. ~ಆಹಾರ = ಅಗ್ರಹಾರ. ~ಉದಕ =(ಪೂಜೆಯ) ಮೀಸಲು ನೀರು. ~ಗಣ್ಯ = ಪ್ರಮುಖ; ಶ್ರೇಷ್ಠ. ~ಗೃಹ = ಹಿರಿಯ ಮನೆತನ. ~ಜನ್ಮ=ಅಗ್ರಜ. ~ಮಾಂಸ=ಹೃದಯ; ಹೃದಯ ಮಾಂಸ. ~ವರ್ತಿ = ಮುಂದಾಳು; ~ಸಾಲೆ = ದೇವಸ್ಥಾನದ ಪಾಕಶಾಲೆ.

ಅಗ್ರಗ (ನಾ). ಮುಂದಾಳು; ನಾಯಕ.

ಅಗ್ರಜ (ನಾ). ಅಣ್ಣ; ಹಿರಿಯ ಮಗ.

ಅಗ್ರಣಿ (ನಾ). ಮುಂದಾಳು.

ಅಗ್ರಹಾರ (ನಾ). ೧. ದಾನಕೊಟ್ಟ ಭೂಮಿ. ೨. ಬ್ರಾಹ್ಮಣರು ವಾಸಮಾಡುವ ಕೇರಿ.

ಅಗ್ರಾಸನ (ನಾ). ೧. ದಾನವಾಗಿ ಕೊಟ್ಟ ಭೂಮಿ; ಅಗ್ರಹಾರ. ೨. ಭೋಜನಶಾಲೆ. ೩. ಮೊದಲನೆಯ ಪೀಠ. ೪. ಅಧ್ಯಕ್ಷಪೀಠ.

ಅಗ್ರಿಮ (ಗು). ೧. ಮೊದಲನೆಯ. ೨. ತುದಿಯ. ೩. ಹಿರಿಯ.

ಅಗ್ರೇಸರ (ನಾ). ೧. ಮುಂದಾಳು. (ಗು). ೨. ಮುಂದೆ ಹೋಗುವ. ೩. ಶ್ರೇಷ್ಠ.

ಅಘ (ನಾ). ೧. ಪಾಪ. ೨. ದುಃಖ. ೩. ಕಷ್ಟ. ೪. ಸೂತಕ. ೫. ಭವಾವಳಿ. ೬. ಒಬ್ಬ ರಾಕ್ಷಸನ ಹೆಸರು. ~ರಿಪು=೧. ಪಾಪದ ಶತ್ರು. ೨. ಶ್ರೀಕೃಷ್ಣ. ~ಹರ = ಪಾಪವನ್ನು ನಾಶಮಾಡುವ.

ಅಘಟಿತ (ಗು). ೧. ನಡೆಯದ. ೨. ಸಾಧ್ಯವಲ್ಲದ. ೩. ಸಂಭವಿಸಲಾಗದ. ~ಘಟನೆ = ೧. ಸಂಭವಿಸಲಾರದ ಕಾರ್ಯವು ಸಂಭವಿಸುವುದು. ೨. ಅಸಾಧಾರಣ ಸಂಗತಿ. ~ಘಟಿತ = ನಡೆಯಲಾಗದ್ದನ್ನು ನಡೆಸುವವನು.

ಅಘಮರ್ಷಣ (ನಾ). ೧. ಪಾಪವನ್ನು ಕಳೆಯುವುದು. ೨. ಒಂದು ಮಂತ್ರದ ಹೆಸರು. ೩. ಆ ಮಂತ್ರದ ದ್ರಷ್ಟಾರನಾದ ಋಷಿ.

ಅಘಾಟ (ನಾ). ಅದ್ಭುತ; ಅತಿಶಯ.

ಅಘಾತಿ (ಗು). ೧. ಕೊಲ್ಲದ. ೨. ಅಪಾಯಕರವಲ್ಲದ.

ಅಘೋರ (ನಾ). ೧. ಶಿವನ ಪಂಚಮುಖಗಳಲ್ಲಿ ಒಂದು. (ಗು). ೨. ಘೋರವಲ್ಲದ. ೩. ಅತಿ ಭಯಂಕರ.

ಅಘೋಷ (ಗು). ೧. ಧ್ವನಿಯಿಲ್ಲದ. ೨. ಸ್ಪಂದನವಿಲ್ಲದೆ ಉಚ್ಚರಿಸುವ.

ಅಚರ = ಅಚಲ.

ಅಚಲ(ಳ) (ನಾ). ೧. ಬೆಟ್ಟ. ೨. ಮೋಕ್ಷ. ೩. ಏಳರ ಸಂಕೇತ. (ಗು). ೪. ಚಲಿಸದ. ೫. ಶಾಶ್ವತವಾದ. ~ಪದ = ಶಾಶ್ವತ ಪದವಿ ; ಮೋಕ್ಷ.

ಅಚಾತುರ್ಯ (ನಾ). ೧. ದಡ್ಡತನ. ೨. ಪ್ರಮಾದ.

ಅಚಿಂತ್ಯ (ನಾ). ೧. ಪಾದರಸ. ೨. ಮೂವತ್ತೊಂದು ಅಂಕೆಗಳ ಸಂಖ್ಯೆ. (ಗು). ೩. ಚಿಂತಿಸಲಾಗದ.

ಅಚಿನ್ನಿದ್ರೆ (ನಾ). ಜಡತೆ ತುಂಬಿದ ನಿದ್ದೆ.

ಅಚಿರ (ಗು). ೧. ಬಹುಕಾಲ ನಿಲ್ಲದ ; ಕ್ಷಣಿಕ. ೨. ಶೀಘ್ರ. ~ಅಂಶು = ~ದ್ಯುತಿ = ~ಪ್ರಭೆ = ಮಿಂಚು.

ಅಚೈತನ್ಯ (ನಾ). ೧. ಚೈತನ್ಯವಲ್ಲದ್ದು. ೨. ಅರಿವಿಲ್ಲದಿರುವಿಕೆ. ೩. ಜಡವಸ್ತು. ೪. ಅಶಕ್ತಿ. ೫. ಅತಿಯಾದ ಬಡತನ.

ಅಚ್ಚ (ನಾ). ೧. ಇಂದ್ರಿಯ. ೨. ಜಪಮಣಿ. (ಗು). ೩. ಬೆರಕೆಯಿಲ್ಲದ ; ಅಪ್ಪಟ. ~ಅರಳ್=ಹೊಸ ಹೂವು. ~ಆಳ್(ಳು) = ಶ್ರೇಷ್ಠನಾದ ಆಳು. ~ಕಂ(ಗಂ)ಪು = ಹೊಸಕಂಪು. ~ಕ(ಗ)ಡೆ = ಸೊಗಸಾದ ರಂಗೋಲಿ. ~ಬ(ವ)ಟು(ಳಿ) = ಒಳ್ಳೆಯ ಮನೆತನ. ~(ಂ)ಪೊ(ಬೊ)ಯ್ = ಪುಟವಿಡು. ~ಸರ = ಅಕ್ಷಮಾಲೆ.

ಅಚ್ಚಯ = ಅಕ್ಷಯ.

ಅಚ್ಚರ (ನಾ). ೧. ದೇವತೆ. (ಗು). ೨. ನಾಶವಿಲ್ಲದ. ~ಗಣಿಕೆ=ಅಚ್ಚರಸಿ. = ~ಪೆ(ವೆ)ಣ್(ಣ್ಣು) = ಅಚ್ಚರಸಿ.

ಅಚ್ಚರಸಿ = ಅಪ್ಸರೆ.

ಅಚ್ಚರಸೆ = ಅಚ್ಚರಸಿ.

ಅಚ್ಚರಿ (ನಾ). ಆಶ್ಚರ್ಯ. ೨. ಅಪ್ಸರೆ. ~ಮೊಳೆ = ಆಶ್ಚರ್ಯ ಮೂಡು.

ಅಚ್ಚಳ (ಗು). ೧. ಸ್ವಚ್ಛ. ೨. ಪ್ರಶಾಂತ.

ಅಚ್ಚಿ (ನಾ). ೧. ತಾಯಿ. ೨. ಮೊಲೆ. ೩. ಲಕ್ಷ್ಮಿ. ೪. ಕಣ್ಣು. ೫. (ಮಕ್ಕಳ ಮಾತಿನಲ್ಲಿ) ರೊಟ್ಟಿ ; ತಿನಿಸು.

ಅಚ್ಚಿಗ (ನಾ). ೧. ತೀವ್ರವಾದ ವ್ಯಥೆ. ೨. ಶ್ರಮ. ೩. ಅಪಾಯ. ೪. ಸಂಭ್ರಮ. ೫. ರೀತಿ. ೬. ನೆವ. ೭. ಆಶ್ಚರ್ಯ. ೮. ಪೂಜಾರಿ; ಅರ್ಚಕ. ~ಕೊ(ಗೊ)ಳ್ = ತೀವ್ರವಾಗಿ ವ್ಯಥೆಪಡು.

ಅಚ್ಚು (ಕ್ರಿ). ೧. ಹಿಡಿದುಕೊ. ೨. ಅಚ್ಚೊತ್ತಿದಂತೆ ಇರು. (ನಾ). ೩. ಎರಕ ಹೊಯ್ದು ಬಿಂಬವನ್ನು ಮಾಡಿಕೊಳ್ಳುವ ಸಾಧನ; ಪಡಿಯಚ್ಚು. ೪. ಅಚ್ಚಿನ ಮೂಲಕ ಸಿದ್ಧಪಡಿಸಿದ ಪದಾರ್ಥ; ವಿಗ್ರಹ. ೫. ಒತ್ತಿದ ಮುದ್ರೆ. ೬. ಒಂದು ನೆಯ್ಗೆ ಉಪಕರಣ. ೭. ಮುದ್ರಣ. ೮. ಪ್ರೀತಿ; ಪ್ರೀತಿಯ ವಸ್ತು. ೯. ಅಂಚು. ೧೦. ಪಕ್ಷಿಯ ಮಲ; ಹಿಕ್ಕೆ. ೧೧. ನಡುಗೂಟ; ಕೀಲು. ೧೨. ಪಗಡೆಯ ದಾಳ. ೧೩. ಜೂಜಾಟ. ~ಆಗು =೧. ಶಾಶ್ವತವಾಗು. ೨. ಮುದ್ರಣ ಹೊಂದು. ~ಆಡಿಸು = ಅಚ್ಚಿನಂತೆ ತಿರುಗಿಸು. ~ಇಡು=ಮುದ್ರಿಸು. ~ಇಱು(ರಿ) = ೧. ಎರಕಹೊಯ್ಯು. ೨. ಮುದ್ರಿಸು. ~ಉಡಿ = ೧. ಎರಕ ಹೊಯ್ದಂತೆ ಒಂದಾಗು. ೨. ರಥ ಮೊದಲಾದವುಗಳ ಅಚ್ಚು ಮುರಿದು ಹೋಗು. ~ಎರೆ =೧. ಅಕ್ಷರದ ಮೊಳೆಗಳನ್ನು ಎರಕಹೊಯ್ಯು. ೨. ಪ್ರತಿಕೃತಿ ಮಾಡು. ~ಒತ್ತು=ಅಚ್ಚೆರೆ. ~ಕ(ಗ)ಂಬ = ಬಂಡಿಯ ಅಚ್ಚುಮರ ; ಇರಸು. ~ಕ(ಗ)ಟ್ಟು = ೧. ಬಟ್ಟೆ ನೇಯುವಲ್ಲಿ ಅಣಿ ಬರುವಂತೆ ಅಚ್ಚನ್ನು ತಯಾರು ಮಾಡು. ೨. ಕೆರೆ ಕಾಲುವೆ ಮುಂತಾದುವುಗಳ ಆಸರೆಯಲ್ಲಿರುವ ಭೂಮಿಯ ಪರಿಮಿತಿ. ೩. ಓರಣ; ಚೊಕ್ಕವ್ಯವಸ್ಥೆ. ೪. ತೇರಿನ ವೇದಿಕೆಯ ಹಲಗೆ. ~ಕೂಟ = ಮುದ್ರಣ

ಶಾಲೆ. ~ಬೆಲ್ಲ = ಅಚ್ಚಿನಲ್ಲಿ ಹೊಯ್ದ ಬೆಲ್ಲ. ~ಮನೆ = ಅಚ್ಚುಕೂಟ. ~ಮರ = ಎರಕ ಹೊಯ್ಯಲು ಮಾಡಿರುವ ಅಚ್ಚು. ~ಮೆಚ್ಚು = ಅತಿಶಯವಾದ ಮೆಚ್ಚಿಕೆ. ~ಮೊಳೆ = ಮುದ್ರಣದ ಅಕ್ಷರವನ್ನು ಕೆತ್ತಿರುವ ಮೊಳೆ.

**ಅಚ್ಚುಕ** (ನಾ). ೧. ತೀವ್ರವಾದ ವ್ಯಥೆ. ೨. ಉತ್ಸಾಹ.

**ಅಚ್ಚುಗ** = ಅಚ್ಚಿಗ. ~**ಕೊಳ್** = ತೀವ್ರವಾಗಿ ವ್ಯಥೆಪಡು.

**ಅಚ್ಚುಳ** (ನಾ). ೧. ಚರ್ಮದ ಕೆಲಸ. ೨. ಕುದುರೆಗೆ ಜೀನು ಹಾಕುವುದು ಮುಂತಾದ ಕೆಲಸ. ~ಆಯುಲ = ೧. ಪರಿಚಾರಕ; ಊಳಿಗದವನು. ೨. ಕುದುರೆಯ ಜೀನು ಮುಂತಾದುವನ್ನು ಸಜ್ಜು ಮಾಡುವವನು.

**ಅಚ್ಚೆ** (ನಾ). ೧. ಒಂದು ಬಗೆಯ ಮೀನು. ೨. ಪೂಜೆ. ೩. ಪೂಜಾವಿಗ್ರಹ. ೪. ಮಕ್ಕಳನ್ನು ಅತಿಯಾಗಿ ಮುದ್ದು ಮಾಡುವುದು.

**ಅಚ್ಚೇರು** (ನಾ). ಅರ್ಧಸೇರು.

**ಅಚ್ಛ** (ನಾ). ೧. ಸ್ಫಟಿಕ. (ಗು). ೨. ನಿರ್ಮಲವಾದ.

**ಅಚ್ಯುತ** (ನಾ). ೧. ವಿಷ್ಣು; ಕೃಷ್ಣ. (ಗು). ೨. ಬಿದ್ದುಹೋಗದ. ೩. ಚ್ಯುತಿಯಿಲ್ಲದ; ನಾಶವಿಲ್ಲದ. ~ಪದವಿ = ಶಾಶ್ವತವಾದ ಸ್ಥಾನ; ಮೋಕ್ಷ.

**ಅಜ** (ನಾ). ೧. ಪರಮಾತ್ಮ. ೨. ಜೀವ. ೩. ಸೂರ್ಯ. ೪. ಚಂದ್ರ. ೫. ಮನ್ಮಥ. ೬. ಮೇಕೆ; ಆಡು. ೭. ಮೇಷರಾಶಿ. ೮. ಹಳೆಯ ಬತ್ತ. ೯. ಮಳೆ. ೧೦. ಸಮುದ್ರ. ೧೧. ಆನೆ. ೧೨. ಹೆಂಗಸು. ೧೩. ಭೂಮಿ. ೧೪. ಮುಕ್ತಿ. (ಗು). ೧೫. ಹುಟ್ಟು ಇಲ್ಲದ. ~ಅಂಡ = ಬ್ರಹ್ಮಾಂಡ; ವಿಶ್ವ. ~ಗಜಾಂತರ = ಆಡಿಗೂ ಆನೆಗೂ ಇರುವಂಥ ವ್ಯತ್ಯಾಸ.

**ಅಜಕು** (ಕ್ರಿ). ಹೆದರು.

**ಅಜಗ** (ನಾ). ೧. ಶಿವನ ಧನುಸ್ಸು. ೨. ವಿಷ್ಣು. ೩. ಅಗ್ನಿ. ೪. ಒಂದು ಹಾವಿನ ಹೆಸರು.

**ಅಜಗರ** (ನಾ). ಹೆಬ್ಬಾವು.

**ಅಜಗವ** (ನಾ). ಶಿವನ ಧನುಸ್ಸು. ~**ಪಾಣಿ** = ಶಿವ.

**ಅಜನ** (ನಾ). ೧. ಮರುಭೂಮಿ. ೨. ಅಲ್ಪ ಮನುಷ್ಯ. (ಗು). ೩ ಜನರಿಲ್ಲದ; ನಿರ್ಜನವಾದ.

**ಅಜನ್ಯ** (ನಾ). ೧. ವಿಪತ್ತನ್ನು ಸೂಚಿಸುವ ಪ್ರಕೃತಿ ವ್ಯಾಪಾರ; ಉತ್ಪಾತ. (ಗು). ೨. ಹುಟ್ಟುವುದಕ್ಕೆ ಅರ್ಹವಲ್ಲದ. ೩. ಜನಕ್ಕೆ ಹಿತಕರವಲ್ಲದ.

**ಅಜಮಾಯಿಶಿ(ಷಿ)** (ನಾ). ಪರೀಕ್ಷೆ; ತನಿಖೆ.

**ಅಜಮಾಷಿ(ಸು).** (ನಾ). ಅಂದಾಜು; ಸರಿಸುಮಾರು.

**ಅಜಯ** (ನಾ). ೧. ಜಯವಲ್ಲದ್ದು; ಸೋಲು. ೨. ಸೋಲಿಸಲಾಗದವನು. ೩. ವಿಷ್ಣು.

**ಅಜರ** (ನಾ). ೧. ಮುಪ್ಪಿಲ್ಲದವನು; ದೇವತೆ. ೨. ಕೃಷ್ಣ. ೩. ಜಿನ.

**ಅಜಸ್ರ** (ಅ). ಯಾವಾಗಲೂ.

**ಅಜಾತ** (ನಾ). ೧. ವಿಷ್ಣು ೨. ಶಿವ. ೩. ಜಿನ. (ಗು). ೪. ಇನ್ನೂ ಹುಟ್ಟದಿರುವ. ೫. ಹುಟ್ಟು ಇಲ್ಲದ. ~**ಶತ್ರು** = ೧. ಶತ್ರುವೇ ಇಲ್ಲದವನು. ೨. ಶಿವ. ೩. ಧರ್ಮರಾಯ.

**ಅಜಾರಿ** (ನಾ). ಕಾಯಿಲೆ; ರೋಗ.

**ಅಜಿಂಕ್ಯ** (ಗು). ಗೆಲ್ಲಲಾಗದ.

**ಅಜಿಗಿಜಿ** (ನಾ). ಅರೆದು ಪುಡಿಪುಡಿ ಮಾಡಿದ್ದು; ಚೂರ್ಣ.

**ಅಜಿತ** (ನಾ). ೧. ವಿಷ್ಣು. ೨. ಶಿವ. ೩. ಎರಡನೆಯ ತೀರ್ಥಂಕರ. (ಗು). ೪. ಸೋತುಹೋಗದ. ೫. ಗೆಲ್ಲಲಾಗದ.

**ಅಜಿನ** (ನಾ). ೧. ಚರ್ಮ. ೨. ಜಿಂಕೆಯ ಚರ್ಮ. ~**ಅಂಬರ** = ಶಿವ.

**ಅಜಿರ** (ಗು). ೧. ಚುರುಕಾದ. (ನಾ). ೨. ಅಂಗಳ; ರಂಗ. ೩. ಇಂದ್ರಿಯ ಗೋಚರವಾದ ವಿಷಯ. ೪. ಗಾಳಿ. ೫. ಶರೀರ.

**ಅಜಿನಾನ** (ನಾ). ಓಮುಕಾಳು.

**ಅಜೀರ್ಣ** (ನಾ). ೧. ತಿಂದ ಆಹಾರ ಅರಗದಿರುವುದು; ಅಗ್ನಿಮಾಂದ್ಯ. (ಗು). ೨. ಅರಗದ; ಜೀರ್ಣವಾಗದ.

**ಅಜೆ** (ನಾ). ೧. ಆಡು. ೨. ಮಾಯೆ.

**ಅಜೇಯು** = ಅಜಿಂಕ್ಯ.

**ಅಜ್ಜ** (ನಾ). ೧. ತಂದೆಯ ಅಥವಾ ತಾಯಿಯ ತಂದೆ; ತಾತ. ೨. ಹಿರಿಯ; ವೃದ್ಧ. ೩. ಬ್ರಹ್ಮ.

**ಅಜ್ಜಿ** (ನಾ). ೧. ತಂದೆಯ ಅಥವಾ ತಾಯಿಯ ತಾಯಿ. ೨. ಮುದುಕಿ. ೩. ಜೈನ ಸಂನ್ಯಾಸಿನಿ.

**ಅಜ್ಜಿಕೆ** (ನಾ). ೧. ಜೈನ ಸಂನ್ಯಾಸಿನಿ. ೨. ಪೂಜ್ಯೆ.

**ಅಜ್ಜಿಗಿಜ್ಜಿ** (ನಾ). ಮೆತ್ತಗಾಗಿರುವುದು; ಜಜ್ಜಿ ಹೋಗಿರುವುದು.

**ಅಜ್ಜಿಬಜ್ಜಿ** = ಅಜ್ಜಿಗಿಜ್ಜಿ.

**ಅಜ್ಜುಗುಜ್ಜು** (ನಾ). ಬಹಳ ಮೆತ್ತಗಿರುವುದು; ಶಿಥಿಲತೆ.

**ಅಜ್ಞ** (ನಾ). ತಿಳಿವಳಿಕೆ ಇಲ್ಲದವನು; ದಡ್ಡ.

**ಅಜ್ಞಾತ** (ಗು). ತಿಳಿಯದ. ~ವಾಸ=ಯಾರಿಗೂ ತಿಳಿಯದಂತೆ ಮಾಡುವ ವಾಸ.

**ಅಜ್ಞಾನ** (ನಾ). ೧. ಅರಿವಿಲ್ಲದಿರುವಿಕೆ; ೨. ಅಜಾಗರೂಕತೆ. ೩. ಅವಿದ್ಯೆ.

**ಅಜ್ಞಾನಿ** = ಅಜ್ಞ.

**ಅಟಕಟ** (ನಾ). ಬಳಲಿಕೆ. ~ಇಸು = ೧. ಆಯಾಸಪಡು. ೨. ರೌದ್ರಾವೇಶವನ್ನು ತೋರು.

**ಅಟಕಾಯಿಸು** (ಕ್ರಿ). ಅಡ್ಡಿಮಾಡು.

**ಅಟಕಾಳಿ** = ಅಟ್ಟಕಟು.

**ಅಟಕಿಸು** = ಅಟಕಾಯಿಸು.

**ಅಟಗೋಲು** (ನಾ). ಎತ್ತಿನ ಮೇಲೆ ಹೊರೆಯನ್ನು ಹೇರಲು ಉಪಯೋಗಿಸುವ ಗಳೆ.

**ಅಟನ** (ನಾ). ತಿರುಗಾಟ; ಸಂಚಾರ.

**ಅಟಮಟ** (ನಾ). ೧. ಸುಳ್ಳು. ೨. ಮಾಯೆ. ೩. ಮೋಸ. ೪. ಮೋಸಗಾರ. ~ಇಗ = ಮೋಸಗಾರ. ~ಇಸು = ೧. ಸುಳ್ಳು ಮಾಡು. ೨. ಮೋಸಮಾಡು. ೩. ಹೋಗಲಾಡಿಸು. ೪. ಆತುರಪಡು.

**ಅಟವಟ** = ಅಟಮಟ. ~ಇಸು = ೧. ಮೋಸಮಾಡು. ೨. ಆತುರಪಡು.

**ಅಟವಣೆ** = ಅಟ್ಟವಣೆ.

**ಅಟವಿ** (ನಾ). ೧. ಒಂದು ಅಳತೆ. ೨. ಕಾಡು. ~ಚರ = ಬೇಡ.

**ಅಟಾಟೋಪ** (ನಾ). ಆಡಂಬರ.

**ಅಟಾಪ** (ನಾ). ೧. ಶಕ್ತಿ; ಸಾಮರ್ಥ್ಯ. ೨. ಅಂಕೆ; ಅಧೀನ.

**ಅಟೋಪ** = ಅಟಾಪ.

**ಅಟ್ಟ** (ನಾ). ೧. ಮನೆಯ ಒಳಗಡೆ ಸಾಮಾನುಗಳನ್ನು ಇಡುವುದಕ್ಕೋಸ್ಕರ ಛಾವಣಿಗೆ ಹೊಂದಿ ಮಾಡಿರುವ ಅಂತಸ್ತು. ೨. ಮಹಡಿ. ೩. ಮೇಲ್ಮಾಳಿಗೆ; ವೇದಿಕೆ; ಅಟ್ಟಳೆ. ೪. ಅಂಗುಳು. ೫. ಎತ್ತರ; ಉನ್ನತಿ. ೬. ಎಂಟು. ~ಅಸುರ = ೧. ಅತಿ ಭಯಂಕರ ಸ್ಥಿತಿ. ೨. ಅತಿ ಭಯಂಕರ ವ್ಯಕ್ತಿ.

**ಅಟ್ಟಕಟು(ಳಿ)** (ನಾ). ಜಿಡ್ಡನ್ನು ಹೋಗಲಾಡಿಸಲು ಉಜ್ಜಿಕೊಳ್ಳುವ ಗಂಜಿ ಅಥವಾ ಸರಿ.

**ಅಟ್ಟಟ್ಟ** (ನಾ). ದೂತನನ್ನು ಕಳಿಸುವುದು; ನಿಯೋಗ.

**ಅಟ್ಟಟ್ಟಿಕೆ** (ನಾ). ದೂತನನ್ನು ಅಟ್ಟುವುದು; ದೌತ್ಯ.

**ಅಟ್ಟಡಿ** (ನಾ). ಅತ್ಯಂತ ಕೆಳಭಾಗ; ತಟ್ಟತಳ.

**ಅಟ್ಟಣ(ಣೆ)** (ನಾ). ಕೋಟೆಯ ಮೇಲೆ ಕಟ್ಟಿರುವ ಕೊಠಡಿ; ಕೊತ್ತಳ.

ಅಟ್ಟಣಿಗೆ = ಅಟ್ಟಳಿಗೆ.
ಅಟ್ಟಣೆ = ಅಟ್ಟಣ.
ಅಟ್ಟವಣೆ (ನಾ). ಕೊಡುವ ಮತ್ತು ಕಳೆಯುವ ಲೆಕ್ಕ. ~ಇಲಾಖೆ = ಭೂಕಂದಾಯದ ಇಲಾಖೆ. ~ಕೋಲ್ = (ಹಿಂದಿನ ಕಾಲದಲ್ಲಿ) ಓದುವಾಗ ಪುಸ್ತಕವನ್ನು ಇಟ್ಟುಕೊಳ್ಳುವುದಕ್ಕೆ ಉಪಯೋಗಿಸುತ್ತಿದ್ದ ಪೀಠ; ವ್ಯಾಸಪೀಠ.
ಅಟ್ಟವೆ (ನಾ). ೧. ಅಟ್ಟಳಿಗೆ. ೨. ಅಷ್ಟಮಿ.
ಅಟ್ಟಹಾಸ (ನಾ). ೧. ತುಂಬ ಗಟ್ಟಿಯಾದ ನಗು. ೨. ಆಡಂಬರ. ~(ಂ)ಕೆ(ಗೆ)ಯ್ = ತಿರಸ್ಕರಿಸು.
ಅಟ್ಟಳ(ಳೆ) = ಅಟ್ಟಣ.
ಅಟ್ಟಳಿಗೆ (ನಾ). ಎತ್ತರದ ವೇದಿಕೆ.
ಅಟ್ಟಾಲ(ಳ) (ನಾ). ೧. ಕೊತ್ತಳ; ಬುರುಜು. ೨. ಉಪ್ಪರಿಗೆ.
ಅಟ್ಟಿಮಿಟ್ಟ (ನಾ). ಬಿಗಿಯಾಗಿ ತಬ್ಬಿಕೊಳ್ಳುವಿಕೆ; ತೆಕ್ಕೆ ಬೀಳುವಿಕೆ.
ಅಟ್ಟು (ಕ್ರಿ). ೧. ಅಂಟು. ೨. ಬೆನ್ನು ಹತ್ತಿ ಹೋಗು. ೩. ಓಡಿಸು. ೪. ಕಳಿಸು. ೫. ಮುಂದಕ್ಕೆ ಚಾಚು. ೬. ಹೊಯ್ಯು. ೭. ಅಡುಗೆ ಮಾಡು. ೮. ಕುದಿದು ಗಟ್ಟಿಯಾಗು. (ನಾ). ೯. ಅಟ್ಟುವಿಕೆ; (ದೂತರನ್ನು) ಕಳಿಸುವಿಕೆ. ೧೦. ಬೆನ್ನಟ್ಟುವಿಕೆ. ೧೧. ಮೇಲು ಭಾಗದ ಬಡು, -ನೆಲೆ. ೧೨. ಅಟ್ಟಣೆ. ~ಆಳು = ೧. ಅಟ್ಟಿಸಿಕೊಂಡು ಬರುವ ಆಳು. ೨. ಆಳಿನ ಹಿಂದೆ ಕಳಿಸಿದ ಮತ್ತೊಬ್ಬ ಆಳು. ~ಇಸು = ೧. ಕಳಿಸಿಕೊಡು. ೨. ಬತ್ತು. ೩. ಕಾಯಿಸು; ಕುದಿಸಿ ಇಂಗಿಸು. ~ಉಪ್ಪು = ಉಪ್ಪುನೀರನ್ನು ಕಾಯಿಸಿ ಇಂಗಿಸಿ ತಯಾರಿಸಿದ ಉಪ್ಪು. ~ಉಳಿ = ೧. ಅಟ್ಟಿಸಿಕೊಂಡು ಹೋಗುವಿಕೆ. ೨. ಹಿಂಸೆ. ೩. ದೀಹದ ಮೃಗ. ~ಉಳಿಗ = ಹಿಂಸೆ ಮಾಡುವವನು. ~ಉಳಿಗಾರ = ಅಟ್ಟುಳಿಗ. ~ಉಳಿಯಾಳು = ಬೇಟೆಯನ್ನು ಅಟ್ಟಿಸಿಕೊಂಡು ಹೋಗಿ ಹೊಡೆಯುವ ಆಳು. ~ಓಲೆ = ಸಂದೇಶದ ಪತ್ರ. ~(ಂ)ಪ(ಬ)ರಿ = ೧. ಬೆನ್ನಟ್ಟು. ೨. ಬೆನ್ನಟ್ಟುವಿಕೆ. ~ಕಾ(ಗಾ)ಱ = ಹೊಡೆದೋಡಿಸುವವನು. ~ಕೊ(ಗೊ)ಳ್ಳು = ಚಿಂತಿಸು. ~ಕೋ(ಗೋ)ಲು = (ಅಡುಗೆಯಲ್ಲಿ) ತೊಳಸಲು ಉಪಯೋಗಿಸುವ ಮರದ ಕೋಲು.
ಅಟ್ಟೆ (ನಾ). ೧. ತಲೆಯಿಲ್ಲದ ದೇಹ. ೨. ಎಲುಬಿನ ಗೂಡು. ೩. ಪಾದರಕ್ಷೆಯ ತಳಭಾಗದ ಹಲ್ಲೆ. ೪. ಚರ್ಮ. ೫. ರಸ ತೆಗೆದ ಕಬ್ಬಿನ ಸಿಪ್ಪೆ. ೬. ಹುಣಿಸೆಹಣ್ಣಿನ ಬಿಲ್ಲೆ. ೭. ಗಾಯದ ಹಕ್ಕಳೆ.
ಅಟ್ಟೆಗಾಲು (ನಾ). ಬಗ್ಗಿದ ಕಾಲು; ಡೊಂಕು ಕಾಲು.
ಅಠರಾ (ನಾ). ಹದಿನೆಂಟು. ~ಕಚೇರಿ = ಸರಕಾರದ ಹದಿನೆಂಟು ಇಲಾಖೆಗಳುಳ್ಳ ಕಚೇರಿ.
ಅಠವಣೆ (ನಾ). ೧. ಅಟ್ಟವಣೆ. ೨. ಜ್ಞಾಪಿಸುವುದು. ೩. ನೆನಪು.
ಅಡಂಗಕಾಱ (ನಾ). ಕೋಟೆಯ ರಕ್ಷಕ.
ಅಡಂಗಾಯಿತ = ಅಡಂಗಕಾಱ.
ಅಡಂಗಾಯ್ತ = ಅಡಂಗಕಾಱ
ಅಡಂಗು (ಕ್ರಿ). ೧. ಮರೆಯಾಗು. ೨. ಹಿಂದಕ್ಕೆ ಸರಿ. ೩. ಶಮನವಾಗು. ೪. ಸೇರಿ ಹೋಗು. ೫. ಕೊನೆಗೊಳ್ಳು. ೬. ವಿಧೇಯವಾಗು. (ನಾ). ೭. ಮರೆಯಾಗುವುದು. ೮. ಅಡಗಿಕೊಳ್ಳುವ ಸ್ಥಳ. ೯. ಜೋಡಣೆ; ಸೇರಿಕೆ. ~ಉಱುಚಾಟ = ಕಣ್ಣುಮುಚ್ಚಾಲೆ ಆಟ. ~ಬತ್ತು = ಅಡಗಿ ಹೋಗುವಂತೆ ಅದುಮು; ಪರಿಹರಿಸು.

**ಅಡಂಬೆ** (ನಾ). ದನದ ಕೊಟ್ಟಿಗೆಯ ಬಾಗಿಲಲ್ಲಿ ಆಚೆಯಿಾಚೆ ಸರಿಸಲು ಬರುವಂತಿರುವ ಗೂಟಗಳುಳ್ಳ ಕದ.

**ಅಡಕ** (ನಾ). ೧. ವಶದಲ್ಲಿಟ್ಟುಕೊಳ್ಳುವುದು. ೨. ಮಿತಿ. ೩. ನಿಯಮ. ೪. ಒಳಸೇರಿರುವುದು. ೫. ಅಡಗಿಕೊಂಡಿರುವುದು. ೬. ಪತ್ರದ ಜೊತೆಯಲ್ಲಿ ಲಕೋಟೆಯಲ್ಲಿಡುವ ಇತರ ಕಾಗದ ಮೊದಲಾದುವು. ೭. ಒಂದರ ಮೇಲೊಂದನ್ನು ಪೇರಿಸುವುದು. ~(ಂ)ಕೆ(ಗೆ)ಯ್ = ೧. ಒಳಕೊಳ್ಳು. ೨. ಅಡಗಿಸು. ~ಕೊ(ಗೊ)ಳಿಸು = ಒತ್ತಿ ಗಾತ್ರವನ್ನು ಚಿಕ್ಕದು ಮಾಡು.

**ಅಡಕಲು** = ಅಡಕಿಲ್.

**ಅಡಕಿಲ್(ಲು)** (ನಾ). ಒಂದರ ಮೇಲೆ ಒಂದನ್ನು ಪೇರಿಸಿ ಇಡುವುದು. ~ಕೊ(ಗೊ)ಳ್ = ೧. ಒಂದರ ಮೇಲೊಂದಾಗಿ ಪೇರಿಸಿರು. ೨. ದಟ್ಟವಾಗು. ~ತೆ(ದೆ)ರೆ = ತೆರೆಯ ಮೇಲೆ ತೆರೆ. ~ಪಾ(ವಾ)ಸು = ಒಂದರ ಮೇಲೊಂದಾಗಿ ಪೇರಿಸಿದ ಹಾಸಿಗೆ. ~ಪೆ(ವೆ)ಸರ್ = ಇದ್ದ ಹೆಸರಿನ ಮೇಲೆ ಮತ್ತೆ ಸೇರಿಸಿಕೊಂಡ ಹೆಸರು.

**ಅಡಕು** (ನಾ). ೧. ನಿಯಮ. ೨. ಹಿಡಿತ. ೩. ನೆಯ್ಗೆಯಲ್ಲಿ ಒತ್ತಿ ಸೇರಿಸಿದ ನಾಲ್ಕು ದಾರದ ಎಳೆ.

**ಅಡಕೆ** (ನಾ). ಒಂದು ಬಗೆಯ ಮರ; ಕ್ರಮುಕ.

**ಅಡಗು** = ೧. ಅಡಂಗು. (ನಾ). ೨. ಮಾಂಸ. ~ತಾ(ದಾ)ಣ = ಅವಿತುಕೊಳ್ಳುವ ಸ್ಥಳ. ~ತಿ(ದಿ)ನ್ = ಮಾಂಸವನ್ನು ತಿನ್ನು. ~ತು(ದು)ಳಿ = ಮಾಂಸದ ಮುದ್ದೆಯಾಗುವಂತೆ ತುಳಿ.

**ಅಡಚಣೆ** (ನಾ). ೧. ಕೊರತೆ. ೨. ತೊಂದರೆ.

**ಅಡಚು** = ಅಡರ್ಚು.

**ಅಡತಟ್ಟೆ** (ನಾ). ತಾಂಬೂಲ ಮೊದಲಾದುವನ್ನು ಕೊಡುವುದಕ್ಕಾಗಿ ಉಪಯೋಗಿಸುವ ತಟ್ಟೆ.

**ಅಡತಿ** (ನಾ). ೧. ದಳ್ಳಾಳಿ. ೨. ದಳ್ಳಾಳಿಯ ಅಂಗಡಿ.

**ಅಡಪ** (ನಾ). ಅಡಕೆಲೆಯ ಚೀಲ. ~ಆಳಿ = (ತನ್ನ ಒಡೆಯನ) ಎಲೆಯಡಕೆಯ ಸಂಚಿಯನ್ನು ಹಿಡಿಯುವವನು. ~ಇಗ = ಅಡಪಾಳಿ. ~ವಳ(ಳ್ಳ) = ೧. ಅಡಪಾಳಿ. ೨. ಕ್ಷೌರಿಕ.

**ಅಡಪು** (ನಾ). ೧. ಆಸರೆ. ೨. ಅಡವು; ಈಡು. ೩. ದೇವಸ್ಥಾನದ ಒಂದು ಊಳಿಗ. ೪. ಒಂದು ಬಗೆಯ ಚರ್ಮರೋಗ; ನಾಯಿಕಜ್ಜಿ.

**ಅಡಬಡಿಸು** (ಕ್ರಿ). ೧. ಆತುರಪಡು. ೨. ಗಾಬರಿಪಡು.

**ಅಡಬಹಳ** (ನಾ). ದಾಯಾದ್ಯ.

**ಅಡಬಳ** (ನಾ). ೧. ಅಡುಗೆ ಮಾಡುವವನು. ೨. ಮಾಂಸ. ೩. ಮಾಂಸವನ್ನು ತಿನ್ನುವವನು; ರಾಕ್ಷಸ.

**ಅಡಮಾನ** (ನಾ). ಒತ್ತೆ; ಅಡವು.

**ಅಡಮುಟ್ಟ** (ನಾ). ಮೊಂಡ; ಹಠಮಾರಿ.

**ಅಡರ್(ರು)** (ಕ್ರಿ). ೧. ಮೇಲಕ್ಕೆ ಹತ್ತು. ೨. ಹಬ್ಬು. ೩. ಸೇರು. ೪. ಆಕ್ರಮಿಸು. ೫. ಉನ್ನತವಾಗು. ೬. ಚುಚ್ಚು. (ನಾ). ೭. ಆಸರೆ. ೮. ಚಿಕ್ಕ ರೆಂಬೆ. ೯. ಕಡ್ಡಿ; ಪುಳ್ಳಿ. ~ಆಟ = ೧. ಮೇಲೆ ಏರಿ ಹೋಗುವುದು; ಜಗಳ. ೨. ಸ್ಪರ್ಧೆ. ~ಆಳಿ = ರೇಗಿ ಮೇಲೆ ಬೀಳುವವನು. ~ಮಾಡು = ಆಶ್ರಯವಾಗಿ ಮಾಡು.

**ಅಡರಾಸು** (ಕ್ರಿ). ತವಕಪಡು.

**ಅಡರ್ಚು** (ಕ್ರಿ). ೧. ಒತ್ತಾಗಿ ಸೇರು. ೨. ಹೊಡೆ.

**ಅಡರ್ಪು** (ಕ್ರಿ). ೧. ಸಿದ್ಧಪಡಿಸು. (ನಾ). ೨. ಆಸರೆ. ೩. ಅಡವು; ಈಡು.

**ಅಡಲು** (ಕ್ರಿ). ೧. ನರಳು; ವ್ಯಥೆಪಡು. ೨. ಹೆದರು; ಗಾಬರಿಪಡು. (ನಾ). ೩. ಮೊಳೆ; ಹೊದರು.

ಅಡವಡಿಸು (ಕ್ರಿ). ಆತುರಪಡು.

ಅಡವರಿಸು = ಅಡವಡಿಸು.

ಅಡವಿ (ನಾ). ಕಾಡು; ಅರಣ್ಯ. ~ಪಾಲು = ದಿಕ್ಕುಗೆಟ್ಟು ಹೋಗುವುದು; ಹಾಳಾಗುವುದು.

ಅಡವು (ನಾ). ೧. ರೀತಿ. ೨. ಹಿಡಿತಕ್ಕೆ ಉಚಿತವಾದ ಗಾತ್ರ. ೩. ಸಮೃದ್ಧಿ. ೪. ಆಸರೆ. ೫. ಸಾಲವಾಗಿ ಕೊಟ್ಟ ಹಣದ ಭರವಸೆಗಾಗಿ ಚಿನ್ನ, ಬೆಳ್ಳಿ, ಪಾತ್ರೆ, ಪದಾರ್ಥ ಮುಂತಾದುವನ್ನು (ಹಣ ಕೊಟ್ಟವನ) ವಶದಲ್ಲಿಡುವುದು; ಒತ್ತೆ. ೬. ಸನ್ನೆಮರದ ಕೆಳಗೆ ಅಡ್ಡವಾಗಿ ಹಾಕುವ ಮರ. ೭. ತಡೆಯಾಗಿಡುವ ವಸ್ತು.

ಅಡಸಲುಬಡಸಲು (ಅ). ಅವ್ಯವಸ್ಥಿತವಾಗಿ.

ಅಡಸು (ಕ್ರಿ). ೧. ಬಿಗಿಯಾಗಿ ಒತ್ತು. ೨. ಒತ್ತಿ ಒಳಸೇರಿಸು. ೩. ಹದಿ; ಮೆಟ್ಟು; ಕುಂದಣಿಸು. ೪. ಒತ್ತಿ ಹಿಡಿದುಕೊ. ೫. ಮೇಲೆ ಬೀಳು. ೬. ಪ್ರಾಪ್ತವಾಗು. ೭. ಚುಚ್ಚು. ೮. ಸೇರಿಸು.

ಅಡಹಡಿಸು (ಕ್ರಿ). ಆತುರಪಡು; ಗಡಬಡಿಸು.

ಅಡಹು = ಅಡವು.

ಅಡಾಣೆ (ನಾ). ಕೂಲಿ ಕೊಡದೆ ಒತ್ತಾಯದಿಂದ ಮಾಡಿಸುವ ಕೆಲಸ.

ಅಡಾಯ (ನಾ). ಅತಿಯಾದ ಸಲುಗೆ.

ಅಡಾಯಿಸು (ಕ್ರಿ). ೧. ತಡೆ. ೨. (ಕುದುರೆಯಂತೆ) ಚಡಪಡಿಸು. ೩. (ಒಬ್ಬನ) ಗಮನಕ್ಕೆ ತರು.

ಅಡಾಯುಧ (ನಾ). ಒಂದು ಬಗೆಯ ಕತ್ತಿ.

ಅಡಾವಣೆ (ನಾ). ಅಡ್ಡಿ.

ಅಡಾವುಡಿ (ನಾ). ೧. ಗದ್ದಲ. ೨. ಆತುರ. ೩. ಅವ್ಯವಸ್ಥೆ. ೪. ಹದ್ದುಮೀರುವ ವ್ಯಕ್ತಿ. ೫. ಆಡಂಬರ. ~ಮಾತು = ೧. ಭಯವನ್ನು ಹುಟ್ಟಿಸುವ ಮಾತು. ೨. ಅಸಂಬದ್ಧ ಪ್ರಲಾಪ.

ಅಡಿ (ನಾ). ೧. ಹೆಜ್ಜೆ. ೨. ಕಾಲು. ೩. ಹನ್ನೆರಡು ಅಂಗುಲದ ಉದ್ದಳತೆ. ೪. ಗುರುಹಿರಿಯರ ವಿಷಯದಲ್ಲಿ ಗೌರವ ಸೂಚಕವಾಗಿ (ದೇವರು, ಸ್ವಾಮಿ ಎಂಬಂತೆ) ಉಪಯೋಗಿಸುವ ಶಬ್ದ. ೫. ಕೆಳಭಾಗ. ೬. ರಹಸ್ಯ. ೭. ಆಶ್ರಯ. ೮. ಮೂಲ ಕಾರಣ. ೯. ಅಳತೆ; ಲೆಕ್ಕ. ೧೦. ಪದ್ಯದ ಒಂದು ಪಂಕ್ತಿ. ೧೧. ಕಟ್ಟಡದ ನಿವೇಶನ. ~ಅ(ಯ)ಟಿ(ಳಿ) = ಸಮೂಲವಾಗಿ ನಾಶವಾಗು. ~ಆ(ಯಾ)ಳು = ಊಳಿಗದಾಳು. ~ಇ(ಯಿ)ಡು = ೧. ಮುಂದುವರಿ. ೨. ಪ್ರಾರಂಭಿಸು. ~ಊ(ಯೂ)ಟೆ = (ಅರಗಿನ ರಸ ಮೊದಲಾದುವನ್ನು) ಅಂಗಾಲಿಗೆ ಬಳಿಯುವುದು. ~ಊ(ಯೂ)ಡು = ಅಂಗಾಲಿಗೆ ಬಳಿ. ~ಒ(ವೊ)ತ್ತು = ೧. ಬರವಣಿಗೆಯಲ್ಲಿ ಸಂಯುಕ್ತಾಕ್ಷರದ ಕೆಳಭಾಗದ ಒತ್ತು. ೨. ತಳಭಾಗದಲ್ಲಿ ಇರಿಸುವ ಆಧಾರ. ೩. ಬರೆಯುವಾಗ ಆಧಾರವಾಗಿ ಇಟ್ಟುಕೊಳ್ಳುವ ರಟ್ಟು, ಹಲಗೆ ಇತ್ಯಾದಿ. ೪. ಪಾದರಕ್ಷೆ. ~ಕಟ್ಟು = ೧. ತಳಹದಿ (ಹಾಕು). ೨. ಬಂಡವಾಳ. ~ಕ(ಗ)ಲ್(ಲ್ಲು)=೧. ತಳಹದಿ. ೨. ನೆಲಕ್ಕೆ ಹಾಸುವ ಕಲ್ಲು. ೩. ಬೀಸುವ ಕಲ್ಲಿನ ಕೆಳಗಡೆಯ ಹೋಳು. ೪. ಕಮ್ಮಾರ, ಅಕ್ಕಸಾಲೆ ಮೊದಲಾದವರು ಬಳಸುವ ಬಡಿಗಲ್ಲು. ~ಕಾ(ಗಾ)ರ = ಗ್ರಾಮದ ಪಟೇಲ. ~ಕಿ(ಗಿ)ಡು = ೧. ನಡಗೆ ತಪ್ಪಿಹೋಗು. ೨. ಶಕ್ತಿಗುಂದು. ೩. ಆಧಾರ ಇಲ್ಲವಾಗು. ~ಕೆ(ಗೆ)ಡೆ = ೧. ಬುಡ ಕಳಚಿ ಕೆಳಗೆಬೀಳು. ೨. ನಮಸ್ಕರಿಸು. ~ಕೆ(ಗೆ)ಪ್ಪು = ಪಾದರಕ್ಷೆ. ~ಕೈ(ಗೈ) = ೧. ಕೆಳಗೆ ಒಡ್ಡಿದ ಕೈ. ೨. ಸೋಲಿಸು. ~ಕೋ(ಗೋಂ)ಟೆ = ಮುಖ್ಯವಾದ ಕೋಟೆ. ~ಕೋ(ಗೋ)ಲು = ೧. ಮರದ

ಅಗಳಿ. ೨. ಮರದ ಸೌಟು. ~ಗಂಟು =೧. ತಳದ ಕೆಸರು. ೨. ಮುಗ್ಗಿದ ಧಾನ್ಯ. ~ತ(ದ)ಳ=೧. ಅಂಗಾಲು. ೨. ತಳಹದಿ. ~ನೀರು=ಎರಡು ಮೂರನೆಯ ಬೆಳೆಗಳನ್ನು ತೆಗೆದುಕೊಂಡ ಮೇಲೆ ಮುಂದೆ ಮಳೆ ಬರುವವರೆಗೂ ಗದ್ದೆಯಲ್ಲಿ ತಡೆದು ನಿಲ್ಲಿಸಿದ ನೀರು. ~ನೆಲ = ಪಾತಾಳ. ~ಪ(ವ)ಜ್ಜೆ = ೧. ಹೆಜ್ಜೆಯ ಗುರುತು. ೨. ಸಂಪ್ರದಾಯ. ~ಪಟ್ಟಿ = ಹೊಸ್ತಿಲು. ~ಪಾಯ = ತಳಹದಿ. ~ಮುಟ್ಟ =ಸಂಪೂರ್ಣವಾಗಿ. ~ಮೇಲಾಗು =೧. ತಳ ಮೇಲಾಗು. ೨. ಹದಗೆಡು.

ಅಡಿಗೆ = ಅಡುಗೆ.

ಅಡಿಮೆ (ನಾ). ಗುಲಾಮಗಿರಿ.

ಅಡಿವ (ನಾ). ಹುಟ್ಟು; ಜನ್ಮ.

ಅಡಿಸಡಿ (ನಾ). ಅಡ್ಡಿ; ಅಡಚಣೆ.

ಅಡಿಸೇರು (ನಾ). ಎರಡೂವರೆ ಸೇರು.

ಅಡು (ಕ್ರಿ). ೧. ಅಡಿಗೆ ಮಾಡು. ೨. ಬೇಯಿ; ಕುದಿ. ~ಕ(ಗ)ಬ್ಬ(ಬ್ಬ್) = ಸೌದೆ. ~ಕ(ಗ)ರಿ = ಅಡಿಗೆಗಾಗಿ ಉರಿಸುವ ಇದ್ದಿಲು. ~ಕ(ಗ)ರಿಸು = ಇದ್ದಿಲನ್ನು ಮಾಡು. ~ಕ(ಗ)ಲ = ಅಡಿಗೆಯ ಪಾತ್ರೆ. ~ಕಳ = ಅಡಿಗೆಯ ಮನೆ. ~ಕಾ(ಗಾ)ಯಿ = ಬಿಸಿ ಮಾಡಿದ ಉಪ್ಪಿನಕಾಯಿ. ~ಕುಳಿ = ಅಡಿಗೆಯ ಕೆಲಸದವನು. ~ಕೂ(ಗೂ)ಳ್(ಳ್) =ಬೇಯಿಸಿದ್ದು; ಅನ್ನ. ~ಮದ್ದು = ಬೇಯಿಸಿ ಸಿದ್ಧಪಡಿಸಿದ ಮದ್ದು; ಪೋಲ್ಟೀಸು.

ಅಡು(ಂ)ಕು (ಕ್ರಿ).೧. ಒಂದರಮೇಲೊಂದನ್ನು ಪೇರಿಸು. ೨. ಬೇರೆ ಕಡೆಗೆ ಒಯ್ಯು.

ಅಡುಕಲ್ (ನಾ). ಗುಂಪು.

ಅಡುಗು (ಕ್ರಿ). ಒಂದಾಗು.

ಅಡುಗೂಲಿ (ನಾ). ೧. (ಹಿಂದಿನ ಕಾಲದಲ್ಲಿ ಹಣ ತೆಗೆದುಕೊಂಡು ಆಗಂತುಕರಿಗೂ ಪ್ರವಾಸಿಗಳಿಗೂ) ಅಡಿಗೆಮಾಡಿ ಹಾಕುತ್ತಿದ್ದ ಮುದುಕಿ. ೨. ಹಿಂದಿನ ಕಾಲದಲ್ಲಿ ಊಟವನ್ನು, ಇತ್ತೀಚೆಗೆ ದವಸಧಾನ್ಯವನ್ನು ಕೂಲಿಗೆ ಪ್ರತಿಯಾಗಿ ಪಡೆಯುವ ಆಳು.

ಅಡುಗೆ (ನಾ). ೧. ಪಾಕ ಕ್ರಿಯೆ. ೨.ಬೇಯಿಸಿ ಸಿದ್ಧಪಡಿಸಿದ ಊಟದ ಪದಾರ್ಥ.

ಅಡುಪಾಡು (ಕ್ರಿ). ಹೊಡೆದಾಡು.

ಅಡುವು (ನಾ). ಒತ್ತಾಗಿರುವಿಕೆ; ದಟ್ಟವಾಗಿರುವಿಕೆ.

ಅಡುಱ್(ರ್) (ಕ್ರಿ). ಮೇಲೆಬೀಳು. ~ಕೆ = ವ್ಯಾಪಿಸುವುದು.

ಅಡೆ (ಕ್ರಿ). ೧. ಬೆರಳಿನಿಂದ ಹೊಡೆ. ೨. ಭರ್ತಿ ಮಾಡು. ೩. ಮುಚ್ಚಿಹೋಗಿರು. ೪. ಹೊಂದು. ೫. ಒದಗು. (ನಾ). ೬. ಮಾಗಿಸುವುದಕ್ಕಾಗಿ ಹುಲ್ಲು ಮುಂತಾದುವುಗಳಲ್ಲಿ ಮುಚ್ಚಿಟ್ಟ ಮಾವಿನಕಾಯಿ, ಬಾಳೆಕಾಯಿ ಇತ್ಯಾದಿ. ೭. ಆಶ್ರಯ. ೮. ಬಡಗಿ, ಕಮ್ಮಾರ ಮುಂತಾದವರು ಉಪಯೋಗಿಸುವ ಮರದದಿಮ್ಮಿ; ಅಡಿಗೊರಡು. ೯. ಸಗಣಿ; ಬೆರಣಿ. ೧೦. ಬಟ್ಟೆಯ ಅಥವಾ ಕಂಬಳಿಯ ಅಂಚು. ೧೧. ಒಂದು ಬಗೆಯ ಅಕ್ಕಿಯ ದೋಸೆ. ~ಒ(ಯೊ)ತ್ತು = ಮುಚ್ಚಿಕೊಳ್ಳುವ ಹಾಗೆ ಅಮುಕು. ~ಕ(ಗ)ಟ್ಟು = ೧. (ತಲೆಗೂದಲಂತೆ) ಜಡೆಗಟ್ಟು. ೨. ಬಟ್ಟೆಗೆ ಅಥವಾ ಕಂಬಳಿಗೆ ಕರೆಕಟ್ಟು. ~ಕಲ್ = ಅಡಿಗಲ್. ~ಕುಣಿ = ಸಗಣಿಯನ್ನು ತುಂಬುವ ತಿಪ್ಪೆ. ~ತೆಗೆ = ಅಡೆ ಹಾಕಿದ್ದನ್ನು ಮಾಗಿದ ಮೇಲೆ ಹೊರಕ್ಕೆ ತೆಗೆ. ~ಪಟ್ಟಿ = ಬಂಡಿಯ ಒಂದು ಭಾಗ. ~ಪೊ(ವೊ)ತ್ತು = ಪೂರ್ತಿಯಾಗಿ ಹೊತ್ತಿಕೊಳ್ಳು. ~ಬರು =(ಕಾಯಿ) ಮಾಗುವ ಸ್ಥಿತಿಗೆ ಬರು. ~ಹಬ್ಬ = ಮೀನ ಸಂಕ್ರಮಣದಲ್ಲಿ ಒಂದು ಹಬ್ಬ; ಮೂರು

ದೋಸೆಯ ಹಬ್ಬ. ~ಹಾಕು = (ಮಾವಿನ ಕಾಯಿ, ಬಾಳೆಕಾಯಿ ಮೊದಲಾದುವನ್ನು) ಹಣ್ಣು ಮಾಡುವುದಕ್ಕಾಗಿ ಹುಲ್ಲಿನಲ್ಲಿ ಮುಚ್ಚಿಡು.

ಅಡೆತಡೆ = ಅಡ್ಡಿ.

ಅಡೆಪ = ಅಡಪ.

ಅಡ್ಡ (ನಾ). ೧. ಪಕ್ಕದಿಂದ ಪಕ್ಕಕ್ಕೆ ಸಾಗುವುದು. ೨. ತಡೆ. ೩. ತೊಲೆ. ೪. ಅರ್ಧ. ೫. ಹಿಂದೆ ಪ್ರಚಾರದಲ್ಲಿದ್ದ ಅರ್ಧ ಹಣದ ಬೆಲೆಯ ಒಂದು ನಾಣ್ಯ. (ಗು). ೬. ಅಡ್ಡಲಾಗಿರುವ. ~ಅಂಚು = ಪಂಚೆ, ಸೀರೆ ಮುಂತಾದುವುಗಳ ಸೆರಗಿನಲ್ಲಿ ಅಡ್ಡಡ್ಡಲಾಗಿರುವ ಬಣ್ಣದ ಪಟ್ಟೆ. ~ಅಗಲ = ಅಡ್ಡಳತೆ. ~ಅಗಲು = ಅಡ್ಡಳತೆ ಹೆಚ್ಚಾಗಿರುವ ಬಾದಾಮಿಯಾಕಾರದ ಊಟದ ತಟ್ಟೆ. ~ಅಳತೆ = (ವಸ್ತುವಿನ) ಅಗಲದ ಅಳತೆ. ~ಆಡು = ೧. ಅತ್ತಿತ್ತ ಸುಳಿದಾಡು. ೨. (ವಾಯು ಸೇವನೆಗಾಗಿ) ಸಂಚರಿಸು. ~ಇಕ್ಕು = ೧.ಅಡ್ಡಲಾಗಿ ಇಡು. ೨. ಲಂಚ ಕೊಡು. ~ಇ(ಯಿ)ಸು = ೧. ತಡೆ; ಅಡ್ಡಿಮಾಡು. ೨. ಅಡ್ಡಲಾಗಿ ಹಿಡಿ; ಮರೆ ಮಾಡು. ~ಕಟ್ಟಿಗೆ = ಒಂದು ಬಗೆಯ ವಾದ್ಯ. ~ಕ(ಗ)ಟ್ಟು = ೧. ಅಡ್ಡಲಾಗಿ ದಾರಿಯನ್ನು ಕಟ್ಟಿನಿಲ್ಲು. ೨. ಅಡ್ಡಲಾಗಿ ಜೋಡಿಸು. ೩. ಅಡ್ಡಲಾಗಿ ಹಾಕಿರುವ ಕಟ್ಟು. ~ಕಸಬಿ = ೧. ತನಗೆ ಸಹಜವಲ್ಲದ ವೃತ್ತಿಯನ್ನು ಹಿಡಿದವನು. ೨. ಕೆಲಸದಲ್ಲಿ ನುರಿಯದವನು. ~ಕಾ(ಗಾ)ಲು = ೧. ನಡೆಯುವಾಗ ಅಡ್ಡಡ್ಡಲಾಗಿ ಇಡುವ ಕಾಲು. ೨. ಬೇರೊಬ್ಬರ ನಡಗೆಗೆ ಅಡ್ಡಲಾಗಿ ಒಡ್ಡುವ ಕಾಲು. ~ತೊಡರು = ೧. ಅಡ್ಡಿಪಡಿಸು. ೨. ನಡುವೆ ಬಂದ ಅಡ್ಡಿ. ~ದಾರಿ = ೧. ಮುಖ್ಯವಾದ ದಾರಿಗೆ ಅಡ್ಡಲಾಗಿರುವ ದಾರಿ. ೨. ತಪ್ಪುದಾರಿ. ~ದುಡ್ಡು = ೧. ಅರ್ಧದುಡ್ಡು; ಎರಡು ಕಾಸು. ೨. ಬಹಳ ಕಡಿಮೆ ಬೆಲೆಯ ನಾಣ್ಯ. ೩. (ನ್ಯಾಯವಲ್ಲದೆ) ಬೇರೆ ರೀತಿಯಿಂದ ಬರುವ ಹಣ. ~ನಾಮ = ೧. ಅಡ್ಡಹೆಸರು ಅಥವಾ ಕುಲದ ಹೆಸರು. ೨. (ಸ್ಮಾರ್ತರು) ಹಣೆಯ ಮೇಲೆ ಅಡ್ಡಲಾಗಿ ಇಟ್ಟುಕೊಳ್ಳುವ ಗಂಧದ ಗೆರೆ. ~ಪಟ್ಟಿ = ೧. ಅಡ್ಡಲಾಗಿ ಹಾಕಿರುವ ಪಟ್ಟಿ. ೨. ಬಾಗಿಲಿನ ಅಥವಾ ಕಿಟಕಿಯ ಚೌಕಟ್ಟಿನ ಮೇಲ್ಭಾಗದ ಅಥವಾ ಕೆಳಭಾಗದ ಪಟ್ಟಿ. ೩. ಸಣ್ಣ ಹಾದಿ; ಕಾಲುದಾರಿ. ~ಮಾತು = ೧. ಅಪ್ರಸ್ತುತವಾದ ಮಾತು. ೨. ಅಡ್ಡಿಯನ್ನು ತರುವ ಮಾತು. ~ಮಾರ್ಗ = ೧. ಕಾಲುಹಾದಿ. ೨. ತಪ್ಪುದಾರಿ. ~ವಿಚಾರಣೆ = ಸಾಕ್ಷಿಗೆ ಪ್ರತಿಪಕ್ಷದ ವಕೀಲರು ಪ್ರಶ್ನೆಗಳನ್ನು ಹಾಕಿ ಮಾಡುವ ವಿಚಾರಣೆ; ಪಾಟೀ ಸವಾಲು. ~ಹೆಸರು = ೧. ಹುಟ್ಟಿದಾಗ ಇಟ್ಟ ಹೆಸರಲ್ಲದೆ ರೂಢಿಯಲ್ಲಿರುವ ಬೇರೊಂದು ಹೆಸರು. ೨. ಉಪನಾಮ. ~ಹೊತ್ತು = ಹೊತ್ತಲ್ಲದ ಹೊತ್ತು; ಅಕಾಲ.

ಅಡ್ಡಣ(ಣೆ, ಸೆ) (ನಾ). ಗುರಾಣಿ; ಢಾಲು.

ಅಡ್ಡಣಿಗೆ (ನಾ). ಊಟದ ತಟ್ಟೆ ಮುಂತಾದುವನ್ನು ಇಡುವ ಪೀಠ; ಮುಕ್ಕಾಲುಮಣೆ.

ಅಡ್ಡಾಳಿ (ನಾ). ದಾಸಿ; ಸೇವಕಿ.

ಅಡ್ಡಿ (ನಾ). ೧. ತಡೆ; ವಿಘ್ನ. ೨. ಗೌರವ. ೩. ಆಡಂಬರ. ~ಇಗ = ವಿಘ್ನವನ್ನುಂಟುಮಾಡುವವನು; ಅಡ್ಡಿ ಬರುವವನು. ~ಮಾಡು = ೧.ಅಡ್ಡಿತರು.೨.ತಡಮಾಡು. ~ಸಡಿ(ಡ್ಡಿ) = ಅಡಚಣೆ.

ಅಡ್ಡಿಕೆ(ಗೆ) (ನಾ). ಹೆಂಗಸರು ಕೊರಳಲ್ಲಿ ಧರಿಸುವ ಅರ್ಧಚಂದ್ರಾಕಾರದ ಒಂದು ಆಭರಣ.

ಅಡ್ಡೆ (ನಾ). ೧. ಹೆಗಲ ಮೇಲೆ ಅಥವಾ ಕೊರಳ ಮೇಲೆ ಹೊರುವುದಕ್ಕಾಗಿ

ಮಾಡಿರುವ ಸಾಧನ; ಕಾವಡಿ; ಕಂಬಿ. ೨. ಬೀಜವನ್ನು ಬಿತ್ತುವ ಒಂದು ಉಪಕರಣ. ೩. ಜನ ಸೇರುವ ಸ್ಥಳ; ಕಟ್ಟೆ. ೪. ಅಂಗಡಿ.

**ಅಣ್(ಣ್ಣು)** (ಕ್ರಿ). ೧. ಅಂಟು; ಸೋಂಕು. (ನಾ). ೨. ನಾಯಿಯನ್ನು ಕಟ್ಟುವ ಹಗ್ಗ. **~ಮುಟ್ಟು** = ಸೋಕುವಷ್ಟು ಹತ್ತಿರ.

**ಅಣಂ** (ಅ). ೧. ಸ್ವಲ್ಪವೂ. ೨. ಬಹಳವಾಗಿ.

**ಅಣ(ಂ)ಚು** (ಕ್ರಿ). ೧. ಅಡಗಿಸು; ತಗ್ಗಿಸು; ಹೀನಾಯುಗೊಳಿಸು. ೨. ಆಕ್ರಮಿಸು; ಮುತ್ತು. (ನಾ). ೩. ಆಯುಧದ ತುದಿ. ೪. ಸೌಟು, ಚಮಚ ಮುಂತಾದ ಸಾಮುಗ್ರಿಗಳನ್ನು ತೂಗುಹಾಕಲು ಅನುಕೂಲವಾಗುವಂತೆ ಮರದಿಂದ ತಯಾರಿಸಿದ ರಂಧ್ರಗಳುಳ್ಳ ಚೌಕಟ್ಟು.

**ಅಣಂಬೆ(ಬಿ)** = ಆಳಂಬೆ.

**ಅಣಕ** (ನಾ). ೧. ಅಪಹಾಸ್ಯ. ೨. ಅಣಕಿಸುವುದು; ಹೀಯಾಳಿಸುವುದು. ೩. ವಿನೋದ. ೪. ನಟನೆ. ೫. ಕಟಕಿ; ಚುಚ್ಚುನುಡಿ. ೬. ಆಶ್ಚರ್ಯ. **~ಅ(ವಾ)ಡು** = ಅಪಹಾಸ್ಯ ಮಾಡು. **~ಇಸು** = ಅಣಕವಾಡು.

**ಅಣಕಂ** (ಅ). ಅತಿಶಯವಾಗಿ.

**ಅಣಕಿಗ** (ನಾ). ಕುಚೋದ್ಯಗಾರ.

**ಅಣಕು** (ಕ್ರಿ). ತುರುಕು; ಗಿಡಿ.

**ಅಣಗಿಸು** (ಕ್ರಿ). ಅಡಗಿಸು; ಮುಚ್ಚಿಡು.

**ಅಣಗು** (ಕ್ರಿ). ೧. ಉಪಶಮನ ಹೊಂದು. ೨. ಅವಿತುಕೊ. **~ಒತ್ತು** = ತಗ್ಗುವಂತೆ ಅದುಮು.

**ಅಣಚಿ** (ನಾ). ೧. ಸುಮಂಗಲಿ. ೨. ಮಾಂಗಲ್ಯ.

**ಅಣರು** (ಕ್ರಿ). ತಿವಿ; ಚುಚ್ಚು.

**ಅಣಲ್(ಲು)** (ನಾ). ಬಾಯಿಯ ಒಳಭಾಗ.

**ಅಣಸು** (ಕ್ರಿ). ೧. ಆಕ್ರಮಿಸು. (ನಾ). ೨. ಬಾಣದ ಹಿಳುಕು. ೩. ಒನಕೆಯ ತುದಿ, ದನಕರುಗಳ ಕೋಡು, ಆನೆಯ ದಂತ ಮುಂತಾದುವಕ್ಕೆ ಅಳವಡಿಸುವ ಲೋಹದ ಕಟ್ಟು. ೪. ಜೋಡಣೆಯ ಸ್ಥಾನ; ಕೀಲು.

**ಅಣಿ** (ಕ್ರಿ). ೧. ಸಜ್ಜಾಗು. ೨. ರಚಿಸು. (ನಾ). ೩. ಅಚ್ಚುಕಟ್ಟು. ೪. ಅವಕಾಶ. ೫. ನೆಯ್ಗೆಯ ಮಗ್ಗದ ಹಾಸುಹೊಕ್ಕುಗಳ ಜೋಡಣೆ. ೬. ಕಾಲಾಳುಗಳ ಪಡೆ; ಪದಾತಿ. ೭. ಸೈನ್ಯದ ವ್ಯೂಹ. **~ಅಂ(ಯಂ)ಕಕಾಱ** = ಇಡೀ ಸೇನೆಯನ್ನೇ ಎದುರಿಸಿ ಯುದ್ಧ ಮಾಡುವ ಏಕಾಂಗ ವೀರ. **~ಕೀಲು** = ಬೀಗದ ಒಳಕೀಲು. **~ಕೆ(ಗೆ)ಲಸ** = ಪದಾರ್ಥವನ್ನು ಅಣಿಗೊಳಿಸುವ ಕೆಲಸ. **~ಕೊ(ಗೊ)ಳಿಸು**=ಸಿದ್ಧಪಡಿಸು. **~ಗಂಟು** = ಅತ್ತಿತ್ತ ಜಾರಿಸಬಹುದಾದ ನೂಲಿನ ಕುಣಿಕೆಯ ಗಂಟು. **~ಗಾರ** = ೧. ಅಣಿ ಮಾಡುವವನು. ೨. ವಿವೇಕಿ. ೩. ಮುಖಂಡ. ೪. ನೆಯ್ಗೆಯ ಹಾಸಹೊಕ್ಕುಗಳನ್ನು ಸಿದ್ಧಪಡಿಸುವವನು. **~ನೆರೆ** = ಸಿದ್ಧವಾಗಿ ಸೇರು.

**ಅಣಿಗೆ** (ನಾ). ನೆಯ್ಗೆಯುವರ ಮಗ್ಗದ ಅಚ್ಚು.

**ಅಣಿಮೆ** (ನಾ). ೧. ಸೂಕ್ಷ್ಮತ್ವ. ೨. ಅತ್ಯಂತ ಸೂಕ್ಷ್ಮವಾದ ರೂಪವನ್ನು ಹೊಂದಬಲ್ಲ ಶಕ್ತಿ; ಅಷ್ಟಸಿದ್ಧಿಗಳಲ್ಲಿ ಒಂದು.

**ಅಣಿಯರ** (ನಾ). ೧. ಅತಿಶಯ. ೨. ಸಡಗರ; ರಭಸ. **~ಪೆ(ವೆ)ಱು** = ಮೇಲ್ಮೆಯನ್ನು ಹೊಂದು.

**ಅಣಿಯರಂ** (ಅ). ೧. ಹೆಚ್ಚಾಗಿ. ೨. ಶೀಘ್ರವಾಗಿ.

**ಅಣಿಲ್(ಲು)** (ನಾ). ಅಳಿಲು; ಇಣಚಿ.

**ಅಣು** (ನಾ). ೧. ಅತ್ಯಂತ ಸೂಕ್ಷ್ಮವಾದ ವಸ್ತು. ೨. ವಸ್ತುವಿನ ಅಥವಾ ಕಾಲದ ಅತ್ಯಂತ ಸೂಕ್ಷ್ಮಾಂಶ. ೩. ಶಿವ. ೪. ಬತ್ತದಲ್ಲಿ ಸಣ್ಣನಾದ ಒಂದು ಜಾತಿ. **~ಗುಂಡು** = ಪರಮಾಣು ಶಕ್ತಿಯಿಂದ ಸಿಡಿಸುವ ಬಾಂಬು; ಆಟಂಬಾಂಬು. **~ವ್ರತ** = ಜೈನ ಗೃಹಸ್ಥರು ಪಾಲಿಸಬೇಕಾದ ಐದು ವ್ರತ.

**ಅಣುಂಕು** (ಕ್ರಿ). ಕುಗ್ಗಿಸು.

**ಅಣು(ಂ)ಗ** (ನಾ). ೧. ಪ್ರೀತಿಪಾತ್ರನಾದವನು. ೨. ಮಗ. ೩. ಪ್ರಿಯಶಿಷ್ಯ. ~ಜೀವಿತ =ಪ್ರೀತಿಪಾತ್ರರಿಗಾಗಿ ಕೊಟ್ಟ ಕೊಡುಗೆ.

**ಅಣು(ಂ)ಗಿ** (ನಾ). ಮಗಳು.

**ಅಣು(ಂ)ಗು** (ನಾ). ಪ್ರೀತಿ.

**ಅಣುಕು** (ಕ್ರಿ). ೧. ಆಕ್ರಮಿಸು. (ನಾ). ೨. ಒಂದು ಬಗೆಯ ಛತ್ರಿ.

**ಅಣುಗಿಱು** (ಕ್ರಿ). ಅತ್ಯಂತ ಸಮೀಪಕ್ಕೆ ಬರು.

**ಅಣುಗೆ** (ನಾ). ೧. ಮಗಳು. ೨. ಪ್ರೀತಿಪಾತ್ರಳಾದವಳು.

**ಅಣುವ** (ನಾ). ಹನುಮಂತ.

**ಅಣೆ** (ಕ್ರಿ). ೧.ತಿವಿ. ೨. ಹೊಡೆ. ೩. ಸೋಕು. ೪. ಆವರಿಸು. ೫. ತಿಕ್ಕು. ೬. ಅರಿಹೋಗು. (ನಾ). ೭. ಅಡ್ಡಗಟ್ಟೆ; ಅಣೆಕಟ್ಟು. ೮. ಬೆಟ್ಟದ ತಪ್ಪಲು. (ಪ್ರ). ೯. ಒಂದು ಭಾವನಾಮ ಪ್ರತ್ಯಯ. ~ಇ(ಯಿ)ಡು =ಊರೆಯಾಗಿ ನಿಲ್ಲಿಸು. ~ಇ(ಯಿ)ಸು =ಹೊಡೆಯಿಸು. ~ಕ(ಗ)ಟ್ಟು =ನೀರಿನ ಪ್ರವಾಹಕ್ಕೆ ಅಡ್ಡಲಾಗಿ ಹಾಕಿದ ಕಟ್ಟೆ; ಅಡ್ಡಗಟ್ಟೆ.

**ಅಣೆಪ** (ನಾ). ತಿವಿತ; ಇರಿತ.

**ಅಣ್ಕು** (ಕ್ರಿ). ಮುಳುಗು.

**ಅಣ್ಕೆ** (ನಾ.) ಲೇಪನ; ಬಣ್ಣ ಹಾಕುವುದು. ~ಗೆಯ್ =೧. ಲೇಪಿಸು; ಬಣ್ಣಹಾಕು. ೨. ಸವರು; ನೇವರಿಸು.

**ಅಣ್ಣ** (ನಾ). ೧. ಹಿರಿಯ ಸಹೋದರ. ೨. ಗಂಡಸರನ್ನು ಪ್ರೀತಿಯಿಂದ ಅಥವಾ ಗೌರವದಿಂದ ಸಂಬೋಧಿಸುವ ಮಾತು.

**ಅಣ್ಣನೆ** (ಅ). ೧. ಹಿತವಾಗಿ. ೨. ಬಹಳವಾಗಿ.

**ಅಣ್ಣಲೆ** (ನಾ). ರಾಜ; ದೊರೆ.

**ಅಣ್ಣಿ** (ನಾ). ಹೆಂಗಸರನ್ನು (ಕೆಲವು ವೇಳೆ ಗಂಡಸರನ್ನೂ) ಪ್ರೀತಿಯಿಂದ ಕರೆಯುವಾಗ ಉಪಯೋಗಿಸುವ ಮಾತು.

**ಅಣ್ಣೆ** (ನಾ). ೧. ಏಟು. ೨. ಒಂದು ಬಗೆಯ ಸೊಪ್ಪು. (ಗು). ೩. ಉತ್ತಮವಾದ. ~ನೂಲು =ಶ್ರೇಷ್ಠವಾದ ನೂಲು. ~ಪಾ(ವಾ)ಲ್(ಲು) =ಉತ್ತಮವಾದ ಹಾಲು.

**ಅಣ್ಣೆಕಲ್(ಲು)** (ನಾ). ೧. ಆಟವಾಡುವಾಗ ಮೇಲಕ್ಕೆ ಹಾರಿಸಿ ಕೈಯೊಡ್ಡಿ ಹಿಡಿದು ಕೊಳ್ಳುವ ಸಣ್ಣಕಲ್ಲು. ೨. ಆಲಿಕಲ್ಲು.

**ಅಣ್ಪು** (ನಾ). ೧. ಸವರುವುದು; ಲೇಪಿಸುವುದು. ೨. ಮೈಗೆ ಲೇಪಿಸಿಕೊಳ್ಳುವ ಸುಗಂಧದ್ರವ್ಯ. ೩. ಬಾಂಧವ್ಯ; ನಂಟುತನ. ~ಇಸು =ಲೇಪಿಸು; ಸವರು. ~ಪಿ(ವಿ)ಡಿ=ಲೇಪವನ್ನು ಹೊಂದು.

**ಅಣ್ಮು** (ಕ್ರಿ). ೧. ಪರಾಕ್ರಮವನ್ನು ತೋರಿಸು. ೨. ಸಮರ್ಥವಾಗು; ಶಕ್ತವಾಗು. (ನಾ). ೩. ಪರಾಕ್ರಮ. ~ಕಾಱ(ರ)=ಪರಾಕ್ರಮಿ. ~ಕಿ(ಗಿ)ಡು=ಪೌರುಷ ನಾಶವಾಗು.

**ಅತಂತ್ರ** (ಗು). ೧. ತಂತಿಯಿಲ್ಲದ. ೨. ಕೇಳುವವರಿಲ್ಲದ. ೩. ಭದ್ರವಿಲ್ಲದ.

**ಅತಟ** (ನಾ). ೧. ಪ್ರಪಾತ. (ಗು). ೨. ತೀರವಿಲ್ಲದ; ದಡವಿಲ್ಲದ. ೩. ಕಡಿದಾದ.

**ಅತನು** (ನಾ). ೧. ದೇಹವಿಲ್ಲದವನು; ಮನ್ಮಥ. (ಗು). ೨. ತೆಳುವಲ್ಲದ; ದಪ್ಪನಾದ. ~ಉದರ =೧. ಕೃಶವಲ್ಲದ ಹೊಟ್ಟೆ. ೨. ದಪ್ಪನಾದ ಹೊಟ್ಟೆಯುಳ್ಳದ್ದು.

**ಅತಲ(ಳ)** (ನಾ). ೧. ತಳವಿಲ್ಲದ್ದು. ೨. ಏಳು ಅಧೋಲೋಕಗಳಲ್ಲಿ ಒಂದು. ೩. ಒಂದು ನರಕದ ಹೆಸರು. ೪. ಶಿವ.

**ಅತಸಿ** (ನಾ). ಅಗಸೆ ಗಿಡ.

**ಅತಿ** (ನಾ). ೧. ಹೆಚ್ಚು. (ಗು). ೨. ಹೆಚ್ಚಾದ; ಅಧಿಕವಾದ; ಅತಿಶಯವಾದ. ೩. ಮೀರಿದ. (ಅ). ೪. ಹೆಚ್ಚಾಗಿ. ~ಅಲ್ಪ =೧. ತೀರ ಕಡಮೆಯಾದ. ೨. ಬಹಳ ಹೀನವಾದ. ~ಅವೇಕ್ಷಣ = ನಮಗೆ ಬೇಕಾದ ಅಂಶ

ವನ್ನು ವಸ್ತುವಿನಲ್ಲಿ ಅದು ಇಲ್ಲದಿದ್ದರೂ ಸೇರಿಸಿಕೊಂಡು ಕಾಣುವ ದೋಷ. **~ಆಚಾರ**=೧.ಕೆಟ್ಟ ನಡತೆ. ೨.ದೌರ್ಜನ್ಯ; ದುರಾಚಾರ. **~ಆಧಾನ**=೧.ಬಹಳ ಹೆಚ್ಚಾಗಿ ಇಡುವುದು. ೨. ಮೀರುವುದು; ಕಟ್ಟಳೆ ಮೀರಿದ ನಡೆವಳಿಕೆ. **~ಆಲೀಢ**= ಪರಮಾವಧಿಯ; ತುಂಬ ಹೆಚ್ಚಿನ. **~ಆಹಿತ** =೧. ದೊಡ್ಡ ಅನಿಷ್ಟ; ವಿಶೇಷವಾದ ಕೇಡು. ೨. ಜೀವದ ಹಂಗು ತೊರೆದು ಮಾಡುವ ಸಾಹಸ. ೩. ಮಹತ್ತರವಾದ ಭಯ. **~ಇಂದ್ರಿಯ**=೧. ಇಂದ್ರಿಯಗಳಿಗೆ ಸಂಬಂಧಿಸದೆ ಇರುವ. ೨. ಸೂಕ್ಷ್ಮವಾದ. ೩. ಆತ್ಮ. ೪. ಪ್ರಕೃತಿ. ೫. ಮನಸ್ಸು. **~ಉಕ್ತಿ** = ೧. ತುಂಬ ಹೆಚ್ಚುಮಾಡಿ ಹೇಳುವುದು. ೨. ಒಂದು ಕಾವ್ಯಾಲಂಕಾರ. **~ಕರ್ಮ**=ಕೆಟ್ಟ ಕೆಲಸ. **~ಕ(ಗ)ಳೆ** = ೧. ಮೀರು; ಉಲ್ಲಂಘಿಸು. ೨. ಕಡೆಗಣಿಸು. ೩. ದೂರಮಾಡು; ಪರಿಹರಿಸು. ೪. ಕಳೆ; ಹಾಳುಮಾಡು. ೫. (ಕಾಲ) ಮುಗಿದುಹೋಗು. **~ಬಜೆ** =ಒಂದು ಔಷಧ ದ್ರವ್ಯ. **~ಬಲ**=೧.ತುಂಬ ಬಲಿಷ್ಟವಾದ. ೨. ಗಾಳಿ. **~ಮಾನಸ** =ಮನಸ್ಸಿನ ಎಲ್ಲೆಗೆ ಮೀರಿದ . ಸತ್ಯ. **~ಮಾನುಷ**=ಮನುಷ್ಯನ ಶಕ್ತಿಗೆ ಮೀರಿದ; ಮನುಷ್ಯರಿಗೆ ದೊರೆಯದ. **~ಮಾರ್ಗ** =ಮಾರ್ಗವನ್ನು ಅತಿಕ್ರಮಿಸಿದವನು. **~ಮುಕ್ತ** = ೧. ಪೂರ್ಣವಾಗಿ ಬಿಡುಗಡೆ ಹೊಂದಿದ. ೨. ಕಾಮಕ್ರೋಧಗಳಿಂದ ಬಿಡಲ್ಪಟ್ಟ. ೩. ಬೀಜರಹಿತವಾದ. ೪. ಮುತ್ತುಗಳಿಗಿಂತಲೂ ಬೆಳ್ಳಗಿರುವ. ೫. ಬಂಜೆಯಾದ ತಳಿ. ೬. ಇರವಂತಿಗೆ. ೭. ಹುಲಿಗಿಲು ಮರ. **~ಮೂತ್ರ** = ಮೇಲಿಂದ ಮೇಲೆ ಮೂತ್ರವಿಸರ್ಜನೆಯನ್ನುಂಟು ಮಾಡುವ ಒಂದು ರೋಗ; ಮಧುಮೇಹ. **~ರಥ** = ರಥಿಕರಲ್ಲಿ ಅತ್ಯಂತ ಶ್ರೇಷ್ಠನಾದವನು. **~ರಸ** =೧. ಬಹಳ ಹೆಚ್ಚು ರಸವುಳ್ಳ. ೨. ಅಕ್ಕಿ, ತೆಂಗಿನಕಾಯಿ, ಬೆಲ್ಲ ಇವುಗಳನ್ನು ರುಬ್ಬಿ ತುಪ್ಪದಲ್ಲಿ ಕರಿದು ಮಾಡುವ ಒಂದು ಬಗೆಯ ಭಕ್ಷ್ಯ. **~ವಾದ** = ೧. ಮಿತಿ ಮೀರಿ ಮಾತಾಡುವುದು. ೨. ಮಿತಿಮೀರಿದ ಚರ್ಚೆ. ೩. ನಿಂದೆಯ ಮಾತು. **~ಸಾರ** =೧. ಅತಿಶಯವಾದ; ಸತ್ತ್ವದಿಂದ ಕೂಡಿದ; ರಸಮಯವಾದ. ೨. ಬಹಳವಾಗಿ ಭೇದಿಯಾಗುವ ಒಂದು ರೋಗ.

**ಅತಿಕರ್ಮಿ** (ನಾ). ಬಹಳ ಕೆಟ್ಟ ಕೆಲಸಗಳನ್ನು ಮಾಡಿದವನು; ಪಾಪಿ.

**ಅತಿಕ್ರಮ** (ನಾ). ೧. ಮೀರುವುದು. ೨. ನಿಯಮ ವಿರುದ್ಧವಾದದ್ದು. ೩. ಮರ್ಯಾದೆಯನ್ನು ಮೀರಿದ ನಡೆವಳಿಕೆ. **~ಇಸು**=೧. ಮೀರು. ೨. ಕಡೆಗಣಿಸು. ೩. ದಾಟು. ೪. ಹೊರಹೊಮ್ಮು. **~ಪ್ರವೇಶ**=ನಿಷೇಧಿಸಿರುವ ಸ್ಥಳಕ್ಕೆ ಪ್ರವೇಶ ಮಾಡುವುದು.

**ಅತಿಕ್ರಮಣ** (ನಾ). ೧. ಕ್ರಮವನ್ನು ಉಲ್ಲಂಘಿಸುವುದು. ೨. ಹಕ್ಕು ಇಲ್ಲದ ಕಡೆ ಹೋಗುವುದು. ೩. ಎಲ್ಲೆ ಮೀರುವುದು.

**ಅತಿಕ್ರಾಂತ** (ನಾ). ೧. ಆನೆಯ ಏಳು ಮದಾವಸ್ಥೆಗಳಲ್ಲಿ ಒಂದು. (ಗು). ೨. ಮೀರಿದ. ೩. ಮುಗಿದು ಹೋದ.

**ಅತಿಗಮನ** (ನಾ). ಮೀರುವುದು.

**ಅತಿಗಮಿಸು** (ಕ್ರಿ). ಮೀರು.

**ಅತಿಚರೆ** (ನಾ). ೧. ಮೀರಿ ನಡೆಯತಕ್ಕವಳು; ಚಪಲಸ್ವಭಾವದ ಹೆಂಗಸು. ೨. ಬೆಟ್ಟದಾವರೆ.

**ಅತಿಚಾರ** (ನಾ). ಶಾಸ್ತ್ರಕ್ಕೂ ಪದ್ಧತಿಗೂ ವಿರುದ್ಧವಾದ ನಡೆವಳಿಕೆ.

**ಅತಿಜಾಗರ** (ನಾ). ೧. ತುಂಬ ಎಚ್ಚರಿಕೆ. ೨. ಕರಿಯ ಕೊಕ್ಕರೆ.

**ಅತಿಥಿ** (ನಾ). ೧. ಅನಿರೀಕ್ಷಿತವಾಗಿ ಮನೆಗೆ ಬಂದ

ಸಭ್ಯ ಗೃಹಸ್ಥ. ೨. ಆಮಂತ್ರಣವನ್ನು ಪಡೆದು ಅಥವಾ ಪಡೆಯದೆಯೆ ಮನೆಗೆ ಬಂದ ಗೌರವಸ್ಥ. ೩. ಸಿಟ್ಟು. ೪. ಶ್ರೀರಾಮನ ಮೊಮ್ಮಗನಾದ ಸುಹೋತ್ರ.

**ಅತಿರ** = ಅಸ್ಥಿರ.

**ಅತಿರಿಕ್ತ** (ನಾ). ೧. ತುಂಬ ಬಡವ. (ಗು). ೨. ಬಿಟ್ಟುಹೋದ; ಕಳೆದುಹೋದ. ೩. ಬಹಳ ಹೆಚ್ಚಾದ. ೪. ಆಚೆಯ.

**ಅತಿರೇಕ** (ನಾ). ೧. ರೂಢಿಗೆ ವಿರೋಧವಾದ ನಡೆ. ೨. ಅಳತೆಗೆ ಮೀರಿದ ಸ್ಥಿತಿ; ಅತಿಶಯ.

**ಅತಿವರ್ತಿ** (ಗು). ೧. ಬಹಳ ಹೆಚ್ಚಿನ. ೨. ಮೊಟ್ಟಮೊದಲನೆಯ. ೩. ಕ್ರಮವನ್ನು ಮೀರಿ ನಡೆಯುವ; ಅತಿಕ್ರಮಿಸಿ ನಡೆಯುವ.

**ಅತಿವರ್ತಿತ** (ನಾ). ೧. ಆನೆಗಳಿಗೆ ಉಂಟಾಗುವ ಏಳು ಮದಾವಸ್ಥೆಗಳಲ್ಲಿ ಒಂದು. (ಗು). ೨. ಮೀರಿಹೋದ.

**ಅತಿವೇಲ** (ನಾ). ೧. ಅತಿಮೂತ್ರವೆಂಬ ರೋಗ. (ಗು). ೨. ಸಮುದ್ರದ ದಡವನ್ನು ಮೀರಿದ. ೩. ಕಾಲವನ್ನು ಮೀರಿದ. ೪. ಮೇರೆ ಮೀರಿದ; ಅತ್ಯಧಿಕವಾದ.

**ಅತಿಶಯ** (ನಾ). ೧. ಹೆಚ್ಚಳ. ೨. ಅಸಾಧಾರಣವಾದ ಮಹಿಮೆ. **~ಉಕ್ತಿ** = ಸ್ವಲ್ಪವನ್ನು ಮಹತ್ತರವಾಗಿ ಮಾಡಿ ಹೇಳುವುದು; ಒಂದು ಕಾವ್ಯಾಲಂಕಾರ.

**ಅತಿಸಂಧಿತೆ** (ನಾ). ಮೋಸಕ್ಕೆ ಗುರಿಯಾದವಳು.

**ಅತಿಸರ್ಜನ** (ನಾ). ೧. ಬಹಳವಾಗಿ ದಾನ ಮಾಡುವುದು; ಕೊಡುಗೈತನ. ೨. ಕೊಲೆ.

**ಅತೀತ** (ನಾ). ೧. ಕ್ರಮತಪ್ಪಿದ ನಡತೆ. ೨. ಇಂದ್ರಿಯಗಳ ಹಿಡಿತಕ್ಕೆ ಮೀರಿದವನು; ಯತಿ. (ಗು). ೩. ಮೀರಿದ. ೪. ಎಲ್ಲೆಯನ್ನು ಮೀರಿದ. ೫. ಸತ್ತುಹೋದ. ೬. ಕಳೆದುಹೋದ.

**ಅತೀವ** (ಗು). ತುಂಬ; ಅತ್ಯಧಿಕ.

**ಅತುಲ(ಳ)** (ನಾ). ೧. ಎಳ್ಳು. ೨. ಕಫ. (ಗು). ೩. ಅಸಮಾನವಾದ. ೪. ಹಗುರಾದ.

**ಅತೃಪ್ತಿ** (ನಾ). ಅಸಮಾಧಾನ.

**ಅತ್ತ** (ಅ). ೧. ಆ ಕಡೆ; ಆ ಪಕ್ಕ. ೨. ಹೊರಗೆ; ಬೇರೊಂದು ಕಡೆ.

**ಅತ್ತಪರ** (ನಾ). ಢಾಲು; ಗುರಾಣಿ.

**ಅತ್ತರಣ** (ನಾ). ೧. ಕುಳಿತುಕೊಳ್ಳಲು ಅಥವಾ ಮಲಗಿಕೊಳ್ಳಲು ಹಾಸುವ ಮೆತ್ತೆ, -ಪೀಠ. ೨. ಆನೆಯ ಬೆನ್ನಿನ ಮೇಲೆ ಹಾಕುವ ಗವಸಣಿಗೆ.

**ಅತ್ತರು** (ನಾ). ಹೂವುಗಳಿಂದ ಭಟ್ಟಿಯಿಳಿಸಿ ತೆಗೆದ ಸುಗಂಧದ್ರವ್ಯ; ಪುಷ್ಪಸಾರ. **~ದಾನಿ** = ಅತ್ತರನ್ನು ಹಾಕಿಡುವ ಪಾತ್ರೆ.

**ಅತ್ತಲಗ್ಗ** (ನಾ). ಅಸಾಧ್ಯ.

**ಅತ್ತಳಕೊತ್ತಳ** (ನಾ). ಅವ್ಯವಸ್ಥೆ.

**ಅತ್ತಳಗ** (ನಾ). ೧. ಹೆಚ್ಚಳ. ೨. ಅಸಾಧ್ಯತೆ; ಅಶಕ್ಯತೆ. ೩. ವ್ಯಥೆ.

**ಅತ್ತಿ** (ನಾ). ೧. ಸಂತೋಷ. ೨. ಒಂದು ಬಗೆಯ ಮರ. **~ಕಾಯ್** = ೧. ಅತ್ತಿ ಮರದ ಕಾಯಿ. ೨. ಅತ್ತಿಕಾಯಿಯ ಆಕಾರದಲ್ಲಿರುವ ಒಂದು ಮಕ್ಕಳ ಒಡವೆ.

**ಅತ್ತಿಗೆ** (ನಾ). ೧. ಅಣ್ಣನ ಹೆಂಡತಿ. ೨. ಗಂಡನ ಸಹೋದರಿ.

**ಅತ್ತೆ** (ನಾ). ೧. ಹೆಂಡತಿಯ ಅಥವಾ ಗಂಡನ ತಾಯಿ. ೨. ತಂದೆಯ ಒಡಹುಟ್ಟಿದವಳು. ೩. ಸೋದರಮಾವನ ಹೆಂಡತಿ; ಸೋದರತ್ತೆ. ೪. ಒಂದು ಬಗೆಯ ಬೆತ್ತದ ಕಾವಡಿ; ಕಂಬಿ; ಅಡ್ಡೆ.

**ಅತ್ಯಂಗ** (ನಾ). ಒಂದು ಬಗೆಯ ಬಟ್ಟೆ.

**ಅತ್ಯಂತ** (ಗು). ೧. ಎಲ್ಲೆ ಮೀರಿದ; ೨. ಎಲ್ಲಕ್ಕೂ ಹೆಚ್ಚಿನ.

**ಅತ್ಯಯ** (ನಾ). ೧. ಅತಿಕ್ರಮ; ಎಲ್ಲೆ ಮೀರುವುದು. ೨. ಮುಕ್ತಾಯ. ೩. ಅಭಾವ; ಮರೆಯಾಗುವುದು. ೪. ಕೇಡು. ೫. ಸಾವು;

ನಾಶ. ೬. ಕಷ್ಟ. ೭. ಮೇಲೆ ಬೀಳುವುದು. ೮. ಅಪರಾಧ. ೯. ಶಿಕ್ಷೆ.

**ಅಥರ್ವ** (ನಾ). ೧. ಪುರೋಹಿತ. ೨. ಪುರಾಣ ಪ್ರಸಿದ್ಧನಾದ ಒಬ್ಬ ಋಷಿ. ೩. ಅಥರ್ವಣ.

**ಅಥರ್ವಣ** (ನಾ). ನಾಲ್ಕನೆಯ ವೇದ. ~ಕೆಲಸ = ಮಾಟ; ಮೋಸಗಾರಿಕೆ.

**ಅದಕು** (ಕ್ರಿ). ೧. ಹಿಸುಕು; ಅದುಮು; ಒತ್ತು. ೨. ತಗ್ಗು; ನೆಗ್ಗು; ಜಜ್ಜಿಹೋಗು. (ನಾ). ೩. ಲೋಹದ ಪಾತ್ರೆಯಲ್ಲಿ ಉಂಟಾದ ತಗ್ಗು, -ನೆಗ್ಗು.

**ಅದಗುಂತಿ** (ನಾ). ೧. ಅತಿಶಯ. ೨. ರಾಶಿ.

**ಅದಟ** (ನಾ). ಶೂರ; ಪರಾಕ್ರಮಿ. ~ತನ = ಅದಟತೆ.

**ಅದಟತೆ** (ನಾ). ಪರಾಕ್ರಮ; ಶೌರ್ಯ.

**ಅದಟು** (ಕ್ರಿ). ೧. ನಿಂದಿಸು; ಜರೆ; ಗದರಿಸು. ೨. ಅದುಮು; ಅಡಗಿಸು. (ನಾ). ೩. ಪರಾಕ್ರಮ; ಶೌರ್ಯ. ೪. ದರ್ಪ; ಗರ್ವ. ೫. ಅಬ್ಬರ. ~ಅಲೆ = ೧. (ಶೌರ್ಯದಿಂದ) ಕಾಡು, -ಪೀಡಿಸು. ~ಆನು = ಪರಾಕ್ರಮವನ್ನು ತಾಳು, -ಹೊಂದು. ~ಇಗ = ಶೂರ; ಪರಾಕ್ರಮಿ.

**ಅದಪು** (ಕ್ರಿ). ಆವೇಶದಿಂದ ಮಾತಾಡು; ನಿಂದಿಸು.

**ಅದಬ್(ಬ್ಬು)** (ನಾ). ೧. ವಿನಯ; ನಮ್ರತೆ. ೨. ಹತೋಟಿ; ಹದ್ದುಬಸ್ತು.

**ಅದರಿಸು** = ಅದ್ದಲಿಸು.

**ಅದರು** = ಅದಿರ್. ~ಅಟ್ಟು = ೧. ನಡುಗಿಸು. ೨. ಗದರಿಸಿ ಓಡಿಸು.

**ಅದಲುಬದಲು** (ನಾ). ಒಂದಕ್ಕೆ ಪ್ರತಿಯಾಗಿ ಮತ್ತೊಂದು; ವಿನಿಮಯ.

**ಅದವ** (ನಾ). ಅಂಗಹೀನ; ಊನವಾದವನು.

**ಅದವಲ(ಳ)ಲ್** (ನಾ). ಸಂತಾಪ; ವ್ಯಥೆ.

**ಅದಾಲತು(ತ್ತು)** (ನಾ). ನ್ಯಾಯಾಸ್ಥಾನ; ಕೋರ್ಟು.

**ಅದಾವತ್ತು(ತಿ)** (ನಾ). ಹಗೆತನ; ಮಾತ್ಸರ್ಯ.

**ಅದಿಕೆ** (ನಾ). ವಿಶೇಷೋತ್ಸವ.

**ಅದಿಗುದಿ** (ನಾ). ಸಂತಾಪ; ತಳಮಳ.

**ಅದಿತಿ** (ನಾ.) ೧. ಭೂಮಿ. ೨. ಹಸು. ೩. ಮಾತು. ೪. ದೇವತೆಗಳ ಜನನಿ.

**ಅದಿಬದಿ** (ನಾ). ಎರಡು ಪಕ್ಕ; ಅಕ್ಕಪಕ್ಕ.

**ಅದಿರ್(ರು)** (ಕ್ರಿ). ೧. ನಡುಗು; ಅಲ್ಲಾಡು. ೨. ಹೆದರು. (ನಾ). ೩. ಕಂಪನ; ನಡುಕ. ೪. ಲೋಹಾಂಶವುಳ್ಳ ಖನಿಜದ್ರವ್ಯ. ~ಆಟ = ಅದುರುವಿಕೆ; ಅಳ್ಳಾಟ. ~ಇಸು = ೧. ನಡುಗಿಸು; ಅಲ್ಲಾಡಿಸು. ೨. ಪರಿಹರಿಸು; ನಿವಾರಿಸು. ~ಕೋ(ಗೋ)ಲ್ = (ಸದ್ದುಮಾಡುವ) ತಳವಾರನ ಕೋಲು.

**ಅದಿರಾಸು** (ನಾ). ತೆನೆಯಿಂದ ಉದುರಿದ ಕಾಳು; ಹಕ್ಕಲು.

**ಅದಿರುಗಂತಿ** = ಅದಿರ್ಗಂತಿ.

**ಅದಿರೆ** (ನಾ). (ದನಗಳ ವಿಷಯದಲ್ಲಿ) ಬೆದೆ. ~ಕ(ಗ)ಟ್ಟು = ಬೆದೆಹತ್ತಿ ಮೇಲೇರು.

**ಅದಿರ್ಕೆ** (ನಾ). ನಡುಕ; ಕಂಪನ.

**ಅದಿರ್ಗಂತಿ** (ನಾ). ಒಂದು ಬಗೆಯ ಹೂವು; ಮಾಧವಿ.

**ಅದಿರ್ಚು** = ಅದಿರ್ಪು.

**ಅದಿರ್ಪು** (ಕ್ರಿ). ೧. ನಡುಗಿಸು; ಬೆದರಿಸು. ೨. ಅಡಗಿಸು; ದಮನಮಾಡು. ೩. ಧಿಕ್ಕರಿಸು; ಮೀರು. ೪. ಚುಚ್ಚು; ತಿವಿ. (ನಾ). ೫. ಅದುರುವಿಕೆ; ಕಂಪನ; ಅಳ್ಳಾಟ. ೬. ಹೆದರಿಕೆ; ಭಯ. ~ಕೆ(ಗೆ)ಯ್ = ನಡುಗಿಸು; ಅಳ್ಳಾಡಿಸು.

**ಅದಿರ್ಮುತ್ತೆ** = ಅದಿರ್ಗಂತಿ.

**ಅದೀಪನ** (ನಾ). ೧. ಅಜೀರ್ಣ. (ಗು). ೨. ಜೀರ್ಣಕಾರಿಯಲ್ಲದ.

**ಅದುಗು** (ಕ್ರಿ). ತಗ್ಗು; ಕುಗ್ಗು; ಉಡುಗು. ~ಇಸು = ೧. ಒತ್ತಿ ಮೆತ್ತಗೆ ಮಾಡು. ೨. ಕುಗ್ಗಿಸು; ಉಡುಗಿಸು.

ಅದುಭುತ = ಅದ್ಭುತ.
ಅದುವಮು (ಕ್ರಿ). ಅಮುಕು ; ಒತ್ತು.
ಅದುರು = ಅದಿರ್.
ಅದೃಶ್ಯ (ಗು). ೧. ಕಾಣಿಸದ; ಕಣ್ಣಿಗೆ ಬೀಳದ. ೨. ನೋಡಲಾಗದ ; ಕಾಣಬಾರದ.
ಅದೃಷ್ಟ (ನಾ). ೧. ಜನ್ಮಾಂತರ ಕರ್ಮಫಲ ; ವಿಧಿ; ಹಣೆಯ ಬರಹ. ೨. ಭಾಗ್ಯ. (ಗು). ೩. ಕಾಣದ; ಗೋಚರಿಸದ. ~ಪರೀಕ್ಷೆ = ದೈವಪರೀಕ್ಷೆ. ~ವಂತ = ಭಾಗ್ಯಶಾಲಿ. ~ವಶ = ೧. ದೈವವಶವಾದ. ೨. ಭಾಗ್ಯವಿಶೇಷ; ಸುದೈವ.
ಅದ್ದ (ನಾ). ೧. ಅರ್ಧ. ೨. ಒಂದು ಅಳತೆ.
ಅದ್ದಗಣೆ (ನಾ). (ಅಕ್ಕಸಾಲೆಯ) ಅಡಿಗಲ್ಲು.
ಅದ್ದನ(ಣ) (ನಾ). ೧. ಒಂದು ಸಣ್ಣ ಅಳತೆ. ೨. ಅಡಿಗಲ್ಲು.
ಅದ್ದರ (ನಾ). ೧. ಗದ್ದಲ. (ಗು). ೨. ಶಿಥಿಲ; ಅಸ್ಥಿರ; ಗಟ್ಟಿಯಲ್ಲದ.
ಅದ್ದರಚಿದ್ದರ(ನಾ). ಪಡಿಯಚ್ಚು; ಪ್ರತಿಬಿಂಬ.
ಅದ್ದರಿಸು = ಅದ್ದಲಿಸು.
ಅದ್ದಲ(ಳ) (ನಾ). ೧. ಅಬ್ಬರ; ಬೊಬ್ಬೆ; ಘೋಷ. ೨. ನಡುಕ; ಭಯ. ~ಇಸು = ೧. ಅರ್ಭಟಿಸು ; ಬೆದರಿಸು. ೨. ನಡುಗು; ಅಲ್ಲಾಡು.
ಅದ್ದಾನ (ನಾ). ಕಷ್ಟ ; ಸಂಕಟ; ಅಧ್ವಾನ.
ಅದ್ದಿಕ (ನಾ). ೧. ಅಧ್ಯಕ್ಷ; ಮುಖ್ಯಾಧಿಕಾರಿ. ೨. ಮೇಲ್ವಿಚಾರಣೆ; ಮುಖ್ಯಾಧಿಕಾರ. ೩. ಸಮಕ್ಷ; ಸಮ್ಮುಖ.
ಅದ್ದಿಕೆ = ಅದ್ದುಗೆ.
ಅದ್ದು = ಅಬ್ಧಿ.
ಅದ್ದುಗಾಣೆ = ಅದ್ದಗಣೆ.
ಅದ್ದುಗೆ (ನಾ). ೧. ಮುಳುಗುವುದು. ೨. ಅದ್ದುವುದು; ಮುಳುಗಿಸುವುದು. ೩. ಬಣ್ಣ ಹಾಕುವುದು.
ಅದ್ದೆ (ಗು). ಬೇರೊಬ್ಬನ ಸ್ಥಾನದಲ್ಲಿಯ; ಬದಲಿ.
ಅದ್ಧೂರಿ (ನಾ). ವೈಭವ; ವಿಜೃಂಭಣೆ.
ಅದ್ಭುತ (ನಾ). ೧. ನವರಸಗಳಲ್ಲಿ ಒಂದು. (ಗು). ೨. ಆಶ್ಚರ್ಯಕರವಾದ; ವಿಸ್ಮಯವನ್ನುಂಟು ಮಾಡುವ.
ಅದ್ಮರ (ನಾ). ಅತಿಯಾಗಿ ತಿನ್ನುವವನು; ಹೊಟ್ಟೆಬಾಕ.
ಅದ್ಯತನ (ನಾ). ೧. ಈಚಿನವನು; ಈಗಿನ ಕಾಲದವನು. (ಗು). ೨. ಈಚಿನ; ಈಗಿನ; ಆಧುನಿಕ.
ಅದ್ಯಾಪಿ (ಅ). ಇನ್ನೂ; ಇಲ್ಲಿಯ ವರೆಗೂ.
ಅದ್ರಿ (ನಾ). ೧. ಬೆಟ್ಟ; ಪರ್ವತ. ೨. ಕಲ್ಲು. ೩. ಮರ. ೪. ಸೂರ್ಯ. ೫. ಏಳು ಎಂಬ ಸಂಖ್ಯೆಯ ಸಂಕೇತ. ೬. ಒಂದು ಅಳತೆ. ~ಕನ್ಯೆ = ಪಾರ್ವತಿ. ~ಕೀಲೆ = ಭೂಮಿ ~ಜಾತ = ೧. ಬೆಟ್ಟದಲ್ಲಿ ಹುಟ್ಟಿದುದು. ೨. ಕಾಡುಗಿಚ್ಚು. ~ದಳನ = ೧. ಪರ್ವತಗಳನ್ನು ಸೀಳುವುದು. ೨. ಇಂದ್ರ ೩. ವಜ್ರಾಯುಧ. ~ಸಾರ = ೧. ಪರ್ವತದಷ್ಟು ಸತ್ತ್ವವುಳ್ಳ. ೨. ಕಬ್ಬಿಣ.
ಅದ್ರಿಜ (ನಾ). ಬೆಟ್ಟದಲ್ಲಿ ಹುಟ್ಟಿದುದು; ಶಿಲಾಜಿತು.
ಅದ್ಲೆ (ನಾ). ಗಳುಗಳನ್ನು ಸೀಳಿ ಮಾಡಿದ ದಬ್ಬೆ. ~ಪಟ್ಟೆ = ಬಂಡಿ ಅಥವಾ ಗಾಡಿಯ ಪಕ್ಕಗಳಲ್ಲಿ ದಬ್ಬೆಗಳಿಂದ ಕಟ್ಟಿದ ತಡಿಕೆ.
ಅದ್ವಯ (ನಾ). ೧. ಅದ್ವೈತ. ೨. ಪರಮಾರ್ಥ. ೩. ಬುದ್ಧ. (ಗು). ೪. ಎರಡಲ್ಲದ. ೫. ಎರಡಿಲ್ಲದ; ತಾನೊಂದೇ ಆದ. ~ವಾದಿ = ೧. ಒಂದೇ ಹೊರತು ಎರಡಿಲ್ಲವೆಂದು ವಾದಿಸುವವನು; ಅದ್ವೈತಿ. ೨. ಬುದ್ಧ. ೩. ಜೈನ.
ಅದ್ವಿತೀಯ (ಗು). ಎರಡನೆಯದಿಲ್ಲದ; ಅಸಮಾನ.
ಅದ್ವೈತ (ನಾ.) ೧. ವಿಕಾರವಿಲ್ಲದಿರುವಿಕೆ; ಸಮತ್ವ. ೨. ಬ್ರಹ್ಮ ಮತ್ತು ಜೀವಿಗಳು

ಬೇರೆ ಬೇರೆಯಲ್ಲ ಎಂದು ಪ್ರತಿಪಾದಿಸುವ ಮತ, –ವಾದ. ೩. ಅದ್ವೈತಿ. (ಗು). ೪. ತನಗೆ ಎರಡನೆಯದಿಲ್ಲದ; ತಾನೇತಾನಾದ. ೫. ಎಣೆಯಿಲ್ಲದ; ಅಸಮಾನ.

**ಅದ್ವೈತಿ** (ನಾ). ಅದ್ವೈತ ಮತವನ್ನು ಅವಲಂಬಿಸಿದವನು.

**ಅಧಃಕರಣ** (ನಾ). ಕೀಳುಮಾಡುವುದು; ಧಿಕ್ಕರಿಸುವುದು.

**ಅಧಃಕರಿಸು** (ಕ್ರಿ). ೧. ಕೀಳು ಮಾಡು; ಧಿಕ್ಕರಿಸು. ೨. ದಾಟು; ಕಳೆ.

**ಅಧಮ** (ನಾ). ೧. ಕೀಳಾದವನು; ನೀಚ. ೨. ಅತಿ ಕಾಮುಕ. ೩. ದುರ್ದಶೆಯನ್ನು ಸೂಚಿಸುವ ಒಂದು ಗ್ರಹಸಂಯೋಗ. (ಗು). ೪. ಅತ್ಯಂತ ಕೆಳಗಿನ; ಅತ್ಯಂತ ಹೀನವಾದ.

**ಅಧಮರ್ಣ** (ನಾ). ಸಾಲವನ್ನು ತೆಗೆದುಕೊಂಡವನು; ಸಾಲಗಾರ.

**ಅಧರ** (ನಾ). ೧.ಕೆಳತುಟಿ; ತುಟಿ. ೨.ಕೆಳಭಾಗ. ೩. ವಾದದಲ್ಲಿ ಬಾಯಿಕಟ್ಟಿ ಹೋದವನು. (ಗು). ೪. ಕೆಳಗಡೆಯ. ೫. ಕೀಳಾದ; ಹೀನ. ~ಇಸು=ಕೀಳುಮಾಡು; ಧಿಕ್ಕರಿಸು.

**ಅಧರತೆ** (ನಾ). ೧. ಕೆಳಗಡೆ ಇರುವಿಕೆ. ೨. ಕೀಳಾಗಿರುವಿಕೆ; ಕೀಳುತನ.

**ಅಧರ್ಮ** (ನಾ). ಧರ್ಮವಲ್ಲದ್ದು; ಧರ್ಮಕ್ಕೆ ವಿರುದ್ಧವಾದದ್ದು.

**ಅಧವ** (ನಾ). ಅನಾಥ; ದಿಕ್ಕಿಲ್ಲದವನು.

**ಅಧವೆ** (ನಾ). ಗಂಡನಿಲ್ಲದವಳು; ವಿಧವೆ.

**ಅಧಿಕ** (ಗು). ೧. ಹೆಚ್ಚಾದ. ೨. ಮೇಲಾದ; ಉತ್ತಮವಾದ. ~ಕಟ್ಟಳೆ = ೧. ಶ್ರಾದ್ಧ. ೨. ಹೆಚ್ಚುಗಟ್ಟಳೆ. ~ಪ್ರಸಂಗ = ತನಗೆ ಸಂಬಂಧವಿಲ್ಲದ ವಿಷಯಗಳಲ್ಲಿ ನಡುವೆ ಪ್ರವೇಶಿಸುವುದು. ~ಮಾಸ = ಸುಮಾರು ಮೂರು ವರ್ಷಕ್ಕೊಮ್ಮೆ ಚಾಂದ್ರಮಾನ ಸಂವತ್ಸರಕ್ಕೆ ಹೆಚ್ಚಾಗಿ ಸೇರಿಸಿದ ತಿಂಗಳು.

**ಅಧಿಕರಣ** (ನಾ). ೧. ಅಧಿಕಾರ. ೨. ಸಪ್ತಮೀ ವಿಭಕ್ತಿಯ ಅರ್ಥ. ೩.ಒಂದು ವಿಷಯವನ್ನು ಕುರಿತು ಹೇಳುವ ಗ್ರಂಥಭಾಗ. ೪. ಪರಮಾಧಿಕಾರ. ೫. ಸರಕಾರ.

**ಅಧಿಕರಿಸು** (ಕ್ರಿ). ೧. ಅಧಿಕಾರವನ್ನು ಪಡೆ; ಹೊಂದು. ೨. (ಕಲೆ ಅಥವಾ ಶಾಸ್ತ್ರವನ್ನು) ಅಭ್ಯಾಸಮಾಡು; ಪೂರ್ಣವಾಗಿ ತಿಳಿ. ೩. ಅವಲಂಬಿಸು; ಆಶ್ರಯಿಸು. ೪. ಗುರಿಯಲ್ಲಿಟ್ಟುಕೊ.

**ಅಧಿಕಾರ** (ನಾ). ೧. (ಯಾವುದಾದರೊಂದು ಕಾರ್ಯವನ್ನು) ನಡಸುವ, ವಿಧಿಸುವ ಅಥವಾ ನಿರ್ಣಯಿಸುವ ಶಕ್ತಿ. ೨. ಕಾರ್ಯನಿರ್ವಾಹಕ ಸ್ಥಾನ; ಪದವಿ. ೩. ಆಡಳಿತ; ಆಳಿಕೆ; ಪ್ರಭುತ್ವ. ೪. ಸ್ವಾಮ್ಯ; ಹಕ್ಕು. ೫. ಯೋಗ್ಯತೆ; ಅರ್ಹತೆ. ೬. ಗ್ರಂಥದ ಒಂದು ಒಳವಿಭಾಗ. ೭. ವಿಶೇಷ ಜ್ಞಾನ; ಪ್ರವೀಣತೆ. ~ಪ್ರಯುಕ್ತ = ೧. ಅಧಿಕಾರ ನಿಮಿತ್ತ. ೨. ಸ್ಥಾನಬಲದಿಂದ.

**ಅಧಿಕಾರಿ** (ನಾ). ೧. ಅಧಿಕಾರವನ್ನು ನಡಸುವವನು; ಅಧಿಕಾರಸ್ಥ. ೨. ಹಕ್ಕುಳ್ಳವನು; ಸ್ವಾಮಿ; ಪ್ರಭು. ೩.ಯೋಗ್ಯತೆಯುಳ್ಳವನು.

**ಅಧಿಕಾರಿಣಿ** (ನಾ). ಅಧಿಕಾರವುಳ್ಳವಳು; ಅಧಿಕಾರವನ್ನು ನಡಸುವವಳು.

**ಅಧಿಕೃತ** (ನಾ). ೧. ಅಧಿಕಾರಿ. (ಗು). ೨. ಅಧಿಕಾರದಲ್ಲಿ ನಿಯೋಜಿಸಲ್ಪಟ್ಟ. ೩. ಅಧಿಕಾರ ಹೊಂದಿದ. ೪. ಕುರಿತು ಹೇಳಲ್ಪಟ್ಟ. ೫. ಪ್ರಮಾಣಭೂತವಾದ.

**ಅಧಿಕ್ರಮ** (ನಾ). ೧. ಮುಂದುವರಿಯುವುದು; ಹೋಗುವುದು. ೨. ದಾಳಿ; ಆಕ್ರಮಣ. ೩. ನಡಸುವುದು.

**ಅಧಿಕ್ಷಿಪ್ತ** (ಗು). ೧. ಆಕ್ಷೇಪಿಸಲ್ಪಟ್ಟ. ೨. ತಿರಸ್ಕರಿಸಲ್ಪಟ್ಟ. ೩. ಕೆಳಕ್ಕೆ ಎಸೆಯಲ್ಪಟ್ಟ. ೪. ಇಡಲ್ಪಟ್ಟ. ೫. ಕಳಿಸಲ್ಪಟ್ಟ.

**ಅಧಿಕ್ಷೇಪ** (ನಾ). ೧. ಆಕ್ಷೇಪ; ನಿಂದೆ. ೨. ತಿರಸ್ಕಾರ. ೩. ಒಂದರ ಮೇಲೆ ಇಡುವುದು. ೪. ಎಸೆಯುವುದು. ೫. ಕಳಿಸಿಬಿಡುವುದು.

**ಅಧಿಗತ** (ಗು). ೧. ಪಡೆದ; ಪ್ರಾಪ್ತವಾದ. ೨. ಅಭ್ಯಾಸ ಮಾಡಿದ.

**ಅಧಿಗಮ** (ನಾ). ೧. ಪಡೆಯುವುದು; ಸಂಪಾದನೆ; ಪ್ರಾಪ್ತಿ. ೨. ಕಲಿಯುವುದು; ಅಭ್ಯಾಸ; ಜ್ಞಾನ. ೩. (ವ್ಯಾಪಾರದಿಂದ ಬರುವ) ಲಾಭ.

**ಅಧಿತ್ಯಕ** (ನಾ). ಬೆಟ್ಟದ ಮೇಲುಗಡೆಯ ಕಾಡುಪ್ರದೇಶ.

**ಅಧಿದೇವತೆ** (ನಾ). ೧. ಒಂದು ವಸ್ತು ಅಥವಾ ಕ್ಷೇತ್ರಕ್ಕೆ ಸಂಬಂಧಿಸಿದ ದೇವತೆ; ಅಭಿಮಾನಿ ದೇವತೆ. ೨. ಎಲ್ಲಾ ದೇವತೆಗಳಿಗೂ ಮುಖ್ಯವಾದ ದೇವತೆ.

**ಅಧಿಪ** (ನಾ). ಒಡೆಯ.

**ಅಧಿಪತ್ರ** (ನಾ). ಅಧಿಕಾರವನ್ನು ಕೊಡುವ ಪತ್ರ; ಆಜ್ಞಾಪತ್ರ.

**ಅಧಿರಾಜ** (ನಾ). ರಾಜರಿಗೆಲ್ಲ ಮೇಲಿನವನಾದ ರಾಜ; ಚಕ್ರವರ್ತಿ.

**ಅಧಿರೂಢ** (ಗು). ಹತ್ತಿದ; ಮೇಲೆ ಏರಿದ.

**ಅಧಿರೋಹಣ** (ನಾ). ಹತ್ತುವುದು; ಮೇಲೆ ಏರುವುದು.

**ಅಧಿವಾಸ** (ನಾ). ೧. ವಾಸಸ್ಥಳ; ಮನೆ. ೨. ಹುಟ್ಟಿದ ಸ್ಥಳ; ಜನ್ಮಸ್ಥಾನ. ೩. ದೇವತಾ ವಿಗ್ರಹವನ್ನು ಪ್ರತಿಷ್ಠಿಸುವ ಮೊದಲು ಧಾನ್ಯ, ನೀರು ಮೊದಲಾದುವುಗಳಲ್ಲಿ ನೆಲೆಗೊಳಿಸಿರುವುದು, –ವಾಸಮಾಡಿಸುವುದು. ೩. ಪರಿಸರ. ೪. ಸುಗಂಧವನ್ನು ಲೇಪಿಸುವುದು. ೫. ಸುಗಂಧ. ೬. ಹೊದಿಕೆ. ~ಇಸು = ೧. ನೆಲಸು; ವಾಸಮಾಡು. ೨. ಪೂಜಿಸು. ೩. ಸುಗಂಧಗೊಳಿಸು; ವಾಸನೆ ಕಟ್ಟು.

**ಅಧಿವಾಸನ** (ನಾ). ೧. ಸುಗಂಧದ್ರವ್ಯಗಳಿಂದ ವಾಸನೆ ಕಟ್ಟುವುದು. ೨. ಯಜ್ಞಾದಿಕರ್ಮಗಳನ್ನು ಪ್ರಾರಂಭಿಸುವ ಮೊದಲು ಮಾಡುವ ದೇವತಾಸ್ಥಾಪನೆ, –ಪೂಜೆ. ೩. ಹೊಸದಾಗಿ ನಿರ್ಮಿಸಿದ ವಿಗ್ರಹಗಳಿಗೆ ಪ್ರಾಣಪ್ರತಿಷ್ಠಾಪನೆ.

**ಅಧಿವೇಶನ** (ನಾ). ಸಭೆ ಸೇರುವಿಕೆ.

**ಅಧಿಷ್ಠಾನ** (ನಾ). ೧. ನೆಲಸಿರುವುದು. ೨. ನೆಲೆ; ಆಧಾರ. ೩. ತಳಹದಿ. ೪. ಪಟ್ಟಣ. ೫. ಅಧಿಕಾರ. ೬. (ಬಂಡಿ ಮೊದಲಾದುವುಗಳ) ಚಕ್ರ. ೭. ನಿಯಮ. ~ಕ(ಗ)ಟ್ಟು = ತಳಹದಿ ಹಾಕು.

**ಅಧಿಷ್ಠಾಯಕ** (ನಾ). ಮೇಲಧಿಕಾರ ನಡಸುವವನು; ಮೇಲಧಿಕಾರಿ.

**ಅಧಿಷ್ಠಿತ** (ಗು). ೧. ನೆಲೆಯನ್ನು ಪಡೆದ. ೨. ಮೇಲಧಿಕಾರವನ್ನು ಪಡೆದ.

**ಅಧೀನ** (ಗು). (ಒಬ್ಬರ) ಕೈಕೆಳಗಿರುವ; ಆಶ್ರಿತನಾದ.

**ಅಧೀರ** (ಗು). ೧. ಧೈರ್ಯವಿಲ್ಲದ. ೨. ಮನಃಸ್ಥೈರ್ಯವಿಲ್ಲದ.

**ಅಧೀಶ** (ನಾ). ಒಡೆಯ; ಪ್ರಭು.

**ಅಧೃತಿ** (ನಾ). ೧. ಸ್ಥೈರ್ಯವಿಲ್ಲದಿರುವುದು; ಅಧೈರ್ಯ. ೨. ಬಿಗಿಯಿಲ್ಲದಿರುವುದು; ಶಿಥಿಲತೆ. ೩. ಸಂಯಮಹೀನತೆ.

**ಅಧೃಷ್ಟ** (ಗು). ೧. ದಿಟ್ಟನಲ್ಲದ; ಧೂರ್ತತನವಿಲ್ಲನ. ೨. ನಾಚುವ ಸ್ವಭಾವದ; ಸಂಕೋಚ ಪ್ರಕೃತಿಯ. ೩. ಸೋಲಿಸಲಾಗದ; ಅಜೇಯ.

**ಅಧೈರ್ಯ** (ನಾ). ಧೈರ್ಯವಿಲ್ಲದಿರುವಿಕೆ; ಪುಕ್ಕಲುತನ. ~ಕೊ(ಗೊ)ಳ್ = ಭಯಪಡು; ಹೆದರು.

**ಅಧೋಕ್ಷಜ** (ನಾ). ೧. ವಿಷ್ಣು. ೨. ಕೃಷ್ಣ.

**ಅಧೋಗತಿ** (ನಾ). ೧. ಕೆಳಕ್ಕಿಳಿಯುವುದು. ೨. ದುರ್ಗತಿ; ನರಕ.

**ಅಧೋಮುಖ** (ನಾ). ೧. ಕೆಳಮುಖ. ೨. ತಲೆ

ಯನ್ನು ಕೆಳಕ್ಕೆ ಬಾಗಿಸಿ ನಡೆಯುವವನು. ೩. ತಲೆಕೆಳಗು. ೪. ವಿಷ್ಣು. ೫. ನರಕದ ಒಂದು ಭಾಗ.

**ಅಧ್ಯಕ್ಷ** (ನಾ). ೧. ಯಜಮಾನ; ಪ್ರಭು. ೨. ಸಭಾಪತಿ. ೩. ಮೇಲ್ವಿಚಾರಣೆ ೪. ಹಾಲೆಮರ. (ಗು). ೫. (ಇಂದ್ರಿಯ ಗಳಿಗೆ) ಗೋಚರವಾದ. ೬. ಮೇಲ್ವಿಚಾರಣೆ. ಮಾಡುವ.

**ಅಧ್ಯಕ್ಷಿಣಿ** = ಅಧ್ಯಕ್ಷೆ.

**ಅಧ್ಯಕ್ಷೆ** (ನಾ). ಅಧ್ಯಕ್ಷಸ್ಥಾನದಲ್ಲಿರುವವಳು.

**ಅಧ್ಯಯ** (ನಾ). ೧. ಕಲಿಯುವುದು; ಅಭ್ಯಾಸ ಮಾಡುವುದು. ೨. ಅಧ್ಯಾಯ; ಸಂಧಿ.

**ಅಧ್ಯಯನ** (ನಾ). ೧. ಓದುವುದು; ಕಲಿಯು ವುದು. ೨. ಓದು; ವ್ಯಾಸಂಗ.

**ಅಧ್ಯವಸಾನ** (ನಾ). ಪ್ರಯತ್ನ; ಎಡೆಬಿಡದೆ ಮಾಡುವ ಅಭ್ಯಾಸ.

**ಅಧ್ಯವಸಾಯ** (ನಾ). ೧. ಮನೋನಿಶ್ಚಯ. ೨. ಪ್ರಯತ್ನ; ನಿರಂತರ ಪರಿಶ್ರಮ.

**ಅಧ್ಯಾತ್ಮ** (ನಾ). ೧. ಆತ್ಮನಿಗೆ ಸಂಬಂಧಿಸಿದ್ದು; ಬ್ರಹ್ಮವನ್ನು ಕುರಿತದ್ದು. ೨. ಆತ್ಮತತ್ತ್ವ; ಪರಬ್ರಹ್ಮ. ೩. ಇಂದ್ರಿಯ. (ಗು). ೪. ಆತ್ಮಕ್ಕೆ ಸಂಬಂಧಿಸಿದ.

**ಅಧ್ಯಾತ್ಮಿಕ** (ಗು). ೧. ಅಧ್ಯಾತ್ಮಕ್ಕೆ ಸಂಬಂಧಿಸಿದ. ೨. ತನ್ನಿಂದ ಉಂಟಾದ.

**ಅಧ್ಯಾಪಕ** (ನಾ). ೧. ಉಪಾಧ್ಯಾಯ; ಶಿಕ್ಷಕ. ೨. ಗುರು. ೩. ವ್ಯಾಖ್ಯಾನ ಮಾಡುವವನು; ವಿವರಣೆ ಹೇಳುವವನು.

**ಅಧ್ಯಾಪನ** (ನಾ). ೧. ವೇದವನ್ನು ಕಲಿಸುವುದು. ೨. ಪಾಠವನ್ನು ಕಲಿಸುವುದು.

**ಅಧ್ಯಾಪಿಕೆ** (ನಾ). ಪಾಠವನ್ನು ಕಲಿಸುವವಳು; ಉಪಾಧ್ಯಾಯಿನಿ.

**ಅಧ್ಯಾಯ** (ನಾ). ೧. ಗ್ರಂಥದ ಒಂದು ಭಾಗ; ಪ್ರಕರಣ. ೨. ವ್ಯಾಸಂಗ.

**ಅಧ್ಯಾರೋಪ** (ನಾ). ೧. ಮೇಲಿಡುವುದು. ೨. ಒಂದು ವಸ್ತುವಿನ ಗುಣವನ್ನು ಮತ್ತೊಂದಕ್ಕೆ ಆರೋಪಿಸುವುದು. ೩. ಅಧ್ಯಾಹಾರ.

**ಅಧ್ಯಾಹಾರ** (ನಾ). ೧. ತರ್ಕ; ಊಹೆ. ೨. ಬಿಟ್ಟು ಹೋಗಿರುವುದನ್ನು ಊಹಿಸಿ ತಿಳಿದುಕೊಳ್ಳುವುದು.

**ಅಧ್ಯಾಹಾರ್ಯ** (ನಾ). ೧. ಅರ್ಥಪೂರ್ತಿ ಮಾಡುವುದಕ್ಕಾಗಿ ಬಿಟ್ಟುಹೋಗಿರುವ ಪದ ಮೊದಲಾದುವುಗಳನ್ನು ಊಹಿಸಿ ಸೇರಿಸಿ ಕೊಳ್ಳುವುದು. (ಗು). ೨. ಹಾಗೆ ಸೇರಿಸಿ ಕೊಳ್ಳತಕ್ಕ.

**ಅಧ್ರುವ** (ಗು). ೧. ಸ್ಥಿರವಲ್ಲದ; ಅಸ್ಥಿರ; ಅಶಾಶ್ವತ; ಚಂಚಲ. ೨. ನಿಶ್ಚಯವಿಲ್ಲದ; ನಿರ್ಧಾರವಿಲ್ಲದ.

**ಅಧ್ವ** (ನಾ). ೧. ದಾರಿ; ಮಾರ್ಗ; ರೀತಿ; ಕ್ರಮ. ೨. ಕಾಲ; ವೇಳೆ. ೩. ಆಕಾಶ; ವಾಯುಮಂಡಲ. ೪. ವೇದಗಳಲ್ಲಿ ಒಂದು ಶಾಖೆ. ೫. ಸ್ಥಳ. ೬. ಪ್ರಯಾಣ ಮಾಡ ಬೇಕಾದ ದೂರ.

**ಅಧ್ವಗ** (ನಾ). ಪ್ರಯಾಣ ಮಾಡುವವನು; ದಾರಿಹೋಕ.

**ಅಧ್ವಜ** (ಗು). ೧. ದಾರಿಯಲ್ಲಿ ಹುಟ್ಟಿದ; ಪ್ರಯಾಣದಿಂದ ಉಂಟಾದ; ಪ್ರವಾಸ ದಿಂದಾದ. ೨. ಧ್ವಜವಿಲ್ಲದ; ಬಾವುಟವಿಲ್ಲದ.

**ಅಧ್ವರ** (ನಾ). ಯಜ್ಞ; ಯಾಗ.

**ಅಧ್ವರಿ** (ನಾ). ಯಜ್ಞವನ್ನು ಮಾಡುವವನು; ಯಾಗದೀಕ್ಷಿತ.

**ಅಧ್ವರ್ಯ** (ನಾ). ವೈಭವ; ವಿಜೃಂಭಣೆ; ಆಡ್ಢೂರಿ.

**ಅಧ್ವರ್ಯು** (ನಾ). ೧. ಯಜ್ಞಪುರೋಹಿತ. ೨. ಯಜ್ಞವನ್ನು ನಡಸುವವನು. ೩. ಮುಂದಾಳು; ನಾಯಕ.

**ಅಧ್ವಾನ** (ನಾ). ೧. ಅಧ್ವ. ೨. ಕಾಡು; ವನ. ೩. ಕಷ್ಟ; ತೊಂದರೆ. ೪. ತುಂಬ ಹದಗೆಟ್ಟ

ಸ್ಥಿತಿ; ಅಸ್ತವ್ಯಸ್ತತೆ. (ಗು). ೫. ದನಿಯಿಲ್ಲದ; ಹೀನಸ್ವರವುಳ್ಳ.

**ಅನಂಗ** (ನಾ). ೧. ಮನ್ಮಥ. ೨. ಆಕಾಶ. ೩. ಗಾಳಿ. ೪. ಮನಸ್ಸು. (ಗು). ೫. ಶರೀರವಿಲ್ಲದ.

**ಅನಂತ** (ನಾ). ೧. ಗುಂಪು; ಸಮೂಹ. ೨. ವಿಷ್ಣು. ೩. ಕೃಷ್ಣ. ೪. ಶಿವ. ೫. ಬಲರಾಮ. ೬. ಆದಿಶೇಷ. ೭. ಆಕಾಶ; ಗಗನ. ೮. ಹದಿನಾಲ್ಕನೆಯ ತೀರ್ಥಂಕರ. (ಗು). ೯. ಕೊನೆಯಿಲ್ಲದ; ಅಸಂಖ್ಯವಾದ. ~ಭೋಗ = ೧. ಅಪರಿಮಿತವಾದ ಸುಖ. ೨. ಆದಿಶೇಷನ ಶರೀರ. ~ಶಯನ = ಆದಿಶೇಷನ ಮೇಲೆ ಮಲಗುವವನು; ವಿಷ್ಣು.

**ಅನಂತರ** (ಗು). ೧. ಅಂತರವಿಲ್ಲದ; ಒಳಭಾಗವಿಲ್ಲದ. ೨. ವಿರಾಮವಿಲ್ಲದ; ಎಡೆಬಿಡದ. ೩. ವ್ಯತ್ಯಾಸವಿಲ್ಲದ. (ಅ). ೪. ಆಮೇಲೆ; ಆ ಬಳಿಕ.

**ಅನಂತೆ** (ನಾ). ೧. ಭೂಮಿ. ೨. ಪಾರ್ವತಿ. ೩. ತುರುಚಿಯ ಗಿಡ. ೪. ಅಳಲೆಯ ಕಾಯಿ. ೫. ಹಿಪ್ಪಲಿ. ೬. ನೆಲ್ಲಿಯ ಕಾಯಿ. ೭. ಗರಿಕೆ. ೮. ಅಮೃತವಳ್ಳಿ. ೯. ಸೊಗದೆಬೇರು.

**ಅನಕ್ಷರ** (ನಾ). ೧. ಅವಾಚ್ಯ. ೨. ಅಶಿಕ್ಷಿತ; ಓದು ಬಾರದವನು. ~ಜಠರ = ಓದುಬರಹ ಇಲ್ಲದವನು; ನಿರಕ್ಷರಕುಕ್ಷಿ.

**ಅನಘ** (ನಾ). ೧. ಪಾಪರಹಿತ. ೨. ದೋಷರಹಿತ. ೩. ನಿರಪರಾಧಿ. ೪. ಶುಚಿ.

**ಅನಚ್ಛ** (ಗು). ತಿಳಿಯಾಗಿರದ; ಕೊಳಕಾದ.

**ಅನಡ್ವ** (ನಾ). ಎತ್ತು; ಗೂಳಿ.

**ಅನತ** (ಗು). ೧. ಬಾಗದ; ನೆಟ್ಟಗಿರುವ. ೨. ವಿನಯವಿಲ್ಲದ.

**ಅನತಿ** (ಗು). ಸ್ವಲ್ಪ; ಕೊಂಚ.

**ಅನದ್ಯತನ** (ನಾ). ಇಂದಿನದಲ್ಲದ್ದು; ಈಗಿನದಲ್ಲದ್ದು.

**ಅನಧಿಕಾರಿ** (ನಾ). ೧. ಅಧಿಕಾರಿಯಲ್ಲದವನು. ೨. ಅರ್ಹತೆಯಿಲ್ಲದವನು.

**ಅನಧ್ಯಯನ** (ನಾ). ೧. ಅಧ್ಯಯನವಿಲ್ಲದಿರುವುದು. ೨. ಅಧ್ಯಯನ ಮಾಡಬಾರದ ದಿನ.

**ಅನಧ್ಯಾಯ** (ನಾ). ೧. ವ್ಯಾಸಂಗಕ್ಕೆ ಬಿಡುವು; ರಜ. ೨. ವೇದಾಭ್ಯಾಸ ಮಾಡದವನು.

**ಅನನಾಸ್(ಸು)** (ನಾ). ಒಂದು ಬಗೆಯ ಹಣ್ಣು; ಫರಂಗಿ ಹಲಸು.

**ಅನನುಕೂಲ** (ಗು). ಅನುಕೂಲವಲ್ಲದ; ವಿರುದ್ಧವಾದ.

**ಅನನುನಾಸಿಕ** (ನಾ). ಅನುನಾಸಿಕವಲ್ಲದ್ದು; ಮೂಗಿನ ಸಹಾಯವಿಲ್ಲದೆ ಉಚ್ಚರಿಸಬಹುದಾದ ವರ್ಣ.

**ಅನನ್ಯ** (ನಾ). ೧. ಏಕನಿಷ್ಠ. (ಗು). ೨. ಬೇರೆಯಲ್ಲದ. ೩. ಅದ್ವಿತೀಯ. ~ಮನಸ್ಕ = ಏಕಾಗ್ರಚಿತ್ತ. ~ವೃತ್ತಿ = ಏಕಾಗ್ರಚಿತ್ತತೆ.

**ಅನನ್ಯಜ** (ನಾ). ಮನ್ಮಥ.

**ಅನನ್ವಯ** (ನಾ). ಒಂದಕ್ಕೊಂದು ಹೊಂದದಿರುವುದು.

**ಅನನ್ವಿತ** (ಗು). ಒಂದಕ್ಕೊಂದು ಸಂಬಂಧವಿಲ್ಲದ; ಅಸಂಬದ್ಧ.

**ಅನಪತ್ಯ** (ನಾ). ಮಕ್ಕಳಿಲ್ಲದವನು.

**ಅನಪತ್ಯೆ** (ನಾ). ಮಕ್ಕಳಿಲ್ಲದವಳು; ಬಂಜೆ.

**ಅನಪಾಯಿನಿ** (ನಾ). ೧. ನಾಶರಹಿತಳು; ಶಾಶ್ವತೆ. ೨. ಲಕ್ಷ್ಮಿ.

**ಅನಪೇಕ್ಷಿತ** (ಗು). ಬಯಸದ; ಬೇಡದ; ಅಪೇಕ್ಷಿಸದ.

**ಅನಪೇತ** (ಗು). ೧. ಹೊರಟು ಹೋಗದ. ೨. ಅಗಲದ. ೩. ಮೀರದಿರುವ; ತಪ್ಪದೆ ಅನುಸರಿಸುವ.

**ಅನಪೇಯ** (ಗು). ಕುಡಿಯಲು ಯೋಗ್ಯವಾದ.

**ಅನಭಿಜ್ಞತೆ** (ನಾ). ತಿಳಿವಳಿಕೆ ಸಾಲದಿರುವಿಕೆ.

**ಅನಭಿಷಿಕ್ತ** (ಗು). ಅಭಿಷೇಕ ಹೊಂದದ.

**ಅನಯು** (ನಾ). ೧. ಅಕ್ರಮ; ತಪ್ಪುದಾರಿ ೨. ಅನಿಷ್ಟವುಂಟುಮಾಡುವ ವಿಧಿ; ದುರ್ದೈವ. ೩. ಅನೀತಿ; ಕೆಟ್ಟ ನಡವಳಿಕೆ. ೪. ನೀತಿರಹಿತ; ನಯವಿಲ್ಲದವನು.

**ಅನರ್ಗಲ(ಳ)** (ಗು). ತಡೆಯಿಲ್ಲದ; ಸ್ವಚ್ಛಂದ ವೃತ್ತಿಯು.

**ಅನರ್ಘ** (ಗು). ೧. ಬೆಲೆ ಕಟ್ಟಲಾಗದ; ಅಮೂಲ್ಯ. ೨. ಶ್ರೇಷ್ಠವಾದ.

**ಅನರ್ಘ್ಯ** = ಅನರ್ಘ.

**ಅನರ್ಥ** (ನಾ). ೧. ವೈಪರೀತ್ಯ; ಕೇಡು. ೨. ಬಡವ. (ಗು). ೩. ಅರ್ಥವಲ್ಲದ. ೪. ಅರ್ಥವಿಲ್ಲದ; ಹೊಂದಿಕೆಯಿಲ್ಲದ. ೫. ಉಪಯೋಗವಿಲ್ಲದ. ~ಕರ =೧. ಪ್ರಯೋಜನವಿಲ್ಲದುದು. ೨. ಕೇಡನ್ನು ತರತಕ್ಕುದು; ಅಪಾಯಕರವಾದುದು. ~ಕ್ರಾಂತಿ = ಕೇಡನ್ನುಂಟುಮಾಡುವ ವಿಪ್ಲವ.

**ಅನರ್ಥಕ** (ನಾ). ೧. ವಾಕ್ಯದೋಷಗಳಲ್ಲಿ ಒಂದು. (ಗು). ೨. ಅರ್ಥವಿಲ್ಲದ. ೩. ಪ್ರಯೋಜನವಿಲ್ಲದ.

**ಅನರ್ಹ** (ನಾ). ಅರ್ಹತೆಯಿಲ್ಲದವನು; ಅಯೋಗ್ಯನಾದವನು.

**ಅನಲ** (ನಾ). ೧. ಅಗ್ನಿ; ಬೆಂಕಿ. ೨. ಅಗ್ನಿದೇವ. ೩. ಜಠರಾಗ್ನಿ; ಜೀರ್ಣಶಕ್ತಿ. ೪. ಮೂರು ಎಂಬ ಸಂಖ್ಯೆಯ ಸಂಕೇತ. ೫. ಕೃತ್ತಿಕಾ ನಕ್ಷತ್ರ. ~ಅಕ್ಷ = ಬೆಂಕಿಯನ್ನು ಕಾರುವ ಕಣ್ಣುಳ್ಳವನು; ಈಶಾನ. ~ಅರ್ಚಿ = ಬೆಂಕಿಯ ಜ್ವಾಲೆ. ~ಅಸ್ತ್ರ = ಆಗ್ನೇಯಾಸ್ತ್ರ. ~ಕ(ಗ)ಣ್ = ಬೆಂಕಿಯನ್ನು ಕಾರುವ ಕಣ್ಣು. ~ಗರ್ಭ = ೧. ಬೆಂಕಿಯನ್ನು ಕಾರುವ. ೨. ಅರಣಿ. ~ನಯನ = ಅನಲಾಕ್ಷ. ~ಮರೀಚಿ = ೧. ಅಗ್ನಿಯ ಕಿರಣ. ೨. ಸೂರ್ಯ. ~ಮುಖ = ೧. ಅಗ್ನಿಮುಖ; ಬೆಂಕಿಯ ಬಾಯಿ. ೨. ಅಗ್ನಿಯೇ ಬಾಯಾಗಿ ಉಳ್ಳವನು; ದೇವತೆ.

**ಅನಲು** (ಕ್ರಿ). ೧. ಉರಿ; ಜ್ವಲಿಸು. (ನಾ). ೨. ಸೆಕೆ; ಸಂತಾಪ. ೩. ಕೋಪ. ೪. ದುಃಖ.

**ಅನಲ್ಪ** (ಗು). ೧. ಅಲ್ಪವಲ್ಲದ; ಬಹಳ. ೨. ಹೆಚ್ಚಿನ; ಮೇಲಾದ.

**ಅನವದ್ಯ** (ಗು). ನಿರ್ದೋಷವಾದ; ಸ್ವಚ್ಛವಾದ; ನಿಷ್ಕಳಂಕವಾದ.

**ಅನವಧಿ** (ಗು). ಮೇರೆಯಿಲ್ಲದ; ಅಪಾರವಾದ.

**ಅನವರತ** (ಗು). ಎಡೆಬಿಡದ; ನಿರಂತರವಾದ.

**ಅನವಲ್ಯ** (ನಾ). ಕ್ಲೇಶ; ತೊಂದರೆ.

**ಅನವಶ್ಯ** (ಗು). ಅವಶ್ಯವಿಲ್ಲದ; ಅಗತ್ಯವಿಲ್ಲದ.

**ಅನವಸ್ಥೆ** (ನಾ). ವ್ಯವಸ್ಥೆಯಿಲ್ಲದಿರುವುದು; ಕ್ರಮವಿಲ್ಲದಿರುವುದು.

**ಅನವೇಕ್ಷಣ** (ನಾ). ನೋಡದಿರುವುದು; ಪರೀಕ್ಷೆ ಮಾಡದಿರುವುದು.

**ಅನವ್ಯಯ** (ನಾ). ಅಗತ್ಯವಿಲ್ಲದ ವೆಚ್ಚ; ದುಂದು.

**ಅನಶನ** (ನಾ). ೧. ಉಪವಾಸ. (ಗು). ೨. ಆಹಾರವಿಲ್ಲದ. ~ದೀಕ್ಷೆ = ಉಪವಾಸ ವ್ರತ.

**ಅನಸು** (ನಾ). ಜೋಳ ಮುಂತಾದ ಗಿಡಗಳನ್ನು ಕತ್ತರಿಸಿದ ಮೇಲೆ ಬುಡದಲ್ಲಿ ಒಡೆಯುವ ಚಿಗುರು.

**ಅನಸೂಯೆ** (ನಾ). ೧. ಅಸೂಯೆಯಿಲ್ಲದಿರುವುದು. ೨. ಹೊಟ್ಟೆಕಿಚ್ಚಿಲ್ಲದ ಹೆಂಗಸು. ೩. ಅತ್ರಿಮಹರ್ಷಿಯ ಹೆಂಡತಿ.

**ಅನಾಕುಲ(ಳ)** (ನಾ). ೧. ವ್ಯಾಕುಲವಿಲ್ಲದ ಸ್ಥಿತಿ. (ಗು). ೨. ವ್ಯಾಕುಲವಿಲ್ಲದ; ಶಾಂತವಾದ. (ಅ). ೩. ಕ್ಷೋಭೆಗೊಳ್ಳದೆ; ನಿರಾಯಾಸವಾಗಿ; ನಿಶ್ಚಿಂತೆಯಿಂದ.

**ಅನಾಗತ** (ನಾ). ೧. ಭವಿಷ್ಯ. (ಗು). ೨. ಇನ್ನೂ ಬಾರದ; ಮುಂದಿನ.

೩. ದೊರೆಯದ; ಸಿಕ್ಕದ. ೪. ತಿಳಿಯದ. ~ಕರ್ತೃ = ಭವಿಷ್ಯವನ್ನು ಅರಿತು ಬರೆಯುವವನು. ~ಪೂಜೆ = ತಿಳಿಯದ ಪೂಜೆ.

**ಅನಾಗತಜ್ಞ** (ನಾ). ಭವಿಷ್ಯವನ್ನು ಬಲ್ಲವನು; ಜೋಯಿಸ.

**ಅನಾಗತಾರ್ತವೆ** (ನಾ). ಮೈನೆರೆಯದ ಹುಡುಗಿ.

**ಅನಾಗರಿಕ** (ನಾ). ೧. ನಾಗರಿಕನಲ್ಲದವನು; (ಗು). ೨. ನಾಗರಿಕವಲ್ಲದ.

**ಅನಾಚಾರ** (ನಾ). ಆಚಾರವಲ್ಲದುದು; ತಪ್ಪು ನಡೆ. ~ವಂತ = ಆಚಾರವನ್ನು ಬಿಟ್ಟವನು.

**ಅನಾಜು** (ನಾ). ಧಾನ್ಯ; ಕಾಳು; ದವಸ.

**ಅನಾಥ** (ನಾ). ೧. ದಿಕ್ಕಿಲ್ಲದವನು; ತಬ್ಬಲಿ. (ಗು). ೨. ಕಾಪಾಡುವವರಿಲ್ಲದ; ದಿಕ್ಕಿಲ್ಲದ.

**ಅನಾದರ** (ನಾ). ೧. ಉಪೇಕ್ಷೆ; ಉದಾಸೀನತೆ. (ಗು). ೨. ಆದರವಿಲ್ಲದ; ಉಪೇಕ್ಷಿಸಿದ.

**ಅನಾದಿ** (ನಾ). ೧. ಸ್ವರ್ಗ. (ಗು). ೨. ಆದಿಯಿಲ್ಲದ; ಮೊದಲಿಲ್ಲದ. ೩. ಬಹಳ ಪುರಾತನಕಾಲದಿಂದ ಬಂದ. ~ಕಾಲ = ಬಹು ಪುರಾತನ ಕಾಲ.

**ಅನಾಧೇಯ** (ಗು). ತೆಗೆದುಕೊಳ್ಳಬಾರದ; ಒಪ್ಪಲಾಗದ.

**ಅನಾನುಕೂಲ್ಯ** (ನಾ). ಅನುಕೂಲವಿಲ್ಲದಿರುವುದು.

**ಅನಾಪ್ತ** (ನಾ). ೧. ಆಪ್ತನಲ್ಲದವನು; ನಂಟನಲ್ಲದವನು. (ಗು). ೨. ಹೊಂದದಿರುವ; ಇನ್ನೂ ಪಡೆಯದ.

**ಅನಾಮಕ** (ನಾ). ೧. ಕಿರುಬೆರಳ ಪಕ್ಕದ ಕೈಬೆರಳು; ಉಂಗುರದ ಬೆರಳು. ೨. ಮೊಳೆರೋಗ; ಮೂಲವ್ಯಾಧಿ. (ಗು). ೩. ಹೆಸರಿಲ್ಲದ; ಪ್ರಸಿದ್ಧಿ ಪಡೆಯದ.

**ಅನಾಮತ್ತು** (ತು) ೧. = ಅಮಾನತ್ತು. (ಅ). ೨. ಸಂಪೂರ್ಣವಾಗಿ; ಪೂರ್ತಿಯಾಗಿ; ಎಲ್ಲಾ. ೩. ಇದ್ದಕ್ಕಿದ್ದಂತೆ; ಒಮ್ಮೊಂದೊಮ್ಮೆಗೆ.

**ಅನಾಮಧೇಯ** (ನಾ). ಹೆಸರಿಲ್ಲದವನು; ಅಪ್ರಸಿದ್ಧ.

**ಅನಾಮಯ** (ನಾ). ೧. ಕ್ಷೇಮ; ಆರೋಗ್ಯ. (ಗು). ೨. ರೋಗವಿಲ್ಲದ; ನಿರೋಗವಾದ.

**ಅನಾಮಿಕ** (ನಾ). ೧. ಚಂಡಾಲ; ಹೊಲೆಯ (ಗು). ೨. ಹೆಸರಿಲ್ಲದ; ಅಪ್ರಸಿದ್ಧವಾದ.

**ಅನಾಮಿಕೆ** (ನಾ). ೧. ಕಿರುಬೆರಳ ಪಕ್ಕದ ಕೈಬೆರಳು; ಉಂಗುರದ ಬೆರಳು. ೨. ಹೊಲತಿ.

**ಅನಾಯಕ** (ಗು). ನಾಯಕನಿಲ್ಲದ; ಒಡೆಯನಿಲ್ಲದ.

**ಅನಾಯತ** (ನಾ). ೧. ಅಕ್ರಮಕೃತ್ಯ; ತಪ್ಪು ಕೆಲಸ. (ಗು). ೨. ಅಲ್ಪವಾದ; ಸಣ್ಣದಾದ. ೩. ನಿರಾಧಾರವಾದ; ಆಸರೆಯಿಲ್ಲದ. ೪. ಕ್ಷಣಿಕವಾದ; ಅಸ್ಥಿರವಾದ. ೫. ನಿಬಿಡವಾದ; ಅವಿಚ್ಛಿನ್ನವಾದ.

**ಅನಾಯಾಸ** (ನಾ). ೧. ಬಳಕೆಯಿಲ್ಲದಿರುವುದು; ಸುಲಭತೆ. (ಅ). ೨. ಸುಖವಾಗಿ; ಕಷ್ಟವಿಲ್ಲದೆ. ೩. ಇದ್ದಕ್ಕಿದ್ದಂತೆ; ಅನಿರೀಕ್ಷಿತವಾಗಿ.

**ಅನಾರತ** (ಗು). ಬಿಡುವಿಲ್ಲದ; ಸಂತತವಾದ; ನಿರಂತರವಾದ.

**ಅನಾರ್ಯ** (ನಾ). ೧. ಆರ್ಯರಿಲ್ಲದ ಸಭೆ, -ಪ್ರದೇಶ. ೨. ಆರ್ಯರು ಆಚರಿಸಬಾರದ್ದು. (ಗು). ೩. ಆರ್ಯನಲ್ಲದ. ೪. ಗೌರವಿಸಲು ಯೋಗ್ಯನಲ್ಲದ.

**ಅನಾರ್ಷ** (ಗು). ಪ್ರಾಚೀನವಲ್ಲದ.

**ಅನಾಲಸ್ಯ** (ನಾ). ಆಲಸ್ಯವಿಲ್ಲದಿರುವವನು.

**ಅನಾವರ** (ಗು). ಬಹಳವಾದ; ಹೆಚ್ಚಾದ.

**ಅನಾವರಣ** (ನಾ). ೧. ಆವರಣವನ್ನು ತೆಗೆಯುವುದು. ೨. ಪ್ರಕಟಸುವುದು. ೩. ಮುಸುಕಾಗಲೀ ಮುಚ್ಚಳವಾಗಲೀ ಇಲ್ಲದ ವಸ್ತು. ~ಉತ್ಸವ = (ಭಾವಚಿತ್ರ ಮೊದಲಾದುವುಗಳ) ತೆರೆಯನ್ನು ತೆಗೆದು ಪ್ರಕಟಿಸುವ ಸಮಾರಂಭ.

ಅನಾವಶ್ಯಕ (ನಾ). ಅಗತ್ಯವಿಲ್ಲದಿರುವುದು.

ಅನಾವಿಲ(ಳ) (ಗು). ಕದಡದಿರುವ; ನಿರ್ಮಲವಾದ.

ಅನಾವೃತ (ಗು). ಮುಚ್ಚದಿರುವ.

ಅನಾವೃಷ್ಟಿ (ನಾ). ಮಳೆಯಿಲ್ಲದಿರುವುದು; ಬಹಳ ಕಾಲ ಮಳೆಯೇ ಆಗದಿರುವುದು.

ಅನಾಸಕ್ತ (ಗು). ಆಸಕ್ತಿಯಿಲ್ಲದ; ನಿಸ್ಪೃಹವಾದ.

ಅನಾಸಕ್ತಿ (ನಾ). ೧. ಆಸಕ್ತಿಯಿಲ್ಲದಿರುವಿಕೆ. ೨. ಫಲಾಪೇಕ್ಷೆಯಿಲ್ಲದಿರುವಿಕೆ. ~ಯೋಗ = ಫಲದ ಮೇಲೆ ಅಪೇಕ್ಷೆಯಿಲ್ಲದೆ ಕರ್ಮವನ್ನು ಆಚರಿಸುವ ಕ್ರಮ.

ಅನಾಸ್ಥೆ (ನಾ). ಆಸ್ಥೆಯಿಲ್ಲದಿರುವಿಕೆ; ಔದಾಸೀನ್ಯ.

ಅನಾಹತ (ನಾ). ೧. ಒಗೆಯದ ಅರಿವೆ; ನೂತನ ವಸ್ತ್ರ. ೨. ಅಭೇದ್ಯ. ೩. ಗುಣಿಸದೆ ಇರುವುದು. (ಗು). ೪. ಹೊಡೆಯಲ್ಪಡದ; ಏಟು ಬೀಳದ.

ಅನಾಹಾರ (ನಾ). ೧. ಆಹಾರವಿಲ್ಲದಿರುವುದು; ನಿರಾಹಾರ. ೨. ಆಹಾರವಿಲ್ಲದವನು; ಆಹಾರವನ್ನು ಬಿಟ್ಟವನು.

ಅನಾಹುತ (ನಾ). ಆಕಸ್ಮಿಕ; ಕೇಡು.

ಅನಾಹೂತ (ನಾ). ೧. ಆಕಸ್ಮಿಕವಾದ ಕೇಡು. (ಗು). ೨. ಕರೆಯಲ್ಪಡದ; ಆಹ್ವಾನವಿಲ್ಲದ.

ಅನಿಂದ್ಯ (ಗು). ನಿಂದೆಗೆ ಆಸ್ಪದವಿಲ್ಲದ.

ಅನಿಕೆ (ನಾ). ಎಣಿಕೆ; ಉದ್ದೇಶ; ಆಲೋಚನೆ.

ಅನಿಕೇತ (ನಾ). ೧. ಮನೆಯಿಲ್ಲದವನು; ನೆಲೆಯಿಲ್ಲದವನು. ೨. ನಿಯತವಾಗಿ ಒಂದು ನೆಲೆಯಲ್ಲಿ ನಿಲ್ಲದವನು; ಮನೆಮಠಗಳ ಮೋಹವಿಲ್ಲದವನು.

ಅನಿಗಾಲ (ಅ). ಯಾವಾಗಲೂ; ಬಿಡುವಿಲ್ಲದೆ; ಸಂತತವಾಗಿ.

ಅನಿತು(ತ್ತು) (ಅ). ಅಷ್ಟು.

ಅನಿತ್ಯ (ಗು). ನಿತ್ಯವಲ್ಲದ; ಕ್ಷಣಿಕ.

ಅನಿಧನ (ನಾ). ೧. ನಿರಾಶ್ರಿತ. (ಗು). ೨. ನಾಶವಿಲ್ಲದ; ಅಂತ್ಯವಿಲ್ಲದ. ~ನಿಧನ = ಆಶ್ರಯವಿಲ್ಲದವರಿಗೆ ಆಶ್ರಯನಾದವನು; ಶಿವ.

ಅನಿಬದ್ಧ (ಗು). ೧. ಬಂಧನಕ್ಕೆ ಸಿಲುಕದ. ೨. ಅಸಂಬದ್ಧವಾದ; ಹೊಂದಿಕೆಯಿಲ್ಲದ.

ಅನಿಬರ್(ರು) (ನಾ). ಅಷ್ಟು ಜನ; ಅಷ್ಟು ಮಂದಿ.

ಅನಿಮಿತ್ತ (ಗು). ಕಾರಣವಿಲ್ಲದ; ಆಕಸ್ಮಿಕವಾದ; ನಿರ್ವ್ಯಾಜವಾದ. ~ವೈರ = ನಿಷ್ಕಾರಣವಾದ ದ್ವೇಷ.

ಅನಿಮಿಷ (ನಾ). ೧. ಮೀನು. ೨. ದೇವತೆ. ೩. ಜಾಗರೂಕ. (ಗು). ೪. ಕಣ್ಣು ಮಿಟುಕಿಸದ; ರೆಪ್ಪೆ ಹೊಡೆಯದ. ~ಅರಿ = ೧. ರಾಕ್ಷಸ. ೨. ಬೆಸ್ತ. ~ಆಪಗೆ = ದೇವಲೋಕದ ನದಿ; ಗಂಗೆ. ~ಆಲಯ = ಸ್ವರ್ಗ. ~ಧ್ವಜ = ಧ್ವಜದಲ್ಲಿ ಮೀನಿನ ಚಿಹ್ನೆ ಉಳ್ಳವನು; ಮನ್ಮಥ. ~ನಗ = ೧. ಮೇರುಪರ್ವತ. ೨. ಮಂದರ ಪರ್ವತ. ~ಪ್ರಕೀರ್ಣಕ = ೧. ಮೀನುಗಳ ಸಮೂಹ. ೨. ದೇವತೆಗಳ ಸಮೂಹ. ~ಮಂತ್ರಿ = ಬೃಹಸ್ಪತಿ. ~ಮಾರ್ಗ = ಆಕಾಶ.

ಅನಿಮೇಷ (ನಾ). ೧. ದೇವತೆ. ೨. ಮೀನು.

ಅನಿಯತ (ಗು). ನಿಯಮವಿಲ್ಲದ; ಹಿಡಿತಕ್ಕೆ ಸಿಕ್ಕದ; ಅನಿಶ್ಚಿತ. ~ವೃತ್ತಿ = ನಿಯಮವಿಲ್ಲದ ಸ್ಥಿತಿ.

ಅನಿರೀಕ್ಷಿತ (ಗು). ನಿರೀಕ್ಷಿಸದೆ ಉಂಟಾದ.

ಅನಿರುದ್ಧ (ನಾ). ೧. ಕೃಷ್ಣನ ಮೊಮ್ಮಗ. (ಗು). ೨. ತಡೆಯಿಲ್ಲದ.

ಅನಿರ್ಜಿತ (ಗು). ಗೆಲ್ಲಲ್ಪಡದ. ~ಇಂದ್ರಿಯ = ಜಿತೇಂದ್ರಿಯನಲ್ಲದವನು; ಇಂದ್ರಿಯಗಳಿಗೆ ವಶನಾದವನು.

ಅನಿರ್ಣೇಯ (ಗು). ನಿರ್ಣಯ ಮಾಡಲು ಆಗದ.

ಅನಿರ್ದಿಷ್ಟ (ಗು). ನಿರ್ದಿಷ್ಟವಲ್ಲದ; ಖಚಿತವಲ್ಲದ.

ಅನಿರ್ವಚನೀಯ (ನಾ). ೧. ದೇವರು. ೨. ಮಾಯೆ. (ಗು). ೩. ಹೀಗೆ ಎಂದು ಹೇಳಲಾಗದ; ವರ್ಣಿಸಲು ಶಕ್ಯವಲ್ಲದ.

ಅನಿರ್ವಾಚ್ಯ (ನಾ). ೧. ದೇವರು. ೨. ಮಾಯೆ. ೩. ಜಗತ್ತು. (ಗು). ೪. ವಿವರಿಸಿ ಹೇಳಲು ಸಾಧ್ಯವಿಲ್ಲದ.

ಅನಿಲ(ಳ) (ನಾ). ೧. ಗಾಳಿ; ವಾಯು. ೨. ವಾತರೋಗ. ೩. ಸ್ವಾತಿ ನಕ್ಷತ್ರ. ~ತನಯ = ೧. ಭೀಮ. ೨. ಆಂಜನೇಯ. ~ದ್ವಾರ = ಕಿಟಕಿ.

ಅನಿವ (ನಾ). ನಿರ್ಬಂಧ; ಒತ್ತಾಯ. ~ಕೆ(ಗೆ)ಯ್ = ೧. ನಿರ್ಬಂಧ ಪಡಿಸು; ಬಲಾತ್ಕರಿಸು. ೨. ಆಕ್ಷೇಪಿಸು.

ಅನಿವರ್ತಿ (ನಾ). ೧. ಹಿಂತಿರುಗದವನು. ೨. ರಣದಿಂದ ವಿಮುಖನಾಗದವನು; ಧೀರ. ೩. ವಿಷ್ಣುವಿನ ಸಹಸ್ರನಾಮಗಳಲ್ಲಿ ಒಂದು. (ಗು). ೪. ಮತ್ತೆ ಒದಗಿದ.

ಅನಿವಾರ್ಯ (ನಾ). ೧. ಆವಶ್ಯಕ. (ಗು). ೨. ತಡೆಯಲಾಗದ; ತಪ್ಪಿಸಲಾಗದ. ೩. ಗತ್ಯಂತರವಿಲ್ಲದಿರುವ.

ಅನಿವೃತ್ತ (ಗು). ೧. ಹಿಂತಿರುಗದ. ೨. ನಿವೃತ್ತಿ ಹೊಂದದ.

ಅನಿಶ (ಗು). ೧. ರಾತ್ರಿಯಿಲ್ಲದ. ೨. ಬಿಡುವಿಲ್ಲದ; ನಿರಂತರ.

ಅನಿಶಂ (ಅ). ಯಾವಾಗಲೂ; ಎಡೆಬಿಡದೆ.

ಅನಿಷ್ಟ (ನಾ). ೧. ಅಪ್ರಿಯವಾದುದು. ೨. ಬೇಕಿಲ್ಲದವನು; ಕೆಟ್ಟವನು.

ಅನಿಷ್ಪಂದ (ಗು). ಅಲುಗದ.

ಅನಿಸು ೧. = ಅನ್ನಿಸು. (ಅ). ೨. ಅಷ್ಟು.

ಅನೀಕ (ನಾ). ೧. ಗುಂಪು; ಸಮೂಹ. ೨. ಸೈನ್ಯ. ೩. ಸಾಲು. ೪. ಯುದ್ಧ.

ಅನೀಕಸ್ಥ (ನಾ). ೧. ಸೈನ್ಯದಲ್ಲಿರುವವನು. ೨. ಸೈನ್ಯಾಧಿಪತಿ. ೩. ಕಾವಲುಗಾರ. ೪. ಮಾವಟಿಗ.

ಅನೀಕಿನಿ (ನಾ). ೧. ಗುಂಪು; ಸಮೂಹ. ೨. ಸೈನ್ಯ.

ಅನೀನು (ನಾ). ಕಡಿವಾಣ; ಲಗಾಮು.

ಅನೀಶ್ವರ (ನಾ). ೧. ಒಡೆಯನಿಲ್ಲದವನು; ಸ್ವತಂತ್ರ. ೨. ನಾಸ್ತಿಕ.

ಅನೀಹಿತ (ಗು). ಅಪೇಕ್ಷಿಸಲ್ಪಡದ. ~ವೃತ್ತಿ = ಏನನ್ನೂ ಬೇಡದಿರುವ ವ್ರತ.

ಅನು (ನಾ). ೧. ಅಚ್ಚುಕಟ್ಟು; ಸೊಗಸು. ೨. ರೀತಿ; ಕ್ರಮ. ೩. ಅನುಕೂಲತೆ. ೪. ಆಸ್ಪದ. ~ಅ(ವ)ಱಿ(ರಿ) = ಕ್ರಮ ಅಥವಾ ರೀತಿಯನ್ನು ತಿಳಿ. ~ಕಾ(ಗಾ)ಣ್ = ೧. ಹಿತವನ್ನು ಕಾಣು; ಸುಖವನ್ನು ಪಡೆ. ೨. ಸ್ವರೂಪವನ್ನು ತಿಳಿ. ~ಕೂ(ಗೂ)ಡು = ೧. ಅನುಸಾರವಾಗಿರು. ೨. ಒಡನೆ ಸೇರು. ~ಕೆ(ಗೆ)ಡು = ೧. ದಾರಿ ತಪ್ಪು. ೨. ಅನುಕೂಲತೆ ತಪ್ಪು; ಹಾಳಾಗು. ೩. ಕಳವಳಪಡು. ~ಕೆ(ಗೆ)ಯ್ = ಸಿದ್ಧವಾಗು; ಸಜ್ಜಾಗು. ~ಕೊ(ಗೊ)ಡು = ಆಸ್ಪದಕೊಡು. ~ಕೊ(ಗೊ)ಳ್ = ಕೈಗೊಳ್ಳು. ~ತೋ(ದೋ)ಱು(ರು) = ಸರಿಯಾಗಿ ಕಾಣು; ನ್ಯಾಯವಾಗಿ ತೋರು. ~ಪ(ವ)ಡೆ = ಕ್ರಮವಾಗು; ಅನುಕೂಲ ಹೊಂದು. ~ಪಿ(ವಿ)ಡಿ = ಕ್ರಮವನ್ನು ಹಿಡಿ. ~ಪೆ(ವೆ)ಱು(ರು) = ಸುಖವನ್ನು ಪಡೆ; ನೆಮ್ಮದಿಯನ್ನು ಹೊಂದು. ~ಬಿ(ವಿ)ೀಡು = ಅನುಕೂಲವಾದ ವಾಸಸ್ಥಾನ; ಹಿತಕರವಾದ ಮನೆ. ~ಮಾಡು = ೧. ಅಣಿಮಾಡು; ಸಿದ್ಧಗೊಳಿಸು. ೨. ಸಿದ್ಧವಾಗು; ಸಜ್ಜಾಗು. ~ಮಾ(ವಾ)ತು = ಹಿತವಾದ ಮಾತು.

ಅನುಂಗೊಲೆ (ನಾ). ಯಾತನಾಮಯವಾದ ಕೊಲೆ.

**ಅನುಕ** (ನಾ). ೧. ಗಂಡ. ೨. ಇಳಿಜಾರು; ಇಳಿಕಲು. (ಗು). ೩. ಆಸೆಬುರುಕನಾದ. ೪. ಮೋಹಗೊಂಡ.

**ಅನುಕಂಪ(ಪೆ)** (ನಾ). ಕನಿಕರ; ಸಹಾನುಭೂತಿ.

**ಅನುಕಂಪನ** (ನಾ). ಅನುಸರಿಸಿದ ಸ್ಪಂದನ; ಅನುಸರಿಸಿ ಅದುರುವಿಕೆ.

**ಅನುಕರಣ(ಣೆ)** (ನಾ). ೧. (ಇತರರು) ಮಾಡಿದಂತೆ ಮಾಡುವುದು. ೨. ಹೋಲುವಿಕೆ; ಸಾಮ್ಯ. ೩. ಒಂದು ಸದ್ದನ್ನು ಆ ರೀತಿಯಲ್ಲಿಯೇ ಉಚ್ಚರಿಸಿ ಸೂಚಿಸುವ ಪದ. ೪. ಅಭಿನಯ.

**ಅನುಕರಿಸು** (ಕ್ರಿ). ೧. (ಇತರರು) ಮಾಡಿದಂತೆ ಮಾಡು; ಅಭಿನಯಿಸು. ೨. ಹೋಲು. ೩. ಧರಿಸು. ೪. ಸ್ವೀಕರಿಸು. ೫. ಒಪ್ಪು.

**ಅನುಕರ್ಷ** (ನಾ). ೧. ಆಕರ್ಷಣೆ; ಸೆಳೆತ. ೨. ವಿಗ್ರಹ ಮುಂತಾದುವುಗಳಲ್ಲಿ ಮಂತ್ರಪೂರ್ವಕವಾಗಿ ಮಾಡುವ ದೇವತೆಗಳ ಆವಾಹನೆ. ೩. ರಥದ ಅಚ್ಚಿನ ಮರ.

**ಅನುಕಲ್ಪನೆ** (ನಾ). ಪುನರ್‌ಸೃಷ್ಟಿ.

**ಅನುಕೀರ್ತನೆ** (ನಾ). ಕೊಂಡಾಟ; ಗುಣಗಾನ.

**ಅನುಕೂಲ** (ನಾ). ೧. ಸಹಾಯಕ. ೨. ಸೌಕರ್ಯ. ೩. ಶ್ರೀಮಂತಿಕೆ. (ಗು). ೪. ತೀರವನ್ನು ಅನುಸರಿಸಿದ. ೫. ಸಹಾಯಕವಾದ. ~ಇಗ= ಅನುಕೂಲವಾಗಿ ನಡೆದುಕೊಳ್ಳುವವನು. ~ಇಸು = ಅನುಕೂಲವಾಗು; ಹಿತವಾಗು; ಸಹಾಯವಾಗು.

**ಅನುಕೂಲೆ** (ನಾ). ಅನುಕೂಲವಾದವಳು; ಅನುಸರಿಸಿ ನಡೆಯುವವಳು.

**ಅನುಕೃತಿ** (ನಾ). ೧.ಅನುಕರಣ. ೨. ಅನುಸರಿಸಿ ನಡೆಯುವುದು. ೩. ನಕಲು.

**ಅನುಕ್ತ** (ಗು). ಹೇಳಲ್ಪಡದ. ~ಸೂತ್ರ = ಗ್ರಂಥಕರ್ತರಿಂದ ರಚಿತವಾಗದೆ ಬೇರೆಯವರು ಸೇರಿಸಿದ ಸೂತ್ರ.

**ಅನುಕ್ರಮ** (ನಾ). ೧. ಪರಿವಿಡಿ; ಆನುಪೂರ್ವಿ. (ಗು). ೨. ಕ್ರಮಕ್ಕೆ ಅನುಸಾರವಾದ. ~ಇಸು = ೧. ಅನುಸರಿಸಿ ನಡೆ; ಕ್ರಮವಾಗಿ ನಡೆ. ೨. ಪರ್ಯಾಲೋಚಿಸು.

**ಅನುಕ್ರಮಣಿಕೆ** (ನಾ). ಪರಿವಿಡಿ; ವಿಷಯ ಸೂಚಿಕೆ.

**ಅನುಕ್ರೋಶ** (ನಾ). ಕನಿಕರ; ಸಹಾನುಭೂತಿ

**ಅನುಗ** (ನಾ). ೧. ಸೇವಕ; ಅನುಚರ. (ಗು). ೨. ಅನುಸರಿಸಿ ನಡೆಯುವ; ಹಿಂಬಾಲಿಸುವ; ಹೊಂದಿಕೊಂಡು ನಡೆಯುವ.

**ಅನುಗತ** (ನಾ). ೧. ಜೊತೆಯಲ್ಲಿ ಬರುವವನು; ಅನುಚರ. ೨. ವಿಧೇಯತೆ. (ಗು). ೩. ಅನುಸರಿಸಿ ಬಂದ; ಹಿಂಬಾಲಿಸಿದ. ೪. ಸಂಬಂಧಪಟ್ಟ.

**ಅನುಗಾಮಿ** (ಗು). ಅನುಸರಿಸುವ; ಜೊತೆಯಲ್ಲಿ ನಡೆಯುವ.

**ಅನುಗಾಲ** (ಅ). ಸದಾಕಾಲ; ಯಾವಾಗಲೂ.

**ಅನುಗುಣ** (ಗು). ಅನುರೂಪವಾದ.

**ಅನುಗ್ರಹ** (ನಾ). ೧. ಕೃಪೆ. ೨. ಅಂಗೀಕಾರ.

**ಅನುಚರ** (ನಾ). ೧. ಸೇವಕ; ಸಹಾಯಕ. (ಗು). ೨. ಅನುಸರಿಸಿ ನಡೆಯುವ.

**ಅನುಚಿತ** (ಗು). ೧. ಯೋಗ್ಯವಲ್ಲದ. ೨. ವಿಲಕ್ಷಣವಾದ.

**ಅನುಚ್ಛೇದ** (ನಾ). ೧. ನಾಶವಾಗದಿರುವುದು. ೨. ಅಧ್ಯಾಯ; ಪ್ರಕರಣ.

**ಅನುಜ** (ನಾ). ತಮ್ಮ.

**ಅನುಜಾತ** = ಅನುಜ.

**ಅನುಜೀವಿ** (ನಾ). ೧. ಸೇವಕ. (ಗು). ೨. ಆಶ್ರಿತ.

**ಅನುಜ್ಞೆ** (ನಾ). ೧.ಒಪ್ಪಿಗೆ. ೨.ಆಜ್ಞೆ; ಅಪ್ಪಣೆ.

**ಅನುತಾಪ** (ನಾ). ೧. ಪಶ್ಚಾತ್ತಾಪ. ೨. ಕನಿಕರ. ೩. ಸಂತಾಪ.

**ಅನುತ್ತಮ** (ಗು). ತನಗಿಂತ ಬೇರೆ ಉತ್ತಮ ವಸ್ತುವಿಲ್ಲದ; ಅತ್ಯುತ್ತಮವಾದ.

**ಅನುತ್ತರ** (ನಾ). ೧. ದಕ್ಷಿಣ ದಿಕ್ಕು. ೨. ಅಸಂಬದ್ಧವಾದ ಪ್ರತ್ಯುತ್ತರ. ೩. ಬಾಯಿಗೆ ಬಂದುದನ್ನು ಗಳಹುವವನು. (ಗು). ೪. ಅತ್ಯುತ್ತಮವಾದ. ೫. ಕೀಳಾದ. ೬. ದಕ್ಷಿಣ ದಿಕ್ಕಿನ. ೭. ಮರುಮಾತಿಲ್ಲದ. ೮. ಪ್ರತ್ಯುತ್ತರಕ್ಕೆ ಯೋಗ್ಯವಲ್ಲದ.

**ಅನುದಾತ್ತ** (ನಾ). ೧. (ವೇದಗಳನ್ನು ಹೇಳುವಾಗ) ತಗ್ಗಿನಲ್ಲಿ ಉಚ್ಚರಿಸುವ ಒಂದು ಬಗೆಯ ಸ್ವರ. (ಗು). ೨. ಉದಾತ್ತವಲ್ಲದ.

**ಅನುದಾರ** (ನಾ). ೧. ಲೋಭಿ; ಜಿಪುಣ. (ಗು). ೨. ಉದಾರವಲ್ಲದ; ಔದಾರ್ಯವಿಲ್ಲದ; ಘನತೆಯಿಲ್ಲದ.

**ಅನುದಿನ(ಂ)** (ಅ). ದಿನಾಲು ; ಪ್ರತಿದಿನ.

**ಅನುನಯ** (ನಾ). ೧. ನಯವಾದ ಮಾತುಗಳಿಂದ ಮನವೊಲಿಸುವುದು. ೨. ಪ್ರೀತಿ; ಸ್ನೇಹ. ೩. ರೀತಿ.

**ಅನುನಾಸಿಕ** (ನಾ). ಮೂಗಿನ ಸಹಾಯದಿಂದ ಉಚ್ಚರಿಸುವ ವರ್ಣ.

**ಅನುಪತ್ಯ** (ನಾ). ೧. ಕಷ್ಟದ ಪರಿಸ್ಥಿತಿ. ೨. (ಹೆರಿಗೆಯ) ಬೇನೆ. ೩. ವಿಶೇಷ ಕಾರ್ಯ.

**ಅನುಪಪತ್ತಿ** (ನಾ). ೧. ಸಿದ್ಧಿಸದಿರುವುದು. ೨. ಭಂಗ. ೩. ಅನಾನುಕೂಲತೆ.

**ಅನುಪಪನ್ನ** (ಗು). ೧. ಸಿದ್ಧವಾಗದ. ೨. ಹೊಂದಿಕೆಯಿಲ್ಲದ. ೩. ರುಜುವಾತಿಲ್ಲದ. ೪. ಉಪಾಯಗಾಣದ.

**ಅನುಪಮ** (ಗು). ಹೋಲಿಕೆಗೆ ಮೀರಿದ.

**ಅನುಪಾನ** (ನಾ). ೧. ಔಷಧದ ಜೊತೆಗೆ ಸೇವಿಸುವ ಪಾನೀಯ. ೨. ಔಷಧಿಯನ್ನು ಸೇವಿಸುವ ಕ್ರಮ. ೩. ರೋಗಿಗಳಿಗೆ ನಡಸುವ ಉಪಚಾರ; ಪಥ್ಯ.

**ಅನುಪಾಲಕ** (ನಾ). ಕಾಪಾಡುವವನು.

**ಅನುಪಾಲನ** (ನಾ). ಕಾಪಾಡುವುದು; ರಕ್ಷಿಸುವುದು.

**ಅನುಪು** (ಕ್ರಿ). ಕಳುಹಿಸು.

**ಅನುಬಂಧ** (ನಾ). ೧. ಸಂಬಂಧ; ಸ್ನೇಹ. ೨. ಅನುಸರಿಸಿ ನಡೆಯುವ ಅಧೀನ ವ್ಯಕ್ತಿ. ೩. ಆರಂಭ. ೪. ತೊಡಗಿದ ಕೆಲಸವನ್ನು ಬಿಡದೆ ನಡಸುವಿಕೆ. ೫. ಗ್ರಂಥದ ಕೊನೆಯಲ್ಲಿ ಸಂಬಂಧಪಟ್ಟ ವಿಶೇಷ ವಿಷಯಗಳ ನಿರೂಪಣೆ. ~ಇಸು = ೧. ಸೇರಿಕೊಂಡು ಬರು. ೨. ಮುಂದುವರಿಸು.

**ಅನುಬಂಧಿ** (ನಾ). ೧. ಸಂಬಂಧವುಳ್ಳವನು; ಬಂಧು. (ಗು). ೨. ಕಟ್ಟಲ್ಪಟ್ಟ ; ಸಂಬಂಧವುಳ್ಳ.

**ಅನುಬದ್ಧ** (ಗು). ಜೊತೆಗೆ ಕಟ್ಟಿದ ; ಅನಂತರ ಸೇರಿದ; ಸಂಬಂಧಿಸಿದ.

**ಅನುಬಲ** (ನಾ). ೧. ಸಹಾಯಕ ಸೈನ್ಯ. ೨. ಬೆಂಬಲ.

**ಅನುಬಿಂಬ** (ನಾ). ಪ್ರತಿಬಿಂಬ.

**ಅನುಭವ** (ನಾ). ೧. ಇಂದ್ರಿಯಗಳ ಮೂಲಕ ಬರುವ ಜ್ಞಾನ. ೨. ಸುಖ, ದುಃಖ ಮುಂತಾದ ಭಾವಗಳನ್ನು ಪಡೆಯುತ್ತಿರುವ ಮನಸ್ಸಿನ ಸ್ಥಿತಿ. ೩. ಅನುಭಾವ. ೪. ಆರು ಬಗೆಯ ಭಕ್ತಿಗಳಲ್ಲಿ ಒಂದು.

**ಅನುಭವಸ್ಥ** (ನಾ). ಅನುಭವವುಳ್ಳ ವ್ಯಕ್ತಿ; ಸಳಗಿದ ವ್ಯಕ್ತಿ ; ನುರಿತವನು.

**ಅನುಭವಿ** (ನಾ). ೧. ಅನುಭವವುಳ್ಳ ವ್ಯಕ್ತಿ. ೨. ಆತ್ಮಜ್ಞಾನಿ.

**ಅನುಭವಿಕ** = ಅನುಭವಸ್ಥ.

**ಅನುಭಾವ** (ನಾ). ಅತೀಂದ್ರಿಯವಾದ ಅನುಭವ; ಆತ್ಮಾನುಭವ. ~ಶಾಸ್ತ್ರ = ಅತೀಂದ್ರಿಯ ಅನುಭವವನ್ನು ವಿವರಿಸುವ ಶಾಸ್ತ್ರ.

**ಅನುಭಾವಿ** (ನಾ). ೧. ಅನುಭವವುಳ್ಳವನು. ೨. ಅಪರೋಕ್ಷಾನುಭವವುಳ್ಳವನು.

**ಅನುಭೂತ** (ಗು). ೧. ಅನುಭವಿಸಿದ. ೨. ಈ ಹಿಂದಿನ.

**ಅನುಭೂತಿ** (ನಾ). ೧. ಅನುಭಾವ. ೨. ಸ್ವಂತ ಅನುಭವಕ್ಕೆ ಬಂದಿರುವ ತಿಳಿವು.

**ಅನುಭೋಕ್ತವ್ಯ** (ಗು). ಅನುಭವಿಸಲೇ ಬೇಕಾದ.

**ಅನುಭೋಕ್ತೃ** (ನಾ). ಅನುಭವಿಸುವವನು.

**ಅನುಭೋಗ** (ನಾ). ೧. ಸುಖದುಃಖಾದಿಗಳ ಅನುಭವ. ೨. ಸ್ವಾಮ್ಯಕ್ಕೆ ಒಳಪಟ್ಟಿರುವುದು. ೩. ಮಾಡಿದ ಸೇವೆಗಾಗಿ ಅನುಭವಿಸಿಕೊಂಡು ಬರುವಂತೆ ಬಿಟ್ಟ ದತ್ತಿ. ~ಇಸು =೧. ಭೋಗಿಸು. ೨. ಕಷ್ಟಪಡು. ~ದಾರ = ಅನುಭವಿಸುವವನು ; ಮಾಲೀಕ.

**ಅನುಮತ** (ನಾ). ೧. ಒಪ್ಪಿಗೆ; ಸಮ್ಮತಿ. ೨. ಇಷ್ಟ ; ಪ್ರಿಯ. ೩. ಅಭಿಪ್ರಾಯ. (ಗು). ೪. ಸಮ್ಮತಿ ಪಡೆದ.

**ಅನುಮತಿ** (ನಾ). ಸಮ್ಮತಿ. ~ಇಸು=೧. ಒಪ್ಪು; ಸಮ್ಮತಿಸು. ೨. ಒಪ್ಪಿಸು.

**ಅನುಮಾನ** (ನಾ). ೧. ಎಣಿಕೆ ; ಊಹೆ. ೨. ರೀತಿ. ೩. ಸಂದೇಹ. ೪. ಉದ್ದೇಶ. ~(ಂ)ಪ(ಬ)ಡು = ಸಂಶಯಪಡು.

**ಅನುಮಿತ** (ಗು). ಊಹಿಸಲ್ಪಟ್ಟ ; ತರ್ಕಿಸಿದ.

**ಅನುಮಿತಿ** (ನಾ).ಊಹೆ. ~ಇಸು=ಊಹಿಸು; ಎಣಿಸು.

**ಅನುಮೇಯ** (ಗು). ಊಹಿಸಿ ತಿಳಿಯಬೇಕಾದ.

**ಅನುಮೋದ** (ನಾ). ೧. ಸಂತೋಷ. ೨. ಒಪ್ಪಿಗೆ; ಸಮ್ಮತಿ. ~ಇಸು = ೧. ಬೆಂಬಲಿಸು ; ಪುಷ್ಟೀಕರಿಸು. ೨. ಸಮ್ಮತಿಸು.

**ಅನುಮೋದಕ** (ನಾ). ಅನುಮೋದನೆ ಮಾಡುವವನು ; ಸಮ್ಮತಿಸುವವನು.

**ಅನುಮೋದನ(ನೆ)** (ನಾ). ೧. ಸಂತೋಷಗೊಳಿಸುವಿಕೆ. ೨. ನಂಬಿಕೆ. ೩. ಸಮ್ಮತಿ. ೪. ಸಹಾನುಭೂತಿಯಿಂದ ಒದಗಿದ ಸಂತೋಷ. ~ಕೊಡು = ಒಪ್ಪಿಗೆ ಸೂಚಿಸು.

**ಅನುಯಾಯಿ** (ನಾ). ಅನುಸರಿಸಿ ನಡಯುವವನು ; ಹಿಂಬಾಲಕ.

**ಅನುಯೋಗ** (ನಾ). ೧. ಪ್ರಶ್ನೆ. ೨. ದೋಷಾರೋಪಣೆ. ೩. ದಂಡನೆ. ೪. ಸಲಹೆ ಕೇಳುವುದು. ೫. ಆತ್ಮಧ್ಯಾನ.

**ಅನುಯೋಜನ** (ನಾ). ೧. ಪ್ರಶ್ನೆ ಕೇಳುವುದು. ೨. ಜೋಡಣೆ.

**ಅನುರಕ್ತ** (ಗು). ಆಸಕ್ತಿಯುಳ್ಳ.

**ಅನುರಕ್ತಿ** (ನಾ). ಒಲವು; ಪ್ರೇಮ ; ಗಾಢವಾದ ಆಸಕ್ತಿ.

**ಅನುರಣನ** (ನಾ). ಅನುಸರಿಸಿ ಮುಂದುವರಿದ ಧ್ವನಿ ; ಧ್ವನಿ ಪರಂಪರೆ.

**ಅನುರಣಿತ** (ನಾ). ಪ್ರತಿಧ್ವನಿ.

**ಅನುರಾಗ** (ನಾ). ೧. ಪ್ರೀತಿ. ೨. ಕೆಂಪುಬಣ್ಣ.

**ಅನುರಾಗಿ** (ನಾ). ಪ್ರೀತಿಯುಳ್ಳವನು ; ಒಲಿದವನು.

**ಅನುರಾಧೆ** (ನಾ). ಇಪ್ಪತ್ತೇಳು ನಕ್ಷತ್ರಗಳಲ್ಲಿ ಹದಿನೇಳನೆಯದು.

**ಅನುರೂಪ** (ಗು). ಅನುಗುಣವಾದ ; ಯೋಗ್ಯವಾದ.

**ಅನುರೋಧ** (ನಾ). ೧. ಹೊಂದಿಕೊಂಡು ನಡೆಯುವುದು. ೨. ಬಲಾತ್ಕಾರ. ~ಇಸು = ಬಲಾತ್ಕರಿಸು.

**ಅನುಲಕ್ಷಿಸು** (ಕ್ರಿ). ಗಮನಿಸು.

**ಅನುಲಾಪ** (ನಾ). ಒಮ್ಮೆ ಹೇಳಿದುದನ್ನು ಮತ್ತೆ ಮತ್ತೆ ಹೇಳು. ~ತೊ(ದೊ)ೞು(ರು) = ಮತ್ತೆ ಮತ್ತೆ ಹೇಳು.

**ಅನುಲೇಪ** (ನಾ). ೧. ಲೇಪನ. ೨. ಲೇಪನ ದ್ರವ್ಯ. ~(ಂ)ಕೆ(ಗೆ)ಯ್ = ಲೇಪಿಸು. ~ಇಸು = ಬಳಿ ; ಸವರು ; ಹಚ್ಚು.

**ಅನುಲೇಪನ** = ಅನುಲೇಪ. ~ಕೆ(ಗೆ)ಯ್ = ಅನುಲೇಪಂಗೆಯ್.

**ಅನುಲೋಮ** (ನಾ). ರೂಢಿಯಲ್ಲಿರುವ ಕ್ರಮ; ಯಥಾಕ್ರಮ.

**ಅನುವಂಶ** (ನಾ). ಮೂಲವಂಶ. ~ತತ್ತ್ವ = ವಂಶಾರ್ಜಿತ ಲಕ್ಷಣಗಳು ಪುನರಾವೃತ್ತಿ

ಯಾಗುವ ವಿಧಾನವನ್ನು ಸಂಖ್ಯಾತತ್ತ್ವಕ್ಕೆ ಇಳಿಸಲು ಪ್ರಯತ್ನಿಸುವ ತತ್ತ್ವ. ~ವಾದಿ = ಮೂಲಪುರುಷನ ಸ್ವಭಾವವು ವಂಶದಲ್ಲಿ ಇಳಿದುಬರುವುದೆಂದು ವಾದಿಸುವವನು.

**ಅನುವಂಶೀಯ** (ಗು). ವಂಶಪಾರಂಪರ್ಯ ವಾಗಿ ಬಂದ.

**ಅನುವದಿಸು** (ಕ್ರಿ). ೧. ಹೇಳಿಕೊಟ್ಟ ಹಾಗೆ ಕೇಳು. ೨. ವ್ಯಾಖ್ಯಾನ ಮಾಡು. ೩. ಸಂಭಾಷಿಸು. ೪. ನಿರೂಪಿಸು. ೫. ಭಾಷಾಂತರ ಮಾಡು.

**ಅನುವರ** (ನಾ). ೧. ಯುದ್ಧ. ೨. ಕಷ್ಟ.

**ಅನುವರ್ತನ(ನೆ)** (ನಾ). ೧. ಅನುಸರಣೆ. ೨. ಸಮ್ಮತಿ ಸೂಚಿಸುವುದು. ೩. ಪರಿಣಾಮ; ಫಲಿತಾಂಶ.

**ಅನುವರ್ತಿ** (ನಾ). ಅನುಸರಿಸಿ ನಡೆಯು ವವನು. ~ಇಸು = ೧. ಅನುಸರಿಸಿ ನಡೆ. ೨. ಮಾಡು; ನೆರವೇರಿಸು.

**ಅನುವಶ** (ಗು). ಹೇಳಿದಂತೆ ಕೇಳುವ.

**ಅನುವಸಥ** (ನಾ). ವಾಸಸ್ಥಳ; ಮನೆ.

**ಅನುವಾದ** (ನಾ). ೧. ಅನುಸರಿಸಿ ಹೇಳುವುದು. ೨. ಪುನಃ ನಿರೂಪಿಸುವುದು. ೩. ವ್ಯಾಖ್ಯಾನ. ೪. ಭಾಷಾಂತರ. ೫. ಸಮ್ಮತಿ. ~ಕ = ಅನುವಾದ ಮಾಡುವವನು.

**ಅನುವಿದ್ಧ** (ಗು). ೧. ರಂಧ್ರ ಮಾಡಿದ. ೨. ಸೇರಿಕೊಂಡ. ೩. ಕುಂದಣಿಸಿದ.

**ಅನುವು** = ಅನು. ~ಇಸು = ೧. ಅನುನಯ ದಿಂದ ಕೇಳಿಕೊ. ೨. ಬಯಸು. ೩. ವ್ಯಾಪಿಸು. ೪. ಅಣಿಮಾಡು. ೫. ಅನುಕರಿಸು. ~ಏ(ವೇ)ಱು(ರು) = ಅಂದವನ್ನು ಪಡೆ; ಚೆನ್ನಾಗು.

**ಅನುವೃತ್ತಿ** (ನಾ). ೧. ಅನುಕರಣ. ೨. ಅನು ಮೋದನೆ. ೩. ಸೇವೆ. ೪. ಪುನರಾವರ್ತನೆ. ~ಗೈ = ವಿಧೇಯತೆಯಿಂದ ನಡೆ.

**ಅನುವೇದನೆ** (ನಾ). ಸಹಾನುಭೂತಿ.

**ಅನುವೇಷ್ಟಿಸು** (ಕ್ರಿ). ಚೆನ್ನಾಗಿ ಸುತ್ತುಗಟ್ಟು; ಬಳಸಿಕೊಳ್ಳು; ಆವರಿಸು.

**ಅನುಶಯ** (ನಾ). ೧. ಸಮೀಪ ಸಂಬಂಧ. ೨. ಬಹಳ ಕಾಲದಿಂದ ಬಂದ ಹಗೆತನ. ೩. ಪಶ್ಚಾತ್ತಾಪ. ೪. ಉದ್ವೇಗ. ೫. ಕೋಪ. ೬. ಪೂರ್ವಜನ್ಮದ ದುಷ್ಕರ್ಮ. ೭. ಪರಾಶ್ರಯ.

**ಅನುಶಾಸನ** (ನಾ). ೧. ನಿರ್ದೇಶನ; ೨. ಉಪದೇಶ. ೩. ಶಿಕ್ಷೆ.

**ಅನುಶಾಸಿಸು** (ಕ್ರಿ). ೧. ಹೇಳಿದಂತೆ ಕೇಳುವ ಹಾಗೆ ಮಾಡು; ನಿಯಮಿಸು; ವಿಧೇಯ ವಾಗಿಸು. ೨. ದಂಡಿಸು; ಶಿಕ್ಷಿಸು.

**ಅನುಶೀಲನ(ನೆ)** (ನಾ). ಪರಿಶೀಲನೆ.

**ಅನುಶ್ರುತ** (ನಾ). ೧. ಕೇಳಿಕೇಳಿ ಪ್ರಖ್ಯಾತ ವಾದದ್ದು. ೨. ವೃತ್ತಾಂತ; ಸುದ್ದಿ. (ಗು). ೩. ಪರಂಪರೆಯಿಂದ ಪ್ರಾಪ್ತವಾದ. ೪. ಶಾಶ್ವತವಾದ.

**ಅನುಷಂಗ** (ನಾ). ೧. ಸಂಬಂಧ; ಸಹವಾಸ. ೨. ಕನಿಕರ. ೩. ಉಪಪ್ರಯೋಜನ. ೪. ಸಂದರ್ಭ; ಪ್ರಸಂಗ.

**ಅನುಷ್ಟುಪ್ಪು** (ನಾ). ೧. ಭಾಷೆ; ಸರಸ್ವತಿ. ೨. ಒಂದು ಬಗೆಯ ಛಂದಸ್ಸು. (ಗು). ೩. ಸ್ತೋತ್ರಕ್ಕೆ ಯೋಗ್ಯವಾದ.

**ಅನುಷ್ಠಾನ** (ನಾ). ಆಚರಣೆ.

**ಅನುಸಂಧಾನ** (ನಾ). ೧. ಓರಣವಾಗಿ ಇರಿಸುವುದು. ೨. ಪರಿಶೀಲನೆ; ವಿಮರ್ಶೆ. ೩. ಏರ್ಪಾಡು. ೪. ಧ್ಯಾನ. ~(೦)ಕಿ(ಗಿ)ಡು =ಅನುಕ್ರಮದಲ್ಲಿ ವ್ಯತ್ಯಾಸವಾಗು; ಕ್ರಮ ತಪ್ಪು. ~ಇಸು = ಧ್ಯಾನಿಸು.

**ಅನುಸಂಧಿಸು** (ಕ್ರಿ). ೧. ಜೋಡಿಸು; ಹೊಂದಿಸು. ೨. ಸೇರು; ಕೂಡು.

**ಅನುಸರಣ(ಣೆ)** (ನಾ). ೧. ಅನುಸರಿಸಿ ನಡೆಯುವುದು. ೨. ವಿಧೇಯತೆ. ೩. ಪದ್ಧತಿ. ೪. ನಡವಳಿಕೆ. ೫. ಸಲುಗೆ.

**ಅನುಸರಿಸು** (ಕ್ರಿ). ೧. ಹೊಂದಿಕೊಳ್ಳು. ೨. ಆಚರಿಸು. ೩. ಅನ್ವಯವಾಗು.

**ಅನುಸಾರ** (ನಾ). ಕ್ರಮವಾಗಿ ನಡೆಯುವುದು; ಹೊಂದಿಕೊಂಡು ಬರುವುದು.

**ಅನುಸ್ಯೂತ** (ಗು). ಹೊಂದಿಕೊಂಡು ಬಂದ; ಎಡೆಬಿಡದ.

**ಅನುಸ್ವಾರ** (ನಾ). ಬಿಂದು ಸಹಿತವಾದ ವರ್ಣ; ಬಿಂದು.

**ಅನುಹಾರ್ಯ** (ನಾ). ೧. ಅಮಾವಾಸ್ಯೆಯಲ್ಲಿ ನಡಸುವ ತರ್ಪಣವೇ ಮುಂತಾದ ಪಿತೃಕರ್ಮ. (ಗು). ೨. ಆಚರಿಸತಕ್ಕ.

**ಅನೂಕ** (ನಾ). ೧. ಬೆನ್ನುಮೂಳೆ. ೨. ಪೂರ್ವ ಜನ್ಮ. ೩. ಶೀಲ. ೪. ವಂಶ; ಕುಲ.

**ಅನೂಚಾನ** (ನಾ). ೧. ಪರಂಪರೆಯಾಗಿ ನಡದು ಬಂದ ಪದ್ಧತಿ. (ಗು). ೨. ವ್ಯಾಸಂಗ ಶೀಲನಾದ.

**ಅನೂತ್ನ** (ಗು). ಹೊಸದಲ್ಲದ; ಹಳೆಯ; ಪ್ರಾಚೀನ.

**ಅನೂನ** (ಗು). ಕುಂದಿಲ್ಲದ; ಕೊರತೆಯಿಲ್ಲದ.

**ಅನೂಪ** (ನಾ). ೧. ನೀರು ಸಮೃದ್ಧಿಯಾಗಿರುವ ಪ್ರದೇಶ. ೨. ಜೌಗು ಪ್ರದೇಶ. ೩. ನದಿಯ ತೀರ. ೪. ಬೆಟ್ಟದ ತಪ್ಪಲು. ೫. ಕೆರೆ. ೬. ಎಮ್ಮೆ. ೭. ಕಪ್ಪೆ. ೮. ಆನೆ. (ಗು). ೯. ನೀರು ಸಮೃದ್ಧಿಯಾದ; ಜಲ ತುಂಬಿರುವ.

**ಅನೂರು** (ನಾ). ೧. ತೊಡೆಯಿಲ್ಲದವನು. ೨. ಸೂರ್ಯನ ಸಾರಥಿ; ಅರುಣ.

**ಅನೃತ** (ನಾ). ೧. ಋತವಲ್ಲದುದು; ಸುಳ್ಳು. ೨. ಕೃಷಿ.

**ಅನೇಕ** (ಗು). ಒಂದಕ್ಕಿಂತ ಹೆಚ್ಚಾದ.

**ಅನೇಕಪ** (ನಾ). ಆನೆ.

**ಅನೇಡಮೂಕ** (ನಾ). ೧. ಕಿವುಡ ಮತ್ತು ಮೂಗ. ೨. ಕುರುಡ; ಅಂಧ. ೩. ದುಷ್ಟ; ಅಪ್ರಾಮಾಣಿಕ; ಮೋಸಗಾರ.

**ಅನೋಕಹ** (ನಾ). ಮರ; ಗಿಡ.

**ಅನೌಪಚಾರಿಕ** (ಗು). ೧. ಔಪಚಾರಿಕವಲ್ಲದ. ೨. ಪೂರ್ವಸಿದ್ಧತೆಯಿಲ್ಲದ.

**ಅನ್ನ** (ನಾ). ೧. ಆಹಾರ. ೨. ಬೇಯಿಸಿದ ಅಕ್ಕಿ. ೩. ವಿಷ್ಣು. ೪. ಸೂರ್ಯ. ೫. ನೀರು. (ಗು). ೬. ಆ ಪ್ರಕಾರವಾದ; ಅಂಥ. ~ಋಣ = ಅನ್ನದ ಋಣ; ಹಂಗು. ~ಪಾಟಿಕೆ = ಅಡುಗೆ ಮನೆ; ಪಾಕಶಾಲೆ. ~ಶುದ್ಧಿ = ೧. ಆಹಾರ ಶುದ್ಧಿ. ೨. ತುಪ್ಪ.

**ಅನ್ನಂ** (ಅ). ೧. ಅಷ್ಟರೊಳಗೆ. ೨. ವರೆಗೆ. ೩. ಆ ಪ್ರಕಾರವಾಗಿ.

**ಅನ್ನ(ಂ)ಬರ(ಂ)** = ಅನ್ನೆವರಂ.

**ಅನ್ನಭೇದಿ** (ನಾ). ಕಬ್ಬಿಣ ಮತ್ತು ಗಂಧಕಾಮ್ಲಗಳ ಸಂಯೋಗದಿಂದ ಉಂಟಾಗುವ ಒಂದು ಲವಣ; ಕಾಸೀಸ.

**ಅನ್ನಮಯ** (ನಾ). ಪಂಚಕೋಶಗಳಲ್ಲಿ ಒಂದು; ಸ್ಥೂಲದೇಹ.

**ಅನ್ನಾದ** (ನಾ). ಅನ್ನವನ್ನು ತಿನ್ನುವವನು.

**ಅನ್ನಾನ್ನಗತಿಕ** (ನಾ). ಆಹಾರಕ್ಕಾಗಿ ಹಂಬಲಿಸುವವನು.

**ಅನ್ನಿಗ** (ನಾ). ಅನ್ಯ; ಬೇರೆಯವನು;

**ಅನ್ನು** = ಎನ್. ~ಇಸು = ೧. ಹೇಳಿಸು. ೨. ಬೈಯಿಸು. ೩. ಭಾಸವಾಗು.

**ಅನ್ನೆಗ(ಂ)** (ಅ). ೧. ಆ ವರೆಗೆ. ೨. ಅಷ್ಟು ಮಟ್ಟಿಗೆ. ೩. ಅಷ್ಟರಲ್ಲಿ. ೪. ಅದಕ್ಕೆ ಮುಂಚೆ. ೫. ಹೀಗಿರುವಲ್ಲಿ.

**ಅನ್ನೆವರ(ಂ)** (ಅ). ಅಲ್ಲಿಯವರೆಗೆ; ಆ ತನಕ.

**ಅನ್ನೋಣ** (ನಾ). ಹೇಳಿಕೆ; ಅಂಬೋಣ.

**ಅನ್ಯ** (ನಾ). ೧. ಬೇರೆಯ; ಅನ್ನಿಗ. ೨. ಮತ್ತೊಂದು; ಮತ್ತೊಬ್ಬ. ~ಅಂಗನೆ = ಪರಸ್ತ್ರೀ.

**ಅನ್ಯತ್ರ** (ಅ). ೧. ಬೇರೊಂದು ಸಂದರ್ಭದಲ್ಲಿ. ೨. ಬೇರೆಯ ಕಡೆ.

**ಅನ್ಯಥಾ** (ಅ). ಬೇರೆ ಬಗೆಯಾಗಿ; ವಿರೋಧವಾಗಿ.

**ಅನ್ಯಾಯ** (ನಾ). ನ್ಯಾಯವಲ್ಲದುದು; ಸರಿಯಲ್ಲದುದು. **~ಆರ್ಜಿತ** = ಅನ್ಯಾಯವಾಗಿ ಸಂಪಾದಿಸಿದ. **~ಉಪಾರ್ಜಿತ** = ಅನ್ಯಾಯಾರ್ಜಿತ. **~ಕಾರ** = ಅನ್ಯಾಯವನ್ನು ಮಾಡುವವನು. **~ವೃತ್ತಿ** = ತಪ್ಪು ನಡವಳಿಕೆ.

**ಅನ್ಯಾಯಿ** = ಅನ್ಯಾಯಕಾರ.

**ಅನ್ಯೋನ್ಯ** (ನಾ). ೧. ಪರಸ್ಪರ ಪ್ರೀತಿ. (ಗು). ೨. ಪರಸ್ಪರ.

**ಅನ್ವಂಗಂ** (ಅ). ಬೆಂಬಳಿಯಲ್ಲಿ; ತರುವಾಯ.

**ಅನ್ವಯ** (ನಾ). ೧. ವಂಶ; ಕುಲ. ೨. ಸಂಬಂಧ. ೩. ಅನುಯಾಯಿ. ೪. ತಾತ್ಪರ್ಯ. **~ಇಸು** = ೧. ಕ್ರಮವರಿತು ಜೋಡಿಸು; ಹೊಂದಿಸು. ೨. ಹೊಂದು.

**ಅನ್ವರ್ಥ** (ಗು). ಸಾರ್ಥಕವಾದ. **~ನಾಮ** = ಅರ್ಥಪೂರ್ಣವಾದ ಹೆಸರು.

**ಅನ್ವರ್ಥಕ** = ಅನ್ವರ್ಥ. **~ಅಭಿಧಾನ** = ಅನ್ವರ್ಥನಾಮ.

**ಅನ್ವವಾಯ** (ನಾ). ವಂಶ; ಮನೆತನ.

**ಅನ್ವಾದಿ** (ನಾ). ಭೋಗ್ಯದಾರನು ಬೇರೆ ಭೋಗ್ಯ ಮಾಡುವುದು.

**ಅನ್ವಾಸನ** (ನಾ). ೧. ಒಬ್ಬರು ಕುಳಿತುಕೊಂಡ ಮೇಲೆ ತಾನು ಕುಳಿತುಕೊಳ್ಳುವುದು. ೨. ಸೇವೆ; ಸತ್ಕಾರ. ೩. ಪಶ್ಚಾತ್ತಾಪ. ೪. ಕಾರ್ಖಾನೆ. ೫. ಸ್ನೇಹವಸ್ತಿ; ಎನಿಮಾ.

**ಅನ್ವಾಹಾರ್ಯ** (ನಾ). ೧. ಪುರೋಹಿತರಿಗೆ ಶ್ರಾದ್ಧಾದಿಗಳಲ್ಲಿ ಕೊಡುವ ದಕ್ಷಿಣೆ. ೨. ಮಾಸಿಕ ಶ್ರಾದ್ಧ.

**ಅನ್ವಿತ** (ನಾ). ೧. ಸಂಬಂಧಿಸಿದವನು. ೨. ಉಚಿತ ರೀತಿ. ೩. ವಿದ್ವಾಂಸ. (ಗು). ೪. ಒಡಗೂಡಿದ. ೫. ಊಹಿಸಿ ತಿಳಿಯಬಹುದಾದ.

**ಅನ್ವಿಷ್ಟ** (ಗು). ಹುಡುಕಲ್ಪಟ್ಟ; ಹುಡುಕಿದ.

**ಅನ್ವೀಕ್ಷಣ(ಣೆ)** (ನಾ). ೧. ಹುಡುಕುವುದು. ೨. ಪರಾಮರ್ಶೆ. ೩. ಧ್ಯಾನ.

**ಅನ್ವೀಕ್ಷೆ** = ಅನ್ವೀಕ್ಷಣ.

**ಅನ್ವೇಷಕ** (ನಾ). ಹುಡುಕುವವನು; ಸಂಶೋಧಕ.

**ಅನ್ವೇಷಣ(ಣೆ)** (ನಾ). ಹುಡುಕುವುದು.

**ಅಪಕರ್ಷ** (ನಾ). ದುರ್ದೆಶೆ.

**ಅಪಕರ್ಷಕ** (ಗು). ದುರ್ದೆಶೆಯನ್ನುಂಟು ಮಾಡುವ; ಕುಂದುಕೊರತೆಯನ್ನು ತರತಕ್ಕ.

**ಅಪಕರ್ಷಣ** (ನಾ). ೧. ಇರುವ ಕಡೆಯಿಂದ ಬೇರೆ ಕಡೆಗೆ ಸೆಳೆಯುವುದು. ೨. ಕುಗ್ಗಿಸುವುದು; ಕಡಮೆ ಮಾಡುವುದು; ತೆಗೆಯುವುದು.

**ಅಪಕಾರ** (ನಾ). ಕೆಡುಕು ಮಾಡುವುದು; ದ್ರೋಹ.

**ಅಪಕೀರ್ತಿ** (ನಾ). ಕೆಟ್ಟ ಹೆಸರು; ದುರ್ಯಶ.

**ಅಪಕೃತ** (ನಾ). ೧. ಕೇಡಿಗೆ ಗುರಿಯಾದವನು. ೨. ಅಪಕಾರ. ೩. ದುಷ್ಕರ್ಮ ಪರಿಣಾಮ.

**ಅಪಕೃಷ್ಟ** (ಗು). ೧. ದೂರಕ್ಕೆ ಒಯ್ಯಲ್ಪಟ್ಟ; ಕೆಳಕ್ಕೆ ಇಳಿಸಿದ; ಅಗಲಿಸಿದ. ೨. ನೀಚ; ಹೀನ.

**ಅಪಕ್ರಮ** (ನಾ). ೧. ಪಲಾಯನ. ೨. ಅಕ್ರಮ.

**ಅಪಕ್ವ** (ಗು). ೧. ಬೇಯದೆ ಇರುವ; ಹಸಿಯ. ೨. ಹಣ್ಣಾಗದಿರುವ. ೩. ಜೀರ್ಣವಾಗದ. **~ತೆ** = ಪಕ್ವವಾಗಲ್ಲದಿರುವಿಕೆ.

**ಅಪಕ್ಷ್ಮತೆ** (ನಾ). ಕಣ್ಣುರೆಪ್ಪೆ ಬಡಿಯದಿರುವುದು; ರೆಪ್ಪೆ ಮಿಟುಕಿಸದಿರುವುದು.

**ಅಪಖ್ಯಾತಿ** = ಅಪಕೀರ್ತಿ.

**ಅಪಗತ** (ಗು). ೧. ದೂರ ಸರಿದ; ತೊಲಗಿದ. ೨. ತೀರಿ ಹೋದ. **~ವಿಗ್ರಹ** = ೧. ಶರೀರವಿಲ್ಲದವನು. ೨. ಯುದ್ಧದ ಗೋಜಿಲ್ಲದವನು.

**ಅಪಗತಿ** (ನಾ). ೧. ದೂರ ಹೋಗುವುದು. ೨. ಕೀಳುದೆಸೆ.

**ಅಪಗಮ** (ನಾ). ೧. ಹೊರಟುಹೋಗುವುದು; ಬಿಟ್ಟುಹೋಗುವುದು. ೨. ಅಗಲಿಕೆ; ವಿರಹ. ೩. ಸಾವು. ~ಇಸು = ಹಿಂದಕ್ಕೆ ಸರಿ; ಬಿಟ್ಟುಹೋಗು.

**ಅಪಗಮಿತ** (ನಾ). ೧. ವ್ಯಯ; ನ್ಯೂನತೆ. (ಗು). ೨. ದೂರ ಹೋದ; ಬಿಟ್ಟುಹೋದ.

**ಅಪಘನ** (ನಾ). ೧. ಶರೀರ. ೨. ಅವಯವ. ೩. ಮೋಡಗಳಿಲ್ಲದ್ದು.

**ಅಪಘಾತ** (ನಾ). ಅನಿರೀಕ್ಷಿತವಾಗಿ ಒದಗಿದ ಅಪಾಯ.

**ಅಪಘಾತಿ** (ನಾ). ಅಪಾಯ; ಭಯಂಕರವಾದ ಸಾವುನೋವುಗಳ ಸಂದರ್ಭ.

**ಅಪಚನ** (ನಾ). ಅರವೆ; ಅಜೀರ್ಣ.

**ಅಪಚರಿಸು** (ಕ್ರಿ). ಅಪಚಾರ ಮಾಡು; ತಿರಸ್ಕರಿಸು.

**ಅಪಚಾರ** (ನಾ). ೧. ವಿರುದ್ಧವಾದ ಆಚರಣೆ; ಅಗೌರವ. ೨. ಅಗಲಿಕೆ; ಸಾವು. ೩. ಅಭಾವ. ೪. ನ್ಯೂನತೆ.

**ಅಪಚಿತ** (ಗು). ೧. ಕಡಮೆಯಾದ. ೨. ಗೌರವಕ್ಕೆ ಪಾತ್ರವಾದ.

**ಅಪಚಿತಿ** (ನಾ). ೧. ಹಾನಿ; ಕೇಡು. ೨. ವೆಚ್ಚ. ೩. ಪ್ರಾಯಶ್ಚಿತ್ತ. ೪. ಶಿಕ್ಷೆ. ೫. ಪೂಜೆ.

**ಅಪಜಯ** (ನಾ). ಸೋಲು. ~ಪಡಿಸು = ಸೋಲಿಸು.

**ಅಪಜಿಹ್ಮ** (ನಾ). ೧. ವಕ್ರವಿಲ್ಲದಿರುವಿಕೆ; ಮೋಸವಿಲ್ಲದಿರುವಿಕೆ. ೨. ಮೋಸವಿಲ್ಲದವನು; ನೇರ ನಡವಳಿಕೆಯುಳ್ಳವನು.

**ಅಪಜ್ಞಾನ** (ನಾ). ಮುಚ್ಚುಮರೆ; ಅಪಲಾಪ; ಕಂಡುಕೇಳಿದ್ದನ್ನು ಇಲ್ಲವೆನ್ನುವುದು.

**ಅಪಟ** (ನಾ). ತೆರೆ; ಪರದೆ.

**ಅಪಟು** (ನಾ). ೧. ರೋಗಿ. (ಗು). ೨. ಅಸಮರ್ಥ; ಚಟುವಟಿಕೆಯಿಲ್ಲದ.

**ಅಪತಿಕ** (ಗು). ಒಡೆಯನಿಲ್ಲದ; ಅನಾಥನಾದ.

**ಅಪತೃಷ್ಣೆ** (ನಾ). ದುರಾಶೆ; ಕೆಟ್ಟ ಆಸೆ.

**ಅಪತ್ಯ** (ನಾ). ಸಂತಾನ.

**ಅಪತ್ರಪ** (ನಾ). ನಾಚಿಕೆಗೇಡಿ.

**ಅಪತ್ರಪೆ** (ನಾ). ೧. ನಾಚಿಕೆ; ಸಂಕೋಚ. ೨. ಲಜ್ಜೆಗೆಟ್ಟ ಹೆಂಗಸು.

**ಅಪಥ** (ನಾ). ೧. ದಾರಿಯಿಲ್ಲದ್ದು. ೨. ಅಪಮಾರ್ಗ. ೩. ಹಾದಿ ಕಾಣದ ಸನ್ನಿವೇಶ. ೪. ಪಾಷಂಡಿತನ. ೫. ಯೋನಿ.

**ಅಪಥ್ಯ** (ನಾ). ೧. ಹಿತವಲ್ಲದ್ದು. ೨. ಪಥ್ಯ ಮಾಡದಿರುವುದು.

**ಅಪದಗಾಮಿ** (ನಾ). ೧. ಹಾವು. (ಗು). ೨. ಕಾಲಿಲ್ಲದೆ ನಡೆಯುವ.

**ಅಪದಶೆ** (ನಾ). ಕೀಳುದೆಸೆ; ದುರ್ದಶೆ.

**ಅಪದಾಂತರ** (ನಾ). ನೆರೆಹೊರೆ; ಒಂದು ಹೆಜ್ಜೆಯ ದೂರವೂ ಇಲ್ಲದಷ್ಟು ಸಮೀಪ.

**ಅಪದಾನ** (ನಾ). ೧. ಉದಾತ್ತವಾದ ಕೆಲಸ. ೨. ಜನ್ಮಾಂತರಗಳ ಕಥೆ.

**ಅಪದೂರು(ಱು)** (ನಾ). ಸುಳ್ಳು ದೂರು; ಅಪವಾದ.

**ಅಪದೆಸೆ** = ಅಪದಶೆ.

**ಅಪದೇಶ** (ನಾ). ೧. ನಿಮಿತ್ತ; ನೆಪ. ೨. ಗುರಿ. ೩. ಕೀರ್ತಿ. ೪. ಮೋಸ. ೫. ಅಯೋಗ್ಯಸ್ಥಳ.

**ಅಪಧಮನಿ** (ನಾ). ಹೃದಯದ ಕಡೆಯಿಂದ ದೇಹದ ಇತರ ಭಾಗಕ್ಕೆ ರಕ್ತವನ್ನು ಸಾಗಿಸುವ ರಕ್ತನಾಳ.

**ಅಪಧೈರ್ಯ** (ನಾ). ಅಂಜಿಕೆ; ಅಂಜುಬುರುಕತನ; ಅಧೈರ್ಯ.

**ಅಪಧ್ಯಾನ** (ನಾ). ದುಷ್ಟಚಿಂತನೆ; ಇತರರಿಗೆ ಹಾನಿಯನ್ನು ಬಯಸುವುದು.

**ಅಪಧ್ವಂಸ** (ನಾ). ೧. ಕೀಳಾಗಿರುವುದು; ಪತಿತನಾಗುವುದು; ವರ್ಣಸಂಕರ. ೨. ಪತಿತ; ಜಾತಿ ಕೆಟ್ಟವನು; ಸಂಕರಜಾತಿಯವನು.

ಅಪಧ್ವಂಸಿ (ನಾ). ೧. ನಾಶಮಾಡುವವನು. ೨. ಜಾತಿ ಸಂಕರವನ್ನುಂಟುಮಾಡುವವನು; ಕುಲಗೆಡಿಸುವವನು.

ಅಪನಂಬಿಕೆ (ನಾ). ಅವಿಶ್ವಾಸ.

ಅಪನಿಂದೆ (ನಾ). ಅನ್ಯಾಯವಾದ ಅಪವಾದ.

ಅಪನಿರೂಪಣ (ನಾ). ತಪ್ಪು ನಿರೂಪಣೆ.

ಅಪನೀತ (ಗು). ತೆಗೆದು ಹಾಕಲ್ಪಟ್ಟ; ಹೋಗಲಾಡಿಸಿದ.

ಅಪಪದ (ನಾ). ಅಸಾಧುವಾದ ಪದ.

ಅಪಪಾಠ (ನಾ). (ಗ್ರಂಥಸಂಪಾದನೆಯಲ್ಲಿ) ತಪ್ಪಾದ ಪಾಠ.

ಅಪಪ್ರಚಾರ (ನಾ). ೧. ಸುಳ್ಳು ಸುದ್ದಿ ಹರಡುವುದು. ೨. ಒಬ್ಬರ ವಿರುದ್ಧವಾಗಿ ಪ್ರಚಾರ ಮಾಡುವುದು.

ಅಪಭ್ರಂಶ (ನಾ). ೧. ಜಾರಿ ಬೀಳುವುದು. ೨. ತದ್ಭವ ಶಬ್ದ. ೩. ಅಪಭ್ರಂಶ ಭಾಷೆ. ~ನುಡಿ = ತಪ್ಪು ನುಡಿ; ತೊದಲುನುಡಿ.

ಅಪಭ್ರಷ್ಟ (ಗು). ೧. ನಡತೆಗೆಟ್ಟ. ೨. ಅಸಾಧುವಾದ.

ಅಪಮತಿ (ಗು). ಬುದ್ಧಿಗೆಟ್ಟ; ತಿಳಿಗೇಡಿಯಾದ.

ಅಪಮಾನ (ನಾ). ಅವಮಾನ. ~ಇಸು = ಅಗೌರವವನ್ನುಂಟುಮಾಡು; ಮರ್ಯಾದೆಯನ್ನು ಕಳೆ; ಮಾನಕ್ಕೆ ಭಂಗತರು.

ಅಪಮಾರ್ಜನ (ನಾ). ತೊಡೆದು ಹಾಕುವುದು; ಅಳಿಸುವುದು; ಗುಡಿಸುವುದು; ಶುದ್ಧಗೊಳಿಸುವುದು.

ಅಪಮಿತ (ಗು). ಅಪಮಾನಕ್ಕೆ ಗುರಿಯಾದ; ಮಾನ ಕಳೆದುಕೊಂಡ.

ಅಪಮಿತ್ಯ (ನಾ). ಸಾಲ; ಋಣ.

ಅಪಮೂರ್ಧ (ನಾ). ತಲೆಯಿಲ್ಲದ ಅಟ್ಟೆ; ಮುಂಡ.

ಅಪಮೃತ್ಯು (ನಾ). ೧. ಅಕಾಲದಲ್ಲಿ ಉಂಟಾದ ಸಾವು. ೨. ಆಕಸ್ಮಿಕವಾದ ಮರಣ.

ಅಪಮೌಲ್ಯ (ನಾ). ಮೌಲ್ಯವನ್ನು ತಗ್ಗಿಸುವುದು.

ಅಪಯಶ = ಅಪಕೀರ್ತಿ.

ಅಪಯಾನ (ನಾ). ಹಿಂದಿರುಗುವುದು.

ಅಪರ (ನಾ). ೧. ಪಶ್ಚಿಮದಿಕ್ಕು. ೨. ಆನೆಯ ಹಿಂಗಾಲಿನ ಹೆಜ್ಜೆ. ೩. ಶತ್ರು. ೪. ಮನೋಹರ. (ಗು). ೫. ಬೇರೆಯ. ೬. ಆಮೇಲಿನ. ೭. ಕೀಳಾದ. ೮. ಹಿಂದುಗಡೆಯ. ೯. ದೂರದ. ೧೦. ಅತ್ಯುತ್ತಮವಾದ. ~ಕ್ರಿಯೆ = ಉತ್ತರಕ್ರಿಯೆ. ~ಗಿರಿ = ಪಶ್ಚಿಮ ಪರ್ವತ. ~ಜ್ಞಾನ = ಅತ್ಯುತ್ತಮ ಜ್ಞಾನ. ~ಪಕ್ಷ = ೧. ಕೃಷ್ಣಪಕ್ಷ. ೨. ಶತ್ರುಪಕ್ಷ. ~ಭಾಗ = ಹಿಂಭಾಗ. ~ರಾತ್ರಿ = ರಾತ್ರಿಯ ಉತ್ತರಾರ್ಧ. ~ವಯಸ್ಸು = ಇಳಿ ವಯಸ್ಸು.

ಅಪರಂಜಿ (ನಾ). ೧. ಚೊಕ್ಕ ಚಿನ್ನ. ೨. ಅತ್ಯುತ್ತಮ.

ಅಪರಂಪಾರ (ಗು). ಅನಂತ; ಎಲ್ಲೆ ಮೀರಿದ.

ಅಪರಜ (ಗು). ೧. ಧೂಳಿಲ್ಲದ. ೨. ರಜೋಗುಣವಿಲ್ಲದ.

ಅಪರಾಗ (ನಾ). ೧. ಪಶ್ಚಿಮ ದಿಕ್ಕಿನ ಪರ್ವತ. (ಗು). ೨. ವ್ಯಾಮೋಹವಿಲ್ಲದ. ೩. ಕೆಂಪು ಬಣ್ಣವನ್ನು ಕಳೆದುಕೊಂಡ.

ಅಪರಾಜಿತ (ನಾ). ೧. ವಿಷ್ಣು. ೨. ಶಿವ. ೩. ಜಿನ. (ಗು). ೪. ಸೋಲದ.

ಅಪರಾಜಿತೆ (ನಾ). ೧. ಸೋಲದವಳು; ಜಯಶೀಲೆ. ೨. ದುರ್ಗಾದೇವಿ.

ಅಪರಾಧ (ನಾ). ೧. ತಪ್ಪು. ೨. ದಂಡ.

ಅಪರಾಶೆ (ನಾ). ಪಶ್ಚಿಮ ದಿಕ್ಕು.

ಅಪರಾಹ್ಣ (ನಾ). ಮಧ್ಯಾಹ್ನದ ಮೇಲಿನ ಕಾಲ; ಹಗಲಿನ ಉತ್ತರಭಾಗ.

ಅಪರಿಗ್ರಹ (ನಾ). ದಾನವಾಗಿ ತೆಗೆದುಕೊಳ್ಳದಿರುವ ವ್ರತ.

ಅಪರಿಚಿತ (ನಾ). ೧. ಗುರುತಿಲ್ಲದವನು. (ಗು). ೨. ಗುರುತಿಲ್ಲದ; ಪರಿಚಯವಿಲ್ಲದ.

**ಅಪರಿಚ್ಛಿನ್ನ** (ಗು). ೧. ಕತ್ತರಿಸದೆ ಇರುವ; ನಿರಂತರವಾದ. ೨. ನಿರ್ಣಯವಾಗದ; ಅಳತೆಗೆ ಸಿಕ್ಕದ.

**ಅಪರಿಮಿತ** (ಗು). ಮಿತಿಯಿಲ್ಲದ; ಅಳತೆ ಮೀರಿದ; ಎಲ್ಲೆಯಿಲ್ಲದ.

**ಅಪರಿಮೇಯ** (ಗು). ಅಳತೆ ಮಾಡಲು ಶಕ್ಯವಿಲ್ಲದ; ಅಳತೆಗೆ ಮೀರಿದ.

**ಅಪರೂಪ** (ಗು). ೧. ಅಪೂರ್ವವಾದ. ೨. ರೂಪವಿಲ್ಲದ.

**ಅಪರ್ಣೆ** (ನಾ). ಪಾರ್ವತಿ.

**ಅಪಲಪನ** = ಅಪಲಾಪ.

**ಅಪಲಾಪ** (ನಾ). ೧. ತಪ್ಪು ಮಾತು; ಸುಳ್ಳು. ೨. ಅರ್ಥವಿಲ್ಲದ ಮಾತು. ~ಇಸು =೧. ಅಲ್ಲಗಳೆ; ಸುಳ್ಳು ಹೇಳು. ೨. ಅರ್ಥವಿಲ್ಲದ ಮಾತುಗಳನ್ನು ಆಡು; ಕೂಗಿಕೊಳ್ಳು.

**ಅಪವರಕ** (ನಾ). ೧. ಕೊಠಡಿ; ಒಳಮನೆ. ೨. ವಾತಾಯನ; ಗವಾಕ್ಷದ ರಂಧ್ರ.

**ಅಪವರ್ಗ** (ನಾ). ೧. ಬಿಡುವುದು. ೨. ಮೋಕ್ಷ. ೩. ದಾನ. ೪. ಕಾರ್ಯದ ಸಮಾಪ್ತಿ. ೫. ವರ್ಗಕ್ಕೆ ಸೇರಿದುದು.

**ಅಪವರ್ತನ** (ನಾ). ೧. ತೆಗೆಯುವುದು. ೨. ಅಪಹಾರ. ೩. ಸಂಗ್ರಹ. ೪. ಭಾಜ್ಯವನ್ನು ನಿಶ್ಶೇಷವಾಗಿ ಭಾಗಿಸುವ ಸಂಖ್ಯೆ.

**ಅಪವರ್ತಿಸು** (ಕ್ರಿ). ೧. ಹೋಗಲಾಡಿಸು; ೨. ಅಪವರ್ತನಗಳಾಗಿ ವಿಭಾಗಿಸು.

**ಅಪವಾದ** (ನಾ). ೧. ನಿಂದೆ. ೨. ಅನ್ಯಾಯವಾದ ಆರೋಪ. ೩. ಹೇಳಿದ್ದನ್ನು ಅಲ್ಲವೆಂದು ವಾದಿಸುವುದು. ೪. ನಿಯಮಕ್ಕೆ ಹೊರತಾದುದು.

**ಅಪವ್ಯಯ** (ನಾ). ೧. ಅನ್ಯಾಯದ ವೆಚ್ಚ; ಆವಶ್ಯವಿಲ್ಲದ ಖರ್ಚು. ೨. ಪೋಲು ಮಾಡುವುದು; ಹಾಳು ಮಾಡುವುದು.

**ಅಪಶಕುನ** (ನಾ). ಅಶುಭ ಶಕುನ.

**ಅಪಶದ** (ನಾ). ೧. ದುಷ್ಟ; ಖೂಳ. (ಗು). ೨. ಹೀನಕುಲದ; ಕೀಳಾದ.

**ಅಪಶಬ್ದ** (ನಾ). ೧. ಅಶುದ್ಧವಾದ ಶಬ್ದ. ೨. ಕೆಟ್ಟಮಾತು.

**ಅಪಸದ** = ಅಪಶದ.

**ಅಪಸರ್ಪ** (ನಾ). ಬೇಹುಗಾರ; ಗೂಢಚಾರ.

**ಅಪಸವ್ಯ** (ನಾ). ೧. ಎಡವಲ್ಲದ್ದು; ಬಲಗಡೆ ೨. ವೈಚಿತ್ರ್ಯ. ೩. ಅಶುಭ ವ್ಯಕ್ತಿ.

**ಅಪಸಾಕ್ಷಿ** (ನಾ). ಸುಳ್ಳು ಸಾಕ್ಷಿ.

**ಅಪಸಾತು** (ಅ). ತಮ್ಮತಮ್ಮೊಳಗೆ.

**ಅಪಸಿದ್ಧಾಂತ** (ನಾ). ೧. ತಪ್ಪಾದ ನಿರ್ಣಯ. ೨. ಅಯೋಗ್ಯವಾದ ಮತ.

**ಅಪಸ್ಮಾರ** (ನಾ). ೧. ಮರೆವು. ೨. ಮೂರ್ಛಾರೋಗ; ಮೂರ್ಛಾರೋಗ.

**ಅಪಸ್ವರ** (ನಾ). ೧. ಶ್ರುತಿಗೆ ಹೊಂದದ ಸ್ವರ. ೨. ಕೆಟ್ಟಮಾತು; ಅಮಂಗಲವಾದ ಮಾತು.

**ಅಪಹರ**=ಅಪಹಾರ. ~ಇಸು= ೧. ಪರಿಹರಿಸು; ನಿವಾರಿಸು. ೨. ನೀಗು; ಪರಿಹಾರವಾಗು. ೩. ಕಿತ್ತುಕೊಳ್ಳು; ಎತ್ತಿಹಾಕು; ಕದಿ.

**ಅಪಹಾತ** (ನಾ). ಕೈಲಾಗದವನು; ಕೆಲಸಕ್ಕೆ ಬಾರದವನು.

**ಅಪಹಾರ** (ನಾ). ೧. ಕಿತ್ತುಕೊಳ್ಳುವುದು; ಎತ್ತಿ ಹಾಕುವುದು. ೨. (ಯುದ್ಧದ) ತಾತ್ಕಾಲಿಕವಾದ ನಿಲುಗಡೆ.

**ಅಪಹಾಸ್ಯ** (ನಾ). ತಿರಸ್ಕಾರದಿಂದ ಮಾಡುವ ಹಾಸ್ಯ; ಚೇಷ್ಟೆ.

**ಅಪಹ್ನವ** (ನಾ). ೧. ಅಲ್ಲಗಳೆಯುವುದು. ೨. ಸಂತೈಕೆ; ಸಾಂತ್ವನ. ೩. ಸ್ನೇಹ.

**ಅಪಾಂಗ** (ನಾ). ೧. ಅಂಗಹೀನ. ೨. ಕಡೆಗಣ್ಣು.

**ಅಪಾಂಪತಿ** (ನಾ). ೧. ಸಮುದ್ರ. ೨. ವರುಣ.

**ಅಪಾಕೃತ** (ಗು). ಹೊರದೂಡಿದ; ನಿರಾಕರಿಸಲ್ಪಟ್ಟ.

**ಅಪಾಚಿ** (ನಾ). ೧. ದಕ್ಷಿಣದಿಕ್ಕು; ತೆಂಕಲು. ೨. ಪಶ್ಚಿಮದಿಕ್ಕು; ಪಡುವಲು.

**ಅಪಾತ್ರ** (ಗು). ಅಯೋಗ್ಯ ; ಅನರ್ಹ.

**ಅಪಾನ** (ನಾ). ೧. ಗುದಸ್ಥಾನದ ವಾಯು. ೨. ಗುದಪ್ರದೇಶ.

**ಅಪಾಪೋಲಿ** (ನಾ). ಪೋಕರಿ; ದಾರಿ ತಪ್ಪಿದವನು.

**ಅಪಾಮಾರ್ಗ** (ನಾ). ೧. ತಪ್ಪು ದಾರಿ. ೨. ಉತ್ತರಣೆ ಗಿಡ; ಉತ್ತರಾಣಿ ಗಿಡ.

**ಅಪಾಯ** (ನಾ). ಕೇಡು ; ಹಾನಿ.

**ಅಪಾರ** (ನಾ). ೧. ಆಚೆಯ ದಡ. (ಗು). ೨. ಎಲ್ಲೆಯಿಲ್ಲದ; ಕೊನೆಯಿಲ್ಲದ.

**ಅಪಾರ್ಥ** (ನಾ). ೧. ತಪ್ಪು ಅರ್ಥ. (ಗು). ೨. ಅರ್ಥವಿಲ್ಲದ. ೩. ಪ್ರಯೋಜನವಿಲ್ಲದ.

**ಅಪಾಶ್ರಯ** (ನಾ). ೧. ಆಸರೆ. ೨. ಅಂಗಳದ ಬೇಲಿ. ೩. ಅಂಗಳದಲ್ಲಿ ಹಾಕಿದ ಚಪ್ಪರ. (ಗು). ೪. ಆಸರೆ ತಪ್ಪಿದ; ಸಹಾಯವಿಲ್ಲದ.

**ಅಪಿಧಾನ** (ನಾ). ೧. ಮುಚ್ಚುವುದು ; ಮರೆ ಮಾಡುವುದು. ೨. ಮುಚ್ಚಳ ; ಮರೆ.

**ಅಪಿನಿ** = ಅಪೀಮು. ~ಕೂಟ = ಅಪೀಮಿನ ಉಂಡೆ.

**ಅಪೀಮು** (ನಾ). ಗಸಗಸೆಯ ಕಾಯಿಯಿಂದ ಬರುವ ಒಂದು ಬಗೆಯ ಅಂಟು ; ಒಂದು ಮಾದಕ ದ್ರವ್ಯ.

**ಅಪೀಲ್(ಲು)** (ನಾ). ಮೇಲಿನವರಿಗೆ ಮಾಡಿ ಕೊಳ್ಳುವ ಮನವಿ.

**ಅಪುತ್ರ** (ನಾ). ೧. ಮಗನಿಲ್ಲದವನು. ೨. ಮಗನಲ್ಲದವನು.

**ಅಪೂಟ** (ಅ). ಪೂರ್ಣವಾಗಿ.

**ಅಪೂಪ** (ನಾ). ೧. ದೋಸೆ, ಒಬ್ಬಟ್ಟು, ಇಡ್ಡಲಿ ಮುಂತಾದ ತಿಂಡಿ. ೨. ಗೋಧಿ. ೩. ಜೇನುಗೂಡು.

**ಅಪೂರ್ವ** (ಗು). ೧. ಹಿಂದೆ ಎಂದೂ ಕಾಣದ. ೨. ಆಶ್ಚರ್ಯಕರವಾದ. ೩. ಅಸಮಾನವಾದ. ೪. ಪೂರ್ವವಲ್ಲದ ; ಮೊದಲಿಲ್ಲದ. ~ಇಗ = ಅಪರಿಚಿತ ; ಹೊಸಬ.

**ಅಪೇಕ್ಷೆ** (ನಾ). ೧. ಬಯಕೆ. ೨. ನಿರೀಕ್ಷೆ. ~ಇಸು = ೧. ಬಯಸು ; ಕೋರು. ೨. ನಿರೀಕ್ಷಿಸು.

**ಅಪೇತ** (ಗು). ಹೊರಟುಹೋದ; ಕಳೆದು ಹೋದ.

**ಅಪೇಯ** (ಗು). ೧. ಕುಡಿಯಬಾರದ. ೨. ಅಹಿತಕರವಾದ.

**ಅಪೋಹ** (ನಾ). ೧. ತಳ್ಳುವುದು; ನೂಕುವುದು. ೨. ತರ್ಕ. ೩. ವಿತರ್ಕ. ೪. ತಪ್ಪಾದ ಊಹೆ. ೫. ನ್ಯೂನತೆ.

**ಅಪೌರುಷೇಯ** (ಗು). ಮನುಷ್ಯನಿಂದ ಮಾಡ ಲಾಗದ ; ದೈವಪ್ರೇರಿತ.

**ಅಪ್ಪ** (ನಾ). ೧. ತಂದೆ. ೨. ಅಕ್ಕಿಹಿಟ್ಟಿನಿಂದ ತಯಾರಿಸುವ ಒಂದು ತಿಂಡಿ.

**ಅಪ್ಪಂತ** (ನಾ). ೧. ಸಂಭಾವಿತ. (ಗು). ೨. ಯೋಗ್ಯವಾದ.

**ಅಪ್ಪಚ್ಚಿ** (ನಾ). ೧. (ಮಕ್ಕಳ ಭಾಷೆಯಲ್ಲಿ) ರೊಟ್ಟಿ ಮುಂತಾದ ತಿನಿಸು. ೨. ಚಪ್ಪಟೆ ಯಾದದ್ದು.

**ಅಪ್ಪಟ** (ಗು). ಶುದ್ಧವಾದ ; ಚೊಕ್ಕ.

**ಅಪ್ಪಣೆ** (ನಾ). ೧. ಆಜ್ಞೆ. ೨. ಅನುಮತಿ. ೩. ಹೊಂದಿಕೆ.

**ಅಪ್ಪಯಣ** (ನಾ). ಪ್ರಯಾಣವನ್ನು ನಿಲ್ಲಿಸು ವುದು.

**ಅಪ್ಪಯಿಸು** (ಕ್ರಿ). ೧. ಒಪ್ಪಿಸು ; ಅರ್ಪಿಸು. ೨. ಆಶ್ರಯಿಸು.

**ಅಪ್ಪರಿಸು** = ಅಪ್ಪಳಿಸು.

**ಅಪ್ಪಳಿಸು** (ಕ್ರಿ). ೧. ತಟ್ಟು ; ಹೊಯ್ಯು. ೨. ನಿಗ್ರಹಿಸು. ೩. ಧ್ವಂಸಮಾಡು.

**ಅಪ್ಪಾಲೆ(ಳೆ)ತಿಪ್ಪಾಲೆ(ಳೆ)** (ನಾ). ಮಕ್ಕಳ ಒಂದು ಆಟ.

**ಅಪ್ಪಿತಪ್ಪಿ** (ಅ). ಆಕಸ್ಮಿಕವಾಗಿ.

**ಅಪ್ಪು** (ಕ್ರಿ). ೧. ಆಲಿಂಗಿಸು. ೨. ಸಂಭವಿಸು. ೩. ಅಂಗೀಕರಿಸು. (ನಾ). ೪. ಆಲಿಂಗನ.

೫. ನೀರು ; ಜಲ. ~ಇಸು = ಅಪ್ಪುವಂತೆ ಮಾಡು. ~ಕೆ(ಗೆ)ಯ್ = ೧. ಅಂಗೀಕರಿಸು; ಒಪ್ಪು. ೨. ಹೊಂದು ; ಪಡೆ. ೩. ಒದಗಿಸು. ೪. ಆಲಿಂಗಿಸು. ~ಕೈ(ಗೈ) = ೧. ಆಲಿಂಗಿಸುವ ಕೈ. ೨. ಕಟ್ಟಿದ ಕೈ.

ಅಪ್ಪುಗೆ (ನಾ). ೧. ಆಲಿಂಗನ. ೨. ಒಪ್ಪಿಗೆ.

ಅಪ್ರತಿಬದ್ಧ (ಗು). ತಡೆಯಿಲ್ಲದ; ವಿಘ್ನವಿಲ್ಲದ.

ಅಪ್ರತಿಭ (ಗು). ದಿಕ್ಕು ತೋಚದ.

ಅಪ್ರತಿಮ (ಗು). ಎಣೆಯಿಲ್ಲದ ; ಅಸಮಾನವಾದ.

ಅಪ್ರತಿಹತ (ಗು). ತಡೆಯಿಲ್ಲದ; ನಿರ್ವಿಘ್ನವಾದ ; ಸೋಲಿಲ್ಲದ.

ಅಪ್ರತೀತ (ಗು). ೧. ಸಾಮಾನ್ಯವಾಗಿ ಅರ್ಥ ತಿಳಿಯದ. ೨. ಸಮಾಪಿಸಲಾಗದ. ೩. ಅವಿರೋಧವಾದ.

ಅಪ್ರಬುದ್ಧ (ಗು). ೧. ತಿಳಿವಳಿಕೆಯಿಲ್ಲದ. ೨. ವಯಸ್ಸಾಗದ. ೩. ಇನ್ನೂ ಎಚ್ಚರಾಗದಿರುವ.

ಅಪ್ರಸ್ತುತ (ಗು). ಸಂದರ್ಭಕ್ಕೆ ಸರಿಯಲ್ಲದ.

ಅಪ್ರಾಸಂಗಿಕ (ಗು). ಪ್ರಸಂಗಕ್ಕೆ ಸಂಬಂಧಪಡದ.

ಅಪ್ರಿಯ (ನಾ). ೧. ಹಗೆ; ಶತ್ರು. (ಗು). ೨. ಪ್ರಿಯವಲ್ಲದ; ಇಷ್ಟಕ್ಕೆ ವಿರೋಧವಾದ.

ಅಪ್ಸರ(ರೆ) (ನಾ). ದೇವತಾಸ್ತ್ರೀಯರಲ್ಲಿ ಒಂದು ಪಂಗಡ.

ಅಫೀಮು = ಅಪೀಮು.

ಅಫು = ಅಪೀಮು.

ಅಬಕಾರಿ = ಆಬ್ಕಾರಿ.

ಅಬಚಿ (ನಾ). ತಾಯಿಯ ತಂಗಿ ಅಥವಾ ಅಕ್ಕ.

ಅಬದ್ಧ (ನಾ). ೧. ತಪ್ಪು. ೨. ಸುಳ್ಳು. (ಗು). ೩. ನಿಯಮರಹಿತ; ಸ್ವೇಚ್ಛೆಯ. ೪. ಅಸಂಬದ್ಧ. ೫. ಅರ್ಥಹೀನ. ~ಖೋರ = ೧. ಸುಳ್ಳುಗಾರ. ೨. ಅಸಂಬದ್ಧ ಪ್ರಲಾಪಿ. ~ಚರಿತ = ತಪ್ಪು ನಡವಳಿಕೆ ; ಅನಾಚಾರ.

ಅಬರಂಗ (ನಾ). ಕಾಗೆ ಬಂಗಾರ ; ಅಭ್ರಕ.

ಅಬರು = ಆಬರು.

ಅಬಲೆ (ನಾ). ೧. ಬಲಹೀನೆ. ೨. ಹೆಂಗಸು.

ಅಬುಜ = ಅಬ್ಜ. ~ಉದರ = ವಿಷ್ಣು. ~ಭವ = ಬ್ರಹ್ಮ. ~ಭವಾಂಡ = ಬ್ರಹ್ಮಾಂಡ.

ಅಬುದ = ಅಬ್ದ.

ಅಬುದಿ = ಅಬ್ಧಿ.

ಅಬ್ಜ (ನಾ). ೧. ನೀರಿನಲ್ಲಿ ಹುಟ್ಟಿದ್ದು ; ತಾವರೆ. ೨. ಶಂಖ. ೩. ಚಂದ್ರ. ೪. ರತ್ನ ; ಮುತ್ತು. ೫. ಐರಾವತ. ೬. ಧನ್ವಂತರಿ. ೭. ಲಕ್ಷ್ಮಿ. ೮. ನೀರಂಜಿಮರ; ನಿಚುಲ ವೃಕ್ಷ. ೯. ಒಂದು ಸಂಖ್ಯೆ; ನೂರು ಕೋಟಿ. ೧೦. ಪಚ್ಚ ಕರ್ಪೂರ.

ಅಬ್ಜಿನಿ (ನಾ). ೧. ತಾವರೆಯ ಬಳ್ಳಿ ೨. ಕಮಲದ ಗುಂಪು.

ಅಬ್ದ (ನಾ). ೧. ಮೋಡ. ೨. ವರ್ಷ. ೩. ಕೊನ್ನಾರಿ ಗೆಡ್ಡೆ; ಗೇಕಿನ ಗೆಡ್ಡೆ. ~ಕಾಲ = ಮಳೆಗಾಲ. ~ರವ = ಗುಡುಗು.

ಅಬ್ಧಿ (ನಾ). ಸಮುದ್ರ. ~ನಂದನ = ಚಂದ್ರ. ~ನವನೀತಕ = ಅಬ್ಧಿನಂದನ.

ಅಬ್ಧಿಪ (ನಾ). ೧. ಸಮುದ್ರರಾಜ. ೨. ವರುಣ.

ಅಬ್ಬ (ನಾ). ೧. ತಂದೆ. ೨. ತಾಯಿ. ೩. ಆಶ್ಚರ್ಯಸೂಚಕ ಶಬ್ದ.

ಅಬ್ಬರ (ನಾ). ೧. ಆರ್ಭಟ. ೨. ಅತಿಶಯ. ೩. ಪರಾಕ್ರಮ. ೪. ಅಧಿಕಾರದ ದರ್ಪ. ೫. ಆಕಾಶ. ~ಇಗ = ಆರ್ಭಟ ಮಾಡುವವನು. ~ಇಸು = ೧. ಆರ್ಭಟಿಸು ; ಗರ್ಜಿಸು. ೨. ಆವರಿಸು. ~ತಾಳ = ರಭಸ; ಬಿರುಸು. ~ಬಡಕ = ಅಬ್ಬರ ಮಾಡುವ ಸ್ವಭಾವದವನು.

ಅಬ್ಬರಣೆ (ನಾ). ಗಟ್ಟಿಯಾದ ಕೂಗು; ಗದ್ದಲ.

ಅಬ್ಬು (ಕ್ರಿ). ೧. ಸಾಧ್ಯವಾಗು ; ನಿಲುಕು. ೨. ಒಳಪಡು. ೩. ಆಶ್ರಯಿಸು ; ಅವಲಂಬಿಸು. ೪. ಹೋಗಲಾಡಿಸು.

**ಅಬ್ಬ್ಯಾಜಿ** (ನಾ). ೧. ಮಸಿ; ಕಾಡಿಗೆ ೨. ಬೂಷ್ಟು. ೩. ಜೇಡರ ಹುಳು.

**ಅಬ್ಬೆ** (ನಾ). ೧. ತಾಯಿ. ೨. ಸದರ; ಹಗುರ. ೩. ಒಂದು ಜಾತಿಯ ಹುಳು. ೪. ಒಂದು ಜಾತಿಯ ಗಿಡ; ಪಾಚಿ; ಗಲಗು.

**ಅಬ್ಬೇಪಾರಿ** (ನಾ). ೧. ಕೆಲಸವಿಲ್ಲದವನು. ೨. ದಿಕ್ಕಿಲ್ಲದವನು; ಗತಿಗೆಟ್ಟವನು.

**ಅಬ್ರಹ್ಮಣ್ಯ** (ನಾ). ೧. ಬ್ರಾಹ್ಮಣನಿಗೆ ಉಚಿತವಲ್ಲದ್ದು. ೨. ಬ್ರಾಹ್ಮಣನಿಗೆ ಆದ ಅನ್ಯಾಯ.

**ಅಬ್ರು** = ಆಬರು. ~**ದಾರ** = ಮರ್ಯಾದಸ್ಥ.

**ಅಭಂಗ** (ನಾ). ೧. ಭಂಗವಿಲ್ಲದ ಸ್ಥಿತಿ; ೨. ಸೋಲಿಲ್ಲದವನು. ೩. ಸೊಂಟದ ಮೇಲೆ ಅಂಗೈಗಳನ್ನೂರಿ ನಿಲ್ಲುವ ಒಂದು ಭಂಗಿ. (ಗು). ೪. ಭಂಗವಿಲ್ಲದ; ಮುರಿಯದ.

**ಅಭಂಡ** (ಗು). ಮರ್ಯಾದೆಯಿಲ್ಲದ; ಮೇರೆಯಿಲ್ಲದ.

**ಅಭಕ್ತ** (ನಾ). ೧. ಭಕ್ತನಲ್ಲದವನು. ೨. ಅನ್ನವಿಲ್ಲದ ಸ್ಥಿತಿ.

**ಅಭದ್ರ** (ಗು). ೧. ಅಮಂಗಳವಾದ; ಅಶುಭವಾದ. ೨. ಸುರಕ್ಷಿತವಲ್ಲದ.

**ಅಭಯ** (ನಾ). ೧. ನಿರ್ಭಯತೆ; ಸುರಕ್ಷಿತತೆ. ೨. ಲಾಮಂಚದ ಬೇರು. (ಗು). ೩. ಭಯವಿಲ್ಲದ; ಅಂಜದ.

**ಅಭಯೆ** (ನಾ). ೧. ಭಯವಿಲ್ಲದವಳು. ೨. ಅಳಲೆ ಕಾಯಿ.

**ಅಭವ** (ನಾ). ೧. ಶಿವ. ೨. ಜಿನ; ಅರ್ಹಂತ. ೩. ಇಲ್ಲದಿರುವಿಕೆ; ನಾಶ. (ಗು). ೪. ಭವವಿಲ್ಲದ; ಹುಟ್ಟಿಲ್ಲದ.

**ಅಭಾಗಿ** (ನಾ). ನಿರ್ಭಾಗ್ಯ; ದುರದೃಷ್ಟಶಾಲಿ.

**ಅಭಾಗಿನಿ** (ನಾ). ನಿರ್ಭಾಗ್ಯಳಾದ ಹೆಂಗಸು.

**ಅಭಾವ** (ನಾ). ೧. ಇಲ್ಲದಿರುವುದು. ೨. ಲೋಪ.

**ಅಭಿಕ್ರಮ** (ನಾ). ೧. ಹತ್ತುವುದು; ಆರೋಹಣ. ೨. ಆಕ್ರಮಣ; ಮೇಲೆ ಬೀಳುವುದು. ೩. ಉದ್ಯೋಗ; ಪ್ರಯತ್ನ; ಕಾರ್ಯಾರಂಭ.

**ಅಭಿಖ್ಯಾನ** (ನಾ). ೧. ಹೆಸರು. ೨. ಕೀರ್ತಿ; ಪ್ರಖ್ಯಾತಿ.

**ಅಭಿಗಮನ** (ನಾ). ಎದುರಿಗೆ ಹೋಗುವುದು; ಇದಿರುಗೊಳ್ಳುವುದು. ~**ವಾರ್ತೆ** = ಬರುವ ಸಮಾಚಾರ.

**ಅಭಿಗಾರ** = ಅಭಿಘಾರ.

**ಅಭಿಗ್ರಹ** (ನಾ). ೧. ದರೋಡೆ; ಲೂಟಿ. ೨. ಆಕ್ರಮಣ; ಮುತ್ತಿಗೆ. ೩. ಪ್ರತಿಭಟನೆ. ೪. ದೂರು; ಫಿರ್ಯಾದು. ೫. ಅಧಿಕಾರ; ಗೌರವ; ತೂಕ.

**ಅಭಿಘಾತ** (ನಾ). ೧. ಪೆಟ್ಟು; ಹೊಡೆತ. ೨. ಗಾಯ; ಗಾಸಿ. ೩. ನಷ್ಟ; ನಾಶ.

**ಅಭಿಘಾರ** (ನಾ). ೧. ಅನ್ನದ ಮೇಲೆ ಮೊದಲು ಬಡಿಸುವ ತುಪ್ಪ. ೨. ನೈವೇದ್ಯಕ್ಕೆ ತುಪ್ಪ ಹಾಕುವ ಕ್ರಿಯೆ.

**ಅಭಿಚಾರ** (ನಾ). ೧. ವಿರುದ್ಧವಾದ ಆಚರಣೆ; ವಿಶ್ವಾಸಘಾತ. ೨. ಮಾಟ. ~**ಕ್ರಿಯೆ** = ಮಾಟ ಮಾಡುವುದು.

**ಅಭಿಜನ** (ನಾ). ೧. ವಂಶ; ಗೋತ್ರ. ೨. ಕೀರ್ತಿ. ೩. ಉತ್ತಮ ಕುಲದಲ್ಲಿ ಹುಟ್ಟಿದವನು. ೪. ಪರಿಜನ.

**ಅಭಿಜಾತ** (ನಾ). ೧. ಉತ್ತಮ ಕುಲದಲ್ಲಿ ಹುಟ್ಟಿದವನು. ೨. ಪ್ರಿಯ. ೩. ಸುಂದರ. ೪. ವಿದ್ಯಾವಂತ; ವಿವೇಕಿ.

**ಅಭಜಿತ್ತು** (ನಾ). ೧. ಜಯಶಾಲಿ. ೨. ದಿವಸದ ಎಂಟನೆಯ ಮುಹೂರ್ತ. ೩. ಒಂದು ನಕ್ಷತ್ರ.

**ಅಭಿಜ್ಞ** (ನಾ). ಚೆನ್ನಾಗಿ ತಿಳಿದವನು.

**ಅಭಿಜ್ಞಾನ** (ನಾ). ೧. ತಿಳಿವು. ೨. ನೆನಪು. ೩. ಜ್ಞಾಪಕಕ್ಕೆ ತರುವ ಗುರುತು, –ಕುರುಹು. ೪. ರುಜುವಾತು.

**ಅಭಿಧಮನಿ** (ನಾ). ಹೃದಯಕ್ಕೆ ಅಭಿಮುಖವಾಗಿ ಹೋಗುವ ರಕ್ತನಾಳ.

**ಅಭಿಧಾನ** (ನಾ). ೧. ನಿರೂಪಣೆ. ೨. ಹೆಸರು. ೩. ಮಾತು. ೪. ಸಂಭಾಷಣೆ. ೫. ನಿಘಂಟು.

**ಅಭಿಧೆ** (ನಾ). ೧. ಹೆಸರು. ೨. ವಾಚ್ಯಾರ್ಥವನ್ನು ಕೊಡುವ ಶಬ್ದಶಕ್ತಿ. ೩. ಶಬ್ದ.

**ಅಭಿಧ್ಯೆ** (ನಾ). ೧. ಚಿಂತನೆ. ೨. ಬಯಕೆ.

**ಅಭಿನಂದನ** (ನಾ). ಸಂತೋಷವನ್ನುಂಟುಮಾಡುವವನು.

**ಅಭಿನಂದನೆ** (ನಾ). ೧. ಪ್ರಶಂಸೆ. ೨.ಸಂತೋಷ ಪ್ರಕಟನೆ.

**ಅಭಿನಯ** (ನಾ). ನಟನೆ; ಅನುಕರಣ.

**ಅಭಿನವ** (ಗು). ಹೊಸದಾದ; ನೂತನವಾದ. ~ಇಸು = ೧. ಹೊಸದು ಮಾಡು. ೨. ಅತ್ಯುತ್ತಮರೀತಿಯಲ್ಲಿ ನಡೆಸು.

**ಅಭಿನಿವೇಶ** (ನಾ). ೧.ಆಸಕ್ತಿ. ೨. ಅಭಿಪ್ರಾಯ ವಿಶೇಷ. ೩. ದೃಢ ನಿಶ್ಚಯ.

**ಅಭಿನೀತ** (ಗು). ೧. ಹತ್ತಿರಕ್ಕೆ ಒಯ್ಯಲ್ಪಟ್ಟ. ೨. ಅಭಿನಯಿಸಲ್ಪಟ್ಟ. ೩. ಸಂಸ್ಕರಿಸಿದ. ೪. ಯೋಗ್ಯವಾದ.

**ಅಭಿನೇತ್ರಿ** (ನಾ). ನಟಿ.

**ಅಭಿಪ್ರಾಣಿ** (ನಾ). ಸಾಧು ; ಬಡಜೀವಿ.

**ಅಭಿಪ್ರಾಯ** (ನಾ). ೧. ಆಶಯ. ೨.ಉದ್ದೇಶ. ೩. ತಾತ್ಪರ್ಯ.

**ಅಭಿಭವ** (ನಾ). ೧. ಸೋಲು. ೨. ಕಷ್ಟ. ೩. ಅವಮಾನ. ~ಇಸು = ೧. ಸೋಲಿಸು. ೨. ಅವಮಾನಗೊಳಿಸು. ೩. ಆಯಾಸಗೊಳಿಸು.

**ಅಭಿಮತ** (ನಾ). ೧. ಅಭಿಪ್ರಾಯ ; ಭಾವ. ೨. ಇಷ್ಟವಾದುದು. (ಗು). ೩. ಒಪ್ಪಲ್ಪಟ್ಟ.

**ಅಭಿಮಾನ** (ನಾ). ೧. ಹೆಮ್ಮೆ. ೨. ಅಹಂಕಾರ. ೩. ಹಿಂಸೆ. ೪. ಪ್ರೀತಿ.~ಇಸು =ಗೌರವಿಸು; ಪ್ರೀತಿಸು. ~(ಂ)ಕಿ(ಗಿ)ಡು = ಮಾನ ಹೋಗು. ~ಕೆ(ಗೆ)ಡಿ = ಮಾನಗೆಟ್ಟ ವ್ಯಕ್ತಿ. ~ಕೆ(ಗೆ)ಡು = ಆತ್ಮಗೌರವಕ್ಕೆ ಹಾನಿ; ಗರ್ವಭಂಗ.

**ಅಭಿಮುಖ** (ಗು). ೧. ಎದುರಿಗಿರುವ; ಸಮ್ಮುಖ. ೨. ಅನುಕೂಲವಾದ.

**ಅಭಿಯಾತಿ** (ನಾ). ಹಗೆ; ಶತ್ರು.

**ಅಭಿಯೋಗ** (ನಾ). ೧.ಆಸಕ್ತಿ. ೨. ಒತ್ತಾಯ. ೩. ಆಕ್ರಮಣ ; ಯುದ್ಧ. ೪. ಅಕಾರ್ಯ. ೫. ಆಪಾದನೆ ; ಅಪವಾದ.

**ಅಭಿರಾಮ** (ಗು). ಸುಂದರವಾದ.

**ಅಭಿರುಚಿ** (ನಾ). ೧. ಆಸಕ್ತಿ ; ಒಲವು. ೨. ಸವಿಯುವ ಶಕ್ತಿ. ೩. ಪ್ರಕಾಶ.

**ಅಭಿರೂಪ** (ನಾ). ೧. ವಿದ್ವಾಂಸ. ೨. ಸ್ಪಷ್ಟವಾದ ರೂಪ. (ಗು). ೩. ಅನುರೂಪವಾದ. ೪. ಸುಂದರವಾದ.

**ಅಭಿಲಷಿತ** (ನಾ). ೧. ಬಯಕೆ. (ಗು). ೨. ಬಯಸಿದ.

**ಅಭಿಲಾಷೆ** (ನಾ). ಆಸೆ; ಬಯಕೆ. ~ಇಸು = ಬಯಸು ; ಆಸೆಪಡು.

**ಅಭಿವರ್ಧನ** = ಅಭಿವೃದ್ಧಿ.

**ಅಭಿವೃದ್ಧಿ** (ನಾ). ಏಳಿಗೆ; ಶ್ರೇಯಸ್ಸು.

**ಅಭಿವ್ಯಂಜನ** (ನಾ). ೧. ಸ್ಪಷ್ಟವಾಗಿ ತೋರುವುದು. ೨. ಸ್ಪಷ್ಟಪಡಿಸುವುದು. ೩. ಅಭಿವ್ಯಕ್ತಿಗೊಳಿಸುವುದು.

**ಅಭಿವ್ಯಕ್ತಿ** (ನಾ). ೧. ಪ್ರಕಟವಾಗುವುದು. ೨. ಉಕ್ತಿ ; ಹೇಳಿಕೆ. ~ಕೊ(ಗೊ)ಳ್ = ಪ್ರಕಟವಾಗು.

**ಅಭಿಶಾಪ** (ನಾ). ೧. ಉಗ್ರಶಾಪ. ೨. ಅನ್ಯಾಯವಾದ ಆರೋಪಣೆ.

**ಅಭಿಷಂಗ** (ನಾ). ೧. ಕೂಟ ; ಸಹವಾಸ. ೨. ಸೋಲು. ೩. ಸಾಲ. ೪. ಅಪವಾದ. ೫. ಶಪಥ. ೬. ಶಾಪ. ೭. ಅಪಮಾನ.

**ಅಭಿಷೇಕ** (ನಾ). ೧. ದೇವರಿಗೆ ಮಾಡಿಸುವ ಮಂಗಳಸ್ನಾನ. ೨. ಪಟ್ಟ ಕಟ್ಟುವಾಗ ಮಾಡಿಸುವ ಸ್ನಾನ; ಪಟ್ಟಾಭಿಷೇಕ.

**ಅಭಿಸರಣ** (ನಾ). ೧.ಎದುರಿಗೆ ಹೋಗುವುದು. ೨. ಪ್ರಿಯರ ಭೇಟಿಗಾಗಿ ಸಂಕೇತಸ್ಥಾನಕ್ಕೆ

ಹೋಗುವುದು. ೩. ಪರಸ್ಪರ ಭೇಟಿಗಾಗಿ ಮಾಡಿಕೊಂಡ ಸಂಕೇತ.

**ಅಭಿಸಾರ** (ನಾ). ಪ್ರಿಯರ ಭೇಟಿಗಾಗಿ ಸಂಕೇತ ಸ್ಥಾನಕ್ಕೆ ಹೋಗುವುದು.

**ಅಭಿಸಾರಿಕೆ** (ನಾ). ಪ್ರಿಯನನ್ನು ಕೂಡಲು ಸಂಕೇತಸ್ಥಾನಕ್ಕೆ ಹೋಗುವ ಹೆಣ್ಣು.

**ಅಭಿಹಾರ** (ನಾ). ೧. ದರೋಡೆ. ೨. ಆಕ್ರಮಣ. ೩. ಯುದ್ಧಸನ್ನಾಹ. ೪. ತಳ್ಳುವುದು. ೫. ಬೆರಕೆ. ೬. ಪ್ರಯತ್ನ. ೭. ನಿಷ್ಕರುಣೆ.

**ಅಭೀಕ** (ನಾ). ೧. ಕಾಮುಕ. ೨. ನಲ್ಲ. ೩. ನಿರ್ಭೀತ.

**ಅಭೀಷ್ಟ** (ನಾ). ಪ್ರಿಯವಾದುದು ; ಬಯಸಿದುದು.

**ಅಭ್ಯಂಗ** (ನಾ). ೧. ಎಣ್ಣೆಮಜ್ಜನ. ೨. ಲೇಪನ ದ್ರವ್ಯ. **~ಇಸು** = ೧. ಲೇಪಿಸು. ೨. ಎಣ್ಣೆಮಜ್ಜನಮಾಡು.

**ಅಭ್ಯಂಜನ** = ಅಭ್ಯಂಗ.

**ಅಭ್ಯಂತರ**(ನಾ). ೧. ಅಂತರಾಳ. ೨. ಅಂತರಂಗ. ೩. ಕಾಲದ ಅವಧಿ. ೪. ಅಡ್ಡಿ ; ಆಕ್ಷೇಪಣೆ. **~ಇಸು** = ೧. ಅಡ್ಡಿಪಡಿಸು ; ತಡೆ. ೨. ಮೆಚ್ಚು.

**ಅಭ್ಯರ್ಚನ(ನೆ)** (ನಾ). ಪೂಜೆ ; ಸತ್ಕಾರ.

**ಅಭ್ಯರ್ಥಿ** (ನಾ). ಉಮೇದುವಾರ; ಅರ್ಜಿದಾರ.

**ಅಭ್ಯವಹಾರ** (ನಾ). ೧. ಊಟ. ೨. ಆಹಾರ. ೩. ತಿನ್ನಲು ಯೋಗ್ಯವಾದುದು.

**ಅಭ್ಯಾಗತ(ತೆ)** (ನಾ). ೧. ಅನಿರೀಕ್ಷಿತವಾಗಿ ಬಂದ ಅತಿಥಿ. ೨. ಆತಿಥಿ ಸತ್ಕಾರ; ಆತಿಥ್ಯ. (ಗು). ೩. ಹೊರಗಿನಿಂದ ಬಂದ.

**ಅಭ್ಯಾಗಮ** (ನಾ). ೧. ಬರುವಿಕೆ. ೨. ಯುದ್ಧ.

**ಅಭ್ಯಾಸ** (ನಾ). ೧. ರೂಢಿ. ೨. ವ್ಯಾಸಂಗ. ೩. ಪುನರುಚ್ಚಾರಣೆ. ೪. ಸಮೀಪ. ೫. ಸಾಧನ ಪಾಠ. **~ಇಸು** = ೧. ಅಭ್ಯಾಸ ಮಾಡಿಸು. ೨. ಅಭ್ಯಾಸ ಮಾಡು.

**ಅಭ್ಯಾಸಿ** (ನಾ). ವಿದ್ಯಾರ್ಥಿ; ಕಲಿಯುವವನು.

**ಅಭ್ಯಾಹಾರ** (ನಾ). ೧. ಹತ್ತಿರಕ್ಕೆ ತರುವುದು. ೨. ದರೋಡೆ. ೩. ಭೋಜನ.

**ಅಭ್ಯುತ್ಥಾನ** (ನಾ). ೧. ಅಭಿವೃದ್ಧಿ. ೨. ಗೌರವಕ್ಕಾಗಿ ಎದ್ದು ನಿಲ್ಲುವುದು.

**ಅಭ್ಯುದಯ** (ನಾ). ೧. ಉದಯಿಸುವುದು. ೨. ಅಭಿವೃದ್ಧಿ. ೩. ಗೌರವ.

**ಅಭ್ಯುಪಗಮ** (ನಾ). ೧. ಹತ್ತಿರಕ್ಕೆ ಹೋಗುವುದು. ೨. ಅಂಗೀಕಾರ. ೩. ನಿರ್ಣಯ.

**ಅಭ್ರ** (ನಾ). ೧. ಮೋಡ. ೨. ಆಕಾಶ. ೩. ಅಭ್ರಕ. ೪. ತುರುಬು. ೫. ಕಣ್ಣು. ೬. ಕರ್ಪೂರ. ೭. ಕೊಡನಾರಿಗೆಡ್ಡೆ. ೮. ಸೊನ್ನೆಯ ಸಂಕೇತ. **~ಆಪಗೆ**=ಗಂಗಾನದಿ. **~ಕೇಶ** = ಶಿವ. **~ಗಜ** = ಐರಾವತ. **~ಪತಿ** = ಇಂದ್ರ. **~ಪುಷ್ಪ** = ೧. ನೀರು. ೨. ಗಗನಕುಸುಮ. **~ಮಣಿ** = ೧. ಸೂರ್ಯ. ೨. ಚಂದ್ರ.

**ಅಭ್ರಂಕಷ** (ನಾ). ೧. ವಾಯು. ೨. ಬೆಟ್ಟ. (ಗು). ೩. ಮೋಡಗಳನ್ನು ಉಜ್ಜುವಂತೆ ಎತ್ತರವಾಗಿರುವ.

**ಅಭ್ರಕ** (ನಾ). ೧. ಕಾಗೆ ಬಂಗಾರ. ೨. ಕೊಡನಾರಿ ಗೆಡ್ಡೆ.

**ಅಮಂಗಲ(ಳ)** (ನಾ). ಅಶುಭ ; ಅನಿಷ್ಟ.

**ಅಮಗ** (ನಾ). ೧. ಉತ್ಸವ ಸಮಯ. ೨. ಹಣ್ಣು, ಹೂವು ಉಂಟಾಗುವ ಕಾಲ.

**ಅಮಚು** = ಅಮರ್ಚು.

**ಅಮತ** (ನಾ). ೧. ರೋಗ. ೨. ಸಾವು. ೩. ಕಾಲ. (ಗು). ೪. ಮನಸ್ಸಿಗೆ ಗೋಚರವಾಗದ; ಅನುಭವಕ್ಕೆ ಸಿಕ್ಕದ. ೫. ಸಮ್ಮತವಲ್ಲದ.

**ಅಮತ್ರ** (ನಾ). ತಟ್ಟೆ, ಹರಿವಾಣ ಮುಂತಾದ ಪಾತ್ರೆ.

**ಅಮದು** = ಅಮರ್ದು.

**ಅಮರ್(ರು)** (ಕ್ರಿ). ೧. ಭದ್ರವಾಗಿ ಸೇರು. ೨. ಉಚಿತವಾಗು ; ಸರಿಹೋಗು.

೩. ಆಕ್ರಮಿಸು. ೪. ಒದಗಿಬರು. ೫. ಕೂಡಿಸು; ಜೋಡಿಸು. ೬. ಹಿಡಿತಕ್ಕೆ ಸಿಕ್ಕು. ೭. ಹತ್ತಿಕೊಳ್ಳು. ೮. ಆಕ್ಷೇಪಿಸು; ಗದರಿಸು. ~ ಇಸು = ೧. ಕೂಡಿಸು. ೨. ಉಂಟುಮಾಡು; ಒದಗಿಸು. ೩. ಜೋಡಿಸು. ೪. ಭದ್ರವಾಗಿ ಹಿಡಿ. ೫. ಹತ್ತಿಸು; ಆರೋಪಿಸು. ೬. ಸಿದ್ಧಪಡಿಸು. ೭. ಆಕ್ಷೇಪಿಸು; ಬೈಯು. ೮. ಹೊಡೆ.

**ಅಮರ** (ನಾ). ೧. ಇನಾಮಾಗಿ ಕೊಟ್ಟ ಗ್ರಾಮ. ೨. ಒಂದು ಸಾವಿರ ಕಾಲಾಳುಗಳ ಮೇಲಿನ ಆಳಿಕೆ. ೩. ಹಾಲು, ಬೆಣ್ಣೆ, ಮೊಸರು ಮುಂತಾದ ವಸ್ತುಗಳು. ೪. ದೇವತೆ. ೫. ಪಾದರಸ. ೬. ಚಿನ್ನ. ೭. ದೇವದಾರು ವೃಕ್ಷ. ೮. ಕಳ್ಳಿಗಿಡ. (ಗು). ೯. ಮರಣವಿಲ್ಲದ; ಶಾಶ್ವತವಾದ. ~ ಇಂದ್ರ = ದೇವೇಂದ್ರ. ~ ಈಶ = ೧. ದೇವೇಂದ್ರ. ೨. ಶಿವ. ೩. ವಿಷ್ಣು. ~ ಕಂಟಕ = ರಾಕ್ಷಸ. ~ ಕರಿ = ಐರಾವತ. ~ ಕುಜ = ಕಲ್ಪವೃಕ್ಷ. ~ ಗಿರಿ = ಮೇರುಪರ್ವತ. ~ ಗುರು = ಬೃಹಸ್ಪತಿ. ~ ಜನನಿ = ಅದಿತಿ. ~ ಮಣಿ = ಚಿಂತಾಮಣಿ.

**ಅಮರಿ** (ನಾ). ೧. ನೆಲಾವರಿಕೆ ಗಿಡ; ನೆಲತಂಗಡಿ. ೨. ಅಮರಸ್ತ್ರೀ.

**ಅಮರಿಕೆ** = ಅಮರ್ಕೆ.

**ಅಮರಿಚು** = ಅಮರ್ಚು.

**ಅಮರೆ** = ಅವರೆ.

**ಅಮರ್ಕೆ** (ನಾ). ೧. ಬೆಸುಗೆ. ೨. ಜೋಡಣೆ.

**ಅಮರ್ಚು** (ಕ್ರಿ). ೧. ಇರಿಸು; ಕೂರಿಸು; ಸೇರಿಸು. ೨. ಉಂಟುಮಾಡು; ಒದಗಿಸು. ೩. ತೊಡಿಸು; ಮುಡಿಸು. ೪. ಲೇಪಿಸು; ಸವರು. ೫. ಅಪ್ಪು; ಆಲಿಂಗಿಸು. ೬. ಕೂಡು; ಸೇರು. ೭. ಮಾಡು; ಏರ್ಪಡಿಸು. ೮. ಹೊಂದು. ೯. ಜೋಡಿಸು. ೧೦. ಭದ್ರವಾಗಿ ಹಿಡಿ. ೧೧. ಒತ್ತು.

**ಅಮರ್ದು** (ನಾ). ೧. ಅಮೃತ. ೨. ಹಾಲು. ೩. ನೈವೇದ್ಯ. ~ ಉಣಿ = ಅಮರ್ದುಂಡ. ~ ಕ(ಗ)ಡಲು = ಕ್ಷೀರಸಾಗರ. ~ ಕಳೆವೆಳಗ = ಚಂದ್ರ. ~ ಕೆಯ್ = ಅಮೃತದ ಕಿರಣ.

**ಅಮರ್ದುಂಡ** (ನಾ). ಅಮೃತವನ್ನು ಊಟ ಮಾಡಿದವನು; ದೇವತೆ.

**ಅಮರ್ಷ** (ನಾ). ೧. ಅಸಹನೆ. ೨. ಕೋಪ. ೩. ಹೊಟ್ಟೆಕಿಚ್ಚು. ೪. ನಿಶ್ಚಯ.

**ಅಮಲ್(ಲು)** (ನಾ). ೧. ಮಾದಕತೆ; ಮತ್ತು. ೨. ಕೆಲಸ; ವ್ಯವಹಾರ. ೩. ಆಡಳಿತ. ೪. ಪದವಿ; ಹುದ್ದೆ. ೫. ಗ್ರಾಮದ ಆದಾಯದಲ್ಲಿ ಪಾಲುಗಾರಿಕೆಯ ಹಕ್ಕು. ೬. ಭೂಕಂದಾಯದ ಶೇಖರಣೆ. ~ ಜಾರಿ = ಅಧಿಕಾರ ಚಲಾವಣೆ. ~ ದಾರ = ಭೂಕಂದಾಯವೇ ಮುಂತಾದ ತೆರಿಗೆಯನ್ನು ವಸೂಲು ಮಾಡಲು ನಿಯುಕ್ತನಾದ ಅಧಿಕಾರಿ; ಮಾಮಲೆದಾರ. ~ ಬಜಾವಣೆ = ಆಜ್ಞೆಯನ್ನು ಜಾರಿ ಮಾಡುವುದು.

**ಅಮಲ(ಳ)** (ನಾ). ೧. ಅಭ್ರಕ; ಕಾಗೆ ಬಂಗಾರ. (ಗು). ೨. ನಿರ್ಮಲವಾದ.

**ಅಮಸೋಲು** = ಅಮುಸೋಲು.

**ಅಮಳ್(ಳ)** (ನಾ). ೧. ಅವಳಿಜವಳಿ. ೨. ಒಡನಾಡಿ. ~ ತಲೆಯ = ೧. ಅಗ್ನಿ. ೨. ಗಂಡಭೇರುಂಡ. ~ ದೇವರ್ = ಅಶ್ವಿನೀ ದೇವತೆಗಳು. ~ ಪ(ವ)ಕ್ಕಿ = ಚಕ್ರವಾಕ ಪಕ್ಷಿ.

**ಅಮಾತ್ಯ** (ನಾ). ಮಂತ್ರಿ; ಸಚಿವ.

**ಅಮಾನತ್ತು** (ನಾ). ೧. ಬಳಸದೆ ಭದ್ರವಾಗಿಡುವ ವಸ್ತು; ನ್ಯಾಸ. ೨. ಅನಿಶ್ಚಿತ ಸ್ಥಿತಿಯಲ್ಲಿ ತಾತ್ಕಾಲಿಕವಾಗಿ ತಡೆಹಿಡಿದಿರುವುದು. ೩. ಅನಿಶ್ಚಯ ಸ್ಥಿತಿ. ೪. ಪರೀಕ್ಷೆ. ~ ದಾರ = ಅಮಾನತ್ತಿನಲ್ಲಿ ವ್ಯವಹರಿಸುವವನು. ~ ದಾರಿ = ನಂಬಿಕೆ.

**ಅಮಾನಿ** (ನಾ). ಸರ್ಕಾರ ತನ್ನ ಮೇಲ್ವಿಚಾರಣೆಯಲ್ಲಿಯೇ ನಡಸುವ ವ್ಯವಹಾರ. ~**ಕೆರೆ** = ಸರ್ಕಾರದ ವಶದಲ್ಲಿರುವ ಕೆರೆ.

**ಅಮಾನುಷ** (ಗು). ೧. ಮನುಷ್ಯನಿಗೆ ಸಲ್ಲದ; ಕ್ರೂರವಾದ. ೨. ಮನುಷ್ಯನಿಗೆ ಮೀರಿದ; ಅತಿಮಾನುಷ.

**ಅಮಿಷ** (ನಾ). ೧. ಮಾಂಸ. ೨. ಲೌಕಿಕ ಸುಖ. ೩. ನಿಶ್ಚಲತೆ. ೪. ನಿಷ್ಕಪಟ.

**ಅಮು(ಂ)ಕು** (ಕ್ರಿ). ೧. ಅದುಮು; ಹಿಸುಕು. ೨. ಆಲಿಂಗಿಸು.

**ಅಮೂಲ್ಯ** (ಗು). ಬೆಲೆಯಿಲ್ಲದ; ಬಹಳ ಬೆಲೆಯುಳ್ಳ.

**ಅಮೃತ** (ನಾ). ೧. ದೇವತೆ. ೨. ಮೋಕ್ಷ. ೩. ಸುಧೆ. ೪. ವಿಷನಿವಾರಕವಾದ ಔಷಧ. ೫. ಅನ್ನ. ೬. ನೀರು. ೭. ಹಾಲು. ೮. ಬಿಳಿಯ ಬಣ್ಣ. (ಗು). ೯. ಸಾವಿಲ್ಲದ; ಶಾಶ್ವತವಾದ. ~**ಅಂಶು** = ಚಂದ್ರ. ~**ಕರ** = ೧. ಚಂದ್ರ. ೨. ವೈದ್ಯ. ೩. ವಾಸುಕಿ. ೪. ರಾಕ್ಷಸ. ೫. ದೇವತೆ. ೬. ಶಿವ. ೭. ಸಮುದ್ರ. ~**ಶಿಲೆ** = ಚಂದ್ರಕಾಂತ ಶಿಲೆ.

**ಅಮೆ** (ನಾ). ೧. ಅಮಾವಾಸ್ಯೆ. ೨. ಚಂದ್ರನ ಹದಿನಾರು ಕಲೆಗಳಲ್ಲಿ ಕೊನೆಯದು.

**ಅಮೇಧ್ಯ** (ನಾ). ೧. ಹೇಲು; ಮಲ. (ಗು). ೨. ಯಜ್ಞಕ್ಕೆ ಯೋಗ್ಯವಲ್ಲದ. ೩. ಅಶುದ್ಧವಾದ.

**ಅಮೇಯ** (ಗು). ಅಳೆಯಲಾಗದ; ಎಣಿಕೆಗೆ ಮೀರಿದ.

**ಅಮೋಘ** (ಗು). ೧. ವ್ಯರ್ಥವಾಗದ; ಸಾರ್ಥಕವಾದ. ೨. ಗುರಿಯನ್ನು ಮುಟ್ಟುವ. ೩. ತುಂಬ ಬೆಲೆಯುಳ್ಳ.

**ಅಮೌಲ್ಯ** = ಅಮೂಲ್ಯ.

**ಅಮ್ಮ** (ನಾ). ೧. ತಂದೆ. ೨. ತಾಯಿ. ೩. ಸ್ತ್ರೀ ದೇವತೆ. ೪. ಸಿಡುಬು. ೫. ಅಜ್ಜಿ.

**ಅಮ್ಮಾಲೆ** (ನಾ). ಒಂದು ಬಗೆಯ ಆಟ.

**ಅಮ್ಮಾವು** (ನಾ). ಕಾಡುಹಸು.

**ಅಮ್ಮಿ** (ನಾ). ೧. ಅಮ್ಮ. ೨. ಅಸಿಕಲ್ಲು. ೩. ಮೊಲೆ.

**ಅಯನ** (ನಾ). ೧. ಚಲಿಸುವುದು. ೨. ಮಾರ್ಗ. ೩. ಪ್ರದೇಶ. ೪. ಭೂಮಧ್ಯರೇಖೆಯ ಉತ್ತರಕ್ಕೆ ಅಥವಾ ದಕ್ಷಿಣಕ್ಕೆ ಸೂರ್ಯನು ಚಲಿಸುವ ಮಾರ್ಗ. ೫. ಭೂಗೋಳದ ಮೇಲಿನ ವಿಷುವದ್ಬಿಂದು; ಸಂಕ್ರಾಂತಿ ಬಿಂದು. ೬. ಜಾತ್ರೆ.

**ಅಯಸ್** (ನಾ). ಕಬ್ಬಿಣ; ಉಕ್ಕು. ~**ಕಾಂತ** = ಸೂಜಿಗಲ್ಲು.

**ಅಯಸ** (ನಾ). ದಣಿವು; ಆಯಾಸ.

**ಅಯಾಲು** (ನಾ). ಕುದುರೆಯ ಅಥವಾ ಸಿಂಹದ ಕುತ್ತಿಗೆಯ ಮೇಲಿನ ಕೂದಲು.

**ಅಯಿದಾರೆ** (ನಾ). ಒಂದು ಬಗೆಯ ಸಕ್ಕರೆ.

**ಅಯುತ** (ನಾ). ೧. ಹತ್ತು ಸಾವಿರ. (ಗು). ೨. ಸೇರದಿರುವ; ಎಣಿಕೆಗೆ ಒಳಪಡದ.

**ಅಯೋಗ** (ನಾ). ೧. ಒನಕೆ. ೨. ಸಂಬಂಧವಿಲ್ಲದಿರುವುದು.

**ಅಯೋನಿಜೆ** (ನಾ). ಯೋನಿಯಲ್ಲಿ ಹುಟ್ಟದವಳು; ಸೀತೆ.

**ಅಯೋಮಯ** (ಗು). ೧. ಕಬ್ಬಿಣ ಅಥವಾ ಉಕ್ಕಿನಿಂದ ಮಾಡಿದ. ೨. ಕ್ಲಿಷ್ಟವಾದ.

**ಅಯ್ಕಿಲ್** (ನಾ). ೧. ಚಳಿ; ಶೀತ. ೨. ಹಿಮ; ಮಂಜು. ~**ಕ(ಗ)ದಿರ** = ಚಂದ್ರ.

**ಅಯ್ದು** ೧. = ಎಯ್ದು. (ನಾ) ೨. ಐದು ಎಂಬ ಸಂಖ್ಯೆ.

**ಅಯ್ದೆ** (ನಾ). ೧. ಮುತ್ತೈದೆ. ೨. ಮುತ್ತೈದೆತನ. ~**ತಾ(ದಾ)ಳಿ** = ಮಾಂಗಲ್ಯ. ~**ಮಿನುಗು** = ಅಯ್ದೆತಾಳಿ.

**ಅಯ್ಯ** (ನಾ). ೧. ತಂದೆ. ೨. ಅಜ್ಜ. ೩. ಜಂಗಮ. ೪. ಉಪಾಧ್ಯಾಯ. ೫. ಯಜಮಾನ.

**ಅಯ್ರು** (ನಾ). ಮುತ್ತೈದೆ. **~ತಾ(ದಾ)ಳಿ** = ಅಯ್ದೆತಾಳಿ.

**ಅರ** (ನಾ). ೧. ನಯಗೊಳಿಸಲು ಅಥವಾ ಹರಿತ ಗೊಳಿಸಲು ಬಳಸುವ ಉಪಕರಣ. ೨. = ಅಜಿ.

**ಅರಂಟು** (ಕ್ರಿ). ಅಲೆಯುತ್ತಾ ಹುಡುಕು; ಸುತ್ತು.

**ಅರಕ** (ನಾ). ೧. ಬಟ್ಟೆಯಿಳಿಸುವುದು. ೨. ಬಟ್ಟೆಯಿಳಿಸಿದುದು. ೩. ಅರಗುವುದು.

**ಅರಕಳಿ** (ನಾ). ೧. ಅಪೂರ್ಣತೆ. (ಗು). ೨. ಅಪೂರ್ಣ.

**ಅರಕು** ೧. = ಅರಕ. ೨. ವರಕು; ಗಿಲೀಟು.

**ಅರಗಟ್ಟ** (ನಾ). ನೀರನ್ನು ಎತ್ತುವ ರಾಟೆ.

**ಅರಗಿಳಿ(ಣಿ)** (ನಾ). ಗಿಳಿಗಳಲ್ಲಿ ಶ್ರೇಷ್ಠವಾದುದು; ರಾಜಕೀರ.

**ಅರಗು** (ಕ್ರಿ). ೧. ಜೀರ್ಣವಾಗು; ಕರಗು. ೨. ವಶವಾಗು. (ನಾ). ೩. ಅಂಜು. ೪. ಮುದ್ರೆ ಮಾಡಲು ಬಳಸುವ ಒಂದು ದ್ರವ್ಯ; ಲಾಕ್ಷ.

**ಅರಚಲು** (ನಾ). ಅರುಚುವಿಕೆ; ಕೂಗು.

**ಅರಣ** (ನಾ). ೧. ಮದುವೆಯಲ್ಲಿ ಕೊಡುವ ಉಡುಗೊರೆ. ೨. ಸಗಣಿ.

**ಅರಣಿ** (ನಾ). ೧. ಹೂವು. ೨. ಯಾಗಾಗ್ನಿಯನ್ನು ಹುಟ್ಟಿಸಲು ಉಪಯೋಗಿಸುವ ಮರದ ಕೊರಡು.

**ಅರಣೆ** (ನಾ). ಹಾವುರಾಣಿ.

**ಅರಣ್ಯ** (ನಾ). ಅಡವಿ; ಕಾಡು.

**ಅರಣ್ಯಾನಿ** (ನಾ). ೧. ಮಹಾರಣ್ಯ. ೨. ವನದೇವತೆ.

**ಅರತಿ** (ನಾ). ೧. ಬೇಡವಾಗಿರುವಿಕೆ; ಅನಾಸ್ಥೆ. ೨. ಸಿಟ್ಟು.

**ಅರತ್ನಿ** (ನಾ). ೧. ಮೊಳಕೈ. ೨. ಮೊಳ.

**ಅರದ** (ನಾ). ೧. ರಥ; ತೇರು. ೨. ಬೋಡ; ಬಚ್ಚಬಾಯಿಯವನು.

**ಅರದೇಶಿ(ಸಿ)** (ನಾ). ಯಾತ್ರಿಕ; ಸಂನ್ಯಾಸಿ.

**ಅರಮನೆ** (ನಾ). ರಾಜನ ಮನೆ.

**ಅರಮರಿಕೆ** (ನಾ). ೧. ಅನುಮಾನ; ಸಂಶಯ. ೨. ಅಸಮ್ಮತಿ. ೩. ತೆರೆ.

**ಅರಮೆ** (ನಾ). ೧. ತೋಟ; ಉದ್ಯಾನವನ. (ಅ). ೨. ಕೆಲವುಟ್ಟಿಗೆ; ಸ್ವಲ್ಪಮಟ್ಟಿಗೆ.

**ಅರರ** (ನಾ). ೧. ಹೊದಿಕೆ; ಮುಸುಕು. ೨. = ಅರರಿ.

**ಅರರಿ** (ನಾ). ಕದ; ಬಾಗಿಲು.

**ಅರಲ್(ಲು)** = ಅಲರ್.

**ಅರಲಂಬ** = ಅಲರಂಬ.

**ಅರವ** (ನಾ). ೧. ತಮಿಳುಭಾಷೆ. ೨. ತಮಿಳ.

**ಅರವರಿಸು** (ಕ್ರಿ). ೧. ವಿಚಾರಿಸು. ೨. ಕಡೆಗಣಿಸು.

**ಅರವಿಂದ** (ನಾ). ಕಮಲ.

**ಅರಸ** (ನಾ). ೧. ರಾಜ. ೨. ಹಿರಿಯ; ಶ್ರೇಷ್ಠ. ೩. ರಸಿಕನಲ್ಲದವನು; ರಸವಿಲ್ಲದವನು. **~ಪಟ್ಟಿಗೆ** = ರಾಜಪದವಿ.

**ಅರಸು** ೧. = ಅಜಿಸು. (ನಾ). ೨. ಅರಸ. ೩. ದೊರೆತನ; ಅರಸುತನ. **~ಇಗ** = ಹುಡುಕುವವನು; ಅನ್ವೇಷಕ.

**ಅರಳ್(ಳು)** ೧. = ಅಲರ್. (ನಾ.) ೨. ಹುರಿದು ಅರಳಿಸಿದ ಕಾಳು; ಲಾಜೆ.

**ಅರಳಿ** (ನಾ). ೧. ಅಶ್ವತ್ಥವೃಕ್ಷ. ೨. ಅರಣೆ. **~ಎಲೆ** = ಅರಳಿ ಎಲೆಯಾಕಾರದ ಒಂದು ಒಡವೆ.

**ಅರಳಿಚು** = ಅಲರ್ಚು.

**ಅರಳೆ(ಲೆ)** (ನಾ). ೧. ಕಾಳು ತೆಗೆದ ಹತ್ತಿ. ೨. ಕಂಬ; ಸ್ಥಾಣು.

**ಅರಾಜಕ** (ನಾ). ೧. ರಾಜನಿಲ್ಲದಿರುವ ಸ್ಥಿತಿ; ಅವ್ಯವಸ್ಥೆ. (ಗು). ೨. ರಾಜನನ್ನು ಹೊಂದಿಲ್ಲದ.

**ಅರಾತಿ** (ನಾ). ಹಗೆ; ಶತ್ರು.

**ಅರಿ** (ಕ್ರಿ). ೧. ಕತ್ತರಿಸು. ೨. = ಅಱು.

೩. ಅಕ್ಕಿ ಮುಂತಾದ ಧಾನ್ಯಗಳನ್ನು ನೀರಿನಲ್ಲಿ ಜಾಲಿಸಿ ಶೋಧಿಸು. (ನಾ). ೪. ಹೊಲಗದ್ದೆಗಳಲ್ಲಿ ಕೊಯ್ದು ಅಲ್ಲಲ್ಲೇ ಗುಡ್ಡೆ ಹಾಕುವ ತೆನೆ. ೫. ತೆನೆಯಲ್ಲಿನ ಹಿಡಿ. ೬. ಒಂದು ಬಗೆಯ ಕಣ್ಣಿನ ರೋಗ. ೭. ಹಗೆ; ಶತ್ರು. ೮. ಆರು ಎಂಬ ಸಂಖ್ಯೆಯ ಸಂಕೇತ.

**ಅರಿದಾಳ** (ನಾ). ಶಂಖಪಾಷಾಣ ಮತ್ತು ಗಂಧಕಗಳ ಸಂಯೋಗದಿಂದಾದ ಒಂದು ಬಗೆಯ ಹಳದಿಯ ಧಾತುವಿಶೇಷ; ಹರಿತಾಲ.

**ಅರಿದು** (ಗು). ೧. ಅಸಾಧ್ಯವಾದ. ೨. ಅಪೂರ್ವವಾದ.

**ಅರಿವೆ** = ಅಱುವೆ. **~ಅಂಚಡಿ** = ಬಟ್ಟೆಬರೆ.

**ಅರಿಷ್ಟ** (ನಾ). ೧. ತೊಂದರೆಯಿಲ್ಲದಿರುವುದು; ಪಾಪವಿಲ್ಲದಿರುವುದು. ೨. ಶುಭ; ಮಂಗಳ. ೩. ದುರದೃಷ್ಟ; ಅಶುಭ. ೪. ಕೆಡುಕ. **~ಪತಿ** = ವಿಘ್ನೇಶ್ವರ. **~ಸದ್ಮ** = ಹೆರಿಗೆ ಮನೆ; ಸೂತಿಕಾಗೃಹ.

**ಅರಿಸಿನ** (ನಾ). ೧. ಒಂದು ಬಗೆಯ ಹಳದಿಯ ಬಣ್ಣದ ಬೇರು, -ಪುಡಿ; ಹರಿದ್ರೆ. ೨. ಹಳದಿ ಬಣ್ಣ. **~ಕಾಮಾಲೆ** = ಮೈಯೆಲ್ಲಾ ಹಳದಿ ಬಣ್ಣವಾಗುವ ಒಂದು ರೋಗ; ಕಾಮಣಿ. **~ಕುತ್ತ** = ಅರಿಸಿನ ಕಾಮಾಲೆ. **~ಮುಂಡ** = ಅರಿಸಿನ ಕಾಮಾಲೆ.

**ಅರುಂಬು** (ನಾ). ಹೂವಿನ ಮೊಗ್ಗು.

**ಅರುಗು** (ಕ್ರಿ). ೧. ಪಕ್ಕಕ್ಕೆ ಸರಿ; ಹೋಗು. (ನಾ). ೨. ಅಂಚು; ಪಕ್ಕ. **~ಇಸು** = ೧. ಅಂಚಿಗೆ ನಿಲ್ಲಿಸು. ೨. ಕಳಿಸು.

**ಅರುಣ** (ನಾ). ೧. ಕೆಂಪು. ೨. ಸೂರ್ಯನ ಸಾರಥಿಯ ಹೆಸರು. ೩. ಸೂರ್ಯ.

**ಅರುಬು** (ನಾ). ೧. ಕರ್ತವ್ಯ; ಹೊಣೆಗಾರಿಕೆ. ೨. ಬರ; ಕ್ಷಾಮ.

**ಅರುಹಂತ** = ಅರ್ಹಂತ.

**ಅರುಳ್(ಳು)** (ನಾ). ಕರುಣೆ; ದಯೆ.

**ಅರೆ** (ಕ್ರಿ). ೧. ನುಣ್ಣಗೆ ಮಾಡು; ಪುಡಿ ಮಾಡು; ತೇಯು. (ನಾ). ೨. = ಅಱೆ. ೩. ಅರ್ಧ. ೪. ನ್ಯೂನತೆ. ೫. ಗೂಡು; ಮಾಡ. ೬. ಸೆಳೆಖಾನೆ. ೭. ಗಾಡಿಯ ಚಕ್ರದಲ್ಲಿರುವ ಕಡ್ಡಿ. (ಅ). ೮. ಕೆಲಮಟ್ಟಿಗೆ; ತುಸು. **~ಕು(ಗು)ರಿಕ** = ೧. ಅರ್ಧ ಮಾತ್ರ ಕೆಲಸವಾಗಿರುವುದು. ೨. ಅಪೂರ್ಣವಾಗಿ ಕೆಲಸ ಮಾಡುವವನು. **~ನೆಲೆ** = ಸೈನ್ಯಕ್ಕೆ ಬೆಂಬಲವಾಗಿ ಹಿಂದುಗಡೆ ಇರುವ ಸೈನ್ಯ. **~ಮಾ(ಮಾ)ನಿಸ** = ೧. ಅರ್ಧ ಮಾತ್ರ ಮನುಷ್ಯ; ನರಸಿಂಹ. ೨. ದಕ್ಷಬ್ರಹ್ಮ. **~ಮೆಯ್ವೆಣ್** = ಅರ್ಧಾಂಗಿ; ಹೆಂಡತಿ.

**ಅರೆವೆಣ್ಣ** (ನಾ). ಅರ್ಧನಾರೀಶ್ವರ; ಶಿವ.

**ಅರೋಚಕ** (ನಾ). ೧. ಹೊಳಪಿಲ್ಲದುದು. ೨. ರುಚಿಯನ್ನು ಹುಟ್ಟಿಸದುದು. ೩. ಬೇಸರವನ್ನುಂಟುಮಾಡುವಂಥದು. ೪. ಅರುಚಿ.

**ಅರೋಚಿ** (ನಾ). ವಿವೇಕಿ; ವಿವೇಚನೆಯುಳ್ಳವನು.

**ಅಱ(ರ)** (ನಾ). ೧. ಬಹಳ ಕಾಲ ಮಳೆಬೆಳೆಗಳಿಲ್ಲದಿರುವುದು; ಕ್ಷಾಮ. ೨. ಧರ್ಮ. ೩. ಯಮಧರ್ಮರಾಜ. **~ಕು(ಗು)ಲಿ** = ೧. ಧರ್ಮದ್ರೋಹಿ. ೨. ಬೇಟೆಗಾರ. ೩. ಅನ್ಯಾಯದಿಂದ ಕೊಲ್ಲುವವನು. **~ಬ(ವ)ಟ್ಟೆ** = ಧರ್ಮದ ಮಾರ್ಗ. **~ಬ(ವ)ಱ(ರ)ಗು** = ಮಳೆಯಿಲ್ಲದೆ ಒಣಗು. **~ಬಿ(ವಿ)ಡು** = ಧರ್ಮಕ್ಕಾಗಿ ದಾನಮಾಡು. **~ಮಗ** = ಯಮನ ಮಗ; ಧರ್ಮರಾಯ. **~ವಟ್ಟಿಗೆ** = ಧರ್ಮಕ್ಕಾಗಿ (ನೀರು, ಪಾನಕ, ನೀರುಮಜ್ಜಿಗೆ, ಎಳನೀರು ಮುಂತಾದ) ಪಾನೀಯಗಳನ್ನು ದಾರಿಹೋಕರಿಗೆ ಕೊಡುವ ತಾತ್ಕಾಲಿಕ ಧರ್ಮಶಾಲೆ.

**ಅಱ(ರ)(ಂ)ಬು** = ಅಱುಂಬು.

**ಅಱ(ರ)(ಂ)ಬೆ** = ಅಱಮೆ.

**ಅಱ(ರ)ಕೆ** (ನಾ). ೧. ಹುಡುಕುವುದು. ೨. ಬಯಕೆ. ೩. ಬಾಯಾರಿಕೆ. ೪. ಕೊರತೆ.

**ಅಱ(ರ)ಚು** = ಅಱುಚು.

**ಅಱ(ರ)ಮೆ(ವೆ)** (ನಾ). ಅಜೀರ್ಣ.

**ಅಱ(ರ)ಲ್(ಲು)** (ನಾ). ೧. ಬತ್ತಿಹೋಗುವುದು. ೨. ಬಾಯಾರಿಕೆ.

**ಅಱ(ರ)ಸು** (ಕ್ರಿ). ೧. ಹುಡುಕು. (ನಾ). ೨. ಹುಡುಕುವಿಕೆ; ಅನ್ವೇಷಣೆ.

**ಅಱಿ(ರಿ)** (ಕ್ರಿ). ತಿಳಿ; ಕಲಿ. ~ಅ(ಯ)ಮೆ =೧. ಅಜ್ಞಾನ. ೨. ಅಜ್ಞಾನದಿಂದ ಮಾಡಿದ ಕೆಲಸ. ~ಕು(ಗು)ಱಿ(ರಿ) = ಜ್ಞಾನದಲ್ಲಿ ಕುರಿಯಂತಿರುವವನು; ದಡ್ಡ. ~ಪ(ವ)ಗೆ = ಜ್ಞಾನಕ್ಕೆ ವೈರಿ; ದಡ್ಡ.

**ಅಱಿ(ರಿ)ಕೆ** (ನಾ). ೧. ತಿಳಿವಳಿಕೆ. ೨. ಕೀರ್ತಿ. ೩. ಬಳಕೆ. ೪. ಆಸೆ. ೫. ವಿಜ್ಞಾಪನೆ. ~ಕಾ(ಗಾ)ಳಗ= ಪ್ರಸಿದ್ಧವಾದ ಯುದ್ಧ.

**ಅಱಿಚು** = ಅಱುಚು.

**ಅಱಿ(ರಿ)ತ** (ನಾ). ತಿಳಿವಳಿಕೆ.

**ಅಱಿ(ರಿ)ಪು(ಹು)** (ಕ್ರಿ). ತಿಳಿಸು.

**ಅಱಿ(ರಿ)ಲ್(ಲು)** (ನಾ). ೧. ನಕ್ಷತ್ರ. ೨. = ಅಳಿಱ್. ~ಬ(ವ)ಟ್ಟೆ = ನಕ್ಷತ್ರ ಮಾರ್ಗ; ಆಕಾಶ.

**ಅಱಿ(ರಿ)ವು** (ನಾ). ತಿಳಿವಳಿಕೆ.

**ಅಱು(ರು)** (ಕ್ರಿ).೧. ಒಣಗು; ಬತ್ತು. (ನಾ). ೨. ಸ್ನೇಹ. ೩. ಆರು ಎಂಬ ಸಂಖ್ಯೆಗೆ ಸಮಾಸದ ಪೂರ್ವಪದದಲ್ಲಿ ವಿಕಲ್ಪತೆಯಿಂದ ಒದಗುವ ರೂಪ.~ಕೆ(ಗೆ)ಱೆ(ರೆ) = ಬತ್ತಿದ ಕೆರೆ.~ಪ(ವ)ಗೆ =ಅರಿಷಡ್ವರ್ಗ; ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ ಗಳೆಂಬ ಆರುಶತ್ರುಗಳು. ~ಮೊಗ = ಆರುಮುಖಗಳುಳ್ಳವನು; ಷಣ್ಮುಖ.

**ಅಱು(ರು)(ಂ)ಬು** (ನಾ). ೧. ಕ್ಷಾಮ. ೨. ಬತ್ತಿದ ಕಾಲುವೆ. ~ನೀರ್ = ಬತ್ತಿದ ಹಳ್ಳದಲ್ಲಿ ತೋಡಿದಾಗ ಬರುವ ನೀರು.

**ಅಱು(ರು)ಚು** (ಕ್ರಿ). ಗಟ್ಟಿಯಾಗಿ ಕೂಗಿಕೊಳ್ಳು.

**ಅಱು(ರು)ಪು** = ಅಱಿಪು.

**ಅಱು(ರು)ಮೆ** (ನಾ). ೧. ಪ್ರೀತಿ; ಮುದ್ದು. ೨. ಆರುಸಲ.

**ಅಱು(ರು)ವೆ** (ನಾ). ಬಟ್ಟೆ.

**ಅ(ಱೆ)ರೆ** (ಕ್ರಿ). ೧. ಒಣಗು. ೨. ಪೆಟ್ಟು ಹಾಕು. (ನಾ). ೩.ಹೊಡೆತ. ೪.ಕಲ್ಲುಬಂಡೆ. ~ಅ(ಯ)ಟ್ಟು = ೧. ಬೆನ್ನಟ್ಟಿಹೋಗು. ೨. ಹೊಡೆದೋಡಿಸು. ~ಕ(ಗ)ಲ್ = ಕಲ್ಲುಬಂಡೆ. ~ಪೊ(ವೊ)ಯ್ = ೧. ಅಪ್ಪಳಿಸಿ ಹೊಡೆ. ೨. ಬಲವಾದ ಹೊಡೆತ.

**ಅರ್ಕ** (ನಾ). ೧. ಬಟ್ಟೆಯಿಳಿಸುವುದು. ೨. ಸೂರ್ಯ. ೩. ತಾಮ್ರ. ೪. ಲೋಹ. ೫. ಪ್ರಭೆ; ಕಿರಣ. ೬. ಸ್ಫಟಿಕದ ಹರಳು. ೭. ಇಂದ್ರ. ೮. ಕಲ್ಪವೃಕ್ಷ. ೯.ಎಕ್ಕದ ಗಿಡ. ೧೦. ವೈಚಿತ್ರ್ಯ; ಆಶ್ಚರ್ಯ. ೧೧. ತಂಬಿಗೆ.

**ಅರ್ಕಜ** (ನಾ). ೧. ಶನಿ. ೨. ಕರ್ಣ. ೩. ಯಮ. ೪. ಸುಗ್ರೀವ.

**ಅರ್ಕಜೆ** (ನಾ). ಯಮುನಾ ನದಿ.

**ಅರ್ಕಮೆ** = ಅಟ್ಕಮೆ.

**ಅರ್ಕಱು** = ಅಟ್ಕಱ್.

**ಅರ್ಕಾಡು** = ಅಟ್ಕಾಡು.

**ಅರ್ಕೆ** = ಅಟ್ಕೆ.

**ಅರ್ಗಲ(ಳ)** (ನಾ). ೧. ಅಗಳಿ; ತಾಪಾಳ. ೨.ಶ್ರೇಷ್ಠನಾದವನು. ~ಇಸು= ಹೆಚ್ಚಾಗು; ಹಿರಿದಾಗು.

**ಅರ್ಘ** (ನಾ). ೧. ಬೆಲೆ; ಕ್ರಯ. ೨. ಪೂಜಾದ್ರವ್ಯ.

**ಅರ್ಘ್ಯ** (ನಾ). ೧. ದೇವತೆಗಳಿಗೂ ಪೂಜ್ಯರಿಗೂ ಕೈತೊಳೆಯಲು ಕೊಡುವ ನೀರು.

೨. ಬೆಲೆ. (ಗು). ೩. ಬೆಲೆಬಾಳುವ; ಬಹಳ ಬೆಲೆಯು. ೪. ಪೂಜ್ಯವಾದ.

**ಅರ್ಚಕ** (ನಾ). ೧. ಪೂಜೆ ಮಾಡುವವನು. ೨. ಪೂಜಾರಿ.

**ಅರ್ಚನ** (ನಾ). ಪೂಜೆ; ಸತ್ಕಾರ.

**ಅರ್ಚಿ** (ನಾ). ೧. ಜ್ವಾಲೆ. ೨. ಕಾಂತಿ; ಕಿರಣ.

**ಅರ್ಚೆ** (ನಾ). ೧. ಪೂಜೆ; ಆರಾಧನೆ. ೨. ಮೂರ್ತಿ; ವಿಗ್ರಹ. ~ಇಸು = ಪೂಜಿಸು; ಆರಾಧಿಸು; ಗೌರವಿಸು.

**ಅರ್ಜಿ** (ನಾ). ಅರಿಕೆ; ಪ್ರಾರ್ಥನಾಪತ್ರ. ~ದಾರ = ಅರಿಕೆ ಮಾಡಿಕೊಳ್ಳುವವನು; ಅರ್ಜಿಯನ್ನು ಕೊಟ್ಟವನು.

**ಅರ್ಜಿಸು** (ಕ್ರಿ). ಸಂಪಾದಿಸು; ಗಳಿಸು.

**ಅರ್ಜುನ** (ನಾ). ೧. ಬೆಳ್ಳಗಿರುವುದು. ೨. ಮತ್ತಿ ಮರ. ೩. ತೃಣ; ಹುಲ್ಲು. ೪. ಒಂದು ಬಗೆಯ ನೇತ್ರರೋಗ. ೫. ಪಾಂಡವರಲ್ಲಿ ಒಬ್ಬ.

**ಅರ್ಣ** (ನಾ). ೧. ನೀರು; ಪ್ರವಾಹ. ೨. ಅಕ್ಷರ. ೩. ತೇಗದ ಮರ.

**ಅರ್ಣವ** (ನಾ). ಸಮುದ್ರ.

**ಅರ್ತಿ** ೧. = ಅಟ್ತು. ೨. ಚೀಲ. ೩. ನೋವು; ವ್ಯಥೆ. ೪. ಬಿಲ್ಲಿನ ಕೊಪ್ಪು. ~ಇಸು = ೧. ಬಯಸು; ಅಪೇಕ್ಷಿಸು. ೨. ಬೇಡು; ಯಾಚಿಸು.

**ಅರ್ಥ** (ನಾ). ೧. ಶಬ್ದದ ಅಭಿಪ್ರಾಯ. ೨. ದ್ರವ್ಯ. ೩. ವಿಷಯ; ಉದ್ದೇಶ. ೪. ಕೋರಿಕೆ. ~ಪತಿ = ೧. ರಾಜ. ೨. ಕುಬೇರ. ~ಶಾಸ್ತ್ರ = ೧. ರಾಜನೀತಿ; ದಂಡನೀತಿ. ೨. ಹಣಕಾಸಿನ ವ್ಯವಹಾರವನ್ನು ತಿಳಿಸುವ ಶಾಸ್ತ್ರ.

**ಅರ್ಥಿ** ೧. = ಅಟ್ತು. ೨. ಯಾಚಕ. ೩. ಸೇವಕ. ೪. ವಾದಿ. ~ಪ(ವ)ಡು = ಅಟ್ತುವಡು.

**ಅರ್ದಿಸು** (ಕ್ರಿ). ೧. ಮರ್ದಿಸು; ಹಿಂಸಿಸು; ನೋಯಿಸು. ೨. ಸೋಲಿಸು; ಅಡಗಿಸು.

**ಅರ್ದು** = ಅಟ್ದು.

**ಅರ್ಧ** (ನಾ.) ೧. ಎರಡು ಸಮಪಾಲುಗಳಲ್ಲಿ ಒಂದು. ೨. ಒಂದು ಅಂಶ. ~ಇಸು = ಅರ್ಧಕ್ಕೆ ಕತ್ತರಿಸು; ಎರಡು ಸಮಪಾಲು ಮಾಡು. ~ಗುಚ್ಛ = ಇಪ್ಪತ್ತುನಾಲ್ಕು ಎಳೆಗಳುಳ್ಳ ಹಾರ. ~ನಾರಿ = ೧. ಪಾರ್ಶ್ವ ವಾಯು; ಲಕ್ವ. ೨. ಅರ್ಧ ಹೆಣ್ಣಾಗಿರುವಿಕೆ. ~ಮಾಣವಕ = ಹನ್ನೆರಡು ಎಳೆಗಳುಳ್ಳ ಮುತ್ತಿನ ಹಾರ.

**ಅರ್ಪಣ(ಣೆ)** (ನಾ). ೧. ಒಪ್ಪಿಸುವುದು. ೨. ಹುದುಗಿಸುವುದು. ೩. ಅಳವಡಿಸುವುದು. ೪. ಹಿಂತಿರುಗಿ ಕೊಡುವುದು.

**ಅರ್ಬುದ** ೧. = ಅದ್ಭುತ. ೨. ಹಾವು. ೩. ಒಂದು ಬಗೆಯ ವ್ರಣರೋಗ; ಕ್ಯಾನ್ಸರ್. ೪. ಹಲ್ಲುಬೇನೆ. ೫. ಕಣ್ಣಿನ ಒಂದು ರೋಗ. ೬. ಹತ್ತುಕೋಟಿ.

**ಅರ್ಭಕ** (ನಾ). ೧. ಸಣ್ಣದು; ಚಿಕ್ಕದು. ೨. ಮೊಲೆಗೂಸು; ಎಳೆಯ ಕೂಸು.

**ಅರ್ಭಾಟ** (ನಾ). ೧. ಆರ್ಭಟ. ೨. ಸಡಗರ. ೩. ಅತ್ಯುತ್ತಮ.

**ಅರ್ಯ** (ನಾ). ೧. ಯಜಮಾನ; ಸ್ವಾಮಿ. ೨. ವೈಶ್ಯ.

**ಅರ್ಯಮ** (ನಾ). ೧. ಪಿತೃದೇವತೆಗಳ ಪ್ರಮುಖ. ೨. ಸೂರ್ಯ.

**ಅರ್ವ** (ನಾ). ೧. ಹೀನ; ನೀಚ. ೨. ಕುದುರೆ.

**ಅರ್ವಾಚೀನ** (ಗು). ಇತ್ತೀಚಿನ; ಹೊಸದಾದ.

**ಅರ್ವಿ(ಬಿ)** (ನಾ). ಬೆಟ್ಟದಿಂದ ಬೀಳುವ ನದಿ; ಜಲಪಾತ.

**ಅರ್ವಿಸು** (ಕ್ರಿ). ೧. ಸುಡು. ೨. ವ್ಯಾಪಿಸು; ಅಧಿಕವಾಗು. ೩. ಹೆದರಿಸು. ೪. ಭಯಪಡು.

**ಅರ್ವು** ೧. = ಅಟ್ವು. (ನಾ). ೨. ಅತಿಶಯ. ~ಪಡೆ = ಅತಿಶಯವನ್ನು ಹೊಂದು.

**ಅರ್ಹ** (ನಾ). ೧. ತೀರ್ಥಂಕರ. ೨. ಬುದ್ಧ. ೩. ಹಕ್ಕುಳ್ಳವನು. ೪. ಶಕ್ತ; ಸಮರ್ಥ.

(ಗು). ೫. ತಕ್ಕುದಾದ; ಯೋಗ್ಯವಾದ. ೬. ಬೆಲೆ ಬಾಳುವ.

**ಅರ್ಹ(ಂ)ತ** (ನಾ). ೧. ತೀರ್ಥಂಕರ. ೨. ಬುದ್ಧ.

**ಅಲ(ಳ)ಂಕರಣ** (ನಾ). ೧. ಅಲಂಕಾರ ಮಾಡುವುದು. ೨. ಒಡವೆ; ಆಭರಣ.

**ಅಲ(ಳ)ಂಕಾರ** (ನಾ). ೧. ಒಡವೆ; ಆಭರಣ. ೨. ಭೂಷಣಪ್ರಾಯ. ೩. ಸೊಗಸು. ೪. ಕಾವ್ಯದ ಸೊಗಸನ್ನು ಹೆಚ್ಚಿಸುವ ಶಬ್ದಾರ್ಥ ವೈಚಿತ್ರ್ಯ.

**ಅಲಂಘ್ಯ** (ಗು). ದಾಟಲಾಗದ; ಮೀರಬಾರದ.

**ಅಲಂಪು** (ನಾ). ೧. ಪ್ರೀತಿ; ಸಂತೋಷ. ೨. ಸೊಗಸು. ೩. ಉತ್ಕಟವಾದ ಇಚ್ಛೆ. ೪. ಅತಿಶಯ; ಮೇಲ್ಮೆ. ~**ಇಕ್ಕು** = ಬಳಿ; ಸವರು; ಲೇಪಿಸು. ~**ಕಾ(ಗಾ)ಱ(ರ)** = ಸೊಗಸುಗಾರ. ~**ಕೊಳ್** = ಸಿಂಗರಿಸಿಕೊಳ್ಳು.

**ಅಲಂಬು** = ಅಲುಂಬು.

**ಅಲ(ಳ)ಕ** (ನಾ). ೧. ಮುಂಗುರುಳು; ಗುಂಗುರು ಕೂದಲು. ೨. ಹುಚ್ಚುನಾಯಿ. ೩. ಬೇಟೆಯ ನಾಯಿ.

**ಅಲಕು** ೧. = ಅಲುಗು. (ನಾ). ೨. ಹಲುಬೆ. ೩. ಹೆಣೆದ ತೆಂಗಿನ ಗರಿ.

**ಅಲ(ಳ)ಕೆ** (ನಾ). ೧. ಕುಬೇರನ ರಾಜಧಾನಿ; ಅಳಕಾನಗರ. ೨. ಎಂಟರಿಂದ ಹತ್ತು ವರ್ಷದೊಳಗಿನ ವಯಸ್ಸಿನ ಹುಡುಗಿ.

**ಅಲಕ್ತಕ** (ನಾ). ಅರಗು.

**ಅಲಕ್ಷ್ಯ** (ನಾ). ೧. ಲಕ್ಷ್ಯವಿಲ್ಲದಿರುವುದು; ಕಡೆಗಣಿಸುವುದು. (ಗು). ೨. ಕಾಣಲಾಗದ; ಗಮನಕ್ಕೆ ಬಾರದ.

**ಅಲಗರ್ಜಿ** (ನಾ). ಅಜಾಗರೂಕತೆ.

**ಅಲಗು** ೧. = ಅಲುಗು. (ನಾ). ೨. ಆಯುಧದ ಅಂಚು. ೩. ಖಡ್ಗ. ೪. ಬಾಣ.

**ಅಲತಗೆ** (ನಾ). ಅರಗಿನ ರಸ.

**ಅಲಪಾಟು** (ನಾ). ೧. ಅಲೆದಾಟ. ೨. ಆಯಾಸ; ದಣಿವು.

**ಅಲಬು** (ನಾ). ಒಂದು ಜಾತಿಯ ಹುಲ್ಲು.

**ಅಲರ್(ರು)** (ಕ್ರಿ). ೧. ವಿಕಾಸವಾಗು; ಅಗಲವಾಗು. (ನಾ). ೨. ಹೂವು; ಪುಷ್ಪ. ~**ಅಂಬು** = ಹೂವಿನ ಬಾಣ. ~**ಆಗು** = ಹೂ ಬಿಡು. ~**ಉಣಿ** = ದುಂಬಿ.

**ಅಲರಂಬ** (ನಾ). ಹೂಬಾಣಗಳುಳ್ಳವನು; ಮನ್ಮಥ.

**ಅಲಱು(ರು)** (ಕ್ರಿ). ಚದುರು; ಹಾಳಾಗು; ಒಡೆ.

**ಅಲ(ಳ)ರ್ಕ** (ನಾ). ೧. ರೇಗಿದ ನಾಯಿ. ೨. ಹುಚ್ಚುನಾಯಿ. ೩. ಬಿಳಿಯ ಎಕ್ಕೆಯ ಗಿಡ.

**ಅಲರ್ಚು** (ಕ್ರಿ). ೧. ಅರಳುವಂತೆ ಮಾಡು. ೨. ಚದುರಿಸು.

**ಅಲವರಿಕೆ** (ನಾ). ೧. ಆಯಾಸ; ಕ್ಲೇಶ. ೨. ಆಸೆ.

**ಅಲವರಿಸು** (ಕ್ರಿ). ಆಸೆಪಡು; ಹಾತೊರೆ.

**ಅಲವಱು(ರು)** (ಕ್ರಿ). ೧. ಸಂಕಟಪಡು; ದುಃಖಪಡು. ೨. ಹೆಚ್ಚು ಆಸೆಪಡು; ಹಂಬಲಿಸು. ೩. ಕಷ್ಟಪಡು.

**ಅಲವಲಕೆ** = ಅಲವರಿಕೆ.

**ಅಲವಲಸು** = ಅಲವರಿಸು.

**ಅಲಸ** (ನಾ). ೧. ಸೋಮಾರಿ; ಆಲಸ್ಯವುಳ್ಳವನು. ೨. ಸೋಮಾರಿತನ; ಆಲಸ್ಯ. ~**ಇಕೆ** = ೧. ಆಯಾಸ; ದಣಿವು; ಬಳಲಿಕೆ. ೨. ಆಲಸ್ಯ; ನಿಧಾನ; ಸಾವಕಾಶ. ೩. ಉದಾಸೀನತೆ; ಅಲಕ್ಷ್ಯ. ೪. ನಿದ್ರೆ; ತೂಕಡಿಕೆ. ~**ಇಗ** = ಸೋಮಾರಿ.

**ಅಲ(ಳ)ಸಂದೆ** (ನಾ). ತಡಗುಣಿಯಂತಹ ಒಂದು ಬಗೆಯ ದ್ವಿದಳಧಾನ್ಯ; ರಾಜಮಾಷ.

**ಅಲಸು** (ಕ್ರಿ). ೧. ಆಯಾಸಗೊಳ್ಳು. ೨. ತಡಮಾಡು; ಉದಾಸೀನಮಾಡು.

೩. ಜಾಲಾಡು; ನೀರಿನಲ್ಲಿ ಚೆನ್ನಾಗಿ ಅಲುಗಾಡಿಸು. (ನಾ). ೪. ಬಳಲಿಕೆ.

**ಅಲಿ(ಳಿ)** (ನಾ). ೧. ತುಂಬಿ; ಭ್ರಮರ. ೨. ಚೇಳು. ೩. ಕಾಗೆ. ೪. ಮದ್ಯ. ~ಕೀರನ್ಯಾಯ = ದುಂಬಿಯನ್ನು ನೇರಳೆ ಹಣ್ಣೆಂದು ಗಿಳಿಯೂ ಗಿಳಿಯ ಕೊಕ್ಕನ್ನು ಹೂವೆಂದು ದುಂಬಿಯೂ ಭ್ರಮಿಸಿ ಮೇಲೆರಗುವುದಕ್ಕೆ ಸಂಬಂಧಿಸಿದ ಒಂದು ನ್ಯಾಯ.

**ಅಲಿಂಜರ** (ನಾ). ನೀರಿನ ಹರವಿ; ಗುಡಾಣ.

**ಅಲಿ(ಳಿ)ಕ** (ನಾ). ಹಣೆ; ನೆತ್ತಿ. ~ಈಕ್ಷಣ = ಶಿವ.

**ಅಲೀ(ಳೀ)ಕ** (ನಾ). ೧. ಅಸತ್ಯ; ಸುಳ್ಳು. ೨. ಕಪಟ; ಮೋಸ; ನಟನೆ. (ಗು). ೩. ಮೆಚ್ಚಲಾಗದ; ಸಂತೋಷಕರವಲ್ಲದ.

**ಅಲುಂಕು** = ಅಲುಗು.

**ಅಲು(ಂ)ಬು** (ಕ್ರಿ). ೧. ನೀರಿನಿಂದ ತೊಳೆ. ೨. ಅಲ್ಲಾಡಿಸು. (ನಾ). ೩. ಕಾಲು ತೊಳೆದ ನೀರು.

**ಅಲುಗು** (ಕ್ರಿ). ೧. ಅಲ್ಲಾಡು; ಕದಲು. ೨. ಅಲ್ಲಾಡಿಸು. (ನಾ). ೩. ಅಲ್ಲಾಟ; ಕಂಪನ.

**ಅಲುಪು** = ಅಱುಪು.

**ಅಲುಮಾರು** = ಅಲ್ಮೈರ.

**ಅಲೆ** (ಕ್ರಿ). ೧. ಸಂಚರಿಸು. ೨. ಗುರಿಯಿಲ್ಲದೆ ತಿರುಗಾಡು. ೩. ಸೋಲಿಸು. ೪. ಪೀಡಿಸು. ೫. ನಿವಾರಿಸು. ೬. ಮೂದಲಿಸು. ೭. ತಾಗು. ೮. ತೊಳೆ. (ನಾ). ೯. ತೊಂದರೆ; ಕಾಟ. ೧೦. ಬೀಸುವಿಕೆ. ೧೧. (ನೀರಿನ) ತೆರೆ; ತರಂಗ. ~ಕಾ(ಗಾ)ರ = ಹಿಂಸೆ ಮಾಡುವವನು. ~ಕುಳಿ = ಅಲೆಮಾರಿ.

**ಅಲೇಖ** (ನಾ). ಬರೆಯುವ ಓಲೆ.

**ಅಲ್ಪ** (ನಾ). ೧. ತುಚ್ಛ; ಹೀನ. (ಗು). ೨. ಸಣ್ಣ; ಕೊಂಚ.

**ಅಲ್ಬತ್** (ಅ). ಅವಶ್ಯವಾಗಿ; ನಿಸ್ಸಂದೇಹವಾಗಿ.

**ಅಲ್ಮೈರ** (ನಾ). ಬೀರು; ಕಪಾಟು.

**ಅಲ್ಲ** (ನಾ). ಹಸಿಯ ಶುಂಠಿ; ಕಾರಗೆಣಸು.

**ಅಲ್ಲಗಳೆ** (ಕ್ರಿ). ೧. ನಿರಾಕರಿಸು. ೨. ಕಡೆಗಣಿಸು.

**ಅಲ್ಲಣಿಗೆ** = ಅಲ್ಲಳಿ.

**ಅಲ್ಲಳಿ** (ನಾ). ಮೇಳ; ವಿನೋದ. ~ಕಾಳೆಗ = ಹುಸಿಕಾಳಗ.

**ಅಲ್ಲಾಡು** (ಕ್ರಿ). ೧. ಚಲಿಸು; ಅಲುಗಾಡು. ೨. ನಡುಗು. ೩. ಅಲ್ಲಾಡಿಸು; ತೂಗಾಡು.

**ಅಲ್ಲು** (ಕ್ರಿ). ೧. ಸೇರಿಸು; ಹೆಣೆ; ನೇಯು. ೨. ಚಲಿಸು.

**ಅಲ್ಲೋಲಕಲ್ಲೋಲ** (ನಾ). ದೊಡ್ಡದೊಡ್ಡ ತೆರೆಗಳು ಏಳುವುದು; ಕ್ಷೋಭೆ.

**ಅವಕರ** (ನಾ). ಕಸ; ಧೂಳು.

**ಅವಕಾಶ** (ನಾ). ೧. ಅಂತರ. ೨. ಪುರುಸತ್ತು; ಬಿಡುವು. ೩. ಅನುಕೂಲಸಂದರ್ಭ; ಸೌಕರ್ಯ.

**ಅವಕಿಲ(ಳ)** (ನಾ). ಕೆಸರು; ರೊಚ್ಚು.

**ಅವಕೀರ್ಣ** (ಗು). ೧. ಎರಚಿದ; ಕೆದರಿದ. ೨. ತುಂಬಿದ. ೩. ಬಿಟ್ಟ.

**ಅವಕುಂಚಿತ** (ಗು). ಬಾಗಿದ; ಮುದುಡಿದ.

**ಅವಕುಂಠನ** (ನಾ). ೧. ಮುಖ ಪರದೆ; ಮೇಲುಮುಸುಕು. ೨. ಸುತ್ತುಗಟ್ಟುವುದು; ಆವರಿಸುವುದು.

**ಅವಕ್ರಯ** (ನಾ). ೧. ಬಾಡಿಗೆ. ೨. ಬೆಲೆ; ಕ್ರಯ. ೩. ಕೂಲಿ. ೪. ಬಾಡಿಗೆಗಾಗಿ ಕೊಡುವುದು.

**ಅವಗಡ** (ನಾ). ೧. ತೊಂದರೆ; ಅಪಘಾತ. ೨. ಸಾಹಸ; ಪರಾಕ್ರಮ. ೩. ಅಸಾಧ್ಯವಾದುದು. ೪. ಭಯಂಕರವಾದುದು. ~ಇಸು = ೧. ಕಡೆಗಣಿಸು; ಹೀಯಾಳಿಸು. ೨. ಭಂಗಿಸು; ಸೋಲಿಸು.

**ಅವಗಡೆಯ** (ನಾ). ೧. ಸಾಹಸಿ. ೨. ತೊಂದರೆ;

ಅಪಾಯ. (ಗು). ೩. ಭಯಂಕರವಾದ; ರೌದ್ರವಾದ.
**ಅವಗತ** (ಗು). ೧. ಹೊರಟುಹೋದ; ಕಳೆದುಹೋದ. ೨. ಚೆನ್ನಾಗಿ ತಿಳಿದುಕೊಂಡ. ~ಅ(ವಾ)ಗು = ೧. ಲೀನವಾಗು; ಐಕ್ಯವಾಗು. ೨. ಗೊತ್ತಾಗು; ತಿಳಿದುಬರು.
**ಅವಗತಿ** (ನಾ). ಜ್ಞಾನ; ತಿಳಿವಳಿಕೆ.
**ಅವಗಯಿಸು** (ಕ್ರಿ). ೧. ಗ್ರಹಿಸು; ಪಡೆ; ಹೊಂದು. ೨. ತೋರಿಸು; ಪ್ರದರ್ಶಿಸು. ೩. ತಿರಸ್ಕರಿಸು; ಪರಿಹಾಸ ಮಾಡು. ೪. = ಅವಗಹಿಸು.
**ಅವಗವಿಸು** = ಅವಗಹಿಸು.
**ಅವಗಹಿಸು** (ಕ್ರಿ). ೧. ಒಳಹೊಗು; ಲೀನವಾಗು. ೨. = ಅವಗ್ರಹಿಸು.
**ಅವಗಱ(ಳಿ)** (ನಾ). ಅತಿಶಯ; ಆಧಿಕ್ಯ. ~ಇಸು = ಉರವಣಿಸು; ಅತಿಶಯವಾಗು.
**ಅವಗಱ(ಳಿ)ಯ** (ನಾ). ೧. ರಭಸದಿಂದ ನುಗ್ಗುವ ಸ್ವಭಾವ. ೨. ಅತಿಶಯ; ಆಧಿಕ. ೩. ಪರಿಕರ.
**ಅವಗಾಹ** (ನಾ). ೧. ಮುಳುಗುವುದು. ೨. ಮುಳುಗಿ ಸ್ನಾನ ಮಾಡುವುದು. ೩. ನೀರಿನ ದೋಣಿ. ೪. ಆಳ. ~ಇಸು = ೧. ಮುಳುಗಿ ಸ್ನಾನಮಾಡು. ೨. ವ್ಯಾಪಿಸು; ಹರಡು. ೩. ಚೆನ್ನಾಗಿ ತಿಳಿ.
**ಅವಗಾಹನ** = ಅವಗಾಹ.
**ಅವಗೀತ** (ಗು). ೧. ತಪ್ಪುತಪ್ಪಾಗಿ ಹಾಡಿದ. ೨. ನಿಂದಿಸಿದ. ೩. ಮತ್ತೆ ಕಂಡ.
**ಅವಗುಂಠನ** = ಅವಕುಂಠನ.
**ಅವಗುಣ** (ನಾ). ದುರ್ಗುಣ; ದೋಷ.
**ಅವಗ್ರಹ** (ನಾ). ೧. ಬೇರ್ಪಡಿಸುವುದು. ೨. ಅಡ್ಡಿ. ೩. ಹತೋಟಿ. ೪. ಅನಾವೃಷ್ಟಿ. ೫. ಆನೆಯ ಹಣೆ. ೬. ಬೈಗಳಿನ ಮಾತು. ~ಇಸು = ೧. ಹಿಡಿ; ಆಕ್ರಮಿಸು. ೨. ಆವರಿಸು. ೩. ಸ್ವೀಕರಿಸು.
**ಅವಘಡ** = ಅವಗಡ.
**ಅವಚಯ** (ನಾ). (ಹೂವು, ಹಣ್ಣು ಮೊದಲಾದುವನ್ನು) ಕೊಯ್ಯುವುದು; ಬಿಡಿಸುವುದು.
**ಅವಚಱು(ರು)** (ಕ್ರಿ). ೧. ಬೇಸರಪಡು; ಜುಗುಪ್ಸೆಪಡು. (ನಾ). ೨. ಬೇಸರ; ಜುಗುಪ್ಸೆ.
**ಅವಚು** ೧. = ಅವುಚು. ೨. = ಅವಚಱು.
**ಅವಚ್ಛನ್ನ**(ಗು). ಮುಚ್ಚಲ್ಪಟ್ಟ; ಆವೃತವಾದ.
**ಅವಚ್ಛಿನ್ನ** (ಗು). ೧. ಕತ್ತರಿಸಲ್ಪಟ್ಟ; ಮುರಿದ. ೨. ನಿಶ್ಚಿತವಾದ. ೩. ವಿಲಕ್ಷಣವಾದ.
**ಅವಚ್ಛೇದ** (ನಾ). ೧. ಕತ್ತರಿಸುವುದು. ೨. ಕತ್ತರಿಸಿದ ಭಾಗ. ೩. ಎಲ್ಲೆ; ಮೇರೆ.
**ಅವಜ್ಞತೆ** (ನಾ). ಕಡೆಗಣಿಸುವುದು; ಅಲಕ್ಷ್ಯ.
**ಅವಜ್ಞೆ** = ಅವಜ್ಞತೆ.
**ಅವಟ** (ನಾ). ಹಳ್ಳ; ಕುಳಿ; ರಂಧ್ರ.
**ಅವಟಯಿಸು** (ಕ್ರಿ). ೧. ಕೊಡು; ಒಪ್ಪಿಸು. ೨. ಒದಗಿಸು. ೩. ಒಟ್ಟಾಗು. ೪. ಹರಡು. ೫. ಆದರಿಸು.
**ಅವಟು** (ನಾ). ೧. ಕೊರಳಿನ ಹಿಂಭಾಗ; ಹೆಕ್ಕತ್ತು. ೨. ಗುಳಿ; ಬಿಲ.
**ಅವಡೀನ** (ನಾ). (ಪಕ್ಷಿಗಳಂತೆ) ಹಾರುತ್ತ ಕೆಳಕ್ಕೆ ಇಳಿಯುವುದು.
**ಅವಡುಸವಡು** (ನಾ). ೧. ಪೂರ್ತಿಯಾಗಿ ನುರಿಯದಿರುವುದು. ೨. ಅವ್ಯವಸ್ಥೆ; ಗಡಿಬಿಡಿ. ೩. ಬೆರಕೆ; ಮಿಶ್ರ.
**ಅವಣ** (ನಾ). ೧. ರಕ್ಷಣೆ. ೨. ತೃಪ್ತಿ. ~ಜವಣ = ಸಂರಕ್ಷಣೆ ಮತ್ತು ಆಹಾರ.
**ಅವತಂಸ** (ನಾ). ೧. ಆಭರಣ. ೨. ಹೂ ಮಾಲೆ.
**ಅವತರ** = ಅವತಾರ. ~ಇಸು = ೧. ಇಳಿದು ಬರು. ೨. ಅವತಾರ ಮಾಡು. ೩. ಉಂಟಾಗು. ೪. ಇಳಿಸು. ೫. ಬೇರೊಬ್ಬರ ಮಾತನ್ನು ಉದ್ಧರಿಸು.
**ಅವತರಣ** (ನಾ). ೧. ಇಳಿಯುವುದು.

೨. ಅವತಾರ. ೩. ಸೋಪಾನ. ೪. ದಾಟು ವುದು.

**ಅವತರಣಿಕೆ** (ನಾ). ೧. ಗ್ರಂಥದ ಪೀಠಿಕೆ; ಪ್ರಸ್ತಾವನೆ. ೨. ಬೇರೊಂದು ಗ್ರಂಥದಿಂದ ಉದ್ಧರಿಸಿ ಹೇಳುವ ವಿಷಯ.

**ಅವತಾರ** (ನಾ). ೧. ಕೆಳಕ್ಕೆ ಇಳಿಯುವುದು. ೨. ದೇವತೆಗಳು ಭೂಮಿಯ ಮೇಲೆ ಹುಟ್ಟುವುದು. ೩. ನಿರೂಪಣೆ. ೪. ಹತ್ತು ಎಂಬ ಸಂಖ್ಯೆ. ೫. ವೇಷ; ರೂಪ.

**ಅವತೀರ್ಣ** (ಗು). ೧. ಇಳಿದ; ಇಳಿಸಲ್ಪಟ್ಟ. ೨. ದಾಟಿದ; ಹಾದುಹೋದ. ೩. ಭಾಷಾಂತರಿಸಲ್ಪಟ್ಟ.

**ಅವತೆ** (ನಾ). ಸಂಕಟದ ಸ್ಥಿತಿ; ದುರ್ದೆಸೆ; ದುರವಸ್ಥೆ.

**ಅವತೋಕೆ** (ನಾ). ಕಂದುಹಾಕಿದ ಹಸು; ಗರ್ಭಸ್ರಾವವಾದ ಆಕಳು.

**ಅವದಂಶ** (ನಾ). ಮದ್ಯಪಾನದ ನಡುವೆ ರುಚಿಯನ್ನು ಹೆಚ್ಚಿಸಿಕೊಳ್ಳಲು ನಂಜಿ ಕೊಳ್ಳುವ ಮಾಂಸ, ಉಪ್ಪಿನಕಾಯಿ ಮುಂತಾದ ಪದಾರ್ಥ; ಚಾಕಣ.

**ಅವದಾತ** (ಗು). ೧. ಬಿಳಿದಾದ. ೨. ಹಳದಿ ಯಾದ. ೩. ಪರಿಶುದ್ಧವಾದ.

**ಅವದಾನ** (ನಾ). ೧. ಪ್ರಶಸ್ತವಾದ ಕೆಲಸ. ೨. ನೆರವೇರಿಸಿದ ಕೆಲಸ. ೩. ಪರಾಕ್ರಮ; ಶೌರ್ಯ.

**ಅವದಾರಣ** (ನಾ). ೧. ಸೀಳುವುದು; ಭೇದಿಸು ವುದು. ೨. ಕೈಗುದ್ದಲಿ; ಪಿಕಾಸಿ.

**ಅವದ್ಯ** (ಗು). ನಿಂದ್ಯವಾದ; ಹೀನವಾದ.

**ಅವಧರಿಸು** (ಕ್ರಿ). ಮನಸ್ಸಿಟ್ಟು ಕೇಳು; ಚಿತ್ತಯಿಸು.

**ಅವಧಾನ** (ನಾ). ೧. ಗಮನಿಸುವಿಕೆ; ಲಕ್ಷಿಸುವುದು. ೨. ನೆನಪಿನಲ್ಲಿಟ್ಟುಕೊಳ್ಳು ವುದು. ೩. ಎಚ್ಚರಿಕೆ.

**ಅವಧಾನಿ** (ನಾ). ೧. ಸ್ಮರಣಶಕ್ತಿ ಚೆನ್ನಾಗಿರು ವವನು. ೨. ವೇದಾದಿಗಳನ್ನು ಅಧ್ಯಯನ ಮಾಡಿದವನು.

**ಅವಧಾರಣ(ಣೆ)** (ನಾ). ೧. ನಿಶ್ಚಯ; ನಿರ್ಣಯ. ೨. ಒತ್ತಿ ಹೇಳುವುದು.

**ಅವಧಾರು** (ನಾ). ದೇವತೆ, ಗುರು, ರಾಜ, ಹಿರಿಯ ಮೊದಲಾದವರ ಗಮನವನ್ನು ಸೆಳೆಯಲು ಬಳಸುವ ಮಾತು. ~ಇಸು = ೧. ಲಕ್ಷ್ಯದಲ್ಲಿಡು; ಮನಸ್ಸಿಗೆ ತಂದು ಕೊಳ್ಳು. ೨. ಸೈರಿಸು.

**ಅವಧಿ** (ನಾ). ೧. ಗಡು; ಮೇರೆ. ೨. ಬಲ. ೩. ಅವಕಾಶ. ೪. ರಂಧ್ರ; ತೂತು.

**ಅವಧೀರಣ** (ನಾ). ತಿರಸ್ಕಾರ.

**ಅವಧೂತ** (ನಾ). ೧. ಎಲ್ಲ ಬಗೆಯ ಅಭಿಮಾನ ವನ್ನೂ ತಳ್ಳಿಹಾಕಿದವನು. (ಗು). ೨. ತಳ್ಳಲ್ಪಟ್ಟ.

**ಅವನ** (ನಾ). ೧. ಸಂರಕ್ಷಣೆ. ೨. ಸಂತೋಷ. ೩. ತೃಪ್ತಿಪಡಿಸುವುದು. ೪. ಬಯಕೆ. ೫. ಅನುಗ್ರಹ. ೬. ವೇಗ. ೭. ಬಾಗುವುದು.

**ಅವನತ** (ನಾ). ೧. ನಮಸ್ಕರಿಸಿದವನು. ೨. ಕೀಳುದೆಸೆಯಲ್ಲಿರುವವನು. (ಗು). ೩. ಬಾಗಿದ; ಬಗ್ಗಿದ; ನಮಸ್ಕರಿಸಿದ. ~ಆಗು = ನಮಸ್ಕರಿಸು.

**ಅವನತಿ** (ನಾ). ೧. ನಮಸ್ಕಾರ. ೨. ಕೀಳುದೆಸೆ.

**ಅವನಿ** (ನಾ). ೧. ಭೂಮಿ. ೨. ಕರಿಬೇವಿನ ಗಿಡ. ೩. ಅಗಸೆ ಮರ.

**ಅವಬೋಧೆ** (ನಾ). ೧. ಎಚ್ಚರಿಕೆಗೊಳ್ಳುವುದು. ೨. ಅರಿವು. ೩. ವಿವೇಕ. ೪. ನಿರ್ಣಯ. ೫. ತರಬೇತು.

**ಅವಬೋಧನ** (ನಾ). ೧. ಎಚ್ಚರಿಸುವುದು. ೨. ತಿಳಿವಳಿಕೆಯನ್ನುಂಟುಮಾಡುವುದು.

**ಅವಭೃಥ** (ನಾ). ಯಾಗದ ಸಮಾಪ್ತಿ. ~ಸವನ = ಅವಭೃಥಸ್ನಾನ. ~ಸ್ನಾನ = ಯಾಗ ಅಥವಾ ಮಂಗಳಕಾರ್ಯ ಮುಗಿದ ಮೇಲೆ ಮಾಡುವ ಸ್ನಾನ.

**ಅವಮರ್ಯಾದೆ** (ನಾ). ಅಗೌರವ; ಮರ್ಯಾದೆಯಿಲ್ಲದುದು.

**ಅವಮಾನ** (ನಾ). ಅಪಮಾನ; ಅಗೌರವ.

**ಅವಯವ** (ನಾ). ೧. ಅಂಗ. ೨. ಭಾಗ. ೩. ಸೌಲಭ್ಯ. ೪. ಉದಾಸೀನತೆ.

**ಅವರ** (ನಾ). ೧. ಆನೆಯ ಹಿಂಗಾಲಿನ ತೊಡೆ. (ಗು). ೨. ಹೀನವಾದ; ಕೆಳದರ್ಜೆಯ. ೩. ಆ ತರುವಾಯದ; ಕಡೆಯ.

**ಅವರಜ** (ನಾ). ತಮ್ಮ.

**ಅವರೆ** (ನಾ). ೧.ಒಂದು ಬಗೆಯ ದ್ವಿದಳಧಾನ್ಯ. ೨. ದೇವ ರಮಣಿ; ಅಪ್ಸರೆ. ~**ಕಾಯಿ** = ಅವರೆಗಿಡದ ಕಾಯಿ.

**ಅವರೋಧ** (ನಾ). ೧. ಅಡ್ಡಿ; ಪ್ರತಿಬಂಧ. ೨. ಅಂತಃಪುರ; ರಾಣಿವಾಸ.

**ಅವರೋಹ** (ನಾ). ೧. ಇಳಿಯುವುದು. ೨. ಬಿಳಲು. ೩. ಮರದ ಬುಡದಿಂದ ತುದಿಯವರೆಗೂ ಹಬ್ಬಿರುವ ಬಳ್ಳಿ.

**ಅವರೋಹಣ** (ನಾ). ಇಳಿಯುವುದು.

**ಅವಜು(ರು)** (ಕ್ರಿ). ಹಲ್ಲಿನಿಂದ ಕಚ್ಚು.

**ಅವರ್ಗೀಯ** (ಗು). ೧. ವರ್ಗಕ್ಕೆ ಸೇರದ. ೨. ಅಕ್ಷರಮಾಲೆಯಲ್ಲಿ ವರ್ಗೀಯ ವ್ಯಂಜನಗಳಲ್ಲದ.

**ಅವರ್ಜ್ಯ** (ಗು). ಬಿಡಲಾಗದ.

**ಅವರ್ಣ** (ನಾ). ೧. ಅ ಮತ್ತು ಆ ಎಂಬ ಅಕ್ಷರ. ೨. ಅಪವಾದ. (ಗು). ೩. ಬಣ್ಣವಿಲ್ಲದ.

**ಅವರ್ತಿ** (ನಾ). ಬಡತನ; ಕಷ್ಟ.

**ಅವಲ್(ಲು)** (ಕ್ರಿ). ೧. ಕುಟ್ಟು. (ನಾ). ೨. ಕುಟ್ಟುವಿಕೆ. ೩. ಅವಲಕ್ಕಿ. ೪. ಭತ್ತ, ಜೋಳ ಮುಂತಾದುವುಗಳ ಪುರಿ. ೫. = ಅವ್ವಲ್.

**ಅವಲ(ಳ)ಂಬ** (ನಾ). ೧. ಆಸರೆ; ಆಶ್ರಯ; ಆಧಾರ. ೨. ನೆಲಹು; ನೆಲವು. ~**ಇಸು** = ೧. ಆಶ್ರಯಿಸು. ೨. (ಕಾವ್ಯದ) ವಸ್ತುವಾಗಿ ಅಥವಾ ವಿಷಯವಾಗಿ ಮಾಡಿಕೊಳ್ಳು. ೩. ಇಳಿಬೀಳು. ೪. ಅನುಸರಿಸು.

**ಅವಲಕ್ಷಣ** (ನಾ). ೧. ಅಶುಭ; ಅಮಂಗಳ. (ಗು). ೨. ಒಳ್ಳೆಯ ರೂಪವಿಲ್ಲದ.

**ಅವಲಗ್ನ** (ನಾ). ೧. ಸೊಂಟ; ನಡು. ೨. ಅಶುಭ ಮುಹೂರ್ತ. (ಗು). ೩.ಸೇರಿದ; ಸೇರಿಕೊಂಡ; ಜೋಡಿಸಿದ.

**ಅವಲಿಪ್ತ** (ನಾ). ೧. ಗರ್ವಿಷ್ಟ; ಅಹಂಕಾರಿ. (ಗು). ೨. ಲೇಪಿಸಿದ; ಬಳಿದ.

**ಅವಲೀಢ** (ಗು). ೧. ವ್ಯಾಪಿಸಲ್ಪಟ್ಟ. ೨. ನೆಕ್ಕಲ್ಪಟ್ಟ.

**ಅವಲೇಪ** (ನಾ). ೧. ಲೇಪನ; ಬಳಿಯುವಿಕೆ. ೨.ದರ್ಪ. ೩.ಮದ; ಸೊಕ್ಕು. ೪.ಅಪವಾದ; ಆರೋಪ.

**ಅವಲೋಕ** = ಅವಲೋಕನ.

**ಅವಲೋಕನ** (ನಾ.) ೧. ನೋಡುವುದು; ದರ್ಶನ. ೨. ಪರಿಶೀಲನೆ; ವಿಮರ್ಶೆ. ೩. ದೃಷ್ಟಿ.

**ಅವಶಕುನ** = ಅಪಶಕುನ.

**ಅವಶಿಷ್ಟ** (ಗು). ಉಳಿದ; ಮಿಕ್ಕ.

**ಅವಶೇಷ** (ನಾ). ಉಳಿದುದು; ಶೇಷ; ಮಿಕ್ಕುದು.

**ಅವಶ್ಯ** (ನಾ). ೧. ಅಗತ್ಯ. (ಗು). ೨.ಹಿಡಿತಕ್ಕೆ ಸಿಕ್ಕದ. ೩. ತಪ್ಪಿಸಲಾಗದ; ಅನಿವಾರ್ಯ.

**ಅವಷ್ಟಂಭ** (ನಾ). ೧. ಆಶ್ರಯ. ೨.ನೆಲೆಯಾಗಿ ನಿಲ್ಲುವುದು. ೩. ಆತ್ಮವಿಶ್ವಾಸ. ೪. ಆರಂಭ. ೫. ಕಂಭ. ೬. ಸೌಂದರ್ಯ. ೭. ಮೇಲ್ಮೆ. ೮. ಚಿನ್ನ. ೯. ಗರ್ವ.

**ಅವಸಥ** (ನಾ). ೧. ವಾಸಸ್ಥಾನ. ೨. ಗ್ರಾಮ. ೩. ಶಾಲೆ.

**ಅವಸರ** (ನಾ). ೧. ಸಮಯ; ಸನ್ನಿವೇಶ. ೨. ಅಗತ್ಯವಾದ ಕಾಲ. ೩. ಅವಕಾಶ. ೪. ಸಂದರ್ಭ. ೫. ಆತುರ. ೬. ಆವಶ್ಯಕತೆ. ೭. ಒಂದು ವರ್ಷ. ೮. ಮಳೆ. ~ಇಸು

೮ ೧. ತ್ವರೆಗೊಳ್ಳು ; ಆತುರಪಡು. ೨. ಆತುರಪಡಿಸು ; ತ್ವರೆಗೊಳಿಸು.

**ಅವಸರ್ಪ** (ನಾ). ಬೇಹುಗಾರ ; ಗೂಢಚಾರ.

**ಅವಸರ್ಪಿಣಿ** (ನಾ). ಇಳಿತಾಯು; ಕುಂದುವುದು.

**ಅವಸಾನ** (ನಾ). ೧. ಕೊನೆ ; ಅಂತ್ಯ. ೨. ಸಾವು ; ಮರಣ.

**ಅವಸ್ಕಂದ** (ನಾ). ೧. ದಾಳಿ ; ಮುತ್ತಿಗೆ. ೨. ಬಿಡಾರ ; ಠಾಣ್ಯ. ೩. ಆರೋಪಣೆ.

**ಅವಸ್ಥೆ** (ನಾ). ೧. ಸ್ಥಿತಿ ; ಸನ್ನಿವೇಶ. ೨. ಮಜಲು ; ಘಟ್ಟ. ೩. ತೊಂದರೆ ; ಕಷ್ಟ.

**ಅವಹಿತ** (ಗು). ೧. ನಿಯೋಜಿಸಿದ. ೨. ಇಡಲ್ಪಟ್ಟ.

**ಅವಹೇಳನ** (ನಾ). ಹೀಯಾಳಿಕೆ ; ಅವಮಾನ.

**ಅವಳಿ** = ಅವುಳ್. **~ಚುಕ್ಕಿ** = ಅಶ್ವಿನೀ ನಕ್ಷತ್ರ. **~ಜವಳಿ** = ೧. ಯಮಳ. ೨. ಒಂದೇ ಹೆರಿಗೆಯಲ್ಲಿ ಹುಟ್ಟಿದ ಎರಡು ಮಕ್ಕಳು.

**ಅವಾಂತರ** (ನಾ). ೧. (ಸೈನ್ಯ, ಯುದ್ಧ, ಮುಂತಾದುವುಗಳಿಂದ ಆಗುವ) ತೊಂದರೆ. ೨. ಗದ್ದಲ ; ಗಡಿಬಿಡಿ. (ಗು). ೩. ನಡುವೆ ಉಂಟಾದ. ೪. ಮುಖ್ಯವಲ್ಲದ.

**ಅವಾಕ್ಕು** (ನಾ). ೧. ಮಾತಿಲ್ಲದಿರುವುದು. ೨. ಮೂಕ. **~ಆಗಿಸು** = ಮಾತನಾಡದಂತೆ ಮಾಡು. **~ಆಗು** = ಮಾತು ಹೊರಡದಂತಾಗು.

**ಅವಾಚ್ಯ** (ನಾ). ೧. ಬೈಗಳು ; ನಿಂದೆ. (ಗು). ೨. ನುಡಿಯಬಾರದ.

**ಅವಾಜು** (ನಾ). ಶಬ್ದ ; ಸದ್ದು.

**ಅವಾಢವ್ಯ** (ಗು). ಅಳತೆ ಮೀರಿದ ; ಭಾರಿಯಾದ.

**ಅವಾರಿ** (ಗು). ಸಂತತವಾಗಿ ನಡೆಯುವ. **~ಸ(ಛ)ತ್ರ** = ಎಡೆಬಿಡದೆ ನಡೆಯುವ ಧರ್ಮಛತ್ರ.

**ಅವಾಸ** (ಗು). ಚೆತ್ತಲೆಯಾದ ; ವಸ್ತ್ರವಿಲ್ಲದ.

**ಅವಿ** (ಕ್ರಿ). ೧. ಅಡಗು ; ಬಚ್ಚಿಟ್ಟುಕೊ. (ನಾ). ೨. ಒಂದು ಅಳತೆ. ೩. ಕುರಿ. ೪. ಮೇಕೆ. ೫. ಸೂರ್ಯ. ೬. ಎಕ್ಕದ ಗಿಡ. ೭. ಬೆಟ್ಟ. ೮. ಗಾಳಿ. ೯. ಮುಟ್ಟಾದ ಹೆಂಗಸು.

**ಅವಿದ್ಧ** (ನಾ). ೧. ಕಿವಿ ಚುಚ್ಚಿಸಿಕೊಳ್ಳದವನು. (ಗು). ೨. ಕಿವಿ ಚುಚ್ಚದ.

**ಅವಿದ್ಯೆ** (ನಾ). ೧. ವಿದ್ಯೆಯಿಲ್ಲದಿರುವುದು ; ಅಜ್ಞಾನ. ೨. ಮಾಯಾಪಂಚಕದಲ್ಲಿ ಒಂದು.

**ಅವಿಧೇಯ** (ಗು). ೧. ನಿಯಮಕ್ಕೆ ಒಳಪಡದ. ೨. ವಿಧೇಯತೆಯಿಲ್ಲದಿರುವ ; ಹೇಳಿದಂತೆ ಕೇಳದ. **~ತನ** = ವಿಧೇಯತೆಯಿಲ್ಲದಿರುವಿಕೆ; ನಿಯಮಕ್ಕೆ ಒಳಪಡದೆ ಇರುವಿಕೆ.

**ಅವಿನಾಭಾವ** (ನಾ). ಒಂದನ್ನೊಂದು ಅಗಲದೆ ಇರುವಿಕೆ.

**ಅವಿನ್ನಾಣ** (ನಾ). ಅಭಿಜ್ಞಾನ ; ಗುರುತು ; ಕುರುಹು.

**ಅವಿಭಕ್ತ** (ಗು). ೧. ವಿಭಾಗವಾಗದ ; ಪಾಲು ಮಾಡದಿರುವ. ೨. ಬೇರೆ ಮಾಡದ ; ಒಂದಾಗಿರುವ. **~ಕುಟುಂಬ** = ವಿಭಾಗವಾಗದೆ ಒಟ್ಟಿಗೆ ಇರುವ ಕುಟುಂಬ.

**ಅವಿಭಾಜ್ಯ** (ಗು). ೧. ವಿಭಾಗಿಸಬಾರದ. ೨. ವಿಭಾಗಿಸಲು ಆಗದ. ೩. ನಿಶ್ಶೇಷವಾಗಿ ಭಾಗಾಹಾರ ಮಾಡಲು ಶಕ್ಯವಿಲ್ಲದ.

**ಅವಿರತ** (ಗು). ಬಿಡುವಿಲ್ಲದ ; ನಿರಂತರವಾದ ; ಒಂದೇ ಸಮನಾದ.

**ಅವಿವೇಕ** (ನಾ). ೧. ವಿವೇಕವಿಲ್ಲದಿರುವುದು ; ತಿಳಿವಳಿಕೆ ಸಾಲದಿರುವುದು. ೨. ಭ್ರಾಂತಿ ; ಅಧ್ಯಾಸ.

**ಅವಿಶ್ರಾಂತ** (ಗು). ೧. ನಿರಂತರವಾದ ; ಎಡೆಬಿಡದ. ೨. ವಿಶ್ರಾಂತಿ ಹೊಂದದ.

**ಅವಿಶ್ವಾಸ** (ನಾ). ವಿಶ್ವಾಸವಿಲ್ಲದಿರುವುದು ; ನಂಬಿಕೆಯಿಲ್ಲದಿರುವುದು.

**ಅವು** (ಕ್ರಿ). ಒನಕೆಯಿಂದ ಕುಟ್ಟು.

**ಅವು(ಂ)ಕು** = ಅಮುಂಕು. **~ಆಟ** = ಒತ್ತಡ; ಅಮುಕುವಿಕೆ.

**ಅವುಂಡು** (ನಾ). ೧. ದವಡೆ. ೨. ಕೆಳತುಟಿ.

**ಅವುಗು** (ನಾ). ಹಾಲುಖೋವದಿಂದ ಮಾಡಿದ ಕಡುಬು.

**ಅವುಟು** (ನಾ). ೧. ಮೂರೂವರೆ. ೨. ಸಿಡಿಮದ್ದನ್ನು ಹಾರಿಸುವ ಸಣ್ಣ ಫಿರಂಗಿ. ೩. ತೋರಿಕೆಯ ಮಾತು.

**ಅವುಡು** (ಕ್ರಿ). ೧. ಹಲ್ಲಿನಿಂದ ಕಚ್ಚು. ೨. ಮೆಲುಕಾಡಿಸು. ೩. = ಅವುಂಡು. ೪. ಕಾಳು; ಅಗಳು. ೫. ಒರಟಾದದ್ದು; ನುರಿಯುದ್ದು.

**ಅವುತಣ** (ನಾ). ೧. ಉತ್ತಮವೂ ರಸಭರಿತವೂ ಆದ ಊಟಕ್ಕೆ ಆಹ್ವಾನ. ೨. ರಸಭರಿತವಾದ ಊಟ.

**ಅವೇಕ್ಷಣ** (ನಾ). ೧. ನೋಡುವುದು. ೨. ಪರಿಶೀಲನೆ; ವಿಮರ್ಶೆ.

**ಅವ್ಯಕ್ತ** (ನಾ). ೧. ಪರಮಾತ್ಮ. ೨. ಶಿವ. ೩. ಕಾಮ. ೪. ಮೂರ್ಖ. ೫. ಚಿನ್ನ. (ಗು). ೬. ಅಸ್ಪಷ್ಟವಾದ.

**ಅವ್ಯಯ** (ನಾ). ೧. ಮೋಕ್ಷ. ೨. ನಿರ್ವಿಕಾರನಾದ ಪರಮಾತ್ಮ. ೩. (ವ್ಯಾಕ) ರೂಪಭೇದ ಹೊಂದದ ಶಬ್ದ. (ಗು). ೪. ನಷ್ಟಹೊಂದದ; ವಿಕಾರವಾಗದ. **~ಪದ** = ಶಾಶ್ವತವಾದ ಸ್ಥಾನ; ಮೋಕ್ಷ.

**ಅವ್ಯವಚ್ಛಿನ್ನ** (ಗು). ಎಡೆಬಿಡದ; ನಡುವೆ ಕತ್ತರಿಸಿಹೋಗದ; ನಿರಂತರವಾದ.

**ಅವ್ಯವಧಾನ** (ನಾ). ೧. ಬಿಡುವಿಲ್ಲದಿರುವುದು; ಸಂತತವಾಗಿರುವುದು. ೨. ಅವಧಾನವಿಲ್ಲದಿರುವುದು; ಅಜಾಗರೂಕತೆ. (ಗು). ೩. ಮುಸುಕಾಗಲಿ, ಮರೆಯಾಗಲಿ ಇಲ್ಲದ.

**ಅವ್ಯಾಜ** (ಗು). ನಿಷ್ಕಪಟವಾದ; ಸಹಜವಾದ.

**ಅವ್ವಡಿಸು** = ಅವ್ವಳಿಸು.

**ಅವ್ವಲ್** (ಗು). ೧. ಉತ್ಕೃಷ್ಟವಾದ. ೨. ನೇರವಾದ.

**ಅವ್ವಳಿಸು** (ಕ್ರಿ). ೧. ಆಕ್ರಮಿಸು. ೨. ಮೀರು. ೩. ಉರವಣಿಸು. ೪. ಪೀಡಿಸು. ೫. ಹಿಂದೆಗೆ.

**ಅವ್ವಾಳಿ** (ನಾ). ಕೈಲಾಗದವನು; ಹೆಣ್ಣಿಗ. **~ತನ** = ಹೆಣ್ಣಿಗತನ; ಅಶಕ್ತತೆ.

**ಅವ್ವೆ(ವ್ವ)** (ನಾ). ೧. ತಾಯಿ. ೨. ರಾಣಿವಾಸದ ದಾಸಿ.

**ಅಶನ** (ನಾ). ೧. ತಿನ್ನುವುದು. ೨. ಆಹಾರ.

**ಅಶನಿ** (ನಾ). ೧. ಸಿಡಿಲು. ೨. ವಜ್ರಾಯುಧ.

**ಅಶರೀರ** (ನಾ). ೧. ಕಾಮ; ಮನ್ಮಥ. ೨. ಆಕಾಶ. (ಗು). ೩. ಶರೀರವಿಲ್ಲದ. **~ಧ್ವನಿ** = ಅಶರೀರವಾಣಿ. **~ವಾಣಿ** = ಶರೀರ ಕಾಣದೆ ಕೇಳಿಬರುವ ಮಾತು; ಆಕಾಶವಾಣಿ.

**ಅಶಿರ** (ನಾ). ೧. ಅಗ್ನಿ. ೨. ಸೂರ್ಯ. ೩. ಗಾಳಿ.

**ಅಶೇಷ** (ಗು). ಶೇಷವಿಲ್ಲದಿರುವ. **~ಸಮಯ** = ೧. ಎಲ್ಲಾ ಸಮಯ. ೨. ಎಲ್ಲಾ ಮತಧರ್ಮ.

**ಅಶೋಕ** (ನಾ). ೧. ದೇವತೆ. ೨. ಸಂನ್ಯಾಸಿ. ೩. ಮೌರ್ಯವಂಶದ ಒಬ್ಬ ರಾಜ. ೪. ಒಂದು ಜಾತಿಯ ಮರ. (ಗು). ೫. ದುಃಖವಿಲ್ಲದ.

**ಅಶ್ಮ** (ನಾ). ೧. ಕಲ್ಲು. ೨. ಮೇಘ. **~ಗರ್ಭ** = ಪಚ್ಚೆ; ಮರಕತಮಣಿ. **~ಪುಷ್ಪ** = ಕಲ್ಲುಹೂವು; ಪಾಚಿ; ಹಾವಸೆ.

**ಅಶ್ಮಜ** (ನಾ). ೧. ಕಾವಿಕಲ್ಲು. ೨. ಶಿಲಾಜಿತು. ೩. ಕಬ್ಬಿಣ.

**ಅಶ್ಮರಿ** (ನಾ). ಮೂತ್ರಕೋಶದ ಒಂದು ರೋಗ; ಕಲ್ಲುಕಟ್ಟು.

**ಅಶ್ರಿ** (ನಾ). ೧. ಮೂಲೆ. ೨. ಏಣು; ಅಂಚು.

**ಅಶ್ರು** (ನಾ). ಕಣ್ಣೀರು.

**ಅಶ್ಲೀಲ** (ಗು). ೧. ಅಮಂಗಳವಾದ. ೨. ಅಸಭ್ಯವಾದ.

**ಅಶ್ವ** (ನಾ). ಕುದುರೆ. **~ಮುಖ** = ೧. ಕುದುರೆ ಮುಖವುಳ್ಳವನು; ಕಿನ್ನರ. ೨. ಹಯಗ್ರೀವ. **~ಮೇಧ** = ಕುದುರೆಯನ್ನು ಬಲಿಕೊಡುವ ಒಂದು ಯಾಗ. **~ಶಾಲೆ** = ಕುದುರೆಯ ಲಾಯ. **~ಹೃದಯ** = ಅಶ್ವವಿದ್ಯೆಯ ಮರ್ಮ.

**ಅಶ್ವತ್ಥ** (ನಾ). ಅರಳೀಮರ.

**ಅಶ್ವತ್ಥಾಮ** (ನಾ). ೧. ಕುದುರೆಯ ಶಕ್ತಿ, -ವೇಗ. ೨. ದ್ರೋಣಾಚಾರ್ಯರ ಮಗ.

**ಅಶ್ವಿನಿ** (ನಾ). ೧. ಅಶ್ವಿನೀದೇವತೆಗಳ ತಾಯಿ. ೨. ಇಪ್ಪತ್ತೇಳು ನಕ್ಷತ್ರರಾಶಿಗಳಲ್ಲಿ ಮೊದಲ ನೆಯದು.

**ಅಷಾಢ** (ನಾ). ೧. ಆಷಾಢಮಾಸ. ೨. ಬ್ರಹ್ಮಚಾರಿ ಅಥವಾ ಯತಿಯು ಕೈಯಲ್ಲಿ ಹಿಡಿಯುವ ಮುತ್ತುಗದ ದಂಡ. ೩. ಪೂರ್ವಾಷಾಢ ಅಥವಾ ಉತ್ತರಾಷಾಢ ನಕ್ಷತ್ರ(ದಲ್ಲಿ ಹುಟ್ಟಿದವನು). ೫. ಮಲಯ ಪರ್ವತ.

**ಅಷ್ಟ** (ನಾ). ಎಂಟು. **~ಗುಣ** = ೧. ಎಂಟು ಮಡಿ. ೨. = ಅಷ್ಟಭೋಗ. **~ದರಿದ್ರ** = ಬಹಳ ಬಡವ. **~ಭೋಗ** = ಮನೆ, ಹಾಸುಗೆ, ವಸ್ತ್ರ, ಆಭರಣ, ಸ್ತ್ರೀ, ಪುಷ್ಪ, ಗಂಧ, ತಾಂಬೂಲ ಎಂಬ ಎಂಟು ವಸ್ತುಗಳು.

**ಅಷ್ಟಕ** (ನಾ). ೧. ಎಂಟು ಭಾಗಗಳುಳ್ಳದ್ದು. ೨.ಎಂಟು ಪದ್ಯ ಅಥವಾ ಶ್ಲೋಕಗಳನ್ನುಳ್ಳ ಕವಿತಾರಚನೆ.

**ಅಷ್ಟಮ** (ಗು). ಎಂಟನೆಯ.

**ಅಷ್ಟಮಿ** (ನಾ). ಚಾಂದ್ರಮಾನ ಪಕ್ಷದ ಎಂಟನೆಯ ದಿನ.

**ಅಷ್ಟವೆ** (ನಾ). ಅಷ್ಟಮಿಾ ತಿಥಿ.

**ಅಷ್ಟಾದಶ** (ನಾ). ಹದಿನೆಂಟು.

**ಅಷ್ಟಾಪದ** (ನಾ). ೧. ಎಂಟು ಕಾಲುಗಳುಳ್ಳ ಪ್ರಾಣಿ; ಶರಭ. ೨. ಜೇಡರ ಹುಳು. ೩. ಚಿನ್ನ. ೪. ಚದುರಂಗದ ಅಥವಾ ಪಗಡೆಯ ಮಣೆ. ೫. ಒಂದು ಬಗೆಯ ಕಾಡುಮಲ್ಲಿಗೆ. **~ಮಯ** = ಚಿನ್ನದಿಂದ ಮಾಡಿದ್ದು. **~ರಿಪು** = ೧. ಗಂಡಭೇರುಂಡ. ೨. ಸಿಂಹ.

**ಅಷ್ಟಾವಂಕ** = ಅಷ್ಟಾವಕ್ರ.

**ಅಷ್ಟಾವಕ್ರ** (ನಾ). ೧. ಬಹಳ ವಿಕಾರವಾದ ಅವಯವಗಳುಳ್ಳ ವ್ಯಕ್ತಿ. ೨. ಬಹಳ ವಿಕಾರವುಳ್ಳದ್ದು.

**ಅಷ್ಟು** (ನಾ). ಆ ಪರಿಮಾಣ; ಆ ಅಳತೆ.

**ಅಷ್ಟೋತ್ತರ** (ನಾ). ೧. ನೂರೆಂಟು ನಾಮ ಗಳನ್ನು ಹೇಳಿಕೊಂಡು ನಡೆಸುವ ದೇವತಾರ್ಚನೆ. ೨. ನೂರೆಂಟು ನಾಮ ಗಳುಳ್ಳ ದೇವತಾಸ್ತೋತ್ರ. ೩. ಒಂದೇ ಮಂತ್ರವನ್ನು ನೂರೆಂಟುಬಾರಿ ಪಠಿಸುವುದು. ೪. ಬೈಗಳು. **~ಶತ** = ನೂರೆಂಟು.

**ಅಷ್ಠಿ** (ನಾ). ಹಣ್ಣಿನ ಬೀಜ ಅಥವಾ ಓಟೆ.

**ಅಸ** (ನಾ). ೧. ದುರ್ಬಲತೆ. ೨. ಹೊಂದಿಕೆ. ೩. ಪ್ರಸಿದ್ಧಿ. ೪. ವೇಗ. ೫. ಹಸನು ಮಾಡುವುದು. **~ಅ(ವ)ಳ(ಳಿ)** = ಶಕ್ತಿ ಗುಂದು. **~ಕಟು(ಳಿ)** = ೧. ಅತಿಕ್ರಮಿಸು. ೨. ತುಂಬಾ ಹೆಚ್ಚಾಗು. ೩. ತಪ್ಪಿಸು. ೪. ವಶತಪ್ಪು. **~ಕಟು(ಳಿ)ಹ** = ಕೈಮಿಾರು ವುದು. **~ಕೆ(ಗೆ)ಡಿಸು** = ಹಾಳುಮಾಡು. **~ಬಡಿ** = ಅಗಸನು ಬಟ್ಟೆಯನ್ನು ಒಗೆಯು ವಂತೆ ಹೊಡೆ. **~ಮ(ವ)ನೆ** = ಅಗಸನ ಮನೆ. **~ಮುಸೆ** = ಸಣ್ಣಗಾಯ. **~ವಸ** = ೧. ಆತುರ. ೨. ದುಡುಕುವುದು. ೩. ಅಸ್ತವ್ಯಸ್ತ. ೪. ಅವಶ್ಯ.

**ಅಸಂಕೀರ್ಣ** (ಗು). ೧. ಬೆರಸಿಹೋಗದ. ೨. ಸರಳವಾದ.

**ಅಸಂಕ್ಲುಪ್ತ** (ನಾ). ೧. ಐದು ಬಗೆಯ ಭಿಕ್ಷೆ ಗಳಲ್ಲಿ ಒಂದು. (ಗು). ೨. ನಿಯಮಿತ ವಲ್ಲದ.

**ಅಸಂಖ್ಯ** (ಗು). ಲೆಕ್ಕವಿಲ್ಲದ.

**ಅಸಂಖ್ಯಾತ** = ಅಸಂಖ್ಯ.

**ಅಸಂಗ** (ನಾ). ೧. ಸಂಪರ್ಕವಿಲ್ಲದವನು. (ಗು). ೨. ಸಂಪರ್ಕವಿಲ್ಲದ.

**ಅಸಂಗತ** (ನಾ). ೧. ಅಸಂಬದ್ಧವಾದುದು. (ಗು). ೨. ಹೊಂದದ.

**ಅಸಂಗತಿ** (ನಾ). ೧. ಸಂಬಂಧವಿಲ್ಲದಿರುವುದು. ೨. ಅನೌಚಿತ್ಯ.

**ಅಸಂತುಷ್ಟ** (ಗು). ೧. ಸಂತೋಷವಿಲ್ಲದ. ೨. ತೃಪ್ತಿಯಿಲ್ಲದ. **~ಚಿತ್ತ** = ಅತೃಪ್ತ.

**ಅಸಂತುಷ್ಟಿ** (ನಾ). ೧. ಅಸಂತೋಷ. ೨. ಅತೃಪ್ತಿ.

**ಅಸಂಧೇಯ** (ಗು). ೧. ಸಂಧಿ ಮಾಡಲು ಶಕ್ಯವಿಲ್ಲದ. ೨. ಬೆಸೆಯಲು ಶಕ್ಯವಿಲ್ಲದ.

**ಅಸಂಬದ್ಧ** (ಗು). ಹೊಂದಿಕೆಯಿಲ್ಲದ. **~ಪ್ರಲಾಪ** = ಪ್ರಸ್ತುತವಲ್ಲದ, ಹೊಂದಾಣಿಕೆಯಿಲ್ಲದ ಮಾತು.

**ಅಸಂಬಾಧ** (ನಾ). ೧. ನಿರ್ಬಂಧವಿಲ್ಲದಿರುವುದು. (ಗು). ೨. ಜನಸಮ್ಮರ್ದವಿಲ್ಲದ. ೩. ವಿಶಾಲವಾದ.

**ಅಸಂಭವ** (ನಾ). ೧. ಒಂದು ಅರ್ಥಾಲಂಕಾರ. (ಗು). ೨. ಉಂಟಾಗಲು ಶಕ್ಯವಿಲ್ಲದ.

**ಅಸಂಭವನೀಯ** = ಅಸಂಭವ.

**ಅಸಂಭಾವಿತ** (ನಾ). ೧. ಸಂಭಾವಿತನಲ್ಲದವನು. (ಗು). ೨. ಯೋಚಿಸಲು ಶಕ್ಯವಿಲ್ಲದ.

**ಅಸಂಭಾವ್ಯ** (ಗು). ಊಹೆಗೆ ನಿಲುಕದ.

**ಅಸಂಸ್ಕೃತ** (ನಾ). ೧. ಉತ್ತಮವಾದ ಸಂಸ್ಕಾರವನ್ನು ಪಡೆಯದವನು. (ಗು). ೨. ಉತ್ತಮವಾದ ಸಂಸ್ಕಾರವನ್ನು ಪಡೆಯದ. ೩. ಸಂಸ್ಕೃತವಲ್ಲದ. ೪. ನಯಗೊಳಿಸಿ ಒಗ್ಗರಣೆ ಮುಂತಾದುವುಗಳಿಂದ ವಾಸನೆ ಕಟ್ಟದ.

**ಅಸಂಹತ** (ನಾ). ೧. ಬೇರೆಬೇರೆಯಾಗಿ ನಿಂತ ಸೈನ್ಯವ್ಯೂಹ. (ಗು). ೨. ಸಡಿಲವಾದ.

**ಅಸಕ್ತ** (ನಾ). ಆಸಕ್ತಿಯಿಲ್ಲದವನು.

**ಅಸಗ** ೧. = ಅಗಸ. ೨. ಒಂದು ಪಕ್ಷಿ. **~ಪ(ವ)ರಿ** = ಒಂದು ಬಗೆಯ ಆಟ. **~ಪೊ(ವೊ)ಯ್** = ಅಗಸನ ಹೊಡೆತ.

**ಅಸಗಟು(ಳಿ)** (ಕ್ರಿ). ನಾಶಮಾಡು.

**ಅಸಡ್ಡಾಳ** (ನಾ). ೧. ಕ್ರಮವಿಲ್ಲದಿರುವುದು; ಅವ್ಯವಸ್ಥೆ. ೨. ಕುರೂಪ. (ಗು). ೩. ಕುರೂಪವಾದ. ೪. ಕ್ಷುದ್ರವಾದ.

**ಅಸಡ್ಡೆ** (ನಾ). ಆಸಕ್ತಿಯಿಲ್ಲದಿರುವುದು; ಅಲಕ್ಷ್ಯ; ಔದಾಸೀನ್ಯ; ಉಪೇಕ್ಷೆ.

**ಅಸತಿ** (ನಾ). ನೀತಿಗೆಟ್ಟ ಹೆಂಗಸು. **~ವಸಥ** = ಜಾರೆಯ ಮನೆ.

**ಅಸತ್ಕಥೆ** (ನಾ). ೧. ಕೆಟ್ಟಕಥೆ. ೨. ಕೆಟ್ಟವರ ಕಥೆ.

**ಅಸತ್ತು** (ನಾ). ೧. ಇಲ್ಲದಿರುವುದು. ೨. ಸತ್ಯವಲ್ಲದ್ದು. ೩. ಕೆಟ್ಟದ್ದು.

**ಅಸದರ್ಥ**(ನಾ). ೧. ಕೆಟ್ಟಅರ್ಥ. ೨. ಅನ್ಯಾಯದ ಮಾರ್ಗದಲ್ಲಿ ಸಿಕ್ಕುವ ದ್ರವ್ಯ. ೩. ಕೆಟ್ಟ ಉದ್ದೇಶ.

**ಅಸದಳ** (ನಾ). ೧. ಅಸಾಧ್ಯ. ೨. ಅತಿಶಯ.

**ಅಸದಾಖ್ಯಾತಿ** (ನಾ). ಕವಿಸಮಯದಲ್ಲಿ ಒಂದು.

**ಅಸದಾಗ್ರಹ** (ನಾ). ಸಲ್ಲದ ಹಟ.

**ಅಸದೃಶ** (ಗು). ೧. ಅಸಮಾನವಾದ. ೨. ಅನುಚಿತವಾದ.

**ಅಸದ್ವಾದ** (ನಾ). ಅನುಚಿತವಾದ ವಾದ.

**ಅಸನ** (ನಾ). ಆಹಾರ. **~ಬೆಸನ** = ಆಹಾರದ ಚಿಂತೆ.

**ಅಸನರಿ** (ನಾ). ೧. ಉಪಾಯಗಾರ. ೨. ದುರ್ಬಲ.

**ಅಸನಿ** (ನಾ). ವಜ್ರಾಯುಧ.

**ಅಸಭ್ಯ** (ಗು). ಒಳ್ಳೆಯ ನಡತೆಯಿಲ್ಲದ.

**ಅಸಮ** (ಗು). ೧. ಸಮವಲ್ಲದ. ೨. ಸಮಾನವಿಲ್ಲದ. ೩. ಬೆಸಸಂಖ್ಯೆಯ. **~ಅಂಬಕ** = ವಿಷಮಸಂಖ್ಯೆಯ ಕಣ್ಣುಳ್ಳವನು; ಶಿವ.

~ಅಸ್ತ್ರ = ೧. ಬೆಸ ಸಂಖ್ಯೆಯ ಬಾಣ. ೨. ವಿಷಮ ಸಂಖ್ಯೆಯ ಬಾಣಗಳುಳ್ಳವನು; ಮನ್ಮಥ.

**ಅಸಮಾಧಾನ** (ನಾ). ಸಮಾಧಾನವಿಲ್ಲದಿರುವುದು.

**ಅಸಮ್ಮತ** (ನಾ). ೧. ಒಂದು ಕಾವ್ಯದೋಷ. (ಗು). ೨. ಒಪ್ಪಲಾಗದ.

**ಅಸರಂತ** (ಗು). ೧. ನಿರಂತರವಾದ. (ಅ). ೨. ಯಾವಾಗಲೂ.

**ಅಸರಪಸರ** (ನಾ). ಅವಕಾಶ; ಆಸರೆ.

**ಅಸಲ್(ಲು)** (ನಾ). ೧. ಮೂಲಧನ. (ಗು). ೨. ಮೂಲವಾದ. ೩. ಅಪ್ಪಟವಾದ. **~ಅಧಿಕಾರ** = ಒಂದು ಹುದ್ದೆಗೆ ಹೊಂದಿಕೊಂಡು ಹೋದ ಅಧಿಕಾರ. **~ಕ್ರಯ** = ನಿಜವಾದ ಬೆಲೆ. **~ಪ್ರತಿ** = ಮೂಲಪ್ರತಿ. **~ಮಾಲು** = ಶುದ್ಧವಾದ ವಸ್ತು. **~ಸನದು** = ಮೂಲಪತ್ರ.

**ಅಸಲಿ** (ನಾ). ಕೊರಳಿಗೆ ಹಾಕಿಕೊಳ್ಳುವ ಒಂದು ಬಗೆಯ ಆಭರಣ.

**ಅಸಲೀಕಾರ** (ನಾ). ಮುಖ್ಯಕರ್ತ.

**ಅಸವರ್ಣ** (ಗು). ಸವರ್ಣವಲ್ಲದ; ವಿಜಾತೀಯ.

**ಅಸವಸ** (ನಾ). ೧. ಆತುರ; ತ್ವರೆ. ೨. ಮುದುಕುವುದು. ೩. ಅಸ್ತವ್ಯಸ್ತ. **~(ಂ)ಕೊ(ಗೊ)ಳ್** = ೧. ಆತುರಪಡು. ೨. ಬಾಡು; ಕಂದು.

**ಅಸಹಕಾರ** (ನಾ). ಸಹಕರಿಸದೆ ಇರುವುದು.

**ಅಸಹನ(ನೆ)** (ನಾ). ೧. ಸೈರಣೆಯಿಲ್ಲದಿರುವುದು. ೨. ಶತ್ರು.

**ಅಸಹಾಯ** (ಗು). ೧. ಸಹಾಯಕನಿಲ್ಲದ. ೨. ಇತರರ ಸಹಾಯವಿಲ್ಲದೆ ಕೆಲಸ ಮಾಡುವ ಸಾಮರ್ಥ್ಯವುಳ್ಳ.

**ಅಸಹ್ಯ** (ನಾ). ೧. ಸೈರಣೆಯಿಲ್ಲದವನು. (ಗು). ೨. ಸಹಿಸಲಾಗದ.

**ಅಸಳೆ** (ನಾ). ದುರ್ಬಲ; ಶಕ್ತಿಹೀನ.

**ಅಸಾಧಾರಣ** (ಗು). ವಿಶಿಷ್ಟವಾದ.

**ಅಸಾಧು** (ನಾ). ೧. ಸಾಧುವಲ್ಲದುದು. ೨. ಸಾಧುವಲ್ಲದವನು. (ಗು). ೩. ಉಚಿತವಲ್ಲದ.

**ಅಸಾಧ್ಯ** (ನಾ). ೧. ಗಟ್ಟಿಗ. (ಗು). ೨. ಶಕ್ಯವಲ್ಲದ.

**ಅಸಾರ** (ಗು). ನಿರುಪಯೋಗವಾದ.

**ಅಸಿ** (ಕ್ರಿ). ೧. ಚೆಲ್ಲು. ೨. ನಡುಗು. ೩. ಸಣ್ಣದಾಗು. (ನಾ). ೪. ಕತ್ತಿ. **~ಇ(ಯಿ)ಡು** = ಅರೆಯುವ ಕಲ್ಲಿನ ಮೇಲಿಡು. **~ಏ(ಯೇ)ಱು** = ೧. ಕತ್ತಿಯ ಗಾಯ. ೨. ಖಡ್ಗಯುದ್ಧ. ೩. ಮೋಸ. **~ಕ(ಗ)ಲ್ಲು** = ಸಂಬಾರ ಮುಂತಾದುವನ್ನು ಅರೆಯುವ ಅಡಿಗಲ್ಲು. **~ಧಾರಾವ್ರತ** = ೧. ಕತ್ತಿಯ ಅಲಗಿನ ಮೇಲೆ ಹೆಜ್ಜೆಯಿಟ್ಟು ನಡೆಯುವಂತೆ ಆಚರಿಸಲು ಬಲು ಕಷ್ಟವಾದ ಒಂದು ವ್ರತ. ೨. ದಂಪತಿಗಳು ಏಕಶಯ್ಯೆಯಲ್ಲಿದ್ದರೂ ಸಂಯಮದಿಂದ ಇರುವುದು. **~ಧಾರೆ** = ಕತ್ತಿಯ ಅಲಗು. **~ಧಾವಕ** = ಕತ್ತಿಯನ್ನು ಸಾಣೆ ಹಿಡಿಯುವವನು. **~ಪತ್ರ** = ೧. ಕತ್ತಿಯ ಅಲಗು. ೨. = ಅಸಿಧಾರಾವ್ರತ. ೩. ಕತ್ತಿಯ ಒರೆ. ೪. ಕತ್ತಿಯ ಆಕಾರದ ಎಲೆಗಳುಳ್ಳ ಮರ. ೫. ಒಂದು ನರಕ. ೬. ಕಬ್ಬು. **~ಮಸೆ** = ಕತ್ತಿಯ ಏಟಿನಿಂದಾದ ಗಾಯ. **~ಹೇತಿ** = ಖಡ್ಗಪಾಣಿ.

**ಅಸಿಕ** (ನಾ). ೧. ತೆಳ್ಳಗಿರುವವನು. ೨. ಸಣ್ಣ ಕತ್ತಿ.

**ಅಸಿತ** (ನಾ). ೧. ಕಪ್ಪು. ೨. ಆಹಾರ. ೩. ಕೃಷ್ಣಪಕ್ಷ. ೪. ಶನಿ. (ಗು). ೫. ಬಿಳುಪಲ್ಲದ. **~ಅಂಬರ** = ೧. ನೀಲಿ ವಸ್ತ್ರ. ೨. ನೀಲಿ ವಸ್ತ್ರವುಳ್ಳವನು; ಬಲರಾಮ. **~ರಕ್ತ** = ೧. ಕಪ್ಪಾದ ರಕ್ತ. ೨. ಅಗ್ನಿಯ ಏಳು ನಾಲಗೆಗಳಲ್ಲಿ ಒಂದು. ೩. ಕಪ್ಪು, ಕೆಂಪು ಮಿಶ್ರವಾಗಿರುವ.

**ಅಸಿದು(ಯು)** (ಗು). ತೆಳ್ಳಗಿರುವ. **~ಕೊ(ಗೊ)ಳ್** = ಸಣ್ಣದಾಗು.

**ಅಸಿಮಿಸಿ** (ನಾ). ಹಿಂದೆಮುಂದೆ ನೋಡುವುದು; ಅನುಮಾನ.

**ಅಸೀಮ** (ಗು). ಎಲ್ಲೆಯಿಲ್ಲದ.

**ಅಸು** (ನಾ). ೧. ಪ್ರಾಣ. ೨. ಬಲಾತ್ಕಾರದಿಂದ ಕಿತ್ತುಕೊಂಡದ್ದು. **~(ಂ)ಕೊ(ಗೊ)ಳ್** = ೧. ಪ್ರಾಣವನ್ನು ತೆಗೆ. ೨. ಹೆದರು. ೩. ಆಶ್ಚರ್ಯಪಡು. ೪. ಮನಸ್ಸನ್ನು ಅಪಹರಿಸು. **~ಕು(ಗು)ಡಿ** = ಸಾಯಿಸು. **~ಕೆ(ಗೆ)ಡು** = ಸತ್ತ್ವ ಕುಗ್ಗು. **~ಧಾರಣೆ** = ಜೀವವನ್ನು ಹಿಡಿದಿರುವುದು. **~ಪಿ(ವಿ)ಡಿ** = ೧. ಬದುಕಿರು. ೨. ವೇಗದಿಂದ ಎದುರು ಜಟ್ಟಿಯನ್ನು ಹಿಡಿಯುವುದು; ಮಲ್ಲಯುದ್ಧದ ಒಂದು ಪಟ್ಟು. **~ಮೋಕ್ಷ** = ಸಾವು.

**ಅಸು(ಂ)ಬು** (ಕ್ರಿ). ಅಲ್ಲಾಡಿಸು.

**ಅಸುಗೆ(ಕೆ)** (ನಾ). ಅಶೋಕವೃಕ್ಷ.

**ಅಸುರ್(ರು)** (ಕ್ರಿ). ೧. ಅಸಹ್ಯಪಡು. ೨. ಆಯಾಸಗೊಳ್ಳು.

**ಅಸುರ** (ನಾ). ರಾಕ್ಷಸ. **~ಅಂತಕ** = ದೈತ್ಯರನ್ನು ಸಂಹರಿಸುವವನು; ವಿಷ್ಣು.

**ಅಸುರುಸರು** (ನಾ). ದಣಿವಿನಿಂದಾಗುವ ಉಸುರು; ಆಯಾಸ.

**ಅಸುವೆ** = ಅಸಿಗಲ್ಲು.

**ಅಸೂಯೆ** (ನಾ). ೧. ಹೊಟ್ಟೆಕಿಚ್ಚು. ೨. ದ್ವೇಷ.

**ಅಸೃಕ್ಕು** (ನಾ). ರಕ್ತ.

**ಅಸೃಗ್ದರ** (ನಾ). ಹೆಂಗಸರ ರಕ್ತಸ್ರಾವರೋಗ.

**ಅಸೃತಿ** (ನಾ). ೧. ಕೆಟ್ಟ ನಡತೆ. ೨. ಸುಳ್ಳು.

**ಅಸೇಚಕ** (ನಾ). ೧. ತೃಪ್ತಿಪಡಿಸಲು ಶಕ್ಯವಿಲ್ಲದವನು. ೨. ಎಷ್ಟು ತಿಂದರೂ ತೃಪ್ತಿಯಿಲ್ಲದವನು.

**ಅಸೇಚನ** (ಗು). ಎಷ್ಟು ನೋಡಿದರೂ ತೃಪ್ತಿಯಾಗದಿರುವ.

**ಅಸೇಧ** (ನಾ). ಅಡ್ಡಿ; ನಿರೋಧ.

**ಅಸೇವ್ಯ** (ನಾ). ೧. ಸೇವೆಗೆ ಅನರ್ಹನಾದವನು. (ಗು). ೨. ಸೇವಿಸಬಾರದ; ಮಾಡಬಾರದ.

**ಅಸ್ಖಲಿತ** (ಗು). ೧. ಅಲ್ಲಾಡದ. ೨. ಬೀಳದ. ೩. ತಪ್ಪದ.

**ಅಸ್ತ** (ನಾ). ೧. ಪಶ್ಚಿಮ ಪರ್ವತ. ೨. ಸಾವು; ಕೊನೆ. ೩. (ಹೊತ್ತು) ಮುಳುಗುವಿಕೆ. (ಗು). ೪. ಎಸೆಯಲ್ಪಟ್ಟ. ೫. ನಿವಾರಿಸಿದ. ೬. ಕಳೆದುಹೋದ. ೭. ಮುಳುಗಿಹೋದ. **~ಅಂತರಗತ** = ಅಸ್ತಪರ್ವತದೊಳಗೆ ಸೇರಿದವನು. **~ಅಚಲ(ಳ)** = ಸೂರ್ಯನು ಮುಳುಗಿ ಮರೆಯಾಗುವಂತೆ ತೋರುವ ಪರ್ವತ. **~ಅಬ್ಧಿ** = ಸೂರ್ಯನು ಮುಳುಗುವ ಸಮುದ್ರ; ಪಶ್ಚಿಮಸಮುದ್ರ. **~ದವ** = ಅಡಗಿದ ಅಥವಾ ನಂದಿದ ಕಾಡುಕಿಚ್ಚುಗಳು. **~ಪ್ರಾಪ್ತಿ** = ಮುಳುಗುವುದು. **~ರಾಗ** = ಸಂಜೆಗೆಂಪು. **~ವಿಳಾಸ** = ಸಂತೋಷವು ಮರೆಯಾದವನು.

**ಅಸ್ತಂಗತ** (ನಾ). ೧. ಮುಳುಗಿದವನು. ೨. ನಷ್ಟವಾದವನು.

**ಅಸ್ತಗಾಮಿ** (ಗು). ಮುಳುಗುತ್ತಿರುವ.

**ಅಸ್ತಮಯ**(ನಾ). (ಹೊತ್ತು) ಮುಳುಗುವುದು.

**ಅಸ್ತಮಾನ** = ಅಸ್ತಮಯ.

**ಅಸ್ತಮಿತ** (ಗು). ೧. ಮುಳುಗಿದ. ೨. ಕಳೆದುಹೋದ.

**ಅಸ್ತಮಿಸು** (ಕ್ರಿ). ೧. ಮುಳುಗು. ೨. ಸಾಯು.

**ಅಸ್ತವ್ಯಸ್ತ** (ನಾ). ಅಕ್ರಮವಾಗಿರುವುದು; ಅಸಂಬದ್ಧ.

**ಅಸ್ತಿತ್ವ** (ನಾ). ಇರುವಿಕೆ.

**ಅಸ್ತಿಭಾರ** = ಅಸ್ತಿವಾರ.

**ಅಸ್ತಿವಾರ** (ನಾ). ತಳಹದಿ; ಬುನಾದಿ.

**ಅಸ್ತೇಯ** (ನಾ). ಕದಿಯದಿರುವುದು. **~ಭಾವನೆ** = ಇತರರ ವಸ್ತುವನ್ನು ಬಯಸದಿರುವುದು.

**ಅಸ್ತೋಕ** (ನಾ). ೧. ಅತಿಶಯ. (ಗು). ೨. ಅಧಿಕವಾದ.
**ಅಸ್ತ್ರ** (ನಾ). ೧. ಬಾಣ. ೨. ಆಯುಧ. ~ಜೀವ = ೧. ಆಯುಧದ ಬಲದಿಂದ ಜೀವಿಸುವವನು; ಸೈನಿಕ. ೨. ಬೇಡರವನು.
**ಅಸ್ತ್ರಿ** (ನಾ). ಅಸ್ತ್ರಧಾರಿ; ಬಿಲ್ಗಾರ.
**ಅಸ್ಥಿ** (ನಾ). ಮೂಳೆ; ಎಲುಬು. ~ಸಾರ = ಮಜ್ಜೆಯೆಂಬ ಧಾತು. ~ಸ್ರಾವ=ಮೂಳೆ ಕರಗಿ ಹರಿಯುವ ಒಂದು ರೋಗ; ಶ್ವೇತಸ್ರಾವ.
**ಅಸ್ನಿಗ್ಧ** (ಗು). ೧. ಜಿಡ್ಡಿಲ್ಲದ. ೨.ಕ್ರೂರವಾದ.
**ಅಸ್ಪಷ್ಟ** (ಗು). ಸ್ಪಷ್ಟವಾಗಿಲ್ಲದ.
**ಅಸ್ಪೃಶ್ಯ** (ಗು). ೧. ಮುಟ್ಟಬಾರದ. ೨. ಮುಟ್ಟಲಾಗದ.
**ಅಸ್ಮದೀಯ** (ನಾ). ೧. ನಮ್ಮದು. (ಗು). ೨. ನಮಗೆ ಸೇರಿದ.
**ಅಸ್ಮೇರ** (ಗು). ೧. ಮುಗುಳುನಗೆಯಿಲ್ಲದ. ೨. ಅರಳದ.
**ಅಸ್ರ** (ನಾ). ೧. ಕಣ್ಣೀರು. ೨. ಕೂದಲು. ೩. ರಕ್ತ.
**ಅಸ್ರಪ** (ನಾ). ರಕ್ತ ಕುಡಿಯುವವನು; ರಾಕ್ಷಸ.
**ಅಸ್ವಪ್ನ** (ನಾ). ೧. ದೇವತೆ. (ಗು). ೨. ನಿದ್ರೆಯಿಲ್ಲದ.
**ಅಸ್ವರ** (ನಾ). ೧. (ವ್ಯಾಕ) ಸ್ವರವಲ್ಲದ್ದು. (ಗು). ೨. ಸ್ವರವಲ್ಲದ. ೩. ಸ್ವರವಿಲ್ಲದ.
**ಅಸ್ವಸ್ಥ** (ಗು). ಆರೋಗ್ಯವಿಲ್ಲದ.
**ಅಸ್ವಾಧ್ಯಾಯ** (ನಾ). ೧. ವೇದಾಭ್ಯಾಸವಿಲ್ಲದಿರುವುದು. ೨. ವೇದಾಭ್ಯಾಸ ಮಾಡದವನು.
**ಅಸ್ವಾಭಾವಿಕ** (ಗು). ಸಹಜವಲ್ಲದ; ಕೃತಕವಾದ.
**ಅಹಂ** (ನಾ). ೧. ನಾನು ಎಂಬ ಭಾವ. ೨. ಗರ್ವ.
**ಅಹಂಕರಿಸು** (ಕ್ರಿ). ಗರ್ವಿಸು.
**ಅಹಂಕಾರ** (ನಾ). ೧. ಗರ್ವ. ೨. ಅಂತಃಕರಣಗಳಲ್ಲಿ ಒಂದು.
**ಅಹಂಕೃತಿ** = ಅಹಂಕಾರ.
**ಅಹ(ಂ)ಗೆ** (ಅ). ಆ ರೀತಿಯಲ್ಲಿ; ಹಾಗೆ.
**ಅಹಂತವ್ಯ** (ಗು). ಕೊಲ್ಲಬಾರದ.
**ಅಹಂತೆ** (ನಾ). ಹೆಮ್ಮೆ; ಸೊಕ್ಕು.
**ಅಹಂಮನ್ಯ** (ನಾ). ೧. ತಾನು ಮೇಲೆಂದು ತಿಳಿದವನು. ೨. ತಾನು ದೇವರ ಅಂಶವೆಂದು ತಿಳಿದವನು.
**ಅಹಂಮಮತೆ** (ನಾ). ನಾನು ಮತ್ತು ನನ್ನದು ಎಂಬ ಭಾವ.
**ಅಹಃಪತಿ** (ನಾ). ಹಗಲಿನ ಒಡೆಯ; ಸೂರ್ಯ. ~ಸುತ = ೧. ಸೂರ್ಯಪುತ್ರ. ೨. ಶನಿ. ೩. ಯಮ. ೪. ಸುಗ್ರೀವ. ೫. ಕರ್ಣ.
**ಅಹತ** (ನಾ). ೧. ಹೊಸ ಬಟ್ಟೆ. ೨.ಹೊಡೆತಕ್ಕೆ ಸಿಕ್ಕದವನು. (ಗು). ೩. ಹೊಡೆಯಲ್ಪಡದ. ೪. ಒಗೆಯದ. ೫. ಕುಗ್ಗದ.
**ಅಹನಿ** (ನಾ). ಹಗಲು ಮತ್ತು ರಾತ್ರಿ.
**ಅಹಮಹಮಿಕ(ಕೆ)** (ನಾ). ೧. ನಾನು ಮುಂದು, ತಾನು ಮುಂದು ಎಂದು ಯಾವುದಾದರೂ ಕೆಲಸಕ್ಕೆ ಸ್ಪರ್ಧೆಯಿಂದ ನುಗ್ಗುವುದು. ೨. ಅಹಂಕಾರ.
**ಅಹರಹ** (ನಾ). ಪ್ರತಿದಿನ.
**ಅಹರ್ನಿಶಿ** (ಅ). ಹಗಲಿರುಳು.
**ಅಹರ್ಪತಿ** = ಅಹಃಪತಿ.
**ಅಹಲೆಕಾರ** (ನಾ). ಕೆಳದರ್ಜೆಯ ಕೆಲಸಗಾರ.
**ಅಹವಾಲ್(ಲು)** (ನಾ). ೧. ತಮಗಿರುವ ತೊಂದರೆಯನ್ನು ತಿಳಿಸಿ ಪರಿಹಾರಕ್ಕಾಗಿ ಮಾಡುವ ವಿನಂತಿ; ಮನವಿ. ೨. ವರದಿ. ೩. ಪರಿಸ್ಥಿತಿ.
**ಅಹಸ್ಸು** (ನಾ). ಹಗಲು.
**ಅಹಾರ್ಯ** (ನಾ). ೧. ಪರ್ವತ. (ಗು). ೨. ಅಪಹರಿಸಲು ಆಗದ.

ಅಹಿ (ನಾ). ೧. ಹಾವು. ೨. ವೃತ್ರನೆಂಬ ರಾಕ್ಷಸ. ೩. ರಾಹು. ~ಕಟಕ = ೧. ಸರ್ಪವನ್ನು ಕೈಕಡಗವಾಗಿ ಹೊಂದಿದವನು; ಶಿವ. ೨. ಹಾವುಗಳ ಗುಂಪು. ~ಭಯ =೧. ಹಾವಿನ ದೆಸೆಯಿಂದಾದ ಹೆದರಿಕೆ. ೨. ಸ್ವಪಕ್ಷದಿಂದ ಉಂಟಾಗುವ ಭಯ.

ಅಹಿಂಸೆ (ನಾ). ಹಿಂಸೆ ಮಾಡದಿರುವುದು.

ಅಹಿಕ (ನಾ). ೧. ಈ ಲೋಕಕ್ಕೆ ಸಂಬಂಧಿಸಿದುದು. ೨. ಒಂದು ಬಗೆಯ ಕುರುಡು ಹಾವು.

ಅಹಿತ (ನಾ). ೧. ಶತ್ರು. (ಗು). ೨. ವಿರೋಧವಾದ.

ಅಹಿಧರ (ನಾ). ಸರ್ಪವನ್ನು ಧರಿಸಿದವನು; ಶಿವ.

ಅಹಿಪ (ನಾ). ಹಾವುಗಳ ಒಡೆಯ; ಸರ್ಪರಾಜ; ಆದಿಶೇಷ.

ಅಹಿಭುಕ್ಕು (ನಾ). ೧. ಹಾವುಗಳನ್ನು ತಿನ್ನುವ ಪ್ರಾಣಿ. ೨. ನವಿಲು. ೩. ಗರುಡ. ೪. ಮುಂಗುಸಿ.

ಅಹಿಮ (ಗು). ತಂಪಿಲ್ಲದ; ಬಿಸಿಯಾದ. ~ಕರ = ಉಷ್ಣಕಿರಣ; ಸೂರ್ಯ.

ಅಹಿರಣಿ (ನಾ). ಎರಡು ತಲೆಗಳನ್ನು ಹೊಂದಿರುವ ಒಂದು ಬಗೆಯ ಹಾವು; ಇರ್ತಲೆಗ.

ಅಹಿರ್ಬುಧ್ನ್ಯ (ನಾ). ಈಶ್ವರ; ಶಿವ.

ಅಹೀನ (ನಾ). ೧. ಸರ್ಪರಾಜ. (ಗು). ೨. ಹೀನವಲ್ಲದ.

ಅಹೇತು (ನಾ). ೧. (ಕಾವ್ಯಮೀ) ಅತಿಶಯವೆಂಬ ಅಲಂಕಾರದಲ್ಲಿ ಒಂದು ಭೇದ. (ಗು). ೨. ಕಾರಣವಲ್ಲದ. ೩. ಕಾರಣವಿಲ್ಲದ.

ಅಹೋರಾತ್ರಿ (ನಾ). ಹಗಲು ಮತ್ತು ರಾತ್ರಿ.

ಅಹ್ನ (ನಾ). ಹಗಲುವೇಳೆ.

ಅಳ್ ೧. =ಅಱ್. (ಗು). ೨. ಕೋಮಲವಾದ. ೩. ಮಂದವಾದ. ~ಒಱತೆ = ನೀರಿನ ಸಣ್ಣ ಒರತೆ. ~ನೆತ್ತಿ = (ಎಳೆಯ ಮಗುವಿನ) ಮೃದುವಾದ ನೆತ್ತಿ. ~ನೆಲ = ಜೌಗುನೆಲ.

ಅಳಕ (ನಾ). ೧. ಸಡಿಲ; ಅಳ್ಳಕ. ೨. ಲೇಖನವಸ್ತು. ೩. ಒಂದು ಅಳತೆ.

ಅಳಗ (ನಾ). ೧. ಹವಳ. ೨. ಹವಳದ ಬಣ್ಣದ ಹಸು, ಕುದುರೆ, ನಾಯಿ ಮುಂತಾದ ಪ್ರಾಣಿ. ೩. ಸುಂದರ; ಚೆಲುವ. ೪. ಹಣೆ.

ಅಳಗೆ (ನಾ). ಮಡಕೆ.

ಅಳತೆ (ನಾ). ಪ್ರಮಾಣ; ಪರಿಮಿತಿ.

ಅಳದಕ್ಕಿ (ಗು). ಗೋಳಾಡುವ ಸ್ವಭಾವದ.

ಅಳಬಳ (ನಾ). ೧. ಶಕ್ತಿ. ೨. ಸನ್ನಿವೇಶ. ೩. ಉದ್ದೇಶ.

ಅಳರಿ = ಅರಳಿ.

ಅಳಱ್(ರ್,ರು,ಱು) (ಕ್ರಿ). ೧. ಭಯಪಡು. ೨. ನಡುಗು. ೩. ನಾಶವಾಗು. ೪. ನಾಶಮಾಡು. (ನಾ). ೫. ಭಯ. ೬. ಸಂಕಟ.

ಅಳರ್ಪು (ನಾ). ೧. ಭಯ. ೨. ಮನೋವ್ಯಥೆ.

ಅಳವಡು (ಕ್ರಿ). ೧. ವಶವಾಗು. ೨. ದೃಢವಾಗು. ೩. ಸಾಧ್ಯವಾಗು. ೪. ಒಪ್ಪು. ೫. ಉಂಟಾಗು. ೬. ಕೊಡು. ~ಇಕೆ =೧. ಹೊಂದಿಕೆ. ೨. ರೀತಿ. ೩. ಅನುಕೂಲತೆ. ~ಇಸು = ೧. ಹೊಂದಿಸು. ೨. ವಶಪಡಿಸು. ೩. ಶಮನಮಾಡು. ೪. ಉಂಟಾಗು. ೫. ವ್ಯಾಪಿಸು.

ಅಳವಳ (ನಾ). ದುಃಖ; ವ್ಯಥೆ.

ಅಳವಳ್ಳ (ನಾ). ವ್ಯವಹಾರಜ್ಞಾನವಿಲ್ಲದವನು; ಪೆದ್ದ.

ಅಳವಿ ೧. = ಅಳವು. ೨. ವಶ. ೩. ವಿಶ್ವಾಸ. ೪. ಯುದ್ಧ. ~ತ(ದ)ಪ್ಪು = ೧. ಹೆಚ್ಚಾಗು. ೨. ಗುರಿ ತಪ್ಪು. ೩. ಶಕ್ತಿಗುಂದು.

ಅಳವು (ನಾ). ೧. ಶಕ್ತಿ. ೨. ಸಾಧ್ಯವಾದುದು. ೩. ಅಳತೆ. ೪. ಹತ್ತಿರ. ~ಕೊ(ಗೊ)ಡು = ೧. ಅಳತೆಗೆ ಸಿಕ್ಕು. ೨. ಒದಗಿಸು.

ಅಳವೆ (ನಾ). ೧. ರೈತರಿಗೆ ಸಾಗುವಳಿ ಬಗ್ಗೆ ಬರೆದುಕೊಡುವ ಒಪ್ಪಂದ. ೨. ನದೀಮುಖ. ೩. ನೀರಿನ ಬಿಡುಗಂಡಿ; ತೂಬು.

**ಅಳಸು** (ಕ್ರಿ). ೧. ಸುರತಧ್ವನಿ ಮಾಡು. ೨. ಅಳೆಯಿಸು. (ನಾ). ೩. ಸುರತಧ್ವನಿ. ೪. ಒಂದು ಬಗೆಯ ಭಕ್ಷ್ಯ.

**ಅಳಿ** ೧. = ಅಱು. ೨. ಎಳೆಯುದು. ೩. = ಅಲಿ.

**ಅಳಿಪ** (ನಾ). ಆಸೆಗಾರ; ಬಯಸುವವನು.

**ಅಳಿಪು(ವು,ಹು)** ೧. = ಅಱುಪು. ೨. ಅತಿಯಾಸೆಪಡು. (ನಾ). ೩. ಅತಿಯಾಸೆ.

**ಅಳಿಯ** (ನಾ). ೧. ಮಗಳ ಗಂಡ. ೨. ಸೋದರಿಯ ಮಗ; ಸೋದರಳಿಯ. ~ತನ = ೧. ಅಳಿಯನಾಗಿರುವಿಕೆ. ೨. ಮದುವೆಯಾದ ಮೊದಲ ದೀಪಾವಳಿಯಲ್ಲಿ ಅಳಿಯನಿಗೆ ಮಾಡುವ ಆದರೋಪಚಾರ. ~ಸಂತಾನ = ಸೋದರಳಿಯನಿಗೆ ಮನೆತನದ ಆಸ್ತಿಯ ಹಕ್ಕು ನಿಯಮ.

**ಅಳಿಲ್** (ನಾ). ಕೆಸರು; ಬದಿ.

**ಅಳಿಲು** ೧. = ಅಣಿಲ್. ೨. ಜಾರುವುದು.

**ಅಳಿವಣಿಗೆ** (ನಾ). ಕೀಳುದೆಸೆ.

**ಅಳುಂಕು** (ಕ್ರಿ). ಅಲುಗಾಡು.

**ಅಳುಂಬ** (ನಾ). ೧. ಅತಿಶಯ. ೨. ಮನೋಹರವಾದುದು. ೩. ಆಶ್ರಯ.

**ಅಳುಕು** ೧. = ಅಳ್ಕು. ೨. ಮುಳ್ಳು ಚುಚ್ಚಿ ನೋಯು. ೩. ಒರೆಸು. (ನಾ). ೪. ಚುಚ್ಚಿದ ಮುಳ್ಳಿನಿಂದ ಉಂಟಾಗುವ ನೋವು.

**ಅಳುರ್(ರು)** (ಕ್ರಿ). ೧. ವ್ಯಾಪ್ತಿಹೊಂದು. ೨. ಸುಡು. ೩. ಚದರಿಹೋಗು. (ನಾ). ೪. ವಿಸ್ತಾರ.

**ಅಳುರ್ಚು** (ಕ್ರಿ). ವ್ಯಾಪ್ತಿಯನ್ನುಂಟುಮಾಡು.

**ಅಳುವೆ** (ನಾ). ನದಿಗಳು ಸಮುದ್ರಕ್ಕೆ ಸೇರುವ ಸ್ಥಳ; ನದೀಮುಖ.

**ಅಳೆ** (ಕ್ರಿ). ೧. ಅಳತೆ ಮಾಡು. (ನಾ). ೨. ಮಜ್ಜಿಗೆ.

**ಅಳೆತ** (ನಾ). ಅಳೆಯುವುದು; ಅಳತೆ.

**ಅಳ್ಕು** (ಕ್ರಿ). ೧. ಭಯಪಡು. ೨. ಹಿಂಜರಿ. ೩. ಶಕ್ತಿಹೀನವಾಗು. ೪. ನಡುಗು. (ನಾ). ೫. ಭಯ. ~ಆಡು = ೧. ಭಯದಿಂದ ನಡುಗು. ೨. ಬಳಲು; ಶಿಥಿಲವಾಗು.

**ಅಳ್ದರಿ** (ನಾ). ದೊಡ್ಡ ಗುಹೆ.

**ಅಳ್ಳಕ** (ನಾ). ೧. ಸಡಿಲ. ೨. ಸಡಿಲವಾದ ಕಟ್ಟು.

**ಅಳ್ಳಿಱಿ(ರಿ)** (ಕ್ರಿ). ೧. ಧ್ವನಿ ಮಾಡು; ಶಬ್ದಮಾಡು. ೨. ಅಲುಗಾಡು. ೩. ಅಲುಗಾಡಿಸು. ೪. ಚುಚ್ಚು. (ನಾ). ೫. ಧ್ವನಿ; ಶಬ್ದ.

**ಅಳ್ಳು** (ಕ್ರಿ). ೧. ಚಲಿಸು; ಅಲುಗು. (ನಾ). ೨. ಅಂಗಡಿ, ಸಂತೆಗಳಲ್ಲಿ ಧಾನ್ಯ ಅಳೆಯುವ ಕೂಲಿಗಾಗಿ ಕೊಡುವ ಧಾನ್ಯ.

**ಅಳ್ಳೆ** (ನಾ). ೧. ಹೊಟ್ಟೆಯ ಒಂದು ಪಕ್ಕ; ಪಕ್ಕೆ. ೨. ಸಡಿಲ. ೩. ಏಡಿ. ~ಕುಡಿ = ಪಕ್ಕೆಯ ಕಡೆ. ~ಜೊಳ್ಳೆತನ = ನಿಸ್ಸಾರವಾಗಿರುವುದು.

**ಅಳ್ಳೆದೆ** = ಅಳ್ಳೆರ್ದೆ.

**ಅಳ್ಳೆರ್ದೆ** (ನಾ). ೧. ನಡುಗುವ ಎದೆ. ೨. ಚಂಚಲವಾದ ಮನಸ್ಸು. ೩. ಹೆದರುವ ವ್ಯಕ್ತಿ.

**ಅೞ್(ೞ್,ಳು,ೞು)** (ಕ್ರಿ). ೧. ರೋದನ ಮಾಡು. (ನಾ). ೨. ರೋದನ.

**ಅೞ(ಳ)ಲ್(ಲು)** (ಕ್ರಿ). ೧. ದುಃಖಪಡು. (ನಾ). ೨. ವ್ಯಥೆ. ೩. ಭಯ. ~ಪಾಡು = ದುಃಖದ ಸ್ಥಿತಿ.

**ಅೞ(ಳ)ಲ್ಬೆ** (ನಾ). ದುಃಖ.

**ಅೞಿ(ಳಿ)** (ಕ್ರಿ). ೧. ನಾಶವಾಗು. ೨. ಮರೆಯಾಗು. ೩. ನಾಶಪಡಿಸು. (ನಾ). ೪. ನಾಶ. ೫. ಅಲ್ಪತನ. ೬. ಅಳತೆ ಪಾತ್ರೆಯ ತಳದಲ್ಲಿ ನಿಲ್ಲುವ ದ್ರವ. ~ಬ(ಯೊ)ಡಲ್ = ನಶ್ವರವಾದ ದೇಹ. ~ಕ = ನೀಚ; ಕೆಡುಕ. ~ಚಟ್ಟ = ಹೀನವಾದ ಶಿಷ್ಯತನ. ~ನೆತ್ತಿ = ಕೆಟ್ಟಬರಹದಿಂದ ಕೂಡಿದ್ದ ಹಣೆ; ದುರದೃಷ್ಟ.

~ಬಿಡು = ಎಣ್ಣೆ ಮೊದಲಾದ ದ್ರವ್ಯಗಳನ್ನು ತುಂಬಿ ಚೆಲ್ಲುವಂತೆ ಅೞೆ. ~ಬೀೞು =ಅೞಿಬಿಡು. ~ಬೇನೆ= ೧. ಸ್ವಲ್ಪನೋವು. ೨. ಕೆಟ್ಟರೋಗ. ~ಮಂತ್ರ =೧. ಹೀನವಾದ ಮಂತ್ರ. ೨. ಹೀನವಾದ ಮಂತ್ರಾಲೋಚನೆ. ~ಮನ = ೧. ದುರ್ಬಲವಾದ ಮನಸ್ಸು. ೨. ದುರ್ಬಲವಾದ ಮನಸ್ಸುಳ್ಳವನು.

ಅೞಿ(ಳಿ)ಪ (ನಾ). ೧. ನಾಶಮಾಡುವವನು. ೨. ಅಲ್ಪನಾದವನು.

ಅೞಿ(ಳಿ)ಪು(ವು,ಹು) (ಕ್ರಿ). ೧. ನಾಶಮಾಡು. (ನಾ). ೨. ನಾಶ. ೩. ಜೀರ್ಣವಾಗಿರುವಿಕೆ.

ಅೞು(ಳು)ಹ (ನಾ). ಅಳುವಿಕೆ.

ಅೞ್ಕ(ಳ್ಕ)ಜ (ನಾ). ೧. ಹೊಟ್ಟೆಕಿಚ್ಚು; ಅಸೂಯೆ. ೨. ಆಶ್ಚರ್ಯ.

ಅೞ್ಕಱ್(ರ,ರೆ,ಱು) (ಕ್ರಿ). ೧. ಪ್ರೀತಿ ತೋರು. (ನಾ). ೨. ಪ್ರೀತಿ.

ಅೞ್ಕ(ಳ್ಕ)ವೆ (ನಾ). ಪರಾಕ್ರಮ.

ಅೞ್ಕು(ಳ್ಕು) (ಕ್ರಿ). ೧. ಜೀರ್ಣವಾಗು. (ನಾ). ೨. ಜೀರ್ಣಿಸಿದ ಸ್ಥಿತಿ. ~ಅಮೆ = ಅಜೀರ್ಣವಾಗಿರುವುದು. ~ಆಡು = ೧. ಪೂರ್ತಿ ನಷ್ಟವಾಗು. ೨. ಲಯಗೊಳಿಸು.

ಅೞ್ಕೆ(ಳ್ಕೆ) = ಅೞುಹ.

ಅೞ್ಗು(ಳ್ಗು) (ಕ್ರಿ). ೧. ಲಯವಾಗು. ೨. ಕುಗ್ಗು. ~ಇಸು = ೧. ಕ್ಷೀಣಿಸು. ೨. ಅಡಗಿಸು; ಹೋಗಲಾಡಿಸು.

ಅೞ್ತಿ(ಳ್ತಿ) (ನಾ). ೧. ಪ್ರೀತಿ. ೨. ಸಂತೋಷ. ~ಕು(ಗು)ಂದು = ಆಸಕ್ತಿ ಗುಂದು. ~ಪ(ವ)ಡು = ೧. ಸಂತೋಷಿಸು. ೨. ಪ್ರೀತಿಸು.

ಅೞ್ತಿ(ಳ್ತಿ)ಗೆ (ನಾ). ೧. ಪ್ರೀತಿಯುಳ್ಳವಳು. ೨. ಸಲ್ಲೆ; ಪ್ರೀತಿಪಾತ್ರಳು.

ಅೞ್ದು(ಳ್ದು) (ಕ್ರಿ). ನೆನೆಯಿಸು; ಅದ್ದು.

ಅೞ್ಟು(ಳ್ಟು) = ಅಣ್ಟು.

ಅೞ್ವು(ಳ್ವು) (ಕ್ರಿ). ೧. ಸುಡು. ೨. ವ್ಯಾಪಿಸು.



ಆ (ನಾ). ಕನ್ನಡ ವರ್ಣಮಾಲೆಯ ಎರಡನೆಯ ವರ್ಣ; ಆಕಾರ.

ಆ(ಂ)ಕೆ (ನಾ). ೧. ಎದುರಿಸುವಿಕೆ; ಪ್ರತಿಭಟನೆ. ೨. ಆಸರೆ; ಊರೆ. ~ಗೆಯ್ = ೧. ಊರೆಯಾಗಿ ಕೊಡು. ೨. ನಮುಸ್ಕರಿಸು.

ಆಂಗಿಕ (ಗು). ಶರೀರಕ್ಕೆ ಸಂಬಂಧಿಸಿದ.

ಆಂಗೀರಸ (ನಾ). ೧. ಅಂಗೀರಸ್ ವಂಶದವನು. ೨. ದೇವತೆಗಳ ಗುರುವಾದ ಬೃಹಸ್ಪತಿ. ೩. ಅರುವತ್ತು ಸಂವತ್ಸರಗಳಲ್ಲಿ ಆರನೆಯದು.

ಆಂಗುಲಿ (ನಾ). ಹಸುವನ್ನು ಕೊಲ್ಲುವವನು.

ಆಂಗೊಳಗು (ನಾ). ಹಸುವಿನ ಗೊರಸು.

ಆಂಗ್ಲ (ನಾ). ೧. ಇಂಗ್ಲಿಷ್ ಜನಾಂಗದವನು. (ಗು). ೨. ಇಂಗ್ಲಿಷ್ ಜನಾಂಗದವನಿಗೆ ಸಂಬಂಧಿಸಿದ.

ಆಂಡಾರಿ (ನಾ). ಭಕ್ತ; ಶರಣ.

ಆಂಡಿ (ನಾ). ಶೈವಸಂನ್ಯಾಸಿ; ಜಂಗಮ.

ಆಂತರ (ಗು). ಒಳಗಿನ; ನಡುವಣ.

ಆಂತರ್ಯ (ನಾ). ೧. ಒಳಗುಟ್ಟು. ೨. ಅಂತರಂಗದ ಸ್ನೇಹ. ೩. ಮನಸ್ಸು.

ಆಂತ್ರ (ನಾ). ೧. ಕರುಳು. (ಗು). ೨. ಕರುಳಿಗೆ ಸಂಬಂಧಿಸಿದ.

ಆಂದುಗಲ್ಲು (ನಾ). ೧. ಹೊರೆಯನ್ನು ಇಳಿಸಲು ನೆಟ್ಟಿರುವ ಹಾಸುಗಲ್ಲು. ೨. ಬೀಸುವ ಕಲ್ಲು.

ಆಂದೋಲ(ಳ) (ನಾ). ೧. ತೂಗಾಡುವುದು. ೨. ಉಯ್ಯಾಲೆ. ೩. ಪಲ್ಲಕ್ಕಿ. ೪. ಚಂಚಲತೆ.

ಆಂದೋಲಕ (ನಾ). ೧. ತೂಗಾಡುವಿಕೆ. ೨. ಗಡಿಯಾರದ ಮುಳ್ಳುಗಳನ್ನು ನಿಯಂತ್ರಿಸುತ್ತ ಚಲಿಸುವ ಲೋಲಕ ದಂಡ.

ಆಂದೋಲ(ಳ)ನ ೧. = ಆಂದೋಲ. ೨. ಚಳುವಳಿ.

ಆಂದೋಲಿ(ಳಿ)ತ (ನಾ). ೧. ತೂಗಾಟ. ೨. ಉಯ್ಯಾಲೆ ಆಟ. (ಗು). ೩. ತೂಗಾಡಿಸಲ್ಪಟ್ಟ.

ಆಂಧಸಿಕ (ನಾ). ಅಡಿಗೆಯವನು.

ಆಂಧ್ಯ (ನಾ). ೧. ಕುರುಡು. ೨. ಕತ್ತಲು.

ಆಂಧ್ರ (ನಾ). ೧. ತೆಲುಗು ಭಾಷೆ. ೨. ತೆಲುಗು ದೇಶ. ೩. ತೆಲುಗು ದೇಶದವನು.

ಆಂಬೊಡೆ (ನಾ). ಒಂದು ಬಗೆಯ ವಡೆ.

ಆಂಶಿಕ (ಗು). ಅಂಶಕ್ಕೆ ಮಾತ್ರ ಸಂಬಂಧಿಸಿದ; ಅಪೂರ್ಣವಾದ.

ಆಕಂಪನ (ನಾ). ನಡುಕ; ಅಲ್ಲಾಟ.

ಆಕಂಪಿತ (ಗು). ನಡುಗಿಸಲ್ಪಟ್ಟ.

ಆಕಂಪಿಸು (ಕ್ರಿ). ನಡುಗು; ಅಲ್ಲಾಡು.

ಆಕರ (ನಾ). ೧. ಬಾಯಾರಿಕೆ. ೨. ಉತ್ಪತ್ತಿ ಸ್ಥಾನ. ೩. ಗುಂಪು. ೪. ಗಣಿ. ೫. ಹಳ್ಳಿ. ೬. ಅವಕಾಶ. ೭. ಮರದಲ್ಲಿ ಅಥವಾ ಲೋಹದಲ್ಲಿ ರಂಧ್ರವನ್ನು ಕೊರೆಯುವ ಸಾಧನ; ಬೈರಿಗೆ. ~ಗ್ರಂಥ = ಆಧಾರವಾದ ಗ್ರಂಥ. ~ಮಂಡಳಿಕ = ಗಣಿಗಳ ಮೇಲ್ವಿಚಾರಕ.

ಆಕರಣ(ಣೆ) (ನಾ). ೧. ಕರೆಯುವುದು; ಆಹ್ವಾನ. ೨. ಶೇಖರಣೆ. ೩. ಕಂದಾಯ ನಿರ್ಧಾರ.

ಆಕರಿಸು (ಕ್ರಿ). ೧. ಅಂಗೀಕರಿಸು; ಸ್ವೀಕರಿಸು. ೨. ಬರಮಾಡಿಕೊ. ೩. ತೆಗೆದುಕೊ. ೪. ಭಯಗೊಳ್ಳು. ೫. ನಿಗ್ರಹಿಸು. ೬. ಬಿಟ್ಟುಬಿಡು. ೭. ಆಕಾರವನ್ನು ತಾಳು. ೮. ಆಸೆಪಡು.

ಆಕರ್ಣನ (ನಾ). ಕಿವಿಯಿಂದ ಕೇಳುವುದು.

ಆಕರ್ಣಿಸು (ಕ್ರಿ). ಕಿವಿಯಿಂದ ಕೇಳು.

ಆಕರ್ಷ (ನಾ). ೧. ತನ್ನ ಕಡೆಗೆ ಎಳೆಯುವುದು. ೨. ಬಿಲ್ಲಿಗೆ ಬಾಣವನ್ನು ಹೂಡಿ ಪ್ರಯೋಗ

ಕ್ಕಾಗಿ ಸೆಳೆಯುವುದು. ೩. ಮನಸ್ಸು ಪರವಶವಾಗುವುದು. ೪. ಪಗಡೆಯ ಆಟ, ಕಾಯಿ, ದಾಳ, ಹಾಸು ಮೊದಲಾದುವು.

**ಆಕರ್ಷಕ** (ನಾ). ೧. ಅಯಸ್ಕಾಂತ. (ಗು). ೨. (ಮನಸ್ಸನ್ನು) ಸೆಳೆಯುವ.

**ಆಕರ್ಷಣ(ಣೆ)** (ನಾ). ೧. ಸೆಳೆತ. ೨. ಸುಲಿಗೆ.

**ಆಕರ್ಷಿ** (ನಾ). ಬಾವಿಯಿಂದ ನೀರನ್ನು ಮೇಲಕ್ಕೆ ಎತ್ತುವ ಸಾಧನ; ಏತ.

**ಆಕಲನ(ನೆ)** (ನಾ). ೧. ಶೇಖರಿಸುವುದು. ೨. ಗ್ರಹಿಸುವುದು; ತಿಳಿಯುವುದು.

**ಆಕಲಿ(ಳಿ)ತ** (ಗು). ೧. ಹೊಂದಿಕೊಂಡ. ೨. ಗ್ರಹಿಸಿದ. ೩. ಲೆಕ್ಕಿಸಿದ.

**ಆಕಲಿ(ಳಿ)ಸು** (ಕ್ರಿ). ೧. ಗ್ರಹಿಸು. ೨. ಹಿಡಿ.

**ಆಕಲ್ಪ** (ನಾ). ೧. ಆಭರಣ. (ಅ). ೨. ಕಲ್ಪದ ವರೆಗೆ.

**ಆಕಲ್ಯ** (ನಾ). ರೋಗ.

**ಆಕಸ್ಮಿಕ** (ನಾ). ೧. ಅನಿರೀಕ್ಷಿತವಾದ ಘಟನೆ. ೨. ಅಪಘಾತ. (ಗು). ೩. ಅನಿರೀಕ್ಷಿತವಾದ.

**ಆಕಳ್(ಳು)** (ನಾ). ೧. ಗೋಸಮುದಾಯ. ೨. ಹಸು.

**ಆಕಳಿ** (ನಾ). ಕೀಳಾದ ವಸ್ತು.

**ಆಕಳಿಕೆ** = ಆಗುಳ್.

**ಆಕಾಂಕ್ಷಿಸು** (ಕ್ರಿ). ಬಯಸು.

**ಆಕಾಂಕ್ಷೆ** (ನಾ). ಬಯಕೆ; ಅಪೇಕ್ಷೆ.

**ಆಕಾರ** (ನಾ). ೧. ಆ ಎಂಬ ವರ್ಣ. ೨. ಆಕೃತಿ. ೩. ಮನಸ್ಸಿನ ಭಾವಗಳನ್ನು ಹೊರಗೆಡಹುವ ಮುಖಚರ್ಯೆ, ಅಂಗ ಚೇಷ್ಟೆ ಮುಂತಾದುವು. ೪. ಸೂಚನೆ; ಚಿಹ್ನೆ. ೫. ಕೃಷಿಕ್ಷೇತ್ರದ ವಿಸ್ತಾರ. ೬. ಜಮೀನಿನ ಕಂದಾಯ ಅಥವಾ ಸರಕಾರಕ್ಕೆ ಕೊಡ ಬೇಕಾದ ತೆರಿಗೆ. ೭. ಉತ್ಪತ್ತಿ. ~**ಪೂಜೆ** = ವಿಗ್ರಹಾರಾಧನೆ; ಮೂರ್ತಿಪೂಜೆ.

**ಆಕಾರಣ** (ನಾ). ೧. ಬರಮಾಡಿಕೊಳ್ಳುವುದು. ೨. ಸವಾಲು ಹಾಕುವುದು.

**ಆಕಾರಣೆ** (ನಾ). ಉತ್ಪತ್ತಿ.

**ಆಕಾಲಿ(ಳಿ)ಕಿ** (ನಾ). ೧. ಕ್ಷಣಿಕವಾದದ್ದು. ೨. ಮಿಂಚು.

**ಆಕಾಶ** (ನಾ). ೧. ಪಂಚಭೂತಗಳಲ್ಲಿ ಒಂದು; ಗಗನ. ೨. ಶೂನ್ಯಪ್ರದೇಶ. ~**ಕೇಶ** = ಆಕಾಶವೇ ತಲೆಗೂದಲಾಗುಳ್ಳವನು; ಶಿವ. ~**ಕೊಳವೆ** = ಆಕಾಶದ ಕಡೆಗೆ ಬಿಡುವ ಮದ್ದಿನ ಬಾಣ. ~**ಗಂಗೆ** = ದೇವ ಗಂಗಾನದಿ. ~**ಗೂಡು** = ದೀಪಾವಳಿ ಮುಂತಾದ ಹಬ್ಬದ ದಿನಗಳಲ್ಲಿ ಎತ್ತರವಾದ ಕಂಬದ ತುದಿಯಲ್ಲಿ ತೂಗುಬಿಡುವ ದೀಪ; ಗೂಡುದೀಪ. ~**ಪುರಾಣ** = ನಿರಾಧಾರ ವಾದ ಕಥೆ; ಕೆಲಸಕ್ಕೆ ಬಾರದ ಮಾತು. ~**ಪುಷ್ಪ** = ಅತ್ಯಂತ ಅಸಂಭವವಾದ ವಸ್ತು; ಗಗನಕುಸುಮ. ~**ಬಿಲ್ಲು** = ಕಾಮನ ಬಿಲ್ಲು. ~**ಯಾನ** = ೧. ಆಕಾಶಮಾರ್ಗದಲ್ಲಿ ಮಾಡುವ ಪ್ರಯಾಣ. ೨. ಆಕಾಶದಲ್ಲಿ ಪ್ರಯಾಣ ಮಾಡುವ ಸಾಧನ. ~**ವಾಣಿ** = ೧. ಗಗನದಲ್ಲಿ ಕೇಳಿಬರುವ ಶಬ್ದ; ಅಶರೀರವಾಣಿ. ೨. ತಂತಿಯಿಲ್ಲದೆ ಬರುವ ಸಮಾಚಾರ ಮುಂತಾದುವು. ೩. ರೇಡಿಯೋ; ಬಾನುಲಿ.

**ಆಕಾಶಗಾಮಿ** (ನಾ). ಅಂತರಿಕ್ಷದಲ್ಲಿ ಸಂಚರಿಸು ವವನು; ದೇವತೆ.

**ಆಕಿಂಚಿನ್ಯ** (ನಾ). ತನ್ನದಾಗಿ ಏನೂ ಇಲ್ಲದಿರು ವುದು; ಬಡತನ.

**ಆಕೀರ್ಣ** (ಗು). ಹರಡಿದ; ತುಂಬಿದ.

**ಆಕುಂಚನ** (ನಾ). ಮುದುರುವುದು; ಕುಗ್ಗು ವುದು.

**ಆಕುಂಚಿಸು** (ಕ್ರಿ.) ೧. ಕುಗ್ಗಿಸು; ಸಂಕೋಚ ಮಾಡು. ೨. ಕಿರಿದಾಗು.

**ಆಕುಲ(ಳ)** (ನಾ). ೧. ಕಳವಳ. (ಗು). ೨. ವ್ಯಾಕುಲವುಳ್ಳ; ಕಳವಳವುಳ್ಳ. ೩. ಅಸ್ತವ್ಯಸ್ತವಾದ. ೪. ತುಂಬಿದ.

ಆಕುಲಿತೆ (ನಾ). ಚಿಂತೆ; ಕೊರಗು.
ಆಕುಲೆ(ಳೆ) (ನಾ). ಚಿಂತೆಗೆ ಒಳಗಾದವಳು.
ಆಕೂತ (ನಾ). ೧. ಅಭಿಪ್ರಾಯ. ೨. ಭಾವನೆ.
ಆಕೃತಿ (ನಾ). ೧. ಆಕಾರ. ೨. ದೇಹ. ೩. ಬುಡಕಟ್ಟು; ಪಂಗಡ. ೪. ಮಂತ್ರ ಸಾಧನಗಳಲ್ಲಿ ಒಂದು.
ಆಕೃಷ್ಟ (ಗು). ಆಕರ್ಷಿಸಲ್ಪಟ್ಟ.
ಆಕೆವಾಳ (ನಾ). ಶೂರ; ವೀರ.
ಆಕೇಕರ (ನಾ). ಅರೆತೆರೆದ ಕಡೆಗಣ್ಣು.
ಆಕ್ರಂದ (ನಾ). ಯುದ್ಧ; ಕಾಳಗ.
ಆಕ್ರಂದನ (ನಾ). ಗಟ್ಟಿಯಾಗಿ ಅಳುವುದು.
ಆಕ್ರಂದಿಸು (ಕ್ರಿ). ಗಟ್ಟಿಯಾಗಿ ಅಳು; ಗೋಳಿಡು.
ಆಕ್ರಮಣ(ಣೆ) (ನಾ). ೧. ಮೇಲೆ ಬೀಳುವುದು. ೨. ದಾಳಿ ನಡೆಸುವುದು. ೩. ಮೀರುವುದು.
ಆಕ್ರಮಿಸು (ಕ್ರಿ). ೧. ಮೇಲೆ ಬೀಳು. ೨.ವ್ಯಾಪಿಸು. ೩. ಮೀರು. ೪. ಹೆಜ್ಜೆಯಿಡು.
ಆಕ್ರಾಂತ (ನಾ). ೧. ವಶಪಡಿಸಿಕೊಂಡದ್ದು. ೨. ಮುತ್ತಿಗೆ ಹಾಕಲ್ಪಟ್ಟದ್ದು.
ಆಕ್ರೀಡ (ನಾ). ೧. ರಾಜೋದ್ಯಾನ. ೨. ವಿನೋದ. ೩. ಸಾರ್ವಜನಿಕರಿಗಾಗಿ ರಾಜನಿಂದ ಏರ್ಪಡಿಸಲ್ಪಟ್ಟ ಉದ್ಯಾನವನ.
ಆಕ್ರೋಶ (ನಾ). ೧. ದುಃಖದಿಂದ ಗಟ್ಟಿಯಾಗಿ ಕೂಗಿಕೊಳ್ಳುವುದು. ೨. ಬೈಗಳು. ೩. ಸಿಟ್ಟು.
ಆಕ್ಷಿಪ್ತ (ನಾ). ೧. ಹಾಸ್ಯ. ೨. ಕೆಟ್ಟವನು. (ಗು). ೩. ಎಸೆಯಲ್ಪಟ್ಟ. ೪. ಸೇರಿದ.
ಆಕ್ಷೇಪ (ನಾ). ೧. ಎಸೆಯುವುದು. ೨. ನಡುಕ. ೩. ಮೂದಲಿಸುವುದು. ೪. ಸಂಶಯ. ೫. = ಆಕ್ಷೇಪಣೆ.
ಆಕ್ಷೇಪಕ (ನಾ). ೧. ಬೈಯುವುದು. ೨. ಆಕ್ಷೇಪಿಸುವವನು. (ಗು). ೩. ಅಡ್ಡಿ ಬರುವ. ೪. ಎಸೆಯುವ. ೫. ನಿಂದಿಸುವ.
ಆಕ್ಷೇಪಣೀಯ (ಗು). ಪ್ರತಿಭಟಿಸಲು ತಕ್ಕುದಾದ.
ಆಕ್ಷೇಪಣೆ (ನಾ). ಅಭಿಪ್ರಾಯವನ್ನಾಗಲೀ ಕೆಲಸವನ್ನಾಗಲೀ ಪ್ರತಿಭಟಿಸಿ ನುಡಿಯುವುದು; ನಿಂದೆ.
ಆಖಂಡಲ(ಳ) (ನಾ). ದೇವೇಂದ್ರ. ~ತನಯ = ೧. ಇಂದ್ರನ ಮಗ. ೨. ವಾಲಿ. ೩. ಅರ್ಜುನ. ೪. ಜಯಂತ.
ಆಖರಿ = ಆಖೈರು.
ಆಖಾತ (ನಾ). ನೈಸರ್ಗಿಕವಾದ ಕೊಳ.
ಆಖು (ನಾ). ಇಲಿ. ~ರಥ = ಇಲಿಯನ್ನು ರಥವನ್ನಾಗಿ ಉಳ್ಳವನು; ಗಣಪತಿ.
ಆಖುದ್ವಿಷ (ನಾ). ಇಲಿಯ ವೈರಿ; ಬೆಕ್ಕು.
ಆಖುಭುಕ್ಕು (ನಾ). ಇಲಿಯನ್ನು ತಿನ್ನುವ ಪ್ರಾಣಿ; ಬೆಕ್ಕು.
ಆಖೇಟ (ನಾ). ೧. ಬೇಟೆ. ೨. ಭಯ.
ಆಖೈರು (ನಾ). ಕಡೆ; ಕೊನೆ. ~ಸಾಲು = ವರ್ಷದ ಕೊನೆ.
ಆಖ್ಯಾತ (ಗು). ಪ್ರಸಿದ್ಧವಾದ. ~ಪದ = ಕ್ರಿಯಾಪದ; ಧಾತುವಿಗೆ ಆಖ್ಯಾತ ಪ್ರತ್ಯಯವು ಸೇರುವುದರಿಂದ ಆಗುವ ಪದ.
ಆಖ್ಯಾತಿ (ನಾ). ೧. ಹೇಳುವುದು; ನಿರೂಪಣೆ. ೨. ಕೀರ್ತಿ; ಯಶಸ್ಸು.
ಆಖ್ಯಾತಿಸು (ಕ್ರಿ). ವಿವರಿಸು; ಹೇಳು.
ಆಖ್ಯಾನ (ನಾ). ೧. ನಿರೂಪಣೆ. ೨. ಹೆಸರು. ೩. ಕಥೆ, ಪುರಾಣ ಮತ್ತು ಇತಿಹಾಸದಲ್ಲಿ ಬರುವ ವೃತ್ತಾಂತ ವಿಶೇಷಗಳು.
ಆಖ್ಯಾಯಕ (ನಾ). ೧. ಹೇಳುವವನು. ೨. ದೂತ.
ಆಖ್ಯಾಯಿಕೆ (ನಾ). ಕಥೆ.
ಆಖ್ಯೆ (ನಾ). ೧. ಹೆಸರು. ೨. ಪ್ರಖ್ಯಾತಿ.
ಆಖ್ಯೇಯ (ಗು). ಹೇಳಲು ಅರ್ಹವಾದ.
ಆಗಂತು (ನಾ). ೧. ಅತಿಥಿ. (ಗು). ೨. ಅನಿರೀಕ್ಷಿತವಾಗಿ ಬಂದ.

**ಆಗಂತುಕ** (ನಾ). ೧. ಅನಿರೀಕ್ಷಿತವಾಗಿ ಬಂದವನು; ಅತಿಥಿ. (ಗು). ೨. ಅನಿರೀಕ್ಷಿತವಾಗಿ ಬಂದ.

**ಆಗಗಾಡಿ** (ನಾ). ಹೊಗೆಬಂಡಿ.

**ಆಗಡ** (ನಾ). ಕೆಟ್ಟ ಕೆಲಸ.

**ಆಗಡಃ(ಲ್,ಳ್)** (ಅ). ೧. ಆ ಸಮಯದಲ್ಲಿ. ೨. ಯಾವ ಸಮಯದಲ್ಲೂ; ಯಾವಾಗಲೂ.

**ಆಗತ** (ಗು). ೧. ಬಂದ; ಸೇರಿದ. ೨. ಪ್ರಾಪ್ತವಾದ.

**ಆಗತಿ** (ನಾ). ೧. ಬರುವುದು. ೨. ಲಾಭ. ೩. ಅನಿರೀಕ್ಷಿತವಾದುದು.

**ಆಗತ್ಯ** = ಆಗಾತ್ಯ.

**ಆಗಮ** (ನಾ). ೧. ಬರುವುದು. ೨. ಪೂರ್ವದಿಂದಲೂ ಬಂದ ಸಂಪ್ರದಾಯದ ಗ್ರಂಥ. ೩. ದೇವಪೂಜಾತಂತ್ರ ವಿಧಾನವನ್ನು ತಿಳಿಸುವ ಶಾಸ್ತ್ರ. ೪. (ವ್ಯಾಕ) ಸಂಧಿಯಲ್ಲಿ ನಡುವೆ ಒಂದು ವರ್ಣ ಅಥವಾ ವರ್ಣಸಮುದಾಯವು ಹೊಸದಾಗಿ ಬಂದು ಸೇರುವುದು. ೫. ತಿಳಿವಳಿಕೆ. ೬. ಅಧಿಕಾರಪತ್ರ.

**ಆಗಮಜ್ಞ** (ನಾ). ಆಗಮಗಳನ್ನು ತಿಳಿದವನು.

**ಆಗಮನ** (ನಾ). ಬರುವುದು.

**ಆಗಮಿ** (ನಾ). ಹೊಸದಾಗಿ ಬಂದವನು.

**ಆಗಮಿಕ**(ನಾ). ೧. ಆಗಮಗಳನ್ನು ತಿಳಿದವನು. ೨. ವಿಗ್ರಹಪ್ರತಿಷ್ಠೆ ಮೊದಲಾದ ಆಗಮಶಾಸ್ತ್ರವನ್ನು ಅರಿತವನು; ದೇವಸ್ಥಾನದ ಪೂಜಾರಿ

**ಆಗಮಿಸು** (ಕ್ರಿ). ಬಂದು ಸೇರು.

**ಆಗಮೆ** (ನಾ). ೧. ವ್ಯವಸಾಯ. (ಅ). ೨. ಆ ಕೂಡಲೇ.

**ಆಗರ** (ನಾ). ೧. ಆಧಾರವಾದ ಸ್ಥಳ; ಗಣಿ. ೨. ಮನೆ. ೩. ಸ್ಥಳ. ೪. ತೋಟ. ೫. ಉಪ್ಪಿನ ಮಡಿ.

**ಆಗರ್ಭ** (ಅ) ಗರ್ಭದಿಂದಲೇ. ~ಶ್ರೀಮಂತ = ಹುಟ್ಟಿದಂದಿನಿಂದಲೂ ಐಶ್ವರ್ಯವಂತ.

**ಆಗಸ** = ಆಕಾಶ. ~ಚ(ವ)ಟ್ಟೆಗ = ಆಕಾಶದಲ್ಲಿ ಸಂಚರಿಸುವವನು; ಖೇಚರ: ದೇವತೆ. ~ಮ(ವ)ಣಿ = ಗಗನಮಣಿ; ಸೂರ್ಯ.

**ಆಗಸ್ಸು** (ನಾ). ೧. ಅಪರಾಧ. ೨. ಪಾಪ.

**ಆಗಾತ್ಯ**(ನಾ). ಬಹಳನೋವು, ಹಿಂಸೆ, ತೊಂದರೆಗಳುಂಟಾಗಿವೆಯೆಂದು ನಟಿಸುವುದು.

**ಆಗಾಮಿ** (ನಾ). ೧. ಈ ಜನ್ಮದಲ್ಲಿ ಮಾಡುವ ಕರ್ಮ. (ಗು). ೨. ಮುಂದಿನ.

**ಆಗಾಮಿಕ** (ನಾ). ೧. ಮುಂದೆ ಬರಬಹುದಾದ ಆದಾಯ. (ಗು). ೨. ಮುಂದೆ ಬರಲಿರುವ.

**ಆಗು** (ಕ್ರಿ). ೧. ಒದಗಿ ಬರು; ಉಂಟಾಗು. ೨. ಜರುಗು; ನಡೆ. ೩. ವೃದ್ಧಿಹೊಂದು. ೪. ನೆರವೇರು; ಮುಗಿ. ೫. ಸರಿಯಾಗು; ಒಪ್ಪು. ೬. ಸಾಧ್ಯವಾಗು. ೭. ದೊರಕು; ಲಭಿಸು. ೮. ನೆರವಾಗು. ೯. ಉಳಿ; ಸ್ಥಿರವಾಗಿ ನಿಲ್ಲು. ೧೦. ಪರಿಣಮಿಸು; ಬದಲಾವಣೆ ಹೊಂದು. ೧೧. ಇರು; ವರ್ತಿಸು. ೧೨. ಪ್ರೀತಿಯಿರು; ಬೇಕಾಗಿರು. ೧೩. ಸಂಬಂಧವಿರು. ೧೪. ನಿರ್ಮಾಣವಾಗು; ರಚಿತವಾಗು. (ನಾ). ೧೫. ಆಗುವಿಕೆ. ೧೬. ಲಾಭ; ಜಯ. ೧೭. ಏಳಿಗೆ. ~ಹೋಗು = ಜಯಾಪಜಯ; ಲಾಭನಷ್ಟ.

**ಆಗುಹ** (ನಾ). ಆಗುವಿಕೆ; ಆಗುವುದು.

**ಆಗುಳ್(ಳಿ)** (ನಾ). ಆಕಳಿಕೆ; ಆಕಳಿಸುವುದು.

**ಆಗೇರ** (ನಾ). ಉಪ್ಪು ಮಾಡುವವನು; ಉಪ್ಪಲಿಗ; ಉಪ್ಪಾರ.

**ಆಗ್ನೇಯ** (ನಾ). ೧. ಪೂರ್ವಕ್ಕೂ ದಕ್ಷಿಣಕ್ಕೂ ನಡುವೆ ಇರುವ ದಿಕ್ಕು. (ಗು). ೨. ಅಗ್ನಿಗೆ ಸಂಬಂಧಿಸಿದ. ~ಅಸ್ತ್ರ = ಅಗ್ನಿಮಂತ್ರದಿಂದ ಅಭಿಮಂತ್ರಿಸಿ ಬಿಡುವ ಬಾಣ.

**ಆಗ್ರ** (ನಾ). ೧. ಮನೆ. ೨. ಸುತ್ತುಮುತ್ತಿನ ಪ್ರದೇಶ.

**ಆಗ್ರಹ** (ನಾ). ೧. ಹಿಡಿಯುವುದು; ತೆಗೆದುಕೊಳ್ಳುವುದು. ೨. ಹಟ; ಒತ್ತಾಯ. ೩. ಆಸಕ್ತಿ; ವಿಶ್ವಾಸ. ೪. ಕೋಪ.

**ಆಘಟಿತ** (ಗು). ಜೋಡಿಸಿದ; ಕೂಡಿದ.
**ಆಘಾಟ** (ನಾ). ೧. ಎಲ್ಲೆ; ಮೇರೆ. ೨. ಉತ್ತರಣೆಯ ಗಿಡ.
**ಆಘಾತ** (ನಾ). ೧. ಪೆಟ್ಟು; ಹೊಡೆತ. ೨. ಹಾನಿ; ಕೇಡು.
**ಆಘೂರ್ಣಿಸು** (ಕ್ರಿ). ಶಬ್ದವಾಗು; ಮೊಳಗು.
**ಆಘೋಷಣ** (ನಾ). ೧. ಗಟ್ಟಿಯಾಗಿ ಕೂಗಿ ಸಾರುವುದು. ೨. ಒಂದು ಬಗೆಯ ಚರ್ಮ ವಾದ್ಯ.
**ಆಘ್ರಾಣ** (ನಾ). ವಾಸನೆ ನೋಡುವುದು; ಮೂಸುವುದು.
**ಆಘ್ರಾಣಿತ** (ಗು). ವಾಸನೆ ನೋಡಲ್ಪಟ್ಟ.
**ಆಚಂದ್ರಾರ್ಕಂ** (ಅ). ಚಂದ್ರನೂ ಸೂರ್ಯನೂ ಇರುವವರೆಗೆ; ಶಾಶ್ವತವಾಗಿ.
**ಆಚಮನ** (ನಾ). ಆತ್ಮಶುದ್ಧಿಗೋಸ್ಕರ ಅಂಗೈ ಗುಳಿಯಲ್ಲಿ ಶುದ್ಧೋದಕವನ್ನು ಮಂತ್ರ ಪೂರ್ವಕವಾಗಿ ಕುಡಿಯುವುದು.
**ಆಚರಣ(ಣೆ)** (ನಾ). ೧. ಆಚರಿಸುವುದು; ಅನುಸರಿಸುವುದು. ೨. ಅಭ್ಯಾಸ; ಬಳಕೆ.
**ಆಚಾರ** (ನಾ). ೧. ಕಟ್ಟುಪಾಡು; ನಿಯಮ; ಸಂಪ್ರದಾಯ. ೨. ಒಳ್ಳೆಯ ನಡತೆ. **~ಕಾ(ಗಾ)ಣಿಕೆ** = ಅಕ್ಕಸಾಲಿ, ಬಡಗಿ, ಕಮ್ಮಾರ ಮುಂತಾದ ಕಸಬಿನವರು ಸಲ್ಲಿಸುವ ತೆರಿಗೆ. **~ದೂರ** = ನಡತೆಗೆಟ್ಟವನು; ದುರಾಚಾರಿ.
**ಆಚಾರಿ** (ನಾ). ೧. ಆಚಾರವುಳ್ಳವನು. ೨. ಕಮ್ಮಾರ, ಬಡಗಿ, ಅಕ್ಕಸಾಲಿಗ ಮತ್ತು ಶಿಲ್ಪಿ ಮುಂತಾದ ಕೆಲಸಗಾರರ ಕುಲಕ್ಕೆ ಸೇರಿದವನು.
**ಆಚಾರ್ಯ** (ನಾ). ೧. ಗುರು. ೨. ಪುರೋಹಿತ.
**ಆಚಾರ್ಯೆ** (ನಾ). ಆಚಾರ್ಯತ್ವವನ್ನು ವಹಿಸಿದ ಹೆಂಗಸು; ಉಪಾಧ್ಯಾಯಿನಿ.
**ಆಚಿತ** (ನಾ). ೧. ಒಂದು ಗಾಡಿ ತುಂಬುವಷ್ಟು ತೂಕ. (ಗು). ೨. ಕೂಡಿಸಲ್ಪಟ್ಟ.
**ಆಚು** (ನಾ). ಆವಶ್ಯಕತೆ; ಅಗತ್ಯ; ದರದು. **~ಪೇಚು** = ತೊಡರು; ತೊಂದರೆ; ಅಡ್ಡಿ.
**ಆಚೆ** (ಅ). ೧. ಅತ್ತಕಡೆ; ಆಕಡೆ. ೨. ಅನಂತರ; ಆಮೇಲೆ. ೩. ಹೊರಗಡೆ; ಹೊರಗೆ.
**ಆಚ್ಛನ್ನ** (ಗು). ಮುಚ್ಚಲ್ಪಟ್ಟ; ಮರೆಮಾಡಿದ.
**ಆಚ್ಛಾದನ** (ನಾ). ೧. ಮುಚ್ಚುವುದು; ಮರೆ ಮಾಡುವುದು. ೨. ಹೊದಿಕೆ; ಬಟ್ಟೆ. ೩. ಗೌಸು; ಚೀಲ. ೪. ಮನೆಯ ಮೇಲ್ಛಾವಣಿಗೆ ಆಧಾರವಾದ ಮರದ ಪಟ್ಟಿ.
**ಆಚ್ಛಾದಿತ** = ಆಚ್ಛನ್ನ.
**ಆಚ್ಛೇದ** (ನಾ). ಕತ್ತರಿಸುವುದು; ಕೊಯ್ದು ಹಾಕುವುದು.
**ಆಜನ್ಮ** (ಅ). ೧. ಹುಟ್ಟಿದಂದಿನಿಂದ. ೨. ಜೀವಿತಾವಧಿಯವರೆಗೆ.
**ಆಜವಂಜವ** (ನಾ). ಸಂಸಾರ; ಹುಟ್ಟುಸಾವುಗಳ ಪರಂಪರೆ.
**ಆಜಾನುಬಾಹು** (ನಾ). ೧. ನೇರವಾಗಿ ನಿಂತರೆ ಮಂಡಿಯನ್ನು ಮುಟ್ಟುವಷ್ಟು ನೀಳವಾದ ತೋಳು. ೨. ಮಂಡಿಯನ್ನು ಮುಟ್ಟುವಷ್ಟು ನೀಳವಾದ ತೋಳುಳ್ಳವನು.
**ಆಜಾನೇಯ** (ನಾ). ೧. ಉತ್ತಮ ಜಾತಿಯ ಕುದುರೆ. (ಗು). ೨. ಉತ್ತಮ ಜಾತಿಯ.
**ಆಜಾರಿ** (ನಾ). ರೋಗ.
**ಆಜಿ** (ನಾ). ೧. ಯುದ್ಧ. ೨. ಯುದ್ಧರಂಗ. ೩. ಪಣ ಕಟ್ಟಿ ಸ್ಪರ್ಧೆಯಿಂದ ಓಡುವುದು. ೪. ಬೈಗಳು.
**ಆಜೀವ** (ನಾ). ೧. ವೃತ್ತಿ; ಜೀವನೋಪಾಯ. ೨. ಜೈನಸಾಧು; ಶ್ರಮಣ. (ಅ). ೩. ಜೀವವಿರುವವರೆಗೆ; ಬದುಕಿರುವವರೆಗೆ. **~ಕ** = ೧. ಭಿಕ್ಷುಕ. ೨. ಚೆತ್ತಲೆಯಾಗಿರುವ ಪರಿವ್ರಾಜಕ. **~ಸದಸ್ಯ** = ಬದುಕಿರುವವರೆಗೂ ಸದಸ್ಯನಾಗಿರುವವನು.
**ಆಜೀವಿಕೆ** (ನಾ). ಜೀವನೋಪಾಯ; ವೃತ್ತಿ.

ಆಜುಬಾಜು (ನಾ). ನೆರೆಹೊರೆ; ಅಕ್ಕಪಕ್ಕ.

ಆಜೂಜುವಾರಿ (ನಾ). ಅನುಸರಣೆ; ದೈನ್ಯ ವರ್ತನೆ.

ಆಜ್ಞೆ (ನಾ). ೧. ಅಪ್ಪಣೆ; ನಿರ್ದೇಶ. ೨. ಅವಕಾಶ; ಅನುಮತಿ. ೩. ನ್ಯಾಯಾಸ್ಥಾನದ ತೀರ್ಪು.

ಆಜ್ಯ (ನಾ). ತುಪ್ಪ. ~ಆಹುತಿ = ತುಪ್ಪದಿಂದ ಮಾಡುವ ಹೋಮ.

ಆಟ (ನಾ). ೧. ಆಡುವುದು; ಕ್ರೀಡೆ. ೨. ಕುಣಿತ, ನೃತ್ಯ, ನಾಟಕ, ಯಕ್ಷಗಾನ ಮುಂತಾದುವುಗಳ ಪ್ರದರ್ಶನ. ೩. ವ್ಯವಹಾರ; ಕೆಲಸ. ೪. ನಟನೆ; ತೋರಿಕೆ. ~ಆಳಿ =ಆಟದಲ್ಲಿ ಆಸಕ್ತಿಯುಳ್ಳ ವ್ಯಕ್ತಿ; ಕ್ರೀಡಾಶೀಲ. ~ಕಾ(ಗಾ)ಯಿ =೧. ಪಗಡೆ ಮುಂತಾದ ಆಟಗಳಲ್ಲಿ ಉಪಯೋಗಿಸುವ ಕಾಯಿ. ೨. ಆಟದ ಕಾಯಿಯ ಹಾಗೆ ಇತರರು ನಡೆಸಿದಂತೆ ನಡೆಯುವವನು. ~ಕೂಟ = ೧. ನರ್ತನಗೋಷ್ಠಿ. ೨. ಕ್ರೀಡಾಕೂಟ. ~ಪಾಟ =೧. ಆಡುವುದು ಮತ್ತು ಹಾಡುವುದು. ೨. ಆಟ ಮತ್ತು ಪಾಠ. ~ಹೂಡು = ೧. ಆಟವನ್ನು ಆರಂಭಿಸು. ೨. ತಂತ್ರ ಹೂಡು; ನಟನೆ ಮಾಡು.

ಆಟರ್(ರು) (ಕ್ರಿ). ೧. ಮೇಲೆ ಬೀಳು; ಮುತ್ತು. ೨. ಅಟ್ಟು; ಓಡಿಸು. ೩. ಒಟ್ಟಾಗು; ಗುಂಪಾಗು. ೪. ಒದಗು; ಪ್ರಾಪ್ತವಾಗು.

ಆಟಲೆ (ಕ್ರಿ). ೧. ಅಟ್ಟಿಕೊಂಡು ಹೋಗಿ ಹಿಂಸಿಸು. (ನಾ). ೨. ಹಿಂಸೆ; ಕಾಟ.

ಆಟವಿಕ (ನಾ). ೧. ಆಟಗಾರ; ನಟ. ೨. ಅಡವಿಯಲ್ಲಿ ವಾಸಮಾಡುವವನು; ಬೇಡ. ೩. ಧೂರ್ತ.

ಆಟವಿಟ (ನಾ). ಮೋಸಗಾರನಾದ ಅಥವಾ ಕಪಟಿಯಾದ ಜಾರ.

ಆಟಾಳು (ನಾ). ಶಕ್ತ; ಸಮರ್ಥ.

ಆಟಿ (ನಾ). ೧. ಸೌರಮಾನದ ಆಷಾಢಮಾಸ. ೨. ಸರಕುಟಿವೆಂಬ ಹಕ್ಕಿ.

ಆಟಿಕೆ(ಗೆ) (ನಾ). ೧. ಆಟದ ಸಾಮಾನು. ೨. ಆಟ; ಲೀಲೆ.

ಆಟಿಸು (ಕ್ರಿ). ಅಲ್ಲಾಡಿಸು; ತೂಗಾಡಿಸು. ~ಇಸು = ೧. ಬಯಸು; ಆಸೆಪಡು. ೨. ಅಲ್ಲಾಡಿಸು.

ಆಟುಳಿಕ (ನಾ). ಹಿಂಸೆ ಮಾಡುವವನು; ಹಿಂಸಕ.

ಆಟೋಪ (ನಾ). ೧. ಆಡಂಬರ; ಅಬ್ಬರ. ೨. ದರ್ಪ; ಗರ್ವದ ಪ್ರದರ್ಶನ.

ಆಡಂಬರ (ನಾ). ತೋರಿಕೆ; ಡಬಡ್ಡಾಳಿಕೆ.

ಆಡಳಿತ (ನಾ). ಸಂಸ್ಥೆಯ ಅಥವಾ ರಾಜ್ಯದ ಮೇಲ್ವಿಚಾರಣೆ; ಆಳಿಕೆ.

ಆಡಿಕೆ (ನಾ). ೧. ಆಡುವುದು; ಹೇಳಿಕೆ. ೨. ನಿಂದೆ; ದೂರು. ೩. ವಂಚನೆ; ನಟನೆ. ೪. ಚಲನೆ; ಸುಳಿದಾಟ.

ಆಡಿತ್ತು (ನಾ). ೧. ಮಾತನಾಡಿದುದು. ೨. (ಗಾಣ) ಆಡಿದುದು.

ಆಡು (ಕ್ರಿ). ೧. ಕ್ರೀಡಿಸು; ವಿಹರಿಸು. ೨. ಅಲುಗು; ಚಲಿಸು. ೩. ಕುಣಿ; ನರ್ತಿಸು. ೪. ಪಗಡೆ, ಜೂಜು ಮುಂತಾದ ಕ್ರೀಡೆಗಳಲ್ಲಿ ಆಸಕ್ತನಾಗು. ೫. ನುಡಿ; ಹೇಳು. ೬. ಮಾತುಕೊಡು. ೭. ವ್ಯವಹರಿಸು. ೮. ತೆಗಳು; ನಿಂದಿಸು. (ನಾ). ೯. ಆಟವಾಡುವುದು; ವಿಹರಿಸುವುದು. ೧೦. ಮೇಕೆ. ~(ಂ)ಕಾ(ಗಾ)ಱ(ರ) = ಆಟಗಾರ; ವೇಷಧಾರಿ. ~(ಂ)ಕು(ಗು)ಳಿ = ಆಟದಲ್ಲಿ ತುಂಬ ಆಸಕ್ತಿಯುಳ್ಳವನು. ~(ಂ)ತೊ(ದೊ)ಲೆ = ಮೇಲಕ್ಕೂ ಕೆಳಕ್ಕೂ ತೂಗಾಡುವ ತೊಲೆ; ಏತ. ~(ಂ)ಪೊ(ಬೊ)ಲ = ೧. ಆಟದ ಬಯಲು. ೨. ಆಶ್ರಯಸ್ಥಾನ. ~ಕ(ಗ)ಬ್ಬ = ನಾಟಕ; ದೃಶ್ಯ

ಕಾನ್ಯ. ~ಕಾ(ಗಾ)ಡು = ಓಡಾಡುವ ಕಾಡಿನ ಪ್ರದೇಶ. ~ನುಡಿ = ಬಳಕೆಯ ಮಾತು.

ಆಡೆ (ನಾ). ಜಿಗಣೆ; ಜಿಗಳೆ.

ಆಢಾವೆ (ನಾ). ಜಮಾಖರ್ಚಿನ ನಿರೂಪಣೆ.

ಆಢ್ಯ (ನಾ). ೧. ಶ್ರೀಮಂತ. ೨. ಸಮರ್ಥ. (ಗು). ೩. ಹೊಂದಿರುವ; ಉಳ್ಳ.

ಆಣಂಬೆ = ಆಳಂಬೆ.

ಆಣಕ (ಗು). ಅಲ್ಪವಾದ; ಕೀಳಾದ.

ಆಣತಿ (ನಾ). ೧. ಆಜ್ಞೆ. ೨. = ಆಳತಿ.

ಆಣವ (ಗು). ಅತ್ಯಂತ ಸೂಕ್ಷ್ಮವಾದ; ಅಣುರೂಪವಾದ.

ಆಣಿ (ನಾ). ೧. ಶ್ರೇಷ್ಠವಾದುದು; ಉತ್ಕೃಷ್ಟವಾದುದು. ೨. ದುಂಡಾದುದು. ೩. ಮೊಳೆ; ಕೀಲು; ಗೂಟ. ೪. ಮುಳ್ಳು ಚುಚ್ಚಿ ಕೀವು ತುಂಬಿಕೊಳ್ಳುವುದು. ~ಕಲ್ಲು=೧. ಉತ್ತಮವಾದ ಕಲ್ಲು; ರತ್ನ. ೨. ಆಲಿಕಲ್ಲು. ೩. ಕಂಬಗಳಿಗೆ ಆಧಾರವಾದ ಅಡಿಗಲ್ಲು. ~ಕಾ(ಗಾ)ಜ(ರ) = ೧. ಸುವರ್ಣ ಪರೀಕ್ಷಕ; ರತ್ನ ಪರೀಕ್ಷಕ. ೨. ಯೋಗ್ಯತೆಯನ್ನು ತಿಳಿದವನು.

ಆಣಿಕೆ (ನಾ). ವರ್ತಕನು ರೈತನಿಗೆ ವಸ್ತುವನ್ನು ಕೊಳ್ಳುವುದಾಗಿ ಒಪ್ಪಂದ ಮಾಡಿಕೊಂಡು ಕೊಡುವಂಥ ಹಣ.

ಆಣೆ (ನಾ). ೧. ಆಜ್ಞೆ; ಅಪ್ಪಣೆ. ೨. ಪ್ರತಿಜ್ಞಾಸೂಚಕವಾದ ಮಾತು. ೩. ವ್ಯಕ್ತಿ ಅಥವಾ ವಸ್ತುವನ್ನು ಹೇಳಿ ಮಾಡುವ ಪ್ರಮಾಣ. ೪. ಆಲಿಕಲ್ಲು; ಆಣಿಕಲ್ಲು. ೫. ಬಿರುಕು; ಸೀಳು. ೬. ಒಂದು ನಾಣ್ಯ. ~ಓಲೆ = ಆಜ್ಞಾಪತ್ರ. ~ಗೋಸಣೆ = ಅಪ್ಪಣೆಯನ್ನು ಸಾರಿ ಹೇಳುವುದು. ~ತಿನ್ನು = ವಚನ ಕೊಡು. ~ಪ(ವ)ತ್ರಳೆ = ೧. ಆಜ್ಞೆಯ ಪತ್ರಿಕೆ. ೨. ಪ್ರತಿಜ್ಞೆಯ ಪತ್ರ.

ಆಣೆವಾರಿ (ನಾ). ಹೊಲಗದ್ದೆಗಳಲ್ಲಿ ಆಗುವ ಬೆಳೆಗಳನ್ನು ಅಂದಾಜು ಮಾಡುವುದು.

ಆತಂಕ (ನಾ). ೧. ಭಯ; ಹೆದರಿಕೆ. ೨. ಚಿಂತೆ; ವ್ಯಥೆ. ೩. ರೋಗ; ವ್ಯಾಧಿ. ೪. ಅಡ್ಡಿ; ತಡೆ. ೫. ಅಧೀನ; ಹಿಡಿತ.

ಆತಂಚನ (ನಾ). ೧. ಹಾಲಿಗೆ ಹೆಪ್ಪು ಹಾಕುವುದು. ೨. ಹೆಪ್ಪುಗಟ್ಟಿಸುವ ವಸ್ತು.

ಆತತ (ಗು). ೧. ಹರಡಿದ; ವಿಶಾಲವಾದ. ೨. ಕೂಡಿದ; ಹೊಂದಿಕೊಂಡ. ~ಕೀರ್ತಿ = ವಿಸ್ತಾರವಾಗಿ ಹರಡಿದ ಕೀರ್ತಿಯುಳ್ಳವನು.

ಆತತಾಯಿ (ನಾ). ಕೊಲ್ಲುವ ಉದ್ದೇಶದಿಂದ ಬರುವವನು; ಕೊಲೆಪಾತಕಿ.

ಆತಪ (ನಾ). ೧. ಬಿಸಿಲು. ೨. ಪ್ರಕಾಶ; ಕಾಂತಿ. ~ಪಕ್ಷಿ = ಮುಂಡುಮುಳುಕನ ಹಕ್ಕಿ. ~ವಾರಣ = ಕೊಡೆ; ಛತ್ರಿ.

ಆತಪ್ತ (ಗು). ಬೆಂದ; ಕಾದುಹೋದ.

ಆತರ (ನಾ). ೧. ನದಿಯನ್ನು ದಾಟುವುದು. ೨. ನದಿಯನ್ನು ದಾಟಿಸುವ ದೋಣಿ, ತೆಪ್ಪ ಮುಂತಾದುವುಗಳಿಗೆ ಕೊಡುವ ಬಾಡಿಗೆ. ೩. ದೋಣಿ; ತೆಪ್ಪ; ಹಡಗು.

ಆತಾಪಿ ೧. = ಆತಪಪಕ್ಷಿ. ೨. ಉತ್ಸಾಹವನ್ನುಳ್ಳವನು.

ಆತಿಥೇಯ (ನಾ). ೧. ಅತಿಥಿಸತ್ಕಾರ. ೨. ಅತಿಥಿಪೂಜೆಯನ್ನು ಮಾಡುವವನು.

ಆತಿಥ್ಯ ೧. = ಆತಿಥೇಯ. ೨. ಅತಿಥಿ.

ಆತುರ (ನಾ). ೧. ಯಾತನೆಯಿಂದ ಪೀಡಿತನಾದವನು. ೨. ಬಲವಾದ ಆಸೆ. ೩. ಅವಸರಪಡುವವನು. ೪. ಅವಸರ; ತ್ವರೆ.

ಆತೋದ್ಯ (ನಾ). ೧. ಒಂದು ಬಗೆಯ ವಾದ್ಯ. (ಗು). ೨. ಹೊಡೆಯಲ್ಪಡುವ; ಬಾಜಿಸುವ.

ಆತ್ತ (ಗು). ೧. ಹಿಡಿದ; ಪರಿಗ್ರಹಿಸಲ್ಪಟ್ಟ. ೨. ಪಡೆದ; ಪ್ರಾಪ್ತವಾದ. ೩. ಕಳೆದುಕೊಂಡ; ನಿವಾರಿಸಿದ.

ಆತ್ಮ (ನಾ). ೧. ಜೀವ ; ಚೇತನ. ೨.ಸ್ವಭಾವ ; ಧರ್ಮ. ೩. ಪ್ರಯತ್ನ. ೪. ಧೈರ್ಯ. ೫. ಬುದ್ಧಿ ; ಮನಸ್ಸು. ~ಕಥೆ = ತಾನೇ ಬರೆದ ತನ್ನ ಚರಿತ್ರೆ. ~ಜ್ಞಾನ = ಆತ್ಮನ ಸ್ವರೂಪದ ಅರಿವು. ~ನಿವೇದನ =(ಭಗವಂತನಲ್ಲಿ) ತನ್ನನ್ನು ತಾನು ಅರ್ಪಿಸಿಕೊಳ್ಳುವುದು ; ಆತ್ಮಾರ್ಪಣೆ. ~ಪ್ರತಿಷ್ಠೆ =೧. ತನ್ನ ಗೌರವ. ೨. ಗರ್ವ; ಅಹಂಕಾರ. ~ಪ್ರತ್ಯಯ = ಆತ್ಮವಿಶ್ವಾಸ. ~ಭವ =೧. ಮಗ. ೨. ತನ್ನ ಜನ್ಮ ಪರಂಪರೆ. ~ಸಾಕ್ಷಿ=ಅಂತರಂಗದ ಪ್ರೇರಣೆ.~ಹತ್ಯೆ = ತನ್ನನ್ನು ತಾನೇ ಕೊಂದುಕೊಳ್ಳುವುದು.

ಆತ್ಮಜ (ನಾ). ೧. ಮಗ. ೨. ತಲೆಯ ಕೂದಲು. ೩. ರೇತಸ್ಸು ; ಶುಕ್ಲ. ೪. ಮನ್ಮಥ.

ಆತ್ಮಜನ್ಮ (ನಾ). ಮಗ.

ಆತ್ಮಭೂ (ನಾ). ೧. ಬ್ರಹ್ಮ. ೨. ವಿಷ್ಣು. ೩. ಮನ್ಮಥ.

ಆತ್ಮೀಯ (ನಾ). ೧. ಆಪ್ತ ; ಬಂಧು. (ಗು). ೨. ತನ್ನ ; ತನಗೆ ಸಂಬಂಧಿಸಿದ.

ಆತ್ಯಂತಿಕ (ಗು). ಅತ್ಯಂತ ಕೊನೆಯದಾದ ; ಪರಮಾವಧಿಯ.

ಆತ್ರೇಯ (ನಾ). ೧. ಅತ್ರಿ ಋಷಿಯ ಗೋತ್ರದವನು. ೨. ಅತ್ರಿಯ ಮಗನಾದ ದೂರ್ವಾಸ. ೩. ಚಂದ್ರ.

ಆತ್ರೇಯಿ (ನಾ). ರಜಸ್ವಲೆಯಾದ ಅಥವಾ ಮುಟ್ಟಾಗಿರುವ ಹೆಂಗಸು.

ಆದಂ (ಅ). ವಿಶೇಷವಾಗಿ ; ಅತಿಶಯವಾಗಿ.

ಆದರ (ನಾ). ೧. ಗೌರವ ; ಮರ್ಯಾದೆ. ೨. ಆಸಕ್ತಿ. ೩. ಪ್ರೀತಿ. ೪. ಸತ್ಕಾರ ; ಉಪಚಾರ. ೫. ಆಸೆ ; ಉತ್ಕಟವಾದ ಇಚ್ಛೆ.

ಆದರ್ಶಿಸು (ಕ್ರಿ). ೧. ಕಡೆಗಣಿಸು ; ತಿರಸ್ಕರಿಸು. ೨. ನೋಯಿಸು ; ಅವಮಾನಪಡಿಸು.

ಆದರ್ಶ (ನಾ). ೧. ಕನ್ನಡಿ. ೨. ಧ್ಯೇಯ ; ಗುರಿ.

ಆದರ್ಶನ (ನಾ). ೧. ಕನ್ನಡಿ. ೨. ಪ್ರಕಟನೆ.

ಆದಲೆ (ನಾ). ೧. ಅತ್ತಕಡೆ ; ಆ ಕಡೆ. ೨. ಮುಂದುಗಡೆ ; ಮುಂಭಾಗ. ೩. ಉಂಟಾಗುವಿಕೆ ; ಉತ್ಪತ್ತಿ.

ಆದಾನ (ನಾ). ತೆಗೆದುಕೊಳ್ಳುವುದು ; ಸ್ವೀಕರಿಸುವುದು.

ಆದಾಬು (ನಾ).೧. ಗೌರವ. ೨. ನಮಸ್ಕಾರ.

ಆದಾಯ (ನಾ). ವರಮಾನ ; ಲಾಭ.

ಆದಾವತಿ (ನಾ). ದ್ವೇಷ ; ಹಗೆತನ.

ಆದಿ (ನಾ). ೧. ಮೊದಲು ; ಪ್ರಾರಂಭ. ೨. ಕಾರಣ ; ಮೂಲ. ೩. ಪೂರ್ವಕಾಲ. ೪. (ವ್ಯಾಕ) ಪ್ರಥಮಾವಿಭಕ್ತಿ. ~ಕಾವ್ಯ = ಮೊಟ್ಟಮೊದಲನೆಯ ಕಾವ್ಯ ; ರಾಮಾಯಣ. ~ಪರ್ವ = ೧. ಮಹಾಭಾರತದಲ್ಲಿ ಮೊದಲನೆಯ ಪರ್ವ. ೨. (ವರ್ಷದ) ಮೊದಲನೆಯ ಹಬ್ಬ ; ಯುಗಾದಿ ಹಬ್ಬ. ~ಶಕ್ತಿ = ಮೂಲಶಕ್ತಿ ; ಮಹೇಶ್ವರಿ. ~ಶೇಷ = ಮಹಾವಿಷ್ಣುವಿನ ಹಾಸಿಗೆಯಾದ ಸರ್ಪರಾಜ.

ಆದಿಷ್ಟ (ಗು). ಉಪದೇಶ ಹೊಂದಿದ; ಹೇಳಲ್ಪಟ್ಟ.

ಆದಿಷ್ಟಣ (ನಾ). ಅಸ್ತಿಭಾರ.

ಆದೀಕ (ನಾ). ಲಾಭ ; ಆದಾಯ.

ಆದೃತ(ಗು).೧. ಆದರಿಸಲ್ಪಟ್ಟ. ೨.ಆದರವುಳ್ಳ.

ಆದೆ (ನಾ). ಗೂಬೆಯ ಜಾತಿಗೆ ಸೇರಿದ ಪಕ್ಷಿ ; ಹಂದಿಗೀರನ ಹಕ್ಕಿ.

ಆದೇಯ (ನಾ). ೧. ದಾನ. (ಗು). ೨. ಸ್ವೀಕರಿಸಬಹುದಾದ.

ಆದೇಶ (ನಾ). ೧. ಆಜ್ಞೆ ; ಅಪ್ಪಣೆ. ೨. ಭವಿಷ್ಯವಾಣಿ. ೩. ಉಪದೇಶ. ೪. ಒಂದು ವರ್ಣಕ್ಕೆ ಪ್ರತಿಯಾಗಿ ಮತ್ತೊಂದು ವರ್ಣವು ಬರುವುದು.

ಆದೇಶನ (ನಾ). ಅಪ್ಪಣೆ ಮಾಡುವುದು.
ಆದೇಷ್ಟೃ (ನಾ). ೧. ಆದೇಶ ಕೊಡತಕ್ಕವನು; ನಿರ್ದೇಶಕ. ೨. ಯಾಗ ಮಾಡುವವನು.
ಆದೋಹಳ (ನಾ). ಹೆಚ್ಚಾದ ಬಯಕೆ.
ಆದ್ಯ (ನಾ). ೧. ಮೊದಲನೆಯವನು. (ಗು). ೨. ಮೊದಲನೆಯ; ಹಿಂದಿನ.
ಆದ್ಯಂತ (ನಾ). ೧. ಮೊದಲು ಮತ್ತು ಕೊನೆ. ೨. ಸಮಸ್ತ; ಒಟ್ಟು; ಸಮಗ್ರ.
ಆಧರ (ನಾ). ತನ್ನ ಸೋಲನ್ನು ತಾನೇ ಹೇಳಿಕೊಳ್ಳುವವನು.
ಆಧರಣೆ (ನಾ). ಆಧಾರ; ಆಸರೆ; ನೆಲೆ.
ಆಧರಿಸು (ಕ್ರಿ). ೧. ಆಧಾರವಾಗಿ ಮಾಡಿಕೊ. ೨. ಆಧಾರವಾಗು; ಧರಿಸು.
ಆಧಾನ (ನಾ). ೧. ಇಡುವುದು; ಮಾಡುವುದು. ೨. ತೆಗೆದುಕೊಳ್ಳುವುದು. ೩. ಒಳಕೊಳ್ಳುವುದು. ೪. ಇಟ್ಟಿರುವುದಕ್ಕಾಗಿ ಕೊಟ್ಟ ವಸ್ತು.
ಆಧಾರ (ನಾ). ೧. ಆಶ್ರಯ. ೨. ಅವಲಂಬನ; ಸಹಾಯ. ೩. ಸಮರ್ಥನೆ ಮಾಡುವ ಪ್ರಮಾಣ. ೪. ತಳಹದಿ; ಅಸ್ತಿಭಾರ. ೫. ಪ್ರವಾಹ. ೬. ಸಾಲಕ್ಕೆ ಹೊಣೆಯಾಗಿರುವ ಹೊಲ, ಗದ್ದೆ ಮುಂತಾದುವು.
ಆಧಿ (ನಾ). ೧. ಮಾನಸಿಕವಾದ ತೊಂದರೆ. ೨. ಆಸ್ತಿಗಳ ವಿಷಯದಲ್ಲಿ ಆಧಾರ, ಭೋಗ್ಯ ಮುಂತಾದ ಪರಾಧೀನತೆ. ೩. ಜೂಜು ಮುಂತಾದ ದುರ್ವ್ಯಸನ. ೪. ಆಶ್ರಯ; ಆಸರೆ.
ಆಧಿಕ್ಯ (ನಾ). ೧. ಹೆಚ್ಚಿಗೆ. ೨. ಹಿರಿಮೆ; ಮೇಲ್ಮೆ.
ಆಧಿದೈವಿಕ (ನಾ). ದೈವಿಕವಾಗಿ ಉಂಟಾಗುವ ತೊಂದರೆ.
ಆಧಿಪತ್ಯ (ನಾ). ೧. ಪ್ರಭುತ್ವ. ೨. ಪ್ರಭುತ್ವಕ್ಕೆ ಒಳಪಟ್ಟ ಪ್ರದೇಶ.
ಆಧಿಭೌತಿಕ (ನಾ). ೧. ಪ್ರಾಣಿಗಳಿಂದ ಒದಗುವ ವಿಪತ್ತು. ೨. ಪಂಚಭೂತಗಳಿಂದಾಗುವ ತೊಂದರೆ.
ಆಧೀನ (ನಾ). ಅಧೀನ; ವಶ.
ಆಧುನಿಕ (ಗು). ಈಗಿನ; ಇತ್ತೀಚಿನ; ನವೀನ.
ಆಧೂತ (ಗು). ಅಲ್ಲಾಡಿಸಿದ; ಕುಲುಕಿದ.
ಆಧೇಯ (ನಾ). ೧. ಆಶ್ರಯ. ೨. ಆಧಾರವಾಗಿಡುವ ಜಮೀನು ಮುಂತಾದುವು. (ಗು). ೩. ಆಧಾರವನ್ನು ಆಶ್ರಯಿಸಿಕೊಂಡಿರುವ.
ಆಧೋರಣ (ನಾ). ೧. ಆನೆಯ ಸವಾರ; ಮಾವುತ. ೨. ಸಲಗ.
ಆಧ್ಮಾನ (ನಾ). ಹೊಟ್ಟೆ ಉಬ್ಬರಿಸಿಕೊಳ್ಳುವುದು.
ಆಧ್ಯಾತ್ಮಿಕ (ನಾ). ೧. ತಾಪತ್ರಯಗಳಲ್ಲಿ ಒಂದು. (ಗು). ೨. ಆತ್ಮವಸ್ತುವಿಗೆ ಸಂಬಂಧಿಸಿದ; ತತ್ತ್ವಶಾಸ್ತ್ರಕ್ಕೆ ಅನ್ವಯಿಸುವ.
ಆನ್(ನು) (ಕ್ರಿ). ೧. ಎದುರಿಸು; ಪ್ರತಿಭಟಿಸು. ೨. ವಹಿಸು; ಕೈಕೊಳ್ಳು. ೩. ಹಿಡಿ; ಒಡ್ಡು. ೪. ತಡೆ; ನಿಲ್ಲು. ೫. ಊರೆಯಾಗು; ಆಶ್ರಯವಾಗು. ೬. ಆಶ್ರಯಹೊಂದು; ಒರಗು. (ಸ). ೭. ಉತ್ತಮ ಪುರುಷ ಸರ್ವನಾಮ.
ಆನಂತ್ಯ (ನಾ). ೧. ಕೊನೆಯಿಲ್ಲದಿರುವಿಕೆ. ೨. ಕೊನೆಯಿಲ್ಲದ ವಸ್ತು.
ಆನಂದ (ನಾ). ೧. ಸಂತೋಷ. ೨. ಪರಮಾವಧಿಯಾದ ಸಂತೋಷ. ೩. ಅರುವತ್ತು ಸಂವತ್ಸರಗಳಲ್ಲಿ ಒಂದು. ~ತುಂದಿಲ = ಆನಂದದಿಂದ ತುಂಬಿದ. ~ವೃಕ್ಷ = ಅಶೋಕವೃಕ್ಷ.
ಆನಂದನ (ನಾ). ೧. ಸಂತೋಷ. (ಗು). ೨. ಸಂತೋಷವನ್ನುಂಟುಮಾಡುವ.
ಆನಕ (ನಾ). ಭೇರಿ; ದುಂದುಭಿ; ನಗಾರಿ. ~ದುಂದುಭಿ = ಶ್ರೀ ಕೃಷ್ಣನ ತಂದೆಯಾದ ವಸುದೇವ.

**ಅನತ** (ಗು). ಬಾಗಿದ; ನಮಸ್ಕರಿಸಿದ; ಶರಣಾಗತನಾದ. ~ ಭುವನ = ಎಲ್ಲರಿಂದಲೂ ವಂದಿಸಲ್ಪಟ್ಟವನು.

**ಅನದ್ಧ** (ನಾ). ೧. ಮದ್ದಲೆ ಮುಂತಾದ ಚರ್ಮ ವಾದ್ಯ. (ಗು). ೨. ಕಟ್ಟಲ್ಪಟ್ಟ.

**ಅನನ** (ನಾ). ೧. ಮುಖ. ೨. ಬಾಯಿ.

**ಅನಮ್ರ** = ಅನತ. ~ ಅಮರ = ದೇವತೆಗಳಿಂದ ನಮಸ್ಕರಿಸಲ್ಪಟ್ಟವನು.

**ಅನಯನ** (ನಾ). ತೆಗೆದುಕೊಂಡು ಬರುವುದು.

**ಅನರ್ತ** (ನಾ). ೧. ರಂಗಸ್ಥಳ. ೨. ಯುದ್ಧ.

**ಅನಾಯ** (ನಾ). ಬಲೆ.

**ಅನಾಯ್ಯ** (ನಾ). ೧. ಸಂಸ್ಕರಿಸುವ ಅಗ್ನಿ. (ಗು). ೨. ತರಿಸಬೇಕಾದ; ತೆಗೆದುಕೊಂಡು ಬರಬೇಕಾದ.

**ಅನಾಹ** (ನಾ). ೧. ಕಟ್ಟಿಕೊಳ್ಳುವುದು; ಬದ್ಧನಾಗುವುದು. ೨. ಮಲಮೂತ್ರಗಳು ಕಟ್ಟಿಕೊಳ್ಳುವ ಒಂದು ರೋಗ. ೩. ಉದ್ದ.

**ಅನಿಕೆ** (ನಾ). ೧. ಪ್ರತಿಭಟನೆ; ಎದುರಿಸುವುದು. ೨. ಸಮಾನ; ಎದುರು. ೩. ಧರಿಸುವುದು. ೪. ಆಧಾರ. ೫. = ಅಣಿಕೆ.

**ಅನಿಲ** (ನಾ). ೧. ಆಂಜನೇಯ. ೨. ಭೀಮಸೇನ. (ಗು). ೩. ಅನಿಲಕ್ಕೆ ಸಂಬಂಧಿಸಿದ.

**ಅನೀಕ** (ನಾ). ೧. ಸೈನ್ಯ. ೨. ಸಮೂಹ.

**ಅನೀಕಿನಿ** (ನಾ). ಒಂದು ಅಕ್ಷೌಹಿಣಿಯಲ್ಲಿ ಹತ್ತನೆಯ ಒಂದು ಅಂಶದಷ್ಟು ಸೈನ್ಯ.

**ಅನೀತ** (ಗು). ತರಲ್ಪಟ್ಟ; ತಂದ.

**ಅನುಪೂರ್ವಿ** (ನಾ). ೧. ಅನುಕ್ರಮ; ಪರಿಪಿಡಿ. ೨. ಪೂರ್ವಾಪರ ಸಂಬಂಧ.

**ಅನುವಂಶ** (ಗು). ವಂಶಪರಂಪರೆಯಿಂದ ಬಂದ.

**ಅನುಷಂಗಿಕ** (ಗು). ಮುಖ್ಯ ವಿಷಯಕ್ಕೆ ಸಂಬಂಧಿಸಿಪಂತೆ (ತಾನಾಗಿ) ಒದಗಿ ಬರುವ; ಪ್ರಾಸಂಗಿಕವಾದ. ~ ಫಲ = ಉದ್ದೇಶಪಟ್ಟ ಮುಖ್ಯಫಲವಲ್ಲದೆ ನಡುವೆ ಅದರ ಜತೆಗೆ ತಾನಾಗಿ ಒದಗುವ ಪ್ರಯೋಜನ.

**ಅನೂಪಕ್ಷೇತ್ರ** (ನಾ). ಸುತ್ತುಮುತ್ತು ನೀರು ಹೇರಳವಾಗಿರುವ ಪ್ರದೇಶ.

**ಅನೆ** (ನಾ). ೧. ಗಜ; ಕರಿ. ೨. ದೊಡ್ಡದು. ~ ಕ(ಗ)ಂಬ(ಭ) = ೧. ಗೋಡೆ ಬೀಳ ದಂತೆ ಕಟ್ಟುವ ಊರುಗಂಬ. ೨. ಆನೆಯನ್ನು ಕಟ್ಟುವ ಕಂಬ. ~ ಕಾಲು = ಆನೆಯ ಕಾಲಿನಂತೆ ಕಾಲು ಊದಿಕೊಳ್ಳುವ ಒಂದು ರೋಗ. ~ ಕು(ಗು)ಲಿ = ಆನೆಯನ್ನು ಕೊಲ್ಲತಕ್ಕ ಪ್ರಾಣಿ; ಸಿಂಹ. ~ ಕೊ(ಗೊ)ಳ್ಳ = ಆನೆಗಳನ್ನು ಹಿಡಿಯುವುದಕ್ಕೆ ಮಾಡಿದ ಹೊಂಡ; ಖೆಡ್ಡ. ~ ಪ(ವ)ರಿ = ಆನೆ ಸುಗ್ಗು ವಂತೆ ಮುಂದೆ ನುಗ್ಗುವಿಕೆ. ~ ಪ(ವ)ಱೆ(ರೆ) = ಒಂದು ಬಗೆಯ ಚರ್ಮವಾದ್ಯ. ~ ಬಿ(ವಿ)ನ್ನಾಣಿ = ಗಜಶಾಸ್ತ್ರನಿಪುಣ.

**ಅಪ** (ನಾ). ನೀರು.

**ಅಪಗೆ** (ನಾ). ನದಿ; ಹೊಳೆ.

**ಅಪಣ** (ನಾ). ಅಂಗಡಿ.

**ಅಪತ್ತು** (ನಾ). ಅಪಾಯ; ತೊಂದರೆ.

**ಅಪನ್ನ** (ಗು). ೧. ಆಪತ್ತಿಗೆ ಗುರಿಯಾದ. ೨. ಪಡೆದ. ~ ಸತ್ತ್ವ = ಗರ್ಭಿಣಿಯಾದ ಹೆಂಗಸು.

**ಅಪಾಟ** (ಗು). ೧. ಅಷ್ಟು. ೨. ಅಷ್ಟೊಂದು; ಬಹಳ.

**ಅಪಾತ** (ನಾ). ೧. ಮುತ್ತಿಗೆ. ೨. ಇಳಿಸುವುದು. ೩. ಉಂಟಾಗುವುದು; ಸಂಭವ. ೪. ಮೇಲ್ನೋಟ; ಹೊರನೋಟ.

**ಅಪಾದನೆ** (ನಾ). ೧. ತಪ್ಪು ಹೊರಿಸುವುದು; ಆರೋಪಣೆ. ೨. ತಪ್ಪು; ಆರೋಪ.

**ಅಪಾದಮಸ್ತಕ** (ಅ). ಕಾಲಿನಿಂದ ಹಿಡಿದು ತಲೆಯವರೆಗೆ.

**ಅಪಾದಿತ** (ನಾ). ೧. ತಪ್ಪು ಹೊರಿಸಲ್ಪಟ್ಟವನು. (ಗು). ೨. ಪಡೆದ. ೩. ತಂದುಕೊಂಡ. ೪. ಸ್ಥಾಪಿಸಿದ.

**ಅಪಾಳಿತ** (ಗು). ವ್ಯಾಪ್ತವಾದ.

**ಆಪೀಡ** (ನಾ). ೧. ಒತ್ತುವುದು. ೨. ತಲೆಯ ಮೇಲೆ ಧರಿಸುವ ಆಭರಣ; ಶಿರೋಭೂಷಣ.

**ಆಪೀನ** (ನಾ). ೧. ಕೆಚ್ಚಲು. (ಗು). ೨. ದೊಡ್ಡದಾದ.

**ಆಪೂಪಿಕ** (ನಾ). ೧. ಕಜ್ಜಾಯ, ದೋಸೆ ಮೊದಲಾದ ತಿಂಡಿಗಳನ್ನು ಮಾಡುವವನು. ೨. ಕಜ್ಜಾಯ, ದೋಸೆ ಮೊದಲಾದ ತಿಂಡಿಗಳ ರಾಶಿ.

**ಆಪೂರ** (ನಾ). ೧. ಪ್ರವಾಹ. (ಗು). ೨. ಚೆನ್ನಾಗಿ ತುಂಬಿದ.

**ಆಪೆ** (ನಾ). ಚಿಪ್ಪಿನ ಸೌಟು.

**ಆಪೇಯ** (ಗು). ಕುಡಿಯಲು ಯೋಗ್ಯವಾದ.

**ಆಪೊತ್ತು(ಳ್ತು)** (ನಾ). ಆ ಹೊತ್ತು; ಆ ಸಮಯ.

**ಆಪೋಶನ** (ನಾ). ಊಟಕ್ಕೆ ಮೊದಲೂ ಊಟಕ್ಕೆ ನಂತರವೂ ಮಂತ್ರಪೂರ್ವಕವಾಗಿ ಅಂಗೈಯ ನೀರನ್ನು ಹೀರುವುದು; ಹಾಗೆ ಹೀರುವ ನೀರು.

**ಆಪೋಶಿಸು** (ಕ್ರಿ). ಆಪೋಶನವನ್ನು ಮಾಡು.

**ಆಪ್ತ** (ನಾ). ೧. ನಂಬಿಕೆಗೆ ಅರ್ಹನಾದವನು. ೨. ಆತ್ಮೀಯ. (ಗು). ೩. ಪಡೆದ. ೪. ಯೋಗ್ಯವಾದ. ೫. ನಂಬಿಕೆಗೆ ಯೋಗ್ಯವಾದ. ೬. ಸಂಬಂಧಿಸಿದ.

**ಆಪ್ಯ** (ಗು). ೧. ಪಡೆಯಬೇಕಾದ. ೨. ನೀರಿನ; ನೀರಿನಿಂದ ಕೂಡಿದ.

**ಆಪ್ಯಯ** (ನಾ). ಜೀರ್ಣ; ಲಯ.

**ಆಪ್ಯಾಯನ** (ನಾ). ೧. ಸುಖ; ಹಿತ. (ಗು). ೨. ಸುಖಕರವಾದ.

**ಆಪ್ಯಾಯಮಾನ** (ಗು). ಸುಖಕರವಾದ; ಹಿತಕರವಾದ.

**ಆಪ್ರೇಕ್ಷಣ** (ನಾ). ಚೆನ್ನಾಗಿ ನೋಡುವುದು.

**ಆಪ್ಲವ** (ನಾ). ೧. ಸ್ನಾನ ಮಾಡುವುದು. ೨. ಚಿಮುಕಿಸುವುದು.

**ಆಬರು** (ನಾ). ಗೌರವ; ಮರ್ಯಾದೆ. ~ಕೆ(ಗೆ)ೇಡಿ = ಮಾನ ಮರ್ಯಾದೆ ಇಲ್ಲದವನು.

**ಆಬಲ್(ಲು)** = ಆವಲ್.

**ಆಬಾಗೇಡಿ** (ನಾ). ೧. ತಿಳಿಗೇಡಿ. ೨. ಶಕ್ತಿಯಿಲ್ಲದವನು.

**ಆಬಾದು** (ನಾ). ೧. ಅಭಿವೃದ್ಧಿ; ಉತ್ತಮ ಸ್ಥಿತಿ. ೨. ಸಾಗುವಳಿ. ೩. ಜನವಸತಿ.

**ಆಬಾಲವೃದ್ಧ** (ಅ). ಮಕ್ಕಳಿಂದ ಹಿಡಿದು ಮುದುಕರವರೆಗೆ; ಎಲ್ಲರೂ.

**ಆಬ್ಕಾರಿ** (ನಾ). ಹೆಂಡ, ಸಾರಾಯಿ ಮುಂತಾದ ಮಾದಕವಸ್ತುಗಳ ತಯಾರಿಕೆ ಮತ್ತು ಮಾರಾಟದ ಮೇಲೆ ಹಾಕುವ ತೆರಿಗೆ.

**ಆಭರಣ** (ನಾ). ೧. ಧರಿಸುವುದು. ೨. ಒಡವೆ.

**ಆಭಾರ** (ನಾ). ಉಪಕಾರ; ಔದಾರ್ಯ. ~ಮನ್ನಣೆ = ವಂದನಾರ್ಪಣೆ.

**ಆಭಾರಿ** (ನಾ). ಉಪಕೃತ; ಋಣಿ.

**ಆಭಾರ್ಯ** (ನಾ). ಒಡವೆ; ಆಭರಣ.

**ಆಭಾಸ** (ನಾ). ೧. ಕಾಂತಿ; ಪ್ರಕಾಶ. ೨. ಹೊರತೋರಿಕೆ. ೩. ಹೋಲಿಕೆ; ಸಾಮ್ಯ. ೪. ಉದ್ದೇಶ. ೫. ಭ್ರಾಂತಿ. ೬. ಭ್ರಾಂತಿಯ ವಿಷಯ.

**ಆಭಿಚಾರ** (ನಾ). ೧. ಮಾಟ; ಮೋಡಿ. (ಗು). ೨. ಅಭಿಚಾರಕ್ಕೆ ಸಂಬಂಧಿಸಿದ; ಮರುಳುಗೊಳಿಸುವ.

**ಆಭಿಜಾತ್ಯ** (ನಾ). ಸತ್ಕುಲದಲ್ಲಿ ಹುಟ್ಟುವಿಕೆ; ಕುಲೀನತೆ.

**ಆಭೀರ** (ನಾ). ೧. ದನಗಾಹಿ; ಗೊಲ್ಲ. ೨. ಒಕ್ಕಲಿಗ. ~ಪಲ್ಲಿ = ಗೊಲ್ಲರ ಹಳ್ಳಿ.

**ಆಭೀಲ(ಳ)** (ಗು). ಭಯಂಕರವಾದ.

**ಆಭೀಳತೆ** (ನಾ). ಭಯಂಕರತೆ; ಉಗ್ರತೆ.

**ಆಭೋಗ** (ನಾ). ೧. ಸುಖ; ಸಂತೋಷ. ೨. ತುಂಬಿರುವಿಕೆ. ೩. ವಿಸ್ತಾರ; ಹರಹು. ೪. ಹಾವಿನ ಹೆಡೆ. ೫. ಪ್ರಯತ್ನ; ಶ್ರಮ.

**ಆಮ** (ನಾ). ೧. ಮಲಬದ್ಧತೆ. ೨. ಆಹಾರವು

ಸರಿಯಾಗಿ ಜೀರ್ಣವಾಗದೆ ಜೀರ್ಣಾಂಗಗಳಲ್ಲಿ ಹುಳಿಯಾಗಿ ತಿರುಗಿ ಉಂಟಾಗುವ ಒಂದು ಬಗೆಯ ದ್ರವ. ೩. ರೋಗ. ೪. ಮಡಕೆಗಳನ್ನು ಸುಡುವ ಒಲೆ; ಆವಿಗೆ. (ಗು). ೫. ಬೇಯಿಸದ; ಹಸಿಯ. ೬. ಹಣ್ಣಾಗದ. ~ಆಶಯ = ೧. ಜೀರ್ಣಿಸಿದ ಆಹಾರ ಹುಳಿಯಾಗಿ ಕೂಡಿಕೊಳ್ಳುವ ಆಹಾರನಾಳದ ಭಾಗ. ೨. ಹೊಟ್ಟೆ. ~ಶಂಕೆ = ಆಮದಿಂದ ಕೂಡಿದ ಭೇದಿ. ~ಶ್ರಾದ್ಧ = ಹಸಿಯ ಪದಾರ್ಥಗಳನ್ನು ಉಪಯೋಗಿಸಿ ಮಾಡುವ ಶ್ರಾದ್ಧ.

ಆಮಂಡ (ನಾ). ಹರಳುಗಿಡ; ಔಡಲಗಿಡ.

ಆಮಂತ್ರಕ (ನಾ). ಸಭೆ ಮೊದಲಾದುವನ್ನು ಕರೆಯುವವನು.

ಆಮಂತ್ರಣ (ನಾ). ೧. ಆಹ್ವಾನ; ಕರೆ. ೨. ಕರೆಯೋಲೆ. ೩. ಮರ್ಯಾದೆ; ಉಪಚಾರ. ೪. ಔತಣ. ೫. ಬೀಳ್ಕೊಳ್ಳುವುದು. ೬. ಸಂಭಾಷಣೆ.

ಆಮದು (ನಾ). ೧. ಆದಾಯ. ೨. ತರಿಸಿಕೊಂಡ ವಸ್ತು.

ಆಮಯ (ನಾ). ರೋಗ.

ಆಮರ್ದ (ನಾ). ಹಿಸುಕುವುದು; ಕಿವಿಚುವುದು.

ಆಮರ್ಷ (ನಾ). ಕೋಪ.

ಆಮಲ(ಳ)ಕ (ನಾ). ನೆಲ್ಲಿಗಿಡ ಮತ್ತು ಕಾಯಿ.

ಆಮಸೋಲು (ನಾ). ೧. ಒಂದು ಬಗೆಯ ಹುಳಿಹಣ್ಣು. ೨. ಮಾವಿನಕಾಯಿ ಬಾಳಕ.

ಆಮಳೆ (ಗು). ಪೂರ್ತಿ; ಇಡೀ.

ಆಮಾತ್ಯ = ಅಮಾತ್ಯ.

ಆಮಿಷ (ನಾ). ೧. ಮಾಂಸ. ೨. ಭೋಗ್ಯವಸ್ತು. ೩. ಲಂಚ. ೪. ಪ್ರಲೋಭನ; ಆಸೆ.

ಆಮಿಲ (ನಾ). ತಾಲ್ಲೂಕಿನ ಆಡಳಿತವನ್ನು ನೋಡಿಕೊಳ್ಳುವ ಸ್ಥಳೀಯ ಅಧಿಕಾರಿ; ತಹಸೀಲುದಾರ.

ಆಮಿಲ(ಳ)ನ (ನಾ). ಮುಚ್ಚುವಿಕೆ.

ಆಮುಕ್ತ (ನಾ). ೧. ಕವಚ ತೊಟ್ಟಿರುವವನು. ೨. ಯುದ್ಧಕವಚ. (ಗು). ೩. ಸಡಿಲಗೊಳಿಸಿದ. ೪. ತೊಟ್ಟ; ಧರಿಸಿದ.

ಆಮುತ್ರಿಕ (ನಾ). ೧. ಪರಲೋಕದ ಗತಿ; ಮೋಕ್ಷ. (ಗು). ೨. ಪರಲೋಕದ.

ಆಮುಷ್ಮಿಕ (ನಾ). ೧. ಪರಲೋಕ. (ಗು). ೨. ಪರಲೋಕಕ್ಕೆ ಸಂಬಂಧಿಸಿದ.

ಆಮೂಲ (ಅ). ಮೂಲದಿಂದ ಹಿಡಿದು. ~ಅಗ್ರ = ಬುಡದಿಂದ ತುದಿಯವರೆಗೆ.

ಆಮೆ (ನಾ). ೧. ಒಂದು ಜಲಚರ ಪ್ರಾಣಿ; ಕೂರ್ಮ; ಕಮಠ. ೨. ಬೇಯಿಸದ ಆಹಾರ ಪದಾರ್ಥಗಳು.

ಆಮೋದ (ನಾ). ೧. ಸಂತೋಷ. ೨. ಸುವಾಸನೆ. (ಗು). ೩. ಸಂತೋಷಕರವಾದ.

ಆಮ್ನಾಯ (ನಾ). ೧. ಪರಂಪರಾಗತವಾದ ಪದ್ಧತಿ. ೨. ವಂಶ; ಪೀಳಿಗೆ. ೩. ವೇದ.

ಆಮ್ನೆ (ನಾ). ನೆನಪಿಗೆ ಒಳಪಡಿಸುವುದು.

ಆಮ್ರ (ನಾ). ೧. ಹುಳಿ; ಸಾರು. ೨. ಮಾವು; ಮಾವಿನ ಮರ. ~ವಲ್ಲಿ = ಕೋಮಲವಾದ ಮಾವಿನ ಗಿಡ.

ಆಮ್ರಾತಕ (ನಾ). ಅಮಟೆಯ ಮರ ಮತ್ತು ಕಾಯಿ.

ಆಮ್ರೇಡಿತ (ನಾ). ಹೇಳಿದುದನ್ನು ಮತ್ತೆ ಹೇಳುವುದು; ಪುನರುಕ್ತಿ.

ಆಮ್ಲ (ನಾ). ೧. ಹುಳಿರಸ; ಹುಳಿ. ೨. ಹುಣಿಸೆ. ~ಜನಕ = ಪ್ರಾಣವಾಯು.

ಆಮ್ಲೀಕರಣ (ನಾ). ಹುಳಿಮಾಡುವಿಕೆ.

ಆಯ್(ಯಿ,ಯು) (ಕ್ರಿ). ೧. ಶೇಖರಿಸು; ಸಂಗ್ರಹಿಸು. ೨. ಚುನಾಯಿಸು. ೩. ಬೇರ್ಪಡಿಸು. (ನಾ). ೪. ತಾಯಿ. ೫. ಮುತ್ತಜ್ಜಿ. ೬. ಜೀವಿತದ ಅವಧಿ; ಆಯುಷ್ಯ. ~ಕುಳಿ = ೧. ತಿರುಕ; ಭಿಕ್ಷುಕ. ೨. ಆರಿಸಿಕೊಳ್ಳುವುದು. ೩. ಆರಿಸಿಕೊಂಡ

ಮೇಲೆ ಉಳಿದದ್ದು. ೪. ಆರಿಸಿಕೊಂಡ. ~ಪೊ(ವೊ)ಯ್ = ಜೀವವನ್ನು ತುಂಬು.

ಆಯು (ನಾ). ೧. ಒಳಗು; ಮರ್ಮ. ೨. ಐಶ್ವರ್ಯ. ೩. (ಶರೀರದ) ಮರ್ಮಸ್ಥಾನ. ೪. ಪ್ರಮಾಣ; ಪರಿಮಿತಿ. ೫. ರೀತಿ; ನೀತಿ. ೬. ಉದ್ದೇಶ. ೭. ರಚನೆಯ ವಿಧಾನ. ೮. ಅನುಕೂಲತೆ. ೯. ಸಮುಸ್ಥಿತಿ; ಹಿಡಿತ. ೧೦. ಅಗಲಕ್ಕಿಂತ ಉದ್ದ ಹೆಚ್ಚಾದ ಆಕೃತಿ. ೧೧. ಆದಾಯ; ಹುಟ್ಟುವಳಿ. ೧೨. ಕಂದಾಯ. ~(ಂ)ತ(ದ)ಪ್ಪು = ೧. ಕೆಚ್ಚುಗುಂದು. ೨. ತೂಕತಪ್ಪು. ~ಕಟ್ಟು = ೧. ಅಚ್ಚುಕಟ್ಟು; ಅನುಕೂಲತೆ. ೨. ಮರ್ಮಸ್ಥಾನ; ಮಹತ್ತ್ವದ ಪ್ರದೇಶ. ೩. ರಚನೆ; ಮಾಟ. ೪. ಗ್ರಾಮದ ಎಲ್ಲೆಕಟ್ಟಿನ ಸಮಗ್ರ ವಿಸ್ತೀರ್ಣ. ೫. ಜಲಾಶಯದ ಆಸರೆಯಲ್ಲಿ ಬೆಳೆಯುವ ಜಮೀನಿನ ಒಟ್ಟು ವಿಸ್ತಾರ. ~ಕಾ(ಗಾ)ಣಿಸು = ಮರ್ಮಸ್ಥಾನವನ್ನು ಮುಟ್ಟುವಂತೆ ಮಾಡು. ~ಕಾ(ಗಾ)ಣು = ಸಮತೆಯನ್ನು ಕಾಣು. ~ಕಾ(ಗಾ)ಱ(ರ) = ೧. ಕೆಲಸದ ರಹಸ್ಯವನ್ನು ತಿಳಿದವನು. ೨. ವಂಶಪರಂಪರೆಯಾಗಿ ಗ್ರಾಮಕ್ಕೆ ಸೇವೆ ಸಲ್ಲಿಸುತ್ತಿರುವ ಸೇವಕ. ೩. ಜೀತಗಾರ. ೪. ಊರಿನ ಮುಖ್ಯಸ್ಥರ ಮನೆಗಳಿಂದ ಅನ್ನ, ಆಹಾರ ಮುಂತಾದುವುಗಳನ್ನು ಸಾಂಪ್ರದಾಯಿಕವಾಗಿ ಪಡೆದುಕೊಳ್ಳುವವನು. ~ಕಾ(ಗಾ)ಲು = ಅಡ್ಡಣಿಗೆಗೆ ಕೊಡುವ ಊರೆಗೋಲು, — ಆಸರೆಗೋಲು.

ಆಯುತ (ನಾ). ೧. ಉಚಿತವಾದ ಕ್ರಮ. ೨. ಸಿದ್ಧ; ಸನ್ನದ್ಧ. ೩. ಅತಿಶಯ; ಹೆಚ್ಚಳ. ೪. ನೆಲೆ; ವಾಸಸ್ಥಾನ. ೫. (ಮಂಗಳ ಕಾರ್ಯದಲ್ಲಿ) ಸಮ್ಮತವೇ ಎಂದು ಕೇಳುವ ಕ್ರಮ. (ಗು). ೬. ಅಗತ್ಯವಾದ; ಉಚಿತವಾದ. ೭. ವಿಶಾಲವಾದ. ೮. ನೀಳವಾದ. ~ಕೀರ್ತಿ = ವಿಸ್ತಾರವಾಗಿ ಪಸರಿಸಿದ ಕೀರ್ತಿಯುಳ್ಳವನು.

ಆಯುತಿ (ನಾ). ೧. ಮನಸ್ಸಿನ ಸಂಯಮ; ಜಿತೇಂದ್ರಿಯತ್ವ. ೨. ಸಾಮರ್ಥ್ಯ. ೩. ಮಹಿಮೆ. ೪. ವಿಸ್ತಾರ; ವ್ಯಾಪ್ತಿ. ೫. ಭವಿಷ್ಯ. ೬. ಆದಾಯ; ಲಾಭ.

ಆಯುತಿಕ್ಕೆ(ಕೆ) (ನಾ). ೧. ಪ್ರಭಾವ; ಘನತೆ. ೨. ಅತಿಶಯ. ೩. ಶ್ರದ್ಧೆ; ಆಸಕ್ತಿ.

ಆಯುತ್ತ (ನಾ). ೧. ಕೂಡಿರುವುದು; ಸಂಬಂಧಿಸಿರುವುದು. (ಗು). ೨. ಅಧೀನ. ೩. ಪಳಗಿದ. (ಅ). ೪. ಸುಲಭವಾಗಿ; ಅನಾಯಾಸವಾಗಿ.

ಆಯುಪಾಣಿ (ನಾ). ಆರಿಸಿದ್ದು; ಉತ್ಕೃಷ್ಟವಾದದ್ದು.

ಆಯುಲ್ಲಕ (ನಾ). ಉತ್ಕಟವಾದ ಬಯಕೆ; ಉತ್ಕಂಠತೆ.

ಆಯುಶ್ಶೂಲಿ(ಳಿ)ಕ (ನಾ). ೧. ಸುಲಭವಾಗಿ ಸಾಧ್ಯವಾಗುವ ಕೆಲಸಕ್ಕೆ ತೀಕ್ಷ್ಣವಾದ ಉಪಾಯಗಳನ್ನು ಅವಲಂಬಿಸುವವನು. (ಗು). ೨. ಕಬ್ಬಿಣದ ಶೂಲಕ್ಕೆ ಸಂಬಂಧಿಸಿದ.

ಆಯುಸ (ನಾ). ೧. ಆಯಾಸ; ಬಳಲಿಕೆ. ೨. ಉಕ್ಕಿನಿಂದ ಮಾಡಿದ ಆಯುಧ. (ಗು). ೩. ಕಬ್ಬಿಣದಿಂದ ಮಾಡಿದ. ~ಪಿಂಡ = ಕಬ್ಬಿಣದ ಗುಂಡು.

ಆಯುಸ್ಕರ (ನಾ). ಅಯುಸ್ಕಾಂತ; ಸೂಜಿಗಲ್ಲು.

ಆಯಾ (ನಾ). ದಾದಿ; ದಾಸಿ; ಸೇವಕಿ.

ಆಯಾತ (ನಾ). ೧. ಬಂದವನು. ೨. ಆಮದು; ಹೊರಗಿನಿಂದ ತರಿಸಿಕೊಳ್ಳುವ ವಸ್ತು. (ಗು). ೩. ಬಂದ; ಸೇರಿದ. ~ಪ್ರಯಾತ = ಬರುವ ಮತ್ತು ಹೋಗುವ.

ಆಯಾನ (ನಾ). ೧. ಬರುವುದು. ೨. ಸ್ವಭಾವ; ಪ್ರಕೃತಿ. ೩. ಅಭೇದ್ಯವಾದುದು.

ಆಯಾಮ (ನಾ). ೧. ಉದ್ದ; ನೀಳ. ೨. ವಿಸ್ತಾರ; ಹರಹು. ೩. ಸಂಯಮ; ನಿಯಮನ.

ಆಯಾಸ ೧. = ಆಯಸ. ೨. ಪ್ರಯತ್ನ.
ಆಯಾಸಿ (ನಾ). ದಣಿದವನು.
ಆಯಾಳಿಸು (ಕ್ರಿ). ಕೇಸರದಂತೆ ಮಾಡಿಕೊ.
ಆಯುಕ್ತ (ನಾ). ೧. ನಿಯೋಗಿ; ಪ್ರತಿನಿಧಿ. (ಗು). ೨. ನೊಗಕ್ಕೆ ಹೂಡಿದ. ೩. ಕೆಲಸಕ್ಕಾಗಿ ನಿಯೋಗಿಸಲ್ಪಟ್ಟ.
ಆಯುಧ (ನಾ). ೧. ಹೊಡೆಯುವುದಕ್ಕೆ ಬಳಸುವ ಸಾಧನ. ೨. ಕೆಲಸ ಮಾಡಲು ಉಪಯೋಗಿಸುವ ಸಲಕರಣೆ.
ಆಯುಧಿಕ (ನಾ). ೧. ಸೈನಿಕ; ಸಿಪಾಯಿ. (ಗು). ೨. ಆಯುಧಗಳಿಗೆ ಸಂಬಂಧಿಸಿದ.
ಆಯುರ್ವೇದ (ನಾ). ಭಾರತೀಯ ವೈದ್ಯ ಶಾಸ್ತ್ರ.
ಆಯುಷ್ಯ (ನಾ). ೧. ಜೀವಿತಾವಧಿ; ಬದುಕಿರುವ ಕಾಲ. (ಗು). ೨. ದೀರ್ಘಾಯುಸ್ಸನ್ನು ಕೊಡತಕ್ಕ.
ಆಯೋಗ (ನಾ). ೧. ನೊಗಕ್ಕೆ ಹೂಡಿದ ಎತ್ತು, ಕುದುರೆ ಮುಂತಾದ ಪ್ರಾಣಿಗಳ ಜೊತೆ. ೨. ಒಂದು ಕೆಲಸಕ್ಕಾಗಿ ನೇಮಿಸಿದ ಸಮಿತಿ; ನಿಯೋಗ. ೩. ಜೋಡಣೆ. ೪. ಆಭರಣ; ಒಡವೆ. ೫. ತೀರ; ದಡ.
ಆಯೋಜನ (ನಾ). ಜೋಡಣೆ.
ಆಯೋಧನ (ನಾ). ಯುದ್ಧ; ಕಾಳಗ.
ಆರ್ (ರು) ೧. = ಆರ್ಜ್. ೨. ಗಟ್ಟಿಯಾಗಿ ಕೂಗು; ಗರ್ಜಿಸು. ೩. ತೃಪ್ತಿಪಡು; ತಣಿ. ೪. ತುಂಬು. (ನಾ). ೫. ನೊಗವನ್ನು ಹೂಡಿ ಎತ್ತುಗಳನ್ನು ಕಟ್ಟಿದ ನೇಗಿಲು. ೬. ಹೋರಿಗಳನ್ನು ಪಳಗಿಸುವುದಕ್ಕಾಗಿ ನೊಗದಂತೆ ಉಪಯೋಗಿಸುವ ಮರ. ೭. ನಿಚುಳವೃಕ್ಷ. ~ಇಸು = ೧. ಆಯು. ೨. ಶೇಖರಿಸು. ೩. ನಂದಿಸು.
ಆರ (ನಾ). ೧. ಹಾರ; ಮಾಲೆ. ೨. ಹಿತ್ತಾಳೆ. ೩. ಕಬ್ಬಿಣಕ್ಕೂ ಆಮ್ಲಜನಕಕ್ಕೂ ಉಂಟಾದ ಸಂಯೋಗದಿಂದ ದೊರೆಯುವ ವಸ್ತು; ಲೋಹಾಮ್ಲ. ೪. ಅಂಗಾರಕ ಗ್ರಹ. ೫. ಶನಿಗ್ರಹ. ೬. ಖಡ್ಗ. ೭. ಚರ್ಮವನ್ನು ಕತ್ತರಿಸುವ ಸಾಧನ.
ಆರಂಬ(ಭ) (ನಾ). ೧. ಬೇಸಾಯ; ಒಕ್ಕಲುತನ. ೨. ಮೊದಲು; ಪ್ರಾರಂಭ. ೩. ಉದ್ಯೋಗ. ~ಶೂರ = ಕೆಲಸವನ್ನು ಆರಂಭ ಮಾಡುವುದರಲ್ಲಿ ಮಾತ್ರ ಗಟ್ಟಿಗ.
ಆರಕ (ನಾ). ಕಾಪಾಡುವವನು; ರಕ್ಷಕ.
ಆರಕ್ತ (ಗು). ಪೂರ್ಣ ಕೆಂಪಾದ.
ಆರಕ್ಷ (ನಾ). ೧. ರಕ್ಷಣೆ; ಕಾಪು. ೨. ಆನೆಯ ಕುಂಭಸ್ಥಳದ ಕೆಳಭಾಗ.
ಆರಟ(ಟೆ) (ನಾ). ಸೂರೆ; ಕೊಳ್ಳೆ.
ಆರಣ (ನಾ). ವೇದಗಳಲ್ಲಿ ಒಂದು ಭಾಗ.
ಆರಣ್ಯ (ನಾ). ೧. ಅರಣ್ಯ; ಕಾಡು. (ಗು). ೨. ಅರಣ್ಯದ; ಕಾಡಿನ.
ಆರಣ್ಯಕ (ನಾ). ೧. ಅರಣ್ಯವಾಸಿ. ೨. ಬ್ರಾಹ್ಮಣ್ಯಕ್ಕೆ ಸಂಬಂಧಿಸಿದ ವೇದದ ಒಂದು ಭಾಗ. (ಗು). ೩. ಕಾಡಿನ.
ಆರತ (ನಾ). ೧. ಸಂಕಟ; ವ್ಯಾಕುಲ. (ಗು). ೨. ಮೃದುಸ್ವಭಾವದ. ೩. ಆಸಕ್ತನಾದ.
ಆರತಿ (ನಾ). ೧. ಕುಂಕುಮ ಬೆರಸಿದ ನೀರಿನಿಂದ ಅಥವಾ ದೀಪಗಳಿಂದ ಎತ್ತುವ ನೀರಾಜನ. ೨. ಆರತಿಯನ್ನು ಮಾಡುವ ಉಪಕರಣ. ೩. ವಿರಾಮ; ಮುಗಿಯುವಿಕೆ.
ಆರನಾಲ(ಳ) (ನಾ). ಗಂಜಿ; ಅಂಬಲಿ.
ಆರಪಾರ (ಅ). ತುದಿಯಿಂದ ತುದಿಯವರೆಗೆ; ತಡೆಯಿಲ್ಲದೆ; ಅನಿರ್ಬಂಧಿತವಾಗಿ.
ಆರಬ್ಧ (ಗು). ಆರಂಭಿಸಿದ.
ಆರಭಾರ (ನಾ). ಆಡಳಿತ; ಮೇಲ್ವಿಚಾರಣೆ.
ಆರಯ್(ಯಿ) (ಕ್ರಿ). ೧. ಹುಡುಕು. ೨. ಯೋಚಿಸು. ೩. ವಿಮರ್ಶಿಸು. ೪. ಕಾಪಾಡು.
ಆರಯ್ಕೆ (ನಾ). ೧. ವಿಮರ್ಶಿಸುವುದು; ವಿಮರ್ಶೆ. ೨. ರಕ್ಷಣೆ; ಪೋಷಣೆ.

ಆರವ (ನಾ). ಶಬ್ದ ; ಧ್ವನಿ ; ಕೂಗು.
ಆರವಾರ (ನಾ). ೧. ಸ್ವಲ್ಪ ಆಯಾಸ ಅಥವಾ ನೋವಿಗೆ ಬಹಳವಾಗಿ ಆರ್ಭಟ ಮಾಡಿ ಕೂಗಿಕೊಳ್ಳುವುದು. ೨. = ಆರುವಾರ.
ಆರವೆ(ಮೆ) (ನಾ). ತೋಟ ; ಉದ್ಯಾನವನ.
ಆರಾಗ್ರ (ನಾ). ೧. ಉಳಿಯಂತೆ ಮೊನೆಯುಳ್ಳ ಬಾಣ. ೨. ಚರ್ಮ ಕತ್ತರಿಸುವ ಉಳಿಯ ಬಾಯಿ, -ಅಲಗು.
ಆರಾಜಿತ (ಗು). ಸಿಂಗರಿಸಿದ.
ಆರಾಜಿಸು (ಕ್ರಿ). ಪ್ರಕಾಶಿಸು ; ಹೊಳೆ.
ಆರಾತೀಯ (ಗು). ೧. ದೂರದ ; ಹಿಂದಿನ. ೨. ಸಮೀಪದ ; ಈಚಿನ.
ಆರಾತ್ರಿಕ = ಆರತಿ. ~ಕ್ರಿಯೆ = ಆರತಿಯೆತ್ತುವುದು.
ಆರಾಧಕ (ನಾ). ಪೂಜೆ ಮಾಡುವವನು ; ಅರ್ಚಕ.
ಆರಾಧನ(ನೆ) (ನಾ). ೧. ಪೂಜೆ ; ಉಪಾಸನೆ. ೨. ಸಂತೋಷಪಡಿಸುವುದು. ೩. ಸೇವೆ. ೪. ಸಾಧನೆ. ೫. ಸಿದ್ಧಿ.
ಆರಾಧ್ಯ (ನಾ). ೧. ಶೈವರಲ್ಲಿ ಒಂದು ಪಂಗಡ. (ಗು). ೨. ಪೂಜ್ಯನಾದ ; ಓಲೈಸಬೇಕಾದ.
ಆರಾಮ (ನಾ). ೧. ಸುಖಕರವಾದುದು ; ರಮ್ಯವಾದುದು. ೨. ತೋಟ. ೩. ವಿಶ್ರಾಂತಿ; ವಿರಾಮ. ೪. ಆರೋಗ್ಯ.
ಆರಾಲಿ(ಳಿ)ಕ (ನಾ). ಅಡಿಗೆಯವನು.
ಆರಾವ = ಆರವ.
ಆರಿದ್ರೆ (ನಾ). ೧. ಇಪ್ಪತ್ತೇಳು ನಕ್ಷತ್ರರಾಶಿಗಳಲ್ಲಿ ಆರನೆಯದು. ೨. ಆ ನಕ್ಷತ್ರದ ಹೆಸರಿನ ಮಳೆ.
ಆರುವಾರ (ನಾ). ಸಾಲಕ್ಕಾಗಿ ಮನೆ, ಜಮೀನು ಮುಂತಾದ ಆಸ್ತಿಯನ್ನು ಭೋಗ್ಯಹಾಕುವುದು.
ಆರುಷಣ (ನಾ). ಕೊತ್ತಂಬರಿಬೀಜ ; ಧನಿಯ.
ಆರುಷ್ಕರ (ಗು). ಗೇರಿನ ; ಗೇರುಬೀಜದ.
ಆರುಹತ (ನಾ). ೧. ಜೈನಮತ. ೨. ಜೈನಮತದವನು.
ಆರೂಢ (ನಾ). ೧. ತತ್ತ್ವಜ್ಞ ; ಜೀವನ್ಮುಕ್ತ. (ಗು). ೨. ಏರಿದ ; ಹತ್ತಿದ. ೩. ಪಡೆದ. ೪. ಕೈಗೊಂಡ. ~ತಪ = ೧. ತಪಸ್ಸನ್ನು ಕೈಕೊಂಡ. ೨. ಮಾಘಮಾಸವನ್ನು ಹಿಡಿದ. ~ಯೋಗಿ = ಸಿದ್ಧ ; ಜೀವನ್ಮುಕ್ತ.
ಆರೆ (ನಾ). ೧. ದನಕರು, ಕುದುರೆ ಮುಂತಾದ ಪ್ರಾಣಿಗಳ ಗೊರಸಿನ ಹಿಂಭಾಗ ; ಕಿರುಗೊರಸು. ೨. ಚರ್ಮವನ್ನು ಕತ್ತರಿಸುವ (ಮೋಚಿಯ) ಉಳಿ. ೩. ಸಣ್ಣಚೂರಿ. ೪. ಅಂಕುಶ. ೫. ಕೋಳಿಗಳ ಕಾಲುಗಳಿಗೆ ಕಟ್ಟುವ ಸಣ್ಣಕತ್ತಿ. ೬. ಗಾಡಿಯ ಚಕ್ರದಲ್ಲಿರುವ ಮರದ ಕಾಲು. ೭. ತ್ರಿಜ್ಯ.
ಆರೋಗಣ(ಣೆ) (ನಾ). ಊಟ ; ಭೋಜನ.
ಆರೋಗ್ಯ (ನಾ). ರೋಗವಿಲ್ಲದಿರುವುದು ; ಸ್ವಸ್ಥತೆ ; ಸೌಖ್ಯ.
ಆರೋಚಕ (ಗು). ಅರುಚಿಯನ್ನು ಹೋಗಲಾಡಿಸಿ ನಾಲಗೆಗೆ ರುಚಿಯನ್ನು ಹುಟ್ಟಿಸುವ.
ಆರೋಪ (ನಾ). ೧. (ಒಂದು ವಸ್ತುವಿನಲ್ಲಿ ಇಲ್ಲದ ಗುಣವನ್ನು) ಹೊರಿಸಿ ಹೇಳುವುದು. ೨. ತಪ್ಪು ಹೊರಿಸುವುದು.
ಆರೋಪಣ(ಣೆ) (ನಾ). ೧. ಮೇಲೆ ಹೊರಿಸುವುದು. ೨. ತಪ್ಪು ಹೊರಿಸುವುದು. ೩. ಬಿಲ್ಲಿಗೆ ಹೆದೆಯನ್ನು ಏರಿಸುವುದು.
ಆರೋಪಿ (ನಾ). ಅಪವಾದಕ್ಕೆ ಗುರಿಯಾದವನು.
ಆರೋಹ (ನಾ). ೧. ಹತ್ತುವುದು. ೨. ಸವಾರ. ೩. ಎತ್ತರ. ೪. ಉದ್ದ. ೫. (ಹೆಂಗಸರ) ಸೊಂಟ ; ನಡು. ೬. ನಿತಂಬ ಪ್ರದೇಶ.
ಆರೋಹಣ (ನಾ). ೧. ಹತ್ತುವುದು. ೨. ಅವಲಂಬನ. ೩. ಮೆಟ್ಟಿಲು.
ಆರೋಹಿ (ನಾ). ಏರಿದವನು ; ಸವಾರ.
ಆಱ್(ರ್,ರು,ಱು) (ಕ್ರಿ). ೧. ಸಮರ್ಥವಾಗು ; ಶಕ್ತವಾಗು. ೨. ತಾಳಿಕೊಳ್ಳು ;

ಸೈರಿಸು. ೩. ಒಣಗಿ ಹೋಗು. ೪. ನಂದು; ಅಡಗು. ೫. ಶಾಂತವಾಗು. (ನಾ). ೬. ಒಂದು ಸಂಖ್ಯಾವಾಚಕ. ~ಅಡಿ= ೧. ಆರು ಕಾಲುಗಳುಳ್ಳ ಕೀಟ; ದುಂಬಿ. ೨. ಬಾಧೆ; ಹಿಂಸೆ. ೩. ದ್ವೇಷ; ಹಗೆತನ.

**ಆಟಾ(ರಾ)ಟ** (ನಾ). ೧. ರೋಗದಿಂದ ನರಳುವವನ ವೇದನೆ; ನರಳಾಟ. ೨. ನೀರಾಟ; ಜಲಕೇಳಿ.

**ಆರ್ಕಿ** (ನಾ). ೧. ಸೂರ್ಯನ ಮಗ. ೨. ಶನಿ. ೩. ಯಮ. ೪. ಸುಗ್ರೀವ. ೫. ಕರ್ಣ.

**ಆರ್ಜನ(ನೆ)** (ನಾ). ಗಳಿಕೆ; ಸಂಪಾದನೆ.

**ಆರ್ಜವ** (ನಾ). ೧. ಪ್ರಾಮಾಣಿಕತೆ; ಋಜುಸ್ವಭಾವ. ೨. ಸುಖದುಃಖಗಳೊದಗಿದಾಗ ಸಮಚಿತ್ತದಿಂದಿರುವುದು. ೩. ನಿತ್ಯಕರ್ಮಾನುಷ್ಠಾನವನ್ನು ಬಿಡದೆ ಸಂತೋಷಮಯವಾಗಿರುವುದು. ೪. ವಿನಯ; ನಮ್ರತೆ. ೫. ಋಜುಸ್ವಭಾವದವನು; ಪ್ರಾಮಾಣಿಕ.

**ಆರ್ಜಿತ** (ಗು). ಸಂಪಾದಿಸಿದ; ಗಳಿಸಿದ.

**ಆರ್ತ** (ನಾ). ೧. ಕಷ್ಟಕ್ಕೆ ಸಿಕ್ಕಿದವನು; ದುಃಖಿತ. ೨. ಬಯಸುವವನು. ೩. ಆಪತ್ತು; ಕಷ್ಟ. ೪. ಅಪಹರಿಸುವುದು.

**ಆರ್ತವ** (ನಾ). ೧. ಋತುಕಾಲದಲ್ಲಿ ಸ್ರವಿಸುವ ರಕ್ತ; ಮುಟ್ಟು. (ಗು). ೨. ಋತುಗಳಿಗೆ ಸಂಬಂಧಿಸಿದ. ೩. ಸ್ತ್ರೀಯರ ಋತುಕಾಲಕ್ಕೆ ಸಂಬಂಧಿಸಿದ.

**ಆರ್ತಿ** ೧. = ಆರಿದ್ರೆ. ೨. ವ್ಯಥೆ; ಸಂಕಟ. ೩. ದೈನ್ಯ. ೪. ಬಿಲ್ಲಿನ ತುದಿ; ಕೊಪ್ಪು. ೫. ರೋಗ. ೬. ಬಯಕೆ. ೭. ನಾಶ.

**ಆರ್ಥಿಕ** (ಗು). ಹಣಕಾಸಿಗೆ ಸಂಬಂಧಿಸಿದ.

**ಆರ್ದ್ರ** (ನಾ). ೧. ಹಸಿಯ ಶುಂಠಿ; ಅಲ್ಲ. (ಗು). ೨. ತೇವವಾದ. ೩. ಹೊಚ್ಚಹೊಸದಾದ. ೪. ಮೃದುವಾದ. ೫. ಮಗ್ನವಾದ. ~ಭಾವ = ೧. ತೇವವಾಗಿರುವಿಕೆ. ೨. ಮೃದುತ್ವ. ೩. ಪ್ರೀತಿಯಿಂದ ಕೂಡಿರುವುದು.

**ಆರ್ದ್ರಕ** (ನಾ). ೧. ಹಸಿಯ ಶುಂಠಿ; ಅಲ್ಲ. ೨. ತೇವ ಮಾಡುವ ಸಲಕರಣೆ; ತೇವತಡಿ.

**ಆರ್ದ್ರತೆ** (ನಾ). ೧. ಒದ್ದೆ; ತೇವ. ೨. ಮೃದುತ್ವ.

**ಆರ್ಭಗ** (ನಾ). ಸಾಮರ್ಥ್ಯವುಳ್ಳವನು; ಸಾಹಸಿ.

**ಆರ್ಭ** (ನಾ). ೧. ಸಾಮರ್ಥ್ಯ; ಪರಾಕ್ರಮ. ೨. ತೀವ್ರತೆ; ರಭಸ. ೩. ದಯೆ. ೪.=ಆರ್ಭಟೆ.

**ಆರ್ಭಟ(ಟೆ)** (ನಾ). ಗಟ್ಟಿಯಾದ ಕೂಗು; ಗರ್ಜನೆ.

**ಆರ್ಮ** (ನಾ). ೧. ಆಶ್ರಯಸ್ಥಾನ; ನೆಲೆ. ೨. ಹಿತಕರವಾದುದು; ಶ್ರೇಯಸ್ಕರವಾದುದು.

**ಆರ್ಯ** (ನಾ). ೧. ಸಾಧು; ಸಜ್ಜನ. ೨. ಉತ್ತಮ ಕುಲದಲ್ಲಿ ಹುಟ್ಟಿದವನು. ೩. ತಪಸ್ವಿ. ೪. ಆಚಾರ್ಯ; ಗುರು. ೫. ಶೈವರಲ್ಲಿ ಒಂದು ಪಂಗಡ; ಆರಾಧ್ಯ. ೬. ವೃದ್ಧ; ಹಿರಿಯ. ೭. ಭೋಗಭೂಮಿಯಲ್ಲಿ ಹುಟ್ಟಿದವನು.

**ಆರ್ಯಾವರ್ತ** (ನಾ). ಆರ್ಯರು ನೆಲೆಸಿದ್ದ ಹಿಮಾಲಯ ಮತ್ತು ವಿಂಧ್ಯಪರ್ವತಗಳ ನಡುವಿನ ಪ್ರದೇಶ.

**ಆರ್ಯೆ** (ನಾ). ೧. ಪೂಜ್ಯಳಾದ ಸ್ತ್ರೀ. ೨. ಪಾರ್ವತಿ. ೩. ಛಂದಸ್ಸಿನಲ್ಲಿ ಒಂದು ಬಗೆ.

**ಆರ್ಷ** (ನಾ). ೧. ಎಂಟು ವಿಧ ವಿವಾಹಗಳಲ್ಲಿ ಒಂದು. (ಗು). ೨. ಋಷಿಗಳಿಗೆ ಸಂಬಂಧಿಸಿದ. ೩. ಪ್ರಾಚೀನವಾದ. ೪. ಪವಿತ್ರವಾದ.

**ಆರ್ಷಭ್ಯ** (ನಾ). ಎತ್ತು ಆಗುವುದಕ್ಕೆ ತಕ್ಕ ವಯಸ್ಸಾದ ಹೋರಿ.

**ಆರ್ಷೇಯ** (ನಾ). ೧. ಹಿಂದಿನವನು. (ಗು). ೨. ಋಷಿಗಳಿಗೆ ಸಂಬಂಧಿಸಿದ. ೩. ಪ್ರಾಚೀನವಾದ; ಹಿಂದಿನಿಂದ ಬಂದ.

**ಆರ್ಹಂತ್ಯ** (ಗು). ಅರ್ಹಂತನಿಗೆ ಸಂಬಂಧಿಸಿದ.

**ಆರ್ಹತ** (ನಾ). ೧. ಜೈನ. (ಗು). ೨. ಜೈನ ಧರ್ಮಕ್ಕೆ ಸಂಬಂಧಿಸಿದ.

**ಆಲ್(ಲು)** (ಕ್ರಿ). ೧. ಗಟ್ಟಿಯಾಗಿ ಕೂಗು; ಕಿರುಚು. (ನಾ). ೨. ನೀರನ್ನು ಇಡುವ ಸಣ್ಣಪಾತ್ರೆ; ಹೂಜಿ. ೩. ಆಲೂಗಡ್ಡೆ; ಬಟಾಟೆ. ~ಇಸು = ೧. ಮನಸ್ಸಿಟ್ಟು ಕೇಳು; ಗಮನಿಸು. ೨. ಚಿಂತಿಸು; ಆಲೋಚಿಸು. ೩. ಗಟ್ಟಿಯಾಗಿ ಕೂಗುವಂತೆ ಮಾಡು. ೪. ನೋಡು; ನಿರೀಕ್ಷಿಸು.

**ಆಲ** (ನಾ). ೧. ಹಾಲುಮರಗಳಲ್ಲಿ ಒಂದು; ವಟವೃಕ್ಷ. ೨. ವಿಷಪ್ರಾಣಿಗಳು ಬಿಡುವ ಪ್ರವ. ೩. ಹಳದಿಯ ಬಣ್ಣದ ಹೂವು. ೪. ಚೇಳಿನ ಕೊಂಡಿ. (ಗು). ೫. ಅಗಲವಾಗಿರುವ.

**ಆಲಂಕಾರಿಕ** (ನಾ). ೧. ಅಲಂಕಾರಶಾಸ್ತ್ರವನ್ನು ಬಲ್ಲವನು. (ಗು). ೨. ಅಲಂಕಾರದಿಂದ ಕೂಡಿದ. ೩. ಲಾಕ್ಷಣಿಕವಾದ.

**ಆಲ(ಳ)ಂಬ** (ನಾ). ಆಶ್ರಯ; ಆಧಾರ.

**ಆಲ(ಳ)ಂಬನ** ೧. = ಆಲಂಬ. ೨. ನೇತಾಡುವುದು. ೩. ಸಹಾಯ.

**ಆಲ(ಳ)ಂಭ** (ನಾ). ೧. ಹಿಡಿದುಕೊಳ್ಳುವುದು. ೨. ಕೊಲ್ಲುವುದು. ೩. ನಿರ್ಮೂಲನ.

**ಆಲಗ್ನ** (ಗು). ೧. ಸೇರಿಕೊಂಡ; ಸಿಕ್ಕಿಕೊಂಡ. ೨. ಸೇರಿಸಿ ಕಟ್ಟಿದ.

**ಆಲಜಾಲ(ಳ)** (ನಾ). ಸುಳ್ಳಿನ ಕಂತೆ.

**ಆಲ(ಳ)ಯ** (ನಾ). ವಾಸಸ್ಥಳ; ಮನೆ.

**ಆಲವಟ್ಟ(ಟ)** (ನಾ). ಹುಲ್ಲು, ತಾಳೆಗರಿ ಅಥವಾ ಬಟ್ಟೆಯಿಂದ ಮಾಡಿದ ಬೀಸಣಿಗೆ.

**ಆಲವಟ್ಟಲು** ೧. = ಆಲವಟ್ಟ. ೨. ಒಂದು ಬಗೆಯ ಛತ್ರಿ.

**ಆಲವಾಲ(ಳ)** (ನಾ). ಮರಗಿಡಗಳ ಬುಡದಲ್ಲಿ ನೀರು ನಿಲ್ಲುವಂತೆ ಸುತ್ತಲೂ ಕಟ್ಟಿದ ಕಟ್ಟೆ; ಪಾತಿ; ಮಡಿ.

**ಆಲಸ** (ನಾ). ೧. ಸೋಮಾರಿ; ಜಡ. ೨. ಸೋಮಾರಿತನ. (ಗು). ೩. ನಿಧಾನವಾದ.

**ಆಲ(ಳ)ಸಿ** (ನಾ). ಸೋಮಾರಿ; ಮೈಗಳ್ಳ.

**ಆಲಸಿಕೆ** (ನಾ). ೧. ಆಯಾಸ. ೨. ಜಡತೆ; ಆಲಸ್ಯ.

**ಆಲಸ್ಯ** ೧.=ಆಲಸ. ೨. ಅನಾರೋಗ್ಯ. ೩. ದಣಿವು. ೪. ಬೇಸರ.

**ಆಲಾ(ಳಾ)ನ** (ನಾ). ಆನೆಯನ್ನು ಕಟ್ಟುವ ಕಂಬ.

**ಆಲಾ(ಳಾ)ಪ** (ನಾ). ೧. ಮಾತು; ಸಂಭಾಷಣೆ. ೨. ಸಂಗೀತದ ಪ್ರಾರಂಭದಲ್ಲಿ ರಾಗದ ಛಾಯೆಯನ್ನು ವಿಸ್ತರಿಸಿ ತೋರಿಸುವುದು; ಆಲಾಪನೆ.

**ಆಲಾಬು** (ನಾ). ಸೋರೆಗಿಡ ಮತ್ತು ಕಾಯಿ.

**ಆಲಾಸ್ಯ** (ನಾ). ಮೊಸಳೆ.

**ಆಲಿ(ಳಿ)** (ನಾ). ೧. ಘನೀಭೂತವಾದ ನೀರಿನ ಹನಿಗಳು; ಆಲಿಕಲ್ಲು; ಆಣಿಕಲ್ಲು. ೨. ಕಣ್ಣಿನ ಮಧ್ಯದಲ್ಲಿರುವ ಕರಿಯ ಗುಡ್ಡೆ. ೩. ಕಣ್ಣು. ೪. ದೃಷ್ಟಿ; ನೋಟ. ೫. ಕಣ್ಣುರೆಪ್ಪೆ. ೬. ನೇಯ್ಗೆ. ೭. ಗೆಳತಿ; ಸಖಿ. ೮. ಆಸೆ. ೯. ಏರಿ; ಸೇತುವೆ. ೧೦. ಸಾಲು; ಪಂಕ್ತಿ. ೧೧. ಸಮೂಹ. ೧೨. ದುಂಬಿ. ೧೩. ಚೇಳು. ~ಕು(ಗು)ಡು = ತಣ್ಣಗಾಗು; ತಂಪನ್ನುಂಟುಮಾಡು. ~ಕೊ(ಗೊ)ಡು = ಅತಿಶೈತ್ಯವಾಗು. ~ನೀರ್ = ೧. ಮಂಜಿನ ನೀರು; ತಣ್ಣನೆಯ ನೀರು. ೨. ಕಣ್ಣೀರು; ಕಂಬನಿ.

**ಆಲಿಂಗ** (ನಾ). ಅಪ್ಪಿಕೊಳ್ಳುವುದು; ಆಲಿಂಗನ.

**ಆಲಿಂಗ್ಯ** (ಗು). ಅಪ್ಪಿಕೊಳ್ಳಲು ಯೋಗ್ಯವಾದ.

**ಆಲಿಂದ** (ನಾ). ಮನೆಯ ಹೊರಬಾಗಿಲಿನ ಮುಂದಿನ ಜಗಲಿ; ಮೊಗಸಾಲೆ.

**ಆಲೀಢ** (ನಾ). ೧. ಯುದ್ಧಮಾಡುವಾಗ ನಿಲ್ಲುವ ಕ್ರಮ. (ಗು). ೨. ರುಚಿ ನೋಡಿದ; ತಿಂದ. ೩. ಆವರಿಸಿದ.

**ಆಲೀನ** (ಗು). ೧. ಕರಗಿಸಿದ. ೨. ಮೇಲೆ ನೆಲೆಸಿದ; ಒರಗಿದ.

**ಆಲುಕ** (ನಾ). ೧. ನೀರಿನ ಹೂಜಿ. ೨. ಒಂದು ಜಾತಿಯ ಕಪ್ಪುಮರ. ೩. ಆದಿಶೇಷ.

ಆಲೆ (ನಾ). ೧. ಕಬ್ಬಿನಿಂದ ರಸವನ್ನು ತೆಗೆಯುವ ಯಂತ್ರ. ೨. ಗಾಣ. ೩. ಕಿವಿಯ ಹಾಲೆ.

ಆಲೇಖ್ಯ (ನಾ). ೧. ಬರೆಹ; ಚಿತ್ರ. (ಗು). ೨. ಬರೆಯಬೇಕಾದ; ಚಿತ್ರಿಸಬೇಕಾದ.

ಆಲೇಪನ (ನಾ). ೧. ಬಳಿಯುವುದು; ಸವರುವುದು. ೨. ಲೇಪಿಸುವ ದ್ರವ್ಯ.

ಆಲೊ(ಲೋ)ಕ (ನಾ). ೧. ನೋಡುವುದು; ನೋಟ. ೨. ಪ್ರಭೆ; ಕಾಂತಿ. ೩. ಜ್ಞಾನ. ೪. ಹೊಗಳಿಕೆ.

ಆಲೊ(ಲೋ)ಕನ (ನಾ). ೧. ನೋಡುವುದು; ನೋಟ. ೨. ವಿಮರ್ಶೆ; ಪರಿಶೀಲನೆ.

ಆಲೊ(ಲೋ)ಚನೆ (ನಾ). ೧. ಕಾಣುವುದು; ನೋಡುವುದು. ೨. ಯೋಚಿಸುವುದು; ಪರಾಮರ್ಶೆ. ೩. ಅಭಿಪ್ರಾಯ; ಉದ್ದೇಶ.

ಆಲೊ(ಲೋ)ಚಿಸು (ಕ್ರಿ). ೧. ವಿಚಾರಿಸು; ಯೋಚಿಸು. ೨. ಗುರುವಿನ ಹತ್ತಿರ ತಪ್ಪೊಪ್ಪಿಗೆ ಮಾಡು.

ಆಲೋಡನ(ನೆ) (ನಾ). ೧. ಕಲಕುವುದು; ಕಡೆಯುವುದು. ೨. ಬೆರಸುವುದು; ಕಲಸುವುದು. ೩. ಆಲೋಚನೆ. ೪. ಮನನ ಮಾಡುವುದು.

ಆಲೊ(ಲೋ)ಲ(ಳ) (ನಾ). ೧. ಆಸಕ್ತನಾದವನು. ೨. ಆಸಕ್ತಿ. (ಗು). ೩. ಅಲುಗಾಡುವ; ಚಂಚಲವಾದ. ೪. ಹೊರಳುವ; ತಿರುಗುವ. ೫. ಕದಡಿದ; ಕಲಕಿದ.

ಆಲ್ಪರಿ (ಕ್ರಿ). ೧. ಅಲೆದಾಡು. ೨. ಅಂಗಲಾಚಿ ಬೇಡು. ೩. ಗೋಳಾಡು.

ಆವಗಂ (ಅ). ೧. ಯಾವಾಗಲೂ; ಎಡೆಬಿಡದೆ. ೨. ಅತಿಶಯವಾಗಿ; ಬಹಳ.

ಆವಗೆ (ನಾ). ಹೆಂಚು, ಮಡಕೆ ಮುಂತಾದುವುಗಳನ್ನು ಸುಡುವ ಕುಂಬಾರನ ಒಲೆ; ಕುಲಿಮೆ. ~ಕ(ಗ)ಲ = ಆವಗೆಯಲ್ಲಿ ಸುಟ್ಟ ಮಡಕೆ.

ಆವಡಿ (ನಾ). ಕಷ್ಟ; ತೊಂದರೆ; ಹಿಂಸೆ.

ಆವಣಿ (ನಾ). ಚಾಂದ್ರಮಾನದ ಆಷಾಢ ಶ್ರಾವಣ.

ಆವಪನ (ನಾ). ೧. ಬೀಜ ಬಿತ್ತುವುದು; ಬಿತ್ತನೆ. ೨. ಪಾತ್ರೆ.

ಆವರಕ (ನಾ). ಮುಚ್ಚುವ ಅಥವಾ ಮರೆ ಮಾಡುವ ವಸ್ತು.

ಆವರಣ (ನಾ). ೧. ಮುಚ್ಚುವುದು; ಮುಸುಕು ಹಾಕುವುದು. ೨. ಪ್ರಾಕಾರ; ಸುತ್ತುಗೋಡೆ. ೩. ಹೊದಿಕೆ. ೪. ಗುರಾಣಿ; ಹರಿಗೆ.

ಆವರಿಕೆ (ನಾ). ತಂಗಡಿ ಗಿಡ.

ಆವರಿಸು (ಕ್ರಿ). ೧. ಹರಡು; ವ್ಯಾಪಿಸು. ೨. ಪಡೆ; ಹೊಂದು. ೩. ಮುತ್ತು; ಕವಿ. ೪. ಪ್ರಾಪ್ತವಾಗು; ಸೇರು. ೫. ವಿಮರ್ಶಿಸು; ವಿಚಾರಿಸು.

ಆವರೆ = ಆವರಿಕೆ.

ಆವರ್ಜನ (ನಾ). ೧. ಬಾಗುವುದು; ಒರಗುವುದು. ೨. ಕೊಡುವುದು. ೩. ಒಲಿಸಿಕೊಳ್ಳುವುದು. ೪. ಸಂಪಾದನೆ; ಗಳಿಕೆ.

ಆವರ್ಜಿಸು (ಕ್ರಿ). ೧. ಒಲಿಸಿಕೊಳ್ಳು. ೨. ಪಡೆ; ಗಳಿಸು. ೩. ಒಳಕೊಳ್ಳು.

ಆವರ್ತ (ನಾ). ೧. ನೀರಿನ ಸುಳಿ. ೨. ಪ್ರಾಣಿಗಳ ಮೈಮೇಲಿನ ಕೂದಲಲ್ಲಿ ಕಾಣಿಸಿಕೊಳ್ಳುವ ಸುಳಿ. ~ಮಾರುತ = ಸುಂಟರಗಾಳಿ; ಸುಳಿಗಾಳಿ.

ಆವರ್ತನ(ನೆ) (ನಾ). ೧. ತಿರುಗುವಿಕೆ; ಸುತ್ತುವುದು. ೨. ಸುಳಿ. ೩. ಲೋಹಗಳನ್ನು ಒಟ್ಟಿಗೆ ಸೇರಿಸಿ ಕರಗಿಸುವುದು. ೪. ಪರಿಶೀಲನೆ.

ಆವರ್ತನಿ (ನಾ). ೧. ಲೋಹಗಳನ್ನು ಕರಗಿಸುವ ಮೂಸೆ. ೨. ಸೌಟು.

ಆವರ್ತಿ (ನಾ). ೧. ಸುತ್ತುವುದು. ೨. ಬಾರಿ; ಸಲ.

ಆವಲ್(ಲು) (ನಾ). ತಾವರೆ ಜಾತಿಯ ಒಂದು ಹೂವು.

**ಆವಲಿ** (ನಾ). ೧. ಸಾಲು; ಪಂಕ್ತಿ. ೨. ಕುಲ; ವಂಶ. ೩. ಗುಂಪು; ರಾಶಿ.
**ಆವಲಿತ** (ಗು). ಹೊರಳಿದ; ತಿರುಗಿದ.
**ಆವಶ್ಯಕ** (ಗು). ಆವಶ್ಯ; ಅಗತ್ಯವಾದ.
**ಆವಸಥ** (ನಾ). ವಾಸಸ್ಥಾನ; ಮನೆ.
**ಆವಹ** (ಗು). ೧. ಉಂಟುಮಾಡುವ. ೨. ಕೂಡಿದ; ಉಳ್ಳ.
**ಆವಹಿಸು** (ಕ್ರಿ). ೧. ಆವಾಹನೆ ಮಾಡು. ೨. ಕೂಗಿ ಕರೆ.
**ಆವಳಿ** ೧. = ಆವಲಿ. ೨. ನೆಲ್ಲಿಯ ಕಾಯಿ ಮತ್ತು ಗಿಡ.
**ಆವಾಗ** (ಅ). ೧. ಯಾವ ಸಮಯದಲ್ಲಿ. ೨. ಯಾವಾಗಲೂ. ೩. ಆ ಸಮಯದಲ್ಲಿ.
**ಆವಾಗಲು(ಳು)ಂ** (ಅ). ಎಲ್ಲಾ ಕಾಲದಲ್ಲೂ; ಸದಾಕಾಲ; ಎಡೆಬಿಡದೆ.
**ಆವಾಪ** (ನಾ). ೧. (ಬೀಜವನ್ನು) ಬಿತ್ತುವುದು. ೨. ಕೈಬಳೆ; ಕಂಕಣ. ೩. = ಆವಾಲ.
**ಆವಾರ** (ನಾ). ಆವರಣ; ಅಂಗಳ.
**ಆವಾಲ(ಳ)** (ನಾ). ಪಾತಿ; ಮಡಿ.
**ಆವಾಸ** = ಆವಸಥ.
**ಆವಾಹನ(ನೆ)** (ನಾ). ವಿಗ್ರಹದಲ್ಲಿ ಅಥವಾ ಪ್ರತೀಕದಲ್ಲಿ ಬಂದು ನೆಲೆಗೊಳ್ಳುವಂತೆ ಇಷ್ಟದೈವವನ್ನು ಮಂತ್ರಪೂರ್ವಕವಾಗಿ ಪ್ರಾರ್ಥಿಸುವುದು.
**ಆವಾಹಿಸು** (ಕ್ರಿ). ಆವಾಹನೆ ಮಾಡು.
**ಆವಿ** (ನಾ). ೧. (ನೀರಿನ) ಹಬೆ; ಉಗಿ. ೨. ಕಾವು. ೩. ಹೆಂಚು, ಮಡಕೆ ಮುಂತಾದುವುಗಳನ್ನು ಸುಡುವ ಒಲೆ; ಕುಲಿಮೆ. ೪. ಚಿಗಟ; ಚಿಕ್ಕಾಡು. ~ಕ(ಗ)ಣ್ಣು = ಉಷ್ಣದಿಂದ ಕೆಂಪಾದ ಕಣ್ಣು.
**ಆವಿಗೆ** = ಆವಗೆ.
**ಆವಿದ್ಧ** (ಗು). ೧. ಕೊರೆದ; ರಂಧ್ರ ಮಾಡಿದ. ೨. ತಿರುಗಿಸಿದ. ೩. ಡೊಂಕಾದ; ಕೊಂಕಿದ.
**ಆವಿಲ(ಳ)** (ಗು). ೧. ಕದಡಿದ; ಕೊಳಕಾದ. ೨. ಕೂಡಿದ; ಸೇರಿದ.
**ಆವಿಷ್ಕರಣ** (ನಾ). ೧. ಕಾಣಿಸಿಕೊಳ್ಳುವುದು. ೨. ಪ್ರಕಾಶಪಡಿಸುವುದು. ೩. ಶೋಧನೆ.
**ಆವಿಷ್ಟ** (ಗು). ೧. ಆವೇಶದಿಂದ ಕೂಡಿದ. ೨. ಭೂತಗ್ರಹಾದಿಗಳು ಮೈಮೇಲೆ ಬಂದ.
**ಆವು** (ನಾ). ಹಸು; ಆಕಳು.
**ಆವುಜ(ಜೆ)** (ನಾ). ಒಂದು ಬಗೆಯ ಚರ್ಮ ವಾದ್ಯ.
**ಆವುಟ** (ನಾ). ಬೂಟಾಟಿಕೆ; ನಟನೆ.
**ಆವುದು** (ಸ). ಎಂತಹುದು; ಎಲ್ಲಿಯದು.
**ಆವೃತ** (ಗು). ೧. ಹೊದಿಸಲ್ಪಟ್ಟ; ಮುಚ್ಚಲ್ಪಟ್ಟ. ೨. ಸುತ್ತುವರಿದ.
**ಆವೃತಿ** (ನಾ). ೧. ಹೊದಿಕೆ; ಆವರಣ. ೨. ಸುತ್ತುವರಿಯಲ್ಪಡುವುದು.
**ಆವೃತ್ತ** (ನಾ). ೧. ಅಗೆಯುವುದರಿಂದ ನೆಲದಲ್ಲಿ ಬರುವ ನೀರು. (ಗು). ೨. ಸುತ್ತು ತಿರುಗಿದ. ೩. ಹಿಂತಿರುಗಿದ.
**ಆವೆ** (ನಾ). ೧. ಆಮೆ. ೨. ಸಾಸಿವೆ.
**ಆವೇಗ** (ನಾ). ಸಂಭ್ರಮ; ಗಡಿಬಿಡಿ; ತ್ವರೆ.
**ಆವೇದನ** (ನಾ). ೧. ಅರಿಕೆ ಮಾಡಿಕೊಳ್ಳುವುದು; ವರದಿ ಮಾಡುವುದು. ೨. ಮನವಿ.
**ಆವೇಶ** (ನಾ). ೧. ರೋಷ; ಆಗ್ರಹ. ೨. ಆಕ್ರಮಣ; ಹಿಡಿತ. ೩. ಉಂಟಾಗುವಿಕೆ. ೪. ಭೂತಗ್ರಹಾದಿಗಳ ಚೇಷ್ಟೆ. ೫. ಸ್ಫೂರ್ತಿ;
**ಆವೇಶನ** (ನಾ). ೧. ರೋಷ; ಆಗ್ರಹ. ೨. ಶಿಲ್ಪಶಾಲೆ.
**ಆವೇಶಿಕ** (ನಾ). ಅಭ್ಯಾಗತ; ಅತಿಥಿ.
**ಆಶಂಕೆ** (ನಾ). ೧. ಸಂದೇಹ; ಸಂಶಯ. ೨. ಭಯ; ಆತಂಕ.
**ಆಶಂಸೆ** (ನಾ). ೧. ಹಾರೈಕೆ; ಕೋರಿಕೆ. ೨. ಘೋಷಣೆ.
**ಆಶಯ** (ನಾ). ೧. ಮನಸ್ಸಿನ ಭಾವ; ಅಭಿಪ್ರಾಯ. ೨. ಮನಸ್ಸು; ಹೃದಯ.

೩. ಆಧಾರ; ಆಶ್ರಯ. ೪. ಕೋಶ; ಚೀಲ. ೫. ನೀರು. ೬. ಆಸ್ತಿ; ಸ್ವತ್ತು.

**ಆಶಾಂಬರ** (ನಾ). ೧. ದಿಕ್ಕುಗಳು ಮತ್ತು ಆಕಾಶ. ೨. ದಿಗಂಬರ; ಜಿನ. ೩. ಶಿವ.

**ಆಶಿ** (ನಾ). ೧. ಹಾವಿನ ಹಲ್ಲು. ೨. ತಿನ್ನುವವನು.

**ಆಶೀರ್ವಾದ** (ನಾ). ಆಶೀರ್ವಚನ; ಹರಕೆ. ~**ಸೇಸೆ** = ಹರಕೆಯಿಂದ ಕೂಡಿದ ಅಕ್ಷತೆ.

**ಆಶೀರ್ವಿಷ** (ನಾ). ಹಲ್ಲಿನಲ್ಲಿ ವಿಷವುಳ್ಳ ಪ್ರಾಣಿ; ಹಾವು.

**ಆಶು** (ನಾ). ೧. ವೇಗ; ತ್ವರೆ. ೨. (ಬೇಗನೆ ಬೆಳೆಯುವ) ಒಂದು ಬಗೆಯ ಬತ್ತ. (ಅ). ೩. ಬೇಗನೆ; ಜಾಗ್ರತೆ; ವಿಳಂಬವಿಲ್ಲದೆ. ~**ಕವಿ** = ಸಮಯಸ್ಫೂರ್ತಿಯಿಂದ ಕವನವನ್ನು ರಚಿಸಬಲ್ಲ ಕವಿ.

**ಆಶುಗ** (ನಾ). ೧. ಗಾಳಿ. ೨. ಬಾಣ. (ಗು). ೩. ಬೇಗ ಚಲಿಸುವ. ~**ಅಶನ** = ಸರ್ಪ. ~**ಆಸನ** = ಬಾಣಾಸನ; ಬಿಲ್ಲು.

**ಆಶೆ(ಸೆ)** (ನಾ). ೧. ಅಪೇಕ್ಷೆ; ಬಯಕೆ; ಇಚ್ಛೆ. ೨. ಭರವಸೆ; ನಂಬಿಕೆ. ೩. ದಿಕ್ಕು. ೪. ಆಸರೆ. ೫. ಜೇನು; ತಡಿ.

**ಆಶೌಚ** (ನಾ). ೧. ಸೂತಕ; ಮೈಲಿಗೆ. ೨. ಅಶುದ್ಧಿ; ಹೊಲಸು.

**ಆಶ್ಚರ್ಯ** (ನಾ). ೧. ಅಚ್ಚರಿ; ವಿಚಿತ್ರ. ೨. ಅದ್ಭುತ; ವಿಸ್ಮಯ. ೩. ಬೆಕ್ಕಸ; ಬೆರಗು.

**ಆಶ್ರಮ** (ನಾ). ೧. ಋಷಿಗಳ ವಾಸಸ್ಥಾನ. ೨. ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ, ಸಂನ್ಯಾಸ ಎಂಬ ಜೀವನದ ನಾಲ್ಕು ಘಟ್ಟಗಳು. ೩. ಪಾಠಶಾಲೆ. ೪. ವಸತಿ; ವಾಸಗೃಹ.

**ಆಶ್ರಯ** (ನಾ). ೧. ಆಸರೆ; ಅವಲಂಬನ. ೨. ಮೂಲಸ್ಥಾನ; ನಿವಾಸಸ್ಥಾನ.

**ಆಶ್ರವ** (ನಾ). ೧. ವಿಧೇಯ; ವಿನೀತ. ೨. ವಾಗ್ದಾನ. ೩. ತಪ್ಪು; ಅಪರಾಧ. ೪. ಪ್ರವಾಹ; ನದಿ.

**ಆಶ್ಲೇಷ** (ನಾ). ೧. ಆಲಿಂಗನ; ಅಪ್ಪುಗೆ. ೨. ನಿಕಟವಾದ ಸಂಬಂಧ; ಒಡಗೂಡಿರುವುದು. ೩. ಇಪ್ಪತ್ತೇಳು ನಕ್ಷತ್ರಗಳಲ್ಲಿ ಒಂದು.

**ಆಶ್ವಾಸ** (ನಾ). ೧. ಉಸಿರನ್ನು ತೆಗೆದುಕೊಳ್ಳುವುದು; ಉಚ್ಛ್ವಾಸ. ೨. ಸಮಾಧಾನ ಪಡಿಸುವುದು. ೩. ಗ್ರಂಥಗಳಲ್ಲಿನ ಅಧ್ಯಾಯ.

**ಆಶ್ವಾಸನ(ನೆ)** (ನಾ). ೧. ದುಃಖಿತರನ್ನು ಸಮಾಧಾನ ಪಡಿಸುವುದು. ೨. ಭರವಸೆ.

**ಆಶ್ವಿನ** (ನಾ). ಆಶ್ವಯುಜ ಮಾಸ.

**ಆಷಾಢ** (ನಾ). ೧. ಚಾಂದ್ರಮಾನದಲ್ಲಿ ನಾಲ್ಕನೆಯ ತಿಂಗಳು. ೨. ಮುತ್ತುಗದ ಕೋಲು.

**ಆಷಾಢಭೂತಿ** (ನಾ). ವೇಷಧಾರಿ; ಬೂಟಾಟಿಕೆಯವನು.

**ಆಷಾಢಿ** (ನಾ). ೧. ಆಷಾಢಮಾಸದ ಹುಣ್ಣಿಮೆ. ೨. ಶತಾವರಿ ಗಿಡ.

**ಆಸಕ್ತ** (ಗು). ೧. ಮಗ್ನವಾದ; ತತ್ಪರವಾದ. ೨. ಸ್ಥಿರವಾದ; ಶಾಶ್ವತವಾದ.

**ಆಸಕ್ತಿ** (ನಾ). ೧. ಶ್ರದ್ಧೆ; ತತ್ಪರತೆ. ೨. ಅಂಟಿಕೊಳ್ಳುವ ಸ್ವಭಾವ. ೩. ಮೋಹ.

**ಆಸಡಿ** = ಆಷಾಢಿ.

**ಆಸನ** (ನಾ). ೧. ಕುಳಿತುಕೊಳ್ಳುವುದು. ೨. ಪೀಠ, ಕುರ್ಚಿ ಮುಂತಾದ ಸಾಧನ. ೩. ಆನೆಯ ಹೆಗಲು. ೪. ಮಲದ್ವಾರ ಪ್ರದೇಶ; ಗುದ.

**ಆಸನ್ನ** (ನಾ). ೧. ಹತ್ತಿರ; ಸಮೀಪ. (ಗು). ೨. ಹತ್ತಿರವಾದ; ಸಮೀಪವಾದ. ~**ಕಾಲ** = ಸಾವು ಸಮೀಪಿಸಿದವನು.

**ಆಸನ್ನತೆ** (ನಾ). ಸಾಮೀಪ್ಯ; ಸಮೀಪವಾಗಿರುವಿಕೆ.

**ಆಸರ** (ನಾ). ಒಂದು ಸುಗಂಧ ದ್ರವ್ಯ; ಜಾಯಿಪತ್ರೆ.

**ಆಸರೆ** (ನಾ). ಅವಲಂಬನ; ಆಶ್ರಯ.

**ಆಸಱ್**(ರು,ಱು) (ಕ್ರಿ). ೧. ಬಳಲು; ಆಯಾಸಪಡು. ೨. ಬೇಸರಗೊಳ್ಳು; ಜುಗುಪ್ಸೆ ಹೊಂದು. (ನಾ). ೩. ದಣಿವು; ಆಯಾಸ. ೪. ಬಾಯಾರಿಕೆ. ೫. ಆಲಸ್ಯ. ೬. ಆಸೆ; ಬಯಕೆ.

**ಆಸವ** (ನಾ). ೧. ಬಟ್ಟಿಯಿಳಿಸಿ ತಯಾರಿಸಿದ್ದು; ಔಷಧಿಯ ಅರ್ಕ. ೨. ಮದ್ಯ; ಸುರೆ. ೩. ಮಕರಂದ; ಪುಷ್ಪರಸ.

**ಆಸಾದಿ** (ನಾ). ಕೆರ ಹೊಲಿಯುವವನು; ಮೋಚಿ.

**ಆಸಾಮಿ** (ನಾ). ವ್ಯಕ್ತಿ; ಮನುಷ್ಯ.

**ಆಸಾರ** (ನಾ). ೧. ಮಳೆ; ಜಡಿಮಳೆ. ೨. ಮುತ್ತಿಗೆ ಹಾಕುವುದು. ೩. ಆಹಾರ ಸಾಮಗ್ರಿ.

**ಆಸು** (ಕ್ರಿ). ೧. ಮೇಲಿನಿಂದ ಬಿಡು; ಎತ್ತಿ ಬಿಡು. (ನಾ). ೨. ಸಾಲವೃಕ್ಷ; ಸರ್ಜವೃಕ್ಷ. ೩. ಅಷ್ಟು; ಆ ಪ್ರಮಾಣ. ೪. ಸಾಧ್ಯ; ಶಕ್ಯ.

**ಆಸುರ** (ನಾ). ೧. ಬೇಸರ; ಜುಗುಪ್ಸೆ. ೨. ಅತಿಶಯ. ೩. ಸೊಕ್ಕು; ಅಹಂಕಾರ. (ಗು). ೪. ಭಯಂಕರವಾದ. ೫. ಬೇಸರದ.

**ಆಸೇಚನ** (ನಾ). ೧. ಚಿಮುಕಿಸುವುದು. ೨. ಅತ್ಯಂತ ಪ್ರಿಯವಾದುದು.

**ಆಸೇವನ** (ನಾ). ೧. ಯಾವ ಕೆಲಸವನ್ನಾದರೂ ಶ್ರದ್ಧೆಯಿಂದ ಮಾಡುವುದು. ೨. (ಮತ್ತೆ ಮತ್ತೆ) ಸೇವಿಸುವುದು.

**ಆಸ್ಕಂದನ** (ನಾ). ಕಾಳಗ; ಯುದ್ಧ.

**ಆಸ್ತರಣ** (ನಾ). ೧. ಹರಡುವುದು. ೨. ಆಸನ; ಹಾಸಿಗೆ. ೩. ಪದರ; ಮಡಿಕೆ.

**ಆಸ್ತಿ** (ನಾ). ಸೊತ್ತು; ಐಶ್ವರ್ಯ.

**ಆಸ್ತಿಕ** (ನಾ). ೧. ಪರಲೋಕ, ದೈವ, ಧರ್ಮಗಳಲ್ಲಿ ನಂಬಿಕೆಯುಳ್ಳವನು. ೨. ಆಸ್ತಿವಂತ.

**ಆಸ್ತಿಮಿತ** (ಗು). ೧. ತೊಯ್ದು; ನೆನೆದ. ೨. ಅಲುಗದ; ಕದಲದ. ೩. ಸೊಗಸಾದ; ಕೋಮಲವಾದ. ೪. ಸಂತೋಷಗೊಂಡ.

**ಆಸ್ತೆ** (ನಾ). ೧. ಅಕ್ಕರೆ; ಪ್ರೀತಿ. (ಅ). ೨. ನಿಧಾನವಾಗಿ.

**ಆಸ್ಥಾನ** (ನಾ). ೧. ಸ್ಥಳ; ಜಾಗ. ೨. ರಾಜಸಭೆ; ದರಬಾರು.

**ಆಸ್ಥಾನಿಕ** (ನಾ). ೧. ರಾಜಸಭೆಯ ಸದಸ್ಯ; ಸಭಾಸದ. (ಗು). ೨. ಆಸ್ಥಾನಕ್ಕೆ ಸೇರಿದ.

**ಆಸ್ಥೆ** ೧. = ಆಸ್ತೆ. ೨. ಆಸ್ಥಾನ; ರಾಜಸಭೆ. ೩. ಪ್ರಯತ್ನ. ೪. ಸ್ಥಿತಿ; ಅವಸ್ಥೆ. ೫. ಶ್ರದ್ಧೆ.

**ಆಸ್ಪಂದನ** (ನಾ). ಮಿಡಿಯುವಿಕೆ; ಮಿಡಿತ.

**ಆಸ್ಪತ್ರೆ** (ನಾ). ವೈದ್ಯಶಾಲೆ; ಚಿಕಿತ್ಸಾಲಯ.

**ಆಸ್ಪದ** (ನಾ). ೧. ಅವಕಾಶ. ೨. ಆಶ್ರಯ; ನೆಲೆ. ೩. ಉದ್ಯೋಗ. ೪. ಗೌರವ.

**ಆಸ್ಫಾಲ(ಳ)ನ** (ನಾ). ಅಪ್ಪಳಿಸುವುದು; ಹೊಡೆತ.

**ಆಸ್ಫೋಟನ** (ನಾ). ೧. ಸಿಡಿತ; ಹಾರುವುದು. ೨. ಬಡಿಯುವುದು. ೩. ನಡುಗುವುದು; ಅದುರುವುದು.

**ಆಸ್ಫೋಟನಿ** (ನಾ). ಬೈರಿಗೆ; ರಂಧ್ರಮಾಡುವ ಸಾಧನ.

**ಆಸ್ಯ** (ನಾ). ೧. ಮುಖ. ೨. ಬಾಯಿ. ~ಅನಿಲ(ಳ) = ಉಸಿರು. ~ಪತ್ರ = ತಾವರೆ; ಕಮಲ. ~ಪಾಕ = ಬಾಯಿ ಹುಣ್ಣು. ~ಲೋಮ = ಗಡ್ಡ.

**ಆಸ್ರವ** (ನಾ). ೧. ಕಷ್ಟ. ೨. ಹರಿಯುವಿಕೆ.

**ಆಸ್ವಾದ** (ನಾ). ೧. ರುಚಿ ನೋಡುವುದು ಸವಿಯುವುದು. ೨. ರುಚಿ; ಸವಿ.

**ಆಹಕ** (ನಾ). ಮೂಗಿನಲ್ಲಿ ಉಂಟಾಗುವ ಒಂದು ರೋಗ.

**ಆಹತ** (ನಾ). ೧. ಹೊಡೆತ; ಪೆಟ್ಟು. ೨. ಹೊಸಬಟ್ಟೆ. ೩. ನಗಾರಿ, ಮದ್ದಳೆ ಮುಂತಾದ ಚರ್ಮವಾದ್ಯ. (ಗು).

೪. ಹೊಡೆಯಲ್ಪಟ್ಟ; ಬಡಿದ. ೫. ತಿಳಿದ; ಗೊತ್ತಾದ.

**ಆಹವಿಸು** (ಕ್ರಿ). ಅಹಂ ಎಂಬ ಭಾವನೆಯನ್ನು ಹೊಂದು.

**ಆಹರ** (ನಾ). ೧. ಆಹಾರ. ೨. ತರುವುದು; ತೆಗೆದುಕೊಂಡು ಬರುವುದು. ೩. ಉಚ್ಛ್ವಾಸ. ೪. ಉಚ್ಛ್ವಾಸದ ಗಾಳಿ.

**ಆಹರಣ** (ನಾ). ೧. ತರುವುದು. ೨. ಅಪಹರಿಸುವುದು. ೩. ಮುಂದಿಡುವುದು. ೪. ಪ್ರೇರೇಪಿಸುವುದು. ೫. ಮದುವೆ ಮುಂತಾದ ಕಾಲದಲ್ಲಿ ವಧೂವರರಿಗೆ ಕೊಡುವ ಉಪಾಯನ.

**ಆಹವ** (ನಾ). ೧. ಯುದ್ಧ; ಕಾಳಗ. ೨. ಯುದ್ಧಕ್ಕೆ ಕರೆಯುವುದು. ೩. ಯಾಗ; ಯಜ್ಞ.

**ಆಹವಿ** (ನಾ). ಯೋಧ; ವೀರ.

**ಆಹಾರ** (ನಾ). ೧. ಅನ್ನ; ಕೂಳು. ೨. ಊಟ; ಭೋಜನ. ೩. ಸಮೀಪಕ್ಕೆ ತರುವುದು. ~ನಾಳ = ಅನ್ನನಾಳ.

**ಆಹಾವ** (ನಾ). ೧. ಪಶುಗಳು ನೀರು ಕುಡಿಯುವ ತೊಟ್ಟಿ. ೨. ಕೊಳ; ಹೊಂಡ.

**ಆಹಿಕ** (ನಾ). ೧. ಕೇತುಗ್ರಹ. (ಗು). ೨. ದಿನದ; ದಿನಗಟ್ಟಳೆಯ.

**ಆಹಿತ** (ಗು). ಇಡಲ್ಪಟ್ಟ; ಮಡಗಿದ.

**ಆಹು** (ನಾ). ೧. ಧ್ವನಿ. ೨. ಬತ್ತ; ನೆಲ್ಲು. ೩. ಸೂಕ್ಷ್ಮವಾದುದು; ಅತಿ ಸಣ್ಣದು.

**ಆಹುತ** (ನಾ). ೧. ಆತಿಥ್ಯ; ಸತ್ಕಾರ. ೨. ಪಂಚ ಮಹಾಯಜ್ಞಗಳಲ್ಲಿ ಒಂದು. (ಗು). ೩. ಹೋಮ ಮಾಡಲ್ಪಟ್ಟ; ಅರ್ಪಿಸಲ್ಪಟ್ಟ.

**ಆಹುತಿ** (ನಾ). ೧. ಯಜ್ಞಯಾಗಾದಿಗಳಲ್ಲಿ ದೇವತೆಗಳಿಗಾಗಿ ಅಗ್ನಿಯಲ್ಲಿ ಅರ್ಪಿಸುವ ಹವಿಸ್ಸು. ೨. ಬಲಿ; ತುತ್ತು.

**ಆಹೂತ** (ಗು). ಕರೆಯಲ್ಪಟ್ಟ; ಆಹ್ವಾನಿಸಿದ.

**ಆಹೃತ** (ಗು). ತರಲ್ಪಟ್ಟ; ತಂದ.

**ಆಹೃತಿ** (ನಾ). ೧. ತರುವುದು. ೨. ಅಪಹರಿಸುವುದು. ೩. ಶೇಖರಿಸುವುದು.

**ಆಹೇಯ** (ನಾ). ೧. ಹಾವಿನ ವಿಷ, ಚರ್ಮ ಮುಂತಾದುವು. (ಗು). ೨. ಹಾವುಗಳಿಗೆ ಸಂಬಂಧಿಸಿದ; ಹಾವಿನ.

**ಆಹೇರ(ರು)** (ನಾ). ಉಡುಗೊರೆ.

**ಆಹ್ನಿಕ** (ನಾ). ೧. (ಪ್ರತಿದಿನವೂ ಕ್ಲುಪ್ತಕಾಲದಲ್ಲಿ ನಡೆಯಬೇಕಾದ ಸಂಧ್ಯಾವಂದನೆಯೇ ಮುಂತಾದ) ನಿತ್ಯಕರ್ಮ. ೨. ನಿರಂತರವಾದ ಉದ್ಯೋಗ. ೩. ನಿತ್ಯ ಆಹಾರ; ಊಟ. ೪. ಒಂದು ದಿನದಲ್ಲಿ ಓದಬಹುದಾದ ಗ್ರಂಥದ ಭಾಗ. (ಗು). ೫. ಪ್ರತಿದಿನದ.

**ಆಹ್ಲಾದ** (ನಾ). ಸಂತೋಷ; ಆನಂದ.

**ಆಹ್ವಯ** (ನಾ). ಹೆಸರು; ನಾಮಧೇಯ.

**ಆಹ್ವಾನ** (ನಾ). ಕರೆಯುವಿಕೆ; ಕರೆ.

**ಆಳ್(ಳು)** (ಕ್ರಿ). ೧. ಅಧಿಕಾರ ನಡೆಸು. ೨. ಪಡೆ; ಹೊಂದು. ೩. ಅನುಭವಿಸು; ಭೋಗಿಸು. ೪. ರಕ್ಷಿಸು; ಕಾಪಾಡು. ೫.=ಆಟ್. (ನಾ). ೬. ಗಂಡಸು; ಪುರುಷ. ೭. ಸೇವಕ; ದೂತ. ೮. ಭಟ; ಯೋಧ. ~ಇಸು = ೧. ಆಳುವಂತೆ ಮಾಡು. ೨. ಜೋಡಿಸು; ಅಳವಡಿಸು. ೩. ಒದಗಿಸು; ಉಂಟುಮಾಡು. ೪. ನಟನೆ ಮಾಡು. ~ಒತ್ತು= ಅರಸೊತ್ತಿಗೆ. ~ತನ=೧. ಆಳಿನ ಕೆಲಸ; ಸೇವಕತನ. ೨. ಪೌರುಷ; ಶೌರ್ಯ. ೩. ಮನುಷ್ಯನ ರೂಪ. ೪. ಯಜಮಾನಿಕೆ; ದೊಡ್ಡಸ್ತಿಕೆ.

**ಆಳ** ೧. = ಆಟ. ೨. ಮೋಸ; ವಂಚನೆ. ~ಆ(ವಾ)ಡು = ೧. ಮರುಳುಗೊಳಿಸು; ವಂಚಿಸು. ೨. ಸುಳ್ಳು ಕಲ್ಪನೆಗಳನ್ನುಂಟು ಮಾಡು. ~ಮಾಳ(ಲ) = ಮೋಸ; ವಂಚನೆ. ~ಮೇಳ(ಲ) = ಸಹವಾಸ; ಒಡನಾಟ.

**ಆಳಂಬೆ** (ನಾ). ನಾಯಿಕೊಡೆ; ಶಿಲೀಂಧ್ರ.

ಆಳತಿ (ನಾ). ಹಾಡುವಿಕೆ; ಗಾಯನ. ~ಕೂ(ಗೂ)ಡು = ಆಲಾಪನೆ ಮಾಡು.

ಆಳ್ಕೆ (ನಾ). ೧. ರಾಜ್ಯಭಾರ; ಅಧಿಕಾರ. ೨. ರಾಜ್ಯದ ಸೀಮೆ; ಮೇರೆ.

ಆಟ್(ಳ್,ಳು) (ಕ್ರಿ). ೧. (ನೀರಿನಲ್ಲಿ) ಮುಳುಗು. ೨. ಮಗ್ನವಾಗು. ೩. ಹೂಳು; ಒಳಸೇರು. ೪. ಕುಸಿಬೀಳು; ಕುಸಿ.

ಆಜ(ಳ) (ನಾ). ೧. ಗಭೀರ; ಗಾಢತೆ. ೨. ಒಳಗು; ಮರ್ಮ.

ಆಜಿ(ಳಿ) (ನಾ). ೧. ಮೋಸ; ವಂಚನೆ. ೨. ಹಠಮಾರಿತನ; ಮೊಂಡುತನ. ೩. ವೃತ್ತ; ದುಂಡಾಗಿರುವುದು. ೪. ಚಕ್ರಾಯುಧ.

ಆಟ್ತಿ(ಳ್ತಿ) (ನಾ). ಮುಳುಗುವಿಕೆ; ಮಗ್ನವಾಗುವಿಕೆ.

ಆಟ್ವಾ(ಳ್ವಾ)ರ್(ರು) (ನಾ). ಭಗವಂತನ ಭಕ್ತಿಯಲ್ಲಿ ಮುಳುಗಿದವರು; ತಮಿಳು ನಾಡಿನ ವಿಷ್ಣುಭಕ್ತಿ ಪಂಥದವರು.



ಇ (ನಾ). ೧. ಕನ್ನಡ ವರ್ಣಮಾಲೆಯ ಮೂರನೆಯ ವರ್ಣ. ೨. ಕಾಮನ ಹೆಸರು. ೩. ನೂರು ಎಂಬ ಸಂಖ್ಯೆಯ ಸಂಕೇತ. (ಪ್ರ). ೪. ಸ್ತ್ರೀ ವಾಚಕ ಪ್ರತ್ಯಯ. ೫. ಬಹುವ್ರೀಹಿ ಸಮಾಸದ ಕಡೆಯಲ್ಲಿ ಸೇರುವ ಪ್ರತ್ಯಯ.

ಇಂಕಾರ್(ರು) (ನಾ). ನಿರಾಕರಣೆ; ತಿರಸ್ಕಾರ.

ಇಂಕೆ (ನಾ). ಇಂಗುವಿಕೆ; ಆರುವಿಕೆ.

ಇಂಗಡಲ್(ಲು) (ನಾ). ಕ್ಷೀರಸಾಗರ; ಹಾಲ್ಗಡಲು. ~ಅಳಿಯ = ವಿಷ್ಣು. ~ಕುವರ = ಚಂದ್ರ. ~ಕುವರಿ = ಲಕ್ಷ್ಮಿ.

ಇಂಗಳ(ಣ) (ನಾ). ೧. ಬೆಂಕಿ; ಕೆಂಡ. ೨. ಸಂತಾಪ; ಸಂಕಟ. ೩. ಗಾರೆಗಿಡ; ಇಂಗುದೀವೃಕ್ಷ. ~ಕ(ಗ)ಣ್(ಣ್ಣು) =ಬೆಂಕಿಯನ್ನು ಕಾರುವ ಕಣ್ಣು; ಅಗ್ನಿನೇತ್ರ. ~ಕು(ಗು)ವರ = ಬೆಂಕಿಯ ಮಗ; ಷಣ್ಮುಖ.

ಇಂಗಾಲ (ನಾ). ೧. ಇದ್ದಲು. ೨. ಕಾರ್ಬನ್ ಎಂಬ ಅಲೋಹ ಮೂಲಧಾತು. ~ಆಮ್ಲ = ಇಂಗಾಲದ ಸಂಯುಕ್ತ ಅನಿಲ.

ಇಂಗಿತ (ನಾ). ಆಶಯ; ಅಭಿಪ್ರಾಯ.

ಇಂಗಿತಜ್ಞ (ನಾ). ಬೇರೆಯವರ ಅಭಿಪ್ರಾಯವನ್ನು ಊಹಿಸಿ ತಿಳಿಯುವವನು.

ಇಂಗು (ಕ್ರಿ). ೧. ಒಣಗು; ಬತ್ತು. ೨. ಅಡಗು; ಹುದುಗಿಹೋಗು. ೩. ಕೊಡು. (ನಾ). ೪. ಒಂದು ಗಿಡದ ಹೆಸರು. ೫. (ಅಡಿಗೆಗೂ ಔಷಧಕ್ಕೂ ಉಪಯೋಗವಾಗುವ) ಒಂದು ಮರದ ಹಾಲಿನಿಂದ ದೊರೆಯುವ ವಸ್ತು; ಹಿಂಗು.

ಇಂಗುದ(ದಿ) (ನಾ). ಗಾರೇಗಿಡ; ಇಂಗಳದ ಗಿಡ.

ಇಂಗುಲಿಕ (ನಾ). ೧. ಪಾದರಸದಿಂದ ಆದ ಒಂದು ಅದಿರು; ಹಿಂಗುಳ. ೨. ನೀಲಿಯ ಬಣ್ಣದ ಒಂದು ಔಷಧ ದ್ರವ್ಯ. ೩. ಕೆಂಪು ಬಣ್ಣ.

ಇಂಚರ (ನಾ). ೧. ಇಂಪಾದ ಧ್ವನಿ; ಮಧುರ ಸ್ವರ. ೨. ಇಂಪಾದ ಧ್ವನಿಯುಳ್ಳದ್ದು; ಕೋಗಿಲೆ. ೩. ಮಧುರವಾದ ಬಾಣ. ೪. ಮನ್ಮಥ.

ಇಂಚರಿ (ನಾ). ಇಂಪಾದ ಸೋನೆ, -ಪ್ರವಾಹ.

ಇಂಚಿ (ನಾ). ಏಣಿ.

ಇಂಚು (ನಾ). ಅಂಗುಲ. ~ಪಟ್ಟಿ = ಇಂಚುಗಳನ್ನು ಗುರುತಿಸುವ ಅಳತೆಪಟ್ಟಿ.

ಇಂಚೆ (ನಾ). ಹಿಂಸೆ.

ಇಂಡಕಿ (ನಾ). ಕೂರಿಗೆಯ ಒಂದು ತಾಳಿಗೆ; ಕಾಳು ಬೀಳದಂತೆ ಹಾಕುವ ಬೂಚು; ಪಿಡ್ಡ.

ಇಂಡಿಗೆ (ನಾ). ಹೂವಿನ ದಂಡೆ.

ಇಂಡು (ಕ್ರಿ). ೧. ಹೇಳು; ಕೂಗು. (ನಾ). ೨. ರಾಶಿ; ಒಟ್ಟಿಲು.

ಇಂಡೆ (ನಾ). ೧. ಚೂರು; ತುಣುಕು. ೨. ಹಿಂಡು; ಗುಂಪು. ೩. ಬಿರುಕು; ಸಂದು. ೪. ಚೆಂಡು. ೫. ಹೂವಿನ ಹಾರ. ~ದಂಡೆ = ಒತ್ತಾಗಿ ಕಟ್ಟಿದ ಹೂವಿನ ದಂಡೆ.

ಇಂತಪ್ಪ (ಗು). ಈ ರೀತಿಯ; ಈ ಬಗೆಯ.

ಇಂತು (ಅ). ಹೀಗೆ; ಈ ಪ್ರಕಾರವಾಗಿ.

ಇಂದಿಂದಿರ (ನಾ). ದುಂಬಿ; ಭ್ರಮರ.

ಇಂದಿರ (ನಾ). ೧. ಇಂದ್ರ. ೨. ಒಂದು ಜಾತಿಯ ಕುದುರೆ. ~ದಿಕ್ಕು = ಪೂರ್ವದಿಕ್ಕು. ~ಬಿ(ವಿ)ಲ್(ಲ್ಲು) = ಕಾಮನಬಿಲ್ಲು.

ಇಂದಿರೆ (ನಾ). ಲಕ್ಷ್ಮಿ.

ಇಂದೀವರ (ನಾ). ೧. ನೀಲಿಯ ನೈದಿಲೆ; ಕನ್ನೈದಿಲೆ. ೨. ತಾವರೆ. ~ಮಂದಿರೆ = ಲಕ್ಷ್ಮಿ.

ಇಂದು (ನಾ). ೧. ಈ ದಿನ; ಈ ಹೊತ್ತು.

೨. ಸಿಂಧುನದಿ. ೩. ಚಂದ್ರ. ~ಉಪ್ಪು =ಸೈಂಧವಲವಣ. ~ಕಾಂತ=ಚಂದ್ರಕಾಂತ ಶಿಲೆ. ~ಜನಕ= ೧. ಚಂದ್ರನ ತಂದೆ; ಸಮುದ್ರ. ೨. ಅತ್ರಿ ಮಹರ್ಷಿ. ~ರುಚಿ =ಚಂದ್ರನ ಕಾಂತಿ. ~ವಾರ=ಸೋಮವಾರ. ~ವ್ರತ= ಚಾಂದ್ರಾಯಣ ವ್ರತ.

ಇಂದ್ರ (ನಾ). ೧. ದೇವತೆಗಳ ಒಡೆಯ. ೨. ದ್ವಾದಶಾದಿತ್ಯರಲ್ಲಿ ಒಬ್ಬ. ೩. ಒಡೆಯ; ಯಜಮಾನ. ೪. ಶ್ರೇಷ್ಠ. ೫. ಒಂದು ಜಾತಿಯ ಕುದುರೆ. ~ಜಾಲ=೧. ಯಕ್ಷಿಣಿ ವಿದ್ಯೆ; ಗಾರುಡಿ; ಕಣ್ಕಟ್ಟು. ೨. ಕಪಟ; ವಂಚನೆ. ~ದ್ವಿಪ=ಐರಾವತ. ~ಧನು = ಕಾಮನಬಿಲ್ಲು. ~ವಧು = ಅಪ್ಸರೆ. ~ಸರಿತ್ತು=ದೇವಗಂಗೆ.

ಇಂದ್ರಲುಪ್ತ (ನಾ). (ತಲೆಯ) ಕೂದಲು ಉದುರಿ ಹೋಗುವ ಒಂದು ರೋಗ; ತೆವಳೆ.

ಇಂದ್ರವರ್ತುಲ (ನಾ). ಮಾಯಾವಲಯ; ಮೋಹದ ಆವರಣ.

ಇಂದ್ರಾಣಿ (ನಾ). ೧. ಇಂದ್ರನ ಹೆಂಡತಿ; ಶಚಿ. ೨. ರತಿದೇವಿ. ೩. ಸರಸ್ವತಿ. ೪. ದುರ್ಗಾ ದೇವಿ; ಭೈರವಿ. ೫. ಐದು ಇಂದ್ರಿಯಗಳು. ೬. ಕಿರಣ; ಕಾಂತಿ. ೭. ಲಕ್ಕೀಗಿಡ.

ಇಂದ್ರಿಯ (ನಾ). ೧. ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳನ್ನು ಗ್ರಹಿಸಲು ಸಹಕಾರಿಯಾಗಿರುವ ಅವಯವ. ೨. ಶುಕ್ಲ; ವೀರ್ಯ. ೩. ಶಕ್ತಿ; ಓಜಸ್ಸು. (ಗು). ೪. ಇಂದ್ರನಿಗೆ ಸಂಬಂಧಿಸಿದ. ೫. ಇಂದ್ರನಿಗೆ ಯೋಗ್ಯವಾದ. ~ನಿಗ್ರಹ = ಇಂದ್ರಿಯಗಳನ್ನು ಹತೋಟಿಯಲ್ಲಿಟ್ಟುಕೊಳ್ಳುವುದು; ಸಂಯಮ.

ಇಂಧನ (ನಾ). ೧. ಹತ್ತಿಸುವುದು; ಉರಿಸುವುದು. ೨. ಸೌದೆ. ~ಮಾಡಿಸು = ಚಿತೆಯನ್ನು ಏರ್ಪಡಿಸು.

ಇಂಧನಿ (ನಾ). ಉರುವಲನ್ನು ಒದಗಿಸುವವನು.

ಇಂಪು (ನಾ). ೧. ಸವಿ; ರುಚಿ. ೨. ಹಿತ; ಆನಂದ. ~ಕ(ಗ)ರ್ಪುರ= ಸುವಾಸನೆಯ ಕರ್ಪೂರ. ~ಬಾ(ವಾ)ಚೆ(ಳೆ)=ರಸಬಾಳೆ.

ಇಂಬು (ನಾ). ೧. ಎಡೆ; ಆಶ್ರಯ. ೨. ಅಳತೆ; ಮಿತಿ. ೩. ಇಂಪು. ೪. ಸುಖ; ಸಂತೋಷ. ೫. ಪ್ರೀತಿ. ೬. ಸೌಕರ್ಯ; ಅನುಕೂಲತೆ. ೭. ಸೌಂದರ್ಯ; ಸೊಗಸು.

ಇಂಬುಳ(ಳು) (ನಾ). ಜಿಗಳೆ; ಜಿಗಣೆ.

ಇಕ್ಕರಿಸು (ಕ್ರಿ). ೧. ಎರಡು ಕಡೆಗಳಲ್ಲಿಯೂ ಸಾಲುಗೊಂಡು ಬರು; ಎರಡು ಸಾಲಾಗು. ೨. ಎರಡು ಭಾಗವಾಗು. ೩. ರಭಸದಿಂದ ಇಕ್ಕು; ಅಪ್ಪಳಿಸು. ೪. ಅಗಲಿಸು; ವಿಸ್ತಾರವಾಗಿಸು.

ಇಕ್ಕಲು (ನಾ). ರಾಶಿ; ಬಣವೆ.

ಇಕ್ಕು (ಕ್ರಿ). ೧. ಇರಿಸು; ಮಡಗು. ೨. ಬಳಿ; ಲೇಪಿಸು. ೩. ಮುಡಿಸು. ೪. ಬಿಟ್ಟುಹೋಗು. ೫. ಕೆಡಹು; ಬಿಸಾಡು. ೬. (ಚಾಮರ) ಬೀಸು. ೭. ಹರಹು; ಹಾಸು. ೮. (ಬಾಗಿಲು) ಮುಚ್ಚು. ೯. ನೀಡು; ಉಣಿಸು. ೧೦. ಬಡಿ; ಕೊಲ್ಲು. ~ಇಸು = ೧. ಸ್ಥಾಪಿಸು; ಇರಿಸು. ೨. ಕಟ್ಟಿಸು. ೩. ಮುಚ್ಚಿಸು; ಭದ್ರಪಡಿಸು. ೪. ಮರಳಿಸು; ಹಿಂತಿರುಗಿಸು. ~(೦)ಕೂ(ಗೂ)ಟ್(ಳ್) = ಭಿಕ್ಷಾನ್ನ. ~ಮದ್ದು = ಕೈಮಸಕು; ಆಹಾರದಲ್ಲಿ ಸೇರಿಸುವ ವಿಷ.

ಇಕ್ಕೆ = ಇರ್ಕೆ.

ಇಕ್ಷು (ನಾ). ಕಬ್ಬು. ~ಕಾರ್ಮುಕ=ಮನ್ಮಥ. ~ಪಯ=ಕಬ್ಬಿನ ಹಾಲು.

ಇಕ್ಷ್ವಾಕು (ನಾ). ೧. ಸೂರ್ಯವಂಶದ ಮೂಲಪುರುಷನಾದ ಒಬ್ಬ ದೊರೆ. ೨. ಕಹಿ ಸೋರೆಗಿಡ.

ಇಗರು ೧. = ಇಮರು. (ನಾ). ೨. ಹಲ್ಲಿನ ಒಸಡು.

ಇಗರ್ಜಿ (ನಾ). ಕ್ರೈಸ್ತರ ದೇವಾಲಯ; ಚರ್ಚು.
ಇಗ್ಗರ (ನಾ). ಉಪದ್ರವ; ಕಾಟ; ಹಿಂಸೆ.
ಇಗ್ಗಾಲಿ (ನಾ). ಎರಡು ಚಕ್ರಗಳುಳ್ಳದ್ದು; ಬೈಸಿಕಲ್ಲು.
ಇಚ್ಚಕ (ನಾ). ೧. ಪುಸಲಾಯಿಸುವುದು; ಮುಖಸ್ತುತಿ. ೨. ವಿಧೇಯನಾದವನು. ೩. ಮುಖಸ್ತುತಿಗಾರ.
ಇಚ್ಚಟ (ನಾ). ಧೀರ; ಶೂರ.
ಇಚ್ಚಣಿಗೆ (ನಾ). ಏಣಿ; ನಿಚ್ಚಣಿಗೆ.
ಇಚ್ಚಾರಿ (ನಾ). ೧. ಎರಡು ಚಾರಿ; ಸವ್ಯಸಾಚಿತ್ವ. ೨. ಎರಡು ಪಕ್ಕ.
ಇಚ್ಛಿಸು (ಕ್ರಿ). ಆಸೆಪಡು; ಅಪೇಕ್ಷಿಸು.
ಇಚ್ಛೆ (ನಾ). ೧. ಅಪೇಕ್ಷೆ; ಆಸೆ. ೨. ಬಯಸಿದ ವಸ್ತು; ಪ್ರೀತಿಪಾತ್ರವಾದ ವಸ್ತು. ೩. ಅಂಕೆಯಲ್ಲಿರುವ ವಸ್ತು. ೪. ಮನಬಂದ ರೀತಿ; ಸ್ವಾತಂತ್ರ್ಯ. ೫. ಅಭಿಪ್ರಾಯ; ಸಮ್ಮತಿ. ~ಕಾ(ಗಾ)ಱ(ರ)= ೧. ಪ್ರಿಯ; ನಲ್ಲ. ೨. ಮನ್ಮಥ; ಕಾಮ. ~ಸಾವು = ಸ್ವೇಚ್ಛಾಮರಣ.
ಇಚ್ಛಾಕಾರ (ನಾ). ಆದರ; ಸತ್ಕಾರ.
ಇಚ್ಛಿತ (ನಾ). ೧. ಬಯಕೆ; ಅಪೇಕ್ಷೆ. (ಗು). ೨. ಬಯಸಿದ; ಅಪೇಕ್ಷೆಪಟ್ಟ.
ಇಜಾರ (ನಾ). ೧. ಗುತ್ತಿಗೆ; ಕರಾರು; ಒಪ್ಪಂದ. ೨. ಷರಾಯಿ; ಚಣ್ಣ.
ಇಜ್ಜೊತೆ (ನಾ). ಇಜ್ಜೋಡಿ; ಹೊಂದಿಕೆಯಿಲ್ಲದ ಜೊತೆ.
ಇಜ್ಯೆ (ನಾ). ೧. ಯಾಗ; ಯಜ್ಞ. ೨. ದತ್ತಿ; ದಾನ. ೩. ದೇವತಾಪೂಜೆ.
ಇಟ್ಚರ (ನಾ). ೧. ಸ್ವೇಚ್ಛೆಯಿಂದ ಸಂಚರಿಸುವಂತಹುದು. ೨. ಬಸವ.
ಇಟ್ಟಿಗೆ (ನಾ). ೧. ಸುಟ್ಟಮಣ್ಣಿನ ಆಯಾಕಾರವಾದ ಹೆಂಟೆ. ೨. ಒಂದು ಬಗೆಯ ಮೃದುವಾದ ಕೆಂಪುಕಲ್ಲು; ಜಂಬಿಟ್ಟಿಗೆ. ೩. ಒಂದು ಸಸ್ಯರೋಗ.

ಇಟ್ಟಳ(ಣ) (ನಾ). ೧. ರಾಶಿ; ಮೊತ್ತ. ೨. ಆಶ್ರಯ; ವಾಸಸ್ಥಾನ. ೩. ಸಂಭ್ರಮ; ಸಡಗರ. ೪. ಅಪವಾದ; ನಿಂದೆ. ೫. ಹಿಂಸೆ; ಆಘಾತ. ೬. ರಚನೆ; ಕ್ರಮ. (ಗು). ೭. ಮನೋಹರವಾದ; ಸುಂದರವಾದ. ~ಇಸು= ೧. ಗುಂಪಾಗು. ೨. ಮುತ್ತು; ಆಕ್ರಮಿಸು. ೩. ಒತ್ತಾಗಿ ಇಡು; ಜೋಡಿಸು. ೪. ತುಂಬಿಹೋಗು. ೫. ಹಿಗ್ಗು. ೬. ಮೀರು; ಅತಿಶಯವಾಗು.
ಇಟ್ಟಳಂ (ಅ). ಅತಿಶಯವಾಗಿ; ವಿಶೇಷವಾಗಿ.
ಇಟ್ಟಿ (ನಾ). ೧. ಕಾಜಿವಾರದ ಮರ. ೨. ಈಟಿ; ಶಲ್ಯ. ೩. ಯಾಗ; ಯಜ್ಞ.
ಇಟ್ಟಿಗೆ= ಇಟ್ಟಗೆ.
ಇಟ್ಟು (ನಾ). ನಿಬಿಡತೆ; ಸಾಂದ್ರತೆ.
ಇಟ್ಟೆ (ನಾ). ೧. ಬೇಕಾದವಳು; ಇಷ್ಟಳಾದವಳು. ೨. = ಇಟ್ಟಿ.
ಇಟ್ಟೆಡೆ (ನಾ). ೧. ಇಕ್ಕಟ್ಟು; ಸಂದು. ೨. ಅನಿವಾರ್ಯತೆ; ಕಷ್ಟ. ೩. ಗುಂಪು; ಸಂದಣಿ. ೪. ಸಮೀಪ; ಹತ್ತಿರ.
ಇಟ್ಲಿ (ನಾ). ಗೂಳಿಯ ಅಥವಾ ಹೋರಿಯ ಗುಟುರು.
ಇಡಂಕು (ನಾ). ೧. ಸಂದು; ಬಿರುಕು. ೨. ಇಡುವಿಕೆ. ೩. ದನಕರುಗಳ ರೋಗ.
ಇಡಪು (ನಾ). ಠೇವಣಿ; ಇಡುಗಂಟು.
ಇಡರು (ಕ್ರಿ). ೧. ಎಡಹು; ಮುಗ್ಗರಿಸು. (ನಾ). ೨. ಅಡ್ಡಿ; ತಡೆ. ೩. ತೊಂದರೆ; ಕ್ಲೇಶ. ೪. ಹಗೆತನ.
ಇಡಿ (ಕ್ರಿ). ೧. ಕುಟ್ಟು; ಪುಡಿಮಾಡು. ೨. ತಿವಿ; ಚುಚ್ಚು. ೩. ತುಂಬಿರು; ನಿಬಿಡವಾಗು. ೪. ಅದುಮಿ ತುಂಬು; ಗಿಡಿ. (ನಾ). ೫. ಪಾತ್ರೆಗಳಲ್ಲಿ ಅಂಟಿಕೊಂಡಿರುವ ಕಿಮುಟ. (ಗು). ೬. ವಟ್ಟವಾದ. ೭. ಸಮಗ್ರ; ಪೂರ್ಣ. ~ಅ(ಯ)ಪ್ಪ= ಒತ್ತುಸೇವಗೆ; ಒಂದು ಭಕ್ಷ್ಯ. ~ಕ(ಗ)ಪ್ಪು= ನಿಬಿಡವಾದ

ಕಪ್ಪು; ತುಂಬಿದ ಕಪ್ಪು. ~ಕಾ(ಗಾ)ಯ್ = ೧. ತುಂಬುಕಾಯಿ; ಮುರಿಯದ ಕಾಯಿ. ೨. ಉಂಡೆಗಾಯಿಯ ಉಪ್ಪಿನಕಾಯಿ.

ಇಡಿದಡಕು (ನಾ). ಹಳ್ಳತಿಟ್ಟು; ತಗ್ಗುದಿಣ್ಣೆ.

ಇಡು (ಕ್ರಿ). ೧. ಮಡಗು; ಇರಿಸು. ೨. ಹೂಡು; ಅಣಿಗೊಳಿಸು. ೩. ಧರಿಸು; ತೊಡು. ೪. ಆಯುಧವನ್ನು ಅಥವಾ ವಸ್ತುವನ್ನು ಎಸೆದು ಹೊಡೆ. ೫. ಎಸೆ; ಬಿಸಾಡು. ೬. ಅನ್ನದಾನ ಮಾಡು; ಭಿಕ್ಷೆ ಹಾಕು. (ನಾ). ೭. ಬಿದಿರಿನ ತಟ್ಟೆ; ತಡಿಕೆ. ~ಕಾ(ಗಾ)ಯಿ = ೧. ದೇವತಾ ವಿಗ್ರಹದ ಮುಂದೆ ನಿವಾಳಿಸಿ ನೆಲಕ್ಕೆ ಬೀಸಿ ಎಸೆಯುವ ತೆಂಗಿನಕಾಯಿ. ೨. ಪಂದ್ಯಕ್ಕಾಗಿ ಬಂಡರ ಮೇಲೊಂದು ಒಡೆಯುವ ತೆಂಗಿನಕಾಯಿ. ~ಗಂಟು = ೧. ಇಟ್ಟ ಹಣ; ಠೇವಣಿ. ೨. ಬಂಡವಾಳ; ನ್ಯಾಸ. ~ಪ(ವ)ಗೆ = ಬದ್ಧದ್ವೇಷ. ~ಮುದ್ದು = ಇಕ್ಕು ಮುದ್ದು.

ಇಡು(ಂ)ಕು (ಕ್ರಿ). ೧. ಬಲವಾಗಿ ಎಸೆ; ಚಿಮ್ಮಿಸು. ೨. ತುರುಕು. ೩. ಮೇಲೆ ಬೀಳು. (ನಾ). ೪. ಸ್ವಯಂಪೂರ್ಣವಾದುದು.

ಇಡುಗು (ಕ್ರಿ). ೧. ವ್ಯಾಪಿಸು; ಹರಡು. (ನಾ.) ೨. ಸಂದು; ಬಿರುಕು.

ಇಡುವು (ನಾ). ೧. ಸಂದುಗೊಂದು; ಇಕ್ಕಟ್ಟು. ೨. ರಾಶಿ; ಗುಂಪು.

ಇಡೆ (ನಾ). ೧. ಎಡೆ; ಸ್ಥಳ. ೨. ಭೂಮಿ. ೩. ಸ್ವರ್ಗ. ೪. ದೇಹದ ಎಡಭಾಗದ ನಾಡಿಯ ಹೆಸರು.

ಇಡ್ಡಲಿ (ನಾ). ಒಂದು ಬಗೆಯ ಭಕ್ಷ್ಯ.

ಇಡ್ಡಲಿಗೆ = ಇಡ್ಡಲಿ.

ಇಣಕಲು (ನಾ). ಇಣಿಕಿ ನೋಡುವುದು.

ಇಣಚಿ (ನಾ). ೧. ಅಳಿಲು. ೨. ಏಣಿ; ನಿಚ್ಚಣಿಕೆ.

ಇಣಿ (ನಾ). ಗೂಳಿ, ಎತ್ತು ಮೊದಲಾದುವುಗಳ ಹಿಣಿಲು.

ಇಣಿಕು (ಕ್ರಿ). ಮರೆಯಲ್ಲಿ ನಿಂತು ನೋಡು; ಹಣಿಕಿ ನೋಡು. ~ದೀಪ = ಮಿಣುಕು ದೀಪ.

ಇತರ (ನಾ). ೧. ಸಾಮಾನ್ಯ ಜನ; ನಾಡಾಡಿ. (ಗು). ೨. ಬೇರೆಯ; ಉಳಿದ. ~ಅರ್ಥ = ೧. ಬೇರೊಂದು ಅರ್ಥ. ೨. ಇತರ ಎಂಬುದರ ಅರ್ಥ. ೩. ಬೇರೊಂದು ಪ್ರಯೋಜನ.

ಇತರೆ (ನಾ). ಸಾಧಾರಣಳಾದ ಹೆಂಗಸು.

ಇತಿ (ಅ). ೧. ಹೀಗೆಂದು; ಇಂತು. ೨. ಆದ ಕಾರಣ. ೩. ಹೆಸರಾದ.

ಇತಿಹಾಸ (ನಾ). ಪೂರ್ವಕಥೆ; ಚರಿತ್ರೆ.

ಇತ್ತ (ನಾ). ೧. ಈ ಕಡೆ; ಈ ದಿಕ್ಕು. ೨. ಆ ಕಾಲದಿಂದೀಚೆಗೆ; ಆ ಸಮಯ.

ಇತ್ಯರ್ಥ (ನಾ). ೧. ಪರಿಣಾಮ; ಫಲಿತಾಂಶ. ೨. ತೀರ್ಮಾನ.

ಇತ್ಯಾದಿ (ನಾ). ಇವೇ ಮುಂತಾದುವು.

ಇತ್ವರಿ (ನಾ). ಸ್ವೈರಿಣಿ; ಜಾರೆ.

ಇದಿರ್(ರು) (ನಾ). ೧. ಅಭಿಮುಖ; ಸಮ್ಮುಖ. ೨. ಪ್ರತಿಭಟನೆ; ವಿರೋಧ. ~ಎಡೆ = ೧. ಎದುರುಗಡೆ; ಮುಂಭಾಗ. ೨. ಅವಕಾಶ. ~ಎತ್ತು = ೧. ಎದುರಾಗಿ ಪೋಗು; ಪಂಡೆತ್ತಿ ಹೋಗು. ೨. ಬೇರೆ ಸ್ಥಳದಲ್ಲಿ ಎತ್ತಿ ಪೂಜೆ ನಡೆಸು. ~ಏಱು(ರು) = ೧. ಎದುರಾಗಿ ನುಗ್ಗು. ೨. ಎದುರಾಗಿ ಕಾಣಿಸಿಕೊ; ಪ್ರಕಟವಾಗು. ~ಕ(ಗ)ಟ್ಟು = ೧. ಪ್ರತಿಭಟಿಸಿ ನಿಲ್ಲು. ೨. ಎದುರು ಮಾಡಿಕೊ. ೩. ಮನೆಯ ಮುಂಭಾಗದ ಕಟ್ಟಡ, ಮುಂಗಟ್ಟು, ಜಗಲಿ ಮುಂತಾದುವು. ೪. ಅಡ್ಡಲಾಗಿರುವುದು.

ಇದ್ದಿಲ್(ಲು) (ನಾ). ಕೆಂಡವನ್ನು ಆರಿಸಿದ ಮೇಲೆ ಉಳಿಯುವ ಕರಿಕು.

ಇದ್ಧ (ಗು). ವೃದ್ಧಿಹೊಂದಿದ.

ಇಧ್ಮ (ನಾ). ಸೌದೆ; ಕಟ್ಟಿಗೆ.

ಇನ (ನಾ). ೧. ಸೂರ್ಯ. ೨. ಗಂಡ; ಒಡೆಯ. ೩. ಹಣವಂತ. ೪. ತಂದೆ. ~ಕುಮಾರ = ೧. ಸೂರ್ಯನ ಮಗ. ೨. ಯಮ. ೩. ಶನಿ. ೪. ಸುಗ್ರೀವ. ೫. ಕರ್ಣ. ~ರಿಪು = ಸೂರ್ಯನ ಶತ್ರು; ರಾಹು. ~ವಾರ = ರವಿವಾರ.

ಇನಾಂ (ನಾ). ಬಹುಮಾನ. ~ದಾರ = ಇನಾಮನ್ನು ಪಡೆದವನು; ಜೋಡಿದಾರ.

ಇನಾಂತಿ (ನಾ). ಕಂದಾಯವಿಲ್ಲದೆ ಮಾನ್ಯವಾಗಿ ಕೊಟ್ಟ ಜಮೀನು.

ಇನಿತ್ತು (ನಾ). ೧. ಒಂದು ಪರಿಮಾಣಸೂಚಕವಾದ ಶಬ್ದ. ೨. ಈ ಸಂಖ್ಯೆಯ ಪರಿಮಿತಿ. ೩. ಕೊಂಚ; ಸ್ವಲ್ಪ.

ಇನಿದು (ನಾ). ೧. ಇಂಪು; ರುಚಿ. ೨. ಅಮೃತ. (ಗು). ೩. ಸಿಹಿಯಾದ. ~ಕ(ಗ)ಱೆ(ರೆ) = ಪ್ರಿಯವನ್ನುಂಟುಮಾಡು.

ಇನಿಸು (ನಾ). ೧. ಇಷ್ಟು. ೨. ಸ್ವಲ್ಪ. (ಅ). ೩. ಸ್ವಲ್ಪಮಟ್ಟಿಗೆ.

ಇನುಮಡಿಸು (ಕ್ರಿ). ಎರಡರಷ್ಟಾಗು.

ಇಪ್ಪೆ (ನಾ). ೧. ಒಂದು ಜಾತಿಯ ಮರ; ಹಿಪ್ಪೆ. ೨. ಮೆಲುಕು ಹಾಕುವುದು. ೩. ಇರುವಿಕೆ.

ಇಬ್ಬಂದಿ (ನಾ). ೧. ಒಮ್ಮೆ ಆಕಡೆ ಮತ್ತೊಮ್ಮೆ ಈಕಡೆ ಇರುವ ವ್ಯಕ್ತಿ. ೨. ಉಭಯಲಿಂಗಿ. ೩. ದಡ್ಡ. ೪. ಸಂಕರಜಾತಿ. ೫. ಹುಲಿ ಜಾತಿಗೆ ಸೇರಿದ ಒಂದು ವನ್ಯಮೃಗ. ೬. ಉಭಯಸಂಕಟ.

ಇಬ್ಬನಿ (ನಾ). ಮಂಜುನೀರಿನ ಹನಿ; ಹಿಮ.

ಇಭ (ನಾ). ೧. ಆನೆ. ೨. ಒಂದು ಶಬ್ದಾಲಂಕಾರ. ೩. ಒಬ್ಬ ರಾಕ್ಷಸನ ಹೆಸರು. ~ಅಂತಕ = ಸಿಂಹ. ~ಮುಖ = ೧. ಆನೆಯ ಮುಖ. ೨. ಗಣಪತಿ.

ಇಭ್ಯ (ನಾ). ೧. ಆನೆಗಳ ಗುಂಪು. ೨. ಐಶ್ವರ್ಯವಂತ. (ಗು). ೩. ಆನೆಗಳಿಗೆ ಸಂಬಂಧಿಸಿದ. ~ಕುಲ = ವೈಶ್ಯಕುಲ.

ಇಮುರು (ಕ್ರಿ). ೧. ಒಣಗು. ೨. ಕಳೆಗುಂದು.

ಇಮಾನಿ (ನಾ). ೧. ವಿಶ್ವಾಸ. ೨. ವಿಶ್ವಾಸಪಾತ್ರ.

ಇಮಾರತು (ನಾ). ಭಾರಿ ಕಟ್ಟಡ.

ಇಮ್ಮಿದ (ನಾ). ಚೆಲುವ; ಸುಂದರ.

ಇಮ್ಮು (ನಾ). ಇಂಪು; ಸೊಗಸು.

ಇಯತ್ತೆ (ನಾ). ತರಗತಿ; ಕ್ಲಾಸು.

ಇಯಾಂಡು (ನಾ). ವರ್ಷ; ಸಂವತ್ಸರ.

ಇರ್(ರು) (ಕ್ರಿ). ೧. ನೆಲೆಗೊಳ್ಳು. ೨. ಜೀವಿಸು. ೩. ವಾಸಮಾಡು. ೪. ನಿಲ್ಲು. ೫. ವರ್ತಿಸು. ~ಇಸು = ಇಡು; ಮಡಗು.

ಇರವಂತಿ (ನಾ). ಮಲ್ಲಿಗೆ ಜಾತಿಯ ಒಂದು ಹೂವು.

ಇರವು (ನಾ). ರೂಪು; ಆಕಾರ.

ಇರಸಾಲು (ನಾ). ಸರಕಾರಕ್ಕೆ ಸಲ್ಲಬೇಕಾದ ಕಂದಾಯದ ಹಣವನ್ನು ಸಲ್ಲಿಸುವುದು.

ಇರಸು (ನಾ). ಬಂಡಿಯ ಅಚ್ಚುಮರ.

ಇರಹ (ನಾ). ಒದ್ದೆ; ತೇವ.

ಇರಾದೆ (ನಾ). ಉದ್ದೇಶ; ಅಭಿಪ್ರಾಯ.

ಇರಿ (ಕ್ರಿ). ೧. ಜಿನುಗು. ೨. (ಹಾಲು) ಕರೆ. ೩. = ಇಱು. (ನಾ). ೪. ಕರೆಯುವ ಹಾಲಿನ ಧಾರೆ.

ಇರಿಕೆ (ನಾ). ೧. ಇರುವ ಸ್ಥಿತಿ. ೨. ಸಿಂಬೆ; ಸುರುಳಿ.

ಇರುಳ್(ಳು) (ನಾ). ರಾತ್ರಿ. ~ಅರಸ = ಚಂದ್ರ. ~ಕ(ಗ)ಣ್ಣು = ರಾತ್ರಿ ಕಣ್ಣು ಕಾಣದಿರುವಿಕೆ.

ಇರೆ (ನಾ). ೧. ಭೂಮಿ; ತಿರೆ. ೨. ನೀರು. ೩. ಸರಸ್ವತಿ. ೪. ಆಹಾರ.

ಇಱು(ರಿ) (ಕ್ರಿ). ೧. ಹೊಡೆ; ಚುಚ್ಚು. ೨. ಯುದ್ಧಮಾಡು. ೩. ಕೊಲ್ಲು. ೪. ಗುಣಿಸು. ೫. ಎಸೆ. ೬. ಕತ್ತರಿಸು. ೭. ಕೊರೆ; ಕಂಡರಿಸು. (ನಾ). ೮. ಇರಿತ; ಕೊಲೆ. ೯. ಜಿಂಕೆ. ~ಕುಳಿ = ಹೋರಿ ಮುಂತಾದ ಕೊಂಬಿನ ಪ್ರಾಣಿ. ~ಕೊ(ಗೊ)ಳಿ = ಮೀನು

ಹಿಡಿಯುವುದಕ್ಕಾಗಿ ಬಳಸುವ ಒಂದು ಬಗೆಯ ಕುಕ್ಕೆ. ~ಬಿ(ವಿ)ಟ್ಟಿ = ಸೋತ ರಾಜನು ಗೆದ್ದ ರಾಜನಿಗೆ ಮಾಡಬೇಕಾದ ಮೂರುಬಗೆಯ ಬಿಟ್ಟಿಯ ಕೆಲಸಗಳಲ್ಲಿ ಒಂದು; ಯುದ್ಧವೊದಗಿದಾಗ ಸೇನೆಯೊಡನೆ ಸಹಾಯಕ್ಕೆ ಬಂದು ಹೋರಾಡುವುದು.

**ಇಱ(ರಿ)ಸಿಲ್(ಲು)** (ನಾ). ೧. ಎರಚುತ್ತಾ ಬೀಳುವ ಮಳೆ; ಇರಚಲು. ೨. ನೀರು, ಪನ್ನೀರು ಮುಂತಾದುವನ್ನು ಚಿಮುಕಿಸುವ ಬೀಸಣಿಗೆ ಮತ್ತು ಅದರ ಗಾಳಿ. ೩. ಪ್ರಾಣಿಗಳನ್ನು ಕೆಡಹುವ ಕುಳಿ; ಕಪ್ಪು.

**ಇಱು(ರು)(ಂ)ಕು** (ಕ್ರಿ). ೧. (ಕಂಕುಳು, ತೊಡೆ ಮುಂತಾದ ಪ್ರದೇಶಗಳಲ್ಲಿ)ಅದುಮಿ ಭದ್ರವಾಗಿ ಹಿಸುಕಿ ಹಿಡಿ. ೨. ಸಣ್ಣದಾಗು; ಕಿರಿದಾಗು.

**ಇಱು(ರು)(ಂ)ಪೆ(ವೆ,ಹೆ)** (ನಾ). ಚೀಮೆ; ಪಿಪೀಲಿಕೆ.

**ಇಱು(ರು)(ಂ)ಬು** (ನಾ). ೧. ಇಕ್ಕಟ್ಟು. ೨.ಗುಂಪು. ೩.ಕರ್ಕಶತೆ. ೪.ಹಳ್ಳ; ತಗ್ಗು. ~ಕೊ(ಗೊ)ಳ್ = ೧. ಸಂದುಗೊಂದುಗಳಲ್ಲಿ ಹೋಗಿ ಸೇರು. ೨.ಹಳ್ಳಕ್ಕೆ ಬೀಳು.

**ಇರ್ಕೊಳ** (ನಾ). ೧.ಎರಡು ಕೊಳಗ ಪ್ರಮಾಣ. ೨. ಎರಡು ಕೊಳಗ ಬೀಜವರಿಯ ಜಮೀನು.

**ಇರ್ಕೆ** (ನಾ). ೧. ವಾಸಸ್ಥಾನ. ೨. ಸ್ಥಿತಿ. ೩. ನೆಲಸುವಿಕೆ.

**ಇರ್ದಲ್** = ಇದ್ದಿಲ್.

**ಇರ್ಮೊಯ್** (ನಾ). ೧. ಎರಡು ಮಗ್ಗಲು. ೨. ಇಹ ಮತ್ತು ಪರ. ೩. ಎರಡು ಪದರ.

**ಇರ್ಪಕ್ಕ** (ನಾ). ೧. ಶುಕ್ಲ ಮತ್ತು ಕೃಷ್ಣ ಪಕ್ಷಗಳು. ೨. ಎರಡು ಮಗ್ಗಲು.

**ಇರ್ಬೀಡು** (ನಾ). ೧. ಎರಡು ಬಿಡಾರ. ೨. ಎರಡು ಸಲ ಫಲ ಬಿಡುವುದು. ೩. ಶಿಂಶುಪ ವೃಕ್ಷ.

**ಇಲ್**[2] (ಕ್ರಿ). ೧. ನಿಷೇಧಾರ್ಥದಲ್ಲಿ ಮಾತ್ರ ಬಳಕೆಯಲ್ಲಿರುವ ಇಲ್ಲ ಎಂಬ ಕ್ರಿಯಾತ್ಮಕಾವ್ಯಯದ ಮೂಲರೂಪ. ೨. ಅಥವಾ; ಹಾಗಲ್ಲವಾದರೆ. (ನಾ). ೩. ನೆಲೆ. (ಪ್ರ). ೪. ಕೃದಂತಭಾವನಾಮ ಪ್ರತ್ಯಯ. ~ಅಮೆ = ೧. ಅಭಾವ; ಇಲ್ಲದಿರುವಿಕೆ. ೨. ಬಡತನ.

**ಇಲಾಖೆ** (ನಾ). ೧.ಆಡಳಿತಶಾಖೆ. ೨.ಆಡಳಿತಕ್ಕೆ ಒಳಪಟ್ಟ ಸೀಮೆ.

**ಇಲಾಜು** (ನಾ). ೧.ಉಪಚಾರ. ೨.ಉಪಾಯ; ಹಂಚಿಕೆ.

**ಇಲಿ** (ನಾ). ಮೂಷಕ. ~ಕಿವಿ = ಇಲಿಯ ಕಿವಿಯ ಆಕಾರದ ಎಲೆಗಳುಳ್ಳ ಒಂದು ಗಿಡ; ಒಂದೆಲಗ.

**ಇಲಿಕು** (ಕ್ರಿ). ಕಿವಿಚಿ ಹೋಗು.

**ಇಲುಕು** (ನಾ). ೧. ಎಳೆತ. ೨. ಹಿಡಿತ.

**ಇಲುಗು** (ನಾ). ೧. ಮೂಳೆ. ೨. ಅಂಶ.

**ಇಲ್ಲಣ** (ನಾ). ೧. ಜೇಡನ ಬಲೆ. ೨. ಹೊಗೆ ಹಿಡಿದ ಜೇಡನಬಲೆ; ಗೃಹಧೂಮ.

**ಇಲ್ಲಾಮಲ್ಲಿ** (ನಾ). ೧. ಚಾಡಿ. ೨. ಚಾಡಿ ಹೇಳುವ ವ್ಯಕ್ತಿ.

**ಇಲ್ವಲ** (ನಾ). ೧. ಮೃಗಶಿರಾ ನಕ್ಷತ್ರದ ಅಗ್ರಭಾಗದಲ್ಲಿರುವ ತಾರೆಗಳು. ೨. ಒಬ್ಬ ರಾಕ್ಷಸ.

**ಇಷ** (ನಾ). ೧. ಆಶ್ವಯುಜ ಮಾಸ. ೨. ರಸವುಳ್ಳದ್ದು.

**ಇಷಾರೆ** (ನಾ.) ಸಂಕೇತ; ಸನ್ನೆ.

**ಇಷೀಕೆ** (ನಾ). ೧. ಆನೆಯ ಕಣ್ಣುಗುಡ್ಡೆ. ೨. ಕಾಶ ಎಂಬ ಹುಲ್ಲು. ೩. ಚಿನ್ನವು ಮೂಸೆಯಲ್ಲಿ ಕರಗಿದೆಯೋ ಇಲ್ಲವೋ ಎಂದು ಪರೀಕ್ಷಿಸಲು ಬಳಸುವ ಕಬ್ಬಿಣದ ಅಥವಾ ಮರದ ಕಡ್ಡಿ.

**ಇಷು** (ನಾ). ಅಂಬು. ~ಗತಿ = ಬಿಲ್ಲಿನಿಂದ ಬಿಟ್ಟ ಬಾಣದ ನಡೆ.

ಇಷುಧಿ (ನಾ). ಬತ್ತಳಿಕೆ.

ಇಷ್ಟ (ನಾ). ೧. ಪ್ರೀತಿಪಾತ್ರ. ೨. ಬಯಕೆ. ೩. ಯಜ್ಞಕರ್ಮ. (ಗು). ೪. ಹಿತವಾದ. ೫. ಅಪೇಕ್ಷಿಸಲ್ಪಟ್ಟ. ೬. ಹೋಮ ಮಾಡಲ್ಪಟ್ಟ. ~ಅರ್ಥ = ಬೇಡಿದ ಫಲ. ~ಅವಾಪ್ತಿ = ಇಷ್ಟಾರ್ಥವನ್ನು ಪಡೆಯು ವುದು. ~ ಆಲಾಪ = ಪ್ರೀತಿಯ ಮಾತು. ~ಗಂಧ = ೧. ಸುಗಂಧ. ೨. ಸುವಾಸನೆ ಯುಳ್ಳ ವಸ್ತು. ~ಯೋಗ = ಪ್ರಿಯ ಸಮಾಗಮ. ~ವರಣ = ಚುನಾವಣೆ.

ಇಷ್ಟಕಾರಿ (ನಾ). ಪ್ರಿಯವನ್ನುಂಟುಮಾಡು ವವನು.

ಇಷ್ಟದಾನಿ (ನಾ). ಬಯಸಿದ್ದನ್ನು ಕೊಡು ವವನು.

ಇಷ್ಟಿ (ನಾ). ೧. ಯಾಗ. ೨. ಪೂಜೆ. ೩. ಬಯಕೆ.

ಇಷ್ಟು (ನಾ). ೧. ಈ ಪರಿಮಾಣ. ೨. ಸ್ವಲ್ಪ; ತುಸು.

ಇಷ್ಟೆ (ನಾ). ಪ್ರೀತಿಪಾತ್ರಳು.

ಇಷ್ವಾಸ (ನಾ). ೧. ಬಿಲ್ಲು. ೨. ಬಿಲ್ಲುಗಾರ.

ಇಸಂ (ನಾ). ವ್ಯಕ್ತಿ; ಆಸಾಮಿ.

ಇಸಬು (ನಾ). ಒಂದು ಬಗೆಯ ಚರ್ಮ ರೋಗ.

ಇಸವಿ (ನಾ). ಕ್ರೈಸ್ತಶಕದ ವರ್ಷ.

ಇಸು (ಕ್ರಿ). ೧. ಬಾಣಪ್ರಯೋಗ ಮಾಡು. ೨. ಅದುಮು. ೩. ಸೂಸು. (ನಾ). ೪. ಬಾಣ.

ಇಸುಬು = ಇಸಬು.

ಇಸುವೆಸ (ನಾ). ಸೇವಾವೃತ್ತಿ.

ಇಸ್ತಿಹಾರು (ನಾ). ಪ್ರಸಿದ್ಧಪತ್ರಿಕೆ; ನೋಟೀಸು.

ಇಸ್ತ್ರಿ (ನಾ). ಶಾಖವಾಗಿರುವ ಉಕ್ಕಿನ ಉಜ್ಜು ಪೆಟ್ಟಿಗೆಯಿಂದ ಬಟ್ಟೆಗಳನ್ನು ಗರಿಯಾಗಿರು ವಂತೆ (ನಾಜೂಕು) ಮಾಡುವುದು. ~ಎಲೆ = ಊಟದ ಎಲೆ. ~ಪೆಟ್ಟಿಗೆ = ಇಸ್ತ್ರಿ ಮಾಡುವ ಲೋಹದ ಸಾಧನ.

ಇಸ್ಪೀಟು (ನಾ). ಒಂದು ಬಗೆಯ ಆಟ; ಗಂಜೀಫು ಆಟ.

ಇಹ (ನಾ). ೧. ಇರುವಿಕೆ. ೨. ಈ ಭೂಮಿ; ಈ ಲೋಕ.

ಇಹಗೆ (ಅ). ಈ ರೀತಿಯಾಗಿ; ಹೀಗೆ.

ಇಳಕಲು (ನಾ). ಇಳಿಜಾರಾದ ಪ್ರದೇಶ.

ಇಳಿ ೧. = ಇೞಿ. (ನಾ). ೨. ಎಣ್ಣೆ, ತುಪ್ಪ ಮುಂತಾದುವುಗಳ ಅಳತೆಯಲ್ಲಿ ಅಳತೆಯ ಪಾತ್ರೆಯ ಬಾಯಿಂದ ಕೆಳಕ್ಕೆ ಹರಿಯುವಂತೆ ಬಿಡುವಿಕೆ. ೩. ದೀರ್ಘಾಕ್ಷರದ ಚಿಹ್ನೆ. ೪. ರವೆಯಷ್ಟು. (ಅ). ೫. ಪೂರ್ತಿಯಾಗಿ. ~ಕಿ(ಗಿ)ವಿ = ೧. ಜೋಲುಬಿದ್ದ ಕಿವಿ. ೨. ಚಾಡಿ ಮಾತನ್ನು ಕೇಳುವವನು. ~ತಾ(ದಾ)ಣ = ವಿಮಾನಗಳು ಕೆಳಕ್ಕೆ ಇಳಿಯಲು ಅನುಕೂಲವಾಗುವಂತೆ ನಿರ್ಮಿ ಸಿರುವ ಸ್ಥಳ. ~ತೆ(ದೆ)ಗೆ = ನಿವಾಳಿಸು. ~ಭೋಗ್ಯ=ಲೇವಾದೇವಿಯಲ್ಲಿ ಜಮೀನನ್ನು ಭೋಗ್ಯಕ್ಕೆ ಹಾಕಿಕೊಂಡು ಅಸಲೂ ಬಡ್ಡಿ ಎರಡೂ ತೀರುವ ತನಕ ಉತ್ಪತ್ತಿಯಲ್ಲಿ ಕಟಾಯಿಸಿಕೊಂಡು ಅನುಭವಿಸುತ್ತಾ ಬರುವ ಕ್ರಮ. ~ಮೋಡು = ಸಮನೆಲವಿಲ್ಲದೆ ಏರುತಗ್ಗಾಗಿರುವಿಕೆ. ~ ವಯಸ್ಸು = ಮುಪ್ಪು.

ಇಳಿ(ಂ)ಕೆ (ನಾ). ತಿರಸ್ಕಾರ; ತಾತ್ಸಾರ.

ಇಳಿದು (ಗು). ೧. ಕಡಮೆಯಾದ. ೨. ಸುಲಭ ವಾದ. ೩. ಬಡವಾದ.

ಇಳಿಪು ೧. = ಇೞಿಪು. ೨. ಕೀಳುಮಾಡು; ಹೀಯಾಳಿಸು.

ಇಳಿಲ್ (ನಾ). ಶೋಭೆ; ಚೆಲುವು.

ಇಳಿತೆ (ನಾ). ೧. ಸುಂದರಿ. ೨. ಹೆಂಡತಿ.

ಇಳೆ (ನಾ). ೧. ಭೂಮಿ. ೨. ಹಸು. ೩. ಭಾಷೆ. ೪. ಶರೀರದ ಬಲಗಡೆಯಲ್ಲಿರುವ ಒಂದು

ನಾಡಿ. ೫. ಮನುವಿನ ಮಗಳು. ೬. ವಿಷಪೂರ್ಣ. ೭. ಅನ್ನ. ೮. ನೀರು. ೯. ರಸಮಯವಾದ ವಸ್ತುಗಳ ಸಮೂಹ. ೧೦. ಉತ್ತಮ ಸ್ಥಿತಿ. ~ಆ(ಯಾ)ಣ್ಮ = ರಾಜ.

**ಇಳೇಜ್ಯ** (ಗು). ಭೂಮಿಯಲ್ಲಿ ಪೂಜೆಗೆ ಪಾತ್ರವಾದ.

**ಇೞಿ(ಳಿ)** (ಕ್ರಿ). ೧. ಕೆಳಕ್ಕೆಬರು. ೨. ಬೀಳು. ೩. ಸುರಿ. ೪. ಕಡಮೆಯಾಗು. ೫. ಜೋಲು ಬೀಳು. ೬. ಅವತರಿಸಿ ಬರು. ೭. ಪರಿಹಾರವಾಗು. ೮. ಮುಳುಗು. ೯. ಬಾಗು. **~ನೇಹ** = ೧. ಕಡಮೆಯಾಗುತ್ತಿರುವ ಸ್ನೇಹ. ೨. ಕಡಮೆಯಾಗುತ್ತಿರುವ ಎಣ್ಣೆ.

**ಇೞಿ(ಳಿ)ಪು(ವು)** (ಕ್ರಿ). ೧. ಕೆಳಕ್ಕೆ ತರು. ೨. ತೊರೆ; ನೀಗು. ೩. ಕಡಮೆ ಮಾಡು; ಕುಗ್ಗಿಸು. ೪. ಬಟ್ಟೆ ಇಳಿಸು. ೫. ಕೆಡಹು; ಬೀಳಿಸು. ೬. ಜೋತುಬಿಡು.

**ಇೞ್ಕು(ಳ್ಕು)ೞ್(ಳ್)** (ನಾ). ಪಾತ್ರೆಗಳನ್ನು ಹಿಡಿಯುವ ಸಾಧನ; ತಂಡಸ; ಚಿಮುಟ.



**ಈ** (ಕ್ರಿ). ೧. ಕೊಡು ; ಈಯು. ೨. ಅವಕಾಶವನ್ನು ಕೊಡು. (ನಾ). ೩. ಕನ್ನಡ ವರ್ಣಮಾಲೆಯ ನಾಲ್ಕನೆಯ ವರ್ಣ.

**ಈ(ಂ)ಚಿಲ್** (ನಾ). ತಾಳೆಯ ಜಾತಿಗೆ ಸೇರಿದ ಮರ; ಈಚಲುಮರ.

**ಈ(ಂ)ಚು** (ನಾ). ಕಂದುವಿಕೆ ; ಮಾಸುವಿಕೆ.

**ಈಂಟು** (ಕ್ರಿ). ಕುಡಿ; ಪಾನಮಾಡು.

**ಈಕ್ಷಕ** (ನಾ). ನೋಡುವವನು.

**ಈಕ್ಷಣ** (ನಾ). ೧. ಕಣ್ಣು. ೨. ನೋಡುವಿಕೆ.

**ಈಕ್ಷ್ಯ** (ಗು). ನೋಡಬಹುದಾದ.

**ಈಗಡು(ಳ್,ಳು)** (ಅ). ಈ ಸಮಯದಲ್ಲಿ.

**ಈಚಲ್(ಲು)** ೧. = ಈಂಚಿಲ್. ೨. ಮಳೆಗಾಲದಲ್ಲಿ ದೀಪಕ್ಕೆ ಮುತ್ತುವ ರೆಕ್ಕೆ ಇರುವ ಒಂದು ಜಾತಿಯ ಹುಳು.

**ಈಚೆ** (ಅ). ೧. ಈ ಕಡೆಯ. ೨. ಅನಂತರ.

**ಈಟ** (ನಾ). ಇಟ್ಟಿ ; ಶಲ್ಯ.

**ಈಡಿ** (ನಾ). ಹೆಂಡ.

**ಈಡಿತ** (ಗು). ಹೊಗಳಲ್ಪಟ್ಟ.

**ಈಡು** (ನಾ). ೧. ಬಾಣದ ಅಥವಾ ಗುಂಡಿನ ಪ್ರಯೋಗ. ೨. ಹೊಡೆಯಬೇಕಾದ ವಸ್ತು; ಗುರಿ. ೩. ಒಂದು ಸಲ ಇಡುವಿಕೆ. ೪. ಕಾರಣ. ೫. ಇಕ್ಕಟ್ಟು. ೬. ಹೊಣೆ. ೭. ಲೇಪ. ೮. ಉಪಾಯ. ೯. ಮರಗೆಲಸ ಮಾಡುವಾಗ ಅಡಿಗೆ ಕೊಡುವ ಆನಿಕೆ, -ಕೊರಡು. ೧೦. ಒಂದಾಗುವಿಕೆ. ೧೧. ಸರಿ; ಸಮಾನ. ~ಆಡು = ೧. ಕಿತ್ತು ಒಗೆ. ೨. ಕಳೆ. ~ಇಱು(ರಿ) = ೧. ಕೊಂಬಿನಿಂದ ಉಜ್ಜು. ೨. ಕಿಕ್ಕಿರಿ. ೩. ವ್ಯಾಪಿಸು. ೪. ಗುಣಿಸು.

**ಈನ್(ನು,ಯು)** (ಕ್ರಿ). (ಪ್ರಾಣಿಗಳು) ಮರಿ ಹಾಕು. ~ಇಸು = ೧. (ಪ್ರಾಣಿಗಳ) ಪ್ರಸವಕ್ಕೆ ಸಹಾಯ ಮಾಡು. ೨. ಒದಗಿಸು.

**ಈಪಿ** (ನಾ). ೧. ನೊಣಗಳ ಹಿಕ್ಕೆ. ೨. ಹೇನಿನ ಮೊಟ್ಟೆ.

**ಈಪ್ಸಿತ** (ನಾ). ೧. ಆಸೆ. (ಗು). ೨. ಆಸೆಪಟ್ಟ. ~ಅರ್ಥ = ಬಯಸಿದ ವಸ್ತು.

**ಈಪ್ಸೆ** (ನಾ). ಆಸೆ.

**ಈರ್(ರು)** (ಕ್ರಿ). ೧. ಎಳೆ; ಸೆಳೆ. ೨. (ಹೇನಿನ ಮೊಟ್ಟೆಯನ್ನು) ಬಾಚು. (ನಾ). ೩. ಹೇನಿನ ಮೊಟ್ಟೆ. ೪. ತೇವ. ~ಉಳ್ಳಿ = ಒಂದು ಬಗೆಯ ಗೆಡ್ಡೆ.

**ಈರಣ** (ನಾ). ೧. ಚಲನ. ೨. ಮೃದಂಗ.

**ಈರಲು** (ನಾ). ೧. ಮರದ ನೆರಳಿನಿಂದ ಬಿಸಿಲು ಬೀಳದೆ ಬೆಳೆ ಸರಿಯಾಗಿ ಬರದಿರುವಿಕೆ; ಚೀಕಲು. ೨. ಮುಟ್ಟು ಅಥವಾ ಮೈಲಿಗೆಯ ಸೋಂಕಿನಿಂದ ಮಕ್ಕಳಿಗೆ ಬರುವ ಶೀತಭೇದಿ.

**ಈರಾಟಿಕೆ** (ನಾ). ಹೊಡೆದಾಟ.

**ಈರಿಣ** (ನಾ). ೧. ಚೌಳುಭೂಮಿ. ೨. ಮರುಭೂಮಿ.

**ಈರಿತ** (ನಾ). ೧. ಹೇಳಿದ ಮಾತು. (ಗು). ೨. ಹೇಳಲ್ಪಟ್ಟ. ೩. ಎಸೆಯಲ್ಪಟ್ಟ.

**ಈರೆ(ರಿ)** (ನಾ). ಪಿತ್ತಕೋಶ.

**ಈಱು(ರಿ)ಲ್(ಲು)** (ನಾ). ೧.ಪ್ರಸವ; ಹೆರಿಗೆ. ೨.ಹೆರಿಗೆಯ ಹನ್ನೊಂದನೆಯ ದಿನ ಮಾಡುವ ಮಂಗಳಸ್ನಾನ. ೩. ಹೆರಿಗೆಯ ಮನೆ.

**ಈರ್ಮ** (ನಾ). ವ್ರಣ ; ಗಾಯ.

**ಈರ್ಷ್ಯೆ** (ನಾ). ಹೊಟ್ಟೆಕಿಚ್ಚು.

**ಈಲು** (ನಾ). ೧. ಗರ್ಭ. ೨. ಸಲಿಗೆ.

**ಈವರು** (ನಾ). ಸ್ವಲ್ಪ ಮುಂಚಿನ ಕಾಲ.

**ಈಶ** (ನಾ). ೧. ಒಡೆಯ. ೨. ಈಶ್ವರ. ೩. ಏಕಾದಶರುದ್ರರಲ್ಲಿ ಒಬ್ಬ. ೪. ಈಶಾನ್ಯ ದಿಕ್ಕಿಗೆ ಒಡೆಯ.

**ಈಶಾನ** ೧. = ಈಶ. ೨. ಶಿವನ ಪಂಚಮುಖಗಳಲ್ಲಿ ಒಂದು. ೩. ಸೂರ್ಯ.

**ಈಶಾನಿ** (ನಾ). ದುರ್ಗೆ.

**ಈಶಾನ್ಯ** (ನಾ). ೧. ಉತ್ತರದಿಕ್ಕಿಗೂ ಪೂರ್ವ ದಿಕ್ಕಿಗೂ ಮಧ್ಯೆ ಇರುವ ದಿಕ್ಕು. ೨. ಈಶಾನ್ಯ ದಿಕ್ಕಿನ ಒಡೆಯ. ೩. ಈಶ್ವರ.

**ಈಶ್ವರ** (ನಾ). ೧. ಒಡೆಯ. ೨. ಶಿವ. ೩. ಏಕಾದಶರುದ್ರರಲ್ಲಿ ಒಬ್ಬ. ೪. ಲಿಂಗ. ೫. ಅರುವತ್ತು ಸಂವತ್ಸರಗಳಲ್ಲಿ ಹನ್ನೊಂದನೆಯದು. ೬. ಪರಮಾತ್ಮ. ೭. ಈಶ್ವರೀ ಬೇರು. ೮. ಧನವಂತ.

**ಈಶ್ವರಿ** (ನಾ). ೧. ಪಾರ್ವತಿ. ೨. ಹಾವಿನ ವಿಷಕ್ಕೆ ಔಷಧಿಯಾಗುವ ಒಂದು ಮೂಲಿಕೆ.

**ಈಷಣ(ಣೆ)** (ನಾ). ೧. ಆಸೆ. ೨. ಆತುರ. **~ತ್ರಯ** = ಮಕ್ಕಳು, ಹೆಂಡತಿ, ಹಣ ಎಂಬ ಮೂರು ವಸ್ತುಗಳ ಮೇಲಿನ ಮೋಹ.

**ಈಸಾಡ(ಡಿ)** (ನಾ). ಒಂದು ಬಗೆಯ ಮಾವಿನ ಹಣ್ಣು.

**ಈಸಾಯಿ** (ನಾ). ಕ್ರೈಸ್ತಮತವನ್ನು ಅನುಸರಿಸುವವನು.

**ಈಸು(ಜು)** (ಕ್ರಿ). ೧. ನೀರಿನ ಮೇಲೆ ತೇಲುತ್ತಾ ಹೋಗು. ೨. ಕೊಡಿಸು. ೩. ತೆಗೆದುಕೊ. ೪. ಅವಕಾಶ ಕೊಡು. ೫. ಸೆಳೆ; ಎಳೆ. (ನಾ). ೬. ನೀರಿನಲ್ಲಿ ತೇಲುತ್ತಾ ಚಲಿಸುವುದು. ೭. ಇಷ್ಟು. ೮. ಇರ್ಚಿಮರ. **~ಕಾ(ಗಾ)ಯಿ** = ಈಜುವಾಗ ಕಟ್ಟಿಕೊಳ್ಳುವ ಒಣಗಿದ ಸೋರೆ ಕಾಯಿ.

**ಈಸುಟಿ್(ೞ್)** (ನಾ). ರೆಕ್ಕೆ ಇರುವ ಗೆದ್ದಲು ಹುಳು.

**ಈಹಾಮೃಗ** (ನಾ). ತೋಳ.

**ಈಹೆ** (ನಾ). ೧. ಆಸೆ. ೨. ಪ್ರಯತ್ನ. ೩. ಚೇಷ್ಟೆ.

**ಈಳನ** (ನಾ). ಹೊಗಳಿಕೆ; ಸ್ತುತಿ.

**ಈಳಿಗೆ** (ನಾ). ತರಕಾರಿಯನ್ನು ಕತ್ತರಿಸುವುದಕ್ಕೆ ಮಣೆಗೆ ಜೋಡಿಸಿರುವ ಕತ್ತಿ; ಮೆಟ್ಟುಗತ್ತಿ.

**ಈಳಿಲು** (ನಾ). ಕೀಳು; ಕಡೆ.

**ಈಳು** (ಕ್ರಿ). ಸ್ತುತಿಸು; ಹೊಗಳು.

**ಈಳೆ** (ನಾ). ೧. ಕಿತ್ತಳೆ, ಹೇರಿಳೆ ಮೊದಲಾದ ವರ್ಗಕ್ಕೆ ಸೇರಿದ ಮರ ಮತ್ತು ಹಣ್ಣು. ೨. ನಿಂಬೆಹಣ್ಣು. **~ಸಾಂದು** = ಈಳೆಯ ಗಂಧ.

**ಈಟಿ್(ೞ್)** (ಕ್ರಿ). ಸೆಳೆ; ಎಳೆ.

**ಈಟಿ(ೞಿ)ತ** = ಈಳನ.



**ಉ** (ನಾ). ಕನ್ನಡ ವರ್ಣಮಾಲೆಯ ಐದನೆಯ ವರ್ಣ.

**ಉಂಕಿ** (ನಾ). ನೆಯ್ಗೆಯ ಮಗ್ಗದಲ್ಲಿ ಉದ್ದುದ್ದವಾಗಿ ಹಾಸಿದ ನೂಲಿನ ಹಾಸು.

**ಉಂಗುಟ** (ನಾ). ೧. ಕಾಲಿನ ಅಥವಾ ಕೈಯ ಹೆಬ್ಬೆರಳು. ೨. ಎಕ್ಕಡಗಳಲ್ಲಿ ಕಾಲಿನ ಹೆಬ್ಬೆರಳನ್ನು ತೂರಿಸಲು ಮಾಡಿರುವ ಉಂಗುರದಂತಹ ರಚನೆ.

**ಉಂಗುರ** (ನಾ). ಬೆರಳಿಗೆ ಇಡುವ ಆಭರಣ. **~ಉಡಿಕೆ**= ಮದುವೆ ನಿಶ್ಚಿತಾರ್ಥ ಸಮಾರಂಭ.

**ಉಂಗುಷ್ಟ** = ಉಂಗುಟ.

**ಉಂಚ**(ನಾ). ೧.ಕೋಳಿ, ಬಾತು ಮುಂತಾದುವುಗಳು ತಪ್ಪಿಸಿಕೊಂಡು ಹೋಗದಂತೆ ಮೇಲೆ ಕವಿಸುವ ತೂತುಗಳಿರುವ ಬಿದಿರಿನ ಕುಕ್ಕೆ; ತೂತುಮಂಕರಿ. ೨. ಎತ್ತರ. ೩. ಎತ್ತರವಾದ ಧ್ವನಿ. ೪. ಶ್ರೇಷ್ಠನಾದವನು. (ಗು). ೫. ಎತ್ತರವಾದ. ೬. ಶ್ರೇಷ್ಠವಾದ.

**ಉಂಚತೆ** (ನಾ). ಉತ್ಕೃಷ್ಟತೆ; ಔನ್ನತ್ಯ.

**ಉಂಚು** (ಕ್ರಿ). ಕಾಪಾಡು; ರಕ್ಷಿಸು.

**ಉಂಛ** (ನಾ). ಹಕ್ಕಲಾರಿಸುವುದು. **~ವೃತ್ತಿ** =ಬಿದ್ದಿರುವ ಕಾಳುಗಳನ್ನು ಆರಿಸಿಕೊಂಡು ಅದರಿಂದ ಜೀವನ ನಡೆಸುವ ಕ್ರಮ. **~ಶಿಲ** =೧. ಹಕ್ಕಲುಗಳಲ್ಲಿ ಬಿದ್ದಿರುವ ತೆನೆ ಹಾಗೂ ಕಾಳುಗಳನ್ನು ಆರಿಸಿಕೊಳ್ಳುವಿಕೆ. ೨. ಹೀಗೆ ಆರಿಸಿಕೊಂಡು ಜೀವಿಸುವಿಕೆ.

**ಉಂಟು** (ಅ). ಇದೆ ಎಂಬರ್ಥದ ಅವ್ಯಯ.

**ಉಂಡಲಿಗೆ** (ನಾ). ೧. ಬೇಯಿಸಿದ ಹಿಟ್ಟಿನ ಮುದ್ದೆ. ೨. ಕಡುಬು.

**ಉಂಡಾಡಿ** (ನಾ). ಉಂಡು ತಿರುಗುವವನು; ಉಡಾಳ; ಸೋಮಾರಿ.

**ಉಂಡಿಗೆ** (ನಾ). ೧. ಉಂಡೆ. ೨. ಗಂಟಲು. ೩. ಮುದ್ರೆ; ಮೊಹರು. ೪. ಅಧೀನ; ವಶ. ೫. ರಹದಾರಿ. ೬. ತೆರಿಗೆ. ೭. ಹಣ್ಣು ಹಂಪಲುಗಳಲ್ಲಿ ಪರೀಕ್ಷಾರ್ಥವಾಗಿ ಚಿಕ್ಕದಾಗಿ ಕೊರೆದು ಮಾಡುವ ರಂಧ್ರ.

**ಉಂಡೆ** (ನಾ). ೧. ದುಂಡನೆಯ ಆಕಾರವುಳ್ಳ ಮುದ್ದೆ. ೨. ಪೂರ್ಣವಾದ ವಸ್ತು. ೩. ಲಾಡು; ಲಡ್ಡುಗೆ. **~ಕ(ಗ)ಟ್ಟು** =೧. ಮುದ್ದೆಯಾಗು. ೨. ಗುಂಡಾಗಿಸು. **~ತ(ದ)ಲೆ**= ಬೋಳಿಸಿದ ತಲೆ.

**ಉಂತು** (ಅ) ೧. ಈ ನಡುವಣ ಪ್ರಕಾರವಾಗಿ; ಹೀಗೆ. ೨. ಸುಮ್ಮನೆ. ೩. ಇನ್ನು.

**ಉಂತೆ** (ಅ). ೧. ಏನೂ ಮಾಡದೆ; ಸುಮ್ಮನೆ. ೨. ನಿಷ್ಕಾರಣವಾಗಿ.

**ಉಂದ** (ನಾ). ೧. ಗೌರವಸ್ಥ. (ಗು). ೨. ಮರ್ಯಾದೆಗೆ ಯೋಗ್ಯವಾದ.

**ಉಂದಲ್** (ನಾ). ಸಮೂಹ; ಗುಂಪು.

**ಉಂದು** (ಅ). ಈ ನಡುವಿನ ದಿನ; ಈ ಮಧ್ಯಕಾಲ.

**ಉಂದುರ** (ನಾ). ಇಲಿ.

**ಉಂಬಳಿ** (ನಾ). ಮಾನ್ಯವಾಗಿ ಕೊಡುವ ಭೂಮಿ, ಗ್ರಾಮ ಮುಂತಾದುವು

**ಉಕ್ಕಡ** (ನಾ). ೧.ಊರಿನ ಗಡಿ. ೨. ಪಹರೆಯ ನೆಲೆ. ೩.ಸುಂಕದ ಕಟ್ಟೆ. ೪.ಹಗ್ಗದ ಕುಣಿಕೆ. ೫. ಅತಿಶಯ. (ಗು). ೬. ಅತಿಶಯವಾದ.

**ಉಕ್ಕರಿಸು** (ಕ್ರಿ). ೧. ಬಾಡಿಸು; ತಾಳಿಸು. ೨. ಕುದಿಸು; ಬೇಯಿಸು.

**ಉಕ್ಕಲಿ(ಳಿ)ಸು** (ಕ್ರಿ). ೧. ಉಬ್ಬು; ಕೊಬ್ಬು. ೨. ಸಡಿಲವಾಗು; ತಪ್ಪಿಸು. ೩. ಮರೆಮಾಚು; ಬಚ್ಚಿಡು.

**ಉಕ್ಕು** = ಉರ್ಕು. **~ಅಂದ**= ೧. ಹೆಚ್ಚಳ; ಅತಿಶಯ. ೨. ಉತ್ಸಾಹ. ೩. ಉಕ್ಕಿನ ರೀತಿ; ಬಲವುಳ್ಳದ್ದು.

**ಉಕ್ಕೈವ** (ನಾ). ೧. ಮೋಸ; ಠಕ್ಕು. ೨. ಮೋಸಗಾರ. ೩. ಉತ್ಸಾಹ; ಸಡಗರ. ೪. ಉತ್ಸವ; ಸಮಾರಂಭ. ೫. ಗರ್ವ. ೬. ಸಂಶಯ.

**ಉಕ್ತ** (ನಾ). ೧. ಮಾತು; ವಚನ. (ಗು). ೨. ಹೇಳಿದ. **~ಲೇಖಕ**=ಹೇಳಿದುದನ್ನು ಬರೆದುಕೊಳ್ಳುವವನು.

**ಉಕ್ತಿ** (ನಾ). ಮಾತು; ಹೇಳಿಕೆ.

**ಉಕ್ಷ** (ನಾ). ಎತ್ತು; ಗೂಳಿ. **~ಕೇತ**=ಎತ್ತಿನ ಗುರುತನ್ನು ಬಾವುಟದಲ್ಲಿ ಉಳ್ಳವನು; ಶಿವ. **~ಪತಿ**=ನಂದಿ.

**ಉಕ್ಷಣ** (ನಾ). ಚಿಮುಕಿಸುವುದು; ಸಿಂಪಡಿಸುವುದು.

**ಉಖೆ** (ನಾ). ಮಡಕೆ.

**ಉಖ್ಯ** (ನಾ). ಮಡಕೆಯಲ್ಲಿ ಬೇಯಿಸಿದ ಮಾಂಸ.

**ಉಗಮ** (ನಾ). ೧. ಹುಟ್ಟುವ ಸ್ಥಳ. ೨. ಹುಟ್ಟು.

**ಉಗರಿಸು** (ಕ್ರಿ). ಕಷ್ಟಪಟ್ಟು ಉಸಿರಾಡು; ಏದು.

**ಉಗಾದಿ** (ನಾ). ಯುಗಾದಿ; ಹೊಸವರ್ಷದ ಆರಂಭ.

**ಉಗಾಭೋಗ** (ನಾ). ದಾಸ ಸಾಹಿತ್ಯದಲ್ಲಿ ಒಂದು ಬಗೆಯ ಹಾಡು.

**ಉಗಿ** (ಕ್ರಿ). ೧. ಹೊರಕ್ಕೆ ತೆಗೆ; ಸೆಳೆ. ೨. ಹೋಗಲಾಡಿಸು. ೩. ಬಿಚ್ಚಿಹೋಗು. ೪. ಚಿಮ್ಮು; ಚೆಲ್ಲು. ೫. ಉಗುಳು. ೬. ಚುಚ್ಚು. ೭. ಉಗುರಿನಿಂದ ಸೀಳು. ೮. ಕುಗ್ಗಿಸು. (ನಾ). ೯. ನೀರಿನ ಹಬೆ. ೧೦. ಸೀಳಿಹೋದ ಸ್ಥಿತಿ. ೧೧. ಇರಿತ. **~ಕಾಸು** = ಆವಿಯಿಂದ ಶಾಖವನ್ನು ಕೊಡು. **~ಪಟ**=ಸುಲಿಗೆ. **~ಪ(ವ)ಡಗ**=ಪೀಕದಾನಿ. **~ಬಂಡಿ**=ಹಬೆಯಿಂದ ಓಡುವ ಗಾಡಿ; ರೈಲುಬಂಡಿ. **~ಬಗಿ**=೧. ಹರಿದು ಚೂರುಚೂರು ಮಾಡು. ೨. ಸೀಳಿಹೋಗಿ ಚೂರುಚೂರಾಗಿರುವುದು. ೩. ಕಕ್ಕಾಬಿಕ್ಕಿ.

**ಉಗು** (ಕ್ರಿ). ೧. ಚೆಲ್ಲು. ೨. ಹೊರಬೀಳುವಂತೆ ಮಾಡು. (ನಾ). ೩. ಬಿಡಿಬಿಡಿಯಾಗಿರುವಿಕೆ.

**ಉಗುರ್(ರು)** (ನಾ). ೧. ನಖ. ೨. ವೀಳೆಯದೆಲೆ ಕತ್ತರಿಸುವ ಸಾಧನ. **~ಅಂಟು**=ಉಗುರಿಗೆ ಬಳಿಯುವ ಲೇಪನ; ಮದರಂಗಿ. **~ಅಡ್ಡಿಗೆ**=೧. ಉಗುರಿನ ಆಕಾರದಿಂದ ಕೂಡಿದ ಕಂಠಾಭರಣ. ೨. ಹುಲಿಯುಗುರಿಗೆ ಚಿನ್ನದ ಚೌಕಟ್ಟನ್ನು ಸೇರಿಸಿ ಮಾಡಿದ ಆಭರಣ. **~ಇಸು**=ಉಗುರಿನಿಂದ ಬಾಚು. **~ಉಳಿ**=೧. ವೀಳೆಯದೆಲೆಯನ್ನು ಬಿಡಿಸಲು ಹೆಬ್ಬೆರಳಿಗೆ ಹಾಕುವ ಉಗುರಿನ ಆಕಾರದ ಅಲಗುಳ್ಳ ಸಾಧನ. ೨. ಒಳಗಡೆಗೆ ಬಾಗಿರುವ ಅಲಗುಳ್ಳ ಉಳಿ. **~ಒತ್ತು** =೧. ಉಗುರಿನ ಒತ್ತುವಿಕೆ. ೨. ಗೋಧಿ ಅಥವಾ ಅಕ್ಕಿಹಿಟ್ಟನ್ನು ಕಲಸಿ ಉಗುರೊತ್ತಿ ಮಾಡಿದ ಗವುಲಿ; ಅಂತಹ ಗವುಲಿಯಲ್ಲಿ ಮಾಡಿದ ಪಾಯಸ. **~ನಂಜು**=ಉಗುರು ಸೋಕುವುದರಿಂದಾಗಲಿ, ಜಿಗುಟುವುದರಿಂದಾಗಲಿ ರಕ್ತದಲ್ಲಿ ಸೇರುವ ವಿಷ. **~ಬಿಸಿ**=ಸ್ವಲ್ಪ ಉಷ್ಣ; ಕವೋಷ್ಣ. **~ಸುತ್ತು**=ಉಗುರಿನ ಸುತ್ತಲೂ ಊದಿಕೊಂಡು ನೋವುಂಟುಮಾಡುವ ಬಾವು.

**ಉಗುಳ್(ಳ್,ಳು)** (ಕ್ರಿ). ೧. ಉಗಿ. ೨. ಹೊರಸೂಸು. (ನಾ). ೩. ಜೊಲ್ಲು; ಲಾಲಾರಸ. **~ಇಸು**=೧. ಉಗುಳುವಂತೆ ಮಾಡು. ೨. ಬಯ್ಯಿಸು. **~ನೀರು**=೧. ಬಾಯಿತುಂಬುವಷ್ಟು ನೀರು; ಗುಟುಕು ನೀರು. ೨. ಬಾಯಿಗೆ ಹಾಕಿಕೊಂಡು ಉಗುಳಬೇಕಾದ ನೀರು. ೩. ಜೊಲ್ಲು. **~ನುಂಗು**=೧. ಉಗುಳನ್ನು ನುಂಗು. ೨. ಹಿಂದೆ ಮುಂದೆ ನೋಡು.

ಉಗ್ಗ (ನಾ). ೧. ತೊದಲುವವನು ; ಬಿಕ್ಕರಿಸುವವನು. ೨. ಪಾತ್ರೆಗಳನ್ನು ಸುಲಭವಾಗಿ ಹಿಡಿದುಕೊಂಡು ಹೋಗಲು ಅವುಗಳ ಬಾಯಿಗೆ ಕಟ್ಟುವ ಹಗ್ಗ.

ಉಗ್ಗಡ(ನಾ). ೧. ಉತ್ಕಟತೆ. ೨.=ಉಗ್ಗಡಣೆ. (ಗು). ೩. ಅತಿಶಯವಾದ.

ಉಗ್ಗಡಣೆ (ನಾ). ಗಟ್ಟಿಯಾದ ಕೂಗು ; ಬಿರುದಾವಳಿಯ ಹೊಗಳಿಕೆ.

ಉಗ್ಗು (ಕ್ರಿ). ೧. ತೊದಲು. ೨. ಗುಕ್ಕು. ೩. ಚೆಲ್ಲು. ೪. ಉಕ್ಕಿಬರು. (ನಾ). ೫. ತೊದಲುವಿಕೆ. ೬. ಹೆಚ್ಚಳ. ೭. (ಮಕ್ಕಳ ಮಾತಿನಲ್ಲಿ) ಹಾಲು ಅಥವಾ ನೀರು.

ಉಗ್ಘಡಿಯಂತ್ರ (ನಾ). ನೀರನ್ನು ಎತ್ತುವ ಯಂತ್ರ ; ಏತ.

ಉಗ್ರ (ನಾ). ೧. ಪ್ರಚಂಡತೆ. ೨. ಕೋಪಿಷ್ಠ. ೩. ಕ್ರೂರಿ. ೪. ಶಿವ. ೫. ಸಂಕರ ಜಾತಿಯವನು. (ಗು). ೬. ತೀಕ್ಷ್ಣವಾದ. ೭. ಭಯಂಕರವಾದ. ~ಕರ = ತೀಕ್ಷ್ಣವಾದ ಕಿರಣಗಳನ್ನು ಉಳ್ಳವನು; ಸೂರ್ಯ. ~ಗಂಧ = ಕಟುವಾದ ವಾಸನೆಯುಳ್ಳದ್ದು; ಬೆಳ್ಳುಳ್ಳಿ, ಬಜೆ, ಅಜವಾನ ಮೊದಲಾದುವು.

ಉಗ್ರಾಣ (ನಾ). ಧಾನ್ಯ ಮೊದಲಾದ ಸಾಮಾನುಗಳನ್ನು ತುಂಬುವ ಮನೆ.

ಉಗ್ರಾಣಿ (ನಾ). ೧. ಉಗ್ರಾಣದ ಸೇವಕ. ೨. ಉಗ್ರಾಣದ ಮೇಲ್ವಿಚಾರಕ. ೩. ಪಟೇಲ, ಶಾನುಭೋಗರ ಸೇವಕ.

ಉಚಾಪತಿ (ನಾ). ಸಾಲವಾಗಿ ಸಾಮಾನುಗಳನ್ನು ತೆಗೆದುಕೊಳ್ಳುವುದು.

ಉಚಾಯಿಸು (ಕ್ರಿ). ಹದ್ದು ಮೀರು ; ಉಲ್ಲಂಘಿಸು.

ಉಚಿತ (ನಾ). ೧. ಕಾಣಿಕೆ. ೨. ಪುಕ್ಕಟೆಯಾದುದು. ೩. ಸಂದರ್ಭಕ್ಕೆ ತಕ್ಕ ರೀತಿ. (ಗು). ೪. ಸರಿಯಾದ. ೫. ಸುಖಕರವಾದ. ೬. ಪಳಗಿದ.

ಉಚ್ಚ (ನಾ). ೧. ಎತ್ತರ. ೨. ಉದ್ದ. ೩. ಮುಖವನ್ನೆತ್ತಿ ನಡೆಯುವವನು. ೪. ಶ್ರೇಷ್ಠತೆ. (ಗು). ೫. ಮೇಲಾದ. ~ಅವಚ = ಮೇಲು ಮತ್ತು ಕೀಳು.

ಉಚ್ಚಂಡ (ನಾ). ೧. ಮೇಲೆ ಎತ್ತಿ ಕಟ್ಟಿದುದು. (ಗು). ೨. ತೀವ್ರವಾದ.

ಉಚ್ಚಯ (ನಾ). ೧. ಸಮೂಹ. ೨. ಉಡಿಯನ್ನು ಬಿಗಿಗೊಳಿಸಿ ನಿರಿಯನ್ನು ಸಿಕ್ಕಿಸುವ ಗಂಟು ; ಬಾಳೆಕಾಯಿ.

ಉಚ್ಚರಣ (ನಾ). ೧. ಉಚ್ಚಾರ ಮಾಡುವುದು. ೨. ಮೇಲೆ ಅಥವಾ ಹೊರಗೆ ಹೋಗುವುದು.

ಉಚ್ಚಲ(ಳ) (ಗು). ಮೇಲಕ್ಕೆ ಚಲಿಸುವ ; ಚಿಮ್ಮುವ.

ಉಚ್ಚವ(ಹ) = ಉತ್ಸವ.

ಉಚ್ಚಾಟನ(ನೆ) (ನಾ). ಓಡಿಸುವಿಕೆ ; ಅಟ್ಟುವುದು ; ತೊಲಗಿಸುವುದು.

ಉಚ್ಚಾಟಿಸು (ಕ್ರಿ). ಅಟ್ಟು ; ಓಡಿಸು.

ಉಚ್ಚಾರ (ನಾ). ೧. ಉಚ್ಚಾರಣೆ; ಹೇಳುವಿಕೆ. ೨. ಮಲ ; ಹೇಲು.

ಉಚ್ಚಾರಣ(ಣೆ) (ನಾ). ಉಚ್ಚಾರ ಮಾಡುವುದು ; ಹೇಳುವುದು.

ಉಚ್ಚಿಷ್ಟ = ಉಚ್ಛಿಷ್ಟ.

ಉಚ್ಚು = ಉರ್ಚು.

ಉಚ್ಚೆ (ನಾ). ಮೂತ್ರ. ~ಕಟ್ಟು = ಮೂತ್ರ ವಿಸರ್ಜನೆಯಾಗದಂತೆ ತಡೆಯಾಗುವ ಒಂದು ರೋಗ.

ಉಚ್ಚೈರ್ಧ್ವನಿ (ನಾ). ಗಟ್ಟಿಯಾದ ಕೂಗು ; ಗರ್ಜನೆ.

ಉಚ್ಚೈಃಶ್ರವಸ್ಸು (ನಾ). ೧. ನೆಟ್ಟನೆಯ ಕಿವಿಗಳಿಂದ ಕೂಡಿದುದು. ೨. ಇಂದ್ರನ ಕುದುರೆ.

ಉಚ್ಚೈಃಸು (ಕ್ರಿ). (ದೂಳಿನಂತೆ) ಮೇಲಕ್ಕೆ ಚಿಮ್ಮು ; ನೆಗೆ.

ಉಚ್ಛಾದನ (ನಾ). ೧. ಸುಗಂಧ ದ್ರವ್ಯಗಳಿಂದ ಮೈಯನ್ನು ತೀಡಿ ಚೊಕ್ಕಟಗೊಳಿಸುವುದು. ೨. ಮರೆಯನ್ನು ತೆಗೆಯುವುದು.

ಉಚ್ಛಾಪ (ನಾ). ಶಾಪದ ಪರಿಹಾರ; ವಿಶಾಪ.

ಉಚ್ಛಿಷ್ಟ (ನಾ). ತಿಂದು ಮಿಕ್ಕದ್ದು; ಎಂಜಲು.

ಉಚ್ಛೃಂಖಲ(ಳ) (ಗು). ಕಟ್ಟುಪಾಡಿಗೆ ಒಳಪಡದ; ಸ್ವೈರವೃತ್ತಿಯುಳ್ಳ.

ಉಚ್ಛೇದ (ನಾ). ಕತ್ತರಿಸುವಿಕೆ; ನಾಶ.

ಉಚ್ಛ್ರಾಯ (ನಾ). ಅಭಿವೃದ್ಧಿ; ಏಳಿಗೆ.

ಉಚ್ಛ್ವಾಸ (ನಾ). ೧. ಉಸಿರನ್ನು ಹೊರಗೆ ಬಿಡುವಿಕೆ. ೨. ಹೊರಗೆ ಬಿಟ್ಟ ಉಸಿರು; ನಿಶ್ವಾಸ. ೩. ಉಸಿರನ್ನು ಒಳಕ್ಕೆ ಎಳೆದುಕೊಳ್ಳುವಿಕೆ. ೪. ಗ್ರಂಥದ ಭಾಗ; ಅಧ್ಯಾಯ. ೫. ಉಬ್ಬುವಿಕೆ; ಏರುವಿಕೆ.

ಉಜರು (ನಾ). ಆಕ್ಷೇಪ; ವಿರೋಧ; ಅಡ್ಡಿ.

ಉಜಾಡ (ಗು). ನಿರ್ಜನವಾದ; ಹಾಳುಬಿದ್ದ.

ಉಜ್ಜವಣೆ (ನಾ). ೧. ವ್ರತವನ್ನು ಪೂರ್ಣಗೊಳಿಸುವ ಕರ್ಮ; ಉದ್ಯಾಪನೆ. ೨. ಕೊನೆ; ಸಮಾಪ್ತಿ.

ಉಜ್ಜವಿಸು (ಕ್ರಿ). ವ್ರತವನ್ನು ಮುಕ್ತಾಯಗೊಳಿಸು; ಉದ್ಯಾಪನೆಯನ್ನು ಮಾಡು.

ಉಜ್ಜಳ = ಉಜ್ಜ್ವಲ.

ಉಜ್ಜೀವನ (ನಾ). ಬದುಕಿಸುವುದು; ಚೈತನ್ಯವನ್ನು ತುಂಬುವುದು.

ಉಜ್ಜೀವಿಸು (ಕ್ರಿ). ಬದುಕುವಂತೆ ಮಾಡು; ಚೈತನ್ಯವನ್ನು ಕೊಡು.

ಉಜ್ಜು = ಉಜ್ಜ್. ~ಕ(ಗ)ಲ್ಲು = ನೆಲವನ್ನು ಉಜ್ಜಿ ನುಣುಪುಗೊಳಿಸುವ ಕಲ್ಲು; ಗಾರೆಕಲ್ಲು. ~ಕೊ(ಗೊ)ರಡು = ಹತ್ತರಿ; ತೋಪಡ.

ಉಜ್ಜುಗ (ನಾ). ೧. ಕೆಲಸ; ಉದ್ಯೋಗ. ೨. ಆರಂಭ. ೩. ಉದ್ದೇಶ; ಆಲೋಚನೆ.

ಉಜ್ಜೃಂಭಿತ (ನಾ). ೧. ಆಕಳಿಕೆ. (ಗು). ೨. ಬಾಯನ್ನು ಆಗಲಿಸಿದ; ಆಕಳಿಸಿದ. ೩. ಅಧಿಕವಾದ; ಪ್ರಬಲವಾದ.

ಉಜ್ಜ್ವಲ(ಳ) (ನಾ). ೧. ಪ್ರಕಾಶ; ಕಾಂತಿ. (ಗು). ೨. ಚೆನ್ನಾಗಿ ಉರಿಯುತ್ತಿರುವ. ೩. ಹೊಳೆಯುವ; ಪ್ರಕಾಶಮಾನವಾದ. ೪. ಶ್ಲಾಘ್ಯ; ಶ್ರೇಷ್ಠ.

ಉಟಜ (ನಾ). ೧. ಎಲೆಗಳಿಂದ ಕಟ್ಟಿದ ಮನೆ; ಪರ್ಣಶಾಲೆ. ೨. ಮನೆ.

ಉಟ್ಟರ ೧. = ಉಡಿಗಂಟು. ೨. ಉಡಿ; ಮಡಿಲು.

ಉಟ್ಟಾಡಿ (ನಾ). ವಸ್ತ್ರಾಲಂಕಾರಗಳಲ್ಲಿ ಪ್ರೀತಿಯುಳ್ಳ ವ್ಯಕ್ತಿ.

ಉಟ್ಟಿ (ನಾ). ೧. ಹಗ್ಗ ಅಥವಾ ಹುರಿಗಳಿಂದ ಮಾಡಿದ ಬಲೆ; ಕಲ್ಲಿ. ೨. ತೊಟ್ಟಿಲನ್ನು ತೂಗುಹಾಕಲು ಸಹಾಯವಾಗುವ ಅದರ ಚೌಕಟ್ಟಿನಲ್ಲಿರುವ ಬಳೆ.

ಉಟ್ಟಿಗೆ (ನಾ). ಬಟ್ಟೆ; ವಸ್ತ್ರ.

ಉಟ್ಟುರ = ಉಟ್ಟರ.

ಉತಾವುಳಿ (ನಾ). ರಭಸ; ತೀವ್ರತೆ.

ಉಡಾಫೆ(ಪೆ) (ನಾ). ೧. ಪಾಲುಮಾರಿಕೆ; ಅಸಡ್ಡೆ. ೨. ಬಡಾಯಿ; ಸುಳ್ಳು.

ಉಡಾಯಿಸು (ಕ್ರಿ). ೧. ತಿರಸ್ಕಾರದಿಂದ ತಳ್ಳಿಬಿಡು; ಕೈಬಿಡು. ೨. ಹಾರಿಸು; ಎಸೆ. ೩. ದುಂದುಮಾಡು; ಪೋಲುಮಾಡು.

ಉಡಾಳ (ನಾ). ೧. ಪೋಲಿ; ಅಪಾಪೋಲಿ. ೨. ಸೋಮಾರಿ; ಉಂಡಾಡಿ.

ಉಡಿ (ಕ್ರಿ). ೧. ಮುರಿ; ತುಂಡಾಗು; ಒಡೆ. ೨. ಮುರಿದು ಹಾಕು; ತುಂಡು ಮಾಡು. ೩. ಹೊಸೆ; ಹುರಿ ಮಾಡು. ೪. ಬೆಳಗು; ಹೊಳೆ. ೫. ಚಿಗುರು; ಮೊಳಕೆಯೊಡೆ. (ನಾ). ೬. ಸೊಂಟ; ನಡು. ೭. ಮಡಿಲು; ಸೋಗಿಲು. ೮. ಚೂರು; ತುಂಡು. ೯. ಹುಣ್ಣು. ೧೦. ಮೊಳಕೆ. ~ಅ(ಯ)ಕ್ಕಿ = ಮಡಿಲಕ್ಕಿ. ~ಗಂಟು = ಸೀರೆ ಉಡುವಾಗ

ಸೊಂಟದಲ್ಲಿ ಕಟ್ಟಿಕೊಳ್ಳುವ ಗಂಟು. ~ಜಲ್ಲಿ = ಸೊಂಟಕ್ಕೆ ಕಟ್ಟಿಕೊಳ್ಳುವ ಗೊಂಡೆ, -ಕುಚ್ಚು. ~ತುಂಬು= ಮಡಿಲು ತುಂಬು; ಸೋಗಿಲಿಕ್ಕು.

ಉಡಿಕೆ (ನಾ). ೧. ವಿಧವೆಯರು ಮಾಡಿಕೊಳ್ಳುವ ಪುನರ್ವಿವಾಹ; ಕೂಡುವಳಿ. ೨. ಈಚಲು ಗರಿಯಿಂದ ಮಾಡಿದ ಚೀಲ; ಸಂಬಳಿಗೆ. ೩. ಉಡುಗೆ. ೪. ಹೇಲು; ಮಲ.

ಉಡಿಗೆ = ಉಡುಗೆ.

ಉಡಿತ (ನಾ). ಭಂಗ; ಮುರಿಯುವಿಕೆ.

ಉಡಿಲು (ನಾ). ಮಡಿಲು; ಸೋಗಿಲು.

ಉಡು (ಕ್ರಿ). ೧. (ಪಂಚೆ, ಸೀರೆ ಮೊದಲಾದುವನ್ನು) ಧರಿಸು, -ತೊಡು. (ನಾ). ೨. ಹಲ್ಲಿಯ ಜಾತಿಗೆ ಸೇರಿದ ಒಂದು ದೊಡ್ಡ ಪ್ರಾಣಿ; ಗೋಧ. ೩. ಬಾಗೆ ಹೂವು; ಶಿರೀಷ. ೪. ನಕ್ಷತ್ರ. ~ಕುಳಿ=೧. ನಾಶ ಮಾಡುವವನು. ೨. ನೀಚ; ಹೀನ. ~ಕೊ(ಗೊ)ಱೆ(ರೆ) = ವಿಶೇಷ ಸಂದರ್ಭಗಳಲ್ಲಿ ಕಾಣಿಕೆಯಾಗಿ ಕೊಡುವ ಬಟ್ಟೆಬರೆ ಮುಂತಾದುವು; ಬಳುವಳಿ.

ಉಡುಕ (ನಾ). ಕುಂದುವಿಕೆ; ಕ್ಷಯುವಾಗುವಿಕೆ.

ಉಡುಕು (ಕ್ರಿ). ೧. ಕಚ್ಚು. (ನಾ). ೨. ಒಂದು ಬಗೆಯ ಚರ್ಮವಾದ್ಯ.

ಉಡುಕೆ = ಉಡಿಕೆ.

ಉಡುಗು (ಕ್ರಿ). ೧. ಸಂಕೋಚ ಹೊಂದು; ಕುಗ್ಗು. ೨. ಒಳಹೊಗು; ಒಳಸೇರು. ೩. ಸ್ತಬ್ಧವಾಗು; ನಿಂತುಹೋಗು. ೪. ಬಿಡು; ತ್ಯಜಿಸು. ೫. ಹಿಂದಕ್ಕೆ ತೆಗೆದುಕೊ; ಉಪಸಂಹಾರ ಮಾಡು. ೬. ಕುಗ್ಗಿಸು; ತಗ್ಗಿಸು. ೭. (ಕಸವನ್ನು) ಗುಡಿಸು; ಬಳಿ. ೮. (ಕಾಳುಕಡ್ಡಿಗಳನ್ನು) ಒಂದೆಡೆ ಕೂಡಿಸು; ರಾಶಿ ಹಾಕು. (ನಾ). ೯. (ಕಸ) ಗುಡಿಸುವಿಕೆ.

ಉಡುಗುಣಿ (ನಾ). ಹೆಣ್ಣುಮಕ್ಕಳ ಒಂದು ಆಭರಣ; ಒಡ್ಯಾಣ.

ಉಡುಗೆ(ಪು) (ನಾ). ಬಟ್ಟೆ; ವಸ್ತ್ರ.

ಉಡುಗೋಲು (ನಾ). ಉಡುಗುವ ಕೋಲು; ಕಸಪೊರಕೆ.

ಉಡುತೆ (ನಾ). ಅಳಿಲು; ಇಣಚಿ.

ಉಡುಪ (ನಾ). ೧. ಅಂಗಹೀನ; ಕೈಕಾಲುಗಳಿಲ್ಲದವನು. ೨. ನಕ್ಷತ್ರಗಳ ಒಡೆಯ; ಚಂದ್ರ. ೩. ತೆಪ್ಪ; ದೋಣಿ.

ಉಡುವೆ (ನಾ). ೧. ಪೊದೆಗಳಿಂದ ತುಂಬಿದ ಪ್ರದೇಶ. ೨. ಅಳಿಲಿನ ಜಾತಿಗೆ ಸೇರಿದ ಒಂದು ಪ್ರಾಣಿ.

ಉಡುಸಾರಣೆ (ನಾ). (ಸಗಣಿಯಿಂದ) ನೆಲವನ್ನು ಸಾರಿಸುವುದು.

ಉಡುಹು (ಕ್ರಿ). (ಪದ) ವಿಭಾಗ ಮಾಡು.

ಉಡೆ (ನಾ). ೧. ಸೊಂಟ; ಟೊಂಕ. ೨. ಮಡಿಲು; ಸೋಗಿಲು. ೩. = ಉಡುಗೆ. ~ದಾರ = ೧. ಸೊಂಟಕ್ಕೆ ಕಟ್ಟಿಕೊಳ್ಳುವ ದಾರ ಅಥವಾ ಆಭರಣ. ೨. ಒಡ್ಯಾಣ; ಡಾಬು. ~ಮು(ವ)ಣಿ= ನಡುವಿಗೆ ಕಟ್ಟುವ ಗೆಜ್ಜೆಯ ದಾರ.

ಉಡ್ಡಾಡು (ಕ್ರಿ). ಅತ್ತ ಇತ್ತ ಚಲಿಸು; ಹೊರಳಾಡು.

ಉಡ್ಡಾಣ (ನಾ). ಆಕಾಶದಲ್ಲಿ ಸಂಚರಿಸುವಿಕೆ.

ಉಡ್ಡಿ (ನಾ). ರಾಶಿ; ಗುಡ್ಡೆ.

ಉಡ್ಡೀನ (ನಾ). ೧. ಪಕ್ಷಿಗಳ ಹಾರಾಟದಲ್ಲಿ ಒಂದು ಬಗೆ. (ಗು). ೨. ಆಕಾಶದಲ್ಲಿ ಸಂಚರಿಸುವ.

ಉಣ್(ಣ್ಣು) (ನಾ). ೧. (ಆಹಾರ ಪದಾರ್ಥ ಮೊದಲಾದುವನ್ನು) ತಿನ್ನು; ಊಟ ಮಾಡು. ೨. ಕುಡಿ; ಹೀರು. ೩. ಅನುಭವಿಸು.

ಉಣುಗು (ನಾ). ದನಕರುಗಳ ಮತ್ತು ನಾಯಿಗಳ ಚರ್ಮಕ್ಕೆ ಅಂಟಿಕೊಳ್ಳುವ ಒಂದು ಬಗೆಯ ಹುಳು; ಉಣ್ಣೆ.

ಉಣ್ಣೆ (ನಾ). ೧. ಕುರಿಗಳ ಮೈಮೇಲಿನ ಕೂದಲು; ತುಪ್ಪಟ. ೨. = ಉಣುಗು.

ಉಣ್ಮು (ಕ್ರಿ). ೧. ಮೇಲೇಳು; ಹೊರಸೂಸು. ೨. ಹಿಗ್ಗು; ಉಬ್ಬು.

ಉಣ್ಮೆ (ನಾ). ಇರುವಿಕೆ; ಅಸ್ತಿತ್ವ.

ಉತಾರು (ನಾ). ೧. ಇಳಿಜಾರು. ೨. ಕೆಳಗಿಳಿಯುವುದು. ೩. ರೋಗಕ್ಕೆ ಪ್ರತಿ ಔಷಧಿ. ೪. ನಕಲು; ಪ್ರತಿ.

ಉತಾವಳಿ (ನಾ). ೧. ದುಡುಕು; ಗಡಿಬಿಡಿ. (ಗು). ೨. ದುಡುಕಿನ; ಗಡಿಬಿಡಿಯ.

ಉತ್ಕ (ಗು). ಕುತೂಹಲದಿಂದ ಕೂಡಿದ; ಉತ್ಸುಕವಾದ.

ಉತ್ಕಂಠ (ನಾ). ೧. ಎತ್ತರವಾದ ಧ್ವನಿ; ಗಟ್ಟಿಯಾದ ಧ್ವನಿ. (ಗು). ೨. ಮೇಲಕ್ಕೆತ್ತಿದ ಕತ್ತುಳ್ಳ. ೩. ವಿಶೇಷವಾದ ಆತುರದಿಂದ ಕೂಡಿದ.

ಉತ್ಕಂಠೆ (ನಾ). ೧. ಅತಿಶಯವಾದ ಉತ್ಸುಕತೆ. ೨. ವಿಯೋಗದಿಂದ ಉಂಟಾಗುವ ದುಃಖ; ಉದ್ವಿಗ್ನತೆ. ೩. ಉತ್ಸುಕತೆಯುಳ್ಳವಳು.

ಉತ್ಕಂಪ (ನಾ). ನಡುಕ; ಅಲುಗಾಟ.

ಉತ್ಕಟ (ನಾ). ೧. ಆಧಿಕ್ಯ; ಪ್ರಾಬಲ್ಯ. ೨. ಉಗ್ರತೆ. (ಗು). ೩. ಹೆಚ್ಚಾದ; ಪ್ರಬಲವಾದ. ೪. ಅತ್ಯುಗ್ರವಾದ. ೫. ಸೊಕ್ಕಿದ; ಮದಿಸಿದ.

ಉತ್ಕರ (ನಾ). ೧. ರಾಶಿ; ಸಮೂಹ. ೨. ಸೀಳುವುದು.

ಉತ್ಕರ್ಷ (ನಾ). ೧. ಹೆಚ್ಚಳ; ಮೇಲ್ಮೆ. ೨. ಏಳಿಗೆ; ಅಭಿವೃದ್ಧಿ.

ಉತ್ಕಲಿ(ಳಿ)ಕೆ (ನಾ). ೧. ಬಯಕೆ; ಉತ್ಕಟವಾದ ಇಚ್ಛೆ. ೨. ವಿರಹಕಾತರತೆ. ೩. ಮೊಗ್ಗು.

ಉತ್ಕೀರ್ಣ (ಗು). ೧. ರಾಶಿ ಹಾಕಿದ; ಗುಡ್ಡೆ ಹಾಕಿದ. ೨. ಮೇಲಕ್ಕೆ ಚೆಲ್ಲಿದ; ಹರಡಿದ. ೩. ಕಂಡರಿಸಲ್ಪಟ್ಟ; ಕೊರೆಯಲ್ಪಟ್ಟ.

ಉತ್ಕೃಷ್ಟ (ನಾ). ೧. ಬಾಣವನ್ನು ಎಳೆದು ಬಿಡುವುದು. (ಗು). ೨. ಮೇಲಕ್ಕೆ ಸೆಳೆಯಲ್ಪಟ್ಟ; ಹೊರಕ್ಕೆ ತೆಗೆಯಲ್ಪಟ್ಟ. ೩. ಅತ್ಯುತ್ತಮವಾದ; ಶ್ರೇಷ್ಠವಾದ.

ಉತ್ಕೋಚ (ನಾ). ೧. ಮೇಲಕ್ಕೆ ಬಾಗುವುದು; ಮೇಲೆ ವ್ಯಾಪಿಸುವುದು. ೨. ಲಂಚ. ೩. ಮೋಸ.

ಉತ್ಕ್ರಮಣ (ನಾ). ಸಾಯುವ ಹೊತ್ತು; ಅಂತ್ಯಕಾಲ.

ಉತ್ಕ್ರಾಂತಿ (ನಾ). ೧. ಬಿಟ್ಟುಹೋಗುವಿಕೆ; ಹೊರಟುಹೋಗುವಿಕೆ. ೨. ಕ್ರಮವಾಗಿ ಮಾರ್ಪಾಟಾಗುವುದು; ವಿಕಾಸ.

ಉತ್ಕ್ರೋಶ (ನಾ). ೧. ಗಟ್ಟಿಯಾದ ಕೂಗು; ಬೊಬ್ಬೆ. ೨. ಕುರರವೆಂಬ ಹಕ್ಕಿ.

ಉತ್ಖಾತ (ಗು). ೧. ಅಗೆದ; ಬೇರುಸಹಿತ ಕಿತ್ತುಹಾಕಿದ. ೨. ಹೊರಕ್ಕೆ ತೆಗೆದ; ಸೆಳೆದ.

ಉತ್ತಂಡ (ನಾ). ಕಂಠಾಭರಣ; ಸರಿಗೆ.

ಉತ್ತಂಸ (ನಾ). ೧. ತಲೆಯಲ್ಲಿ ಧರಿಸುವ ಆಭರಣ; ಶಿರೋಭೂಷಣ. ೨. ಕಿವಿಯ ಆಭರಣ; ಓಲೆ; ಕರ್ಣಪೂರ. ೩. ಶ್ರೇಷ್ಠನಾದವನು; ಉತ್ಕೃಷ್ಟನಾದವನು.

ಉತ್ತಪ್ಪ (ನಾ). ದಪ್ಪದೋಸೆ; ಉಬ್ಬುದೋಸೆ; ಊತಪ್ಪ.

ಉತ್ತಮ (ನಾ). ೧. ಶ್ರೇಷ್ಠನಾದವನು; ಮೇಲಾದವನು. (ಗು). ೨. ಶ್ರೇಷ್ಠವಾದ; ಮೇಲಾದ. ~ಪುರುಷ = ೧. ಶ್ರೇಷ್ಠನಾದ ವ್ಯಕ್ತಿ. ೨. (ವ್ಯಾಕ) ಪುರುಷವಾಚಕ ಸರ್ವನಾಮಗಳಲ್ಲಿ ಒಂದು.

ಉತ್ತರ (ನಾ). ೧. ಮುಂದಿನದು; ಮುಂಭಾಗ. ೨. ವಾಮಭಾಗ; ಎಡಭಾಗ. ೩. ಪ್ರಶ್ನೆಗೆ ಪೂರಕವಾಗಿ ಹೇಳುವ ಮಾತು; ಮರುನುಡಿ. ೪. ಉತ್ತರದಿಕ್ಕು; ಬಡಗು. (ಗು). ೫. ಮೇಲಿನ; ಮೇಲುಭಾಗದ. ೬. ಉತ್ತಮವಾದ; ಮೇಲ್ತರಗತಿಯ. ೭. ಅಧಿಕವಾದ;

ಹೆಚ್ಚಾದ. ೮. ತರುವಾಯದ; ಅನಂತರದ. ~ಅಧಿಕಾರಿ = ಮುಂದಿನ ಹಕ್ಕುದಾರ; ವಾರಸುದಾರ. ~ಅಯಣ = ಮಕರ ಸಂಕ್ರಾಂತಿಯಿಂದ ಕರ್ಕಾಟಕ ಸಂಕ್ರಾಂತಿ ವರೆಗಿನ ಆರುತಿಂಗಳ ಕಾಲ. ~ಇಸು =೧. ಪ್ರತಿಯಾಗಿ ಹೇಳು; ಮರುನುಡಿ. ೨. ದಾಟು; ಮೀರು. ೩. ಫಲಿಸು; ಕೈಗೂಡು. ೪. ಉದ್ಧರಿಸು. ೫. ನಡಸು; ನೆರವೇರಿಸು. ೬. ಸಾಲತೀರಿಸು. ೭. ತಂಗು; ನಿಲ್ಲು. ೮. ಎತ್ತಿಹಿಡಿ. ೯. ಇಳಿ. ೧೦. ಕತ್ತರಿಸು. ~ಕ್ರಿಯೆ = ೧. ಸತ್ತವರಿಗೆ ಮಾಡುವ ಸಂಸ್ಕಾರ; ಅಪರಕರ್ಮ. ೨. ಮುಂದಿನ ಕೆಲಸ.

**ಉತ್ತರಳ** (ಗು). ೧. ತುಂಬ ಚಂಚಲವಾದ; ಬಹಳವಾಗಿ ಕಂಪಿಸುವ. ೨. ಬಹಳ ಹೊಳೆಯುವ.

**ಉತ್ತರಾಸ** (ನಾ). ೧. ಬಾಗಿಲ ಚೌಕಟ್ಟಿನ ಮೇಲುಭಾಗ; ಗಂಧವಟ್ಟಿಗೆ. ೨. ಬಾಗಿಲ ಚೌಕಟ್ಟಿನ ಕೆಳಪಟ್ಟಿ; ಹೊಸ್ತಿಲು.

**ಉತ್ತರಿಗೆ** = ಉತ್ತರೀಯ.

**ಉತ್ತರೀಯ** (ನಾ). ಮೇಲುಹೊದಿಕೆ; ಹೊದೆದುಕೊಳ್ಳುವ ಬಟ್ಟೆ.

**ಉತ್ತರೆ**(ನಾ).೧.ಇಪ್ಪತ್ತೇಳುನಕ್ಷತ್ರರಾಶಿಗಳಲ್ಲಿ ಹನ್ನೆರಡನೆಯದು. ೨. ವಿರಾಟನ ಮಗಳು.

**ಉತ್ತ್ರವಳ** (ನಾ). ೧. ಆತುರ; ತವಕ. ೨. ಕಾತರ ದಿಂದಿರುವವನು; ಆತುರಗಾರ.

**ಉತ್ತಳಿಸು** (ಕ್ರಿ). ಚಿಮುಕಿಸು; ಸಿಂಪಡಿಸು.

**ಉತ್ತಾನ** (ನಾ). ೧. ಅತಿ ಸ್ಪಷ್ಟವಾದುದು. (ಗು). ೨. ಮೇಲಕ್ಕೆ ಎದ್ದ; ಉಚ್ಚವಾದ. ೩. ಮೇಲುಮುಖವಾದ. ೪. ಅಂಗತ್ತನಾದ.

**ಉತ್ತಾರ** (ನಾ). ೧. ಪರಿಹಾರ. ೨. ವಿನಿಮಯ; ಪ್ರತಿವಸ್ತು. ೩. ಸಲುವಳಿ; ಸಂದಾಯ. ೪. ಎತ್ತರವಾದ ಧ್ವನಿ. ೫. ಸೋಡಿ; ಹಿಯಾಯಿತಿ. ೬. ಉಂಬಳಿ; ದಾನ; ದತ್ತಿ.

**ಉತ್ತಾರಕ** (ನಾ). ೧. ರಕ್ಷಕ. ೨. ಕಷ್ಟ ದಿಂದ ಬಿಡುಗಡೆ ಹೊಂದಿಸುವ ಉಪಾಯ. (ಗು). ೩. ದಡವನ್ನು ಮುಟ್ಟಿಸುವ.

**ಉತ್ತಾರಣ** (ನಾ). ೧. ದಾಟುವುದು; ದಂಡೆ ಮುಟ್ಟುವುದು. ೨. ದಡಕ್ಕೆ ಮುಟ್ಟಿಸು ವುದು; ದಾಟಿಸುವುದು. (ಗು). ೩. ದಾಟಿ ಸುವ; ಪಾರುಮಾಡುವ.

**ಉತ್ತಾಲ(ಳ)** (ನಾ). ೧. ಚುರುಕಾದ ನಡಿಗೆ ಯುಳ್ಳವನು; ವೇಗಶಾಲಿ. (ಗು). ೨. ಎತ್ತರವಾದ; ಉನ್ನತವಾದ. ೩. ಗೆಲ್ಲಲು ಕಷ್ಟವಾದ; ದುರ್ಜಯವಾದ.

**ಉತ್ತೀರ್ಣ** (ನಾ). ೧. ದಾಟಿದವನು; ತೇರ್ಗಡೆ ಹೊಂದಿದವನು. ೨. ಹಂಗಿನಿಂದ ಬಿಡುಗಡೆ ಹೊಂದಿದವನು.

**ಉತ್ತುಂಗ** (ಗು). ೧. ಉನ್ನತವಾದ; ಎತ್ತರ ವಾದ. ೨. ಶ್ರೇಷ್ಠವಾದ; ಉತ್ತಮವಾದ. ೩. ಅತಿ ಉದ್ದವಾದ.

**ಉತ್ತುತ್ತೆ** (ನಾ). ಖರ್ಜೂರದ ಮರ ಮತ್ತು ಅದರ ಹಣ್ಣು.

**ಉತ್ತೇಜನ** (ನಾ). ಹುರಿದುಂಬಿಸುವುದು; ಪ್ರೋತ್ಸಾಹಿಸುವುದು.

**ಉತ್ಥಾನ** (ನಾ). ೧. ಮೇಲಕ್ಕೆ ಏಳುವುದು; ಎದ್ದು ನಿಲ್ಲುವುದು. ೨. ಉದಯ; ಹುಟ್ಟಿ ಮೇಲಕ್ಕೆ ಬರುವುದು. ೩. (ನಿದ್ದೆಯಿಂದ) ಎಚ್ಚರಾಗುವುದು.

**ಉತ್ಪತ್ತಿ** (ನಾ). ೧. ಹುಟ್ಟುವಿಕೆ; ಜನನ. ೨. ಮೂಲ. ೩. ಲಾಭ; ಹುಟ್ಟುವಳಿ.

**ಉತ್ಪನ್ನ** (ನಾ). ೧. ಗಳಿಕೆ; ಸಂಪಾದನೆ. (ಗು). ೨. ಹುಟ್ಟಿದ; ಉಂಟಾದ.

**ಉತ್ಪಲ(ಳ)** (ನಾ). ಕನ್ನೈದಿಲೆ; ಇಂದೀವರ.

**ಉತ್ಪಲಿನಿ** (ನಾ). ೧. ಉತ್ಪಲಗಳಿಂದ ಕೂಡಿ ದುದು; ಸರೋವರ. ೨. ನೈದಿಲೆಯ ಬಳ್ಳಿ.

**ಉತ್ಪಾಟನ** (ನಾ). ಕೀಳುವುದು; ನಾಶ ಗೊಳಿಸುವುದು.

**ಉತ್ಪಾತ** (ನಾ). ೧. ಮೇಲಕ್ಕೆ ಹಾರುವುದು ; ಮೇಲಕ್ಕೆ ನೆಗೆಯುವುದು. ೨. (ಭೂಕಂಪ, ಉಲ್ಕಾಪಾತ ಮುಂತಾದ) ಆಕಸ್ಮಿಕವಾದ ಘಟನೆ. ೩. ಅಪಶಕುನ.

**ಉತ್ಪಾದನೆ** (ನಾ). ಸೃಷ್ಟಿಸುವಿಕೆ ; ತಯಾರಿಸುವಿಕೆ.

**ಉತ್ಪ್ರೇಕ್ಷೆ** (ನಾ). ೧. ಅಧಿಕವಾಗಿ ವರ್ಣಿಸುವುದು ; ಅತಿಶಯವಾದ ಮಾತು. ೨. ಒಂದು ಕಾವ್ಯಾಲಂಕಾರ.

**ಉತ್ಫುಲ್ಲ** (ಗು). ವಿಕಾಸ ಹೊಂದಿದ ; ಚೆನ್ನಾಗಿ ಅರಳಿದ.

**ಉತ್ಸಂಗ** (ನಾ). ೧. ಸಮ್ಮೇಳನ ; ಸಮಾಗಮ. ೨. ತೊಡೆ. ೩. ಪಕ್ಕ ; ಮಗ್ಗುಲು. ೪. ನಡು ; ಸೊಂಟ.

**ಉತ್ಸರ್ಗ** (ನಾ). ೧. ವಿಸರ್ಜಿಸುವುದು ; ಬಿಡುವುದು. ೨. ತ್ಯಾಗ ; ದಾನ. ೩. ಸಾಮಾನ್ಯವಾದ ನಿಯಮ. ೪. ಮಲ ; ವಿಷ್ಠೆ.

**ಉತ್ಸವ** (ನಾ). ೧. ಹಬ್ಬ ; ಸಮಾರಂಭ. ೨. ಸಂಭ್ರಮ ; ಸಡಗರ. ೩. ಮೆರವಣಿಗೆ.

**ಉತ್ಸಾಹ** (ನಾ). ೧. ಶಕ್ತಿ ; ಬಲ. ೨. ಹುರುಪು ; ಆಸಕ್ತಿ. ೩. ಕಷ್ಟತರವಾದ ಪ್ರಯತ್ನ. ೪. ಪರಾಕ್ರಮ ; ಶೌರ್ಯ. ೫. ಸುಖ.

**ಉತ್ಸುಕ** (ನಾ). ೧. ವೇಗಶಾಲಿ ; ಚಟುವಟಿಕೆಯುಳ್ಳವನು. (ಗು). ೨. ಕುತೂಹಲದಿಂದ ಕೂಡಿದ. ೩. ವಿರಹದಿಂದ ಹಂಬಲಿಸುವ. ೪. ಶಾಂತಿಯಿಲ್ಲದ.

**ಉತ್ಸೇಧ** (ನಾ). ೧. ಎತ್ತರ ; ಔನ್ನತ್ಯ. ೨. ಉದ್ದ ; ನೀಳ.

**ಉದಂಚಿತ** (ಗು). ೧. ಮೇಲಕ್ಕೆ ಎತ್ತಿರುವ ; ಎದ್ದು ಕಾಣುವ. ೨. ಉಂಟಾದ ; ಒಡಗೂಡಿದ.

**ಉದಂತ** (ನಾ). ಸಮಾಚಾರ ; ಸುದ್ದಿ.

**ಉದಕ** (ನಾ). ೧. ನೀರು ; ಜಲ. ೨. ಸೊಪ್ಪಿನಿಂದ ಮಾಡಿದ ತಿಳಿಸಾರು.

**ಉದಗ್ರ** (ನಾ). ೧. ವೀರ ; ಶೂರ. (ಗು). ೨. ಮೇಲೆ ಮುಖ ಮಾಡಿದ ; ಎತ್ತರವಾದ. ೩. ಹೆಚ್ಚಾದ ; ಶ್ರೇಷ್ಠವಾದ.

**ಉದಧಿ** (ನಾ). ಕಡಲು ; ಸಮುದ್ರ.

**ಉದಯ** (ನಾ). ೧. ಸೃಷ್ಟಿ ; ಹುಟ್ಟು. ೨. ಪೂರ್ವದಿಕ್ಕಿನ ಪರ್ವತ. ೩. ಅಭಿವೃದ್ಧಿ ; ಶ್ರೇಯಸ್ಸು. ೪. ಕಾಂತಿ ; ಹೊಳಪು. ~ರಾಗ=೧. ಬೆಳಗಿನ ಕೆಂಪು ; ಅರುಣಕಾಂತಿ. ೨. ಬೆಳಗಿನ ಜಾವದಲ್ಲಿ ಹಾಡುವ ಒಂದು ರಾಗ.

**ಉದರ** (ನಾ). ೧. ಹೊಟ್ಟೆ ; ಜಠರ. ೨. ಆಹಾರ. ~(ಂ)ಭರಣ = ಹೊಟ್ಟೆ ಹೊರೆಯುವುದು ; ಹೊಟ್ಟೆ ತುಂಬಿಕೊಳ್ಳುವುದು.

**ಉದವಾಸ** (ನಾ). ೧. ನೀರಿನಲ್ಲಿ ವಾಸಿಸುವುದು. ೨. ನದೀತೀರದ ಮನೆ. ೩. ಕಂದಕ ; ಅಗಳು.

**ಉದಾತ್ತ** (ನಾ). ೧. (ವೇದಗಳನ್ನು ಹೇಳುವಾಗ) ಮೇಲುಧ್ವನಿಯಲ್ಲಿ ಉಚ್ಚರಿಸುವ ಸ್ವರ. (ಗು). ೨. ಶ್ರೇಷ್ಠವಾದ ; ಉನ್ನತವಾದ. ೩. ಔದಾರ್ಯವುಳ್ಳ ; ವಿಶಾಲ ಹೃದಯದ.

**ಉದಾನ** (ನಾ). ೧. ಉಸಿರಾಡುವಿಕೆ. ೨. ಐದು ಪ್ರಾಣವಾಯುಗಳಲ್ಲಿ ಒಂದು ; ಕಂಠಪ್ರದೇಶದಲ್ಲಿರುವ ವಾಯು.

**ಉದಾರ** (ಗು). ೧. ಧಾರಾಳ ಸ್ವಭಾವದ ; ತ್ಯಾಗಶೀಲನಾದ. ೨. ಘನವಾದ ; ಶ್ರೇಷ್ಠವಾದ. ೩. ವಿಸ್ತಾರವಾದ ; ದೊಡ್ಡದಾದ. ೪. ಪ್ರಾಮಾಣಿಕವಾದ ; ನ್ಯಾಯಸಮ್ಮತವಾದ.

**ಉದಾರಿ** (ನಾ). ದಾನಶೀಲನಾದವನು ; ಧಾರಾಳಿ.

**ಉದಾಸ** = ಉದಾಸೀನ.

**ಉದಾಸೀನ** (ನಾ). ೧. ಯಾವ ವಿವಾದಕ್ಕೂ ಸೇರದವನು ; ಬೇಸತ್ತವನು. ೨. ತಿರಸ್ಕಾರ ; ಕಡೆಗಣಿಸುವಿಕೆ. ೩. ಅಶ್ರದ್ಧೆ ; ಅಲಕ್ಷ್ಯ.

(ಗು). ೪. ತಟಸ್ಥವಾದ ; ಯಾವ ಪಕ್ಷಕ್ಕೂ ಸೇರದ.

**ಉದಾಹರಣೆ** (ನಾ). ೧. ಹೇಳಿಕೆ. ೨. ದೃಷ್ಟಾಂತ. ೩. ಆದರ್ಶ ; ಮಾದರಿ.

**ಉದಾಹರಿಸು** (ಕ್ರಿ). ೧. ಹೇಳು ; ನಿರೂಪಿಸು. ೨. ದೃಷ್ಟಾಂತವನ್ನು ಕೊಡು ; ಎತ್ತಿಹೇಳು.

**ಉದಿತ** (ಗು). ೧. ಹುಟ್ಟಿದ ; ಉತ್ಪನ್ನವಾದ. ೨. ಏಳಿಗೆಯನ್ನು ಹೊಂದಿದ ; ಅಭಿವೃದ್ಧಿ ಪಡೆದ. ೩. ಹೇಳಿದ ; ಉಕ್ತವಾದ.

**ಉದಿರ್(ರು)** (ಕ್ರಿ). (ಮೇಲಿಂದ) ಕೆಳಗೆ ಬೀಳು ; ಕಳಚಿ ಬೀಳು.

**ಉದೀರ್ಣ** (ನಾ). ೧. ಹಿರಿಯ ; ದೊಡ್ಡವನು. (ಗು). ೨. ದೊಡ್ಡದಾದ ; ಹೆಚ್ಚಾದ.

**ಉದುಂಬರ** (ನಾ). ೧. ಅತ್ತಿಯ ಮರ. ೨. ತಾಮ್ರ.

**ಉದುರ್(ರು)** ೧. = ಉದಿರ್. (ನಾ). ೨. ಬಿಡಿಬಿಡಿಯಾಗಿರುವುದು.

**ಉದುರೆ** (ನಾ). ಉದುರಿಸುವ ಪುಡಿ ; ಸೂಸಲು.

**ಉದ್ಗತ** (ಗು). ೧. ಹೊರಹೊಮ್ಮಿದ ; ಮೇಲಕ್ಕೆ ಬಂದ. ೨. ವಾಂತಿಯಾದ ; ಕಕ್ಕಿದ.

**ಉದ್ಗಮ** (ನಾ). ೧. ಮೇಲೇರುವುದು ; ಏರಿಕೆ. ೨. ಹುಟ್ಟಿ ಬರುವುದು ; ಗೋಚರಿಸುವುದು. ೩. ಮೂಲಸ್ಥಾನ ; ಹುಟ್ಟು. ೪. ಹೂವು ; ಪುಷ್ಪ.

**ಉದ್ಗಾರ** (ನಾ). ೧. ವಾಂತಿ ; ವಮನ. ೨. ತೇಗು. ೩. (ಭಾವಾವೇಶದಿಂದ ಕೂಡಿದ) ಮಾತು.

**ಉದ್ಗ್ರಂಥ** (ನಾ). ಪ್ರೌಢವಾದ ಗ್ರಂಥ.

**ಉದ್ಘ** (ನಾ). ೧. ಸುಖ ; ಉತ್ತಮತೆ. ೨. ಬಲ. ೩. ಒಳ್ಳೆಯವನು. (ಗು). ೪. ಶ್ರೇಷ್ಠವಾದ ; ಪ್ರಶಸ್ತವಾದ.

**ಉದ್ಘಾಟಕ** (ನಾ). ೧. ತೆರೆಯುವವನು ; ಆರಂಭಿಸುವವನು. ೨. ಬೀಗದ ಕೈ ; ಕೀಲಿಕೈ. ೩. (ಬಾವಿಯಿಂದ) ನೀರನ್ನು ಎತ್ತುವ ರಾಟೆ.

**ಉದ್ಘಾಟನ(ನೆ)** (ನಾ). ೧. ತೆರೆಯುವಿಕೆ ; ಆರಂಭೋತ್ಸವ. ೨. ಎತ್ತುವುದು ; ಮೇಲೇರಿಸುವುದು.

**ಉದ್ಘಾಟಿಸು** (ಕ್ರಿ). ೧. ಆರಂಭಿಸು ; ತೆರೆ. ೨. ದೋಷವನ್ನು ಎತ್ತಿಹೇಳು ; ಆಕ್ಷೇಪಿಸು.

**ಉದ್ಘೋಷ** (ನಾ). ಗಟ್ಟಿಯಾದ ಶಬ್ದ ; ಬಲವಾದ ಧ್ವನಿ.

**ಉದ್ದ** (ನಾ). ೧. ಎತ್ತರ. ೨. ಲಂಬ ; ನೀಳ. ೩. ಆಳ. ~ಉರುಟು = ೧. ಒರಟುತನ ; ಅಸಭ್ಯತನ. ೨. ಬಹಳ ಒರಟಾದ. ೩. ಬಲು ಗಟ್ಟಿಯಾದ.

**ಉದ್ದಂಡ** (ನಾ). ೧. ದರ್ಪ ; ಗರ್ವ. ೨. ಅಹಂಕಾರದ ಮಾತು. (ಗು). ೩. ಮೇಲಕ್ಕೆ ಎತ್ತಿದ ನಾಳವುಳ್ಳ. ೪. ನೀಳವಾದ ; ಎತ್ತರವಾದ. ೫. ಪ್ರಬಲವಾದ ; ಪ್ರಚಂಡವಾದ. (ಅ). ೬. ಬಹುಕಾಲದವರೆಗೆ.

**ಉದ್ದರಿ** (ನಾ). ಸಾಲ ; ಕಡ.

**ಉದ್ದಳನ** (ನಾ). ೧. ಸೀಳುವಿಕೆ ; ಭೇದಿಸುವಿಕೆ. ೨. ಸೀಳುವವನು ; ಭೇದಿಸುವವನು.

**ಉದ್ದಾನ** (ನಾ). ೧. ಬಂಧಿಸುವುದು ; ಅಂಕೆಯಲ್ಲಿಡುವುದು. (ಗು). ೨. ಭಯಂಕರವಾದ ; ಕಟ್ಟುಮೀರಿದ.

**ಉದ್ದಾಮ** (ಗು). ಉತ್ತಮವಾದ ; ಶ್ರೇಷ್ಠವಾದ.

**ಉದ್ದಿಮೆ** (ನಾ). ೧. ಉದ್ಯೋಗ ; ಕೆಲಸ. ೨. ಕೈಗಾರಿಕೆ.

**ಉದ್ದಿಷ್ಟ** (ನಾ). ೧. ಉದ್ದೇಶ ; ಗುರಿ. (ಗು). ೨. ಗುರಿಯಿಟ್ಟ ; ಉದ್ದೇಶಿಸಿದ.

**ಉದ್ದೀಪನ** (ನಾ). ೧. ಪ್ರಕಾಶನ ; ಉತ್ತೇಜನ. (ಗು). ೨. ಹೊತ್ತಿಸುವ ; ಉರಿಸುವ.

**ಉದ್ದು** ೧. = ಉರ್ದು. ೨. = ಉಬ್ಬು.

ಉದ್ದೇಶ (ನಾ). ೧. ಗುರಿ; ಧ್ಯೇಯ. ೨. ಅಭಿಪ್ರಾಯ; ಆಲೋಚನೆ. ೩. ಎತ್ತರವಾದ ಸ್ಥಳ.

ಉದ್ಧಟ (ನಾ). ಒರಟ; ಅವಿನೀತ.

ಉದ್ಧತ (ಗು). ೧. ಮೇಲಕ್ಕೆತ್ತಿದ; ಎತ್ತರಿಸಿದ. ೨. ಹೊಡೆದ; ಮೀಟಿದ. ೩. ಸೊಕ್ಕಿದ; ಕೊಬ್ಬಿದ. ೪. ಉದ್ರೇಕಗೊಂಡ. ೫. ಅವಿನೀತ.

ಉದ್ಧರಣ (ನಾ). ೧. ಮೇಲಕ್ಕೆ ಎತ್ತುವಿಕೆ; ಉದ್ಧಾರ. ೨. ಇತರರು ಹೇಳಿದ ಮಾತನ್ನು ಎತ್ತಿ ಹೇಳುವುದು.

ಉದ್ಧರಣೆ (ನಾ). ೧. ಲೋಹದ ಸಣ್ಣ ಸೌಟು. ೨. ಉದಾಹರಣೆ.

ಉದ್ಧರಿಸು (ಕ್ರಿ). ೧. ಮೇಲಕ್ಕೆ ಎತ್ತು; ಸಂರಕ್ಷಿಸು; ಕಾಪಾಡು. ೨. ಉದಾಹರಣೆ ಕೊಡು; ಬೇರೆಯವರ ಮಾತುಗಳನ್ನು ಎತ್ತಿ ಹೇಳು.

ಉದ್ಧಾರ (ನಾ). ೧. ಮೇಲಕ್ಕೆ ಎತ್ತುವುದು; ಕಾಪಾಡುವುದು. ೨. ಬಿಡುಗಡೆ; ಮೋಕ್ಷ. ೩. ಸಾಲ; ಋಣ.

ಉದ್ಧುರ (ಗು). ೧. ಸ್ವತಂತ್ರವಾದ; ಸ್ವೇಚ್ಛೆಯಾದ. ೨. ಸಮರ್ಥವಾದ; ಶಕ್ತವಾದ. ೩. ಶ್ರೇಷ್ಠವಾದ; ಮೇಲಾದ. ೪. ಉತ್ಸಾಹಗೊಂಡ; ಹರ್ಷದಿಂದ ಕೂಡಿದ. ೫. ಕಳಚಿಬಿದ್ದ.

ಉದ್ಧುಲಿ(ಳಿ)ಸು (ಕ್ರಿ). ಪುಡಿಯನ್ನು ಉದುರಿಸು, – ಸವರು.

ಉದ್ಧೃತ (ಗು). ೧. ಮೇಲಕ್ಕೆ ಎತ್ತಿದ; ಹೊರಕ್ಕೆ ಎಳೆದ. ೨. ಉದಾಹರಿಸಿದ; ಉದ್ಧರಿಸಿದ.

ಉದ್ಧೃತಿ (ನಾ). ಉದಾಹರಣೆ.

ಉದ್ಬೋಧ (ನಾ). ೧. ಎಚ್ಚರ. ೨. ಜ್ಞಾನ; ಉತ್ತಮವಾದ ಅರಿವು.

ಉದ್ಭಟ(ಗು). ಉತ್ತಮವಾದ; ಅತಿಶಯವಾದ.

ಉದ್ಭವ (ನಾ). ೧. ತಲೆದೋರುವುದು; ಉತ್ಪತ್ತಿ. ೨. ಏಳಿಗೆ; ಅಭಿವೃದ್ಧಿ. ~ಮೂರ್ತಿ = ತಾನೇತಾನಾಗಿ ಹುಟ್ಟಿದ ಮೂರ್ತಿ; ಒಡಮೂಡಿದ ಮೂರ್ತಿ.

ಉದ್ಭಾಸಿ (ಗು). ಪ್ರಕಾಶಮಾನವಾದ; ಶೋಭಿಸುವ.

ಉದ್ಭಿಜ್ಜ(ಜ) (ನಾ). ಭೂಮಿಯನ್ನು ಸೀಳಿಕೊಂಡು ಮೊಳೆತು ಬರುವಂಥದು; ಮರ, ಬಳ್ಳಿ ಮೊದಲಾದುವು.

ಉದ್ಭೂತ (ಗು). ೧. ಹುಟ್ಟಿದ; ಕಾಣಿಸಿಕೊಂಡ. ೨. ಕಣ್ಣಿಗೆ ಕಾಣಿಸುವ; ಗೋಚರವಾಗುವ.

ಉದ್ಭ್ರಾಂತ (ಗು). ೧. ಭ್ರಾಂತಿಗೊಂಡ; ಕಕ್ಕಾಬಿಕ್ಕಿಯಾದ. ೨. ಅಲೆಯುತ್ತಿರುವ.

ಉದ್ಯತ (ನಾ). ೧. ಪ್ರಯತ್ನಶೀಲ; ಉದ್ಯೋಗಶೀಲ. (ಗು). ೨. ಮೇಲಕ್ಕೆತ್ತಿದ; ಎತ್ತಿಹಿಡಿದ.

ಉದ್ಯಮ (ನಾ). ೧. ಮೇಲೆ ಎತ್ತುವಿಕೆ. ೨. ಉದ್ಯೋಗ; ಕೆಲಸ.

ಉದ್ಯಾನ (ನಾ). ೧. ಹೊರ ಹೊರಡುವುದು. ೨. ಕೈತೋಟ.

ಉದ್ಯಾಪನ(ನೆ) (ನಾ). ೧. ಪೂರ್ತಿಮಾಡುವಿಕೆ. ೨. ಕೈಗೊಂಡ ವ್ರತಗಳನ್ನು ಮುಗಿಸುವಾಗ ಮಾಡುವ ಶಾಸ್ತ್ರೋಕ್ತವಾದ ಕರ್ಮ.

ಉದ್ಯುಕ್ತ (ನಾ). ಉದ್ಯೋಗಿಸುವವನು; ಪ್ರಯತ್ನಿಸುವವನು.

ಉದ್ಯೋಗ (ನಾ). ೧. ಪ್ರಯತ್ನ ಮಾಡುವುದು; ಕೈಕೊಳ್ಳುವುದು. ೨. (ಶ್ರದ್ಧೆಯಿಂದ ಅಥವಾ ಆಸಕ್ತಿಯಿಂದ ಮಾಡುವ) ಕೆಲಸ; ಪ್ರಯತ್ನ. ೩. ವೃತ್ತಿ; ಕಸಬು. ೪. ಅಧಿಕಾರ; ಹುದ್ದೆ. ೫. ಕೈಗಾರಿಕೆ.

ಉದ್ಯೋಗಸ್ಥ (ನಾ). ೧. ಕಾರ್ಯತತ್ಪರ. ೨. ಕಸಬುದಾರ. ೩. ಹುದ್ದೆಯಲ್ಲಿರುವವನು; ಅಧಿಕಾರಿ.

ಉದ್ಯೋತ (ನಾ). ೧. ಹೊಳಪು; ಕಾಂತಿ. ೨. (ಗ್ರಂಥದ) ವಿಭಾಗ, –ಅಧ್ಯಾಯ.

ಉದ್ರಿಕ್ತ (ಗು). ೧. ಹೆಚ್ಚಿದ; ಅತಿಶಯವಾದ. ೨. ಕೆರಳಿದ; ಉದ್ರೇಕಗೊಂಡ.

ಉದ್ರೇಕ (ನಾ). ೧. ಉದ್ವೇಗ; ಆವೇಗ. ೨. ಮೇರೆ ಮೀರುವಿಕೆ; ಹೆಚ್ಚಾಗುವಿಕೆ. ೩. ದುಡುಕು. ೪. ಅಮಲು.

ಉದ್ವರ್ತನ (ನಾ). ೧. ಮೇಲೆ ಏರುವುದು. ೨. ಹೋಗಲಾಡಿಸುವುದು. ೩. ಸುಗಂಧ ದ್ರವ್ಯಗಳನ್ನು ಮೈಗೆ ಲೇಪಿಸುವುದು.

ಉದ್ವಹ (ನಾ). ೧. ಶ್ರೇಷ್ಠ; ಪ್ರಮುಖ. ೨. ಸುಖ; ಸಂತೋಷ.

ಉದ್ವಾಸನ(ನೆ) (ನಾ). ಆವಾಹನೆ ಮಾಡಿ ಪೂಜಿಸಿದ್ದ ದೇವರನ್ನು ವಿಸರ್ಜಿಸುವುದು.

ಉದ್ವಾಹ (ನಾ). ೧. ಮೇಲಕ್ಕೆ ಎತ್ತುವುದು. ೨. ಮದುವೆ.

ಉದ್ವಿಗ್ನ (ನಾ). ೧. ಉದ್ವೇಗಗೊಂಡವನು. (ಗು). ೨. ತಳಮಳಗೊಂಡ; ಉದ್ವೇಗ ಗೊಂಡ.

ಉದ್ವೃತ್ತ (ನಾ). ೧. ದಾರಿ ತಪ್ಪಿದವನು; ಕೆಟ್ಟ ನಡತೆಯವನು. (ಗು). ೨. ಮೇಲಕ್ಕೆ ಏರಿರುವ; ಅಭಿವೃದ್ಧಿ ಹೊಂದಿದ. ೩. ಕೊಬ್ಬಿದ; ಸೊಕ್ಕಿದ.

ಉದ್ವೇಗ (ನಾ). ೧. ವೇಗದಿಂದ ಹೋಗುವುದು. ೨. ಭಯ; ಹೆದರಿಕೆ. ೩. ಉಮ್ಮಳಿಕೆ; ತಳಮಳ. ೪. ಆವೇಶ; ರಭಸ.

ಉದ್ವೇಜನ (ನಾ). ಕೆರಳಿಸುವುದು; ಕವಡುವುದು.

ಉನಿ (ಕ್ರಿ). ನೆನೆ; ಒದ್ದೆಯಾಗು.

ಉನ್ನತ (ನಾ). ೧. ಹಿರಿಯ; ಉತ್ತಮ. (ಗು). ೨. ಎತ್ತರವಾದ. ೩. ಮೇಲಾದ.

ಉನ್ನತಿ (ನಾ). ೧. ಮೇಲ್ಮೆ; ಹಿರಿಮೆ. ೨. ಅಭ್ಯುದಯ; ಏಳಿಗೆ. ೩. ಎತ್ತರ.

ಉನ್ನು (ಕ್ರಿ). ಭಾವಿಸು; ಎಣಿಸು.

ಉನ್ನೆಗಂ (ಅ). ಆ ನಡುವಣ ಕಾಲದಲ್ಲಿ; ಅಲ್ಲಿಯವರೆಗೆ; ಆ ವೇಳೆಗೆ.

ಉನ್ಮತ್ತ (ನಾ). ೧. ಹುಚ್ಚು ಹಿಡಿದವನು; ಬುದ್ಧಿ ಭ್ರಮಣೆಯಾದವನು. ೨. ಉಮ್ಮತ್ತಿ ಗಿಡ; ದತ್ತೂರದ ಗಿಡ. (ಗು). ೩. ಬಹಳವಾಗಿ ಮದಿಸಿದ; ಕೊಬ್ಬಿದ.

ಉನ್ಮದ (ನಾ). ೧. ಅತಿಯಾದ ಸೊಕ್ಕು; ಕೊಬ್ಬು. ೨. ಉದ್ರೇಕ. (ಗು). ೩. (ಅತಿಯಾಗಿ) ಸೊಕ್ಕಿದ; ಕೊಬ್ಬೇರಿದ. ೪. ಉದ್ರೇಕಗೊಂಡ.

ಉನ್ಮಾದ (ನಾ). ಹುಚ್ಚು; ಬುದ್ಧಿಭ್ರಮಣೆ.

ಉನ್ಮಾರ್ಗಿ (ನಾ). ಕೆಟ್ಟದಾರಿಯಲ್ಲಿ ಹೋಗುವವನು.

ಉನ್ಮೀಲ(ಳ)ನ (ನಾ). ತೆರೆಯುವಿಕೆ; ವಿಕಾಸ.

ಉನ್ಮೀಲಿ(ಳಿ)ತ (ಗು). ತೆರೆದ; ಅರಳಿದ.

ಉನ್ಮುಖ (ಗು). ೧. ಮೇಲಕ್ಕೆತ್ತಿದ ಮುಖವುಳ್ಳ; ಮೇಲುಮುಖವಾದ. ೨. ಅಭಿಮುಖವಾದ; ತನ್ನ ಕಡೆಗೆ ತಿರುಗಿದ. ೩. ಕಾತರನಾದ; ಆತುರನಾದ. ೪. ಸನ್ನದ್ಧವಾದ; ಸಿದ್ಧವಾಗಿರುವ.

ಉನ್ಮೂಲನ (ನಾ). ಬುಡಸಹಿತ ಕಿತ್ತು ಹಾಕುವಿಕೆ; ಮೂಲೋತ್ಪಾಟನೆ.

ಉನ್ಮೇಷ (ನಾ). ಕಣ್ಣು ತೆರೆಯುವಿಕೆ.

ಉಪಕಂಠ (ನಾ). ೧. ಕೊರಳಿನ ಬಳಿ. ೨. ಸಮೀಪ; ನೆರೆಹೊರೆ.

ಉಪಕಥೆ (ನಾ). ಮುಖ್ಯವಾದ ಕಥೆಯ ನಡುವೆ ಬರುವ ಸಣ್ಣಕಥೆ; ಅಡ್ಡಕಥೆ.

ಉಪಕರಣ (ನಾ). ೧. ಉಪಕಾರ; ಸಹಾಯ. ೨. (ಕೆಲಸ ಮಾಡಲು ಬೇಕಾದ) ಸಾಧನ; ಸಲಕರಣೆ.

ಉಪಕರಣೆ (ನಾ). ಪೂಜಾಪಾತ್ರೆ.

ಉಪಕರಿಸು (ಕ್ರಿ). ಉಪಕಾರ ಮಾಡು; ಸಹಾಯವೆಸಗು.

ಉಪಕಾರ (ನಾ). ೧. ಸಹಾಯ; ನೆರವು. ೨. ಉಪಕಾರ ಮಾಡುವವನು; ಸಹಾಯಕ.

ಉಪಕೃತಿ (ನಾ). ಉಪಕಾರ; ನೆರವು.

ಉಪಕ್ರಮು (ನಾ). ೧. ಸಮೀಪಿಸುವುದು; ಹತ್ತಿರ ಹೋಗುವುದು. ೨. ಪ್ರಾರಂಭ; ಮೊದಲು ಮಾಡುವುದು. ೩. ಉಪಾಯು; ಹಂಚಿಕೆ.

ಉಪಗತ (ಗು). ೧. ಸಮೀಪಕ್ಕೆ ಬಂದ; ಹತ್ತಿರವಾದ. ೨. ಯುಕ್ತವಾದ; ಸಹಿತವಾದ. ೩. ಅಂಗೀಕರಿಸಿದ.

ಉಪಗೂಹನ (ನಾ). ೧. ಮರೆ ಮಾಡುವುದು; ಬಚ್ಚಿಡುವುದು. ೨. ತಬ್ಬಿಕೊಳ್ಳುವುದು; ಆಲಿಂಗನ. ೩. ರಕ್ಷಣೆ; ಎತ್ತಿ ಹಿಡಿಯುವುದು.

ಉಪಗೃಹ (ನಾ). ಒಳಗಿನ ಕೋಣೆ; ಓವರಿ.

ಉಪಗ್ರಾಹ್ಯ (ನಾ). ೧. ಕಾಣಿಕೆ; ನಜರು. (ಗು). ೨. ಸ್ವೀಕಾರಕ್ಕೆ ಯೋಗ್ಯವಾದ. ೩. ಅಭಿವಂದನೆಗೆ ಅರ್ಹನಾದ.

ಉಪಚಯು (ನಾ). ೧. ಶೇಖರಣೆ; ಕೂಡಿಸುವುದು. ೨. ರಾಶಿ; ಗುಂಪು. ೩. ಅಭಿವೃದ್ಧಿ; ಏಳಿಗೆ.

ಉಪಚರ್ಯೆ (ನಾ). ೧. ಸೇವೆ. ೨. ಚಿಕಿತ್ಸೆ.

ಉಪಚಾರ (ನಾ). ೧. ಹತ್ತಿರ ನಡೆಯುವುದು, -ಸೇರುವುದು. ೨. ಸತ್ಕಾರ; ಸೇವೆ. ೩. ವೈದ್ಯಕೀಯ ಆರೈಕೆ; ಶುಶ್ರೂಷೆ.

ಉಪಚಿತ (ಗು). ೧. ಕೂಡುತ್ತಾ ಬಂದ; ಶೇಖರಿಸಲ್ಪಟ್ಟ. ೨. ಒಟ್ಟಾದ; ರಾಶಿಯಾದ. ೩. ಹೆಚ್ಚಾದ; ವೃದ್ಧಿ ಹೊಂದಿದ; ಬೆಳೆದ.

ಉಪಜಾತ (ಗು). ಉತ್ಪತ್ತಿಯಾದ; ಕಾಣಿಸಿಕೊಂಡ.

ಉಪಜಾಪ (ನಾ). ೧. ರಹಸ್ಯವಾಗಿ ಕಿವಿಯಲ್ಲಿ ಹೇಳುವುದು; ಪಿಸುಮಾತನ್ನಾಡುವುದು. ೨. ಚಾಡಿ ಹೇಳುವುದು. ೩. ಭೇದೋಪಾಯ; ಒಳಜಗಳವುಂಟುಮಾಡುವಿಕೆ.

ಉಪಜಿಹ್ವೆ (ನಾ). ೧. ಕಿರುನಾಲಗೆ. ೨. ಕಿರುನಾಲಗೆ ಊದಿಕೊಳ್ಳುವ ಒಂದು ರೋಗ.

ಉಪಜೀವನ (ನಾ). ೧. (ಇತರರನ್ನು) ಆಶ್ರಯಿಸಿ ಬದುಕುವಿಕೆ; ಪರಾವಲಂಬಜೀವನ. ೨. ಜೀವನ ನಿರ್ವಾಹ; ಬದುಕು.

ಉಪಜೀವಿ (ನಾ). ಪರಾವಲಂಬನದಿಂದ ಜೀವಿಸುವ ಮನುಷ್ಯ, ಸಸ್ಯ, ಪ್ರಾಣಿ ಮುಂತಾದುವು.

ಉಪಟಲ(ಳ) (ನಾ). ಹಿಂಸೆ; ತೊಂದರೆ.

ಉಪತಾಪ (ನಾ). ೧. ಸೆಕೆ; ಶಾಖ. ೨. ಕಾಟ. ೩. ರೋಗ.

ಉಪದಂಶ (ನಾ). ಉಪ್ಪಿನಕಾಯಿ, ಹಪ್ಪಳ ಮುಂತಾದ ನಂಜಿಕೊಳ್ಳುವ ಪದಾರ್ಥ.

ಉಪದೆ (ನಾ). ೧. ನಜರು; ಕಾಣಿಕೆ. ೨. ದಾನ; ಕೊಡುಗೆ.

ಉಪದೇಶ (ನಾ). ೧. ಬೋಧಿಸುವುದು; ಶಿಕ್ಷಣ. ೨. ಹಿತವನ್ನು ಹೇಳುವುದು; ಬುದ್ಧಿವಾದ.

ಉಪದ್ರವ (ನಾ). ೧. ಮುತ್ತಿಗೆ ಹಾಕುವುದು. ೨. ಅನಿಷ್ಟ; ಕೇಡು; ಕಾಟ.

ಉಪಧಾನ (ನಾ). ೧. ಒರಗುವಿಕೆ; ಆವಲಂಬನ. ೨. ತಲೆದಿಂಬು; ಒರಗುದಿಂಬು.

ಉಪಧಿ (ನಾ). ೧. ಮೋಸ; ವಂಚನೆ. ೨. ತೊಂದರೆ; ಉಪದ್ರವ.

ಉಪಧೆ ೧. = ಉಪಧಿ. ೨. ಪ್ರಾಮಾಣಿಕತೆಯ ಪರೀಕ್ಷೆ. ೩. ಶಬ್ದದ ಕಡೆಯಕ್ಷರದ ಹಿಂದಿನ ಅಕ್ಷರ.

ಉಪನತ (ನಾ). ೧. ಉಂಟಾದುದು; ಪ್ರಾಪ್ತವಾದುದು. (ಗು). ೨. ಹತ್ತಿರಕ್ಕೆ ಬಂದ. ೩. ತಲೆ ಬಾಗಿ ನಮಸ್ಕರಿಸಿದ.

ಉಪನಯನ (ನಾ). ೧. ಹತ್ತಿರಕ್ಕೆ ತರುವುದು. ೨. ಷೋಡಶ ಸಂಸ್ಕಾರಗಳಲ್ಲಿ ಒಂದು; ಮುಂಜಿ; ಬ್ರಹ್ಮೋಪದೇಶ.

ಉಪನಾಮು (ನಾ). ಅಡ್ಡಹೆಸರು.

ಉಪನಿಷತ್ತು (ನಾ). ವೇದಗಳ ಕೊನೆಯ ಭಾಗ; ವೇದಾಂತ; ಜ್ಞಾನಕಾಂಡ.

ಉಪನೇತ್ರ (ನಾ). ಕನ್ನಡಕ; ಸುಲೋಚನ.

ಉಪನ್ಯಾಸ (ನಾ). ೧. ಅರ್ಥವಿವರಣೆ; ವ್ಯಾಖ್ಯಾನ. ೨. ಭಾಷಣ. ೩. ಪ್ರಬಂಧ.

ಉಪಪತಿ (ನಾ). ಮಿಂಡ.

ಉಪಪತ್ತಿ (ನಾ). ೧. ಒಂದು ಸಿದ್ಧಾಂತವನ್ನು ಸಮರ್ಥಿಸುವುದಕ್ಕಾಗಿ ಮಾಡುವ ತರ್ಕ. ೨. ಆಧಾರ; ರುಜುವಾತು. ೩. ಜೀವನೋಪಾಯ.

ಉಪಪತ್ನಿ (ನಾ). ಕ್ರಮಬದ್ಧವಾಗಿ ಮದುವೆಯಾಗದ ಹೆಂಡತಿ; ಬಂಗಾರದವಳು.

ಉಪಪನ್ನ (ನಾ). ೧. ಹಣವಂತ; ಧನಿಕ. (ಗು). ೨. ಉಂಟಾದ; ಕೂಡಿರುವ. ೩. ತಕ್ಕ; ನ್ಯಾಯವಾದ.

ಉಪಪಾದನೆ (ನಾ). ಸಮರ್ಥನೆ; ಸಾಧನೆ.

ಉಪಪ್ಲವ (ನಾ). ೧. ಆಕ್ರಮಣ; ಮುತ್ತಿಗೆ. ೨. ಅನಿಷ್ಟ; ಕೇಡು. ೩. ಗ್ರಹಣ.

ಉಪಮೆ (ನಾ). ೧. ಹೋಲಿಕೆ; ಸಾದೃಶ್ಯ. ೨. ಒಂದು ಕಾವ್ಯಾಲಂಕಾರ.

ಉಪಯುಕ್ತ (ಗು). ಉಪಯೋಗಿಸಲ್ಪಡುವ; ಉಪಯೋಗಕ್ಕೆ ಬರುವ.

ಉಪಯೋಗ (ನಾ). ಪ್ರಯೋಜನ; ಬಳಕೆ.

ಉಪರತ (ನಾ). ೧. ವಿರಕ್ತ. ೨. ಸಾವು; ಮರಣ. (ಗು). ೩. ಬಿಟ್ಟ; ದೂರೀಕರಿಸಿದ. ೪. ಸತ್ತ; ಮರಣ ಹೊಂದಿದ.

ಉಪರತಿ (ನಾ). ೧. ಬಿಡುವು; ವಿರಾಮ. ೨. ಸಾವು. ೩. ವೈರಾಗ್ಯ.

ಉಪರಾಟ (ನಾ). ತಿರುವುಮುರುವು; ಅಸ್ತವ್ಯಸ್ತ.

ಉಪರಿ (ನಾ). ೧. ಮೇಲುಭಾಗ. ೨. ಅಧಿಕ; ಹೆಚ್ಚು. (ಗು). ೩. ಮೇಲಿನ; ಮೇಲುಭಾಗದ. (ಅ). ೪. ಬಳಿಕ; ಅನಂತರ.

ಉಪರೋಧ (ನಾ). ೧. ಅಡ್ಡಿ; ಅಡಚಣೆ. ೨. ಒತ್ತಾಯ; ಬಲಾತ್ಕಾರ.

ಉಪಲ(ಳ) (ನಾ). ಕಲ್ಲು; ಶಿಲೆ.

ಉಪಲಬ್ಧ (ಗು). ದೊರೆತ; ಪ್ರಾಪ್ತವಾದ.

ಉಪಲಬ್ಧಿ (ನಾ). ೧. ಪ್ರಾಪ್ತಿ. ೨. ಆದಾಯ; ವರಮಾನ. ೩. ತಿಳಿವಳಿಕೆ; ಜ್ಞಾನ.

ಉಪಲಾಲನೆ (ನಾ). ಮುದ್ದಾಡುವುದು; ಪ್ರೀತಿಸುವುದು.

ಉಪವನ (ನಾ). ಊರಿನ ಸಮೀಪದಲ್ಲಿರುವ ತೋಟ; ಉದ್ಯಾನ.

ಉಪವಾಸ (ನಾ). ೧. ಹತ್ತಿರದಲ್ಲಿ ವಾಸಿಸುವುದು; ಸಮೀಪದಲ್ಲಿ ನೆಲೆಸುವುದು. ೨. ಊಟ ಮಾಡದಿರುವುದು; ಹಸಿದಿರುವುದು.

ಉಪವಿಷ್ಟ (ಗು). ಕುಳಿತುಕೊಂಡಿರುವ; ಕುಳಿತ.

ಉಪವೀತ (ನಾ). ಯಜ್ಞೋಪವೀತ; ಜನಿವಾರ.

ಉಪವೃತ್ತಿ (ನಾ). ಮುಖ್ಯವೃತ್ತಿಯ ಜೊತೆಗೆ ಅವಲಂಬಿಸಿರುವ ಬೇರೆ ವೃತ್ತಿ; ಉಪಕಸಬು.

ಉಪಶಮ (ನಾ). ೧. ಇಂದ್ರಿಯನಿಗ್ರಹ. ೨. ಸಹನೆ; ತಾಳ್ಮೆ. ೩. ಶಾಂತವಾಗುವುದು; ಶಮನ.

ಉಪಶಾಂತ (ನಾ). ೧. ತಾಳ್ಮೆಯಿಂದ ಕೂಡಿದವನು; ಸಹನೆಯಿಂದ ಕೂಡಿದವನು. (ಗು). ೨. ಅಡಗಿದ; ಶಮನ ಹೊಂದಿದ.

ಉಪಶಾಖೆ (ನಾ). ಸಣ್ಣ ಕೊಂಬೆ; ಚಿಕ್ಕರೆಂಬೆ.

ಉಪಷ್ಟಂಭ (ನಾ). ಆಧಾರ; ಆಶ್ರಯ; ನೆಲೆ.

ಉಪಸಂಹರಿಸು (ಕ್ರಿ). ೧. (ಬಿಟ್ಟ ಬಾಣವನ್ನು) ಹಿಂದಕ್ಕೆ ತೆಗೆದುಕೊ, -ಮರಳಿ ಪಡೆ. ೨. ನಿಲ್ಲಿಸು; ಮುಕ್ತಾಯ ಮಾಡು. ೩. ಅಡಗಿಸು; ನಾಶಮಾಡು.

ಉಪಸಂಹಾರ (ನಾ). ೧. (ಬಿಟ್ಟ ಬಾಣವನ್ನು) ಹಿಂದಕ್ಕೆ ತೆಗೆದುಕೊಳ್ಳುವಿಕೆ. ೨. ತಡೆಯುವುದು; ನಿಲ್ಲಿಸುವುದು. ೩. ಮುಕ್ತಾಯ; ಕೊನೆ; ಸಮಾರೋಪ. ೪. ನಾಶ; ಪ್ರಳಯ.

ಉಪಸರ್ಗ (ನಾ). ೧. ಹತ್ತಿರ; ಸಮೀಪ. ೨. ತೊಂದರೆ; ಕಷ್ಟ. ೩. ಅಪಶಕುನ. ೪. ಧಾತುಗಳ ಹಿಂದೆ ಸೇರುವ ಅಕ್ಷರ; ಒಂದು ಬಗೆಯ ನಿಪಾತ.

ಉಪಸರ್ಜನ (ನಾ). ೧. ಅನಿಷ್ಟವನ್ನು ಸೂಚಿಸುವ ಚಿಹ್ನೆ; ಕೇಡು. ೨. ಮುಖ್ಯವಲ್ಲದ್ದು; ಮತ್ತೊಂದಕ್ಕೆ ಅಧೀನವಾದುದು.

ಉಪಸ್ಕರ (ನಾ). ೧. ಅಲಂಕಾರ. ೨. ಉಪಕರಣ; ಸಾಮಗ್ರಿ. ೩. ಗೃಹೋಪಕರಣ. ೪. ಉಪ್ಪು, ಮೆಣಸು ಮೊದಲಾದ ಪರಿಕರ; ಮಸಾಲೆ; ಸಂಬಾರ.

ಉಪಸ್ಥಿತ (ಗು). ೧. ಹತ್ತಿರದಲ್ಲಿರುವ; ಸಮೀಪಕ್ಕೆ ಬಂದ. ೨. ಕುಳಿತುಕೊಂಡ; ಹಾಜರಿರುವ.

ಉಪಸ್ಪರ್ಶ (ನಾ). ೧. ಮುಟ್ಟುವುದು. ೨. ತೊಳೆಯುವುದು. ೩. ಆಚಮನ.

ಉಪಹತಿ (ನಾ). ೧. ಹೊಡೆತ; ಪೆಟ್ಟು. ೨. ಕೇಡು; ಅಪಾಯ.

ಉಪಹಸಿತ (ನಾ). ೧. ತಿರಸ್ಕಾರ ಅಥವಾ ಅಪಹಾಸ್ಯದಿಂದ ಕೂಡಿದ ನಗೆ. (ಗು). ೨. ಹಾಸ್ಯ ಮಾಡಲ್ಪಟ್ಟ; ನಗೆಗೆ ಗುರಿಯಾದ.

ಉಪಹಾರ (ನಾ). ೧. ಸಮೀಪಕ್ಕೆ ತರುವುದು. ೨. ಬಲಿ; ನೈವೇದ್ಯ. ೩. ಪೂಜೆ; ಅರ್ಚನೆ. ೪. ಕಾಣಿಕೆ; ನಜರು. ೫. = ಉಪಾಹಾರ. ~ಗೃಹ = ಹೋಟೆಲು.

ಉಪಹಾಸ (ನಾ). ೧. ವ್ಯಂಗ್ಯದಿಂದ ಕೂಡಿದ ನಗೆ; ಹಾಸ್ಯ. ೨. ತಿರಸ್ಕಾರ.

ಉಪಹಿತ (ಗು). ೧. ಕೂಡಿರುವ; ಸೇರಿರುವ. ೨. ಇಡಲ್ಪಟ್ಟ. ೩. ಅವಲಂಬಿಸಿದ.

ಉಪಾಂಗ (ನಾ). ಮುಖ್ಯವಾದ ಅಂಗದ ಒಳವಿಭಾಗ; ಅಂಗದೊಳಗಿನ ಅಂಗ.

ಉಪಾಂಶು (ನಾ). ೧. ಗುಟ್ಟು; ರಹಸ್ಯ. ೨. ಇತರರಿಗೆ ಕೇಳಿಸದಂತೆ ಮೆಲುದನಿಯಲ್ಲಿ ಉಚ್ಚರಿಸುವುದು.

ಉಪಾಕರ್ಮ (ನಾ). ೧. ಆರಂಭ; ಉಪಕ್ರಮ. ೨. ಒಂದು ವೈದಿಕ ಕರ್ಮ; ಜನಿವಾರದ ಹಬ್ಬ; ಶ್ರಾವಣಿ.

ಉಪಾಖ್ಯಾನ (ನಾ). ೧. ಹಿಂದೆ ನಡೆದಿರುವ ಕಥೆ; ಪೂರ್ವಕಥೆ. ೨. = ಉಪಕಥೆ.

ಉಪಾತ್ತ (ಗು). ೧. ಸಂಪಾದಿಸಲ್ಪಟ್ಟ; ಪಡೆದ. ೨. ಉಂಟುಮಾಡುವ; ತರುವ. ೩. ಒಯ್ಯಲ್ಪಟ್ಟ. ೪. ಸ್ವೀಕರಿಸಿದ.

ಉಪಾದಾನ (ನಾ). ೧. ಸ್ವೀಕರಿಸುವುದು; ಗ್ರಹಿಕೆ. ೨. ಹಿಂದೆಗೆದುಕೊಳ್ಳುವುದು. ೩. ಭಿಕ್ಷೆ; ತಿರುಪೆ.

ಉಪಾದೇಯ (ಗು). ತೆಗೆದುಕೊಳ್ಳಲು ಯೋಗ್ಯವಾದ; ಗ್ರಾಹ್ಯವಾದ.

ಉಪಾಧಿ (ನಾ). ೧. ತೋರಿಕೆ; ವೇಷ. ೨. ಬಿರುದು; ಪ್ರಶಸ್ತಿ. ೩. ಅಡ್ಡಿ; ತೊಂದರೆ. ೪. ಕಾರಣ; ಹೇತು.

ಉಪಾಧ್ಯಾಯ (ನಾ). ಪಾಠ ಹೇಳಿಕೊಡುವವನು; ಅಧ್ಯಾಪಕ.

ಉಪಾನಹ (ನಾ). ಮೆಟ್ಟು; ಪಾದರಕ್ಷೆ.

ಉಪಾಯ (ನಾ). ಹಂಚಿಕೆ; ಯುಕ್ತಿ.

ಉಪಾಯನ (ನಾ). ಕಾಣಿಕೆ; ಉಡುಗೊರೆ.

ಉಪಾರ್ಜನ(ನೆ) (ನಾ). ಸಂಪಾದನೆ; ಗಳಿಕೆ.

ಉಪಾಲಂಭ (ನಾ). ೧. ಪ್ರಾಪ್ತಿ; ಪಡೆಯುವುದು. ೨. ನಿಂದೆ; ತಿರಸ್ಕಾರದ ಮಾತು. ೩. ಕೊಂಕುನುಡಿ.

ಉಪಾಸಕ (ನಾ). ಉಪಾಸನೆ ಮಾಡುವವನು; ಆರಾಧಕ; ಭಕ್ತ.

ಉಪಾಸನ (ನಾ). ೧. ಸಮೀಪದಲ್ಲಿ ಕುಳ್ಳಿರುವಿಕೆ. ೨. = ಉಪಾಸನೆ. ೩. ಪೂಜೆ; ಆರಾಧನೆ. ೪. ಪೀಠ; ಆಸನ.

ಉಪಾಸನೆ (ನಾ). ಸೇವೆ ಸಲ್ಲಿಸುವುದು; ಶುಶ್ರೂಷೆ.

ಉಪಾಸ್ಯ (ಗು). ಆರಾಧಿಸಲು ಯೋಗ್ಯವಾದ.

ಉಪಾಹಾರ (ನಾ). ತಿಂಡಿ; ಅಲ್ಪಾಹಾರ.

**ಉಪೇಂದ್ರ** (ನಾ). ೧. ಇಂದ್ರನ ತಮ್ಮ; ವಾಮನಮೂರ್ತಿ. ೨. ಕೃಷ್ಣ; ವಿಷ್ಣು.
**ಉಪೇಕ್ಷಿತ** (ನಾ). ೧. ಕಡೆಗಣಿಸುವವನು; ಉದಾಸೀನ ಮಾಡುವವನು. (ಗು). ೨. ಕಡೆಗಣಿಸಲ್ಪಟ್ಟ.
**ಉಪೇಕ್ಷೆ** (ನಾ). ಅಲಕ್ಷ್ಯ; ಕಡೆಗಾಣಿಕೆ.
**ಉಪೇತ** (ಗು). ಕೂಡಿದ; ಸೇರಿದ.
**ಉಪೋದ್ಘಾತ** (ನಾ). ೧.ಆರಂಭ. ೨. ಪೀಠಿಕೆ; ಮುನ್ನುಡಿ.
**ಉಪೋಷಣ** = ಉಪವಾಸ.
**ಉಪ್ಪಂಡ**(ನಾ). ಮಲೆತಿರುವಿಕೆ; ಸೊಕ್ಕಿರುವಿಕೆ.
**ಉಪ್ಪಗರಿ** (ನಾ). ಅವಲಕ್ಕಿಯಿಂದ ಮಾಡುವ ತಿಂಡಿ; ಚಾಕಣ.
**ಉಪ್ಪಟ** (ನಾ). ಉತ್ತಮವಾದ ವಸ್ತ್ರ.
**ಉಪ್ಪಡ** ೧. = ಉಪ್ಪಟ. ೨. ಬಾಳಕ. ೩. = ಉಪ್ಪವಡ. ~ಪದ = ಸುಪ್ರಭಾತದ ಹಾಡು.
**ಉಪ್ಪಯಣ** (ನಾ). ಪ್ರಯಾಣ ಮಾಡುವಾಗ ತಂಗುವುದು; ನಡುವೆ ಬೀಡು ಬಿಡುವುದು.
**ಉಪ್ಪರ** (ನಾ). ೧. ಎತ್ತರ; ಉನ್ನತಿ. ೨. ಅತಿಶಯ; ಹೆಚ್ಚು. (ಗು). ೩. ಎತ್ತರವಾದ; ಉನ್ನತವಾದ. ~ಇಸು = ೧.ಮೇಲಕ್ಕೆ ನೆಗೆ; ಹಾರು. ೨. ವ್ಯಾಪಿಸು. ೩. ಹಿಗ್ಗು; ಅತಿಶಯವಾಗು. ೪. ಮೇಲಕ್ಕೆ ಎಬ್ಬಿಸು; ಎತ್ತರಿಸು. ೫. ಮುಚ್ಚಳವನ್ನು ತೆಗೆ.
**ಉಪ್ಪರಿಗೆ(ಕೆ)** (ನಾ). ಕರುಮಾಡ; ಮಹಡಿ; ಸೌಧ.
**ಉಪ್ಪಲ** (ನಾ). ಚೌಳು; ಚೌಳುಭೂಮಿ.
**ಉಪ್ಪಲಿಗ(ಕ)** = ಉಪ್ಪಾಜಿ.
**ಉಪ್ಪವಡ** (ನಾ). ೧. ಹಾಸಿಗೆಯನ್ನು ಬಿಟ್ಟು ಮೇಲಕ್ಕೆ ಏಳುವುದು; ನಿದ್ರೆಯಿಂದ ಏಳುವುದು. ೨. ಸುಪ್ರಭಾತ; ಸುಪ್ರಭಾತದ ಹಾಡು.
**ಉಪ್ಪಳ** (ನಾ). ನೈದಿಲೆ ಹೂವು; ಉತ್ಪಲದ ಹೂವು.
**ಉಪ್ಪಾಜ(ರ)** (ನಾ). ೧. ಉಪ್ಪು ತಯಾರಿಸುವವನು. ೨. ಮಣ್ಣು ಅಥವಾ ಗಾರೆ ಕೆಲಸದವನು.
**ಉಪ್ಪು** (ನಾ). ೧. ಆಹಾರ ಪದಾರ್ಥಗಳನ್ನು ರುಚಿಗೊಳಿಸುವ ಒಂದು ಪದಾರ್ಥ; ಲವಣ. ೨. ಒಂದು ಬಗೆಯ ಆಟ. ೩. ಮುದ್ದು; ಪ್ರೀತಿ. ೪. ಹಂಗು. ~ಆರತಿ = ದೃಷ್ಟಿ ನಿವಾರಣೆಗಾಗಿ ಎತ್ತುವ ಉಪ್ಪಿನ ಆರತಿ. ~ಎಸರ್ = ಹುಳಿ ಕಾರವಿಲ್ಲದ, ಉಪ್ಪು ಮಾತ್ರ ಹಾಕಿದ ಸಾರು. ~ಕಾ(ಗಾ)ಯ್ = ಉಪ್ಪುಕಾರದೊಡನೆ ಕೂಡಿಸಿದ ಮಾವು, ನಿಂಬೆ ಇತ್ಯಾದಿ; ಊರುಗಾಯಿ. ~ಕಾ(ಗಾ)ವು = ಉಪ್ಪಿನಿಂದ ಕೊಡುವ ಶಾಖ. ~ಮಡಿ = (ಉಪ್ಪು ತಯಾರಿಸಲು) ಉಪ್ಪುನೀರನ್ನು ತಡೆದು ನಿಲ್ಲಿಸುವ ಪಾತಿ.
**ಉಪ್ಪೇರಿ** (ನಾ). ಒಂದು ಬಗೆಯ ಕರಿದ ತಿನಿಸು.
**ಉಬ್ಬಟೆ** = ಉರ್ಬಟೆ.
**ಉಬ್ಬಣ** (ನಾ). ೧. ಅಗಳಿ; ಲಾಳವಿಂಡಿಗೆ. ೨. ಹೆಚ್ಚಳ.
**ಉಬ್ಬದಿಗ** (ನಾ). ಆಧಿಕ್ಯ; ಅತಿಶಯ.
**ಉಬ್ಬರ** = ಉರ್ವರ. ~ಇಸು = ೧. ಬಾತುಕೊಳ್ಳು. ೨. ಎದ್ದು ಕಾಣಿಸಿಕೊಳ್ಳು; ಹೊರಬೀಳು. ೩. ಅತಿಶಯವಾಗು. ೪. ಗರ್ವಿಸು. ೫. ಸಂಭ್ರಮಿಸು; ಆತುರಗೊಳ್ಳು. ೬. ಅಸಮಾಧಾನಗೊಳ್ಳು. ~ಇ(ವಿ)ಳಿತ = ಏರಿಕೆ ಮತ್ತು ಇಳಿಕೆ; ಹಿಗ್ಗುಕುಗ್ಗು. ~ಕ(ಗ)ಹಳೆ = ಗಟ್ಟಿಯಾಗಿ ಧ್ವನಿಮಾಡುವ ಕಹಳೆ; ದೊಡ್ಡ ಕಹಳೆ.
**ಉಬ್ಬಲ** (ನಾ). ಕೆಸರು; ಬದಿ.
**ಉಬ್ಬಲು** (ನಾ). ೧. ಹೊಟ್ಟು; ಸಿಪ್ಪೆ. ೨. (ತಾನಾಗಿ ಉದುರಿದ) ಕೂದಲು ಅಥವಾ ತುಪ್ಪಟ.

ಉಬ್ಬಸ (ನಾ). ೧. ಗೂರಲು ರೋಗ; ದಮ್ಮು. ೨. ಮೇಲುಸಿರು. ೩. ಹಿಂಸೆ; ಸಂಕಟ. ೪. ಅಸಮಾಧಾನ.

ಉಬ್ಬಳಿಕೆ (ನಾ). ೧. ಓಕರಿಕೆ; ವಾಂತಿ ಬರುವಂತಾಗುವುದು. ೨. ಹುಳಿತೇಗು. ೩. ನಿಟ್ಟುಸಿರು. ೪. ಹೆಚ್ಚಳ; ಅತಿಶಯ.

ಉಬ್ಬಿನ (ನಾ). ಕೇಡು; ಹಾನಿ.

ಉಬ್ಬು = ಉರ್ವು. ~ಆಳು =೧. ಉತ್ಸಾಹಿಯಾದ ಶೂರ. ೨. ಸ್ತೋತ್ರಪ್ರಿಯ. ೩. ಉತ್ಸಾಹ.

ಉಬ್ಬೆ (ನಾ). ೧. ಉಷ್ಣ; ಸೆಕೆ. ೨. ಉದ್ವೇಗ; ಸಂಕಟ. ೩. ಜೋರು. ೪. ಸೋಡಾಪುಡಿ ಮುಂತಾದುವನ್ನು ನೀರಿಗೆ ಸೇರಿಸಿ ಬಟ್ಟೆಯನ್ನು ಬೇಯಿಸುವ ಕ್ರಮ. ೫. ಕಾಯಿಗಳನ್ನು ಹಣ್ಣುಮಾಡಲು ಅಡೆ ಹಾಕುವುದು. ೬. ಒಂದು ಸಲ ಒರಳಿನಲ್ಲಿ ಹಿಡಿಯುವಷ್ಟು ಅಳತೆ.

ಉಬ್ಬೆಗ (ನಾ). ೧. ದುಃಖ; ಸಂತಾಪ. ೨. ಚಿಂತೆ. ೩. ಕೇಡು. ೪. ವೇಗ. ೫. ಭಯ.

ಉಬ್ಬೆಮೆ (ನಾ). ೧. ಹೆಚ್ಚಾದ ಭ್ರಾಂತಿ. ೨. ತವಕ; ಆವೇಗ.

ಉಭಯ (ನಾ). ಎರಡು. ~ಲಿಂಗಿ =೧. ಹೆಣ್ಣು ಮತ್ತು ಗಂಡಿನ ಲಕ್ಷಣವುಳ್ಳವನು. ೨. ಪುಲ್ಲಿಂಗ ಮತ್ತು ಸ್ತ್ರೀಲಿಂಗಕ್ಕೆ ಸೇರಿರುವ ಶಬ್ದ. ~ಲೋಕ = ಇಹ ಮತ್ತು ಪರ.

ಉಭಯತ್ರ (ಅ). ಎರಡು ಕಡೆಯೂ; ಎರಡು ಸ್ಥಳಗಳಲ್ಲಿಯೂ.

ಉಮರು (ನಾ). ಸೆಕೆ; ಬೇಗೆ. ~ಬೊಕ್ಕೆ = ಸೆಕೆಗುಳ್ಳೆ.

ಉಮಾಧವ (ನಾ). ಉಮೆಯ ಪತಿ; ಶಿವ.

ಉಮುಳ್ (ಳ್, ಳು) (ಕ್ರಿ). ಉಗುಳು; ಉಗಿ.

ಉಮೆ (ನಾ). ೧. ಪಾರ್ವತಿ. ೨. ಕೀರ್ತಿ. ೩. ಎಳ್ಳಗಸೆ ಗಿಡ.

ಉಮೇದು (ನಾ). ೧. ಉತ್ಸಾಹ; ಹುರುಪು. ೨. ಭರವಸೆ; ವಿಶ್ವಾಸ. ೩. ಅಪೇಕ್ಷೆ; ಆಕಾಂಕ್ಷೆ. ~ವಾರ =೧. ಉತ್ಸಾಹಶಾಲಿ; ಭರವಸೆಯುಳ್ಳವನು. ೨. ಕೆಲಸವನ್ನು ಕಲಿಯಬಯಸುವವನು. ೩. ಅರ್ಜಿ ಸಲ್ಲಿಸುವವನು; ಅಭ್ಯರ್ಥಿ.

ಉಮ್ಮ (ನಾ). ೧. ಮುತ್ತು; ಮುದ್ದು. ೨. = ಉಮ್ಮೆ.

ಉಮ್ಮಚ್ಚ (ನಾ). ೧. ಕೋಪ; ಅಸಮಾಧಾನ. ೨. ದಿಕ್ಕು ತೋರದ ಸ್ಥಿತಿ; ದಿಗ್ಭ್ರಮೆ. ೩. ದುಃಖ. ೪. ಉತ್ಸಾಹ.

ಉಮ್ಮಚ್ಚರ (ನಾ). ಅತಿಶಯವಾದ ಕೋಪ, – ಅಸಮಾಧಾನ.

ಉಮ್ಮತ್ತ (ನಾ). ಮದ್ದುಗುಣಿಕೆ ಗಿಡ; ದತ್ತೂರಿ ಗಿಡ.

ಉಮ್ಮನೆ (ಅ). ಬಿಸಿಬಿಸಿಯಾಗಿ.

ಉಮ್ಮಲು (ನಾ). ೧. ಉಗುಳು; ಕಫ. ೨. ಉಬ್ಬಸ; ದಮ್ಮು.

ಉಮ್ಮಹ (ನಾ). ಹೆಚ್ಚು ಉತ್ಸಾಹ; ಅಧಿಕ ಸಂತೋಷ.

ಉಮ್ಮಳ (ನಾ). ೧. ದುಃಖ. ೨. ಉಷ್ಣ.

ಉಮ್ಮಳಿಕೆ = ಉಮ್ಮಳ.

ಉಮ್ಮಿ (ಮಿ) (ನಾ). (ಧಾನ್ಯದ) ಹೊಟ್ಟು; ಉಬ್ಬಲು.

ಉಮ್ಮಿಗೆ (ನಾ). ೧. ಗೋಧಿಯ ಹಸಿಯ ತೆನೆ. ೨. ಜೋಳ ಮುಂತಾದ ತೆನೆಗಳನ್ನು ಸುಟ್ಟು ಉಜ್ಜಿ ತೆಗೆದ ಕಾಳು.

ಉಮ್ಮು ೧. = ಉಣ್ಮು. (ನಾ). ೨. ದುಃಖ; ಸಂತಾಪ.

ಉಮ್ಮುಗಿಸು (ಕ್ರಿ). ಗಂಜಿ ಬಸಿದ ಮೇಲೆ ಅನ್ನವು ಹದವಾಗುವುದಕ್ಕಾಗಿ ಬೆಂಕಿಯ ಮೇಲಿಡು.

ಉಮ್ಮೆ (ನಾ). ೧. ಉಷ್ಣ; ಸೆಕೆ. ೨. ಸಂತಾಪ; ದುಃಖ.

ಉಯ್ (ಕ್ರಿ). ೧. ಒಯ್ಯು ; ತೆಗೆದುಕೊಂಡು ಹೋಗು. ೨. ತಡೆದಿಡು ; ಹಿಡಿತದಲ್ಲಿಡು. (ನಾ). ೩. = ಉಮ್ಮಿ.
ಉಯಿಲು (ನಾ). ಮೃತ್ಯುಪತ್ರ.
ಉಯ್ಯಾಲ್(ಲು) (ನಾ). ತೂಗುಮಣೆ ; ಜೋಕಾಲಿ.
ಉಯ್ಯಾಲೆ = ಉಯ್ಯಾಲ್.
ಉಯ್ಲು (ನಾ). ಸೆಳೆತವುಳ್ಳ ಪ್ರವಾಹ.
ಉರ (ನಾ). ಎದೆ ; ವಕ್ಷಸ್ಥಳ. ~ಗೆಜ್ಜೆ = ಎತ್ತುಗಳ ಕೊರಳಿಗೆ ಕಟ್ಟುವ ಗೆಜ್ಜೆ. ~ಚಲ್ಲಿ = ಎದೆಗೆ ಕಟ್ಟಿಕೊಳ್ಳುವ ಕನ್ನಡಿ. ~ಪ(ವ)ರಿ = ವೇಗದಿಂದ ಓಡುವಿಕೆ ; ಬೇಗನೆ ಹರಿಯುವಿಕೆ. ~ಪಾಶ=ಹೇರೆತ್ತುಗಳ ಎದೆಗೆ ಬಿಗಿಯುವ ಹಗ್ಗ ; ಎದೆಪಟ್ಟಿ.
ಉರಗ (ನಾ). ೧. ಹಾವು. ೨. ದೇವಗಣದಲ್ಲಿ ಒಂದು ಗುಂಪು ; ನಾಗರು. ೩. ರಾಹು. ~ಕಟಕ = ಉರಗವನ್ನು ಕಡಗವಾಗಿ ಉಳ್ಳವನು ; ಶಿವ. ~ಗೇಹ = ಹಾವಿನ ಮನೆ ; ಹುತ್ತ. ~ಪತಾಕ = ಬಾವುಟದಲ್ಲಿ ಹಾವಿನ ಗುರುತುಳ್ಳವನು ; ದುರ್ಯೋಧನ. ~ಬ(ವ)ಳ್ಳಿ = ವೀಳೆಯದೆಲೆಯ ಬಳ್ಳಿ ; ನಾಗವಲ್ಲಿ. ~ಮಥನ = ಹಾವನ್ನು ಕೊಲ್ಲುವವನು ; ಗರುಡ. ~ಸ್ಪರ್ಶ = ರಾಹುವಿನ ಸ್ಪರ್ಶ ; ಗ್ರಹಣ.
ಉರಗಿ (ನಾ). ೧. ಹೆಣ್ಣುಹಾವು. ೨. ಒಂದೆಲಗನ ಗಿಡ.
ಉರಗು (ಕ್ರಿ). ಕರಗು.
ಉರವಣೆ(ಣಿ) (ನಾ). ೧. ಆತುರ ; ದುಡುಕು. ೨. ಸಂಭ್ರಮ ; ಸಡಗರ. ೩. ರಭಸ. ೪. ಆಧಿಕ್ಯ ; ಹೆಚ್ಚಳ. ೫. ನಿಷ್ಠುರ.
ಉರಸ್ತ್ರಾಣ (ನಾ). ಕವಚ ; ಚಿಲಖತ್ತು.
ಉರಾಟ (ನಾ). ಹೆಂಡತಿ ; ಮಡದಿ.
ಉರಿ (ಕ್ರಿ). ೧. ಸುಡು ; ಜ್ವಲಿಸು. ೨. ಸಂಕಟಪಡು. ೩. ಗರ್ವದಿಂದ ಬೀಗು. (ನಾ). ೪. ಬೆಂಕಿಯ ನಾಲಗೆ ; ಜ್ವಾಲೆ. ೫. ಸಂಕಟ ; ಸಂತಾಪ. ೬. ಜ್ವರ. ~ಕು(ಗು)ದುರೆ = ಬಡಬಾಗ್ನಿ. ~ಮಂಡಲ = ೧. ಹೊಟ್ಟೆಯಲ್ಲಿ ಉರಿ ಸುತ್ತಿಕೊಂಡಂತೆ ಬೇನೆ ಹುಟ್ಟಿಸುವ ಒಂದು ರೋಗ. ೨. ಸೋಕಿದ ಕಡೆ ಉರಿ ತೋರುವ ಒಂದು ಜಾತಿಯ ವಿಷಸರ್ಪ. ~ಮೇಷ = ತೇಗದ ಮರ. ~ಸಿಂಗಿ = ೧. ಒಂದು ಬಗೆಯ ವಿಷದ ಹಾವು. ೨. ಒಂದು ಬಗೆಯ ಮಾದಕ ಮೂಲಿಕೆ. ೩. ಕೋಪಿಷ್ಠನಾದ ವ್ಯಕ್ತಿ.
ಉರಿಗಯ್ಯ (ನಾ). ಸುಡುವ ಕಿರಣಗಳುಳ್ಳವನು ; ಸೂರ್ಯ.
ಉರಿಪು(ಹು) (ಕ್ರಿ). ೧. ಸುಡು ; ದಹಿಸು. (ನಾ). ೨. ಉರಿಯುವಿಕೆ. ೩. ಸಂತಾಪ ; ಸಂಕಟ.
ಉರಿಲ್ (ನಾ). ಪಾಶ; ಜೀರುಕುಣಿಕೆಯ ಹಗ್ಗ.
ಉರು (ನಾ). ೧. ಕಂಠಪಾಠ ಮಾಡುವುದು ; ಗಟ್ಟಿ ಮಾಡುವುದು. (ಗು). ೨. ವಿಶೇಷವಾದ ; ಹೆಚ್ಚಿನ. ೩. ವಿಸ್ತಾರವಾದ. ೪. ಶ್ರೇಷ್ಠವಾದ ; ಅಮೋಘವಾದ.
ಉರುಗುರ (ನಾ). ಮಲ ; ಅಮೇಧ್ಯ.
ಉರುಟಣೆ (ನಾ). ೧. ಮದುವೆಯಲ್ಲಿ ವಧೂವರರು ಹೂವಿನ ಚೆಂಡು, ತೆಂಗಿನಕಾಯಿ ಮೊದಲಾದುವುಗಳನ್ನು ಪರಸ್ಪರ ಉರುಳಿಸುತ್ತ ಆಡುವ ಆಟ. ೨. ವಧೂವರರು ಪರಸ್ಪರ ಅರಿಸಿನ ಕುಂಕುಮಗಳನ್ನು ಹಚ್ಚಿ ಹೆಸರು ಹೇಳುವ ವಿನೋದ.
ಉರುಟು (ಕ್ರಿ). ೧. ಅತಿಕ್ರಮಿಸು; ಮೀರಿನಡೆ. ೨. ಕೆಳಕ್ಕೆ ಬೀಳು. ೩. ಉರುಳಿಸು. (ನಾ). ೪. ದುಂಡು ; ಗುಂಡಾಗಿರುವಿಕೆ. ೫. ಉಂಗುರ. (ಗು). ೬. ಒರಟಾದ ; ನಾಜೂಕಿಲ್ಲದ. ~ಆಟ = ಹೋರಾಟ ; ಪ್ರತಿಭಟನೆ. ~ಆಣೆ = ೧. ಉಂಡೆ ; ಗುಂಡಾದ ಮುದ್ದೆ. ೨. ಮರದ ದಿಮ್ಮಿ

ಗಳನ್ನು ಉರುಳಿಸಲು ಅಡಿಗೆ ಇಡುವ ತುಂಡು ; ಸರಬು.

**ಉರುಣೆ** (ನಾ). ಉಂಡೆ ; ಗುಳಿಗೆ.

**ಉರುಪು** = ಉರಿಪು.

**ಉರುಮು** (ಕ್ರಿ). ಮೇಲೆ ಬೀಳು ; ಮುತ್ತು.

**ಉರುಲ್(ಲು)** = ಉರಿಲ್.

**ಉರುವಲು** (ನಾ). ಕಟ್ಟಿಗೆ ; ಸೌದೆ.

**ಉರುಸು** (ನಾ). ಮುಹಮ್ಮದೀಯ ಸಾಧುಗಳ ಪುಣ್ಯತಿಥಿ ಮತ್ತು ಅಂದು ನಡೆಸುವ ಜಾತ್ರೆ.

**ಉರುಳ್(ಳು)** (ಕ್ರಿ). ೧. ದುಂಡಾದ ವಸ್ತು ನೆಲದಲ್ಲಿ ಚಲಿಸುವಂತೆ ಚಲಿಸು ; ಹೊರಳಾಡು. ೨. ಕೆಳಕ್ಕೆ ಬೀಳು. ೩. ಸಾಯು ; ನಾಶವಾಗು. (ನಾ). ೪. = ಉರಿಲ್. ೫. ಉರುಳುವಿಕೆ. ~ಕ = ೧. ಉರುಳಿಕೊಂಡು ಹೋಗುವವನು. ೨. ಅಸ್ಥಿರನಾದವನು ; ಚಂಚಲನಾದವನು. ~ಗೆಡ್ಡೆ = ಆಲೂಗೆಡ್ಡೆ. ~ಬೇಟೆ = ಕೊರಲಿಗೆ ಉರುಲು ಹಾಕಿ ಪ್ರಾಣಿಯನ್ನು ಹಿಡಿಯುವ ಬೇಟೆ. ~ಸೇವೆ = ದೇಹವನ್ನು ಬಲಕ್ಕೆ ಉರುಳಿಸಿಕೊಂಡು ಹೋಗುವ ಒಂದು ಬಗೆಯ ಸೇವೆ ; ದಿಂಡುರುಳು.

**ಉರುಳಿ(ಳೆ)** (ನಾ). ೧. ಗುಂಡಾದ ವಸ್ತು ; ಉಂಡೆ, ಗೋಲಿ ಮುಂತಾದುವು. ೨. ದುಂಡನೆಯ ಪಾತ್ರೆ. ೩. ಸುರುಳಿ. ೪. ಒಂದು ಬಗೆಯ ಪಕ್ಷಿ.

**ಉರುಳ್ಚಿಸು** (ಕ್ರಿ). ಉರುಳಿಸು ; ಬೀಳಿಸು.

**ಉಱ(ರ)ವ** (ನಾ). ೧. ಹಿರಿಯವನು. ೨. ನಂಟ.

**ಉಱಿ(ರಿ)** (ಕ್ರಿ). ೧. ಹೀರು. ೨. ಸೇದು. (ನಾ). ೩. ಪಾತ್ರೆ ಮುಂತಾದುವುಗಳನ್ನು ಎತ್ತರದಲ್ಲಿ ಇಡಲು ಹಗ್ಗದಿಂದ ಮಾಡಿದ ಸಾಧನ ; ನೆಲುವು.

**ಉಱಿ(ರಿ)ತ** (ನಾ). ೧. ಹೀರುವಿಕೆ. ೨. ಸೇದುವಿಕೆ.

**ಉಱು(ರು)** (ಕ್ರಿ). ೧. ಇರು ; ನೆಲಸು. ೨. ಹೊಂದು ; ಸೇರು. ೩. ಇಷ್ಟವಾಗು ; ಹಿಡಿಸು. ೪. ಲಕ್ಷ್ಯಮಾಡು. ೫. ಸಮರ್ಥವಾಗು; ಶಕ್ತವಾಗು. ~ಇಸು = ೧. ಸಹಿಸು. ೨. ಹತ್ತಿರ ಸಾರು. ~ಬಾ(ವಾ)ೞ್(ಳ್) = ಈಗಿರುವ ಬದುಕು.

**ಉಱು(ರು)ಂಗು** (ಕ್ರಿ). ೧. ಓರೆಯಾಗು ; ಬಾಗು. ೨. ತಿರುಗು ; ಹೊರಳು.

**ಉಱು(ರು)(ಂ)ಬು** (ಕ್ರಿ). ೧. ಮೇಲೆ ಬೀಳು; ಎದುರಿಸು. ೨. = ಉಱುಹು. (ನಾ). ೩. ಅತಿಶಯವಾದ ವೇಗ.

**ಉಱು(ರು)ಕು** (ನಾ). ೧. ನಡುಕ. ೨. ಭಯ. ~ಕೊ(ಗೊ)ಳ್ = ೧. ನಡುಗು. ೨. ಭಯಪಡು.

**ಉಱು(ರು)ಬೆ** (ನಾ). ೧. ಮೇಲೆ ಬೀಳುವಿಕೆ ; ಮುತ್ತಿಗೆ. ೨. ರಭಸ.

**ಉಱು(ರು)ಮಾಱು(ರು)** = ಉಱುವಾಱು.

**ಉಱು(ರು)ಮಿಕೆ** (ನಾ). ರಭಸ ; ವೇಗ.

**ಉಱು(ರು)ವ** (ಗು). ಶ್ರೇಷ್ಠವಾದ ; ಪ್ರಸಿದ್ಧವಾದ.

**ಉಱು(ರು)ವಾಱು(ರು)** (ಕ್ರಿ). ೧. ವಕ್ರವಾಗಿ ಹಾರು. (ನಾ). ೨. ವಿನಿಮಯದ ವ್ಯಾಪಾರ.

**ಉಱು(ರು)ವು** (ನಾ). ಡೊಂಕು ; ವಕ್ರತೆ.

**ಉಱು(ರು)ಹು** (ಕ್ರಿ). ಬಾಯಿಯಿಂದ ಗಾಳಿ ಊದು.

**ಉಱೆ(ರೆ)** (ಅ). ಅತಿಶಯವಾಗಿ; ಬಹಳವಾಗಿ.

**ಉರ್ಕಳಿಸು** (ಕ್ರಿ). ಗರ್ವಿಸು ; ಅಹಂಕಾರಪಡು.

**ಉರ್ಕು** (ಕ್ರಿ). ೧. ಮೇಲಕ್ಕೆ ಹಬ್ಬು ; ಹೊಮ್ಮಿ ಬರು. ೨. ಪರಾಕ್ರಮವನ್ನು ತೋರು. ೩. ಗರ್ವಿಸು. ೪. ಕರಗು. (ನಾ). ೫. ಹೊಮ್ಮಿ ಮೇಲಕ್ಕೆ ಬರುವಿಕೆ. ೬. ಏಳಿಗೆ. ೭. ಉತ್ಸಾಹ. ೮. ಗರ್ವ. ೯. ಬಲ. ೧೦. ಧೈರ್ಯ. ೧೧. ಹದಮಾಡಿದ

ಕಬ್ಬಿಣ. ~ಉಡಿ=೧. ಗರ್ವ ಅಡಗು; ಸೊಕ್ಕು ಮುರಿ. ೨. ಗರ್ವವನ್ನು ಮುರಿಯುವುದು; ಗರ್ವಭಂಗ. ೩. ಪರಾಕ್ರಮಶಾಲಿ.

ಉಗರ್ು (ಕ್ರಿ). ೧. ಮೇಲಕ್ಕೆ ಉಬ್ಬಿಬರು. ೨. ಕೃಶವಾಗು. (ನಾ). ೩. ಉಗ್ಗುವಿಕೆ; ತೊದಲುವಿಕೆ.

ಉಚರ್ು (ಕ್ರಿ). ೧. ಹೊರಕ್ಕೆ ತೆಗೆ; ಸೆಳೆ. ೨. ಚುಚ್ಚು; ತಿವಿ. ೩. ಚುಚ್ಚಲ್ಪಡು; ತಿವಿಯಲ್ಪಡು. ೪. ಉದುರು; ಕಳಚಿಬೀಳು. ೫. ರಭಸದಿಂದ ನುಗ್ಗು; ಸೀಳಿಕೊಂಡು ಬರು. ೬. ಸುಡು; ದಹಿಸು. ೭. ಹೊರಕ್ಕೆ ನೀಡು; ಚಾಚು. ೮. ಭೇದಿಯಾಗು. ೯. ಭಾಗಿಸು; ಭಾಗಹಾರ ಮಾಡು.

ಉದರ್ು (ಕ್ರಿ). ೧. ಒರಸು; ತಿಕ್ಕು. ೨. ಉಜ್ಜಿ ಹರೆಯನ್ನು ಬಾಚಿಸು. ೩. ಮರ್ದನ ಮಾಡು. (ನಾ). ೪. ಉಜ್ಜುವಿಕೆ; ತಿಕ್ಕುವಿಕೆ. ೫. = ಉಬ್ಟು. ೬. ಒಂದು ಭಾಷೆಯ ಹೆಸರು.

ಉರ್ಬಟೆ (ನಾ). ೧. ಹೆಚ್ಚಳ; ಅತಿಶಯ. ೨. ಪರಾಕ್ರಮ; ಸಾಹಸ. ೩. ಹಿಂಸೆ; ಕಾಟ.

ಉರ್ಬಿ(ರ್ವಿ) = ಉರ್ವರೆ.

ಉರ್ವಟೆ (ನಾ). ೧. ಕರು. ೨. ವರ್ಷ. ೩. ಧ್ವನಿ; ಸಪ್ಪಳ.

ಉರ್ವರ (ನಾ). ೧. ಹೆಚ್ಚಿಗೆ; ಅತಿಶಯ. ೨. ಆಡಂಬರ. ೩. ಉದ್ವೇಗ; ಆವೇಗ. ೪. ಏರಿಕೆ; ಉಕ್ಕುವಿಕೆ. ೫. ಬಾತುಕೊಳ್ಳುವಿಕೆ.

ಉರ್ವರೆ (ನಾ). ನೆಲ; ಭೂಮಿ.

ಉರ್ವಾರು (ನಾ). ೧. ಸೌತೆಗಿಡ. ೨. ಮೆಕ್ಕೆ ಗಿಡ.

ಉರ್ವೀಜ (ನಾ). ೧. ಗಿಡ; ಮರ. (ಗು). ೨. ಭೂಮಿಯಲ್ಲಿ ಹುಟ್ಟಿದ.

ಉರ್ವು(ರ್ಬು) (ಕ್ರಿ). ೧. ಹುಟ್ಟು; ಉಂಟಾಗು. ೨. ಬೀಗು; ಗರ್ವಿಸು. ೩. ಹಿಗ್ಗು; ಸಂತೋಷಿಸು. (ನಾ). ೪. ಏಳಿಗೆ; ಅಭಿವೃದ್ಧಿ. ೫. ವೇಗ; ರಭಸ. ೬. ಹಿಗ್ಗು; ಉತ್ಸಾಹ. ೭. ಗರ್ವ. ~ಜವ್ವನೆ= ಯೌವನ ಏರುತ್ತಿರುವವಳು; ಏರುಜವ್ವನೆ.

ಉಲಕೋಚಿ (ನಾ). ತುಂಟ; ಕಿಲಾಡಿ.

ಉಲಿ (ಕ್ರಿ). ೧. ಕೂಗು; ಧ್ವನಿಮಾಡು ೨. ಹೇಳು; ಮಾತನಾಡು. (ನಾ). ೩. ಧ್ವನಿ; ಶಬ್ದ. ೪. ಮಾತು.

ಉಲಿಗ (ನಾ). ೧. ಹುಲಿಗಿಲ ಗಿಡ. ೨. ಹರಟೆಮಲ್ಲ.

ಉಲಿಗೆ (ನಾ). ಹಲಸಿನ ತೊಳೆಯಿಂದ ಮಾಡುವ ಭಕ್ಷ್ಯ; ಉಂಡಲಿಗೆ.

ಉಲಿಪ(ಹ) (ನಾ). ೧. ಧ್ವನಿ. ೨. ಮಾತು.

ಉಲಿಪು (ನಾ). ಧ್ವನಿ; ಕೂಗು.

ಉಲುಕು (ಕ್ರಿ). ೧. ಅಲ್ಲಾಡು; ನಡುಗು. ೨. ಅಳುಕು ಉಂಟಾಗು; ಶಂಕಿಸು. (ನಾ). ೩. ಅದಿರಾಟ; ಕಂಪನ.

ಉಲುಪೆ (ನಾ). ಮಂಗಳ ಪ್ರಸಂಗಗಳಲ್ಲಿ ಉಚಿತವಾಗಿ ಕೊಡುವ ಆಹಾರ ಸಾಮಗ್ರಿ; ಭತ್ಯ.

ಉಲುಹು(ಪು,ವು) = ಉಲಿಪು.

ಉಲೂ(ಳೂ)ಕ (ನಾ). ೧. ಗೂಗೆ; ಗೂಬೆ. ೨. ಒಬ್ಬ ರಾಕ್ಷಸನ ಹೆಸರು.

ಉಲೂಖಲ (ನಾ). ಒರಳು.

ಉಲ್ಕೆ (ನಾ). ೧. ಆಕಾಶದಿಂದ ಬೀಳುವ ತೇಜಃಪುಂಜವಾದ ಒಂದು ವಸ್ತು. ೨. ಉರಿಯುವ ಕೊಳ್ಳಿ; ಪಂಜು.

ಉಲ್ಟಾ (ನಾ). ೧. ತಲೆಕೆಳಗು; ವಿರುದ್ಧವಾದ ದಿಕ್ಕು. ೨. ವಾಂತಿ. ~ಪಲ್ಟಿ = ಅಸ್ತವ್ಯಸ್ತ; ತಲೆಕೆಳಗು.

ಉಲ್ಬ (ನಾ). ಗರ್ಭಕೋಶ; ಜರಾಯು.

ಉಲ್ಬಣ (ನಾ). ೧. ತೀವ್ರತೆ; ಅತಿಶಯ. ೨. ಮೆದೆ; ರಾಶಿ. (ಗು). ೩. ತೀವ್ರವಾದ; ಹೆಚ್ಚಿನ.

ಉಲ್ಮುಕ (ನಾ). ಉರಿಯುವ ಕೊಳ್ಳಿ.

ಉಲ್ಲಂಘನ(ನೆ) (ನಾ). ೧. ಹಾರುವುದು. ೨. ಮೀರುವುದು; ಅತಿಕ್ರಮಣ.

ಉಲ್ಲಟ (ನಾ). ೧. ಹೊರಳಾಟ. ೨. ಚಂಚಲತೆ.

ಉಲ್ಲಡೆ(ವ) (ನಾ). ಮೆರವಣಿಗೆ ಹೋಗುವಾಗ ಮೇಲೆ ಹಿಡಿಯುವ ಆವರಣ; ಮೇಲ್ಕಾಪು.

ಉಲ್ಲಸಿತ (ಗು). ೧. ಹೊಳೆಯುವ. ೨. ಸೊಗಸಾದ. ೩. ಸಂತೋಷಕರವಾದ.

ಉಲ್ಲಾಪ (ನಾ). ೧. ಅಣಕದ ನುಡಿ; ಕಟಕಿ ಮಾತು. ೨. ಗಟ್ಟಿಯಾದ ಮಾತು. ೩. ದುಃಖ ಅಥವಾ ಬೇನೆಯಲ್ಲಿ ಉಂಟಾಗುವ ಧ್ವನಿಯ ವ್ಯತ್ಯಾಸ.

ಉಲ್ಲಾರ (ನಾ). ೧. ಆವರಣ; ಗೌಸು. ೨. ಮೆತ್ತೆ.

ಉಲ್ಲಾಸ (ನಾ). ೧. ಸಂತೋಷ; ಉತ್ಸಾಹ. ೨. ಹೊಳಪು; ಕಾಂತಿ.

ಉಲ್ಲಿ (ನಾ). ನಾದಿದ ಹಿಟ್ಟು; ಕಣಕ.

ಉಲ್ಲಿಖಿತ (ನಾ). ೧. ಉಲ್ಲೇಖ. (ಗು). ೨. ಬರೆಯಲ್ಪಟ್ಟ. ೩. ಕೆತ್ತಲ್ಪಟ್ಟ.

ಉಲ್ಲು (ನಾ). ೧. ಗೂಗೆ. ೨. ದಡ್ಡ; ಮೂರ್ಖ.

ಉಲ್ಲುಲಿ(ಳಿ)ತ (ಗು). ಹೊರಳಾಡಿದ.

ಉಲ್ಲೇಖ (ನಾ). ೧. ಅಗೆತ. ೨. ಬರೆಹ. ~ಇಸು = ೧. ಬರೆ. ೨. ವರ್ಣಿಸು. ೩. ಉದ್ಧರಿಸು.

ಉಲ್ಲೇಖಿತ (ಗು). ಬರೆದ; ಸೂಚಿಸಿದ.

ಉಲ್ಲೋಲ(ಳ) (ನಾ). ೧. ದೊಡ್ಡ ಅಲೆ. ೨. ವೇಗ. (ಗು). ೩. ಬಲವಾಗಿ ಮೇಲಕ್ಕೆ ಎದ್ದ. ~ಕಲ್ಲೋಲ = ೧. ದೊಡ್ಡ ತೆರೆ. ೨. ಕಲಕಿ ಹೋಗಿರುವ ಸ್ಥಿತಿ; ಮನಃಕ್ಷೋಭೆ.

ಉಶೀರ (ನಾ). ಬಾಳದ ಬೇರು; ಲಾವಂಚದ ಬೇರು.

ಉಷಣ (ನಾ). ೧. ಶುಂಠಿ. ೨. ಮೆಣಸು. ೩. ಹಿಪ್ಪಲಿ.

ಉಷಸ್ಸು (ನಾ). ೧. ಬೆಳಗಿನ ಕಾಲ. ೨. ಉಷಃಕಾಲದ ಅಧಿದೇವತೆ.

ಉಷಿತ (ಗು). ೧. ಸುಡಲ್ಪಟ್ಟ. ೨. ವೇಗವಾದ. ೩. ವಾಸಮಾಡಲ್ಪಟ್ಟ.

ಉಷೆ (ನಾ). ೧. ಅರುಣೋದಯದ ಕಾಲ; ಪ್ರಭಾತ. ೨. ಬಾಣಾಸುರನ ಮಗಳು; ಅನಿರುದ್ಧನ ಹೆಂಡತಿ. ೩. ಸುಡುವಿಕೆ. ೪. ಪಾತ್ರೆ.

ಉಷ್ಟ್ರ (ನಾ). ೧. ಒಂಟೆ. ೨. ಮಣ್ಣಿನ ಪಾತ್ರೆ. ೩. ಕುಂಬಾರನ ಚಕ್ರ. ೪. ಉಷ್ಟ್ರಪಕ್ಷಿ.

ಉಷ್ಣ (ನಾ). ೧. ಬಿಸಿ. ೨. ಸೆಕೆ. ೩. ಬೇಸಗೆಯ ಕಾಲ. ~ಅಂಶು = ಸೂರ್ಯ. ~ಕ(ಗ)ಣ್ಣು = ಒಂದು ಬಗೆಯ ನೇತ್ರರೋಗ.

ಉಷ್ಣೀಷ (ನಾ). ೧. ಮುಂಡಾಸು; ರುಮಾಲು. ೨. ಕಿರೀಟ.

ಉಷ್ಮಕ (ನಾ). ಬೇಸಗೆಯ ಕಾಲ.

ಉಸಲಿ(ಳಿ) (ನಾ). ಹೆಸರು, ಕಡಲೆ ಮೊದಲಾದ ಕಾಳನ್ನು ಬೇಯಿಸಿ ಸಂಬಾರಹಾಕಿದ ತಿನಿಸು; ಗುಗ್ಗುರಿ.

ಉಸಾಬರಿ (ನಾ). ಗೋಜು; ಗೊಡವೆ.

ಉಸಿಕ (ನಾ). ಮೌನಿ.

ಉಸಿಕನೆ (ಅ). ಸುಮ್ಮನೆ.

ಉಸಿರ್(ರು) (ಕ್ರಿ). ೧. ಶ್ವಾಸೋಚ್ಛ್ವಾಸ ಮಾಡು. ೨. ಹೇಳು; ಮಾತನಾಡು. ೩. ಧ್ವನಿಮಾಡು. ೪. ಶ್ವಾಸವನ್ನು ಸ್ವಲ್ಪ ನಿಲ್ಲಿಸು. (ನಾ). ೫. ಶ್ವಾಸ. ೬. ಜೀವ. ೭. ಗಾಳಿ. ೮. ಮಾತು. ೯. ಶಕ್ತಿ; ಚೈತನ್ಯ. ~ಆಟ = ಶ್ವಾಸೋಚ್ಛ್ವಾಸ ಮಾಡುವಿಕೆ. ~ಎತ್ತು = ೧. ಮಾತಾಡು. ೨. ಏದು.

~ತಃ(ದಾ)ಣ = ೧. ಪ್ರಾಣಸ್ಥಾನ; ಮರ್ಮಸ್ಥಳ. ೨.(ಪದ್ಯಗಳಲ್ಲಿ)ಯತಿಸ್ಥಾನ. ~ಹಾಕು = ನಿಟ್ಟುಸಿರು ಬಿಡು; ದುಃಖಿಸು.

ಉಸುಕು(ಗು,ಬು) (ನಾ). ಮರಳು; ಹೊಯಿಗೆ.

ಉಸುರ್(ರು) = ಉಸಿರ್. ~ಅಡಗು = ಸತ್ತು ಹೋಗು. ~ಆನ್ = ದಮ್ಮು ತೆಗೆದುಕೊಳ್ಳು. ~ಊದು = (ಮಕ್ಕಳ ನೆತ್ತಿಯ ಮೇಲೆ) ಉಸಿರನ್ನು ಊದು; ತೂಪಿರಿ. ~ಪೆ(ವೆ)ಣ್ = ವಾಕ್ಕಿನ ಅಧಿದೇವತೆ; ಸರಸ್ವತಿ.

ಉಸುಲು (ನಾ). ಒಳ ಅಳತೆ; ವಿಸ್ತೀರ್ಣ.

ಉಸ್ತಾದ (ನಾ). ಗುರು.

ಉಸ್ತುವಾರಿ (ನಾ). ಮೇಲ್ವಿಚಾರಣೆ.

ಉಳ್(ಳು) (ಕ್ರಿ). ೧. ಇರು. ೨. = ಉಱ್. ~ಅಂಜಿಸು=ಮನದೊಳಗೆ ಭಯವನ್ನುಂಟು ಮಾಡು. ~ಅಱಿ(ರಿ)ತ = ಒಳಜ್ಞಾನ; ಸತ್ಯಪ್ರಜ್ಞೆ. ~ಅಲರ್ = ೧. ಚೆನ್ನಾಗಿ ಅರಳು. ೨. ಚೆನ್ನಾಗಿ ಅರಳಿದ ಹೂವು. ~ಅಳ್ಕು = ಅಂತರಂಗದಲ್ಲಿ ಹೆದರು; ಹಿಂದೆಗೆ. ~ಆತ = ಹಣವುಳ್ಳವನು; ಧನಿಕ. ~ಅಱು(ರು) = ವಾಸಿಯಾಗು; ಮಾಯು.

ಉಳಗುನ್ನಿ (ನಾ). ತುರುಚೆಗಿಡ; ಉರಸಣಿಗೆ.

ಉಳಿ ೧. = ಉಱು. ೨. ಅವಿತುಕೊಳ್ಳು; ಬಚ್ಚಿಟ್ಟುಕೊಳ್ಳು. ೩. ನರ ಹೊರಳು; ಉಳುಕು. (ನಾ). ೪. ಅವಿತುಕೊಳ್ಳುವಿಕೆ. ೫. ಗುಪ್ತಸ್ಥಳ. ೬. ಕಳ್ಳ. ೭. ಲೋಹ ಮೊದಲಾದುವನ್ನು ಕತ್ತರಿಸಲು ಉಪಯೋಗಿಸುವ ಒಂದು ಉಪಕರಣ. ೮. ರಜ; ಬಿಡುವು. ~ಅ(ಯ)ಲಗು = ಉಳಿಯ ಬಾಯಂತೆ ಅಲಗುಳ್ಳ ಬಾಣ. ~ಕ(ಗ)ಡೆ = ೧. ಮಿಕ್ಕದ್ದು; ಉಳಿದುದು. ೨. ಕ್ಷೇಮ; ನೆಮ್ಮದಿ. ~ಕೆ(ಗೆ)ಲಸ = ೧. ಬಡಗಿ ಕೆಲಸ. ೨. ಉಳಿದ ಕೆಲಸ. ~ಸೆಂಡು = ಚೆಂಡನ್ನು ಬಚ್ಚಿಟ್ಟು ಆಡುವ ಒಂದು ಬಗೆಯ ಆಟ.

ಉಳುಕ (ನಾ). ೧. ತಪ್ಪಿಸಿಕೊಂಡವನು; ಮರೆಯಾದವನು. ೨. ಮೃಗಳ್ಳ.

ಉಳುಕಲು (ನಾ). ಮಿಕ್ಕಿದ್ದು; ಅವಶೇಷ.

ಉಳುಕು (ಕ್ರಿ). ೧. ನರ ಹೊರಳು. ೨. ನೋವು ಉಂಟಾಗು. (ನಾ). ೩. ನರ ಹೊರಳುವಿಕೆ. ೪. ನೋವು.

ಉಳುಬಾಳು (ನಾ). ೧. ಬದುಕುವಿಕೆ. ೨. ನೆಮ್ಮದಿ.

ಉಳುಮೆ (ನಾ). ೧. ಮಿಕ್ಕುದು; ಉಳಿದುದು. ೨. = ಉಱುಮೆ.

ಉಳುವಲು (ನಾ). ದಾಟುವ ಜಾಗ; ಕಡಕಲು.

ಉಳೆ (ನಾ). ಜಿಂಕೆ; ಚಿಗರೆ.

ಉಳ್ಕು (ಕ್ರಿ). ೧. ಕಣ್ಣು ಕೋರೈಸು. ೨. ವೇದನೆಯುಂಟುಮಾಡು. ೩. ಧಾರೆಯಾಗಿ ಸುರಿ. (ನಾ). ೪. = ಉಲ್ಕೆ.

ಉಳ್ಳಿ (ನಾ). ೧. ಈರುಳ್ಳಿ. ೨. ಬೆಳ್ಳುಳ್ಳಿ. ೩. = ಉರುಳಿ.

ಉಱ್(ಳ್,ಳು,ಱು) (ಕ್ರಿ). ನೇಗಿಲುಹೊಡೆ.

ಉಱಿ(ಳಿ) (ಕ್ರಿ). ೧. ಬಿಡು; ತ್ಯಜಿಸು. ೨. ಮಿಗು; ಹೊರತಾಗು. ೩. ಬದುಕಿರು. ೪. ಮೀರು; ಅತಿಕ್ರಮಿಸು. ೫. ಲಾಭವಾಗು. ೬. ಶಾಶ್ವತವಾಗಿ ನೆಲಸು. ೭. ಇರು; ತಂಗು. (ನಾ). ೮. ಮಿಕ್ಕುದು; ಅವಶೇಷ. ೯. ಇರುವ ಸ್ಥಳ. ೧೦. ಶಕುನದ ಪಕ್ಷಿ.

ಉಱಿ(ಳಿ)ಕು (ನಾ). ೧. ಉಳಿದುದು. ೨. ವಾದ್ಯ.

ಉಱಿ(ಳಿ)ಪು (ಕ್ರಿ). ೧. ಇರುವಂತೆ ಮಾಡು; ನೆಲೆಯಾಗಿಸು. ೨. ಮರೆಮಾಡು. ೩. ಮಿಗಿಸು. ೪. ಬದುಕಿಸು.

ಉಱು(ಳು)(ಂ)ಗು (ಕ್ರಿ). ೧. ಒಲಿ; ಪ್ರೀತಿಸು. (ನಾ). ೨. ಪ್ರೀತಿ; ಒಲುಮೆ.

ಉಬು(ಳು)ಮೆ (ನಾ). ೧. ಉಳುವಿಕೆ; ಬೇಸಾಯ. ೨. ಗೇಣಿಗೆ ಕೊಟ್ಟ ಹೊಲ.

ಉಬ್ಬಿ(ಳ್ಗಿ) (ನಾ). ಒಂದು ಬಗೆಯ ವ್ರತ.

ಉಬ್ಗೆ(ಳ್ಗೆ) (ನಾ). ಅನುರಾಗ; ಪ್ರೀತಿ.

ಉಬ್ದು(ಳ್ದು) (ನಾ). ಒಂದು ಬಗೆಯ ಧಾನ್ಯ; ಉದ್ದು.



ಊ (ನಾ). ಕನ್ನಡ ವರ್ಣಮಾಲೆಯ ಆರನೆಯ ವರ್ಣ.

ಊಂಕು (ಕ್ರಿ). ೧. ಧ್ಯಾನಿಸು ; ನೆನೆ. (ನಾ). ೨. ನೆಗೆತ. ~ಇಡು = ತೂಗಾಡು.

ಊಂಟು (ಕ್ರಿ). ಉಬ್ಬಿ ಬೆಳೆ.

ಊಕ (ನಾ). ೧. ಪ್ರಯತ್ನ. ೨. ಭಾವಿಸುವಿಕೆ; ಚಿಂತನೆ.

ಊಗು (ಕ್ರಿ). ೧. ತೂಗು ; ಜೋಲು. ೨. ಪ್ರವೇಶಿಸು. (ನಾ). ೩. ಹಂಚಿಕಡ್ಡಿ ಮುಂತಾದುವುಗಳ ಮುಳ್ಳು.

ಊಚ = ಉಂಚ. ~ನೀಚ = ಮೇಲು ಮತ್ತು ಕೀಳು.

ಊಚಿ (ನಾ). ೧. ಒಂದು ಬಗೆಯ ಹುಲ್ಲು ; ಹಂಚಿಹುಲ್ಲು. (ಗು). ೨. ಶ್ರೇಷ್ಠವಾದ.

ಊಟ (ನಾ). ಆಹಾರವನ್ನು ತೆಗೆದುಕೊಳ್ಳುವುದು ; ಭೋಜನ.

ಊಟೆ (ನಾ). ನೀರಿನ ಚಿಲುಮೆ ; ಬುಗ್ಗೆ.

ಊಡು (ಕ್ರಿ). ೧. ಊಟಮಾಡು ; ಕುಡಿ ; ತಿನ್ನು. ೨. ತಿನ್ನಿಸು; ಕುಡಿಸು. ೩.ಲೇಪಿಸು. (ನಾ). ೪. ತಿನಿಸು ; ಆಹಾರ. ೫. ಆಧಾರ ; ಊರೆ. ೬.ಗುರಿ. ~ಕೊ(ಗೊ)ಳ್ = ದಾಟ ಹೊರಬೀಳು.

ಊಢೆ (ನಾ). ಮದುವೆಯಾದವಳು.

ಊಣ (ನಾ). ೧. ಊಟ. ೨. = ಊಣಯ.

ಊಣಯ (ನಾ). ಕುಂದು ; ಕೊರತೆ.

ಊತ (ನಾ). ೧.ಬಾತುಕೊಳ್ಳುವಿಕೆ. ೨.ಸ್ಥಿರತೆ.

ಊತಪ್ಪ = ಉತ್ತಪ್ಪ.

ಊತಿ (ನಾ). ೧. ಒಂದು ಬಗೆಯ ರೋಗ. ೨. ವೇಗ ; ರಭಸ. ೩. ನೇಯುವುದು. ೪. ಬಯಕೆ.

ಊದರ(ರೆ,ಲು) (ನಾ). ೧.ಹೊಗೆ. ೨.ಬಾವು ; ಊತ. ೩. ಹುಲ್ಲು ; ಕಳೆ.

ಊದಾ (ನಾ). ಒಂದು ಬಣ್ಣ ; ಕೆನ್ನೀಲಿ ಅಥವಾ ಬೂದುಬಣ್ಣ.

ಊದು ೧. = ಊಬು. ೨. ಧ್ವನಿಮಾಡು. ೩. ಗುಟ್ಟಾಗಿ ಹೇಳು ; ಚಾಡಿ ಹೇಳು. ೪. ಬಾತುಕೊಳ್ಳು ; ಉಬ್ಬು. (ನಾ). ೫. ಲೋಬಾನ. ~ಇಸು = ೧. ಗಾಳಿ ಬೀಸುವಂತೆ ಮಾಡು. ೨. ಲೋಹವನ್ನು ಶುದ್ಧಗೊಳಿಸು. ೩. ಕೊಂಬು, ಕಹಳೆ ಮೊದಲಾದುವನ್ನು ಊದುವಂತೆ ಮಾಡು. ~ಕಡ್ಡಿ = ಧೂಪಕ್ಕಾಗಿ ಸುಗಂಧವಸ್ತುಗಳಿಂದ ತಯಾರಿಸಿದ ಕಡ್ಡಿ; ಗಂಧದ ಕಡ್ಡಿ. ~ಕಾಮಾಲೆ = ದೇಹವು ಊದಿಕೊಂಡು ಹಳದಿ ಬಣ್ಣಕ್ಕೆ ತಿರುಗುವ ಒಂದು ರೋಗ; ಅರಿಸಿನಮುಂಡಿಗೆ ರೋಗ. ~ಕೊಳವೆ = ಬೆಂಕಿಯನ್ನು ಹೊತ್ತಿಸುವುದಕ್ಕಾಗಿ ಗಾಳಿಯನ್ನು ಊದುವ ಕೊಳವೆ. ~ದಾನು(ನಿ) = ಊದುಕಡ್ಡಿ ಸಿಕ್ಕಿಸುವ ಪಾತ್ರೆ. ~ಬತ್ತಿ = ಊದುಕಡ್ಡಿ.

ಊನ (ನಾ). ೧. ಕುಂದು ; ನ್ಯೂನತೆ. ೨.ಅಂಗಹೀನತೆ. ~ಮನ = ಅಲ್ಪಮನಸ್ಕ ; ಸಣ್ಣ ಮನಸ್ಸಿನ ವ್ಯಕ್ತಿ. ~ಮಾಸಿಕ = ಸತ್ತವರಿಗಾಗಿ ಅವರು ಸತ್ತ ಒಂದು ವರ್ಷದೊಳಗೆ ನಡೆಸುವ ಶ್ರಾದ್ಧಕಾರ್ಯ.

ಊಬ (ನಾ). ಕಾವು ; ಶಾಖ.

ಊಬು (ಕ್ರಿ). ೧. (ಗಾಳಿ) ಬೀಸು. ೨. ಬಾಯಿಂದ ಗಾಳಿಯನ್ನು ಹಾಕು. (ನಾ). ೩. ಗೋಧಿ ಮುಂತಾದ ಧಾನ್ಯಗಳ ತೆನೆಯ ಮೊನಚಾದ ತುದಿ. ೪. ಹಂಚಿಕಡ್ಡಿ ಮುಳ್ಳು.

ಊಮೆ (ನಾ). ೧. ಮೂಗ. ೨.ಗೆಳೆಯ.

ಊರ್(ರು) ೧. = ಊಱು. (ನಾ). ೨. ಜನವಾಸಮಾಡುವ ಸ್ಥಳ ; ಪಟ್ಟಣ. ೩. ತೊಡೆ. ~ಅಗಲ = ೧. ಊರಿನ ತುಂಬ. ೨. ಬಹಳ

ಅಗಲ. ~ಆನೆ = ಹಂದಿ; ಸೂಕರ. ~ಆಳ್(ಳು) = ೧. ಊರಿನ ಆಧಿಪತ್ಯ ನಡೆಸು. ೨. ಊರಿನ ಮುಖ್ಯಸ್ಥ. ~ಇಚ =೧. ಊರಿನಲ್ಲಿ ಹುಟ್ಟಿದವನು. ೨. ದಡ್ಡ; ಗಾವಿಲ. ~ಏಱು(ರು) = ಬೇರೆ ಊರಿಗೆ ಒಕ್ಕಲು ಹೋಗು; ವಲಸೆ ಹೋಗು. ~ಕಾ(ಗಾ)ಯ್(ಯಿ)=ಉಪ್ಪಿನಕಾಯಿ. ~ದಘ್ನ=ತೊಡೆ ಮುಳುಗುವಷ್ಟು(ನೀರಿನ) ಮಟ್ಟವುಳ್ಳ. ~ಬಸವಿ = ೧. ದೇವರಿಗೆ ಮೀಸಲಾಗಿ ಬಿಟ್ಟ ಹೆಣ್ಣು. ೨. ಸೂಳೆ. ~ಸಿಂಗ= ಗ್ರಾಮಸಿಂಹ; ನಾಯಿ.

ಊರೆ (ನಾ). ಆಧಾರ; ಆಶ್ರಯ.

ಊಱು(ರು) (ಕ್ರಿ). ೧. ನೆಲೆಯಾಗಿ ನಿಲ್ಲು; ನೆಲಸು. ೨. ನೆಡು; ಭದ್ರವಾಗಿ ನಿಲ್ಲಿಸು. ೩. ಸ್ಥಾಪಿಸು. ೪. ಕಚ್ಚು. ೫. ಆವರಿಸು. ೬. ಅಂಟಿಕೊ. ೭. ಜಿನುಗು. ೮. ಸುರಿ. ೯.ತೇವವಾಗು;ನೆನೆ. ~(ಂ)ಕೊ(ಗೊ)ೞು =೧. ನಡೆಯುವಾಗ ಆಧಾರವಾಗಿ ಊರಿ ಕೊಳ್ಳುವ ಬೆತ್ತ. ೨. ತೆಪ್ಪ ನಡೆಸುವ ಕೋಲು. ೩. ಆಧಾರ.

ಊರ್ಜ (ನಾ). ೧. ಶಕ್ತಿ. ೨. ಪ್ರಯತ್ನ. ೩. ಕಾರ್ತಿಕಮಾಸ.

ಊರ್ಜಿತ (ಗು). ೧. ಶಕ್ತಿಯಿಂದ ಕೂಡಿದ; ಬಲಿಷ್ಠವಾದ. ೨. ನೆಲೆ ನಿಂತ; ಏಳಿಗೆಯನ್ನು ಪಡೆದ. ೩. ಹೆಚ್ಚಿನ; ಶ್ರೇಷ್ಠವಾದ.

ಊರ್ಣ (ನಾ). ೧. ಉಣ್ಣೆ. ೨. ಉಣ್ಣೆಯ ಬಟ್ಟೆ. ~ಕೇಶ = (ಚಕ್ರವರ್ತಿತ್ವ ಸೂಚಕ ವಾದ) ಹುಬ್ಬುಗಳ ಮಧ್ಯದಲ್ಲಿರುವ ಸುಳಿಯ ಕೂದಲು. ~ನಾಭ = ಜೇಡರಹುಳು.

ಊರ್ಣಾಯು ೧. = ಊರ್ಣ. ೨. ಕಂಬಳಿ. ೩. ಕುರಿ; ಟಗರು. ೪. ಕಂಬಳಿಯ ಹುಳು.

ಊರ್ಧ್ವ (ನಾ). ೧. ಮೇಲ್ಭಾಗ. (ಗು). ೨. ಮೇಲಿನ; ಎತ್ತರದಲ್ಲಿರುವ. ~ಕ್ರಿಯೆ = ದಹನಾದಿ ಶವಸಂಸ್ಕಾರ; ಅಂತ್ಯಕ್ರಿಯೆ. ~ಪಿಂಡ = ಆನೆಯ ಗಂಡಸ್ಥಳ. ~ಪುಂಡ್ರ = ಮೇಲುಮುಖವಾಗಿ ಧರಿಸುವ ಗೆರೆ; ನಾಮ. ~ಶ್ವಾಸ = ೧. ದಮ್ಮು. ೨. ಪ್ರಾಣಾಯಾಮ.

ಊರ್ಧ್ವಕ (ನಾ). ಒಂದು ವಿಧವಾದ ಮದ್ದಳೆ.

ಊರ್ಮಿ (ನಾ). ೧. ಉತ್ಸಾಹ; ಹೆಚ್ಚಳ. ೨. ದೊಡ್ಡ ಅಲೆ. ೩. ಬಟ್ಟೆಯ ಮಡಿಕೆ; ನಿರಿ. ೪. ಪ್ರವಾಹ.

ಊರ್ಮಿಕ(ಕೆ) (ನಾ). ೧. ಉಂಗುರ. ೨. ವಿಷಾದ; ಖೇದ.

ಊರ್ಮಿಳೆ (ನಾ). ಜನಕರಾಜನ ಮಗಳು; ಲಕ್ಷ್ಮಣನ ಹೆಂಡತಿ.

ಊರ್ಮು (ಕ್ರಿ). ಅಹಂಕಾರ ಪಡು.

ಊರ್ಮೆ (ನಾ). ಆಧಿಕ್ಯ; ಶ್ರೇಷ್ಠತೆ.

ಊರ್ವ (ನಾ). ೧. ಸಮುದ್ರದ ಬೆಂಕಿ. ೨.ಜಲಾಶಯ. ~ಅನಲ(ಳ) = ಬಡಬಾಗ್ನಿ.

ಊರ್ವಶಿ (ನಾ). ನಾರಾಯಣನೆಂಬ ಋಷಿಯ ತೊಡೆಯಿಂದ ಜನಿಸಿದವಳು; ಒಬ್ಬ ಅಪ್ಸರೆ.

ಊಷರ (ನಾ). ಚೌಳುಭೂಮಿ. ~ಅಂಬು = ಚೌಳು ನೆಲದ ನೀರು.

ಊಷ್ಮ (ನಾ). ೧.ಶಾಖ; ಬೇಗೆ. ೨.ಬೇಸಗೆಯ ಕಾಲ. ೩. ತೇಜಸ್ಸು.

ಊಸರವಳ್ಳಿ (ನಾ). ಕ್ಷಣಕ್ಷಣಕ್ಕೂ ಬಣ್ಣ ಬದಲಾಯಿಸುವ ಒಂದು ಪ್ರಾಣಿ; ಓತಿ; ಗೋಸುಂಬೆ.

ಊಸು (ಕ್ರಿ). ಹಳಸು; ಕೆಟ್ಟುಹೋಗು.

ಊಹೆ(ನಾ). ಎಣಿಕೆ; ಅಂದಾಜು ಮಾಡುವುದು.

ಊಳ್(ಳು) (ಕ್ರಿ). ೧.ಗಟ್ಟಿಯಾಗಿ ಕೂಗು; ಕಿರುಚು. ೨. ದೂರದಿಂದ ಕರೆ. ೩.(ನಾಯಿ ನರಿಗಳು) ಕೂಗು. ೪. ನಿಂದಿಸು; ಬಯ್ಯು. (ನಾ). ೫. ಹುರಳಿಲ್ಲದೆ ಗಟ್ಟಿಯಾಗಿ ಅರಚುವುದು. ೬. ನಾಯಿನರಿಗಳ ಧ್ವನಿ.

ಊಟಿ(ಳಿ)ಗ (ನಾ). ಸೇವೆ; ಜೀತ.

**ಋ** (ನಾ). ಕನ್ನಡ ವರ್ಣಮಾಲೆಯ ಏಳನೆಯ ಅಕ್ಷರ.

**ಋಕ್ಕು** (ನಾ). ಋಗ್ವೇದದ ಮಂತ್ರ.

**ಋಕ್ಥ** (ನಾ). ೧. ಆಸ್ತಿ. ೨. ಹಣ; ಐಶ್ವರ್ಯ.

**ಋಕ್ಷ** (ನಾ). ೧. ಕರಡಿ. ೨. ನಕ್ಷತ್ರ.

**ಋಗ್ವೇದ** (ನಾ). ನಾಲ್ಕು ವೇದಗಳಲ್ಲಿ ಮೊದಲನೆಯದು.

**ಋಗ್ವೇದಿ** (ನಾ). ೧. ಋಗ್ವೇದವನ್ನು ಅನುಸರಿಸುವವನು. (ಗು). ೨. ಋಗ್ವೇದಕ್ಕೆ ಸಂಬಂಧಿಸಿದ.

**ಋಚ(ಚೆ)** = ಋಕ್ಕು.

**ಋಜೀಷ** (ನಾ). ಹಿಟ್ಟು ಮಾಡುವ ಪಾತ್ರೆ.

**ಋಜು** (ಗು). ೧. ನೇರವಾದ; ಪ್ರಾಮಾಣಿಕವಾದ. ೨. ಆಡಂಬರವಿಲ್ಲದ; ಸರಳವಾದ. **~ರೋಹಿತ** =೧. ಇಂದ್ರನ ಧನುಸ್ಸು. ೨. ಕಾಮನ ಬಿಲ್ಲು.

**ಋಣ** (ನಾ). ೧. ಸಾಲ. ೨. ಕೋಟೆ. ೩. ನೀರು. ೪. ಹಂಗು. ೫. ಉಪಕಾರ. **~ಅನುಬಂಧ** = ಪೂರ್ವಜನ್ಮದ ಋಣಸಂಬಂಧ. **~ತ್ರಯ** = ದೇವಋಣ, ಪಿತೃಋಣ ಮತ್ತು ಋಷಿಋಣ ಎಂಬ ಮೂರು ಬಗೆಯ ಋಣಗಳು.

**ಋಣಿ** (ನಾ). ೧. ಸಾಲವುಳ್ಳವನು ; ಸಾಲಗಾರ. ೨. ಹಂಗಿಗೆ ಒಳಗಾದವನು.

**ಋತ** (ನಾ). ೧. ಸತ್ಯ. ೨. ಧರ್ಮ ; ನ್ಯಾಯ.

**ಋತಿ** (ನಾ). ೧. ಹೋಗುವುದು. ೨. ಮಾರ್ಗ. ೩. ನಿಂದೆ. ೪. ಅಭಿವೃದ್ಧಿ.

**ಋತು** (ನಾ). ೧. ವರ್ಷದಲ್ಲಿ ಎರಡೆರಡು ತಿಂಗಳುಗಳ ಕಾಲದ ಅವಧಿ. ೨. ಮುಟ್ಟು ; ರಜಸ್ಸು. **~ಸಾರ್ವಭೌಮ** = ಋತುಗಳ ಚಕ್ರವರ್ತಿ ; ವಸಂತ.

**ಋತ್ವಿಕ್ಕು(ಜ)** (ನಾ). ಯಜ್ಞ ಪುರೋಹಿತ.

**ಋದ್ಧ** (ನಾ). ೧. ರಾಶಿ ಹಾಕಿದ ಧಾನ್ಯ. (ಗು). ೨. ವೃದ್ಧಿ ಹೊಂದಿದ ; ತುಂಬಿದ.

**ಋದ್ಧಿ** (ನಾ). ೧. ಅಭಿವೃದ್ಧಿ. ೨. ಕೈಗೂಡುವಿಕೆ ; ಸಿದ್ಧಿ. ೩. ಐಶ್ವರ್ಯ.

**ಋದ್ಧಿಮಂತ** (ನಾ). ೧. ಶ್ರೀಮಂತ. ೨. ಪವಾಡಗಳನ್ನು ನಡೆಸುವ ಸಾಮರ್ಥ್ಯವುಳ್ಳವನು.

**ಋಷಭ** (ನಾ). ಗೂಳಿ; ಎತ್ತು.

**ಋಷಿ** (ನಾ). ೧. ತಪಸ್ವಿ. ೨. ಸಪ್ತರ್ಷಿ ಎಂಬ ನಕ್ಷತ್ರಮಂಡಲ. **~ಧುರ್ಯ** = ಋಷಿಶ್ರೇಷ್ಠ ; ಶಿವ. **~ಪುತ್ರಿ** = ೧. ಋಷಿಯ ಮಗಳು. ೨. ಒಂದು ಬಗೆಯ ಸುಗಂಧಪತ್ರ; ದವನ.



ಎ (ನಾ). ೧. ಕನ್ನಡ ವರ್ಣಮಾಲೆಯ ಹನ್ನೊಂದನೆಯ ಅಕ್ಷರ. (ಪ್ರ). ೨. ಸ್ತ್ರೀಲಿಂಗ ಪ್ರತ್ಯಯ.

ಎಂಕಲು (ನಾ). ಕೊಂಬೆ; ರೆಂಬೆ.

ಎಂಗ (ನಾ). ಮೂಢ; ತಿಳಿಗೇಡಿ; ಎಗ್ಗ.

ಎಂಗಿ ೧. = ಎಂಗ. ೨. ಮೋಸ; ವಂಚನೆ. ೩. ವಂಚಕ.

ಎಂಚೆಯ (ನಾ). ಕಿವಿಯ ಆಭರಣ.

ಎಂಜಲ್(ಲ,ಲು) (ನಾ). ೧. ತಿಂದು ಉಳಿದದ್ದು; ಉಚ್ಛಿಷ್ಟ. ೨. ಇತರರು ಅನುಭವಿಸಿ ಬಿಟ್ಟ ಯಾವುದಾದರೂ ವಸ್ತು.

ಎಂಟು (ನಾ). ಒಂದು ಸಂಖ್ಯಾವಾಚಕ. ~ಅಡಿ = ಎಂಟು ಪಾದಗಳನ್ನುಳ್ಳದ್ದು; ಶರಭ. ~ಎಡೆ = ಮುತ್ತು ಹುಟ್ಟುವ ಎಂಟು ಸ್ಥಳಗಳು.

ಎಂತಪ್ಪ(ಹ) (ಗು). ಯಾವ ರೀತಿಯ.

ಎಂತು (ಅ). ಹೇಗೆ; ಯಾವ ರೀತಿಯಲ್ಲಿ.

ಎಂತುಟು (ಗು). ೧. ಎಷ್ಟು. ೨. = ಎಂತು.

ಎಂದು (ನಾ). ೧. ಯಾವ ದಿನ. ೨. ಯಾವ ವೇಳೆ.

ಎಂದುಂ (ಅ). ಯಾವಾಗಲೂ; ಎಂದಿಗೂ.

ಎಕತಾಯಿ (ನಾ). ಒಂದು ತೆರನಾದ ಬಟ್ಟೆ.

ಎಕರೆ (ನಾ). ಭೂಮಿಯ ಒಂದು ಅಳತೆ; ನಲವತ್ತು ಗುಂಟೆಗಳ ಸ್ಥಳ.

ಎಕ್ಕ (ನಾ). ೧. ಒಂದು; ಒಂಟಿ. ೨. ಎಕ್ಕದ ಗಿಡ. ೩. (ಪಗಡೆ ಆಟದಲ್ಲಿ) ದಾಳದ ಮೇಲಿನ ಒಂದನೆಯ ಸಂಖ್ಯೆಯ ಗುರುತು. ೪. ಇಸ್ಪೀಟಿನ ಎಲೆ; ಹಾಸು. ~ತಕ್ಕು = ಸಮಾನವಾದ ಶಕ್ತಿ ಅಥವಾ ಸಾಮರ್ಥ್ಯ. ~ತಾ(ದಾ)ಳೆ = ಬೂರುಗದ ಮರ. ~ಸರ = ೧. ಏಕಾವಳಿ. ೨. ಒಂದೇ ಬಾಣ. ೩. ಒಂದೇ ಧ್ವನಿ. ೪. ಒಂಟಿಯಾಗಿ ಸಂಚರಿಸುವುದು. ೫. ನಿರಂತರತೆ. ~ಸೊಕ್ಕು = ಅಹಂಕಾರ.

ಎಕ್ಕಂಜಿ (ನಾ). ಒಂದು ಬಗೆಯ ತಂತೀವಾದ್ಯ.

ಎಕ್ಕಛಾಯ (ನಾ). ೧. ಒಂದೇ ಬಣ್ಣ. ೨. ಇಂದ್ರ ನೀಲರತ್ನದಲ್ಲಿ ಒಂದು ಬಗೆ.

ಎಕ್ಕಟಿ(ಟೆ) (ನಾ). ೧. ಒಬ್ಬಂಟಿಗ. ೨. ಗುಟ್ಟು; ರಹಸ್ಯ. (ಗು). ೩. ಗುಟ್ಟಾದ. (ಅ). ೪. ಗುಟ್ಟಾಗಿ; ರಹಸ್ಯವಾಗಿ. ~ಕಾ(ಗಾ)ಳೆಗ = ದ್ವಂದ್ವಯುದ್ಧ.

ಎಕ್ಕಟಿಗ (ನಾ). ೧. ಗೂಢಚಾರ. ೨. ಒಬ್ಬಂಟಿಗ. ೩. ಆಪ್ತ.

ಎಕ್ಕಡ = ಎಕ್ಕವಡ.

ಎಕ್ಕಡಿ (ನಾ). ಪಗಡೆ ಆಟದಲ್ಲಿ ಒಂದು ವಿಧ.

ಎಕ್ಕಡು (ನಾ). ಬಿಕ್ಕಳಿಕೆ.

ಎಕ್ಕತಳ (ನಾ). ಗೊತ್ತಾದ ಸ್ಥಳ; ನಿಯತವಾದ ಜಾಗ. ~(ಂ)ಕೊ(ಗೊ)ಳ್ ಒಂದಾಗಿ ತೆಗೆದುಕೊ; ಸಮವಾಗಿ ಗಣಿಸು.

ಎಕ್ಕತಾಳಿ (ನಾ). ಹಾಸ್ಯ; ಗೇಲಿ.

ಎಕ್ಕತುಳ (ನಾ). ೧. ಒಂದೇ ತೂಕ. ೨. ಪರಾಕ್ರಮ. ೩. ದ್ವಂದ್ವಯುದ್ಧ.

ಎಕ್ಕನಾತಿ (ನಾ). ಒಂದು ಕ್ಷುದ್ರದೇವತೆ.

ಎಕ್ಕಬಾಗೆ (ನಾ). ಒಂದೇ ಪಾಲು, – ಭಾಗ.

ಎಕ್ಕರ (ನಾ). ಕೀಳು ಮನುಷ್ಯ; ನೀಚ.

ಎಕ್ಕರಿಸು (ಕ್ರಿ). ಗೇಲಿ ಮಾಡು; ಅಣಕಿಸು.

ಎಕ್ಕಲ (ನಾ). ೧. ಕಾಡುಹಂದಿ. ೨. ಒಂಟಿ. ೩. ಸಲಗ. ೪. ಶ್ರೇಷ್ಠ. ೫. ಬಲಿಷ್ಠ. ~ಆವಣ = ಒಂದೇ ಅಂಗಡಿ; ಏಕಾಶ್ರಯ. ~ಗಾಣ = ಪಕ್ಕವಾದ್ಯಗಳಿಲ್ಲದೆ ಒಬ್ಬನೇ ಹಾಡುವವನು; ತನಿ ಸಂಗೀತಗಾರ. ~ದೇವಿ = ರೇಣುಕೆ; ಎಲ್ಲಮ್ಮ. ~ರಾವುತ = ಶ್ರೇಷ್ಠನಾದ ಸವಾರ.

ಎಕ್ಕಲು (ನಾ). ಒಂದು ಬಗೆಯ ಮಣ್ಣು.
ಎಕ್ಕವಡ (ನಾ). ೧. ಚಪ್ಪಲಿ; ಕೆರ. ೨. ಹಕ್ಕಿಗಳನ್ನು ಹಿಡಿಯುವ ಬಟ್ಟೆ.
ಎಕ್ಕಸ (ನಾ). ೧. ವೇಗ. ೨. ಅಹಂಕಾರ.
ಎಕ್ಕಸಕ್ಕ (ನಾ). ೧. ಅಸಂಬದ್ಧದ ಮಾತು. ೨. ಅಸಂಬದ್ಧ ಪ್ರಲಾಪಿ.
ಎಕ್ಕಳಿಸು (ಕ್ರಿ). ತಗ್ಗು; ಸಂಕೋಚವಾಗು.
ಎಕ್ಕಳೆ (ನಾ). ಒಂದು ಜಾತಿಯ ಕೀಟ; ಜಿರಲೆ.
ಎಕ್ಕಾವಳಿ (ನಾ). ಒಂದು ಎಳೆಯ ಸರ.
ಎಕ್ಕು (ಕ್ರಿ). ೧. (ಹತ್ತಿಯನ್ನು) ಬೇರೆಮಾಡು; ಹತ್ತಿಯನ್ನು ಬಿಡಿಸು. ೨. ಹೊಡೆ; ಬಡಿ. ೩. ತೊಂದರೆಗೊಳಿಸು. ೪. ಭೇದಿಯಾಗು. ೫. ಮೇಲಕ್ಕೆ ಏರು. ~ಇಸು = ೧. ಹತ್ತಿಯನ್ನು ಬಿಡಿಸಿಡು. ೨. ಸೀಳು; ವಿಭಾಗಿಸು.
ಎಕ್ಕೆ (ನಾ). ೧. ಜೊತೆ; ಸಂಗಡ. ೨. ಗುಂಪು. ೩. ಎಕ್ಕದ ಗಿಡ. ೪. ಮಂಚದ ಚೌಕಟ್ಟು. ೫. ಇಕ್ಕೆ; ಮನೆ. ~ಎಕ್ಕೆ = ೧. ಒಂದರ ಮೇಲೊಂದಾಗಿ; ಮೇಲೆಮೇಲೆ. ೨. ಪರಸ್ಪರವಾಗಿ. ~ಸಾ(ವಾ)ಯ್ = ಒಮ್ಮೊಂದೊಮ್ಮೆ ಮೇಲೆನುಗ್ಗು; ಮುನ್ನುಗ್ಗು. ~ಪಿ(ವಿ)ಂಡು = ಶಿಷ್ಯರ ಗುಂಪು.
ಎಗಚಿಗ (ನಾ). ಹಾಸ್ಯಗಾರ.
ಎಗಟು (ಗು). ೧. (ವಿಪರೀತ ಸೇವನೆಯಿಂದ) ರುಚಿಗೆಟ್ಟ; ಅಸಹ್ಯವಾದ. ೨. ಒರಟಾದ.
ಎಗರು (ಕ್ರಿ). ೧. ಚಿಮ್ಮು; ಜಿಗಿ. ೨. ಸವೆದು ಹೋಗು.
ಎಗಲು = ಎಂಕಲು.
ಎಗು (ನಾ). ಮೇಲೆ ಹತ್ತುವುದು.
ಎಗ್ಗ (ನಾ). ದಡ್ಡ; ಗಾಂಪ.
ಎಗ್ಗಲ(ಳ) (ನಾ). ಆಧಿಕ್ಯ; ಬಹಳ.
ಎಗ್ಗಾಮುಗ್ಗಾ (ಅ). ಹಿಂದಕ್ಕೆ ಮುಂದಕ್ಕೆ.
ಎಗ್ಗು (ಕ್ರಿ). ೧. ಬಿಕ್ಕಳಿಸು. (ನಾ). ೨. ಹೆಡ್ಡತನ; ದಡ್ಡತನ. ೩. ನಾಚಿಕೆ; ಸಂಕೋಚ. ೪. ಕಡಮೆ. ~ಅಱಿ(ರಿ) = ನಾಚಿಕೆ ಪಡು. ~ಉಳಿ = ಗಾಂಪ; ಒರಟ.
ಎಚ್ಚ (ನಾ). ಹಿಕ್ಕೆ; ಪಿಚಿಕೆ.
ಎಚ್ಚಕ (ನಾ). ಕೊಡುವವನು; ದಾತ.
ಎಚ್ಚರ = ಎಚ್ಚಱ್. ~ತ(ದ)ಪ್ಪು = ಮೈಮರೆ; ಮೂರ್ಛೆಹೋಗು.
ಎಚ್ಚಱು(ರು) = ಎಚ್ಚಱ್.
ಎಚ್ಚಿತ (ಗು). ಸರಿಯಾದ; ಯೋಗ್ಯವಾದ.
ಎಚ್ಚು (ಕ್ರಿ). ೧. ಲೇಪಿಸು. ೨. ಸರಿಪಡಿಸು; ಸಮಮಾಡು. ೩. ಅಲಂಕರಿಸು.
ಎಜ್ಜ (ನಾ). ವೆಜ್ಜ; ತೂತು.
ಎಟಕು (ಕ್ರಿ). ೧. (ಎತ್ತರದಲ್ಲಿರುವ ಪದಾರ್ಥವು) ಕೈಗೆ ಸಿಕ್ಕು; ನಿಲುಕು. ೨. ಸಾಕಾಗು; ಪರ್ಯಾಪ್ತವಾಗು.
ಎಟುಕು ೧. = ಎಟಕು. (ನಾ). ೨. ನಿಲುಕುವಿಕೆ; ಕೈಗೆ ಸಿಗುವಿಕೆ.
ಎಟುವ (ನಾ). ಸಲ್ಲದವನು; ಕೆಲಸಕ್ಕೆ ಬಾರದವನು.
ಎಟ್ಟೆ (ನಾ). ೧. ಹಠಮಾರಿ; ಮೊಂಡ. ೨. ಒಂದು ಬಗೆಯ ಮೀನು. (ಗು). ೩. ಒಣಗಿ ಬಿರುಸಾದ; ಬಂಜರಾದ.
ಎಟ್ಟುಗೆ (ನಾ). ಕೈಬಟ್ಟಲು.
ಎಡ (ನಾ). ೧. ವಾಮಭಾಗ. ೨. ಕಡಮೆಯಾದದ್ದು. ೩. ಎಳೆಯದು; ಮರಿ. ~ಕ(ಗ)ಲಿಸು = ಎಡಕ್ಕೆ ಸರಿಸು; ಬದಿಗೊತ್ತು. ~ಪಕ್ಷ = ೧. ವಾಮಪಕ್ಷ. ೨. ವಿರೋಧಪಕ್ಷ.
ಎಡ(ಂ)ಪು(ವು,ಹು) (ಕ್ರಿ). ೧. ಬೀಳುವಂತಾಗು; ಮುಗ್ಗರಿಸು. ೨. ತಪ್ಪುಮಾಡು. (ನಾ). ೩. ಮುಗ್ಗರಿಸುವಿಕೆ. ೪. ತಪ್ಪು; ದೋಷ.
ಎಡಗಯ್ಯ (ನಾ). ೧. ಎಡಗೈಯಿಂದಲೇ ಕೆಲಸವನ್ನು ಮಾಡುವವನು; ಲೊಡ್ಡ. ೨. ಆದಿಕರ್ಣಾಟಕರಲ್ಲಿ ಒಂದು ಪಂಗಡ.

ಎಡಚ ೧. = ಎಡಗಯ್ಯ. ೨. ಅಲ್ಪ ; ಕೀಳ.
ಎಡಚು(ಸು) (ನಾ). ೧. ತೊಂದರೆ ; ಅಡ್ಡಿ. ೨. ಎಡಗೈಯಲ್ಲಿ ಕೆಲಸ ಮಾಡುವ ಅಭ್ಯಾಸ.
ಎಡತಾಕು (ಕ್ರಿ). ಅಡ್ಡಾಡು ; ಸುಳಿ.
ಎಡತಿ (ನಾ). ೧. ಗೊಲ್ಲಗಿತ್ತಿ. ೨. ಮಧ್ಯ ವಯಸ್ಸಿನವಳು.
ಎಡಬಿಡಂಗಿ (ನಾ). ಗೊಂದಲಗೊಂಡವನು.
ಎಡರ್(ರು) (ಕ್ರಿ). ೧. ಬಡತನವನ್ನು ಹೊಂದು. (ನಾ). ೨. ಅಡಚಣೆ ; ಅಡ್ಡಿ. ~ಕೆ(ಗೆ)ೀಡಿ = ಅಡ್ಡಿಗಳನ್ನು ನಿವಾರಿಸುವವನು ; ವಿನಾಯಕ.
ಎಡಱು(ರು) (ಕ್ರಿ). ೧. ಪ್ರತಿಭಟಿಸು ; ವಿರೋಧಿಸು. ೨. ತೊಂದರೆ ಮಾಡು ; ಕಷ್ಟಪಡಿಸು. (ನಾ). ೩. ಬಡತನ. ೪. ವಕ್ರತೆ.
ಎಡನ (ನಾ). ನಾಡಾಡಿ ; ಸಾಮಾನ್ಯ ವ್ಯಕ್ತಿ.
ಎಡವಟ್ಟ (ನಾ). ೧. ದಡ್ಡ ; ಮೂಢ. ೨. ಒರಟ ; ವಕ್ರ.
ಎಡವಟ್ಟು (ನಾ). ೧. ಕ್ರಮತಪ್ಪಿದ್ದು ; ರೂಢಿಗೆ ವಿರೋಧವಾದದ್ದು. ೨. ಅನುಕೂಲವಿಲ್ಲದಿರುವುದು.
ಎಡವರಿಸು (ಕ್ರಿ). ಮುಗ್ಗರಿಸು ; ಎಡವು.
ಎಡುಕು (ನಾ). ಸಂದು ; ಬಿರುಕು.
ಎಡುಗೋಲು (ನಾ). ಊರುಗೋಲು ; ಆಶ್ರಯ.
ಎಡೆ (ಕ್ರಿ). ೧. (ಸಿಪ್ಪೆಯನ್ನು) ಸುಲಿ ; ತೆಗೆ. ೨. ಬಿಚ್ಚಿತೋರು ; ಸ್ಪಷ್ಟವಾಗಿ ಕಾಣು. (ನಾ). ೩. ಪ್ರದೇಶ ; ಸ್ಥಳ. ೪. ನಡುವೆ ; ಮಧ್ಯ. ೫. ಅವಕಾಶ ; ಆಸ್ಪದ. ೬. ಹತ್ತಿರ ; ಸಮೀಪ. ೭. ನೈವೇದ್ಯ. ೮. ಊಟ ; ಆಹಾರ. ೯. ಊಟಕ್ಕೆ ಬಡಿಸುವ ಎಲೆ. ~ಅ(ಯ)ಕ್ಕರ = ಒಂದು ಪದ್ಯಜಾತಿಯ ಹೆಸರು. ~ಕ(ಗ)ಟ್ಟು = ೧. ಒಳನಿಯಮ ; ಕಟ್ಟುಪಾಡು. ೨. ಕ್ಲುಪ್ತವಾದ ಜಾಗ ; ನಿಶ್ಚಿತವಾದ ಸ್ಥಳ. ~ಕಿ(ಗಿ)ಱಿ(ರಿ) = ೧. ಆಕ್ರಮಿಸು ; ಆವರಿಸು. ೨. ದಟ್ಟವಾಗು ; ಕಿಕ್ಕಿರಿ. ~ಕೆ(ಗೆ)ಡೆ = ೧. ಕೆಳಕ್ಕೆ ಬೀಳು. ೨. ನಮಸ್ಕರಿಸು. ~ಕೆ(ಗೆ)ಯ್ = ೧. ಅವಕಾಶವನ್ನು ಮಾಡಿಕೊಡು ; ಸ್ಥಳ ಕೊಡು. ೨. ತಂಗು. ~ಗುತ್ತಿ = ನಡುವಣ ದ್ವೀಪ. ~ಪ(ವ)ರಿಸು = ೧. ನಡುವೆ ಬರಿ ಮಾಡು. ೨. ಹಿಮ್ಮೆಟ್ಟಿಸು ; ಓಡಿಸು. ~ಪೆ(ವೆ)ೞ್(ಳ್) = ಕಾರಣವನ್ನು ತಿಳಿಸು ; ಇಂಗಿತವನ್ನು ಹೇಳು. ~ಬಿ(ವಿ)ಡುವು = ೧. ಅವಕಾಶವನ್ನು ಪಡೆದಿರುವಿಕೆ ; ವ್ಯಾಪ್ತಿ. ೨. ಸ್ಥಳಾವಕಾಶ. ೩. ಕಾಲಾವಕಾಶ. ~ಮಡಗು = ೧. ತಡೆ ಮಾಡು ; ನಿಧಾನಿಸು. ೨. ಮುಚ್ಚಿಡು ; ಮರೆಮಾಡು. ~ಮಾಡು = ೧. ಅವಕಾಶ ಕೊಡು ; ಸ್ಥಳ ಮಾಡು. ೨. ನೈವೇದ್ಯ ಮಾಡು ; ಊಟಕ್ಕೆ ಬಡಿಸು.
ಎಡೆಯು (ನಾ). ೧. ಹತ್ತಿರದವನು ; ಜತೆಯವನು. ೨. ದನ ಕಾಯುವವನು ; ಗೊಲ್ಲ.
ಎಡ್ಡ (ನಾ). ೧. ಸುಂದರ ; ಮನೋಹರ. ೨. ಬುದ್ಧಿ ಇಲ್ಲದವನು ; ದಡ್ಡ. ೩. ಮೋಸಗಾರ ; ಕಪಟಿ. ~(ಂ)ತಿಡ್ಡ = ಕ್ರಮಬದ್ಧವಲ್ಲದಿರುವುದು ; ಅಸಂಬದ್ಧತೆ. ~(ಂ)ಪ(ಬ)ಡೆ = ಸುಂದರವಾಗು ; ಮನೋಹರವಾಗು.
ಎಡ್ಡು (ನಾ). ೧. ಮೋಸಗೊಳಿಸುವುದು ; ಮೋಸ. ೨. ಸೊಕ್ಕು ; ಅಹಂಕಾರ.
ಎಣ್(ಣ್ಣು) (ಕ್ರಿ). ೧. ಎಣಿಸು ; ಲೆಕ್ಕಹಾಕು. ೨. ಭಾವಿಸು ; ಬಗೆ.
ಎಣಗೋಣ (ನಾ). ಕೊಂಕು ; ಬಿಂಕ.
ಎಣವಳಿಕೆ (ನಾ). ಸ್ತ್ರೀಸಂಗ ; ಕೂಟ.
ಎಣಿಕೆ (ನಾ). ೧. ಲೆಕ್ಕ ಮಾಡುವುದು ; ಲೆಕ್ಕ. ೨. ಆಲೋಚನೆ ; ಯೋಚನೆ. ೩. ಊಹೆ.

ಎಣೆ (ನಾ). ೧. ಸಮ ; ಸಾಟಿ. ೨. ಪ್ರೇಮ ; ಪ್ರೀತಿ. ೩. ಜೊತೆ ; ಜೋಡಿ. ೪. ಕೂದಲು. ೫. ಮಕ್ಕಳ ಒಂದು ರೋಗ. ೬. ನೆತ್ತಿ ; ಶಿಖರ. ~ಆ(ಯಾ)ಡು = ೧. ಜತೆಯಾಗಿ ಆಡು. ೨. ಹಾವುಗಳು ಕೂಡಿಕೆಯಾಗು. ~ಕಟ್ಟು = ೧. ಜೊತೆಯಾಗು. ೨. ತಳಕು ಹಾಕು ; ಅಪ್ಪಿಕೊಳ್ಳು. ~ಗಂಟು = ತಲೆ ಗೂದಲನ್ನು ಸುತ್ತಿ ಹಾಕಿದ ಗಂಟು. ~ಪ(ವ)ಕ್ಕಿ = ಜೊತೆಯಾಗಿರುವ ಪಕ್ಷಿ; ಚಕ್ರವಾಕ.

ಎಣ್ಣೆ (ನಾ). ೧. ಎಳ್ಳು, ಅಗಸೆ ಮೊದಲಾದ ಕಾಳುಗಳಿಂದ ಹಿಂಡಿ ತೆಗೆದ ದ್ರವ ಪದಾರ್ಥ; ತೈಲ. ೨. ಶಕ್ತಿ ; ಉತ್ಸಾಹ. ~ಕ(ಗ)ಪ್ಪಡ = ಎಣ್ಣೆಯಿಂದ ಪರಿಷ್ಕರಿಸಿ ನೀರಿಳಿಯದಂತೆ ಮಾಡಿದ ಬಟ್ಟೆ; ಮೇಣಗಪ್ಪಟ. ~ಕ(ಗ)ಪ್ಪು = ಕಪ್ಪು ಮತ್ತು ಕೆಂಪುಗಳ ಮಧ್ಯಸ್ಥ ಬಣ್ಣ. ~ಕಾ(ಗಾ)ಯಿ = ಎಣ್ಣೆಯಲ್ಲಿ ಬೇಯಿಸಿ ಮಾಡಿದ ಪಲ್ಯ; ತಾಳದ. ~ಮ(ವ)ಣಿ = ಕೊರಳ ಸರದ ಒಂದು ಬಗೆಯ ಮಣಿ.

ಎತ್ತ (ನಾ). ಯಾವ ಕಡೆ ; ಯಾವ ದಿಕ್ಕು.

ಎತ್ತಂ (ಅ). ಎಲ್ಲೆಲ್ಲೂ.

ಎತ್ತರ = ಎಚ್ತರ.

ಎತ್ತು (ಕ್ರಿ). ೧. ಎತ್ತಿ ಹಿಡಿ; ಏರಿಸು. ೨. ಎಬ್ಬಿಸು; ಮೇಲಕ್ಕೆತ್ತು. ೩. ನೀರು ಹಾಯಿಸು. ೪. ಅಪಹರಿಸು. ೫. ಸಂಗ್ರಹಿಸು; ಕೂಡಿಸು. ೬. ಬಡಿಸು; ಊಟಕ್ಕೆ ನೀಡು. ೭. ಎಚ್ಚರಿಸು. ೮. ಬೆಳಗು. ೯. ಸಮರ್ಪಿಸು ; ಕೊಡು. ೧೦. ಮೊದಲಿಡು ; ಆರಂಭಿಸು. ೧೧. ತಾಳು; ಹೊಂದು. ೧೨. ಬದುಕಿಸು ; ಉಜ್ಜೀವಿಸು. (ನಾ). ೧೩. ಬಸವ ; ಗೂಳಿ. ~ಅಂಗಡಿ = ೧. ದಿವಾಳಿಯಾದ ಅಂಗಡಿ. ೨. ಮುಂದೆ ಸಾಗುವಿಕೆ ; ಮುಂದಿನ ಪ್ರಯಾಣ. ~ಆಡು = ದೋಷಾರೋಪ ಮಾಡು ; ಹಂಗಿಸು. ~(ಂ)ಕೊ(ಗೊ)ಳ್ = ಎತ್ತಿಕೊಂಡು ಹೋದ ಕೊಳ್ಳೆ; ಸುಲಿಗೆ. ~ಕಂಬಿ = ಅಡ್ಡೆ; ಕಾವಡಿ. ~ಕ(ಗ)ಡೆ = ಏರ್ಪಾಡು ; ಪ್ರಯತ್ನ. ~ವಳಿ = ವಸೂಲು ಮಾಡುವುದು;

ಎದಿರ್(ರು) (ನಾ). ಅಭಿಮುಖ ; ಇದಿರು.

ಎದುರ್(ರು) = ಎದಿರ್. ~ಆಡು = ವಿರೋಧಿಸಿ ನುಡಿ. ~ಕಾ(ಗಾ)ಣಿಕೆ = ೧. ಕಣ್ಣಾರ ನೋಡುವುದು. ೨. ಪ್ರತ್ಯಕ್ಷ ಕಾಣಿಕೆ. ~ಚೀಟು = ೧. ಆಸ್ತಿಯ ಮಾರಾಟಕ್ಕೆ ಸಂಬಂಧಿಸಿದ ಪತ್ರ; ಪರಸ್ಪರ ಸಮ್ಮತಿ ಪತ್ರ. ೨. ಕಳೆದು ಹೋದ ಪತ್ರಕ್ಕೆ ಬದಲಾಗಿ ಬರೆದುಕೊಟ್ಟ ಪತ್ರ.

ಎದೆ = ಎರ್ದೆ. ~ಉ(ಯು)ರಿ = ೧. ಎದೆಯ ಉರಿ ; ಸಂತಾಪ. ೨. ಹೊಟ್ಟೆಕಿಚ್ಚು. ~ಕು(ಗು)ದಿ = ೧. ಸಂತಾಪ ಪಡು. ೨. ಎದೆಯ ತಳಮಳ; ಸಂತಾಪ. ೩. ಅಂಜಿಕೆ ; ಭಯ. ~ಕೆ(ಗೆ)ಳೆಯ = ಆಪ್ತಗೆಳೆಯ. ~ಕೊ(ಗೊ)ಯ್ಕ = ವಂಚಕ ; ದ್ರೋಹಿ. ~ಗುಂಡಿಗೆ = ೧. ಹೃದಯ. ೨. ಧೈರ್ಯ ; ದಿಟ್ಟತನ. ~ಗುಕ್ಕು = ಭಯದಿಂದ ಎದೆಹಾರುವಿಕೆ ; ಒಳಗಿನ ಅಳುಕು. ~ಡೋಜು(ರು) = ಎದೆಯ ಒಳಭಾಗ. ~ಪ(ವ)ಲಗೆ = ಹಡಗಿನ ದೊಡ್ಡ ಹಲಗೆ.

ಎದೆಗುರುಡ (ನಾ). ಹೃದಯವಿಲ್ಲದವನು ; ಅರಸಿಕ.

ಎದ್ದಲಗಾಟ (ನಾ). ಹಿಂಸೆ; ಕಾಟ ; ತೊಂದರೆ.

ಎನ್(ನು,ನ್ನು) (ಕ್ರಿ). ೧. ಹೇಳು ; ನುಡಿ. (ಸ). ೨. ಉತ್ತಮ ಪುರುಷ ಸರ್ವನಾಮ.

ಎನಸುಂ (ಅ). ಅಧಿಕವಾಗಿ ; ಬಹಳವಾಗಿ.

ಎನಿತು(ತ್ತು) (ನಾ). ಪರಿಮಾಣವನ್ನು ಸೂಚಿಸುವ ಶಬ್ದ ; ಎಷ್ಟು.

ಎನಿಸು (ಕ್ರಿ). ೧. ಎನ್ನುವ ಹಾಗೆ ಮಾಡು. ೨. = ಎಷ್ಟು.

ಎನಿಸುಂ = ಎನಸುಂ.

ಎನ್ನ (ಗು). ಎಂತಹ ; ಎಂಥ.

ಎಪ್ಪೆ (ನಾ). ಮೋಸ; ವಂಚನೆ.

ಎಬಡ (ನಾ). ೧. ಸರಿಯಾಗಿ ಮಾತನಾಡಲು ಬಾರದವನು ; ದಡ್ಡ. ೨. ಯದ್ವಾತದ್ವಾ ಮಾತನಾಡುವವನು.

ಎಮ (ಅ). ಒಪ್ಪಿಗೆ, ಅಲಕ್ಷ್ಯ, ಆಶೀರ್ವಾದ ಮುಂತಾದ ಭಾವಗಳನ್ನು ಸೂಚಿಸುವ ಮಾತು.

ಎಮುಕೆ (ನಾ). ಎಲುಬು ; ಮೂಳೆ.

ಎಮೆ (ನಾ). ಕಣ್ಣಿನ ರೆಪ್ಪೆ. ~ಆ(ಯಾ)ಟ = ಕಣ್ಣುರೆಪ್ಪೆ ಬಡಿಯುವುದು.

ಎಮ್ಮೆ = ಎಮ್ಮೆ. ~ ಕೊ (ಗೊ) ಬ್ಬು =೧. ಎಮ್ಮೆಯ ಕೊಬ್ಬು. ೨. ಅತಿಶಯವಾದ ಸೊಕ್ಕು. ~ಚೆ(ದೆ)ೞು(ಳು) = ದೊಡ್ಡ ಚೇಳು ; ಮಂಡರಗಪ್ಪೆ. ~ದಾಂಡಿಗ = ಮೈಮೇಲೆ ಚುಕ್ಕಿಗಳಿರುವಬಾತು.

ಎಯ್(ಯ್ಯ) (ನಾ). ಮುಳ್ಳುಹಂದಿ.

ಎಯ್ತರ್ (ಕ್ರಿ). ಬರು ; ಸಮೀಪಿಸು.

ಎಯ್ದು ೧. = ಎಯ್ತರ್. ೨.ಪಡೆ ; ಹೊಂದು.

ಎಯ್ದೆ ೧. = ಅಯ್ದೆ. (ಅ). ೨. ಚೆನ್ನಾಗಿ ; ಪೂರ್ತಿಯಾಗಿ.

ಎರ (ನಾ). ೧. ಎಲಚಿ ಮರ. ೨. ಸಾಲ ; ಕಡ.

ಎರಕ ೧. = ಎಱಕ. ೨. ಕಾಯಿಸಿದ ಲೋಹಾದಿಗಳ ದ್ರವವನ್ನು ಅಚ್ಚಿಗೆ ಎರೆಯುವಿಕೆ ಮತ್ತು ಹಾಗೆ ಎರೆದ ಅಚ್ಚು.

ಎರಕೆ ೧. = ಎಱಂಕೆ. ೨. ಜೊಂಡು ಹುಲ್ಲು. ೩. ಪ್ರಾರ್ಥನೆ ; ಬೇಡಿಕೆ.

ಎರಚಲು (ನಾ). ೧. ಇರಿಸಲು ಮಳೆ. ೨. ಎರಚಿದುದು ; ಸಿಡಿದುದು.

ಎರಡು (ನಾ). ೧. ಒಂದು ಸಂಖ್ಯೆ ; ದ್ವಿ. ೨.ಭೇದ ; ಮೋಸ. ~ಕೆ(ಗೆ)ಡು = ಇಹಪರಗಳೆರಡೂ ಕೆಟ್ಟುಹೋಗು. ~ನಾಲಗೆ = ಸುಳ್ಳುಮಾತು.

ಎರಣ (ನಾ). ಕರುವಿನ ಸಗಣಿ.

ಎರಣೆ (ನಾ). ಹಾವುರಾಣಿ.

ಎರಲ್(ಲು) = ಎಲರ್.

ಎರಲೆ(ಳೆ) (ನಾ). ಜಿಂಕೆ; ಚಿಗರೆ. ~ಕು(ಗು)ಱು(ರು)ಪ = ಚಂದ್ರ.

ಎರವಲು = ಎರವು.

ಎರವು(ವಿ) (ನಾ). ೧. ಸಾಲ ; ಕಡ. ೨. ಭೇದಭಾವ ; ಅಂತರ. ೩. ಕುಂದು ; ದೋಷ. ~ಆ(ವಾ)ಗು = ೧. ದೂರವಾಗು. ೨. ದ್ವೇಷಿಯಾಗು. ೩. ಹಾನಿಯಾಗು. ~ಇಗ = ೧. ಹೊರಗಿನವನು. ೨. ಸಾಲಗಾರ.

ಎರುಬು (ನಾ). ಸಗಣಿ; ಗೊಬ್ಬರ. ~ಪು(ಹು)ಳು = ಎರೆಹುಳು.

ಎರೆ ೧. = ಎಱೆ. ೨. ಬೇಡು ; ಯಾಚಿಸು. (ನಾ). ೩. ಚಕ್ರಕ್ಕೆ ಹಾಕುವ ಎಣ್ಣೆ ; ಕೀಲೆಣ್ಣೆ. ೪. ಕಪ್ಪಾದ ಭೂಮಿ. ೫. ಮೀನು ಮುಂತಾದುವುಗಳಿಗೆ ಹಾಕುವ ಆಹಾರ. ೬. ಹಾವಿನ ಪೊರೆ. ೭. ಜೊತೆಗಾರ ; ಒಡನಾಡಿ. ೮. ಅಂಚು ; ದಡ. ~ಕಬ್ಬಿಣ = ತಾಂಡವಾಳ. ~ಪೊ(ಹೊ)ರೆ =೧.ಹಾವಿನ ಚರ್ಮದ ಪದರ. ೨.ಮುಚ್ಚು ಮರೆ.

ಎಱ(ರ)(ಂ)ಕೆ (ನಾ). ೧. ಪಕ್ಷಿಗಳ ರೆಕ್ಕೆ, –ಪಕ್ಕ. ೨. ತೋಳು ; ರಟ್ಟೆ.

ಎಱ(ರ)ಕ (ನಾ). ೧. ಪ್ರೀತಿ ; ಅನುರಾಗ. ೨. ಬಾಗುವುದು ; ನಮಸ್ಕರಿಸುವುದು.

ಎಱ(ರ)ಕಲು (ನಾ). ಜಲಪಾತ ; ಅಬ್ಬಿ.

ಎಱ(ರ)ಕು (ನಾ). ನಾಳ ; ಟೊಳ್ಳುಕಾಂಡ.

ಎಱ(ರ)ಗ (ನಾ). ದಡ್ಡ ; ಎಗ್ಗ.

ಎಱ(ರ)ಗು (ಕ್ರಿ). ೧. ಬಾಗು ; ನಮಸ್ಕರಿಸು. ೨. ಬೀಳು. ೩. ಮುತ್ತು ; ಆವರಿಸು. ೪. ಹೊಡೆ; ಬಡಿ. (ನಾ). ೫. ಮೂರ್ಖತನ ; ದಡ್ಡತನ.

ಎಱ(ರ)ಚು (ಕ್ರಿ). ಚಿಮುಕಿಸು ; ಸಿಂಪಡಿಸು.

ಎಱು(ರಿ) (ಕ್ರಿ). ೧. ಮೊನಚಾದ ಸಾಧನ ದಿಂದ ತಿವಿ. ೨. ಯುದ್ಧ ಮಾಡು.

ಎಱೆ(ರೆ) (ಕ್ರಿ). ೧. ಸುರಿ ; ಹೊಯ್ಯು. ೨. ಮೀರು ; ಅತಿಶಯವಾಗು. ೩. ಅಭ್ಯಂಜನ ಸ್ನಾನ ಮಾಡಿಸು. (ನಾ). ೪. ಆಶ್ರಯ. ೫. ಪ್ರಭುತ್ವ ; ಒಡೆತನ. ೬. ಒಡೆಯ ; ಯಜಮಾನ. ~ಅ(ಯ)ಪ್ಪ= ೧. ಒಂದು ಕ್ಷುದ್ರ ದೇವತೆ. ೨. ಒಂದು ಬಗೆಯ ಸಿಹಿ ತಿಂಡಿ. ~ಪ(ವ)ಟ್ಟು = ಮೂಲಸ್ಥಾನ ; ಆಶ್ರಯ. ~ಬೆ(ವೆ)ಸನ =೧. ಅಭಿಷೇಕ ಮಾಡುವ ಕೆಲಸ. ೨. ರಾಜಕಾರ್ಯ.

ಎಱೆ(ರೆ)ಯ (ನಾ). ೧. ಒಡೆಯ ; ಯಜಮಾನ. ೨. ಇನಿಯ ; ನಲ್ಲ.

ಎರ್ದೆ (ನಾ). ೧.ಎದೆ; ಹೃದಯ. ೨.ಧೈರ್ಯ; ಸಾಮರ್ಥ್ಯ.~ಕೊ(ಗೊ)ಡು=೧.ಧೈರ್ಯ ಕೊಡು ; ಪ್ರೋತ್ಸಾಹಿಸು. ೨. ಮೊಲೆ ಯೂಡು. ೩. ಎದುರಿಸು ; ಎದೆಯೊಡ್ಡು. ~ಬ(ವ)ರ್ =ಮನಸ್ಸಿಗೆ ಬರು ; ಪ್ರೀತಿ ಪಾತ್ರವಾಗು.

ಎರ್ಮೆ (ನಾ). ಒಂದು ಚತುಷ್ಪಾದ ಪ್ರಾಣಿ ; ಎಮ್ಮೆ ; ಮಹಿಷ.

ಎಲ(ಳ)ಚಿ (ನಾ). ಬೋರೆ ಮರ.

ಎಲರ್(ರು) (ನಾ). ಗಾಳಿ ; ವಾಯು. ~ಅಣುಗ= ಹನುಮಂತ. ~ಗೆಳೆಯ ಗಾಳಿಯ ಗೆಳೆಯ ; ಬೆಂಕಿ.

ಎಲರುಣಿ (ನಾ). ವಾಯುವನ್ನು ಆಹಾರ ವಾಗುಳ್ಳದ್ದು ; ಹಾವು.

ಎಲರ್ಚು (ಕ್ರಿ). ಚೈತನ್ಯವನ್ನು ಪಡೆ.

ಎಲವ (ನಾ). ದೂದಿ ಮರ ; ಬೂರುಗ.

ಎಲು ೧. = ಎಲ್ಬು. ೨. ಕಾಂತಿ ; ಪ್ರಕಾಶ.

ಎಲುಬು(ವು) = ಎಲ್ಬು.

ಎಲೆ (ನಾ). ೧. ಮರಗಿಡಗಳ ಪತ್ರ. ೨. ವೀಳೆಯದೆಲೆ. ೩. ಇಸ್ಪೀಟಿನ ಎಲೆ. ~ಉ(ಯು)ಗುರು=ವೀಳೆಯದೆಲೆಯನ್ನು ಕೊಯ್ಯುವ ಉಪಕರಣ. ~ಕ(ಗ)ತ್ತರಿ =೧. ಕುರಿಗಳ ಮೈಯಿಂದ ಉಣ್ಣೆಯನ್ನು ಕತ್ತರಿಸುವ ಕತ್ತರಿ. ೨. ಚೌಲದ ಸಮಯ ದಲ್ಲಿ ಉಪಯೋಗಿಸುವ ಕತ್ತರಿಯಾಕಾರದ ಎಲೆ. ~ಪಟ್ಟಿ = ೧. ವೀಳ್ಯ ; ಬೀಡಾ. ೨. ಎಲೆಯಿಂದ ಸುತ್ತಿದ ಹೊಗೆಬತ್ತಿ. ~ಮದ್ದು = ೧. ಅಫೀಮು ; ಅಪಿನಿ ಮದ್ದು. ೨. ಎಲೆಗಳಿಂದ ಮಾಡಿದ ಮದ್ದು. ~ವಸ್ತ್ರ = ಬಣ್ಣದ ಕರವಸ್ತ್ರ ; ವಲ್ಲಿ. ~ಸ(ಚ)ಂಚಿ = ೧. ಎಲೆಯ ಚೀಲ. ೨. ದೇವತಾ ವಿಗ್ರಹಕ್ಕೆ ಉತ್ಸವದಲ್ಲಿ ಅರ್ಪಿಸುವ ತಾಂಬೂಲದ ಉಪಹಾರ.

ಎಲ್ಲಮ್ಮ (ನಾ). ರೇಣುಕಾದೇವಿ ; ಶಕ್ತಿ ದೇವತೆ.

ಎಲ್ಲಿ ೧. = ಎಲ್ಲಮ್ಮ. ೨. ಯಾವ ಸ್ಥಳ.

ಎಲ್ಲೆ (ನಾ). ಮೇರೆ ; ಸರಹದ್ದು.~ಕೆ(ಗೆ)ಡು = ೧.ಮೇರೆಯನ್ನು ಮೀರು. ೨.ಮರ್ಯಾದೆ ಮೀರು.

ಎಲ್ವು (ನಾ). ಎಲುಬು ; ಮೂಳೆ.

ಎವುಟ್(ಳ್) (ನಾ). ೧. ಎಂಜಲು ; ೨. ಅಗುಳು.

ಎವೆ ೧. = ಎವೆ. ೨. ಯವಧಾನ್ಯ ; ಜವೆ.

ಎಷ್ಟು (ನಾ). ಯಾವ ಪ್ರಮಾಣ.

ಎಸಕ (ನಾ). ೧. ಕಾಂತಿ ; ಪ್ರಕಾಶ. ೨. ಸೊಬಗು ; ವೈಭವ. ೩. ರೀತಿ ; ಸ್ಥಿತಿ. ೪. ಅತಿಶಯ ; ಆಧಿಕ್ಯ. ೫. ಪ್ರತಾಪ ; ಪರಾಕ್ರಮ. ೬. ಕೆಲಸ ; ಉದ್ಯೋಗ. ೭. ತೀಡುವಿಕೆ ; ಬೀಸುವಿಕೆ.

ಎಸಗು (ಕ್ರಿ). ೧.ಮಾಡು. ೨.ಉಂಟುಮಾಡು; ಒದಗಿಸು. ೩. ಉಂಟಾಗು ; ಒದಗು. ೪. ಆಚರಿಸು ; ನಡೆದುಕೊ. ೫. ರಥವನ್ನು ನಡೆಸು. ೬.(ಗಾಳಿ) ಬೀಸು. ೭. ಯತ್ನಿಸು. ಉದ್ಯೋಗಿಸು. ೮. ಹೊರಸೂಸು ; ಚೆಲ್ಲು.

೯. ರಚಿಸು. (ನಾ). ೧೦. ಕೆಲಸ; ಉದ್ಯೋಗ. ೧೧. ಬೀಸುವಿಕೆ.

**ಎಸಡು(ಡಿ)** (ನಾ). ೧. ಏಡಿ; ನಳ್ಳಿ; ೨. ಆಮೆ; ಕೂರ್ಮ.

**ಎಸರ್(ರು)** (ಕ್ರಿ). ೧. ಕುದಿ; ತಳಮಳಿಸು. (ನಾ). ೨. ಕುದಿಯಲಿಟ್ಟ ನೀರು; ಕುದಿನೀರು. ೩. ನೀರಿನ ಕುದಿತ. ೪. ಸಾರು; ಪಲ್ಯದ ರಸ. ೫. ಹಸಿಯ ವಸ್ತುಗಳನ್ನು ಹಿಂಡಿ ತೆಗೆದ ರಸ ಅಥವಾ ಬೇಯಿಸಿ ತೆಗೆದ ಕಷಾಯ. ೬. ತೇವ. ~ಮುಚ್ಚೆ = ಎಸರಿನ ಪಾತ್ರೆಯ ಮುಚ್ಚಳ.

**ಎಸವು** (ಕ್ರಿ). ಉಬ್ಬು; ದೊಡ್ಡದಾಗು.

**ಎಸಳು** ೧. = ಎಸೞ್. ೨. ಬೀಗದ ಕೈ.

**ಎಸೞ್(ಳ್)** (ನಾ). ೧. ಹೂವಿನ ದಳ; ಪಕಳೆ. ೨. ಹೋಳು; ವಿಭಾಗ. ೩. ಪದರ; ಹಾಳೆ. ~ಬ(ವ)ಲಿ = ಹೂವನ್ನು ಸೂಸುವುದು.

**ಎಸು** (ಕ್ರಿ). ೧. ಬಾಣ ಪ್ರಯೋಗ ಮಾಡು; ಅಂಬನ್ನು ಎಸೆ. ೨. ಬಳಿ; ಲೇಪಿಸು.

**ಎಸುಗೆ** (ನಾ). ಎಸೆತ; ಎಸೆಯುವಿಕೆ.

**ಎಸೆ** (ಕ್ರಿ). ೧. ಬಾಣವನ್ನು ಪ್ರಯೋಗಿಸು. ೨. ಬಿಸಾಡು; ಚೆಲ್ಲು. ೩. ಒಪ್ಪು; ಶೋಭಿಸು. (ನಾ). ೪. ಎಸೆಯುವಿಕೆ.

**ಎಸೆವಾರ** (ನಾ). ವಿವಿಧ ನಾದಗಳ ಸಮೂಹ.

**ಎಹ(ಂ)ಗೆ** (ಅ). ಯಾವ ರೀತಿಯಾಗಿ; ಯಾವ ಕ್ರಮದಲ್ಲಿ; ಹೇಗೆ.

**ಎಳ್(ಳು)** (ನಾ). ಎಣ್ಣೆಯನ್ನು ತೆಗೆಯಲು ಉಪಯೋಗಿಸುವ ಕಾಳು; ತಿಲಧಾನ್ಯ. ~ನೀರು = ತರ್ಪಣ.

**ಎಳ** = ಎಳದು. ~ಕ = ೧. ಸಂಚಲತೆ; ಕಂಪನ. ೨. ಎಳೆಯದಾದ; ಬಲಿಯದ. ~ಕ(ಗ)ಂದಿ = ಹೊಸದಾಗಿ ಕರು ಹಾಕಿರುವ ಹಸು ಅಥವಾ ಎಮ್ಮೆ. ~ಕಾ(ಗಾ)ಯ್ = ೧. ಎಳೆಯ ಕಾಯಿ; ಹೀಚು. ೨. ಎಳೆಯ ತೆಂಗಿನ ಕಾಯಿ; ಸೀಯಾಳ. ~ಕಾ(ಗಾ)ರ್ = ಮುಂಗಾರು ಮಳೆ; ಮಳೆಗಾಲದ ಪ್ರಾರಂಭ. ~ತೆ(ದೆ)ನೆ = ೧. ಮೊದಲನೆಯ ಗರ್ಭ. ೨. ಎಳೆಯದಾದ ಧಾನ್ಯದ ತೆನೆ. ~ನೀಲ = ೧. ರಾಜಾವರ್ತ ವೆಂಬ ನೀಲರತ್ನ. ೨. ನಸು ನೀಲಿಬಣ್ಣ.

**ಎಳದಳಿಸು** (ಕ್ರಿ). ಕೋಮಲವಾಗಿರು; ನಳನಳಿಸು.

**ಎಳದು** (ನಾ). ೧. ಎಳೆತನ; ಬಾಲ್ಯ. (ಗು). ೨. ಎಳೆಯದಾದ; ಚಿಕ್ಕದಾದ. (ಅ). ೩. ಚಂಚಲವಾಗಿ.

**ಎಳಮೆ(ವೆ)** (ನಾ). ಎಳೆಯತನ; ಬಾಲ್ಯ.

**ಎಳವಿಡು** (ಕ್ರಿ). ನೇತುಹಾಕು; ಇಳಿಯಬಿಡು.

**ಎಳವು** ೧. = ಎೞವು. (ನಾ). ೨. ಎಳೆಯುವಿಕೆ; ಸೆಳೆಯುವಿಕೆ. ೩. ಮಕ್ಕಳಿಗೆ ಬರುವ ಒಂದು ರೋಗ; ಸೆಳವು.

**ಎಳಸು** (ಕ್ರಿ). ೧. ಬಯಸು; ಅಪೇಕ್ಷಿಸು. ೨. ಕಡಮೆಯಾಗು; ಕುಂದು. ೩. ಯೋಚಿಸು; ಬಗೆ. ೪. ಹರಡು; ವ್ಯಾಪಿಸು. (ನಾ). ೫. ಚಿಕ್ಕವನು; ಸಣ್ಣವಯಸ್ಸಿನವನು. (ಗು). ೬. ಎಳೆಯ; ಬಲಿಯದ.

**ಎಳೆ** ೧. = ಎೞೆ. ೨. ಛಾವಣಿಗೆ ಹಾಕುವ ತೊಲೆ; ತೀರು. ೩. ಭೂಮಿ; ಧರಣಿ. ೪. = ಎಳದು. ~ಅಷ್ಟಮಿ = ಭಾದ್ರಪದ ಶುದ್ಧ ಅಷ್ಟಮಿ. ~ಕ(ಗ)ನ್ನ = ಹುತ್ತ. ~ತಟ = ಆಕರ್ಷಣೆ; ಸೆಳೆತ. ~ತಳಲ್ = ಮೊಳಕೆಯೊಡೆ. ~ಪಾಕ = ೧. ದಾರದ ಎಳೆಯಂತಿರುವ ಪಾಕ. ೨. ಹದಕ್ಕೆ ಬಾರದ ಪಾಕ. ~ಹೂಟೆ = ವ್ಯವಸಾಯದ ಒಂದು ಉಪಕರಣ; ಹಲಬೆ.

**ಎಳೆತ** (ನಾ). ೧. ಎಳೆಯುವಿಕೆ; ಸೆಳೆತ. ೨. ಆಕರ್ಷಣೆ; ಒಲವು.

**ಎಳೆಯ** = ಎಳದು.

ಎಟಿ(ಳ)ಗ = ಏಟಿಗ.

ಎಟ(ಳ)ತೆ (ನಾ). ಜೋಲಾಡುವಿಕೆ; ನೇತಾಡುವಿಕೆ.

ಎಟ(ಳ)ಲ್(ಲು) (ಕ್ರಿ). ೧. ಜೋಲುಬೀಳು; ನೇತಾಡು. ೨. ಬಳಲು; ಆಯಾಸಹೊಂದು. ೩. ಬಡವಾಗು; ಕೃಶವಾಗು. ೪. ಮೇಲೆ ಬೀಳು. ೫. ಮೋಹಿಸು.

ಎಟ(ಳ)ವು (ಕ್ರಿ). ಸವರು; ಲೇಪಿಸು.

ಎಟೆ(ಳೆ) (ಕ್ರಿ). ೧. ತನ್ನ ಕಡೆಗೆ ಸೆಳೆದುಕೊ; ಆಕರ್ಷಿಸು. (ನಾ). ೨. ನೂಲಿನ ಎಳೆ; ದಾರ. ೩. ಎಳೆದ ಗುರುತು; ಜಾಡು. ~ಕುಳಿ = ಸೆಳೆತ; ಆಕರ್ಷಣೆ.

ಎಚ್ಚ(ಚ್ಚ)ಱ್(ರ್,ರು,ಱು) (ಕ್ರಿ). ೧. ನಿದ್ರೆಯಿಂದ ಏಳು; ಜಾಗರಗೊಳ್ಳು. ೨. ಜಾಗರೂಕತೆಯಿಂದಿರು. ೩. ರೋಗದಿಂದ ಅಥವಾ ಮೂರ್ಛೆಯಿಂದ ಚೇತರಿಸಿಕೊಳ್ಳು. (ನಾ). ೪. ನಿದ್ರೆಯಿಂದ ಏಳುವುದು; ಜಾಗೃತನಾಗಿರುವಿಕೆ. ~ಇಕೆ = ಎಚ್ಚರದಿಂದಿರುವಿಕೆ; ಜಾಗರೂಕತೆ.

ಎಟ್ತ(ಳ್ತ)ರ್(ರು) (ಕ್ರಿ). ೧. ಎದ್ದುಬರು; ಹತ್ತಿರಕ್ಕೆ ಬರು. ೨. ದಂಡೆತ್ತಿ ಬರು; ಮುತ್ತು.

ಎಟ್ತ(ಳ್ತ)ರ (ನಾ). ಉನ್ನತಿ; ಏಳಿಗೆ; ಎತ್ತರ.

ಎಟ್ತ(ಳ್ತ)ರವು (ನಾ). ಎದ್ದು ಬರುವುದು; ಹತ್ತಿರ ಬಂದು ಸೇರುವುದು.

ಎಟ್ತು(ಳ್ತು) (ನಾ). ೧. ಬಸವ; ಎತ್ತು. ೨. ಮಂಚದ ನೇಯ್ಗೆಯ ನುಲಿ. ೩. ಬರೆಹ; ಅಕ್ಷರ.

ಎಟ್ಪ(ಳ್ಪ)ತ್ತು (ನಾ). ಒಂದು ಸಂಖ್ಯೆ; ಎಪ್ಪತ್ತು.

ಎಟ್ಬು(ಳ್ಬು,ಬ್ಬು) (ಕ್ರಿ). ೧. ಮೇಲಕ್ಕೆ ಎಬ್ಬಿಸು; ಎಬ್ಬು. ೨. ಅಟ್ಟು; ಓಡಿಸು. ~ಅಟ್ಟು = ಬೆನ್ನಟ್ಟು; ಹಿಂಬಾಲಿಸು.



ಐ (ನಾ). ಕನ್ನಡ ವರ್ಣಮಾಲೆಯ ಹನ್ನೆರಡನೆಯ ವರ್ಣ.

ಐಂಕು (ಕ್ರಿ). ಬಿಕ್ಕಳಿಸಿಕೊಂಡು ಅಳು; ಐದು.

ಐಕ (ನಾ). ೧. ಒಂದು ಸಂಖ್ಯೆ; ಒಂದು. ೨. ಒಂಟಿ; ಒಬ್ಬಂಟಿಗ. ~ಅಂತ= ೧. ಗುಟ್ಟಾದ ಸ್ಥಳ. ೨. ಕಿವಿಮಾತು; ರಹಸ್ಯ. ೩. ಮಂತ್ರಾಲೋಚನೆ. ೪. ಒಂಟಿಯಾದ. ೫. ಗುಟ್ಟಾದ. ೬. ಒಂದೇ ವಸ್ತುವಿನ ಮೇಲೆ ಗಮನ ಹರಿಸಿದ. ~ಅಗ್ರ =೧. ಏಕಾಗ್ರತೆ. ೨. ಒಂದೇ ಗುರಿಯುಳ್ಳ. ~ಆವಲಿ(ಳಿ) =೧. ಒಂದೆಳೆಯ ಸರ; ಎಕ್ಕಾವಳಿ. ೨. (ಕಾವ್ಯಮೀ) ಒಂದು ಅಲಂಕಾರ. ~ಕುಂಡಲ= ೧. ಒಂದೇ ಕುಂಡಲವನ್ನು ಉಳ್ಳವನು. ೨. ಕುಬೇರ. ೩. ಬಲರಾಮ. ~ಗುರು = ೧. ಒಬ್ಬನೇ ಒಬ್ಬ ಗುರು. ೨. ಒಬ್ಬ ಗುರುವಿನ ಬಳಿ ವ್ಯಾಸಂಗ ಮಾಡಿದವರು; ಸಹಾಧ್ಯಾಯಿ. ~ಗ್ರಾಹಿ = ಒಂದೇ ಪಟ್ಟು ಹಿಡಿದವನು; ಹಟವಾದಿ. ~ಜೀವ= ೧. ಒಂದೇಜೀವ. ೨. ಅನ್ಯೋನ್ಯವಾದುದು. ~ತಾನ =೧. ಏಕಾಗ್ರಚಿತ್ತ; ಒಮ್ಮನಸ್ಸು. ೨. ಒಂದೇ ಶ್ರುತಿ. ೩. ಒಂದೇ ವಸ್ತುವಿನ ಮೇಲೆ ಗಮನವಿಟ್ಟ. ~ದಂತ = ಗಣೇಶ. ~ದೃಷ್ಟಿ =೧. ಒಂದೇ ನೋಟ. ೨. ಒಕ್ಕಣ್ಣ. ೩. ಕಾಗೆ. ~ವೇಣಿ = ೧. ಒಂದೇ ಜಡೆಯುಳ್ಳವಳು. ೨. (ಪತಿವಿರಹಸೂಚಕವಾಗಿ) ಜಡೆ ಕಟ್ಟಿಕೊಳ್ಳದವಳು.

ಐಕತ್ರ (ಅ). ಒಂದೇ ಜಾಗದಲ್ಲಿ.

ಐಕತ್ವ (ನಾ). ೧. ಒಂದೇ ಒಂದಾಗಿರುವಿಕೆ. ೨. ಹೋಲಿಕೆ; ಸಾಮ್ಯ.

ಐಕಮೇವ (ಗು). ಒಂದೇ ಒಂದಾದ.

ಐಕಾಐಕಿ (ಅ). ಒಮ್ಮೆಲೇ; ಇದ್ದಕ್ಕಿದ್ದಂತೆ.

ಐಕಾಂಗಿ (ನಾ). ೧. ಒಬ್ಬಂಟಿಗ; ಏಕಾಕಿ. ೨. ಏಕಪಕ್ಷೀಯವಾದುದು.

ಐಕಾಕಿ = ಐಕಾಂಗಿ.

ಐಕಾದಶ (ನಾ). ೧. ಒಂದು ಸಂಖ್ಯೆ; ಹನ್ನೊಂದು. (ಗು). ೨. ಹನ್ನೊಂದನೆಯ.

ಐಕಾದಶಿ (ನಾ). ಚಾಂದ್ರಮಾನದ ಹನ್ನೊಂದನೆಯ ತಿಥಿ.

ಐಕಾಹ (ನಾ). ೧. ಒಂದು ದಿವಸ ಕಾಲ. ೨. ಸತ್ತವರಿಗೆ ಹನ್ನೊಂದನೆಯ ದಿನ ಮಾಡುವ ಉತ್ತರಕ್ರಿಯೆ.

ಐಕೀಕರಣ (ನಾ). ಒಂದುಗೂಡಿಸುವುದು; ಒಟ್ಟಾಗಿ ಸೇರಿಸುವುದು.

ಐಕೀಭವಿಸು (ಕ್ರಿ). ಒಂದಾಗು; ಒಟ್ಟಾಗು.

ಐಕೀಭೂತ (ಗು). ಒಂದಾದ; ಒಟ್ಟುಗೂಡಿದ.

ಐಗಡಿಸು (ಕ್ರಿ). ಓಕರಿಕೆ ಬರು; ಅಸಹ್ಯವಾಗು.

ಐಗಳ್ (ಅ). ೧. ಯಾವಾಗ; ಯಾವಕಾಲದಲ್ಲಿ. ೨. ಯಾವಾಗಲೂ; ಸದಾಕಾಲ.

ಐಗು (ಕ್ರಿ). ೧. ಸಾಗಿಸು; ನಿಭಾಯಿಸು. ೨. ಏನು ಪ್ರಯೋಜನವಾಗು. ೩. ಬೇಯು; ಸುಡು. ೪. = ಐದು.

ಐಚುಪೇಚು (ನಾ). ಮುಚ್ಚುಮರೆ.

ಐಟು (ನಾ). ಹೊಡೆತ; ಪೆಟ್ಟು. ~ಪಾವುಡೆ = ಒಂದು ರಾಜಚಿಹ್ನೆ.

ಐಡ (ನಾ). ೧. ಕಿವುಡ. ೨. ಕಾಡುಕುರಿ. ~ಮೂಕ= ೧. ಕಿವುಡ ಮತ್ತು ಮೂಕ. ೨. ಮೂರ್ಖ; ದಡ್ಡ. ೩. ಕುರುಡ.

ಐಡಿ (ನಾ). ನಳ್ಳಿ; ಎಸಡಿ. ~ಹುಣ್ಣು = ದುರ್ಮಾಂಸ ಬೆಳೆದುಕೊಳ್ಳುವ ರೋಗ; ಕ್ಯಾನ್ಸರ್.

ಐಡಿಸು (ಕ್ರಿ). ಅವಹೇಳನ ಮಾಡು; ನಿಂದಿಸು.

ಐಡು (ನಾ). ೧. ಸಮಯ; ಕಾಲ. ೨. ಮಚ್ಚೆ; ಗುರುತು.

ಐಡೂಕ (ನಾ). ಎಲುಬುಗಳನ್ನಿಟ್ಟು ನಿರ್ಮಿಸಿದ ಗೋಡೆ.

ಐಣ್(ಣು) (ನಾ). ಅಂಚು ; ತುದಿ.

ಐಣ (ನಾ). ಗಂಡು ಜಿಂಕೆ; ಎರಳೆ. ~ಅಂಕ = ಚಂದ್ರ. ~ವಾಹನ = ವಾಯು.

ಐಣಗೋಣ = ಎಣಗೋಣ.

ಐಣಿ (ನಾ). ೧. ನಿಚ್ಚಣಿಕೆ. ೨. ಹೆಣ್ಣುಜಿಂಕೆ.

ಐಣೆಲು (ನಾ). ಮುಂಗಾರು ಬೆಳೆಗೆ ಸಂಬಂಧಿಸಿದುದು.

ಐತ (ನಾ). ೧. ಮೇಲೇರುವಿಕೆ. ೨. (ಬಾವಿಯಿಂದ) ನೀರನ್ನು ಮೇಲೆತ್ತುವ ಸಾಧನ. ೩. ಬತ್ತವನ್ನು ಕುಟ್ಟುವ ಸಾಧನ. ೪. ಚಿತ್ರವಿಚಿತ್ರವಾದ ಬಣ್ಣ ; ಮಿಶ್ರವರ್ಣ.

ಐತಿಪ್ರೇತಿ (ನಾ). ಸರಸ ವಿರಸ; ಅನುಕೂಲ ಪ್ರತಿಕೂಲ.

ಐದು (ಕ್ರಿ). ೧. ಮೇಲುಸಿರು ಬಿಡು ; ಏಗು. (ನಾ). ೨. ಮುಳ್ಳುಹಂದಿ.

ಐನ್(ನು) (ಸ). ಪ್ರಶ್ನಾರ್ಥಕ ಸರ್ವನಾಮ ; ಯಾವುದು.

ಐನ (ನಾ). ಪಾಪ.

ಐಬರಾಸಿ (ನಾ). ಅವಿವೇಕಿ ; ಕೆಲಸಕ್ಕೆ ಬಾರದವನು.

ಐರ್(ರು) (ಕ್ರಿ). ೧. ಯೋಗ್ಯವಾಗು. ೨. ಆಯ್ದುಕೊಳ್ಳು. ೩. = ಐಱ್. (ನಾ). ೪. ಎತ್ತುಗಳನ್ನು ಹೂಡಿದ ಆರು; ನೇಗಿಲು. ೫. ಎತ್ತಿನ ಜೊತೆ. ೬. ಎತ್ತರವಾದ ಭೂಮಿ. ~ಇಳಿತ = ೧. ಉಬ್ಬರ ಮತ್ತು ಇಳಿತ. ೨. ಹೆಚ್ಚುಕಡಮೆ. ~ಪಡು = ೧. ಕ್ರಮಗೊಳ್ಳು. ೨. ಗಾಯುಗೊಳ್ಳು. ~ಪೇರು = ೧. ಹಳ್ಳತಿಟ್ಟು. ೨. ಹೆಚ್ಚುಕಡಮೆ. ೩. ತಕ್ಕಡಿ ಸಮತೂಕವಿಲ್ಲದಿರುವಿಕೆ.

ಐರಂಡ (ನಾ). ಹರಳುಗಿಡ ; ಔಡಲಗಿಡ.

ಐರಣಿಗ (ನಾ). ಚಿನ್ನದ ಕೆಲಸ ಮಾಡುವವನು ; ಅಕ್ಕಸಾಲೆ.

ಐರಿ (ನಾ). ೧. ಎತ್ತರವಾದ ಕಟ್ಟೆ; ದಿಣ್ಣೆ. ೨. ಕೆರೆ. ~ಹೊಡೆ = ಒಡ್ಡು ಹಾಕು.

ಐಱ್(ರ್,ರು,ಱು) (ಕ್ರಿ). ೧. ಮೇಲಕ್ಕೆ ಹೋಗು ; ಹತ್ತು. ೨. ಯುದ್ಧಮಾಡು ; ಮೇಲೆಬೀಳು. ೩. ಉಬ್ಬು ; ಸಂತೋಷಪಡು. ೪. ಗಣನೆಗೆ ಬರು. ೫. ಉಂಟಾಗು ; ಒದಗು. (ನಾ). ೬. ಗಾಯ ; ಹುಣ್ಣು. ೭. ಪೆಟ್ಟು ; ಹೊಡೆತ. ೮. ಯುದ್ಧ ; ಕಾಳಗ. ೯. ಏರುವಿಕೆ. ೧೦. ವಾಹನ. ೧೧. ಈಟಿ. ~ಆಟ = ೧. ಏರುವಿಕೆ ; ಹತ್ತುವಿಕೆ. ೨. ಯುದ್ಧ ; ಕಾಳಗ. ೩. ಪೈಪೋಟಿ ; ಸ್ಪರ್ಧೆ. ~ಇಸು = ೧. ಮೇಲೇರಿಸು. ೨. ಮುಡಿಸು. ೩. ಹೆದೆಯನ್ನು ಬಿಗಿ. ೪. ಉಬ್ಬಿಸು ; ಹೆಚ್ಚಿಸು. ೫. ಆರೋಪಿಸು ; ಅನ್ವಯಿಸು. ೬. ಪಡೆ ; ಹೊಂದು.

ಐರ್ತೆ (ನಾ). ಉಬ್ಬರ ; ಏರಿಬರುವ ಅಲೆ.

ಐಪರ್ಾಡು(ಟು) (ನಾ). ವ್ಯವಸ್ಥೆ ; ಸಿದ್ಧತೆ.

ಐಲಂ (ನಾ). ಹರಾಜು ; ಲಿಲಾವು.

ಐಲ(ಳ)ಕ್ಕಿ (ನಾ). ಸುವಾಸನೆಯ ಕಾಳುಗಳುಳ್ಳ ಕಾಯಿ. ~ಸರ = ೧. ಏಲಕ್ಕಿ ಕಾಯಿಗಳಿಂದ ಮಾಡಿದ ಸರ. ೨. ಏಲಕ್ಕಿಯಾಕಾರದ ಚಿನ್ನದ ಸರ.

ಐವ (ನಾ). ೧. ಅನಾದರ ; ತಿರಸ್ಕಾರ. ೨. ದುಃಖ ; ಅಳಲು. ೩. ಹಗೆ ; ವೈರ. ೪. ನಾಚಿಕೆ. ೫. ದೋಷ ; ಕುಂದು.

ಐವಂಚ (ಅ). ಒಟ್ಟಿನಲ್ಲಿ ; ಅಂತೂ.

ಐಸು (ಕ್ರಿ). ೧. ಬಾಣಪ್ರಯೋಗ ಮಾಡು ; ಇಸು. (ನಾ). ೨. ಬಾಣಪ್ರಯೋಗ ಮಾಡುವುದು. ೩. ಹೊಡೆತ ; ಪೆಟ್ಟು. ೪. ಎಷ್ಟು; ೫. ಕ್ರೈಸ್ತ ಮತಪ್ರವರ್ತಕ.

ಐಳಿಗೆ = ಐಟ್ಗೆ.

ಐಳಿದ (ನಾ). ೧. ಅವಮಾನ ; ತಿರಸ್ಕಾರ. ೨. ಅಪಹಾಸ್ಯಕ್ಕೆ ಗುರಿಯಾದವನು.

ಏಳಿದಿಕೆ(ಕ್ಕೆ) (ನಾ). ೧. ಅವಮಾನದ ಸ್ಥಿತಿ; ಹೀನಾವಸ್ಥೆ. ೨. ಅಪಹಾಸ್ಯ.

ಏಳಿಲ(ಲು) (ನಾ). ತಿರಸ್ಕಾರ; ಅವಮಾನ.

ಏಳಿಸು = ಏಡಿಸು.

ಏಱ್(ಳ್,ಳು,ಱು) (ಕ್ರಿ). ೧. ನಿಲ್ಲು; ಮೇಲೇಳು. ೨. ಎಚ್ಚರವಾಗು; ನಿದ್ರೆ ತಿಳಿ. ೩. ಜೀವವನ್ನು ಪಡೆ. ೪. ತಲೆಯೆತ್ತು; ಉಜ್ಜೀವಿಸು. (ನಾ). ೫. ಒಂದುಸಂಖ್ಯೆ.

ಏಱ(ಳ)ಗ (ನಾ). ೧. ಟಗರು; ಮೇಷ. ೨. ಏಳುಬೆಟ್ಟ.

ಏಱ್ಕೆ(ಳ್ಕೆ) (ನಾ). ಮೇಲೇರುವಿಕೆ; ಬೆಳವಣಿಗೆ.



ಐ (ನಾ). ಕನ್ನಡ ವರ್ಣಮಾಲೆಯ ಹದಿಮೂರನೆಯ ವರ್ಣ.

ಐಂದವ (ನಾ). ೧. ಚಾಂದ್ರಮಾನದ ತಿಂಗಳು. ೨. ಇಂದುವಿನ ಮಗ. ೩. ಬೆಳುದಿಂಗಳು. (ಗು). ೪. ಚಂದ್ರನಿಗೆ ಸಂಬಂಧಿಸಿದ.

ಐಂದ್ರ (ಗು). ಇಂದ್ರನಿಗೆ ಸಂಬಂಧಿಸಿದ. ~ಜಾಲ = ಯಕ್ಷಿಣಿ ವಿದ್ಯೆ; ಗಾರುಡಿ. ~ಶರ = ವಜ್ರಾಸ್ತ್ರ.

ಐಂದ್ರಕ (ನಾ). ಇಂದ್ರನ ದಿಕ್ಕು; ಪೂರ್ವ.

ಐಂದ್ರಜಾಲಿಕ (ನಾ). ಯಕ್ಷಿಣಿವಿದ್ಯೆ ಬಲ್ಲವನು; ಗಾರುಡಿಗ.

ಐಂದ್ರಿ (ನಾ). ೧. ಇಂದ್ರನ ಹೆಂಡತಿ; ಶಚಿ. ೨. ಪೂರ್ವ ದಿಕ್ಕು; ಮೂಡಲು.

ಐಂದ್ರಿಯ (ಗು). ೧. ಇಂದ್ರಿಯಗಳಿಗೆ ಸಂಬಂಧಿಸಿದ. ೨. ಇಂದ್ರಿಯಗಳನ್ನುಳ್ಳ.

ಐಕಮತ್ಯ (ನಾ). ಏಕಾಭಿಪ್ರಾಯ; ಒಗ್ಗಟ್ಟು.

ಐಕಿಲ್ = ಅಯ್ಕಿಲ್.

ಐಕ್ಯ ೧. = ಐಕಮತ್ಯ. ೨. ಪರಮಾತ್ಮನಲ್ಲಿ ಒಂದಾದವನು. ೩. ಒಟ್ಟು; ಮೊತ್ತ.

ಐಕ್ಷವ (ನಾ). ೧. ಸಕ್ಕರೆ. (ಗು). ೨. ಕಬ್ಬಿಗೆ ಸಂಬಂಧಿಸಿದ.

ಐಚ್ಛಿಕ (ಗು). ಇಚ್ಛೆಗೆ ಸಂಬಂಧಿಸಿದ.

ಐಟು (ನಾ). ಠೀವಿ; ಬಿಂಕ.

ಐತಿಹಾಸಿಕ (ಗು). ಇತಿಹಾಸಕ್ಕೆ ಸೇರಿದ; ಚಾರಿತ್ರಿಕ.

ಐತಿಹ್ಯ (ನಾ). ಪರಂಪರೆಯಿಂದ ಬಂದಿರುವುದು; ಚರಿತ್ರೆ.

ಐದೆ = ಅಯ್ದೆ.

ಐನ್(ನು) (ನಾ). ೧. ಮುಖ್ಯ; ಪ್ರಧಾನ. ೨. ಸರಿ; ಶುದ್ಧ.

ಐನಾತಿ (ಗು). ಮುಖ್ಯವಾದ; ಪ್ರಧಾನವಾದ.

ಐಬು (ನಾ). ೧. ಕುಂದು; ಕೊರತೆ. ೨. ಪತ್ತೆ; ಗುರುತು.

ಐರಾಣಿ (ನಾ). ಮದುವೆಯಲ್ಲಿ ಚಿತ್ರಬರೆದಿಡುವ ಗಡಿಗೆ ಮತ್ತು ಅದನ್ನು ಪೂಜಿಸುವ ವ್ರತ.

ಐರಾವಣ ೧. = ಐರಾವತ. ೨. ಒಬ್ಬ ರಾಕ್ಷಸ.

ಐರಾವತ (ನಾ). ಇಂದ್ರನ ಆನೆ.

ಐಲ(ಳ)ಬಿಲ(ಳ) (ನಾ). ಕುಬೇರ.

ಐಲು (ನಾ). ಹುಚ್ಚು; ಮುರುಳುತನ. ~ಪೈಲು = ೧. ಸಾಮಾನ್ಯವಾದುದು; ನಾಡಾಡಿ. ೨. ಹುಚ್ಚು; ಮರುಳು.

ಐಲೆ(ಳೆ)ಯ (ನಾ). ಕರಿಯ ಏಲಕ್ಕಿ.

ಐವಜು (ನಾ). ೧. ಉತ್ಪನ್ನ; ಬೆಳೆ. ೨. ಬೆಲೆ; ಕಿಮ್ಮತ್ತು.

ಐಶ್ವರ್ಯ (ನಾ). ೧. ಪರಮಾಧಿಕಾರ. ೨. ಸಂಪತ್ತು; ಭಾಗ್ಯ.

ಐಷಾರಾಮ (ನಾ). ವಿಷಯಾಸಕ್ತಿ; ಸುಖಜೀವನ.

ಐಸಲೆ (ಅ). ಅಷ್ಟೇ; ಅಲ್ಲವೇ.

ಐಸಾಯಿ (ನಾ). ಕ್ರೈಸ್ತಧರ್ಮದವನು.

ಐಸಿರಿ = ಐಶ್ವರ್ಯ.

ಐಸುಫೈಸು (ನಾ). ಪ್ರಶಸ್ತವಾದುದು; ವಿಸ್ತಾರವಾದುದು.

ಐಹಿಕ (ನಾ). ೧. ಇಹಲೋಕ. (ಗು). ೨. ಇಹಲೋಕಕ್ಕೆ ಸಂಬಂಧಿಸಿದ; ಲೌಕಿಕವಾದ.

ಒ (ನಾ). ೧. ಕನ್ನಡ ವರ್ಣಮಾಲೆಯ ಹದಿನಾಲ್ಕನೆಯ ವರ್ಣ. (ಅ). ೨. ಅನುಕರಣಾವ್ಯಯ.

ಒಂಟಿ (ನಾ). ೧. ಒಂದು. ೨. ಒಬ್ಬ; ಏಕಾಕಿ. ೩. ಏಕಾಕಿಯಾಗಿರುವಿಕೆ; ಏಕಾಂತ. ೪. ಒಂದು ಬಗೆಯ ಕಿವಿಯ ಆಭರಣ; ಹತ್ತಕಡುಕು.

ಒಂಟು (ಕ್ರಿ). ಸರಿಹೊಂದು; ಒಗ್ಗು.

ಒಂಟೆ (ನಾ). ಮರುಭೂಮಿಯಲ್ಲಿ ವಾಸಿಸುವ ಒಂದು ಪ್ರಾಣಿ.

ಒಂಡು (ನಾ). ಕೆಸರು; ರಾಡಿ.

ಒಂಡೆ (ನಾ). ೧. ಒಡ್ಡು; ಕಟ್ಟೆ. ೨. ಸೊಂಟ; ಟೊಂಕ.

ಒಂತು (ನಾ). ೧. ಬಾರಿ; ಸರದಿ. ೨. ಭಾಗ; ಅಂಶ.

ಒಂದರಿ = ಒನಲಿ.

ಒಂದು (ಕ್ರಿ). ೧. ಕೂಡು; ಸೇರು. ೨. ಪಡೆ; ಹೊಂದು. (ನಾ). ೩. ಹೊಂದಿಕೊಂಡು ನಡೆಯುವಿಕೆ. ೪. ಒಂದು ಸಂಖ್ಯೆ; ಏಕ.

ಒಂಬತ್ತು (ನಾ). ಒಂದು ಸಂಖ್ಯೆ; ನವ.

ಒಕ್ಕಂದಿ (ನಾ). ೧. ವರ್ಷಕ್ಕೊಮ್ಮೆ ಕರು ಹಾಕುವ ಹಸು. ೨. ಒಂದು ಕರುವನ್ನು ಹಾಕಿದ ಹಸು.

ಒಕ್ಕಣಿಕೆ ೧. = ಒಕ್ಕಣೆ. ೨. ವ್ಯಾಖ್ಯಾನ; ವಿವರಿಸಿ ಹೇಳುವಿಕೆ.

ಒಕ್ಕಣೆ (ನಾ). ಪೈರಿನಿಂದ ಕಾಳನ್ನು ಬೇರ್ಪಡಿಸುವ ಕೆಲಸ; ಒಕ್ಕುವಿಕೆ.

ಒಕ್ಕತನ (ನಾ). ಕೂಡಿ ಬಾಳುವೆ ಮಾಡುವುದು.

ಒಕ್ಕರೆ (ನಾ). ಕೊಳ; ಪುಷ್ಕರಿಣಿ.

ಒಕ್ಕಲ್(ಲು) (ನಾ). ೧. ಒಕ್ಕುವಿಕೆ; ಒಕ್ಕಣೆ. ೨. ಮನೆ; ವಾಸಸ್ಥಳ. ೩. ಮನೆತನ; ಕುಲ. ೪. ಬೇಸಾಯಗಾರ; ರೈತ. ೫. ನಿವಾಸಿ; ಪ್ರಜೆ. ೬. ಬಾಡಿಗೆದಾರ; ಗುತ್ತಿಗೆದಾರ. ~ಇಕ್ಕು = ೧. ಬಡಿ; ಹೊಡೆ. ೨. ಅಸ್ತವ್ಯಸ್ತವಾಗಿಸು. ೩. ನೆಲಸು; ಬೀಡುಬಿಡು.

ಒಕ್ಕು (ಕ್ರಿ). ೧. ಬೆಳೆದ ಬೆಳೆಯಿಂದ ಕಸಕಡ್ಡಿಗಳನ್ನು ಬೇರ್ಪಡಿಸು. ೨. = ಒಬ್ಬು. (ನಾ). ೩. ಒಕ್ಕುವಿಕೆ; ಕಣಗೆಲಸ. ೪. ಶುಭಾಶುಭಗಳ ಸೂಚನೆ; ಶಕುನ.

ಒಗ(ಂ)ಟು(ಟೆ) (ನಾ). ಸುಲಭವಾಗಿ ತಿಳಿಯಲಾಗದ ಮಾತು; ಪ್ರಹೇಳಿಕೆ.

ಒಗಡು (ಕ್ರಿ). ಕಾರು; ಕಕ್ಕು. ~ಇಸು = ೧. ವಾಂತಿಮಾಡು; ಕಕ್ಕು. ೨. ಹೊರಸೂಸು; ಉಗುಳು. ೩. ಹೇಸಿಕೆಯೆನಿಸು.

ಒಗತನ = ಒಕ್ಕತನ.

ಒಗರ್(ರು,ಚು) (ನಾ). ೧. ಷಡ್ರಸಗಳಲ್ಲಿ ಒಂದು; ಕಷಾಯ. ೨. ಅಪಕ್ವವಾದುದು. ೩. ಅಹಂಕಾರ. ~ಅಡಕೆ = ಬೇಯಿಸದ ಅಡಕೆ; ಸೊಕ್ಕಡಕೆ.

ಒಗಸು (ಕ್ರಿ). ೧. ಎಸೆಯುವಂತೆ ಮಾಡು; ಬಿಸಾಡು. ೨. ಸೇರು; ಒಗ್ಗು.

ಒಗು (ಕ್ರಿ). ೧. ಹೊರಸೂಸು; ಚೆಲ್ಲು. ೨. ಹರಡು; ಆವರಿಸು. (ನಾ). ೩. ಹೊರಹೊಮ್ಮುವಿಕೆ. ೪. ಉತ್ಸಾಹ. ~ಮಿಗೆ = ೧. ಆಧಿಕ್ಯ; ಹೆಚ್ಚಳ. ೨. ಹೆಚ್ಚಾಗಿ.

ಒಗೆ (ಕ್ರಿ). ೧. ಹುಟ್ಟು; ಕಾಣಿಸಿಕೊಳ್ಳು. ೨. ನೆಗೆ; ಹಾರು. ೩. ಎಸೆ; ಬಿಸಾಡು. ೪. ಹೊಡೆ; ಕುಟ್ಟು. ೫. ನೀರಿನಲ್ಲಿ ಬಟ್ಟೆಯನ್ನು ತೊಳೆ; ಸೆಣೆ. (ನಾ). ೬. ಒಗೆಯುವಿಕೆ; ಒಗೆತ. ~ಇಸು = ೧. ಹುಟ್ಟಿಸು. ೨. ಬಿಸಾಡು.

ಒಗ್ಗಟ್ಟು (ನಾ). ಐಕ್ಯ; ಐಕಮತ್ಯ.

ಒಗ್ಗರ (ನಾ). ಸಮೂಹ; ಗುಂಪು.

ಒಗ್ಗರಣೆ (ನಾ). ೧. (ಆಹಾರದಲ್ಲಿ ರುಚಿ ಹುಟ್ಟಿಸಲು) ಸಂಬಾರ ಪದಾರ್ಥವನ್ನು ಕರಿದು ಕೂಡಿಸುವುದು. ೨. ಸ್ವಾರಸ್ಯವಾದ ವಿಷಯವನ್ನು ಸೇರಿಸುವುದು.

ಒಗ್ಗರಿಸು (ಕ್ರಿ). ೧. ಒಗ್ಗರಣೆ ಹಾಕು. ೨. ಹುರಿದುಬಿಡು; ಧ್ವಂಸಮಾಡು.

ಒಗ್ಗು ೧. = ಒಟ್ಟು. ೨. ಒಂದು ಕಡೆಗೆ ತಿರುಗು. ೩. ಚಾಚು; ನೀಡು. ೪. ಪರವಶವಾಗು. ೫. ಸಂತೋಷಿಸು. ೬. ತೊದಲು; ಬಿಕ್ಕು.

ಒಚ್ಚತ (ನಾ). ೧. ಮಿಾಸಲು; ಮುಡಿಪು. ೨. ನಿಶ್ಚಿತ. ೩. ಹಿತವಾದುದು. ೪. ಸಾಮರಸ್ಯ; ಐಕ್ಯ. ೫. ಅಚ್ಚುಕಟ್ಟು. ೬. ಏಕಕಾಲ. ೭. ನೆಮ್ಮದಿ; ಸೌಖ್ಯ. ೮. ಅಂದ; ಸೊಬಗು. ೯. ಅತಿಶಯ; ಹೆಚ್ಚಳ. ೧೦. ಒಪ್ಪಿಸುವಿಕೆ. ೧೧. ಅವಕಾಶ; ಆಸ್ಪದ. (ಅ). ೧೨. ಒಂದೇ ಸಮನೆ. ೧೪. ಕೂಡಲೇ. ೧೫. ಸ್ವಲ್ಪವೂ. ೧೬. ಸ್ವಲ್ಪಕಾಲದವರೆಗೆ.

ಒಚ್ಚಯ (ನಾ). ೧. ಹೊಂದಾವಣೆ; ಸ್ನೇಹ. ೨. ಅಪಮಾನ; ಸೋಲು. ೩. ಏಳಿಗೆ; ಅಭಿವೃದ್ಧಿ.

ಒಚ್ಚಿ (ನಾ). ೧. ತುಸು ಹೊತ್ತು; ಸ್ವಲ್ಪಕಾಲ. ೨. ಒಂದು. ೩. ಸ್ವಲ್ಪ; ತುಸು.

ಒಜ್ಜರ (ನಾ). ೧. ಬೆಟ್ಟದ ಝರಿ; ಅಬ್ಬಿ. ೨. ಒಂದು ರಾಜಚಿಹ್ನೆ. ~ಇಸು = ಸ್ರವಿಸು; ಉಕ್ಕು.

ಒಜ್ಜಲು (ನಾ). ತೇವ; ಒದ್ದೆ.

ಒಟಿಕರು (ನಾ). ಒಣಕಲು; ಹೆಕ್ಕಳಿಕೆ.

ಒಟ್ಟಜ (ನಾ). ೧. ಕಪ್ಪ; ಕಾಣಿಕೆ. ೨. ಒತ್ತೆ. ೩. = ಒಟ್ಟಜೆ.

ಒಟ್ಟಜೆ (ನಾ). ೧. ಅತಿಶಯ; ಮೇಲ್ಮೆ. ೨. ಸಮೂಹ; ರಾಶಿ. ೩. ಪರಾಕ್ರಮ. ೪. ಆವೇಶ; ರಭಸ. ೫. ಸಹನೆ; ಸಮಾಧಾನ.

ಒಟ್ಟಾರೆ (ಅ). ೧. ಇಡಿಯಾಗಿ; ಪೂರ್ತಿಯಾಗಿ. ೨. ಒಟ್ಟನಲ್ಲಿ.

ಒಟ್ಟೆ (ನಾ). ೧. ಅಂಚು; ತುದಿ. ೨. ಮೊಂಡು; ಹಟಮಾರಿ. ೩. ಅವಯವಗಳ ಸೆಳೆತ.

ಒಟ್ಟಿಗೆ (ಅ). ಜೊತೆಯಲ್ಲಿ.

ಒಟ್ಟಿಲ್(ಲು) (ನಾ). ರಾಶಿ; ಗುಂಪು.

ಒಟ್ಟು (ಕ್ರಿ). ೧. ಕೂಡಿಸು; ರಾಶಿಮಾಡು. ೨. ತುರುಕು; ತುಂಬು. ೩. ಕೂಡು; ಸೇರು. (ನಾ). ೪. ರಾಶಿ; ಗುಂಪು. ೫. ಮೊಳೆ; ಅಂಕುರ. ೬. ಮೊತ್ತ.

ಒಟ್ಟೆ (ನಾ). ೧. ಸೀಳು; ಹೋಳು. ೨. = ಒಂಟೆ.

ಒಡ = ಒಡಂ. ~ಪು(ವು)ಟ್ಟು = ೧. ಜೊತೆಯಲ್ಲಿ ಹುಟ್ಟು. ೨. ಸಹೋದರ ಅಥವಾ ಸಹೋದರಿ.

ಒಡಂ (ಅ). ೧. ಸಹಿತವಾಗಿ; ಜೊತೆಯಾಗಿ. ೨. ಕೂಡಲೆ. ~ಪ(ಬ)ಡು = ೧. ಅನುಮತಿ ಕೊಡು; ಒಪ್ಪು. ೨. ಹೊಂದಿಕೆಯಾಗು; ಅನ್ವಯವಾಗು. ೩. ರುಚಿಸು; ಸೇರು. ೪. ಒಪ್ಪುವಿಕೆ; ಸಮ್ಮತಿ. ೫. ಹೊಂದಿಕೆ. ೬. ಹೋಲಿಕೆ.

ಒಡಕಲು (ನಾ). ೧. ಒಡೆದಿರುವಿಕೆ; ನುಚ್ಚು. (ಗು). ೨. ನುಚ್ಚಾದ; ತರಿಯಾದ.

ಒಡಕು (ನಾ). ೧. ಬಿರುಕು; ಸೀಳು. ೨. ಒಡೆದ ಭಾಗ; ಚೂರು. ೩. ಮನಸ್ತಾಪ; ಜಗಳ. ~ದನಿ = ೧. ಇಂಪಿಲ್ಲದ ಧ್ವನಿ; ಕೆಟ್ಟ ಧ್ವನಿ. ೨. ಕೆಟ್ಟಸುದ್ದಿ.

ಒಡಗು (ನಾ). ೧. ಒಡಕು; ಭೇದ. ೨. ಸಣ್ಣ ಕಾಲುವೆ; ಪಿಳ್ಳ ಕಾಲುವೆ.

ಒಡತಿ (ನಾ). ಯಜಮಾನಿ; ಸ್ವಾಮಿನಿ.

ಒಡನೆ = ಒಡಂ.

ಒಡಪು (ನಾ). ೧. ಒಡೆದಿರುವಿಕೆ; ಒಡಕು. ೨. ಒಗಟು; ಸಮಸ್ಯೆ.

ಒಡಮೆ(ವೆ) (ನಾ). ೧. ಆಭರಣ. ೨. ಐಶ್ವರ್ಯ.

ಒಡರ್(ರು) (ಕ್ರಿ). ೧. ಮಾಡು; ರಚಿಸು. ೨. ಒದಗು; ಉಂಟಾಗು. ೩. ನೀಗು. ೪. ತೊಡಗು; ಕೈಕೊಳ್ಳು.

ಒಡರ್ಚು ೧. = ಒಡರ್. ೨. ಪ್ರಯತ್ನಿಸು. ೩. ಒದಗಿಸು. ೪. ನೀಡು.

ಒಡಲ್(ಲು) (ನಾ). ೧. ಶರೀರ; ಮೈ. ೨. ಹೊಟ್ಟೆ. ೩. ಅಂಚು, ಸೆರಗುಗಳನ್ನುಳಿದ ಸೀರೆಯ ಭಾಗ. ~ಆಗು = ೧. ಆಶ್ರಯ ವಾಗು. ೨. ಕಾಣಿಸಿಕೊಳ್ಳು. ~ಇಚ = ೧. ಒಡಲಿನಲ್ಲಿ ಹುಟ್ಟಿದವನು; ಮಗ. ೨. ಮನ್ಮಥ; ಕಾಮ. ~ಉರಿ = ೧. ಕಳವಳ; ದುಃಖ. ೨. ಹೊಟ್ಟೆಕಿಚ್ಚು.

ಒಡೆ (ಕ್ರಿ). ೧. ಸೀಳು; ಬಿರಿ. ೨. ಚೂರು ಮಾಡು; ಪುಡಿಮಾಡು. ೩. ಹೊರಬರು; ಕಾಣಿಸಿಕೊಳ್ಳು. ೪. ಬೇರ್ಪಡಿಸು. ೫. ಸ್ವರೂಪ ಕೆಟ್ಟುಹೋಗು. ೬. ಬಿಚ್ಚು; ತೆರೆ. ೭. ಅರ್ಥ ಹೇಳು. ೮. ಬೇರೆಯಾಗು; ಬೇರ್ಪಡು. (ನಾ). ೯. ಒಡೆದಿರುವಿಕೆ. ೧೦. ಮುರಿದ ವಸ್ತು. ೧೧. ಒಂದು ಬಗೆಯ ತಿಂಡಿ; ವಡೆ. ೧೨. ಪ್ರಭು; ಒಡೆಯ. (ಪ್ರ). ೧೩. ಪಕ್ಷಾರ್ಥವನ್ನು ಸೂಚಿಸುವ ಪ್ರತ್ಯಯ.

ಒಡೆತ (ನಾ). ೧. ಒಡೆಯುವಿಕೆ. ೨. ನರಗಳ ತುಡಿತದಿಂದಾಗುವ ನೋವು.

ಒಡೆಯ (ನಾ). ೧. ಪ್ರಭು; ಯಜಮಾನ. ೨. ಉಳ್ಳವನು; ಹಣವಂತ. (ಪ್ರ). ೩. ಉಳ್ಳ; ಇರುವ.

ಒಡ್ಡ (ನಾ). ೧. ಕಲ್ಲು, ಮಣ್ಣು ಕೆಲಸ ಮಾಡುವವನು. ೨. ಒರಟು ಕೆಲಸ ಮಾಡುವವನು. ೩. ಮೂರ್ಖ; ದಡ್ಡ. ೪. ರಾಶಿ; ಗುಂಪು. ೫. ಜೂಜಿನ ಪಣದ ದ್ರವ್ಯ.

ಒಡ್ಡಣ = ಒಡ್ಡವಣೆ.

ಒಡ್ಡವ (ನಾ). ವಿನ್ಯಾಸ; ರಚನಾಕ್ರಮ.

ಒಡ್ಡವಣೆ (ನಾ). ೧. ಗುಂಪು; ರಾಶಿ. ೨. ಸನ್ನಾಹ; ಸಜ್ಜು. ೩. ಪಡೆ; ಸೈನ್ಯ. ೪. ಯುದ್ಧರಂಗ. ೫. ಒಡ್ಡುವಿಕೆ.

ಒಡ್ಡಾರ (ನಾ). ೧. ಸಮಸ್ಯೆ; ಸ್ಪರ್ಧೆ. ೨. ವಿರೋಧ; ಹಗೆತನ.

ಒಡ್ಡಿ (ನಾ). ೧. ಜೂಜಿಗೆ ಒಡ್ಡುವ ಪಣ. ೨. ಸ್ಪರ್ಧೆಯ ಮಾತು. ೩. ದೊಡ್ಡಿ. ೪. ನಾಲ್ಕರ ಗುಂಪು; ಚತುಷ್ಟ.

ಒಡ್ಡು (ಕ್ರಿ). ೧. ಅರ್ಪಿಸು; ಈಡುಮಾಡು. ೨. ಎದುರಿಸು; ಪ್ರತಿಭಟಿಸು. ೩. ಎದುರಿಗೆ ಹಿಡಿ; ಮುಂದಿಡು. ೪. ಉಬ್ಬು; ಮೇಲೇಳು. ೫. ವ್ಯೂಹರಚನೆ ಮಾಡು. ೬. ಹಾಯಿಸು. ೭. ಚಾಚು. (ನಾ). ೮. ಗುಂಪು; ಸಮೂಹ. ೯. ವ್ಯೂಹ; ಸೈನ್ಯ. ೧೦. ಅಡ್ಡಗಟ್ಟೆ. ೧೧. ನೀರು ನಿಂತಿರುವ ಕಟ್ಟೆ. ೧೨. ಜೂಜಿನಲ್ಲಿ ಒಡ್ಡುವ ಪಣ. ೧೩. ಕಣದಲ್ಲಿ ತುಳಿಸಲು ಹಾಕಿದ ಧಾನ್ಯದ ತೆನೆ. ೧೪. ಠೀವಿ; ಬೆಡಗು. ೧೫. ಅಂದ; ಅಚ್ಚುಕಟ್ಟು.

ಒಡ್ಡೋಲಗ (ನಾ). ದರ್ಬಾರು; ಸಭೆ.

ಒಡ್ಯಾಣ (ನಾ). ನಡುವಿಗೆ ಹಾಕಿಕೊಳ್ಳುವ ಪಟ್ಟಿ; ಡಾಬು.

ಒಣ = ಒಣಗು. ~ವ್ಯವಸಾಯ = ಖುಷ್ಕಿ.

ಒಣಗು (ಕ್ರಿ). ೧. ಆರಿಹೋಗು; ಶುಷ್ಕ ವಾಗು. (ನಾ). ೨. ಒಣಗಿಸುವಿಕೆ; ಶೋಷಣ.

ಒಣರ್ (ಕ್ರಿ). ೧. ಭಾವಿಸು; ತಿಳಿ. ೨. ಹೇಳು; ನಿರೂಪಿಸು. ೩. ಕೂಡು; ಸೇರು.

ಒತ್ತಂಬ (ನಾ). ೧. ಒತ್ತುವಿಕೆ; ಬಲಾತ್ಕಾರ. ೨. ಸಮೂಹ; ಮೊತ್ತ. ೩. ಭಾರ. ~ಇಸು = ೧. ಪ್ರೋತ್ಸಾಹ ಹೊಂದು. ೨. ಕೂಡಿಬರು. ೩. ಹೆಚ್ಚಾಗು.

ಒತ್ತಡ (ನಾ). ೧. ಒತ್ತುವಿಕೆ; ಭಾರ. ೨. ಉಗಿಯ ಕಾವು ಕೊಡುವುದು. ೩. ಹೆಚ್ಚಳ; ಆಧಿಕ್ಯ.

ಒತ್ತಮಿಸು (ಕ್ರಿ). ಮೀರು ; ಅತಿಕ್ರಮಿಸು.
ಒತ್ತರ (ನಾ). ೧. ಒಂದೇ ರೀತಿ. ೨. ಒಂದು ಸಾಲು. ೩. ಗುಂಪು ; ಸಮೂಹ. ೪. ವೇಗ; ಒತ್ತಡ. ~ಇಸು = ೧. ಒಂದುಕಡೆಗೆ ತಳ್ಳು. ೨. ಕಡೆಗಣಿಸು. ೩. ನಿವಾರಿಸು. ೪. ಮುತ್ತು; ಕವಿ. ೫. ಸೀಳು ; ಒಡೆ. ೬. ಹಿಂಬಾಲಿಸು ; ಜೊತೆಗೂಡು. ೭. ಸೇರಿಸು ; ಒಟ್ಟು. ೮. ಹೆಚ್ಚಾಗು. ೯. ಹಾಯು ; ನುಗ್ಗು. ೧೦. ಕಿಕ್ಕಿರಿ; ಸಂದಣಿಸು. ೧೧. ಅಲುಗಾಡು.
ಒತ್ತು (ಕ್ರಿ). ೧. ಆಕ್ರಮಿಸು ; ಮುತ್ತು. ೨. ಚುಚ್ಚು ; ತಿವಿ. ೩. ಚುಚ್ಚಿ ಮಾತನಾಡು. ೪. ನೂಕು ; ತಳ್ಳು. ೫. ಊದು ; ಬಾರಿಸು. ೬. ಅದುಮು; ಹಿಸುಕು. ೭. ಬಳಿ; ಲೇಪಿಸು. ೮. ಕಾಡು ; ಪೀಡಿಸು. ೯. ಒರಸು ; ಕಳೆ. ೧೦. ಅಪ್ಪು; ಆಲಿಂಗಿಸು. ೧೧. ಕುಟ್ಟು ; ಬಡಿ. ೧೨. ಮುಂದುವರಿ ; ಸಾಗು. ೧೩. ಹೇರು ; ಭಾರಹಾಕು. (ನಾ). ೧೪. ಒತ್ತಡ ; ಅದುಮುವಿಕೆ. ೧೫. ಸ್ಪರ್ಶ; ಸೋಕು. ೧೬. ನದಿಯ ತೀರ. ೧೭. ಸಮೀಪ; ನೆರೆ. ೧೮. ದಟ್ಟವಾದುದು. ೧೯. ರಾಶಿ ; ಗುಂಪು. ೨೦. ಆಸರೆ; ಅವಲಂಬನೆ. ~ಆಯ = ನಿರ್ಬಂಧ ; ಬಲವಂತ. ~ಆಸೆ = ಸಹಾಯ ; ನೆರವು. ~ಯಂತ್ರ= ಅಚ್ಚು ಮಾಡುವ ಯಂತ್ರ.
ಒತ್ತೆ (ನಾ). ೧. ಆಧಾರವಾಗಿ ಕೊಡುವ ವಸ್ತು; ಅಡವು. ೨. ಸೂಳೆಯರಿಗೆ ತೆರುವ ಹಣ.
ಒದಗಣೆ (ನಾ). ಸಿಗುವಿಕೆ ; ಲಭಿಸುವಿಕೆ.
ಒದಗು (ಕ್ರಿ). ೧. ಉಂಟಾಗು ; ದೊರಕು. ೨. ನೆರವಾಗು. ೩. ಪಕ್ಕಕ್ಕೆ ಸರಿ. ೪. ಸಾಕಾಗು. ೫. ಸೇರು ; ಬಳಿಗೆ ಹೋಗು. ೬. ಮುಂದಾಗು. ೭. ವಶವಾಗು. (ನಾ). ೮. ದೊರೆತುದು ; ಲಭ್ಯ. ೯. ರಕ್ಷೆ; ನೆರವು.
ಒದಡು = ಒಸಡು.
ಒದಱು(ರು) (ಕ್ರಿ). ೧. ಭುಜಾಸ್ಫಾಲನೆ ಮಾಡು; ಕೈಚಪ್ಪಾಳೆ ತಟ್ಟು. ೨. ಕೊಡಹು ; ಜಾಡಿಸು. ೩. ಅಲುಗಾಡು ; ನಡುಗು. ೪. ನಿಂದಿಸು ; ತಿರಸ್ಕರಿಸು. ೫. ಕಿರುಚು ; ಗರ್ಜಿಸು. ೬. ಉಚ್ಚರಿಸು. ೭. ಮೋಸದ ಮಾತನಾಡು. ~ಆಡು = ೧. ಚಡಪಡಿಸು; ಒದ್ದಾಡು. ೨. ನಡುಗು. ೩. ಕೂಗಾಡು.
ಒದವಿ (ನಾ). ಕೊಡುಗೆ ; ದಾನ.
ಒದವು(ಹು) (ಕ್ರಿ). ೧. ಉಂಟಾಗು ; ಒದಗಿಬರು. ೨. ತೋಡು ; ಬಗಿ. ೩. ಸಿದ್ಧ ವಾಗು ; ಅಣಿಯಾಗು. ೪. ಏಳಿಗೆ ಹೊಂದು. ೫. ಗುಂಪಾಗು. ೬. ಫಲಿಸು ; ಸಿದ್ಧಿಸು. ೭. ಸಲಹು ; ಕಾಪಾಡು. (ನಾ). ೮. ಅಭಿವೃದ್ಧಿ; ಏಳಿಗೆ. ೯. ಸಾಮರ್ಥ್ಯ. ೧೦. ನೆರವು ; ಸಹಾಯ. ೧೧. ಕೂಡುವಿಕೆ; ಜೋಡಣೆ. ೧೨. ಉಂಟಾಗುವಿಕೆ ; ಪ್ರಾಪ್ತಿ.
ಒದೆ (ಕ್ರಿ). ೧. ತುಳಿ ; ಮೆಟ್ಟು. ೨. ತಳ್ಳು ; ನೂಕು. ೩. ಚಿಮ್ಮಿಬರು. ೪. ಅಪ್ಪಳಿಸು ; ಕೊಚ್ಚು. (ನಾ). ೫. ಒದೆಯುವಿಕೆ. ೬. ಪಕ್ಕದಲ್ಲಿಯ ಆಧಾರ, -ಆಸರೆ.
ಒದೆತ (ನಾ). ೧. ಕಾಲಿನಿಂದ ಒದೆಯುವಿಕೆ. ೨. ಬಲವಾದ ಪೆಟ್ಟು.
ಒದ್ದೆ (ನಾ). ನೆನೆದಿರುವುದು ; ತೇವ.
ಒನಕೆ (ನಾ). ಬತ್ತ ಮೊದಲಾದುವುಗಳನ್ನು ಕುಟ್ಟುವ ಸಾಧನ; ಮುಸಲ.
ಒನಪು (ನಾ). ಬೆಡಗು ; ಬಿನ್ನಾಣ.
ಒನಲ್(ಲು) (ಕ್ರಿ). (ಅವಮಾನದಿಂದ) ಕೋಪಿಸಿಕೊಳ್ಳು ; ಸಿಟ್ಟಿಗೇಳು.
ಒನಲಿ (ನಾ). ಒಂದರಿ ; ಜರಡಿ.
ಒನೆ (ಕ್ರಿ). ೧. (ಧಾನ್ಯಗಳನ್ನು) ಶುದ್ಧಿ ಮಾಡು, -ಹಸನುಮಾಡು. ೨. ಅಲುಗಾಡು; ತೂಗಾಡು. ೩. ಅಲುಗಾಡಿಸು.
ಒಪ್ಪ (ನಾ). ೧. ಸಮ್ಮತಿ ; ಒಪ್ಪಿಗೆ. ೨. ಸಹಿ; ರುಜು. ೩. ಒಪ್ಪುವಂತಹ ಮಾತು.

೪. ಮೆರುಗು ; ಕಾಂತಿ. ೫. ಅಚ್ಚುಕಟ್ಟು ; ಓರಣ. ೬. ಸ್ಥಿತಿ ; ಇರುವಿಕೆ.

ಒಪ್ಪಂದ (ನಾ). ಒಪ್ಪಿಗೆ ; ಕರಾರು.

ಒಪ್ಪಚ್ಚಿ (ನಾ). ೧. ತುಸು ; ಸ್ವಲ್ಪ. ೨. ಒಮ್ಮೆ ; ಒಂದು ಸಲ.

ಒಪ್ಪಾರು (ನಾ). ೧. ಒಂದು ಕಡೆ. ೨. ಒಂದೇ ಕಡೆಗೆ ಇಳಿಜಾರಾಗಿರುವ ಛಾವಣಿ.

ಒಪ್ಪಿತ (ನಾ). ೧. ಸಮ್ಮತಿ ; ಅನುಮೋದನೆ. ೨. ರುಜು ; ಸಹಿ.

ಒಪ್ಪು (ಕ್ರಿ). ೧. ಸಮ್ಮತಿಸು ; ಅಂಗೀಕರಿಸು. ೨. ಹೊಳೆ ; ಪ್ರಕಾಶಿಸು. ೩. ಯೋಗ್ಯವಾಗು ; ಉಚಿತವಾಗು. ೪. ಬಳಕೆಯಲ್ಲಿರು. ೫. ಮೆಚ್ಚಿಕೆಯಾಗು. ೬. ಪ್ರಕಟವಾಗು ; ಕಾಣಿಸು. (ನಾ). ೭. ಒಪ್ಪಿಗೆ ; ಸಮ್ಮತಿ. ೮. ಒಪ್ಪಿಸುವ ವಸ್ತು. ೯. ಚೆಲುವು ; ಸೌಂದರ್ಯ. ೧೦. ಹಿರಿಮೆ ; ಗೌರವ.

ಒಪ್ಪುಗೆ (ನಾ). ಸಮ್ಮತಿ ; ಅನುಮೋದನೆ.

ಒಬ್ಬಟ್ಟು (ನಾ). ಒಂದು ಬಗೆಯ ಸಿಹಿ ತಿಂಡಿ ; ಹೋಳಿಗೆ.

ಒಬ್ಬುಳಿ = ಒರ್ವುಳಿ.

ಒಬ್ಬೆ (ನಾ). ಒರಳಿನಲ್ಲಿ ಒಂದು ಸಲಕ್ಕೆ ಹಿಡಿಯುವಷ್ಟು ಅಳತೆ ; ಇಬ್ಬೆ.

ಒಮ್ಮನಸ್ಸು (ನಾ). ಒಂದೇ ಮನಸ್ಸು ; ಏಕಚಿತ್ತ.

ಒಮ್ಮು (ಕ್ರಿ). ೧. ಅನುಸರಿಸು ; ಹಿಂಬಾಲಿಸು. ೨. ಒಪ್ಪು ; ಒಡಂಬಡು. (ನಾ). ೩. ಮೇಳನ ; ಹೊಂದಿಕೆ. ೪. ಏಕಾಂಗಿಯಾಗಿರುವಿಕೆ ; ಅಸಹಾಯಕತೆ.

ಒಮ್ಮೆ = ಒರ್ಮೆ.

ಒಮ್ಮೊಲೆ (ಅ). ಒಂದೇ ಸಾರಿಗೆ ; ಥಟ್ಟನೆ.

ಒಯ್(ಯ್ಯು) (ಕ್ರಿ). ತೆಗೆದುಕೊಂಡು ಹೋಗು ; ಸಾಗಿಸು.

ಒಯ್ಕನೆ (ಅ). ನೆಟ್ಟನೆ ; ನೇರವಾಗಿ.

ಒಯ್ಯಗೆ(ನೆ) (ಅ). ಮೆಲ್ಲನೆ ; ಮೃದುವಾಗಿ.

ಒಯ್ಯಾರ (ನಾ). ೧. ಸೊಗಸು ; ಅಂದ. ೨. ದಯೆ ; ದಾಕ್ಷಿಣ್ಯ. ~ಇಸು = ೧. ಸವರು ; ನೇವರಿಸು. ೨. ಕ್ರಮಗೊಳಿಸು.

ಒಯ್ಯಾರಿ (ನಾ). ಬೆಡಗಿ ; ಸೊಗಸುಗಾತಿ.

ಒರಚು (ಗು). ವಕ್ರವಾದ ; ಒಂದು ಕಡೆಗೆ ಮಾಲುವ. ~ಕ(ಗ)ಣ್ಣು = ಮೆಳ್ಳಗಣ್ಣು.

ಒರಪು (ನಾ). ಉಜ್ಜುವುದು ; ತಿಕ್ಕುವುದು.

ಒರಲ್(ಲು,ಳ್,ಳು) ೧. = ಒಱಲ್. (ನಾ). ೨. ಒರಳುಕಲ್ಲು ; ರುಬ್ಬುಗಲ್ಲು.

ಒರಸು (ಕ್ರಿ). ೧. ತೀಡು ; ತಿಕ್ಕು. ೨. ಬಟ್ಟೆಯಿಂದ ಒತ್ತಿ ತೆಗೆ ; ನಿವಾರಿಸು. ೩. ಅಳಿಸು ; ನಾಶಮಾಡು. ೪. ಲೇಪಿಸು ; ಬಳಿ. ೫. ಸೋಕು ; ತಾಗು. (ನಾ). ೬. ಒರಸುವಿಕೆ ; ಉಜ್ಜುವಿಕೆ. ೭. ಹಿಂಸೆ ; ಕಾಟ.

ಒರುಗು (ನಾ). ಒಣಗಿದುದು ; ಒಣಕಲು.

ಒರೆ (ಕ್ರಿ). ೧. ಹೇಳು ; ನಿರೂಪಿಸು. ೨. ಬಳಿ ; ಸವರು. ೩. ಉಜ್ಜು ; ತಿಕ್ಕು. ೪. ಪರೀಕ್ಷಿಸು. ೫. ಹೆರೆ ; ನಯಮಾಡು. ೬. = ಒಱೆ. (ನಾ). ೭. ಹೇಳಿಕೆ ; ಮಾತು. ೮. ಉಜ್ಜುವಿಕೆ. ೯. ಉಜ್ಜುವುದರಿಂದ ಉಂಟಾಗುವ ಮೆರುಗು. ೧೦. ಗುಣದೋಷಗಳ ಪರೀಕ್ಷೆ. ೧೧. ಸಾಟಿ ; ಸಮಾನ. ~ಕ(ಗ)ಲ್(ಲ್ಲು) = ಚಿನ್ನ, ಬೆಳ್ಳಿಗಳನ್ನು ಪರೀಕ್ಷಿಸಲು ತಿಕ್ಕಿ ನೋಡುವ ಕಲ್ಲು ; ನಿಕಷ.

ಒಱ(ರ)(ಂ)ಗು (ಕ್ರಿ). ೧. ನಿದ್ದೆಹೋಗು ; ಮಲಗು. ೨. ಬಾಗು ; ಬಗ್ಗು. ೩. ಸಾಯು. ೪. ಆತುಕೊಳ್ಳು ; ನೆಮ್ಮು. (ನಾ). ೫. ಬಾಗುವಿಕೆ. ೬. ನಿದ್ರೆ ; ಶಯನ. ೭. ದಿಂಬು. ~ಮೂಡೆ = ಉದ್ದನೆಯ ಒರಗುದಿಂಬು.

ಒಱ(ರ)(ಂ)ಟು (ನಾ). ೧. ಹಟಮಾರಿತನ ; ಮೊಂಡು. ೨. ನಯನಾಜೂಕು ಇಲ್ಲದಿರುವಿಕೆ.

ಒಱ(ರ)(ಂ)ತೆ (ನಾ). ನೀರು ಜಿನುಗುವ ತಗ್ಗು ; ಒಸರು.

ಒಜ(ರ)ಪು(ಹು) (ನಾ). ಹೊಳಪು; ಕಾಂತಿ.
ಒಜ(ರ)ಲ್(ಲು) (ಕ್ರಿ). ೧. ಪ್ರೀತಿಸು; ಮೋಹಿಸು. ೨. ಅರಚು; ಕೂಗಿಕೊಳ್ಳು. ೩. ನರಳು. (ನಾ). ೪. ಪ್ರೀತಿ; ಮೋಹ. ೫. ಕೂಗಾಟ. ೬. ನರಳುವಿಕೆ.
ಒಜ(ರ)ಲೆ(ಳೆ) (ನಾ). ೧. ಗೆದ್ದಲು; ಬಿಳಿ ಇರುವೆ. ೨. ಒಸರುವಿಕೆ. ~ಕಾ(ಗಾ)ಲ್ = ಆನೆಕಾಲು ರೋಗ ತಗುಲಿದ ಪಾದ.
ಒಜ(ರ)ಲ್ಚು (ಕ್ರಿ). ೧. ಮೆಚ್ಚಿಸು. ೨. ಕೂಗುವಂತೆ ಮಾಡು. ೩. ಮೊಳಗು; ಧ್ವನಿಮಾಡು.
ಒಜೆ³(ರೆ) (ಕ್ರಿ). ೧. ಸ್ರವಿಸು; ಜಿನುಗು. ೨. ಒದ್ದೆಯಾಗು; ನೀರೂರು. (ನಾ). ೩. ಕತ್ತಿಯ ಚೀಲ; ಶಸ್ತ್ರಕೋಶ. ~ಕ(ಗ)ಲ್ಲು = ಚಂದ್ರಕಾಂತ ಶಿಲೆ.
ಒರ್ಕೊರಲ್(ಲು) (ನಾ). ಒಂದೇ ಕೊರಳು; ಏಕಾಭಿಪ್ರಾಯ.
ಒರ್ಜಂತ (ನಾ). ಏಕದಂತ; ಗಣಪತಿ.
ಒರ್ಬಿ (ನಾ). ೧. ಒಂದು ತಂಡ, -ಪಂಗಡ. ೨. = ಒಬ್ಬೆ.
ಒರ್ಮೆ (ಅ). ಒಮ್ಮೆ; ಒಂದು ಬಾರಿ.
ಒರ್ವೞಿ (ನಾ). ಗುಂಪು; ಒಟ್ಟಲು.
ಒಲ್(ಲು) (ಕ್ರಿ). ೧. ಒಪ್ಪು; ಸಮ್ಮತಿಸು. ೨. ಬಯಸು; ಅಪೇಕ್ಷಿಸು. ೩. ಶಕ್ತನಾಗು. ೪. ಮೆಚ್ಚು; ಪ್ರೀತಿಸು.
ಒಲಕಾಡು (ನಾ). ಸುಡುಗಾಡು; ಶ್ಮಶಾನ.
ಒಲಪು(ಹು) (ನಾ). ೧. ಒಲೆತ; ತೂಗಾಟ. ೨. ಒಯ್ಯಾರ; ಬೆಡಗು.
ಒಲವರ (ನಾ). ೧. ಬಯಕೆ; ಪ್ರೀತಿ. ೨. ಮನಸ್ಸಿನ ಪ್ರವೃತ್ತಿ. ೩. ಪಕ್ಷಪಾತ.
ಒಲವು (ನಾ). ೧. ಪ್ರೀತಿ; ಮೋಹ. ೨. ಆಸಕ್ತಿ; ಶ್ರದ್ಧೆ. ೩. ಉತ್ಸಾಹ.
ಒಲಿ ೧. = ಒಲ್. (ನಾ). ೨. ಗರಿ; ಓಲೆ.
ಒಲುಮೆ = ಒಲ್ಮೆ. ~ಮದ್ದು = ವಶಮಾಡಿಕೊಳ್ಳಲು ಪ್ರಯೋಗಿಸುವ ಮದ್ದು.
ಒಲೆ (ಕ್ರಿ). ೧. ತೊನೆ; ತೂಗಾಡು. ೨. ಅಲ್ಲಾಡಿಸು; ಅತ್ತಿತ್ತ ಆಡಿಸು. ೩. ಬಾಗು; ಓರೆಯಾಗು. ೪. ಆಗು; ಒದಗು. ೫. ಒಪ್ಪು; ಶೋಭಿಸು. ೬. ನುಡಿ; ಮಾತನಾಡು. (ನಾ). ೭. ಅಡುಗೆ ಮಾಡಲು ಬೆಂಕಿ ಉರಿಯಿಸುವ ಸಲಕರಣೆ; ಅಶ್ಮಂತಕ. ೮. ತೂಗಾಟ; ಒಲೆದಾಟ. ~ಅ(ಯು)ಡುಕು = ಒಲೆಹೂಡು; ಅಡುಗೆ ಮಾಡು.
ಒಲ್ಮೆ (ನಾ). ೧. ಪ್ರೀತಿ; ಅನುರಾಗ. ೨. ಅನುಗ್ರಹ; ದಯೆ.
ಒಲ್ಲಗೆ(ನೆ) (ಅ). ಮೆಲ್ಲನೆ; ನಿಧಾನವಾಗಿ.
ಒಲ್ಲಣಿಗೆ (ನಾ). ಒದ್ದೆಯಾದ ಬಟ್ಟೆ.
ಒವಜ(ಝ) (ನಾ). ೧. ಉಪಾಧ್ಯಾಯ; ಕಲಿಸುವವನು. ೨. ಶಿಲ್ಪಿ.
ಒವಜು (ನಾ). ಉಪಾಧ್ಯಾಯ ವೃತ್ತಿ; ಕಲಿಸುವಿಕೆ.
ಒವಟ್(ಳ್) (ನಾ). ಸೌಳು; ಚೌಳು.
ಒಸಗು (ಕ್ರಿ). ಸಂತೋಷಪಡು; ನಲಿ.
ಒಸಗೆ (ನಾ). ೧. ಶುಭ; ಮಂಗಳಕಾರ್ಯ. ೨. ಸಂತೋಷ. ೩. ಕಾಣಿಕೆ; ಉಡುಗೊರೆ. ೪. ಶುಭಸಮಾಚಾರ. ೫. ಆಹ್ವಾನ; ಕರೆ. ೬. ಯಶಸ್ಸು; ಜಸ.
ಒಸಡು (ನಾ). ೧. ಹಲ್ಲುಗಳಿಗೆ ಆಧಾರವಾಗಿರುವ ಮಾಂಸಖಂಡ. ೨. ತುಟಿ.
ಒಸರ್(ರು) (ಕ್ರಿ). ೧. ಜಿನುಗು; ಸೋರು. (ನಾ). ೨. ಜಿನುಗುವಿಕೆ; ಸೋರುವಿಕೆ. ೩. ಚಿಕ್ಕ ಪ್ರವಾಹ. ೪. ಒರತೆ; ಚಿಲುಮೆ. ~ಕ(ಗ)ಲ್ = ಚಂದ್ರಕಾಂತ ಶಿಲೆ.
ಒಸೆ (ಕ್ರಿ). ೧. ಒಲಿ; ಮೆಚ್ಚು. ೨. ಅನುಗ್ರಹಿಸು. ೩. ಹಿಗ್ಗು; ಸಂತೋಷಪಡು. ೪. ಶೋಭಿಸು; ಸೊಗಸಾಗು.
ಒಳಕೆಯ್ (ಕ್ರಿ). ೧. ಪಡೆ; ಹೊಂದಿರು. ೨. ಆವರಿಸು; ಒಳಕೊಳ್ಳು. ೩. ಒಲಿಸಿಕೊಳ್ಳು. (ನಾ). ೪. ಅಂಗೈ. ೫. ನಷ್ಟ.

೬. ಜಿಪುಣ. ೭. ಕಕ್ಕಸು, ಬಚ್ಚಲು ಎಲ್ಲವೂ ಒಳಗೇ ಇರುವ ಮನೆ. ೮. ಗದ್ದೆಯ ಅಥವಾ ಹೊಲದ ಒಳಭಾಗ.

**ಒಳಕೊಳ್(ಳ್ಳು)** (ಕ್ರಿ). ೧. ಒಳಗಿಟ್ಟುಕೊಳ್ಳು; ಸೇರಿಸಿಕೊಳ್ಳು. ೨. ಸಮ್ಮತಿಸು; ಒಪ್ಪಿಕೊಳ್ಳು. ೩. ಒದಗು; ಉಂಟಾಗು. ೪. ಒಳಸೇರು; ಅಡಕವಾಗಿರು. ೫. ಪಡೆ; ಹೊಂದು.

**ಒಳಗಡೆ** (ನಾ) ೧. ಒಳಗಿನ ಭಾಗ, -ಪ್ರದೇಶ. ೨. ಅಂತರಂಗ. ೩. ದನಕರುಗಳು ಕಾಡಿನ ಅಂಚಿನಲ್ಲಿ ಆಚೆ ಹೋಗದಂತೆ ಒಡ್ಡು ಹಾಕಿದ ಪ್ರದೇಶ.

**ಒಳಗು(ವು,ಹು)** (ನಾ). ೧. ಒಳಭಾಗ. ೨. ಮನಸ್ಸು: ಹೃದಯ. ೩. ಗುಟ್ಟು; ರಹಸ್ಯ. ೪. ಅಧೀನ; ವಶ.

**ಒಳಗೆ** (ಅ). ೧. ಒಳಗಡೆ. ೨. ಅಂತರಂಗದಲ್ಲಿ. ೩. ಅಷ್ಟರಲ್ಲಿ; ಮುಂಚೆ.

**ಒಳಜೋಟಿ** (ನಾ). ೧. ಅಂತಃಕಲಹ; ಒಳಜಗಳ. ೨. ಮನಸ್ಸಿನ ಹೊಯ್ದಾಟ; ತುಮುಲ.

**ಒಳಬೆ(ಬು)** (ನಾ). ಬೆಟ್ಟದ ಕೆಳಗಿನ ಜೌಗು ನೆಲ.

**ಒಳಯಿ(ಂ)ಕೆ** (ಅ). ಒಳಗಡೆ; ಒಳಭಾಗದಲ್ಲಿ.

**ಒಳಱು(ರು)** (ಕ್ರಿ). ಕೂಗು; ಅರಚು. ~ಗುದಿಗೆ = ಕುಟ್ಟಿ ಶಬ್ದ ಮಾಡಲು ಉಪಯೋಗಿಸುವ ದೊಣ್ಣೆ.

**ಒಳಲೆ** (ನಾ). ಮಕ್ಕಳಿಗೆ ಹಾಲು ಮೊದಲಾದುವನ್ನು ಕುಡಿಸುವ ಸಾಧನ; ಶಿಂಪೆ.

**ಒಳೆ** (ಕ್ರಿ). ೧. ನರತೊಡಕು; ಎಲುವಿನ ಕೀಲುತಪ್ಪು. (ನಾ). ೨. ಮನೆಯ ಎರಡು ಸೂರುಗಳೂ ಕೂಡುವ ತುದಿ.

**ಒಳ್ಪು** (ನಾ). ೧. ಒಳ್ಳೆಯತನ; ಸದ್ಗುಣ. ೨. ಚೆಲುವು; ಶೋಭೆ. ೩. ತಿರುಳು; ಕೆಚ್ಚು. ೪. ಕ್ಷೇಮ; ಸುಖ. ೫. ಮೇಲ್ಮೆ.

**ಒಳ್ಳನೆ** (ಅ). ಸುಮ್ಮನೆ; ನಿಷ್ಕಾರಣವಾಗಿ.

**ಒಳ್ಳಿ** (ನಾ). ಸಮೂಹ; ರಾಶಿ.

**ಒಳ್ಳಿತ್ತು(ತು)** (ನಾ). ೧. ಒಳ್ಳೆಯದು; ಶ್ರೇಷ್ಠ. ೨. ಶುಭವಾದುದು; ಹಿತವಾದುದು. (ಗು). ೩. ಒಳ್ಳೆಯದಾದ; ಶ್ರೇಷ್ಠವಾದ. (ಅ). ೪. ಆಗಬಹುದು, ಒಳ್ಳೆಯದು ಎಂದು ಸೂಚಿಸುವ ಅವ್ಯಯ.

**ಒಳ್ಳೆ** (ನಾ). ೧. ವಿಷವಿಲ್ಲದ ಹಾವು; ನೀರುಹಾವು. ೨. ಕಹಿ ಪಡವಲಕಾಯಿ. (ಗು). ೩. ಒಳ್ಳೆಯ.

**ಒಬ್ಬು(ಳ್ಕು)** (ಕ್ರಿ). ೧. ಹರಿ; ಪ್ರವಹಿಸು (ನಾ). ೨. ನದಿಯ ಪ್ರವಾಹ.

**ಒಬ್ಬು(ಳ್ಗು)** (ಕ್ರಿ). ೧. ಒಟ್ಟುಗೂಡು; ಗುಂಪಾಗು. ೨. ಒಳಗೆ ಸೇರು; ಪ್ರವೇಶಿಸು. ೩. ಮೆಚ್ಚಿಕೆಯಾಗು. ೪. ರೂಢಿಯಾಗು; ಹೊಂದಿಕೆಯಾಗು. (ನಾ). ೫. ಗುಂಪು; ಒಗ್ಗು. ೬. ಅತಿಪರಿಚರ್ಯೆ; ಹೆಚ್ಚಿನ ಸೇವೆ.

❋

ಓ (ಕ್ರಿ). ೧. ಪ್ರೀತಿಸು ; ಸಲಹು. (ನಾ). ೨. ಕನ್ನಡ ವರ್ಣಮಾಲೆಯ ಹದಿನೈದನೆಯ ಅಕ್ಷರ.

ಓಂಕಾರ (ನಾ). ಓಂ ಎಂಬ ಮಂತ್ರಾಕ್ಷರ; ಪ್ರಣವ. ~ಮೂರ್ತಿ = ಶಿವ.

ಓಂಗು (ಕ್ರಿ). ಕೆಲಸವಿಲ್ಲದೆ ಸುತ್ತಾಡು.

ಓ(ಂ)ತಿ (ನಾ). ಹಲ್ಲಿಯ ಜಾತಿಗೆ ಸೇರಿದ ಪ್ರಾಣಿ ; ಹೆಂಟೆಗೊದ್ದ.

ಓಂಪುಡಿ (ನಾ). ಕಡಲೆಹಿಟ್ಟಿಗೆ ಓಮನ್ನು ಹಾಕಿ ಮಾಡುವ ಕಾರದ ತಿಂಡಿ.

ಓಕ (ನಾ). ೧. ಮನೆ ; ವಾಸಸ್ಥಳ. ೨. ಮೇರೆ; ಗಡಿ. ೩. ಸಂತೋಷ.

ಓಕರ = ಓಕರಿಕೆ.

ಓಕರಿಕೆ (ನಾ). ೧. ವಾಂತಿ ; ವಮನ. ೨. ಜುಗುಪ್ಸೆ ; ಹೇಸಿಕೆ.

ಓಕು (ನಾ). ಕೊರತೆ ; ನ್ಯೂನತೆ.

ಓಕುಳಿ (ನಾ). ಉತ್ಸವಕಾಲದಲ್ಲಿ ಪರಸ್ಪರ ಮೈಮೇಲೆ ಎರಚುವ ಬಣ್ಣದ ನೀರು.

ಓಗಟೆ = ಒಗಂಟು.

ಓಗರ (ನಾ). ೧. ಪೂರ್ಣವಾದುದು. ೨. ಬೇಯಿಸಿದ ಆಹಾರ ; ಅನ್ನ. ೩. ಪರಿಮಳ ; ಸುಗಂಧ. ~ಕ(ಗ)ಂಪು = ಬೆರಕೆ ಗಂಧ ; ಮಿಶ್ರಗಂಧ.

ಓಘ (ನಾ). ೧. ಪ್ರವಾಹ. ೨. ರಭಸ. ೩. ಸಮೂಹ ; ರಾಶಿ.

ಓಜ ೧. = ಒವಜ. ೨. ಕಾಂತಿ ; ಹೊಳಪು. (ಗು). ೩. ಬೆಸಸಂಖ್ಯೆಯುಳ್ಳ; ವಿಷಮ ಸಂಖ್ಯೆಯ.

ಓಜಸ್ವಿ (ಗು). ೧. ಕಾಂತಿಯುಳ್ಳ. ೨. ಬಲವುಳ್ಳ.

ಓಜಸ್ಸು (ನಾ). ೧. ಶಕ್ತಿ; ಕೆಚ್ಚು. ೨. ಕಾಂತಿ; ಹೊಳಪು. ೩. ಪ್ರಕಟರೂಪ. ೪. ಆಧಾರ ; ನೆಲೆ. ೫. ನೀರು. ೬. ಕಾವ್ಯದ ಹತ್ತು ಶಬ್ದಗುಣಗಳಲ್ಲಿ ಒಂದು.

ಓಜೆ (ನಾ). ೧. ಶ್ರೇಣಿ ; ಸಾಲು. ೨. ಕ್ರಮ; ರೀತಿ. ೩. ವಶ ; ಅಧೀನ.

ಓಟ (ನಾ). ೧. ಓಡುವಿಕೆ ; ಪಲಾಯನ. ೨. ನಡೆ ; ಶೈಲಿ. ~ಕು(ಗು)ಳಿ =೧. ಓಡುವುದೇ ಸ್ವಭಾವವಾಗಿ ಉಳ್ಳವನು. ೨. ಪುಕ್ಕಲ ; ಹೇಡಿ.

ಓಟೆ (ನಾ). ೧. ಬಿದಿರಿನ ಜಾತಿಯ ಒಂದು ಮರ. ೨. ಸೀಳು ; ಹೋಳು. ೩. ಹಣ್ಣಿನ ಮಧ್ಯೆಯಿರುವ ಬೀಜ ; ಗೊರಟೆ. ೪. ಸಿಪ್ಪೆ; ಪರಟೆ.

ಓಡ (ನಾ). ದೋಣಿ ; ಹರಿಗೋಲು.

ಓಡಾರಿ (ನಾ). ಕುಂಬಾರ.

ಓಡು (ಕ್ರಿ). ೧. ಪಲಾಯನ ಮಾಡು ; ದೌಡಾಯಿಸು. (ನಾ). ೨. ಮಡಕೆಯ ಚೂರು ; ಬೋಕಿ. ೩. ಮಡಕೆ. ೪. ಹುರಿಯುವ ಹೆಂಚು. ೫. ಮಾಳಿಗೆಯ ಹೆಂಚು. ೬. ತಲೆಬುರುಡೆ; ಚಿಪ್ಪು. ೭. ಅಲ್ಪ; ಕ್ಷುದ್ರ. ೮. = ಓಡ.

ಓಡೆ (ನಾ). ೧. ಸುಟ್ಟಮಣ್ಣಿನ ವರ್ತುಳ. ೨. ದವಸಧಾನ್ಯಗಳನ್ನು ತುಂಬುವ ದೊಡ್ಡ ಮಣ್ಣಿನ ಸಾಧನ ; ರಂಜಣಿಗೆ. ೩. ದೋಣಿ.

ಓಣಿ (ನಾ). ೧. ಸಾಲು ; ಶ್ರೇಣಿ. ೨. ಕೇರಿ ; ಗಲ್ಲಿ. ೩. ಹಳ್ಳ ; ಕೊರಕಲು.

ಓತ (ನಾ). ೧. ಓದುವಿಕೆ ; ಪಠನ. ೨. ಮಗ್ಗದ ಹಾಸು. ~ಪ್ರೋತ = ೧. ಹಾಸುಹೊಕ್ಕು; ಎಲ್ಲ ಕಡೆಗೆ ವ್ಯಾಪಿಸಿದ್ದು. ೨. ಸರಾಸರಿ. ೩. ನಿರಂತರ.

ಓತು (ಕ್ರಿ). ೧. ಸಾಲಾಗಿರಿಸು ; ಪೇರಿಸು. (ನಾ). ೨. ಓದಿದ್ದು. ೩. ಬೆಕ್ಕು.

ಓದಕ್ಕಿ = ಓಮ.

**ಓದನ** (ನಾ). ಅನ್ನ ; ಓಗರ.
**ಓದು** (ಕ್ರಿ). ೧. ಪಠನಮಾಡು. ೨. ಅಭ್ಯಾಸ ಮಾಡು ; ಕಲಿ. (ನಾ). ೩. ಓದುವಿಕೆ. ೪. ವಿದ್ಯೆ ; ಜ್ಞಾನ. ೫. ವೇದ.
**ಓನಾಮ** (ನಾ). ೧. ಓಂನಮಃ ಎಂಬ ಮಂತ್ರ. ೨. ಆರಂಭ.
**ಓಪ** (ನಾ). ಪ್ರಿಯಕರ ; ನಲ್ಲ.
**ಓಪಾದಿ** (ನಾ). ೧. ಹೋಲಿಕೆ ; ಸಾದೃಶ್ಯ. (ಅ). ೨. ಹಾಗೆ ; ಅಂತೆ.
**ಓಪು** (ನಾ). ಪ್ರೀತಿ ; ಸ್ನೇಹ.
**ಓಬಿರಾಯ** (ನಾ). ಅತಿ ಪ್ರಾಚೀನ ಕಾಲದ ಒಬ್ಬ ಕಾಲ್ಪನಿಕ ವ್ಯಕ್ತಿ.
**ಓಮ(ಮು)** (ನಾ). ೧. ಜೀರಿಗೆ ಜಾತಿಗೆ ಸೇರಿದ ಬೀಜ ; ಅಜಮೋದ. ೨. ದಯೆ.
**ಓಯರ** = ಒಯ್ಯಾರ.
**ಓರಂಡಲ** (ನಾ). ೧. ಒಂದು ಪ್ರತಿಭಟನೆ. ೨. ಒಂದು ಕಡೆಯ ಭಾರ.
**ಓರಗಿತ್ತಿ** (ನಾ). ಭಾವ ಅಥವಾ ಮೈದುನನ ಹೆಂಡತಿ ; ನೆಗೆಣ್ಣಿ.
**ಓರಗೆ** (ನಾ). ಸಮಾನ ; ಸಮವಯಸ್ಕ.
**ಓರಣ** (ನಾ). ೧. ಸಾಲು ; ಪಂಕ್ತಿ. ೨. ಅಚ್ಚು ಕಟ್ಟು ; ಕ್ರಮ.
**ಓರಿಗೆ** = ಓರಗೆ.
**ಓಱು** (ಕ್ರಿ). ಚಿಂತಿಸು ; ಆಲೋಚಿಸು.
**ಓರೆ** (ನಾ). ೧. ಇಳುಕಲು ; ಇಳಿಜಾರು. ೨. ವ್ಯತ್ಯಾಸ. ೩. ಮೂಲೆ ; ತುದಿ. ೪. ಪಕ್ಕ ; ಪಾರ್ಶ್ವ. ೫. ವಕ್ರತೆ ; ಡೊಂಕು. ೬. ಸಮಾನ ; ಸಮವಯಸ್ಕ. ~ಆ(ಯಾ)ಗು = ೧. ವಕ್ರವಾಗು. ೨. ಪಕ್ಕಕ್ಕೆ ಸರಿ ; ಅರುಗಾಗು. ~ಕೋರೆ = ೧. ಹೆಚ್ಚು ಕಡಮೆ ; ಲೋಪದೋಷ. ೨. ವಕ್ರತೆ ; ಅಂಕುಡೊಂಕು.
**ಓಱು(ರು)ಗುಡಿಸು** (ಕ್ರಿ). ಓರೆಯಾಗು ; ಕುಸಿ.
**ಓಱೆ(ರೆ)** (ನಾ). ಆಗಡುತನ ; ಒರಟುತನ. ~ಆ(ಯಾ)ವು = ತುಂಟ ಹಸು.
**ಓಲಗ** (ನಾ). ೧. ರಾಜನ ಸಭೆ ; ದರ್ಬಾರು. ೨. ರಾಜನ ಸೇವೆ ; ಊಳಿಗ. ೩. ನಾಗಸ್ವರ ಮೊದಲಾದ ವಾದ್ಯ. ~ಇಸು = ೧. ದರ್ಬಾರು ಮಾಡು. ೨. ಒಟ್ಟಿಗೆ ಸೇರು. ೩. ಸೇವೆ ಮಾಡು. ೪. ಕಾಣಿಕೆ ಕೊಡು. ೫. ಪುಸಲಾಯಿಸು. ೬. ಹಿಂಜರಿ. ೭. ನಾಗಸ್ವರ ಮೊದಲಾದ ವಾದ್ಯಗಳನ್ನು ಬಾರಿಸು.
**ಓಲಿ** (ನಾ). ೧. ಕನ್ಯಾದಕ್ಷಿಣೆ ; ಕನ್ಯಾಶುಲ್ಕ. ೨. ಒತ್ತೆ ; ಆಧಾರ.
**ಓಲು** (ಕ್ರಿ). ೧. ಬಾಗು ; ತೂಗು. (ನಾ). ೨. ಒತ್ತೆ ; ಈಡು. (ಅ). ೩. ಅಂತೆ ; ಹಾಗೆ. ~ಆಟ = ೧. ತೂಗಾಟ. ೨. ಉಬ್ಬು ; ಉತ್ಸಾಹ. ~ಆಡು = ೧. ತೂಗಾಡು ; ತೊನೆದಾಡು. ೨. ಹಿಗ್ಗು ; ನಲಿದಾಡು. ೩. ನೀರಾಟವಾಡು.
**ಓಲೆ** (ನಾ). ೧. ತಾಳೆಮರದ ಗರಿ, –ಎಲೆ. ೨. ಕಾಗದ ; ಪತ್ರ. ೩. ಕಿವಿಯ ಆಭರಣ. ~ಕಾ(ಗಾ)ಜ(ರ) = ಕಾಗದಪತ್ರಗಳನ್ನು ಒಯ್ಯುವ ಆಳು ; ಅಂಚೆಯಾಳು. ~ಭಾ(ವಾ)ಗ್ಯ = ಮುತ್ತೈದೆತನ.
**ಓವಡಿಸು** (ಕ್ರಿ). ವೃದ್ಧಿಯಾಗು ; ಹೆಚ್ಚು.
**ಓವರಿ** (ನಾ). ೧. ಒಳಮನೆ ; ಕೋಣೆ. ೨. ಪಕ್ಕ ; ಮಗ್ಗುಲು. ೩. ಮುಚ್ಚುಮರೆ.
**ಓವಳಿಸು** (ಕ್ರಿ). ಆರತಿ ಬೆಳಗು.
**ಓಷ** (ನಾ). ಉರಿಯುವಿಕೆ ; ದಾಹ.
**ಓಷಧಿ** (ನಾ). ೧. ಸಸ್ಯ ; ಮೂಲಿಕೆ. ೨. ಔಷಧಿಗಾಗಿ ಉಪಯೋಗಿಸುವ ಮೂಲಿಕೆ. ~ಈಶ = ಚಂದ್ರ.
**ಓಷ್ಠ** (ನಾ). ತುಟಿ ; ಬಾಯ್ದೆರೆ.
**ಓಷ್ಠ್ಯ** (ನಾ). ೧. ತುಟಿಯ ಸಹಾಯದಿಂದ ಹುಟ್ಟುವ ಅಕ್ಷರ. (ಗು). ೨. ತುಟಿಯಲ್ಲಿರುವ. ೩. ತುಟಿಗೆ ಸಂಬಂಧಿಸಿದ.
**ಓಸರ** (ನಾ). ೧. ಸಮತೂಕವಿಲ್ಲದಿರುವುದು ; ಓರೆಯಾಗುವುದು. ೨. ಸುಳ್ಳು ; ಅಸತ್ಯ.

~ ಇಸು = ೧. ಓರೆಯಾಗು ; ಆರುಗಾಗು. ೨. ಓರೆಮಾಡು ; ತಳ್ಳು. ೩. ಹಿಂಜರಿ. ೪. ಒರಸು ; ತೊಡೆ. ೫. ಅಪೇಕ್ಷಿಸು ; ಬಯಸು.

ಓಸರಣೆ (ನಾ). ಹಿಂಜರಿಯುವುದು ; ಹಿಮ್ಮೆಟ್ಟುವುದು.

ಓಸರಿಗೆ (ನಾ). ಮನೆಯ ಮುಂದಿನ ಹಜಾರ.

ಓಸಱು(ರಿ) (ನಾ). ಶಕುನ ; ನಿಮಿತ್ತ.

ಓಸ್ಕರ (ಅ). ಸಲುವಾಗಿ ; ದೆಸೆಯಿಂದ.

ಓಹಟೆ (ನಾ). ಸಮುದ್ರದ ತೆರೆಗಳ ಇಳಿತ.

ಓಹಿ (ನಾ). ಅವಧಿ ; ಗಡುವು.

ಓೞ್ (ಕ್ರಿ). ೧. ಸಂಭೋಗಿಸು ; ಕೂಡು. (ನಾ). ೨. ಹೋೞು ; ಸೀೞು.

ಓಳಿ (ನಾ). ೧. ಸಮೂಹ; ರಾಶಿ. ೨. = ಓರಣ.

ಓಳೆ (ನಾ). ಒಳಭಾಗ ; ಕುಹರ.

ಓಳ್ಕೆ (ನಾ). ಸಂಭೋಗ ; ಕೂಟ.



ಔ (ನಾ). ಕನ್ನಡವರ್ಣಮಾಲೆಯ ಹದಿನಾರನೆಯ ಅಕ್ಷರ.

ಔ(ಂ)ಕು (ಕ್ರಿ). ಅದುಮು ; ಒತ್ತು.

ಔ(ಂ)ಚು ೧. = ಔಂಕು. ೨. ಮುಚ್ಚಿಡು ; ಮರೆಮಾಡು.

ಔ(ಂ)ಡು (ನಾ). ೧. ಜೊತೆ ; ಯಮಳ. ೨. ಕೆಳತುಟಿ.

ಔಘ (ನಾ). ೧. ಗುಂಪು ; ಸಮೂಹ. ೨. ಪ್ರವಾಹ.

ಔಚಿತ್ಯ (ನಾ). ಉಚಿತವಾದುದು ; ಯೋಗ್ಯವಾದುದು.

ಔಟು (ನಾ). ೧. ಜೋರು ; ಜಂಬ. ೨. ಉಡಾಫೆ ; ಬಡಾಯಿ.

ಔಡಲ (ನಾ). ಹರಳು ; ಅವುಡಲ.

ಔತಣ(ಸ) (ನಾ). ಭೋಜನ ; ಅವುತಣ.

ಔತ್ತರೇಯ (ಗು). ಉತ್ತರ ದಿಕ್ಕಿಗೆ ಸಂಬಂಧಿಸಿದ.

ಔತ್ತಾನಪಾದ (ನಾ). ೧. ಉತ್ತಾನಪಾದನ ಮಗ ; ಧ್ರುವ. ೨. ಧ್ರುವ ನಕ್ಷತ್ರ.

ಔತ್ಸುಕ್ಯ (ನಾ). ೧. ಕುತೂಹಲ ; ಉತ್ಸಾಹ. ೨. ದುಃಖ. ೩. ಬಯಕೆ ; ಆಸೆ.

ಔದಾರ್ಯ (ನಾ). ಉದಾರತೆ ; ಘನತೆ.

ಔದಾಸ್ಯ (ನಾ). ಉದಾಸೀನತೆ ; ಅಲಕ್ಷ್ಯ.

ಔದುಂಬರ (ನಾ). ೧. ಅತ್ತಿಯ ಮರ. ೨. ಕುಷ್ಠರೋಗದಲ್ಲಿ ಒಂದು ಬಗೆ. ೩. ಒಂದು ವಾದ್ಯ.

ಔದ್ಧತ್ಯ (ನಾ). ಉದ್ಧಟತನ.

ಔದ್ಯೋಗಿಕ (ಗು). ಉದ್ಯೋಗಕ್ಕೆ ಸಂಬಂಧಿಸಿದ ; ತಾಂತ್ರಿಕವಾದ.

ಔನ್ನತ್ಯ (ನಾ). ಉನ್ನತಿಕೆ ; ದೊಡ್ಡಸ್ತಿಕೆ.

ಔಪಚಾರಿಕ (ಗು). ೧. ಉಪಚಾರಕ್ಕೆ ಸಂಬಂಧಿಸಿದ ; ವಾಡಿಕೆಯ. ೨. ಗೌಣವಾದ; ಪ್ರಧಾನವಲ್ಲದ. ೩. ಲಾಕ್ಷಣಿಕವಾದ.

ಔಪಾಸನ(ನೆ) (ನಾ). ದಂಪತಿಗಳು ಮಾಡುವ ಹೋಮ ; ಉಪಾಸನೆ.

ಔರಸ (ನಾ). ೧. ಸ್ವಂತ ಮಗ. (ಗು). ೨. ಎದೆಗೆ ಸಂಬಂಧಿಸಿದ. ~ಸಂಪತ್ತು = ಪರಂಪರೆಯಾಗಿ ಬಂದ ಐಶ್ವರ್ಯ.

ಔರ್ವ (ನಾ). ೧. ಒಬ್ಬ ಋಷಿಯ ಹೆಸರು. ೨. ಸಮುದ್ರದೊಳಗಿರುವ ಬೆಂಕಿ. (ಗು). ೩. ತೊಡೆಯಿಂದ ಹುಟ್ಟಿದ.

ಔಷಧ (ನಾ). ೧. ವನಸ್ಪತಿ. ೨. ಮದ್ದು. ೩. ಪರಿಹಾರ ; ಚಿಕಿತ್ಸೆ. ~ಆಚಾರ್ಯ = ಧನ್ವಂತರಿ. ~ಆಲಯ = ಆಸ್ಪತ್ರೆ ; ದವಾಖಾನೆ.

ಔಷಧಿ (ನಾ). ಮದ್ದು.

❋

ಕ (ನಾ). ೧. ಕನ್ನಡ ವರ್ಣಮಾಲೆಯ ಇಪ್ಪತ್ತೊಂದನೆಯ ಅಕ್ಷರ. (ಪ್ರ). ೨. ಪುಲ್ಲಿಂಗ ಸೂಚಕ ತದ್ಧಿತ ಪ್ರತ್ಯಯ. ೩. ಕರ್ತೃತ್ವ ಸೂಚಕ ಪ್ರತ್ಯಯ.

ಕಂ = ಕಣ್. ~ಕಾ(ಗಾ)ಪು = ರೆಪ್ಪೆ. ~ಕೆ(ಗೆ)ಡು = ೧. ಕಣ್ಣಿನ ಬಾಧೆ. ೨. ಕಂಗೆಡುವಿಕೆ; ತೊಂದರೆ. ~ಕೊ(ಗೊ)ಳಿಸು = ಅಂದವಾಗು; ಶೋಭಿಸು. ~ಪ(ಬ)ನಿ = ಕಣ್ಣೀರು.

ಕಂಕ (ನಾ). ೧. ರಣಹದ್ದು. ೨. ಇಕ್ಕಳ; ಚಿಮುಟ. ೩. ವಿರಾಟರಾಜನ ಆಸ್ಥಾನದಲ್ಲಿ ಯುಧಿಷ್ಠಿರನು ಇಟ್ಟುಕೊಂಡ ಹೆಸರು. ~ಪತ್ರ = ಹದ್ದಿನ ಗರಿಗಳನ್ನು ಕಟ್ಟಿದ ಬಾಣ.

ಕಂಕಟ (ನಾ). ೧. ಕವಚ. ೨. ಅಂಕುಶ. ೩. ಮೇರೆ; ಎಲ್ಲೆ.

ಕಂಕಣ (ನಾ). ೧. ಕಡಗ; ಬಳೆ. ೨. ನೀರಿನ ಕಣ. ೩. ಕಣ್ಣೀರು; ಅಶ್ರುಬಿಂದು. ೪. ಮದುವೆಯಲ್ಲಿ ವಧೂವರರು ಮುಂಗೈಗೆ ಕಟ್ಟುವ ರಕ್ಷಾಸೂತ್ರ. ~ಕ(ಗ)ಟ್ಟು =೧. ಮಂಗಳ ಪ್ರಸಂಗಗಳಲ್ಲಿ ಮುಂಗೈಗೆ ಕಂಕಣವನ್ನು ಕಟ್ಟು. ೨. ಸಂಕಲ್ಪ ಮಾಡು.

ಕಂಕಣಿಕೆ (ನಾ). ೧. ಗೆಜ್ಜೆಗಳಿರುವ ಬಳೆ. ೨. ಸಣ್ಣಗೆಜ್ಜೆ.

ಕಂಕತ (ನಾ). ಬಾಚಣಿಗೆ; ಹಣಿಗೆ.

ಕಂಕರ(ರೆ) (ನಾ). ೧. ಸುಣ್ಣಕಲ್ಲು. ೨. ಬೆಣಚು ಕಲ್ಲು.

ಕಂಕರಿ (ನಾ). ೧. ಒಂದು ಬಗೆಯ ವಾದ್ಯ. ೨. ಚಾಟಿ. ೩. ಸುಳಿಗೂದಲುಳ್ಳವನು. ~ಕೊ(ಗೊ)ೞಲ್ =ಬಾರುಕೋಲು.

ಕಂಕಳ (ನಾ). ಬಳೆ; ಕೈಕಡಗ. ~ಪ(ವ)ರಳ್ = ೧. ಬಳೆಯಲ್ಲಿ ಹುದುಗಿರುವ ರತ್ನ. ೨. ಒಳ್ಳೊಳ್ಳೆಯ ಗಾದೆಗಳನ್ನು ಚೆನ್ನಾಗಿ ಬಲ್ಲವನು.

ಕಂಕಾಲ(ಳ) (ನಾ). ೧. ಅಸ್ಥಿಪಂಜರ. ೨. ಒಬ್ಬ ರಾಕ್ಷಸನ ಹೆಸರು. ~ಅಂಕಪಾಣಿ = ಶಿವ.

ಕಂಕಾಲಿ(ಳಿ) (ನಾ). ೧. ಶಿವ. ೨. ಶಿವನ ಸೇವಕರಲ್ಲಿ ಒಬ್ಬ. ೩. ರುದ್ರಾಣಿಯರಲ್ಲಿ ಒಬ್ಬಳು.

ಕಂಕಾಳಿಕೆ (ನಾ). ಎಲುಬಿನ ಗೂಡು; ಅಸ್ಥಿ ಪಂಜರ.

ಕಂಕಿ(ಕು,ಕೆ) (ನಾ). ೧. ಕಾಳು ತೆಗೆದ ತೆನೆ. ೨. ಕಾಳಿನ ಮೇಲಿನ ಊಬು. ೩. ಕಾಯಿ ಉದುರಿಸಿದ ಗೊನೆ. ೪. ರೋಗಿಷ್ಠೆ.

ಕಂಕುಟು(ಳು) = ಕವುಂಕುಳ್.

ಕಂಕೆಲ್ಲಿ(ಲಿ) (ನಾ). ಅಶೋಕವೃಕ್ಷ.

ಕಂಗನೆ (ಅ). ಅಧಿಕವಾಗಿ; ಅತಿಶಯವಾಗಿ.

ಕಂಗಳ (ನಾ). ಕುರುಡ; ಅಂಧ.

ಕಂಗಾರು (ನಾ). ಕೋಪ; ಸಿಟ್ಟು.

ಕಂಗಾಲ (ನಾ). ೧.ಬಡವ.(ಗು). ೨.ದುರ್ಬಲವಾದ. ~ಆಗು = ೧. ಕಂಗೆಡು. ೨. ದುರ್ಬಲವಾಗು.

ಕಂಗಾಲಿ(ಳಿ) (ನಾ). ೧. ಬಡತನ. ೨. ಬಡವ.

ಕಂಗು (ನಾ). ೧.ಅಡಿಕೆಯ ಮರ; ಕೌಂಗು. ೨.ಬರಗು; ನವಣೆ. ೩.ಕೋಪ. ೪. ಅತ್ಯಂತ ಸೋಜಿಗ.

ಕಂಗೋರೆ (ನಾ). ೧. ಕಟ್ಟಡ ಮತ್ತು ಗೋಡೆಗಳಲ್ಲಿ ಮಾಡಿರುವ ಕೆತ್ತನೆಯ ಅಲಂಕಾರ. ೨. ಬಟ್ಟೆಯ ಅಂಚಿನಲ್ಲಿ ಹೆಣೆದ ಕಸೂತಿ.

ಕಂಚ (ನಾ). ಸ್ಪರ್ಧೆಯಲ್ಲಿ ಮುಟ್ಟಬೇಕಾದ ಕೊನೆಯ ಮೆಟ್ಟುಗಟ್ಟೆ; ಗುರಿ.

ಕಂಚಡಿ (ನಾ). ಕೌಪೀನ; ಕಚ್ಚುಟ.

ಕಂಚಲು (ನಾ). ಕರುವನ್ನು ಕಟ್ಟುವ ಸ್ಥಳ.

ಕಲಿ ೧. = ಕಲ್. (ನಾ). ೨. ಕಾಳಿಗ. ೩. ಬಂಟ; ವೀರ. ೪. ತಾರೆಯ ಮರ. ೫. ಕಲಿಯುಗ. ೬. ಕಲಿಪುರುಷ. ~ಗಂಟು =೧. (ವೀರರು) ಕೂದಲನ್ನು ಕಟ್ಟುವ ಒಂದು ಬಗೆ. ೨. ಬೆನ್ನಿನ ಮೇಲೆ ನೇಲುವ ಸಡಿಲವಾದ ಮುಡಿ; ಎಜೆಗಂಟು. ~ತನ= ಸಾಹಸ; ಶೌರ್ಯ. ~ಯುಗ = ನಾಲ್ಕು ಯುಗಗಳಲ್ಲಿ ಕಡೆಯದು.

ಕಲಿ(ಳಿ)ಂಗ (ನಾ). ೧. ಚಾತಕ ಪಕ್ಷಿ. ೨. ಸಾರಂಗ. ೩. ಒಂದು ಬಗೆಯ ಧಾನ್ಯ; ಇಂದ್ರಯವ. ೪. ಮೋಸಗಾರ.

ಕಲಿ(ಳಿ)ಂದ (ನಾ). ೧. ತಾರೆಯ ಮರ; ಕಲಿದ್ರುಮ. ೨. ಯಮುನಾ ನದಿ ಹುಟ್ಟುವ ಬೆಟ್ಟ.

ಕಲಿಕಿ (ನಾ). ಚೆಲುವೆ; ಸುಂದರಿ.

ಕಲಿಕೆ ೧. = ಕಲ್ಕೆ. ೨. ಹೂವಿನ ಮೊಗ್ಗು; ಕೋರಕ. ೩. ದೀಪದ ಕುಡಿ. ೪. ಹೀಚು ಗಾಯಿ.

ಕಲಿಜ (ನಾ). ೧. ಪಿತ್ತಾಶಯ. ೨. ಮೂತ್ರಪಿಂಡ.

ಕಲಿತ (ನಾ). ೧. ಕಲಿತುದು; ವಿದ್ಯೆ. ೨. ಕಲಿಯುವಿಕೆ. (ಗು). ೩. ಜೋಡಿಸಿದ. ೪. ಒಡಗೊಂಡ.

ಕಲಿನ (ನಾ). ಕಡಿವಾಣ; ಖಲೀನ.

ಕಲಿಲ (ನಾ). ೧. ಹೆಪ್ಪುಗಟ್ಟಿರುವ ವಸ್ತು; ಗಟ್ಟಿಯಾದುದು. ೨. ಪಾಪ; ದೋಷ. (ಗು). ೩. ಬೆರತಿರುವ. ೪. ಒಳಹೊಗಲಾರದ. ೫. ಕಿಕ್ಕಿರಿದ; ತುಂಬಿದ. ~ಅರಿ = ಪಾಪವನ್ನು ನಾಶಮಾಡುವವನು; ಜಿನ.

ಕಲುಂಬು (ಕ್ರಿ). ೧. ಕದಡು; ಕಲಕು. (ನಾ). ೨. ಕೊಳೆ; ಕವಡು.

ಕಲುಷ (ನಾ). ೧. ರೋಷ; ಆವೇಶ. ೨. ಪಾಪ; ಕಳಂಕ. (ಗು). ೩. ಕವಡಿದ; ಬಗ್ಗಡವಾದ. ೪. ಉದ್ವೇಗಗೊಂಡ; ಸಿಟ್ಟುಗೆದ್ದ.

ಕಲುಹೆ (ನಾ). ಕಲಿಯುವಿಕೆ; ವಿದ್ಯೆ.

ಕಲೆ (ಕ್ರಿ). ೧. ಸೇರು; ಬೆರೆತುಕೊಳ್ಳು. (ನಾ). ೨. ಗುರುತು. ೩. ಯಾವುದಾದರೂ ವಸ್ತುವಿನ ಚಿಕ್ಕ ಭಾಗ. ೪. ಕಾಲದ ಒಂದು ಗಣನೆ. ೫. ಲಲಿತವಿದ್ಯೆ. ೬. ಸೂಕ್ಷ್ಮ ಪರಿಮಾಣದ ವಸ್ತು. ೭. ಚಂದ್ರಬಿಂಬದ ಹದಿನಾರನೆಯ ಒಂದು ಅಂಶ. ೮. ಕಾಂತಿ. ೯. ವೀರ್ಯ. ~ಕಾ(ಗಾ)ಱ(ರ) = ಕಲಾವಿದ; ಕಲಾಕಾರ.

ಕಲೇವರ (ನಾ). ಮೈ; ದೇಹ; ಶರೀರ.

ಕಲೋಪಾಸಕ (ನಾ). ಕಲೆಯನ್ನು ಆರಾಧಿಸುವವನು; ಕಲಾರಾಧಕ.

ಕಲ್ಕ (ನಾ). ೧. ಕದಡು; ಅರೆದು ಮಾಡಿದ ಸರಿ. ೨. ಪಾಪ; ದೋಷ.

ಕಲ್ಕಿ (ನಾ). ವಿಷ್ಣುವಿನ ಹತ್ತು ಅವತಾರಗಳಲ್ಲಿ ಕೊನೆಯದು.

ಕಲ್ಕುಡ (ನಾ). ಒಂದು ಕ್ಷುದ್ರದೇವತೆ.

ಕಲ್ಕೆ (ನಾ). ೧. ಕಲಿಯುವಿಕೆ; ವಿದ್ಯೆ. ೨. ಕೌಶಲ. ೩. ಸಹಜವಲ್ಲದ್ದು; ಕೃತಕವಾದದ್ದು.

ಕಲ್ಪ (ನಾ). ೧. ಕಟ್ಟಳೆ; ನಿಯಮ. ೨. ವೇದದ ಒಂದು ಅಂಗ. ೩. ಬ್ರಹ್ಮನ ಒಂದು ದಿವಸ ಅಥವಾ ಸಹಸ್ರ ಯುಗ. ೪. ಪ್ರಳಯ. ~ಅಂತ = ಪ್ರಳಯಕಾಲ. ~ಕುಜ = ಬೇಡಿದುದನ್ನು ಕೊಡುವ ದೇವಲೋಕದ ಒಂದು ಮರ; ಕಲ್ಪವೃಕ್ಷ. ~ಲತೆ = ಕಲ್ಪಕುಜ.

ಕಲ್ಪಜ (ನಾ). ೧. ಸ್ವರ್ಗದಲ್ಲಿ ಹುಟ್ಟಿದುದು. ೨. ದೇವತೆ; ಅಮರ.

ಕಲ್ಪನ (ನಾ). ೧. ನಿಯಮ. ೨. ಯೋಜನೆ. ೩. ಕೃತಿ; ರಚನೆ. ೪. ಅಲಂಕಾರ. ೫. ಭಾವನೆ; ಊಹೆ.

ಕಲ್ಪನೆ = ಕಲ್ಪನ.

ಕಲ್ಪಿ = ಕಲುಹೆ.

**ಕಲ್ಪಿಸು** (ಕ್ರಿ). ೧. ಉಂಟುಮಾಡು ; ಸೃಜಿಸು. ೨. ಊಹಿಸು; ಕಲ್ಪನೆ ಮಾಡು. ೩. ನಿರೀಕ್ಷಿಸು.

**ಕಲ್ಮಷ** = ಕಶ್ಮಲ.

**ಕಲ್ಯ** (ನಾ). ೧. ರೋಗವಿಲ್ಲದವನು ; ಆರೋಗ್ಯವಂತ. ೨. ಬೆಳಗಿನ ಜಾವ. ೩. ಮದ್ಯ ; ಮಾದಕ ಪೇಯ. ೪. ನಿನ್ನೆ ; ಹಿಂದಿನ ದಿನ. (ಗು). ೫. ಸಿದ್ಧವಾದ. ೬. ಮಂಗಳಕರವಾದ. ೭. ಎಚ್ಚರಿಕೆ ಕೊಡುವ.

**ಕಲ್ಯಾಣ** (ನಾ). ೧. ಒಳಿತು ; ಶುಭ. ೨. ಚಿನ್ನ; ಹೊನ್ನು. ೩. ಮದುವೆ. ೪. ವೈಭವ. (ಗು). ೫. ಚೆಲುವಾದ. ೬. ಮಂಗಳಕರವಾದ.

**ಕಲ್ಯಾಣಿ** (ನಾ). ೧. ಶುಭವನ್ನು ನೀಡುವವಳು. ೨. ಪಾರ್ವತಿ. ೩. ಚೌಕಾಕಾರದ ಕಲ್ಲಿನ ಮೆಟ್ಟಿಲುಗಳಿರುವ ಕೊಳ. ೫. ಅದೃಷ್ಟವಂತೆ. ೬. ಒಂದು ಬಗೆಯ ಬಾಳೆ. (ಗು). ೭. ಮಂಗಳಕರವಾದ. ೮. ಸಂತೋಷವುಳ್ಳ.

**ಕಲ್ಲಂಗಡಿ** (ನಾ). ಕರಬೂಜದ ಜಾತಿಗೆ ಸೇರಿದ ಬಳ್ಳಿ ಮತ್ತು ಅದರ ಹಣ್ಣು.

**ಕಲ್ಲನೆ** (ಅ). ಹೆಚ್ಚಾಗಿ ; ಉಲ್ಬಣವಾಗಿ.

**ಕಲ್ಲವಿಲ** (ನಾ). ಅಸ್ತವ್ಯಸ್ತವಾಗುವಿಕೆ ; ಚೆಲ್ಲಾಪಿಲ್ಲಿ.

**ಕಲ್ಲಾಬಿಲ್ಲಿ** = ಕಲ್ಲವಿಲ.

**ಕಲ್ಲಿ** (ನಾ). ೧. ಹೆಣಿಕೆಯ ಬಲೆ; ಸರಗುಣಿಕೆಯ ಬಲೆ. ೨. ಕಣ್ಣುಕಣ್ಣಾಗಿರುವ ಚೀಲ ; ಬಲೆ ಚೀಲ. ೩. ಕಿರೀಟ, ಪೇಟಗಳ ಮೇಲೆ ಧರಿಸುವ ಒಂದು ಒಡವೆ. ೪. ಮಡಿಕೆ; ಪದರ ೫. ಗಲ್ಲ ; ಕೆನ್ನೆ. ~ಮೀಸೆ = ೧. ಕೆನ್ನೆಯನ್ನು ಆವರಿಸಿಕೊಂಡಿರುವ ಮೀಸೆ; ಗಲ್ಲಮೀಸೆ. ೨. ಪ್ರಾಣಿಗಳ ತುಟಿಗೆ ಹೊಂದಿರುವ ಬಿರುಸಾದ ಕೂದಲು.

**ಕಲ್ಲೆ** (ನಾ). ೧. ಗೊಂದಲ ; ಕ್ಷೋಭೆ. ೨. ನವೆ ; ತುರಿಕೆ. ೩. ನೀರಿನ ಹರವಿ ; ಗುಡಾಣ.

**ಕಲ್ಲೋಲ** (ನಾ). ದೊಡ್ಡ ಅಲೆ ; ಹೆದ್ದೆರೆ. ~ಆ(ವಾ)ಗು = ೧. ಹೊಯ್ದಾಡು. ೨. ಚೆಲ್ಲಾಪಿಲ್ಲಿಯಾಗು ; ಚದರು.

**ಕಲ್ಹಾರ** (ನಾ). ನೈದಿಲೆ ; ನೀಲೋತ್ಪಲ.

**ಕವ** (ನಾ). ಪರಿವಿಡಿ ; ಕ್ರಮ.

**ಕವಂಗ** (ನಾ). ದ್ರವಪದಾರ್ಥಗಳನ್ನು ಬಡಿಸಲು ಉಪಯೋಗಿಸುವ ಹಿಡಿಯುಳ್ಳ ಪಾತ್ರೆ ; ಕಬಾಯಿ.

**ಕವಕವ** (ನಾ). ಕಳವಳ ; ಆತಂಕ. ~ಇಸು = ೧. ಗಹಗಹಿಸು. ೨. ತಳತಳಿಸು. ೩. ವೇಗಗೊಳ್ಳು ; ರಭಸಗೊಳ್ಳು.

**ಕವಚ** (ನಾ). ೧. ಹೊದಿಕೆ ; ಆವರಣ. ೨. ಉಕ್ಕಿನ ಅಂಗಿ ; ಕಂಚುಕ. ೩. ರಕ್ಷಾಮಂತ್ರ ; ರಕ್ಷೆ. ೪. ನಗಾರಿ ; ಭೇರಿ. ~ಹರ = ಪ್ರಾಪ್ತವಯಸ್ಕ.

**ಕವಚಿತ** (ನಾ). ೧. ಕವಚವನ್ನು ಧರಿಸಿದವನು. (ಗು). ೨. ಕವಚವನ್ನು ಧರಿಸಿದ.

**ಕವಟು** (ನಾ). ಬಾಗಿಲು ; ಕದ.

**ಕವಡಿ** (ನಾ). ೧. ಹೊದೆಯುವ ಬಟ್ಟೆ ; ಕೌದಿ. ೨. ಮೋಸಗಾರ ; ಕಪಟಿ.

**ಕವಡಿಕೆ** (ನಾ). ೧. ಕವಲಾಗಿರುವಿಕೆ. ೨. ಧೋತ್ರ, ಕಂಬಳಿಗಳ ಕರೆಗೆ ಇರುವ ಜೋಡು ಹೆಣಿಕೆಯ ಅಂಚು. ೩. ಎರಡಲಗಿನ ಬಾಣ. ೪. ಕವಡೆ ಮತ್ತು ಅದರಿಂದಾಡುವ ಆಟ. ೫. ಮೋಸ ; ವಂಚನೆ.

**ಕವಡು** (ನಾ). ೧. ಮೋಸ ; ವಂಚನೆ. ೨. ಭ್ರಾಂತಿ ; ಭ್ರಮೆ. ೩. ಕವಡು ; ಕೊಳೆ. ೪. ದಾಟುಗಾಲು ; ದಾಪುಹೆಜ್ಜೆ. ೫. ಟಿಸಿಲು; ಕವಲಾಗಿರುವಿಕೆ. ~ಕ(ಗ)ಂಟಕ = ೧. ಮೋಸ ; ವಂಚನೆ. ೨. ಮೋಸಗಾರ ; ವಂಚಕ.

**ಕವಡೆ** (ನಾ). ೧. ಒಂದು ಬಗೆಯ ಗಿಡ. ೨. ಕಪರ್ದಿ ; ಕವುಡೆ. ~ಕ(ಗ)ಟ್ಟು = ಗಂಟುಕಟ್ಟು ; ದದ್ದಾಗು.

ಕವಣ (ನಾ). ಹುಲ್ಲುಗಾವಲು; ಕಾವಣ.
ಕವಣದ ಕಡ್ಡಿ (ನಾ). ಬಜಿ.
ಕವಣೆ (ನಾ). ೧. ಕಲ್ಲಿನಿಂದ ಬೀಸಿ ಹೊಡೆಯುವುದಕ್ಕಾಗಿ ಮಾಡಿದ ಜಾಳಿಗೆಯ ಸಾಧನ. ೨. = ಕವಣ.
ಕವತೆ = ಕವರ್ತೆ.
ಕವನ (ನಾ). ೧. ಕಾವ್ಯ; ಕವಿತೆ. ೨. ಕಲ್ಪನೆ.
ಕವಯಿತ್ರಿ (ನಾ). ಕಾವ್ಯ ರಚಿಸುವವಳು; ಕಬ್ಬಿಗಿತಿ.
ಕವರ್(ರು) (ಕ್ರಿ). ೧. ದೋಚು; ಸುಲಿ. ೨. ಸೆರೆಹಿಡಿ; ಮರುಳುಮಾಡು. ೩. ಆವರಿಸು; ಆಕ್ರಮಿಸು. ೪. ಕಚ್ಚು; ಕಡಿ. (ನಾ). ೫. ಚಪ್ಪರ; ಹೊದಿಕೆ. ೬. ಕೊಳ್ಳೆ; ಸುಲಿಗೆ. ೭. ರೋಷ; ಆಗ್ರಹ. ೮. ಶಾಖೆ. ೯. ಹೊದಿಕೆ; ರಟ್ಟು.
ಕವರ್ತೆ (ನಾ). ೧. ಬಲಾತ್ಕಾರದಿಂದ ಕಿತ್ತುಕೊಳ್ಳುವುದು; ಸುಲಿಗೆ. ೨. ಪೀಡೆ; ಹಿಂಸೆ. ~ಕೊ(ಗೊ)ಳ್ = ಸುಲಿಗೆ ಮಾಡು; ಕಿತ್ತುಕೊಳ್ಳು.
ಕವಲ್(ಲು) (ಕ್ರಿ). ೧. ಕೊಂಬೆಯೊಡೆ; ಟಿಸಿಲೊಡೆ. (ನಾ). ೨. ರೆಂಬೆ; ಟಿಸಿಲು. ೩. ಭಿನ್ನತೆ; ಬದಲಾವಣೆ. ೪. ಆಸರೆ; ಊರೆ. ~ಎತ್ತು= ಬಗೆಬಗೆಯ ಆಟಗಳನ್ನು ಕಲಿಸಿ, ವೇಷ ತೊಡಿಸಿದ ಎತ್ತು; ಕೋಲೆ ಬಸವ. ~ಬತ್ತು = ಮರದ ಕಾಂಡ; ಬೊಡ್ಡೆ. ~ಕ(ಗ)ಣೆ = ೧. ಅರ್ಧ ಚಂದ್ರಾಕೃತಿಯ ತುದಿಯುಳ್ಳ ಬಾಣ. ೨. ಮರದಲ್ಲಿ ಕವಲು ಒಡೆಯುವ ಜಾಗ; ಶಾಖಾಮೂಲ. ~ನಾಲಗೆ = ೧. ಜೋಡು ನಾಲಗೆ. ೨. ಸುಳ್ಳಾಡುವ ನಾಲಗೆ.
ಕವಲ(ಳ) (ನಾ). ೧. ತುತ್ತು; ಕಬಳ. ೨. ತಂಬುಲ.
ಕವಳಿ (ನಾ). ೧. ಎಚ್ಚರ ತಪ್ಪುವಿಕೆ; ಮೂರ್ಛೆ. ೨. = ಕಳವೆ.
ಕವಳಿಕೆ = ಕವಳಿಗೆ.
ಕವಳಿಗೆ (ನಾ). ೧. ವೀಳ್ಯದೆಲೆ, ಓಲೆಗರಿ ಮೊದಲಾದುವುಗಳ ಕಟ್ಟು. ೨. ಪಂಕ್ತಿ; ಸಾಲು. ೩. ಇಪ್ಪಾರು ಛಾವಣಿಯ ಗೋಡೆಗೆ ತುದಿಯಲ್ಲಿ ಮಾಡಿರುವ ತ್ರಿಕೋನಾಕಾರ; ಚಂದಾಯ. ೪. ಭಿಕ್ಷಾಪಾತ್ರೆ. ೫. ಸಂಪುಟ; ಕರಂಡಕ. ~ಕ(ಗ)ಟ್ಟು=ಜೋಡಿಸಿ ಕಟ್ಟು.
ಕವಳೀಕರಿಸು(ಕ್ರಿ). ತುತ್ತು ಮಾಡು; ಕಬಳಿಸು.
ಕವಳೆ = ಕಳವೆ.
ಕವಾಟ (ನಾ). ೧. ಬಾಗಿಲು; ಕದ. ೨. ಕಪಾಟು; ಅಲ್ಮಾರು. ~ಪುಟ = ಬಾಗಿಲ ರೆಕ್ಕೆ; ಕದ. ~ಶಲಾಕೆ = ಬಾಗಿಲಿಗೆ ಹಾಕುವ ಅಗುಳಿ.
ಕವಾಡ = ಕಬಾಡ. ~ಸರಕು = ಎತ್ತಿನ ಮೇಲೆ ಹೇರುವ ಸರಕು.
ಕವಾಯಿತು (ನಾ). ಸೈನಿಕರೇ ಮೊದಲಾದವರು ಮಾಡುವ ಕಸರತ್ತು, -ವ್ಯಾಯಾಮ.
ಕವಿ (ಕ್ರಿ). ೧. ಮುಸುಕು; ಮುತ್ತು. ೨. ಮರೆ ಮಾಡು; ಹೊದಿಸು. ೩. ದಟ್ಟವಾಗು; ಮೇಳೈಸು. ೪. ಎರಗು; ಮೇಲೆ ಬೀಳು. ೫. ಉತ್ಸಾಹಿಸು. ೬. ತೊಡು; ಧರಿಸು. (ನಾ). ೭. ಹೊದಿಕೆ; ಮುಚ್ಚಳ. ೮. ಕುದುರೆಯ ಕಣ್ಣಿನ ಮರೆ; ಕಣ್ಮಡೆ. ೯. ಕವಿದಿರುವಿಕೆ; ತುಂಬಿರುವಿಕೆ. ೧೦. ಮೇಲೆ ಬೀಳುವಿಕೆ; ಮುತ್ತುವಿಕೆ. ೧೧. ಚತುರ; ಬುದ್ಧಿವಂತ. ೧೨. ಕಾವ್ಯ ರಚಿಸುವವನು; ಕಬ್ಬಿಗ. ೧೩. ದೈತ್ಯರ ಗುರು; ಶುಕ್ರ. ೧೪. ನೀರಹಕ್ಕಿ. ~ಏ(ಯೇ)ಱು(ರು) = ರಾತ್ರಿ ಮಾಡುವ ಯುದ್ಧ; ಸೌಪ್ತಿಕ. ~ಕೊ(ಗೊ)ಳ್ = ೧. ಆವರಿಸು; ತುಂಬು. ೨. ಕಾವ್ಯ ದರ್ಶನ ಪಡೆ. ~ಪುಂಗವ = ಕವಿಶ್ರೇಷ್ಠ. ~ಸಮಯ = ಕಾವ್ಯಗಳ ಮೂಲಕ ಕವಿಗಳು ರೂಢಿಗೆ ತಂದಿರುವ ಸಂಪ್ರದಾಯ.
ಕವಿಂಜ (ನಾ). ಒಂದು ಬಗೆಯ ಹಕ್ಕಿ; ಗೌಜಲು.

ಕವಿಚು (ಕ್ರಿ). ೧. ತಿರುವುಮುರುವಾಗು; ಅಡಿಮೇಲಾಗು. ೨. ಹೊದಿಸು; ಆವರಿಸು. (ನಾ). ೩. ಹೊದಿಸುವಿಕೆ; ಹೊದಿಕೆ.

ಕವಿತೆ (ನಾ). ೧. ಕವಿಯ ಕರ್ಮ; ಕಾವ್ಯ ರಚನೆ. ೨. = ಕವಿತ್ವ.

ಕವಿತ್ವ (ನಾ). ಕಾವ್ಯ.

ಕವಿಲ್(ಲು) (ಕ್ರಿ). ೧. ಮುತ್ತು; ಆವರಿಸು. ೨. ಕಪಿಲವರ್ಣವಾಗು; ಮಾಸಲುಗೆಂಪು ಬಣ್ಣವಾಗು. (ನಾ). ೩. ಮಾಸಲುಗೆಂಪು ಬಣ್ಣ; ಕಪಿಲವರ್ಣ. ೪. ಗೂಳಿ; ಎತ್ತು. ೫. ಒಂದು ಬಗೆಯ ಆಟ.

ಕವಿಲೆ (ನಾ). ಕಂದುಬಣ್ಣದ ಹಸು; ಕಪಿಲೆ.

ಕವುಂಕುಟ್(ಳ್) (ನಾ). ೧. ಬಗಲು; ಕಕ್ಷಪುಟ. ೨. (ಮರದಲ್ಲಿ) ಕಾಂಡ ಮತ್ತು ರೆಂಬೆಗಳ ಸಂದು.

ಕವುಂಗು (ನಾ). ಅಡಕೆ; ಪೂಗ.

ಕವುಂಜು = ಕವಿಂಜ.

ಕವುಂದಿ (ನಾ). ತುಂಡು ಬಟ್ಟೆಗಳನ್ನು ಕೂಡಿಸಿ ಹೊಲಿದ ಹಚ್ಚಡ; ಕಂತೆ.

ಕವುಚು ೧. = ಕವಿಚು. (ನಾ). ೨. ದುರ್ನಾತ; ದುರ್ವಾಸನೆ.

ಕವುದಿ = ಕವುಂದಿ.

ಕವುಱು(ರು) = ಕನುಱು. ~ಏಟ್(ಳ್) = ಸುಟ್ಟವಾಸನೆ ಹೊಡೆ; ಹೊಗೆನಾತ ಬಡಿ.

ಕವುಳು (ನಾ). ಕೆನ್ನೆ; ಕಪೋಲ; ಗಲ್ಲ.

ಕವುಳುಡೆ (ನಾ). ದಿಂಬು; ಲೋಡು.

ಕವೆ (ನಾ). ೧. ಕವಲಾಗಿರುವ ಮರದ ಕೋಲು; ಕವೆಗೋಲು. ೨. ಎರಡು ಮಾತು.

ಕವೆಯಾರ = ಕೆಯ್ವಾರ.

ಕವೋಷ್ಣ (ಗು). ತುಸು ಬೆಚ್ಚಗಿನ; ಉಗುರು ಬೆಚ್ಚಗಾದ.

ಕವ್ಯ (ನಾ). ೧. ಪಿತೃದೇವತೆಗಳ ಒಂದು ವರ್ಗ. ೨. ಶ್ರಾದ್ಧಾದಿಗಳಲ್ಲಿ ಪಿತೃಗಳಿಗೆ ಕೊಡುವ ಪಿಂಡ.

ಕವ್ಪರೆ (ನಾ). ೧. ಸುತ್ತುವಿಕೆ; ಭ್ರಮಣ. ೨. ಸಡಗರ; ಸಂಭ್ರಮ. ~ಕೊ(ಗೊ)ಳ್ = ೧. ಸಡಗರಿಸು. ೨. ಬಯಸು. ೩. ಬೆರಗಾಗು. ೪. ಮುಸುಕು; ಮುತ್ತು.

ಕಶಾದಂಡ (ನಾ). ಚಾವಟಿ; ಬಾರುಕೋಲು.

ಕಶಿಪು (ನಾ). ೧. ಆಹಾರ. ೨. ಬಟ್ಟೆ; ವಸ್ತ್ರ.

ಕಶೆ (ನಾ). ೧. ಅಂಗಿಯ ಲಾಡಿ. ೨. ಚಬಕ; ಚಾಟಿ.

ಕಶೇರು (ನಾ). ೧. ಬೆನ್ನೆಲುಬು. ೨. ಒಂದು ಬಗೆಯ ಹುಲ್ಲು.

ಕಶ್ಮಲ (ನಾ). ೧. ಹೊಲಸು; ಕೊಳೆ. ೨. ಪಾಪ. (ಗು). ೩. ಹೊಲಸಾದ; ಕೊಳಕಾದ.

ಕಶ್ಯಪ (ನಾ). ೧. ಆಮೆ; ಕೂರ್ಮ. ೨. ಒಬ್ಬ ಋಷಿಯ ಹೆಸರು. ~ನಂದನ = ೧. ಕಶ್ಯಪನ ಮಗ; ಗರುಡ. ೨. ಅರುಣ.

ಕಷಣ (ನಾ). ೧. ಉಜ್ಜುವಿಕೆ; ಮಸೆಯುವಿಕೆ. ೨. ಒರೆಹಚ್ಚುವಿಕೆ.

ಕಷಾಯ (ನಾ). ೧. ಸುಗಂಧ; ಸುವಾಸನೆ. ೨. ಕೆಂಪುಬಣ್ಣ. ೩. ಮೂಲಿಕೆಗಳನ್ನು ಬಟ್ಟಿಯಿಳಿಸಿ ತೆಗೆದ ರಸ. ೪. ಚಹ, ಕಾಫಿ ಮೊದಲಾದುವುಗಳ ಅರ್ಕ. ೫. ಕಳ್ಳಹಾದಿ. (ಗು). ೬. ಸುವಾಸನೆಯಿಂದ ಕೂಡಿದ. ೭. ಕೆಂಪಾಗಿರುವ. ೮. ಒಗರಿನಿಂದ ಕೂಡಿದ.

ಕಷಾಯಿತ (ಗು). ೧. ಒಗರಾದ; ಕಹಿಯಾದ. ೨. ಕೆಂಪೇರಿದ; ಕೆಂಪಾದ.

ಕಷ್ಟ (ನಾ). ೧. ಕಠಿಣವಾದದ್ದು; ಕರ್ಕಶವಾದದ್ದು. ೨. ನೀಚ; ಹೀನ. ೩. ಶ್ರಮ; ದುಡಿತ. ೪. ಹಗೆ; ಶತ್ರುತ್ವ. ೫. ಕ್ಷೌರ. ೬. ತೊಂದರೆ; ಪೀಡೆ. (ಗು). ೭. ತೊಂದರೆ ಕೊಡುವ. ~ಆತ್ಮ = ಕಷ್ಟದಿಂದ ಬದುಕುವವನು; ದುಃಖಿ. ~ಆಶ್ರಯ = ನೀಚ; ಅಧಮ. ~ತೆಗೆ=ಧಾನತಿಪಡು; ಕ್ಲೇಶಪಡು. ~ವಸ್ತ್ರ = ಒರಟುಬಟ್ಟೆ; ಕೋರಾಬಟ್ಟೆ.

**ಕಷ್ಟತಿಕೆ** (ನಾ). ವ್ಯಾಕುಲತೆ; ಕ್ಲೇಶ.

**ಕಷ್ಟತೆ** (ನಾ). ೧. ಕ್ಲೇಶಕರವಾದುದು. ೨. ಅಸಾಧ್ಯವಾದುದು.

**ಕಷ್ಟೆ** (ನಾ). ೧. ಹೀನಳಾದವಳು; ನೀಚೆ. ೨. ದುಃಖ ಪಡುವವಳು; ಕಷ್ಟಜೀವಿ.

**ಕಸ** (ನಾ). ೧. ಕೊಳೆ; ಹೊಲಸು. ೨. ಪೈರಿನ ನಡುವೆ ಬೆಳೆಯುವ ಹುಲ್ಲು; ಕಳೆ. ೩. ಮಾಸು; ಹೆರಿಗೆಯ ಸೆತ್ತೆ. ೪. ಬಾವು; ಊತ. **~ಕ(ಗ)ಣ್ಣು** = ಬೇನೆ ಹತ್ತಿದ ಕಣ್ಣು. **~ಕ(ಗ)ಳೆ** = ೧. ಕಸವನ್ನು ತೆಗೆ; ಕಸಗುಡಿಸು. ೨. ತಿರಸ್ಕರಿಸು; ತೊರೆ. **~ನೀರು** = ೧. ಕಸಗುಡಿಸುವುದು ಮತ್ತು ನೀರು ತರುವುದು. ೨. (ಹೆರಿಗೆಯಾದ ಮೇಲೆ) ಕಸ ಬಿದ್ದೊಡನೆ ಬರುವ ನೀರು. **~ಬೋಹರಿಗೆ** = ಕಸಕಿಲ್. **~ಮುಸಗು** = ಕೆರಳು; ರೇಗು.

**ಕಸಕಸೆ** (ನಾ). ೧. ಬಿಳಿಯಬಣ್ಣದ ಸಾಂಬಾರದ ಕಾಳು; ಅಫೀಮಿನ ಕಾಳು. ೨. ಒಂದು ಬಗೆಯ ಹುಲ್ಲು.

**ಕಸಕಿಲ್(ಲು)** (ನಾ). ಪೊರಕೆ; ಬರಲು.

**ಕಸಗು** (ಕ್ರಿ). ಕುಕ್ಕು; ಉಜ್ಜು.

**ಕಸಟ** (ನಾ). ಕೊಳಕ; ಹೊಲಸುಗಾರ.

**ಕಸಟು** (ನಾ). ಕೊಳೆ; ಹೊಲಸು.

**ಕಸಬಿ** (ನಾ). ೧. ಸೂಳೆ. ೨. ಉದ್ಯೋಗಸ್ಥ.

**ಕಸಬು** (ನಾ). ೧. ಕೆಲಸ; ಉದ್ಯೋಗ. ೨. ಸೂಳೆಗಾರಿಕೆ; ವೇಶ್ಯಾವೃತ್ತಿ. **~ಶಾಲೆ** = ವೃತ್ತಿಶಿಕ್ಷಣ ಶಾಲೆ.

**ಕಸಬೆ** (ನಾ). ತಾಲ್ಲೂಕಿನ ಅಥವಾ ಅದರ ಭಾಗದ ಮುಖ್ಯ ಸ್ಥಳ.

**ಕಸರ್(ರು)** (ಕ್ರಿ) ೧. ಒಗರಾಗಿ ಗಂಟಲು ಕೆರೆ. ೨. ಕಾಡು; ಪೀಡಿಸು. ೩. ಬಯ್ಯು; ಗದರಿಸು. (ನಾ). ೪. ಒಗರು; ಅಪಕ್ವತೆ. ೫. ಹಸಿಯಾಗಿರುವಿಕೆ. ೬. ಕಳವಳ; ಬೇಗೆ. ೭. ತೊಂದರೆ. ೮. ದೇಹದೊಳಗಿನ ವಿಕಾರ. ೯. ಕಸ; ಕೊಳೆ. ೧೦. ಕೊರತೆ; ನ್ಯೂನತೆ. ೧೧. ಸಾಮರ್ಥ್ಯ; ಶಕ್ತಿ. **~ಇಕೆ** = ೧. ಸೊರಗುವಿಕೆ; ಬಾಡುವಿಕೆ. ೨. ಅಸಮಾಧಾನ; ಮನಸ್ತಾಪ. ೩. ಅನುಮಾನ.

**ಕಸರತ್ತು** (ನಾ). ೧. ವ್ಯಾಯಾಮ; ಕವಾಯಿತು. ೨. ಶಕ್ತಿಯ ಹಾಗೂ ಚಮತ್ಕಾರದ ಪ್ರದರ್ಶನ.

**ಕಸರಾಮುಸರ** (ನಾ). ಅವ್ಯವಸ್ಥಿತವಾದದ್ದು; ಹದಗೆಟ್ಟ ಬೆರಕೆ.

**ಕಸರೆ** (ನಾ). ಕೊಂದ ಪ್ರಾಣಿಯ ಕರುಳಿನಲ್ಲಿರುವ ಆಹಾರ.

**ಕಸಱ್(ರು,ಱು)** (ನಾ). ನೋವಿನಿಂದ ಕೂಗುವುದು; ನರಳಿಕೆ.

**ಕಸವರ** (ನಾ). ೧. ಹೊನ್ನು; ಚಿನ್ನ. ೨. ಧನ; ಸಂಪತ್ತು.

**ಕಸವಿಸಿ** (ನಾ). ಸಂಕಟ; ತಳಮಳ; ಕಳವಳ. **~ಪ(ಬ)ಡು** = ಚಡಪಡಿಸು; ತಳಮಳಿಸು.

**ಕಸಾಪ** = ಕಸಾಬ.

**ಕಸಾಬ** (ನಾ). ಮಾಂಸವನ್ನು ಮಾರಿ ಜೀವಿಸುವವನು; ಕಟುಕ.

**ಕಸಾಯಿ** = ಕಸಾಬ. **~ಖಾನೆ** = ಕಟುಕರ ಅಂಗಡಿ.

**ಕಸಾರಿಕೆ** (ನಾ). ಬೇನೆ; ಕಾಯಿಲೆ.

**ಕಸಾಲೆ** = ಕಸಾರಿಕೆ.

**ಕಸಿ** (ಕ್ರಿ). ೧. ಕುಸಿ; ಜರಿ. ೨. ಒಸರು; ಜಿನುಗು. ೩. ಕಿತ್ತುಕೊಳ್ಳು; ಅಪಹರಿಸು. (ನಾ). ೪. ಒಸರುವುದು; ಸ್ರಾವ. ೫. ಕತ್ತರಿಸುವಿಕೆ. ೬. ಹೋರಿ ಮೊದಲಾದುವುಗಳಿಗೆ ವೀರ್ಯಗುಂದಿಸುವಿಕೆ; ಹಿಡ. ೭. ಗಿಡ, ಬಳ್ಳಿಗಳಲ್ಲಿ ಒಂದರ ಶಾಖೆಯನ್ನು ಇನ್ನೊಂದಕ್ಕೆ ಅಂಟಿಸಿ ಬೆಳೆಯಿಸುವಿಕೆ; ಕಲಮು.

**ಕಸು** (ನಾ). ೧. ಬಲ; ಕೆಚ್ಚು. ೨. ಸತ್ತ್ವವುಳ್ಳ ಆಹಾರ. (ಗು). ೩. ಅಪಕ್ವವಾದ;

ಹೀಚಾದ. ~ಕಾ(ಗಾ)ಯ್(ಯಿ)=ಒಗರು ಕಾಯಿ ; ಹೀಚುಕಾಯಿ.

ಕಸುಕ (ನಾ). ಆಳು ; ಸೇವಕ.

ಕಸುಕು (ನಾ). ೧. ಎಳಕಲು ; ಬಲಿಯದಿರುವುದು. ೨. ಅರೆಬೆಂದದ್ದು. ~ತನ=ಒಗರು; ಅಪಕ್ವತೆ.

ಕಸುಬು = ಕಸಬು.

ಕಸುರ್ = ಕಸರ್.

ಕಸುಂಜು(ರು) (ಕ್ರಿ). ಕೋಪದಿಂದ ಮಾತಾಡು, – ಕೂಗು.

ಕಸುವು = ಕಸು.

ಕಸೂತಿ (ನಾ). ಬಣ್ಣಬಣ್ಣದ ದಾರಗಳಿಂದ ಬಟ್ಟೆಗಳಿಗೆ ಮಾಡುವ ಹೆಣಿಗೆಯ ಅಲಂಕಾರ.

ಕಸೆ (ನಾ). ೧. ಕಲಮು ; ಕಸಿ ಕಟ್ಟುವುದು. ೨. ಸೇಯ್ಗೆಯ ಎಳೆ. ೩. ಅಂಗಿಯ ಲಾಡಿ. ೪. ಚಾಟಿ ; ಬಾರುಕೋಲು.

ಕಸೋಟಿ (ನಾ). ೧. ಒರೆಗಲ್ಲು. ೨. ಪರೀಕ್ಷೆ.

ಕಸ್ತಿ (ನಾ). ೧. ಪರಿಶ್ರಮ ; ಕಷ್ಟ. ೨. ಪರಾಕ್ರಮ ; ಶಕ್ತಿ. ೩. ಕಲಹ ; ಹೋರಾಟ. ೪. ಒತ್ತಾಯ ; ಹಿಂಸೆ.

ಕಸ್ತು (ನಾ). ೧. ತೊಂದರೆ ; ಪೀಡೆ. ೨. ತೀವ್ರ; ಸಕತ್ತು. ೩. ಗಟ್ಟಿ; ದೃಢ. ೪. ಶ್ರಮ ; ಕಷ್ಟ. ೫. ಜಬರದಸ್ತು ; ಜೋರು.

ಕಸ್ತುರಿ = ಕತ್ತುರಿ.

ಕಸ್ತೂರಿ = ಕತ್ತುರಿ. ~ಬೆಕ್ಕು = ಪುನುಗಿನ ಬೆಕ್ಕು. ~ಮೃಗ = ಕಸ್ತೂರಿಯನ್ನು ಕೊಡುವ ಕೊಂಬಿಲ್ಲದ ಜಿಂಕೆ.

ಕಸ್ವರ (ನಾ). ೧. ಸಂಪತ್ತು ; ಆಸ್ತಿ. ೨. ನಿರಂತರವಾದುದು. ೩. ವಸ್ತುಗಳ ಸಮೂಹ. (ಗು). ೪. ಹೋಗುವ ; ಚಲಿಸುವ.

ಕಹಳೆ (ನಾ). ಉದ್ದವಾಗಿ ಬಾಗಿರುವ ತುತ್ತೂರಿ ; ಕಾಳೆ. ~ಕಾಱ(ರ) = ಕಹಳೆ ಊದುವವನು.

ಕಹಿ (ಕ್ರಿ). ೧. ವಿಷವಾಗು ; ಕಹಿಯಾಗು. (ನಾ). ೨. ತಿಕ್ತ ; ಕಯ್ಪು. ~ನನ್ನಿ = ಅಪ್ರಿಯವಾದ ಸತ್ಯ ; ಕಟುಸತ್ಯ.

ಕಳ್(ಳು) (ಕ್ರಿ). ೧. ಎತ್ತಿಹಾಕು; ಅಪಹರಿಸು. (ನಾ). ೨. ಕಳವು ; ಕಳ್ಳತನ. ೩. ಹಾಲು ; ರಸ. ೪. ಹೆಂಡ ; ಸುರೆ. ೫. ನೂಲಿನ ಹಿಂಜಿ. ೬. ನದಿಯನ್ನು ದಾಟುವ ಸ್ಥಳ; ಹಾಯ್ಗಡ. ~ವಡಿಗ = ಹೆಂಡವನ್ನು ಮಾರುವವನು.

ಕಳ (ನಾ). ೧. ಧಾನ್ಯಗಳನ್ನು ಒಕ್ಕುವ ಸ್ಥಳ. ೨. ರಣರಂಗ ; ಕಾಳೆಗದ ಸ್ಥಳ. ೩. ಆಟದ ಮೈದಾನ. ೪. ಸಸಿ ನೆಡುವ ಮಡಿ. ೫. ಕೆಡುಕ ; ದುಷ್ಟ. ೬. ಮೂಗ ; ಮೂಕ. ~(ಂ)ಪೆ(ಬೆ)ೞ್(ಳ್) = ಯುದ್ಧಭೂಮಿಯನ್ನು ಗೊತ್ತುಪಡಿಸು. ~ಬ(ವ)ಲಿ = ಯುದ್ಧಭೂಮಿಗೆ ಕೊಡುವ ಬಲಿ ; ರಣಬಲಿ.

ಕಳಂಜಿ (ನಾ). ೧. ಧಾನ್ಯವನ್ನು ಸಂಗ್ರಹಿಸುವ ಸ್ಥಳ ; ಬಿದಿರಿನ ಗೂಡೆ. ೨. ಒಂದು ಬಗೆಯ ಸಸ್ಯ.

ಕಳಂಜು = ಕಣಂಜು.

ಕಳಕಳಿ (ನಾ). ಆಸ್ಥೆ ; ಆಸಕ್ತಿ.

ಕಳಗ (ನಾ). ೧. ಎತ್ತಿನ ಬಂಡಿಯ ಚೌಕಟ್ಟಿಗೆ ಎರಡು ಪಕ್ಕಗಳಲ್ಲೂ ನಿಲ್ಲಿಸಿದ ಕಡ್ಡಿ ; ಗುಜ್ಜುಗೋಲು. ೨. = ಕಳಲಿಕೆ.

ಕಳಗಿ (ನಾ). ಆಡು ; ಮೇಕೆ.

ಕಳಚು = ಕಟಿಲ್ಚು.

ಕಳಪಿಳಿ (ನಾ). ಅಸ್ತವ್ಯಸ್ತತೆ ; ಚೆಲ್ಲಾಪಿಲ್ಲಿ.

ಕಳಪು (ನಾ). ತಪ್ಪಿಸಿಕೊಳ್ಳುವುದು ; ಚಕ್ಕರು.

ಕಳಪೆ (ನಾ). ಕಡಮೆ ತರಗತಿಯದು.

ಕಳರು (ಕ್ರಿ). ೧. ಕದಡು ; ಕಲಕು. (ನಾ). ೨. ಜೋಧನೆ.

ಕಳಜು(ರು) (ಕ್ರಿ). ೧. ಅಂಜು ; ಭಯಪಡು. ೨. ಶ್ರಮಪಡು. (ನಾ). ೩. ಜೌಗುನೆಲ ; ಚೌಳುಭೂಮಿ.

ಕಳಲಿಕೆ (ನಾ). ಎಚ್ಚರದಪ್ಪುವಿಕೆ; ಬವಳಿ.

ಕಳವಳ (ನಾ). ೧. ತಳಮಳ; ಕಸಿವಿಸಿ. ೨. ಗೊಂದಲ; ಭ್ರಾಂತಿ. ~ಇಗ = ೧. ಕಾತರಪಡುವವನು; ತಳಮಳಿಸುವವನು. ೨. ಕಳ್ಳ. ~ಇಸು = ೧. ಆತಂಕಗೊಳ್ಳು; ಚಡಪಡಿಸು. ೨. ಸಂಭ್ರಮಗೊಳ್ಳು; ಆತುರಪಡು. ೩. ಸಡಿಲವಾಗು; ಶಿಥಿಲವಾಗು.

ಕಳವಳಿ (ಕ್ರಿ). ಚಿಂತಿಸು; ತಳಮಳಿಸು.

ಕಳವಿಗೆ (ನಾ). ೧. ಒಂದು ಜಾತಿಯ ಹಣ್ಣು. ೨. ಕಟುಕರೋಹಿಣಿ. ೩. ಸಾರಣೆ ಗಿಡ; ಮುಳ್ಳುಗಸೆ.

ಕಳವು (ನಾ). ೧. ಕಳ್ಳತನ; ಅಪಹಾರ. ೨. ವಂಚನೆ; ಮೋಸ. ~ಓ(ವೋ)ಲೆ = ಮೋಸದಿಂದ ಸೃಷ್ಟಿಸಿದ ಕಾಗದ. ~ಪೊ(ವೊ)ಗು = ಕಳವಾಗು.

ಕಳವೆ (ನಾ). ೧. ಕರಿಬಣ್ಣದ ಚಿಕ್ಕಚಿಕ್ಕ ಹಣ್ಣು ಬಿಡುವ ಮುಳ್ಳುಕಂಟಿ; ಕಮರಿಕೆ ಗಿಡ. ೨. = ಕಟವೆ.

ಕಳಸ ೧. = ಕಲಶ. ೨. ಜೋಡಣೆ; ಹೊಂದಿಕೆ. ~ಕಾ(ಗಾ)ಣ್ = ಕೊನೆಗಾಣು; ಸಿದ್ಧಿಯನ್ನು ಪಡೆ. ~ಪ್ರಾಯ = ಉತ್ತಮವಾದದ್ದು; ಶ್ರೇಷ್ಠವಾದದ್ದು.

ಕಳಸಿಗೆ (ನಾ). ೧. ಕಲಶ; ಪಾತ್ರೆ. ೨. ಹದಿನಾಲ್ಕು ಸೇರಿನ ಒಂದು ಅಳತೆ.

ಕಳಸೆ = ಕಳಸಿಗೆ.

ಕಳಾಕುಳ (ನಾ). ೧. ತೀಕ್ಷ್ಣವಾದ ವಿಷ. ೨. ಜಂಜಡ; ಬಂಧನ.

ಕಳಾತೀತ (ನಾ). ಕಲೆಗೆ ಅತೀತವಾದದ್ದು.

ಕಳಾಧರ (ನಾ). ೧. ಕಲೆಗಳನ್ನು ತಿಳಿದವನು; ಕಲಾವಿದ. ೨. ಚಂದ್ರ.

ಕಳಾಸ = ಕಾಳಸೆ.

ಕಳಿ ೧. = ಕಱಿ. ೨. ಸಂತೋಷಪಡು; ಹಿಗ್ಗು. ೩. ಸೊಕ್ಕು; ಮದವೇರು. (ನಾ). ೪. ಅಂಬಲಿ; ಗಂಜಿ. ೫. ಸೊಕ್ಕು; ಮದ. ~ಅ(ಯ)ಡಕೆ = ಬೇಯಿಸಿದ ಎಳಸಾದ ಅಡಕೆ. ~ಪ(ವ)ಱಿ(ರಿ) = ೧. ಮಿತಿಮೀರು. ೨. ದಾಟು.

ಕಳಿಂಚು (ನಾ). ಮೋಸ; ವಂಚನೆ.

ಕಳಿಕ (ನಾ). ೧. ಜೋಳ. ೨. ಒಂದು ಬಗೆಯ ಹೂವಿನ ಗಿಡ.

ಕಳಿವು ೧. = ಕಱಿವು. ೨. ಬರಡು; ಬಂಜೆ.

ಕಳಿಸು (ಕ್ರಿ). ೧. ಕಳವು ಮಾಡಿಸು; ಕದಿಸು. ೨. ಕಳುಹಿಸು; ಕಳುಹು.

ಕಳುಂಚು = ಕಳಿಂಚು.

ಕಳುವು ೧. = ಕಳುಹು. (ನಾ). ೨. ಬಲಿ; ಬಲಿಗಾಗಿ ಇಟ್ಟ ಪಿಂಡ.

ಕಳುಹು (ಕ್ರಿ). ೧. ಕಳುಹಿಸು; ಬೀಳ್ಕೊಡು. ೨. ಸಾಗಿಸು; ರವಾನಿಸು.

ಕಳೆ (ಕ್ರಿ). ೧. ಬಿಡು; ತೊರೆ. ೨. ತೆಗೆ; ಕಡಮೆಮಾಡು. ೩. ನಿವಾರಣೆಯಾಗು. ೪. ಒರಸು; ಉಜ್ಜು. ೫. ನಾಶಮಾಡು. (ನಾ). ೬. ಪೈರಿನ ನಡುವೆ ಬೆಳೆಯುವ ಹುಲ್ಲು; ಕಸ. ೭. = ಕಲೆ. ~ಕ(ಗ)ಟ್ಟು = ೧. ಸೊಗಸು ಹೆಚ್ಚಾಗು; ಬಣ್ಣವೇರು. ೨. ಸೊಬಗನ್ನು ಉಂಟುಮಾಡು.

ಕಳೇಬಗ = ಕಲೇವರ.

ಕಳ್ಳ (ನಾ). ೧. ಕಳವು ಮಾಡುವವನು; ಚೋರ. ೨. ಒಂದು ಬಗೆಯ ಸಸ್ಯ. ೩. ಹಲಸಿನ ಬೀಜದ ಮೇಲಿನ ಕವಚ. ~ಗಂಟು = ಬೇರೆಯವರಿಗೆ ತಿಳಿಯದಂತೆ ಇರಿಸಿದ ಹಣ. ~ನಾಣ್ಯ = ಖೋಟಾ ನಾಣ್ಯ. ~ಬಂಟ = ೧. ಪಕ್ಕಾ ಕಳ್ಳ. ೨. ಗೂಢಚಾರ. ~ಬಟ್ಟಿ = ಕಳ್ಳತನದಿಂದ ಇಳಿಸುವ ಹೆಂಡದ ಬಟ್ಟಿ.

ಕಳ್ಳಂಗಡಲೆ (ನಾ). ಒಂದು ಜಾತಿಯ ಸಸ್ಯ; ಏಲಾವಾಲುಕ.

ಕಳ್ಳಸಿಗ (ನಾ). ಹೆಂಡ ಇಳಿಸುವವನು; ಈಡಿಗ.

ಕಳ್ಳಿ (ನಾ). ೧. ಕಳವು ಮಾಡುವವಳು; ತುಡುಗಿ. ೨. ಮಂದವಾದ ಹಾಲನ್ನುಳ್ಳ ಒಂದು ಜಾತಿಯ ಗಿಡ.

ಕಳ್ಳಿಕೆ (ನಾ). ಹಲಸಿನ ಮರದ ಹೀಚುಗಾಯಿ.

ಕಳ್ಳು = ಕಳ್.

ಕಱ(ಳ)ನಿ (ನಾ). ಸಾಗುವಳಿ ಮಾಡುವ ತರಿ ಭೂಮಿ; ಬತ್ತದ ಗದ್ದೆ.

ಕಱ(ಳ)ಮೆ = ಕಱವೆ.

ಕಱ(ಳ)ಲ್(ಲು) (ಕ್ರಿ). ೧. ಸೊರಗು; ಬಡವಾಗು. ೨. ಎದೆಗುಂದು. ೩. ಬೀಳು; ಕುಸಿ. (ನಾ). ೪. ಕುಗ್ಗಿದ ಸ್ಥಿತಿ; ಶಿಥಿಲತೆ. ೫. ಮೊಸರು ಅಥವಾ ಮಜ್ಜಿಗೆ. ೬. ಅಂದುಗೆ; ನೂಪುರ.

ಕಱ(ಳ)ಲೆ (ನಾ). ಮುಳ್ಳುಗಳಿಂದ ಕೂಡಿದ ಸಣ್ಣರೆಂಬೆ.

ಕಱ(ಳ)ಲ್ಚು (ಕ್ರಿ). ೧. ಬೇರ್ಪಡಿಸು; ಬೇರೆ ಮಾಡು. ೨. ತೆಗೆ; ಬಿಚ್ಚು. ೩. ಪರಿಹರಿಸು. ೪. ಕೀಳು; ಕಿತ್ತುಕೊಳ್ಳು. ೫. ಸಡಿಲು; ಜಾರು. (ನಾ). ೬. ಕಳೆಯುವಿಕೆ; ನಿವಾರಣೆ.

ಕಱ(ಳ)ವೆ (ನಾ). ಬತ್ತ; ನೆಲ್ಲು.

ಕಱಿ(ಳಿ) (ಕ್ರಿ). ೧. ಸಾಯು; ತೀರು. ೨. ದಾಟು; ಸಾಗಿಹೋಗು. ೩. ಕಳೆದು ಹೋಗು. ೪. ನಿವಾರಿಸು; ಹೋಗಲಾಡಿಸು. ೫. ಕೈಮಿಾರು; ಮಿತಿಮಿಾರು. ೬. ಹೊರದೆಗೆ; ಕಳಚು. ೭. ವಜಾ ಮಾಡು; ಕಳೆ. ೮. ಹಣ್ಣಾಗು; ಮಾಗು. ೯. ಬಾಡು; ಬತ್ತು. (ನಾ). ೧೦. ಅಗುಳಿ, ನೊಗ ಮೊದಲಾದುವುಗಳ ರಂಧ್ರದಲ್ಲಿ ಜೋಡಿಸುವ ಮರದ ಗೂಟ. ೧೧. ಅಂಬಲಿ; ಗಂಜಿ. ~ಓ(ಯೋ)ದು = ಓದಿನಲ್ಲಿ ಪಾರಂಗತನಾಗು. ~ಪ(ನ)ಣ್(ಣ್ಣು) = ೧. ಚೆನ್ನಾಗಿ ಮಾಗಿದ ಹಣ್ಣು; ಪಕ್ವಫಲ. ೨. ಕೊಳೆಯುವ ಸ್ಥಿತಿಗೆ ಬಂದ ಹಣ್ಣು. ~ಪ(ವ)ದ = ೧. ಇಳಿಮೊಗದ ಸ್ಥಿತಿ. ೨. ಚೆನ್ನಾಗಿ ಮಾಗಿದ ಸ್ಥಿತಿ.

ಕಱಿ(ಳಿ)ಪು ೧. = ಕಳುಹು. ೨. ದಾಟು; ಕ್ರಮಿಸು. ೩. (ಕಾಲವನ್ನು) ತಳ್ಳು; ನೂಕು. (ನಾ). ೪. ಕರೆ; ಕಳಂಕ. ೫. ಕೀಳಾದುದು; ಕಳಪೆ.

ಕಱಿ(ಳಿ)ಲೆ (ನಾ). ಬಿದಿರಿನ ಮೊಳಕೆ.

ಕಱಿ(ಳಿ)ವು (ನಾ). ೧. ಸಾವು; ಅಳಿವು; ಅಂತ್ಯ. ೨. ಸೋಲು; ಪರಾಭವ.

ಕಱಿ²(ಳೆ) ೧. = ಕಱಿ. (ನಾ). ೨. ಬಿದಿರಿನ ಕೊಳವೆ; ಕೊಳಲು.

ಕಱ್ಕ(ಳ್ಕ)ನೆ (ಅ). ಒಮ್ಮೆಲೆ; ಇದ್ದಕ್ಕಿದ್ದಂತೆ.

ಕಱ್ಗ(ಳ್ಗ)ನೆ = ಕರ್ಗನೆ.

ಕಱ್ಗು(ಳ್ಗು) ೧. = ಕರ್ಗು. (ನಾ). ೨. ಕಪ್ಪು; ಕಂದುಬಣ್ಣ.

ಕಱ್ಗೊ(ಳ್ಗೊ)ಲೆ (ನಾ). ೧. ಭೀಕರವಾದ ಕೊಲೆ; ಕಗ್ಗೊಲೆ. ೨. ತಾಳಲಾಗದ ಹಿಂಸೆ.

ಕಱ್ಚು(ಳ್ಚು) (ಕ್ರಿ). ತೊಳೆ; ಪ್ರಕ್ಷಾಲಿಸು.

ಕಱ್ತ(ಳ್ತ)ಲೆ (ನಾ). ಕತ್ತಲೆ; ಅಂಧಕಾರ. ~ಪ(ವ)ಗೆಯ =೧. ಸೂರ್ಯ. ೨. ಕತ್ತಲೆಯ ವೈರಿ; ಚಂದ್ರ. ~ಮ(ವ)ಣಿ = ಚಂದ್ರ.

ಕಱ್ತು(ಳ್ತು) (ನಾ). ೧. ಕೊರಳು; ಕತ್ತು. ೨. ಹೆಗಲು.

ಕಱ್ತೆ(ಳ್ತೆ) (ನಾ). ಕತ್ತೆ; ಗರ್ದಭ. ~ಕುಟಗ = ಕತ್ತೆ ಕಾಯುವವನು.

❋

ಕಾ (ಕ್ರಿ). ೧. ಕಾಪಾಡು ; ಸಲಹು ; ಕಾಯು. ೨. ಕಾವಲಿರು ; ಪಹರೆಯಿರು. ೩. ಗುಪ್ತವಾಗಿರಿಸು. ೪. ಮನ್ನಿಸು ; ಕ್ಷಮಿಸು. ೫. ಹಾದಿನೋಡು ; ನಿರೀಕ್ಷಿಸು. ~ಇ(ಯಿ)ಸು = ೧. ದಾರಿ ನೋಡುವಂತೆ ಮಾಡು. ೨. ಬಿಸಿಮಾಡು ; ಕಾವು ಕೊಡು. ೩. ರೇಗಿಸು. ೪. ಕಾಯಿಬಿಡುವಂತೆ ಮಾಡು.

ಕಾಂಕ್ಷೆ (ನಾ). ಅಪೇಕ್ಷೆ ; ಆಸೆ.

ಕಾಂಗಡಿ (ನಾ). ಚಾವಣಿಯಿಂದ ನೇತುಬಿಟ್ಟ ಚೌಕಾಕಾರದ ತೊಟ್ಟಿಲು.

ಕಾಂಗು (ನಾ). ೧. ಕಡುನೀಲಿ ಬಣ್ಣ; ದಟ್ಟ ಕಪ್ಪು ಬಣ್ಣ. ೨. ಕಡು ನೀಲಿ ಅಥವಾ ಕಪ್ಪುಬಣ್ಣದ ಬಟ್ಟೆ.

ಕಾಂಚನ (ನಾ). ೧. ಹೊನ್ನು ; ಚಿನ್ನ. ೨. ನಾಗಸಂಪಿಗೆ ಮರ. ~ಅದ್ರಿ = ಚಿನ್ನದ ಬೆಟ್ಟ; ಮೇರು ಪರ್ವತ. ~ಪ್ರಸವ = ನಾಗಸಂಪಿಗೆ ಮರ.

ಕಾಂಚಾಣ (ನಾ). ೧. ದುಡ್ಡು. ೨. ಚಿನ್ನ.

ಕಾಂಚಾಳ (ನಾ). ಒಂದು ಜಾತಿಯ ಮರ ; ಕಂಚುವಾಳ.

ಕಾಂಚಿ (ನಾ). ಡಾಬು ; ಕಟಿಸೂತ್ರ.

ಕಾಂಚೀಕಳಾಪ = ಕಾಂಚಿ.

ಕಾಂಜೀರ (ನಾ). ಕಿತ್ತಲೆ ಬಣ್ಣದ ಕಹಿ ಕಾಯಿ ಬಿಡುವ ಒಂದು ಬಗೆಯ ಗಿಡ; ಇಟ್ಟೆ.

ಕಾಂಡ (ನಾ). ೧. ತಾಳು ; ದಂಟು ; ದೇಟು. ೨. ಮರದ ಕೆಳಭಾಗ ; ಬೊಡ್ಡೆ. ೩. ಬಾಣ; ಶರ. ೪. ಅಧ್ಯಾಯ ; ಪ್ರಕರಣ. ~ಆಸನ = ಬಿಲ್ಲು ; ಧನುಸ್ಸು. ~ಪೃಷ್ಠ = ಬೆನ್ನಿನ ಮೇಲೆ ಬಾಣಗಳನ್ನು ಹೊತ್ತುಕೊಂಡು ಹೋಗುವವನು ; ಯೋಧ.

ಕಾಂಡಧಿ (ನಾ). ೧. ಸಮುದ್ರ. ೨. ಬತ್ತಳಿಕೆ ; ತೂಣೀರ.

ಕಾಂಡಪಟ = ಕಂಡವಡ.

ಕಾಂತ (ನಾ). ೧. ಒಡೆಯ ; ಪತಿ. ೨. ನಲ್ಲ ; ಪ್ರಿಯಕರ. ೩. ಕಲ್ಲು. ೪. ಕಬ್ಬಿಣ. ೫. (ಕಾವ್ಯಮೀ) ಕಾವ್ಯಗುಣಗಳಲ್ಲಿ ಒಂದು. ೬. ಸೂಜಿಗಲ್ಲು ; ಅಯಸ್ಕಾಂತ. (ಗು). ೭. ಇಷ್ಟವಾದ ; ಪ್ರಿಯವಾದ. ೮. ಸುಂದರವಾದ ; ಮನೋಹರವಾದ.

ಕಾಂತಾರ (ನಾ). ೧. ಅಡವಿ ; ಕಾಡು. ೨. ಕಠಿನವಾದ ದಾರಿ.

ಕಾಂತಿ (ನಾ). ೧. ಬೆಳಕು ; ಹೊಳಪು. ೨. ಅಪೇಕ್ಷೆ ; ಬಯಕೆ. ೩. ಲಾವಣ್ಯ ; ಚೆಲುವು.

ಕಾಂತೆ (ನಾ). ೧. ಹೆಂಗಸು ; ಸ್ತ್ರೀ. ೨. ಪ್ರಿಯೆ; ಕಾದಲೆ. ೩. ಪತ್ನಿ ; ಹೆಂಡತಿ.

ಕಾಂಬಲ(ಳ) (ನಾ). ೧. ಕಂಬಳಿಯ ಹೊದಿಕೆಯಿರುವ ಬಂಡಿ. (ಗು). ೨. ಕಂಬಳಿಯಿಂದ ಹೊದಿಸಲ್ಪಟ್ಟ.

ಕಾಂಸಾಳ = ಕಂಸಾಳ.

ಕಾಂಸ್ಯ (ನಾ). ೧. ಒಂದು ಬಗೆಯ ಲೋಹ ; ಕಂಚು. ೨. ಕಂಚಿನ ಜಾಗಟೆ. ~ಯುಗ = ಕಂಚನ್ನು ಬಳಸುವುದಕ್ಕೆ ಆರಂಭಿಸಿದ ಕಾಲ.

ಕಾಕ (ನಾ). ೧. ಕಕ್ಕ ; ಚಿಕ್ಕಪ್ಪ. ೨. ಕಾಗೆ ; ವಾಯಸ. ೩. ದುಷ್ಟ ; ನೀಚ. ೪. ಒಬ್ಬ ರಾಕ್ಷಸನ ಹೆಸರು. ~ದೃಷ್ಟಿ = ವಕ್ರದೃಷ್ಟಿ. ~ನಿಶೆ = ಕಗ್ಗತ್ತಲು ; ಅಮಾವಾಸ್ಯೆಯ ರಾತ್ರಿ. ~ಪಕ್ಷ = ೧. ಚೌಲಕರ್ಮದಲ್ಲಿ ತೆಗೆಯದೆ, ತಲೆಯ ಎರಡೂ ಪಕ್ಕಗಳಲ್ಲಿ ಉಳಿಸಿದ ಜುಟ್ಟು ; ಚಂಡಿಕೆ. ೨. ಕಾಗೆಯ ರೆಕ್ಕೆ. ~ಪೋಕ = ಅಲ್ಪನಾದವನು; ನೀಚ. ~ಪೌರುಷ = ೧. ಕಾಗೆಯ ಪೌರುಷ. ೨. ಒಣಜಂಬ. ೩. ಒಣಜಂಬದವನು.

~ಭಾಜನ = ೧. ಕಾಗೆಯ ಪಾಲು. ೨. ಅಪಾತ್ರನಿಗೆ ನೀಡುವ ಆಹಾರ.

ಕಾಕಂಬಿ (ನಾ). ಬೆಲ್ಲವಾಗುವುದಕ್ಕೆ ಸ್ವಲ್ಪ ಮೊದಲು ತೆಗೆದ ಕಬ್ಬಿನ ಹಾಲಿನ ಪಾಕ.

ಕಾಕಡ (ನಾ). ಒಂದು ಜಾತಿಯ ಬಿಳಿಯ ಹೂವು.

ಕಾಕತಾಲಿ(ಳಿ)ೀಯ (ನಾ). ೧. ಅಕಸ್ಮಾತ್ತಾಗಿ ನಡೆದುದು. ೨. ಲೌಕಿಕ ನ್ಯಾಯಗಳಲ್ಲಿ ಒಂದು.

ಕಾಕಲಿ(ಳಿ) (ನಾ). ಸೂಕ್ಷ್ಮವಾದ ಮತ್ತು ಅಸ್ಫುಟವಾದ ಮಧುರ ಧ್ವನಿ.

ಕಾಕು (ನಾ). ೧. ತೊಂದರೆ; ಹಿಂಸೆ. ೨. ಈರುಳ್ಳಿ ಮೊದಲಾದುವುಗಳ ಕಟು ವಾಸನೆ. ೩. ಭಾವೋದ್ರೇಕದಿಂದ ಆಗುವ ಧ್ವನಿಯ ಬದಲಾವಣೆ. ೪. ವ್ಯಂಗ್ಯ; ಕೊಂಕು. ೫. ದೇಶ್ಯ; ದೇಶೀಯ. ೬. ಹಾಳು; ನಾಶ. ೭. ನೀಚವಾದುದು. ೮. ಕೆಟ್ಟಮನುಷ್ಯ; ನೀಚ. ೯. ಸುಳ್ಳು. ೧೦. ಗಟ್ಟಿಯಾಗಿ ಮಾಡುವ ಧ್ವನಿ. ೧೧. ಚೀರಾಟ; ಬೊಬ್ಬೆ. ~ದೈವ= ಕ್ಷುದ್ರ ದೇವತೆ. ~ಬಲ = ೧. ಅಲ್ಪಬಲ; ಕೀಳಾದ ಶಕ್ತಿ. ೨. ಅಲ್ಪಬಲವುಳ್ಳವನು.

ಕಾಕುತ್ಸ್ಥ (ನಾ). ಕಕುತ್ಸ್ಥವಂಶದಲ್ಲಿ ಹುಟ್ಟಿದವನು; ರಾಮ, ಲಕ್ಷ್ಮಣ ಮೊದಲಾದವರು.

ಕಾಕೋದರ (ನಾ). ಹಾವು; ಸರ್ಪ.

ಕಾಕೋಲ (ನಾ). ೧. ಡೊಂಬ ಕಾಗೆ; ಅಡವಿಯ ಕಾಗೆ. ೨. ಕಾಗೆ. ೩. ಹಗೆತನ. ೪. ಒಂದು ಬಗೆಯ ವಿಷ. ೫. ದಾವಾನಲ; ಕಾಡುಕಿಚ್ಚು.

ಕಾಕೋಳಿ (ನಾ). ೧. ಒಂದು ಬಗೆಯ ಮೂಲಿಕೆ. ೨. ಉಂಡಾಡಿ; ತುಂಟ.

ಕಾಗಜ (ನಾ). ೧. ಬರೆಯಲು ಉಪಯೋಗಿಸುವ ಹಾಳೆ. ೨. ಓಲೆ; ಪತ್ರ. ೩. ಒಪ್ಪಂದ.

ಕಾಗದ = ಕಾಗಜ.

ಕಾಗದಳಿ (ನಾ). ಕೆಂಪು ಮಣ್ಣಿನ ಭೂಮಿ.

ಕಾಗಬ್ಬು (ನಾ). ಒಂದು ಜಾತಿಯ ಹುಲ್ಲು; ಕಾಗೆಬಿದಿರು.

ಕಾಗಲು (ನಾ). ನೀರು ಮರಳುವಿಕೆ, -ಕುದಿತ.

ಕಾಗಿಣಿ (ನಾ). ಒಂದು ಬಗೆಯ ನಾಣ್ಯ; ಕಾಣಿ.

ಕಾಗು = ಕಾಂಗು.

ಕಾಗುದುರೆ (ನಾ). ಕಾಡು ಕುದುರೆ; ಪಳಗದ ಕುದುರೆ.

ಕಾಗೆ (ನಾ). ವಾಯಸ. ~ಕಾರುಬಾರು = ಅವ್ಯವಸ್ಥೆ. ~ಬಂಗಾರ = ಒಂದು ಬಗೆಯ ಖನಿಜ; ಅಭ್ರಕ. ~ಬಂಜೆ = ಒಂದು ಮಗುವನ್ನು ಹಡೆದ ಮೇಲೆ ಬಸುರಾಗದಿರುವವಳು.

ಕಾಗೆಂಡೆ (ನಾ). ಒಂದು ಜಾತಿಯ ಮೀನು.

ಕಾಚ (ನಾ). ೧. ಕಾಜು; ಗಾಜು. ೨. ನೆಲಹು; ಕಾವಡಿ. ೩. ಕಾಸೆ; ಚಡ್ಡಿ. ೪. ಕಣ್ಣಿನ ಒಂದು ರೋಗ. ~ವಲಯ = ಗಾಜಿನಿಂದ ಮಾಡಿದ ಬಳೆ; ಗಾಜಿನ ಬಳೆ.

ಕಾಚಕ್ಕಿ (ನಾ). ೧. ತೆನೆಯಿಂದ ತೆಗೆದು ಸುಟ್ಟ ಕಾಳು; ಬೆಳಸಿ. ೨. ನಸುಗೆಂಪು ಬಣ್ಣ.

ಕಾಚು (ನಾ). ೧. ಖದಿರವೃಕ್ಷ. ೨. ತಾಂಬೂಲದೊಡನೆ ಸೇರಿಸುವ ಒಂದು ಸುಗಂಧ ವಸ್ತು. ೩. ಗಾಜು.

ಕಾಜ (ನಾ). ೧. ಕೆಲಸ; ಕಾರ್ಯ. ೨. ಅಂಗಿ, ಕೋಟು ಮೊದಲಾದುವುಗಳಿಗೆ ಗುಂಡಿ ಹಾಕುವುದಕ್ಕಾಗಿ ಮಾಡಿದ ತೂತು; ಗುಂಡಿಮನೆ.

ಕಾಜಾಣ (ನಾ). ಒಂದು ಜಾತಿಯ ಹಕ್ಕಿ.

ಕಾಜಿ (ನಾ). ಮುಹಮ್ಮದೀಯರ ನ್ಯಾಯಾಧೀಶ. ~ನ್ಯಾಯ= ಎರಡು ಪಕ್ಷಕ್ಕೂ ಸಮಾಧಾನ ತರುವ ಸ್ಥೂಲನ್ಯಾಯ.

ಕಾಜು (ನಾ). ೧. ಗಾಜು. ೨. ಕನ್ನಡಕ; ಸುಲೋಚನ.

ಕಾಟ (ನಾ). ೧. ತೊಂದರೆ; ಉಪಟಳ. ೨. ಕಾಡಿನಲ್ಲಿರುವವನು; ಬೇಡ. ೩. ಒಂದು ಕ್ಷುದ್ರದೇವತೆ. ೪. ಘಾಟು; ಉಗ್ರವಾದ ವಾಸನೆ. ~ಆಚಾರ = ಶ್ರದ್ಧೆ ಯಿಲ್ಲದೆ, ಕಾಟಕ್ಕೆ ಮಾಡುವ ಕೆಲಸ; ಬೇಕಾಬಿಟ್ಟಿ ಕೆಲಸ. ~ಕ = ೧. ಉಪದ್ರವಕಾರಿ. ೨. ಬೇಟೆಗಾರ. ~ಕಸರು = ಮಿತವ್ಯಯ.

ಕಾಟಕಾಯಿ (ನಾ). ದರೋಡೆ; ಸುಲಿಗೆ.

ಕಾಟಕೋನ (ನಾ). ೧. ತೊಂಬತ್ತು ಅಂಶಗಳ ಕೋನ; ಸಮಕೋನ. ೨. ಉಪ್ಪಾರನು ಬಳಸುವ ಚೌಕಪಟ್ಟಿ; ಮೂಲೆಮಟ್ಟ.

ಕಾಟರ (ನಾ). ಕುದುರೆಯ ಜೀನು; ಹಲ್ಲಣ.

ಕಾಟಾ (ನಾ). ತಕ್ಕಡಿ.

ಕಾಟಿ (ನಾ). ೧. ರಾಗಿ ಅಥವಾ ಜೋಳದ ಗಂಜಿ; ಸಂಗಟಿ. ೨. ಒಂದು ನಾಣ್ಯ. ೩. ಕಾಡೆಮ್ಮೆ ಅಥವಾ ಕಾಡುಕೋಣ. ೪. ಒಂದು ಕ್ಷುದ್ರದೇವತೆ. ೫. ಸೀರೆ ಅಥವಾ ಧೋತ್ರದ ಅಂಚು. ೬. ಮೈಕಟ್ಟು.

ಕಾಟಿಮ (ನಾ). ಒಂದು ಕ್ಷುದ್ರದೇವತೆ.

ಕಾಟು (ನಾ). ೧. ಹಲ್ಲುಗಳಿಂದ ಕಚ್ಚುವಿಕೆ. ೨. ಕತ್ತಿ, ಕೊಡಲಿಯಿಂದ ಆದ ಕಚ್ಚು. ೩. ಬರೆದುದನ್ನು ಹೊಡೆದು ಹಾಕುವ ಕತ್ತರಿ ಗುರುತು. (ಗು). ೪. ಪೋಲಿ ತಿರುಗುವ. ೫. ತೊಂದರೆ ಕೊಡುವ. ~ನಾಯಿ = ಪೋಲಿ ತಿರುಗುವ ನಾಯಿ.

ಕಾಟುಗ = ಕಾಟಕ.

ಕಾಟ್ಟೇರಿ (ನಾ). ಒಂದು ಭೂತದ ಹೆಸರು.

ಕಾಠಿಣ್ಯ (ನಾ). ೧. ಕಠಿಣತೆ; ಬಿರುಸುತನ. ೨. ನಿಷ್ಠುರತೆ. ೩. ಕಷ್ಟ.

ಕಾಡ (ನಾ). ೧. ಕಾಡಿನಲ್ಲಿರುವವನು. ೨. ಕೆಲಸಕ್ಕೆ ಬಾರದವನು.

ಕಾಡಣಿ (ನಾ). ಕುದುರೆಯ ಕಾಲಿಗೆ ಕಟ್ಟುವ ಹಗ್ಗ.

ಕಾಡಣೆ = ಕಾಡಣಿ.

ಕಾಡತೂಸು (ನಾ). ಬಂದೂಕು, ಪಿಸ್ತೂಲುಗಳಲ್ಲಿಟ್ಟು ಹಾರಿಸುವ ಮದ್ದು ತುಂಬಿದ ಕೊಳವೆ; ತೋಟಾ.

ಕಾಡವೆ (ನಾ). ಜಿಂಕೆ ಜಾತಿಗೆ ಸೇರಿದ ಪ್ರಾಣಿ; ಕಡವೆ

ಕಾಡಿಗೆ (ನಾ). ೧. ದೀಪದ ಕುಡಿಯ ಮಸಿ. ೨. ಅಂಜನ; ಕಪ್ಪು. ೩. ಕರಿಯ ಬಣ್ಣ. ~ನೀರು = ಕಾಡಿಗೆಯ ಹೊಳಪು. ~ರೋಗ = ತೆನೆಯ ಕಾಳಿಗೆ ಕಪ್ಪು ಹತ್ತುವ ಒಂದು ರೋಗ.

ಕಾಡೀಕಾರ (ನಾ). ಗಾಜಿನ ಕನ್ನಡಿ ಮಾಡುವವರು ಮತ್ತು ಅಕ್ಕಸಾಲಿಗರು ಬಳಸುವ ಒಂದು ದ್ರಾವಕ ವಸ್ತು; ತೇಜಾಪಿನ ಎಣ್ಣೆ.

ಕಾಡೀನೀರು (ನಾ). ದ್ರಾಕ್ಷಿ, ಸೇಬು ಮೊದಲಾದುವುಗಳ ಮದ್ಯದಿಂದ ತಯಾರಿಸಿದ ಹುಳಿ ನೀರು.

ಕಾಡು (ಕ್ರಿ). ೧. ಏಡಿಸು; ಅವಹೇಳನ ಮಾಡು. ೨. ಪೀಡಿಸು; ಹಿಂಸಿಸು. (ನಾ). ೩. ಅಡವಿ; ಅರಣ್ಯ. ೪. ಹೊಲ; ಭೂಮಿ. ೫. ಕರಿಯ ಬಣ್ಣ. ೬. ಅನಾಗರಿಕವಾದದ್ದು. ೭. ಪ್ರದೇಶ; ಸ್ಥಲ. ~ಆರಂಭ = ಮಳೆಯ ನೀರಿನಿಂದ ಮಾಡುವ ವ್ಯವಸಾಯ; ಕುಷ್ಕಿ.

ಕಾಡೆ (ನಾ). ೧. ಒಂದು ಬಗೆಯ ಪಕ್ಷಿ; ಲಾವಕ್ಕಿ. ೨. ಔಷಧಿಗಾಗಿ ವನಸ್ಪತಿ ಮೊದಲಾದುವುಗಳಿಂದ ತೆಗೆದ ಅರ್ಕ; ಕಷಾಯ.

ಕಾಣ್(ಣು) (ಕ್ರಿ). ೧. ನೋಡು; ಈಕ್ಷಿಸು. ೨. ಭೇಟಿಯಾಗು; ಸಂದರ್ಶಿಸು. ೩. ಎಣಿಸು; ಭಾವಿಸು. ೪. ಕಣ್ಣಿಗೆ ಬೀಳು; ಗೋಚರಿಸು.

ಕಾಣ (ನಾ). ೧. ಒಕ್ಕಣ್ಣ. ೨. ಕುರುಡ. ೩. ಕನಡೆಯಂತೆ ತೂತುಬಿದ್ದದ್ದು. ೪. ಕಾಗೆ. ೫. ಬತ್ತೆ; ಅಡವು.

ಕಾಣಯ (ನಾ). ದೊಣ್ಣೆ; ಬಡಿಗೆ.
ಕಾಣಾಚಿ (ನಾ). ಹಕ್ಕುದಾರಿ ಜಮೀನು; ಪಿತ್ರಾರ್ಜಿತ ಆಸ್ತಿ.
ಕಾಣಿ (ನಾ). ೧. ಒಂದು ಚಿಕ್ಕ ನಾಣ್ಯ; ಪಣದ ಅರುವತ್ತು ನಾಲ್ಕನೆಯ ಭಾಗ. ೨. ಕಾಣಿಕೆ. ೩. ಭೂಮಿಯ ಒಂದು ಅಳತೆ. ೪. ಆಸ್ತಿ; ಆನುವಂಶಿಕ ಹಕ್ಕುದಾರಿಕೆ. ೫ ತಕ್ಕಡಿಯ ತಟ್ಟೆಗಳನ್ನು ಸಮತೂಕಕ್ಕೆ ತರಲು ಹಾಕುವ ತೂಕ; ಪೇರು.
ಕಾಣಿಕೆ = ಕಾಣ್ಕೆ.
ಕಾಣಿಯಾಲ (ನಾ). ಬೇಸಾಯಗಾರ; ರೈತ.
ಕಾಣೆ (ನಾ). ೧. ಕಾಣದೆ ಅಡಗುವುದು; ಅದೃಶ್ಯತೆ. ೨. ಒಂದು ಬಗೆಯ ಮೀನು.
ಕಾಣ್ಕೆ (ನಾ). ೧. ನೋಟ; ದರ್ಶನ. ೨. ಉಡುಗೊರೆ; ಉಪಾಯನ. ೩. ಅಧಿಕಾರಿಗಳಿಗೆ ಒಪ್ಪಿಸಬೇಕಾದ ನಜರು. ೪. ಕೊಡುಗೆ. ~ಪೊ(ವೊ)ಲ = ಕಣ್ಣು ಕಾಣುವಷ್ಟು ಹರವು; ದೃಷ್ಟಿಪಥ.
ಕಾಣ್ಮೆ (ನಾ). ೧. ನೋಟ; ದರ್ಶನ. ೨. ಶೌರ್ಯ; ಪರಾಕ್ರಮ.
ಕಾಣ್ವ (ನಾ). ೧. ಕಾಣ್ವಶಾಖೆಗೆ ಸೇರಿದವನು. (ಗು). ೨. ಕಣ್ವಋಷಿಯ ಸಂಬಂಧವಾದ.
ಕಾತಕರಿ (ನಾ). ಕಾಚು, ಇದ್ದಲು ಮೊದಲಾದುವುಗಳನ್ನು ತಯಾರಿಸುವ ಒಂದು ವರ್ಗ..
ಕಾತರ (ನಾ). ೧. ಕಳವಳ; ತಳ್ಳಂಕ. ೨. ಉತ್ಸುಕತೆ; ಆತುರ. ೩. ದುಡುಕು ಸ್ವಭಾವವುಳ್ಳ ವ್ಯಕ್ತಿ. ೪. ಹೆದರಿದವನು. (ಗು). ೫. ಕಳವಳಗೊಂಡ. ೬. ಅಸ್ತವ್ಯಸ್ತವಾದ. ೭. ಆಸಕ್ತಿಯಿಂದ ಕೂಡಿದ. ೮. ಅಂಜಿದ. ~ಇಸು = ೧. ಉತ್ಕಂಠಿತನಾಗು; ಹಂಬಲಿಸು. ೨. ಸಿಡಿಮಿಡಿಗೊಳ್ಳು. ೩. ಕಳವಳಿಸು; ವ್ಯಥೆಪಡು. ೪. ಬೆದರು; ಅಂಜು. ೫. ತುಳುಕು; ಉಕ್ಕು.
ಕಾತರತೆ (ನಾ). ೧. ಉತ್ಸುಕತೆ. ೨. ದಿಗಿಲು; ಅಂಜಿಕೆ.
ಕಾತಳ (ನಾ). ೧. ಕಳವಳ; ತಳ್ಳಂಕ. ೨. ಹೆದರಿಕೆ; ಭಯ. ~ಇಸು = ೧. ಹಂಬಲಿಸು. ೨. ಕಳವಳಿಸು. ೩. ಅಂಜು; ಹೆದರು.
ಕಾತಿ (ನಾ). ೧. ಕೋಪ; ಕ್ರೋಧ. ೨. = ಕತ್ತಿ. ೩. ಗರತಿ; ಮುತ್ತೈದೆ. (ಪ್ರ). ೪. ಒಂದು ಸ್ತ್ರೀವಾಚಕ ಪ್ರತ್ಯಯ.
ಕಾತುರ = ಕಾತರ.
ಕಾತ್ಯಾಯನಿ (ನಾ). ೧. ಪಾರ್ವತಿ. ೨. ನಡುವಯಸ್ಸಿನ ವಿಧವೆ. ೩. ಯಾಜ್ಞವಲ್ಕ್ಯನ ಹೆಂಡತಿ.
ಕಾದಂಬ (ನಾ). ೧. ಬೂದುಬಣ್ಣದ ರೆಕ್ಕೆಗಳುಳ್ಳ ಹಂಸಪಕ್ಷಿ. ೨. ಕದಂಬವೃಕ್ಷ ಮತ್ತು ಹೂವು.
ಕಾದಂಬರಿ (ನಾ). ೧. (ಕದಂಬ ಪುಷ್ಪದಿಂದ ಮಾಡಿದ) ಮದ್ಯ. ೨. ಗದ್ಯಕಥಾ ಸಾಹಿತ್ಯದಲ್ಲಿ ಒಂದು ವಿಶಿಷ್ಟ ಪ್ರಕಾರ.
ಕಾದಂಬಿನಿ (ನಾ). ಮುಗಿಲುಗಳ ಸಾಲು; ಮೇಘಮಾಲೆ.
ಕಾದಲ್ ೧. = ಕಾದಲ್ಮೆ. ೨. ಒಂದು ಬಗೆಯ ಸಸ್ಯ; ಕೂಳಗೆಡ್ಡೆ.
ಕಾದಲ (ನಾ). ೧. ಇನಿಯ; ನಲ್ಲ. ೨. ಗಂಡ; ಪತಿ.
ಕಾದಲೆ (ನಾ). ೧. ನಲ್ಲೆ; ಪ್ರಿಯೆ. ೨. ಹೆಂಡತಿ; ಸತಿ.
ಕಾದಲ್ಮೆ (ನಾ). ನಲ್ಮೆ; ಒಲವು.
ಕಾದಿಗೆ = ಕಾಡಿಗೆ.
ಕಾದು (ಕ್ರಿ). ೧. ಹೋರಾಡು; ಯುದ್ಧಮಾಡು. (ನಾ). ೨. ಹೋರಾಟ; ಕದನ.
ಕಾದ್ರವೇಯ (ನಾ). ೧. ಕದ್ರುವಿನ ಮಗ. ೨. ಹಾವು; ಸರ್ಪ.
ಕಾನ್(ನು) (ನಾ). ೧. (ಬೆಟ್ಟದೆಡೆ ಇರುವ) ಕಾಡು, -ಅಡವಿ. ೨. ದಟ್ಟಣೆ; ಸಾಂದ್ರತೆ.

ಕಾನ ೧. = ಕಾನ್. ೨. ಕಿವಿ. ~ಬಾವಲಿ =೧. ಕಿವಿಯಲ್ಲಿ ಧರಿಸುವ ಆಭರಣ. ೨. ಕಾಡಿನ ಬಾವಲಿ, -ಕಪ್ಪಡಿ.

ಕಾನಕ (ಗು). ಚಿನ್ನದಿಂದ ಮಾಡಿದ; ಕನಕಕ್ಕೆ ಸಂಬಂಧಿಸಿದ.

ಕಾನನ (ನಾ). ಕಾಡು; ಅಡವಿ.

ಕಾನೀನ (ನಾ). ೧. ಕನ್ಯೆಯ ಮಗ. ೨. ಕರ್ಣ. ೩. ವ್ಯಾಸ.

ಕಾನೂನು (ನಾ). ಕಟ್ಟಳೆ; ನಿಯಮ. ~ಭ್ರಷ್ಟ = ಶಾಸನಕ್ಕೆ ಹೊರತಾದವನು.

ಕಾನೋಲೆ (ನಾ). ಒಂದು ಬಗೆಯ ಸಿಹಿತಿಂಡಿ; ಕರ್ಜಿಕಾಯಿ.

ಕಾಪಟಿಕ (ನಾ). ೧. ಕಪಟ; ಮೋಸಗಾರ. ೨. ಹೊಗಳುಭಟ್ಟ; ಭಟ್ಟಂಗಿ.

ಕಾಪಟ್ಯ (ನಾ). ಮೋಸಗಾರಿಕೆ; ವಂಚನೆ.

ಕಾಪಥ (ನಾ). ೧. ಕಷ್ಟಕರವಾದ ದಾರಿ. ೨. ದುರ್ಮಾರ್ಗ; ಕೆಟ್ಟ ನಡತೆ. ೩. ಒಂದು ಸುವಾಸನೆಯ ಬೇರು; ಲಾಮಂಚ.

ಕಾಪಾಲ (ನಾ). ೧. ಭಿಕ್ಷಾಪಾತ್ರೆ. ೨. ತಲೆ ಬುರುಡೆ. ೩. ವಾಮಮಾರ್ಗದ ಒಂದು ಶೈವಪಂಥ. (ಗು). ೪. ತಲೆಬುರುಡೆಗೆ ಸಂಬಂಧಪಟ್ಟ. ೫. ಭಿಕ್ಷಾಪಾತ್ರೆಗೆ ಸಂಬಂಧಿಸಿದ.

ಕಾಪಾಲಿ (ನಾ). ಕಪಾಲವನ್ನು ಧರಿಸಿದವನು; ಶಿವ.

ಕಾಪಾಲಿ(ಳಿ)ಕ (ನಾ). ೧. ತಲೆಬುರುಡೆಗಳಲ್ಲಿ ಭಿಕ್ಷೆ ಸ್ವೀಕರಿಸಿ, ಅವುಗಳಲ್ಲೇ ಆಹಾರ ಪಾನೀಯಗಳನ್ನು ಸ್ವೀಕರಿಸುವ ಒಂದು ಶೈವಪಂಥ. ೨. ಕಾಪಾಲಿಕ ಪಂಥಕ್ಕೆ ಸೇರಿದವನು.

ಕಾಪಿಲ (ನಾ). ೧. ಕಪಿಲಮುನಿಯ ಮತ; ಸಾಂಖ್ಯಮತ. ೨. ಸಾಂಖ್ಯಶಾಸ್ತ್ರವನ್ನು ಬಲ್ಲವನು. (ಗು). ೩. ಕಪಿಲಮುನಿಗೆ ಸಂಬಂಧಪಟ್ಟ.

ಕಾಪು (ನಾ). ೧. ಕಾಯುವಿಕೆ; ಕಾವಲು. ೨. ಮಗು ಹುಟ್ಟಿದ ಏಳನೆಯದಿನ ಮಾಡುವ ಒಂದು ಶುಭಕಾರ್ಯ. ೩. ಬೇಲಿ; ಪ್ರಾಕಾರದ ಗೋಡೆ. ೪. ಕಡಗ. ೫. ಬಂಧನ. ೬. ದೃಷ್ಟಿದೋಷ ನಿವಾರಣೆಗಾಗಿ ಇಡುವ ಕಾಡಿಗೆಯ ಬೊಟ್ಟು. ~ಆಡು = ಸಲಹು; ರಕ್ಷಿಸು.

ಕಾಪುರುಷ (ನಾ). ೧. ಹೀನಮನುಷ್ಯ; ಕ್ಷುದ್ರ. ೨. ಅಂಜುಬುರುಕ; ಹೇಡಿ.

ಕಾಪೇಯ (ನಾ). ೧. ಮಂಗಗಳ ಜಾತಿ; ಕಪಿಕುಲ. ೨. ಕಪಿಚೇಷ್ಟೆ. (ಗು). ೩. ಕಪಿಗೆ ಸಂಬಂಧಪಟ್ಟ.

ಕಾಪೋತ (ನಾ). ೧. ಪಾರಿವಾಳದ ಬಣ್ಣ; ಬೂದುಬಣ್ಣ. ೨. ಬಿಳುಪುಳ್ಳ ಒಂದು ಮೂಲ ಲೋಹ; ಕ್ಷಾರ. ೩. ಪಾರಿವಾಳಗಳ ಗುಂಪು. ೪. ಕಾಡಿಗೆ; ಅಂಜನ.

ಕಾಫರ (ನಾ). ದೇವರಲ್ಲಿ ನಂಬಿಕೆಯಿಲ್ಲದವನು; ನಾಸ್ತಿಕ.

ಕಾಬು (ನಾ). ೧. ಸಂಧಿ; ಸಮಯ. ೨. ಹಿಡಿತ; ನಿಯಂತ್ರಣ.

ಕಾಮ (ನಾ). ೧. ಬಯಕೆ; ಅಪೇಕ್ಷೆ. ೨. ವಿಷಯಾಭಿಲಾಷೆ. ೩. ನಾಲ್ಕು ಪುರುಷಾರ್ಥಗಳಲ್ಲಿ ಒಂದು. ೪. ಪ್ರೀತಿಯ ಅಧಿದೇವತೆ; ಮನ್ಮಥ. ~ಇಷ್ಟಿ = ಇಷ್ಟವನ್ನು ನೆರವೇರಿಸಿಕೊಳ್ಳುವ ಉದ್ದೇಶದಿಂದ ಮಾಡುವ ಯಜ್ಞ. ~ಕಸ್ತೂರಿ = ತುಳಸಿ ಜಾತಿಗೆ ಸೇರಿದ ಒಂದು ಸುವಾಸನೆಯ ಸಸ್ಯ. ~ಕೂಟ = ೧. ಸೂಳೆಗಾರಿಕೆ. ೨. ವಿಟ; ಜಾರ. ~ರೂಪ = ೧. ಬೇಕಾದ ರೂಪವನ್ನು ಧರಿಸಬಲ್ಲವನು. ೨. ಪಂಚಮಾಯಾಮಂತ್ರಗಳಲ್ಲಿ ಒಂದು. ೩. ಸುಂದರನಾದವನು.

ಕಾಮುಕರ (ನಾ). ೧. ತನ್ನ ಇಚ್ಛೆ ಬಂದಂತೆ ನಡೆದುಕೊಳ್ಳುವುದು; ಸ್ವೈರಾಚಾರ. ೨. ಸೊಕ್ಕು; ಬಿಂಕ.

ಕಾಮಗಾರ (ನಾ). ಕಾರ್ಖಾನೆ ಮೊದಲಾದುವುಗಳಲ್ಲಿ ಕೆಲಸ ಮಾಡುವವನು ; ಕಾರ್ಮಿಕ.

ಕಾಮಗಾರಿ (ನಾ). ಕಾರ್ಮಿಕರ ಕೆಲಸ.

ಕಾಮಟಗಾರ (ನಾ). ಕೆಲಸಗಾರ ; ಕಾಮಾಟಿ.

ಕಾಮಣಿ = ಕಾಮಾಲೆ.

ಕಾಮತಿ (ನಾ). ಹೊಲದಲ್ಲಿ ಕೆಲಸ ಮಾಡುವವನು ; ವ್ಯವಸಾಯಗಾರ.

ಕಾಮದ (ನಾ). ೧. ಸ್ಕಂದ. ೨. ಸೂರ್ಯ. ೩. ಶಿವ. (ಗು). ೪. ಬೇಡಿದುದನ್ನು ಕೊಡುವ.

ಕಾಮದಾರ (ನಾ). ೧. ಕೆಲಸಗಾರ; ಕಾಮಗಾರಿ ಮಾಡುವವನು. ೨. ಸರಕಾರಿ ನೌಕರ, – ಅಧಿಕಾರಿ.

ಕಾಮನೆ (ನಾ). ಆಸೆ ; ಅಪೇಕ್ಷೆ.

ಕಾಮವಟ್ಟ (ನಾ). ಮರಗೆಲಸ ಮುಂತಾದುವನ್ನು ಮಾಡುವ ಸ್ಥಳ, –ಕರ್ಮಶಾಲೆ.

ಕಾಮಳ್ಳಿ (ನಾ). ಒಂದು ಜಾತಿಯ ಪಕ್ಷಿ.

ಕಾಮಾಕ್ಷಿ (ನಾ). ೧. ದುರ್ಗೆ ; ಪಾರ್ವತಿ. ೨. ಒಂದು ಬಗೆಯ ವೀಣೆ. ೩. ರುದ್ರಾಕ್ಷಿ.

ಕಾಮಾಟ (ನಾ). ೧. ಕೂಲಿ ಕೆಲಸ. ೨. ಕೆಲಸದ ಆಳು.

ಕಾಮಾಟಿ = ಕಾಮಟಗಾರ.

ಕಾಮಾಲೆ (ನಾ). ಮೈಯೆಲ್ಲ ಹಳದಿಬಣ್ಣಕ್ಕೆ ತಿರುಗಿ ಊದಿಕೊಳ್ಳುವ ಒಂದು ರೋಗ ; ಅರಸಿನಮುಂಡಿಗೆ.

ಕಾಮಿ (ನಾ). ೧. ಕಾಮುಕ. ೨. ಬಯಕೆಯುಳ್ಳವನು. ೩. ಮನ್ಮಥನ ಹೆಂಡತಿ ; ರತಿ. ೪. ಹೆಣ್ಣುಬೆಕ್ಕು. (ಗು). ೫. ಬಯಸುವ ; ಇಚ್ಛಿಸುವ.

ಕಾಮಿತ (ನಾ). ೧. ಬಯಕೆ ; ಇಚ್ಛೆ. ೨. ಬಯಸಿದ ವಸ್ತು. (ಗು). ೩. ಬಯಸಿದ.

ಕಾಮಿನಿ (ನಾ). ೧. ಹೆಂಗಸು ; ಸ್ತ್ರೀ. ೨. ಚೆಲುವೆ ; ಸುಂದರಿ. ೩. ಅನುರಕ್ತಳಾದವಳು ; ಪ್ರೀತಿಸುವ ಹೆಂಗಸು.

ಕಾಮುಕ (ನಾ). ೧. ಕಾಮಾಸಕ್ತನಾದವನು ; ವಿಷಯಲಂಪಟ. (ಗು). ೨. ಕಾಮಪೀಡಿತನಾದ.

ಕಾಮ್ಯ (ನಾ). ೧. ಬಯಕೆ ; ಮನೋರಥ. (ಗು). ೨. ಇಷ್ಟವಾದ. ೩. ಸೊಗಸಾದ. ~ಅರ್ಥ = ೧. ಯಜ್ಞ, ಯಾಗ, ವ್ರತಾದಿಗಳಿಂದ ಪೂರೈಸಿಕೊಳ್ಳುವ ಇಷ್ಟ. ೨. ಬಯಸತಕ್ಕ ವಿಷಯ ಅಥವಾ ವಸ್ತು.

ಕಾಯ್ ೧. = ಕಾ. ೨. ಉಷ್ಣವಾಗು ; ಕಾವು ಏರು. ೩. ಸಿಟ್ಟಾಗು. ೪. ಕಾಯಿಬಿಡು. (ನಾ). ೫. ಮಿಡಿಗೂ ಹಣ್ಣಿಗೂ ನಡುವಿನ ಸ್ಥಿತಿ. ೬. ಬೀಜಕೋಶ. ೭. ತೆಂಗಿನಕಾಯಿ. ೮. ವಿಫಲತೆ. ೯. ಪಗಡೆ, ಚದುರಂಗ ಮೊದಲಾದ ಆಟದ ಸಾಧನ. ~ಕೊ(ಗೊ)ಂಡ = ನೀರು ಕಾಯಿಸುವ ಹಂಡೆ. ~ಮನೆ = ರಕ್ಷಣೆಯ ನೆಲೆ.

ಕಾಯ (ನಾ). ೧. ಮೈ ; ಒಡಲು. ೨. ಕಿರುಬೆರಳಿನ ಬುಡ. ೩. ಸಮೂಹ. ೪. ಮರದ ಕಾಂಡ. ~ಅಗ್ನಿ = ಶರೀರದಲ್ಲಿನ ಬೆಂಕಿ ; ಜಠರಾಗ್ನಿ. ~ಕಲ್ಪ = ೧. ಯೌವನವನ್ನು ತಂದುಕೊಡುವ ಆಯುರ್ವೇದ ಚಿಕಿತ್ಸೆ. ೨. ಪೌಷ್ಟಿಕವಾದ ಆಹಾರ.

ಕಾಯಂ (ಗು). ೧. ಸ್ಥಿರವಾದ ; ಖಚಿತವಾದ. ೨. ತೀರ್ಮಾನಿಸಿದ.

ಕಾಯಕ (ನಾ). ೧.ಶರೀರ; ದೇಹ. ೨.ಕಸಬು; ದುಡಿಮೆ. ೩. ಕುತಂತ್ರ ; ಕೆಟ್ಟ ಕೆಲಸ. (ಗು). ೪. ದೇಹಕ್ಕೆ ಸಂಬಂಧಿಸಿದ ; ವೈಹಿಕವಾದ.

ಕಾಯಜ (ನಾ). ೧. ಮಗ. ೨. ಮನ್ಮಥ. (ಗು). ೩. ದೇಹದೊಳಗೆ ಅಥವಾ ದೇಹದಿಂದ ಹುಟ್ಟಿದ.

ಕಾಯದೆ (ನಾ). ೧. ನಿಯಮ ; ಕಟ್ಟಳೆ. ೨. ನ್ಯಾಯಶಾಸ್ತ್ರ.

ಕಾಯಮಾನ (ನಾ). ಹಂದರ ; ಚಪ್ಪರ.

ಕಾಯಲ್ (ನಾ). ಕೊಲ್ಲಿ ; ಅಖಾತ.

ಕಾಯಸ್ಥ (ನಾ). ೧. ಕರಣಿಕ ; ಸೇನಬೋವ. ೨. ಲಿಪಿಕಾರ.

ಕಾಯಾಸ (ನಾ). ಊಹೆ ; ಅಂದಾಜು.

ಕಾಯಿ = ಕಾಯ್. ~ಕ(ಗ)ಟ್ಟು = ಗಡ್ಡೆ ಕಟ್ಟು. ~ಪಲ್ಯ = ತರಕಾರಿ. ~ರಸ = ೧. ತೆಂಗಿನಕಾಯಿಯ ಹಾಲು. ೨. ಒಂದು ಬಗೆಯ ಮೇಲೋಗರ.

ಕಾಯಿಲೆ (ನಾ). ವ್ಯಾಧಿ ; ರೋಗ.

ಕಾಯಿಸ್‌ದಾರ್ (ನಾ). ಕಂದಾಯದ ಅಧಿಕಾರಿ.

ಕಾಯ್ಪು (ನಾ). ೧. ಬಿಸಿ; ತಾಪ. ೨. ಮುನಿಸು; ರೋಷ. ೩. ಉದ್ವೇಗ ; ರಭಸ. ೪. ಕಾವಲು.

ಕಾರ್ (ಕ್ರಿ). ೧. ತಿನ್ನು; ಭಕ್ಷಿಸು. (ನಾ). ೨. ನೇಗಿಲ ಗುಳ. ೩. ಮಳೆಗಾಲ. ೪. ಮಳೆಯ ನೀರಿನಿಂದ ತೆಗೆಯುವ ಫಸಲು. ೫. ಮಳೆಯ ಮೋಡ. ೬. ಕೆಸರು ; ಅಟ್ಲು. ೭. = ಕರಿದು. ~ಎಳ್ಳು = ೧. ಕರಿಯ ಎಳ್ಳು. ೨. ಹುಚ್ಚೆಳ್ಳು ; ಗುರೆಳ್ಳು. ೩. ಚರ್ಮದ ಮೇಲಿರುವ ಚಿಕ್ಕ ಕರಿಯ ಮಚ್ಚೆ. ೪. ಪುಪ್ಪುಸ; ಶ್ವಾಸಕೋಶ. ~ಒಡ್ಡು =೧. ಕಾರ್ಗಾಲದ ಮೋಡವನ್ನು ಕವಿಸು. ೨. ಕರಿಯ ರಾಶಿ. ~ಕ(ಗ)ತ್ತಲೆ = ದಟ್ಟವಾದ ಕತ್ತಲೆ ; ಕಗ್ಗತ್ತಲೆ. ~ಮುಖ = ಮಳೆಗಾಲದ ಪ್ರಾರಂಭ. ~ಮುಗಿಲ್(ಲು) = ೧. ಮಳೆಗಾಲದ ಮುಗಿಲು, –ಮೋಡ. ೨. ಕಪ್ಪು ಮೋಡ ; ನೀಲಮೇಘ.

ಕಾರ (ನಾ). ೧. ತೀಕ್ಷ್ಣವಾದ ರುಚಿ ; ಖಾರ. ೨. ಒಂದು ಬಗೆಯ ಉಪ್ಪು. ೩. ಮಾಡುವುದು ; ತಯಾರಿಸುವುದು. ೪. ಕಂದಾಯ ; ತೆರಿಗೆ. ೫. ಬಂಧನ ; ಸೆರೆ. ೬. ಕೋಪ ; ಸಿಟ್ಟು. ೭. = ಕಾಜಿ. ~ಗೆಣಸು = ಹಸಿ ಶುಂಠಿ ; ಅಲ್ಲ. ~ದಾಣೆ = ಉಪ್ಪುಕಾರ ಹಚ್ಚಿದ ಸೇವು.

ಕಾರಂಜಿ (ನಾ). ನೀರಿನ ಚಿಲುಮೆ ; ಬುಗ್ಗೆ.

ಕಾರಂಡ (ನಾ). ಒಂದು ಬಗೆಯ ನೀರುಹಕ್ಕಿ.

ಕಾರಕ (ನಾ). ೧. ಮಾಡುವವನು ; ರಚಿಸುವವನು. ೨. ಹಿಂಸೆ ; ಪೀಡೆ. ೩. (ವ್ಯಾಕ) ಕ್ರಿಯೆಗೆ ನಿಮಿತ್ತವಾಗಿರುವುದು ; ಕರ್ತೃ, ಕರ್ಮ ಮೊದಲಾದುದು. (ಗು). ೪. ಉಂಟು ಮಾಡುವ.

ಕಾರಕರ್ದಿ (ನಾ). ಅಧಿಕಾರದ ಅವಧಿ ; ಆಡಳಿತದ ಕಾಲ.

ಕಾರಕೂನ (ನಾ). ೧. ಗುಮಾಸ್ತ ; ಕರಣಿಕ. ೨. ಸುಂಕ ವಸೂಲುಮಾಡುವವನು.

ಕಾರಖಾನೆ (ನಾ). ಯಂತ್ರಗಳ ಸಹಾಯದಿಂದ ದೊಡ್ಡ ಪ್ರಮಾಣದಲ್ಲಿ ವಸ್ತುಗಳನ್ನು ತಯಾರಿಸುವ ಸ್ಥಳ.

ಕಾರಣ (ನಾ). ೧. ನಿಮಿತ್ತ ; ಹೇತು. ೨. ಉದ್ದೇಶ. ೩. ಆರಾಧ್ಯದೇವತೆ. ೪. ಅಗತ್ಯ ; ಅವಶ್ಯಕತೆ. ೫. ಒಂದು ಮಹತ್ತರ ಕಾರ್ಯಕ್ಕಾಗಿ ಅವತಾರಮಾಡಿದ ಜೀವ. (ಅ). ೬. ಆದುದರಿಂದ; ತತ್ಪರಿಣಾಮವಾಗಿ. ೭. ಸಲುವಾಗಿ ; ಓಸ್ಕರ. ~ಅಂತರ = ಬೇರೆಯ ಕಾರಣ ; ವಿಶಿಷ್ಟವಾದ ಕಾರಣ. ~ಪುರುಷ = ೧. ಎಲ್ಲಕ್ಕೂ ಮೂಲಕಾರಣನಾದ ಪುರುಷ; ಪರಬ್ರಹ್ಮ. ೨. ಪ್ರೇರಕನಾದ ವ್ಯಕ್ತಿ. ೩. ಅವತಾರ ಪುರುಷ.

ಕಾರಣವ (ನಾ). ಮನೆತನದ ಮುಖ್ಯಸ್ಥ ; ಪೂರ್ವಜ.

ಕಾರಣಿಕ (ನಾ). ೧. ವಿಮರ್ಶಕ ; ಪರೀಕ್ಷಕ. ೨. ಅವತಾರಪುರುಷ. ೩. ಗುರು. ೪. ಕುತಂತ್ರಿ. ೫. ಪವಾಡ ; ಅದ್ಭುತ ಕೃತ್ಯ.

ಕಾರಣೆ (ನಾ). ಗೋಡೆಯ ಕೆಳಭಾಗದಲ್ಲಿ ಬಳಿಯುವ ಬಣ್ಣದ ಗೆರೆ ; ಮೇಜುಕಟ್ಟು.

ಕಾರಪಕ (ನಾ). ದೇವಾಲಯದ ಕಟ್ಟಡ ಮೊದಲಾದುವುಗಳನ್ನು ಮಾಡಿಸುವವನು ; ಕಾರ್ಯನಿರ್ವಾಹಕ.

ಕಾರಭಾರ (ನಾ). ಆಡಳಿತ; ಕಾರ್ಯಭಾರ.
ಕಾರಭಾರಿ (ನಾ). ೧. ಆಡಳಿತಗಾರ. ೨. ಅಧಿಕ ಪ್ರಸಂಗಿ; ಉಪದ್ವ್ಯಾಪಿ.
ಕಾರಮಣಿ (ನಾ). ಅಲಸಂದೆ; ತಡಗುಣಿ.
ಕಾರಸ್ಥಾನ (ನಾ). ೧. ಕೆಲಸ ನಡೆಯುವ ಸ್ಥಳ. ೨. ಒಳಸಂಚು; ಪಿತೂರಿ.
ಕಾರಾಗಾರ (ನಾ). ೧. ಕಾರ್ಯಾಲಯ; ಕಾರಖಾನೆ. ೨. ಸೆರೆಮನೆ; ಜೈಲು.
ಕಾರಾಗೃಹ (ನಾ). ೧. ಸೆರೆಮನೆ; ಜೈಲು. ೨. ಸೆರೆಮನೆವಾಸ; ಬಂಧನ.
ಕಾರಿ (ನಾ). ೧. ಕರಿಯ ಹೋರಿ. ೨. ಜವುಗು ಭೂಮಿ; ಚೌಳುನೆಲ. ೩. ಆಖಾತ; ಕೊಲ್ಲಿ. ೪. ಹೊಳೆ ದಾಟುವ ಸ್ಥಳ; ಹಾಯ್ಗಡ.
ಕಾರಿಕೆ (ನಾ). ೧. ಮಾಡುವವಳು; ವರ್ತಿಸುವವಳು. ೨. ನರ್ತಕಿ; ನಟಿ. ೩. ಹಿಂಸೆ. ೪. ಶಾಸ್ತ್ರವಿಚಾರವನ್ನು ವಿವರಿಸುವ ಶ್ಲೋಕ. ೫. ಕಸಬು; ಕೆಲಸ.
ಕಾರಿಗೆ (ನಾ). ಕಂದಕ; ಅಗಳ್ತೆ.
ಕಾರೀಷ (ನಾ). ಬೆರಣಿಯ ರಾಶಿ.
ಕಾರು ೧. = ಕಾಱ್. ೨. = ಕಾರ್. (ನಾ). ೩. ಶಿಲ್ಪಿ; ಕುಶಲಕರ್ಮಿ.
ಕಾರುಕ (ನಾ). ಶಿಲ್ಪಿ; ಕೈಕೆಲಸಗಾರ.
ಕಾರುಣ್ಯ (ನಾ). ದಯೆ; ಮರುಕ.
ಕಾರೆ (ನಾ). ೧. ಒಂದು ಜಾತಿಯ ಹಣ್ಣು ಬಿಡುವ ಮುಳ್ಳುಗಿಡ. ೨. ಮರಕುಟಿಗನ ಹಕ್ಕಿ. ೩. ಸೆರೆ; ಸಂಕೋಲೆ.
ಕಾಱ್(ರ್,ರು,ಱು) (ಕ್ರಿ). ಕಕ್ಕು; ವಾಂತಿ ಮಾಡು. ~ಇಕೆ = ವಾಂತಿ; ಓಕರಿಕೆ.
ಕಾಱ(ರ) (ಪ್ರ). ಒಂದು ತದ್ಧಿತ ಪ್ರತ್ಯಯ.
ಕಾಱೆ(ರೆ) (ನಾ). ಕೊರಳಲ್ಲಿ ಧರಿಸುವ ಒಂದು ಆಭರಣ; ಕೊರಳಬಂದಿ.
ಕಾರ್ಖಾನನೀಸ (ನಾ). ಸರಕಾರಿ ಧಾನ್ಯ ಸಂಗ್ರಹಾಲಯಗಳನ್ನು ನೋಡಿಕೊಳ್ಳುವ ಅಧಿಕಾರಿ; ಉಗ್ರಾಣಾಧಿಕಾರಿ.
ಕಾರ್ಖಾನೆ = ಕಾರಖಾನೆ.
ಕಾರ್ತಸ್ವರ (ನಾ). ಚಿನ್ನ; ಬಂಗಾರ.
ಕಾರ್ತಾಂತಿಕ (ನಾ). ಜೋಯಿಸ; ಭವಿಷ್ಯ ಹೇಳುವವನು.
ಕಾರ್ತಿ (ನಾ). ಮಳೆಗಾಲ; ಕಾರುತಿಂಗಳು.
ಕಾರ್ತಿಕ (ನಾ). ೧. ಚಾಂದ್ರಮಾನ ವರ್ಷದಲ್ಲಿ ಎಂಟನೆಯ ತಿಂಗಳು. ೨. = ಕಾರ್ತಿಕೇಯ.
ಕಾರ್ತಿಕೇಯ (ನಾ). ಕೃತ್ತಿಕೆಯರಿಂದ ಪೋಷಿಸಲ್ಪಟ್ಟವನು; ಷಣ್ಮುಖ.
ಕಾರ್ಪಣ್ಯ (ನಾ). ೧. ಬಡತನ; ದಾರಿದ್ರ್ಯ. ೨. ದೈನ್ಯ; ದೀನಸ್ಥಿತಿ. ೩. ದಯೆ; ಮರುಕ. ೪. ಜಿಪುಣತನ; ಕೃಪಣತೆ.
ಕಾರ್ಪಾಸ (ನಾ). ೧. ಹತ್ತಿ. ೨. ಹತ್ತಿಯ ಬಟ್ಟೆ. (ಗು). ೩. ಹತ್ತಿಯಿಂದ ಮಾಡಿದ. ~ಚಾಪ = ಅರಳೆ ಹಿಂಜುವ ಬಿಲ್ಲು. ~ವಿವರಣ = ಅರಳೆ ಹಿಂಜುವುದು.
ಕಾರ್ಮಣ (ನಾ). ೧. ಕೆಲಸವನ್ನು ಮುಗಿಸುವುದು. ೨. ಮಂತ್ರತಂತ್ರಗಳ ಮೂಲಕ ವಶಮಾಡಿಕೊಳ್ಳುವಿಕೆ. ೩. ಮಾಯಾವಿದ್ಯೆ; ಕಣ್ಕಟ್ಟು. (ಗು). ೪. ಕ್ರಿಯೆಗೆ ಸಂಬಂಧಿಸಿದ.
ಕಾರ್ಮಿಕ (ನಾ). ೧. ಕೆಲಸ ಮಾಡುವವನು; ಕರ್ಮಚಾರಿ; ಕಾಮಗಾರ. (ಗು). ೨. ಕ್ರಿಯಾತ್ಮಕವಾದ; ಕರ್ಮಸಂಬಂಧವಾದ.
ಕಾರ್ಮುಕ (ನಾ). ಬಿಲ್ಲು; ಧನುಸ್ಸು.
ಕಾರ್ಯ (ನಾ). ೧. ಮಾಡಬೇಕಾದುದು; ಕರ್ತವ್ಯ; ಕೆಲಸ. ೨. ಸಮಾರಂಭ; ಆಚರಣೆ. ೩. ಕಾರಣದ ಫಲ; ಪರಿಣಾಮ. (ಗು). ೪. ಆಚರಿಸಲು ಯೋಗ್ಯವಾದ. ~ಅಂಗ = ಆಡಳಿತ ಶಾಖೆ. ~ಕಾರಣಿಕೆ = ಸೇವೆ ಮೊದಲಾದ ಆಚರಣೆಗಳ ಮಹಿಮೆ. ~ಕ್ರಮ = ೧. ಗೊತ್ತುಪಡಿಸಿದ ಕಾರ್ಯಗಳ ಪರಿವಿಡಿ. ೨. ಕಾರ್ಯಗಳ ವೇಳಾಪತ್ರಿಕೆ. ~ವಾಸಿ = ೧. ಕಾರ್ಯಸಾಧಕ; ಕಾರ್ಯದ

ಉದ್ದೇಶವುಳ್ಳ ವ್ಯಕ್ತಿ. ೨.ಕೆಲಸದ ಒಳ್ಳೆಯ ಸ್ಥಿತಿ. ೩. ಕಾರ್ಯಸಾಧನೆ.

ಕಾರ್ಯಕಾರಿ (ಗು). ೧. ಆಚರಣೆಯಲ್ಲಿ ಬರುವಂತಹ. ೨.ಕೆಲಸವನ್ನು ನಿರ್ವಹಿಸುವ. ~ಮಂಡಲಿ=ಕಾರ್ಯನಿರ್ವಾಹಕ ಸಮಿತಿ.

ಕಾರ್ಯದರ್ಶಿ (ನಾ). ಸಂಘ, ಸಂಸ್ಥೆಯ ಕಾರ್ಯಗಳನ್ನು ನೋಡಿಕೊಳ್ಳುವ ವ್ಯಕ್ತಿ.

ಕಾರ್ಷ್ಣಿ (ನಾ). ೧. ಕೃಷ್ಣನ ಮಗ. ೨. ಅರ್ಜುನನ ಮಗ; ಬಭ್ರುವಾಹನ.

ಕಾರ್ಷ್ಣ್ಯ (ನಾ). ಕರಿಯ ಬಣ್ಣ; ಕಪ್ಪು.

ಕಾಲ್(ಲು) (ನಾ). ೧. ಮೊಣಕಾಲಿನಿಂದ ಪಾದದವರೆಗಿನ ಭಾಗ. ೨. ಅಡಿ; ಪಾದ. ೩. ಮಂಚ, ಕುರ್ಚಿ ಮುಂತಾದುವುಗಳನ್ನು ನಿಲ್ಲಿಸಲು ಜೋಡಿಸುವ ಕೋಲು. ೪. ಜಡೆ ಹೆಣೆಯುವಾಗ ಮಾಡಿಕೊಳ್ಳುವ ಕೂದಲಿನ ಭಾಗ. ೫. ಕೆರೆ, ನದಿ ಮುಂತಾದುವುಗಳಿಂದ ನೀರು ಹಾಯಿಸಲು ಮಾಡಿದ ನಾಲೆ; ಕಾಲುವೆ. ೬. ನಾಲ್ಕನೆಯ ಒಂದು ಭಾಗ. ~ಅಂಗಿ=ಇಜಾರು; ಷರಾಯಿ. ~ಅಂದುಗೆ =ಕಾಲಿನಲ್ಲಿ ಧರಿಸುವ ಕಡಗ; ನೂಪುರ. ~ಅಟ್ಟೆ=ಕಾಲುಮಣೆ; ಚಿಕ್ಕ ಗಡಗಂಚಿ. ~ಆಟ= ೧. ತಿರುಗಾಟ; ಸಂಚಾರ. ೨. ನರ್ತನ; ಕುಣಿತ. ೩. ವೇಗದ ಗತಿ; ರಭಸ. ೪. ಪ್ರಹಾರ; ಹೊಡೆತ. ~ಊರು = ಚಿಕ್ಕ ಹಳ್ಳಿ; ಕುಗ್ರಾಮ. ~ಊಱು(ರು) = ಸ್ಥಿರವಾಗು; ನೆಲೆಯಾಗು. ~ಗಾಡಿ=ಬೈಸಿಕಲ್ಲು. ~ದೀಪ = ಎತ್ತರವಾದ ಪೀಠವನ್ನುಳ್ಳ ದೀಪ; ಸಮೆ. ~ದೂಳಿ = ೧. ಕಾಲುಗಳು ಎಬ್ಬಿಸಿದ ದೂಳು. ೨. ಊಟ ಮಾಡುವಾಗ ಬೇರೆಯವರ ಕಾಲುದೂಳಿನಿಂದ ಬರುವ ಅಸ್ವಸ್ಥತೆ. ೩. ಹೆರವರ ಕಣ್ಣಿನಂಜಿನಿಂದಾಗುವ (ಮಕ್ಕಳ) ಹೊಟ್ಟೆನೋವು. ೪. ಪಾದಧೂಳಿ; ಚರಣ ರಜ. ~ನಡೆ = ೧. ಕಾಲು ನಡಗೆ. ೨. ದನಕರು, ಕುರಿ ಮೊದಲಾದ ಚತುಷ್ಪಾದ ಪ್ರಾಣಿವರ್ಗ. ~ಪ(ವ)ಳ್ಳಿ = ಒಂದು ಊರಿಗೆ ಸೇರಿಕೊಂಡಿರುವ ಚಿಕ್ಕ ಹಳ್ಳಿ; ಉಪಗ್ರಾಮ. ~ಪಾ(ಹಾ)ರು = ಆಧಾರ ತಪ್ಪು; ಗತಿ ಇಲ್ಲದಾಗು. ~ಬ(ವ)ಟ್ಟಿ(ಳಿ) =ಸಾರಿಸುವಿಕೆ; ಸಾರಣೆ. ~ಮಡಿ = ೧. ಕಾಲುಗಳನ್ನು ಮಡಿಚು. ೨.ಮೂತ್ರವಿಸರ್ಜನೆ ಮಾಡು. ೩. ಮೂತ್ರ ವಿಸರ್ಜನೆ. ೪. ಕಾಲುಗಳನ್ನು ಮಡಿಸುವಿಕೆ. ೫.ಪಾದರಕ್ಷೆಯ ತಳಭಾಗ; ಅಟ್ಟೆ. ~ಸುತ್ತು = ೧. ಕಾಲುಂಗುರ. ೨. = ಕಾಲ್ಪೂಳಿ.

ಕಾಲ(ಳ) (ನಾ). ೧. ಸಮಯ; ವೇಳೆ. ೨. ವರ್ಷ; ಸಂವತ್ಸರ. ೩. ಸಂದರ್ಭ; ಸನ್ನಿವೇಶ. ೪. ಸಾವು; ಮರಣ. ೫.ಯಮ. ೬. ಬೆಂಕಿಯ ಏಳು ಜ್ವಾಲೆಗಳಲ್ಲಿ ಒಂದು. ೭. ಪ್ರಳಯ. ೮. ಕಪ್ಪುಬಣ್ಣ. ೯. ಶಿವ. ೧೦. ಕರಿಯ ನಾಗರಹಾವು. (ಗು). ೧೧. ಕಪ್ಪುಬಣ್ಣದ. ೧೨. ಪೀಡಿಸುವ. ೧೩. ಭಯಂಕರವಾದ. ~ಅಂತಕ =೧. ಮೃತ್ಯುದೇವತೆ; ಯಮ. ೨. ಶಿವ. ~ಉಚಿತ = ೧. ಯೋಗ್ಯಸಮಯ. ೨. ಕಾಲಕ್ಕೆ ಉಚಿತವಾದದ್ದು. ೩. ಸಮಯಕ್ಕೆ ತಕ್ಕ. ~(ಂ)ಕೆ(ಗೆ)ಯ್ = ಕಾಲವಾಗು; ಸಾಯು. ~ಕಂಠ =೧. ಶಿವ; ನೀಲಕಂಠ. ೨. ಗುಬ್ಬಿ; ಗುಬ್ಬಚ್ಚಿ. ~ಕೂಟ=ಒಂದು ಮಹಾವಿಷ; ಭಯಂಕರ ವಿಷ. ~ಕ್ಷೇಪ = ೧. ತಡಮಾಡುವುದು. ೨. ಕಾಲ ಕಳೆಯುವುದು. ೩. ಹರಿಕಥೆ; ಭಗವತ್ಕಥೆ. ~ಖಂಡ = ೧. ಪಿತ್ತಕೋಶ; ಯಕೃತ್ತು. ೨. ಕಾಲದ ವಿಭಾಗ; ಕಾಲಾವಧಿ. ~ಧರ್ಮ = ೧. ಕಾಲಕ್ಕೆ ಅನುಗುಣವಾದ ನಡವಳಿಕೆ. ೨. ವಸಂತ ಮೊದಲಾದ ಋತುಗಳ ಸ್ವಭಾವ. ೩. ಮರಣ; ಮೃತ್ಯು. ~ಮುಖ = ೧. ಮುಸು; ಕಪ್ಪು ಮುಖದ

ಕಪಿ. ೨. ಕರಿಯ ಅಗುರು; ಕಾಲಾಗುರು. ೩. ಯಮುನ ಮುಖ. ೪. ಕಪ್ಪು ಮುಖವುಳ್ಳವನು. ~ಸಂತೆ = ಕಳ್ಳಪೇಟೆ. ~ಸರಣಿ = ಉರಿಯ ಮಾಲೆ; ಜ್ವಾಲಾಮಾಲೆ. ~ಸರ್ಪ = ಕೃಷ್ಣಸರ್ಪ.

**ಕಾಲಾ(ಳಾ)ಪಾನಿ** (ನಾ). ಕರಿನೀರಿನ ಶಿಕ್ಷೆ; ಗಡೀಪಾರು.

**ಕಾಲಾ(ಳಾ)ಯಸ** (ನಾ). ಕಪ್ಪುಲೋಹ; ಕಬ್ಬಿಣ.

**ಕಾಲಿ(ಳಿ)** (ನಾ). ೧. ದುರ್ಗೆ; ಪಾರ್ವತಿ. ೨. ಕಪ್ಪು ಬಣ್ಣದವಳು; ಕರಿಪಿ. ೩. ರಕ್ತಪಾನದಲ್ಲಿ ಆಸಕ್ತಿಯಿರುವ ಒಬ್ಬ ದೇವತೆ; ರಣಮಾರಿ.

**ಕಾಲಿ(ಳಿ)ಂಗ** (ನಾ). ೧. ಕೃಷ್ಣ ಸರ್ಪ. ೨. ಕಲ್ಲಂಗಡಿ ಹಣ್ಣು. ~ಮರ್ದನ = ಕಾಳಿಂಗ ಸರ್ಪವನ್ನು ನಾಶಮಾಡಿದವನು; ಕೃಷ್ಣ.

**ಕಾಲಿ(ಳಿ)ಂದಿ** (ನಾ). ಯಮುನಾ ನದಿ. ~ವೈರಿ = ಬಲರಾಮ.

**ಕಾಲಿಕ** (ಗು). ಕಾಲಕ್ಕೆ ಸಂಬಂಧಿಸಿದ.

**ಕಾಲಿ(ಳಿ)ಕೆ** (ನಾ). ೧. ಕಪ್ಪು; ಕತ್ತಲೆ. ೨. ಮಾಲಿನ್ಯ; ಕುಂದು. ೩. ಮೋಡಗಳ ದಟ್ಟಣೆ. ೪. ತುಕ್ಕು; ಕಿಲುಬು. ೫. ದುರ್ಗೆ; ಪಾರ್ವತಿ.

**ಕಾಲಿಗೆ** (ನಾ). ಸರದಿ ಬೆಳೆ; ಆವರ್ತನ ಪೈರು.

**ಕಾಲುರಿಚ** (ನಾ). ೧. ಹಳ್ಳಿಗ; ಗ್ರಾಮೀಣ. ೨. ದಡ್ಡ; ಹೆಡ್ಡ.

**ಕಾಲುವೆ** = ಕಾಲ್ವಾಯ್.

**ಕಾಲೆ(ಳೆ)ಯ** (ನಾ). ೧. ಕೇಸರಿ; ಕುಂಕುಮ ಕೇಸರಿ. ೨. ರಾಕ್ಷಸವರ್ಗ. ೩. ಕುಂಕುಮ. ೪. ಕಲಿಯುಗಕ್ಕೆ ಸಂಬಂಧಿಸಿದುದು.

**ಕಾಲ್ಪನಿಕ** (ನಾ). ೧. ಹೊಸದಾಗಿ ಕಲ್ಪಿಸುವವನು. (ಗು). ೨. ಕಲ್ಪಿತವಾದ; ಸತ್ಯವಲ್ಲದ.

**ಕಾಲ್ಯ** (ನಾ). ೧. ಬೆಳಗು; ಪ್ರಾತಃಕಾಲ. ೨. ಸಂಧ್ಯಾವಂದನೆ ಮೊದಲಾದ ಕಾರ್ಯ. (ಗು). ೩. ಸಮಯಕ್ಕೆ ಸರಿಯಾದ. ೪. ಹಿತಕರವಾದ; ಪ್ರಿಯವಾದ. ೫. ಬೆಳಗಿನ.

**ಕಾಲ್ವಾಯ್** (ನಾ). ನೀರು ಹೋಗಲು ಮಾಡಿದ ಹರಿ, –ತೋಡು.

**ಕಾವ** (ನಾ). ಕಾಮ; ಮನ್ಮಥ. ~ಕ(ಗ)ಲಹ = ಪ್ರೇಮಕಲಹ.

**ಕಾವಂಚಿ** (ನಾ). ೧. ಒಂದು ಬಗೆಯ ಹುಲ್ಲು; ಕಾಚೀಹುಲ್ಲು. ೨. ಒಂದು ಬಗೆಯ ಬದನೆ.

**ಕಾವಡಿ** (ನಾ). ೧. ಹೆಗಲಮೇಲೆ ಹೊತ್ತು ತರುವ ಬಿದಿರಿನ ದಬ್ಬೆ; ಅಡ್ಡೆ. ೨. ತೂಗುಯ್ಯಾಲೆ. ~ಕಾ(ಗಾ)ಱ(ರ) = ಕಾವಡಿ ಹೊರುವವನು; ಕಂಬಿಕಾರ.

**ಕಾವಣ** (ನಾ). ೧. ಹಂದರ; ಚಪ್ಪರ. ೨. ತೋಪು. ೩. ಹೆಣಿಗೆ. ೪. = ಕಾವಳ.

**ಕಾವರ** (ನಾ). ೧. ಸೊಕ್ಕು; ಮದ. ೨. ಕೋಪ; ಕ್ರೋಧ. ೩. ಉದ್ವೇಗ; ರಭಸ. ೪. ಉದ್ವೇಗವುಳ್ಳವನು. ೫. ಸಂಭ್ರಮ; ಸಡಗರ.

**ಕಾವಲ್(ಲು)** (ನಾ). ೧. ಕಾಪು; ರಕ್ಷಣೆ. ೨. ಕಾಯುವವನು; ಕಾಪಿನ ಆಳು. ೩. ದನಕರುಗಳನ್ನು ಮೇಯಿಸಲು ಮೀಸಲಾಗಿರುವ ಸ್ಥಳ. ೪. ಕಾವಲಿಟ್ಟ ಸ್ಥಳ; ಸೆರೆಮನೆ. ೫. ಒಂದು ಬಗೆಯ ಸಸ್ಯ. ~ಕಟ್ಟೆ = ಸುಂಕದ ಕಟ್ಟೆ; ಉಕ್ಕಡ.

**ಕಾವಲಿ** (ನಾ). ೧. ಉಪ್ಪಿನ ಮಾಳ. ೨. ಬಾಣಲೆ; ಹುರಿಯುವ ಹೆಂಚು. ೩. ಕಾಲುವೆ; ತೋಡು.

**ಕಾವಳ** (ನಾ). ೧. ಕತ್ತಲೆ; ಮಬ್ಬು; ಅಂಧಕಾರ. ೨. ಮಂಜು.

**ಕಾವಿ** (ನಾ). ೧. ಕೆಂಪುಬಣ್ಣದ ಮಣ್ಣು. ೨. ಒಂದು ಬಗೆಯ ಬಣ್ಣ; ಕೇಸರಿಬಣ್ಣ. ೩. ಕಾವಿಬಣ್ಣದ ಬಟ್ಟೆ; ಕಾಷಾಯ ವಸ್ತ್ರ.

ಕಾವು ೧. = ಕಾಯ್ದು. ೨. ದಂಟು; ದೇಟು. ೩. ಹಿಡಿಕೆ; ಹಿಡಿ. ೪. ಅಂಚು; ದಡ. ~ಪೆಟ್ಟಿಗೆ=ಕೃತಕವಾದ ಶಾಖೋಪಕರಣ.

ಕಾವ್ಯ (ನಾ). ೧. ಕಬ್ಬ; ಕವಿತೆ. ೨. ಶುಕ್ರ. ~ಕಂಜಾಸನ=ಕಾವ್ಯಸೃಷ್ಟಿಯಲ್ಲಿ ಬ್ರಹ್ಮ; ಕವಿಶ್ರೇಷ್ಠ. ~ನಾಮ = ಕವಿಯು ಕಾವ್ಯ ರಚಿಸುವಾಗ ಇಟ್ಟುಕೊಳ್ಳುವ ಹೆಸರು. ~ಮೀಮಾಂಸೆ = ಕಾವ್ಯದ ಸ್ವರೂಪ, ಲಕ್ಷಣಗಳನ್ನು ವಿವರಿಸುವ ಶಾಸ್ತ್ರ.

ಕಾಶ (ನಾ). ೧. ಕಾಂತಿ; ಪ್ರಕಾಶ. ೨. ಬಿಳಿಯ ಹೂವು ಬಿಡುವ ಒಂದು ಜಾತಿಯ ಹುಲ್ಲು; ಜೊಂಡು ಹುಲ್ಲು.

ಕಾಶಿ (ನಾ). ೧. ಗಂಗಾತೀರದಲ್ಲಿರುವ ಒಂದು ಪ್ರಸಿದ್ಧ ತೀರ್ಥ; ವಾರಣಾಶಿ. (ಗು). ೨. ಹೊಳೆಯುವ; ಪ್ರಕಾಶಿಸುವ. ೩. ಕಾಣುವ; ತೋರುವ. ~ಕುಪ್ಪೆ = ಕಾಶಿಯಿಂದ ಗಂಗಾಜಲವನ್ನು ತರುವುದಕ್ಕಾಗಿ ಬಳಸುವ ಗಿಂಡಿ.

ಕಾಶೆ (ನಾ). ೧. ಜೊಂಡುಹುಲ್ಲು. ೨. = ಕಾಸೆ.

ಕಾಶ್ಮೀರ (ನಾ). ೧. ನೆಲದಾವರೆಗೆಡ್ಡೆ. ೨. ಕೇಸರಿ; ಕುಂಕುಮಕೇಸರಿ. ೩. ಕುಂಕುಮ. ~ರಾಗ = ಕುಂಕುಮದ ಲೇಪ.

ಕಾಶ್ಯಪ (ನಾ). ೧. ಕಶ್ಯಪಗೋತ್ರದಲ್ಲಿ ಹುಟ್ಟಿದ ಒಬ್ಬ ಋಷಿ. (ಗು). ೨. ಕಶ್ಯಪನಿಗೆ ಸಂಬಂಧಿಸಿದ.

ಕಾಶ್ಯಪಿ (ನಾ). ೧. ಕಶ್ಯಪನ ಮಗ. ೨. ಅರುಣ. ೩. ಗರುಡ. ೪. ಭೂಮಿ; ಪೃಥ್ವಿ.

ಕಾಷಾಯ (ನಾ). ೧. ಕಾವಿಬಟ್ಟೆ. (ಗು). ೨. ಕಾವಿಬಣ್ಣವುಳ್ಳ.

ಕಾಷ್ಠ (ನಾ). ೧. ಕಟ್ಟಿಗೆ; ಸೌದೆ. ೨. ಚಿಲಕ; ಅಗುಳಿ. ೩. ದಡ್ಡ; ಮೂರ್ಖ. ೪. ತೆಳ್ಳಗಾಗಿರುವಿಕೆ; ತೆಳುವು. ~ವ್ಯಸನ = ಒಣತರಲೆ; ನಿರರ್ಥಕವಾದ ಚಿಂತೆ.

ಕಾಷ್ಠೆ (ನಾ). ೧. ಗುರಿ; ಧ್ಯೇಯ. ೨. ತುತ್ತತುದಿ. ೩. ದಿಕ್ಕು; ದೆಸೆ. ೪. ಎಲ್ಲೆ; ಗಡಿ. ೫. ಹದಿನೆಂಟು ಸಲ ರೆಪ್ಪೆ ಬಡಿಯುವಷ್ಟು ಕಾಲ.

ಕಾಸ (ನಾ). ೧. ಕೆಮ್ಮು; ಕೆಮ್ಮಲು. ೨. ಉಬ್ಬಸರೋಗ; ದಮ್ಮುರೋಗ. ೩. ಅರಳುವಿಕೆ; ವಿಕಾಸ. ೪. ಕಾಂತಿ. ೫. ಕಾಣುವಿಕೆ; ಪ್ರಕಟನ.

ಕಾಸಟ (ನಾ). ಒಂದು ಬಗೆಯ ಬಟ್ಟೆ; ಹತ್ತಿಯ ಬಟ್ಟೆ.

ಕಾಸಡೆ (ನಾ). ಹೀನವಾದುದು; ತುಚ್ಛವಾದುದು.

ಕಾಸದಾರ (ನಾ). ೧. ಕುದುರೆಯ ಸೇವಕ. ೨. ಅಧೀನ; ಗುಲಾಮ.

ಕಾಸರ (ನಾ). ೧. ಕೋಣ. ೨. ಕಾಡು; ಅರಣ್ಯ.

ಕಾಸರು (ನಾ). ಒಂದು ಜಾತಿಯ ವಿಷವೃಕ್ಷ ಮತ್ತು ಹಣ್ಣು.

ಕಾಸಾರ (ನಾ). ೧. ತಾಮ್ರ, ಹಿತ್ತಾಳೆಯ ಪಾತ್ರೆಗಳನ್ನು ಮಾಡುವವನು; ಚೋಗಾರ. ೨. ಕೊಳ; ಸರೋವರ.

ಕಾಸೀಸ (ನಾ). ಒಂದು ಬಗೆಯ ಲವಣ; ಅನ್ನಭೇದಿ.

ಕಾಸು (ಕ್ರಿ). ೧. ಸುಡು; ಬಿಸಿಮಾಡು. (ನಾ). ೨. ತಾಮ್ರದ ಸಣ್ಣ ನಾಣ್ಯ; ದಮ್ಮಡಿ. ೩. ದುಡ್ಡು; ಹಣ. ೪. ನೆಲವು; ಕಾವಡಿ. ೫. ಬರ್ಜಿ; ಭಲ್ಲೆ. ~ವೀಸ = ಒಂದು ಕಾಸು ಹಾಗೂ ಅದರ ಎಂಟನೆಯ ಒಂದು ಭಾಗ; ತೀರ ಅಲ್ಪವಾದ ಹಣ.

ಕಾಸೆ (ನಾ). ೧. ಕಚ್ಚೆಹಾಕಿ ಉಟ್ಟುಕೊಳ್ಳುವ ವಸ್ತ್ರ. ೨. ನಡುಕಟ್ಟು; ಸೊಂಟಕ್ಕೆ ಸುತ್ತುವ ವಸ್ತ್ರ. ೩. ಕಾವಿಯ ಬಟ್ಟೆ. ೪. ಕಾಷಾಯ ಬಣ್ಣ; ಕೆಂಪು ಬಣ್ಣ.

ಕಾಹಲ(ಳ) (ನಾ). ಒಂದು ವಾದ್ಯವಿಶೇಷ; ಕಹಳೆ.

ಕಾಹಲೆ(ಳೆ) ೧. = ಕಾಹಲ. ೨. ದೊಡ್ಡ ಭೇರಿ; ನಗಾರಿ.

ಕಾಹು = ಕಾಪು.

ಕಾಹುರ = ಕಾವರ.

ಕಾಳಗ = ಕಾಳೆಗ.

ಕಾಳಜಿ (ನಾ). ೧. ಗೊಡವೆ; ಚಿಂತೆ. ೨. ಜೋಪಾನ; ಜಾಗರೂಕತೆ. ೩. ಆರೈಕೆ.

ಕಾಳಸ = ಕಾಳಸೆ.

ಕಾಳಸೆ (ನಾ). ೧. ಬೆಸುಗೆ; ಅಂಟಿಕೊಳ್ಳುವಿಕೆ. ೨. ನಿರ್ಭರತೆ; ಗಾಢತ್ವ. ೩. ಕೀಲಜೆ; ಜೋಡಣೆ.

ಕಾಳಾಂಜಿ (ನಾ). ೧. ಪನ್ನೀರಿನ ಪಾತ್ರೆ. ೨. ಉಗುಳುವ ಪಾತ್ರೆ; ಪೀಕದಾನಿ.

ಕಾಳಾಮುಖ (ನಾ). ಶೈವಧರ್ಮದ ಒಂದು ಪಂಥ ಮತ್ತು ಆ ಪಂಥಕ್ಕೆ ಸೇರಿದವನು.

ಕಾಳಿಜ = ಕಲಿಜ.

ಕಾಳೆಗ (ನಾ). ಯುದ್ಧ. ~ಪ(ವ)ಱೆ(ರೆ) = ರಣಭೇರಿ. ~ಪ(ವ)ಲಗೆ = ಗುರಾಣಿ.

ಕಾಱ್(ೞ್,ಳು,ಱು) (ನಾ). ೧. ಕೆಟ್ಟದ್ದು; ಕೀಳು. ೨. ದಿನಸಿ; ಧಾನ್ಯ. ೩. ಕಣ; ಹಳುಕು. ೪. ಕರಿಯ ಬಣ್ಣ; ಕಪ್ಪು. ೫. =ಕಾಡು. ~ಆಗು = ೧. ಕೆಟ್ಟುಹೋಗು; ಹಾಳಾಗು. ೨. ದುಷ್ಟವಾಗು; ನೀಚವಾಗು. ~ಕ(ಗ)ಬ್ಬ = ಕೀಳುತರಗತಿಯ ಕಾವ್ಯ. ~ಕಿಚ್ಚು = ಕಾಡಿನ ಬೆಂಕಿ; ದಾವಾನಲ. ~ಕೆ(ಗೆ)ಡೆ = ಗೊಡ್ಡುಹರಟೆ ಹರಟು; ವೃಥಾ ಮಾತನಾಡು. ~ಪುರ = ಕಾಡಿನ ಪ್ರವಾಹ; ಕಾಡಿನ ತೊರೆ. ~ಮಿಗ = ೧. ಕಾಡಿನಲ್ಲಿರುವ ಮೃಗ. ೨. ಕಾಡು ಜಿಂಕೆ.



# ಕಿ

ಕಿಂಕರ (ನಾ). ೧. ಚಿಂತೆ; ಅಸಮಾಧಾನ. ೨. ಆಳು; ಸೇವಕ.

ಕಿಂಕರತೆ (ನಾ). ೧. ದಾಸ್ಯಭಾವ; ಆಳಾಗಿರುವಿಕೆ. ೨. ಕೊರತೆ; ದೈನ್ಯ.

ಕಿಂಕಾಪು (ನಾ). ಚಿನ್ನ ಅಥವಾ ಬೆಳ್ಳಿಯ ಎಳೆಗಳನ್ನು ಸೇರಿಸಿ ನೆಯ್ದ ರೇಷ್ಮೆಬಟ್ಟೆ.

ಕಿಂಕಿಣಿ (ನಾ). ೧. ಕಿರುಗೆಜ್ಜೆ; ಕಿರುಗಂಟೆ. ೨. ಕಿಣಿಕಿಣಿ ಎಂಬ ನಾದ.

ಕಿಂಕಿರಾತ (ನಾ). ೧. ಅಶೋಕವೃಕ್ಷ. ೨. ಕೆಂಪುಗೋರಂಟಿ.

ಕಿಂಕಿಲ (ನಾ). ೧. ದೈನ್ಯ; ನಮ್ರತೆ. ೨. ದೈನ್ಯವುಳ್ಳವನು.

ಕಿಂಕುರ್ವಾಣ (ನಾ). ೧. ಸೇವಾವೃತ್ತಿ. ೨. ದೈನ್ಯ; ಅಸಹಾಯತೆ. ೩. ಏನು ಮಾಡಬೇಕೆಂದು ತೋಚದವನು.

ಕಿಂಕೃತಿ (ನಾ). ಅಳಲು; ಸಂಕಟ.

ಕಿಂಕೊಱೆ(ಳೆ) (ನಾ). ೧. ಕೆಸರು; ರಾಡಿ. ೨. ಅಳಿವು; ನಾಶ. ೩. ಹಿಂಸೆ; ತೊಂದರೆ.

ಕಿಂಚಿತ (ನಾ). ೧. ಕೊಂಚ; ಸ್ವಲ್ಪ. (ಗು). ೨. ಸ್ವಲ್ಪವಾದ; ಕೊಂಚವಾದ.

ಕಿಂಚಿತ್ತು = ಕಿಂಚಿತ.

ಕಿಂಚುಲ(ಳ)ಕ (ನಾ). ೧. ಮಣ್ಣಿನಲ್ಲಿ ಅಥವಾ ಕೆಸರಿನಲ್ಲಿ ಇರುವ ಒಂದುಹುಳು; ಎರೆಹುಳು. ೨. ಒಂದು ಜಲಚರ.

ಕಿಂಜಲ್ಕ(ಲ್ಕ) (ನಾ). ಹೂವಿನ ಕುಸುರು.

ಕಿಂಡಿ (ನಾ). ತೂತು ; ಕಂಡಿ ; ರಂಧ್ರ.

ಕಿಂದರಿ (ನಾ). ಒಂದು ಬಗೆಯ ವಾದ್ಯ.

ಕಿಂಪಾಕ (ನಾ). ೧. ಒಂದು ಬಗೆಯ ವಿಷದ ಹಣ್ಣುಗಳನ್ನು ಬಿಡುವ ಮರ; ಕಾಂಜೀರ. (ಗು). ೨. ಪಕ್ವವಲ್ಲದ ; ಬಲಿಯದ.

ಕಿಂಪುರುಷ (ನಾ). ಕುದುರೆಯ ಮುಖ, ಮನುಷ್ಯನ ಶರೀರವನ್ನುಳ್ಳ ಒಂದು ದೇವತೆ; ಕಿನ್ನರ.

ಕಿಂವದಂತಿ (ನಾ). ಜನರಲ್ಲಿ ಹಬ್ಬಿರುವ ಮಾತು; ಗಾಳಿಮಾತು.

ಕಿಂಶುಕ (ನಾ). ಮುತ್ತುಗದ ಮರ.

ಕಿಕೀದಿವಿ (ನಾ). ಹಂಗನ ಹಕ್ಕಿ ; ಹಾಲಕ್ಕಿ.

ಕಿಕ್ಕರ (ನಾ). ಬಂಧು ; ನೆಂಟ.

ಕಿಕ್ಕಿಱ(ರಿ) (ಕ್ರಿ). ೧. ದಟ್ಟವಾಗು ; ಒತ್ತಾಗಿರು. ೨. ಕೂಗು ; ಚೀರು. ೩. ಅಸಮಾಧಾನಗೊಳ್ಳು. (ನಾ). ೪. ದಟ್ಟಣೆ; ಸಂದಣಿ. ~ಕೊ(ಗೊ)ಳ್=ಸಾಂದ್ರವಾಗು; ದಟ್ಟೈಸು.

ಕಿಕ್ಕಿಲಿ (ನಾ). ೧. ಗೇಲಿ ; ತಮಾಷೆ. ೨. ಕಚಕುಳಿ.

ಕಿಗ್ಗ (ಗು). ಕಿರಿದಾದ; ಚಿಕ್ಕದಾದ.

ಕಿಗ್ಗಡೆ (ನಾ). ಕೆಳಗಡೆ ; ಕೆಳಭಾಗ.

ಕಿಗ್ಗಳ ೧. = ಕಿಗ್ಗುಳ. (ಗು). ೨. ಬಹಳ ಹಳೆಯ ; ಓಬಿರಾಯನ ಕಾಲದ.

ಕಿಗ್ಗಾಳಿ (ನಾ). ಕೆಳಗಿನಿಂದ ಬರುವ ಗಾಳಿ ; ಬೇಟೆಗೆ ಗುರಿಯಾದ ಪ್ರಾಣಿಯ ಕಡೆಯಿಂದ ಬೇಟೆಯಾಡುವ ಮೃಗ ಅಥವಾ ಬೇಟೆಗಾರನ ಕಡೆಗೆ ಬೀಸುವ ಗಾಳಿ.

ಕಿಗ್ಗುಳ (ನಾ). ೧. ಕೆಳಮಟ್ಟ ; ತಗ್ಗು. ೨. ತುಚ್ಛವಾಗಿರುವಿಕೆ; ಹೀನತನ. (ಗು). ೩. ತುಚ್ಛವಾಗಿರುವ.

ಕಿಚಾಯಿಸು (ಕ್ರಿ). ಕೀಟಲೆಮಾಡು ; ಚುಡಾಯಿಸು.

ಕಿಚ್ಚಡಿ (ನಾ). ೧. ಅಕ್ಕಿ, ಬೇಳೆಗಳನ್ನು ಒಟ್ಟಿಗೆ ಕೂಡಿಸಿ ಮಾಡಿದ ಆಹಾರ. ೨. ಜೋಳ, ಗೋಧಿ ಮೊದಲಾದುವುಗಳ ನುಚ್ಚನ್ನಾಗಲೀ ಸಬ್ಬಕ್ಕಿಯನ್ನಾಗಲೀ ಬೇಯಿಸಿ ಮಾಡಿದ ಅನ್ನ. ೩. ಮುದ್ದೆಮುದ್ದೆಯಾದ ಅನ್ನ. ೪. ನಜ್ಜುಗುಜ್ಜು.

ಕಿಚ್ಚು (ನಾ). ೧. ಬೆಂಕಿ ; ಅಗ್ನಿ. ೨. ತಾಪ ; ದಗೆ. ೩. ಎದೆಗುದಿ ; ಸಂಕಟ.

ಕಿಟಕಿ = ಕಿಡಿಕೆ.

ಕಿಟಿ (ನಾ). ೧. ಕಾಡುಹಂದಿ ; ಸೂಕರ. ೨. ಬೆಲೆಯುಳ್ಳ ಹರಳು ; ರತ್ನ.

ಕಿಟ್ಟ (ನಾ). ೧. ಗಟ್ಟಿಯಾದ ಗಜ್ಜುಗ. ೨. ತುಕ್ಕು; ಜಂಗು. ೩. ಮಲ. ೪. ತಗ್ಗಿನಲ್ಲಿ ಕೂಡಿಟ್ಟ ಸಗಣಿ. ೫. ಎಣ್ಣೆ, ತುಪ್ಪ ಮೊದಲಾದುವುಗಳ ಗಸಿ; ಗಷ್ಟು. ೬. ಒಡಕು ಪಾತ್ರೆಗೆ ಹಾಕುವ ತೇಪೆ. ~ಆಲಯ = ಕೊಳೆಯನ್ನು ತೊಳೆಯುವ ಸ್ಥಳ ; ಬಚ್ಚಲುಮನೆ.

ಕಿಟ್ಟು (ಕ್ರಿ). ೧. ತಾಗು ; ಮುಟ್ಟು. ೨. ಲೇಪಿಸು ; ಬಳಿ. ೩. ಕೈಗೆಬರು ; ಪ್ರಾಪ್ತವಾಗು. (ನಾ). ೪. ಕಬ್ಬಿಣದ ತುಕ್ಕು.

ಕಿಡಿ (ನಾ). ೧. ಬೆಂಕಿಯ ಕಣ ; ಸ್ಫುಲಿಂಗ. ೨. ಕೆಟ್ಟ ವಾಸನೆ ; ದುರ್ವಾಸನೆ.

ಕಿಡಿಕಿ (ನಾ). ೧. ಹಾದರಗಿತ್ತಿ; ಜಾರೆ. ೨. = ಕಿಡಿಕೆ.

ಕಿಡಿಕೆ (ನಾ). ಗವಾಕ್ಷ ; ವಾತಾಯನ.

ಕಿಡು = ಕೆಡು. ~ಕೆ(ಗೆ)ೞಡಿ = ೧. ತುಂಟ ; ಉಲಕೋಚಿ. ೨. ತೊಂದರೆ ಕೊಡುವವನು.

ಕಿಣ (ನಾ). ೧. ಘರ್ಷಣೆಯಿಂದ ಚರ್ಮದ ಮೇಲೆ ಉಂಟಾದ ದಡ್ಡು. ೨. ಗಾಯದ ಗುರುತು ; ಕಲೆ.

ಕಿಣಿ (ನಾ). ೧. ಗೆಜ್ಜೆಯ ಶಬ್ದ. ೨. = ಕೀನಿ.

ಕಿಣ್ಣ (ನಾ). ೧. ಚಿಕ್ಕ ಪಾನಪಾತ್ರೆ; ಬಟ್ಟಲು. ೨. ಚಿಣ್ಣ; ಹುಡುಗ.

ಕಿತಬಿ (ನಾ). ಇಲ್ಲದ ಕಾರಭಾರ; ಸಲ್ಲದ ಕಾರ್ಯ.

ಕಿತವ (ನಾ). ೧.ಜೂಜುಗಾರ. ೨.ಸುಳ್ಳುಗಾರ. ೩. ದತ್ತೂರ; ಮದ್ದುಗುಣಿಕೆಯ ಗಿಡ.

ಕಿತಾಪತಿ = ಕಿತಬಿ.

ಕಿತಾಬು (ನಾ). ೧. ಬಿರುದು; ಸ್ತುತಿ. ೨. ಪುಸ್ತಕ.

ಕಿತ್ (ನಾ). ೧. ಚಿಕ್ಕವನು; ಎಳೆಯ ಪ್ರಾಯದವನು. ೨. = ಕಿಱಿದು. ~ಅಡಿ = ೧.ಚಿಕ್ಕ ಪಾದ. ೨. ಚಿಕ್ಕಸ್ವಾಮಿ; ಮರಿಸ್ವಾಮಿ. ೩. ಋಷಿ. ~ಈಳೆ = ಈಳೆ ಜಾತಿಗೆ ಸೇರಿದ ಒಂದು ಹಣ್ಣು. ~ಎಸಟ್(ಳ್) = ಕಿರಿಯ ಎಸಳು.

ಕಿತ್ತಡ (ನಾ). ೧. ಅಸಹ್ಯಭಾವ; ಅಸಮಾಧಾನ. ೨.ಮೋಸ; ವಂಚನೆ. ೩. ತಪಸ್ಸು. ೪. ಹೂವು; ಕುಸುಮ.

ಕಿತ್ತಲೆ(ಳೆ) = ಕಿತ್ತೀಳೆ.

ಕಿತ್ತಾಟ (ನಾ). ಜಗಳ; ಕಚ್ಚಾಟ.

ಕಿತ್ತಾನಾರು (ನಾ). ಪುಂಡಿಯ ನಾರು; ಸಣಬಿನ ನಾರು.

ಕಿತ್ತು (ಕ್ರಿ). ಕೀಳು; ಮಿಾಟಿತೆಗೆ.

ಕಿತ್ತೆ (ನಾ). ಅನುಕರಣೆಗಾಗಿ ಸುಂದರವಾದ ಅಕ್ಷರಗಳಲ್ಲಿ ಬರೆದು ಕೊಟ್ಟ ಕಾಗದ; ಮಾದರಿ ಲಿಪಿ.

ಕಿನ (ನಾ). ಸಿಟ್ಟು; ಕೋಪ.

ಕಿನಾರ (ನಾ). ದಡ; ಅಂಚು.

ಕಿನಿ (ಕ್ರಿ). ಕೆರಳು; ಸಿಟ್ಟಾಗು.

ಕಿನಿಕೆ = ಕೀನಿ.

ಕಿನಿಸು (ಕ್ರಿ). ೧. ರೇಗು; ಕೆರಳು. (ನಾ). ೨. ಮುನಿಸು; ಕೋಪ.

ಕಿನ್ನರ = ಕಿಂಪುರುಷ. ~ಭಾವೆ = ಕಿನ್ನರ ಸ್ತ್ರೀ. ~ಸ್ವರ = ಮಧುರವಾದ ಕಂಠಧ್ವನಿ.

ಕಿನ್ನರಿ (ನಾ). ೧. ಕಿನ್ನರ ಸ್ತ್ರೀ. ೨. ಒಂದು ತಂತೀವಾದ್ಯ.

ಕಿಪಾತು (ನಾ). ಅಪಮಾನ; ಅವಮಾನ.

ಕಿಬಱ(ಳಿ) (ನಾ). ಮನೆಯ ಹೊರ ಅಂಚು.

ಕಿಬ್ಬದಿ = ಕಿಬ್ಬರಿ.

ಕಿಬ್ಬರಿ = ಕಿಬ್ಬರಿ.

ಕಿಬ್ಬಿ (ನಾ). ಇಳಿಜಾರು; ಬೆಟ್ಟದ ಪಕ್ಕ.

ಕಿಬ್ಬೆ = ಕಿಬ್ಬಿ.

ಕಿಬ್ಬೊಟ್ಟೆ = ಕಿಱಪ್ಪೊಟ್ಟೆ.

ಕಿಮುಟ (ನಾ). ಆವರಣ; ಪದರ.

ಕಿಮುಚಿಟ್(ಳ್) (ನಾ). ಹಿಸುಕಲ್ಪಟ್ಟುದು.

ಕಿಮುಚಿಟ್ಟು(ಳ್ಚು) (ಕ್ರಿ). ಹಿಸುಕು; ಹಿಂಡು; ಕಿವುಚು.

ಕಿಮ್ಮತ್ತು (ನಾ). ೧. ಬೆಲೆ; ಮೌಲ್ಯ. ೨. ಗೌರವ; ಮರ್ಯಾದೆ.

ಕಿಮ್ಮಿರ (ನಾ). ಭೀಮಸೇನನಿಂದ ಹತನಾದ ಒಬ್ಬ ರಾಕ್ಷಸನ ಹೆಸರು.

ಕಿರಗಣೆ (ನಾ). ಅಗಲ ಕಡಮೆಯಿರುವ ಸೀರೆ; ಕಿರಿಗೆ.

ಕಿರಣ (ನಾ). ೧. ರಶ್ಮಿ; ಬೆಳಕಿನ ಕದಿರು. ೨. ಹರಡುವಿಕೆ.

ಕಿರಲು (ಕ್ರಿ). ೧. ಕೂಗು; ಶಬ್ದಮಾಡು. (ನಾ). ೨. ಚೀತ್ಕಾರ; ಚೀರುವಿಕೆ.

ಕಿರಾಣಿ (ನಾ). ದಿನಸಿ; ಧಾನ್ಯ.

ಕಿರಾತ (ನಾ). ೧. ಬೇಡ; ಶಬರ. ೨. ಒಂದು ಮೂಲಿಕೆ; ಚಿರಾಯತ. ೩. ಗಿಡ್ಡ; ಕುಳ್ಳ. ೪. ಬಡಕಲು ಶರೀರದವನು.

ಕಿರಿ (ಕ್ರಿ). ೧. ಬೋಳಿಸು; ಕ್ಷೌರಮಾಡು. ೨.ಹಲ್ಲು ಕಿಸಿ; ಹಲ್ಲು ತೆರೆ. ೩. = ಕಿಱಿದು. (ನಾ). ೪. ದಾರದ ಗಂಟು. ೫. ಹಂದಿ; ವರಾಹ. ~ಇಸು = ಬೋಳಿಸು; ಕ್ಷೌರಮಾಡು. ~ದಾರಿ = ಕಾಲುಹಾದಿ. ~ನುಡಿ = ೧. ಕೀಳುಮಾತನ್ನಾಡು. ೨. ಸಂಕ್ಷಿಪ್ತವಾದ ಮಾತು. ೩.ಕೀಳುನುಡಿ; ಅಲ್ಪವಾದ ಮಾತು. ~ಪೊ(ಹೊ)ಟ್ಟೆ = ಹೊಕ್ಕಳ ಕೆಳಗಿನ ಹೊಟ್ಟೆ; ಕಿಬ್ಬೊಟ್ಟೆ. ~ಬೊಟ್ಟು

= ೧. ಒಂದು ಬಗೆಯ ಆಭರಣ; ಹಣೆಬೊಟ್ಟು. ೨. ಕಿರಿಯ ಬೆರಳು. ~ವಕ್ತ್ರ = ೧. ಹಂದಿಯ ಮುಖ. ೨. ಹಂದಿಯ ಮುಖವುಳ್ಳವನು.

ಕಿರಿಂಚಿಲ್ಲು (ನಾ). ಎನ್ನೆಯನ್ನು ಕಟ್ಟುವ ಹಟ್ಟಿ; ಕೊಟ್ಟಿಗೆ.

ಕಿರಿಟಿ (ನಾ). ಕಿರ್ ಎಂದು ಸದ್ದು ಮಾಡುವ ಜೀರುಂಡೆ; ಚಿಮ್ಮಂಡೆ.

ಕಿರಿಮೆ (ನಾ). ಕಿರಿತನ; ಸಣ್ಣತನ.

ಕಿರಿಯಾತು (ನಾ). ನೀಲಿ ಹೂವು ಬಿಡುವ ಒಂದು ಮೂಲಿಕೆ; ಕಿರಾತಕಡ್ಡಿ.

ಕಿರಿಸೆ (ನಾ). ಒಂದು ಬಗೆಯ ಆಯುಧ; ಚಿಕ್ಕ ಕತ್ತಿ.

ಕಿರಿಸ್ತಾನ (ನಾ). ೧. ಕ್ರೈಸ್ತಧರ್ಮಕ್ಕೆ ಸೇರಿದವನು. (ಗು). ೨. ಕ್ರೈಸ್ತಮತಕ್ಕೆ ಸೇರಿದ.

ಕಿರೀಟ (ನಾ). ರತ್ನಖಚಿತವಾದ ಶಿರೋಭೂಷಣ; ಮಕುಟ. ~ಧಾರಣೆ =ಕಿರೀಟವನ್ನು ಧರಿಸುವುದು;ಪಟ್ಟಾಭಿಷೇಕ.

ಕಿರೀಟಿ (ನಾ). ೧. ಕಿರೀಟವನ್ನು ಧರಿಸಿದವನು. ೨. ಒಂದು ಬಗೆಯ ಪಕ್ಷಿ; ಹಂಗನಹಕ್ಕಿ. ೩. ಇಂದ್ರ. ೪. ಅರ್ಜುನ.

ಕಿರು = ಕಿಱಿದು. ~ಕು(ಗು)ಟ್ಟು= ೧. ಚೀರು; ಕಿರುಚು. ೨. (ಬಾಗಿಲು) ಕಿರ್ ಎಂದು ಶಬ್ದ ಮಾಡು.

ಕಿರುಚು = ಕಿಱುಚು.

ಕಿರುಟಿಗ (ನಾ). ಒಂದು ಜಾತಿಯ ಹಕ್ಕಿ.

ಕಿಱು(ರಿ) (ಕ್ರಿ). ೧. ತುಂಬು; ಗಿಡಿ. ೨. ಅಡಗಿಹೋಗು; ಕುಸಿ. (ನಾ). ೩.= ಕಿಱಿದು. ~ಕೂ(ಗೂ)ಸು = ೧.ಚಿಕ್ಕ ಮಗು; ಹಸುಳೆ. ೨. ಸಣ್ಣ ಹುಡುಗಿ; ಬಾಲಿಕೆ. ~ಕೆ(ಗೆ)ಯ್ = ತೆಗಳು; ನಿಂದಿಸು.

ಕಿಱು(ರಿ)ಕಿಱು(ರಿ) (ನಾ). ಕಿರುಕುಳ; ಕಾಟ.

ಕಿಱು(ರಿ)ಗೆ (ನಾ). ೧. ಚಿಕ್ಕ ಸೀರೆ; ಬಾಲಕಿಯರು ಉಡುವ ಸೀರೆ. ೨. ಸೊಗಸು. ಚೆಲುವು.

ಕಿಱು(ರಿ)ಚು (ಕ್ರಿ). ಕೂಗು; ಚೀರು. ~ಆಟ = ಕೂಗಾಟ; ಅರಚುವಿಕೆ.

ಕಿಱು(ರಿ)ದು (ನಾ). ೧. ಚಿಕ್ಕದು; ಸಂಕ್ಷೇಪವಾದುದು. (ಗು). ೨. ಚಿಕ್ಕ; ಸಣ್ಣ.

ಕಿಱು(ರಿ)ಪು (ಕ್ರಿ). ೧.ತುರುಕು; ಒಳಸೇರಿಸು. ೨. ತಿವಿ; ಚುಚ್ಚು. ೩.ನಿಗುರು; ನಿಮಿರು. ೪. ವಕ್ರವಾಗು; ಗಂಟಿಕ್ಕು.

ಕಿಱು(ರಿ)ಯ (ನಾ).೧.ಚಿಕ್ಕವನು; ಸಣ್ಣವನು. ೨. ಕೆಳಮಟ್ಟದವನು; ಹೀನ.

ಕಿಱು(ರಿ)ಹು = ಕಿಱುಪು.

ಕಿಱು(ರು) (ಕ್ರಿ). ೧. ಮುಚ್ಚು; ಕದವಿಕ್ಕು. ೨. ಆವರಿಸು; ತುಂಬು. ೩. ನಡುವೆಯೊಡ್ಡು; ತಡೆ. ೪. ಮೌನವಾಗು; ನೀರವವಾಗು. (ನಾ). ೫. = ಕಿಱಿದು. ~ಎ(ವೆ)ಲರ್ = ಸಣ್ಣಗಾಳಿ; ಮಂದಮಾರುತ. ~ಕ(ಗ)ಟ್ಟು = ತಿಳಿಯಾದ ಕಟ್ಟು; ಸಾರ. ~ಕ(ಗ)ಣೆ = ಒಂದು ಬಗೆಯ ಬಾಣ. ~ಕು(ಗು)ಣಿ = ೧. ಸಣ್ಣ ಕುಣಿ, -ತಗ್ಗು. ೨. ಒಳ ಅಂಗಿ. ~ಕು(ಗು)ಣಿಕೆ = ಕಿರುಬೆರಳು; ಸಣ್ಣ ಬೆರಳು. ~ಕುಲ = ೧. ಹೀನಕುಲದವನು; ಅಲ್ಪ. ೨. ಕ್ಷುಲ್ಲಕವಾದುದು. ೩. ಕ್ಷುಲ್ಲಕವಾದ; ಅಲ್ಪವಾದ. ~ಕುಸಾಲೆ = ಒಂದು ಬಗೆಯ ಸೊಪ್ಪು. ~ಕುಳ = ೧. ಕಿಱುಕುಲ. ೨.ಚಿಲ್ಲರೆ ತೆರಿಗೆ. ೩.ಚಿಲ್ಲರೆ ಸಾಮಗ್ರಿ. ೪. ಚಿಲ್ಲರೆ ವ್ಯಾಪಾರ.೫. ತೊಂದರೆ; ಕಾಟ. ~ಕೂ(ಗೂ)ಳಿ =ಮೀನು ಹಿಡಿಯುವ ಸಣ್ಣ ಬುಟ್ಟಿ. ~ಗೇಣ್ = ಚಿಕ್ಕ ಕತ್ತಿ; ಕಠಾರಿ. ~ಡೊಳ್ಳು=೧.ಸಣ್ಣಹೊಟ್ಟೆ; ಚಿಕ್ಕಹೊಟ್ಟೆ. ೨. ಹೊಟ್ಟೆಯ ಕೆಳಭಾಗ; ಅಡಿಹೊಟ್ಟೆ. ~ತೊ(ದೊ)ಡೆ = ೧. ಕಾಲಿನ ಹರಡಿ

ನಿಂದ ಮೊಳಕಾಲಿನವರೆಗಿನ ಭಾಗ; ಮೀನುಖಂಡ. ೨. ಮೊಳಕಾಲಿನ ಮೇಲು ಭಾಗ. ~ನಾಲಿಗೆ = ೧. ಗಂಟಲೊಳಗೆ ನಾಲಿಗೆಯ ಮೇಲೆ ಜೋತಾಡುವ ಮಾಂಸ ಪಿಂಡ. ೨. ಗಂಟಲು ಉಬ್ಬಿ ಉಂಟಾಗುವ ತೊಂದರೆ. ~ಪ(ವ)ರೆಯ = ೧. ಎಳೆಯ ವಯಸ್ಸು; ಸಣ್ಣಪ್ರಾಯ. ೨. ಸಣ್ಣ ಪ್ರಾಯದವನು; ಎಳೆಯ. ~ಪ(ಹ)ಳ್ಳಿ = ಚಿಕ್ಕಹಳ್ಳಿ; ಸಣ್ಣ ಹಳ್ಳಿ. ~ಪು(ವು)ಲಿ = ಚಿಕ್ಕ ಹುಲಿ; ಚಿರತೆ; ಕಿರುಬ. ~ಬ(ವ)ಳ್ಳಿ = ಸಣ್ಣಬಳ್ಳಿ, -ಲತೆ. ~ಬಾವಲು = ಜಿರಳೆ; ಜೊಂಡಿಗ. ~ಬೆ(ವೆ)ರಲ್ = ಕಿಱುಗುಣಿಕೆ. ~ಮನೆ = ೧. ಚಿಕ್ಕಮನೆ; ಸಣ್ಣಮನೆ. ೨.ಕೋಣೆ; ಕೊಠಡಿ. ~ಮಾನಿಸ = ಸಣ್ಣಮನುಷ್ಯ; ಕ್ಷುದ್ರಮನುಷ್ಯ.

ಕಿಱು(ರು)ಕು (ಕ್ರಿ). ೧. ದಟ್ಟವಾಗು; ಪುಷ್ಟವಾಗು. ೨. ಗೀರು; ಗೀಚು. ೩. (ಬರೆದುದನ್ನು) ಹೊಡೆದುಹಾಕು.

ಕಿಱು(ರು)ಕೆ (ನಾ). ಮುಚ್ಚುವಿಕೆ; ಆವರಿಸುವಿಕೆ.

ಕಿಱು(ರು)ಪು = ಕಿಱುಪು.

ಕಿಱು(ರು)ಬ (ನಾ). ೧. ಹುಲಿಯ ಜಾತಿಗೆ ಸೇರಿದ ಒಂದು ಕಾಡುಮೃಗ; ನಾಯಿಹುಲಿ. ೨. ಚಿಕ್ಕವನು. ೩. ಅಲ್ಪ; ಕ್ಷುದ್ರ.

ಕಿಱು(ರು)ಳ (ನಾ). ೧. ಚಿಕ್ಕದು; ಮರಿ. ೨. ಕಿರಿಯವನು; ಮಗು. ೩. ಮೊಳಕೆ; ಅಂಕುರ. ೪. ಅಲ್ಪ.

ಕಿಱು(ರು)ಳೆ (ನಾ). ಚಿಕ್ಕವಳು; ಹುಡುಗಿ.

ಕಿರ್ಕಿಜೋಡು (ನಾ). ಕಿರ್‌ಕಿರ್ ಎಂದು ಶಬ್ದ ಮಾಡುವ ಜೋಡು; ಗಿರಕಿ ಜೋಡು.

ಕಿರ್ಗಟ್ಟು = ಕಿಱ್ಕಟ್ಟು.

ಕಿರ್ಗಿ (ನಾ). ಚೆಲುವು; ಸೊಗಸು.

ಕಿರ್ಗು = ಕಿಱ್ಗು.

ಕಿರ್ಚು = ಕಿಚ್ಚು. ~(ಂ)ಕೊ(ಗೊ)ಲ್ = ಪಾವಕಾಸ್ತ್ರ; ಆಗ್ನೇಯಾಸ್ತ್ರ.

ಕಿರ್ದಿ (ನಾ). ೧. ದಿನವಹಿ ಲೆಕ್ಕಪತ್ರ. ೨. ಆಯವ್ಯಯಗಳನ್ನು ಬರೆದಿಡುವ ಪುಸ್ತಕ; ಜಮಾಖರ್ಚಿನ ಪುಸ್ತಕ.

ಕಿರ್ಮೀರ (ನಾ). ೧. ಮಿಶ್ರವರ್ಣ. (ಗು). ೨. ಮಿಶ್ರವರ್ಣವುಳ್ಳ.

ಕಿಲ (ನಾ). ೧. ಸಂತೋಷದ ನಗುವಿನ ಅನುಕರಣ. ೨. ಆಟ; ವಿಲಾಸ. (ಗು). ೩. ಕೆಟ್ಟುಹೋದ; ಹಾಳುಬಿದ್ದ.

ಕಿಲಕಿಲ (ನಾ). ೧. ಸಂತೋಷವನ್ನು ಸೂಚಿಸುವ ನಗೆ. ೨. ಹಕ್ಕಿಗಳ ಕೂಗಾಟ.

ಕಿಲಕಿರೆ (ನಾ). ೧. ಒಂದು ಬಗೆಯ ಮೂಲಿಕೆ. ೨. ಒಂದು ಬಗೆಯ ಸೊಪ್ಪು.

ಕಿಲಬು = ಕಿಲುಂಬು.

ಕಿಲಾಟ (ನಾ). ಕುದಿಸಿ ಗಟ್ಟಿಮಾಡಿದ ಹಾಲು; ಖೋವ.

ಕಿಲಾಡಿ (ನಾ). ತುಂಟ; ಚೇಷ್ಟೆಗಾರ. ~ತನ = ೧. ಚೇಷ್ಟೆ; ತುಂಟಾಟ. ೨. ಚಾತುರ್ಯ.

ಕಿಲಾಪ (ನಾ). ವ್ಯಾಜ್ಯ; ಜಗಳ.

ಕಿಲಾಪು = ಕಿಲಾಪ.

ಕಿಲಾ(ಳಾ)ಸ (ನಾ). ೧. ಮಚ್ಚೆ; ಚಿಬ್ಬು. ೨. ತುರಿಗಜ್ಜಿ. ೩. ಕುಷ್ಠರೋಗ; ತೊನ್ನು. ೪. ಮಂಡಮೆ; ಮಡವೆ.

ಕಿಲಿಂಜ (ನಾ). ೧. ಚಾಪೆ. ೨. ಮರದ ತೆಳು ಹಲಗೆಯಿಂದ ಮಾಡಿದ ಅಡ್ಡತೆರೆ; ತಡಿಕೆ.

ಕಿಲಿಕಿಲಿ = ಕಿಲಕಿಲ.

ಕಿಲುಂಬು (ಕ್ರಿ). ೧ ವಿಷವಾಗು; ಕಿಟ್ಟಗಟ್ಟು. (ನಾ). ೨. ಕೊಳೆ; ಕಿಟ್ಟ; ವಿಷ. ~ಕ(ಗ)ಟ್ಟು = ಕಿಲುಬು ಹಿಡಿ; ಕಲಂಕಿತವಾಗು. ~ಕೊ(ಗೊ)ಳ್=ಕಿಲುಂಬುಗಟ್ಟು. ~ನಾಱು(ರು) = ಹೊಲಸು ನಾರು; ದುರ್ಗಂಧ ಹೊಡೆ

ಕಿಲುಬು = ಕಿಲುಂಬು.

ಕಿಲ್ಬಿಷ (ನಾ). ೧.ಕೊಳೆ; ಕಲಂಕ. ೨.ಮೋಸ; ಕಪಟ. ೩. ಪಾಪ. ೪. ವಿಷ. ೫. ತಪ್ಪು; ಅಪರಾಧ.

ಕಿಲ್ಲತ್ತು (ನಾ). ಸನ್ಮಾನಾರ್ಥವಾಗಿ ಕೊಡುವ ಪೋಷಾಕು; ಉಡುಗೊರೆ.

ಕಿಲ್ಲೆ (ನಾ). ಕೋಟೆ; ದುರ್ಗ. ~ದಾರ = ೧. ದುರ್ಗಾಧಿಪತಿ; ಕೋಟೆಯ ಒಡೆಯ. ೨.ಪೋಲೀಸರ ಮೇಲಧಿಕಾರಿ; ಫೌಜುದಾರ.

ಕಿವಿ (ಕ್ರಿ). ೧.ಕೇಳು; ಅವಧರಿಸು.೨.ಕೇಳಿಸು. ೩. ಕೀವು ತುಂಬು. (ನಾ). ೪. ಶಬ್ದವನ್ನು ಗ್ರಹಣ ಮಾಡುವ ಇಂದ್ರಿಯ; ಕರ್ಣ. ೫. ತುಪಾಕಿಯ ಮದ್ದು ತುಂಬುವ ಗುಣಿ. ೬. ಬಾಣಲೆ ಮೊದಲಾದುವುಗಳ ಹಿಡಿ. ~ಊ(ಯೂ)ದು=೧. ಕಿವಿಯಲ್ಲಿ ಗುಟ್ಟಾಗಿ ಹೇಳು; ಬೋಧಿಸು. ೨. ಚುಚ್ಚಿಕೊಡು; ಚಾಡಿ ಹೇಳು. ~ಕ(ಗ)ಚ್ಚು= ೧. ಕಿವಿಯೂದು. ೨. ಗುಟ್ಟಾಗಿ ಕಿವಿಯಲ್ಲಿ ಹೇಳುವಿಕೆ. ~ಕೊ(ಗೊ)ಡು = ಮನಸ್ಸಿಟ್ಟು ಕೇಳು; ಆಲಿಸು. ~ಚಟ್ಟೆ = ಕಿವಿಯ ಮೇಲ್ಭಾಗ. ~ಚಾಟು = ಹಲವುಸಾರಿ ಕೇಳಿ ರೂಢಿಯಾಗಿರುವುದು. ~ತೆ(ದೆ)ಱೆ(ರೆ) = ೧. ಕಿವಿಗೊಡು. ೨. ಕಿವಿಯ ತೆರೆ; ಕರ್ಣಪಟಲ. ~ಪಾ(ವಾ)ಲೆ = ಕಿವಿಯ ಕೆಳಭಾಗ; ಹಾಲೆ. ~ಬೇ(ವೇ)ಟ = ಕೇಳುವುದರಿಂದಲೇ ಉಂಟಾಗುವ ಮೋಹ.

ಕಿವಿಚು = ಕಿವುಚ್ಚು.

ಕಿವಿರು (ನಾ). ಮೀನು ಮೊದಲಾದ ಜಲಚರ ಪ್ರಾಣಿಗಳ ಶ್ವಾಸಾಂಗ.

ಕಿವುಂಡ (ನಾ). ಕಿವಿ ಕೇಳಿಸದವನು; ಕೆಪ್ಪ.

ಕಿವುಂಡು (ನಾ). ಕಿವಿಕೇಳಿಸದಿರುವಿಕೆ; ಬಧಿರತೆ.

ಕಿವುಚು = ಕಿವುಚ್ಚು.

ಕಿವುಡ = ಕಿವುಂಡ.

ಕಿವುಡು = ಕಿವುಂಡು. ~ಓದು = ಸ್ವಾರಸ್ಯವನ್ನು ಗಮನಿಸದೆ ಓದು; ಕುರುಡೋದು. ~ಕಾ(ಗಾ)ಯ್(ಯಿ) = ನೀರು ಇಮರಿದ ತೆಂಗಿನಕಾಯಿ. ~ಕೇ(ಗೇ)ಳ್(ಳು) = ಕೇಳಿದರೂ ಕೇಳಿಸದಂತಿರು; ಅಲಕ್ಷ್ಯಮಾಡು.

ಕಿವುಟ್ = ಕಿವುಂಡು.

ಕಿಶೆ = ಕಿಸೆ.

ಕಿಶೋರ (ನಾ). ೧. ಯಾವುದಾದರೂ ಪ್ರಾಣಿಯ ಮರಿ; ಪೋತ. ೨. ಹದಿನೈದು ವರ್ಷದೊಳಗಿನ ಪ್ರಾಯದ ಹುಡುಗ. (ಗು). ೩. ಚಿಕ್ಕ ಪ್ರಾಯದ; ಎಳೆಯ.

ಕಿಷ್ಕಿಂದ (ನಾ). ೧. ಒತ್ತಾದದ್ದು; ಇಕ್ಕಟ್ಟು. ೨.ಗುಂಪು; ಸಂದಣಿ.

ಕಿಷ್ಕು (ನಾ). ೧. ಮುಂದೋಳು. ೨. ಒಂದು ಗೇಣು. (ಗು). ೩. ನೀಚ; ದುಷ್ಟ.

ಕಿಸಣಿ (ನಾ). ಒಂದು ಬಗೆಯ ಕಬ್ಬಿಣದ ಆಯುಧ; ತೋಪಡ.

ಕಿಸಲಯ (ನಾ). ಚಿಗುರು; ಪಲ್ಲವ.

ಕಿಸಿ (ಕ್ರಿ). ೧. ಅಗಲವಾಗಿಸು; ತೆರೆ. ೨. ಸಾಧ್ಯವಾಗು. ೩. ಸಾಧಿಸು.

ಕಿಸು (ನಾ). ೧.ಕೆಂಪು; ಅರುಣ. ೨.ತಾಮ್ರ. ೩. ಕೆಂಪು ಭೂಮಿ. ೪. ಕೆಂಪು ರತ್ನ; ಪದ್ಮರಾಗ. ~ಕ(ಗ)ಣ್(ಣ್ಣು) = ೧. ಕೆಂಪಾದ ಕಣ್ಣು; ಕೆಂಗಣ್ಣು. ೨. ಕೋಪ; ಕ್ರೋಧ. ~ಕ(ಗ)ಲ್(ಲ್ಲು) = ಕೆಂಪುಬಣ್ಣದ ಹರಳು; ಪದ್ಮರಾಗ; ಮಾಣಿಕ್ಯ.

ಕಿಸುಃಕುಳ = ಕಿಸುಗುಳ.

ಕಿಸುಗುಳ (ನಾ). ೧. ಕೊಳೆ; ಹೊಲಸು. ೨.ಹೇಯವಾದುದು. ೩.ಹೊಲಸಾದ ವ್ಯಕ್ತಿ. ೪. ಪಾಪ. ೫. ನಿಂದಕ; ಆಪಾದಿಸುವವನು. ೬. ತೊಂದರೆ; ಪೀಡೆ.

ಕಿಸುರ್(ರು) (ಕ್ರಿ). ೧. ಅಸಹ್ಯವಾಗಿರು. ೨. ಅಸಹ್ಯಪಡು. (ನಾ). ೩. ಹೇಸಿಕೆ. ೪. ಮತ್ಸರ. ೫. ವಿರೋಧ. ೬.ದೃಷ್ಟಿದೋಷ. ೭. ಕಲಹ. ೮. ಕೆಂಪುಬಣ್ಣ. ೯. ತಾಮ್ರ. ೧೦. ಕಣ್ಣಿನ ಗೀಜು. ~ಆನ್(ನು)

= ಕರುಬು ; ಮತ್ಸರಿಸು. ~ಕ(ಗ)ಣ್ಣು = ಪಿಸುರುಗಣ್ಣು; ಕೊಳೆ ತುಂಬಿದ ಕಣ್ಣು. ~ಬೆ(ವೆ)ೞ್ = ಕೆಡುಕನ್ನು ಉಂಟು ಮಾಡುವ ಒಂದು ಮೂಲಿಕೆ.

ಕಿಸೆ (ನಾ). ಜೇಬು ; ಬೊಕ್ಕಣ. ~ಕ(ಗ)ಳ್ಳ = ಜೇಬು ಕತ್ತರಿಸಿ ಕಳವು ಮಾಡುವವನು ; ಜೇಬುಗಳ್ಳ.

ಕಿಸ್ಗಾರ (ನಾ). ಕಡುಗೆಂಪು ಬಣ್ಣದ ಹೂವು ಬಿಡುವ ಒಂದು ಗಿಡ ; ಕೇಪಲಗಿಡ.

ಕಿಸ್ತು (ನಾ). ೧. ಕಂತಿನ ಮೂಲಕ ಪಾವತಿ ಮಾಡುವಿಕೆ; ಕಂತು. ೨.ಕಂದಾಯದ ಹಣ.

ಕಿಳ್ (ನಾ). ಹಾಳುನೆಲ ; ಪಾಳುನೆಲ.

ಕಿಳಿರ್(ರು) (ಕ್రి). ೧. ನಿಮಿರು ; ನಿಗುರು. ೨. ಕೆರಳು ; ಸಿಟ್ಟಾಗು. ೩. = ಕಿಳಿಱು.

ಕಿಳಿಱು(ರು) (ಕ್ರಿ). ೧. ಕೆನೆ; ಹೇಕರಿಸು. (ನಾ). ೨. ಕುದುರೆಯ ಕೆನೆತ; ಹೇಷಾರವ.

ಕಿಳ್ಳಿ (ನಾ). ಚೇಷ್ಟೆ ; ಕಿಲಾಡಿತನ. ~ಕೇತ = ೧. ಒಂದು ಬಗೆಯ ಸೂತ್ರದ ಬೊಂಬೆ. ೨.ಸೂತ್ರದ ಬೊಂಬೆಯನ್ನು ಆಡಿಸುವವನು; ಸೂತ್ರಧಾರ. ೩. ಕಿಡಿಗೇಡಿ ; ತುಂಟ.

ಕಿಳ್ಳು (ಕ್ರಿ). ೧. ಚಿವುಟು ; ಗಿಲ್ಲು. (ನಾ). ೨. ಕಣ್ಣೊಳಗಿನ ಪಿಚ್ಚು ; ಪಿಸುರು.

ಕಿೞ್(ಳ್) ೧. = ಕೀೞ್. (ನಾ). ೨. = ಕೆೞಗು. ~ಕಟ್ಟು = ಕೆಳಭಾಗದ ಕಟ್ಟು ; ಕೆಳಗೆ ಕಟ್ಟಿದ ಪಟ್ಟಿ. ~ಕ(ಗ)ಣ್ = ೧. ಕೆಳಮೊಗವಾಗಿ ನೋಡುವ ಕಣ್ಣು ; ಕೆಳಗಣ್ಣು. ೨. ಕೀಳಾಗಿ ನೋಡುವುದು ; ತಿರಸ್ಕಾರ ದೃಷ್ಟಿ. ~ಕಬ್ಬಿಗ = ಕೀಳುಕವಿ ; ಅಲ್ಪಕವಿ. ~ಕು(ಗು)ಂಟೆ = ೧. ಕೆಳಗಿನ ಕುಳಿ. ೨. ಒಂದು ಬಗೆಯ ಬಲಿದಾನ. ~ತಲೆ=೧.ಕೆಳಕ್ಕೆ ಬಾಗಿದತಲೆ. ೨.ಸೋಲು; ಪರಾಭವ. ~ನೆಲ = ೧. ತಗ್ಗಾದ ನೆಲ. ೨. ಕೆಳಗಿನ ಲೋಕ ; ಪಾತಾಳ. ~ನೆಲೆ = ೧. ಕೆಳಗಿನ ಪ್ರದೇಶ, -ಸ್ಥಳ. ೨. ಕೆಳ ಮಟ್ಟ; ಅಡಿಮಟ್ಟ. ~ಪಡು = ಕೆಳಗಾಗು; ಹೀನವಾಗು. ~ಪೊಟ್ಟೆ = ಹೊಕ್ಕುಳ ಕೆಳಭಾಗ ; ಕೆಳ ಹೊಟ್ಟೆ. ~ಪೊಡೆ = ಕಿೞ್ಪೊಟ್ಟೆ. ~ಬಗೆ = ಕೀಳು ಮನಸ್ಸು. ~ಬರಿ = ೧. ದೇಹದ ಪಕ್ಕ ; ಪಕ್ಕೆ; ಅಳ್ಳೆ. ೨. ಬೆಟ್ಟದ ಪಕ್ಕ; ಕಿಬ್ಬಿ. ~ಮಾಡು = ೧. ಕೀಳಾಗುವಂತೆ ಮಾಡು. ೨. ಕೆಳಗೆ ತೋರಿಸು. ~ಮೊಗ = ೧. ಮುಖದ ಕೆಳಭಾಗ. ೨. ಕೆಳಕ್ಕೆ ಬಾಗಿದ ಮುಖ. ೩. ಮುಖವನ್ನು ಕೆಳಕ್ಕೆ ಬಾಗಿಸಿದವನು.

ಕಿೞ(ಳ)ಂಗು (ನಾ). ಗೆಣಸು, ಬಟಾಟೆ ಮುಂತಾದ ಗೆಡ್ಡೆ.

ಕಿೞ(ಳ)ವ (ನಾ). ಮುದುಕ ; ವಯಸ್ಸಾದವನು.

ಕಿೞು(ಳಿ)ಪು (ಕ್ರಿ). ಕೀಳಿಸು ; ಕೀಳುವಂತೆ ಮಾಡು.

ಕಿೞ್ಗ(ಳ್ಗ) (ಕ್ರಿ). ೧.ಕೆಳಮಟ್ಟದಲ್ಲಿರು ; ತಗ್ಗಿನಲ್ಲಿರು. ೨. ಕುಳ್ಳಾಗು ; ಕುಗ್ಗು.



# ಕೀ

ಕೀ (ಕ್ರಿ). ಕೀವು ಆಗು ; ಕೀವು ತುಂಬು.

ಕೀಕಸ (ನಾ). ೧. ಮೂಳೆ ; ಎಲುಬು. (ಗು). ೨. ಗಟ್ಟಿಯಾದ ; ಕಠಿಣವಾದ.

ಕೀಚಕ (ನಾ). ೧. ಗಾಳಿಗೆ ಧ್ವನಿಮಾಡುವ ಟೊಳ್ಳು ಬಿದಿರು. ೨. ಒಂದು ಜಾತಿಯ ಮರ ; ಮಾರ್ಗಣ ವೃಕ್ಷ. ೩. ವಿರಾಟರಾಜನ

ಸೇನಾಪತಿ. ~ಅರಿ = ಕೀಚಕನನ್ನು ಕೊಂದವನು; ಭೀಮ.

ಕೀಚಕ್ಕಿ (ನಾ). ಒಂದು ಬಗೆಯ ಪಕ್ಷಿ; ಕ್ರೌಂಚಪಕ್ಷಿ; ನೀರುಕೋಳಿ.

ಕೀಚಲು (ನಾ). ಚೀರುಧ್ವನಿ; ಕೀರಲುಧ್ವನಿ.

ಕೀಚು (ನಾ). ೧. ಪಕ್ಷಿಗಳು ಕೂಗುವ ಧ್ವನಿ; ಚೀರುದನಿ. ೨. = ಕೀನಿ. ೩. ಕೃಶ; ಒಣಕಲು. ೪. = ಕೀಚಕ್ಕಿ. ~ಪಾಚು = ಕೂಗಾಟ; ಕಿರಿಚಾಟ. ~ಬಾಲ = ಕೃಶವಾದ ಬಾಲವುಳ್ಳ ಒಂದು ಜಾತಿಯ ಹಕ್ಕಿ; ಕೋಯಷ್ಟಿಕ.

ಕೀಟ (ನಾ). ೧. ಕೊಳೆ; ಕಿಟ್ಟ. ೨. ಹುಳು; ಕ್ರಿಮಿ. ೩. ಅಲ್ಪವ್ಯಕ್ತಿ; ಕ್ಷುದ್ರಜೀವಿ. ~ಅಣು = ಅತಿ ಸೂಕ್ಷ್ಮವಾದ ಜೀವಿ; ಅಣುಜೀವಿ. ~ಆಲಯ = ಕಿಟ್ಟಾಲಯ.

ಕೀಟಕ (ನಾ). ೧. ಕೀಟಲೆ ಮಾಡುವವನು; ಕೆಡುಕ. ೨. = ಕೀಟ.

ಕೀಟಲೆ (ನಾ). ೧. ಕುಚೇಷ್ಟೆ; ಕಿಡಿಗೇಡಿತನ. ೨. ತೊಂದರೆ; ಪೀಡೆ.

ಕೀಟು (ನಾ). ೧. ಅನಾದರ; ತಿರಸ್ಕಾರ. (ಗು). ೨. ಕೊಂಚ; ಸ್ವಲ್ಪ.

ಕೀಡೆ (ನಾ). ಹುಳು; ಕೀಟ.

ಕೀಣಿ = ಕೀನಿ.

ಕೀತು (ನಾ). ತುಂಡು; ಸೀಳು; ಚೂರು.

ಕೀತ್ಕೃತಿ (ನಾ). ಕಿರಿಚಾಟ; ಕೂಗಾಟ.

ಕೀನ (ಗು). ೧. ಕ್ಷೀಣವಾದ; ಕುಗ್ಗಿದ. ೨. ಕಿರಿಯ; ಚಿಕ್ಕ.

ಕೀನಾಶ (ನಾ). ೧. ದೀನ; ದರಿದ್ರ. ೨. ಯಮ. ೩. ಬೇಸಾಯ; ಸಾಗುವಳಿ. ೪. ಬೇಸಾಯಗಾರ. ೫. ಜಿಪುಣ; ಲೋಭಿ. ೬. ಮಾಂಸಾಹಾರಿ. ೭. ಸೇವಕ. ೮. ರೋಗಿ. (ಗು). ೯. ಕಿರಿಯ; ಚಿಕ್ಕ. ~ನಾಶ = ಯಮನನ್ನು ನಾಶಗೊಳಿಸಿದವನು; ಶಿವ. ~ಲುಲಾಯ = ಯಮನ ಕೋಣ.

ಕೀನಿ (ನಾ). ಹಲ್ಲುಗಳಲ್ಲಿರುವ ಕೊಳೆ; ಕಿಟ್ಟ. ~ಪ(ವ)ಲ್(ಲ್ಲು) = ಕಿಟ್ಟಗಟ್ಟಿದ ಹಲ್ಲು.

ಕೀರ (ನಾ). ೧. ಮುಂಗುಸಿ; ಮುಂಗುಲಿ. ೨. ಹಾಲು; ಕ್ಷೀರ. ೩. ಗಿಳಿ; ಶುಕ. ೪. ಮಾಂಸ. ~ವಾಣಿ = ೧. ಗಿಳಿಯ ಧ್ವನಿ. ೨. ಮಧುರವಾದ ಧ್ವನಿಯುಳ್ಳವಳು.

ಕೀರಣ = ಕೀಲಣ.

ಕೀರಲು (ಗು). ಕರ್ಕಶವಾದ; ಕಠೋರವಾದ.

ಕೀರಾರ = ಕೀಲಾರ.

ಕೀರಿಂದ (ನಾ). ಹಾಲು ಬೆಣ್ಣೆಯ ಮನೆ.

ಕೀರು ೧. = ಕೀಱು. (ನಾ). ೨. ಒಂದು ಬಗೆಯ ಪಾಯಸ.

ಕೀರುತಿ = ಕೀರ್ತಿ.

ಕೀರೆ (ನಾ). ಒಂದು ಬಗೆಯ ಸೊಪ್ಪು.

ಕೀಱು(ರಿ)ದು (ಅ). ವ್ಯಾಪಕವಾಗಿ; ನಿಬಿಡವಾಗಿ.

ಕೀಱು(ರು) (ಕ್ರಿ). ೧. ಕೂಗು; ಅರಚು. ೨. ರೇಗು; ಸಿಟ್ಟಾಗು. ೩. ಉಜ್ಜು; ಒರಸು. ೪. ಚುಚ್ಚು; ತಿವಿ. ೫. ಗುರುತುಮಾಡು; ಗೆರೆಯನ್ನು ಎಳೆ. ೬. ಒರೆದು ನೋಡು; ಪರೀಕ್ಷಿಸು. ೭. ಒತ್ತಾಯ ಮಾಡು. ೮. ಸೂಚಿಸು. ೯. ಪ್ರತಿಭಟಿಸು. ೧೦. ಮುಚ್ಚು; ಕದವಿಕ್ಕು. ~ಇಡು = ೧. ಕಿರಿಚು; ಕೂಗು. ೨. ಮೊಳಗು; ಮೊರೆ. ೩. ಗೀರು; ಗೆರೆಯಿಡು.

ಕೀರ್ಣ (ನಾ). ೧. ಸಂದಣಿ; ಗುಂಪು. (ಗು). ೨. ಮುಸುಕಿದ; ಆವರಿಸಲ್ಪಟ್ಟ. ೩. ಕೆದರಿದ; ಚೆಲ್ಲಿದ. ೪. ಮರೆಯಾದ; ಮುಚ್ಚಲ್ಪಟ್ಟ. ೫. ಗೀರಿದ; ಕೊರೆದ.

ಕೀರ್ತನ (ನಾ). ೧. ಹೇಳುವಿಕೆ. ೨. ಹೊಗಳಿಕೆ; ಸ್ತುತಿ. ೩. ಹರಿಕಥೆ; ಪುರಾಣ ಪ್ರಸಂಗ. ~ಂಕೆ(ಗೆ)ಯ್ = ಸ್ತೋತ್ರ ಮಾಡು. ~ಕಾ(ಗಾ)ಱ(ರ) = ಹರಿಕಥೆ ಮಾಡುವವನು.

**ಕೀರ್ತನೆ** ೧. = ಕೀರ್ತನ. ೨. ದೇವರಸ್ತುತಿ ರೂಪವಾದ ಹಾಡು; ದೇವರನಾಮ. ೩. ಕೀರ್ತಿ; ಯಶಸ್ಸು.

**ಕೀರ್ತಿ** (ನಾ). ೧. ಹೇಳಿಕೆ; ವರದಿ. ೨. ಯಶಸ್ಸು; ಖ್ಯಾತಿ. **~ಮುಖ** =೧. ಬಳೆಯಾಕಾರದ ಒಂದು ಆಭರಣ. ೨. ಕೀರ್ತಿಯ ಮುಖ. ೩. ದೇವಾಲಯಗಳಲ್ಲಿ ಸಿಂಹಾಕೃತಿಯ ಒಂದು ಶಿಲ್ಪ; ಸಿಂಹಲಲಾಟ. **~ಶೇಷ** = ಯಶಸ್ಸನ್ನು ಮಾತ್ರ ಉಳಿಸಿಹೋದ; ಸತ್ತ.

**ಕೀರ್ತಿಸು** (ಕ್ರಿ). ಹೊಗಳು; ಸ್ತುತಿಸು.

**ಕೀಲ್(ಲು)** (ನಾ). ೧. ಅಗುಳಿ; ಬೆಣೆ. ೨. ಬಾಗಿಲು, ಪೆಟ್ಟಿಗೆ ಮುಂತಾದುವಕ್ಕೆ ಹಾಕುವ ಬೀಗ. ೩. ಗಡಿಯಾರ, ಯಂತ್ರ ಮೊದಲಾದುವನ್ನು ನಡೆಸಲು ಸುತ್ತಿ ಇಡುವ ಸುರುಳಿ. ೪. ರಹಸ್ಯ; ಗುಟ್ಟು. ೫. ಬೆಂಕಿ; ಅಗ್ನಿ. **~ಇಗ** = ೧. ಬೆಸ್ತ; ಮೀನುಗಾರ. ೨. ಬಡಗಿ; ಮರಗೆಲಸಿ. **~ಇಸು** = ೧. ಜೋಡಿಸು; ಸೇರಿಸು. ೨. ನಡು; ನಾಟು. ೩. ಬಿಗಿದು ಕಟ್ಟು. ೪. ದಟ್ಟಣಿಸು; ಒತ್ತಾಗಿ ಸೇರು. **~ಎಣ್ಣೆ** = ೧. ಯಂತ್ರದ ಕೀಲುಗಳು ಸರಾಗವಾಗಿ ತಿರುಗುವುದಕ್ಕಾಗಿ ಹಾಕುವ ಎಣ್ಣೆ. ೨. ಟಾರೆಣ್ಣೆ; ಡಾಂಬರು.

**ಕೀಲ** (ನಾ). ೧. ಹಾಲು; ಕ್ಷೀರ. ೨. ಗೂಟ; ಬೆಣೆ. ೩. ಕಂಬ; ಸ್ತಂಭ. ೪. ಈಟಿ; ಭರ್ಜಿ. ೫. ಪರ್ವತ. ೬. ಅರಗು; ಲಾಕ್ಷ. ೭. ಬೆಂಕಿಯ ಜ್ವಾಲೆ. ೮. ಮರ್ಮ; ಗುಟ್ಟು. ೯. ಹಿಡಿತ; ಅಂಕೆ. **~ಸಾಗರ** = ಒಂದು ಬಗೆಯ ರೊಟ್ಟಿ.

**ಕೀಲ(ಳ)ಕ** ೧. = ಕೀಲ. ೨. ಸುತ್ತಿಗೆ; ಕೊಡತಿ. ೩. ಅರುವತ್ತು ಸಂವತ್ಸರಗಳಲ್ಲಿ ಒಂದು.

**ಕೀಲಣ** (ನಾ). ೧. ಜೋಡಣೆ; ಬಂಧ. ೨. ಗುಟ್ಟು; ಮರ್ಮ.

**ಕೀಲಣೆ** = ಕೀಲಣ. **~ಪೆ(ವೆ)ಱು(ರು)** = ಬಂಧನಕ್ಕೆ ಸಿಕ್ಕು; ಕಟ್ಟಿಗೆ ಒಳಗಾಗು.

**ಕೀಲಾರ** (ನಾ). ಹಸುಗಳ ಹಟ್ಟಿ; ಗೋಶಾಲೆ.

**ಕೀಲಾರಿ** (ನಾ). ೧. ದನಕರುಗಳನ್ನು ಸಾಕುವವನು; ತುರುಗಾಹಿ. ೨. ಹಾಲು ಮಾರುವವನು.

**ಕೀಲಾಲ** (ನಾ). ೧. ನೆತ್ತರು; ರಕ್ತ. ೨. ನೀರು; ಜಲ. ೩. ಅಮೃತ. ೪. ಸಿಹಿಯಾದ ಪಾನೀಯ. ೫. ಜೇನುತುಪ್ಪ. ೬. ಕೆಂಪು ಬಣ್ಣ. ೭. ಸೀಯಾಳ; ಸಿಹಿತೆಂಗು.

**ಕೀಲಾಲಪ** (ನಾ). ೧. ಅಮೃತಪಾನ ಮಾಡುವವನು; ದೇವತೆ. ೨. ರಕ್ತ ಕುಡಿಯುವವನು; ರಾಕ್ಷಸ.

**ಕೀಲಿ** = ಕೀಲ್. **~ಕೆಯ್** = ಬೀಗವನ್ನು ತೆಗೆಯುವ ಸಾಧನ; ಬೀಗದ ಕೈ.

**ಕೀಲಿತ** (ಗು). ೧. ಜೋಡಿಸಿದ; ಸೇರಿಸಿದ. ೨. ನಾಟಿದ; ಚುಚ್ಚಿದ. ೩. ಕಟ್ಟಲ್ಪಟ್ಟ; ಬಂಧನದಲ್ಲಿಟ್ಟ.

**ಕೀಲೆ** (ನಾ). ಉರಿ; ಜ್ವಾಲೆ.

**ಕೀವಿಲ** (ನಾ). ಕೊಳಕ; ಹೇಸಿ ಮನುಷ್ಯ.

**ಕೀವು** (ನಾ). ಹುಣ್ಣಿನೊಳಗೆ ಉಂಟಾಗುವ ರಸಿಕೆ, –ಲಸಿಕೆ.

**ಕೀಶ** (ನಾ). ಕೋತಿ; ಮಂಗ. **~ಈಶ** = ೧. ಕಪಿಗಳ ಒಡೆಯ. ೨. ಸುಗ್ರೀವ. ೩. ಶ್ರೀರಾಮ.

**ಕೀಸರ** (ನಾ). ಬೇಸರ ತರುವ ಗಟ್ಟಿಯಾದ ಶಬ್ದ, –ಗಲಾಟೆ.

**ಕೀಸರು** ೧. = ಕೀಸರ. ೨. ತರಕಾರಿ ಹೆಚ್ಚಿದ ಮೇಲೆ ಉಳಿಯುವ ಕಸಕಡ್ಡಿ.

**ಕೀಸಲು** (ನಾ). ಪದರ; ಮಡಿಕೆ.

**ಕೀಸು** (ಕ್ರಿ). ೧. ತೆಳುವು ಮಾಡು; ಕೃಶಗೊಳಿಸು. ೨. ಕೊರೆ; ಕೆತ್ತು. ೩. ಉಜ್ಜು; ತಿಕ್ಕು. ೪. ಬಾಣಬಿಡು. ೫. ಬೋಳಿಸು. (ನಾ). ೬. ಕಿವಿಯಲ್ಲಿಟ್ಟುಕೊಳ್ಳುವ ತಾಳೆ

ಗರಿಯ ಸೀಳು; ಸುತ್ತೋಲೆ. ೭. ಸಿಗುರು; ಚಕ್ಕೆ. ~ಉಳಿ = ಉಜ್ಜುಗೊರಡು; ಹತ್ತರಿ.

ಕೀಳ್(ಳು) ೧. = ಕೀಟ್. (ನಾ). ೨. ಹಸುವಿನ ಕರು. ೩. ಅಂಗಳ; ಕೊಟ್ಟಿಗೆ. ~ಇಸು = ೧. ಕಿತ್ತು ತೆಗೆಸು. ೨.ಅಗೆಸು; ತೋಡಿಸು. ೩. ಕಿವುಡುಗೊಳಿಸು. ~ಕ(ಗ)ಣ್ಣು = ೧. ತಿರಸ್ಕಾರದೃಷ್ಟಿ. ೨. ಕಣ್ಣಿನ ಒಂದು ಬಗೆಯ ರೋಗ. ~ಕು(ಗು)ದಿ = ಹೀನಸ್ಥಿತಿಯಲ್ಲಿ ನರಳು. ~ದಾನ = ೧. ಕೆಳಗೆ ಸುರಿಯುವ ಮದೋದಕ. ೨. ಅಪಾತ್ರದಾನ. ~ವಾಸಿ = ಇಳಿವರಿ; ತಗ್ಗುವಿಕೆ.

ಕೀಳಿಡು (ಕ್ರಿ). ಅರಚು; ಕೂಗು.

ಕೀಟ್(ಳ್) (ಕ್ರಿ). ೧. ಎಳೆದು ಹಾಕು; ತೆಗೆದುಹಾಕು. (ನಾ). ೨. ಕೆಳಮಟ್ಟ. ೩. ಸೇವೆ. ೪. ಅಧಮ ಕುಲ. ೫. ಕಳಪೆ ಬಂಗಾರ. ೬. ಕುದುರೆಯ ಬಾಯೊಳಗೆ ಇಡುವ ಕಬ್ಬಿಣದ ಕಂಬಿ; ಕಡಿವಾಣ. ೭.ತಗ್ಗಾದಪ್ರದೇಶ. ~ಆಳ್(ಳು)=ಊಳಿಗದಾಳು; ಅಡಿಯಾಳು. ~ಇಲ್ = ೧. ಸೇವಕರು ವಾಸಮಾಡುವ ಮನೆ. ೨. ಮನೆಯ ಅಂಗಳ; ಪಡಸಾಲೆ. ೩.ಕೆಳಮುಖ; ಜೋತು ಬೀಳುವುದು. ~ಬಾ(ವಾ)ಳ್ = ಬಿಚ್ಚುಗತ್ತಿ; ಹಿರಿದ ಕತ್ತಿ. ~ಮನ = ೧. ಹೀನವಾದ ಮನಸ್ಸು. ೨. ಹೀನವಾದ ಮನಸ್ಸಿನವನು; ನೀಚ.

ಕೀಟ(ಳ) (ನಾ). ೧. ಹೀನವಾದುದು; ಅಲ್ಪವಾದುದು. ೨. ನೀಚಮನುಷ್ಯ.

ಕೀಟ್ಮೆ(ಳ್ಮೆ) (ನಾ). ಕೀಳುತನ; ಹೀನತನ.

ಕೀಟ್ವಾ(ಳ್ವಾ)ಳ (ನಾ). ಅಂಗರಕ್ಷಕ; ಬಿಚ್ಚುಗತ್ತಿಯವನು.



# ಕು

ಕು (ನಾ). ಭೂಮಿ. ~ಜಾತ = ೧. ಭೂಮಿಯಿಂದ ಹುಟ್ಟಿದುದು. ೨. ಮರ, ಗಿಡ ಮುಂತಾದುವು. ೩. ಮಂಗಳ ಗ್ರಹ; ಅಂಗಾರಕ. ~ಧವ = ರಾಜ; ದೊರೆ.

ಕುಂಕುಮ (ನಾ). ೧. ಒಂದು ಜಾತಿಯ ಗಿಡ ಮತ್ತು ಹೂವು. ೨. ಕುಂಕುಮ ಕೇಸರಿ. ೩. ಹೆಂಗಸರು ಹಣೆಗೆ ಇಟ್ಟುಕೊಳ್ಳುವ ಕೆಂಬಣ್ಣದ ಪುಡಿ. ~ಅಂಕ=೧. ಕುಂಕುಮದ ಗುರುತು; ಲೇಪ. ೨. ಕುಂಕುಮದ ಲೇಪ ಹೊಂದಿದವನು. ~ಬಲ = ಮುತ್ತೈದೆತನ.

ಕುಂಕುವ = ಕುಂಕುಮ.

ಕುಂಕೆ (ನಾ). ೧. ಹೆಕ್ಕತ್ತು; ಹೆಡತಲೆ. ೨. ಹೆಗಲು.

ಕುಂಗ (ನಾ). ಮೀನುಗಾರ; ಬೆಸ್ತ.

ಕುಂಗು (ಕ್ರಿ). ೧. ಮುಳುಗು; ಅದ್ದು. ೨. ಬಾಗು; ಬಗ್ಗು. (ನಾ). ೩. ನೀರವತೆ; ಮೌನ.

ಕುಂಗೆ (ನಾ). ಮೊಲೆ; ಸ್ತನ.

ಕುಂಚ (ನಾ). ೧. ಗೊಂಚಲು; ಮಂಜರಿ. ೨. ನವಿಲುಗರಿಯಿಂದ ಮಾಡಿದ ಕುಂಚಿಗೆ. ೩. ಚವರಿ; ಚಾಮರ. ೪. ಚಿತ್ರ ಬರೆಯುವುದಕ್ಕೂ ಬಣ್ಣ ತುಂಬುವುದಕ್ಕೂ ಉಪ

ಯೋಗಿಸುವ ಕೂದಲಿನ ಕುಚ್ಚು. ೫. ಉಜ್ಜಿ ತೊಳೆಯುವುದಕ್ಕಾಗಿ ಬಳಸುವ ಸಾಧನ. ೬. ಅಣಸು ; ಗೊಣಸು.

**ಕುಂಚನ** (ನಾ). ತಿರುವು ; ಬಾಗು.

**ಕುಂಚಿ** ೧. = ಕುಂಚಿಗೆ. ೨. ಕುಚ್ಚು; ಗೊಂಚಲು. ೩.ನವಿಲುಗರಿಯಿಂದ ಮಾಡಿದ ಕುಂಚಿಗೆ.

**ಕುಂಚಿಕೆ** ೧. = ಕುಂಚ. ೨. ಬೀಗದ ಕೈ ; ಕೀಲಿಕೈ.

**ಕುಂಚಿಗೆ** (ನಾ). ಸಣ್ಣಮಕ್ಕಳ ಬೆನ್ನು ಮತ್ತು ತಲೆಯನ್ನು ಮುಚ್ಚುವಂತೆ ಹಾಕುವ ಕುಲಾಯಿ ; ಕುಲಾವಿ.

**ಕುಂಚಿತ** (ನಾ). ೧. ಕೀಳ್ಮಟ್ಟದವನು ; ತುಚ್ಛನಾದವನು. (ಗು). ೨.ಬಾಗಿದ ; ವಕ್ರವಾದ.

**ಕುಂಚು** (ಕ್ರಿ). ಕುಗ್ಗು ; ಬಾಗು.

**ಕುಂಜ** (ನಾ). ೧. ಬಳ್ಳಿಮಾಡ; ಲತಾಗೃಹ. ೨. ಆನೆಯ ಕೆಳದವಡೆ, –ಕೋರೆ. ೩.ಗುಹೆ ; ಗವಿ. ~ಉಪಾಂತ = ಹೊದರಿನ ಅಂಚು, –ದಂಡೆ.

**ಕುಂಜನ** (ನಾ). ಹೊದರು ; ಪೊದೆ.

**ಕುಂಜರ** (ನಾ). ೧. ಆನೆ ; ಗಜ. ೨. ಒಬ್ಬ ರಾಕ್ಷಸನ ಹೆಸರು ; ಗಜಾಸುರ. ~ಅರಾತಿ =೧. ಆನೆಯ ಶತ್ರು; ಸಿಂಹ. ೨.ಗಜಾಸುರನ ವೈರಿ ; ಶಿವ. ೩. ಶರಭ.

**ಕುಂಜಲ** (ನಾ). ಹುಳಿಗಂಜಿ ; ಅಂಬಲಿ.

**ಕುಂಜಿ** (ನಾ). ಮಗು ; ಕೂಸು.

**ಕುಂಜು** (ಕ್ರಿ). ನೆಗೆ ; ಜಿಗಿ ; ಹಾರು.

**ಕುಂಟ** (ನಾ). ೧. ಕಾಲು ಊನನಾದವನು. (ಗು). ೨ ದಡ್ಡ ; ಮಂದ. ೩. ಅಶಕ್ತ. ೪. ಸರಿಯಾಗಿ ನಡೆಯದ ; ಅಸಮರ್ಪಕ. ~ಚಾಕರಿ = ಸರಿಯಾಗಿ ನಡೆಯದ ನೌಕರಿ. ~ಜವಾಬು = ೧. ಸುಳ್ಳು ಉತ್ತರ. ೨. ಸಂಕ್ಷೇಪವಾದ ಉತ್ತರ. ~ದೇವತೆ = ಒಂದು ಕ್ಷುದ್ರದೇವತೆ.

**ಕುಂಟಣಿ** (ನಾ). ೧. (ವ್ಯಭಿಚಾರಕ್ಕಾಗಿ) ಗಂಡು ಹೆಣ್ಣುಗಳನ್ನು ಹೊಂದಿಸುವ ದಾಸಿ; ತಲೆಹಿಡುಕಿ. ೨. ತಲೆಹಿಡುಕ. ೩. ಕುಂಟಣಿಯ ಕೆಲಸ ; ತಲೆಹಿಡುಕತನ.

**ಕುಂಟಲಿ** = ಕುಂಟಣಿ.

**ಕುಂಟಿ** (ನಾ). ಕಾಲು ಊನವಾದವಳು ; ಹೆಳವಿ.

**ಕುಂಟಿಣಿ** = ಕುಂಟಣಿ.

**ಕುಂಟು** ೧. = ಕೊಂಟು. (ನಾ). ೨. ಗಿಡ್ಡ ; ಮೋಟ. ~ಆಟ = ಕುಂಟಿಕೊಂಡು ಬೇರೆಯವರನ್ನು ಹಿಡಿಯುವ ಒಂದು ಬಗೆಯ ಆಟ ; ಕುಂಟು ಮುಟ್ಟಾಟ. ~ನೆಪ(ವ) =ತೋರಿಕೆಯನೆಪ. ~ಪಂಕ್ತಿ=೧. ದಸ್ತವೈಜು ಮೊದಲಾದುವುಗಳಲ್ಲಿ ಆಮೇಲೆ ಸೇರಿಸಿದ ಸಾಲು. ೨. ಷರತ್ತು. ~ಹಲಪಿ=ಕುಂಟುತ್ತಾ ಕಲ್ಲಿನ ಬಿಲ್ಲೆಯನ್ನು ಕಾಲಿನಿಂದ ಚಿಮ್ಮಿಕೊಂಡು ಹೋಗುವ ಒಂದು ಬಗೆಯ ಆಟ ; ಕುಂಟಬಿಲ್ಲೆ.

**ಕುಂಟೆ** (ನಾ). ೧. ವ್ಯವಸಾಯದ ಒಂದು ಉಪಕರಣ. ೨. ನೀರು ನಿಲ್ಲುವ ಕುಳಿ ; ಕಟ್ಟೆ. ೩. ಕೊರಡು ; ಮರದ ತುಂಡು.

**ಕುಂಠಿತ** (ಗು). ೧. ಕುಗ್ಗಿದ ; ಮೊಟಕಾದ. ೨. ಮಂದವಾದ. ೩. ಮುಸುಕಿದ. ೪. ಮಂಕುಹಿಡಿದ. ೫. ನಿಂತುಹೋದ ; ತಡೆಯಲ್ಪಟ್ಟ.

**ಕುಂಡ** (ನಾ). ೧. ಹೋಮಕಾರ್ಯಕ್ಕಾಗಿ ನೆಲದಲ್ಲಿ ಮಾಡಿದ ಕುಣಿ. ೨. ಮಣ್ಣಿನ ಪಾತ್ರೆ. ೩. ಮಣ್ಣು ತುಂಬಿ ಸಣ್ಣಸಸಿಗಳನ್ನು ಬೆಳೆಸುವ ಪಾತ್ರೆ. ೪. ಜಲಾಶಯ ; ಕುಂಟೆ. ೫. ಹೊಟ್ಟೆ ; ಉದರ. ೬. ಹಾದರಕ್ಕೆ ಹುಟ್ಟಿದ ಮಗ. ~ಗೋ(ಲ(ಳ)ಕ =೧. ಹಾದರಕ್ಕೆ ಹುಟ್ಟಿದವನು. ೨. ವಿಧವೆಗೆ ಬೇರೆಯವರಿಂದ ಹುಟ್ಟಿದವನು. ೩. = ಕುಂಜಲ.

**ಕುಂಡಲ(ಳ)** (ನಾ). ೧. ಕಿವಿಯ ಆಭರಣ. ೨. ಕುಣಿಕೆ ; ಹಗ್ಗದ ಮಲಕು. ೩. ಬರೆಹದಲ್ಲಿ ಬಳಸುವ ಆವರಣ ಚಿಹ್ನೆ ; ಕಂಸ. ೪. ವರ್ತುಳ; ಸುತ್ತು. ~ದೀಕ್ಷಿತ = ಯಾಗವನ್ನು ಮುಗಿಸಿದ ಗುರುತಾಗಿ ಕಿವಿಯಲ್ಲಿ ಚಿನ್ನದ ಕುಂಡಲಗಳನ್ನು ಧರಿಸಿದವನು.

**ಕುಂಡಲಿ(ಳಿ)** (ನಾ). ೧. ಸುರುಳಿ ಸುತ್ತಿಕೊಂಡ ಹಾವು. ೨. ಒಂದು ಮೂಲಿಕೆ. ೩. ಭ್ರಮರ; ದುಂಬಿ. (ಗು). ೪. ಕುಂಡಲಗಳಿಂದ ಅಲಂಕೃತವಾದ. ೫. ವರ್ತುಳಾಕಾರವಾದ.

**ಕುಂಡಿ** (ನಾ). ೧. ತೆಂಗಿನ ಬುರುಡೆಯಿಂದ ಮಾಡಿದ ಜಲಪಾತ್ರೆ. ೨. = ಕುಂಡೆ.

**ಕುಂಡಿಕೆ** (ನಾ). ೧. ಕಮಂಡಲು ; ಜಲಪಾತ್ರೆ. ೨. ಬಾಳೆಗೊನೆಯ ಮೋತೆ.

**ಕುಂಡಿಗೆ** = ಕುಂಡಿಕೆ.

**ಕುಂಡೆ** (ನಾ). ೧. ನಿತಂಬ ; ಪಿರ್ರೆ. ೨. ಪಾತ್ರೆ ಮೊದಲಾದುವುಗಳ ತಳ, –ಬುಡ.

**ಕುಂತ** (ನಾ). ೧. ಈಟಿ; ಭರ್ಜಿ. ೨. ಚಿಕ್ಕ ಪ್ರಾಣಿ.

**ಕುಂತಲ(ಳ)** (ನಾ). ೧. ತಲೆಗೂದಲು ; ಕೇಶ. ೨. ಮುಡಿಯನ್ನು ಕಟ್ಟಿಕೊಳ್ಳುವ ಒಂದು ಬಗೆ. ~ಹಸ್ತ = ಉದ್ದವಾಗಿ ಹೆಣೆದ ಜಡೆ.

**ಕುಂದ** (ನಾ). ೧. ಕೊರತೆ; ನ್ಯೂನತೆ. ೨. ಬೆಟ್ಟ; ಗುಡ್ಡ. ೩. ಮರಳುದಿಣ್ಣೆ. ೪. ಒಂದು ಜಾತಿಯ ಮಲ್ಲಿಗೆ; ಮೊಲ್ಲೆ; ಕೋಲುಮಲ್ಲಿಗೆ. ೫. ಕುಬೇರನ ನವನಿಧಿಗಳಲ್ಲಿ ಒಂದು.

**ಕುಂದಕ** (ನಾ). ೧. ಕೊರತೆ; ಕುಂದು. ೨. ಅಡ್ಡಿ; ಆತಂಕ.

**ಕುಂದಣ** (ನಾ). ೧. ಚಿನ್ನದಲ್ಲಿ ಹರಳನ್ನು ಕೂಡಿಸುವ ಕೆಲಸ. ೨. ಚೊಕ್ಕ ಚಿನ್ನ; ಅಪರಂಜಿ.

**ಕುಂದಣಿ** (ನಾ). ೧. ಒರಳುಕಲ್ಲಿನಲ್ಲಿ ಧಾನ್ಯಗಳನ್ನು ತಳಿಸುವಾಗ ಕಾಳು ಸಿಡಿದುಹೋಗದಂತೆ ಇಡುವ ಸಾಧನ; ಕುದುರು. ೨. ಮರದ ಒರಳು.

**ಕುಂದು** (ಕ್ರಿ). ೧. ಕುಗ್ಗು; ತಗ್ಗು. ೨. ಒಣಗು; ಬಾಡು. ೩. ತಪ್ಪು. ೪. ನಿಲ್ಲಿಸು ; ಸ್ಥಾಪಿಸು. (ನಾ). ೫. ಕೊರತೆ; ನ್ಯೂನತೆ. ೬. ಕೀಳಾದುದು; ಹೀನವಾದುದು. ೭. ದನಕರುಗಳಿಗೆ ಬರುವ ಒಂದು ರೋಗ; ಸೆಲೆ. ೮. ಒಂದು ಬಗೆಯ ಸುಗಂಧದ ಬೇರು; ಕುಂದುರುಕ. ~ಇಡು = ನಿಂದಿಸು ; ದೋಷಾರೋಪ ಮಾಡು. ~ಇಸು = ೧. ಕುಗ್ಗಿಸು ; ತಗ್ಗಿಸು. ೨. ನಾಶವಾಗು.

**ಕುಂದೇಲು** (ನಾ). (ಅಳತೆ ಮೊದಲಾದುವುಗಳಲ್ಲಿ) ಕಡಮೆಯಾಗುವುದು ; ಕೊರೆ.

**ಕುಂಪಟ** (ನಾ). ಅಗ್ಗಿಷ್ಟಿಗೆ; ಕಬ್ಬಿಣದ ಒಲೆ.

**ಕುಂಪಣಿ** (ನಾ). ೧. ಸಾಮೂಹಿಕ ಕಾರ್ಯಸಂಸ್ಥೆ. ೨. ಭಾರತವನ್ನು ಕೆಲಕಾಲ ಆಳುತ್ತಿದ್ದ ಈಸ್ಟ್‌ಇಂಡಿಯಾ ಕಂಪನಿಯೆಂಬ ವ್ಯಾಪಾರೀ ಸಂಸ್ಥೆ.

**ಕುಂಬ** (ನಾ). ೧. ಹಡಗನ್ನು ಕಟ್ಟುವ ಮರ; ಕೂವೆಮರ. ೨. ಗಡಿಗೆ; ಕಲಶ. ೩. ಉತ್ಸವದಲ್ಲಿ ದೇವತೆಗೆ ಗಡಿಗೆಯಲ್ಲಿ ಎಡೆಮಾಡುವ ಅನ್ನ. ೪. ಧಾನ್ಯವನ್ನು ಅಳೆಯುವ ಒಂದು ಅಳತೆ. ೫. ಯಾಗಸ್ಥಳದ ಸುತ್ತಲೂ ಇರುವ ಬೇಲಿ.

**ಕುಂಬತಳ** (ನಾ). ಆನೆಯ ನೆತ್ತಿ; ಕುಂಭಸ್ಥಳ.

**ಕುಂಬಱ(ರ)** (ನಾ). ಮಣ್ಣಿನ ಪಾತ್ರೆಗಳನ್ನು ಮಾಡುವವನು; ಕುಂಬಾರ.

**ಕುಂಬಳ** (ನಾ). ೧. ಅಡುಗೆಗೆ ಮತ್ತು ಔಷಧಿಗೆ ಉಪಯೋಗಿಸುವ ಒಂದು ಬಗೆಯ ಕಾಯಿ; ಕೂಷ್ಮಾಂಡ. ೨. ಇಸ್ಪೀಟಿನ ಎಲೆಗಳಲ್ಲಿ ಒಂದು. ~ಸೊಟ್ಟೆ = ಕುಂಬಳದ ಬುರುಡೆಯಿಂದ ಮಾಡಿದ ಜಲಪಾತ್ರೆ; ಕಮಂಡಲು.

ಕುಂಬಳಿ (ನಾ). ಕೂಲಿ; ದಿನಗೂಲಿ.

ಕುಂಬಾಱ(ರ) = ಕುಂಬಱ.

~ಪು(ಹು)ೞು(ಳು) = ಕೆಸರಿನಲ್ಲಿ ಇರುವ ಒಂದು ಜಾತಿಯ ಮಣ್ಣುಹುಳು.

ಕುಂಬು (ಕ್ರಿ). ೧. ಜೋಲು; ಒಲೆದಾಡು. ೨. ಬಾಗು; ನಮಸ್ಕರಿಸು. ೩. ಚಪ್ಪಾಳೆ ತಟ್ಟಿಕೊಂಡು ಕುಣಿ. (ನಾ). ೪. ಬಾಗುವಿಕೆ; ನಮಸ್ಕಾರ. ೫. ಹುಳುಕು; ಕುಟ್ಟೆ. ೬. ಗಟ್ಟಿಯಿಲ್ಲದುದು; ದುರ್ಬಲವಾದುದು.

ಕುಂಬೆ (ನಾ). ಗೋಡೆಯ ಮೇಲ್ಭಾಗದಲ್ಲಿ ಮಾಳಿಗೆಯ ಸುತ್ತಲೂ ಕಟ್ಟಿದ ದಿಂಡು; ಗೋಡೆಯ ತಲೆಕಟ್ಟಡ.

ಕುಂಭ (ನಾ). ೧. ಕೊಡ; ಕಲಶ. ೨. ಒಂದು ಅಳತೆ. ೩. ಆನೆಯ ಕುಂಭಸ್ಥಳ. ೪. ಒಂದು ಬಗೆಯ ಸುಗಂಧಸಸ್ಯ; ಗುಗ್ಗುಳ. ೫. ಒಬ್ಬ ರಾಕ್ಷಸನ ಹೆಸರು. ೬. ಹನ್ನೆರಡು ರಾಶಿಗಳಲ್ಲಿ ಒಂದು. ~ದ್ರೋಣ=ಧಾರಾಕಾರವಾದುದು; ಒಂದೇ ಸಮನೆ ಸುರಿಯುವುದು. ~ಸಂಭವ = ೧. ಅಗಸ್ತ್ಯ. ೨. ದ್ರೋಣಾಚಾರ್ಯ. ~ಸ್ಥಲ(ಳ) = ಕುಂಬತಳ.

ಕುಂಭಕರ್ಣ (ನಾ). ಒಬ್ಬ ರಾಕ್ಷಸನ ಹೆಸರು; ರಾವಣನ ತಮ್ಮ.

ಕುಂಭಿ (ನಾ). ೧. ಆನೆ; ಗಜ. ೨. ಮಡಕೆ; ಪಾತ್ರೆ.

ಕುಂಭಿನಿ (ನಾ). ೧. ಭೂಮಿ. ೨. ಹೆಣ್ಣಾನೆ; ಪಿಡಿ.

ಕುಂಭೀನಸ (ನಾ). ಹಾವು; ಸರ್ಪ.

ಕುಂಭೀರ (ನಾ). ಮೊಸಳೆ; ನಕ್ರ.

ಕುಈ (ನಾ). ಒಂದು ದ್ರಾವಿಡಭಾಷೆ.

ಕುಕವಿ (ನಾ). ಕ್ಷುದ್ರಕವಿ; ಅಧಮಕವಿ.

ಕುಕಿಲ್(ಲು) (ಕ್ರಿ). ೧. ಕೋಗಿಲೆಯಂತೆ ಕೂಗು; ಬಗ್ಗಿಸು. ೨. ಕಿರಿಚು; ಅರಚು. (ನಾ). ೩. ಕೋಗಿಲೆ. ೪. ಕೋಗಿಲೆಯ ಧ್ವನಿ.

ಕುಕೂಲ (ನಾ). ೧. ಹೊಟ್ಟು, ಉಮ್ಮಿ ಮೊದಲಾದುವುಗಳಿಂದ ಹೊತ್ತಿಸಿದ ಬೆಂಕಿ. ೨. ತಪ್ಪಲು ಪ್ರದೇಶ; ಸಾನು. ೩. ದಕ್ಕುದಸಿಗಳನ್ನು ತುಂಬಿದ ಕುಣಿ.

ಕುಕ್ಕ (ನಾ). ನಾಯಿ; ಶ್ವಾನ.

ಕುಕ್ಕಡಿ (ನಾ). ೧. ಮಧ್ಯದಲ್ಲಿ ದಪ್ಪವಾಗಿಯೂ ಎರಡು ತುದಿಗಳಲ್ಲಿ ತೆಳುವಾಗಿಯೂ ಇರುವ ದಾರದ ಸುತ್ತು. ೨. ರಟ್ಟೆಯ ಸ್ನಾಯುವಿನಲ್ಲಿ ಏಳುವ ಬಾವು, -ಊತ.

ಕುಕ್ಕರ = ಕುಕ್ಕ.

ಕುಕ್ಕರಬಡಿ (ಕ್ರಿ). ೧. ಒತ್ತಾಯದಿಂದ ಕುಕ್ಕಿ ಕುಳ್ಳಿರಿಸು; ಎತ್ತಿ ಅಪ್ಪಳಿಸು. ೨. ಸದ್ದಿಲ್ಲದೆ ಕುಳಿತಿರು.

ಕುಕ್ಕು (ಕ್ರಿ). ೧. ಚುಚ್ಚು; ತಿವಿ. ೨. ಕೊಕ್ಕಿನಿಂದ ಕುಟುಕು. ೩. ಹೇನು, ಕೂರೆ ಮೊದಲಾದುವನ್ನು ಉಗುರಿನಿಂದ ಒರೆ; ಹಿಸುಕಿ ಕೊಲ್ಲು. ೪. ಕಣ್ಣು ಕೋರೈಸು. ೫. ಬಟ್ಟೆಯನ್ನು ಮೆತ್ತಗೆ ಕುಸುಕು. ೬. = ಕುಬ್ಬು. ೭. ರಾಶಿಯಾಗಿ ಬರು; ಗುಂಪಾಗಿ ಬರು. (ನಾ). ೮. ಒಂದು ಬಗೆಯ ನೀರುಹಕ್ಕಿ; ಕೊಕ್ಕರೆ.

ಕುಕ್ಕುಟ (ನಾ). ೧. ಹುಂಜ. ೨. ಮೋಸ; ವಂಚನೆ. ~ಆಹವ = ಕೋಳಿಯ ಕಾಲುಗಳಿಗೆ ಚೂರಿಗಳನ್ನು ಕಟ್ಟಿ ಕಾದಾಡಿಸುವುದು; ಹುಂಜದ ಕಾಳಗ. ~ಈಶ್ವರ = ಗೊಮ್ಮಟೇಶ್ವರ.

ಕುಕ್ಕುರ ೧. = ಕುಕ್ಕ. ೨. ಒಂದು ಬಗೆಯ ಸುಗಂಧದ ಗಿಡ; ಮಾಚಿಪತ್ರೆ.

ಕುಕ್ಕುಱು(ರಿ)ಸು (ಕ್ರಿ). ೧. ಕುಸಿದು ಬೀಳು; ಒಮ್ಮೆಲೆ ಕೆಳಗೆ ಕುಳಿತುಕೊಳ್ಳು. ೨. ಬಲಾತ್ಕಾರವಾಗಿ ಕೂರಿಸು. ೩. ಆಕ್ಕಸದಿಂದ ಕೆಳಗೆ ಕುಕ್ಕು; ಎತ್ತಿ ಅಪ್ಪಳಿಸು. ೪. ನಾಶಮಾಡು; ಹಾಳುಮಾಡು. ೫. ಕುಳ್ಳಿರು; ಕೂಡು.

ಕುಕ್ಕುಟ(ಳ) (ನಾ). ಕುದಿಯುವುದನ್ನು ಸೂಚಿಸುವ ಅನುಕರಣ ಶಬ್ದ. ~(ಂ)ಕು(ಗು)ದಿ = ೧. ತೀವ್ರವಾಗಿ ಕುದಿ; ತಕತಕನೆ ಕುದಿ. ೨. ತಳಮಳಿಸು; ಸಂಕಟ ಪಡು.

ಕುಕ್ಕೂಬಾಳ (ನಾ). ಎಳೆಯ ಮಗು; ಹಸು ಗೂಸು.

ಕುಕ್ಕೆ (ನಾ). ೧. ಬಿದಿರಿನಿಂದ ಹೆಣೆದ ಬುಟ್ಟಿ; ಮಂಕರಿ. ೨. ಹೊಟ್ಟೆ; ಉದರ.

ಕುಕ್ಷಿ (ನಾ). ೧. ಬಸಿರು; ಹೊಟ್ಟೆ. ೨. ಗುಹೆ. ೩. ಪೊಳ್ಳಾದ ಭಾಗ.

ಕುಗುರು (ಕ್ರಿ). ತೂಕಡಿಸು; ಜೊಂಪುಹತ್ತು. ~ಹತ್ತು = ಜೊಂಪುಹತ್ತು; ತೂಕಡಿಕೆ ಬರು.

ಕುಗ್ಗು ೧. = ಕುಬ್ಜು. (ನಾ). ೨. ಕುಸಿತ; ಕೊರತೆ. ~ಬಡಿ = ಸದೆಬಡಿ.

ಕುಗ್ರಾಮ (ನಾ). ೧. ತೀರ ಚಿಕ್ಕಹಳ್ಳಿ; ಕಾಲೂರು. ೨. ದುರ್ಭಿಕ್ಷ; ಕ್ಷಾಮ.

ಕುಚ (ನಾ). ಮೊಲೆ; ಸ್ತನ.

ಕುಚಂದನ (ನಾ). ೧. ರಕ್ತಚಂದನ; ಕೆಂಪು ಗಂಧ. ೨. ಕುಂಕುಮಕೇಸರಿ.

ಕುಚರ (ನಾ). ೧. ಕೆಟ್ಟಬುದ್ಧಿಯುವನು. (ಗು). ೨. ನೆಲದ ಮೇಲೆ ಓಡಾಡುವ. ೩. ಮೆಲ್ಲಗೆ ಸಾಗುವ. ೪. ಕೆಟ್ಟ ನಡತೆಯ. ೫. ದೋಷ ಗಳನ್ನು ಹುಡುಕುವ.

ಕುಚಿತ (ನಾ). ೧. ಅಲ್ಪಸಾಧನನು; ಅಧಮ. (ಗು). ೨. ಸಂಕುಚಿತವಾದ. ೩. ಅಲ್ಪ; ಕ್ಷುದ್ರ.

ಕುಚೇಲ (ನಾ). ೧. ಚಿಂದಿಬಟ್ಟೆ. ೨. ಚಿಂದಿಬಟ್ಟೆ ಯನ್ನು ಧರಿಸಿದವನು. ೩. ಕೃಷ್ಣನ ಬಾಲ್ಯ ಸ್ನೇಹಿತ; ಸುದಾಮ.

ಕುಚೇಷ್ಟೆ (ನಾ). ೧. ದುಷ್ಟಯೋಜನೆ. ೨. ಕುಚೋದ್ಯ; ಅಪಹಾಸ್ಯ.

ಕುಚೋದ್ಯ ೧. = ಕುಚೇಷ್ಟೆ. ೨. ಕಿಡಿಗೇಡಿತನ.

ಕುಚ್ಚಣಿಕೆ (ನಾ). ಅಣಕ; ನಿಂದೆ.

ಕುಚ್ಚಣಿಸು (ಕ್ರಿ). ತಿರಸ್ಕರಿಸು; ನಿಂದಿಸು.

ಕುಚ್ಛಿತ (ನಾ). ೧. ಹೀನವಾದುದು; ಕೀಳಾದುದು. ೨. ಅಲ್ಪ; ನೀಚ. (ಗು). ೩. ಕೀಳಾದ; ಕುತ್ಸಿತ.

ಕುಚ್ಚು (ಕ್ರಿ). ೧. ಕುದಿಸು; ಮರಳಿಸು. ೨. ಕುಕ್ಕು; ಚುಚ್ಚು. (ನಾ). ೩. ಒಂದು ಜಾತಿಯ ಮೀನು. ೪. ಗೊಂಚಲು; ಗೊಂಡೆ. ೫. ಜಡೆಯ ಕೊನೆಗೆ ಕಟ್ಟುವ ಆಭರಣ. ~ಮಟ್ಟೆ = ೧. ಸುಣ್ಣ, ಬಣ್ಣ ಹೊಡೆಯುವುದಕ್ಕೆ ಉಪಯೋಗಿಸುವ ಒರಟಾದ ಕುಂಚ. ೨. ಬಿರುಸಾದ ಕೂದಲು ಗಳಿಂದ ಮಾಡಿದ ಕುಂಚ.

ಕುಜ ೧. = ಕುಜಾತ. ೨. ಬೇಡ; ಕಿರಾತ. ೩. ನಿಷ್ಠುರವಾದ ಮಾತು. (ಗು). ೪. ಭೂಮಿ ಯಲ್ಲಿ ಹುಟ್ಟಿದ. ~ವಾರ = ಮಂಗಳವಾರ.

ಕುಜಾಯ (ನಾ). ಹೂಜಿ; ಕಳಸ.

ಕುಜ್ಜ (ನಾ). ೧. ಕುಳ್ಳ; ಗಿಡ್ಡ; ಕುಬ್ಜ. (ಗು). ೨. ಬಾಗಿದ; ಕೆಳಗಿಳಿದ. ~ಮುಖ = ಮುಖವನ್ನು ಬಾಗಿಸಿದವನು.

ಕುಜ್ಜೆ (ನಾ). ೧. ಪಕ್ವವಾಗದ ಹಲಸಿನಕಾಯಿ; ಕಡಿಗೆ. ೨. ಗಿಡ್ಡಿ; ಕುಬ್ಜೆ.

ಕುಟ (ನಾ). ೧. ಕುಟ್ಟುವುದು. ೨. ಕೊಡ; ಕಲಶ. ೩. ಮನೆ. ೪. ಮರ; ವೃಕ್ಷ. ೫. ಕಲ್ಲು ಒಡೆಯುವ ಸಾಧನ; ಸುತ್ತಿಗೆ.

ಕುಟಂಕ (ನಾ). ೧. ಚಪ್ಪರ. ೨. ಕೊಟ್ಟಿಗೆ.

ಕುಟಕ (ನಾ). ೧. ಕಡೆಗೋಲನ್ನು ಕಟ್ಟುವ ಕಂಬ. ೨. ಗಳೆಯಿಲ್ಲದ ನೇಗಿಲು.

ಕುಟಜ (ನಾ). ಬೆಟ್ಟಮಲ್ಲಿಗೆ; ಕೊಡಸಿಗೆ.

ಕುಟರು (ನಾ). ೧. ಕೋಳಿ. ೨. ಡೇರೆ; ಗುಡಾರ.

ಕುಟಹಾರಿ (ನಾ). ದಾಸಿ; ತೊತ್ತು.

ಕುಟಿ (ನಾ). ೧. ಕಣ್ಣಿನಲ್ಲಿ ಏಳುವ ಬೊಕ್ಕೆ. ೨. ತಿರುವು; ಬಾಗು. ೩. ಗುಡಿಸಿಲು;

ಮನೆ. ೪. ಹೊಗೆ ಹಾಕುವುದಕ್ಕೆ ಬಳಸುವ ಪಾತ್ರೆ. ೫. ಹೂವಿನ ತುರಾಯಿ.

**ಕುಟಿಲ(ಳ)** (ನಾ). ೧. ಮೋಸ; ವಂಚನೆ. ೨. ಮೋಸಗಾರ. (ಗು). ೩. ಕೊಂಕಿದ; ಬಾಗಿದ. ೪. ಗುಂಗುರಾದ. ೫. ಮೋಸಗಾರಿಕೆಯ; ವಂಚನೆಯ. **~ಅಂಗ** = ಅಪ್ರಮಾಣಿಕ ಮಾರ್ಗ; ಮೋಸವನ್ನೊಳಗೊಂಡ ರೀತಿ. **~ಅಲ(ಳ)ಕ** = ಗುಂಗುರು ಕೂದಲು; ಸುರುಳಿಗೂದಲು. **~ಕೋವಿದ** = ವಂಚನೆಯಲ್ಲಿ ನಿಪುಣ.

**ಕುಟೀರ** (ನಾ). ಗುಡಿಸಿಲು; ಸಣ್ಣಮನೆ.

**ಕುಟೀರಕ** = ಕುಟೀರ.

**ಕುಟುಂಬ** (ನಾ). ೧. ಮನೆತನ. ೨. ಮನೆಯ ಯಜಮಾನಿ; ಹೆಂಡತಿ. ೩. ಮನೆಯೊಳಗಿರುವ ಎಲ್ಲ ಸಂಬಂಧಿಕರು; ಸಂಸಾರ.

**ಕುಟುಂಬಿ** (ನಾ). ೧. ಮನೆಯ ಯಜಮಾನ. ೨. ಸಂಸಾರವನ್ನು ಚೆನ್ನಾಗಿ ಪೋಷಿಸುವವನು. ೩. ಒಕ್ಕಲಿಗ; ಬೇಸಾಯಗಾರ.

**ಕುಟುಂಬಿನಿ** (ನಾ). ಮನೆಯ ಒಡತಿ; ಯಜಮಾನಿ.

**ಕುಟುಕು** (ಕ್ರಿ). ೧. ಕುಕ್ಕು; ತಿವಿ. (ನಾ). ೨. ತುತ್ತು; ಗ್ರಾಸ. ೩. ಒಂದು ಸಲ ಕುಡಿಯುವಷ್ಟು ದ್ರವ; ಗುಟುಕು. **~ಕೊ(ಗೊ)ಳ್** = ೧. ಕೊಕ್ಕಿನಿಂದ ಕುಟುಕು. ೨. ನುಂಗು; ಕಬಳಿಸು. **~ಜೀವ** = ಈಗಲೋ ಆಗಲೋ ಹಾರಿ ಹೋಗಲಿರುವ ಪ್ರಾಣ. **~ಮುಳ್ಳು** = ೧. ಚುಚ್ಚುವ ಮುಳ್ಳು. ೨. ತೊಂದರೆ; ಕಿರಿಕಿರಿ.

**ಕುಟುರು** (ಕ್ರಿ). ೧. ಪಾರಿವಾಳದ ಹಾಗೆ ಧ್ವನಿ ಮಾಡು. (ನಾ). ೨. ಪಾರಿವಾಳ ಮೊದಲಾದ ಪಕ್ಷಿಗಳ ಕೂಗು. ೩. ಎತ್ತು ಅಥವಾ ಹೋರಿ ಮಾಡುವ ಶಬ್ದ; ಡುರುಕು. ೪. ಉಬ್ಬಿದ ಕೆನ್ನೆ.

**ಕುಟ್ಟಣ** (ನಾ). (ಎಲೆ, ಅಡಿಕೆ ಮೊದಲಾದುವನ್ನು) ಕುಟ್ಟುವ ಸಾಧನ.

**ಕುಟ್ಟಣಿ** = ಕುಟ್ಟಣ.

**ಕುಟ್ಟರಿ** (ನಾ). ಕುಪ್ಪೆ; ರಾಶಿ.

**ಕುಟ್ಟಾಣಿ** = ಕುಟ್ಟಣ.

**ಕುಟ್ಟಿ** (ನಾ). ೧. ಹುಡುಗ; ಬಾಲಕ. ೨. ಚಿಕ್ಕಗೂಟ; ಬೆಣೆ; ಚಿಣ್ಣಿ. **~ದೊಣ್ಣೆ** = ಒಂದು ಬಗೆಯ ಆಟ; ಚಿಣ್ಣಿಕೋಲು.

**ಕುಟ್ಟಿಗ** (ನಾ). ಒಂದು ಬಗೆಯ ಆಟ; ಲಾಗ ಹಾಕುವುದು.

**ಕುಟ್ಟಿಚಾತ** (ನಾ). ಒಂದು ಕ್ಷುದ್ರದೇವತೆ; ಜಕ್ಕಿಣಿ. **~ವಿದ್ಯೆ** = ಇಂದ್ರಜಾಲ; ಕಣ್ಕಟ್ಟು.

**ಕುಟ್ಟಿನಿ** = ಕುಂಟಣಿ.

**ಕುಟ್ಟಿಮ** (ನಾ). ಕಲ್ಲುಗಳನ್ನು ಹೊಂದಿಸಿದ ನೆಲಗಟ್ಟು; ಸಮ ಮಾಡಿದ ನೆಲ.

**ಕುಟ್ಟು** (ಕ್ರಿ). ೧. ಹೊಡೆ; ಬಡಿ. ೨. ಗಟ್ಟಿಯಾಗಿ ಉಚ್ಚರಿಸು. ೩. ಒನಕೆ ಮೊದಲಾದುವುಗಳಿಂದ ಏಟು ಹಾಕಿ ಬತ್ತದ ಹೊಟ್ಟು ತೆಗೆ. (ನಾ). ೪. ಹೊಡೆತ; ಪೆಟ್ಟು. ೫. ಅಜೀರ್ಣದಿಂದ ಕರುಳಿನಲ್ಲಾಗುವ ನೋವು. ೬. ಪುಡಿ; ಚೂರ್ಣ.

**ಕುಟ್ಟೆ** (ನಾ). ಮರವನ್ನು ಕೊರೆದು ಹುಡಿ ಮಾಡುವ ಹುಳು.

**ಕುಟ್ಮಲ(ಳ)** (ನಾ). ಅರೆಬಿರಿದ ಮೊಗ್ಗು; ನನೆ.

**ಕುಠ** (ನಾ). ಮರ; ವೃಕ್ಷ.

**ಕುಠಾರ** (ನಾ). ಕೊಡಲಿ, ಗುದ್ದಲಿ ಮುಂತಾದ ಆಯುಧ.

**ಕುಠಾರಧರ** (ನಾ). ೧. ಕೊಡಲಿಯನ್ನು ಹಿಡಿದವನು; ಪರಶುರಾಮ. ೨. ವಿನಾಯಕ; ಗಣೇಶ.

**ಕುಠಾರಿ** = ಕುಠಾರ.

**ಕುಡ** = ಕುಟಿ.

**ಕುಡತ** = ಕುಡತಿ.

ಕುಡತಿ (ನಾ). ತೋೞಿಲ್ಲದ ಗಿಡ್ಡಂಗಿ; ವಾಸ್ಕೋಟು.

ಕುಡಲು = ಕುಡುಗೋಲ್.

ಕುಡಿ (ಕ್ರಿ). ೧. ಪಾನಮಾಡು. (ನಾ). ೨. ತುದಿ; ಮೊನೆ. ೩. ಬಳ್ಳಿಯ ತುದಿ; ಚಿಗುರು. ೪. ವಂಶ; ಮನೆತನ. ೫. ಒಕ್ಕಲು. ~ಕ=ಕುಡುಕ. ~ಕ(ಗ)ಟ್ಟು =೧. ದೀಪದ ಬತ್ತಿ ಸುಟ್ಟು ಕರಿಕಾಗು. ೨. ಕೆಲವು ಗಿಡಮೂಲಿಕೆಗಳನ್ನು ಮಂತ್ರಿಸಿ ಮಾಸಲುಗಟ್ಟು. ~ಕೊ(ಗೊ)ೞ್ = ಚಿಗುರು; ಕುಡಿಯೊಡೆ. ~ಪೞ(ಳೆ)ಯ = ಹಳೆಯ ತಲೆಮಾರಿನವನು; ಪೂರ್ವಜ. ~ಬಾ(ವಾ)ಲ =೧. ಬಾಲದ ತುದಿ, -ಕೊನೆ. ೨. ಚೂಪಾದ ಬಾಲವುಳ್ಳ ಒಂದು ಜಾತಿಯ ನಾಯಿ. ~ಮುಸುಗು = ಹೆಂಗಸರು ತಲೆಯ ಮೇಲೆ ಹೊದೆಯುವ ಸೆರಗು.

ಕುಡಿಕೆ (ನಾ). ಮಣ್ಣಿನಿಂದ ಮಾಡಿದ ಚಿಕ್ಕ ಪಾತ್ರೆ; ಗಿಂಡಿ.

ಕುಡಿಚಿ (ನಾ). ಕುಡಿಯುವ ಚಟವುಳ್ಳವಳು, -ವ್ಯಸನವುಳ್ಳವಳು.

ಕುಡಿತ (ನಾ). ಕುಡಿಯುವಿಕೆ.

ಕುಡಿತೆ (ನಾ). ೧. ಬೊಗಸೆ; ಸೇರೆ. ೨. ಕುಡಿಯುವಿಕೆ. ೩. ಸೇರಿನ ಆರನೆಯ ಒಂದು ಅಂಶ. ೪. ಕಲಗಚ್ಚಿನ ಪಾತ್ರೆ; ಬಾನಿ.

ಕುಡಿಯ (ನಾ). ಒಕ್ಕಲಿಗ; ಬೇಸಾಯಗಾರ.

ಕುಡಿಹ (ನಾ). ೧. ಕುಡಿಯುವವನು; ಕುಡುಕ. ೨. ದಡ್ಡ; ಅವಿವೇಕಿ.

ಕುಡು ೧. = ಕೊಡು. ೨. ಏಟುಕೊಡು; ಹೊಡೆ. (ನಾ). ೩. ವಕ್ರವಾಗಿರುವಿಕೆ; ಬಾಗಿರುವಿಕೆ. ~ಕೊ(ಗೊ)ೞಲ್ =ಕೊಂಕಿದ ಧಾರೆಯುಳ್ಳ ಕೊಯ್ಯುವ ಸಾಧನ. ~ದಾಡೆ = ಕೊಂಕಿದ ಕೋರೆಹಲ್ಲು.

ಕುಡುಕ (ನಾ). ಕುಡಿಯುವವನು; ಮದ್ಯಪಾನ ಮಾಡುವವನು.

ಕುಡುಕು ೧. = ಕುಟುಕು. ೨. ಕುಟುಕು ಕೊಡು; ಗುಟುಕುನೀಡು. (ಗು). ೩. ಕುಡಿಯುವ ಸ್ವಭಾವದ.

ಕುಡುಗೂಸು = ಕೊಡಗೂಸು.

ಕುಡುಪು (ನಾ). ೧. ಡೊಂಕು; ವಕ್ರತೆ. ೨. ವಾದನದಂಡ; ಕಮಾನು. ೩. ಕಣ್ಣಿಗೆ ಅಂಜನವನ್ನು ಲೇಪಿಸುವ ಕಡ್ಡಿ; ಅಂಜನಶಲಾಕೆ. ೪. ಹತ್ತಿಯನ್ನು ಎಕ್ಕುವ ಕೋಲು. ೫. ಬರೆ ಹಾಕುವ ಕುಡ.

ಕುಡುಹು = ಕುಡುಪು.

ಕುಡ್ಡ (ನಾ). ಒಂದು ಜಾತಿಯ ಹಕ್ಕಿ; ಕೌಜಲು.

ಕುಡ್ಡೆ = ಕುಡ್ಯ.

ಕುಡ್ಯ (ನಾ). ಗೋಡೆ; ಭಿತ್ತಿ.

ಕುಣಪ (ನಾ). ೧. ಹೆಣ; ಶವ. ೨. ದುರ್ಗಂಧ; ಕೆಟ್ಟವಾಸನೆ. ~ಭೂಮಿ = ಸುಡುಗಾಡು; ಶ್ಮಶಾನ.

ಕುಣಿ (ಕ್ರಿ). ೧. ನೆಗೆದಾಡು; ಹಾರಾಡು. ೨. ನರ್ತಿಸು. (ನಾ). ೩. ಗುಂಡಿ; ತಗ್ಗು. ೪. ಡೊಂಕಾದ ಕೈಯುಳ್ಳವನು. ೫. ನಂದಿಮರ. ~ಇಸು = ೧. ಕುಣಿಯುವಂತೆ ಮಾಡು; ನರ್ತಿಸುವಂತೆ ಮಾಡು. ೨. ತನ್ನ ಇಚ್ಛೆಯಂತೆ ನಡೆಯಿಸು. ೩. ಅಲುಗಾಡಿಸು; ಅಲ್ಲಾಡಿಸು. ~ಗಲ್ಲ = ಗುೞಿಬಿದ್ದ ಗಲ್ಲ; ಪಚ್ಚುಬಿದ್ದ ಕೆನ್ನೆ.

ಕುಣಿಕಿಲ್ = ಕುನಿಕಿಲ್.

ಕುಣಿಕೆ (ನಾ). ೧. ಗುಣಿ; ತಗ್ಗು. ೨. = ಕುೞಿಕೆ. ೩. ಬೆರಳು. ೪. ಕೊನೆ; ತುದಿ. ೫. ಗೋಲಿ; ಗುಂಡು. ೬. ಒಂದು ಔಷಧಿಯ ಗಿಡ.

ಕುಣಿತ (ನಾ). ಕುಣಿಯುವಿಕೆ; ನರ್ತನ.

ಕುಣಿಲು (ನಾ). ನಳಿಕೆ; ನಾಳ.

ಕುಣುಕು (ಕ್ರಿ). ೧. ಕುಟ್ಟು; ಪುಡಿಮಾಡು. (ನಾ). ೨. ಕೀಲು; ಅಗುಳಿ.

ಕುಣ್ಕು (ಕ್ರಿ). ಬಾಗು; ಕುಸಿ.

ಕುತಂಜಿ (ನಾ). ಒಂದು ಬಗೆಯ ರಾಜಚಿಹ್ನೆ.
ಕುತಂತ್ರ (ನಾ). ಕೆಟ್ಟ ಹಂಚಿಕೆ, -ಉಪಾಯ.
ಕುತನಿ (ನಾ). ಅರ್ಧ ಹತ್ತಿ ಮತ್ತು ಅರ್ಧ ರೇಷ್ಮೆಯಿಂದ ತಯಾರಿಸಿದ ಬಟ್ಟೆ.
ಕುತಪ (ನಾ). ೧. ಅಪರಾಹ್ನ; ಸಂಜೆ. ೨. ದರ್ಭೆ. ೩. ವ್ರತಭ್ರಷ್ಟವಾದುದು. ೪. ಅಂಜಲಿ; ಬೊಗಸೆ. ೫. = ಕುತುಪ. ೬. ಒಂದು ವಾದ್ಯ ವಿಶೇಷ. (ಗು). ೭. ನಸುಬಿಸಿಯಾದ.
ಕುತಪಿ (ನಾ). ವಾದ್ಯವನ್ನು ಬಾಜಿಸುವವನು; ವಾದ್ಯಗಾರ.
ಕುತರ್ಕ (ನಾ). ನ್ಯಾಯವಲ್ಲದ ಚರ್ಚೆ.
ಕುತುಕ (ನಾ). ೧. ಆಶ್ಚರ್ಯ; ಬೆರಗು. ೨. ಕುತೂಹಲ; ಆತುರ.
ಕುತುಪ (ನಾ). ೧. ಚರ್ಮದಿಂದ ಮಾಡಿದ ಸಣ್ಣ ಎಣ್ಣೆ ಚೀಲ. ೨. ಪಿತೃಗಳಿಗೆ ತರ್ಪಣ ಕೊಡಲು ಯೋಗ್ಯವಾದ ಕಾಲ.
ಕುತುಬಿ (ನಾ). ಮುಸಲ್ಮಾನರು ಮಾಡುವ ಸ್ತೋತ್ರ.
ಕುತೂಹಲ(ಳ) (ನಾ). ೧.ಅಚ್ಚರಿ; ವಿಸ್ಮಯ. ೨.ಅಸಮಾಧಾನ; ತಳಮಳ. ೩. ಹಂಬಲ; ತವಕ. ೪.ಸಂತೋಷ. ೫. ಆಟ; ವಿನೋದ.
ಕುತ್ಕೀಲ(ಳ) (ನಾ). ಬೆಟ್ಟ; ಪರ್ವತ.
ಕುತ್ತ (ನಾ). ೧. ಕೊರತೆ. ೨. ರೋಗ; ಬೇನೆ. ೩.ತೊಂದರೆ. ~(ಂ)ಕೊ(ಗೊ)ಳ್ = ೧. ರೋಗಪೀಡಿತನಾಗು; ವ್ಯಾಧಿಗ್ರಸ್ತನಾಗು. ೨. ತೊಂದರೆಗೀಡಾಗು. ~ವಳ = ೧. ದೋಷಿ; ಅಪಾದಿತ. ೨. ರೋಗಿ; ವ್ಯಾಧಿಗ್ರಸ್ತ.
ಕುತ್ತರಿಸು = ಕುಸ್ತರಿಸು.
ಕುತ್ತಱ(ರಿ) (ನಾ). ಹುಲ್ಲಿನ ಮೆದೆ.
ಕುತ್ತಿ (ನಾ). ೧. ಮರ ಕಡಿದ ಮೇಲೆ ಬುಡದಲ್ಲಿ ಉಳಿಯುವ ತುಂಡು. ೨. ಮಗು; ಕೂಸು. ೩. ಪ್ರವಸ್ತುವಿನ ಒಂದು ಅಳತೆ.
ಕುತ್ತಿಕೋಲು (ನಾ). ಕಟ್ಟಡ ಬೀಳದಂತೆ ಕೊಡುವ ಆನಿಕೆ, -ಊರೆ.
ಕುತ್ತಿಗೆ (ನಾ). ಕತ್ತು; ಕೊರಳು; ಕಂಠ. ~ಕೊ(ಗೊ)ಯ್ಕ = ೧. ಕುತ್ತಿಗೆ ಕೊಯ್ಯುವವನು. ೨. ಮೋಸಗಾರ; ದ್ರೋಹಿ.
ಕುತ್ತಿಸಿಱು(ರು) (ನಾ). (ಆನೆ, ಹಂದಿ ಮುಂತಾದುವುಗಳ) ಚುಚ್ಚುವ ಕೋಡು.
ಕುತ್ತು (ಕ್ರಿ). ೧. ಚುಚ್ಚು; ತಿವಿ. ೨. ಹೊಡೆ; ಬಡಿ. ೩. ಸಿಕ್ಕಿಸು; ಸೆಕ್ಕು. ೪. ಕುಕ್ಕು; ಕೋರೈಸು. ೫. ನೆಡು; ನಾಟು. ೬.ಬಾಗು; ಕುಸಿ. ೭. ಎತ್ತು; ಬಿಡಿಸು. ೮. ತೊಡು; ಧರಿಸು. (ನಾ). ೯. ಹೊಡೆತ; ಏಟು. ೧೦.ತೊಂದರೆ; ಕಷ್ಟ. (ಗು). ೧೧. =ಕುಱು. ~ಅಟ್ಟ = ಅಡುಗೆಮನೆಯ ಮೇಲಿನ ಸಣ್ಣ ಅಟ್ಟ; ಹೊಗೆ ಅಟ್ಟ. ~ಅಡಿ = ಚಿಕ್ಕ ಹೆಜ್ಜೆ; ಸಣ್ಣ ಪಾದ. ~ಉಸಿರು = ಏದುಸಿರು; ಮೇಲುಸಿರು; ತಡೆದು ತಡೆದು ಬರುವ ಉಸಿರು. ~ಎಸೞ್(ಳ್) =ಸಣ್ಣ ರೇಕು; ಚಿಕ್ಕ ದಳ. ~(ಂ)ಗಱು(ರಿ) = ೧.ಬೀಸುವ ರೆಕ್ಕೆ. ೨ ಚುಚ್ಚುವ ರೇಕು, -ದಳ. ೩.ಕೇದಗೆ ಎಸಳಿನ ಆಕಾರದ ಒಂದು ಆಭರಣ. ~ಕೊ(ಗೊ)ೞಲು = ಕಮ್ಮಾರನು ಉಪಯೋಗಿಸುವ ಬೆಸೆಕೋಲು; ತೋರುಗೋಲು. ~ಕೋವಿ = ಮದ್ದನ್ನು ಗಿಡಿದು ಹೊಡೆಯುವ ಕೋವಿ. ~ತ(ದ)ಲೆ = ಬಾಗಿದ ತಲೆ; ಕೆಳಮುಖವಾದ ತಲೆ. ~ನವಿರ್(ರು) =ಪುಳಕಗೊಂಡ ಕೂದಲು.
ಕುತ್ತುಱ್(ರ್,ರು,ಱು) (ನಾ). ಪೊದರು; ಕಂಟಿ. ~ಮೆ(ವೆ)ಳೆ = ದಟ್ಟವಾಗಿ ಬೆಳೆದ ಮೆಳೆ.
ಕುತ್ತೆ (ನಾ). ರೋಗವುಳ್ಳವಳು; ಕಾಯಿಲೆಯವಳು.
ಕುತ್ತೆಸರ್(ರು) (ನಾ). ೧.ಕುದಿಯುವ ನೀರು. ೨. ಒಳಗುದಿ; ಸಂಕಟ.

ಕುತ್ತೋಟ (ನಾ). ರೋಗಿ.

ಕುತ್ಸಿತ (ನಾ). ೧. ದೂಷಣೆ ; ನಿಂದೆ. ೨. ನಿಂದ್ಯವಾದ ವಸ್ತು ; ಕೆಟ್ಟ ಪದಾರ್ಥ. ೩. ದುಷ್ಟ; ಕೆಡುಕ. (ಗು). ೪. ತೆಗಳಿಕೆಗೆ ಗುರಿಯಾದ. ~ಆಚಾರ = ೧. ನಿಂದ್ಯವಾದ ಆಚಾರ; ಹೇಯವಾದ ನಡತೆ. ೨. ಕೆಟ್ಟನಡತೆಯುಳ್ಳವನು ; ದುರಾಚಾರಿ.

ಕುಥ (ನಾ). ೧. ಆನೆಯ ಬೆನ್ನಿನ ಮೇಲೆ ಅಲಂಕಾರಕ್ಕಾಗಿ ಹೊದಿಸುವ ಬಟ್ಟೆ; ಜೂಲು. ೨. ಬಣ್ಣದ ಬಟ್ಟೆ. ೩. ಕುಶ; ದರ್ಭೆ.

ಕುದರಾಳ (ನಾ). ಕನ್ನಡಿಹಾವು; ಉರಿಮಂಡಲದ ಹಾವು.

ಕುದಿ (ಕ್ರಿ). ೧. ಶಾಖದಿಂದ ಉಕ್ಕು ; ಮರಳು ೨. ನೆಗೆ ; ಹಾರು. ೩. ದುಃಖಿಸು ; ಸಂಕಟಪಡು. ೪. ಕೋಪದಿಂದ ಕೆರಳು. ೫. ತವಕಿಸು ; ತಾಪಪಡು. ೬. ಬಹಳ ಗರ್ವಪಡು ; ಸೊಕ್ಕು. ೭. ಗಳಹು ; ಹರಟು. ೮. ಅಸೂಯೆ ಪಡು ; ಕರುಬು. (ನಾ). ೯. ಮರಳುವಿಕೆ; ಕುದಿತ; ಕ್ವಥನ. ೧೦. ಸಂಕಟ ; ಸಂತಾಪ. ೧೧. ಹಂಬಲ ; ತವಕ. ೧೨. ಹೊಟ್ಟೆಕಿಚ್ಚು ; ಅಸೂಯೆ. ೧೩. ರೋಷ ; ಸಿಟ್ಟು. ೧೪. ಅವಧಿ ; ವಾಯಿದೆ. ~ಕ(ಗ)ಣ್(ಣ್ಣು) = ಉರಿಗಣ್ಣು ; ಬೆಂಕಿ ಕಾರುವ ಕಣ್ಣು. ~ಕು(ಗು)ಣಿ = ಸುಣ್ಣದ ಕಲ್ಲುಗಳನ್ನು ನೀರಿನಲ್ಲಿ ಕರಗಿಸಲು ಮಾಡಿದ ಗುಳಿ. ~ಹಿಟ್ಟು = ಚೆನ್ನಾಗಿ ಬೇಯಿಸಿದ ಹಿಟ್ಟು; ಪೋಲ್ಟೀಸು.

ಕುದಿಪ ೧.= ಕುದಿಪಲ್. ೨. ವ್ಯಥೆ ; ಬೇಗುದಿ. ೩. ತೀವ್ರವಾದ ಬಯಕೆ. ೪. ತೊಂದರೆ ; ಜಂಜಾಟ.

ಕುದಿಪಲ್ (ನಾ). ಕುದಿಯುವಿಕೆ; ಬೇಯುವಿಕೆ.

ಕುದಿರ್(ರು) (ನಾ). ೧. ಬಿದಿರಿನ ದಬ್ಬೆಗಳಿಂದ ಅಥವಾ ಮಣ್ಣಿನಿಂದ ಮಾಡಿದ ಕಣಜ ; ಗಳಗೆ. ೨. ಕುಂದಣಿಗೆ. ೩. ಸಿಂಬೆ. ೪. ಹಳ್ಳ; ತಗ್ಗು. ೫. ನಡುಗಡ್ಡೆ ; ಸಣ್ಣ ದ್ವೀಪ. ೬. ನದಿಯ ಪಾತ್ರ. ೭. ಹೊಳೆ ; ತೊರೆ. ೮. ಒಂದು ತೂಕದ ಅಳತೆ.

ಕುದಿಹ = ಕುದಿಪ.

ಕುದುಂಬಳು (ನಾ). ಒಂದು ಜಾತಿಯ ಹಕ್ಕಿ ; ಲಾವಕ್ಕಿ.

ಕುದುಕು (ಕ್ರಿ). ೧. ಜೋರಾಗಿ ನಡೆ. ೨. ಜೋರಾಗಿ ನಡೆಯಿಸು. ೩. ಒದರು ; ಕೊಡಹು. ೪. ಕುಲುಕು ; ಅಲುಗಾಡಿಸು. (ನಾ). ೫. ವೇಗವಾದ ನಡೆ ; ಕುಲುಕೋಟ.

ಕುದುಕುಳಿ (ನಾ). ೧. ವ್ಯಾಕುಲ ಮನಸ್ಸಿನವನು. ೨. ಅಸೂಯಾಪರ. ೩. ಆವೇಶವುಳ್ಳವನು. (ಗು). ೪. ದ್ವೇಷಿಸುವ. ೫. ದುರಾಶೆಯ.

ಕುದುಗು (ಕ್ರಿ). ೧. ಅಡಗಿಕೊಳ್ಳು; ಹುದುಗು. ೨. ಸಂಕಟಪಡು ; ಸಂತಪಿಸು.

ಕುದುಗುಳಿ = ಕುದುಕುಳಿ.

ಕುದುಪಲ್ = ಕುದಿಪಲ್. ~ಅಕ್ಕಿ = ಬತ್ತವನ್ನು ಬೇಯಿಸಿ ಮಾಡಿದ ಅಕ್ಕಿ ; ಕುಸುಬಲಕ್ಕಿ ; ಕುಚ್ಚಿಗೆ ಅಕ್ಕಿ.

ಕುದುರ್(ರು) (ಕ್ರಿ). ೧. ವ್ಯವಸ್ಥೆಗೆ ಬರು ; ಸ್ಥಿಮಿತಕ್ಕೆ ಬರು. ೨. ಒದಗು ; ಉಂಟಾಗು. ೩. ಏಳಿಗೆ ಹೊಂದು ; ಬೆಳೆ. ೪. ದೊರಕು ; ಲಭಿಸು. ೫. ಪಳಗು ; ತರಬೇತಿ ಹೊಂದು. ೬. ತೀರ್ಮಾನವಾಗು. ೭. ಗಟ್ಟಿಯಾಗಿ ಹಿಡಿ. (ನಾ). ೮. ವ್ಯವಸ್ಥೆ ; ಏರ್ಪಾಡು. ೯. ಚೆಲುವು ; ಸೊಗಸು. ೧೦. ಕುಂದಣಿಗೆ. ೧೧. ಕುಂದು ; ದೋಷ. ೧೨. ಗೋಡೆ. ೧೩. ಸಿಂಬೆ. ~ಇಸು = ೧. ಹೊಂದಿಸು ; ಗೊತ್ತುಪಡಿಸು. ೨. ಒದಗಿಸು ; ದೊರಕಿಸು. ೩. ಬೆಳೆಸು ; ಅಭಿವೃದ್ಧಿಗೊಳಿಸು.

ಕುದುರೆ (ನಾ). ೧. ಅಶ್ವ ; ತುರಗ. ೨. ಬಂದೂಕನ್ನು ಹಾರಿಸುವ ತಿರುಪು.

೩. ಒಂದು ಜಾತಿಯ ಮಿಡಿತೆ; ಶಿವನ ಕುದುರೆ. ~ಓ(ಯೋ)ದು = ಕಲಿಯುವುದೂ ಮರೆಯುವುದೂ ಕೂಡಿಯೇ ಸಾಗುವ ಓದು. ~ಕಾ(ಗಾ)ಱ(ರ) = ಕುದುರೆಯ ಸವಾರ; ರಾವುತ. ~ಬೆಡ(ಂ)ಗ = ಕುದುರೆ ಸವಾರಿಯಲ್ಲಿ ಜಾಣ್ಮೆಯುಳ್ಳವನು. ~ವಳೆಯ = ಕುದುರೆಯ ತುಂಟತನವನ್ನು ತಡೆಯಲು ಕಟ್ಟುವ ಸೊಂಟಪಟ್ಟಿ; ತಂಗುಪಟ್ಟಿ.

**ಕುದುವು** (ನಾ). ಅಡವು; ಈಡು; ಒತ್ತೆ.

**ಕುದೆ** (ನಾ). ೧. ಸಂಕೋಲೆ; ಬಂಧನ. ೨. ಕೊರಳಪಟ್ಟಿಯ ಗುಂಡಿ.

**ಕುದ್ದಾಲ(ಳ)** (ನಾ). ೧. ನೆಲವನ್ನು ಅಗೆಯುವ ಸಾಧನ; ಗುದ್ದಲಿ. ೨. ಒಂದು ಜಾತಿಯ ಹೂವಿನ ಗಿಡ; ಕೆಂಗಾಂಚಾಳ.

**ಕುದ್ರ** (ನಾ). ೧. ಕ್ಷುದ್ರನಾದವನು; ಅಲ್ಪ. ೨. ಕರುಬು; ಅಸೂಯೆ. (ಗು). ೩. ಕೀಳಾದ; ಹೀನನಾದ. ~ಕೆ(ಗೆ)ಡಿ = ೧. ಅತಿದುಷ್ಟ; ಧೂರ್ತ. ೨. ತುಂಟ; ಕಿಡುಗೇಡಿ.

**ಕುಧರ** (ನಾ). ೧. ಬೆಟ್ಟ; ಪರ್ವತ. ೨. ಕುತ್ಸಿತವಾದ ವೇಷವನ್ನು ಧರಿಸಿದವನು. ~ಅರಿ = ಪರ್ವತಗಳ ಶತ್ರು; ಇಂದ್ರ.

**ಕುನಯ** (ನಾ). ೧. ಮೋಸ. ೨. ಕೆಟ್ಟನೀತಿ. ~ಉಪಪತ್ತಿ = ದುಷ್ಟಮತದ ಯುಕ್ತಿ.

**ಕುನಸು** (ನಾ). ಸೇಡು; ಬದ್ಧದ್ವೇಷ.

**ಕುನಿ** (ಕ್ರಿ). ೧. ಕುಗ್ಗು; ಅಡಗು. ೨. ಬಗ್ಗು; ತಲೆಬಾಗು. ೩. ಹಿಂಜರಿ; ಹಿಮ್ಮೆಟ್ಟು. (ನಾ). ೪. ತಗ್ಗು; ಕುಳಿ. ೫. ಸಣ್ಣ ಕೈದೋಟ. ೬. ಮೂಲೆ. ೭. ಊಬುಸಹಿತವಾದ ಧಾನ್ಯ. ೮. ಜೋಳ, ರಾಗಿ ಮುಂತಾದ ಕಾಳಿನ ಮೇಲಿನ ಮುಸುಕು.

**ಕುನಿಕಿಲ್(ಲು)** (ನಾ). ಚೀಲ; ಸಂಚಿ.

**ಕುನಿಸು** = ಕುನಸು.

**ಕುನು(ಂ)ಗು** (ಕ್ರಿ). ೧. ಕುಗ್ಗು; ಸಂಕೋಚಗೊಳ್ಳು. ೨. ಬಾಗು; ಬಗ್ಗು. ೩. ವಕ್ರವಾಗು; ಡೊಂಕಾಗು. ೪. ರೂಪುಗೆಡು.

**ಕುನ್ನ** (ನಾ). ೧. ಸಣ್ಣ ಹೇನು. (ಗು). ೨. ಕತ್ತರಿಸಿದ; ಮುರಿದ. ~ಕೆ(ಗೆ)ಯ್ = ಕತ್ತರಿಸಿದ ಕೈ; ಕಡಿದ ಕೈ.

**ಕುನ್ನಿ** (ನಾ). ೧. ನಾಯಿಮರಿ. ೨. ಯಾವುದಾದರೂ ಪ್ರಾಣಿಯ ಮರಿ. ೩. ಗಂಡುಕೂಸು. ೪. ಕೆಂಪು ಗುಲಗಂಜಿ ಗಿಡ; ರಕ್ತಗುಂಜಿ. (ಗು). ೫. ಅಲ್ಪವಾದ; ಕ್ಷುದ್ರವಾದ.

**ಕುಪಥ** (ನಾ). ೧. ಕೆಟ್ಟದಾರಿ; ದುರ್ಮಾರ್ಗ. ೨. ಸಂಪ್ರದಾಯವಿರುದ್ಧವಾದ ಮತ.

**ಕುಪಿತ** (ನಾ). ೧. ಕೋಪ; ಸಿಟ್ಟು. (ಗು). ೨. ರೇಗಿದ; ಕೋಪಗೊಂಡ. ~ಮತಿ = ೧. ಸಿಡುಕಿನ ವ್ಯಕ್ತಿ. ೨. ಸಿಡುಕಿನ ಸ್ವಭಾವವುಳ್ಳ.

**ಕುಪ್ಪಕುಱಿ(ರಿ)** (ನಾ). ಒಂದು ಬಗೆಯ ಆಟ.

**ಕುಪ್ಪಟಿ** = ಕುಂಪಟಿ.

**ಕುಪ್ಪಡಿಗೆ** = ಕುಂಪಟಿ.

**ಕುಪ್ಪರು** (ಕ್ರಿ). ನೆಗೆ; ಹಾರು. ~ಇಸು = ೧. ಜಿಗಿ; ಪುಟನೆಗೆ. ೨. ಆವರಿಸು; ಕವಿ. ೩. ಕುಸಿದುಬೀಳು. ೪. ಎತ್ತಿ ಒಗೆ.

**ಕುಪ್ಪಲು** (ನಾ). ಗೊಬ್ಬರ.

**ಕುಪ್ಪಸ** (ನಾ). ೧. ರವಕೆ; ಕಂಚುಕ. ೨. ಕವಚ; ಚಿಲಖತ್ತು. ೩. ಹಾವಿನ ಪೊರೆ; ನಿರ್ಮೋಕ.

**ಕುಪ್ಪಳ** (ನಾ). ಬೊಕ್ಕೆ; ಗುಳ್ಳೆ.

**ಕುಪ್ಪಳಿ** (ನಾ). ರಾಶಿ; ಗುಂಪು.

**ಕುಪ್ಪಳಿಸು** (ಕ್ರಿ). ೧. ಹಾರು; ಜಿಗಿ. ೨. ಕವಿ; ಮುತ್ತು. ೩. ಕುಸಿ; ಜರಿ. ೪. ಮಿಡುಕು; ತುಡಿ. ೫. ಬೀಳಿಸು; ಕೆಡವು. ೬. ರಾಶಿಯಾಗು; ಒಟ್ಟಾಗು. ೭. ರಾಶಿಹಾಕು; ಒಟ್ಟುಗೂಡಿಸು.

ಕುಪ್ಪಿ (ನಾ). ೧. ಬಾಣ ಮೊದಲಾದುವುಗಳನ್ನಿಡುವ ಚರ್ಮದ ಕೋಶ; ಬತ್ತಳಿಕೆ. ೨. ಜಾಡಿ; ಕರಡಿಗೆ; ಭರಣಿ. ೩. ಒಂದು ಬಗೆಯ ಗಿಡ. ~ಮಾತ್ರೆ = ಭರಣಿಯಲ್ಲಿ ಅಥವಾ ಸೀಸೆಯಲ್ಲಿ ಮಾಡಿಟ್ಟ ಔಷಧದ ಮಾತ್ರೆ.

ಕುಪ್ಪಿಗೆ (ನಾ). ೧.ಜಾಡಿ; ಭರಣಿ. ೨.ಕೊಳವೆ. ೩. ಬಾಣದ ತುದಿಗೆ ಜೋಡಿಸುವ ಚೂಪಾದ ಲೋಹದ ಹೊದಿಕೆ. ೪. ಮುತ್ತು, ರುದ್ರಾಕ್ಷಿ ಮುಂತಾದುವಕ್ಕೆ ಅಳವಡಿಸುವ ಅರ್ಧ ಗೋಲಾಕಾರದ ಚಿನ್ನದ ಮುಚ್ಚಳ. ೫. ಕಿವಿಯ ಆಭರಣ. ೬. ಪಾತ್ರೆಗಳ ಬಾಯಿಗೆ ಹಾಕುವ ಮುಚ್ಚಳ, -ಬಿರಡೆ.

ಕುಪ್ಪು (ಕ್ರಿ). ೧. ರಾಶಿಮಾಡು; ಗುಡ್ಡೆ ಹಾಕು. ೨. ಹಾರು; ನೆಗೆ. ೩. ಅದುರು; ಕಂಪಿಸು. (ನಾ). ೪.ಹಾರುವಿಕೆ; ನೆಗೆಯುವಿಕೆ. ೫. ಉಬ್ಬಾದ ವಸ್ತು; ಡುಬ್ಬ. ೬. (ಒಲೆಗೆ ಜೋಡಿಸುವ) ಮಣ್ಣಿನ ಮುದ್ದೆ. ೭. ದೇಹದ ಮೇಲೇಳುವ ದುರ್ಮಾಂಸದ ಗಡ್ಡೆ.

ಕುಪ್ಪುಸ = ಕುಪ್ಪಸ.

ಕುಪ್ಪುಳು (ನಾ). ಭರದ್ವಾಜ ಪಕ್ಷಿ; ಸಂಬಾರ ಕಾಗೆ.

ಕುಪ್ಪೆ (ನಾ). ೧.ರಾಶಿ; ಗುಡ್ಡೆ. ೨.ಹೊಲಸು; ತಿಪ್ಪೆ. ೩. ಗೊರಗು; ಗೊರಬು; ಕೊಪ್ಪೆ. ೪. ದಿಣ್ಣೆ; ತೆನರು.

ಕುಪ್ಯ (ನಾ). ೧. ಕ್ಷುದ್ರಲೋಹ; ತಾಮ್ರ, ಹಿತ್ತಾಳೆ, ಕಂಚು ಮುಂತಾದುವು. ೨. ಕ್ಷುದ್ರ ಲೋಹಗಳಿಂದ ಮಾಡಿದ ನಾಣ್ಯ, ಪಾತ್ರೆ ಮುಂತಾದುವು.

ಕುಪ್ರಸಿದ್ಧ (ಗು). ಅಪಖ್ಯಾತಿಗೆ ಗುರಿಯಾದ; ಕೆಟ್ಟಹೆಸರು ಬಂದ.

ಕುಬಾಯಿ (ನಾ). ಗಾಜು ಅಥವಾ ಪಿಂಗಾಣಿಯಿಂದ ಮಾಡಿದ ಪಾತ್ರೆ; ಜಾಡಿ.

ಕುಬಾಳು (ನಾ). ಚಾವಣಿಯ ತುದಿ, -ಶಿಖರ.

ಕುಬುದ್ಧಿ (ನಾ). ೧. ಕೆಟ್ಟಬುದ್ಧಿ; ಕೆಟ್ಟ ವಿಚಾರ. ೨. ಕೆಟ್ಟ ಬುದ್ಧಿಯನ್ನುಳ್ಳವನು.

ಕುಬುಬು (ನಾ). ಕೂಗಾಟವನ್ನು ಸೂಚಿಸುವ ಒಂದು ಅನುಕರಣ ಶಬ್ದ. ~ಇಡು(ರಿ) = ಗಟ್ಟಿಯಾಗಿ ಕೂಗು; ಬೊಬ್ಬೆಹಾಕು.

ಕುಬುಸ = ಕುಪ್ಪಸ.

ಕುಬೇರ (ನಾ). ೧. ಅಷ್ಟದಿಕ್ಪಾಲಕರಲ್ಲಿ ಒಬ್ಬ; ಧನಪತಿ. ೨. ದುಷ್ಟರ ಶರೀರದಲ್ಲೂ ವಾಸಿಸುವವನು; ವಿಷ್ಣು. ೩. ಒಂದು ಬಗೆಯ ಧೂಪ.

ಕುಬ್ಜ (ನಾ). ೧. ಗೂನುಬೆನ್ನಿನವನು; ಗೂನ. ೨. ಕುಳ್ಳ; ಗಿಡ್ಡ. ೩. ಕೊಂಕು; ವಕ್ರತೆ. (ಗು). ೪.ಕುಳ್ಳಾದ; ಗಿಡ್ಡಾದ. ೫.ಗೂನಾದ; ಗೂನುಬೆನ್ನಿನ.

ಕುಬ್ಜೆ (ನಾ). ಬೆನ್ನು ಬಾಗಿದವಳು; ಗೂನಿ.

ಕುಬ್ಬ (ನಾ). ಅರ್ಧಗೋಲಾಕಾರದ ರಚನೆ; ಗುಮ್ಮಟ.

ಕುಬ್ಬಾಟ (ನಾ). ಅಹಂಭಾವದ ವರ್ತನೆ; ಗತ್ತಿನ ನಡೆವಳಿ.

ಕುಭಾಷೆ (ನಾ). ೧.ನಿಂದೆಯ ನುಡಿ; ಬೈಗುಳು. ೨. ಕೆಟ್ಟ ಭಾಷೆ, -ಆಣೆ. ೩. ಅಲ್ಪವಾದ ಭಾಷೆ; ಅನಾಗರಿಕರ ಮಾತು.

ಕುಭೃತ್ತು (ನಾ). ೧. ಪರ್ವತ; ಬೆಟ್ಟ. ೨. ಭೂಮಿಯನ್ನು ಆಳುವವನು; ರಾಜ.

ಕುಮಂತ್ರ (ನಾ). ೧. ಕೆಟ್ಟಆಲೋಚನೆ; ದುರ್ಬೋಧನೆ. ೨. ಕೆಟ್ಟ ಮಂತ್ರ; ಇತರರಿಗೆ ಪೀಡೆಯುಂಟು ಮಾಡುವ ಮಂತ್ರ. ೩. ಕುತಂತ್ರ; ಕಪಟ.

ಕುಮುಕಿ ೧. = ಕುಮುಕು. ೨. ಹಿಡುವಳಿ ಭೂಮಿಗೆ ನೂರುಗಜಗಳ ಅಕ್ಕಪಕ್ಕದ ಸರಕಾರಿ ಭೂಮಿ. ೩. ಅಂಗೈಯಿಂದ ಹೊಡೆಯುವ ಏಟು; ಚಪ್ಪಾಳೆ ಏಟು. (ಗು). ೪. ಸಹಾಯಕ; ನೆರವಾಗುವ.

~ಆನೆ = ಮಿಕ್ಕ ಆನೆಗಳನ್ನು ಹಿಡಿಯಲು ಸಹಾಯ ಮಾಡುವ ಪಳಗಿದ ಆನೆ; ಒತ್ತಾನೆ.

ಕುಮುಕು (ನಾ). ಸಹಾಯ ; ಒತ್ತಾಸೆ.

ಕುಮುಟ = ಕುಂಪಟಿ.

ಕುಮತ (ನಾ). ೧. ಕೆಟ್ಟಮತ. ೨. ಕೆಟ್ಟ ಅಭಿಪ್ರಾಯ.

ಕುಮರ = ಕುವರ.

ಕುಮರಿ ೧. = ಕುಮ್ಮರಿ. ೨. = ಕುವರಿ. ~ಪೈರು = ಕಾಡನ್ನು ಸುಟ್ಟು ಕೃಷಿ ಮಾಡಿದ ಪೈರು.

ಕುಮಲು(ನಾ). ಒಳಗೊಳಗೇ ಉರಿಯುವುದು; ಒಳಗುದಿ.

ಕುಮಾರ (ನಾ). ೧. ಮಗ ; ಪುತ್ರ. ೨. ಎಳೆಯ ವನು ; ಬಾಲಕ. ೩. ಯುವಕ ; ತರುಣ. ೪. ಷಣ್ಮುಖ ; ಸುಬ್ರಹ್ಮಣ್ಯ. ೫. ರಾಜ್ಯದ ಉತ್ತರಾಧಿಕಾರಿ. ೬. ಒಂದು ಔಷಧಿ ಗಿಡ; ವರುಣವೃಕ್ಷ. ~ಶ್ರವಣ = ಬೌದ್ಧ ಅಥವಾ ಜೈನ ಬಾಲಯತಿ.

ಕುಮಾರಕ = ಕುಮಾರ.

ಕುಮಾರಿ (ನಾ). ೧. ಹುಡುಗಿ ; ಬಾಲಕಿ. ೨. = ಕುಮಾರಿತಿ. ೩. ಜಾಜಿಯಲ್ಲಿ ಒಂದು ಬಗೆ ; ಹೆಜ್ಜಾಜಿ. ೪. ಲೋಳೆಸರ ; ಲೋಳೆಸರ. ೫. ದುರ್ಗೆಯ ಹೆಸರು ಗಳಲ್ಲೊಂದು ; ಕನ್ಯಾಕುಮಾರಿ. ೬. ಸಣ್ಣ ಗೋರಂಟಿ ಗಿಡ.

ಕುಮಾರಿತಿ (ನಾ). ೧. ಮದುವೆಯಾಗದಿರು ವವಳು ; ಕನ್ಯೆ. ೨. ಮಗಳು. ೩. ರಾಜ ಕುಮಾರಿ.

ಕುಮುಚು (ಕ್ರಿ). ೧. (ನಿದ್ರೆಯಲ್ಲಿ) ಬೆಚ್ಚಿ ಬೀಳು; ಹೆದರಿಕೆಯಿಂದ ನಡುಗು. ೨. ಜಿಗಿ ; ನೆಗೆ. ೩. ಬಸವಳಿ ; ಕಸುವುಗುಂದು.

ಕುಮುದ (ನಾ). ೧. ಜನರ ಸಂತೋಷ. ೨. ಬಿಳಿಯ ನೈದಿಲೆ. ೩. ನೀಲೋತ್ಪಲ. ೪. ಕೆಂದಾವರೆ. ೫. ದಿಗ್ಗಜಗಳಲ್ಲಿ ಒಂದು. ೬. ಚಂದ್ರ. ೭. ನೀರು. ೮. ಸೂರ್ಯ. ೯. ಅಸಂತೋಷ. ೧೦. ಒಂದು ಜಾತಿಯ ಮರ. ೧೧. ಕಠಿಣತೆ ; ಕ್ರೌರ್ಯ. ~ಆಕರ = ೧. ನೈದಿಲೆಗಳ ಸಮೂಹ. ೨. ನೈದಿಲೆ ಗಳಿಂದ ಕೂಡಿದ ಕೊಳ.

ಕುಮುದಿನಿ ೧.= ಕುಮುದಾಕರ. ೨. ನೈದಿಲೆಯ ಬಳ್ಳಿ.

ಕುಮುದ್ವತಿ (ನಾ). ೧. ಕುಮುದಗಳಿಂದ ಕೂಡಿದ ಸರೋವರ,-ಕೊಳ. ೨. ನೈದಿಲೆಯ ಹೂವುಗಳ ಸಮೂಹ.

ಕುಮುಲು (ಕ್ರಿ). ೧. ಜ್ವಾಲೆಯಿಲ್ಲದೆ ಒಳ ಗೊಳಗೇ ಉರಿ. ೨. ಸಿಟ್ಟು ಮೊದಲಾದ ಭಾವಗಳು ಮನಸ್ಸಿನೊಳಗೆ ಹೊಗೆಯಾಡು ತ್ತಿರು ; ಕುದಿ.

ಕುಮ್ಮಕ್ಕು = ಕುಮುಕು.

ಕುಮ್ಮಚಟ್ಟು (ನಾ). ಹಾರುವುದರಲ್ಲಿ ಒಂದು ರೀತಿ.

ಕುಮ್ಮರಿ (ನಾ). ಕಾಡನ್ನು ಕಡಿದು ಸಾಗುವಳಿ ಮಾಡಿದ ಪ್ರದೇಶ.

ಕುಮ್ಮರಿಸು (ಕ್ರಿ). ೧. ಕೆಳಕ್ಕೆ ಸುರಿ ; ಬಗ್ಗಿಸು. ೨. ತುಂಬು ; ಗಿಡಿ.

ಕುಮ್ಮು (ಕ್ರಿ). ೧. ಒನಕೆಯಿಂದ ಕುಟ್ಟು. ೨. ನಿಶ್ಶಕ್ತಿಯಿಂದ ಕೆಳಗೆ ಬೀಳು; ಕುಕ್ಕರಿಸು. ೩. ಇರಿ ; ತಿವಿ. ೪. ಜಜ್ಜು ; ಪುಡಿಪುಡಿ ಮಾಡು. (ನಾ). ೫. ಒನಕೆಯಿಂದ ಕುಟ್ಟುವುದು.

ಕುಯ್‌ = ಕೊಯ್‌.

ಕುಯುಕ = ಕುಹಕ.

ಕುಯಿಲು = ಕೊಯ್ಲು.

ಕುಯುಕ್ತಿ (ನಾ). ಕುತಂತ್ರ ; ಕೆಟ್ಟಯುಕ್ತಿ.

ಕುಯೋನಿ (ನಾ). ೧. ಪಶು, ಪಕ್ಷಿ ಮೊದಲಾದ ಪ್ರಾಣಿಗಳ ಯೋನಿ. ೨. ಕೆಟ್ಟಹುಟ್ಟು ; ಕೀಳುಜನ್ಮ.

ಕುಯಲ್ಲಿ = ಕೊಯ್ಲು.

ಕುರ (ನಾ). ಗೊರಸು ; ಕೊಳಗು.

ಕುರಂಗ (ನಾ). ೧. ಜಿಂಕೆ; ಹುಲ್ಲೆ. ೨. ಚಂದ್ರನಲ್ಲಿರುವ ಜಿಂಕೆಯ ಚಿಹ್ನೆ. ~ನಾಭಿ = ಒಂದು ಜಾತಿಯ ಜಿಂಕೆಯ ಹೊಕ್ಕುಳಿನಲ್ಲಿ ಉತ್ಪತ್ತಿಯಾಗುವ ಸುಗಂಧ ವಸ್ತು ; ಕಸ್ತೂರಿ. ~ರಿಪು = ಜಿಂಕೆಯ ಶತ್ರು ; ಹುಲಿ.

ಕುರಂಗು (ನಾ). ಕೋತಿ; ಕಪಿ. ~ಕಟ್ಟು = ಬಿಗಿಯಾದ ಕಟ್ಟು ; ಕೋಡಗ ಕಟ್ಟು.

ಕುರಂಟಕ (ನಾ). ೧. ಗೋರಂಟಿ ಗಿಡ. ೨. ಸ್ಫಟಿಕದ ಗಿಡ ; ಗೊರಟೆಗಿಡ.

ಕುರಂಟಗೆ (ನಾ). ಒಂದು ಬಗೆಯ ಔಷಧಿ ಗಿಡ; ಅಜಶೃಂಗಿ.

ಕುರಕು (ಕ್ರಿ). ನೋಯು ; ವ್ಯಥೆಪಡು.

ಕುರಕುರಿ (ನಾ). ೧. ತಕರಾರು; ಕಿರಿಕಿರಿ. ೨. ಸೊಕ್ಕು ; ಗರ್ವ.

ಕುರಗ (ನಾ). ಅಕ್ಕಸಾಲಿಗರು ಮತ್ತು ಕಮ್ಮಾರರು ಉಪಯೋಗಿಸುವ ಅಡಿಗಲ್ಲು; ಅದ್ದಗಣೆ.

ಕುರಡಿ (ನಾ). ಎಣ್ಣೆಯಲ್ಲಿ ಕರಿದು ಮಾಡುವ ಒಂದು ಬಗೆಯ ತಿಂಡಿ; ಶಾವಿಗೆ ಸಂಡಿಗೆ.

ಕುರಣೆ (ನಾ). ಉಣ್ಣೆಯ ಹುರಿ, -ರೋಮ.

ಕುರರ (ನಾ). ಒಂದು ಜಲಚರ ಪಕ್ಷಿ; ಮರಕೂಟ ವಕ್ಕಿ.

ಕುರರಿ (ನಾ). ೧. ಹೆಣ್ಣುಮರಕೂಟವಕ್ಕಿ. ೨. ಹೆಣ್ಣುಕುರಿ.

ಕುರವ (ನಾ). ೧. ಕೆಟ್ಟಶಬ್ದ. ೨. = ಕುರವಕ. ೩. ಒಂದು ಜಾತಿಯ ಜಲಚರ ಪಕ್ಷಿ.

ಕುರವಂಜಿ = ಕೊಜವಂಜಿ.

ಕುರವಕ (ನಾ). ೧. ಕೆಂಪುಹೂವಿನ ದೊಡ್ಡ ಗೋರಂಟ ; ಮದರಂಗಿ ಗಿಡ. ೨. ಒಂದು ಜಾತಿಯ ಹಕ್ಕಿ.

ಕುರವಿ (ನಾ). ಗುಬ್ಬಚ್ಚಿ; ಗುಬ್ಬಿ.

ಕುರಾಡ (ನಾ). ಗೋಡೆಯಲ್ಲಿ ನೆಡುವ ದಸಿ; ಗೂಟ.

ಕುರಾನ್(ನು) (ನಾ). ಮಹಮ್ಮದೀಯರ ಧರ್ಮಗ್ರಂಥ.

ಕುರಿ ೧. = ಕುಜು. ೨. ಬಾಗು; ಬಗ್ಗು.

ಕುರು (ನಾ). ೧. ಕೀವು, ರಕ್ತಗಳಿಂದ ತುಂಬಿದ ಗುಳ್ಳೆ, -ಬೊಕ್ಕೆ. ೨. ಪಾಂಡವರ ಮತ್ತು ಕೌರವರ ವಂಶದ ಮೂಲಪುರುಷ. ೩. = ಕುಜು. ~ಕು(ಗು)ಟ್ಟು = ಮಿಡಿ ; ಸ್ಪಂದಿಸು. ~ಕ್ಷೇತ್ರ = ೧. ಪಾಂಡವರಿಗೂ ಕೌರವರಿಗೂ ಯುದ್ಧ ನಡೆದ ಸ್ಥಳ. ೨. ತಿಕ್ಕಾಟ ; ಜಗಳ. ೩. ರಣರಂಗ ; ಯುದ್ಧಕ್ಷೇತ್ರ.

ಕುರುಂಜಿಗೆ (ನಾ). ೧. ಹುಲ್ಲನ್ನು ಕತ್ತರಿಸುವ ಆಯುಧ ; ಉಜ್ಜುಗೋರಿ. ೨. ಮಗುಚುವ ಕೈ ; ಖಡಚಿ.

ಕುರುಂದ (ನಾ). ಬಲುಗಟ್ಟಿಯಾದ ಒಂದು ಖನಿಜ ; ಕುರುವಿಂದ.

ಕುರುಂಬಳೆ = ಕುರುಂಬಾಳೆ.

ಕುರುಂಬಾಳೆ (ನಾ). ಅಡಕೆ ಹಾಗೂ ತೆಂಗಿನ ಹೂಗಳ ಗೊಂಚಲನ್ನು ಮುಚ್ಚಿಕೊಂಡಿರುವ ಕವಚ ; ಹೊಂಬಾಳೆ.

ಕುರುಂಬೆ (ನಾ). ಎಳೆಯ ತೆಂಗಿನಕಾಯಿ.

ಕುರುಕು ೧. = ಕುಜುಂಕು. ೨. ಮೆಲ್ಲನೆ ಹೇಳು; ಗುಂಯಿಗುಟ್ಟು. ~ತಿಂಡಿ = ಹುರಿಗಾಳು ಮುಂತಾದ ಮೆಲುಕುಹಾಕಿ ತಿನ್ನುವ ತಿಂಡಿ. ~ಪದ = ಸಣ್ಣಹಾಡು ; ಗುಂಯಿಗುಟ್ಟುವ ಹಾಡು.

ಕುರುಗಣೆ (ನಾ). ೧. ಕುಗ್ಗಿದ ಸ್ಥಿತಿ. ೨. ಕಡಮೆಯಾದ ಅಥವಾ ಗಿಡ್ಡವಾದ ವಸ್ತು. ೩. ಆವಿಯಾಗುವಿಕೆಯಿಂದ ಮಂದವಾದ ದ್ರವ ವಸ್ತು.

ಕುರುಚಲು (ನಾ). ೧. ಗಿಡಗಂಟಿ ; ಪೊದರು. (ಗು). ೨. ಸಣ್ಣದಾದ; ಚಿಕ್ಕದಾದ.

~ಕೊ(ಗೊ)ದಲು = ಪೊದೆಯಂತೆ ಬೆಳೆದ ಗಿಡ್ಡ ಕೂದಲು.

ಕುರುಜು (ನಾ). ೧. ಅಲಂಕರಿಸಿದ ಮಂಟಪ. ೨. ಗೋಪುರ; ಬುರುಜು. ೩. ಕರ್ಪೂರ ವನ್ನು ತೂಗುವ ಒಂದು ಮಾನ. ೪. ರಾಶಿ; ಗುಡ್ಡೆ.

ಕುರುಟ (ನಾ). ಒಂದು ಜಾತಿಯ ಹಕ್ಕಿ.

ಕುರುಟು (ನಾ). (ಧಾನ್ಯದ) ಒಂದು ಅಳತೆ; ಚಿಕ್ಕಮುಡಿ.

ಕುರುಡ (ನಾ). ೧. ಕಣ್ಣು ಕಾಣದವನು; ಅಂಧ. ೨. ಅಜ್ಞಾನಿ; ತಿಳಿವಳಿಕೆ ಇಲ್ಲದ ವನು. ~ಅಕ್ಕಿ = ಬತ್ತದ ಮೇಲಿನ ಸಿಪ್ಪೆ ಮಾತ್ರ ಸುಲಿದು ಚೆನ್ನಾಗಿ ತೊಳಸದಿರುವ ಅಕ್ಕಿ.

ಕುರುಡಿ (ನಾ). ಕಣ್ಣು ಕಾಣದವಳು; ಅಂಧೆ.

ಕುರುಡಿಗೆ (ನಾ). ಅಕ್ಕಿ, ಗೋಧಿ ಮುಂತಾ ದುವುಗಳಿಂದ ತಯಾರಿಸಿದ ಸಂಡಿಗೆ.

ಕುರುಡೀಕುಂಬಾರ (ನಾ). ಒಂದೇ ರಂಧ್ರದ ಗೂಡನ್ನು ಕಟ್ಟುವ ಒಂದು ಜಾತಿಯ ಕಣಜದ ಹುಳು.

ಕುರುಡು (ನಾ). ೧. ಕಣ್ಣು ಕಾಣದಿರುವಿಕೆ; ಅಂಧತ್ವ. ೨. ಅಂಧವಾದುದು; ದೃಷ್ಟಿಶೂನ್ಯ ವಾದುದು. ೩. ಅವಿವೇಕ. ~ಕವಡೆ = ೧. ತೂತುಬಿದ್ದ ಕವಡೆ. ೨. ಬಳಸದ ಕವಡೆ. ೩. ಚಲಾವಣೆಯಿಲ್ಲದ ನಾಣ್ಯ. ~ಕ(ಗ)ಟ್ಟ(ಳ್ಳ)ಲೆ = ಕಗ್ಗತ್ತಲೆ. ~ದರಬಾರು = ವಿವೇಕವಿಲ್ಲದ ಆಡಳಿತ. ~ನಂಬಿಕೆ = ಮೂಢನಂಬಿಕೆ.

ಕುರುಹೆ (ನಾ). ೧. (ಪಶು, ಪಕ್ಷಿಗಳ) ಮರಿ; ಪೋತ. ೨. ಪ್ರಾಣಿಗಳ ಹಿಚಿಕೆ; ಮಲ. (ಗು). ೩. ಎಳೆಯ; ಎಳಸಾದ.

ಕುರುದೆ (ನಾ). ಹಳೆಪೈಕ ಮುಂತಾದ ಜಾತಿ ಗಳಿಗೆ ಸೇರಿದ ಚಿಕ್ಕವಯಸ್ಸಿನ ಹುಡುಗ ಅಥವಾ ಹುಡುಗಿ.

ಕುರುಪು (ನಾ). ೧. ಒಂದು ಬಗೆಯ ಆಯುಧ. ೨. = ಕುಱುಪು.

ಕುರುಪೆ = ಕುರುಂಜಿಗೆ.

ಕುರುವಕ = ಕುರವಕ.

ಕುರುವಾಯಿ (ನಾ). ಹರಿತವಾದ ಬಾಯುಳ್ಳ ಒಂದು ಬಗೆಯ ಕೀಟ.

ಕುರುವಿಂದ (ನಾ). ೧. ಪಾದರಸದಿಂದ ಆದ ಒಂದು ಅದಿರು; ಇಂಗಲೀಕ. ೨. ಕೊನ್ನಾರಿ ಗೆಡ್ಡೆ. ೩. ಮಾಣಿಕ್ಯ; ಕೆಂಪು ಹರಳು.

ಕುರುವೆ (ನಾ). ಕುಕ್ಕೆ; ಮಂಕರಿ.

ಕುರುವೇರು (ನಾ). ಮುಡಿವಾಳ; ಲಾಮಂಚದ ಒಂದು ಪ್ರಭೇದ.

ಕುರುಳ್(ಳು) (ನಾ). ೧. ಕೂದಲು; ಗುಂಗುರು ಕೂದಲು. ೨. ಒಣಗಿಸಿದ ಸಗಣಿ; ಬೆರಣಿ.

ಕುರುಳಿ (ನಾ). ೧. ಸಣ್ಣ ಮಡಕೆ; ಕುಡಿಕೆ. ೨. ಸಣ್ಣವನು; ಚಿಕ್ಕಮಗು. ೩. ಸುಕ್ಕು; ಮುದುಡು.

ಕುರುಳೆ (ನಾ). ಅಗಲಬಾಯಿಯ ಕಂಚಿನ ಪಾತ್ರೆ.

ಕುರುಳ್ಚು (ಕ್ರಿ). ಆಯುಧವನ್ನು ಝಳಪಿಸು.

ಕುರೂಪ (ನಾ). ೧. ಅಂದಗೇಡಿತನ; ಸೌಂದರ್ಯಹೀನತೆ. ೨. ಅಂದಗೇಡಿ; ಕುರೂಪಿ.

ಕುರೂಪಿ (ನಾ). ೧. ರೂಪಹೀನ ವ್ಯಕ್ತಿ. (ಗು). ೨. ಅಂದಗೇಡಿಯಾದ; ರೂಪುಗೆಟ್ಟ.

ಕುಱು(ರಿ) (ಕ್ರಿ). ೧. ಗುರುತಿಸು; ಗುರುತು ಮಾಡು. ೨. ಗಮನಿಸು; ಲಕ್ಷ್ಯಕೊಡು. ೩. ಉದ್ದೇಶಿಸು; ಆಲೋಚಿಸು. ೪. ಬಳಿ; ಲೇಪಿಸು. (ನಾ). ೫. ಗುರುತು; ಚಿಹ್ನೆ. ೬. ಲಕ್ಷ್ಯ; ಗುರಿ. ೭. ಉದ್ದೇಶ. ೮. ಸೀಮೆ; ಎಲ್ಲೆ. ೯. ಮೇಕೆ ಬಳಗದ ಒಂದು ಪ್ರಾಣಿ; ಮೇಷ. ~ಮನ = ೧. ಕುರಿಯ ಮನಸ್ಸು, -ಸ್ವಭಾವ. ೨. ಪುಕ್ಕಲು ಮನಸ್ಸು; ಹೇಡಿ ಬುದ್ಧಿ.

ಕುಱು(ರಿ)ಪು (ನಾ). ಗುರುತು ; ಚಿಹ್ನೆ.

ಕುಱು(ರು) (ಕ್ರಿ). ೧. ಉದ್ದೇಶಿಸು ; ಲಕ್ಷಿಸು. (ನಾ). ೨. ಗುರುತು ; ಚಿಹ್ನೆ. (ಗು). ೩. ಸಣ್ಣದಾದ; ಚಿಕ್ಕದಾದ. ~ಕ = ೧. ಗಿಡ್ಡ; ಕುಳ್ಳ. ೨. ಅಲ್ಪ ; ಕೀಳ. ~ಕುಣಿಕೆ = ಕಿರುಬೆರಳು. ~ಕೆ(ಗೆ)ಯ್ =೧. ಸಣ್ಣಕೈ. ೨. ರಥದ ಮುಂಭಾಗ. ~ಗಡ್ಡ=ಕುರುಚಲು ಗಡ್ಡ. ~ಮು(ವ)ಡಿ = ಸಣ್ಣಮುಡಿ ; ಒಗೆದ ಚಿಕ್ಕ ವಸ್ತ್ರ.

ಕುಱು(ರು)(ಂ)ಕು (ಕ್ರಿ). ೧. ಮೆಲುಕುಹಾಕಿ ತಿನ್ನು ; ಕೊಂಚಕೊಂಚವಾಗಿ ತಿನ್ನು. (ನಾ). ೨. = ಕುಱುಕಲು.

ಕುಱು(ರು)(ಂ)ಬ (ನಾ). ೧. ಕುರಿ ಸಾಕುವವನು ; ಕುರಿಗಾಹಿ. ೨. ಹಳಬ. ೩. ಕೋಟೆಯ ಕಾವಲುಗಾರ. ೪. ಉಗ್ರಾಣದ ಯಜಮಾನ ; ಕೊಠಾರಿ. ೫. ಮಡಕೆ ಮಾಡುವವನು ; ಕುಂಬಾರ. ೬. = ಕುಱುವ.

ಕುಱು(ರು)(ಂ)ಬು (ನಾ). ೧. ದ್ವೇಷ ; ಅಸೂಯೆ. ೨. ಹಠ ; ಹುಚ್ಚುತನ.

ಕುಱು(ರು)ಂಬುಗೊಳಿಸು (ಕ್ರಿ). ಸಜ್ಜುಗೊಳಿಸು ; ಏರ್ಪಡಿಸು.

ಕುಱು(ರು)ಕಲು (ನಾ). ಮೆಲುಕು ಹಾಕಿ ತಿನ್ನುವ ತಿಂಡಿ; ಹುರಿಗಾಳು ಮುಂತಾದುವು.

ಕುಱು(ರು)ಕುಱು(ರು)ಂ (ಅ). ಅತಿ ಸಣ್ಣಗೆ ; ನಿಧಾನವಾಗಿ. ~ಮೆಟ್ಟು = ಬಹಳ ನಿಧಾನವಾಗಿ ಹೆಜ್ಜೆಯಿಡು.

ಕುಱು(ರು)ಚು (ನಾ). ೧. ಸಣ್ಣದಾಗಿರುವಿಕೆ ; ಕುಳ್ಳಾಗಿರುವಿಕೆ. ೨. ಪೊದರು ; ಪೊದೆ. (ಗು). ೩. ಸಣ್ಣದಾಗಿರುವ ; ಗಿಡ್ಡಾದ.

ಕುಱು(ರು)ಜು = ಕುಱುಚು.

ಕುಱು(ರು)ಪು = ಕುಱುಪು.

ಕುಱು(ರು)ವ (ನಾ). ೧. ನೀರಿನಿಂದ ಸುತ್ತುವರಿದ ಪ್ರದೇಶ ; ಅಂತರೀಪ ; ದ್ವೀಪ. ೨. ಗುಡ್ಡ ; ದಿಬ್ಬ.

ಕುಱು(ರು)ಹು = ಕುಱುಪು.
~ತೋ(ದೋ)ಱು(ರು) = ೧. ಗುರುತನ್ನು ತೋರಿಸು ; ಸುಳಿವು ಕೊಡು. ೨. ಕಾಣಿಸಿಕೊಳ್ಳು; ಪ್ರತ್ಯಕ್ಷವಾಗು.

ಕುರ್ಕ (ನಾ). ಚಿರತೆ ; ಚಿರ್ಚ.

ಕುರ್ಕರ (ನಾ). ನಾಯಿ ; ಶ್ವಾನ.

ಕುರ್ಕೀಲು (ನಾ). ಬುಟ್ಟಿ ; ಮಂಕರಿ.

ಕುರ್ಕುರ = ಕುರ್ಕರ.

ಕುಗ್ಗು ೧. = ಕುಬ್ಜ. (ನಾ). ೨. ದೇಹ ಕುಗ್ಗಿರುವಿಕೆ ; ಕುಬ್ಜತೆ.

ಕುರ್ಚಿ (ನಾ). ೧. ಎತ್ತರವಾದ ಪೀಠ, -ಆಸನ. ೨. ಒಂದು ಬಗೆಯ ಮೀನು. ೩. ಒಂದು ಬಗೆಯ ಮರ.

ಕುರ್ನೀಸಾತ್(ತು) (ನಾ). ಸಲಾಮು ; ನಮಸ್ಕಾರ.

ಕುಲ (ನಾ). ೧. ಗುಂಪು; ಸಮೂಹ. ೨. ವಂಶ ; ಮನೆತನ. ೩. ಜಾತಿ. ೪. ಮನೆ ; ವಾಸಸ್ಥಳ. ~(ಂ)ಕೆ(ಗೆ)ಡು = ಜಾತಿಕೆಡು; ಜಾತಿಭ್ರಷ್ಟನಾಗು. ~ಕಂಟಕ = ಮನೆತನಕ್ಕೆ ಕೆಟ್ಟ ಹೆಸರು ತರುವವನು. ~ಕರಣಿ = ಕುಲ ಪರಂಪರೆಯಿಂದ ಕರಣಿಕನಾಗಿರುವವನು ; ಶಾನುಭೋಗ. ~ಕೆ(ಗೆ)ಡಿಸು = ೧. ಜಾತಿಯನ್ನು ಕೆಡಿಸು. ೨. ಹಾಳುಮಾಡು ; ನಾಶಮಾಡು. ~ಕೋಟಿ = ಅನೇಕ ಪೀಳಿಗೆ; ತಲೆಮಾರು. ~ಗೃಹ=೧. ಉತ್ತಮವಾದ ಮನೆ. ೨. ತವರುಮನೆ. ~ನಾಮ = ಅಡ್ಡಹೆಸರು ; ಮನೆತನದ ಹೆಸರು. ~ಪತಿ = ೧. ಮನೆತನದ ಯಜಮಾನ. ೨. ಪ್ರಧಾನ ಶಿಕ್ಷಾಚಾರ್ಯ. ೩. ವಿಶ್ವವಿದ್ಯಾಲಯದ ಅಧ್ಯಕ್ಷ. ~ಪಾ(ವಾ)ಡಿ = ೧. ಗ್ರಾಮಸ್ಥರ ಕೈಕೆಳಗಿನ ಸೇವಕ. ೨. ಮನೆತನ; ವಂಶ. ~ವಧು=೧. ಪತಿವ್ರತೆ. ೨. ಹೆಂಡತಿ.

ಕುಲಟೆ (ನಾ). ಜಾರೆ ; ವ್ಯಭಿಚಾರಿಣಿ.

**ಕುಲತ್ಥ** (ನಾ). ಒಂದು ಬಗೆಯ ಧಾನ್ಯ; ಹುರುಳಿ.

**ಕುಲಾಬಿ** (ನಾ). ಉಯ್ಯಾಲೆ ಮೊದಲಾದುವುಗಳಿಗಾಗಿ ಜಂತೆಯಲ್ಲಿ ಸೇರಿಸಿದ ಕಬ್ಬಿಣದ ಕೊಕ್ಕೆ.

**ಕುಲಾ(ಳಾ)ಯ** (ನಾ). ೧. ಹಕ್ಕಿಗಳ ಗೂಡು. ೨. = ಕುಲಾಯಿ.

**ಕುಲಾಯಿ** (ನಾ). ೧. ತಲೆಯುಡಿಗೆ. ೨. ಕೂಸಿನ ತಲೆಗೆ ಕಟ್ಟುವ ಟೋಪಿ; ಕುಲಾವಿ.

**ಕುಲಾಯಿಸು** (ಕ್ರಿ). ಒದಗಿಬರು; ತೆರೆ.

**ಕುಲಾಲ** (ನಾ). ಕುಂಬಾರ.

**ಕುಲಾವಿ** = ಕುಲಾಯಿ.

**ಕುಲಾಸ್** (ನಾ). ೧. ತೆರೆದುದು; ಪ್ರಕಟವಾದುದು. ೨. ಬಿಡುಗಡೆ. ೩. ಆರಾಮ; ನೆಮ್ಮದಿ. ೪. ತೆರವು; ಖಾಲಿಯಾಗಿರುವಿಕೆ.

**ಕುಲಿ** (ನಾ). ೧. ಕುಲವುಳ್ಳವನು; ಕುಲವಂತ. (ಪ್ರ). ೨. ಒಂದು ತದ್ಧಿತ ಪ್ರತ್ಯಯ.

**ಕುಲಿಂಗ** (ನಾ). ಕೆಟ್ಟ ಚಿಹ್ನೆ; ಕೆಟ್ಟಲಾಂಛನ.

**ಕುಲಿ(ಳಿ)ಕ** (ನಾ). ೧. ಕುಲೀನ; ಸತ್ಕುಲದಲ್ಲಿ ಹುಟ್ಟಿದವನು. ೨. ಅಷ್ಟಸರ್ಪಗಳಲ್ಲಿ ಒಂದು. ೩. ಒಂದು ಬಗೆಯ ವಿಷಸರ್ಪ.

**ಕುಲಿಮೆ** = ಕೊಲಿಮೆ.

**ಕುಲಿ(ಳಿ)ಶ** (ನಾ). ೧. ವಜ್ರಾಯುಧ. ೨. ವಜ್ರ. ೩. ಒಂದು ಜಾತಿಯ ಮೀನು. ~ಅಸ್ತ್ರ = ೧. ವಜ್ರಾಯುಧ. ೨. ದೇವೇಂದ್ರ.

**ಕುಲಿ(ಳಿ)ಶಧರ** (ನಾ). ವಜ್ರಾಯುಧವನ್ನು ಹಿಡಿದವನು; ಇಂದ್ರ.

**ಕುಲಿ(ಳಿ)ಶಿ** = ಕುಲಿಶಧರ.

**ಕುಲಿ(ಳಿ)ೀನ** (ನಾ). ೧. ಒಳ್ಳೆಯ ಕುಲದವನು; ಕುಲಜ. (ಗು). ೨. ಒಳ್ಳೆಯ ಕುಲದಲ್ಲಿ ಹುಟ್ಟಿದ. ೩. ಮನೆತನಕ್ಕೆ ಸೇರಿದ.

**ಕುಲಿ(ಳಿ)ೀರ** (ನಾ). ೧. ಏಡಿ; ನಳ್ಳಿ. ೨. ಜ್ಯೋತಿಷ್ಯದ ಹನ್ನೆರಡು ರಾಶಿಗಳಲ್ಲಿ ಒಂದು; ಕರ್ಕಾಟಕ.

**ಕುಲು(ಂ)ಕು** (ಕ್ರಿ). ೧. ಒತ್ತಿ ತುಂಬು. ೨. ಅಲುಗಾಡಿಸು; ಅಲ್ಲಾಡಿಸು. ೩. ಬೆಡಗು ಮಾಡು; ಒಯ್ಯಾರಮಾಡು. ೪. ಮೆಲ್ಲನೆ ಹೇಳು; ಗುಂಯಿಗುಟ್ಟು. (ನಾ). ೫. ಅಲ್ಲಾಟ; ಕುಲುಕಾಟ. ೬. ಒಯ್ಯಾರ; ಒನಪು. ೭. ಕುದುರೆಯ ನಡೆಯಲ್ಲಿಯ ಕುಕ್ಕೋಟ.

**ಕುಲುಕಣೆ** (ನಾ). ೧. ಕುಲುಕಾಟ; ಕುಲುಕುವಿಕೆ. ೨. ಹಸ್ತಲಾಘವ.

**ಕುಲುಮೆ** = ಕೊಲಿಮೆ.

**ಕುಲ್ಮಾಷ** (ನಾ). ೧. ಹುಳಿಗಂಜಿ. ೨. ಅರ್ಧ ಬೆಂದ ಧಾನ್ಯ. ೩. ಅಲಸಂದೆ.

**ಕುಲ್ಯ** (ನಾ). ೧. ಹೊಂಡ; ಜಲಾಶಯ. ೨. ಕಂದಕ; ಅಗಳು. ೩. ಕುಲೀನ. ೪. ಮೂಳೆ; ಎಲುವು. (ಗು). ೫. ಕುಲಕ್ಕೆ ಸಂಬಂಧಿಸಿದ.

**ಕುಲ್ಲ** (ನಾ). ೧. ನೀಚ; ಕ್ಷುದ್ರ. ೨. ಚಿಕ್ಕವನು; ಕಿರಿಯ. (ಗು). ೩. ಚಿಕ್ಕದಾದ; ಸಣ್ಣದಾದ. ~ತನ = ೧. ಸಣ್ಣತನ. ೨. ಸಂಕೋಚ.

**ಕುಲ್ಲು** (ನಾ). ಕ್ಷುದ್ರವಾದುದು; ದುಷ್ಟವಾದುದು.

**ಕುವತ್ತು** (ನಾ). ೧. ಶಕ್ತಿ; ತ್ರಾಣ. ೨. ಶಕ್ತಿಯುಳ್ಳದ್ದು; ಬಲಶಾಲಿ.

**ಕುವರ** (ನಾ). ೧. ಮಗ. ೨. ತರುಣ; ಯುವಕ. ೩. ಷಣ್ಮುಖ; ಸ್ಕಂದ. ~ಇಂದ್ರ = ಉತ್ತಮನಾದ ಮಗ.

**ಕುವರಿ** (ನಾ). ೧. ಮಗಳು; ಸುತೆ. ೨. ಕನ್ನೆ; ಕುಮಾರಿ.

**ಕುವರು** (ಕ್ರಿ). ಮುಚ್ಚು; ತುಂಬು.

**ಕುವಲ(ಳ)ಯ** (ನಾ). ೧. ಬೆಳ್ದಾವರೆ. ೨. ನೀಲಿಯ ತಾವರೆ; ಕನ್ನೈದಿಲೆ. ೩. ಭೂಮಂಡಲ. ~ಪತಿ = ೧. ಚಂದ್ರ. ೨. ರಾಜ.

**ಕುವಲಿ** (ನಾ). ಬೋರೆಮರ; ಎಲಚಿಮರ.

**ಕುವಾದ** (ನಾ). ೧. ನಿಂದೆ; ಕೆಟ್ಟಮಾತು. ೨. ಕುತರ್ಕ; ಕೆಟ್ಟವಾದ. (ಗು). ೩. ಹೀಗಳೆಯುವ; ನಿಂದಿಸುವ.

**ಕುವಿ** (ಕ್ರಿ). ಕೂಗು; ಗಟ್ಟಿಯಾಗಿ ಧ್ವನಿ ಮಾಡು.

**ಕುವಿಂದ** (ನಾ). ನೆಯ್ಗೆಯವನು; ನೇಕಾರ.

**ಕುವೇಣಿ** (ನಾ). ೧. ಮೀನು ಹಿಡಿಯುವ ಬಲೆ. ೨. ಮೀನಿನ ಬುಟ್ಟಿ. ೩. ಚೆನ್ನಾಗಿ ಹೆಣೆಯದ ಜಡೆ.

**ಕುವೇರ** = ಕುಬೇರ.

**ಕುವ್ಯಾಡ** (ನಾ). ಕುಚೇಷ್ಟೆ; ಕುಚೋದ್ಯ.

**ಕುವ್ವೆ** = ಕೂವೆ.

**ಕುಶ** (ನಾ). ೧. ಹೋಮಹವನಾದಿಗಳಿಗೆ ಬಳಸುವ ಚೂಪಾದ ಹುಲ್ಲು; ದರ್ಭೆ. ೨. ನೀರು. ೩. ಶ್ರೀರಾಮನ ಹಿರಿಯಮಗನ ಹೆಸರು. ~ಅಗ್ರ = ೧. ದರ್ಭೆಯ ಮೊನೆ. ೨. ತೀಕ್ಷ್ಣವಾದುದು. ~ಗ್ರಂಥಿ = ದರ್ಭೆಯ ಕಟ್ಟು.

**ಕುಶಜ** (ನಾ). ತಾವರೆ; ಕಮಲ.

**ಕುಶದ** (ನಾ). ಮುಗಿಲು; ಮೋಡ.

**ಕುಶಲ(ಳ)** (ನಾ). ೧. ಅಭಿಜ್ಞತೆ; ಚಾತುರ್ಯ. ೨. ಚತುರನಾದವನು. ೩. ಕ್ಷೇಮ; ಸ್ವಾಸ್ಥ್ಯ. (ಗು). ೪. ಸರಿಯಾದ. ೫. ಕ್ಷೇಮಕರವಾದ. ೬. ಚತುರನಾದ. ~ಪತ್ರಿಕೆ = ಯೋಗ ಕ್ಷೇಮವನ್ನು ತಿಳಿಸುವ ಪತ್ರ.

**ಕುಶವ** (ನಾ). ಕುಂಬಾರ.

**ಕುಶಾಮತ್ತು** (ನಾ). ೧. ಖುಷಿ; ಸಂತೋಷ. ೨. ಸಂತೋಷಗೊಳಿಸುವಿಕೆ.

**ಕುಶಾಲ್(ಲು)** (ನಾ). ೧. ಸಂತೋಷ; ಖುಷಿ. ೨. ವಿನೋದ; ತಮಾಷೆ. ೩. ಕ್ಷೇಮ. ~ತೋಪು = ಗೌರವ ಹಾಗೂ ಸಂತೋಷ ಪ್ರಕಟನೆಗಾಗಿ ಹಾರಿಸುವ ತೋಪು.

**ಕುಶಿ** (ನಾ). ೧. ಹದಮಾಡಿದ ಕಬ್ಬಿಣ. ೨. ನೇಗಿಲ ಕುಡ, -ಗುಳ.

**ಕುಶಿಕ** (ನಾ). ೧. ನೇಗಿಲ ಕುಡ. ೨. ವಿಶ್ವಾಮಿತ್ರನ ತಾತ. ~ತನಯ = ವಿಶ್ವಾಮಿತ್ರ.

**ಕುಶಿನಿ** (ನಾ). ಹದ್ದು; ಗಿಡಗ.

**ಕುಶೀಲವ** (ನಾ). ೧. ನಟ. ೨. ಚಾರಣಕವಿ; ಸ್ತುತಿಪಾಠಕ.

**ಕುಶೂಲ** (ನಾ). ಧಾನ್ಯವನ್ನು ಸಂಗ್ರಹಿಸಿಡುವ ಸ್ಥಳ; ಕಣಜ. ~ಧಾನ್ಯ = ೧. ಕಣಜದಲ್ಲಿ ಶೇಖರಿಸಿಟ್ಟ ಧಾನ್ಯ. ೨. ಕಣಜದಲ್ಲಿ ಕಾಳನ್ನು ಸಂಗ್ರಹಿಸಿಡುವವನು.

**ಕುಶೆ** (ನಾ). ೧. ದರ್ಭೆ. ೨. ಮುಚ್ಚುವ ಹಲಗೆ. ೩. ಮರದ ತುಂಡು. ೪. ವಾಘೆ; ಲಗಾಮು.

**ಕುಶೇಶಯ** (ನಾ). ೧. ನೀರಿನಲ್ಲಿರುವುದು; ತಾವರೆ. ೨. ನೀರಿನಲ್ಲಿ ಮಲಗಿರುವವನು; ವಿಷ್ಣು.

**ಕುಷ್ಕಿ** (ನಾ). ಮಳೆಯ ನೀರಿನಿಂದ ಬೆಳೆ ಬೆಳೆಯುವ ಭೂಮಿ; ಕಾಡಾರಂಬ.

**ಕುಷ್ಠ** (ನಾ). ೧. ಒಂದು ಬಗೆಯ ತೊನ್ನು ರೋಗ; ಶ್ವಿತ್ರ ೨. ತೊನ್ನು ರೋಗಿ. ೩. ಒಂದು ಜಾತಿಯ ಔಷಧಿ ಸಸ್ಯ; ಚಂಗಲ ಕೋಷ್ಠ.

**ಕುಷ್ಠಿಕೆ** (ನಾ). ಕರುಳು; ಅಂತ್ರ.

**ಕುಸಮಯ** (ನಾ). ೧. ಕೆಟ್ಟಮತ; ದುಷ್ಟ ಸಿದ್ಧಾಂತ. ೨. ಕೆಟ್ಟವೇಳೆ; ಅವೇಳೆ.

**ಕುಸಲ** (ನಾ). ೧. ಚಾತುರ್ಯ; ಕೌಶಲ. ೨. ಕುಸುರಿಗೆಲಸ; ಚಿತ್ತಾರದ ಕೆಲಸ. ೩. ಸೌಖ್ಯ; ಸಂತೋಷ. ೪. ಮಾಟ; ಮಾಯೆ.

**ಕುಸಿ** (ಕ್ರಿ). ೧. ಕುಗ್ಗು; ಕುಂದು. ೨. ಹಿಂದೆಗೆ; ಹಿಮ್ಮೆಟ್ಟು. ೩. ಜರಿ; ಕೆಳಕ್ಕಿಳಿ. ೪. ಬಾಗಿಸು. ೫. ತಡೆಹಿಡಿ; ನಿರೋಧಿಸು. ೬. ಕೀಳು; ಉತ್ಪಾಟಿಸು. (ನಾ). ೭. ಕೆಳಗೆ ಜರಿಯುವುದು; ಕುಸಿತ. ೮. ಮನದ ಕುಗ್ಗು; ಉತ್ಸಾಹಹೀನತೆ. ೯. ಅಗುಳಿ;

ಲಾಳವಿಂಡಿಗೆ. ~ಕು(ಗು)ಟ್ಟು = ಕೆಳಕ್ಕೆ ಅದುಮು.

ಕುಸಿತ (ನಾ). ೧. ಕೆಳಕ್ಕೆ ಇಳಿಯುವಿಕೆ. ೨. (ಧಾರಣೆವಾಸಿಯಲ್ಲಿ) ತಗ್ಗುವಿಕೆ, – ಇಳಿತ.

ಕುಸಿರು (ನಾ). ಮೊಳಕೆ; ಚಿಗುರು.

ಕುಸಿವಿಷ್ಟೆ (ನಾ). ಒಣಜಂಬ; ಒಣಪ್ರತಿಷ್ಠೆ.

ಕುಸೀದ (ನಾ). ೧. ಹಣವನ್ನು ಬಡ್ಡಿಗೆ ಕೊಡುವುದು. ೨. ಬಡ್ಡಿ ವ್ಯವಹಾರ ಮಾಡುವವನು. ೩. ಹಣವನ್ನಿಟ್ಟುಕೊಂಡು ಬಡ್ಡಿ ಕೊಡುವ ಸಂಸ್ಥೆ.

ಕುಸು(ಂ)ಕು (ಕ್ರಿ). ೧. ಕುಟ್ಟು; ಅಪ್ಪಳಿಸು. ೨. ಬಟ್ಟೆಯನ್ನು ಮೆತ್ತಗೆ ಕುಕ್ಕು. ೩.ಕುಸಿ; ಕುಗ್ಗು. ೪.ಜಾರು; ಜಾರಿಬೀಳು. ~ಇಱು(ರಿ) = ತಿವಿ; ಗುದ್ದು.

ಕುಸು(ಂ)ಕುಱು(ರು) (ನಾ). ೧. ಗಿಡಬಳ್ಳಿಗಳಿಂದ ಒತ್ತಾದ ಸ್ಥಳ; ಇಡಕು. ೨.ಸಂದು; ಮೂಲೆ. ~ಧರ್ಮ = ಅಪ್ರಸಿದ್ಧವಾದ ಧರ್ಮ; ಮೂಲೆಯಲ್ಲಿ ಅಡಗಿರುವ ಧರ್ಮ.

ಕುಸು(ಂ)ಬೆ (ನಾ). ೧. ಒಂದು ಬಗೆಯ ಗಿಡ ಮತ್ತು ಅದರ ಬೀಜ. ೨. ಕುಸುಬೆಹೂವಿನ ಬಣ್ಣ; ಕೇಸರಿಬಣ್ಣ.

ಕುಸುಕ (ನಾ). ಕೆತ್ತನೆಯ ಕೆಲಸ; ಕುಸುರಿಗೆಲಸ.

ಕುಸುಬಲಕ್ಕಿ = ಕುಡುಪಲಕ್ಕಿ.

ಕುಸುಬಿಷ್ಟೆ = ಕುಸಿವಿಷ್ಟೆ.

ಕುಸುಬು (ಕ್ರಿ). ೧. ಬೇಯಿಸು; ಪಕ್ವ ಮಾಡು. ೨. ಬಟ್ಟೆಯನ್ನು ಮೆಲ್ಲಗೆ ಒಗೆ; ಕುಸುಕು. ೩. ಹೊಡೆದು ಕೆಡಹು.

ಕುಸುಮ (ನಾ). ೧. ಹೂವು; ಪುಷ್ಪ. ೨. ಕಿತ್ತಳೆ ಮೊದಲಾದ ಹಣ್ಣುಗಳ ಒಳಗಿರುವ ತಿರುಳು, –ಎಸಳು. ೩.ಮುಟ್ಟು; ರಜಸ್ಸು. ೪. ಮುಟ್ಟಿನ ದೋಷ; ರಜೋವಿಷಯಕವಾದ ರೋಗ. ೫.ಷಟ್ಪದಿ ಛಂದಸ್ಸಿನಲ್ಲಿ ಒಂದು ಭೇದ. ~ಅಸ್ತ್ರ = ೧.ಹೂವಿನ ಬಾಣ. ೨. ಹೂವಿನ ಬಾಣಗಳನ್ನುಳ್ಳವನು; ಮನ್ಮಥ. ~ಆಕರ = ೧. ಹೂವುಗಳಿಂದ ತುಂಬಿದ ಸ್ಥಳ; ಪುಷ್ಪವಾಟಿ. ೨. ಹೂವಿನ ಗೊಂಚಲು. ೩. ವಸಂತಋತು. ~ಆಸವ = ೧.ಹೂವಿನ ರಸ; ಮಕರಂದ. ೨. ಹೂವಿನಿಂದ ತಯಾರಿಸಿದ ಮದ್ಯ. ~ಆಸಾರ =ಹೂವಿನ ಸುರಿಮಳೆ; ಪುಷ್ಪವೃಷ್ಟಿ. ~ಇಸು = ೧. ಅರಳು; ವಿಕಸಿಸು. ೨. ಹೂವನ್ನು ಬಿಡು. ೩. ಹೂಬಿಡುವಂತೆ ಮಾಡು.

ಕುಸುಮಿತ (ಗು). ಹೂವನ್ನು ಬಿಟ್ಟ; ಪುಷ್ಪಿತ.

ಕುಸುರಿ (ನಾ). ೧.ಹಣ್ಣು, ಕಾಯಿಗಳ ಮೃದುವಾದ ತಿರುಳು. ೨. ತೆಂಗಿನಕಾಯಿಯ ತುರಿ, –ರೇಕು. ೩.ಹೂವಿನ ಮಧ್ಯದಲ್ಲಿರುವ ನವಿರಾದ ತಂತು; ಪುಷ್ಪಕೇಸರ. ೪.ಕುಸುರಿ ಕೆಲಸದಿಂದ ಕೂಡಿದ ಆಭರಣ. ೫. ಬೆಡಗು; ಬಿನ್ನಾಣ. ೬.ತುಂಡು; ಚೂರು. ೭.ಸೂಕ್ಷ್ಮವಾದ ಮತ್ತು ನಾಜೂಕಾದ ಕೆಲಸ. ೮. ಎಂಜಲು; ಉಚ್ಛಿಷ್ಟ. ೯. ಎಳೆಯ ಕಾಯಿ; ಹೀಚು. ೧೦. ಒಂದು ಬಗೆಯ ಬಟ್ಟೆ.

ಕುಸುರು (ಕ್ರಿ). ೧. ಸೂಕ್ಷ್ಮವಾದ ಕೆಲಸ ಮಾಡು; ನಯಗೆಲಸ ಮಾಡು. ೨. ಚೂರು ಮಾಡು; ಕೊಚ್ಚು. ೩. ಕುಕ್ಕು; ಕುಸುಕು. ೪.ತುಂಬು; ಗಿಡಿ. ೫.ಮುಸುರು; ಮುತ್ತು. ೬. ಬಾಗು; ಕುಗ್ಗು. ೭. ಚಿತ್ರಿತವಾಗು. (ನಾ). ೮. = ಕುಸುರಿ. ~ಎಳ್(ಳು) = ಸಕ್ಕರೆ ಪಾಕದಲ್ಲಿ ಅದ್ದಿದ ಎಳ್ಳು, ಜೀರಿಗೆ ಮುಂತಾದುವು.

ಕುಸುವು (ಕ್ರಿ). ೧. ಬೇಯಿಸು; ಪಕ್ವ ಮಾಡು. (ನಾ). ೨. ಒಂದು ಜಾತಿಯ ಕಾಡುಹುಲ್ಲು.

ಕುಸೃತಿ (ನಾ). ೧. ವಂಚನೆ; ಮೋಸ. ೨. ಕೆಟ್ಟನಡತೆ. ೩. ಇಂದ್ರಜಾಲ; ಮಾಟ.

ಕುಸ್ತರಿಸು (ಕ್ರಿ). ೧. ಸಮಾಧಾನಪಡಿಸು; ಸಂತೈಸು. ೨. ಉಪಚರಿಸು; ಆದರಿಸು. ೩. ವಿವರಿಸು; ವರ್ಣಿಸು. ೪. ನಿವಾರಿಸು; ತೊಲಗಿಸು. ೫. ಕವಲಿಸು; ಅಲುಗಾಡಿಸು. ೬. ಸಂತೋಷಪಡಿಸು; ತೃಪ್ತಿಪಡಿಸು. ೭. ಕುಳ್ಳಿರಿಸು.

ಕುಸ್ತಿ (ನಾ). ಜಟ್ಟಿಕಾಳಗ; ಮಲ್ಲಯುದ್ಧ.

ಕುಸ್ತುಂಬರಿ (ನಾ). ಕೊತ್ತುಂಬರಿ; ಧನಿಯ.

ಕುಹಕ (ನಾ). ೧. ಮೋಸ; ವಂಚನೆ. ೨. ಮಾಯೆ; ಇಂದ್ರಜಾಲ. ೩. ಮೋಸಗಾರ; ಕಪಟಿ.

ಕುಹಕಿ (ನಾ). ೧. ಮಾಯಾವಿ. ೨. ಮೋಸಗಾರ; ಕಪಟಿ. ೩. ಹುರುಡಿಗ; ಈರ್ಷ್ಯೆಯುಳ್ಳವನು.

ಕುಹರ (ನಾ). ೧. ಗವಿ; ಗುಹೆ. ೨. ತೂತು; ರಂಧ್ರ.

ಕುಹರಣ (ನಾ). ಸುರತ ಧ್ವನಿ; ಅಳಸು.

ಕುಹಳ (ನಾ). ೧. ಅಡಕೆಹೂವಿನ ಗೊಂಚಲು; ಹಿಂಗಾರ; ಹೊಂಬಾಳೆ. ೨. ವೀಳೆಯದೆಲೆಯ ಹಂಬು.

ಕುಹಳಿ = ಕುಹಳ.

ಕುಹು (ನಾ). ೧. ಚಂದ್ರನು ಕಾಣಿಸದಿರುವ ಅಮಾವಾಸ್ಯೆ. ೨. ದೇಹದ ಮುಖ್ಯ ನಾಡಿಗಳಲ್ಲಿ ಒಂದು. ೩. ಕೋಗಿಲೆಯ ಧ್ವನಿ. ~ಯೋಗ = ಒಂದು ಅನಿಷ್ಟಕಾರಕಯೋಗ ಮತ್ತು ಅದರಿಂದುಂಟಾಗುವ ದೋಷ.

ಕುಳ್ (ಕ್ರಿ). ಆಸೀನನಾಗು; ಕುಳಿತುಕೊಳ್ಳು. ~ಇರ್(ರು) = ಕುಳ್.

ಕುಳ ೧. = ಕುಟು. ೨. ತೆರಿಗೆ; ಸುಂಕ. ೩. ಗೇಣಿದಾರ. ೪. ನಾಲ್ಕು ಬಳ್ಳಗಳ ಒಂದು ಅಳತೆ; ಕೊಳಗ. ೫. ದೇಶ್ಯ ಶಬ್ದಗಳಲ್ಲಿ ಬರುವ ಳಕಾರ. ೬. ಅಸಾಮಿ; ವ್ಯಕ್ತಿ. ೭. = ಕುಲ. ~ಅಚ್ಚ = ನಿರ್ಮಲವಾದುದು; ಶುಭ್ರ.

ಕುಳವ (ನಾ). ಒಂದು ಜಾತಿಯ ನೀರುಹಕ್ಕಿ.

ಕುಳವಾರು (ನಾ). ೧. ಗಣನೀಯ ವ್ಯಕ್ತಿ ಅಥವಾ ಮನೆತನ. ೨. ಗಿರಾಕಿ; ಕೊಳ್ಳುವವನು. ೩. ಅಸಾಮಿ; ವ್ಯಕ್ತಿ. ೪. ಪ್ರತಿ ರೈತನಿಗೂ ಸಂಬಂಧಿಸಿದ ವೈಯಕ್ತಿಕ ಲೆಕ್ಕಪತ್ರ. ~ಚಿಟ್ಠ = ಪ್ರತಿ ರೈತನಿಂದ ಸಾಗುವಳಿ ಮಾಡಲಾದ ಬೇರೆಬೇರೆ ಜಮಾನಿನ ಲೆಕ್ಕ.

ಕುಳಿ ೧. = ಕುಟಿ. (ಪ್ರ). ೨. ಒಂದು ತದ್ಧಿತ ಪ್ರತ್ಯಯ.

ಕುಳಿಕೆ (ನಾ). ೧. ಜೀರುಗುಣಿಕೆ; ಸರಗಂಟು. ೨. ಕಟ್ಟು; ಬಂಧ.

ಕುಳಿಮೆ (ನಾ). ಬಸಿರು; ಗರ್ಭ.

ಕುಳಿಯ (ನಾ). ಎಗ್ಗ; ಮೂಢ.

ಕುಳಿರ್ (ಕ್ರಿ). ೧. ತಣ್ಣಗಿರು; ತಂಪಾಗಿರು. ೨. ತಂಪಾಗು; ತಣ್ಣಗಾಗು. (ನಾ). ೩. ಚಳಿ; ತಂಪು. ೪. ಹಿಮ; ಮಂಜು. ~ಕ(ಗ)ದಿರ್ = ಚಂದ್ರನ ತಂಪಾದ ಕಿರಣ; ಬೆಳುದಿಂಗಳು. ~ಕ(ಗ)ಲ್(ಲ್ಲು) = ಚಂದ್ರಕಾಂತಶಿಲೆ. ~ಕೋಡು = ೧. ಚಳಿಯಾಗು; ಶೀತಲವಾಗು. ೨. ತಣಿ; ತೃಪ್ತಿಹೊಂದು. ೩. ಉಲ್ಲಾಸಗೊಳಿಸು. ~ಪ(ವ)ನಿ = ೧. ತಂಪಾದ ನೀರಿನ ಹನಿ. ೨. ಹಿಮಬಿಂದು; ಮಂಜಿನ ಹನಿ. ~ಬೆ(ವೆ)ಟ್ಟು = ಹಿಮಾಲಯ ಪರ್ವತ. ~ಮ(ವ)ನೆ = ತಂಪಾದ ಮನೆ; ಶೈತ್ಯಾಲಯ.

ಕುಳಿರ್ಮೆ (ನಾ). ೧. ತಂಪು; ಶೈತ್ಯ. ೨. ದಯೆ; ಕರುಣೆ.

ಕುಳಿಲ್ (ನಾ). ಮರದ ಮೇಲೆ ಆಡುವ ಆಟ; ಮರಕೋತಿ ಆಟ.

ಕುಳಿಸ = ಕುಲಿಶ.

ಕುಳುಂಪೆ (ನಾ). ನೀರು ನಿಂತಿರುವ ಗುಂಡಿ; ಕುಂಟೆ. ~ಕೊ(ಗೊ)ಳ್ = ಕೆಸರುಗಟ್ಟು; ಗುಂಡಿಯಂತಾಗು.

ಕುಳುತ್ಥ = ಕುಲತ್ಥ.
ಕುಳ್ಳ (ನಾ). ೧. ಗಿಡ್ಡ ; ಎತ್ತರವಿಲ್ಲದವನು. (ಗು). ೨. ಮೊಟಕಾದ ; ಗಿಡ್ಡಾದ.
ಕುಳ್ಳಿ (ನಾ). ೧. ಗಿಡ್ಡಿ ; ಕುಬ್ಜೆ. ೨. (ಬೆಲ್ಲದ) ಅಚ್ಚು.
ಕುಳ್ಳು ೧. = ಕುಳ್. (ನಾ). ೨. ಗಿಡ್ಡಾಗಿರುವಿಕೆ ; ಚಿಕ್ಕದಾಗಿರುವಿಕೆ. ~ಎಡೆ = ಪೀಠ ; ಆಸನ.
ಕುಱ(ಳ) = ಕುಱು.
ಕುಱು(ಳಿ) (ಕ್ರಿ). ೧. ಗುಣಿಬೀಳು ; ಕುಸಿ. ೨. ತೋಡು ; ಅಗೆ. ೩. ಸೊರಗು ; ಕೃಶವಾಗು. (ನಾ). ೪. ಗುಂಡಿ; ತಗ್ಗು. ~ಇಸು = ಕೀಳಾಗಿಸು ; ಹೀನಾಯಮಾಡು.
~ಕ(ಗ)ಣ್(ಣ್ಣು) = ಒಳಕ್ಕೆ ಇಳಿದ ಕಣ್ಣು ; ಗುಳಿಗಣ್ಣು. ~ಕೊ(ಗೊ)ಳ್ = ಕುಗ್ಗು ; ಕ್ಷೀಣಿಸು. ~ತೆವಱು(ರು) = ಹಳ್ಳ ತಿಟ್ಟು ; ತಗ್ಗುದಿಣ್ಣೆ. ~ಪೊ(ವೊ)ಗು = ಹೆರಿಗೆಯಾದ ಅಥವಾ ಮುಟ್ಟಾದ ನಂತರ ಶುದ್ಧಿಗಾಗಿ ಸ್ನಾನ ಮಾಡು.
ಕುಱು(ಳು) (ನಾ). ೧. ಕುಂಟೆ, ನೇಗಿಲುಗಳ ಬಾಯಿಗೆ ತೊಡಿಸುವ ಕಬ್ಬಿಣದ ಪಟ್ಟಿ. ೨. ಬರೆ ಹಾಕುವ ಕಬ್ಬಿಣದ ಸಲಾಕೆ.
ಕುಱ್ಗು(ಳ್ಗು) (ಕ್ರಿ). ೧. ಸಂಕೋಚವಾಗು ; ಚಿಕ್ಕದಾಗು. ೨. ಬಾಗು ; ಬಗ್ಗು. ೩. ಕೊರಗು ; ಮ್ಲಾನವಾಗು.



# ಕೂ

ಕೂ (ನಾ). ೧. ಕೂಗುವಿಕೆ ; ಕರೆ. ೨. ಪಕ್ಷಿಗಳ ಕೂಗಿನ ಅನುಕರಣಪದ. ೩. ಹೆಣ್ಣು ಪಿಶಾಚಿ. ೪. ಭೂಮಿ ; ನೆಲ.
ಕೂಂಕು (ಕ್ರಿ). ೧. ಮೇಲಕ್ಕೆ ಎತ್ತು. ೨. ದೂಡು ; ತಳ್ಳು. ೩. ತಿರಸ್ಕರಿಸು ; ತಳ್ಳಿಹಾಕು.
ಕೂಂಟು (ಕ್ರಿ). ೧. ವಕ್ರವಾಗಿ ನಡೆ; ಕುಂಟು. ೨. ತತ್ತರಿಸು ; ತಡವರಿಸು. (ನಾ). ೩. ಕುಂಟುವಿಕೆ.
ಕೂ(ಂ)ದಲ್(ಲು) (ನಾ). ಕುರುಳು ; ಕೇಶ.
ಕೂಂಪು (ಕ್ರಿ). ಕುಕ್ಕು ; ಕುಟುಕು.
ಕೂಕಂಬ = ಕೂವಕಂಭ.
ಕೂಕಟೆ (ನಾ). ಜುಟ್ಟು ; ಶಿಖೆ.
ಕೂಕಣಿ (ನಾ). ಕಿವಿಯ ಮಲ ; ಗುಗ್ಗೆ.
ಕೂಕಲು (ನಾ). ೧. ಕೂಗಾಟ ; ಚೀರಾಟ. ೨. ಕಾಜಾಣ ; ಕಳಿಂಗನ ಹಕ್ಕಿ.
ಕೂಕು (ನಾ). ಕೂಗಾಟ ; ಕೂಗುವಿಕೆ. ~ಇಱು(ರಿ) = ಕೂಗಾಡು ; ಆರ್ಭಟಿಸು.
ಕೂಕುದ (ನಾ). ಸಾಲಂಕೃತ ಕನ್ಯೆಯನ್ನು ದಾನಮಾಡುವವನು.
ಕೂಗಟೆ (ನಾ). ಅಂಟುವಾಳದ ಮರ.
ಕೂಗಣಿ = ಕೂಕಣಿ.
ಕೂಗರಿ (ನಾ). ಒಂದು ಬಗೆಯ ಕಾಯಿಪಲ್ಯ.
ಕೂಗಲಿ = ಕೂಗರಿ.
ಕೂಗಳ (ನಾ). ಮಾಡಿನ ಮುಖ್ಯ ತೊಲೆ ; ಬೆನ್ನುತೊಲೆ.
ಕೂಗು (ಕ್ರಿ). ೧. ಧ್ವನಿಮಾಡು ; ಅರಚು. ೨. ಕರೆ ; ಆಹ್ವಾನಿಸು. (ನಾ). ೩. ಕೂಗುವಿಕೆ; ಧ್ವನಿ. ~ಅಳತೆ = ಗಟ್ಟಿಯಾಗಿ ಕೂಗಿದರೆ ಕೇಳುವಷ್ಟು ದೂರ. ~ಬಂಡೆ = ಕೂಗಿದರೆ ಪ್ರತಿಧ್ವನಿ ಕೊಡುವ ಬಂಡೆ.

**ಕೂಚಂಭಟ್ಟ** (ನಾ). ಅವಿವೇಕಿ; ದಡ್ಡ.

**ಕೂಚಿ** (ನಾ). ೧. ಶಿಖರದಿಂದ ದಂಡಿನ ರವಾನೆ. ೨. ಶ್ರೇಷ್ಠವಾದುದು.

**ಕೂಚು** (ನಾ). ೧. ತೊಲೆಗೆ ಆಧಾರವಾಗಿ ನಿಲ್ಲಿಸುವ ಕಂಬ; ಮನೆಯ ನಿಲುಗಂಬ. ೨. ವಕ್ರತೆ; ಡೊಂಕು. ೩. ಸಿದ್ಧತೆ; ಸಜ್ಜು. ೪. ಶಿಬಿರದಿಂದ ಸೈನ್ಯದ ಚಲನೆ. (ಗು). ೫. ಸಣ್ಣ; ಚಿಕ್ಕ. ~ಕೊ(ಗೊ)ೞ್(ಲು) = ಬಾಗಿಲಿನ ಚಿಲಕ ಹಾಕುವುದಕ್ಕೆ ಉಪಯೋಗಿಸುವ ಕೊಕ್ಕೆ; ಕೊಂಡಿ.

**ಕೂಜ** (ನಾ). ಉದ್ದ ಕತ್ತಿನ ಪಾತ್ರೆ; ಹೂಜಿ.

**ಕೂಜನ** (ನಾ). ಕೂಗು; ಧ್ವನಿ; ಕುಕಿಲು.

**ಕೂಜಿಸು** (ಕ್ರಿ). ಪಕ್ಷಿಯಂತೆ ಕೂಗು.

**ಕೂಜೆ** = ಕೂಜ.

**ಕೂಟ** (ನಾ). ೧. ಸೇರಿಕೆ; ಸಂಯೋಗ. ೨. ರಾಶಿ; ಸಮುದಾಯ. ೩. ಸಂಘ; ಸಭೆ. ೪. ನಾಲ್ಕಾರು ದಾರಿಗಳು ಸೇರುವ ಸ್ಥಳ. ೫. ಸಂಭೋಗ. ೬. ಎತ್ತರವಾದುದು; ನೆತ್ತಿ. ೭. ಸ್ಥಿರತೆ; ಅಚಲತೆ. ೮. ಹಡಗು. ೯. ನೇಗಿಲಿನ ಭಾಗ; ಕುಳು. ೧೦. ಚಮ್ಮಟಿಗೆ. ೧೧. ಜೊತೆ; ಸಂಗ. ೧೨. ಕಪಟ; ಮೋಸ. ೧೩. ಕೊಂಬು ಮುರಿದ ಎತ್ತು ಮೊದಲಾದುವು. ~ಉಪಾಯ = ಮೋಸದ ಉಪಾಯ; ಕುಟಿಲೋಪಾಯ. ~ಕುಳಿ = ಗುಂಪುಗೂಡುವ ಜನ; ನೆರವಿ. ~ಪಾಕಳ = ೧. ಪಿತ್ತಜ್ವರ. ೨. ಆನೆಗೆ ಬರುವ ಒಂದು ಬಗೆಯ ಜ್ವರ. ~ಪ್ರಶ್ನೆ = ಬಿಡಿಸಲಾಗದ ಕಗ್ಗಂಟು. ~ಯಂತ್ರ = ಮೃಗಪಕ್ಷಿಗಳನ್ನು ಉಪಾಯದಿಂದ ಹಿಡಿಯುವ ಸಾಧನ; ಬೋನು, ಬಲೆ ಮುಂತಾದುವು. ~ಸಾಕ್ಷಿ = ೧. ಸುಳ್ಳು ಸಾಕ್ಷಿ. ೨. ಸುಳ್ಳುಸಾಕ್ಷಿ ಹೇಳುವವನು.

**ಕೂಟಗೆ** (ನಾ). ೧. ಸಂತರ್ಪಣೆ. ೨. ಕಹಿ ಔಷಧಿಯೊಡನೆ ಸೇರಿಸುವ ಸಿಹಿ.

**ಕೂಟಸ್ಥ** (ನಾ). ೧. ಮನೆತನದ ಮುಖಂಡ. ೨. ಪರಮಾತ್ಮ. ೩. (ಚಿತ್‌ಸ್ವರೂಪದಲ್ಲಿ) ಕೂಡಿಕೊಳ್ಳುವಿಕೆ; ಐಕ್ಯ. ೪. ಕೂಡಿಕೊಂಡವನು; ಐಕ್ಯನಾದವನು. (ಗು). ೫. ತುದಿಯಲ್ಲಿರುವ. ೬. ಸಮೂಹದ ಮಧ್ಯದಲ್ಲಿರುವ.

**ಕೂಟಾಯಿ** (ನಾ). ಧಾನ್ಯವನ್ನು ಸಂಗ್ರಹಿಸಿಡುವ ಸಾಧನ; ಕಣಜ.

**ಕೂಟು** (ನಾ). ೧. ನಾಲ್ಕುದಾರಿ ಕೂಡುವ ಸ್ಥಳ; ಚೌಕ. ೨. ಬಗೆಬಗೆಯ ತರಕಾರಿಗಳನ್ನು ಸೇರಿಸಿ ಮಾಡುವ ಮೇಲೋಗರ.

**ಕೂಡ** (ಅ). ೧. ಒಡನೆ; ಸಂಗಡ. ೨. ಸಹ.

**ಕೂಡಲ್(ಲು)** (ನಾ). ಕೂಡಿಕೊಳ್ಳುವಿಕೆ; ಸಂಗಮ; ಜೊತೆ.

**ಕೂಡಲೆ** (ಅ). ಸಂಗಡವೆ; ತಕ್ಷಣ.

**ಕೂಡಿಲು** (ನಾ). ಒಂದು ಜಾತಿಯ ಮೀನು.

**ಕೂಡು** (ಕ್ರಿ). ೧. ಸೇರು; ಬೆರೆ. ೨. ಸಾಧ್ಯವಾಗು; ಈಡೇರು. ೩. ಸಂಭೋಗಿಸು. ೪. ಕೂಡಿಸು; ಸೇರಿಸು. ೫. ಒಪ್ಪು; ಶೋಭಿಸು. ೬. ಹಾಕು; ಒಟ್ಟು. ೭. ಇಡು. ೮. ಬಂಧಿಸು; ಸೆರೆಯಲ್ಲಿಡು. ೯. ಕುಳ್ಳಿರು; ಆಸೀನನಾಗು. (ನಾ). ೧೦. ಕೂಟ; ಜೊತೆ. ~ಇಕೆ = ೧. ಬೆರಕೆ; ಸೇರುವೆ. ೨. ವಿಧವೆ ಅಥವಾ ಗಂಡನನ್ನು ಬಿಟ್ಟವಳು ಮಾಡಿಕೊಳ್ಳುವ ಉಡಿಕೆ; ಕೂಡುವಳಿ. ~ವಳಿ = ಕೂಡಿಕೆ.

**ಕೂಡೆ** ೧. = ಕೂಡ. ೨. ಕೂಡಲೆ; ಒಮ್ಮೆಲೆ.

**ಕೂಣಿ** (ನಾ). ಮೀನು ಹಿಡಿಯುವ ಬುಟ್ಟಿ; ಕೂಳೆ.

**ಕೂಣಿತ** (ಗು). ೧. ಮುಚ್ಚಿದ; ಮುಗಿದ. ೨. ಸಂಕುಚಿತವಾದ.

**ಕೂನ್(ನು)** (ಕ್ರಿ). ೧. ಬಾಗು; ಬಗ್ಗು. (ನಾ). ೨. ಬೆನ್ನು ಬಾಗಿರುವಿಕೆ; ಡೂಗು. ೩. ವಕ್ರತೆ; ಕೊಂಕು.

**ಕೂನ** (ನಾ). ೧. ಕುಳ್ಳಾಗಿರುವಿಕೆ. ೨. ಗೂನುಳ್ಳವನು ; ಡೂಗ. ೩. ಬಾಗಿರುವಿಕೆ ; ವಕ್ರತೆ. ೪. ಕುರುಹು ; ಗುರುತು.

**ಕೂನಿ** (ನಾ). ೧. ಗೂನುಳ್ಳವಳು ; ಗೂನಿ ೨. ಮಣ್ಣಿನ ಪಾತ್ರೆ ; ಗಡಿಗೆ.

**ಕೂಪ** ೧. = ಕೂರ್ಪ. ೨. ಹಳ್ಳ ; ಗುಳಿ. ೩. ಬಾವಿ.

**ಕೂಪಕ** (ನಾ). ೧. ಹಳ್ಳ. ೨. ಒಣಗಿದ ನದಿಯ ಒಡಲಲ್ಲಿ ನೀರಿಗಾಗಿ ತೋಡಿದ ಕುಳಿ. ೩. ಕೂವೆಯ ಕಂಬ, –ಮರ. ೪. ನದಿಯ ಮಧ್ಯದಲ್ಲಿರುವ ಬಂಡೆಗಲ್ಲು.

**ಕೂಪಾರ** (ನಾ). ಸಾಗರ ; ಸಮುದ್ರ.

**ಕೂಬರ** (ನಾ). ೧. ಬಂಡಿಯ ಅಥವಾ ರಥದ ಈಸು. ೨. ಬಂಡಿ ; ಶಕಟ.

**ಕೂರ್**(ರು) (ಕ್ರಿ). ೧. ಪ್ರೀತಿಸು ; ಒಲವು ತೋರು. ೨. ಮೋಹಿಸು ; ಮೆಚ್ಚು. ೩. ಹರಿತವಾಗು ; ತೀಕ್ಷ್ಣವಾಗು. ೪. ಕುಳಿತುಕೊಳ್ಳು. (ನಾ). ೫. = ಕೂಱು. ೬. ಹರಿತವಾಗಿರುವಿಕೆ. ೭. ಪ್ರೇಮ ; ನಲ್ಮೆ. ೮. ಪರಾಕ್ರಮ. (ಗು). ೯. ಹರಿತವಾದ ; ತೀಕ್ಷ್ಣವಾದ. ~ಅಸಿ = ಹರಿತವಾದ ಕತ್ತಿ ; ತೀಕ್ಷ್ಣವಾದ ಖಡ್ಗ. ~ಇಸು = ೧. ಪ್ರೀತಿಸುವಂತೆ ಮಾಡು ; ಒಲಿಸು. ೨. ಕುಳ್ಳಿರಿಸು. ~ಕಲಹ = ಪ್ರಣಯಕಲಹ ; ಪ್ರೇಮದ ಜಗಳ.

**ಕೂರ** (ನಾ). ೧. ಅನ್ನ ; ಆಹಾರ. ೨. ಹರಿತವಾಗಿರುವಿಕೆ ; ತೀಕ್ಷ್ಣತೆ. ೩. ಪರಾಕ್ರಮ ; ಶೌರ್ಯ. (ಗು). ೪. ಹರಿತವಾದ.

**ಕೂರಂಗಿ** (ನಾ). ಒಂದು ಕಾಡುಪ್ರಾಣಿ.

**ಕೂರಗೆ** = ಕೂರಂಗಿ.

**ಕೂರಿತ್ತು** (ಗು). ಹರಿತವಾದ ; ತೀಕ್ಷ್ಣವಾದ.

**ಕೂಱು(ರಿ)ಗೆ** (ನಾ). ೧. ಹೊಲಗಳಲ್ಲಿ ಬೀಜ ಬಿತ್ತುವ ಉಪಕರಣ. ೨. ಹೊಲವನ್ನು ಅಳೆಯುವ ಒಂದು ಪ್ರಮಾಣ.

**ಕೂಱು**(ರು) (ನಾ). ಪಾಲು ; ಅಂಶ. ~ಕೊ(ಗೊ)ಳ್ = ೧. ತುರುಕಿಕೊಳ್ಳು ; ಗಿಡಿದುಕೊಳ್ಳು. ೨. ಕತ್ತರಿಸು ; ಭಾಗ ಮಾಡು.

**ಕೂಱೆ**[2](ರೆ) (ನಾ). ೧. ಕೊಳಕಾದ ಬಟ್ಟೆ ; ಮಲಿನ ವಸ್ತ್ರ. ೨. ಕೊಳಕಾದ ಬಟ್ಟೆಗಳಲ್ಲಿ ಹುಟ್ಟಿಕೊಳ್ಳುವ ಒಂದು ಜಾತಿಯ ಕ್ರಿಮಿ.

**ಕೂರ್ಚ** (ನಾ). ೧. ಕುಚ್ಚು ; ಗುಚ್ಛ. ೨. ಹುಬ್ಬುಗಳ ನಡುವಣ ಸ್ಥಳ. ೩. ಗಡ್ಡ. ೪. ಮೀಸೆ. ೫. ಪೀಠ ; ಆಸನ. ೬. ದರ್ಭೆ. ೭. ತಲೆ ; ಶಿರಸ್ಸು.

**ಕೂರ್ಚಿಕೆ** (ನಾ). ೧. ಕಾಯಿಸಿ ಗಟ್ಟಿಗೊಳಿಸಿದ ಹಾಲು ; ಗಿಣ್ಣು. ೨. ಒಂದು ಬಗೆಯ ಖಾದ್ಯ.

**ಕೂರ್ಚೆ** (ನಾ). ೧. ಗೊರಸಿನ ಮೇಲುಭಾಗ ; ಕಿರುಗೊಳಗು. ೨. ಗುಚ್ಛ ; ಕುಚ್ಚು.

**ಕೂರ್ಪ** (ನಾ). ೧. ಪ್ರೀತಿಸುವವನು ; ಪ್ರಿಯ. ೨. ಹುಬ್ಬುಗಳ ನಡುವಿನ ಪ್ರದೇಶ. ೩. ಗೆರಸೆ ; ಮೊರ.

**ಕೂರ್ಪರ** (ನಾ). ೧. ಮೊಳಕೈ. ೨. ಮೊಳಕಾಲು.

**ಕೂರ್ಪಾಸ** (ನಾ). ಕುಪ್ಪಸ ; ಕಂಚುಕ.

**ಕೂರ್ಪು** (ನಾ). ೧. ಒಲವು ; ಪ್ರೀತಿ. ೨. ಮೊನೆ ; ತೀಕ್ಷ್ಣತೆ. ೩. ಶೌರ್ಯ ; ಕೆಚ್ಚು. ೪. ಅತಿಶಯ ; ಆಧಿಕ್ಯ.

**ಕೂರ್ಮ** (ನಾ). ೧. ಆಮೆ ; ಕಮಠ. ೨. ವಿಷ್ಣುವಿನ ಹತ್ತು ಅವತಾರಗಳಲ್ಲಿ ಎರಡನೆಯದು. ~ಈಶ = ೧. ಆಮೆಗಳ ಒಡೆಯ. ೨. ಒಂದು ಶಿವಲಿಂಗ.

**ಕೂರ್ಮೆ** (ನಾ). ಪ್ರೀತಿ ; ಒಲ್ಮೆ.

**ಕೋಲ್** (ನಾ). ೧. ವಿಗ್ರಹ ಮೊದಲಾದುವನ್ನು ಕೂರಿಸುವುದಕ್ಕಾಗಿ ಮಾಡಿದ ತಳಗೂಟ, –ಬೆಣೆ. ೨. ತುದಿ ; ಕೊನೆ. ~ತು(ದು)ಂಬು = ಅರೆಗಳನ್ನು ಹಿಡಿದುಕೊಂಡಿರುವ

ಚಕ್ರದ ಮಧ್ಯದಲ್ಲಿರುವ ಗಡ್ಡೆ, –ಪಿಂಡಿಕೆ; ಗುಂಬ.

**ಕೂಲ** (ನಾ). ೧. ರಾಶಿ; ಸಮೂಹ. ೨. ತಟ; ದಡ.

**ಕೂಲಂಕಷ** (ಗು). ೧. ದಡವನ್ನು ಉಜ್ಜಿ ಹಾಕುವ,–ಕೊರೆಯುವ. ೨. ಸಮಗ್ರವಾದ; ಮೊದಲಿನಿಂದ ಕೊನೆಯವರೆಗಿನ.

**ಕೂಲವತಿ** (ನಾ). ನದಿ; ಹೊಳೆ.

**ಕೂಲಿ** (ನಾ). ೧. ದುಡಿಮೆಗಾಗಿ ಕೊಡುವ ಹಣ, ಕಾಳು ಮುಂತಾದುವು, ೨. ಗಳಿಕೆ; ಸಂಪಾದನೆ. ೩. ಬೆಲೆ; ಬಾಡಿಗೆ. ೪. ಕೂಲಿಯ ಆಳು; ಕೂಲಿಕಾರ. ೫. ಜೀತ; ದುಡಿತ. ~ **ಅಟ್ಟು** = ಕೂಲಿ ಕೊಟ್ಟು ದನಗಳನ್ನು ಮೇಯಿಸಿಕೊಂಡು ಬರಲು ಕಳುಹಿಸು. ~ **ಇಗ** = ಕೂಲಿ; ಜೀತದಾಳು. ~ **ಮಠ** = ಕೂಲಿಯನ್ನು ಪಡೆದು ನಡೆಸುತ್ತಿದ್ದ ಶಾಲೆ.

**ಕೂಲು** (ಕ್ರಿ). ೧. ಕುಗ್ಗು; ಕುಸಿ; ಬೀಳು. (ನಾ). ೨. (ಕೆರೆ ಅಥವಾ ಬಾವಿಗಳ) ಮೆಟ್ಟಿಲು, –ಸೋಪಾನ. ೩. = ಕೂಲ್.

**ಕೂವ** (ನಾ). ೧. ಹಡಗಿನ ಮಧ್ಯದಲ್ಲಿರುವ ಕಂಬ; ಕೂಪಸ್ತಂಭ. ೨. ಬಾವಿ; ಕೂಪ. ~ **ಕಂಭ(ಬ)** = ಹಗ್ಗವನ್ನು ಎಳೆದು ಕಟ್ಟುವ ಹಡಗಿನ ಮಧ್ಯಭಾಗದ ಕಂಬ; ಕೂವೆ.

**ಕೂವೆ** (ನಾ). ೧. ಒಂದು ಬಗೆಯ ಗೆಣಸು ಮತ್ತು ಅದರ ಗಿಡ; ಅರಾರೂಟು. ೨. ಲೋಹ ಕರಗಿಸುವ ತಟ್ಟೆ. ೩. = ಕೂವ. ~ **ಹಿಟ್ಟು** = ಕೂವೆಗೆಡ್ಡೆಯಿಂದ ತಯಾರಿಸಿದ ಹಿಟ್ಟು.

**ಕೂಷ್ಮಾಂಡ** (ನಾ). ೧. ಒಂದು ಬಗೆಯ ಕಾಯಿಪಲ್ಯೆ; ಕುಂಬಳ. ೨. ಶಿವನ ಒಂದು ಹೆಸರು. ೩. ಒಂದು ಜಾತಿಯ ಪಿಶಾಚಿ.

**ಕೂಸ** (ನಾ). ಚಿಕ್ಕವನು; ಎಳೆಯ; ಬಾಲಕ.

**ಕೂಸು** (ನಾ). ೧. ಮಗು; ಹಸುಳೆ. ೨. ಮದುವೆಯಾಗದ ಹೆಣ್ಣು; ಕನ್ಯೆ. ೩. = ಕೂಸ. ೪. ಶಿಷ್ಯ; ವಿದ್ಯಾರ್ಥಿ. ~ **ಆಟ** = ಮಕ್ಕಳಾಟ; ಬಾಲಲೀಲೆ. ~ **ಆಡಿಸು** = ೧. ತಮಾಷೆ ಮಾಡು; ವಿನೋದ ಮಾಡು. ೨. ಕೂಸನ್ನು ಆಡಿಸು. ~ **ಮಱ(ರಿ)** = ೧. ಮಗು; ಹಸುಳೆ. ೨. ಮಕ್ಕಳನ್ನು ಆಡಿಸುವ ಒಂದು ಬಗೆಯ ಆಟ.

**ಕೂಸೆ** (ನಾ). ಒಂದು ಜಾತಿಯ ಮೀನು.

**ಕೂಳಿ** = ಕೂಳೆ.

**ಕೂಳು** (ಕ್ರಿ). ೧. ತಿವಿ; ಇರಿ. (ನಾ). ೨. = ಕೂಱ್.

**ಕೂಳೆ** (ನಾ). ೧. ಮೀನು ಹಿಡಿಯುವ ಬುಟ್ಟಿ. ೨. ಪಯಿರನ್ನು ಕೊಯ್ದ ಬಳಿಕ ತಳದಲ್ಲಿ ಉಳಿಯುವ ಮೋಟು ತುಂಡು; ಕೋಲಿ. ೩. ಕೂಳೆಯ ಭಾಗದಲ್ಲಿ ಹುಟ್ಟಿದ ಹೊಸ ಮೊಳಕೆ. ೪. ನೆನೆ ಹಾಕಿದ ಕಾಳಿನಲ್ಲಿ ಹೊರಡುವ ಮೊಳಕೆ. ೫. ಕೀವು; ಲಸಿಕೆ. ೬. ದುಷ್ಟೆ; ಕೀಳು ಹೆಂಗಸು.

**ಕೂಱ್(ಳ್, ಳು, ಱು)** (ನಾ). ೧. ಅನ್ನ; ಓಗರ. (ಗು). ೨. ದುಷ್ಟ; ಕ್ರೂರವಾದ. ೩. ಬಿಸಿಯಾದ. ೪. ಹರಿತವಾದ; ಮೊನಚಾದ. ~ **ಕು(ಗು)ದಿ** = ೧. ಅನ್ನ ಕುದಿಯುವಂತೆ ಕುದಿ. ೨. ಒಳಗೊಳಗೇ ಸಂತಾಪ ಪಡು. ೩. ಒಳಗೊಳಗೇ ಕುದಿಯುವಿಕೆ; ತಳಮಳ. ~ **ಪ(ಬ)ಸವು** = ಅನ್ನದ ಬರ; ದುರ್ಭಿಕ್ಷ. ~ **ಬಡಿಕ** = ೧. ಹೊಟ್ಟೆಬಾಕ; ತಿನ್ನಾಳಿ. ೨. ಹೊಟ್ಟೆಬಾಕತನ.

**ಕೂಬ(ಳ)** (ನಾ). ೧. ಮೂರ್ಖ; ಎಗ್ಗ. ೨. ಅಲ್ಪ; ನೀಚ. ~ **ತನ** = ದುರುಳತನ; ನೀಚತನ.

❋

**ಕೃಂತ** (ನಾ). ೧. ಕತ್ತರಿಸುವುದು. ೨. ತುಂಡು ಮಾಡುವ ಸಲಕರಣೆ.

**ಕೃಕ** (ನಾ). ಗಂಟಲು; ತಾಳಿಗೆ.

**ಕೃಕರ** (ನಾ). ೧. ಒಂದು ಜಾತಿಯ ಹಕ್ಕಿ; ಕಬ್ಬಕ್ಕಿ. ೨. ದೇಹದ ಪಂಚವಾಯುಗಳಲ್ಲಿ ಒಂದು.

**ಕೃಕಲಾಸ** (ನಾ). ಓತಿಕೇತ; ಹೆಂಟೆಗೊದ್ದ.

**ಕೃಕವಾಕು** (ನಾ). ೧. ಕೋಳಿ; ಕುಕ್ಕುಟ. ೨. ನವಿಲು. ೩. = ಕೃಕಲಾಸ.

**ಕೃಕಾಟಿಕೆ** (ನಾ). ಕುತ್ತಿಗೆಯ ಹಿಂಭಾಗ; ಹೆಕ್ಕತ್ತು.

**ಕೃಚ್ರ** (ನಾ). ೧. ಶ್ರಮ; ಪ್ರಯಾಸ. ೨. ವಿಪತ್ತು; ಗಂಡಾಂತರ. ೩. ದುಃಖ; ನೋವು. ೪. ಆಹಾರಸೇವನೆಯಲ್ಲಿ ಒಂದು ಬಗೆಯ ವ್ರತ. (ಗು). ೫. ಕಷ್ಟಕರವಾದ; ಕಠಿಣವಾದ.

**ಕೃತ** (ನಾ). ೧. ನಾಲ್ಕು ಯುಗಗಳಲ್ಲಿ ಮೊದಲನೆಯದು. ೨. ಧನ್ಯನಾದವನು; ಪುಣ್ಯವಂತ. ೩. ಯಮ. ೪. ಉಪಕಾರ; ಅನುಗ್ರಹ. (ಗು). ೫. ಮಾಡಿದ; ಮುಗಿಸಿದ. ~ಅಂಜಲಿ = ೧. ಜೋಡಿಸಿದ ಕೈ; ಮುಗಿದ ಕೈ. ೨. ಕೈಗಳನ್ನು ಮುಗಿದ ವ್ಯಕ್ತಿ. ೩. ಮುಟ್ಟಿದರೆ ಎಲೆಗಳು ಮುರುಟುವ ಗಿಡ; ಮುಟ್ಟಿದರೆ ಮುನಿ. ~ಅಂತ = ೧. ಸಿದ್ಧಾಂತ; ತೀರ್ಮಾನ. ೨. ಕರ್ಮಫಲ; ವಿಧಿ. ೩. ಯಮ. ೪. ಪಾಪಕರ್ಮ. ೫. ಇಪ್ಪತ್ತೇಳು ನಕ್ಷತ್ರರಾಶಿಗಳಲ್ಲಿ ಒಂದು; ಭರಣಿ. ೬. ಅಂತ್ಯಗೊಳಿಸಲ್ಪಟ್ಟ. ~ಅನುಶಯ = ಪಶ್ಚಾತ್ತಾಪಗೊಂಡವನು. ~ಅರ್ಥ = ಮಾಡಬೇಕಾದ ಕೆಲಸವನ್ನು ಮಾಡಿ ಸಫಲತೆಯನ್ನು ಹೊಂದಿದವನು; ಕೃತಕೃತ್ಯ. ~ಕೃತ್ಯ = ಕೃತಾರ್ಥ. ~ಮುಖ = ಚತುರ; ಜಾಣ. ~ಸಮಯ = ಪ್ರತಿಜ್ಞೆ ಮಾಡಿದವನು.

**ಕೃತಕ** (ನಾ). ೧. ನಿರ್ಮಾಣ; ರಚನೆ. ೨. ಕಪಟ; ಮೋಸ. ೩. ಮೋಸಗಾರ; ವಂಚಕ. (ಗು). ೪. ಮಾಡಿದ; ನೆರವೇರಿಸಿದ. ೫. ಸ್ವಾಭಾವಿಕವಲ್ಲದ; ಅಸಹಜ. ೬. ಕಪಟದ; ಮೋಸದ. ~ಪುತ್ರ = ದತ್ತುಮಗ.

**ಕೃತಘ್ನ** (ನಾ). ಮಾಡಿದುದನ್ನು ಮರೆಯುವವನು; ಉಪಕಾರಗೇಡಿ.

**ಕೃತಜ್ಞ** (ನಾ). ಮಾಡಿದ ಉಪಕಾರವನ್ನು ನೆನೆಯುವವನು.

**ಕೃತಜ್ಞತೆ** (ನಾ). ಮಾಡಿದ ಉಪಕಾರವನ್ನು ನೆನೆಯುವುದು; ಉಪಕಾರಸ್ಮರಣೆ.

**ಕೃತಸಾಪತ್ನಿಕೆ** (ನಾ). ಸವತಿಯನ್ನುಳ್ಳ ಮೊದಲನೆಯ ಹೆಂಡತಿ.

**ಕೃತಿ** (ನಾ). ೧. ಕೆಲಸ; ಕಾರ್ಯ. ೨. ಕಾವ್ಯ; ಗ್ರಂಥ. ೩. ವಿದ್ವಾಂಸ; ಪಂಡಿತ. ೪. ನೆರವೇರಿಸಿದ ಕಾರ್ಯ; ಪೂರ್ತಿಗೊಳಿಸಿದ ಕೆಲಸ. ೫. ಕುಶಲಕಲೆಗೆ ಸಂಬಂಧಿಸಿದ ರಚನೆ; ಕಲಾಕೃತಿ. ~ಚೌರ್ಯ = ಬೇರೆಯವರ ಕೃತಿಯಿಂದ ಅಪಹರಿಸುವುದು.

**ಕೃತ್ತಿ** (ನಾ). ೧. ಚರ್ಮ; ತೊಗಲು. ೨. ಒಂದು ಜಾತಿಯ ಮರ; ಭೂರ್ಜವೃಕ್ಷ. ~ವಾಸ = ೧. ಚರ್ಮದ ಬಟ್ಟೆ. ೨. ಹುಲಿಯ ಚರ್ಮವನ್ನು ಧರಿಸಿದವನು; ಶಿವ.

**ಕೃತ್ತಿಕೆ** (ನಾ). ೧. ಇಪ್ಪತ್ತೇಳು ನಕ್ಷತ್ರರಾಶಿಗಳಲ್ಲಿ ಮೂರನೆಯದು ಮತ್ತು ಆ ನಕ್ಷತ್ರರಾಶಿಗಳಲ್ಲಿ ಬರುವ ಮಳೆ. ೨. ವಾಹನ. ೩. ಒಂದು ಬಗೆಯ ಪಾತ್ರೆ. ೪. ಚರ್ಮ; ತೊಗಲು.

**ಕೃತ್ಯ** (ನಾ). ೧. ಕೆಲಸ; ಕಾರ್ಯ. ೨. ಅನ್ಯರಿಗೆ ಕೇಡನ್ನೆಣಿಸಿ ಮಾಡುವ ದುಷ್ಟದೇವತೆಯ ಉಪಾಸನೆ; ಮಾಟ. ೩. ನಿಷ್ಠೆ. ೪. ದ್ರೋಹಿ; ವಿಶ್ವಾಸಘಾತಕ. (ಗು). ೫. ಮಾಡತಕ್ಕ; ಮಾಡಲು ಯೋಗ್ಯವಾದ.

**ಕೃತ್ಯೆ** (ನಾ). ೧. ಕೆಲಸ; ಕಾರ್ಯ. ೨. ಮಾಟ ಮೊದಲಾದ ಅಭಿಚಾರಿಕ ಕ್ರಿಯೆಯ ಅಧಿದೇವತೆ. ೩. ಮಾಟ.

**ಕೃತ್ರಿಮ** (ನಾ). ೧. ಕಪಟ; ಮೋಸ. ೨. ಮೋಸಗಾರ; ಕಪಟಿ. ೩. ಮಾಟ; ಶೂನ್ಯ. (ಗು). ೪. ಸಹಜವಲ್ಲದ; ಕೃತಕವಾದ.

**ಕೃತ್ಸ್ನ** (ನಾ). ೧. ನೀರು. ೨. ಹೊಟ್ಟೆ. ೩. ಪೂರ್ತಿಯಾಗಿರುವಿಕೆ.

**ಕೃದಂತ** (ನಾ). ವ್ಯಾಕರಣದಲ್ಲಿ ಕೃತ್ ಪ್ರತ್ಯಯದಿಂದ ಕೊನೆಗೊಳ್ಳುವ ಶಬ್ದ.

**ಕೃದರ** (ನಾ). ಉಗ್ರಾಣ; ಕಣಜ.

**ಕೃಪಣ** (ನಾ). ೧. ದೈನ್ಯದಿಂದ ಕೂಡಿದುದು. ೨. ಅಲ್ಪ; ನೀಚ. ೩. ಲೋಭಿ; ಜಿಪುಣ. ೪. ದರಿದ್ರ; ಬಡವ. (ಗು). ೫. ಹೀನವಾದ; ತುಚ್ಛವಾದ. ೬. ತಿಳಿವಳಿಕೆಯಿಲ್ಲದ.

**ಕೃಪಣತೆ** (ನಾ). ೧. ಲೋಭ; ಜಿಪುಣತನ. ೨. ಕೆಟ್ಟತನ; ನೀಚತನ. ೩. ದೈನ್ಯ; ಅಸಹಾಯಕತೆ.

**ಕೃಪಾಣ** (ನಾ). ಖಡ್ಗ; ಕತ್ತಿ.

**ಕೃಪಾಣಿ** (ನಾ). ೧. ಕತ್ತರಿ. ೨. ಚಾಕು; ಕಠಾರಿ.

**ಕೃಪಾದೃಷ್ಟಿ** (ನಾ). ದಯೆಯಿಂದ ಕೂಡಿದ ನೋಟ.

**ಕೃಪಾಲು(ಳು)** (ನಾ). ದಯಾಳು; ಕರುಣಿ.

**ಕೃಪೀಟ** (ನಾ). ೧. ಹೊಟ್ಟೆ; ಉದರ. ೨. ಗರ್ಭ ನಿಂತಿರುವ ಹೊಟ್ಟೆ; ಬಸಿರು. ೩. ನೀರು. ೪. ಸೌದೆ. ೫. ಕಂಚು. ೬. ಕಾಡು. ೭. ಬರಗಾಲ. ~ಯೋನಿ = ಬೆಂಕಿ; ಅಗ್ನಿ.

**ಕೃಪೆ** (ನಾ). ದಯೆ; ಕರುಣೆ. ~ಪ(ವ)ಡೆ = ದಯೆಯನ್ನು ಹೊಂದು.

**ಕೃವಿ** (ನಾ). ನೂಲಿನಿಂದ ಬಟ್ಟೆಯನ್ನು ನೇಯುವ ಯಂತ್ರ; ಮಗ್ಗ.

**ಕೃಶ** (ನಾ). ೧. ತೆಳ್ಳಗಿರುವಿಕೆ. (ಗು). ೨. ತೆಳುವಾದ. ೩. ಅಲ್ಪವಾದ. ~ಅಂಗ = ಬಡವಾದ ದೇಹ; ದುರ್ಬಲ ಶರೀರ.

**ಕೃಶಾನು** (ನಾ). ೧. ಅಗ್ನಿ; ಬೆಂಕಿ. ೨. ಒಂದು ಬಗೆಯ ಸಸ್ಯ; ಚಿತ್ರಮೂಲ.

**ಕೃಷಿ** (ನಾ). ೧. ಸಾಗುವಳಿ; ಬೇಸಾಯ. ೨. ಪ್ರಯತ್ನ; ಉದ್ಯಮ.

**ಕೃಷಿಕ** (ನಾ). ೧. ಬೇಸಾಯಗಾರ; ರೈತ. ೨. ನೇಗಿಲ ಗುಳ.

**ಕೃಷ್ಟ** (ಗು). ೧. ಎಳೆಯಲ್ಪಟ್ಟ; ಜಗ್ಗಿದ. ೨. ಉಳುಮೆಯಾದ; ಉತ್ತ.

**ಕೃಷ್ಣ** (ನಾ). ೧. ಕಪ್ಪುಬಣ್ಣ; ಅಸಿತವರ್ಣ. ೨. ವಸುದೇವನ ಮಗ; ವಿಷ್ಣುವಿನ ಅವತಾರ. ೩. ಕಾಗೆ. ೪. ಕೋಗಿಲೆ. ೫. ಒಂದು ಜಾತಿಯ ಜಿಂಕೆ. ೬. ಕಬ್ಬಿಣ. (ಗು). ೭. ಕಪ್ಪಾದ; ಕರಿಯ ಬಣ್ಣದ. ೮. ಕೆಟ್ಟ; ದುಷ್ಟ. ~ಕಾರಸ್ಥಾನ = ಮೋಸದ ಕಾರುಭಾರ. ~ಪಕ್ಷ = ಹುಣ್ಣಿಮೆಯ ಮರುದಿನದಿಂದ ಅಮಾವಾಸ್ಯೆಯವರೆಗಿನ ಕಾಲ; ಬಹುಳ. ~ಮೃಗ = ೧. ಕಪ್ಪುಬಣ್ಣದ ಜಿಂಕೆ. ೨. ಶ್ರೀಕೃಷ್ಣನನ್ನು ಧ್ಯಾನಿಸುವುದು. ~ಸರ್ಪ = ಕರಿಯ ಹಾವು; ಕಾಳಸರ್ಪ.

**ಕೃಷ್ಣಿಕೆ** (ನಾ). ೧. ಕರಿಯ ಸಾಸಿವೆ. ೨. ಕಪ್ಪು ಕಲೆ.

**ಕೃಷ್ಣೆ** (ನಾ). ೧. ಅಗ್ನಿಯ ಏಳು ನಾಲಗೆಗಳಲ್ಲಿ ಒಂದು. ೨. ಉದ್ದವಾದ ಕರಿಮೆಣಸು; ಹಿಪ್ಪಲಿ. ೩. ದ್ರೌಪದಿ.

ಕೃಷ್ಯ (ನಾ). ೧. ಉಳುವುದಕ್ಕೆ ಯೋಗ್ಯವಾದ ಭೂಮಿ. (ಗು). ೨. ಉಳಬೇಕಾದ. ೩. (ಮೇಲಕ್ಕೆ) ಎಳೆಯಲು ಸಾಧ್ಯವಾದ.

ಕ್ಲೃಪ್ತ (ನಾ). ೧. ಬೆಲೆ; ಮೌಲ್ಯ. (ಗು). ೨. ಏರ್ಪಡಿಸಿದ. ೩. ನಿರ್ಧರಿಸಿದ. ೪. ಕಲ್ಪಿಸಿದ. ೫. ಕತ್ತರಿಸಿದ.



# ಕೆ

ಕೆಂ (ಗು). ಕೆಂಪಾದ; ಕೆಂಪುಬಣ್ಣದ. ~ಕ(ಗ)ಣ್(ಣ್ಣು) = ಕೆಂಪಾದ ಕಣ್ಣು; ರೇಗಿದ ಕಣ್ಣು. ~ಕ(ಗ)ದಿರ್ = ಕೆಂಪು ಬಣ್ಣದ ಕಿರಣ. ~ಕ(ಗ)ಲ್(ಲು) = ೧.ಕೆಂಪುಕಲ್ಲು; ಮಾಣಿಕ್ಯ. ೨.ಕೆಂಪಾಗಿರುವಿಕೆ; ಕೆಂಬಣ್ಣ. ~ಕಾ(ಗಾ)ಂಚಾಳ = ಕೆಂಪು ಕಾಂಚಿವಾಳ; ಕೋವಿದಾರ ವೃಕ್ಷ ~ಕು(ಗು)ಡಿ = ೧.ಕೆಂಪಾದ ಕುಡಿ; ಚಿಗುರು. ೨. ಹವಳ; ಪ್ರವಾಳ. ~ಜಡೆ =ಕೆಂಪುಕೂದಲಿನ ಹೆರಳು. ~ತ(ದ)ಲ(ಳ) = ೧. ಕೆಂಪಾದ ಅಂಗೈ. ೨. ಕೆಂಪಾದ ಅಂಗಾಲು. ~ತ(ದ)ಳಿರ್(ರು) = ಕೆಂಪಾದ ಚಿಗುರು. ~ತಾರೆ = ಕೆಂಪು ನಕ್ಷತ್ರ. ~ದಲ(ಳ) = ಕೆಂಪಾದ ಎಸಳು, -ರೇಕು. ~ನೆತ್ತರ್(ರು) = ಕೆಂಪುರಕ್ತ. ~ಪ(ಬ)ರಲ್(ಲು) = ಕೆಂಪು ಹರಳು; ಮಾಣಿಕ್ಯ. ~ಪೊ(ಬೊ)ನ್ = ೧. ಚೊಕ್ಕ ಚಿನ್ನ; ಅಪರಂಜಿ. ೨. ತಾಮ್ರ. ~ಬೊಟ್ಟು = ೧. ಕೆಂಪುಬೊಟ್ಟು. ೨. ಶುಕ್ರನಕ್ಷತ್ರ; ಬೆಳ್ಳಿಚುಕ್ಕೆ. ~ಮುಟ್ಟೆ = ಕೆಮ್ಮಣ್ಣು.

ಕೆಂಕ (ನಾ). ಕೆಂಚುಬಣ್ಣ; ಕೆಂಪು. ~ಮು(ವ)ಣಿ= ಮಾಣಿಕ್ಯ.

ಕೆಂಕನೆ (ಅ). ಚೆನ್ನಾಗಿ.

ಕೆಂಕರಿಸು (ಕ್ರಿ). ೧. ಉಬ್ಬು; ಉತ್ಸಾಹಿಸು. ೨. ಕೆಂಪಾಗು; ಕೆಂಪುಬಣ್ಣಕ್ಕೆ ತಿರುಗು.

ಕೆಂಗಣ್ಣ (ನಾ). ೧. ಕೆಂಪಾದ ಕಣ್ಣುಳ್ಳವನು. ೨. ಕೆಂಪಾದ ಕಣ್ಣುಳ್ಳದ್ದು; ಕೋಗಿಲೆ.

ಕೆಂಗದಿರ (ನಾ). ಕೆಂಪಾದ ಕಿರಣಗಳನ್ನುಳ್ಳವನು; ಸೂರ್ಯ.

ಕೆಂಗಱು(ರಿ) (ನಾ). ೧. ಕೆಂಬಣ್ಣದ ಗರಿ. ೨. ಒಂದು ಜಾತಿಯ ಮೀನು.

ಕೆಂಗೋಲ್(ಲು) (ನಾ). ಕೆರಳುವಿಕೆ; ಉದ್ರೇಕ. ~ಮುಸಗು = ಕೋಪಗೊಳ್ಳು; ಉದ್ರೇಕಗೊಳ್ಳು.

ಕೆಂಚ (ನಾ). ೧. ಕೆಂಪುಬಣ್ಣವುಳ್ಳದ್ದು. ೨. ಕೆಂಪು ಮೈಬಣ್ಣದವನು. ೩. ಚೆಲುವ; ಸುಂದರ.

ಕೆಂಚನೆ (ಅ). ಕೆಂಪಗೆ; ಕೆಚ್ಚಗೆ.

ಕೆಂಚು (ನಾ). ೧. ಕೆಂಪುಬಣ್ಣ. ೨. ಗರ್ವ; ಸೊಕ್ಕು. ~ಅಣಿಲು = ಕೆಂಪುಬಣ್ಣದ ಅಳಿಲು; ಕೆಂಪು ಇಣಚಿ.

ಕೆಂಜಿಗ = ಕೆಂಜಿಗೆ.

ಕೆಂಜಿಗೆ (ನಾ). ೧. ಒಂದು ಜಾತಿಯ ಸಸ್ಯ. ೨. ಕೆಂಪುಬಣ್ಣದ ದೊಡ್ಡ ಇರುವೆ; ಕೇಸಿರುವೆ.

ಕೆಂಜುಟ್ಟುವಕ್ಕಿ (ನಾ). ಕೆಂಪುಜುಟ್ಟನ್ನುಳ್ಳ ಪಕ್ಷಿ; ಹುಂಜ; ತಾಮ್ರಚೂಡ.

ಕೆಂಡ (ನಾ). ಉರಿಯುತ್ತಿರುವ ಇದ್ದಿಲು; ಇಂಗಳ. ~ಕಾಱು(ರು) = ೧. ಕೆಂಡವನ್ನು ಉಗುಳು. ೨. ರೇಗು; ಸಿಟ್ಟಾಗು. ~ಸಂಪಗೆ = ಸಂಪಿಗೆಯಲ್ಲಿ ಒಂದು ಬಗೆ.

ಕೆಂಡಗಣ್ಣ (ನಾ). ಬೆಂಕಿಯ ಕಣ್ಣುಳ್ಳವನು; ಶಿವ.

ಕೆಂದ (ನಾ). ಕೆಂಪುಬಣ್ಣದ ಹೋರಿ.

ಕೆಂದಾಳಿ (ನಾ). ಕೆಂಪುತೆಂಗು ; ಚೆಂದಾಳ.

ಕೆಂದು (ಕ್ರಿ). ೧. ಆತುಕೊಳ್ಳು ; ಒರಗು. ೨. ಮಲಗು ; ನಿದ್ರಿಸು. ೩. ಒಗ್ಗು ; ಅಂಟು. (ನಾ). ೪. ಬೇಟ ; ರತಿ. ೫. ಕೆಂಬಣ್ಣ.

ಕೆಂಪು (ನಾ). ೧. ಕೆಂಬಣ್ಣ ; ರಕ್ತವರ್ಣ. ೨. ಒಂದು ಬಗೆಯ ಲೋಹ; ತಾಮ್ರ. ೩. ಕೆಂಪುಬಣ್ಣದ ಹರಳು ; ಮಾಣಿಕ್ಯ. ೪. ಎಕ್ಕಡ ; ಮೆಟ್ಟು. ~ತ(ದು)ಂಬಿ = ಕಣಜದ ಹುಳು ; ಕಡಜೀರಿಗೆ.

ಕೆಂಬರವು (ನಾ). ೧. ಕೆಂಪಾಗಿ ಹರಡುವಿಕೆ. ೨. ಕೆಂಪುಚೇಳು. ೩. ಉಷ್ಣದೋಷದಿಂದ ಮಗುವಿನ ಮೈಮೇಲೆ ಮೂಡುವ ಚೇಳಿನ ಆಕಾರದ ಮಚ್ಚೆ.

ಕೆಂಬಾರ (ನಾ). ೧. ಸಂಜೆಯ ಮುಗಿಲಬಣ್ಣ. ೨. ಕೆಂಪುನೆಲ್ಲು. ೩. = ಕೆಂಬರವು.

ಕೆಂಬೂತ = ಕೆಂಬೋತ.

ಕೆಂಬೂತಿ (ನಾ). ೧. ಒಂದು ಬಗೆಯ ಬತ್ತ. ೨. = ಕೆಂಬೋತ.

ಕೆಂಬೋತ (ನಾ). ಸಂಬಾರಕಾಗೆ ; ಭಾರದ್ವಾಜ ಪಕ್ಷಿ.

ಕೆಕ್ಕನೆ (ಅ). ಚಕ್ಕನೆ ; ಕೂಡಲೆ.

ಕೆಕ್ಕರಿಕೆ (ನಾ). ಸೌತೆಜಾತಿಗೆ ಸೇರಿದ ಹಣ್ಣು; ಪುಟ್ಟಹಣ್ಣು.

ಕೆಕ್ಕರಿಸು = ಕೆಕ್ಕಳಿಸು.

ಕೆಕ್ಕಸ (ನಾ). ನಿಂದೆ ; ಬೈಗುಳು. ~ಕೆ(ಗೆ)ಲೆ = ಗೇಲಿಮಾಡು ; ಅಪಹಾಸ್ಯಮಾಡು.

ಕೆಕ್ಕಳ (ನಾ). ೧.ಕೆಂಪು ; ಕೆಂಬಣ್ಣ. ೨.ಸಿಟ್ಟು; ಕೋಪ. ~ಇಸು = ೧. ಕೆಂಪಾಗು. ೨. ಕ್ರೋಧಗೊಳ್ಳು. ೩. ಗಾಬರಿಯಾಗು; ಬೆದರು. ೪. ನೆಟ್ಟಗೆ ನೋಡು. ೫. ಕೆಂಪಾಗಿಸು. ೬.ಕೋಪದಿಂದ ದುರುಗುಟ್ಟಿಕೊಂಡು ನೋಡು. ~ಕೆ(ಗೆ)ಳರ್ = ಕನಲಿ ಕೆಂಡವಾಗು ; ಅತಿಯಾಗಿ ಕೋಪಿಸು.

ಕೆಕ್ಕು (ಕ್ರಿ). ೧. ಹಸುಗಳನ್ನು (ಕಾಯುವಾಗ) ಕೂಗು, -ಕೇಕೆ ಹಾಕು. ೨. ಕೇಕರಿಸು ; ಗಂಟಲು ಕೆರೆಯುವಂತಾಗು.

ಕೆಕ್ಕೆ (ನಾ). ಕೆನ್ನೆ ; ಕದಪು.

ಕೆಗಹು (ನಾ). ರೇಗು ; ಕನಲು.

ಕೆಚ್ಚನೆ = ಕೆಂಚನೆ.

ಕೆಚ್ಚಲ್(ಲು) (ನಾ). ಹಸು, ಎಮ್ಮೆ ಮೊದಲಾದ ಪ್ರಾಣಿಗಳ ಮೊಲೆಯ ಮೇಲ್ಭಾಗ.

ಕೆಚ್ಚು (ಕ್ರಿ). ೧. ದಾರದ ಎರಡು ತುದಿಗಳನ್ನು ಹೊಸೆದು ಕೂಡಿಸು. ೨. ಸೇರಿಸು; ಹೊಂದಿಸು. ೩. ಕುಂದಣಿಸು ; ಕೀಲಿಸು. (ನಾ). ೪. ಹೊಸೆದು ಮಾಡಿದ ಗಂಟು. ೫. ಕೂಡುವುದು ; ಬೆಸುಗೆ. ೬. ಕೆಂಪುಬಣ್ಣ. ೭. = ಕೆಚ್ಚರ್. ~ಕ(ಗ)ಟ್ಟು = ಗಟ್ಟಿಗೊಳ್ಳು ; ದೃಢವಾಗು. ~ಬಿ(ವಿ)ಟಬ್(ಳ್) = ೧. ಹೆಣೆದುಕೊಂಡಿರು. ೨. ತುಂಬ ಗರ್ವದಿಂದ ಕೂಡಿರು.

ಕೆಟ್ಟ (ನಾ). ೧. ಕೆಡಕು ಮಾಡುವುದು. (ಗು). ೨. ಒಳ್ಳೆಯದಲ್ಲದ ; ಕೆಡುಕಿನ. ೩. ಉಗ್ರವಾದ ; ಪ್ರಚಂಡವಾದ. ~ಎಣಿಸು = ಕೇಡನ್ನು ಬಗೆ ; ಕೆಟ್ಟದ್ದನ್ನು ಯೋಚಿಸು.

ಕೆಡ(ಂ)ಪು (ಕ್ರಿ). ೧. ಕೆಳಕ್ಕೆ ಬೀಳಿಸು. ೨. ಬೀಳು ; ಕೆಡೆ. ೩. ನೂಕು ; ತಳ್ಳು. ೪. ನಾಶಮಾಡು ; ಕೊಲ್ಲು.

ಕೆಡಹು = ಕೆಡಂಪು.

ಕೆಡು (ಕ್ರಿ). ೧.ಹಾಳಾಗು ; ಅಳಿ. ೨. ಲೋಪವಾಗು ; ಇಲ್ಲವಾಗು. ೩. ಗುಣಹೊಂದು ; ವಾಸಿಯಾಗು. ೪. ಚೆದರು ; ಚೆಲ್ಲಾಪಿಲ್ಲಿಯಾಗು. ೫. ಸೋಲು ; ಹಿಮ್ಮೆಟ್ಟು. ೬. ನಿರ್ಗತಿಕನಾಗು. ೭. ಮೀರು ; ಉಲ್ಲಂಘಿಸು. ೮. ಶೀಲವನ್ನು ಕಳೆದು

ಕೊಳ್ಳು. ೯. ಹದಗೆಡು; ಅವ್ಯವಸ್ಥಿತವಾಗು. ೧೦. ಕೀಳಾಗು; ದುಷ್ಟನಾಗು. ೧೧. ಸಾಯು. ೧೨. ಮಸುಕಾಗು; ಮಬ್ಬಾಗು. ೧೩. ನಂದು; ಆರು. (ನಾ). ೧೪. ಮಚ್ಚೆ; ಚಿಬ್ಬು. ~ಇಸು = ೧.ಹಾಳುಮಾಡು. ೨. ಶೀಲಭಂಗಮಾಡು. ೩.ಹೋಗಲಾಡಿಸು; ನಿವಾರಿಸು. ೪. ಆರಿಸು; ನಂದಿಸು. ೫. ಕೇಡು; ನಾಶ.

ಕೆಡುಕ (ನಾ). ಕೇಡಾಳಿ; ದುಷ್ಟ.

ಕೆಡುಕು (ನಾ). ೧ ಕೇಡು; ನಾಶ. ೨. ವ್ಯಥೆ; ನೋವು. ~ಎನಿಸು=ಮನಸ್ಸಿಗೆನೋವಾಗು.

ಕೆಡೆ (ಕ್ರಿ). ೧ ಬೀಳು; ಉರುಳು. ೨. ಒರಗು; ಮಲಗು. ೩. ಸಾಯು; ಪ್ರಾಣನೀಗು. ೪. ಗಳಹು; ಹರಟು. (ನಾ). ೫. ಬೀಳುವಿಕೆ; ಪತನ. ~ನುಡಿ = ೧. ಕೆಟ್ಟಮಾತನ್ನಾಡು; ನಿಂದಿಸು. ೨. ಅವಹೇಳನೆ; ನಿಂದೆ.

ಕೆಡ್ಡಾ (ನಾ). ಕಾಡಾನೆಗಳನ್ನು ಹಿಡಿಯಲು ಮಾಡಿದ ಕಂದಕ; ಕಪ್ಪು.

ಕೆಣಕು (ಕ್ರಿ). ೧. ಕೆರಳಿಸು; ರೇಗಿಸು. ೨. ಆಕ್ರಮಿಸು; ಮುತ್ತು. ೩. ಪ್ರಚೋದಿಸು; ಪ್ರೇರಿಸು. ೪. ಕೆದರು; ಕೆದಕು. (ನಾ). ೫. ಕೆಣಕುವಿಕೆ; ಕೆರಳುವಿಕೆ.

ಕೆತ್ತಣ (ನಾ). ಹರಳುಗಳನ್ನು ಚಿನ್ನದಲ್ಲಿ ಕೂಡಿಸುವಿಕೆ; ಕುಂದಣ.

ಕೆತ್ತನೆ = ಕೆತ್ತಣ.

ಕೆತ್ತು (ಕ್ರಿ). ೧. ನಡುಗು; ಮಿಡುಕು. ೨. ಕುಂದಣಿಸು; ಕೆಚ್ಚು. ೩. ತೆಳ್ಳಗೆ ಮಾಡು; ಮೇಲ್ಭಾಗವನ್ನು ಸುಲಿ. ೪. ಕತ್ತರಿಸು; ಖಂಡಿಸು. ೫. ಕಂಡರಿಸು; ಕೊರೆ. (ನಾ). ೬. ನಡುಕ; ಸ್ಪಂದನ.

ಕೆತ್ತುಗೆಯ್ (ಕ್ರಿ). ಮುಚ್ಚು.

ಕೆತ್ತೆ (ನಾ). ೧. ಕತ್ತರಿಸಿ ತೆಗೆದ ಚೂರು; ಚಕ್ಕೆ. ೨. ಉಪ್ಪಿನಕಾಯಿಯ ಹೋಳು.

ಕೆದಕು (ಕ್ರಿ). ೧. ಕೆದರು; ಬೆದಕು. ೨. ನೆಲವನ್ನು ಅಗೆದು ಸಡಿಲಗೊಳಿಸು; ಪರಡು.

ಕೆದಱ್(ರ್,ರು,ಱು) (ಕ್ರಿ). ೧. ಹರಡು; ವಿಸ್ತರಿಸು. ೨. ಕೆದಕು; ಬೆದಕು. ೩. ಚೆದರಿಸು; ಬೇರೆ ಬೇರೆ ಮಾಡು. ೪. ಚೆದರಿಹೋಗು. ೫. ಒಲೆದಾಡು; ತೂಗಾಡು. ೬. ಕೊಡವು; ಒದರು. ೭. ಎಸೆ; ಬೀರು. (ನಾ). ೮. ಚೆದರುವುದು; ಚೆಲ್ಲಾಪಿಲ್ಲಿಯಾಗುವುದು.

ಕೆನೆ (ಕ್ರಿ). ೧. (ಕುದುರೆಯಂತೆ) ಹೇಕರಿಸು; ಹೇಷಾರವವನ್ನು ಮಾಡು. (ನಾ). ೨. ಹಾಲು ಮತ್ತು ಮೊಸರಿನ ಸಾರವತ್ತಾದ ಭಾಗ. ೩. ಸಾರ; ತಿರುಳು. ೪. ಸೊಬಗು.

ಕೆನ್ನ (ನಾ). ೧. ದುಃಖ; ಕಷ್ಟ. ೨. ಕೆಂಪಾದುದು; ಕೆಂಬಣ್ಣ. ~ನೀರ್(ರು) = ೧. ಕೆಂಪು ನೀರು; ಕೆಸರು ನೀರು. ೨. ನೆತ್ತರು; ರಕ್ತ. ೩. ಕೆಂಪುಬಣ್ಣ. ೪. ಕೆಂಪುಬಣ್ಣದ ಕಾಂತಿ.

ಕೆನ್ನಂ (ಅ). ೧. ಬಹಳವಾಗಿ; ಅಧಿಕವಾಗಿ. ೨. ವ್ಯರ್ಥವಾಗಿ; ಸುಮ್ಮನೆ.

ಕೆನ್ನೆ (ನಾ). ಕದಪು; ಕಪೋಲ.

ಕೆಪ್ಪ (ನಾ). ಕಿವಿ ಕೇಳಿಸಲಾರದವನು; ಕಿವುಡ; ಬಧಿರ.

ಕೆಪ್ಪು (ಕ್ರಿ). ೧. ಕೊಡು; ಸಲ್ಲಿಸು. (ನಾ). ೨. = ಕೆರ್ಪು. ೩. ಕಿವುಡು; ಬಧಿರತೆ.

ಕೆಪ್ಪೆ = ಕೆನ್ನೆ.

ಕೆಬ್ಬೆ (ನಾ). ೧.ಕೆಂಪುಮಣ್ಣಿನ ಭೂಮಿ. ೨. ಸಿಪ್ಪೆ. ~ರೋಗ = ಸಸ್ಯಗಳಿಗೆ ಬೂಷ್ಟು ಹಿಡಿಯುವ ಒಂದು ರೋಗ.

ಕೆಮ್ಮಗೆ (ಅ). ೧. ಸುಮ್ಮನೆ; ವ್ಯರ್ಥವಾಗಿ. ೨. ಮೌನವಾಗಿ; ನೀರವವಾಗಿ.

ಕೆಮ್ಮನೆ = ಕೆಮ್ಮಗೆ.

ಕೆಮ್ಮು (ಕ್ರಿ). ೧. ಕೇಕರಿಸು; ಗಂಟಲು ಸರಿಮಾಡಿಕೊಳ್ಳು. (ನಾ). ೨. ಕೆಮ್ಮುವಿಕೆ; ಕಾಸ.

ಕೆಯ್ (ಕ್ರಿ). ೧. (ಕೆಲಸ) ಮಾಡು; ನೆರವೇರಿಸು. ೨. ಉಳು; ಸಾಗುವಳಿ ಮಾಡು. (ನಾ). ೩. ಕರ; ಹಸ್ತ. ೪. ಆನೆಯ ಸೊಂಡಿಲು. ೫. ಮರದ ಕೊಂಬೆ; ಗೆಲ್ಲು. ೬. ಮಾರ್ಗ; ಮುಖಾಂತರ. ೭. ನೆರವು; ಸಹಾಯ. ೮. ಗದ್ದೆ, ಹೊಲ ಮುಂತಾದ ಸಾಗುವಳಿಭೂಮಿ. ೯. ಪೈರು; ಬೆಳೆ. ೧೦. ಕಿರಣ; ರಶ್ಮಿ. ೧೧. ಅಲಂಕಾರ; ಶೃಂಗಾರ. ೧೨. ಅದಟು; ಪರಾಕ್ರಮ. ೧೩. ಅಂಚು; ಸೆರಗು. ~ಅಡಕ=ಕೈಹಿಡಿತ; ಚಮತ್ಕಾರ. ~ಅಳೆ = ಮಜ್ಜಿಗೆ. ~ಆಸೆ = ಲಂಚದ ಆಸೆ. ~ಎಣ್ಣೆ = ೧. ಯಂತ್ರದ ಸಹಾಯವಿಲ್ಲದೆ ಕೈಯಿಂದಲೇ ತೆಗೆದ ಎಣ್ಣೆ. ೨. ಹರಳೆಣ್ಣೆ; ಔಡಲ ಎಣ್ಣೆ. ~ಕ(ಗ)ಟ್ಟು =೧. ಸೆಣಸು; ಹೊಡೆದಾಡು. ೨. ಸಂಭವಿಸು; ಉಂಟಾಗು. ೩. ಕತ್ತರಿಯ ಆಕಾರದಲ್ಲಿ ಎದೆಯ ಮೇಲೆ ಕೈಗಳನ್ನು ಇಟ್ಟುಕೊಳ್ಳು. ೪. ಶರಣಾಗು; ಸೋಲು. ೫. ತುಂಬ ಅಡಚಣೆಯಾಗು. ೬. ಕೈಯಲ್ಲಿ ಧರಿಸುವ ಒಂದು ಆಭರಣ. ~ಕರಣ = ೧. ಎಲ್ಲರಿಗೂ ತಿಳಿದಿರುವ ವೈದ್ಯಕೀಯ ಚಿಕಿತ್ಸೆ. ೨. ಕೈಸನ್ನೆ. ೩. ಕೈಚಳಕ; ಹಸ್ತಕೌಶಲ. ~ಕಸ = ಅಲ್ಪವಸ್ತು; ಕ್ಷುದ್ರವಸ್ತು. ~ಕಾಗದ = ಕರಾರುಪತ್ರ. ~ಕಾ(ಗಾ)ಣ್(ಣು) = ದಿಟವಾಗು; ಅನುಭವಕ್ಕೆ ಬರು. ~ಕಾ(ಗಾ)ವಲು = ೧. ಮುಂದಿನ ಪ್ರಯೋಜನಕ್ಕಾಗಿ ಕಾದಿರಿಸಿದುದು. ೨. ಅಂಗರಕ್ಷಕ ಅಥವಾ ರಕ್ಷಣೆಗಾಗಿ ಬಳಿಯಲ್ಲೇ ಇಟ್ಟುಕೊಂಡಿರುವ ವಸ್ತು. ~ಕಾ(ಗಾ)ಹು = ೧. ರಕ್ಷಣೆ. ೨. ಕೈಸೆರೆ; ಬಂಧನ. ~ಕುಂಟು = ೧. ಕೈಊನವಾಗು. ೨. ಬರವಣಿಗೆಯಲ್ಲಿ ಎಡವು. ~ಕೂ(ಗೂ)ಡು = ೧. ನೆರವೇರು; ಸಿದ್ಧಿಸು. ೨. ಉಂಟಾಗು; ಒದಗಿಬರು. ೩. ಒಟ್ಟಾಗು; ಒಂದಾಗು. ೪. ನೆರವಾಗು; ಅನುಕೂಲವಾಗು. ~ಕೆ(ಗೆ)ಲಸ = ೧. ಸ್ವಂತವಾಗಿ ಮಾಡುವ ಕೆಲಸ. ೨. ಸುತ್ತುಗೆಲಸ; ಸಣ್ಣಪುಟ್ಟ ಕೆಲಸ. ~ಕೆೞ(ಳ)ಗು = ಅಧೀನ; ವಶ. ~ಕೊ(ಗೊ)ಳ್ = ೧. ಪರಿಗ್ರಹಿಸು; ಸ್ವೀಕರಿಸು. ೨. ಒಪ್ಪು; ಒಡಂಬಡು. ೩. ಪಡೆ; ಹೊಂದು. ೪. ಅಧೀನಪಡಿಸಿಕೊಳ್ಳು; ಆಕ್ರಮಿಸು. ೫. ಆರಂಭಿಸು. ೬. ಲೆಕ್ಕಿಸು; ಗಮನಿಸು. ೭. ಎಸಗು; ಮಾಡು. ೮. ಕೇಳು; ಗ್ರಹಿಸು. ೯. ಬೆಳೆ; ವೃದ್ಧಿಯಾಗು. ೧೦. ಎದುರಿಸು; ಪ್ರತಿಭಟಿಸು. ~ಕೋಚಃ=ತೊಂದರೆ; ಇಕ್ಕಟ್ಟು. ~ಗಟ್ಟಿ = (ಊಟವಾದ ಬಳಿಕ) ಕೈಗೆ ಲೇಪಿಸಿಕೊಳ್ಳುವ ಒಂದು ಸುಗಂಧ. ~ಗುಂಡಿಗೆ = ಹಸ್ತಕಮಂಡಲ; ಜಲಪಾತ್ರೆ. ~ಗುಂಡು=೧. ಒಂದು ಯುದ್ಧೋಪಕರಣ; ಕೈಯಿಂದ ಎಸೆಯುವ ಗುಂಡು. ೨. ಮಕ್ಕಳ ಮುಂಗೈಯ ಆಭರಣ. ~ಗುಕ್ಕು = ಕೈತುತ್ತು. ~ಗುಣ = ೧. ಕೈಯ ಸಾಮರ್ಥ್ಯ; ಹಸ್ತಕೌಶಲ. ೨. ಕೈಯ ಪ್ರಭಾವ; ಹಸ್ತಗುಣ. ~ಚೆಲ್ಲು = ೧. ಕೈಯನ್ನು ಚಾಚು. ೨. ಕಾರ್ಯವಿಮುಖನಾಗು; ನಿಷ್ಕ್ರಿಯನಾಗು. ~ತಟ್ಟು = ೧. ಕರತಾಡನಮಾಡು; ಚಪ್ಪಾಳೆ ತಟ್ಟು. ೨. ಸಂಕೇತ ಮಾಡು. ೩. ಒದಗು; ಸಂಭವಿಸು. ೪. ಜಗಳವಾಡು. ~ತಪ್ಪು =೧. ಕೈಯಿಂದ ಜಾರಿಬೀಳು, –ಕಳಚು. ೨. ಕೈಯಿಂದ ಆಗುವ ತಪ್ಪು; ಅಪರಾಧ. ೩. ಅಜಾಗರೂಕತೆಯಿಂದ ಬರವಣಿಗೆಯಲ್ಲಾಗುವ ತಪ್ಪು; ಸ್ಖಾಲಿತ್ಯ. ~ತಾಂಗು = ಸೇತುವೆಗಳ ಅಕ್ಕಪಕ್ಕಗಳಲ್ಲಿರುವ ಕಟಕಟೆ. ~ತು(ದು)ಡುಕು = ೧. ಕೈಯಿಂದ ಹಿಡಿದುಕೊಳ್ಳು.

೨. ಮುನ್ನುಗ್ಗು; ದುಡುಕು. ೩. ಕೈಯಿಂದ ಬಲಾತ್ಕಾರವಾಗಿ ಕಿತ್ತು ಕೊಳ್ಳುವುದು. ೪. ಹಿಂದೆ ಮುಂದೆ ನೋಡದೆ ಕೈಮಾಡುವಿಕೆ. ~ತೊ(ದೊ)ವಲ್ = ಚಿಗುರೆಲೆ; ಎಳೆದಳಿರು. ~ತೊ(ದೊ)ಳಸು = ೧. ಕೈಯಿಂದ ಕಲಕು. ೨. ಬಲಾತ್ಕಾರದಿಂದ ಸೆಳೆ. ೩. ಕೈಯಿಂದ ಮಾಡುವ ಕಲಹ; ಗುದ್ದಾಟ. ೪. ತೊಳಸುವಿಕೆ. ೫. ಬಲಾತ್ಕಾರದಿಂದ ಸೆಳೆಯುವಿಕೆ. ೬. ಕೈವಶ; ಅಧೀನ. ~ತೊ(ದೊ)ಱು(ರು) = ೧. ಸಾಮರ್ಥ್ಯವನ್ನು ಪ್ರದರ್ಶಿಸು. ೨. ಕೈಯನ್ನು ತೋರು. ~ದಂಡೆ = ೧. ಸಣ್ಣದೊಣ್ಣೆ. ೨. ಕೈಯ ಆಸರೆ. ~ದಸ್ತು = ೧. ಇಸ್ಪೀಟಾಟದಲ್ಲಿ ಎಲೆಗಳನ್ನು ಹಂಚಿದಾಗ ಒಬ್ಬರಿಗೆ ಬರುವ ಎಲೆಗಳ ಮೊತ್ತ. ೨. ಒಂದು ಬಗೆಯ ಕೈಪಾತ್ರೆ. ~ಧಾರೆ = ೧. ಕೈಯ ಮೇಲೆ ಎರೆಯುವ ನೀರು. ೨. ಶಾಸ್ತ್ರೋಕ್ತವಾದ ಮದುವೆ. ೩. ವಧೂವರರ ಕೈಗಳ ಮೇಲೆ ಎರೆಯುವ ನೀರಿನ ಧಾರೆ. ~ನೀಡು = ೧. ಬೇಡು; ಯಾಚಿಸು. ೨. ಕೈಹಾಕು; ಕೈಯಿಕ್ಕು. ೩. ನೆರವಾಗು; ಆಶ್ರಯ ಕೊಡು. ~ಪಟ್ಟೆಯ = ಆನೆಗೆ ತಲೆಯಿಂದ ಸೊಂಡಿಲವರೆಗೆ ಇಳಿಬಿಡುವ ಅಲಂಕಾರದ ಪಟ್ಟೆವಸ್ತ್ರ. ~ಪಱೆ(ರೆ) = ೧. ಕೈಚಪ್ಪಾಳೆ. ೨. ಕೈತಮಟೆ. ~ಪಿ(ವಿ,ಹಿ)ಡಿ = ೧. ಕೈಯಿಂದ ಹಿಡಿದುಕೊಳ್ಳು. ೨. ಮದುವೆಯಾಗು. ೩. ಅಂಗೀಕರಿಸು; ಸ್ವೀಕರಿಸು. ೪. ಸೆರೆಹಿಡಿ; ಬಂಧಿಸು. ೫. ನೆರವಾಗು. ೬. ತಡೆಗಟ್ಟು. ೭. ಹಿಡಿತಮಾಡು. ೮. ಕನ್ನಡಿ; ದರ್ಪಣ. ೯. ಆಶ್ರಯ; ಆಧಾರ. ೧೦. ಹಿಡಿ; ಹಿಡಿಕೆ. ೧೧. ಕೈಹೊತ್ತಗೆ. ೧೨. ಕೈಯ ಹಿಡಿತ; ಮುಷ್ಟಿ. ~ಪೊಡೆ = ೧. ಬಾಣದ ಗರಿ, -ಪುಂಖ. ೨. ಬಿಲ್ಲಿನ ಹೆದೆ ತಾಗದಂತೆ ಮುಂಗೈಗೆ ಕಟ್ಟುವ ರಕ್ಷಾಕವಚ. ~ಪೊ(ವೊ)ೞ್ಕು = ೧. ಚಿಗುರುವಿಕೆ. ೨. ದುಷ್ಟತನ; ಕೆಟ್ಟತನ. ~ಬ(ವ)ೞಿ(ಳಿ) = ಹೊಲಗದ್ದೆಗಳ ಪಕ್ಕದ ಪ್ರದೇಶ. ~ಬಿಱಿ(ರಿ) = ವಾಹನಗಳ ವೇಗವನ್ನು ತಡೆಹಿಡಿಯುವ ಸಾಧನ; ಬ್ರೇಕು. ~ಮಗುಚು = ೧. ಕೈ ಬೀಸು; ಬಲಪ್ರದರ್ಶನ ಮಾಡು. ೨. ಕತ್ತರಿಸು; ತುಂಡರಿಸು. ೩. ಎಸೆ; ಪ್ರಯೋಗಿಸು. ೪. ಕೈತಪ್ಪಿಹೋಗು. ೫. ಕರ್ಮಗಳನ್ನು ಆಚರಿಸು. ೬. ಇಲ್ಲವೆನ್ನು. ೭. ತಿರುವಿಹಾಕು. ೮. ವ್ಯವಹಾರ ನಡೆಸು. ~ಮದ್ದು = ೧. ನಿಧಾನವಾಗಿ ಅಪಾಯವನ್ನುಂಟುಮಾಡುವ ಒಂದು ಬಗೆಯ ಔಷಧ; ಕೈಮುಸಕ. ೨. ವಶೀಕರಣ ಔಷಧ. ~ಮುಸಕ = ೧. ಮಾಟ; ಮಾಯೆ. ೨. ಇಕ್ಕುಮದ್ದು; ಆಹಾರದೊಡನೆ ಬೆರಸಿ ಕೊಡುವ ಒಂದು ಬಗೆಯ ಮಂದವಿಷ. ~ಮಱೆ(ರೆ) = ೧. ಬೆರಗಾಗು; ವಿಸ್ಮಯಗೊಳ್ಳು. ೨. ಶಕ್ತಿಗುಂದು; ಹಸ್ತಕೌಶಲವನ್ನು ಕಳೆದುಕೊಳ್ಳು. ~ಮಾಂಸ = ಕೆಯಸ್‌ಮದ್ದು. ~ಮಾಡು = ೧. ಕೈಸನ್ನೆಯಿಂದ ಸೂಚಿಸು. ೨. ದಾಳಿಮಾಡು; ಮೇಲೆ ಬೀಳು. ೩. ಆಯುಧವನ್ನು ಝಳಪಿಸು. ೪. ಬೆಲೆಯನ್ನು ನಿಷ್ಕರ್ಷಿಸಿ ಸಂಕೇತದಿಂದ ಸೂಚಿಸು. ~ಮಿಗು = ಅಧಿಕವಾಗು; ಮಿತಿಮೀರು. ~ಮೇಳವಿಸು = ೧. ಬೆರೆ; ಸೇರು. ೨. ಹೋರಾಡು. ೩. ಕೈಗೂಡು; ಸಿದ್ಧಿಸು. ೪. ಸಂಭವಿಸು; ಉಂಟಾಗು. ೫. ಅಳವಡು; ಒಪ್ಪು. ~ರಂಪಣಿ = ಮೀನು ಹಿಡಿಯುವ ಚಿಕ್ಕ ಜಾಳಿಗೆ. ~ವಾಕು = ಮಕ್ಕಳಿಗೆ ತೊಡಿಸುವ ಬಳೆ; ಕಪ್ಪ. ~ಸದ್ದಕ = ಹತ್ತಿರದಲ್ಲಿ ಸದಾ ಇರುವ ಸೇವಕ. ~ಹಂದು = ಕೈಅಲುಗಾಡು.

ಕೆಯ್ತ (ನಾ). ೧. ಕೆಲಸ; ಕಾರ್ಯ. ೨. ಹೊಲದ ಉಳುಮೆ; ಕೃಷಿ. ೩. ಮೋಸ; ಕಪಟ. ೪. ಚೇಷ್ಟೆ.

ಕೆಯ್ದು (ನಾ). ಆಯುಧ; ಶಸ್ತ್ರ. ~ಕಾ(ಗಾ)ಱ(ರ) = ಸೈನಿಕ; ಯೋಧ.

ಕೆಯ್ವಾಡ (ನಾ). ೧. ಕುಶಲ ಕೆಲಸ; ಕೈಗಾರಿಕೆ. ೨. ಕೈಚಳಕ. ೩. ಪ್ರಭಾವ.

ಕೆಯ್ವಾರ (ನಾ). ೧. ಕೊಂಡಾಟ; ಹೊಗಳಿಕೆ. ೨. ಅಭಿಮಾನ; ಮಮತೆ. ೩. ವೃತ್ತವನ್ನು ಳೆಯುವ ಒಂದು ಸಲಕರಣೆ; ಕಂಪಾಸು. ೪. ಬೆಂಬಲ; ನೆರವು. ೫. ಕೈಚಳಕ, –ಸಾಮರ್ಥ್ಯ.

ಕೆರ = ಕೆರ್ಪು.

ಕೆರ(ಂ)ಕು ೧. = ಕೆರಂಟು. (ನಾ). ೨. ನವೆ.

ಕೆರ(ಂ)ಟು (ಕ್ರಿ). ಉಗುರಿನಿಂದ ಕೆರೆ; ಗೀಚು.

ಕೆರಪು = ಕೆರ್ಪು.

ಕೆರಸಿ (ನಾ). ೧. ಚಚ್ಚೌಕಾಕಾರದ ಅಗಲ ಬಾಯುಳ್ಳ ಬಿದಿರಿನ ಬುಟ್ಟಿ. ೨. ಕೇರುವ ಸಾಧನ; ಮೊರ.

ಕೆರಸೆ = ಕೆರಸಿ.

ಕೆರಹು = ಕೆರ್ಪು.

ಕೆರಳ್(ಳು) (ಕ್ರಿ). ೧. ಹರಡು; ಕೆದರು. ೨. ರೇಗು; ಕನಲು. ೩. ಕೆರಳಿಸು; ರೇಗಿಸು.

ಕೆರೆ ೧. = ಕೆರಂಟು. ೨. ಕತ್ತರಿಸು; ತುಂಡು ಮಾಡು. ೩. ತುರಿಸು; ತಿಕ್ಕು. ೪. ಬೋಳಿಸು. (ನಾ). ೫. = ಕೆಱೆ. ೬. ಹಸುಗಳ ಹಿಂಡು; ಗೋಸಮೂಹ.

ಕೆಱು(ರು)-(ಕ್ರಿ). ನವೆ; ನೋಯು.

ಕೆಱೆ(ರೆ) (ನಾ). ಅಡ್ಡಗಟ್ಟೆಹಾಕಿ ನೀರು ನಿಲ್ಲಿಸಿದ ಸ್ಥಳ; ತಟಾಕ.

ಕೆರ್ಜು (ನಾ). ೧. ಮರದ ಒಳಗಿನ ಗಟ್ಟಿಯಾದ ಭಾಗ; ಚೇಗು. ೨. ಧೈರ್ಯ; ಸಾಹಸ. ೩. ಸೊಕ್ಕು; ಮದ.

ಕೆರ್ಪು (ನಾ). ಮೆಟ್ಟು; ಎಕ್ಕಡ.

ಕೆಲ (ನಾ). ೧. ಪಕ್ಕ; ಮಗ್ಗುಲು. ೨. ಸ್ಥಳ; ಪ್ರದೇಶ. ೩. ಹೊರಭಾಗ; ಬಹಿರಂಗ. (ಸ). ೪. ಕೊಂಚ; ಸ್ವಲ್ಪ. ~ಬಲ = ಅಕ್ಕಪಕ್ಕ; ಎಡಬಲ.

ಕೆಲಚು (ನಾ). ನೆರವು; ಸಹಾಯ.

ಕೆಲಪು (ನಾ). ಕೆಲೆಯುವಿಕೆ; ಗುಟುರು.

ಕೆಲಸ (ನಾ). ೧. ಕಾರ್ಯ; ಕೃತ್ಯ. ೨. ಉದ್ಯೋಗ; ವೃತ್ತಿ. ೩. ಕುಶಲಕರ್ಮ. ೪. ಊಳಿಗ; ಸೇವೆ. ೫. ಉಪಯೋಗ. ೬. ಕ್ಷೌರ. ~ಇಗ = ಕೆಲಸಿ. ~ಕೆ(ಗೆ)ೀಡಿ = ೧. ಕೆಲಸವನ್ನು ಕೆಡಿಸುವವನು. ೨. ಕೆಲಸ ಮಾಡಲಾರದವನು. ~ಕೆ(ಗೆ)ೀಡು = ಕೆಲಸವಾಗದಿರುವಿಕೆ.

ಕೆಲಸಿ (ನಾ). ೧. ಕೆಲಸ ಮಾಡುವವನು; ಕೆಲಸಗಾರ. ೨. ಕ್ಷೌರಿಕ; ನಾಯಿಂದ.

ಕೆಲೆ (ಕ್ರಿ). ೧. ಗುಟುರು ಹಾಕು; ಗರ್ಜಿಸು. ೨. ಉತ್ಸಾಹದಿಂದ ಕೂಗು. ೩. ಹರಟು; ಗಳಹು.

ಕೆಲ್ಲ (ನಾ). ಕೆನ್ನೆ; ಕಪೋಲ.

ಕೆಲ್ಲಯಿಸು (ಕ್ರಿ). ೧. ವಿಹ್ವಲವಾಗು; ಬೆದರು. ೨. ತುಂಡಾಗು; ಸೀಳಾಗು. ೩. ಉದ್ರೇಕಗೊಳ್ಳು; ಕೆರಳು.

ಕೆಲ್ಲೆ (ನಾ). ೧. ಸಿಗುರು; ಸಿಬುರು. ೨. ಪಕ್ಕ; ಬದಿ. ೩. ಅಂಚು; ತುದಿ. ೪. ಕೆರೆತ; ನವೆ.

ಕೆಸಱ್(ರ್,ರು,ಱು) (ನಾ). ೧. ರಾಡಿ; ಅರಲು; ಪಂಕ. ೨. ಗದ್ದೆ; ತರಿಭೂಮಿ. ~ಅಂಕ=ಜಟ್ಟಿ; ಮಲ್ಲ. ~ಕ(ಗ)ಲ್(ಲ್ಲು) = ಅಡಿಗಲ್ಲು; ತಳಪಾಯದ ಕಲ್ಲು. ~ಮಲ್ಲಿಗೆ = ಕೆಸರಿನಲ್ಲಿ ಹುಟ್ಟುವ ಹೂವು; ತಾವರೆ; ಕಮಲ. ~ಮಸಗು = ಬಗ್ಗಡವಾಗು; ರಾಡಿಯಾಗು.

ಕೆಸವು (ನಾ). ೧. ಅಣಬೆ; ನಾಯಿಕೊಡೆ. ೨. ಒಂದು ಬಗೆಯ ಸೊಪ್ಪು; ಶೇಮೆದಂಟು.

**ಕೆಳದಿ** (ನಾ). ಗೆಳತಿ; ಸ್ನೇಹಿತೆ.
**ಕೆಳಯಿ(ಂ)ಕೆ** (ಅ). ಕೆಳಗಡೆಗೆ; ಬುಡದಲ್ಲಿ.
**ಕೆಳರ್(ರು)** (ಕ್ರಿ). ೧. ಬಾಯಿತೆರೆ; ಬಿರಿ. ೨. ಅರಳು; ವಿಕಾಸವಾಗು. ೩. ರೇಗು; ಕೋಪಿಸು. ೪. ಕೂಗು; ಗರ್ಜಿಸು. ೫. ಹರಡು; ಕೆದರು.
**ಕೆಳರ್ಚು** (ಕ್ರಿ). ಉದ್ರೇಕಿಸು; ರೇಗಿಸು.
**ಕೆಳವಾಡಿ** (ನಾ). ಒಂದು ಬಗೆಯ ಕಬ್ಬು.
**ಕೆಳೆ** (ಕ್ರಿ). ೧. ಎಳೆ; ಸೆಳೆ. (ನಾ). ೨. ಸ್ನೇಹ; ಗೆಳೆತನ. ೩. ಸ್ನೇಹಿತ; ಗೆಳೆಯ. ~ತನ = ಸ್ನೇಹ; ಸಖ್ಯ; ಮೈತ್ರಿ.
**ಕೆಳೆಯ** (ನಾ). ೧. ಗೆಳೆಯ; ಸ್ನೇಹಿತ. ೨. ಗೆಣೆಯ; ವಿಟ.
**ಕೆಟಿ(ಳ)ಗು** (ನಾ). ಕೆಳಭಾಗ; ಅಧೋಭಾಗ.
**ಕೆಟಿ(ಳ)ಗೆ** (ಅ). ೧. ಕೆಳಭಾಗದಲ್ಲಿ; ಅಡಿಯಲ್ಲಿ. ೨. ಹಿಂದೆ; ಪೂರ್ವದಲ್ಲಿ. ೩. ಅಧೀನದಲ್ಲಿ; ವಶದಲ್ಲಿ.
**ಕೆಟಿ(ಳ)ವ** (ನಾ). ೧. ಮುದುಕ; ವೃದ್ಧ. ೨. ಶ್ರೇಷ್ಠನಾದವನು; ಹಿರಿಯ.
**ಕೆಟಿ(ಳ)ವಿ** (ನಾ). ಮುದುಕಿ; ವೃದ್ಧೆ.
**ಕೆಟಿ(ಳ)ವೆ** (ನಾ). ಇಳಿವಯಸ್ಸು; ವೃದ್ಧಾಪ್ಯ.



# ಕೇ

**ಕೇ** (ಕ್ರಿ). ೧. ಮಲಗು; ಒರಗು; ನಿದ್ದೆ ಮಾಡು. ೨. = ಕೇಯು.
**ಕೇಂಕರ** (ನಾ). ಗಂಟಲಲ್ಲಿ ಗುರುಗುಟ್ಟುವಿಕೆ; ಕೇಕರಿಸುವಿಕೆ.
**ಕೇಂದ್ರ** (ನಾ). ೧. ಮಧ್ಯಭಾಗ; ನಡುವಿನ ಸ್ಥಳ. ೨. ಮೂಲಸ್ಥಾನ; ಮುಖ್ಯಸ್ಥಳ. ~ಸರಕಾರ = ಸಮಗ್ರ ರಾಷ್ಟ್ರವನ್ನು ಆಳುವ ಸರಕಾರ.
**ಕೇಂದ್ರೀಕರಿಸು** (ಕ್ರಿ). ಒಂದೇ ಸ್ಥಳದಲ್ಲಿ ನಿಲ್ಲಿಸು; ಏಕಾಗ್ರವಾಗುವಂತೆ ಮಾಡು.
**ಕೇಕ** (ನಾ). ೧. ಒಪ್ಪಂದ; ಒಡಂಬಡಿಕೆ. ೨. ವರ್ತನೆಯ ಸಾಲ.
**ಕೇಕಟ** (ನಾ). ನಿಸ್ಸಾರ; ನಿಸ್ಸತ್ತ್ವ.
**ಕೇಕರ** ೧. = ಕೇಂಕರ. ೨. ಮೆಳ್ಳೆಗಣ್ಣಿನವನು. ೩. ಕಡೆಗಣ್ಣು; ಕಟಾಕ್ಷ. (ಗು). ೪. ಮೆಳ್ಳೆಗಣ್ಣುಳ್ಳ; ಕೋಸುಗಣ್ಣಿನ. ~ಇಸು = ೧. ಗಂಟಲನ್ನು ಸರಿಮಾಡಿಕೊಳ್ಳುವುದಕ್ಕಾಗಿ ಉಗುಳು. ೨. ಕಡೆಗಣ್ಣಿನಿಂದ ನೋಡು. ~ಮರೀಚಿ = ಕಡೆಗಣ್ಣಿನ ಕಾಂತಿ.
**ಕೇಕಟ(ರ)** (ನಾ). ಹೆಗ್ಗಣ.
**ಕೇಕಾರವ** (ನಾ). ನವಿಲಿನ ಧ್ವನಿ.
**ಕೇಕಿ** (ನಾ). ನವಿಲು; ಮಯೂರ.
**ಕೇಕೆ** (ನಾ). ೧. ಸಂತೋಷದ ಕೂಗು; ಉತ್ಸಾಹದ ಕೂಗು. ೨. = ಕೇಕಾರವ.
**ಕೇಗು** (ಕ್ರಿ). ೧. ನವಿಲಿನಂತೆ ಕೂಗು. ೨. ಸಂಭ್ರಮದಿಂದ ಕೂಗು. (ನಾ). ೩. = ಕೇಕಾರವ.
**ಕೇಚರ** (ನಾ). ೧. ಆಕಾಶದಲ್ಲಿ ಸಂಚರಿಸುವವನು; ಖೇಚರ. ೨. ಒಂದು ಕ್ಷುದ್ರ ದೇವತೆಯ ಹೆಸರು.
**ಕೇಡಾಕುಳಿ** (ನಾ). ಜಲಕ್ರೀಡೆಯಾಡಲು ಮಾಡಿದ ಕುಳಿ; ಕಲ್ಯಾಣಿ.

**ಕೇಡಿ** (ನಾ). ೧. ಕೆಡುಕನ್ನು ಮಾಡುವವನು; ಕೇಡಿಗ. ೨. ಕೆಡಿಸುವವನು.

**ಕೇಡು** (ನಾ). ೧. ಕೆಡುಕು; ಅಪಾಯ; ಆಪತ್ತು. ೨. ಅಳಿವು; ನಾಶ. ೩. ನಷ್ಟ; ಹಾನಿ. ೪. ಕೆದರಿ ಬಿದ್ದಿರುವುದು. **~ಆಡಿ** = ಕೇಡಿ. **~ಇಗ** = ಕೇಡಿ. **~ಎಯ್ದಿಸು** = ಕೇಡಿಗೆ ಗುರಿಮಾಡು; ಕೆಡಿಸು. **~ಕಾ(ಗಾ)ಲ** = ವಿನಾಶದ ಕಾಲ.

**ಕೇಣ** (ನಾ). ೧. ಹೊಟ್ಟೆಕಿಚ್ಚು; ಮತ್ಸರ. ೨. ಕೋಪ; ರೋಷ. ೩. ಲೋಭ; ಅತ್ಯಾಸೆ. ೪. ದೀರ್ಘ ವಿಚಾರ; ಚಿಂತನೆ. ೫. ದಾಕ್ಷಿಣ್ಯ; ಸಂಕೋಚ. ೬. ಭಯ; ಹೆದರಿಕೆ. ೭. ಕೊರತೆ; ಊನ. **~ಕಾಱ(ರ)** = ಲೋಭಿ; ಜಿಪುಣ.

**ಕೇಣಸರ** (ನಾ). ೧. ಕರುಬು; ಹೊಟ್ಟೆಕಿಚ್ಚು. ೨. ಸಂಶಯ; ಅನುಮಾನ.

**ಕೇಣಿ** (ನಾ). ೧. ನದಿಯ ದಡಗಳಲ್ಲಿ ತಾತ್ಕಾಲಿಕವಾಗಿ ಅಗೆದ ಬಾವಿ. ೨. ಗುತ್ತಿಗೆ; ಒಪ್ಪಂದ. ೩. ಪಾಲು; ಭಾಗ. ೪. ಮೈತ್ರಿ; ಕೆಳೆ. ೫. ಸಾಲು; ಪಂಕ್ತಿ. ೬. ಕ್ರಯವಿಕ್ರಯ. ೭. ರತ್ನಪರೀಕ್ಷೆಯಲ್ಲಿ ಒಂದು ವಿಧ. **~ಕಾ(ಗಾ)ಱ(ರ)** = ೧. ಗುತ್ತಿಗೆದಾರ. ೨. ವ್ಯಾಪಾರ ಸಂಘದವನು; ವ್ಯಾಪಾರಿ. ೩. ಚತುರ; ಬುದ್ಧಿವಂತ. **~ಕೊ(ಗೊ)ಳ್** =೧. ಗುತ್ತಿಗೆ ಹಿಡಿ; ಸ್ವಾಧೀನಮಾಡಿಕೊಳ್ಳು. ೨. ತಾಳು; ಧರಿಸು. ೩. ಜೊತೆಗೂಡು; ಸೇರು. ೪. ಸಾಲುಗೊಳ್ಳು; ಸಾಲುಗಟ್ಟು.

**ಕೇತ** (ನಾ). ೧. ತೊಂದರೆ; ಕಿರುಕುಳ. ೨. ಒಂದು ಬಗೆಯ ಆಟ; ಕಿಳ್ಳೆಕೇತರ ಆಟ. ೩. ಕರೆ; ಆಹ್ವಾನ. ೪. ಜಾಗ; ಸ್ಥಳ. ೫. ಒಂದು ಕ್ಷುದ್ರದೇವತೆಯ ಹೆಸರು.

**ಕೇತಕಿ** (ನಾ). ತಾಳೆಯ ಗಿಡ ಮತ್ತು ಅದರ ಹೂವು.

**ಕೇತನ** (ನಾ). ೧. ಮನೆ; ನಿವಾಸ. ೨. ಬಾವುಟ; ಧ್ವಜ. ೩. ಕರೆ; ಆಹ್ವಾನ. ೪. ಚಿಹ್ನೆ; ಲಾಂಛನ. ೫. ತೇಜಸ್ಸು; ಕಾಂತಿ. **~ಮಾಲಿ(ಳಿ)ಕೆ** = ಧ್ವಜಗಳ ಸಾಲು.

**ಕೇತು** (ನಾ). ೧. ಕಾಂತಿ; ಪ್ರಭೆ. ೨. ಉಲ್ಕೆ. ೩. ಅನಿಷ್ಟಸೂಚಕವಾದ ಬಾಲಚಿಕ್ಕೆ; ಧೂಮಕೇತು. ೪. ನವಗ್ರಹಗಳಲ್ಲಿ ಒಂದು. ೫. ಲಾಂಛನ; ಗುರುತು. ೬. ಬಾವುಟ; ಧ್ವಜ. ೭. ಹಿರಿಯ; ಒಡೆಯ. ೮. ಕತ್ತಾಳೆ; ರಕ್ಕಸಬಾಳೆ. ೯. ದೇವತೆಗಳ ವಿಮಾನ. ೧೦. ರೋಗ. ೧೧. ಶತ್ರು; ವೈರಿ. **~ದಂಡ** = ಧ್ವಜಸ್ತಂಭ.

**ಕೇದಗೆ** = ಕೇತಕಿ.

**ಕೇದಾರ** (ನಾ). ೧. ಗದ್ದೆ. ೨. ಉದ್ಯಾನ; ತೋಟ. ೩. ಹಿಮಾಲಯದಲ್ಲಿರುವ ಒಂದು ಕ್ಷೇತ್ರ. **~ವನ** = ಬತ್ತದ ಗದ್ದೆ; ಶಾಲಿವನ.

**ಕೇದಿಗೆ** ೧. = ಕೇತಕಿ. ೨. ಕೇದಗೆಯ ಆಕಾರದಲ್ಲಿ ಮಾಡಿದ ಒಂದು ಆಭರಣ.

**ಕೇನಾರ** (ನಾ). ೧. ಕೆನ್ನೆಯ ಮೇಲುಭಾಗ. ೨. ತಲೆ. ೩. ಕೆನ್ನೆ.

**ಕೇನಿಪಾತಕ** (ನಾ). ಹಡಗಿನ ಮುಂಭಾಗ.

**ಕೇನೆ** (ನಾ). ಸೂರಣಗೆಡ್ಡೆ; ಶೇನೆಗೆಡ್ಡೆ.

**ಕೇಪಲ(ಳ)** (ನಾ). ಒಂದು ಬಗೆಯ ಕಡುಗೆಂಪು ಹೂವಿನ ಸಸ್ಯ.

**ಕೇಪು** (ನಾ). ೧. ಸರಕು; ಮಾಲು. ೨. ತುಪಾಕಿಯ ಗುಂಡುಗಳಿಗೆ ಹಾಕಿರುವ ಹಿಂಬದಿಯ ಅಣಸು, -ಟೋಪಿ. ೩. ಮಕ್ಕಳ ತುಪಾಕಿಯ ಪಟಾಸ್ ಮದ್ದು. **~ತೊಟ್ಟು** = ತುಪಾಕಿಯಲ್ಲಿ ಕೇಪು ಇಡುವ ಭಾಗ. **~ಪೊ(ಹೊ)ಡೆ** = ೧. ಗುಂಡು ಹಾರಿಸು. ೨. ಜಯಗಳಿಸು.

**ಕೇಮ** (ನಾ). ೧. ಗಾಯ ಒಣಗಿದ ಮೇಲೆ ಉಂಟಾಗುವ ಕಪ್ಪು ಕಲೆ. ೨. ಕ್ಷೇಮ; ಸೌಖ್ಯ.

**ಕೇಯು** (ಕ್ರಿ). ಸಂಭೋಗಿಸು; ರತಿಕ್ರೀಡೆ ಮಾಡು.

**ಕೇಯೂರ** (ನಾ). ತೋಳುಬಳೆ; ತೋಳು ಬಂದಿ.

**ಕೇರ್(ರು)** ೧. = ಕೇಱು. (ನಾ). ೨. ಗೋಡೆ; ಭಿತ್ತಿ. ೩. ಗೇರುಮರ ಮತ್ತು ಅದರ ಬೀಜ. ೪. ಕೇರುವ ಸಾಧನ; ಮೊರ. ~ಅಡಕೆ = ಕೇರು ಹಾಕಿದ ಅಡಕೆ. ~ಕ(ಗ)ಟ್ಟು = ೧. ಕೆಡಿಸು; ನಾಶಪಡಿಸು. ೨. ಗೋಡೆಯನ್ನು ಕಟ್ಟು. ೩. ಗೋಡೆ ಯಂತಹ ರಚನೆ.

**ಕೇರಲ(ಳ)** (ನಾ). ೧. ದಕ್ಷಿಣ ಭಾರತದ ಒಂದು ಪ್ರದೇಶ ಮತ್ತು ಆ ಪ್ರದೇಶದವನು. ೨. ತೆಂಗು.

**ಕೇರಿ** (ನಾ). ೧. ಮನೆ ಸಾಲುಗಳ ನಡುವಿನ ಹಾದಿ; ಓಣಿ. ೨. ಸಾಲು; ಶ್ರೇಣಿ. ೩. ಪಗಡೆಹಾಸಿನಲ್ಲಿರುವ ಪಟ್ಟೆ.

**ಕೇರೆ** (ನಾ). ಒಂದು ಜಾತಿಯ ಹಾವು; ಕೆರೆ ಹಾವು.

**ಕೇಱು(ರು)** (ಕ್ರಿ). ಮೊರದಿಂದ ಕಾಳುಕಡಿ ಗಳನ್ನು ತೂರಿ ಕಾಳನ್ನೂ ಕಸವನ್ನೂ ಬೇರ್ಪಡಿಸು; ಕಾಳನ್ನು ಹಸನು ಮಾಡು.

**ಕೇಲ್** (ನಾ). ಮಣ್ಣಿನಿಂದ ಮಾಡಿದ ಹರವಿ; ಗುಡಾಣ.

**ಕೇಲಿ** (ನಾ). ೧. ಆಟ; ಕ್ರೀಡೆ. ೨. ಶೃಂಗಾರ ಲೀಲೆ.

**ಕೇಲಿಕಿಲ** (ನಾ). ನಾಟಕದಲ್ಲಿ ನಾಯಕನ ಆಪ್ತಮಿತ್ರ; ವಿದೂಷಕ.

**ಕೇಲಿಕೆ** (ನಾ). ಆಟ; ವಿನೋದ.

**ಕೇಲು** ೧. = ಕೇಲ್. ೨. ಖಯಾಲು; ಚಪಲ.

**ಕೇವಣ** (ನಾ). ೧. ಹರಳು ಮೊದಲಾದುವನ್ನು ಕೂಡಿಸುವುದು; ಕುಂದಣ. ೨. ನೂಕುವುದು; ತಳ್ಳುವುದು. ೩. ಚೆಲ್ಲುವುದು. ~ಇಸು = ೧. ಜೋಡಿಸು; ಕೀಲಿಸು. ೨. ಲೇಪಿಸು; ತೊಡೆ. ೩. ತೊಡಿಸು; ಧರಿಸು. ೪. ಬೆರಸು; ಸೇರಿಸು.

**ಕೇವಲ(ಳ)** (ನಾ). ೧. ಪರವಸ್ತು; ಪರಮಾತ್ಮ. ೨. ಮುಕ್ತ; ಕೈವಲ್ಯವನ್ನು ಪಡೆದವನು. ೩. ಮುಕ್ತಿ; ಕೈವಲ್ಯ. (ಗು). ೪. ಬರಿಯ; ಅಷ್ಟುಮಾತ್ರದ. ೫. ಸಮಗ್ರ; ಸಂಪೂರ್ಣ. ೬. ಶುದ್ಧ; ಅಪ್ಪಟ. ೭. ತೀರ ಸಾಮಾನ್ಯವಾದ; ನಾಡಾಡಿಯಾದ. ~ಅವಸ್ಥೆ = ಏಕಾಕಿಯಾಗಿರುವ ಸ್ಥಿತಿ. ~ಜ್ಞಾನ = ಲೋಕಾಲೋಕಗಳ ಸರ್ವವಸ್ತುಗಳ ಸಮಗ್ರ ಜ್ಞಾನ. ~ಮಿತ್ರ = ಆಪ್ತಮಿತ್ರ.

**ಕೇವಲಿ(ಳಿ)** (ನಾ). ಕೇವಲಜ್ಞಾನವನ್ನು ಪಡೆದವನು.

**ಕೇವೆ** (ನಾ). ಕೆಂಬಣ್ಣದ ಕಲ್ಲು; ಗೈರಿಕ.

**ಕೇಶ** (ನಾ). ೧. ತಲೆಗೂದಲು. ೨. ಒಂದು ಬಗೆಯ ಸುಗಂಧದ್ರವ್ಯ; ಮುಡಿವಾಳ. ~ಬಂಧ = ಕೂದಲನ್ನು ಕಟ್ಟುವಿಕೆ; ಮುಡಿ. ~ಮಾರ್ಜನ = ೧. ತಲೆಯನ್ನು ಬಾಚುವಿಕೆ. ೨. ಬಾಚಣಿಗೆ. ~ವಪನ = ಕೂದಲನ್ನು ಕತ್ತರಿಸುವಿಕೆ; ಚೌಲಕ್ರಿಯೆ. ~ಹಸ್ತ = ಸಮೃದ್ಧವಾದ ತಲೆಗೂದಲು.

**ಕೇಶಘ್ನ** (ನಾ). ತಲೆಯನ್ನು ಬೋಳಾಗಿಸುವ ರೋಗ; ತಿಗಳಿ.

**ಕೇಶರ** (ನಾ). ೧. ಕುಂಕುಮಕೇಸರಿ. ೨. ಕೇಸರಿ ಬಣ್ಣ.

**ಕೇಶವ** (ನಾ). ೧. ಕೃಷ್ಣ; ವಿಷ್ಣು. (ಗು). ೨. ಸಮೃದ್ಧವಾದ ಹಾಗೂ ಸುಂದರವಾದ ತಲೆಗೂದಲನ್ನುಳ್ಳ.

**ಕೇಶಾಕೇಶಿ** (ನಾ). ಪರಸ್ಪರ ಕೂದಲನ್ನು ಹಿಡಿದು ಎಳೆದಾಡುತ್ತ ಮಾಡುವ ಯುದ್ಧ.

**ಕೇಶಿ** (ನಾ). ೧. ಕೃಷ್ಣನಿಂದ ಹತನಾದ ಒಬ್ಬ ರಾಕ್ಷಸ. (ಗು). ೨. ದಟ್ಟವಾದ ಅಥವಾ ಸೊಗಸಾದ ಕೂದಲನ್ನುಳ್ಳ.

**ಕೇಸರ** (ನಾ). ೧. ಹೂವಿನಲ್ಲಿರುವ ಎಳೆ ; ಪರಾಗತಂತು. ೨. ಹೂವಿನ ಹುಡಿ ; ಪರಾಗ. ೩. ಬಕುಲ ; ವಕುಳದ ವೃಕ್ಷ. ೪. ಸುರಗಿ ಹೂವು. ೫. ನಾಗಸಂಪಗೆ. ೬. ಕುದುರೆ, ಸಿಂಹ ಮುಂತಾದುವುಗಳ ಕತ್ತಿನ ಮೇಲಿರುವ ಜೂಲುಕೂದಲು ; ಅಯಾಲು. ೭. ಚಿನ್ನ ; ಬಂಗಾರ. ೮. ಕುಂಕುಮಕೇಸರಿ.

**ಕೇಸರಿ** (ನಾ). ೧. ಕತ್ತಿನ ಮೇಲೆ ಜೂಲು ಕೂದಲುಳ್ಳದ್ದು ; ಅಯಾಲನ್ನುಳ್ಳದ್ದು. ೨. ಸಿಂಹ. ೩. ಕುದುರೆ. ೪. ಕೇಸರಿಬಣ್ಣ. ೫. ಕೆಂಪುಭೂಮಿ. ೬. ಬಕುಳದ ಹೂವು. ೭. ಕುಂಕುಮಕೇಸರಿ. ~ಇಸು = ಕೆಂಪಗೆ ಮಾಡು. ~ಕೇತನ = ೧. ಸಿಂಹದ ಗುರುತುಳ್ಳ ಧ್ವಜ. ೨. ಸಿಂಹದ ಗುರುತಿನ ಧ್ವಜವುಳ್ಳವನು; ಭೀಮ. ~ಪೀಠ =ಸಿಂಹಾಸನ. ~ಭಾತು = ಅಕ್ಕಿ ಅಥವಾ ರವೆಗೆ ಕೇಸರಿ, ಸಕ್ಕರೆ ಮುಂತಾದುವುಗಳನ್ನು ಸೇರಿಸಿ ಮಾಡಿದ ಪಕ್ವಾನ್ನ.

**ಕೇಸರಿಣಿ** (ನಾ). ಹೆಣ್ಣುಸಿಂಹ ; ಸಿಂಹಿಣಿ.

**ಕೇಸು** (ನಾ). ೧. ಕೆಂಪು ; ಕೆಂಪು ಬಣ್ಣ. ೨. ತವುಡು ; ಹೊಟ್ಟು. ೩. ಒಂದು ಬಗೆಯ ಬಟ್ಟೆ. ~ಅಕ್ಕಿ = ಕೆಂಪು ಅಕ್ಕಿ. ~ಅಳಗ = ಬಿಳಿ ಮತ್ತು ಕೆಂಪು ಮಿಶ್ರವರ್ಣವಾಗಿರುವ ಕುದುರೆ. ~ಉರಿ = ಕೆಂಪಾದ ಉರಿ.

**ಕೇಳ್**(ಳು) (ಕ್ರಿ). ೧. ಕಿವಿಗೊಡು ; ಆಲಿಸು. ೨. ಒಡಂಬಡು ; ಒಪ್ಪು. ೩. ಪ್ರಶ್ನೆಮಾಡು; ವಿಚಾರಿಸು. ೪. ಬೇಡು ; ಯಾಚಿಸು. ೫. ಕೇಳಿಬರು ; ಕೇಳಿಸು. ~ಇಸು = ೧. ಕೇಳುವಂತೆ ಮಾಡು. ೨. ಕಿವಿಗೆ ಬೀಳು ; ಕೇಳಿಬರು ; ಕೇಳು. ೩. ವಾದ್ಯಗಳನ್ನು ನುಡಿಸು. ೪. ಬೇಡುವಂತೆ ಮಾಡು. ~ಮಾತು = ಕೇಳಿದ ಮಾತು ; ವದಂತಿ.

**ಕೇಳ** (ನಾ). ಸಂಗಡಿಗ ; ಜೊತೆಗಾರ. ~ಮೇಳ = ಸರಸಸಲ್ಲಾಪ.

**ಕೇಳಿ** (ನಾ). ೧. ಒಂದು ಬಗೆಯ ತೆಂಗು. ೨. = ಕೇಲಿ. ೩. = ಕೇಱಿ. ~ನಿವಾಸ = ನೃತ್ಯಮಂದಿರ. ~ಬ(ವ)ಟ್ಟಲ್ = ತೆಂಗಿನ ಕರಟ; ಚಿಪ್ಪು. ~ಮಾ(ವಾ)ತು = ವಿನೋದದ ಮಾತು ; ಸಲ್ಲಾಪ. ~ಶೀಲ(ಳ) = ಕ್ರೀಡಾಶೀಲ ; ಆಟಗುಳಿ.

**ಕೇಳಿಕೆ** (ನಾ). ೧. ಕೇಳುವಿಕೆ; ಶ್ರವಣ. ೨. ಬೇಡಿಕೆ ; ಯಾಚನೆ. ೩. ಹಾಡು ; ಭಜನೆ. ೪. = ಕೇಲಿಕೆ.

**ಕೇಳುಗ** (ನಾ). ಕೇಳುವವನು ; ಶ್ರೋತೃ.

**ಕೇಳ್ವಿ** (ನಾ). ೧. ಕೇಳುವಿಕೆ ; ಶ್ರವಣ. ೨. ಪ್ರಶ್ನೆ.

**ಕೇಱಿ**(ಳಿ) (ನಾ). ೧. ಪಂಕ್ತಿ ; ಸಾಲು. ೨. ಗುಂಪು ; ಹಿಂಡು.



# ಕೈ

**ಕೈ** = ಕೆಯ್.

**ಕೈಂಕರ್ಯ** (ನಾ). ಸೇವೆ ; ಊಳಿಗ.

**ಕೈಕೋಳ** (ನಾ). ೧. ನೇಕಾರ ; ನೆಯ್ಗೆಯವನು. ೨. ಒಂದು ಬಗೆಯ ಸೈನ್ಯ. ೩. ದೇವಾಲಯದ ಸೇವಕ. ೪. ಅಪರಾಧಿಯ ಕೈಗೆ ತೊಡಿಸುವ ಬೇಡಿ.

**ಕೈಗಾರಿಕೆ** (ನಾ). ೧. ಕೈಕೆಲಸ ; ಹಸ್ತಕೌಶಲದ ಕೆಲಸ. ೨. ಕೈಕೆಲಸದಿಂದ ಅಥವಾ ಯಂತ್ರ

ಗಳಿಂದ ನಡಸುವ ಉದ್ಯಮ. ೩.ತೋಳ್ಬಲ; ಬಾಹುಶಕ್ತಿ.

ಕೈತಕ (ನಾ). ಕೇದಿಗೆ; ಕೇತಕಿಪುಷ್ಪ.

ಕೈತವ ೧. =ಕೈದವ. ೨. ವ್ಯಾಜ; ನೆಪ. ೩. ಜೂಜು; ಪಂದ್ಯ. ೪. ಜೂಜಿನ ಮನೆ.

ಕೈತಾಯಿ (ನಾ). ಒಂದು ಜಾತಿಯ ಹರಳುಗಿಡ.

ಕೈದವ (ನಾ). ಮೋಸ; ಕಪಟ; ವಂಚನೆ.

ಕೈದಿ (ನಾ). ಬಂದಿ; ಸೆರೆಯಾಳು.

ಕೈದು ೧. = ಕೆಯ್ದು. ೨. ಸೆರೆಮನೆ; ಜೈಲು. ೩. ದಸ್ತಗಿರಿ; ಬಂಧನ.

ಕೈನೆ (ನಾ). ೧. ದಾಸಿ; ಪರಿಚಾರಿಕೆ; ತೊತ್ತು. ೨. ಕ್ಷುದ್ರಹೆಂಗಸು; ದುಷ್ಟೆ.

ಕೈಪೆ (ನಾ). ಕಹಿರುಚಿ; ತಿಕ್ತ.

ಕೈಫಿಯತ್ತು (ನಾ). ೧. ಸ್ಪಷ್ಟವಾದ ಹೇಳಿಕೆ; ವಿವರಣೆ. ೨. ಅಜ್ಞಾಪತ್ರ; ತಿಳಿವಳಿಕೆಪತ್ರ. ೩. ವ್ಯಾಜ್ಯದಲ್ಲಿ ಪ್ರತ್ಯಾರೋಪಗಳಿಗೆ ಮೊದಲಬಾರಿಗೆ ಕೊಡುವ ಲಿಖಿತ ಉತ್ತರ. ೪. ವಿವರಗಳನ್ನೊಳಗೊಂಡ ದಾಖಲೆ.

ಕೈಮ (ನಾ). ಮಾಂಸದಿಂದ ಮಾಡುವ ಒಂದು ಭಕ್ಷ್ಯ.

ಕೈಮೆ (ನಾ). ೧. ಕೆಲಸ; ಕಾರ್ಯ. ೨. ಕೈಚಳಕ; ಹಸ್ತಕೌಶಲ. ೩. ಕಪಟ; ಮೋಸ. ೪. ಕೆಟ್ಟತನ; ದುರುಳತನ. ~ಕಾ(ಗಾ)ಱ(ರ)=ಸಾಹಸಿ; ಪರಾಕ್ರಮಿ.

ಕೈರ = ಕಯ್ರ.

ಕೈರವ (ನಾ). ಬಿಳಿಯ ನೈದಿಲೆ. ~ಬಾಂಧವ = ಚಂದ್ರ.

ಕೈರವಿಣಿ (ನಾ). ೧. ಬಿಳಿಯ ನೈದಿಲೆಗಳ ಸಮೂಹ. ೨. ನೈದಿಲೆಗಳಿಂದ ಕೂಡಿದಕೊಳ.

ಕೈಲ (ನಾ). ಸೌಟಿನ ಹಿಡಿಕೆ; ಸಟ್ಟುಗದ ಹಿಡಿ.

ಕೈಲಾ(ಳಾ)ಸ (ನಾ). ೧. ಒಂದು ಬೆಟ್ಟ. ೨. ಶಿವನ ನೆಲೆ. ೩. ಸುಖ; ಆನಂದ.

ಕೈಲು (ನಾ). ಅಡಕೆ, ತೆಂಗು, ಬಾಳೆ ಮುಂತಾದುವುಗಳ ಗೊನೆ.

ಕೈವರ್ತ (ನಾ). ಮೀನುಗಾರ; ಬೆಸ್ತ.

ಕೈವಲ್ಯ (ನಾ). ೧. ನಿರ್ವಾಣ; ಮೋಕ್ಷ. ೨. ಮುಖ್ಯವಾದ ಸ್ಥಾನ. ೩. ನಿರ್ಮಲತೆ.

ಕೈವಾರ =ಕೆಯ್ವಾರ. ~ಇಸು = ೧. ಹೊಗಳು; ಸ್ತುತಿಸು. ೨. ಬೆಂಬಲಿಸು; ನೆರವು ನೀಡು.

ಕೈವಾರಿ (ನಾ). ೧. ಹೊಗಳುವವನು; ಭಟ್ಟಂಗಿ. ೨. ಶೂರ; ಪರಾಕ್ರಮಿ. ೩. ಮಮತೆಯುಳ್ಳವನು; ಅಭಿಮಾನಿ.

ಕೈಶಿಕ (ನಾ). ೧. ತಲೆಗೂದಲಿನ ಸಮೂಹ; ಕೇಶರಾಶಿ. ೨. ಪ್ರಣಯ; ಪ್ರೀತಿ.

*

# ಕೊ

ಕೊಂಕ (ನಾ). ೧. ಡೊಂಕು; ಬಾಗು. ೨. ಕೊಂಕುಉಳ್ಳವನು; ವಕ್ರ. ೩. ಒಂದು ಜಾತಿಯ ಕಾಡುಪ್ರಾಣಿ.

ಕೊಂಕಣ (ನಾ). ಪಶ್ಚಿಮಭಾರತದ ಒಂದು ಪ್ರದೇಶ ಮತ್ತು ಆ ಪ್ರದೇಶದವನು.

ಕೊಂಕಿ (ನಾ). ೧. ಕೊಂಡಿ; ಕೊಕ್ಕೆ. ೨. ವಕ್ರ ಸ್ವಭಾವದವನು; ಕೊಂಗಿ.

ಕೊಂಕು (ಕ್ರಿ). ೧.ಡೊಂಕಾಗು; ವಕ್ರವಾಗು. ೨. ಹಿಂದೆಗೆ; ಹಿಂಜರಿ. ೩. ಉದ್ವೇಗಗೊಳ್ಳು; ರೇಗು. ೪. ನೋವಾಗು. ೫. ಚುಚ್ಚು; ನೋಯಿಸು. (ನಾ). ೬. ಡೊಂಕು; ಬಾಗು. ೭. ವಕ್ರೋಕ್ತಿ; ವ್ಯಂಗ್ಯೋಕ್ತಿ. ೮. ಅಳುಕು; ಅಂಜಿಕೆ. ೯. ಚುಚ್ಚುಮಾತು; ಕಟಕಿ. ೧೦. ಬಾಧೆ;

ತೊಂದರೆ. ೧೧. ಶಸ್ತ್ರಪ್ರಯೋಗದಲ್ಲಿ ಒಂದು ರೀತಿ. ೧೨. ಕುಂದು ; ಕೊರತೆ. ~ಇಸು = ೧. ಓರೆಮಾಡು ; ಬಾಗಿಸು. ೨. ಪೀಡಿಸು ; ಹಿಂಸಿಸು. ~ಕೊಱ(ರ)ತೆ = ಕುಂದುಕೊರತೆ ; ಓರೆಕೋರೆ. ~ಪೆ(ವೆ)ಱು(ರು)= ೧.ಬಾಗಿರು; ವಕ್ರವಾಗಿರು. ೨. ವಕ್ರೋಕ್ತಿಯಿಂದ ಕೂಡಿರು ; ಧ್ವನಿಪೂರ್ಣವಾಗಿರು.

**ಕೊಂಗ** (ನಾ). ೧. ಕೊಂಗನಾಡು ಮತ್ತು ಆ ನಾಡಿಗೆ ಸೇರಿದವನು. ೨. ಕೋತಿ ; ಕಪಿ. ೩. ಒಂದು ಜಾತಿಯ ಕುದುರೆ. ೪. ಕಾಳು ತೂರಲು ಬಳಸುವ ಒಂದು ಸಾಧನ ; ಕುಕ್ಕೆ.

**ಕೊಂಗೆ** (ನಾ). ೧.ರೆಂಬೆ ; ಕೊಂಬೆ. ೨. ಕಿವಿಯ ಮಲ ; ಗುಗ್ಗೆ.

**ಕೊಂಚ** (ಗು). ತುಸು ; ಸ್ವಲ್ಪ ; ಅಲ್ಪ. ~ಕಾ(ಗಾ)ಱ(ರ) = ಸಾಮಾನ್ಯ ವ್ಯಕ್ತಿ ; ನಾಡಾಡಿ.

**ಕೊಂಚೆ** (ನಾ). ೧. ಕೋಟೆಯ ಗೋಡೆ, –ಪ್ರಾಕಾರ. ೨. ನಿತಂಬ. ೩.ಕ್ರೌಂಚಪಕ್ಷಿ.

**ಕೊಂಚೆಯ** (ನಾ). ಬಳ್ಳಿಮಾಡ ; ಲತಾಗೃಹ.

**ಕೊಂಜು** (ಕ್ರಿ). ಮೃದುವಾಗಿ ಮಾತನಾಡು.

**ಕೊಂಟ** (ಗು). ತೊಂಡು ; ತುಂಟ.

**ಕೊಂಟು** (ನಾ). ಮರದ ಕೊರಡು, –ತುಂಡು.

**ಕೊಂಡ** (ನಾ). ೧. ಗುಡ್ಡ ; ದಿಣ್ಣೆ. ೨. ಕೆರೆ ; ಹೊಂಡ. ೩. ಹೋಮ ಮಾಡುವುದಕ್ಕಾಗಿ ರಚಿಸಿದ ಕುಳಿ. ೪. ವೀರಭದ್ರ. ೫. ಭೂತಬೇತಾಳಗಳಲ್ಲಿ ಒಂದರ ಹೆಸರು. ~ಕು(ಗು)ಱಿ(ರಿ) = ೧. ನಾಲ್ಕು ಕೊಂಬುಳ್ಳ ಜಿಂಕೆ. ೨. ಅಡವಿಯ ಕುರಿ. ~ಮುಸು = ಕಪ್ಪುಮುಖದ ಕೋತಿ.

**ಕೊಂಡವಾಡ** (ನಾ). ತುಡುಗುದನಗಳನ್ನು ಹಿಡಿದು ಬಂಧಿಸುವ ಸರಕಾರೀ ದೊಡ್ಡಿ ; ದೌಂಡಿಮನೆ.

**ಕೊಂಡಾಟ** (ನಾ). ೧. ಹೊಗಳಿಕೆ ; ಸ್ತುತಿ. ೨. ಮುದ್ದಾಟ ; ಪ್ರೀತಿ.

**ಕೊಂಡಾಡು** (ಕ್ರಿ). ೧. ಹೊಗಳು ; ಸ್ತುತಿಸು. ೨. ಲಾಲಿಸು ; ಮುದ್ದಿಸು. ೩.ವ್ಯಕ್ತಪಡಿಸು.

**ಕೊಂಡಿ** (ನಾ). ೧.ಕೊಕ್ಕೆ. ೨. (ಕುಟುಕುವ) ಮೊನೆಯಾದ ಮುಳ್ಳು, –ತುದಿ. ೩. ತಿರುವು ; ಬಾಗು. ೪. ಚಾಡಿ. ~ಇಸು = ಚಾಡಿಹೇಳು; ಪಿಸುಣಿಸು.

**ಕೊಂಡೆ** (ನಾ).೧.ಚಾಡಿ; ಪಿಸುಣು. ೨.ತುರುಬು ಕಟ್ಟಲುಪಯೋಗಿಸುವ ಸಿಂಬೆಯಂಥ ಸಾಧನ. ೩. ಕುಚ್ಚು ; ಗೊಂಚಲು. ೪. ಗುನಿ ತೆಗೆಯದ ಕಾಳು.

**ಕೊಂಡೆಗ** = ಕೊಂಡೆಯ.

**ಕೊಂಡೆಯ** (ನಾ). ೧. ಚಾಡಿ ; ಪಿಸುಣು. ೨. ಚಾಡಿಕೋರ.

**ಕೊಂತ** (ನಾ). ೧. ಒಂದು ಬಗೆಯ ಆಯುಧ; ಸಬಳ. ೨. ಒತ್ತೊರಳಿನಲ್ಲಿ ಒಳಗಿಟ್ಟು ಒತ್ತುವ ಭಾಗ ; ದಿಂಡು. ೩. ಪಂಪು ಮೊದಲಾದುವುಗಳಲ್ಲಿರುವ ಬೆಣೆ. ೪. ತೂಬಿನ ಕಂಡಿಯನ್ನು ಮುಚ್ಚುವ ಸಾಧನ.

**ಕೊಂತಿ** (ನಾ). ೧. ಒಂದು ಜಾತಿಯ ಮೀನು. ೨. ಪಾಂಡವರ ತಾಯಿ ; ಕುಂತಿ. ೩.ಬೆಲ್ಲದ ಸಣ್ಣ ಅಚ್ಚು.

**ಕೊಂಪೆ** (ನಾ). ೧. ಕಸಕಡ್ಡಿಗಳ ರಾಶಿ; ಕುಪ್ಪೆ. ೨. ಚಿಕ್ಕಹಳ್ಳಿ ; ಕುಗ್ರಾಮ. ೩. ಗುಡಿಸಿಲು ; ಜೋಪಡಿ.

**ಕೊಂಬು** (ನಾ). ೧. ಪ್ರಾಣಿಗಳ ಕೋಡು, –ಶೃಂಗ. ೨. ದ್ರವಪದಾರ್ಥಗಳನ್ನು ತುಂಬಿಡಲು ಪ್ರಾಣಿಗಳ ಕೋಡಿನಿಂದ ಮಾಡಿದ ಕೊಳವೆ. ೩. ಕೊಂಬಿನಾಕಾರದ ಊದುವ ವಾದ್ಯ. ೪. ಮರದ ರೆಂಬೆ, –ಶಾಖೆ. ೫. ನೆತ್ತಿ ; ಶಿಖರ ; ತುದಿ. ೬.ಸಂಕೇತಸ್ಥಳ. ೭. ಆನೆಯ ಕೋರೆ. ~ಕೊ(ಗೊ)ಳ್ = ಆಸರೆಯನ್ನು ಹೊಂದು ; ಆಶ್ರಯಿಸು.

~ಪೆ(ವೆ)ಱೆ(ರೆ) = ೧. (ಕೊಂಬಿನಂತೆ) ಡೊಂಕಾದ ಚಂದ್ರ. ೨. ಹೆಬ್ಬೆರಳು ಮತ್ತು ತೋರುಬೆರಳುಗಳ ನಡುವಿನ ಪ್ರದೇಶ.

**ಕೊಂಬೆ** (ನಾ). ಟೊಂಗೆ ; ರೆಂಬೆ.

**ಕೊಕ್ಕ** (ನಾ). ಕೋಳಿ.

**ಕೊಕ್ಕರ** (ನಾ). ಅಸಹ್ಯ; ಜುಗುಪ್ಸೆ. ~ಇಸು = ೧. ಅಸಹ್ಯಪಡು ; ಹೇಸಿಕೊಳ್ಳು. ೨. ಬೆದರು ; ಅಂಜು. ೩. ಕುಗ್ಗು ; ಕುಸಿ. ೪. ಕೋಪಗೊಳ್ಳು. ೫. ಬೆದರಿಸು ; ಹೆದರಿಸು. ೬. ಕೋರೈಸು ; ಕಣ್ಣುಕುಕ್ಕು. ೭. ಕೂಗು ; ಅರಚು.

**ಕೊಕ್ಕರಿ** (ನಾ). ಡೊಂಕು ; ವಕ್ರತೆ.

**ಕೊಕ್ಕರಿಕೆ** (ನಾ). ಜುಗುಪ್ಸೆ ; ಹೇಸಿಕೆ.

**ಕೊಕ್ಕರೆ** (ನಾ). ೧. ಒಂದು ಜಾತಿಯ ನೀರು ಹಕ್ಕಿ. ೨. ಒಂದು ಜಾತಿಯ ಮೀನು. ೩. ಒಂದು ಜಾತಿಯ ಮರ. ೪. ಒಂದು ಬಗೆಯ ಸಸ್ಯರೋಗ. ~ರೋಗ = ಬತ್ತದ ಬೆಳೆಗೆ ಬರುವ ಒಂದು ಬಗೆಯ ರೋಗ.

**ಕೊಕ್ಕಱ(ರ)** (ನಾ). ಬೆಕ್ಕು ; ಮಾರ್ಜಾಲ.

**ಕೊಕ್ಕಸ** (ನಾ). ಬಲಿಷ್ಠ ; ಗಟ್ಟಿಗ.

**ಕೊಕ್ಕು** (ಕ್ರಿ). ೧. ಅಸಹ್ಯಪಡು. (ನಾ). ೨. ಪಕ್ಷಿಯ ಚಂಚು, -ಮೂತಿ. ೩. ಕೊಕ್ಕರೆ. (ಗು). ೪. ಅಂಕುಡೊಂಕಾದ ; ವಕ್ರವಾದ.

**ಕೊಕ್ಕೆ** (ನಾ). ೧. ವಕ್ರತೆ; ಅಂಕುಡೊಂಕುತನ. ೨. ಕೊಂಡಿ. ೩. ಕುಣಿಕೆ; ತಳಕು. ೪. ಪಕ್ಷಿಯ ಚಂಚು. ೫. ದೋಟಿ ; ಕೊಕ್ಕೆ ಕೋಲು. ೬. ಸುವಾಸನೆಯ ಬಿಳಿಹೂವು ಬಿಡುವ ಒಂದು ಸಸ್ಯ. ೭. ಆಕ್ಷೇಪಣೆ; ಅಡ್ಡಿ. ~ಕೋಲು = ೧. ತುದಿಯಲ್ಲಿ ಕೊಕ್ಕೆ ಕೂಡಿಸಿದ ಕೋಲು. ೨. ಅಂಕುಶ. ~ಚಿಕ್ಕ = ವಿದೂಷಕ; ಕೋಡಂಗಿ. ~ಮಾತು = ೧. ಕೊಂಕು ನುಡಿ. ೨. ಆಕ್ಷೇಪಣೆ ; ಅಡ್ಡಿಯ ಮಾತು.

**ಕೊಗಳು** (ನಾ). ಇಪ್ಪಾರು ಗುಡಿಸಿಲು.

**ಕೊಗೆ** (ಕ್ರಿ). ಬಣ್ಣಿಸು ; ವರ್ಣಿಸು.

**ಕೊಗ್ಗ** (ನಾ). ೧. ವಕ್ರತೆ; ಡೊಂಕುತನ. ೨. ಅಸಹ್ಯಧ್ವನಿಯುಳ್ಳ ಮನುಷ್ಯ.

**ಕೊಗ್ಗಿ** (ನಾ). ೧. ಒಂದು ಬಗೆಯ ಔಷಧಿ ಸಸ್ಯ. ೨. ಕಿವಿಯೊಳಗಿನ ಮಲ ; ಗುಗ್ಗೆ.

**ಕೊಚ್ಚರಟೆ** (ನಾ). ತೊದಲುವುದು.

**ಕೊಚ್ಚಲು** (ನಾ). ತುಂಡು ; ಹೋಳು ; ಕಡಿ.

**ಕೊಚ್ಚು** (ಕ್ರಿ). ೧. ಆತ್ಮಸ್ತುತಿ ಮಾಡಿಕೊಳ್ಳು. ೨. ಕಾಳು ಮೊದಲಾದುವನ್ನು ಮೊರದಲ್ಲಿ ಹಾಕಿ ಕೇರು. ೩. ತುಂಡು ಮಾಡು ; ಕತ್ತರಿಸು. (ನಾ). ೪. ಕತ್ತರಿಸುವ ಸಾಧನ. ೫. ಪುಡಿ ; ಹುಡಿ. ೬. ಕತ್ತರಿಸಲ್ಪಡುವಿಕೆ. ೭. ಧಾನ್ಯರೂಪದಲ್ಲಿ ಕೊಡುವ ಕೂಲಿ ; ಪಡಿ. ೮. ಮೂತ್ರದ ವಾಸನೆ.

**ಕೊಚ್ಚೆ** (ನಾ). ಕೆಸರು ; ರಾಡಿ.

**ಕೊಜೆ** (ನಾ). ಆನೆ ಮುಣ್ಣು ; ಜೇಡಿಮುಣ್ಣು.

**ಕೊಜ್ಜೆ** (ನಾ). ನಪುಂಸಕ; ಶಿಖಂಡಿ; ಖೋಜಾ.

**ಕೊಟಡಿ** (ನಾ). ಚಿಕ್ಕಮನೆ ; ಕೋಣೆ.

**ಕೊಟ್ಟ** (ನಾ). ೧. ದನಕರುಗಳಿಗೆ ಔಷಧಿಯನ್ನು ಕುಡಿಸಲು ಬಳಸುವ ಬಿದಿರಿನ ಕೊಳವೆ ; ಗೊಟ್ಟ. ೨. ಜಂಬ ; ದರ್ಪ. ೩. ತುಂಟತನ ; ಪುಂಡತನ. ೪. ತುಂಟ ; ಪುಂಡ. ೫. ಕೋಟೆ; ದುರ್ಗ. ೬. ವಾಸಸ್ಥಾನ. ೭. ರಾಜ್ಯದ ಸಣ್ಣ ವಿಭಾಗ ; ಜಿಲ್ಲೆ. ೮. ದನಕರುಗಳ ಹಟ್ಟಿ ; ಕೊಟ್ಟಿಗೆ. ೯. ಕುಷ್ಠರೋಗ ; ತೊನ್ನು. ೧೦. ಒಂದು ಜಾತಿಯ ಮುಳ್ಳುಪೊದೆ.

**ಕೊಟ್ಟಿಗೆ** (ನಾ). ೧. ಮನೆಯ ಹೊರಭಾಗದಲ್ಲಿ ಕಟ್ಟಿದ ಚಿಕ್ಕ ಕೊಠಡಿ. ೨. ದನದ ಹಟ್ಟಿ ; ಹಕ್ಕೆ.

**ಕೊಟ್ಟಜ** (ನಾ). ಕಪ್ಪ ; ಕಾಣಿಕೆ.

**ಕೊಟ್ಟಣ** (ನಾ). ೧. (ಬತ್ತ ಮೊದಲಾದುವನ್ನು) ಕುಟ್ಟುವಿಕೆ. ೨. ಬತ್ತ ಕುಟ್ಟುವ

ಒರಳು. ೩. ಕುಟ್ಟುವ ಸಾಧನ; ಕುಟ್ಟಾಣಿ. ೪. ಕುಟ್ಟುವ ಕೆಲಸ. ೫. ಆಶ್ರಯಸ್ಥಾನ; ನೆಲೆ.

**ಕೊಟ್ಟರ** = ಕೊಟ್ಟಾರ.

**ಕೊಟ್ಟವಳ** (ನಾ). ೧. ಕೋಟೆಯ ಕಾವಲುಗಾರ. ೨. = ಕೊಟ್ಟಾರಿ.

**ಕೊಟ್ಟಸ** (ನಾ). ಸುಟ್ಟಮಾಂಸ; ಸುಂಟಗೆ.

**ಕೊಟ್ಟಾರ** (ನಾ). ಉಗ್ರಾಣ; ಕಣಜ.

**ಕೊಟ್ಟಾರಿ** (ನಾ). ಉಗ್ರಾಣದ ಅಧಿಕಾರಿ.

**ಕೊಟ್ಟ** (ನಾ). ೧. ಕೋಣೆ; ಕೊಠಡಿ. ೨. ಕೆಟ್ಟವನು; ದುಷ್ಟ. ೩. ಸಲ್ಲದುದು; ನಿಜವಲ್ಲದುದು. ೪. ಹಿಂಸೆ; ಕೊಲೆ. (ಗು). ೫. ಒರಟಾದ; ಮೊಂಡಾದ.

**ಕೊಟ್ಟಗ** (ನಾ). ಸೀಳುಬಾಲದ ಒಂದು ಬಗೆಯ ಹಕ್ಕಿ; ಕೀಚುಬಾಲ.

**ಕೊಟ್ಟಗೆ** (ನಾ). ೧. ಹೊರೆ ಹೊರುವ ಎತ್ತು; ಹೇರೆತ್ತು. ೨. = ಕೊಟ್ಟಗೆ.

**ಕೊಟ್ಟು** (ನಾ). ೧. ಮೊಲೆಯ ತೊಟ್ಟು; ಚೂಚುಕ. ೨. (ನವಿಲು ಮೊದಲಾದ ಪಕ್ಷಿಗಳ ತಲೆಯ ಮೇಲಿರುವ) ಜುಟ್ಟು; ಶಿಖೆ. ೩. ಜಡೆಯಲ್ಲಿ ಧರಿಸುವ ಚಿನ್ನದ ಆಭರಣ. ೪. ಒಂದು ಜಾತಿಯ ಪಕ್ಷಿ; ಹಂಗನ ಹಕ್ಕಿ. ೫. ತಮಟೆ; ಹರೆ. ೬. ಮಣ್ಣನ್ನು ಅಗೆದು ಹಾಕುವ ಸಾಧನ; ಗುದ್ದಲಿ. ೭. ಹಾವಿನ ಹೆಡೆ. ೮. ಅಕ್ಷರಗಳ ತಲೆಕಟ್ಟು.

**ಕೊಟ್ಟುಕ** (ನಾ). ತಲೆಯ ಮೇಲೆ ಜುಟ್ಟುಳ್ಳ ಒಂದು ಜಾತಿಯ ಪಕ್ಷಿ; ಕೋಯಷ್ಟಿಕ.

**ಕೊಟ್ಟೆ** (ನಾ). ೧. ಹಣ್ಣು ಅಥವಾ ಕಾಯಿಯ ಒಳಗಿನ ಗಟ್ಟಿಯಾದ ಬೀಜ; ಗೊರಟೆ. ೨. ಅಡಕೆಯ ಹಾಳೆಯಿಂದ ಮಾಡಿದ ದೊನ್ನೆ. ೩. ಗೂಡು. ೪. ಕೊಳೆರೋಗ ತಾಗದಂತೆ ಅಡಕೆಗೊನೆಗಳಿಗೆ ಕಟ್ಟುವ ಹಾಳೆಯ ಮುಸುಕು. ೫. ಈಜುಬುರುಡೆಯಾಗಿ ಉಪಯೋಗಿಸುವ ಗೋಟು ತೆಂಗಿನಕಾಯಿ. ೬. ಒಂದು ಬಗೆಯ ಭಕ್ಷ್ಯ; ಬೇಯಿಸಿದ ಕಡುಬು. ~**ಕಟ್ಟು** = ೧. ಮುಸುಕು ಕಟ್ಟು. ೨. ಮರಗಟ್ಟು; ಸೆಡೆದುಕೊಳ್ಳು.

**ಕೊಠಡಿ** = ಕೊಟಡಿ.

**ಕೊಡ** (ನಾ). ೧. ಎಳೆಯದಾಗಿರುವಿಕೆ. ೨. ಜೇನುಗೂಡು. ೩. ಮಣ್ಣು ಅಥವಾ ಲೋಹದಿಂದ ಮಾಡಿದ ಬಾಯಿ ಕಿರಿದಾದ ಪಾತ್ರೆ; ಕುಂಭ. ೪. ತಕ್ಕಡಿಯ ಪರಡಿ, – ಬಟ್ಟಲು. ~**ಕೂ(ಗೂ)ಸು** = ಇನ್ನೂ ಮದುವೆಯಾಗದಿರುವ ಹುಡುಗಿ; ಕನ್ಯೆ. ~**ಪಾನ** = ಮಣ್ಣು ಅಥವಾ ಲೋಹದಿಂದ ಮಾಡಿದ ಕೊಡ.

**ಕೊಡ(ಂ)ಕೆ** (ನಾ). ೧. ಕಿವಿ. ೨. ಕಿವಿಯ ಆಭರಣ; ಕುಂಡಲ.

**ಕೊಡ(ಂ)ಗೆಯ್** (ನಾ). ದಾನವಾಗಿ ಬಿಟ್ಟ ಭೂಮಿ; ಉಂಬಳಿ.

**ಕೊಡ(ಂ)ಚಿ** (ನಾ). ಒಂದು ಜಾತಿಯ ಮುಳ್ಳು ಗಿಡ.

**ಕೊಡ(ಂ)ತಿ** (ನಾ). ಮರದ ಸುತ್ತಿಗೆ; ಗುದಿಗೆ.

**ಕೊಡಂಬೆ** (ನಾ). ಮೀನು ಹಿಡಿಯುವ ಜೋಡು ಬುಟ್ಟಿ.

**ಕೊಡಚು** (ಕ್ರಿ). ೧. ಕಿವಿಯೊಳಗಿನ ಗುಗ್ಗೆಯನ್ನು ಹೊರದೆಗೆ. ೨. ಪಾತ್ರೆಯೊಳಗಿನ ಕೊಳೆಯನ್ನು ಉಜ್ಜಿ ಹೋಗಲಾಡಿಸು.

**ಕೊಡತ** (ನಾ). ೧. ಓಟಕ್ಕೆ ತಡೆಯಾಗುವಂತೆ ಪ್ರಾಣಿಯ ಕೊರಳಿಗೆ ಕಟ್ಟುವ ಕೋಲು; ಹಾಸುಗೋಲು. ೨. = ಕೊಡೆತ.

**ಕೊಡನಾರಿ** (ನಾ). ಒಂದು ಬಗೆಯ ಮೂಲಿಕೆ; ಭದ್ರಮುಸ್ತೆ.

**ಕೊಡಪು** (ಕ್ರಿ). ಒದರು; ಜಾಡಿಸು.

**ಕೊಡಮೆ** = ಕೊಡಂಬೆ.

**ಕೊಡಲಿ** (ನಾ). ಮರ ಮೊದಲಾದುವನ್ನು ಕಡಿಯುವ ಸಾಧನ; ಪರಶು. ~**ಗೊರವ** = ಪರಶುರಾಮ. ~**ರಾಮ** = ಕೊಡಲಿಗೊರವ.

ಕೊಡಲೆ ೧. = ಕೊಡಲಿ. ೨. ಕರುಳು; ಅಂತ್ರ.

ಕೊಡವಿ (ನಾ). ಕುಮಾರಿ; ಕನ್ಯೆ.

ಕೊಡವು ೧. = ಕೊಡಪು. ೨. ಬಿಟ್ಟುಬಿಡು; ಕಳಚು.

ಕೊಡಸಿಗೆ (ನಾ). ಒಂದು ಬಗೆಯ ಸಸ್ಯ; ಗಿರಿಮಲ್ಲಿಕೆ; ಕುಟಜ.

ಕೊಡಹು ೧. = ಕೊಡಪು. (ನಾ). ೨. ಜಾಡಿಸುವಿಕೆ. ೩. ಸಿಂಚನ; ಚೆಲ್ಲುವಿಕೆ.

ಕೊಡಿ (ನಾ). ೧. ಕುಡಿ; ಚಿಗುರು. ೨. ಬಾವುಟ; ಧ್ವಜ. ೩. ಗಟ್ಟಿಗತನ; ದಾರ್ಢ್ಯ. ೪. ಕಾರ್ತಿಕಮಾಸ. ~ಮರ = ದೇವಾಲಯದ ಮುಂದಿನ ಕಂಬ; ಧ್ವಜಸ್ತಂಭ.

ಕೊಡು (ಕ್ರಿ). ೧. ಸಲ್ಲಿಸು; ಒಪ್ಪಿಸು. ೨. ಮದುವೆ ಮಾಡಿಕೊಡು. ೩. ದಯಪಾಲಿಸು; ಅನುಗ್ರಹಿಸು. ೪. ನೀಡು; ದಾನಮಾಡು. ~ಕೈ(ಗೈ) = ಧಾರಾಳವಾಗಿ ದಾನ ಮಾಡುವ ಕೈ.

ಕೊಡುಗೆ ೧. = ಕೊಡಂಗೆಯ್. ೨. ಕೊಡುವಿಕೆ; ನೀಡುವಿಕೆ. ೩. ಕೊಟ್ಟ ವಸ್ತು; ಕಾಣಿಕೆ.

ಕೊಡೆ (ಕ್ರಿ). ೧. ಮೊನಚಾದ ಆಯುಧದಿಂದ ಚುಚ್ಚಿ ಗುಳಿಮಾಡು. ೨. ಕೊರೆ; ಕಂಡರಿಸು. ೩. ನೋವಾಗು. ೪. ಬಡವಾಗು; ಕೃಶವಾಗು. (ನಾ). ೫. ಆತಪತ್ರ; ಛತ್ರಿ. ೬. ಚಂದ್ರ ಮತ್ತು ಸೂರ್ಯನ ಸುತ್ತಲೂ ಇರುವ ಪ್ರಭಾವಳಿ. ೭. ಕೊಡುವಿಕೆ; ಕೊಡುಗೆ. ೮. ಹಾಲು ಕೆಡುವ ಒಂದು ಬಗೆ. ~ಪು(ಹು)ಲ್(ಲ್ಲು) = ಅಣಬೆ; ನಾಯಿಕೊಡೆ.

ಕೊಡೆತ (ನಾ). (ಸಂದುಗಳಲ್ಲಿ) ನರಗಳ ಹೊಡೆತ, –ಸಿಡಿತ.

ಕೊಡೆನೆಗೆ (ಕ್ರಿ). ಪುಟಹಾರು; ಜಿಗಿ.

ಕೊಣ (ನಾ). ೧. ಸ್ನಾನದ ತೊಟ್ಟಿ. ೨. ಪುಷ್ಕರಿಣಿ.

ಕೊಣಕು (ಕ್ರಿ). ೧. ನೆಗೆ; ಕುಪ್ಪಳಿಸು. (ನಾ). ೨. ನೆಗೆತ; ಜಿಗಿತ.

ಕೊಣಗು = ಕೊಳಗು.

ಕೊಣತ (ನಾ). ವ್ಯಾಯಾಮಕ್ಕಾಗಿ ಕೈಯಿಂದ ತಿರುಗಿಸುವ ಗದೆಯಂತಹ ಸಾಧನ; ಲೋಡು.

ಕೊಣಬಿಗೆ (ನಾ). ಕಣಕವನ್ನು ನಾದುವುದಕ್ಕಾಗಿ ಬಳಸುವ ಅಗಲವಾದ ಮರದ ಮರಿಗೆ; ಹರಿವಾಣ.

ಕೊಣಬು (ನಾ). ೧. ಬೆಡಗು; ಒನಪು. ೨. ತರಕಾರಿ ಹಾಕಿ ಮಾಡಿದ ಒಂದು ಬಗೆಯ ವ್ಯಂಜನ; ಸಾಂಬಾರು.

ಕೊಣಬೆ (ನಾ). ಬಣವೆ; ಮೆದೆ.

ಕೊಣಸು (ನಾ). ೧. ಜಿಂಕೆಯ ಮರಿ. ೨. ಗೊಲಸು.

ಕೊತವಾಲ (ನಾ). ಕೋಟೆಯ ರಕ್ಷಕ, –ಕಾವಲುಗಾರ.

ಕೊತ್ತಣ = ಕೊತ್ತಲ.

ಕೊತ್ತಲ(ಳ) (ನಾ). ಕೋಟೆಯ ಬುರುಜು.

ಕೊತ್ತಳಿಕೆ (ನಾ). (ತೆಂಗು, ಅಡಕೆ ಮುಂತಾದುವುಗಳ) ಗರಿಗಳನ್ನು ಸವರಿದ ಮೇಲೆ ಉಳಿಯುವ ಸೋಗೆಯ ದಿಂಡು; ಹೆಡೆಮಟ್ಟೆ; ಗೊದಮಟ್ಟೆ.

ಕೊತ್ತಟಿ(ಳಿ) (ನಾ). ೧. (ಕಾಗೆಗಳ) ಗುಂಪು; ಸಮೂಹ. ೨. ಬೇರೆಬೇರೆ ವೃತ್ತಿಯವರ ಸಂಸ್ಥೆ, –ಸಂಘ.

ಕೊತ್ತಿ (ನಾ). ೧. ಬೆಕ್ಕು; ಮಾರ್ಜಾಲ. ೨. ಬಂದೂಕಿನ ಕುದುರೆ.

ಕೊತ್ತು (ಕ್ರಿ). ೧. ಕುಕ್ಕು; ಅಗೆ. ೨. ಚೂರು ಮಾಡು; ಕೊಚ್ಚು. (ನಾ). ೩. ಗೊಂಚಲು; ಗೊನೆ.

ಕೊತ್ತುಂಬರಿ (ನಾ). ಒಂದು ಸಂಬಾರದ ಬೀಜ ಮತ್ತು ಅದರ ಗಿಡ.

ಕೊತ್ವಾಲ = ಕೊತವಾಲ.

ಕೊತ್ವಾಲಿ (ನಾ). ಕೊತವಾಲನ ಕಚೇರಿ, –ಚಾವಡಿ.

**ಕೊದಂಟ** (ನಾ). ದನಗಳು ಓಡಿಹೋಗದಂತೆ ತಡೆಯಲು ಕೊರಳಿಗೆ ಕಟ್ಟುವ ಮರದ ತುಂಡು ; ಕೊಂಡಿಗೆ ; ಗುದ್ದಿಗೆ.

**ಕೊದಲು** (ಕ್ರಿ). ೧. ಉಗ್ಗು ; ತೊದಲು. (ನಾ). ೨. ತೊದಲುವಿಕೆ.

**ಕೊದಳ್** ೧. = ಕೊದಲು. (ನಾ). ೨. ಮಧುರ ವಾದ ಧ್ವನಿ ; ಮಂಜುಳವಾದ ನುಡಿ.

**ಕೊದಳಿ** (ನಾ). ಎಳ್ಳು ತೆಗೆದ ಮೇಲೆ ಉಳಿ ಯುವ ಎಳ್ಳುಗಿಡದ ಸಿಪ್ಪೆ, -ಬುರುಡೆ.

**ಕೊದಿಲು** = ಕೊಣಬು.

**ಕೊದೆ** (ನಾ). ೧. ಕವೆ ; ಕವಲು. ೨. ಮರದ ದಿಮ್ಮಿ. ೩. ಬೆದೆ ; ನಸೆ.

**ಕೊನಬು** (ನಾ). ೧. ಬೆಡಗು ; ಒನಪು. ೨. ಬೆಡಗುಗಾರ ; ಒನಪುಗಾರ. ೩. ತುಂಟ ತನ ; ಲಂಡತನ.

**ಕೊನರ್(ರು)** (ಕ್ರಿ). ೧. ಚಿಗುರು ; ಪಲ್ಲವಿಸು. ೨. ಏಳಿಗೆ ಹೊಂದು ; ಅಭಿವೃದ್ಧಿಯಾಗು. (ನಾ). ೩. ಪಲ್ಲವ ; ಚಿಗುರು. ~ಎಣಿಕೆ = ಬೇರೆ ಯೋಚನೆ ; ಮತ್ತೊಂದು ವಿಚಾರ.

**ಕೊನೆ** (ಕ್ರಿ). ೧. ಬೆಳೆಯಿಸು ; ವೃದ್ಧಿಗೊಳಿಸು. ೨. ಕೊಂಡಾಡು ; ಹೊಗಳು. ೩. ಬಿಂಕ ಗೊಳ್ಳು ; ಗರ್ವಿಸು. ೪. ಕೊನರು ; ಚಿಗುರು. ೫. ಪೂರ್ಣವಾಗು. ೬. ಸಂತೋಷ ಪಡು ; ಹರ್ಷಿಸು. (ನಾ). ೭. ತುದಿ ; ಅಗ್ರ ಭಾಗ. ೮. ಕುಡಿ ; ಚಿಗುರು. ೯. ಕೊಂಬೆ ; ರೆಂಬೆ. ೧೦. ಅಂತ್ಯ ; ಮುಕ್ತಾಯ. ೧೧. ಮೂಲೆ. ~ಕಾ(ಗಾ)ಣಿಸು = ೧. ಮುಗಿಸು ; ತೀರಿಸು. ೨. ಕೊಲ್ಲು ; ನಾಶಮಾಡು. ~ಪ(ವ)ರಿ = ೧. ಚಿಗುರು ಬಿಡು. ೨. ಹಬ್ಬು ; ಪಸರಿಸು. ೩. ಕೊನೆ ಗೊಳ್ಳು ; ಮುಗಿ.

**ಕೊನ್ನ** (ನಾ). ಪಾಪಿಷ್ಠ ; ಪಾಪಿ.

**ಕೊನ್ನಾರ** (ನಾ). ೧. ಗೂಡು ; ಮಾಡ. ೨. ಕೊಳ್ಳ ; ದರಿ.

**ಕೊನ್ನಾರಿ** = ಕೊಡನಾರಿ.

**ಕೊಪ್ಪ** (ನಾ). ೧. ಚಿಕ್ಕಹಳ್ಳಿ ; ಕಾಲೂರು. ೨. ಗುಡಿಸಿಲುಗಳ ಸಮುದಾಯ.

**ಕೊಪ್ಪರ** (ನಾ). ೧. ಮೊಳಕೈ. ೨. ಮೊಳಕಾಲು. ೩. ಕೊಪ್ಪರಿಗೆ ; ದೊಡ್ಡಪಾತ್ರೆ. ೪. ಮಲ್ಲ ಯುದ್ಧದಲ್ಲಿ ಒಂದು ವರಸೆ.

**ಕೊಪ್ಪರಿಕೆ** (ನಾ). ಅಗಲವಾದ ಬಾಯುಳ್ಳ ಲೋಹದ ಪಾತ್ರೆ ; ಕಡಾಯಿ.

**ಕೊಪ್ಪರಿಗೆ** = ಕೊಪ್ಪರಿಕೆ.

**ಕೊಪ್ಪರಿಸು** (ಕ್ರಿ). ೧. ತಿವಿ ; ಹೊಡೆ. ೨. ಮೀರು ; ಹೆಚ್ಚಾಗು.

**ಕೊಪ್ಪಲ್(ಲು)** (ನಾ). ೧. ಕುಪ್ಪೆ ; ರಾಶಿ. ೨. ಚಿಕ್ಕಹಳ್ಳಿ. ೩. ಗಿಡಗಳ ಗುಂಪು ; ತೋಪು.

**ಕೊಪ್ಪು** (ನಾ). ೧. ಬಿಲ್ಲಿನ ತುದಿ. ೨. ತುದಿ ; ಅಗ್ರಭಾಗ. ೩. ಕಿವಿಯ ಮೇಲುಭಾಗದಲ್ಲಿ ತೊಡುವ ಒಂದು ಆಭರಣ. ೪. ತುರುಬು ; ಮುಡಿಗಂಟು. ೫. ಒಂದು ಬಗೆಯ ಆಭರಣ ; ಜಡೆಬಿಲ್ಲೆ. ೬. ಅಂದ ; ಚಂದ.

**ಕೊಪ್ಪೆ** (ನಾ). ಮಳೆಗಾಲದಲ್ಲಿ ತಲೆಗೆ ಮರೆ ಮಾಡಿಕೊಳ್ಳಲು ಕಂಬಳಿ ಮೊದಲಾದುವು ಗಳಿಂದ ಮಾಡಿದ ಕುಂಚಿಗೆ ; ಗೊರಬು.

**ಕೊಬ್ಬಟ್ಟು** (ನಾ). ೧. ಅರ್ಧ ಕುಟ್ಟಿದ ಬತ್ತ. ೨. ಬತ್ತವನ್ನು ಕುಟ್ಟಿ ತೆಗೆದ ಹೊಟ್ಟು.

**ಕೊಬ್ಬರಿ** (ನಾ). ೧. ತೆಂಗಿನಕಾಯಿಯ ಒಳ ತಿರುಳು. ೨. ಗೋಟುಕಾಯಿ.

**ಕೊಬ್ಬಿಲ** (ನಾ). ಕೀಳು ಮನುಷ್ಯ ; ಅಲ್ಪ.

**ಕೊಬ್ಬು** = ಕೊರ್ವು. ~ತೆ(ದೆ)ಕ್ಕೆ = ನೆಣದ ರಾಶಿ.

**ಕೊಮೆ** (ಕ್ರಿ). ಸುಡು ; ಉರಿ.

**ಕೊಮ್ಮೆ** (ನಾ). ೧. ಧಾನ್ಯವನ್ನು ಸಂಗ್ರಹಿ ಸಿಡಲು ಬಿದಿರು ಅಥವಾ ಮಣ್ಣಿನಿಂದ ಮಾಡಿದ ಸಾಧನ ; ಗಳಗೆ. ೨. ಒಂದು ಬಗೆಯ ಮೂಲಿಕೆ ; ಗಣಜಿಲು. ೩. ಕೊಬ್ಬು ; ಅಹಂಕಾರ.

**ಕೊಯ್** (ಕ್ರಿ). ೧. ಕತ್ತರಿಸು; ಸೀಳು. ೨. ಗಿಡದಿಂದ ಹಣ್ಣು ಮೊದಲಾದುವುಗಳನ್ನು ಕೀಳು. ~ಕ(ಗ)ತ್ತಿ = ೧. ಕೊಯ್ಯುವ ಕತ್ತಿ. ೨. ಈಳಿಗೆ; ಮೆಟ್ಟುಗತ್ತಿ.

**ಕೊಯ್ಕ** (ನಾ). ೧. ಕತ್ತರಿಸುವವನು; ಸೀಳುವವನು. ೨. ಒಂದು ಬಗೆಯ ಪಕ್ಷಿ.

**ಕೊಯ್ತ** (ನಾ). ೧. ಕೊಯ್ಯುವುದು; ಕತ್ತರಿಸುವುದು. ೨. ಕೊಯ್ಯುವ ಸಾಧನ; ಕತ್ತಿ.

**ಕೊಯ್ಯು** = ಕೊಯ್.

**ಕೊಯ್ಲು** (ನಾ). ೧.(ಬೆಳೆಯನ್ನು) ಕೊಯ್ಯುವಿಕೆ; ಕಟಾವು. ೨. ಕೊಯ್ದ ಗಾಯ.

**ಕೊರ(೦)ಗು** (ಕ್ರಿ). ೧.ಬಡನಾಗು; ಸೊರಗು. ೨. ವ್ಯಥೆಪಡು; ಪರಿತಪಿಸು. ೩. ಬಾಡು; ಬತ್ತು. (ನಾ). ೪. ಕಳವಳ; ವ್ಯಥೆ. ~ಇಸು = ೧. ಸೊರಗಿಸು; ಕುಗ್ಗಿಸು. ೨. ಬಾಡಿಸು; ಕಂದಿಸು. ೩. ಸೋಲಿಸು.

**ಕೊರ(೦)ಟು** (ನಾ). ೧. ಬೆಳವಣಿಗೆ ನಿಂತು ಹೋದುದು; ಕೊರಡು. ೨. ಒಣಗಿ ಕರಟಾದುದು. ~ತ(ದ)ಲೆ = ಜಡೆಗಟ್ಟಿ ಕೊರಡಿನಂತಾದ ತಲೆ.

**ಕೊರಂಬೆ** (ನಾ). ಮರದ ಎಲೆಗಳಿಂದ ಮಾಡಿದ ಗೊರಬು.

**ಕೊರಕ** (ನಾ). ೧. ಕೊರೆಯುವ ಸಾಧನ. ೨. ಒರಟಾದುದು; ಒರಟು.

**ಕೊರಕಲ್(ಲು)** (ನಾ). ಪ್ರವಾಹ, ಬಂಡಿಯ ಗಾಲಿ ಮೊದಲಾದುವುಗಳ ಕೊರೆತದಿಂದಾದ ತಗ್ಗು.

**ಕೊರಗಣೆ** (ನಾ). ಕೊರಗು; ಚಿಂತೆ.

**ಕೊರಡು** (ನಾ). ೧. ನೆಟ್ಟಗೆ ಇರುವ ಕಾಮನ ಬಿಲ್ಲು. ೨. = ಕೊಜಿಂಡು.

**ಕೊರಡೆ** (ನಾ). ೧.ಬಾರುಕೋಲು; ಚಬುಕ. ೨.ಚಾಟಿಯ ಏಟು. ೩.ಕೊರಡಿನಂಥವಳು; ಒರಟು ಹೆಂಗಸು.

**ಕೊರಪ** (ನಾ). ೧. ಕುದುರೆಯ ಮೈಯನ್ನು ಉಜ್ಜುವ ಹಣಿಗೆ; ಖರಾರಿ. ೨. ಕೊರೆದ ಅಡಕೆಯ ಭಾಗ.

**ಕೊರಪುಳ್ಳಿ** (ನಾ). ದಪ್ಪನಾದ ಪುಳ್ಳೆ, -ಕಟ್ಟಿಗೆ.

**ಕೊರಲ್(ಲು)** (ನಾ). ೧. ಕತ್ತು; ಕುತ್ತಿಗೆ. ೨.ಧ್ವನಿ; ಕಂಠ. ~ಉದ್ದ = ಕುತ್ತಿಗೆಗೆ ಬರುವಷ್ಟು. ~ಉಬ್ಬಸ = ೧. ಕೊರಳು ಬಿಗಿದು ಉಸಿರಾಟ ಕಷ್ಟವಾಗುವಿಕೆ. ೨. ಕಷ್ಟವನ್ನುಂಟುಮಾಡುವವನು.

**ಕೊರಲ್ಚು** (ಕ್ರಿ). ಹುಯ್ಯಲಿಡು; ಆಕ್ರೋಶ ಮಾಡು.

**ಕೊರವ** (ನಾ). ೧. ಒಂದು ಜಾತಿಯ ಮೀನು. ೨. = ಕೊಜವ.

**ಕೊರಸು** (ನಾ). ಒಂದು ಜಾತಿಯ ಹಕ್ಕಿ.

**ಕೊರಳ್(ಳು)** ೧. = ಕೊರಲ್. ೨. ಕಾಳಿನ ತೆನೆ. ~ಕೊ(ಗೊ)ಯ್ಕ = ಕೊರಳನ್ನು ಕತ್ತರಿಸುವವನು; ಕೊಲೆಗಡಿಕ. ~ಕೊ(ಗೊ)ಳಿಸು = ತಡೆಹಿಡಿ; ನಿಯಂತ್ರಿಸು.

**ಕೊರೆ** (ಕ್ರಿ). ೧. ಗೊರಕೆ ಹೊಡೆ. ೨. ಇರಿ; ಚುಚ್ಚು. ೩. ಕೆತ್ತು; ಕಂಡರಿಸು. ೪. ಬೆಂಕಿಕಡ್ಡಿಯನ್ನು ಗೀಚು. ೫. ಬೇಸರದಿಂದ ಗೀಚು. ೬. ಬೇಸರ ಬರುವಂತೆ ಒಂದೇಸಮನೆ ಮಾತನಾಡು. ೭. = ಕೊಱೆ. (ನಾ). ೮. ಕತ್ತರಿಸುವುದು; ತುಂಡು ಮಾಡುವುದು. ೯. ತುಂಡು; ಚೂರು.

**ಕೊರೆತ** (ನಾ). ೧. ಕೊರೆಯುವಿಕೆ; ಕುಯ್ಯುವಿಕೆ. ೨. ಕಂಡರಣೆ; ಕೆತ್ತನೆಯ ಕೆಲಸ. ೩. ದೀರ್ಘವಾದ ಹಾಗೂ ನೀರಸವಾದ ಮಾತಿನಿಂದ ಉಂಟಾಗುವ ಹಿಂಸೆ.

**ಕೊಜ(ರ)(೦)ಡು** (ನಾ). ೧. ಮೋಟುಮರ; ಮರದ ತುಂಡು. ೨. ಮಣ್ಣುಹೆಂಟೆಗಳನ್ನು ಪುಡಿ ಮಾಡಲು ಬಳಸುವ ಒಂದು

ಸಾಧನ; ಹಲುಬೆ. ೩. ಒಂದು ಬಗೆಯ ಆಯುಧ. ~ಕೊ(ಗೊ)ಳ್ = ೧. ಹಲುಬೆ ಹೊಡೆ. ೨. ಮರಗಟ್ಟು; ಜಡ್ಡುಗಟ್ಟು.

**ಕೊಱ(ರ)(೦)ತೆ** (ನಾ). ೧. ಕೊರೆ; ಕಡಮೆ. ೨. ಕುಂದು; ದೋಷ.

**ಕೊಱ(ರ)ಚ** (ನಾ). ೧. ನಿಂದಕ; ದೂಷಕ. ೨. ಬಾಚಣಿಗೆ ಮೊದಲಾದ ಸಾಮಾನು ಗಳನ್ನು ಮಾರುವ ಜನ.

**ಕೊಱ(ರ)ಚು** (ಕ್ರಿ). ೧. ಮೂದಲಿಸು; ತೆಗಳು. ೨. ಕಿರಿಚು; ಚೀರು. (ನಾ). ೩. ಚುಚ್ಚುಮಾತು; ಮೂದಲಿಕೆ. ~ಆಟ = ಚುಚ್ಚುಮಾತು; ಅಣಕ. ~ಆಡು = ೧. ಮೂದಲಿಸು; ಹೀಯಾಳಿಸು. ೨. ಪೀಡಿಸು; ಕಾಡು.

**ಕೊಱ(ರ)ಮ** ೧. = ಕೊಱವ. ೨. ಘಾಟಿ; ಘಟಿಂಗ.

**ಕೊಱ(ರ)ಲೆ** (ನಾ). ಸಾವೆಯಂತಹ ಒಂದು ಬಗೆಯ ಧಾನ್ಯ.

**ಕೊಱ(ರ)ವ** (ನಾ). ೧. ಚಾಪೆ, ಬುಟ್ಟಿ ಮೊದ ಲಾದುವನ್ನು ಮಾಡಿ ಮಾರುವ ಹಾಗೂ ಕಣಿಯನ್ನು ಹೇಳುವ ಒಂದು ಜಾತಿ.

**ಕೊಱ(ರ)ವಂಜಿ** (ನಾ). ಕೊರವರ ಹೆಂಗಸು; ಕಣಿ ಹೇಳುವವಳು.

**ಕೊಱ(ರ)ವಿ** = ಕೊಱವಂಜಿ.

**ಕೊಱ²(ರೆ)** (ಕ್ರಿ). ೧. ಕೊಯ್ಯು; ಕತ್ತರಿಸು. ೨. ತೂತುಮಾಡು. ೩. ಸುತ್ತು; ತಿರುಗು. ೪. ಕೊರತೆಯಾಗು. (ನಾ). ೫. ಕೊರತೆ; ನ್ಯೂನತೆ. ೬. ಉಳಿದುದು; ಬಾಕಿ. ೭. ಒಂದು ಬಗೆಯ ಧಾನ್ಯ; ಹಾರಕ. ~ಕೂೞ(ಳು) =(ಪಕ್ಷಿಗೆ ಹಾಕುವ) ಕಾಳಿನ ಆಹಾರ; ಎರೆ.

**ಕೊಱರ್** (ಕ್ರಿ). ೧. ಕತ್ತರಿಸಿ ಹಾಕು; ತುಂಡು ಮಾಡು. ೨. ತನ್ನನ್ನು ಹೊಗಳಿಕೊಂಡು ಮಾತನಾಡು; ಆತ್ಮಸ್ತುತಿ ಮಾಡಿಕೊಳ್ಳು. (ನಾ). ೩. ಉಜ್ಜೆಯ ಮಾತ.

**ಕೊಬ್ಬರ್** = ಕೊರ್ವು.

**ಕೊರ್ವು** (ಕ್ರಿ). ೧. ಹೆಚ್ಚಾಗು; ಅತಿಶಯ ವಾಗು. ೨. ಬಲಿ; ದಪ್ಪವಾಗು. ೩. ಉಬ್ಬು; ಉತ್ಸಾಹಿಸು. ೪. ಸೊಕ್ಕು; ಅಹಂಕಾರ ಪಡು. (ನಾ). ೫. ಹೆಚ್ಚಳ; ಆಧಿಕ್ಯ. ೬. ಸೊಕ್ಕು; ಮದ. ೭. ನೆಣ; ಚರ್ಬಿ.

**ಕೊಲ್(ಲು)** (ಕ್ರಿ). ೧. ಸಾಯಿಸು. ೨. ಪೀಡಿಸು; ನೋಯಿಸು. ೩. ಹಾಳು ಮಾಡು; ಪೋಲುಮಾಡು. ೪. ಹೊಡೆ.

**ಕೊಲಪ** (ನಾ). ನೇಕಾರ; ಜಾಡ.

**ಕೊಲವ** = ಕೊಲಪ.

**ಕೊಲಿ(ಳಿ)ಕೆ** (ನಾ). ಕೊಂಡಿ; ಕುಣಿಕೆ.

**ಕೊಲಿಮೆ** (ನಾ). ಅಕ್ಕಸಾಲಿಗನ ಅಥವಾ ಕಮ್ಮಾರನ ಒಲೆ; ಕುಲಿಮೆ.

**ಕೊಲೆ** (ಕ್ರಿ). ೧. ಕೊಲ್ಲು; ಸಾಯಿಸು. (ನಾ). ೨. ಕೊಲ್ಲುವಿಕೆ; ವಧೆ. ೩. ಹಿಂಸೆ; ಪೀಡೆ. ~ಕ(ಗ)ಡಿಕ = ಕೊಲೆ ಮಾಡು ವವನು. ~ಪಾತಕ = ೧. ಕೊಲ್ಲುವುದರಿಂದ ಉಂಟಾಗುವ ಪಾಪ. ೨. = ಕೊಲೆಗಡಿಕ.

**ಕೊಲ್ಲ** (ನಾ). ಕಮ್ಮಾರ.

**ಕೊಲ್ಲಟ** = ಕೊಲ್ಲಟಿಗ.

**ಕೊಲ್ಲಟಿಗ** (ನಾ). ಡೊಂಬ; ಡೊಂಬರವನು. ~ಇತ್ತಿ = ಡೊಂಬರ ಹೆಂಗಸು.

**ಕೊಲ್ಲಣ** (ನಾ). ೧. ವಿನೋದ; ಕ್ರೀಡೆ. ೨. = ಕೊಲ್ಲಣಿಗೆ.

**ಕೊಲ್ಲಣಿಗೆ** (ನಾ). ೧. ಎಡೆಯಾಟ; ಸಂಚಾರ. ೨. ಪಟ್ಟಣಿ; ಸಂದಣಿ.

**ಕೊಲ್ಲಾರ** (ನಾ). ಸಿಂಗರಿಸಿದ ಕಮಾನುಬಂಡಿ.

**ಕೊಲ್ಲಾರಿ** ೧. = ಕೊಲ್ಲಾರ. ೨. ಬಂಡಿಯ ಬಿದಿರಿನ ಕಮಾನು.

**ಕೊಲ್ಲಿ** (ನಾ). ೧. ಓರೆ; ವಕ್ರವಾದುದು. ೨. ಅಗಡು; ತೊಂಡು. ೩. ಚಿಕ್ಕ ಜಲ ಪ್ರವಾಹ; ಹಳ್ಳ. ೪. ಭೂಮಿಯೊಳಗೆ ನುಗ್ಗಿರುವ ಸಮುದ್ರಭಾಗ; ಆಖಾತ.

~ನೋಟ = ಓರೆನೋಟ; ಕಡೆಗಣ್ಣಿನ ನೋಟ.

**ಕೊಲ್ಲು** = ಕೊಲ್.

**ಕೊಲ್ಲೆ** (ನಾ). ೧. ಗೊಲೆ; ಗೊನೆ. ೨. ಓರೆ; ವಕ್ರನಾದುದು. ೩. ಮೂಲೆ; ತುದಿ.

**ಕೊವರ** (ನಾ). ೧. ಕುಂಬಾರ. ೨. ಕುಮಾರ; ಮಗ.

**ಕೊಸಗು** (ನಾ). ಒಂದು ಜಾತಿಯ ಮರ; ಬೆಟ್ಟದಾವರೆ; ಕರ್ಣಿಕಾರ.

**ಕೊಸರ್** (ಕ್ರಿ). ಹಿಡಿತದಿಂದ ಬಿಡಿಸಿಕೊಳ್ಳು; ಜಾರಿಕೊಳ್ಳು.

**ಕೊಸರು** ೧. = ಕೊಸರ್. ೨. ಎಳೆ; ಜಗ್ಗು. ೩ಉತ್ಕಟವಾಗು. ೪. ಅಧಿಕವಾಗಿ ಹೇಳು. ೫. ಮತ್ತೆ ಮತ್ತೆ ಬಯಸು. ೬. ವ್ಯಾಪಾರ ದಲ್ಲಿ ಚೌಕಾಸಿ ಮಾಡು. (ನಾ). ೭. ಅತ್ಯಾಸೆ; ಅತಿಯಾದ ಬಯಕೆ. ೮. ಬಹಳ ಕಡಮೆ; ಸ್ವಲ್ಪ. ೯. ಹೆಚ್ಚಳ; ಆಧಿಕ್ಯ. ~ಆಡು =೧. ತಪ್ಪಿಸಿಕೊಳ್ಳಲು ಯತ್ನಿಸು; ಎಳೆ ದಾಡು. ೨. ಹೆಚ್ಚಾಗಿಬೇಕೆಂದು ಕೇಳು.

**ಕೊಸಱು(ರು)** (ಕ್ರಿ). ೧. ಮೋಹಗೊಳಿಸು. (ನಾ). ೨. ಮೋಹ; ಮರುಳು. ~ಇಕೆ = ಚೆಲುವು; ಸೊಗಸು.

**ಕೊಸೆ** (ಕ್ರಿ). ೧. ಸಂಭೋಗ ಮಾಡು; ಸುಸಿ ಲಾಡು. ೨. ಜಗ್ಗು; ಎಳೆದಾಡು. (ನಾ). ೩. ಕುದುರೆಸವಾರಿಯಲ್ಲಿ ಒಂದು ಬಗೆ. ೪. ಕಡಿವಾಣ; ಲಗಾಮು. ೫. ರತಿಕ್ರೀಡೆ; ಸಂಭೋಗ. ೬. ಪುರುಷನ ಜನನೇಂದ್ರಿಯ. ~ಕೊ(ಗೊ)ಳ್ = ಲಗಾಮನ್ನು ಎಳೆ.

**ಕೊಳ್(ಳು)** (ಕ್ರಿ). ೧. ತೆಗೆದುಕೊಳ್ಳು; ಸ್ವೀಕರಿಸು. ೨. ವಶಪಡಿಸಿಕೊಳ್ಳು; ಕಿತ್ತು ಕೊಳ್ಳು. ೩. ಕ್ರಯಕ್ಕೆ ಪಡೆ; ಕೊಂಡು ಕೊಳ್ಳು. ೪. ಕರೆ; ಸುರಿ. ೫. ಆಕ್ರಮಿಸು. ೬. ಕಡಿ; ಕಚ್ಚು. ೭. ಕೆಲಸಕ್ಕೆ ಬರು; ಪ್ರಯೋಜನವಾಗು. ೮. ಲೆಕ್ಕಿಸು; ಲಕ್ಷ್ಯ ಮಾಡು. ೯. ತಾಗು; ಮುಟ್ಟು. ೧೦. ಮೆಚ್ಚು; ಗೌರವಿಸು. ೧೧. ಗಳಿಸು; ಸಂಪಾದಿಸು. ೧೨. ಮುತ್ತು; ಆವರಿಸು. ~ಇಸು = ೧. ಅಪಹಾರ ಮಾಡಿಸು. ೨. ಕಚ್ಚು ವಂತೆ ಮಾಡು; ಕಡಿಯಿಸು. ೩. ಅಂಟಿಸು; ಹತ್ತಿಸು. ೪. ತೂಗು; ಬೀಸು. ~ಕೊಡೆ = ೧. ಕೊಡುವ ಮತ್ತು ತೆಗೆದುಕೊಳ್ಳುವ ವ್ಯವಹಾರ; ವಿನಿಮಯ. ೨. ವಿವಾಹ ಸಂಬಂಧ; ಬಾಂಧವ್ಯ. ~ಮಗ = ದತ್ತು ಪುತ್ರ; ಸಾಕುಮಗ.

**ಕೊಳ** (ನಾ). ೧. ಸರೋವರ; ಪುಷ್ಕರಿಣಿ. ೨. ಗೊತ್ತಾದ ಸ್ಥಳ; ಸಂಕೇತ ಸ್ಥಳ. ~(ಂ)ಕ(ಗ)ಟ್ಟು = ದಟ್ಟೈಸು; ಸಂದ ಣಿಸು. ~(ಂ)ಕೊ(ಗೊ)ಳ್ = ೧. ಮಡು ಗಟ್ಟಿ ನಿಲ್ಲು. ೨. ಬಂಧಿಸಲ್ಪಡು.

**ಕೊಳಕು** = ಕೊೞಕು. ~ನುಡಿ = ೧. ಹೊಲಸು ಮಾತನಾಡು. ೨. ಹೊಲಸು ಮಾತು. ~ಮಂಡಲ = ತನ್ನ ವಿಷದಿಂದ ಶರೀರವು ಕೊಳೆತುಬೀಳುವಂತೆ ಮಾಡುವ ಒಂದು ಜಾತಿಯ ಹಾವು.

**ಕೊಳ್ಕೆ** (ನಾ). ವರ್ಷದಲ್ಲಿ ಬತ್ತದ ಮೂರನೆಯ ಬೆಳೆ.

**ಕೊಳಗ** (ನಾ). ೧. ಒಂದು ಅಳತೆ; ನಾಲ್ಕು ಬಳ್ಳಗಳ ಪರಿಮಾಣ. ೨. ಲೋಹದ ದೊಡ್ಡ ಪಾತ್ರೆ. ೩. = ಕೊಳಗು. ~ತ(ದ)ಪ್ಪಲೆ = ಕೊಳಗದ ಆಕಾರದ ಪಾತ್ರೆ; ದೊಡ್ಡ ಲೋಹದ ಪಾತ್ರೆ.

**ಕೊಳಗು** (ನಾ). (ಪಶುಗಳ) ಕಾಲಿನ ಗೊರಸು; ಖುರಪುಟ.

**ಕೊಳಗುಳಿಕೆ** (ನಾ). ಒಂದು ಬಗೆಯ ಮುಳ್ಳು ಗಿಡ; ಇಕ್ಷುರ.

**ಕೊಳಚೆ** = ಕೊೞಚೆ. ~ನೀರ್(ರು) =ಬಗ್ಗಡ ವಾದ ನೀರು; ರಾಡಿ.

**ಕೊಳದಪ್ಪಲೆ** = ಕೊಳಗದಪ್ಪಲೆ.

ಕೊಳಪು (ಕ್ರಿ). ಕೆರಳು ; ಮುಸಗು.

ಕೊಳರ್ (ನಾ). ಲಾಮಂಚ ; ಬಾಳದ ಬೇರು.

ಕೊಳಱು(ರು) (ಕ್ರಿ). (ಭಯ, ಕೋಪ ಮತ್ತು ಗೊಂದಲಗಳಿಂದ) ಕೂಗು ; ಬೊಬ್ಬಿರಿ.

ಕೊಳರ್ವಕ್ಕಿ (ನಾ). ಒಂದು ಜಾತಿಯ ನೀರು ಹಕ್ಕಿ.

ಕೊಳವಳಿಕೆ = ಕೊಳಗುಳಿಕೆ.

ಕೊಳವೇರ್(ರು) = ಕೊಳರ್.

ಕೊಳಾಯಿ (ನಾ). ನಲ್ಲಿ ; ನಳ.

ಕೊಳುಗುಳ = ಕೊಳ್ಗುಳ.

ಕೊಳೆ ೧. = ಕೊೞೆ³. ೨. ಪ್ರಗತಿಯಿಲ್ಲದೆ ಇದ್ದ ಸ್ಥಾನದಲ್ಲಿಯೇ ಇರು. ~ರೋಗ=ಅಡಕೆಯ ಮರಕ್ಕೆ ತಗಲುವ ಒಂದು ರೋಗ. ~ಹಾಕು = ೧. ಕೊಳೆಯುವಂತೆ ಮಾಡು. ೨.ತಡೆದು ನಿಲ್ಲಿಸು ; ಪ್ರಗತಿಯಿಲ್ಲದೆ ಇರಿಸು.

ಕೊಳ್ಗುಳ (ನಾ). ೧. ಕಾಳಗ; ಯುದ್ಧ. ೨. ರಣಭೂಮಿ; ಯುದ್ಧರಂಗ. ~(ಂ)ಕೊ(ಗೊ)ಳ್ =೧.ಯುದ್ಧಮಾಡು. ೨. ಕಾಳೆಗವನ್ನು ಗೆಲ್ಲು.

ಕೊಳ್ಳ (ನಾ). ೧.ತಗ್ಗಾಗಿರುವ ಪ್ರದೇಶ; ದರಿ. ೨. ಗುಹೆ; ಗಹ್ವರ.

ಕೊಳ್ಳಿ (ನಾ). ಉರಿಯುವ ಕಟ್ಟಿಗೆ ; ಅಲಾತ. ~ಕೊ(ಗೊ)ಳ್(ಳು) = ೧. ಬೆಂಕಿತಾಗು. ೨. ಕೋಪಗೊಳ್ಳು ; ಸಿಟ್ಟಾಗು. ~ದೆವ್ವ =ಕೊಳ್ಳಿಹಿಡಿದು ಓಡಾಡುವ ಹಾಗೆ ಕಾಣುವ ಪಿಶಾಚಿ. ~ಬೀ(ವೀ)ಸು = ಯುದ್ಧವನ್ನು ಪ್ರಾರಂಭಿಸುವುದರ ಸಂಕೇತವಾಗಿ ಉರಿಯುವ ಕೊಳ್ಳಿಯನ್ನು ಬೀಸು.

ಕೊಳ್ಳು ೧. = ಕೊಳ್. (ನಾ). ೨. ಒಂದು ದ್ವಿದಳ ಧಾನ್ಯ ; ಹುರುಳಿ.

ಕೊಳ್ಳೆ (ನಾ). ೧.ಸುಲಿಗೆ; ಸೂರೆ. ೨.ದೋಚಿಕೊಂಡ ವಸ್ತು ; ಸುಲಿಗೆಯ ದ್ರವ್ಯ. ~ಪೊ(ಹೊ)ಡೆ = ಲೂಟಿ ಮಾಡು. ~ಪೋ(ಹೋ)ಗು = ಸುಲಿಗೆಯಾಗು ; ಲೂಟಿಯಾಗು.

ಕೊಳ್ಳೆಗ (ನಾ). ಕೊಳ್ಳೆ ಹೊಡೆಯುವವನು ; ಸುಲಿಗೆಗಾರ.

ಕೊೞ್(ಳ್) (ಗು). ಕೊಳೆತು ಗಿಜಿಗಿಜಿಯಾಗಿರುವ ; ಅಸಹ್ಯವಾದ. ~ಕೆ(ಗೆ)ಸಱ್(ರ್) = ೧. ಅಜಿಗಿಜಿಯಾದ ಕೆಸರು. ೨. =ಕೋೞ್ಗೆಸಱ್. ~ಮಿದುಳ್(ಳು) = ಅಜಿಗಿಜಿಯಾದ ಮಿದುಳು ; ಜಜ್ಜಿದ ಮಿದುಳು.

ಕೊೞ(ಳ)ಕ (ನಾ). ೧. ಕೊಳಕು ಮನುಷ್ಯ; ಹೊಲಸಾದವನು. ೨. ಒಂದು ಜಾತಿಯ ಹಾವು; ಕೊಳಕುಮಂಡಲ.

ಕೊೞ(ಳ)ಕು (ನಾ). ಕೊಳೆತುದು; ಹೊಲಸು.

ಕೊೞ(ಳ)ಚೆ = ಕೊೞಕು.

ಕೊೞ(ಳ)ಲ್(ಲು) (ನಾ). ಬಿದಿರ ಕೊಳವೆಯಿಂದ ಮಾಡಿದ ಊದುವ ವಾದ್ಯ;ವೇಣು.

ಕೊೞ(ಳ)ವಿ (ನಾ). ೧.ಬಿದಿರು ಮೊದಲಾದುವುಗಳ ಪೊಳ್ಳಾದ ನಾಳ, –ನಳಿಕೆ. ೨. ಒಂದು ಅಳತೆಯ ಪ್ರಮಾಣ; ಚಟಾಕು.

ಕೊೞ(ಳ)ವೆ = ಕೊೞವಿ.

ಕೊೞೆ³(ಳೆ) (ಕ್ರಿ). ೧. ಕೆಟ್ಟು ನಾರು. (ನಾ). ೨.ಕೊಳೆತುದು ; ಹೊಲಸು. ~ಪಾ(ವಾ)ವು = ಒಂದು ಜಾತಿಯ ಹಾವು; ಕೊಳಕುಮಂಡಲ.

❋

ಕೋ (ಕ್ರಿ). ೧. ಪೋಣಿಸು. ೨. ಸೇರಿಸು; ಸಿಕ್ಕಿಸು. ೩. ಚುಚ್ಚು; ತಿವಿ. ೪. ಕಟ್ಟು; ಬಂಧಿಸು. ೫. ಸಿಕ್ಕು; ವಶವಾಗು. ೬. ಸೇರಿಕೊಳ್ಳು; ಜೊತೆಗೂಡು. ೭. ಬಗ್ಗಿಸು; ವಕ್ರವಾಗಿಸು.

ಕೋ(ಂ)ಟೆ (ನಾ). ಕಿಲ್ಲೆ; ದುರ್ಗ. ~ಕಾ(ಗಾ)ಐ(ರ) = ಕೋಟೆಯ ರಕ್ಷಕ. ~ಕೊತ್ತಲ = ಕೋಟೆ ಮತ್ತು ಅದರ ಮೇಲಿರುವ ಬುರುಜು. ~ತೆ(ದೆ)ನೆ = ಕೋಟೆಯ ತುದಿ; ಬುರುಜು. ~ಬಿ(ವಿ)ರಿ = ಕೋಟೆಯ ಬಿರುಕು. ~ಮಾನ್ಯ = ಕೋಟೆಯ ರಕ್ಷಣೆಗಾಗಿ ಕೊಟ್ಟ ಮಾನ್ಯ, – ಭೂಮಿ.

ಕೋಕ (ನಾ). ೧. ಜಕ್ಕವಕ್ಕಿ; ಚಕ್ರವಾಕ ಪಕ್ಷಿ. ೨. ತೋಳ; ಈಹಾಮೃಗ. ೩. ಕೋಗಿಲೆ; ಪಿಕ. ೪. ಕಪ್ಪೆ. ೫. ಕರ್ಜೂರದ ಮರ ಮತ್ತು ಅದರ ಹಣ್ಣು. ೬. ಒಳಗಿನ ತೆಳುಪದರ ಅಂಟಿಕೊಂಡಿರುವ ಅಡಕೆ.

ಕೋಕನದ (ನಾ). ಕೆಂಪುತಾವರೆ; ಕೆಂದಾವರೆ.

ಕೋಕಿ (ನಾ). ಹೆಣ್ಣು ಚಕ್ರವಾಕಪಕ್ಷಿ.

ಕೋಕಿಲ(ಳ) (ನಾ). ಕೋಗಿಲೆ; ಪಿಕ.

ಕೋಗಿಲೆ ೧. = ಕೋಕಿಲ. ೨. ಒಂದು ಜಾತಿಯ ಹುಳು. ೩. ಜಾನುವಾರುಗಳಿಗೆ ಬರುವ ಒಂದು ಬಗೆಯ ರೋಗ. ೪. ಒಂದು ಜಾತಿಯ ಗಿಡ; ಕುಪ್ಪೆಗಿಡ; ಕಾಬಾಳೆ. ೫. ಮಾವಿನ ಓಟೆಯ ಒಳಗಿನ ತಿರುಳು.

ಕೋಗೀರು (ನಾ). ಕುದುರೆಯ ಬೆನ್ನಿನ ಮೇಲೆ ಹಾಕುವ ಥಡಿ; ಜೀನು.

ಕೋಗು (ನಾ). ತುಂಡು; ಭಾಗ. ~ರಿವಾಜು = ಗೇಣಿದಾರನು ಪ್ರತಿವರ್ಷ ಒಡೆಯನಿಗೆ ತೆರುವ ಗೇಣಿಯ ಪದ್ಧತಿ.

ಕೋಚು ೧. = ಕೋಸು. ೨. ಕದ; ಬಾಗಿಲಿನ ರೆಕ್ಕೆ. ~ಭಟ್ಟ = ಬುದ್ಧಿಗೇಡಿ; ಅವಿವೇಕಿ.

ಕೋಜು (ನಾ). ಪತ್ತೆ ಹಚ್ಚುವುದು; ಶೋಧ; ತಪಾಸಣೆ.

ಕೋಟ (ನಾ). ೧. ಒಂದು ಜಾತಿಯ ಹಕ್ಕಿ. ೨. ವಕ್ರತೆ; ಡೊಂಕುತನ. ೩. ಗುಡಿಸಿಲು. ೪. ಕೋಟೆ. ೫. ಒಟ್ಟು ಮೊತ್ತದಲ್ಲಿ ವ್ಯಕ್ತಿ ಅಥವಾ ಸಂಘವು ಒದಗಿಸಲೇಬೇಕಾದ ಅಥವಾ ಪಡೆಯಲು ಹಕ್ಕುಳ್ಳ ಪಾಲು; ದೇಯಾಂಶ; ಹಸುಗೆ.

ಕೋಟರ (ನಾ). ೧. ಮರದ ಪೊಟರೆ; ಡೊಗರು. ೨. ಬಿಲ; ರಂಧ್ರ.

ಕೋಟಲೆ (ನಾ). ೧. ತೊಂದರೆ; ಕಾಟ. ೨. ಕೇಡು; ಹಿಂಸೆ. ೩. ಸಣ್ಣ ಜಾತಿಯ ಸಿಡುಬು; ಸೀತಾಳೆ. ~ಪ(ವ)ಡು = ತೊಂದರೆಗೆ ಒಳಗಾಗು.

ಕೋಟವಿ (ನಾ). ೧. ಬತ್ತಲೆಯಾಗಿರುವ ಹೆಂಗಸು. ೨. ದುರ್ಗಾದೇವಿ.

ಕೋಟಿ (ನಾ). ೧. ಕೊನೆ; ತುದಿ. ೨. ತರಗತಿ; ವರ್ಗ. ೩. ನೂರು ಲಕ್ಷ. ೪. ಅಸಂಖ್ಯವಾದದ್ದು; ಲೆಕ್ಕವಿಲ್ಲದ್ದು. ೫. ಉಗ್ರಾಣ; ಧಾನ್ಯಾಗಾರ. ೬. ಹಾಯಿಹಡಗು. ೭. ಆಕ್ಷೇಪಣೆ; ಮೂದಲಿಕೆ. ೮. ಮೂಲೆ; ಕೋಣ. ೯. ಬಿಲ್ಲಿನ ತುದಿ; ಕೊಪ್ಪು. ೧೦. ಒಡವೆ; ಅಲಂಕಾರ. ~ಏ(ಯೇ)ಱು(ರಿ)ಸು = ೧. ಆಕ್ಷೇಪಿಸು; ಮೂದಲಿಸು. ೨. ವಾದವನ್ನು ಒಡ್ಡು. ~ಪತ್ರ = ೧. ದೋಣಿಯನ್ನು ನಡಸುವ ಹುಟ್ಟು. ೨. ಹಡಗಿನ ಮುಂಭಾಗ, – ಚೂಣಿ. ~ಪ್ರಮಿತ = ಕೋಟಿ ಸಂಖ್ಯೆಯ.

ಕೋಟಿಕ (ನಾ). ೧. ತುತ್ತತುದಿ; ಶಿಖರ. (ಗು). ೨. ತುತ್ತತುದಿಯ.

ಕೋಟಿನಾಳು (ನಾ). ಹುಟ್ಟಿದ ದಿನದ ವಿವರ ಮತ್ತು ಗ್ರಹಕುಂಡಲಿಯನ್ನು ಒಳಗೊಂಡ ಜಾತಕ ; ಜನ್ಮಕುಂಡಲಿ.

ಕೋಟಿಶ (ನಾ). (ಹೊಲಗದ್ದೆಗಳಲ್ಲಿ ಹೆಂಟೆಯನ್ನು ಒಡೆಯುವ) ಮರದ ಕೊಡತಿ.

ಕೋಟೀರ (ನಾ). ೧. ಕಿರೀಟ; ಮುಕುಟ. ೨. ಜಡೆ; ಮುಡಿ. ೩. ಕಿರೀಟದಲ್ಲಿರುವ ಮಣಿ ; ಮುಕುಟದ ಮಣಿ.

ಕೋಠಿ (ನಾ). ೧. ಪ್ರಶ್ನೆ; ಸವಾಲು. ೨. ವಸ್ತುಗಳನ್ನು ಕೂಡಿಡುವ ಸ್ಥಳ; ಉಗ್ರಾಣ.

ಕೋಡ (ನಾ). ೧. ಕೋತಿ; ಮಂಗ. ೨. ಕಾಡುಹಂದಿ; ಸೂಕರ. ೩. ಹಾಸ್ಯ ; ತಮಾಷೆ.

ಕೋಡ(ಂ)ಗಿ (ನಾ). ೧. ಬಯಲಾಟ, ನಾಟಕಗಳಲ್ಲಿ ಬರುವ ಹಾಸ್ಯಗಾರ; ವಿದೂಷಕ. ೨. ಅವಿವೇಕಿ.

ಕೋಡಗ (ನಾ). ಕೋತಿ; ಮಂಗ. ~ಕ(ಗ)ಟ್ಟು = ಬಿಗಿಯಾದ ಬಂಧನ.

ಕೋಡವಣಿಗ (ನಾ). ಸಾವಿರ ಕಾಲುಗಳುಳ್ಳ ಹುಳು ; ಜರಿ.

ಕೋಡಿ (ನಾ). ೧. ಕೆರೆಕಟ್ಟೆಗಳಿಂದ ಹೆಚ್ಚಿನ ನೀರು ಹರಿದುಹೋಗಲು ಮಾಡಿರುವ ದಾರಿ. ೨. ಹೊಳೆ; ಹೊನಲು. ೩. ಹುಟ್ಟು; ಉಗಮ. ೪. ಒಂದು ಕ್ಷುದ್ರ ದೇವತೆಯ ಹೆಸರು. ೫. ದೇವಾಲಯದ ಎದುರಿನ ಧ್ವಜಸ್ತಂಭಕ್ಕೇರಿಸುವ ಗರುಡಪಟ. ೬. (ದಿವಿಮ್ಮೆಯ ಅಥವಾ ಮರದ) ಒಂದು ಅಳತೆ. ೭. ತುದಿ; ಕೊನೆ. ೮. ಗುಂಪು; ಸಮೂಹ. ೯. = ಖೋಡಿ. ~ಕ(ಗ)ಟ್ಟು = ಕೋಡಿಯಾಗು; ಹೊಳೆಯಾಗು. ~ಪ(ವ)ರಿ = ೧. ಕೆರೆಯ ಹೆಚ್ಚಿನ ನೀರು ಕೋಡಿಯ ಮೂಲಕ ಹೊರಹೊಮ್ಮು. ೨. ತುಂಬಿತುಳುಕು; ಹೊರಚೆಲ್ಲು. ೩. ಮಿತಿಮೀರು. ~ಮನ = ಅಲ್ಪಬುದ್ಧಿ; ದುಷ್ಟ ಮನಸ್ಸು. ~ಹಬ್ಬ = ೧. ಕೆರೆಯು ಕೋಡಿ ಬಿದ್ದಾಗ ಮಾಡುವ ಹಬ್ಬ. ೨. ಗರುಡಗಂಬಕ್ಕೆ ಧ್ವಜವೇರಿಸಿ ನಡಸುವ ಹಬ್ಬ.

ಕೋಡು (ಕ್ರಿ). ೧. ಬಹಳ ತಂಪಾಗು ; ತಣ್ಣಗಾಗು. ೨. ಭಯಪಡು; ಬೆದರು. ೩. ಉಡುಗು; ಸೆಡೆ. ೪. ಚಳಿಯಿಂದ ನಡುಗು. (ನಾ). ೫. ತಂಪು; ಚಳಿ; ಶೈತ್ಯ. ೬. ಭಯ ; ಅಂಜಿಕೆ. ೭. ಕೊಂಬು. ೮. ಏಡಿ, ನಳ್ಳಿ ಮುಂತಾದುವುಗಳ ಕೊಂಡಿ. ೯. ಮರದ ಕೊಂಬೆ; ಟೊಂಗೆ. ೧೦. ಶಿಖರ; ಬೆಟ್ಟದ ತುದಿ. ೧೧. ಕೊಡುವಿಕೆ; ದಾನ. ೧೨. ಕೋಡಿ; ನೀರು ಹರಿಯುವ ಕಂಡಿ. ೧೩. ಆನೆಯ ದಂತ ; ಕೋರೆ. ~ಅಣಸು = ಕೊಂಬಿಗೆ ಅಳವಡಿಸುವ ಲೋಹದ ಗೊಣಸು. ~ಇಕ್ಕು = ಕೊಂಬಿನಿಂದ ಇರಿ; ತಿವಿ. ~ಇಡು = ೧. ಕೋಡಿಕ್ಕು. ೨. ಬಾಗು ; ಕೊಂಕಾಗು. ೩. ಹುರುಡಿಸು ; ಸ್ಪರ್ಧಿಸು. ~ಒಲೆ = ಜೋಡೊಲೆ ; ಕೂಡೊಲೆ. ~(ಂ)ಕ(ಗ)ಲ್ = ಬೆಟ್ಟದ ತುದಿಯ ಕಲ್ಲು; ಶಿಖರ. ~(ಂ)ತಳೆ = ಸುರುಟು; ಮುದುರು. ~ಕಾಯಿ = ಬೀಜ ಸುಲಿಯಲು ಬರುವ ಉದ್ದವಾದ ಕಾಯಿ. ~ಬಳೆ = ೧. ಕೋಡಣಸು. ೨. ಒಂದು ಬಗೆಯ ಕರಿದ ತಿಂಡಿ. ~ಸೇಡು = ಚಳಿಯಿಂದಾಗುವ ಸೆಡೆತ.

ಕೋಡೆ (ನಾ). ೧. ತಂಗಾಳಿ; ಪಡುವಣಗಾಳಿ. ೨. ಬೇಸಗೆಕಾಲ ; ಸೆಕೆಗಾಲ. ~ತಿರುನಾಳು = ಬೇಸಗೆಯಲ್ಲಿ ನಡೆಯುವ ಒಂದು ಉತ್ಸವ.

ಕೋಣ್ (ನಾ). ಎರಡು ದಿಕ್ಕುಗಳು ಸೇರುವ ಸ್ಥಳ; ಮೂಲೆ.

ಕೋಣ (ನಾ). ೧. ಮಹಿಷ. ೨. = ಕೋಣ್. ೩. ಚರ್ಮವಾದ್ಯಗಳನ್ನು ಬಾರಿಸುವ ಕೋಲು. ೪. ತಂತೀವಾದ್ಯಗಳನ್ನು ಬಾರಿ

ಸುವ ದಂಡ; ಕಮಾನು. ೫. ಕತ್ತಿಯ ಮೊನಚಾದ ಬಾಯಿ; ಅಸಿಧಾರೆ. ೬. ಕೋಲು; ಬಡಿಗೆ.

**ಕೋಣಪ** (ನಾ). ೧. ದಿಕ್ಪಾಲಕರಲ್ಲಿ ಒಬ್ಬ; ನಿರುತಿ. ೨. ರಾಕ್ಷಸ; ದೈತ್ಯ.

**ಕೋಣೆ** (ನಾ). ೧. ಹೂಜಿ; ದಾನಿ. ೨. ಕೊಠಡಿ; ಕಿರುಮನೆ. ೩. ಅಡುಗೆಮನೆ. ೪. = ಕೋಣ್.

**ಕೋತ** (ನಾ). ೧. ಒಂದು ದ್ರಾವಿಡಭಾಷೆ. ೨. ಕಡಮೆ ಮಾಡುವುದು; ಕಳೆಯುವಿಕೆ.

**ಕೋತಿ** (ನಾ). ಮಂಗ; ಕಪಿ.

**ಕೋತು** (ನಾ). ೧. ಉಳುವಿಕೆ; ಸಾಗುಮಾಡುವಿಕೆ. ೨. ಕರಾರುಮಾಡಿಕೊಳ್ಳುವಿಕೆ; ಒಪ್ಪಂದ.

**ಕೋದಂಡ** (ನಾ). ೧. ಶಾಲೆಯಲ್ಲಿ ತುಂಟ ಹುಡುಗರಿಗೆ ಹಿಂದೆ ವಿಧಿಸುತ್ತಿದ್ದ ಒಂದು ಬಗೆಯ ಶಿಕ್ಷೆ. ೨. ಬಿಲ್ಲು; ಧನುಸ್ಸು. ~ಪಂಡಿತ=ಬಿಲ್ಲುವಿದ್ಯೆಯನ್ನು ತಿಳಿದವನು.

**ಕೋದ್ರವ** (ನಾ). ಒಂದು ಬಗೆಯ ಧಾನ್ಯ; ಬರಗು; ಹಾರಕ.

**ಕೋನ** = ಕೋಣ್. ~ಶಿಲೆ = ಅಸ್ತಿಭಾರ; ಅಡಿಗಲ್ಲು.

**ಕೋನೇರಿ** (ನಾ). ಸುತ್ತಲೂ ಪಾವಟಿಗೆಗಳಿರುವ ಕೆರೆ; ಕಲ್ಯಾಣಿ.

**ಕೋಪ** (ನಾ). ಸಿಟ್ಟು; ಮುನಿಸು. ~ಆಟೋಪ = ಸಿಟ್ಟಿನ ಅಬ್ಬರ; ರೌದ್ರಾವೇಶ.

**ಕೋಪಿ** (ನಾ). ಸಿಟ್ಟುಗೊಂಡವನು; ರೋಷದಿಂದ ಕೂಡಿದವನು.

**ಕೋಪಿಷ್ಠ** = ಕೋಪಿ.

**ಕೋಪು** (ನಾ). ೧. ಹಾವಭಾವ. ೨. ಓರಣ; ವ್ಯವಸ್ಥೆ. ೩. ಸೈನ್ಯದ ಒಡ್ಡು, –ವ್ಯೂಹ. ೪. ಲಂಗೋಟಿ; ಕೌಪೀನ. ೫. ಬೇಟೆಯಲ್ಲಿ ಒಂದು ರೀತಿ.

**ಕೋಮಟ** (ನಾ). ವೈಶ್ಯ; ಸೆಟ್ಟಿ.

**ಕೋಮಲ(ಳ)** (ನಾ). ೧. ಮೆದುವಾಗಿರುವಿಕೆ; ಸುಕುಮಾರತೆ. ೨. ನೀರು; ಜಲ. ೩. ಎಳಗಾಯಿ; ಮಿಡಿ. (ಗು). ೪. ಮೆದುವಾದ; ಸುಕುಮಾರವಾದ. ೫. ಸುಂದರವಾದ; ಚೆಲುವಾದ. ೬. ಇಂಪಾದ; ಮಧುರವಾದ. ~ಇಸು = ಮೃದುವಾಗು; ನಳನಳಿಸು.

**ಕೋಮಲತೆ** (ನಾ). ೧. ಮೆದುವಾಗಿರುವಿಕೆ; ಮೃದುತ್ವ. ೨. ಚೆಲುವು; ಸೌಂದರ್ಯ.

**ಕೋಮಲತ್ವ** = ಕೋಮಲತೆ.

**ಕೋಮಲಾಂಗಿ** (ನಾ). ಸುಕುಮಾರವಾದ ಶರೀರ ಉಳ್ಳವಳು.

**ಕೋಮಲೆ(ಳೆ)** = ಕೋಮಲಾಂಗಿ.

**ಕೋಮು** (ನಾ). ಜಾತಿ; ಪಂಗಡ. ~ವಾರು = ಜಾತಿಗೆ ಸಂಬಂಧಿಸಿದ; ಜಾತೀಯ.

**ಕೋಯಂಡ** (ನಾ). ಬಿಲ್ಲು; ಧನುಸ್ಸು.

**ಕೋಯಷ್ಟಿ** (ನಾ). ಒಂದು ಜಾತಿಯ ಹಕ್ಕಿ; ಕೊಟ್ಟುಕ.

**ಕೋಯಿಲ್(ಲು)** (ನಾ). ದೇವಾಲಯ; ಗುಡಿ.

**ಕೋರ** (ನಾ). ೧. ಮಗ; ಕುವರ. ೨. ನುಣುಪಿಲ್ಲದ ಬಟ್ಟೆ; ದೊರಗು ಬಟ್ಟೆ. (ಪ್ರ). ೩. ಒಂದು ತದ್ಧಿತಪ್ರತ್ಯಯ.

**ಕೋರಕ** (ನಾ). ಮೊಗ್ಗು; ನನೆ.

**ಕೋರಕಿತ** (ಗು). ಮೊಗ್ಗು ಬಿಟ್ಟಿರುವ.

**ಕೋರಡಿ** (ನಾ). ೧. ಸಾರವಿಲ್ಲದಿರುವಿಕೆ; ನಿಸ್ಸಾರತೆ. ೨. ನಿರ್ಬಂಧ; ಅಡ್ಡಿ. ೩. ರಭಸ; ವೇಗ. ೪. ಉಪದ್ರವ; ಕೀಟಲೆ.

**ಕೋರಡಿಗ** (ನಾ). ೧. ಮೂರ್ಖ; ಅವಿವೇಕಿ. ೨. ದುಷ್ಟ; ಹಿಂಸಕ.

**ಕೋರಡಿಗೆ** (ನಾ). ನೇಗಿಲಿನ ಹಗ್ಗಕ್ಕೆ ತೊಡಿಸುವ ಮರದ ಸಾಧನ.

**ಕೋರಡೆ** (ನಾ). ಚಾವಟಿ; ಬಾರುಕೋಲು.

**ಕೋರಯಿಸು** (ಕ್ರಿ). ೧. ಅತಿ ಪ್ರಕಾಶದಿಂದ ಕಣ್ಣನ್ನು ಕುಕ್ಕು. ೨. ಹೆಮ್ಮೆದೋರು; ಅಟ್ಟಹಾಸ ಮಾಡು.

**ಕೋರಲು** (ನಾ). ಮುಡಿಪು ; ಬಲಿ.

**ಕೋರಾ** (ಗು). ೧. ಹೊಚ್ಚಹೊಸತಾದ ; ಆಗ ತಾನೆ ತಯಾರಿಸಿದ. ೨. ಮಡಿ ಮಾಡದ ; ಉಬ್ಬೆಗೆ ಹಾಕದ. ೩. ಏನೂ ಬರೆಯುದಿರುವ; ಖಾಲಿಯಾದ.

**ಕೋರಿ** ೧. = ಕೋಱು. ೨. ಮಗಳು ; ಕುವರಿ. ~ಕಾಗದ = ಒರಟು ಕಾಗದ ; ಕತ್ತೆ ಕಾಗದ. ~ಜವ್ವನ = ಹೊಸಪ್ರಾಯ; ನವಯೌವನ.

**ಕೋರಿಂದೆ** (ನಾ). ಸುವಾಸನೆಯುಳ್ಳ ಒಂದು ಜಾತಿಯ ಗಿಡ ; ಚಕ್ರವರ್ತಿಸೊಪ್ಪು.

**ಕೋರು** ೧. = ಕೋಱು. (ನಾ). ೨. ಜರಿ ; ಜರತಾರಿ. ~ಅನ್ನ = ಭಿಕ್ಷೆಯಾಗಿ ಹಾಕುವ ದವಸ ; ಧಾನ್ಯದ ಭಿಕ್ಷೆ.

**ಕೋರೆ** (ನಾ). ೧.ಓರೆ; ಡೊಂಕು. ೨.ಮೂಲೆ; ಕೊನೆ. ೩. ವಕ್ರಸ್ವಭಾವ ; ತುಂಟತನ. ೪. = ಕೋಱೆ. ೫. ಗಣಿಕೆ ಗಿಡ. (ಗು). ೬. ಬರಿದಾದ ; ಖಾಲಿ. ೭. ಓರೆಯಾದ ; ಸೊಟ್ಟಾದ. ~ತಿ(ದಿ)ಂಗಳ್=ವಕ್ರಚಂದ್ರ; ಬಾಲಚಂದ್ರ.

**ಕೋರೈಸು** = ಕೋರಯಿಸು.

**ಕೋಱ(ರಿ)** (ನಾ). ೧. ಹರಕುಬಟ್ಟೆ ; ಚಿಂದಿ. ೨. ಹರಕು ಕಂಬಳಿ ; ಕಂಬಳಿಯ ಚೂರು.

**ಕೋಱು(ರು)** (ಕ್ರಿ). ೧. ಬೇಡು ; ಕೇಳಿ ಕೊಳ್ಳು. (ನಾ). ೨. ಭೂಮಿಯ ಒಡೆಯ ನಿಗೆ ಸಲ್ಲುವ ಧಾನ್ಯದ ಅಂಶ ; ವಾರಪಾಲು. ೩. ಮಾಲಿಕ ಮತ್ತು ಸಾಗುವಳಿದಾರನ ನಡುವೆ ಒಪ್ಪಂದದ ಮೇಲೆ ಮಾಡುವ ಕೃಷಿ. ೪.= ಕೋರಾನ್ನ. ~ಇಕೆ = ೧. ಅಪೇಕ್ಷೆ ; ಬಯಕೆ. ೨. ಪ್ರಾರ್ಥನೆ ; ಬೇಡಿಕೆ.

**ಕೋಱೆ(ರೆ)** (ನಾ). ೧. ಆನೆಯ ದಂತ. ೨. ಪ್ರಾಣಿಗಳ ದವಡೆಯ ಮೊನಚಾದ ಹಲ್ಲು. (ಗು). ೩. ಹರಿತವಾದ; ಮೊನಚಾದ. ~ದಾಡೆ = ಕೋರೆ ಹಲ್ಲು ; ಚೂಪಾದ ಹಲ್ಲು. ~ಪ(ವ)ಲ್(ಲ್ಲು) = ಕೋಱೆ ದಾಡೆ.

**ಕೋರ್ಜಿ** (ನಾ). ಧಾನ್ಯದ ಒಂದು ಅಳತೆ ; ನಲವತ್ತೆರಡು ಮುಡಿ.

**ಕೋಲ್(ಲು)** (ನಾ). ೧. ದೊಣ್ಣೆ ; ಬಡಿಗೆ. ೨. ಬಾಣ ; ಸರಳು. ೩. ಅಳತೆಯ ಕಡ್ಡಿ. ೪. ಸೇರಿಸುವಿಕೆ ; ಕೂಡಿಸುವಿಕೆ. ೫. ತೆಪ್ಪ; ದೋಣಿ. (ಗು). ೬. ಉದ್ದವಾದ ; ನೀಳ ವಾದ. ~ಅಣ್ಣ = ಕೋಲನ್ನು ಕೈಯಲ್ಲಿ ಹಿಡಿದು ವಿದ್ಯೆಯನ್ನು ಕಲಿಸುವವನು; ಗುರು. ~ಆಟ = ೧. ಕೋಲುಗಳನ್ನು ಹಿಡಿದು ಮಾಡುವ ಸಾಮೂಹಿಕ ನೃತ್ಯ. ೨. ಯೋಧರು ಬಾಣಗಳ ಮೂಲಕ ಮಾಡುವ ವ್ಯಾಯಾಮ. ~ಕಾ(ಗಾ)ಱ(ರ) =ಕೋಲನ್ನು ಹಿಡಿದಿರುವವನು; ವೇತ್ರಧಾರಿ. ~ಜೇನು = ಮರದ ಕೊಂಬೆಯಲ್ಲಿ ಕಟ್ಟುವ ಜೇನು. ~ಮಲ್ಲಿಗೆ = ಮಲ್ಲಿಗೆಯಲ್ಲಿ ಒಂದು ಜಾತಿ ; ಸೂಜಿಮಲ್ಲಿಗೆ. ~ಪೊ(ಹೊ)ಯ್ಯು = ಹಾಡಿನ ತಾಳಕ್ಕನುಗುಣವಾಗಿ ಕೋಲು ಹಾಕು ; ಕೋಲಾಟವಾಡು.

**ಕೋಲ** (ನಾ). ೧. ಅಲಂಕಾರ ; ಶೃಂಗಾರ. ೨. ಭೂತಗಳಿಗೆ ಕೊಡುವ ಸೇವೆ, -ಹರಕೆ. ೩. ಭೂತದ ವೇಷಧಾರಿ ಮಾಡುವ ಕುಣಿತ; ಭೂತನರ್ತನ. ೪. ಸೋಗು ; ವೇಷ. ೫. ಮೆರವಣಿಗೆ. ೬.ಕಾಡುಹಂದಿ ; ವರಾಹ. ೭.ತೆಪ್ಪ ; ಹರಿಗೋಲು. ೮. ಬೋರೆಮರ ; ಎಲಚಿಮರ. ೯. ಕರಿಮೆಣಸು.

**ಕೋಲಣೆ** (ನಾ).ಒಂದುಜಾತಿಯ ಹೂವು; ಅಣ್ಣೆ ಹೂವು.

**ಕೋಲಾಕೋಲಿ** (ನಾ). ಕೋಲುಗಳಿಂದ ಮಾಡುವ ಯುದ್ಧ.

**ಕೋಲಾರ** (ಗು). ಕೆಳದರ್ಜೆಯ ; ಕೀಳು ಮಟ್ಟದ. ~ತಟ್ಟು = ಕೆಳದರ್ಜೆಯ ಸಣ್ಣ ತಳಿಯ ಕುದುರೆ ; ಟಾಕಣ.

**ಕೋಲಾ(ಳಾ)ಹಲ(ಳ)** (ನಾ). ೧. ಗಜಿಬಿಜಿ; ಕಲಕಲ; ಗಲಾಟೆ. ೨. ಬೊಬ್ಬೆ; ಪ್ರಲಾಪ. ೩. ಕಲಹ; ಕಾಳಗ. ~ಇಕೆ = ೧. ಗದ್ದಲ; ಗಲಾಟೆ. ೨. ಯುದ್ಧ; ಕಾಳಗ. ~ಇಸು = ೧. ಗದ್ದಲ ಮಾಡು. ೨. ಗಟ್ಟಿಯಾಗಿ ಎಲ್ಲೆಡೆಯೂ ಕೇಳಿಬರು. ೩. ಕೆಣಕು; ಕ್ಷೋಭೆಗೊಳಿಸು. ೪. ಪರಾಕ್ರಮವನ್ನು ತೋರು.

**ಕೋಲಿ** (ನಾ). ೧. ಕೊಯ್ಲಾದ ಮೇಲೆ ಉಳಿಯುವ ಪೈರಿನ ಭಾಗ; ಕೂಳೆ. ೨. ಎಲಚಿಮರ; ಬೋರೆಮರ.

**ಕೋಲೆ** (ನಾ). ಹಿಪ್ಪಲಿ.

**ಕೋಲೆಬಸವಣ್ಣ** (ನಾ). ಆಟವಾಡಿಸಲು ಅಲಂಕರಿಸಿದ ಎತ್ತು; ಕವಲೆತ್ತು; ಗಂಗೆತ್ತು.

**ಕೋವ** (ನಾ). ಮಡಕೆ ಮಾಡುವವನು; ಕುಂಬಾರ.

**ಕೋವಣ** (ನಾ). ಲಂಗೋಟಿ; ಕೌಪೀನ.

**ಕೋವಳ**(ನಾ). ಕೋಮಲತೆ; ಮೃದುವಾದುದು.

**ಕೋವಳೆ** (ನಾ). ಕನ್ನೈದಿಲೆ; ನೀಲೋತ್ಪಲ.

**ಕೋವಿ** (ನಾ). ೧. ಕೊಳವೆ; ಪಿಚಕಾರಿ. ೨. ಕೊಳಲು; ವೇಣು. ೩. ಊದುಗೊಳವಿ. ೪. ಗುಂಡು ಹಾರಿಸುವ ಸಾಧನ; ತುಪಾಕಿ.

**ಕೋವಿದ** (ನಾ). ವಿದ್ವಾಂಸ; ಪಂಡಿತ.

**ಕೋವಿದಾರ** (ನಾ). ಕಂಚುವಾಳದ ಗಿಡ; ಕೆಂಗಾಂಚಾಳದ ಗಿಡ.

**ಕೋವು** (ಕ್ರಿ). ೧. ಕೆಡವು; ಬೀಳಿಸು. (ನಾ). ೨. ಎರಡು ಗುಡ್ಡಗಳ ನಡುವಿನ ಇಕ್ಕಟ್ಟಾದ ಭೂಮಿ.

**ಕೋವೆ** (ನಾ). ೧. ಲೋಹಗಳನ್ನು ಕರಗಿಸುವ ಮೂಸೆ. ೨. ರಂಧ್ರ; ತೂತು. ೩. (ಉಗುರಿನ) ತುದಿ. ೪. ಕೆಂಪುಹಣ್ಣು ಬಿಡುವ ಒಂದು ಜಾತಿಯ ಬಳ್ಳಿ. ೫. ಆನುಪೂರ್ವಿ; ಪರಿಪಿಡಿ. ೬. ಮಕ್ಕಳ ಒಂದು ರೋಗ; ಅಗ್ನಿಮಾಂದ್ಯ. ೭. ನಾಯಿಕೆಮ್ಮು; ಕೋಡಗಕೆಮ್ಮು.

**ಕೋಶ** (ನಾ). ೧. ಆಯುಧಗಳನ್ನಿಡುವ ಚೀಲ; ಒರೆ. ೨. ರೇಶ್ಮೆಹುಳು ಮುಂತಾದ ಕೆಲವು ಕೀಟಗಳ ಆವರಣ, –ಗೂಡು. ೩. ಪಕ್ಷಿಗಳ ತತ್ತಿ; ಮೊಟ್ಟೆ. ೪. ಬೊಕ್ಕಸ; ಖಜಾನೆ. ೫. ತಾವರೆ ಹೂವಿನ ಒಳಗಿನ ಗೊಂಡೆ; ಕರ್ಣಿಕೆ. ೬. ವಸ್ತುಗಳನ್ನು ಮುಚ್ಚಿ ಭದ್ರಪಡಿಸುವ ಚೀಲ, ಕವಚ, ಪೆಟ್ಟಿಗೆ ಮುಂತಾದುವು. ೭. ಕೆಲವು ಪ್ರಾಣಿಗಳ ಗಡುಸಾದ ಹೊರಹೊದಿಕೆ; ಚಿಪ್ಪು. ೮. ನಿಘಂಟು. ೯. ವೃಷಣ. ೧೦. ಕಾವ್ಯಕ್ಕೆ ಸಂಬಂಧಿಸಿದ ಒಂದು ಬಗೆಯ ಮಾತಿನ ಜೋಡಣೆ. ~ಅಧ್ಯಕ್ಷ = ಖಜಾನೆಯ ಮುಖ್ಯಾಧಿಕಾರಿ; ಭಂಡಾರಿ. ~ಅವಸ್ಥೆ = ಸೊಳ್ಳೆ ಮುಂತಾದ ಜೀವಿಗಳು ತತ್ತಿಯ ಒಳಗೆ ಹುದುಗಿಕೊಂಡಿರುವ ಸ್ಥಿತಿ. ~ಗೃಹ = ಖಜಾನೆ; ಭಂಡಾರ.

**ಕೋಶಾತಕಿ** (ನಾ). ೧. ಪಡವಲ ಬಳ್ಳಿ ಮತ್ತು ಅದರ ಕಾಯಿ. ೨. ಹರಳುಗಿಡ; ಏರಂಡ. ೩. ವ್ಯಾಪಾರ. ೪. ವ್ಯಾಪಾರ ಮಾಡುವವನು; ವ್ಯಾಪಾರಿ. ೫. ಬಡಬಾಗ್ನಿ; ಬಾಡಬ.

**ಕೋಷ್ಟಕ** (ನಾ). ವಸ್ತುಗಳ ಪ್ರಮಾಣಗಳ ನಿರ್ಣಯವನ್ನೂ ಅವುಗಳ ಹೆಸರನ್ನೂ ತಿಳಿಸುವ ಪಟ್ಟಿಕೆ; ತಖ್ತೆ.

**ಕೋಷ್ಠ** (ನಾ). ೧. ಹೊಟ್ಟೆಯ ಒಳಭಾಗ. ೨. ಮನೆಯ ಒಳಕೊಠಡಿ; ಕೋಣೆ. ೩. ಪದರು; ಸ್ತರ. ೪. ತೊನ್ನು; ಕುಷ್ಠರೋಗ. ೫. ಸುತ್ತುಗೋಡೆ; ಪ್ರಾಕಾರ. ೬. ಉಗ್ರಾಣ. ~ಆಗಾರ = ಕಣಜ.

**ಕೋಸು** (ಕ್ರಿ). ೧. ದಾರವನ್ನು ಪೋಣಿಸು. (ನಾ). ೨. ಒರೆ; ಡೊಂಕು. ೩. ವಕ್ರಸ್ವಭಾವ. ೪. ತುದಿ; ಅಂಚು. ೫. ಮೂರು ಅಥವಾ ನಾಲ್ಕು ಮೈಲಿಗಳ ದೂರ; ಹರದಾರಿ. ೬. ಒಂದು ಬಗೆಯ ತರಕಾರಿ; ಕ್ಯಾಬೇಜು.

(ಗು). ೭. ವಕ್ರಸ್ವಭಾವದ. ~ಕ(ಗ)ಣ್ಣು = ಓರೆನೋಟದ ಕಣ್ಣು.

**ಕೋಸುಂಬರಿ** (ನಾ). ೧. ಹೆಸರು, ಕಡಲೆ ಇತ್ಯಾದಿ ಬೇಳೆಗಳಿಂದ ಮಾಡುವ ಒಂದು ತಿನಿಸು. ೨. ತರಕಾರಿಗಳಿಂದ ಮಾಡಿದ ಪಚ್ಚಡಿ.

**ಕೋಹಳೆ** (ನಾ). ೧. ಜಾನುವಾರುಗಳ ಕೊಂಬು ಮತ್ತು ಕೊಳಗುಗಳಿಗೆ ತೊಡಿಸುವ ಲೋಹದ ಕಟ್ಟು; ಅಣಸು. ೨. ಹೊದಿಕೆ; ಪರೆ. ೩. ಶಿಖರಾಕಾರದ ವಸ್ತುಗಳಿಗೆ ಅಳವಡಿಸುವ ಆಭರಣ.

**ಕೋಹು** (ನಾ). ೧. ಮೂಲೆ; ಸಂದು. ೨. ತುಂಡು; ಸೀಳು. ೩. ಹಳ್ಳ; ತಗ್ಗು. ೪. ಕೊಲ್ಲಿ; ಅಖಾತ. ೫. ಪೋಣಿಸುವಿಕೆ. ೬. ಸಾಲು; ಪಂಕ್ತಿ. ೭. ಪೆಟ್ಟು; ಇರಿತ.

**ಕೋಳ್(ಳು)** (ನಾ). ೧. ಹೊಡೆತ; ಪೆಟ್ಟು. ೨. ಲೂಟಿ; ಕೊಳ್ಳೆ. ೩. ಕೈಸೆರೆ; ಬಂಧನ. ೪. ಹಿಂಸ್ರಪ್ರಾಣಿ ಬೇಟೆಯಾಡುವ ಆಹಾರ. ೫. ಕಚ್ಚುವಿಕೆ; ಕಡಿತ. ೬. ಹಿಡಿತ; ವಶಪಡಿಸಿಕೊಳ್ಳುವುದು. ೭. ಪಕ್ಕ; ಪಾರ್ಶ್ವ. ~ಕು(ಗು)ದಿ = ೧. ಮಿತಿಮೀರಿದ ದುಃಖ. ೨. ಉದ್ರೇಕ. ~ದಾಂಟು = ದಾಪುಗಾಲಿನಿಂದ ನಡೆಯುವಿಕೆ. ~ಪಿ(ವಿ)ಡಿ = ೧. ಸೆರೆಹಿಡಿ; ಬಂಧಿಸು. ೨. ಮನಸ್ಸನ್ನು ಆಕರ್ಷಿಸು; ಸೆಳೆ. ~ಪೊ(ವೊ,ಹೊ)ೇಗು = ೧. ಸೂರೆ ಹೋಗು; ಲೂಟಿಯಾಗು. ೨. ವಶವಾಗು. ೩. ಬಲಿಯಾಗು; ತುತ್ತಾಗು. ೪. ನಾಶವಾಗು; ಹಾಳಾಗು. ~ಬಾ(ವಾ)ಯ್ = ೧. ಸೂರೆಗಾರರ ಮುಂಭಾಗ. ೨. ಕಾಲುವೆಗೆ ನೀರನ್ನು ಬಿಡುವ ಅಣೆಕಟ್ಟಿನ ಬಾಗಿಲಿನ ಪ್ರದೇಶ.

**ಕೋಳ** (ನಾ). ೧. ಬೇಡಿ; ಸಂಕೋಲೆ. ೨. ಕಾಲನ್ನು ಬಂಧಿಸುವ ಮರದ ಒಂದು ಉಪಕರಣ.

**ಕೋಳಸುಂದ** (ನಾ). ಕಾಡುನಾಯಿ; ಚೆನ್ನನಾಯಿ.

**ಕೋಳಿ** ೧. = ಕೋೞಿ. ೨. ಒಂದು ಜಾತಿಯ ಹೂವು ಬಿಡುವ ಗಿಡ; ಕೋಳಿಕುಟುಮನ ಗಿಡ. ~ಅಂಕ = ಕೋಳಿ ಕಾಳಗ; ಕೋಳಿ ಜೂಜು.

**ಕೋಳಿಕಾರ** (ನಾ). ಸಣ್ಣ ಜಾತಿಯ ಚಿರತೆ.

**ಕೋಳೆ** (ನಾ). ೧. ಕಣ್ಣಿನ ಮೂಲೆ; ಕಡೆಗಣ್ಣು. ೨. ಕಫ; ಶ್ಲೇಷ್ಮ.

**ಕೋೞ್(ಳ್)** (ನಾ). ೧. ಕೋಡು; ಕೊಂಬು. ೨. ತಂಪು; ಚಳಿ; ಶೈತ್ಯ. ~ಕುಟ್ಟು = ೧. ಕೊಂಬಿನಿಂದ ತಿವಿ; ಹಾಯು. ೨. ಅತಿಯಾದ ಭಯ. ~ಕೆ(ಗೆ)ಸಱ್(ರ್) = ತಂಪಾದ ಕೆಸರು. ~ಮಿಗ = ಮಾಂಸಾಹಾರಿ ಮೃಗ; ಕ್ರೂರಮೃಗ.

**ಕೋೞಿ(ಳಿ)** (ನಾ). ಹುಂಜ; ಕುಕ್ಕುಟ.



# ಕೌ

**ಕೌಂಕುೞ್(ಳ್)** = ಕವುಂಕುೞ್.

**ಕೌಂಗು** = ಕವುಂಗು.

**ಕೌಂಡಿನ್ಯ** (ನಾ). ೧. ಒಬ್ಬ ಋಷಿಯ ಹೆಸರು. ೨. ಒಂದು ಗೋತ್ರ.

**ಕೌಂತೇಯ** (ನಾ). ಕುಂತಿಯ ಮಗ.

**ಕೌಕ್ಷೇಯಕ** (ನಾ). ಕತ್ತಿ; ಖಡ್ಗ.

**ಕೌಟವಿ** (ನಾ). ನಗ್ನಳಾದ ಹೆಂಗಸು; ಕೋಟವಿ.

ಕೌಟಲ್ಯ (ನಾ). ೧. ಡೊಂಕಾಗಿರುವಿಕೆ; ಕೊಂಕು. ೨. ಕೊಂಕು ಸ್ವಭಾವ; ಅಪ್ರಮಾಣಿಕತನ. ೩. ಮೋಸಗಾರ; ಅಪ್ರಾಮಾಣಿಕ.

ಕೌಟುಂಬಿಕ (ನಾ). ೧. ಗೃಹಸ್ಥ; ಕುಟುಂಬದ ಯಜಮಾನ. (ಗು). ೨. ಕುಟುಂಬಕ್ಕೆ ಸಂಬಂಧಿಸಿದ. ~ವ್ಯವಹಾರ=ಕುಟುಂಬಕ್ಕೆ ಸೇರಿದ ವ್ಯವಹಾರ; ಮನೆವಾರ್ತೆ.

ಕೌಣಪ (ನಾ). ೧. ಹೆಣವನ್ನು ತಿಂದು ಜೀವಿಸುವವನು; ಪಿಶಾಚ. ೨. ಒಬ್ಬ ದಿಕ್ಪಾಲಕ; ನಿರುತಿ.

ಕೌತ (ನಾ). ೧. ಕುಂಟುನೆಪ. ೨. ಒಂದು ವಾದ್ಯವಿಶೇಷ.

ಕೌತುಕ (ನಾ). ೧. ಅತ್ಯಾಸಕ್ತಿ; ಕುತೂಹಲ. ೨. ಬಹಳ ಆಶ್ಚರ್ಯಕರವಾದ ಸಂಗತಿ. ೩. ಹಬ್ಬ; ಉತ್ಸವ. ೪. ಸಂತೋಷ; ಆನಂದ. ೫. ಆಟ; ಕ್ರೀಡೆ. (ಗು). ೬. ಆಶ್ಚರ್ಯವನ್ನುಂಟುಮಾಡುವ; ವಿಸ್ಮಯಕರವಾದ.

ಕೌತೂಹಲ(ಳ) (ನಾ). ೧. ಬಯಕೆ; ಆಸೆ. ೨. ಸೋಜಿಗ; ಆಶ್ಚರ್ಯ. ೩. ವಿಸ್ಮಯಜನಕವಾದ ವಿಷಯ. ೪. ಚಿಂತೆ; ಸಂಕಟ.

ಕೌಪ (ನಾ). ಲಂಗೋಟಿ; ಕೌಪೀನ.

ಕೌಪೀನ = ಕೌಪ.

ಕೌಪು = ಕೌಪ.

ಕೌಮಾರ (ನಾ). ೧. ಶೈಶವ. ೨. ಶೈಶವದಿಂದ ಹದಿನಾರು ವರ್ಷದೊಳಗಿನ ಪ್ರಾಯ; ಕನ್ಯೆ ಅಥವಾ ಕುಮಾರನ ಅವಸ್ಥೆ. (ಗು). ೩. ಬಾಲ್ಯಾವಸ್ಥೆಯ. ೪. ಕುಮಾರಸ್ವಾಮಿಗೆ ಸಂಬಂಧಿಸಿದ.

ಕೌಮಾರ್ಯ (ನಾ). ೧. ಬಾಲ್ಯ; ಎಳವೆ. ೨. ಮದುವೆಯಾಗದಿರುವಿಕೆ; ಕನ್ಯಾವಸ್ಥೆ.

ಕೌಮುದ (ನಾ). ೧. ನೈದಿಲೆಗಳ ಸಮೂಹ. (ಗು). ೨. ನೈದಿಲೆಗಳಿಗೆ ಸಂಬಂಧಿಸಿದ.

ಕೌಮುದಿ (ನಾ). ಬೆಳುದಿಂಗಳು.

ಕೌಮೋದಕಿ (ನಾ). ವಿಷ್ಣುವಿನ ಗದೆ.

ಕೌರವ ೧.=ಕೌರವ್ಯ. (ಗು). ೨. ಕುರುವಂಶಕ್ಕೆ ಸಂಬಂಧಿಸಿದ.

ಕೌರವ್ಯ (ನಾ). ಕುರುವಂಶದಲ್ಲಿ ಹುಟ್ಟಿದವನು. ~ಕೋಲಾಹಳ = ಕೌರವರಿಗೆ ತಳಮಳವನ್ನುಂಟುಮಾಡಿದವನು; ಭೀಮಸೇನ.

ಕೌಲಿಕ (ನಾ). ೧. ಸೋಗುಗಾರ. ೨. ವದಂತಿ; ಬೀದಿಮಾತು. (ಗು). ೩. ಕುಲಕ್ಕೆ ಸಂಬಂಧಿಸಿದ.

ಕೌಲು (ನಾ). ಒಪ್ಪಂದ; ಕರಾರು.

ಕೌಲೆ(ಳೆ)ಯ (ನಾ). ೧. ಬೇಟೆಯ ನಾಯಿ. (ಗು). ೨. ಉತ್ತಮಕುಲದಲ್ಲಿ ಹುಟ್ಟಿದ. ೩. ಕುಲಕ್ಕೆ ಸಂಬಂಧಿಸಿದ. ~ಕುಟುಂಬಿನಿ =(ಬೇಟೆಯ) ಹೆಣ್ಣುನಾಯಿ.

ಕೌಶಲ (ನಾ). ೧. ಜಾಣತನ; ಚದುರು. ೨. ಸುಖ; ಕ್ಷೇಮ.

ಕೌಶಲ್ಯ = ಕೌಶಲ.

ಕೌಶಿಕ (ನಾ). ೧. ಕುಶಿಕ ವಂಶದವನು; ವಿಶ್ವಾಮಿತ್ರ. ೨. ಗೂಬೆ; ಗೂಗೆ. ೩. ಇಂದ್ರ. ೪. ರೇಶ್ಮೆಬಟ್ಟೆ. ೫. ಚಂದ್ರ.

ಕೌಶಿಕೆ (ನಾ). ಕುಡಿಯುವ ಪಾತ್ರೆ; ಪಾನಪಾತ್ರೆ.

ಕೌಶೇಯ (ನಾ). ೧. ಕೋಶದಿಂದ ಬಂದದ್ದು; ರೇಶ್ಮೆಯ ನೂಲು. ೨. ರೇಶ್ಮೆಯ ಬಟ್ಟೆ; ಪೀತಾಂಬರ.

ಕೌಸುಂಭ (ನಾ). ೧. ಕುಸುಬೆ ಹೂವು. ೨. ಕುಸುಬೆ ಹೂವಿನ ಬಣ್ಣ; ರಕ್ತವರ್ಣ. (ಗು). ೩. ಕುಸುಬೆಗಿಡಕ್ಕೆ ಸಂಬಂಧಿಸಿದ. ~ಅಂಬರ=ಕೆಂಪು ಬಣ್ಣದ ಬಟ್ಟೆ.

ಕೌಸುಮ (ನಾ). ೧. ಹೂವು. ೨. ಜೇನುತುಪ್ಪ. (ಗು). ೩. ಹೂವಿಗೆ ಸಂಬಂಧಪಟ್ಟ. ~ತಾಲವೃಂತ =ಹೂವುಗಳಿಂದ ಮಾಡಿದ ಬೀಸಣಿಗೆ.

ಕೌಸ್ತುಭ (ನಾ). ವಿಷ್ಣುವಿನ ಎದೆಯನ್ನು ಅಲಂಕರಿಸಿರುವ ಒಂದು ರತ್ನ. ~ವಕ್ಷ =ಕೌಸ್ತುಭರತ್ನವನ್ನು ಧರಿಸಿದವನು; ವಿಷ್ಣು.

ಕೌಳಿಕ (ನಾ). ೧. ಕಟುಕ; ಕಸಾಯಿಗಾರ. ೨. ಮೋಸ; ವಂಚನೆ. ೩. ಮೋಸಗಾರ; ವಂಚಕ. ೪. = ಕೌಲಿಕ.

ಕ್ರಂದನ (ನಾ). ೧.ಕರೆ; ಆಹ್ವಾನ. ೨. ಅಳು; ರೋದನ.

ಕ್ರಕಚ (ನಾ). ಕರಗಸ; ಗರಗಸ.

ಕ್ರತು (ನಾ). ೧.ಯಾಗ; ಯಜ್ಞ. ೨.ಸಂಕಲ್ಪ; ನಿಶ್ಚಯ. ೩. ಧ್ಯೇಯ; ಉದ್ದೇಶ. ೪. ಪ್ರಜಾಪತಿಗಳಲ್ಲಿ ಒಬ್ಬ. ~ಪುರುಷ =ಯಜ್ಞಪುರುಷ; ವಿಷ್ಣು.

ಕ್ರಮ (ನಾ). ೧.ನಡೆ; ಮುಂದುವರಿಯುವಿಕೆ. ೨. ಹೆಜ್ಜೆ ಇಡುವಿಕೆ. ೩. ಅಡಿ; ಪಾದ. ೪.ಪಾಳಿ; ಸರದಿ. ೫.ಪರಂಪರೆಯಾಗಿ ಬಂದ ಪದವಿ. ೬. ರೀತಿ; ನಿಯಮ. ೭. ಕಾನೂನು ಬದ್ಧವಾಗಿ ಕೈಕೊಂಡ ಕಾರ್ಯವಿಧಾನ. ೮. ವೇದಮಂತ್ರವನ್ನು ಹೇಳುವ ರೀತಿಗಳಲ್ಲಿ ಒಂದು. ~ಅಧಿಕ=೧. ಒಳ್ಳೆಯ ನಡತೆಯಿಂದ ಶ್ರೇಷ್ಠನಾದವನು. ೨. ಹೆಚ್ಚು ಪಾದಗಳನ್ನು ಳ್ಳದ್ದು; ಆರಡಿ; ದುಂಬಿ.

ಕ್ರಮಣ (ನಾ). ಹೋಗುವಿಕೆ; ಮುಂದು ವರಿಯುವಿಕೆ.

ಕ್ರಮಿಸು (ಕ್ರಿ). ೧.ನಡೆ; ಸಾಗು. ೨.ದಾಟು; ದಾಟಿಹೋಗು.

ಕ್ರಮುಕ (ನಾ). ೧. ಅಡಕೆ. ೨.ಒಂದು ಜಾತಿಯ ಗಿಡ.

ಕ್ರಮೇಣ(ಅ). ಹಂತಹಂತವಾಗಿ; ಕ್ರಮವಾಗಿ.

ಕ್ರಮೇಲ(ಳ)ಕ (ನಾ). ಒಂಟೆ; ಉಷ್ಟ್ರ.

ಕ್ರಯ (ನಾ). ೧. ಬೆಲೆ ಕೊಟ್ಟು ಕೊಳ್ಳುವಿಕೆ. ೨.ಬೆಲೆ; ಕಿಮ್ಮತ್ತು. ~ಚೀಟು = ಮಾರಾಟ ವನ್ನು ಸ್ಥಿರಪಡಿಸುವ ಕರಾರುಪತ್ರ; ವಿಕ್ರಯಪತ್ರ.

ಕ್ರವ್ಯ (ನಾ). ಹಸಿಯ ಮಾಂಸ.

ಕ್ರವ್ಯಾದ (ನಾ). ೧. ರಾಕ್ಷಸ; ದೈತ್ಯ. ೨. ಮಾಂಸಾಹಾರಿಯಾದ ಪ್ರಾಣಿ.

ಕ್ರಾಂತ (ನಾ). ೧. ನಡೆಯುವುದು; ಹೆಜ್ಜೆ ಇಡುವುದು. (ಗು). ೨. ಹೋದ; ದಾಟಿದ. ~ದೃಷ್ಟಿ = ಅಗೋಚರವನ್ನು ಕಾಣುವ ದೃಷ್ಟಿ.

ಕ್ರಾಂತಿ (ನಾ). ೧. ಹೋಗುವಿಕೆ; ಕ್ರಮಣ. ೨. ಆಕ್ರಮಣ; ದಾಳಿ. ೩. ಗ್ರಹಗಳ ಗತಿ. ೪. ಆಂದೋಲನ; ವಿಪ್ಲವ.

ಕ್ರಾಂತಿಕಾರಿ (ನಾ). ೧. ಕ್ರಾಂತಿಯನ್ನುಂಟು ಮಾಡುವವನು. (ಗು). ೨.ವಿಪ್ಲವವನ್ನುಂಟು ಮಾಡುವ.

ಕ್ರಿಮಿ (ನಾ). ೧. ಹುಳು; ಕ್ಷುದ್ರಜಂತು. ೨. ಅರಗು; ಲಾಕ್ಷ. ~ನಾಶಕ = ೧.ಕ್ರಿಮಿ ಗಳನ್ನು ಕೊಲ್ಲುವ ಔಷಧ. ೨.ಕ್ರಿಮಿಗಳನ್ನು ಕೊಲ್ಲುವಂತಹ.

ಕ್ರಿಯಾತ್ಮಕ (ಗು). ೧. ಕಾರ್ಯರೂಪವಾಗಿ ರುವ. ೨.ಕ್ರಿಯಾಶೀಲವಾದ.

ಕ್ರಿಯಾಪದ (ನಾ). ವಾಕ್ಯದಲ್ಲಿ ಕ್ರಿಯೆ ಯನ್ನು ಸೂಚಿಸುವ ಪದ.

ಕ್ರಿಯಾರೂಪ (ನಾ). ೧. ವಾಸ್ತವವಾದುದು. ೨. ಕಟ್ಟುಪಾಡು; ವ್ಯವಸ್ಥೆ.

ಕ್ರಿಯಾಶಕ್ತಿ (ನಾ). ಕೆಲಸ ಮಾಡುವ ಶಕ್ತಿ; ಕಾರ್ಯಶಕ್ತಿ.

ಕ್ರಿಯೆ (ನಾ). ೧. ಕೆಲಸ; ಕಾರ್ಯ. ೨. ಆಚರಣೆ; ಕರ್ಮಾಚರಣೆ. ೩. ಕ್ರಿಯಾ ಪದ. ೪. ವ್ಯಾಕರಣದಲ್ಲಿ ಕ್ರಿಯಾಪದದಿಂದ ಸೂಚಿತವಾಗುವ ಕೆಲಸ. ೫. ಪ್ರಾಯಶ್ಚಿತ್ತ. ೬. ಉಪಕಾರಸ್ಮರಣೆ.

ಕ್ರಿಸ್ತ (ನಾ). ಕ್ರೈಸ್ತಮತಸ್ಥಾಪಕ; ಏಸು. ~ಪೂರ್ವ = ಕ್ರಿಸ್ತನು ಹುಟ್ಟುವುದಕ್ಕೆ ಮುಂಚಿನ. ~ಶಕ = ಕ್ರಿಸ್ತನು ಹುಟ್ಟಿದ ಕಾಲದಿಂದ ಆರಂಭವಾದ ವರ್ಷ.

ಕ್ರೀ = ಕ್ರಿಯೆ.

ಕ್ರೀಡಾಂಗಣ (ನಾ). ಆಟದ ಬಯಲು.

ಕ್ರೀಡಾಕುಳಿ (ನಾ). ಜಲಕ್ರೀಡೆಗಾಗಿ ಮಾಡಿದ ಕೊಳ; ಈಜುಗೊಳ.

ಕ್ರೀಡಾಪಟು (ನಾ). ಆಟದಲ್ಲಿ ನಿಪುಣ.

ಕ್ರೀಡೆ (ನಾ). ೧. ಆಟ; ವಿನೋದ. ೨. ಸಂಭೋಗ; ಮೈಥುನ. ~ಇಸು =೧. ಆಟವಾಡು. ೨. ಸಂಭೋಗ ಮಾಡು.

ಕ್ರೀತ (ಗು). ಬೆಲೆಗೆ ಕೊಂಡ; ಕ್ರಯಕ್ಕೆ ಪಡೆದ.

ಕ್ರುಂಚ (ನಾ). ಕ್ರೌಂಚಪಕ್ಷಿ.

ಕ್ರುದ್ಧ (ನಾ). ೧.ಕೋಪ; ಸಿಟ್ಟು. ೨.ರೇಗಿದವನು; ಕೋಪಗೊಂಡವನು. (ಗು). ೩. ರೇಗಿದ; ಮುನಿದ. ~ಮುದ್ರೆ = ಕೋಪದ ಭಂಗಿ.

ಕ್ರೂಜೆ (ನಾ). ೧. ಶಿಲುಬೆ. ೨. ಗೌರವ ಸೂಚಕ ಪದಕ.

ಕ್ರೂರ (ನಾ). ೧. ದಯೆಯಿಲ್ಲದವನು; ನಿರ್ದಯಿ. ೨. ಕಳ್ಳ; ತುಡುಗ. (ಗು). ೩. ನಿರ್ದಯವಾದ; ಕಠೋರಹೃದಯದ ~ಗ್ರಾಹ್ಯ = ಚಾಡಿಯ ಮಾತನ್ನು ಕೇಳುವವನು.

ಕ್ರೂರಿ (ನಾ). ದಯೆಯಿಲ್ಲದವನು; ನಿರ್ದಯಿ.

ಕ್ರೈಸ್ತ (ನಾ). ಕ್ರಿಸ್ತನ ಅನುಯಾಯಿ; ಕ್ರಿಶ್ಚಿಯನ್ ಮತದವನು.

ಕ್ರೋಡ (ನಾ). ೧.ಎದೆ; ವಕ್ಷಸ್ಥಳ. ೨.ಹಂದಿ; ವರಾಹ. ೩. ವರಾಹಾವತಾರಿಯಾದ ವಿಷ್ಣು. ೪.ಶನಿಗ್ರಹ. ೫.ಭೂಮಿಯನ್ನು ಹೊತ್ತಿರುವ ಎಂಟುಕುಲಸರ್ಪಗಳಲ್ಲಿ ಒಂದು. ~ಪತ್ರ =೧. ಗ್ರಂಥದಲ್ಲಿ ಪುಟಗಳು ಇಲ್ಲದ ಕಡೆ ಹೊಸದಾಗಿ ಬರೆದು ಸೇರಿಸಿದ ಪುಟ. ೨. ಅನುಬಂಧ.

ಕ್ರೋಡೀಕರಣ (ನಾ). ೧. ಅಪ್ಪುಗೆ; ಆಲಿಂಗನ. ೨.ಸಂಕ್ಷೇಪಿಸುವಿಕೆ; ಸಂಕ್ಷೇಪನ.

ಕ್ರೋಡೀಕರಿಸು (ಕ್ರಿ). ೧. ಆಲಿಂಗಿಸು; ಅಪ್ಪು. ೨. ಸಂಕ್ಷೇಪಿಸು; ಸಂಗ್ರಹಮಾಡು.

ಕ್ರೋಡೀಕೃತ (ಗು). ಒಟ್ಟುಗೂಡಿದ; ಸಂಗ್ರಹೀತ.

ಕ್ರೋಧ (ನಾ). ಸಿಟ್ಟು; ರೇಗು. ~ಅಂಧ =ಕೋಪದಿಂದ ಕುರುಡಾದವನು; ವಿವೇಕವನ್ನು ಕಳೆದುಕೊಂಡವನು.

ಕ್ರೋಧನ (ನಾ). ೧. ಸಿಟ್ಟು; ಕೋಪ. ೨.ಕೋಪಗೊಂಡವನು; ಕ್ರುದ್ಧನಾದವನು. ೩. ಅರುವತ್ತು ಸಂವತ್ಸರಗಳಲ್ಲಿ ಒಂದು. (ಗು). ೪. ಕೋಪಾವೇಶದ; ಮುನಿಸಿನ.

ಕ್ರೋಧಿ (ನಾ). ೧.ಅರುವತ್ತು ಸಂವತ್ಸರಗಳಲ್ಲಿ ಒಂದು. (ಗು). ೨. ರೇಗುವ ಸ್ವಭಾವದ.

ಕ್ರೋಧಿನಿ (ನಾ). ಆನೆಯ ಏಳು ಮದಾವಸ್ಥೆಗಳಲ್ಲಿ ಒಂದು.

ಕ್ರೋಶ (ನಾ). ೧. ಕೂಗುವಿಕೆ; ಕೂಗು. ೨. ದೂರವನ್ನು ಅಳೆಯುವ ಒಂದು ಪ್ರಮಾಣ; ಹರದಾರಿ. ೩. ದಿವ್ಯದಿಂದ ಮಾಡುವ ಪರೀಕ್ಷೆ.

ಕ್ರೋಷ್ಟು (ನಾ). ೧. ಕೂಗುವವನು. ೨.ನರಿ.

ಕ್ರೌಂಚ (ನಾ). ಕೊಂಚೆ; ನೀರುಕೊಕ್ಕರೆ.

ಕ್ರೌರ್ಯ (ನಾ). ಕ್ರೂರತನ; ನಿರ್ದಯತೆ.

ಕ್ಲಾಂತ (ಗು). ಬಳಲಿದ; ಆಯಾಸಗೊಂಡ.

ಕ್ಲಾಂತಿ (ನಾ). ದಣಿವು; ಬಳಲಿಕೆ.

ಕ್ಲಿನ್ನ (ನಾ). ೧. ತೇವ; ಒದ್ದೆ. (ಗು) ೨. ನೆನೆದ; ಒದ್ದೆಯಾದ.

ಕ್ಲಿಷ್ಟ (ನಾ). ೧. ತೊಂದರೆ; ಪೀಡೆ; ಕ್ಲೇಶ. (ಗು). ೨. ಕಷ್ಟವಾದ; ಕಠಿಣವಾದ.

ಕ್ಲೀಬ (ನಾ). ೧. ನಪುಂಸಕ; ಷಂಡ. ೨. ಹೇಡಿ; ಪುಕ್ಕ. ೩. ಲೋಭಿ; ಜಿಪುಣ. ೪. ಸೋಮಾರಿ.

ಕ್ಲುಪ್ತ (ಗು). ನಿಗದಿಯಾದ; ಗೊತ್ತುಪಡಿಸಿದ.

ಕ್ಲೇದನ (ನಾ). ತೇವಗೊಳಿಸುವಿಕೆ; ಒದ್ದೆ ಮಾಡುವಿಕೆ.

ಕ್ಲೇಶ (ನಾ). ದುಃಖ; ಸಂಕಟ; ನೋವು. ~ಅನುಬಂಧ = ದುಃಖಪರಂಪರೆ. ~ಸಹಿಷ್ಣು = ಕಷ್ಟವನ್ನು ತಾಳಿಕೊಳ್ಳುವವನು.

ಕ್ಲೇಶಿ (ನಾ). ೧. ತೊಂದರೆಯುಳ್ಳವನು; ಕಷ್ಟವುಳ್ಳವನು. ೨. ದುಃಖವನ್ನು ಉಂಟುಮಾಡುವವನು; ಹಿಂಸಕ.

ಕ್ಲೈಬ್ಯ (ನಾ). ನಪುಂಸಕತ್ವ; ಷಂಡತನ.

ಕ್ವಚಿತ (ಅ). ೧. ಎಲ್ಲಿಯಾದರೂ; ಅಪರೂಪವಾಗಿ. ೨. ರಹಸ್ಯವಾಗಿ; ಗುಟ್ಟಾಗಿ. ೩. ತೀರ ಕಡಮೆಯಾಗಿ; ಅತ್ಯಲ್ಪವಾಗಿ.

ಕ್ವಚಿತ್ತು = ಕ್ವಚಿತ.

ಕ್ವಣ (ನಾ). ಒಡವೆ, ವಾದ್ಯ ಮೊದಲಾದುವುಗಳ ಧ್ವನಿ.

ಕ್ವಣಿತ = ಕ್ವಣ.

ಕ್ವಥನ (ನಾ). ೧. ಬೇಯಿಸುವುದು. ೨. ಕುದಿತ; ಉಕ್ಕುವಿಕೆ.

ಕ್ಷಕಿರಣ (ನಾ). ಸಾಮಾನ್ಯ ಬೆಳಕಿನ ಕಿರಣ ತೂರದ ಪದಾರ್ಥವನ್ನು ಭೇದಿಸಿಕೊಂಡು ಹೋಗುವ ಒಂದು ವಿಶೇಷ ಕಿರಣ; ಎಕ್ಸ್‌ರೇ.

ಕ್ಷಣ (ನಾ). ೧. ಕಾಲದ ಒಂದು ಪ್ರಮಾಣ; ನಾಲ್ಕು ನಿಮಿಷಗಳ ಕಾಲ. ೨. ಹಬ್ಬ; ಉತ್ಸವ. ೩. ವಿರಾಮ; ಬಿಡುವು. ೪. ವೇಗ; ರಭಸ. ೫. ಆಮಂತ್ರಣ; ನಿಮಂತ್ರಣ. ೬. ಸರಿಯಾದ ಸಮಯ; ಯೋಗ್ಯಕಾಲ. (ಅ). ೭. ಕೂಡಲೆ; ತಕ್ಷಣ. ~ಭಂಗುರ = ಸ್ವಲ್ಪ ಕಾಲದಲ್ಲಿಯೇ ನಾಶವಾಗತಕ್ಕ; ಕ್ಷಣಿಕ. ~ರುಚಿ = ಕ್ಷಣಕಾಲ ಬೆಳಗಿ ಮಾಯವಾಗುವುದು; ಮಿಂಚು.

ಕ್ಷಣದಾಚರ (ನಾ). ರಾಕ್ಷಸ.

ಕ್ಷಣದೆ (ನಾ). ರಾತ್ರಿ; ಇರುಳು.

ಕ್ಷಣಿಕ (ಗು). ಅಶಾಶ್ವತವಾದ; ಕ್ಷಣಕಾಲ ಮಾತ್ರ ಇರುವ.

ಕ್ಷತ (ನಾ). ೧. ಗಾಯ; ಪೆಟ್ಟು. (ಗು). ೨. ಗಾಯವಾದ; ಏಟುಬಿದ್ದ. ~ವಿಕ್ಷತ = ಗಾಯಗಳಿಂದ ಜರ್ಝರಿತವಾದ.

ಕ್ಷತಿ (ನಾ). ೧. ನೋವು; ಗಾಯ. ೨. ಕೇಡು; ನಷ್ಟ.

ಕ್ಷತ್ರ ೧. = ಕ್ಷತ್ರಿಯ. ೨. ಕಷ್ಟಗಳು ಬಾರದಂತೆ ಕಾಪಾಡುವಿಕೆ. ~ಚಕ್ರ = ಕ್ಷತ್ರಿಯರ ಸಮೂಹ. ~ವೇದ = ಅಥರ್ವವೇದ.

ಕ್ಷತ್ರಿಯ (ನಾ). ನಾಲ್ಕು ವರ್ಣಗಳಲ್ಲಿ ಒಂದು ಮತ್ತು ಆ ವರ್ಣಕ್ಕೆ ಸೇರಿದವನು.

ಕ್ಷಪಣ (ನಾ). ೧. ಉಪವಾಸ. ೨. ಕ್ಷೀಣಗೊಳಿಸುವಿಕೆ; ನಾಶ. ೩. ಬೌದ್ಧಭಿಕ್ಷು. ೪. = ಕ್ಷಪಣಕ.

ಕ್ಷಪಣಕ (ನಾ). ಜೈನ ಸಂನ್ಯಾಸಿ; ಸವಣ.

ಕ್ಷಪಣೆ (ನಾ). ೧. ಇಲ್ಲದಿರುವಿಕೆ; ಅಭಾವ. ೨. ಕರ್ಮಕ್ಷಯ.

ಕ್ಷಪಾಕರ (ನಾ). ರಾತ್ರಿಯನ್ನು ಉಂಟುಮಾಡುವವನು; ಚಂದ್ರ.

ಕ್ಷಪಿತ (ಗು). ೧. ಕಳೆದ; ಬಿಸುಟ. ೨. ಕುಗ್ಗಿದ; ಸೊರಗಿದ. ೩. ನಾಶಮಾಡಲ್ಪಟ್ಟ.

ಕ್ಷಪಿಯಿಸು (ಕ್ರಿ). ೧. ಕುಗ್ಗಿಸು; ಕ್ಷೀಣಗೊಳಿಸು. ೨. ನಾಶಗೊಳಿಸು.

ಕ್ಷಪೆ (ನಾ). ೧. ಇರುಳು; ರಾತ್ರಿ. ೨. ಅರಿಸಿನ.

ಕ್ಷಮ (ನಾ). ೧. ಸಮರ್ಥನಾದವನು. (ಗು). ೨. ತಾಳ್ಮೆಯುಳ್ಳ; ಸೈರಣೆಯುಳ್ಳ. ೩. ಯೋಗ್ಯವಾದ.

ಕ್ಷಮತೆ (ನಾ). ೧. ಯೋಗ್ಯತೆ; ಅರ್ಹತೆ. ೨. ಶಕ್ತಿ; ಪರಾಕ್ರಮ.

ಕ್ಷಮಾಗುಣ (ನಾ). ತಾಳ್ಮೆ; ಸೈರಣೆ.

ಕ್ಷಮಾದಾನ (ನಾ). ತಪ್ಪನ್ನು ಕ್ಷಮಿಸುವುದು.

ಕ್ಷಮಾಪ (ನಾ). ಭೂಮಿಯನ್ನು ಪಾಲಿಸುವವನು; ಅರಸ.

ಕ್ಷಮಾಪಣೆ (ನಾ). ೧. ಕ್ಷಮೆಯನ್ನು ಯಾಚಿಸುವುದು. ೨. ಮನ್ನಿಸುವಿಕೆ; ಕ್ಷಮಿಸುವಿಕೆ.

ಕ್ಷಮಿಸು (ಕ್ರಿ). ಅಪರಾಧವನ್ನು ಮನ್ನಿಸು; ಕ್ಷಮೆಯನ್ನು ತೋರು.

ಕ್ಷಮೆ (ನಾ). ೧. ಇತರರ ತಪ್ಪನ್ನು ಮನ್ನಿಸುವ ಗುಣ; ಸೈರಣೆ; ತಾಳ್ಮೆ. ೨. ಭೂಮಿ; ನೆಲ. ~ಕೊ(ಗೊ)ಳ್ = ೧. ಸೈರಿಸು; ಕ್ಷಮಿಸು. ೨. ಕ್ಷಮಾಯಾಚನೆ ಮಾಡು.

ಕ್ಷಯ (ನಾ). ೧. ಕುಗ್ಗುವಿಕೆ; ಸೊರಗುವಿಕೆ. ೨. ನಾಶ; ಹಾಳಾಗುವಿಕೆ. ೩. ಒಂದು ಬಗೆಯ ಬೇನೆ. ೪. ಅರುವತ್ತು ಸಂವತ್ಸರಗಳಲ್ಲಿ ಒಂದು. ೫. ಮನೆ; ವಾಸಸ್ಥಳ. ೬. ಎರಡು ಸಂಕ್ರಮಣಗಳುಳ್ಳ ಒಂದು ಚಾಂದ್ರಮಾಸ. ~ವೃಜಿನ = ಪಾಪಗಳನ್ನು ನಾಶಮಾಡುವವನು.

ಕ್ಷರ (ಗು). ೧. ಕರಗಿಹೋಗುವ; ನಶ್ವರವಾದ. ೨. ಮಾರ್ಪಡುವ; ವಿಕಾರ ಹೊಂದತಕ್ಕ. ೩. ಪ್ರಾಕೃತಿಕವಾದ; ಪಂಚಭೂತಾತ್ಮಕವಾದ.

ಕ್ಷರಣೆ (ನಾ). ಸ್ರವಿಸುವುದು; ಸೋರುವುದು.

ಕ್ಷವಥು (ನಾ). ೧. ಸೀನು; ಸೀನುವಿಕೆ. ೨. ಕೆಮ್ಮಲು; ಕೆಮ್ಮು.

ಕ್ಷಳ (ನಾ). ಸಂಸ್ಕೃತದ ಲಕಾರಕ್ಕೆ ಪರ್ಯಾಯವಾಗಿ ಬರುವ ಕನ್ನಡದ ಳಕಾರ.

ಕ್ಷಾಂತಿ (ನಾ). ತಾಳ್ಮೆ; ಸೈರಣೆ; ಸಹನೆ.

ಕ್ಷಾತ್ರ (ನಾ). ೧. ಕ್ಷತ್ರಿಯರ ಕುಲ. ೨. ಕ್ಷತ್ರಿಯನ ತೇಜಸ್ಸು. ೩. ರಾಜ್ಯಪಾಲನೆ. (ಗು). ೪. ಕ್ಷತ್ರಿಯನಿಗೆ ಸೇರಿದ.

ಕ್ಷಾಮ (ನಾ). ೧. ಬರ; ಬರಗಾಲ. ೨. ತೆಳುಪು; ಕ್ಷೀಣವಾದುದು. (ಗು). ೩. ಸುಡಲ್ಪಟ್ಟ. ೪. ಬಡವಾದ; ಸೊರಗಿದ.

ಕ್ಷಾರ (ನಾ). ೧. ಉಪ್ಪು; ಲವಣ. ೨. ಉಗ್ರತೆ; ತೀಕ್ಷ್ಣತೆ. ೩. ಬೂದಿ; ಭಸ್ಮ. (ಗು). ೪. ಉಪ್ಪಾದ; ಉಪ್ಪಿನ ರುಚಿಯುಳ್ಳ. ೫. ಕಟುವಾದ; ತೀಕ್ಷ್ಣವಾದ.

ಕ್ಷಾಲನ (ನಾ). ತೊಳೆಯುವಿಕೆ.

ಕ್ಷಿತಿ (ನಾ). ೧. ಭೂಮಿ. ೨. ಸ್ಥಳ; ಪ್ರದೇಶ. ೩. ಕೇಡು; ನಾಶ.

ಕ್ಷಿತಿಜ (ನಾ). ೧. ಭೂಮಿಯಲ್ಲಿ ಹುಟ್ಟಿದುದು; ಮರ ಮುಂತಾದುವು. ೨. ಭೂಮಿಯನ್ನು ಮುಟ್ಟಿದಂತೆ ಕಾಣುವ ಆಕಾಶಭಾಗ; ದಿಗಂತ. ೩. ಮಂಗಳಗ್ರಹ; ಅಂಗಾರಕ.

ಕ್ಷಿತಿಜೆ (ನಾ). ಭೂಮಿಯ ಮಗಳು; ಸೀತೆ.

ಕ್ಷಿತಿಪ (ನಾ). ಭೂಮಿಯನ್ನು ರಕ್ಷಿಸುವವನು; ಅರಸ.

ಕ್ಷಿಪಣಿ (ನಾ). ದೂರದಿಂದ ನಿಯಂತ್ರಿಸಲ್ಪಡುವ ಸ್ಫೋಟಕವಾದ ಆಯುಧ.

ಕ್ಷಿಪ್ತ (ಗು). ೧. ಎಸೆಯಲ್ಪಟ್ಟ; ಬಿಸುಟ. ೨. ಹರಡಿದ; ವ್ಯಾಪಿಸಿದ.

ಕ್ಷಿಪ್ರ (ನಾ). ೧. ವೇಗ; ತ್ವರಿತ. (ಗು). ೨. ತ್ವರಿತವಾದ; ವೇಗವುಳ್ಳ.

ಕ್ಷೀಣ (ನಾ). ೧. ನಾಶ; ಕೇಡು. (ಗು). ೨. ಕುಗ್ಗಿದ; ಸೊರಗಿದ. ೩. ನಷ್ಟವಾದ; ನಾಶವಾದ. ೪. ಕೀಳಾದ; ಹೀನವಾದ. ~ಇಸು = ೧. ಸೊರಗು; ಕೃಶವಾಗು. ೨. ನಾಶವಾಗು; ಕ್ಷಯಿಸು. ೩. ದುರ್ಬಲಗೊಳಿಸು. ~ಧನ = ಬಡವ; ದರಿದ್ರ.

ಕ್ಷೀರ (ನಾ). ೧. ಹಾಲು. ೨. ಮರಗಿಡಗಳ ಹಾಲು. ೩. ನೀರು. ೪. ಮೋಡ.

ಕ್ಷುಣ್ಣ (ನಾ). ೧. ಶಾಸ್ತ್ರದಲ್ಲಿ ಪ್ರವೀಣನಾದವನು; ಪಂಡಿತ. (ಗು). ೨. ಮೆಟ್ಟಿದ; ತುಳಿಯಲ್ಪಟ್ಟ. ೩. ಹಿಸುಕಲ್ಪಟ್ಟ; ಮರ್ದಿಸಿದ. ೪. ನೋಯಿಸಲ್ಪಟ್ಟ; ಅಸಮಾಧಾನಗೊಂಡ. ೫. ಪಳಗಿದ; ಅಭ್ಯಾಸ ಮಾಡಿದ.

ಕ್ಷುತ್ತು (ನಾ). ಹಸಿವೆ.

ಕ್ಷುದ್ಬಾಧೆ (ನಾ). ಹಸಿವೆಯ ಸಂಕಟ.

ಕ್ಷುದ್ರ (ನಾ). ೧. ಚಾಡಿ; ಪಿಸುಣು. ೨. ಸಣ್ಣತನ; ಅಲ್ಪತೆ. ೩. ದರಿದ್ರ; ಬಡವ. ೪. ಕೃಪಣ; ಲೋಭಿ. ೫. ಚಾಡಿಕೋರ.

(ಗು). ೬. ತೀರ ಚಿಕ್ಕದಾದ; ಅಲ್ಪವಾದ. ೭. ಕೀಳು ವರ್ಜೆಯ; ನೀಚವಾದ. ೮. ದುರಾಸೆಯುಳ್ಳ. ೯. ಕ್ರೂರವಾದ; ನಿರ್ದಯವಾದ.

ಕ್ಷುದ್ರೆ (ನಾ). ೧. ನಡತೆಗೆಟ್ಟವಳು; ಜಾರೆ. ೨. ನರ್ತಕಿ.

ಕ್ಷುಧೆ = ಕ್ಷುತ್ತು.

ಕ್ಷುಪ (ನಾ). ೧. ಪೊದೆ; ಕಂಟಿ. ೨. ಚಿಕ್ಕಚಿಕ್ಕ ರೆಂಬೆಗಳುಳ್ಳ ಮರ.

ಕ್ಷುಬ್ಧ (ಗು). ಕದಡಿದ; ಕ್ಷೋಭೆಗೊಂಡ.

ಕ್ಷುಭಿತ (ನಾ). ೧. ಕದಡು; ಕ್ಷೋಭೆ. (ಗು). ೨. = ಕ್ಷುಬ್ಧ. ೩. ಕನಲಿದ; ಅಸಮಾಧಾನಗೊಂಡ. ೪. ಕಳವಳಗೊಂಡ; ವ್ಯಾಕುಲವಾದ. ೫. ಬಿರುಸಾದ; ಕಠಿಣವಾದ. ೬. ಬೆದರಿದ.

ಕ್ಷುರ (ನಾ). ೧. ಕ್ಷೌರ ಮಾಡುವ ಸಣ್ಣ ಕತ್ತಿ; ಚೂರಿ. ೨. ಗೊರಸು; ಕೊಳಗು.

ಕ್ಷುರಿಕ (ನಾ). ಚೂರಿ; ಸುರಿಗೆ; ಚಾಕು.

ಕ್ಷುರಿಕೆ = ಕ್ಷುರಿಕ.

ಕ್ಷುಲ್ಲಕ (ನಾ). ೧. ಕೀಳುಮನುಷ್ಯ; ಅಲ್ಪ. ೨. ದಡ್ಡ; ಮೂರ್ಖ. ೩. ಬೇಡ; ಶಬರ. (ಗು). ೪. ಚಿಕ್ಕದಾದ; ಕಿರಿಯ. ೫. ಕೀಳಾದ; ಹೀನ. ~ಭಾಷೆ = ಗ್ರಾಂಥಿಕ ರೂಪ ತಾಳದಿರುವ ಭಾಷೆ.

ಕ್ಷೇತ್ರ (ನಾ). ೧. ಹೊಲ; ಗದ್ದೆ. ೨. ಪ್ರದೇಶ. ೩. ಪುಣ್ಯಸ್ಥಳ; ಯಾತ್ರಾಸ್ಥಳ. ೪. ಹೆಂಡತಿ. ೫. ದೇಹ; ಶರೀರ.

ಕ್ಷೇತ್ರಜ್ಞ (ನಾ) ೧. ಆತ್ಮ. ೨. ಬಲ್ಲವನು; ಚತುರ.

ಕ್ಷೇತ್ರಪಾಲ (ನಾ). ೧. ಹೊಲ ಮುಂತಾದುವುಗಳನ್ನು ಕಾಯುವವನು. ೨. ಕ್ಷೇತ್ರವನ್ನು ರಕ್ಷಿಸುವ ಒಂದು ದೇವತೆ; ಭೈರವ.

ಕ್ಷೇಪ (ನಾ). ೧. ಎಸೆಯುವುದು; ಬಿಸುಡುವುದು. ೨. ನಿಂದಿಸುವುದು. ೩. ಕಳೆಯುವುದು.

ಕ್ಷೇಮ (ನಾ). ೧. ಮನೆ; ವಾಸಸ್ಥಳ. ೨. ನೆಮ್ಮದಿ; ಸುಖ. ೩. ಆರೋಗ್ಯ; ಸ್ವಾಸ್ಥ್ಯ. ೪. ಶುಭ; ಮಂಗಳ. ೫. ವಸ್ತುವನ್ನು ಕಾಯ್ದಿಟ್ಟುಕೊಳ್ಳುವುದು.

ಕ್ಷೇಮಂಕರ (ನಾ). ೧. ಹಿತವನ್ನುಂಟುಮಾಡುವವನು. (ಗು). ೨. ಕ್ಷೇಮವನ್ನುಂಟುಮಾಡುವ.

ಕ್ಷೇಮಕಾರಿ (ನಾ). ೧. ಮಂಗಳವನ್ನು ಸೂಚಿಸುವ ಪಕ್ಷಿ; ಗರುಡಪಕ್ಷಿ. ೨. = ಕ್ಷೇಮಂಕರ.

ಕ್ಷೋಣಿ (ನಾ). ೧. ನೆಲ; ಭೂಮಿ. ೨. ಲೋಕದ ಜನ. ೩. ಹದಿನೇಳು ಅಂಕಿಗಳನ್ನುಳ್ಳ ಒಂದು ಸಂಖ್ಯೆ.

ಕ್ಷೋಣೀಧ್ರ (ನಾ). ಬೆಟ್ಟ; ಪರ್ವತ.

ಕ್ಷೋದ (ನಾ). ೧. ಕುಟ್ಟುವುದು; ಪುಡಿಮಾಡುವುದು. ೨. ಪುಡಿ; ಹಿಟ್ಟು. ೩. ತಳಮಳ; ಕ್ಷೋಭೆ.

ಕ್ಷೋಭ (ನಾ). ೧. ಅಲುಗಾಟ; ಕುಲುಕಾಟ. ೨. ಕದಡುವಿಕೆ; ಅಲ್ಲೋಲಕಲ್ಲೋಲ. ೩. ಉದ್ವೇಗ; ಉದ್ವಿಗ್ನತೆ. ೪. ಕೋಪ; ಸಿಟ್ಟು. ೫. ಕಷ್ಟ; ವಿಪತ್ತು. ~ಇಸು = ೧. ಕಲಕಲ್ಪಡು; ಅಲ್ಲೋಲ ಕಲ್ಲೋಲವಾಗು. ೨. ರೇಗು; ಕೋಪಿಸು. ೩. ಉದ್ರೇಕಿಸು; ಸಿಟ್ಟಿಗೆಬ್ಬಿಸು.

ಕ್ಷೋಭೆ (ನಾ). ಅಶಾಂತಿ; ಗೊಂದಲ; ವಿಪ್ಲವ.

ಕ್ಷೌದ್ರ (ನಾ). ಜೇನುತುಪ್ಪ. ~ಪಟಲ(ಳ) = ಜೇನುಹುಟ್ಟು; ಜೇನುಗೂಡು.

ಕ್ಷೌಮ (ನಾ). ೧. ರೇಶ್ಮೆವಸ್ತ್ರ; ಪಟ್ಟೆವಸ್ತ್ರ. ೨. ನಾರಿನಿಂದ ಮಾಡಿದ ಬಟ್ಟೆ; ನಾರುಮಡಿ.

ಕ್ಷೌರ (ನಾ). ತಲೆಗೂದಲನ್ನು ಬೋಳಿಸುವುದು; ಕಷ್ಟ.

ಕ್ಷೌರಿಕ (ನಾ). ನಾಯಿಂದ; ನಾಪಿತ; ಕೆಲಸಿ.

ಕ್ಷ್ಮಾ (ನಾ). ಭೂಮಿ. ~ಅಚಲ(ಳ) = ಕ್ಷ್ಮಾಧರ.

ಕ್ಷ್ಮಾಜ (ನಾ). ೧. ಭೂಮಿಯಲ್ಲಿ ಹುಟ್ಟಿದುದು; ಮರ, ಗಿಡ ಮುಂತಾದುವು. ೨. ಮಂಗಳ ಗ್ರಹ.

ಕ್ಷ್ಮಾಧರ (ನಾ). ಬೆಟ್ಟ ; ಪರ್ವತ.

ಕ್ಷ್ಮಾಪ (ನಾ). ಭೂಮಿಯನ್ನು ರಕ್ಷಿಸುವವನು ; ಅರಸ.

ಕ್ಷ್ವೇಡ (ನಾ). ನಂಜು ; ವಿಷ.

ಕ್ಷ್ವೇಳ = ಕ್ಷ್ವೇಡ.



# ಖ

ಖ (ನಾ). ೧. ಕನ್ನಡ ವರ್ಣಮಾಲೆಯ ಇಪ್ಪತ್ತೆರಡನೆಯ ಅಕ್ಷರ. ೨. ಬಾನು ; ಆಕಾಶ. ೩. ಇಂದ್ರಿಯ. ೪. ಮನಸ್ಸು. ೫. ಬ್ರಹ್ಮ. ೬. ಸೊನ್ನೆ. ~ಚರ = ೧. ಪಕ್ಷಿ. ೨. ಸೂರ್ಯ. ೩. ಗಂಧರ್ವ. ೪. ಆಕಾಶದಲ್ಲಿ ಸಂಚರಿಸುವ; ಆಕಾಶಗಾಮಿಯಾದ. ~ಪ್ರವಾಹ = ದೇವನದಿ ; ಆಕಾಶಗಂಗೆ.

ಖಂಜ (ನಾ). ಕುಂಟ ; ಹೆಳವ.

ಖಂಜನ (ನಾ). ಒಂದು ಜಾತಿಯ ಹಕ್ಕಿ.

ಖಂಜರೀಟ = ಖಂಜನ.

ಖಂಡ (ನಾ). ೧. ತುಂಡು ; ಚೂರು. ೨. ಗುಂಪು ; ಸಮೂಹ. ೩. ಗ್ರಂಥದ ಅಧ್ಯಾಯ, -ಆಶ್ವಾಸ. ೪. ಅನೇಕ ದೇಶಗಳನ್ನೊಳಗೊಂಡ ದೊಡ್ಡ ಭೂಭಾಗ. ೫. ಮೂಳೆಯಿಲ್ಲದ ಮಾಂಸ. ~ಇಂದು = ಅರ್ಧಚಂದ್ರ ; ಕೋರೆಚಂದ್ರ. ~ಕಥೆ = ಗದ್ಯಕಥೆಗಳಲ್ಲಿ ಒಂದು ಪ್ರಕಾರ. ~ಪರಶು = ೧. ಪರಮೇಶ್ವರ. ೨. ಪರಶುರಾಮ. ೩. ವಿನಾಯಕ. ~ಭಂಡ = ಸರಕು; ಸಾಮಗ್ರಿ. ~ಲಡ್ಡುಗೆ = ಒಂದು ಬಗೆಯ ಸಿಹಿತಿಂಡಿ; ಮೋಹನಲಾಡು.

ಖಂಡಣೆ (ನಾ). ೧. ಒಡೆಯುವುದು ; ಮುರಿಯುವುದು. ೨. ಕಂಡರಣೆ ; ಕೆತ್ತುವಿಕೆ. ೩. ಕಪ್ಪಕಾಣಿಕೆ ; ಪೊಗದಿ. ೪. ಕಂದಾಯ ; ಗುತ್ತಿಗೆ.

ಖಂಡನ (ನಾ). ೧. ಒಡೆಯುವುದು; ಮುರಿಯುವುದು. ೨. ಆತಂಕಪಡಿಸುವುದು. ೩. ಇನ್ನೊಬ್ಬರ ಅಭಿಪ್ರಾಯವನ್ನು ಖಂಡಿಸುವುದು.

ಖಂಡನೀಯ (ಗು). ೧. ಕತ್ತರಿಸಲು ಶಕ್ಯವಾದ. ೨. ನಿರಾಕರಿಸಲು ಯೋಗ್ಯವಾದ.

ಖಂಡಿ (ನಾ). ಒಂದು ಬಗೆಯ ತೂಕ.

ಖಂಡಿಕೆ (ನಾ). ೧. ಬಟ್ಟಗಡಲೆ ; ಬಟಾಣಿ. ೨. ಶೇಂಗಾ ; ನೆಲಗಡಲೆ. ೩. ಕಡಲೆ ; ಚಣಕ. ೪. ವೇದ ಗ್ರಂಥವನ್ನು ಭಾಗಭಾಗವಾಗಿ ಓದುವುದು. ೫. ಗುರುವಿಗೆ ಕೊಡುವ ಸಂಭಾವನೆ.

ಖಂಡಿತ (ನಾ). ೧. ಅಸಮಗ್ರತೆ; ಅಸಂಪೂರ್ಣವಾದುದು. ೨. ಅಸಂಪೂರ್ಣನಾದವನು. (ಗು). ೩. ಒಡೆಯಲ್ಪಟ್ಟ ; ಕತ್ತರಿಸಿದ. ೪. ಪ್ರತಿಭಟಿಸಿದ ; ವಿರೋಧಿಸಲ್ಪಟ್ಟ. ೫. ನಾಶಮಾಡಲ್ಪಟ್ಟ; ಹಾಳಾದ. ೬. ನಿಶ್ಚಿತವಾದ. (ಅ). ೭. ನಿಶ್ಚಿತವಾಗಿ ; ನಿಜವಾಗಿ. ~ವಾದಿ = ೧. ನಿರ್ದಾಕ್ಷಿಣ್ಯವಾಗಿ ಮಾತನಾಡುವವನು. ೨. ರಾಜಕೀಯದಲ್ಲಿ ಉಗ್ರಗಾಮಿ.

ಖಂಡಿಸು (ಕ್ರಿ). ೧. ಕಡಿ; ಕತ್ತರಿಸು. ೨. ಹೋಗಲಾಡಿಸು; ಕಳೆ. ೩. ತಪ್ಪೆಂದು ಸಾಧಿಸು. ೪. ನಿಂದಿಸು; ಬಯ್ಯು.

ಖಂಡುಗ (ನಾ). ಒಂದು ಬಗೆಯ ಅಳತೆ.

ಖಂಡೆ (ನಾ). ಕತ್ತಿ; ಖಡ್ಗ.

ಖಂಡೆಯ ೧. = ಖಂಡೆ. ೨. ಕಂಡರಣೆ; ಕಡೆತ.

ಖಂಬೀರ (ನಾ). ೧. ಸಾಹಸಿ; ಧೈರ್ಯಶಾಲಿ. (ಗು). ೨. ಸಾಹಸಿಯಾದ.

ಖಗ (ನಾ). ೧. ಆಕಾಶದಲ್ಲಿ ಸಂಚರಿಸುವಂಥದು. ೨. ಹಕ್ಕಿ; ಪಕ್ಷಿ. ೩. ಬಾಣ. ೪. ದೇವತೆ. ೫. ಸೂರ್ಯ. ೬. ಆಕಾಶ. ~ಗಮನ = ೧. ಪಕ್ಷಿಗಳ ಸಂಚಾರ. ೨. ಪಕ್ಷಿಯ ಮೇಲೆ ಕುಳಿತು ಸಂಚರಿಸುವವನು; ವಿಷ್ಣು. ~ಪತಿ = ಪಕ್ಷಿಗಳ ರಾಜ; ಗರುಡ.

ಖಗೋಲ(ಳ) (ನಾ). ೧. ಗ್ರಹ ನಕ್ಷತ್ರಾದಿಗಳು. ೨. ಆಕಾಶದ ಪರಿಧಿ; ನಭೋಮಂಡಲ. ~ಶಾಸ್ತ್ರ = ಗ್ರಹ ನಕ್ಷತ್ರಾದಿಗಳಿಗೆ ಸಂಬಂಧಿಸಿದ ಶಾಸ್ತ್ರ.

ಖಚಿತ (ಗು). ೧. ಕೂಡಿಸಿದ; ಕುಂದಣಿಸಿದ. ೨. ಬೆರಸಿದ; ಮಿಶ್ರವಾದ. ೩. ನಿಶ್ಚಿತವಾದ; ಖಂಡಿತವಾದ.

ಖಜಕ (ನಾ). ೧. ಕಡೆಗೋಲು; ಮಂತು. ೨. ಮೇಲ್ಕಟ್ಟು; ವಿತಾನ.

ಖಜಾಂಚಿ (ನಾ). ಖಜಾನೆಯ ಅಧಿಕಾರಿ; ಭಂಡಾರಿ.

ಖಜಾನೆ (ನಾ). ಬೊಕ್ಕಸ; ತಿಜೋರಿ.

ಖಜೀಲ (ಗು). ೧. ಲಜ್ಜಿತ. ೨. ನೊಂದ.

ಖಟರಾ (ನಾ). ೧. ಎತ್ತಿನ ಬಂಡಿ; ಚಕ್ಕಡಿ. (ಗು). ೨. ಕೆಟ್ಟುಹೋದ; ನಿರುಪಯುಕ್ತ.

ಖಟಾಟೋಪ (ನಾ). ೧. ಸಾಹಸ; ಪ್ರಯತ್ನ. ೨. ಗಲಾಟೆ; ಗೊಂದಲ. ೩. ಆಡಂಬರ; ಡೌಲು.

ಖಟಪಿಟ (ನಾ). ಹೆಣಗಾಟ; ಪ್ರಯತ್ನ.

ಖಟ್ಟ (ಗು). ೧. ಬಲವಾದ; ಗಟ್ಟಿಯಾದ. ೨. ನೊಂದ; ನಿಷ್ಠುರವಾದ.

ಖಟ್ವ (ನಾ). ೧. ಮಂಚ; ಹೊರಸು. ೨. ಉಯ್ಯಾಲೆ; ಜೋಕಾಲಿ. ~ಅಂಗ = ೧. ಮಂಚ. ೨. ತುದಿಯಲ್ಲಿ ತಲೆ ಬುರುಡೆಯುಳ್ಳ ಶಿವನ ಗದೆ. ೩. ಒಂದು ಜಾತಿಯ ಮರ.

ಖಡಕು (ನಾ). ೧. ತೀವ್ರತೆ; ಉಗ್ರತೆ; ಕಠೋರ. ೨. ಸಡಗರ; ವೈಭವ. (ಗು). ೩. ತೀಕ್ಷ್ಣವಾದ; ಉಗ್ರವಾದ.

ಖಡಖೋಡು (ನಾ). ಬಲವಾಗಿರುವುದು; ಮಜಬೂತು.

ಖಡಾಖಂಡಿತ (ಗು). ನಿರ್ದಾಕ್ಷಿಣ್ಯವಾದ; ಸ್ಪಷ್ಟವಾದ.

ಖಡಾಖಡಿ (ಅ). ಖಂಡಿತವಾಗಿ; ಸ್ಪಷ್ಟವಾಗಿ.

ಖಡು (ನಾ). ಸೀಮೆಸುಣ್ಣ.

ಖಡ್ಗ (ನಾ). ೧. ಕತ್ತಿ; ಕರವಾಳ. ೨. =ಖಡ್ಗಮೃಗ. ~ಮೃಗ = ಮೂಗಿನ ಮೇಲೆ ಕೊಂಬುಳ್ಳ ಮೃಗ; ಗೇಂಡಾಮೃಗ.

ಖಡ್ಗಾಖಡ್ಗಿ (ನಾ). ಖಡ್ಗಗಳನ್ನು ಹಿಡಿದು ಮಾಡುವ ಯುದ್ಧ; ಕತ್ತಿಕಾಳೆಗ.

ಖಡ್ಗಿ = ಖಟ್ಗ.

ಖಡ್ಡ (ನಾ). ೧. ದಿಟ್ಟತನ. ೨. ತಿಳಿಗೇಡಿ; ಹೆಡ್ಡ.

ಖಣ ೧. = ಕಣ. ೨. ಸೆಳೆ; ಖಾನೆ.

ಖತ (ನಾ). ೧. ಕೈಬರಹ; ಬರವಣಿಗೆ. ೨. ಕಾಗದ. ೩. ಬರೆಯುವವನು; ಕರಣಿಕ.

ಖತಂ (ನಾ). ಮುಕ್ತಾಯ; ಸಮಾಪ್ತಿ.

ಖತಾಯತಿ (ನಾ). ದಾಖಲೆ; ನಮೂದು.

ಖತಿ (ನಾ). ೧. ರೇಗುವಿಕೆ; ಕೋಪ. ೨. ಅವಸರ; ಗಡಿಬಿಡಿ. ೩. ದುಃಖ; ಅಳಲು. ೪. ತುಕ್ಕು; ಜಂಗು. ~ಕೊ(ಗೊ)ಳ್ = ೧. ಕೋಪಗೊಳ್ಳು. ೨. ದುಃಖಿಸು; ನೊಂದುಕೊಳ್ಳು.

ಖದಿರ (ನಾ). ಕಗ್ಗಲಿಯ ಮರ ಮತ್ತು ಆ ಮರದ ಅಂಟು ; ಕಾಚು.

ಖದೀಮ (ನಾ). ನುರಿತವನು ; ಪ್ರಚಂಡ.

ಖದ್ದರ (ನಾ). ಕೈನೂಲಿನಿಂದ ನೆಯ್ದ ಬಟ್ಟೆ ; ಖಾದಿ.

ಖದ್ಯೋತ (ನಾ). ೧. ಸೂರ್ಯ. ೨. ಮಿಂಚು ಹುಳು ; ಮಿಣುಕುಹುಳು.

ಖನಕ (ನಾ). ೧. ಅಗೆಯುವಿಕೆ. ೨. ಗಣಿಯಲ್ಲಿ ಕೆಲಸ ಮಾಡುವವನು. ೩. ಕನ್ನ ಕೊರೆಯುವವನು. ೪. ಹೆಗ್ಗಣ.

ಖನನ (ನಾ). ೧. ಅಗೆಯುವಿಕೆ ; ತೋಡುವಿಕೆ. ೨. ಕನ್ನ ಕೊರೆಯುವುದು. ೩. ಹೆಣವನ್ನು ಹೂಳುವುದು.

ಖನಿ (ನಾ). ಗಣಿ; ಆಕರ; ನೆಲೆ.

ಖನಿಜ (ನಾ). ಗಣಿಯಲ್ಲಿ ಹುಟ್ಟಿದುದು ; ಚಿನ್ನ, ಬೆಳ್ಳಿ ಮೊದಲಾದುವು.

ಖನಿತ್ರ (ನಾ). ಗುದ್ದಲಿ ; ಪಿಕಾಸಿ.

ಖಪ (ನಾ). ೧. ಖರ್ಚು. ೨. ಮಾರಾಟ ; ವಿಕ್ರಯ.

ಖಪುರ (ನಾ). ೧. ಅಡಕೆ ಮರ. ೨. ಕೋಣ; ಮಹಿಷ. ೩. ಮುಖ. ೪. ಮರ ; ವೃಕ್ಷ. ೫. ಅವಮಾನ.

ಖಬರು (ನಾ). ಅರಿವು ; ಎಚ್ಚರಿಕೆ.

ಖಮಂಗ (ಗು). ಗಮಗಮಿಸುವ ; ಸುವಾಸನೆಯಿಂದ ಕೂಡಿದ.

ಖಯ (ನಾ). ೧. ಜಂಬ ; ಸೊಕ್ಕು. ೨. ಮೊಂಡುತನ; ಹಟಮಾರಿತನ. ~ಖೋಡಿ = ೧. ಅಳುಕು ; ಅಂಜಿಕೆ. ೨. ಸಂಕೋಚ; ಅನುಮಾನ. ೩. ಕೊರಗು ; ನೋವು. ೪. ಮೊಂಡುತನ; ಹಠ. ೫. ಕೊರತೆ ; ನ್ಯೂನತೆ.

ಖಯಾಲಿ (ನಾ). ೧. ಇಷ್ಟ ; ಮರ್ಜಿ ; ಲಹರಿ. ೨. ಆಸಕ್ತಿ ; ಮೋಹ. ೩. ವಿಚಾರ; ಯೋಚನೆ.

ಖರ (ನಾ). ೧. ಹೇಸರಗತ್ತೆ. ೨. ಕತ್ತೆ. ೩. ರಾಮನಿಂದ ಕೊಲ್ಲಲ್ಪಟ್ಟ ಒಬ್ಬ ರಾಕ್ಷಸನ ಹೆಸರು. ೪. ಅರುವತ್ತು ಸಂವತ್ಸರಗಳಲ್ಲಿ ಒಂದು. (ಗು). ೫. ಒರಟಾದ ; ಗಟ್ಟಿಯಾದ. ೬. ಹರಿತವಾದ ; ತೀಕ್ಷ್ಣವಾದ. ~ಕರ = ಉಗ್ರವಾದ ಕಿರಣಗಳನ್ನುಳ್ಳವನು ; ಸೂರ್ಯ. ~ದಂಡ = ೧. ತಾವರೆ. ೨. ಉಗ್ರಶಿಕ್ಷೆ

ಖರಾಬು = ಕರಾಬು.

ಖರಾಮತ್ತು = ಕರಾಮತಿ.

ಖರೀದಿ (ನಾ). ೧. ಬೆಲೆಕೊಟ್ಟು ಕೊಂಡುಕೊಳ್ಳುವಿಕೆ. ೨. ಬೆಲೆ; ಕ್ರಯ ; ಕಿಮ್ಮತ್ತು.

ಖರೆ = ಖರೆಯ.

ಖರೆಯ (ನಾ). ೧. ದಿಟವಾದುದು ; ಸತ್ಯ. ೨. ಮೇಲಾದವನು ; ಶ್ರೇಷ್ಠ.

ಖರೋಷ್ಠಿ (ನಾ). ಒಂದು ಬಗೆಯ ಲಿಪಿ.

ಖರ್ಚು (ನಾ). ವೆಚ್ಚ ; ವ್ಯಯ.

ಖರ್ಜೂರ (ನಾ). ೧. ಉತ್ತುತ್ತೆ ಮರ ಮತ್ತು ಅದರ ಹಣ್ಣು. ೨. ಬೆಳ್ಳಿ.

ಖರ್ಪರ ೧. = ಕರ್ಪರ. ೨. ಆಮೆಯ ಚಿಪ್ಪು. ೩. ಭಿಕ್ಷಾಪಾತ್ರೆ.

ಖರ್ವ (ನಾ). ೧. ಹದಿಮೂರು ಅಂಕಿಗಳಿರುವ ಒಂದು ಸಂಖ್ಯೆ. ೨. ಕುಬೇರನ ನವನಿಧಿಗಳಲ್ಲಿ ಒಂದು. (ಗು). ೩. ಮುರಿದ ; ಊನವಾದ. ೪. ಕುಳ್ಳ ; ಗಿಡ್ಡ.

ಖರ್ವಟ = ಖರ್ವಡ.

ಖರ್ವಡ (ನಾ). ನಗರ ಮತ್ತು ಹಳ್ಳಿಗಳ ಮಧ್ಯಸ್ಥಿತಿಯಲ್ಲಿದ್ದು, ಬೆಟ್ಟಗಳಿಂದ ಸುತ್ತಲ್ಪಟ್ಟ ಊರು.

ಖರ್ವಿತ (ಗು). ನುಗ್ಗಾದ ; ತುಳಿಯಲ್ಪಟ್ಟ.

ಖಲ(ಳ) (ನಾ). ೧. ಧಾನ್ಯವನ್ನು ಒಕ್ಕುವ ಜಾಗ ; ಕಣ. ೨. ಎಳ್ಳಿನ ಹಿಂಡಿ. ೩. ಯುದ್ಧ; ಕದನ. ೪. ಔಷಧಿ ಮುಂತಾದುವನ್ನು ಅರೆಯುವ ಸಾಧನ ; ಕಲಬತ್ತು. ೫. ನೀಚ;

ದುಷ್ಟ. ೬. ರಾಕ್ಷಸ; ದೈತ್ಯ. ~ನಾಯಕ = ಕಥೆ ಅಥವಾ ನಾಟಕದಲ್ಲಿ ನಾಯಕನಿಗೆ ಎದುರಾಗಿ ನಿಲ್ಲುವ ವ್ಯಕ್ತಿ. ~ನ್ಯಾಯ = ೧. ಕೀಳುನಡತೆ; ದುಷ್ಟವ್ಯವಹಾರ. ೨. ಸಂಗ್ರಹದ ರೀತಿ; ಸಂಚಯನ ಪದ್ಧತಿ.

**ಖಲತ್ತು** (ನಾ). ಉದ್ದನೆಯ ಅಂಗಿ; ನಿಲುವಂಗಿ.

**ಖಲನೆ** (ನಾ). ಪುಡಿಮಾಡುವಿಕೆ; ಚೂರ್ಣಗೊಳಿಸುವಿಕೆ.

**ಖಲಿಂದರ** (ನಾ). ಮಹಮ್ಮದೀಯ ಬೈರಾಗಿ.

**ಖಲೀನ** (ನಾ). ೧. ಕಡಿವಾಣ. (ಗು). ೨. ಆಕಾಶದಲ್ಲಿ ಆಡಗಿರುವ.

**ಖಲೀಫ** (ನಾ). ೧. ಇಸ್ಲಾಂಧರ್ಮದ ಗುರು. ೨. ದೊರೆ; ರಾಜ.

**ಖಲ್ವ** (ನಾ). ಕಲಬತ್ತು.

**ಖಲ್ವಾಟ** (ನಾ). ಬೋಳುತಲೆ.

**ಖಡ್ಗ(ಳ್ಗ)** (ನಾ). ಕತ್ತಿ; ಖಡ್ಗ.

**ಖಡ್ಗಿ(ಳ್ಗಿ)** (ನಾ). ೧. ಕತ್ತಿಯನ್ನು ಹಿಡಿದವನು; ಖಡ್ಗಧಾರಿ. ೨. ಖಡ್ಗಮೃಗ; ಗೇಂಡಾಮೃಗ. ~ವೃಂದ = ೧. ಖಡ್ಗಧಾರಿಗಳ ಸಮೂಹ. ೨. ಗೇಂಡಾಮೃಗಗಳ ಗುಂಪು.

**ಖಾಕಿ** (ನಾ). ೧. ಮಾಸಲು ಬಣ್ಣದ ಬಟ್ಟೆ. (ಗು). ೨. ಮಾಸಲು ಬಣ್ಣದ; ಮಾಸಲು ಹಳದಿಯ.

**ಖಾಜಿ** = ಕಾಜಿ.

**ಖಾಡಾಖಾಡಿ** (ನಾ). ೧. ತುರುಸಿನ ಯುದ್ಧ; ದ್ವಂದ್ವಯುದ್ಧ. ೨. ಜೋರು; ಆವೇಶ. ೩. ಸ್ಪರ್ಧೆ; ಪೈಪೋಟಿ. ೪. ಗದಾಯುದ್ಧದಲ್ಲಿ ಒಂದು ವರಿಸೆ.

**ಖಾಣ** (ನಾ). ಮೇವು; ಪಶುಗಳ ಆಹಾರ.

**ಖಾತ** (ನಾ). ೧. ಅಗೆತ; ತೋಡಲ್ಪಟ್ಟದ್ದು. ೨. ಆಳ; ಗುಣ್ಣು. ೩. ಕೊಳ; ಪುಷ್ಕರಿಣಿ. (ಗು). ೪. ಆಗೆಯಲ್ಪಟ್ಟ; ತೋಡಿದ.

**ಖಾತರ್‌ಜಮೆ** (ನಾ). ನಂಬುಗೆ; ವಿಶ್ವಾಸ.

**ಖಾತರಿ** (ನಾ). ೧. ವಿಚಾರ; ಚರ್ಚೆ. ೨. ಭರವಸೆ. ೩. = ಖಾತರ್‌ಜಮೆ.

**ಖಾತೆ** (ನಾ). ೧. ಕಿರ್ದಿ ಪುಸ್ತಕದಲ್ಲಿ ನಮೂದಾಗಿರುವ ಜಮಾಖರ್ಚಿನ ಭಾಗ. ೨. ಲೆಕ್ಕದ ಪುಸ್ತಕ; ಖತಾವಣಿ. ೩. ಸರ್ಕಾರದ ಆಡಳಿತ ಭಾಗ, –ಇಲಾಖೆ. ೪. ಕೊಳ; ಪುಷ್ಕರಿಣಿ.

**ಖಾತೇವಾರ** (ಗು). ಬೇರೆ ಬೇರೆ ವರ್ಗಗಳಾಗಿ ವಿಂಗಡಿಸಿ ಬರೆದ; ವರ್ಗೀಕೃತವಾದ.

**ಖಾದಿ** = ಖದ್ದರ.

**ಖಾದ್ಯ** (ನಾ). ಅಗಿದು ತಿನ್ನಬೇಕಾದ ತಿಂಡಿ, –ತಿನಿಸು.

**ಖಾನ** ೧. = ಖಾಣ. ೨. ಊಟ; ಭೋಜನ. ೩. ಸರದಾರ; ಅಮೀರ.

**ಖಾನಾವಳಿ** (ನಾ). ದುಡ್ಡು ಪಡೆದುಕೊಂಡು ಊಟ ಹಾಕುವ ಸ್ಥಳ; ಹೊಟೇಲು.

**ಖಾನೆ** (ನಾ). ೧. ಮನೆ; ನಿವಾಸ. ೨. ಮೇಜು, ಕಪಾಟು ಮೊದಲಾದವುಗಳಲ್ಲಿ ಮಾಡಿದ ಚಿಕ್ಕಚಿಕ್ಕ ವಿಭಾಗ, –ಸೆಳೆ.

**ಖಾನೆಸುಮಾರಿ** (ನಾ). ಮನೆ, ದನಕರು ಮತ್ತು ಜನಗಳನ್ನು ಕ್ರಮವಾಗಿ ಎಣಿಕೆ ಮಾಡುವಿಕೆ.

**ಖಾಯಿಸು** (ನಾ). ಬಯಕೆ; ಆಸೆ.

**ಖಾರಿ** (ನಾ). ಕೊಲ್ಲಿ; ಅಖಾತ.

**ಖಾಲಸಾ** (ನಾ). ಸ್ವಾಧೀನ ಪಡಿಸಿಕೊಳ್ಳುವಿಕೆ; ಕಿತ್ತುಕೊಳ್ಳುವಿಕೆ.

**ಖಾಲಿ** (ನಾ). ೧. ಬರಿದು; ತೆರವಾದುದು. (ಗು). ೨. ನಿರರ್ಥಕವಾದ; ಹುರುಳಿಲ್ಲದ. ೩. ಉದ್ಯೋಗವಿಲ್ಲದ. ೪. ಬರಿದಾದ; ತೆರವಾದ.

**ಖಾವಂದ** (ನಾ). ಒಡೆಯ; ಸ್ವಾಮಿ.

**ಖಾಸಗಿ** (ಗು). ೧. ಸ್ವಂತದ; ಸ್ವಕೀಯವಾದ. ೨. ವೈಯಕ್ತಿಕವಾದ ಒಡೆತನವನ್ನುಳ್ಳ.

ಖಾಸಾ (ಗು). ೧. ತನ್ನದೇ ಆದ; ಸ್ವಂತ. ೨. ಪ್ರತ್ಯಕ್ಷ; ಖುದ್ದು. ೩. ಸ್ಪಷ್ಟ; ಖಚಿತ. ೪. ವಿಶಿಷ್ಟವಾದ; ವಿಶೇಷವಾದ.

ಖಿಜಮತ್ತು (ನಾ). ಸೇವೆ; ಚಾಕರಿ.

ಖಿನ್ನ (ನಾ). ೧. ಖೇದ; ವಿಷಾದ. (ಗು). ೨. ನೊಂದುಕೊಂಡ; ಖೇದಗೊಂಡ. ೩. ದಣಿದ; ಬಳಲಿದ.

ಖಿಲ (ನಾ). ೧. ಸಾಗು ಮಾಡದಿರುವ ಭೂಮಿ; ಬೀಳು ನೆಲ. ೨. ಹಾಳು; ನಾಶ. ೩. ಗ್ರಂಥಕ್ಕೆ ಪೂರಕವಾಗಿ ಸೇರಿಸಿದ ಭಾಗ; ಅನುಬಂಧ. ೪. ಉಳಿಮದು; ಶೇಷ. ೫. ಅವಕಾಶ; ತೆರವು. ೬. ಶೂನ್ಯ; ಖಾಲಿ.

ಖುದ್ದು (ಗು). ೧. ಸ್ವಂತ; ತನ್ನದೇ ಆದ. (ಅ). ೨. ಸ್ವತಃ; ತಾನಾಗಿ.

ಖುಬಿ (ನಾ). ೧. ಚೆಲುವು; ಸೊಗಸು. ೨. ಗುಟ್ಟು; ಮರ್ಮ.

ಖುರ (ನಾ). ಕುದುರೆ, ದನಕರು ಮುಂತಾದು ವುಗಳ ಕಾಲಿನ ಗೊರಸು; ಕೊಳಗು. ~ಆಹತಿ = ಗೊರಸಿನ ಏಟು, –ಹೊಡೆತ. ~ಪುಟ = ಖುರ.

ಖುರಳಿ (ನಾ). ೧. ಶಸ್ತ್ರಾಭ್ಯಾಸ. ೨. ಗರಡಿಮನೆ.

ಖುರಾಕು (ನಾ). ಪುಷ್ಟಿಕರವಾದ ಆಹಾರ.

ಖುಲಾಯಿಸು (ಕ್ರಿ). ತೆರೆ; ಬಿಚ್ಚು; ಅರಳು.

ಖುಲಾಸೆ (ನಾ). ೧. ಬಿಡುಗಡೆ; ಮುಕ್ತಿ. ೨. ತೆರವಾಗುವಿಕೆ; ಖಾಲಿ ಮಾಡುವಿಕೆ.

ಖುಲ್ಲ (ನಾ). ೧. ಕ್ಷುದ್ರತೆ; ನೀಚತನ. ೨. ನೀಚನಾದವನು. (ಗು). ೩. ಚಿಕ್ಕ; ಸಣ್ಣ; ಅಲ್ಪವಾದ.

ಖುಶಾಲಿ (ನಾ). ೧. ಹಿಗ್ಗು; ಸಂತೋಷ. ೨. ಬಕ್ಷೀಸು.

ಖುಶಿ = ಖುಶಾಲಿ.

ಖುಷಿ ೧. = ಖುಶಾಲಿ. ೨. ಇಷ್ಟ; ಮರ್ಜಿ. ೩. ವಿನೋದ; ಹಾಸ್ಯ. ~ಪಡಿಸು = ಸಂತೋಷಪಡಿಸು; ಪ್ರಸನ್ನಗೊಳಿಸು.

ಖೂನಿ (ನಾ). ೧. ಕೊಲೆ; ವಧೆ. ೨. ಕೊಲೆ ಮಾಡಿದವನು; ಕೊಲೆಗಾರ.

ಖೆಡ್ಡಾ = ಕೆಡ್ಡಾ.

ಖೇಚರ (ನಾ). ೧. ಆಕಾಶದಲ್ಲಿ ಸಂಚರಿಸುವವನು; ಗಂಧರ್ವ. ೨. ಪಕ್ಷಿ. ೩. ಸೂರ್ಯ ಮೊದಲಾದ ಗ್ರಹಗಳು.

ಖೇಚರಿ (ನಾ). ದೇವತಾ ಸ್ತ್ರೀ; ವಿದ್ಯಾಧರಿ.

ಖೇಟ (ನಾ). ೧. ಚಿಕ್ಕ ಹಳ್ಳಿ; ಗ್ರಾಮ. ೨. ಗುರಾಣಿ; ಹರಿಗೆ. ೩. ಕಫ; ಶ್ಲೇಷ್ಮ. ೪. ಬೇಟೆ. ೫. ನೀಚವಾದುದು. ೬. ಬೆಟ್ಟದ ತಪ್ಪಲು. ೭. ಪಕ್ಷಿ.

ಖೇಟಕ = ಖೇಟ.

ಖೇಡ (ನಾ). ೧. ಹಳ್ಳಿ; ಗ್ರಾಮ. ೨. ಹೆದರಿದವನು; ಭಯಗ್ರಸ್ಥ.

ಖೇಡನ (ನಾ). ಆಟ; ಲೀಲೆ.

ಖೇಡೆಯ (ನಾ). ಗುರಾಣಿ; ಅಡ್ಡಣ.

ಖೇದ (ನಾ). ೧. ಉಮ್ಮಳ; ದುಃಖ. ೨. ಬಳಲಿಕೆ; ಆಯಾಸ.

ಖೇಪೆ (ನಾ). ಸರದಿ; ಬಾರಿ.

ಖೇಯ (ನಾ). ಕಂದಕ; ಅಗಳ್ತೆ.

ಖೇಲ(ಳ) = ಖೇಡನ. ~ಗೋಷ್ಠಿ ೧. ಲೋಕಾಭಿರಾಮವಾದ ಮಾತುಕತೆ. ೨. ಆಟಪಾಟ; ವಿನೋದಗೋಷ್ಠಿ.

ಖೇಲ(ಳ)ನ ೧. = ಖೇಡನ. ೨. ಆಟದ ಸಾಮಾನು; ಆಟಿಗೆ.

ಖೋಜಾ (ನಾ). ಕೊಜ್ಜ; ನಪುಂಸಕ.

ಖೋಟಾ (ಗು). ೧. ಕೆಟ್ಟ; ಕ್ರೂರ. ೨. ನಿಜವಲ್ಲದ; ಕೃತ್ರಿಮವಾದ.

ಖೋಡ (ನಾ). ೧. ಕುಂಟ; ಹೆಳವ. ೨. ಮಲ್ಲಯುದ್ಧದಲ್ಲಿ ಒಂದು ವರಿಸೆ.

ಖೋಡಿ (ನಾ). ೧. ದುರುಳತನ; ಮೋಸ. ೨. ಕೆಟ್ಟವ್ಯಕ್ತಿ; ಕೆಡುಕ. ೩. ಕೊರತೆ; ನ್ಯೂನತೆ. ೪. ತಪ್ಪು; ಅಪರಾಧ. ೫. ಹಾನಿ; ಕೆಡುಕು. ೬. ಅನುಮಾನ; ಸಂಶಯ.

೭. ಬಡಪಾಯಿ ; ದರಿದ್ರ. (ಗು). ೮.ಕೆಟ್ಟ; ದುರುಳ. ~ಕ(ಗ)ಳೆ = ದೂರು; ದೂಷಿಸು.

ಖೋತ (ನಾ). ಕಡಮೆ ಮಾಡುವಿಕೆ ; ಕಡಿತ.

ಖೋಲಿ (ನಾ). ೧. ಬತ್ತಳಿಕೆ. ೨. ಕೋಣೆ; ಕೊಠಡಿ.

ಖೋವಾ (ನಾ). ಕಾಯಿಸಿ ಗಟ್ಟಿಗೊಳಿಸಿದ ಹಾಲು.

ಖ್ಯಾತ (ನಾ). ೧.ಪ್ರಸಿದ್ಧಿ ; ಖ್ಯಾತಿ. (ಗು). ೨.ಹೆಸರಾದ; ಪ್ರಸಿದ್ಧವಾದ. ~ಕರ್ಣಾಟಕ = ೧. ಪ್ರಸಿದ್ಧವಾದ ಕರ್ಣಾಟಕ ದೇಶ, -ಭಾಷೆ. ೨. ಕನ್ನಡದಲ್ಲಿ ಪ್ರಸಿದ್ಧವಾದ ಆರು ಸಂಸ್ಕೃತ ವೃತ್ತಗಳು.

ಖ್ಯಾತಿ (ನಾ). ೧. ಹೆಸರುವಾಸಿ; ಪ್ರಸಿದ್ಧಿ. ೨. ಹೊಗಳಿಕೆ; ಸ್ತುತಿ. ೩. ತೋರುವಿಕೆ; ಪ್ರಕಟವಾಗುವಿಕೆ. ೪. ವರದಿ; ನಿರೂಪಣೆ. ೫. ಅರ್ಹತೆ; ಮಾನ್ಯತೆ.



# ಗ

ಗ (ನಾ). ೧. ಕನ್ನಡ ವರ್ಣಮಾಲೆಯ ಇಪ್ಪತ್ತುಮೂರನೆಯ ಅಕ್ಷರ. (ಪ್ರ). ೨. ಒಂದು ತದ್ಧಿತಪ್ರತ್ಯಯ.

ಗಂಗಸಾಗರ(ನಾ). ಒಂದು ಬಗೆಯ ಸಾರಾಯಿ, -ಹೆಂಡ.

ಗಂಗಳ = ಗಂಗಾಳ.

ಗಂಗಾಧರ (ನಾ). ಗಂಗೆಯನ್ನು ಧರಿಸಿದವನು; ಶಿವ.

ಗಂಗಾಳ (ನಾ). ೧. ಅಗಲವಾದ ಮುಂಡನೆಯ ಲೋಹದ ಪಾತ್ರೆ. ೨. ತಟ್ಟೆ; ಊಟದ ಬಟ್ಟಲು. ~ಮುರಿಗೆ = ಒಂದು ಬಗೆಯ ಆಟ ; ಟೋಪಿಆಟ.

ಗಂಗೆ (ನಾ). ೧.ಕಂಠ; ಕೊರಳು. ೨.ಭಾರತದ ಒಂದು ಪ್ರಸಿದ್ಧ ನದಿ. ೩.ನೀರು ; ಉದಕ. ~ಎತ್ತು = ಬಗೆಬಗೆಯ ಆಟಗಳನ್ನು ಕಲಿಸಿ, ವೇಷ ತೊಡಿಸಿದ ಎತ್ತು ; ಕೋಲೆ ಬಸವ. ~ತೊ(ದೊ)ಗಲ್(ಲು) = ದನಗಳ ಕುತ್ತಿಗೆಯ ಕೆಳಗೆ ತೂಗುವ ಮೃದುವಾದ ಚರ್ಮ ; ಸಾಸ್ನೆ.

ಗಂಗೋದಕ (ನಾ). ೧.ಪವಿತ್ರವಾದ ನೀರು ; ಗಂಗಾಜಲ. ೨. ಕುಡಿಯುವ ನೀರು.

ಗಂಜ (ನಾ). ೧. ಕೋಶ ; ಖಜಾನೆ. ೨.ಗಣಿ; ಖನಿ. ೩. ಹೆಂಡದಂಗಡಿ ; ಮಡಖಾನೆ. ೪. ವ್ಯಾಪಾರದ ಸ್ಥಳ; ಮಾರುಕಟ್ಟೆ. ೫. ಕುತೂಹಲ.

ಗಂಜಣಿ (ನಾ). ೧. ಪೊದೆ; ಹೊದರು. ೨. ಒಂದು ಬಗೆಯ ಹುಲ್ಲು.

ಗಂಜಣಿಕೆ = ಗಂಜಣಿ.

ಗಂಜಲ(ಳ) (ನಾ). ೧.ದನಕರುಗಳ ಮೂತ್ರ. ೨. ಕೆಟ್ಟವಾಸನೆ ; ದುರ್ವಾಸನೆ.

ಗಂಜಾಲ (ನಾ). ಮೋಸ ; ವಂಚನೆ.

ಗಂಜಿ (ನಾ). ೧.ಅಕ್ಕಿ ಬೇಯಿಸಿ ತೆಗೆದ ದ್ರವ. ೨. ರವೆ, ಅಕ್ಕಿನುಚ್ಚು ಮುಂತಾದುವಕ್ಕೆ ಹಾಲು, ಸಕ್ಕರೆ ಹಾಕಿ ಮಾಡುವ ಪಾಯಸದಂಥ ದ್ರವಪದಾರ್ಥ. ೩. ಮಡಿಮಾಡುವಾಗ ಬಟ್ಟೆಗಳಿಗೆ ಹಾಕುವ ಪಿಷ್ಟ ಪದಾರ್ಥ. ೪. ತೆಂಗಿನ ಎಳಗಾಯಿಯಲ್ಲಿರುವ ತಿರುಳು ; ಬಂಬಲು.

ಗಂಜೀಫು (ನಾ). ವಿವಿಧಾಕಾರದ ಚಿತ್ರ ಹಾಗೂ ಸಂಖ್ಯೆಗಳಿಂದ ಕೂಡಿದ ಕಾಗದದೆಲೆಗಳ ಕಟ್ಟು ಹಾಗೂ ಅವುಗಳಿಂದ ಆಡುವ ಒಂದು ಆಟ.

ಗಂಜು (ನಾ). ೧. ಒಂದರೊಳಗೊಂದು ಅಡಕವಾಗುವ ಲೋಹದ ಪಾತ್ರೆ. ೨. ಮಾರುಕಟ್ಟೆ; ಬಜಾರು.

ಗಂಟಲ್(ಲು) (ನಾ). ೧. ಕೊರಳು; ಕುತ್ತಿಗೆ. ೨. ಧ್ವನಿ; ಕೊರಳ ನಾದ. ೩. ಗಂಟು ಗಂಟಾದುದು; ಕಗ್ಗಂಟು. ~ಕಟ್ಟು = ೧. ಕೊರಳ ಸೆರೆ ಬಿಗಿದು ಬರು. ೨. ಶೀತದಿಂದ ಧ್ವನಿ ಕೆಡು.

ಗಂಟಿ (ನಾ). ೧. ದನಕರು; ಜಾನುವಾರು. ೨. ಕಿವಿಯ ಒಂದು ಆಭರಣ.

ಗಂಟಿಗೆ = ಗಂಟಕೆ.

ಗಂಟು (ನಾ). ೧. ಕಬ್ಬು, ಜೋಳ ಮುಂತಾದುವುಗಳ ಕಣ್ಣು; ಗಿಣ್ಣು. ೨. ಕಟ್ಟು; ಕಂತೆ. ೩. ಗಡ್ಡೆ; ಗ್ರಂಥಿ. ೪. ಐಶ್ವರ್ಯ; ಸಂಪತ್ತು. ೫. ಪರಸ್ಪರ ಸಂಬಂಧ; ನಂಟು. ೬. ಸಮಸ್ಯೆ; ತೊಡಕು. ೭. ಎಲುಬಿನ ಕೀಲು. ~ಇಕೆ = ೧. ಗುಂಪು; ಸಮೂಹ. ೨. ಗಂಟು; ಹೊರೆ. ~ಇಕ್ಕು = ೧. ಗಂಟು ಹಾಕು; ಕಟ್ಟು. ೨. ಸಂಬಂಧವನ್ನು ಉಂಟುಮಾಡು. ೩. ಉಂಟಾಗು; ಒದಗು. ೪. ಮುಡುಪಾಗಿಡು; ಮೀಸಲು ಇರಿಸು. ೫. ತೊಡಕುಹಾಕು; ಅಡ್ಡಿಯಾಗು. ~ಒಡೆ = ೧. ಕುಡಿವೊಡೆ; ಚಿಗುರು. ೨. ಅರಳು; ವಿಕಾಸಿಸು. ~ಕ(ಗ)ಟ್ಟು = ೧. ಗಂಟಾಗು; ಮುದ್ದೆಯಾಗು. ೨. ಕೂಡಿಹಾಕು; ಸೇರಿಸು. ~ಕ(ಗ)ಳ್ಳ = ೧. ಗಂಟು ಇದ್ದರೂ ಇಲ್ಲದಂತೆ ನಟಿಸುವವನು. ೨. ತೆಗೆದುಕೊಂಡ ಹಣವನ್ನು ಹಿಂದಿರುಗಿಸದವನು. ೩. ಹಣವನ್ನು ಕದಿಯುವವನು. ~ಬೀಳು = ೧. ಗಂಟುಗಂಟಾಗು; ಗೋಜಾಗು. ೨. ಬೆನ್ನುಹತ್ತು; ಅಂಟಿಕೊಳ್ಳು. ೩. ಸಮನಾಗು; ಸರಿಯಾಗು. ~ಬೇನೆ = ಜ್ವರ ಬಂದು ಗಂಟು ಏಳುವ ರೋಗ; ಪ್ಲೇಗು. ~ಹಾಕು = ೧. ಸೇರಿಸು; ಕೂಡಿಸು. ೨. ಸಂಬಂಧವನ್ನು ಉಂಟುಮಾಡು.

ಗಂಟೆ (ನಾ). ೧. ಗಡ್ಡೆ; ಗೆಡ್ಡೆ. ೨. ಬಾರಿಸುವ ಸಾಧನ; ಘಂಟೆ. ೩. ಕಾಲ; ಸಮಯ. ೪. ಒಂದು ತಾಸು; ಅರುವತ್ತು ನಿಮಿಷಗಳ ಕಾಲ. ೫. ಒಂದು ಜಾತಿಯ ಹೂವಿನ ಬಳ್ಳಿ.

ಗಂಡ (ನಾ). ೧. ಶೂರ; ವೀರ. ೨. ಪತಿ; ಒಡೆಯ. ೩. ಗಂಡಸು. ೪. ಕೆನ್ನೆ; ಕಪೋಲ. ೫. ಆನೆಯ ಗಂಡಸ್ಥಳ. ೬. ಕುರು; ಗುಳ್ಳೆ. ೭. ಗ್ರಹಗಳ ಪ್ರಭಾವದಿಂದ ಉಂಟಾಗುವ ರೋಗರುಜಿನಗಳು. ೮. ಆಪತ್ತು; ಅಪಾಯ. ~ಗರ್ವ = ವೀರೋಚಿತವಾದ ಸೊಕ್ಕು; ಅತಿಶಯವಾದ ಗರ್ವ. ~ಪೆಂಡಾರ = ಶ್ರೇಷ್ಠವೀರರ ಶೌರ್ಯ ಸೂಚಕವಾದ ಒಂದು ಬಿರುದು ಮತ್ತು ಆ ಬಿರುದನ್ನು ಸೂಚಿಸುವ ಎಡಗಾಲಿನ ಆಭರಣ. ~ಭೇರುಂಡ = ಎರಡು ತಲೆಗಳಿರುವ ಒಂದು ಕಾಲ್ಪನಿಕ ಪಕ್ಷಿ. ~ಮಾಲೆ = ಕತ್ತಿನ ಗ್ರಂಥಿಗಳಿಗೆ ಉಂಟಾಗುವ ರೋಗ.

ಗಂಡಕ (ನಾ). ಖಡ್ಗಮೃಗ; ಗೇಂಡಾಮೃಗ.

ಗಂಡಶೈಲ (ನಾ). ಬೆಟ್ಟದ ಮೇಲಿನಿಂದ ಜಾರಿ ಕೆಳಕ್ಕೆ ಬೀಳುವ ದೊಡ್ಡ ಬಂಡೆ.

ಗಂಡಸು (ನಾ). ೧. ಪುರುಷ. ೨. ವೀರ; ಶೂರ.

ಗಂಡಾಂತರ (ನಾ). ಹೆಚ್ಚಿನ ಅಪಾಯ; ದೊಡ್ಡ ವಿಪತ್ತು.

ಗಂಡಾಗುಂಡಿ (ನಾ). ೧. ದುಂಡಾವರ್ತಿ; ದುರುಳತನ. ೨. ಅವ್ಯವಸ್ಥೆ; ಅಕ್ರಮ.

ಗಂಡು (ನಾ). ೧. ಕೆಚ್ಚು; ಪರಾಕ್ರಮ. ೨. ಗಂಡಸು. ೩. ಶೂರ; ಪರಾಕ್ರಮಿ.

೪. ಮರಗಳ ಕೆಚ್ಚು, – ತಿರುಳು. ೫. ಬಲ ಭಾಗ; ದಕ್ಷಿಣಭಾಗ. ೬.ಯಶಸ್ವಿಯಾದುದು; ಫಲಪ್ರದ. ೭. ಮದುವೆಯ ವರ. ~ಅಡಕೆ = ಒರಟಾದ ಅಡಕೆ; ಗೋಟಡಕೆ. ~ಆಗು =೧. ಗಂಡುಮುಗುವಾಗು. ೨.ಧೈರ್ಯವನ್ನು ಪಡೆ. ೩. ಯಶಸ್ವಿಯಾಗು. ~ಇಗ = ಸಾಹಸಿ; ವೀರ. ~ಎಲೆ= ಮುತ್ತುಗದ ಎಲೆಯಲ್ಲಿ ಮಧ್ಯದ ದೊಡ್ಡ ಎಲೆ. ~ಕ(ಗ)ಚ್ಚೆ = ವೀರಗಚ್ಚೆ; ವೀರಗಾಸೆ. ~ಕ(ಗ)ರಟ= ತೆಂಗಿನಕಾಯಿಯಲ್ಲಿ ಕಣ್ಣುಗಳಿಲ್ಲದ ಚಿಪ್ಪಿನ ಭಾಗ. ~ಕ(ಗ)ರಣೆ =೧. ಕೆನೆಮೊಸರು. ೨. ದೊಡ್ಡ ತುತ್ತು. ~ಕ(ಗ)ಲಿ = ಅತ್ಯಂತ ಪರಾಕ್ರಮಿ. ~ಬೀರಿ = ಗಂಡಸಿನಂತೆ ವರ್ತಿಸುವವಳು; ಗಂಡುರಾಮೆ. ~ಮೆಟ್ಟು= ಪರಾಕ್ರಮಿಗಳ ಭೂಮಿ; ಕೆಚ್ಚಿನ ನೆಲ. ~ರಾಮೆ = ಗಂಡುಬೀರಿ.

ಗಂಡೂಪದ (ನಾ). ಎರೆಹುಳು; ಮಣ್ಣುಹುಳು.

ಗಂಡೂಷ(ನಾ). ೧. ಬಾಯಿ ಮುಕ್ಕುಳಿಸುವುದು. ೨. ಬಾಯಿ ಮುಕ್ಕುಳಿಸುವ ನೀರು.

ಗಂಡೋಲ (ನಾ). ೧. ಕವಳ; ಗ್ರಾಸ. ೨. ಹಸಿಯ ಬೆಲ್ಲ.

ಗಂಡೋಲಿ (ನಾ). ಕಡಜದ ಹುಳು; ಕಡಜೀರಿಗೆ.

ಗಂತವ್ಯ (ನಾ). ಸೇರಬೇಕಾದ ಸ್ಥಳ; ಗುರಿ.

ಗಂತಿ (ನಾ). ಗಡ್ಡೆ; ಗ್ರಂಥಿ.

ಗಂತು (ನಾ). ೧. ಹಾದಿ; ಮಾರ್ಗ. ೨. ಹಾದಿಹೋಕ; ಪಯಣಿಗ. ೩. ಸುಳಿದಾಟ; ಚಲನೆ.

ಗಂದರ (ನಾ). ಗಂಧರ್ವ; ದೇವತೆ.

ಗಂದವಣ (ನಾ). ಸುಗಂಧದ್ರವ್ಯಗಳನ್ನು ಮಾರುವ ಅಂಗಡಿ.

ಗಂದಿಗೆ (ನಾ). ೧. ಪರಿಮಳ ದ್ರವ್ಯ. ೨. ಒಂದು ಔಷಧ ದ್ರವ್ಯ; ಗ್ರಂದಿಗೆ.

ಗಂದೆ (ನಾ). ೧. ಬೊಬ್ಬೆ; ಗುಳ್ಳೆ. ೨. ಗಾಯ.

ಗಂಧ (ನಾ). ೧. ವಾಸನೆ. ೨. ಸುವಾಸನೆ; ಪರಿಮಳ. ೩. ಹಣೆಯ ಮೇಲೆ ಇಟ್ಟುಕೊಳ್ಳುವ ಶ್ರೀಗಂಧದ ಬೊಟ್ಟು. ೪. ಶ್ರೀಗಂಧದ ಮರ. ೫. ಸೊಕ್ಕು; ಮದ. ೬. ಅಲ್ಪಜ್ಞಾನ; ಸುಳಿವು. ೭. ಗಂಧಮಿಶ್ರಿತ ನೀರು. ~ಅಕ್ಷತೆ =೧. ಗಂಧ ಮತ್ತು ಅರಿಸಿನ ಬೆರಸಿದ ಅಕ್ಕಿಯ ಕಾಳು. ೨. ಮಂಗಳ ಪ್ರಸಂಗಗಳಲ್ಲಿ ಕೊಡುವ ಗಂಧ ಮತ್ತು ಅಕ್ಷತೆ. ೩. ಹಣೆಯ ಮೇಲೆ ಹಚ್ಚುವ ತಿಲಕ. ~ಗಜ = ಉತ್ತಮ ಜಾತಿಯ ಆನೆ. ~ಪ(ವ)ಟ್ಟಿಗೆ = ಕದ, ಮಣೆ ಮೊದಲಾದುವುಗಳ ಅಡ್ಡಪಟ್ಟಿ. ~ಪತ್ರ=೧. ಸುವಾಸನೆಯ ಪತ್ರ. ೨. ತುಳಸಿ, ಮರುಗ ಮೊದಲಾದ ಎಲೆಗಳು. ~ಶಾಲಿ(ಳಿ) = ಸುವಾಸನೆಯ ಬತ್ತ. ~ಸಾರ = ಚಂದನ. ~ಸಿಂಧುರ = ಗಂಧಗಜ.

ಗಂಧಕ (ನಾ). ಹಳದಿ ಬಣ್ಣದ ಒಂದು ರಾಸಾಯನಿಕ ವಸ್ತು.

ಗಂಧನ (ನಾ). ೧. ಸುವಾಸನೆ; ಪರಿಮಳ. ೨. ಪ್ರಕಟನೆ; ತಿಳಿಸುವಿಕೆ. ೩. ಸಂತೋಷ. ೪. ಅಳಿವು; ನಾಶ.

ಗಂಧರ್ವ (ನಾ). ೧. (ದೇವಲೋಕದ) ಸಂಗೀತಗಾರ. ೨. ಕುದುರೆ; ಅಶ್ವ. ೩. ದುಂಬಿ; ಭ್ರಮರ. ~ಗಾನ =೧. ಗಂಧರ್ವ ಗಾಯನ. ೨. ಮಧುರವಾದ ಗಾಯನ.

ಗಂಧವಣ ೧. = ಗಂದವಣ. ೨. ಸುಗಂಧ ದ್ರವ್ಯದ ಮಾಟೆ.

ಗಂಧವತಿ (ನಾ). ಗಂಧವನ್ನು ಉಳ್ಳುದು; ಭೂಮಿ.

ಗಂಧವಹ (ನಾ). ಗಂಧವನ್ನು ಹೊತ್ತುಕೊಂಡು ಹೋಗುವವನು; ಗಾಳಿ.

ಗಂಧವಾಹ ೧. = ಗಂಧವಹ. ೨. ಕಸ್ತೂರಿ ಮೃಗ.

ಗಂಪೆ (ನಾ). (ಕಸದ) ಬುಟ್ಟಿ; ಗೂಡೆ.

ಗಂಬೂರ (ನಾ). ಒಂದು ಸುಗಂಧವಸ್ತು; ಕರ್ಪೂರ.

ಗಂಭೀರ (ನಾ). ೧. ಆಳ; ಗಾಂಭೀರ್ಯ. (ಗು). ೨. ಆಳವಾದ; ಗಹನವಾದ. ೩. ಘನವಾದ; ಭವ್ಯವಾದ.

ಗಂಭೀರವೇದಿ (ನಾ). ಸೊಕ್ಕಿದ ಆನೆ; ಮದಿಸಿದ ಆನೆ.

ಗಂಹರ (ನಾ). ೧. ಗುಹೆ; ಗವಿ. ೨. ಕಾಡು; ಅರಣ್ಯ.

ಗಕ್ಕು (ನಾ). ಒಂದು ಜಾತಿಯ ಕೊಕ್ಕರೆ.

ಗಗನ (ನಾ). ೧. ಬಾನು; ಆಕಾಶ. ೨. ಸೊನ್ನೆ; ಶೂನ್ಯ. ~ಕುಂತಲ(ಳ) = ವ್ಯೋಮಕೇಶ; ಶಿವ. ~ಕುಸುಮ = ೧. ಆಕಾಶದಲ್ಲಿರುವ ಹೂವು. ೨. ಅಸಂಭವವಾದುದು; ಕಾಲ್ಪನಿಕ ಸಂಗತಿ. ~ಮಣಿ = ದಿನಮಣಿ; ಸೂರ್ಯ.

ಗಗ್ಗ (ನಾ). ೧. ಒಡ್ಡ; ಒರಟ. ೨. ಕೆಟ್ಟ ವಾಸನೆ; ಗಬ್ಬುನಾತ.

ಗಗ್ಗರ ೧. = ಗರ್ಗರ. ೨. ನಿಂತು ನಿಂತು ಮಾತನಾಡುವುದು; ಗದ್ಗದ. ~ಇಕೆ = ಗದ್ಗದಸ್ವರ. ~ದನಿ=ಕರ್ಕಶವಾದ ಧ್ವನಿ.

ಗಗ್ಗರಿ (ನಾ). ೧. ಕಂಭದ ಕೆಳಗಿರುವ ಪೀಠ. ೨. ಬಹಳ ನಿರಿಗೆಯುಳ್ಳ ಲಂಗ. ೩. ಕಾಲು ಕಡಗ; ಗರ್ಗರ.

ಗಚ್ಚರಿಸು (ಕ್ರಿ). ಅಗೆ; ತೋಡು.

ಗಚ್ಚು (ನಾ). ೧. ತುತ್ತು; ಕಬಳ. ೨. ನೆಲ, ಗೋಡೆ ಮೊದಲಾದುವುಗಳಿಗೆ ಹಾಕುವ ಗಾರೆ, –ಲೆಪ್ಪ. ೩. ಗಾರೆಯಿಂದ ಮಾಡಿದ ಮೇಲ್ಮಾಳಿಗೆ; ತಾರಸಿ. ೪. ಒಯ್ಯಾರ; ಜಂಬ. ~ಆಗು = ಪೂರ್ಣವಾಗು; ದಟ್ಟವಾಗು.

ಗಚ್ಛ (ನಾ). ೧. ಓಡಿಹೋಗುವಿಕೆ; ಪರಾರಿ. ೨. ಸಾವು; ಮರಣ.

ಗಜ (ನಾ). ೧. ಆನೆ; ಕರಿ. ೨. ಒಬ್ಬ ರಾಕ್ಷಸನ ಹೆಸರು. ೩. ದೊಡ್ಡದು; ಹಿರಿದು. ೪. ಮೂರು ಅಡಿ ಅಳತೆ. ೫. ಕಂಬಿ; ಸರಳು. ~ಕ(ಗ)ಡ್ಡಿ = ಅಳತೆಯ ಕಡ್ಡಿ; ಅಳತೆಗೋಲು. ~ಗಮನ = ೧. ಆನೆಯ ನಡಗೆ; ನಿಧಾನವಾದ ನಡೆ. ೨. ದೇವೇಂದ್ರ. ~ನಿಂಬೆ = ದೊಡ್ಡ ಜಾತಿಯ ನಿಂಬೆ. ~ಪತಿ = ೧. ಆನೆಗಳ ಒಡೆಯ; ಗಜೇಂದ್ರ. ೨. ಪಟ್ಟದ ಆನೆ. ೩. ಒಂದು ಬಗೆಯ ನಾಣ್ಯ. ~ಮುಖ = ೧. ಆನೆಯ ಮುಖ. ೨. ಆನೆಯಂತೆ ಮುಖವುಳ್ಳವನು; ಗಣಪತಿ. ~ರಗಳೆ = ಅಸಂಬದ್ಧವಾದ ಮಾತು. ~ಸ್ನಾನ = ಉಪಯೋಗವಿಲ್ಲದ ಕೆಲಸ.

ಗಜಕರ್ಣ (ನಾ). ೧. ಒಂದು ಬಗೆಯ ಚರ್ಮ ರೋಗ. ೨. ಕೆಂಪು ಹರಳು ಗಿಡ.

ಗಜಗಲಿಸು (ಕ್ರಿ). ೧. ಹೊಳೆ; ಪ್ರಕಾಶಿಸು. ೨. ಝೇಂಕರಿಸು.

ಗಜಬಜ (ನಾ). ೧. ಗದ್ದಲ; ಗಲಿಬಿಲಿ. ೨. ಅಸ್ತವ್ಯಸ್ತತೆ. ~ಇಸು = ೧. ಗದ್ದಲ ಮಾಡು; ಗಲಭೆ ಮಾಡು. ೨. ಗಲಾಟೆಯಿಂದ ತುಂಬು.

ಗಜಬಜೆ = ಗಜಬಜ.

ಗಜಮು (ನಾ). ತಲೆಕೆಳಗಾಗಿ ಇರುವುದು.

ಗಜಬು(ರು) (ಕ್ರಿ). ೧. ಬೆದರಿಸು; ಗದರಿಸು. ೨. ಗರ್ಜಿಸು; ಅರ್ಭಟಿಸು. (ನಾ). ೩. ಗದರಿಕೆ. ೪. ಗರ್ಜನೆ; ಅರ್ಭಟ.

ಗಜಾಲು (ನಾ). ೧. ಗದ್ದಲ; ಗಲಭೆ. ೨. ಕಾಡುಹರಟೆ; ಹಾಳುಹರಟೆ.

ಗಜಿಬಿಜಿ = ಗಜಬಜ.

ಗಜುಗ ೧. = ಗರ್ದುಗು. ೨. ಕಣ್ಣಿನಲ್ಲಿ ಬೆಳೆಯುವ ದುರ್ಮಾಂಸದ ಗ್ರಂಥಿ. ೩. ಗಜ್ಜುಗದ ಕಾಯಿಗಳಿಂದ ಆಡುವ ಒಂದು ಆಟ.

ಗಜೆ (ನಾ). ಗದೆ.

ಗಜ್ಜರಿ (ನಾ). ಕೆಂಪು ಮೂಲಂಗಿ ; ಕಜ್ಜರಿ.

ಗಜ್ಜು (ನಾ). ಪೆಟ್ಟು ; ಹೊಡೆತ.

ಗಜ್ಜುಗ = ಗಜುಗ.

ಗಟವಾಣಿ (ನಾ). ಗಟ್ಟಿಗಿತ್ತಿ ; ದಿಟ್ಟೆ ; ಧೈರ್ಯಸ್ಥೆ.

ಗಟಾರ (ನಾ). ಚರಂಡಿ ; ಮೋರಿ.

ಗಟಿಕೆ (ನಾ). ಗಟ್ಟಿಯಾಗಿರುವಿಕೆ ; ಘಟ್ಟಿ.

ಗಟ್ಟ (ನಾ). ೧. ಬೆಟ್ಟಗಳ ಸಾಲು ; ಪರ್ವತಾವಳಿ. ೨. ನದಿ, ಕೆರೆ ಮುಂತಾದುವುಗಳ ಮೆಟ್ಟಲಿರುವ ಸ್ಥಳ, -ಸೋಪಾನ ಮಾರ್ಗ.

ಗಟ್ಟಿ (ನಾ). ೧. ಗಡ್ಡೆ ಕಟ್ಟಿದುದು ; ಹೆಪ್ಪುಗಟ್ಟಿದುದು. ೨. ಬಿರುಸಾದುದು ; ಕಲ್ಲಿನಂತಾದುದು. ೩. ಸಾಮರ್ಥ್ಯ ; ಬಲ. ೪. ಲೋಹದ ತುಂಡು. ೫. ಸುಗಂಧ ದ್ರವ್ಯದ ಕರಣೆ. ೬. ಕಡ್ಡಿ ; ಕಾಂಡ. ೭. ದೃಢವಾದುದು ; ಖಂಡಿತ. ೮. ಬಿಗಿಯಾದುದು ; ಭದ್ರವಾದುದು. ~ಕುಳ = ೧. ಗಟ್ಟಿಗ ; ಆಢ್ಯ. ೨. ಹಣವಂತ. ~ಕೊ(ಗೊ)ಳ್(ಳ್ಳು) = ೧. ಗಟ್ಟಿಯಾಗು ; ಘನೀಭವಿಸು. ೨. ಸ್ಥಿರವಾಗಿ ನಿಲ್ಲು. ~ಮಗುಚ್ಚು(ಳ್ಚು) = ಗಂಧವನ್ನು ತೇಯು, -ಅರೆ. ~ಮುಟ್ಟು = ೧. ಬಲವಾದುದು. ೨. ನಿಶ್ಚಯವಾದುದು ; ದೃಢವಾದುದು. ೩. ದಷ್ಟಪುಷ್ಟವಾದ. ~ವಳ = ಗಂಧವನ್ನು ತೇಯುವವನು ; ಗಂಧಿಗ.

ಗಟ್ಟಿಗ (ನಾ). ೧. ಸಾಹಸಿ ; ಶೂರ. ೨. ಬಲ್ಲವನು ; ನಿಷ್ಣಾತ. ~ತನ = ೧. ಸಾಮರ್ಥ್ಯ; ಶೂರತನ. ೨. ಎದೆಗಾರಿಕೆ ; ಧೈರ್ಯ.

ಗಟ್ಟಿವಳ್ತಿ (ನಾ). ಗಂಧವನ್ನು ಅರೆಯುವವಳು.

ಗಟ್ಟು (ನಾ). ೧. ದಡ ; ತೀರ. (ಗು). ೨. ಬಹಳ ಕಠಿನವಾದ ; ಭಯಂಕರವಾದ.

ಗಡ (ನಾ). ೧. ಸಣ್ಣ ಕೋಟೆ, -ದುರ್ಗ. ೨.=ಗಡಂ. ~ಕು(ಗು)ಟ್ಟು = ಭಯಪಡು ; ಬೆದರು.

ಗಡಂ (ನಾ). ಸಂತೋಷ, ಆಶ್ಚರ್ಯ ಮುಂತಾದುವನ್ನು ಸೂಚಿಸುವ ಶಬ್ದ.

ಗಡಂಗ = ಗಡಂಗು.

ಗಡಂಗು (ನಾ). ೧. ದಾಸ್ತಾನು ಮಳಿಗೆ ; ಗೋದಾಮು. ೨. ಹೆಂಡದಂಗಡಿ ; ಪಡಖಾನೆ.

ಗಡಗಂಚಿ (ನಾ). ೧. ವಸ್ತುಗಳನ್ನಿಡಲು ಗೋಡೆಗೆ ಹೊಂದಿಸಿ ಮಾಡಿದ ಅಟ್ಟ ; ಬಡು. ೨. ನೀರಿನ ಪಾತ್ರೆ ಮುಂತಾದುವನ್ನು ಇಡುವ ನಾಲ್ಕು ಕಾಲುಗಳ ಮರದ ಅಡ್ಡಣಿಗೆ.

ಗಡಗಡೆ (ನಾ). ನೀರು ಸೇದಲು ಬಾವಿಯ ಅಡ್ಡಪಟ್ಟಿಗೆ ಹೊಂದಿಸಿದ ಗಾಲಿ.

ಗಡಚು = ಗಡುಸು. ~ಇಕ್ಕು = ಕಿವಿಗೆ ಕರ್ಕಶವಾಗು ; ಕಿವುಡುಗೊಳಿಸು.

ಗಡಣ (ನಾ). ೧. ಕೂಡಿಸುವಿಕೆ. ೨. ಸಮೂಹ; ರಾಶಿ. ೩. ಕೂಟ ; ಸಹವಾಸ. ~ಇಸು = ೧. ಗುಂಪಾಗು ; ಒಟ್ಟುಗೂಡು. ೨. ಸೇರಿಸು ; ಜೋಡಿಸು. ೩. ನೆರವೇರು ; ಘಟಿಸು. ೪. ಎಡೆಮಾಡು ; ಬಡಿಸು.

ಗಡಣೆ (ನಾ). ೧. ಮೇಳ ; ಗಾಯನಗೋಷ್ಠಿ ೨. ಕೂಡಿಸುವಿಕೆ. ೩. ಆಲೋಚನೆ; ಚಿಂತೆ.

ಗಡದ್ದು (ನಾ). ೧. ಸೊಂಪು ; ಭರ್ಜರಿ. (ಗು). ೨. ಆಳವಾದ ; ಗಾಢವಾದ. ೩. ಹೇರಳ ; ವಿಶೇಷ.

ಗಡನೆ (ಅ). ಒಡನೆ ; ಕೂಡಲೆ.

ಗಡಪಾರೆ (ನಾ). ದೊಡ್ಡ ಹಾರೆ.

ಗಡಪು = ಗಡಪ್ಪು.

ಗಡಪ್ಪು (ನಾ). ಇಲ್ಲದಂತೆ ಮಾಡುವಿಕೆ.

ಗಡಬಡ (ನಾ). ೧. ಅವಸರ ; ಆತುರ. ೨. ಗದ್ದಲ ; ಕೋಲಾಹಲ. ೩. ಗಾಬರಿ ; ದಿಗಿಲು.

ಗಡಬಡೆ (ನಾ). ಗೊಂದಲ ; ಗಡಿಬಿಡಿ.

ಗಡಬಾರೆ = ಗಡಪಾರೆ.

ಗಡವಮಂಚಿಕೆ (ನಾ). ೧. ನೀರಿನ ಪಾತ್ರೆ ಮುಂತಾದುವನ್ನು ಇಡುವ ನಾಲ್ಕು ಕಾಲು ಗಳ ಅಡ್ಡಣಿಗೆ; ಗಡಗಂಚಿ. ೨. ಹಾಸಿಗೆ ಮುಂತಾದುವನ್ನು ಇಡಲು ಮಾಡಿದ ಒಂದಡಿ ಎತ್ತರದ ಕಾಲುಮಂಚ.

ಗಡವ (ನಾ). ೧. ಗಂಡುಕೋತಿ. ೨. ಗಟ್ಟಿ; ಕಟ್ಟುಮಸ್ತಾದುದು.

ಗಡಸು = ಗಡುಸು.

ಗಡಪ (ನಾ). ಬಾಗಿಲ ಕೆಳಗಿನ ಭಾಗ; ಹೊಸ್ತಿಲು.

ಗಡಾರಿ = ಗಡಪಾರೆ.

ಗಡಾವಣೆ (ನಾ). ೧. ಬೊಬ್ಬೆ; ದೊಡ್ಡ ಧ್ವನಿ. ೨. ಸಡಗರ; ಕೋಲಾಹಲ.

ಗಡಿ (ನಾ). ೧. ಎಲ್ಲೆ; ಅಂಚು. ೨. ಆಶ್ರಯ; ಬೀಡು. ೩. ತಾಲ್ಲೂಕು. ೪. ಗಳಿಗೆ; ಇಪ್ಪತ್ತು ನಾಲ್ಕು ನಿಮಿಷಗಳ ಅವಧಿ. ೫. ಸಣ್ಣ ಕೋಟೆ. ೬. ಆಸಾಮಿ; ವ್ಯಕ್ತಿ. ೭. ಗುತ್ತಿಗೆ. ~ಕಲ್ಲು = ಸೀಮೆಗಲ್ಲು; ಬಾಂದುಕಲ್ಲು. ~ಪಾರು = ದೇಶದಿಂದ ಹೊರಗೆ ಹಾಕುವುದು.

ಗಡಿಂಬ (ನಾ). ಭೂಮಿಯ ಒಂದು ಅಳತೆ, -ಪ್ರಮಾಣ.

ಗಡಿಗೆ (ನಾ). ಮಣ್ಣಿನ ಪಾತ್ರೆ.

ಗಡಿಬಿಡಿ = ಗಡಬಡ.

ಗಡಿಯಾರ = ಘಳಿಯಾರ.

ಗಡು (ನಾ). ೧. ವಾಯಿದೆ; ಅವಧಿ. ೨. ಪಡ; ತೀರ. ೩. ಗಂಡಮಾಲೆಯ ರೋಗ; ಗಳಗಂಡ. ೪. ದುಬ್ಬ; ಹಿಣಿಲು.

ಗಡುತರ (ಗು). ದಪ್ಪನಾದ; ಸ್ಥೂಲವಾದ.

ಗಡುವು (ನಾ). ವಾಯಿದೆ; ಅವಧಿ.

ಗಡುಸು (ನಾ). ಬಿರುಸು; ಒರಟು. ~ಆಗು =೧. ಬಿರುಸಾಗು. ೨. ಕ್ಲಿಷ್ಟವಾಗು; ಕಠಿನವಾಗು.

ಗಡುಸುಗಾರ್ತಿ (ನಾ). ಗಟ್ಟಿಗಿತ್ತಿ; ದಿಟ್ಟೆ.

ಗಡೆ = ಗಡಗಡೆ.

ಗಡ್ಡ (ನಾ). ೧. ದಾಡಿ. ೨. ಗಲ್ಲ.

ಗಡ್ಡಿ (ನಾ). ಹತ್ತು ದಸ್ತುಗಳ ಕಾಗದದ ಕಟ್ಟು; ಅರ್ಧ ರೀಮು.

ಗಡ್ಡೆ (ನಾ). ೧. ಮುದ್ದೆ; ಉಂಡೆ. ೨. ರಾಶಿ. ೩. ಕಂದಮೂಲ; ಗೆಡ್ಡೆ. ೪. ನಡುಗಡ್ಡೆ; ತೆವರು; ದ್ವೀಪ. ೫. ಶರೀರದಲ್ಲಿ ರೋಗದಿಂದ ಬೆಳೆಯುವ ಗಂಟು. ~ಜ್ವರ = ವಿಷಮಶೀತ ಜ್ವರ; ಮಲೇರಿಯ ಜ್ವರ.

ಗಣ (ನಾ). ೧. ಹಿಂಡು; ಗುಂಪು. ೨. ಶಿವನ ಪ್ರಮಥರ ಸಮೂಹ. ೩. ಭೂತ; ಕ್ಷುದ್ರ ದೇವತೆ. ~ನಾಥ = ೧. ಗಣೇಶ. ೨. ಗುಂಪಿನ ಯಜಮಾನ. ೩. ಶಿವ. ~ಪತಿ = ಗಣಪ. ~ರಾಜ್ಯ = ಪ್ರಜಾಪ್ರಭುತ್ವವುಳ್ಳ ರಾಜ್ಯ.

ಗಣಕ (ನಾ). ೧. ಲೆಕ್ಕಿಗ; ಕರಣಿಕ. ೨. ಜೋಯಿಸ.

ಗಣಜಿಲೆ (ನಾ). ೧. ಒಂದು ಬಗೆಯ ಔಷಧಿ ಸಸ್ಯ. ೨. ಸಿಡುಬುರೋಗದಲ್ಲಿ ಒಂದು ಬಗೆ; ನೀರುಕೋಟಲೆ.

ಗಣತಿ (ನಾ). ೧. ನೀರಿನ ಪಾತ್ರೆ; ಧಾರಾ ಪಾತ್ರೆ. ೨. ಎಣಿಕೆ; ಲೆಕ್ಕ.

ಗಣನೀಯ (ನಾ). ೧. ಎಣಿಸತಕ್ಕುದು. (ಗು). ೨. ಲಕ್ಷಿಸಲು ಯೋಗ್ಯವಾದ; ಗಣನೆ ಮಾಡಲು ಯೋಗ್ಯವಾದ.

ಗಣನೆ (ನಾ). ೧. ಎಣಿಕೆ; ಲೆಕ್ಕ. ೨. ಲಕ್ಷ್ಯ; ಗಮನ. ೩. ಗೌರವ; ಆದರ. ~ಕೆ(ಗೆ)ಡು = ಎಣಿಕೆ ಮೀರು; ಲೆಕ್ಕಕ್ಕೆ ಸಿಕ್ಕದಿರು.

ಗಣಪ (ನಾ). ವಿನಾಯಕ; ಗಣೇಶ.

ಗಣಿ (ನಾ). ಆಶ್ರಯಸ್ಥಾನ; ಕಣಿ.

ಗಣಿಕಾಂಗನೆ (ನಾ). ವೇಶ್ಯೆ; ಸೂಳೆ.

ಗಣಿಕಾವಾಟ(ನಾ). ಸೂಳೆಗೇರಿ; ವೇಶ್ಯಾವಾಟ.

ಗಣಿಕೆ (ನಾ). ೧. ಗೆಣ್ಣು; ಗಂಟು; ಗ್ರಂಥಿ. ೨. ಕಬ್ಬು, ದಂಟು ಮೊದಲಾದುವುಗಳ ತುಂಡು. ೩. ಕೆಂಪು ಮತ್ತು ಕಪ್ಪು ಬಣ್ಣದ

ಹಣ್ಣುಗಳನ್ನು ಬಿಡುವ ಸಣ್ಣಗಿಡ. ೪. ಸೂಳೆ; ವೇಶ್ಯೆ. ೫. ಹೆಣ್ಣಾನೆ; ಪಿಡಿ. ೬. ಆನೆಯ ಮರಿ.

ಗಣಿತ ೧. =ಗಣಿದ. ೨. ಲೆಕ್ಕ. ೩. ಗಣಿತ ಶಾಸ್ತ್ರ. (ಗು). ೪.ಲೆಕ್ಕಹಾಕಿದ; ಎಣಿಸಿದ.

ಗಣಿತಜ್ಞ (ನಾ). ೧. ಗಣಿತವನ್ನು ಬಲ್ಲವನು. ೨. ಜ್ಯೋತಿಷಿ.

ಗಣಿದ (ನಾ). ಎಣಿಕೆ; ಗಣನೆ; ಲೆಕ್ಕಾಚಾರ. ~ಇಸು = ಲೆಕ್ಕಹಾಕು; ಗಣಿಸು.

ಗಣಿಸು (ಕ್ರಿ). ೧. ಎಣಿಸು; ಲೆಕ್ಕಹಾಕು. ೨. ಗಮನಿಸು; ಮಹತ್ತ್ವವನ್ನು ಕೊಡು.

ಗಣೆ ೧. = ಗಳು. ೨. ಬಾಣ.

ಗಣ್ಯ (ನಾ). ೧. ಗಣನೆಗೆ ಯೋಗ್ಯನಾದವನು; ಪ್ರಮುಖ. (ಗು). ೨. ಎಣಿಸಲಾಗುವ; ಲೆಕ್ಕಿಸುವ. ೩. ಲಕ್ಷ್ಯಮಾಡತಕ್ಕ; ಗಮನಿಸತಕ್ಕ.

ಗತ (ನಾ). ೧. ಹಿಂದೆ ಆದುದು; ಕಳೆದು ಹೋದುದು. ೨. ಹೋಗುವಿಕೆ; ನಡೆ. (ಗು). ೩. ಹೋದ; ಕಳೆದ. ೪. ಸತ್ತು ಹೋದ; ಕಣ್ಮರೆಯಾದ. ೫. ತಲುಪಿದ; ಸೇರಿದ. ~ಅನುಗತಿಕ=೧.ಸಂಪ್ರದಾಯ ಪರವಾದುದು; ಅನುಸರಣೆ. ೨. ವಿವೇಚನೆ ಯಿಲ್ಲದೆ ಹಿಂದಿನದನ್ನು ಅನುಸರಿಸುವವನು. ~ಇಸು=೧. ನಡೆ; ಗಮಿಸು. ೨. ಕಳೆ; ಮುಗಿ. ೩. ಉಂಟಾಗು; ಒದಗು. ೪. ಸಾಯು; ತೀರು. ~ಪ್ರಜ್ಞ = ಪ್ರಜ್ಞೆ ಯನ್ನು ಕಳೆದುಕೊಂಡವನು. ~ಪ್ರಾಣ = ೧. ಸತ್ತವನು; ನಿರ್ಜೀವವಾದವನು. ೨.ಸಾವನ್ನು ಸಮೀಪಿಸುವಿಕೆ; ಸಾಯುಪಿಕೆ. ~ಭ್ರಾಂತಿ = ೧. ಭ್ರಾಂತಿಯಿಲ್ಲದಿರುವಿಕೆ. ೨. ನಿಶ್ಚಯಜ್ಞಾನವುಳ್ಳವನು.

ಗತಕ (ನಾ). ೧. ಕೃತಕವಾದುದು; ನಿಜವಲ್ಲ ದುದು. ೨. ಮೋಸ; ಕಪಟ. ೩. ಅಲ್ಲಾಡು ವಿಕೆ; ಚಲನೆ.

ಗತಿ (ನಾ). ೧. ನಡಗೆ; ಗಮನ. ೨. ದಶೆ; ಅವಸ್ಥೆ. ೩. ಪದ್ಧತಿ; ಮಾರ್ಗ. ೪.ಆಧಾರ; ಆಶ್ರಯ. ೫. ಅದೃಷ್ಟ; ಭಾಗ್ಯ. ೬. ಉಪಾಯ; ಹಂಚಿಕೆ. ೭. ಅಧ್ಯಾಯ; ಆಶ್ವಾಸ. ೮. ಜಾಣ್ಮೆ; ಪಾಂಡಿತ್ಯ. ~ಅಂತರ = ಬೇರೆಯ ಉಪಾಯ; ಅನ್ಯಮಾರ್ಗ. ~ಕೆ(ಗೆ)ಡು = ೧. ಗುರಿ ತಪ್ಪು. ೨. ಚಲನೆಯಿಲ್ಲದಾಗು; ನಡೆಗೆಡು. ೩.ಆಶ್ರಯ ತಪ್ಪು; ಸ್ಥಿತಿಗೆಡು. ~ಕೆ(ಗೆ)ಟ್ಟ = ಗತಿಯಿಲ್ಲದವನು; ಗತಿಹೀನ. ~ಭಂಗ = ೧. ಮುಗ್ಗರಿಸುವಿಕೆ. ೨. ಹೋಗದಂತೆ ತಡೆಗಟ್ಟುವಿಕೆ.

ಗತ್ತು (ನಾ). ೧. ಗತಿ; ಗಮನ. ೨. ವೈಖರಿ; ರೀತಿ. ೩. ಜಬರ್; ದರ್ಪ. ೪. ಯುಕ್ತಿ; ತಂತ್ರ. ೫. ಅನುಸರಣೆ; ಹೊಂದಿಕೆ. ೬. ಉಚ್ಚಮಟ್ಟ. ೭. ರೀತಿ; ಮಾರ್ಗ. ~ಗಾರ = ೧. ಉಪಾಯವನ್ನು ಬಲ್ಲವನು; ತಂತ್ರಗಾರ. ೨. ಧೋರಣೆಯುಳ್ಳವನು.

ಗದ (ನಾ). ೧.ಹೇಳಿಕೆ; ಮಾತು. ೨. ರೋಗ; ವ್ಯಾಧಿ.

ಗದಕ = ಗತಕ.

ಗದಗುಂಪ (ನಾ). ಬಲವಾದ ನಡುಕ,-ಕಂಪನ. ~ಕೊ(ಗೊ)ಳ್ = ಬಲವಾಗಿ ನಡುಗು, -ಕಂಪಿಸು.

ಗದಗದ (ನಾ).ನಡುಕವನ್ನು ಸೂಚಿಸುವ ಪದ. ~ಇಸು = ತತ್ತರಿಸು; ಕಂಪಿಸು.

ಗದಗು (ಕ್ರಿ). ತಿನ್ನು; ಮುಕ್ಕು; ಕಬಳಿಸು.

ಗದಡು (ನಾ).೧. ದನಕರುಗಳ ಮಲಮೂತ್ರ ಗಳ ಕೆಟ್ಟನಾತ. ೨. ಕಮಟು ವಾಸನೆ; ಘಾಟು.

ಗದರು = ಗದಜು.~ಇಕೆ = ೧.ಜಬರಿಸುವಿಕೆ. ೨. ದನಕರುಗಳನ್ನು ಅದ್ದಲಿಸುವುದು. ~ಇಸು = ೧. ಅಬ್ಬರಿಸು; ಗರ್ಜಿಸು. ೨. ದನಕರುಗಳನ್ನು ಅದ್ದಲಿಸು, -ಅಟ್ಟು.

ಗದಱು(ರು) (ಕ್ರಿ). ೧.ಅಬ್ಬರಿಸು ; ಗರ್ಜಿಸು. ೨. ಹೆದರಿಸು ; ಜಬರಿಸು. (ನಾ). ೩. ಅಬ್ಬರ ; ಗರ್ಜನೆ. ೪. ಗದ್ದಲ ; ಕೋಲಾಹಲ.

ಗದಾಧರ (ನಾ). ಗದೆಯನ್ನು ಧರಿಸಿದವನು ; ವಿಷ್ಣು ; ಕೃಷ್ಣ.

ಗದು (ನಾ). ಬಾವು ; ಊತ.

ಗದುಬು (ಕ್ರಿ). ಅಟ್ಟು ; ಓಡಿಸು.

ಗದೆ (ನಾ). ಒಂದು ಬಗೆಯ ಆಯುಧ ; ಮುದ್ಗರ. ~ಕೊ(ಗೊ)ಳ್= ಗದೆಯನ್ನು ಎತ್ತಿಕೊಳ್ಳು.

ಗದ್ಗದ (ನಾ). ೧. ಧ್ವನಿಯ ನಡುಕ. ೨.ನಿಂತು ನಿಂತು ಬರುವ ಅಸ್ಪಷ್ಟವಾದ ಮಾತು. ~ಇಸು = ಕಂಠ ಬಿಗಿದುಬರು.

ಗದ್ದ (ನಾ). ಚಿಬುಕ. ~ಕಟ್ಟು = ಒಂದು ಬಗೆಯ ಕಂಠರೋಗ ; ಮಂಗನ ಬಾವು ; ಕೆಪ್ಪಟರಾಯ.

ಗದ್ದಲ(ಳ) (ನಾ). ೧. ಗೊಂದಲ ; ಗಲಾಟೆ. ೨.ಸಂಭ್ರಮ ; ವಿಜೃಂಭಣೆ. ೩.ಜನಸಂದಣಿ.

ಗದ್ದಿಗೆ = ಗದುರ್ಗೆ. ~ಕಲ್ಲು = ಕಂಬಕ್ಕೆ ಪೀಠವಾಗಿರುವ ಕಲ್ಲು.

ಗದ್ದೆ = ಗಟ್ಡಿ. ~ಕಟ್ಟು = ೧. ಕಾಲುವೆ ; ನಾಲೆ. ೨. ಬತ್ತ ಬೆಳೆಯಲು ಯೋಗ್ಯವಾದ ಭೂಮಿ.

ಗದ್ಯ (ನಾ). ೧.ಛಂದೋಬದ್ಧವಲ್ಲದ ಮಾತು ; ವಚನ. (ಗು). ೨. ಹೇಳತಕ್ಕ ; ಹೇಳಬಹುದಾದ.

ಗದ್ಯಾಣ (ನಾ).ಒಂದು ಚಿನ್ನದ ನಾಣ್ಯ; ನಿಷ್ಕ.

ಗನ (ನಾ). ೧. ಗಟ್ಟಿಯಾದುದು ; ಕಲ್ಲು. ೨. ಭಾರವಾದುದು ; ಗುರುತರವಾದುದು. ೩.ಬಹಳ ; ಅತಿ. ೪.ಮಹತ್ತ್ವವುಳ್ಳುದು; ಶ್ರೇಷ್ಠವಾದುದು.

ಗನಹ (ನಾ). ೧. ಶಿವ ; ಈಶ್ವರ. ೨.ಹಿರಿಯ. ೩. ಬ್ರಾಹ್ಮಣ ; ವಿಪ್ರ.

ಗನಿ = ಗಣಿ.

ಗನೀಮು (ನಾ). ೧. ಗುಪ್ತಶತ್ರು. ೨.ಕೊಳ್ಳೆ ; ಲೂಟಿ.

ಗನ್ನ (ನಾ). ಮೋಸ. ~(ಂ)ಕೊ(ಗೊ)ಳ್ = ನಟಿಸು ; ಸೋಗುಹಾಕು. ~ಕ(ಗ)ತಕ = ಮೋಸ ; ವಂಚನೆ. ~ಕಾ(ಗಾ)ಜ(ರ) = ಠಕ್ಕ ; ವಂಚಕ. ~ಗರುವಿಕೆ = ಪೊಳ್ಳು ಬಡಿವಾರ ; ಒಣಹೆಮ್ಮೆ.

ಗಪ್‌ಚಿಪ್ (ಅ). ಮೌನವಾಗಿ ; ಸುಮ್ಮನೆ.

ಗಪ್ಪನೆ (ಅ). ಕೂಡಲೆ ; ಫಕ್ಕನೆ.

ಗಪ್ಪು ೧. = ಗಪ್‌ಚಿಪ್. ೨. ತಟ್ಟನೆ ; ಕೂಡಲೆ. ~ಆಗು =೧. ಸುಮ್ಮನಾಗು; ಮೌನವಾಗು. ೨. ಅದೃಶ್ಯವಾಗು ; ಕಾಣೆಯಾಗು.

ಗಬಲಿಕ್ಕು (ಕ್ರಿ). ನುಂಗು ; ಕಬಳಿಸು.

ಗಬ್ಬ (ನಾ). ೧. ಹೊಟ್ಟೆ. ೨.ಬಸಿರು ; ಗರ್ಭ. ೩. ಗರ್ವ ; ಸೊಕ್ಕು.

ಗಬ್ಬರಿಸು (ಕ್ರಿ). ೧. ಅಗೆ ; ತೋಡು. ೨. ಸೀಳು ; ಒಡೆ. ೩. ಮುತ್ತು ; ಆವರಿಸು.

ಗಬ್ಬಿ (ನಾ). ೧. ಗರ್ವಿ ; ಅಹಂಕಾರಿ. ೨. ಹೆಚ್ಚಳ ; ಆಧಿಕ್ಯ. ೩. ಸಮರ್ಥ ; ಶ್ರೇಷ್ಠ. ೪. ಕೊಬ್ಬಿದವಳು ; ದರ್ಪಿಷ್ಠೆ.

ಗಬ್ಬಿಲ (ನಾ). ತೊಗಲಬಾವಲಿ ; ಕಣ್ಣು ಕಪ್ಪಡಿ ; ಕಪ್ಪಟ.

ಗಬ್ಬು (ನಾ). ೧. ಕೆಟ್ಟವಾಸನೆ ; ದುರ್ಗಂಧ. ೨. ಸೊಕ್ಕು ; ಗರ್ವ. (ಗು). ೩. ಹೊಲಸಾದ ; ಕೊಳಕಾದ. ~ನಾರು = ಕೆಟ್ಟವಾಸನೆ ಬರು ; ದುರ್ವಾಸನೆ ಬರು.

ಗಭಸ್ತಿ (ನಾ). ೧.ಕಿರಣ ; ರಶ್ಮಿ. ೨. ಸೂರ್ಯ. ~ಮಾಲಿ = ಸೂರ್ಯ.

ಗಭೀರ (ನಾ). ೧.ಆಳ; ಗಾಂಭೀರ್ಯ. (ಗು). ೨. ಗಂಭೀರವಾದ ; ಆಳವಾದ. ೩.ಮಂದ್ರವಾದ. ೪. ದೊಡ್ಡ ; ಗಹನವಾದ.

ಗಮ (ನಾ). ಹೋಗುವುದು ; ಚಲನೆ.~ಇಸು = ನಡೆ ; ಸಾಗು.

ಗಮಕ (ನಾ). ೧. ತಡೆಯಿಲ್ಲದೆ ಮುಂದುವರಿಯುವಿಕೆ. ೨. ಬೆಡಗು; ಸೊಗಸು. ೩. ಠೀವಿ; ಗಾಂಭೀರ್ಯ. ೪. ವ್ಯಾಕರಣದ ಸಮಾಸಗಳಲ್ಲಿ ಒಂದು. ೫. ರಾಗಬದ್ಧವಾಗಿ, ಅರ್ಥಪೂರ್ಣವಾಗಿ ಕಾವ್ಯವನ್ನು ಓದುವುದು. ೬. ಉತ್ಸಾಹ; ಸಂಭ್ರಮ. ೭. ಬೋಧನೆ; ಉಪದೇಶ. (ಗು) ೮. ಮನದಟ್ಟು ಮಾಡುವ. ~ಇಸು = ೧. ರಾಗಬದ್ಧವಾಗಿ, ಅರ್ಥಪೂರ್ಣವಾಗಿ ಕಾವ್ಯವನ್ನು ಓದು. ೨. ಆತುರಪಡು; ದುಡುಕು. ~ಪೆ(ವೆ)ಱು(ರು) = ಸೊಗಸನ್ನು ಹೊಂದು; ಶೋಭಿಸು.

ಗಮಕಿ (ನಾ). ಗಮಕ ಮಾಡುವವನು.

ಗಮಗಮ (ನಾ). ಹೆಚ್ಚಾದ ಸುವಾಸನೆ; ಪರಿಮಳ.

ಗಮಜು (ನಾ). ಸೊಕ್ಕು; ಅಹಂಕಾರ.

ಗಮನ (ನಾ). ೧. ಹೋಗುವುದು. ೨. ನಡಗೆ; ನಡೆ. ೩. ಲಕ್ಷ್ಯ; ಅವಧಾನ. ೪. ಸುವಾಸನೆ; ಪರಿಮಳ. ~ಅರ್ಹ = ಗಮನಿಸಬೇಕಾದ; ಲಕ್ಷಿಸಲು ಯೋಗ್ಯವಾದ. ~ಇಸು = ೧. ಹೋಗು; ನಡೆ. ೨. ಲಕ್ಷ್ಯ ಕೊಡು; ಲೆಕ್ಕಿಸು.

ಗಮನೀಯ (ಗು). ೧. ಹೋಗಬೇಕಾದ. ೨. ಗಮನಿಸಬೇಕಾದ; ಲಕ್ಷ್ಯಕೊಡಬೇಕಾದ.

ಗಮಾರ (ನಾ). ಹಳ್ಳಿಗ; ಗಾವಿಲ.

ಗಮ್ಮ (ನಾ). ೧. ಧಗೆ; ಸೆಕೆ. ೨. ಬೆವರು; ಸ್ವೇದ. ~ಕುಚ್ಚು = ಸೆಕೆಯಾಗು; ಧಗೆಯಾಗು.

ಗಮ್ಮತ್ತು (ನಾ). ತಮಾಷೆ; ಮೋಜು.

ಗಮ್ಮನೆ (ಅ). ೧. ಬೇಗನೆ; ಶೀಘ್ರವಾಗಿ. ೨. ಸುಮ್ಮನೆ; ಮೌನವಾಗಿ. ೩. ಸುವಾಸನೆಯಾಗಿ; ಸುಗಂಧದೊಡನೆ.

ಗಮ್ಮು = ಗಮಜು.

ಗಮ್ಯ (ನಾ). ೧. ಹೋಗಬೇಕಾದ ಸ್ಥಳ; ಗುರಿ. (ಗು). ೨. ಹೋಗತಕ್ಕ. ೩. ತಿಳಿಯಲು ಶಕ್ಯವಾದ.

ಗಯಾಳ (ನಾ). ೧. ಹೇಡಿ; ಪುಕ್ಕ. ೨. ಕಪಟಿ; ಕುಹಕಿ.

ಗಯ್ಯಾಳಿ (ನಾ). ದುಷ್ಟಸ್ವಭಾವದ ಹೆಂಗಸು; ಧೂರ್ತೆ.

ಗರ (ನಾ). ೧. ಗ್ರಹ. ೨. ದೆವ್ವ, ಭೂತ ಮುಂತಾದ ದುಷ್ಟಶಕ್ತಿಗಳು. ೩. ಪಗಡೆಯಾಟದಲ್ಲಿ ದಾಳಗಳಿಂದ ಸೂಚಿತವಾಗುವ ಸಂಖ್ಯೆ. ೪. ನುಂಗುವುದು. ೫. ನಂಜು; ವಿಷ. ~ಬಡಿ = ದೆವ್ವ, ಪಿಶಾಚಿಗಳ ಬಾಧೆಗೊಳಗಾಗು.

ಗರಕು (ನಾ). ಏರು ತಗ್ಗಾಗಿರುವುದು; ಸಮತಲವಿಲ್ಲದಿರುವುದು.

ಗರಗಟ್ಟು (ಕ್ರಿ). ೧. ಒಣಗು. ೨. ಅಡ್ಡಿಯಾಗು.

ಗರಗರ (ನಾ). ೧. ಚೆಲುವು; ಸೊಗಸು. ೨. ಸ್ವಚ್ಛತೆ; ಅಚ್ಚುಕಟ್ಟು.

ಗರಗಸ = ಕರಗಸ.

ಗರಜು (ನಾ). ಅಗತ್ಯ; ಆವಶ್ಯಕತೆ.

ಗರಟಿಗೆ = ಗರವಟ್ಟಿಗೆ.

ಗರಡಿ (ನಾ). ೧. ವ್ಯಾಯಾಮಶಾಲೆ; ಗರುಡಿ. ೨. ಹಳ್ಳಿಯ ದೆವ್ವಕ್ಕಾಗಿ ಕಟ್ಟಿದ ಗುಡಿ.

ಗರಣ (ನಾ). ಹಿಡಿಯುವುದು; ಗ್ರಹಣ.

ಗರತಿ (ನಾ). ಪತಿವ್ರತೆ; ಗೃಹಿಣಿ.

ಗರದ (ನಾ). ವಿಷವನ್ನು ಕೊಟ್ಟು ಕೊಲ್ಲಲು ಬಯಸುವವನು.

ಗರಮಾ (ನಾ). ೧. ಉಷ್ಣತೆ; ಸೆಕೆ. ೨. ಒಂದು ಬಗೆಯ ಮೇಹರೋಗ.

ಗರಲ(ಳ) (ನಾ). ನಂಜು; ವಿಷ. ~ಗ್ರೀವ = ಕೊರಳಿನಲ್ಲಿ ವಿಷವನ್ನು ಧರಿಸಿದವನು; ಶಿವ.

ಗರಲಭುಕ್ಕು (ನಾ). ವಿಷವನ್ನು ಉಂಡವನು; ನಂಜುಂಡ; ಶಿವ.

ಗರವಟ (ನಾ). ೧. ಕಾವಲು; ಗಸ್ತು. ೨. ಯಾಗ; ಯಜ್ಞ. ~ಇಗ = ಕಾವಲುಗಾರ; ಪಹರೆಯುವನು.

ಗರವಟಿಗೆ (ನಾ). ೧. ಕಾವಲು; ಗಸ್ತು. ೨. ರೋಷ; ಸಿಟ್ಟು. ~ಬ(ವ)ರ್(ರು) = ಪಹರೆ ಮಾಡು.

ಗರವಸ (ನಾ). ೧. ಕಾವಲು; ಪಹರೆ. ೨. ದುಷ್ಟಶಕ್ತಿಗಳ ಬಾಧೆಗೊಳಗಾಗುವಿಕೆ. ~ಕೊ(ಗೊ)ಳ್ = ೧. ಪಹರೆ ಮಾಡು. ೨. ಗರಬಡಿ.

ಗರವು (ಕ್ರಿ). ಸುಲಿ; ಕಿತ್ತುಕೊಳ್ಳು.

ಗರಸು (ನಾ). ೧. ದಪ್ಪಮರಳು ಮತ್ತು ಕಲ್ಲಿನ ತುಂಡುಗಳ ಮಿಶ್ರಣ; ಕಂಕರೆ. ೨. ಮಣ್ಣು, ಕಲ್ಲು ಮಿಶ್ರವಾದ ಹಳದಿ ಮತ್ತು ಕೆಂಪು ಬಣ್ಣದ ಮಣ್ಣು. ೩. ಗಡುಸು; ಕರ್ಕಶ.

ಗರಳಿಗೆ (ನಾ). ಗಸ್ತು; ಕಾವಲು.

ಗರಿ = ಗಱಿ. ~ಕೆ(ಗೆ)ಡು = ೧. ರೆಕ್ಕೆ ಬಿದ್ದು ಹೋಗು. ೨. ಬಲಹೀನವಾಗು. ~ಕೊ(ಗೊ)ಳ್ಳು = ೧. ರೆಕ್ಕೆಯನ್ನು ಪಡೆ. ೨. ಉತ್ಸಾಹಗೊಳ್ಳು. ೩. ವೇಗವನ್ನು ಪಡೆ. ~ಮುರಿ = ೧. ಬಟ್ಟೆಗಳ ಮಡಿಕೆಗಳು ಮುರಿಯದೆ ಇರುವುದು. ೨. ಕರಿದ ಪದಾರ್ಥಗಳು ಗರುಗಾಗಿರುವುದು.

ಗರಿಗ (ನಾ). ಒಂದು ಜಾತಿಯ ಪಕ್ಷಿ.

ಗರಿಣಿ (ನಾ). ಗೃಹಿಣಿ.

ಗರಿಮೆ (ನಾ). ೧. ಭಾರ; ಒಜ್ಜೆ. ೨. ಹಿರಿಮೆ; ಘನತೆ.

ಗರಿಷ್ಠ (ಗು). ೧. ಅತಿ ಭಾರವಾದ. ೨. ಪೂಜ್ಯವಾದ; ಶ್ರೇಷ್ಠವಾದ.

ಗರೀಬ (ನಾ). ೧. ಬಡವ; ದರಿದ್ರ. ೨. ದೀನ; ನಮ್ರ.

ಗರೀಬಿ (ನಾ). ದಾರಿದ್ರ್ಯ; ಬಡತನ.

ಗರುಗ (ನಾ). ೧. ಒಂದು ಜಾತಿಯ ಸಸ್ಯ. ೨. ಒಂದು ಬಗೆಯ ಭಕ್ಷ್ಯ.

ಗರುಡ (ನಾ). ೧. ಹದ್ದಿನ ಜಾತಿಗೆ ಸೇರಿದ ಪಕ್ಷಿ. ೨. ವಿಷ್ಣುವಿನ ವಾಹನ. ೩. ತನ್ನ ಬಾಳನ್ನು ಅರಸನಿಗಾಗಿ ಮುಡಿಪಾಗಿಸಿದ ಸ್ವಾಮಿಭಕ್ತ. ~ಕ(ಗ)ಂಭ(ಬ) = ೧. ದೇವಾಲಯಗಳ ಮುಂದಿನ ಧ್ವಜಸ್ತಂಭ; ಕೊಡಿಮರ. ೨. ವೀರರ ಸ್ಮಾರಕವಾಗಿ ನಿಲ್ಲಿಸುವ ಕಂಬ. ೩. ದಾಸಯ್ಯನು ಕೈಯಲ್ಲಿ ಹಿಡಿಯುವ ದೀವಟಿಗೆ. ~ಪಂಚಮಿ = ಶ್ರಾವಣ ಶುದ್ಧ ಪಂಚಮಿ ಮತ್ತು ಅಂದು ಮಾಡುವ ಪೂಜೆ. ~ಪಚ್ಚೆ = ೧. ಒಂದು ಬಗೆಯ ರತ್ನ; ಮರಕತಮಣಿ. ೨. ಸರ್ಪವಿಷವನ್ನು ಪರಿಹರಿಸುವ ಮೂಲಿಕೆ. ~ಪಾತಾಳ = ೧. ಹಾವಿನ ವಿಷವನ್ನು ಪರಿಹರಿಸುವ ಒಂದು ಮೂಲಿಕೆ. ೨. ಬಾವಿಗೆ ಬಿದ್ದ ವಸ್ತುವನ್ನು ತೆಗೆಯುವ ಸಾಧನ; ಪಾತಾಳಗರುಡಿ.

ಗರುಡಿ (ನಾ). ೧. ನೆಲೆ; ಆಶ್ರಯ. ೨. ವ್ಯಾಯಾಮಶಾಲೆ. ~ಕಾಱ(ರ) = ೧. ಜಟ್ಟಿ; ಮಲ್ಲ. ೨. ಗರುಡಿಯ ಗುರು; ಗರುಡಿಯ ಆಚಾರ್ಯ.

ಗರುತ್ಮ (ನಾ). ಗರುಡ.

ಗರುತ್ಮಂತ (ನಾ). ೧. ಹಕ್ಕಿ; ಪಕ್ಷಿ. ೨. ಗರುಡ ಪಕ್ಷಿ.

ಗರುವ (ನಾ). ೧. ಹಿರಿಯ; ಶ್ರೇಷ್ಠ. ೨. ಬಲಶಾಲಿ; ಶೂರ. ೩. = ಗರ್ವ. (ಗು). ೪. ಶ್ರೇಷ್ಠವಾದ; ಉತ್ತಮವಾದ. ~ಇಕೆ = ೧. ಹಿರಿಮೆ; ದೊಡ್ಡಸ್ತಿಕೆ. ೨. ಗರ್ವ; ಅಹಂಕಾರ.

ಗರುವಲಿ (ನಾ). ವಾಯು; ಗಾಳಿ.

ಗರುವಾಯಿ (ನಾ). ೧. ದೊಡ್ಡತನ; ಘನತೆ. ೨. ಬೆಡಗು; ಸೊಗಸು; ಠೀವಿ. ~ಕೆ(ಗೆ)ಡು = ಹಿರಿಮೆ ಕುಂದು; ಘನತೆ ಅಳಿ.

ಗರುವೆ (ನಾ). ೧. ದೊಡ್ಡವಳು; ಹಿರಿಯಳು. ೨. ಸೊಗಸುಗಾತಿ; ಚೆಲುವೆ. ೩. ಗರ್ವಿಷ್ಠೆ; ಜಂಬಗಾತಿ.

**ಗಱು(ರಿ)** (ನಾ). ೧. (ಹಕ್ಕಿಗಳ) ರೆಕ್ಕೆ; ಪುಕ್ಕ. ೨. ಬಾಣಕ್ಕೆ ತುದಿಯಲ್ಲಿ ಕಟ್ಟುವ ರೆಕ್ಕೆ. ೩. ತಾಳೆ, ತೆಂಗು ಮುಂತಾದುವುಗಳ ಸೋಗೆ. ೪. ಹೂವಿನ ಎಸಳು; ರೇಕು. ~ಕ(ಗ)ಟ್ಟು = ೧. ಬಾಣಕ್ಕೆ ಗುರಿಯನ್ನು ಕಟ್ಟು. ೨. ಬಲವಾಗು; ಶಕ್ತಿಯುತವಾಗು. ~ಪೂ(ವೂ) = ಕೇದಗೆ; ತಾಳೆಹೂವು.

**ಗಱು(ರಿ)ಕೆ** = ಕಱುಂಕೆ.

**ಗಱು(ರು)ಗು** (ನಾ). ಗರಿಗರಿಯಾಗಿರುವುದು; ಹಗುರವಾಗಿರುವುದು.

**ಗರ್ಗರ** (ನಾ). ೧. ಸಣ್ಣಸಣ್ಣ ಗೆಜ್ಜೆಗಳಿಂದ ಕೂಡಿದ ಕಾಲಿನ ಕಡಗ. ೨. ನೀರಿನ ಸುಳಿ; ಮಡು. ೩. ಒಂದು ವಾದ್ಯ ವಿಶೇಷ. ೪. ಕಡೆಗೋಲು.

**ಗರ್ಘರಿ** (ನಾ). ೧. ಕೊಡ; ಬಿಂದಿಗೆ. ೨. ಗೆಜ್ಜೆ; ಕಿರುಗಂಟೆ.

**ಗರ್ಜನೆ** (ನಾ). ಗಟ್ಟಿಯಾದ ಕೂಗು; ಆರ್ಭಟೆ.

**ಗರ್ಜಿಸು** (ಕ್ರಿ). ೧. ಗರ್ಜನೆ ಮಾಡು; ಆರ್ಭಟಿಸು. ೨. ಗದರಿಸು; ಜಂಕಿಸು. ೩. ಅಳವಡಿಸು; ಜೋಡಿಸು.

**ಗರ್ತ** (ನಾ). ೧. ಸಿಂಹಾಸನ; ಗದ್ದುಗೆ. ೨. ಕುಳಿ; ತಗ್ಗು. ೩. ನೀರಿನ ಸುಳಿ; ಚಕ್ರ. ೪. ಬಿಲ. ~ಆಶ್ರಯ = ಬಿಲದಲ್ಲಿರುವ ಇಲಿ ಮೊದಲಾದ ಪ್ರಾಣಿಗಳು.

**ಗರ್ದಭ** (ನಾ). ಕತ್ತೆ; ರಾಸಭ.

**ಗರ್ದಭೆ** (ನಾ). ಹೆಣ್ಣುಕತ್ತೆ.

**ಗರ್ದಿ** (ನಾ). ೧. ಗದ್ದಲ; ಗಲಾಟೆ. ೨. ಸಡಗರ; ಸಂಭ್ರಮ. (ಗು). ೩. ಭಾರಿ; ದೊಡ್ಡ.

**ಗರ್ದುಗ** = ಗರ್ದುಗು.

**ಗರ್ದುಗು** (ನಾ). ಒಂದು ಜಾತಿಯ ಮುಳ್ಳು ಪೊದೆ ಮತ್ತು ಅದರ ಕಾಯಿ; ಗಜ್ಜುಗ.

**ಗರ್ದುಗೆ** (ನಾ). ೧. ಸಿಂಹಾಸನ; ಪೀಠ. ೨. ವೀರಶೈವಸ್ವಾಮಿಗಳ ಸಮಾಧಿ; ಗದ್ದುಗೆ.

**ಗರ್ದೆ** = ಗಬ್ಬಿದ್ದ.

**ಗರ್ನಾಲು** (ನಾ). ಉತ್ಸವಾದಿಗಳಲ್ಲಿ ಹಾರಿಸುವ ಸಿಡಿಮದ್ದು ತುಂಬಿರುವ ಗೋಲಿ ಮುಂತಾದುವು.

**ಗರ್ಭ** (ನಾ). ೧. ಹೊಟ್ಟೆ; ಉದರ. ೨. ಬಸಿರು. ೩. ಕಂದು; ಭ್ರೂಣ. ೪. ಮಗು; ಕೂಸು. ೫. ಒಳಗು; ಒಳಭಾಗ. ~ಗೃಹ = ೧. ಒಳಗಿನ ಕೋಣೆ. ೨. ದೇವಾಲಯಗಳಲ್ಲಿ ಮೂಲವಿಗ್ರಹವನ್ನು ಇಟ್ಟಿರುವ ಒಳಭಾಗ; ಗರ್ಭಗುಡಿ. ~ಷಷ್ಠಿ = ಅರುವತ್ತು ದಿನಗಳಲ್ಲಿ ತೆನೆಬರುವ, -ಹೊಡೆಯಾಗುವ.

**ಗರ್ಭವತಿ** = ಗರ್ಭಿಣಿ.

**ಗರ್ಭಿಣಿ** (ನಾ). ಬಸಿರಿ; ಗರ್ಭವತಿ.

**ಗರ್ಭೀಕರಿಸು** (ಕ್ರಿ). ಹುದುಗಿಸು; ಒಳಪಡಿಸು.

**ಗರ್ಭೀಕೃತ** (ಗು). ಒಳಗಿರಿಸಿದ; ಹುದುಗಿಸಲ್ಪಟ್ಟ.

**ಗರ್ವ** (ನಾ). ಸೊಕ್ಕು; ಹೆಮ್ಮೆ. ~ವ್ಯಾಳ = ೧. ಮದಿಸಿದ ಆನೆ; ತೊಂಡಾನೆ. ೨. ಗರ್ವದಿಂದ ಕೂಡಿದ; ದುಷ್ಟ.

**ಗರ್ವಿತ** (ನಾ). ೧. ಮದಿಸಿದವನು; ಅಹಂಕಾರಿ. (ಗು). ೨. ಮದದಿಂದ ಕೂಡಿದ; ಸೊಕ್ಕಿದ.

**ಗರ್ಹಣ** (ನಾ). ಬಯ್ಗುಳು; ತೆಗಳಿಕೆ.

**ಗರ್ಹಿತ** ೧. = ಗರ್ಹಣ. (ಗು). ೨. ನಿಂದಿಸಲ್ಪಟ್ಟ.

**ಗಲ(ಳ)** (ನಾ). ಕೊರಳು; ಕುತ್ತಿಗೆ. ~ಕಂಬಲ(ಳ) = ೧. ಗಂಗೆದೊಗಲು; ಸಾಸ್ನೆ. ೨. ಕೊರಳಿಗೆ ಸುತ್ತುವ ಉಣ್ಣೆಬಟ್ಟೆ.

**ಗಲಂತಿಕೆ** (ನಾ). ೧. ನೀರಿನ ಪಾತ್ರೆ; ಕಲಶ. ೨. ಅಭಿಷೇಕ ಪಾತ್ರೆ; ಧಾರಾಪಾತ್ರೆ.

**ಗಲಕು** (ನಾ). ಲೇಖನಿಯನ್ನು ಮಾಡಲು ಬಳಸುವ ಒಂದು ಜಾತಿಯ ಸಸ್ಯ; ಲಾಳದ ಕಡ್ಡಿ.

**ಗಲಗು** ೧. = ಗಲಕು. ೨. ಲಾಳದ ಕಡ್ಡಿಯಿಂದ ಮಾಡಿದ ಲೇಖನಿ. ೩. ಗಲಾಟೆ; ಗದ್ದಲ.

**ಗಲಬರಿಸು** (ನಾ). ಪಾತ್ರೆ ಮುಂತಾದುವುಗಳನ್ನು ನೀರಿನಲ್ಲಿ ತೊಳೆ; ಅಲುಬು.

**ಗಲಬೆ** (ನಾ). ೧. ಗದ್ದಲ; ಕೂಗಾಟ. ೨. ತೊಂದರೆ; ತೊಡಕು.

**ಗಲಭೆ** = ಗಲಬೆ.

**ಗಲಾಟೆ** ೧. = ಗಲಬೆ. ೨. ಗಡಿಬಿಡಿ; ಸಂಭ್ರಮ. ೩. ಸಂದಣಿ; ನೂಕುನುಗ್ಗಲು.

**ಗಲಿ(ಳಿ)ತ** (ಗು). ಜಾರಿದ; ಕಳಚಿದ.

**ಗಲಿಬಿಲಿ** (ನಾ). ೧. ಗಲಾಟೆ; ಗಲಭೆ. ೨. ದಿಗ್ಭ್ರಾಂತಿ; ದಿಕ್ಕು ತೋಚದಿರುವುದು. ೩. ಗೊಂದಲ; ತೊಡಕು.

**ಗಲಿಯಿಸು** (ಕ್ರಿ). ಕೆಳಗೆ ಬೀಳು.

**ಗಲೀಜು** (ನಾ). ಕೊಳಕು; ಕೊಳೆ; ಹೊಲಸು.

**ಗಲೀತ** (ನಾ). ಪೆಟ್ಟು; ಹೊಡೆತ.

**ಗಲ್ಲ** (ನಾ). ೧. ಕದಪು; ಕೆನ್ನೆ. ೨. ತುಟಿಯ ಕೆಳಭಾಗ; ಗದ್ದ; ಚಿಬುಕ. ೩. ಹಣದ ಪೆಟ್ಟಿಗೆ. ೪. ಹಣದ ಪೆಟ್ಟಿಗೆಯ ಬಳಿಯಲ್ಲಿಯ ಆಸನ. ~ಗುಗ್ಗುರಿ = ಕೆನ್ನೆಯ ಮೇಲೆ ತೂಗಾಡುತ್ತಿರುವ ಮುಂಗುರುಳು. ~ಗುಳಿ = ನಗುವಾಗ ಕೆನ್ನೆಯಲ್ಲಿ ಬೀಳುವ ಗುಳಿ.

**ಗಲ್ಲಣೆ** (ನಾ). ೧. ಕಾಟ; ತೊಂದರೆ. ೨. ಗಲ್‌ಗಲ್ ಎಂಬ ಧ್ವನಿ.

**ಗಲ್ಲಿ** (ನಾ). ಓಣಿ; ಕೇರಿ.

**ಗಲ್ಲಿಸು** (ಕ್ರಿ). ೧. ಅಲ್ಲಾಡಿಸು; ಕುಲುಕು. ೨. ಕಾಡಿಸು; ಪೀಡಿಸು. ೩. ತಿವಿ; ಚುಚ್ಚು.

**ಗಲ್ಲು** (ನಾ). ೧. ಕುತ್ತಿಗೆಗೆ ನೇಣುಹಾಕಿ ಕೊಲ್ಲುವ ಸಾಧನ; ನೇಣುಮರ. ೨. ಒಂದು ಬಗೆಯ ಮರಣದಂಡನೆ; ಫಾಶಿ.

**ಗಲ್ಲೆ** (ನಾ). ೧. ಮುದ್ದೆ; ಗೆಡ್ಡೆ. ೨. ಹಣದ ಪೆಟ್ಟಿಗೆ. ೩. ಹಣದ ಪೆಟ್ಟಿಗೆಯ ಬಳಿಯಲ್ಲಿಯ ಆಸನ. ~ಕ(ಗ)ಟ್ಟು = ೧. ಗಡ್ಡೆಯಾಗು; ಘನೀಭವಿಸು. ೨. ಗುಂಪಾಗು.

**ಗವನಿ** (ನಾ). ೧. ಓಣಿ; ಗಲ್ಲಿ. ೨. ಪ್ರಾಕಾರ; ಗೋಡೆ. ೩. ಆವರಣ.

**ಗವಯ** (ನಾ). ಒಂದು ಬಗೆಯ ಎತ್ತು.

**ಗವಯಿ** (ನಾ). ಹಾಡುಗಾರ; ಗಾಯಕ.

**ಗವಱೆ(ರೆ)** (ನಾ). ಬುಟ್ಟಿ; ಗೂಡೆ.

**ಗವಸಣಿ** = ಗವಸಣಿಗೆ. ~ಇಸು = ಮುಸುಕು ಹಾಕು; ಆಚ್ಛಾದಿಸು.

**ಗವಸಣಿಗೆ** (ನಾ). ೧. ಗೌಸು; ಮುಸುಕು. ೨. ಒರೆ; ಶಸ್ತ್ರಕೋಶ. ೩. ಆನೆಯ ಹೊದಿಕೆ; ಜೂಲು.

**ಗವಸು** (ಕ್ರಿ). ೧. ಮುಸುಕು; ಮುತ್ತು. (ನಾ). ೨. = ಗವಸಣಿಗೆ.

**ಗವಳಿ** = ಗವಳಿಗ.

**ಗವಳಿಗ** (ನಾ). ಗೋವಳ; ಗೊಲ್ಲ; ಗೌಳಿಗ. ~ಇತ್ತಿ = ಹಾಲು, ಮೊಸರು ಮುಂತಾದುವುಗಳನ್ನು ಮಾರುವವಳು; ಗೊಲ್ಲಿತಿ.

**ಗವಾಕ್ಷ** (ನಾ). ೧. ಗಾಳಿ, ಬೆಳಕು ಬರುವುದಕ್ಕಾಗಿ ಮಾಡಿರುವ ಕಂಡಿ; ಬೆಳಕುಕಿಂಡಿ. ೨. ಗೋವಿನ ಕಣ್ಣು.

**ಗವಾಕ್ಷಿ** (ನಾ). ೧. ಬೆಳಕುಕಿಂಡಿ; ಗವಾಕ್ಷ. ೨. ಒಂದು ಜಾತಿಯ ಗಿಡ; ಬುಡುಮೆ ಗಿಡ.

**ಗವಾಯಿ** = ಗವಯಿ.

**ಗವಾಸ್ಪದ** (ನಾ). ದನಕರುಗಳು ಮೇಯುವ ಸ್ಥಳ; ಹುಲ್ಲುಗಾವಲು.

**ಗವಿ** (ನಾ). ೧. ಮೇಲೇರುವಿಕೆ; ಆಕ್ರಮಣ. ೨. ಗುಹೆ. ೩. ನೆಲೆ; ಆಶ್ರಯಸ್ಥಾನ.

**ಗವುಂಡ** = ಗಾವುಂಡ.

**ಗವುಲು** (ನಾ). ೧. ಕೆಟ್ಟವಾಸನೆ; ಗಬ್ಬು. ೨. ಅತಿ ತೀಕ್ಷ್ಣವಾದ ವಾಸನೆ; ಕಟುವಾಸನೆ.

**ಗವುಳಿ** (ನಾ). ಹಲ್ಲಿ; ಗೌಳಿ.

**ಗವೇಂದ್ರ** (ನಾ). ಶ್ರೇಷ್ಠವಾದ ಎತ್ತು; ನಂದಿ.

**ಗವ್ಯ** (ನಾ). ೧. ಹಸುವಿನ ಹಾಲು, ಮೊಸರು ಮುಂತಾದುವು. (ಗು). ೨. ಹಸುವಿಗೆ ಸಂಬಂಧಿಸಿದ. ೩. ಹಸುವಿನಿಂದ ದೊರಕುವ.

ಗವ್ಯೂತಿ (ನಾ). ೧. ದೂರವನ್ನು ಅಳೆಯುವ ಒಂದು ಪ್ರಮಾಣ. ೨. ಹುಲ್ಲುಗಾವಲು; ಗೋಮಾಳ.

ಗಷ್ಟು = ಗಸಟು.

ಗಸಟು (ನಾ). ತುಪ್ಪ, ಎಣ್ಣೆ ಮುಂತಾದ ದ್ರವ ಪದಾರ್ಥಗಳ ಅಡಿಯಲ್ಲಿ ನಿಲ್ಲುವ ಕಸರು; ಗಸಿ.

ಗಸಣೆ (ನಾ). ೧. ತೊಂದರೆ; ಕೋಟಲೆ. ೨. ಗೋಜು; ಗೊಡವೆ. ೩. ತಿಕ್ಕಾಟ; ಘರ್ಷಣೆ. ~ಕೊ(ಗೊ)ಳ್ = ೧. ಬವಣೆಗೊಳ್ಳು; ತೊಂದರೆಯನ್ನನುಭವಿಸು. ೨. ಆಯಾಸಪಡಿಸು.

ಗಸಣೆ = ಗಸಣೆ.

ಗಸಿ ೧. = ಗಸಟು. ೨. ತೊಗರಿಬೇಳೆಯಿಂದ ಮಾಡಿದ ಮೇಲೋಗರ; ಹುಳಿ.

ಗಸ್ತು (ನಾ). ೧. ಕಾವಲು; ಪಹರೆ. ೨. ಗಸ್ತು ತಿರುಗುವವನು; ಪಹರೆಯವನು. ೩. ಮೋಸ; ವಂಚನೆ. ~ಕೊಡು = ಮೋಸಮಾಡು.

ಗಹಗಹ (ನಾ). ಒಂದು ಅನುಕರಣ ಶಬ್ದ. ~ಇಸು = ೧. ಗಟ್ಟಿಯಾಗಿ ನಗು. ೨. ಸಂತೋಷಪಡು. ೩. ಹೊಳೆ; ಜಗಜಗಿಸು. ೪. ಗಟ್ಟಿಯಾಗಿ ಧ್ವನಿಮಾಡು.

ಗಹನ (ನಾ). ೧. ಸುಲಭವಲ್ಲದುದು. ೨. ಕಾಡು; ಅಡವಿ. ೩. ದಟ್ಟಣೆ; ನಿಬಿಡತೆ. ೪. ದೊಡ್ಡವನು; ಗೌರವಸ್ಥ. (ಗು). ೫. ಕಷ್ಟವಾದ; ಸುಲಭವಲ್ಲದ. ೬. ದಟ್ಟವಾದ; ನಿಬಿಡವಾದ.

ಗಹ್ವರ (ನಾ). ೧. ಗವಿ; ಗುಹೆ. ೨. ಕಾಡು; ವನ. ೩. ತಗ್ಗು; ಹಳ್ಳ. (ಗು). ೪. ಪ್ರವೇಶಿಸಲು ಆಗದ; ಅಗಮ್ಯವಾದ. ೫. ಆಳವಾದ.

ಗಹ್ವರಿ (ನಾ). ೧. ಭೂಮಿ. ೨. ಗುಹೆ.

ಗಳಂತಿಗೆ ೧. = ಗಲಂತಿಕೆ. ೨. ಕೋಣೆ; ಕೊಠಡಿ.

ಗಳಗೆ (ನಾ). ೧. ದವಸಧಾನ್ಯಗಳನ್ನು ತುಂಬುವ ಬಿದಿರಿನ ದೊಡ್ಡ ಗೂಡೆ. ೨. ಬುಟ್ಟಿ; ಕುಕ್ಕೆ.

ಗಳಬಳ (ನಾ). ಗದ್ದಲ; ಗಲಾಟೆ.

ಗಳಲೆ (ನಾ). ಕಂಕುಳು ಮೊದಲಾದ ಸಂಧಿಗಳಲ್ಲಿ ಏಳುವ ಗಂಟು; ಹದಗಡಲೆ.

ಗಳವತ್ತಿಗೆ (ನಾ). ಆನೆ ಅಥವಾ ಕುದುರೆಯ ಕೊರಳಿನ ಪಟ್ಟಿ.

ಗಳಿಕೆ (ನಾ). ಸಂಪಾದನೆ; ಆದಾಯ.

ಗಳಿಗೆ ೧. = ಗಟಿಗೆ. ೨. ವೀಳ್ಯದೆಲೆ, ಬಟ್ಟೆ ಮುಂತಾದುವುಗಳ ಮಡಿಕೆ, – ಪದರ. ~ಮುರಿ = ಹೊಸಬಟ್ಟೆಯ ಮಡಿಕೆಯನ್ನು ಮೊದಲನೆಯ ಸಲ ಬಿಚ್ಚು.

ಗಳಿಬಿಳಿ (ನಾ). ೧. ಸರಳತನ; ಕಪಟವಿಲ್ಲದಿರುವಿಕೆ. (ಗು). ೨. ಸರಳವಾದ; ಸಲುಗೆಯ.

ಗಳಿಮೆ = ಗಳಿಕೆ.

ಗಳಿಯಿಸು (ಕ್ರಿ). ೧. ಜೋಲುಬೀಳು; ನೇತುಬೀಳು. ೨. ಸೋರು; ಸ್ರವಿಸು. ೩. ಹರಡು; ವ್ಯಾಪಿಸು. ೪. ಬರಿದಾಗು; ಖಾಲಿಯಾಗು.

ಗಳಿಲನೆ (ಅ). ವೇಗವಾಗಿ; ಶೀಘ್ರವಾಗಿ.

ಗಳಿಸು (ಕ್ರಿ). ಸಂಪಾದಿಸು; ಆರ್ಜಿಸು.

ಗಳು (ನಾ). ೧. ಬಿದಿರುಕೋಲು. ೨. ಜೋಳ ಮುಂತಾದುವುಗಳ ದೇಟು.

ಗಟಿ(ಳ)ಗಟಿ(ಳ)ನೆ (ಅ). ೧. ಬೇಗನೆ. ೨. ನಿರಂತರವಾಗಿ; ಎಡೆಬಿಡದೆ.

ಗಟಿ(ಳ)ಗಟಿ(ಳಿ)ಸು (ಕ್ರಿ). ೧. ಎಡೆಬಿಡದೆ ಸುರಿ. ೨. ತ್ವರೆಗೊಳ್ಳು. ೩. ಮರುಗು; ವ್ಯಥೆಪಡು.

ಗಟಿ(ಳ)ಪ (ನಾ). ೧. ಅರ್ಥಹೀನವಾಗಿ ಮಾತನಾಡುವವನು. ೨. ಸುಳ್ಳು ಹೇಳುವವನು; ಸುಳ್ಳ.

ಗಟಿ(ಳ)ಪು (ಕ್ರಿ). ೧. ಸುಮ್ಮನೆ ಮಾತನಾಡ; ಜಲ್ಪಿಸು. ೨. ಮತ್ತೆಮತ್ತೆ ಧ್ವನಿಮಾಡು. ೩. ಸುಳ್ಳುಹೇಳು.

ಗಟ(ಳ)ಹು = ಗಟಿಪು.
ಗಟಿ¹(ಳಿ)ಗೆ (ನಾ) ೧. ಇಪ್ಪತ್ತು ನಾಲ್ಕು ನಿಮಿಷಗಳ ಅವಧಿ. ೨. ಘಟವಾದ್ಯ. ~ಬ(ವ)ಟ್ಟಲ್ = ೧.ಲಗ್ನದ ಮುಹೂರ್ತವನ್ನು ತಿಳಿಸುವ ಬಟ್ಟಲು. ೨.ಧಾರಾಪಾತ್ರೆ; ಗಲಂತಿಕೆ.
ಗಟಿ¹(ಳಿ)ಯಿಂಸು (ಕ್ರಿ). ೧. ಸಂಪಾದಿಸು; ಗಳಿಸು. ೨. ಸಂಭವಿಸು; ಉಂಟಾಗು. ೩. ಪಡೆ; ತಾಳು.
ಗಟಿ²(ಳಿ) (ನಾ). ೧. ಬಿದಿರು ಕೋಲು. ೨. ಕಡೆಯುವ ಕೋಲು; ಮಂತು. ೩. ಬಾಣ. ೪. ಭೂಮಿಯನ್ನು ಅಳೆಯುವ ಒಂದು ಅಳತೆ. ~ಕಾಱ(ರ)= ೧.ಬಿದಿರು, ಗಳುವಿನಲ್ಲಿ ವ್ಯವಹರಿಸುವವನು. ೨.ಡೊಂಬರವನು. ೩. ಅಂಬಿಗ. ೪. ಕಟ್ಟಿಗೆಕಾರ; ವೇತ್ರಧಾರಿ.
ಗಟ್ದಿ(ಳ್ದಿ) (ನಾ). ನೀರಾವರಿಭೂಮಿ; ತರಿ ಜಮೀನು; ಗದ್ದೆ.
ಗಾಂಗ (ನಾ). ೧. ಭೀಷ್ಮ. ೨. ಕಾರ್ತಿಕೇಯ. (ಗು). ೩. ಗಂಗಾನದಿಗೆ ಸಂಬಂಧಿಸಿದ; ಗಂಗೆಯಲ್ಲಿ ಹುಟ್ಟಿದ.
ಗಾಂಗೇಯ (ನಾ). ೧. ಗಂಗಾನದಿಯ ಮಗ. ೨.ಭೀಷ್ಮ. ೩.ಚಿನ್ನ; ಬಂಗಾರ. ೪. ಬಿಳಿಯ ಬಣ್ಣ; ಧವಳತೆ.
ಗಾಂಜಾ (ನಾ). ಅಮಲೇರಿಸುವ ಒಂದು ಬಗೆಯ ವನಸ್ಪತಿ ಮತ್ತು ಅದರಿಂದ ಮಾಡಿದ ಮಾದಕ ಪದಾರ್ಥ.
ಗಾಂಡು (ನಾ). ೧.ದೊಡ್ಡ ದೊಣ್ಣೆ. ೨.ಬುದ್ಧಿಯಿಲ್ಲದ ಟೊಣಪ.
ಗಾಂಧರ್ವ (ನಾ). ೧. ಸಂಗೀತ ಶಾಸ್ತ್ರ. ೨. ನರ್ತನ; ನಾಟ್ಯ. ೩. ಕುದುರೆ. ೪.ಗಂಧರ್ವರ ಗುಂಪು, –ಸಮೂಹ. (ಗು). ೫. ಗಂಧರ್ವರಿಗೆ ಸಂಬಂಧಿಸಿದ. ~ವಿದ್ಯೆ = ಸಂಗೀತ ವಿದ್ಯೆ. ~ವಿವಾಹ = ವಧೂವರರು ಪರಸ್ಪರ ಮೆಚ್ಚಿ ತಾವೇ ಮಾಡಿಕೊಳ್ಳುವ ಮದುವೆ.
ಗಾಂಧಾರಿ (ನಾ). ೧. ಧೃತರಾಷ್ಟ್ರನ ಹೆಂಡತಿ. ೨. ಒಂದು ಜಾತಿಯ ಸಸ್ಯ; ದೇವದಾಳಿ ಗಿಡ; ಮಂಚಿಪತ್ರೆ.
ಗಾಂಪ (ನಾ). ಬುದ್ಧಿಯಿಲ್ಲದವನು; ದಡ್ಡ.
ಗಾಂಪು (ನಾ). ದಡ್ಡತನ; ಹೆಡ್ಡತನ.
ಗಾಂಭೀರ್ಯ (ನಾ). ೧. ಸುಖದುಃಖ ಮೊದಲಾದುವುಗಳಲ್ಲಿ ವಿಕಾರ ಹೊಂದದ ಚಿತ್ತವೃತ್ತಿ. ೨. ಆಳವಾಗಿರುವಿಕೆ; ಗುಣ್ಪು.
ಗಾಗಳ (ನಾ). ಗದ್ದಲ; ಗಲಾಟೆ.
ಗಾಜು = ಕಾಜು.
ಗಾಜುಗೋಜು (ನಾ). ೧. ಒಂದಕ್ಕೊಂದು ಬೆರೆಯುವುದು; ಅಸ್ತವ್ಯಸ್ತತೆ. ೨. ಸುತ್ತುಮಾತು; ಬಳಸುನುಡಿ.
ಗಾಟ (ನಾ). ದೊಡ್ಡದಾಗಿರುವಿಕೆ; ಹಿರಿದು.
ಗಾಠಾಯಿಸು (ಕ್ರಿ). ೧. ಭೇಟಿಯಾಗು; ಕಾಣು. ೨. ಮಾಡು; ಆಚರಿಸು.
ಗಾಡ (ನಾ). ೧. ಹೆಚ್ಚಳ; ಅತಿಶಯ. ೨.ನಿಶ್ಚಯ; ದೃಢತೆ. ೩. ಬೇಗ; ಶೀಘ್ರ. ೪. ಸಾಡೆ ಹಿಡಿಯುವ ಚಕ್ರ; ಚರಕಿ. ~ಇಸು = ೧. ಬಿಗಿಯಾಗು; ಬಲವಾಗು. ೨. ಹರಡು; ವ್ಯಾಪಿಸು. ೩. ಹೊಡೆ; ಬಾರಿಸು.
ಗಾಡಿ (ನಾ). ೧. ಚೆಲುವು; ಸೊಬಗು. ೨. ಚೆಲುವೆ; ಸುಂದರಿ. ೩. ಬಂಡಿ; ಶಕಟ. ೪. ಇಂದ್ರಜಾಲ; ಗಾರುಡಿ. ೫. ಮೋಸ; ವಂಚನೆ. ೬.ಮರದ ತುಂಡನ್ನು ಇನ್ನೊಂದು ಮರದ ತುಂಡಿಗೆ ಸೇರಿಸಲು ಬಡಗಿಯು ತೋಡುವ ಹಳ್ಳ; ವೆಜ್ಜ. ~ಇಗ =೧.ಸೊಗಸುಗಾರ; ಚೆಲುವ. ೨.ಗಾರುಡಿಗ; ಇಂದ್ರಜಾಲಿಗ. ೩.ಮೋಸಗಾರ; ವಂಚಕ. ~ಇಸು= ಎದ್ದು ಕಾಣು; ಚೆನ್ನಾಗಿ ಕಾಣು. ~ಕತ್ತರಿ = ಬಂಡಿಯಲ್ಲಿ ಬಂಡಿ ಹೊಡೆಯು

ವವನು ಕುಳಿತುಕೊಳ್ಳುವ ಸ್ಥಳ. ~ಕಾ(ಗಾ)ಱ(ರ) = ಗಾಡಿಗ.

ಗಾಢ (ನಾ). ೧. ಹೆಚ್ಚಳ; ಅತಿಶಯ. ೨. ಜಾಗ್ರತೆ; ತ್ವರಿತ. ೩. ವೇಗವಾದ ನಡಗೆ. (ಗು). ೪. ಹೆಚ್ಚಾದ; ಅತಿಶಯವಾದ. ೫. ದಟ್ಟವಾದ; ಒತ್ತಾದ. ~ಅಂಧಕಾರ = ಕಗ್ಗತ್ತಲೆ; ದಟ್ಟವಾದ ಕತ್ತಲೆ. ~ಇಕೆ = ೧. ಉರವಣೆ; ಉತ್ಕಟತೆ. ೨. ಅತಿಶಯ; ಹೆಚ್ಚಳ.

ಗಾಣ (ನಾ). ೧. ಎಣ್ಣೆಯನ್ನು ಅಥವಾ ಕಬ್ಬಿನ ರಸವನ್ನು ತೆಗೆಯುವ ಯಂತ್ರ. ೨. ಮೀನು ಹಿಡಿಯುವ ಕೊಕ್ಕೆ; ಗಾಳ. ೩. ಗಾನ; ಗಾಯನ. ೪. ಗಾಯಕ; ಸಂಗೀತಗಾರ. ~ಇಗ = ಗಾಣವನ್ನು ಹೊಡೆಯುವವನು; ತೆಲ್ಲಿಗ.

ಗಾಣಿಕ್ಯ (ನಾ). ಸೂಳೆಯರ ಗುಂಪು.

ಗಾತ್ರ (ನಾ). ೧. ಮೈ; ಒಡಲು. ೨. ಅಂಗ; ಅವಯವ. ೩. ಆಕಾರ. ೪. ದಪ್ಪ; ತೋರ. ೫. ಆನೆಯ ಮುಂಗಾಲು. ೬. ಚರ್ಮ; ತೊಗಲು. ೭. ಒಂದು ಸಾವಿರ ವೀಳೆಯದೆಲೆಗಳುಳ್ಳ ಕಟ್ಟು.

ಗಾಥೆ (ನಾ). ೧. ಪದ್ಯ. ೨. ಹಾಡು; ಗಾನ. ೩. = ಗಾದೆ.

ಗಾದರಿ (ನಾ). ೧. ಚಾವಟಿ, ಕೋಲು ಮೊದಲಾದುವುಗಳ ಪೆಟ್ಟಿನಿಂದ ಮೈಮೇಲೆ ಏಳುವ ಗುರುತು. ೨. ಸೊಳ್ಳೆ ಮುಂತಾದುವುಗಳ ಕಡಿತದಿಂದುಂಟಾಗುವ ಗಂದೆ.

ಗಾದಿ (ನಾ). ೧. ಅರಳೆಯನ್ನು ತುಂಬಿ ಮಾಡಿದ ಹಾಸುಗೆ. ೨. ಅಧಿಕಾರಸ್ಥಾನ; ಗದ್ದುಗೆ. ೩. ಒಂದು ಬಗೆಯ ಚರ್ಮರೋಗ; ಗಂದೆ.

ಗಾದಿಗೆ (ನಾ). ಕೋಟೆಯ ಅಗಳು; ಕಂದಕ.

ಗಾದೆ (ನಾ). ನಾಣ್ಣುಡಿ; ಲೋಕೋಕ್ತಿ.

ಗಾನ (ನಾ). ಹಾಡು; ಸಂಗೀತ. ~ಸಾತ್ಯ = ಹಾಡಲು ಬಳಸುವ ಪದ್ಯ.

ಗಾಬರಿ (ನಾ). ಭಯ; ಅಂಜಿಕೆ.

ಗಾವುಂಡ (ನಾ). ಗ್ರಾಮದ ಮುಖ್ಯಸ್ಥ; ಪಟೇಲ; ಗೌಡ.

ಗಾಮುಂಡು (ನಾ). ೧. ಗೌಡನ ವೃತ್ತಿ; ಗೌಡಿಕೆ. ೨. = ಗಾವುಂಡ.

ಗಾಯ (ನಾ). ಆಯುಧ ಮೊದಲಾದುವುಗಳ ಹೊಡೆತದಿಂದ ದೇಹದಲ್ಲುಂಟಾಗುವ ಏರು, -ಕ್ಷತ.

ಗಾಯಕ (ನಾ). ೧. ಸಂಗೀತಗಾರ; ಹಾಡುಗಾರ. ೨. ಸಂಗೀತ; ಗಾಯನ.

ಗಾಯತ್ರಿ (ನಾ). ೧. ಒಂದು ಮಂತ್ರವಿಶೇಷ. ೨. ಒಂದು ಜಾತಿಯ ಮರ; ಕಗ್ಗಲಿ. ೩. ಒಂದು ಬಗೆಯ ಛಂದಸ್ಸು. ೪. ದುರ್ಗೆ.

ಗಾಯನ (ನಾ). ಹಾಡುಗಾರಿಕೆ; ಹಾಡುವುದು.

ಗಾರಣ (ನಾ). ೧. ಚಾಡಿ ಹೇಳುವುದು; ದೂರು. ೨. ಅವಾಂತರ; ಹಗರಣ. ೩. ಇತರರ ದೋಷವನ್ನು ಹೇಳುವುದು.

ಗಾರಿಗೆ (ನಾ). ೧. ಒಂದು ಬಗೆಯ ಸಿಹಿಭಕ್ಷ್ಯ. ೨. ಕೋಟೆಯ ಸುತ್ತಲೂ ಇರುವ ಕಂದಕ.

ಗಾರು (ನಾ). ೧. ಗಾಸಿ; ಹಿಂಸೆ. ೨. ಉಷ್ಣದಿಂದ ಮೈಮೇಲೆ ಏಳುವ ಬೊಕ್ಕೆ.

ಗಾರುಡ (ನಾ). ೧. ಗರುಡನಿಗೆ ಸಂಬಂಧಿಸಿದುದು. ೨. ಹಾವಾಡಿಗ. ೩. = ಗಾರುಡಿ. ೪. ಗಾರುಡಮಣಿ. ೫. ಗರುಡಮಂತ್ರ. ~ಇಗ = ೧. ಗಾರುಡವಿದ್ಯೆಯನ್ನು ಬಲ್ಲವನು; ಹಾವು ಹಿಡಿಯುವ ವಿದ್ಯೆಯನ್ನು ತಿಳಿದವನು. ೨. ಹಾವಿನ ಕಡಿತಕ್ಕೆ ಮದ್ದು ಮಾಡುವವನು; ವಿಷವೈದ್ಯ. ೩. ಯಕ್ಷಿಣಿಗಾರ; ಐಂದ್ರಜಾಲಿಕ. ~ಇಸು = ೧. ವಿಷ ಇಳಿಯುವಂತೆ ಮಂತ್ರಹಾಕು. ೨. ಮಂಕು ಕವಿಸು; ವಶಪಡಿಸಿಕೊಳ್ಳು. ೩. ಗದರಿಸು.

ಗಾರುಡಿ (ನಾ). ೧. ಗರುಡ ಸಂಬಂಧವಾದ ವಿದ್ಯೆ; ಸರ್ಪವಶೀಕರಣವಿದ್ಯೆ. ೨. ಕಣ್ಕಟ್ಟು; ಇಂದ್ರಜಾಲ.

ಗಾರೆ (ನಾ). ಸುಣ್ಣ ಮತ್ತು ಮರಳುಗಳ ಮಿಶ್ರಣ ; ಗಚ್ಚು.

ಗಾಬು(ರು) (ನಾ). ೧. ನಯವಲ್ಲದುದು ; ಒರಟು. ೨. ದಿಗಿಲು ; ಗಾಬರಿ. ೩. ಹಿಂಸೆ; ಕಾಟ. ೪. ತುಚ್ಛ; ಹೀನ. (ಗು). ೫. ಶುಷ್ಕವಾದ ; ಒಣಗಿದ. ~ಆಗು = ೧. ಒಣಗಿ ಹೋಗು ; ಶುಷ್ಕವಾಗು. ೨. ಉದ್ರೇಕಗೊಳ್ಳು ; ಆವೇಶಗೊಳ್ಳು. ೩. ಗಾಬರಿಗೊಳ್ಳು. ~(ಂ)ಕೆ(ಗೆ)ಡು = ೧. ಒಣಗು; ರಸಹೀನವಾಗು. ೨. ಶಕ್ತಿಹೀನವಾಗು. ೩. ತೊಂದರೆಗೆ ಸಿಕ್ಕಿಕೊಳ್ಳು. ೪. ಧಿಕ್ಕರಿಸು; ನಿಂದಿಸು. ~ಮಾಡು = ೧. ಹಾಳುಮಾಡು; ನಾಶಮಾಡು. ೨. ಹಿಂಸಿಸು. ೩. ಕೀಳು ಮಾಡು.

ಗಾರ್ದಭ (ನಾ). ೧. ಕತ್ತೆ ; ರಾಸಭ. (ಗು). ೨. ಕತ್ತೆಗೆ ಸಂಬಂಧಿಸಿದ.

ಗಾರ್ಹಪತ್ಯ (ನಾ). ಯಜ್ಞಯಾಗಗಳಿಗೆ ಸಂಬಂಧಪಟ್ಟ ಅಗ್ನಿತ್ರಯಗಳಲ್ಲಿ ಒಂದು.

ಗಾರ್ಹಸ್ಥ್ಯ (ನಾ). ಗೃಹಸ್ಥನಾಗಿರುವಿಕೆ ; ಗೃಹಸ್ಥಾಶ್ರಮ.

ಗಾಲವ (ನಾ). ೧. ಒಂದು ಜಾತಿಯ ಸಸ್ಯ ; ಲೋಧ್ರ. ೨. ಒಬ್ಬ ಋಷಿಯ ಹೆಸರು.

ಗಾಲಿ (ನಾ). ಚಕ್ರ ; ಉರುಳು. ~ಪ(ವ)ಕ್ಕಿ = ಎಣೆವಕ್ಕಿ ; ಚಕ್ರವಾಕ.

ಗಾಲೀಚ (ನಾ). ಚಿತ್ರರಂಜಿತವಾದ ಜಮಖಾನ.

ಗಾವ (ನಾ). ಗ್ರಾಮ ; ಹಳ್ಳಿ.

ಗಾವಟ ೧. = ಗಾವಠಿ. ೨. ಉತ್ತಮವಲ್ಲದುದು. ೩. ಸರಕಾರಕ್ಕೆ ಸಂಬಂಧವಿಲ್ಲದುದು ; ಖಾಸಗಿ. (ಗು). ೪. ಹಳ್ಳಿಗೆ ಸಂಬಂಧಿಸಿದ ; ಗ್ರಾಮೀಣ.

ಗಾವಟೆ (ನಾ). ಒಂದು ಜಾತಿಯ ಮರ.

ಗಾವಠಿ (ನಾ). ದೇಶೀಯವಾದುದು ; ನಾಟಿ.

ಗಾವಣ (ನಾ). ೧. ಹಳ್ಳಿಯವನು ; ಗ್ರಾಮೀಣ ಪ್ರದೇಶದವನು. ೨. ನೆಲೆ ; ಆಶ್ರಯಸ್ಥಾನ.

ಗಾವದಿ (ನಾ). ೧. ದಡ್ಡ ; ಮೂಢ. (ಗು). ೨. ಹೆಡ್ಡನಾದ; ದಡ್ಡನಾದ.

ಗಾವರ (ನಾ). ೧. ಗದ್ದಲ ; ಗಲಾಟೆ. ೨. ಗುಂಜಾರವ ; ಝೇಂಕಾರ. ~ಇಸು = ೧. ಗದ್ದಲಮಾಡು ; ಸದ್ದುಮಾಡು. ೨. ಝೇಂಕರಿಸು.

ಗಾವಳಿ (ನಾ). ೧. ಸದ್ದು ; ಗದ್ದಲ. ೨. ರಂಪ; ರಗಳೆ. ೩. ಜನರ ಗುಂಪು, -ಸಮೂಹ. ೪. ಕಷ್ಟ ; ತೊಂದರೆ. ೫. ಠೀವಿ ; ಗತ್ತು.

ಗಾವಿಲ(ಳ) (ನಾ). ೧. ಹಳ್ಳಿಯವನು ; ಗ್ರಾಮಸ್ಥ. ೨. ಗ್ರಾಮಾಧಿಕಾರಿ ; ಪಟೇಲ. ೩. ಎಗ್ಗ ; ಹೆಡ್ಡ.

ಗಾವು (ನಾ). ಗ್ರಾಮದೇವತೆಗಳ ಮುಂದೆ ಬಲಿಗಾಗಿ ಇಟ್ಟಿರುವ ಪ್ರಾಣಿಯನ್ನು ಪೂಜಾರಿಯು ಹಲ್ಲಿನಿಂದ ಕಚ್ಚಿಕೊಲ್ಲುವುದು.

ಗಾವುಂಡ = ಗಾಮುಂಡ.

ಗಾವುಂಡಿ (ನಾ). ಗ್ರಾಮಾಧಿಕಾರಿಯ ಹೆಂಡತಿ.

ಗಾವುದ (ನಾ). ದೂರವನ್ನು ಅಳೆಯುವ ಒಂದು ಪ್ರಮಾಣ.

ಗಾವುದು = ಗಾವುದ.

ಗಾಸಿ (ನಾ). ೧. ತೊಂದರೆ ; ಹಿಂಸೆ. ೨. ದಣಿವು; ಆಯಾಸ. ೩. ಕುದುರೆಯ ಜೀನಿನ ಮೇಲೆ ಅಲಂಕಾರಕ್ಕಾಗಿ ಹಾಕುವ ವಸ್ತ್ರ.

ಗಾಹ (ನಾ). ೧. ಅಸಾಧ್ಯ ; ಗಹನ. ೨. ಮುಳುಗುವಿಕೆ ; ಅವಗಾಹ. ೩. ಅಡಗಿಕೊಳ್ಳುವುದು.

ಗಾಹಿಲ (ನಾ). ಕಷ್ಟ ; ತೊಂದರೆ.

ಗಾಹು (ನಾ). ೧. ಮೋಸ ; ವಂಚನೆ. ೨. ಗುರಿ; ಉದ್ದೇಶ. ೩. ಆಳ. ೪. ಹಿಡಿತ ; ಪ್ರಭಾವ. ೫. (ಆಳವಾದ) ತಿಳಿವು, -ಅರಿವು. ~ಇಸು = ೧. ಮೋಸಮಾಡು. ೨. ಹಾಸ್ಯಮಾಡು. ೩. ಹರಡು ; ವ್ಯಾಪಿಸು. ೪. ಅನುಭವಿಸು. ೫. ಮುಳುಗು. ~ಕಾಱ(ರ) = ೧. ಮೋಸ

ಗಾರ; ಕಪಟಿ. ೨. (ಆಳವನ್ನು) ತಿಳಿದವನು; ಜ್ಞಾನಿ. ~ಗತಕ = ೧. ಕಪಟ; ಮೋಸ. ೨. ಭ್ರಮೆ; ಭ್ರಾಂತಿ.

ಗಾಹೆ = ಗಾಥೆ.

ಗಾಳ (ನಾ). ೧. (ಮೀನು ಹಿಡಿಯುವ) ಕೊಕ್ಕೆ. ೨. ತಂತ್ರ; ಹೂಟ. ~ಕ(ಗ)ತ್ತರಿ = ಗಂಟಲ ಬಳೆಯನ್ನು ಕತ್ತರಿಸುವ ಸಾಧನ; ಕೊರಳುಗತ್ತರಿ.

ಗಾಳಿ (ನಾ). ೧. ಎಲರು; ವಾಯು. ೨. ದೆವ್ವ; ಪಿಶಾಚಿ. ೩. ಸುಳಿವು; ಕುರುಪು. ೪. ಗೀಳು; ಚಟ. ೫. ಪ್ರಭಾವ. ೬. ಗಲಭೆ; ತಂಟೆ. ~ಕೊಡೆ = ವೈಮಾನಿಕರು ವಿಮಾನದಿಂದ ಭೂಮಿಗೆ ಧುಮುಕುವಾಗ ಉಪಯೋಗಿಸುವ ಕೊಡೆ; ಪ್ಯಾರಾಚೂಟು. ~ಕೋಳಿ = ವಾಯುವಿನ ದಿಕ್ಕನ್ನು ಸೂಚಿಸುವುದು; ಗಾಳಿಪುಂಜ. ~ಗಾಜ(ರ) = ಒರಟ; ತುಂಟ. ~ಗುದ್ದು = ೧. ಗಾಳಿಯನ್ನು ತಿವಿ, ಹೊಡೆ. ೨. ಉಪಯೋಗವಿಲ್ಲದ ಕೆಲಸವನ್ನು ಮಾಡು. ~ಗೋಪುರ = ಕೈಗೂಡದ ಆಸೆ. ~ಪಟ = ಗಾಳಿಯಲ್ಲಿ ಹಾರಿಸುವ ಆಟದ ಪಟ. ~ಬ(ವ)ಟ್ಟೆ = ವಾಯುಮಾರ್ಗ; ಆಕಾಶ. ~ಮಾ(ವಾ)ತು = ೧. ಸುಳ್ಳುಸುದ್ದಿ; ಪೊಳ್ಳುಮಾತು. ೨. ನಿಂದೆ; ಬಯ್ಗುಳು.

ಗಾಳಿಸು (ಕ್ರಿ). ೧. ಹೋಗಲಾಡಿಸು; ದೂರಮಾಡು; ಬೇರ್ಪಡಿಸು. ೨. ಶೋಧಿಸು; ಸೋಸು. ೩. ಸೋರು; ಸುರಿ.

ಗಾಳು (ನಾ). ೧. ಒರಟ; ಧೂರ್ತ. ೨. ಕೆಲಸಕ್ಕೆ ಬಾರದವನು. ೩. ಹಾಳು; ನಾಶ. (ಗು). ೪. ತುಚ್ಛ; ಅಲ್ಪ.

ಗಾಳುಮೇಳು (ನಾ). ೧. ತಿರುವುಮುರುವು; ಅಸ್ತವ್ಯಸ್ತತೆ. ೨. ಆತುರ; ಸಂಭ್ರಮ.

ಗಿಂಜಲು (ನಾ). ಮುದ್ದೆಯಾದುದು; ತುಂಬಬೆಂದಿರುವುದು.

ಗಿಂಜು (ಕ್ರಿ). ೧. (ಹಲ್ಲು) ಕಿಸಿ; ಅಗಲವಾಗಿ ತೆರೆ. ೨. ಎಳೆ; ಜಗ್ಗು. (ನಾ). ೩. ತಿರುಳು. ೪. ಬೀಜ ತುಂಬಿರುವಿಕೆ. ೫. = ಗಿಂಜಲು.

ಗಿಂಟ (ನಾ). ಜೋಡಿ ಹೆಣಿಗೆಯಿಂದ ನೆಯ್ದ ಬಟ್ಟೆ; ಒರಟು ಬಟ್ಟೆ.

ಗಿಂಡಿ (ನಾ). ಕಿರಿದಾದ ಬಾಯುಳ್ಳ ಪಾತ್ರೆ.

ಗಿಂಡು (ಕ್ರಿ). ಚಿವುಟು; ಜಿಗುಟು.

ಗಿಗ್ಗಿರಿ (ನಾ). ಮುತ್ತಿಗೆ; ಆಕ್ರಮಣ.

ಗಿಚ್ಚಿ (ನಾ). ೧. ಒಂದು ಬುಗುರಿಯಿಂದ ಮತ್ತೊಂದು ಬುಗುರಿಗೆ ಹೊಡೆದು ಮಾಡುವ ಗೀಚು. ೨. ಕವಡೆಯಾಟದ ಒಂದು ಹಂತ.

ಗಿಜಗುಟ್ಟು (ಕ್ರಿ). ೧. ಜುಗುಪ್ಸೆಯಾಗುವಂತೆ ಜಿಗುಟಾಗಿರು; ಗಿಜಿಗಿಜಿಯಾಗು. ೨ ಗದ್ದಲದಿಂದ ಕೂಡಿರು; ನಿಬಿಡವಾಗಿರು.

ಗಿಜರು (ನಾ). ೧. ಗದ್ದಲ; ಗಲಾಟೆ. ೨. ಕಾಡಿನ ದಟ್ಟವಾದ ಪ್ರದೇಶ; ದಟ್ಟಡವಿ.

ಗಿಜವಾಯಿ (ನಾ). ಕಿಸಿಬಾಯಿ; ತೆರೆದ ಬಾಯಿ.

ಗಿಜಿಗಿಜಿ (ನಾ). ೧. ಅಸಹ್ಯ ಬರುವಂತೆ ಅಂಟಂಟಾಗಿರುವುದು. ೨. ಒಂದು ಅನುಕರಣ ಧ್ವನಿ.

ಗಿಟಕು (ನಾ). ತೆಂಗಿನಕಾಯಿಯ ಒಣತಿರುಳು; ಒಣಕೊಬ್ಬರಿ.

ಗಿಟಗಿರಿ (ಕ್ರಿ). ೧. ಅಮುಕು; ಹಿಸುಕು. ೨. ತುಂಬು; ಕಿಕ್ಕಿರಿ.

ಗಿಟ್ಟು (ಕ್ರಿ). ೧. ತಾಗು; ಸೋಂಕು. ೨. ದೊರಕು; ಪ್ರಾಪ್ತವಾಗು; ದಕ್ಕು. ~ಇಸು = ದೊರಕಿಸಿಕೊಳ್ಳು; ಸಂಪಾದಿಸು.

ಗಿಡ ೧. = ಗಿಡು. ೨. ವಶೀಕರಣ. ~ಬೀಳು = ಗಿಡಗಳ ಮರೆಯಲ್ಲಿ ಅಡಗು; ತಲೆಮರೆಸಿಕೊಳ್ಳು. ~ಮಾಡು = ೧. ಮಾಟಮಾಡು. ೨. ಕೈಮದ್ದು ಹಾಕು.

ಗಿಡಗ = ಗಿಡಿಗ. ~ಕಣ್ಣು = ೧. ಗಿಡಗನ ಕಣ್ಣು. ೨. ಬಹಳ ಸೂಕ್ಷ್ಮವಾದ ದೃಷ್ಟಿ.

ಗಿಡಿ (ಕ್ರಿ). ೧. ತುರುಕು ; ಜಡಿದು ತುಂಬು. (ನಾ). ೨. ಒಂದು ಜಾತಿಯ ಪಕ್ಷಿ. ~ಕಿ(ಗಿ)ಱಿ(ರಿ)= ಹಲ್ಲುಬಿಡು; ಹಲ್ಲುಕಿಸಿ.

ಗಿಡಿಗ (ನಾ). ಮಾಂಸಾಹಾರಿಯಾದ ಒಂದು ಜಾತಿಯ ಪಕ್ಷಿ; ಡೇಗೆ.

ಗಿಡಿಗಿಡಿ (ಗು). ಸಡಿಲವಾದ. ~ಜಂತ್ರ = ತೊಗಲು ಹಾಗು ಎಲುಬಿನ ಗೂಡು ಮಾತ್ರವಿರುವ ದೇಹ ; ಶಿಥಿಲವಾದ ಶರೀರ.

ಗಿಡಿಗು (ಕ್ರಿ). ತುರುಕು ; ಬಲವಂತವಾಗಿ ತುಂಬು.

ಗಿಡಿಬಿಡಿ (ನಾ). ಒಂದು ವಾದ್ಯ ವಿಶೇಷ.

ಗಿಡಿವು (ನಾ). ರಾಶಿ ; ಒಡ್ಡು.

ಗಿಡು (ನಾ). ೧. ಸಣ್ಣಮರ. ೨. ಮರ ; ವೃಕ್ಷ.

ಗಿಡುಂಗ = ಗಿಡಿಗ.

ಗಿಡ್ಡ (ನಾ). ೧. ಕುಳ್ಳಾದುದು. ೨. ಹೆಚ್ಚು ಎತ್ತರವಿಲ್ಲದವನು ; ಕುಳ್ಳ. ೩. ಕುಳ್ಳಾದ ಎತ್ತು. (ಗು). ೪. ಸಣ್ಣದಾದ ಹಾಗು ದಪ್ಪವಾದ.

ಗಿಡ್ಡಂಗಿ (ನಾ). ೧. ಗಡಂಗು ; ಗುದಾಮು. ೨. ಹೆಂಡದ ಅಂಗಡಿ. ೩. ಕಾರಾಗೃಹ ; ಸೆರೆಮನೆ. ೪. ಮೋಟು ಅಂಗಿ; ವಾಸ್ಕೋಟು.

ಗಿಡ್ಡು (ನಾ). ೧. ಕುಳ್ಳು; ಗುಜ್ಜು. ೨. ಊದು ಕಡ್ಡಿಯನ್ನು ಸಿಕ್ಕಿಸಲು ಉಪಯೋಗಿಸುವ ಸಾಧನ. ೩. ಗಿಡ್ಡನಾದ ವ್ಯಕ್ತಿ ; ಕುಳ್ಳ.

ಗಿಣಿ = ಗಿಳಿ.

ಗಿಣ್ಣಲ್ (ನಾ). ಸಣ್ಣಪಾತ್ರೆ ; ಗಿಂಡಿ.

ಗಿಣ್ಣೆಲ್(ಲು) = ಗಿಣ್ಣಲ್.

ಗಿಣ್ಣು (ನಾ). ೧. ಎಳಗಂದಿಯ ಹಾಲು. ೨. ಎಳಗಂದಿಹಾಲನ್ನು ಕಾಯಿಸಿ ಮಾಡುವ ಒಂದು ಬಗೆಯ ಸಿಹಿತಿಂಡಿ. ೩. = ಗೆಣ್ಣು.

ಗಿದ್ದ (ನಾ). ೧. ನಾಲ್ಕರಲ್ಲಿ ಒಂದು ಪಾಲು ; ಕಾಲುಭಾಗ. ೨. ಬೇಳೆ ಮುಂತಾದ ಘನ ವಸ್ತುಗಳ ಒಂದು ಅಳತೆ.

ಗಿಬರು (ಕ್ರಿ). ಗೀರು ; ಪರಚು ; ಗೆಬರು.

ಗಿರಕಿ (ನಾ). ೧. ನಾಲ್ಕನೆಯ ಒಂದು ಭಾಗ ; ಗಿದ್ದ. ೨. ಲಾಗ ; ದಿಂಡುರುಳಿಕೆ. ೩. ಗಿರಕ್, ಗಿರಕ್ ಎಂದು ಶಬ್ದ ಮಾಡುವುದು. ~ಚಡಾವು= ಗಿರಕ್ ಎಂದು ಶಬ್ದ ಮಾಡುವ ಮೆಟ್ಟು.

ಗಿರಕು (ನಾ). ೧. ದಟ್ಟವಾಗಿರುವುದು ; ನಿಬಿಡತೆ. ೨. ದೃಢವಾಗಿ ಜೋಡಿಸಿರುವುದು ; ಬಿಗಿಯಾದುದು.

ಗಿರಗಟ್ಟೆ (ನಾ). ಗಾಳಿಗೆ ತಿರುಗುವ ಆಟದ ಚಕ್ರ ; ಗಿರುಗಟೆ.

ಗಿರಣಿ (ನಾ). ೧. ಒಂದು ಬಗೆಯ ವ್ರಣ ರೋಗ ; ಹಿರೇಬೇನೆ. ೨. ಯಂತ್ರಗಳಿಂದ ಸಜ್ಜಿತವಾದ ಕಾರ್ಖಾನೆ.

ಗಿರದೆ (ನಾ). ದುಂಡನೆಯ ಪುಟ್ಟದಿಂಬು.

ಗಿರಮಿಟ್ಟು (ನಾ). ಮರದಲ್ಲಿ ತೂತು ಕೊರೆಯುವ ಸಾಧನ ; ಬೈರಿಗೆ.

ಗಿರವಿ (ನಾ). ಅಡವು ; ಒತ್ತೆ.

ಗಿರಾಕಿ (ನಾ). ೧. ಕೊಂಡುಕೊಳ್ಳುವವನು ; ಗ್ರಾಹಕ. ೨. ಆಸಾಮಿ ; ವ್ಯಕ್ತಿ. ೩. ಬೇಡಿಕೆ.

ಗಿರಿ (ನಾ). ೧. ನುಂಗುವುದು. ೨. ಬೆಟ್ಟ ; ಪರ್ವತ. ೩. ಇಲಿ ; ಮೂಷಕ. (ಪ್ರ). ೪. ಒಂದು ಭಾವನಾಮ ಪ್ರತ್ಯಯ. ~ಈಶ = ೧. ಹಿಮವಂತ; ಪರ್ವತರಾಜ. ೨. = ಗಿರಿಶ. ~ದುರ್ಗ = ಬೆಟ್ಟದ ಮೇಲಿರುವ ಕೋಟೆ. ~ನಿತಂಬ=ಪರ್ವತದ ಇಳುಕಲು ಪ್ರದೇಶ. ~ಮಲ್ಲಿಗೆ = ಬೆಟ್ಟಮಲ್ಲಿಗೆ ; ಕೊಡಸಿಗೆ. ~ರಾಜ = ಪರ್ವತಗಳ ರಾಜ ; ಹಿಮವಂತ. ~ಸುತ = ಆನೆ ; ಗಜ.

ಗಿರಿಕ = ಗಿರಿಕೆ.

ಗಿರಿಕರ್ಣಿಕೆ (ನಾ). ೧. ಒಂದು ಬಗೆಯ ವನಸ್ಪತಿ ; ವಿಷ್ಣುಕ್ರಾಂತಿ. ೨. ಒಂದು ಜಾತಿಯ ಮರ.

ಗಿರಿಕೆ (ನಾ). ಇಲಿಸುಂಡ ; ಚಿಟ್ಟಲಿ.

ಗಿರಿಜ (ನಾ). ೧. ಗುಡ್ಡಗಾಡಿಗೆ ಸೇರಿದ ಮನುಷ್ಯ; ಮಲೆನಾಡಿನವನು. (ಗು). ೨. ಬೆಟ್ಟದಲ್ಲಿ ಹುಟ್ಟಿದ.

ಗಿರಿಶ (ನಾ). ಪರ್ವತವಾಸಿ; ಶಿವ.

ಗಿರುಗಟಿ = ಗಿರಗಟ್ಟಿ.

ಗಿರುಪಲು (ನಾ). ಹಂಬಲು; ಬಯಕೆ.

ಗಿಜು(ರು) (ಕ್ರಿ). ಭಾವಿಸು; ಭ್ರಮಿಸು.

ಗಿಜು(ರು)ಗಟೆ (ನಾ). ಒಂದು ವಾದ್ಯ ವಿಶೇಷ.

ಗಿರ್ದ (ನಾ). ಕಾಲುಭಾಗ; ಗಿದ್ದ.

ಗಿಲಗಂಚಿ = ಗಿಲಿಗಿಂಚಿ.

ಗಿಲಾಯು (ನಾ). ೧. (ನುಣುಪು ಮಾಡುವುದಕ್ಕಾಗಿ) ಗೋಡೆ ಮೊದಲಾದುವುಗಳಿಗೆ ಗಾರೆ ಬಳಿಯುವುದು. ೨. ಮೆದುಗಾರೆ.

ಗಿಲಾಯಿ = ಗಿಲಾಯು.

ಗಿಲಾವು = ಗಿಲಾಯು.

ಗಿಲಿ (ನಾ). ೧. ಭಯ; ಅಂಜಿಕೆ. ೨. ಗೀಳು.

ಗಿಲಿಕೆ (ನಾ). ೧. ಗಿಲಿಗಿಲಿ ಸದ್ದು ಮಾಡುವ ಒಂದು ಮಕ್ಕಳ ಆಟಿಕೆ. ೨. ಗಿಲಿಗಿಲಿ ಸದ್ದುಮಾಡುವ ಕೋಡಣಸು.

ಗಿಲಿಗಿಂಚಿ (ನಾ). ಒಂದು ಬಗೆಯ ಸಿಹಿತಿಂಡಿ; ಕರ್ಜಿಕಾಯಿ.

ಗಿಲಿಗಿಂಚೆ (ನಾ). ಒಂದು ಜಾತಿಯ ಮರ.

ಗಿಲೀಟು (ನಾ). ೧. ಲೋಹಗಳಿಗೆ ಬಳಿಯುವ ಚಿನ್ನದ ಅಥವಾ ಬೆಳ್ಳಿಯ ಮುಲಾಮು. ೨. ಥಳುಕಿನಿಂದ ಕೂಡಿರುವುದು. ೩. ನಯವಾದ ಮಾತುಗಾರಿಕೆ; ಪುಸಲಾವಣೆ. ~ಮಾಡು = ೧.ಲೇಪ ಕೊಡು; ಹೊಳಪು ಕೊಡು. ೨. ಮುಖಸ್ತುತಿ ಮಾಡು.

ಗಿಲುಬು (ಕ್ರಿ). ಕಾಡಿ ಬೇಡಿ ಸಂಪಾದಿಸು.

ಗಿಲ್ಲು (ಕ್ರಿ). ಗಿಂಡು; ಚಿವುಟು.

ಗಿವುರು (ಕ್ರಿ). ಗೀರು; ಕೆರೆ.

ಗಿಳಂಕರಿಸು (ಕ್ರಿ). ೧. ನುಂಗು; ಕಬಳಿಸು. ೨.(ಗುಟ್ಟು ಮೊದಲಾದುವನ್ನು) ಮುಚ್ಚಿಟ್ಟುಕೊಳ್ಳು.

ಗಿಳಿ (ನಾ). ಕನ್ನಡವಕ್ಕಿ; ಶುಕ; ಕೀರ. ~ಪಾಠ = ಅರ್ಥಮಾಡಿಕೊಳ್ಳದೆ ಉರುಹಾಕುವುದು. ~ಮಾವು = ಮಾವಿನಲ್ಲಿ ಒಂದು ಜಾತಿ; ತೋತಾಪುರಿ.

ಗಿಳಿದೇರ (ನಾ). ಗಿಣಿಯನ್ನು ವಾಹನವಾಗಿ ಉಳ್ಳವನು; ಮನ್ಮಥ.

ಗೀಗೀಪದ (ನಾ). ಒಂದು ಬಗೆಯ ಜಾನಪದ ಗೀತೆ.

ಗೀಚು (ಕ್ರಿ). ೧. ಗೀರು; ಗೆರೆ ಎಳೆ. ೨. ಅಡ್ಡಾದಿಡ್ಡಿಯಾಗಿ ಬರೆ. ೩. ಪರಚು; ಕೆರೆ. (ನಾ).೪. ಗೆರೆ; ಗೀಟು. ೫. ಅಡ್ಡಾದಿಡ್ಡಿಯಾಗಿ ಬರೆದುದು.

ಗೀಜಗ (ನಾ). ಒಂದು ಜಾತಿಯ ಹಕ್ಕಿ; ಖಂಜರೀಟ.

ಗೀಜು (ನಾ). ಕಣ್ಣಿನ ಕೊಳೆ; ಪಿಸುರು.

ಗೀಜುಗ = ಗೀಜಗ.

ಗೀಟು (ನಾ). ೧. ಗೆರೆ; ರೇಖೆ. ೨. ಉದ್ದೇಶ; ಗುರಿ.

ಗೀತ (ನಾ). ೧. ಹಾಡು; ಪದ. (ಗು). ೨. ಹಾಡಲ್ಪಟ್ಟ. ~ರೂಪಕ = ಛಂದೋಬದ್ಧವಾದ ಸಂಭಾಷಣೆಗಳನ್ನೊಳಗೊಂಡಿರುವ ದೃಶ್ಯಕಾವ್ಯ; ಗೀತನಾಟಕ.

ಗೀತಿಕೆ (ನಾ). ೧. ಸಣ್ಣಹಾಡು; ಕೀರ್ತನೆ. ೨. ಛಂದಸ್ಸಿನಲ್ಲಿಯ ಅಂಶಗಣಬದ್ಧವಾದ ಒಂದು ಅಚ್ಚಗನ್ನಡ ವೃತ್ತ.

ಗೀತೆ (ನಾ). ೧. ಹಾಡು; ಪದ. ೨. ಮಹಾಭಾರತದಲ್ಲಿ ಅರ್ಜುನನಿಗೆ ಕೃಷ್ಣನ ಉಪದೇಶದ ಭಾಗ; ಭಗವದ್ಗೀತೆ.

ಗೀರು ೧. = ಗೀಜು. ೨. ಗುರುತುಮಾಡು; ಗೆರೆ ಎಳೆ. ~ಬಳೆ = ಗೆರೆಗಳನ್ನು ಕೆತ್ತಿರುವ ಚಿನ್ನದ ಬಳೆ.

ಗೀಜು(ರು) (ಕ್ರಿ). ೧. ಉಜ್ಜು; ಒರಸು. ೨. ಚುಚ್ಚು; ತಿವಿ. (ನಾ). ೩. ಗೆರೆ; ರೇಖೆ. ೪. ಗಾಯದ ಗೆರೆ; ಬಾಸುಂಡೆ.

**ಗೀರ್ವರ** (ನಾ). ೧. ಸರಸ್ವತಿಯ ಪತಿ ; ಬ್ರಹ್ಮ. ೨. ಮಾತುಗಳ ಒಡೆಯ ; ಬೃಹಸ್ಪತಿ.

**ಗೀರ್ವಾಣ** (ನಾ). ದೇವತೆ ; ಸುರ. ~ಭಾಷೆ = ಸಂಸ್ಕೃತಭಾಷೆ.

**ಗೀರ್ವಾಣಿ** (ನಾ). ೧. ದೇವತಾಸ್ತ್ರೀ. ೨. ಸರಸ್ವತಿ; ಶಾರದೆ.

**ಗೀಳು** (ಕ್ರಿ). ೧. ಹರಿ ; ತುಂಡುಮಾಡು ; ಸೀಳು. ೨. ಗೀರು ; ಗೀಚು. (ನಾ). ೩. ಹಂಬಲ; ಚಟ ; ಹವ್ಯಾಸ. ~ಹಿಡಿ = ಹಂಬಲವುಂಟಾಗು ; ಉತ್ಕಟವಾದ ಬಯಕೆಯನ್ನು ಹೊಂದು.

**ಗೀೞ್(ಳ್)** (ನಾ). ೧. ಚೀರಲು ಧ್ವನಿ; ಚೀತ್ಕಾರ. ೨. ಗರ್ಜನೆ; ಆರ್ಭಟೆ.

**ಗುಂಕ** (ನಾ). ಊಳಿಗದವನು ; ಸೇವಕ.

**ಗುಂಗಾಡು** (ನಾ). ಒಂದು ಜಾತಿಯ ಸೊಳ್ಳೆ.

**ಗುಂಗಿ** (ನಾ). ೧. ಕರಿಯ ಬಣ್ಣದ ದೊಡ್ಡ ದುಂಬಿ. ೨. ಗುಂಜಾರವ ; ಝೇಂಕಾರ.

**ಗುಂಗು** (ನಾ). ೧. ಮತ್ತು ; ಅಮಲು. ೨. ಪರವಶತೆ ; ತನ್ಮಯತೆ. ೩. ಹವ್ಯಾಸ ; ಗೀಳು. ೪. ಗುಂಜಾರವ. ೫. ಧಾನ್ಯಗಳ ಮೇಲಿನ ಊಬು ; ಉಮ್ಮಿ.

**ಗುಂಗುದಿ** (ನಾ). ಸಂತಾಪ ; ಬೇಗುದಿ.

**ಗುಂಗುರು** ೧.=ಗುಂಗುಱು. (ಗು). ೨. ಸುರುಳಿಯಾದ ; ಕೊಂಕಾದ.

**ಗುಂಗುಱು(ರು)** (ನಾ). ಒಂದು ಜಾತಿಯ ಸೊಳ್ಳೆ ; ಗುಂಗಾಡು.

**ಗುಂಜನ** (ನಾ). ಇಂಪಾದ ಧ್ವನಿ; ಮಧುರಧ್ವನಿ.

**ಗುಂಜಾರವ** (ನಾ). ೧. ದುಂಬಿಯ ಧ್ವನಿ. ೨. = ಗುಂಜನ.

**ಗುಂಜಾಲಯ** (ನಾ). ಹೆಂಡದಂಗಡಿ ; ಪಡಖಾನೆ.

**ಗುಂಜಿ** (ನಾ). ೧. ಗುಲಗಂಜಿ ಗಿಡ ಮತ್ತು ಅದರ ಬೀಜ. ೨. ಒಂದು ಗುಲಗಂಜಿ ತೂಕ.

**ಗುಂಜು** (ಕ್ರಿ). ೧. ತೊಡಕಿಕೊಳ್ಳು ; ಸಿಕ್ಕುಸಿಕ್ಕಾಗು. ೨. ಎಳೆ; ಜಗ್ಗು. ೩. ಮುದುಡು; ಮುರುಟಿಕೊಳ್ಳು. (ನಾ). ೪. ಸಿಕ್ಕು ; ತೊಡಕು. ೫. ತೆಂಗಿನಕಾಯಿಯ ಮೇಲಿನ ನಾರು, -ಜುಬ್ಬರು. ೬. ಬಿದಿರು, ತೆಂಗು ಮೊದಲಾದುವುಗಳಿಂದ ಕೀಸಿ ತೆಗೆದ ಎಳೆಗಳ ರಾಶಿ.

**ಗುಂಟ** (ಅ). ಅನುಸರಿಸಿ ; ಹಿಡಿದು.

**ಗುಂಟಗೆ** (ನಾ). ೧. ಚರ್ಮವಾದ್ಯಗಳನ್ನು ಬಿಗಿಗೊಳಿಸಲು ಪಕ್ಕದಲ್ಲಿ ಅಳವಡಿಸಿರುವ ಬೆಣೆ ; ಬಿರಡೆ. ೨. ಕಾಲಿನ ಹರಡು.

**ಗುಂಟೆ** (ನಾ). ಒಂದು ಎಕರೆಯ ನಲವತ್ತನೆಯ ಒಂದು ಭಾಗ.

**ಗುಂಡ** (ನಾ). ೧. ತೋಡಿದ ತಗ್ಗು ; ನೆಲಬಾವಿ. ೨. ಒನಪುಗಾರ; ಆಡಂಬರದ ಮನುಷ್ಯ. ೩. ಒರಟ.

**ಗುಂಡಗೆ** (ನಾ). ೧. ನೀರಿನ ಪಾತ್ರೆ ; ಜಲಪಾತ್ರೆ. (ಅ). ೨. ದುಂಡಾಗಿ ; ವರ್ತುಲಾಕಾರವಾಗಿ

**ಗುಂಡಾಲ** (ನಾ). ಅಗಲವಾದ ಬಾಯುಳ್ಳ ಪಾತ್ರೆ ; ಗುಂಡಲಿಗೆ.

**ಗುಂಡಿ** (ನಾ). ೧. ಗುಳಿ ; ಹಳ್ಳ. ೨. ತೂತು; ಬಿಲ. ೩. ಎದೆ; ಗುಂಡಿಗೆ. ೪. ಗುಂಡುಪಾತ್ರೆ. ೫. ಬಿರಡೆ ; ಗುಬ್ಬಿ . ೬. ಯಂತ್ರಗಳನ್ನು ನಡಸಲು ಒತ್ತುವ ಗುಬುಟು. ೭. ಒನಪುಗಾತಿ; ಒಯ್ಯಾರಿ.

**ಗುಂಡಿಗೆ** (ನಾ). ೧. ಎದೆ; ಹೃದಯ. ೨. ಧೈರ್ಯ ; ಕೆಚ್ಚು. ೩. ಒಂದು ಬಗೆಯ ಪಾತ್ರೆ ; ಕಮಂಡಲು.

**ಗುಂಡಿತು** (ಗು). ಆಳವಾದ ; ಗಂಭೀರವಾದ.

**ಗುಂಡಿತ್ತು** = ಗುಂಡಿತು.

**ಗುಂಡು** (ನಾ). ೧. ಗುಂಪು ; ಸಮೂಹ. ೨. ಗುಂಡುಕಲ್ಲು ; ಬಂಡೆ. ೩ ತುಪಾಕಿಯ ಗೋಲಿ. ೪. ಸರಕ್ಕೆ ಹಾಕುವ ಗೋಳಾಕಾರದ

ಚಿನ್ನದ ಮಣಿ. ೫. ಆಟಕ್ಕೆ ಉಪಯೋಗಿಸುವ ಗೋಲಿ. (ಗು). ೬. ದುಂಡಾದ; ದುಂಡಗೆ ಇರುವ. ~ಕ(ಗ)ಲ್(ಲ್ಲು) = ೧. ದುಂಡಾಗಿರುವ ಕಲ್ಲು. ೨. ರುಬ್ಬುಗಲ್ಲು. ~ಕೊ(ಗೊ)ಂವಿ = ೧. ಬಂದೂಕು. ೨. ಯಾವ ಕಟ್ಟುಪಾಡೂ ಇಲ್ಲದವನು. ~ಮಲ್ಲಿಗೆ = ಮಲ್ಲಿಗೆಯಲ್ಲಿ ಒಂದು ಜಾತಿ; ದುಂಡುಮಲ್ಲಿಗೆ.

**ಗುಂದ** (ನಾ). ೧. ಬೆಟ್ಟ; ಗುಡ್ಡ. ೨. ಮರಳು ದಿಣ್ಣೆ.

**ಗುಂದೆ** = ಗುಂದ.

**ಗುಂಪು** (ನಾ). ೧. ಗುಚ್ಛ; ಸಮೂಹ. ೨. ಆಳ; ಗಾಂಭೀರ್ಯ. ~ಕಟ್ಟು = ೧. ಒಟ್ಟಿಗೆ ಸೇರು; ಗುಂಪುಗೂಡು. ೨. ಒಳಗಿಂದೊಳಗೇ ಪಂಗಡ ಕಟ್ಟು.

**ಗುಂಫ** (ನಾ). ೧. ಆಳ; ಗಾಂಭೀರ್ಯ. ೨. = ಗುಂಫನ.

**ಗುಂಫನ** (ನಾ). ಮಾಲೆಯಂತೆ ಕಟ್ಟುವುದು.

**ಗುಂಬ** (ನಾ). ೧. ನೆರವಿ; ರಾಶಿ. ೨. ಆಳ; ಗಾಂಭೀರ್ಯ. ೩. ಸಮಸ್ಯೆ. ೪. ಗಡಿಗೆ; ಘಟ. ೫. ವಾಹನಗಳ ಚಕ್ರದ ನಡುವಿನ ಗಡ್ಡೆ.

**ಗುಂಬಜು** (ನಾ). ಅರ್ಧಗೋಳಾಕಾರದ ಗೋಪುರದಂತಹ ರಚನೆ.

**ಗುಂಭ** (ನಾ). ೧. ವಾಹನಗಳ ಚಕ್ರದ ನಡುವಿನ ಗಡ್ಡೆ. ೨. ಕಂಬಗಳ ತುದಿಯ ಕಲಶಾಕಾರದ ಬೋದಿಗೆ. ೩. ಆಳ; ಗಾಂಭೀರ್ಯ. ೪. ಗುಟ್ಟು; ರಹಸ್ಯ.

**ಗುಂಯಿ** (ನಾ). ಒಂದು ಅನುಕರಣ ಧ್ವನಿ. ~ಕು(ಗು)ಡು = ೧. ಗುಂಯ್ ಎಂದು ಶಬ್ದಮಾಡು. ೨. ಪ್ರತಿಧ್ವನಿಸು. ೩. ಗೊಣಗುಟ್ಟು.

**ಗುಕ್ಕ** (ನಾ). ಉಗ್ಗುತ್ತಾ ಮಾತನಾಡುವವನು; ಉಗ್ಗ.

**ಗುಕ್ಕು** (ಕ್ರಿ). ೧. ಉಗ್ಗು. (ನಾ). ೨. ಗುಕ್ಕುವಿಕೆ; ಉಗ್ಗು. ೩. ಒಂದು ಸಲ ಬಾಯಿಗೆ ಹಾಕಿಕೊಳ್ಳುವಷ್ಟು ಆಹಾರ; ತುತ್ತು. ೪. ಹಿಡಿತ; ಅಧೀನ. ೫. ಎದೆಯ ಬಡಿತ. ~ಹಿಡಿ = ೧. ಉಗ್ಗು ಉಂಟಾಗು. ೨. ದಿಗ್ಭ್ರಮೆಯಾಗು.

**ಗುಗ್ಗರಿ** ೧. = ಗುಗ್ಗುರಿ. ೨. ಕುಗ್ಗಿದ ಸ್ಥಿತಿ; ಕುಗ್ಗುವಿಕೆ. ~ಕೊ(ಗೊ)ಂಲು = ಶಾಲೆಗಳಲ್ಲಿ ಹಿಂದೆ ವಿಧಿಸುತ್ತಿದ್ದ ಒಂದು ಬಗೆಯ ಶಿಕ್ಷೆ.

**ಗುಗ್ಗು** (ನಾ). ದಡ್ಡ; ಗಾವಿಲ.

**ಗುಗ್ಗುರಿ** (ನಾ). ೧. ಒಂದು ಬಗೆಯ ತಿನಿಸು; ಉಸಳಿ. ೨. ಸುರುಳಿಯಾಗುವುದು; ಸುತ್ತಿಕೊಳ್ಳುವುದು. ೩. ರೋಮಾಂಚನ. ~ಕ(ಗ)ಟ್ಟು = ರೋಮಾಂಚನವಾಗು.

**ಗುಗ್ಗುಲ(ಳ)** (ನಾ). ೧. ಒಂದು ಜಾತಿಯ ಮರ. ೨. ಧೂಪಕ್ಕೆ ಉಪಯೋಗಿಸುವ ಒಂದು ಬಗೆಯ ಅಂಟು; ಲೋಬಾನ.

**ಗುಗ್ಗೆ** (ನಾ). ಕಿವಿಯೊಳಗಿನ ಮಲ; ಕೂಗಣೆ.

**ಗುಚ್ಛ** (ನಾ). ೧. ಗೊಂಚಲು. ೨. ಮೆಳೆ; ಪೊದೆ. ೩. ಮೂವತ್ತೆರಡು ಅಥವಾ ಎಪ್ಪತ್ತು ಎಳೆಗಳುಳ್ಳ ಮುತ್ತಿನ ಹಾರ.

**ಗುಜರಾಯಿಸು** (ಕ್ರಿ). ೧. ಸಮರ್ಪಿಸು; ಸಲ್ಲಿಸು. ೨. ಬರೆ; ಲೇಖಿಸು.

**ಗುಜರಿ** (ನಾ). ೧. ಚಿಲ್ಲರೆ ವ್ಯಾಪಾರ. ೨. ಚಿಲ್ಲರೆ ವ್ಯಾಪಾರದ ಸ್ಥಳ. ೩. ಹಳೆಯ ಸಾಮಾನುಗಳನ್ನು ಮಾರುವ ಸ್ಥಳ.

**ಗುಜುಗುಜು** (ನಾ). ೧. ಒಂದು ಅನುಕರಣ ಶಬ್ದ. ೨. ಪಿಸುಮಾತು. ೩. ಜನಾಪವಾದ. ೪. ಅನುಮಾನ; ಸಂಶಯ.

**ಗುಜುಱು(ರು)** (ನಾ). ೧. ಗುಂಜುಗುಂಜಾಗಿರುವಿಕೆ; ಕೆದರಿದುದು. ೨. ಒಂದಕ್ಕೊಂದು ಹೆಣೆದುಕೊಂಡಿರುವುದು; ಪೊದರು.

**ಗುಜ್ಜ** (ನಾ). ಕುಳ್ಳ; ಗಿಡ್ಡ.

**ಗುಜ್ಜಾರಿ** (ನಾ). ೧. ಕುಳ್ಳಾಗಿರುವುದು; ಗಿಡ್ಡಾಗಿರುವುದು. ೨. = ಗುಜ್ಜು.

**ಗುಜ್ಜು** (ಕ್ರಿ). ೧. ನಮಸ್ಕಾರ ಮಾಡು. (ನಾ). ೨. ಚಾವಣಿ ನಿಲ್ಲುವುದಕ್ಕೆ ಕೊಡುವ ಊರೆ ಗೋಲು. ೩. ಸಣ್ಣದಾಗಿರುವಿಕೆ; ಚಿಕ್ಕದಾಗಿರುವಿಕೆ. **~ಅಡಿ** = ೧. ಸಣ್ಣ ಹೆಜ್ಜೆ; ಚಿಕ್ಕ ಹೆಜ್ಜೆ. ೨. ಮಂದಗಮನ. **~ಕೊ(ಗೊ)ಳ್** = ೧. ಸಣ್ಣದಾಗು; ಮುದುರಿಕೊಳ್ಳು. ೨. ಬಾಗು; ಕುಸಿದು ಬೀಳು. ೩. ಮಂದವಾಗು. **~ಗುಜು(ರು)ಕು** = ೧. ಗುಜುಗುಂಪಲು; ಗುಜುಗುಜು. ೨. ಅಳುಕು; ಸಂಶಯ; ಅನುಮಾನ. **~ಮಾವು** = ಒಂದು ಬಗೆಯ ಮಾವು.

**ಗುಜ್ಜೆ** (ನಾ). ೧. ಗಿಡ್ಡ; ಕುಳ್ಳ; ಕುಬ್ಜೆ. ೨. ಹುಡುಗಿ; ಕನ್ಯೆ. ೩. ಎಳೆಯ ಹಲಸಿನ ಕಾಯಿ.

**ಗುಟಕೆ** (ನಾ). ಗುಳಿಗೆ; ಮಾತ್ರೆ.

**ಗುಟುಕರಿಸು** (ಕ್ರಿ). ೧. ಗುಟುಕು ಗುಟುಕಾಗಿ ಕುಡಿ. ೨. ನೀರು ಮೊದಲಾದುವನ್ನು ಬೇಗನೆ ಕುಡಿ. ೩. ಧ್ವನಿಮಾಡು; ಗುಬ್ಬಳಿಸು. ೪. ವೇದನೆಪಡು; ಸಂಕಟಪಡು.

**ಗುಟುಕು** (ನಾ). ಒಂದು ಸಲ ಕುಡಿಯುವಷ್ಟು; ಕುಟುಕು.

**ಗುಟುರು** (ಕ್ರಿ). ೧. ಗರ್ಜಿಸು; ಹೂಂಕಾರ ಮಾಡು. (ನಾ). ೨. ಎತ್ತು ಅಥವಾ ಹೋರಿಯ ಡುರುಕು.

**ಗುಟ್ಟೆ** ೧. = ಗುಟಕೆ. ೨. ಒಂದು ಬಾರಿಗೆ ಮಕ್ಕಳು ಸೇವಿಸುವಷ್ಟು (ತೇದುಕೊಡುವ) ಔಷಧಿಯ ಮಿಶ್ರಣ.

**ಗುಟ್ಟು** (ನಾ). ೧. ರಹಸ್ಯ; ಗೌಪ್ಯ. ೨. ಕೆಚ್ಚು; ಗರ್ವ. **~ಅಳಿ** = ೧. ಗುಟ್ಟುರಟ್ಟಾಗು; ರಹಸ್ಯ ಬಯಲಾಗು. ೨. ಸತ್ತ್ವಗುಂದು.

**ಗುಡ** (ನಾ). ಬೆಲ್ಲ.

**ಗುಡಲು** = ಗುಡಿಲ್.

**ಗುಡಾಕು** (ನಾ). ಮಾದಕ ಹಾಗು ಸುಗಂಧ ದ್ರವ್ಯಗಳನ್ನು ಬೆರಸಿ ಹದಗೊಳಿಸಿದ ತಂಬಾಕು.

**ಗುಡಾಣ** = ಗುಡುವನ.

**ಗುಡಾರ** = ಗೂಡಾರ.

**ಗುಡಿ** (ನಾ). ೧. ಮಂಡಲ; ವೃತ್ತ. ೨. ಗುಂಪು; ಗೊಂಚಲು. ೩. ತುದಿ. ೪. ಧ್ವಜ; ಬಾವುಟ. ೫. ಗುಡಿಸಿಲು; ಕುಟೀರ. ೬. ದೇವಾಲಯ. ೭. ವಿತಾನ; ಮಂಟಪ. ೮. ಕೆತ್ತನೆ ಕೆಲಸ; ಕುಶಲಕೈಗಾರಿಕೆ. ೯. ಬಣ್ಣದ ಕೆಲಸ. **~ಕ(ಗ)ಟ್ಟು** = ೧. ಚಂದ್ರ, ಸೂರ್ಯ ಬಿಂಬಗಳ ಸುತ್ತ ಪರಿವೇಷ ಕಟ್ಟು. ೨. ಸುತ್ತುಹಾಕು; ಪ್ರದಕ್ಷಿಣೆಮಾಡು. ೩. ಗುಂಪುಗೂಡು; ಒಟ್ಟಿಗೆ ಸೇರು. ೪. ಕೂಡಿಸಿಕಟ್ಟು. ೫. ಬಾವುಟವನ್ನು ಏರಿಸು. ೬. ರೋಮಾಂಚನವಾಗು. ೭. ಸಂತೋಷಗೊಳ್ಳು. ೮. ದೇವಸ್ಥಾನವನ್ನು ನಿರ್ಮಿಸು. ೯. ಗಾಳಿಗೋಪುರ ಕಟ್ಟು; ಕನಸು ಕಾಣು. ೧೦. ಬಣ್ಣವನ್ನು ಬಳಿ. **~ಕಾ(ಗಾ)ರ** = ಮರದಿಂದ ಬೊಂಬೆ ಮೊದಲಾದ ಕೆತ್ತನೆ ಕೆಲಸ ಮಾಡುವವನು. **~ಕೈಗಾರಿಕೆ** = ಮನೆಯಲ್ಲಿಯೇ ಮಾಡುವ ಸಣ್ಣ ಕೈಗಾರಿಕೆ; ಗೃಹ ಕೈಗಾರಿಕೆ.

**ಗುಡಿಯಿಸು** (ಕ್ರಿ). ೧. ರಾಶಿಹಾಕು; ಒಟ್ಟಿಗೆ ಸೇರಿಸು. ೨. ಕಸವನ್ನು ಉಡುಗು; ಗುಡಿಸು.

**ಗುಡಿಲ್(ಲು)** (ನಾ). ಜೋಪಡಿ; ಗುಡಿಸಿಲು.

**ಗುಡಿಸಿಲ್(ಲು)** = ಗುಡಿಲ್.

**ಗುಡಿಸು** = ಗುಡಿಯಿಸು.

**ಗುಡಿಸೆಟ್ಟಿ** (ನಾ). ನಡತೆಗೆಟ್ಟವಳು; ಬೆಲೆವೆಣ್ಣು.

**ಗುಡುಗು** (ಕ್ರಿ). ೧. ಮೇಘಧ್ವನಿಯುಂಟಾಗು. ೨. ಗರ್ಜಿಸು; ಆರ್ಭಟಿಸು. ೩. ಗುಡುಗಿನ ಆಟದಲ್ಲಿ ಗುಡುಗುಡು ಎಂದು ಕೂಗುತ್ತಾ ಓಡು. (ನಾ). ೪. ಮೇಘಧ್ವನಿ. ೫. ಒಂದು ಬಗೆಯ ಆಟ; ಕಬಡ್ಡಿ ಆಟ. ೬. ಗರ್ಜನೆ;

ಆರ್ಭಟ. ~ಆಡು = ೧. ಓಡಾಡು; ಅತ್ತಿತ್ತ ಚಲಿಸು. ೨. ಕೂಗಾಡು; ಗಟ್ಟಿಯಾಗಿ ಮಾತನಾಡು. ೩. ಕಬಡ್ಡಿ ಆಟವನ್ನು ಆಡು.

**ಗುಡುಗುಡಿ** (ನಾ). ತಂಬಾಕು ಸೇದುವ ಒಂದು ಸಾಧನ.

**ಗುಡುಗುಡು** (ನಾ). ಒಂದು ಅನುಕರಣ ಶಬ್ದ. ~ಇಸು = ೧. ರೋಷದಿಂದ ಕೂಗು; ಗರ್ಜಿಸು. ೨. ಒಂದೇಸಮನೆ ಸ್ರವಿಸು, –ಹರಿ.

**ಗುಡುವನ** (ನಾ). ದೊಡ್ಡ ಮಡಕೆ.

**ಗುಡ್ಡ** ೧. = ಗುಜ್ಜ. ೨. ಚಿಕ್ಕವನು; ಹುಡುಗ. ೩. ಶಿಷ್ಯ; ಭಕ್ತ. ೪. ಚಿಕ್ಕ ಬೆಟ್ಟ; ಸಣ್ಣ ಬೆಟ್ಟ.

**ಗುಡ್ಡಿ** (ನಾ). ೧. ಕುಳ್ಳಾದುದು; ಗಿಡ್ಡು. ೨. ಶಿಷ್ಯೆ; ವಿದ್ಯಾರ್ಥಿನಿ.

**ಗುಡ್ಡು** (ನಾ). ೧. ಚಿಕ್ಕದು; ಗಿಡ್ಡು. ೨. ಶಿಷ್ಯ; ಭಕ್ತ. ೩. ಕಣ್ಣಿನ ಪಾಪೆ. ~ಕೊ(ಗೊ)ಳ್ = ಕುಗ್ಗು; ಕುಸಿ.

**ಗುಡ್ಡೆ** (ನಾ). ೧. ರಾಶಿ; ಸಮೂಹ. ೨. ಕಲ್ಲು, ಮಣ್ಣು ಮೊದಲಾದುವುಗಳ ದಿಬ್ಬ. ೩. ಕಣ್ಣಿನ ಪಾಪೆ. ೪. ಸಣ್ಣವಸ್ತ್ರ; ತುಂಡು ಬಟ್ಟೆ.

**ಗುಣ** (ನಾ). ೧. ಸ್ವಭಾವ; ಧರ್ಮ. ೨. ದಯೆ, ವಿವೇಕ ಮೊದಲಾದ ಸ್ವಭಾವ ಧರ್ಮ. ೩. ಬೆಲೆ; ಕಿಮ್ಮತ್ತು. ೪. ವ್ಯಾಕರಣದಲ್ಲಿ ಒಂದು ಸಂಧಿಯ ಹೆಸರು. ೫. ವಿಶೇಷಣ. ೬. ಕಾವ್ಯಶಾಸ್ತ್ರದಲ್ಲಿ ಹತ್ತು ಪ್ರಶಸ್ತ ಲಕ್ಷಣಗಳು. ೭. ಸ್ವಭಾವ. ೮. ನೂಲು; ಎಳೆ; ತಂತು. ೯. ಬಿಲ್ಲಿನ ಹೆದೆ; ನಾರಿ. ೧೦. ರೋಗ ಕಡಿಮೆಯಾಗುವುದು, –ವಾಸಿಯಾಗುವುದು. ೧೧. ಅಂಕ. ~ಇಸು = ೧. ಗುಣಾಕಾರ ಮಾಡು. ೨. ಎಣಿಸು; ಲೆಕ್ಕಹಾಕು. ೩. ಅಭ್ಯಾಸ ಮಾಡು; ಸಾಧನೆಮಾಡು. ~ಗರ್ಭ = ಹೊಟ್ಟೆಯಲ್ಲಿ ನೂಲುಳ್ಳ ಹುಳು; ಜೇಡರ ಹುಳು. ~ಮುಖ = ೧. ರೋಗವು ವಾಸಿಯಾಗುವ ಸ್ಥಿತಿ. ೨. ರೋಗವು ವಾಸಿಯಾಗುತ್ತಿರುವ ವ್ಯಕ್ತಿ. ~ವಾಚಕ = ೧. ಒಳ್ಳೆಯ ಮಾತು. ೨. ವ್ಯಾಕರಣದಲ್ಲಿ ವಸ್ತು ಅಥವಾ ವ್ಯಕ್ತಿಯ ಗುಣವನ್ನು ತಿಳಿಸುವ ಪದ; ವಿಶೇಷಣ ಪದ. ~ವೃಕ್ಷಕ = ಕೂವೆ ಕಂಬ.

**ಗುಣಕ** (ನಾ). ೧. ಲೆಕ್ಕಮಾಡುವವನು. ೨. ಗುಣಗಳಿಂದ ಕೂಡಿರುವವನು. ೩. ಗುಣಿಸುವ ಸಂಖ್ಯೆ.

**ಗುಣಗು** (ಕ್ರಿ). ೧. ಅಸ್ಪಷ್ಟವಾಗಿ ಮಾತನಾಡು. ೨. ತಕರಾರು ಮಾಡು. (ನಾ). ೩. ಗೊಣಗಾಟ; ಅಸ್ಪಷ್ಟವಾಗಿ ಮಾತನಾಡುವುದು. ೪. ಆಕ್ಷೇಪ; ತಕರಾರು.

**ಗುಣಣೆ** (ನಾ). ನಾಟಕಶಾಲೆ; ನೃತ್ಯಶಾಲೆ.

**ಗುಣಾಕಾರ** (ನಾ). ೧. ಒಂದು ಸಂಖ್ಯೆಯನ್ನು ಮತ್ತೊಂದು ಸಂಖ್ಯೆಯಿಂದ ಗುಣಿಸುವುದು. ೨. ಸೆಲೆ; ಚದರ. ~ಹಾಕು = ಮನಸ್ಸಿನಲ್ಲಿ ಲೆಕ್ಕಾಚಾರ ಹಾಕು; ಆಲೋಚಿಸು.

**ಗುಣಿ** (ನಾ). ೧. ಕುಳಿ; ತಗ್ಗು. ೨. ಸಣ್ಣ ಕೋಲು. ೩. ಗುಣವಂತ.

**ಗುಣೀಭೂತ** (ಗು). ಅಪ್ರಧಾನವಾದ; ಮುಖ್ಯವಲ್ಲದ. ~ವ್ಯಂಗ್ಯ = ಕಾವ್ಯದಲ್ಲಿ ವ್ಯಂಗ್ಯಾರ್ಥವು ಅಪ್ರಧಾನವಾಗಿದ್ದು, ವಾಚ್ಯಾರ್ಥಕ್ಕೆ ಅಂಗಭಾವವನ್ನು ಹೊಂದಿರುವುದು.

**ಗುಣುಂಕು** (ನಾ). ೧. ದೊಣ್ಣೆ; ಕೋಲು. ೨. ನಗಾರಿ ಮೊದಲಾದ ವಾದ್ಯಗಳನ್ನು ಬಾರಿಸುವ ದಪ್ಪವಾದ ಕೋಲು; ಕುಡುಪು. ೩. ಕಮಾನು; ವಾದನದಂಡ.

**ಗುಣುಗುಣಿಸು** (ಕ್ರಿ). ೧. ಅಸ್ಪಷ್ಟವಾಗಿ ಮಾತನಾಡು; ಪಿಸುಗುಟ್ಟು. ೨. ಮೆಲ್ಲಗೆ ಹಾಡಿಕೊಳ್ಳು. ೩. ಸತತವಾಗಿ ಧ್ವನಿಮಾಡು.

**ಗುಣ್ಪು** (ನಾ). ೧. ಗುಂಪು; ರಾಶಿ; ಸಮೂಹ. ೨. ಆಳ; ಗಾಂಭೀರ್ಯ. ೩. ಗುಟ್ಟು; ರಹಸ್ಯ. ೪. ಆಧಿಕ್ಯ; ಹೆಚ್ಚಳ.

**ಗುತ್ತ** (ನಾ). ೧. ಸಮೀಪ; ಹತ್ತಿರ. ೨. ಬಿಗಿಯಾಗಿರುವುದು; ಅಳತೆಗೆ ಅಡಕವಾಗಿರುವುದು. ೩. ಚಿಕ್ಕದು; ಗಿಡ್ಡು. (ಗು). ೪. ರಕ್ಷಿಸಲ್ಪಟ್ಟ. ೫. ಗುಟ್ಟಾದ.

**ಗುತ್ತಗೆ** (ನಾ). ೧. ಒಬ್ಬನಿಗೇ ಇರುವ ಅನುಭವದ ಹಕ್ಕು; ಏಕಸ್ವಾಮ್ಯ. ೨. ಗೇಣಿಯ ಹಣ ಅಥವಾ ದವಸ.

**ಗುತ್ತಿ** (ನಾ). ೧. ಗೊಂಚಲು; ಗೊನೆ. ೨. ಪೊದರು; ಕಂಟಿ. ೩. ಗಡ್ಡೆ; ದಿಬ್ಬ; ಎತ್ತರವಾದ ಭೂಮಿ. ೪. ಕತ್ತರಿಸಿದಾಗ ಉಳಿಯುವ ಬುಡ; ಕೂಳೆ.

**ಗುತ್ತಿಗೆ** = ಗುತ್ತಗೆ.

**ಗುತ್ತು** (ನಾ). ೧. ತಗ್ಗು; ಗುಂಡಿ. ೨. ಹೊಡೆತ; ಏಟು. ೩. ಜಮೀನು; ಸ್ಥಳ. ೪. ಪರಿಚಯ; ಮಾಹಿತಿ. ೫. ಒತ್ತಾದುದು; ದಟ್ಟವಾದುದು. ೬. ಒಪ್ಪಂದ; ಕರಾರು.

**ಗುದ** (ನಾ). ಆಸನ; ಮಲದ್ವಾರ.

**ಗುದಾಮು** (ನಾ). ಸರಕುಗಳನ್ನು ಶೇಖರಿಸುವ ಸ್ಥಳ; ಮಳಿಗೆ.

**ಗುದಿ** (ಕ್ರಿ). ೧. ಕಾಲುಗಳನ್ನು ಕಟ್ಟು. (ನಾ). ೨. ತೆಂಗು, ಅಡಕೆ ಮುಂತಾದ ಮರಗಳನ್ನು ಹತ್ತುವಾಗ ಕಾಲಿಗೆ ಕಟ್ಟಿಕೊಳ್ಳುವ ಹಗ್ಗ. ೩. ಗೊಂಚಲು; ಮಂಜರಿ. ೪. ಒಂದು ಬಗೆಯ ಆಯುಧ.

**ಗುದಿಗೆ** (ನಾ). ೧. ಒನಕೆಯಂತೆ ದಪ್ಪನಾಗಿರುವ (ಲೋಹದ ಕಟ್ಟುಳ್ಳ) ದೊಣ್ಣೆ, –ಬಡಿಗೆ. ೨. ಗೊಂಚಲು; ಮಂಜರಿ.

**ಗುದುಕು** (ಕ್ರಿ). ಚಿಮ್ಮು; ನೆಗೆ.

**ಗುದುಗುದು** (ನಾ). ನವೆ; ತುರಿಕೆ; ಕಂಡೂತಿ. ~ಇಸು = ೧. ನವೆಯಾಗು; ತುರಿಕೆಯಾಗು. ೨. ಕೊರೆ.

**ಗುದುಮುರಿಗೆ** (ನಾ). ೧. ಗುದ್ದಾಟ. ೨. ಉಸಿರುಕಟ್ಟಿಸುವುದು. ೩. ದಾಂಧಲೆ; ಗಲಾಟೆ.

**ಗುದ್ದರಿಸು** (ಕ್ರಿ). ೧. ನೂಕು; ತಳ್ಳು. ೨. ಗುದ್ದು; ಅಪ್ಪಳಿಸು.

**ಗುದ್ದಲಿ** (ನಾ). ನೆಲವನ್ನು ಅಗೆಯಲು ಉಪಯೋಗಿಸುವ ಕಬ್ಬಿಣದ ಒಂದು ಸಾಧನ.

**ಗುದ್ದಿ** (ನಾ). ದನಕರುಗಳ ನಡಗೆಯನ್ನು ತಡೆಯಲು ಕೊರಳಿಗೆ ಕಟ್ಟುವ ಮರದ ತುಂಡು.

**ಗುದ್ದು** ೧. = ಗುದ್ದು. (ನಾ). ೨. ಪೊಟರೆ.

**ಗುನಗು** (ನಾ). ತೊಂದರೆ; ಕೇಡು.

**ಗುನಿ** (ನಾ). ೧. ಕಾಳುಗಳ ಮೇಲಿನ ಹೊಟ್ಟು; ಉಮ್ಮಿ. ೨. ಬಟ್ಟೆ, ಕಾಗದ ಮೊದಲಾದುವುಗಳನ್ನು ಹಾಳುಮಾಡುವ ಒಂದು ಬಗೆಯ ಕೀಟ; ನುಸಿ. ~ಕ(ಗ)ಡಿ = ನುಸಿಹೊಡೆ; ಹುಳುತಿನ್ನು.

**ಗುನುಗು** (ಕ್ರಿ). ೧. ಅಸ್ಪಷ್ಟವಾಗಿ ಮಾತನಾಡು; ಗೊಣಗು. ೨. ಸತತವಾಗಿ ಧ್ವನಿಸು. (ನಾ). ೩. = ಗುನಗು.

**ಗುನ್ನ** (ನಾ). ೧. ದಿಣ್ಣೆ; ದಿಬ್ಬ. ೨. (ಬುಗುರಿಯಾಟದಲ್ಲಿ) ಕಚ್ಚು ಬೀಳುವಿಕೆ. ೩. ಕಿರಿದಾಗಿರುವಿಕೆ; ಸಣ್ಣದಾಗಿರುವಿಕೆ.

**ಗುನ್ನಾಂಪಟ್ಟೆ** (ನಾ). ಬಣ್ಣಬಣ್ಣದ ಹೊಳಪಿನ ಕಾಗದ; ಬೇಗಡೆ.

**ಗುನ್ಹೆ** (ನಾ). ತಪ್ಪು; ಅಪರಾಧ.

**ಗುಪಟೆ** (ನಾ). ಉಬ್ಬು; ಬೋರೆ; ಬುಗುಟು.

**ಗುಪಿತ** = ಗುಪ್ತ.

**ಗುಪ್ತ** (ನಾ). ೧. ಗುಟ್ಟು; ರಹಸ್ಯ. (ಗು). ೨. ಗುಟ್ಟಾದ. ~ಗಾಮಿನಿ = ಗುಟ್ಟಾಗಿ ಹರಿಯುವುದು.

**ಗುಪ್ತಿ** (ನಾ). ೧. ಕಾಪು; ರಕ್ಷಣೆ. ೨. ಮುಚ್ಚಿಡುವುದು; ಜೋಪಾನ. ೩. ಬಿಲ; ರಂಧ್ರ. ೪. ಕಲ್ಲಿನ ಪೌಳಿ, –ಗೋಡೆ. ೫. ಖಡ್ಗವನ್ನು ಒಳಗೊಂಡ ಪೊಳ್ಳುಕೋಲು. ೬. ಸೆರೆಮನೆ.

**ಗುಪ್ಪು** (ಕ್ರಿ). ೧. ಮರೆಯಾಗಿರು. ೨. ಕುಪ್ಪಳಿಸು. (ನಾ). ೩. ಮುಸುಕು ; ಗುಬರು. ೪. ಮಣ್ಣಿನ ಮುದ್ದೆ, -ಉಂಡೆ.

**ಗುಪ್ಪೆ** (ನಾ). ಕುಪ್ಪೆ ; ರಾಶಿ.

**ಗುಬರು** (ಕ್ರಿ). ೧. ಅಡಗಿರು ; ಮರೆಯಾಗಿರು. ೨. ಕಾಲಿನಿಂದ ತಲೆಯುವರೆಗೆ ಮುಸುಕು ಹಾಕು. (ನಾ). ೩. ದಟ್ಟವಾಗಿರುವಿಕೆ ; ಗುಂಪಾಗಿರುವಿಕೆ. ೪. ಮುಸುಕು ; ಮರೆ.

**ಗುಬುಟು** (ನಾ). ೧. ಗುಂಡಾದ ವಸ್ತು ; ಗುಮುಟ. ೨. ಲೋಹದ ಗುಂಡು. ೩. = ಗುಪಟೆ.

**ಗುಬ್ಬಚ್ಚಿ** (ನಾ). ಒಂದು ಜಾತಿಯ ಸಣ್ಣಪಕ್ಷಿ; ಗುಬ್ಬಿ.

**ಗುಬ್ಬಳಿಸು** (ಕ್ರಿ). (ಪಕ್ಷಿಗಳು) ಕೂಗು.

**ಗುಬ್ಬಿ** ೧.= ಗುಬ್ಬಚ್ಚಿ. ೨. ಚಿಕ್ಕದು. ೩. ಒಂದು ಬಗೆಯ ಒಡವೆ. ೪. ಗುಂಡಿ; ಬಿರಡೆ. ೫. ಮದುವೆಯ ಸಮಾರಂಭದಲ್ಲಿ ಬೀಗರು ಪರಸ್ಪರರ ಬಟ್ಟೆಗಳ ಮೇಲೆ ಒತ್ತುವ ಮುದ್ರೆ. ೬. ಉಬ್ಬಿಕೊಂಡಿರುವುದು ; ಗುಬಟೆ. ೭. ಕೆನ್ನೆಯ ಪಕ್ಕದಲ್ಲಿರುವ ಕಿವಿಯ ಭಾಗ. ~ಆ(ಯಾ)ಟ = ಒಂದು ಬಗೆಯ ಮಕ್ಕಳಾಟ. ~ಎಂಜಲು = ಮಕ್ಕಳು ತಿಂಡಿಯನ್ನು ಬಟ್ಟೆಯಲ್ಲಿಟ್ಟು ಕಚ್ಚುವುದು; ಕಾಗೆಎಂಜಲು. ~ಗೂಡು=೧. ಗುಬ್ಬಚ್ಚಿಯ ಗೂಡು. ೨. ಮಕ್ಕಳು ಮರಳಿನಲ್ಲಿ ಮನೆ ಕಟ್ಟಿ ಆಡುವ ಒಂದು ಆಟ. ~ಬಾವುಲಿ = ಕಿವಿಯ ಒಂದು ಆಭರಣ. ~ಬೇಳೆ = ಕಿವಿಯಲ್ಲಿ ಧರಿಸುವ ಒಂದು ಆಭರಣ.

**ಗುಮುಕು** (ಕ್ರಿ). ಹೊಡೆ ; ಗುದ್ದು.

**ಗುಮುಟೆ** (ನಾ). ಒಂದು ವಾದ್ಯ ವಿಶೇಷ.

**ಗುಮಾನಿ** (ನಾ). ಸಂಶಯ ; ಸಂದೇಹ.

**ಗುಮಾನೆ** = ಗುಮಾನಿ.

**ಗುಮಾಸ್ತ** (ನಾ). ಲೆಕ್ಕಪತ್ರವನ್ನು ಬರೆಯುವವನು ; ಕಾರಕೂನ.

**ಗುಮಿತ** (ನಾ). ೧. ರಹಸ್ಯವಾದ ಸಮಾಚಾರ. ೨. ಸದ್ದು ; ಧ್ವನಿ.

**ಗುಮುಕು** (ನಾ). ಬಾಗಿಸುವಿಕೆ ; ತಗ್ಗಿಸುವಿಕೆ.

**ಗುಮ್ಮ** (ನಾ). ೧. (ಮಕ್ಕಳಿಗೆ) ಭಯವನ್ನು ಹುಟ್ಟಿಸುವ ಒಂದು ಕಾಲ್ಪನಿಕ ಭೂತ ; ಬವ್ವ. ೨. ಗೂಬೆ. ೩. ಕೋಟೆಕಾಳೆಗದಲ್ಲಿ ಉಪಯೋಗಿಸುತ್ತಿದ್ದ ಒಂದು ಸಾಧನ.

**ಗುಮ್ಮಟ** (ನಾ). ೧. ಅರ್ಧಗೋಳಾಕಾರದ ಗೋಪುರ ; ಗುಂಬಜು. ೨. ಬೊಂಬೆ ; ವಿಗ್ರಹ.

**ಗುಮ್ಮಡಿ** (ನಾ). ಭೂತ ; ಪಿಶಾಚಿ.

**ಗುಮ್ಮತಿ** (ನಾ). ಡೇರೆ ; ಗುಡಾರ.

**ಗುಮ್ಮನ** (ನಾ). ೧. ಮಾತನಾಡದಿರುವಿಕೆ. ೨. ಮಕ್ಕಳ ಒಂದು ಆಟ. ~ಕು(ಗು)ಸುಕ = ಒಂಟಿಯಾಗಿರುವವನು; ಯಾರೊಂದಿಗೂ ಬೆರೆಯದಿರುವವನು.

**ಗುಮ್ಮನೆ** (ಅ). ಸುಮ್ಮನೆ ; ಗಂಭೀರವಾಗಿ.

**ಗುಮ್ಮಿ** (ನಾ). ೧. ಗುಂಪು ; ಮೊತ್ತ. ೨. ಗುಣಿ; ಹಳ್ಳ. ೩. ನೀರಿನ ಹೊಂಡ. ೪. ದೊಡ್ಡ ಮಡಕೆ ; ಗುಡಾಣ. ೫. ಕೊಠಡಿ ; ಕೋಣೆ.

**ಗುಮ್ಮು** (ಕ್ರಿ). ೧. ಗುದ್ದು ; ಇರಿ ; ತಿವಿ. ೨. ಹರಡು ; ವ್ಯಾಪಿಸು. ೩. ಒತ್ತರಿಸು ; ನುಗ್ಗಿಬರು. ೪. ಸಂಭೋಗಿಸು. ೫. ಅಂಗತ್ತನಾಗಿ ಮಲಗಿ ಮುಂದಕ್ಕೆ ಸರಿ. (ನಾ). ೬. ಗುಂಪು ; ಸಮೂಹ. ೭. ಈಜುವಾಗ ನೀರನ್ನು ಅಪ್ಪಳಿಸುವುದು.

**ಗುಯ್ಯಲ್(ಲು)** (ನಾ). ೧. ಕೊಳ; ಸರೋವರ. ೨. ಭೂಮಿಯ ಒಂದು ಬಗೆಯ ಅಳತೆ.

**ಗುರಕಾಯಿಸು** (ಕ್ರಿ). ೧. (ನಾಯಿಯಂತೆ) ಗುರುಗುಟ್ಟು. ೨. ಕೋಪದಿಂದ ಕೂಗಾಡು; ರೇಗಾಡು.

**ಗುರಣ** (ನಾ). ೧. ಸುತ್ತುವುದು. ೨. ಶ್ರದ್ಧಾಪೂರ್ವಕವಾದ ಪ್ರಯತ್ನ, -ಶ್ರಮ.

**ಗುರಾಣಿ** (ನಾ). ಅಡ್ಡಣ ; ಹರಿಗೆ ; ಢಾಲು.

**ಗುರಾಬ** (ನಾ). ಒಂದು ಬಗೆಯ ದೋಣಿ.

**ಗುರಿ** (ನಾ). ೧.ಲಕ್ಷ್ಯ; ಈಡು. ೨.ಉದ್ದೇಶ. **~ಮುಟ್ಟು** = ೧. ಹೋಗಬೇಕಾದ ಸ್ಥಳವನ್ನು ತಲುಪು. ೨. ಸಾಧಿಸಬೇಕೆಂದಿರುವ ಧ್ಯೇಯವನ್ನು ಸಾಧಿಸು. **~ಹೊಡೆ** = ಲಕ್ಷ್ಯವನ್ನು ಭೇದಿಸು.

**ಗುರು** (ನಾ). ೧. ವಿದ್ಯೆಯನ್ನು ಹೇಳಿಕೊಡುವವನು; ಉಪಾಧ್ಯಾಯ. ೨. ಪುರೋಹಿತ. ೩. ಪೂಜ್ಯ; ಹಿರಿಯ. ೪. ದೇವತೆಗಳ ಉಪಾಧ್ಯಾಯ; ಬೃಹಸ್ಪತಿ. ೫. ನವಗ್ರಹಗಳಲ್ಲಿ ಒಂದು; ಬೃಹಸ್ಪತಿ ಗ್ರಹ. ೬. ಛಂದಸ್ಸಿನಲ್ಲಿ ಎರಡು ಮಾತ್ರೆಗಳನ್ನು ಹೊಂದಿರುವ ಅಕ್ಷರ. ೭. ಮಠದ ಅಧಿಪತಿ. (ಗು). ೮.ಭಾರವಾದ; ಘನವಾದ. ೯. ವಿಶಾಲವಾದ; ವಿಸ್ತಾರವಾದ. ೧೦. ಬೆಲೆಯುಳ್ಳ. **~ಕರಜಾತ** = ಗುರುಗಳಿಂದ ಉಪದೇಶವನ್ನು ಪಡೆದು ಸಂನ್ಯಾಸ ದೀಕ್ಷೆಯನ್ನು ಕೈಕೊಂಡವನು. **~ಕುಲ** = ೧. ಗುರುಗಳ ಮನೆ. ೨. ಶಿಕ್ಷಣ ಕೇಂದ್ರ; ಪಾಠಶಾಲೆ. **~ಮಠ** = ಗುರುಕುಲ.

**ಗುರುಗುಂಜಿ** (ನಾ). ಒಂದು ಜಾತಿಯ ಬಳ್ಳಿ ಮತ್ತು ಅದರ ಬೀಜ.

**ಗುರುಗುಲು** (ನಾ). ಸೂರ್ಯಕಾಂತಿ ಗಿಡ.

**ಗುರುತರ** (ಗು). ಬಹಳ ಹಿರಿದಾದ; ಮಹತ್ತರವಾದ.

**ಗುರುತು** (ನಾ). ೧. ಕುರುಹು; ಲಕ್ಷಣ. ೨. ಪರಿಚಯ; ಮಾಹಿತಿ. ೩. ಹಸ್ತಾಕ್ಷರ; ರುಜು. **~ಇಸು** = ೧. ಗೊತ್ತುಹಚ್ಚು. ೨. ಬರೆದಿಟ್ಟುಕೊಳ್ಳು.

**ಗುರುತ್ವ** (ನಾ). ೧.ತೂಕವಾಗಿರುವಿಕೆ; ತೂಕ. ೨. ಗೌರವ; ಹಿರಿಮೆ. ೩. ಕಲಿಸುವಿಕೆ; ಅಧ್ಯಾಪನ. ೪. ಉಪಾಧ್ಯಾಯನ ವೃತ್ತಿ. **~ಆಕರ್ಷಣ** = ಒಂದು ಪದಾರ್ಥವು ಮತ್ತೊಂದು ಪದಾರ್ಥವನ್ನು ಸೆಳೆಯುವಿಕೆ.

**ಗುರುಂಬು** (ಕ್ರಿ). ತಿನ್ನು.

**ಗುರುಳೆ** (ನಾ). ೧. ಬುದ್ಬುದ; ಗುಳ್ಳೆ. ೨. ಮೈಮೇಲೆ ಏಳುವ ಬೊಕ್ಕೆ. ೩. ಗೋಲಾಕಾರವಾದ ಯಾವುದಾದರೂ ವಸ್ತು. ೪. ಶಂಖ ಮತ್ತು ಅದರ ಹುಳು.

**ಗುರೆಳ್ಳು** (ನಾ). ಒಂದು ಜಾತಿಯ ಕರಿಯ ಎಳ್ಳು; ಹುಚ್ಚೆಳ್ಳು.

**ಗುರ್(ರಿ)** (ನಾ). ೧. ಗುರುತು; ಚಿಹ್ನೆ. ೨. ಸೀಮೆ; ಎಲ್ಲೆ. ೩. = ಗುರಿ. **~ಆ(ಯಾ)ಳು** = ಚೆಂಡಿನಿಂದ ಗುರಿಯಿಟ್ಟು ಹೊಡೆಯುವ ಒಂದು ಬಗೆಯ ಮಕ್ಕಳಾಟ. **~ಕಾ(ಗಾ)ಐ(ರ)** = ೧. ಗುರಿ ಹೊಡೆಯುವುದರಲ್ಲಿ ನಿಪುಣ. ೨. ಉನ್ನತಾಧಿಕಾರಿ. ೩. = ಗುರ್ಕಾರ.

**ಗುರ್(ರು)ಕು** (ನಾ). ೧.ಗೊರಕೆ. ೨. ನರಳುವಿಕೆ.

**ಗುರ್(ರು)ಗುಟ್ಟು** (ಕ್ರಿ). ೧. ಗಂಟಲಲ್ಲಿ ಗೊರಗೊರ ಸದ್ದಾಗು. ೨. ಸಿಡುಕಿ ಮಾತನಾಡು.

**ಗುರ್(ರು)ತು** (ನಾ). ೧. ಕುರುಹು; ಲಕ್ಷಣ. ೨. ಪರಿಚಯ; ಮಾಹಿತಿ. ೩.ಹೆಸರುವಾಸಿ.

**ಗುರ್ಕಾರ** (ನಾ). ಸಂಸ್ಥೆಯ ಅಥವಾ ಪಂಗಡದ ಮುಖಂಡ.

**ಗುರ್ಜಿ** (ನಾ). ೧. ಮಳೆ ತರುವ ದೇವತೆ. ೨. ಒಂದು ಜಾತಿಯ ಮರ.

**ಗುರ್ದು** (ಕ್ರಿ). ೧. ಮುಷ್ಟಿಯಿಂದ ಹೊಡೆ; ಗುದ್ದು. (ನಾ). ೨. ಮುಷ್ಟಿಯಿಂದ ಹೊಡೆಯುವಿಕೆ; ಹೊಡೆತ.

**ಗುಲ** (ನಾ). ೧. ಬೆಲ್ಲ. ೨. ಮಾತ್ರೆ; ಗುಳಿಗೆ. ೩. ಗೋಲಾಕಾರದ ವಸ್ತು.

**ಗುಲಗಂಜಿ** = ಗುರುಗುಂಜಿ.

**ಗುಲಬಾಕ್ಷಿ** (ನಾ). ಒಂದು ಬಗೆಯ ಹೂವು.

**ಗುಲಾಬಜಾಮೂನು** (ನಾ). ಒಂದು ಬಗೆಯ ಸಿಹಿತಿಂಡಿ.

ಗುಲಾಬದಾನಿ (ನಾ). ಪನ್ನೀರಿನ ಪಾತ್ರೆ.
ಗುಲಾಬಿ (ನಾ). ಒಂದು ಜಾತಿಯ ಗಿಡ ಮತ್ತು ಅದರ ಹೂವು.
ಗುಲಾಮ (ನಾ). ೧. ಅಡಿಯಾಳು; ದಾಸ. ೨. ಕೀಳುಮಟ್ಟದವನು; ಬೆಲೆಯಿಲ್ಲದವನು. ೩. ಇಸ್ಪೀಟು ಎಲೆಗಳಲ್ಲಿ ಒಂದು; ಜಾಕಿ. ~ಗಿರಿ = ಪರಾಧೀನತೆ.
ಗುಲಾಲು (ನಾ). ಉತ್ಸವ ಸಮಾರಂಭಗಳಲ್ಲಿ ಪರಸ್ಪರ ಎರಚುವ ಕೆಂಪುಬಣ್ಣದ ಪುಡಿ.
ಗುಲು(ಳು)ಚ್ಛ (ನಾ). ಗೊಂಚಲು; ಗೊಂಡೆ.
ಗುಲ್ಫ (ನಾ). ಪಾದದ ಹರಡು.
ಗುಲ್ಮ (ನಾ). ೧. ಪೊದೆ; ಪೊದರು. ೨. ಸೇನೆಯ ಒಂದು ಭಾಗ; ತುಕಡಿ. ೩. ಪ್ಲೀಹಕೋಶ; ಪ್ಲೀಹ. ೪. ಪ್ಲೀಹ ರೋಗ; ಗಡ್ಡೆರೋಗ.
ಗುಲ್ಲು (ನಾ). ೧. ಗಲಾಟೆ; ಗದ್ದಲ. ೨. ಅಲ್ಲಲ್ಲಿ ಹರಡುತ್ತಿರುವ ಸುದ್ದಿ; ಪುಕಾರು.
ಗುಸುಟು = ಗಸಟು.
ಗುಹೆ (ನಾ). ಕಲ್ಲಿನ ದೊಡ್ಡ ಪೊಟರೆ; ಗವಿ.
ಗುಹ್ಯ (ನಾ). ೧. ಮುಚ್ಚಿಡಬೇಕಾದುದು; ಗುಟ್ಟು. ೨. ಮಾಡಬಾರದ ಕೆಲಸ; ಅಕಾರ್ಯ. ೩. ಅಲ್ಪವಾದುದು. ೪. ಲಂಗೋಟಿ; ಕೌಪೀನ. ೫. ಜನನೇಂದ್ರಿಯ. (ಗು). ೬. ಮುಚ್ಚಿಡತಕ್ಕ. ~ರೋಗ = ಜನನೇಂದ್ರಿಯದ ರೋಗ.
ಗುಹ್ಯಕ (ನಾ). ೧. ಕುಬೇರ. ೨. ಕುಬೇರನ ಸೇವಕ; ಯಕ್ಷ.
ಗುಳ ೧. = ಗುಬಿ. (ಗು). ೨. ಸಣ್ಣ; ಚಿಕ್ಕ.
ಗುಳಂಬ (ನಾ). ಮಾವು, ನೆಲ್ಲಿ ಮುಂತಾದುವುಗಳ ಮುರಬ್ಬ.
ಗುಳದಾಳಿ (ನಾ). ಮಂಗಳಸೂತ್ರ; ತಾಳಿ.
ಗುಳಪಾವಟೆ (ನಾ). ಗೋಧಿ ಹಿಟ್ಟಿನಿಂದ ಮಾಡುವ ಒಂದು ಬಗೆಯ ಸಿಹಿ ತಿಂಡಿ.
ಗುಳಾಪು (ನಾ). ಗಾಜಿನ ಬುರುಡೆ, -ಗೋಳ.
ಗುಳಿಕ (ನಾ). ೧. ಅಷ್ಟಸರ್ಪಗಳಲ್ಲಿ ಒಂದು; ಕುಳಿಕ. ೨. ಶನಿಯ ಮಗ; ಒಂದು ಉಪಗ್ರಹ. ~ಕಾಲ = ಶುಭಕಾರ್ಯಗಳಿಗೆ ಪ್ರಶಸ್ತವಲ್ಲದ ಕಾಲ.
ಗುಳಿಗೆ (ನಾ). ೧. ಉರುಳೆ; ಮಾತ್ರೆ. ೨. ಒಂದು ನಾಣ್ಯ. ೩. ಮಡ; ಹರಡು.
ಗುಳೂಚಿ (ನಾ). ಒಂದು ಜಾತಿಯ ಬಳ್ಳಿ; ಅಮೃತವಳ್ಳಿ.
ಗುಳೂರಿಗೆ (ನಾ). ಒಂದು ಬಗೆಯ ಭಕ್ಷ್ಯ; ಹೂರಿಗೆ.
ಗುಳೆ = ಗೂಳೆಯ. ~ಕಟ್ಟು = ಬರಗಾಲ ಮುಂತಾದ ವಿಪ್ಲವಕಾಲದಲ್ಲಿ ವಲಸೆ ಹೋಗಲು ಗುಂಪುಗೂಡು. ~ಹೋಗು = ವಲಸೆ ಹೋಗು.
ಗುಳ್ಳ (ನಾ). ಬದನೆಯಲ್ಲಿ ಒಂದು ಜಾತಿ; ಗುಂಡುಬದನೆ.
ಗುಳ್ಳೆ ೧. = ಗುರುಳೆ. (ಗು). ೨. ಸಣ್ಣ; ಪುಟ್ಟ. ~ನರಿ = ಸಣ್ಣಜಾತಿಯ ನರಿ.
ಗುಬಿ(ಳ) (ನಾ). ೧. ಆನೆ ಕುದುರೆಗಳ ಪಕ್ಕರಕ್ಕೆ; ಹಕ್ಕರಿಕೆ. ೨. ನೇಗಿಲಿಗೆ ಹಾಕುವ ಕಬ್ಬಿಣದ ಸಣ್ಣ ಪಟ್ಟಿ; ಕುಳ. ೩. ಗುಡ; ಬೆಲ್ಲ.
ಗುಬಿ(ಳಿ) (ಕ್ರಿ). ೧. ಗುಣಿ ಬೀಳು. (ನಾ). ೨. ತಗ್ಗು; ಹಳ್ಳ.
ಗುಬು(ಳು) (ನಾ). ಕುಂಟೆ, ನೇಗಿಲುಗಳ ಬಾಯಿಗೆ ತೊಡಿಸುವ ಕಬ್ಬಿಣದ ಪಟ್ಟಿ.
ಗೂಂಟ ೧. = ಗೂಟ. ೨. ಕುದುರೆ.
ಗೂಂಡಾ (ನಾ). ತುಂಟ; ಪುಂಡ. ~ಗಿರಿ = ಪುಂಡಾಟಿಕೆ; ಪುಂಡುತನ.
ಗೂಕು (ನಾ). ಹಲಸಿನ ಮಿಡಿ; ಗುಜ್ಜೆ.
ಗೂಗರಿಸು (ಕ್ರಿ). ಚಟುವಟಿಕೆ ಇಲ್ಲದಿರು.
ಗೂಗೆ (ನಾ). ಒಂದು ಜಾತಿಯ ಹಕ್ಕಿ; ಘೂಕ; ಗೂಬೆ. ~ಹೊರಿಸು = ತಪ್ಪು ಹೊರಿಸು; ಅಪವಾದವನ್ನು ಹೊರಿಸು.

ಗೂಜು (ನಾ). ಹಲಸಿನ ಹಣ್ಣಿನ ನಡುವೆ ಇರುವ ದಿಂಡು.

ಗೂಟ (ನಾ). ದಸಿ ; ಬೆಣೆ.

ಗೂಟೆ (ನಾ). ೧.ಹಂದಿ ; ವರಾಹ. ೨.ಒಂದು ಜಾತಿಯ ಗಡ್ಡೆ.

ಗೂಡಾರ (ನಾ). ೧. ಬಟ್ಟೆಯ ಮನೆ ; ಡೇರೆ ; ತಂಬು. ೨. ಡೇರೆಯ ಮೇಲೆ ಹೊದೆಸುವುದಕ್ಕೂ ನೆಲದ ಮೇಲೆ ಹಾಸುವುದಕ್ಕೂ ಬಳಸುವ ದಪ್ಪನಾದ ಬಟ್ಟೆ.

ಗೂಡು (ನಾ). ೧. (ಪಕ್ಷಿಗಳ) ನೆಲೆ ; ಬೀಡು. ೨. ವಸ್ತುಗಳನ್ನಿಡಲು ಗೋಡೆಯಲ್ಲಿ ಮಾಡಿದ ಮಾಡು. ೩. ಪಂಜರ ; ಬೋನು. ೪.ದೇಹ; ಶರೀರ. ೫. ಮನಸ್ಸು; ಹೃದಯ. ೬. ತೆಂಗಿನ ಗರಿಗಳಿಂದ ಹೆಣೆದ ಚೀಲ. ೭. ಕಟಾಂಜನ; ಕಟಕಟೆ. ೮. ಒಲೆ. ~ಕೊ(ಗೊ)ಳ್ =೧. ಆಶ್ರಯವನ್ನು ಪಡೆ. ೨. ಅಡಗು ; ಮರೆಯಾಗು. ೩. ಮರುಗು; ಕೊರಗು.

ಗೂಡೆ (ನಾ). ೧. ದೊಡ್ಡಬುಟ್ಟಿ, —ಕುಕ್ಕೆ. ೨.ಹುಡುಗಿ. ~ತೆಪ್ಪ = ಗುಂಡನೆಯ ಒಂದು ಬಗೆಯ ದೋಣಿ ; ಬುಟ್ಟಿದೋಣಿ.

ಗೂಢ (ನಾ). ೧. ಗುಟ್ಟು ; ರಹಸ್ಯ. (ಗು). ೨. ಅಡಗಿದ ; ಮುಚ್ಚಿದ. ೩. ಗುಟ್ಟಾದ ; ರಹಸ್ಯವಾದ. ~ಚಾರ = ಬೇಹುಗಾರ ; ಗುಪ್ತಚಾರ. ~ಪದ =೧. ಅರ್ಥವು ತಿಳಿಯಲಾಗದ ಪದ. ೨. ಸರ್ಪ ; ಹಾವು. ೩. ಆದಿಶೇಷ.

ಗೂಥ (ನಾ). ಮಲ ; ಅಮೇಧ್ಯ.

ಗೂದ = ಗೂಥ.

ಗೂದೆ (ನಾ). ೧. ಚಪ್ಪರಬದನೆ ; ಟೊಮಾಟೊ. ೨. ಮಲದ್ವಾರದಲ್ಲಿ ಕಾಣಿಸಿಕೊಳ್ಳುವ ದೊಡ್ಡಕರುಳಿನ ತುದಿ.

ಗೂನು (ನಾ). ಬೆನ್ನು ಬಾಗಿರುವಿಕೆ ; ಡೂಗು.

ಗೂಬೆ = ಗೂಗೆ.

ಗೂರಲು (ನಾ). ದಮ್ಮಿನ ರೋಗ ; ಉಬ್ಬಸ.

ಗೂರು (ಕ್ರಿ). ೧. ಕೆಮ್ಮು ; ಉಬ್ಬಸಪಡು. ೨. = ಗೂಱು. (ನಾ). ೩. = ಗೂರಲು.

ಗೂಱು(ರು) (ಕ್ರಿ). ಕೋರೆದಾಡೆ, ಪಿಕಾಸಿ ಮೊದಲಾದುವುಗಳಿಂದ ಮಣ್ಣನ್ನು ಅಗೆ, —ಗೋರು. ~ಆಡು = ೧. ಕೊಂಬು ಅಥವಾ ಕೋರೆದಾಡೆಗಳಿಂದ ಕೆದರು. ೨. ಚೆಲ್ಲಾಪಿಲ್ಲಿ ಮಾಡು.

ಗೂರ್ಣಿಸು (ಕ್ರಿ). ಮೊರೆ ; ಭೋರ್ಗರೆ.

ಗೂಹನ (ಸಾ). ಮುಚ್ಚಿಡುವುದು.

ಗೂಳಿ (ನಾ). ೧. ಎತ್ತು ; ವೃಷಭ. ೨.ದೇವರ ಹೆಸರಿನಲ್ಲಿ ಬಿಟ್ಟಿರುವ ಹೋರಿ ; ಬಸವ. ೩. ಮೀನು ಹಿಡಿಯುವ ಬುಟ್ಟಿ ; ಕೂಳೆ.

ಗೂಳೆಯ (ನಾ). ೧. ವಲಸೆ ಹೋಗುವುದು ; ಒಕ್ಕಲು ಹೋಗುವುದು. ೨. ವಲಸೆ ಹೋಗುವ ಅಥವಾ ಬರುವ ಜನರ ತಂಡ.

ಗೃಧ್ರ (ನಾ). ಹದ್ದು.

ಗೃಹ (ನಾ). ೧.ಮನೆ ; ಬೀಡು. ೨.ಹೆಂಡತಿ ; ಪತ್ನಿ. ~ಕೃತ್ಯ = ೧. ಮನೆಗೆಲಸ. ೨. ಮನೆಯ ಆಡಳಿತ ; ಮನೆವಾರ್ತೆ. ~ಕೈಗಾರಿಕೆ=ಗುಡಿಕೈಗಾರಿಕೆ. ~ಕೋಕಿಳ = ಹಲ್ಲಿ ; ಗೌಳಿ. ~ಚಾಮರ = ಕಸಪೊರಕೆ ; ಬರಲು. ~ದೇವತೆ = ೧. ಮನೆತನದ ದೇವರು. ೨. ಗೃಹಿಣಿ. ~ಪ್ರವೇಶ =೧. ಹೊಸ ಮನೆಗೆ ಮೊದಲಬಾರಿ ಪ್ರವೇಶಿಸುವುದು. ೨. ಮದುಮಗಳನ್ನು ಮನೆತುಂಬಿಸಿಕೊಳ್ಳುವುದು. ~ಮಂತ್ರಿ = ಒಳಾಡಳಿತವನ್ನು ನಿರ್ವಹಿಸುವ ಸಚಿವ. ~ಮಹತ್ತರ = ಅರಮನೆಯ ಆಡಳಿತದ ಮುಖ್ಯಾಧಿಕಾರಿ ; ಮನೆವೆಗ್ಗಡೆ.

ಗೃಹಸ್ಥ (ನಾ). ೧. ಮದುವೆಯಾದವನು ; ಸಂಸಾರಿ. ೨. ಯೋಗ್ಯ ; ಸಭ್ಯ. ~ಆಶ್ರಮ = ನಾಲ್ಕು ಆಶ್ರಮಗಳಲ್ಲಿ ಎರಡನೆಯದು.

ಗೃಹಿಣಿ (ನಾ). ಹೆಂಡತಿ.

ಗೃಹೀತ (ನಾ). ೧. ಅಭಿಪ್ರಾಯ ; ಗ್ರಹಿಕೆ. (ಗು). ೨. ಹಿಡಿಯಲ್ಪಟ್ಟ. ೩. ತಿಳಿಯಲ್ಪಟ್ಟ. ೪. ಸ್ವೀಕರಿಸಲ್ಪಟ್ಟ. ೫. ಹೊಂದಿದ ; ಒಳಗೊಂಡ.

ಗೃಹ್ಯ (ಗು). ೧. ಮನೆವಾರ್ತೆಗೆ ಸಂಬಂಧಿಸಿದ. ೨. ತೆಗೆದುಕೊಳ್ಳತಕ್ಕ. ೩. ಅಂಗೀಕರಿಸತಕ್ಕ.

ಗೆಂಟಗೆ (ನಾ). ಚೊಚ್ಚಲು ಬಸಿರಿಗೆ ಕಟ್ಟುವ ರಕ್ಷೆ.

ಗೆಂಟು (ನಾ). ೧. ದೂರ. ೨. ವ್ಯತ್ಯಾಸ ; ಅಂತರ. ೩. ಪರಸ್ಪರ ವಿರೋಧ. ೪. ಹತ್ತಿರ; ಸಮೀಪ. ~ಆಗು = ೧. ದೂರವಾಗು ; ಎರವಾಗು. ೨. ಕಾಲವಿಳಂಬವಾಗು ; ತಡವಾಗು.

ಗೆಂಟುಗೆ = ಗೆಂಟಗೆ.

ಗೆಗ್ಗೆ (ನಾ). ಕೋಟೆಕಾಳೆಗದಲ್ಲಿ ಉಪಯೋಗಿಸುತ್ತಿದ್ದ ಒಂದು ಸಾಧನ.

ಗೆಜ್ಜಲು = ಗೆದಲ್.

ಗೆಜ್ಜೆ (ನಾ). ೧. ಕಿರುಗಂಟೆ; ಕಿಂಕಿಣಿ. ೨. ಕಿಬ್ಬೊಟ್ಟೆಯ ತಳಭಾಗಕ್ಕೂ ತೊಡೆಗೂ ಮಧ್ಯೆ ಇರುವ ಸಂದು. ~ಟೀಕೆ = ಒಂದು ಬಗೆಯ ಕಂಠಾಭರಣ. ~ಪೂಜೆ=೧. ವೇಶ್ಯಾವೃತ್ತಿಯನ್ನು ಪ್ರಾರಂಭಿಸುವಾಗ ಮಾಡುವ ಸಮಾರಂಭ. ೨. ನಾಟಕದ ಪ್ರಾರಂಭದಲ್ಲಿ ಮಾಡುವ ಪೂಜೆ. ~ವಸ್ತ್ರ = ಪೂಜೆಗಾಗಿ ಹತ್ತಿಯಿಂದ ಮಾಡುವ ಸರ ಮತ್ತು ದುಂಡು ಬಿಲ್ಲೆ.

ಗೆಡೆ (ಕ್ರಿ). ೧. ಗಳಹು ; ಹರಟು. ೨. (ಹಕ್ಕಿಗಳು) ಧ್ವನಿಮಾಡು. (ನಾ). ೩. ಸ್ನೇಹ; ಗೆಳೆತನ. ೪. ಸಂಪರ್ಕ. ೫. ಎಣೆ ; ಸಮ ; ಜೊತೆ. ೬. ಶೋಭೆ ; ಒಪ್ಪು. ೭. ಬೀಳುವಿಕೆ ; ಪತನ. ~ಕೊ(ಗೊ)ಳ್ = ೧. ಜೊತೆಗೊಳ್ಳು ; ಒಡಗೂಡು. ೨. ಹೊಂದು ; ಪಡೆ. ೩. ಲವಲವಿಕೆಯಿಂದ ಕೂಡಿರು. ೪. ಆಶ್ರಯಿಸು. ೫. ಕೈಗೊಳ್ಳು. ~ಪ(ವ)ಕ್ಕಿ = ಚಕ್ರವಾಕ ಪಕ್ಷಿ.

ಗೆಡೆಪ (ನಾ). ೧. ಅರ್ಥವಿಲ್ಲದ ಮಾತು. ೨. ಗಿಳಿ ಮುಂತಾದ ಹಕ್ಕಿಗಳ ಮಾತು.

ಗೆಡ್ಡೆ (ನಾ). ೧. ಕಂದಮೂಲ; ಗಡ್ಡೆ. ೨. ಶರೀರದಲ್ಲಿ ರೋಗದಿಂದ ಬೆಳೆಯುವ ಗಂಟು. ೩. ಆಧಾರ; ಆಶ್ರಯ. ೪. ಹೆಪ್ಪುಗಟ್ಟಿದುದು.

ಗೆಣತಿ = ಗೆಳತಿ.

ಗೆಣಸು = ಗೆಱಸು.

ಗೆಣೆ (ನಾ). ೧. ಸ್ನೇಹ; ಕೆಳೆ. ೨. ಗೆಳೆಯ; ಸ್ನೇಹಿತ. ~ಕಾ(ಗಾ)ಱ(ರ) = ೧. ಒಡನಾಡಿ; ಗೆಳೆಯ. ೨. ಇನಿಯ; ನಲ್ಲ. ೩. ವಿಟ ; ಜಾರ.

ಗೆಣೆಯ = ಗೆಣೆಗಾಱ.

ಗೆಣ್ಣು (ನಾ). ಬೆರಳು, ಕಬ್ಬು ಅಥವಾ ಬಿದಿರು ಮೊದಲಾದುವುಗಳ ಗಂಟು.

ಗೆತ್ತು (ನಾ). ಹೋಲಿಕೆ; ಸಾದೃಶ್ಯ.

ಗೆದಲ್(ಲು) (ನಾ). ಮರಮುಟ್ಟು, ಪುಸ್ತಕ ಮುಂತಾದುವುಗಳನ್ನು ನಾಶಮಾಡುವ ಒಂದು ಜಾತಿಯ ಬಿಳಿಯ ಇರುವೆ.

ಗೆದಿ (ಕ್ರಿ). ಗೆಲ್ಲು ; ಜಯಿಸು.

ಗೆದ್ದಲ್(ಲು) = ಗೆದಲ್.

ಗೆಪ್ಪೆ (ನಾ). ೧. ಆಸ್ತಿ; ಐಶ್ವರ್ಯ. ೨. ರಾಶಿ.

ಗೆಬರು (ಕ್ರಿ). ಗೀರು; ಪರಚು. ~ಆಡು = ೧. ಹುಡುಕಾಡು. ೨. ಗೋರು ; ಕವರು.

ಗೆಯ್ ೧. = ಗೆಯ್ಯು. ೨. ಸಾಗುವಳಿಮಾಡು.

ಗೆಯ್ತ = ಕೆಯ್ತ.

ಗೆಯ್ಯು (ಕ್ರಿ). ಮಾಡು ; ನೆರವೇರಿಸು.

ಗೆರಸಿ = ಕೆರಸಿ.

ಗೆರಸೆ = ಕೆರಸಿ.

ಗೆಱೆ(ರೆ) (ನಾ). ಗೀಟು; ಗೆರೆ. ~ದಾಟು = ಮಾತು ಮೀರು; ಎಲ್ಲೆಮೀರು.

ಗೆರ್ಬು (ಕ್ರಿ). ೧. ಸಂಭೋಗಿಸು. (ನಾ). ೨. ಸಂಭೋಗ.

ಗೆಲ್(ಲು) (ಕ್ರಿ). ೧. ಜಯಿಸು; ಸಾಧಿಸು. ೨. ಮೀರು; ಅತಿಕ್ರಮಿಸು. ೩. ಭೇದಿಸು; ಒಡೆ. ೪. ಲೇಪಿಸು; ಬಳಿ.

ಗೆಲವು (ನಾ). ೧. ಜಯ. ೨. ಸಂತೋಷ; ಸುಖ.

ಗೆಲ್ಲ (ನಾ). ಗೆಲವು; ಜಯ. ~(ಂ)ಕು(ಗು)ಡು = ೧. ಸೋಲನ್ನು ಒಪ್ಪಿಕೊಳ್ಳು. ೨. ವಿಜಯದ ಕಾಣಿಕೆಯನ್ನು ನೀಡು. ~(ಂ)ಕೊ(ಗೊ)ಳ್ = ೧. ಸೋಲಿಸು. ೨. ಹೆಮ್ಮೆತಾಳು. ~ಕಾ(ಗಾ)ಱ(ರ) = ಗೆಲ್ಲುವವನು; ಜಯಶೀಲ. ~ಪೆ(ವೆ)ಣ್ = ಗೆಲುವಿನ ದೇವತೆ; ಜಯಲಕ್ಷ್ಮಿ.

ಗೆಲ್ಲು (ಕ್ರಿ). ೧. ಜಯಿಸು; ಸಾಧಿಸು. (ನಾ). ೨. ಕೊಂಬೆ; ಟೊಂಗೆ.

ಗೆಲ್ವು (ನಾ). ೧. ಜಯ. ೨. ಶುಭಾಶಯ; ಹರಕೆ.

ಗೆಳತಿ (ನಾ). ಕೆಳದಿ; ಸ್ನೇಹಿತೆ.

ಗೆಳೆ (ಕ್ರಿ). ೧. ಎಳೆ; ಸೆಳೆ. (ನಾ). ೨. ಸ್ನೇಹಿತ; ಗೆಳೆಯ.

ಗೆಳೆಯ (ನಾ). ಕೆಳೆಯ; ಸ್ನೇಹಿತ.

ಗೆಱ(ಳ)ಸು (ನಾ). ಒಂದು ಬಗೆಯ ಗಡ್ಡೆ; ಕಂದಮೂಲ; ಗೆಣಸು.

ಗೇಂಡಾಮೃಗ (ನಾ). ಖಡ್ಗಮೃಗ; ಗಂಡಕ.

ಗೇಕು (ನಾ). ಒಂದು ಬಗೆಯ ಸಸ್ಯ.

ಗೇಣ್(ಣು) (ನಾ). ೧. ಒಂಬತ್ತು ಅಂಗುಲಗಳ ಅಳತೆ. ೨. ಉದ್ದವಾದ ಕತ್ತಿ. ~ಅಂಕ = ಖಡ್ಗಯುದ್ಧ.

ಗೇಣಿ (ನಾ). ಗುತ್ತಿಗೆ.

ಗೇಬೆ (ನಾ). ರೋಗದಿಂದ ಮುಖ ಊದಿಕೊಳ್ಳುವಿಕೆ; ಬಾವು; ಊತ.

ಗೇಯ (ನಾ). ೧. ಹಾಡುವಿಕೆ; ಗಾಯನ. (ಗು). ೨. ಹಾಡಲು ಯೋಗ್ಯವಾದ.

ಗೇರ್(ರು) (ನಾ). ಒಂದು ಜಾತಿಯ ಮರ ಮತ್ತು ಅದರ ಬೀಜ; ಭಲ್ಲಾತಕಿ. ~ಕುಕ್ಕೆ = ಗೇರೆಣ್ಣೆ ಬಳಿದು ಸೋರದಂತೆ ಮಾಡಿದ ಬುಟ್ಟಿ. ~ಪಪ್ಪು = ಗೋಡಂಬಿ.

ಗೇರಿ (ನಾ). ತಲೆ ಸುತ್ತುವಿಕೆ, -ತಿರುಗುವಿಕೆ.

ಗೇರೆ (ನಾ). ಬೇಲಿ; ಆವರಣ.

ಗೇಲಿ (ನಾ). ಅಪಹಾಸ್ಯ; ತಮಾಷೆ; ಲೇವಡಿ.

ಗೇಹ (ನಾ). ಮನೆ; ಗೃಹ.

ಗೇಹಳಿ (ನಾ). ಹೊಸ್ತಿಲು; ಹೊಸಲು.

ಗೈರತ್ತು (ನಾ). ಶಕ್ತಿ; ಸಾಮರ್ಥ್ಯ.

ಗೈರಿಕ (ನಾ). ೧. ಒಂದು ಬಗೆಯ ಕೆಂಪು ಬಣ್ಣದ ಖನಿಜ; ಜಾದು; ಕಾವಿಕಲ್ಲು. ೨. ಚಿನ್ನ; ಬಂಗಾರ. (ಗು). ೩. ಬೆಟ್ಟದಲ್ಲಿ ಹುಟ್ಟಿದ.

ಗೈರು (ನಾ). ೧. ಅಭಾವ; ಇಲ್ಲದಿರುವುದು. ೨. ತಪ್ಪು; ಅನುಚಿತ. ~ಹಾಜರು = ಹಾಜರಿ ಇಲ್ಲದಿರುವುದು; ಅನುಪಸ್ಥಿತಿ.

ಗೈರುಮಿಲೆ (ನಾ). ೧. ಜಾಗ ತಪ್ಪುವುದು; ತಪ್ಪು ಜಾಗಕ್ಕೆ ಹೋಗುವುದು. ೨. ಕಳೆದು ಹೋಗುವಿಕೆ.

ಗೊಂಕುಱು(ರು) (ನಾ). ೧. ಕರ್ಕಶವಾಗಿ ಅರಚುವಿಕೆ. (ಗು). ೨. ದೊಡ್ಡಗಾತ್ರದ. ~ಕ(ಗ)ಟ್ಟಿ(ತ್ತಿ) = ದೊಡ್ಡ ಜಾತಿಯ ಕತ್ತಿ.

ಗೊಂಕೆ (ನಾ). ಕೊರಳು; ಗೋಣು.

ಗೊಂಗಡಿ (ನಾ). ೧. ಕಂಬಳಿ. ೨. ತಲೆ, ಬೆನ್ನುಗಳನ್ನು ಮುಚ್ಚಲು ಧರಿಸುವ ಕಂಬಳಿಯ ಗೊಪ್ಪೆ; ಗೊರಬು. ೩. ಚೆನ್ನಾಗಿರುವ ಮತ್ತು ನೀಳವಾಗಿರುವ ಹುಣಿಸೆಯ ಹಣ್ಣು.

ಗೊಂಚಲ್(ಲು) (ನಾ). ಕುಚ್ಚು; ಗುಚ್ಛ; ಮಂಜರಿ.

ಗೊಂಚಿ ೧. = ಗೊಂಚಲ್. ೨. ನೆರವಿ; ಗುಂಪು.

ಗೊಂಚಲು = ಗೊಂಚಿ.

ಗೊಂಟು (ನಾ). ೧. ದಿಕ್ಕು; ದಿಶೆ. ೨. ಮೂಲೆ; ಕೋನ. ೩. ಅಂಚು; ದಡಿ.

ಗೊಂಡ (ನಾ). ೧. ವಿಂಧ್ಯ ಪರ್ವತದಲ್ಲಿ ವಾಸಿಸುವ ಒಂದು ಜನಾಂಗ. (ಗು). ೨. ದಟ್ಟವಾದ; ಗಹನವಾದ.

ಗೊಂಡೆ (ನಾ). ೧. ಒಂದು ಬಗೆಯ ಆಭರಣ; ಕುಚ್ಚು. ೨. ಒಂದು ಜಾತಿಯ ಹೂವಿನ ಗಿಡ.

ಗೊಂಡೆಯ (ನಾ). ೧. ಗೊಂಚಲು; ಕುಚ್ಚು. ೨. ಒಂದು ಬಗೆಯ ಆಭರಣ. ೩. ರಾಶಿ; ಸಮೂಹ.

ಗೊಂದಣ = ಗೊಂದಳ. ~ಇಸು = ೧. ಒಟ್ಟಾಗು; ಗುಂಪುಗೂಡು. ೨. ಹೆಚ್ಚಾಗು; ಅಧಿಕವಾಗು. ೩. ಗದ್ದಲವೆಬ್ಬಿಸು. ~(ಂ)ಕೊ(ಗೊ)ಳ್ = ೧. ಗುಂಪುಗೂಡು. ೨. ಗಾಬರಿಪಡು; ಗಲಿಬಿಲಿಯಾಗು.

ಗೊಂದಲ (ನಾ). ಗಲಾಟೆ; ಗದ್ದಲ.

ಗೊಂದಳ (ನಾ). ೧. ಗುಂಪು; ಹಿಂಡು; ಮೊತ್ತ. ೨. = ಗೊಂದಲ. ೩. ಒಂದು ಬಗೆಯ ಕುಣಿತ; ಮೇಳನೃತ್ಯ.

ಗೊಂದಿ ೧. = ಗೊಂದು. ೨. ಕೊಲ್ಲಿ; ಆಖಾತ.

ಗೊಂದು (ನಾ). ಇಕ್ಕಟ್ಟು; ಇಡುಕು.

ಗೊಂದೆ (ನಾ). ಎತ್ತು; ಬಸವ. ~ಬೊಂದಿ = ೧. ಎತ್ತಿನ ಶರೀರ. ೨. ಧರ್ಮಾಚರಣೆಯಿಲ್ಲದವನು; ಅಧರ್ಮಿ.

ಗೊಂಬೆ (ನಾ). ೧. ಬೊಂಬೆ; ವಿಗ್ರಹ. ೨. ಗುಂಪು; ಸಮೂಹ. ೩. ಕಣ್ಣಿನ ಗುಡ್ಡೆ. ~ಆ(ಯಾ)ಟ = ೧. ಸೂತ್ರದ ಬೊಂಬೆಯಾಟ. ೨. ಬೊಂಬೆಗಳನ್ನು ಇಟ್ಟುಕೊಂಡು ಆಡುವ ಆಟ. ~ಕೂರಿಸು = ನವರಾತ್ರಿಯಲ್ಲಿ ಗೊಂಬೆಗಳನ್ನು ಓರಣವಾಗಿ ಕೂಡಿಸು. ~ರಾಮ = ತೊಗಲು ಗೊಂಬೆಗಳನ್ನು ಕುಣಿಸುವವನು; ಕಿಳ್ಳಿಕೇತ.

ಗೊಗ್ಗ (ನಾ). ೧. ಮೈಲಾರದೇವರ ಭಕ್ತ. ೨. ಮಕ್ಕಳನ್ನು ಹೆದರಿಸಲು ಹೇಳುವ ಕಾಲ್ಪನಿಕ ದೆವ್ವ; ಗುಮ್ಮ.

ಗೊಗ್ಗರ (ನಾ). ಧ್ವನಿಯಲ್ಲಿ ಉಂಟಾಗುವ ಒಂದು ಬಗೆಯ ವಿಕಾರ, – ಕರ್ಕಶತೆ.

ಗೊಗ್ಗರು = ಗೊಗ್ಗರ.

ಗೊಜಗು (ಕ್ರಿ). ೧. ಅಸ್ಪಷ್ಟವಾಗಿ ಮಾತನಾಡು. (ನಾ). ೨. ಅಸ್ಪಷ್ಟವಾಗಿ ಮಾತನಾಡುವುದು.

ಗೊಜ್ಜ (ನಾ). ಹಿರಿಯ; ಪೂರ್ವಜ.

ಗೊಜ್ಜಗೆ (ನಾ). ಒಂದು ಜಾತಿಯ ಹೂವು.

ಗೊಜ್ಜು (ಕ್ರಿ). ೧. ಎರಚು; ಸುರಿ; ಹೊಯ್ಯು. (ನಾ). ೨. ಒಂದು ಬಗೆಯ ಮೇಲೋಗರ. ೩. ಯಾವುದಾದರೂ ದ್ರವಪದಾರ್ಥ. ೪. ಆಮ್ಲತೆ; ಹುಳಿ.

ಗೊಟರು (ನಾ). ಪೊಟರೆ; ಬಿಲ.

ಗೊಟಾಯಿಸು (ಕ್ರಿ). ತಿರುವಿಹಾಕು; ತೊಳಸು.

ಗೊಟಾಳಿ (ನಾ). ತೊಂದರೆ; ಗೋಜು.

ಗೊಟ್ಟ (ನಾ). ೧. ದನದ ಕೊಟ್ಟಿಗೆ; ಗೋಶಾಲೆ. ೨. ದನಕರುಗಳಿಗೆ ಔಷಧಿ ಮುಂತಾದುವನ್ನು ಕುಡಿಸುವ ಬಿದಿರಿನ ಕೊಳವೆ. ೩. ನೆಲೆಮನೆ; ಬೀಡು.

ಗೊಟ್ಟಿ (ನಾ). ೧. ಜೊತೆ; ಒಡನಾಟ. ೨. ಕೂಟ; ಸಭೆ. ೩. ಮಾತುಕತೆ; ಸಲ್ಲಾಪ. ೪. ದನದ ಹಟ್ಟಿ; ಕೊಟ್ಟಿಗೆ. ~ಗಾಣ = ೧. ಮೇಳಸಂಗೀತ. ೨. ಮೇಳಗಾನದಲ್ಲಿ ಭಾಗವಹಿಸುವವನು.

ಗೊಟ್ಟು (ನಾ). ೧. ಮೊಂಡುತನ; ಹಟ. ೨. ಮೋಸ; ಕಪಟ. ೩. ಬರ; ಕ್ಷಾಮ. ೪. ನಿಷ್ಫಲತೆ. ೫. ಪೂರ್ತಿಯಾಗಿ ಒಣಗಿರುವ ಸ್ಥಿತಿ. ~ಕ(ಗ)ಟ್ಟು = ಒಣಗಿಹೋಗು.

ಗೊಡಗು (ನಾ). ೧. ಬಾವಿಯ ಅಥವಾ ಹಗೇವಿನ ಒಳಗೆ ಆಗಿರುವ ಡೊಗರು. ೨. ಬಗ್ಗಡ; ರಾಡಿ.

ಗೊಡವೆ (ನಾ). ಸಂಬಂಧ; ಗೋಜು; ಸಂಪರ್ಕ; ಉಸಾಬರಿ.

ಗೊಡ್ಡ (ನಾ). ೧. ಮೋಸ; ಕಪಟ. ೨. ಚೇಷ್ಟೆ; ತುಂಟತನ. ೩. ತೊಂದರೆ; ಕೇಡು. ೪. ಕೆಲಸಕ್ಕೆ ಬಾರದವನು; ಕೈಲಾಗದವನು.

ಗೊಡ್ಡಿ (ನಾ). ಬಂಜೆಯಾದ ಹೆಂಗಸು.

ಗೊಡ್ಡು (ನಾ). ೧. ಬಂಜೆಯಾಗಿರುವಿಕೆ; ಬಂಜೆತನ. ೨. ಬಂಜೆ; ಗೊಡ್ಡಿ. ೩. ಗಬ್ಬವಾಗದ ಹಸು ಅಥವಾ ಎಮ್ಮೆ. ೪. ನಿಷ್ಫಲತೆ; ಅಂತಸ್ಸಾರವಿಲ್ಲದಿರುವಿಕೆ. (ಗು). ೫. ವ್ಯರ್ಥವಾದ; ನಿಷ್ಫಲವಾದ. ~ಆಚಾರ = ವ್ಯರ್ಥವಾದ ಆಚಾರ. ~ಆಟ = ೧. ಮೋಸ; ಕುತಂತ್ರ. ೨. ಕೀಟಲೆ; ಉಪದ್ರವ. ~ಕೊ(ಗೊ)ಳ್ = ಕೆಲಸಕ್ಕೆ ಬಾರದೆ ಹೋಗು; ವ್ಯರ್ಥವಾಗು. ~ಮಾತು = ಉಪಯೋಗವಿಲ್ಲದ ಮಾತು, –ಹರಟೆ. ~ವ್ಯಕ್ತಿ = ೧. ಕೆಲಸಕ್ಕೆ ಬಾರದವನು; ಅಪ್ರಯೋಜಕ. ೨. ವಿವೇಚನೆಯಿಲ್ಲದೆ ಸಂಪ್ರದಾಯಗಳನ್ನು ಅನುಸರಿಸುವವನು. ~ಸಾರು = ಬೇಳೆಯನ್ನು ಹಾಕದೆ ಮಾಡುವ ಸಾರು.

ಗೊಣಗು (ಕ್ರಿ). ೧. ಅಸ್ಪಷ್ಟವಾಗಿ ಮಾತನಾಡು. ೨. ಒಂದೇ ಸಮನೆ ಮಾತನಾಡು; ವಟಗುಡು. ೩. ಚಾಡಿಹೇಳು; ದೂರು. (ನಾ). ೪. ಅಸ್ಪಷ್ಟವಾಗಿ ಮಾತನಾಡುವಿಕೆ. ೫. ಆಕ್ಷೇಪ.

ಗೊಣಸು (ನಾ). ೧. ಹಸು, ಎತ್ತು ಮುಂತಾದುವುಗಳ ಕೊರಳಿನ ಆಭರಣ. ೨. =ಗೊಬಸು.

ಗೊಣೆಯ (ನಾ). ೧. ಬಿಲ್ಲಿನ ಹೆದೆ; ಮೌರ್ವಿ. ೨. ಚಕ್ರದ ಅಲಗು, –ಧಾರೆ.

ಗೊಣ್ಣೆ (ನಾ). ೧. ಸಿಂಬಳ. ೨. ಒಂದು ಬಗೆಯ ಹುಳು; ಗುನಿ. ೩. ಶಾಯಿಯ ತೊಟ್ಟು, –ಹನಿ.

ಗೊತ್ತು (ನಾ). ೧. ನೆಲೆ; ಬೀಡು. ೨. ಪರಿಚಯ; ತಿಳಿವಳಿಕೆ. ೩. ಚಿಹ್ನೆ; ಕುರುಹು. ೪. ನಿಯಮ; ಗೊತ್ತುವಳಿ. ೫. ಕೀರ್ತಿ; ಯಶಸ್ಸು. ೬. ನಿಶ್ಚಿತವಾದ ಸ್ಥಳ. ೭. ಕುದುರೆ, ದನಕರುಗಳನ್ನು ಕಟ್ಟುವ ಜಾಗ. ೮. ಉದ್ದೇಶ; ಗುರಿ. ೯. ಮೇರೆ; ಎಲ್ಲೆ. ೧೦. ತಿಳಿದುದು; ವಿದಿತವಾದುದು. ~ಗಾರ = ಯಜಮಾನ; ನಾಯಕ. ~ಗುರಿ = ೧. ಸ್ಥಿರವಾದ ಧ್ಯೇಯ. ೨. ನೆಲೆ ಸೇರಲು ಗೊತ್ತುಮಾಡಿಕೊಂಡ ಸ್ಥಳ. ~ಪಾಡು = ಏರ್ಪಾಡು; ವ್ಯವಸ್ಥೆ. ~ಮಾಡು = ನಿರ್ಧರಿಸು; ನಿರ್ಣಯಿಸು. ~ವಳಿ = ಠರಾವು; ನಿರ್ಣಯ.

ಗೊದಕು (ನಾ). ಕೆಸರು; ಬದಿ; ಪಂಕ.

ಗೊದಮು (ನಾ). ೧. ರಥದ ವೇಗವನ್ನು ತಡೆಯಲು ಬಳಸುವ ಕೊರಡು; ತಡೆಮರ. ೨. ತೆಂಗಿನಗರಿಯ ಬುಡದ ತುಂಡು.

ಗೊದಮೊಟ್ಟೆ (ನಾ). ೧. ಬಾಲವುಳ್ಳ ಮರಿಗಪ್ಪೆ. ೨. ತೆಂಗಿನಗರಿಯ ಬುಡದ ತುಂಡು.

ಗೊದಳೆ (ನಾ). ಒಂದು ಜಾತಿಯ ಮೀನು.

ಗೊದ್ದ (ನಾ). ೧. ಕರಿಯ ಬಣ್ಣದ ದೊಡ್ಡ ಜಾತಿಯ ಇರುವೆ; ಕಟ್ಟಿರುವೆ. ೨. ಓತಿಕೇತ.

ಗೊನೆ (ಕ್ರಿ). ೧. ಬಿಂಕಗೊಳ್ಳು; ಗರ್ವಿಸು. (ನಾ). ೨. ಹೂವು, ಹಣ್ಣು ಮುಂತಾದುವುಗಳ ಗೊಂಚಲು; ಗೊಲೆ. ~ಕಾ(ಗಾ)ರ = ಅಡಕೆ ಮುಂತಾದ ಗೊನೆಗಳನ್ನು ಕೊಯ್ಯುವವನು.

ಗೊನೆಹ (ನಾ). ೧. ಬಿಂಕ; ಹೆಮ್ಮೆ. ೨. ಬಯಕೆ; ಅಪೇಕ್ಷೆ.

ಗೊಪೆ (ನಾ). ೧. ಹೆಣ ಹುಗಿಯುವ ಕುಣಿ; ಗೋರಿ. ೨. ಗೌಪ್ಯವಾದ ಸ್ಥಳ.

ಗೊಬಡಿ (ನಾ). ಗುಡಿಸಿಲು; ಜೋಪಡಿ.

ಗೊಬ್ಬರ (ನಾ). ೧. ಜಾನುವಾರುಗಳ ಸಗಣಿ, ಎಲೆ ಮುಂತಾದುವುಗಳ ಮಿಶ್ರಣ.

೨. ಹೊಲಸು ; ಕಸ. ೩. ಒಂದು ಬಗೆಯ ಅಂಟುರೋಗ; ದಡಾರ.

ಗೊಬ್ಬಳಿ (ನಾ). ಜಾಲಿಯ ಮರ; ಬೊಬ್ಬಳಿ ಮರ.

ಗೊಬ್ಬೆ (ನಾ). ಈಚಲು ಮುಂತಾದ ಮರಗಳಿಗೆ ಕಳ್ಳನ್ನು ಇಳಿಸಲು ಕಟ್ಟುವ ಗಡಿಗೆ.

ಗೊಮ್ಮಟ (ನಾ). ೧. ಚೆಲುವ; ಸುಂದರ. ೨. ಕಾಮದೇವರಲ್ಲಿ ಮೊದಲನೆಯವನು; ಬಾಹುಬಲಿ.

ಗೊರಕೆ (ನಾ). ೧. ನಿದ್ರಿಸುವಾಗ ಉಸಿರಾಟದಿಂದಾಗುವ ಶಬ್ದ. ೨. ಕಬ್ಬಿಣದ ಈಟಿ.

ಗೊರಗು = ಗೊರಬು.

ಗೊರಜೆ (ನಾ). ೧. ಒಂದು ಬಗೆಯ ಸೊಪ್ಪು. ೨. ಒಂದು ಜಾತಿಯ ಶಂಖದ ಹುಳು ಮತ್ತು ಅದರ ಚಿಪ್ಪು.

ಗೊರಟ (ನಾ). ೧. ಮಾವು ಮೊದಲಾದ ಹಣ್ಣುಗಳ ಓಟೆ. ೨. ಒರಟಾದುದು; ಗಟ್ಟಿಯಾದುದು.

ಗೊರಟೆ (ನಾ). ೧. ಮಾವು ಮೊದಲಾದ ಹಣ್ಣುಗಳ ಒಳಗಿರುವ ಬೀಜ; ಓಟೆ. ೨. ಒಂದು ಜಾತಿಯ ಗಿಡ; ಸ್ಫಟಿಕದ ಗಿಡ.

ಗೊರಬಿ (ನಾ). ದೇವಸ್ಥಾನದ ಸೇವೆಗೆ ಬಿಟ್ಟ ಹೆಣ್ಣು; ದೇವದಾಸಿ.

ಗೊರಬು (ನಾ). ಮಳೆಯ ನೀರು ಮೈಮೇಲೆ ಬೀಳದಂತೆ ಹುಲ್ಲು, ಎಲೆ ಮುಂತಾದುವುಗಳಿಂದ ಮಾಡಿದ ಮುಸುಕು, –ಹೊದಿಕೆ.

ಗೊರವ (ನಾ). ೧. ಶೈವ ಸಂನ್ಯಾಸಿ; ಜಂಗಮ. ೨. ತಿರುಕ; ಭಿಕ್ಷುಕ. ೩. ಶಿವ. ೪. ಹಿರಿಯ; ಗೌರವಾರ್ಹ. ೫. ಮೈಲಾರ ದೇವರ ಭಕ್ತ. ೬. = ಗೊರವಂಕ.

ಗೊರವಂಕ (ನಾ). ಒಂದು ಜಾತಿಯ ಪಕ್ಷಿ.

ಗೊರವಿ (ನಾ). ೧. ಶೈವ ಸಂನ್ಯಾಸಿನಿ. ೨. ಒಂದು ಜಾತಿಯ ಮರ; ಕೊಳ್ಳಿಮರ. ೩. ಒಂದು ಜಾತಿಯ ಹೂವಿನ ಗಿಡ.

ಗೊರಸು (ನಾ). ದನ, ಕುದುರೆ ಮುಂತಾದುವುಗಳ ಕೊಳಗು; ಖುರ.

ಗೊರೆ (ನಾ). ಕೆಸರು; ಪಂಕ.

ಗೊಱ(ರ)ಲೆ (ನಾ). ಒಂದು ಜಾತಿಯ ಬಿಳಿ ಇರುವೆ; ಗೆದ್ದಲು.

ಗೊಲಸು (ನಾ). ಒಂದು ಬಗೆಯ ಕಡಗದಂತಹ ಆಭರಣ.

ಗೊಲೆ (ನಾ). ೧. ಕೊಂಡಿ; ಕುಣಿಕೆ. ೨. ಬಿಲ್ಲಿನ ತುದಿ; ಕೊಪ್ಪು. ೩. ಗೊಂಚಲು; ಗುಚ್ಛ.

ಗೊಲ್ಲ (ನಾ). ೧. ಗೋವಳ; ಗೋಪಾಲ. ೨. ಖಜಾನೆಯಲ್ಲಿ ನಾಣ್ಯಪರೀಕ್ಷಕನ ಸಹಾಯಕ.

ಗೊಳಲೆ (ನಾ). ೧. ಬತ್ತದ ಹೊಟ್ಟು. ೨. ನೆಲಗಡಲೆ, ಹುಣಿಸೆ ಮುಂತಾದುವುಗಳ ಸಿಪ್ಪೆ.

ಗೊೞ(ಳ)ಸು (ನಾ). ಕುಣಿಕೆ; ಕೊಂಡಿ.

ಗೋ (ನಾ). ೧. ಹಸು; ಆಕಳು. ೨. ಎತ್ತು; ಗೂಳಿ. ೩. ಆಕಾಶ. ೪. ನೀರು. ೫. ಕಿರಣ. ೬. ವಜ್ರಾಯುಧ. ೭. ಭೂಮಿ. ೮. ಮಾತು. ೯. ಕಣ್ಣು. ೧೦. ಪಾರ್ವತಿ. ~ಕರ್ಣ = ೧. ಹಸುವಿನ ಕಿವಿ. ೨. ಚಮರೀಮೃಗ. ೩. ಒಂಬತ್ತು ಇಂಚುಗಳ ಅಳತೆ; ಚೋಟು. ೪. ಹಾವು. ೫. ಪಶ್ಚಿಮ ಕರಾವಳಿಯಲ್ಲಿಯ ಒಂದು ಕ್ಷೇತ್ರ. ~ಕುಲ(ಳ) = ೧. ಗೋವುಗಳ ಹಿಂಡು. ೨. ಕಿರಣಗಳ ಪುಂಜ. ~ಕೇಶ = ವ್ಯೋಮಕೇಶ; ಶಿವ. ~ಪತಿ = ೧. ಗೂಳಿ. ೨. ದೇವೇಂದ್ರ. ೩. ದನಗಾಹಿ. ೪. ಬ್ರಹ್ಮ. ೫. ವರುಣ. ~ಮಂಡಲ(ಳ) = ೧. ದನಕರುಗಳ ಮಂದೆ. ೨. ಭೂಮಂಡಲ. ~ಮಾಳ = ಹುಲ್ಲುಗಾವಲು. ~ಮುಖ = ೧. ಹಸುವಿನ ಮುಖ. ೨. ಒಂದು ಬಗೆಯ ವಾದ್ಯ. ೩. ದ್ರವಪದಾರ್ಥಗಳನ್ನು ಬಡಿಸಲು ಉಪಯೋಗಿಸುವ ಪಾತ್ರೆ;

ಕಬಾಯಿ. ~ಲಾಂಗೂಲ = ೧. ಆಕಳ ಬಾಲ. ೨. ಆಕಳ ಬಾಲದಂತೆ ಬಾಲವಿರುವ ಕಪ್ಪುಮುಖದ ಕೋತಿ; ಮುಸುವ. ~ವರ್ಧನ =೧. ದನಗಳನ್ನು ಪಾಲನೆ ಮಾಡುವುದು. ೨. ಗೋವುಗಳನ್ನು ಪಾಲಿಸುವವನು; ಕೃಷ್ಣ. ೩.ಒಂದು ಬೆಟ್ಟದ ಹೆಸರು. ೪. ಗೋರಿಕಾಯಿ; ಚವಳಿಕಾಯಿ. ~ವಳ = ೧. ದನಗಾಹಿ; ಗೋಪಾಲ. ೨. ಜೀವಿಗಳ ಒಡೆಯ. ೩. ಪಶುಪತಿ. ~ಶೀರ್ಷ=೧. ಗೋವಿನ ತಲೆ. ೨.ಒಂದು ಜಾತಿಯ ಗಂಧದ ಮರ. ~ಶ್ರೋತ್ರ = ಕಣ್ಣುಗಳೇ ಕಿವಿಯಾಗಿರುವ ಪ್ರಾಣಿ; ಹಾವು.~ಸಾಸ=೧. ಒಂದು ಸಾವಿರ ಹಸುಗಳ ದಾನ. ೨.ತುರುಕಾಳೆಗದಲ್ಲಿ ತೋರುವ ಸಾಹಸ. ~ಸ್ವಾಮಿ=೧. ತುರುಗಾಹಿ; ಗೊಲ್ಲ. ೨. ಇಂದ್ರಿಯಗಳನ್ನು ಜಯಿಸಿದವನು; ವಿರಕ್ತ.

ಗೋಂಡಿ (ನಾ). ದ್ರಾವಿಡ ಭಾಷಾವರ್ಗಕ್ಕೆ ಸೇರಿದ ಒಂದು ಭಾಷೆ.

ಗೋಂದು (ನಾ). ಅಂಟು; ಸರಿ.

ಗೋಗರೆ (ಕ್ರಿ). ೧. ದೈನ್ಯದಿಂದ ಬೇಡಿಕೊಳ್ಳು. (ನಾ). ೨. ದೀನವಾಗಿ ಬೇಡಿಕೊಳ್ಳುವಿಕೆ.

ಗೋಚರ (ನಾ). ೧.ದನಕರುಗಳು ಮೇಯುವ ಸ್ಥಳ; ಹುಲ್ಲುಗಾವಲು. (ಗು). ೨. ದನಕರುಗಳು ಸಂಚರಿಸುವ. ೩. ಕಣ್ಣು ಮೊದಲಾದ ಇಂದ್ರಿಯಗಳಿಗೆ ವೇದ್ಯವಾದ; ಕಣ್ಣಿಗೆ ಕಾಣತಕ್ಕ. ೪.ಮಾಡಬಹುದಾದ; ಶಕ್ತಿಗೆ ನಿಲುಕುವ. ~ಇಸು=೧.ತೋರು; ಕಾಣು. ೨. ತಿಳಿ; ವೇದ್ಯವಾಗು. ೩. ತೋರಿಸು; ಪ್ರಕಟಿಸು.

ಗೋಚು (ಕ್ರಿ). ೧. ಗೋರು; ಬಳಿ. ೨. ದೋಚು; ಸುಲಿ. (ನಾ). ೩. ಸುಲಿಗೆಗಾರ; ಲೂಟಿ ಮಾಡುವವನು.

ಗೋಜ (ನಾ). ೧. ನೀರಿನಲ್ಲಿ ಹುಟ್ಟಿದುದು; ತಾವರೆ. ೨. ಸ್ವರ್ಗದಲ್ಲಿ ಹುಟ್ಟಿದವನು.; ದೇವತೆ. ~ರಿಪು = ಕಮಲದ ಶತ್ರು; ಚಂದ್ರ.

ಗೋಜು (ಕ್ರಿ). ೧. (ದಾರದ ಎಳೆಗಳಂತೆ) ಸಿಕ್ಕಾಗು; ಗಂಟಾಗು. (ನಾ).೨.ತೊಡಕು; ಸಿಕ್ಕು. ೩.ಗೊಡವೆ; ತಂಟೆ. ೪. ತೊಂದರೆ; ಕಷ್ಟ.

ಗೋಟ (ನಾ). ಹಿಂಸೆ; ತೊಂದರೆ. ~ಕೊ(ಗೊ)ಳಿಸು = ತೊಂದರೆಗೆ ಗುರಿಪಡಿಸು; ಕಷ್ಟಕ್ಕೀಡುಮಾಡು.

ಗೋಟು ೧. = ಗೊಂಟು. ೨. ಸೇರಿರುವಿಕೆ; ಬೆರೆತಿರುವಿಕೆ. ೩. ಶಿಬಿರ; ಪಾಳೆಯ. ೪. ಬಲಿತುದು; ಬಿರುಸಾದುದು. ೫. ಚಿನ್ನದ ಬಳೆ, –ಕಂಕಣ. ೬. ಅಡಕೆಯಲ್ಲಿ ಒಂದು ಜಾತಿ. ೭. ಮುದುಕಿ; ವೃದ್ಧೆ.

ಗೋಟುವಾದ್ಯ (ನಾ). ಒಂದು ಬಗೆಯ ತಂತಿವಾದ್ಯ.

ಗೋಡಂಬಿ (ನಾ). ಗೇರುಮರ ಮತ್ತು ಅದರ ಬೀಜ.

ಗೋಡು (ನಾ). ಮೆಕ್ಕಲುಮಣ್ಣು; ಹೂಳುಮಣ್ಣು.

ಗೋಡೆ (ನಾ). ಕುಡ್ಯ; ಭಿತ್ತಿ.

ಗೋಣ್(ಣು) (ನಾ). ೧. ಕೊರಳು; ಕುತ್ತಿಗೆ. ೨. ಕುತ್ತಿಗೆಯ ಹಿಂಭಾಗ; ಹೆಡತಲೆ. ~ಕೊ(ಗೊ)ಯ್ಕ=೧.ಕುತ್ತಿಗೆ ಕೊಯ್ಯುವವನು. ೨. ವಂಚಕ; ಮೋಸಗಾರ. ~ನವಿರ್ = (ಪ್ರಾಣಿಗಳ) ಕುತ್ತಿಗೆಯ ಜೂಲು; ಅಯಾಲು. ~ನಾಟಿ(ಳಿ) = ಗಂಟಲುಮಣಿ; ಕಂಠನಾಳ. ~ಮುಱಿ(ರಿ) =೧.ಕೊಲ್ಲು; ಸಾಯಿಸು. ೨. ಕುತ್ತಿಗೆಯನ್ನು ಕೊಯ್ಯುವುದು. ೩. ಹಿಂಸೆ; ತೊಂದರೆ. ~ಹಾಕು= ತಲೆದೂಗು.

ಗೋಣಿ (ನಾ). ೧. ಸೆಣಬಿನ ನಾರಿನಿಂದ ಮಾಡಿದ ಬಟ್ಟೆ ಅಥವಾ ಚೀಲ. ೨. ನಾಲ್ಕು ಕೊಳಗದಷ್ಟು ಪ್ರಮಾಣ. ೩. ಚೀಲ; ಸಂಚಿ. ೪. ಒಂದು ಜಾತಿಯ ಗಿಡ. ೫. ಹಂದಿ; ವರಾಹ. ೬. ಆಲದ ಜಾತಿಯ ಮರ; ಗೋಳಿ. ~ತಟ್ಟು = ೧. ಸೆಣಬಿನ ಬಟ್ಟೆ; ಗೋಣಿಪಟ್ಟೆ. ೨. ದಡಾರ; ಗೊಬ್ಬರ.

ಗೋತ (ನಾ). ೧. ದನಕರು ಮುಂತಾದುವುಗಳ ಮೂತ್ರ; ಗಂಜಳ. ೨. ಲಾಗ; ಪಲ್ಟಿ. ~ಹಾಕು = ೧. ಲಾಗಹೊಡೆ; ಪಲ್ಟಿ ಹಾಕು. ೨. ಸೋಲು; ತೇರ್ಗಡೆಯಾಗದಿರು. ೩. ಸಾಯು; ಮರಣಹೊಂದು. ~ಹೊಡೆ = ಗೋತಹಾಕು.

ಗೋತ್ರ (ನಾ). ೧. ಕೊಟ್ಟಿಗೆ; ದೊಡ್ಡಿ. ೨. ಹಸುಗಳ ಮಂದೆ. ೩. ಕುಲ; ವಂಶ; ಮನೆತನ. ೪. ಬೆಟ್ಟ; ಪರ್ವತ. ೫. ಭೂಮಿ; ಪೃಥ್ವಿ. ೬. ಸೂರ್ಯ.

ಗೋತ್ರಜ (ನಾ). ೧. ಒಂದೇ ಕುಲ ಅಥವಾ ವಂಶದಲ್ಲಿ ಹುಟ್ಟಿದವನು. ೨. ಪರ್ವತದಲ್ಲಿ ಹುಟ್ಟಿದವನು.

ಗೋದಣ (ನಾ). ದನಕರುಗಳಿಗೆ ಮೇವು ಹಾಕುವ ತೊಟ್ಟಿ; ಗೊಂತು.

ಗೋದಣೆ (ನಾ). ೧. ನೇಗಿಲು. ೨. ಗುದ್ದಲಿ.

ಗೋದಲೆ = ಗೋದಣ.

ಗೋದಾಮು = ಗುದಾಮು.

ಗೋದಾಮೆ (ನಾ). ೧. ಊಸರವಳ್ಳಿ; ಗೋಸುಂಬೆ. ೨. ಗೋದುವೆ ಹಾವು.

ಗೋದಿ (ನಾ). ಒಂದು ಬಗೆಯ ಧಾನ್ಯ. ~ಸರ = ಗೋದಿಯ ಆಕಾರದಲ್ಲಿ ಮಾಡಿದ ಚಿನ್ನದ ಮಣಿಗಳ ಸರ.

ಗೋದುವೆ (ನಾ). ೧. ಒಂದು ಬಗೆಯ ಧಾನ್ಯ; ಗೋಧೂಮ. ೨. ಮೈಮೇಲೆ ಗೋದಿಯಾಕಾರದ ಚುಕ್ಕೆಗಳುಳ್ಳ ಒಂದು ಜಾತಿಯ ಹಾವು.

ಗೋಧ (ನಾ). ೧. ದೊಡ್ಡ ಜಾತಿಯ ಗೌಳಿ; ಉಡು. ೨. ಬಿಲ್ಲುಗಾರರು ಮುಂಗೈಗೆ ಕಟ್ಟಿಕೊಳ್ಳುವ ತೊಗಲಿನ ಕವಚ.

ಗೋಧೂಲಿ(ಳಿ) (ನಾ). ೧. ಸಂಧ್ಯಾಕಾಲದಲ್ಲಿ ಮನೆಗೆ ಬರುವ ದನಗಳ ಕಾಲು ತುಳಿತದಿಂದ ಏಳುವ ಧೂಳು. ೨. ಮುಚ್ಚಂಜೆ.

ಗೋನಾಟಿ(ಳಿ) (ನಾ). ಕೊರಳಿನ ನಾಳ; ಗಂಟಲುಮಣಿ.

ಗೋಪ (ನಾ). ೧. ದನಗಾಹಿ; ಗೋಪಾಲ. ೨. ರಾಜ; ದೊರೆ. ೩. ಕೃಷ್ಣ. ೪. ಪ್ರಾಂತಾಧಿಕಾರಿ. ೫. ದೇವೇಂದ್ರ. ೬. ಸೂರ್ಯ. ೭. ನಂದಿ. ೮. ಚಂದ್ರ. ೯. ಹಾವು. ೧೦. ಒಂದು ಬಗೆಯ ರಾಳ. ~ವಾಹನ =೧. ಶಿವ. ೨. ಐರಾವತ. ೩. ಗರುಡ. ೪. ಹಂಸ. ~ಶಕಲ = ಚಂದ್ರನ ಕಳೆ, -ಭಾಗ.

ಗೋಪನ (ನಾ). ೧. ಕಾಪಾಡುವುದು; ರಕ್ಷಿಸುವುದು. ೨. ಮರೆಮಾಡುವಿಕೆ.

ಗೋಪಾಲ(ಳ) (ನಾ). ೧ ದನಗಾಹಿ; ಗೊಲ್ಲ. ೨. ಶಿವ. ೩. ಕೃಷ್ಣ. ೪. ಭಿಕ್ಷೆ. ೫. ಭಿಕ್ಷಾಪಾತ್ರೆ. ~ಪು(ಬು)ಟ್ಟಿ = ಹರಿದಾಸರು ಗೋಪಾಳ ಬೇಡಲು ಹಿಡಿಯುವ ಬಿದಿರಿನ ಬುಟ್ಟಿ.

ಗೋಪಿ (ನಾ). ೧. ಗೊಲ್ಲ ಜಾತಿಯ ಹೆಂಗಸು; ಗೊಲ್ಲಿತಿ. ೨. ನಂದಗೋಪನ ಹೆಂಡತಿ; ಯಶೋದೆ.

ಗೋಪಿಚಂದನ (ನಾ). ವೈಷ್ಣವರು ಹಣೆಯಲ್ಲಿ ಮುದ್ರೆಗಳನ್ನು ಧರಿಸಲು ಬಳಸುವ ಒಂದು ಬಗೆಯ ಹಳದಿ ಬಣ್ಣದ ಮಣ್ಣು.

ಗೋಪು (ನಾ). ಕೊರಳಲ್ಲಿ ಧರಿಸುವ ಒಂದು ಬಗೆಯ ಚಿನ್ನದ ಆಭರಣ.

ಗೋಪುರ (ನಾ). ೧. ನಗರದ ಹೆಬ್ಬಾಗಿಲು; ಅಗಸೆ. ೨. ದೇವಾಲಯಗಳ ಮಹಾದ್ವಾರದ ಮೇಲಿನ ಗುಮ್ಮಟ, -ಶಿಖರ.

ಗೋಪೆ (ನಾ). ಹೆಣ ಹುಗಿಯುವ ಕುಣಿ; ಸಮಾಧಿ.

ಗೋಪ್ಯ (ನಾ). ೧. ಗುಟ್ಟು; ರಹಸ್ಯ. ೨. ದಾಸಿಯ ಮಗ; ತೊತ್ತಿನ ಮಗ. (ಗು). ೩. ಗುಟ್ಟಾಗಿಡಬೇಕಾದ; ಮುಚ್ಚಿಡಬೇಕಾದ.

ಗೋಮ (ನಾ). ೧. ಸಗಣಿ; ಗೋಮಯ. ೨. = ಗೋಮೆ.

ಗೋಮಯ = ಗೋಮ.

ಗೋಮಾಯು (ನಾ). ೧. ನರಿ; ಜಂಬುಕ. ೨. ಒಂದು ಜಾತಿಯ ಕಪ್ಪೆ.

ಗೋಮಾಳಿ = ಗೋನಾಳಿ.

ಗೋಮಿನಿ (ನಾ). ೧. ಲಕ್ಷ್ಮಿ. ೨. ಇಳೆ; ಭೂಮಿ.

ಗೋಮು (ನಾ). ೧. ಜರಿ; ಲಕ್ಷ್ಮೀಚೇಳು. ೨. ಕುದುರೆಯ ಮೈಮೇಲೆ ಕಾಣಿಸುವ ಹೀನಸುಳಿ. ೩. ಡೌಲು; ಆಡಂಬರ.

ಗೋಮೆ (ನಾ). ಊಟ ಮಾಡಿದ ಸ್ಥಳವನ್ನು ಸಗಣಿನೀರಿನಿಂದ ಶುದ್ಧಿ ಮಾಡುವುದು.

ಗೋಮೇಧಿಕ (ನಾ). ನವರತ್ನಗಳಲ್ಲಿ ಒಂದು; ಕೆಂಪುಛಾಯೆಯುಳ್ಳ ರತ್ನ.

ಗೋರ್ (ಕ್ರಿ). ೧. ಬಲೆಯಿಂದ ಮೀನು ಹಿಡಿ. ೨. ಕೆರೆ; ಗೆಬರು. ೩. ದೋಚು; ಸುಲಿ.

ಗೋರಂಟ (ನಾ). ೧. ಒಂದು ಜಾತಿಯ ಗಿಡ; ಮದರಂಗಿ. ೨. = ಗೋರಂಟೆ.

ಗೋರ(ಂ)ಟೆ (ನಾ). ಒಂದು ಜಾತಿಯ ಹೂವಿನ ಗಿಡ; ಸ್ಫಟಿಕದ ಗಿಡ.

ಗೋರಿ (ನಾ). ೧. ಸೆಳೆತ; ಆಕರ್ಷಣೆ; ಮರುಳುಗೊಳಿಸುವಿಕೆ. ೨. ಬೇಟೆಯಲ್ಲಿ ಜಿಂಕೆಗಳನ್ನು ಮರುಳುಗೊಳಿಸಲು ಬೇಟೆಗಾರನು ಹಾಡುವ ಗಾಯನ. ೩. ಮೃಗಗಳನ್ನು ಹಿಡಿಯುವ ಸಾಧನ; ಬಲೆ. ೪. ನೆಲವನ್ನು ಮಟ್ಟಮಾಡುವ ಸಾಧನ; ಹಲುಬೆ. ೫. = ಗೋರಿಕಾಯಿ. ೬. ಸಮಾಧಿ. ~ಕ(ಗ)ಲ್(ಲ್ಲು) = ೧. ಸಮಾಧಿಯ ಮೇಲೆ ನೆಟ್ಟ ಕಲ್ಲು. ೨. ಬೆಣಚುಗಲ್ಲು. ~ಕಾಯಿ = ಒಂದು ಬಗೆಯ ತರಕಾರಿ; ಚವಳಿಕಾಯಿ. ~ಕೊ(ಗೊ)ಳಿಸು = ೧. ಬೇಟೆಯ ಮೃಗವನ್ನು ಹಾಡಿನಿಂದ ಮರುಳುಗೊಳಿಸು. ೨. ವಶಪಡಿಸಿಕೊಳ್ಳು. ೩. ಹಿಂಸಿಸು; ತೊಂದರೆಪಡಿಸು. ೪. ಸಮಾಧಿ ಮಾಡು.

ಗೋರು ೧. = ಗೋರ್. ೨. ನೋಯಿಸು; ಹಿಂಸಿಸು. ೩. ರಾಶಿಮಾಡು. ೪. ನೆಲವನ್ನು ಮಟ್ಟಮಾಡು.

ಗೋರೆ (ನಾ). ೧. ಗೋರುವ, ಬಾಚುವ ಅಥವಾ ಕಲಕುವ ಉಪಕರಣ. ೨. ಅಚ್ಚಿಗೆ ಹಾಕಿದ ಬೆಲ್ಲದಲ್ಲಿ ಗೋರುಮಣೆಯಿಂದ ತೆಗೆದ ಬೆಲ್ಲ. ೩. ಮೀನು ಹಿಡಿಯುವ ಬುಟ್ಟಿ.

ಗೋರೋಚನ (ನಾ). ದನಗಳ ಹೊಟ್ಟೆಯಲ್ಲಿ ಸಿಕ್ಕುವ ಒಂದು ಬಗೆಯ ಹಳದಿಬಣ್ಣದ ಸುಗಂಧದ್ರವ್ಯ.

ಗೋಲ(ಳ) (ನಾ). ೧. ಗುಂಡಗಿರುವುದು; ಉರುಟಾಗಿರುವುದು. ೨. ವಿಧವೆಗೆ ಹುಟ್ಟಿದ ಮಗ. ೩. ಹಸುವಿನ ಗೊರಸು. ~ಗುಮ್ಮಟ = ೧. ಗುಂಡನೆಯ ಗೋಪುರ. ೨. ಬಿಜಾಪುರದ ಪ್ರಸಿದ್ಧವಾದ ಐತಿಹಾಸಿಕ ಕಟ್ಟಡ.

ಗೋಲಂದಾಜ (ನಾ). ಫಿರಂಗಿಗಳಿಂದ ಗುಂಡುಗಳನ್ನು ಹಾರಿಸುವ ಸಿಪಾಯಿ.

ಗೋಲ(ಳ)ಕ (ನಾ). ೧. ಗುಂಡಾದ ವಸ್ತು. ೨. ವಿಧವೆಗೆ ಹುಟ್ಟಿದ ಮಗ. ೩. ಕಣ್ಣು ಮೊದಲಾದ ಇಂದ್ರಿಯ ದ್ವಾರಗಳು. ೪. ಕಣ್ಣಿನ ಪಾಪೆ, –ಗೊಂಬೆ. ೫. ಹಣವನ್ನು ಕೂಡಿಸಿಡುವ ಡಬ್ಬ; ಹುಂಡಿ.

ಗೋಲಿ (ನಾ). ಮಕ್ಕಳು ಆಟಕ್ಕೆ ಬಳಸುವ ಗಾಜಿನ ಗುಂಡು, ಬಂದೂಕಿನ ಗುಂಡು ಮುಂತಾದ ಗೋಲಾಕಾರದ ವಸ್ತು.

ಗೋಲಿ(ಳಿ)ಬಾರು (ನಾ). ಬಂದೂಕಿನಿಂದ ಗುಂಡುಗಳನ್ನು ಹಾರಿಸುವುದು.

ಗೋವ (ನಾ). ೧. ದನಗಾಹಿ; ಗೋಪಾಲಕ. ೨. ರಕ್ಷಕ; ಅಧಿಪತಿ. ೩. ಕುದುರೆಯ ಸವಾರ. ~ಇಕೆ = ದನಗಾಹಿತನ; ಗೋವಳಿಗತನ.

ಗೋವಿಂಜೋಳ (ನಾ). ಮುಸುಕಿನ ಜೋಳ; ಮೆಕ್ಕೆಜೋಳ.

ಗೋವಿಂದ (ನಾ). ೧. ಗೋವುಗಳನ್ನು ಹೊಂದಿದವನು; ಗೊಲ್ಲ. ೨. ಕೃಷ್ಣ. ೩. ಬೃಹಸ್ಪತಿ. ೪. ಇಲ್ಲದಾಗುವಿಕೆ; ಮಾಯವಾಗುವಿಕೆ. ~ಗತಿ = ಇಂದ್ರಜಾಲ; ಯಕ್ಷಿಣೀವಿದ್ಯೆ.

ಗೋವು (ನಾ). ೧. ಆಕಳು; ಹಸು. ೨. ಭೂಮಿ.

ಗೋವುಳಿಗ (ನಾ). ತುರುಕಾರ; ದನಗಾಹಿ.

ಗೋವೆ (ನಾ). ೧. ಗೋವಾ ಪ್ರಾಂತ. ೨. ಗೇರುಮರ ಮತ್ತು ಅದರ ಬೀಜ; ಗೋಡಂಬಿ.

ಗೋಷಾ (ನಾ). ಮಹಮ್ಮದೀಯ ಹೆಂಗಸರು ಧರಿಸುವ ಮುಸುಕು ಮತ್ತು ಹಾಗೆ ಧರಿಸುವ ಪದ್ಧತಿ.

ಗೋಷ್ಠ (ನಾ). ೧. ದನದ ಹಟ್ಟಿ; ಕೊಟ್ಟಿಗೆ. ೨. ದನಕರುಗಳ ಮಂದೆ.

ಗೋಷ್ಠಿ (ನಾ). ೧. ಕೂಟ; ಸಭೆ. ೨. ಒಡನಾಟ; ಸಹವಾಸ.

ಗೋಷ್ಪದ (ನಾ). ೧. ಆಕಳಪಾದ. ೨. ಹಸುವಿನ ಹೆಜ್ಜೆಯ ಅಳತೆ.

ಗೋಷ್ವಾರೆ (ನಾ). ೧. ಲೆಕ್ಕಪತ್ರಗಳ ವಿವರಗಳಿಂದ ಸಿದ್ಧಪಡಿಸಿದ ಮುಖ್ಯಾಂಶ ಪತ್ರಿಕೆ. (ಅ). ೨. ಮೇಲಿಂದ ಮೇಲೆ; ಸ್ಥೂಲವಾಗಿ.

ಗೋಸ (ನಾ). ೧. ಶಬ್ದ; ಧ್ವನಿ. ೨. ಗೊಲ್ಲರ ಹಳ್ಳಿ; ತುರುಹಟ್ಟಿ.

ಗೋಸಗೆ (ನಾ). ನಸುಕು; ಮುಂಜಾವು.

ಗೋಸಣೆ (ನಾ). ೧. ಸಾರುವಿಕೆ; ಘೋಷಣೆ. ೨. ಪ್ರಸಿದ್ಧಿ; ಕೀರ್ತಿ. ~ಕ(ಗ)ಳೆ = ಡಂಗುರ ಸಾರು.

ಗೋಸನೆ = ಗೋಸಣೆ. ~ಕು(ಗು)ಡುಕು = ಕೂಗಿ ಕರೆದು ಕೊಡುವ ಗ್ರಾಸ. ~ಕೊ(ಗೊ)ಳ್ = ಸಾರು; ಪ್ರಕಟಿಸು.

ಗೋಸರು (ನಾ). ಹಾವಸೆ; ಪಾಚಿ; ಪಾಮಾಚಿ.

ಗೋಸಾಯಿ (ನಾ). ಸಂನ್ಯಾಸಿ; ಬೈರಾಗಿ.

ಗೋಸಾವಿ = ಗೋಸಾಯಿ.

ಗೋಸಿ (ನಾ). ಲಂಗೋಟಿ; ಕೌಪೀನ.

ಗೋಸುಂಬೆ (ನಾ). ಕ್ಷಣಕ್ಷಣಕ್ಕೂ ಬಣ್ಣ ಬದಲಾಯಿಸುವ ಒಂದು ಜಾತಿಯ ಪ್ರಾಣಿ; ಊಸರವಳ್ಳಿ; ಓತಿಕೇತ.

ಗೋಸ್ತನಿ (ನಾ). ೧. ದ್ರಾಕ್ಷಿಯ ಹಣ್ಣು, ಗೊಂಚಲು ಮತ್ತು ಬಳ್ಳಿ. ೨. ನಾಲ್ಕು ಎಳೆಗಳ ಸರ.

ಗೋಹಳೆ (ನಾ). ಸಗಣಿಯನ್ನು ಒಟ್ಟುವ ಜಾಗ; ತಿಪ್ಪೆ.

ಗೋಹುರ = ಗೋಪುರ.

ಗೋಳ್(ಳು)=ಗೋಟ್. ~ಆಟ = ದುಃಖಿಸುವುದು; ಸಂಕಟಪಡುವುದು. ~ಹೊಯ್ = ಕಾಡು; ಪೀಡಿಸು.

ಗೋಳಿ (ನಾ). ೧. ಆಲದ ಜಾತಿಗೆ ಸೇರಿದ ಒಂದು ಮರ. ೨. ಬಕುಳದ ಮರ. ೩. = ಗೋಟು.

ಗೋಟ್(ಳ್) (ನಾ). ೧. ಅಳು; ರೋದನ. ೨. ದುಃಖ; ಸಂಕಟ. ~ಆಡು = ಅಳು; ದುಃಖಿಸು. ~ಇಡು = ಗೋಳಾಡು; ಪ್ರಲಾಪಿಸು. ~ಉಂಡೆ = ಮಿತಿಮೀರಿದ ದುಃಖ, –ಸಂಕಟ. ~ಕ(ಗ)ಱೆ(ರೆ) = ೧. ಪ್ರಲಾಪಿಸು; ದುಃಖಿಸು. ೨. ಅಳು; ಗೋಳಾಟ.

ಗೋಟು(ಳ) (ನಾ). ಕುದುರೆ. ~ಆಯಿಲ = ಕುದುರೆ ಸವಾರ; ರಾವುತ.

ಗೋಟ್ರೂ(ಳಿ) (ನಾ). ಒಂದು ಬಗೆಯ ಮೂಲಿಕೆ.

ಗೋಟುಃ(ಳಿ)ಗೆ (ನಾ). ಹೆಣ್ಣುಕುದುರೆ.

ಗೌಂಟಿಕೆ = ಗೆಂಟಿಗೆ.

ಗೌಂಡಿ (ನಾ). ಗಾರೆ ಕೆಲಸದವನು; ಉಪ್ಪಾರ.

ಗೌಜಲ (ನಾ). ಒಂದು ಬಗೆಯ ಸಣ್ಣಹಕ್ಕಿ.

ಗೌಜು (ನಾ). ೧. ಸಡಗರ; ಸಂಭ್ರಮ. ೨. ಗದ್ದಲ; ಗೊಂದಲ.

ಗೌಡ (ನಾ). ಗ್ರಾಮದ ಮುಖ್ಯಸ್ಥ; ಗಾಮುಂಡ. ~ಇತಿ = ಗ್ರಾಮಾಧಿಕಾರಿಯ ಹೆಂಡತಿ; ಗಾಮುಂಡಿ.

ಗೌಡಿ (ನಾ). ೧. ಕಾಕಂಬಿಯಿಂದ ಬಟ್ಟಿಯಿಳಿಸಿದ ಮದ್ಯ. ೨. ಕಾವ್ಯದ ಮೂರು ರೀತಿಗಳಲ್ಲಿ ಒಂದು.

ಗೌಣ (ಗು). ೧. ಪ್ರಧಾನವಲ್ಲದ; ಅಮುಖ್ಯ. ೨. ಆಲಂಕಾರಿಕವಾಗಿ ಹೇಳಿದ; ಲಾಕ್ಷಣಿಕ. ೩. ಕೆಳಮಟ್ಟದ; ಕೀಳಾದ.

ಗೌತ (ನಾ). ಭಾರಿ ಶ್ರೀಮಂತ; ಅತ್ಯಂತ ಧನಿಕ.

ಗೌಪ್ಯ (ನಾ). ಗುಟ್ಟು; ರಹಸ್ಯ.

ಗೌರ (ನಾ). ೧. ಹೊಂಬಣ್ಣ; ನಸುಗೆಂಪು. (ಗು). ೨. ಬಿಳಿಯ.

ಗೌರವ (ನಾ). ೧. ಭಾರ; ಒಜ್ಜೆ. ೨. ಹಿರಿಮೆ; ಶ್ರೇಷ್ಠತೆ. ೩. ಮರ್ಯಾದೆ. ೪. ಗಣ್ಯ; ಹಿರಿಯ. ೫. ಬಿಳಿಯ ಬಣ್ಣ. (ಗು). ೬. ಗುರುವಿಗೆ ಸಂಬಂಧಿಸಿದ. ~ಧನ = ಸಂಬಳವಿಲ್ಲದೆ ಕೆಲಸ ಮಾಡುವವರಿಗೆ ಗೌರವಸೂಚಕವಾಗಿ ಕೊಡುವ ಹಣ.

ಗೌರಿ (ನಾ). ೧. ಮೈನೆರೆಯದವಳು; ಕನ್ಯೆ. ೨. ಪಾರ್ವತಿ. ೩. ಗೋರೋಚನ. ~ಹಬ್ಬ = ಭಾದ್ರಪದ ಶುದ್ಧ ತದಿಗೆಯಂದು ಗೌರಿಯನ್ನು ಪೂಜಿಸುವ ಹಬ್ಬ.

ಗೌರಿಮ (ನಾ). ಬಿಳಿಯ ಬಣ್ಣ; ಬಿಳುಪು.

ಗೌರು (ನಾ). ೧. ಗರಿಗರಿಯಾಗಿರುವುದು; ಗರುಗು. ೨. = ಗೌಱು.

ಗೌಱು(ರು) (ನಾ). ಗಟ್ಟಿಯಾದ ಕೀರಲು ಧ್ವನಿ; ಕರ್ಕಶಧ್ವನಿ. ~ಅಗಿ = ದೊಡ್ಡ ಧ್ವನಿಮಾಡು; ಅರ್ಭಟಿಸು. ~ಕ(ಗ)ಹಳೆ = ಗಟ್ಟಿಯಾಗಿ ಧ್ವನಿಮಾಡುವ ಕಹಳೆ.

ಗೌಲಿ = ಗೌವಲೆ.

ಗೌವಲೆ (ನಾ). ಗೋಧಿಯ ಹಿಟ್ಟಿನಿಂದ ಮಾಡಿದ ನವಿರಾದ ಚಿಕ್ಕ ಚೂರುಗಳು ಮತ್ತು ಅದರಿಂದ ಮಾಡುವ ಪಾಯಸ.

ಗೌಳ (ನಾ). ೧. ಒಂದು ಬಗೆಯ ಆಭರಣ. ೨. ಒಂದು ಜಾತಿಯ ಸಸ್ಯ. ~ಸರ = ೧. ಒಂದು ಬಗೆಯ ಹಸ್ತಾಭರಣ. ೨. ಒಂದು ಬಗೆಯ ಕಂಠಾಭರಣ.

ಗೌಳಿ (ನಾ). ಹಲ್ಲಿ.

ಗ್ರಂಥ (ನಾ). ೧. ಕಟ್ಟುವುದು; ಜೋಡಿಸುವುದು. ೨. ಪುಸ್ತಕ; ಹೊತ್ತಗೆ. ೩. ನಾಲ್ಕು ವೇದಗಳು. ೪. ಕ್ರಮವರಿತು ವಿಷಯವನ್ನು ಪ್ರತಿಪಾದಿಸುವ ಬರವಣಿಗೆ, –ಲೇಖನ. ೫. ಮೂವತ್ತೆರಡು ಅಕ್ಷರಗಳ ಸಮುದಾಯ. ೬. ಸಂಪತ್ತು; ಐಶ್ವರ್ಯ. ~ಆಲಯ = ಪುಸ್ತಕ ಭಂಡಾರ. ~ಪಾತ = ಗ್ರಂಥಗಳಲ್ಲಿ ಹುಳು ತಿಂದು ಅಥವಾ ಬೇರೆ ಯಾವುದೇ ಕಾರಣದಿಂದ ಪಠ್ಯಭಾಗ ನಷ್ಟವಾಗುವುದು. ~ಲಿಪಿ = ಸಂಸ್ಕೃತವನ್ನು ಬರೆಯಲು ಅನುಕೂಲಿಸುವಂತೆ ಸುಧಾರಿಸಿದ ತಮಿಳು ಲಿಪಿ. ~ಸಂಪಾದನೆ = ಗ್ರಂಥದ ಪಾಠಗಳ ಪರಿಷ್ಕರಣ.

ಗ್ರಂಥಿ (ನಾ). ೧. ಕಟ್ಟು; ಬಂಧ. ೨. ಗಡ್ಡೆ; ಗೆಡ್ಡೆ. ೩. ಶರೀರದಲ್ಲಿ ರಸವನ್ನು ಸ್ರವಿಸುವ ಗೆಡ್ಡೆಯಂತಿರುವ ಕೆಲವು ಅವಯವಗಳು. ~ಪರ್ಣ = ಒಂದು ಜಾತಿಯ ಸುಗಂಧದ ಗಿಡ; ಮಾಚಿಪತ್ರೆ.

ಗ್ರಥಿತ (ಗು). ೧. ಜೋಡಿಸಿ ಕಟ್ಟಿದ. ೨. ಕ್ರಮಬದ್ಧವಾಗಿ ನಿರೂಪಿಸಿದ.

ಗ್ರಸನ (ನಾ). ೧. ನುಂಗುವುದು ; ತಿನ್ನುವುದು. ೨. ಬಲಾತ್ಕಾರದಿಂದ ಹಿಡಿಯುವುದು. ೩. ಸೂರ್ಯ, ಚಂದ್ರರಿಗೆ ಆಗುವ ಗ್ರಹಣ.

ಗ್ರಸ್ತ (ನಾ). ೧. (ಓದುವಾಗ) ಅಕ್ಷರಗಳನ್ನು ನುಂಗುವುದು. (ಗು). ೨. ತಿಂದ ; ನುಂಗಲ್ಪಟ್ಟ. ೩. (ಗ್ರಹ ಮುಂತಾದುವುಗಳಿಂದ) ಹಿಡಿಯುಲ್ಪಟ್ಟ, -ಆವರಿಸಲ್ಪಟ್ಟ.

ಗ್ರಹ (ನಾ). ೧. ಹಿಡಿಯುವುದು ; ಹಿಡಿತ. ೨. ತೆಗೆದುಕೊಳ್ಳುವುದು; ಸ್ವೀಕರಿಸುವುದು. ೩. ಸೂರ್ಯ, ಚಂದ್ರ, ಅಂಗಾರಕ, ಬುಧ, ಗುರು, ಶುಕ್ರ, ಶನಿ, ರಾಹು ಮತ್ತು ಕೇತುಗಳೆಂಬ ಒಂಬತ್ತು ಗ್ರಹಗಳು. ೪. ದುಷ್ಟಶಕ್ತಿ ; ಗರ, ರಾಹು, ಭೂತ ಮುಂತಾದುವು. ~ಇಸು = ೧. ಹಿಡಿ ; ಸ್ವೀಕರಿಸು. ೨. ತಿಳಿದುಕೊಳ್ಳು. ~ಗತಿ =೧. ಗ್ರಹಗಳ ಚಲನೆ. ೨. ಗ್ರಹಗಳ ಚಲನೆಯಿಂದ ಮನುಷ್ಯನ ಜೀವನದ ಮೇಲೆ ಉಂಟಾಗುವ ಪರಿಣಾಮ. ~ಗ್ರಾಮ = ನವಗ್ರಹಗಳ ಸಮೂಹ. ~ಚಾರ =೧. ಗ್ರಹಗಳ ಚಲನೆ; ಗ್ರಹಗತಿ. ೨. ದುರದೃಷ್ಟ ; ದುರವಸ್ಥೆ.

ಗ್ರಹಣ (ನಾ). ೧. ಹಿಡಿಯುವುದು. ೨. ಸೂರ್ಯ, ಚಂದ್ರರಿಗೆ ಉಂಟಾಗುವ ಉಪರಾಗ ; ರಾಹು ನುಂಗುವುದು ; ಸೂರ್ಯ, ಚಂದ್ರರು ಮರೆಯಾಗುವುದು. ೩. ವಿಷಯವನ್ನು ಅರಿಯುವುದು.

ಗ್ರಹಣಿ (ನಾ). ೧. ಆಮಶಂಕೆ ; ಅತಿಸಾರ. ೨. ಮೂಳೆಗಳು ಮೆದುವಾಗುವ ಒಂದು ಮಕ್ಕಳ ರೋಗ.

ಗ್ರಹಿಕೆ (ನಾ). ಅಭಿಪ್ರಾಯ ; ಭಾವನೆ ; ತಿಳಿವಳಿಕೆ.

ಗ್ರಹಿತ ೧. = ಗ್ರಹಿಕೆ. (ಗು). ೨. ಹಿಡಿದ ; ಆಕ್ರಮಿಸಿದ.

ಗ್ರಾಂಥಿಕ (ಗು). ಗ್ರಂಥಕ್ಕೆ ಸಂಬಂಧಿಸಿದ.

ಗ್ರಾಮ (ನಾ). ೧. ಹಳ್ಳಿ ; ಊರು. ೨. ಗುಂಪು ; ಸಮೂಹ. ~ಪಂಚಾಯಿತಿ = ಹಳ್ಳಿಯ ಆಡಳಿತ ನಿರ್ವಹಣೆಗೆ ಏರ್ಪಟ್ಟ ಚುನಾಯಿತ ಪ್ರತಿನಿಧಿಗಳ ಸಂಸ್ಥೆ. ~ಮೃಗ = ನಾಯಿ ; ಶುನಕ. ~ಸಿಂಹ = ಗ್ರಾಮಮೃಗ.

ಗ್ರಾಮಣಿ (ನಾ). ಹಳ್ಳಿಯ ಮುಖ್ಯಸ್ಥ ; ಗ್ರಾಮಾಧಿಕಾರಿ.

ಗ್ರಾಮಸ್ಥ (ನಾ). ೧. ಗ್ರಾಮವಾಸಿ ; ಹಳ್ಳಿಗ. ೨. ಹಳ್ಳಿಯ ಗೌಡ, ಸೇನಬೋವ ಮೊದಲಾದ ಅಧಿಕಾರಿಗಳು.

ಗ್ರಾಮೀಣ (ನಾ). ೧. ಹಳ್ಳಿಯವನು ; ಹಳ್ಳಿಗ. ೨. ಅನಾಗರಿಕ ; ಒರಟ. (ಗು). ೩. ಹಳ್ಳಿಯಲ್ಲಿ ಹುಟ್ಟಿದ.

ಗ್ರಾಮ್ಯ (ನಾ). ೧. ಅವಿದ್ಯಾವಂತ ; ಗಾವಿಲ. ೨. ವ್ಯಾಕರಣವಿರುದ್ಧವಾದುದು ; ಅಸಾಧುವಾದುದು. ೩. ಪದದೋಷಗಳಲ್ಲಿ ಒಂದು. (ಗು). ೪. ಗ್ರಾಮದಲ್ಲಿ ತಯಾರಿಸಿದ.

ಗ್ರಾವ (ನಾ). ೧. ಕಲ್ಲು ; ಶಿಲೆ. ೨. ಬೆಟ್ಟ ; ಗುಡ್ಡ. ೩. ಧೈರ್ಯ. ೪. ಮೋಡ. ೫. ಗ್ರಾಮ ; ಊರು.

ಗ್ರಾಸ (ನಾ). ೧. ನುಂಗುವುದು ; ಕಬಳಿಸುವುದು. ೨. ತುತ್ತು. ೩. ಆಹಾರ ; ಊಟ.

ಗ್ರಾಹ (ನಾ). ೧. ತೆಗೆದುಕೊಳ್ಳುವುದು ; ಹಿಡಿಯುವುದು. ೨. ಮೊಸಳೆ, ನೀರಾನೆ ಮುಂತಾದ ಜಲಚರ ಪ್ರಾಣಿಗಳು.

ಗ್ರಾಹಕ (ನಾ). ೧. ಗ್ರಹಿಸುವವನು ; ತಿಳಿಯುವವನು. ೨. ಯಂತ್ರ ಸಲಕರಣೆಗಳಲ್ಲಿ ಯಾವುದನ್ನಾದರೂ ಒಳಕೊಳ್ಳುವ ಕೋಶ. ೩. ಕೊಂಡುಕೊಳ್ಳುವವನು; ಗಿರಾಕಿ. (ಗು). ೪. ಹಿಡಿಯುವ ; ಗ್ರಹಿಸುವ. ೫. ಹೊರುವ; ಧರಿಸುವ. ೬. ಒಳಗೊಂಡ.

ಗ್ರಾಹಿ (ನಾ). ೧. ಹೆಣ್ಣುದೆವ್ವ. ೨. ಮೂರ್ಛೆ; ಬವಳಿ. (ಗು). ೩. ಹಿಡಿಯುವ; ಗ್ರಹಿಸುವ. ೪. ಅಂಗೀಕರಿಸುವ. ೫. ಒಳಗೊಂಡಿರುವ.

ಗ್ರಾಹ್ಯ (ಗು). ೧. ಗ್ರಹಿಸಬಹುದಾದ; ತಿಳಿಯಬಹುದಾದ. ೨. ಹಿಡಿಯಬಹುದಾದ. ೩. ಅನುಭವಿಸಬಹುದಾದ.

ಗ್ರೀವ ೧. = ಗ್ರೀವೆ. ೨. ನಾದ; ಧ್ವನಿ.

ಗ್ರೀವೆ (ನಾ). ಕೊರಳು; ಕತ್ತು.

ಗ್ರೀಷ್ಮ (ನಾ). ೧. ಆರು ಋತುಗಳಲ್ಲಿ ಎರಡನೆಯದು; ಜ್ಯೇಷ್ಠ, ಆಷಾಢ ಮಾಸಗಳ ಕಾಲ. ೨. ಉಷ್ಣ; ಸೆಕೆ; ತಾಪ. ೩. ಬೇಸಗೆ.

ಗ್ರೈವೇಯಕ (ನಾ). ೧. ಕಂಠಾಭರಣ; ಹಾರ. ೨. ಆನೆಯ ಕೊರಳಿಗೆ ತೊಡಿಸುವ ಸರಪಣಿ.

ಗ್ಲಪನ (ನಾ). ೧. ಬಾಡುವಿಕೆ; ಮುದುರುವಿಕೆ. ೨. ಬಳಲುವಿಕೆ; ದಣಿಯುವಿಕೆ.

ಗ್ಲಾನ (ಗು). ದಣಿದ; ಬಳಲಿದ.

ಗ್ಲಾನಿ (ನಾ). ೧. ಬಳಲಿಕೆ; ದಣಿವು. ೨. ನೋವು. ೩. ಅವನತಿ; ನಾಶ.

ಗ್ಲೌ (ನಾ). ಚಂದ್ರ; ಶಶಿ.



# ಘ

ಘ (ನಾ). ಕನ್ನಡ ವರ್ಣಮಾಲೆಯ ಇಪ್ಪತ್ತುನಾಲ್ಕನೆಯ ವರ್ಣ.

ಘಂಟಿಕೆ (ನಾ). ೧. ಕಿರುಗಂಟೆ; ಸಣ್ಣಗಂಟೆ. ೨. ದಶವಾದ್ಯಗಳಲ್ಲಿ ಒಂದು.

ಘಂಟೆ (ನಾ). ೧. ಗಂಟೆ. ೨. ಅರುವತ್ತು ನಿಮಿಷಗಳ ಅವಧಿ; ತಾಸು. ೩. ಒಂದು ಜಾತಿಯ ಮರ.

ಘಕ್ಕನೆ (ಅ). ತಟ್ಟನೆ; ಕೂಡಲೆ.

ಘಟ (ನಾ). ೧. ಮಣ್ಣಿನ ಪಾತ್ರೆ; ಗಡಿಗೆ; ಕೊಡ. ೨. ತಾಳವಾದ್ಯಗಳಲ್ಲಿ ಒಂದು. ೩. ಒಡಲು; ದೇಹ. ೪. ಸೇರಿಕೆ; ಕೂಡಿಕೆ. ೫. ಒಂದು ದ್ರೋಣದಷ್ಟು ಅಳತೆ. ೬. ಅಂಚು; ಸೆರಗು. ~ಚಕ್ರ = ಬಾವಿಯಿಂದ ನೀರನ್ನು ಮೇಲೆತ್ತುವ ಸಾಧನ. ~ವಾಸಕ = ಬಿಂದಿಗೆಯಲ್ಲಿ ತುಂಬಿದ ಸುಗಂಧವಸ್ತು. ~ಶ್ರಾದ್ಧ = ಸಂಬಂಧವನ್ನು ಕಳೆದುಕೊಳ್ಳಲು ವಿಧಿಪೂರ್ವಕವಾಗಿ ನಡಸುವ ಶ್ರಾದ್ಧ. ~ಸರ್ಪ = ಭಯಂಕರವಾದ ನಾಗರಹಾವು. ~ಸ್ಫೋಟ ೧. = ಘಟಶ್ರಾದ್ಧ. ೨. ದಾಂಪತ್ಯ ವಿಚ್ಛೇದನ.

ಘಟಕ (ನಾ). ೧. (ಮದುವೆ, ವ್ಯಾಪಾರ ಮೊದಲಾದ ಕಾರ್ಯಗಳಲ್ಲಿ) ಕೆಲಸವನ್ನು ಕುದುರಿಸುವವನು; ದಳ್ಳಾಳಿ. ೨. ವ್ಯವಸ್ಥಾಪಕ; ಪಾರುಪತ್ಯಗಾರ. ೩. ದಕ್ಷ; ಸಮರ್ಥ. ೪. (ಸಮಗ್ರವಾದ ದೇಶ, ಸಂಸ್ಥೆ ಮೊದಲಾದುವುಗಳ) ಅಂಗ, —ವಿಭಾಗ. (ಗು). ೫. ಸೇರಿರುವ; ಅಂತರ್ಗತವಾದ.

ಘಟನ (ನಾ). ೧. ಸೇರಿಸುವಿಕೆ; ಕೂಡಿಸುವಿಕೆ; ಜೋಡಣೆ. ೨. ಆಗುವುದು; ಸಂಭವಿಸುವುದು.

ಘಟನೆ = ಘಟನ.

ಘಟಾನುಘಟಿ (ನಾ). ೧. ಬಹಳ ಗಟ್ಟಿಗ; ಅತಿ ಸಮರ್ಥ. (ಗು). ೨. ಬಹಳ ಗಟ್ಟಿಯಾದ; ಅತಿ ಸಮರ್ಥವಾದ.

ಘಟಿ ೧. = ಘಟಿಕೆ. ೨. ಜಾಗಟೆ.

ಘಟಿಕಾಸ್ಥಾನ (ನಾ). ೧. ಧರ್ಮಶ್ರದ್ಧೆಯುಳ್ಳ ವಿದ್ವಾಂಸರು ಅಧಿಕೃತವಾಗಿ ಸಭೆ ಸೇರುವ ಸ್ಥಳ. ೨. ಧಾರ್ಮಿಕ ಶಿಕ್ಷಣ ಕೇಂದ್ರ; ಮಹಾವಿದ್ಯಾಲಯ. ೩. ಸಿದ್ಧಿಕ್ಷೇತ್ರ.

ಘಟಿಕೆ (ನಾ). ೧. ಇಪ್ಪತ್ತು ನಿಮಿಷಗಳ ಅವಧಿ; ಗಳಿಗೆ. ೨. ಸಣ್ಣ ಗಡಿಗೆ.

ಘಟಿಕೋತ್ಸವ (ನಾ). ವಿಶ್ವವಿದ್ಯಾನಿಲಯದ ಪದವೀದಾನ ಸಮಾರಂಭ.

ಘಟಿತ (ನಾ). ೧. ಸಂಭವಿಸಿದುದು; ಆದುದು. (ಗು). ೨. ಕೂಡಿದ; ಸೇರಿದ. ೩. ಜೋಡಿಸಿದ; ಸೇರಿಸಿದ. ೪. ಮಾಡಿದ; ನೆರವೇರಿಸಿದ. ೫. ಏರ್ಪಾಡು ಮಾಡಿದ; ವ್ಯವಸ್ಥೆ ಮಾಡಿದ.

ಘಟಿಯಿಸು ೧.=ಘಟಿಸು. ೨.ಪಡೆ; ಹೊಂದು. ೩. ಸೇರಿಸು; ಕೂಡಿಸು.

ಘಟಿಸು (ಕ್ರಿ).೧. ಉಂಟಾಗು; ಸಂಭವಿಸು. ೨. ದೊರಕು; ಲಭಿಸು. ೩.ಸೇರು; ಕೂಡು. ೪. ಮಾಡು; ನೆರವೇರಿಸು.

ಘಟೀಯಂತ್ರ (ನಾ). ೧. ಬಾವಿಯಿಂದ ನೀರೆತ್ತುವ ಸಾಧನ; ಘಟಚಕ್ರ. ೨.ಗಳಿಗೆ ಬಟ್ಟಲು.

ಘಟೆ (ನಾ). ೧. ಗುಂಪು; ಸಮೂಹ. ೨. ಆನೆಗಳ ಗುಂಪು, –ಪಡೆ. ೩. ಪ್ರಯತ್ನ; ಉದ್ಯಮ.

ಘಟ್ಟ (ನಾ). ೧. ಮೆಟ್ಟುವಿಕೆ. ೨.ಮೆಟ್ಟಲು; ಸೋಪಾನ. ೩. ಹಂತ; ಅವಸ್ಥೆ. ೪. ಬೆಟ್ಟಗಳ ಸಾಲು; ಪರ್ವತ ಪಂಕ್ತಿ. ೫. ಹಡಗಿನ ಕಟ್ಟೆ.

ಘಟ್ಟಣೆ (ನಾ). ೧. ಕುಟ್ಟುವಿಕೆ; ದಮ್ಮಸ್ಸು ಮಾಡುವಿಕೆ. ೨. ದಮ್ಮಸ್ಸು ಮಾಡಿ, ಮಟ್ಟ ಮಾಡಿದ ಸ್ಥಳ. ೩. ಪೆಟ್ಟು; ಏಟು. ೪. ಜೋಡಿಸುವಿಕೆ; ಸೇರ್ಪಡೆ.

ಘಟ್ಟಿ (ನಾ).೧.ಹೆಪ್ಪುಗಟ್ಟಿದುದು. ೨.ಲೋಹದ (ಭಾರವಾದ) ಸಣ್ಣತುಂಡು. ೩. ಸುಗಂಧ ದ್ರವ್ಯದ ಕರಣೆ. ೪. ಕಡ್ಡಿ; ಕಾಂಡ. ೫. ಬಿಗಿಯಾದುದು.

ಘಟ್ಟಿತ (ಗು). ೧. ಒತ್ತಾಗಿ ಸೇರಿಸಿದ; ಬಲವಾಗಿ ಒತ್ತಿದ. ೨.ಹೊಡೆದ; ಕುಟ್ಟಿದ.

ಘಟ್ಟಿಸು (ಕ್ರಿ). ೧. ಶಕ್ತಿಯುತವಾಗು. ೨. ಹೊಡೆ; ಅಪ್ಪಳಿಸು. ೩. ಸೇರಿಸು; ಅಳವಡಿಸು. ೪. ತೊಲಗಿಸು; ನಿವಾರಿಸು. ೫. ತಿರುವು; ತೊಳಸು. ೬. ನಿಬಿಡವಾಗು; ದಟ್ಟೈಸು. ೭. ಕೊಲ್ಲು.

ಘನ (ನಾ). ೧. ಮೋಡ; ಮುಗಿಲು. ೨.ತಾಳ, ಗೆಜ್ಜೆ ಮೊದಲಾದ ಕಂಚಿನವಾದ್ಯ. ೩. ಗಟ್ಟಿಯಾದುದು; ಗಡ್ಡೆ. ೪. ವೇದ ಪಠನದಲ್ಲಿ ಒಂದು ವಿಶೇಷ ರೀತಿ. ೫. ಅತ್ಯಂತ ಅಧಿಕವಾದುದು. ೬. ಬಲ; ಶಕ್ತಿ. ೭. ನೀರು; ಜಲ. ೮. ಆರು ಸಮ ಚತುರಸ್ರ ಮೈಗಳುಳ್ಳ ವಸ್ತು. ೯. ಒಂದು ಸಂಖ್ಯೆಯನ್ನು ಅದರ ವರ್ಗದಿಂದ ಗುಣಿಸುವುದರಿಂದ ಬಂದ ಲಬ್ಧ. (ಗು). ೧೦. ಭಾರವಾದ; ತೂಕವಾದ. ೧೧. ಮಹತ್ವವುಳ್ಳ. ೧೨. ಅಧಿಕವಾದ; ಹೆಚ್ಚಾದ. ೧೩. ಗಟ್ಟಿಯಾದ. ೧೪. ತುಂಬಿದ; ಪೂರ್ತಿಯಾದ. ~ಉಪಲ(ಳ) = ಆಲಿಕಲ್ಲು. ~ಫಲ = ಗಣಿತದಲ್ಲಿ ವಸ್ತುವಿನ ಉದ್ದ, ಅಗಲ ಮತ್ತು ಎತ್ತರಗಳನ್ನು ಗುಣಿಸಿ ಬಂದ ಲಬ್ಧ. ~ರಸ = ೧.ಕರ್ಪೂರ. ೨. ನೀರು; ಉದಕ. ೩. ಜಿಗುಟಾದ ದ್ರವ. ೪. ಬಟ್ಟಿ ಇಳಿಸಿದ ದ್ರವವಸ್ತು; ಕಷಾಯ. ೫. ಜಲನಿಧಿ; ಸಮುದ್ರ.

ಘನತೆ (ನಾ). ೧. ಅಂತಸ್ತು; ಹಿರಿಮೆ. ೨. ಅಭಿವೃದ್ಧಿ; ಏಳಿಗೆ.

ಘನಪಾಠಿ (ನಾ). ವೇದವನ್ನು ಘನಪಾಠ ಕ್ರಮದಲ್ಲಿ ಅಧ್ಯಯನ ಮಾಡಿದವನು.

ಘನಸ್ತಿಕೆ (ನಾ). ಹಿರಿಮೆ; ಶ್ರೇಷ್ಠತೆ.

ಘನೀಭವಿಸು (ಕ್ರಿ). ಗಟ್ಟಿಯಾಗು; ಹೆಪ್ಪು ಗಟ್ಟು.

ಘನ್ನ (ಗು). ಶ್ರೇಷ್ಠವಾದ; ಪವಿತ್ರವಾದ; ಘನತೆಯುಳ್ಳ.

ಘಮ್ (ನಾ). ೧. ಸುವಾಸನೆ. ೨. ಹುರುಪು; ಉತ್ಸಾಹ.

ಘಮ್ಮನೆ (ಅ). ಬೇಗನೆ; ಕೂಡಲೆ.

ಘರಟ್ಟ (ನಾ). ಬೀಸುವ ಕಲ್ಲು.

ಘರಾಣೆ (ನಾ). ೧. ಮನೆತನ; ಕುಟುಂಬ. ೨. ಸಂಗೀತದಲ್ಲಿ ವಿಶಿಷ್ಟರೀತಿಯ ಸಂಪ್ರದಾಯ.

ಘರ್ಘರ (ನಾ). ೧. ಕೊಡ; ಬಿಂದಿಗೆ. ೨. ಒಂದು ಅನುಕರಣ ಧ್ವನಿ. (ಗು). ೩. ಕರ್ಕಶವಾದ; ಕಠೋರವಾದ.

ಘರ್ಘರಿಕೆ (ನಾ). ೧. ಗೆಜ್ಜೆ. ೨. ಗೆಜ್ಜೆಗಳಿಂದ ಮಾಡಿದ ಒಂದು ಆಭರಣ. ೩. ಒಂದು ವಾದ್ಯ ವಿಶೇಷ.

ಘರ್ಮ (ನಾ). ೧. ಬಿಸುಪು; ಕಾವು. ೨. ಬೆವರು; ಸ್ವೇದ. (ಗು). ೩. ಉಷ್ಣವಾದ; ಬಿಸಿಯಾದ.

ಘರ್ಷಣ (ನಾ). ೧. ಉಜ್ಜುವಿಕೆ; ಒರಸುವಿಕೆ. ೨. ಅರೆಯುವಿಕೆ; ಪುಡಿ ಮಾಡುವಿಕೆ.

ಘರ್ಷಣೆ ೧. = ಘರ್ಷಣ. ೨. ಯುದ್ಧ; ಕಾಳಗ.

ಘಳಿಗೆ (ನಾ). ೧. ಇಪ್ಪತ್ತುನಾಲ್ಕು ನಿಮಿಷಗಳ ಅವಧಿ ೨. ಬಟ್ಟೆ, ವೀಳ್ಯದೆಲೆ ಮೊದಲಾದುವುಗಳ ಮಡಿಕೆ; ಗಳಿಗೆ.

ಘಳಿಯಾರ (ನಾ). ೧. ಕಾಲವನ್ನು ತಿಳಿಸುವ ಯಂತ್ರ; ಗಡಿಯಾರ. ೨. ಕಾಲಮಾಪಕ ಯಂತ್ರವಿರುವ ಮನೆ.

ಘಳಿಲನೆ (ಅ). ಬೇಗನೆ; ಶೀಘ್ರವಾಗಿ.

ಘಟಿ(ಳಿ)ಗೆ (ನಾ). ೧. ಇಪ್ಪತ್ತುನಾಲ್ಕು ನಿಮಿಷಗಳ ಅವಧಿ. ೨. ದರ್ಬಾರು ನಡಸುವ ಸಭಾಮಂಟಪ.

ಘಟಿ(ಳಿ)ಯಂ (ನಾ). ಕಟ್ಟಳೆ; ನಿಯಮ.

ಘಟಿ(ಳಿ)ಯಿಸು (ಕ್ರಿ). ೧. ಸಂಪಾದಿಸು; ಗಳಿಸು. ೨. ಉಂಟಾಗು; ಸಂಭವಿಸು. ೩. ಉಂಟುಮಾಡು. ೪. ಸೇರಿಸು; ಕೂಡಿಸು.

ಘಾಟ (ನಾ). ೧. ಸೇರಿಕೆ; ಕೂಡಿಕೆ. ೨. ರಭಸ; ತೀವ್ರತೆ. ೩. ಕುತ್ತಿಗೆಯ ಹಿಂಭಾಗ; ಹೆಕ್ಕತ್ತು.

ಘಾಟಿ (ನಾ). ೧. ಕಣಿವೆ. ೨. ಗಟ್ಟಿಗ; ಸಮರ್ಥ. ೩. ತುಂಟ; ಉದ್ಧಾಳ. (ಗು). ೪. ಅಸಾಮಾನ್ಯವಾದ.

ಘಾಟು (ನಾ). ಕಟುವಾಸನೆ.

ಘಾತ (ನಾ). ೧. ಹೊಡೆತ; ಪೆಟ್ಟು. ೨. ನಾಶ. ೩. ಅಪಾಯ; ಆಪತ್ತು. ೪. ಆಳ; ಗಭೀರತೆ. ~ಇಸು = ೧. ಹೊಡೆ; ಬಡಿ. ೨. ಕೊಲ್ಲು; ನಾಶಮಾಡು.

ಘಾತಕ (ನಾ). ೧. ಕೊಲ್ಲುವವನು. ೨. ಹಿಂಸಕ; ಉಪದ್ರವಿ. ೩. ದ್ರೋಹಿ; ವಂಚಕ. (ಗು). ೪. ಕೊಲೆ ಮಾಡುವ. ೫. ಹಿಂಸೆಮಾಡುವ.

ಘಾತಿ (ನಾ). ೧. ಮರಣ; ನಾಶ. ೨. ಕೊಲ್ಲುವಿಕೆ; ಸಂಹಾರ. ೩. ಹೊಡೆತ; ಏಟು. ೪. ಪಕ್ಷಿಗಳನ್ನು ಹಿಡಿಯುವುದು ಅಥವಾ ಕೊಲ್ಲುವುದು.

ಘಾತುಕ = ಘಾತಕ.

ಘಾಸ (ನಾ). ಹುಲ್ಲು; ತೃಣ.

ಘಾಸಿ (ನಾ). ೧. ತೊಂದರೆ; ಹಿಂಸೆ. ೨. ಆಯಾಸ; ದಣಿವು. ೩. ಬೆಂಕಿ. (ಗು). ೪. (ಎಲ್ಲವನ್ನೂ) ನುಂಗುವ.

ಘೀಂಕೃತಿ (ನಾ). ಆನೆಯ ಕೂಗು, –ಧ್ವನಿ.

ಘೀಳ್ = ಗೀಟ್.

ಘುಟಿಕೆ (ನಾ). ೧. ಗುಳಿಗೆ; ಮಾತ್ರೆ. ೨. ಮಡ; ಹರಡು.

ಘುಡುಘುಡು (ನಾ). ಒಂದು ಅನುಕರಣ ಧ್ವನಿ. ~ ಇಸು = ೧. ರೋಷದಿಂದ ಕೂಗು. ೨. ಭೇರಿ ಮೊದಲಾದ ಚರ್ಮವಾದ್ಯಗಳು ಘು ಡು ಘು ಡು ಎಂದು ಶಬ್ದಮಾಡು. ೩. ಹೆಚ್ಚಾಗಿ ತೋರು.

ಘುಸೃಣ (ನಾ). ಕುಂಕುಮಕೇಸರಿ.

ಘೂಕ (ನಾ). ಗೂಗೆ; ಗೂಬೆ.

ಘೂರ್ಣನ (ನಾ). ೧. ಅಲುಗಾಡುವಿಕೆ; ಕಂಪನ. ೨. ಗರ್ಜನೆ.

ಘೂರ್ಣಿಸು (ಕ್ರಿ). ೧.ಗರ್ಜಿಸು; ಅಬ್ಬರಿಸು. ೨. ಹಿಗ್ಗು; ವಿಸ್ತರಿಸು. ೩. ಅಧಿಕವಾಗು; ವಿಜೃಂಭಿಸು. ೪. ಅಲ್ಲೋಲಕಲ್ಲೋಲವಾಗು. ೫. ಸುತ್ತು; ತಿರುಗು; ಭ್ರಮಿಸು.

ಘೂರ್ಮಿತ (ನಾ). ಗರ್ಜನೆ; ಅಬ್ಬರ.

ಘೃಣಿ (ನಾ). ೧. ಕಿರಣ; ಕದಿರು. ೨. ಸೆಕೆ; ತಾಪ. ೩. ಕರುಣೆ; ದಯೆ. (ಗು). ೪. ಕರುಣೆಯುಳ್ಳ; ದಯೆಯುಳ್ಳ.

ಘೃತ (ನಾ). ೧. ತುಪ್ಪ; ನೆಯ್. ೨.ಹಾಲು. ೩.ಅಮೃತ. (ಗು). ೪. ಚಿಮುಕಿಸಲ್ಪಟ್ಟ; ಸಿಂಪಡಿಸಿದ.

ಘೃಷ್ಟ (ಗು). ತೀಡಿದ; ಉಜ್ಜಿದ.

ಘೃಷ್ಟಿ (ನಾ). ೧. ಕಾಡುಹಂದಿ; ಸೂಕರ. ೨. ಕಿರಣ; ಕದಿರು. ೩. ಹಿಟ್ಟು ಬೀಸುವಿಕೆ; ಪುಡಿಮಾಡುವಿಕೆ.

ಘೇಂಡಾಮೃಗ = ಗೇಂಡಾಮೃಗ.

ಘೇರಾಯಿಸು = ಘೇರಿಸು.

ಘೇರಿ (ನಾ). ತಲೆಸುತ್ತುವಿಕೆ; ಶಿರೋಭ್ರಮಣ.

ಘೇರಿಸು (ಕ್ರಿ). ಸುತ್ತುವರಿ; ಬಳಸು.

ಘೋಕು (ನಾ). ಉರು ಹೊಡೆಯುವುದು; ಕಂಠಪಾಠ.

ಘೋಟ (ನಾ). ಕುದುರೆ; ಅಶ್ವ.

ಘೋಟಾಳಿ (ನಾ). ಗೊಂದಲ; ಕಕ್ಕಾಬಿಕ್ಕಿ.

ಘೋಡೆ = ಘೋಟ.

ಘೋಣ (ನಾ). ಮೂಗು; ನಾಸಿಕ.

ಘೋಣಿ (ನಾ). ಹಂದಿ; ವರಾಹ.

ಘೋರ (ನಾ). ೧. ಭಯಂಕರನಾದವನು. ೨. ಕಷ್ಟ; ತೊಂದರೆ. ೩. ಭಯಂಕರತೆ; ಉಗ್ರತೆ. (ಗು). ೪. ಹೆದರಿಕೆಯನ್ನು ಹುಟ್ಟಿಸುವ; ಭಯಂಕರವಾದ. ೫. ತೀಕ್ಷ್ಣವಾದ; ಕಠಿನವಾದ. ೬. ಪ್ರಚಂಡವಾದ; ಬಲವಾದ.

ಘೋಷ ೧. = ಗೋಸ. ೨. ವ್ಯಾಕರಣದಲ್ಲಿ ಮೃದುವಾದ ವ್ಯಂಜನ.

ಘೋಷಣೆ = ಗೋಸಣೆ.

ಘೋಷಿಸು (ಕ್ರಿ). ೧. ಗಟ್ಟಿಯಾಗಿ ಕೂಗು; ಡಂಗುರ ಹೊಡೆ; ಸಾರು. ೨. (ಶಾಸನ, ಕಾನೂನು ಮೊದಲಾದುವುಗಳನ್ನು) ಜಾರಿಗೆ ತರು.

ಘ್ರಾಣ (ನಾ). ೧. ಮೂಗು; ನಾಸಿಕ. ೨. ಮೂಸುವಿಕೆ; ವಾಸನೆ ನೋಡುವಿಕೆ. ೩.ವಾಸನೆ; ಕಂಪು. ~ ಇಸು = ಮೂಸು; ವಾಸನೆ ನೋಡು.

❋

## ಙ

ಙ (ನಾ). ಕನ್ನಡ ವರ್ಣಮಾಲೆಯ ಇಪ್ಪತ್ತೈದನೆಯ ಅಕ್ಷರ.

ಙವನ (ನಾ). ದಿವ್ಯಧ್ವನಿ.

❋

ಚ (ನಾ). ಕನ್ನಡ ವರ್ಣಮಾಲೆಯ ಇಪ್ಪತ್ತಾರನೆಯ ಅಕ್ಷರ.

ಚಂಗ (ನಾ). ೧. ಕೊಂಕುತನ; ವಕ್ರತೆ. ೨. ಗಂಜೀಪಿನ ಆಟದ ಎಲೆ. (ಗು). ೩. ಚುರುಕಾದ. ೪. ಚೆಲುವಾದ; ಸುಂದರವಾದ.

ಚಂಗು (ಕ್ರಿ). ೧. ಹಾರು; ನೆಗೆ. (ನಾ). ೨. ನೆಗೆತ; ಜಿಗಿತ. ೩. ಒಂದು ಬಗೆಯ ವಾದ್ಯ.

ಚಂಚ (ನಾ). ೧. ಬೇಡ; ಶಬರ. ೨. ಕಪಟ; ಮೋಸ. ~ವಂಚ = ಮೋಸ; ವಂಚನೆ.

ಚಂಚರೀಕ (ನಾ). ದುಂಬಿ; ಭ್ರಮರ.

ಚಂಚಲ(ಳ) (ನಾ). ೧. ಗಾಳಿ; ವಾಯು. ೨. ಕಾದಲ; ಪ್ರೇಮಿ. ೩. ಜಾರ; ವ್ಯಭಿಚಾರಿ. ೪. ಪುರಲೆಹಕ್ಕಿ. (ಗು). ೫. ಅಲುಗುವ; ಸ್ಥಿರವಲ್ಲದ.

ಚಂಚಲೆ(ಳೆ) (ನಾ). ೧. ಚಂಚಲಸ್ವಭಾವದವಳು. ೨. ಲಕ್ಷ್ಮಿ. ೩. ಮಿಂಚು.

ಚಂಚು (ನಾ). ೧. ಪಕ್ಷಿಯ ಕೊಕ್ಕು. ೨. ಔಡಲಗಿಡ; ಹರಳುಗಿಡ. ~ಪುಟ = ಪಕ್ಷಿಯ ಕೊಕ್ಕು.

ಚಂಚುರ (ಗು). ೧. ಚತುರ; ನಿಷ್ಣಾತ. ೨. ಸುಂದರವಾದ; ಚೆಲುವಾದ. ೩. ಅತಿಶಯವಾದ.

ಚಂಡ (ನಾ). ೧. ವೀರ; ಪರಾಕ್ರಮಿ. ೨. ಒಬ್ಬ ರಾಕ್ಷಸನ ಹೆಸರು. ೩. ಉಷ್ಣತೆ; ಶಾಖ. ೪. ಹುಣಿಸೆಯ ಮರ. (ಗು). ೫. ತೀಕ್ಷ್ಣವಾದ; ಉಗ್ರವಾದ. ೬. ಬಿಸಿಯಾದ; ಉಷ್ಣವಾದ. ೭. ಬಲಿಷ್ಠವಾದ; ಬಲಾಢ್ಯ. ೮. ಕ್ರೂರ; ಕರ್ಕಶ. ~ಆಮಯ = ತೀವ್ರವಾದ ರೋಗ. ~ಕರ = ಉಷ್ಣವಾದ ಕಿರಣಗಳುಳ್ಳವನು; ಸೂರ್ಯ. ~ಮಾರುತ = ಪ್ರಬಲವಾದ ಗಾಳಿ.

ಚಂಡಾತ (ನಾ). ೧. ತೊಡೆಮಟ್ಟಿಗೆ ತೊಡುವ ಚಡ್ಡಿ. ೨. ಕಣಗಿಲೆ.

ಚಂಡಾಲ(ಳ) (ನಾ). ೧. ಬ್ರಾಹ್ಮಣ ಸ್ತ್ರೀಯಲ್ಲಿ ಶೂದ್ರನಿಂದ ಹುಟ್ಟಿದವನು. ೨. ಕ್ರೂರಿ; ಕೊಲೆಗಡಿಕ.

ಚಂಡಾಳಿ (ನಾ). ೧. ದುರುಳದುಂಬಿ; ದುಷ್ಟ ಭ್ರಮರ. ೨. ಹೊಲತಿ; ಚಂಡಾಲಸ್ತ್ರೀ. ೩. ಹೀನಜಾತಿಗೆ ಸೇರಿದುದು.

ಚಂಡಿ (ನಾ). ೧. ಹಟಮಾರಿತನ; ಛಲ. ೨. ಹಟಮಾರಿಯಾದ ಹೆಣ್ಣು; ಮೊಂಡಿ. ೩. ತೀಕ್ಷ್ಣತೆ; ಉಗ್ರತೆ. ೪. ಚಾಮುಂಡಿ; ದುರ್ಗೆ. ೫. ಒಬ್ಬ ಋಷಿಪತ್ನಿಯ ಹೆಸರು. ೬. ಪ್ರಚಂಡ; ಉಗ್ರನಾದವನು. ~ಇಸು = ೧. ಹಟಹಿಡಿ. ೨. ದಟ್ಟವಾಗು; ನಿಬಿಡವಾಗು. ೩. ಎದುರುಬೀಳು; ಪ್ರತಿಭಟಿಸು. ೪. ಸಿಟ್ಟುಗೊಳ್ಳು; ಕೋಪಿಸು. ೫. ಉತ್ಸಾಹಿಸು. ~ಕೊ(ಗೊ)ಳ್(ಳ್ಳು) = ೧. ಚಂಡಿಹಿಡಿ. ೨. ಮುತ್ತು; ಆವರಿಸು. ~ತನ = ೧. ಪರಾಕ್ರಮ. ೨. ಹಟಮಾರಿತನ. ~ಹಿಡಿ = ಹಟ ಮಾಡು; ಮೊಂಡುಹಿಡಿ.

ಚಂಡಿಕೆ ೧.=ಚೆಂಡಿಕೆ. ೨.ದುರ್ಗೆ; ಚಾಮುಂಡಿ.

ಚಂಡಿಲ (ನಾ). ೧. ಶಿವ; ರುದ್ರ. ೨. ನಾಯಿಂದ; ಕೆಲಸಿಗ.

ಚಂಡು (ನಾ). ೧. ಗೊಂಚಲು; ಕುಚ್ಚು. ೨. ಆಟದ ವಸ್ತು; ಕಂತುಕ. ೩. ತಲೆ; ಶಿರ. ೪. ಒಂದು ಜಾತಿಯ ಹೂವು. ೫. ಕತ್ತಿನ ಹಿಂಭಾಗ; ಹೆಕ್ಕತ್ತು. ೬. ಭಾರವನ್ನು ಹೊರಲು ತಲೆಯ ಮೇಲೆ ಇಟ್ಟುಕೊಳ್ಳುವ ಸಿಂಬೆ. ೭. ಜೋಳ, ನವಣೆ ಮೊದಲಾದುವುಗಳ ತೆನೆ.

**ಚಂಡೋಲ** (ನಾ). ೧. ಇಂಪಾಗಿ ಹಾಡುವ ಒಂದು ಜಾತಿಯ ಪಕ್ಷಿ. ೨. ಅಫೀಮು; ಅಪಿನಿ.

**ಚಂದ** (ನಾ). ೧. ಅಂದ; ಸೊಗಸು. ೨. ಹೋಲಿಕೆ; ಸಾದೃಶ್ಯ. ೩. ರೀತಿ; ವಿಧ. ೪. ಸರಿಯಾದುದು; ಯೋಗ್ಯವಾದುದು. ೫. ಕ್ಷೇಮ; ಸೌಖ್ಯ. ೬. ತಿಂಗಳು; ಚಂದ್ರ.

**ಚಂದಣ** (ನಾ). ಶ್ರೀಗಂಧದ ಮರ.

**ಚಂದನ** ೧. = ಚಂದಣ. ೨. ಶ್ರೀಗಂಧವನ್ನು ತೇದು ಮಾಡಿದ ಗಂಧ. ೩. ಅತ್ಯುತ್ತಮವಾದುದು. **~ಅಚಲ** = ಮಲಯಪರ್ವತ. **~ಉಪಲ** = ಗಂಧ ತೇಯುವ ಸಾಣೆಕಲ್ಲು.

**ಚಂದಮ** (ನಾ). ಚಂದ್ರ; ತಿಂಗಳು.

**ಚಂದವ** = ಚಂದಮ.

**ಚಂದಾ** (ನಾ). ವಂತಿಗೆ; ವರ್ಗಣಿ. **~ದಾರ** = ವಂತಿಗೆ ಕೊಡುವವನು; ವರ್ಗಣಿದಾರ.

**ಚಂದಾಯ** (ನಾ). ಇಪ್ಪಾರು ಚಾವಣಿಯ ಕೊನೆಯಲ್ಲಿರುವ ತ್ರಿಕೋಣಾಕಾರದ ಗೋಡೆಯ ಭಾಗ; ಗೇಬಲ್ಲು.

**ಚಂದಿರ** (ನಾ). ೧. ಚಂದ್ರ; ತಿಂಗಳು. ೨. ಸಿಂಧೂರ; ಕೆಂಪುಬಣ್ಣದ ಪುಡಿ. **~ಬ(ವ)ಟ್ಟು** = ೧. ಚಂದ್ರಮಂಡಲ. ೨. ಸಿಂಧೂರದ ತಿಲಕ.

**ಚಂದುಳ್ಳಿ** (ಗು). ಚೆಲುವಾದ; ಸೊಗಸಾದ.

**ಚಂದ್ರ** (ನಾ). ೧. ಶಶಿ; ತಿಂಗಳು. ೨. ಸಿಂಧೂರ; ಕೆಂಪುಬಣ್ಣದ ಪುಡಿ. ೩. ಆಹ್ಲಾದಕರವಾದ ವಸ್ತು. ೪. ಚಿನ್ನ. ೫. ಕರ್ಪೂರ. (ಗು). ೬. ಹೊಳೆಯುವ; ಲಕಲಕಿಸುವ. **~ಆತಪ** =೧. ಬೆಳುದಿಂಗಳು. ೨. ಮೇಲ್ಕಟ್ಟು; ವಿತಾನ. **~ಕಳಾಪ** = ೧. ನವಿಲುಗರಿಗಳ ಸಮೂಹ. ೨. ನವಿಲುಗರಿಗಳಿಂದ ಅಲಂಕರಿಸಿಕೊಂಡವನು. **~ಕಾಂತ** = ಚಂದ್ರಪ್ರಕಾಶದಿಂದ ದ್ರವಿಸುವುದೆಂದು ಭಾವಿಸಲಾದ ಒಂದು ಬಗೆಯ ಬಿಳಿಯ ಕಲ್ಲು. **~ಕಾ(ಗಾ)ವಿ** =೧. ಸಿಂಧೂರದ ಬಣ್ಣ; ಕೆಂಪುಬಣ್ಣ. ೨. ಕೆಂಬಣ್ಣದ ಅಂಚಿನ ಕಪ್ಪುಸೀರೆ; ಕಾಗಿನ ಸೀರೆ. **~ಶಾಲೆ** = ೧. ಉಪ್ಪರಿಗೆ; ಮಹಡಿ. ೨. ಮೊಗಸಾಲೆ; ಪಡಸಾಲೆ. **~ಹಾರ** = ಒಂದು ಬಗೆಯ ಕಂಠಾಭರಣ. **~ಹಾಸ** = ೧. ಬೆಳುದಿಂಗಳಿನಂತಹ ನಗೆ. ೨. ಚಂದ್ರನನ್ನು ನೋಡಿ ನಗುವವನು. ೩. ಒಂದು ಬಗೆಯ ಖಡ್ಗ.

**ಚಂದ್ರಕ** (ನಾ). ೧. ನವಿಲುಗರಿಯ ಕಣ್ಣು. ೨. ಚಂದ್ರ.

**ಚಂದ್ರಕಿ** (ನಾ). ಪೀಲಿಗಳನ್ನುಳ್ಳುದು; ನವಿಲು. **~ವಾಸ** = ನವಿಲನ್ನು ವಾಹನವನ್ನಾಗಿ ಉಳ್ಳವನು; ಷಣ್ಮುಖ.

**ಚಂದ್ರಚೂಡ** (ನಾ). ತಲೆಯಲ್ಲಿ ಚಂದ್ರನನ್ನು ಧರಿಸಿದವನು; ಶಿವ.

**ಚಂದ್ರಿ** (ನಾ). ೧. ಚಂದ್ರನ ಮಗ; ಬುಧ. (ಗು). ೨. ಹೊಳೆಯುವ. ೩. ಹೊನ್ನಿನ; ಚಿನ್ನದ.

**ಚಂದ್ರಿಕೆ** (ನಾ). ೧. ಬೆಳುದಿಂಗಳು. ೨. ಚಂದ್ರನ ಹದಿನಾರು ಕಲೆಗಳಲ್ಲಿ ಒಂದು. ೩. ಬರೆಹವನ್ನುಳ್ಳ ಓಲೆಗರಿಯ ಸುರುಳಿ. ೪. ಹಣ್ಣು ಪಕ್ವವಾಗಿರುವುದನ್ನು ತಿಳಿದುಕೊಳ್ಳಲು ಪರೀಕ್ಷಾರ್ಥವಾಗಿ ಕೊರೆಯುವ ರಂಧ್ರ; ಉಂಡಿಗೆ.

**ಚಂಪಕ** (ನಾ). ೧. ಒಂದು ಜಾತಿಯ ಮರ ಮತ್ತು ಅದರ ಹೂವು; ಸಂಪಿಗೆ. ೨. ಕೇಸರಿ ಬಣ್ಣ. **~ಮಾಲೆ** = ೧. ಸಂಪಿಗೆ ಹೂವುಗಳ ಮಾಲೆ. ೨. ಅಕ್ಷರ ಛಂದಸ್ಸಿನಲ್ಲಿ ಒಂದು ಬಗೆ.

**ಚಂಪು** (ನಾ). ಗದ್ಯಪದ್ಯ ಮಿಶ್ರವಾದ ಕಾವ್ಯರೂಪ.

**ಚಂಪೆ** (ನಾ). ೧. ಸಂಪಿಗೆ ಮರ. ೨. ಸುಗಂಧ; ಪರಿಮಳ. ೩. ಕೆನ್ನೆ; ಕಪೋಲ.

ಚಂಪೆಯು (ನಾ). ಒಂದು ಬಗೆಯ ಡೇರೆ.

ಚಂಬಕ (ನಾ). ಒಂದು ಬಗೆಯ ಚರ್ಮವಾದ್ಯ.

ಚಂಬು (ನಾ). ತಾಮ್ರ ಮುಂತಾದ ಲೋಹದ ಗುಂಡನೆಯ ಪಾತ್ರೆ; ಚೆಂಬು.

ಚಕಚಕಿಸು (ಕ್ರಿ). ಹೊಳೆ; ಲಕಲಕಿಸು.

ಚಕಬಂದಿ (ನಾ). ಮನೆ, ಹೊಲ ಮುಂತಾದ ಕ್ಷೇತ್ರಗಳ ಸೀಮಾವಿವರ.

ಚಕಮಕಿ ೧. = ಚಕ್ಕಮುಕ್ಕಿ. ೨. ಜಗಳ; ಕದನ.

ಚಕಾರ (ನಾ). ೧. ಚ ಎಂಬ ಅಕ್ಷರ. ೨. ಒಂದು ಅಕ್ಷರದಷ್ಟು; ಒಂದು ಶಬ್ದದಷ್ಟಾದರೂ ಮಾತು. ~ಇಸು = ಒಂದು ಮಾತನ್ನಾದರೂ ಆಡು. ~ಎ(ವೆ)ತ್ತು = ಚಕಾರಿಸು.

ಚಕಿತ (ನಾ). ೧. ಬೆರಗುಗೊಂಡವನು; ವಿಸ್ಮಿತನಾದವನು. (ಗು). ೨. ಅಲುಗುವ; ಅಸ್ಥಿರವಾದ. ೩. ಗಾಬರಿಗೊಂಡ; ಭಯಪಟ್ಟ. ೪. ಬೆರಗುಗೊಂಡ.

ಚಕೋರ (ನಾ). ೧. ಬೆಳುದಿಂಗಳನ್ನೇ ಸೇವಿಸಿ ಬದುಕುವುದೆಂದು ನಂಬಲಾಗಿರುವ ಹಕ್ಕಿ; ಜೊನ್ನವಕ್ಕಿ. ೨. ಕಪಿಂಜಲ ಹಕ್ಕಿ.

ಚಕೋರಿ (ನಾ). ಹೆಣ್ಣು ಚಕೋರ ಪಕ್ಷಿ.

ಚಕ್ಕ (ಗು). ಅಚ್ಚುಕಟ್ಟಾದ; ಚೊಕ್ಕಟವಾದ.

ಚಕ್ಕಂದ (ನಾ). ೧. ಸಂತೋಷ; ಉಲ್ಲಾಸ. ೨. ಲಲ್ಲೆ; ಸರಸ.

ಚಕ್ಕಂಬಟ್ಟಲು = ಚಕ್ಕಳಬಕ್ಕಳ.

ಚಕ್ಕಡಿ (ನಾ). ೧. ಎತ್ತಿನ ಬಂಡಿ. ೨. ಒಂದು ಬಗೆಯ ಕುಣಿತ; ಜಕ್ಕಡಿ.

ಚಕ್ಕಣ (ನಾ). ಕಳ್ಳು ಕುಡಿಯುವಾಗ ನಂಜಿಕೊಳ್ಳುವ ಪದಾರ್ಥ; ಚಾಕಣ.

ಚಕ್ಕಮುಕ್ಕಿ (ನಾ). ಪರಸ್ಪರ ತಾಗಿಸುವುದರಿಂದ ಬೆಂಕಿಯುಂಟಾಗುವ ಒಂದು ಬಗೆಯ ಕಲ್ಲು.

ಚಕ್ಕರ್ (ನಾ). ೧. ಸುತ್ತುವಿಕೆ; ತಿರುಗುವಿಕೆ. ೨. = ಚಕ್ಕರು.

ಚಕ್ಕರು (ನಾ). ತಪ್ಪಿಸುವಿಕೆ.

ಚಕ್ಕಲ(ಳ)ಗುಳಿ (ನಾ). ಪಕ್ಕೆಗಳಲ್ಲಿ ಬೆರಳಾಡಿಸಿ ನಗಿಸುವ ಕ್ರಿಯೆ; ಕಚಗುಳಿ.

ಚಕ್ಕವಕ್ಕಿ (ನಾ). ೧. ಚಕ್ರವಾಕ ಪಕ್ಷಿ. ೨. ಚಾತಕ ಪಕ್ಷಿ.

ಚಕ್ಕವತ್ತ (ನಾ). ಒಂದು ಬಗೆಯ ತರಕಾರಿ ಸೊಪ್ಪು.

ಚಕ್ಕಳ ೧. = ಚಕ್ಕಣ. ೨. ಚಾಪೆ; ಮುಂದಲಿಗೆ. ೩. ಕಟಾಹ; ಕೊಪ್ಪರಿಗೆ; ಕಡಾಯಿ. ೪. ತೊಗಲು; ಚರ್ಮ. ೫. ಗಾಯದ ಮೇಲಿನ ಹಕ್ಕಳೆ. ೬. = ಚಕ್ಕಳಬಕ್ಕಳ.

ಚಕ್ಕಳಬಕ್ಕಳ (ನಾ). ಕಾಲು ಮಡಿಚಿ ಹಾಕಿಕೊಂಡು ಕೂಡುವುದು; ಚೌಕಾಸನ.

ಚಕ್ಕಳಿ(ಳಿ) (ಕ್ರಿ). ೧. ಚಪ್ಪಟೆಯಾಗು; ಅಪ್ಪಚ್ಚಿಯಾಗು. (ನಾ). ೨. ಚಪ್ಪಟೆಯಾದುದು.

ಚಕ್ಕುಲಿ (ನಾ). ಒಂದು ಬಗೆಯ ಕಾರದ ತಿಂಡಿ.

ಚಕ್ಕೆ (ನಾ). ತೆಳ್ಳನೆಯ ಚೂರು.

ಚಕ್ಕೋತ ೧. = ಚಕ್ಕವತ್ತ. ೨. ಈಳೆ ಜಾತಿಗೆ ಸೇರಿದ ಒಂದು ಜಾತಿಯ ಮರ ಮತ್ತು ಅದರ ಹಣ್ಣು.

ಚಕ್ರ (ನಾ). ೧. ಗಾಲಿ. ೨. ಕುಂಬಾರನ ಚಕ್ರ; ತಿಗುರಿ. ೩. ವಿಷ್ಣುವಿನ ಒಂದು ಆಯುಧ. ೪. ಮಂಡಲ; ವರ್ತುಳ. ೫. ಸಮೂಹ; ನೆರವಿ. ೬. ಪಡೆ; ಸೈನ್ಯ. ೭. ಒಂದು ನಾಣ್ಯದ ಹೆಸರು. ೮. ಚಕ್ರವಾಕ ಪಕ್ಷಿ. ೯. ರಾಜ್ಯ; ಸಾಮ್ರಾಜ್ಯ. ೧೦. ಸೊನ್ನೆ; ಇಲ್ಲದಂತಾಗುವಿಕೆ. ~ಬಡ್ಡಿ = ಬಡ್ಡಿಯ ಮೇಲೆ ಬಡ್ಡಿ. ~ಮಾರುತ = ಸುಂಟರಗಾಳಿ; ಸುಟ್ಟುರೆ ಗಾಳಿ. ~ವ್ಯೂಹ = ಒಂದು ಬಗೆಯ ಸೇನಾರಚನೆ. ೨. ಬಿಕ್ಕಟ್ಟಿನ ಪರಿಸ್ಥಿತಿ.

ಚಕ್ರಧರ (ನಾ). ೧. ಚಕ್ರವನ್ನು ಧರಿಸಿದವನು; ವಿಷ್ಣು. ೨. ಚಕ್ರವರ್ತಿ. ೩. ಹಾವು.

ಚಕ್ರವರ್ತಿ (ನಾ). ಸಾರ್ವಭೌಮ; ಸಾಮ್ರಾಟ.

ಚಕ್ರವರ್ತಿನಿ(ನಾ). ೧.ಚಕ್ರವರ್ತಿಯ ಪಟ್ಟದ ರಾಣಿ. ೨. ಸಾಮ್ರಾಜ್ಞಿ. ೩.ಒಂದು ಬಗೆಯ ಸುವಾಸನೆಯ ಮೂಲಿಕೆ.

ಚಕ್ರವಾಕ (ನಾ). ಕೋಕಪಕ್ಷಿ; ಬಿಸಿಲುಹಕ್ಕಿ; ರಥಾಂಗಪಕ್ಷಿ.

ಚಕ್ರವಾಲ(ಳ) (ನಾ). ೧. ವರ್ತುಳ; ವೃತ್ತ. ೨. ದಿಗಂತ. ೩. ಸಮೂಹ; ನೆರವಿ.

ಚಕ್ರಿ (ನಾ). ೧.ಗಾಲಿಗಳನ್ನುಳ್ಳುದು; ಬಂಡಿ. ೨. ಚಕ್ರಾಯುಧವನ್ನು ಉಳ್ಳವನು; ವಿಷ್ಣು; ಕೃಷ್ಣ. ೩. ಚಕ್ರವರ್ತಿ. ೪. ಕುಂಬಾರ. ೫. ಹಾವು; ಸರ್ಪ. ೬. ಚಕ್ರವಾಕ ಪಕ್ಷಿ.

ಚಕ್ಷು (ನಾ). ಕಣ್ಣು; ನೇತ್ರ.

ಚಕ್ಷುಃಶ್ರವ (ನಾ). ಕಣ್ಣುಗಳನ್ನೇ ಕಿವಿಗಳನ್ನಾಗಿ ಬಳಸುವ ಪ್ರಾಣಿ; ಹಾವು; ಸರ್ಪ.

ಚಕ್ಷುಷ್ಯ (ನಾ). ೧. ಚೆಲುವ; ಸುಂದರ. (ಗು). ೨.ಕಣ್ಣಿಗೆ ಚೆಲುವಾದ, –ಹಿತವಾದ.

ಚಗಚೆ (ನಾ). ಒಂದು ಜಾತಿಯ ಗಿಡ; ಚೊಗಚೆ.

ಚಗತಳಿ (ನಾ). ಸಣ್ಣ ಚೂರು, –ತುಂಡು.

ಚಚ್ಚರ (ನಾ). ೧. ಜಾಗ್ರತೆ; ತ್ವರೆ. ೨. ಎಚ್ಚರಿಕೆ; ಜಾಗರೂಕತೆ. ~ಇಗ = ೧. ಆತುರಗಾರ; ದುಡುಕುವವನು. ೨. ದುಡುಕಿ ಮಾತನಾಡುವವನು.

ಚಚ್ಚರಂ (ಅ). ೧. ಬೇಗನೆ; ತ್ವರಿತವಾಗಿ. ೨. ಎಚ್ಚರಿಕೆಯಿಂದ; ಜಾಗರೂಕವಾಗಿ. ೩.ದಿಟವಾಗಿ; ನಿಶ್ಚಯವಾಗಿ. ೪.ನಿರ್ನಿಮಿತ್ತವಾಗಿ.

ಚಚ್ಚು (ಕ್ರಿ). ೧. ಹೊಡೆ; ಬಡಿ. ೨. =ಚರ್ಚು.

ಚಚ್ಚೌಕ (ನಾ). ನಾಲ್ಕು ಕಡೆಗಳಲ್ಲೂ ಚೌಕವಾಗಿರುವುದು; ಸಮ ಚತುರಸ್ರ.

ಚಟ (ನಾ). ಹವ್ಯಾಸ; ಅಭ್ಯಾಸ; ಚಾಳಿ.

ಚಟಕ (ನಾ). ಗುಬ್ಬಿ; ಗುಬ್ಬಚ್ಚಿ.

ಚಟಚಟ (ನಾ). ೧. ಒಂದು ಅನುಕರಣ ಧ್ವನಿ. (ಅ). ೨. ಲಗುಬಗೆಯಿಂದ; ಬೇಗನೆ.

ಚಟವಟಿಕೆ (ನಾ). ೧. ಲಗುಬಗೆ; ತ್ವರಿತ. ೨. ಅಚ್ಚುಕಟ್ಟು; ಚೊಕ್ಕತನ. ೩. ಉತ್ಸಾಹ; ಚೈತನ್ಯ.

ಚಟಾಕಿ (ನಾ). ಪಟಾಕಿ; ಪಟಾಕ್ಷಿ.

ಚಟಾಕು (ನಾ). ಅಳತೆಯಲ್ಲಿ ಒಂದು ಪ್ರಮಾಣ; ಸೇರಿನ ಹದಿನಾರನೆಯ ಒಂದು ಭಾಗ.

ಚಟಿಕೆ ೧. =ಚಟ್ಟಿಗೆ. ೨. ಹೆಣ್ಣುಗುಬ್ಬಿ.

ಚಟು (ನಾ). ಪ್ರಿಯವಾದ ಮಾತು; ಹಿತವಾದ ನುಡಿ.

ಚಟುಲ(ಳ) (ನಾ). ೧. ಶೀಘ್ರತೆ; ತ್ವರೆ. (ಗು). ೨. ಚಲಿಸುವ ಸ್ವಭಾವವುಳ್ಳ. ೩. ವೇಗದಿಂದ ಕೂಡಿದ. ೪. ಸುಂದರವಾದ.

ಚಟುಲ(ಳ)ತೆ (ನಾ). ೧. ವೇಗ; ಚಪಲತೆ. ೨. ಸೊಗಸು; ಸೌಂದರ್ಯ.

ಚಟುವಟಿಕೆ (ನಾ). ೧. ವೇಗ; ಶೀಘ್ರತೆ. ೨. ಕೆಲಸ; ಕ್ರಿಯೆ.

ಚಟೂರಿಸು (ಕ್ರಿ). ಮೋಸಮಾಡು; ವಂಚಿಸು.

ಚಟ್ಟ (ನಾ). ೧. ಹೆಣವನ್ನು ಸಾಗಿಸುವ ಬಿದಿರಿನ ಚೌಕಟ್ಟು; ಸಿದಿಗೆ. ೨. ಅಚ್ಚುಕಟ್ಟು; ಸೊಗಸು. ೩. ಚರಟ; ಗಸಿ. ೪. ಶಿಷ್ಯ; ಗುಡ್ಡ. ೫.ಸಮತಲವಾಗಿರುವುದು; ಚಪ್ಪಟೆ.

ಚಟ್ಟಣಿ (ನಾ). ಒಂದು ಬಗೆಯ ವ್ಯಂಜನ ಪದಾರ್ಥ.

ಚಟ್ಟಿ ೧.=ಚಟ್ಟಿಗೆ. ೨. ಚಿಕ್ಕಹಳ್ಳಿ; ಕೊಪ್ಪಲು. ೩. ಗುಡಿಸಿಲು. ೪. ಚಾಂದ್ರಮಾನ ಪಕ್ಷದಲ್ಲಿ ಆರನೆಯ ತಿಥಿ; ಷಷ್ಠಿ.

ಚಟ್ಟಿಗೆ (ನಾ). ಮಣ್ಣಿನ ಪಾತ್ರೆ; ಮಡಕೆ.

ಚಟ್ಟು (ನಾ). ೧. ಚಪ್ಪಟೆಯಾಗಿರುವಿಕೆ. ೨. ಪಲ್ಲಕ್ಕಿಯ ಮೇಲೆ ಹೊದಿಸುವ ಬಟ್ಟೆ. ೩. ಬೀಜ ತೆಗೆದು ಒಣಗಿಸಿಟ್ಟ ಕಾಯಿ. ೪. ಎಳೆಯ ಕಾಯಿ; ಹೀಚು. ೫. ಕೊಳೆ;

ಹೊಲಸು. ೬. ನಾಶ; ಹಾಳು. ೭. ಒರಟು ಭೂಮಿ. ೮. ಪರಿಮಳ ದ್ರವ್ಯದ ಲೇಪನ. ೯. ಹರಟೆ.

ಚಟ್ಟೆ (ನಾ). ೧. ಚಪ್ಪಟೆ; ಮಟ್ಟವಾಗಿರುವಿಕೆ. ೨. ಬಿದಿರಿನಿಂದ ಮಾಡಿದ ಸಣ್ಣ ಬುಟ್ಟಿ; ಚಿಬ್ಬಲು. ೩. ಆಂಗ್ಲರ ಮಾದರಿಯ ಉಡುಗೆ, –ತೊಡುಗೆ.

ಚಟ್ನಿ = ಚಟ್ಟಣಿ.

ಚಡತ (ನಾ). ಮನೆಯ ಮುಂದಿನ ಜಗಲಿ, –ಕಟ್ಟೆ.

ಚಡಪಡ (ನಾ). ಅಸಮಾಧಾನ; ಕಳವಳ. ~ಇಕೆ = ಚಡಪಡ. ~ಇಸು = ೧. ಆತುರ ಪಡು; ತ್ವರೆಗೊಳ್ಳು. ೨. ಕಳವಳಗೊಳ್ಳು; ಕಾತರಗೊಳ್ಳು. ೩. ಒದ್ದಾಡು; ಹೊರಳಾಡು.

ಚಡಾಯ (ನಾ). ೧. ಪದವಿಯಲ್ಲಿ ಉನ್ನತಿ, –ಬಡತಿ. ೨. ಅತಿಶಯ; ಆಧಿಕ್ಯ.

ಚಡಾಯಿಸು (ಕ್ರಿ). ೧. ಏರು; ಹೆಚ್ಚಾಗು. ೨.ಎತ್ತರಿಸು; ಹೆಚ್ಚುಮಾಡು. ೩.ಹೊಡೆ; ಏಟುಕೊಡು.

ಚಡಾವು (ನಾ). ೧. ಏರಿಕೆ; ಉನ್ನತಿ. ೨. ಏರುನೆಲ; ದಿಣ್ಣೆ. ೩. ಒಂದು ಬಗೆಯ ಮೆಟ್ಟು.

ಚಡಾಳ (ನಾ). ೧. ಹೆಚ್ಚಳ; ಆಧಿಕ್ಯ. ೨. ಚಾತುರ್ಯ; ಚತುರತೆ. ~ಇಸು = ೧. ಚಾತುರ್ಯದಿಂದ ಹೊಂದಿಸು, –ಜೋಡಿಸು. ೨.ಅಧಿಕವಾಗು; ಮೇಲಾಗು. ೩. ತುಂಬು; ಹಬ್ಬು. ೪. ಪ್ರಜ್ವಲಿಸು; ಹೊಳೆ. ೫. ಉರವಣಿಸು; ಉಗ್ರವಾಗು.

ಚಡಿ (ನಾ). ೧. ಮೆಟ್ಟಲುಗಳ ಸಾಲು; ಸೋಪಾನ ಮಾರ್ಗ. ೨. ಕಣಿವೆ; ಪ್ರಪಾತ. ೩. ಬೆತ್ತ; ಕೋಲು. ೪. ಮರಗೆಲಸದಲ್ಲಿ ಎರಡು ಮರದ ತುಂಡುಗಳನ್ನು ಕೂಡಿಸುವ ಸ್ಥಳದಲ್ಲಿ ಮಾಡುವ ಪಡ.

ಚಡ್ಡಿ (ನಾ). ೧. ಅರೆಚಲ್ಲಣ; ಅರ್ಧಚಣ್ಣ. ೨. ಬಿಗಿಯಾದ ಕಾಸೆ; ಕಾಚ.

ಚಢಾಯಿ (ನಾ). ಲಗ್ಗೆ; ಮುತ್ತಿಗೆ; ದಾಳಿ.

ಚಣ (ನಾ). ಕ್ಷಣ; ಸ್ವಲ್ಪ ಹೊತ್ತು.

ಚಣ(ಂ)ಗಿ (ನಾ). ಒಂದು ದ್ವಿದಳ ಧಾನ್ಯ; ಕಡಲೆ.

ಚಣಕ (ನಾ). ೧. ಚಣ್ಣ; ಚಡ್ಡಿ. ೨. = ಚಣಂಗಿ.

ಚಣಗೆ = ಚಣಂಗಿ.

ಚಣ್ಣ = ಚಲ್ಲಣ.

ಚತುರ (ನಾ). ೧. ನಾಲ್ಕು. ೨. ಜಾಣತನ; ಕೌಶಲ್ಯ. ೩. ಜಾಣ; ನಿಪುಣ. (ಗು). ೪. ಪ್ರೌಢನಾದ. ೫. ಚಟುವಟಿಕೆಯುಳ್ಳ.

ಚತುರಂಗ (ನಾ). ೧. ನಾಲ್ಕು ಅಂಗಗಳಿಂದ ಕೂಡಿದುದು. ೨. ಆನೆ, ಕುದುರೆ, ರಥ ಮತ್ತು ಪದಾತಿಗಳಿಂದ ಕೂಡಿದ ಸೈನ್ಯ. ೩. ಒಂದು ಬಗೆಯ ಆಟ; ಚದುರಂಗ.

ಚತುರಂಗುಲ(ಳ) (ನಾ). ೧. ನಾಲ್ಕು ಅಂಗುಲ. ೨. ಕಕ್ಕೆಗಿಡ.

ಚತುರಶ್ರ ೧. = ಚತುರಸ್ರ. (ಗು). ೨.ನಾಲ್ಕು ಮೂಲೆಗಳುಳ್ಳ; ಚೌಕವಾದ. ೩.ಹಿತವಾದ. ೪. ಅಚ್ಚುಕಟ್ಟಾದ.

ಚತುರಸ್ರ (ನಾ). ನಾಲ್ಕು ಮೂಲೆಗಳನ್ನುಳ್ಳುದು; ಚಚ್ಚೌಕ.

ಚತುರಾಸ್ಯ (ನಾ). ೧. ನಾಲ್ಕು ಮುಖಗಳುಳ್ಳವನು; ಬ್ರಹ್ಮ. ೨. ಜಾಣ್ಮೆಯ ಮಾತನ್ನು ಆಡುವವನು. ~ಪ್ರಿಯೆ = ೧. ಸರಸ್ವತಿ. ೨. ಜಾಣೆ.

ಚತುರೋಪಾಯ (ನಾ). ೧. (ಕಾರ್ಯ ಸಾಧನೆಗೆ ಪ್ರಯೋಗಿಸಲಾಗುವ) ಸಾಮ, ದಾನ, ಭೇದ, ದಂಡವೆಂಬ ನಾಲ್ಕು ಬಗೆಯ ಉಪಾಯಗಳು. ೨.ಜಾಣತನದ ಉಪಾಯವನ್ನು ಮಾಡುವವನು.

**ಚತುರ್ಥ** (ನಾ). ೧. ನಾಲ್ಕನೆಯ ವರ್ಣಕ್ಕೆ ಸೇರಿದವನು; ಶೂದ್ರ. (ಗು). ೨. ನಾಲ್ಕನೆಯ. ~ಅಂಶ = ನಾಲ್ಕನೆಯ ಒಂದು ಭಾಗ. ~ಸ್ನಾನ = ಮುಟ್ಟಾದವಳು ನಾಲ್ಕನೆಯ ದಿನ ಮಾಡುವ ಸ್ನಾನ.

**ಚತುರ್ಥಿ** (ನಾ). ೧. ಚಾಂದ್ರಮಾನ ಪಕ್ಷದಲ್ಲಿ ನಾಲ್ಕನೆಯ ತಿಥಿ; ಚೌತಿ. ೨. ವ್ಯಾಕರಣದಲ್ಲಿಯ ನಾಮವಿಭಕ್ತಿಗಳಲ್ಲಿ ನಾಲ್ಕನೆಯದು.

**ಚತುರ್ವೇದ** (ನಾ). ಋಕ್ಕು, ಯಜುಸ್ಸು, ಸಾಮ ಮತ್ತು ಅಥರ್ವಣವೆಂಬ ನಾಲ್ಕು ವೇದಗಳು.

**ಚತುರ್ವೇದಿ** (ನಾ). ನಾಲ್ಕು ವೇದಗಳನ್ನು ಬಲ್ಲವನು.

**ಚತುಷ್ಕ** (ನಾ). ೧. ನಾಲ್ಕರ ಗುಂಪು, -ಸಮುದಾಯ. ೨. ಚೌಕಾಕಾರದ ಅಂಗಳ.

**ಚತುಷ್ಟಯ** (ನಾ). ೧. ನಾಲ್ಕರ ಗುಂಪು. (ಗು). ೨. ನಾಲ್ಕು ವಸ್ತು ಅಥವಾ ವಿಭಾಗಗಳನ್ನು ಉಳ್ಳ. ೩. ನಾಲ್ಕುಪಟ್ಟು ಇರುವ.

**ಚತುಷ್ಪದಿ** (ನಾ). ನಾಲ್ಕು ಸಾಲುಗಳುಳ್ಳ ಒಂದು ಪದ್ಯಜಾತಿ; ಚೌಪದಿ.

**ಚತುಷ್ಪಾದಿ** (ನಾ). ನಾಲ್ಕು ಪಾದಗಳನ್ನು ಉಳ್ಳದ್ದು.

**ಚತ್ತರಿಗೆ** (ನಾ). ಕೊಡೆ; ಛತ್ರಿ.

**ಚತ್ತಾಣ** (ನಾ). ಕಂದಪದ್ಯಗಳು ಹೆಚ್ಚಾಗಿದ್ದು ವೃತ್ತ, ತ್ರಿಪದಿ ಮುಂತಾದುವನ್ನೊಳಗೊಂಡ ಒಂದು ಕಾವ್ಯಪ್ರಭೇದ.

**ಚತ್ತು** (ನಾ). ೧. ಒಳಮಾಳಿಗೆ. ೨. ಮೇಲ್ಕಟ್ಟು; ವಿತಾನ.

**ಚತ್ರ** (ನಾ). ೧. ಧರ್ಮಾರ್ಥವಾಗಿ ಊಟ, ವಸತಿಗಳನ್ನು ಒದಗಿಸುವ ಸ್ಥಳ; ಧರ್ಮಾಲಯ. ೨. = ಚತ್ತರಿಗೆ.

**ಚತ್ರಿ** = ಚತ್ತರಿಗೆ.

**ಚತ್ವರ** (ನಾ). ೧. ಚೌಕಾಕಾರವಾದ ಅಂಗಳ. ೨. ಯಜ್ಞಕ್ಕಾಗಿ ಸಮತಟ್ಟು ಮಾಡಿದ ನೆಲ. ೩. ಹಲವು ದಾರಿಗಳು ಕೂಡುವ ಸ್ಥಳ.

**ಚದರ** (ನಾ). ಚಚ್ಚೌಕ; ಚೌರಸ.

**ಚದಿ** (ನಾ). ೧. ಹಟ; ಚಂಡಿತನ. ೨. ಮೋಸ; ದ್ರೋಹ.

**ಚದುಪು** (ನಾ). ೧. ವಂಚನೆ; ಮೋಸ. ೨. ಚದುರು; ಚಾತುರ್ಯ.

**ಚದುರ್** (ನಾ). ಜಾಣತನ; ಚಾತುರ್ಯ.

**ಚದುರ** ೧.=ಚದುರ್. ೨. ಜಾಣ; ಬುದ್ಧಿವಂತ ೩. ಸೊಗಸು; ಚೆಲುವು.

**ಚದುರಂಗ** (ನಾ). ೧. ಒಂದು ಬಗೆಯ ಆಟ. ೨. ಒಂದು ಬಗೆಯ ಸಸ್ಯ.

**ಚದುರಸಿಗೆ** (ನಾ). ಚಚ್ಚೌಕವಾದ ವಸ್ತು; ಚೌಕ.

**ಚದುರು** (ಕ್ರಿ). ೧. ಚೆಲ್ಲಾಪಿಲ್ಲಿಯಾಗು; ಬೇರೆ ಬೇರೆಯಾಗು. (ನಾ). ೨. ಜಾಣತನ; ಕೌಶಲ್ಯ. ೩. ಚಮತ್ಕಾರದ ಮಾತು; ವಕ್ರೋಕ್ತಿ.

**ಚದುರೆ** (ನಾ). ೧. ಚಾತುರ್ಯ. ೨. ಜಾಣೆ; ಪ್ರೌಢೆ.

**ಚದ್ದರು** (ನಾ). ಹತ್ತಿಯ ಅಥವಾ ರೇಷ್ಮೆಯ ದಪ್ಪ ಹೊದಿಕೆ; ದುಪ್ಪಟಿ.

**ಚಪ** (ನಾ). ಬಿದಿರು.

**ಚಪಲ(ಳ)** (ನಾ). ೧. ಪಾದರಸ; ಪಾರದ. ೨. ತೀವ್ರವಾದ ಆಸೆ, -ಬಯಕೆ. ೩. ಚಂಚಲ ಸ್ವಭಾವದವನು. (ಗು). ೪. ಅಸ್ಥಿರವಾದ; ಚಂಚಲವಾದ. ೫. ಚುರುಕಾದ; ಚಟುವಟಿಕೆಯುಳ್ಳ. ೬. ದುಡುಕಿನ ಸ್ವಭಾವದ. ೭. ಕ್ಷಣಿಕವಾದ. ೮. ತಳಮಳ ಹೊಂದಿದ. ೯. ಚಂಚಲವಾದ ಮನಸ್ಸುಳ್ಳ.

**ಚಪಲೆ(ಳೆ)** (ನಾ). ೧. ಚಂಚಲಸ್ವಭಾವದವಳು. ೨. ಮಿಂಚು; ವಿದ್ಯುತ್ತು.

ಚಪಾತಿ (ನಾ). ಗೋಧಿಯ ಹಿಟ್ಟಿನಿಂದ ಮಾಡುವ ಒಂದು ಬಗೆಯ ರೊಟ್ಟಿ.

ಚಪಾವಣೆ (ನಾ). ಬಚ್ಚಿಡುವುದು; ಮರೆ ಮಾಡುವುದು.

ಚಪೇಟ (ನಾ). ೧. ಬೆರಳುಗಳನ್ನು ಬಿಚ್ಚಿ ಹಿಡಿದ ಅಂಗೈ. ೨. ಬಿಚ್ಚಿದ ಅಂಗೈಯಿಂದ ಕೊಡುವ ಏಟು.

ಚಪ್ಪಟೆ (ನಾ). ೧. ಸಪಾಟಾಗಿರುವುದು; ಸಮತಟ್ಟಾಗಿರುವುದು. ೨. ಅಂಗೈಯಿಂದ ಕೊಟ್ಟ ಏಟು, — ಹೊಡೆತ. (ಗು). ೩. ಸಮತಲವಾದ; ಸಪಾಟಾದ.

ಚಪ್ಪಡಿ (ನಾ). ೧. ಚಪ್ಪಟೆಯಾದ ಕಲ್ಲು; ಹಾಸುಗಲ್ಲು. ೨. ಹಲಗೆ; ಫಲಕ. ~ಎಳೆ = ೧. ಹಾಸುಗಲ್ಲನ್ನು ಹಾಕು. ೨. ನಾಶ ಮಾಡು; ಹಾಳುಮಾಡು.

ಚಪ್ಪರ (ನಾ). ೧. ಚಾವಣಿ; ಮೇಲ್ಕಟ್ಟು; ವಿತಾನ. ೨. ಬಳ್ಳಿ ಹಬ್ಬುವುದಕ್ಕಾಗಿ ಹಾಕಿದ ಚೌಕಟ್ಟು; ಕಾವಣ. ೩. ಹಂದರ; ಶಾಮಿಯಾನ; ಪಂದಲು. ೪. ಗುಡಿಸಿಲು. ~ಬದನೆ = ಟೊಮಾಟೊ; ತಕ್ಕಾಳಿ.

ಚಪ್ಪರಣೆ (ನಾ). ೧. ತಿನ್ನುವಾಗ ತುಟಿಗಳಿಂದ ಮಾಡುವ ಶಬ್ದ. ೨. ಹೂಡಿದ ಕುದುರೆ, ಎತ್ತು ಮುಂತಾದುವುಗಳನ್ನು ವೇಗಗೊಳಿಸಲು ಸಾರಥಿಗಳು ಮಾಡುವ ಶಬ್ದ. ೩. ಹಕ್ಕಿಗಳ ಕೂಗು. ೪. ಹುರಿದುಂಬಿಸುವಿಕೆ. ೫. ಗದರಿಸುವಿಕೆ; ಜಂಕಣೆ.

ಚಪ್ಪರಿಸು (ಕ್ರಿ). ೧. ತಿನ್ನುವಾಗ ನಾಲಗೆಯಿಂದ ಅಥವಾ ತುಟಿಗಳಿಂದ ಚಪ್ಪೆಂದು ಸದ್ದು ಮಾಡು. ೨. ಧ್ವನಿಮಾಡು; ಕೂಗು. ೩. ಅಪ್ಪಳಿಸು; ಹೊಡೆ. ೪. ಮೈದಡವು; ಸವರು. ೫. ಗದರಿಸು; ಜಂಕಿಸು. ೬. ಕಡೆಗಣಿಸು; ಅಲಕ್ಷಿಸು. ೭. ಆಕ್ರಮಿಸು; ಆವರಿಸು. ೮. ಹೀಯಾಳಿಸು; ಹಂಗಿಸು.

ಚಪ್ಪಲಿ (ನಾ). ಮೆಟ್ಟು; ಕೆರ; ಎಕ್ಕಡ.

ಚಪ್ಪಳೆ (ನಾ). ಕೈತಟ್ಟುವಿಕೆ; ಕರತಾಡನ.

ಚಪ್ಪಾಳೆ = ಚಪ್ಪಳೆ.

ಚಪ್ಪು (ಕ್ರಿ). ಅಗಿದು ತಿನ್ನು; ಜಗಿದು ತಿನ್ನು. ~ಇಱು(ರಿ) = ಚಪ್ಪರಿಸಿಕೊಂಡು ತಿನ್ನು; ಆಸ್ವಾದಿಸು.

ಚಪ್ಪೆ (ನಾ). ೧. ತೊಡೆಯ ಹೊರಭಾಗ. ೨. ಚಪ್ಪಟೆಯಾದುದು. ೩. ಅಚ್ಚು; ಮುದ್ರೆ; ಛಾಪು. ~ರೋಗ = ದನಕರುಗಳಿಗೆ ಬರುವ ಒಂದು ರೋಗ.

ಚಪ್ಪೋಡು (ನಾ). ೧. ತಾಮ್ರಶಾಸನ. ೨. ಸ್ವತ್ತು; ಸೊಮ್ಮು; ಆಸ್ತಿ.

ಚಪ್ರಾಸಿ (ನಾ). ಬಿಲ್ಲೆ ಧರಿಸಿದ ಆಳು, —ಜವಾನ.

ಚಬಕ (ನಾ). ಚಾವಟಿ; ಚಡಿ.

ಚಬುಕು ೧. = ಚಬಕ. ೨. ಚುರುಕು; ಚಪಲತೆ.

ಚಮಕಾಯಿಸು (ಕ್ರಿ). ೧. ಹೊಳೆ; ಪ್ರಕಾಶಿಸು. ೨. ಕುಕ್ಕು; ಕೋರೈಸು. ೩. ಚಾವಟಿಯಿಂದ ಬಡಿದು ಚುರುಕುಗೊಳಿಸು.

ಚಮಕಿ (ನಾ). ಬೇಗಡೆ; ಗುನ್ನಾಂಪಟ್ಟಿ.

ಚಮಕಿತ (ನಾ). ೧. ವಿಸ್ಮಿತನಾದವನು. (ಗು). ೨. ವಿಸ್ಮಯಗೊಂಡ; ಚಕಿತನಾದ.

ಚಮಕು (ನಾ). ೧. ಹೊಳಪು. ೨. ಥಳಕು. ೩. ಚುರುಕು; ಚೂಟಿ.

ಚಮಚ (ನಾ). ಚಿಕ್ಕ ಸವುಟಿನಾಕಾರದ ಸಾಧನ; ಉದ್ಧರಣೆ.

ಚಮಚೆ = ಚಮಚ.

ಚಮಟ (ನಾ). ತೊಗಲು; ಚರ್ಮ.

ಚಮಡ = ಚಮಟ.

ಚಮತ್ಕರಿಸು (ಕ್ರಿ). ೧. ಸೋಜಿಗವನ್ನುಂಟುಮಾಡು; ಆಶ್ಚರ್ಯಗೊಳಿಸು. ೨. ಅತಿಶಯಿಸು.

ಚಮತ್ಕಾರ (ನಾ). ೧. ಸೋಜಿಗ; ವಿಸ್ಮಯ. ೨. ಚಾತುರ್ಯ; ಕೌಶಲ.

**ಚಮತ್ಕೃತಿ** ೧. = ಚಮತ್ಕಾರ. ೨. ಆನಂದ; ಆಹ್ಲಾದ.

**ಚಮರ** (ನಾ). ೧. ಬಾಲದಲ್ಲಿ ಉದ್ದವಾದ ಕೂದಲುಳ್ಳ ಒಂದು ಮೃಗ. ೨. ಚಮರ ಮೃಗದ ಬಾಲದ ಕೂದಲಿನಿಂದ ತಯಾರಿಸಿದ ಕುಂಚ, –ಚಾಮರ.

**ಚಮರಿ** (ನಾ). ೧. ಹೆಣ್ಣು ಚಮರ ಮೃಗ. ೨. ಚಮರಮೃಗದ ಬಾಲದ ಕೂದಲು. ೩. ಚಾಮರ.

**ಚಮಸ** (ನಾ). ಯಾಗಾದಿಗಳಲ್ಲಿ ಸೋಮರಸ ವನ್ನು ಕುಡಿಯುವುದಕ್ಕಾಗಿ ಬಳಸುವ ಪಾತ್ರೆ.

**ಚಮು** (ನಾ). ಪಡೆ; ಸೈನ್ಯ.

**ಚಮೂಪ** (ನಾ). ಪಡೆವಳ; ಸೇನಾಧಿಪತಿ.

**ಚಮೂರ** (ನಾ). ಹುಲಿ; ವ್ಯಾಘ್ರ.

**ಚಮೂರು** (ನಾ). ಒಂದು ಜಾತಿಯ ಜಿಂಕೆ.

**ಚಮ್ಮಟ** (ನಾ). ಚರ್ಮದ ಹೊದಿಕೆಯುಳ್ಳ ಗುರಾಣಿ; ಖೇಟಕ.

**ಚಮ್ಮಟಿಕೆ** (ನಾ). ೧. ಚಾವಟಿ; ಬಾರು ಕೋಲು. ೨. ಸುತ್ತಿಗೆ.

**ಚಮ್ಮಟಿಗೆ** = ಚಮ್ಮಟಿಕೆ.

**ಚಮ್ಮಡ** = ಚಮಟ.

**ಚಮ್ಮಾರ** (ನಾ). ಚರ್ಮದ ಕೆಲಸ ಮಾಡು ವವನು; ಸಮಗಾರ.

**ಚಮ್ಮಾವುಗೆ** (ನಾ). ಚರ್ಮದ ಪಾದರಕ್ಷೆ; ಸಮ್ಮಾವುಗೆ.

**ಚಮ್ಮಾಳಿಗೆ** (ನಾ). ಚರ್ಮದ ಪಾದುಕೆ.

**ಚಯ್** (ನಾ). ಚೆಲ್ಲಾಟ; ವಿನೋದ.

**ಚಯ** (ನಾ). ಸಮೂಹ; ಗುಂಪು; ರಾಶಿ.

**ಚಯನ** (ನಾ). ೧. ಕೂಡಿಹಾಕುವಿಕೆ; ಒಟ್ಟು ಗೂಡಿಸುವಿಕೆ. ೨. ಸೌದೆಯನ್ನು ಒಟ್ಟುವಿಕೆ. ೩. ಯಾಗದಲ್ಲಿ ಅಗ್ನಿ ಮೊದಲಾದುವುಗಳ ಸಂಸ್ಕಾರ.

**ಚರ** (ನಾ). ೧. ಚಲಿಸುವವನು; ನಡೆಯುವವನು. ೨. ಜೀವಂತ ವಸ್ತು; ಪ್ರಾಣಿ. ೩. ಗೂಢಚಾರ; ಬೇಹುಗಾರ. (ಗು). ೪. ಚಲಿಸುವ; ನಡೆಯುವ. ೫. ಸ್ಥಳದಿಂದ ಸ್ಥಳಕ್ಕೆ ಸಾಗಿಸಬಹುದಾದ. **~ಅಚರ** = ೧. ಸ್ಥಾವರ ಹಾಗು ಜಂಗಮ ವಸ್ತುಗಳು. ೨. ಸ್ಥಾವರ ಹಾಗು ಜಂಗಮ ವಸ್ತುಗಳಿಂದ ಕೂಡಿದ ಜಗತ್ತು, –ಪ್ರಪಂಚ. ೩. ಚಲಿಸುವ ಮತ್ತು ಚಲಿಸದ. **~ಆಸ್ತಿ**=ಸ್ಥಳದಿಂದ ಸ್ಥಳಕ್ಕೆ ಸಾಗಿಸಬಹುದಾದ ಆಸ್ತಿ. **~ಇಸು** = ೧. ನಡೆ; ಸಂಚರಿಸು. ೨. ಅಲುಗು; ಅಲ್ಲಾಡು. ೩. ಪಾಲಿಸು; ಆಚರಿಸು. ೪. ಜೀವಿಸು; ಬಾಳು.

**ಚರಂಡಿ** (ನಾ). ಗಟಾರ; ಮೋರಿ.

**ಚರಕ** (ನಾ). ೧. ನೂಲುವ ರಾಟೆ. ೨. ಗಾಣ. ೩. ಚಕ್ರ; ಗಾಲಿ. ೪. ಅಲೆದಾಡುವವನು. ೫. ಬೇಹುಗಾರ; ಗೂಢಚಾರ.

**ಚರಕಿ** (ನಾ). ಲೋಹ, ದಂತ ಮೊದಲಾದುವುಗಳನ್ನು ತಕ್ಕ ಆಕಾರಕ್ಕೆ ಕಡೆಯುವ ಯಂತ್ರ; ಕಡೆತದ ಯಂತ್ರ.

**ಚರಟ** (ನಾ). ೧. ಗಸಿ; ಗಷ್ಟು. ೨. ಸಾರ ತೆಗೆದ ವಸ್ತು; ನಿಸ್ಸಾರವಾದುದು; ಹಿಪ್ಪೆ.

**ಚರಣ** (ನಾ). ೧. ನಡೆ; ಸಂಚಾರ. ೨. ಕಾಲು; ಪಾದ. ೩. ಪದ್ಯಗಳ ಸಾಲು, —ಪಂಕ್ತಿ. **~ಆಯುಧ** = ಕಾಲುಗಳನ್ನೇ ಆಯುಧವಾಗಿ ಉಳ್ಳುದು; ಹುಂಜ. **~ವಲ್ಮೀಕ** = ಆನೆಕಾಲು ರೋಗ.

**ಚರಣಿ** (ನಾ). ದನಕರುಗಳಿಗೆ ಮೇವು ಹಾಕುವ ಮರದ ತೊಟ್ಟಿ; ಗೋದಲೆ; ಗೊಂತು.

**ಚರಪು** (ನಾ). ೧. ಆತಿಥ್ಯ; ಸಮಾರಾಧನೆ. ೨. ದೇವರ ಪ್ರಸಾದ.

**ಚರಬಿ** (ನಾ). ಕೊಬ್ಬು; ನೆಣ.

**ಚರಮ** (ನಾ). ೧. ತರುವಾಯ; ಅನಂತರ. ೨. ಕೊನೆಯದು; ಅಂತ್ಯದಲ್ಲಿರುವುದು. (ಗು). ೩. ಕಡೆಯ; ಕೊನೆಯ. ೪. ತೀರ ಕೆಳಮಟ್ಟದ. ೫. ಪಶ್ಚಿಮ ದಿಕ್ಕಿನ.

~ಗೀತ = ೧. ಕೊನೆಯ ಹಾಡು. ೨. ಸತ್ತವರಿಗಾಗಿ ದುಃಖಿಸಿ ಅವರ ಗುಣಗಾನ ಮಾಡುವ ಹಾಡು. ~ಸಮಯ = ೧. ಅಂತ್ಯ ಸಮಯ; ಮರಣಪೂರ್ವ ಕಾಲ. ೨. ಕೊನೆಯ ಅವಕಾಶ.

ಚರವಿಗೆ (ನಾ). ಅಗಲವಾದ ಬಾಯುಳ್ಳ ಲೋಹದ ಪಾತ್ರೆ; ಚರಿಗೆ.

ಚರಾಯಿ (ನಾ). ೧. ಹುಲ್ಲುಗಾವಲು; ಗೋಮಾಳ. ೨. ಹುಲ್ಲುಗಾವಲಿನಲ್ಲಿ ದನಕರುಗಳನ್ನು ಮೇಯಿಸುವಿಕೆ.

ಚರಿ (ಕ್ರಿ). ೧. ನಾಶಮಾಡು. (ನಾ). ೨. ಆಚರಣೆ; ಚರ್ಯೆ. ೩. ನಾರಿನ ಅಥವಾ ಸೆಣಬಿನ ಹುರಿ. ೪. ಸೇವಕಿ. ೫. ಅಂಟು; ಸರಿ.

ಚರಿಗೆ (ನಾ). ೧. ಚೆಂಬು. ೨. ತಪ್ಪಲೆ. ೩. ಜೈನಯತಿಗಳು ಆಹಾರಕ್ಕಾಗಿ ಮಾಡುವ ಸಂಚಾರ. ೪. ಆಹಾರ ಸೇವನೆ; ಊಟ. ~ಕೊ(ಗೊ)ಡು = ಭಿಕ್ಷೆಗೆ ಹೊರಡು.

ಚರಿತ (ನಾ) ೧. ವೇಗ; ತ್ವರಿತ. ೨. ಗತಿ; ನಡಗೆ. ೩. ನಡೆದುದು; ಆಗಿಹೋದುದು. ೪. ನಡೆವಳಿಕೆ; ಆಚಾರ. ೫. ಇತಿಹಾಸ; ಚರಿತ್ರೆ. (ಗು). ೬. ನಡೆದ; ಗಮಿಸಿದ. ೭. ನೆರವೇರಿಸಿದ; ಸಾಧಿಸಿದ. ~ಅರ್ಥ = ೧. ಕಾರ್ಯಸಿದ್ಧಿ. ೨. ಕೃತಾರ್ಥ; ಧನ್ಯ. ೩. ಜೀವನ; ಬದುಕು. ೪. ಕ್ಷೇಮ; ಸೌಖ್ಯ. ೫. ಗುರಿಯನ್ನು ಸಾಧಿಸಿದ.

ಚರಿತೆ = ಚರಿತ್ರೆ.

ಚರಿತ್ರೆ (ನಾ). ೧. ನಡೆ; ನಡೆವಳಿ. ೨. ಇತಿಹಾಸ; ಜೀವನ ಕಥೆ.

ಚರು (ನಾ). ೧. ನೈವೇದ್ಯ; ಹವಿಸ್ಸು. ೨. ಹವಿಸ್ಸನ್ನು ಮಾಡುವ ಪಾತ್ರೆ.

ಚರುಕ = ಚರು.

ಚರುಗ (ನಾ). ೧. ಸುಗ್ಗಿಯಲ್ಲಿ ರೈತರು ಭೂಮಿಗೆ ಅರ್ಪಿಸುವ ನೈವೇದ್ಯ. ೨. ದೇವತೆಯ ಪ್ರೀತ್ಯರ್ಥವಾಗಿ ಕೊಡುವ ಬಲಿ.

ಚರೆ (ನಾ). ಬಂದೂಕಿನಿಂದ ಹಾರಿಸುವ ಸಿಡಿಮದ್ದು.

ಚರ್ಚನೆ (ನಾ). ೧. ಅಭ್ಯಾಸ; ವ್ಯಾಸಂಗ. ೨. ಗಂಧ ಮೊದಲಾದುವನ್ನು ಲೇಪಿಸಿಕೊಳ್ಳುವುದು; ಅನುಲೇಪನ.

ಚರ್ಚಾಕೂಟ (ನಾ). ೧. ಚರ್ಚೆ ನಡೆಯುವ ಸಭೆ. ೨. ಪರ ಹಾಗು ವಿರುದ್ಧ ಪಕ್ಷಗಳು ಒಂದು ವಿಷಯವನ್ನು ಕುರಿತು ವಾದ ಮಾಡುವ ಸಭೆ; ಚರ್ಚಾಗೋಷ್ಠಿ.

ಚರ್ಚಾಸ್ಪದ (ಗು). ವಾದವಿವಾದಗಳಿಗೆ ಅವಕಾಶವಿರುವ.

ಚರ್ಚು (ಕ್ರಿ). ೧. ಮಗುವನ್ನು ಕಂಕುಳಲ್ಲಿ ಎತ್ತಿಕೊಳ್ಳು. (ನಾ). ೨. ಕ್ರಿಶ್ಚಿಯನ್ನರ ದೇವಾಲಯ.

ಚರ್ಚೆ (ನಾ). ೧. ಗಂಧ ಮೊದಲಾದ ಸುಗಂಧ ದ್ರವ್ಯಗಳ ಅನುಲೇಪನ. ೨. ಚಿಂತನೆ; ಪರ್ಯಾಲೋಚನೆ. ೩. ದುರ್ಗೆ; ಚಾಮುಂಡಿ. ೪. ಕಾರಣ ಸಹಿತ ವಿಮರ್ಶಿಸುವುದು. ೫. ವಿವಾದ; ವಾಗ್ವಾದ. ೬. ಸಂತೋಷ. ೭ ಸುರತ; ರತಿಕ್ರೀಡೆ. ೮. ಮಾತು; ಉಕ್ತಿ. ~ಇಸು = ಚರ್ಚೆಮಾಡು.

ಚರ್ದಿ (ನಾ). ಓಕರಿಕೆ; ವಾಂತಿ. ~ಇಸು = ವಾಂತಿ ಮಾಡು; ಕಾರಿಕೊಳ್ಳು.

ಚರ್ಬಿ = ಚರಬಿ.

ಚರ್ಮ (ನಾ). ೧. ತೊಗಲು; ತ್ವಕ್ಕು. ೨. ಗುರಾಣಿ; ಢಾಲು. ~ಚಕ್ಷು = ಹೊರಗಣ್ಣು; ಹೊರದೃಷ್ಟಿ. ~ವಾದ್ಯ = ತೊಗಲಿನಿಂದ ಮಾಡಿದ ನಗಾರಿ, ಹರೆ ಮುಂತಾದ ವಾದ್ಯ.

ಚರ್ಮಕಾರ = ಚಮ್ಮಾರ.

ಚರ್ಮಣ (ನಾ). ಕೇಳಿದ ಕೂಡಲೇ ಉತ್ತರ ಕೊಡಬಲ್ಲವನು; ವಾಗ್ಮಿ.

ಚರ್ಮಿ (ನಾ). ೧. ಗುರಾಣಿಯನ್ನು ಹಿಡಿದುಕೊಂಡ ಯೋಧ. ೨. ಹರಿಗೆ; ಗುರಾಣಿ. (ಗು). ೩. ಗುರಾಣಿಯನ್ನು ಹಿಡಿದುಕೊಂಡ.

ಚರ್ಯೆ (ನಾ). ೧. ನಡತೆ; ನಡೆವಳಿ. ೨. ಆಚರಣೆ; ಅನುಷ್ಠಾನ. ೩. ರೀತಿ; ಮಾರ್ಗ.

ಚರ್ವಣ (ನಾ). ೧. ಅಗಿದು ತಿನ್ನುವುದು; ಮೆಲುಕಾಡಿಸುವುದು; ಜಗಿಯುವಿಕೆ. ೨. ಆಸ್ವಾದನೆ; ಸವಿ. ೩. = ಚರ್ಮಣ.

ಚರ್ವಿತ (ಗು). ೧. ತಿನ್ನಲ್ಪಟ್ಟ; ಉಂಡ. ೨. ಅಗಿದು ನುರಿಸಿದ. ~ಚರ್ವಣ = ೧. ತಿಂದುದನ್ನೇ ಮತ್ತೆ ತಿನ್ನುವುದು. ೨. ಬೇಸರಗೊಳಿಸುವ ಪುನರುಕ್ತಿ.

ಚರ್ವು (ಕ್ರಿ). ತಿರುಹು; ಹುರಿಮಾಡು.

ಚಲ (ನಾ). ೧. ಸ್ಥಿರಸಂಕಲ್ಪ; ದೃಢತೆ; ಛಲ. ೨. ಮೊಂಡುತನ; ಹಟಮಾರಿತನ. ೩. ಕ್ಷೋಭೆ; ಉದ್ವೇಗ. (ಗು). ೪. ಚಲಿಸುವ. ೫. ಅಲುಗುವ; ನಡುಗುವ. ೬. ಕದಡಿದ; ಕ್ಷುಬ್ಧವಾದ. ~ಚಿತ್ರ = ಚಲನಚಿತ್ರ; ಸಿನೇಮ. ~ದಲ(ಳ) = ಅಲುಗಾಡುತ್ತಲೇ ಇರುವ ಎಲೆಗಳನ್ನುಳ್ಳುದು; ಅರಳಿಮರ.

ಚಲಂಕು (ಕ್ರಿ). ೧. ಎರಚು; ಚಿಮುಕಿಸು. ೨. ಬಿಸಾಡು; ಒಗೆ.

ಚಲಕು ೧. = ಚಲಂಕು. ೨. ಕಲಕು; ಕದಡು.

ಚಲಚ್ಚಿತ್ರ = ಚಲಚಿತ್ರ.

ಚಲ(ಳ)ನ ೧. = ಚಲನೆ. ೨. ಚರಣ; ಪಾದ. ೩. ಗಾಳಿ. ~ವಲನ = ೧. ಗತಿ; ಸಂಚಾರ. ೨. ಚಟುವಟಿಕೆ; ಕ್ರಿಯೆ. ~ಸಂಭವ = ೧. ಆಂಜನೇಯ. ೨. ಭೀಮ.

ಚಲನೆ (ನಾ). ೧. ಅಲುಗಾಟ. ೨. ಗತಿ; ನಡೆ.

ಚಲಾಕು = ಚಾಲಾಕು.

ಚಲಾಯಿಸು (ಕ್ರಿ). ೧. ಬಳಸು; ಉಪಯೋಗಿಸು; ಅಮಲಿಗೆ ತರು. ೨. ಕೆಲಸ ಮಾಡಿಸು.

ಚಲಾವಣೆ (ನಾ). ೧. ವ್ಯವಹಾರದಲ್ಲಿರುವಿಕೆ; ಬಳಕೆ. ೨. ಸಾಗಾಟ; ಸಾಗಾಣಿಕೆ.

ಚಲಿ (ನಾ). ೧. ಹಾದರಗಿತ್ತಿ; ವ್ಯಭಿಚಾರಿಣಿ. ೨. ಚಿಲ್ಲದ ಮರ ಮತ್ತು ಅದರ ಬೀಜ. ೩. ದೃಢಸಂಕಲ್ಪವುಳ್ಳವನು.

ಚಲಿ(ಳಿ)ತ (ಗು). ೧. ಹೆಜ್ಜೆಯಿಟ್ಟ; ನಡೆದು ಹೋದ. ೨. ಕದಡಿದ; ಕಲಕಿದ. ೩. ಚಂಚಲವಾದ; ಚಪಲವಾದ.

ಚಲಿಯಿಸು (ಕ್ರಿ). ೧. ಅಲುಗಾಡು; ಹೊಯ್ದಾಡು. ೨. ಕದಡಿಸು; ಕಲಕು.

ಚಲಿಸು (ಕ್ರಿ). ೧. ನಡೆ; ಓಡಾಡು. ೨. ಅಲುಗಾಡು; ಕಂಪಿಸು. ೩. ಕ್ಷೋಭೆಗೊಳ್ಳು.

ಚಲುವೆ (ನಾ). ೧. ಒಂದು ಜಾತಿಯ ಹಕ್ಕಿ. ೨. ಬಟ್ಟೆಗಳನ್ನು ಮಡಿ ಮಾಡುವಿಕೆ. ೩. =ಚೆಲ್ವೆ.

ಚಲ್ಲ ೧. = ಚೆಲ್ಲ. ೨. ಒಂದು ಜಾತಿಯ ಮರ. ~ಕಾ(ಗಾ)ಯ್ = ಚಳ್ಳೆ.

ಚಲ್ಲಣ (ನಾ). ಚಡ್ಡಿ.

ಚಲ್ಲಪಿಲ್ಲಿ (ನಾ). ಅಸ್ತವ್ಯಸ್ತವಾಗಿರುವಿಕೆ; ಚೆದರಿಹೋಗಿರುವುದು; ಚೆಲ್ಲಾಪಿಲ್ಲಿ.

ಚಲ್ಲವತ್ತ (ನಾ). ಸವಿಮಾತುಗಳಿಂದ ಮರುಳು ಮಾಡಿ, ದ್ರೋಹ ಬಗೆಯುವವನು; ವಂಚಕ.

ಚಲ್ಲವೊತ್ತ = ಚಲ್ಲವತ್ತ.

ಚಲ್ಲಿ (ನಾ). ೧. ಚೂರು; ತುಣುಕು. ೨. ಕನ್ನಡಿ; ದರ್ಪಣ.

ಚಲ್ಲು (ಕ್ರಿ). ೧. ಪಸರಿಸು; ಹರಡು. ೨. ಚೆದರಿಹೋಗು; ದಿಕ್ಕಾಪಾಲಾಗು. ೩. ಚಿಮುಕಿಸು; ತಳಿ. ೪. ಬಿಸುಡು; ಎಸೆ. ೫. ಇಡು; ಮಡಗು. ೬. ಸೂಸು; ಚಿಮ್ಮು. (ನಾ). ೭. ಗಾಂಭೀರ್ಯವಿಲ್ಲದಿರುವಿಕೆ; ಹಗುರಸ್ವಭಾವ.

ಚವ (ನಾ). ೧. ರುಚಿ. ೨. ಮುತ್ತುರತ್ನಗಳ ತೂಕದಲ್ಲಿ ಒಂದು ಪ್ರಮಾಣ.

**ಚವಂಗ** (ನಾ). ಒಂದು ಬಗೆಯ ಆಟ; ಚೌಕಾಬಾರದ ಆಟ; ಚಕ್ಕದ ಆಟ.

**ಚವಡಿಕೆ** (ನಾ). ಒಂದು ಬಗೆಯ ಚರ್ಮ ವಾದ್ಯ; ಚೌಡಿಕೆ.

**ಚವರ** (ನಾ). ಕುಂಚ; ಚಾಮರ.

**ಚವರಿ** (ನಾ). ೧. ಚಮರೀಮೃಗದ ಕೂದಲು. ೨. = ಚವರ. ೩. ಹೆಂಗಸರು ಜಡೆಯೊಂದಿಗೆ ಹಾಕಿಕೊಳ್ಳುವ ಕೂದಲಿನ ಕುಚ್ಚು; ಚೌರಿ. ~ಮಿಗ = ಹೆಣ್ಣು ಚಮರ ಮೃಗ.

**ಚವರಿಗೆ** (ನಾ). ಬಿಂದಿಗೆ; ಕೊಡ.

**ಚವಲ** ೧. = ಚವರ. ೨. ಚಾಮರ ಬೀಸುವ ಸೇವಕ. ೩. ಹುಟ್ಟುಕೂದಲನ್ನು ತೆಗೆಸುವುದು; ಜಾವಳ. ೪. ಎರಡಾಣೆ ಬೆಲೆಯ ಒಂದು ಬೆಳ್ಳಿಯ ನಾಣ್ಯ.

**ಚವಲಂಬ** (ನಾ). ರೆಪ್ಪೆ; ಎವೆ.

**ಚವಳಿ** (ನಾ). ಒಂದು ಬಗೆಯ ತರಕಾರಿ; ಗೋರಿಕಾಯಿ.

**ಚವಿ** (ನಾ). ಹೊಳಪು; ಕಾಂತಿ.

**ಚವು** = ಚೌ. ~ಬ(ವ)ಟ್ಟೆ = ೧. ನಾಲ್ಕು ಹಾದಿಗಳು. ೨. ನಾಲ್ಕು ಹಾದಿಗಳು ಕೂಡುವ ಸ್ಥಳ; ಚೌಕ.

**ಚವುಕ** (ನಾ). ೧. ಮಂಗಳಕಾರ್ಯಗಳಲ್ಲಿ ಅಕ್ಕಿ ಮೊದಲಾದುವುಗಳಿಂದ ಹಾಕುವ ಹಸೆ. ೨. ನಾಲ್ಕು ಮೂಲೆಗಳುಳ್ಳುದು; ಚೌಕಾಕಾರವಾದುದು. ೩. ಅಗ್ಗವಾದುದು. (ಗು). ೪. ಅಗ್ಗವಾದ.

**ಚಷಕ** (ನಾ). ಮದ್ಯವನ್ನು ಕುಡಿಯುವ ಬಟ್ಟಲು; ಪಾನಪಾತ್ರೆ.

**ಚಷಾಲ** (ನಾ). ಯಜ್ಞಶಾಲೆಯಲ್ಲಿ ಯೂಪ ಸ್ತಂಭದ ತುದಿಗೆ ಸೇರಿಸಿದ ಮರದ ಬಳೆ.

**ಚಸ್ಕ** (ನಾ). ಲಪಟಾಯಿಸುವುದು.

**ಚಸ್ಟ** (ನಾ). ಕನ್ನಡಕ; ಚಾಳೀಸು.

**ಚಹ** (ನಾ). ತೇಯೆಲೆ; ಟೀಸೊಪ್ಪು ಮತ್ತು ಅದರಿಂದ ಮಾಡಿದ ಪಾನೀಯ.

**ಚಹಡ** ೧. = ಚಹಡಿ. ೨. ಚಾಡಿಕೋರ.

**ಚಹಡಿ** (ನಾ). ಚಾಡಿ; ಪಿಸುಣು; ಕೊಂಡೆಯ.

**ಚಹರೆ** (ನಾ). ಚರ್ಯೆ; ಲಕ್ಷಣ.

**ಚಳ** ೧. = ಚಲ. ೨. ಬೆಲ್ಲ; ಗುಡ.

**ಚಳಕ** (ನಾ). ೧. ವೇಗ; ಚಪಲತೆ. ೨. ಜಾಣ್ಮೆ; ಚಾತುರ್ಯ. ~ಇಗ = ಚಟುವಟಿಕೆಯುಳ್ಳವನು; ವೇಗಶಾಲಿ.

**ಚಳಕಿಗೆ** (ನಾ). ತೋಳಿಗೆ ಧರಿಸುವ ಒಂದು ಆಭರಣ; ತೋಳುಬಳೆ.

**ಚಳಕು** (ನಾ). ನರ, ಸ್ನಾಯು ಮುಂತಾದುವುಗಳು ಸೆಳೆದುಕೊಳ್ಳುವಿಕೆ; ವಾತದ ಹಿಡಿತ.

**ಚಳತುಂಬು** (ನಾ). ಓಲೆಯೊಂದಿಗೆ ಹಾಕಿಕೊಳ್ಳುವ ಒಂದು ಬಗೆಯ ಮುತ್ತಿನ ಆಭರಣ.

**ಚಳತೆ** (ನಾ). ೧. ಚಂಚಲತೆ; ಚಪಲತೆ. ೨. ಲಗುಬಗೆ; ತ್ವರೆ.

**ಚಳಬಳಿಕೆ** ೧. = ಚಳತೆ. ೨. ಗಾನದ ಇಂಪು, –ಮಾಧುರ್ಯ. ೩. ಅಬ್ಬರ.

**ಚಳಯ** ೧. = ಚಳೆಯ. ೨. ಲಗುಬಗೆ; ತ್ವರೆ. ೩. ಚಲನ; ಗತಿ.

**ಚಳವಳ** (ನಾ). ಸಾಮೂಹಿಕ ಕ್ಷೋಭೆ; ಆಂದೋಲನ.

**ಚಳಿ** (ಕ್ರಿ). ೧. ಪ್ರಭಾವ ಕಡಮೆಯಾಗು; ಕುಗ್ಗು; ಸೆಡೆ. ೨. ಸೋಲು; ಬಳಲು. ೩. ಲಕ್ಷ್ಯವಿಡು; ಗಮನವಿಡು. ೪. ತಣ್ಣಗಾಗು. ೫. ಹುಳಿಯಿಂದ ಹಲ್ಲು ಜುಮ್ಮೆನ್ನು. (ನಾ). ೬. ತಂಪು; ಶೀತ. ೭. ಮಂಜು; ಹಿಮ. ೮. ನಡುಕ; ಕಂಪನ. ~ಕ(ಗ)ದಿರ್ = ತಂಪಾದ ಕಿರಣ. ~ಕಾ(ಗಾ)ಲ = ಶೀತಕಾಲ; ಮಾಗಿ. ~ಗಿರಿ = ಹಿಮಾಲಯ ಪರ್ವತ. ~ಜ್ವರ = ಚಳಿಯೊಡನೆ ಬರುವ ಜ್ವರ; ಮಲೇರಿಯ. ~ಪೆ(ವೆ)ಱು(ರು) = ಶೀತದಿಂದ ಬಾಧೆಪಡು. ~ಬೆ(ವೆ)ಟ್ಟು = ಚಳಿಗಿರಿ.

ಚಳಿಗದಿರ (ನಾ). ತಂಪಾದ ಕಿರಣಗಳಿಂದ ಕೂಡಿದವನು ; ಚಂದ್ರ.

ಚಳಿಯಿಸು ೧. = ಚಲಿಯಿಸು. ೨. ಅಪ ಮಾರ್ಗಕ್ಕೆ ಹೋಗು ; ಹಾದಿತಪ್ಪು. ೩. ಸೋಲಿಸು.

ಚಳುಕು = ಚಳಕು.

ಚಳುವಳಿ = ಚಳವಳಿ.

ಚಳೆ (ಕ್ರಿ). ೧. ತುಂಬಿರು ; ಹೆಚ್ಚಾಗಿರು. (ನಾ). ೨. = ಚಳೆಯ. ~ಕೊ(ಗೊ)ಡು = ಸಿಂಪಡಿಸು ; ತಳಿಸು.

ಚಳೆಯ (ನಾ). ಸಿಂಪಡಿಸುವುದು ; ಚಿಮುಕಿಸುವುದು.

ಚಳ್ಳು (ನಾ). ತೆಳುವಾದ ಉದ್ದನೆಯ ಚೆತ್ತ ; ಸೆಳ್ಳು.

ಚಳ್ಳೆ (ನಾ). ಉಪ್ಪಿನಕಾಯಿಗೆ ಬಳಸುವ ಒಂದು ಬಗೆಯ ಹುಳಿಕಾಯಿ.

ಚಾ(ಂ)ಗು (ನಾ). ಕೊಂಡಾಟದ ಒಂದು ನುಡಿ.

ಚಾಂಚಲ್ಯ (ನಾ). ಚಂಚಲತೆ; ಅಸ್ಥಿರತೆ.

ಚಾಂಡಾಲ(ಳ) (ನಾ). ಬ್ರಾಹ್ಮಣಸ್ತ್ರೀಯಲ್ಲಿ ಶೂದ್ರನಿಂದ ಹುಟ್ಟಿದವನು ; ಚಂಡಾಲ. ~ಇಸು = ಚಂಡಾಲನಂತೆ ವರ್ತಿಸು.

ಚಾಂದಣಿ (ನಾ). ಮೇಲ್ಕಟ್ಟು ; ವಿತಾನ.

ಚಾಂದಸ (ನಾ). ೧. ವೇದಾಧ್ಯಯನ ಮಾಡಿದವನು ; ವೈದಿಕ. ೨. ಆಲಸ್ಯ ; ಜಡತೆ. ~ಇಕೆ = ಆಲಸ್ಯ ; ಜಡತ್ವ.

ಚಾಂದ್ರಮಾನ (ನಾ). ಚಂದ್ರನ ಗತಿಯನ್ನು ಅನುಸರಿಸಿ ದಿನ ಮತ್ತು ಮಾಸಗಳನ್ನು ಲೆಕ್ಕಮಾಡುವ ಕ್ರಮ.

ಚಾಂದ್ರಾಯಣ (ನಾ). ಚಂದ್ರನ ವೃದ್ಧಿ, ಕ್ಷಯಗಳಿಗನುಸಾರವಾಗಿ ಅಹಾರವನ್ನು ಸ್ವೀಕರಿಸುವ ಒಂದು ವ್ರತ.

ಚಾಂಪೇಯ (ನಾ). ೧. ಸಂಪಗೆ ; ಚಂಪಕ. ೨. ನಾಗಕೇಸರ. ೩. ಕರ್ಣ ; ರಾಧೇಯ. ೪. ಬಂಗಾರ ; ಚಿನ್ನ.

ಚಾಕ (ನಾ). ೧. ಚೊಕ್ಕತನವುಳ್ಳವನು. (ಗು). ೨. ಅಚ್ಚುಕಟ್ಟಾದ ; ಚೊಕ್ಕ.

ಚಾಕಚಕ್ಯ (ನಾ). ೧. ಜಾಣ್ಮೆ ; ಚಾತುರ್ಯ. ೨. ಲಗುಬಗೆ ; ಚಟುವಟಿಕೆ.

ಚಾಕರ (ನಾ). ಆಳು ; ಸೇವಕ.

ಚಾಕರಿ (ನಾ). ೧. ಜೀತ ; ಊಳಿಗ ; ಸೇವೆ. ೨. ಸಂಬಳದ ಕೆಲಸ ; ನೌಕರಿ.

ಚಾಕು (ನಾ). (ಕತ್ತರಿಸಲು ಉಪಯೋಗಿಸುವ) ಸಣ್ಣ ಚೂರಿ.

ಚಾಕ್ಷುಷ (ನಾ). ೧. ಹದಿನಾಲ್ಕು ಮನುಗಳಲ್ಲಿ ಒಬ್ಬ. ೨. ಕಣ್ಣಿಗೆ ಕಾಣುವಂತಹುದು. (ಗು). ೩. ಕಣ್ಣಿಗೆ ಸಂಬಂಧಪಟ್ಟ.

ಚಾಗ (ನಾ). ೧. ತ್ಯಾಗ ; ದಾನ. ೨. ಹಸಿರು ಬಣ್ಣ ; ಮರಕತ ವರ್ಣ. ~ಇ(ವಿ)ಕ್ಕು = ೧. ದಾನಮಾಡು ; ತ್ಯಾಗಮಾಡು. ೨. ಹೊರಹೊಮ್ಮಿಸು ; ಹೊರಚೆಲ್ಲು. ~(ಂ)ಗೆಯ್ = ದಾನಮಾಡು.

ಚಾಗಿ (ನಾ). ದಾನಿ ; ತ್ಯಾಗಿ ; ಕೊಡುಗೈಯವನು.

ಚಾಚಾ (ನಾ). ಚಿಕ್ಕಪ್ಪ ; ತಂದೆಯ ತಮ್ಮ.

ಚಾಚು (ಕ್ರಿ). ೧. ಮುಂದೆ ನಡೆ, –ಸಾಗು. ೨. ಮುಂದೆ ಒಡ್ಡು, –ನೀಡು. ೩. ಹೆಚ್ಚಾಗಿ ಒದಗಿಸು. (ನಾ). ೪. ವಿಸ್ತಾರ ; ವ್ಯಾಪ್ತಿ. ~ಅರೆ = ಮುಂದಕ್ಕೆ ಚಾಚಿಕೊಂಡಿರುವ ಬಂಡೆ.

ಚಾಚೂ (ನಾ). ೧. ಮಾತಿನಲ್ಲಿಯ ಪ್ರತಿಯೊಂದು ಅಕ್ಷರ, –ವಿವರ. ೨. ತುಸು ; ಅಲ್ಪ. ~ತಪ್ಪದೆ = ಸ್ವಲ್ಪವೂ ನ್ಯೂನತೆಯಿಲ್ಲದೆ.

ಚಾಟಕ (ನಾ). ೧. ಗಾರುಡಿ ವಿದ್ಯೆ ; ಕಣ್ಣು ಕಟ್ಟು ವಿದ್ಯೆ. ೨. ವಂಚಕ ; ಮೋಸಗಾರ.

ಚಾಟಿ (ನಾ). ೧. ಹುರಿ ಅಥವಾ ಚರ್ಮವನ್ನು ಕಟ್ಟಿ ಮಾಡಿದ ಸಾಧನ ; ಬಾರುಕೋಲು. ೨. ಬುಗುರಿಯ ಹುರಿ, –ದಾರ.

**ಚಾಟಿಸು** (ಕ್ರಿ). ೧. ಚಾವಟಿಯಿಂದ ಹೊಡೆ. ೨. ಸಾರು; ಪ್ರಕಟಿಸು.

**ಚಾಟು** (ನಾ). ೧. ರಕ್ಷಣೆಗಾಗಿ ಮಾಡಿದ ಮರೆ, –ತಡಿಕೆ. ೨. ಸಮ; ಸರಿ. ೩. ಹೊಗಳಿಕೆ; ಮುಖಸ್ತುತಿ. ೪. ಸಂತೋಷಕರವಾದ ಮಾತು; ಪ್ರಿಯವಚನ. ೫. ಲಘುವಾದುದು; ಹಗುರವಾದುದು. (ಗು). ೬. ಸಂತೋಷಕರವಾದ. ೭. ಚಮತ್ಕಾರವಾದ; ಚಾತುರ್ಯದ. **~ಆಗು** = ಆಶ್ರಯವಾಗು; ರಕ್ಷಣೆ ನೀಡು. **~ಕಾಱ(ರ)** = ೧. ಪ್ರಿಯವಾದ ಮಾತುಗಳನ್ನಾಡುವವನು. ೨. ಮುಖಸ್ತುತಿ ಮಾಡುವವನು. **~ಪದ್ಯ** = ಮನೋಹರವಾದ ಪದ್ಯ.

**ಚಾಟುಕಾರ** (ನಾ). ೧. ಹಿತವಚನ; ಪ್ರಿಯವಾದ ಮಾತು. ೨. ಪ್ರೀತಿ; ವಿಶ್ವಾಸ.

**ಚಾಟುಲ** = ಚಟುಲ.

**ಚಾಡಿ** = ಚಹಡಿ. **~ಕೋರ** = ಚಾಡಿ ಹೇಳುವವನು; ಪಿಸುಣ. **~ಮಾ(ವಾ)ತು** = ಇಲ್ಲದ ದೂಷಣೆಯನ್ನು ಆರೋಪಿಸುವ ಮಾತು.

**ಚಾಣ** (ನಾ). ಉಕ್ಕಿನ ಸಣ್ಣ ಉಳಿ; ಟಂಕ.

**ಚಾಣಕ್ಕಿ** = ಚಾಳಾಂಕಿ.

**ಚಾಣಾಕ್ಷ** (ನಾ). ಸೂಕ್ಷ್ಮದೃಷ್ಟಿಯುಳ್ಳವನು; ಕುಶಲಮತಿ.

**ಚಾತಕ** (ನಾ). ಮಳೆಹನಿಯನ್ನು ಕುಡಿದು ಜೀವಧಾರಣೆ ಮಾಡುವುದೆಂದು ನಂಬಲಾದ ಹಕ್ಕಿ; ಚಾದಗೆ.

**ಚಾತುರ** (ನಾ). ೧. ಜಾಣತನ; ಚಾತುರ್ಯ. ೨. ಹೊಗಳುವಿಕೆ. (ಗು). ೩. ಚಾತುರ್ಯದ; ಜಾಣತನದ. ೪. ಸುಂದರವಾದ.

**ಚಾತುರಂಗ** (ನಾ). ೧. ಚತುರಂಗ ಬಲ. ೨. ಒಂದು ಬಗೆಯ ರತ್ನ.

**ಚಾತುರಿಯ** (ನಾ). ೧. ಜಾಣತನ; ಚಾತುರ್ಯ. ೨. ಚತುರ; ಜಾಣ.

**ಚಾತುರ್ದಂತ** (ನಾ). ೧. ನಾಲ್ಕು ದಂತವುಳ್ಳುದು; ಐರಾವತ. ೨. ಆನೆ.

**ಚಾತುರ್ಮಾಸ** (ನಾ). ೧. ನಾಲ್ಕು ತಿಂಗಳು. ೨. ನಾಲ್ಕು ತಿಂಗಳು ನಡಸುವ ವ್ರತ, –ನಿಯಮ.

**ಚಾತುರ್ಮಾಸ್ಯ** (ನಾ). ಮಳೆಗಾಲದ ನಾಲ್ಕು ತಿಂಗಳು ಮುನಿಗಳು ಒಂದೆಡೆ ಕುಳಿತು ನಡಸುವ ವ್ರತ.

**ಚಾತುರ್ಯ** (ನಾ). ೧. ಜಾಣತನ; ಕೌಶಲ. ೨. ಮನೋಹರವಾದುದು; ಆಹ್ಲಾದಕರವಾದುದು.

**ಚಾತುರ್ವರ್ಗ** (ನಾ). ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳು.

**ಚಾತುರ್ವರ್ಣ** (ನಾ). ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಎಂಬ ನಾಲ್ಕು ವರ್ಣಗಳು.

**ಚಾತುರ್ವರ್ಣ್ಯ** (ನಾ). ಚತುರ್ವರ್ಣಗಳು.

**ಚಾದಗೆ** = ಚಾತಕ.

**ಚಾದರ** (ನಾ). ೧. ರೇಷ್ಮೆಯ ಜರತಾರಿಯಿಂದ ಅಲಂಕೃತವಾದ ಪಂಚೆ, ಶಾಲು ಮೊದಲಾದುವು. ೨. = ಚಾದರು.

**ಚಾದರು** (ನಾ). ಹತ್ತಿಯ ಅಥವಾ ರೇಷ್ಮೆಯ ದಪ್ಪ ಹೊದಿಕೆ.

**ಚಾಪ** (ನಾ). ೧. ಬಿಲ್ಲು; ಧನುಸ್ಸು. ೨. ಕಾಮನ ಬಿಲ್ಲು. ೩. ಧನೂರಾಶಿ. ೪. ಮುದ್ರೆ; ಅಚ್ಚಿನ ಮೊಳೆ. ೫. ಬಂದೂಕಿನ ಕುದುರೆ. **~ಖಾನೆ** = ಮುದ್ರಣಾಲಯ; ಅಚ್ಚುಕೂಟ. **~ಚಾಪಲ(ಳ)** = ವೇಗವಾಗಿ ಬಾಣ ಬಿಡುವವನು.

**ಚಾಪಕ** (ನಾ). ಚಪ್ಪಟೆಯಾಗಿರುವ ರತ್ನ.

**ಚಾಪಟೆಯ** (ನಾ). ಚಂಚಲತೆ; ಚಪಲತೆ.

**ಚಾಪಲ(ಳ)** (ನಾ). ೧. ಚಾಂಚಲ್ಯ; ಅಸ್ಥಿರತೆ. ೨. ಲವಲವಿಕೆ; ಚಟುವಟಿಕೆ. ೩. ಆತುರ;

ತೀವ್ರಗತಿ. ೪. ಉತ್ತೇಜನ. (ಗು). ೫. ಚಪಲವಾದ; ಚಂಚಲವಾದ.

**ಚಾಪಲ್ಯ** (ನಾ). ೧. ಚಪಲತೆ; ಚಾಂಚಲ್ಯ. ೨. ಚಟುವಟಿಕೆ; ಉತ್ಸಾಹ. ೩. ಗೀಳು; ಚಟ.

**ಚಾಪು** (ನಾ). ೧. ಹರವು; ವಿಸ್ತಾರ. ೨. ಆಟದಲ್ಲಿ ಉಪಯೋಗಿಸುವ ಸಣ್ಣ ಚಪ್ಪಟೆ ಕಲ್ಲು; ಬಚ್ಚ. ೩. ಹೊಲದಲ್ಲಿ ಕೊಯ್ದು ಚೆಲ್ಲಿದ ದಂಟಿನ ಸೂಡು. ೪. ಮೃದಂಗ ಅಥವಾ ತಬಲವನ್ನು ಬಾರಿಸುವ ಒಂದು ಗತ್ತು. ~ಹಾಕು = ತಬಲದ ಮೇಲೆ ವಿಶಿಷ್ಟವಾದ ಗತ್ತಿನಿಂದ ತಾಳ ಹಾಕು.

**ಚಾಪೆ** (ನಾ). ೧. ಮಂದಲಿಗೆ. ೨. ಬಂಟ್ಟೆ; ಹೆಡಗೆ.

**ಚಾಮರ** (ನಾ). ಚಮರೀ ಮೃಗದ ಕೂದಲುಗಳಿಂದ ಮಾಡಿದ ಬೀಸಣಿಕೆ; ಚಮರ.

**ಚಾಮೀಕರ** (ನಾ). ಚಿನ್ನ; ಹೊನ್ನು.

**ಚಾಯು** (ನಾ). ೧. ಬಣ್ಣ; ವರ್ಣ. ೨. ಸೊಗಸು; ಅಂದ. ೩. ನೆರಳು; ಛಾಯೆ.

**ಚಾರ** (ನಾ). ೧. ನಡಗೆ; ಗತಿ. ೨. ಗೂಢಚಾರ; ಬೇಹುಗಾರ. ೩. ಸುದ್ದಿಗಾರ; ವಾರ್ತಾವಾಹಕ. ೪. ಸೆರೆ; ಬಂಧನ. ೫. ನಿರ್ವಹಣೆ; ಆಚರಣೆ.

**ಚಾರಕ** (ನಾ). ದೂತ; ಚಾರ.

**ಚಾರಣ** (ನಾ). ೧. ತಿರುಗಾಡುವಿಕೆ; ಸುತ್ತಾಡುವಿಕೆ. ೨. ನಟ; ಅಭಿನಯಿಸುವವನು. ೩. ಸ್ತುತಿಪಾಠಕ. ೪. ಗಂಧರ್ವ; ದೇವಗಾಯಕ. ೫. ಧರ್ಮೋಪದೇಶ ಮಾಡುತ್ತ ಸಂಚರಿಸುವ ಜೈನಮುನಿ. ೬. ದ್ವಂದ್ವ ಯುದ್ಧದಲ್ಲಿ ಒಂದು ವರಸೆ. ~ಋಷಿ = ಚಾರಣ ಋದ್ಧಿಯನ್ನು ಪಡೆದ ಚಾರಣ ಯೋಗಿ. ~ಕವಿ = ಸ್ತುತಿಪಾಠಕನಾದ ಕವಿ.

**ಚಾರಪಾಯಿ** (ನಾ). ನೂಲು ಅಥವಾ ಬಟ್ಟೆಯ ಪಟ್ಟಿಯನ್ನು ಹೆಣೆದು ಮಾಡಿದ ಮಂಚ; ಹೊರಸು.

**ಚಾರಿ** (ನಾ). ೧. ಪಗಡೆಕಾಯಿ; ಲೆತ್ತದ ಕಾಯಿ. ೨. ಚಲಿಸುವುದು. ೩. ಗತಿ; ಗಮನ. ೪. ತಂತ್ರ; ಉಪಾಯ. ೫. ಅಗ್ಗದ ಬೆಲೆ; ಸುಲಭದ ಬೆಲೆ. ೬. ಗುರಿ; ಉದ್ದೇಶ.

**ಚಾರಿತ್ರ** (ನಾ). ನಡತೆ; ಶೀಲ; ನಡವಳಿಕೆ. ~(ಂ)ಕೆ(ಗೆ)ಡು = ನಡತೆಗೆಡು; ಶೀಲವನ್ನು ಕಳೆದುಕೊಳ್ಳು.

**ಚಾರಿತ್ರಿಕ** (ಗು). ಚರಿತ್ರೆಗೆ ಸಂಬಂಧಿಸಿದ; ಐತಿಹಾಸಿಕವಾದ.

**ಚಾರಿವರಿ** (ಕ್ರಿ). ೧. ಯುಕ್ತಿಯಿಂದ ಮುಂದೆ ನುಗ್ಗು, -ಸಾಗು. ೨. ಸುತ್ತುವರಿ; ಆವರಿಸು. ೩. = ಚಾಲುವರಿ.

**ಚಾರಿಸು** (ಕ್ರಿ). ೧. ಅರೆ; ರುಬ್ಬು. ೨. ಅರೆದು ಮಿಶ್ರಮಾಡು. ೩. ಚಾತುರ್ಯದಿಂದ ನಡಸು; ಜಾಣತನದಿಂದ ನೆರವೇರಿಸು.

**ಚಾರು** (ಗು). ೧. ಮನೋಹರವಾದ; ಚೆಲುವಾದ. ೨. ಉತ್ತಮವಾದ; ಶ್ರೇಷ್ಠವಾದ. ೩. ಇಷ್ಟವಾದ; ಪ್ರಿಯವಾದ. ~ಕರಣ = ಅಲಂಕರಿಸುವಿಕೆ; ಸಿಂಗರಿಸುವಿಕೆ.

**ಚಾರೆ** (ನಾ). ಹಲಸಿನ ಹಣ್ಣಿನಲ್ಲಿ ತೊಳೆ ತೆಗೆದ ಮೇಲೆ ಉಳಿಯುವ ಭಾಗ.

**ಚಾಱ(ರ)** (ನಾ). ಗೀಟು; ಗೆರೆ.

**ಚಾಱು(ರು)** (ನಾ). ಒಂದು ಬಗೆಯ ಮೇಲೋಗರ; ಸಾರು.

**ಚಾರ್ಚಿಕ್ಯ** (ನಾ). ೧. ಸುಗಂಧದ್ರವ್ಯವನ್ನು ಮೈಗೆ ಲೇಪಿಸಿಕೊಳ್ಳುವಿಕೆ. ೨. ಅಂಗರಾಗದ ಪುಡಿ; ಬುಕ್ಕೀಹಿಟ್ಟು; ಬುಕ್ಕಿಟ್ಟು.

**ಚಾರ್ವಾಕ** (ನಾ). ದೇವರ ಅಸ್ತಿತ್ವದಲ್ಲಿ ನಂಬಿಕೆ ಇಲ್ಲದವನು; ನಾಸ್ತಿಕ.

**ಚಾಲಕ** (ನಾ). ೧. ನಡಯಿಸುವವನು; ನಿರ್ವಾಹಕ. ೨. ಸಾರಥಿ; ಬಂಡಿಹೊಡೆಯುವ

ವವನು. ೩. ಚಲನಶಕ್ತಿಯನ್ನು ನೀಡುವ ಯಂತ್ರ. (ಗು). ೪. ನಡಸತಕ್ಕ ; ಚಲಿಸುವಂತೆ ಮಾಡುವ.

**ಚಾಲತಿ** (ನಾ). ೧. ಚಲಿಸುತ್ತಿರುವ ಸ್ಥಿತಿ; ರೂಢಿ. (ಗು). ೨. ಸದ್ಯ ನಡೆಯುತ್ತಿರುವ; ಬಳಕೆಯಲ್ಲಿರುವ.

**ಚಾಲ(ಳ)ನಿ** (ನಾ). ಸಾರಣಿಗೆ; ಜಂದರಿ; ಜರಡಿ.

**ಚಾಲನೆ** (ನಾ). ಪ್ರೇರಣೆ ; ಚಲನಶಕ್ತಿ.

**ಚಾಲಾಕು** (ಗು). ೧. ಚುರುಕಾದ ; ಚಟುವಟಿಕೆಯುಳ್ಳ. ೨. ಬುದ್ಧಿವಂತಿಕೆಯಿಂದ ಕೂಡಿದ ; ಚತುರ.

**ಚಾಲಿಸು** (ಕ್ರಿ). ೧. ಚಲಿಸುವಂತೆ ಮಾಡು ; ನಡಸು, ೨. ಅಲ್ಲಾಡಿಸು ; ಅಲುಗಿಸು. ೩. ಪಸರಿಸು ; ವಿಸ್ತರಿಸು.

**ಚಾಲು** (ನಾ). ೧. ಚಲಿಸುವುದು ; ಚಲನೆ. ೨. ಆರಂಭ ; ತೊಡಗುವಿಕೆ. ೩. ಸಂಪ್ರದಾಯ ; ಪದ್ಧತಿ. ೪. ನಡೆ ; ಗತಿ. ೫. ಚಲಾವಣೆ ; ಚಾಲ್ತಿ.

**ಚಾಲುವರಿ** (ಕ್ರಿ). ಬೇಡು ; ಅಂಗಲಾಚು.

**ಚಾಲ್ತಿ** = ಚಾಲತಿ.

**ಚಾವಟ** (ನಾ). ಬಾರುಕೋಲು ; ಚಾಟಿ.

**ಚಾವಟೆಯ** (ನಾ). ಮಲೆತವನು ; ಉದ್ಧಟ.

**ಚಾವಡಿ** (ನಾ). ೧. ಆಸ್ಥಾನ ; ಸಭಾಮಂಟಪ; ಓಲಗಶಾಲೆ. ೨. ಹಳ್ಳಿಯಲ್ಲಿ ಪಂಚಾಯತಿ ಸಭೆ ಸೇರುವ ಸ್ಥಳ; ಗ್ರಾಮಕಚೇರಿ. ೩. ಮನೆಯ ಮುಂದಿನ ಜಗಲಿ, –ಕಟ್ಟೆ. ೪. ಆಶ್ರಯಸ್ಥಾನ; ಬೀಡು. ೫. ಪೋಲೀಸು ಚೌಕಿ ; ಕೊತವಾಲನ ಕಚೇರಿ. ~ಕಾರ = ಪಂಚಾಯತಿ ಸಭೆಯ ಸದಸ್ಯ ; ಪಂಚ.

**ಚಾವಣಿ** (ನಾ). ೧. ದಂಡಿನ ತಾತ್ಪೂರ್ತಿಕ ಬಿಡಾರ ; ಸೇನಾಶಿಬಿರ. ೨. ಮನೆಯ ಮೇಲಿನ ಆವರಣ, –ಸೂರು. ೩. ನಿವಾಸಸ್ಥಾನ.

**ಚಾಪಲ(ಳ)** (ನಾ). ಚಾಪಲ್ಯ ; ಚಪಲತೆ. ~ಇಸು=೧. ಚಪಲತೆಯನ್ನುಂಟುಮಾಡು. ೨. ಅಲ್ಲಗಳೆ ; ಹೀಯಾಳಿಸು. ೩. ಧ್ವನಿ ಮಾಡು.

**ಚಾಪಿ** (ನಾ). ಬೀಗದ ಕೈ ; ಕೀಲಿಕೈ.

**ಚಾಷ** (ನಾ). ಒಂದು ಜಾತಿಯ ನೀಲವರ್ಣದ ಹಕ್ಕಿ ; ಶಕುನದ ಹಕ್ಕಿ.

**ಚಾಳ** (ನಾ). ೧. ಪೊಳ್ಳು; ಜಳ್ಳು. ೨. ಹಲವು ಮನೆಗಳನ್ನೊಳಗೊಂಡ ವಠಾರ.

**ಚಾಳಕ** (ನಾ). ೧. ಧೂರ್ತ ; ತಂತ್ರಗಾರ. ೨. ಮುಖಸ್ತುತಿ ಮಾಡುವವನು. ೩. ನಿರ್ವಾಹಕ. (ಗು). ೪. ಕುಟಿಲವಾದ.

**ಚಾಳವಿಸು** (ಕ್ರಿ). ಚಲಿಸುವಂತೆ ಮಾಡು ; ನಡೆಯಿಸು.

**ಚಾಳಾಂಕಿ** (ನಾ). ಒಂದು ಜಾತಿಯ ಪಕ್ಷಿ; ಸಾರಿಕೆ.

**ಚಾಳಿ** (ನಾ). ೧. ನಡತೆ ; ಆಚಾರ. ೨. ಚಟ ; ಗೀಳು. ೩. ರೀತಿ ; ಕ್ರಮ. ೪. ಕೆಟ್ಟಚಟ; ದುರಭ್ಯಾಸ. ೫. ಸಂಗ ; ಒಡನಾಟ.

**ಚಾಳಿಸು** (ಕ್ರಿ). ೧. ಸೋಲಿಸು. ೨. ಹೀಯಾಳಿಸು; ತಿರಸ್ಕರಿಸು. ೩. ಪೀಡಿಸು ; ಕಾಡು. ೪. ಒತ್ತಾಯಿಸು. ೫. ರಾಗಾಲಾಪನೆ ಮಾಡು. ೬. ಚಲಿಸುವಂತೆ ಮಾಡು ; ನಡೆಯಿಸು. ೭. ಅಲ್ಲಾಡಿಸು ; ಅಲುಗಿಸು. ೮. ಜರಡಿಹಿಡಿ ; ಸೋಸು. ೯. ಚಲಿಸು ; ಮುನ್ನುಗ್ಗು. ೧೦. ನೆಪಹೂಡು. ೧೧. ನಿವಾರಿಸು. ೧೨. ಬಿಡು ; ತ್ಯಜಿಸು. ೧೩. ನೂಕು ; ತಳ್ಳು.

**ಚಾಳೀಸು** (ನಾ). ೧. ನಲವತ್ತು. ೨. ನಲವತ್ತನೆಯ ವಯಸ್ಸಿನಲ್ಲಿ ಬರುವ ದೃಷ್ಟಿಮಾಂದ್ಯ. ೩. ಕನ್ನಡಕ ; ಸುಲೋಚನ.

**ಚಾಳು** = ಚಾಳ.

**ಚಾಳಿಯು** (ನಾ). ೧. ಕುಪ್ಪಳಿಸುತ್ತಾ ಸಾಗುವ ಒಂದು ರೀತಿಯ ಚಲನ ಕ್ರಮ. ೨. ಕುಸ್ತಿ

ಅಥವಾ ಕಾಳೆಗದಲ್ಲಿ ಶತ್ರುವನ್ನು ಹಿಡಿಯಲು ವೇಗವಾಗಿ ಸಂಚರಿಸುವ ಕ್ರಮ.

ಚಾಟ್(ಳ್) (ನಾ). ನವಗ್ರಹಗಳಲ್ಲಿ ಒಂದು; ರಾಹು.

ಚಿಂಕು (ನಾ). ಒಂದು ಬಗೆಯ ಆಭರಣ.

ಚಿಂಚ (ನಾ). ೧. ಮೈಮೇಲೆ ಚುಕ್ಕೆಗಳಿರುವ ಎತ್ತು. ೨. ಹುಣಿಸೆಮರ ಮತ್ತು ಅದರ ಹಣ್ಣು. ~ಪಟ್ಟಿ=ಒಂದು ಬಗೆಯ ಆಭರಣ; ಹುಣಿಸೆಎಲೆ ಆಕಾರದ ಪದಕದಿಂದ ಕೂಡಿದ ಸರ.

ಚಿಂತನ (ನಾ). ೧. ಯೋಚನೆ. ೨. ಧ್ಯಾನ.

ಚಿಂತನೆ = ಚಿಂತನ.

ಚಿಂತಾಕ (ನಾ). ಕೊರಳಲ್ಲಿ ಧರಿಸುವ ಒಂದು ಆಭರಣ; ಕೊರಳಪಟ್ಟಿ.

ಚಿಂತಾಕು ೧. = ಚಿಂತಾಕ. ೨. ಒಡ್ಯಾಣ; ನಡುಪಟ್ಟಿ.

ಚಿಂತಾಕ್ರಾಂತ (ನಾ). ೧. ಚಿಂತೆಯಿಂದ ಕೂಡಿದವನು. (ಗು). ೨. ಚಿಂತೆಗೊಳಗಾದ.

ಚಿಂತಾಮಣಿ (ನಾ). ಬಯಸಿದ್ದುದನ್ನು ಕೊಡಬಲ್ಲ ದೇವಲೋಕದ ದಿವ್ಯರತ್ನ.

ಚಿಂತಾಲು (ನಾ). ಒಂದು ಬಗೆಯ ತಕ್ಕಡಿ.

ಚಿಂತೆ (ನಾ) ೧. ಕಳವಳ; ಉಮ್ಮಳ. ೨. = ಚಿಂತನ. ~ಇಸು = ೧. ಯೋಚಿಸು; ಭಾವಿಸು. ೨. ತಲ್ಲಣಿಸು; ಆತಂಕಪಡು. ೩. ಮನನಮಾಡು. ೪. ಧ್ಯಾನಮಾಡು.

ಚಿಂದಿ (ನಾ). ೧. ಹರಕು ಬಟ್ಟೆ; ತುಂಡು ಅರಿವೆ. ೨. ತಲೆಗೆ ಕಟ್ಟಿಕೊಳ್ಳುವ ವಸ್ತ್ರ. ೩. ಸೊಂಟಪಟ್ಟಿ; ನಡುಕಟ್ಟು. ~ಉಡಾಯಿಸು = ಸ್ವಲ್ಪವೂ ಉಳಿಯದಂತೆ ಲಪಟಾಯಿಸು, —ಕೊಳ್ಳೆಹೊಡೆ.

ಚಿಂಪಿ (ನಾ). ಕಪ್ಪೆಚಿಪ್ಪು; ಸಿಂಪು.

ಚಿಂಪಿಗ (ನಾ). ಬಟ್ಟೆ ಹೊಲೆಯುವವನು; ದರ್ಜಿ; ಸಿಂಪಿಗ.

ಚಿಂಪೆ = ಚಿಂಪಿ.

ಚಿಃ (ನಾ). ಜುಗುಪ್ಸೆ, ತಿರಸ್ಕಾರ ಮೊದಲಾದುವುಗಳನ್ನು ಸೂಚಿಸುವ ಶಬ್ದ.

ಚಿಕಣಿ (ನಾ). ೧. ಚಿಕ್ಕದು; ಸಣ್ಣದು. (ಗು). ೨. ಗಟ್ಟಿಯಾದ. ೩. ಸಾರವತ್ತಾದ. ೪. ಉತ್ತಮವಾದ.

ಚಿಕಿತ್ಸಕ (ನಾ). ೧. ವೈದ್ಯ. ೨. ಆಳವಾಗಿ ಪರಿಶೀಲಿಸುವವನು.

ಚಿಕಿತ್ಸಾಲಯ (ನಾ). ಆಸ್ಪತ್ರೆ; ದವಾಖಾನೆ.

ಚಿಕಿತ್ಸೆ (ನಾ). ರೋಗಕ್ಕೆ ಮಾಡುವ ವೈದ್ಯೋಪಚಾರ.

ಚಿಕೀರ್ಷೆ (ನಾ). ಕೆಲಸ ಮಾಡುವ ಬಯಕೆ.

ಚಿಕುರ (ನಾ). ೧. ತಲೆಯ ಕೂದಲು. (ಗು). ೨. ದುಡುಕಿನ ಸ್ವಭಾವದ. ೩. ಯಾವುದಕ್ಕೂ ಹಿಂದೆಗೆಯದೆ ಇನ್ನೊಬ್ಬರಿಗೆ ತೊಂದರೆಯನ್ನುಂಟುಮಾಡುವ. ೪. ಚಂಚಲವಾದ.

ಚಿಕ್ಕ (ನಾ). ೧. ಎಳೆಯ ವಯಸ್ಸು; ಎಳೆಯತನ. ೨. ಬಲೆಯಂತೆ ಹೆಣೆದಿರುವ ಚೀಲ; ಕಲ್ಲಿಚೀಲ. (ಗು). ೩. ಸಣ್ಣ; ಕಿರಿಯ. ~ಅಪ್ಪ = ೧. ತಂದೆಯ ತಮ್ಮ; ಕಕ್ಕ. ೨. ತಾಯಿಯ ತಂಗಿಯ ಗಂಡ. ~ಅಮ್ಮ = ೧. ತಾಯಿಯ ತಂಗಿ. ೨. ಚಿಕ್ಕಪ್ಪನ ಹೆಂಡತಿ; ಕಕ್ಕಿ. ~ಊಳಿಗ = ಚಿಕ್ಕಪುಟ್ಟ ಕೆಲಸ.

ಚಿಕ್ಕಟ ೧. = ಚಿಕ್ಕುಟಿ. (ಗು). ೨. ಕ್ಷುದ್ರವಾದ; ನಾಡಾಡಿಯಾದ.

ಚಿಕ್ಕಣ (ಗು). ೧. ಮೃದುವಾದ. ೨. ನಿಧಾನವಾಗಿ ಸ್ರವಿಸುವ. ೩. ಕೊಬ್ಬು ಹತ್ತಿರುವ; ಸ್ನಿಗ್ಧ.

ಚಿಕ್ಕಣಿ (ನಾ). ೧. ಒಂದು ಬಗೆಯ ಅಡಕೆ. ೨. ಒಂದು ಬಗೆಯ ಹುಲ್ಲು.

ಚಿಕ್ಕಣಿಕೆ (ನಾ). ಒಂದು ಜಾತಿಯ ಹುಲ್ಲು.

ಚಿಕ್ಕಾಡು = ಚಿಕ್ಕುಟ.

ಚಿಕ್ಕುಟ (ನಾ). ಸೊಳ್ಳೆಯಂತಹ ಸಣ್ಣ ರೆಕ್ಕೆ ಹುಳು; ಚಿಗಟ.

ಚಿಗಟ = ಚಿಕ್ಕುಟ.
ಚಿಗರಿ = ಚಿಗರೆ.
ಚಿಗರೆ (ನಾ). ಜಿಂಕೆ ; ಹುಲ್ಲೆ.
ಚಿಗಿ (ಕ್ರಿ). ೧. ಬೆರಳುಗಳಿಂದ ಚಿಮ್ಮಿಸು ; ಮಿಡಿ. ೨. ಮೊಳಕೆದೋರು ; ಚಿಗುರು. ೩. ಬಲಿತುಕೊಳ್ಳು ; ಚೇತರಿಸಿಕೊಳ್ಳು. ೪. ನೆಗೆ ; ಹಾರು. ೫. ಮುಂದುವರಿ. ೬. ವೃದ್ಧಿಯಾಗು. ~ಇಸು = ೧. ಚಿಮ್ಮಿಸು; ಹಾರಿಸು. ೨. ವೃದ್ಧಿಗೊಳಿಸು. ~ಹಲ್ಲೆ = ಹಲ್ಲೆಯೊಂದನ್ನು ಕುಳಿಯ ಬಳಿಯಿಟ್ಟು ಕೋಲಿನ ತುದಿಯಿಂದ ಚಿಮ್ಮಿಸುವ ಒಂದು ಬಗೆಯ ಆಟ.
ಚಿಗುಟು = ಚಿವುಂಟು.
ಚಿಗುರ್ (ಕ್ರಿ). ೧. ಅಂಕುರಿಸು ; ಪಲ್ಲವಿಸು. (ನಾ). ೨. ಕುಡಿ ; ಪಲ್ಲವ.
ಚಿಗುರು ೧. = ಚಿಗುರ್. ೨. ಉಂಟಾಗು ; ತಲೆದೋರು. ೩. ಉತ್ಸಾಹಗೊಳಿಸು ; ಉಬ್ಬಿಸು. ~ಇಸು = ೧. ಮೊಳೆಯುವಂತೆ ಮಾಡು ; ಚಿಗುರುವಂತೆ ಮಾಡು. ೨. ಸಂತೋಷಪಡಿಸು ; ಉತ್ಸಾಹಗೊಳಿಸು.
ಚಿಗುಳಿ (ನಾ). ಎಳ್ಳು ಮತ್ತು ಬೆಲ್ಲವನ್ನು ಕುಟ್ಟಿ ಮಾಡಿದ ಒಂದು ಬಗೆಯ ತಿಂಡಿ. ~ತು(ದು)ಟು(ಳಿ) = ಗಿಜಿಗಿಜಿಯಾಗುವಂತೆ ತುಳಿ.
ಚಿಗುಳು (ಕ್ರಿ). ಸೀಳು ; ಬಗಿ.
ಚಿಚ್ಚಕ್ಷು (ನಾ). ಒಳಗಣ್ಣು ; ಅಂತರ್ದೃಷ್ಟಿ.
ಚಿಚ್ಛಕ್ತಿ (ನಾ). ಮನಸ್ಸಿನ ಶಕ್ತಿ ; ಆತ್ಮಶಕ್ತಿ ; ಚೈತನ್ಯ.
ಚಿಟ (ಗು). ಚಿಕ್ಕ ; ಸಣ್ಣ.
ಚಿಟಕಿ (ನಾ). ೧. ಕೈಯ ಹೆಬ್ಬೆರಳು ಮತ್ತು ಮಧ್ಯದ ಬೆರಳನ್ನು ಸೇರಿಸಿ ಮಾಡುವ ಶಬ್ದ. ೨. ಸ್ವಲ್ಪ ಮಾತ್ರ.
ಚಿಟಕೆ ೧. = ಚಿಟಕಿ. ೨. ಮಕ್ಕಳ ಬೇನೆಗೆ ಬಳೆಯ ಚೂರು ಮುಂತಾದುವುಗಳಿಂದ ಹಾಕುವ ಬರೆ. ೩. ತಾಳಹಾಕುವ ಸಾಧನ. (ಗು). ೪. ಸಣ್ಣದಾದ ; ಚಿಕ್ಕ. ~ಚಪ್ಪರ = ಕಡಮೆ ವೆಚ್ಚ.
ಚಿಟುಂಕು (ನಾ). ೧. ಕೈಯ ಹೆಬ್ಬೆರಳು ಮತ್ತು ಮಧ್ಯದ ಬೆರಳುಗಳಿಂದ ಮಾಡುವ ಶಬ್ದ. ೨. ಬೆರಳುಗಳನ್ನು ಸದ್ದಾಗುವಂತೆ ಮಡಿಚುವುದು ; ನೆಟಿಕೆ. ~ಇಸು = ಬೆರಳುಗಳಿಂದ ಶಬ್ದಮಾಡು ; ನೆಟಿಕೆಮುರಿ.
ಚಿಟುಕು ೧. = ಚಿಟುಂಕು. ೨. ಸಣ್ಣದು ; ಚಿಕ್ಕದು. ೩. ಮಿಡಿಯುವುದು ; ಮಿಡಿತ. (ಗು). ೪. ಸಣ್ಣದಾದ. ~ಮುರಿ = ಬೆರಳುಗಳನ್ನು ಮಡಿಚಿ, ಸದ್ದಾಗುವಂತೆ ನೆಟಿಕೆ ತೆಗೆ.
ಚಿಟ್ಟಿ (ನಾ). ೧. ನಾಲ್ಕು ಸೇರಿನ ಒಂದು ಅಳತೆ. ೨. ಚಿಕ್ಕದಾದ ಮತ್ತು ದಿನಚರಿಯನ್ನು ಬರೆದಿಡುವ ಕರಡು ಪುಸ್ತಕ.
ಚಿಟ್ಟು (ನಾ). ೧. ಬೇಸರ ; ಬೇಜಾರು. (ಗು). ೨. ಸಣ್ಣ ; ಚಿಕ್ಕ. ~ಇಗ = ಶಿಷ್ಯ. ~ಊಳಿಗ = ಸುತ್ತುಗೆಲಸ ; ಮೇಲುಕೆಲಸ. ~ಹಿಡಿ = ೧. ಬೇಸರವಾಗು ; ಜುಗುಪ್ಸೆಯಾಗು. ೨. ನೋವಾಗು ; ಹಿಂಸೆಯಾಗು.
ಚಿಟ್ಟೆ (ನಾ). ೧. ಪತಂಗ ; ಪಾತರಗಿತ್ತಿ. ೨. ಧಾನ್ಯದ ಒಂದು ಅಳತೆ. ೩. ಪಗಡೆಯ ದಾಳ. ೪. ಎತ್ತರವಾದ ಜಗಲಿ ; ಅಟ್ಟಣೆ. (ಗು). ೫. ಸಣ್ಣ ; ಚಿಕ್ಕ.
ಚಿಡಾಯಿಸು = ಚುಡಾಯಿಸು.
ಚಿಣ್ಣ (ನಾ). ೧. ಬಾಲಕ ; ಹುಡುಗ. (ಗು). ೨. ಸಣ್ಣದಾದ ; ಚಿಕ್ಕದಾದ. ~ಆಟ = ಚೆಲ್ಲಾಟ ; ಹುಡುಗಾಟ. ~ತನ = ಬಾಲ್ಯ ; ಚಿಕ್ಕಂದು.
ಚಿಣ್ಣೆ (ನಾ). ೧. ಚಿಕ್ಕದು ; ಸಣ್ಣದು. ೨. ಚಿಣ್ಣೆಕೋಲಾಟಕ್ಕೆ ಬಳಸುವ ಮರದ ಚಿಕ್ಕ ತುಂಡು. ~ಕೋಲು = ೧. ಚಿಣ್ಣೆಯನ್ನೂ

ದಾಂಡನ್ನೂ ಹಿಡಿದು ಆಡುವ ಆಟ. ೨. ಚಿಣ್ಣಿ ಆಟಕ್ಕೆ ಬಳಸುವ ದಾಂಡು.
ಚಿತ (ಗು). ೧. ರಾಶಿ ಮಾಡಲ್ಪಟ್ಟ. ೨. ಮುಚ್ಚಲ್ಪಟ್ಟ. ೩. ಗಮನವನ್ನು ನೀಡಿದ.
ಚಿತಾಭಸ್ಮ (ನಾ). ಚಿತೆಯ ಬೂದಿ.
ಚಿತಾಯಿಸು (ಕ್ರಿ). ೧. ಹುರಿದುಂಬಿಸು. ೨. ರೇಗಿಸು.
ಚಿತಾವಣೆ (ನಾ). ಚುಚ್ಚಿಕೊಡುವಿಕೆ; ಪ್ರಚೋದಿಸುವಿಕೆ.
ಚಿತಿ (ನಾ). ೧. ರಾಶಿ ಹಾಕುವುದು; ಶೇಖರಿಸುವುದು. ೨. ಬೆಂಕಿಯ ಕುಂಡ.
ಚಿತೆ (ನಾ). ಶವವನ್ನು ಸುಡಲು ಒಟ್ಟಿದ ಕಟ್ಟಿಗೆಯ ರಾಶಿ.
ಚಿತ್ತ ೧. = ಚಿತ್ತೆ. ೨. ಗ್ರಹಿಸುವಿಕೆ. ೩. ಮನಸ್ಸು. ೪. ಗುರಿ; ಉದ್ದೇಶ. (ಗು) ೫. ತಿಳಿಯಲ್ಪಟ್ಟ. ~ಅವಧಾನ = ಏಕಚಿತ್ತತೆ. ~ಇ(ವಿ)ಡು = ಗಮನ ಕೊಡು; ಮನಸ್ಸಿಡು. ~ಇ(ಯಿ)ಸು = ೧. ಮನಸ್ಸಿಗೆ ತಂದುಕೊಳ್ಳು; ಲಕ್ಷಿಸು. ೨. ಬರು; ದಯಮಾಡು. ೩. ಮನಸ್ಸನ್ನು ಸೆಳೆ. ~(ಂ)ಕು(ಗು)ಡು = ಮನಸ್ಸು ಕೊಡು; ಲಕ್ಷ್ಯಕೊಡು. ~(ಂ)ಪು(ಬು)ಗು =೧. ಮನಸ್ಸನ್ನು ಪ್ರವೇಶಿಸು. ೨. ಮನಸ್ಸನ್ನು ಆಕರ್ಷಿಸು; ಮನೋಹರವಾಗು. ~(ಂ)ಪೆ(ಬೆ)ಱು(ರು)=ಮೋಹಗೊಳಿಸು; ವಶಪಡಿಸಿಕೊಳ್ಳು. ~ಚಾಂಚಲ್ಯ = ಮನಸ್ಸಿನ ಅಸ್ಥಿರತೆ. ~ಭ್ರಮೆ = ಚಿತ್ತವಿಕೃತಿ. ~ವಿಕೃತಿ = ಭ್ರಮೆ; ಹುಚ್ಚು. ~ವೃತ್ತಿ = ಮನಸ್ಸಿನ ವ್ಯಾಪಾರ; ಮನೋಧರ್ಮ. ~ಸ್ಫುರಣ = ಮನಸ್ಸಿಗೆ ಹೊಳೆಯುವುದು; ಸ್ಪಷ್ಟವಾಗುವುದು. ~ಸ್ವಾಸ್ಥ್ಯ = ಮನಸ್ಸಿನ ನೆಮ್ಮದಿ.
ಚಿತ್ತಗ (ನಾ). ಚಿರತೆ; ಚಿರ್ಚ.
ಚಿತ್ತಜ (ನಾ). ಮನಸ್ಸಿನಲ್ಲಿ ಹುಟ್ಟಿದವನು; ಕಾಮ; ಮನ್ಮಥ. ~ಅರಿ = ಮನ್ಮಥನ ವೈರಿ; ಶಿವ. ~ಪಿತ = ಕಾಮನ ತಂದೆ; ವಿಷ್ಣು.
ಚಿತ್ತರ = ಚಿತ್ರ.
ಚಿತ್ತಳಿ (ನಾ). ಸಣ್ಣ ಚೂರು; ಚಿಕ್ಕ ಚೂರು. ~ಇಸು = ಸಣ್ಣ ಸಣ್ಣ ಚೂರಾಗಿ ಕತ್ತರಿಸು.
ಚಿತ್ತಾರ = ಚಿತ್ರ. ~ಇಗ = ಚಿತ್ತಾರಿ.
ಚಿತ್ತಾರಿ (ನಾ). ಚಿತ್ರಗಳನ್ನು ಬರೆಯುವವನು; ಚಿತ್ರಗಾರ.
ಚಿತ್ತಿನಿ (ನಾ). ನಾಲ್ಕು ಬಗೆಯ ಸ್ತ್ರೀ ಜಾತಿಗಳಲ್ಲಿ ಒಂದು.
ಚಿತ್ತು (ನಾ). ೧. ಜ್ಞಾನಸ್ವರೂಪವಾದುದು; ಮನಸ್ಸು. ೨. ಬರೆಯುವಾಗ ಮುಸಿಯಿಂದ ಆಗುವ ಕಲೆ. ೩. ದೋಷ. ೪. (ಕುಸ್ತಿಯಲ್ಲಿ) ಎದುರಾಳಿಯನ್ನು ಅಂಗತ್ತನಾಗಿ ಬೀಳಿಸುವುದು.
ಚಿತ್ತೆ (ನಾ). ಚಿತ್ರಾನಕ್ಷತ್ರ ಮತ್ತು ಆ ನಕ್ಷತ್ರದಲ್ಲಿ ಬರುವ ಮಳೆ.
ಚಿತ್ತೈಸು (ಕ್ರಿ). ೧. ಮನಸ್ಸಿಗೆ ತಂದುಕೊಳ್ಳು; ಲಕ್ಷಿಸು. ೨. ದಯಮಾಡು; ಆಗಮಿಸು. ೩. ಅನುಗ್ರಹಿಸು. ೪. ಕೇಳಿಕೊಳ್ಳು; ಬೇಡಿಕೊಳ್ಳು.
ಚಿತ್ರ (ನಾ). ೧. ಬರೆದ ಆಕೃತಿ; ತಸವೀರು. ೨. ಭದ್ರ; ಶುಭ. ೩. ಚಮತ್ಕಾರಪ್ರಧಾನವಾದ ಕಾವ್ಯ. ೪. ಆಶ್ಚರ್ಯ; ಸೋಜಿಗ. ೫. ಮೂರು ಪಾದಗಳುಳ್ಳ ಒಂದು ಬಗೆಯ ಪದ್ಯ. (ಗು). ೬. ಎದ್ದು ಕಾಣುವ; ಗಮನ ಸೆಳೆಯುವ. ೭. ಪ್ರಕಾಶಮಾನವಾದ ಬಣ್ಣವುಳ್ಳ. ೮. ಶಬಲವಾದ; ವಿವಿಧ ಬಣ್ಣವುಳ್ಳ. ~ಅಂಗ = ೧. ಚೆಲುವಾದ ದೇಹವುಳ್ಳುದು. ೨. ಹುಲಿ. ೩. ಜಿಂಕೆ. ೪. ಮೈಮೇಲೆ ಪಟ್ಟೆ ಅಥವಾ ಚುಕ್ಕೆಗಳನ್ನು ಹೊಂದಿದ. ೫. ಸುಂದರವಾದ ದೇಹವುಳ್ಳ.

~ಅಂಬರ = ಬಣ್ಣಬಣ್ಣದ ಬಟ್ಟೆ; ಅನೇಕ ಬಣ್ಣಗಳಿಂದ ಕೂಡಿದ ಬಟ್ಟೆ. ~ಅನ್ನ = ಸಂಬಾರಗಳೊಡನೆ ಕಲಸಿದ ಅನ್ನ; ಕಲಸನ್ನ. ~ಆಹುತಿ = ಚಿತ್ರಾವತಿ. ~ಇಸು = ೧. ಚಿತ್ರವನ್ನು ಬರೆ; ರೂಪಿಸು. ೨. ಕಣ್ಣಿಗೆ ಕಟ್ಟುವಂತೆ ವರ್ಣಿಸು, ವಿವರಿಸು. ~ಕರ್ಮ = ೧. ಚಿತ್ರವನ್ನು ಬರೆಯುವುದು; ಚಿತ್ರರಚನೆ. ೨. ಜಾಣತನದಿಂದ ಕೂಡಿದ ಕೆಲಸ; ಕುಸುರಿಗೆಲಸ. ~ಕಾಯ = ೧. ಚಿರತೆ. ೨. ಹುಲಿ. ೩. ಸುಂದರವಾದ ದೇಹ. ~ಕುಟಿ = ಡೇರೆ; ಗುಡಾರ. ~ಗೀತೆ = ಚಲನಚಿತ್ರಗಳಲ್ಲಿ ಬರುವ ಹಾಡು. ~ಪಟ = ೧. ಚಿತ್ರವನ್ನು ಬರೆದಿರುವ ಬಟ್ಟೆ ಅಥವಾ ಕಾಗದ. ೨. ಬಟ್ಟೆ ಮೊದಲಾದುವುಗಳಲ್ಲಿ ಬರೆದಿಟ್ಟ ಚಿತ್ರ; ತಸವೀರು. ೩. ಬಣ್ಣಬಣ್ಣದ ಬಟ್ಟೆ. ೪. ಚಲನಚಿತ್ರದ ತೆರೆ. ~ಪಟ್ಟಿಕೆ = ಚಿತ್ರಗಳ ಸಾಲು. ~ಪತ್ರ = ೧. ಬಣ್ಣಬಣ್ಣದ ಎಲೆ. ೨. ಹಲವು ಬಣ್ಣದ ಬಟ್ಟೆಗಳಿಂದ ಕೂಡಿದ ಅಲಂಕಾರ. ~ಪ್ರಪಂಚ = ೧. ಸುಂದರವಾಗಿ ಅಲಂಕರಿಸಿರುವ ಸ್ಥಳ. ೨. ಚಲನಚಿತ್ರಗಳ ಜಗತ್ತು. ~ಭಾನು = ೧. ಸೂರ್ಯ. ೨. ಅಗ್ನಿ. ೩. ಅರುವತ್ತು ಸಂವತ್ಸರಗಳಲ್ಲಿ ಒಂದು. ~ಭಿತ್ತಿ = ಚಿತ್ರಗಳಿಂದ ಕೂಡಿದ ಗೋಡೆ. ~ರಥ = ೧. ಪ್ರಕಾಶಮಾನವಾದ ರಥವುಳ್ಳವನು. ೨. ಸೂರ್ಯ. ೩. ಅಗ್ನಿ. ~ಲಿಪಿ = ಚಿತ್ರಸಂಕೇತಗಳ ಬರೆವಣಿಗೆ. ~ವಧೆ = ದೇಹವನ್ನು ತುಂಡುತುಂಡಾಗಿ ಮಾಡಿ ಕೊಲ್ಲುವಿಕೆ; ಚಿತ್ರಹಿಂಸೆಯಿಂದ ಕೊಲ್ಲುವಿಕೆ. ~ವಿಚಿತ್ರ = ಹಲವು ಬಗೆಯ ಬಣ್ಣಗಳಿಂದ ಕೂಡಿದ. ~ವಿಹ(ಂ)ಗ = ತುಂಬಿ; ಭ್ರಮರ. ~ಶಾಲೆ = ೧. ಬಣ್ಣಬಣ್ಣದ ಸೀರೆ. ೨. ಚಿತ್ರಗಳನ್ನು ಬರೆಯುವ ಸ್ಥಳ; ಚಿತ್ರಾಗಾರ. ~ಹಿಂಸೆ = ಅನೇಕ ರೀತಿಗಳಿಂದ ಉಂಟುಮಾಡುವ ಕಿರುಕುಳ.

ಚಿತ್ರಕ (ನಾ). ೧. ಚಿತ್ರಗಳನ್ನು ಬರೆಯುವವನು; ಚಿತ್ರಗಾರ. ೨. = ಚಿತ್ತಗ. ೩. ಹುಲಿ. ೪. ಹಣೆಗೆ ಇಡುವ ತಿಲಕ ಅಥವಾ ಬೊಟ್ಟು.

ಚಿತ್ರಗುಪ್ತ (ನಾ). ಜನರ ಪಾಪ ಪುಣ್ಯದ ಕರ್ಮಗಳನ್ನು ಬರೆದಿಡುವ ಯಮಲೋಕದ ಅಧಿಕಾರಿ.

ಚಿತ್ರಲೇಖೆ (ನಾ). ೧. ಚಿತ್ರ. ೨. ಒಬ್ಬ ಅಪ್ಸರಸ್ತ್ರೀ.

ಚಿತ್ರಶಿಖಂಡಿ (ನಾ). ೧. ಒಬ್ಬ ಋಷಿಯ ಹೆಸರು; ಅಂಗೀರಸ. ೨. ಸಪ್ತರ್ಷಿಮಂಡಲ. (ಗು). ೩. ಮನೋಹರವಾದ ಜುಟ್ಟುಳ್ಳ.

ಚಿತ್ರಾಂಗದೆ (ನಾ). ೧. ಚೆಲುವಾದ ತೋಳುಬಳೆಗಳನ್ನು ಧರಿಸಿದವಳು. ೨. ಅರ್ಜುನನ ಹೆಂಡತಿ; ಬಭ್ರುವಾಹನನ ತಾಯಿ.

ಚಿತ್ರಾಂಗಿ (ನಾ). ಚೆಲುವೆ; ಸುಂದರಿ.

ಚಿತ್ರಾವತಿ (ನಾ). ಊಟದ ಮೊದಲು ಚಿತ್ರಗುಪ್ತರಿಗೆ ಕೊಡುವ ಅನ್ನದ ತುತ್ತು.

ಚಿತ್ರಾವಹ (ಗು). ಅಚ್ಚರಿಯನ್ನು ಉಂಟುಮಾಡುವ; ಆಶ್ಚರ್ಯಕರವಾದ.

ಚಿತ್ರಿಕ (ನಾ). ಚಿತ್ರಗಳನ್ನು ಬರೆಯುವವನು; ಚಿತ್ರಕಾರ.

ಚಿತ್ರಿಕೆ (ನಾ). ೧. ಚಿತ್ರಗಳನ್ನು ಬರೆಯುವವಳು. ೨. ಒಂದು ಬಗೆಯ ತಂತಿವಾದ್ಯ.

ಚಿತ್ರೆ = ಚಿತ್ತೆ.

ಚಿದಕು (ಕ್ರಿ). ೧. ನೀರಿನಲ್ಲಿ ನೆನೆಸಿದ ಕಾಳುಗಳನ್ನು ಹಿಸುಕಿ ಸಿಪ್ಪೆಯನ್ನು ತೆಗೆ. (ನಾ). ೨. ಹಿಸುಕಿ ಸಿಪ್ಪೆ ತೆಗೆದುದು.

ಚಿದಾನಂದ (ನಾ). ಮನಸ್ಸಿನ ಆನಂದ; ಆತ್ಮಾನಂದ. ~ರೂಪ = ಚೈತನ್ಯರೂಪನಾಗಿಯೂ ಆನಂದರೂಪನಾಗಿಯೂ ಇರುವವನು; ಶಿವ.

ಚಿದುಕು = ಚಿವಕು.
ಚಿದ್ರ (ನಾ). ೧. ಒಡಕು ; ತೂತು ; ಛಿದ್ರ. ೨. ಮೋಸ; ದ್ರೋಹ.
ಚಿದ್ರೂಪ (ನಾ). ೧. ಸುಹೃದಯ ; ಒಳ್ಳೆಯ ಮನಸ್ಸಿನವನು. ೨. ಚೈತನ್ಯಸ್ವರೂಪ.
ಚಿನಕಡಿ (ಕ್ರಿ). ೧. ಸಣ್ಣದಾಗಿ ಕತ್ತರಿಸು ; ತುಂಡುಮಾಡು. (ನಾ). ೨. ಚಿಕ್ಕ ಚೂರು; ತುಣುಕು.
ಚಿನಕುರುಳಿ (ನಾ). ೧. ಒಂದು ಬಗೆಯ ಪಟಾಕಿ. ೨. ಮಸಾಲೆ ಹಾಕಿ ಹುರಿದು ಮಾಡಿದ ಕಾಳು ; ಹುರಿಗಾಳು.
ಚಿನಿ (ನಾ). ೧. ಒಂದು ಬಗೆಯ ರೇಷ್ಮೆ ಸೀರೆ. (ಗು). ೨. ಸಣ್ಣ; ಚಿಕ್ಕ. ~ಖಂಡ = ಸಣ್ಣದಾಗಿ ಕತ್ತರಿಸಿದ (ಮಾಂಸದ) ಚೂರು.
ಚಿನಿವರದ = ಚಿನಿವಾರ.
ಚಿನಿವಾರ (ನಾ). ೧. ಅಕ್ಕಸಾಲಿಗ. ೨. ಚಿನ್ನದ ವ್ಯಾಪಾರಿ.
ಚಿನುಕು (ಕ್ರಿ). ೧. ನೀರನ್ನು ಚಿಮುಕಿಸು. ೨. ಕಾಳನ್ನು ನೆನೆಸಿ ಉಪ್ಪುಕಾರ ಹಚ್ಚಿ ಒಣಗಿಸು.
ಚಿನುಮಯ (ನಾ). ಪರಮಾತ್ಮ; ಪರಬ್ರಹ್ಮ.
ಚಿನ್ನ (ನಾ). ೧. ಹೊನ್ನು ; ಬಂಗಾರ. ೨. ಚಿನ್ನದ ನಾಣ್ಯ. ೩. =ಚಿಣ್ಣ. ೪. ಚಿಹ್ನೆ; ಗುರುತು. ೫. ಕತ್ತರಿಸಲ್ಪಟ್ಟುದು. ~ಆಟ = ಹುಡುಗಾಟ ; ಚಲ್ಲಾಟ. ~ಇಗ = ಚಿನ್ನದ ವ್ಯಾಪಾರ ಮಾಡುವವನು ; ಅಕ್ಕಸಾಲಿಗ. ~(ಂ)ಕಾ(ಗಾ)ಳೆ = ಸಣ್ಣ ಜೋಡುಕಹಳೆ. ~ಪ(ವ)ರದ = ಚಿನ್ನಿಗ. ~ಪೂ = ತಲೆಯಲ್ಲಿ ಧರಿಸುವ ಒಂದು ಆಭರಣ.
ಚಿನ್ನಾಲಿ (ನಾ). ಜಾರೆ; ವ್ಯಭಿಚಾರಿಣಿ.
ಚಿನ್ನಿ (ನಾ). ದನಕರುಗಳಿಗೆ ನೆನೆಸಿ ಕೊಡುವ ತೊಗರಿಯ ನುಚ್ಚು ಮತ್ತು ಕಡಲೆಯ ನುಚ್ಚುಗಳ ಮಿಶ್ರಣ.
ಚಿನ್ನಿಧಾನ (ನಾ). ಜ್ಞಾನ ಭಂಡಾರ ; ಜ್ಞಾನದ ಗಣಿ.
ಚಿನ್ಹೆ (ನಾ). ಗುರುತು ; ಸಂಕೇತ ; ಚಿಹ್ನೆ.
ಚಿನ್ಮಯ ೧. = ಚಿನುಮಯ. (ಗು). ೨. ಶುದ್ಧ ಜ್ಞಾನದಿಂದ ಕೂಡಿದ ; ಜ್ಞಾನಸ್ವರೂಪವಾದ.
ಚಿಪಲಿ (ನಾ). ನೈನಾಹಕ್ಕಿ.
ಚಿಪಿಲೆ = ಚಿಪಲಿ.
ಚಿಪ್ಪ (ನಾ). ವಿಗ್ರಹ ನಿರ್ಮಾಣವಿದ್ಯೆ ; ಶಿಲ್ಪ. ~ಇಗ = ೧. ಶಿಲ್ಪಿ ; ಶಿಲ್ಪಕಾರ್ಯಮಾಡುವವನು. ೨. ದರ್ಜಿ ; ಸಿಂಪಿಗ.
ಚಿಪ್ಪಲು (ನಾ). ಒಂದು ಜಾತಿಯ ಮೀನು.
ಚಿಪ್ಪಳ (ನಾ). ಬೇಲಿಯ ಎರಡು ಮಗ್ಗುಲುಗಳಿಗೂ ಬಿದಿರನ್ನು ಅಡ್ಡವಾಗಿ ಜೋಡಿಸಿ ಬಿಗಿದುದು ; ಅಡ್ಡಗಟ್ಟು.
ಚಿಪ್ಪಳು (ನಾ). ಇಕ್ಕಟ್ಟಿಗೆ ಸಿಕ್ಕಿಸುವುದು ; ಕಾಡುವುದು. ~ವಿಡಿ(ರಿ)ಸು = ಕಾಡು ; ಪೀಡಿಸು.
ಚಿಪ್ಪಾಟ (ನಾ). ದನಗಳು ತಿಂದುಳಿಸಿದ ಮೇವು.
ಚಿಪ್ಪಡಿ ೧. = ಚಿಪ್ಪಾಟ. ೨. ಚೂರು ; ತುಂಡು.
ಚಿಪ್ಪು (ನಾ). ೧. ತೆಂಗಿನ ಕರಟ. ೨. ತಲೆಯ ಓಡು, -ಬುರುಡೆ. ೩. ಸಿಂಪು ; ಕಪ್ಪೆಚಿಪ್ಪು. ೪. ತೊಗಟೆ ; ಕವಚ. ೫. ಬಾಳೆಯ ಗೊನೆಯ ಒಂದು ಭಾಗ, -ಗೊಂಚಲು.
ಚಿಬುಕ (ನಾ). ತುಟಿಯ ಕೆಳಭಾಗ ; ಗದ್ದ.
ಚಿಬ್ಬ = ಚಿಬ್ಬು.
ಚಿಬ್ಬಲು (ನಾ). ಬಿದಿರಿನ ತಟ್ಟೆ, -ಮುಚ್ಚಳ.
ಚಿಬ್ಬಿಲ್(ಲು) = ಚಿಬ್ಬಲು.
ಚಿಬ್ಬು (ನಾ). ಒಂದು ಚರ್ಮರೋಗ ; ಸಿಬ್ಬು.
ಚಿಮುಟ ೧. = ಚಿಮ್ಮುಟ. ೨. ಹೆಬ್ಬೆರಳು ಮತ್ತು ತೋರುಬೆರಳಿನಲ್ಲಿ ಹಿಡಿಯುವಷ್ಟು ವಸ್ತು ; ಒಂದು ಚಿಟಿಕೆ.
ಚಿಮುಟಗೆ = ಚಿಮುಟ.

**ಚಿಮಣಿ** (ನಾ). ೧. ಹೊಗೆ ಹೋಗುವ ನಳಿಕೆ; ಹೊಗೆಗೂಡು. ೨. ಸೀಮೆಎಣ್ಣೆಯ ಬುಡ್ಡಿ. ೩. ದೀಪಕ್ಕೆ ಹಾಕುವ ಗಾಜಿನ ಬುರುಡೆ. ~ಎಣ್ಣೆ = ಸೀಮೆಎಣ್ಣೆ; ಕಲ್ಲೆಣ್ಣೆ.

**ಚಿಮಿಚಿಮಿ** (ನಾ). ಒಂದು ಅನುಕರಣ ಶಬ್ದ. ~ಇಸು = ೧. ಸುಡುವಾಗ ಚುಯ್ಯೆಂದು ಶಬ್ದ ಮಾಡು. ೨. ಹೊರಳಾಡು; ಉರುಳಾಡು.

**ಚಿಮೊಂಕು** (ಕ್ರಿ). ನೀರನ್ನು ಸಿಂಪಡಿಸು, -ತಳಿ. ~ಇಸು = ದ್ರವವನ್ನು ಸಿಂಪಡಿಸು, -ತಳಿ.

**ಚಿಮುಂಟ** = ಚಿಮ್ಮುಟ.

**ಚಿಮುಂಟು** (ಕ್ರಿ). ೧. ಕಣ್ಣನ್ನು ಮಿಟುಕಿಸು ೨. ಜಿಗುಟು; ಚಿವುಟು.

**ಚಿಮ್ಮುಂಡೆ** (ನಾ). ಜೀರುಂಡೆಹುಳು; ಜೀರುಡುಂಬಿ.

**ಚಿಮ್ಮು** (ಕ್ರಿ). ೧. ಬೆರಳುಗಳಿಂದ ಮಿಡಿ. ೨. ತಳ್ಳು; ಮಾಟು. ೩. ನೆಗೆ; ಹಾರು. ೪. ಚಿಮುಕಿಸು; ತಳಿ. ೫. ಆಯುಧವನ್ನು ಝುಳಪಿಸು. ೬. (ಚಾಮರ ಮುಂತಾದುವುಗಳಿಂದ) ಬೀಸು. ೭. ಎಸೆ; ತೂರು. (ನಾ). ೮. ನೆಗೆತ. ೯. ಉತ್ಸಾಹ; ಹುರುಪು.

**ಚಿಮ್ಮುಟ** (ನಾ). ಇಕ್ಕುಳದಂತಹ ಒಂದು ಸಾಧನ; ಪಟಕಾರ.

**ಚಿಮ್ಮುರಿ** (ನಾ). ೧. ಹೆಡಮುರಿಗೆ ಕಟ್ಟುವುದು; ಹಿಂಗಟ್ಟು. ೨. ತಲೆಯುಡುಗೆ; ರುಮಾಲು. ೩. ವೀರಗಚ್ಚೆ; ವೀರಗಾಸೆ.

**ಚಿರ** (ಗು). ೧. ಚೆಲುವಾದ; ಅಂದವಾದ. ೨. ದೀರ್ಘಕಾಲದ; ಬಹುಕಾಲದ. ~ಆಯು = ೧. ದೀರ್ಘಾಯುಸ್ಸು. ೨. ಚಿರಂಜೀವಿ; ದೀರ್ಘಾಯುಸ್ಸುಳ್ಳವನು. ೩. ಕಾಗೆ. ~ಋಣಿ = ಉಪಕಾರವನ್ನು ಸದಾ ಸ್ಮರಿಸಿಕೊಳ್ಳುವವನು; ಕೃತಜ್ಞ. ~ಶಾಂತಿ = ೧. ಶಾಶ್ವತವಾದ ನೆಮ್ಮದಿ. ೨. ಸಾವು; ಮರಣ.

**ಚಿರಂ** (ಅ). ಯಾವಾಗಲೂ; ಶಾಶ್ವತವಾಗಿ.

**ಚಿರಂಜೀವಿ** (ನಾ). ೧. ದೀರ್ಘಕಾಲ ಬಾಳುವವನು. ೨. ಕಾಗೆ. ೩. ಅಶ್ವತ್ಥಾಮ, ವ್ಯಾಸ, ಪರಶುರಾಮ, ವಿಭೀಷಣ, ಕೃಪಾಚಾರ್ಯ, ಆಂಜನೇಯ, ಬಲಿ ಎಂಬ ಸಾವಿಲ್ಲದ ಏಳು ಜನ ಪುರಾಣಪುರುಷರು. ೪. ಮಗ; ಪುತ್ರ. ೫. ಚಿಕ್ಕವನು; ಕಿರಿಯ. (ಗು). ೬. ಮರಣವಿಲ್ಲದ; ಬಹಳ ಕಾಲ ಬಾಳುವ.

**ಚಿರಂಟಿ** (ನಾ). ೧. ಯುವತಿ. ೨. ತಂದೆಯ ಮನೆಯಲ್ಲಿಯೇ ಇರುವ ಪ್ರಾಪ್ತವಯಸ್ಕಳಾದ ಹೆಂಗಸು.

**ಚಿರಂತನ** (ಗು). ೧. ಅತಿ ಪ್ರಾಚೀನ ಕಾಲದ. ೨. ಎಂದೆಂದಿಗೂ ಇರುವ; ಶಾಶ್ವತವಾದ. ೩. ವಯಸ್ಸಾದ; ಹಿರಿಯ. (ಅ). ೪. ಎಲ್ಲಾ ಕಾಲ; ಸತತ. ~ಆಚಾರ್ಯ = ಪ್ರಾಚೀನ ಕಾಲದ ಗುರು.

**ಚಿರಿಚು** (ಕ್ರಿ). ನಗು.

**ಚಿರೋಟಿ** (ನಾ). ಒಂದು ಬಗೆಯ ಭಕ್ಷ್ಯ; ಪದರಫೇಣಿ.

**ಚಿಜಿ(ರ)ತೆ** (ನಾ). ಮೈಮೇಲೆ ಚುಕ್ಕೆಗಳಿರುವ ಒಂದು ಜಾತಿಯ ಕಾಡುಮೃಗ.

**ಚಿರ್ಚ** = ಚಿಜತೆ.

**ಚಿರ್ಚು** = ಚಿಜತೆ.

**ಚಿಲಕ** ೧. = ಚಿಲುಕ. ೨. ಒಂದು ಬಗೆಯ ಮೂತ್ರರೋಗ.

**ಚಿಲಕುರುಳಿ** (ನಾ). ಒಂದು ಬಗೆಯ ಖಾದ್ಯ ವಿಶೇಷ; ಹುರಿಗಾಳು.

**ಚಿಲಖತ್ತು** (ನಾ). ಉಕ್ಕಿನ ಕವಚ; ತನುತ್ರಾಣ.

**ಚಿಲಿಕೆ** (ನಾ). ೧. ಛಾವಣಿಗೆ ಹಾಕುವ ಮರದ ಸಣ್ಣ ಪಟ್ಟಿ. ೨. ಒಂದು ಬಗೆಯ ಸೊಪ್ಪು.

**ಚಿಲಿ(ಳಿ)ಚಿಮ** (ನಾ). ಒಂದು ಜಾತಿಯ ಸಣ್ಣ ಮೀನು; ಜಂಬುಮೀನು.

ಚಿಲಿಪಿಲಿ (ನಾ). ಒಂದು ಅನುಕರಣ ಧ್ವನಿ. ~ಕು(ಗು)ಟ್ಟು = (ಹಕ್ಕಿಗಳು) ಚಿಲಿಪಿಲಿ ಎಂದು ಧ್ವನಿಮಾಡು.

ಚಿಲಿಮಿಲಿಗ (ನಾ). ಒಂದು ಜಾತಿಯ ಹಕ್ಕಿ.

ಚಿಲುಕ (ಗು). ಬಾಗಿಲಿಗೆ ಹಾಕುವ ಕೊಂಡಿ.

ಚಿಲುಕೀರೆ (ನಾ). ಒಂದು ಬಗೆಯ ಸೊಪ್ಪು.

ಚಿಲುಕು (ನಾ). ಸಿಪ್ಪೆ; ಪೊರೆ. ~ಇಸು = ಕಾಳಿನ ಮೇಲಿನ ಸಿಪ್ಪೆಯನ್ನು ತೆಗೆ.

ಚಿಲುಕೂಲಿ (ನಾ). ಒಂದು ಜಾತಿಯ ಹಕ್ಕಿ.

ಚಿಲುಪಾಲ್(ಲು) (ನಾ). ಚೆನ್ನಾಗಿ ಕಾಯಿಸಿದ ಹಾಲು; ಕೆನೆಹಾಲು.

ಚಿಲುಮೆ (ನಾ). ೧. ನೀರು ಉಕ್ಕುವ ಸ್ಥಳ; ಬುಗ್ಗೆ. ೨. ತಂಬಾಕು ಸೇದಲು ಉಪಯೋಗಿಸುವ ಮಣ್ಣಿನ ಕೊಳವೆ, –ನಳಿಕೆ.

ಚಿಲ್ಪೇರಿ (ನಾ). ಸಣ್ಣವನು; ಚಿಕ್ಕವನು.

ಚಿಲ್ಲ (ನಾ). ೧. ಕತಕದ ಮರ ಮತ್ತು ಅದರ ಬೀಜ. ೨. ರಾಟೆಯಲ್ಲಿ ಕದಿರನ್ನು ಜೋಡಿಸುವ ಕೊಕ್ಕೆ. ೩. ಒಂದು ಜಾತಿಯ ಪಕ್ಷಿ; ಮುಂಡುಮುಳುಕ. ೪. ಸಣ್ಣ ನೌಕರ.

ಚಿಲ್ಲರೆ (ನಾ). ೧. ಒಂದು ಪೂರ್ಣ ವಸ್ತುವಿನ ಅಂಶ, –ಭಾಗ. ೨. ಪುಡಿಕಾಸು. ೩. ದೊಡ್ಡ ನಾಣ್ಯಕ್ಕೆ ಕೊಡುವ ಸಮಾನ ಬೆಲೆಯ ಸಣ್ಣ ಪುಟ್ಟ ನಾಣ್ಯಗಳು. (ಗು). ೪. ಸಣ್ಣದಾದ; ಅಲ್ಪವಾದ.

ಚಿಲ್ಲಾಣ (ನಾ). ಕತ್ತಿ; ಕಠಾರಿ.

ಚಿಲ್ಲೆ (ನಾ). ಕೆಟ್ಟ ಹೆಂಗಸು; ನೀಚ ಸ್ತ್ರೀ.

ಚಿವಡಾ (ನಾ). ಒಂದು ಬಗೆಯ ತಿನಿಸು; ಕಾರದ ಅವಲಕ್ಕಿ.

ಚಿವು(ಂ)ಟು (ಕ್ರಿ). ಉಗುರುಗಳಿಂದ ಚರ್ಮವನ್ನು ಹಿಂಡು, –ತಿರಿಚು.

ಚಿವುಡು (ಕ್ರಿ). ಉಗುರಿನಿಂದ ಕೀಳು.

ಚಿವುರು (ಕ್ರಿ). ೧. (ಉಗುರಿನಿಂದ) ಪರಚು, –ಕೆರೆ. (ನಾ). ೨. ಕೆರೆಯುವಿಕೆ.

ಚಿಹ್ನ = ಚಿನ್ನೆ.

ಚಿಹ್ನೆ = ಚಿನ್ನೆ.

ಚಿಳ್ಳೆ (ನಾ). ೧. ಸಣ್ಣದು; ಮರಿ. ೨. = ಚಿಲ್ಲೆ.

ಚೀಜು (ನಾ). ೧. (ಮಹತ್ವವುಳ್ಳ) ಪದಾರ್ಥ, –ವಸ್ತು. ೨. ಹಾಡು; ಪದ.

ಚೀಟಿ (ನಾ). ೧. ಬಣ್ಣಬಣ್ಣದ ಚಿತ್ರದ ನಮೂನೆಗಳಿಂದ ಅಚ್ಚೊತ್ತಿದ ಬಟ್ಟೆ. ೨. ಬರಹದಿಂದ ಕೂಡಿದ ಸಣ್ಣ ಕಾಗದ. ೩. ಕಂತಿನ ರೂಪದಲ್ಲಿ ನಡಸುವ ಹಣದ ವ್ಯವಹಾರ.

ಚೀಟು (ನಾ). ೧. ಸಣ್ಣ ಕಾಗದ, –ಪತ್ರ. ೨. ಭೀತಿ, ರೋಗಾದಿಗಳ ಪರಿಹಾರಕ್ಕಾಗಿ ಕಟ್ಟಿಕೊಳ್ಳುವ ಯಂತ್ರಗಳನ್ನು ಬರೆಯುವ ತಾಳೆಗರಿ, ಭೂರ್ಜಪತ್ರ ಮೊದಲಾದುವು. ೩. ಅಂಚೆಯ ಚೀಟಿ; ಸ್ಟಾಂಪು. ೪. ದಾಖಲೆ ಪತ್ರ. ೫. ಸ್ವಲ್ಪ; ಚೂರು.

ಚೀಡೆ (ನಾ). ಒಂದು ಬಗೆಯ ತಿಂಡಿ.

ಚೀತ್ಕರಿಸು (ಕ್ರಿ). ೧. ಗಟ್ಟಿಯಾಗಿ ಅರಚು. ಆರ್ತನಾದ ಮಾಡು. ೨. ನೀರು ಮುಂತಾದುವನ್ನು ಶಬ್ದವಾಗುವಂತೆ ಕುಡಿ.

ಚೀತ್ಕಾರ (ನಾ). ಆರ್ತನಾದ.

ಚೀನ (ನಾ) ೧. ರೇಷ್ಮೆಯ ಬಟ್ಟೆ. ೨. ಒಂದು ವಾದ್ಯ ವಿಶೇಷ.

ಚೀನಿ (ನಾ). ೧. ಚೀನಾದೇಶದಲ್ಲಿ ಉತ್ಪನ್ನವಾದುದು. ೨. ರೇಷ್ಮೆಬಟ್ಟೆ. ೩. ಒಂದು ಬಗೆಯ ಸಕ್ಕರೆ; ಬೂರಾಸಕ್ಕರೆ. ೪. ಕರ್ಪೂರ. ~ಕಾಯಿ = ಸಿಹಿಕುಂಬಳಕಾಯಿ; ಸಕ್ಕರೆಗುಂಬಳ.

ಚೀಪು (ಕ್ರಿ). ೧. ಹೀರು; ಸೀಪು. (ನಾ). ೨. ಕಲ್ಲಿನ ಅಥವಾ ಮರದ ಚೂರು. ೩. ಒಂದು ಜಾತಿಯ ಕೆಸುವಿನ ಬಳ್ಳಿ.

ಚೀರ (ನಾ). ೧. ಮರದ ತೊಗಟೆ. ೨. ಬಟ್ಟೆ; ವಸ್ತ್ರ. ೩. ನಾರುಬಟ್ಟೆ; ವಲ್ಕಲ. ೪. = ಚೀಲ. ೫. ಚಿಂದಿಬಟ್ಟೆ; ಹರಕುಬಟ್ಟೆ. ೬. ನಾಲ್ಕು ಎಳೆಗಳ ಹಾರ. ೭. ಗೆರೆ; ರೇಖೆ.

**ಚೀರಣ** ೧. = ಚೀಲಣ. ೨. ಚೀರಣದಿಂದ ಮಾಡಿದ ಕೆತ್ತನೆಯ ಕೆಲಸ.

**ಚೀರು** ೧. = ಚೀರ್. ೨. = ಚಿವುರು. (ನಾ). ೩. ಕೆಸರುಮಣ್ಣು.

**ಚೀರ್**(ರ್,ರು,ಉ) (ಕ್ರಿ). ಕೂಗು; ಅರಚು. ~ಇಕೆ = ಕಿರಿಚಾಟ; ಕೂಗಾಟ.

**ಚೀಲ** (ನಾ). ಪದಾರ್ಥಗಳನ್ನು ತುಂಬಲು ಬಟ್ಟೆ, ಗೋಣಿ ಮೊದಲಾದುವುಗಳಿಂದ ಮಾಡಿದ ಸಾಧನ; ಸಂಚಿ.

**ಚೀಲಣ** (ನಾ). ಲೋಹವನ್ನು ಕತ್ತರಿಸುವ ಸಾಧನ; ಉಳಿ; ಚಾಣ. ~ಇಸು = ಕೆತ್ತು; ಕಂಡರಿಸು.

**ಚೀಲಾಯು** (ನಾ). ಸಣ್ಣಕತ್ತಿ; ಸುರಿಗೆ.

**ಚೀಲಿ** (ನಾ). ಬೆಕ್ಕು; ಮಾರ್ಜಾಲ.

**ಚೀವರ** (ನಾ). ಸಂನ್ಯಾಸಿಗಳು ತೊಡುವ ಬಟ್ಟೆ.

**ಚೀವು** (ಕ್ರಿ). ೧. ಉಗುರು, ಸೀಸದ ಕಡ್ಡಿ ಮುಂತಾದುವುಗಳನ್ನು ಹೆರೆ. ೨. ರಸವನ್ನು ಹೀರು; ಚೀಪು.

**ಚುಂಗಡಿ** (ನಾ). ೧. ಅಲ್ಪವಾದುದು; ಚಿಕ್ಕದು. ೨. ಚಿಲ್ಲರೆ ಹಣ. ೩. ಬಡ್ಡಿ. ೪. ಒಂದು ಬಗೆಯ ಹೊಳೆಯುವ ಬಟ್ಟೆ.

**ಚುಂಗಾಣಿ** (ನಾ). ಜೇಡಿಮಣ್ಣಿನಿಂದ ಮಾಡಿದ ಹೊಗೆಬತ್ತಿಯ ಕೊಳವೆ.

**ಚುಂಗು** (ನಾ). ೧. ತುದಿ; ಅಂಚು. ೨. (ರುಮಾಲು, ಪಂಚೆ ಮೊದಲಾದುವುಗಳನ್ನು ಉಡುವಾಗ ಅಲಂಕಾರವಾಗಿ ಬಿಡುವ) ನೆರಿಗೆ, -ಮಡಿಕೆ. ೩. ಒಂದು ಬಗೆಯ ಆಭರಣ; ಕುಚ್ಚು. ೪. ಕೂದಲು. ೫. ಹುಲ್ಲು ಮುಂತಾದ ಎಲೆಯ ಮೇಲಿರುವ ನಾರು; ಜುಂಗು. ೬. (ಗಂಜಲದ) ವಾಸನೆ, -ನಾತ.

**ಚುಂಗುಳ** (ನಾ). ಒಂದು ಬಗೆಯ ಹುಳು.

**ಚುಂಚು** (ನಾ). ೧. ಪಕ್ಷಿಯ ಕೊಕ್ಕು. ೨. ಸೊಂಡೆ; ಮೂತಿ. ೩. ಚಿಕ್ಕದು; ಸಣ್ಣದು. ೪. ಸೂರು; ಒಪ್ಪಾರು. ೫. ಸುಳಿಗೂದಲು; ಗುಂಗುರುಕೂದಲು. ೬. ಒಂದು ಬಗೆಯ ವನಸ್ಪತಿ. (ಗು). ೭. ಹೆಸರುವಾಸಿಯಾದ; ಪ್ರಖ್ಯಾತವಾದ. ~ಲೋವೆ = ಗೋಡೆಯಿಂದ ಮುಂಚಾಚಿಕೊಂಡಿರುವ ಭಾಗ.

**ಚುಂಡಿ** (ನಾ). ಸಣ್ಣಬಾವಿ.

**ಚುಂಡಿಲಿ** (ನಾ). ೧. ಸುಂಡಿಲಿ. ೨. ಸಂಬಾರ ಹಾಕಿ ಬೇಯಿಸಿದ ಕಾಳು; ಉಸಳಿ.

**ಚುಂದಿ** (ನಾ). ಕುಂಟಣಿ; ತಲೆಹಿಡುಕಿ.

**ಚುಂಬಕ** (ನಾ). ೧. ಚುಂಬಿಸುವವನು. ೨. ಕಾಮುಕ. ೩. ಮೋಸಗಾರ; ವಂಚಕ. ೪. ಸೂಜಿಗಲ್ಲು; ಅಯಸ್ಕಾಂತ. ೫. ಆಕರ್ಷಕವಾದುದು. ~ಗಾಳಿ = ಆಕರ್ಷಣೆಯ ಶಕ್ತಿಯುಳ್ಳ ಗಾಳಿ.

**ಚುಂಬನ** (ನಾ). ೧. ಮುತ್ತು; ಮುದ್ದು. ೨. ಮೃದುವಾದ ಸ್ಪರ್ಶ.

**ಚುಂಬಿ** (ನಾ). ೧. ತುದಿ; ಕೊನೆ. (ಗು). ೨. ತಾಗುವ; ಮುಟ್ಟುವ.

**ಚುಂಬಿಸು** (ಕ್ರಿ). ೧. ಮುತ್ತಿಡು. ೨.(ಮೃದುವಾಗಿ) ಮುಟ್ಟು, -ಸೋಕು.

**ಚುಕಾಯಿಸು** (ಕ್ರಿ). ೧. ಮೇರೆ ಮೀರು; ಮುಂದುವರಿ. ೨. ಮುಗಿಸು; ಪೂರೈಸು. ೩. ಸರಿಹೊಂದಿಸು. ೪. ಬೆಲೆಯನ್ನು ನಿಗದಿಪಡಿಸು.

**ಚುಕ್ಕಾಣಿ** (ನಾ). ೧. (ಹಡಗು, ವಿಮಾನ ಮುಂತಾದುವುಗಳ) ದಿಕ್ಕನ್ನು ಬದಲಿಸಲು ಸಹಾಯ ಮಾಡುವ ಒಂದು ಸಾಧನ. ೨. ಮಾರ್ಗದರ್ಶಿಯ ಸ್ಥಾನ, -ಪದವಿ. ~ಇಗ = ಚುಕ್ಕಾಣಿಯನ್ನು ಹಿಡಿದಿರುವವನು; ಕರ್ಣಧಾರ.

**ಚುಕ್ಕಿ** ೧. = ಚುಕ್ಕೆ. ೨. ರಾಕ್ಷಸರ ಗುರು; ಶುಕ್ರಾಚಾರ್ಯ. ~ಕು(ಗು)ವರ = ಶುಕ್ರಾಚಾರ್ಯನ ಶಿಷ್ಯ; ರಾಕ್ಷಸ.

**ಚುಕ್ಕೆ** (ನಾ). ೧.ತಾರೆ ; ನಕ್ಷತ್ರ. ೨.ವರ್ತುಲಾಕಾರದ ಸಣ್ಣ ಗುರುತು ; ಟಿಮ್ಕು ; ಚುಕ್ಕಿ. ೩. ಶುಕ್ರಗ್ರಹ. ೪.ಅಲ್ಪ ; ಹೀನ. ೫.ಹುಳಿಯಾದ ಎಲೆಗಳುಳ್ಳ ಒಂದು ಜಾತಿಯ ಸಸ್ಯ. **~ದುಪ್ಪಿ** = ಮೈಮೇಲೆ ಸಣ್ಣಸಣ್ಣ ಚುಕ್ಕೆಗಳಿರುವ ಜಿಂಕೆ ; ಕೃಷ್ಣಸಾರಂಗ.

**ಚುಕ್ತಾ** (ನಾ). (ಹಣವನ್ನು) ಬಾಕಿ ಇಲ್ಲದಂತೆ ತೀರಿಸುವುದು.

**ಚುಕ್ತಿ** = ಚುಕ್ತಾ.

**ಚುಚುಂದರ** (ನಾ). ಒಂದು ಜಾತಿಯ ಇಲಿ ; ಸುಂಡಿಲಿ.

**ಚುಚ್ಚು** ೧. = ಚುಚ್ಚು. ೨. ಎತ್ತಿಕಟ್ಟು ; ಪ್ರಚೋದಿಸು. ೩. ರಂಧ್ರಮಾಡು. (ನಾ). ೪. ಇರಿತ ; ತಿವಿತ. ೫.ಬಯ್ಗುಳು; ನಿಂದೆ. **~ನೋಟ** = ತೀಕ್ಷ್ಣವಾದ ದೃಷ್ಟಿ. **~ಮದ್ದು** = ದೇಹಕ್ಕೆ ಸೂಜಿಯ ಮೂಲಕ ಕೊಡುವ ಔಷಧ ; ಸೂಜಿಮದ್ದು.

**ಚುಚ್ಚುಗ** (ನಾ). ಮಗುಚುವ ಕೈ ; ಕಡಚಿ.

**ಚುಚ್ಚುಳ** (ನಾ). ೧. ತೀಕ್ಷ್ಣವಾದ ಮಾತು ; ಚುಚ್ಚುನುಡಿ. ೨. ಚುಚ್ಚುಮಾತನ್ನಾಡುವವನು.

**ಚುಜ್ಜಲು** (ನಾ). ಒಂದು ಜಾತಿಯ ಮರ ; ಸುಜ್ಜಲು.

**ಚುಟಕ** (ನಾ). ಅಣಕದಿಂದ ಕೂಡಿದ ಪದ್ಯ ; ಪ್ರಹೇಳಿಕೆ.

**ಚುಟಿಕೆ** (ನಾ). ಮಕ್ಕಳ ಬೇನೆಗೆ ಬಳೆ ಮುಂತಾದುವುಗಳಿಂದ ಹಾಕುವ ಬರೆ.

**ಚುಟುಕ** ೧. = ಚುಟಕ. ೨. = ಚುಟುಕು.

**ಚುಟುಕು** (ನಾ). ೧. ಸಣ್ಣದು ; ಚಿಕ್ಕದು. (ಗು). ೨. ಸಣ್ಣದಾದ; ಚಿಕ್ಕದಾದ.

**ಚುಟ್ಟ** (ನಾ). ೧. ಹೊಗೆಸೊಪ್ಪಿನ ಎಲೆಯಲ್ಲಿ ಸುತ್ತಿ ಸೇದುವ ಹೊಗೆಸೊಪ್ಪಿನ ಬತ್ತಿ; ಬೀಡಿ. ೨. ಚಿಕ್ಕದು ; ಸಣ್ಣದು. ೩. ಸಣ್ಣ ಉಂಡೆ, –ಗುಳಿಗೆ.

**ಚುಡಾಯಿಸು** = ಛೇಡಿಸು.

**ಚುನಾಯಿತ** (ಗು). ಆರಿಸಲ್ಪಟ್ಟ ; ಆಯ್ಕೆಯಾದ.

**ಚುನಾಯಿಸು** (ಕ್ರಿ). ಆರಿಸು; ಆಯ್ಕೆಮಾಡು.

**ಚುನಾವಣೆ** (ನಾ). ಆರಿಸುವುದು ; ಆಯ್ಕೆ.

**ಚುನ್ನ** (ನಾ). ೧.ನಿಂದೆ ; ಬಯ್ಗುಳು. ೨.ಆಸೆ; ಅಪೇಕ್ಷೆ. ೩. ಅಣಕ ; ಕೊಂಕುನುಡಿ ; ವ್ಯಂಗ್ಯೋಕ್ತಿ. ೪. ತಪ್ಪು ; ದೋಷ. ೫. ಅಲ್ಪವಾದುದು ; ಕ್ಷುದ್ರವಾದುದು. (ಗು). ೬. ಹೀನವಾದ; ಅಲ್ಪವಾದ. **~(ಂ)ಆ(ವಾ)ಡು** = ೧. ಚುಚ್ಚುಮಾತನ್ನಾಡು ; ಕೊಂಕುನುಡಿ. ೨. ನಿಂದಿಸು ; ಬಯ್ಯು. ೩. ಅಪಹಾಸ್ಯ ಮಾಡು. ೪. ಚೋದಿಸು ; ಪ್ರೋತ್ಸಾಹಿಸು. **~(ಂ)ಗೆಯ್** = ಹೀಯಾಳಿಸು ; ಅವಹೇಳನ ಮಾಡು. **~ಕ** = ನಿಂದಿಸುವವನು; ತೆಗಳುವವನು. **~ನುಡಿ** = ಅಣಕ ; ಚುಚ್ಚುಮಾತು.

**ಚುಂಬುಕ** (ನಾ). ತುಟಿಯ ಕೆಳಭಾಗ ; ಗದ್ದ. **~ಅಗ್ರ** = ಗದ್ದದ ತುದಿ.

**ಚುರಮುರಿ** = ಚುರುಮುರಿ.

**ಚುರಿ** (ನಾ). ಸಣ್ಣಬಾವಿ.

**ಚುರುಕು** (ನಾ). ೧. ಚಾಕಚಕ್ಯತೆ ; ಚತುರತೆ. ೨. ಸೂಕ್ಷ್ಮವಾದುದು ; ಚಾಲಾಕಾದುದು. ೩.ಕಾವು ; ಬಿಸುಪು. ೪. ವೇಗ; ಲಗುಬಗೆ. ೫. = ಚುಱುಕು. (ಗು). ೬. ತೀಕ್ಷ್ಣವಾದ; ಹರಿತವಾದ. ೭.ಚಾತುರ್ಯದಿಂದ ಕೂಡಿದ; ಚಾಲಾಕಾದ.

**ಚುರುಗುಟ್ಟು** (ಕ್ರಿ). ೧. ತೀಕ್ಷ್ಣವಾಗಿ ನೋವಾಗು. ೨. ಹಸಿವೆಯಿಂದ ಬಾಧೆಯಾಗು.

**ಚುರುಟು** (ನಾ). ಒಂದು ಬಗೆಯ ಹೊಗೆಬತ್ತಿ.

**ಚುರುಮುರಿ** (ನಾ). ಮಂಡಕ್ಕಿ ; ಪುರಿ.

**ಚುಜು(ರ)ಚಿ** = ತುಜುಚಿ.

**ಚುಳು(ರು)ಕು** (ನಾ). (ಚಾಕು ಮುಂತಾದುವು ಗಳಂತೆ) ಮೊನಚಾಗಿರುವಿಕೆ.
**ಚುರ್ಚಿ** (ನಾ). ಕಣ್ಣು ಉರಿಯುವ ಒಂದು ಬಗೆಯ ರೋಗ; ಉರಿಗಣ್ಣು.
**ಚುರ್ಚು** (ಕ್ರಿ). ೧. (ಆಯುಧ, ಮುಳ್ಳು ಮೊದಲಾದುವುಗಳಿಂದ) ತಿವಿ, -ಚುಚ್ಚು. ೨. ಸುಡು; ದಹಿಸು. ~(ಂ)ಕೊ(ಗೊ)ಳ್ಳಿ = ಉರಿಯುವ ಕೊಳ್ಳಿ; ಸೂಟಿ. ~ಪಾ(ವಾ)ಯ್ = ಮೇಲೆ ಬೀಳು.
**ಚುಲಕ** (ನಾ). ಸೇರೆ; ಕುಡಿತೆ; ಬೊಗಸೆ.
**ಚುಲು(ಳು)ಕ** ೧. = ಚುಲಕ. ೨. ಕರಡಿಗೆ; ಭರಣಿ. ~ಉದಕ = ಅಂಗೈಯಲ್ಲಿ ಹಿಡಿಯುವಷ್ಟು ನೀರು; ಮುಕ್ಕುನೀರು.
**ಚುಲ್ಲ್ಹಾರಿ** = ಚಿಲ್ಲೇರಿ.
**ಚುಲ್ಲ** (ನಾ). ೧. ಅಲ್ಪತನ; ಕ್ಷುದ್ರತೆ. ೨. ಸೋರುಗಣ್ಣು; ನೀರು ಸುರಿಯುವ ಕಣ್ಣು. ೩. ಸೋರುಗಣ್ಣಿನವನು. (ಗು). ೪. ಕೀಳಾದ; ಕ್ಷುದ್ರವಾದ.
**ಚುಲ್ಲಿ** (ನಾ). ಒಲೆ; ಅಶ್ಮಂತಕ.
**ಚುಳಕ** ೧. = ಚುಲಕ. (ಗು). ೨. ಸೂಕ್ಷ್ಮವಾದ. ~ಪಾನ = ಅಂಗೈಯಲ್ಲಿ ತುಂಬುವಷ್ಟು ನೀರು.
**ಚುಳಿಕೆ** (ನಾ). ಉಕ್ಕಿನ ಅಥವಾ ಕಬ್ಬಿಣದ ತುದಿಯುಳ್ಳ ಕೋಲು.
**ಚುಳುಕು** (ನಾ). ಅತಿ ಸೂಕ್ಷ್ಮವಾದುದು; ತೀರ ಸಣ್ಣದಾಗಿರುವುದು.
**ಚುಳ್ಳಿ** (ನಾ). ೧. ಒಂದು ಜಾತಿಯ ಸಾಗವಾನಿ ಮರ. ೨. ಒಂದು ಜಾತಿಯ ಮುಳ್ಳುಪೊದೆ. ೩. ತುಟಿಗಳನ್ನು ಚುಂಚಿನಂತೆ ಚಾಚುವುದು.
**ಚೂಕು** (ನಾ). ತಪ್ಪು; ನ್ಯೂನತೆ; ಲೋಪ.
**ಚೂಚಕ** ೧. = ಚೂಚುಕ. ೨. ಗೊಂಚಲು.
**ಚೂಚುಕ** (ನಾ). ಮೊಲೆಯ ತೊಟ್ಟು.
**ಚೂಟಾಟ** (ನಾ). ಒಂದು ಬಗೆಯ ಆಟ; ಮುಟ್ಟಾಟ.
**ಚೂಟಿ** (ನಾ). ೧. ಚುರುಕು; ವೇಗ. ೨. ಯುಕ್ತಿ; ಹಂಚಿಕೆ. ೩. ಚತುರತೆ; ಜಾಣತನ. ೪. ರಜೆ. ೫. ಸೋಡಿಬಿಡುವುದು.
**ಚೂಡ** (ನಾ). ೧. ಶಿಖೆ; ಜುಟ್ಟು. ೨. (ನವಿಲು, ಹುಂಜ ಮುಂತಾದುವುಗಳ) ತಲೆಯ ಮೇಲಿನ ತುರಾಯಿ, -ಕೊಟ್ಟು. ೩. ಶಿಖರ; ತುದಿ. ೪. ಜಡೆಗಟ್ಟಿರುವ ಕೂದಲು.
**ಚೂಡಾ** = ಚಿವಡಾ.
**ಚೂಡಾಕರಣ** (ನಾ). (ಮೊದಲನೆಯ ಬಾರಿಗೆ) ಗಂಡುಮಕ್ಕಳಿಗೆ ತಲೆಯ ಕೂದಲನ್ನು ತೆಗೆಸುವ ವಿಧಿ; ಚೌಲ.
**ಚೂಡಾಮಣಿ** (ನಾ). ೧. ತಲೆಯಲ್ಲಿ ಧರಿಸುವ ರತ್ನದ ಆಭರಣ. ೨. ಶ್ರೇಷ್ಠನಾದ ವ್ಯಕ್ತಿ ಅಥವಾ ವಸ್ತು.
**ಚೂಡಾರತ್ನ** = ಚೂಡಾಮಣಿ.
**ಚೂಡಿಕೆ** (ನಾ). ತುದಿ; ಶಿಖರ.
**ಚೂಡೆ** (ನಾ). ೧. ಶಿಖೆ; ಜುಟ್ಟು. ೨. (ನವಿಲು, ಹುಂಜ ಮುಂತಾದುವುಗಳ) ತಲೆಯ ಮೇಲಿನ ತುರಾಯಿ, -ಕೊಟ್ಟು. ೩. ಶಿಖರ; ತುದಿ. ೪. ತಲೆ; ಶಿರಸ್ಸು. ೫. ಕಿರೀಟದ ತುದಿಯ ಗುಚ್ಛ; ಸಿರಪೇಷು. ೬. ತೋಳು ಬಳೆ; ವಂಕಿ.
**ಚೂಣಿ** (ನಾ). ೧. ಮುಂಭಾಗ. ೨. ಯುದ್ಧದಲ್ಲಿ ಮುಂದೆ ನಿಲ್ಲುವ ಸೈನ್ಯ; ಮುಂದಳ. ~ಕಾ(ಗಾ)ಳೆಗ = ಸೈನ್ಯದ ಮುಂಭಾಗದಲ್ಲಿ ನಡೆಯುವ ಯುದ್ಧ; ಮುಂಚೂಣಿ ಯುದ್ಧ.
**ಚೂಣಿಗ** (ನಾ). ಸೈನ್ಯದ ಮುಂಭಾಗದಲ್ಲಿ ನಿಂತು ಕಾದುವವನು.
**ಚೂತ** (ನಾ). ಮಾವಿನ ಮರ. ~ಅಂಕುರ = ಮಾವಿನ ಚಿಗುರು; ಮಾಂದಳಿರು. ~ಡಿಂಭ = ಚೂತಾಂಕುರ. ~ನಂದನ = ಮಾವಿನ ತೋಟ.

ಚೂಪು (ನಾ). ೧. ಕಣ್ಣು ; ನೇತ್ರ. ೨. ನೋಟ; ದೃಶ್ಯ. ೩. ಹರಿತ ; ತೀಕ್ಷ್ಣತೆ. (ಗು). ೪. ಹರಿತನಾದ; ತೀಕ್ಷ್ಣವಾದ; ಮೊನಚಾದ.

ಚೂಪುಗಾರಿಕೆ (ನಾ). ೧. ಕುಶಲತೆ ; ಚಾಲಾಕುತನ. ೨. ತೋರಿಕೆ ; ಆಡಂಬರ.

ಚೂರ್ (ಕ್ರಿ). ೧. ಹರಿತವಾಗು ; ತೀಕ್ಷ್ಣವಾಗು. ೨. ತಿರುಗು ; ಸುತ್ತು. ~ಮೊನೆ = ಹರಿತನಾದ ತುದಿ ; ತೀಕ್ಷ್ಣವಾದ ಧಾರೆ.

ಚೂರಿ (ನಾ). ಸಣ್ಣ ಕತ್ತಿ ; ಸುರಿಗೆ.

ಚೂರಿಸು (ಕ್ರಿ). ೧. ಪುಡಿಮಾಡು ; ನಾಶಗೊಳಿಸು. ೨. ಕಾಡು; ಪೀಡಿಸು. ೩. ಝಳಪಿಸು ; ತಿರುಗಿಸು. ೪. ಚಾಚು ; ನೀಡು. ೫. ಉರಿಯನ್ನು ಕಾರು ; ಉಗ್ರವಾಗು.

ಚೂರು (ಕ್ರಿ). ೧. ಕೆರೆ ; ಗೆಬರು. (ನಾ). ೨. ತುಂಡು ; ಹೋಳು. (ಗು). ೩. ತುಸು ; ಕೊಂಚ.

ಚೂರ್ಣ (ನಾ). ೧. ಒಂದು ಬಗೆಯ ಗೆಡ್ಡೆ ; ಸುವರ್ಣಗಡ್ಡೆ. ೨. ಸುಣ್ಣ. ೩. ಚೂರು ; ತುಂಡು. ೪. (ಚಂದನ, ಕರ್ಪೂರ ಮೊದಲಾದ ದ್ರವ್ಯಗಳ) ಹುಡಿ, –ಪುಡಿ. ೫. ಗದ್ಯದ ಒಂದು ಭೇದ. ~ಇಗ = ನಾಶ ಮಾಡುವವನು. ~ಕುಂತಲ(ಳ) = ಗುಂಗುರು ಕೂದಲು.

ಚೂರ್ಣಿ (ನಾ). ೧. ನೂರು ಕವಡೆಗಳ ಮೊತ್ತ. ೨. ನಿರುತ್ತರಗೊಳಿಸುವ ತರ್ಕ.

ಚೂರ್ಣಿಕೆ (ನಾ). ೧. ಹಾಡಿನ ಒಂದು ಪ್ರಕಾರ. ೨. ಸುಲಭ ಶೈಲಿಯ ಒಂದು ಗದ್ಯಪ್ರಕಾರ.

ಚೂಲ(ಳ) (ನಾ). ೧. ಜುಟ್ಟು ; ಶಿಖೆ. ೨. ತುದಿ ; ಶಿಖರ.

ಚೂಲಿ(ಳಿ)ಕೆ (ನಾ). ೧. (ಆನೆಯ) ಕಿವಿಯ ಬುಡ. ೨. ಹುಂಜ, ನವಿಲು ಮುಂತಾದುವುಗಳ ತಲೆಯ ಕೊಟ್ಟು ; ತುರಾಯಿ. ೩. (ಬೆಟ್ಟ, ಮರ ಮುಂತಾದುವುಗಳ) ತುದಿ, –ಶಿಖರ. ೪. ಮುಂಭಾಗ; ಮುಂಬದಿ. ೫. ಕೂದಲು ; ಕೇಶ. ೬. ನಾಟಕದಲ್ಲಿ ಮುಂದೆ ಬರುವ ವಿಷಯವನ್ನು ತೆರೆಯ ಹಿಂದಿನಿಂದ ಸೂಚಿಸುವುದು.

ಚೂಳಯ (ನಾ). ತಿಲಕ ; ಬೊಟ್ಟು.

ಚೂಳಿ (ನಾ). ೧. ಹೆರಳು. ೨. ರಾಜಚಿಹ್ನೆಗಳಲ್ಲಿ ಒಂದು. ೩. ತುದಿ ; ಕೊನೆ. ೪. = ಚೂಣಿ.

ಚೂಳೆಯ (ನಾ). ಬೈತಲೆಗೆ ಇಡುವ ಮುತ್ತಿನ ಆಭರಣ ; ಹಣೆಬೊಟ್ಟು.

ಚೆಂ (ನಾ). ಕೆಂಪು ; ಕೆಂಪಾದುದು. ~ಕ(ಗ)ಣಗಿಲೆ = ೧. ಕೆಂಪುಕಣಗಿಲೆ. ೨. ತಾವರೆ. ~ಕ(ಗ)ದಿರ್ = ಕೆಂಪಾದ ಕಿರಣ. ~ಕಾ(ಗಾ)ವಿ = ೧. ಕೆಂಪು ಮಿಶ್ರಿತ ಕಾವಿ ಬಣ್ಣ. ೨. ಕೆಂಪುಕಾವಿಯ ಬಣ್ಣದ ಸೀರೆ. ~ಕು(ಗು)ಡಿ = ೧. ಕೆಂಪಾದ ಚಿಗುರು, –ಪಲ್ಲವ. ೨. ಹವಳ ; ಪ್ರವಾಳ. ~ತ(ದ)ಳ = ಕೆಂಪಗಿರುವ ಅಂಗೈ ; ಕೆಂದಳ. ~ತ(ದ)ಳಿರ್(ರು) = ಕೆಂಪಾದ ಚಿಗುರು ; ಎಳೆಯ ಚಿಗರು. ~ತೆ(ದೆ)ಂಗು = ಕೆಂಪುಬಣ್ಣದ ತೆಂಗಿನ ಕಾಯಿ ಮತ್ತು ಅದರ ಮರ. ~ಪೊ(ಬೊ)ನ್ = ೧. ತಾಮ್ರ. ೨. ಅಪರಂಜಿ ; ಬಂಗಾರ. ೩. ಚಿನ್ನದ ನಾಣ್ಯ. ~ಬಣ್ಣ = ೧. ಕೆಂಪು ಬಣ್ಣ. ೨. ಕೆಂಪುಬಣ್ಣದ ಬಟ್ಟೆ.

ಚೆಂಗದಿರ (ನಾ). ಕೆಂಪಾದ ಕಿರಣಗಳಿಂದ ಕೂಡಿದವನು ; ಸೂರ್ಯ.

ಚೆಂಗು (ಕ್ರಿ). ೧. ಜಿಗಿದುಹೋಗು ; ಓಡಿ ಹೋಗು. ೨. = ಚಂಗು.

ಚೆಂಗೂಲಿ (ನಾ). ೧. ದಿನಗೂಲಿಯವನು. ೨. ಸೂಳೆ ; ವೇಶ್ಯೆ.

ಚೆಂಡಿಕೆ (ನಾ). ಜುಟ್ಟು ; ಶಿಖೆ.

ಚೆಂಡು (ನಾ). ೧. ಆಟವಾಡುವ ಗುಂಡನೆಯ ವಸ್ತು ; ಕಂದುಕ. ೨. ತಲೆ. ~ಆಡು = ೧. ಚೆಂಡಿನ ಆಟವಾಡು. ೨. ಕೊಲ್ಲು ;

ಸಂಹರಿಸು. ~ಇಸು = ತಲೆಯನ್ನು ಕತ್ತರಿಸು. ~ಪೂ(ವೂ,ಹೂ) = ಒಂದು ಜಾತಿಯ ಹಳದಿ ಹೂವು. ~ಮಲ್ಲಿಗೆ = ಒಂದು ಜಾತಿಯ ಗುಂಡು ಮಲ್ಲಿಗೆ.

ಚೆಂಡೆ (ನಾ). ಒಂದು ಬಗೆಯ ಚರ್ಮ ವಾದ್ಯ.

ಚೆಂಬು (ನಾ). ೧. ತಾಮ್ರ ಮುಂತಾದ ಲೋಹದ ಗುಂಡನೆಯ ಪಾತ್ರೆ; ಚೊಂಬು. ೨. ಒಂದು ಬಗೆಯ ಲೋಹ; ತಾಮ್ರ.

ಚೆಂಬೋತ (ನಾ). ಒಂದು ಜಾತಿಯ ಕೆಂಪು ಬಣ್ಣದ ಪಕ್ಷಿ; ಸಂಬಾರಕಾಗೆ.

ಚೆಕ್ಕಿಸು (ಕ್ರಿ). ಹಿಂದಕ್ಕೆ ಅಟ್ಟು; ಹಿಮ್ಮೆಟ್ಟಿಸು.

ಚೆಕ್ಕು (ನಾ). ಗಾಣ.

ಚೆಚ್ಚರ = ಚಚ್ಚರ. ~ಇಕೆ = ಚಳಕ; ಕೌಶಲ.

ಚೆಚ್ಚು (ಕ್ರಿ). ೧. ಹೊಡೆ; ಬಡಿ; ಚಚ್ಚು. ೨. ಕುಟ್ಟು; ಪುಡಿಮಾಡು.

ಚೆಜ್ಜ (ನಾ). ೧. ಕಟ್ಟಡದ ಕಿಟಕಿ, ಬಾಗಿಲುಗಳ ಮೇಲೆ ಹೊರಚಾಚಿಕೊಂಡಿರುವ ಛಾವಣಿಯ ಮೇಲ್ಭಾಗ; ಸಜ್ಜ. ೨. ಮೇಲ್ಛಾವಣಿ; ವಿತಾನ.

ಚೆದಱು(ರು) (ಕ್ರಿ). ೧. ಹರಡು; ಪಸರಿಸು. ೨. ಚೆಲ್ಲಾಪಿಲ್ಲಿಯಾಗು; ಬೇರೆಬೇರೆಯಾಗು. ೩. ಚೆದರಿಸು; ದಿಕ್ಕಾಪಾಲುಮಾಡು.

ಚೆನ್ (ನಾ). ೧. ಅಂದ; ಸೊಗಸು. ೨. ಸರಿಯಾಗಿರುವಿಕೆ; ನೇರ್ಪು. ೩.= ಚೆಂ. ~ಅಡಿ = ೧. ಚೆಲುವಾದ ಪಾದ. ೨. ಸುಂದರವಾದ ತಳಭಾಗ. ~ಅಲರ್(ರು) = ೧. ಚೆನ್ನಾಗಿ ವಿಕಾಸವಾಗು, -ಅರಳು. ೨. ಚೆನ್ನಾಗಿ ಹಿಗ್ಗು, -ಸಂತೋಷಗೊಳ್ಳು. ೩. ಅಂದವಾದ ಹೂವು. ~ಇಗ=ಚೆಲುವ; ಸುಂದರ. ~ನೀರ್ = ನೆತ್ತರು; ಕೆನ್ನೀರು. ~ನೆಯ್ದಿಲ್(ಲು) = ಕೆಂಪು ನೈದಿಲೆ; ರಕ್ತೋತ್ಪಲ. ~ನೇಸಱ್(ರ್, ರು, ಱು) = ಕೆಂಪಾಗಿರುವ ಸೂರ್ಯ.

ಚೆನ್ನ (ನಾ). ೧. ಸುಂದರನಾದವನು; ಚೆಲುವ. ೨. ಶೂರ; ಪರಾಕ್ರಮಿ. ೩. ಒಳ್ಳೆಯದು. ೪. ಚೆಲುವು; ಸೊಗಸು. (ಗು). ೫. ಮಿಗಿಲಾದ; ಶ್ರೇಷ್ಠವಾದ. ೬. ಅಂದವಾದ; ಮನೋಹರವಾದ. ~ಪೊಂಗ = ಉತ್ತಮನಾದ ದರ್ಪಶಾಲಿ, -ಉದ್ಧಟ.

ಚೆನ್ನಂಗಿ (ನಾ). ಒಂದು ಜಾತಿಯ ಮರ.

ಚೆನ್ನಾಗಿ (ಅ). ಅಂದವಾಗಿ; ಸೊಗಸಾಗಿ.

ಚೆನ್ನು (ನಾ). ೧. ಒಳ್ಳೆಯದು. ೨. ಸೊಗಸು; ಚೆಲುವು.

ಚೆನ್ನೆ (ನಾ). ೧. ಚೆಲುವೆ; ಸುಂದರಿ. ೨. = ಚೆನ್ನಂಗಿ. ೩. ಒಂದು ಬಗೆಯ ಆಟ; ಅಟ್ಟಗುಳಿ ಮಣೆಯಾಟ.

ಚೆಯ್ = ಚಯ್. ~ಆಡು=ಚಲ್ಲಾಟವಾಡು; ವಿನೋದಮಾಡು.

ಚೆಲ್(ಲು) (ಗು). ಚೆಲುವಾದ; ಸುಂದರವಾದ.

ಚೆಲದಿ (ನಾ). ಜೇಡರಹುಳು.

ಚೆಲುವ (ನಾ). ೧. ಅಂದವಾದುದು. ೨. ಸುಂದರ; ಸ್ಫುರದ್ರೂಪಿ. (ಗು). ೩. ಅಂದವಾದ; ಚೆಲುವಾದ.

ಚೆಲುವೆ = ಚೆಲ್ವೆ.

ಚೆಲ್ಲ (ನಾ). ೧. ಸರಸ; ವಿನೋದ. ೨. ನಗೆ. ~ಆಟ = ವಿನೋದ; ವಿಲಾಸ. ~ಆ(ವಾ)ಡು = ವಿನೋದವಾಡು; ಸರಸವಾಡು. ~ಕ(ಗ)ಣ್ = ವಿಲಾಸವನ್ನು ಸೂಸುವ ನೋಟ.

ಚೆಲ್ಲಗಾರ್ತಿ (ನಾ). ರಸಿಕಳಾದ ಸ್ತ್ರೀ; ವಿಲಾಸವತಿ.

ಚೆಲ್ಲಾಪಿಲ್ಲಿ = ಚಲ್ಲಪಿಲ್ಲಿ.

ಚೆಲ್ಲು ೧. = ಚಲ್ಲು. ೨. ಸುರಿ; ವರ್ಷಿಸು. ೩. ಚಂಚಲವಾಗು. ೪. ಬೀಸು; ಗಾಳಿ ಹಾಕು. ೫. ಚಾಚು; ನೀಡು. ೬. ಕಳೆ; ನೀಗು.

ಚೆಲ್ಲೆ (ನಾ). ೧. ಉದ್ದ ; ನೀಳ. ೨. ತೆಂಗಿನ ಕಾಯಿಗಳನ್ನು ಕೊಯ್ದುಮೇಲೆ ಉಳಿಯುವ ಗೊನೆಯ ಭಾಗ. ೩. ಸರಸ ; ವಿಲಾಸ. (ಗು). ೪. ಉದ್ದವಾದ; ದೀರ್ಘವಾದ. ~ಕ(ಗ)ಣ್ = ಚೆಲ್ಲಗಣ್.

ಚೆಲ್ಲೆಯ (ನಾ). ಒಂದು ಬಗೆಯ ಆಯುಧ; ಹಗುರಾದ ಈಟಿ, –ಭಲ್ಲೆಯ.

ಚೆಲ್ಲೆಹ = ಚೆಲ್ಲೆಯ.

ಚೆಲ್ವ ೧. = ಚೆಲ್ವು. ೨. ಸುಂದರನಾದವನು ; ಚೆಲುವ.

ಚೆಲ್ವು (ನಾ). ೧. ಅಂದ; ಚಂದ. ೨. ಸುಂದರವಾದುದು ; ಮನೋಹರವಾದುದು. ~ಇಕೆ = ಅಂದ ; ಚೆಲುವು. ~ಇಡಿ = ಚೆಲುವಿನಿಂದ ಕೂಡಿರು ; ಸೌಂದರ್ಯ ತುಂಬಿರು. ~ಪ(ವ)ರಿ = ೧. ಅಂದವಾಗಿ ಓಡು, –ಮುಂದುವರಿ. ೨. ಚೆಲುವನ್ನು ಹರಡು, –ಸೂಸು. ~ಪೆ(ವೆ)ಱು(ರು) = ಅಂದವನ್ನು ಪಡೆ ; ಸುಂದರವಾಗು.

ಚೆಲ್ವೆ (ನಾ). ಸುಂದರಿ ; ಅಂದಗಾತಿ.

ಚೆಳ್ಳೆ (ನಾ). ಒಂದು ಜಾತಿಯ ಮರ ; ಸೆಳ್ಳೆ.

ಚೇಗು (ನಾ). ೧. ಗಿಡಮರಗಳ ಮಧ್ಯದ ತಿರುಳು, –ಕೆಚ್ಚು. ೨. ಸಾರ ; ಸತ್ತ್ವ. ೩. ಪಾತ್ರೆಗಳ ತಳಕ್ಕೆ ಅಂಟಿಕೊಂಡಿರುವ ಕಪ್ಪು, –ಮಸಿ. ೪. = ಚೇಗೆ.

ಚೇಗೆ (ನಾ). ಕೇಡು ; ಭಂಗ.

ಚೇಟ (ನಾ). ಸೇವಕ ; ಆಳು.

ಚೇಟಿ (ನಾ). ದಾಸಿ ; ಸೇವಕಿ.

ಚೇಟಿಕೆ = ಚೇಟಿ.

ಚೇಡಿ (ನಾ). ಮಾಟ ; ಯಕ್ಷಿಣೀವಿದ್ಯೆ.

ಚೇಡೆ (ನಾ). ೧. ಮಾಟ, ಮದ್ದು ಮುಂತಾದ ಕ್ಷುದ್ರಕರ್ಮಗಳ ಅಧಿದೇವತೆ. ೨. = ಚೇಡಿ.

ಚೇಣ = ಚಾಣ.

ಚೇಣಿ (ನಾ). ನೀರಿನಲ್ಲಿ ಬೆಳೆಯುವ ಒಂದು ಜಾತಿಯ ಗಟ್ಟಿಯಾದ ಹುಲ್ಲು ; ಜೊಂಡು.

ಚೇತ (ನಾ). ಮನಸ್ಸು ; ಚೇತಸ್ಸು.

ಚೇತನ (ನಾ). ೧. ಮನಸ್ಸು ; ಬುದ್ಧಿ. ೨. ಆತ್ಮ. ೩. ಚೈತನ್ಯವುಳ್ಳುದು ; ಜೀವಿ. ೪. ಚೈತನ್ಯ ; ಚಟುವಟಿಕೆ. ೫. ಶಕ್ತಿ ; ಸಾಮರ್ಥ್ಯ. (ಗು). ೬. ಇಂದ್ರಿಯ ಗ್ರಹಣ ಶಕ್ತಿಯುಳ್ಳ; ಪ್ರಜ್ಞೆಯುಳ್ಳ. ೭. ಜೀವಂತವಾದ. ೮. ಸ್ಪಷ್ಟವಾದ. ~ಅಚೇತನ = ಸಜೀವವಾದ ಮತ್ತು ನಿರ್ಜೀವವಾದ.

ಚೇತನೆ (ನಾ). ೧. ಪ್ರಜ್ಞೆ ; ಎಚ್ಚರ. ೨. ಗ್ರಹಣಶಕ್ತಿ ; ಬುದ್ಧಿ. ೩. ಚೈತನ್ಯ ; ಶಕ್ತಿ.

ಚೇತರಿಸು (ಕ್ರಿ). ೧. ಚೈತನ್ಯವನ್ನು ಪಡೆ ; ಜಾಗ್ರತನಾಗು. ೨. ಎಚ್ಚರಿಸು ; ಚೈತನ್ಯವನ್ನು ತುಂಬು.

ಚೇತಸ್ಸು (ನಾ). ೧. ಪ್ರಜ್ಞೆ ; ಬುದ್ಧಿಶಕ್ತಿ. ೨. ಮನಸ್ಸು ; ಚಿತ್ತ. ೩. ಜೀವ ; ಆತ್ಮ.

ಚೇತೋಜಾತ (ನಾ). ಮನಸ್ಸಿನಲ್ಲಿ ಹುಟ್ಟಿದವನು ; ಮನ್ಮಥ. ~ವೈರಿ = ಮನ್ಮಥನ ವೈರಿ ; ಶಿವ.

ಚೇತೋಹಾರಿ (ಗು). ಮನಸ್ಸನ್ನು ಸೆಳೆಯುವ, –ಸೂರೆಗೊಳ್ಳುವ.

ಚೇಪು (ಕ್ರಿ). ೧. ಚಿಮುಕಿಸು ; ಚೆಲ್ಲು. (ನಾ). ೨. ಕೆಚ್ಚಲಿನ ಹಾಲು ತೊರೆಯುವುದು ; ಸೊರ ಬಿಡುವುದು. ೩. ಕೆಂಪು ಅರಿಸಿನ.

ಚೇಪೆ (ನಾ). ಒಂದು ಜಾತಿಯ ಹಣ್ಣಿನ ಗಿಡ ; ಸೀಬೆ.

ಚೇರಟೆ (ನಾ). ಸಾವಿರಕಾಲಿನ ಹುಳು ; ಒನಕೆ ಮುಂಡಿ.

ಚೇಲ (ನಾ). ೧. ಬಟ್ಟೆ ; ವಸ್ತ್ರ. ೨. ಶಿಷ್ಯ ; ವಿದ್ಯಾರ್ಥಿ. ೩. ಅನುಯಾಯಿ; ಹಿಂಬಾಲಕ. ೪. ಆಳು ; ಸೇವಕ. ~ಅಂಚಲ = ವಸ್ತ್ರದ ತುದಿ ; ಸೆರಗು.

ಚೇಲಿ (ನಾ). ಕೆಟ್ಟ ಹೆಂಗಸು ; ದುಷ್ಟೆ.

ಚೇಲಿ(ಳಿ)ಕ (ನಾ). ಸಿಂಪಿಗ ; ದರ್ಜಿ.

ಚೇಲಿ(ಳಿ)ಕೆ (ನಾ). ೧. ಕುಪ್ಪಸ. ೨. ಪುನುಗು.
ಚೇಷ್ಟಿತ (ನಾ). ೧. ಕೆಲಸ; ಕಾರ್ಯ. ೨. ಗತಿ; ಸಂಚಾರ. (ಗು). ೩. ಕೆಲಸ ಮಾಡಿದ. ೪. ಕದಲಿಸಿದ. ೫. ಯತ್ನಿಸಿದ.
ಚೇಷ್ಟೆ (ನಾ). ೧. ಅಂಗಾಂಗಗಳ ಚಲನೆ, –ಸನ್ನೆ. ೨. ಉದ್ಯೋಗ; ಕಾರ್ಯ. ೩. ವರ್ತನೆ; ನಡವಳಿಕೆ. ೪. ಚಾಲನೆ; ಪ್ರೇರಣೆ. ೫. ತಮಾಷೆ; ಹುಡುಗಾಟ. ೬. ತುಂಟುತನ. ೭. ಸರಸ; ಚೆಲ್ಲಾಟ. ~ಇಸು = ೧. ಚಲಿಸು; ಅಲುಗಾಡು. ೨. ಉದ್ಯೋಗಿಸು; ತೊಡಗು. ೩. ಚೈತನ್ಯ ವನ್ನು ತುಂಬು. ೪. ಕೆಣಕು; ಚಲ್ಲಾಟ ಮಾಡು. ೫. ಚೇತರಿಸಿಕೊಳ್ಳು; ಜಾಗೃತ ವಾಗು.
ಚೇಳ್(ಳು) ೧. = ತೇಟ್. ೨. ಒಂದು ಜಾತಿಯ ಗಿಡ. ~ಕೊಂಡಿ = ಚೇಳಿನ ಬಾಲದ ತುದಿಯಲ್ಲಿರುವ ಮುಳ್ಳು. ~ಬಾಣ = ಒಂದು ಬಗೆಯ ಮದ್ದಿನ ಬಾಣ. ~ಮಣಿ = ಚೇಳಿನ ವಿಷವನ್ನು ಇಳಿಸತಕ್ಕ ಒಂದು ಬಗೆಯ ಮಣಿ.
ಚೇಳ (ನಾ). ೧. ಬಟ್ಟೆ; ವಸ್ತ್ರ. ೨. ಕೆಟ್ಟುದು; ಕೀಳಾದುದು.
ಚೇಟ್(ಳ್) = ತೇಟ್.
ಚೈ=ಚಯ್. ~ಕು(ಗು)ಡು = ಲಲ್ಲೆಯಾಡು; ಮುದ್ದಾಡು. ~ಮುಂಡಾಡು=ಚೈಗುಡು.
ಚೈತನ್ಯ (ನಾ). ೧. ಅರಿವು; ಪ್ರಜ್ಞೆ. ೨. ಆತ್ಮ. ೩. ಚಟುವಟಿಕೆ. ೪. ಶಕ್ತಿ; ಸಾಮರ್ಥ್ಯ. ೫. ಜಡವಲ್ಲದುದು.
ಚೈತ್ಯ (ನಾ). ೧. ಚಿತಾಭಸ್ಮವನ್ನು ಹೂಳಿದ ಜಾಗದಲ್ಲಿ ಕಟ್ಟಿದ ಸ್ಮಾರಕ. ೨. ಯಜ್ಞಶಾಲೆ. ೩. = ಚೈತ್ಯಾಲಯ. ೪. ಬುದ್ಧನ ಅಥವಾ ಜಿನನ ವಿಗ್ರಹ. ೫. ಸ್ವರ್ಗ. ೬. ಜೀವ; ಆತ್ಮ. ೭. ಅರಳಿಮರ. (ಗು). ೮. ಚಿತೆಗೆ ಸಂಬಂಧಪಟ್ಟ. ~ಆಲಯ = ಜೈನ ಅಥವಾ ಬೌದ್ಧ ದೇವಾಲಯ; ಬಸದಿ ಅಥವಾ ವಿಹಾರ. ~ವೃಕ್ಷ = ಬಸದಿಯ ಬಳಿ ಬೆಳೆದಿರುವ ಮರ; ಅರಳಿಮರ.
ಚೈತ್ರ (ನಾ). ೧. ಚಾಂದ್ರಮಾನ ವರ್ಷದಲ್ಲಿ ಮೊದಲನೆಯ ತಿಂಗಳು. ೨. ವಸಂತಮಾಸ; ಮಧುಮಾಸ. ೩. ವಸಂತಮಾಸದ ಒಂದು ಉತ್ಸವ. ~ಆಗಮ = ವಸಂತ ಋತುವಿನ ಪ್ರಾರಂಭ. ~ದೂತ = ವಸಂತಾಗಮನ ವನ್ನು ತಿಳಿಸುವ ಹಕ್ಕಿ; ಕೋಗಿಲೆ. ~ದೂತಿ = ಒಂದು ಜಾತಿಯ ಹೂವು; ಅದಿರ್ಗಂತಿ; ಮಾಧವಿ. ~ಮಿತ್ರ = ವಸಂತಋತುವಿನ ಗೆಳೆಯ; ಮನ್ಮಥ.
ಚೈತ್ರರಥ (ನಾ). ಕುಬೇರನ ಉದ್ಯಾನವನ.
ಚೈನಿ (ನಾ). ೧. ವಿಲಾಸ; ಸುಖಭೋಗ. ೨. ಷೋಕಿಮಾಡುವವನು; ವಿಲಾಸಿ.
ಚೈರಂತನ (ಗು). ಪುರಾತನವಾದ; ಪ್ರಾಚೀನ ವಾದ. ~ಕ್ರಮ=ಪ್ರಾಚೀನ ಸಂಪ್ರದಾಯ.
ಚೊಂಗ (ನಾ). ವಕ್ರಸ್ವಭಾವದವನು.
ಚೊಂಚ (ನಾ). ೧. ಸೊಟ್ಟಗೈಯವನು; ಮೊಂಡುಗೈಯವನು. (ಗು). ೨. ಡೊಂಕಾದ; ವಕ್ರವಾದ.
ಚೊಂಚು (ನಾ). ಡೊಂಕುತನ; ವಕ್ರತೆ.
ಚೊಂದಕಪ್ಪೆ (ನಾ). ಬಾಲದ ಕಪ್ಪೆ; ಗೊದ ಮಟ್ಟೆ.
ಚೊಂಬು (ನಾ). ಲೋಹದ ಗುಂಡನೆಯ ಪಾತ್ರೆ; ಚೆಂಬು.
ಚೊಕ್ಕ (ನಾ). ೧. ಮನೋಹರವಾದುದು; ಸುಂದರವಾದುದು. ೨. ಸ್ವಚ್ಛವಾದುದು; ಶುದ್ಧವಾದುದು. ೩. ಉತ್ತಮನಾದವನು; ಶ್ರೇಷ್ಠನಾದವನು. ೪. ಸ್ವಚ್ಛತೆ; ಪರಿಶುದ್ಧತೆ. (ಗು). ೫. ಶುದ್ಧವಾದ; ಸ್ವಚ್ಛವಾದ.
ಚೊಕ್ಕಟ ೧. = ಚೊಕ್ಕ೪. ೨. ಅಚ್ಚುಕಟ್ಟು; ಓರಣ.
ಚೊಕ್ಕನೆ (ಅ). ಕುಂದಿಲ್ಲದೆ; ಚೆನ್ನಾಗಿ.

**ಚೊಕ್ಕಳ** (ನಾ). ೧. ಅಂದ; ಸೊಬಗು. ೨. ಸ್ವಚ್ಛವಾದುದು; ಪರಿಶುದ್ಧವಾದುದು. ~ಇಕೆ = ೧. ಸೊಗಸು; ಅಂದ. ೨. ಪರಿಶುದ್ಧತೆ. ೩. ಪ್ರಸಿದ್ಧಿ.

**ಚೊಕ್ಕು** (ಕ್ರಿ). ೧. ಪರಿತಪಿಸು; ಕುಗ್ಗು. (ನಾ). ೨. ಸೌಂದರ್ಯ; ಚೆಲುವು. ೩. ಸುಂದರವಾದುದು.

**ಚೊಕ್ಕೆಯ** (ನಾ). ೧. ಬಿನ್ನಾಣ; ಚಾತುರ್ಯ. ೨. ಮಲ್ಲಯುದ್ಧದಲ್ಲಿ ಒಂದು ಪಟ್ಟು.

**ಚೊಕ್ಕೆಹ** (ನಾ). ೧. ಬಿನ್ನಾಣ; ಚಾತುರ್ಯ. ೨. ಯುಕ್ತಿ.

**ಚೊಗಚೆ** = ಚಗಚೆ.

**ಚೊಗರು** (ನಾ). ಒಗರು; ಒಗಚು.

**ಚೊಗೆ** (ನಾ). ಅಂಗಿ; ಕವಚ.

**ಚೊಚ್ಚ** (ನಾ). ಸ್ವಚ್ಛತೆ; ನಿರ್ಮಲವಾದುದು.

**ಚೊಚ್ಚಲ್**(ಲು) ೧. = ಚೊಚ್ಚುಲ್. (ಗು). ೨. ಮೊತ್ತಮೊದಲನೆಯ; ಪ್ರಪ್ರಥಮ.

**ಚೊಚ್ಚಿಲ್**(ಲು) = ಚೊಚ್ಚಲ್.

**ಚೊಚ್ಚುಲ್**(ಲು) (ನಾ). ಮೊದಲನೆಯ ಹೆರಿಗೆ, –ಸೂಲು.

**ಚೊಟ್ಟೆ** (ನಾ). ೧. ಅಂಗಹೀನೆ; ಹೆಳವಿ. ೨. ಹುಂಜದ ತಲೆಯ ಮೇಲಿರುವ ಕೆಂಪು ಬಣ್ಣದ ಕೊಟ್ಟು, –ಜುಟ್ಟು. (ಗು). ೩. ನೇರವಲ್ಲದ; ಡೊಂಕಾದ.

**ಚೊತ್ತಿ** (ನಾ). ಅಂಗಹೀನೆ; ಹೆಳವಿ.

**ಚೊಲ್ಲೆಯ** (ನಾ). ೧. ತುರುಬಿನ ಕೊನೆ. ೨. ತುರುಬಿನಲ್ಲಿ ಮುಡಿಯುವ ಹೂವಿನ ದಂಡೆ, –ಮಾಲೆ.

**ಚೊಲ್ಲೆಹ** = ಚೊಲ್ಲೆಯ.

**ಚೊಳ್ಳೆ** = ಚೆಳ್ಳೆ.

**ಚೋಕು** (ಗು). ಚಪ್ಪಟೆಯಾದ.

**ಚೋಕ್ಷ** (ಗು). ೧. ಸ್ವಚ್ಛವಾದ; ಚೊಕ್ಕ. ೨. ಮನೋಹರವಾದ. ೩. ಚುರುಕಾದ. ೪. ಪ್ರಾಮಾಣಿಕವಾದ. ೫. ಉಗ್ರವಾದ.

**ಚೋಚ** (ನಾ). ೧. ತೊಗಟೆ; ಸಿಪ್ಪೆ. ೨. ದಾಲ್ಚಿನ್ನಿ ಚಕ್ಕೆ; ಲವಂಗಪಟ್ಟೆ. ೩. ತೆಂಗು. ೪. ಬಾಳೆ.

**ಚೋಜಿಗ** (ನಾ). ಆಶ್ಚರ್ಯ; ಸೋಜಿಗ.

**ಚೋಟು** (ನಾ). ಚಾಚಿದ ತೋರುಬೆರಳು ಹಾಗು ಹೆಬ್ಬೆರಳುಗಳ ನಡುವಿನ ಅಳತೆ.

**ಚೋಡಿ** (ನಾ). ೧. ಕೋಪ; ಮುನಿಸು. ೨. ಹೊಟ್ಟೆಕಿಚ್ಚು; ಮತ್ಸರ.

**ಚೋದಕ** (ಗು). ಪ್ರೇರಿಸುವ; ಪ್ರೇರಕವಾದ.

**ಚೋದನೆ** (ನಾ). ೧. ಅಟ್ಟುವುದು; ದೂಡುವುದು. ೨. ಪ್ರೇರಿಸುವುದು.

**ಚೋದಿಸು** (ಕ್ರಿ). ೧. ಗಾಡಿ, ರಥ ಮೊದಲಾದುವನ್ನು ನಡೆಯಿಸು. ೨. ಹುರಿದುಂಬಿಸು; ಪ್ರೇರೇಪಿಸು.

**ಚೋದ್ಯ** (ನಾ). ೧. ಆಶ್ಚರ್ಯ; ವಿಸ್ಮಯ. ೨. ಆಶ್ಚರ್ಯಕರವಾದ ವಸ್ತು; ಸೋಜಿಗದ ವಿಷಯ. ೩. ಆಕ್ಷೇಪಿಸುವುದು. (ಗು). ೪. ಓಡಿಸಬೇಕಾದ; ಅಟ್ಟಬೇಕಾದ. ೫. ಪ್ರೇರಿಸಲ್ಪಡುವ. ~(೦)ಪ(ಬ)ಡು = ಆಶ್ಚರ್ಯಪಡು.

**ಚೋಪದಾರ** (ನಾ). ವೇತ್ರಧಾರಿ; ಕೋಲುಕಾರ.

**ಚೋರ** (ನಾ). ಕಳವು ಮಾಡುವವನು; ಕಳ್ಳ. ~ಕ(ಗ)ಂಡಿ = (ಕೋಟೆ ಮೊದಲಾದುವುಗಳಲ್ಲಿ) ಗುಪ್ತವಾಗಿ ನುಸುಳಿ ಹೋಗಲು ಮಾಡಿರುವ ಕಂಡಿ; ಕಳ್ಳಬಾಗಿಲು.

**ಚೋರೆ** (ನಾ). ೧. ಒಂದು ಜಾತಿಯ ಹಕ್ಕಿ. ೨. ರಕ್ತ; ನೆತ್ತರು.

**ಚೋಲ** (ನಾ). ೧. ಬೇತಾಳ; ದೆವ್ವ. ೨. ಅಂಗಿ; ಕವಚ.

**ಚೋಲಿ**(ಳಿ) (ನಾ). ರವಿಕೆ; ಕುಪ್ಪಸ.

**ಚೋಷಣ** (ನಾ). ಹೀರಿಕೊಳ್ಳುವುದು.

**ಚೋಹ** = ಜೋಹ.

ಚೋಳ (ನಾ). ೧. ಅಂಗಿ; ಕವಚ. ೨.=ಚೋಲಿ.

ಚೌ (ನಾ). ನಾಲ್ಕು. ~ಕಟ್ಟು = ೧. ನಾಲ್ಕು ಮೂಲೆಯಾಗಿರುವ ಮರದ ಕಟ್ಟು. ೨. ವರ್ಗ; ಪಂಗಡ. ೩. ಮಿತಿ; ಕಟ್ಟು. ೪. ಸ್ಥೂಲರೂಪರೇಖೆ, –ಸ್ವರೂಪ. ೫. ಬಂಧ; ರಚನೆ. ~ಗಾವೆ = ನಾಲ್ಕು ಗ್ರಾಮಗಳ ಕೂಟ, –ಸಮುದಾಯ. ~ಜಂತ = ನಾಲ್ಕು ದಂತಗಳನ್ನುಳ್ಳುದು; ಐರಾವತ. ~ದಂತ = ೧. ಚೌಜಂತ. ೨. ಆನೆ. ~ಪ(ಹ)ಂಚಿ = ಪಗಡೆಯಾಟದಲ್ಲಿ ಒಂದಾದ ಮೇಲೆ ಒಂದರಂತೆ ನಾಲ್ಕು ಸಲ ಬೀಳುವ ಐದರ ಗರ. ~ಪ(ವ)ಟ್ಟ = ನಾಲ್ಕು ರಸ್ತೆಗಳು ಕೂಡುವ ಜಾಗ; ಚತುಷ್ಪಥ.

ಚೌಕ (ನಾ). ೧. ಚತುಷ್ಕೋಣಾಕೃತಿಯಾದ ಅಂಗಳ; ಜಗಲಿ. ೨. ಶುಭಕಾರ್ಯದಲ್ಲಿ ಇಡುವ ಚೌಕಾಕಾರವಾದ ಆಸನ, –ಹಸೆ. ೩. ನಾಲ್ಕು ಬೀದಿಗಳು ಕೂಡುವ ಸ್ಥಳ. ೪. ಲೆತ್ತ ಮೊದಲಾದ ಆಟಗಳಲ್ಲಿ ನಾಲ್ಕರ ಗರ, –ದಾಯ. ೫. ನಾಲ್ಕು ಮೂಲೆಗಳುಳ್ಳುದು. ೬. ಇಷ್ಟಲಿಂಗವನ್ನಿಡುವ ಭರಣಿ, –ಕರಡಿಗೆ. ೭. ಆಡಂಬರ; ಚಮತ್ಕಾರ. ೮. ಚಿಕ್ಕವಸ್ತ್ರ; ಕರವಸ್ತ್ರ. ೯. ತುದಿ; ಅಗ್ರ. ~ದಾಯ = (ಪಗಡೆಯಾಟದಲ್ಲಿ) ಗರಗಳನ್ನು ಎಸೆದಾಗ ನಾಲ್ಕು ನಾಲ್ಕಾಗಿ ಹೆಚ್ಚುತ್ತ ಹೋಗುವ ಗರಗಳು. ~ದಗೆ = (ಪಗಡೆ, ಲೆತ್ತ ಮೊದಲಾದ ಆಟದಲ್ಲಿ) ಒಂದಾದ ಮೇಲೆ ಒಂದರಂತೆ ನಾಲ್ಕುಸಲ ಬೀಳುವ ಎರಡರ ಗರ. ~ಬಾರ = ಒಂದು ಬಗೆಯ ಆಟ; ಚಕ್ಕದ ಆಟ.

ಚೌಕಡಿ (ನಾ). ೧. ನಾಲ್ಕರ ಗುಂಪು; ಚತುಷ್ಕ. ೨. ಸೀರೆ ಮೊದಲಾದುವುಗಳ ಮೇಲೆ ಇರುವ ಚಚ್ಚೌಕವಾದ ಮನೆಗಳು. ೩. ನಾಲ್ಕು ವಸ್ತುಗಳ ಅಥವಾ ವ್ಯಕ್ತಿಗಳ ಮೇಳ.

ಚೌಕಶಿ (ನಾ). ೧. ಕೂಲಂಕಷವಾದ ವಿಚಾರಣೆ; ತಪಾಸಣೆ. ೨. = ಚೌಕಾಶಿ.

ಚೌಕಸಿ = ಚೌಕಶಿ.

ಚೌಕಳಿ (ನಾ). ೧. ನಾಲ್ಕು ಮುತ್ತುಗಳನ್ನುಳ್ಳ ಕಿವಿಯ ಆಭರಣ. ೨. ಸೀರೆ ಮೊದಲಾದುವುಗಳ ಮೇಲಿರುವ ಚಚ್ಚೌಕವಾದ ಮನೆಗಳು.

ಚೌಕಾಶಿ (ನಾ). ವ್ಯಾಪಾರದಲ್ಲಿ ಕೊಸರು ಕೇಳುವುದು.

ಚೌಕಾಸಿ = ಚೌಕಾಶಿ.

ಚೌಕಿ (ನಾ). ೧. ನಾಲ್ಕು ಕಾಲುಗಳನ್ನುಳ್ಳ ಪೀಠ, ಮಣೆ, ಮಂಚ ಮೊದಲಾದುವು. ೨. ಮನೆಯ ಒಳ ಅಂಗಳ; ತೊಟ್ಟಿ. ೩. ಪೋಲೀಸು ಠಾಣೆ. ೪. ಕಾವಲು; ಪಹರೆ. ೫. ಚಚ್ಚೌಕವಾದ ಮಂಟಪ. ೬. ಯಕ್ಷಗಾನದ ಪಾತ್ರಧಾರಿಗಳು ವೇಷ ಹಾಕುವ ಮನೆ. ~ದಾರ = ಕಾವಲುಗಾರ; ಪಹರೆಯವನು.

ಚೌಕಿಗೆ (ನಾ). ೧. ಮನೆಯ ಒಳ ಅಂಗಳ; ಹಜಾರ. ೨. ಉಪ್ಪರಿಗೆಯ ಮೊಗಸಾಲೆ, –ಕೈಸಾಲೆ.

ಚೌಗಡ (ನಾ). ದೇವಾಲಯ, ಅರಮನೆ ಮೊದಲಾದುವುಗಳಲ್ಲಿ ನಾಲ್ಕುನಾಲ್ಕು ಗಳಿಗೆಗೊಮ್ಮೆ ಬಾರಿಸುವ ವಾದ್ಯಮೇಳ.

ಚೌಚೌ (ನಾ). ೧. ಸೀಮೆಬದನೆಯ ಬಳ್ಳಿ ಮತ್ತು ಅದರ ಕಾಯಿ. ೨. ಹಲವು ಬಗೆಯ ಕರಿದ ತಿಂಡಿಗಳ ಮಿಶ್ರಣ.

ಚೌತಿ (ನಾ). ಪಕ್ಷದ ನಾಲ್ಕನೆಯ ತಿಥಿ; ಚತುರ್ಥಿ.

ಚೌಧುರಿ (ನಾ). ಕಂದಾಯದ ಅಧಿಕಾರಿ.

ಚೌಪದಿ (ನಾ). ೧. ಛಂದಸ್ಸಿನಲ್ಲಿ ನಾಲ್ಕು ಪಾದಗಳುಳ್ಳ ಒಂದು ಪದ್ಯಜಾತಿ. ೨. ನಾಲ್ಕು ಕಾಲುಗಳುಳ್ಳ ಪೀಠ.

ಚೌಪಳಿಗೆ (ನಾ). ೧. ಚಚ್ಚೌಕವಾದ ಹಜಾರ; ಮೊಗಸಾಲೆ. ೨. ಚಚ್ಚೌಕವಾದ ಮಂಟಪ, -ಹಂದರ.

ಚೌಬಾರ (ನಾ). ನಾಲ್ಕುಕಡೆಯೂ ಬಾಗಿಲುಗಳು ಉಳ್ಳುದು; ಉಪ್ಪರಿಗೆಯ ಮೊಗಸಾಲೆ.

ಚೌರ (ನಾ). ೧. ಕ್ಷೌರ; ಹಜಾಮತಿ. ೨. ನಷ್ಟ; ಪೋಲು.

ಚೌರಸ (ನಾ). ೧. ಚಚ್ಚೌಕ; ಚತುರಸ್ರ. ೨. ಚದರ.

ಚೌರಿ (ನಾ). ೧. ಕುಂಚ; ಚಾಮರ. ೨. ಹೆಂಗಸರು ತಲೆಗೂದಲಿನೊಂದಿಗೆ ಹಾಕಿಕೊಳ್ಳುವ ಕೂದಲ ಕುಚ್ಚು; ಗಂಗಾವನ. ೩. ಅಲಂಕಾರಕ್ಕಾಗಿ ಕಟ್ಟುವ ಕುಚ್ಚು; ೪. ಜೈನಮುನಿಗಳಿಗೆ ನೀಡುವ ಭಿಕ್ಷೆ; ಚರಿಗೆ.

ಚೌರ್ಯ (ನಾ). ಕಳ್ಳತನ; ಕಳವು.

ಚೌಲ ೧. = ಚೌಳ. ೨. ಒಂದು ನಾಣ್ಯ.

ಚೌವಟ = ಚೌವಟ್ಟ.

ಚೌಳ (ನಾ). ಜುಟ್ಟು ಬಿಡಿಸುವುದು; ಚೂಡಾಕರ್ಮ.

ಚೌಳಿ (ನಾ). ೧. ಒಂದು ಜಾತಿಯ ಇರುವೆ; ಕೆಂಜಿಗ. ೨. ಒಂದು ಬಗೆಯ ತರಕಾರಿ; ಗೋರಿಕಾಯಿ.

ಚೌಳು (ನಾ). ಸವುಳು; ಉಪ್ಪಿನ ರುಚಿಯುಳ್ಳುದು.

ಚ್ಯವನ (ನಾ). ೧. ಚಲಿಸುವುದು; ಚಲನೆ. ೨. ಬೀಳುವುದು. ೩. ಒಬ್ಬ ಋಷಿಯ ಹೆಸರು. (ಗು). ೪. ಚಲಿಸುವಂತೆ ಮಾಡುವ.

ಚ್ಯುತ (ನಾ). ೧. ಹೊರದೂಡಲ್ಪಟ್ಟವನು. (ಗು). ೨. ಸ್ರವಿಸಿದ. ೩. ಕಳೆದ; ನಷ್ಟವಾದ. ೪. ಹೊರದೂಡಲ್ಪಟ್ಟ; ಭ್ರಷ್ಟ. ೫. ಸರಿದ; ಜಾರಿದ.

ಚ್ಯುತಿ (ನಾ). ೧. ಸ್ಖಲನ. ೨. ಬೀಳುವುದು; ಪತನ. ೩. ನಷ್ಟ; ಹಾನಿ.



# ಛ

ಛ (ನಾ). ಕನ್ನಡ ವರ್ಣಮಾಲೆಯ ಇಪ್ಪತ್ತೇಳನೆಯ ಅಕ್ಷರ.

ಛಂದ (ನಾ). ೧. ಮನೋಹರವಾದುದು; ಚೆಲುವಾದುದು. ೨. ಆಕಾರ; ರೀತಿ. ೩. ಸಂತೋಷ; ಹರ್ಷ. ೪. ಸ್ವೈರವೃತ್ತಿ. ೫. ಇಚ್ಛೆ; ಪ್ರೀತಿ. ೬. ಪದ್ಯರಚನೆಯ ನಿಯಮ.

ಛಂದಸ್ಸು (ನಾ). ೧. ವೇದ; ವೇದಮಂತ್ರ. ೨. ಇಚ್ಛೆ; ಅಪೇಕ್ಷೆ. ೩. ಸ್ವೈರಾಚಾರ; ಸ್ವಚ್ಛಂದವೃತ್ತಿ. ೪. ಛಂದಸ್ಸನ್ನು ವಿವರಿಸುವ ಶಾಸ್ತ್ರ. ೫. ಪದ್ಯರಚನೆಯ ನಿಯಮ.

ಛಂದೋಭಂಗ (ನಾ). ಪದ್ಯದ ರಚನೆಯಲ್ಲಿ ಛಂದಸ್ಸಿನ ನಿಯಮವನ್ನು ಮೀರುವುದು.

ಛಂದೋವತಂಸ (ನಾ). ದೇಶೀಯ ಛಂದಸ್ಸಿಗೆ ಸೇರಿದ ಒಂದು ವೃತ್ತ.

ಛಗ (ನಾ). ಗಂಡು ಮೇಕೆ; ಹೋತ.

ಛಟೆ (ನಾ). ೧. ಪ್ರಕಾಶ; ಹೊಳಪು. ೨. ಸಮೂಹ; ರಾಶಿ.

ಛಡಾಳ (ನಾ). ಹೆಚ್ಚಳ; ಆಧಿಕ್ಯ. ~ಇಸು =೧. ಅಧಿಕವಾಗು; ಮೇಲಾಗು. ೨. ಪ್ರಜ್ವಲಿಸು; ಥಳಥಳಿಸು. ೩. ಉಗ್ರವಾಗು; ಉರವಣಿಸು.

ಛತ್ರ = ಚತ್ರ. ~ಪತಿ = ರಾಜ. ~ಭಂಗ = ಅರಸೊತ್ತಿಗೆ ತಪ್ಪಿ ಹೋಗುವುದು.

ಛತ್ರಿ (ನಾ). ೧. ಕೊಡೆ ; ಆತಪತ್ರ. ೨.ಕೊಡೆಯನ್ನು ಹಿಡಿದುಕೊಂಡಿರುವವನು.

ಛದ (ನಾ). ೧. ಮುಚ್ಚಳ; ಗವುಸು. ೨. ಹಕ್ಕಿಗಳ ರೆಕ್ಕೆ. ೩. ಎಲೆ ; ಪರ್ಣ.

ಛದನ = ಛದ.

ಛದಿ (ನಾ). ೧. ಮನೆಯ ಮೇಲ್ಭಾವಣಿ. ೨. ಮುಸುಕು ; ಹೊದಿಕೆ. ೩. ಮೋಸ; ವಂಚನೆ.

ಛದ್ಮ (ನಾ). ೧. ವೇಷವನ್ನು ಮಾರ್ಪಡಿಸುವುದು ; ವೇಷಾಂತರ. ೨.ಕಪಟ ; ಮೋಸ. ೩. ಕಾರಣ ; ನೆಪ.

ಛದ್ಮನೆ (ನಾ). ೧. ಮುಸುಕು ; ಮರೆ. ೨. ಮೋಸ ; ಕಪಟ.

ಛನ್ನ (ಗು). ೧.ಮುಚ್ಚಲ್ಪಟ್ಟ; ಹೊದಿಸಲ್ಪಟ್ಟ. ೨. ಅಡಗಿರುವ; ಮರೆಯಾದ. ೩. ಬಚ್ಚಿಡಲ್ಪಟ್ಟ ; ರಹಸ್ಯವಾದ.

ಛರ್ದಿ (ನಾ). ವಾಂತಿ ; ವಮನ.

ಛಲ(ಳ) (ನಾ). ೧.ನೆಪ ; ವ್ಯಾಜ. ೨.ಮೋಸ ; ವಂಚನೆ. ೩. ದೃಢನಿಶ್ಚಯ. ೪. ಹಟಮಾರಿತನ ; ಮೊಂಡಾಟ. ~ಇಸು = ೧.ವಂಚಿಸು; ಮೋಸಮಾಡು. ೨. ಪೀಡಿಸು ; ಕಾಡು. ~ವಾದಿ = ಹಟಗಾರ ; ಹಟವಾದಿ.

ಛಲ್ಲಿ (ನಾ). ೧. ಮೃದಂಗ ಬಾರಿಸುವ ಒಂದು ಗತ್ತು. ೨. ಮರದ ತೊಗಟೆ. ೩. ಗಡ್ಡೆ ; ಕಂದ.

ಛವಿ (ನಾ). ೧.ಹೊಳಪು ; ಕಾಂತಿ. ೨.ಚರ್ಮ; ತೊಗಲು. ೩. ಬಣ್ಣ ; ವರ್ಣ.

ಛಾಂದಸ (ನಾ). ೧. ವೇದಾಧ್ಯಯನ ಮಾಡಿದವನು ; ಶ್ರೋತ್ರಿಯ. ೨. ಛಂದಸ್ಸನ್ನು ಅರಿತವನು ; ಛಂದಶ್ಶಾಸ್ತ್ರಜ್ಞ. ೩. ಹಳೆಯ ಸಂಪ್ರದಾಯಗಳಿಗೆ ಅಂಟಿಕೊಂಡಿರುವವನು ; ಕಂದಾಚಾರದ ಮನುಷ್ಯ. ೪. ಸೋಮಾರಿ ; ಜಡ. (ಗು). ೫.ವೇದಕ್ಕೆ ಸಂಬಂಧಪಟ್ಟ. ೬. ಛಂದಸ್ಸಿಗೆ ಸೇರಿದ.

ಛಾಗ = ಛಗ.

ಛಾತಿ (ನಾ). ೧.ಎದೆ ; ವಕ್ಷಸ್ಥಳ. ೨.ಧೈರ್ಯ; ಕೆಚ್ಚು.

ಛಾತ್ರ (ನಾ). ಶಿಷ್ಯ ; ವಿದ್ಯಾರ್ಥಿ.

ಛಾನಸ (ನಾ). ೧. ಸೋಮಾರಿತನ ; ಜಡತೆ. (ಗು). ೨. ಸಂಪ್ರದಾಯನಿಷ್ಠ.

ಛಾಪ (ನಾ). ಅಚ್ಚು ; ಮುದ್ರೆ. ~ಕಾಗದ = ಸರ್ಕಾರದ ಛಾಪೆಯನ್ನು ಮುದ್ರಿಸಿರುವ ಕಾಗದ. ~ಖಾನೆ = ಮುದ್ರಣಾಲಯ.

ಛಾಪು = ಛಾಪ.

ಛಾಯ (ನಾ). ೧. ನೆರಳು. ೨. ಪ್ರತಿಬಿಂಬ ; ಪಡಿಯಚ್ಚು.

ಛಾಯಾಗ್ರಹಣ (ನಾ). ೧. ತನ್ನಲ್ಲಿರುವ ಪ್ರಭಾವವಿಶೇಷದಿಂದ ವ್ಯಕ್ತಿಯ ಗಮನವನ್ನು ನಿರೋಧಿಸಲು ಅವನ ನೆರಳನ್ನು ಹಿಡಿಯುವುದು. ೨. ಛಾಯಾಚಿತ್ರವನ್ನು ತೆಗೆಯುವುದು. ~ಯಂತ್ರ = ಛಾಯಾಚಿತ್ರವನ್ನು ತೆಗೆಯುವ ಯಂತ್ರ; ಕ್ಯಾಮರ.

ಛಾಯೆ ೧. = ಛಾಯ. ೨. ಸೂರ್ಯನ ಹೆಂಡತಿ ; ಛಾಯಾದೇವಿ. ೩. ಕಾಂತಿ ; ಪ್ರಕಾಶ. ೪. ಅಧಿಕಾರ ; ಪ್ರಭಾವ. ೫. ಅಲ್ಪಾಂಶ; ಸ್ವಲ್ಪಭಾಗ. ೬. ಸೂಚನೆ ; ಸುಳಿವು. ೭. ಬಣ್ಣ ; ವರ್ಣ.

ಛಿದ್ರ (ನಾ). ೧. ತೂತು; ರಂಧ್ರ. ೨. ಸಂದು; ಬಿರುಕು. ೩. ಕೊರತೆ ; ದೌರ್ಬಲ್ಯ. ೪.ವಿರಸ ; ಮನಸ್ತಾಪ. ~ಇಸು = ೧.ಒಡೆ; ನಾಶಮಾಡು. ೨. ವಿರಸವನ್ನುಂಟುಮಾಡು. ೩. ರಹಸ್ಯವನ್ನು ಭೇದಿಸು. ೪. ನಿಂದಿಸು.

ಛಿದ್ರಾನ್ವೇಷಿ(ನಾ). ತಪ್ಪನ್ನು ಹುಡುಕುವವನು; ದೋಷಗ್ರಾಹಿ.

ಛಿನ್ನ (ಗು). ೧. ಕತ್ತರಿಸಲ್ಪಟ್ಟ ; ತುಂಡು ಮಾಡಿದ. ೨. ನಾಶಗೊಳಿಸಲ್ಪಟ್ಟ.

ಛೀ = ಚೀ. ~ಕು(ಗು)ಟ್ಟು = ತಿರಸ್ಕರಿಸು ; ಧಿಕ್ಕರಿಸು.

ಛೀಮಾರಿ (ನಾ). ಧಿಕ್ಕಾರ ; ತಿರಸ್ಕಾರ. ~ಹಾಕು = ಛೀಗುಟ್ಟು.

ಛುರಣ (ನಾ). ಹರಡುವಿಕೆ ; ವ್ಯಾಪನೆ.

ಛುರಿಕೆ (ನಾ). ಚೂರಿ ; ಚಾಕು.

ಛೂಮಂತ್ರ (ನಾ). ಗ್ರಹಗಳ ಕಾಟವನ್ನು ಪರಿಹರಿಸಲು ಮಾಡುವ ಒಂದು ಮಂತ್ರ.

ಛೆ (ನಾ). ಮೂದಲಿಕೆ, ಜುಗುಪ್ಸೆ ಮುಂತಾದ ಭಾವಗಳನ್ನು ಸೂಚಿಸುವ ಶಬ್ದ.

ಛೇಕ (ನಾ). ೧. ಸಾಧುಪ್ರಾಣಿ ; ಸಾಕುಪ್ರಾಣಿ. ೨. ಜಾಣ. ೩. ನಾಗರಿಕ. ೪. ರಸಿಕ.

ಛೇಡಿಸು (ಕ್ರಿ). ಕುಚೇಷ್ಟೆ ಮಾಡಿ ರೇಗಿಸು ; ಚುಡಾಯಿಸು.

ಛೇದ = ಛೇದನ. ~ಇಸು = ಕತ್ತರಿಸು ; ತುಂಡರಿಸು.

ಛೇದನ (ನಾ). ಕತ್ತರಿಸುವುದು ; ತುಂಡು ಮಾಡುವುದು.

ಛೇದ್ಯ (ಗು). ೧. ಕತ್ತರಿಸಲ್ಪಡುವ. ೨. ಕತ್ತರಿಸಲು ಯೋಗ್ಯವಾದ.



# ಜ

ಜ (ನಾ). ಕನ್ನಡ ವರ್ಣಮಾಲೆಯ ಇಪ್ಪತ್ತೆಂಟನೆಯ ಅಕ್ಷರ.

ಜಂಕಣೆ (ನಾ). ೧. ಗದರಿಕೆ ; ಗರ್ಜನೆ. ೨. (ಪಕ್ಷಿಗಳ) ಕೂಗು, –ಕುಕಿಲು.

ಜಂಕು (ಕ್ರಿ). ಬೆದರು ; ಹೆದರು. ~ಇಸು = ೧. ಗದರಿಸು ; ಬೆದರಿಸು. ೨. ಹೀಯಾಳಿಸು ; ತಿರಸ್ಕರಿಸು. ೩. ಕಿರಿಚು ; ಚೀರು.

ಜಂಕೆ = ಜಂಕಣೆ.

ಜಂಗಮ (ನಾ). ೧. ಚಲನೆಯುಳ್ಳದು ; ಸಂಚಾರವುಳ್ಳುದು. ೨. ವಿರಕ್ತ ; ಅಯ್ಯ. ೩. ಹಾವು ಮೊದಲಾದ ಪ್ರಾಣಿಗಳಿಂದ ಉಂಟಾಗುವ ವಿಷ. (ಗು). ೪. ಚಲಿಸುವ.

ಜಂಗಲ್ (ನಾ). ೧. ಕಾಡು ; ಅರಣ್ಯ. ೨. = ಜಂಗಾಲ್.

ಜಂಗಲಿ (ಗು). ಅರಣ್ಯಕ್ಕೆ ಸಂಬಂಧಿಸಿದ ; ಕಾಡಿಗೆ ಸೇರಿದ.

ಜಂಗಳ (ನಾ). ಬಿಗಿಯಿಲ್ಲದುದು ; ಸಡಿಲವಾದುದು.

ಜಂಗಾಲ್ (ನಾ). ಜೋಡುದೋಣಿ, –ತೆಪ್ಪ.

ಜಂಗಿ (ಗು). ೧. ಯುದ್ಧಕ್ಕೆ ಸಂಬಂಧಿಸಿದ. ೨. ಅತಿಶಯವಾದ ; ಹೆಚ್ಚಿನ. ~ಕುಸ್ತಿ = ಭಾರಿ ಕುಸ್ತಿ. ~ಸಾಮಾನು = ಯುದ್ಧದ ಸಾಮಗ್ರಿ.

ಜಂಗು (ಕ್ರಿ). ೧. ತುಕ್ಕುಹಿಡಿ ; ಕಿಲುಬು. (ನಾ). ೨. ವೀರಶೈವ ಜಂಗಮರು ಕಾಲಿಗೆ ಕಟ್ಟಿಕೊಳ್ಳುವ ದಪ್ಪನಾದ ಹಿತ್ತಾಳೆಯ ಗೆಜ್ಜೆ. ೩. ಎತ್ತಿನ ಕೊರಳಲ್ಲಿ ಕಟ್ಟುವ ಗಂಟೆ, –ಗೆಜ್ಜೆ. ೪. ತುಕ್ಕು ; ಕಿಲುಬು. ೫. ತೆಕ್ಕೆ ; ಅಪ್ಪುಗೆ. ~ಉಬು(ಳಿ) = ಹಿಡಿತ ತಪ್ಪು ; ಕುಸಿದು ಬೀಳು. ~ಹಿಡಿ = ೧. ತುಕ್ಕುಹಿಡಿ. ೨. ಜಡವಾಗು ; ನಿಷ್ಕ್ರಿಯವಾಗು.

ಜಂಗುಡಿ (ನಾ). ಹೆಗಲು ; ಭುಜ.

ಜಂಗುಳಿ (ನಾ). ೧. ಸಮೂಹ ; ಮೊತ್ತ. ೨. ದನದ ಮಂದೆ, –ಹಿಂಡು.

ಜಂಗುಳಿಗ (ನಾ). ಗಾರುಡಿಗ ; ವಿಷವೈದ್ಯ.

ಜಂಘಾಬಲ (ನಾ). ಕಾಲುಗಳಲ್ಲಿಯ ಶಕ್ತಿ ; ಚಲನಶಕ್ತಿ.
ಜಂಘಾಲ(ಳ) (ನಾ). ೧. ವೇಗದಿಂದ ನಡೆಯ ಬಲ್ಲವನು. (ಗು). ೨. ವೇಗವಾದ ; ಚುರುಕಾದ.
ಜಂಘೆ (ನಾ). ಕೆಳದೊಡೆ ; ಕಿರುದೊಡೆ.
ಜಂಜಡ (ನಾ). ೧. ತೊಂದರೆ ; ಕಷ್ಟ. ೨. ವ್ಯಥೆ ; ಚಿಂತೆ.
ಜಂಜರ (ನಾ). ೧. ಬಂಧನ ; ಸೆರೆ. (ಗು). ೨. ಸಾಧಾರಣ ; ಸಾಮಾನ್ಯವಾದ.
ಜಂಜಾಟ = ಜಂಜಡ.
ಜಂಜಾಲು (ನಾ). ತಿರುಗಣೆಯ ಮೇಲೆ ತಿರುಗಿಸಲು ಅನುಕೂಲವಾದ ಒಂದು ಬಗೆಯ ಬಂದೂಕು ; ದೊಡ್ಡ ಫಿರಂಗಿ.
ಜಂಝಾನಿಲ(ಳ) (ನಾ). ಮಳೆಹನಿ ಒಡಗೂಡಿದ ಬಿರುಗಾಳಿ.
ಜಂಝಾರ (ನಾ). ೧. ಶೂರ; ಧೀರ. ೨. ಶಕ್ತಿ; ಪರಾಕ್ರಮ.
ಜಂಟಿ (ನಾ). ೧. ಸೇರುವಿಕೆ ; ಒಟ್ಟುಗೂಡುವಿಕೆ. ೨. ಜೋಡಣೆ. ೩. ಪಾಲುಗಾರಿಕೆ. ೪. ಜೋಡಿ ; ಜೊತೆ. ~ದೇವರ್ = ಅಶ್ವಿನಿ ದೇವತೆಗಳು. ~ಹಾಕು = ಜೋಡಿಸು ; ಕೂಡಿಸು.
ಜಂಡೆ (ನಾ). ೧. ಧ್ವಜ; ಬಾವುಟ. ೨. ಗೊಂಡೆ; ಕುಚ್ಚು.
ಜಂತ (ನಾ). ೧. ಹಲ್ಲು ; ದಂತ. ೨. ಆನೆಯ ದಾಡೆ; ಹಸ್ತಿದಂತ. ೩. ಅಗಲ ; ಪನ್ನ. ~ಇಗ = ದಂತದ ವ್ಯಾಪಾರಿ.
ಜಂತು (ನಾ). ೧. ಜೀವವನ್ನುಳ್ಳುದು ; ಜೀವಿ. ೨. ಸಣ್ಣ ಕ್ರಿಮಿ. ೩. ಕರುಳಿನಲ್ಲಿ ಹುಟ್ಟುವ ಒಂದು ಜಾತಿಯ ಹುಳು.
ಜಂತೆ (ನಾ). ಮೇಲ್ಛಾವಣಿಗಳಿಗೆ ಆಧಾರವಾಗಿ, ತೊಲೆಗಳ ಮೇಲೆ ಹಾಕುವ ಸಣ್ಣ ಅಡ್ಡ ಪಟ್ಟಿ.
ಜಂತ್ರ (ನಾ). ೧. ಯಂತ್ರ. ೨. ವಾದ್ಯ. ೩. ನೂಲು ತೆಗೆಯುವ ಯಂತ್ರ ; ರಾಟೆ. ~ಬಿಜ್ಜೆ = ವಾದ್ಯ ಸಂಗೀತ.
ಜಂಪತಿ (ನಾ). ಗಂಡ ಹೆಂಡತಿಯರು; ದಂಪತಿ.
ಜಂಪು (ನಾ). ೧. ಪಂಜರ ; ಬೋನು. ೨. ಗೊಂಚಲು ; ಗುಚ್ಛ. ೩. ಸೊಗಸು ; ವೈಭವ. ೪. ಕಿವಿಯ ಒಂದು ಆಭರಣ. ೫. = ಜೊಂಪು.
ಜಂಪೆ (ನಾ). ಮನೆಯ ಒಂದು ಭಾಗ.
ಜಂಬ (ನಾ). ೧. ಗರ್ವ ; ಹೆಮ್ಮೆ. ೨. ಒಣ ಆಡಂಬರ. ೩. ಮೈಮೇಲೆ ಚುಕ್ಕೆಗಳಿರುವ ಒಂದು ಜಾತಿಯ ಕುದುರೆ. ~ಕೊಚ್ಚು = ತನ್ನನ್ನು ತಾನು ಹೊಗಳಿಕೊಳ್ಳು ; ಆತ್ಮಸ್ತುತಿಮಾಡಿಕೊಳ್ಳು.
ಜಂಬರ (ನಾ). ಕೆಲಸ ; ಉದ್ಯೋಗ.
ಜಂಬಾಲ(ಳ) (ನಾ). ೧. ಕೆಸರು ; ಬದಿ ; ರಾಡಿ. ೨. ಹಾವಸೆ; ಪಾಚಿ.
ಜಂಬಿ (ನಾ). ಬನ್ನಿಮರ ; ಶಮೀವೃಕ್ಷ. ~ಸಾರಿ = ಜಂಬೂಸವಾರಿ.
ಜಂಬಿಯಾ (ನಾ). ಕಠಾರಿ ; ಕಿರುಗತ್ತಿ.
ಜಂಬೀರ (ನಾ). ನಿಂಬೆಯ ಗಿಡ ಮತ್ತು ಅದರ ಹಣ್ಣು.
ಜಂಬು (ನಾ). ೧. ಉದ್ದ. ೨. ಒಂದು ಬಗೆಯ ಜೌಗು ಸಸ್ಯ ; ಜೊಂಡು. ೩. ನೇರಳೆ ಮರ ಮತ್ತು ಅದರ ಹಣ್ಣು. ೪. ಒಂದು ಬಗೆಯ ಕೆಂಪು ಮಣ್ಣು. ~ಇಟ್ಟಿಗೆ = ಕೆಂಪು ಜೇಡಿ ಮಣ್ಣಿನ ಇಟ್ಟಿಗೆ. ~ನೇಱು(ರಿ)ಲೆ = ಉತ್ತಮ ಜಾತಿಯ ನೇರಳೆಹಣ್ಣು.
ಜಂಬುಕ (ನಾ). ನರಿ.
ಜಂಬುಖಾನ (ನಾ). ನೆಲದ ಮೇಲೆ ಹಾಸುವ ನೂಲಿನ ಹಾಸು ; ಜಮುಖಾನ.
ಜಂಬೂಸವಾರಿ (ನಾ). ಬನ್ನಿಮರದ ಪೂಜೆಗೆಂದು ಆನೆಯ ಮೇಲೆ ಹೊರಡುತ್ತಿದ್ದ ಅರಸನ ಮೆರವಣಿಗೆ.

ಜಂಭ (ನಾ). ೧. ಗರ್ವ ; ಹೆಮ್ಮೆ. ೨. ಒಣ ಆಡಂಬರ. ೩. ಸಂಜೆಹಣ್ಣು. ೪. ಒಬ್ಬ ರಾಕ್ಷಸನ ಹೆಸರು. ~ಅರಿ = ಜಂಭನೆಂಬ ರಾಕ್ಷಸನ ಶತ್ರು ; ಇಂದ್ರ.

ಜಂಭೀರ = ಜಂಬೀರ.

ಜಕಣಿ (ನಾ). ಯಕ್ಷಿಣಿ ; ಯಕ್ಷಸ್ತ್ರೀ.

ಜಕಾತಿ (ನಾ). ಸಾಗಣೆಯ ಮೇಲಿನ ತೆರಿಗೆ ; ಸುಂಕ. ~ಕಟ್ಟೆ = ಸುಂಕದ ಕಟ್ಟೆ ; ಉಕ್ಕಡ.

ಜಕೀರ (ನಾ). ದಾಸ್ತಾನು ; ಸಂಗ್ರಹ.

ಜಕ್ಕ (ನಾ). ೧. ಗಾಲಿ ; ಚಕ್ರ. ೨. ಕುಬೇರನ ಪ್ರಜೆ ; ಯಕ್ಷ.

ಜಕ್ಕಂದೊಟ(ಳ) (ನಾ). ಚಕ್ರಾಕಾರವಾಗಿ ಸುತ್ತುವ ಉಯ್ಯಾಲೆ ; ಗಿರಕಾಲೆ.

ಜಕ್ಕಂದೊಟ(ಳ)ಲಿ (ನಾ). ಕೋಣ; ಮಹಿಷ.

ಜಕ್ಕಂದೊಟ(ಳ)ಲಿದೇರ (ನಾ). ಕೋಣ ವನ್ನು ವಾಹನವಾಗುಳ್ಳವನು ; ಯಮ.

ಜಕ್ಕಣಿ = ಜಕಣಿ.

ಜಕ್ಕವಕ್ಕಿ (ನಾ). ಎಣೆವಕ್ಕಿ ; ಚಕ್ರವಾಕ.

ಜಕ್ಕಿ = ಜಕಣಿ.

ಜಕ್ಕಿಣಿ ೧. = ಜಕಣಿ. ೨. ಇಂದ್ರಜಾಲ ; ಕಣ್ಕಟ್ಟು.

ಜಕ್ಕುಲಿ (ನಾ). ೧. ಕಚಗುಳಿ ; ಚಕ್ಕಳಗುಳಿ. ೨. ಸಂತೋಷ ; ವಿನೋದ. ~ಇಸು = ೧. ಕಚಗುಳಿಯಿಡು ; ಕಟ್ಟಾಡಿಸು. ೨. ಆಕರ್ಷಿಸು ; ಮೋಹಗೊಳಿಸು. ೩. ಅಪಹಾಸ್ಯಮಾಡು. ೪. ಆವರಿಸು ; ವ್ಯಾಪಿಸು. ೫. ಸೋಲಿಸು. ೬. ಕಿತ್ತು ಕೊಳ್ಳು ; ಅಪಹರಿಸು. ೭. ನಾಶಮಾಡು. ೮. ಮುಟ್ಟು ; ಸೋಕು.

ಜಖಂ (ನಾ). ೧. ಗಾಯ ; ಪೆಟ್ಟು. ೨. ನಷ್ಟ ; ಕೇಡು.

ಜಗ (ನಾ). ೧. ಹೊಳಪು ; ಪ್ರಕಾಶ. ೨. ಲೋಕ; ಪ್ರಪಂಚ. ~ಜಟ್ಟಿ=ಹೆಸರಾದ ಮಲ್ಲ; ಪ್ರಸಿದ್ಧನಾದ ಮಲ್ಲ. ~ದಿಂಡೆ = ತುಂಬಾ ಒರಟಾದವಳು; ಮಹಾಧೂರ್ತೆ.

ಜಗಜಂಪು (ನಾ). ೧. ವೈಭವ ; ಅತಿಶಯ. ೨. ಕುಚ್ಚುಗಳ ಅಲಂಕಾರ ; ಜಾಲರಿ.

ಜಗಜಗಿಸು (ಕ್ರಿ). ಹೆಚ್ಚು ಪ್ರಕಾಶಮಾನವಾಗಿ ಹೊಳೆ; ಝಗಝಗಿಸು.

ಜಗತಿ (ನಾ). ೧. ವೇದಿಕೆ ; ಕಟ್ಟೆ ; ಜಗಲಿ. ೨. ಭೂಮಿ; ನೆಲ. ೩. ಲೋಕ; ಪ್ರಪಂಚ. ೪. ಮಂತ್ರಿ ; ಸಚಿವ. ೫. ಹೊರೆಯನ್ನು ಹೊತ್ತು ಜೀವನ ಸಾಗಿಸುವವನು. ೬. ವೈದಿಕ ಛಂದಸ್ಸಿನಲ್ಲಿಯ ಒಂದು ಸಮವೃತ್ತ.

ಜಗತೀತಲ(ಳ) (ನಾ). ೧. ಜಗತ್ತು ; ಪ್ರಪಂಚ. ೨. ಭೂಮಿ.

ಜಗತೀವಲಯ (ನಾ). ಭೂಮಂಡಲ.

ಜಗತ್ಕರ್ತೃ (ನಾ). ಪ್ರಪಂಚವನ್ನು ಸೃಷ್ಟಿಸಿ ದವನು ; ಬ್ರಹ್ಮ.

ಜಗತ್ತು (ನಾ). ಲೋಕ ; ವಿಶ್ವ.

ಜಗದುದರ (ನಾ). ಜಗತ್ತನ್ನೇ ತನ್ನ ಹೊಟ್ಟೆ ಯಲ್ಲಿ ಉಳ್ಳವನು ; ವಿಷ್ಣು.

ಜಗದ್ಗುರು (ನಾ). ಲೋಕಕ್ಕೆಲ್ಲಾ ಪೂಜ್ಯ ನಾದವನು.

ಜಗರ (ನಾ). ಲೋಹದ ಅಂಗಿ ; ಯುದ್ಧ ಕವಚ.

ಜಗಲ (ನಾ). ೧. ಕಪಟಿ ; ಮೋಸಗಾರ. ೨. ಸಗಣಿ. ೩. = ಜಗರ. ೪. ಮದ್ಯವನ್ನು ತಯಾರಿಸಲು ಅನುಗೊಳಿಸಿದ ನಾನಾ ಪದಾರ್ಥಗಳಿಂದಾದ ಮುದ್ದೆ.

ಜಗಲಿ (ನಾ). ಕಟ್ಟೆ ; ವೇದಿಕೆ ; ಜಗತಿ.

ಜಗಳ = ಜಗಟ. ~ಅ(ವಾ)ಡು = ಕಲಹ ಮಾಡು ; ಕಚ್ಚಾಡು. ~ಗಂಟ = ಕಲಹ ಮಾಡುವ ಸ್ವಭಾವದವನು ; ಜಗಳಕೋರ. ~ಗಂಟಿ = ೧. ಕಲಹಮಾಡುವ ಸ್ವಭಾವ ದವಳು. ೨. = ಜಗಳಗಂಟ. ೩. ಕಲಹ ಮಾಡುವ ಸ್ವಭಾವದ.

ಜಗಳೆ (ನಾ). ಕಂಚಿನ ತಾಳ; ಕಂಸಾಳ.

ಜಗಱ(ಳ) (ನಾ). ಕಲಹ; ಗುದ್ದಾಟ.

ಜಗಿ (ಕ್ರಿ). ೧. ಅಗಿ; ಬಾಯಲ್ಲಿ ನುರಿಸು. ೨. ಚುಚ್ಚು; ನೋಯಿಸು. ೩. ಹೊಳೆ; ಪ್ರಕಾಶಿಸು. ೪. ಭಾರದಿಂದ ಜೋಲು, -ಬಾಗು. ೫. ತುಂಬಿತುಳುಕು.

ಜಗುಲಿ = ಜಗಲಿ.

ಜಗುಱ್(ಳ್, ಳು) (ಕ್ರಿ). ೧. ಓಡಿಹೋಗು; ದೂರಹೋಗು. ೨. ಜಾರು; ಜಾರಿಕೊಳ್ಳು. ~ತರ್ = ಜಾರಿಬೀಳು; ಕಳಚು.

ಜಗ್ಗನೆ = ಜರ್ರನೆ.

ಜಗ್ಗು (ಕ್ರಿ). ೧. ಕುಗ್ಗು; ಕುಸಿ. ೨. ಭಾರದಿಂದ ಬಾಗು, -ಜೋಲು. ೩. ಸೋಲು; ಸಗ್ಗು. ೪. ಕುಗ್ಗಿಸು; ಕುಸಿಯಿಸು. ೫. ತೂಗಾಡು; ತೊನೆದಾಡು. ೬. ಎಳೆ; ಸೆಳೆ. (ನಾ). ೭. ಒನಪಿನಿಂದ ಒಲೆಯುವಿಕೆ, -ಬಾಗುವಿಕೆ. ~ಆಟ = ೧. ಎಳೆದಾಟ; ಎಳೆದಾಡುವಿಕೆ. ೨. ಚೌಕಾಸಿ. ~ಇಸು = ೧. ಕುಗ್ಗಿಸು; ಕುಸಿಯಿಸು. ೨. ಸೋಲಿಸು. ೩. ತೂಗಾಡು; ಒಲೆದಾಡು. ೪. ವಿಶೇಷವಾಗು; ವಿಪುಲವಾಗು. ೫. ಎಳೆದಾಡು; ಜಗ್ಗಾಡು. ~ಹಾಕು = ಮೈ ಅತ್ತಿತ್ತ ಒಲೆಯುವಂತೆ ಹೆಜ್ಜೆಹಾಕು.

ಜಗ್ಧಿ (ನಾ). ೧. ತಿನ್ನುವಿಕೆ. ೨. ಊಟ; ಭೋಜನ.

ಜಘನ (ನಾ). ನಿತಂಬ.

ಜಘನ್ಯ (ನಾ). ೧. ಕೀಳು; ನೀಚವಾದುದು. ೨. ಶೂದ್ರ. (ಗು). ೩. ಹಿಂಭಾಗದ. ೪. ಕಡೆಯ; ಅಂತ್ಯದ.

ಜಜ (ನಾ). ಯೋಧ; ಸೈನಿಕ.

ಜಜ್ಜರಿ (ಕ್ರಿ). ೧. ಸಡಿಲವಾಗು; ಶಿಥಿಲವಾಗು. (ನಾ). ೨. ಕೊರಕಲು; ಬಿರುಕು.

ಜಜ್ಜರಿತ (ಗು). ಸಡಿಲವಾದ; ಜೀರ್ಣವಾದ; ಶಿಥಿಲವಾದ.

ಜಜ್ಜಾಗ (ನಾ). ೧. ಶೂರ; ಧೀರ. ೨. ಕಾಳೆಗ; ಯುದ್ಧ. ೩. ಚೂರುಚೂರು ಮಾಡುವವನು. ೪. ವೀರರ ಸಮೂಹ.

ಜಜ್ಜು (ಕ್ರಿ). ಚಚ್ಚು; ಪುಡಿಮಾಡು; ಕುಟ್ಟು. ~ಕ(ಗ)ಂತೆ = ಹರಿದ ಬಟ್ಟೆ; ಚಿಂದಿಯಾದ ಬಟ್ಟೆ. ~ಕು(ಗು)ಟ್ಟು = ಸಣ್ಣಗಾಗುವಂತೆ ಕುಟ್ಟು; ನುರಿಸು.

ಜಜ್ಝಾರ (ನಾ). ೧. ಶೂರ; ಧೀರ. (ಗು). ೨. ತೀವ್ರವಾದ.

ಜಟಿಕರಿಸು (ಕ್ರಿ). ೧. ಝಾಡಿಸು; ಒದರು. ೨. ಅಪಹಾಸ್ಯಮಾಡು; ಗೇಲಿಮಾಡು.

ಜಟಕಾ (ನಾ). ೧. ಒಂದು ಬಗೆಯ ಒಂಟಿ ಕುದುರೆಯ ಗಾಡಿ. ೨. ಅಂಬಿಗರು ಪೂಜಿಸುವ ಒಂದು ದೇವತೆ.

ಜಟಮಟಿಸು (ಕ್ರಿ). ಮೋಸಪಡಿಸು; ವಂಚಿಸು.

ಜಟಾಜೂಟ (ನಾ). ಜಡೆಗಟ್ಟಿದ ಜುಟ್ಟು; ಜಟಾಸಮೂಹ.

ಜಟಾಪಟಿ (ನಾ). ಜಗಳ; ಕಲಹ.

ಜಟಾಬಂಧ (ನಾ). ಕಟ್ಟಿದ ಜಟೆ.

ಜಟಿ (ನಾ). ೧. ಜಟೆಯುಳ್ಳವನು; ಋಷಿ. ೨. ಶಿವ. ೩. ಬೀಳಲುಗಳನ್ನುಳ್ಳ ಮರ.

ಜಟಿಲ(ಳ) (ನಾ). ೧. ತೊಡಕು; ಸಮಸ್ಯೆ. (ಗು). ೨. ಒಂದಕ್ಕೊಂದು ಹೆಣೆದುಕೊಂಡಿರುವ; ಸಿಕ್ಕಾದ. ೩. ಕ್ಲಿಷ್ಟವಾದ; ತೊಡಕಾದ.

ಜಟೆ (ನಾ). ೧. ಜಡೆಗಟ್ಟಿದ ಕೂದಲು. ೨. ಆಲ ಮುಂತಾದ ಮರಗಳ ಬೀಳಲು.

ಜಟ್ಟಿ (ನಾ). ಕುಸ್ತಿ ಮಾಡುವ ಕಸಬಿನವನು; ಪೈಲುವಾನ; ಮಲ್ಲ. ~ಕಾಳಗ = ಮಲ್ಲಯುದ್ಧ; ಕುಸ್ತಿ. ~ಹಿಡಿತ = ಕುಸ್ತಿಯ ವರಸೆ; ಬಿಗಿಮುಷ್ಟಿ.

ಜಟ್ಟಿಗ ೧. = ಜಟ್ಟಿ. ೨. ವೀರ; ಶೂರ. ೩. ಒಂದು ಕ್ಷುದ್ರದೇವತೆಯ ಹೆಸರು ಜಟ್ಟಿಂಗ.

ಜಠರ (ನಾ). ೧. ಹೊಟ್ಟೆ ; ಉದರ. (ಗು). ೨. ಗಟ್ಟಿಯಾದ; ಗಡುಸಾದ. ೩. ವಯಸ್ಸಾದ. ~ರಸ = ಅನ್ನಕೋಶದಲ್ಲಿ ಉತ್ಪತ್ತಿಯಾಗುವ ಒಂದು ಬಗೆಯ ದ್ರವ; ಪಾಚಕರಸ.

ಜಡ (ನಾ). ೧. ಅರಿಯುವ ಶಕ್ತಿಯಿಲ್ಲದುದು. ೨. ಆಲಸ್ಯ; ಜಡತ್ವ. ೩. ಅಲಸಿ; ಸೋಮಾರಿ. ೪. ನೀರು. ೫. ಖಾಯಿಲೆ; ಜಡ್ಡು. ೬. ಮೂಕ. ೭. ಮಂದಬುದ್ಧಿ; ದಡ್ಡಬುದ್ಧಿ. ೮. ಮೂರ್ಖ; ತಿಳಿಗೇಡಿ. (ಗು). ೯. ಅರಿಯುವ ಶಕ್ತಿಯಿಲ್ಲದ. ೧೦. ಕ್ರಿಯಾಶೂನ್ಯವಾದ; ಅಚೇತನವಾದ. ೧೧. ಗಟ್ಟಿಯಾದ. ೧೨. ಭಾರವಾದ; ತೂಕವಾದ. ೧೩. ಕಠಿನವಾದ; ಕಷ್ಟವಾದ. ೧೪. ಭಾವನಾರಹಿತವಾದ. ೧೫. ಶೀತಲವಾದ. ~ಜೀವ = ದಡ್ಡ; ಅಜ್ಞ. ~ತನ = ೧. ಜಡ್ಡು; ಅನಾರೋಗ್ಯ. ೨. ಆಲಸ್ಯ; ಸೋಮಾರಿತನ.

ಜಡಜ (ನಾ). ನೀರಿನಲ್ಲಿ ಹುಟ್ಟಿದುದು; ಕಮಲ; ಜಲಜ.

ಜಡತ (ನಾ). ಹೊಡೆಯುವಿಕೆ; ಗಟ್ಟಿಸುವಿಕೆ.

ಜಡತಿ = ಝಡತಿ.

ಜಡತೆ (ನಾ). ೧. ಅನಾಸಕ್ತಿ; ನಿರುತ್ಸಾಹ. ೨. ತಿಳಿಗೇಡಿತನ; ಮಂಕು. ೩. ಶೈತ್ಯ; ಶೀತಲತೆ.

ಜಡಧರ (ನಾ). ಜಲವನ್ನು ಧರಿಸಿರುವುದು; ಮೋಡ; ಮೇಘ.

ಜಡಧಿ (ನಾ). ಸಮುದ್ರ; ಸಾಗರ.

ಜಡಪು (ನಾ). ಹೊಳಪು; ಕಾಂತಿ.

ಜಡರು (ನಾ). ಜಡತೆ; ಜಾಡ್ಯ.

ಜಡಿ (ಕ್ರಿ). ೧. ಬೆದರಿಸು; ಗದರಿಸು. ೨. ಕೂಗು; ಧ್ವನಿಮಾಡು. ೩. ಹೊಡೆ; ಬಡಿ. ೪. ಇಡಿ; ಗಿಡಿ; ತುಂಬು. ೫. ಕಲಸು; ಬೆರಸು. ೬. ವ್ಯಾಪಿಸು; ಹರಡು. ೭. ಝಳಪಿಸು; ಬೀಸು. ೮. ಸ್ರವಿಸು; ಸುರಿ. ೯. ಅಲ್ಲಾಡು; ನಡುಗು. ೧೦. ಎಳೆ; ಸೆಳೆ. ೧೧. ಭಾರದಿಂದ ಕೆಳಕ್ಕೆ ಜೋಲು. ೧೨. ಬಿಗಿಮಾಡು; ಭದ್ರಪಡಿಸು. (ನಾ). ೧೩. ಬೆದರಿಕೆ; ಗದರಿಕೆ. ೧೪. ಸೋನೆಮಳೆ. ~ಮಳೆ = ಎಡೆಬಿಡದೆ ಸುರಿಯುವ ಮಳೆ; ಸೋನೆ.

ಜಡಿತ (ಗು). ಕುಂದಣಿಸಿದ; ಜೋಡಿಸಿದ.

ಜಡಿಪ (ನಾ). ಪಕ್ಷಿಗಳ (ವಿಶೇಷವಾಗಿ ಕೋಗಿಲೆಯ) ಕೂಗು.

ಜಡಿಪು (ನಾ). ೧. ಝಳಪಿಸುವಿಕೆ. ೨. =ಜಡಿಪ.

ಜಡೆ = ಜಟೆ. ~ಕ(ಗ)ಟ್ಟು = ೧. ಕೂದಲು ಜಟೆಯಾಗು, -ಗಂಟುಕಟ್ಟು. ೨. ಹೆರಳು ಹಾಕು. ೩. ಬತ್ತಿಗಟ್ಟಿದ ಕೂದಲು. ~ಕೋಲಾಟ = ಕೋಲಾಟವಾಡುತ್ತ ನೂಲುಗಳು ಜಡೆಯಾಗುವಂತೆ ಮಾಡುವ ಆಟ. ~ಗೊಂಡೆ = ಜಡೆಯ ಕೊನೆಗೆ ಹಾಕಿಕೊಳ್ಳುವ ಒಂದು ಅಲಂಕಾರ ವಸ್ತು; ಕುಚ್ಚು. ~ದೇವ = ಜಟೆಯುಳ್ಳ ದೇವರು; ಶಿವ. ~ನಾಗರ = ೧. ಒಂದು ಜಾತಿಯ ನಾಗರ ಹಾವು. ೨. ತುರುಬಿಗೆ ಹಾಕಿಕೊಳ್ಳುವ ನಾಗರಹೆಡೆಯಾಕಾರದ ಒಂದು ಆಭರಣ. ~ಹೆ(ವೆ)ಣೆ = ೧. ಹೆರಳು ಹಾಕು. ೨. ಒಂದಕ್ಕೊಂದು ಹೆಣೆದುಕೊಂಡ ಬೇರುಗಳ ಸಿಕ್ಕು. ~ಬಿಲ್ಲೆ =ಜಡೆಗೆ ಅಥವಾ ತುರುಬಿಗೆ ಹಾಕಿಕೊಳ್ಳುವ ಒಂದುಆಭರಣ. ~ಹತ್ತಿ = ಒಳಗಿನ ಬೀಜಗಳು ಒತ್ತಾಗಿ ಜಡೆಯಂತೆ ಹೆಣೆದುಕೊಂಡಿರುವ ಒಂದು ಬಗೆಯ ಹತ್ತಿ.

ಜಡ್ಡು (ಕ್ರಿ). ೧. ಉಂಟುಮಾಡು. ೨. ಹಿಂದಕ್ಕೆಳೆ. ೩. ಹಿಂಜರಿ. (ನಾ). ೪. ದಡ್ಡು; ಚರ್ಮ ದಪ್ಪವಾಗಿ ಕಾಯಿಗಟ್ಟುವುದು. ೫. ಆಲಸ್ಯ; ಸೋಮಾರಿತನ. ೬. ಕಾಯಿಲೆ; ರೋಗ. ೭. ಬಂಜರು; ಪಾಳು.

ಜತನ (ನಾ). ೧. ಸಾಧನೆ; ಪ್ರಯತ್ನ. ೨. ಜೋಕೆ; ಜೋಪಾನ.

ಜತಿ (ನಾ). ಯತಿ; ಮುನಿ.

ಜತಿಗೆ (ನಾ). ನೊಗವನ್ನು ಎತ್ತಿನ ಕೊರಳಿಗೆ ಸೇರಿಸಿ ಕಟ್ಟುವ ಹಗ್ಗ; ಜೊತ್ತಗೆ.

ಜತು (ನಾ). ಅರಗು; ಲಾಕ್ಷ. ~ಗೃಹ = ಅರಗಿನ ಮನೆ; ಲಾಕ್ಷಾಗೃಹ.

ಜತೆ (ನಾ). ೧. ಜೊತೆ; ಜೋಡಿ. ೨. ಸ್ನೇಹ; ಕೆಳೆ.

ಜತ್ತ = ಜತನ. ~ಆಯತ = ಅಧಿಕವಾದ ಜೋಕೆ, –ಜೋಪಾನ.

ಜತ್ತಕ ೧. = ಜತ್ತುಕ. ೨. ಮೋಸಗಾರ; ಕಪಟಿ. ೩. ಚೆಲುವ; ಸುಂದರನಾದವನು.

ಜತ್ತಕುಱು(ರು) = ಜತ್ತುಕಱು.

ಜತ್ತರ (ನಾ). ಕೌಪೀನ; ಲಂಗೋಟಿ.

ಜತ್ತು (ನಾ). ಸ್ನೇಹ; ಮೈತ್ರಿ.

ಜತ್ತುಕ (ನಾ). ಮೋಸ; ಕಪಟ.

ಜತ್ತುಕಱು(ರು) (ನಾ). ಚೇಷ್ಟೆ; ಲೀಲೆ.

ಜತ್ತುಳ (ನಾ). ನೊರೆ; ಬುರುಗು.

ಜತ್ರು (ನಾ). ಕೊರಳಿನ ಎಲುಬು.

ಜನ (ನಾ). ೧. ಮನುಷ್ಯರು; ಜನತೆ. ೨. ವ್ಯಕ್ತಿ; ಮನುಷ್ಯ. ೩. ಏಳು ಊರ್ಧ್ವ ಲೋಕಗಳಲ್ಲಿ ಒಂದು. ~ಅಂಗ = ೧. ಒಂದು ದೇಶಕ್ಕೆ ಅಥವಾ ಪಂಗಡಕ್ಕೆ ಸೇರಿದ ಜನತೆ. ೨. ಸಂತತಿ; ಪೀಳಿಗೆ; ತಲೆಮಾರು. ~ಗಣತಿ = ಜನರ ಎಣಿಕೆ; ಖಾನೇಶುಮಾರಿ. ~ಜನಿತ = ೧. ಜನರಲ್ಲಿ ಹಬ್ಬಿರುವ ವಿಷಯ. ೨. ಜನರಿಂದ ಉತ್ಪತ್ತಿಯಾದ, –ಲಭಿಸಿದ. ~ನಾಥ = ಅರಸ; ರಾಜ. ~ಪದ = ೧. ಜನತೆ; ಮಾನವ ಜನಾಂಗ. ೨. ದೇಶ; ರಾಜ್ಯ. ೩. ಜನ ಸಾಮಾನ್ಯ. ~ವಾದ = ೧. ಜನರಾಡುವ ಮಾತು. ೨. ವದಂತಿ; ಗಾಳಿಸುದ್ದಿ. ೩. ಅಪವಾದ; ಲೋಕನಿಂದೆ.

ಜನಕ (ನಾ). ೧. ಉತ್ಪತ್ತಿಗೆ ಕಾರಣವಾದುದು. ೨. ಜನ್ಮದಾತ; ತಂದೆ. ೩. ಸೀತೆಯ ತಂದೆಯ ಹೆಸರು. (ಗು). ೪. ಹುಟ್ಟಿಸುವ; ಉಂಟುಮಾಡುವ.

ಜನತೆ (ನಾ). ಜನಸಮೂಹ; ಜನ.

ಜನನ (ನಾ). ೧. ಹುಟ್ಟಿಸುವುದು; ಉಂಟಾಗಿಸುವುದು. ೨. ಹುಟ್ಟು; ಜನ್ಮ. ೩. ವಂಶ; ಕುಲ. (ಗು). ೪. ಹುಟ್ಟಿಸುವ; ಉಂಟುಮಾಡುವ. ~ಸೂತಕ = ಮಗು ಹುಟ್ಟಿದಾಗ ತಂದೆ, ತಾಯಿ ಮೊದಲಾದವರಿಗೆ ಉಂಟಾಗುವ ಮೈಲಿಗೆ; ವೃದ್ಧಿ; ಪುರುಡು.

ಜನನಿ (ನಾ). ೧. ಹೆತ್ತವಳು; ತಾಯಿ. ೨. ಒಂದು ಜಾತಿಯ ಸಸ್ಯ. (ಗು). ೩. ಉಂಟುಮಾಡುವ; ಕೊಡುವ.

ಜನಪ (ನಾ). ರಾಜ; ದೊರೆ. ~ಅಧ್ವರ = ರಾಜಸೂಯಯಾಗ.

ಜನಾನ = ಜನಾನಾ.

ಜನಾನಾ (ನಾ). ಅಂತಃಪುರ; ರಾಣಿವಾಸ.

ಜನಿ (ಕ್ರಿ). ೧. ಜಿನುಗು; ಒಸರು. (ನಾ). ೨. ಹುಟ್ಟು; ಜನನ. ೩. ಹೆಣ್ಣು; ಸ್ತ್ರೀ. ೪. ಸೊಸೆ. ~ಇ(ಯಿ)ಸು = ೧. ಜನಿಸು. ೨. ಒದಗು; ಉಂಟಾಗು. ೩. ಗೋಚರಿಸು.

ಜನಿತ (ನಾ). ೧. ಉತ್ಪತ್ತಿಯಾದುದು; ಹುಟ್ಟು. (ಗು). ೨. ಹುಟ್ಟಿದ; ಉತ್ಪತ್ತಿಯಾದ.

ಜನಿವಾರ (ನಾ). ಯಜ್ಞೋಪವೀತ; ಯಜ್ಞಸೂತ್ರ.

ಜನಿಸು (ಕ್ರಿ). ೧. ಹುಟ್ಟು; ಉದ್ಭವಿಸು. ೨. ಹುಟ್ಟಿಸು; ಉಂಟುಮಾಡು.

ಜನುಮ = ಜನ್ಮ.

ಜನೆ (ನಾ). ತತ್ತಿಯೊಳಗಿನ ಲೋಳೆ.

ಜನ್ನ (ನಾ). ೧. ಯಾಗ; ಯಜ್ಞ. ೨. ಕುದುರೆಗಳಲ್ಲಿ ಒಂದು ಜಾತಿ. ~ದಾರ = ಜನಿವಾರ.

ಜನ್ನಗೂಟ(ಳ) (ನಾ). ಹವಿಸ್ಸನ್ನು ಆಹಾರವಾಗಿ ಉಳ್ಳವನು; ದೇವತೆ.

ಜನ್ನಣೆ (ನಾ). ಯಾಗಶಾಲೆ ; ಯಜ್ಞವಾಟಿಕೆ.

ಜನ್ನವಿರ = ಜನಿವಾರ.

ಜನ್ನಿಗೆ (ನಾ). ೧. ದೇವರಿಗೆ ಮೀಸಲಾಗಿ ಬಿಟ್ಟ ಗೋವು ಮತ್ತು ಅದರ ಹಾಲು. ೨. = ಜನಿವಾರ. (ಗು). ೩. ಯಜ್ಞಕ್ಕೆ ಸಂಬಂಧಪಟ್ಟ.

ಜನ್ನಿವಾರ = ಜನಿವಾರ.

ಜನ್ಮ (ನಾ). ೧. ಹುಟ್ಟು ; ಜನನ. ೨. ಜೀವಿತ ; ಬಾಳುವೆ. ~ಅಂತರ = ಇನ್ನೊಂದು ಜನ್ಮ ; ಬೇರೆ ಜನ್ಮ. ~ನಕ್ಷತ್ರ = ಹುಟ್ಟಿದ ದಿನ ಇದ್ದ ನಕ್ಷತ್ರ. ~ಪತ್ರ = ಜನನಕಾಲದ ಗ್ರಹಗಳ ಸ್ಥಿತಿಯನ್ನು ಸೂಚಿಸುವ ಪತ್ರ; ಜನ್ಮಕುಂಡಲಿ.

ಜನ್ಯ (ನಾ). ೧. ಹುಟ್ಟು ; ಜನನ. ೨. ಜನರಿಗೆ ಸಂಬಂಧಿಸಿದುದು. ೩. ಜನ. ೪. ಸುದ್ದಿ ; ವದಂತಿ. ೫. ಯುದ್ಧ ; ಕಲಹ. (ಗು). ೬. ಉಂಟಾಗುವ ; ಹುಟ್ಟುವ.

ಜನ್ಯೆ (ನಾ). ಮದುಮಗಳ ದಾಸಿ.

ಜಪ (ನಾ). ಮಂತ್ರಪಠನ ; ಮಂತ್ರವನ್ನು ಮತ್ತೆ ಮತ್ತೆ ಉಚ್ಚರಿಸುವುದು. ~ಇಸು = ಮಂತ್ರವನ್ನು ಪುನಃ ಪುನಃ ಉಚ್ಚರಿಸು ; ಜಪಮಾಡು. ~ಮಾಲೆ = ಜಪ ಮಾಡುವಾಗ ಮಂತ್ರವನ್ನು ಲೆಕ್ಕವಿಡಲು ಬಳಸುವ ಮಣಿಮಾಲೆ ; ಜಪಸರ.

ಜಪಾಪುಷ್ಪ (ನಾ). ಕೆಂಪು ದಾಸವಾಳದ ಹೂವು.

ಜಪ್ತಿ (ನಾ). ಆಸ್ತಿ ಮೊದಲಾದುವನ್ನು ಬಲಾತ್ಕಾರವಾಗಿ ವಶಪಡಿಸಿಕೊಳ್ಳುವುದು ; ಮುಟ್ಟುಗೋಲು ಹಾಕುವುದು.

ಜಪ್ತು = ಜಪ್ತಿ.

ಜಪ್ಪಿಸು (ಕ್ರಿ). ೧. ಹೊಂಚು ಹಾಕು ; ನಿರೀಕ್ಷಿಸು. ೨. ಎಚ್ಚರಿಕೆಯಿಂದಿರು ; ಮುಂಜಾಗರೂಕತೆ ವಹಿಸು.

ಜಪ್ಪು (ಕ್ರಿ). ೧. ಹೊಡೆ ; ತಿವಿ. ೨. ಎಸೆ ; ಬಿಸುಡು.

ಜಪ್ಯ (ನಾ). ೧. ಜಪಿಸಬೇಕಾದ ಮಂತ್ರ. (ಗು). ೨. ಜಪಿಸಬೇಕಾದ.

ಜಬಡು (ಕ್ರಿ). ಜಗಿ ; ಅಗಿ.

ಜಬರದಸ್ತಿ (ನಾ). ೧. ಠೀವಿ ; ಜೋರು. ೨. ಒತ್ತಾಯ ; ಬಲಾತ್ಕಾರ.

ಜಬರು (ನಾ). ೧. ಜೋರು ; ಠೀವಿ. (ಗು). ೨. ಬಲಶಾಲಿಯಾದ. ೩. ಭಾರಿಯಾದ ; ಬೆಲೆಬಾಳುವ. ~ಇಸು = ಕೋಪದಿಂದ ಮಾತನಾಡು; ಜೋರು ಮಾಡು; ಗದರಿಸು.

ಜಬರ್ದಸ್ತು ೧. = ಜಬರದಸ್ತಿ. ೨. ವೈಭವ ; ವಿಜೃಂಭಣೆ. (ಗು). ೩. ಬಲಶಾಲಿಯಾದ.

ಜಬ್ಬ (ನಾ). ೧. ಮುದುಕ ; ವೃದ್ಧ. ೨. ಅಶಕ್ತತೆ.

ಜಬ್ಬಲು (ನಾ). ೧. ದುರ್ಬಲವಾಗಿರುವುದು ; ಶಕ್ತಿಹೀನವಾದುದು. ೨. ಜಜ್ಜಿಹೋಗಿರುವುದು ; ಮೆತ್ತಗಾಗಿರುವುದು. ೩. ಜೋತುಬಿದ್ದಿರುವುದು ; ಇಳಿಬಿದ್ದಿರುವುದು.

ಜಬ್ಬು (ಕ್ರಿ). ೧. ಹೊಡೆ ; ಚಚ್ಚು. ೨. ಚೀಪು; ಸೀಪು. (ನಾ). ೩. ದುರ್ಬಲತೆ. ೪. ಮೆತ್ತಗಾಗಿರುವುದು. ೫. ವಯಸ್ಸಾದ ವ್ಯಕ್ತಿ. ೬. ಹುಬ್ಬಿನ ಚಲನೆ ; ಭ್ರೂವಿಲಾಸ. ೭. (ಕುಷ್ಠ ಮೊದಲಾದ ರೋಗಗಳಲ್ಲಿ ಚರ್ಮದ ಮೇಲೆ ಏಳುವ) ಗುಳ್ಳೆ ; ತದ್ದು.

ಜಮ (ನಾ). ೧. ಯಮ. ೨. ನಿಗ್ರಹ; ನಿರ್ಬಂಧ.

ಜಮಖಾನೆ ೧. = ಜಂಬುಕಾನ. ೨. ಅಂಗಸಾಧನೆಗೆ ಅನುಕೂಲಪಡಿಸಿರುವ ಸ್ಥಳ ; ವ್ಯಾಯಾಮ ರಂಗ.

ಜಮದಗ್ನಿ (ನಾ). ೧. ಪ್ರಜ್ವಲಿಸುವ ಅಗ್ನಿ ; ಉರಿಯುವ ಬೆಂಕಿ. ೨. ಒಬ್ಬ ಋಷಿ ; ಪರಶುರಾಮನ ತಂದೆ.

ಜಮಳ (ನಾ). ಅವಳಿ ; ಜವಳಿ ; ಯಮಳ.

ಜಮಾ (ನಾ). ೧. ಆಯ ; ಆದಾಯ ; ಹುಟ್ಟುವಳಿ. ೨. ಸಂದಾಯ. ~ಇ(ಯಿ)ಸು = ೧. ಕೂಡು ; ಸೇರು. ೨. ಶೇಖರಿಸು ;

ಕೂಡಿಸು. ೩. ಹೊಂದಾಣಿಕೆಯಾಗು; ಕೂಡಿಬರು. ೪. (ಉದ್ಯೋಗ, ವ್ಯಾಪಾರ ಮೊದಲಾದುವು) ಊರ್ಜಿತವಾಗು. ~ಖರ್ಚು = ಆದಾಯ ಮತ್ತು ವೆಚ್ಚ.

ಜಮಾಬಂದಿ (ನಾ). ಸರಕಾರಕ್ಕೆ ಸಲ್ಲಬೇಕಾದ ಕಂದಾಯವನ್ನು ನಿಗದಿ ಪಡಿಸುವುದು.

ಜಮೀನು (ನಾ). ಭೂಮಿ; ನೆಲ. ~ದಾರ = ೧. ಭೂಮಿಯ ಮೇಲ್ವಿಚಾರಣೆಯ ಅಧಿಕಾರಿ. ೨.ಭೂಮಿಯ ಒಡೆಯ, –ಮಾಲಿಕ.

ಜಮೀಯತು (ನಾ). ಸಂಗ್ರಹ; ಸಂಚಯ.

ಜಮೆ ೧. = ಜಮಾ. ೨. ಸಂಗ್ರಹ; ಶೇಖರಣೆ. ೩. ಕೂಡಿದುದು; ಸೇರಿದುದು.

ಜಮ್ಮ (ನಾ). ತನ್ನ ಸೇವೆಗಾಗಿ ಅರಸನು ಇನಾಮಾಗಿ ಕೊಟ್ಟ ಭೂಮಿ.

ಜಯ (ನಾ). ೧. ಗೆಲ್ಲುವುದು; ಗೆಲವು. ೨. (ಇಂದ್ರಿಯ) ನಿಗ್ರಹ; ಸಂಯಮ. ೩. ಮನೋಹರವಾದುದು. ೪. ಅರುವತ್ತು ಸಂವತ್ಸರಗಳಲ್ಲಿ ಒಂದು. ೫. ವಿಷ್ಣುವಿನ ದ್ವಾರಪಾಲಕರಲ್ಲಿ ಒಬ್ಬ. ~ಘೋಷ = ಗೆಲವನ್ನು ಸಾರಿಹೇಳುವ ಧ್ವನಿ; ಜಯಕಾರ. ~ಮಂಗಲ(ಳ) = ೧. ಪಟ್ಟದ ಆನೆ. ೨. ವಿಜಯೋತ್ಸವ. ೩. ಗೆಲವಾಗಲೆಂಬ ಹಾರೈಕೆಯ ಮಾತು. ~ಮುಖ = ಗೆಲ್ಲುವ ಉಪಾಯ. ~ಲಕ್ಷ್ಮಿ = ಗೆಲವಿನ ದೇವತೆ. ~ಶೀಲ = ೧. ಗೆಲವನ್ನು ಪಡೆಯುವ ಸ್ವಭಾವವುಳ್ಳವನು. ೨. ಗೆದ್ದವನು; ಯಶಸ್ವಿಯಾದವನು. ~ಸ್ತಂಭ = ಗೆಲವಿನ ನೆನಪಿಗಾಗಿ ನೆಟ್ಟ ಕಂಬ; ಗೆಲ್ಗಂಬ.

ಜಯಂತಿ (ನಾ). ೧. ಬಾವುಟ; ಧ್ವಜ. ೨.ಗತಿಸಿದ ವಿಭೂತಿಪುರುಷರ ಹುಟ್ಟುಹಬ್ಬ.

ಜಯನ (ನಾ). ೧. ಗೆಲ್ಲುವುದು; ಜಯಿಸುವುದು. ೨. ಆಯುಧ; ಶಸ್ತ್ರ. ೩. ಯುದ್ಧ ಕವಚ. ~ಶಾಲೆ = ಆಯುಧಶಾಲೆ; ಶಸ್ತ್ರಾಗಾರ.

ಜಯಶಾಲಿ (ನಾ). ಗೆದ್ದವನು; ವಿಜಯಿ.

ಜರ (ನಾ). ೧. ಜ್ವರ. ೨. ಮುಪ್ಪು; ವೃದ್ಧಾಪ್ಯ. ೩. ಚಿನ್ನ; ಬಂಗಾರ. ೪. ಸರಿಗೆ; ಜರಿಎಳೆ; ಕಲಾಬತ್ತು. ~ಕಾಟಿ = ಕಲಾಬತ್ತಿನ ಅಂಚು.

ಜರಗು ೧. = ಜರುಗು. (ನಾ). ೨. ಚಿನ್ನದ ಸಣ್ಣಸಣ್ಣ ಕಣಗಳು ಬೆರೆತಿರುವ ಮಣ್ಣು. ೩. ಚಿನ್ನ; ಬಂಗಾರ. ೪. ಜೊಳ್ಳು; ಹುಳು ತಿಂದುದು. ೫. ಜಾಳುಜಾಳಾದ ನೆಯ್ಗೆ.

ಜರಠ (ನಾ). ೧. ಮುದುಕ; ವೃದ್ಧ. (ಗು). ೨. ಸವಕಳಿಯಾದ; ಶಿಥಿಲವಾದ. ೩. ಒರಟಾದ; ಕಠಿನವಾದ. ೪. ಕೆಸರಾದ. ೫. ಬಾಗಿದ; ಜೋಲುಬಿದ್ದ.

ಜರಡ (ನಾ). ೧. ಅಶಕ್ತ; ದುರ್ಬಲ. ೨. ಗಟ್ಟಿಯಾದುದು; ಬಿರುಸಾದುದು. ೩.ಮುದುಕ; ವೃದ್ಧ. ೪.ಗಟ್ಟಿಗ; ಸಮರ್ಥ.

ಜರಡಿ = ಜಲ್ಲಡೆ.

ಜರಡು (ನಾ). ೧. ಹುರುಳಿಲ್ಲದುದು; ಜೊಳ್ಳು. ೨. ಶಿಥಿಲವಾದುದು; ಕೃಶವಾದುದು.

ಜರಣ (ನಾ). ೧. ಒಂದು ಸಂಬಾರ ಪದಾರ್ಥ; ಜೀರಿಗೆ. (ಗು). ೨. ಶಿಥಿಲವಾದ; ಜೀರ್ಣವಾದ. ೩. ಜೀರ್ಣಶಕ್ತಿಯನ್ನು ಹೆಚ್ಚಿಸುವ.

ಜರತಾರಿ (ನಾ). ೧. ಜರಿ; ಕಲಾಬತ್ತು; ಸರಿಗೆ. (ಗು). ೨. ಕಲಾಬತ್ತಿನ.

ಜರತಿ (ನಾ). ಮುದುಕಿ; ವೃದ್ಧೆ.

ಜರದಾ (ನಾ). ತಾಂಬೂಲದೊಂದಿಗೆ ಸೇವಿಸುವ ಪರಿಮಳದ್ರವ್ಯ ಬೆರೆತ ಹೊಗೆಸೊಪ್ಪು.

ಜರದಾಲು(ಳು) (ನಾ). ಬಾದಾಮಿ ಹಣ್ಣು.

ಜರಬು (ನಾ). ೧.ದರ್ಪ; ಠೀವಿ. ೨.ಆಡಂಬರ; ವೈಭವ. (ಗು). ೩. ದರ್ಪವುಳ್ಳ; ಠೀವಿಯುಳ್ಳ.

ಜರಾಯು (ನಾ). ೧. ಭ್ರೂಣವನ್ನು ಆವರಿಸಿರುವ ಪೊರೆ. ೨. ಗರ್ಭಕೋಶ; ಬಸಿರು.

ಜರಿ ೧. = ಜಱು. ೨. ಕುಸಿದು ಬೀಳು. ೩. ಜಾರಿಬೀಳು ; ಕಳಚು. ೪. ಹಿಂಜರಿ ; ಹಿಂದೆಗೆ. ೫. ಸೊರಗು ; ಬಡವಾಗು. ೬. (ಭಾರದಿಂದ) ಜೋಲುಬೀಳು ; ಜಗ್ಗು. (ನಾ). ೭. ಶತಪದಿ ; ಲಕ್ಷ್ಮಿಚೇಳು. ೮. ಕೊರಕಲಲ್ಲಿ ಹರಿಯುವ ನದಿ ; ಝುರಿ. ೯. ಬೆಟ್ಟಗುಡ್ಡಗಳ ಬದಿ ; ಪ್ರಪಾತ. ೧೦. ಕಲಾಬತ್ತು ; ಸರಿಗೆ. ~ಇಸು =೧. ಕೆಡಹು ; ಬೀಳಿಸು. ೨. ಕುಗ್ಗುವಂತೆ ಮಾಡು ; ಕೊರಗಿಸು. ~ಕೊಳ್ಳು= ಕೊರಗಿ ಬಡವಾಗು.

ಜರಿಕೆ (ನಾ). ೧.ಜರಿಯುವುದು; ಹೀಯಾಳಿಸುವುದು. ೨. ತ್ವರೆ; ಆತುರ.

ಜರುಗು (ಕ್ರಿ). ೧. ಜಾರು. ೨. ಪಕ್ಕಕ್ಕೆ ಸರಿ. ೩. ಹಿಂಜರಿ ; ಹಿಮ್ಮೆಟ್ಟು. ೪. (ಕಾಲದಂತೆ) ಕಳೆದುಹೋಗು ; ವ್ಯತೀತವಾಗು. ೫. ನಡೆ; ಸಾಗು ; ನೆರವೇರು. ~ಇಸು = ೧. ನೂಕು; ತಳ್ಳು. ೨. ನೆರವೇರಿಸು ; ನಡಸು.

ಜರುಹು (ಕ್ರಿ).ಬೀಳಿಸು; ಉರುಳಿಸು; ಕೆಡಹು.

ಜರೂರು (ನಾ). ೧. ಅಗತ್ಯ ; ಆವಶ್ಯಕತೆ. ೨. ಕೂಡಲೇ ಆಗಬೇಕಾದುದು. (ಗು). ೩. ಅಗತ್ಯವಾದ.

ಜರೆ ೧. = ಜಱೆ. ೨. ಜಾರಿಬೀಳು ; ಕಳಚು. (ನಾ). ೩. ಮುಪ್ಪು ; ವೃದ್ಧಾಪ್ಯ. ೪. ಮುಪ್ಪಿನಿಂದ ಬೆಳ್ಳಗಾದ ತಲೆಗೂದಲು ; ನರೆ.

ಜಱಿ(ರಿ) (ಕ್ರಿ). ೧. ಬಯ್ಯು ; ನಿಂದಿಸು. ೨. ತಿರಸ್ಕರಿಸು ; ಧಿಕ್ಕರಿಸು. ೩. ಜಡಿ ; ಗದರಿಸು.

ಜಱು(ರು)ಚು (ಕ್ರಿ). ೧. ಅತಿಯಾಗಿ ಮಾತನಾಡು ; ಗಳಹು. ೨. ಕಲಕಲ ಧ್ವನಿ ಮಾಡು. (ನಾ). ೩. ಅತಿಯಾದ ಮಾತು ; ಹರಟೆ. ೪. ಅರ್ಥವಿಲ್ಲದ ಮಾತು ; ವ್ಯರ್ಥಾಲಾಪ.

ಜಱೆ(ರೆ) (ಕ್ರಿ). ೧. ನಿಂದಿಸು ; ಬಯ್ಯು. ೨. ತಿರಸ್ಕರಿಸು ; ಧಿಕ್ಕರಿಸು. ೩. ಕುಗ್ಗು ; ಕುಸಿ. ೪. ಕೆಣಕು.

ಜರ್ಕು (ಕ್ರಿ). ಉಗುರಿನಿಂದ ಅಥವಾ ಪಂಜದಿಂದ ಹೊಡೆ.

ಜರ್ಗನೆ (ಅ). ಥಟ್ಟನೆ ; ಕೂಡಲೆ.

ಜರ್ಗು (ಕ್ರಿ). ಕುಗ್ಗು ; ಕುಸಿ.

ಜರ್ಜರ (ನಾ). ೧.ಮುದುಕ ; ವೃದ್ಧ. (ಗು). ೨. ಶಿಥಿಲವಾದ ; ಹಳೆಯ. ೩. ಸೀಳಿದ ; ಬಿರಿದ. ೪. ಮಾಸಿದ ; ಮಸುಕಾದ.

ಜರ್ಜರಿತ (ಗು). ೧. ಚೂರುಚೂರಾದ ; ಭಗ್ನವಾದ. ೨. ಗಾಯಗೊಂಡ. ೩.ಕೆದರಿದ; ಚೆಲ್ಲಾಪಿಲ್ಲಿಯಾದ. ೪. ಸೋತ ; ದಣಿದ. ೫. ಸುಗ್ಗಾದ ; ಶಿಥಿಲವಾದ.

ಜರ್ಝರ (ನಾ). ೧.ಶೂರ; ಧೀರ. ೨.ಉದ್ಧತ.

ಜರ್ಝರ (ನಾ). ೧. ಒಂದು ಬಗೆಯ ಚರ್ಮವಾದ್ಯ. ೨. ಒಡಕು ಧ್ವನಿ ; ಕರ್ಕಶ ಧ್ವನಿ.

ಜರ್ಬು (ಕ್ರಿ). ೧. (ಕಣ್ಣುಸನ್ನೆಯಿಂದ) ಗದರಿಸು, –ಜಡಿ. (ನಾ). ೨. ಗದರಿಕೆ. ೩. ಹುಬ್ಬಿನ ಚಲನೆ. ೪. ದರ್ಪ ; ಠೀವಿ.

ಜರ್ವು (ಕ್ರಿ). ೧. (ಕಣ್ಣುಸನ್ನೆಯಿಂದ) ಗದರಿಸು ; ಜಂಕಿಸು. ೨.ಮಿಾಟು ; ಚಲಿಸು. ೩. ಹುಬ್ಬಿನಿಂದ ಭಾವವನ್ನು ಪ್ರಕಟಿಸು. (ನಾ). ೪. ಗದರಿಕೆ ; ಜಂಕಣೆ. ೫.ಹುಬ್ಬಿನ ಚಲನೆ. ೬. ದರ್ಪ ; ಠೀವಿ.

ಜಲ(ಳ) (ನಾ). ೧. ಹೊಳಪು ; ಕಾಂತಿ. ೨. ಸೆಕೆ ; ಶಾಖ. ೩. ನೀರು. ೪. ಜಡ ; ದಡ್ಡ. ೫. ಕಪಟ ; ಮೋಸ. ೬. ಲಾಮಂಚ. ೭.ಮೂತ್ರ; ಉಚ್ಚೆ. ~ಆಶಯ=೧. ನೀರಿಗೆ ಆಶ್ರಯವಾದ ಕೊಳ, ಸರೋವರ ಮುಂತಾದುವು. ೨. ಲಾಮಂಚ ; ಬಾಳದ ಬೇರು. ~ಕನ್ಯೆ(ನ್ನೆ) = ೧. ನೀರಿನಲ್ಲಿ ವಾಸಿಸುವ ಅಪ್ಸರೆ. ೨. ನಾಗಕನ್ಯೆ. ~ಕೇಳಿ = ನೀರಿನಲ್ಲಿ ಆಡುವ ವಿನೋದದ ಆಟ ; ನೀರಾಟ.

**~ಗರ** = ಹೊಟ್ಟೆಯಲ್ಲಿ ನೀರು ತುಂಬಿಕೊಳ್ಳುವ ಒಂದು ರೋಗ; ಜಲೋದರ. **~ಗಾರ** = ೧. ಕಸ ಗುಡಿಸುವವನು; ಜಾಡಮಾಲಿ. ೨. ಮಣ್ಣಿನಿಂದ ಚಿನ್ನವನ್ನು ತೆಗೆಯುವವನು. **~ಚರ** = ನೀರಿನಲ್ಲಿ ವಾಸಿಸುವ ಮೀನು, ಮೊಸಳೆ ಮುಂತಾದ ಜಲಜಂತು. **~ಜನಕ** = ನೀರಿನ ಘಟಕಗಳಲ್ಲಿ ಒಂದಾದ ಅನಿಲ; ಹೈಡ್ರೋಜೆನ್. **~ತರಂಗ** = ೧. ನೀರಿನ ಅಲೆ. ೨. ಬೇರೆ ಬೇರೆ ಪ್ರಮಾಣದ ಪಿಂಗಾಣಿ ಬಟ್ಟಲುಗಳಲ್ಲಿ ಬೇರೆ ಬೇರೆ ಪ್ರಮಾಣದಲ್ಲಿ ನೀರನ್ನು ತುಂಬಿ ಕಡ್ಡಿಯಿಂದ ಬಡಿದು ನುಡಿಸುವ ಒಂದು ವಾದ್ಯ. **~ದುರ್ಗ** = ನೀರಿನ ನಡುವೆ ಇರುವ ಕೋಟೆ. **~ಬಾಧೆ** = ೧. ನೀರಿನಿಂದ ಉಂಟಾಗುವ ತೊಂದರೆ. ೨. ಮೂತ್ರ ವಿಸರ್ಜನೆ. **~ಯಂತ್ರ** = ೧. ಜೀರ್ಕೊಳವೆ; ಪಿಚಕಾರಿ. ೨. ನೀರನ್ನು ಎತ್ತುವ ಯಂತ್ರ; ರಾಟಳ. **~ಲಿಪಿ** = ಕ್ಷಣಭಂಗುರವಾದುದು. **~ಸ್ತಂಭನ** = ೧. ನೀರನ್ನು ತಡೆಯುವುದು. ೨. ನೀರಿನಲ್ಲಿದ್ದೂ ನೀರಿನ ಬಾಧೆ ತಟ್ಟದಂತೆ ತಡೆಯುವ ಮಂತ್ರವಿದ್ಯೆ. **~ಹರಿ** = ೧. ನೀರಿನ ಪ್ರವಾಹ. ೨. ಲಿಂಗಕ್ಕೆ ಅಥವಾ ವಿಗ್ರಹಕ್ಕೆ ಅಭಿಷೇಕ ಮಾಡಿದ ನೀರು ಪಾಣಿವಟ್ಟಲಿನಿಂದ ಹರಿದು ಹೋಗುವುದಕ್ಕಾಗಿ ಮಾಡಿದ ದಾರಿ.

**ಜಲಕ್ಕನೆ** (ಅ). ೧. ಸ್ವಚ್ಛವಾಗಿ; ಶುಭ್ರವಾಗಿ. ೨. ವಿಶದವಾಗಿ. ೩. ಒಮ್ಮೆಲೆ; ತಟ್ಟನೆ.

**ಜಲಗ** (ನಾ). ಜಾಲಗಾರ; ಬೆಸ್ತ.

**ಜಲ(ಳ)ಜ** (ನಾ). ೧. ನೀರಿನಲ್ಲಿ ಹುಟ್ಟಿದುದು; ತಾವರೆ. ೨. ಕಪ್ಪೆಚಿಪ್ಪು; ಸಿಂಪು.

**ಜಲದಿವ್ಯ** (ನಾ). ದಿವ್ಯಗಳಲ್ಲಿ ಒಂದು.

**ಜಲ(ಳ)ಜನಾಭ** (ನಾ). ಹೊಕ್ಕುಳಲ್ಲಿ ತಾವರೆ ಹೂವು ಉಳ್ಳವನು; ವಿಷ್ಣು.

**ಜಲಜಲಿಸು** ೧. = ಜಳಜಳಿಸು. ೨. ಒಸರು; ಸ್ರವಿಸು.

**ಜಲ(ಳ)ದ** (ನಾ). ನೀರನ್ನು ಕೊಡುವುದು; ಮೋಡ; ಮುಗಿಲು. **~ಆಗಮ** = ಮಳೆಗಾಲ; ಕಾರ್ಗಾಲ. **~ನಿನದ** = ಗುಡುಗು; ಮೇಘಗರ್ಜನೆ.

**ಜಲ(ಳ)ಧರ** (ನಾ). ಮೋಡ; ಮುಗಿಲು. **~ಮಾರ್ಗ** = ಮೋಡಗಳ ಪಥ; ಆಕಾಶ.

**ಜಲ(ಳ)ಧಿ** (ನಾ). ಕಡಲು; ಸಮುದ್ರ. **~ತಲ್ಪ** = ಸಮುದ್ರವನ್ನು ಹಾಸುಗೆಯಾಗುಳ್ಳವನು; ವಿಷ್ಣು.

**ಜಲಭೃತ್ತು** (ನಾ). ಮೋಡ; ಮೇಘ.

**ಜಲ(ಳ)ರುಹ** (ನಾ). ನೀರಿನಲ್ಲಿ ಹುಟ್ಟಿದುದು; ತಾವರೆ.

**ಜಲಸಾ** (ನಾ). ೧. ಸಂತೋಷಕೂಟ. ೨. ಸಂಗೀತ, ನೃತ್ಯ ಮೊದಲಾದುವುಗಳ ಪ್ರದರ್ಶನ; ಬೈಠಕ್ಕು.

**ಜಲುಗು** (ನಾ). ನೀರು ಜಿನುಗುವ ಸ್ಥಳ.

**ಜಲೂ(ಳೂ)ಕ** (ನಾ). ಜಿಗಣೆ; ಜಿಗಳೆ.

**ಜಲ್ಪ** (ನಾ). ೧. ಮಾತು; ನುಡಿ. ೨. ಅಸ್ಪಷ್ಟವಾದ ಮಾತು. ೩. ಅಸಂಬದ್ಧವಾದ ಮಾತು.

**ಜಲ್ಪಕ** (ನಾ). ೧. ಮಾತುಗಾರ; ವಾಚಾಳ. ೨. ಸಂಭಾಷಣಾ ಚತುರ.

**ಜಲ್ಲಡಿ** = **ಜಲ್ಲಡೆ**.

**ಜಲ್ಲಡೆ** (ನಾ). ಸಾರಣಿಗೆ; ಒಂದರಿ; ಜರಡಿ.

**ಜಲ್ಲರಿ** (ನಾ). ೧. ಕುಚ್ಚು; ಗೊಂಡೆ. ೨. ಒಂದು ಬಗೆಯ ಚರ್ಮವಾದ್ಯ.

**ಜಲ್ಲಿ** (ನಾ). ೧. ಸಣ್ಣ ಸಣ್ಣ ಕಲ್ಲಿನ ಚೂರು. ೨. ಸುಳ್ಳು. ೩. ದೊಡ್ಡ ಬಿದಿರಿನ ಗೂಡೆ; ತೊಂಬೆ. ೪. ಕುಚ್ಚು; ಗೊಂಡೆ. ೫. ಕಬ್ಬಿನ ಕೋಲು; ಇಕ್ಷುದಂಡ. **~ಮಿಗ** = ಚಮರೀಮೃಗ.

ಜಲ್ಲಿಸು (ಕ್ರಿ). ೧. ಹೊಳೆ; ಪ್ರಕಾಶಿಸು. ೨. ಜರಡಿಹಿಡಿ; ಒಂದರಿಯಾಡು. ೩. ಕುಕ್ಕು; ಕುಸುಕು.

ಜಲ್ಲು (ನಾ). ೧. (ಬಟ್ಟೆ, ಎಲೆ ಮೊದಲಾದುವು) ಹರಿದಿರುವುದು. ೨. ದೋಣಿ ನಡಸುವ ಹುಟ್ಟು. ೩. ಆತಂಕ; ಚಿಂತೆ.

ಜಲ್ಲೆ (ನಾ). ೧. ಬಿದಿರು, ಕಬ್ಬು ಮುಂತಾದುವುಗಳ ಕೋಲು, -ಗಳು. ೨. ಹುಟ್ಟುಗೋಲು.

ಜವ (ನಾ). ೧. ಯಮ; ಯಮಧರ್ಮ. ೨. ವೇಗ; ಕ್ಷಿಪ್ರತೆ; ತ್ವರೆ. ೩. ಹೆಚ್ಚಾದ ವೇಗದಿಂದ ಕೂಡಿದವನು. ೪. ಶಕ್ತಿ; ಸಾಮರ್ಥ್ಯ. ~(ಂ)ಕೆ(ಗೆ)ಡು = ೧. ಶಕ್ತಿಗುಂದು; ಸತ್ತ್ವವಳಿ. ೨. ವೇಗ ಕುಗ್ಗು. ~ದಾಡೆ = ಒಂದು ಬಗೆಯ ಆಯುಧ; ಕಠಾರಿ.

ಜವಣೆ (ನಾ). ಸತ್ತವರನ್ನು ಬದುಕಿಸುವುದೆಂದು ಹೇಳಲಾಗುವ ಒಂದು ಜಾತಿಯ ಸಸ್ಯ; ಸಂಜೀವಿನಿ.

ಜವನ (ನಾ). ೧. ಒಂದು ಬಗೆಯ ಸುಗಂಧ ಸಸ್ಯ; ದವನ. ೨. ರಭಸ; ವೇಗ. ೩. ವೇಗವಾಗಿ ಓಡಬಲ್ಲವನು; ವೇಗಶಾಲಿ. ೪. ವೇಗವಾದ ಕುದುರೆ. (ಗು). ೫. ವೇಗವುಳ್ಳ.

ಜವನಿಕೆ (ನಾ). ೧. ತೆರೆ; ಪರದೆ; ಕಾಂಡಪಟ. ೨. ಮರೆ; ಉಚ್ಚುಮರೆ.

ಜವಳ (ನಾ). ೧. ಅವಳಿ; ಜೋಡಿ; ಜೊತೆ. ೨. ಒಂದು ಪ್ರಮಾಣ.

ಜವಳಿ (ನಾ). ೧. ಬಟ್ಟೆ; ವಸ್ತ್ರ. ೨. ಜೊತೆ; ಯುಗಳ. ೩. ಸಮಾನವಾದುದು; ಒಂದೇ ತೆರನಾಗಿರುವುದು. ೪. ಒದ್ದೆ; ತೇವ. ೫. ವೇಗ; ಶೀಘ್ರತೆ. ~ಕ(ಗ)ದವು = ಎರಡು ಪಡಿ; ಜೋಡಿಕದ. ~ತೆ(ದೆ)ಗೆ = ದ್ರವವಿಲ್ಲದಂತಾಗು; ಒಣಗಿಹೋಗು. ~ನುಡಿ = ೧. ಎರಡು ಮಾತು. ೨. ಇಬ್ಬಗೆಯ ಮಾತು; ಮೊದಲು ಆಡಿದುದನ್ನು ಅಲ್ಲಗಳೆಯುವ ಎರಡನೆಯ ಮಾತು.

ಜವಾಜಿ = ಜವಾದಿ.

ಜವಾದಿ (ನಾ). ಒಂದು ಬಗೆಯ ಸುಗಂಧ ದ್ರವ್ಯ; ಪುನುಗು.

ಜವಾನ (ನಾ). ಆಳು; ಸೇವಕ.

ಜವಾನಿ (ನಾ). ಕೆಲಸದವಳು; ಸೇವಕಿ.

ಜವಾಬು (ನಾ). ೧. ಉತ್ತರ; ಮರುನುಡಿ. ೨. ಮೊಕದ್ದಮೆಯ ವಿಚಾರಣೆಯಲ್ಲಿ ಆರೋಪಿ ಅಥವಾ ಸಾಕ್ಷಿದಾರನು ನೀಡುವ ಹೇಳಿಕೆ. ~ದಾರ = ಹೊಣೆಗಾರ; ಉತ್ತರ ಹೇಳುವವನು.

ಜವಾಬುದಾರಿ (ನಾ). ಹೊಣೆಗಾರಿಕೆ; ಹೊಣೆ.

ಜವಾರಿ (ಗು). ಸ್ವಂತ ದೇಶದಲ್ಲಿ ಉತ್ಪತ್ತಿಯಾದ; ದೇಶೀಯ; ನಾಟಿ.

ಜವಾಹಿರಿ (ನಾ). ೧. ಮುತ್ತು, ರತ್ನ ಮುಂತಾದ ಬೆಲೆಯುಳ್ಳ ಮಣಿ. ೨. ರತ್ನ ಖಚಿತವಾದ ಒಡವೆ.

ಜವಿ (ನಾ). ೧. ಕುದುರೆಯ ಕೂದಲು. ೨. ವೇಗವುಳ್ಳವನು. (ಗು). ೩. ಚುರುಕಾದ; ವೇಗಶಾಲಿಯಾದ.

ಜವುಗು (ನಾ). ಯಾವಾಗಲೂ ತೇವವಾಗಿರುವ ಭೂಮಿ; ಜೌಗುನೆಲ. ~ಏಳ್ (ಳ್, ಳು) = ೧. ಒಸರು; ಜಿನುಗು. ೨. ಬಗ್ಗಡವಾಗು; ರಾಡಿಯಾಗು.

ಜವೆ (ನಾ). ೧. ಕುದುರೆಯ ಕೂದಲು. ೨. ಒಂದು ಬಗೆಯ ಧಾನ್ಯ; ಯವಧಾನ್ಯ. ೩. ಒಂದು ಯವೆಯ ಕಾಳಿನಷ್ಟು ತೂಕ. ೪. ಒಂದು ಅಳತೆ. ೫. ಮಾಟದ ಮಂತ್ರ. ~ಬೂದಿ = ಮಂಕುಬೂದಿ.

ಜವ್ವನ (ನಾ). ೧. ಹರೆಯ; ಯೌವನ. ೨. ಮೊಲೆ; ಸ್ತನ. ೩. = ಜವ್ವನಿಗ. ~ಇಗ = ತರುಣ; ಯುವಕ.

ಜವ್ವನೆ (ನಾ). ಯುವತಿ ; ತರುಣಿ.

ಜಸ (ನಾ). ೧.ಯಶಸ್ಸು; ಕೀರ್ತಿ. ೨.ಶೋಭೆ; ಶ್ರೇಯಸ್ಸು. ೩. ವೈಭವ; ಐಶ್ವರ್ಯ. ೪.ಮಾನು. ~(೦)ಪ(ಬ)ಡೆ =೧. ಹೆಸರುವಾಸಿಯಾಗು ; ಪ್ರಸಿದ್ಧವಾಗು. ೨. ವೈಭವವನ್ನು ಹೊಂದು.

ಜಸೆ (ನಾ). ದೆಸೆ ; ಸ್ಥಿತಿ ; ಅವಸ್ಥೆ.

ಜಹಗೀರಿ ೧. = ಜಹಗೀರು. (ಗು). ೨. ಜಹಗೀರಿಗೆ ಸಂಬಂಧಿಸಿದ.

ಜಹಗೀರು (ನಾ). ಉಂಬಳಿಯಾಗಿ ದೊರೆತ ಭೂಮಿ. ~ದಾರ = ಉಂಬಳಿಭೂಮಿಯನ್ನು ಪಡೆದವನು.

ಜಹಜು (ನಾ). ಹಡಗು.

ಜಹಾಂಗೀರು (ನಾ). ಒಂದು ಬಗೆಯ ಸಿಹಿ ಖಾದ್ಯ.

ಜಳಂಬ (ನಾ). ೧. ಹೊದಿಕೆ; ಮುಸುಕು. ೨. ಬೀಸಣಿಗೆ. ~ಆಯ್ತ = ಬೀಸಣಿಗೆ ಬೀಸುವವನು ; ಗಾಳಿ ಹಾಕುವ ಚಾಕರ.

ಜಳಕ (ನಾ). ಮಿಾಹ ; ಸ್ನಾನ.

ಜಳಕು (ಕ್ರಿ). ನಡುಗು; ಅಲುಗು; ಕಂಪಿಸು.

ಜಳಜಳಿಸು (ಕ್ರಿ). ೧. ತಳತಳಿಸು ; ಹೊಳೆ. ೨. ಜಲಜಲ ಎಂದು ಸದ್ದುಮಾಡು.

ಜಳದೆ (ನಾ). ೧.ನೀರಿನಿಂದ ನೆನೆಸಿದ ಬೀಸಣಿಗೆ. ೨. ಲಾಮುಂಚದಿಂದ ಮಾಡಿದ ಬೀಸಣಿಗೆ; ಬಾಳದ ಬೇರಿನ ಬೀಸಣಿಗೆ.

ಜಳವಟ್ಟಿಗೆ (ನಾ). ಒಂದು ಬಗೆಯ ಕಂಠಾಭರಣ.

ಜಳವೆ (ನಾ). ೧. ಬಿದಿರಿನ ಗಳು; ಬೊಂಬು. ೨. ಹುಟ್ಟುಗೋಲು.

ಜಳುಪು (ಕ್ರಿ). ಜಾರು ; ಕಳಚು.

ಜಳ್ಳು (ನಾ). ೧. ಪೊಳ್ಳು ; ತಿರುಳಿಲ್ಲದುದು. ೨. ಪೊಳ್ಳಾದ ಕಾಳು. ~ಜರಗು = ಸತ್ತ್ವಹೀನವಾದುದು. ~ಪೊ(ವೊ)ೕಗು=ಸತ್ತ್ವಗುಂದು ; ಬಲಗುಂದು.

ಜಾ(೦)ಗಟೆ (ನಾ). ಜಯಗಂಟೆ ; ಪೂಜಾಕಾಲದಲ್ಲಿ ಬಾರಿಸುವ ವಾದ್ಯಗಳಲ್ಲಿ ಒಂದು.

ಜಾಂಗಲ(ಳ) (ನಾ). ೧. ನೀರು ಕಡಮೆಯಾಗಿ ಇರುವ ಪ್ರದೇಶ. ೨. ಕಾಡು ಹೆಚ್ಚಾಗಿರುವ ಭೂಭಾಗ. ೩.ಕಾಡುಮನುಷ್ಯ; ಅನಾಗರಿಕ. ೪. ಮಾಂಸ. (ಗು). ೫. ಜಲವಸತಿ ಇಲ್ಲದ. ೬. ಕಾಡುತನವುಳ್ಳ ; ವನ್ಯ.

ಜಾಂಗುಲ(ಳ) (ನಾ). ೧. ನಂಜು ; ವಿಷ. ೨. ವಿಷ ಚಿಕಿತ್ಸೆ ; ವಿಷಪರಿಹಾರ ವಿದ್ಯೆ.

ಜಾಂಗುಲಿ(ಳಿ)ಕ (ನಾ). ವಿಷವೈದ್ಯ ; ಗಾರುಡಿಗ.

ಜಾಂಡೆ (ನಾ). ಬಾವುಟ ; ಧ್ವಜ.

ಜಾಂಬವ (ನಾ). ೧. ಜಂಬೂಫಲ ; ನೇರಿಳೆ ಹಣ್ಣು. ೨. ಕರಡಿಗಳ ಒಡೆಯ ; ಜಾಂಬವಂತ. (ಗು). ೩. ನೇರಿಳೆ ಮರಕ್ಕೆ ಸಂಬಂಧಿಸಿದ. ೪. ಚಿನ್ನದಂತೆ ಹೊಳೆಯುವ.

ಜಾಂಬು (ನಾ). ನೀರು ಕುಡಿಯುವ ಪಾತ್ರೆ.

ಜಾಂಬೂನದ (ನಾ). ೧. ಚಿನ್ನ ; ಸುವರ್ಣ. (ಗು). ೨. ಚಿನ್ನದಿಂದ ಮಾಡಿದ.

ಜಾಕಣಿ (ನಾ).ಮುಚ್ಚುವ ಸಾಧನ; ಮುಚ್ಚಳ.

ಜಾಕಾಯಿ (ನಾ). ಅಡುಗೆಗೆ ಉಪಯೋಗಿಸುವ ಒಂದು ಬಗೆಯ ಸುಗಂಧ ವಸ್ತು ; ಜಾಜಿಕಾಯಿ.

ಜಾಗ (ನಾ). ೧. ಹಸಿರು ; ಮರಕತವರ್ಣ. ೨. ರತ್ನಗಳಲ್ಲಿ ಒಂದು; ಪಚ್ಚೆ. ೩. ಮಂಗಳಪ್ರಸಂಗಗಳಲ್ಲಿ ಅಂಕುರಾರ್ಪಣವೆಂಬ ಕರ್ಮದ ಅಂಗವಾಗಿ ಪಾತ್ರೆಗಳಲ್ಲಿ ಬೆಳಸುವ ಪೈರು. ೪. ಯಾಗ ; ಯಜ್ಞ. ೫. ಸ್ಥಳ ; ನೆಲ ; ಎಡೆ. ೬. ನೆಲಗಟ್ಟು ; ಕುಟ್ಟಿಮ. ~ಪ(ವ)ರಲ್(ಲು) = ಮರಕತಮಣಿ ; ಪಚ್ಚೆ.

ಜಾಗತಿಕ (ಗು). ಜಗತ್ತಿಗೆ ಸಂಬಂಧಿಸಿದ.

ಜಾಗರ (ನಾ). ೧. ಮಂಗಳಪ್ರಸಂಗಗಳಲ್ಲಿ ಅಂಕುರಾರ್ಪಣವೆಂಬ ಕರ್ಮದ ಅಂಗವಾಗಿ

ಪಾತ್ರೆಗಳಲ್ಲಿ ಬೆಳಸುವ ಪೈರು. ೨. ನವಿಲಿನ ಕುಣಿತ. ೩. ಎಚ್ಚರ ; ನಿದ್ರೆಯಿಲ್ಲದಿರುವಿಕೆ. ೪. = ಜಾಗರಣೆ. ೫. ಯುದ್ಧಕವಚ ; ಚಿಲಖತ್ತು.

ಜಾಗರಣ ೧. = ಜಾಗರಣೆ. ೨. ಜಾಗ್ರದವಸ್ಥೆ.

ಜಾಗರಣೆ (ನಾ). ೧. ನಿದ್ದೆ ಮಾಡದಿರುವಿಕೆ. ೨. ರಾತ್ರಿಯೆಲ್ಲಾ ಎಚ್ಚರವಿದ್ದು ನಡಸುವ ಪೂಜೆ.

ಜಾಗರಿಕ (ನಾ). ಒಂದು ಜಾತಿಯ ಹಕ್ಕಿ.

ಜಾಗರೂಕ (ನಾ). ೧. ಎಚ್ಚರವಾಗಿರುವವನು. (ಗು). ೨. ಎಚ್ಚರಿಕೆಯಿಂದಿರುವ.

ಜಾಗರೂಕತೆ (ನಾ). ಎಚ್ಚರದಿಂದಿರುವಿಕೆ ; ಹುಷಾರು.

ಜಾಗು (ಕ್ರಿ). ೧. ಬಾಗು ; ಒಲೆ. (ನಾ). ೨. ಮೌನ ; ನೀರವತೆ. ೩. ಉದಾಸೀನತೆ ; ವಿಳಂಬ. ೪. ಕೊಂಡಾಟದ ಒಂದು ನುಡಿ. ~ಇಸು = ೧. ಬಾಗಿಸು. ೨. ಓರೆಯಾಗಿ ಇಡು ; ಇಳಿಜಾರಾಗಿ ಇಡು. ~ಮಾಡು = ಉದಾಸೀನಮಾಡು ; ತಡಮಾಡು.

ಜಾಗುಡ (ನಾ). ಕುಂಕುಮಕೇಸರಿ.

ಜಾಗೃತ ೧. = ಜಾಗೃತಿ. ೨. ಎಚ್ಚರಗೊಂಡವನು ; ಜಾಗರೂಕ. (ಗು). ೩. ಎಚ್ಚತ್ತ ; ಎಚ್ಚರಿಕೆ ಹೊಂದಿದ.

ಜಾಗೃತಿ (ನಾ). ೧. ಎಚ್ಚರ. ೨. ಆಲಸ್ಯವನ್ನು ಬಿಟ್ಟು ಕಾರ್ಯೋನ್ಮುಖವಾಗುವಿಕೆ.

ಜಾಗ್ರತೆ (ನಾ). ೧. ತ್ವರೆ ; ಶೀಘ್ರತೆ. ೨. ಎಚ್ಚರಿಕೆ; ಜಾಗರೂಕತೆ. ೩. ಕಾರ್ಯೋನ್ಮುಖತೆ. (ಅ). ೪. ಶೀಘ್ರವಾಗಿ ; ವೇಗವಾಗಿ.

ಜಾಜಮು (ನಾ). ರಂಗುರಂಗಿನ ಚಿತ್ರಗಳಿಂದ ಕೂಡಿದ ಹಾಸು.

ಜಾಜಿ (ನಾ). ೧. ಒಂದು ಬಗೆಯ ಹೂವು ; ಮಾಲತೀಪುಷ್ಪ. ೨. = ಜಾಕಾಯಿ. ೩. ಕಾವಿ ಬಣ್ಣ ; ಕೆಂಬಣ್ಣ. ~ಪತ್ರೆ = ಜಾಯಿಕಾಯಿಯ ಸಿಪ್ಪೆ.

ಜಾಠರ (ನಾ). ಹೊಟ್ಟೆ ; ಜಠರ.

ಜಾಡ = ಜೇಡ.

ಜಾಡಣೆ (ನಾ). ೧. ಕೊಡಹುವಿಕೆ ; ಅಲುಗಾಡಿಸುವಿಕೆ. ೨. ಅತಿಸಾರ ; ಭೇದಿ.

ಜಾಡಮಾಲಿ (ನಾ). ಕಸ ಗುಡಿಸುವವನು ; ಜಲಗಾರ.

ಜಾಡಿ (ನಾ). ೧. ದಪ್ಪನೆಯ ಕಂಬಳಿ. ೨. ದಟ್ಟಣೆ ; ಸಂದಣಿ. ೩. ಹೆಚ್ಚಳ ; ಉರವಣೆ ; ಆಧಿಕ್ಯ. ೪. ಮಣ್ಣಿನ ಅಥವಾ ಪಿಂಗಾಣಿಯ ಪಾತ್ರೆ. (ಗು). ೫. ಹಳೆಯ; ಮುದಿಯಾದ.

ಜಾಡಿಸು (ಕ್ರಿ). ೧. (ಕಸವನ್ನು) ಗುಡಿಸು ; ಉಡುಗು. ೨. ಕೊಡಹು ; ಒದರು. ೩. ನೂಕು ; ತಳ್ಳು. ೪. ರಭಸಗೊಳ್ಳು. ೫. ನಿಂದಿಸು ; ಹೀಯಾಳಿಸು. ೬. ಚಿಮ್ಮು ; ಹೊರಸೂಸು. ೭. ಸಿಡಿಸು ; ಕೆಡಹು. ೮. ಭೇದಿಯಾಗು.

ಜಾಡು (ನಾ). ೧. ನಡೆದು ನಡೆದು ಸವೆದ ದಾರಿ. ೨. ಸುಳಿವು ; ಸೂಚನೆ. ೩. ರೀತಿ ; ಕ್ರಮ.

ಜಾಡೆ = ಜಾಡು.

ಜಾಡ್ಯ (ನಾ). ೧. ಚಳಿ; ಶೈತ್ಯ. ೨. ನಿರುತ್ಸಾಹ; ಔದಾಸೀನ್ಯ. ೩. ಅನಾರೋಗ್ಯ ; ಬೇನೆ.

ಜಾಣ್(ಣು) (ನಾ). ಬುದ್ಧಿವಂತಿಕೆ. ~ಇಲಿ = ಬುದ್ಧಿಯಿಲ್ಲದ. ~ಕೆ(ಗೆ)ಡು = ಬುದ್ಧಿಗೆಡು ; ಮತಿಗೆಡು. ~ನುಡಿ = ಜಾಣತನದ ಮಾತು; ಚತುರೋಕ್ತಿ. ~ಪ(ವ)ಕ್ಕಿ = ಗಿಣಿ.

ಜಾಣ (ನಾ). ಬುದ್ಧಿವಂತ ; ತಿಳಿವಳಿಕೆಯುಳ್ಳವನು.

ಜಾಣುಮೆ = ಜಾಣ್ಮೆ.

ಜಾಣುವೆ = ಜಾಣ್ಮೆ.

ಜಾಣೆ (ನಾ). ಬುದ್ಧಿವಂತೆ ; ಚತುರೆ.

ಜಾಣ್ಮೆ (ನಾ). ಜಾಣತನ ; ಕೌಶಲ.

ಜಾತ (ನಾ). ೧. ಹುಟ್ಟಿದವನು. ೨. ಹುಟ್ಟಿದುದು. ೩. ಉತ್ತಮ ಕುಲದಲ್ಲಿ ಹುಟ್ಟಿದವನು; ಕುಲೀನ. ೪. ಮಗ; ಪುತ್ರ. ೫. ಗುಂಪು; ಸಮೂಹ. (ಗು). ೬. ಹುಟ್ಟಿದ; ಉಂಟಾದ. ೭. ವ್ಯಕ್ತವಾದ; ಪ್ರಕಟವಾದ. ~ಕರ್ಮ = ಹುಟ್ಟಿದ ಮಗುವಿಗೆ ಮಾಡುವ ಒಂದು ಸಂಸ್ಕಾರ. ~ರೂಪ = ೧. ಬೆತ್ತಲೆ; ನಗ್ನಾವಸ್ಥೆ. ೨. ದಿಗಂಬರ ಜೈನರ ಸಂನ್ಯಾಸ. ೩. ದಿಗಂಬರನಾದ ಸಂನ್ಯಾಸಿ. ೪. ಚಿನ್ನ. ~ಸೂತಕ = ಮಗು ಹುಟ್ಟಿದಾಗ ಉಂಟಾಗುವ ಮೈಲಿಗೆ; ಪುರುಡು.

ಜಾತಕ (ನಾ). ೧. ಜನ್ಮಕಾಲದ ತಿಥಿ, ವಾರ, ನಕ್ಷತ್ರ ಮುಂತಾದ ವಿವರಗಳನ್ನೂ ಆಗಿನ ಗ್ರಹಗಳ ಸ್ಥಿತಿಯನ್ನೂ ತಿಳಿಸುವ ಪತ್ರಿಕೆ; ಜನ್ಮಕುಂಡಲಿ. ೨. ಹುಟ್ಟಿದವನು. ೩. ಬುದ್ಧನಿಗೆ ಸಂಬಂಧಿಸಿದ ಪೂರ್ವಜನ್ಮಗಳ ಕತೆಗಳು.

ಜಾತವೇದ (ನಾ). ಅಗ್ನಿ; ಬೆಂಕಿ.

ಜಾತಿ (ನಾ). ೧. ಹುಟ್ಟು; ಜನನ. ೨. ಬ್ರಾಹ್ಮಣ ಮೊದಲಾದ ಚತುರ್ವರ್ಣಗಳು. ೩. ಹುಟ್ಟಿದ ಕುಲ, –ವಂಶ. ೪. ರೀತಿ; ಸ್ವಭಾವ. ೫. ಜಾಜಿಗಿಡ ಮತ್ತು ಅದರ ಹೂವು. ೬. ಗುಂಪು; ವರ್ಗ. ೭. ನೆಲ್ಲಿಗಿಡ. ೮. ಮೇಲಾದುದು; ಶ್ರೇಷ್ಠವಾದುದು. ೯. ಸಾದೃಶ್ಯ; ಸಮಾನತೆ. ೧೦. = ಜಾಕಾಯಿ. ~ಅಂಧ = ೧. ಹುಟ್ಟುಕುರುಡ. ೨. ಜಾತಿಯ ವಿಷಯದಲ್ಲಿ ದುರಭಿಮಾನವುಳ್ಳವನು. ~ಇಸು = ಹುಟ್ಟು; ಮೂಡ. ~ಕಾ(ಗಾ)ಱ(ರ) = ಅಭಿನಯಕಾರ; ನಟ. ~ದ್ವೇಷ = ಹುಟ್ಟಿನಿಂದಲೇ ಬಂದ ಹಗೆತನ. ~ಧರ್ಮ = ೧. ಒಂದು ಜಾತಿಯ ಹುಟ್ಟುಗುಣ. ೨. ಆಯಾ ಜಾತಿಗೆ ಬಂದ ಸಂಪ್ರದಾಯ. ~ಬೆಳ್ = ಹುಟ್ಟಿನಿಂದಲೇ ದಡ್ಡ; ಶತಮೂರ್ಖ. ~ಭ್ರಷ್ಟ = ಹುಟ್ಟಿದ ಕುಲದಿಂದ ದೂರವಾದವನು; ಜಾತಿಗೆಟ್ಟವನು. ~ಸಂಕರ = ಬೇರೆ ಬೇರೆ ಜಾತಿಗಳು ಬೆರೆಯುವಿಕೆ. ~ಸ್ಮರ = ಹಿಂದಿನ ಜನ್ಮದ ನೆನಪುಳ್ಳವನು. ~ಹೀನ = ಹೀನ ಜಾತಿಯವನು.

ಜಾತೆ (ನಾ). ೧. ಮಗಳು; ಪುತ್ರಿ. ೨. ಹುಟ್ಟಿದವಳು; ಜನಿಸಿದವಳು.

ಜಾತ್ಯ (ನಾ). ೧. ಒಳ್ಳೆಯ ಕುಲದಲ್ಲಿ ಹುಟ್ಟಿದವನು; ಕುಲೀನ. (ಗು). ೨. ಉತ್ತಮ ಕುಲದಲ್ಲಿ ಹುಟ್ಟಿದ; ಸತ್ಕುಲದ.

ಜಾತ್ರೆ (ನಾ). ೧. ಯಾತ್ರೆ. ೨. ಉತ್ಸವ; ಪರಿಸೆ. ೩. ಜನಗಳ ಗುಂಪು, –ಸಮೂಹ

ಜಾತ್ರೆಗ (ನಾ). ೧. ಯಾತ್ರೆಗೆ ಹೊರಟವನು; ಯಾತ್ರಿಕ. ೨. ಪ್ರಯಾಣಿಕ.

ಜಾದಗೆ = ಚಾತಕ.

ಜಾದಿ (ನಾ). ಒಂದು ಬಗೆಯ ಹೂವು; ಮಾಲತೀಪುಷ್ಪ.

ಜಾದು (ನಾ). ೧. ಕೆಂಪು ಬಣ್ಣದ ಶಿಲೆ. ೨. ಕಾವಿಬಣ್ಣ; ಕೆಂಬಣ್ಣ. ೩. ಇಂದ್ರಜಾಲ; ಕಣ್ಣುಕಟ್ಟು ವಿದ್ಯೆ. ~ಕ(ಗ)ಲ್(ಲ್ಲು) = ಕೆಂಪು ಕಲ್ಲು; ಕಾವಿಕಲ್ಲು.

ಜಾದುಗಾರ (ನಾ). ಮಾಟಗಾರ; ಮೋಡಿಕಾರ.

ಜಾನ (ನಾ). ೧. ಯೋಚನೆ; ಚಿಂತನೆ; ಮನನ ಮಾಡುವುದು. ೨. ಧ್ಯಾನ. ೩. ಜ್ಞಾನ; ಅರಿವು. ~ಇಸು = ೧. ಏಕಾಗ್ರತೆಯಿಂದ ನೆನೆ; ಧ್ಯಾನಮಾಡು. ೨. ಯೋಚಿಸು.

ಜಾನಪದ (ನಾ). ೧. ದೇಶದಲ್ಲಿ ವಾಸಿಸುವವನು; ನಾಡಿನ ಪ್ರಜೆ. ೨. ನಾಡು; ದೇಶ. (ಗು). ೩. ನಾಡಿಗೆ ಸಂಬಂಧಿಸಿದ; ಜನಸಾಮಾನ್ಯಕ್ಕೆ ಸಂಬಂಧಪಟ್ಟ. ೪. ಹಳ್ಳಿಗಾಡಿನ; ಗ್ರಾಮೀಣ; ಗ್ರಾಮ್ಯ.

ಜಾನು (ನಾ). ಮಂಡಿ; ಮೊಳಕಾಲು. ~ದಘ್ನ = ೧. ಮೊಳಕಾಲಿನವರೆಗೆ ಬರುವುದು. ೨. ಮಂಡಿಯವರೆಗೆ ಬರುವ.

**ಜಾನುವಾರು** (ನಾ). ದನ; ಕಾಲ್ನಡೆ.

**ಜಾಪಕ** (ನಾ). ೧. ಜಪ ಮಾಡುವವನು; ಮಂತ್ರಗಳನ್ನು ಜಪಿಸುವವನು. ೨. ಕುಂಕುಮ.

**ಜಾಪಾಳ** (ನಾ). ಒಂದು ಜಾತಿಯ ಔಷಧ ಸಸ್ಯ ಮತ್ತು ಅದರ ಬೀಜ.

**ಜಾಪ್ಯ** (ನಾ). ೧. ಕಾಲಹರಣ; ತಡ; ವಿಲಂಬ. ೨. ಉದಾಸೀನ ಮಾಡುವವನು; ಸೋಮಾರಿ. ೩. ಜಪಿಸಲು ಯೋಗ್ಯವಾದುದು.

**ಜಾಬಾಲ** (ನಾ). ೧. ಕುರಿ ಕಾಯುವವನು; ಕುರುಬ. ೨. ಉಪನಿಷತ್ತುಗಳಲ್ಲಿ ಒಂದು. ೩. ಒಬ್ಬ ಋಷಿಯ ಹೆಸರು.

**ಜಾಬಾಳ** ೧. = ಜಾಬಾಲ. ೨. ಜಾಳುಜಾಳಾದುದು; ನೀರಸವಾದುದು.

**ಜಾಮ** (ನಾ). ೧. ದಿವಸದ ಎಂಟನೆಯ ಒಂದು ಭಾಗದಷ್ಟು ಕಾಲ; ಪ್ರಹರ. ೨. ಸುಡುವಿಕೆ; ದಹನ. ~ಇಸು=ಸುಡು; ದಹಿಸು.

**ಜಾಮಾತೃ** (ನಾ). ಮಗಳ ಗಂಡ; ಅಳಿಯ.

**ಜಾಮಿ** (ನಾ). ೧. ಒಡಹುಟ್ಟಿದವಳು; ಸಹೋದರಿ. ೨. ಪತಿವ್ರತೆ; ಗರತಿ.

**ಜಾಮೀನು** (ನಾ). ಹೊಣೆ; ಈಡು.

**ಜಾಮೂನ್(ನು)** (ನಾ). ಒಂದು ಬಗೆಯ ಸಿಹಿತಿಂಡಿ.

**ಜಾಯಕ** (ನಾ). ಒಂದು ಸುಗಂಧದ ಮರ.

**ಜಾಯಮಾನ** (ನಾ). ೧. ಸ್ವಭಾವ; ಹುಟ್ಟುಗುಣ. (ಗು). ೨. ಹುಟ್ಟತಕ್ಕ; ಒದಗಲಿರುವ.

**ಜಾಯಾಜೀವ** (ನಾ). ಹೆಂಡತಿಯ ಗಳಿಕೆಯಿಂದ ಬದುಕುವವನು.

**ಜಾಯಿ** (ನಾ). ಒಂದು ಬಗೆಯ ಚರ್ಮವಾದ್ಯ.

**ಜಾಯಿಲ** (ನಾ). ೧. ನಾಯಿ; ಸೊಣಗ. ೨. ಜಾತಿ ಕುದುರೆ; ಜಾತ್ಯಶ್ವ.

**ಜಾಯೆ** (ನಾ). ಹೆಂಡತಿ; ಪತ್ನಿ.

**ಜಾರ** (ನಾ). ವ್ಯಭಿಚಾರಿ; ಹಾದರಿಗ.

**ಜಾರಿ** (ನಾ). ೧. ರೂಢಿ; ಅನುಷ್ಠಾನ; ಕಾರ್ಯರೂಪಕ್ಕೆ ತಂದಿರುವುದು. ೨. ಚಲಾಯಿಸುವಿಕೆ; ಅಮಲಿನಲ್ಲಿ ತರುವಿಕೆ. ~ಮಾಡು = ಕಾರ್ಯಗತಮಾಡು.

**ಜಾರು** ೧. = ಜಾಱು. (ನಾ). ೨. ಕಣ್ಣಿನ ಪಿಸುರು; ಗೀಜು. ~ಕ(ಗ)ಣ್ಣು =ಪಿಸುರು ತುಂಬಿದ ಕಣ್ಣು. ~ಕು(ಗು)ಪ್ಪೆ = ಇಳಿಜಾರಾದ ಕಲ್ಲು; ಜಾರುಬಂಡೆ. ~ಬಂಡೆ = ಜಾರುಗುಪ್ಪೆ.

**ಜಾರೆ** (ನಾ). ಹಾದರಿಗಿತ್ತಿ; ಜೋಡೆ.

**ಜಾಱು(ರು)** (ಕ್ರಿ). ೧. ಜಗುಳು; ನುಣುಚಿಕೊಳ್ಳು. ೨. ಮೇಲಿನಿಂದ ಕೆಳಕ್ಕೆ ವೇಗವಾಗಿ ಇಳಿ. ೩. ನಡತೆತಪ್ಪು; ಭ್ರಷ್ಟವಾಗು. (ನಾ). ೪. ಜಾರುವಿಕೆ; ಸರಿಯುವಿಕೆ. ೫. ಇಳಿಜಾರಾದ ಪ್ರದೇಶ. ೬. ಹಿಂದಕ್ಕೆ ಸರಿಯುವುದು; ಹಿಮ್ಮೆಟ್ಟುವುದು. ೭. ಮಾಯೆ; ಕಪಟ. ೮. ಸುಳ್ಳು; ಸಂದೇಹ. ~ಕೆ(ಗೆ)ಡಹು = ಜಾರುವಂತೆ ಮಾಡು; ಉರುಳಿಸು.

**ಜಾಲ** (ನಾ). ೧. ಬಲೆ. ೨. ಕಿಟಕಿ; ಗವಾಕ್ಷ. ೩. ಕಪಟ; ಮೋಸ. ೪. ಗುಂಪು; ಮೊತ್ತ. ೫. ಹಂಚಿಕೆ; ಉಪಾಯ. ೬. ಕೊಬ್ಬು; ಗರ್ವ. ೭. ನೆಪ; ನಿಮಿತ್ತ. ೮. ಮುಚ್ಚಳ. ೯. ಇಂದ್ರಿಯ. ೧೦. ಒಂದು ಜಾತಿಯ ಮರ; ಕದಂಬವೃಕ್ಷ. ೧೧. ಆಭರಣ. ~ಕರಣ = ಮೀನು ಹಿಡಿಯುವಿಕೆ. ~ಗಾಱ(ರ) = ೧. ಬೆಸ್ತ. ೨. ಕೆಸರು, ಮರಳು ಮುಂತಾದುವುಗಳಿಂದ ಚಿನ್ನದ ಕಣಗಳನ್ನು ತೆಗೆಯುವವನು. ೩. ಮೋಸಗಾರ; ವಂಚಕ. ೪. ಐಂದ್ರಜಾಲಿಕ; ಮಾಯಾವಿ. ~ಪಾದ = ೧. ಬೆರಳುಗಳ ನಡುವೆ ತೆಳುವಾದ ಪೊರೆ ಅಂಟಿಕೊಂಡಿರುವ ಕಾಲು. ೨. ಹಂಸ. ೩. ಬಾತುಕೋಳಿ.

ಜಾಲ(ಳ)ಂದರ = ಜಾಲಂಧ್ರ.

ಜಾಲ(ಳ)ಂಧ್ರ (ನಾ). ಬಲೆಯಂತೆ ಕಂಡಿಗಳನ್ನು ಒಳಗೊಂಡಿರುವ ಕಿಟಕಿ; ಜಾಳಾಂಧ್ರ.

ಜಾಲ(ಳ)ಕ (ನಾ). ೧. ಬಲೆ. ೨. ಕಿಟಕಿ; ಗವಾಕ್ಷ. ೩. ಮೊಗ್ಗು. ೪. ಗುಂಪು; ಸಮೂಹ. ೫. ಮೋಸ; ವಂಚನೆ. ೬. ಅಂಕುರ. ೭. ಒಂದು ಬಗೆಯ ಶಿರೋಭೂಷಣ.

ಜಾಲರಿ (ನಾ). ೧. ಬಲೆಯಂತಹ ಶೃಂಗಾರ ವಸ್ತ್ರ; ಮೇಲ್ಕಟ್ಟು; ಝಲ್ಲರಿ. ೨. ಕಣ್ಣುಕಣ್ಣಾಗಿರುವ ತಂತಿಯ ಚೌಕಟ್ಟು. ~ಸೌಟು = ಕರಿದ ಪದಾರ್ಥಗಳನ್ನು ಬಾಣಲೆಯಿಂದ ತೆಗೆಯಲು ಬಳಸುವ ಸಾಧನ.

ಜಾಲಾಡು (ಕ್ರಿ). ೧. ಶೋಧಿಸು; ಜರಡಿಹಿಡಿ. ೨. ಕೊಳೆ ಹೋಗುವಂತೆ ನೀರಿನಲ್ಲಿ ಬಟ್ಟೆ ಮೊದಲಾದುವುಗಳನ್ನು ಚೆನ್ನಾಗಿ ಅಲ್ಲಾಡಿಸು; ಅಲುಬು.

ಜಾಲಿ (ನಾ). ೧. ಒಂದು ಜಾತಿಯ ಮುಳ್ಳು ಮರ; ಗೊಬ್ಬಳಿ; ಬೊಬ್ಬುಳಿ. ೨. ವಂಚಕ; ಕಪಟಿ. ೩. ಬೆಸ್ತ.

ಜಾಲಿ(ಳಿ)ಕ (ನಾ). ೧. ಬೆಸ್ತ. ೨. ಜೇಡರ ಹುಳು. ೩. ಐಂದ್ರಜಾಲಿಕ; ಮಂತ್ರವಾದಿ. ೪. ಬಲೆ.

ಜಾಲಿಸು (ಕ್ರಿ). ೧. ಧಾನ್ಯದಲ್ಲಿರುವ ಕಲ್ಲು ತಳದಲ್ಲಿ ನಿಲ್ಲುವಂತೆ ನೀರಿನಿಂದ ತೊಳೆ. ೨. ಅಲುಗಾಡಿಸು; ಕ್ಷೋಭೆಗೊಳಿಸು. ೩. = ಜಾಲಾಡು.

ಜಾಲೆ (ನಾ). ೧. ಬೆಂಕಿ; ಕಿಚ್ಚು; ಜ್ವಾಲೆ. ೨. ಮಾಟಗಾತಿ.

ಜಾಲ್ಮ (ನಾ). ೧. ದುಡುಕುಗಾರ. ೨. ದಡ್ಡ; ಮೂಢ. ೩. ಕೆಟ್ಟವನು; ದುಷ್ಟ. (ಗು). ೪. ಕ್ರೂರವಾದ. ೫. ತುಚ್ಛವಾದ. ~ಜಲ್ಪ =ದಡ್ಡತನದ ಮಾತು; ಅವಿವೇಕದ ಮಾತು.

ಜಾವ (ನಾ). ೧. ದಿವಸದ ಎಂಟನೆಯ ಒಂದು ಭಾಗದಷ್ಟು ಕಾಲ; ಏಳುವರೆ ಗಳಿಗೆ; ಯಾಮ. ೨. ಕಾವಲು; ಪಹರೆ. ೩. ಕಾವಲುಗಾರರ ಠಾಣೆ.

ಜಾವಡಿ (ನಾ). ಶೃಂಗಾರರಸಪ್ರಧಾನವಾದ ಗೀತೆ.

ಜಾವಳ (ನಾ). ೧. ಚಾಪಲ್ಯ; ಚಂಚಲತೆ. ೨. ಸಾಮಾನ್ಯವಾದುದು. ೩. ಸಾಮಾನ್ಯ ವ್ಯಕ್ತಿ; ನಾಡಾಡಿ. ೪. ಕೀಳಾದವನು; ಹೀನ. ೫. ತಲೆಯ ಮುಂಭಾಗದ ಕೂದಲು; ಮುಂಜುಟ್ಟು. ೬. ಚೌಲ; ಚೂಡಾಕರ್ಮ.

ಜಾವಳಿ (ನಾ). ೧. ನಾಲ್ಕು ಹರಳುಗಳ ಕರ್ಣಾಭರಣ. ೨. = ಜಾವಡಿ.

ಜಾವುಗೆ (ನಾ). ಸುಡುಮದ್ದುಗಳನ್ನು ಹತ್ತಿಸುವ ಸಾಧನ.

ಜಾಸ್ತಿ (ನಾ). ಹೆಚ್ಚಳ; ಆಧಿಕ್ಯ.

ಜಾಹಿರು (ನಾ). ಪ್ರಸಿದ್ಧಪಡಿಸುವಿಕೆ; ಪ್ರಕಟನೆ.

ಜಾಹೀರಾತು = ಜಾಹಿರು.

ಜಾಹೀರು = ಜಾಹಿರು.

ಜಾಹೆ = ಜಾಹ್ಯೆ.

ಜಾಹ್ಯೆ (ನಾ). ನಿದ್ರೆ; ನಿದ್ದೆ.

ಜಾಳ ೧. = ಜಾಲ. ೨. ಬೆಂಕಿಯ ಉರಿ; ಜ್ವಾಲೆ. ~ಇ(ವಿ)ಸು = ೧. ಮೋಸ ಮಾಡು; ವಂಚಿಸು. ೨. ಉರಿಯುವಂತೆ ಮಾಡು; ಹೊತ್ತಿಸು.

ಜಾಳರಿಗೆ (ನಾ). ಜಾಲರಿಯಿಂದ ಕೂಡಿದ ಗವಾಕ್ಷ.

ಜಾಳವಣೆ (ನಾ). ಮೋಸ; ವಂಚನೆ.

ಜಾಳಾಂದರ = ಜಾಲಂಧ್ರ.

ಜಾಳಿಗೆ (ನಾ). ೧. ಬಲೆ; ಜಾಲ. ೨. ಜಾಳುಜಾಳಾಗಿರುವ ಬಟ್ಟೆ, –ವಸ್ತ್ರ. ೩. ಒಂದು ಬಗೆಯ ಮುತ್ತಿನ ಒಡವೆ. ೪. ಕುಚ್ಚು; ಗೊಂಡೆ. ೫. ಮೊತ್ತ; ಸಮೂಹ. ೬. ಹಣದ

ಚೀಲ; ಥೈಲಿ; ಹಮ್ಮಿಣಿ. ೭. ಕಿಟಕಿ; ವಾತಾಯನ. ೮. ಹೆಣಿಕೆಯ ಚೀಲ.

ಜಾಳಿಸು (ಕ್ರಿ). ೧. ನಡೆ; ಚಲಿಸು. ೨. ಸುರಿ; ಚೆಲ್ಲು. ೩. ಕಂಪಿಸು; ಅಲುಗು. ೪. ಸೇರು; ಕೂಡು. ೫. ಬೀಸು; ಝುಳಪಿಸು. ೬. ನೀಗು; ಹೋಗಲಾಡಿಸು. ೭. ಅಟ್ಟು; ಕಳುಹಿಸು. ೮. ನಿಂದಿಸು; ಬಯ್ಯು. ೯. ಸೋಲಿಸು. ೧೦. ಒಂದರಿಯಾಡು; ಜರಡಿಹಿಡಿ.

ಜಾಳು (ನಾ). ೧. ನೆಯ್ಗೆಯಲ್ಲಿ ಎಳೆಗಳು ಒಂದಕ್ಕೊಂದು ದೂರವಾಗಿರುವುದು. ೨. ಹುರುಳಿಲ್ಲದುದು; ನಿಸ್ಸತ್ತ್ವವಾದುದು. ೩. ಹೇಡಿ; ನಿಷ್ಪ್ರಯೋಜಕ. ~ನುಡಿ = ೧. ವ್ಯರ್ಥಾಲಾಪ; ಪೊಳ್ಳುಮಾತು. ೨. ಸುಳ್ಳು.

ಜಾಟು(ಳಿ)ಗೆ (ನಾ). ಉಡುಗೆ; ಬಟ್ಟೆ.

ಜಿಂಕೆ (ನಾ). ಹರಿಣ; ಎರಳೆ; ಹುಲ್ಲೆ.

ಜಿಂಗಿ (ನಾ). ೧. ಮಂಜಿಷ್ಠೆಯೆಂಬ ಔಷಧ ದ್ರವ್ಯ. ೨. ಮತ್ತು; ಅಮಲು.

ಜಿಂಜಿರಿ (ನಾ). ಸರಪಳಿ; ಸಂಕೋಲೆ.

ಜಿಂದಗಿ (ನಾ). ಆಸ್ತಿ; ಸ್ವತ್ತು.

ಜಿಕೀರಿ (ನಾ). ಚೌಕಾಸಿ.

ಜಿಗಟು (ಕ್ರಿ). ೧. ಚಿವುಟು; ಗಿಂಡು. (ನಾ). ೨. ಅಂಟು; ಜಿಡ್ಡು; ಜಿಗಿ. ೩. ಜಿಪುಣತನ; ಅಂಟುಸ್ವಭಾವ.

ಜಿಗಣೆ ೧. = ಜಿಗುಟಿ. ೨. ನೇಗಿಲ ಗುಳವನ್ನು ಭದ್ರವಾಗಿ ಹಿಡಿಯುವ ಒಂದು ಸಾಧನ. ೩. ಕಸೂತಿಯಲ್ಲಿನ ನಕ್ಕಿ ಕೆಲಸ.

ಜಿಗಳು (ಕ್ರಿ). ೧. ಸೀಳು; ಬೇರ್ಪಡಿಸು. (ನಾ). ೨. ಸಣ್ಣ ಕಾಲುವೆ.

ಜಿಗಳೆ = ಜಿಗುಟಿ.

ಜಿಗಿ (ಕ್ರಿ). ೧. ಹಾರು; ನೆಗೆ. (ನಾ). ೨. ಅಂಟು; ಜಿಗುಟು. ೩. ಹತ್ತಿ, ಜೋಳ ಮೊದಲಾದ ಗಿಡಗಳಿಗೆ ಹತ್ತುವ ಬೂಷ್ಟು.

ಜಿಗಿತ (ನಾ). ನೆಗೆತ; ಹಾರುವಿಕೆ.

ಜಿಗಿಲ್(ಲು) (ಕ್ರಿ). ೧. ಜಿಡ್ಡಾಗು. ೨. ಹತ್ತಿಕೊಳ್ಳು; ಅಂಟಿಕೊಳ್ಳು. ೩. ತೊಂದರೆಗೆ ಗುರಿಯಾಗು; ಕಷ್ಟಕ್ಕೊಳಗಾಗು. (ನಾ). ೪. ಸ್ನೇಹ; ಗೆಳೆತನ. ೫. ಅಂಟಾದುದು; ಅಂಟು.

ಜಿಗೀಷು (ನಾ). ೧. ಜಯಿಸಲು ಅಪೇಕ್ಷೆಯುಳ್ಳವನು. (ಗು). ೨. ಬಯಸುವ. ೩. ಜಯಿಸುವ ಅಪೇಕ್ಷೆಯುಳ್ಳ.

ಜಿಗೀಷೆ (ನಾ). ಹೊಂದುವ ಅಥವಾ ಗೆಲ್ಲುವ ಬಯಕೆ.

ಜಿಗುಟು = ಜಿಗಟು.

ಜಿಗುಡು (ನಾ). ಅಂಟು; ಜಿಗಿ.

ಜಿಗುಪ್ಸೆ = ಜುಗುಪ್ಸೆ.

ಜಿಗುರ್ (ಕ್ರಿ). ಅಂಟಿಕೊಳ್ಳು; ಸೇರಿಕೊಳ್ಳು.

ಜಿಗುಟಿ(ಳೆ) (ನಾ). ರಕ್ತವನ್ನು ಹೀರುವ ಜಲವಾಸಿಯಾದ ಒಂದು ಹುಳು.

ಜಿಗ್ಗ (ನಾ). ಒಣಪುರುಳೆ; ಪುಳ್ಳೆ.

ಜಿಘತ್ಸೆ (ನಾ). ಹಸಿವು; ಕ್ಷುಧೆ.

ಜಿಜ್ಞಾಸು (ನಾ). ತಿಳಿದುಕೊಳ್ಳುವ ಅಪೇಕ್ಷೆಯುಳ್ಳವನು.

ಜಿಜ್ಞಾಸೆ (ನಾ). ೧. ತಿಳಿಯುವ ಬಯಕೆ; ಅರಿತುಕೊಳ್ಳುವ ಇಚ್ಛೆ. ೨. ತನಿಖೆ; ಸಂಶೋಧನೆ.

ಜಿಟ್ಟ (ನಾ). ೧. ಭಾರದ್ವಾಜ ಪಕ್ಷಿ; ಟಿಟ್ಟಿಭ. ೨. ಒಂದು ಜಾತಿಯ ಮಿಡತೆ.

ಜಿಡ್ಡಿ (ನಾ). ೧. ಹೆಬ್ಬಾಗಿಲಿನೊಳಗಿನ ಸಣ್ಣ ಕಿಂಡಿ; ದಿಡ್ಡಿ. ೨. ತೆಂಗಿನ ನಾರಿನಿಂದಲೇ ಗಂಟುಹಾಕಿದ ತೆಂಗಿನಕಾಯಿಗಳು.

ಜಿಡ್ಡು (ನಾ). ೧. ಎಣ್ಣೆ, ತುಪ್ಪ ಮುಂತಾದುವುಗಳ ಜಿಗಿ, –ಜಿಗುಟು. ೨. ಗಬ್ಬುನಾತ; ದುರ್ವಾಸನೆ. ೩. ಸೊಕ್ಕು; ಅಹಂಕಾರ. ೪. ನಿರಾಸಕ್ತಿ. ೫. ಕಾಯಿಗಟ್ಟಿರುವುದು; ದಡ್ಡು. ~ಎಣ್ಣೆ = ಅಂಟು ಅಂಟಾದ ಎಣ್ಣೆ; ಕಚ್ಚಾ ಎಣ್ಣೆ.

ಜಿಣುಂಗು (ನಾ). ನವುರಾದುದು; ಸೂಕ್ಷ್ಮವಾದುದು.

ಜಿತ (ನಾ). ೧. ಗೆಲ್ಲಲ್ಪಟ್ಟುದು; ಕೈವಶಮಾಡಿಕೊಂಡುದು. (ಗು). ೨. ಸ್ಥಿರವಾದ; ಅಚಲವಾದ. ~ಇಂದ್ರಿಯ = ಇಂದ್ರಿಯಗಳನ್ನು ಜಯಿಸಿದವನು. ~ಕಾಮ = ೧. ಮನ್ಮಥನನ್ನು ಗೆದ್ದವನು. ೨. ಶಿವ. ೩. ಸಂನ್ಯಾಸಿ; ಯತಿ. ೪. ಬುದ್ಧ. ೫. ಅರ್ಹಂತ.

ಜಿತಕಾಮೆ (ನಾ). ಪತಿವ್ರತೆ; ಸಾಧ್ವಿ.

ಜಿದ್ದು (ನಾ). ೧. ಬದ್ಧಮಾತ್ಸರ್ಯ. ೨. ಪೈಪೋಟಿ; ಸ್ಪರ್ಧೆ; ಮೇಲಾಟ. ೩. ಪಣ; ಪಂಥ.

ಜಿನ (ನಾ). ೧. ಇಂದ್ರಿಯಗಳನ್ನು ಗೆದ್ದವನು; ಜಿತೇಂದ್ರಿಯ. ೨. ಜೈನ ಅಥವಾ ಬೌದ್ಧ ಸಂನ್ಯಾಸಿ. ೩. ವಿಷ್ಣು. ೪. ಬುದ್ಧ. ೫. ಅರ್ಹಂತ. (ಗು). ೬. ವಿಜಯಿಯಾದ. ೭. ಸ್ಥಿರವಾದ. ~ಸಮಯ = ಜೈನಧರ್ಮ; ಜೈನಮಾರ್ಗ. ~ಸವನ = ಜಿನನಿಗೆ ಮಾಡುವ ಅಭಿಷೇಕ.

ಜಿನಿಗಿಸು (ಕ್ರಿ). ಚಲನವಿಲ್ಲದಂತೆ ಮಾಡು; ನಿಶ್ಚೇಷ್ಟವಾಗಿಸು.

ಜಿನುಂಗು (ಕ್ರಿ). ೧. ಅಸ್ಪಷ್ಟವಾಗಿ ಧ್ವನಿಮಾಡು; ಮೊರೆ; ಝೇಂಕರಿಸು. ೨. ಅನೇಕ ಸಲ ಹೇಳು. ೩. ಪಿಸುಮಾತನಾಡು. ೪. ಸೋನೆಯಿಡು; ತೊಟ್ಟಿಕ್ಕು. (ನಾ). ೫. ಸೋನೆಮಳೆ; ಜಡಿಮಳೆ.

ಜಿನುಗು ೧. = ಜಿನುಂಗು. ೨. ಕರಗು; ನೀರಾಗು; ಜೋನೆಯಾಗು. ೩. ಸೇರು; ಕೂಡು. (ನಾ). ೪. ಬಹಳ ಸೂಕ್ಷ್ಮವಾದುದು. ೫. ಕುಸುರಿಗೆಲಸ; ನಯವಾದ ಕೆಲಸ. ೬. ಅತ್ಯಲ್ಪವಾದುದು. ೭. ಕ್ಲೇಶ; ತೊಂದರೆ. ~ಮಾ(ವಾ)ತು = ಪಿಸುಮಾತು; ಮೆಲುಮಾತು.

ಜಿನೆ (ನಾ). ಸೋಪಾನಮಾರ್ಗ; ಮೆಟ್ಟಿಲುಗಳ ಸಾಲು.

ಜಿನ್ನ (ನಾ). ೧. ಅರ್ಹಂತ; ಜಿನ. (ಗು). ೨. ಜೀರ್ಣವಾದ; ಶಿಥಿಲವಾದ.

ಜಿಪುಣ (ನಾ). ಲೋಭಿ; ಕೃಪಣ.

ಜಿಬರು (ನಾ). ಕಣ್ಣಿನ ಕೊಳೆ; ಗೀಜು.

ಜಿಬಳು (ನಾ). ಅಂಟು; ಜಿಗಟು.

ಜಿಬ್ಬಿ (ನಾ). ಜಜ್ಜಿ ಹೋಗಿರುವುದು; ಮೆತ್ತಗಾಗಿರುವುದು.

ಜಿಬ್ಬು (ನಾ). ೧. ಅಂಟಾಗಿರುವಿಕೆ. ೨. ಅಂಟು; ಜೋನೆ.

ಜಿಮ್ಮ (ನಾ). ಅಧೀನ; ವಶ.

ಜಿರಳೆ (ನಾ). ಜೊಂಡಿಗ; ಅಕ್ಕಳೆ.

ಜಿರಾಫೆ (ನಾ). ಒಂದು ಜಾತಿಯ ಪ್ರಾಣಿ.

ಜಿರಾಯಿತಿ (ನಾ). ಖುಷ್ಕಿ ವ್ಯವಸಾಯ; ಕಾಡಾರಂಬ.

ಜಿರಾಯಿತು ೧. = ಜಿರಾಯಿತಿ. ೨. ವ್ಯವಸಾಯಕ್ಕೆ ಅರ್ಹವಾದ ನೆಲ. ~ದಾರ = ಬೇಸಾಯಗಾರ; ಒಕ್ಕಲಿಗ.

ಜಿರಿ (ನಾ). ಶಿಥಿಲವಾದುದು; ಜೀರ್ಣವಾದುದು.

ಜಿಱ(ರ)ಲೆ (ನಾ). ೧. ಜರಿ; ಲಕ್ಷ್ಮಿಚೇಳು. ೨. = ಜಿರಳೆ.

ಜಿಲೇಬಿ (ನಾ). ಒಂದು ಬಗೆಯ ಸಿಹಿತಿಂಡಿ.

ಜಿಲ್ಲಾ (ನಾ). ಹಲವು ತಾಲ್ಲೂಕುಗಳನ್ನೊಳಗೊಂಡ ಭಾಗ; ಪರಗಣೆ.

ಜಿಲ್ಲಿ (ನಾ). ಮಣ್ಣಿನ ಪಾತ್ರೆಗೆ ಬಿದ್ದ ಅಥವಾ ಮಾಡಿದ ಸಣ್ಣ ತೂತು.

ಜಿಲ್ಲೆ = ಜಿಲ್ಲಾ.

ಜಿವುಳಿ = ಚಿಗುಳಿ. ~ತು(ದು)ಱಿ(ಳಿ) = ಗಿಜಿಗಿಜಿಯಾಗುವಂತೆ ತುಳಿ.

ಜಿಷ್ಣು (ನಾ). ೧. ಜಯಶಾಲಿ. ೨. ಅರ್ಜುನ. ೩. ಇಂದ್ರ. ೪. ಅರ್ಹಂತ. ೫. ವಿಷ್ಣು; ಕೃಷ್ಣ. ೬. ಶಿವ. ~ಚಾಪ = ಇಂದ್ರಚಾಪ; ಕಾಮನಬಿಲ್ಲು.

ಜಿಹಾಸೆ (ನಾ). ೧. ತೊರೆಯುವ ಬಯಕೆ. ೨. ಬೇಸರ ; ಜುಗುಪ್ಸೆ.

ಜಿಹ್ಮ (ನಾ). ೧. ವಕ್ರವಾದುದು. ೨. ಕಪಟ ; ವಂಚನೆ. ೩. ಸೋಮಾರಿ.

ಜಿಹ್ವೆ (ನಾ). ೧. ನಾಲಗೆ. ೨. ಬೆಂಕಿಯ ಜ್ವಾಲೆ.

ಜೀಕ (ನಾ). ೧. ಉಯ್ಯಾಲೆ ; ಗಿರಿಕಾಲೆ. ೨. ತೂಗಾಟ ; ತೊನೆದಾಟ. ~ಹೊಡೆ = ಉಯ್ಯಾಲಾಡು ; ತೂಗಾಡು.

ಜೀಕಳಿ (ನಾ). ಜೀಕರ್ಣೊಳವೆ ; ಪಿಚಕಾರಿ.

ಜೀಕು (ಕ್ರಿ). ೧. ತೂಗು ; ತೂಗಾಡಿಸು. (ನಾ). ೨. = ಜೀಕ. ೩. ಗಿರಗಟ್ಟೆ. ೪. ಗಿರಕಿಜೋಡಿನ ಧ್ವನಿ. ೫. ಕಾಂತಿ; ಗೆಲವು.

ಜೀಟು (ನಾ). ಊರೆ ; ಆಧಾರ.

ಜೀತ (ನಾ). ೧. ಕೂಲಿ ; ಸಂಬಳ. ೨. ಮುಡಿತ; ಚಾಕರಿ. ~ಕಾ(ಗಾ)ಱ(ರ) = ಜೀತದ ಆಳು ; ಸೇವಕ.

ಜೀನ (ನಾ). ೧. ಜಿಪುಣ; ಲೋಭಿ. ೨. ತೊಗಲು; ಚರ್ಮ. ೩. = ಜೀನು. ~ಗಾರ = ೧. ಚರ್ಮದ ಕೆಲಸ ಮಾಡುವವನು ; ಚಮ್ಮಾರ. ೨. ಬಣ್ಣಗಾರ ; ಚಿತ್ರಗಾರ.

ಜೀನಸು (ನಾ). ಸರಕು ; ಸಾಮುಗ್ರಿ.

ಜೀನು (ನಾ). ಕುದುರೆಯ ಮೇಲೆ ಕುಳಿತು ಕೊಳ್ಳಲು ಹಾಕುವ ಚರ್ಮದ ಸಾಧನ; ತಡಿ.

ಜೀಪು (ನಾ). ೧. ದೊಡ್ಡಹೆಜ್ಜೆ ; ದಾಪು. ೨. ನೆಗೆತ ; ಹಾರಿಕೆ. ~ಕಾ(ಗಾ)ಲು = ದಾಪುಗಾಲು ; ದಾಟುಗಾಲು. ~ಕೊ(ಗೊ)ಡು = ಹಾರು ; ಜಿಗಿ.

ಜೀಬಿ (ನಾ). ೧. ಕೋಟೆಯ ಒಳಗೋಡೆ ಮತ್ತು ಹೊರಗೋಡೆಯ ನಡುವಿನ ಪ್ರದೇಶ. ೨. ಒಂದು ಬಗೆಯ ವಸ್ತ್ರ.

ಜೀಮೂತ (ನಾ). ೧. ಮೋಡ. ೨. ಪರ್ವತ. ೩. ಒಂದು ಜಾತಿಯ ಸಸ್ಯ. ೪. ಆನೆ. ~ವಾಹನ = ೧. ಮೋಡವನ್ನು ವಾಹನವಾಗುಳ್ಳವನು ; ಇಂದ್ರ. ೨. ಗರುಡನಿಂದ ನಾಗಗಳನ್ನು ರಕ್ಷಿಸಿದ ಒಬ್ಬ ವಿದ್ಯಾಧರ.

ಜೀಯ (ನಾ). ಪ್ರಭು ; ಒಡೆಯ.

ಜೀರ್ (ಕ್ರಿ). ೧. ಝೇಂಕರಿಸು. ೨. ಬಿಗಿ ಮಾಡು ; ಎಳೆ. ೩. ಚಿಮ್ಮು ; ಎರಚು. ೪. = ಜೀಱ್. ~ಕು(ಗು)ಣಿಕೆ = ಎಳೆದೆಳೆದಂತೆ ಮತ್ತೂ ಬಿಗಿಯಾಗುವ ಒಂದು ವಿಧವಾದ ಗಂಟು. ~ಕೊಟ(ಳ)ವಿ(ವೆ) = ಜೀಕಳಿ ; ಪಿಚಕಾರಿ. ~ತು(ದು)ಂಬಿ = ಜೀಱುಂಡೆ.

ಜೀರ (ನಾ). ೧. ವೇಗದಿಂದ ಕೂಡಿದ ಚಲನೆ. ೨. ಖಡ್ಗ. ೩. ಜೀರಿಗೆ. ೪. ಹೂವಾಡಿಗ ; ಹೂಗಾರ.

ಜೀರಕ (ನಾ). ಒಂದು ಬಗೆಯ ಮಸಾಲೆಕಾಳು; ಜೀರಿಗೆ.

ಜೀರಿಗೆ = ಜೀರಕ.

ಜೀರು (ಕ್ರಿ). ೧. ಝೇಂಕರಿಸು. ೨. ಬಿಗಿ ಮಾಡು ; ಎಳೆ. ೩. ಗೀರು ; ಪರಚು. (ನಾ). ೪. ತಂಬೂರಿ ಮುಂತಾದ ತಂತಿವಾದ್ಯಗಳಿಗೆ ನಾದ ಹೆಚ್ಚಿಸಲು ಮಣಿಯ ಹತ್ತಿರ ಕಟ್ಟುವ ದಾರ ; ಜೀವಾಳ.

ಜೀಱ್(ರ್,ರು,ಱು) (ಕ್ರಿ). ೧. ಕಿರಿಚು ; ಚೀರು. ೨. ಕೀರಲುಧ್ವನಿ ಮಾಡು. ೩. ಝೇಂಕರಿಸು.

ಜೀಱು(ರು)ಂಡೆ (ನಾ). ಒಂದು ಜಾತಿಯ ಹುಳು ; ಜೀರುದುಂಬಿ ; ಚಿಮ್ಮಂಡೆ.

ಜೀರ್ಣ (ನಾ). ೧. ಪುರಾತನವಾದುದು ; ಹಳೆಯದು. ೨. ಮುದಿತನ ; ಮುಪ್ಪು. ೩. ಅರಗುವಿಕೆ ; ಪಚನ. ೪. ಮುದುಕ ; ವೃದ್ಧ. ೫. ಕರಗಿ ಹೋಗುವಿಕೆ. (ಗು). ೬. ಮುಪ್ಪಾದ. ೭. ಶಿಥಿಲವಾದ ; ಹಾಳಾದ. ೮. ಕುಗ್ಗಿದ ; ಕುಸಿದ. ೯. ಅರಗಿದ ; ಪಚನಗೊಂಡ. ~ಇಸು = ೧. ಅರಗು ;

ಪಚನವಾಗು. ೨. ಹಾಳಾಗು; ಕೊಳೆ. ೩. ಅರಗಿಸು; ಪಚನಗೊಳಿಸು. ~ಉದ್ಧಾರ = ಹಳತಾಗಿ ಶಿಥಿಲವಾದುದನ್ನು ಸರಿಪಡಿಸುವುದು; ದುರಸ್ತಿ. ~ಕೋಶ = ತಿಂದ ಆಹಾರವು ಪಚನಗೊಳ್ಳುವ ದೇಹಭಾಗ.

ಜೀವ (ನಾ). ೧. ಪ್ರಾಣ; ಚೈತನ್ಯ. ೨. ಪ್ರಾಣವುಳ್ಳುದು; ಪ್ರಾಣಿ. ೩. ಎಲ್ಲ ಪ್ರಾಣಿಗಳಲ್ಲೂ ಇರುವ ಚಿದ್ವಸ್ತು; ಜೀವಾತ್ಮ. ೪. ಜೀವನ; ಬದುಕು. ೫. ದೇವತೆಗಳ ಗುರು; ಬೃಹಸ್ಪತಿ. ೬. ಉದ್ಯೋಗ; ವೃತ್ತಿ. ೭. ಮಾತು. ೮. ನೀರು. ೯. ಕುದುರೆ. ೧೦. ಅತಿಯಾದ ಆಸೆ, -ಇಷ್ಟ. (ಗು). ೧೧. ಪ್ರಾಣವುಳ್ಳ; ಬದುಕಿರುವ. ~ಇಸು = ೧. ಬದುಕು; ಬಾಳು. ೨. ಜೀವನೋಪಾಯವನ್ನುಂಟುಮಾಡಿಕೊಳ್ಳು. ~(ಂ)ಪೊ(ಬೊ)ಯ್ = ಪ್ರಾಣವನ್ನು ತುಂಬು. ~ಕಣ = ಶರೀರ ರಚನೆಗೆ ಅತ್ಯಗತ್ಯವಾದ ಸೂಕ್ಷ್ಮಾಣು. ~ಕಳೆ = ೧. ಕಾಂತಿ; ತೇಜಸ್ಸು. ೨. ಪ್ರಾಣಶಕ್ತಿ; ಜೀವಂತಿಕೆ. ~ಕ(ಗ)ಳ್ಳ = ಹೇಡಿ; ಹಂದೆ. ~ಧನ = ಪಶುಸಂಪತ್ತು. ~ನಿಧಿ = ಸಮುದ್ರ; ಕಡಲು. ~ರಕ್ಕೆ = ಪ್ರಾಣರಕ್ಷಕವಾದ ಕವಚ.

ಜೀವಂತ (ನಾ). ೧. ಬದುಕಿದವನು. (ಗು). ೨. ಬದುಕಿರುವ; ಜೀವಿಸಿರುವ.

ಜೀವಕ (ನಾ). ೧. ಸೇವಕ; ಜೀತಗಾರ. ೨. ಶ್ರವಣ; ಜೈನ ಸಂನ್ಯಾಸಿ. ೩. ಹಾವಾಡಿಗ. ೪. ಹೊನ್ನೆಯ ಮರ. (ಗು). ೫. ಬದುಕಿರುವ; ಜೀವಿಸಿರುವ. ೬. ಜೀವನವನ್ನು ನಡಸುವ.

ಜೀವತ್ತೋಕೆ (ನಾ). ಬದುಕಿರುವ ಮಕ್ಕಳುಳ್ಳವಳು.

ಜೀವನ (ನಾ). ೧. ಬಾಳು; ಬದುಕು. ೨. ಉದ್ಯೋಗ; ವೃತ್ತಿ. ೩. ನೀರು. ~ಅಂಶ = ಜೀವನಕ್ಕಾಗಿ ಕೊಡುವ ಹಣ ಅಥವಾ ಭೂಮಿ; ಪೋಟಗಿ. ~ಅರ್ಥ = ೧. ಬದುಕು; ಜೀವನೋಪಾಯ. ೨. = ಜೀವನಾಂಶ.

ಜೀವನ್ಮುಕ್ತ (ನಾ). ಬದುಕಿರುವಾಗಲೇ ಬ್ರಹ್ಮಜ್ಞಾನವನ್ನು ಪಡೆದು ಸಂಸಾರದಿಂದ ಬಿಡುಗಡೆ ಪಡೆದವನು.

ಜೀವನ್ಮುಕ್ತಿ (ನಾ). ಜೀವನ್ಮುಕ್ತನಾಗುವಿಕೆ.

ಜೀವನ್ಮೃತ (ನಾ). ಬದುಕಿದ್ದರೂ ಸತ್ತವನಂತೆ ನಿಶ್ಶಕ್ತನಾದವನು.

ಜೀವಾತು (ನಾ). ಅನ್ನಾಂಗ; ಜೀವಸತ್ತ್ವ.

ಜೀವಾಳ (ನಾ). ೧. ಜೀವದಾಯಿಯಾದುದು. ೨. ತಿರುಳು; ಸತ್ತ್ವ. ೩. ತಂಬೂರಿ ಮೊದಲಾದ ತಂತಿವಾದ್ಯಗಳಲ್ಲಿ ನಾದ ಹೆಚ್ಚಿಸಲು ಮಣಿಯ ಹತ್ತಿರ ಸೇರಿಸಿದ ನೂಲಿನ ಎಳೆ.

ಜೀವಿ (ನಾ). ೧. ಚೈತನ್ಯವುಳ್ಳ ಜೀವ. (ಗು). ೨. ಪ್ರಾಣದಿಂದ ಕೂಡಿರುವ; ಜೀವಂತವಾಗಿರುವ.

ಜೀವಿತ (ನಾ). ೧. ಜೀವ; ಪ್ರಾಣ. ೨. ಬಾಳು; ಬದುಕು. ೩. ವೃತ್ತಿ; ಕಸಬು. ೪. ಸಂಬಳ; ವೇತನ. (ಗು). ೫. ಬದುಕಿದ; ಬಾಳಿದ. ೬. ಜೀವಿಸಿರುವ; ಬದುಕಿರುವ.

ಜೀವು (ಕ್ರಿ). ಸೀಸದಕಡ್ಡಿ, ಉಗುರು ಮೊದಲಾದುವನ್ನು ತೆಳುವು ಮಾಡು; ಹೆರೆ.

ಜೀವೆ (ನಾ). ೧. ಬದುಕು. ೨. ಬಿಲ್ಲಿನ ಹೆದೆ.

ಜುಂಜು ೧. = ಜುಂಜುಜು. ೨. ಒರಟಾದ ಕೂದಲು. ೩. ಕೋಳಿ, ನವಿಲು ಮುಂತಾದುವುಗಳ ಶಿಖೆ; ತುರಾಯಿ. ೪. ತುದಿ; ಶಿಖರ. ೫. ತುಂತುರು; ತೂರಲು. ೬. ಕೆಂಪು ಬಣ್ಣ. ~ಮು(ವ)ಳೆ = ತುಂತುರು ಮಳೆ; ತೂರಲು ಮಳೆ.

ಜುಂಜುಜು(ರು) (ನಾ). ಸುರುಳಿಗೂದಲು; ಗುಂಗುರುಕೂದಲು. ~ತ(ದ)ಲೆ=ಸುರುಳಿಗೂದಲಿನ ತಲೆ.

ಜುಕಾಯಿಸು (ಕ್ರಿ). ೧. ಬಗ್ಗು; ಬಾಗು. ೨. ಓಲಾಡು; ತೊನೆದಾಡು. ೩. ತೂರಾಡು.

ಜುಕುತಿ (ನಾ). ಹಂಚಿಕೆ; ಉಪಾಯ; ಯುಕ್ತಿ.

ಜುಗ (ನಾ). ೧. ಜೊತೆ; ಜೋಡಿ. ೨. ಯುಗ.

ಜುಗಾರಿ (ನಾ). ಜೂಜು; ಪಂದ್ಯ.

ಜುಗಾರು = ಜುಗಾರಿ.

ಜುಗುಪ್ಸೆ (ನಾ). ಬೇಸರ; ಅಸಹ್ಯ.

ಜುಗುಮ (ನಾ). ಜೊತೆ; ಯುಗ್ಮ.

ಜುಗ್ಗ (ನಾ). ೧. ಜೀನತನ; ಕೃಪಣತೆ. ೨. ಜಿಪುಣ; ಲೋಭಿ.

ಜುಜ್ಝಾರ (ನಾ). ಶೂರ; ಧೀರ.

ಜುಟ್ಟು (ನಾ). ೧. ಕೂದಲು. ೨. ಚೆಂಡಿಕೆ; ಶಿಖೆ. ೩. ನವಿಲು, ಕೋಳಿ ಮುಂತಾದುವುಗಳ ತಲೆಯ ಮೇಲಿರುವ ಕೊಟ್ಟು; ತುರಾಯಿ. ~ಬಿಡಿಸು=ಚೌಲಕರ್ಮವನ್ನು ಮಾಡು; ಚೆಂಡಿಕೆ ಬಿಡಿಸು.

ಜುಡುಪು (ನಾ). ೧. ಪೊದೆ; ಹೊದರು. ೨. ಕುಚ್ಚು; ಗೊಂಡೆ.

ಜುಣಕ (ನಾ). ಕಡಲೆ ಹಿಟ್ಟಿನಿಂದ ಮಾಡುವ ಒಂದು ವ್ಯಂಜನ.

ಜುಣುಂಗು (ಕ್ರಿ). ಮರೆಯಾಗು; ಜಾರು; ನುಣುಚಿಕೊಳ್ಳು.

ಜುಣುಗು ೧. = ಜುಣುಂಗು. ೨. ಕುಗ್ಗು; ಉಡುಗು. (ನಾ). ೩. ಕುಗ್ಗುವಿಕೆ; ಉಡುಗುವಿಕೆ. ೪. ನುಣುಚಿಕೊಳ್ಳುವಿಕೆ. ೫. ಹೇಡಿ. ೬. ನಾಯಿ.

ಜುದ್ಧ (ನಾ). ಯುದ್ಧ; ಕಾಳಗ.

ಜುಪರಿ (ನಾ). ಹರಡಿದ ತಲೆಕೂದಲು; ಕೆದರುಗೂದಲು.

ಜುಬುರು (ನಾ). ನಾರು; ಜುಂಗು.

ಜುಬ್ಬ (ನಾ). ಒಂದು ಬಗೆಯ ಉದ್ದನೆಯ ಅಂಗಿ.

ಜುಮುಕಿ (ನಾ). ಕಿವಿಗೆ ಹಾಕಿಕೊಳ್ಳುವ ಒಂದು ಬಗೆಯ ಒಡವೆ.

ಜುಮುಲಾ (ನಾ). ಒಟ್ಟು; ಮೊತ್ತ.

ಜುಮುುರು (ನಾ). ಅಲಂಕಾರಕ್ಕಾಗಿ ಇಡುವ ಗೊಂಚಲಾಕಾರದ ಗಾಜಿನ ಉಪಕರಣ.

ಜುಮ್ಮನೆ (ಅ). ೧. ಒಡನೆ; ಕೂಡಲೆ. ೨. ತಡೆಯಿಲ್ಲದೆ; ನಿರಾತಂಕವಾಗಿ.

ಜುಮ್ಮು (ನಾ). ೧. ಮತ್ತು; ಅಮಲು. ೨. ರೋಮಾಂಚನ; ನವಿರೇಳುವಿಕೆ. ೩. ಮರಗಟ್ಟುವುದು; ಜೋಮು ಹಿಡಿಯುವುದು. ೪. ಜೂಜು; ದ್ಯೂತ. ~ಎನ್(ನ್ನು) = ೧. ರೋಮಾಂಚನವಾಗು; ಪುಳಕಗೊಳ್ಳು. ೨. ಜುಮ್ಮೆಂದು ಸದ್ದುಮಾಡು; ಮೊರೆ. ೩. ಅಲುಗಾಡು; ಚಲಿಸು. ~ತ(ದ)ಟ್ಟು=ಪುಳಕವುಂಟಾಗು; ನವಿರೇಳು. ~ಹಿಡಿ = ಮರಗಟ್ಟಿದಂತಾಗು; ಜೋಮುಹಿಡಿ.

ಜುಮ್ಲಾ = ಜುಮುಲಾ.

ಜುರಿ (ಕ್ರಿ). ೧. ಸೋರು; ಜಿನುಗು; ಸುರಿ. (ನಾ). ೨. ಜುರುಕೆ; ಒಂದು ಸಲ ಎಳೆಯುವಿಕೆ. ೩. ತೂಗುವುದು; ಜೀಕ.

ಜುಲಾಬು (ನಾ). ಭೇದಿ; ವಿರೇಚನ.

ಜುಲಿಪೆ (ನಾ). ೧. ಚೌಲಕರ್ಮದಲ್ಲಿ ಮುಂದಲೆ ಮತ್ತು ಕಿವಿಗಳ ಪಕ್ಕದಲ್ಲಿ ಕತ್ತರಿಸದೆ ಬಿಡುವ ಕೂದಲು. ೨. ಮುಂಗೂದಲು; ಮುಂಗುರುಳು.

ಜುಲುಪೆ = ಜುಲಿಪೆ.

ಜುಲುಮೆ (ನಾ). ಒತ್ತಾಯ; ಬಲಾತ್ಕಾರ.

ಜುಲ್ಪಿ (ನಾ). (ಕುದುರೆಯ) ನೆತ್ತಿಯ ಮೇಲಿನ ಕೂದಲು.

ಜುಲ್ಮಾನೆ (ನಾ). ತಪ್ಪಿಗಾಗಿ ತೆರಬೇಕಾದ ಹಣ; ದಂಡ.

ಜುಹು (ನಾ). ಯಾಗದಲ್ಲಿ ತುಪ್ಪವನ್ನು ಹೊಯ್ಯಲು ಬಳಸುವ ಸಲಕರಣೆ; ಸೌಟು.

ಜುಳಿಗೆ = ಜೂಳಿ.
ಜೂಂಟ (ನಾ). ಮೋಸಗಾರ; ವಂಚಕ.
ಜೂಗ (ನಾ). ೧. ಒಂದು ಜಾತಿಯ ನಾಯಿ. ೨. ಒಂದು ಜಾತಿಯ ಹಕ್ಕಿ.
ಜೂಗರ (ನಾ). ೧. ತೂಕಡಿಕೆ. ೨. ಆಲಸ್ಯ; ಜಡತನ. ~ಇಸು = ೧. ತೂಕಡಿಸು. ೨. ನಿಧಾನವಾಗಿ ಸಾಗು; ಆಲಸ್ಯದಿಂದ ಕೂಡಿರು.
ಜೂಗು (ಕ್ರಿ). ತೂಗು; ಹೊಯ್ದಾಡು.
ಜೂಜು (ನಾ). ದ್ಯೂತ; ಪಂದ್ಯ ಕಟ್ಟಿ ಆಡುವ ಆಟ. ~ಕೋರ = ಜೂಜಾಡುವುದೇ ಸ್ವಭಾವವಾಗುಳ್ಳವನು.
ಜೂಟ (ನಾ). ೧. ಜಡೆಗಟ್ಟಿದ ಕೂದಲು; ಜಟೆ. ೨. ಮಕ್ಕಳ ಶರೀರಬಲ, -ತ್ರಾಣ.
ಜೂಟಾಟ = ಚೂಟಾಟ.
ಜೂಡಿ (ನಾ). ೧. ಇನಾಮಿನ ಭೂಮಿಗೆ ಕಂದಾಯದಲ್ಲಿ ತೋರಿಸುವ ರಿಯಾಯಿತಿ. ೨. ಕಪ್ಪ; ಕಾಣಿಕೆ.
ಜೂತಿ (ನಾ). ೧. ವೇಗ; ಚುರುಕು. ೨. ಎಕ್ಕಡ; ಕೆರ.
ಜೂದು = ಜೂಜು. ~ಆಳಿ = ಜೂಜುಕೋರ.
ಜೂಪರ (ನಾ). ಜಿನುಗುಮಳೆ; ತುಂತುರು ಮಳೆ.
ಜೂಬು (ನಾ). ೧. ದೆವ್ವ; ಪಿಶಾಚಿ. ೨. ಭಯಾನಕವಾದುದು.
ಜೂರ್ತಿ (ನಾ). ೧. ಜ್ವರ. ೨. ಆತಂಕ; ಕ್ಲೇಶ.
ಜೂಲು (ನಾ). ೧. ಕುದುರೆ, ಸಿಂಹ ಮುಂತಾದ ಪ್ರಾಣಿಗಳ ಕುತ್ತಿಗೆಯ ಮೇಲಿನ ಕೂದಲು; ಆಯಾಲು. ೨. ಉದ್ದವಾದ ಕೂದಲು. ೩. ಪ್ರಾಣಿಗಳ ಮೈ ಮೇಲೆ ಅಲಂಕಾರಕ್ಕಾಗಿ ಹಾಕುವ ಗೌಸು, -ಹೊದಿಕೆ. ೪. ಹರಿದ ಬಟ್ಟೆ; ಚಿಂದಿ.
ಜೂಳ (ನಾ). ಅಲ್ಪ; ಕ್ಷುದ್ರಮನುಷ್ಯ.
ಜೂಳಿ (ನಾ). ಕಮಂಡಲು, ಗಿಂಡಿ ಮುಂತಾದುವುಗಳ ನಳಿಕೆ, -ಬಾಯಿ.
ಜೂಳೆಯ (ನಾ). ೧. ಬೈತಲೆಗೆ ಹಾಕಿಕೊಳ್ಳುವ ಒಡವೆ; ಬೈತಲೆಬೊಟ್ಟು. ೨. ಹಣೆಗೆ ಇಡುವ ತಿಲಕ. ೩. ಸರ. ೪. ಮುತ್ತಿನ ಆಭರಣ.
ಜೃಂಭ (ನಾ). ೧. ಆಕಳಿಕೆ; ಆಗುಳಿಕೆ. ೨. ಅರಳುವಿಕೆ; ವಿಕಾಸ. ೩. ವಿಸ್ತರಿಸುವಿಕೆ; ಹರಡುವಿಕೆ. ~ಇಸು = ಅತಿಶಯವಾಗು; ವಿಜೃಂಭಿಸು.
ಜೃಂಭಿತ (ನಾ). ೧. ಆಕಳಿಕೆ. (ಗು). ೨. ಹೆಚ್ಚಾದ; ಅಧಿಕವಾದ. ೩. ಅರಳಿದ; ವಿಕಸಿತವಾದ.
ಜೇ (ನಾ). ಬಿಲ್ಲಿನ ಹೆದೆ. ~ಪೊ(ವೊ)ಡೆ = ೧. ಬಿಲ್ಲಿನ ಹೆದೆಯನ್ನೆಳೆದು ಧ್ವನಿಮಾಡು; ಧನುಷ್ಟಂಕಾರ ಮಾಡು. ೨. ಬಿಲ್ಲಿಗೆ ಹೆದೆಯೇರಿಸಿ ಮಾಡುವ ಧ್ವನಿ.
ಜೇಂಕರಿಸು (ಕ್ರಿ). ೧. ಹೊಗಳು; ಕೊಂಡಾಡು. ೨. ಝೇಂಕರಿಸು; ಮೊರೆ.
ಜೇಗ(ಂ)ಟೆ = ಜಾಂಗಟೆ.
ಜೇಡ (ನಾ). ೧. ನೇಯುವವನು; ನೇಕಾರ. ೨. ಬಲೆ ನೇಯುವ ಹುಳು; ಜೇಡರಹುಳು. ೩. ಜೇಡರಹುಳುವಿನ ಬಲೆ.
ಜೇಡಿ (ನಾ). ಒಂದು ಬಗೆಯ ಮೃದುವಾದ ಜಿಗಟುಮಣ್ಣು.
ಜೇಣಶಾಲೆ (ನಾ). ಶಸ್ತ್ರಾಗಾರ; ಆಯುಧಶಾಲೆ.
ಜೇತಾರ (ನಾ). ಜಯಶಾಲಿ; ಗೆಲ್ಲುವವನು.
ಜೇನ್(ನು) (ನಾ). ೧. ಮಧು; ಜೇನುತುಪ್ಪ; ಮಕರಂದ. ೨. ಜೇನುಹುಳು. ೩. ಜೇನುಗೂಡು. ೪. ಒಂದು ಜಾತಿಯ ಹಣ್ಣಿನ ಮರ; ಜೇನೆ. ~ಕ(ಗ)ಱೆ(ರೆ) = ಜೇನನ್ನು ಸುರಿ. ~ನೆಯ್ = ಜೇನು; ಮಕರಂದ. ~ಪು(ವು)ಟ್ಟಿ = ಜೇನುಗೂಡು. ~ಹುಳು = ಹೂವಿನ ರಸವನ್ನು ಹೀರಿ, ಜೇನು ಮಾಡಿ ಕೂಡಿಡುವ ಒಂದು ಜಾತಿಯ ಹುಳು.

ಜೇಬು (ನಾ). ಕಿಸೆ; ಚೊಕ್ಕಣ. ~ಕ(ಗ)ಳ್ಳ = ಜೇಬು ಕತ್ತರಿಸಿ ಕಳವು ಮಾಡುವವನು; ಕಿಸೆಗಳ್ಳ.

ಜೇಯ (ಗು). ಜಯಿಸಲು ಶಕ್ಯವಾದ; ಗೆಲ್ಲಲು ಸಾಧ್ಯವಾದ.

ಜೇರು (ನಾ). ೧. ಗೋಡೆ; ಭಿತ್ತಿ. ೨. ದುರ್ಬಲತೆ; ನಿಶ್ಶಕ್ತಿ. ೩. ಇಕ್ಕಟ್ಟು; ಬಿಕ್ಕಟ್ಟು. ೪. ಬೇನೆ; ಕಾಯಿಲೆ. ~ಮುತ್ತಿಗೆ = ಇಕ್ಕಟ್ಟಿಗೆ ಸಿಕ್ಕಿಸುವ ಮುತ್ತಿಗೆ.

ಜೇವಣ (ನಾ). ೧. ಊಟ; ಭೋಜನ. ೨ = ಜೇವಣಿ. ~ಶಾ(ಸಾ)ಲೆ = ಊಟದ ಮನೆ; ಭೋಜನಗೃಹ.

ಜೇವಣಿ (ನಾ). ತುತ್ತು; ಗ್ರಾಸ.

ಜೇವಣಿಗೆ (ನಾ). ೧. ಒಂದು ಜಾತಿಯ ಮರ. ೨. ಸಿಹಿಯಾದುದು; ಮಧುರವಾದುದು.

ಜೈತ್ರ (ನಾ). ೧. ಜಯಶಾಲಿ; ಗೆದ್ದವನು. ೨. ಗೆಲವು; ಜಯ. (ಗು). ೩. ಜಯ ಹೊಂದಿದ; ಯಶಸ್ವಿಯಾದ. ~ಯಾತ್ರೆ = ವಿಜಯಯಾತ್ರೆ.

ಜೈನ (ಗು). ಜಿನ ಸಂಬಂಧವಾದ.

ಜೈವಾತೃಕ (ನಾ). ೧. ದೀರ್ಘಾಯುಸ್ಸುಳ್ಳವನು. ೨. ಚಂದ್ರ.

ಜೊಂಗುಬು(ಳಿ) (ನಾ). ಮೂರ್ಛೆ; ಬವಳಿ.

ಜೊಂಡಿಗ (ನಾ). ಜಿರಲೆ; ತೊಂಡಂಗಿ; ಎಕ್ಕಳೆ.

ಜೊಂಡು (ನಾ). ೧. ತಲೆಯ ಕೂದಲ ಬುಡದಲ್ಲಿ ತೋರಿಬರುವ ಹೊಟ್ಟು. ೨. ಪಾಚಿ; ಹಾವಸೆ. ೩. ನೀರಿನಲ್ಲಿ ಕೊಳೆತು ನಾರುವ ಕಸ. ೪. ಒಂದು ಜಾತಿಯ ಹುಲ್ಲು.

ಜೊಂಪ (ನಾ). ೧. ಗೊಂಚಲು; ಗುಚ್ಛ. ೨. ರಾಶಿ; ಮೊತ್ತ. ೩. ಲತಾಗೃಹ; ಬಳ್ಳಿಮಾಡ. ೪. ಪೊದೆ; ಹೊದರು.

ಜೊಂಪಡಿ (ನಾ). ಗುಡಿಸಿಲು; ಜೋಪಡಿ.

ಜೊಂಪಿಸು (ಕ್ರಿ). ೧. ನಡುಗಿಸು; ಕಂಪನಗೊಳಿಸು. ೨. ತುಂಬು; ಆವರಿಸು; ವ್ಯಾಪಿಸು. ೩. ನಡುಗು; ಕಂಪಿಸು. ೪. ಬಯಸು; ಹಂಬಲಿಸು. ೫. ಅಮಲೇರಿ ಮೈಮರೆ. ೬. ತೂಗಾಡು; ತೊನೆದಾಡು.

ಜೊಂಪು (ನಾ). ೧. ಮತ್ತು; ಮೈಮರೆವು. ೨. ತೂಕಡಿಕೆ; ಮಂಪರು.

ಜೊಂಪೆ (ನಾ). ಗೊಂಚಲು; ಗುಚ್ಛ.

ಜೊಗ್ಗು (ಕ್ರಿ). ೧. ಕುಗ್ಗು; ಕಂದಿಹೋಗು. (ನಾ). ೨. ಕುಗ್ಗುವಿಕೆ; ಕ್ಷೀಣತೆ.

ಜೊತೆ (ನಾ). ೧. ಕೂಡಿರುವುದು; ಕೂಟ; ಸಹವಾಸ. ೨. ಜೋಡಿ; ಯುಗ್ಮ; ಜತೆ. ೩. ಸಿದ್ಧತೆ; ಜೋಡಣೆ. (ಅ). ೪. ಸಂಗಡ; ಸಹಿತವಾಗಿ. ~ಕೂ(ಗೂ)ಡು=೧. ಸೇರು; ಹೊಂದಿಕೊಳ್ಳು. ೨. ಸಂಭೋಗಿಸು. ~ಗಾರ = ಸಂಗಡಿಗ.

ಜೊತ್ತಗೆ (ನಾ). ಎತ್ತುಗಳನ್ನು ನೊಗಕ್ಕೆ ಕಟ್ಟುವ ಹಗ್ಗ; ಮಿಳಿ.

ಜೊತಾತ್ರಯ (ನಾ). ರುಜುವಾತು; ಪ್ರಮಾಣ.

ಜೊತ್ತಿಗೆ = ಜೊತ್ತಗೆ.

ಜೊತ್ತು (ನಾ). ೧. ಆಸರೆ; ನೆಲೆ. ೨. ಸಾಲು; ಶ್ರೇಣಿ. ೩. ದಟ್ಟವಾಗಿರುವಿಕೆ. ೪. ಮೋಸ; ವಂಚನೆ.

ಜೊನ್ನ (ನಾ). ೧. ಬೆಳುದಿಂಗಳು; ಜ್ಯೋತ್ಸ್ನೆ. ೨. ಪಾಡ್ಯದಿಂದ ಪೌರ್ಣಮಿವರೆಗಿನ ಕಾಲ; ಶುಕ್ಲಪಕ್ಷ. ~ಪ(ವ)ಕ್ಕಿ=ಬೆಳುದಿಂಗಳನ್ನೇ ಸೇವಿಸುವುದೆಂದು ಭಾವಿಸಲಾದ ಪಕ್ಷಿ; ಚಕೋರ.

ಜೊನ್ನೊಡಲ (ನಾ). ಚಂದ್ರ. ~ಅಳಿಯ = ಚಂದ್ರನ ಸೋದರಳಿಯ; ಮನ್ಮಥ.

ಜೊಮ್ಮು (ನಾ). ೧. ಮರಗಟ್ಟಿದ ಸ್ಥಿತಿ; ಜೋಮು. ೨. ಅಮಲು; ಮತ್ತು. ~ಏಱು(ರು) = ಮಂಪರು ಹತ್ತು; ಮೈಮರೆ. ~ಪಿ(ಪಿ)ಡಿ = ಜಡವಾಗು.

ಜೊಲ್ಲು (ನಾ). ಲಾಲಾರಸ; ಉಗುಳು.
ಜೊಲ್ಲೆಯು (ನಾ). ತುರುಬಿನ ಕೊನೆ; ಚೊಲ್ಲೆಯ.
ಜೊಲ್ಲೆಹ = ಜೊಲ್ಲೆಯ.
ಜೊಳ್ಳು = ಜಳ್ಳು.
ಜೋ (ನಾ). ೧. ಜೋಗುಳದ ಧ್ವನಿ. (ಗು). ೨. ನೇತಾಡುನ; ಜೋ ೯ ಲಾ ಡು ವ. ~ಮಾಲೆ = ಚಿನ್ನದ ಗುಂಡುಗಳುಳ್ಳ ಉದ್ದವಾದ ಸರ; ಜೋಲ್ಮಾಲೆ.
ಜೋಂಪ (ನಾ). ಗೊಂಚಲು; ಕುಚ್ಚು.
ಜೋಂಪು ೧. = ಜೋಂಪ. ೨. ತೂಕಡಿಕೆ; ಮಂಪರು.
ಜೋಕಾಲಿ (ನಾ). ಉಯ್ಯಾಲೆ; ತೂಗುಮಣೆ.
ಜೋಕು (ನಾ). ೧. ಠೀವಿ; ಡೌಲು. ೨. ಹಂಚಿಕೆ; ತಂತ್ರ. ೩. ವಾದ್ಯವನ್ನು ನುಡಿಸುವುದರಲ್ಲಿ ಒಂದು ಕ್ರಮ.
ಜೋಕುಮಾರ (ನಾ). ಒಬ್ಬ (ಜಾನಪದ) ದೇವತೆಯ ಹೆಸರು.
ಜೋಕೆ (ನಾ). ೧. ಎಚ್ಚರಿಕೆ; ಜಾಗರೂಕತೆ. ೨. ಸೊಗಸು; ಅಂದ. ೩. ರೀತಿ; ಕ್ರಮ. ೪. ಸಾಲು; ಶ್ರೇಣಿ. ೫. ಹಿಡಿತ; ವಶ. ೬. ಸಿದ್ಧತೆ; ತಯಾರಿ. ೭. ಎಚ್ಚರಿಕೆಯನ್ನು ಸೂಚಿಸುವ ಪದ. ೮. ವಾದ್ಯವನ್ನು ಬಾರಿಸುವ ಒಂದು ಕ್ರಮ.
ಜೋಗ (ನಾ). ೧. ತಪಸ್ಸು; ಧ್ಯಾನ; ಯೋಗ. ೨. ಹೊಂದಿಕೆ; ಸೇರಿಕೆ. ೩. ಉಪಯೋಗ. ೪. ದೋಣಿ; ನಾವೆ. ೫. ಒಂದು ಜಾತಿಯ ನಾಯಿ. ೬. ಒಂದು ಬಗೆಯ ವಸ್ತ್ರ. ~ಇ(ಯಿ)ಸು = ೧. ಬಳಸು; ಉಪಯೋಗಿಸು. ೨. ಸೇರಿಸು; ಸಿದ್ಧಗೊಳಿಸು. ~ಪ(ವ)ಟ್ಟಿಗೆ = ಯೋಗಿಗಳು ತೊಡುವ ಬಟ್ಟೆ.
ಜೋಗರಿಸು (ಕ್ರಿ). ೧. ಜೋಪಾನಮಾಡು; ಸಲಹು. ೨. ಜಡವಾಗಿಸು; ನಿಶ್ಚೇಷ್ಟವಾಗಿಸು.
ಜೋಗಿ (ನಾ). ೧. ಯೋಗಿ; ತಪಸ್ವಿ. ೨. ನಿಂತಲ್ಲಿ ನಿಲ್ಲದೆ ಅಲೆಯುವ ಭಿಕ್ಷು, –ಬೈರಾಗಿ. ೩. ಒಂದು ಜಾತಿಯ ವಿಷಸರ್ಪ. ~ಇತಿ = ೧. ಜೋಗಿಣಿ. ೨. ಎಲ್ಲಮ್ಮ ದೇವತೆಯ ಭಕ್ತೆ; ಜೋಗಮ್ಮ.
ಜೋಗಿಣಿ (ನಾ). ಯೋಗಿನಿ; ತಪಸ್ವಿನಿ.
ಜೋಗು (ನಾ). ೧. ದೋಣಿ; ನಾವೆ. ೨. ಜಲಪಾತ; ಅಬ್ಬಿ. ೩. ಜವುಗು ನೆಲ. ೪. ಯೋಗ; ಧ್ಯಾನ. ೫. ಮುರಗಟ್ಟುವಿಕೆ; ಜೋಮು. ~ಎತ್ತು = ೧. ಕೆಸರಾಗು. ೨. ಧ್ಯಾನವನ್ನು ಬಿಟ್ಟು ಏಳು.
ಜೋಗುಳ (ನಾ). ಮಕ್ಕಳನ್ನು ಮಲಗಿಸುವಾಗ ಹಾಡುವ ಹಾಡು; ಲಾಲಿ.
ಜೋಗೈಸು (ಕ್ರಿ). ೧. ಬಳಸು; ಉಪಯೋಗಿಸು. ೨. ಕಾಪಾಡು; ಸಲಹು.
ಜೋಡ (ನಾ). ಹಾದರಿಗ; ಸಿತಗ; ಜಾರ.
ಜೋಡಣೆ (ನಾ). ೧. ಸೇರಿಕೆ; ಹೊಂದಿಕೆ. ೨. ಒಟ್ಟೈಸುವುದು; ರಾಶಿಹಾಕುವುದು. ೩. ಗುಂಪು; ಸಮೂಹ. ೪. ಸಿದ್ಧತೆ; ಸಜ್ಜು.
ಜೋಡಿ (ನಾ). ೧. ಮೊತ್ತ; ಗುಂಪು. ೨. ಸಹವಾಸ; ಒಡನಾಟ. ೩. ಜೊತೆ; ಯುಗ್ಮ. ೪. ಸಂಘಟನೆ; ಒಗ್ಗಟ್ಟು. ೫. = ಜೂಡಿ. (ಅ). ೬. ಜೊತೆಯಲ್ಲಿ. ~ಇಸು = ೧. ಕೂಡಿಸು; ಸೇರಿಸು. ೨. ಅಣಿಯಾಗು; ಸಿದ್ಧವಾಗು. ೩. ಸೇರು; ಜೊತೆಯಾಗು. ೪. ಉಂಟಾಗು; ಒದಗು. ೫. ತಿಳಿಸು; ನಿವೇದಿಸು. ೬. ಸಿದ್ಧಗೊಳಿಸು; ಅಣಿಮಾಡು. ೭. ಜೊತೆಮಾಡು. ೮. ಒಟ್ಟಾಗು; ಸಂಘಟಿತವಾಗು. ~ಗ್ರಾಮ = ಸರ್ಕಾರವು ಇನಾಮಾಗಿ ಕೊಟ್ಟ ಹಳ್ಳಿ; ಇನಾಮು ಗ್ರಾಮ. ~ದಾರ = ೧. ಜಮೀನು ಅಥವಾ ಗ್ರಾಮಗಳನ್ನು ಇನಾಮಾಗಿ ಪಡೆದಿರುವವನು; ಇನಾಂದಾರ. ೨. ಜೊತೆಗಾರ; ಸಂಗಡಿಗ.

ಜೋಡು (ನಾ). ೧. ಜೊತೆ; ಯುಗಲ. ೨. ಸಮಾನ; ಸಾಟಿ. ೩. ಎಕ್ಕಡ; ಕೆರ. ೪. ಕವಚ; ಅಂಗಿ. ೫. ಸಹವಾಸ; ಜೊತೆ. ೬. ಹಾದರ; ವ್ಯಭಿಚಾರ. ೭. ನೆಲೆ; ಆಶ್ರಯ. ೮. ಗುಂಪು; ಸಮುದಾಯ. ~ಆಡು = ಹಾದರವನ್ನು ಮಾಡು. ~ಪ(ವ)ಕ್ಕಿ = ಚಕ್ರವಾಕ; ಎಣೆವಕ್ಕಿ.

ಜೋಡೆ (ನಾ). ಹಾದರಿಗಿತ್ತಿ; ವ್ಯಭಿಚಾರಿಣಿ.

ಜೋತಿ = ಜ್ಯೋತಿ.

ಜೋದ ೧. = ಜೋಧ. ೨. ಸೈನಿಕ; ಯೋಧ.

ಜೋಧ (ನಾ). ಮಾವಟಿಗ; ಮಾವುತ.

ಜೋನಿ (ನಾ). (ಬೆಲ್ಲ ಮುಂತಾದ ವಸ್ತುಗಳು) ಜಿನುಗಿರುವ ಸ್ಥಿತಿ.

ಜೋನೆಗ (ನಾ). ತುರುಕ; ಯವನ.

ಜೋಪಡಿ = ಜೊಂಪಡಿ.

ಜೋಪಾನ (ನಾ). ೧. ಕಾಪಾಡುವಿಕೆ; ರಕ್ಷಣೆ. ೨. ಎಚ್ಚರಿಕೆ; ಜಾಗರೂಕತೆ. ೩. ಎಚ್ಚರಿಕೆಯನ್ನು ಸೂಚಿಸುವ ಪದ.

ಜೋಪಾಸನ (ನಾ). ಪೋಷಣೆ; ಆರೈಕೆ.

ಜೋಪಾಸನೆ = ಜೋಪಾಸನ.

ಜೋಬ = ಜೋಬದ್ರ.

ಜೋಬದ್ರ (ನಾ). ಆಲಸಿ; ಮೈಗಳ್ಳ; ಜಡ.

ಜೋಮು (ನಾ). ೧. ಮೈ ಮರಗಟ್ಟುವುದು; ಜೊಮ್ಮು. ೨. ತೂಕಡಿಕೆ; ಜೊಂಪು.

ಜೋಯಿಸ (ನಾ). ೧. ಗ್ರಹಗತಿಗಳನ್ನು ತಿಳಿಸುವ ಶಾಸ್ತ್ರ; ಜ್ಯೋತಿಷ ಶಾಸ್ತ್ರ. ೨. ಗ್ರಹಗತಿಯನ್ನು ಹೇಳುವವನು; ಜ್ಯೋತಿಷಿ. ~ಇಗ = ಜ್ಯೋತಿಷ್ಯವನ್ನು ಬಲ್ಲವನು.

ಜೋರು (ಕ್ರಿ). ೧. ಸೋರು; ಒಸರು. (ನಾ). ೨. ಸೋರುವಿಕೆ; ಸುರಿಯುವಿಕೆ. ೩. ಕಣ್ಣಿನ ಕೊಳೆ; ಪಿಸುರು. ೪. ದರ್ಪ; ಜರಬು. ೫. ವೇಗ; ರಭಸ. ೬. ಬಲವಾದುದು; ತೀವ್ರವಾದುದು. ೭. ಒತ್ತಾಯ; ಬಲಾತ್ಕಾರ. ೮. ಹೆಚ್ಚಳ; ಆಧಿಕ್ಯ.

ಜೋಲ್(ಲು)(ಕ್ರಿ). ೧. ನೇಲು; ಇಳಿಬೀಳು. ೨. ತೂಗಾಡು; ತೊನೆದಾಡು. ೩. ಸಡಿಲವಾಗು; ಅಳ್ಳಕವಾಗು. ೪. ಜೋಲು ಹಾಕು; ಇಳಿಬೀಳಿಸು. ೫. ಕುಗ್ಗು; ಕುಸಿ. ೬. ಮನಸೋಲು; ಪರವಶವಾಗು. (ನಾ). ೭. ಜೋತುಬೀಳುವಿಕೆ. ೮. ಸಡಿಲ; ಅಳ್ಳಕ. ೯. ಜೋತುಬಿಟ್ಟುದು. ~ಮುಡಿ = ೧. ಸಡಿಲವಾದ ಕೂದಲಗಂಟು; ಅಳ್ಳಕವಾದ ತುರುಬು. ೨. ಒಂದು ಒಗೆಯ ಕೇಶಾಲಂಕಾರ.

ಜೋಲಿ. ೧. = ಜೋಲೆ. ೨. ಗೋಜು; ತಂಟೆ. ೩. ತೂಗಾಟ; ಹೊಯ್ದಾಟ. ೪. ಸಾವಕಾಶ; ತಡ. ೫. ಆನೆ, ಕುದುರೆಗಳ ಮೇಲೆ ಹೊದಿಸುವ ವಸ್ತ್ರ; ಜೂಲು. ೬. ಸಮತೂಕ; ಹವಣು; ಆಯ. ~ತಪ್ಪು=ಆಯ ತಪ್ಪು; ತೂಕತಪ್ಪು. ~ಮಾಡು = ೧. ತಡಮಾಡು; ಸಾವಕಾಶಮಾಡು. ೨. ಹೊಣೆಯಿಂದ ತಪ್ಪಿಸಿಕೊಳ್ಳು. ೩. ಹಟಮಾಡು; ಮೊಂಡುತನ ಮಾಡು. ~ಹೊಡೆ = ೧. ಜೋಲಿತಪ್ಪು. ೨. ತೂಗಾಡು; ಹೊಯ್ದಾಡು.

ಜೋಲೆ (ನಾ). ೧. ಕೆಲಸ; ಕಾರ್ಯ. ೨. ಮೊಂಡುತನ; ಹಟ.

ಜೋವು (ನಾ). ಮರಗಟ್ಟಿದಂತೆ ಆಗುವಿಕೆ; ಜೋಮು. ~ಏಱ್(ರ್) = ಮರಗಟ್ಟಿದಂತಾಗು; ಜೊಮ್ಮುಹಿಡಿ.

ಜೋಸೆ (ನಾ). ಹೆಂಗಸು; ಸ್ತ್ರೀ.

ಜೋಹ (ನಾ). ೧. ಮೋಸದ ವೇಷ; ಸೋಗು. ೨. ರೂಪ; ಆಕಾರ.

ಜೋಹರ (ನಾ). ೧. ನಮಸ್ಕಾರ; ಪ್ರಣಾಮ. ೨. ಬಿನ್ನಹ; ವಿಜ್ಞಾಪನೆ. ೩. ರಜಪೂತ ಸ್ತ್ರೀಯರು ಶತ್ರುವಶವಾಗಬಾರದೆಂದು ಅಗ್ನಿಪ್ರವೇಶದ ಮೂಲಕ ಪ್ರಾಣತ್ಯಾಗ ಮಾಡಿಕೊಳ್ಳುತ್ತಿದ್ದ ಒಂದು ಪದ್ಧತಿ.

ಜೋಳ (ನಾ). ೧. ಒಂದು ಬಗೆಯ ಧಾನ್ಯ. ೨. ಅನ್ನದ ಹಂಗು, –ಋಣ. ~ಪಾ(ವಾ)ಟಿ(ಳಿ) = ೧ ಒಡೆಯನ ಋಣವನ್ನು ತೀರಿಸುವಿಕೆ. ೨. ಒಡೆಯನ ಋಣವನ್ನು ತೀರಿಸುವವನು.

ಜೋಳಿ (ನಾ). ೧. ಸಮಾನ; ಸಾಟಿ. ೨. ಜೋಡಿ; ಜೊತೆ. ೩. ರಾಯಸ; ಸಂದೇಶ. ೪. ಗುಂಪು; ಸಮೂಹ. ೫. ಭಿಕ್ಷೆಯ ಚೀಲ; ಜೋಳಿಗೆ. ೬. = ಜೂಳಿ.

ಜೋಳಿಗೆ (ನಾ). ೧. (ಮಕ್ಕಳನ್ನು ಮಲಗಿಸಲು) ಮೇಲಿನಿಂದ ತೂಗುಬಿಡುವ ಬಟ್ಟೆ; ಬಟ್ಟೆಯಿಂದ ಮಾಡಿದ ತೊಟ್ಟಿಲು. ೨. ಭಿಕ್ಷೆಯ ಚೀಲ; ಕಂತೆ.

ಜೌಗು = ಜವುಗು.

ಜ್ಞ (ನಾ). ೧. ತಿಳಿದವನು; ಬುದ್ಧಿವಂತ. ೨. ಮಂಗಳಗ್ರಹ. ೩. ಬುಧಗ್ರಹ.

ಜ್ಞಪ್ತಿ (ನಾ). ೧. ಬುದ್ಧಿ; ತಿಳಿವು. ೨. ನೆನಪು; ಜ್ಞಾಪಕ.

ಜ್ಞಾತ (ನಾ). ೧. ತಿಳಿದವನು. (ಗು). ೨. ತಿಳಿದ; ಗ್ರಹಿಸಿದ.

ಜ್ಞಾತಿ (ನಾ). ೧. ತಂದೆಯ ಕಡೆಯ ಬಂಧು; ದಾಯಾದಿ. ೨. ಮೃತರಾದ ಪೂರ್ವಿಕರಿಗೆ ಮಾಡುವ ಪಿಂಡಕಾರ್ಯದಲ್ಲಿ ಭಾಗವಿಲ್ಲದ ರಕ್ತಸಂಬಂಧಿ; ಸಪಿಂಡನಲ್ಲದ ಬಂಧು. ೩. ನಂಟ; ಬಂಧು. ೪. ಒಂದೇ ಮೂಲವುಳ್ಳ ಭಾಷಾವರ್ಗಕ್ಕೆ ಸೇರಿದ ಪದ.

ಜ್ಞಾತೃ (ನಾ). ೧. ತಿಳಿದುಕೊಳ್ಳುವವನು. (ಗು). ೨. ಅರಿತುಕೊಳ್ಳುವ.

ಜ್ಞಾನ (ನಾ). ೧. ತಿಳಿವಳಿಕೆ; ಅರಿವು. ೨. ಬ್ರಹ್ಮಜ್ಞಾನ; ಆತ್ಮವಿದ್ಯೆ. ೩. ಎಚ್ಚರಿಕೆ; ಎಚ್ಚರ. ~ಇಂದ್ರಿಯ = ೧. ಶಬ್ದ, ಸ್ಪರ್ಶ, ರೂಪ ಮೊದಲಾದುವುಗಳ ಜ್ಞಾನವನ್ನುಂಟುಮಾಡಿಕೊಡುವ ಇಂದ್ರಿಯ. ೨. ಮನಸ್ಸು; ಬುದ್ಧಿ. ~ತಪ್ಪು=ಎಚ್ಚರ ತಪ್ಪು; ಮೂರ್ಛೆಹೋಗು. ~ವೃದ್ಧ = ಅರಿವಿನಿಂದ ಹಿರಿಯನಾದವನು.

ಜ್ಞಾನಿ (ನಾ). ೧. ಬಲ್ಲವನು; ವಿದ್ವಾಂಸ. ೨. ಜೋಯಿಸ; ಜೋತಿಷ್ಕ.

ಜ್ಞಾಪಕ (ನಾ). ೧. ತಿಳಿಯುವಂತೆ ಬೋಧಿಸುವಿಕೆ. ೨. ಗುರು; ಉಪಾಧ್ಯಾಯ. ೩. ನೆನಪು; ಸ್ಮರಣೆ.

ಜ್ಞಾಪಿಸು (ಕ್ರಿ). ೧. ನೆನಪುಮಾಡಿಕೊಳ್ಳು; ಸ್ಮರಿಸು. ೨. ಸ್ಮರಣೆಗೆ ತರು; ನೆನಪುಮಾಡು.

ಜ್ಞೇಯ (ನಾ). ೧. ತಿಳಿಯಬೇಕಾದ ವಿಷಯ, –ವಸ್ತು. ೨. ಚೈತನ್ಯ ಸ್ವರೂಪ; ಪರಬ್ರಹ್ಮ. (ಗು). ೩. ತಿಳಿಯಬಹುದಾದ; ತಿಳಿಯಬೇಕಾದ.

ಜ್ಯಾ (ನಾ). ೧. ಬಿಲ್ಲಿನ ಹೆದೆ; ಮೌರ್ವಿ. ೨. ಭೂಮಿ. ೩. ತಾಯಿ. ~ಮಂಡಲ = ಭೂಮಂಡಲ; ಪೃಥ್ವಿ. ~ರವ = ಬಿಲ್ಲಿನ ಹೆದೆಯ ಧ್ವನಿ; ಠೇಂಕಾರ.

ಜ್ಯಾಮಿತಿ (ನಾ). ರೇಖಾಗಣಿತ.

ಜ್ಯಾಯ (ನಾ). ೧. ಹಿರಿಯ; ದೊಡ್ಡವನು. ೨. ಅಣ್ಣ; ಅಗ್ರಜ. ೩. ಶ್ರೇಷ್ಠನಾದವನು; ಉತ್ತಮನಾದವನು.

ಜ್ಯೇಷ್ಠ (ನಾ). ೧. ಅಣ್ಣ. ೨. ಹಿರಿಯ ಮಗ. ೩. ಚಾಂದ್ರಮಾನ ವರ್ಷದ ಮೂರನೆಯ ತಿಂಗಳು; ಜ್ಯೇಷ್ಠಮಾಸ. (ಗು). ೪. ಸರ್ವೋತ್ಕೃಷ್ಟವಾದ; ಉತ್ತಮವಾದ.

ಜ್ಯೇಷ್ಠೆ (ನಾ). ೧. ಹಿರಿಯಳು. ೨. ಶ್ರೇಷ್ಠಳು. ೩. ದುರದೃಷ್ಟದ ಅಧಿದೇವತೆ; ದರಿದ್ರಲಕ್ಷ್ಮಿ. ೪. ಇಪ್ಪತ್ತೇಳು ನಕ್ಷತ್ರರಾಶಿಗಳಲ್ಲಿ ಒಂದು.

ಜ್ಯೋತಿ (ನಾ). ೧. ಬೆಳಕು; ಕಾಂತಿ. ೨. ದೀವಿಗೆ; ದೀಪ. ೩. ಅಗ್ನಿ; ಬೆಂಕಿ. ೪. ಕಣ್ಣು; ನೇತ್ರ. ೫. ನಕ್ಷತ್ರ. ೬. ಒಳ್ಳೆಯ ಸ್ವಭಾವ. ೭. ಸೂರ್ಯ, ಚಂದ್ರ ಮೊದಲಾದ ಗ್ರಹಗಳು.

ಜ್ಯೋತಿರಿಂಗಣ (ನಾ). ಮಿಂಚುಹುಳು; ಮಿಣುಕುಹುಳು.

ಜ್ಯೋತಿರ್ಜ್ಞಾನ (ನಾ). ಜ್ಯೋತಿಷಜ್ಞಾನ; ಜ್ಯೋತಿಷವಿದ್ಯೆ.

ಜ್ಯೋತಿರ್ಲತೆ (ನಾ). ಬೆಳಕನ್ನು ಬೀರುವ ಒಂದು ಜಾತಿಯ ಸಸ್ಯ.

ಜ್ಯೋತಿರ್ಲೋಕ (ನಾ). ಪ್ರಕಾಶಮಯವಾದ ಲೋಕ; ಸ್ವರ್ಗ.

ಜ್ಯೋತಿಷ = ಜೋಯಿಸ.

ಜ್ಯೋತಿಷ್ಮತಿ (ನಾ). ೧. ಬೆಳಕನ್ನುಳ್ಳ ರಾತ್ರಿ. ೨. ಒಂದು ಜಾತಿಯ ಸಸ್ಯ; ಕಂಗು.

ಜ್ಯೋತ್ಸ್ನೆ (ನಾ). ೧. ಬೆಳುದಿಂಗಳು; ಚಂದ್ರಿಕೆ. ೨. ಬೆಳುದಿಂಗಳ ರಾತ್ರಿ. ೩. ಚಂದ್ರನ ಹದಿನಾರು ಕಲೆಗಳಲ್ಲಿ ಒಂದು.

ಜ್ವರ (ನಾ). ೧. ಮೈಬಿಸಿಯಾಗುವ ಒಂದು ಬಗೆಯ ರೋಗ ಲಕ್ಷಣ. (ಗು). ೨. ತಪ್ತವಾದ; ಕಾಯಿಸಲ್ಪಟ್ಟ.

ಜ್ವಲ(ಳ)ನ (ನಾ). ೧. ಅಗ್ನಿ; ಬೆಂಕಿ. ೨. ಉರಿಯುವಿಕೆ. ೩. ಹೊಳೆಯುವಿಕೆ. ೪. ಬೆಳಕು; ಪ್ರಕಾಶ. ೫. ಸೂರ್ಯ.

ಜ್ವಲಿ(ಳಿ)ಸು (ಕ್ರಿ). ೧. ಹೊಳೆ; ಪ್ರಕಾಶಿಸು. ೨. ಸುಡು; ದಹಿಸು;

ಜ್ವಾಲಾಮುಖಿ (ನಾ). ಅಗ್ನಿಪರ್ವತ.

ಜ್ವಾಲೆ (ನಾ). ೧. ಬೆಂಕಿಯ ನಾಲಗೆ; ಅಗ್ನಿಶಿಖೆ. ೨. ಬೆಂಕಿ; ಉರಿ.



# ಝ

ಝ (ನಾ). ಕನ್ನಡ ವರ್ಣಮಾಲೆಯ ಇಪ್ಪತ್ತೊಂಬತ್ತನೆಯ ಅಕ್ಷರ.

ಝಂಕಣೆ (ನಾ). ಹೀಯಾಳಿಸುವಿಕೆ.

ಝಂಕೆ = ಜಂಕೆ.

ಝಂಝಾನಿಲ (ನಾ). ಮಳೆಯಿಂದ ಕೂಡಿದ ಬಿರುಗಾಳಿ.

ಝಂಪಾಳ (ನಾ). ಮುಸುಕು; ತೆರೆ.

ಝಗಳೆ = ಜಗಳೆ.

ಝಗಾ (ನಾ). ಒಂದು ಬಗೆಯ ಉಡುಪು.

ಝಗೆ (ನಾ). ೧. ಹೊಳಪು; ಕಾಂತಿ. ೨. = ಝಗಾ.

ಝಟಿತಿ (ಅ). ಕೂಡಲೆ; ಒಡನೆ.

ಝಡತಿ (ನಾ). ಚೆನ್ನಾಗಿ ಹುಡುಕುವುದು; ಶೋಧನೆ.

ಝಡಪ (ನಾ). ೧. ಹೆಚ್ಚಾದ ವೇಗ, -ತ್ವರೆ. ೨. ಎರಗುವಿಕೆ.

ಝಡಿತಿ (ನಾ). ಅವಸರ; ಆತುರ.

ಝಣಂಬ = ಝಂಪಾಳ.

ಝಣಕ (ನಾ). ೧. ಚುರುಕು; ತೀಕ್ಷ್ಣತೆ. ೨. ಶೀಘ್ರತೆ; ಜಾಗ್ರತೆ.

ಝಣತ್ಕಾರ (ನಾ). ಗೆಜ್ಜೆ ಮೊದಲಾದುವುಗಳಿಂದ ಹೊರಡುವ ಧ್ವನಿ.

ಝರಿ (ನಾ). ೧. ಶತಸುದಿ; ಲಕ್ಷ್ಮೀಚೇಳು. ೨. ಬೆಟ್ಟದ ಕೊರಕಲಿನಲ್ಲಿ ಹರಿಯುವ ನದಿ; ಗಿರಿನದಿ.

ಝರ್ಝರ (ನಾ). ಒಂದು ವಾದ್ಯವಿಶೇಷ.

ಝಲಕು (ನಾ). ೧. ಹೊಳಪು; ಮಿಂಚು. ೨. ತೋರುವಿಕೆ; ಸುಳಿವು.

**ಝುಂಲೆ** (ನಾ). ೧. ಸೂರ್ಯನ ಪ್ರಕಾಶ, –ಶೋಭೆ. ೨. ಹುಡುಗಿ. ೩. ಮಗಳು.

**ಝುಲ್ಲ** (ನಾ). ಭ್ರಮೆ ; ಹುಚ್ಚು.

**ಝುಲ್ಲರಿ** (ನಾ). ೧. ಒಂದು ಬಗೆಯ ಚರ್ಮ ವಾದ್ಯ. ೨. ಕುಚ್ಚು ; ಗೊಂಡೆ. ೩. ಜಾಲರಿ.

**ಝುಲ್ಲಿ** (ನಾ). ೧. ಗೊಂಚಲು ; ಕುಚ್ಚು ; ಜಲ್ಲಿ. ೨. ಜಾಲರಿ. ೩. ಸಮೂಹ. ೪. ಚಾಮರ.

**ಝುಲ್ಲಿಸು** (ಕ್ರಿ). ೧. ಪ್ರವಿಸು ; ಸ್ರವಿಸು. ೨. ಬೆದರಿಸು ; ಜಂಕಿಸು.

**ಝುಷ** (ನಾ). ಮೀನು ; ಮತ್ಸ್ಯ. **~ಕೇತನ** = ೧. ಮೀನಿನ ಗುರುತುಳ್ಳ ಧ್ವಜ. ೨. ಮನ್ಮಥ ; ಕಾಮ.

**ಝುಳ** (ನಾ). ೧. ಪ್ರಕಾಶ ; ಕಾಂತಿ. ೨. ಸೆಕೆ ; ಶಾಖ ; ಉಷ್ಣತೆ.

**ಝುಳಂಪಿಸು** (ಕ್ರಿ). ೧. ಅಲ್ಲಾಡಿಸು ; ಬೀಸು. ೨. ಹೆದರಿಸು.

**ಝುಳಂಬ** = ಝುಂಪಾಳ.

**ಝುಳಕ** (ನಾ). ೧. ಪ್ರಕಾಶ ; ಹೊಳಪು. ೨. ಮಿಾಹ ; ಸ್ನಾನ.

**ಝುಳಪು** (ನಾ). ೧. ಬೀಸುವಿಕೆ ; ಜಳಪಿಸುವಿಕೆ. ೨. ಹೊಳಪು ; ಪ್ರಕಾಶ. **~ಇಸು** = ರಭಸದಿಂದ ತೂಗು, –ಬೀಸು.

**ಝುಾಂಡ** (ನಾ). ೧. ಬಾವುಟ ; ಧ್ವಜ. ೨. ವಾಸ ; ಇರುವಿಕೆ. **~ಹೂಡು** = ೧. ಬಾವುಟವನ್ನು ನೆಡು. ೨. ನೆಲಸು ; ತಳವೂರು.

**ಝುಾಡಿಸು** (ಕ್ರಿ). ೧. ಕೊಡಹು ; ಒದರು. ೨. ನಿಂದಿಸು. ೩. ಚಿಮ್ಮು ; ಹೊರಸೂಸು. ೪. ಹೊಡೆ. ೫. ದಬಾಯಿಸು.

**ಝುಪ್ಪರಿ** = ಜುಪರಿ.

**ಝುಲ್ಲಿಕೆ** (ನಾ). ಜೀರುಡುಂಬಿ ; ಜೀರುಂಡೆ.

**ಝುುಡುಪು** (ನಾ). ೧. ಪೊದೆ ; ಪೊದರು. ೨. ಕುಚ್ಚು ; ಗುಚ್ಛ.

**ಝುುಳುಕು** (ನಾ). ಅಸ್ಪಷ್ಟವಾಗಿ ಕಾಣುವುದು ; ಛಾಯೆ.

**ಝೇಂಕರಿಸು** (ಕ್ರಿ). ೧. (ದುಂಬಿಯಂತೆ) ಮೊರೆ ; ಶಬ್ದಮಾಡು. ೨. ಬಿರುನುಡಿಗಳನ್ನಾಡು. ೩. ಬಿಲ್ಲನ್ನು ಧ್ವನಿಮಾಡು.

**ಝೇಂಕಾರ** (ನಾ). ೧. ದುಂಬಿಯ ಧ್ವನಿ. ೨. ಬಿಲ್ಲಿನ ಹೆದೆಯ ಠೇಂಕಾರ.

**ಝೊಂಪು** (ನಾ). ಮೈಮರೆವು. **~ಇಸು** =೧. ಮೈಮರೆ; ಎಚ್ಚರತಪ್ಪು. ೨. ತೂಗಾಡು; ಜೋಲು. ೩. ಆವರಿಸು ; ತುಂಬು. ೪. ನಡುಗು ; ಕಂಪಿಸು.

**ಝೋಂಪು** ೧. = ಝೊಂಪು. ೨. ತೂಕಡಿಕೆ. **~ಇಸು** = ೧. ಬಯಸು ; ಹಂಬಲಿಸು. ೨. ನಡುಗಿಸು. ೩. ಮೈಮರೆ; ಮರುಳಾಗು.

*



# ಟ

**ಟ** (ನಾ). ಕನ್ನಡ ವರ್ಣಮಾಲೆಯ ಮೂವತ್ತೊಂದನೆಯ ಅಕ್ಷರ.

**ಟಂಕ** (ನಾ). ೧. ಕಲ್ಲುಕುಟಿಗನ ಒಂದು ಉಪಕರಣ ; ಕಲ್ಲುಳಿ ; ಚಾಣ. ೨. ಬೆಟ್ಟದ ಇಳಿಜಾರು ಪ್ರದೇಶ. ೩. ಮುದ್ರೆಯೊತ್ತಿದ ನಾಣ್ಯ. ೪. ಪಾತ್ರೆಗಳ ಬಿರುಕನ್ನು ಸುತ್ತಿಗೆಯಿಂದ ಬಡಿದು ಕೂಡಿಸುವಿಕೆ. ೫. ಹೆಮ್ಮೆ ; ಅಭಿಮಾನ. **~ಆಹತಿ** = ಕಲ್ಲುಳಿಯ ಏಟು.

~ಉತ್ಕೀರ್ಣ = ಕಲ್ಲುಳಿಯಿಂದ ಕಂಡರಿಸಿದ, -ಕೆತ್ತಿದ. ~ಕ್ಷತ = ೧. ಕಲ್ಲುಳಿಯ ಪೆಟ್ಟು. ೨. ಕಲ್ಲುಳಿಯಿಂದ ಕೊರೆದ. ~ಸಾಲೆ = ನಾಣ್ಯವನ್ನು ಮುದ್ರಿಸುವ ಸ್ಥಳ.

**ಟಂಕಣ** (ನಾ). ಲೋಹವನ್ನು ಶುದ್ಧಿಗೊಳಿಸಲು ಉಪಯೋಗಿಸುವ ಒಂದು ಬಗೆಯ ಖನಿಜಲವಣ; ಬೆಳುಗಾರ.

**ಟಂಕಾರ** (ನಾ). ೧. ಬಿಲ್ಲಿನ ಠೇಂಕಾರ. ೨. ಗಂಟೆ, ಆಯುಧ ಮೊದಲಾದುವುಗಳಿಂದ ಹೊರಡುವ ಧ್ವನಿ.

**ಟಂಕೃತಿ** (ನಾ). ಬಿಲ್ಲಿನ ಹೆದೆಯ ಶಬ್ದ; ಟಂಕಾರ.

**ಟಂಕೆ** (ನಾ). ೧.ಗುದಿಗೆ; ದೊಣ್ಣೆ. ೨.ಮುದ್ರೆಯೊತ್ತಿದ ನಾಣ್ಯ.

**ಟಕಮಕ** (ನಾ). ೧. ಗಾಬರಿ; ತಳಮಳ; ಕಕಮಕ. (ಅ). ೨. ಒಂದೇ ಸಮನೆ; ತೆರಪಿಲ್ಲದೆ.

**ಟಕ್ಕ** (ನಾ). ೧. ವಂಚಕ; ಮೋಸಗಾರ. (ಗು). ೨. ಮೋಸದ; ವಂಚನೆಯ.

**ಟಕ್ಕು** (ನಾ). ೧. ಮೋಸ; ವಂಚನೆ. ೨. ತೋರಿಕೆ; ಬೂಟಾಟಿಕೆ. ೩. ಆತಂಕದಿಂದ ಕೂಡಿದ ಚಿಂತೆ; ಎದೆಗುಕ್ಕು. ~ಇಸು = ವಂಚಿಸು; ಮೋಸಗೊಳಿಸು. ~ಟವಳಿ = ಮೋಸ; ವಂಚನೆ.

**ಟಕ್ಕೆ** (ನಾ). ೧.ಆಶ್ರಯ; ಆಧಾರ. ೨.ದಿಂಬು; ಲೋಡು.

**ಟಕ್ಕೆಯ** (ನಾ). ಬಾವುಟ; ಧ್ವಜ.

**ಟಗರು** (ನಾ). ತಗರು; ಗಂಡುಕುರಿ.

**ಟಪಾರಿಕೆ** (ನಾ). ಮುಚ್ಚಳ; ಹೊದಿಕೆ.

**ಟಪಾಲ್(ಲು)** (ನಾ). ೧. ಅಂಚೆ; ಅಂಚೆಯ ಮೂಲಕ ರವಾನೆ ಆಗುವ ಪತ್ರ ಮೊದಲಾದುವು. ೨.ಅಂಚೆಯ ಮೂಲಕ ರವಾನಿಸಲು ಕಾಗದಗಳನ್ನು ತುಂಬಿರುವ ಚೀಲ.

**ಟಪ್ಪೆ** (ನಾ). ೧. ದಾರಿಯ ಮಧ್ಯದಲ್ಲಿ ಏರ್ಪಡಿಸಿರುವ ನಿಲುಗಡೆಯ ಸ್ಥಳ; ತಂಗುದಾಣ. ೨. ಟಪಾಲು; ಅಂಚೆ.

**ಟಬರು** (ನಾ). ಅಧಿಕಾರ; ದರ್ಪ.

**ಟಮುಕಿ** = ಟುಮುಕು.

**ಟಮಾಳ** (ನಾ). ೧. ಮೋಸ; ವಂಚನೆ. ೨. ವಂಚನೆಯ ಮಾತು.

**ಟಲಾ(ಳಾ)ಯಿಸು** (ಕ್ರಿ). ೧. ಕುದುರೆಯನ್ನು ನಡಸುವಂತೆ ನಡಸು. ೨. = ಠಲಾಯಿಸು.

**ಟವಟವಿಸು** (ಕ್ರಿ). ಕಳೆತುಂಬಿರು; ಕಾಂತಿಯುಕ್ತವಾಗಿರು.

**ಟವಣೆ** (ನಾ). ೧. ಕೂಡುವ ಮತ್ತು ಕಳೆಯುವ ಲೆಕ್ಕ; ಅಟ್ಟವಣೆ. ೨. ಸುಳ್ಳು.

**ಟವಳಿ** (ನಾ). ೧. ಮೋಸ; ವಂಚನೆ. ೨. ಸುಳ್ಳು. ~ಗಾಱ(ರ) = ಮೋಸಗಾರ; ವಂಚಕ.

**ಟವಾಳ** = ಟಮಾಳ. ~ಇಸು = ಮರುಳುಗೊಳಿಸು; ಮೋಹಕ್ಕೆ ಒಳಪಡಿಸು.

**ಟವುಳಿ** (ನಾ). ೧. ಮೋಸ; ವಂಚನೆ. ೨. ಶಿರಸ್ತ್ರಾಣ; ಸೀಸಕ.

**ಟಾಂಗ** (ನಾ). ೧. ಒಂಟಿ ಕುದುರೆಯ ಗಾಡಿ. ೨. ಮೊಳಕಾಲು.

**ಟಾಕಣ** (ನಾ). ಒಂದು ಜಾತಿಯ ಗಿಡ್ಡ ಕುದುರೆ.

**ಟಾಕಿ** (ನಾ). ೧. ಒಂದು ರೀತಿಯ ಹೊಲಿಗೆ; ಟಬ್ಬಿ. ೨. ಉಳಿ; ಚಾಣ. ೩. (ಸ್ವರ ಪರೀಕ್ಷೆಗಾಗಿ) ಮದ್ದಳೆ ಅಥವಾ ತಬಲದ ಕರಣೆಯ ಮೇಲೆ ಬೆರಳಿನಿಂದ ಹಾಕುವ ಪೆಟ್ಟು. ೪. ನೀರಿನ ತೊಟ್ಟಿ; ಟಾಂಕಿ.

**ಟಾಕು** (ನಾ). ೧.ಒಂದು ಬಗೆಯ ಹೊಲಿಗೆ; ಟಬ್ಬಿ. ೨. ಕೆತ್ತನೆ ಕೆಲಸ; ಕುಸುರಿಗೆಲಸ. ೩. ಲೇಖನಿ. ೪. (ಘನವಸ್ತುಗಳ) ಭಾರದ ಒಂದು ಅಳತೆ, -ತೂಕ. ೫. ಬೆಡಗು; ಒಯ್ಯಾರ.

ಠಾಕುಠೀಕು (ಗು). ಓರಣವಾದ; ಚೊಕ್ಕಟ ವಾದ.

ಠಾಚಣಿ (ನಾ). ಗುಂಡುಸೂಜಿ.

ಠಾಣ (ನಾ). ೧. ಬೀಡು; ನೆಲೆ. ೨. ಜಿಲ್ಲೆಯ. ಮುಖ್ಯಸ್ಥಳ.

ಠಾಣೆಯ (ನಾ).೧.(ಕೋಟೆ, ಕಿಲ್ಲೆ ಮೊದಲಾದುವುಗಳ) ರಕ್ಷಣೆಗಾಗಿ ಇಟ್ಟಿರುವ ಸೈನ್ಯ; ಕಾವಲುದಂಡು. ೨. = ಠಾಣ.

ಠಾಪು (ನಾ). ೧. ದ್ವೀಪ; ನಡುಗಡ್ಡೆ; ತೆವರು. ೨. ಗಡಿಪಾರಿನ ಶಿಕ್ಷೆ; ಕರಿನೀರಿನ ಶಿಕ್ಷೆ.

ಠಾವಿಕೆ = ಠಾವಿಕೆ.

ಠಾವು (ನಾ). ಸ್ಥಳ; ಪ್ರದೇಶ; ತಾವು.

ಠಾಳಿ = ಟವಳಿ. ~ಇಸು = ವಂಚಿಸು; ಮೋಸಗೊಳಿಸು. ~ಕಾಱ(ರ) = ಮೋಸಗಾರ; ವಂಚಕ.

ಟಿಕಳಿ (ನಾ). ೧. ಬೊಟ್ಟು; ತಿಲಕ. ೨. ಸಣ್ಣ ಬಿಲ್ಲೆ.

ಟಿಕಾಣಿ (ನಾ). ಸ್ಥಳ; ಜಾಗ.

ಟಿಕಾಯಿಸು (ಕ್ರಿ). ತಾಳಿಕೆಗೆ ಬರು; ಬಾಳಿಕೆಗೆ ಬರು.

ಟಿಕಾವು (ನಾ). ತಾಳಿಕೆ; ಬಾಳಿಕೆ.

ಟಿಕ್ಕರಿ (ನಾ). ತುಚ್ಛವಾದ ವಸ್ತು; ಅಲ್ಪ ವಸ್ತು. ~ಕೆ(ಗ)ಳೆ = ತುಚ್ಛವೆಂದು ಕಾಣು; ಕಡೆಗಣಿಸು.

ಟಿಕ್ಕೆ (ನಾ). ೧. (ಮಾಣಿಕ್ಯದಂತೆ ಕಾಣುವ) ಗಾಜಿನ ಮಣಿ. ೨. ಕೊರಳಲ್ಲಿ ಧರಿಸುವ ಚಿನ್ನದ ಆಭರಣ; ಅಡ್ಡಿಕೆ.

ಟಿಟ್ಟಿಭ (ನಾ). ಒಂದು ಜಾತಿಯ ಪಕ್ಷಿ.

ಟಿಟ್ಟಿವ = ಟಿಟ್ಟಿಭ.

ಟಿಪ್ಪಣ (ನಾ). ೧. ವಿವರಣೆ; ವ್ಯಾಖ್ಯಾನ. ೨. ವಿಶೇಷಸಂದರ್ಭಗಳಲ್ಲಿ ಮುಖ್ಯ ವಿಷಯಗಳನ್ನು ಮಾತ್ರ ನೆನಪಿಗಾಗಿ ಗುರುತು ಮಾಡಿಕೊಂಡ ಬರವಣಿಗೆ. ೩. ಲಘುವ್ಯಾಖ್ಯಾನ. ~ಇಸು=೧. ಟಿಪ್ಪಣಿ ಬರೆ. ೨. ಬರೆ; ರಚಿಸು.

ಟಿಪ್ಪಣಿ = ಟಿಪ್ಪಣ.

ಟಿಬ್ಬಿ (ನಾ). ೧. ಒಂದು ರೀತಿಯ ಹೊಲಿಗೆ; ಟಾಕಿ. ೨. ಕುಸ್ತಿಯಲ್ಲಿ ಒಂದು ವರಸೆ.

ಟಿಸಲು = ಟಿಸಿಲು. ~ಒಡೆ = ಕವಲೊಡೆ; ರೆಂಬೆಗಳುಂಟಾಗು.

ಟಿಸಿಲು (ನಾ). ೧. ಕೊಂಬೆ; ಟೊಂಗೆ; ಶಾಖೆ. ೨. ವಿಭಾಗ; ಸೀಳು. ~ದಾರಿ = ಕವಲು ದಾರಿ; ಸೀಳುದಾರಿ.

ಟೀಕಾಕಾರ (ನಾ). ವ್ಯಾಖ್ಯಾನ ಬರೆಯುವವನು; ವ್ಯಾಖ್ಯಾನಕಾರ.

ಟೀಕಾಚಾರ್ಯ = ಟೀಕಾಕಾರ.

ಟೀಕು (ನಾ). ೧. ಅರ್ಥವಿವರಣೆ; ವ್ಯಾಖ್ಯಾನ. ೨. ಯೋಗ್ಯವಾದುದು; ಸರಿಯಾದುದು. ~ಬ(ವ)ರೆ = ವ್ಯಾಖ್ಯಾನವನ್ನು ಬರೆ; ವಿವರಣೆಯನ್ನು ಬರೆ.

ಟೀಕೆ (ನಾ). ೧. ಅರ್ಥವಿವರಣೆ; ವ್ಯಾಖ್ಯಾನ. ೨. ತಪ್ಪನ್ನು ಎತ್ತಿತೋರಿಸುವಿಕೆ; ಆಕ್ಷೇಪಣೆ. ೩. ಗುಣದೋಷ ವಿಮರ್ಶೆ. ೪. ಕೊರಳಲ್ಲಿ ಧರಿಸುವ ಒಂದು ಬಗೆಯ ಚಿನ್ನದ ಆಭರಣ; ಅಡ್ಡಿಕೆ. ~ಇಸು=೧. ವ್ಯಾಖ್ಯಾನ ಮಾಡು; ವಿವರಿಸು. ೨. ಗುಣದೋಷ ವಿಮರ್ಶೆ ಮಾಡು. ೩. ಆಕ್ಷೇಪಿಸು.

ಟೀವ (ನಾ). ೧. ಟಿಟ್ಟಿಭಪಕ್ಷಿ. ೨. ಗೀಜುಗಾರನ ಹಕ್ಕಿ; ಖಂಜರೀಟ.

ಟೀವಿ = ಠೀವಿ.

ಟುಂಟುಕ (ನಾ). ೧. ಕ್ರೂರಿ; ದುಷ್ಟ. (ಗು). ೨. ಅಲ್ಪ; ತುಚ್ಛವಾದ.

ಟುಮುಕಿ ೧. = ಟುಮುಕು. ೨. ನೀರಿನಲ್ಲಿ ಎರಡೂ ಕೈಗಳಿಂದ ಸದ್ದಾಗುವಂತೆ ಹೊಡೆಯುವಿಕೆ.

ಟುಮುಕ (ನಾ). ಕುಳ್ಳಾಗಿ ದಪ್ಪನಾಗಿರುವವನು.

**ಟುಮುಕು** (ನಾ). ಒಂದು ಚರ್ಮವಾದ್ಯ; ತಮಟೆ.
**ಟೆಂಟಣಿಸು** (ಕ್ರಿ). ೧. ವಿರೋಧಿಸು; ಎದುರು ಬೀಳು. ೨. ಉತ್ಸಾಹಪಡು; ಸಂಭ್ರಮಿಸು. ೩. ನಡುಗು; ಕಂಪಿಸು. ೪. ಆಧಾರವಾಗು; ಊರೆಯಾಗು. ೫. ಒಟ್ಟಿಗೆ ಸೇರು; ನಿಬಿಡವಾಗಿರು. ೬. ಉಂಟುಮಾಡು. ೭. ಶೋಭಿಸು.
**ಟೆಂಠಣಿಸು** (ಕ್ರಿ). ೧. ವಿರೋಧಿಸು; ಪ್ರತಿಭಟಿಸು. ೨. ಉತ್ಸಾಹಿಸು. ೩. ನಡುಗು; ಕಂಪಿಸು. ೪. ಗುಂಪುಸೇರು; ಒಟ್ಟಾಗು. ೫. ನಶಿಸು; ಕ್ಷಯಿಸು. ೬. ಕೊರಗು; ದುಃಖಿಸು.
**ಟೆಕ್ಕೆಯ** = ಟಕ್ಕೆಯ.
**ಟೆಪ್ಪರ** (ನಾ). (ಕುದುರೆ ಮೊದಲಾದುವುಗಳ) ನಾಗಾಲೋಟ; ಪುಟನೆಗೆತ.
**ಟೆಬ್ಬರ** (ನಾ). ಮೊಂಡತನ; ಹಟ. ~ಇಸು = ೧. ಹಟಮಾಡು; ಪಟ್ಟುಹಿಡಿ. ೨. ಹರಿತವಿಲ್ಲದಂತೆ ಮಾಡು; ಮೊಂಡುಮಾಡು. ೩. ಕುಗ್ಗಿಸು; ಶಕ್ತಿಗುಂದಿಸು. ೪. ಅಸಹ್ಯಪಡು; ಜುಗುಪ್ಸೆತಾಳು. ೫. ಉತ್ಸಾಹಗೊಳ್ಳು.
**ಟೇಕ** (ನಾ). ತಬಲ ಅಥವಾ ಮದ್ದಳೆಗೆ ಬೆರಳಿನಿಂದ ಹಾಕುವ ಪೆಟ್ಟು, – ತಾಳ.
**ಟೊಂಕ** (ನಾ). ಸೊಂಟ; ನಡು. ~ಕಟ್ಟು = ಅಣಿಯಾಗು; ಸಿದ್ಧವಾಗು. ~ಹಾಕು = ಸೊಂಟವನ್ನು ಕೈಯಲ್ಲಿ ಹಿಡಿದುಕೊಂಡು ಕುಳಿತು ಏಳು; ಬೈಸಿಗೆಹಾಕು.
**ಟೊಂಕಾಯಿಸು** (ಕ್ರಿ). ೧. ಮೆಲ್ಲನೆ ಪೆಟ್ಟು ಹಾಕು; ತಟ್ಟು. ೨. ಕುಂಟು; ಕುಪ್ಪಳಿಸು.
**ಟೊಂಗೆ** (ನಾ). ಕೊಂಬೆ; ಗೆಲ್ಲು; ಶಾಖೆ.
**ಟೊಕರೆ** (ನಾ). ಬುಟ್ಟಿ; ಮಂಕರಿ.
**ಟೊಕಳಿ** (ನಾ). ೧. ಹೊರಕವಚ; ಸಿಪ್ಪೆ. ೨. ಒಣಮಾತು; ನಿರರ್ಥಕವಾದ ನುಡಿ.
**ಟೊಕ್ಕ** (ನಾ). ಕುಂಟುವಿಕೆ; ಕುಂಟು.
**ಟೊಣಪ** (ನಾ). ೧. ದೃಢಕಾಯನಾದ ಮನುಷ್ಯ; ದಾಂಡಿಗ. ೨. ಮೂರ್ಖ; ಮಂದಮತಿ. (ಗು). ೩. ದಪ್ಪವಾದ; ಪುಷ್ಟವಾದ.
**ಟೊಣಪೆ** (ನಾ). ೧. ದೊಣ್ಣೆ; ಗುದಿಗೆ. ೨. ದೊಣ್ಣೆಯ ಪೆಟ್ಟು; ಗದಾಪ್ರಹಾರ.
**ಟೊಣೆ** (ಕ್ರಿ). ೧. ವಂಚಿಸು; ಮೋಸಗೊಳಿಸು. ೨. ಕದಿ; ಅಪಹರಿಸು. ೩. ಇರಿ; ತಿವಿ. ೪. ಸೋಲಿಸು; ಪರಾಭವಗೊಳಿಸು. ೫. ತಿರಸ್ಕರಿಸು; ಹೀಗಳೆ. ೬. ತೋಡು; ಬಗಿ.
**ಟೊಣೆಯ** (ನಾ). ೧. ದಡೂತಿ ಮನುಷ್ಯ; ದಾಂಡಿಗ. ೨. ದಡ್ಡ; ಮಂದಮತಿ.
**ಟೊಪ್ಪರ** (ನಾ). ಟೊಪ್ಪಿಗೆ; ಟೋಪಿ.
**ಟೊಪ್ಪಿಗೆ** ೧. = ಟೊಪ್ಪರ. ೨. ಶಿರಸ್ತ್ರಾಣ; ಸೀಸಕ. ೩. ಬೇಟೆಯ ಪ್ರಾಣಿಗಳಿಗೆ ತೊಡಿಸುವ ಮೊಗವಾಡ, –ಮುಖಾವರಣ. ~ಬೀಳು = ೧. ಮೋಸಹೋಗು; ವಂಚನೆಗೊಳಗಾಗು. ೨. ಮೋಸವಾಗು; ವಂಚನೆಯಾಗು. ~ಹಾರಿಸು = ೧. ಸೀಸಕವನ್ನು ಕೆಡವು, –ಬೀಳಿಸು. ೨. ಅವಮರ್ಯಾದೆ ಮಾಡು.
**ಟೊಳ್ಳು** (ನಾ). ೧. ಒಳಗೆ ತಿರುಳಿಲ್ಲದಿರುವುದು; ಪೊಳ್ಳು. (ಗು). ೨. ಹುರುಳಿಲ್ಲದ; ನಿಸ್ಸಾರವಾದ; ಪೊಳ್ಳಾದ. ~ಕ(ಗ)ಣ್ಣು=ಗುಡ್ಡೆಯಿಲ್ಲದ ಕಣ್ಣು; ಕುಳಿಗಣ್ಣು.
**ಟೋಕರು** (ನಾ). ೧. ಪೆಟ್ಟು; ಹೊಡೆತ. ೨. ಕೂಲಿ, ಸಂಬಳ ಮೊದಲಾದುವುಗಳಲ್ಲಿಯ ಖೋತ, –ಕಡಿತ.
**ಟೋಕು** (ನಾ). ಒಟ್ಟಾರೆ ಲೆಕ್ಕ; ಠೋಕು.
**ಟೋಪಿ** (ನಾ). ಟೊಪ್ಪಿಗೆ. ~ಹಾಕು=ಮೋಸಮಾಡು; ವಂಚಿಸು.
**ಟೋಳಿ** (ನಾ). ೧. ಗುಂಪು; ಸಂದಣಿ. ೨. ದಂಡು; ಸೈನ್ಯ.
**ಟೌಳಿ** = ಟವುಳಿ.

ಠ (ನಾ). ಕನ್ನಡ ವರ್ಣಮಾಲೆಯ ಮೂವತ್ತೆರಡನೆಯ ಅಕ್ಷರ.

ಠಕಾರ (ನಾ). ಮೋಸ ; ವಂಚನೆ.

ಠಕಾರಿ (ನಾ). ೧. ಮೋಸವುಳ್ಳುದು. (ಗು). ೨. ವಂಚನೆಯ ; ಮೋಸದ.

ಠಕ್ಕ = ಟಕ್ಕ.

ಠಕ್ಕು (ನಾ). ೧. ಮೋಸ; ವಂಚನೆ. ೨. ಇಂದ್ರಜಾಲ ; ಮಾಟ. ೩. ಮರುಳುಗೊಳಿಸುವ ಮದ್ದು ; ಇಕ್ಕುಮದ್ದು. ~ಇಕ್ಕು = ೧. ಮದ್ದನ್ನು ಹಾಕು ; ಇಕ್ಕುಮದ್ದನ್ನಿಡು. ೨. ಮರುಳುಗೊಳಿಸು ; ಮೋಹಗೊಳಿಸು. ~ಕೊ(ಗೊ)ಳ್ = ೧. ಬೆರಗುಗೊಳ್ಳು ; ವಿಸ್ಮಿತವಾಗು. ೨. ವಂಚನೆಗೆ ಒಳಗಾಗು ; ಮೋಸಹೋಗು.

ಠಕ್ಕೆಯ = ಟಕ್ಕೆಯ.

ಠರಾಯಿಸು (ಕ್ರಿ). ನಿಶ್ಚಯಿಸು; ತೀರ್ಮಾನಿಸು.

ಠರಾವು (ನಾ). ತೀರ್ಮಾನ ; ಗೊತ್ತುವಳಿ ; ನಿರ್ಧಾರ.

ಠಲಾ(ಳಾ)ಯಿಸು (ಕ್ರಿ). ಅತ್ತಿಂದಿತ್ತ ತಿರುಗಾಡು ; ಅಡ್ಡಾಡು.

ಠವಾಳ = ಟವಾಳ.

ಠಸ್ಸೆ (ನಾ). ಒತ್ತುವ ಮುದ್ರೆ.

ಠಾಕುಠೀಕು (ನಾ). ಆಡಂಬರ ; ಡೌಲು.

ಠಾಕೂರ (ನಾ). ೧. ಗೌರವಾರ್ಹನಾದ ವ್ಯಕ್ತಿ. ೨. ಒಂದು ವಂಶದ ಬಿರುದು.

ಠಾಣ (ನಾ). ೧. ಬೀಡು; ನೆಲೆ. ೨. ಕಾವಲು ಸೈನ್ಯ, -ಪಡೆ. ೩. ಕೊತ್ವಾಲನ ಚಾವಡಿ ; ಠಾಣ್ಯ. ~ಇ(ವಿ)ಕ್ಕು = ಸೈನ್ಯವನ್ನು ಕಾವಲಿಡು.

ಠಾಣೆಯ = ಠಾಣ. ~ತೆ(ದೆ)ಗೆ = ದಂಡನ್ನು ಯುದ್ಧಕ್ಕೆ ಹೊರಡಿಸು.

ಠಾಣ್ಯ = ಠಾಣ.

ಠಾಯಿ (ನಾ). ೧. ರಾಗಾಲಾಪನೆಯಲ್ಲಿ ಒಂದು ಪ್ರಕಾರ. ೨. ವಾದನದಲ್ಲಿರುವ ಒಂದು ವಿಶಿಷ್ಟ ರೀತಿ.

ಠಾವಿಕೆ (ನಾ). ತಿಳಿವಳಿಕೆ ; ಪರಿಚಯ.

ಠಾವು ೧. = ಠಾಯ. ೨. ಆಶ್ರಯಸ್ಥಾನ. ~ಕೊ(ಗೊ)ಳ್ = ನೆಲಸು ; ಆಶ್ರಯವನ್ನು ಪಡೆ.

ಠಿಕಾಣಿ = ಟಿಕಾಣಿ.

ಠೀವಿ (ನಾ). ಗಾಂಭೀರ್ಯ ; ಗತ್ತು.

ಠುಮರಿ (ನಾ). ಒಂದು ಬಗೆಯ ಪ್ರೇಮಗೀತೆ.

ಠೆಕ್ಕಿಸು (ಕ್ರಿ). ಒಡ್ಡು ; ಅಡ್ಡವಾಗಿ ಹಿಡಿ.

ಠೆಕ್ಕೆಯ = ಟಕ್ಕೆಯ.

ಠೇಂಕರಿಸು (ಕ್ರಿ). ೧. ಬಿಲ್ಲಿನ ಹೆದೆಯಿಂದ ಶಬ್ದ ಮಾಡು. ೨. ಠೀವಿಯಿಂದ ಮೆರೆ.

ಠೇಂಕಾರ (ನಾ). ೧. ಬಿಲ್ಲಿನ ಹೆದೆಯ ಧ್ವನಿ; ಧನುಷ್ಟಂಕಾರ. ೨. ಒಣಜಂಬ.

ಠೇವಣಾತಿ (ನಾ). ಇಟ್ಟಹಣ ; ಇಡುಗಂಟು.

ಠೇವಣಿ ೧. =ಠೇವಣಾತಿ. ೨. ಪಂತಕ್ಕೋಸ್ಕರ ಕಟ್ಟುವ ಹಣ ; ಬಾಜಿ ಕಟ್ಟುವ ಮೊತ್ತ. ೩. ಈಡು ; ಒತ್ತೆ ; ಅಡವು.

ಠೌಳಿ = ಟವುಳಿ. ~ಇಗ = ೧. ಮೋಸಗಾರ ; ವಂಚಕ. ೨. ಐಂದ್ರಜಾಲಿಕ; ಮಾಯಾವಿ.

ಡ (ನಾ). ಕನ್ನಡ ವರ್ಣಮಾಲೆಯ ಮೂವತ್ತು ಮೂರನೆಯ ವರ್ಣ.

ಡಂಕ = ಡಕ್ಕೆ.

ಡಂಕಣ (ನಾ). ಒಂದು ಬಗೆಯ ಚರ್ಮವಾದ್ಯ.

ಡಂಕು (ನಾ). ಸೇಡು ; ಹಗೆ. ~ಹಿಡಿ = ಸೇಡನ್ನು ಹೊಂದಿರು.

ಡಂಕೆ (ನಾ). ಗುದಿಗೆ ; ದೊಣ್ಣೆ.

ಡಂಕೆಯ (ನಾ). ಒಂಟೆಯ ಬೆನ್ನಿನ ಮೇಲೆ ಕುಳಿತುಕೊಳ್ಳಲು ಚರ್ಮದಿಂದ ಮಾಡಿದ ಆಸನ.

ಡಂಗ (ನಾ). ೧. ಬಡಿಕೋಲು ; ಗುದಿಗೆ. ೨. ರಾಜ್ಯದ ಸೀಮಾಪ್ರದೇಶಗಳ ಪರ್ವತ ಮಾರ್ಗಗಳಲ್ಲಿರುವ ಸುಂಕದ ಕಟ್ಟೆ. ೩. ಕೋಟೆ; ದುರ್ಗ. ~ಆಯ್ತ=೧. ದುರ್ಗ ರಕ್ಷಕ ; ಕೊತವಾಲ. ೨. ನಗರ ರಕ್ಷಕ ; ತಳವಾರ. ೩. ಸುಂಕದ ಕಟ್ಟೆಯಲ್ಲಿ ನಿಯುಕ್ತನಾದವನು ; ಡಂಗದ ಅಧಿಕಾರಿ. ~ಹಾಕು = ೧. ಪರ್ವತ ಮಾರ್ಗದಲ್ಲಿ ಸುಂಕದ ಕಟ್ಟೆಯನ್ನು ಸ್ಥಾಪಿಸು. ೨. ಕಾದು ಕುಳಿತಿರು.

ಡಂಗು (ನಾ). ವಿಸ್ಮಯ; ಆಶ್ಚರ್ಯ; ದಂಗು.

ಡಂಗುರ (ನಾ). ೧. ತಮಟೆ, ಡೋಲು ಮುಂತಾದುವನ್ನು ಹೊಡೆದು ಕೊಂಡು ವಿಷಯವನ್ನು ಬಹಿರಂಗಪಡಿಸುವುದು. ೨. ಡಂಗುರ ಸಾರಲು ಹೊಡೆಯುವ ತಮಟೆ ಅಥವಾ ಡೋಲು. ~ಇಸು= ಡಂಗುರಂ ಬೊಯ್. ~(ಂ) ಪೊ (ಬೊ) ಯ್ = ಡಂಗುರವನ್ನು ಹೊಡೆ; ವಿಷಯವನ್ನು ಪ್ರಸಿದ್ಧಪಡಿಸು. ~ಹೊಡೆ= ಡಂಗುರಂ ಬೊಯ್.

ಡಂಗೂರ = ಡಂಗುರ.

ಡಂಗೆ = ಡಂಕೆ.

ಡಂಬ (ನಾ). ೧. ಮೋಸ; ವಂಚನೆ. ೨. ತೋರಿಕೆಯ ಆಚಾರ ವಿಚಾರ; ಸೋಗಿನ ನಡೆನುಡಿ. ೩. ತೋರಿಕೆಯ ವೇಷದವನು ; ಬೂಟಾಟಿಕೆಯವನು. ~ಆಚಾರ = ತೋರಿಕೆಯ ನಡತೆ ; ಆಡಂಬರ. ~ಇಗ=ವೇಷಧಾರಿ ; ಡಾಂಬಿಕ. ~ಇಸು = ಮೋಸಗೊಳಿಸು ; ವಂಚಿಸು.

ಡಂಬಕ (ನಾ). ೧. ಮೋಸ ; ವಂಚನೆ. ೨. ಒಣಹೆಮ್ಮೆ ; ಆಡಂಬರ. ೩. ಮೋಸಗಾರ ; ವಂಚಕ.

ಡಂಬರ (ನಾ). ೧. ಗುಂಪು ; ಸಮೂಹ. ೨. ಆಟೋಪ ; ಅಟ್ಟಹಾಸ. ೩. ಚೆಲುವು ; ಸೌಂದರ್ಯ. ೪. ತೋರಿಕೆಯ ನಡೆನುಡಿ.

ಡಂಭ = ಡಂಬ. ~ತನ = ೧. ಮೋಸ ; ವಂಚನೆ. ೨. ಸೋಗಿನ ನಡೆನುಡಿ ; ಬೂಟಾಟಿಕೆ. ೩. ಗರ್ವ ; ಅಹಂಕಾರ.

ಡಂಭಕ ೧. = ಡಂಬಕ. (ಗು). ೨. ಸುಳ್ಳಿನ; ಬೂಟಾಟಿಕೆಯ.

ಡಕಾಯಿತ (ನಾ). ದರೋಡೆಗಾರ ; ಕೊಳ್ಳೆ ಹೊಡೆಯುವವನು.

ಡಕಾಯಿತಿ (ನಾ). ದರೋಡೆ ; ಕೊಳ್ಳೆ.

ಡಕ್ಕೆ (ನಾ). ಒಂದು ಬಗೆಯ ಚರ್ಮವಾದ್ಯ; ಇತ್ತಲೆ ತಮಟೆ.

ಡಗಲೆ (ನಾ). ಉದ್ದವಾದ ಅಂಗಿ ; ನಿಲುವಂಗಿ.

ಡಗೆ ೧. = ದಗೆ. ೨. ಭಯ ; ಅಂಜಿಕೆ. ~ಪೊ(ವೊ)ಯ್ = ೧. ಸೆಕೆ ಹೆಚ್ಚಾಗು ; ಉಷ್ಣದಿಂದ ತಳಮಳಿಸು. ೨. ಭಯದಿಂದ ತತ್ತರಿಸು.

ಡಪ್ಪು (ನಾ). ಒಂದು ಬಗೆಯ ಚರ್ಮವಾದ್ಯ.

ಡಬಡ್ಡಾಳಿಕೆ (ನಾ). ಬೂಟಾಟಿಕೆ ; ಇಲ್ಲದುದನ್ನು ತೋರಿಸಿಕೊಳ್ಳುವುದು.

ಡಬರಿ (ನಾ). ಅಗಲವಾದ ಬಾಯುಳ್ಳ ಪಾತ್ರೆ.

ಡಬೀರ (ನಾ). ರಾಜನ ಖಾಸಗಿ ಗುಮಾಸ್ತ, -ಆಪ್ತಕಾರ್ಯದರ್ಶಿ.
ಡಬ್ಬ (ನಾ). ವಸ್ತುಗಳನ್ನಿಡುವ ತಗಡಿನ ಪೆಟ್ಟಿಗೆ.
ಡಬ್ಬಿ ೧. = ಡಬ್ಬ. ೨. ರೈಲುಬಂಡಿಯಲ್ಲಿಯ ಬೋಗಿ.
ಡಬ್ಬು (ನಾ). ೧. ತಲೆಕೆಳಗು ; ಬೋರಲು. ೨. ಒಣ ಹೆಮ್ಮೆ ; ಪೊಳ್ಳುಆಡಂಬರ. ~ಹಾಕು = ೧. ಬೋರಲು ಹಾಕು. ೨. ಅಪಾಯಕ್ಕೆ ಗುರಿಮಾಡು ; ವಿಪತ್ತಿಗೆ ಈಡುಮಾಡು.
ಡಬ್ಬುಗಳ್ಳಿ (ನಾ). ಒಂದು ಜಾತಿಯ ಕಳ್ಳಿ ; ಪಾಪಾಸುಕಳ್ಳಿ.
ಡಮಣಿ (ನಾ). ಒಂದು ಬಗೆಯ ಎತ್ತಿನ ಗಾಡಿ ; ಪೆಟ್ಟಿಗೆ ಗಾಡಿ.
ಡಮರ (ನಾ). ೧. ಗದ್ದಲ; ಹಾವಳಿ. ೨. ವಿಪತ್ತು ; ಉಪದ್ರವ.
ಡಮರು (ನಾ). ಒಂದು ಬಗೆಯ ಚರ್ಮ ವಾದ್ಯ.
ಡಮರುಕ = ಡಮರು.
ಡಮರುಗ = ಡಮರು.
ಡಮಾನ (ನಾ). ಅವಳಿತಮಟೆ; ಜೋಡು ನಗಾರಿ.
ಡಮಾಮಿ (ನಾ). ಒಂದು ಬಗೆಯ ರಣವಾದ್ಯ.
ಡಯನ (ನಾ). ೧. ಆಕಾಶದಲ್ಲಿ ಹಾರುವುದು. ೨. ಹಕ್ಕಿಗಳ ಹಾರಾಟ. ೩. ಪಲ್ಲಕ್ಕಿ ; ಮೇನೆ.
ಡವಕೆ (ನಾ). ಕಾಳಾಂಜಿ ; ಪೀಕದಾನಿ.
ಡವಣೆ (ನಾ). ಒಂದು ಬಗೆಯ ಚರ್ಮವಾದ್ಯ.
ಡವರ (ನಾ). ೧. ಆವರಿಸುವಿಕೆ ; ಆಕ್ರಮಿಸುವಿಕೆ. ೨. ಹಿಂಸೆ; ಬಾಧೆ. ~ಇಸು = ೧. ಆವರಿಸು ; ಆಕ್ರಮಿಸು. ೨. ಹಿಂಸಿಸು ; ಬಾಧಿಸು.
ಡವರುಗ = ಡಮರು.
ಡವಳ (ನಾ). ಮಂಗಳದ ಹಾಡು ; ಸೋಬಾನೆ.
ಡವಾಲಿ (ನಾ). ಪೇದೆ ಅಥವಾ ಸೇವಕನು ಎದೆಯ ಮೇಲೆ ಅಡ್ಡಲಾಗಿ ಧರಿಸುವ ಬಿಲ್ಲೆಯುಳ್ಳ ಪಟ್ಟಿ.
ಡವಿಗೆ (ನಾ). ೧. ಟೊಳ್ಳಾದ ದಪ್ಪ ಬಿದಿರು. ೨. ತಲೆಯ ಚಿಪ್ಪು ; ತಲೆಬುರುಡೆ.
ಡವುಡೆ (ನಾ). ಒಂದು ಬಗೆಯ ಚರ್ಮವಾದ್ಯ ; ಡಿಂಡಿಮ.
ಡಾಂಬರ (ನಾ). ಕಪ್ಪುಬಣ್ಣದ ಅಂಟುದ್ರವ ; ತಾರೆಣ್ಣೆ ; ಕೀಲೆಣ್ಣೆ.
ಡಾಂಬರು = ಡಾಂಬರ.
ಡಾಂಬಿಕ (ನಾ). ೧. ಆಡಂಬರ ; ಸೋಗು. ೨. ತೋರಿಕೆಯ ನಡೆನುಡಿಯವನು ; ಜಂಬಗಾರ.
ಡಾಕಿಣಿ = ಡಾಕಿನಿ.
ಡಾಕಿನಿ (ನಾ). ೧. ಹೆಣ್ಣುಪಿಶಾಚಿ. ೨. ರಾಕ್ಷಸಿಯ ಕತ್ತಿ.
ಡಾಕು (ನಾ). ೧. ಮುತ್ತಿಗೆ ; ಆಕ್ರಮಣ. ೨. ಪ್ರಭೆ ; ತೇಜಸ್ಸು. ೩. ಬಲ ; ಪರಾಕ್ರಮ. ೪. ವೇಗ ; ತ್ವರೆ. ೫. ದೇವಿ ಹಾಕುವಿಕೆ ; ಮೈಲಿ ಚುಚ್ಚುವಿಕೆ.
ಡಾಗು (ನಾ). ೧. ಕಾಯ್ದ ಕಬ್ಬಿಣದ ಗುಳದಿಂದ ಹಾಕಿದ ಗುರುತು ; ಮುದ್ರೆ. ೨. ಮೈಲಿ ರೋಗ ; ಸಿಡುಬು. ೩. ಭಾಂಗಿ ; ಗಂಟು ; ಮೂಟೆ. ೪. ಪಾಲು ; ಭಾಗ ; ಹಿಸ್ಸೆ. ೫. ಕಲೆ ; ಕಳಂಕ.
ಡಾಣೆ = ದಾಣೆ.
ಡಾಣೆ (ನಾ). ದೊಣ್ಣೆ ; ಬಡಿಗೆ. ~ಇಗ = ದಪ್ಪನೆಯ ಮನುಷ್ಯ ; ದಾಂಡಿಗ.
ಡಾಬು (ನಾ). ೧. ನಡುಪಟ್ಟಿ ; ಒಡ್ಯಾಣ. ೨. ಬೆದರಿಕೆ.
ಡಾಮರ (ನಾ). ೧. ಹಿಂಸೆ ; ಕೋಟಲೆ ; ಪೀಡೆ. ೨. ಆಕ್ರಮಣ ; ಮುತ್ತಿಗೆ. ೩. ರೋಗ ; ವ್ಯಾಧಿ. ೪. ಬರಗಾಲ ; ಕ್ಷಾಮ. ೫. ಗಲಭೆ ;

ಗೊಂದಲ. (ಗು). ೬. ಭಯಂಕರವಾದ ; ಕರಾಳವಾದ.

ಡಾಲು (ನಾ). ಗುರಾಣಿ ; ಹರಿಗೆ.

ಡಾವಣಿ (ನಾ). (ದನಕರುಗಳನ್ನು ಸಾಲಾಗಿ ಕಟ್ಟುವ) ಹಗ್ಗ ; ದಾವಣಿ.

ಡಾವರ (ನಾ). ೧. ಬರಗಾಲ. ೨. ಹಿಂಸೆ ; ಕೋಟಲೆ. ೩. ತೀವ್ರತೆ ; ಅತಿಶಯ. ೪. ದಗೆ ; ತಾಪ. ೫. ಪ್ರತಾಪ ; ಶೌರ್ಯ. ೬. ತವಕ ; ಉತ್ಸಾಹ. ೭. ಕೊಳ್ಳೆ ; ಲೂಟಿ. ೮. ಭಯಂಕರವಾದುದು. ೯. ಹಬ್ಬುವಿಕೆ; ಆವರಿಸುವಿಕೆ. ~ಇಸು = ೧. ಚಿಮ್ಮು ; ನೆಗೆ. ೨. ಹೆದರು ; ಅಂಜು. ೩. ತುಂಬು ; ಆವರಿಸು. ೪. ಚುಚ್ಚು ; ತಿವಿ. ೫. ಪ್ರಜ್ವಲಿಸು ; ಉರಿ. ೬. ಬಯಸು ; ಹಂಬಲಿಸು.

ಡಾವು (ನಾ). ಮತ್ಸರ ; ದ್ವೇಷ ; ಹಗೆ.

ಡಾಹ (ನಾ). ೧. ಸುಡುವಿಕೆ ; ದಹನ. ೨. ದಗೆ ; ಸೆಕೆ. ೩. ನೀರಡಿಕೆ ; ಬಾಯಾರಿಕೆ.

ಡಾಳ (ನಾ). ೧. ಹೊಳಪು ; ಕಾಂತಿ. ೨. ಲಾವಣ್ಯ ; ಅಂದ. ೩. ರೀತಿ ; ಕ್ರಮ. ೪. ತೋರಿಕೆ ; ಥಳುಕು. ೫. ಮೋಸಗಾರ ; ವಂಚಕ. ೬. ಬೀಸುವಿಕೆ. ~ಇ(ಯಿ)ಸು = ೧. ಮಿಂಚು ; ಮಿನುಗು. ೨. ಚಾಮರ, ಬೀಸಣಿಗೆ ಮುಂತಾದುವನ್ನು ಬೀಸು. ೩. ಪಗಡೆಯ ದಾಳವನ್ನು ಉರುಳಿಸು. ೪. ಹರಡು; ಪ್ರಸರಿಸು. ~ಕ = ೧ ಮೋಸ ; ವಂಚನೆ. ೨. ಥಳುಕಿನವನು ; ಬೂಟಾಟಿಕೆಯವನು.

ಡಾಳೆ (ನಾ). ಗಯ್ಯಾಳಿ ; ದಿಟ್ಟೆ.

ಡಾಳೈಸು (ಕ್ರಿ). ೧. (ಚಾಮರ ಮುಂತಾದುವನ್ನು) ಬೀಸು. ೨. ಅತ್ತಿತ್ತ ಅಲೆದಾಡು ; ಹೊಯ್ದಾಡು. ೩. ಹೊಳೆ ; ಪ್ರಕಾಶಿಸು.

ಡಿಂಗರ (ನಾ). ೧. ಆಳು ; ಸೇವಕ. ೨. ನೀಚ ; ದುಷ್ಟ.

ಡಿಂಗು (ನಾ). ಆಡಂಬರ; ಅಬ್ಬರ.

ಡಿಂಡಿಮ (ನಾ). ಒಂದು ಬಗೆಯ ಚರ್ಮವಾದ್ಯ.

ಡಿಂಡೀರ (ನಾ). ೧. ನೊರೆ ; ಬುರುಗು ; ಫೇನ. ೨. ಸಮುದ್ರದ ಗಟ್ಟಿಯಾದ ನೊರೆ ; ಕಡಲುನಾಲಗೆ.

ಡಿಂಬ (ನಾ). ೧. ಮೈ ; ಶರೀರ. ೨. ದಂಗೆ ; ಕೋಲಾಹಲ. ೩. ಈತಿಬಾಧೆ ; ತೊಂದರೆ. ೪. ತತ್ತಿ ; ಮೊಟ್ಟೆ. (ಗು). ೫. ಸಣ್ಣದಾದ; ಅಲ್ಪವಾದ.

ಡಿಂಬು (ನಾ). ೧. ದೇಹ ; ಶರೀರ. ೨. ದಿಬ್ಬ; ದಿಣ್ಣೆ. ೩. ಆಧಾರ ; ಆಸರೆ.

ಡಿಂಭ (ನಾ). ೧. ಆಗತಾನೆ ಜನಿಸಿದ ಮಗು ಅಥವಾ ಪ್ರಾಣಿಯ ಮರಿ. ೨. ದಡ್ಡ ; ತಿಳಿಗೇಡಿ. ೩. ದೇಹ ; ಶರೀರ.

ಡಿಕಾವು (ನಾ). ಬಾಹ್ಯ ಸೌಂದರ್ಯ ; ಹೊರಗಿನ ಅಂದ.

ಡಿಕ್ಕಿ (ನಾ). ೧. ತಲೆಯಿಂದ ತಲೆಯನ್ನು ತಾಟಿಸುವಿಕೆ. ೨. ಅಪ್ಪಳಿಸುವಿಕೆ ; ಘಟ್ಟಿಸುವಿಕೆ.

ಡಿಳ್ಳ (ನಾ). ೧. ದುರ್ಬಲತೆ; ಶಕ್ತಿಹೀನತೆ. ೨. ಅಧೈರ್ಯ ; ಭಯ. ೩. ದುಃಖ ; ತಳಮಳ. ~ಇಸು = ೧. ನಡುಗು ; ಕಂಪಿಸು. ೨. ಗಾಬರಿಗೊಳಿಸು ; ಎದೆಗುಂದಿಸು. ೩. ಕುಗ್ಗಿಸು; ದುರ್ಬಲಗೊಳಿಸು.

ಡಿಳ್ಳಾಯ (ನಾ). ೧. ನಡುಕ ; ಕಂಪನ. ೨. ಮೋಸ ; ಠಕ್ಕು.

ಡೀ (ನಾ). ಡಿಕ್ಕಿ ; ಪೆಟ್ಟು ; ಹೊಡೆತ. ~ಕೊಡು = ಡಿಕ್ಕಿಹೊಡೆ.

ಡೀನ (ನಾ). ೧. ಹಾರುವಿಕೆ ; ಹಾರಾಟ. (ಗು). ೨. ಆಕಾಶದಲ್ಲಿ ಹಾರಾಡುವ, –ಸಂಚರಿಸುವ.

ಡೀಲ (ನಾ). ೧. ಅಳ್ಳಕ ; ಸಡಿಲು. ೨. ನಿಧಾನ; ಸಾವಕಾಶ. (ಗು). ೩. ಸಡಿಲವಾದ ; ಬಿಗಿಯಿಲ್ಲದ.

ಡುಂಡುಚಿ (ನಾ). ಒಂದು ಬಗೆಯ ಚರ್ಮ ವಾದ್ಯ.
ಡುಂಡುಭ (ನಾ). ೧. ಎರಡು ತಲೆಗಳುಳ್ಳ ಹಾವು; ಇರ್ತಲೆಗುಯ್ಯ. ೨. ನೀರು ಹಾವು; ಒಳ್ಳೆ.
ಡುಬರಿ = ಡುಬ್ಬ.
ಡುಬ್ಬ (ನಾ). ೧. ಒಂಟೆ, ಗೂಳಿ ಮೊದಲಾದ ಪ್ರಾಣಿಗಳ ಬೆನ್ನ ಮೇಲಿನ ಹಿಣಿಲು. ೨. ಬೆನ್ನು.
ಡುಬು(ರು)ಕು (ನಾ). ಎತ್ತು, ಗೂಳಿ ಮುಂತಾದ ಪ್ರಾಣಿಗಳ ಗುಟುರು. ~ಇಡು = ಗುಟುರು ಹಾಕು.
ಡುಲಿ(ಳಿ) (ನಾ). ಹೆಣ್ಣು ಆಮೆ.
ಡೂಗ (ನಾ). ೧. ಗೂನು ಬೆನ್ನಿನವನು. (ಗು). ೨. ಬೆನ್ನು ಬಗ್ಗಿದ; ಗೂನು ಬೆನ್ನಿನ.
ಡೂಗು (ಕ್ರಿ). ೧. ಬಾಗು; ವಕ್ರವಾಗು. (ನಾ), ೨. ಬೆನ್ನು ಬಾಗಿರುವಿಕೆ; ಗೂನು.
ಡೆಂಕಣ = ಡೆಂಕಣಿ.
ಡೆಂಕಣಿ (ನಾ). ೧. ಕೋಟೆ ಕಾಳಗದಲ್ಲಿ ಬಳಸುತ್ತಿದ್ದ ಒಂದು ಯಂತ್ರ. ೨. ಒಂದು ಬಗೆಯ ಆಯುಧ. ೩. ಕೋಟೆಯ ಮೇಲಿನ ಬುರುಜು.
ಡೆಂಡಣಿಸು (ಕ್ರಿ). ೧. ಉತ್ಸಾಹ ಪಡು; ಹಿಗ್ಗು. ೨. ನಡುಗು; ಕಂಪಿಸು. ೩. ನಶಿಸು; ಕ್ಷಯಿಸು. ೪. ದುಃಖಿಸು; ಕೊರಗು.
ಡೆಗ್ಗೆ (ನಾ). ಕೋಟೆಯ ಬುರುಜುಗಳನ್ನು ಉರುಳಿಸಲು ಶತ್ರುಗಳು ಬಳಸುತ್ತಿದ್ದ ಮರದ ದಿಮ್ಮಿ.
ಡೇಗು (ಕ್ರಿ). ೧. ಉದಾನವಾಯು ಬಿಡು; ತೇಗು. (ನಾ). ೨. ತೇಗುವಿಕೆ.
ಡೇಗೆ (ನಾ). ಒಂದು ಜಾತಿಯ ಪಕ್ಷಿ; ಗಿಡುಗ. ~ಕಣ್ಣು = ೧. ಗಿಡುಗನ ಕಣ್ಣು. ೨. ತೀಕ್ಷ್ಣದೃಷ್ಟಿ; ಸೂಕ್ಷ್ಮದೃಷ್ಟಿ.
ಡೇರಾ ೧. = ಡೇರೆ. ೨. ಒಂದು ಬಗೆಯ ಹೂವು.
ಡೇರೆ (ನಾ). ಬಟ್ಟೆಯಿಂದ ಮಾಡಿದ ಮನೆ; ಗುಡಾರ.
ಡೊಂಕ (ನಾ). ಡೊಂಕು ಸ್ವಭಾವದವನು; ಕುಟಿಲ.
ಡೊಂಕಣಿ (ನಾ). ಒಂದು ಬಗೆಯ ಆಯುಧ; ಸಬಳ.
ಡೊಂಕು (ಕ್ರಿ). ೧. ಓರೆಯಾಗು; ಬಾಗು. ೨. ಕೊಂಕಿಸು; ಬಾಗಿಸು. (ನಾ). ೩. ಓರೆ; ವಕ್ರತೆ. ೪. ಓರೆಯಾದುದು.
ಡೊಂಗರ (ನಾ). ೧ ಬಿಲ; ಪೊಟರೆ. ೨. ಕಡಿದ್ದಾದ ಬಂಡೆ; ಪ್ರಪಾತ. ೩. = ಡೊಂಗುರ.
ಡೋಂಗುರ (ನಾ). ಹಳ್ಳ; ಕುಳಿ.
ಡೊಂಬ (ನಾ). ಗಣೆಯ ಮೇಲೆ ಆಡುವವನು; ಕೊಲ್ಲಟಿಗ. ~ಇತಿ = ಡೊಂಬರ ಹೆಂಗಸು; ಕೊಲ್ಲಟಿಗಿತ್ತಿ.
ಡೊಂಬಕಾಗೆ (ನಾ). ಕಾಗೆಯಲ್ಲಿ ಒಂದು ಜಾತಿ.
ಡೊಂಬಿ (ನಾ). ೧. ಗುಂಪು; ಸಮೂಹ; ದೊಂಬಿ. ೨. ಗುಲ್ಲು; ಕೋಲಾಹಲ; ಬೊಬ್ಬೆ.
ಡೊಂಬು ೧. = ಡಂಬ. ೨. (ಕೆರೆ, ನದಿ ಮುಂತಾದುವುಗಳಲ್ಲಿರುವ) ಆಳವಾದ ಕುಳಿ.
ಡೊಕ್ಕರ (ನಾ). ೧. ಗುದ್ದು; ಹೊಡೆತ. ೨. ಮಲ್ಲಯುದ್ಧದಲ್ಲಿ ಒಂದು ವರಸೆ.
ಡೊಕ್ಕರಿ (ನಾ). ಜೀರ್ಕೊಳವೆ; ಪಿಚಕಾರಿ.
ಡೊಕ್ಕೆ (ನಾ). ೧. ಶರೀರ; ಮೈ. ೨. ಹೊಟ್ಟೆ; ಜಠರ. ೩. ಅಂತರಂಗ; ಮನಸ್ಸು.
ಡೊಗಬು(ರು) (ನಾ). ಬಿಲ; ಪೊಟರೆ.
ಡೊಗೆ (ಕ್ರಿ). ೧. ಹಳ್ಳವನ್ನು ತೋಡು; ಕುಳಿಮಾಡು. (ನಾ). ೨. ತಲೆಯ ಬುರುಡೆ; ಓಡು.
ಡೊಗ್ಗು (ಕ್ರಿ). ೧. ಕುಗ್ಗು; ಜಗ್ಗು. ೨. ಬಾಗು; ನಮಸ್ಕರಿಸು.

**ಡೊಣೆ** (ನಾ). ೧. ದಿನ್ನೆ ಅಥವಾ ಗುಡ್ಡದ ಮೇಲಿನ ಸ್ವಾಭಾವಿಕವಾದ ನೀರಿನ ತಗ್ಗು; ದೊಣೆ. ೨. ಬಿಲ; ರಂಧ್ರ; ಪೊಟರೆ. ೩. ಬತ್ತಳಿಕೆ; ತೂಣೀರ. ೪. ದೋಣಿಯಾಕಾರದ ಕಲ್ಲಿನ ತೊಟ್ಟಿ. ~ಉ(ಯು)ಪ್ಪು = ಒಂದು ಬಗೆಯ ಉಪ್ಪು. ~ಕ(ಗ)ಣ್ಣು = ಕುಳಿಬಿದ್ದ ಕಣ್ಣು; ಗುಳಿಗಣ್ಣು. ~ಪೋ(ವೋ)ಗು = ಡೊಗರು ಬೀಳು; ತೂತಾಗು.

**ಡೊಣ್ಣೆ** (ನಾ). ದಪ್ಪವಾದ ಕೋಲು; ಲಗುಡ. ~ಕೇತ = ಓತಿಕೇತ; ಸರಟ.

**ಡೊಳ್ಳಾಸ** (ನಾ). ೧. ಮೋಸ; ವಂಚನೆ. ೨. ವಿಸ್ತಾರ; ಹರಹು. ೩. ವಿಚಿತ್ರವಾದ ರೂಪು.

**ಡೊಳ್ಳು** (ನಾ). ೧. ಟೊಳ್ಳು; ಪೊಳ್ಳು. ೨. ಬೊಜ್ಜು; ಬೊಜ್ಜು ಬೆಳೆದ ಹೊಟ್ಟೆ. ೩. ಒಂದು ಬಗೆಯ ಚರ್ಮವಾದ್ಯ. ~ಹೊಟ್ಟೆ = ಬೊಜ್ಜು ಹೊಟ್ಟೆ.

**ಡೋಂಗಿ** (ನಾ). ೧. ಮೋಸ; ವಂಚನೆ. ೨. ಸೋಗು; ನಟನೆ.

**ಡೋಕಾ** (ನಾ). ೧. ಶಂಕೆ; ಕಾಳಜಿ. ೨. ಅಪಾಯ; ತೊಂದರೆ; ಕೇಡು. ೩. ವ್ಯಾಪಾರದಲ್ಲಿಯ ನಷ್ಟ.

**ಡೋಕಾರಿ** (ನಾ). ನೋವಾಗದಿದ್ದರೂ ಅಳುವ ವ್ಯಕ್ತಿ.

**ಡೋಣಿ** = ದೋಣಿ. ~ಬೀ(ವೀ)ೞ್(ಳ್) = ಡೊಗರು ಬೀಳು; ಹಳ್ಳ ಉಂಟಾಗು.

**ಡೋಬಿ** (ನಾ). ಅಗಸ; ಮಡಿವಾಳ; ದೋಬಿ.

**ಡೋರ** (ನಾ). ಚರ್ಮಕ್ಕೆ ಬಣ್ಣ ಹಾಕುವವನು.

**ಡೋಱು(ರು)** = ಡೊಗಱು. ~ಕ(ಗ)ಳೆ = ೧. ತೂತುಮಾಡು; ಕುಳಿ ತೋಡು. ೨. ಗಾಯಗೊಳ್ಳು.

**ಡೋಲಿ** (ನಾ). ಪಲ್ಲಕ್ಕಿ; ಮೇನೆ.

**ಡೋಲು(ಳು)** (ನಾ). ಒಂದು ಬಗೆಯ ಚರ್ಮವಾದ್ಯ.

**ಡೋಹ** = ಡೋಹರ.

**ಡೋಹರ** (ನಾ). ಚಂಡಾಲ; ಹೊಲೆಯ.

**ಡೌಡೆ** = ಡವುಡೆ.

**ಡೌಲು** (ನಾ). ೧. ಆಡಂಬರ; ವೈಭವ. ೨. ಬಣಹೆಮ್ಮೆ; ಬಡಾಯಿ.



# ಢ

**ಢ** (ನಾ). ಕನ್ನಡ ವರ್ಣಮಾಲೆಯ ಮೂವತ್ತು ನಾಲ್ಕನೆಯ ವರ್ಣ.

**ಢಕ್ಕುಳಿ** (ನಾ). ೧. ಮೈಗಳ್ಳತನ; ಸೋಮಾರಿತನ. ೨. ವಂಚನೆ; ಕಪಟ.

**ಢಕ್ಕೆ** ೧. = ಡಕ್ಕೆ. ೨. = ಧಕ್ಕೆ.

**ಢಗೆ** = ದಗೆ.

**ಢಾಲು** = ಡಾಲು.

**ಢಾಳ** ೧. = ಡಾಳ. ೨. ಪಗಡೆಯ ದಾಳ. ೩. ಶ್ವೇತವರ್ಣ; ಬಿಳಿಯ ಬಣ್ಣ. ~ಇಸು = ೧. ಪ್ರಕಾಶಗೊಳಿಸು; ಹೊಳಪುಮಾಡು. ೨. ಸಾಣೆಹಿಡಿ; ಮಸೆ. ೩. ಅಲುಬು; ಜಾಲಾಡು. ೪. = ಡಾಳಯಿಸು. ~(ಂ)ಪ(ಬ)ಡೆ = ಉಜ್ಜ್ವಲವಾಗು.

**ಢೀಗು** (ನಾ). ಹೊರೆ; ಕಟ್ಟು; ರಾಶಿ.



ತ (ನಾ). ಕನ್ನಡ ವರ್ಣಮಾಲೆಯ ಮೂವತ್ತಾರನೆಯ ಅಕ್ಷರ.

ತಂ (ಗು). ತಂಪಾದ; ಶೀತಲವಾದ. ~ಕ(ಗ)ಡಲೆ = ಹಸಿಗಡಲೆ; ನೆನೆಗಡಲೆ. ~ಕ(ಗ)ರಗ = ತಣ್ಗರಗ. ~ಕ(ಗ)ಲ್ಲು = ಚಂದ್ರಕಾಂತ ಶಿಲೆ. ~ಕೂ(ಗೂ)ಟ್(ಳ್) = ತಣ್ಗೂಟ್. ~ಕೊ(ಗೊ)ಳ = ತಣ್ಗೊಳ. ~ಗಾಳಿ = ತಣ್ಣನೆಯ ಗಾಳಿ. ~ಪಾ(ಬಾ)ಲ್(ಲು) = ತಣ್ಬಾಲು. ~ಪಿ(ಬಿ)ಟ್ಟು = ತಣ್ಪಿಟ್ಟು. ~ಪು(ಬು)ಳಿ = ಕುದಿಸದೆ, ಮಜ್ಜಿಗೆಯಿಂದ ಮಾಡುವ ಒಂದು ಬಗೆಯ ಮೇಲೋಗರ. ~ಪೊಱ್ತು(ಳ್ತು) = ತಂಪಾದ ಹೊತ್ತು; ಸಂಜೆ. ~ಬೆಳಗು = ಬೆಳುದಿಂಗಳು; ಚಂದ್ರಿಕೆ.

ತಂಗಡಿ (ನಾ). ಅವರಿಕೆ ಗಿಡ; ಹೊನ್ನವರೆ.

ತಂಗದಿರ್ = ತಣ್ಗದಿರ್. ~ಬ(ವ)ಟ್ಟ = ಚಂದ್ರಮಂಡಲ.

ತಂಗದಿರ (ನಾ). ಚಂದ್ರ.

ತಂಗಳು (ನಾ). ೧. ತಣ್ಣಗಾದ ಅನ್ನ; ಆರಿದ ಅನ್ನ. ೨. ಹಳೆಯುದು; ಹಳಸಲು.

ತಂಗಿ (ನಾ). ಕಿರಿಯ ಸೋದರಿ; ಒಡಹುಟ್ಟಿದವಳು.

ತಂಗು (ಕ್ರಿ). ೧. ಇಳಿದುಕೊಳ್ಳು; ಬೀಡುಬಿಡು. (ನಾ). ೨. ಇಳಿದುಕೊಳ್ಳುವುದು; ಬೀಡು ಬಿಡುವುದು. ೩. ಕುದುರೆ ಮೊದಲಾದ ಪ್ರಾಣಿಗಳ ಜೀನನ್ನು ಬಿಗಿಗೊಳಿಸಲು ಸೊಂಟಕ್ಕೆ ಬಿಗಿದಿರುವ ಚರ್ಮದ ಸುತ್ತುಪಟ್ಟಿ. ~ತಾ(ದಾ)ಣ = ನಿಲ್ಲುವ ಸ್ಥಳ; ಬಿಡಾರ. ~ಮನೆ = ಪ್ರಯಾಣಿಕರು ತಾತ್ಕಾಲಿಕವಾಗಿ ತಂಗುವುದಕ್ಕಾಗಿ ನಿರ್ಮಿಸಿದ ಮನೆ; ವಿಶ್ರಾಂತಿಗೃಹ.

ತಂಗೆ = ತಂಗಿ.

ತಂಚಾವಂಚ = ತೊಂಚವಂಚ.

ತಂಟಲಮಾರಿ = ತಂಟಲುಮಾರಿ.

ತಂಟಲುಮಾರಿ (ನಾ). ೧. ತಂಟೆಕೋರ; ಜಗಳಗಂಟ. ೨. ಜಗಳಗಂಟತನ.

ತಂಟೆ (ನಾ). ೧. ಜಗಳ; ವಿವಾದ. ೨. ಉಪದ್ರವ; ತೊಂದರೆ. ೩. ಗೋಜು; ಗೊಡವೆ. ~ಕೋರ = ಜಗಳಗಂಟ.

ತಂಡ (ನಾ). ೧. ಗುಂಪು; ಸಮೂಹ. ೨. ಪಕ್ಷ; ಪಂಗಡ.

ತಂಡಕ (ನಾ). ೧. ಸರಿಯಾದ ಸಿದ್ಧತೆ. ೨. ಐಂದ್ರಜಾಲಿಕ. ೩. ಹೆಚ್ಚಾದ ಸಮಾಸಗಳಿಂದ ಕೂಡಿದ ವಾಕ್ಯರಚನೆ. ೪. ಮರದ ಕಾಂಡ. ೫. ಅಧಿಕಪ್ರಸಂಗಿ; ಉಪದ್ವ್ಯಾಪಿ.

ತಂಡವಾಳ (ನಾ). ಎರಕ ಹೊಯ್ದ ಕಬ್ಬಿಣ; ತಾಂಡವಾಳ.

ತಂಡಸ (ನಾ). ೧. ಇಕ್ಕುಳ; ಚಿಮುಟ. ೨. = ತಂಡಸು.

ತಂಡಸು (ನಾ). ಒಂದು ಜಾತಿಯ ಮುಳ್ಳು ಮರ.

ತಂಡಿ (ನಾ). ೧. ಶೀತ; ಶೈತ್ಯ. ೨. ತೇವ; ಒದ್ದೆ.

ತಂಡು (ನಾ). ಕೋಲು; ದೊಣ್ಣೆ.

ತಂಡು(ಂ)ಮುಂಡು (ನಾ). ಅಸ್ತವ್ಯಸ್ತತೆ; ಚೆಲ್ಲಾಪಿಲ್ಲಿ.

ತಂಡುಲ(ಳ) (ನಾ). ೧.ಅಕ್ಕಿ. ೨. (ಕಮಲದ) ಬೀಜ.

ತಂಡುಲದಿವ್ಯ (ನಾ). ದಿವ್ಯಗಳಲ್ಲಿ ಒಂದು ಬಗೆ.

ತಂಡೆ (ನಾ). ೧. ಕಾಲಿಗೆ ಹಾಕಿಕೊಳ್ಳುವ ಆಭರಣ; ರುಳಿ. ೨. ಎತ್ತಿನ ಕೊರಳಲ್ಲಿ ಕಟ್ಟುವ ಬಣ್ಣಬಣ್ಣದ ಹಗ್ಗಗಳ ಪಟ್ಟಿ.

ತಂಡೇಲ (ನಾ). ದೋಣಿಯ ಯಜಮಾನ.

ತಂತಿ (ನಾ). ೧. ಲೋಹದ ತೆಳುವಾದ ಎಳೆ; ಕಂಬಿ. ೨. ವಿದ್ಯುಚ್ಛಕ್ತಿಯ ತಂತುವಿನ ಮೂಲಕ ಕಳಿಸುವ ಸುದ್ದಿ; ತಾರು. ೩. ವೀಣೆ ಮೊದಲಾದ ತಂತಿವಾದ್ಯ.

ತಂತು (ನಾ). ೧. ತಂತ್ರ; ಉಪಾಯ. ೨. ದಾರ; ನೂಲು. ~ಕರಣ = ನೂಲನ್ನು ತಯಾರಿಸುವುದು. ~ಗಾರ = ಮೋಸಗಾರ; ಕಪಟಿ.

ತಂತುಕಾರ (ನಾ). ಜೇಡರಹುಳು.

ತಂತುರ (ನಾ). ೧. ತಂತ್ರ; ಉಪಾಯ. ೨. ನೂಲಿನ ವಸ್ತ್ರ. ೩. ಕಮಲದ ನಾಳ.

ತಂತುವಾಯ (ನಾ). ೧. ನೇಕಾರ. ೨. ಜೇಡರಹುಳು. ೩. ನೆಯ್ಗೆ. ೪. ಮಗ್ಗ.

ತಂತ್ರ (ನಾ). ೧. ಎಳೆ; ನೂಲು. ೨. ಮಗ್ಗ. ೩. ನೆಯ್ಗೆ. ೪. ಹೊದಿಕೆ. ೫. ಧಾರ್ಮಿಕ ವಿಧಿಗಳ ಉಚಿತವಾದ ಕ್ರಮ. ೬. ತತ್ತ್ವ; ಶಾಸ್ತ್ರೀಯವಾದ ಕ್ರಮ. ೭. ಇಂದ್ರಜಾಲ ವಿದ್ಯೆ. ೮. ಔಷಧಿ; ಮದ್ದು. ೯. ಉಪಾಯ; ಹಂಚಿಕೆ. ೧೦. ಪ್ರತಿಜ್ಞೆ; ಶಪಥ. ೧೧. ರಾಜನ ಪರಿವಾರ. ೧೨. ಸೇನೆ. ೧೩. ಕುಲಭೇದ. ೧೪. ಶೃಂಗಾರ; ಅಲಂಕಾರ. ೧೫. ಪ್ರಧಾನವಾದುದು. ೧೬. ಪರಮಸತ್ಯ; ಪರಮಾರ್ಥ. ೧೭. ಪ್ರಯೋಗ ವಿಧಾನ. ೧೮. (ಸಾಹಿತ್ಯದಲ್ಲಿ) ನಿರ್ಮಾಣ ಕೌಶಲ.

ತಂತ್ರಕ (ನಾ). ಹೊಸಬಟ್ಟೆ.

ತಂತ್ರಿ (ನಾ). ೧. ತಂತ್ರಶಾಸ್ತ್ರವನ್ನು ಬಲ್ಲವನು. ೨. ತಂತ್ರವನ್ನು ಬಲ್ಲವನು; ಉಪಾಯಗಾರ. ೩. ಎಳೆ; ನೂಲು. ೪. ತಂತಿ; ಲೋಹದ ಕಂಬಿ.

ತಂದರಿ (ನಾ). ೧. ತೂಕಡಿಕೆ. ೨. ದಣಿವು; ಬಳಲಿಕೆ.

ತಂದಲ್(ಲು) (ನಾ). ೧. ತುಂತುರು ಹನಿ; ಶೀಕರ. ೨. ಜಡಿಮಳೆ; ಸೋನೆ.

ತಂದೆ (ನಾ). ಜನಕ; ಅಪ್ಪ.

ತಂದ್ರತೆ (ನಾ). ೧. ಬಳಲಿಕೆ; ದಣಿವು. ೨. ಆಲಸ್ಯ; ಜಡತೆ.

ತಂದ್ರಿ ೧. =ತಂದರಿ. ೨. ತಲ್ಲೀನತೆ; ಗುಂಗು.

ತಂಪು (ಕ್ರಿ). ೧. ತಣ್ಣಗಾಗು. ೨. (ದುಃಖ ಮೊದಲಾದ ಭಾವನೆಗಳ) ಆವೇಗ ಕಡಮೆಯಾಗು. (ನಾ). ೩. ಶೀತ; ಶೈತ್ಯ. ೪. ತಣಿವು; ತೃಪ್ತಿ. ೫. ಉಪಶಮನ; ಆರುವಿಕೆ. ~ಇಸು = ೧. ತಣ್ಣಗೆ ಮಾಡು. ೨. ಶಾಂತಗೊಳಿಸು. ~ಬೆ(ವೆ)ಟ್ಟ=ತಂಪಾದ ಬೆಟ್ಟ; ಹಿಮಾಲಯ.

ತಂಬಟ (ನಾ). ಒಂದು ಬಗೆಯ ಚರ್ಮವಾದ್ಯ. ~ಇಗ = ತಮಟೆಯನ್ನು ಬಾರಿಸುವವನು.

ತಂಬಟೆ = ತಂಬಟ.

ತಂಬಲ (ಗು). ಆರ್ದ್ರ; ತೊಯ್ದ. ~ಕ(ಗ)ಱೆ(ರೆ) = ತಂಪುಗೊಳಿಸು.

ತಂಬಾಕು (ನಾ). ಹೊಗೆಸೊಪ್ಪು.

ತಂಬಿ (ನಾ). ೧. ದಂಡಿಸುವಿಕೆ; ದಂಡನೆ. ೨. ತಮ್ಮ; ಕಿರಿಯ ಸಹೋದರ. ೩. ಕಾಳಿನ ಮೇಲಿನ ಸಿಪ್ಪೆ; ಹೊಟ್ಟು.

ತಂಬಿಗೆ = ತಂಬುಗೆ.

ತಂಬಿಸು (ಕ್ರಿ). ೧. ಸ್ತಂಭಿಸು; ನಿಶ್ಚಲವಾಗು. ೨. ತಡೆ; ನಿಲ್ಲಿಸು. ೩. ತೊಲಗಿಸು; ನಿವಾರಿಸು. ೪. ಸಮಾಧಾನ ಮಾಡು; ಶಮನಗೊಳಿಸು.

ತಂಬು (ನಾ). ಡೇರೆ; ಗುಡಾರ.

ತಂಬುಗೆ (ನಾ). ಹಿತ್ತಾಳೆ ಅಥವಾ ತಾಮ್ರದ ಸಣ್ಣ ಪಾತ್ರೆ; ಚಂಬು; ಚರಿಗೆ.

ತಂಬುಲ=ತಾಂಬೂಲ. ~ಇಗ=ತಾಂಬೂಲಿಗ.

ತಂಬೂ = ತಂಬು.

ತಂಬೂರ (ನಾ). ಒಂದು ಬಗೆಯ ತಂತಿವಾದ್ಯ.

ತಂಬೂರಿ = ತಂಬೂರ.

ತಕತ್ತು (ನಾ). ಸಿಂಹಾಸನ; ಪಟ್ಟ.

ತಕರಾರ್(ರು) (ನಾ). ೧. ಅಡ್ಡಿ; ವಿರೋಧ. ೨. ಆಕ್ಷೇಪಣೆ; ದೂರು.

ತಕಲಿ (ನಾ). ನೂಲನ್ನು ತೆಗೆಯುವ ಒಂದು ಉಪಕರಣ.

ತಕಾವಿ (ನಾ). ಸರ್ಕಾರವು ರೈತರಿಗೆ ಕೊಡುವ ಸಾಲದ ಹಣ, -ಮುಂಗಡ ಹಣ.

ತಕ್ಕ (ನಾ). ೧. ಯೋಗ್ಯನಾದವನು; ಸಮರ್ಥ. ೨. ಒಳ್ಳೆಯವನು; ಸಜ್ಜನ. ೩. ಹಿತೈಷಿ; ಗೆಳೆಯ. ೪. ಊರಿನ ಮುಖ್ಯಸ್ಥ. (ಗು). ೫. ಯೋಗ್ಯವಾದ; ಅನುರೂಪವಾದ.

ತಕ್ಕಡಿ (ನಾ). ವಸ್ತುಗಳ ಭಾರವನ್ನು ತೂಗುವ ಸಾಧನ; ತ್ರಾಸು.

ತಕ್ಕಲು (ನಾ). ಪಾಳು ಬಿದ್ದಿರುವ ಭೂಮಿ ಮತ್ತು ಆ ಭೂಮಿಯಲ್ಲಿ ಬೆಳೆದಿರುವ ಕಳೆ.

ತಕ್ಕಾಳಿ (ನಾ). ಟೊಮಾಟೊ ಹಣ್ಣು; ಚಪ್ಪರಬದನೆ.

ತಕ್ಕಿಲ್ (ನಾ). ೧. ಒಂದು ಜಾತಿಯ ಮರ. ೨. ಹುಲ್ಲುಗಾವಲು.

ತಕ್ಕಿಲು (ನಾ). ೧. ಹುಲ್ಲುಗಾವಲು. ೨. = ತಕ್ಕಲು.

ತಕ್ಕಿಸು (ಕ್ರಿ). ಅಪ್ಪು; ಆಲಿಂಗಿಸು.

ತಕ್ಕು (ನಾ). ೧. ಹಿರಿಮೆ; ಘನತೆ. ೨. ಸಾಮರ್ಥ್ಯ; ಪರಾಕ್ರಮ. ೩. ಉದ್ದೇಶ; ಗುರಿ. ೪. ಔಚಿತ್ಯ; ಯೋಗ್ಯತೆ. ೫. ಪ್ರೀತಿ; ಸ್ನೇಹ. ೬. ಸತ್ತ್ವ; ಪ್ರಭಾವ. ೭. ಆಸೆ; ಇಚ್ಛೆ. ೮. ನಾಣ್ನುಡಿ; ಗಾದೆ. ೯. ಯೋಗ್ಯವಾದುದು; ಉಚಿತವಾದುದು. ~ಅಳಿ(ೞಿ) = ೧. ಹಿರಿಮೆಗುಂದು; ಘನತೆಗೆಡು. ೨. ಧೈರ್ಯಗೆಡು; ಎದೆಗುಂದು. ೩. ಔಚಿತ್ಯವನ್ನು ಮೀರು. ~ಕು(ಗು)ಡು = ಒತ್ತಾಸೆಯಾಗು; ಬೆಂಬಲವಾಗು.

ತಕ್ಕುಮೆ (ನಾ). ೧. ತಕ್ಕುದಾಗಿರುವಿಕೆ; ಔಚಿತ್ಯ. ೨. ಯೋಗ್ಯತೆ; ಅರ್ಹತೆ. ೩. ಶೌರ್ಯ; ಪರಾಕ್ರಮ.

ತಕ್ಕೂರ್ಮೆ (ನಾ). ೧. ಘನತೆ; ಹಿರಿಮೆ. ೨. ಉಚಿತವಾದುದು. ೩. ಪ್ರೀತಿ; ಸ್ನೇಹ.

ತಕ್ಕೆ ೧. = ತಬ್ಬಿ. ೨. ರಾಶಿ; ಸಮೂಹ. ೩. ಒರಗುದಿಂಬು; ಲೋಡು. ~ಬೀಳು = ಅವುಚಿಕೊಳ್ಳು.

ತಕ್ಕೆಮುಕ್ಕೆ (ನಾ). ತೆಕ್ಕೆಬಿದ್ದು ಹಿಡಿದುಕೊಳ್ಳುವಿಕೆ.

ತಕ್ಕೈಸು = ತಬ್ಬೈಸು.

ತಕ್ಕೋಲ (ನಾ). ೧. ಸುಗಂಧದ ಚೆಕ್ಕೆಯುಳ್ಳ ಒಂದು ಜಾತಿಯ ವೃಕ್ಷ. ೨. ಒಂದು ಸುಗಂಧದ್ರವ್ಯ.

ತಕ್ರ (ನಾ). ಕಾಲುಪಾಲು ನೀರು ಹಾಕಿ ಕಡೆದ ಮೊಸರು; ಮಜ್ಜಿಗೆ.

ತಕ್ಷ (ನಾ). ಮರಗೆಲಸದವನು; ಬಡಗಿ.

ತಕ್ಷಕ (ನಾ). ೧. ಅಷ್ಟಫಣಿಗಳಲ್ಲಿ ಒಂದು. ೨. ಹಾವುಗಳಲ್ಲಿ ಒಂದು ಜಾತಿ. ೩. ಹಾವು; ಸರ್ಪ. ೪. = ತಕ್ಷ.

ತಕ್ಷಣ = ತತ್‌ಕ್ಷಣ.

ತಕ್ಸೀರ್(ರು) (ನಾ). ಅಪರಾಧ; ತಪ್ಪು.

ತಖ್ತೆ (ನಾ). ಆಯವ್ಯಯ ಮುತ್ತಿತರ ವಿಷಯಗಳ ವಿವರಣೆಯ ಪಟ್ಟಿ.

ತಗಚೆ (ನಾ). ಅಗಸೆಯ ಮರ ಮತ್ತು ಅದರ ಕಾಯಿ.

ತಗಡು (ನಾ). ೧. ಲೋಹದ ಹಾಳೆ, -ಫಲಕ. ೨. ಕುಂದಣದ ಹರಳುಗಳ ಕೆಳಗೆ ಕೂಡಿಸಿದ ವರ್ಣರೇಕು. ೩. ಜರಿ; ಜರತಾರಿ. ೪. ದಟ್ಟಣೆ; ಸಾಂದ್ರತೆ. ~ಕ(ಗ)ತ್ತಲೆ = ದಟ್ಟವಾದ ಕತ್ತಲೆ.

ತಗರ್ (ಕ್ರಿ). ೧. ತಡೆ; ಅಡ್ಡಿಪಡಿಸು. ೨. ನಿಲ್ಲು; ಅಡ್ಡಿಗೊಳಗಾಗು. (ನಾ). ೩. = ತಗರು.

ತಗರ (ನಾ). ೧. ಒಂದು ಜಾತಿಯ ಹೂವಿನ ಗಿಡ; ನಂದಿಬಟ್ಟಲು. ೨. ಒಂದು ಬಗೆಯ ಲೋಹ; ತವರ.

ತಗರು (ನಾ). ಗಂಡುಕುರಿ; ಟಗರು; ಮೇಷ.

ತಗರುಬೊಗರು (ನಾ). ಮೋಸ; ಕಪಟ.

ತಗರ್ದೇರ (ನಾ). ಟಗರನ್ನು ವಾಹನವಾಗುಳ್ಳವನು; ಅಗ್ನಿ.

ತಗಲು (ಕ್ರಿ). ೧. ಸೋಂಕು; ಮುಟ್ಟು. ೨. ತೊಡಗು; ಆಸಕ್ತವಾಗು. ೩. ಸಂಭೋಗಿಸು. (ನಾ). ೪. ಸ್ಪರ್ಶ; ಸೋಂಕು. ೫. ಸೇರುವೆ; ಜೋಡಣೆ. ೬. ಮೋಸ; ವಂಚನೆ. ~ಬೀಳ್(ಳು) = ೧. ಸಂಬಂಧವೇರ್ಪಡು. ೨. ನೇತುಬೀಳು; ಜೋತುಬೀಳು. ೩. ಗಂಟುಬೀಳು. ~ಬೇರೀಜು = ತಪ್ಪಾಗಿ ಕೂಡುವಿಕೆ; ತಪ್ಪುಸಂಕಲನ.

ತಗಲೂಫಿ (ನಾ). ಮೋಸ; ಅಪ್ರಾಮಾಣಿಕತೆ.

ತಗಹು (ಕ್ರಿ). ೧. ತಡೆ; ಪ್ರತಿಬಂಧಿಸು. (ನಾ). ೨. ಅಡ್ಡಿ; ತಡೆ; ನಿರ್ಬಂಧ. ೩. ಆವರಣ; ಮುಸುಕು. ೪. ಬಿಗಿ; ಬಿಗುಹು.

ತಗಾದೆ (ನಾ). ೧. ಬರಬೇಕಾದ ವಸ್ತುವಿಗೆ ಒತ್ತಾಯ ಮಾಡುವುದು. ೨. ಒತ್ತಾಯ; ಬಲವಂತ. ೩. ವ್ಯಾಜ್ಯ; ದಾವೆ.

ತಗಿಬಿಗಿ (ನಾ). ದಿಗ್ಭ್ರಾಂತಿ; ದಿಗ್ಭ್ರಮೆ. ~ಆ(ಯಾ)ಟ = ದಿಗ್ಭ್ರಮೆಗೊಳಿಸುವ ವರ್ತನೆ.

ತಗು (ಕ್ರಿ). ೧. ಹೊಂದು; ಯೋಗ್ಯವಾಗು. ೨. ಸಾಕಾಗು; ಸಾಲು.

ತಗುಣೆ (ನಾ). ರಕ್ತವನ್ನು ಹೀರುವ ಒಂದು ಜಾತಿಯ ಕೀಟ; ತಿಗಣೆ.

ತಗುಳ್(ಳು) (ಕ್ರಿ). ೧. ಸಮೀಪಿಸು; ಸೇರು. ೨. ಬೆನ್ನಟ್ಟು; ಹಿಂಬಾಲಿಸು. ೩. ಮೊದಲು ಮಾಡು; ತೊಡಗು. ೪. ಮೆಚ್ಚು; ಇಷ್ಟಪಡು. ೫. ಒದಗು; ಸಂಭವಿಸು. ೬. ಆವರಿಸು; ಮುತ್ತು; ಆಕ್ರಮಿಸು. ೭. ಆಚರಿಸು; ಕೈಗೊಳ್ಳು. ೮. ನಿಂದಿಸು; ಹೀಯಾಳಿಸು. ೯. ತೊಲಗಿಸು; ನಿವಾರಿಸು. ೧೦. ಅಂಟು; ಹತ್ತು. ೧೧. ದುಡುಕು. ~ಮುಗುಳು = (ಶತ್ರುವನ್ನು) ತಾಗಿ ಹಿಂದಿರುಗುವುದು.

ತಗುಳ (ನಾ). ಗೊಂಚಲು; ಮಂಜರಿ.

ತಗುಳ್ಚು (ಕ್ರಿ). ೧. ಸೇರಿಸು; ಬೆರಸು. ೨. ಆಗಿಸು; ಉಂಟುಮಾಡು. ೩. ಉರಿಹತ್ತಿಸು; ಬೆಂಕಿಹಚ್ಚು. ೪. ತೊಡು; ಧರಿಸು. ೫. ಹೊಂದಿಸು; ಅನ್ವಯಿಸು. ೬. ಮಾಡು; ಉದ್ಯೋಗಿಸು. ೭. ಆರಂಭಿಸು; ತೊಡಗು. ೮. ತಗುಲಿಸು; ಅಂಟಿಸು. ೯. ತಲುಪಿಸು; ಮುಟ್ಟಿಸು. ೧೦. ತೊಲಗಿಸು; ನಿವಾರಿಸು.

ತಗುಳ್ಪು (ನಾ). ೧. ಕೂಡಿಕೊಂಡಿರುವುದು; ಬೆಸುಗೆ. ೨. ಆಧಾರ; ಅವಲಂಬನ. ೩. ಆವರಣ; ಆಚ್ಛಾದನ. ೪. ಸಂಬಂಧ; ಸಂಗತಿ.

ತಗೆ (ಕ್ರಿ). ೧. ಅಡ್ಡಿಮಾಡು; ತಡೆ. ೨. ಸೆಳೆ; ಆಕರ್ಷಿಸು. ೩. ತಡೆಯಾಗು. ೪. ಆವರಿಸು; ಕವಿ. (ನಾ). ೫. ಅಡ್ಡಿ; ತಡೆ. ೬. ತಂಗುವಿಕೆ; ನಿಲ್ಲುವಿಕೆ. ~ಬಗೆ = ೧. ತೊಂದರೆ; ಹಿಂಸೆ. ೨. ಅವಸರ. ೩. ಅಸ್ತವ್ಯಸ್ತತೆ.

ತಗ್ಗಿ (ನಾ). ೧. ಒಂದು ಜಾತಿಯ ಗಿಡ; ಅಗ್ನಿಮಂಥ. ೨. ಮಕ್ಕಳನ್ನು ಕದಿಯುವುದು.

ತಗ್ಗು ೧. = ತಙ್ಕು. (ನಾ). ೨. ಹಳ್ಳ; ಕುಳಿ. ೩. ಕುಗ್ಗಿರುವ ಸ್ಥಿತಿ; ಕುಸಿತ. ೪. ಕುಗ್ಗಿದ ಅವಸ್ಥೆ; ಕಷ್ಟಕಾಲ. ೫. ಬೆಲೆ ಹೆಚ್ಚಾಗಿರುವಿಕೆ; ತುಟ್ಟಿಯಾಗಿರುವಿಕೆ. ೬. ಎತ್ತರವಲ್ಲದುದು; ಕುಳ್ಳಾಗಿರುವುದು.

ತಜವಿಜಿ (ನಾ). ೧. ಹಂಚಿಕೆ; ಸಂಚು. ೨. ಹುಡುಕುವುದು; ಶೋಧನೆ.

ತಜವೀಜು (ನಾ). ೧. ವ್ಯವಸ್ಥೆ; ಏರ್ಪಾಡು. ೨. ಪ್ರಯತ್ನ; ಉದ್ಯಮ.
ತಜ್ಞ (ನಾ). ತಿಳಿದವನು; ಜ್ಞಾನಿ.
ತಜ್ಞತೆ (ನಾ). ನಿಪುಣತೆ; ಪಾಂಡಿತ್ಯ.
ತಟ (ನಾ). ೧. ಬೆಟ್ಟದ ತಪ್ಪಲು; ಸಾನು. ೨. ದಡ; ತೀರ. ೩. ಅಂಚು; ತುದಿ. ೪. ಹೊಲ; ಕ್ಷೇತ್ರ. ೫. ದಿಗಂತ; ಕ್ಷಿತಿಜ. ೬. ಆಕಾಶ. ೭. ಒಂದು ಅನುಕರಣ ಧ್ವನಿ. ~ಕು(ಗು)ಟ್ಟು = ೧. ಅಕ್ಕಸಾಲಿಗನಂತೆ ಸುತ್ತಿಗೆಯಿಂದ ಬಡಿ. ೨. ಅಲೆದಾಡು; ಸುತ್ತಾಡು. ೩. ಹನಿಹನಿಯಾಗಿ ಬೀಳು. ~ಹಾಯ್(ಯು) = ದಾಟಿಕೊಂಡು ಹೋಗು; ಭೇದಿಸಿಕೊಂಡು ಹೋಗು.
ತಟಕು (ಕ್ರಿ). ೧. ತೊಟ್ಟಿಕ್ಕು; ಹನಿ. (ನಾ). ೨. = ತಟುಕು.
ತಟಕ್ಕನೆ (ಅ). ೧. ಹನಿಹನಿಯಾಗಿ; ತೊಟ್ಟು ತೊಟ್ಟಾಗಿ. ೨. ಬೇಗನೆ; ಕೂಡಲೆ.
ತಟಜ (ನಾ). ೧. ತೀರದಲ್ಲಿ ಹುಟ್ಟಿದ ಮರ ಮೊದಲಾದುವು. (ಗು). ೨. ತೀರದಲ್ಲಿ ಹುಟ್ಟಿದ, –ಬೆಳೆದ.
ತಟಪಟ (ನಾ). ೧. ಪ್ರಾಣಾಪಾಯ; ಪ್ರಾಣ ಬಾಧೆ. (ಅ). ೨. ದಡದಡಿಸುತ್ತ; ಪಟಪಟನೆ.
ತಟವಟ (ನಾ). ಮೋಸ; ವಂಚನೆ.
ತಟವಾಣಿ (ನಾ). ವಂಚಕಿ; ಮೋಸಗಾತಿ.
ತಟಸ್ಥ (ನಾ). ೧. ಚಲನೆಯಿಲ್ಲದಿರುವುದು; ನಿಷ್ಕ್ರಿಯತೆ. ೨. ಯಾವ ಕಡೆಗೂ ಸೇರದವನು; ಮಧ್ಯಸ್ಥ. (ಗು). ೩. ಸಮೀಪದಲ್ಲಿರುವ; ದಡದಲ್ಲಿರುವ. ೪. ಯಾವ ಪಕ್ಷಕ್ಕೂ ಸೇರದ; ಮಧ್ಯಸ್ಥವಾದ.
ತಟಾಕ (ನಾ). ಕೆರೆ; ಜಲಾಶಯ.
ತಟಾಯ್ (ಕ್ರಿ). ೧. ಸೀಳಿಕೊಂಡು ಹೋಗು; ಭೇದಿಸಿಕೊಂಡು ಹೋಗು. ೨. ಪಾರಾಗು; ದಾಟಿಹೋಗು. ~ಇಸು = ೧. ಮೀರು; ದಾಟು. ೨. ದಾಟಿಸು; ಗುರಿಮುಟ್ಟಿಸು.
ತಟಿತ್ತು (ನಾ). ಮಿಂಚು.
ತಟಿನಿ (ನಾ). ನದಿ; ಹೊಳೆ; ತೊರೆ.
ತಟಿನ್ನಾದ (ನಾ). ಗುಡುಗು; ಮೇಘನಾದ.
ತಟಿಸು (ಕ್ರಿ). ೧. ತಾಗಿಸು; ಸೋಕಿಸು. ೨. ಅಡ್ಡಿಪಡಿಸು.
ತಟುಕು (ನಾ). ೧. ತೊಟ್ಟು; ಹನಿ; ಬಿಂದು. ೨. ಕೊಂಚ; ಸ್ವಲ್ಪ.
ತಟ್ಟತಳ (ನಾ). ೧. ತುಂಬ ಕೆಳಗು; ತೀರ ಆಳ. ೨. ಚಪ್ಪಟೆಯಾದ ಅಂಗೈ.
ತಟ್ಟನೆ (ಅ). ಕೂಡಲೆ; ಬೇಗನೆ.
ತಟ್ಟಿ (ನಾ). ೧. ಬಿದಿರಿನ ಗೋಡೆ; ತಡಿಕೆ. ೨. ಬಿದಿರಿನಿಂದ ಹೆಣೆದ ಚಾಪೆ. ೩. ಬಾಗಿಲು; ಕದ. ೪. ಜೇನುಹುಟ್ಟು; ಜೇನುಗೂಡು. ~ಮೆಡಱು(ರು) = ತಡಿಕೆಯನ್ನು ಕಟ್ಟು; ತಟ್ಟಿಯನ್ನು ಹೆಣೆ. ~ರಾಯ = ಬಿದಿರು, ಹುಲ್ಲುಗಳಿಂದ ಮಾಡಿದ ಬೆದರುಗೊಂಬೆ; ಬೆಚ್ಚಪ್ಪ.
ತಟ್ಟೆಯ (ನಾ). ೧. ತಡ; ಸಾವಕಾಶ. ೨. ಚಪ್ಪಟೆಯಾಗಿರುವುದು. ೩. ಸತ್ತ್ವಹೀನತೆ.
ತಟ್ಟು (ಕ್ರಿ). ೧. ಬಡಿ; ಹೊಡೆ. ೨. ಮುಟ್ಟು; ತಾಗು. ೩. ಬೆನ್ನನ್ನು ಚಪ್ಪರಿಸು; ಚುಕ್ಕು ತಟ್ಟು. ೪. ಉಬ್ಬಿಸು; ಉತ್ಸಾಹಗೊಳಿಸು. ೫. ರೊಟ್ಟಿ ಮುಂತಾದುವನ್ನು ಕೈಯಿಂದ ಬಡಿ. ೬. ಅಟ್ಟು; ಓಡಿಸು. ೭. ಉಂಟಾಗು; ಅವರಿಸು. (ನಾ). ೮. ಅಪ್ಪಳಿಕೆ; ಅಂಗೈ ಹೊಡೆತ. ೯. ಸಂನ್ಯಾಸಿಗಳು ಹೊದೆಯುವ ವಸ್ತ್ರ. ೧೦. ಗೋಣಿತಟ್ಟು; ದಪಾರ. ೧೧. ಸಮೂಹ; ಗುಂಪು. ೧೨. ಒಂದು ಜಾತಿಯ ಗಿಡ್ಡ ಕುದುರೆ. ೧೩. ಸಮತಲ; ಚಪ್ಪಟೆ. ೧೪. ಪಕ್ಕ; ಕಡೆ. ೧೫. ಲೇಪಿಸುವುದು; ಲೇಪನ. ೧೬. ಕಿವಿಯ ಆಭರಣ. ೧೭. ಕತ್ತಿಯ ಅಲಗು, –ಧಾರೆ. ೧೮. ನಿತ್ರಾಣ; ದುರ್ಬಲತೆ. ೧೯. ಸೋಕುವುದು; ಮುಟ್ಟುವುದು. ೨೦. ಗೋಣಿಯ

ಪಟ್ಟೆ, –ತಾಟು. ~ಆಡು = ೧. ಒಂದ ಕ್ಕೊಂದು ತಾಗು. ೨. ಅತ್ತಿತ್ತ ತೂಗಾಡು. ~ಆಱು(ರು) = ಒಣಗಿ ತಾರಲಾಗು; ಸಂಪೂರ್ಣವಾಗಿ ನಿರ್ದ್ರವವಾಗು. ~ಇಸು = ೧. ತಾಕಿಸು; ಸೋಕಿಸು. ೨. ಉಗ್ಗು; ಗುಕ್ಕು. ೩. ತಡೆದು ನಿಲ್ಲಿಸು. ~ಉಗಿ =ಬಲವಾಗಿ ನಾಟು, –ಚುಚ್ಚು. ~ಉರ್ಚು = ಸೀಳಿಕೊಂಡು ಹೊರಬರು. ~ಮುಟ್ಟು =೧. ದುರದೃಷ್ಟಕರವಾದ ಪೆಟ್ಟು, –ಆಘಾತ. ೨. ಸಂದಿಗ್ಧ ಪರಿಸ್ಥಿತಿ; ಸಮಸ್ಯೆ. ೩. ಮೈಲಿಗೆ; ಸೂತಕ.

ತಟ್ಟೆ (ನಾ). ೧. ಚಪ್ಪಟೆ; ಸಮತಲ. ೨. ತಾಟು; ತಳಿಗೆ; ಹರಿವಾಣ. ೩. ಬಿದಿರಿನ ಸೀಳು, –ತುಂಡು. ೪. ಬೀಜ ಬಲಿಯುದಿರುವ ಕಾಯಿ.

ತಟ್ಟೆಯು (ನಾ). ತಡ; ಸಾವಕಾಶ.

ತಟ್ಟೈಸು (ಕ್ರಿ). ವ್ಯಾಪಿಸು; ಹರಡು.

ತಡ (ನಾ). ೧. ನಿಧಾನ; ಸಾವಕಾಶ; ವಿಳಂಬ. ೨. ಅಡ್ಡಿ; ತಡೆ. ೩. ಅವಕಾಶ; ಬಿಡುವು. ೪. ಗಾಬರಿ; ಗೊಂದಲ. ೫. ದಡ; ತೀರ. ೬. ಸಮಾನ; ಎಣೆ. ~(ಂ)ಕ(ಗ)ಲಸು = ಸೇರು; ಬೆರೆ. ~(ಂ)ಕಾ(ಗಾ)ಲ್= ೧. ತೊಡರುಗಾಲು; ತೊಡಕಿಕೊಳ್ಳುವ ಕಾಲು. ೨. ಅಡ್ಡಿ; ತಡೆ. ೩. ತಪ್ಪುಹೆಜ್ಜೆ. ~(ಂ)ಕೆ(ಗೆ)ಡೆ = ಮುಗ್ಗರಿಸಿ ಬೀಳು; ತತ್ತರಿಸಿ ಬೀಳು. ~ (ಂ)ಪೊ(ಬೊ)ಯ್ = ವಿರೋಧಿಸು; ಪ್ರತಿಭಟಿಸು. ~(ಂ)ಮಾಡು =೧. ಭ್ರಾಂತಿ ಗೊಳಿಸು. ೨. ಕಳವಳಗೊಳ್ಳು; ತಳ್ಳಂಕ ಗೊಳ್ಳು. ೩. ಸಾವಕಾಶಮಾಡು; ವಿಳಂಬ ಮಾಡು. ~(ಂ)ಮೆಟ್ಟು = ೧. ಸಾವಕಾಶ ವಾಗಿ ನಡೆ. ೨. ತೊಡರುಗಾಲು ಹಾಕು; ಮುಗ್ಗರಿಸು.

ತಡಂಗ = ತಟಾಕ.

ತಡಕಸ (ನಾ). ತೊಂದರೆ; ಅಪಾಯ.

ತಡಕು (ಕ್ರಿ). ೧. ಹುಡುಕು. ೨. ತಡವರಿಸು. ೩. ತಗುಲು; ತಾಕು. ~ಆಟ=ಹುಡುಕಾಟ; ಅರಸುವಿಕೆ.

ತಡಗಸ = ತಡಕಸ.

ತಡಗು (ಕ್ರಿ). ತಡೆಗಟ್ಟು; ಅಡ್ಡಿಪಡಿಸು.

ತಡಗುಣಿ (ನಾ). ಒಂದು ಬಗೆಯ ದ್ವಿದಳ ಧಾನ್ಯ; ಅಲಸಂದೆ.

ತಡತಡ (ನಾ). ೧. ತಬ್ಬಿಬ್ಬು; ಅಸ್ತವ್ಯಸ್ತತೆ. ೨. ತೊಡರು; ತೊಡಕು. ~ಇಸು = ತತ್ತರಿಸು; ಮುಗ್ಗರಿಸು.

ತಡಪು (ಕ್ರಿ). ೧. ನೇವರಿಸು; ತಡವು. (ನಾ). ೨. ಅಡ್ಡಿ; ತಡೆ. ೩. ದಟ್ಟಿ; ಲುಂಗಿ.

ತಡಬಡ ೧. = ತಡತಡ. ೨. ನಡೆನುಡಿ ಗಳಲ್ಲಿ ಉಂಟಾಗುವ ತೊಡರು, –ತೊದಲು. ~ಇಸು = ೧. ಕಕ್ಕಾಬಿಕ್ಕಿಯಾಗು. ೨. ಕಳವಳಗೊಳ್ಳು; ಚಡಪಡಿಸು. ೩. ತತ್ತರಿಸು; ತಡವರಿಸು. ೪. ಉಗ್ಗು; ತೊದಲು. ೫. ತಬ್ಬಿಬ್ಬುಗೊಳಿಸು. ~ಕು(ಗು)ಟ್ಟು=ತಬ್ಬಿಬ್ಬಾಗು; ತಡವರಿಸು.

ತಡಬಡಿ (ನಾ). ೧. ಆತಂಕ; ಚಿಂತೆ. ೨. ಅನುಮಾನ; ಅಳುಕು.

ತಡಮೆ (ನಾ). ದನಕರುಗಳು ಒಳಗೆ ನುಗ್ಗ ದಂತೆ ಬೇಲಿಗೆ ಅಳವಡಿಸಿರುವ ಬಿದಿರಿನ ತಡೆ, –ಬಾಗಿಲು.

ತಡವರಿಸು (ಕ್ರಿ). ೧. ಹುಡುಕು; ಬೆದಕು. ೨. ನೇವರಿಸು; ತಡವು. ೩. ಮುಗ್ಗರಿಸು; ನಡೆಗೆಡು. ೪. ತಬ್ಬಿಬ್ಬಾಗು; ಕಂಗೆಡು. ೫. ತಡೆತಡೆದು ಮಾತನಾಡು.

ತಡವು (ಕ್ರಿ). ೧. ತಡೆ; ನಿಲ್ಲು. ೨. ನೇವರಿಸು; ಸವರು. ೩. ಹುಡುಕಾಡು; ತಡಕು. ೪. ಕೆಣಕು; ಕೆರಳಿಸು. ೫. ತಡೆತಡೆದು ಮಾತನಾಡು. ೬. ಹಚ್ಚು; ಲೇಪಿಸು. ೭. ತಡಮಾಡು; ಸಾವಕಾಶಮಾಡು. (ನಾ).

೮. ನಿಧಾನ; ವಿಳಂಬ. ೯. ಅಡ್ಡಿ; ತಡೆ. ೧೦. ಸೋಂಕು; ಸ್ಪರ್ಶ.

**ತಡವೆ** (ನಾ). ಸಲ; ಸೂಳು; ಬಾರಿ.

**ತಡಸಲು** (ನಾ). ೧. ಜಲಪಾತ; ಅಬ್ಬಿ. ೨. = ತಡಸು.

**ತಡಸು** (ನಾ). ಒಂದು ಜಾತಿಯ ಮರ.

**ತಡಹು** (ಕ್ರಿ). ೧. ನೇವರಿಸು; ಸವರು. ೨. ಹುಡುಕು; ತಡಕು. ೩. ತಡಮಾಡು; ಸಾವಕಾಶಮಾಡು. ೪. ಕೆಣಕು; ಕೆರಳಿಸು. ೫. ಹಚ್ಚು; ಲೇಪಿಸು. ೬. ತಟ್ಟು; ಬಡಿ. (ನಾ). ೭. ಅಡ್ಡಿ; ತಡೆ. ೮. ವಿರೋಧ; ಪ್ರತಿಭಟನೆ. ೯. ಸಮಾಧಾನ.

**ತಡಿ** (ನಾ). ೧. ತೇವ; ಒದ್ದೆ. ೨. ದಡ; ತೀರ. ೩. ಎಲ್ಲೆ; ಮೇರೆ. ೪. ಜೀನು; ಹಲ್ಲಣ. ೫. ದಪ್ಪವಾದ ದೊಣ್ಣೆ. ~ಕೂ(ಗೂ)ಡು = ದಡವನ್ನು ಸೇರು. ~ಪಿ(ವಿ)ಡಿ = ತೀರವನ್ನು ಅನುಸರಿಸು.

**ತಡಿಕೆ** (ನಾ). ೧. ಬಿದಿರಿನ ತಟ್ಟಿ. ೨. ಒಂದು ಬಗೆಯ ಬಲೆ. ೩. ತೆರೆ; ಮರೆ. ೪. ಹೆಣಿಕೆ; ನೆಯ್ಗೆ. ~ಬ(ವ)ಲೆ = ೧. ಒಂದು ಬಗೆಯ ಬಲೆ. ೨. ಕಟ್ಟು; ನಿರ್ಬಂಧ.

**ತಡುಗುಣಿ** = ತಡಗುಣಿ.

**ತಡೆ** (ಕ್ರಿ). ೧. ಸಾವಕಾಶಮಾಡು; ವಿಳಂಬ ಮಾಡು. ೨. ತಡವಾಗು; ವಿಳಂಬವಾಗು. ೩. ಕಾಯು; ಉಳಿ; ನಿಲ್ಲು. ೪. ನಿಲ್ಲಿಸು; ತರುಬು. ೫. ಸೈರಿಸು; ತಾಳಿಕೊಳ್ಳು. ೬. ಹೆಚ್ಚುಕಾಲ ಬಾಳು; ತಾಳಿಕೆ ಬರು. ೭. ಅಡ್ಡಗಟ್ಟು; ನಿರೋಧಿಸು. ೮. ಹಿಂದೆಗೆ; ಅನುಮಾನಿಸು. ೯. ಚಲನೆಯಿಲ್ಲದಿರು; ನಿಂತುಹೋಗು. (ನಾ). ೧೦. ಅಡ್ಡಿ; ನಿರ್ಬಂಧ. ೧೧. ರಕ್ಷೆ; ತಾಯಿತಿ. ೧೨. ಸಂಕೋಚ. ೧೩. ತಡ; ವಿಳಂಬ. ೧೪. ಹಾವುಗಳನ್ನು ನಿಲ್ಲಿಸುವ ಮಂತ್ರ. ೧೫. ತಿರುಪು ಅಥವಾ ತಿರುಗಣೆಯನ್ನು ಬಿಗಿಗೊಳಿಸಲು ಕೊನೆಯಲ್ಲಿ ಅಳವಡಿಸಿರುವ ಬಿಲ್ಲೆ. ~ಕ(ಗ)ಟ್ಟು = ೧. ಅಡ್ಡಿಪಡಿಸು. ೨. ಮಂತ್ರವನ್ನು ಹಾಕಿ ಬೆಂಕಿ, ಮಳೆ ಮತ್ತು ದುಷ್ಟಪ್ರಾಣಿ ಮುಂತಾದುವುಗಳನ್ನು ನಿಲ್ಲಿಸು. ೩. ಬಾಧೆಗಳ ನಿವಾರಣೆಗಾಗಿ ತಾಯಿತಿಯನ್ನು ಕಟ್ಟು. ೪. ಅಡ್ಡಿ; ತಡೆ. ೫. ತಾಯಿತಿ; ರಕ್ಷೆ. ~ಕೆ(ಗೆ)ಡು = ಅಡ್ಡಿಯಿಲ್ಲದಂತಾಗು. ~ಗಾಱ(ರ) = ಹಾವಿನ ಮಂತ್ರವನ್ನು ತಿಳಿದವನು; ಗಾರುಡಿಗ. ~ಪಾ(ವಾ)ಯ್ = ಎದುರಿಸು; ಪ್ರತಿಭಟಿಸು. ~ಹಿಡಿ = ೧. ಅಡ್ಡಿಪಡಿಸು; ನಿಗ್ರಹಿಸು. ೨. ಅದುಮಿಡು; ಹತ್ತಿಕ್ಕು.

**ತಡೆಬಡೆ** (ನಾ). ೧. ಅಡ್ಡಿ; ಅಡಚಣೆ. ೨. ನಿಲುಗಡೆ; ವಿರಾಮ.

**ತಣ್** (ಕ್ರಿ). ೧. ತಣ್ಣಗಾಗು. (ನಾ). ೨. = ತಣ್ಣಿತು. ~ಅಲೆ = ತಂಪನ್ನುಂಟುಮಾಡು; ತಂಪಾಗಿರು. ~ಎಲರ್(ರು) = ತಂಪಾದ ಗಾಳಿ; ತಂಗಾಳಿ. ~ಕ(ಗ)ಂಪು = ತಂಪಾದ ಸುವಾಸನೆ. ~ಕ(ಗ)ರಗ = ತಂಪಾದ ಕೊಡ. ~ಕ(ಗ)ಳಸ = ತಣ್ಗರಗ. ~ಕೂ(ಗೂ)ೞ್(ಳ್) = ತಣ್ಣಗಾದ ಅನ್ನ; ಆರಿದ ಅನ್ನ. ~ಕೊ(ಗೊ)ಳ = ತಂಪಾದ ಕೊಳ. ~ಗಾಳಿ = ತಣ್ಣೆಲರ್. ~ನೀರ್(ರು) = ತಂಪಾದ ನೀರು. ~ನೆೞ(ಳ)ಲ್ = ತಂಪಾದ ನೆರಳು, -ಛಾಯೆ. ~ಪ(ಬ)ನಿ = ತಂಪಾದ ಹನಿ. ~ಪಾ(ಬಾ)ಲು = ತಣ್ಣನೆಯ ಹಾಲು; ಕಾಯಿಸದಿರುವ ಹಾಲು. ~ಪಿಟ್ಟು = ಒಂದು ಬಗೆಯ ತಿಂಡಿ; ತಂಬಿಟ್ಟು. ~ಪು(ಬು)ೞಿ(ಳಿ)ಲ್ = ತಂಪಾದ ಮಳಲು,-ಮಳಲುದಂಡೆ. ~ಬಿಸಿಲ್(ಲು) = ೧. ತಂಪಾದ ಬಿಸಿಲು; ಹೂಬಿಸಿಲು. ೨. = ತಣ್ಬೆಳಗು. ~ಬೆಳಗು = ೧. ತಂಪಾದ ಬೆಳಕು; ಶೀತಲ ಕಾಂತಿ.

೨. ಬೆಳುದಿಂಗಳು; ಚಂದ್ರಿಕೆ. ~ಮಲೆ = ಆವರಿಸು; ವ್ಯಾಪಿಸು; ಪಸರಿಸು. ~ಸೊ(ಜೊ)ಡರ್ = ೧. ತಂಪಾದ ಬೆಳಕನ್ನು ಬೀರುವ ದೀಪ. ೨. ಆರಿದ ದೀಪ; ನಂದಿಹೋದ ದೀಪ.

ತಣಲು (ನಾ). ಕೆಂಡ.

ತಣಿ (ಕ್ರಿ). ೧. ತೃಪ್ತಿಹೊಂದು; ಸಮಾಧಾನಗೊಳ್ಳು. ೨. ಆಯಾಸಗೊಳ್ಳು. ೩. ತಂಪಾಗು; ಶೀತಲವಾಗು. (ನಾ). ೪. ನಾಚಿಕೆ; ಲಜ್ಜೆ. ೫. ತರ್ಪಣ; ತನಿ.

ತಣಿಪು (ಕ್ರಿ). ೧. ತೃಪ್ತಿಯನ್ನುಂಟುಮಾಡು; ತಣಿಸು. (ನಾ). ೨. = ತಣಿವು.

ತಣಿವು (ನಾ). ತೃಪ್ತಿ; ಸಮಾಧಾನ.

ತಣಿಸು (ಕ್ರಿ). ೧. ತೃಪ್ತಿಪಡಿಸು. ೨. ತಣ್ಣಗೆ ಮಾಡು; ಆರಿಸು. (ನಾ). ೩. ತಂಪು; ಶೈತ್ಯ. ೪. ತೇವ; ಒದ್ದೆ. ೫. ತೃಪ್ತಿ; ತುಷ್ಟಿ.

ತಣ್ಗದಿರ್ (ನಾ). ತಂಪಾದ ಕಿರಣ; ಶೀತಲವಾದ ಕಿರಣ. ~ಅಡಿ = ತಣ್ಗದಿರ್ವಕ್ಕಿ. ~ಕ(ಗ)ಲ್(ಲ್ಲು) = ಚಂದ್ರಕಾಂತಶಿಲೆ; ಅಮೃತಶಿಲೆ. ~ಪ(ವ)ಕ್ಕಿ = ಬೆಳುದಿಂಗಳ ಹಕ್ಕಿ; ಚಕೋರ.

ತಣ್ಗದಿರ (ನಾ). ತಂಪಾದ ಕಿರಣಗಳುಳ್ಳವನು; ಚಂದ್ರ.

ತಣ್ಣಗೆ (ಅ). ೧. ತಂಪಾಗಿ; ಶೀತಲವಾಗಿ. ೨. ಹಾಯಾಗಿ; ಸುಖವಾಗಿ. ೩. ನಿಶ್ಚಿಂತೆಯಾಗಿ; ತೆಪ್ಪಗೆ. ~ಆಗು = ೧. ನಂದಿಹೋಗು; ಆರಿಹೋಗು. ೨. ಕುಗ್ಗು; ಕಡಮೆಯಾಗು. ೩. ಸಮಾಧಾನಗೊಳ್ಳು; ಶಾಂತವಾಗು. ೪. ಸಾಯು.

ತಣ್ಣನೆ = ತಣ್ಣಗೆ.

ತಣ್ಣಸ (ನಾ). ೧. ತಂಪು; ಶೈತ್ಯ. ೨. ಒದ್ದೆ; ಆರ್ದ್ರತೆ. ೩. = ತಣಿವು. ~ಇಗ = ೧. ತಂಪಾದವನು. ೨. ಜಡಸ್ವಭಾವದವನು; ಆಲಸಿ.

ತಣ್ಣಿತು (ನಾ). ತಂಪಾದುದು; ತಂಪು; ಶೈತ್ಯ.

ತಣ್ಣಿತ್ತು ೧. = ತಣ್ಣಿತು. (ಗು). ೨. ತಂಪಾದ; ಶೀತಲವಾದ.

ತಣ್ಣೈಸು (ಕ್ರಿ). ಆರಿಸು; ತಣ್ಣಗಾಗುವಂತೆ ಮಾಡು.

ತಣ್ಪು ೧. = ತಣಿಪು. (ನಾ). ೨. ತಂಪು; ಶೈತ್ಯ. ~ಕ(ಗ)ಂಪು = ಹಿತಕರವಾದ ವಾಸನೆ.

ತತ (ನಾ). ೧. ತಂತಿವಾದ್ಯ. ೨. ಗಾಳಿ. ೩. ಭೇರಿ, ನಗಾರಿ ಮುಂತಾದ ಚರ್ಮವಾದ್ಯ. (ಗು). ೪. ಹರಡಿದ; ವ್ಯಾಪ್ತವಾದ.

ತತಿ (ನಾ). ೧. ಮೊತ್ತ; ಗುಂಪು. ೨. ಒಂದು ಯಾಗವಿಧಿ. ೩. = ತತು.

ತತು (ನಾ). ೧. ಹದವಾದ ಕಾಲ; ಸಕಾಲ. ೨. ಸುಗ್ಗಿಯ ಕಾಲ.

ತತ್‌ಕ್ಷಣ (ನಾ). ೧. ಆ ಕ್ಷಣ; ಆ ಸಮಯ. (ಅ). ೨. ಆ ಕ್ಷಣದಲ್ಲಿ; ಕೂಡಲೆ.

ತತ್ಕಾಲ (ನಾ). ೧. ಆ ಕಾಲ; ಆ ಸಮಯ. ೨. ತಕ್ಷಣ; ಅಕ್ಷಣ.

ತತ್ಕ್ಷಣ (ನಾ). ಆ ಗಳಿಗೆ; ಅದೇ ಗಳಿಗೆ.

ತತ್ತ = ತಥ್ಯ.

ತತ್ತರ (ನಾ). ೧. ನಡುಕ; ಕಂಪನ. ೨. ಆತುರ; ಗಡಿಬಿಡಿ. ೩. = ತತ್ತಱ. ~ಇಸು = ೧. ನಡುಗು; ಕಂಪಿಸು. ೨. ತಡವರಿಸು. ೩. ತ್ವರೆಗೊಳ್ಳು; ಉತ್ಸುಕನಾಗು.

ತತ್ತರಣೆ = ತತ್ರಾಣೆ.

ತತ್ತಱ(ರ) (ನಾ). ಕಕ್ಕಾಬಿಕ್ಕಿ; ದಿಗ್ಭ್ರಮೆ. ~(ಂ)ತ(ದ)ಱು(ರಿ) = ೧. ಚೂರುಚೂರಾಗಿ ಕತ್ತರಿಸು. ೨. ನಿರ್ನಾಮಗೊಳಿಸು; ನಾಶಪಡಿಸು.

ತತ್ತವಣೆ (ನಾ). ೧. ಹಂಚಿಕೆ; ಉಪಾಯ. ೨. ಆಭರಣ; ಅಲಂಕಾರ. ೩. ವಿಸ್ತಾರ.

ತತ್ತಟಿ(ಳ) (ನಾ). ಒಂದು ಅನುಕರಣ ಶಬ್ದ. ~ಕು(ಗು)ದಿ = ಕತಕತನೆ ಕುದಿ.

ತತ್ತಿ (ನಾ). ಮೊಟ್ಟೆ; ಅಂಡ.

ತತ್ತು (ನಾ). ೧. ಅಪಾಯ; ಗಂಡಾಂತರ. ೨. ಎಡಹುವಿಕೆ; ಮುಗ್ಗುರಿಸುವಿಕೆ. ೩. ಹೊಂದಿಕೆ; ಜೋಡಣೆ. ~ಕ = ಜೊತೆಗಾರ; ಒಡನಾಡಿ.

ತತ್ತ್ವ (ನಾ). ೧. ಅದರ ಸ್ವರೂಪ, –ಭಾವ. ೨. ಸಾರ; ತಿರುಳು. ೩. ಸತ್ಯ. ೪. ಸಿದ್ಧಾಂತ. ೫. ಪರಮಾತ್ಮ. ~ಆಲೋಕ = ತಾತ್ತ್ವಿಕ ದೃಷ್ಟಿ; ಸತ್ಯಜ್ಞಾನ. ~ಜ್ಞಾನಿ = ಪರಮ ಸತ್ಯವನ್ನು ತಿಳಿದವನು; ದಾರ್ಶನಿಕ.

ತತ್ತ್ವಜ್ಞ = ತತ್ತ್ವಜ್ಞಾನಿ.

ತತ್ಪರ (ನಾ). ೧. ಆಸಕ್ತನಾದವನು; ಪರಾಯಣನಾದವನು. ೨. (ಅದರ) ಮುಂದುಗಡೆ ಇರುವುದು; ಉತ್ತರಪದ. (ಗು). ೩. ಅನಂತರದ. ೪. ಕೆಳದರ್ಜೆಯ. ೫. ಅದನ್ನೇ ಪರಮಾರ್ಥವೆಂದು ತಿಳಿದ. ೬. ತೊಡಗಿದ; ಆಸಕ್ತನಾದ.

ತತ್ಪರತೆ (ನಾ). ಆಸಕ್ತಿ; ಶ್ರದ್ಧೆ.

ತತ್ಪುರುಷ (ನಾ). ೧. ಪರಮಾತ್ಮ. ೨. ವ್ಯಾಕರಣದಲ್ಲಿ ಒಂದು ಸಮಾಸದ ಹೆಸರು. ೩. ಶಿವನ ಪಂಚಮುಖಗಳಲ್ಲಿ ಒಂದು.

ತತ್ರಾಣಿ (ನಾ). ನೀರು ಕುಡಿಯಲು ಬಳಸುವ ಚಪ್ಪಟೆಯಾದ ಮಣ್ಣಿನ ಪಾತ್ರೆ.

ತತ್ವ = ತತ್ತ್ವ.

ತತ್ವಾರ (ನಾ). ಕೊರತೆ; ಅಭಾವ.

ತತ್ಸಮ (ನಾ). ೧. ಕನ್ನಡ, ಸಂಸ್ಕೃತಗಳೆರಡಕ್ಕೂ ಸಮಾನವಾದ ಶಬ್ದ. ೨. ತದ್ಭವಕ್ಕೆ ಸಮಾನವಾದ ಅಥವಾ ಮೂಲವಾದ ಸಂಸ್ಕೃತ ಶಬ್ದ. (ಗು). ೩. ಅದಕ್ಕೆ ಸಮನಾದ.

ತಥಾ (ಅ). ೧. ಹಾಗೆ; ಆ ಮೇರೆಗೆ. ೨. ಹಾಗೆಯೇ; ಅದರಂತೆಯೇ.

ತಥಾಗತ (ನಾ). ೧. ಬುದ್ಧ. ೨. ಜೈನ ಅಥವಾ ಬೌದ್ಧಭಿಕ್ಷು. (ಗು). ೩. ಆ ಸ್ಥಿತಿಯಲ್ಲಿರುವ.

ತಥಾಸ್ತು (ನಾ). ಹಾಗೆಯೇ ಆಗಲಿ ಎಂಬುದನ್ನು ಸೂಚಿಸುವ ಮಾತು; ಒಪ್ಪಿಗೆ; ಅನುಮತಿ.

ತಥ್ಯ (ನಾ). ಸತ್ಯ; ದಿಟ; ನಿಜ.

ತದಕು (ಕ್ರಿ). ೧. ಹೊಡೆ; ಬಡಿ. ೨. ಕುಟ್ಟು; ಪುಡಿಮಾಡು. (ನಾ). ೩. ಹೊಡೆಯುವಿಕೆ. ೪. ಒಂದು ಜಾತಿಯ ಮರ.

ತದನಂತರ (ನಾ). ೧. ಅದರ ತರುವಾಯ. (ಅ). ೨. ಆ ಬಳಿಕ; ಆಮೇಲೆ.

ತದಲು (ನಾ). ಬೇಲಿಯಲ್ಲಿ ಅಳವಡಿಸುವ ಮುಳ್ಳಿನ ಬಾಗಿಲು; ತಡಮೆ.

ತದಿಗೆ (ನಾ). ಪಕ್ಷದ ಮೂರನೆಯ ತಿಥಿ; ತೃತೀಯೆ.

ತದುಕು = ತದಕು.

ತದೆ (ಕ್ರಿ). ೧. ಹೊಡೆ; ಬಡಿ. (ನಾ). ೨. ಹೊಡೆತ; ಪೆಟ್ಟು.

ತದ್ದಲು = ತದಲು.

ತದ್ದಿನ (ನಾ). ೧. ಆ ದಿನ. ೨. ಶ್ರಾದ್ಧ; ತಿಥಿ.

ತದ್ದು (ನಾ). ಒಂದು ಬಗೆಯ ಚರ್ಮರೋಗ.

ತದ್ಧಿತ (ನಾ). ೧. ವ್ಯಾಕರಣದಲ್ಲಿ ಧಾತುವಲ್ಲದ ಪ್ರಕೃತಿಗಳಿಗೆ ಹತ್ತುವ ಪ್ರತ್ಯಯ. (ಗು). ೨. ಅದಕ್ಕೆ ಹಿತವಾದ.

ತದ್ಭವ (ನಾ). ೧. ಅದರಲ್ಲಿ ಹುಟ್ಟಿದವನು. ೨. ಆ ಜನ್ಮ; ಪೂರ್ವಜನ್ಮ. ೩. ಸಂಸ್ಕೃತ ಅಥವಾ ಪ್ರಾಕೃತದಿಂದ ರೂಪಾಂತರ ಹೊಂದಿ ಬಂದ ಶಬ್ದ. (ಗು). ೪. ಅದರಲ್ಲಿ ಹುಟ್ಟಿದ.

ತದ್ವತ್ತು (ಅ). ಅದರಂತೆ; ಹಾಗೆಯೇ.

ತನಕ (ಅ). ವರೆಗೆ; ಪರ್ಯಂತ.

ತನಯ = ತನುಜ.

ತನಯೆ = ತನುಜೆ.

ತನಿ (ಕ್ರಿ). ೧. ಹುಲುಸಾಗಿ ಬೆಳೆ; ಹಸನಾಗಿ ಬೆಳೆ. ೨. ಪಕ್ವವಾಗು ; ಕಳಿ. ೩. ಹೆಚ್ಚಾಗು; ಅಧಿಕವಾಗು. ೪. ಒಂಟಿಯಾಗಿರು; ಪ್ರತ್ಯೇಕವಾಗಿರು. (ನಾ). ೫. ಪಕ್ವತೆ; ಪೂರ್ಣತೆ. ೬. ಚೆನ್ನಾಗಿ ಬೆಳೆದುದು. ೭. ತಂಪು; ಹಿತ. ೮. ಸವಿಯಾದುದು; ಸಿಹಿ. ೯. ಹೊಸತು; ನೂತನವಾದುದು. ೧೦. ಹೆಚ್ಚಾದುದು; ಅಧಿಕವಾದುದು. ೧೧. ನಿರ್ಮಲವಾದುದು. ೧೨. ಪ್ರತ್ಯೇಕವಾದುದು; ಒಂಟಿಯಾದುದು. ೧೩. ಒಂಟಿಯಾಗಿರುವಿಕೆ; ಏಕಾಂತ. ~ಎ(ಯೆ)ಱೆ(ರೆ) = ೧. ಹಾವುಗಳಿಗೆ ಪೂಜಾಕಾಲದಲ್ಲಿ ತಂಪಾಗುವಂತೆ ಹಾಲನ್ನು ಎರೆ. ೨. ನೈವೇದ್ಯವನ್ನು ಅರ್ಪಿಸು. ~ಕಿ(ಗಿ)ಡಿ = ಪ್ರಜ್ವಲಿಸುವ ಕೆಂಡ. ~ಕೆ(ಗೆ)ತ್ತು = ೧. ಹೆಚ್ಚಾಗಿ ಅದಿರು, –ನಡುಗು. ೨. ಅತಿಶಯವಾದ ನಡುಕ, –ಸ್ಪಂದನ. ~ಕೆ(ಗೆ)ದಱು(ರು) = ೧. ಚೆನ್ನಾಗಿ ಚೆದರಿಸು. ೨. ಚೆಲ್ಲಾಪಿಲ್ಲಿಯಾಗು. ೩. ಹೆಚ್ಚಾಗಿ ಕೆದಕು. ೪. ಹೆಚ್ಚಾಗಿ ಚೆದರಿರುವಿಕೆ. ~ನಿದ್ರೆ = ೧. ಗಾಢವಾದ ನಿದ್ರೆ. ೨. ಅತಿಶಯವಾದ ಜಡತೆ. ~ಪೆ(ವೆ)ರ್ಚು = ೧. ಅತಿಶಯವಾಗಿ ಹೆಚ್ಚು. ೨. ಬಹಳವಾಗಿ ಉಬ್ಬು, –ಹಿಗ್ಗು. ~ಬೆ(ವೆ)ಳಗು = ೧. ಉಜ್ವಲವಾದ ಪ್ರಕಾಶ. ೨. ಶುಭ್ರವಾದ ಕಾಂತಿ, –ತೇಜಸ್ಸು. ~ಸೊರ್ಕು = ಹೆಚ್ಚಾದ ಮಾದಕತೆ, –ಅಮಲು.

ತನಿಖೆ (ನಾ). ಶೋಧ; ತಪಾಸಣೆ.

ತನು (ನಾ). ೧. ಮೈ; ಶರೀರ. ೨. ಚರ್ಮ; ತೊಗಲು. ೩. ತಂಪು; ಶೈತ್ಯ. (ಗು). ೪. ಸಣ್ಣದಾದ; ಸೂಕ್ಷ್ಮವಾದ. ೫. ತೆಳುವಾದ. ~ಕೆ(ಗೆ)ಡು = ೧. ಅಂಗಹೀನವಾಗು. ೨. ಬೇನೆಬೀಳು. ೩. ಬಡವಾಗು; ಕೃಶವಾಗು. ~ಕೊ(ಗೊ)ಳ್ = ರೂಪತಾಳು; ಮೈದಳೆ.

ತನುಜ (ನಾ). ಮಗ; ಪುತ್ರ.

ತನುಜೆ (ನಾ). ಮಗಳು; ಪುತ್ರಿ.

ತನುತ್ರ (ನಾ). ಕವಚ; ಚಿಲಖತ್ತು.

ತನೂಜ = ತನುಜ.

ತನೂಜೆ = ತನುಜೆ.

ತನೂದರಿ (ನಾ). ತೆಳುವಾದ ಹೊಟ್ಟೆಯುಳ್ಳವಳು.

ತನೂರುಹ (ನಾ). ೧. ಮೈಮೇಲಿನ ರೋಮ, –ಕೂದಲು. ೨. ರೆಕ್ಕೆ; ಗರಿ.

ತನೆ (ನಾ). (ಸಾಮಾನ್ಯವಾಗಿ ಪಶುಗಳ) ಬಸಿರು, –ಗರ್ಭ.

ತನ್ಮಯ (ನಾ). ೧. ಅದರಲ್ಲಿಯೇ ತಲ್ಲೀನನಾದವನು. (ಗು). ೨. ಅದರಲ್ಲಿಯೇ ಆಸಕ್ತವಾದ; ತಲ್ಲೀನ; ಮಗ್ನ.

ತನ್ವಂಗಿ (ನಾ). ಕೋಮಲವಾದ ಶರೀರವುಳ್ಳವಳು; ಕೋಮಲಾಂಗಿ.

ತನ್ವಿ ೧. = ತನ್ವಂಗಿ. ೨. ಛಂದಸ್ಸಿನಲ್ಲಿ ಒಂದು ವೃತ್ತದ ಹೆಸರು.

ತಪ ೧. = ತಪಸ್ಸು. ೨. ನೋವು; ದುಃಖ. ೩. ಬೇಸಗೆ. ೪. ರಾಕ್ಷಸ. ೫. ಹನ್ನೆರಡು ವರ್ಷಗಳ ಅವಧಿ. ~ಇಸು = ೧. ಸುಡು; ಉರಿ. ೨. ತಪಸ್ಸು ಮಾಡು. ೩. ನೋವಿನಿಂದ ನರಳು; ಪರಿತಪಿಸು. ೪. ತಾಪಪಡಿಸು; ದುಃಖಕ್ಕೊಳಗು ಮಾಡು. ~ಕು(ಗು)ಟ್ಟು = ಮರುಗು; ಪರಿತಪಿಸು.

ತಪನ (ನಾ). ೧. ಸೂರ್ಯ. ೨. ವ್ಯಥೆ; ದುಃಖ. (ಗು). ೩. ಸುಡುವ; ಕಾಯಿಸುವ. ~ಕರ = ಸೂರ್ಯನ ಕಿರಣ. ~ಸುತ = ೧. ಸೂರ್ಯನ ಮಗ. ೨. ಕರ್ಣ. ೩. ಯಮ. ೪. ಶನಿ. ೫. ಸುಗ್ರೀವ.

ತಪನೀಯ (ನಾ). ೧. ಚಿನ್ನ; ಹೊನ್ನು. (ಗು). ೨. ಕಾಯಿಸಬೇಕಾದ.

ತಪರಾಕಿ (ನಾ). ಕೆನ್ನೆಗೆ ಹೊಡೆದ ಏಟು ; ಕಪಾಳಮೋಕ್ಷ.

ತಪಸಿ = ತವಸಿ.

ತಪಸೀಲು (ನಾ). ಪೂರ್ಣ ವಿವರಣೆಗಳೊಂದಿಗೆ ಕೂಡಿದ ಹೇಳಿಕೆ, –ನಿರೂಪಣೆ.

ತಪಸು (ನಾ). ತಪಸ್ಸು ; ಧ್ಯಾನ.

ತಪಸ್ವಿ (ನಾ). ಮುನಿ ; ತಪಸಿ.

ತಪಸ್ವಿನಿ (ನಾ). ೧. ತಪಸ್ಸು ಮಾಡುವವಳು. ೨. ಜಟಾಮಾಂಸಿ ಎಂಬ ಸಸ್ಯ ಮತ್ತು ಅದರಿಂದ ಸಿದ್ಧಪಡಿಸಿದ ಸುಗಂಧ ತೈಲ.

ತಪಸ್ಸು (ನಾ). ೧. ಕಾವು ; ಶಾಖ. ೨. ಅಗ್ನಿ; ಬೆಂಕಿ. ೩. ವ್ರತನಿಯಮಾದಿಗಳಿಂದ ದೇಹ ವನ್ನು ದಂಡಿಸುತ್ತ ಧ್ಯಾನಮಾಡುವುದು. ೪. ಮಾಘಮಾಸ. ೫. ಸಪ್ತಲೋಕಗಳಲ್ಲಿ ಒಂದು.

ತಪಾಸಣೆ (ನಾ). ೧. ಪರೀಕ್ಷಿಸುವುದು ; ಪರಿಶೀಲನೆ. ೨. ಶೋಧನೆ ; ತನಿಖೆ.

ತಪಾಸು = ತಪಾಸಣೆ. ~ಇಸು = ೧. ಪರೀಕ್ಷಿಸು; ಪರಿಶೀಲನೆ ಮಾಡು. ೨. ಪತ್ತೆಹಚ್ಚು ; ಶೋಧಿಸು.

ತಪೇಲಿ (ನಾ). ಲೋಹದ ದುಂಡನೆಯ ಪಾತ್ರೆ; ತಪ್ಪಲೆ.

ತಪೋಧನ (ನಾ). ತಪಸ್ಸನ್ನೇ ಧನವನ್ನಾಗಿ ಉಳ್ಳವನು ; ಋಷಿ.

ತಪೋಬಲ (ನಾ). ತಪಸ್ಸಿನ ಪ್ರಭಾವ ; ತಪಶ್ಶಕ್ತಿ.

ತಪೋವನ (ನಾ). ತಪಸ್ವಿಗಳು ಇರುವ ವನ.

ತಪ್ತ (ಗು). ೧. ಕಾಯ್ದ ; ಸುಟ್ಟ. ೨. ನೊಂದ; ಸಂಕಟಪಟ್ಟ.

ತಪ್ಪಡಿಸು (ಕ್ರಿ). ಮೃದುವಾಗಿ ತಟ್ಟು.

ತಪ್ಪಲ್ (ನಾ). ೧. ಬೆಟ್ಟದ ಮಗ್ಗುಲು ; ಸಾನು. ೨. (ಬೆಟ್ಟದ ಮೇಲಿನ) ಸಮತಲ ಪ್ರದೇಶ.

ತಪ್ಪಲು ೧. = ತಪ್ಪಲ್. ೨. ದಡ ; ತೀರ.

ತಪ್ಪಲೆ = ತಪೇಲಿ.

ತಪ್ಪಳೆ = ಚಪ್ಪಳೆ. ~ಕು(ಗು)ಟ್ಟು = ಚಪ್ಪಾಳೆ ಹೊಡೆ.

ತಪ್ಪಿತ (ನಾ). ತಪ್ಪು ; ಅಪರಾಧ.

ತಪ್ಪಿತಸ್ಥ (ನಾ). ತಪ್ಪು ಮಾಡಿದವನು ; ಅಪರಾಧಿ.

ತಪ್ಪು (ಕ್ರಿ). ೧. ಅಪರಾಧ ಮಾಡು. ೨. ನೀತಿ ಬಿಟ್ಟು ನಡೆ ; ಕ್ರಮತಪ್ಪು. ೩. ದೊರೆಯದೆ ಇರು ; ಸಿಕ್ಕದಿರು. ೪. ಬಿಡು ; ಉಳಿ. ೫. ಮೀರು ; ಉಲ್ಲಂಘಿಸು. ೬. ನೆರವೇರ ದಿರು ; ನಡೆಯದಿರು. ೭. ತಾಗದಿರು. ೮. ಸುಳ್ಳಾಗು. ೯. ಸುಳ್ಳುಹೇಳು ; ಸುಳ್ಳಾಡು. ೧೦. ದುರಾಸೆ ಮಾಡು ; ಕಾಮಿಸು. (ನಾ). ೧೧. ಅಪರಾಧ ; ಪಾಪ. ೧೨. ದೋಷ ; ಕುಂದು. ೧೩. ಜಾರು ವಿಕೆ. ೧೪. ಸುಳ್ಳು. ೧೫. ಅಪರಾಧಕ್ಕಾಗಿ ಕೊಡಬೇಕಾದ ದಂಡ, –ಕಾಣಿಕೆ. ~ಇಸು =೧. ತಪ್ಪಿಹೋಗುವಂತೆ ಮಾಡು. ೨. ಸಾಧಿಸದೆ ಇರು ; ಮಾಡದಿರು. ೩. ಕಳಚು ; ಬಿಚ್ಚು. ೪. ಜಾರಿಕೊಳ್ಳು; ನುಣುಚಿಕೊಳ್ಳು. ೫. ಅಡ್ಡಿಪಡಿಸು. ೬. ಕಳೆ; ನೀಗು. ೭. ಮೀರು; ಅತಿಕ್ರಮಿಸು. ~ಓಲೆ = ೧. ಗ್ರಂಥದ ಮುದ್ರಣದಲ್ಲಿ ಉಳಿದುಕೊಂಡಿರುವ ತಪ್ಪುಗಳನ್ನೂ ಅವು ಗಳ ತಿದ್ದುಪಡಿಗಳನ್ನೂ ಸೂಚಿಸುವ ಪಟ್ಟಿ. ೨. ಮುದ್ರಣದ ಕರಡುಪ್ರತಿ. ~ಕ = ತಪ್ಪು ಮಾಡಿದವನು ; ಅಪರಾಧಿ. ~ಕಾ(ಗಾ)ಣಿಕೆ = ಅಪರಾಧಕ್ಕಾಗಿ ತೆರುವ ದಂಡ. ~ಗಂಟು = ೧. ಬಿಚ್ಚಲಾಗದ ಗಂಟು ; ಕಗ್ಗಂಟು. ೨. ನಿಯಮಕ್ಕೆ ವಿರುದ್ಧವಾದ ಸೇರುವಿಕೆ. ೩. ಸಂಪರ್ಕ ಕಳೆದುಹೋಗುವಿಕೆ.

ತಬಕ (ನಾ). ತಟ್ಟೆ ; ಹರಿವಾಣ.

ತಬಕು = ತಬಕ.

ತಬಲ (ನಾ). ಒಂದು ಬಗೆಯ ಚರ್ಮವಾದ್ಯ.
ತಬಲೆ = ತಬಲ.
ತಬೇಲಿ (ನಾ). ಕುದುರೆಯನ್ನು ಕಟ್ಟುವ ಸ್ಥಳ; ಲಾಯ.
ತಬ್ಬರಿಸು (ಕ್ರಿ). ೧. ಹೆದರು; ಹೌಹಾರು. ೨. ಎಡವು; ಮುಗ್ಗರಿಸು.
ತಬ್ಬಲಿ (ನಾ). ೧. ತಾಯಿತಂದೆ ಇಲ್ಲದವನು; ಅನಾಥ; ದಿಕ್ಕಿಲ್ಲದವನು. ೨. ದಿಕ್ಕಿಲ್ಲದುದು.
ತಬ್ಬಿಬ್ಬು (ನಾ). ದಿಗ್ಭ್ರಮೆ; ಕಕ್ಕಾಬಿಕ್ಕಿ. ~ ಕೊ(ಗೊ)ಳ್(ಳು) = ದಿಗ್ಭ್ರಮೆಗೊಳ್ಳು; ಕಂಗೆಡು.
ತಬ್ಬಿಲಿ = ತಬ್ಬಲಿ.
ತಬ್ಬು (ಕ್ರಿ). ೧. ಆಲಿಂಗಿಸು; ಅಪ್ಪಿಕೊಳ್ಳು. (ನಾ). ೨. ಆಲಿಂಗನ; ಅಪ್ಪುಗೆ. ೩. ತೋಳುಗಳಲ್ಲಿ ಒಂದು ಸಲಕ್ಕೆ ಹಿಡಿಯುವಷ್ಟು; ಒಂದು ತೆಕ್ಕೆ.
ತಮ (ನಾ). ೧. ಕತ್ತಲೆ; ಅಂಧಕಾರ. ೨. ಅಜ್ಞಾನ. ೩. ಪಾಪ; ದೋಷ. ೪. = ತಮೋಗುಣ. ೫. ರಾಹು.
ತಮಂಗ (ನಾ). ವೇದಿಕೆ; ಜಗಲಿ; ಕಟ್ಟೆ.
ತಮಂಧ(ನಾ).೧. ಕಗ್ಗತ್ತಲೆ; ಗಾಢಾಂಧಕಾರ. ೨. ಅಜ್ಞಾನ.
ತಮಕು (ನಾ). ಡಂಗುರ ಸಾರುವ ತಮಟೆ.
ತಮಟೆ = ತಂಬಟೆ.
ತಮರ್ (ನಾ). ಹುಟ್ಟಿದ ಮನೆ; ತವರು.
ತಮಸ್ವಿನಿ (ನಾ). ರಾತ್ರಿ; ಇರುಳು.
ತಮಸ್ಸು = ತಮ.
ತಮಾಲ(ಳ) (ನಾ). ೧. ಹೊಂಗೆಯ ಮರ. ೨. ಕತ್ತಲೆ. ~ಪತ್ರ = ೧. ಹೊಂಗೆಯ ಮರ ಮತ್ತು ಅದರ ಎಲೆ. ೨. ಹಣೆಯಲ್ಲಿ ಧರಿಸುವ ಒಂದು ಬಗೆಯ ಬೊಟ್ಟು.
ತಮಾಷೆ (ನಾ). ೧. ಮೋಜು; ಹಾಸ್ಯ; ವಿನೋದ. ೨. ಹಾಸ್ಯದ ಪ್ರಸಂಗ. ೩. ಮೋಜಿನ ವಸ್ತು.
ತಮಿ (ನಾ). ೧. ಅಜ್ಞಾನಿ. ೨. ಇರುಳು; ರಾತ್ರಿ.
ತಮಿಸ್ರ (ನಾ). ಕತ್ತಲೆ; ಅಂಧಕಾರ.
ತಮಿಳ್(ಳ್,ಳು) (ನಾ). ದ್ರಾವಿಡ ಭಾಷೆಗಳಲ್ಲಿ ಒಂದು.
ತಮೋಗುಣ (ನಾ). ಸತ್ತ್ವ, ರಜ ಮತ್ತು ತಮವೆಂಬ ಮೂರು ಗುಣಗಳಲ್ಲಿ ಒಂದು.
ತಮೋಘ್ನ (ನಾ). ೧. ಕತ್ತಲೆಯನ್ನು ನಾಶಮಾಡುವವನು; ಅಗ್ನಿ. (ಗು). ೨. ಕತ್ತಲೆಯನ್ನು ಹೋಗಲಾಡಿಸುವ.
ತಮೋಮಣಿ (ನಾ). ೧. ನವರತ್ನಗಳಲ್ಲಿ ಒಂದು; ಇಂದ್ರನೀಲ. ೨. ಮಿಂಚುಹುಳು.
ತಮೋಹ (ನಾ). ಕತ್ತಲೆಯನ್ನು ನಿವಾರಿಸುವವನು.
ತಮೋಹರ (ನಾ). ೧. ಕತ್ತಲೆಯನ್ನು ಕಳೆಯುವುದು. ೨. ಅಜ್ಞಾನವನ್ನು ನಿವಾರಿಸುವವನು. (ಗು). ೩. ಕತ್ತಲೆಯನ್ನು ಕಳೆಯುವ.
ತಮ್ಮ (ನಾ). ಕಿರಿಯ ಸಹೋದರ; ಅನುಜ.
ತಮ್ಮಟೆ = ತಂಬಟೆ.
ತಮ್ಮಡಿ (ನಾ). ೧. ಅರ್ಚಕ; ಪೂಜಾರಿ. ೨. ಗುರು; ಮುನಿ; ಋಷಿ.
ತಮ್ಮಿಸು (ಕ್ರಿ). ಶಮನಗೊಳಿಸು; ಶಾಂತಗೊಳಿಸು.
ತಯಾರಿ (ನಾ). ಸಿದ್ಧತೆ; ಏರ್ಪಾಡು; ಸಜ್ಜು.
ತಯಾರು = ತಯಾರಿ. ~ಇಕೆ = ೧. ತಯಾರಿಸುವಿಕೆ; ಸಿದ್ಧಪಡಿಸುವಿಕೆ. ೨. ಸಿದ್ಧಪಡಿಸಿದುದು. ~ಇಸು = ತಯಾರು ಮಾಡು; ಸಿದ್ಧಪಡಿಸು.
ತರ್ (ಕ್ರಿ). ೧. ತೆಗೆದುಕೊಂಡು ಬರು. ೨. ಕರೆತರು. ೩. ಕೊಡು; ನೀಡು. ೪. ಒದಗಿಸು; ಉಂಟುಮಾಡು.
ತರ (ನಾ). ೧. ಸರಿಯಾದುದು; ಯೋಗ್ಯವಾದುದು. ೨. ಬಗೆ; ಪ್ರಕಾರ. ೩. ಗುಂಪು; ಸಮೂಹ. ೪. ಸಾಲು; ಓಳಿ. ೫. ಪದರು;

ಮಡಿಕೆ; ಸ್ತರ. ~(ಂ)ಕೊ(ಗೊ)ಳ್ = ೧. ಸಾಲುಗೊಳ್ಳು; ಪಂಕ್ತಿಯಲ್ಲಿ ನಿಲ್ಲು. ೨. ಒಟ್ಟುಗೂಡು; ಗುಂಪುಗೂಡು.

ತರಂಗ (ನಾ). ೧. ಅಲೆ; ತೆರೆ; ಲಹರಿ. ೨. ಕುದುರೆಯ ಓಟಗಳಲ್ಲಿ ಒಂದು ಬಗೆ. ~ಇಸು = ೧. ಅಲೆಯಂತೆ ಓಡಾಡು; ಅಲೆಯಂತೆ ಇರು. ೨. ಮೇರೆ ಮೀರು; ಎಲ್ಲೆದಾಟು. ೩. ದಟ್ಟೈಸು; ಸಂದಣಿಸು.

ತರಂಗಿಣಿ (ನಾ). ಅಲೆಗಳಿಂದ ಕೂಡಿದುದು; ನದಿ.

ತರಂಡ (ನಾ). ಹಡಗು; ದೋಣಿ.

ತರಕಟಾಲು (ಗು). ಕೆಲಸಕ್ಕೆ ಬಾರದ; ನಿಷ್ಪ್ರಯೋಜಕ.

ತರಕಲು (ನಾ). ಒರಟು; ದೊರಗು; ಬಿರುಸು.

ತರಕಸ (ನಾ). ೧. ಬಾಣ; ಅಂಬು. ೨. ಬತ್ತಳಿಕೆ; ತೂಣೀರ.

ತರಕಾರಿ (ನಾ). ಕಾಯಿಪಲ್ಯೆ.

ತರಕ್ಷು (ನಾ). ೧. ಹುಲಿಯ ಜಾತಿಗೆ ಸೇರಿದ ಒಂದು ಪ್ರಾಣಿ; ಕಿರುಬ. ೨. ಹುಲಿ; ವ್ಯಾಘ್ರ.

ತರಗಡೆ (ನಾ). ೧. ನಷ್ಟ; ಹಾನಿ. ೨. ಕುಂದು; ಕೊರತೆ.

ತರಗತಿ (ನಾ). ೧. ಮಟ್ಟ; ದರ್ಜೆ. ೨. ಇಯತ್ತೆ; ವರ್ಗ.

ತರಗಬರಗ (ನಾ). ಅಸ್ತವ್ಯಸ್ತತೆ; ಚೆಲ್ಲಾಪಿಲ್ಲಿ.

ತರಗು (ನಾ). ೧. ಕುಂದುವಿಕೆ; ಕಡಮೆಯಾಗುವಿಕೆ. ೨. ದಳ್ಳಾಳಿ; ವಟ್ಟಾ. ೩. ದಳ್ಳಾಳಿ ವ್ಯಾಪಾರ ನಡಸುವ ಸ್ಥಳ. ೪. = ತಱಗು. ~ಪೇಟೆ = ದಳ್ಳಾಳಿ ವ್ಯಾಪಾರ ನಡೆಯುವ ಪೇಟೆ.

ತರಚಲು ೧. = ತರಕಲು. ೨. ತರಚಿದುದು; ಗೀರು.

ತರಚು (ಕ್ರಿ). ೧. ಗೆರೆಬೀಳುವಂತೆ ಮಾಡು; ಗೀರು; ಗೆಬರು. (ನಾ). ೨. ಜಗಳ; ಕಲಹ; ತಂಟೆ.

ತರಣ (ನಾ). ೧. ದಾಟುವಿಕೆ; ಪಾರಾಗುವಿಕೆ. ೨. ದೋಣಿ; ಹರಿಗೋಲು. ೩. ಬಲ; ಶಕ್ತಿ; ತ್ರಾಣ. (ಗು). ೪. ದಾಟಿಸುವ; ಪಾರುಗಾಣಿಸುವ. ~ಪಣ್ಯ = ಹೊಳೆ ದಾಟಿಸುವುದಕ್ಕಾಗಿ ನಾವಿಕನಿಗೆ ಕೊಡುವ ಕೂಲಿ.

ತರಣಿ (ನಾ). ೧. ದೋಣಿ; ಹರಿಗೋಲು. ೨. ನೇಸರು; ಸೂರ್ಯ. ೩. ಗಿಣಿ. ~ಕಾಂತ = ಸೂರ್ಯಕಾಂತ ಶಿಲೆ.

ತರತಮ (ನಾ). ಹೆಚ್ಚು ಕಡಮೆ; ಮೇಲು ಕೀಳು.

ತರತರ (ನಾ). ಒಂದು ಅನುಕರಣ ಧ್ವನಿ. ~ಇಸು = ನಡುಗು; ಕಂಪಿಸು. ~ಕು(ಗು)ಟ್ಟಿಸು = ಬಹಳವಾಗಿ ನಡುಗಿಸು.

ತರದೂದು (ನಾ). ೧. ಸಿದ್ಧತೆ; ಏರ್ಪಾಡು. ೨. ಪ್ರಯತ್ನ. ೩. ಜರೂರು; ಗರಜು.

ತರಪು (ನಾ). ಕಡಮೆ ಬೆಲೆಯ ರತ್ನ.

ತರಪೇತು = ತರಬೇತು.

ತರಫು (ನಾ). ೧. ದಿಕ್ಕು; ದೆಸೆ. ೨. ಜಿಲ್ಲೆ.

ತರಬೇತು (ನಾ). ಶಿಕ್ಷಣ; ಅಭ್ಯಾಸ.

ತರಲ(ಳ) (ನಾ). ೧. ಚಂಚಲತೆ; ಅಸ್ಥಿರತೆ. ೨. ದ್ರವಪದಾರ್ಥ. ೩. ಮಗು; ಹಸುಳೆ. ೪. ಹುಡುಗ; ಬಾಲಕ. ೫. ಸರದ ನಡುವಿನ ಮಣಿ; ಪದಕ. ೬. ಒಂದು ವೃತ್ತದ ಹೆಸರು. ೭. ಕಾಮುಕ. (ಗು). ೮. ಚಂಚಲವಾದ; ಸ್ಥಿರವಲ್ಲದ. ೯. ಹೊಳೆಯುವ; ಮಿನುಗುವ. ೧೦. ದ್ರವರೂಪವಾದ. ~ಈಕ್ಷಣ = ಚಂಚಲವಾದ ಕಣ್ಣು; ಅತ್ತಿಂದಿತ್ತ ಚಲಿಸುವ ಕಣ್ಣು.

ತರಲೆ(ಳೆ) (ನಾ). ೧. ಅಕ್ಕಿಯ ಗಂಜಿ; ಅಂಬಲಿ. ೨. ಅಪ್ರಯೋಜಕವಾದುದು;

ಕೆಲಸಕ್ಕೆ ಬಾರದುದು. ೩. ಚಾಡಿ. ೪. ತಂಟೆ; ಪೀಡೆ. ೫. ಹುಡುಗಿ; ಬಾಲೆ. (ಗು). ೬. ಅಪ್ರಯೋಜಕವಾದ. ೭. ಚಂಚಲ ಸ್ವಭಾವದ.

ತರವಾರ (ನಾ). ಕತ್ತಿ; ಖಡ್ಗ; ತಲವಾರ.

ತರಸ (ನಾ). ೧. ಮಾಂಸ; ಅಡಗು. ೨. ತ್ರಾಸ; ಕಷ್ಟ.

ತರಸು (ನಾ). ಒರಟು; ಬಿರುಸು.

ತರಸ್ವಿ (ನಾ). ೧. ವೀರ; ಕಲಿ. ೨. ಚಾರ; ಹರಿಕಾರ. ೩. ಗರುಡ. ೪. ಗಾಳಿ. (ಗು). ೫. ವೇಗವುಳ್ಳ. ೬. ಸಾಮರ್ಥ್ಯವುಳ್ಳ.

ತರಹ (ನಾ). ವಿಧ; ಬಗೆ; ಪ್ರಕಾರ.

ತರಹರ (ನಾ). ೧. ನಿಲುಗಡೆ; ನಿಲ್ಲುವಿಕೆ. ೨. ಲಯ; ನಾಶ. ೩. ಸಹನೆ; ತಾಳ್ಮೆ. ೪. ಆವಸರ; ಆತುರ. ೫. ಸಮಾಧಾನ; ನೆಮ್ಮದಿ. ೬. ಸೇರಿಕೆ; ಹೊಂದಿಕೆ. ~ಇಸು = ೧. ಸೈರಿಸು; ಸಹಿಸಿಕೊಳ್ಳು. ೨. ನಡುಗು; ತತ್ತರಿಸು. ೩. ಚಡಪಡಿಸು. ೪. ಆತುರಪಡು; ಗಡಿಬಿಡಿ ಮಾಡು. ೫. ದೂರ ಹೋಗು; ಅಗಲು. ೬. ತೊರೆ; ಬಿಡು.

ತರಳು (ನಾ). ಪಕ್ವವಾಗಿ ಒಣಗಿದ ತೆಂಗು ಮುಂತಾದ ಫಲ.

ತರಾಟೆ (ನಾ). ಆಕ್ಷೇಪಣೆ; ತಕರಾರು.

ತರಾತುರಿ (ನಾ). ೧. ಆತುರ; ಆವಸರ; ತ್ವರೆ. ೨. ಒತ್ತಡ; ಒತ್ತಾಯ.

ತರಿ ೧. = ತಱು. (ನಾ). ೨. ಒರಟು; ದೊರಗು; ಬಿರುಸು. ೩. ನುಚ್ಚು; ಹರಳು. ೪. ತೆಪ್ಪ; ದೋಣಿ. ೫. ನೀರಾವರಿ ಉಳ್ಳ ಭೂಮಿ; ಗದ್ದೆ.

ತರಿಸು (ಕ್ರಿ). ೧. ತರುವಂತೆ ಮಾಡು; ಹತ್ತಿರಕ್ಕೆ ಬರಿಸು. ೨. ದಾಟು; ಪಾರಾಗು.

ತರು ೧. = ತರ್. (ನಾ). ೨. ಮರ; ವೃಕ್ಷ. ~ಚರ = ಕೋಡಗ; ಕಪಿ. ~ವಳಿ = ಹೆಣ್ಣು, ವಸ್ತು ಮುಂತಾದುವನ್ನು ಕೊಡುವುದು ಅಥವಾ ತರುವುದು.

ತರುಡು (ನಾ). ವೃಷಣ.

ತರುಣ (ನಾ). ೧. ಹರೆಯದವನು; ಯುವಕ. ೨. ಕಾಲ; ಸಮಯ. ೩. = ತಱುಣ. (ಗು). ೪. ಕೋಮಲವಾದ; ಎಳೆಯ. ~ಆತಪ = ಎಳೆಯ ಬಿಸಿಲು; ಹೂಬಿಸಿಲು.

ತರುಣಿ (ನಾ). ಹರೆಯದವಳು; ಯುವತಿ.

ತರುಣಿಮ (ನಾ). ಹರೆಯ; ಪ್ರಾಯ.

ತರುವಲಿ (ನಾ). ೧. ಹುಡುಗ. ೨. ಹುಡುಗಿ. ೩. ತಬ್ಬಲಿ; ಪರದೇಶಿ. ~ತನ = ಹುಡುಗಾಟಿಕೆ; ಹುಡುಗತನ.

ತಱ(ರ)(ಂ)ಟು (ನಾ). ೧. ಬರಡು; ಜೊಳ್ಳಾದುದು. ೨. ಕೂದಲು ಉದುರಿದ ಸ್ಥಿತಿ.

ತಱ(ರ)ಕಟೆ (ನಾ). ಅಧಿಕವಾದ ಬಾಧೆ, –ತೊಂದರೆ. ~ಕಾ(ಗಾ)ಡು = ಅತಿಯಾಗಿ ಕಾಡು, –ಪೀಡಿಸು.

ತಱ(ರ)ಗು (ನಾ). ೧. ಒಣಗಿದುದು. ೨. ಒಣಗಿದ ಎಲೆ. ೩. ಒಂದು ಬಗೆಯ ಖಾದ್ಯ.

ತಱು(ರಿ) (ಕ್ರಿ). ೧. ಕಡಿ; ಕತ್ತರಿಸು. ೨. ಹೂವು ಮುಂತಾದುವನ್ನು ಕೀಳು, –ಕೊಯ್ಯು. ೩. ಉಜ್ಜು; ತಿಕ್ಕು. (ನಾ). ೪. ಕಡಿಯುವಿಕೆ; ಕತ್ತರಿಸುವಿಕೆ. ೫. ಕತ್ತಿ. ೬. ಜೋಡಿಸಿರುವುದು; ಕೂಡಿಸಿರುವುದು. ೭. ಪ್ರಾಯದವಳು; ಯುವತಿ. ~ಮಿಂಡಿ = ಹೊಸ ಪ್ರಾಯದವಳು. ~ಸಲ್ = ನಿಶ್ಚಯಿಸು; ನಿರ್ಣಯಿಸು.

ತಱು(ರು)(ಂ)ಬು (ಕ್ರಿ). ೧. ನಿಲ್ಲಿಸು; ಅಡ್ಡಗಟ್ಟು. ೨. ನಿಗ್ರಹಿಸು; ಅಂಕೆಯಲ್ಲಿಡು. (ನಾ). ೩. ಬಂಡೆಗಳನ್ನು ಎತ್ತಲು ಬಳಸುವ ಕೋಲು; ಸನ್ನೆಕೋಲು.

ತಱು(ರು)ಣ (ನಾ). ತಕ್ಕ ಸಮಯ; ಯೋಗ್ಯಕಾಲ.

ತಋ(ರು)ಪು (ನಾ). ಬೆಳೆದ ಕರುವುಳ್ಳ ಹಸು; ಕಡೆಗಂದಿ.

ತಋ(ರು)ವಾಯ್ (ನಾ). ೧. ಕ್ರಮ; ಪರಿವಿಡಿ. ೨. ಅನಂತರದ ಸಮಯ. ೩. ಉಚಿತವಾದ ಸಮಯ.

ತಋ(ರು)ವಾಯು (ನಾ). ೧. ಕ್ರಮ; ಪರಿವಿಡಿ. (ಅ). ೨. ಆಮೇಲೆ; ಆಬಳಿಕ.

ತರ್ಕ (ನಾ). ೧. ಊಹೆ; ಅನುಮಾನ. ೨. ವಿಚಾರ; ಚಿಂತನೆ. ೩. ಚರ್ಚೆ; ವಾದ. ೪. ಸಂದೇಹ; ಸಂಶಯ. ೫. ಆರು ದರ್ಶನಗಳಲ್ಲಿ ಒಂದು. ೬. ಸಂಚಿತ ಕರ್ಮ. ~ಇಸು = ೧. ವಾದಮಾಡು; ಚರ್ಚಿಸು. ೨. ಊಹಿಸು; ಆಲೋಚಿಸು. ~ಸರಣಿ = ವಾದಿಸುವ ರೀತಿ, -ಬಗೆ.

ತರ್ಕೈಸು (ಕ್ರಿ). ಅಪ್ಪು; ಆಲಿಂಗಿಸು.

ತಗ್ಗು (ಕ್ರಿ). ೧. ಕುಗ್ಗು; ಕುಸಿ. ೨. ಬಾಗು. ೩. ಕುಂದು; ಕಡಮೆಯಾಗು. ೪. ಶಾಂತವಾಗು. (ನಾ). ೫. ಬೆಲೆ ಹೆಚ್ಚಾಗಿರುವಿಕೆ; ತುಟ್ಟಿ.

ತರ್ಜನ (ನಾ). ೧. ಹೆದರಿಸುವುದು; ಬೆದರಿಸುವುದು. ೨. ನಿಂದೆ; ಹೀಯಾಳಿಕೆ.

ತರ್ಜನಿ (ನಾ). ಹೆಬ್ಬೆರಳಿನ ಪಕ್ಕದ ಬೆರಳು; ತೋರುಬೆರಳು.

ತರ್ಜಿಸು (ಕ್ರಿ). ೧. ಹೆದರಿಸು; ಬೆದರಿಸು. ೨. ನಿವಾರಿಸು; ತಪ್ಪಿಸು. ೩. ಧಿಕ್ಕರಿಸು.

ತರ್ಜುಮೆ (ನಾ). ಅನುವಾದ; ಭಾಷಾಂತರ.

ತರ್ಣಕ (ನಾ). ೧. ಆಗತಾನೆ ಹುಟ್ಟಿದ ಕರು. ೨. ಕರು; ಗೋವತ್ಸ.

ತರ್ದು (ನಾ). ೧. ಒಂದು ಬಗೆಯ ಚರ್ಮರೋಗ. ೨. ಮರದ ಸೌಟು.

ತರ್ಪಣ (ನಾ). ೧. ತೃಪ್ತಿಪಡಿಸುವಿಕೆ; ತಣಿಸುವಿಕೆ. ೨. ತೃಪ್ತಿ; ತಣಿವು. ೩. ಸತ್ತವರಿಗಾಗಿ ಬಿಡುವ ಎಳ್ಳುನೀರು. ೪. ಹಡಗಿನ ಅಡುಗೆಯ ಮನೆ.

ತರ್ಬು (ಕ್ರಿ). ೧. ಅಪ್ಪು; ಆಲಿಂಗಿಸು. ೨. ಮುಚ್ಚಿಹಿಡಿ. (ನಾ). ೩. ಅಪ್ಪುಗೆ; ಆಲಿಂಗನ.

ತರ್ಮ (ನಾ). ಯಜ್ಞಪಶುವನ್ನು ಕಟ್ಟುವ ಕಂಬದ ತುದಿ.

ತರ್ಷ = ತರ್ಷಣ.

ತರ್ಷಣ (ನಾ). ೧. ಬಾಯಾರಿಕೆ; ದಾಹ. ೨. ಆಸೆ; ಬಯಕೆ.

ತಲ (ನಾ). ೧. ಸಮಕಟ್ಟಾದ ನೆಲ. ೨. ಅಂಗೈ. ೩. ಅಂಗಾಲು. ೪. ಅಡಿ; ಕೆಳಭಾಗ. ೫. ತಾಳೆಮರ; ಪನೆಮರ. ೬. ಬಿಲ್ಲುಗಾರರು ಎಡಗೈ ಮೇಲೆ ಧರಿಸುವ ತೊಗಲಿನ ಪಟ್ಟಿ; ಕೈಪೊಡೆ. ೭. ಕಾರಣ; ಹೇತು. ೮. ಕತ್ತಿಯ ಹಿಡಿ. ೯. ಕಾಡು; ಅರಣ್ಯ. ೧೦. ಗೇಣಿ; ಲಾವಣಿ. ೧೧. ತಗ್ಗು. ೧೨. ಸ್ಥಳ; ಪ್ರದೇಶ. ೧೩. = ತಲಾತಲ. ~ಅತಲ(ಳ) = ಏಳು ಅಧೋಲೋಕಗಳಲ್ಲಿ ಒಂದು.

ತಲಪು ೧. = ತಲುಪು. (ನಾ). ೨. ತುದಿ; ಅಂತ್ಯ. ೩. ಮುಟ್ಟುವಿಕೆ; ಸೇರುವಿಕೆ. ೪. ಗುರಿ; ಲಕ್ಷ್ಯ. ~ಇಸು = ಮುಟ್ಟಿಸು; ಸಲ್ಲಿಸು.

ತಲಬು (ನಾ). ೧. ಸಂಬಳ; ವೇತನ; ಕೂಲಿ. ೨. ಚಟ; ತೆವಲು.

ತಲವಾರ = ತರವಾರ.

ತಲಹು (ನಾ). ೧. ಅಂತ್ಯ; ತುದಿ. ೨. ಗುರಿ. ೩. ತಲೆಮಾರು; ವಂಶ; ಪೀಳಿಗೆ.

ತಲಾಂತರ (ನಾ). ತಲೆಮಾರು.

ತಲಾಟಿ (ನಾ). ಗ್ರಾಮದ ಕಂದಾಯವನ್ನು ಒಟ್ಟುಗೂಡಿಸುವವನು.

ತಲಾಷ್(ಷು) (ನಾ). ತಪಾಸಣೆ; ಶೋಧನೆ.

ತಲುಪು (ಕ್ರಿ). ೧. ಸೇರು; ಮುಟ್ಟು. (ನಾ). ೨. ಪಾವತಿ; ಜಮಾ; ಸಂದಾಯ.

ತಲೆ (ನಾ). ೧. ಶಿರಸ್ಸು; ಮಸ್ತಕ. ೨. ವಂಶ; ಪೀಳಿಗೆ. ೩. ಸಂತತಿಯಲ್ಲಿ ಒಂದು ಹಂತ;

ತಲೆಮಾರು. ೪. ಮುಖ್ಯಸ್ಥ; ಶ್ರೇಷ್ಠನಾದವನು. ೫. ಒಬ್ಬ ವ್ಯಕ್ತಿ, -ಆಳು. ೬. ತುದಿ; ಕಡೆ. ೭. ಅರಿವು; ಜ್ಞಾನ. ~ಆ(ಯಾ)ಳ್(ಳು) = ಮುಖ್ಯ ವ್ಯಕ್ತಿ; ಮುಂದಾಳು; ನಾಯಕ. ~ಉ(ಯು)ರ್ಚು = ೧. ತಲೆಮರೆಸಿಕೊಳ್ಳು. ೨. ವಿಮುಖನಾಗು; ಅಲಕ್ಷ್ಯಮಾಡು. ~ಎ(ಯೆ)ತ್ತು = ೧. ತಲೆಯನ್ನು ಮೇಲೆಮಾಡು. ೨. ಏಳಿಗೆಯನ್ನು ಹೊಂದು. ೩. ಉದ್ಭವವಾಗು; ಉಂಟಾಗು; ಮೂಡು. ೪. ಉಬ್ಬು; ಬೀಗು. ೫. ಚೇತರಿಸಿಕೊಳ್ಳು. ~ಒ(ಯೊ)ಡ್ಡು = ೧. ಹೊಣೆಯನ್ನು ಹೊರು. ೨. ಬಲಿಯಾಗು. ~ಓ(ಯೋ)ಡಿಸು=ಯೋಚಿಸು; ವಿಚಾರಮಾಡು. ~ಕಟ್ಟು = ೧. ತಲೆಯ ಪಟ್ಟಿ, -ಬಂಧನ. ೨. ಅಕ್ಷರದ ಮೇಲಿನ ಗೆರೆ; ಕೊಟ್ಟು. ೩. ಸೇರಿದಂತೆ ಇರುವ ಹೊಲ; ಒತ್ತಿನ ಹೊಲ. ೪. ಶಿರೋನಾಮೆ; ಶೀರ್ಷಿಕೆ. ~ಕ(ಗ)ರೆ = ತಲೆಮರೆಯಾಗು; ಕಾಣದಾಗು. ~ಕಾ(ಗಾ)ಯ್(ಯಿ) =ತಲೆಯನ್ನು ಕಾಪಾಡು; ಜೀವವನ್ನು ರಕ್ಷಿಸು. ~ಕುಡಿ = ವಂಶದ ಬೆಳವಣಿಗೆ; ಸಂತಾನ. ~ಕು(ಗು)ತ್ತು = ೧. ತಲೆಯನ್ನು ಬಗ್ಗಿಸು. ೨. ತಲೆಗೆ ಹೊಡೆ. ~ಕೆ(ಗೆ)ಡಿಸು = ೧. ಮತಿಭ್ರಮಣೆಯನ್ನುಂಟುಮಾಡು. ೨. ಗೊಂದಲವನ್ನುಂಟುಮಾಡು. ~ಕೆರೆ = ೧. ತಲೆಯನ್ನು ತುರಿಸು, -ಪರಚು. ೨. ತಲೆಯನ್ನು ಬಾಚು. ೩. ವಿಚಾರಕ್ಕೆ ಒಳಗಾಗು. ~ಕೆಟಿ(ಳ)ಗು = ಬುಡಮೇಲು; ಅಸ್ತವ್ಯಸ್ತತೆ. ~ಕೊ(ಗೊ)ಡು = ೧. ಎದುರಿಸು. ೨. ಹೊಣೆಯನ್ನು ಹೊರು. ೩. ಪ್ರಾಣಾರ್ಪಣೆ ಮಾಡು; ಬಲಿಯಾಗು. ೪. ಮನಸ್ಸು ಕೊಡು; ಗಮನಕೊಡು. ೫. ನಮಸ್ಕರಿಸು. ~ತಗ್ಗಿಸು = (ಅವಮಾನ, ನಾಚಿಕೆ ಮುಂತಾದ ಭಾವಗಳಿಂದ) ತಲೆಯನ್ನು ಕೆಳಗೆಮಾಡು, -ಬಾಗಿಸು. ~ತಿನ್ನು=ಬಹಳ ಚಿಂತೆಯನ್ನುಂಟುಮಾಡು. ~ತಿರುಕ = ೧. ಭ್ರಮೆಯನ್ನು ಹೊಂದಿದವನು. ೨. ಗರ್ವಿ; ಅಹಂಕಾರಿ. ~ತಿ(ದಿ)ರುಗು =೧. (ಪಿತ್ತದಿಂದ) ತಲೆಸುತ್ತು ಉಂಟಾಗು. ೨. ಬುದ್ಧಿ ವಿಕಲ್ಪವಾಗು. ೩. ಗರ್ವಿಸು; ಅಹಂಕಾರಪಡು. ೪. ತಲೆ ಸುತ್ತುವಿಕೆ, -ತಿರುಗುವಿಕೆ. ~ತೂ(ದೂ)ಗು = ೧. ತಲೆಯನ್ನು ಅತ್ತಿಂದಿತ್ತ ಅಲುಗಾಡಿಸು. ೨. ಅನುಮೋದಿಸು; ಒಪ್ಪು. ೩. ಮೆಚ್ಚು. ೪. ಮೆಚ್ಚುಗೆಯನ್ನು ಸೂಚಿಸುವಿಕೆ. ~ತೊ(ದೊ)ೞ್(ರ್, ರು, ೞು)=ಕಾಣು; ವ್ಯಕ್ತವಾಗು; ಮೂಡು. ~ಪಿ(ವಿ,ಹಿ)ಡಿ = ೧. ತಲೆಯನ್ನು ಕೈಗಳಿಂದ ಹಿಡಿದುಕೊಳ್ಳು. ೨. ತಲೆಹಿಡುಕತನ ಮಾಡು. ~ಪೊ(ವೊ,ಹೊ)ೞ = ಉಡಾಳ; ಹೊಣೆಗೇಡಿ. ~ಬರೆಹ = ೧. ಶಿರೋನಾಮೆ; ಶೀರ್ಷಿಕೆ. ೨. ಹಣೆಬರೆಹ; ವಿಧಿ. ~ಬಾ(ವಾ)ಗಿಲ್(ಲು) = ಮುಂಬಾಗಿಲು; ಮುಖ್ಯದ್ವಾರ. ~ಬಾ(ವಾ)ಗು=೧. ಒಪ್ಪು; ಅನುಮತಿಸು. ೨. ಸೋಲು; ಶರಣಾಗು. ೩. ನಮಸ್ಕರಿಸು. ~ಭಾರ = ೧. ತಲೆಯ ಹೊರೆ, -ಕಟ್ಟು. ೨. ಚಿಂತೆ; ಯೋಚನೆ. ~ಮಗ = ಹಿರಿಯ ಮಗ. ~ಮಾಡು =ಕ್ಷೌರಮಾಡು. ~ಮಾರು = ೧. ವಂಶ; ಪೀಳಿಗೆ. ೨. ಹೊಲದ ಒಂದು ಭಾಗ. ~ಮಾಸು = ೧. ತಲೆಯನ್ನು ಬೋಳಿಸು, -ಮೋಚು. ೨. ನಷ್ಟಕ್ಕೆ ಗುರಿಯಾಗು. ~ಸವರು = ೧. ತಲೆಯನ್ನು ಕತ್ತರಿಸು. ೨. ತಲೆಯನ್ನು ನೇವರಿಸು. ~ಹರಟೆ =೧. ಕೆಲಸಕ್ಕೆ ಬಾರದ ಮಾತು. ೨. ಉದ್ಧಟತನದ ಮಾತು. ~ಹಾಕು= ೧. ತಲೆದೂಗು. ೨. ಸಂಬಂಧವಿಲ್ಲದಿದ್ದರೂ ಇನ್ನೊಬ್ಬರ

ಮಾತಿನಲ್ಲಿ ಬಾಯಿಹಾಕು. ~ಹಿಡಿಕ = ಕುಂಟಣಿಯ ಕೆಲಸಮಾಡುವವನು.

ತಲೊ(ಳೊ)ೀದರಿ (ನಾ). ೧. ತೆಳುವಾದ ಉದರವುಳ್ಳವಳು. ೨. ಹೆಂಡತಿ; ಪತ್ನಿ.

ತಲ್ಪ(ಳ್ಪ) (ನಾ). ೧. ಹಾಸುಗೆ; ಶಯ್ಯೆ. ೨. ಹೆಂಡತಿ. ೩. ಮಾಳಿಗೆ; ಮಹಡಿ. ೪. ತೆಪ್ಪ; ದೋಣಿ.

ತಲ್ಲಣ (ನಾ). ೧. ಹೆದರಿಕೆ; ಗಾಬರಿ. ೨. ಚಿಂತೆ; ತಳಮಳ. ೩. ತವಕ; ಆತುರ.

ತಲ್ಲಟ(ಳ) = ತಲ್ಲಣ.

ತಲ್ಲೀನ (ಗು). ಅದರಲ್ಲಿಯೇ ಆಸಕ್ತವಾದ, -ಮಗ್ನವಾದ.

ತವ(ಂ)ಗ = ತಮಂಗ.

ತವಕ (ನಾ). ೧. ಆಸೆ; ಬಯಕೆ. ೨. ಆವಸರ; ಆತುರ. ೩. ಕುತೂಹಲ; ಕಾತರ. ~ಇಗ = ೧. = ತವಕಿ. ೨. ಉತ್ಸುಕನಾದವನು; ಆತುರಗಾರ. ~ಇಸು = ೧. ಬಯಸು; ಆಶಿಸು. ೨. ತ್ವರೆಮಾಡು; ಅವಸರಗೊಳ್ಳು.

ತವಕಿ (ನಾ). ಅತಿಯಾಗಿ ಆಸೆಪಡುವವನು.

ತವಚು = ತವಟು.

ತವಟು (ಕ್ರಿ). ಧಾನ್ಯವನ್ನು ಹಸನುಮಾಡು; ಕೇರು.

ತವದೊಣೆ (ನಾ). ಬರಿದಾಗದ ಬತ್ತಳಿಕೆ; ಅಕ್ಷಯತೂಣೀರ.

ತವನಿಧಿ (ನಾ). ಎಂದೂ ನಾಶವಾಗದ ನಿಧಿ.

ತವರ್(ರು) ೧. = ತಮುರ್. ೨. ತನ್ನವರು; ಬಾಂಧವರು. ೩. ಆಶ್ರಯಸ್ಥಾನ; ನೆಲೆ. ~ಊರು = ೧. ಹುಟ್ಟಿದ ಊರು. ೨. ಉತ್ಪತ್ತಿಸ್ಥಾನ; ನೆಲೆ.

ತವರ (ನಾ). ಒಂದು ಬಗೆಯ ಲೋಹ; ತ್ರಪು.

ತವರಾಜ (ನಾ). ಒಂದು ಬಗೆಯ ಸಕ್ಕರೆ.

ತವಲಾಯ (ನಾ). ತಾಂಬೂಲ; ವೀಳ್ಯ.

ತವಲಾಯಿ ೧. = ತವಲಾಯ. ೨. ಕರ್ಪೂರದ ಹಳುಕು. ೩. ಕರ್ಪೂರವನ್ನಿಡುವ ಭರಣಿ.

ತವಸಿ (ನಾ). ೧. ತಪಸ್ವಿ; ಋಷಿ. ೨. ಒಂದು ಜಾತಿಯ ಮರ.

ತವಳಿಸು (ಕ್ರಿ). ೧. ನಾಶಮಾಡು. ೨. ಬಾಡುವಂತೆ ಮಾಡು; ಕೊರಗಿಸು.

ತವಾಯಿ (ನಾ). ೧. (ವ್ಯಾಪಾರದಲ್ಲಿ) ನಷ್ಟ, –ಹಾನಿ. ೨. ತೊಂದರೆ; ಪೀಡೆ.

ತವಿರ್ (ನಾ). ಬಡತನ; ದಾರಿದ್ರ್ಯ.

ತವಿಲ್ (ಕ್ರಿ). ೧. ಕುಂದು; ಕುಗ್ಗು. (ನಾ). ೨. ಕುಂದುವುದು; ಕೊರತೆ. ೩. ಕ್ಷಯ; ನಾಶ. ೪. ಖರ್ಚು; ವ್ಯಯ. ೫. ಬಡತನ; ದಾರಿದ್ರ್ಯ. ೬. ತೊಂದರೆ; ವಿಪತ್ತು. ~ಆಗು = ೧. ನಾಶವಾಗು; ಸಾಯು. ೨. ಬಯಲಾಗು; ಅದೃಶ್ಯವಾಗು. ೩. ತಗ್ಗು; ಕುಂದು. ೪. ನಿವಾರಣೆಯಾಗು.

ತವಿಸು (ಕ್ರಿ). ೧. ನಾಶಮಾಡು; ಕೊಲ್ಲು. ೨. ಪರಿಹರಿಸು. ೩. ನಾಶವಾಗು. ೪. ನಿವಾರಣೆಯಾಗು. ೫. ವ್ಯಯಿಸು; ವಿನಿಯೋಗಿಸು. ೬. ಬರಿದು ಮಾಡು. ೭. ಸೊರಗಿಸು; ಸವೆಯಿಸು. ೮. ಬಿಡು; ತ್ಯಜಿಸು. ೯. ತಪಸ್ಸು ಮಾಡು; ಧ್ಯಾನ ಮಾಡು. ೧೦. ವ್ಯಾಕುಲಪಡು; ಪರಿತಪಿಸು. ೧೧. ಶಾಂತಗೊಳಿಸು.

ತವು (ಕ್ರಿ). ೧. ಕುಗ್ಗು; ಕ್ಷಯಿಸು. ೨. ಅಳಿ; ಸಾಯು. ೩. ವ್ಯಯವಾಗು. ೪. ನಾಶಮಾಡು; ಹಾಳುಮಾಡು. ೫. ಇಲ್ಲವಾಗು; ಲೋಪವಾಗು. (ನಾ). ೬. ಕುಂದು; ಕಡಮೆ. ೭. ನಾಶ; ಹಾಳು. ೮. ಕುಗ್ಗಿದ ಸ್ಥಿತಿ.

ತವುಗೆ (ನಾ). ೧. ಕುಂದು; ಕೊರತೆ. ೨. ನಾಶ; ಹಾಳು.

ತವುಡು (ನಾ). ಅಕ್ಕಿ ಮೊದಲಾದ ಕಾಳನ್ನು ಕುಟ್ಟಿದಾಗ ದೊರೆಯುವ ಕಸ; ತೌಡು. ~ಕುಟ್ಟು = ನಿರರ್ಥಕವಾದ ಕೆಲಸವನ್ನು ಮಾಡು.

ತವುದಲೆ (ನಾ). ಕೊನೆ; ಮುಗಿವು. ~ಕಾ(ಗಾ)ಣಿಸು = ಕೊನೆಗಾಣಿಸು; ಕೊಲ್ಲು.

ತವೆ (ಕ್ರಿ). ೧. ಕರಗು; ಕ್ಷೀಣಿಸು. ೨. ತೃಪ್ತಿ ಇಲ್ಲವಾಗು; ಸಾಲದಂತಾಗು. (ನಾ). ೩. ಕಾವಲಿ; ಹಂಚು. (ಅ). ೪. ಹೆಚ್ಚಾಗಿ; ಅತಿಶಯವಾಗಿ. ೫. ಸಂಪೂರ್ಣವಾಗಿ.

ತಸಕಲು = ತಸಕು.

ತಸಕು (ನಾ). ಮೋಸ; ಠಕ್ಕು.

ತಸ್ಕರ (ನಾ). ಕಳ್ಳ; ಚೋರ; ತುಡುಗ. ~ಇಸು = ಕದಿ; ಕಳವು ಮಾಡು.

ತಸ್ತೀಕು (ನಾ). ದೇವಾಲಯ, ಮಸೀದಿ ಮುಂತಾದುವಕ್ಕೆ ಸರ್ಕಾರವು ಕೊಡುವ ಉಂಬಳಿ.

ತಸ್ತು (ನಾ). ಲೋಹದಿಂದ ಮಾಡಿದ ನೀರಿನ ಪಾತ್ರೆ.

ತಹ (ನಾ). ಕರಾರು; ಸಂಧಾನ.

ತಹತಹ (ನಾ). ೧. ಆತುರ; ಗಡಿಬಿಡಿ. ೨. ಕಳವಳ; ಚಿಂತೆ. ~ಇಸು = ೧. ಆತುರ ಪಡು; ಅವಸರಪಡು. ೨. ಚಿಂತಿಸು; ಕಳವಳಿಸು.

ತಹನಾಮೆ (ನಾ). ಒಪ್ಪಂದದ ಪತ್ರ; ಕರಾರು ಪತ್ರ.

ತಹಬಂದು (ನಾ). ೧. ಹತೋಟಿ; ಅಂಕೆ. ೨. ನಿಯಮ; ನಿರ್ಬಂಧ.

ತಹಸೀಲು (ನಾ). ೧. ಕಂದಾಯವನ್ನು ವಸೂಲು ಮಾಡುವುದು. ೨. ಕಂದಾಯದ ವಸೂಲಿಗಾಗಿ ಮಾಡಿದ ಜಿಲ್ಲೆಯ ಭಾಗ; ತಾಲ್ಲೂಕು. ~ದಾರ = ೧. ಹಲವು ಗ್ರಾಮಗಳ ಕಂದಾಯವನ್ನು ವಸೂಲು ಮಾಡುವ ಅಧಿಕಾರಿ. ೨. ತಾಲ್ಲೂಕಿನ ಮುಖ್ಯಾಧಿಕಾರಿ; ಮಾಮಲೇದಾರ.

ತಹಿ (ನಾ). ಕೂಟ; ಸಂಗಡ; ಸಂಘ. ~ಕಾಱ(ರ) = ಜೊತೆಗಾರ; ಸಂಗಡಿಗ.

ತಳ್ (ಕ್ರಿ). ೧. ಕೂಡು; ಸೇರು; ಹೆಣೆದುಕೊಳ್ಳು. ೨. ಹೊಂದಿಕೊಳ್ಳು; ಹೊಂದಿಕೆಯಾಗಿರು. ೩. ಕಾಣಿಸಿಕೊಳ್ಳು; ತೋರಿಬರು. ೪. ಏರಿಹೋಗು; ಮೇಲೆಬೀಳು. ೫. ಹಿಂಜರಿ; ಹಿಮ್ಮೆಟ್ಟು. ೬. ಬಿಗಿ; ಬಂಧಿಸು. ೭. ಹೊಂದು; ತಳೆ; ತಾಳು. ೮. ಹರಡು; ವ್ಯಾಪಿಸು. ೯. ಸಾಂದ್ರವಾಗು; ದಟ್ಟೈಸು. ೧೦. ಅಂಟು; ತಗುಲು. ೧೧. ತೊಡಗು; ಉದ್ಯೋಗಿಸು. ೧೨. ಚಿಗುರು; ಪಲ್ಲವಿಸು. ~ಪೊಯ್ = ೧. ಹೊಡೆ; ಅಪ್ಪಳಿಸು. ೨. ಅಡ್ಡಿಮಾಡು; ವಿರೋಧಿಸು.

ತಳ (ನಾ). ೧. ಸಮತಟ್ಟಾದ ಪ್ರದೇಶ. ೨. ಅಂಗೈ. ೩. ಅಂಗಾಲು. ೪. ಕೆಳಭಾಗ; ಅಡಿ. ೫. ಕಾರಣ; ಮೂಲ. ೬. ತಾಳೆಮರ; ಪನೆ. ೭. ಮೊಳಕೈಯಿಂದ ಮಣಿಕಟ್ಟಿನವರೆಗಿನ ಭಾಗ. ೮. ಏಳು ಅಧೋಲೋಕಗಳಲ್ಲಿ ಒಂದು. ೯. ಸ್ಥಳ; ಊರು. ~ಊ(ವೂ)ರು = ೧. ನೆಲೆಯಾಗಿ ನಿಲ್ಲು; ಸ್ಥಿರವಾಗಿ ವಾಸಮಾಡು. ೨. ಬೀಡುಬಿಡು; ಉಳಿದುಕೊಳ್ಳು. ~ಕ(ಗ)ಟ್ಟು = ೧. ಆಧಾರವಾದ ಚೌಕಟ್ಟು, –ರಚನೆ. ೨. ಮೂಲತತ್ತ್ವ. ~ತಂತ್ರ = ೧. ಕಾಲಾಳುಗಳ ಪಡೆ; ಪದಾತಿ ಸೈನ್ಯ. ೨. ಕೈಕೆಳಗಿನ ಸೈನ್ಯ. ~ಪಾಯ = ೧. ತಳಹದಿ; ಬುನಾದಿ. ೨. ಮೂಲವಾದ ಅಂಶ, –ಆಧಾರ. ~ಮೇಲು = ೧. ಅಡಿಮೇಲು; ತಲೆಕೆಳಗು. ೨. ವ್ಯತ್ಯಸ್ತವಾದುದು. ೩. ಮಲ್ಲಯುದ್ಧದಲ್ಲಿ ಒಂದು ವರಸೆ. ~ಹದಿ = ತಳಪಾಯ.

ತಳಕು (ನಾ). ೧. ಅಪ್ಪುಗೆ; ಆಲಿಂಗನ. ೨. ಹೆಣೆದುಕೊಳ್ಳುವಿಕೆ. ೩. ಹೊಳಪು; ಕಾಂತಿ. ೪. ಬೆಡಗು; ಬಿನ್ನಾಣ. ~ಹಾಕು = ೧. ಸೇರಿಸಿ ಕಟ್ಟು. ೨. ಸಂಬಂಧವನ್ನು ಕಲ್ಪಿಸು. ೩. ಎಣೆಯಾಡು.

ತಳಪ (ನಾ). ೧. ಕಾಂತಿ; ಹೊಳಪು. ೨. ಕೊದಲಿಗೆ ಮೆರುಗು ಕೊಡುವ ಒಂದು ಬಗೆಯ ಬಣ್ಣ; ಕಲಪು. ೩. ಹಾಸುಗೆ; ತಲ್ಪ.

ತಳಪಟ (ನಾ). ೧. ಸಮತಲವಾದ ಪ್ರದೇಶ. ೨. ಬಯಲು. ೩. ರಣರಂಗ. ೪. ಪಾಳು ಭೂಮಿ.

ತಳಪು (ನಾ). ಹೊಳಪು; ಕಾಂತಿ; ಮಿಸುಗು.

ತಳಮಳ (ನಾ). ೧. ಚಿಂತೆ; ದುಃಖ. ೨. ಬೆರಗು; ವಿಸ್ಮಯ. ೩. ಗಾಬರಿ. ~ಇಸು = ೧. ಕೋಪಸಂತಪ್ತವಾಗು. ೨. ಕಳವಳಿಸು; ಸಂಕಟಪಡು.

ತಳಮಳಗು (ಕ್ರಿ). ೧. ದಿಗಿಲುಗೊಳ್ಳು; ಹೆದರು. (ನಾ). ೨. ಬೆರಗು; ವಿಸ್ಮಯ. ~ಆಗು = ೧. ಕಂಗೆಡು; ದಿಗಿಲುಗೊಳ್ಳು. ೨. ಕಳವಳಗೊಳ್ಳು; ಸಂಕಟಪಡು.

ತಳರ್(ರು) (ಕ್ರಿ). ೧. ಚಲಿಸು; ಅಲುಗಾಡು. ೨. ಕಂಪಿಸು; ನಡುಗು. ೩. ಹೊರಡು. ೪. ಬಿಟ್ಟುಹೋಗು; ಅಗಲು. ೫. ಓಡು; ಡೌಡಾಯಿಸು. ೬. ಆಕ್ರಮಣ ಮಾಡು. ೭. ಹಬ್ಬು; ಹರಡು. ೮. ಹಿಂಜರಿ; ಹಿನ್ನೆಟ್ಟು. ~ಅಡಿ = ತಪ್ಪುಹೆಜ್ಜೆ; ದಟ್ಟಡಿ. ~ನಡೆ = ತಳರಡಿ. ~ನುಡಿ = ತೊದಲು ಮಾತು.

ತಳರ್ಚು (ಕ್ರಿ). ೧. ಕದಲಿಸು; ಅಲ್ಲಾಡಿಸು. ೨. ಚೆದರಿಸು; ಚೆಲ್ಲಾಪಿಲ್ಲಿಗೊಳಿಸು. ೩. ಹೊರಡು; ಮುಂಬರಿ.

ತಳರ್ಪು (ನಾ). ೧. ಚಲನೆ; ಅಲುಗಾಟ. ೨. = ತಳಪು.

ತಳಲ್ (ಕ್ರಿ). ಕುಡಿಯೊಡೆ; ಚಿಗುರು.

ತಳಲು (ಕ್ರಿ). ೧. ಹೋಗು; ತೆರಳು. (ನಾ). ೨.= ತಟಿಲ್. ೩.ಚಿಗುರು; ತಳಿರು.

ತಳವಱ(ರ) = ತಳವಾಱ. ~ಇಕೆ = ತಳವಾರನ ವೃತ್ತಿ, -ಕೆಲಸ.

ತಳವಾಱ(ರ) (ನಾ). ಊರಿನ ಕಾವಲುಗಾರ, -ಪಹರೆಯವನು.

ತಳವೆಳಗು (ನಾ). ೧. ಬೆರಗು; ವಿಸ್ಮಯ. ೨. ಭಯ; ದಿಗಿಲು. ೩. ಭ್ರಮೆ; ಭ್ರಾಂತಿ. ೪. ಕಳವಳ; ಚಿಂತೆ. ~ಆಗು=೧. ಬೆರಗಾಗು; ವಿಸ್ಮಯಪಡು. ೨. ದಿಗಿಲುಗೊಳ್ಳು; ಗಾಬರಿಯಾಗು. ೩. ಗಲಿಬಿಲಿಗೊಳ್ಳು; ದಿಗ್ಭ್ರಾಂತವಾಗು. ೪. ಕಳವಳಿಸು; ಪರಿತಪಿಸು.

ತಳಾಱ(ರ) = ತಳವಾಱ.

ತಳಿ (ಕ್ರಿ). ೧. ಚೆಲ್ಲು; ಎಸೆ. ೨. ಚಿಮುಕಿಸು; ಸಿಂಪಡಿಸು. ೩. ಚಿಗುರು ಬಿಡು; ಕೊನರು. ೪. ಅರಳು; ವಿಕಸಿಸು. ೫. ಕಾಣಿಸು; ತೋರು. ೬. ಹರಹು; ವಿಸ್ತರಿಸು. (ನಾ). ೭. ಚಿಮುಕಿಸುವಿಕೆ; ಚಳೆಯ; ಸೇಚನ. ೮. ಸತ್ರ; ಛತ್ರ. ೯. ಕುಲ; ವಂಶ. ೧೦. = ತಱಿ.

ತಳಿಗೆ (ನಾ). ೧. ಲೋಹದ ತಟ್ಟೆ, -ಪರಿವಾಣ. ೨. ದೇವರಿಗೆ ಮಾಡಿಸುವ ಒಂದು ವಿಶೇಷ ನೈವೇದ್ಯ.

ತಳಿರ್(ರು) ೧.=ತಳಲ್. (ನಾ). ೨.ಚಿಗುರು; ಕುಡಿ; ಪಲ್ಲವ. ~ಓವರಿ = ಎಲೆಮನೆ; ಪರ್ಣಕುಟಿ. ~ಕಾ(ಗಾ)ಲ = ಚಿಗುರುವ ಕಾಲ; ವಸಂತ ಕಾಲ. ~ತೊ(ದೊ)ೞರಣ = ಚಿಗುರುಗಳ ಮಾಲೆ, -ಕಟ್ಟು. ~ಪಾ(ವಾ)ಸು = ಚಿಗುರಿನ ಹಾಸುಗೆ.

ತಳಿಲು = ತಟಿಲ್.

ತಳಿಸು (ಕ್ರಿ). ೧. ಧಾನ್ಯದ ಹೊಟ್ಟು ತೆಗೆ, -ಕುಟ್ಟು. ೨. ಬಡಿ; ಹೊಡೆ. ೩. ಚಿಮುಕಿಸು; ಸಿಂಪಡಿಸು.

ತಳುಗು (ಕ್ರಿ). ನಿಲ್ಲು; ತಡೆ.

ತಳುವು (ಕ್ರಿ). ೧. ನಿಧಾನಿಸು; ತಡಮಾಡು. ೨. ಸಾವಕಾಶವಾಗು; ನಿಧಾನವಾಗು.

ತಳುಹು-೧. = ತಳುವು. ೨. ನೂಕು; ತಳ್ಳು. (ನಾ). ೩. ತಡ; ವಿಳಂಬ.

ತಳೆ (ಕ್ರಿ). ೧. ಪಡೆ; ಹೊಂದು. ೨. ಧರಿಸು. ೩. ಒಯ್ಯು. ೪. ತೆಗೆದುಕೊಳ್ಳು; ಸ್ವೀಕರಿಸು. (ನಾ). ೫. (ಪ್ರಾಣಿಗಳಿಗೆ ಕಟ್ಟುವ) ಹಗ್ಗ. ೬. = ತಱೆ.

ತಳ್ಕು (ಕ್ರಿ). ೧. ಲೇಪಿಸು; ಬಳಿ. (ನಾ). ೨. (ಗಂಧವೇ ಮುಂತಾದುವುಗಳ) ಲೇಪನ. ೩. ಅಪ್ಪುಗೆ; ಆಲಿಂಗನ. ೪. ಹೊಳಪು; ಕಾಂತಿ.

ತಳ್ವು (ಕ್ರಿ). ೧. ಪಡೆ; ಹೊಂದು. ೨.=ತಳುವು.

ತಳ್ಳಂಕ (ನಾ). ೧. ಸಂಕೋಚ. ೨. ಹೆದರಿಕೆ; ಅಂಜಿಕೆ. ೩. ಚಿಂತೆ.

ತಳ್ಳಿ (ನಾ). ೧. ಸಂಬಂಧ; ಒಡನಾಟ. ೨. ಗೊಡವೆ; ಗೋಜು. ೩. ನಿಂದೆ; ಅಪವಾದ. ೪. ಕಟ್ಟು; ಬಂಧನ.

ತಳ್ಳು (ಕ್ರಿ). ೧. ನೂಕು; ದಬ್ಬು. ೨. ಎಸೆ; ಒಗೆ. ೩. ನಿರಾಕರಿಸು; ತಿರಸ್ಕರಿಸು. (ನಾ). ೪. ನೂಕುವಿಕೆ; ತಳ್ಳುವಿಕೆ. ~ಪಡಿ = ರದ್ದು; ವಜಾ.

ತಱ(ಳ)ಲ್ (ನಾ). ಒಣಗಿದ ಹಣ್ಣು. ~ಆಗು = ಒಣಗು; ಬತ್ತು.

ತಱಿ(ಳಿ) (ನಾ). ೧. ಮರದ ಕೊರಡು, –ದಿಮ್ಮಿ. ೨. ಬೇಲಿ.

ತಱೆ(ಳೆ) (ನಾ). ಕೊಡೆ; ಛತ್ರಿ.

ತಱ್ಕೆ(ಳ್ಕೆ) (ನಾ). ೧. ಆಲಿಂಗನ; ಅಪ್ಪುಗೆ. ೨. ಒಂದು ಸಲಕ್ಕೆ ತೋಳುಗಳಲ್ಲಿ ಹಿಡಿಯುವ ವಸ್ತು ಪ್ರಮಾಣ; ತೆಕ್ಕೆ.

ತಱ್ಕೈ(ಳ್ಕೈ)ಸು (ಕ್ರಿ). ಅಪ್ಪು; ಆಲಿಂಗಿಸು.

ತಱ್ಗು(ಳ್ಗು) (ಕ್ರಿ). ತಗ್ಗು; ಕುಂದು; ಕಡಮೆಯಾಗು.

ತಱ್ಪ(ಳ್ಪ)ಲ್ (ನಾ). ಬೆಟ್ಟದ ಮಗ್ಗುಲು; ತಪ್ಪಲು.

ತಾಂಕು (ಕ್ರಿ). ೧. ಆಕ್ರಮಣ ಮಾಡು; ಮೇಲೆ ಬೀಳು. (ನಾ). ೨. ಮುಟ್ಟುವಿಕೆ; ಸ್ಪರ್ಶ.

ತಾಂಗು ೧. = ತಾಂಕು. ೨. ತಡೆ; ಅಡ್ಡಿ ಮಾಡು; ವಿರೋಧಿಸು. ೩. ಚುಚ್ಚು; ನಾಟು. ೪. ಸಹಿಸು; ತಾಳಿಕೊಳ್ಳು. ೫. ಹೊಂದು; ಪಡೆ. ೬. ಹಿಡಿದುಕೊಳ್ಳು. (ನಾ). ೭. ಆಸರೆ; ಊರೆ.

ತಾಂಟು (ಕ್ರಿ). ತಾಗು; ಬಡಿ.

ತಾಂಡವ (ನಾ). ನೃತ್ಯದ ಒಂದು ಪ್ರಭೇದ.

ತಾಂಡವಾಳ = ತಂಡವಾಳ.

ತಾಂಡಸ (ನಾ). ತಂಡಸ; ಇಕ್ಕುಳ; ಚಿಮುಟ.

ತಾಂಡೆ (ನಾ). ೧. ಬೀಡು; ಪಾಳೆಯ. ೨. ಗುಂಪು; ಸಮೂಹ.

ತಾಂತ (ಗು). ಬಳಲಿದ; ಆಯಾಸಗೊಂಡ.

ತಾಂತ್ರಿಕ (ನಾ). ೧. ತಂತ್ರಶಾಸ್ತ್ರವನ್ನು ಬಲ್ಲವನು; ತಂತ್ರಜ್ಞ. (ಗು). ೨. ತಂತ್ರ ಶಾಸ್ತ್ರಕ್ಕೆ ಸಂಬಂಧಿಸಿದ. ೩. ಯಂತ್ರ ಶಾಸ್ತ್ರಕ್ಕೆ ಸಂಬಂಧಪಟ್ಟ.

ತಾಂಬರ (ನಾ). ೧. ತಾಮ್ರ. ೨. ಕೆಂಪು ಬಣ್ಣ.

ತಾ(ಂ)ಬಾಣ (ನಾ). ಲೋಹದಿಂದ ಮಾಡಿದ ತಳಿಗೆ.

ತಾಂಬಾಳ = ತಾಂಬಾಣ.

ತಾಂಬೂಲ(ಳ) (ನಾ). ಅಡಕೆ ಮತ್ತು ಸುಣ್ಣಗಳಿಂದ ಕೂಡಿದ ವೀಳೆಯದೆಲೆಯ ಸುರುಳಿ; ವೀಳೆಯ. ~ಇಗ = ವೀಳೆಯದೆಲೆಯನ್ನು ಮಾರುವವನು.

ತಾಂಬೂಲಿ (ನಾ). ೧. ವೀಳೆಯದೆಲೆಯ ಬಳ್ಳಿ. ೨. ತಾಂಬೂಲವನ್ನು ತಯಾರಿಸಿಕೊಡುವ ಸೇವಕ. ೩. = ತಾಂಬೂಲಿಗ.

ತಾ(ಂ)ಬೇಲು (ನಾ). ಆಮೆ; ಕೂರ್ಮ.

ತಾಕತ್ತು (ನಾ). ಶಕ್ತಿ; ಸಾಮರ್ಥ್ಯ.

ತಾಕಲಾಟ (ನಾ). ಒದ್ದಾಟ; ಘರ್ಷಣೆ.

ತಾಕಲಾಡು (ಕ್ರಿ). ೧. ಒಂದಕ್ಕೊಂದು ತಿಕ್ಕಾಡು; ಘರ್ಷಿಸು. ೨. ಹೊಯ್ದಾಡು.

ತಾಕೀತು (ನಾ). ಅಧಿಕಾರಪೂರ್ವಕವಾಗಿ ಕೊಟ್ಟ ಎಚ್ಚರಿಕೆ; ಕಟ್ಟಪ್ಪಣೆ.

ತಾಕು (ಕ್ರಿ). ೧. ಕೂಡು; ಸೇರು. ೨. ಮುಟ್ಟು; ಸ್ಪರ್ಶಿಸು. ೩. ಆಕ್ರಮಣ ಮಾಡು; ಎದುರಿಸು. ೪. ಚುಚ್ಚು; ತಿವಿ. (ನಾ). ೫. ಕೂಡುವ ಸ್ಥಳ. ೬. ಜಮೀನಿನ ಪಟ್ಟಿ.

ತಾಗು (ಕ್ರಿ). ೧. ಎದುರಿಸು; ಮೇಲೆ ಬೀಳು. ೨. ತಡೆ; ಅಡ್ಡಿಪಡಿಸು. ೩. ಚುಚ್ಚು; ನಾಟು. ೪. ಮುಟ್ಟು; ಸೋಕು; ೫. ಹೊಯ್ದಾಡು; ಜೋಲಿಹೊಡೆ. ೬. ನೆಗೆ; ಹಾರು. ೭. ಉಳಿ; ತಂಗು. (ನಾ). ೮. ಬಾಗುವಿಕೆ; ಮಣಿಯುವಿಕೆ. ೯. ಕೂಟ; ಸಂಯೋಗ. ೧೦. ದೋಷ; ಅಪರಾಧ. ~ತಾ(ದಾ)ಣ = ತಂಗುವ ಸ್ಥಳ.

ತಾಗುಡಿ (ನಾ). ಅಡಗಿಕೊಳ್ಳುವ ಸ್ಥಳ; ಅವಿತುಕೊಳ್ಳುವ ಸ್ಥಳ.

ತಾಜಾ (ಗು). ಹೊಚ್ಚಹೊಸದಾದ. ~ಕಲಂ = ಪತ್ರದಲ್ಲಿ ಮರೆತ ವಿಷಯವನ್ನು ಕೊನೆಗೆ ಬರೆಯುವ ಭಾಗ. ~ಮಾಡು = ಪುಸಲಾಯಿಸು; ಉಬ್ಬಿಸು.

ತಾಟ (ನಾ). ೧. ಕಠಿನತೆ; ದೃಢತೆ. ೨. ಗರ್ವ; ಅಹಂಕಾರ.

ತಾಟಂಕ (ನಾ). ಒಂದು ಬಗೆಯ ಕರ್ಣಾಭರಣ.

ತಾಟಗಿತ್ತಿ (ನಾ). ಗಯ್ಯಾಳಿ; ಗಂಡುಬೀರಿ; ಬಜಾರಿ.

ತಾಟಸ್ಥ್ಯ (ನಾ). ಯಾವಕಡೆಗೂ ಸೇರದಿರುವಿಕೆ; ತಟಸ್ಥವಾಗಿರುವಿಕೆ.

ತಾಟಿ (ನಾ). ೧. ತೊಗಟೆ; ಸಿಪ್ಪೆ. ೨. ಗಡುಸು; ದೃಢತೆ. ೩. ತಾಳೆಜಾತಿಯ ಒಂದು ಮರ.

ತಾಟು (ಕ್ರಿ). ೧. ತಾಗು; ಬಡಿ; ಹೊಡೆ; ಅಪ್ಪಳಿಸು. ೨. ಸೋಕು; ಸ್ಪರ್ಶಿಸು. ೩. ತಡೆದುನಿಲ್ಲು; ಕುಂಠಿತವಾಗು. (ನಾ). ೪. ಹೊಡೆತ; ಸಂಘಟ್ಟನೆ. ೫. ತಟ್ಟೆ; ಗಂಗಾಳ. ೬. ಗೋಣಿತಟ್ಟು, -ಚೀಲ. ೭. ಇಳಿಜಾರಾದ ಚಾವಣಿಯ ಚೌಕಟ್ಟು. ೮. ಆಡಂಬರದ ಪ್ರದರ್ಶನ; ಡೌಲು. ~ಆಡು = ೧. ಒಂದಕ್ಕೊಂದು ತಾಕು, -ಬಡಿ. ೨. ಅತ್ತಿತ್ತ ಚಲಿಸು; ಹೊಯ್ದಾಡು. ೩. ಒಂದು ಕಡೆಯಿಂದ ಮತ್ತೊಂದು ಕಡೆಗೆ ಓಡಾಡು; ತಾರಾಡು. ~ಇಸು = ೧. ಹೊಡೆ; ಅಪ್ಪಳಿಸು. ೨. ತಾಕಿಸು; ಮುಟ್ಟಿಸು.

ತಾಟೋಟು (ನಾ). ತಟವಟ; ಮೋಸ; ತಾಟಾಪೋಟಿ.

ತಾಡ (ನಾ). ತಾಲವೃಕ್ಷ; ತಾಳೆಯಮರ. ~ಪತ್ರ = ತಾಳೆಯ ಗರಿ.

ತಾಡನ (ನಾ). ೧. ಹೊಡೆಯುವುದು; ಬಡಿಯುವುದು. ೨. ಏಟು; ಹೊಡೆತ. ೩. ಸೋಕು; ಸ್ಪರ್ಶ.

ತಾಡಿಸು (ಕ್ರಿ). ಹೊಡೆ; ಬಡಿ.

ತಾಣ (ನಾ). ೧. ಸ್ಥಾನ; ನೆಲೆ; ಬೀಡು. ೨. ಇಂಬು; ಆಶ್ರಯ. ~ಅಂತರ = ಪಾಳೆಯ; ಠಾಣ್ಯ. ~ದೀವಿಗೆ = ಒಂದೇ ಸ್ಥಳದಲ್ಲಿ ನಿರಂತರವಾಗಿ ಉರಿಯುವ ದೀಪ; ನಂದಾದೀಪ.

ತಾಣಬಟ್ಟ (ನಾ). ೧. ಸ್ಥಾನಾಂತರ ಹೊಂದಿದವನು; ಸ್ಥಾನಭ್ರಷ್ಟ. (ಗು). ೨. ಇದ್ದ ಜಾಗದಿಂದ ಹೊರದೂಡಲ್ಪಟ್ಟ; ಪದಚ್ಯುತಗೊಳಿಸಲ್ಪಟ್ಟ.

ತಾಣು (ನಾ). ಶಿವ; ಸ್ಥಾಣು.

ತಾತ (ನಾ). ೧. ತಂದೆ; ಜನಕ. ೨. ತಂದೆ ಅಥವಾ ತಾಯಿಯ ತಂದೆ; ಅಜ್ಜ.

ತಾತಾತೂತು (ನಾ). ಬಹಳ ರಂಧ್ರಗಳಿಂದ ಕೂಡಿರುವುದು.

ತಾತಿ = ತಾಯಿತಿ.

ತಾತ್ಕಾಲಿಕ (ಗು). ೧. ಆ ಕಾಲಕ್ಕೆ ಸಂಬಂಧಿಸಿದ; ತತ್ಕಾಲೀನ. ೨. ಹಂಗಾಮಿ; ಖಾಯಂ ಅಲ್ಲದ.

ತಾತ್ಪರಿಯ = ತಾತ್ಪರ್ಯ.

ತಾತ್ಪರ್ಯ (ನಾ). ೧. ಉದ್ದೇಶ; ಗುರಿ. ೨. ವಿವರಣೆ; ವ್ಯಾಖ್ಯಾನ. ೩. ಅರ್ಥ; ಅಭಿಪ್ರಾಯ. ೪. ಆಸಕ್ತಿ; ಒಲವು.

ತಾತ್ತ್ವಿಕ(ನಾ). ೧. ತತ್ತ್ವಶಾಸ್ತ್ರವನ್ನು ಬಲ್ಲವನು; ದಾರ್ಶನಿಕ. (ಗು). ೨. ತತ್ತ್ವ ಶಾಸ್ತ್ರಕ್ಕೆ ಸಂಬಂಧಿಸಿದ.

ತಾತ್ಸಾರ (ನಾ). ತಿರಸ್ಕಾರ; ಉದಾಸೀನತೆ.

ತಾದಾತ್ಮ್ಯ (ನಾ). ೧. ಅದೇ ಆಗಿರುವಿಕೆ; ಅಭಿನ್ನತೆ. ೨. ತಲ್ಲೀನತೆ; ಮಗ್ನತೆ.

ತಾನ್(ನು)(ಸ). ಆತ್ಮಾರ್ಥಕ ಸರ್ವನಾಮ.

ತಾನ (ನಾ). ೧. ದಾರ; ತಂತು. ೨. ಸ್ವರ; ಸೂರು. ೩. ಸ್ವರವಿಸ್ತಾರ. ೪. ಸ್ನಾನ; ಜಳಕ. (ಗು). ೫. ಎಳೆಯಲ್ಪಟ್ಟ.

ತಾಪ (ನಾ). ೧. ಬಿಸಿ; ಕಾವು; ಉಷ್ಣತೆ. ೨. ಸಂಕಟ; ಕಷ್ಟ. ~ಇಸು = ೧. ಬಿಸಿ ಮಾಡು; ಸುಡು. ೨. ಸಿಟ್ಟುಗೊಳ್ಳು; ಕೋಪಗೊಳ್ಳು. ೩. ಸಂಕಟಪಡುವಂತೆ ಮಾಡು; ಬಾಧಿಸು. ೪. ಸಂಕಟಪಡು; ವ್ಯಥೆ ಪಡು. ~ತ್ರಯ = ೧. ಆಧಿದೈವಿಕ, ಆಧಿಭೌತಿಕ ಮತ್ತು ಅಧ್ಯಾತ್ಮಿಕ ಎಂಬ ಮೂರು ಬಗೆಯ ಕಷ್ಟಗಳು. ೨. ತೊಂದರೆ; ಅಡಚಣೆ.

ತಾಪನೆ (ನಾ). ಸ್ಥಾಪನೆ; ನೆಲೆಗೊಳಿಸುವಿಕೆ.

ತಾಪತಿ (ನಾ). ಒಂದು ಬಗೆಯ ರೇಷ್ಮೆಬಟ್ಟೆ.

ತಾಪತ್ತಿ = ತಾಪತಿ.

ತಾಪಸ (ನಾ). ೧. = ತಪಸ್ವಿ. (ಗು). ೨. ತಪಸ್ವಿಗೆ ಸಂಬಂಧಿಸಿದ.

ತಾಪಾಳ್(ಳು) (ನಾ). ಅಗುಳಿ; ಲಾಳವಿಂಡಿಗೆ.

ತಾಪಾಳ = ತಾಪಾಳ್.

ತಾಪಿಂಜ (ನಾ). ಹೊಂಗೆಯ ಮರ; ತಮಾಲ ವೃಕ್ಷ.

ತಾಪು (ನಾ). ೧. ತಲೆಹಿಡುಕಿಯ ಮನೆ; ಕುಂಟಣಿಯ ಮನೆ. ೨. ಒಂದು ವಾದ್ಯ ವಿಶೇಷ.

ತಾಫೆ (ನಾ). ೧. ನರ್ತಕಿಯರ ಅಥವಾ ಸಂಗೀತಗಾರರ ಕೂಟ. ೨. = ತಾಬೆ.

ತಾಬಾ = ತಾಬೆ.

ತಾಬೆ (ನಾ). ೧. ಅಧೀನತೆ; ವಶ. ೨. ಆಶ್ರಯ; ಆಧಾರ. ~ದಾರ = ಕೈಕೆಳಗಿನವನು; ಅನುಯಾಯಿ.

ತಾಮರಸ (ನಾ). ೧. ತಾವರೆ; ಕಮಲ. ೨. ಬಂಗಾರ.

ತಾಮರೆ (ನಾ). ೧. ತಾವರೆ; ಕಮಲ. ೨. ಹುಳುಕಡ್ಡಿ; ಗಜಕರ್ಣ.

ತಾಮಸ (ನಾ). ೧. ಕತ್ತಲೆ; ಅಂಧಕಾರ. ೨. ಅಜ್ಞಾನ; ತಮೋಗುಣ. ೩. ತಡ; ಸಾವಕಾಶ. ೪. ಅಜ್ಞಾನಿ. ೫. ಆಲಸ್ಯ; ಜಡತೆ. (ಗು). ೬. ಕತ್ತಲೆಗೆ ಸಂಬಂಧಿಸಿದ. ೭. ತಮೋಗುಣದಿಂದ ಕೂಡಿದ.

ತಾಮಸಿ (ನಾ). ೧. ತಾಮಸಗುಣವುಳ್ಳವನು. ೨. ಅಜ್ಞಾನಿ. ೩. ರಾತ್ರಿ; ಇರುಳು.

ತಾಮ್ರ ೧. = ತಾಂಬರ. ೨. ಒಂದು ಬಗೆಯ ಕುಷ್ಠರೋಗ. ~ಚೂಡ = ಕೆಂಬಣ್ಣದ ಜುಟ್ಟುಳ್ಳುದು; ಹುಂಜ. ~ತುಂಡ = ೧. ಕೆಂಪುಬಣ್ಣದ ಕೊಕ್ಕು. ೨. ಕೆಂಪು ಬಣ್ಣದ ಕೊಕ್ಕುಳ್ಳುದು; ಗಿಣಿ. ~ಪಟ = ತಾಮ್ರದ ತಗಡು, –ಫಲಕ.

ತಾಯ್ (ನಾ). ಹಡೆದವಳು; ಜನನಿ. ~ಕ(ಗ)ರು = ನೆಲೆ; ಮೂಲಸ್ಥಾನ; ಆಕರ. ~ಕು(ಗು)ಲಿಗ = ತಾಯಿಯನ್ನು ಕೊಲ್ಲುವವನು. ~ತನ = ಮಾತೃತ್ವ; ತಾಯಿಯಾಗಿರುವಿಕೆ. ~ನುಡಿ = ಮಾತೃ ಭಾಷೆ. ~ಬೆ(ವೆ)ೕರ್(ರು)= ಗಿಡಮರಗಳ ಮುಖ್ಯವಾದ ಬೇರು. ~ಮ(ವ)ನೆ=ತವರು ಮನೆ. ~ಮಟ(ಳ)ಲ್(ಲು) = (ಜಲಾ ಶಯಗಳ) ತಳದಲ್ಲಿಯ ಮರಳು.

ತಾಯಿ = ತಾಯ್. ~ಗಂಡ = ೧. ಹಡೆದ ತಾಯಿಯನ್ನೇ ನೆರೆಯುವವನು. ೨. ಕೃತಘ್ನ.

**ತಾಯಿತ** = ತಾಯಿತಿ.

**ತಾಯಿತಿ** (ನಾ). ೧. ಕೇಡಿನ ಬಾಧೆ ತಟ್ಟದಿರಲು ಧರಿಸುವ ಕಾಪು; ಮಂತ್ರರಕ್ಷೆ. ೨. ಒಂದು ಬಗೆಯ ಆಭರಣ.

**ತಾರ** (ನಾ). ೧. ತಾಮ್ರದ ಒಂದು ಚಿಕ್ಕ ನಾಣ್ಯ. ೨. ದಾಟುವುದು. ೩. ತೇಲುವುದು; ಈಜುವುದು. ೪. ಇಳಿಯುವುದು. ೫. ಆಕಾಶ; ಬಾನು. ೬. ತಾರಾಚಲ; ರಜತಾದ್ರಿ. ೭. ಕಣ್ಣುಗುಡ್ಡೆ. ೮. ಬೆಳ್ಳಿ. ೯. ಮುತ್ತು. ೧೦. ಎತ್ತರದ ಧ್ವನಿ; ಏರುಗಡೆಯ ಸ್ವರ. ೧೧. ಬಿಳಿಯುದು; ಶುಭ್ರವಾದುದು. ೧೨. ನಕ್ಷತ್ರ. ~ಇ(ಯಿ)ಸು = ೧. ತಾರ ಸ್ವರದಲ್ಲಿ ಧ್ವನಿಮಾಡು; ಉಚ್ಚಸ್ವರದಲ್ಲಿ ಧ್ವನಿಮಾಡು. ೨. ಶ್ರುತಿ ಕೂಡಿಸು. ~ಹಾರ = (ದೊಡ್ಡ)ಮುತ್ತಿನ ಸರ, -ಮಾಲೆ.

**ತಾರಕ** (ನಾ). ೧. ಪಾರುಮಾಡುವವನು; ಸಂರಕ್ಷಕ. ೨. ನಕ್ಷತ್ರ; ತಾರೆ. ೩. ಸಂರಕ್ಷಿಸುವುದು; ದಾಟಿಸುವುದು. ೪. ಏರಿದ ಧ್ವನಿ; ಎತ್ತರದ ಸ್ವರ. ೫. ಕಣ್ಣುಗುಡ್ಡೆ; ಕನೀನಿಕೆ. ೬. ಒಬ್ಬ ರಾಕ್ಷಸನ ಹೆಸರು. (ಗು). ೭. ರಕ್ಷಿಸುವ; ಪಾರುಮಾಡುವ. ~ಅರಿ = ೧. ತಾರಕನನ್ನು ಸಂಹರಿಸಿದವನು; ಷಣ್ಮುಖ. ೨. ಸೂರ್ಯ. ~ಮಂತ್ರ = ೧. ಮೋಕ್ಷದಾಯಕವಾದ ಮಂತ್ರ. ೨. ಉದ್ಧಾರಮಾರ್ಗ.

**ತಾರಕೆ** ೧. = ತಾರಗೆ. ೨. ಕಣ್ಣಾಲಿ; ಕಣ್ಣುಗುಡ್ಡೆ. ೩. ಉಲ್ಕೆ.

**ತಾರಗೆ** (ನಾ). ನಕ್ಷತ್ರ; ತಾರೆ. ~ಆ(ಯಾ)ಳ್ = ನಕ್ಷತ್ರಗಳ ಒಡೆಯ; ಚಂದ್ರ. ~ಬ(ವ)ಟ್ಟೆ = ನಕ್ಷತ್ರಗಳ ಮಾರ್ಗ; ಆಕಾಶ.

**ತಾರಣ** (ನಾ). ೧. ದಾಟಿಸುವಿಕೆ. ೨. ದಾಟಿಸುವ ಸಾಧನ; ದೋಣಿ. ೩. ದಾಟಿಸುವವನು; ಪಾರುಮಾಡುವವನು. ೪. ಅರುವತ್ತು ಸಂವತ್ಸರಗಳಲ್ಲಿ ಒಂದು. ೫. ಅಡವು; ಒತ್ತೆ.

**ತಾರತಮ್ಯ** (ನಾ). ೧. ಹೆಚ್ಚುಕಡಮೆ; ವ್ಯತ್ಯಾಸ. ೨. ವಿವೇಚನೆ.

**ತಾರಮ್ಮಯ್ಯ** (ನಾ). ೧. ಕೈಸನ್ನೆಮಾಡಿ ಇಲ್ಲವೆನ್ನುವುದು. ೨. ಮಕ್ಕಳನ್ನು ಆಡಿಸುವ ಒಂದು ರೀತಿ.

**ತಾರಸಿ** (ನಾ). ಮನೆಯ ಛಾವಣಿಯ ಮೇಲ್ಭಾಗದಲ್ಲಿ ಸುತ್ತಲೂ ಗಾರೆ, ಇಟ್ಟಿಗೆಗಳಿಂದ ಮಾಡಿದ ದಿಂಡು.

**ತಾರಾತಿಗಡಿ** (ನಾ). ಮೋಸ; ಕಪಟ.

**ತಾರಾಬಲ** (ನಾ). ನಕ್ಷತ್ರ, ಗ್ರಹ ಮುಂತಾದುವುಗಳಿಂದುಂಟಾಗುವ ಫಲ.

**ತಾರಾಮಂಡಲ** (ನಾ). ೧. ನಕ್ಷತ್ರಗಳಿಂದ ಕೂಡಿದ ಆಕಾಶ. ೨. ನಕ್ಷತ್ರ ಸಮೂಹ. ೩. ಬಾಣ, ಬಿರುಸುಗಳಲ್ಲಿ ಒಂದು ಬಗೆ. ೪. ದೊಡ್ಡ ಬಾವಿ.

**ತಾರಿ** (ನಾ). ೧. ನದಿ ದಾಟುವ ಸ್ಥಳ; ಕಡವು; ಹಾಯ್ಗಡ. ೨. ದೋಣಿ. ೩. = ತಾಜಿ.

**ತಾರಿಸು** (ಕ್ರಿ). ಪಾರುಗಾಣಿಸು; ದಾಟಿಸು.

**ತಾರೀಕು** = ತಾರೀಖು.

**ತಾರೀಖು** (ನಾ). ತೇದಿ; ದಿನಾಂಕ.

**ತಾರೀಫು** (ನಾ). ಹೊಗಳಿಕೆ; ಪ್ರಶಂಸೆ.

**ತಾರು** ೧. = ತಾಜ್. (ನಾ). ೨. ತಂತಿಯ ಮೂಲಕ ಕಳಿಸುವ ಸುದ್ದಿ; ತಂತಿವಾರ್ತೆ. ೩. ಅಗುಳಿ; ಲಾಳವಿಂಡಿಗೆ. ೪. ಟಾರು; ಡಾಂಬರು. ೫. ಅಡಕೆಯ ಗೊಂಚಲು. ೬. ಗುಂಪು; ಸಮೂಹ. ~ಕೂ(ಗೂ)ಡು = ೧. ಒಣಗು; ಸೊರಗು. ೨. ಒಟ್ಟುಗೂಡು; ಸಂದಣಿಸು.

**ತಾರುಣ್ಯ** (ನಾ). ಹರೆಯ; ಯೌವನ.

**ತಾರುಣ್ಯವತಿ** (ನಾ). ತರುಣಿ; ಯುವತಿ; ಯೌವನೆ.

ತಾರೆ (ನಾ). ೧. ನಕ್ಷತ್ರ. ೨. ಕಣ್ಣುಗುಡ್ಡೆ; ಆಲಿ. ೩. ಮುತ್ತು. ೪. ಬೆಳ್ಳಿ. ೫. ವಾಯು; ಗಾಳಿ. ೬. = ತಾಱೆ.

ತಾಱ್(ರ್, ರು, ಱು) (ಕ್ರಿ). ೧. ಒಣಗು; ಬತ್ತಿಹೋಗು. ೨. ಸೊರಗು; ಕೃಶವಾಗು. (ನಾ). ೩. ಒಳಿತು, ಕೆಡಕುಗಳ ಮುನ್ಸೂಚನೆ; ಶಕುನ. ೪. ಒಣಗಿದುದು; ಶುಷ್ಕವಾದುದು.

ತಾಱ(ರ)ಲ್ (ನಾ). ೧. ಒಣಗಿದುದು; ಶುಷ್ಕವಾದುದು. ೨. ಪೊದರು; ಪೊದೆ.

ತಾಱಿ(ರಿ) (ನಾ). ಒಂದು ಜಾತಿಯ ಮರ ಮತ್ತು ಅದರ ಕಾಯಿ.

ತಾಱಿ(ರಿ)ಗಬೀಱಿ(ರಿ)ಗ = ತರಗಬರಗ.

ತಾಱು(ರು)(ಂ)ತಟ್ಟು (ನಾ). ೧. ಚೆಲ್ಲಾಪಿಲ್ಲಿ; ಅವ್ಯವಸ್ಥೆ. ೨. ಅಸಂಬದ್ಧತೆ; ಅಸಾಂಗತ್ಯ.

ತಾಱು(ರು)(ಂ)ಬೞಿ(ಳಿ) (ನಾ). ೧. ಅಸ್ತವ್ಯಸ್ತವಾದುದು. ೨. ಹಿಂಡು; ಸಂದಣಿ; ಗುಂಪು.

ತಾಱು(ರು)ಮಾಱು(ರು) = ತಾಱುಂತಟ್ಟು.

ತಾಱೆ(ರೆ) = ತಾಱಿ.

ತಾರ್ಕಣೆ (ನಾ). ೧. ವೈಯಕ್ತಿಕವಾದ ನಿರೀಕ್ಷಣೆ. ೨. ಪ್ರತ್ಯಕ್ಷವಾದ ರುಜುವಾತು; ಖಾತ್ರಿ. ೩. ಹೊಂದಾಣಿಕೆ; ಹೊಂದಿಕೆ.

ತಾರ್ಕಿಕ (ನಾ). ೧. ತರ್ಕಶಾಸ್ತ್ರವನ್ನು ತಿಳಿದವನು. ೨. ವಾದಿಸುವವನು; ವಾದಿ. (ಗು). ೩. ತರ್ಕಶಾಸ್ತ್ರಕ್ಕೆ ಸಂಬಂಧಿಸಿದ.

ತಾರ್ಕ್ಷ್ಯ (ನಾ). ೧. ಗರುಡ; ವೈನತೇಯ. ೨. ಉತ್ತಮ ಜಾತಿಯ ಕುದುರೆ.

ತಾರ್ಣ (ಗು). ಹುಲ್ಲಿನಿಂದ ಮಾಡಿದ.

ತಾರ್ಮುಟ್ಟು (ಕ್ರಿ). ೧. ತಾಗು; ಬಡಿ. (ನಾ). ೨. ಒಣಗಿದುದು; ಶುಷ್ಕವಾದುದು. ೩. ತಡೆ; ನಿರೋಧ. ೪. ಸೋಕು; ಸ್ಪರ್ಶ.

ತಾರ್ಯ (ಗು). ೧. ದಾಟಬಹುದಾದ. ೨. ಜಯಿಸಬೇಕಾದ; ಗೆಲ್ಲಬೇಕಾದ.

ತಾಲ ೧. = ತಾಳ. ೨. ಅಗುಳಿ; ಚಿಲಕ. ೩. ಗಂಧಕಮಿಶ್ರಿತ ಶಂಖಪಾಷಾಣ; ಅರಿದಾಳ. ೪. ಹೆಬ್ಬೆರಳು, ನಡುಬೆರಳುಗಳ ಮಧ್ಯದ ಅಳತೆ. ~ಧ್ವಜ = ತಾಲವೃಕ್ಷದ ಚಿಹ್ನೆಯನ್ನು ಬಾವುಟದಲ್ಲಿ ಉಳ್ಳವನು; ಬಲರಾಮ. ~ಪತ್ರ = ತಾಳೆಯ ಗರಿ, -ಓಲೆ. ~ಮಧು = ತಾಳೆಮರದಿಂದ ತೆಗೆದ ರಸ,-ಹೆಂಡ. ~ವೃಂತ = ತಾಳೆಗರಿಯಿಂದ ಮಾಡಿದ ಬೀಸಣಿಗೆ.

ತಾಲವ್ಯ (ನಾ). ೧. ತಾಲುವಿನಲ್ಲಿ ಉಚ್ಚರಿಸಲ್ಪಡುವ ಅಕ್ಷರ. (ಗು). ೨. ತಾಲುವಿಗೆ ಸಂಬಂಧಿಸಿದ.

ತಾಲಿ (ನಾ). ೧. ಚಿನ್ನದ ಬಟ್ಟು; ಮಾಂಗಲ್ಯ. ೨. ಲೋಹದ ಗುಂಡನೆಯ ಪಾತ್ರೆ; ಥಾಲಿ.

ತಾಲೀಪಿಟ್ಟು (ನಾ). ಒಂದು ಬಗೆಯ ತಿಂಡಿ; ರೊಟ್ಟಿ.

ತಾಲೀಮು (ನಾ). ೧. ತರಬೇತಿ; ಅಭ್ಯಾಸ. ೨. ವ್ಯಾಯಾಮ; ಅಂಗಸಾಧನೆ; ಕಸರತ್ತು. ೩. ಗರುಡಿಮನೆ; ವ್ಯಾಯಾಮಶಾಲೆ.

ತಾಲು (ನಾ). ಗಂಟಲಿನ ಮೇಲುಭಾಗ; ಅಂಗುಳು. ~ಜಿಹ್ವೆ = ೧. ಮೊಸಳೆ. ೨. ಕಿರುನಾಲಗೆ.

ತಾಲುಕ (ನಾ). ೧. ಗಲ್ಲ. ೨. = ತಾಲು.

ತಾಲು(ಳು)ಗೆ (ನಾ). ೧. ತಾಲು; ಅಂಗುಳು. ೨. ಗಂಟಲು.

ತಾಲ್ಲೂಕು (ನಾ). ಜಿಲ್ಲೆಯ ಒಂದು ವಿಭಾಗ; ತಹಸೀಲು.

ತಾವಡ (ನಾ). (ತಾವರೆಮಣಿಗಳಿಂದ ಮಾಡಿದ) ಸರ.

ತಾವಡಿ (ನಾ). ಅಲೆದಾಟ; ಸಂಚಾರ. ~ಕೊ(ಗೊ)ಳ್ = ಅಲೆದಾಡು; ಓಡಾಡು.

ತಾವರೆ (ನಾ). ಒಂದು ಜಾತಿಯ ಜಲಪುಷ್ಪ; ಕಮಲ. ~ಕೊ(ಗೊ)ೞ್(ಲು) = ತಾವರೆಯ ಬಾಣ; ಮನ್ಮಥನ ಪಂಚಬಾಣಗಳಲ್ಲಿ

ಒಂದು. ~ಗೆಳೆಯ = ಕಮಲದ ಸ್ನೇಹಿತ; ಸೂರ್ಯ. ~ನೂಲ್ = ತಾವರೆಯ ನಾರು, –ಎಳೆ. ~ಪ(ವ)ಗೆ = ಕಮಲದ ಹಗೆ; ಚಂದ್ರ. ~ಹಕ್ಕಿ = ಸಾರಸ; ಹಂಸ.

ತಾವಿ (ನಾ). ಕುದುರೆಯ ಗೊರಸಿಗೆ ಹಾಕುವ ಬಳೆ.

ತಾವು (ನಾ). ೧. ಎಡೆ; ಸ್ಥಳ. ೨. ಕಾಗದದ ಹಾಳೆ.

ತಾವುಜ = ತಾಯಿತಿ.

ತಾಸೀಲು = ತಹಸೀಲು.

ತಾಸು (ನಾ). ಆರುವತ್ತು ನಿಮಿಷಗಳ ಕಾಲಾವಧಿ; ಒಂದು ಗಂಟೆ.

ತಾಸೆ (ನಾ). ಒಂದು ಬಗೆಯ ಚರ್ಮವಾದ್ಯ.

ತಾಹೆ (ನಾ). ಕುಂಟಣಿಯ ಮನೆ.

ತಾಳ್ (ಕ್ರಿ). ೧. ಪಡೆ; ಹೊಂದು. ೨. ಧರಿಸು; ತಳೆ. ೩. ಸಹಿಸು; ತಡೆದುಕೊಳ್ಳು. ೪. ಸ್ವೀಕರಿಸು. ೫. ಕಾಯು; ಎದಿರು ನೋಡು. ೬. ಬಾಳಿಕೆ ಬರು. (ನಾ). ೭. ಅಗುಳಿ; ಲಾಳವಿಂಡಿಗೆ. ೮. = ತಾಟಿ್. ೯. ಗಂಟಲು; ತಾಲು. ೧೦. ಮುಳುಗುವಿಕೆ. ೧೧. ಇಳಿಯುವಿಕೆ. ~ಇಕೆ = ೧. ಸಹನೆ; ತಾಳ್ಮೆ. ೨. ಹೆಚ್ಚು ಕಾಲ ಉಪಯೋಗಕ್ಕೆ ಬರುವಿಕೆ; ಬಾಳಿಕೆ.

ತಾಳ (ನಾ). ೧. ಹಾಡುವಾಗ ನಿಯತಗತಿಯನ್ನು ಸೂಚಿಸಲು ಕೈಗಳಿಂದ ಹಾಕುವ ಪೆಟ್ಟು. ೨. ಕಂಚಿನಿಂದ ಮಾಡಿದ ಚಪ್ಪಟೆಯಾದ ಜತೆವಾದ್ಯ. ೩. ತಾಳೆಯ ಮರ. ~ಮದ್ದಳೆ = ರಂಗಸ್ಥಳ, ವೇಷಧಾರಣೆ ಮುಂತಾದ ಪರಿಕರಗಳಿಲ್ಲದೆ ನಿರ್ವಹಿಸುವ ಒಂದು ಬಗೆಯ ಯಕ್ಷಗಾನ. ~ಹಾಕು = ೧. ಸಂಗೀತದಲ್ಲಿ ತಾಳವನ್ನು ಹಾಕು. ೨. ಒಪ್ಪು; ಸಮ್ಮತಿಸು.

ತಾಳದ (ನಾ). ಒಂದು ಬಗೆಯ ವ್ಯಂಜನ ಪದಾರ್ಥ; ಪಲ್ಯ.

ತಾಳಲು (ನಾ). ಉಪ್ಪಿನಕಾಯಿಗೆ ಬಳಸುವ ಒಂದು ಬಗೆಯ ಕಾಯಿ.

ತಾಳವಟ್ಟ (ನಾ). ತಾಳೆಗರಿಯ ಬೀಸಣಿಗೆ.

ತಾಳಿ (ನಾ). ೧. ತಾಲಿ; ಮಂಗಲಸೂತ್ರ. ೨. ಬೆರಣಿಯ ರಾಶಿ.

ತಾಳಿಗೆ = ತಾಲುಗೆ.

ತಾಳಿದ = ತಾಳದ.

ತಾಳಿಲು = ತಾಳಲು.

ತಾಳಿಸು (ಕ್ರಿ). ೧. (ಆಹಾರವನ್ನು) ತುಪ್ಪ ಅಥವಾ ಎಣ್ಣೆಯಲ್ಲಿ ಬೇಯಿಸು. ೨. ಹುರಿ. ೩. ಒಗ್ಗರಿಸು; ಒಗ್ಗರಣೆ ಹಾಕು. ೪. ಹರಿತಗೊಳಿಸು.

ತಾಳು (ಕ್ರಿ). ೧. ಪಡೆ; ಹೊಂದು. ೨. ಧರಿಸು; ತಳೆ. ೩. ಸಹಿಸು; ತಡೆದುಕೊಳ್ಳು. ೪. ಬಾಳಿಕೆಬರು. ೫. ತಡೆ; ನಿಧಾನಿಸು. ೬. ಒಗ್ಗು. (ನಾ). ೭. ದೇಟು; ಕಾಂಡ.

ತಾಳೆ (ನಾ). ೧. ಬೀಸಣಿಗೆಯಾಕಾರದ ಗರಿಗಳುಳ್ಳ ಒಂದು ಜಾತಿಯ ಮರ. ೨. ಹೊಂದಾವಣೆ; ಹೊಂದಿಕೆ. ೩. = ತಾಟಿ. ~ಓ(ಯೋ)ಲೆ = ತಾಳೆಗರಿ. ~ನೋಡು = ಸರಿಹೊಂದಿಸಿ ನೋಡು; ಹೋಲಿಸಿ ನೋಡು. ~ಹಾಕು = ೧. ತಾಳೆನೋಡು. ೨. ಕೂಡಿಸು; ಗಂಟುಹಾಕು.

ತಾಳೇಬಂದು (ನಾ). ಜಮಾಖರ್ಚು ಪಟ್ಟಿ; ಆಯವ್ಯಯ ತಖ್ತೆ.

ತಾಳ್ದು (ಕ್ರಿ). ೧. ಹೊಂದು; ಪಡೆ. ೨. ಧರಿಸು. ೩. ಸಹಿಸು; ತಾಳು. ೪. ಸ್ವೀಕರಿಸು.

ತಾಳ್ಮೆ (ನಾ). ತಡೆದುಕೊಳ್ಳುವಿಕೆ; ಸಹನೆ; ಸೈರಣೆ. ~ಕೆ(ಗೆ)ಡು = ಸೈರಣೆಯನ್ನು ಕಳೆದುಕೊಳ್ಳು.

ತಾಳ್ವಾರ (ನಾ). ಮನೆಯ ಮುಂದಿನ ಇಳಿಜಾರು.

ತಾಟಿ್(ೞ್,ಳು,ೞು) (ನಾ). ೧. ತಾಳೆಯ ಮರ. ೨. ತಾಳೆಗರಿ; ತಾಡೋಲೆ. ೩. ಬುಡ;

ತಳ. ೪. ದಂಟು; ದೇಟು. ೫. ಮರ, ಗಿಡಗಳ ಕಾಂಡ, -ಬೊಡ್ಡೆ. ೬. = ತಾಟಿ³.

**ತಾಟಿ³(ಳೆ)** (ನಾ). ಒಂದು ಜಾತಿಯ ಸುಗಂಧದ ಹೂವುಗಳನ್ನು ಬಿಡುವ ಮರ; ಕೇದಗೆ.

**ತಿಂಗಣಿ** (ನಾ). ತೊಟ್ಟಿಲು ಅಥವಾ ಹಂದರದಲ್ಲಿ ಕಟ್ಟುವ ಅಲಂಕಾರದ ಕುಚ್ಚು, -ಗೊಂಡೆ.

**ತಿಂಗಳ್(ಳು)** (ನಾ). ೧. ಚಂದ್ರ; ಪೆರೆ. ೨. ಮೂವತ್ತು ದಿನಗಳ ಕಾಲಾವಧಿ; ಮಾಸ. ೩. ಬೆಳುದಿಂಗಳು; ಚಂದ್ರಿಕೆ. **~ಪ(ವ)ಕ್ಕಿ** = ಜೊನ್ನವಕ್ಕಿ; ಚಕೋರ. **~ಬೆಳಕು** = ಚಂದ್ರನ ಪ್ರಕಾಶ; ಬೆಳುದಿಂಗಳು.

**ತಿಂಗಳಿಗೆ** (ನಾ). ತಿಲಕ; ಬೊಟ್ಟು.

**ತಿಂಗಿಣಿ** = ತಿಂಗಣಿ.

**ತಿಂಡಿ** (ನಾ). ೧. ಆಹಾರ; ತಿನಿಸು; ಖಾದ್ಯ. ೨. ನವೆ; ತುರಿಕೆ. **~ಪೋತ** = ಅತಿಯಾಗಿ ತಿನ್ನುವವನು; ತಿನಾಳಿ.

**ತಿಂತಿಣಿ** (ನಾ). ೧. ಗುಂಪು; ಸಮೂಹ. ೨. = ತಿಂತ್ರಿಣಿ. **~ಇಸು** = ಗುಂಪಾಗು; ಕಿಕ್ಕಿರಿ; ದಟ್ಟೈಸು. **~ಕೊ(ಗೊ)ಳ್** = ತಿಂತಿಣಿಸು.

**ತಿಂತೆ** (ನಾ). ನವೆ; ತುರಿಕೆ.

**ತಿಂತ್ರಿಣಿ** (ನಾ). ಹುಣಿಸೆಯ ಮರ.

**ತಿಂಬಜ** (ನಾ). ತಿನ್ನುವ ಪದಾರ್ಥ.

**ತಿಂಬು** (ಕ್ರಿ). ೧. ತೀವು; ತುಂಬು; ವ್ಯಾಪಿಸು. ೨. ತುಂಬಿಸು; ಭರ್ತಿಮಾಡು.

**ತಿಕ** (ನಾ). ಗುದ; ಆಸನ.

**ತಿಕಡಿ** (ನಾ). ೧. ತ್ರಿಕೋಣಾಕೃತಿ; ತ್ರಿಭುಜ. ೨. ಗಾಡಿಯಲ್ಲಿ ಗಾಡಿಹೊಡೆಯುವವನು ಕುಳಿತುಕೊಳ್ಳಲು ಮಾಡಿದ ತ್ರಿಕೋಣಾಕಾರದ ರಚನೆ; ಸಿಪಾಯಿದಬ್ಬೆ; ಮೂಕಿ. ೩. ಜೈಲಿನಲ್ಲಿ ಅಪರಾಧಿಗಳ ಬೆನ್ನಿಗೆ ಹೊಡೆಯುವಾಗ ಉಪಯೋಗಿಸುತ್ತಿದ್ದ ತ್ರಿಭುಜವಾದ ಚೌಕಟ್ಟು. ೪. ಕಲ್ಲುಕುಟಿಗನು ಉಪಯೋಗಿಸುವ ಸಮುಮಟ್ಟ; ರಸಮಟ್ಟ.

**ತಿಕ್ಕ** (ನಾ). ತೀಕ್ಷ್ಣವಾದುದು; ಮೊನಚಾದುದು.

**ತಿಕ್ಕಲು** (ನಾ). ೧. ಮನಸ್ಸಿನ ಅಸ್ವಾಸ್ಥ್ಯ; ಕಳವಳ. ೨. ಹುಚ್ಚು; ಚಿತ್ತಭ್ರಮೆ. ೩. ಉಗ್ಗುವಿಕೆ; ತೊದಲು. **~ಆಟ** = ತಬ್ಬಿಬ್ಬು; ಕಂಗೆಡುವಿಕೆ.

**ತಿಕ್ಕು** (ಕ್ರಿ). ೧. ಉಜ್ಜು; ಮರ್ದಿಸು; ತೇಯು. ೨. ಬೆಳಗು; ಶುಚಿಮಾಡು. ೩. ಕಾಡು; ಪೀಡಿಸು. **~ಆಟ** = ೧. ಉಜ್ಜುವಿಕೆ; ಮರ್ದನ. ೨. ಜಗಳ; ಕಲಹ. ೩. ಹೆಣಗಾಟ; ಒದ್ದಾಟ.

**ತಿಕ್ತ** (ನಾ). ೧. ಕಹಿ; ಒಗರು. ೨. ಕಾರ; ಕಟುವಾದುದು. ೩. ಸುಗಂಧ; ಪರಿಮಳ. (ಗು). ೪. ತೀಕ್ಷ್ಣವಾದ; ಹರಿತವಾದ. ೫. ಕಹಿಯಾದ.

**ತಿಗ** = ತಿಕ.

**ತಿಗಡೆ** ೧. = ತಿಗುಡು. ೨. ಒಂದು ಜಾತಿಯ ಬಳ್ಳಿ ಮತ್ತು ಅದರ ಗಡ್ಡೆ.

**ತಿಗಣೆ** = ತಗುಣೆ.

**ತಿಗರಿ** = ತಿಗುರಿ.

**ತಿಗಳ** (ನಾ). ತಮಿಳುನಾಡು ಮತ್ತು ಆ ನಾಡಿಗೆ ಸೇರಿದವನು.

**ತಿಗುಡು** (ನಾ). ತೊಗಟೆ; ಸಿಪ್ಪೆ.

**ತಿಗುಣ** (ನಾ). ೧. ಮೂರುಪಾಲು; ಮುಮ್ಮಡಿ. ೨. ಮೂರುಸಲ, -ಬಾರಿ. ೩. ಸತ್ತ್ವ, ರಜಸ್ಸು ಮತ್ತು ತಮಸ್ಸುಗಳೆಂಬ ಮೂರು ಗುಣಗಳು.

**ತಿಗುರಿ** (ನಾ). (ಕುಂಬಾರನ) ಚಕ್ರ.

**ತಿಗುರು** (ಕ್ರಿ). ೧. ಸುಗಂಧದ್ರವ್ಯವನ್ನು ಪೂಸು, -ಲೇಪಿಸು. (ನಾ). ೨. ಸುಗಂಧ

ವಸ್ತುಗಳ ಲೇಪನ. ೩. ಒಂದು ಬಗೆಯ ಸುಗಂಧದ್ರವ್ಯ.

ತಿಗುಳ = ತಿಗಳ.

ತಿಗುಳು (ನಾ). ತಮಿಳುಭಾಷೆ.

ತಿಗ್ಮ (ನಾ). ೧. ಸೂರ್ಯ. ೨. ರಾಕ್ಷಸ. (ಗು). ೩. ಮೊನಚಾದ; ಹರಿತವಾದ; ತೀಕ್ಷ್ಣವಾದ. ೪. ಬಿಸಿಯಾದ; ಚುರುಕಾದ. ~ಅರಿ = ರಾಕ್ಷಸರ ಶತ್ರು; ವಿಷ್ಣು. ~ಕರ = ೧. ತೀಕ್ಷ್ಣವಾದ ಕಿರಣ. ೨. ತೀಕ್ಷ್ಣವಾದ ಕಿರಣಗಳಿಂದ ಕೂಡಿದವನು; ಸೂರ್ಯ.

ತಿಜೆ (ನಾ). ಮಂಗಳಸಂದರ್ಭಗಳಲ್ಲಿ ಪಠಿಸುವ ಮೂರು ಋಕ್ಕುಗಳು.

ತಿಜೋರಿ (ನಾ). ೧. ಅಮೂಲ್ಯವಸ್ತುಗಳನ್ನಿಡುವ ಕಬ್ಬಿಣದ ಪೆಟ್ಟಿಗೆ. ೨. ಖಜಾನೆ; ಬೊಕ್ಕಸ.

ತಿಟ್ಟ(ನಾ).೧. ದಿಣ್ಣೆ; ಏರಿ. ೨. ರಾಶಿ; ಗುಂಪು. ೩. ಎತ್ತರವಾದ ಪೀಠ; ಉನ್ನತಾಸನ. ೪. ನಕ್ಷೆ; ಚಿತ್ರ. ೫. ಗೊಂಬೆ; ಪುತ್ಥಳಿ. ೬. ನಿಯಮ; ಕಟ್ಟಳೆ. ೭. ನಿಶ್ಚಯ; ನಿರ್ಣಯ. ೮. ಏರ್ಪಾಡು; ವ್ಯವಸ್ಥೆ.

ತಿಟ್ಟು (ಕ್ರಿ). ೧. ಬಯ್ಯು; ನಿಂದಿಸು. (ನಾ). ೨. ಬಯ್ಗುಳು; ನಿಂದೆ. ೩. ದಿಣ್ಣೆ; ತೆವರು.

ತಿಟ್ಟೆ (ನಾ). ೧. ದಿಣ್ಣೆ; ಏರಿ; ತೆವರು. ೨. ಕಟ್ಟೆ; ಸ್ಥಳ.

ತಿಣ (ನಾ). ತೃಣ; ಹುಲ್ಲು. ~(ಂ)ಗಿಱು(ರು) = ಹುಲ್ಲಿಗೆ ಸಮಾನವಾಗಿ ಭಾವಿಸು; ಕೀಳಾಗಿ ಕಾಣು.

ತಿಣೆ (ಕ್ರಿ). ೧. ದಟ್ಟವಾಗಿ ಕೂಡು, –ಸೇರು. ೨. ತುಂಬು. (ನಾ). ೩. ಗುಂಪು; ಸಮೂಹ. ೪. ಒತ್ತಿ ತುಂಬುವಿಕೆ.

ತಿಣೆಕು (ಕ್ರಿ). ೧. ಕಷ್ಟಪಡು; ಹೆಣಗು. (ನಾ). ೨. ಕಷ್ಟ; ತೊಂದರೆ.

ತಿಣುಕು ೧. = ತಿಣೆಕು. ೨. ಮುಕ್ಕು; ಮುಲುಕು. ೩. ಹುರಿಕೆ ಬಿಡು.

ತಿಣ್ಣ (ನಾ). ೧. ಭಾರ; ಬಜ್ಜೆ. ೨. ತೋರವಾದುದು; ದೊಡ್ಡದು. ೩. ಆಧಿಕ್ಯ; ಹೆಚ್ಚಳ. ೪. ಶ್ರೇಷ್ಠವಾದುದು. ೫. ಬಲ; ಶಕ್ತಿ. ೬. ತೀಕ್ಷ್ಣವಾದುದು; ಕಠಿನವಾದುದು. ೭. ನಿಬಿಡತೆ; ಸಾಂದ್ರತೆ. ೮. ಕಷ್ಟ; ಪ್ರಯಾಸ. ~ಕೆ(ಗೆ)ಡು = ೧. ಭಾರವಿಲ್ಲದಾಗು; ಹಗುರವಾಗು. ೨. ಶಕ್ತಿಗುಂದು; ದುರ್ಬಲವಾಗು.

ತಿಣ್ಣಂ (ಅ). ೧. ಹೆಚ್ಚಾಗಿ; ವಿಶೇಷವಾಗಿ. ೨. ದಟ್ಟವಾಗಿ; ಒತ್ತಾಗಿ. ೩. ರಭಸವಾಗಿ; ತೀವ್ರವಾಗಿ. ೪. ಗಟ್ಟಿಯಾಗಿ; ಭದ್ರವಾಗಿ.

ತಿಣ್ಪು (ನಾ). ೧. ಭಾರ; ಬಜ್ಜೆ. ೨. ಹೆಚ್ಚಳ; ಅತಿಶಯ. ೩. ದಟ್ಟಣೆ; ಸಾಂದ್ರತೆ. ೪. ಸ್ಥಿರತೆ; ದೃಢತೆ.

ತಿತವು (ನಾ). ಜರಡಿ; ಸಾರಣಿಗೆ.

ತಿತಿ (ನಾ). ೧. ಸ್ಥಿತಿ; ನೆಲೆ. ೨. = ತಿಥಿ.

ತಿತಿಕ್ಷೆ (ನಾ). ಸಹನೆ; ತಾಳ್ಮೆ.

ತಿತ್ತಿ (ನಾ). ೧. ಚರ್ಮ; ತೊಗಲು. ೨. ಚರ್ಮದ ಊದುಚೀಲ; ತಿದಿ. ೩. (ನೀರು, ಎಣ್ಣೆ ಮುಂತಾದುವನ್ನು ತುಂಬುವ ಚರ್ಮದ) ಚೀಲ.

ತಿತ್ತಿರಿ (ನಾ). ೧. ಒಂದು ಜಾತಿಯ ಹಕ್ಕಿ; ಕವುಜಗ ಹಕ್ಕಿ. ೨. ಒಂದು ವಾದ್ಯವಿಶೇಷ; ತುತೂರಿ. ೩. ಒಂದು ಜಾತಿಯ ಮರ.

ತಿಥಿ (ನಾ). ೧. ಒಂದು ದಿನದ ಕಾಲಮಾನ; ಒಂದು ದಿವಸ. ೨. ಶ್ರಾದ್ಧ; ತದ್ದಿನ.

ತಿದಿ = ತಿತ್ತಿ. ~ಉ(ಯು)ಗಿ = ಚರ್ಮವನ್ನು ಸುಲಿ; ತೊಗಲನ್ನು ಉಚ್ಚು. ~ಊ(ಯೂ)ದು = ೧. ತಿದಿಯಿಂದ ಗಾಳಿ ಹಾಕು. ೨. ಪ್ರೋತ್ಸಾಹಿಸು; ಉತ್ತೇಜಿಸು.

ತಿದ್ದು (ಕ್ರಿ). ೧. ನೇರ್ಪಡಿಸು ; ಸುಧಾರಿಸು. ೨. ಶಿಕ್ಷಿಸು; ದಂಡಿಸು. ೩. ತರಬೇತಿ ಕೊಡು; ಪಳಗಿಸು. ೪. ಗುರುತಿಸು ; ರೇಖಿಸು. ೫. ಕಂಡರಿಸು ; ಕೆತ್ತು. ೬. ಸಾಲ ತೀರಿಸು ; ಋಣ ಪರಿಹಾರಮಾಡು. ೭. ನೀರನ್ನು ಹಾಯಿಸು. ೮. ಸೇದು ; ಎಳೆ. (ನಾ). ೯. ಸುಧಾರಣೆ; ನೇರ್ಪು. ~ಪಾಟು = ತಿದ್ದುಪಡಿ.

ತಿದ್ದುಪಡಿ (ನಾ). ಸರಿಪಡಿಸುವಿಕೆ ; ಸುಧಾರಣೆ.

ತಿನ್ (ಕ್ರಿ). ೧. ಆಹಾರ ಮೊದಲಾದುವನ್ನು ಸೇವಿಸು, -ಉಣ್ಣು. ೨. ಕಚ್ಚು ; ಕಡಿ. ೩. ನವೆಯುಂಟಾಗು ; ತಿನಿಸುಂಟಾಗು. ೪. ಅನುಭವಿಸು. ೫. ತೆಗೆದುಕೊಳ್ಳು ; ಸ್ವೀಕರಿಸು. ೬. ಕಾಡು ; ಪೀಡಿಸು. ೭. ತೆಗೆ; ಹೋಗಲಾಡಿಸು. ~ಆಳಿ = ತಿನಿಸುಬಕ್ಕ ; ಹೊಟ್ಟೆಬಾಕ.

ತಿನಸು = ತಿಂಡಿ.

ತಿನಿಸು = ತಿಂಡಿ.

ತಿನ್ನ (ನಾ). ತಿಂದು ಉಳಿದುದು ; ಎಂಜಲು.

ತಿನ್ನು = ತಿನ್.

ತಿಪ್ಪರಲಾಗ (ನಾ). ಅಂತರಲಾಗ ; ಡೊಂಬರ ಲಾಗ.

ತಿಪ್ಪುಳ್(ಳ್,ಳು) (ನಾ). ಗರಿ ; ತುಪ್ಪುಳು.

ತಿಪ್ಪೆ (ನಾ). ೧. ಕಸಕಡ್ಡಿಗಳ ಗುಡ್ಡೆ ; ಕುಪ್ಪೆ. ೨. ರಾಶಿ; ಸಮೂಹ. ~ಸಾರಿಸು = ವಿಷಯವನ್ನು ಮರೆಮಾಚು.

ತಿಬ್ಬ (ಗು). ೧. ಶೀಘ್ರ ; ವೇಗ. ೨. ತೀಕ್ಷ್ಣವಾದ. ೩. ಅಧಿಕವಾದ.

ತಿಬ್ಬಳಿ (ನಾ). ತಿಳಿವಳಿಕೆ ; ಜ್ಞಾನ.

ತಿಬ್ಬು (ನಾ). ಬಿಲ್ಲಿನ ಹಗ್ಗ ; ಹೆದೆ.

ತಿಮಿ (ನಾ). ೧. ಮೀನು ; ಮತ್ಸ್ಯ. ೨. = ತಿಮಿಂಗಿಲ.

ತಿಮಿಂಗಿಲ(ಳ) (ನಾ). ಅತಿದೊಡ್ಡ ಗಾತ್ರದ ಒಂದು ಜಲಚರ ಪ್ರಾಣಿ.

ತಿಮಿತ (ಗು). ಸ್ತಿಮಿತ; ಸ್ತಬ್ಧ; ಅಚಲವಾದ.

ತಿಮಿರ್ (ಕ್ರಿ). ೧. ಉಜ್ಜು ; ತಿಕ್ಕು. (ನಾ). ೨. ಸುಗಂಧ ದ್ರವ್ಯ ; ಪರಿಮಳ ದ್ರವ್ಯ.

ತಿಮಿರ (ನಾ). ೧. ನವೆ; ತುರಿಕೆ. ೨. ಕತ್ತಲೆ; ಅಂಧಕಾರ. ೩. ಒಂದು ಬಗೆಯ ಕಣ್ಣಿನ ರೋಗ. ೪. ಮೂಢತನ ; ಅಜ್ಞಾನ. ೫. ದುಃಖ. ೬. ರಾಹು. ೭. ದಡ್ಡ ; ತಿಳಿಗೇಡಿ. ೮. ಕುರುಡುತನ ; ಅಂಧತ್ವ.

ತಿಮಿರು (ಕ್ರಿ). ೧. ಉಜ್ಜು ; ತಿಕ್ಕು. (ನಾ). ೨. ಸೊಕ್ಕು ; ಗರ್ವ.

ತಿರ (ನಾ). ೧. ಸ್ಥೈರ್ಯ. ೨. ಶಿವ. (ಗು). ೩. ಸ್ಥಿರವಾದ; ಶಾಶ್ವತವಾದ.

ತಿರಸ್ಕರಣ (ನಾ). ತಾತ್ಸಾರ ; ಕಡೆಗಣಿಸುವಿಕೆ.

ತಿರಸ್ಕರಿಣಿ (ನಾ). ಪರದೆ ; ತೆರೆ ; ಮರೆ.

ತಿರಸ್ಕರಿಸು (ಕ್ರಿ). ಧಿಕ್ಕರಿಸು ; ಕಡೆಗಣಿಸು ; ಅವಹೇಳನ ಮಾಡು.

ತಿರಸ್ಕಾರ = ತಿರಸ್ಕರಣ.

ತಿರಸ್ಕೃತ (ಗು). ೧. ಆಕ್ಷೇಪಿಸಿದ ; ದೂಷಿಸಿದ. ೨. ಮುಚ್ಚಿದ ; ಮರೆಮಾಡಿದ.

ತಿರಿ (ಕ್ರಿ). ೧. ಸುತ್ತು ; ಸಂಚರಿಸು ; ಅಲೆ. ೨. ಭಿಕ್ಷೆ ಬೇಡು ; ಯಾಚಿಸು ; ತಿರುಪೆ ಎತ್ತು. ೩. = ತಿಱಿ. (ನಾ). ೪. ಹುರಿ ಮಾಡುವುದು ; ಹೊಸೆಯುವುದು. ~ಕ = ೧. ಅಲೆದಾಡುವವನು. ೨. ಭಿಕ್ಷುಕ. ~ಕುಳಿ = ತಿರುಪೆ ಬೇಡುವ ವ್ಯಕ್ತಿ ; ಯಾಚಕ. ~ಕೂಳ್(ಳ್) = ತಿರಿದು ತಂದ ಅನ್ನ ; ಭಿಕ್ಷಾನ್ನ.

ತಿರಿಕೆ (ನಾ). ಭಿಕ್ಷೆಗಾಗಿ ಅಲೆಯುವುದು ; ಭಿಕ್ಷಾಟನೆ.

ತಿರಿಚು (ಕ್ರಿ). ತಿರುಗಿಸು ; ಹೊಸೆ.

ತಿರಿಪು (ಕ್ರಿ). ೧. ಚಕ್ರಾಕಾರವಾಗಿ ಸುತ್ತಿಸು ; ತಿರುಗಿಸು. ೨. ಮಗುಚು. (ನಾ). ೩. ತಿರುಗುವಿಕೆ ; ಆವರ್ತ.

ತಿರಿಪೆ (ನಾ). ಯಾಚನೆ ; ಭಿಕ್ಷೆ.

ತಿರು (ನಾ). ೧. ಬಿಲ್ಲಿನ ಹಗ್ಗ ; ಹೆದೆ. ೨. ಪೂಜ್ಯ ; ಶ್ರೇಷ್ಠ. ~ಚೂರ್ಣ = ಶ್ರೀವೈಷ್ಣವರು ನಾಮ ಹಾಕಿಕೊಳ್ಳಲು ಉಪಯೋಗಿಸುವ ಬಣ್ಣದ ಪುಡಿ. ~ನಾಳ್(ಳು) = ಹಬ್ಬದ ದಿನ; ಪರ್ವದಿನ. ~ಪಾಡು = ದೇವತಾಸ್ತುತಿ ; ತೇವಾರ. ~ಪೊ(ವೊ)ಯ್ಲ್ಲ = ಹೆದೆಯ ಹೊಡೆತ; ಧನುಷ್ಟಂಕಾರ. ~ಬಾ(ವಾ)ಯ್ = ಬಿಲ್ಲಿನ ಹಗ್ಗದ ಮಧ್ಯಭಾಗ.

ತಿರುಕ (ನಾ). ಭಿಕ್ಷುಕ.

ತಿರುಗಣೆ (ನಾ). ೧. ಸುಳಿ ; ಆವರ್ತ. ೨. ತಿರುಗುಮೊಳೆ ; ತಿರುಪು. ೩. (ರಸ್ತೆಯ) ತಿರುವು, -ಬಾಗು.

ತಿರುಗು (ಕ್ರಿ). ೧. ವೃತ್ತಾಕಾರವಾಗಿ ಚಲಿಸು, - ಸುತ್ತು. ೨. ಅಲೆದಾಡು ; ಸಂಚರಿಸು. ೩. ಹಿಂದಕ್ಕೆ ಹೋಗು ; ಹಿಮ್ಮೆಟ್ಟು. ೪. ಗತಿ ಬದಲಾಯಿಸು. (ನಾ). ೫. ತಲೆ ಕೆಳಗಾಗುವಿಕೆ. ~ಆಟ = ಅಲೆದಾಟ ; ಸುತ್ತಾಟ. ~ಮುರುಗು = ಹಿಂದು ಮುಂದು ; ತಲೆಕೆಳಗು.

ತಿರುಗುಣಿ (ನಾ). ೧. ಆವರ್ತ ; ಸುಳಿ. ೨. ಒಂದು ಬಗೆಯ ಆಯುಧ.

ತಿರುಚು ೧. = ತಿರಿಚು. (ನಾ). ೨. ನುಲಿದುದು; ಸುತ್ತಿಕೊಂಡುದು.

ತಿರುಪಣಿ (ನಾ). ತಿರುಗುಮೊಳೆ ; ತಿರುಪು.

ತಿರುಪು ೧. = ತಿರಿಪು. (ನಾ). ೨. = ತಿರುಪಣಿ.

ತಿರುಪೆ = ತಿರಿಪೆ.

ತಿರುಬೋಕಿ (ನಾ). ೧. ತಿರುಕನ ಓಡು ; ಭಿಕ್ಷಾಪಾತ್ರೆ. ೨. ತಿರುಕ ; ಭಿಕ್ಷುಕ.

ತಿರುವು ೧. = ತಿರಿಪು. (ನಾ). ೨. ಹೆದೆ; ಮೌರ್ವಿ. ~ಮುರುವು = ತಿರುಗುಮುರುಗು ; ತಲೆಕೆಳಗು.

ತಿರುಹು = ತಿರಿಪು.

ತಿರುಳ್(ಳು) (ನಾ). ಸತ್ತ್ವ ; ಸಾರ.

ತಿರೆ (ನಾ). ಭೂಮಿ ; ಪೊಡವಿ.

ತಿರೋಧಾನ (ನಾ). ೧. ಅಡಗಿಸಿಡುವುದು ; ಮುಚ್ಚಿಡುವುದು. ೨. ನೆವ ; ನೆಪ. ೩. ಮರೆ ಮಾಡುವ ಸಾಧನ. ೪. ಕಾಣದಂತಾಗುವಿಕೆ.

ತಿರೋಹಿತ (ಗು). ಮರೆಮಾಡಿದ ; ಅಡಗಿಸಿದ.

ತಿಱಿ(ರಿ) (ಕ್ರಿ). ೧. ಕತ್ತರಿಸು ; ಕೊಯ್ಯು; ಕೀಳು. ೨. ಬೀಸಿ ಎಸೆ. (ನಾ). ೩. ಕೊಯ್ಯುವಿಕೆ. ೪. ಬೀಸಿ ಎಸೆಯುವಿಕೆ. ~ಕಲ್(ಲ್ಲು) = ಕಲ್ಲುಗಳನ್ನಿಟ್ಟುಕೊಂಡು ಆಡುವ ಒಂದು ಬಗೆಯ ಆಟ ; ಅಣ್ಣೆಕಲ್ಲು.

ತಿಱು(ರು) (ಕ್ರಿ). ೧. ನೀಡು ; ಕೊಡು. ೨. ವಿನಿಮಯ ಮಾಡು.

ತಿದ್ದು (ಕ್ರಿ). ೧. ತಿದ್ದು ; ಸರಿಪಡಿಸು. ೨. ಗುರುತಿಸು ; ರೇಖಿಸು. (ನಾ). ೩. ಸರಿಪಡಿಸುವಿಕೆ ; ನೇರ್ಪು ಮಾಡುವಿಕೆ.

ತಿರ್ಯಕ್ಕು (ನಾ). ೧. ಪಶುಪಕ್ಷಿ ಮುಂತಾದ ಪ್ರಾಣಿವರ್ಗ. (ಗು). ೨. ಅಡ್ಡವಾಗಿ ತಿರುಗುವ ; ಓರೆಯಾಗಿ ಚಲಿಸುವ.

ತಿಲ(ಳ) (ನಾ). ಎಳ್ಳು. ~ಅಂಜಲಿ = ೧. ಗತಿಸಿದವರಿಗೆ ತರ್ಪಣ ಕೊಡುವುದು ; ಎಳ್ಳು ನೀರನ್ನು ಬಿಡುವುದು. ೨. ಆಸೆಯನ್ನು ತೊರೆಯುವುದು. ~ಉದಕ = ತಿಲಾಂಜಲಿ. ~ಘಾತಕ = ಎಣ್ಣೆ ತೆಗೆಯುವವನು ; ಗಾಣಿಗ.

ತಿಲ(ಳ)ಕ (ನಾ). ೧. ಒಂದು ಜಾತಿಯ ಮರ. ೨. ಎಳ್ಳಿನ ಆಕಾರದ ಕಪ್ಪು ಮಚ್ಚೆ ; ಸಂಗಾತಿ. ೩. ಹಣೆಯಲ್ಲಿ ಇಟ್ಟುಕೊಳ್ಳುವ ಬೊಟ್ಟು. ೪. ಶ್ರೇಷ್ಠವಾದುದು ; ಅಲಂಕಾರಪ್ರಾಯವಾದುದು. ~ಇಸು = ಗುರುತಿಸು; ರೇಖಿಸು.

ತಿಲ(ಳ)ಜ (ನಾ). ಎಳ್ಳಿನಿಂದ ಹುಟ್ಟಿದುದು ; ಎಳ್ಳೆಣ್ಣೆ.

ತಿಲ್ಲಾನ (ನಾ). ನೃತ್ಯಕ್ಕೆ ಮೀಸಲಾದ ಒಂದು ಸಂಗೀತ ರಚನೆ.
ತಿವದಿ (ನಾ). ಮೂರು ಪಾದಗಳುಳ್ಳ ಅಂಶ ಗಣಬದ್ಧವಾದ ಒಂದು ಪದ್ಯಜಾತಿ; ತ್ರಿಪದಿ.
ತಿವದಿಗೆ (ನಾ). ಮೂರು ಕಾಲುಗಳುಳ್ಳ ಮಣೆ; ಅಡ್ಡಣಿಗೆ; ತೆವಟಿಗೆ.
ತಿವಳಿ (ನಾ). ೧. ಹೊಟ್ಟೆಯ ಮೇಲಿನ ಮೂರು ಮಡಿಕೆಗಳು. ೨. ಪಂಚಮಹಾವಾದ್ಯಗಳಲ್ಲಿ ಒಂದು.
ತಿವಾಸಿ (ನಾ). ೧. ರತ್ನಗಂಬಳಿ; ಕಸೂತಿ ಹಾಕಿದ ಮೇಲ್ವಾಸು. ೨. ಒರಗುದಿಂಬು; ಲೋಡು.
ತಿವಿ (ಕ್ರಿ). ೧. ಮುಷ್ಟಿಯಿಂದ ಹೊಡೆ, -ಗುದ್ದು. ೨. ಚುಚ್ಚು; ಇರಿ. ೩. ನಾಯಿಗಳ ಬಂಧನವನ್ನು ಬೇಟೆಗಾಗಿ ಸಡಿಲಿಸು. (ನಾ). ೪. ಹೊಡೆತ; ಗುದ್ದು. ೫. ಇರಿತ. ೬. ನಾಯಿಯ ಕೊರಳ ಪಟ್ಟಿ.
ತಿವಿತ (ನಾ). ಚುಚ್ಚುವುದು; ಇರಿತ.
ತಿವುಡು (ನಾ). ತವುಡು; ಉಮ್ಮಿ.
ತಿವುಡೆ (ನಾ). ಒಂದು ಬಗೆಯ ಛಂದೋರೂಪ; ತ್ರಿಪುಡೆ.
ತಿಷ್ಯ (ನಾ). ೧. ಪುಷ್ಯನಕ್ಷತ್ರ ಮತ್ತು ಆ ನಕ್ಷತ್ರದಲ್ಲಿ ಬರುವ ಮಳೆ. ೨. ಪುಷ್ಯಮಾಸ. ೩. ಕಲಿಯುಗ.
ತಿಸರ (ನಾ). ೧. ಮೂರೆಳೆಯ ಸರ. ೨. ಮೂರು ಬಾಣ; ತ್ರಿಶರ. ೩. ಜಗಳ; ಕಲಹ.
ತಿಸುಳ (ನಾ). ಮೂರು ಮೊನೆಗಳುಳ್ಳ ಆಯುಧ; ತ್ರಿಶೂಲ.
ತಿಸುಳಿ (ನಾ). ತ್ರಿಶೂಲವನ್ನು ಹಿಡಿದವನು; ಶಿವ.
ತಿಳಿ (ಕ್ರಿ). ೧. ಶುದ್ಧವಾಗು; ನಿರ್ಮಲವಾಗು. ೨. ಪ್ರಸನ್ನವಾಗು; ಶಾಂತವಾಗು. ೩. ಗ್ರಹಿಸು; ಕಲಿ. ೪. ಎಚ್ಚರಗೊಳ್ಳು; ಜ್ಞಾನಬರು. ೫. ಕಾಣು; ಗೋಚರಿಸು. (ನಾ). ೬. ಸ್ವಚ್ಛತೆ; ನೈರ್ಮಲ್ಯ. ೭. ಜ್ಞಾನ; ಅರಿವು. ೮. ಹೆಂಡದ ಬಟ್ಟಲು; ಮಧುಪಾತ್ರೆ. ೯. ತೆಳ್ಳನೆಯ ದ್ರವ. ~ಕೆ(ಗೆ)ಟ್ಟಿ =ಬುದ್ಧಿಯಿಲ್ಲದವನು; ಮೂಢ.
ತಿಳಿಪು (ಕ್ರಿ). ೧. ಸಮಾಧಾನ ಪಡಿಸು; ಶಾಂತಗೊಳಿಸು. ೨. ತಣಿಸು; ತೃಪ್ತಿಪಡಿಸು. ೩. = ತಿಳಿಸು. (ನಾ). ೪. ಶುದ್ಧವಾದುದು.
ತಿಳಿವಳಿಕೆ (ನಾ). ಜ್ಞಾನ; ಅರಿವು.
ತಿಳಿವು (ನಾ). ೧. ಸಮಾಧಾನ; ಶಾಂತಿ. ೨. = ತಿಳಿವಳಿಕೆ.
ತಿಳಿಸು (ಕ್ರಿ). ತಿಳಿಯಪಡಿಸು; ಅರಿಯುವಂತೆ ಮಾಡು; ವಿಶದಪಡಿಸು.
ತಿಳುಪು = ತಿಳಿಪು.
ತಿಳುಹು = ತಿಳಿಪು.
ತಿಳ್ಳಿ (ನಾ). ಒಂದು ಬಗೆಯ ಆಟ.
ತೀ (ಕ್ರಿ). ೧. ಸುಡು; ಸುಟ್ಟುಹೋಗು. (ನಾ). ೨. ಬೆಂಕಿ; ಕಿಚ್ಚು.
ತೀ(ಂ)ಟು (ಕ್ರಿ). ಮುಟ್ಟು; ತಾಕು; ಸೋಕು.
ತೀಂಟೆ (ನಾ). ೧. ನವೆ; ಬೆದೆ; ಕಡಿತ. ೨. ಕೊಬ್ಬು; ಗರ್ವ.
ತೀಕ್ಷ್ಣ (ನಾ). ೧. ಹರಿತ. ೨. ಕಾರ; ಕಟುತ್ವ. ೩. ವಿಷ; ನಂಜು. ೪. ಕಬ್ಬಿಣ. (ಗು). ೫. ಹರಿತವಾದ; ಚೂಪಾದ. ೬. ಬಿಡುಸಾದ; ಉಷ್ಣವಾದ. ೭. ಕ್ರೂರವಾದ. ~ಅಂಶು = ಸೂರ್ಯ. ~ಕಂದ = ಉಳ್ಳಿಗೆಡ್ಡೆ; ಈರುಳ್ಳಿ. ~ಗಂಧ=೧. ಬಜೆ. ೨. ಸಾಸುವೆ. ~ದಂಷ್ಟ್ರ = ಹುಲಿ. ~ಪುಷ್ಪ = ಲವಂಗ.
ತೀಟ (ನಾ). ೧. ಬೀಸುವಿಕೆ; ತೀಸುವಿಕೆ. ೨. ಮೃದುವಾದ ಸ್ಪರ್ಶ. ೩. ನಸುಗುನ್ನಿ; ತುರುಚಿ.
ತೀಟೆ ೧. = ತೀಂಟೆ. ೨. ಬೆದೆ; ನಸೆ. ೩. ಕೀಟಲೆ; ಚೇಷ್ಟೆ.

ತೀಡು (ಕ್ರಿ). ೧. (ಗಾಳಿ) ಬೀಸು. ೨. ಸೋಕು; ಸ್ಪರ್ಶಿಸು; ಮುಟ್ಟು. ೩. ಹಿಸುಕು; ಹಿಂಡು. ೪. ಉಜ್ಜು; ತಿಕ್ಕು. ೫. ವ್ಯಾಪಿಸು; ಹರಡು. ೬. ಹೊಡೆ; ಬಡಿ. ೭. ತಿದ್ದು; ಸರಿಪಡಿಸು. ೮. ನೇವರಿಸು; ತಡವು. ೯. ಹರಿತಗೊಳಿಸು; ಮಸೆ.

ತೀನ್ (ನಾ). ನವೆ; ತುರಿಕೆ.

ತೀನಿ (ನಾ). ಆಹಾರ; ತಿಂಡಿ; ತಿನಿಸು.

ತೀಸು (ನಾ). ಬೇಲಿ ಅಥವಾ ತಡಿಕೆಯನ್ನು ನಿಲ್ಲಿಸಲು ಆಧಾರವಾದ ಗೂಟ.

ತೀಬು (ನಾ). ಲವಂಗದ ಗಿಡ ಮತ್ತು ಅದರ ಹೂವು.

ತೀರ್ (ಕ್ರಿ). ೧. ನಾಶವಾಗು; ಇಲ್ಲವಾಗು. ೨. ಮುಗಿ; ಕೊನೆಗಾಣು. ೩. ಶಕ್ಯವಾಗು; ಸಾಧ್ಯವಾಗು. ೪. ಸಾಯು. (ನಾ). ೫. ಬಾಣ; ಕಣೆ. ~ ಇಕೆ = ೧. ತೀರ್ಮಾನ; ಮುಕ್ತಾಯ. ೨. ಬಿಡುವು; ವಿಶ್ರಾಂತಿ. ~ ಇಸು = ೧. ಕೊನೆಗಾಣಿಸು; ಮುಗಿಸು; ಪೂರ್ಣ ಮಾಡು. ೨. ಕೊಲ್ಲು; ಸಾಯಿಸು. ೩. ಬಗೆಹರಿಸು. ೪. ಸಂದಾಯ ಮಾಡು. ೫. ನಿರ್ವಹಿಸು; ನೆರವೇರಿಸು.

ತೀರ (ನಾ). ೧. ಕರೆ; ದಡ; ದಂಡೆ. (ಗು). ೨. ಬಹಳ; ತುಂಬ. (ಅ). ೩. ಹೆಚ್ಚಾಗಿ; ಅತಿಯಾಗಿ.

ತೀರು ೧. = ತೀರ್. (ನಾ). ೨. ತೀರ್ಮಾನ; ತೀರ್ಪು; ಅಂತ್ಯ. ೩. ಇತ್ಯರ್ಥ; ವ್ಯವಸ್ಥೆ. ೪. ಕ್ರಮ; ರೀತಿ. ೫. ಅಂದಗೊಳಿಸುವಿಕೆ. ೬. ತೊಲೆ; ದೂಲ; ಜಂತೆ.

ತೀಱ್(ರ್,ರು,ಱು) (ಕ್ರಿ). ಕಬಳಿಸು.

ತೀಱೆ(ರೆ) (ನಾ). ಹುಳು; ಕೀಟ.

ತೀರ್ಕಣೆ (ನಾ). ೧. ಕೊನೆ; ಅಂತ್ಯ. ೨. ನೆರವೇರಿಕೆ.

ತೀರ್ಚು (ಕ್ರಿ). ೧. ಮುಗಿಸು; ಕೊನೆಗಾಣಿಸು; ಪೂರ್ಣಗೊಳಿಸು. ೨. ಪರಿಹರಿಸು; ಗುಣಪಡಿಸು. ೩. ನಾಶಪಡಿಸು; ಸಾಯಿಸು; ಕೊಲ್ಲು. ೪. ಈಡೇರಿಸು; ನೆರವೇರಿಸು.

ತೀರ್ಣ (ಗು). ೧. ದಾಟಿದ; ವಿಸ್ತಾರಿದ. ೨. ತೇಲಿದ. ೩. ಹರಡಿದ.

ತೀರ್ಥ (ನಾ). ೧. ಪವಿತ್ರಜಲ. ೨. ಪುಣ್ಯಕ್ಷೇತ್ರ; ತೀರ್ಥಕ್ಷೇತ್ರ. ೩. ನದಿಯಲ್ಲಿ ಸ್ನಾನಕ್ಕೆ ಇಳಿಯುವ ಜಾಗ; ಸೋಪಾನ; ಮೆಟ್ಟಲು. ೪. ದರ್ಶನಶಾಸ್ತ್ರ. ೫. ಮಂತ್ರಿ. ೬. ಪಂಡಿತ. ೭. ಸಂನ್ಯಾಸಿಗಳ ಹೆಸರಿನ ಕೊನೆಯಲ್ಲಿ ಸೇರಿಸುವ ಮಾತು. ೮. = ತೀರ್ಥಂಕರ. ~ ಮಸ್ತಕ = ಶಿವ; ಈಶ್ವರ. ~ ಯಾತ್ರೆ = ಪವಿತ್ರಸ್ಥಳಗಳಿಗೆ ಹೋಗುವುದು. ~ ರೂಪ = ೧. ತಂದೆ. ೨. ಗೌರವಕ್ಕೆ ಪಾತ್ರನಾದ ವ್ಯಕ್ತಿ.

ತೀರ್ಥಂಕರ (ನಾ). ಅರ್ಹಂತ; ಜಿನ.

ತೀರ್ಪು (ನಾ). ೧. ತೀರ್ಮಾನ; ನಿರ್ಣಯ. ೨. ನ್ಯಾಯ.

ತೀರ್ಮಾನ = ತೀರ್ಪು. ~ ಇಸು = ೧. ತೀರ್ಪು ಕೊಡು. ೨. ನಿರ್ಣಯಕ್ಕೆ ಬರು; ನಿರ್ಧರಿಸು.

ತೀರ್ವೆ (ನಾ). ೧. ಸುಂಕ. ೨. ನಿರ್ಣಯ; ತೀರ್ಮಾನ. ೩. ತೀರಿಸುವಿಕೆ.

ತೀವು (ಕ್ರಿ). ೧. ಭರ್ತಿಮಾಡು; ತುಂಬು. ೨. ಹೊರಸೂಸು; ಚೆಲ್ಲು. ೩. ಹರಡು; ವ್ಯಾಪಿಸು. ೪. ಮುಗಿ; ಕೊನೆಗಾಣು. ೫. ಪೂರೈಸು; ಮುಗಿಸು.

ತೀವ್ರ (ನಾ). ೧. ಹರಿತ; ತೀಕ್ಷ್ಣತೆ. ೨. ರಭಸ; ತ್ವರೆ. (ಗು). ೩. ತೀಕ್ಷ್ಣವಾದ. ೪. ನಿಷ್ಠುರವಾದ. ೫. ಉಗ್ರವಾದ.

ತೀವ್ರತೆ (ನಾ). ೧. ತೀಕ್ಷ್ಣತೆ; ಹರಿತವಾಗಿರುವಿಕೆ. ೨. ರಭಸ; ವೇಗ. ೩. ಆಧಿಕ್ಯ; ಹೆಚ್ಚಳ.

ತುಂಗ (ನಾ). ೧. ಸುರಗಿಮರ; ಪುನ್ನಾಗ ವೃಕ್ಷ. (ಗು). ೨. ಎತ್ತರವಾದ; ಉನ್ನತವಾದ. ೩. ಶ್ರೇಷ್ಠವಾದ; ಮಿಗಿಲಾದ.

~ವಿಕ್ರಮ = ೧. ಅತಿಶಯವಾದ ಶಕ್ತಿಯುಳ್ಳವನು. ೨. ಅತ್ಯಂತ ಪರಾಕ್ರಮವುಳ್ಳ.
ತುಂಗತೆ (ನಾ). ಆಧಿಕ್ಯ ; ಶ್ರೇಷ್ಠತೆ.
ತುಂಗಿ (ನಾ). ೧. ರಾತ್ರಿ. ೨. ಅರಿಸಿನ. ೩. ಒಂದು ಜಾತಿಯ ಗಿಡ ; ನಾರಂಬೇಳೆ.
ತುಂಗೆ (ನಾ). ೧. ಒಂದು ಸುವಾಸನೆಯ ಗಡ್ಡೆ ; ಕೊಡನಾರಿಗಡ್ಡೆ. ೨. ಶ್ರೇಷ್ಠಳಾದವಳು. ೩. ಒಂದು ನದಿಯ ಹೆಸರು.
ತುಂಟ (ನಾ). ೧. ನೀಚ ; ದುಷ್ಟ. ೨. ಚೇಷ್ಟೆಗಾರ ; ತಂಟೆಕೋರ. ೩. ಪೋಲಿ; ಪೋಕರಿ. ~ತನ=೧. ತಂಟೆ; ಚೇಷ್ಟೆ. ೨. ನೀಚತನ; ಕೆಟ್ಟತನ.
ತುಂಟಿ (ನಾ). ೧. ದುರುಳ ಹೆಂಗಸು ; ದುಷ್ಟೆ. ೨. ತಂಟೆಮಾಡುವವಳು.
ತುಂಟು = ತುಂಟತನ.
ತುಂಡ (ನಾ). ೧. ಬಾಯಿ. ೨. ಕೊಕ್ಕು ; ಚಂಚು. ೩. ಸೊಂಡಿಲು. ೪. ಮೂತಿ ; ಮುಸುಡಿ. ೫. ಪೋಲಿ ; ಪೋಕರಿ.
ತುಂಡರಿಸು (ಕ್ರಿ). ತುಂಡು ಮಾಡು ; ಕತ್ತರಿಸು.
ತುಂಡಿ (ನಾ). ೧. ಕೊಕ್ಕು. ೨. ಬಾಯಿ. ೩. (ದೊಡ್ಡ) ಹೊಕ್ಕುಳು.
ತುಂಡಿಕೆ (ನಾ). ತೊಂಡೆಗಿಡ ಮತ್ತು ಅದರ ಹಣ್ಣು.
ತುಂಡು (ನಾ). ೧. ಚೂರು ; ಭಾಗ ; ಖಂಡ. ೨. ಚೇಷ್ಟೆ ; ತಂಟೆ. ೩. ಕೀಳುಬುದ್ಧಿ ; ಕ್ಷುದ್ರತನ. ೪. ಅವಿವೇಕ. ೫. ಸಣ್ಣಬಟ್ಟೆ, –ವಸ್ತ್ರ. ~ಅರಸು = ಮಾಂಡಲಿಕ ; ಪಾಳೇಗಾರ. ~ಅಡಿ =೧. ದಾಂಡಿಗ ; ಘಡಿಯ. ೨. ಉಡಾಳ; ಪೋಕರಿ. ~ಗೆಯ್ = ತುಂಡರಿಸು.
ತುಂತುರು = ತುಂತುಱ್. ~ಪ(ವ)ನಿ=ಸಣ್ಣಹನಿ ; ಶೀಕರ. ~ಮಳೆ = ಹನಿಮಳೆ ; ಸಣ್ಣಮಳೆ.
ತುಂತುಱ್(ರ್,ರು,ಱು) (ನಾ). ಹನಿ ; ತೊಟ್ಟು ; ಶೀಕರ.
ತುಂದ (ನಾ). (ಉಬ್ಬಿದ) ಹೊಟ್ಟೆ.
ತುಂದಿಲ(ಳ) (ನಾ). ೧. ದೊಡ್ಡ ಹೊಟ್ಟೆಯುಳ್ಳವನು. (ಗು). ೨. ದೊಡ್ಡಹೊಟ್ಟೆಯುಳ್ಳ. ೩. ತುಂಬಿದ ; ಪರಿಪೂರ್ಣವಾದ.
ತುಂಬ (ನಾ). ೧. ಹೆಚ್ಚಳ ; ಅತಿಶಯ. ೨. ಕರಿಯ ಕುಂಬಳಕಾಯಿ. (ಅ). ೩. ಹೆಚ್ಚಾಗಿ ; ವಿಶೇಷವಾಗಿ.
ತುಂಬಿ (ನಾ). ೧. ದುಂಬಿ ; ಅಳಿ. ೨. ಒಂದು ಜಾತಿಯ ಗಿಡ ; ತುಂಬೆ. ~ಕು(ಗು)ರುಳ್ = ತುಂಬಿಯಂತೆ ಕಪ್ಪಾಗಿರುವ ಕೂದಲು.
ತುಂಬು (ಕ್ರಿ). ೧. ಪೂರ್ಣವಾಗು ; ಹೊರಚೆಲ್ಲುವಂತಾಗು. ೨. ಭರ್ತಿಮಾಡು; ಪೂರ್ಣಗೊಳಿಸು. ೩. ವ್ಯಾಪಿಸು ; ಹರಡು. ೪. ಕಳೆ ; ಮುಗಿ. (ನಾ). ೫. ಪೂರ್ಣವಾಗಿರುವುದು. ೬. ತೊಟ್ಟು ; ದೇಟು. ೭. ತೂಬು ; ಕಂಡಿ. ~ಉಚ್ಚು = ಕೆರೆಕಟ್ಟೆಗಳ ತೂಬನ್ನು ತೆಗೆದು ನೀರನ್ನು ಹರಿಯಬಿಡು. ~ತಿ(ದಿ)ಂಗಳು = ಹುಣ್ಣಿಮೆಯ ಚಂದ್ರ ; ಪೂರ್ಣಚಂದ್ರ.
ತುಂಬುರ (ನಾ). ೧. ತೂಬರೆಮರ ; ಕಾಡುಮಾವಿನ ಮರ. ೨. ಒಂದು ವಾದ್ಯವಿಶೇಷ; ತಂಬೂರಿ. ೩. ಒಬ್ಬ ಗಂಧರ್ವನ ಹೆಸರು.
ತುಂಬುರು = ತುಂಬುರ.
ತುಂಬೆ ೧. = ತುಂಬಿ. ೨. ಕುಂಬಳಕಾಯಿ.
ತುಕಡಿ (ನಾ). ೧. ತುಂಡು ; ಚೂರು. ೨. ಬಣ ; ಪಂಗಡ. ೩. ಸೈನ್ಯದ ಒಂದು ಭಾಗ. ೪. ಪ್ರಾಂತ ; ಮಂಡಲ.
ತುಕ್ಕಡಿ = ತುಕಡಿ. ~ದಾರ = ಪ್ರಾಂತ್ಯಾಧಿಕಾರಿ.
ತುಕ್ಕು (ಕ್ರಿ). ೧. ಒಟ್ಟಾಗು ; ಕಿಕ್ಕಿರಿ. ೨. ಮುತ್ತು ; ಆಕ್ರಮಿಸು. ೩. ಸುತ್ತು ; ತಿರುಗು. (ನಾ). ೪. ಜಂಗು ; ಕಿಲುಬು.

~ಹಿಡಿ = ೧. ಜಂಗುತಿನ್ನು ; ಕಿಲುಬುಹಿಡಿ. ೨. ಗುಣಹೀನವಾಗು ; ದೋಷಯುಕ್ತವಾಗು.

**ತುಗ್ಗಿಲ್(ಲು)** (ನಾ). ಒಂದು ಜಾತಿಯ ಮರ ; ಚುಜ್ಜಲುಮರ.

**ತುಚ್ಛ** (ನಾ). ೧. ತೆರವು ; ಶೂನ್ಯ. (ಗು). ೨. ಹೀನವಾದ ; ಕೀಳಾದ. ೩. ಕೆಲಸಕ್ಕೆ ಬಾರದ ; ವ್ಯರ್ಥ. ೪. ಶೂನ್ಯವಾದ ; ಬರಿದಾದ.

**ತುಚ್ಛೀಕರಿಸು** (ಕ್ರಿ). ಕಡೆಗಣಿಸು ; ತಿರಸ್ಕರಿಸು.

**ತುಟಾರ** (ನಾ). ವಿಚಾರಮಾಡದಿರುವಿಕೆ ; ದುಡುಕು. ~ಇಸು = ವಿವೇಚನೆಯಿಲ್ಲದೆ ಮುಂದುವರಿ ; ದುಡುಕು.

**ತುಟಿ** (ನಾ). ಅಧರ ; ಓಷ್ಠ.

**ತುಟುಕು** = ತಟಕು.

**ತುಟ್ಟಿ** (ನಾ). ೧. ಹೆಚ್ಚಿನ ಬೆಲೆ ; ದುಬಾರಿ ; ತೇಜಿ. ೨. ತುಷ್ಟಿ ; ತೃಪ್ತಿ. ~ಭತ್ಯ = ಪದಾರ್ಥಗಳ ಬೆಲೆ ಏರಿಕೆಯ ಪರಿಣಾಮವಾಗಿ ಕೊಡುವ ಹೆಚ್ಚಿನ ವೇತನ.

**ತುಟ್ಟಿಸು** (ಕ್ರಿ). ೧. ಶಕ್ತಿಗುಂದು ; ಬಲಹೀನವಾಗು. ೨. ನಾಶವಾಗು. ೩. ಕಡೆಗಣಿಸು ; ಮೀರು. ೪. ಕರಗು ; ಲೀನವಾಗು. ೫. ಶಾಂತಗೊಳಿಸು.

**ತುಡಿ** (ಕ್ರಿ). ಮಿಡಿ ; ಸ್ಪಂದಿಸು.

**ತುಡಿಕೆ** (ನಾ). ಹಣ್ಣುಗಳನ್ನು ಶೇಖರಿಸಿಡುವ ಮನೆ.

**ತುಡಿಗೆ** = ತೊಡಿಗೆ.

**ತುಡಿತ** (ನಾ). ಮಿಡಿತ ; ಸ್ಪಂದನ.

**ತುಡು** ೧. = ತೊಡು. (ನಾ). ೨. ಒಂದು ಮರದ ಹೆಸರು.

**ತುಡು(ಂ)ಕು** (ಕ್ರಿ). ೧. ಜಾಗ್ರತೆಯಾಗಿ ಹಿಡಿ ; ಆತುರದಿಂದ ಹಿಡಿ. ೨. ಬಲಾತ್ಕಾರದಿಂದ ಕಿತ್ತುಕೊಳ್ಳು. ೩. ತಾಗು ; ಮುಟ್ಟು. (ನಾ). ೪. ಶೀಘ್ರವಾಗಿ ಹಿಡಿಯುವಿಕೆ.

**ತುಡುಗ** (ನಾ). ೧. ಕಳ್ಳ ; ಚೋರ. ೨. ಮೋಸಗಾರ ; ವಂಚಕ.

**ತುಡುಗಿ** (ನಾ). ೧. ಕಳ್ಳಿ. ೨. ಮೋಸಗಾತಿ.

**ತುಡುಗು** (ನಾ). ೧. ಕಳ್ಳತನ ; ಕದಿಯುವಿಕೆ. ೨. ಕಳವು ಮಾಡಿದ ವಸ್ತು. ೩. ತುಂಟತನ. ~ಮಾಡು = ಕಳವುಮಾಡು ; ಕದಿ.

**ತುಡುಗುಣಿ** (ನಾ). ಕಳವಿನಿಂದ ಬದುಕುವ ಮನುಷ್ಯ ಅಥವಾ ಪ್ರಾಣಿ.

**ತುಡುಗೆ** = ತೊಡಿಗೆ.

**ತುಡುಪು** (ನಾ). ೧. ದೋಣಿಯನ್ನು ನಡಸುವ ಕೋಲು ; ಹುಟ್ಟು. ೨. ಸಟ್ಟುಗ ; ಸೌಟು.

**ತುಡುಬೆ** (ನಾ). ಒಂದು ಬಗೆಯ ಜೇನು.

**ತುಡುಮು** (ನಾ). ಒಂದು ಬಗೆಯ ಚರ್ಮವಾದ್ಯ.

**ತುಡುರು** (ಕ್ರಿ). ಗದರಿಸು ; ಅಬ್ಬರಿಸು.

**ತುಡುವೆ** = ತುಡುಬೆ.

**ತುಣವ** (ನಾ). ಒಂದು ಬಗೆಯ ವಾದ್ಯ.

**ತುಣುಕು** (ನಾ). ಚೂರು ; ತುಂಡು.

**ತುತಿ** (ನಾ). ಹೊಗಳಿಕೆ ; ಸ್ತುತಿ ; ಪ್ರಶಂಸೆ. ~ಇಸು = ಹೊಗಳು ; ಪ್ರಶಂಸಿಸು.

**ತುತೂರಿ** (ನಾ). ಒಂದು ಬಗೆಯ ಊದುವ ವಾದ್ಯ ; ತೂರ್ಯ.

**ತುತ್ತು** (ಕ್ರಿ). ೧. ನುಂಗು ; ಕಬಳಿಸು. (ನಾ). ೨. ಒಂದು ಸಲಕ್ಕೆ ನುಂಗುವಷ್ಟು ಆಹಾರ ; ಕಬಳ. ~ಆಗು = ಈಡಾಗು ; ಗುರಿಯಾಗು.

**ತುತ್ತೂರಿ** = ತುತೂರಿ.

**ತುತ್ಥ** (ನಾ). ೧. ಒಂದು ವಿಷವಸ್ತು ; ಮೈಲುತುತ್ತ ; ಗಂಧಕಾಮ್ಲ. ೨. ಕಲ್ಲು ; ಶಿಲೆ.

**ತುತ್ಥೆ** (ನಾ). ೧. ನೀಲಿಯ ಗಿಡ. ೨. ಸಣ್ಣ ಏಲಕ್ಕಿ.

**ತುದಿ** (ನಾ). ಅಂತ್ಯ ; ಕೊನೆ ; ಅಗ್ರ.

**ತುನ್ನ** (ನಾ). ೧. ಒಂದು ಜಾತಿಯ ಮರ ; ನಂದಿಮರ. ೨. ನೋವು ; ಬಾಧೆ. (ಗು).

೩. ನೋಯಿಸಲ್ಪಟ್ಟ; ಗಾಸಿಗೊಳಿಸಲ್ಪಟ್ಟ. ೪. ಪೀಡಿಸಲ್ಪಟ್ಟ. ೫. ಕತ್ತರಿಸಲ್ಪಟ್ಟ.

ತುನ್ನವಾಯ (ನಾ). ಬಟ್ಟೆ ಹೊಲಿಯುವವನು; ಸಿಂಪಿಗ.

ತುಪಟ = ತುಪ್ಪುಳ್.

ತುಪಾಕಿ (ನಾ). ಬಂದೂಕು; ಕೋವಿ.

ತುಪ್ಪ (ನಾ). ೧. ಬೆಣ್ಣೆ ಕಾಯಿಸಿ ಇಳಿಸಿದ ಪದಾರ್ಥ; ಘೃತ. ೨. ಬಟ್ಟಿಯಿಳಿಸಿದ ದ್ರವ; ಅರ್ಕ.

ತುಪ್ಪಟ = ತುಪ್ಪುಳ್.

ತುಪ್ಪು (ಕ್ರಿ). ಉಗುಳು; ಉಗಿ.

ತುಪ್ಪುಳ್(ಳ್,ಳು,ಲು) (ನಾ). ೧. ಗರಿ; ಪುಕ್ಕ. ೨. (ಮೊಲ, ಕುರಿ ಮುಂತಾದುವುಗಳ) ಮೃದುವಾದ ರೋಮ; ಉಣ್ಣೆ.

ತುಬಾಕಿ = ತುಪಾಕಿ.

ತುಬ್ಬು (ಕ್ರಿ). ೧. ಪತ್ತೆಮಾಡು; ಶೋಧಿಸು. ೨. ತೋರ್ಪಡಿಸು; ಗುರುತಿಸು. ೩. ಸೂಚಿಸು; ತಿಳಿಸು. ೪. ಹರಡು; ವ್ಯಾಪಿಸು. ೫. ನೂಕು; ತಳ್ಳು. (ನಾ). ೬. ಪತ್ತೆಹಚ್ಚುವಿಕೆ; ಶೋಧನೆ. ~ಕಾ(ಗಾ)ಱ(ರ) = ಪತ್ತೆಹಚ್ಚುವವನು; ಪತ್ತೇದಾರ.

ತುಮುರು (ನಾ). ೧. ತುಂಡು; ಚೂರು. ೨. ತಳ; ಬುಡ.

ತುಮುಲ(ಳ) (ನಾ). ೧. ದೊಂಬಿಕಾಳಗ. ೨. (ಮನಸ್ಸಿನ) ಗೊಂದಲ; ಆಂದೋಲನ; ಗಲಿಬಿಲಿ. (ಗು). ೩. ಕ್ಷೋಭೆಯ; ಗೊಂದಲದ.

ತುಮ್ಮಡಿ (ನಾ). ಶರೀರದಿಂದ ರಕ್ತ ತೆಗೆಯುವ ಒಂದು ಬಗೆಯ ಸಾಧನ.

ತುಯಲ್ (ಕ್ರಿ). ೧. ಒದ್ದೆಯಾಗು; ನೆನೆ; ತೋಯು. ೨. = ತುಯ್ಯು.

ತುಯ್ಯು (ಕ್ರಿ). ಎಳೆ; ಜಗ್ಗು; ಸೆಳೆ.

ತುಯ್ಯಲ್(ಲು) (ನಾ). ಪಾಯಸ; ಪರಮಾನ್ನ.

ತುರಂಗ ೧. = ತುರಗ. ೨. ಸೆರೆಮನೆ; ಜೈಲು.

ತುರಂಗಮ (ನಾ). ಕುದುರೆ; ತುರಗ.

ತುರ(ಂ)ಗಿ (ನಾ). ೧. ಕುದುರೆ ಲಾಯದವನು; ಕಾಸ್ತಾರ. ೨. ರಾವುತ; ಸವಾರ.

ತುರಗ (ನಾ). ವೇಗವಾಗಿ ಚಲಿಸುವುದು; ಕುದುರೆ.

ತುರಾಯ (ನಾ). ೧. ಟೋಪಿ ಅಥವಾ ಕಿರೀಟಕ್ಕೆ ಸಿಕ್ಕಿಸುವ ಹೂವಿನ ಅಥವಾ ಮುತ್ತಿನ ಆಭರಣ; ಶಿರಪೇಷು. ೨. ನವಿಲು ಮುಂತಾದುವುಗಳ ಶಿಖೆ; ಕೊಟ್ಟು.

ತುರಾಯಿ = ತುರಾಯ.

ತುರಿ (ಕ್ರಿ). ೧. ಟೊಳ್ಳುಮಾಡು; ಕೊರೆ. ೨. ಹೆರೆ. ೩.=ತುಱಿ. (ನಾ). ೪. ಹೆರೆಯುವಿಕೆ. ೫. ಹೆರೆದು ತೆಗೆದ ಕುಸುರಿ; ಹೆರಕಲು. ~ಮಣೆ = ಕೊಬ್ಬರಿ ಮುಂತಾದುವನ್ನು ಹೆರೆಯುವ ಸಾಧನ.

ತುರಿತ ೧. = ತುರಿಪ. ೨. = ತುಱಿತ.

ತುರಿಪ (ನಾ). ತ್ವರೆ; ವೇಗ.

ತುರಿಹ = ತುರಿಪ.

ತುರೀಯ (ನಾ). ೧. ಕಾಲುಭಾಗ; ನಾಲ್ಕನೆಯ ಒಂದು ಭಾಗ. ೨. ಯೋಗಿಗಳು ಪರಮಾತ್ಮನಲ್ಲಿ ಐಕ್ಯವಾಗುವ ಸ್ಥಿತಿ. (ಗು). ೩. ನಾಲ್ಕನೆಯ. ~ಅವಸ್ಥೆ = ಮೋಕ್ಷ.

ತುರುಕ (ನಾ). ೧. ತುರ್ಕಿ ದೇಶದವನು. ೨. ಮುಹಮ್ಮದೀಯ.

ತುರುಪು (ನಾ). ೧. ಇಸ್ಪೇಟಿನಾಟದಲ್ಲಿ ಗೆಲುವು ತರುವ ಎಲೆ; ಹುಕುಮು. ೨. ದಂಡು; ಸೈನ್ಯ.

ತುರುವು (ಕ್ರಿ). ೧. ಟೊಳ್ಳುಮಾಡು. (ನಾ). ೨. (ತೆಂಗಿನ ಕಾಯಿಯ) ತುರಿ.

ತುರುಷ್ಕ ೧. = ತುರುಕ. ೨. ಒಂದು ವಿಧವಾದ ಪರಿಮಳ ದ್ರವ್ಯ; ಲೋಬಾನ.

ತುರುಸು (ನಾ). ೧. ಬಿರುಸು. ೨. ಸ್ಪರ್ಧೆ; ಮೇಲಾಟ.

ತುಜು(ರ)ಚಿ = ತುಜುಂಚೆ.
ತುಜು(ರಿ) (ಕ್ರಿ). ೧. ಕೆರೆ ; ತುರಿಸು. (ನಾ). ೨. = ತುಜುಕೆ. ೩. ಒಂದು ಬಗೆಯ ಚರ್ಮ ರೋಗ. ~ಇಸು = ಕೆರೆ ; ತಿಕ್ಕು.
ತುಜು(ರಿ)ಕೆ (ನಾ). ನವೆ ; ಕಡಿತ.
ತುಜು(ರು) (ನಾ). ಹಸು ; ಆಕಳು ; ಗೋವು. ~ಕಾಯು(ರ) = ದನಕಾಯುವವನು ; ಗೊಲ್ಲ. ~ಕೊ(ಗೊ)ಳ್ =ಗೋವುಗಳನ್ನು ಆಕ್ರಮಿಸು; ದನಗಳನ್ನು ಹಿಡಿ. ~ಪಟ್ಟಿ = ದನಗಳ ಹಟ್ಟಿ ; ಕೊಟ್ಟಿಗೆ.
ತುಜು(ರು)(ಂ)ಕು (ಕ್ರಿ). ಒತ್ತಿ ತುಂಬು ; ಗಿಡಿ.
ತುಜು(ರು)(ಂ)ಗಲ್(ಲು) (ನಾ). ೧. ಗುಂಪು; ಸಮೂಹ. ೨. ಗೊಂಚಲು ; ಗುಚ್ಛ ; ಮಂಜರಿ.
ತುಜು(ರು)ಂಗು ೧.= ತುಜುಂಕು. ೨. ಮುಚ್ಚು; ಮರೆಮಾಡು. ೩. ಒತ್ತೊತ್ತಾಗಿರು ; ದಟ್ಟೈಸು.
ತುಜು(ರು)(ಂ)ಬು (ಕ್ರಿ). ೧. ಹೂವನ್ನು ಮುಡಿ ; ಸೂಡು. (ನಾ). ೨. ಕೂದಲಿನ ಗಂಟು ; ಮುಡಿ.
ತುಜು(ರು)ಗು ೧. = ತುಜುಂಗು. (ನಾ). ೨. ಮುಚ್ಚುವಿಕೆ ; ಆವರಣ. ~ಎವೆ(ವೆ) = ಒತ್ತಾದ ಕೂದಲುಗಳುಳ್ಳ ರೆಪ್ಪೆ.
ತುಜು(ರು)ಚಿ = ತುಜುಂಚೆ.
ತುಜು(ರು)ಚೆ (ನಾ). ಮೈಗೆ ನವೆಯುಂಟು ಮಾಡುವ ಒಂದು ಜಾತಿಯ ಸಸ್ಯ.
ತುಜು(ರು)ವೆ (ನಾ). ಒಂದು ಜಾತಿಯ ಎತ್ತರವಾದ ಗಿಡ.
ತುರ್ತು (ನಾ). ೧. ತ್ವರಿತವಾದುದು ; ಜರೂರು. (ಅ). ೨. ಕೂಡಲೆ ; ತಕ್ಷಣದಲ್ಲಿ. ~ಪರಿಸ್ಥಿತಿ = ಜರೂರು ಪರಿಸ್ಥಿತಿ.
ತುರ್ಯ = ತುರೀಯ.

ತುಲನ (ನಾ). ೧. ಎತ್ತುವಿಕೆ ; ಏರಿಸುವಿಕೆ. ೨. ಹೋಲಿಕೆ ; ಸಾಮ್ಯ. ೩. ವಿಮರ್ಶೆ ; ಪರಿಶೀಲನೆ. ೪. ತೂಕಮಾಡುವಿಕೆ.
ತುಲನೆ = ತುಲನ.
ತುಲ(ಳ)ಸಿ (ನಾ). ಒಂದು ಜಾತಿಯ ಗಿಡ ; ವೃಂದೆ.
ತುಲಾಕೋಟಿ (ನಾ). ೧. ದಂಡಿಗೆಯ ಕೊನೆ ; ತೂಗುಕೋಲಿನ ತುದಿ. ೨. ಕಾಲಂದುಗೆ.
ತುಲಾಭಾರ (ನಾ). ತನ್ನ ತೂಕದಷ್ಟು ವಸ್ತು, ಒಡವೆ ಮುಂತಾದುವುಗಳನ್ನು ದಾನ ಮಾಡುವ ವ್ರತ.
ತುಲೆ (ನಾ). ೧. ತುಲಾರಾಶಿ. ೨. ಪ್ರಮಾಣ. ೩. ಸಮ ; ಸಾಟಿ. ೪. ಒಂದು ರೂಪಾಯಿಯಷ್ಟು ತೂಕ ; ತೊಲ. ೫. ತಕ್ಕಡಿ ; ತ್ರಾಸು. ೬. ಹೋಲಿಕೆ ; ಸಾದೃಶ್ಯ. ೭. ದಿವ್ಯಗಳಲ್ಲಿ ಒಂದು ಬಗೆ.
ತುಲ್ಯ (ಗು). ಸಮಾನವಾದ ; ಸದೃಶವಾದ.
ತುವರ (ನಾ). ಒಗರು ; ಒಗಚು.
ತುವರಿ (ನಾ). ೧. ಒಂದು ದ್ವಿದಳಧಾನ್ಯ ; ತೊಗರಿ. ೨. ಸುವಾಸನೆಯ ಮಣ್ಣು.
ತುಷ (ನಾ). ಹೊಟ್ಟು ; ಉಮ್ಮಿ.
ತುಷಾರ (ನಾ). ೧. ಹಿಮ; ಮಂಜು. ೨. ಹನಿ; ತುಂತುರು. (ಗು). ೩. ಶೀತಲವಾದ ; ತಣ್ಣನೆಯ.
ತುಷ್ಟ ೧. = ತುಷ್ಟಿ. ೨. ಸಂತೋಷಗೊಂಡವನು. (ಗು). ೩. ಸಂತೋಷಗೊಂಡ.
ತುಷ್ಟಿ (ನಾ). ತೃಪ್ತಿ ; ಆನಂದ ; ತಣಿವು.
ತುಸ (ಗು). ಸ್ವಲ್ಪ ; ಕೊಂಚ.
ತುಸು = ತುಸ.
ತುಹಿನ (ನಾ). ೧. ಹಿಮ ; ಮಂಜು. ೨. ಶೀತ; ತಂಪು. ೩. ಬೆಳುದಿಂಗಳು. ೪. ಕರ್ಪೂರ. ~ಕರ = ತಂಪಾದ ಕಿರಣಗಳುಳ್ಳವನು ; ಚಂದ್ರ. ~ಗಿರಿ = ಹಿಮಾಲಯ ಪರ್ವತ.

ತುಳಾಡಿ (ನಾ). ಮಲ್ಲಯುದ್ಧದಲ್ಲಿ ಒಂದು ವರಸೆ.

ತುಳು (ನಾ). ಪಶ್ಚಿಮ ಕರಾವಳಿಯ ಒಂದು ಪ್ರದೇಶ ಮತ್ತು ಅಲ್ಲಿಯ ಭಾಷೆ.

ತುಳು(೦)ಕು (ಕ್ರಿ). ೧. ತುಂಬಿ ಚೆಲ್ಲು; ಹೊರಚೆಲ್ಲು. ೨. ಸೇರಿಸು; ಜತೆಗೂಡಿಸು. ೩. ಕದಡು; ಕಲಕು. ೪. (ಬಾಣವನ್ನು) ಎಸೆ, –ಬಿಡು. ೫. ಸಿಂಪಡಿಸು; ಚಿಮುಕಿಸು. (ನಾ). ೬. ಉಕ್ಕುವಿಕೆ; ಹೊರಸೂಸುವಿಕೆ.

ತುಳುಗತ್ತಿ (ನಾ). ಒಂದು ಬಗೆಯ ಕತ್ತಿ.

ತುಳ್ಳು (ಕ್ರಿ). ನೆಗೆ; ಜಿಗಿ; ಹಾರು.

ತುಱ(ಳಿ) (ಕ್ರಿ). ೧. ಮೆಟ್ಟು; ಘಟ್ಟಿಸು. ೨. ನೋಯಿಸು; ಹಿಂಸಿಸು. ೩. ತುಳಿಯಲ್ಪಡು; ಆಘಾತಕ್ಕೆ ಒಳಗಾಗು.

ತುಱ(ಳಿ)ಕಲ್ (ನಾ). ಒಣಗಿದುದು; ಬಾಡಿದುದು.

ತುಱ(ಳಿ)ತ (ನಾ). ೧. ಮೆಟ್ಟುವಿಕೆ. ೨. ಹಿಂಸೆ; ತೊಂದರೆ.

ತುಱ(ಳಿ)ಲ್ (ನಾ). ೧. ನಮಸ್ಕಾರ; ಮಣಿಯುವುದು. ೨. ಸೇವೆ; ಊಳಿಗ. ೩. ಪರಾಕ್ರಮ; ಸಾಹಸ. ~ಆಳ್(ಳು) = ವೀರ; ಕಲಿ. ~ಕೆ(ಗೆ)ಯ್ = ನಮಸ್ಕರಿಸು; ವಂದನೆಮಾಡು.

ತೂಂಕಡು (ನಾ). ಮಂಪರು; ಜೊಂಪು. ~ಇಕೆ = ಜೂಗರಿಸುವಿಕೆ; ಮಂಪರು. ~ಇಸು = ಜಂಪುಹೊಡೆ; ಜೂಗರಿಸು.

ತೂ(೦)ಕು (ಕ್ರಿ). ೧. ತೂಕವನ್ನು ನೋಡು. ೨. ಜೋಲು; ಇಳಿಬೀಳು. ೩. ಅಲ್ಲಾಡಿಸು; ಅಲುಗಿಸು. ೪. ಇಳಿಸು; ಕಡಮೆ ಮಾಡು. (ನಾ). ೫. ತೂಕಮಾಡುವಿಕೆ.

ತೂಂತಿಱ(ರಿ) (ಕ್ರಿ). ೧. ಊದು; ಉರುಬು. ೨. ಉಗುಳು.

ತೂ(೦)ತು (ಕ್ರಿ). ೧. ಒಳಸೇರಿಸು; ತುರುಕು. (ನಾ). ೨. ರಂಧ್ರ; ಕಂಡಿ.

ತೂ(೦)ಬು (ನಾ). ೧. ಗಾಡಿಯ ಚಕ್ರದ ನಾಭಿ; ಗುಂಬ. ೨. (ಕೆರೆಕಟ್ಟೆಗಳ) ನೀರು ಹೋಗುವ ಕಂಡಿ.

ತೂಕ (ನಾ). ೧. ಭಾರ; ಬಜ್ಜೆ. ೨. ಗೌರವ; ಘನತೆ. ೩. ಒಂದು ಚಿನ್ನದ ನಾಣ್ಯದ ತೂಕ. ೪. ಸಮಾನವಾದುದು; ಏರುಪೇರು ಇಲ್ಲದಿರುವುದು.

ತೂಕರಿಸು (ಕ್ರಿ). ತಿರಸ್ಕರಿಸು; ನಿಂದಿಸು.

ತೂಕಿಱ(ರಿ) (ಕ್ರಿ). ಕುಣಿ; ನಲಿ.

ತೂಗು (ಕ್ರಿ). ೧. ಒಲೆ; ತೊನೆ. ೨. ಭಾರ ನೋಡು; ತೂಕಮಾಡು. ೩. ನೇತುಹಾಕು. ೪. ಹೋಲಿಸು. ೫. ವಿಮರ್ಶಿಸು. ೬. ತೊಟ್ಟಿಲನ್ನು ಆಡಿಸು. ೭. ನೇತಾಡು; ಜೋಲು. (ನಾ). ೮. ತೂಕ ಮಾಡುವಿಕೆ. ೯. ತೊಟ್ಟಿಲನ್ನು ಆಡಿಸುವಿಕೆ. ೧೦. ಹಿಂದಕ್ಕೂ ಮುಂದಕ್ಕೂ ಚಲಿಸುವಿಕೆ. ~ಆಡು = ೧. ಹಿಂದಕ್ಕೂ ಮುಂದಕ್ಕೂ ಅಲ್ಲಾಡು; ಒಲೆದಾಡು. ೨. ಜೋತಾಡು; ಜೋಲು. ~(೦)ಸೊ(ಜೊ)ಡರ್(ರು) = ತೂಗುದೀಪ. ~ಮಂಚ = ಉಯ್ಯಾಲೆಹಾಸು.

ತೂಣ (ನಾ). ೧. ಆವೇಶ; ಉದ್ರೇಕ. ೨. = ತೂಣೀರ.

ತೂಣೀರ (ನಾ). ಬಾಣಗಳನ್ನಿಡುವ ಚೀಲ; ಬತ್ತಳಿಕೆ.

ತೂನ (ನಾ). ಗೂಟ; ಸ್ತಂಭ.

ತೂಪರು (ನಾ). ಸಣ್ಣಮಳೆ; ತುಂತುರು.

ತೂಪರೆ (ನಾ). ೧. ಒಂದು ಜಾತಿಯ ಮರ; ತೂಬರೆ ಮರ. ೨. = ತೂಪರು.

ತೂಪಿಱ(ರಿ) ೧.=ತೂಂತಿಱ. ೨.ದೃಷ್ಟಿದೋಷವನ್ನು ಪರಿಹರಿಸಲು ಬೂದಿ ಮುಂತಾದುವನ್ನು ಗಾಳಿಗೆ ಊದಿ ಮಂತ್ರ ಹಾಕು.

ತೂಬರೆ = ತೂಪರೆ.

ತೂಱ(ರ)ಲ್(ಲು) (ನಾ). ೧. ದೂರ ಹೋದುದು. ೨. = ತೂಪರು.

ತೂಱು(ರು) (ಕ್ರಿ). ೧. ಧಾನ್ಯವನ್ನು ಗಾಳಿಯು ಎದುರಾಗಿ ಸುರಿದು ಹಸನುಮಾಡು. ೨. ಪ್ರವೇಶಿಸು. ೩. ತುರುಕು. ೪. ಉದುರು. ೫. ಮೃಗಗಳನ್ನು ಎಬ್ಬಿಸು; ಸೋವು. ೬. ಮೇಲಕ್ಕೆ ಎಸೆ. ೭. ದೂರಹೋಗು. ೮. ತುಂತುರುಗಳಾಗಿ ಬೀಳು. (ನಾ). ೯. ಹನಿಹನಿಯಾಗಿ ಬೀಳುವುದು; ತುಂತುರು. ೧೦. ಒಳಹೊಗುವಿಕೆ.

ತೂರ್ಣ (ನಾ). ೧. ತ್ವರಿತವಾದುದು; ತ್ವರೆ. (ಗು). ೨. ವೇಗವಾದ.

ತೂರ್ಯ ೧. = ತುರೀಯ. ೨. ಒಂದು ಬಗೆಯ ವಾದ್ಯ; ತುತ್ತೂರಿ. ~ತ್ರಯ=ಗಾನ, ನೃತ್ಯ ಮತ್ತು ವಾದ್ಯಗಳ ಮೇಳ, –ಹೊಂದಿಕೆ.

ತೂಲ(ಳ) (ನಾ). ೧. ಅರಳೆ. ೨. ಆಕಾಶ. ೩. ಹಕ್ಕಿಯ ತುಪ್ಪುಳು.

ತೂಲಿಕೆ (ನಾ). ೧. ಅರಳೆಯ ಹಾಸುಗೆ; ಗಾದಿ. ೨. ಚಿತ್ರಗಾರನ ಕುಂಚ. ೩. ದೀಪದ ಬತ್ತಿ; ಹೂಬತ್ತಿ. ೪. ಹಕ್ಕಿಯ ತುಪ್ಪುಳು.

ತೂವರ (ನಾ). ೧. ಕಹಿ; ಒಗರು. ೨. ಕೊಂಬಿಲ್ಲದ ಹೋರಿ. ೩. ನಪುಂಸಕ; ಷಂಡ.

ತೂಷ್ಣೀಕ (ಗು). ಮಾತಿಲ್ಲದ; ಮೌನವಾದ.

ತೂಳ್(ಳು) (ಕ್ರಿ). ೧. ಮುನ್ನುಗ್ಗು; ಮುಂದುವರಿ. ೨. ಹಿಂದಕ್ಕೆ ಸರಿ; ಹಿಮ್ಮೆಟ್ಟು. ೩. ಹಿಂಬಾಲಿಸು; ಬೆನ್ನಟ್ಟು. (ನಾ). ೪. ಮೇಲೆ ಬೀಳುವಿಕೆ; ಆಕ್ರಮಣ. ~ಇಸು = ೧. ಮುಂದುವರೆಯುವಂತೆ ಮಾಡು; ನಡಸು. ೨. ಓಡಿಸು; ಹಿಮ್ಮೆಟ್ಟಿಸು.

ತೂಳ್ದು (ಕ್ರಿ). ೧. ಓಡಿಸು; ಬೆನ್ನಟ್ಟು. ೨. ಹರಡು; ಪಸರಿಸು.

ತೃಣ (ನಾ). ಹುಲ್ಲು; ದರ್ಭೆ. ~ಪುರುಷ = ಬೆದರುಗೊಂಬೆ; ಬೆಚ್ಚು. ~ರಾಜ = ೧. ತಾಳೆಮರ. ೨. ಬಿದಿರು. ೩. ಕಬ್ಬು. ೪. ತೆಂಗಿನಮರ.

ತೃತೀಯ (ಗು). ಮೂರನೆಯ.

ತೃತೀಯೆ (ನಾ). ೧. ಮೂರನೆಯ ಭಾಗ. ೨. ಪಕ್ಷದ ಮೂರನೆಯ ದಿನ; ತದಿಗೆ. ೩. ವ್ಯಾಕರಣದ ವಿಭಕ್ತಿಪ್ರತ್ಯಯಗಳಲ್ಲಿ ಒಂದು.

ತೃಪ್ತ (ನಾ). ೧. ತೃಪ್ತಿಗೊಂಡವನು; ತಣಿದವನು. (ಗು). ೨. ತೃಪ್ತಿಹೊಂದಿದ; ತಣಿದ.

ತೃಪ್ತಿ (ನಾ). ಸಂತುಷ್ಟಿ; ತಣಿವು.

ತೃಷೆ (ನಾ). ೧. ಬಾಯಾರಿಕೆ; ದಾಹ. ೨. ಆಸೆ; ಬಯಕೆ.

ತೃಷ್ಣೆ = ತೃಷೆ.

ತೆಂಕ (ನಾ). ದಕ್ಷಿಣ ದಿಕ್ಕು.

ತೆಂಕಣ (ಗು). ದಕ್ಷಿಣ ದಿಕ್ಕಿಗೆ ಸಂಬಂಧಿಸಿದ. ~ಗಾಳಿ = ದಕ್ಷಿಣ ದಿಕ್ಕಿನಿಂದ ಬೀಸುವ ಗಾಳಿ.

ತೆಂಕಲ್(ಲು) = ತೆಂಕ.

ತೆಂಕು (ಕ್ರಿ). ೧. ಈಸು; ಈಜು. ೨. ಮೂರ್ಛೆಹೊಂದು; ಬವಳಿಬೀಳು. (ನಾ). ೩. = ತೆಂಕ.

ತೆಂಗಾಯ್ (ನಾ). ತೆಂಗಿನಕಾಯಿ; ನಾರಿಕೇಳ.

ತೆಂಗಾಯಿ = ತೆಂಗಾಯ್.

ತೆಂಗು (ಕ್ರಿ). ೧. ಹಕ್ಕಿಯಂತೆ ಎರಗು. (ನಾ). ೨. ತೆಂಗಿನ ಮರ ಮತ್ತು ಅದರ ಕಾಯಿ.

ತೆಂಟು (ಕ್ರಿ). ಹಸನುಮಾಡು; ಕೇರು.

ತೆಂಟೆ (ನಾ). ವೇದಿಕೆ; ಕಟ್ಟೆ.

ತೆಂಡೆ (ನಾ). ೧. ಹೆಣೆದುಕೊಂಡಿರುವುದು; ಸಿಕ್ಕುಸಿಕ್ಕಾಗಿರುವುದು. ೨. (ಹುಲ್ಲು ಮುಂತಾದುವುಗಳ) ಕಂತೆ, –ಕಟ್ಟು.

ತೆಂಬೆಲರ್(ರು) (ನಾ). ದಕ್ಷಿಣ ದಿಕ್ಕಿನ ಗಾಳಿ; ತೆಂಕಣಗಾಳಿ.

ತೆಕ್ಕನೆ (ಅ). ೧. ಅಧಿಕವಾಗಿ; ಹೆಚ್ಚಾಗಿ. ೨. ತಕ್ಷಣ; ಥಕ್ಕನೆ.

ತೆಕ್ಕು (ಕ್ರಿ). ೧. (ಪ್ರಾಣಿಗಳಂತೆ) ಗಾಯ, ನವೆಗಳನ್ನು ನೆಕ್ಕು. ೨. ತೇಲು. ೩.ತೇಲಿಸು; ತೇಲುವಂತೆ ಮಾಡು. ೪. ಧೈರ್ಯಗೆಡು; ಹೆದರು. ೫. ಮೂರ್ಛೆಹೊಂದು.

ತೆಕ್ಕೆ ೧. = ತಱ್ಕ. ೨. ಸುರುಳಿ; ಇರಿಕೆ. ೩. ತುರುಬು; ಮುಡಿ. ೪. ಸಮೂಹ; ಗುಂಪು. ~ಕ(ಗ)ಟ್ಟು = ೧. ಸುರುಳಿಯಾಗು; ಇರಿಕೆ ಹಾಕು. ೨. ಒಂದೆಡೆ ಸೇರು; ಗುಂಪಾಗು. ~ಕೆ(ಗೆ)ಡು = ಗುಂಪಿನಿಂದ ಬೇರೆಯಾಗು; ಚೆದರು. ~ಬೀಳು = ಆಲಿಂಗಿಸು; ಅಪ್ಪು. ~ಹಾಕು = ೧. ತೆಕ್ಕೆಬೀಳು. ೨. ಒಂದನ್ನೊಂದು ಸೇರಿಸಿ ಕಟ್ಟು.

ತೆಗಲ್ (ನಾ). ೧.ಹೆಗಲು; ಭುಜ. ೨. = ತೆಗಲೆ. ೩. ಸೊಕ್ಕು; ಮದ. ೪. ಎದೆ; ಹೃದಯ.

ತೆಗಲೆ (ನಾ). ಕೊರಳಿನ ಮೇಲ್ಭಾಗ; ಹೆಕ್ಕತ್ತು.

ತೆಗವು (ನಾ). ಅಡ್ಡಿ; ಅಡಚಣೆ.

ತೆಗಹು (ನಾ). ೧. ತೆಗೆಯುವಿಕೆ; ಎಳೆಯುವಿಕೆ. ೨. ಬಿಡುವು; ಅವಕಾಶ; ತೆರಪು.

ತೆಗಳಿ (ನಾ). ೧. ತಲೆಗೂದಲು ಉದುರುವ ಒಂದು ಬಗೆಯ ರೋಗ; ಇಂದ್ರಲುಪ್ತಕ. ೨. ಸುಕ್ಕಾಗುವಿಕೆ; ಪದರುಪದರಾಗುವಿಕೆ. ~ಕೊ(ಗೊ)ಳ್ = ಪದರುಪದರಾಗು; ಸುಕ್ಕಾಗು.

ತೆಗಳಿಗೆ = ತೆಗಳಿ. ~ಜೀ(ವೀ)ೞ್(ಳ್) = ೧. ಕೂದಲು ಉದುರು; ಬೋಳಾಗು. ೨. ಸುಕ್ಕುಗಟ್ಟು; ಬಾಡು.

ತೆಗೞ್(ಳ್,ಳು,ೞು) (ಕ್ರಿ). ೧. ನಿಂದಿಸು; ಹೀಯಾಳಿಸು. (ನಾ). ೨. ನಿಂದೆ; ದೂಷಣೆ. ೩. ನಿಂದ್ಯವಾದುದು; ದೋಷ. ~ಇಕೆ = ನಿಂದೆ; ಬಯ್ಗುಳು.

ತೆಗೆ (ಕ್ರಿ). ೧. ಆಕರ್ಷಿಸು; ಸೆಳೆ. ೨. ತೆಗೆದುಕೊಳ್ಳು; ಸ್ವೀಕರಿಸು. ೩.ಕೊಂಡುಕೊಳ್ಳು; ಕ್ರಯಮಾಡು. ೪. ಕಳವು ಮಾಡು; ಕದಿ. ೫. ಹೊರದೆಗೆ; ಹೊರಗೆಳೆ. ೬. ಕಳಚು; ಬಿಚ್ಚು. ೭. ತೋರಿಸು; ಸೂಚಿಸು. ೮. ಹೋಗು; ಸಾಗು. ೯. ಮರೆಯಾಗು; ಕಾಣದೆ ಹೋಗು. ೧೦.ಬಿಡು; ತಿರಸ್ಕರಿಸು. ೧೧. ನೂಕು; ತಳ್ಳು. ೧೨. ಕಳೆ; ಪರಿಹರಿಸು. ೧೩. ಆರಂಭಿಸು; ತೊಡಗು. ೧೪.ಬರೆ; ಲೇಖಿಸು. (ನಾ). ೧೫.ಹಿಮ್ಮೆಟ್ಟುವಿಕೆ; ಪಲಾಯನ. ೧೬. ಧಿಕ್ಕಾರಸೂಚಕವಾದ ಶಬ್ದ. ~ನೆಱೆ(ರೆ) = (ಬಾಣವನ್ನು) ಕಿವಿಯ ಅಂಚಿನವರೆಗೆ ಎಳೆ; ಆಕರ್ಣಾಂತವಾಗಿ ಸೆಳೆ. ~ನೇಣ್(ಣು) = ಕಡೆಯುವ ಹಗ್ಗ; ಮಥಿಸುವ ಹಗ್ಗ. ~ಬಗೆ = ೧.ಪ್ರಾಣ ಹೋಗುವ ಸ್ಥಿತಿ. ೨.ಕಸಿವಿಸಿ; ಕಳವಳ. ೩. ಹಿಂದೆಗೆಯುವಿಕೆ; ಹಿಂಜರಿತ.

ತೆಟ್ಟಂತೆಱೆ(ರೆ) (ಕ್ರಿ). ಅಗಲವಾಗಿ ತೆರೆ.

ತೆಟ್ಟೆ (ನಾ). ಗುಂಪು; ಸಮೂಹ.

ತೆಣಱು(ರು) (ಕ್ರಿ). ನರಳು; ಮುಲುಕು.

ತೆಣೆ (ನಾ). (ಮನೆಯ ಮುಂದಿನ) ಜಗಲಿ, —ಕಟ್ಟೆ.

ತೆತ್ತವಣೆ (ನಾ). ಜೋಡಣೆ; ಹೊಂದಿಕೆ.

ತೆತ್ತು (ಕ್ರಿ). ೧. ತಿರಿಚು; ಹೆಣೆ. ೨. ಹೊಂದಿಕೊಂಡಿರು; ಸ್ನೇಹವಾಗಿರು. ~ಇಗ = ೧. ಸೇವಕ; ಆಳು. ೨. ಗೆಳೆಯ; ಸ್ನೇಹಿತ. ೩. ಸಂಬಂಧಿ; ನೆಂಟ. ೪. ಹೊಣೆಗಾರ; ಜವಾಬ್ದಾರ. ~ಇಸು = ೧. ಜೋಡಿಸು; ಸೇರಿಸು. ೨. ನಾಟು; ಕೀಲಿಸು.

ತೆನೆ (ನಾ). ೧. ಧಾನ್ಯದ ಹೊಡೆ; ಕದಿರು. ೨. ಕೋಟೆಯ ಮೇಲ್ಭಾಗ; ಕೊತ್ತಳ. ೩. ಬಸಿರು; ಗರ್ಭ. ~ಕಾ(ಗಾ)ಯಿ = ವರ್ಷದ ಮೊದಲನೆಯ ಫಲ; ಶ್ರಾವಣ ಮಾಸದಲ್ಲಿ ಬರುವ ಫಲ. ~ಪೋ(ವೋ)ಗು = ಹೊಡೆಯಾಗು; ತೆನೆಗಟ್ಟು.

ತೆಪರ (ನಾ). ಬುದ್ಧಿಗೇಡಿ ; ಹೆಡ್ಡ.
ತೆಪ್ಪ (ನಾ). ಹರಿಗೋಲು ; ನಾವೆ. ~ಉತ್ಸವ = ಜಾತ್ರೆಯ ದಿವಸಗಳಲ್ಲಿ ದೇವರನ್ನು ದೋಣಿಯಲ್ಲಿ ಕೂಡಿಸಿ ಮಾಡುವ ಉತ್ಸವ.
ತೆಪ್ಪಗೆ (ಅ). ೧. ಸುಮ್ಮನೆ ; ಮೌನವಾಗಿ. ೨. ಹಾಯಾಗಿ; ವಿರಾಮವಾಗಿ. ೩. ಪೆಚ್ಚಾಗಿ; ಬೆಪ್ಪಾಗಿ.
ತೆಪ್ಪನೆ = ತೆಪ್ಪಗೆ.
ತೆಪ್ಪಱ್(ರ್,ರು,ಱು) (ಕ್ರಿ). ೧. (ಮೂರ್ಛೆ, ಕಾಯಿಲೆ ಮುಂತಾದುವುಗಳಿಂದ) ಚೇತರಿಸಿ ಕೊಳ್ಳು. ೨. ಚೇತನಗೊಳಿಸು ; ಹುರಿ ದುಂಬಿಸು.
ತೆಬ್ಬು (ನಾ). ಬಿಲ್ಲಿನ ಹೆದೆ ; ನಾರಿ.
ತೆಮರ್(ರು) (ಕ್ರಿ). ೧. ಉಜ್ಜು ; ತಿಕ್ಕು. ೨. ನಾಶಮಾಡು ; ಹಾನಿಮಾಡು. ೩. ಅಳುಕು ; ಹೆದರು. ೪. ಅಟ್ಟು ; ಓಡಿಸು. (ನಾ). ೫. ಎತ್ತರವಾದ ಭೂಮಿ ; ದಿಬ್ಬ ; ತಿಟ್ಟು.
ತೆಮುಳ್ದು (ಕ್ರಿ). ಕೂಡಿಹಾಕು ; ಸಂಗ್ರಹಿಸು.
ತೆಮುೞ್(ಳ್,ಳು,ೞು) (ಕ್ರಿ). ೧. ನುಣುಚಿ ಕೊಳ್ಳು ; ಜಾರು. ೨. ಸರಿದುಕೊಂಡು ಹೋಗು ; ತೆವಳು.
ತೆಮ್ಮ (ನಾ). ೧. ಸಾಲು ; ಓಳಿ. ೨. ಆಧಿಕ್ಯ.
ತೆಮ್ಮಲ್ (ನಾ). ಗುಂಪು ; ಸಮೂಹ.
ತೆಮ್ಮೆ = ತೆಮ್ಮಲ್.
ತೆರಂಟು (ಕ್ರಿ). (ವಧೂವರರಿಗೆ) ಉಡುಗೊರೆಯನ್ನು ಕೊಡು.
ತೆರಟು (ಕ್ರಿ). ೧. ಸುರುಳಿಸುತ್ತು ; ಇರಿಕೆ ಹಾಕು. ೨. ಕೂಡಿಸು ; ಸೇರಿಸು. ೩. = ತೆರಂಟು.
ತೆರಣಿ (ನಾ). ೧. ಉಂಡೆ; ಸುರುಳಿ. ೨.= ತೆರಳಿ. ~ಕ(ಗ)ಟ್ಟು = ೧. ಸುತ್ತಿ ಕಟ್ಟು. ೨. ಬಿಗಿದು ಕಟ್ಟಿದುದು.
ತೆರಪು = ತೆಱಪು. ~ಆಗು = ಖಾಲಿಯಾಗು ; ತೆರವಾಗು. ~ಗೆಯ್ = ಹೋಗಲಾಡಿಸು; ನಿವಾರಿಸು. ~ಮಾಡು = ಖಾಲಿಮಾಡು.
ತೆರಳ್(ಳು) (ಕ್ರಿ). ೧. ಹೋಗು ; ಮುಂದೆ ಸರಿ. ೨. ಅಲ್ಲಾಡಿಸು ; ಅಲುಗಿಸು. ೩. ನಡುಗು ; ಕಂಪಿಸು. ೪. ಸಮೂಹ ವಾಗು ; ಗುಂಪುಗೂಡು. ೫. ಸುರುಳಿಯಾಗು ; ಮುದ್ದೆಯಾಗು.
ತೆರಳಿ (ನಾ). ಒಂದು ಬಗೆಯ ಹುಳು.
ತೆರಳೆ = ತೆರಣಿ.
ತೆರಳ್ಕೆ (ನಾ). ೧. ತೆರಳುವಿಕೆ ; ಚಲಿಸುವಿಕೆ. ೨. ಅಲುಗಾಟ ; ಚಲನೆ. ೩. ಗುಂಪು ; ಸಮೂಹ. ೪. ಮಡಿಕೆ ; ಪದರ ; ನಿರಿಗೆ.
ತೆರಳ್ಚು (ಕ್ರಿ). ೧. ಹೋಗುವಂತೆ ಮಾಡು ; ತೆರಳುವಂತೆ ಮಾಡು. ೨. ಆಯಾಸಪಡಿಸು. ೩. ಬಿಡಿಸು. ೪. ಒಂದುಗೂಡಿಸು ; ಸೇರಿಸು.
ತೆರಿಗೆ = ತೆಱಿಗೆ. ~ಎತ್ತು = ಕಂದಾಯವನ್ನು ವಸೂಲುಮಾಡು.
ತೆರೆ ೧. = ತೆಱೆ. (ನಾ). ೨. ಅಲೆ ; ತರಂಗ. ೩. ಚರ್ಮದ ಮುಡಿಕೆ, –ಸುಕ್ಕು. ೪. ಪರದೆ; ಜವನಿಕೆ. ೫. ಕಣ್ಣಿನ ಒಂದು ಬಗೆಯ ರೋಗ. ~ಕೂ(ಗೂ)ಡು = ೧. ಅಲೆಗಳಿಂದ ಕೂಡಿರು. ೨. ಆವರಣವಿಲ್ಲದ ಗೂಡು, –ಕೋಶ. ~ಮಱೆ(ರೆ) = ೧. ಪರದೆಯ ಮರೆ, –ಹಿಂಭಾಗ. ೨. ಮುಚ್ಚುಮರೆ ; ಗುಟ್ಟು. ~ಸುತ್ತು = ೧. ತೆರೆಯಿಂದ ಸುತ್ತುಗಟ್ಟು. ೨. ಗವಸಣಿಗೆಯಿಂದ ಸುತ್ತುವರಿಯಲ್ಪಟ್ಟುದು.
ತೆಱ(ರ) (ನಾ). ೧. ರೀತಿ; ಕ್ರಮ. ೨. ಕನ್ಯಾಶುಲ್ಕ. ೩. ತೆರಿಗೆ. ೪. ತಪ್ಪುಕಾಣಿಕೆ ; ದಂಡ. ~ಕಾಱ(ರ) = ೧. ತೆರಿಗೆಯನ್ನು ವಸೂಲು ಮಾಡುವವನು. ೨. ಬಾಕಿ ವಸೂಲುದಾರ.

ತೆಱ(ರ)(ಂ)ಬೊಯ್ (ಕ್ರಿ). ಬಲವಾಗಿ ಹೊಡೆ.

ತೆಱ(ರ)ಂಬೊಳೆ (ಕ್ರಿ). ಚೆನ್ನಾಗಿ ಪ್ರಕಾಶಿಸು, –ಹೊಳೆ.

ತೆಱ(ರ)ಪು (ನಾ). ೧. ಬಿಡುವು; ವಿರಾಮ. ೨. ತೆರೆಯುವಿಕೆ. ೩. ಅವಕಾಶ; ಸಂದರ್ಭ. ೪. ಖಾಲಿ; ತೆರವು. ೫. ದಾರಿ; ಮಾರ್ಗ. ೬. ಎಡೆ; ಜಾಗ. ೭. ವಿಸ್ತಾರ; ಅಗಲ.

ತೆಱ(ರ)ವಿ (ನಾ). ತೆರೆಯುವಿಕೆ.

ತೆಱ(ರ)ವು ೧. = ತೆಱಪು. ೨. ತಪ್ಪುಕಾಣಿಕೆ. ೩. ಕಂದಾಯ; ಸುಂಕ. ೪. ಕನ್ಯಾಶುಲ್ಕ.

ತೆಱ(ರ)ವೆ = ತೆಱವಿ.

ತೆಱ(ರ)ಹು = ತೆಱಪು.

ತೆಱಿ(ರಿ)ಗೆ (ನಾ). ಕಂದಾಯ; ಕರ.

ತೆಱು(ರು) (ಕ್ರಿ). ೧. ಕೊಡು; ಸಲ್ಲಿಸು. ೨. ದಂಡ ಕೊಡು.

ತೆಱೆ(ರೆ) (ಕ್ರಿ). ೧. ತೆಗೆ; ಬಿಚ್ಚು. ೨. ಮರೆಯಿಲ್ಲದಂತೆ ಮಾಡು. (ನಾ). ೩. ತೆಗೆಯುವಿಕೆ; ಬಿಚ್ಚುವಿಕೆ. ೪. ಕರ; ಸುಂಕ.

ತೆಲು(ಂ)ಗ (ನಾ). ಆಂಧ್ರದೇಶ, ಭಾಷೆ ಮತ್ತು ಜನ.

ತೆಲು(ಂ)ಗು (ನಾ). ಆಂಧ್ರಭಾಷೆ.

ತೆಲ್ಲ(ಂ)ಟ (ನಾ). ಉಡುಗೊರೆ; ಬಳುವಳಿ.

ತೆಲ್ಲಯಿಸು (ಕ್ರಿ). ೧. ದಟ್ಟವಾಗು; ಮಂದವಾಗು. ೨. ಬಲವಾಗು; ಪುಷ್ಟವಾಗು. ೩. ಜಿಗುಟಾಗು; ಸ್ನಿಗ್ಧವಾಗು. ೪. ವೃದ್ಧಿಗೊಳ್ಳು; ಹೆಚ್ಚಾಗು.

ತೆಲ್ಲಿಗ = ತೈಲಿಕ. ~ಮ(ವ)ನೆ = ಗಾಣಿಗನ ಮನೆ; ಗಾಣದ ಮನೆ.

ತೆವಟಗೆ (ನಾ). ಊಟದ ತಟ್ಟೆಯನ್ನು ಇಡುವ ಮೂರು ಕಾಲಿನ ಮಣೆ; ಅಡ್ಡಣಿಗೆ.

ತೆವಡೆ (ನಾ). ೧. ಕಂತೆ; ಸಿವುಡು. ೨. ಹೊಲದ ಬದು; ಒಡ್ಡು. ೩. ಉನ್ನತ ಭೂಮಿ; ದಿಣ್ಣೆ.

ತೆವರ್ (ನಾ). ದಿಣ್ಣೆ; ದಿಬ್ಬ.

ತೆವರು (ಕ್ರಿ). ೧. ಕದಿ; ದೋಚು. ೨. = ತೆಮರ್.

ತೆವಲು (ನಾ). ಚಟ; ಚಾಳಿ; ಅಭ್ಯಾಸ.

ತೆವಳ್(ಳು) (ಕ್ರಿ). ದೇಕು; ಹೊಟ್ಟೆಹೊಸೆ.

ತೆಳ್(ಳು) (ನಾ). ಸೂಕ್ಷ್ಮತೆ; ತೆಳುವು; ನವುರು. ~ಕ(ಗ)ದ(ಂ)ಪು = ಮೃದುವಾದ ಕೆನ್ನೆ; ನುಣುಪಾದ ಕಪೋಲ. ~ಕ(ಗ)ಚ್ಚು(ಳ್) = ೧. ಅಕ್ಕಿ ತೊಳೆದ ನೀರು; ಕಲಗಚ್ಚು. ೨. ತಿಳಿಯಾದ ಗಂಜಿ, –ಅಂಬಲಿ. ~ಗಾಳಿ = ಮೆಲ್ಲನೆ ಬೀಸುವ ಗಾಳಿ; ಹಿತಪಾದ ಗಾಳಿ. ~ನಿದ್ರೆ = ಸಣ್ಣ ನಿದ್ರೆ; ಜೊಂಪು. ~ಸರಿ = ಸಣ್ಣಗೆ ಬೀಳುವ ಮಳೆ; ಸೋನೆ.

ತೆಳಿ (ನಾ). ಅನ್ನವನ್ನು ಬೇಯಿಸಿ ಬಸಿದ ನೀರು.

ತೆಳುವು (ನಾ). ಸೂಕ್ಷ್ಮತೆ; ನವುರು.

ತೆಳ್ಪು (ನಾ). ೧. ಸಣ್ಣದಾಗಿರುವಿಕೆ; ತೆಳುವು. ೨. ಶುಭ್ರತೆ; ಸ್ವಚ್ಛತೆ. ೩. ಅಂದ; ಸೊಗಸು. ೪. ತಿಳಿಯಾಗಿರುವಿಕೆ.

ತೆಳ್ಪಗೆ (ಅ). ೧. ಸ್ಪಷ್ಟವಾಗಿ; ಸ್ಫುಟವಾಗಿ. ೨. ತಿಳಿಯಾಗಿ. ೩. ಸಣ್ಣಗೆ; ಸೂಕ್ಷ್ಮವಾಗಿ.

ತೆಳ್ಪನೆ = ತೆಳ್ಪಗೆ.

ತೆಳ್ಪಿತ್ತು (ನಾ). ೧. ತೆಳುವಾಗಿರುವಿಕೆ. (ಗು). ೨. ದಪ್ಪವಲ್ಲದ; ಸಣ್ಣಗಿರುವ. ೩. ಸೂಕ್ಷ್ಮವಾದ; ನವುರಾದ.

ತೆಳ್ಪೆ (ಗು). ಆಳವಿಲ್ಲದ; ತೆಳುವಾದ.

ತೇ (ಕ್ರಿ). ೧. ದೂರಹೋಗು. ೨. ಹಿಂಜರಿ; ಹಿಮ್ಮೆಟ್ಟು. ೩. ಅರೆ; ತೀಡು; ತಿಕ್ಕು. ೪. ಸವೆದುಹೋಗು; ತೆಳ್ಪಗಾಗು.

ತೇ(ಂ)ಕಿ (ನಾ). ಗುಂಪು; ಸಮೂಹ.

ತೇ(ಂ)ಕು (ಕ್ರಿ). ೧. ತೇಲು. ೨. ತೇಗು; ಡೇಗು. ೩. ಮಿಡಿ; ಸ್ಪಂದಿಸು. ೪. ಆಯಾಸಹೊಂದು; ಬಳಲು. ೫. ಬಿಕ್ಕು; ಬಿಕ್ಕಳಿಸು. (ನಾ). ೬. ಮೇಲುಬ್ಬಸ; ಮೇಲುಸಿರು.

ತೇಂಗು (ಕ್ರಿ). ೧. ತೇಲು. ೨. ತೇಗು. (ನಾ). ೩. ತೇಗುವಿಕೆ. ೪. ಸಾಮ್ಯ ; ಹೋಲಿಕೆ.

ತೇಂಗೊಳಲು (ನಾ). ಒಂದು ಬಗೆಯ ಕರಿದ ತಿಂಡಿ.

ತೇಗ (ನಾ). ಒಂದು ಜಾತಿಯ ಮರ ; ಸಾಗವಾನಿಮರ.

ತೇಗು (ಕ್ರಿ). ೧.ತೇಲು. ೨. ಉದಾನ ವಾಯು ಬಿಡು. (ನಾ). ೩. ಉದಾನವಾಯು ಬಿಡುವಿಕೆ. ೪. = ತೇಗ.

ತೇಜ (ನಾ). ೧. ಹೊಳಪು ; ಕಾಂತಿ. ೨. ಘನತೆ; ಗೌರವ. ೩. ಸೂರ್ಯ. ೪. ಗಾಳಿ. ೫. ಪರಾಕ್ರಮ. ೬. ಶರೀರ. ೭. ಭವನ. ೮. ಕೀರ್ತಿ. ೯. ಸತ್ತ್ವ. ೧೦. ಹರಿತವಾದುದು; ಚೂಪು. ೧೧. ಬೆಂಕಿ.

ತೇಜಃಪುಂಜ (ನಾ). ಕಾಂತಿಯ ಮೊತ್ತ ; ತೇಜೋರಾಶಿ.

ತೇಜಸ್ವಿ (ನಾ). ಘನತೆಯುಳ್ಳವನು ; ಸತ್ತ್ವಶಾಲಿ.

ತೇಜಸ್ಸು = ತೇಜ.

ತೇಜಿ (ನಾ). ೧. ವೇಗವಾಗಿ ಓಡುವ ಪ್ರಾಣಿ ; ಕುದುರೆ. ೨. ಬೆಲೆಯ ಏರಿಕೆ.

ತೇಟು (ನಾ). ಚೊಕ್ಕವಾದುದು ; ಪರಿಶುದ್ಧವಾದುದು.

ತೇಟೆ (ನಾ). ಸ್ವಚ್ಛತೆ ; ತಿಳಿಯಾಗಿರುವುದು.

ತೇದಿ (ನಾ). ದಿನಾಂಕ ; ತಾರೀಖು.

ತೇನು (ನಾ). ಜೇನುತುಪ್ಪ ; ಮಕರಂದ.

ತೇಪೆ (ನಾ). ೧. ಬಟ್ಟೆ ಮುಂತಾದುವುಗಳ ಹರಿದ ಭಾಗಕ್ಕೆ ಬೇರೊಂದು ತುಂಡನ್ನು ಹೊಂದಿಸುವುದು. ೨. ಗಾರೆಕೆಲಸಗಾರನು ಉಪಯೋಗಿಸುವ ಸಾಧನ ; ಕರಣೆ.

ತೇಮ = ತೇವ.

ತೇಮನ (ನಾ). ೧. ಹಸಿ ; ತೇವ. ೨. ಒಂದು ಬಗೆಯ ಮೇಲೋಗರ ; ಪಳಿದ್ಯ.

ತೇವಾನ (ನಾ). ೧. ಸವೆತ ; ಸವೆಕಳಿ. ೨. ಮೈಗಳ್ಳತನ ; ಆಲಸ್ಯ.

ತೇಯ್(ಯು) (ಕ್ರಿ). ೧. ಅರೆ ; ಉಜ್ಜು. ೨. ಸವೆ ; ಕ್ಷಯಿಸು. ೩. ಸವೆಯಿಸು ; ಕ್ಷಯಿಸುವಂತೆ ಮಾಡು.

ತೇರ್(ರು) (ಕ್ರಿ). ೧. ಕೊನೆಯನ್ನು ಮುಟ್ಟು. ೨. ತೇರ್ಗಡೆಯಾಗು ; ಉತ್ತೀರ್ಣನಾಗು. (ನಾ). ೩. ರಥ ; ಸ್ಯಂದನ. ~ಆಳ್(ಳು) = ರಥವನ್ನು ನಡಸುವವನು ; ಸಾರಥಿ.

ತೇರಣ (ನಾ). ಗೋರಂಟಿ ; ಮದರಂಗಿ.

ತೇರಯಿಸು (ಕ್ರಿ). ೧. ಹಿಂಜರಿ ; ಹಿಮ್ಮೆಟ್ಟು. ೨. ಹಿಂಜರಿಯುವಂತೆಮಾಡು; ಹಿಮ್ಮೆಟ್ಟಿಸು. ೩. ತವಕಪಡು ; ಅಪೇಕ್ಷಿಸು.

ತೇರ್ಗಡೆ (ನಾ). ಜಯ ; ಗೆಲವು.

ತೇಲ್(ಲು) (ಕ್ರಿ). ೧. ನೀರಿನ ಮೇಲೆ ಇರು; ನೀರಿನಲ್ಲಿ ಮುಳುಗದಂತಿರು. ೨. ಹಗುರವಾಗಿ ಚಲಿಸು. ~ಇಸು = ೧. ನೀರಿನ ಮೇಲ್ಮೆ ಮುಳುಗದಂತೆ ಇರಿಸು ; ಅಲೆದಾಡಿಸು. ೨. ಪಾರುಮಾಡು.

ತೇವ (ನಾ). ಹಸಿ ; ಒದ್ದೆ ; ಪಸೆ.

ತೇವುಳಿ (ನಾ). ತಲೆಯ ಕೂದಲು ಉದುರಿ ಹೋಗುವ ಒಂದು ರೋಗ ; ತೆಗಳಿ.

ತೇಟ್(ಳ್,ಳು,ಟು) (ನಾ). ಒಂದು ಜಾತಿಯ ವಿಷಜಂತು ; ಚೇಳು.

ತೇಟ್ಟಿ(ಳ್ದಿ)ೀರ (ನಾ). ಚೇಳನ್ನು ವಾಹನವನ್ನಾಗಿ ಉಳ್ಳವನು ; ಭೈರವ.

ತೈಜಸ (ಗು). ತೇಜಸ್ಸಿನಿಂದ ಕೂಡಿದ ; ಕಾಂತಿಯುತ.

ತೈನಾತಿ (ನಾ). ೧. ಸೇವಕ ; ಕೈಯಾಳು. (ಗು). ೨. ಅಧೀನದ ; ಆಶ್ರಯಕ್ಕೊಳಗಾದ.

ತೈಲ (ನಾ). ಎಣ್ಣೆ.

ತೈಲಕ (ನಾ). ಎಣ್ಣೆ ತೆಗೆದ ಮೇಲೆ ಉಳಿಯುವ ಸಿಪ್ಪೆ ; ಹಿಂಡಿ.

ತೈಲಿಕ (ನಾ). ಗಾಣದಿಂದ ಎಣ್ಣೆ ತೆಗೆಯು ವವನು ; ಗಾಣಿಗ.

ತೊಂಕು (ಕ್ರಿ). ಬಗ್ಗು ; ಬಾಗು.

ತೊಂಗಲ್(ಲು) (ನಾ). ೧. ಗುಂಪು; ಸಮೂಹ. ೨. ಗೊಂಚಲು ; ಕುಚ್ಚು.

ತೊಂಗು (ಕ್ರಿ). ೧. ತೂಗಾಡು ; ಜೋಲು ಬೀಳು. ೨. = ತೊಂಕು. (ನಾ). ೩. ಜೋಲುವಿಕೆ ; ನೇತಾಡುವಿಕೆ.

ತೊಂಗೆ = ತೊಂಗಲ್.

ತೊಂಚಪಂಚ (ನಾ). ಎಲ್ಲದರಲ್ಲೂ ಕುಂದನ್ನು ಹುಡುಕುವ ಸ್ವಭಾವ.

ತೊಂಡ (ನಾ). ಆಳು ; ಸೇವಕ.

ತೊಂಡಂಗಿ (ನಾ). ಜಿರಳೆ; ಆಕ್ಕಳೆ; ಜೊಂಡಿಗ.

ತೊಂಡಲ್ (ನಾ). ತಲೆಯಲ್ಲಿ ಧರಿಸುವ ಮುತ್ತಿನ ಆಭರಣ.

ತೊಂಡಲು (ನಾ). ೧. ಆನೆಯ ಸೊಂಡಿಲು. ೨. = ತೊಂಡಲ್.

ತೊಂಡಿಗ (ನಾ). ಒಂದು ಜಾತಿಯ ಹಕ್ಕಿ.

ತೊಂಡಿಲ್(ಲು) = ತೊಂಡಲ್.

ತೊಂಡು (ನಾ). ೧. ವೃಥಾಲಾಪ ; ಹರಟೆ. ೨. ತುಂಟತನ; ಪುಂಡಾಟ. ~ಕೆ(ಗೆ)ಡೆ = (ಗಿಳಿಯಂತೆ) ಅರ್ಥವಿಲ್ಲದೆ ಮಾತನಾಡು. ~ತೊಂಬ(ಳ)ಸು = ಸ್ವೇಚ್ಛಾವೃತ್ತಿ ; ಉದ್ಧಟತನ.

ತೊಂಡೆ (ನಾ). ೧. ಕಬ್ಬಿನ ಮೇಲುಭಾಗ. ೨. ಊಸರವಳ್ಳಿ ; ಓತಿಕೇತ. ೩. ಒಂದು ಜಾತಿಯ ಬಳ್ಳಿ ಮತ್ತು ಅದರ ಹಣ್ಣು.

ತೊಂತು (ಕ್ರಿ). ೧. ಸುತ್ತು ; ಆವರಿಸು. ೨. ಹತ್ತು ; ಮೇಲೇರು ; ಅಡರು. ೩. (ಜಗಳಕ್ಕೆ) ಎತ್ತಿಕಟ್ಟು ; ಪ್ರೇರೇಪಿಸು. (ನಾ). ೪. ಹತ್ತುವಿಕೆ ; ಏರುವಿಕೆ.

ತೊಂದರೆ (ನಾ). ಅಡ್ಡಿ ; ಅಡಚಣೆ ; ಉಪ ದ್ರವ.

ತೊಂಬಾರ (ನಾ). (ಕಾಳಿನ) ಗುಡ್ಡೆ, -ರಾಶಿ.

ತೊಂಬೆ (ನಾ). ೧. ಗುಂಪು ; ಸಮೂಹ. ೨. ತೊಂಗೆ ; ಗೊಂಚಲು. ೩. ಬಿದಿರಿನ ಬುಟ್ಟಿ ; ಗಳಗೆ.

ತೊಕ್ಕು (ನಾ). (ಹುಣಿಸೆ ಮೊದಲಾದ ಹುಳಿಯಾದ ಕಾಯಿಗಳಿಂದ ಮಾಡುವ) ಚಟ್ನಿಯಂತಹ ಒಂದು ಬಗೆಯ ವ್ಯಂಜನ ಪದಾರ್ಥ.

ತೊಗಟು = ತೊಗಟೆ.

ತೊಗಟೆ (ನಾ). ಸಿಪ್ಪೆ ; ತಿಗಟು.

ತೊಗರಿ (ನಾ). ದ್ವಿದಳಧಾನ್ಯಗಳಲ್ಲಿ ಒಂದು.

ತೊಗರು (ನಾ). ಕೆಂಪು ಬಣ್ಣ.

ತೊಗಱು(ರು) = ತುವರ.

ತೊಗಲ್(ಲು) (ನಾ). ಚರ್ಮ ; ತೊವಲು. ~ಬಾವಲಿ = ಬಾವಲಿಯಲ್ಲಿ ಒಂದು ಜಾತಿ ; ಕಪ್ಪಡಿ.

ತೊಗೆ (ನಾ). ಒಂದು ಬಗೆಯ ಮೇಲೋಗರ ; ತೊವ್ವೆ.

ತೊಟ್ಟಗೆ (ಅ). ತಟ್ಟನೆ ; ಬೇಗ.

ತೊಟ್ಟನೆ = ತೊಟ್ಟಗೆ.

ತೊಟ್ಟಿ (ನಾ). ೧. ಮನೆಯ ಮಧ್ಯದಲ್ಲಿರುವ ಅಂಗಳ ; ಚೌಕ. ೨. ನೀರಿನ ಬಾನಿ. ೩. ಒಂದು ಜಾತಿಯ ಬಳ್ಳಿ.

ತೊಟ್ಟಿಲ್(ಲು) (ನಾ). ಮಗುವನ್ನು ಮಲಗಿಸಿ ತೂಗುವ ಬಿದಿರು ಅಥವಾ ಮರದ ರಚನೆ.

ತೊಟ್ಟು (ನಾ). ೧. ಮೊಲೆಯ ತುದಿ; ಚೂಚುಕ. ೨. (ಹಣ್ಣು ಅಥವಾ ಎಲೆಗಳ) ತುಂಬು ; ಕಾವು. ೩. ಹನಿ ; ತುಂತುರು; ಸೀಕರ.

ತೊಟ್ಟೆ (ನಾ). ೧. ತೆಂಗಿನ ಗರಿಗಳಿಂದ ಮಾಡಿದ ಬುಟ್ಟಿ, -ಕುಕ್ಕೆ. ೨. ಜೇನುತುಪ್ಪ ವಿರದ ಜೇನುಗೂಡು, -ಹುಟ್ಟಿ.

ತೊಡ (ನಾ). ೧. ಒಡವೆ ; ಆಭರಣ. ೨. ಬಟ್ಟೆ ; ವಸ್ತ್ರ. ~(ಂ)ಕ(ಗ)ಟ್ಟು = ೧. ಆಭರಣವನ್ನು ಮಾಡು. ೨. ಅಲಂಕರಿಸು.

ತೊಡ(ಂ)ಕು (ಕ್ರಿ). ೧. ಸಿಕ್ಕಿಕೊಳ್ಳು; ತೊಡರಿಕೊಳ್ಳು. ೨.(ಕೆಲಸದಲ್ಲಿ) ತೊಡಗು; ಪ್ರಾರಂಭಿಸು. ೩. ಎದುರಿಸು; ಸೆಣಸು. (ನಾ). ೪. ಅಡಚಣೆ; ತೊಂದರೆ. ೫. ಸೆಣಸುವಿಕೆ. ೬. ಗೊಡವೆ; ಸಂಬಂಧ. ~ಬೇರು = ತಾಯಿಬೇರಿಗೆ ಹೊಂದಿಕೊಂಡಿರುವ ಸಣ್ಣಬೇರು.

ತೊಡಂಬೆ (ನಾ). ೧. ಗೊಂಚಲು; ಕುಚ್ಚು. ೨. ತೊಟ್ಟು; ತುಂಬು; ಕಾವು.

ತೊಡಗು (ಕ್ರಿ). ಪ್ರಾರಂಭಿಸು; ಮೊದಲು ಮಾಡು.

ತೊಡಚು (ಕ್ರಿ). ೧. ಬಾಣಹೂಡು. ೨. ತೊಡರಿಸು; ಸೇರಿಸು.

ತೊಡಪು (ನಾ). ೧. ಆರಂಭ; ಪ್ರಾರಂಭ. ೨. = ತೊಡ.

ತೊಡಬೆ ೧. =ತೊಡಂಬೆ. ೨.ಆಧಿಕ್ಯ; ಹೆಚ್ಚಳ.

ತೊಡಮೆ (ನಾ). ದಿಡ್ಡಿಬಾಗಿಲು; ತಡಮೆ.

ತೊಡರ್(ರು) (ಕ್ರಿ). ೧. ಕೂಡು; ಸೇರು. ೨. ಎದುರಿಸು; ಪ್ರತಿಭಟಿಸು. ೩. ಸಿಕ್ಕಿಕೊಳ್ಳು; ಬಂಧನಕ್ಕೊಳಪಡು. ೪.ಆವರಿಸಿಕೊಳ್ಳು; ಮುತ್ತು. (ನಾ). ೫. ಸೇರುವಿಕೆ. ೬. ಬಂಧನ. ೭. ಬೇಡಿ; ಸಂಕೋಲೆ. ೮. ಆಭರಣ; ತೊಡವು. ೯. ಅಡ್ಡಿ; ತೊಂದರೆ.

ತೊಡರ್ಚು (ಕ್ರಿ).೧.ಜೋಡಿಸು; ಹೊಂದಿಸು. ೨. ಒಳಹೊಗುವಂತೆ ಮಾಡು.

ತೊಡರ್ಪು (ನಾ). ತೊಡಕು; ಅಡ್ಡಿ.

ತೊಡವು = ತೊಡಪು.

ತೊಡಹ (ನಾ). ಬಳಿಯುವುದು; ಲೇಪನ.

ತೊಡಹು (ಕ್ರಿ). ೧. ಮುತ್ತು; ಆಕ್ರಮಿಸು. (ನಾ). ೨. ಸೇರಿಕೆ; ಹೊಂದಿಕೆ. ೩. ಆಭರಣ; ಒಡವೆ.

ತೊಡಿಗೆ (ನಾ). ೧. ತೊಟ್ಟುಕೊಳ್ಳುವ ವಸ್ತ್ರ. ೨. ಆಭರಣ; ಒಡವೆ.

ತೊಡು (ಕ್ರಿ). ೧. ಧರಿಸು. ೨.ಪ್ರಾರಂಭಿಸು; ಮೊದಲುಮಾಡು. ೩. ಬಾಣವನ್ನು ಹೂಡು. ~ಇಸು = ೧. ಧರಿಸುವಂತೆ ಮಾಡು. ೨. ಶೃಂಗರಿಸು; ಅಲಂಕರಿಸು.

ತೊಡೆ (ಕ್ರಿ). ೧. ಬಳಿ; ಸವರು. ೨. ಒರಸು; ತಿಕ್ಕು; ಉಜ್ಜು. ೩. ಅಳಿಸು; ನಾಶಮಾಡು. (ನಾ). ೪. ಮೊಳಕಾಲಿನಿಂದ ಸೊಂಟದವರೆಗಿನ ಭಾಗ; ಊರು. ~ವಾಳ = ತೊಡೆಯ ಸಂಧಿಯಲ್ಲಿ ಏಳುವ ಗೆಡ್ಡೆ; ಉಡುಚು.

ತೊಣಕು (ಕ್ರಿ). ನೀರನ್ನು ಬತ್ತಿಸಿ ಮೀನನ್ನು ಹುಡುಕು.

ತೊಣಚಿ (ನಾ). ನಾಯಿ, ದನ ಮುಂತಾದುವುಗಳ ಚರ್ಮಕ್ಕೆ ಹತ್ತುವ ಒಂದು ಜಾತಿಯ ನೊಣ; ತೊನಸೆ.

ತೊಣಚೆ = ತೊಣಚಿ.

ತೊಣೆ (ನಾ). ಸಮಾನ; ಎಣೆ; ಸಮ.

ತೊತ್ತಟಿ(ಳ) (ನಾ). ಕಾಲಿನ ತುಳಿತದಿಂದ ಸುಗ್ಗುನುರಿಯಾದುದು. ~(ಂ)ತು(ದು)ಟು(ಳಿ) = ಅಜಿಗಿಜಿಯಾಗುವಂತೆ ತುಳಿ.

ತೊತ್ತು = ತೊಟ್ಟು. ~ತನ = ಸೇವೆ; ಊಳಿಗ.

ತೊದಲ್(ಲು,ಳ್,ಳು) (ಕ್ರಿ). ೧. (ಮಕ್ಕಳಂತೆ) ಮಾತು ತಡವರಿಸು; ತಪ್ಪುತಪ್ಪಾಗಿ ಮಾತನಾಡು. (ನಾ). ೨.ಮಕ್ಕಳ ಮಾತು; ಮುದ್ದಾದ ಮಾತು. ೩. ಅಸತ್ಯ; ಸುಳ್ಳು. ~ಆಡು = ೧. ತಡವರಿಸು; ಬಿಕ್ಕು. ೨. ಸುಳ್ಳಾಡು. ~ಮಾತು = ೧.ಮಕ್ಕಳ ಮಾತು. ೨. ಹುಸಿ; ಸುಳ್ಳು.

ತೊನೆ (ಕ್ರಿ). ಅಲ್ಲಾಡು; ಅತ್ತಿತ್ತ ಚಲಿಸು.

ತೊನ್ನ (ನಾ). ಕುಷ್ಠರೋಗವುಳ್ಳವನು.

ತೊನ್ನು (ನಾ). ಒಂದು ಬಗೆಯ ಚರ್ಮರೋಗ; ಬಿಳಿಯ ಕುಷ್ಠ.

ತೊಪ್ಪಲ್(ಲು) (ನಾ). ೧. ಸೊಪ್ಪು ; ಎಲೆ. ೨. ಬೆಟ್ಟದ ಇಳಿಜಾರು ; ಕಿಬ್ಬಿ.

ತೊಪ್ಪೆ (ನಾ). ಸಗಣಿಯ ಮುದ್ದೆ.

ತೊಯ್ (ಕ್ರಿ). ಒದ್ದೆಯಾಗು ; ನೆನೆ.

ತೊಯ್ಯು = ತೊಯ್.

ತೊರಳೆ (ನಾ). ದೇಹದ ಒಂದು ಭಾಗ ; ಗುಲ್ಮ ; ಪ್ಲೀಹ.

ತೊರೆ (ಕ್ರಿ). ೧. ಸ್ರವಿಸು ; ಸುರಿ. ೨. ಮೊಲೆಯಲ್ಲಿ ಹಾಲು ತುಂಬಿಕೊಳ್ಳು. ೩.= ತೊಱೆ.

ತೊಱೆ(ರೆ) (ಕ್ರಿ). ೧. ಬಿಡು; ತ್ಯಜಿಸು. ೨. ನಿರಾಕರಿಸು ; ತಿರಸ್ಕರಿಸು. (ನಾ). ೩. ಬಿಲ ; ಪೊಟರೆ. ೪. ಹೊಳೆ; ನದಿ. ~ಎಱೆ(ರೆ)ಯ = ನದಿಗಳ ಒಡೆಯ ; ಕಡಲು. ~ಬೆ(ವೆ)ಂಟೆ = ನೀರಿನಲ್ಲಿ ಆಡುವ ಬೇಟೆ ; ಮೀನು ಹಿಡಿಯುವುದು.

ತೊಱೆ(ರೆ)ಯ (ನಾ). ಮೀನು ಹಿಡಿಯುವವನು ; ಬೆಸ್ತ.

ತೊಲ (ನಾ). ಒಂದು ರೂಪಾಯಿಯ ತೂಕ.

ತೊಲ(ಂ)ಗು (ಕ್ರಿ). ಬಿಟ್ಟು ಹೋಗು ; ಅಗಲು ; ಬೇರೆಯಾಗು.

ತೊಲಿ (ನಾ). ೧. ತೂತು ; ರಂಧ್ರ. ೨.ಕುಳಿ; ಕುಣಿ. ೩. ಯಜ್ಞಕ್ಕೆ ಉಪಯೋಗಿಸುವ ಮರದ ಪಾತ್ರೆ.

ತೊಲೆ (ನಾ). ೧. ದೂಲ. ೨. ತಕ್ಕಡಿ. ೩. ತೂಕ ; ಪ್ರಮಾಣ. ೪. ತಕ್ಕಡಿಯ ಕೋಲು. ೫. ಒಂದು ರೂಪಾಯಿಯ ತೂಕ. ೬. ಸಮಾನತೆ ; ಸಮತೆ. ೭.ಕೀರ್ತಿ ; ಗೌರವ. ೮. ಕ್ಷೀಣತೆ ; ಕೃಶವಾಗಿರುವಿಕೆ.

ತೊವರಿ = ತೊಗರಿ.

ತೊವಱು(ರು) = ತುವರ.

ತೊವಲ್(ಲು) ೧. = ತೊಗಲ್. ೨.ಚಿಗುರು ; ಎಳೆದಳಿರು ; ತೊಪ್ಪಲು.

ತೊವೆ = ತೊಗೆ.

ತೊವ್ವೆ = ತೊಗೆ.

ತೊಳಗು (ಕ್ರಿ). ೧. ಹೊಳೆ; ಪ್ರಕಾಶಿಸು. (ನಾ). ೨. = ತೊಳಪು.

ತೊಳಚಿ = ತುಲಸಿ.

ತೊಳಪು (ನಾ). ಕಾಂತಿ ; ಪ್ರಕಾಶ.

ತೊಳಸು (ಕ್ರಿ). ೧. ಬತ್ತದ ಹೊಟ್ಟು ಹೋಗುವಂತೆ ಕುಟ್ಟು ; ತಳಿಸು. ೨. ಮಲ್ಲಯುದ್ಧ ಮಾಡು ; ಗುದ್ದಾಡು. ೩. ಸ್ವಚ್ಛಮಾಡು ; ಹೊಲಸನ್ನು ತೆಗೆ. ೪. = ತೊೞಸು. (ನಾ). ೫. ಕುಟ್ಟುವಿಕೆ. ೬. ಗುದ್ದಾಟ ; ಜಗಳ. ೭. ತೊಡಕು ; ಗೊಂದಲ. ~ಆಟ = ಜಗಳ ; ಕಲಹ.

ತೊಳೆ (ಕ್ರಿ). ೧. (ನೀರಿನಿಂದ) ಸ್ವಚ್ಛಮಾಡು ; ಚೊಕ್ಕಟಮಾಡು. (ನಾ). ೨. ರಂಧ್ರ ; ತೂತು. ೩. ಕಿತ್ತಳೆ ಮೊದಲಾದ ಹಣ್ಣಿನ ಒಳಗಿನ ಒಂದೊಂದು ಖಂಡ ; ಸೊಳೆ.

ತೊಳ್ಳೆ (ನಾ). ೧. ರಂಧ್ರ; ತೂತು. ೨.ಸಾಲ; ಕಡ.

ತೊೞ(ಳ)ಲ್(ಲು) (ಕ್ರಿ). ೧. ತಿರುಗಾಡು ; ಅಲೆದಾಡು. ೨. ಸಂಕಟಪಡು ; ಕಳವಳಿಸು. ೩. ಗಾಬರಿಗೊಳ್ಳು ; ಆತುರಬೀಳು. (ನಾ). ೪. ಗೋಳಕ; ಕಣ್ಣುಗುಡ್ಡೆ. ~ಆಟ = ೧. ಅಲೆಯುವಿಕೆ; ತಿರುಗುವಿಕೆ. ೨. ಕಷ್ಟ ; ಬವಣೆ.

ತೊೞ(ಳ)ಸು (ಕ್ರಿ). ೧. ತಿರುವು ; ಸುತ್ತು. ೨. ಅಸಹ್ಯವಾಗು ; ಓಕರಿಕೆ ಬರು. (ನಾ). ೩. ಸುತ್ತುವಿಕೆ ; ತಿರುಗುವಿಕೆ. ೪. ಓಕರಿಕೆ.

ತೊೞ್ತು(ಳ್ತು) (ನಾ). ೧. ಆಳು ; ಸೇವಕ ; ತೊತ್ತು. ೨. ದಾಸಿ ; ಸೇವಕಿ. ೩. ಸೂಳೆ.

ತೊೞ್ತು(ಳ್ತು)ೞಿ(ಳಿ) (ಕ್ರಿ). ೧. ಮನಬಂದಂತೆ ತುಳಿ ; ತೊತ್ತಳದುಳಿ. (ನಾ). ೨. ತುಳಿದಾಟ.

ತೋ ೧. = ತೋಯ್. (ನಾ). ೨. ನೇತಾಡುವುದು ; ತೂಗಾಡುವುದು. ~ಮಾಲೆ = ನೇಲುತ್ತಿರುವ ಹೂಮಾಲೆ.

ತೋ(ಂ)ಟ (ನಾ). ಉದ್ಯಾನ; ಉಪವನ. ~ಇಗ=ತೋಟದ ಕೆಲಸ ಮಾಡುವವನು; ತೋಟಗಾರ. ~ವಳ=ತೋಂಟಿಗ.

ತೋಕ (ನಾ). ಸಂತತಿ; ಮಕ್ಕಳು.

ತೋಕು (ಕ್ರಿ). ೧. ಎಸೆ; ಪ್ರಯೋಗಿಸು. ೨. ಹೊಡೆ; ಬಡಿ. ೩. ಸುರಿ; ವರ್ಷಿಸು. (ನಾ). ೪. ಕೋವಿ; ಬಂದೂಕು.

ತೋಕುಳಿ (ನಾ). ಅದ್ದುವುದು; ತೋಯಿಸುವುದು.

ತೋಕೆ (ನಾ). ೧. ನವಿಲು, ತೆಂಗು ಅಥವಾ ಕಬ್ಬು ಮುಂತಾದುವುಗಳ ಸೋಗೆ. ೨. ಬಾಲ; ಪುಚ್ಛ.

ತೋಚು (ಕ್ರಿ). ಮನಸ್ಸಿಗೆ ಹೊಳೆ; ಸ್ಫುರಿಸು. ~ಇಕೆ=ಅನಿಸಿಕೆ; ತಿಳಿವಳಿಕೆ.

ತೋಟಾ (ನಾ). ಬಂದೂಕಿಗೆ ತುಂಬುವ ಗುಂಡು.

ತೋಟಿ (ನಾ). ೧. ಕಾದಾಟ; ಜಗಳ. ೨. ಜಾಡಮಾಲಿ; ಭಂಗಿ. ~ಕಾಱ(ರ) = ಕಾದಾಡುವವನು; ಜಗಳಗಂಟ.

ತೋಟೆ (ನಾ). ೧. ತೊಗಟೆ; ಸಿಪ್ಪೆ. ೨. = ತೋಟಾ.

ತೋಡ (ನಾ). ೧. ಮುಂಗೈಗೆ ತೊಡುವ ಒಂದು ಬಗೆಯ ಆಭರಣ. ೨. ಬೆಳೆಯನ್ನು ಹಾಳುಮಾಡುವ ಬಿಳಿಯ ಇಲಿ.

ತೋಡು (ಕ್ರಿ). ೧. ಹಳ್ಳಮಾಡು; ಅಗೆ. ೨. ನೀರು ಮುಂತಾದುವನ್ನು ಒಂದು ಪಾತ್ರೆಯಿಂದ ಮತ್ತೊಂದು ಪಾತ್ರೆಗೆ ಸುರಿ; ಮೊಗೆ. ೩. ಚುಚ್ಚು; ನಾಟು. (ನಾ). ೪. ಕಾಲುವೆ. ೫. ಹೂಡುವಿಕೆ; ತೊಡುವಿಕೆ. ೬. ಹೋಲಿಕೆ; ಸಮಾನತೆ. ೭. ಜೊತೆ; ಜೋಡಿ. ~ಪೊ(ವೊ)ಯ್ಲು = ಒಂದಾದ ಮೇಲೊಂದು ಬೀಳುವ ಏಟು.

ತೋದು (ನಾ). ಯುಕ್ತಿ; ಉಪಾಯ.

ತೋಪಡಾ (ನಾ). ಉಜ್ಜುಗೊರಡು; ಕೀಸುಳಿ.

ತೋಪಡೆ = ತೋಪಡಾ.

ತೋಪು (ನಾ). ೧. ಮರಗಳ ಸಮೂಹ, –ಗುಂಪು. ೨. = ತೋಫು. ~ಖಾನೆ = ಫಿರಂಗಿಗಳನ್ನಿಡುವ ಸ್ಥಳ.

ತೋಫು (ನಾ). ತುಪಾಕಿ; ಫಿರಂಗಿ.

ತೋಬರಿ (ನಾ). ಕುದುರೆಯ ಬಾಯಿಗೆ ಕಟ್ಟುವ ಕಡಲೆಯ ಚೀಲ.

ತೋಮರ (ನಾ). ಒಂದು ಬಗೆಯ ಆಯುಧ; ಈಟಿ.

ತೋಯ್(ಯು) (ಕ್ರಿ). ೧. ನೆನೆ; ಒದ್ದೆಯಾಗು. ೨. ನೀರಿನಲ್ಲಿ ಅದ್ದು; ಒದ್ದೆಮಾಡು.

ತೋಯ (ನಾ). ನೀರು; ಉದಕ. ~ಆಶಯ = ಕೆರೆ; ಸರೋವರ.

ತೋಯಜ (ನಾ). ನೀರಿನಲ್ಲಿ ಹುಟ್ಟಿದುದು; ತಾವರೆ. ~ಅರಿ = ಚಂದ್ರ. ~ಪ್ರಭವ = ಬ್ರಹ್ಮ. ~ಮಿತ್ರ = ಸೂರ್ಯ.

ತೋಯದ (ನಾ). ನೀರನ್ನು ಕೊಡುವುದು; ಮೋಡ.

ತೋರ (ಗು). ದಪ್ಪವಾದ; ದೊಡ್ಡ; ಸ್ಥೂಲ. ~ಹತ್ತ = ೧. ದೊಡ್ಡ ಮತ್ತು ಶಕ್ತಿಯುತವಾದ ಕೈ. ೨. ಶೂರ; ಧೀರ.

ತೋರಣ (ನಾ). ಅಲಂಕಾರಕ್ಕಾಗಿ ಬಾಗಿಲಿಗೆ ಕಟ್ಟುವ ಚಿಗುರು, ಮಣಿ ಮುಂತಾದುವುಗಳ ಮಾಲೆ.

ತೋಱ್(ರ್,ರು,ಱು) (ಕ್ರಿ). ೧. ಕಾಣಿಸಿಕೊಳ್ಳು; ಕಂಡುಬರು. ೨. ಸೂಚಿಸು; ವ್ಯಕ್ತಪಡಿಸು. ~ಇಕೆ = ೧. ನೋಟ; ಕಾಣ್ಕೆ. ೨. ಪ್ರದರ್ಶನ; ದೃಶ್ಯ. ೩. ತೋಚಿದುದು; ಅನಿಸಿಕೆ. ೪. ಆಡಂಬರ; ಡಂಭ. ~ಎತ್ತು = ಬೇಟೆಯಲ್ಲಿ ಮೃಗಗಳನ್ನು ಆಕರ್ಷಿಸಲು ಕಟ್ಟುವ ಎತ್ತು. ~ಬೆರಳು = ಹೆಬ್ಬೆರಳಿನ ಪಕ್ಕದ ಬೆರಳು; ತರ್ಜನಿ.

ತೋಲ್(ಲು) (ನಾ). ೧. ಚರ್ಮ; ತೊಗಲು. ೨. ದಾರಿ; ಮಾರ್ಗ.

ತೋಲ (ನಾ). ೧. ತೂಕ; ಒಜ್ಜೆ. ೨. ತೂಕ ಮಾಡುವುದು; ತುಲನೆ ಮಾಡುವುದು.

ತೋಲನ = ತೋಲ.

ತೋವೆ = ತೊಗೆ.

ತೋಷ (ನಾ). ೧. ಆನಂದ; ಸಂತಸ. ೨. ತೃಪ್ತಿ; ತಣಿವು. ~ಇಸು = ಆನಂದ ಪಡು; ಸಂತೋಷಿಸು.

ತೋಷಣ = ತೋಷ.

ತೋಹು (ನಾ). ೧. ಮರಗಳ ಸಾಲು; ತೋಪು. ೨. ಮೋಸ; ವಂಚನೆ. ೩. ಬೇಟೆಗಾಗಿ ಅಡಗಿಕೊಳ್ಳುವ ಸ್ಥಳ. ೪. ದೀಹದ ಮೃಗಗಳ ಮೂಲಕ ಬೇಟೆಯಾಡುವುದು.

ತೋಳ್(ಳು) (ನಾ). ಬಾಹು; ರಟ್ಟೆ. ~ಕು(ಗು)ಟ್ಟು = ಬಾಹುಗಳನ್ನು ಚಪ್ಪರಿಸು; ಸಡ್ಡುಹೊಡೆ. ~ಬಂದಿ = ತೋಳಿಗೆ ಧರಿಸುವ ಒಂದು ಆಭರಣ; ಅಂಗದ. ~ಪೊದಲ್(ಲು) = ಕಂಕುಳು.

ತೋಳ (ನಾ). ಒಂದು ಜಾತಿಯ ಪ್ರಾಣಿ; ವೃಕ.

ತೋಳೆ (ನಾ). ದೊಡ್ಡ ಜಾತಿಯ ತೊಗಲು ಬಾವಲಿ; ಹೆಬ್ಬಾವಲಿ.

ತೌಡು = ತವುಡು.

ತೌರು = ತವುರ್.

ತೌರ್ಯತ್ರಿಕ (ನಾ). ನೃತ್ಯ, ಗೀತ ಮತ್ತು ವಾದ್ಯಗಳ ಮೇಳ.

ತ್ಯಕ್ತ (ಗು). ತೊರೆದ; ಬಿಟ್ಟ; ವಿಸರ್ಜಿಸಿದ.

ತ್ಯಜನ (ನಾ). ತೊರೆಯುವುದು; ವಿಸರ್ಜನೆ.

ತ್ಯಜಿಸು (ಕ್ರಿ). ತೊರೆ; ಬಿಡು.

ತ್ಯಾಗ (ನಾ). ೧. ಕೊಡುವುದು; ದಾನ ಮಾಡುವುದು. ೨. ದಾನ; ಕೊಡುಗೆ. ೩. ತೊರೆಯುವುದು; ಅಗಲುವುದು. ೪. ಔದಾರ್ಯ.

ತ್ಯಾಗಿ (ನಾ). ೧. ತ್ಯಾಗವನ್ನು ಮಾಡುವವನು; ದಾನಿ. ೨. ಎಲ್ಲವನ್ನು ತೊರೆದವನು; ವಿರಾಗಿ.

ತ್ಯಾಜ್ಯ (ಗು). ಬಿಡತಕ್ಕ; ತ್ಯಜಿಸತಕ್ಕ.

ತ್ರಪು (ನಾ). ಒಂದು ಬಗೆಯ ಲೋಹ; ತವರ.

ತ್ರಪೆ (ನಾ). ೧. ದಿಗ್ಭ್ರಮೆ; ಕಕ್ಕಾಬಿಕ್ಕಿ. ೨. ಸಂಕೋಚ; ಲಜ್ಜೆ.

ತ್ರಯ (ನಾ). ಮೂರರ ಮೊತ್ತ; ಮೂರು.

ತ್ರಯೋದಶಿ (ನಾ). ಪಕ್ಷದ ಹದಿಮೂರನೆಯ ದಿನ.

ತ್ರಸ (ಗು). ೧. ಚಲಿಸುವ; ಸರಿಯುವ. ೨. ನಡುಗುವ; ಕಂಪಿಸುವ.

ತ್ರಸನ(ನಾ). ೧. ಹೆದರಿಕೆ; ಭಯ. ೨. ಕಳವಳ; ಆತಂಕ.

ತ್ರಸ್ತ (ಗು). ಹೆದರಿದ; ಭಯಪಟ್ಟ.

ತ್ರಾಣ (ನಾ). ೧. ಶಕ್ತಿ; ಕಸುವು. ೨. ರಕ್ಷಣೆ; ಕಾಪು.

ತ್ರಾಣಿ (ನಾ). ೧. ಶಕ್ತಿಯುಳ್ಳವನು; ಬಲಶಾಲಿ. ೨. ಕಾಪಾಡುವವನು; ರಕ್ಷಕ.

ತ್ರಾಸ (ನಾ). ೧. ಕಷ್ಟ; ತೊಂದರೆ. ೨. ಭಯ; ಹೆದರಿಕೆ. ೩. ಕೊಲೆ; ಸಂಹಾರ. ೪. ರತ್ನಗಳಲ್ಲಿಯ ಹುಳುಕು. (ಗು). ೫. ಕಂಪಿಸುವ; ನಡುಗುವ. ೬. ಭಯಪಡಿಸುವ.

ತ್ರಾಸು (ನಾ). ತಕ್ಕಡಿ.

ತ್ರಿ (ನಾ). ಮೂರು. ~ಕರಣ = ಮಾತು, ಮನಸ್ಸು ಮತ್ತು ದೇಹ. ~ಕಾಲ = ೧. ಬೆಳಗ್ಗೆ, ಮಧ್ಯಾಹ್ನ ಮತ್ತು ಸಂಜೆ. ೨. ಭೂತ, ವರ್ತಮಾನ ಮತ್ತು ಭವಿಷ್ಯತ್ತು. ~ಕೋಣ = ಮೂರು ಮೂಲೆಗಳಿರುವ ಆಕೃತಿ; ತ್ರಿಭುಜ. ~ಗುಣ = ತ್ರಿಗುಣ. ~ದಶ = ೧. ಮೂವತ್ತು. ೨. ದೇವತೆ. ~ದಿವ = ಸ್ವರ್ಗ. ~ನ(ಣ)ಯನ = ಮೂರು ಕಣ್ಣುಳ್ಳವನು; ಶಿವ. ~ಪದಿ = ೧. ಮೂರು ಸಾಲುಗಳುಳ್ಳ ಪದ್ಯ. ೨. ಮೂರು ಕಾಲುಗಳುಳ್ಳ ಮಣೆ;

ಅಡ್ಡಣಿಗೆ; ತಿವಟಿಗೆ. ೩.ವಿಷ್ಣು. ~ಪುಂಡ್ರ = ಶ್ರೀವೈಷ್ಣವರು ಹಣೆಯಲ್ಲಿ ಧರಿಸುವ ಮೂರು ನಾಮ. ~ಮತ = ದ್ವೈತ, ಅದ್ವೈತ ಮತ್ತು ವಿಶಿಷ್ಟಾದ್ವೈತ ಎಂಬ ಮೂರು ಮತಗಳು. ~ಮೂರ್ತಿ=ಬ್ರಹ್ಮ, ವಿಷ್ಣು ಮತ್ತು ಶಿವ. ~ವಲಿ(ಳಿ) = ಹೊಟ್ಟೆಯ ಮೇಲಿನ ಮೂರು ಗೆರೆಗಳು. ~ವೇಣಿ = ಗಂಗೆ, ಯಮುನೆ ಮತ್ತು ಸರಸ್ವತಿ ನದಿಗಳ ಸಂಗಮ ಸ್ಥಾನ; ಪ್ರಯಾಗ ಕ್ಷೇತ್ರ. ~ಶೂಲ = ಮೂರು ಮೊನೆಗಳುಳ್ಳ ಶಿವನ ಆಯುಧ. ~ಸಂಧ್ಯೆ = ೧. ದಿನದ ಮೂರು ಸಂಧಿಕಾಲಗಳು; ಬೆಳಗ್ಗೆ, ಮಧ್ಯಾಹ್ನ ಮತ್ತು ಸಾಯಂಕಾಲ. ೨. ಆ ಕಾಲಗಳಲ್ಲಿ ಮಾಡುವ ಸಂಧ್ಯಾವಂದನೆ.

ತ್ರಿಕ (ನಾ). ೧. ಮೂರರ ಗುಂಪು, -ಸಮೂಹ. ೨. = ತಿಕ.

ತ್ರಿಶಂಕು (ನಾ). ೧. ಸೂರ್ಯವಂಶದ ಒಬ್ಬ ರಾಜ. ೨. ಇಕ್ಕಟ್ಟಿನಲ್ಲಿ ಸಿಕ್ಕಿರುವವನು.

ತ್ರುಟಿ (ನಾ). ೧. ಕತ್ತರಿಸುವಿಕೆ; ಮುರಿಯುವಿಕೆ. ೨. ಅತಿ ಸಣ್ಣ ಕಣ; ಅಣು. ೩.ಕ್ಷಣ; ಮುಹೂರ್ತ. ೪. ಸಂಶಯ; ಅನುಮಾನ. ೫. ಹಾನಿ; ಕೇಡು.

ತ್ರೇತಾಯುಗ (ನಾ). ನಾಲ್ಕು ಯುಗಗಳಲ್ಲಿ ಎರಡನೆಯದು.

ತ್ರೈಕಾಲಿಕ (ಗು). ಮೂರು ಕಾಲಗಳಿಗೂ ಸಂಬಂಧಿಸಿದ; ಭೂತ, ವರ್ತಮಾನ ಮತ್ತು ಭವಿಷ್ಯತ್ಕಾಲಗಳಿಗೆ ಸೇರಿದ.

ತ್ವಕ್ಕು (ನಾ). ೧. ಚರ್ಮ; ತೊಗಲು. ೨. ತೊಗಟೆ; ಸಿಪ್ಪೆ.

ತ್ವಕ್ಸಾರ (ನಾ). ಬಿದಿರು; ಬೊಂಬು.

ತ್ವಚೆ = ತ್ವಕ್ಕು.

ತ್ವರಿತ (ಅ). ವೇಗವಾಗಿ; ಶೀಘ್ರವಾಗಿ.

ತ್ವರೆ (ನಾ). ತೀವ್ರತೆ; ರಭಸ.

ತ್ವಷ್ಟೃ (ನಾ). ೧. ಬಡಗಿ. ೨. ದೇವಲೋಕದ ಬಡಗಿ; ವಿಶ್ವಕರ್ಮ.

ತ್ಸರು (ನಾ). ಖಡ್ಗ ಮೊದಲಾದ ಆಯುಧಗಳ ಹಿಡಿಕೆ.



# ಥ

ಥ (ನಾ). ಕನ್ನಡ ವರ್ಣಮಾಲೆಯ ಮೂವತ್ತೇಳನೆಯ ಅಕ್ಷರ.

ಥಟ್ಟನೆ (ಅ). ಕೂಡಲೆ; ತಕ್ಷಣ.

ಥಟ್ಟು (ನಾ). ೧. ರಾಶಿ; ಸಮೂಹ. ೨. ಸೈನ್ಯ; ಪಡೆ. ~ಉಗಿ = ೧.ಗುಂಪನ್ನು ಚೆದರಿಸು. ೨. ಚುಚ್ಚು; ನಾಟು. ~ಉಚ್ಚು = ೧. ಭೇದಿಸು; ಸೀಳು. ೨. ಶಕ್ತಿಗುಂದು; ಬಳಲು. ~ಉರಿ=೧. ದೊಡ್ಡದಾಗಿ ಉರಿ. ೨. ದೊಡ್ಡ ಉರಿ; ಮಹಾಜ್ವಾಲೆ.

ಥಳಕು (ನಾ). ೧. ಕಾಂತಿ; ಪ್ರಕಾಶ. ೨. ನಟನೆ; ತೋರಿಕೆ. ೩. ಬೆಡಗು; ಬಿನ್ನಾಣ.

ಥಳಥಳಿಸು (ಕ್ರಿ). ಪ್ರಕಾಶಿಸು; ಹೊಳೆ.

ಥಾಟು (ನಾ). ೧. ಶಿಸ್ತು; ರೀತಿ. ೨.ಒನಪು; ಒಯ್ಯಾರ. ೩. ಸಂಗೀತದಲ್ಲಿ ರಾಗಗಳ ಶೈಲಿ.

ಥಾಪನೆ (ನಾ). ಸ್ಥಾಪನೆ; ನೆಲಸುವಿಕೆ.

ಥೈಲಿ (ನಾ). ಹಣ ಇಡುವ ಚೀಲ; ಹಮ್ಮಿಣಿ.



ದ (ನಾ). ಕನ್ನಡ ವರ್ಣಮಾಲೆಯ ಮೂವ ತ್ತೆಂಟನೆಯ ವರ್ಣ.

ದಂಗು (ನಾ). ಆಶ್ಚರ್ಯ; ವಿಸ್ಮಯ. ~ಬಡಿ = ಅಚ್ಚರಿಪಡು; ವಿಸ್ಮಿತವಾಗು.

ದಂಗೆ (ನಾ). ಬಂಡಾಯ; ದೊಂಬಿ. ~ಕೋರ = ಬಂಡಾಯಗಾರ; ಕ್ರಾಂತಿಕಾರ.

ದಂಟಿ (ನಾ). ವ್ಯಭಿಚಾರಿಣಿ; ಜಾರೆ.

ದಂಟು (ನಾ). ೧. ಕಾಂಡ; ದೇಟು; ನಾಳ. ೨. ಒಂದು ಜಾತಿಯ ತರಕಾರಿ ಸೊಪ್ಪು.

ದಂಡ (ನಾ). ೧. ಕೋಲು; ದಡಿ. ೨. ಕಡೆ ಗೋಲು; ಮಂತು. ೩. ಚರ್ಮವಾದ್ಯ ಗಳನ್ನು ಬಾರಿಸುವ ಕಡ್ಡಿ; ಕುಡುಹು. ೪. ತಪ್ಪಿಗೆ ತೆರುವ ಪರಿಹಾರ; ಜುಲ್ಮಾನೆ. ೫. ನಷ್ಟ; ಹಾನಿ. ೬. ನಮಸ್ಕಾರ. ೭. ಪಡೆ; ಸೇನೆ. ೮. ವ್ಯಾಯಾಮದ ಒಂದು ಪ್ರಕಾರ; ಸಾಮು. ೯. ಶಿಕ್ಷೆ. ೧೦. ಸಾಮ, ದಾನ, ಭೇದ ಮತ್ತು ದಂಡಗಳೆಂಬ ರಾಜನೀತಿಯ ನಾಲ್ಕು ಉಪಾಯಗಳಲ್ಲೊಂದು; ಚತುರೋಪಾಯಗಳಲ್ಲಿ ಒಂದು. ~ಆಜೀವಕ = ೧. ಕೋಲನ್ನು ಹಿಡಿದಿರುವವನು; ಭಿಕ್ಷುಕ, ಬ್ರಹ್ಮಚಾರಿ ಮೊದಲಾದವರು. ೨. ಮೋಸಗಾರ; ವಂಚಕ. ~ಆಹತ = ಕಡೆಗೋಲಿನಿಂದ ಕಡೆದುದು; ಮಜ್ಜಿಗೆ. ~ನಾಯಕ=ದಳದ ಯಜಮಾನ; ಸೇನಾನಿ. ~ನೀತಿ = ೧. ಚತುರೋಪಾಯಗಳಲ್ಲಿ ಒಂದು. ೨. ಯುದ್ಧ; ಕಾಳಗ. ೩. ನ್ಯಾಯ ನಿರ್ವಹಣೆ. ೪. ರಾಜನೀತಿ. ೫. ಶಿಕ್ಷೆಯಿಂದ ಹಾದಿಗೆ ತರುವ ಬಗೆ; ನಿಗ್ರಹ. ~ಪ್ರಣಾಮ = ಸಾಷ್ಟಾಂಗ ನಮಸ್ಕಾರ. ~ಯಾತ್ರೆ=೧. ಶತ್ರುಗಳನ್ನು ನಿಗ್ರಹಿಸಲು ಮಾಡುವ ಪ್ರಯಾಣ. ೨. ತೀರ್ಗಡೆಯಾಗದಿರುವಿಕೆ.

ದಂಡಕ (ನಾ). ೧. ಗಳೆ; ದೊಣ್ಣೆ. ೨. ಒಂದು ಛಂದೋವೃತ್ತದ ಹೆಸರು.

ದಂಡಣೆ (ನಾ). ೧. ಶಿಕ್ಷಿಸುವುದು; ದಂಡಿಸುವುದು. ೨. ಜುಲ್ಮಾನೆ; ತಪ್ಪುಕಾಣಿಕೆ.

ದಂಡಧರ (ನಾ). ೧. ರಾಜನಿಯೋಗಿ; ಅಧಿಕಾರಿ. ೨. ಯಮ.

ದಂಡನೆ = ದಂಡಣೆ.

ದಂಡಿ (ನಾ). ೧. ಘನತೆ; ಗೌರವ. ೨. ಶಕ್ತಿ; ಸಾಮರ್ಥ್ಯ. ೩. ಕೋಲನ್ನು ಹಿಡಿದಿರುವವನು. ೪. ಯಮ. ೫. ರಾಜ. ೬. ದ್ವಾರಪಾಲಕ. ೭. ಭಿಕ್ಷುಕ. ೮. ಸಂನ್ಯಾಸಿ. ೯. ಮರದ ಒಂದು ಉಪಕರಣ; ಬಾಚಿ. ೧೦. ಸಮ; ಸಾಟಿ. ೧೧. ಕೋಪ; ಸಿಟ್ಟು. ೧೨. ಆಧಿಕ್ಯ; ಹೆಚ್ಚಳ. ೧೩. ಕ್ರೌರ್ಯ; ಕಠಿನತೆ.

ದಂಡಿಗೆ (ನಾ). ೧. ಪಲ್ಲಕ್ಕಿ; ಅಂದಣ. ೨. ಒಂದು ತಂತಿವಾದ್ಯ. ೩. ವೀಣೆಯ ದಂಡ. ೪. ಬೆನ್ನೆಲುಬು. ೫. ತಕ್ಕಡಿಯ ಕೋಲು.

ದಂಡಿಲ (ನಾ). ಕ್ಷೌರಿಕ; ನಾಯಿಂದ.

ದಂಡು (ನಾ). ೧. ಸೈನ್ಯ; ಪಡೆ. ೨. ಕೋಲು; ದೊಣ್ಣೆ. ೩. ಗುಂಪು. ~ಕಾ(ಗಾ)ಱ(ರ) = ದಂಡಿನವನು; ಸೈನಿಕ.

ದಂಡುಱು(ರು)ಂಬೆ (ನಾ). ದಿಟ್ಟೆ; ಗಯ್ಯಾಳಿ.

ದಂಡೆ (ನಾ). ೧. ನೆರೆ; ಹತ್ತಿರ. ೨. ಹೂವಿನ ಹಾರ, –ಮಾಲೆ. ೩. ಕೋಲು; ದೊಣ್ಣೆ. ೪. ದಡ; ತೀರ. ೫. ಸಾಮು; ದಂಡ.

ದಂಡೋರ (ನಾ). ಡಂಗುರ; ಪ್ರಕಟನೆ; ಘೋಷಣೆ.

ದಂತ (ನಾ). ೧. ಹಲ್ಲು; ರದನ. ೨. ಆನೆಯ ಕೋರೆ, –ದಾಡೆ. ~ಕಥೆ(ತೆ) = ಕಟ್ಟುಕಥೆ; ಕಲ್ಪಿತ ಕಥೆ. ~ಚೂರ್ಣ = ಹಲ್ಲುಜ್ಜುವ ಪುಡಿ. ~ಛದ = ತುಟಿ; ಅಧರ.

~ಧಾವನ = ೧. ಹಲ್ಲುಗಳನ್ನು ತೊಳೆಯುವುದು; ಶುಭ್ರಗೊಳಿಸುವುದು. ೨.ಹಲ್ಲುಜ್ಜುವ ಸಾಧನ. ~ಪತ್ರ = ದಂತದ ಓಲೆ, -ಕರ್ಣಾಭರಣ. ~ಮೂಲ = ೧. ಹಲ್ಲಿನ ಬುಡ. ೨. ಆನೆಯ ಕೋರೆಯ ಬುಡ; ಕರೀರ.

ದಂತಾವಲ(ಳ) (ನಾ). ಆನೆ ; ಗಜ.

ದಂತಿ (ನಾ). ೧. ದಂತಗಳಿಂದ ಕೂಡಿದುದು ; ಆನೆ. ೨. ಕೋರೆಹಲ್ಲು ; ದಂತ. ~ಮುಖ = ಗಣಪತಿ ; ಗಜಮುಖ.

ದಂತಿನಿ (ನಾ). ಹೆಣ್ಣಾನೆ ; ಪಿಡಿ.

ದಂತುರ (ಗು). ೧. ಉಬ್ಬು ಹಲ್ಲುಳ್ಳ ; ಮುಂದೆ ಚಾಚಿದ ದಂತವುಳ್ಳ. ೨. ಉಬ್ಬು ತಗ್ಗಾದ ; ಹಳ್ಳತಿಟ್ಟಾದ. ೩. ಚಲನೆಯಿಂದ ಕೂಡಿದ.

ದಂತ್ಯ (ನಾ). ೧. ದಂತಗಳ ಸಹಾಯದಿಂದ ಹುಟ್ಟುವ ಅಕ್ಷರ ; ತವರ್ಗ. (ಗು). ೨. ಹಲ್ಲಿಗೆ ಸಂಬಂಧಿಸಿದ.

ದಂದರಹಾಳಿ (ನಾ). ದುಂದುವೆಚ್ಚಗಾತಿ ; ಅತಿಯಾಗಿ ಖರ್ಚುಮಾಡುವವಳು.

ದಂದಶೂಕ (ನಾ). ಹಾವು ; ಸರ್ಪ.

ದಂದುಗ (ನಾ). ತೊಂದರೆ ; ಕಷ್ಟ ; ತೊಡಕು. ~(ಂ)ಕೊ(ಗೊ)ಳ್ = ಕಷ್ಟಕ್ಕೊಳಗಾಗು.

ದಂಧೆ (ನಾ). ಕಸಬು ; ಉದ್ಯೋಗ.

ದಂಪತಿ = ಜಂಪತಿ. ~ಪ(ವ)ಕ್ಕಿ = ಚಕ್ರವಾಕ ಪಕ್ಷಿ.

ದಂಬ (ನಾ). ಮೋಸ ; ವಂಚನೆ.

ದಂಬೆ (ನಾ). ೧. ಸಣ್ಣಕಾಲುವೆ ; ತೋಡು. ೨. ನೀರು ಹರಿಯಲು ಮಾಡಿದ ಸಾಧನ ; ಹರಿನಾಳಿಗೆ.

ದಂಭ ೧. = ದಂಬ. ೨. ತೋರಿಕೆಯ ಆಚಾರ; ಸೋಗು.

ದಂಭೋಲಿ(ಳಿ) (ನಾ). ಇಂದ್ರನ ವಜ್ರಾಯುಧ.

ದಂರೋಟು (ನಾ). ಒಂದು ಬಗೆಯ ಸಿಹಿ ತಿಂಡಿ.

ದಂಶ (ನಾ). ೧. ಕಚ್ಚುವಿಕೆ ; ಕಡಿಯುವಿಕೆ. ೨. ಹಲ್ಲು ; ದಂತ. ೩. (ದನಗಳನ್ನು ಕಚ್ಚುವ) ನೊಣ ; ತೊಣಚಿ ; ತೊನಸಿ.

ದಂಶಕ (ನಾ). ೧. ಉಪ್ಪಿನಕಾಯಿ. (ಗು). ೨. ಕಡಿಯುವ ; ಕಚ್ಚುವ.

ದಂಶನ (ನಾ). ೧. ಕಚ್ಚುವಿಕೆ. ೨. ಕವಚ.

ದಂಶಿತ (ಗು). ೧. ಕಚ್ಚಲ್ಪಟ್ಟ. ೨. ಕವಚವುಳ್ಳ.

ದಂಷ್ಟ್ರ (ನಾ). ಕೋರೆಹಲ್ಲು ; ದಾಡೆ. ~ಆಯುಧ = ಹಲ್ಲುಗಳನ್ನೇ ಆಯುಧವನ್ನಾಗಿ ಉಪಯೋಗಿಸುವ ಪ್ರಾಣಿ; ಕಾಡು ಹಂದಿ, ಕೋತಿ, ಆನೆ ಮುಂತಾದುವು.

ದಂಷ್ಟ್ರಿ (ನಾ). ಕಾಡುಹಂದಿ, ಆನೆ ಮುಂತಾದ ಕೋರೆಹಲ್ಲುಗಳಿರುವ ಪ್ರಾಣಿ.

ದಕ್ಕಡ (ನಾ). ೧. ಧೈರ್ಯ ; ಸಾಮರ್ಥ್ಯ. ೨. ಸಮರ್ಥ ; ಬಲಶಾಲಿ.

ದಕ್ಕಿಣ = ದಕ್ಷಿಣ.

ದಕ್ಕು (ಕ್ರಿ). ೧. ದೊರಕು ; ಸಿಕ್ಕು ; ಪ್ರಾಪ್ತವಾಗು. ೨. ಜೀರ್ಣವಾಗು ; ಅರಗು ; ಗಿಟ್ಟು. (ನಾ). ೩. ಪಡೆದುದು ; ಲಭ್ಯ. ೪. ದಸಿ ; ಶಂಕು ; ಬೆಣೆ. ೫. ಕೂಳೆ. ~ಇಸು = ೧. ಹೊಂದು ; ಪಡೆ. ೨. ಅರಗು ; ಜೀರ್ಣವಾಗು ; ಗಿಟ್ಟು. ~(ಂ) ತ (ದ) ಲೆ = ಉಳಿದುಕೊಂಡ ತಲೆ; ರಕ್ಷಿಸಲ್ಪಟ್ಟ ತಲೆ. ~ಕೊ(ಗೊ)ಡು = ವಶಮಾಡಿಕೊಡು ; ಒಪ್ಪಿಸು.

ದಕ್ಕೆ (ನಾ). ೧. ತೊಂದರೆ; ಹಾನಿ. ೨. ಒಂದು ಬಗೆಯ ಚರ್ಮ ವಾದ್ಯ ; ಡಕ್ಕೆ.

ದಕ್ಷ (ನಾ). ೧. ಸಮರ್ಥ. ೨. ಅರ್ಹ. ೩. ತಿಳಿದವನು ; ಬಲ್ಲಿದ. ೪. ಹುಂಜ ; ಕುಕ್ಕುಟ. ೫. ದಕ್ಷಬ್ರಹ್ಮ. (ಗು). ೬. ಸಮರ್ಥನಾದ. ೭. ತಿಳಿದ. ~ಕನ್ಯೆ = ದಕ್ಷನ ಮಗಳು ; ದಾಕ್ಷಾಯಣಿ.

ದಕ್ಷತೆ (ನಾ). ೧. ಸಾಮರ್ಥ್ಯ. ೨. ಅರ್ಹತೆ. ೩. ಜಾಣ್ಮೆ; ಚಾತುರ್ಯ.

ದಕ್ಷಿಣ (ನಾ). ೧. ತೆಂಕಲು; ತೆಂಕು. ೨. ಬಲಗಡೆ; ಬಲಭಾಗ. ೩. ಕಪಟವಿಲ್ಲದವನು; ನಿಷ್ಕಪಟಿ. ~ಅಯನ = ಸೂರ್ಯನು ದಕ್ಷಿಣ ದಿಕ್ಕಿಗೆ ಚಲಿಸುವ ಕಾಲ. ~ಆವರ್ತ = ಬಲಮುರಿ; ಪ್ರದಕ್ಷಿಣೆ. ~ಆಶಾಪತಿ = ದಕ್ಷಿಣ ದಿಕ್ಕಿನ ಒಡೆಯ; ಯಮಧರ್ಮ.

ದಕ್ಷಿಣೆ (ನಾ). ಗುರು, ಪುರೋಹಿತ ಮೊದಲಾದವರಿಗೆ ಕೊಡುವ ಸಂಭಾವನೆ.

ದಗಡಿ = ದಂಟಿ.

ದಗದ = ದಂಧೆ.

ದಗಲೆ (ನಾ). ೧. ಕವಚ; ಚಿಲಖತ್ತು. (ಗು). ೨. ಸಡಿಲವಾದ; ಅಳ್ಳಕವಾದ.

ದಗಲ್ಬಾಜಿ (ನಾ). ೧. ಮೋಸ; ವಂಚನೆ. ೨. ಮೋಸಗಾರ; ವಂಚಕ.

ದಗಾ (ನಾ). ಮೋಸ; ದ್ರೋಹ. ~ಕೋರ = ಮೋಸಗಾರ; ದ್ರೋಹಿ.

ದಗುಂತಿ (ನಾ). ಅತಿಶಯ; ಹೆಚ್ಚಳ; ಆಧಿಕ್ಯ.

ದಗೆ (ನಾ). ಉರಿ; ಶಾಖ; ಧಗೆ.

ದಗ್ಧ (ಗು). ೧. ಸುಡಲ್ಪಟ್ಟ; ದಹಿಸಿದ. ೨. ಸಂದೇಹದಿಂದ ದೂರವಾದ. ~ಹಸ್ತ = ಅದೃಷ್ಟವಿಲ್ಲದವನು; ನಿರ್ಭಾಗ್ಯ.

ದಚ್ಚಿ (ನಾ). ಹುಣಿಸೆಬೀಜದ ಹೋಳು.

ದಟ್ಟ (ನಾ). ೧. ತುಂಡುಬಟ್ಟೆಗಳನ್ನು ಸೇರಿಸಿ ಹೊಲಿದ ಹಚ್ಚಡ; ಕವುದಿ. (ಗು). ೨. ಸಾಂದ್ರವಾದ; ನಿಬಿಡ. ~ದರಿದ್ರ = ಏನೂ ಇಲ್ಲದವನು; ಕಡುಬಡವ.

ದಟ್ಟಣೆ (ನಾ). ೧. ಒತ್ತೊತ್ತಾಗಿರುವಿಕೆ; ಸಾಂದ್ರತೆ. ೨. ಗುಂಪು; ಸಮೂಹ.

ದಟ್ಟಿ (ನಾ). ೧. ನಡುಪಟ್ಟಿ. ೨. ಸೊಂಟಕ್ಕೆ ಸುತ್ತಿಕೊಳ್ಳುವ ಬಟ್ಟೆ; ಲುಂಗಿ. ೩. ಸೀರೆ.

ದಟ್ಟಿತು (ಗು). ದಪ್ಪವಾದ; ತೋರ.

ದಟ್ಟೈಸು (ಕ್ರಿ). ೧. ಸಾಂದ್ರವಾಗು; ನಿಬಿಡವಾಗು. ೨. ಗದರಿಸು; ಜಂಕಿಸು. ೩. ಒರಸಿಹಾಕು; ಉಜ್ಜು.

ದಟ್ಟು (ನಾ). ೧. ಎಡವುವಿಕೆ; ಮುಗ್ಗುರಿಸುವಿಕೆ. ೨. ಗುಂಪು; ಸಮೂಹ. ~ಅಡಿ = ತಪ್ಪುಹೆಜ್ಜೆ; ತಪ್ಪಡಿ.

ದಡ (ನಾ). ತೀರ; ತಟ. ~ಕಟ್ಟು = ತೂಕದಲ್ಲಿ ಸಮತೋಲನ ಮಾಡು; ಪೇರುಕಟ್ಟು. ~ಸೇರು = ತೇರ್ಗಡೆ ಹೊಂದು; ಸಫಲವಾಗು.

ದಡಾರ (ನಾ). ಒಂದು ಬಗೆಯ ಸಿಡುಬು ರೋಗ; ಗೋಣಿತಟ್ಟು.

ದಡಿ (ನಾ). ೧. ದಂಡ; ಕೋಲು. ೨. (ಸೀರೆ, ಪಂಚೆ ಮೊದಲಾದುವುಗಳ) ಅಂಚು. ೩. = ದಡ.

ದಡಿಗ (ನಾ). ೧. ಕೋಲನ್ನು ಹಿಡಿದಿರುವವನು. ೨. ಗಟ್ಟಿಗ; ಬಲಶಾಲಿ. ೩. ಸ್ಥೂಲಕಾಯದವನು; ದಾಂಡಿಗ.

ದಡಿಯ ೧. = ದಡಿಗ. ೨. = ದಡೆ.

ದಡೂತಿ (ಗು). ಗಟ್ಟಿಮುಟ್ಟಾದ; ದೃಢವಾದ.

ದಡೆ (ನಾ). ಒಂದು ತೂಕ; ಕಾಲುಮಣ.

ದಡ್ಡ (ನಾ). ತಿಳಿಗೇಡಿ; ಹೆಡ್ಡ.

ದಡ್ಡಕ್ಕರ (ನಾ). ಒತ್ತಕ್ಷರ.

ದಡ್ಡಸ (ನಾ). ಡೊಂಬರವನ ಡೋಲು.

ದಡ್ಡಿ (ನಾ). ೧. ಮೂರ್ಖಸ್ತ್ರೀ; ಹೆಡ್ಡಿ. ೨. ತೆರೆ; ಜವನಿಕೆ. ೩. ಮನೆಯ ಮಾಳಿಗೆ. ೪. ಪಂಜರ; ಬೋನು. ೫. ಕುರಿಗಳ ದೊಡ್ಡಿ; ರೊಪ್ಪ. ~ತನ = ತಿಳಿವಳಿಕೆ ಇಲ್ಲದಿರುವುದು; ಅಜ್ಞಾನ.

ದಡ್ಡು (ನಾ). ಚರ್ಮ ಕಾಯಿಗಟ್ಟುವುದು; ಜಡ್ಡು.

ದಣಪೆ (ನಾ). ಅಡೆ; ತಡೆ; ಪ್ರತಿಬಂಧ.

ದಣಾಯಕ (ನಾ). ದಂಡನಾಯಕ; ಸೇನಾಧಿಪತಿ.

ದಣಿ (ಕ್ರಿ). ೧. ಆಯಾಸಪಡು ; ಬಳಲು. ೨. ತೃಪ್ತಿ ಹೊಂದು ; ತಣಿ. (ನಾ). ೩. ಒಡೆಯ ; ಯಜಮಾನ. ~ಇಸು =೧. ಆಯಾಸಗೊಳಿಸು. ೨. ತೃಪ್ತಿಪಡಿಸು; ತಣಿಸು.

ದಣಿ(ಂ)ಬ (ನಾ). (ಹೆಂಗಸರು ಉಡುವ) ಬಟ್ಟೆ ; ವಸ್ತ್ರ.

ದಣಿವು (ನಾ). ೧. ಆಯಾಸ ; ಬಳಲಿಕೆ. ೨. ತೃಪ್ತಿ ; ತಣಿವು.

ದಣ್ಣಾಯಕ = ದಣಾಯಕ.

ದತ್ತ ೧. = ದತ್ತಿ. ೨. ದತ್ತಾತ್ರೇಯ. (ಗು). ೩. ಕೊಡಲ್ಪಟ್ಟ ; ದಾನಮಾಡಿದ. ~ಅಪಹಾರ = ಕೊಟ್ಟದ್ದನ್ನು ಕಸಿದು ಕೊಳ್ಳುವುದು.

ದತ್ತಕ = ದತ್ತುಪುತ್ರ.

ದತ್ತಿ (ನಾ). ದಾನ ; ಕೊಡುಗೆ.

ದತ್ತು (ನಾ). ಕೊಡಲ್ಪಟ್ಟುದು. ~ಪುತ್ರ = ಅಪುತ್ರಕರಾದ ದಂಪತಿಗಳಿಂದ ಸ್ವೀಕರಿಸಲ್ಪಟ್ಟ ಹುಡುಗ ; ಕೊಳ್ಳುಗ. ~ಸ್ವೀಕಾರ = ಉತ್ತರಾಧಿಕಾರಿಯಾಗಿ ಹುಡುಗನನ್ನು ಸ್ವೀಕರಿಸುವುದು.

ದತ್ತೂರ (ನಾ). ಉಮ್ಮತ್ತದ ಗಿಡ ; ಮದ್ದು ಗುಣಿಕೆ.

ದತ್ತೂರಿ = ದತ್ತೂರ.

ದದ್ದರ (ನಾ). ಗಲಭೆ.

ದದ್ದರಿಸು (ಕ್ರಿ). ಚರ್ಮದ ಮೇಲೆ ಗಂದೆ ಏಳು.

ದದ್ದು (ನಾ). ೧. ಬಿರುಕು ; ಸೀಳು. ೨. = ತದ್ದು.

ದಧಿ (ನಾ). ಮೊಸರು. ~ಮಂಥ = ಕಡೆದ ಮೊಸರು ; ಮಜ್ಜಿಗೆ. ~ಸಾರ = ಬೆಣ್ಣೆ.

ದನ (ನಾ). ೧. ಧನ ; ಸಂಪತ್ತು. ೨. ಪಶು ; ಜಾನುವಾರು. ~ಕಾ(ಗಾ)ಹಿ=ದನಗಳನ್ನು ಕಾಯುವವನು ; ಗೋಪಾಲ.

ದನಿ (ನಾ). ಧ್ವನಿ ; ಸ್ವರ. ~ಕು(ಗು)ಡು =೧. ಧ್ವನಿಮಾಡು ; ಶಬ್ದಮಾಡು. ೨. ಪ್ರತಿಧ್ವನಿ ಮಾಡು. ~ಕೂ(ಗೂ)ಡಿಸು = ಧ್ವನಿಯನ್ನು ಸೇರಿಸು ; ಅನುಮೋದಿಸು.

ದನುಜ (ನಾ). ದೈತ್ಯ ; ರಾಕ್ಷಸ. ~ಅರಿ = ರಾಕ್ಷಸರ ವೈರಿ ; ವಿಷ್ಣು. ~ಇಂದ್ರ = ರಾಕ್ಷಸರ ಒಡೆಯ.

ದಪ್ಪ (ನಾ). ೧. ಗಡುತರವಾದುದು. ೨. ಮಂದವಾಗಿರುವಿಕೆ. ೩. ದರ್ಪ ; ಠೀವಿ. (ಗು). ೪. ಮಂದವಾದ;

ದಪ್ಪಕ = ದರ್ಪಕ.

ದಪ್ಪಗ = ದರ್ಪಕ.

ದಫನ್(ನು) (ನಾ). ಅಂತ್ಯಕ್ರಿಯೆ ; ಶವ ಸಂಸ್ಕಾರ.

ದಫೇದಾರ (ನಾ). ಒಬ್ಬ ಪೋಲೀಸು ಅಧಿಕಾರಿ.

ದಫ್ತರ (ನಾ). ದಾಖಲೆಗಳ ಕಟ್ಟು.

ದಬದಬೆ (ನಾ). ಜಲಪಾತ ; ತಡಸಲು.

ದಬರಿ = ಡಬರಿ.

ದಬಾಯಿಸು (ಕ್ರಿ). ೧. ನೂಕು ; ತಳ್ಳು. ೨. ಗದರಿಸು ; ಹೆದರಿಸು.

ದಬ್ಬಣ (ನಾ). ದಪ್ಪವಾದ ಸೂಜಿ.

ದಬ್ಬಳ = ದಬ್ಬಣ.

ದಬ್ಬು (ಕ್ರಿ). ನೂಕು ; ತಳ್ಳು. ~ಆಳಿಕೆ = ದೌರ್ಜನ್ಯದ ಆಳ್ವಿಕೆ.

ದಬ್ಬುದಲೆ (ನಾ). ೧. ನಡುಕ ; ಕಂಪನ. ೨. ಚಿಂತೆ ; ಕಳವಳ.

ದಬ್ಬುಳಿ (ನಾ). ತೆಳ್ಳಗಿನ ಉಣ್ಣೆಯ ವಸ್ತ್ರ ; ದಾವಳಿ.

ದಬ್ಬೆ (ನಾ). ಬಿದಿರಿನ ಪಟ್ಟೆ, –ಸೀಳು.

ದಮ ೧. = ದಮನ. ೨. ಇಂದ್ರಿಯನಿಗ್ರಹ.

ದಮುಡಿ (ನಾ). ೧. ಒಂದು ವಾದ್ಯ ವಿಶೇಷ. ೨. = ದಮ್ಮಡಿ.

ದಮನ (ನಾ). ೧. ಹತೋಟಿ; ಅಂಕೆ. ೨. ಶಿಕ್ಷೆ; ದಂಡ.

ದಮಾಸು (ನಾ). ಒಂದು ಬಗೆಯ ರೇಷ್ಮೆಬಟ್ಟೆ.

ದಮೆ (ನಾ). ಇಂದ್ರಿಯನಿಗ್ರಹ ; ಜಿತೇಂದ್ರಿಯತ್ವ.

ದಮ್ಮ = ಧರ್ಮ.

ದಮ್ಮಡಿ (ನಾ). ಒಂದು ಬಿಡಿಕಾಸು ; ದುಗ್ಗಾಣಿ.

ದಮ್ಮಣಿ (ನಾ). ಧರ್ಮಾರ್ಥವಾಗಿ ಪಾನೀಯಗಳನ್ನು ಕೊಡುವ ಸ್ಥಳ ; ಅರವಟ್ಟಿಗೆ.

ದಮ್ಮಸು (ನಾ). ೧. ನೆಲವನ್ನು ಘಟ್ಟಿಸಿ ಸಮಮಾಡುವುದು. ೨. ನೆಲವನ್ನು ಸಮಮಾಡುವ ಸಾಧನ.

ದಮ್ಮಾಣಿ = ದಮ್ಮಣಿ.

ದಮ್ಮು (ನಾ). ೧. ಉಸಿರು. ೨. ಮೇಲುಸಿರು ; ಏದುಸಿರು. ೩. ಧೈರ್ಯ ; ಕೆಚ್ಚು. ೪. ಗೂರಲುರೋಗ ; ಉಬ್ಬಸ. ೫. ಸಲ ; ಬಾರಿ. ~ಎಳೆ = ಮೇಲುಸಿರು ಬಿಡು. ~ಏರು = ಉಬ್ಬಸ ಹೆಚ್ಚಾಗು. ~ಹತ್ತು = ೧. (ಆಯಾಸದಿಂದ) ಏದುಸಿರು ಉಂಟಾಗು. ೨. ಉಬ್ಬಸ ರೋಗ ಬರು.

ದಮ್ಯ (ನಾ). ೧. ಹೋರಿ. (ಗು). ೨. ಪಳಗಿಸಲ್ಪಡುವ ; ನಿಗ್ರಹಿಸಲ್ಪಡುವ.

ದಯು = ದಯೆ. ~ಪಾಲಿಸು = ೧. ಕರುಣೆ ತೋರು ; ಕೃಪೆಮಾಡು. ೨. ಕೊಡು. ~ಮಾಡಿಸು = ೧. ಬರು. ೨. ಹೋಗು. ~ಮಾಡು = ೧. ಕರುಣಿಸು ; ಕೃಪೆತೋರು. ೨. ಬರು ; ಚಿತ್ತೈಸು. ೩. ಹೋಗು.

ದಯಾಲು(ಳು) (ನಾ). ೧. ದಯೆಯುಳ್ಳವನು; ಕರುಣಿ. (ಗು). ೨. ಕನಿಕರ ಸ್ವಭಾವದ ; ದಯೆಯಿಂದ ಕೂಡಿದ.

ದಯಿತೆ (ನಾ). ಪ್ರೀತಿಯುಳ್ಳವಳು ; ನಲ್ಲೆ.

ದಯೆ (ನಾ). ಕರುಣೆ ; ಕೃಪೆ. ~ಕೆ(ಗೆ)ಯ್ = ಕರುಣೆಯನ್ನು ತೋರು.

ದರ (ನಾ). ೧. ಕುಳಿ ; ಹಳ್ಳ. ೨. ಭಯ ; ಆತಂಕ. ೩. ಬೆಲೆ ; ಧಾರಣೆ. ೪. ಶಂಖ. ೫. ಕೊಂಚ; ಸ್ವಲ್ಪ. ~ಹಸಿತ = ೧. ಮಂದಹಾಸ; ಮುಗುಳುನಗೆ. ೨. ಮುಗುಳುನಗೆಯಿಂದ ಕೂಡಿದ.

ದರಕಾರ (ನಾ). ೧. ಗಮನ ; ಲಕ್ಷ್ಯ. ೨. ಚಿಂತೆ ; ಕಾಳಜಿ.

ದರಕು (ನಾ). ದೊರಗು ; ತರಕಲು.

ದರಖಾಸ್ತು (ನಾ). ಬೇಡಿಕೆಯ ಪತ್ರ; ಅರ್ಜಿ.

ದರಗ (ನಾ). ಮುಸಲ್ಮಾನ ಸಂತರ ಗೋರಿ; – ಪ್ರಾರ್ಥನಾಸ್ಥಳ.

ದರದು (ನಾ). ೧. ಗೊಡವೆ ; ತಂಟೆ. ೨. ಅವಸರ ; ಅಗತ್ಯ ; ಜರೂರು. ೩. ನೋವು ; ದುಃಖ.

ದರದುರ (ನಾ). ೧. ಸಂಶಯ ; ಶಂಕೆ. ೨. ಸಂಭ್ರಮ ; ಸಡಗರ.

ದರಬೇಸಿ = ದರವೇಶಿ.

ದರವೇಶಿ (ನಾ). ೧. ಭಿಕ್ಷುಕ. ೨. ದಿಕ್ಕಿಲ್ಲದವನು ; ಅನಾಥ.

ದರಿ (ನಾ). ೧. ಗವಿ ; ಗುಹೆ. ೨. ಕೊರಕಲು ; ಕಣಿವೆ.

ದರಿದ್ರ (ನಾ). ೧. ದಾರಿದ್ರ್ಯ ; ಬಡತನ. ೨. ಬಡವ ; ನಿರ್ಗತಿಕ. (ಗು). ೩. ಬಡತನವುಳ್ಳ. ೪. ಹೀನವಾದ ; ಕೀಳಾದ.

ದರುಶನ = ದರ್ಶನ.

ದರೆ = ಧರೆ.

ದರೋಗ (ನಾ). ಸರಕಾರದ ಒಬ್ಬ ಅಧಿಕಾರಿ.

ದರೋಡೆ (ನಾ). ಲೂಟಿ ; ಸುಲಿಗೆ.

ದರ್ಕು (ನಾ). ಶೂಲದ ಮೊನೆ.

ದರ್ಜಿ (ನಾ). ಬಟ್ಟೆ ಹೊಲಿಯುವವನು ; ಸಿಂಪಿಗ.

ದರ್ಜೆ (ನಾ). ೧. ಮಟ್ಟ ; ಸ್ಥಾನ. ೨. ತರಗತಿ ; ಇಯತ್ತೆ ; ವರ್ಗ.

ದರ್ದುರ (ನಾ). ಕಪ್ಪೆ.

ದರ್ಪ (ನಾ). ೧. ಹೆಮ್ಮೆ ; ಸೊಕ್ಕು. ೨. ಠೀವಿ ; ಗಾಂಭೀರ್ಯ.

ದರ್ಪಕ (ನಾ). ಕಾಮ ; ಮನ್ಮಥ.
ದರ್ಪಣ (ನಾ). ಕನ್ನಡಿ.
ದರ್ಬಾರು (ನಾ). ೧. ಒಡ್ಡೋಲಗ ; ಆಸ್ಥಾನ. ೨. ಅಧಿಕಾರ ನಡಸುವಿಕೆ. ೩. ಠೀವಿ ; ವೈಭವ.
ದರ್ಭೆ (ನಾ). ಒಂದು ಜಾತಿಯ ಹುಲ್ಲು; ಕುಶ.
ದರ್ವಿ (ನಾ). ೧. ಸಟ್ಟುಗ ; ಸೌಟು. ೨. ಹಾವಿನ ಹೆಡೆ.
ದರ್ವೀಕರ (ನಾ). ಹೆಡೆಯುಳ್ಳುದು ; ಹಾವು.
ದರ್ಶ (ನಾ). ೧. ನೋಟ ; ಕಾಣ್ಕೆ. ೨. ಅಮಾವಾಸ್ಯೆ.
ದರ್ಶಕ (ನಾ). ೧. ನೋಟ ; ಪ್ರದರ್ಶನ. ೨. ನೋಡುವವನು ; ಪ್ರೇಕ್ಷಕ. ೩. ದ್ವಾರಪಾಲಕ. ೪. ನಿಪುಣ ; ಬಲ್ಲಿದ. ೫. ಮಾರ್ಗವನ್ನು ತೋರಿಸುವವನು ; ಮಾರ್ಗದರ್ಶಿ.
ದರ್ಶನ (ನಾ). ೧. ನೋಡುವುದು ; ಅವಲೋಕನ. ೨. ಪರೀಕ್ಷಿಸಿ ನೋಡುವುದು. ೩. ಭೇಟಿ; ಸಂದರ್ಶನ. ೪. ಕಾಣ್ಕೆ ; ನೋಟ. ೫. ವೈಶೇಷಿಕ, ನ್ಯಾಯ, ವೇದಾಂತ, ಸಾಂಖ್ಯ, ಯೋಗ ಮತ್ತು ಮೀಮಾಂಸೆಗಳೆಂಬ ಆರು ತತ್ತ್ವಶಾಸ್ತ್ರಗಳು.
ದಲ (ನಾ). ೧. ಎಸಳು ; ರೇಕು. ೨. ಪಡೆ ; ಸೇನೆ. ೩. ಎಲೆ ; ಪರ್ಣ. ೪. ತುಂಡು ; ಚೂರು. ೫. ರಾಶಿ. ೬. ಮಿಶ್ರಲೋಹ. ~ಏ(ವೇ)ಱು(ರು) = ೧. ಉತ್ಸಾಹಗೊಳ್ಳು ; ಹಿಗ್ಗು. ೨. ಎಸಳೊಡೆ ; ಚಿಗುರೊಡೆ. ೩. ವೃದ್ಧಿಯಾಗು.
ದಲಾ(ಳಾ)ಲ(ಳ) (ನಾ). ವಟ್ಟಾ ತೆಗೆದುಕೊಂಡು ಮಾಲಿಗೆ ಗಿರಾಕಿ ಒದಗಿಸುವವನು ; ಮಧ್ಯವರ್ತಿ.
ದಲಿ(ಳಿ)ತ (ಗು). ೧. ಅರಳಿಸಲ್ಪಟ್ಟ. ೨. ಸೀಳಲ್ಪಟ್ಟ. ೩. ಹಿಂಸೆಗೆ ಒಳಗಾದ.
ದಲ್ಲಾಳಿ (ನಾ). ೧. ದಲಾಲನಿಗೆ ಕೊಡತಕ್ಕ ಹಣ ; ವಟ್ಟಾ. ೨. = ದಲಾಲ.
ದವ = ದಾವ.
ದವಡ (ನಾ). ಕೆಟ್ಟವನು ; ದುಷ್ಟ.
ದವಡೆ (ನಾ). ಆಹಾರವನ್ನು ಅಗಿಯುವ ಭಾಗ; ಅವುಡು.
ದವನ (ನಾ). ಸುವಾಸನೆಯ ಒಂದು ಗಿಡ ; ಹಬ್ಬದ ಹೂವು.
ದವಸ (ನಾ). ಕಾಳು ; ಧಾನ್ಯ.
ದವಳ = ಧವಳ. ~ಆಗಾರ = ಸುಣ್ಣವನ್ನು ಬಳಿದ ಮನೆ.
ದವಳಾರ = ದವಳಾಗಾರ.
ದವಾ (ನಾ). ಮದ್ದು ; ಔಷಧ. ~ಖಾನೆ = ಚಿಕಿತ್ಸಾಲಯ ; ಆಸ್ಪತ್ರೆ.
ದವುಡು = ದೌಡು.
ದಶ (ನಾ). ಒಂದು ಸಂಖ್ಯೆ; ಹತ್ತು. ~ಅಂಗ = ೧. ಹತ್ತು ಅವಯವಗಳು. ೨. ಒಂದು ವಿಧವಾದ ಧೂಪ. ~ಅವತಾರ=ವಿಷ್ಣುವಿನ ಹತ್ತು ಅವತಾರಗಳು. ~ಕಂಠ = ಹತ್ತು ತಲೆಗಳುಳ್ಳವನು ; ರಾವಣ.
ದಶಕ (ನಾ). ೧. ಹತ್ತರ ಗುಂಪು. ೨. ಹತ್ತು ವರ್ಷಗಳ ಅವಧಿ.
ದಶನ (ನಾ). ೧. ಹಲ್ಲು ; ದಂತ. ೨. ಕಡಿಯುವಿಕೆ ; ಕಚ್ಚುವಿಕೆ. ~ವಸನ = ತುಟಿ; ಅಧರ.
ದಶಮ (ಗು). ಹತ್ತನೆಯ. ~ಅಂಶ = ಹತ್ತನೆಯ ಒಂದು ಭಾಗ.
ದಶಮಿ (ನಾ). ೧. ಪಕ್ಷದ ಹತ್ತನೆಯ ದಿವಸ. ೨. ಹಾಲನ್ನು ಬೆರಸಿ ಮಾಡಿದ ಚಪಾತಿ. ೩. ತೊಂಬತ್ತರಿಂದ ನೂರರವರೆಗಿನ ವಯಸ್ಸು.
ದಶೆ (ನಾ). ೧. ಸ್ಥಿತಿ ; ಅವಸ್ಥೆ. ೨. ದೀಪದ ಬತ್ತಿ. ೩. ಅಂಚು ; ಸೆರಗು ; ಕರೆ. ೪. ಕಾಲ ; ಅವಧಿ. ೫. ಅದೃಷ್ಟ ; ದೈವ. ೬. ಬಿಲ್ಲಿನ ಹಗ್ಗ ; ಹೆದೆ. ೭. ಬಾಣ ; ಶರ.

ದಷ್ಟ (ನಾ). ೧. ಕಡಿತ; ಕಚ್ಚುವಿಕೆ. ೨. ಕಚ್ಚಲ್ಪಟ್ಟವನು. (ಗು). ೩. ಕಚ್ಚಲ್ಪಟ್ಟ; ಕಡಿಯಲ್ಪಟ್ಟ.

ದಷ್ಟಪುಷ್ಟ (ನಾ). ಕಟ್ಟುಮಸ್ತಾದ ದೇಹವುಳ್ಳವನು; ದೃಢಕಾಯ.

ದಸಕತ್ತು (ನಾ). ಸಹಿ; ರುಜು.

ದಸಕು (ನಾ). ಹೊಟ್ಟು; ಉಮ್ಮಿ.

ದಸರ (ನಾ). ೧. ನವರಾತ್ರಿಯಾದ ಮಾರನೆಯ ದಿನದ ಹಬ್ಬ; ವಿಜಯದಶಮಿ. ೨. ನವರಾತ್ರಿ ಹಬ್ಬ.

ದಸರಿ (ನಾ). ರೇಷ್ಮೆಬಟ್ಟೆ.

ದಸರೆ = ದಸರ.

ದಸಿ (ನಾ). ಚೂಪಾದ ಗೂಟ, –ಬೆಣೆ.

ದಸಿಕು (ನಾ). ಮೊಳೆ.

ದಸೆ (ನಾ). ೧. ಅವಸ್ಥೆ; ಸ್ಥಿತಿ. ೨. ಅದೃಷ್ಟ; ಸುದೈವ. ೩. ದಿಕ್ಕು.

ದಸ್ತಗಿರಿ (ನಾ). ಬಂಧನ; ಕೈಸೆರೆ.

ದಸ್ತಾವೇಜು (ನಾ). ದಾಖಲೆಪತ್ರ; ದಫ್ತರ.

ದಸ್ತು (ನಾ). ಇಪ್ಪತ್ತುನಾಲ್ಕು ಹಾಳೆ ಅಥವಾ ಕಾಗದಗಳ ಕಟ್ಟು.

ದಸ್ತೂರ(ನಾ). ೧. ರೀತಿ; ಪದ್ಧತಿ. ೨. ತೆರಿಗೆ; ಸುಂಕ. ೩. ಬರೆವಣಿಗೆ; ಬಿಕ್ಕಲಂ.

ದಸ್ಯು (ನಾ). ೧. ಕಳ್ಳ; ತುಡುಗ. ೨. ಶತ್ರು; ವೈರಿ.

ದಸ್ರ (ನಾ). ಅಶ್ವಿನಿ ದೇವತೆಗಳು; ಯಮಳರು.

ದಹನ (ನಾ). ೧. ಬೆಂಕಿ; ಅಗ್ನಿ. ೨. ಸುಡುವಿಕೆ; ಉರಿಯುವಿಕೆ. ~ಅರ್ಚಿ= ಬೆಂಕಿಯ ಜ್ವಾಲೆ. ~ಉಪಲ = ಸೂರ್ಯಕಾಂತ ಶಿಲೆ.

ದಹಿಸು (ಕ್ರಿ). ದಹನಮಾಡು; ಸುಡು.

ದಹ್ಯ (ಗು). ಸುಡುವ.

ದಳ ೧. = ದಲ. ೨. ದಟ್ಟಣೆ; ನಿಬಿಡತೆ.

ದಳದುಳಿ = ದಳದುಳ.

ದಳಿ (ಕ್ರಿ). ೧. ಹೊಲಿದು ಕೂಡಿಸು. (ನಾ). ೨. ತಟ್ಟಿಯ ಗೋಡೆ. ೩. ದನಗಳ ಕಾಲುಗಳನ್ನು ಕಟ್ಟುವ ಹಗ್ಗ.

ದಳಿಂಬ = ದಣಿಂಬ.

ದಳಿಗೆ (ನಾ). ಹೊಲಿಗೆ.

ದಳಿಪ = ದಣಿಂಬ.

ದಳೆ (ಕ್ರಿ). ೧. ಹೊಲಿದು ಕೂಡಿಸು. ೨. ವ್ಯಾಪಿಸು; ಹರಡು. ೩. ಹೆಚ್ಚಾಗು; ವಿಪುಲವಾಗು.

ದಳ್ಳಿಸು (ಕ್ರಿ). ೧. ರಭಸದಿಂದ ಉರಿ; ಜ್ವಲಿಸು. ೨. ಹಬ್ಬು; ಹರಡು. ೩. ಹೆಚ್ಚಾಗು; ಅಧಿಕವಾಗು.

ದಳ್ಳುರಿ (ನಾ). ದೊಡ್ಡ ಉರಿ.

ದಳ(ಳ) (ನಾ). ಸೈನ್ಯ; ಪಡೆ. ~ಪತಿ = ಸೈನ್ಯದ ಯಜಮಾನ; ಸೈನ್ಯಾಧಿಪತಿ.

ದಳ(ಳ)ದುಳ(ಳ) (ನಾ). ಬಲವಾದ ಸೂರೆ, –ಕೊಳ್ಳೆ. ~ಇಸು = ೧. ಸೂರೆಮಾಡು; ಕೊಳ್ಳೆಹೊಡೆ. ೨. ಕ್ಷೋಭೆಗೊಳ್ಳು; ಗೊಂದಲಗೊಳ್ಳು. ~ಕಾ(ಗಾ)ಅ(ರ) = ಕೊಳ್ಳೆಹೊಡೆಯುವವನು; ಸೂರೆಗಾರ.

ದಳ(ಳ)ವಾಯ್ = ದಳಪತಿ.

ದಳ(ಳ)ವಾಯಿ = ದಳಪತಿ.

ದಳ್ದ(ಳ್ದ)ಳಿ(ಳಿ) (ನಾ). ಬೇಡಿ; ಸಂಕೋಲೆ.

ದಾಂಗುಡಿ (ನಾ). ಉದ್ದವಾದ ಕುಡಿ. ~ಬಿ(ಖ)ಡು = ಅಧಿಕವಾಗಿ ಹಬ್ಬು; ಉದ್ದವಾಗಿ ಕುಡಿಚಾಚು.

ದಾ(ಂ)ಟು (ಕ್ರಿ). ೧. ಹಾರು; ನೆಗೆ. ೨. ಮೀರು; ಉಲ್ಲಂಘಿಸು. ೩. ಹಾಯು; ಎದುರು ದಡವನ್ನು ಸೇರು.(ನಾ).೪.ನೆಗೆತ; ಹಾರುವುದು.

ದಾಂಡಿಗ (ನಾ). ೧. ಸ್ಥೂಲಕಾಯದ ಮನುಷ್ಯ; ಗಟ್ಟಿಮುಟ್ಟಾದವನು; ದಡಿಗ. ೨. ಅಸಂಸ್ಕೃತ; ಒರಟ.

ದಾಂತಿ (ನಾ). ನಿಗ್ರಹ; ಸಂಯಮ.

ದಾಂದಲೆ (ನಾ). ಗಲಾಟೆ ; ಗೊಂದಲ.

ದಾಂಪತ್ಯ (ನಾ). ೧. ಗಂಡಹೆಂಡಿರಾಗಿರುವಿಕೆ. ೨. ಗಂಡಹೆಂಡಿರ ಜೀವನ, –ಬಾಳು.

ದಾಂಭಿಕ = ಡಾಂಬಿಕ.

ದಾಕು (ನಾ). ದೇನಿ ಹಾಕಿಸುವುದು ; ಮದ್ದು ಚುಚ್ಚುವುದು. ~ದಾರ = ದೇವಿ ಹಾಕುವವನು.

ದಾಕ್ಷಿಣಾತ್ಯ (ನಾ). ೧. ದಕ್ಷಿಣದೇಶದವನು. (ಗು). ೨. ದಕ್ಷಿಣದೇಶಕ್ಕೆ ಸಂಬಂಧಿಸಿದ.

ದಾಕ್ಷಿಣ್ಯ (ನಾ). ೧.ಪ್ರಾಮಾಣಿಕತೆ; ಒಳ್ಳೆಯತನ. ೨.ಸಂಕೋಚ; ಭಿಡೆಯು. ೩.ಹಂಗು. ~ಕಾ(ಗಾ)ರ = ಸಂಕೋಚಪಟ್ಟುಕೊಳ್ಳುವವನು.

ದಾಖಲ್(ಲು) (ನಾ). ೧.ಬಂದು ಸೇರುವಿಕೆ ; ಹಾಜರಿ. ೨. = ದಾಖಲೆ.

ದಾಖಲೆ (ನಾ). ಆಧಾರವಾದ ಕಾಗದಪತ್ರ ; ದಸ್ತೈವಜು.

ದಾಗೀನು (ನಾ). ಒಡವೆ ; ಆಭರಣ.

ದಾಘ (ನಾ). ತಾಪ ; ಬೇಗೆ.

ದಾಡಿ (ನಾ). ೧. ಗಡ್ಡ. ೨. ಅನಾನುಕೂಲ ; ತೊಂದರೆ.

ದಾಡಿಮ (ನಾ). ಒಂದು ಜಾತಿಯ ಗಿಡ ಮತ್ತು ಅದರ ಹಣ್ಣು ; ದಾಳಿಂಬೆ.

ದಾಡೆ (ನಾ). ಕೋರೆಹಲ್ಲು ; ದಂತ ; ದಂಷ್ಟ್ರ.

ದಾಣೆ (ನಾ). ೧. ಒಂದು ಬಗೆಯ ಖಾದ್ಯ; ಕಾಲಾಶೇವು; ಖಾರ ಸೇವಿಗೆ. ೨. ಹಗ್ಗ ; ಕಣ್ಣಿ.

ದಾತ ೧. = ದಾತಾರ. (ಗು). ೨. ಕೊಯ್ದು ; ಕತ್ತರಿಸಲ್ಪಟ್ಟ.

ದಾತಾರ (ನಾ). ೧. ದಾನಿ; ಉದಾರಿ. ೨. ಯಜಮಾನ ; ಒಡೆಯ.

ದಾತೃ = ದಾತಾರ.

ದಾತ್ಯೂಹ (ನಾ). ಒಂದು ಜಾತಿಯ ಜಲಪಕ್ಷಿ.

ದಾತ್ರ (ನಾ). ಕುಡುಗೋಲು ; ಕಡಿಗತ್ತಿ.

ದಾದಿ (ನಾ). ೧. ದಾಸಿ ; ಸೇವಕಿ. ೨ ಸಾಕುತಾಯಿ.

ದಾದು (ನಾ). ೧. ಸುದ್ದಿ ; ಸಮಾಚಾರ. ೨. ಮುತ್ತುವರ್ಜಿ ; ಮೇಲ್ವಿಚಾರಣೆ. ೩. = ದರದು.

ದಾನ (ನಾ). ೧. ಕೊಡುಗೆ; ಕೊಡುವಿಕೆ ೨. ಕತ್ತರಿಸುವಿಕೆ. ೩. ಆನೆಯ ಮದೋದಕ. ೪. ಚತುರೋಪಾಯಗಳಲ್ಲಿ ಒಂದು.

ದಾನವ (ನಾ). ದೈತ್ಯ ; ರಾಕ್ಷಸ.

ದಾನಿ (ನಾ). ೧. ದಾನಮಾಡುವವನು ; ಉದಾರಿ. ೨. ಕರಂಡಕ. ೩. ಹಲಸಿನ ಬೀಜ.

ದಾಪು (ನಾ). ೧. ದೊಡ್ಡ ಹೆಜ್ಜೆ; ದಾಟುಗಾಲು. (ಗು). ೨. ಪಳಗಿದ ; ಅಂಕೆಗೆ ಒಳಪಟ್ಟ.

ದಾಮ (ನಾ). ೧. ಹಗ್ಗ ; ರಜ್ಜು. ೨. ಡಾಬು ; ನಡುಪಟ್ಟಿ. ೩. ಹಾರ ; ಸರ. ~ಉದರ = ಕೃಷ್ಣ.

ದಾಮನಿ (ನಾ). ದನಗಳನ್ನು ಕಟ್ಟುವ ಹಗ್ಗ.

ದಾಮಾಶಯ (ನಾ). ಪಾಲು ; ಅಂಶ.

ದಾಮಾಷಾ = ದಾಮಾಶಯ.

ದಾಯ (ನಾ). ೧. ಪಗಡೆಯಾಟದಲ್ಲಿ ದಾಳಗಳನ್ನು ಎಸೆಯುವುದು, –ಹಾಕುವುದು. ೨. ಸಮಯ ; ಸಂದರ್ಭ. ೩. ಆಸ್ತಿ ; ಸಂಪತ್ತು. ೪. ಉಡುಗೊರೆ ; ಸಂಭಾವನೆ. ೫. ಪಾಲು ; ಹಿಸ್ಸೆ. ೬. ಕಾಡು ; ಅಡವಿ. ~ಇಗ = ದಾಯಾದಿ. ~ಭಾಗ = ಪಿತ್ರಾರ್ಜಿತವಾಗಿ ಬಂದ ಆಸ್ತಿಯನ್ನು ಹಂಚಿಕೊಳ್ಳುವುದು.

ದಾಯಕ (ನಾ). ೧. ಕೊಡುವುದು. ೨. ಕೊಡುವವನು ; ದಾನಿ.

ದಾಯಾದ = ದಾಯಾದಿ.

ದಾಯಾದಿ (ನಾ). ೧. ಆಸ್ತಿಯಲ್ಲಿ ಭಾಗವನ್ನು ಪಡೆಯುವವನು. ೨. ಜ್ಞಾತಿ; ರಕ್ತಸಂಬಂಧಿ.

ದಾಯಿ = ದಾದಿ.

ದಾರ (ನಾ) ೧. ನೂಲು ; ಎಳೆ. ೨. ಹೆಂಡತಿ; ಪತ್ನಿ. ೩. ಉತ್ತ ಭೂಮಿ. ೪. ಬಾಗಿಲು ; ದ್ವಾರ. (ಪ್ರ). ೫. ಒಂದು ತದ್ಧಿತ ಪ್ರತ್ಯಯ. ~ಪ(ವ)ಟ್ಟ = ೧. ಅಗಸೆ ; ಹೆಬ್ಬಾಗಿಲು. ೨. ಹೊಸ್ತಿಲು. ೩. = ದಾರಂದ.

ದಾರಂದ (ನಾ). ಬಾಗಿಲಿನ ಚೌಕಟ್ಟು ; ದ್ವಾರ ಬಂಧ

ದಾರಕ (ನಾ). ೧. ಸಣ್ಣ ಹುಡುಗ ; ಬಾಲಕ. (ಗು). ೨. ಮುರಿಯುವ ; ತುಂಡರಿಸುವ.

ದಾರಣ (ನಾ). ಸೀಳುವಿಕೆ ; ಒಡೆಯುವಿಕೆ.

ದಾರವಂದ = ದಾರಂದ.

ದಾರಿ (ನಾ). ಹಾದಿ ; ಮಾರ್ಗ. ~ಕಟ್ಟು = ನಿರ್ಬಂಧಿಸು; ಅಡ್ಡಿಪಡಿಸು. ~ತೆ(ದೆ)ಗೆ = ಹೊರಡು ; ಮುಂದುವರಿ. ~ತೊ(ದೊ)ೞು(ರು) = ಮಾರ್ಗದರ್ಶನ ಮಾಡು. ~ಪೊ(ವೊ)ೞಕ = ೧. ಪ್ರಯಾಣಿಕ. ೨. ಅಲೆಮಾರಿ ; ತಿರುಗಾಡುವವನು.

ದಾರಿಗ (ನಾ). ಪ್ರಯಾಣಿಕ ; ದಾರಿಹೋಕ.

ದಾರಿದ್ರ್ಯ (ನಾ). ಬಡತನ ; ಕಂಗಾಲುಸ್ಥಿತಿ.

ದಾರು (ನಾ). ೧. ಕಟ್ಟಿಗೆ ; ಸೌದೆ. ೨. ದೇವದಾರು ಮರ. ~ಕರ್ಮ = ಮರಗೆಲಸ. ~ಹಸ್ತಕ = ಮರದ ಸೌಟು.

ದಾರುಕ (ನಾ). ರಥವನ್ನು ನಡಸುವವನು.

ದಾರುಣ (ನಾ). ೧. ಹಿಂಸೆ ; ಕ್ರೌರ್ಯ. (ಗು). ೨. ಕ್ರೂರವಾದ ; ಉಗ್ರವಾದ ; ಕಠಿನವಾದ.

ದಾರೆ = ಧಾರೆ.

ದಾರ್ಢ್ಯ (ನಾ). ದೃಢತೆ; ಗಟ್ಟಿತನ ; ಕಸುವು.

ದಾರ್ಶನಿಕ (ನಾ). ತತ್ತ್ವಜ್ಞಾನಿ.

ದಾಲ (ನಾ). ಒಂದು ಬಗೆಯ ಕಾಡುಜೇನು.

ದಾಲಚಿನ್ನಿ (ನಾ). ಒಂದು ಬಗೆಯ ಸಾಂಬಾರ ವಸ್ತು ; ಸುವಾಸನೆಯಿಂದ ಕೂಡಿದ ಒಂದು ಬಗೆಯ ಮರದ ತೊಗಟೆ ; ಚೆಕ್ಕೆ.

ದಾವ (ನಾ). ೧. ಅಡವಿ; ಕಾಡು. ೨. ಕಾಡುಕಿಚ್ಚು ; ಕಾಳ್ಗಿಚ್ಚು.

ದಾವಣಿ ೧. = ದಾಮನಿ. ೨. (ಹೆಣ್ಣುಮಕ್ಕಳ) ಮೇಲುಹೊದಿಕೆ ; ಸೆರಗು. ೩. ಗುಂಪು ; ಸಮೂಹ.

ದಾವತಿ = ಧಾವತಿ.

ದಾವರ (ನಾ). ೧. ನೀರಡಿಕೆ ; ಬಾಯಾರಿಕೆ. ೨. ಆಸೆ ; ಬಯಕೆ.

ದಾವಳಿ = ದಬ್ಬಾಳಿ.

ದಾವಾ (ನಾ). ಮೊಕದ್ದಮೆ ; ಖಟ್ಲೆ.

ದಾವು ೧. = ದಾವರ. ೨. ಹಗ್ಗ ; ಕಣ್ಣಿ.

ದಾವೆ (ನಾ). ೧. ಹಗ್ಗ. ೨. = ದಾವಾ.

ದಾಶ = ದಾಸ.

ದಾರ್ಷ್ಟೀಕ (ನಾ). ೧. ದಿಟ್ಟತನ ; ಧಾರ್ಷ್ಟ್ಯ. ೨. ಧೈರ್ಯ ಮತ್ತು ಪ್ರಭಾವವುಳ್ಳವನು.

ದಾಸ (ನಾ). ೧. ಆಳು ; ಸೇವಕ. ೨. ದಾಸಪಂಥದವನು; ಹರಿಭಕ್ತ. ೩. ಜಲಗಾರ ; ಬೆಸ್ತ. ~ಅನುದಾಸ = ಸೇವಕರ ಸೇವಕ. ~ಕೂಟ = ಹರಿದಾಸರ ಸಂಪ್ರದಾಯ, –ಪರಂಪರೆ.

ದಾಸಣ = ದಾಸವಾಳ.

ದಾಸವಾಳ (ನಾ). ಒಂದು ಬಗೆಯ ಗಿಡ ಮತ್ತು ಅದರ ಹೂವು ; ರುದ್ರಪುಷ್ಪ.

ದಾಸಿ (ನಾ). ಸೇವಕಿ ; ತೊತ್ತು.

ದಾಸೇರಕ (ನಾ). ೧. ಸೇವಕಿಯ ಮಗ. ೨. ಒಂಟೆ.

ದಾಸೋಹ (ನಾ). ೧. ಸೇವಾವೃತ್ತಿ; ಕಿಂಕರತೆ. ೨. ಭಕ್ತ. ೩. ಶಿವಭಕ್ತರಿಗೆ ಮಾಡುವ ಆರೋಗಣೆ.

ದಾಸ್ತಾನು (ನಾ). ಸಂಗ್ರಹ ; ಶೇಖರಣೆ.

ದಾಸ್ಯ (ನಾ). ಊಳಿಗ ; ಸೇವಾವೃತ್ತಿ ; ಅಧೀನತೆ.

ದಾಹ (ನಾ). ೧. ಸುಡುವಿಕೆ; ಉರಿಯುವಿಕೆ. ೨. = ದಾವರ.

ಡಾಳ (ನಾ). ಪಗಡೆಯಾಟದಲ್ಲಿ ಉಪಯೋಗಿಸುವ ಸಾಧನ; ಲೆತ್ತ. ~ಹಾಕು = ೧. ದಾಳವನ್ನು ಉರುಳಿಸು. ೨. ಪ್ರಯತ್ನಿಸು.

ದಾಳಿಂಬ = ದಾಡಿಮ.

ಡಾಬೀ(ಳಿ) (ನಾ). ಮುತ್ತಿಗೆ. ~ಕಿ(ಗಿ)ಚ್ಚು = ಹಬ್ಬುತ್ತಿರುವ ಬೆಂಕಿ.

ದಿಂಕು (ನಾ). ನೆಗೆತ; ಜಿಗಿತ. ~ಕೊ(ಗೊ)ಳ್(ಳ್ಳು) = ಕುಪ್ಪಳಿಸು; ಹಾರು.

ದಿಂಟೆ (ನಾ). ದಿಣ್ಣೆ; ತಿಟ್ಟು.

ದಿಂಟೆ = ದಿಂಟ.

ದಿಂಡ (ನಾ). ೧. ಒಂದು ಜಾತಿಯ ಮರ. ೨. ಅಟ್ಟೆ; ಮುಂಡ. ೩. ಉದ್ಧಟ; ಅಹಂಕಾರಿ.

ದಿಂಡಲ (ನಾ). ಒಂದು ಜಾತಿಯ ಮರ.

ದಿಂಡಿಗ = ದಿಂಡಲ.

ದಿಂಡು (ನಾ). ೧. ಗುಂಪು; ಸಮೂಹ. ೨. ಮರದ ತುಂಡು; ಬೆಡೆ. ೩. ಕಾಂಡ; ಬೊಡ್ಡೆ. ೪. ತಿರುಳು; ಕೆಚ್ಚು. ೫. ದಪ್ಪ; ಸ್ಥೂಲ. ೬. ಗರ್ವ; ಹೆಮ್ಮೆ. ೭. ಹೂವಿನ ದಂಡೆ. ೮. ಗಂಟು; ಮೂಟೆ; ಹೇರು. ~ಉರುಳು = ೧. ಮರದ ತುಂಡಿನಂತೆ ಬೀಳು. ೨. ಬಿದ್ದು ಹೊರಳು. ೩. ಒಂದು ಬಗೆಯ ದೇವರ ಸೇವೆ; ದೇವಸ್ಥಾನದ ಸುತ್ತಲೂ ಉರುಳಿಕೊಂಡು ಮಾಡುವ ಸೇವೆ. ~ಕೆ(ಗೆ)ಡೆ = ನಮಸ್ಕರಿಸು; ಅಡ್ಡ ಬೀಳು. ~ತ(ದ)ಱಿ(ರಿ)=೧. ಕಾಂಡವನ್ನು ಕತ್ತರಿಸು. ೨. ಗರ್ವವನ್ನು ನಾಶಮಾಡು. ~ಪಾ(ವಾ)ಯ್ = ನೇರವಾಗಿ ಹೋಗು.

ದಿಂಡೆ (ನಾ). ೧. ನೀಚಹೆಂಗಸು; ದುಷ್ಟೆ. ೨. ಅಟ್ಟೆ; ಕಬಂಧ.

ದಿಂಬು (ನಾ). ಒರಗು; ಲೋಡು.

ದಿಕ್ಕಾಪಾಲು (ಅ). ದಿಕ್ಕುದಿಕ್ಕಿಗೆ; ಸಿಕ್ಕಿದ ಕಡೆಗೆ.

ದಿಕ್ಕು (ನಾ). ೧. ದೆಸೆ. ೨. ಆಶ್ರಯ; ರಕ್ಷಣೆ. ~ಕೆ(ಗೆ)ಡು = ಆಶ್ರಯವನ್ನು ಕಳೆದುಕೊಳ್ಳು; ನೆಲೆ ಇಲ್ಲವಾಗು.

ದಿಕ್ತಟ (ನಾ). ದಿಗಂತ; ಕ್ಷಿತಿಜ.

ದಿಕ್ಪಾಲ (ನಾ). ದಿಕ್ಕಿನ ಅಧಿಪತಿ; ಇಂದ್ರ, ಯಮ ಮುಂತಾದವರು.

ದಿಕ್ಸೂಚಿ (ನಾ). ದಿಕ್ಕನ್ನು ಸೂಚಿಸುವ ಯಂತ್ರ; ಹೋಕಾಯಂತ್ರ.

ದಿಗಂತ = ದಿಕ್ತಟ.

ದಿಗಂಬರ (ನಾ). ೧. ದಿಕ್ಕುಗಳನ್ನೇ ಬಟ್ಟೆಯಾಗುಳ್ಳವನು; ಬೆತ್ತಲೆಯಾಗಿರುವವನು. ೨. ಶಿವ. ೩. ಜೈನ ಸಂನ್ಯಾಸಿ. ೪. ಜೈನರಲ್ಲಿ ಒಂದು ಪಂಥ. (ಗು). ೫. ಬೆತ್ತಲೆಯಾದ.

ದಿಗಡುದಿಮ್ಮಿ (ನಾ). ಯಾವ ಹತೋಟಿಯೂ ಇಲ್ಲದವಳು; ಸ್ವೇಚ್ಛಾಚಾರಿಣಿ.

ದಿಗಿಭ = ದಿಗ್ಗಜ.

ದಿಗಿಲ್(ಲು) (ನಾ). ೧. ಭಯ; ಅಂಜಿಕೆ. ೨. ದಿಙ್ಮೂಢತೆ; ವಿಸ್ಮಯ.

ದಿಗ್ಗಜ (ನಾ). ೧. ಆನೆ. ೨. ಎಂಟು ದಿಕ್ಕುಗಳಲ್ಲೂ ಭೂಮಿಯನ್ನು ಹೊತ್ತಿರುವುದೆಂದು ಭಾವಿಸಲಾದ ಆನೆ. ೩. ಮಹಾವಿದ್ವಾಂಸ. ೪. ಪರಾಕ್ರಮಿ.

ದಿಗ್ಗನೆ (ಅ). ಒಮ್ಮಿಂದೊಮ್ಮೆಲೆ; ಫಕ್ಕನೆ.

ದಿಗ್ದರ್ಶಕ (ನಾ). (ಚಲನಚಿತ್ರ, ನಾಟಕ ಮುಂತಾದುವುಗಳ) ಮಾರ್ಗದರ್ಶಕ; ನಿರ್ದೇಶಕ.

ದಿಗ್ದರ್ಶನ (ನಾ). ೧. ದಿಕ್ಕನ್ನು ತೋರಿಸುವಿಕೆ, -ಸೂಚಿಸುವಿಕೆ. ೨. ನಿರ್ದೇಶನ. ೩. ಸ್ಥೂಲವಾದ ಸೂಚನೆ.

ದಿಗ್ಧ (ನಾ). ೧. ವಿಷವನ್ನು ಲೇಪಿಸಿದ ಬಾಣ. (ಗು). ೨. ಬಳಿದ; ಸವರಿದ.

ದಿಗ್ಬಂಧನ (ನಾ). ಕೆಟ್ಟಶಕ್ತಿಗಳನ್ನು ತಡೆಯಲು ಮಂತ್ರದಿಂದ ಎಲ್ಲ ದಿಕ್ಕುಗಳಿಗೂ ಕಟ್ಟುಮಾಡುವುದು.

ದಿಗ್ಭ್ರಮೆ (ನಾ). ದಿಕ್ಕು ತೋರದಿರುವುದು ; ಗಾಬರಿ ; ಕಳವಳ.

ದಿಗ್ಭ್ರಾಂತಿ = ದಿಗ್ಭ್ರಮೆ.

ದಿಗ್ವಿಜಯ (ನಾ). ೧. ಎಲ್ಲರಾಜ್ಯಗಳನ್ನು ಜಯಿಸುವುದು. ೨. ಪ್ರತಿಸ್ಪರ್ಧಿಗಳನ್ನೆಲ್ಲ ಗೆಲ್ಲುವುದು.

ದಿಙ್ಮೂಢ (ನಾ). ದಿಕ್ಕುಗಳನ್ನು ತಿಳಿಯದವನು; ಕಂಗೆಟ್ಟವನು.

ದಿಟ (ನಾ). ನಿಜ ; ಸತ್ಯ.

ದಿಟ್ಟ (ನಾ). ೧. ಗಟ್ಟಿಗ ; ಬಲಶಾಲಿ. ೨. ಧೈರ್ಯಶಾಲಿ. (ಗು). ೩. ಧೈರ್ಯಶಾಲಿಯಾದ. ~ತನ=ಕೆಚ್ಚು ; ಧೈರ್ಯ.

ದಿಟ್ಟಿ (ನಾ). ೧. ನೋಟ ; ದೃಷ್ಟಿ. ೨. ಕೆಟ್ಟ ದೃಷ್ಟಿ; ಕಣ್ಣೆಂಜಲು. ~ಇಸು=ನೋಡು ; ದೃಷ್ಟಿಸು.

ದಿಟ್ಟೆ (ನಾ). ೧. ಧೈರ್ಯವುಳ್ಳವಳು. ೨. ಉದ್ಧಟಿ.

ದಿಡಗು (ನಾ). ಜೋರು ; ಅಬ್ಬರ.

ದಿಡ್ಡಿ (ನಾ). ಸಣ್ಣಬಾಗಿಲು ; ಕಿಂಡಿ.

ದಿಣ್ಣೆ (ನಾ). ಎತ್ತರವಾದ ಪ್ರದೇಶ ; ತಿಟ್ಟು.

ದಿನ (ನಾ). ೧. ಬೆಳಗು; ಹಗಲು. ೨. ಇಪ್ಪತ್ತು ನಾಲ್ಕು ಗಂಟೆಗಳ ಕಾಲ; ದಿವಸ. ೩. ತಿಥಿ; ಶ್ರಾದ್ಧ. ~ಅಂಕ = ತಾರೀಖು ; ತೇದಿ. ~ಅಂತ = ಹಗಲಿನ ಕೊನೆ; ಸಂಜೆ. ~(ಂ)ಪ್ರತಿ = ನಿತ್ಯವೂ ; ಯಾವಾಗಲೂ. ~ಮಣಿ = ದಿನಕರ.

ದಿನಕರ (ನಾ). ಹಗಲನ್ನುಂಟುಮಾಡುವವನು; ಸೂರ್ಯ.

ದಿನಚರಿ (ನಾ). ೧. ನಿತ್ಯಕರ್ಮ; ದಿನದ ಕೆಲಸ. ೨. ದಿನದ ಕೆಲಸವನ್ನು ಬರೆದಿಡುವ ಪುಸ್ತಕ.

ದಿನಪ (ನಾ). ಸೂರ್ಯ.

ದಿನಸಿ (ನಾ). ದವಸ ; ಧಾನ್ಯ.

ದಿನ್ನೆ = ದಿಣ್ಣೆ.

ದಿಬ್ಬ = ದಿಣ್ಣೆ.

ದಿಬ್ಬಣ (ನಾ). ೧. ಮದುವೆಯ ಮೆರವಣಿಗೆ ; ಸಿಬ್ಬಣ. ೨. ಮರದ ಬೆಣೆ ; ಗೂಟ.

ದಿಬ್ಯ = ದಿವ್ಯ.

ದಿಮ್ಮಿ (ನಾ). ಕೊರಡು ; ಮರದ ತುಂಡು.

ದಿಮ್ಮಿತು (ಗು). ೧. ಬಲಿಷ್ಠವಾದ; ದಪ್ಪವಾದ. ೨. ಶ್ರೇಷ್ಠ ; ದೊಡ್ಡ.

ದಿಮ್ಮಿದ (ನಾ). ಶ್ರೇಷ್ಠವ್ಯಕ್ತಿ.

ದಿರಸು (ನಾ). ಉಡುಪು ; ಬಟ್ಟೆ.

ದಿವ (ನಾ). ೧. ಸ್ವರ್ಗ. ೨. ಆಕಾಶ. ೩. ದಿನ; ಹಗಲು. ~ಅಂಧ = ಹಗಲಿನಲ್ಲಿ ಕುರುಡಾಗಿರುವುದು ; ಗೂಬೆ ಮುಂತಾದುವು.

ದಿವಸ = ದಿನ.

ದಿವಸ್ಪತಿ (ನಾ). ೧. ಸ್ವರ್ಗದ ಒಡೆಯ ; ಇಂದ್ರ. ೨. ಹಗಲಿನ ಒಡೆಯ; ಸೂರ್ಯ.

ದಿವಾಕರ = ದಿನಕರ.

ದಿವಾಕೀರ್ತಿ (ನಾ). ೧. ಹಜಾಮ ; ಕ್ಷೌರಿಕ. ೨. ಹೊಲೆಯ; ಚಂಡಾಲ. ೩. ಚಮ್ಮಾರ ; ಮೋಚಿ.

ದಿವಾಣ (ನಾ). ೧. ಸಚಿವ; ಮಂತ್ರಿ. ೨. ಹಿರಿಯ; ಗಣ್ಯ. ೩. ಓಲಗ; ದರ್ಬಾರು. ೪. ಓಲಗಶಾಲೆ. ೫. ಸರ್ಕಾರ.

ದಿವಾನ = ದಿವಾಣ. ~ಖಾನೆ = ೧. ಮಂತ್ರಿಯ ಮನೆ. ೨. ಆಲೋಚನಾ ಮಂದಿರ; ಯೋಚನಾಗಾರ. ೩. ಪಡಸಾಲೆ; ಮೊಗಸಾಲೆ. ~ಗಿರಿ = ೧. ಮಂತ್ರಿಯ ಪದವಿ, -ಹುದ್ದೆ. ೨. ದೊಡ್ಡಸ್ತಿಕೆ; ಆಡಂಬರ.

ದಿವಾಳಿ (ನಾ). ೧. ದಟ್ಟದರಿದ್ರನಾಗುವಿಕೆ ; ಪಾಪರುಚೀಟಿ ತೆಗೆದುಕೊಳ್ಳುವುದು. ೨. ದೀಪಾವಳಿ.

ದಿವಿ = ದಿವ.

ದಿವಿಜ (ನಾ). ದೇವತೆ.

ದಿವೌಕಸ (ನಾ). ೧. ಸ್ವರ್ಗವನ್ನೇ ಮನೆಯಾಗಿ ಉಳ್ಳವನು ; ದೇವತೆ. ೨. ಚಾತಕ ಪಕ್ಷಿ.

ದಿವ್ಯ (ನಾ). ೧. ನಿಶ್ಚಿತವಾದ ಸಾಕ್ಷಿಪುರಾವೆಗಳಿಲ್ಲದಾಗ ಅಪರಾಧವನ್ನು ನಿರ್ಣಯಿಸಲು ಮಾಡುವ ಉಗ್ರಪರೀಕ್ಷೆ; ತುಲಾ, ಅಗ್ನಿ, ಜಲ, ತಂಡುಲ, ತಪ್ತಮಾಷ, ಫಾಲ ಮತ್ತು ಧರ್ಮಗಳೆಂಬ ಏಳು ಬಗೆಯ ದಿವ್ಯಗಳು. ೨. ಲೋಬಾನ; ಗುಗ್ಗುಳ. ೩. ಶ್ರೇಷ್ಠನಾದವನು. ೪. ಶ್ರೇಷ್ಠವಾದುದು. (ಗು). ೫. ಸುಂದರವಾದ; ಮನೋಹರವಾದ. ೬. ಶ್ರೇಷ್ಠವಾದ. ೭. ಸ್ವರ್ಗಕ್ಕೆ ಸಂಬಂಧಿಸಿದ. ~(ಂ)ಪಿ(ಬಿ)ಡಿ = ಕಠಿನ ಪರೀಕ್ಷೆಗೆ ಒಳಗಾಗು.

ದಿಶೆ (ನಾ). ದೆಸೆ; ದಿಕ್ಕು.

ದಿಸೆ = ದಿಶೆ.

ದೀಂಟು = ದಿಂಟಿ.

ದೀಕೆ = ದೀಕ್ಷೆ.

ದೀಕ್ಷಾಗುರು (ನಾ). ದೀಕ್ಷೆಯನ್ನು ಕೊಡುವವನು.

ದೀಕ್ಷಿತ (ನಾ). ೧. ದೀಕ್ಷೆಯನ್ನು ಹೊಂದಿದವನು. (ಗು). ೨. ನಿಯಮಕ್ಕೆ ಒಳಪಟ್ಟ; ಸಂಕಲ್ಪಕ್ಕೆ ಒಳಗಾದ.

ದೀಕ್ಷೆ (ನಾ). ವ್ರತವನ್ನು ಕೈಗೊಳ್ಳುವಿಕೆ.

ದೀಧಿತಿ = ದೀಪ್ತಿ.

ದೀನ (ನಾ). ೧. ಬಡವ; ದರಿದ್ರ. ೨. ವಿನಯಶಾಲಿ; ನಮ್ರ.

ದೀನಾರ (ನಾ). ಒಂದು ಚಿನ್ನದ ನಾಣ್ಯ.

ದೀಪ (ನಾ). ೧. ದೀವಿಗೆ. ೨. ದ್ವೀಪ; ನಡುಗಡ್ಡೆ. ~ಅವಳಿ= ೧.ದೀಪಗಳ ಸಾಲು. ೨. ಕಾರ್ತಿಕ ಚತುರ್ದಶಿಯಂದು ಆಚರಿಸುವ ಹಬ್ಬ; ದೀವಳಿಗೆ. ~ಇಸು = ಬೆಳಗು; ಹೊಳೆ; ಪ್ರಕಾಶಿಸು.

ದೀಪಕ (ನಾ). ೧. ದೀಪ; ದೀವಿಗೆ. ೨. ಕಾವ್ಯದಲ್ಲಿ ಬರುವ ಒಂದು ಅರ್ಥಾಲಂಕಾರ. (ಗು). ೩. ಪ್ರಕಾಶಮಾನವಾದ; ಉತ್ತೇಜಕವಾದ.

ದೀಪಿಕೆ (ನಾ). ೧. ದೀಪ; ಸೊಡರು. ೨. ಕಾಂತಿ; ಬೆಳಕು.

ದೀಪ್ತ (ಗು). ೧. ಹೊಳೆಯುವ; ಮಿರುಗುವ. ೨. ಉರಿಯುವ; ಜ್ವಲಿಸುವ. ~ತಪ = ತೀಕ್ಷ್ಣವಾದ ಬಿಸಿಲು.

ದೀಪ್ತಿ (ನಾ). ೧. ಬೆಳಕು; ಕಾಂತಿ. ೨. ರಶ್ಮಿ; ಕಿರಣ.

ದೀಪ್ರ (ನಾ). ೧. ಬೆಂಕಿ; ಅಗ್ನಿ. (ಗು). ೨. ಜ್ವಲಿಸುವ; ಉರಿಯುವ.

ದೀರ್ಘ (ನಾ). ೧.ನೀಳ; ಉದ್ದ. ೨.ಛಂದಸ್ಸಿನಲ್ಲಿ ಗುರು ಅಕ್ಷರ. (ಗು). ೩. ಉದ್ದವಾದ; ನೀಳವಾದ. ~ಕೇಶ = ೧. ಉದ್ದವಾದ ಕೂದಲು. ೨. ಕರಡಿ. ~ದೇಹಿ = ೧. ಎತ್ತರವಾದ ಮನುಷ್ಯ. ೨. ಹೆಗ್ಗಣ. ~ನಿದ್ರೆ = ಸಾವು; ಮರಣ. ~ಪ್ರಜ್ಞ = ಮುಂದಾಲೋಚನೆಯುಳ್ಳವನು; ದೂರದರ್ಶಿ. ~ಸುಮಂಗಲಿ = ಬಹುಕಾಲ ಮುತ್ತೈದೆಯಾಗಿರುವವಳು.

ದೀರ್ಘಿಕೆ (ನಾ). ಸರೋವರ.

ದೀವ ೧.= ದೀಹ. ೨. = ದೀಪ.

~ಕಾ(ಗಾ)ಱ(ರ) = ಸೆಳೆಯನ್ನು ಕಟ್ಟಿ ಬೇಟೆಯಾಡುವವನು.

ದೀವಟಿ (ನಾ). ಪಂಜು; ದೊಂದಿ.

ದೀವಟಿಗೆ = ದೀವಟಿ.

ದೀವಸ (ನಾ). ಧೈರ್ಯ; ಸಾಹಸ. ~ಇಗ = ವೀರ; ಸಾಹಸಿ. ~ಕೆ(ಗೆ)ಡು = ಧೈರ್ಯ ಕಳೆದುಕೊಳ್ಳು.

ದೀವಳಿಗೆ = ದೀಪಾವಳಿ.

ದೀವಿ (ನಾ). ದ್ವೀಪ; ನಡುಗಡ್ಡೆ.

ದೀವಿಗೆ = ದೀಪಿಕೆ.

ದೀಹ (ನಾ). ಬೇಟೆಯಲ್ಲಿ ಪ್ರಾಣಿಗಳನ್ನು ಹಿಡಿಯಲು ಬಳಸುವ ಪ್ರಾಣಿ; ಸೆಳೆ.

ದುಂಡಾವರ್ತಿ (ನಾ). ಪುಂಡಾಟ; ಬಂಡತನ; ಧಾರ್ಷ್ಟ್ಯ.

ದುಂಡಿ (ನಾ). ೧. ಗುಂಡನೆಯ ಕಲ್ಲು; ಉರುಟುಕಲ್ಲು. ೨. ತುಂಬುಮೈಯುವಳು.
ದುಂಡು(ನಾ). ೧. ಗುಂಡಾಗಿರುವಿಕೆ. ೨. ಒಂದು ಬಗೆಯ ಬಳೆ, -ಕಂಕಣ. ೩. ಸೊನ್ನೆ. ~ಇಸು=೧. ಸುತ್ತುಗಟ್ಟು; ಚಕ್ರಾಕಾರವಾಗಿ ಮುತ್ತು. ೨. ದುಂಡಗೆ ಮಾಡು. ~ಮಲ್ಲಿಗೆ = ಮಲ್ಲಿಗೆಯಲ್ಲಿ ಒಂದು ಜಾತಿ.
ದುಂಡುಭ (ನಾ). ವಿಷವಿಲ್ಲದ ಒಂದು ಜಾತಿಯ ಹಾವು; ಮಣ್ಣುಮುಕ್ಕ.
ದುಂಡೆ (ನಾ). ಸೂಳೆ; ಹಾದರಿಗಿತ್ತಿ.
ದುಂದು (ನಾ). ಅಪವ್ಯಯ; ಪೋಲು. ~ಕಾ(ಗಾ)ರ = ಪೋಲು ಮಾಡುವವನು.
ದುಂದುಭಿ (ನಾ). ೧. ಒಂದು ಬಗೆಯ ಚರ್ಮವಾದ್ಯ; ನಗಾರಿ. ೨. ಅರುವತ್ತು ಸಂವತ್ಸರಗಳಲ್ಲಿ ಒಂದು.
ದುಂದುಮೆಗಾಲ (ನಾ). ವೈಭವದ ಕಾಲ.
ದುಂಬಾಲು (ನಾ). ಹಿಂಬದಿ; ಹಿಂಭಾಗ. ~ಬೀಳು = ೧. ಬೆನ್ನುಹತ್ತು; ಹಿಂಬಾಲಿಸು. ೨. ಯಾಚಿಸು; ಬೇಡು.
ದುಂಬಿ (ನಾ). ತುಂಬಿ; ಭ್ರಮರ.
ದುಃಖ (ನಾ). ಕಷ್ಟ; ಅಳಲು. ~ಆರ್ತ = ದುಃಖದಿಂದ ನೊಂದವನು.
ದುಃಖಿ = ದುಃಖಾರ್ತ.
ದುಕೂಲ (ನಾ). ರೇಷ್ಮೆಬಟ್ಟೆ; ಪಟ್ಟೆವಸ್ತ್ರ.
ದುಕ್ಕುಡಿ (ನಾ). ಲಗಾಮು; ಕಡಿವಾಣ.
ದುಗ (ನಾ). ಎರಡು. ~ಕಾಣಿ = ಎರಡು ಕಾಸು; ದಮ್ಮಡಿ.
ದುಗುಡ (ನಾ). ವ್ಯಸನ; ಚಿಂತೆ; ಉಮ್ಮಳ.
ದುಗುಲ = ದುಕೂಲ.
ದುಗ್ಗಿ (ನಾ). ೧. ದುರ್ಗೆ; ಪಾರ್ವತಿ. ೨. ಚಿಕ್ಕ ದೋಣಿ; ಹರಿಗೋಲು.
ದುಗ್ಧ (ನಾ). ೧. ಹಾಲು. ೨. ರಸ. (ಗು). ೩. ಹಿಂಡಿದ; ಹಿಂಡಲ್ಪಟ್ಟ. ~ಕಂಠ = ಹಾಲು ಕುಡಿಯುವುದು; ಮಗು.
ದುಗ್ಧೆ (ನಾ). ೧. ಅನುಮಾನ; ಸಂದೇಹ. ೨. ದ್ವೇಷ; ಅಸೂಯೆ.
ದುಟ್ಟ (ಗು). ಕೆಟ್ಟ; ದುಷ್ಟ.
ದುಡಿ (ಕ್ರಿ). ೧. ಕೆಲಸ ಮಾಡು; ಶ್ರಮಪಡು. ೨. ಗಳಿಸು; ಸಂಪಾದಿಸು. ೩. ಮಿಡಿ; ತುಡಿ. (ನಾ). ೪. ತಮಟೆ; ದಮಡಿ.
ದುಡಿತ ೧. = ದುಡಿಮೆ. ೨. ಮಿಡಿತ; ಸ್ಪಂದನ; ತುಡಿತ.
ದುಡಿಮೆ (ನಾ). ೧. ಕೆಲಸ; ಉದ್ಯೋಗ. ೨. ಗಳಿಕೆ; ಸಂಪಾದನೆ.
ದುಡುಕು (ಕ್ರಿ). ೧. ಮುಂದಾಲೋಚನೆ ಇಲ್ಲದೆ ನುಗ್ಗು; ಹಿಂದೆಮುಂದೆ ನೋಡದೆ ಮುನ್ನುಗ್ಗು. (ನಾ). ೨. ಆತುರದಿಂದ ಕೂಡಿರುವಿಕೆ; ಗಡಿಬಿಡಿ. ೩. ಮುಂದಾಲೋಚನೆಯಿಲ್ಲದೆ ಮಾಡುವ ಕೆಲಸ.
ದುಡ್ಡು (ನಾ). ೧. ಆಣೆಯ ಮೂರನೆಯ ಒಂದು ಭಾಗ. ೨. ಹಣ; ರೊಕ್ಕ.
ದುದ್ದು (ನಾ). (ಕುಂಬಳಕಾಯಿ ಮೊದಲಾದುವುಗಳ) ಒಳಭಾಗ; ತಿರುಳು.
ದುಪಟಿ (ನಾ). ೧. ಎರಡು ಪದರುಗಳನ್ನು ಸೇರಿಸಿ ಹೊಲಿದ ಹೊದಿಕೆ. ೨. ಹೊದೆಯುವ ವಸ್ತ್ರ.
ದುಪ್ಪಟ್ಟು (ನಾ). ಇಮ್ಮಡಿ; ಎರಡರಷ್ಟು.
ದುಪ್ಪಿ (ನಾ). ಮೈಮೇಲೆ ಚುಕ್ಕೆಗಳಿರುವ ಜಿಂಕೆ.
ದುಬಾರಿ (ನಾ). ತುಟ್ಟಿ; ಹೆಚ್ಚು ಬೆಲೆ.
ದುಬ್ಬ (ನಾ). ದಪ್ಪನೆಯ ಮನುಷ್ಯ.
ದುಬ್ಬಿ (ನಾ). ೧. ಗಡಿಗೆ; ಮಡಕೆ. ೨. ದಪ್ಪನೆಯ ಹೆಂಗಸು.
ದುಭಾಷಿ (ನಾ). ೧. ಎರಡು ಭಾಷೆಗಳನ್ನು ತಿಳಿದವನು. ೨. ಭಾಷಾಂತರದ ಮೂಲಕ ತಿಳಿಸುವವನು.
ದುಮುಗುಟ್ಟು (ಕ್ರಿ). ಒಳಗಿರುವ ಕೋಪವನ್ನು ಸೂಚಿಸು.

ದುಮುಕು (ಕ್ರಿ). ಮೇಲಿನಿಂದ ಕೆಳಕ್ಕೆ ನೆಗೆ; ಜಿಗಿ; ಹಾರು.
ದುಮುದುಮಿಸು = ದುಮುಗುಟ್ಟು.
ದುಮ್ಮಳ = ದುಗುಡ.
ದುಮ್ಮಾನ = ದುಗುಡ.
ದುರ (ನಾ). ಯುದ್ಧ; ಕಾಳಗ. ~ಕ(ಗ)ಲಿ = ಶೂರ; ಕಟ್ಟಾಳು.
ದುರಂತ (ನಾ). ೧. ದುಃಖ; ನೋವು. (ಗು). ೨. ಕೆಡುಕಿನಲ್ಲಿ ಕೊನೆಗೊಳ್ಳುವ; ಕೆಟ್ಟ ಪರಿಣಾಮವುಳ್ಳ.
ದುರಡಿ (ನಾ). ಬುಟ್ಟಿ; ಕುಕ್ಕೆ.
ದುರದೃಷ್ಟ (ನಾ). ಕೆಟ್ಟ ಅದೃಷ್ಟ; ದೌರ್ಭಾಗ್ಯ.
ದುರಭ್ಯಾಸ (ನಾ). ಕೆಟ್ಟ ಹವ್ಯಾಸ; ದುಷ್ಟ ಚಟ.
ದುರಸ್ತಿ (ನಾ). ಸರಿಪಡಿಸುವಿಕೆ; ತಿದ್ದುವಿಕೆ.
ದುರಾತ್ಮ (ನಾ). ೧. ಕೆಟ್ಟ ಮನಸ್ಸುಳ್ಳವನು; ದುಷ್ಟ. (ಗು). ೨. ಕೆಟ್ಟ ಮನಸ್ಸಿನ.
ದುರಾಲೋಚನೆ (ನಾ). ಕೆಟ್ಟ ಆಲೋಚನೆ; ಕುವಿಚಾರ.
ದುರಾಶೆ (ನಾ). ಕೆಟ್ಟ ಆಸೆ; ಅತಿಯಾಸೆ; ಲೋಭ.
ದುರಿತ (ನಾ). ೧. ಕೆಟ್ಟ ಕೆಲಸ; ಪಾಪ. ೨. ಕೇಡು; ಅಮಂಗಳ.
ದುರುಕ್ತಿ (ನಾ). ಕೆಟ್ಟ ಮಾತು; ಬಯ್ಗುಳು.
ದುರುಗುಟ್ಟು (ಕ್ರಿ). ಸಿಟ್ಟಿನಿಂದ ಕಣ್ಣಿಸಿದು ನೋಡು; ಕೆಕ್ಕಳಿಸು.
ದುರುಪಯೋಗ (ನಾ). ದುರ್ವಿನಿಯೋಗ.
ದುರುಸ್ತು = ದುರಸ್ತಿ.
ದುರುಳ (ನಾ). ಕೆಟ್ಟವನು; ನೀಚ.
ದುರುಳು (ನಾ). ಕೆಟ್ಟತನ; ನೀಚತನ.
ದುರುಳೆ (ನಾ). ಕೆಟ್ಟ ಹೆಂಗಸು; ನೀಚಸ್ತ್ರೀ.
ದುರೂಪೆ (ನಾ). ಕೆಟ್ಟ ರೂಪವುಳ್ಳವಳು; ಕುರೂಪಿ.
ದುರೋದರ (ನಾ). ೧. ಜೂಜು. ೨. ಪಣ; ಪಂದ್ಯ.
ದುರ್ಜು(ರು)ದುಂಬಿ (ನಾ). ನೀಚ; ದುಷ್ಟ.
ದುರ್ಗ (ನಾ). ೧. ಕೋಟೆ. ೨. ಕಾಡು; ಅಡವಿ.
ದುರ್ಗಂಧ (ನಾ). ಕೆಟ್ಟ ವಾಸನೆ; ಹೊಲಸು ವಾಸನೆ.
ದುರ್ಗತಿ (ನಾ). ಕೆಟ್ಟಸ್ಥಿತಿ; ಹೀನಸ್ಥಿತಿ.
ದುರ್ಗಮ (ಗು). ಹೋಗುವುದಕ್ಕೆ ಕಷ್ಟವಾದ; ಕಠಿನವಾದ.
ದುರ್ಗುಣ (ನಾ). ಕೆಟ್ಟ ಗುಣ; ಕೆಟ್ಟ ಸ್ವಭಾವ.
ದುರ್ಘಟನೆ (ನಾ). ಕೆಟ್ಟ ಘಟನೆ; ಗಂಡಾಂತರ.
ದುರ್ಜಯ (ಗು). ಜಯಿಸಲು ಅಸಾಧ್ಯವಾದ; ಸೋಲಿಸಲಾಗದ.
ದುರ್ದಶೆ (ನಾ). ಕೆಟ್ಟ ಸ್ಥಿತಿ; ಹೀನಸ್ಥಿತಿ.
ದುರ್ದಾನ (ನಾ). ಸ್ವೀಕರಿಸಲು ಹಿತವಲ್ಲದ ದಾನ; ಕೆಟ್ಟ ದಾನ.
ದುರ್ದಿನ (ನಾ). ೧. ಮಳೆ ಹೊಯ್ಯುತ್ತಿರುವ ದಿನ. ೨. ಮೋಡದಿಂದ ಕೂಡಿದ ದಿನ. ೩. ಕೆಟ್ಟ ದಿವಸ. ೪. ದಟ್ಟವಾದ ಕತ್ತಲೆ.
ದುರ್ಧರ (ಗು). ತಾಳಲು ಅಸಾಧ್ಯವಾದ; ಕಠಿನವಾದ.
ದುರ್ಧರ್ಷ (ಗು). ೧. ಎದುರಿಸಲಾಗದ; ಪ್ರತಿಭಟಿಸಲಾಗದ. ೨. ಕೊಬ್ಬಿದ; ಸೊಕ್ಕಿನಿಂದ ಕೂಡಿದ.
ದುರ್ಬಲ (ನಾ). ೧. ಅಶಕ್ತ; ನಿತ್ರಾಣಿ. (ಗು). ೨. ಬಲಹೀನವಾದ; ಶಕ್ತಿಹೀನ.
ದುರ್ಬೀನು (ನಾ). ದೂರದರ್ಶಕ ಯಂತ್ರ.
ದುರ್ಬುದ್ಧಿ (ನಾ). ಕೆಟ್ಟ ಬುದ್ಧಿ; ಕುಬುದ್ಧಿ.
ದುರ್ಭಾಗ್ಯ = ದುರದೃಷ್ಟ.
ದುರ್ಭಿಕ್ಷ (ನಾ). ಬರಗಾಲ; ಕ್ಷಾಮ.
ದುರ್ಮಾಂಸ (ನಾ). ಶರೀರದಲ್ಲಿ ಅನಾರೋಗ್ಯದಿಂದ ಬೆಳೆಯುವ ಮಾಂಸದ ಗಡ್ಡೆ.
ದುರ್ಮಾರ್ಗ (ನಾ). ೧. ಕೆಟ್ಟದಾರಿ. ೨. ಕೆಟ್ಟ ನಡವಳಿಕೆ.

ದುರ್ಮುಖಿ (ನಾ). ೧. ಕೆಟ್ಟಮಾತನ್ನಾಡುವವಳು ; ಸೊಟ್ಟ ಬಾಯಿಯುವಳು. ೨. ಅರುವತ್ತು ಸಂವತ್ಸರಗಳಲ್ಲಿ ಒಂದು.

ದುರ್ಲಂಘ್ಯ (ಗು). ೧. ದಾಟಲು ಅಸಾಧ್ಯವಾದ. ೨. ಮೀರಲು ಸಾಧ್ಯವಾಗದ.

ದುರ್ಲಭ (ಗು). ಹೊಂದಲು ಅಸಾಧ್ಯವಾದ ; ಪಡೆಯುಲಶಕ್ಯವಾದ.

ದುರ್ವಾಸನೆ (ನಾ). ೧. ಕೆಟ್ಟವಾಸನೆ ; ನಾತ. ೨. ಪೂರ್ವಜನ್ಮದಿಂದ ಬಂದ ಕೀಳು ಆಸೆಯ ನೆನಪು.

ದುರ್ವ್ಯಸನ (ನಾ). ಕೆಟ್ಟಚಾಳಿ ; ಕೆಟ್ಟ ಚಟ. ~ಲಂಪಟ = ಕೆಟ್ಟನಡತೆಯುವನು ; ದುರಾಚಾರಿ.

ದುಲಿ (ನಾ). ಹೆಣ್ಣು ಆನೆ.

ದುವ್ವಾಳಿ (ನಾ). ಬೇಗ ಓಡುವಿಕೆ ; ನಾಗಾಲೋಟ. ~ಇಸು = ೧. ತ್ವರೆಯಿಂದ ಓಡು ; ರಭಸದಿಂದ ಮುನ್ನುಗ್ಗು. ೨. ವೇಗವಾಗಿ ಓಡಿಸು.

ದುಶ್ಚರಿತ (ನಾ). ೧. ಕೆಟ್ಟ ನಡತೆ ; ದುರಾಚಾರ. ೨. ಕೆಟ್ಟ ನಡತೆಯುವನು. (ಗು). ೩. ಕೆಟ್ಟ ನಡತೆಯ ; ದುರಾಚಾರದ.

ದುಶ್ಶಾಸನ (ನಾ). ೧. ಧೃತರಾಷ್ಟ್ರನ ಮಗ. (ಗು). ೨. ಅಧೀನದಲ್ಲಿಡಲು ಕಠಿನವಾದ.

ದುಷ್ಕರ್ಮ (ನಾ). ೧. ಕೆಟ್ಟಕೆಲಸ ; ಪಾಪದ ಕಾರ್ಯ. ೨. ಕಷ್ಟವಾದ ಕೆಲಸ.

ದುಷ್ಕರ್ಮಿ (ನಾ). ಕೆಟ್ಟಕೆಲಸವನ್ನು ಮಾಡುವವನು ; ಪಾಪಿಷ್ಠ.

ದುಷ್ಕಾಲ (ನಾ). ಕೆಟ್ಟಕಾಲ ; ಬರಗಾಲ ; ಕ್ಷಾಮ.

ದುಷ್ಕೀರ್ತಿ (ನಾ). ಅಪಕೀರ್ತಿ.

ದುಷ್ಟ (ನಾ). ೧. ನೀಚ ; ಕೆಟ್ಟವನು. ೨. ಹಾವು. ೩. ಕುದುರೆ. ೪. ಆನೆಯ ಮದೋದಕ. (ಗು). ೫. ದೋಷದಿಂದ ಕೂಡಿದ. ೬. ನೀಚ ಸ್ವಭಾವದ. ೭. ಕೆಟ್ಟ ; ಹಾಳಾದ.

ದುಸರ (ನಾ). ಜೋಡಿಸರ ; ಎರಡೆಳೆಯ ಸರ.

ದುಸ್ತಮ (ನಾ). ಕಗ್ಗತ್ತಲೆ ; ಅಂಧಕಾರ.

ದುಸ್ತರ (ಗು). ೧. ದಾಟಲಾಗದ ; ಅಸಾಧ್ಯವಾದ. ೨. ಸಹಿಸಲಾಗದ.

ದುಸ್ಸಹ (ಗು). ಸಹಿಸಲಸಾಧ್ಯವಾದ ; ತಡೆಯಲಾಗದ.

ದುಹಿಂ (ನಾ). ದ್ವೇಷ ; ಅಸೂಯೆ.

ದುಹಿತೃ (ನಾ). ಮಗಳು.

ದುಹಿತೆ = ದುಹಿತೃ.

ದುಹಿಸು (ಕ್ರಿ). ಹಾಲು ಕರೆ, –ಹಿಂಡು.

ದೂ(ಂ)ಟು (ಕ್ರಿ). ೧. ಕುಂಟು. ೨. ನೆಗೆ. ೩. ತೊನೆ ; ತೂಗಾಡು. (ನಾ). ೪. ನೆಗೆತ. ೫. ಕುಂಟುವಿಕೆ. ೬. ಹೆಜ್ಜೆ ; ದಾಪು.

ದೂಡು (ಕ್ರಿ). ೧. ನೂಕು ; ತಳ್ಳು. ೨. ಹೊರಹಾಕು ; ಬಹಿಷ್ಕರಿಸು.

ದೂತ (ನಾ). ೧. (ಸಂದೇಶವನ್ನು ಒಯ್ಯುವ) ಸೇವಕ, –ಆಳು. ೨. ರಾಯಭಾರಿ. ~ಆವಾಸ = ರಾಯಭಾರಿಯ ವಾಸಸ್ಥಾನ. ~ಇಸು = ಸೇವಕನ ಕೆಲಸಮಾಡು.

ದೂತಿ (ನಾ). ೧. (ಸಂದೇಶವನ್ನು ಒಯ್ಯುವ) ಸೇವಕಿ, –ದಾಸಿ. ೨. ಕುಂಟಲಗಿತ್ತಿ ; ಕುಂಟಣಿ.

ದೂತ್ಯ (ನಾ). ೧. ಸಂದೇಶ ; ಸುದ್ದಿ. ೨. ದೂತನ ಕೆಲಸ. ೩. ರಾಯಭಾರ.

ದೂದ = ದೂತ.

ದೂದವಿ = ದೂತಿ.

ದೂದಿ ೧. = ದೂತಿ. ೨. ಸ್ವಚ್ಛಮಾಡಿದ ಅರಳೆ. ೩. ಬೂರಲಮರದ ಹತ್ತಿ.

ದೂದು (ನಾ). ದೂತನ ಕೆಲಸ ; ರಾಯಭಾರ ; ದೌತ್ಯ. ~ಕಾ(ಗಾ)ಐ(ರ) = ಸಂದೇಶವನ್ನು ಒಯ್ಯುವವನು.

ದೂದುಗ (ನಾ). ದೂತ ; ಆಳು.

ಧೂನ (ಗು). ೧. ಉರಿದ; ಸುಡಲ್ಪಟ್ಟ. ೨. ನೊಂದ; ದುಃಖಿತ. ೩. ಬಳಲಿದ. ~ಇಸು = ದುಃಖಿಸು; ಅಳು.

ಧೂಪ = ಧೂಪ.

ಧೂಪಿಸು (ಕ್ರಿ). ೧. ಆಯಾಸಹೊಂದು; ದಣಿ. ೨. ಸುಗಂಧ ಹಾಕು; ಗಮಗಮಿಸುವಂತೆ ಮಾಡು; ಧೂಪಹಾಕು.

ಧೂಮರ (ನಾ). ತುಂತುರು ಮಳೆ; ಹನಿಮಳೆ.

ದೂರ (ನಾ). ೧. ಬಹಳ ಅಂತರ. (ಗು). ೨. ಬಹಳ ಅಂತರವಿರುವ; ಸಮೀಪವಲ್ಲದ. ~ಆ(ವಾ)ಗು = ೧. ದೂರಕ್ಕೆ ಹೋಗು. ೨. ಎರವಾಗು; ಸಂಬಂಧವನ್ನು ಕಳೆದುಕೊಳ್ಳು. ೩. ಇಲ್ಲವಾಗು; ನಾಶವಾಗು. ~ದೃಷ್ಟಿ = ಮುಂದಾಲೋಚನೆ. ~ಮಾಡು = ಕಳೆ; ಪರಿಹರಿಸು; ನಿವಾರಿಸು.

ದೂರದರ್ಶಕಯಂತ್ರ (ನಾ). ದೂರದಲ್ಲಿರುವ ವಸ್ತುವನ್ನು ನೋಡುವ ಸಲಕರಣೆ.

ದೂರದರ್ಶಿ (ನಾ). ೧. ಮುಂದಾಲೋಚನೆಯುಳ್ಳವನು. (ಗು). ೨. ದೀರ್ಘದೃಷ್ಟಿಯುಳ್ಳ; ಮುಂದಾಲೋಚನೆಯುಳ್ಳ.

ದೂಱ್(ರ್,ರು,ಱು) (ಕ್ರಿ). ೧. ಚಾಡಿ ಹೇಳು; ಪಿಸುಣು ನುಡಿ. ೨. ನಿಂದಿಸು; ಅವಹೇಳನ ಮಾಡು. ೩. ಫಿರ್ಯಾದು ಮಾಡು; ಆಕ್ಷೇಪಿಸು. (ನಾ). ೪. ಚಾಡಿ; ಪಿಸುಣು. ೫. ನಿಂದೆ; ಅವಹೇಳನ.

ದೂರ್ತ = ಧೂರ್ತ.

ದೂರ್ವೆ (ನಾ). ಗರಿಕೆ; ಹುಲ್ಲು.

ದೂಲ (ನಾ). ತೊಲೆ; ಜಂತೆ.

ದೂಲೆ (ನಾ). ನವೆ; ತೀಟೆ.

ದೂವಾಳಿಸು = ದುವ್ವಾಳಿಸು.

ದೂಪೆ (ನಾ). ಹೊಗೆ; ಧೂಮ.

ದೂಷಕ (ನಾ). ೧. ನಿಂದಿಸುವವನು; ಆರೋಪಿಸುವವನು. (ಗು). ೨. ನಿಂದಿಸುವ; ಆಪಾದಿಸುವ.

ದೂಷಣ = ದೂಷಣೆ.

ದೂಷಣೆ (ನಾ). ನಿಂದನೆ; ಬಯ್ಗುಳು.

ದೂಷಿಸು (ಕ್ರಿ). ನಿಂದಿಸು; ಜರೆ.

ದೂಷ್ಯ ೧. = ದೂಸ. (ಗು). ೨. ನಿಂದನೀಯ; ಆರೋಪಿಸಲರ್ಹವಾದ.

ದೂಸ (ನಾ). ೧. ಒಂದು ಬಗೆಯ ಬಟ್ಟೆ. ೨. ಡೇರೆ; ತಂಬು; ಗುಡಾರ. ~ಇಗ = ಜವಳಿ ವ್ಯಾಪಾರಿ; ಬಟ್ಟೆಯ ವ್ಯಾಪಾರಿ.

ದೂಸಱ್(ರ್,ರು,ಱು) (ನಾ). ೧. ಕಾರಣ; ನಿಮಿತ್ತ. ೨. ಸ್ವಲಾಭ; ಸ್ವಾರ್ಥ.

ದೂಳ್(ಳು) (ನಾ). ರೇಣು; ಕಣ.

ದೂಳಿ = ದೂಳ್. ~ಧೂಸರಿತ = ದೂಳಿನಿಂದ ಹೊಲಸಾದ.

ದೃಕ್ಕು (ನಾ). ಕಣ್ಣು; ನೇತ್ರ.

ದೃಕ್ಸಹಸ್ರ (ನಾ). ಸಾವಿರಕಣ್ಣುಗಳುಳ್ಳವನು; ಇಂದ್ರ.

ದೃಗು = ದೃಕ್ಕು. ~ಜಲ = ಕಣ್ಣೀರು; ಕಂಬನಿ.

ದೃಢ (ನಾ). ೧. ಬಲಶಾಲಿ; ಸಮರ್ಥ. ೨. ಹೆಚ್ಚಳ; ಆಧಿಕ್ಯ. (ಗು). ೩. ಗಟ್ಟಿಯಾದ; ಬಲವುಳ್ಳ. ೪. ನಿಶ್ಚಿತವಾದ; ನಿಜವಾದ. ~ಚಿತ್ತ = ೧. ಏಕಾಗ್ರತೆಯುಳ್ಳ ಮನಸ್ಸು; ಗಟ್ಟಿಮನಸ್ಸು. ೨. ಏಕಾಗ್ರತೆಯುಳ್ಳವನು. ~ಪಡಿಸು = ನಿಶ್ಚಯಪಡಿಸು; ಸ್ಥಿರಪಡಿಸು

ದೃಢೀಕರಣ (ನಾ). ನಿರ್ಧರಿಸುವುದು; ಸ್ಥಿರೀಕರಿಸುವುದು.

ದೃಢೀಕರಿಸು (ಕ್ರಿ). ಬಲಪಡಿಸು; ಸ್ಥಿರಗೊಳಿಸು.

ದೃಶ್ಯ (ನಾ). ೧. ನೋಟ; ಕಾಣ್ಕೆ. ೨. ನಾಟಕದ ಒಂದು ಭಾಗ. (ಗು). ೩. ಕಾಣುವ; ನೋಡಲು ಸಾಧ್ಯವಾದ. ೪. ನೋಡಲು ತಕ್ಕುದಾದ; ರಮಣೀಯವಾದ.

ದೃಷ್ಟ (ಗು). ೧. ನೋಡಿದ; ವೀಕ್ಷಿಸಿದ. ೨. ಪರಿಶೀಲಿಸಿದ. ೩. ಅನುಭವಕ್ಕೆ ಬಂದ.

**ದೃಷ್ಟಾಂತ** (ನಾ). ೧. ಉದಾಹರಣೆ; ನಿದರ್ಶನ. ೨. ಕಾವ್ಯದಲ್ಲಿ ಒಂದು ಅರ್ಥಾಲಂಕಾರ.

**ದೃಷ್ಟಿ** (ನಾ). ೧. ಕಣ್ಣು; ನೇತ್ರ. ೨. ನೋಟ; ಕಾಣ್ಕೆ. ೩. ಅರಿವು; ಜ್ಞಾನ. **~ಕೋನ(ಣ)** = ನೋಡುವ ರೀತಿ, -ಬಗೆ. **~ದೋಷ** = ೧. ಕಣ್ಣಿನ ಬೇನೆ. ೨. ಕಣ್ಣಸುರು; ಕಣ್ಣೆಂಜಲು. ೩. ತಪ್ಪಾಗಿ ನೋಡುವುದು.

**ದೆಂಜಿ** (ನಾ). ಏಡಿ; ಕರ್ಕಟ.

**ದೆಖ್ಖಾಣ** = ದೆಖ್ಖಾಳ.

**ದೆಖ್ಖಾಳ** (ನಾ). ಆಡಂಬರ; ವೈಭವ.

**ದೆಬ್ಬೆ** ೧. = ದಬ್ಬೆ. ೨. ಹೊಡೆತ; ಪೆಟ್ಟು.

**ದೆವಸ** (ನಾ). ದಿವಸ; ದಿನ.

**ದೆವ್ವ** (ನಾ). ಭೂತ; ಪಿಶಾಚಿ.

**ದೆಶೆ** = ದೆಸೆ.

**ದೆಸೆ** (ನಾ). ೧. ದಿಕ್ಕು; ದಿಶೆ. ೨. ಅವಸ್ಥೆ; ಸ್ಥಿತಿ. ೩. ಅದೃಷ್ಟ. **~ಕಾ(ಗಾ)ರ** = ಅದೃಷ್ಟವಂತ. **~ಕೆ(ಗೆ)ಡು** = ೧. ದಿಕ್ಕು ತಪ್ಪು; ಕಂಗೆಡು. ೨. ತಬ್ಬಲಿಯಾಗು. **~ಬ(ವ)ಲಿ** = ದಿಕ್ಕುಗಳಿಗೆ ಕೊಡುವ ಬಲಿ; ದಿಗ್ಬಲಿ.

**ದೇ(ಂ)ಟು** (ನಾ). ಕಾಂಡ; ದಂಟು.

**ದೇಕು** (ಕ್ರಿ). ೧. ಕಷ್ಟಪಟ್ಟು ಕೆಲಸಮಾಡು. ೨. ಕೈಗಳನ್ನು ಊರಿ ಮುಂದಕ್ಕೆ ಸರಿ.

**ದೇಖರೇಖಿ** (ನಾ). ಮೇಲ್ವಿಚಾರಣೆ.

**ದೇಗುಲ** (ನಾ). ದೇವಸ್ಥಾನ; ಗುಡಿ. **~ಇಗ** = ಪೂಜಾರಿ; ಅರ್ಚಕ.

**ದೇಣಿಗೆ** (ನಾ). ೧. ದಾನ; ಕೊಡುಗೆ. ೨. ಕೊಡಬೇಕಾದ ಹಣ ಅಥವಾ ಧಾನ್ಯ.

**ದೇಣೆ** (ನಾ). ಕೊಡಬೇಕಾದ ಹಣ; ಸಾಲ. **~ದಾರ** = ಹಣವನ್ನು ಸಲ್ಲಿಸಬೇಕಾದವನು; ಸಾಲಗಾರ.

**ದೇಯ** (ನಾ). ೧. ಕೊಡುಗೆ. (ಗು). ೨. ಕೊಡಲ್ಪಡುವ. **~ಅರ್ಥಿ** = ದಾನವನ್ನು ಬೇಡುವವನು.

**ದೇವ** (ನಾ). ೧. ಪರಮಾತ್ಮ. ೨. ಸುರ; ದೇವತೆ. ೩. ಅರಸ; ರಾಜ. **~ಅಡಿಗ** = ಪೂಜಾರಿ; ಅರ್ಚಕ. **~ಆಲಯ** = ೧. ಸ್ವರ್ಗ. ೨. ದೇವಸ್ಥಾನ; ಗುಡಿ. **~ಇಂದ್ರ** = ದೇವತೆಗಳ ಒಡೆಯ; ಇಂದ್ರ. **~ಕಣಿಶ** = ಒಂದು ಗಿಡದ ಹೆಸರು; ಪಚ್ಚೆತೆನೆ. **~ಕುಲ(ಳ)** = ೧. ದೇಗುಲ; ಗುಡಿ. ೨. ದೇವತೆಗಳ ಗುಂಪು. **~ಕುಸುಮ** = ಲವಂಗ. **~ಖಾತ** = ಸ್ವಾಭಾವಿಕವಾದ ತಗ್ಗು, -ಹೊಂಡ. **~ಗುರು** = ಬೃಹಸ್ಪತಿ. **~ಚಿಕಿತ್ಸಕ** = ದೇವಲೋಕದ ವೈದ್ಯ. **~ದಾರು** = ಒಂದು ಬಗೆಯ ಮರ. **~ದಾಸಿ** = ೧. ದೇವಾಲಯದ ನರ್ತಕಿ. ೨. ಸೂಳೆ; ವೇಶ್ಯೆ. **~ನಾಗರಿ** = ಸಂಸ್ಕೃತ ಭಾಷೆಯ ಲಿಪಿ. **~ಮಾತೃಕ** = ಮಳೆಯ ನೀರಿನಿಂದ ಬೆಳೆ ಬೆಳೆಯುವ ಪ್ರದೇಶ. **~ಸ್ಥಾನ** = ದೇವಾಲಯ.

**ದೇವತೆ** (ನಾ). ೧. ಸುರ; ಅಮರ. ೨. ದೇವಿ; ದೇವತಾಸ್ತ್ರೀ.

**ದೇವನ** (ನಾ). ೧. ಗತಿ; ಗಮನ. ೨. ಕೆಲಸ; ಉದ್ಯೋಗ. ೩. ಪಗಡೆಯ ಆಟ. ೪. ಆಟ; ವಿನೋದ. ೫. ಪಂದ್ಯ.

**ದೇವರು** (ನಾ). ದೇವ; ಪರಮಾತ್ಮ.

**ದೇವಿ** (ನಾ). ೧. ದೇವತೆ. ೨. ದುರ್ಗೆ. ೩. ರಾಣಿ. ೪. ವೈಲಿ; ಸಿಡುಬು. **~ಹಾಕು** = ಸಿಡುಬಿನ ರಸಿಕೆಯನ್ನು ಹಾಕು.

**ದೇಶ** (ನಾ). ೧. ನಾಡು; ಸೀಮೆ. ೨. ಸ್ಥಳ; ಎಡೆ. **~ಅಟನ** = ಊರೂರುಗಳನ್ನು ಸಂಚರಿಸುವಿಕೆ. **~ಇಗ** = ಗತಿಯಿಲ್ಲದವನು; ಪರದೇಶಿ.

**ದೇಶಾವರ** (ನಾ). ಊರೂರುಗಳನ್ನು ತಿರುಗಿ ಭಿಕ್ಷೆ ಎತ್ತುವುದು ಮತ್ತು ಹಾಗೆ ಪಡೆದ ಭಿಕ್ಷೆ.

**ದೇಶಿ** (ನಾ). ೧. ಪ್ರಾಂತೀಯ ಭಾಷೆ. (ಗು). ೨. ದೇಶಕ್ಕೆ ಸಂಬಂಧಪಟ್ಟ; ನಾಡಿಗೆ ಸೇರಿದ.

ದೇಶಿಕ (ನಾ). ೧. ಮಾರ್ಗದರ್ಶಕ. ೨. ಗುರು. ೩. ಪ್ರಯಾಣಿಕ.

ದೇಶೀಯ (ಗು). ಒಂದು ದೇಶಕ್ಕೆ ಸಂಬಂಧಿಸಿದ.

ದೇಶ್ಯ = ದೇಶೀಯ.

ದೇಸ = ದೇಶ.

ದೇಸಾಯಿ (ನಾ). ಜಿಲ್ಲೆಯ ಮುಖ್ಯಾಧಿಕಾರಿ.

ದೇಸಿ (ನಾ). ೧. ಚೆಲುವು; ಸೊಗಸು. ೨. ರೀತಿ; ಕ್ರಮ. ೩. ಪ್ರಾಂತೀಯ ಭಾಷೆ.

ದೇಸೆ = ದೇಸಿ.

ದೇಹ (ನಾ). ಮೈ; ಶರೀರ. ~ಅಂತ = ಮರಣ; ಸಾವು. ~ತ್ಯಾಗ = ಮರಣ ಹೊಂದುವಿಕೆ.

ದೇಹಲಿ(ಳಿ) (ನಾ). ಹೊಸ್ತಿಲು; ಬಾಗಿಲುವಾಡ.

ದೇಹಾರ (ನಾ). ೧. ದೇವಾಲಯ; ಗುಡಿ. ೨. ಪೂಜೆ; ಅರ್ಚನೆ.

ದೇಹಿ (ನಾ). ೧.ಶರೀರವನ್ನು ಧರಿಸಿರುವವನು; ಮನುಷ್ಯ. ೨. ಪ್ರಾಣಿ. ೩. ಆತ್ಮ.

ದೈತ್ಯ (ನಾ). ದಿತಿಯ ಮಗ; ರಾಕ್ಷಸ. ~ಗುರು = ರಾಕ್ಷಸರ ಗುರು; ಶುಕ್ರಾಚಾರ್ಯ.

ದೈನಂದಿನ (ಗು). ಪ್ರತಿದಿನದ; ನಿತ್ಯದ.

ದೈನಾಸ (ನಾ). ಅಂಗಲಾಚಿ ಬೇಡಿಕೊಳ್ಳುವುದು.

ದೈನ್ಯ (ನಾ). ೧. ದೀನತನ; ಹೀನಸ್ಥಿತಿ. ೨. ವಿನಯ; ನಮ್ರಭಾವ.

ದೈವ (ನಾ). ೧. ದೇವರು; ಪರಮಾತ್ಮ. ೨. ಹಣೆಬರಹ; ವಿಧಿ; ಅದೃಷ್ಟ. ೩. ದೆವ್ವ; ಭೂತ. ೪. ಸಮಾಜದ ಹಿರಿಯರು; ಪಂಚರು. (ಗು). ೫. ದೇವರಿಂದ ಉಂಟಾದ; ದೈವಿಕವಾದ. ~ಅಧೀನ = ೧. ಮರಣಹೊಂದಿದ. ೨. ದೇವರ ಇಚ್ಛೆಗೆ ಒಳಪಟ್ಟ. ~ಕೆ(ಗೆ)ಟ್ಟ = ದುರ್ದೈವಿ; ಅದೃಷ್ಟಹೀನ. ~ಗತಿ = ಹಣೆಬರಹ; ವಿಧಿನಿಯಮ.

ದೈವಜ್ಞ (ನಾ). ಭವಿಷ್ಯವನ್ನು ಹೇಳುವವನು; ಜ್ಯೋತಿಷಿ.

ದೈವಿಕ (ಗು). ದೇವರಿಗೆ ಸಂಬಂಧಿಸಿದ.

ದೈಹಿಕ (ಗು). ದೇಹಕ್ಕೆ ಸಂಬಂಧಿಸಿದ.

ದೊಂಟೆ (ನಾ). ೧. ದನಗಳ ಗತಿನಿರೋಧಕ್ಕಾಗಿ ಕೊರಳಿನಲ್ಲಿ ಕಟ್ಟುವ ಕಟ್ಟಿಗೆ; ಗುದ್ದಿಗೆ. ೨. ದೋಟಿ; ಕೊಕ್ಕೆಕೋಲು.

ದೊಂಡೆ (ಗು). ಮುದ್ದೆಯಾದ; ಗಡ್ಡೆಕಟ್ಟಿದ. ~ಕ(ಗ)ರುಳ್(ಳು) = ಮುದ್ದೆಯಾದ ಕರುಳು.

ದೊಂತಿ (ನಾ). ಒಂದರ ಮೇಲೊಂದು ಪೇರಿಸಿರುವುದು; ಅಡಕಿಲು.

ದೊಂದಡಿ (ನಾ). ಗುಂಪು; ಸಮೂಹ.

ದೊಂದಣ = ದೊಂದಡಿ.

ದೊಂದಣಿ = ದೊಂದಡಿ.

ದೊಂದಿ (ನಾ). ಪಂಜು; ಕಕ್ಕಡ.

ದೊಂದುಳಿ ೧. = ದೊಂದಡಿ. ೨. ಗಲಾಟೆ; ದೊಂಬಿ.

ದೊಂದೆ = ದೊಂದಿ.

ದೊಂಬ = ಡೊಂಬ.

ದೊಂಬಿ = ದೊಂದುಳಿ.

ದೊಗರು (ಕ್ರಿ). ೧. ಕೆದರು; ಗೆಬರು. (ನಾ). ೨. ಪೊಟರೆ; ಬಿಲ.

ದೊಗಲೆ(ಳೆ) (ನಾ). ಸಡಿಲವಾದುದು; ಆಳ್ಳಕವಾದುದು.

ದೊಗ್ಗಳೆ (ನಾ). ಒಂದು ಜಾತಿಯ ಸೊಪ್ಪು; ದಂಟು.

ದೊಟ್ಟೆ (ನಾ). ನೀರೆತ್ತಲು ಉಪಯೋಗಿಸುವ ಲೋಹದ ಅಥವಾ ಮರದ ಪಾತ್ರೆ; ಕಪ್ಪಲಿ.

ದೊಠಾರ (ನಾ). ಗಟ್ಟಿಮನಸ್ಸುಳ್ಳವನು; ದೃಢಚಿತ್ತ. ~ಇಸು = ದೃಢವಾಗಿ ನಿಲ್ಲು.

ದೊಡ್ಡ (ನಾ). ೧. ವೃದ್ಧ; ಹಿರಿಯ. (ಗು). ೨. ದೊಡ್ಡದಾದ; ಹಿರಿದಾದ. ೩. ಮುಖ್ಯವಾದ. ~ತನ = ಘನತೆ; ಹಿರಿಮೆ.

~ಪತ್ರೆ = ಸುಗಂಧಯುಕ್ತವಾದ ಒಂದು ಸಸ್ಯ ಮತ್ತು ಅದರ ಎಲೆ. ~ಮನಸ್ಸು = ಔದಾರ್ಯ; ಉದಾರತ್ವ. ~ಮಾರ್ಗ =೧. ರಾಜಬೀದಿ; ದೊಡ್ಡ ರಸ್ತೆ. ೨. ಆನೆ, ಕುದುರೆಗಳ ಸವಾರಿಯಿಂದ ಕಿರುದೊಡೆ ಯಲ್ಲುಂಟಾಗುವ ದಡ್ಡು. ೩. ಒಳ್ಳೆಯ ರೀತಿ, –ನಡತೆ.

**ದೊಡ್ಡಸ್ತಿಕೆ** (ನಾ). ೧. ಘನತೆ; ದೊಡ್ಡತನ. ೨. ಠೀವಿ; ಆಡಂಬರ.

**ದೊಡ್ಡಿ** (ನಾ). ೧. (ತೊಂಡು) ದನಗಳನ್ನು ಕಟ್ಟುವ ಸ್ಥಳ; ಪೌಂಡಿ. ೨. ಆನೆಗಳನ್ನು ಹಿಡಿಯಲು ಮಾಡಿದ ಕುಳಿ; ಕಪ್ಪು.

**ದೊಡ್ಡಿತು** (ನಾ). ದೊಡ್ಡದು; ಹಿರಿದು.

**ದೊಡ್ಡಿತ್ತು** = ದೊಡ್ಡಿತು.

**ದೊಡ್ಡಿಪತ್ರೆ** = ದೊಡ್ಡಪತ್ರೆ.

**ದೊಡ್ಡು** (ನಾ). ಕಾಡುಕೋಣ.

**ದೊಡ್ಡೆ** (ನಾ). ಚಿಣ್ಣಿಕೋಲಾಟದಲ್ಲಿ ಬಳಸುವ ಕೋಲು; ದಾಂಡು.

**ದೊಣೆ** (ನಾ). ೧. ಬಂಡೆಗಳ ಮಧ್ಯದ ಸಣ್ಣ ಜಲಾಶಯ. ೨. ಬತ್ತಳಿಕೆ; ತೂಣೀರ. ೩. ತಗ್ಗು; ಹಳ್ಳ. ೪. ದೋಣಿ.

**ದೊಣ್ಣೆ** (ನಾ). ಬಡಿಗೆ; ಕೋಲು.

**ದೊಣ್ಣೆಕಾಟ** (ನಾ). ಓತಿಕೇತ; ಸರಟ.

**ದೊದ್ದೆ** (ನಾ). ೧. ಗುಂಪು; ಸಮೂಹ. ೨. ಗಜಿಬಿಜಿ; ಗೊಂದಲ. ೩. ತೊದಲು ಮಾತು; ಅಸ್ಪಷ್ಟವಾದ ಮಾತು.

**ದೊನ್ನೆ** (ನಾ). ಎಲೆಯಿಂದ ಮಾಡಿದ ಬಟ್ಟಲು.

**ದೊಪ್ಪೆ** = ದೊನ್ನೆ.

**ದೊಮ್ಮಳಿಸು** (ಕ್ರಿ). ೧. ಸಂಭ್ರಮದಿಂದ ಸುತ್ತಾಡು. ೨. ಗಾಬರಿ ಪಡು.

**ದೊರಕು** (ಕ್ರಿ). ಲಭಿಸು; ಕೈವಶವಾಗು.

**ದೊರಗು** (ನಾ). ಒರಟು; ನಯವಲ್ಲದುದು.

**ದೊರೆ** (ಕ್ರಿ). ೧. ಪಡೆ; ಹೊಂದು. (ನಾ). ೨. ಸಮಾನ; ಹೋಲಿಕೆ. ೩. ರಾಜ; ಅರಸ. ೪. ಯೋಗ್ಯವಾಗುವಿಕೆ; ಔಚಿತ್ಯ. ೫. ಪ್ರಸಿದ್ಧಿ; ಹೆಸರುವಾಸಿ. ~ಕೆ(ಗೆ)ಡು = ಯೋಗ್ಯತೆಯನ್ನು ಕಳೆದುಕೊಳ್ಳು. ~ಕೊಳು = ಪ್ರಾಪ್ತವಾಗು; ಸಿಕ್ಕು. ~ತನ = ೧. ಅರಸೊತ್ತಿಗೆ. ೨. ದರ್ಪ; ಅಧಿಕಾರ. ~ಪೆ(ವೆ)ಱು(ರು) = ಪ್ರಸಿದ್ಧಿಯನ್ನು ಹೊಂದು, –ಪಡೆ. ~ಸಾನಿ = ಒಡತಿ; ಯಜಮಾನಿ.

**ದೊಸರು** (ನಾ). ಹಳ್ಳ; ತಗ್ಗು.

**ದೊಳ್ಳಾಸ** (ನಾ). ವಂಚನೆ; ಮೋಸ.

**ದೊಳ್ಳು** = ಡೊಳ್ಳು.

**ದೋಚು** (ಕ್ರಿ). ಕಿತ್ತುಕೊಳ್ಳು; ಕವರು; ಅಪಹರಿಸು.

**ದೋಟ** (ನಾ). ೧. ಕಾಯಿ, ಹಣ್ಣು ಮುಂತಾದುವುಗಳನ್ನು ಕೀಳಲು ಉಪಯೋಗಿಸುವ ಸಾಧನ; ಕೊಕ್ಕೆಕೋಲು. ೨. ಆನೆಯನ್ನು ಹದ್ದಿನಲ್ಲಿಡಲು ಬಳಸುವ ಆಯುಧ; ಅಂಕುಶ.

**ದೋಣಿ** (ನಾ). ೧. ನಾವೆ; ತೆಪ್ಪ. ೨. ಅಗಲ ಬಾಯಿಯ ಪಾತ್ರೆ; ಬಾನಿ. ೩. ನೀರು ಹರಿದು ಹೋಗಲು ಮಾಡಿರುವ ಕೊಳವೆ; ಹರಿನಾಳಿಗೆ.

**ದೋಣಿಕೊಂಡ** (ನಾ). ದೊನ್ನೆಯಾಕಾರದ ಹರವಿ, –ಮಡಕೆ.

**ದೋಣು** (ನಾ). ೧. ದೊಡ್ಡಹೊಟ್ಟೆ; ಡೊಳ್ಳು. ೨. ಬೆತ್ತಲೆಯಾಗಿರುವ ಸ್ಥಿತಿ; ನಗ್ನತೆ. ೩. ಒಂದು ಬಗೆಯ ಚರ್ಮವಾದ್ಯ.

**ದೋತರ** = ದೋತ್ರ.

**ದೋತ್ರ** (ನಾ). ಪಂಚೆ.

**ದೋಪು** (ನಾ). ಸೂರೆ; ಸುಲಿಗೆ.

**ದೋಬಿ** (ನಾ). ಅಗಸ; ಮಡಿವಳ.

**ದೋಮೆ** (ನಾ). ೧. ಸೊಳ್ಳೆ. ೨. ಗುಂಗಾಡು; ನೊರಜು.

**ದೋರ** (ನಾ). ಬಾಗಿಲು; ದ್ವಾರ.

ದೋರೆ (ನಾ). ೧. ಮಾಗುವ ಸ್ಥಿತಿಗೆ ಬಂದಿರುವ ಕಾಯಿ. ೨. ಒಂದು ಬಗೆಯ ಆಭರಣ. (ಗು). ೩. ಹಣ್ಣಾಗಲು ಬಂದ.

ದೋಱು(ರು) (ನಾ). ಪೊಟರೆ; ಡೊಗರು.

ದೋರ್ದಂಡ (ನಾ). ತೋಳು; ಬಾಹು.

ದೋರ್ಬಲ (ನಾ). ತೋಳಿನ ಶಕ್ತಿ; ಬಾಹುಬಲ.

ದೋರ್ವಲ(ಳ) = ದೋರ್ಬಲ.

ದೋಲ(ಳ) (ನಾ). ೧. ಅಲುಗಾಡುವಿಕೆ; ತೂಗಾಡುವಿಕೆ. ೨. ಉಯ್ಯಾಲೆ; ಜೋಕಾಲಿ. ೩. ಪಲ್ಲಕ್ಕಿ. (ಗು). ೪. ಓಲಾಡುವ; ತೂಗಾಡುವ. ~ಆಂದೋಲ=(ಮನಸ್ಸಿನ) ಹೊಯ್ದಾಟ.

ದೋಲಿ (ನಾ). ಡೋಲಿ; ಪಲ್ಲಕ್ಕಿ.

ದೋವತಿ (ನಾ). ಪಂಚೆ; ದೋತರ.

ದೋಷ (ನಾ). ೧. ತಪ್ಪು; ಅಪರಾಧ. ೨. ಕುಂದು. ೩. ಪಾಪ; ಕೆಟ್ಟಕಾರ್ಯ. ೪. ಕೆಟ್ಟಗುಣ; ದುರ್ಗುಣ. ೫. ಕತ್ತಲು; ಅಂಧಕಾರ. ೬. ಕೊರತೆ; ನ್ಯೂನತೆ. ೭. ವಾತ, ಪಿತ್ತ, ಶ್ಲೇಷ್ಮಗಳೆಂಬ ಮೂರು ಬಗೆಯ ದೋಷಗಳು. ~ಗ್ರಾಹಿ = ತಪ್ಪುಗಳನ್ನು ಕಂಡುಹಿಡಿಯುವವನು.

ದೋಷಾಕರ (ನಾ). ೧. ರಾತ್ರಿಯಲ್ಲಿ ಬೆಳಕನ್ನು ಚೆಲ್ಲುವವನು; ಚಂದ್ರ. ೨. ದೋಷಗಳ ರಾಶಿ, -ಸಮೂಹ.

ದೋಷಿ (ನಾ). ೧. ತಪ್ಪುಮಾಡಿದವನು; ಅಪರಾಧಿ. ೨. ಕಪ್ಪು ಕಲೆಗಳಿಂದ ಕೂಡಿದವನು; ಚಂದ್ರ. (ಗು). ೩. ದೋಷದಿಂದ ಕೂಡಿದ; ಕೆಟ್ಟಗುಣವುಳ್ಳ.

ದೋಸ = ದೋಷ.

ದೋಸೆ (ನಾ). ಒಂದು ಬಗೆಯ ತಿಂಡಿ.

ದೋಸ್ತಿ (ನಾ). ೧. ಸ್ನೇಹ; ಗೆಳೆತನ. ೨. ಗೆಳೆಯ; ಸ್ನೇಹಿತ.

ದೋಹ (ನಾ). ೧. ಹಾಲನ್ನು ಹಿಂಡುವಿಕೆ. ೨. ಹಾಲು. ೩. ವಂಚನೆ; ದ್ರೋಹ.

ದೋಹದ (ನಾ). ೧. ಅಪೇಕ್ಷೆ; ಬಯಕೆ. ೨. ಗರ್ಭಿಣಿಯ ಬಯಕೆ.

ದೋಹನ (ನಾ). ಹಾಲು ಹಿಂಡುವಿಕೆ.

ದೋಹಲ(ಳ) = ದೋಹದ.

ದೌಡಾಯಿಸು (ಕ್ರಿ). ಓಡು; ಧಾವಿಸು.

ದೌಡು (ನಾ). ೧. ಓಡುವುದು; ಓಟ. ೨. ದಂಡಯಾತ್ರೆ; ದಾಳಿ.

ದೌತಿ (ನಾ). ಮಸಿಯ ಕುಡಿಕೆ.

ದೌತ್ಯ (ನಾ). ದೂತನ ಕೆಲಸ; ರಾಯಭಾರ.

ದೌರ್ಜನ್ಯ (ನಾ). ದುಷ್ಟತನ; ಕೆಟ್ಟತನ.

ದೌರ್ಭಾಗ್ಯ (ನಾ). ದುರದೃಷ್ಟ; ದುರ್ದೈವ.

ದೌಲತ್ತು (ನಾ). ೧. ಐಶ್ವರ್ಯ; ಸಂಪತ್ತು. ೨. ಅಧಿಕಾರದ ದರ್ಪ, -ಠೀವಿ.

ದೌವಾರಿಕ (ನಾ). ಬಾಗಿಲು ಕಾಯುವವನು; ಪ್ರತಿಹಾರಿ.

ದೌಹಿತ್ರ (ನಾ). ಮಗಳ ಮಗ; ಮೊಮ್ಮಗ.

ದ್ಯುತಿ (ನಾ). ೧. ಬೆಳಕು; ಕಾಂತಿ. ೨. ಕಿರಣ; ಕದಿರು.

ದ್ಯುನದಿ (ನಾ). ದೇವಗಂಗೆ; ಸುರನದಿ.

ದ್ಯುಮಣಿ (ನಾ). ಆಕಾಶದಲ್ಲಿ ಹೊಳೆಯುವ ರತ್ನ; ಸೂರ್ಯ; ನೇಸರು.

ದ್ಯುಮುಖ (ನಾ). ಹಗಲಿನ ಆರಂಭ; ಬೆಳಗು; ಮುಂಜಾವ.

ದ್ಯೂತ (ನಾ). ೧. ಜೂಜು. ೨. ಪಗಡೆಯಾಟ; ಲೆತ್ತ.

ದ್ಯೋತ (ನಾ). ಹೊಳಪು; ಬೆಳಕು.

ದ್ಯೋತಕ (ನಾ). ೧. ಪ್ರಕಾಶಪಡಿಸುವಿಕೆ. ೨. ಸೂಚಿಸುವಿಕೆ. (ಗು). ೩. ಪ್ರಕಾಶಗೊಳಿಸುವ. ೪. ಸೂಚಿಸುವ; ಹೊರಗೆಡಹುವ.

ದ್ರಮ್ಮ (ನಾ). ಒಂದು ಬಗೆಯ ನಾಣ್ಯ.

ದ್ರವ (ನಾ). ೧. ಹರಿಯುವ ಸ್ವಭಾವವುಳ್ಳ ವಸ್ತು. ೨. ತೀವ್ರಗತಿ; ರಭಸ. ೩. ಬಟ್ಟಿ ಇಳಿಸಿದುದು; ಅರ್ಕ. ೪. ರಸ. (ಗು).

೫. ಹರಿಯುವ ಸ್ವಭಾವದ; ನೀರಾದ. ~ಇಸು = ೧. ಪ್ರವಹಿಸು. ೨. ನೀರಾಗು; ಕರಗು. ೩. ಮರುಗು; ಕನಿಕರಗೊಳ್ಳು.
ದ್ರವಣ (ನಾ). ಹರಿಯುವಿಕೆ; ಪ್ರವಹಿಸುವಿಕೆ.
ದ್ರವಿಡ (ನಾ). ತಮಿಳುನಾಡು, ಅಲ್ಲಿಯ ಜನ ಮತ್ತು ಭಾಷೆ.
ದ್ರವಿಳ(ಳ) = ದ್ರವಿಡ.
ದ್ರವ್ಯ (ನಾ). ೧. ವಸ್ತು; ಪದಾರ್ಥ. ೨. ಧನ; ಸಂಪತ್ತು. ೩. ಮದ್ಯ; ಹೆಂಡ. ೪. ಒಂದು ಬಗೆಯ ಲೋಹ; ಕಂಚು.
ದ್ರಷ್ಟಾರ (ನಾ). ಆತ್ಮತತ್ತ್ವವನ್ನು ಕಂಡುಕೊಂಡವನು; ಸಾಕ್ಷಾತ್ಕಾರವನ್ನು ಪಡೆದುಕೊಂಡವನು; ಋಷಿ.
ದ್ರಾಕ್ಷಿ (ನಾ). ಒಂದು ಜಾತಿಯ ಬಳ್ಳಿ ಮತ್ತು ಅದರ ಹಣ್ಣು.
ದ್ರಾಕ್ಷೆ = ದ್ರಾಕ್ಷಿ.
ದ್ರಾಬೆ (ನಾ). ೧. ಎಗ್ಗ; ಪೆದ್ದ. ೨. ಹೊಲಸುತನ; ಕೊಳಕುತನ. ೩. ಹೊಲಸುಮನುಷ್ಯ; ಕೊಳಕ.
ದ್ರಾವಕ (ನಾ). ೧. ಹರಿಯುವಂತೆ ಮಾಡುವಿಕೆ. ೨. ಶೋಧಿಸಿ ಮಾಡಿದ ಔಷಧ. ೩. ಲೋಹಗಳನ್ನು ಕರಗಿಸುವ ಸಾಧನ. ೪. ಕಳ್ಳ; ತುಡುಗ. ೫. ಬುದ್ಧಿವಂತ; ಜಾಣ. ೬. ಜೇನುಮೇಣ. ೭. ಚಂದ್ರಕಾಂತಶಿಲೆ.
ದ್ರಾವಿಡ = ದ್ರವಿಡ. ~ಪ್ರಾಣಾಯಾಮ = ಸುಲಭವಾಗಿ ಆಗುವ ಕೆಲಸವನ್ನು ಸುತ್ತಿ ಬಳಸಾಗಿ ಮಾಡುವಿಕೆ.
ದ್ರುತ (ನಾ). ೧. ಓಡುವಿಕೆ; ಓಟ. ೨. ವೇಗ; ರಭಸ ೩. ಚೇಳು. ೪. ಹಾಸ್ಯನಟ. (ಗು). ೫. ಮುನ್ನುಗ್ಗಿದ; ರಭಸದಿಂದ ಓಡಿದ. ೬. ಕರಗಿದ. ~ಗತಿ = ತೀವ್ರವಾದ ನಡಗೆ; ವೇಗವಾದ ಚಲನೆ.
ದ್ರುತಿ (ನಾ). ಕರಗುವಿಕೆ; ನೀರಾಗುವಿಕೆ.
ದ್ರುಮ (ನಾ). ಮರ; ವೃಕ್ಷ.
ದ್ರುಹಿಣ (ನಾ). ೧. ಬ್ರಹ್ಮ. ೨. ಶಿವ.
ದ್ರೋಣ (ನಾ). ೧. ದೋಣಿಯಾಕಾರದ ತೊಟ್ಟಿ; ಬಾನಿ. ೨. ಒಂದು ಅಳತೆ. ೩. ಪಾಂಡವ ಮತ್ತು ಕೌರವರ ಗುರು. ೪. ತುಂಬೆಗಿಡ. ೫. ದೊನ್ನೆ. ೬. ಬಿಲ್ಲು. ೭. ಪ್ರಳಯಕಾಲದ ಮೋಡ. ೮. ಕಾಗೆ.
ದ್ರೋಣಾಮುಖ (ನಾ). ಜಲಮಾರ್ಗಗಳನ್ನುಳ್ಳ ಪಟ್ಟಣ.
ದ್ರೋಣಿ (ನಾ). ೧. ದೋಣಿ; ನಾವೆ. ೨. ತೊಟ್ಟಿ; ಬಾನಿ. ೩. ದರಿ; ಕಣಿವೆ. ೪. ನೀಲಿಯ ಗಿಡ.
ದ್ರೋಹ (ನಾ). ಕೇಡನ್ನೆಣಿಸುವುದು; ವಿಶ್ವಾಸಘಾತ.
ದ್ರೋಹಿ (ನಾ). ಕೇಡನ್ನು ಬಗೆಯುವವನು; ವಿಶ್ವಾಸಘಾತಕ.
ದ್ವಂದ್ವ (ನಾ). ೧. ಜೋಡಿ; ಜತೆ. ೨. ಎರಡು ವಿರುದ್ಧ ವಸ್ತುಗಳ ಜೋಡಿ. ೩. ಜಗಳ; ಕಲಹ. ೪. ಸಂದೇಹ; ಸಂಶಯ. ೫. ರಹಸ್ಯ; ಗುಟ್ಟು. ೬. ಒಂದು ಸಮಾಸದ ಹೆಸರು. ~ಚರ = ಚಕ್ರವಾಕಪಕ್ಷಿ. ~ಯುದ್ಧ = ಇಬ್ಬರು ಪರಸ್ಪರ ಮಾಡುವ ಮಲ್ಲಯುದ್ಧ; ಜಟ್ಟಿಕಾಳಗ.
ದ್ವಯ (ನಾ). ಜತೆ; ಜೋಡಿ.
ದ್ವಾದಶ (ನಾ). ೧. ಹನ್ನೆರಡು. (ಗು). ೨. ಹನ್ನೆರಡನೆಯ.
ದ್ವಾದಶಿ (ನಾ). ಪಕ್ಷದ ಹನ್ನೆರಡನೆಯ ದಿನ.
ದ್ವಾಪರ (ನಾ). ೧. ದಾಳದ ಒಂದು ಪಕ್ಕ. ೨. ಶಂಕೆ; ಸಂದೇಹ. ೩. ನಾಲ್ಕು ಯುಗಗಳಲ್ಲಿ ಮೂರನೆಯದು.
ದ್ವಾರ (ನಾ). ೧. ಬಾಗಿಲು; ಕದ. ೨. ಮಾರ್ಗ; ಉಪಾಯ. ~ಪ(ವ)ಟ್ಟ = ೧. ಅಗಸೆ; ಹೆಬ್ಬಾಗಿಲು. ೨. ಹೊಸ್ತಿಲು. ೩. ಬಾಗಿಲಿನ

ಚೌಕಟ್ಟು; ದ್ವಾರಬಂಧ. ~ಪಾಲಕ =ಬಾಗಿಲು ಕಾಯುವವನು; ಪ್ರತಿಹಾರಿ.

ದ್ವಿ (ನಾ). ಎರಡು; ಉಭಯ. ~ಗುಣ =ಎರಡುಪಟ್ಟು; ಎರಡರಷ್ಟು. ~ಜನ್ಮ =ಬ್ರಾಹ್ಮಣ. ~ಪದಿ = ಎರಡು ಸಾಲುಗಳುಳ್ಳ ಒಂದು ಛಂದೋಪ್ರಭೇದ. ~ಮುಖ = ೧. ಎರಡು ತಲೆಯುಳ್ಳುದು. ೨. ಎರಡು ಬಗೆ, –ರೀತಿ. ೩. ಒಂದು ಜಾತಿಯ ಹಾವು; ಇರ್ತಲೆಗುಯ್ಯ. ~ರೇಫ=ದುಂಬಿ; ಅಳಿ.

ದ್ವಿಗು (ನಾ). ೧. ಎರಡು ಹಸುಗಳನ್ನುಳ್ಳವನು. ೨. ಒಂದು ಸಮಾಸದ ಹೆಸರು.

ದ್ವಿಜ (ನಾ). ೧. ಎರಡು ಹುಟ್ಟುಗಳುಳ್ಳವನು; ಬ್ರಾಹ್ಮಣ. ೨. ಹಕ್ಕಿ. ೩. ಹಾವು. ೪. ಚಂದ್ರ. ೫. ಬ್ರಾಹ್ಮಣ, ಕ್ಷತ್ರಿಯ ಮತ್ತು ವೈಶ್ಯ ಎಂಬ ಮೂರು ವರ್ಣಗಳಲ್ಲಿ ಯಾವುದಾದರೂ ಒಂದಕ್ಕೆ ಸೇರಿದವನು. ೬. ಹಲ್ಲು. ~ಗಮನ = ಪಕ್ಷಿವಾಹನ; ವಿಷ್ಣು.

ದ್ವಿತೀಯ (ನಾ). ೧. ಜೊತೆಗಾರ; ಸಂಗಡಿಗ. (ಗು). ೨. ಎರಡನೆಯ.

ದ್ವಿತೀಯೆ (ನಾ). ೧. ಹೆಂಡತಿ; ಪತ್ನಿ. ೨. ಪಕ್ಷದ ಎರಡನೆಯ ದಿನ. ೩. (ವ್ಯಾಕರಣದಲ್ಲಿ) ಎರಡನೆಯ ವಿಭಕ್ತಿ.

ದ್ವಿತ್ವ (ನಾ). ೧. ಎರಡು; ಜೋಡಿ. ೨. ಒತ್ತಕ್ಷರ; ದಡ್ಡಕ್ಕರ.

ದ್ವಿಪ (ನಾ). ಎರಡು ಘಟ್ಟದಲ್ಲಿ ನೀರು ಮುಂತಾದುವನ್ನು ಕುಡಿಯುವುದು; ಆನೆ.

ದ್ವಿರುಕ್ತಿ (ನಾ). ಒಂದೇ ಮಾತನ್ನು ಎರಡು ಸಲ ಹೇಳುವುದು.

ದ್ವೀಪ (ನಾ). ನೀರಿನಿಂದ ಸುತ್ತುವರಿದ ಭೂಭಾಗ; ಅಂತರೀಪ.

ದ್ವೀಪಿ (ನಾ). ಹುಲಿ; ವ್ಯಾಘ್ರ.

ದ್ವೇಷ (ನಾ). ಹಗೆತನ; ವೈರ.

ದ್ವೇಷಿ (ನಾ). ಹಗೆ; ವೈರಿ.

ದ್ವೈತ (ನಾ). ೧. ಎರಡು; ಜೊತೆ. ೨. ಭೇದ. ೩. ಬ್ರಹ್ಮ ಮತ್ತು ಜೀವ ಬೇರೆ ಬೇರೆ ಎಂದು ಪ್ರತಿಪಾದಿಸುವ ಮತ.

ದ್ವೈಮಾತುರ (ನಾ). ಇಬ್ಬರು ತಾಯಂದಿರನ್ನುಳ್ಳವನು; ಗಣೇಶ.



# ಧ

ಧ (ನಾ). ಕನ್ನಡ ವರ್ಣಮಾಲೆಯ ಮೂವತ್ತೊಂಬತ್ತನೆಯ ಅಕ್ಷರ.

ಧಕ್ಕಡ = ದಕ್ಕಡ.

ಧಕ್ಕು (ನಾ). ಕಮ್ಮಾರ ಅಥವಾ ಅಕ್ಕಸಾಲೆ ಉಪಯೋಗಿಸುವ ಅಡಿಗಲ್ಲು; ಅದ್ದಗಣಿ.

ಧಕ್ಕೆ (ನಾ). ೧. ಅಪಾಯ; ತೊಂದರೆ. ೨. ಪಾತಿ; ಮಡಿ. ೩. ಹಡಗು ನಿಲ್ಲುವ ಸ್ಥಳ; ಬಂದರು; ರೇವು.

ಧಗಧಗಿಸು (ಕ್ರಿ). ಸುಡು; ಜ್ವಲಿಸು.

ಧಗೆ = ದಗೆ.

ಧಟ್ಟಿಸು = ದಟ್ಟಿಸು.

ಧಡಪಡಿಸು (ಕ್ರಿ). ೧. ಪ್ರಯತ್ನಿಸು. ೨. ಗಡಿಬಿಡಿ ಮಾಡು. ೩. ಚಡಪಡಿಸು; ಒದ್ದಾಡು.

ಧಡೂತಿ = ದಡೂತಿ.

ಧಣಿ (ನಾ). ಒಡೆಯ; ಯಜಮಾನ.

ಧನ (ನಾ). ಹಣ ; ಸಂಪತ್ತು.
ಧನಂಜಯ (ನಾ). ೧. ಅಗ್ನಿ ; ಬೆಂಕಿ. ೨. ಅರ್ಜುನ.
ಧನದ (ನಾ). ಕುಬೇರ. ~ಸಖ = ಶಿವ.
ಧನಿಕ (ನಾ). ಸಿರಿವಂತ ; ಸಾಹುಕಾರ.
ಧನು (ನಾ). ೧. ಬಿಲ್ಲು ; ಧನುಸ್ಸು. ೨. ಜ್ಯೋತಿಷ್ಚಕ್ರದಲ್ಲಿ ಒಂದು ರಾಶಿಯ ಹೆಸರು.
ಧನುರ್ಗುಣ (ನಾ). ಬಿಲ್ಲಿನ ಹೆದೆ ; ಮೌರ್ವಿ.
ಧನುರ್ಮಾಸ (ನಾ). ಸೌರಮಾನದ ಒಂಬತ್ತನೆಯ ತಿಂಗಳು ; ಮಾರ್ಗಶಿರಮಾಸ.
ಧನುರ್ವಾತ (ನಾ). ಸೆಳವುರೋಗ; ಸೆಟೆರೋಗ.
ಧನುಷ್ಕೋಟಿ (ನಾ). ೧. ಬಿಲ್ಲಿನ ತುದಿ ; ಕೊಪ್ಪು. ೨. ದಕ್ಷಿಣಭಾರತದ ಒಂದು ಪುಣ್ಯಕ್ಷೇತ್ರ.
ಧನುಸ್ಸು = ಧನು.
ಧನ್ಯ (ನಾ). ೧. ಪುಣ್ಯವಂತ ; ಕೃತಾರ್ಥ. ೨. ಸಿರಿವಂತ ; ಧನಿಕ. (ಗು). ೩. ಕೃತಕೃತ್ಯನಾದ ; ಕೃತಾರ್ಥನಾದ.
ಧನ್ವ (ನಾ). ೧. ಬಿಲ್ಲು. ೨. ಮರುಭೂಮಿ ; ಮರಳುಗಾಡು.
ಧನ್ವಂತರಿ (ನಾ). ೧. ಸೂರ್ಯ. ೨. ದೇವತೆಗಳ ವೈದ್ಯ.
ಧಮನಿ (ನಾ). ೧. ರಕ್ತನಾಳ. ೨. ನಳಿಕೆ ; ನಾಳ ; ಕೊಳವೆ.
ಧಮ್ಮಿಲ್ಲ (ನಾ). ತುರುಬು ; ಮುಡಿ.
ಧರಣ (ನಾ). ೧. ಧರಿಸುವುದು ; ಹೊರುವುದು. ೨. ಒಂದು ಬಗೆಯ ನಾಣ್ಯ.
ಧರಣಿ (ನಾ). ಭೂಮಿ; ನೆಲ. ~ಸುತೆ = ಸೀತೆ.
ಧರಣಿಜ (ನಾ). ಮರ; ವೃಕ್ಷ.
ಧರಣಿಪ (ನಾ). ಭೂಮಿಯ ಅಧಿಪತಿ ; ರಾಜ.
ಧರಧುರ (ನಾ). ಆಧಿಕ್ಯ ; ಹೆಚ್ಚಳ.
ಧರಾಮರ (ನಾ). ಬ್ರಾಹ್ಮಣ ; ವಿಪ್ರ.
ಧರಿತ್ರಿ = ಧರಣಿ.
ಧರಿಸು (ಕ್ರಿ). ೧. ತೊಡು ; ಹಾಕಿಕೊಳ್ಳು. ೨. ಹೊರು.
ಧರೆ = ಧರಣಿ.
ಧರ್ಮ (ನಾ). ೧. ಧಾರಣಮಾಡಿದುದು. ೨. ನಿಯಮ. ೩. ನ್ಯಾಯ. ೪. ಕರ್ತವ್ಯ. ೫. ಪವಿತ್ರಕಾರ್ಯ. ೬. ವರ್ತನೆ ; ನಡವಳಿಕೆ. ೭. ನೀತಿ. ೮. ಸದ್ಗುಣ. ೯. ಪುಣ್ಯ. ೧೦. ಭಿಕ್ಷೆ. ೧೧. ಅಹಿಂಸೆ. ೧೨. ಯಜ್ಞ. ೧೩. ಸ್ವಭಾವ. ೧೪. ಯಮ. ೧೫. ಶಿವ. ೧೬. ಅರಸ; ದೊರೆ. ೧೭. ಉತ್ಪಾತ. ೧೮. ಚಾಪ; ಬಿಲ್ಲು. ೧೯. ವಿಷ; ಗರಳ. ೨೦. ನಾಲ್ಕು ಪುರುಷಾರ್ಥಗಳಲ್ಲಿ ಒಂದು. ~ಕ(ಗ)ಳ್ = ಬಿಟ್ಟಿಯಾಗಿ ಕೊಡುವ ಹೆಂಡ. ~ಕಾರ್ಯ = ಒಳ್ಳೆಯ ಕೆಲಸ ; ಸತ್ಕಾರ್ಯ. ~ಕ್ಷೇತ್ರ = ೧. ಪುಣ್ಯಕ್ಷೇತ್ರ. ೨. ಪಾಂಡವರಿಗೂ ಕೌರವರಿಗೂ ಯುದ್ಧ ನಡೆದ ಸ್ಥಳ; ಕುರುಕ್ಷೇತ್ರ. ~ಛತ್ರ = ಧರ್ಮಶಾಲೆ. ~ದ್ರೋಹ = ಧರ್ಮಕಾರ್ಯಗಳಿಗೆ ಅಡ್ಡಿಪಡಿಸುವುದು. ~ಪತ್ನಿ = ಶಾಸ್ತ್ರೋಕ್ತವಾಗಿ ಮದುವೆಯಾದ ಹೆಂಡತಿ. ~ರಾಜ = ೧. ಯಮ. ೨. ಯುಧಿಷ್ಠಿರ. ೩. ಜಿನ. ೪. ಬುದ್ಧ. ~ಶಾಲೆ = ೧. ಪ್ರವಾಸಿಗರ ತಂಗುಮನೆ. ೨. ಬಡವರ ಆಶ್ರಯಸ್ಥಳ; ಛತ್ರ. ~ಸಂಕಟ = ಉಭಯಸಂಕಟ.
ಧರ್ಮಿ (ನಾ). ಧರ್ಮವನ್ನು ಪಾಲಿಸುವವನು.
ಧರ್ಷ (ನಾ). ೧. ಧೈರ್ಯ ; ದಿಟ್ಟತನ. ೨. ಸೊಕ್ಕು ; ಅಹಂಕಾರ. ೩. ಹಿಂಸೆ.
ಧವ (ನಾ). ೧. ಗಂಡ ; ಪತಿ. ೨. ಒಡೆಯ ; ಯಜಮಾನ.
ಧವಲ(ಳ) (ನಾ). ೧. ಬಿಳುಪು ; ಬಿಳಿಯ ಬಣ್ಣ. ೨. ಎತ್ತು. ೩. ಕರ್ಪೂರ. (ಗು). ೪. ಬಿಳುಪಾದ. ೫. ಸುಂದರವಾದ. ೬. ಶ್ರೇಷ್ಠವಾದ. ~ಆಗಾರ = ಸುಣ್ಣ

ಬಳಿದ ಮನೆ. ~ಛತ್ರ = ರಾಜರಿಗೆ ಹಿಡಿಯುವ ಬಿಳಿಯ ಕೊಡೆ; ಬೆಳ್ಗೊಡೆ. ~ಪಕ್ಷ = ೧. ಶುಕ್ಲಪಕ್ಷ. ೨. ಹಂಸಪಕ್ಷಿ.

ಧಾಂಡಿಗ (ನಾ). ೧. ಗಟ್ಟಿಮುಟ್ಟಾದ ಮನುಷ್ಯ; ಬಲಶಾಲಿ. ೨. ದಡಿಯ.

ಧಾಟಿ (ನಾ). ೧. ರೀತಿ; ಶೈಲಿ. ೨. ದಾಳಿ.

ಧಾಡಸಿ (ಗು). ಗಟ್ಟಿಮುಟ್ಟಾದ; ಸಾಹಸಿಯಾದ; ಧೈರ್ಯಶಾಲಿಯಾದ.

ಧಾಡಿ (ನಾ). ತೊಂದರೆ; ಕಷ್ಟ.

ಧಾತ (ನಾ). ಬ್ರಹ್ಮ.

ಧಾತಕಿ (ನಾ). ಒಂದು ಬಗೆಯ ವನಸ್ಪತಿ; ಮಂದಾಟಿಮೊಗ್ಗು.

ಧಾತು (ನಾ). ೧. ಮೂಲವಸ್ತು. ೨. ಪರಮಾತ್ಮ. ೩. ಇಟ್ಟ ವಸ್ತು. ೪. ಹುಟ್ಟು. ೫. ಕ್ರಿಯಾಪದದ ಮೂಲರೂಪ. ೬. ಅರುವತ್ತು ಸಂವತ್ಸರಗಳಲ್ಲಿ ಒಂದು. ೭. ಶಕ್ತಿ; ಸಾಮರ್ಥ್ಯ. ೮. ಲೋಹ. ೯. ಕಾವಿ, ಜಾಜು ಮುಂತಾದ ಕೆಂಪು ಬಣ್ಣದ ಕಲ್ಲು. ೧೦. ರಕ್ತ, ಮಾಂಸ, ಅಸ್ಥಿ, ವೀರ್ಯ, ಮಜ್ಜೆ ಮುಂತಾದ ದೇಹದಲ್ಲಿಯ ಸಪ್ತಧಾತುಗಳು. ೧೧. ರೂಪ, ರಸ, ಗಂಧಾದಿ ವಿಷಯ.

ಧಾತ್ರಿ (ನಾ). ೧. ಭೂಮಿ; ನೆಲ. ೨. ತಾಯಿ; ಜನನಿ. ೩. ಸಾಕುತಾಯಿ. ~ಫಲ = ನೆಲ್ಲಿಕಾಯಿ; ಆಮಲಕ.

ಧಾನುಷ್ಕ (ನಾ). ಬಿಲ್ಲುಗಾರ.

ಧಾನ್ಯ (ನಾ). ದವಸ; ಕಾಳುಕಡಿ.

ಧಾನ್ಯಕ (ನಾ). ಕೊತ್ತುಂಬರಿ ಬೀಜ; ಧನಿಯ.

ಧಾಬೆ (ನಾ). ದನಕಟ್ಟುವ ಸ್ಥಳ; ಕೊಟ್ಟಿಗೆ.

ಧಾಮ (ನಾ). ೧. ಮನೆ; ವಾಸಸ್ಥಳ. ೨. ದೇಹ; ಶರೀರ. ೩. ಕಿರಣ; ಕದಿರು.

ಧಾರಣ (ನಾ). ೧. ಧರಿಸುವಿಕೆ. ೨. ಗ್ರಹಿಸುವಿಕೆ. ೩. ನಿಗ್ರಹ; ಹತೋಟಿ; ಹಿಡಿತ.

ಧಾರಣೆ ೧. = ಧಾರಣ. ೨. ದರ; ಬೆಲೆ.

ಧಾರಾಗೃಹ (ನಾ). ಕಾರಂಜಿಮನೆ; ಜಲಗೃಹ.

ಧಾರಾಧರ (ನಾ). ಮೋಡ; ಮುಗಿಲು.

ಧಾರಾಳ (ನಾ). ಔದಾರ್ಯ; ಹೃದಯವೈಶಾಲ್ಯ.

ಧಾರಾಳಿ (ನಾ). ಧಾರಾಳವಾಗಿ ದಾನ ಮಾಡುವವನು; ಉದಾರಿ.

ಧಾರಿಣಿ = ಧರಣಿ.

ಧಾರುಣಿ = ಧರಣಿ.

ಧಾರೆ (ನಾ). ೧. ಒಂದೇ ಸಮನೆ ನೀರು ಸುರಿಯುವಿಕೆ; ವರ್ಷ. ೨. ಕತ್ತಿ ಮುಂತಾದುವುಗಳ ಅಲಗು. ೩. ನೀರೆರೆದು ಕೊಡುವ ದಾನ. ೪. ಮದುವೆಯ ಒಂದು ವಿಧಿ. ೫. ಕುದುರೆಯ ಐದು ಗತಿಗಳಲ್ಲಿ ಒಂದು. ~ಎ(ಯೆ)ಱೆ(ರೆ) = ೧. ಧಾರಾಪೂರ್ವಕವಾಗಿ ದಾನಮಾಡು. ೨. ಕನ್ಯೆಯನ್ನು ದಾನ ಮಾಡು. ~ಬ(ವ)ಟ್ಟಲ್(ಲು) = ಗಳಿಗೆ ಬಟ್ಟಲು; ಗಳಂತಿಗೆ.

ಧಾರ್ತರಾಷ್ಟ್ರ (ನಾ). ೧. ಒಂದು ಜಾತಿಯ ಹಂಸಪಕ್ಷಿ. ೨. ಧೃತರಾಷ್ಟ್ರನ ಮಕ್ಕಳು; ದುರ್ಯೋಧನ ಮುಂತಾದವರು.

ಧಾರ್ಮಿಕ (ನಾ). ೧. ಧರ್ಮಕ್ಕನುಸಾರವಾಗಿ ವರ್ತಿಸುವವನು. (ಗು). ೨. ಧರ್ಮಶ್ರದ್ಧೆಯುಳ್ಳ; ಧರ್ಮನಿಷ್ಠೆಯುಳ್ಳ.

ಧಾವಂತ = ಧಾವತಿ.

ಧಾವಕ (ಗು). ೧. ಶುಚಿಮಾಡುವ; ಸ್ವಚ್ಛಮಾಡುವ. ೨. ಓಡುವ.

ಧಾವತಿ (ನಾ). ೧. ಆತುರ; ತವಕ. ೨. ಶ್ರಮ; ದಣಿವು.

ಧಾವನ (ನಾ). ೧. ಶುದ್ಧಮಾಡುವುದು; ತೊಳೆಯುವುದು. ೨. (ವೇಗವಾಗಿ) ಓಡುವುದು.

ಧಾವಳಿ = ದಬ್ಬುಳಿ.

ಧಾವಿಸು (ಕ್ರಿ). ತ್ವರೆಯಿಂದ ಓಡು; ಆತುರದಿಂದ ಸಾಗು.

ಧಾಳಿ = ದಾಳಿ.
ಧಿಕ್ಕರಿಸು (ಕ್ರಿ). ಅಪಮಾನಿಸು ; ತಿರಸ್ಕರಿಸು.
ಧಿಕ್ಕಾರ (ನಾ). ತಿರಸ್ಕಾರ.
ಧಿಮಾಕು (ನಾ). ಸೊಕ್ಕು ; ಗರ್ವ.
ಧಿಷಣ (ನಾ). ೧. ಜಾಣ ; ಬುದ್ಧಿವಂತ. ೨. ದೇವತೆಗಳ ಗುರು ; ಬೃಹಸ್ಪತಿ.
ಧಿಷ್ಣ್ಯ (ನಾ). ೧. ಬುದ್ಧಿ. ೨. ನಕ್ಷತ್ರ. ೩. ಅಸುರರ ಗುರು ; ಶುಕ್ರಾಚಾರ್ಯ. ೪. ನಿವಾಸ.
ಧೀ (ನಾ). ಜ್ಞಾನ ; ಪಾಂಡಿತ್ಯ. ~ಮಣಿ = ಬುದ್ಧಿಶಾಲಿ ; ಪಂಡಿತ ; ವಿದ್ವಾಂಸ.
ಧೀಮಂತ (ನಾ). ಬುದ್ಧಿವಂತ. ~ಇಕೆ=ಬುದ್ಧಿವಂತಿಕೆ ; ಜಾಣ್ಮೆ.
ಧೀರ (ನಾ). ೧. ದಿಟ್ಟ ; ಧೈರ್ಯಶಾಲಿ. ೨. ಪಂಡಿತ ; ವಿದ್ವಾಂಸ.
ಧೀವರ (ನಾ). ೧. ಜಾಣ ; ಬುದ್ಧಿವಂತ. ೨. ಮೀನು ಹಿಡಿಯುವವನು ; ಬೆಸ್ತ.
ಧೀವಸ = ದೀವಸ.
ಧುಮುಕು = ದುಮುಕು.
ಧುರ (ನಾ). ೧. ನೊಗ. ೨. ಬಂಡಿಯ ಮುಂಭಾಗ, –ಮೂತಿ. ೩. ಒಜ್ಜೆ ; ಭಾರ. ೪. ಕಂಪನ; ನಡುಗುವಿಕೆ. ೫. ಸಿರಿ ; ಸಂಪತ್ತು. ೬. ಕಾಳಗ ; ಕದನ.
ಧುರಂಧರ (ನಾ). ೧. ಭಾರವನ್ನು ಹೊತ್ತವನು. ೨. ಹೊಣೆಯನ್ನು ಹೊತ್ತಿರುವವನು. ೩. ಮುಖಂಡ; ನಾಯಕ. (ಗು). ೪. ಭಾರವನ್ನು ಹೊತ್ತಿರುವ.
ಧುರೀಣ = ಧುರಂಧರ.
ಧುರೆ (ನಾ). ಭಾರ ; ಒಜ್ಜೆ.
ಧುರ್ಯ (ನಾ). ೧. ಮುಂದಾಳು ; ಯಜಮಾನ. (ಗು). ೨. ಹೊಣೆಯನ್ನು ಹೊರುವ.
ಧೂಪ (ನಾ). ೧. ಸಾಂಬ್ರಾಣಿ ಮೊದಲಾದ ಸುವಾಸನೆಯ ಪುಡಿ. ೨. ಸಾಂಬ್ರಾಣಿ ಮೊದಲಾದ ಸುವಾಸನೆಯ ವಸ್ತುಗಳನ್ನು ಕೆಂಡದ ಮೇಲೆ ಹಾಕಿದಾಗ ಹೊರಡುವ ಹೊಗೆ. ~ವರ್ತಿ = ಊದುಬತ್ತಿ ; ಅಗರುಬತ್ತಿ.
ಧೂಮ (ನಾ). ೧. ಹೊಗೆ. ೨. ಮೋಡ. ~ಕೇತು = ೧. ಅಗ್ನಿ ; ಬೆಂಕಿ. ೨. ಉಲ್ಕೆ ; ಬಾಲಚುಕ್ಕೆ. ~ಪಾನ= ಬೀಡಿ, ಹೊಗೆಬತ್ತಿ ಮುಂತಾದುವನ್ನು ಸೇದುವುದು. ~ಶಕಟ = ಹೊಗೆ ಬಂಡಿ; ರೈಲುಗಾಡಿ.
ಧೂಮ್ರ (ನಾ). ೧. ಕಪ್ಪು ಬಣ್ಣ. ೨. ಬೂದು ಬಣ್ಣ. (ಗು). ೩. ಕಪ್ಪಾದ ; ಕರಿಯ ಬಣ್ಣದ.
ಧೂರ್ಜಟಿ (ನಾ). ಶಿವ.
ಧೂರ್ತ (ನಾ). ೧. ಮೋಸಗಾರ ; ವಂಚಕ. ೨. ಜೂಜುಗಾರ. ೩. ದುರಾಚಾರಿ ; ಕೆಟ್ಟ ನಡತೆಯುವನು. (ಗು). ೪. ತುಂಟ ; ದುಷ್ಟ.
ಧೂಲಿ(ಳಿ) (ನಾ). ಧೂಳು ; ಹುಡಿ. ~ಪಟ = ೧. ಧೂಳಿನ ರಾಶಿ, –ಸಮೂಹ. ೨. ಸಂಪೂರ್ಣ ನಾಶ.
ಧೂಸರ (ನಾ). ಕಂದುಬಣ್ಣ.
ಧೂಳ್(ಳು) = ಧೂಳಿ. ~ಆಗು = ೧. ಹೊಲಸಾಗು ; ಕೊಳೆಯಾಗು. ೨. ಹಾಳಾಗು ; ನಾಶಹೊಂದು.
ಧೃತ (ಗು). ಹಿಡಿಯಲ್ಪಟ್ಟ ; ಧರಿಸಿದ.
ಧೃತರಾಷ್ಟ್ರ (ನಾ). ೧. ಒಂದು ಜಾತಿಯ ಪಕ್ಷಿ. ೨. ಕುರುಕುಲದ ಒಬ್ಬ ದೊರೆ.
ಧೃತಿ (ನಾ). ೧. ತಾಳುವಿಕೆ ; ಧರಿಸುವಿಕೆ. ೨. ಕೆಚ್ಚು ; ಧೈರ್ಯ. ೩. ತೃಪ್ತಿ ; ತಣಿವು. ~ಕೆ(ಗಿ)ಡು = ಧೈರ್ಯಗುಂದು ; ಹೆದರು.
ಧೃಷ್ಟ (ನಾ). ೧. ಧೈರ್ಯಶಾಲಿ ; ಗಟ್ಟಿಗ. (ಗು). ೨. ಧೈರ್ಯದಿಂದ ಕೂಡಿದ ; ಬಲಶಾಲಿಯಾದ. ೩. ಲಜ್ಜೆಯಿಲ್ಲದ. ೪. ದುರಭಿಮಾನದ ; ಗರ್ವದಿಂದ ಕೂಡಿದ ; ಉದ್ಧಟ.

ಧೇನಿಸು (ಕ್ರಿ). ಧ್ಯಾನ ಮಾಡು; ನೆನೆ.

ಧೇನು (ನಾ). ೧. ಕರುಹಾಕಿದ ಹಸು; ಈದ ಆಕಳು. ೨. ಭೂಮಿ.

ಧೇನುಕೆ (ನಾ). ೧. ಈದ ಆಕಳು. ೨. ಆನೆಯ ಮರಿ. ೩. ಒಂದು ಬಗೆಯ ಆಯುಧ.

ಧೈರ್ಯ (ನಾ). ೧. ಕೆಚ್ಚು; ದಿಟ್ಟತನ. ೨. ತಾಳ್ಮೆ; ಸಹನೆ.

ಧೈರ್ಯಸ್ಥ (ನಾ). ಧೈರ್ಯವಂತ; ದಿಟ್ಟ.

ಧೋತರ = ದೋತ್ರ.

ಧೋಬಿ = ದೋಬಿ.

ಧೋರ (ನಾ). ಒಂದು ಬಗೆಯ ಚರ್ಮವಾದ್ಯ; ನಗಾರಿ.

ಧೋರಣ (ನಾ). ೧. ವಾಹನ. ೨. ಗತಿ; ಗಮನ. ೩. ತ್ವರಿತ; ವೇಗ.

ಧೋರಣೆ (ನಾ). ೧. ಲಕ್ಷ್ಯ; ಗಮನ. ೨. ಅಲಕ್ಷ್ಯ. ೩. ರೀತಿ; ಕ್ರಮ. (ಗು). ೪. ಬಾಗಿದ.

ಧೋವತಿ = ದೋವತಿ.

ಧೌತ (ನಾ). ೧. ಬೆಳ್ಳಿ. (ಗು). ೨. ಸ್ವಚ್ಛಗೊಳಿಸಿದ; ಮೆರುಗುಗೊಳಿಸಿದ; ಶುಭ್ರ.

ಧ್ಯಾನ (ನಾ). ಚಿಂತನೆ; ಮನನ. ~ಇಸು = ಚಿಂತನೆ ಮಾಡು; ಮನನ ಮಾಡು.

ಧ್ಯೇಯ (ನಾ). ೧. ಗುರಿ; ಲಕ್ಷ್ಯ. (ಗು). ೨. ಧ್ಯಾನಕ್ಕೆ ಯೋಗ್ಯವಾದ; ಚಿಂತನೆಗೆ ಯೋಗ್ಯವಾದ.

ಧ್ರುವ (ನಾ). ೧. ಸ್ಥಿರವಾದುದು. ೨. ಗಗನ; ಆಕಾಶ. ೩. ಮೋಟುಮರ. ೪. ಎಣ್ಣೆ ಗಿರಣಿಯಲ್ಲಿ ಬಳಸುವ ಮರದ ತುಂಡು, -ದಿಮ್ಮಿ. ೫. ವಸುಗಳಲ್ಲಿ ಒಬ್ಬನ ಹೆಸರು. ೬. ಉತ್ತಾನಪಾದನ ಮಗ. ೭. ಒಂದು ನಕ್ಷತ್ರ. (ಗು). ೮. ಸ್ಥಿರವಾದ; ನಿತ್ಯವಾದ; ಅಚಲವಾದ.

ಧ್ವಂಸ (ನಾ). ನಾಶ; ಅಳಿವು.

ಧ್ವಜ (ನಾ). ೧. ಬಾವುಟ; ಪತಾಕೆ. ೨. ಗುರುತು; ಚಿಹ್ನೆ. ~ಸ್ತಂಭ = ಬಾವುಟವನ್ನು ಏರಿಸುವ ಕಂಬ.

ಧ್ವನಿ (ನಾ). ೧. ಸಪ್ಪಳ; ನಾದ; ಉಲಿ. ೨. ಕಂಠ; ಶಾರೀರ. ೩. ಕಾವ್ಯದಲ್ಲಿ ಬರುವ ಸೂಚ್ಯಾರ್ಥ.

ಧ್ವಸ್ತ (ಗು). ಹಾಳಾದ; ನಾಶವಾದ.

ಧ್ವಾಂಕ್ಷ (ನಾ). ೧. ಕಾಗೆ. ೨. ಬಕಪಕ್ಷಿ. ~ಧ್ವಜ = ಕಾಗೆಯ ಗುರುತನ್ನು ಪತಾಕೆಯಲ್ಲಿ ಉಳ್ಳವನು; ಕರ್ಣ.

ಧ್ವಾಂತ (ನಾ). ೧. ಕತ್ತಲೆ. (ಗು). ೨. ಆವರಿಸಿದ; ಮುಚ್ಚಿದ.

ಧ್ವಾನ (ನಾ). ಧ್ವನಿ; ನಾದ; ಉಲಿ

❋

# ನ

ನ (ನಾ). ಕನ್ನಡ ವರ್ಣಮಾಲೆಯ ನಲವತ್ತನೆಯ ಅಕ್ಷರ.

ನಂಜ (ನಾ). ಸೀರಾವರಿ ಭೂಮಿ.

ನಂಜು (ಕ್ರಿ). ೧. ಬಾಡಿಸಿಕೊಳ್ಳು; ನಂಚಿಕೊಳ್ಳು. (ನಾ). ೨. ವಿಷ. ೩. ದ್ವೇಷ; ಸೇಡು.

ನಂಜುಂಡ (ನಾ). ಶಿವ.

ನಂಜುಗೊರಲ(ಳ) (ನಾ). ಕಂಠದಲ್ಲಿ ವಿಷವನ್ನು ಧರಿಸಿಕೊಂಡವನು; ಶಿವ.

ನಂಟ (ನಾ). ಸಂಬಂಧಿಕ; ಬಂಧು.

ನಂಟಸ್ತಿಕೆ (ನಾ). ಸಂಬಂಧ; ನಂಟು.

ನಂಟು = ನಂಟಸ್ತಿಕೆ.

ನಂಚುಲಿ (ನಾ). ಮಳೆ ಬಿದ್ದು ಮಣ್ಣು ಸ್ವಲ್ಪ ಹಸಿಯಾಗಿರುವಾಗ ಬಿತ್ತುವುದು.

ನಂತರ (ಅ). ಆಮೇಲೆ ; ತರುವಾಯ.

ನಂದ (ನಾ). ೧. ಸಂತೋಷ ; ಆನಂದ. ೨. ಕೃಷ್ಣನ ಸಾಕುತಂದೆ.

ನಂದಕ (ನಾ). ೧. ವಿಷ್ಣುವಿನ ಕತ್ತಿಯ ಹೆಸರು. (ಗು). ೨. ಸಂತೋಷವನ್ನುಂಟು ಮಾಡುವ.

ನಂದನ (ನಾ). ೧. ಸಂತೋಷಪಡಿಸುವುದು. ೨.ಪುತ್ರ ; ಮಗ. ೩.ದೇವೇಂದ್ರನ ತೋಟ. ೪. ಅರುವತ್ತು ಸಂವತ್ಸರಗಳಲ್ಲಿ ಒಂದು.

ನಂದನೆ (ನಾ). ಮಗಳು ; ಪುತ್ರಿ.

ನಂದಾದೀಪ (ನಾ). ನಂದದ ದೀಪ ; ಸದಾ ಉರಿಯುತ್ತಿರುವ ದೀಪ.

ನಂದಿ (ನಾ). ೧. ಆನಂದ ; ಸಂತೋಷ. ೨. ಮಗ. ೩. ಶಿವನ ವಾಹನ ; ವೃಷಭ. ೪. ಒಂದು ಜಾತಿಯ ಮರ. ~ಕಂಭ(ಬ) = ಉತ್ಸವಾದಿಗಳಲ್ಲಿ ಮುಂದೆ ಹಿಡಿಯುವ ನಂದಿವಿಗ್ರಹವುಳ್ಳ ಕಂಬ. ~ಧ್ವಜ = ೧. ವೃಷಭದ ಗುರುತುಳ್ಳ ಬಾವುಟ. ೨. = ನಂದಿಕಂಭ. ~ವಾಹನ = ವೃಷಭವನ್ನು ವಾಹನವಾಗುಳ್ಳವನು ; ಶಿವ.

ನಂದಿನಿ (ನಾ). ೧. ಸಂತೋಷವನ್ನು ಕೊಡುವವಳು. ೨. ಮಗಳು.

ನಂದಿಬಟ್ಟಲು = ನಂದಿವಟ್ಟ.

ನಂದಿವಟ್ಟ (ನಾ). ಒಂದು ಜಾತಿಯ ಗಿಡ ಮತ್ತು ಅದರ ಹೂವು ; ನಂದಿಬಟ್ಟಲು.

ನಂದು (ಕ್ರಿ). ೧. ಆರು ; ತಣ್ಣಗಾಗು. ೨. ನಾಶವಾಗು ; ಹಾಳಾಗು. ~ಇಸು = ೧. ಆರಿಸು. ೨. ಅಳಿಸು ; ನಾಶಮಾಡು.

ನಂದ್ಯಾವರ್ತ = ನಂದಿವಟ್ಟ.

ನಂಬಿಗಸ್ತ (ನಾ). ವಿಶ್ವಾಸಕ್ಕೆ ಯೋಗ್ಯನಾದವನು.

ನಂಬಿಗೆ = ನಂಬುಗೆ.

ನಂಬು (ಕ್ರಿ). ವಿಶ್ವಾಸವಿಡು ; ನೆಚ್ಚು. ~ಇಕೆ = ನಂಬುಗೆ.

ನಂಬುಗೆ (ನಾ). ವಿಶ್ವಾಸ; ನೆಚ್ಚಿಕೆ. ~ಕೆ(ಗೆ)ಡು = ಅವಿಶ್ವಾಸ ತಾಳು; ಭರವಸೆಯನ್ನು ಕಳೆದುಕೊಳ್ಳು.

ನಕಲಿ (ನಾ). ೧. ಅಣಕ ; ಚೇಷ್ಟೆ ; ಹುಡುಗಾಟಿಕೆ. ೨. ಕೃತಕವಾದುದು.

ನಕಲು (ನಾ). ಪ್ರತಿ ; ಬೇರೆಯ ಪ್ರತಿ ; ಪ್ರತಿಪತ್ರ.

ನಕಾರ (ನಾ). ಇಲ್ಲವೆಂದು ಹೇಳುವಿಕೆ ; ನಿರಾಕರಿಸುವಿಕೆ.

ನಕಾಶೆ (ನಾ). ೧. ದೇಶ, ಗ್ರಾಮ, ಕಟ್ಟಡ ಮುಂತಾದುವುಗಳ ರೂಪರೇಷೆಯನ್ನು ತೋರಿಸುವ ಚಿತ್ರ ; ನಕ್ಷೆ. ೨. ಕೆತ್ತನೆಯ ಕೆಲಸ ; ಕುಸುರಿಗೆಲಸ.

ನಕಾಸೆ = ನಕಾಶೆ.

ನಕುಲ (ನಾ). ೧. ಮುಂಗುಸಿ ; ಮುಂಗುಲಿ. ೨. ಪಂಚಪಾಂಡವರಲ್ಲಿ ಒಬ್ಬ.

ನಕ್ಕಿ (ನಾ). ೧. ತಂತಿಯ ವಾದ್ಯವನ್ನು ಬಾರಿಸುವಾಗ ಬೆರಳಿಗೆ ಹಾಕಿಕೊಳ್ಳುವ ತಂತಿಯ ಉಂಗುರ. ೨. ವರಕು ; ಚಮಕಿ.

ನಕ್ಕು (ಕ್ರಿ). ನಾಲಗೆಯಿಂದ ಸವರು ; ನೆಕ್ಕು.

ನಕ್ಕೆ (ನಾ). ನರಿ ; ಜಂಬುಕ.

ನಕ್ತ (ನಾ). ೧. ಗಾದೆಯ ಮಾತು; ನಾಣ್ಣುಡಿ. ೨. ರಾತ್ರಿ ; ಇರುಳು.

ನಕ್ತಂಚರ (ನಾ). ರಾತ್ರಿಯಲ್ಲಿ ಸಂಚರಿಸುವವನು ; ಕಳ್ಳ, ಪಿಶಾಚಿ ಮುಂತಾದವರು.

ನಕ್ರ (ನಾ). ಮೊಸಳೆ ; ನೆಗಳೆ. ~ಕೇತನ = ಮೊಸಳೆಯ ಗುರುತಿನ ಧ್ವಜವುಳ್ಳವನು ; ಕಾಮ.

ನಕ್ಷತ್ರ (ನಾ). ೧. ಚುಕ್ಕೆ ; ತಾರೆ. ೨. ಅಶ್ವಿನಿ ಮೊದಲಾದ ಇಪ್ಪತ್ತೇಳು ಉಡುಗಳು.

ನಕ್ಷೆ = ನಕಾಶೆ.

**ನಖ** ೧. = ನಖರ. ೨. ಒಂದು ಬಗೆಯ ಸುಗಂಧದ್ರವ್ಯ. ~ಹತಿ = ಉಗುರಿನಿದಾಂವ ಘಾಯ, –ಪೆಟ್ಟು.

**ನಖರ** (ನಾ). ಉಗುರು. ~ಆಯುಧ = ಉಗುರುಗಳನ್ನೇ ಆಯುಧವಾಗಿ ಉಳ್ಳುದು; ಸಿಂಹ, ಹುಲಿ ಮುಂತಾದ ಮೃಗ.

**ನಗ** (ನಾ). ೧. ಒಡವೆ; ಆಭರಣ. ೨. ಬೆಟ್ಟ; ಪರ್ವತ. ೩. ಮರ; ವೃಕ್ಷ. ೪. ಹಡಗು; ನಾವೆ. ~ಅಧೀಶ್ವರ = ಹಿಮಾಲಯ ಪರ್ವತ. ~ವೈರಿ = ಪರ್ವತಗಳ ಶತ್ರು; ಇಂದ್ರ.

**ನಗಜೆ** (ನಾ). ಪರ್ವತರಾಜನ ಮಗಳು; ಪಾರ್ವತಿ.

**ನಗದು** (ನಾ). ೧. ಕೈಯಲ್ಲಿರುವ ಹಣ; ರೊಕ್ಕ. (ಗು). ೨. ಹಣಕಾಸಿನ; ಆದಾಯದ.

**ನಗರ** (ನಾ). ಪಟ್ಟಣ. ~ಸಭೆ = ಪುರಸಭೆ.

**ನಗರಿ** = ನಗರ.

**ನಗಾರಿ** (ನಾ). ಒಂದು ಬಗೆಯ ಚರ್ಮವಾದ್ಯ.

**ನಗು** (ಕ್ರಿ). ೧. ಹಾಸ ಬೀರು. ೨. ಅಪಹಾಸ್ಯ ಮಾಡು; ಅಣಕಿಸು. (ನಾ). ೩. = ನಗೆ. ~ಇಸು = ನಗುವಂತೆ ಮಾಡು.

**ನಗೆ** (ನಾ). ೧. ನಗು; ಹಾಸ. ೨. ಹಾಸ್ಯ; ಅಣಕ. ~ಕಾ(ಗಾ)ಱ(ರ) = ನಗಿಸುವವನು; ವಿದೂಷಕ. ~ಕೆ(ಗೆ)ೇಡು = ಹಾಸ್ಯಾಸ್ಪದವಾಗುವಿಕೆ. ~ಪಾಟಲು = ನಗೆಗೇಡು.

**ನಗೆಚಾಟಿಕೆ** (ನಾ). ಹಾಸ್ಯ; ಚೇಷ್ಟೆ.

**ನಗೌಕಸ** (ನಾ). ೧. ಪಕ್ಷಿ. ೨. ಸಿಂಹ. (ಗು). ೩. ಗಿಡ ಅಥವಾ ಪರ್ವತದಲ್ಲಿ ವಾಸಿಸುವ.

**ನಗ್ಗು** (ಕ್ರಿ). ೧. (ಪಾತ್ರೆ ಮೊದಲಾದುವು) ಜಜ್ಜಿ ತಗ್ಗಾಗು. (ನಾ). ೨. (ಪಾತ್ರೆಗಳಿಗೆ) ಪೆಟ್ಟುಬೀಳುವಿಕೆ; ತಗ್ಗಾಗುವಿಕೆ.

**ನಗ್ನ** (ನಾ). ೧. ಬೆತ್ತಲೆ. ೨. ಬಟ್ಟೆಯನ್ನು ಧರಿಸದಿರುವವನು; ಬೆತ್ತಲೆಯಾಗಿರುವವನು. ೩. ದಿಗಂಬರ; ಜೈನ ಸಂನ್ಯಾಸಿ. ೪. ಶಿವ; ಶಂಕರ. (ಗು). ೫. ಬೆತ್ತಲೆಯಾದ; ಆವರಣವಿಲ್ಲದ. ~ಖಡ್ಗ = ಒರೆ ಕಳಚಿದ ಖಡ್ಗ; ಬಿಚ್ಚುಗತ್ತಿ.

**ನಚ್ಚಣ** = ನರ್ತನ.

**ನಚ್ಚಣಿ** = ನರ್ತಕಿ.

**ನಚ್ಚಣೆ** = ನರ್ತನ.

**ನಚ್ಚು** (ಕ್ರಿ). ೧. ನಂಬು; ವಿಶ್ವಾಸವಿಡು. (ನಾ). ೨. ನಂಬುಗೆ; ವಿಶ್ವಾಸ. ~ಇಕೆ(ಗೆ) = ನಂಬುಗೆ; ವಿಶ್ವಾಸ.

**ನಜರಾಣೆ** (ನಾ). ೧. ಕಾಣಿಕೆ; ಕೊಡುಗೆ. ೨. ಒತ್ತಾಯದಿಂದ ಹೇರಿದ ತೆರಿಗೆ, –ಕರ.

**ನಜರು** (ನಾ). ೧. ಗಮನ; ನಿಗಾ. ೨. ದೃಷ್ಟಿ; ಕಣ್ಣೆಂಜಲು. ೩. ಕಾಣಿಕೆ; ಕೊಡುಗೆ.

**ನಜ್ಜುಗುಜ್ಜು** (ನಾ). ನುಗ್ಗುನುಗ್ಗಾದ ಸ್ಥಿತಿ; ಪುಡಿಪುಡಿಯಾಗಿರುವಿಕೆ.

**ನಟ** (ನಾ). ೧. ನಟಿಸುವವನು; ಅಭಿನಯಕಾರ. ೨. ಶಿವ; ಈಶ್ವರ. ~ರಾಜ = ಶಿವ.

**ನಟನ** (ನಾ). ೧. ಅಭಿನಯ. ೨. ನರ್ತನ. ೩. ಸೋಗು; ಕಪಟವೇಷ.

**ನಟನೆ** = ನಟನ.

**ನಟಿ** (ನಾ). ೧. ನಟಿಸುವವಳು; ಅಭಿನಯಿಸುವವಳು. ೨. ಸೂತ್ರಧಾರನ ಹೆಂಡತಿ.

**ನಟಿಕೆ** (ನಾ). ಬೆರಳುಗಳ ಕೀಲನ್ನು ಮುರಿದು ಲಟಿಕೆ ತೆಗೆದು ಶಬ್ದಮಾಡುವುದು. ~ಮುರಿ = ೧. ಬೆರಳುಗಳನ್ನು ಶಬ್ದ ಬರುವಂತೆ ಮುರಿಸು. ೨. ಕೆಡುಕನ್ನು ಬಯಸು; ಶಪಿಸು. ೩. ದೃಷ್ಟಿನಿವಾರಣೆಗಾಗಿ ಬೆರಳುಗಳನ್ನು ಮುರಿಚು.

**ನಟಿಸು** (ಕ್ರಿ). ೧. ಅಭಿನಯಿಸು. ೨. ಸೋಗು ಮಾಡು.

**ನಟ್ಟಡವಿ** (ನಾ). ಕಾಡಿನ ಮಧ್ಯಭಾಗ.

ನಟ್ಟವಿಗ (ನಾ). ೧. ನೃತ್ಯ ಮಾಡುವವನು. ೨. ಅಭಿನಯಿಸುವವನು. ೩. ನರ್ತನವನ್ನು ಕಲಿಸುವವನು.

ನಟ್ಟೆ (ನಾ). ೧. ನಾಟಿ ಹಾಕಲು ಯೋಗ್ಯವಾದ ಎಳೆಯ ಬತ್ತ ಮುಂತಾದುವುಗಳ ಸಸಿ ೨. ಸೀಯಾಳದ ಹಣ್ಣಿನ ಮೃದುಭಾಗ. ೩. ಮನೋಹರವಾದುದು; ಸುಂದರ ವಾದುದು.

ನಟ್ಟಿರುಳ್ (ನಾ). ಮಧ್ಯರಾತ್ರಿ; ಸರಿರಾತ್ರಿ.

ನಟ್ಟುವ (ನಾ). ನಟಿಸುವವನು; ನಟ.

ನಟ್ಟುಿಗ = ನಟ್ಟವಿಗ.

ನಡಕ (ನಾ). ನಡತೆ; ರೀತಿ.

ನಡಗೆ (ನಾ). ನಡೆಯುವಿಕೆ; ನಡಿಗೆ.

ನಡತೆ ೧. = ನಡಗೆ. ೨. ರೀತಿ; ವರ್ತನೆ; ನಡೆವಳಿ. ~ಕೆ(ಗೆ)ಡು = ದುರಾಚಾರಿ ಯಾಗು; ರೀತಿಗೆಡು.

ನಡಪು (ಕ್ರಿ). ೧. ನಡಸು; ನಡೆಯುವಂತೆ ಮಾಡು. ೨ ಸಾಕು; ಸಲಹು. ೩. ನಿರ್ವ ಹಿಸು. (ನಾ). ೪. ನಡೆಯುವಿಕೆ; ನಡಗೆ.

ನಡವಳಿಕೆ (ನಾ). ೧. ವರ್ತನೆ; ನಡತೆ; ರೀತಿ. ೨. ಕಟ್ಟಳೆ; ನಿಯಮ; ಕ್ರಮ.

ನಡವೆ (ನಾ). ಮನೆಯ ಮುಂಬಾಗಿಲಿಗೆ ಹೊಂದಿಕೊಂಡಿರುವ ಒಳಭಾಗ.

ನಡಿಗೆ = ನಡಗೆ.

ನಡು (ಕ್ರಿ). ೧. ನೆಡು; ನಾಟುವಂತೆ ಮಾಡು; ಚುಚ್ಚು. ೨. ಒಳಸೇರು; ನಾಟು. (ನಾ). ೩. ಸೊಂಟ; ಟೊಂಕ. ೪. ಮಧ್ಯಭಾಗ. ~ಕ(ಗ)ಟ್ಟು = ೧. ಸಿದ್ಧವಾಗು. ೨. ಸೊಂಟದ ಪಟ್ಟಿ. ~ಪ(ವ)ಗಲ್ = ಮಧ್ಯಾಹ್ನ.

ನಡುಕ (ನಾ). ೧. ಅದಿರುವಿಕೆ; ಕಂಪನ. ೨. ಹೆದರಿಕೆ; ಭಯ.

ನಡುಗು (ಕ್ರಿ). ೧. ಅಲುಗಾಡು; ಕಂಪಿಸು. ೨. ಹೆದರು; ಭಯಪಡು.

ನಡುವೆ ೧. = ನಡವೆ. (ಅ). ೨. ಮಧ್ಯದಲ್ಲಿ; ನಡುವಿನಲ್ಲಿ.

ನಡೆ (ಕ್ರಿ). ೧. ಚಲಿಸು; ಹೋಗು. ೨. ಆಚರಿ ಸಲ್ಪಡು; ಜರುಗು. ೩. ಮುಂದುವರಿ; ಸಾಗು. ೪. ಚಲಾವಣೆಯಾಗು; ಸಲ್ಲು. ೫. ಗೌರವಿಸಲ್ಪಡು. (ನಾ). ೬. ನಡೆಯು ವುದು; ನಡಗೆ. ೭. ನಡತೆ; ರೀತಿ. ೮. ದನ ಕರು; ಕಾಲ್ನಡೆ. ೯. ದಾರಿ; ಮಾರ್ಗ. ೧೦. ಒಂದು ದಿವಸದ ಪ್ರಯಾಣ. ೧೧. ಶೈಲಿ; ರೀತಿ. (ಅ). ೧೨. ಸರಿಯಾಗಿ; ಚೆನ್ನಾಗಿ. ~ಕೆ(ಗೆ)ಡು = ೧. ಆಯಾಸ ಹೊಂದು; ದಣಿ. ೨. ದಾರಿತಪ್ಪು; ದಾರಿ ಕಾಣದಂತಾಗು. ೩. ಆಚಾರಹೀನವಾಗು; ಕೀಳುವರ್ತನೆಮಾಡು. ~ಚಪ್ಪರ = ಉತ್ಸ ವಾದಿಗಳಲ್ಲಿ ಹಿಡಿದುಕೊಂಡು ಹೋಗುವ ಬಟ್ಟೆಯ ಚಪ್ಪರ; ಉಲ್ಲಡೆ. ~ತರ್(ರು) = ಸಮೀಪಕ್ಕೆ ಬರು. ~ಪೆ(ವೆ)ಣ = ಬದು ಕಿದ್ದು ಸತ್ತಂತೆ ಇರುವವನು. ~ಮಡಿ = ನಡೆಯುವಾಗ ಕಾಲು ನೆಲಕ್ಕೆ ತಾಗದಂತೆ ಹಾಸುವ ಮಡಿಬಟ್ಟೆ. ~ಮಾಡ=ವಿಮಾನ.

ನಡೆವಳಿ = ನಡವಳಿಕೆ.

ನಣ್ಪು (ನಾ). ೧. ವಿಶ್ವಾಸ; ನಂಬುಗೆ. ೨. ಸ್ನೇಹ; ಗೆಳೆತನ. ೩. ನೆಂಟಸ್ತಿಕೆ. ೪. ಚೆಲುವು; ಸೊಗಸು.

ನತ (ನಾ). ೧. ನಮಸ್ಕರಿಸಿದವನು. ೨. ಬಗ್ಗಿ ದವನು. (ಗು). ೩. ನಮಸ್ಕರಿಸಿದ. ೪. ಕುಗ್ಗಿದ. ೫. ಡೊಂಕಾದ; ಬಾಗಿದ.

ನತದೃಷ್ಟ (ನಾ). ದುರ್ದೈವಿ; ಅದೃಷ್ಟವಿಲ್ಲ ದವನು.

ನತಿ (ನಾ). ೧. ನಮಸ್ಕಾರ; ಬಾಗುವಿಕೆ. ೨. ವಕ್ರತೆ; ಡೊಂಕು.

ನತ್ತು (ಕ್ರಿ). ೧. ತೊದಲು; ಉಗ್ಗು. (ನಾ). ೨. ಮೂಗುತಿ; ಮುಖರ.

ನದ (ನಾ). ಗಂಡುಹೊಳೆ.

ನದರು = ನಜರು.
ನದಿ (ನಾ). ಹೊಳೆ.
ನದಿಪು (ಕ್ರಿ). ಆರಿಸು ; ನಂದಿಸು.
ನದೀಜ (ನಾ). ಗಂಗೆಯ ಮಗ ; ಭೀಷ್ಮ.
ನದುಗು (ಕ್ರಿ). ಹಿಮ್ಮೆಟ್ಟು ; ಹಿಂಜರಿ.
ನದುಳು (ನಾ). ಆಶ್ಚರ್ಯ ; ವಿಸ್ಮಯ.
ನನಸು (ನಾ). ನನ್ನಿ ; ದಿಟ ; ಸತ್ಯ.
ನನೆ (ಕ್ರಿ). ೧. ತೋಯು ; ಒದ್ದೆಯಾಗು. ೨. ಮೊಗ್ಗುಬಿಡು. (ನಾ). ೩ ಮೊಗ್ಗು ; ಮುಗುಳು. ೪. ಹೂವು ~ವಿ(ಯೋ)ಱು(ರು) = ಮೊಗ್ಗಾಗು ; ಮೊಗ್ಗುಬಿಡು. ~ಕ(ಗ)ಣೆ = ಹೂವುಗಳ ಬಾಣ. ~ಕು(ಗು)ದಿ = ಬೇಯುವ ಹಾಗೆಯೇ ಕುದಿಯುವ ಸ್ಥಿತಿ. ~ನಗೆ = ಮುಗುಳುನಗೆ ; ಮಂದಹಾಸ.
ನನೆಗಣೆಯ (ನಾ). ಹೂವುಗಳ ಬಾಣಗಳುಳ್ಳವನು ; ಮನ್ಮಥ.
ನನ್ನಿ (ನಾ). ೧. ನಿಜ ; ದಿಟ. ೨. ಪ್ರೀತಿ ; ಒಲುಮೆ. ~ಕಾ(ಱ)(ರ) = ಸತ್ಯವಂತ. ~ಕೊ(ಗೊ)ಳ್ = ಭಾಷೆಯನ್ನು ತೆಗೆದುಕೊಳ್ಳು.
ನಪಾಸು (ನಾ). ತೇರ್ಗಡೆಯಾಗದಿರುವಿಕೆ ; ಅನುತ್ತೀರ್ಣವಾಗುವಿಕೆ ; ಫೇಲು.
ನಪಿರಿ (ನಾ). ಒಂದು ಬಗೆಯ ವಾದ್ಯ.
ನಪುಂಸಕ (ನಾ). ೧. ಕೊಜ್ಜೆ ; ಷಂಡ. ೨. ವ್ಯಾಕರಣದ ಲಿಂಗಗಳಲ್ಲಿ ಒಂದು.
ನಪ್ಪೆ (ನಾ). ಮರ ಅಥವಾ ಹಣ್ಣನಲ್ಲಾದ ಕಚ್ಚು, -ಪೆಟ್ಟು.
ನಫೆ (ನಾ). ಲಾಭ ; ಆದಾಯ.
ನಭ (ನಾ). ೧. ಆಕಾಶ ; ಮುಗಿಲು. ೨. ಶ್ರಾವಣಮಾಸ.
ನಭಶ್ಚರ (ನಾ). ಆಕಾಶದಲ್ಲಿ ತಿರುಗುವವನು; ಖಚರ ; ದೇವತೆ.
ನಮನ (ನಾ). ಬಾಗುವಿಕೆ ; ವಂದನೆ.
ನಮಲು (ಕ್ರಿ). ೧. ಜಗಿ ; ಮೆಲುಕುಹಾಕು. (ನಾ). ೨. ಜಗಿಯುವಿಕೆ ; ಮೆಲುಕು ಹಾಕುವಿಕೆ.
ನಮಸ್ಕರಿಸು (ಕ್ರಿ). ನಮಸ್ಕಾರ ಮಾಡು ; ವಂದಿಸು.
ನಮಸ್ಕಾರ = ನಮನ.
ನಮಾಜು (ನಾ). ಮುಸಲ್ಮಾನರ ದೇವತಾ ಪ್ರಾರ್ಥನೆ.
ನಮಿಸು = ನಮಸ್ಕರಿಸು.
ನಮೂದು (ನಾ). ದಾಖಲೆ ; ನೋಂದಣಿ. ~ಇಸು = ದಾಖಲೆ ಮಾಡು.
ನಮೂನೆ (ನಾ). ೧. ಮಾದರಿ ; ಪ್ರಕಾರ. ೨ ಪ್ರತಿ ; ನಕಲು. ೩. ರೀತಿ ; ಬಗೆ; ತರಹ.
ನಮೆ (ಕ್ರಿ). ೧. ಬಡವಾಗು ; ಸೊರಗು. ೨. ಸಂಕಟಪಡು ; ನರಳು. ೩. ಬಡತನವನ್ನು ಹೊಂದು.
ನಮೇರು (ನಾ). ಒಂದು ಜಾತಿಯ ಮರ ; ಸುರಗಿ ಮರ.
ನಮ್ರ (ಗು). ೧. ಬಾಗಿದ ; ಬಗ್ಗಿದ. ೨. ವಿನಯದಿಂದ ಕೂಡಿದ. ೩. ಅಧೀನ ; ಅಂಕಿತದಲ್ಲಿರುವ.
ನಯ (ನಾ). ೧. ನುಣುಪು ; ಮೃದುತ್ವ. ೨. ನ್ಯಾಯ ; ನೀತಿ. ೩. ಕಾವ್ಯದಲ್ಲಿಯ ಒಂದು ಗುಣ ; ಸುಕುಮಾರ ಗುಣ. ೪. ನಾಜೂಕು ; ಸೂಕ್ಷ್ಮತೆ. ೫. ಒಯ್ಯುವಿಕೆ ; ಮುಟ್ಟಿಸುವಿಕೆ. ೬. ನೀತಿಶಾಸ್ತ್ರ. ೭ ಉಪಾಯ.
ನಯಜ್ಞ (ನಾ). ಜಾಣ ; ವಿವೇಕಿ.
ನಯನ (ನಾ). ೧. ಕಣ್ಣು. ೨. ಮಾರ್ಗದರ್ಶನ. ~ಕರ್ಣ = ಹಾವು ; ಸರ್ಪ. ~ಪುತ್ರಿಕೆ = ಕಣ್ಣಿನ ಗೊಂಬೆ, -ಗುಡ್ಡೆ.
ನರ (ನಾ). ೧. ಮನುಷ್ಯ. ೨. ಅರ್ಜುನ. ೩. ರಕ್ತ ಹರಿಯುವ ನಾಳ ; ಸರೆ. ~ಕವಿ = ಪ್ರತಿಭೆಯಿಲ್ಲದ ಕವಿ ; ಸಾಮಾನ್ಯ ಕವಿ.

~ಕೇಸರಿ = ವಿಷ್ಣುವಿನ ನಾಲ್ಕನೆಯ ಅವತಾರ; ನರಸಿಂಹಾವತಾರ. ~ಸಿಂಹ = ೧. ನರಕೇಸರಿ. ೨. ಧೀರ; ಶೂರ.

ನರಕ (ನಾ). ೧. ಪಾಪ ಮಾಡಿದವರನ್ನು ಶಿಕ್ಷಿಸುವ ಸ್ಥಳವೆಂದು ನಂಬಲಾಗಿರುವ ಲೋಕ. ೨. ಕೊಳಚೆಯ ರಾಶಿ. ೩. ಅತಿಯಾದ ಕಷ್ಟ. ೪. ಒಬ್ಬ ರಾಕ್ಷಸನ ಹೆಸರು. ~ಗತಿ = ದುರ್ದೆಶೆ; ಕೆಟ್ಟಸ್ಥಿತಿ. ~ವಾಸ = ೧. ನರಕದಲ್ಲಿರುವುದು. ೨. ಕೊಳಚೆಯಲ್ಲಿ ಇರುವುದು.

ನರಕು ೧. = ನರುಕು. ೨. ನರಳು; ಮುಲುಕು.

ನರಟು (ಕ್ರಿ). ೧. ಬೆಳವಣಿಗೆಯಲ್ಲಿ ಕುಗ್ಗು; ಮುರುಟು. (ನಾ). ೨. ಮುರುಟಿದ ಸ್ಥಿತಿ.

ನರಡು (ನಾ). ೧. ದನಗಳ ಒಂದು ಅಂಟು ರೋಗ. ೨. ಒರಟು; ನಯವಿಲ್ಲದುದು. ೩. ಅವಿನಯ; ಹುಂಬತನ.

ನರಲ್(ಲು, ಳ್, ಳು) (ಕ್ರಿ). ವೇದನೆಪಡು; ಸಂಕಟದಿಂದ ಮುಲುಕು. ~ಆಟ = ವೇದನೆಪಡುವಿಕೆ; ನರಳಿಕೆ.

ನರವುಲಿ = ನರಹುಲಿ.

ನರಹುಲಿ (ನಾ). ಚರ್ಮದ ಮೇಲೇಳುವ ಸಣ್ಣ ಗಂತಿ, -ಗಂಟು.

ನರಿ (ನಾ). ಜಂಬುಕ; ಬಳ್ಳು.

ನರುಕು (ಕ್ರಿ). ಜಜ್ಜು; ಗಾಯಮಾಡು.

ನರುಗು (ನಾ). ಬೂದಿಬಣ್ಣ.

ನರೆ (ಕ್ರಿ). ೧. ಕೂದಲು ಬೆಳ್ಳಗಾಗು. (ನಾ). ೨. ಬಿಳಿಯ ಕೂದಲು. ~ಕ(ಗ)ಂಬಳಿ = ಬೂದಿ ಬಣ್ಣದ ಕಂಬಳಿ. ~ತ(ದ)ಲೆ = ಬಿಳಿಯ ಕೂದಲು; ನರೆತ ಕೂದಲು.

ನರೆದಲೆಗ (ನಾ). ೧. ಬಿಳಿಯ ಕೂದಲುಳ್ಳವನು. ೨. ರಾಗಿ.

ನಱು(ರು) (ನಾ). ಪರಿಮಳ; ಸುಗಂಧ. ~ಕ(ಗ)ಂಪು = ಸುವಾಸನೆ; ಸುಗಂಧ.

ನಱು(ರು)ಜು (ನಾ). ಸಣ್ಣಕಲ್ಲು; ನೊರಜು.

ನಱು(ರು)ವಲ್(ಲು) (ನಾ). ಒಂದು ಜಾತಿಯ ಮರ; ಅಗ್ನಿಮಂಥ.

ನರ್ತಕ (ನಾ). ನರ್ತಿಸುವವನು; ಕುಣಿಯುವವನು.

ನರ್ತಕಿ (ನಾ). ನರ್ತಿಸುವವಳು.

ನರ್ತನ (ನಾ). ಕುಣಿತ; ನೃತ್ಯ.

ನರ್ಮ (ನಾ). ೧. ಆಟ; ಕ್ರೀಡೆ. ೨. ವಿನೋದ; ಪರಿಹಾಸ್ಯ. ~ಸಚಿವ = (ರಾಜನ) ಅಂತರಂಗ ಸಚಿವ.

ನಲ್ (ಗು). ೧. ಒಳ್ಳೆಯ; ಉತ್ತಮವಾದ. ೨. ಕ್ಷೇಮದಿಂದ ಕೂಡಿದ; ಸೌಖ್ಯವಾದ. ೩. ಸುಂದರವಾದ; ಚೆಲುವಾದ. ~ನುಡಿ = ಒಳ್ಳೆಯ ಮಾತು. ~ಪ(ವ)ರಕೆ = ಒಳ್ಳೆಯ ಹರಕೆ, -ಆಶೀರ್ವಾದ.

ನಲ (ನಾ). ೧. ಪೊಳ್ಳಾದ ಬಿದಿರು. ೨. ಕಂಪು; ವಾಸನೆ. ೩. ನಿಷಧದೇಶದ ಒಬ್ಬ ದೊರೆಯ ಹೆಸರು. ೪. ಅರುವತ್ತು ಸಂವತ್ಸರಗಳಲ್ಲಿ ಒಂದು.

ನಲಗು = ನಲುಗು.

ನಲವು = ನಲಿವು. ~ಏ(ಪೇ)ಱು(ರು) = ಆನಂದವು ಹೆಚ್ಚಾಗು; ಹಿಗ್ಗು.

ನಲಿ (ಕ್ರಿ). ೧. ಆನಂದಿಸು; ಸಂತೋಷಪಡು. (ನಾ). ೨. ಒಂದು ಬಗೆಯ ಸುಗಂಧದ್ರವ್ಯ.

ನಲಿ(ಳಿ)ನ (ನಾ). ತಾವರೆ; ಕಮಲ. ~ಬಾಂಧವ = ಸೂರ್ಯ. ~ವೈರಿ = ಚಂದ್ರ. ~ಸಂಭವ = ಬ್ರಹ್ಮ.

ನಲಿ(ಳಿ)ನಿ ೧. = ನಲಿನ. ೨. ಕಮಲಗಳಿಂದ ಕೂಡಿದುದು; ಕೊಳ.

ನಲಿವು (ನಾ). ಆನಂದ; ಸಂತೋಷ.

ನಲುಗು (ಕ್ರಿ). ೧. ಕೊರಗು; ಸೊರಗು. ೨. ಮುದುಡಿಯಾಗು; ಸುಕ್ಕಾಗು.

ನಲ್ಮೆ (ನಾ). ೧. ಅಕ್ಕರೆ; ಪ್ರೀತಿ. ೨. ಸ್ನೇಹ; ಗೆಳೆತನ. ೩. ಕ್ಷೇಮ; ಒಳಿತು.

ನಲ್ಲ (ನಾ). ೧. ಪ್ರಿಯ ; ಕಾದಲ. ೨. ಪತಿ ; ಒಡೆಯ. ೩. ಒಳ್ಳೆಯತನ ; ಸದ್ಗುಣ. ೪. ಸೌಂದರ್ಯ ; ಸೊಗಸು. (ಗು). ೫. ಒಳ್ಳೆಯ ; ಉತ್ತಮವಾದ. ~ಮನ = ಒಳ್ಳೆಯ ಮನಸ್ಸು.

ನಲ್ಲಿ (ನಾ). ಕೊಳಾಯಿ ; ನಳ.

ನಲ್ಲೆ (ನಾ). ಪ್ರಿಯತಮೆ ; ಪ್ರೀತಿಪಾತ್ರಳು.

ನವ (ನಾ). ೧. ಒಂದು ಸಂಖ್ಯೆ ; ಒಂಬತ್ತು. (ಗು). ೨. ನೂತನ; ಹೊಸದಾದ. ~ಗ್ರಹ = ಸೂರ್ಯ, ಚಂದ್ರ, ಮಂಗಳ, ಬುಧ, ಗುರು, ಶುಕ್ರ, ಶನಿ, ರಾಹು ಮತ್ತು ಕೇತು ಮೊದಲಾದ ಒಂಬತ್ತು ಗ್ರಹಗಳು. ~ನಿಧಿ = ಪದ್ಮ, ಮಹಾಪದ್ಮ, ಶಂಖ, ಮಕರ, ಕಚ್ಛಪ, ಮುಕುಂದ, ನಂದ, ನೀಲ ಮತ್ತು ಖರ್ವಗಳೆಂಬ ಕುಬೇರನ ಒಂಬತ್ತು ಐಶ್ವರ್ಯಗಳು. ~ಪಲ್ಲವ = ಹೊಸ ಚಿಗುರು, –ತಳಿರು. ~ಯೌವನ = ಎಳೆಯ ಪ್ರಾಯ. ~ರತ್ನ = ವಜ್ರ, ಮಾಣಿಕ್ಯ, ಮರಕತ, ಪುಷ್ಯರಾಗ, ನೀಲ, ಗೋಮೇಧಕ, ವೈಡೂರ್ಯ, ಮುತ್ತು ಮತ್ತು ಹವಳಗಳೆಂಬ ಒಂಬತ್ತು ಬಗೆಯ ರತ್ನಗಳು. ~ರಸ = ಕಾವ್ಯದಲ್ಲಿ ಬರುವ ಶೃಂಗಾರ, ಹಾಸ್ಯ, ಕರುಣ, ರೌದ್ರ, ವೀರ, ಭಯಾನಕ, ಬೀಭತ್ಸ, ಅದ್ಭುತ ಮತ್ತು ಶಾಂತವೆಂಬ ಒಂಬತ್ತು ಬಗೆಯ ರಸಗಳು. ~ರಾತ್ರಿ = ಆಶ್ವಯುಜ ಮಾಸದ ಒಂಬತ್ತು ರಾತ್ರಿಗಳು ; ದಸರೆ.

ನವಣೆ (ನಾ). ಲಾವಣ್ಯ ; ಅಂದ. ~ಪ(ವ)ಡೆ = ಲಾವಣ್ಯವನ್ನು ಹೊಂದು ; ಚೆಲುವನ್ನು ಪಡೆ.

ನವಣೆ (ನಾ). ಒಂದು ಬಗೆಯ ಧಾನ್ಯ.

ನವನೀತ (ನಾ). ಬೆಣ್ಣೆ.

ನವಪತ್ತು = ನೌಬತ್ತು.

ನವಮಿ (ನಾ). ಪಕ್ಷದ ಒಂಬತ್ತನೆಯ ದಿನ.

ನವರಂಗ (ನಾ). ದೇವಾಲಯದ ಸಭಾಮಂಟಪ.

ನವಸಾಗರ (ನಾ). ಪಾತ್ರೆಗಳಿಗೆ ಕಲಾಯಿ ಹಾಕುವಾಗ ಬಳಸುವ ಒಂದು ಬಗೆಯ ಕ್ಷಾರಪದಾರ್ಥ.

ನವಸಿಗ (ನಾ). ತೊಂದರೆಪಡಿಸುವವನು ; ಕಾಡುವವನು.

ನವಾಬ (ನಾ). ಮುಸಲ್ಮಾನರ ದೊರೆ.

ನವಾಯಿ (ನಾ). ೧ ಹೊಸತನ ; ನಾವೀನ್ಯ. ೨. ಚೆಲುವು ; ಸೌಂದರ್ಯ. ೩. ಠೀವಿ ; ಆಡಂಬರ.

ನವಾರ (ನಾ). ಲಾಡಿ.

ನವಿರ್(ರು) (ನಾ). ೧. ಕೂದಲು ; ರೋಮ. ೨. = ನವುರು. ~ಏಳು = ರೋಮಾಂಚನವಾಗು.

ನವಿಲ್(ಲು) (ನಾ). ಒಂದು ಜಾತಿಯ ಪಕ್ಷಿ; ಮಯೂರ.

ನವೀನ (ನಾ). ೧. ಹೊಸತು ; ಈಚಿನದು. (ಗು). ೨. ಹೊಸದಾದ ; ಆಧುನಿಕ.

ನವುರು (ಗು). ೧. ತೆಳುವಾದ ; ಸಪುರವಾದ. ೨. ಸೂಕ್ಷ್ಮವಾದ.

ನವೆ ೧. = ನವೆ. ೨. (ವಿಶೇಷವಾಗಿ ಪ್ರಾಣಿಗಳಲ್ಲಿ) ತುರಿಕೆಯಾಗು. (ನಾ). ೩. ತೀಟೆ ; ತುರಿಕೆ ; ಕಡಿತ.

ನವ್ಯ = ನವೀನ. ~ಪ್ರಸೂನ = ಆದೇ ತಾನೆ ಅರಳಿದ ಹೂವು.

ನಶಿಸು (ಕ್ರಿ). ಅಳಿ ; ನಾಶವಾಗು.

ನಶ್ಯ = ನಸ್ಯ.

ನಶ್ವರ (ಗು). ನಾಶವಾಗುವ ; ಹಾಳಾಗುವ.

ನಷ್ಟ (ನಾ). ೧. ಕೊರತೆ; ಕುಂದು. ೨. ಹಾನಿ ; ಹಾಳು. (ಗು). ೩. ಹಾಳಾದ; ನಾಶವಾದ; ಕಳೆದುಹೋದ. ~ಕಾಲ = ಕೆಟ್ಟಸಮಯ; ಅಳಿಗಾಲ.

ನಸನಸೆ (ನಾ). ಗೊಣಗಾಟ ; ಕಿರಿಕಿರಿ.

ನಸರಾಣಿ (ನಾ). ಅಲ್ಪ; ನೀಚ.

ನಸರಿ (ನಾ). ೧. ಜೇನುಹುಳು. ೨. ಉತ್ತಮ ಜಾತಿಯ ಜೇನುತುಪ್ಪ.

ನಸಿ (ಕ್ರಿ). ೧. ಸೊರಗು; ಕ್ಷೀಣವಾಗು; ಬಡವಾಗು. ೨. ಮೂರ್ಛೆಹೊಂದು; ಬವಳಿಬೀಳು. ~ಮೆಯ್ = ಸೊರಗಿದ ದೇಹ; ಬಡಕಲು ಶರೀರ.

ನಸಿಕು (ಕ್ರಿ). ೧. ಬಾಡು; ಸೊರಗು. (ನಾ). ೨. ಕಡನೆಯಾಗುವಿಕೆ; ಕುಂದುವಿಕೆ.

ನಸು (ಗು). ಸ್ವಲ್ಪ; ಕೊಂಚ. ~ಕ(ಗ)ತ್ತಲೆ = ಮಬ್ಬುಗತ್ತಲೆ. ~ನಗು(ಗೆ) = ಮೆಲು ನಗೆ; ಮುಗುಳುನಗೆ.

ನಸುಕು (ನಾ). ಬೆಳಗಿನ ಜಾವ; ಮುಂಜಾವ.

ನಸುಗುನ್ನಿ (ನಾ). ಒಂದು ಜಾತಿಯ ಗಿಡ; ತುರುಚೆ.

ನಸೆ (ನಾ). ೧. ಬಿದೆ. ೨. ನವೆ; ತೀಟೆ. ~ಕಾ(ಗಾ)ಜ(ರ) = ಕಾಮ; ಮನ್ಮಥ.

ನಸೆನಸೆ = ನಸನಸೆ.

ನಸ್ಯ (ನಾ) ೧. ನಾಸೀಪುಡಿ; ನಶ್ಯ. (ಗು). ೨. ಮೂಗಿಗೆ ಸಂಬಂಧಿಸಿದ.

ನಳ ೧. = ನಲ. ೨. = ನಲ್ಲಿ.

ನಳನಳಿಕೆ (ನಾ). ೧. ಕೋಮಲತೆ; ಮಾರ್ದವ. ೨. ಚೆಲುವು; ಸೌಂದರ್ಯ.

ನಳನಳಿಸು (ಕ್ರಿ). ೧. ಕೋಮಲವಾಗಿರು; ಮೃದುವಾಗಿರು. ೨. ಸುಂದರವಾಗಿ ಕಾಣು.

ನಳಿ (ಕ್ರಿ). ೧. ಬಾಗು; ಬಗ್ಗು. (ಗು). ೨. ಕೋಮಲವಾದ; ಮೃದುವಾದ.

ನಳಿಕೆ = ನಳಿಗೆ.

ನಳಿಗೆ (ನಾ). ಕೊಳವೆ; ನಾಳ.

ನಳ್ಳಿ (ನಾ). ಒಂದು ಬಗೆಯ ಜಲಚರ ಪ್ರಾಣಿ; ಏಡಿ; ಎಸಡಿ.

ನಾ(ಂ)ಟು (ಕ್ರಿ). ೧. ಒಳಹೊಗು; ಪ್ರವೇಶಿಸು. ೨. ಭದ್ರವಾಗಿ ಊರು, -ನೆಡು. ೩. ಮನಸ್ಸಿನಲ್ಲಿ ಗಟ್ಟಿಯಾಗಿ ನೆಲಸು.

ನಾಂದಿ (ನಾ). ೧. ಮಂಗಳಕಾರ್ಯದ ಪ್ರಾರಂಭದಲ್ಲಿ ಮಾಡುವ ಪ್ರಾರ್ಥನೆ. ೨. ಆರಂಭ; ಮೊದಲು.

ನಾಂದು (ಕ್ರಿ). ೧. ಒಪ್ಪಮಾಡು; ತೋಯಿಸು. ೨. ಕರಗು; ನೀರಾಗು.

ನಾಂಬ (ನಾ). ಸೋಮಾರಿ; ಅಲಸಿ.

ನಾಂಬು (ಕ್ರಿ). ಆಲಸ್ಯದಿಂದ ಕೂಡಿರು; ಜಡವಾಗು.

ನಾಕ (ನಾ). ೧. ದೇವತೆಗಳ ವಾಸಸ್ಥಾನ; ಸ್ವರ್ಗ. ೨. ಆಕಾಶ; ಮುಗಿಲು. ೩. ನೆಲ; ಭೂಮಿ. ೪. ಹುತ್ತ.

ನಾಕಿ (ನಾ). ಸ್ವರ್ಗದಲ್ಲಿ ವಾಸಿಸುವವನು; ದೇವತೆ.

ನಾಕು (ನಾ). ೧. ಒಂದು ಸಂಖ್ಯೆ; ನಾಲ್ಕು. ೨. ಹುತ್ತ.

ನಾಗ (ನಾ) ೧. ಒಂದು ಜಾತಿಯ ಹಾವು; ನಾಗರಹಾವು. ೨. ಎಂಟು ಮಹಾ ಸರ್ಪಗಳಲ್ಲಿ ಒಂದು. ೩. ಆನೆ; ಗಜ. ೪. ಮುಖಂಡ; ಮುಂದಾಳು. ೫. ನೀರು. ೬. ಸೀಸ. ೭. ಬೆಂಕಿ. ೮. ದುಷ್ಟ; ನೀಚ. ೯. ಒಂದು ಜಾತಿಯ ಮರ; ನಾಗಕೇಸರ. ~ಅಂತಕ = ಗರುಡ. ~ಅಶನ = ಹಾವುಗಳನ್ನು ಆಹಾರವಾಗುಳ್ಳ ಗರುಡ, ನವಿಲು ಮುಂತಾದುವು. ~ಕಂಕಣ = ಶಿವ. ~ಪ(ವ)ತ್ರಿಗೆ = ವೀರಶೈವರು ಕೊರಳಿನಲ್ಲಿ ಧರಿಸುವ ಲಿಂಗದ ಪೆಟ್ಟಿಗೆ; ಕರಡಿಗೆ. ~ಭೂಷಣ = ನಾಗಕಂಕಣ. ~ಮುರಿ = ತೋಳಿನಲ್ಲಿ ಧರಿಸುವ ಹಾವಿನಾಕಾರದ ಒಂದು ಒಡವೆ. ~ರತ್ನ = ಹಾವಿನ ಹೆಡೆಯಲ್ಲಿರುವ ಮಣಿ. ~ಲೋಕ = ಸರ್ಪಲೋಕ; ಪಾತಾಳ. ~ವಲ್ಲಿ = ೧. ವೀಳೆಯದೆಲೆಯ ಬಳ್ಳಿ. ೨. ಮದುವೆಯಲ್ಲಿ ಮದುಮಕ್ಕಳಿಗೆ ತಾಂಬೂಲ ಕೊಡುವ ಶಾಸ್ತ್ರ; ನಾಗೋಲೆ. ~ವಾಸ = ೧. ಪಾತಾಳಲೋಕ.

೨. ಅಂತಃಪುರ. ೩. ನಾಟ್ಯಗೃಹ. ೪. ದೀಪ ಮುಂತಾದುವನ್ನು ನೇತುಹಾಕಲು ಬಳಸುವ ಕೊಕ್ಕೆ. ~ಸಂಪಿಗೆ = ಸಂಪಿಗೆಯಲ್ಲಿ ಒಂದು ಜಾತಿ. ~ಸ್ವರ = ೧. ಹಾವುಗಳಿಗೆ ಪ್ರಿಯವಾದ ಒಂದು ವಾದ್ಯವಿಶೇಷ; ಪುಂಗಿ. ೨. ಓಲಗ.

ನಾಗಂದಿಗೆ = ನಾಗವಂದಿ.

ನಾಗರ (ನಾ). ೧. ನಾಗರಹಾವು. ೨. ತಲೆಯಲ್ಲಿ ಧರಿಸುವ ಒಂದು ಆಭರಣ. ೩. ಒಣಶುಂಠಿ. ೪. ದೇವನಾಗರಿ ಲಿಪಿ. (ಗು). ೫. ನಗರಕ್ಕೆ ಸಂಬಂಧಿಸಿದ.

ನಾಗರಕ (ನಾ). ಪಟ್ಟಣದ ಮುಖಂಡ.

ನಾಗರಿಕ (ನಾ). ೧. ಪೌರ; ಪಟ್ಟಣಿಗ. ೨. ಸುಸಂಸ್ಕೃತ; ಸಭ್ಯ.

ನಾಗವಂದಿ (ನಾ). ಸಾಮಾನುಗಳನ್ನಿಡಲು ಎರಡು ಕಂಬಗಳ ಮೇಲೆ ಇಟ್ಟಿರುವ ಹಲಗೆ.

ನಾಗಾಲೋಟ (ನಾ). ೧. ನಾಲ್ಕು ಕಾಲುಗಳನ್ನು ಎತ್ತಿ ಓಡುವ ಓಟ. ೨. ಅತಿವೇಗದಿಂದ ಓಡುವ ಓಟ.

ನಾಗಿಣಿ (ನಾ). ನಾಗಲೋಕದ ಹೆಂಗಸು; ನಾಗಕನ್ಯೆ.

ನಾಗುಳ (ನಾ). ಒಂದು ಅಳತೆ; ನಾಲ್ಕು ಕೊಳಗ.

ನಾಚಿಕೆ (ನಾ). ಸಂಕೋಚ; ಲಜ್ಜೆ. ~ಕೆ(ಗೆ)ಡು = ಲಜ್ಜೆಯನ್ನು ಕಳೆದುಕೊಳ್ಳು. ~ಕೆ(ಗೆ)ೇಡಿ = ಲಜ್ಜೆಗೇಡಿ; ಲಜ್ಜೆ ಇಲ್ಲದವನು. ~ಕೆ(ಗೆ)ೇಡು = ಅವಮಾನ; ನಿರ್ಲಜ್ಜೆ.

ನಾಚು ೧. = ನಾಣ್ಚು. (ನಾ). ೨. ನೃತ್ಯ. ~[illegible] = ನಾಚಿಕೆ ~ಇಸು = ೧. ಸಂಕೋಚಗೊಳ್ಳುವಂತೆ ಮಾಡು. ೨. ಅಪಮಾನಗೊಳಿಸು.

ನಾಜೂಕು (ನಾ). ೧. ಓರಣ; ಅಚ್ಚುಕಟ್ಟು. ೨. ನಯ; ಕೋಮಲತೆ; ಸುಕುಮಾರತೆ. (ಗು). ೩. ನಯವಾದ; ಸೂಕ್ಷ್ಮವಾದ; ಕೋಮಲವಾದ.

ನಾಟಕ (ನಾ). ೧. ದೃಶ್ಯಕಾವ್ಯ. ೨. ನೃತ್ಯ; ನರ್ತನ. ~ಆ(ವಾ)ಡು = ೧. ನಾಟಕದಲ್ಲಿ ಅಭಿನಯಿಸು; ನಟಿಸು. ೨. ಸೋಗು ಹಾಕು; ನಟನೆ ಮಾಡು.

ನಾಟಾ (ನಾ). ಮರದ ದಿಮ್ಮಿ; ತೊಲೆ.

ನಾಟಿ (ನಾ). ೧. ಬೇರೆ ಕಡೆಯಲ್ಲಿ ನೆಡಲು ಯೋಗ್ಯವಾದ ಎಳೆಯ ಬತ್ತದ ಸಸಿ ಮುಂತಾದುವು. ೨. ಬತ್ತ ಮುಂತಾದ ಸಸಿಗಳನ್ನು ಬೇರೆ ಕಡೆಯಲ್ಲಿ ನೆಡುವ ಕೆಲಸ. (ಗು). ೩. ದೇಶೀಯವಾದ; ದೇಶ್ಯ. ~ಹಾಕು = ಬತ್ತದ ಸಸಿಯನ್ನು ಬೇರೊಂದೆಡೆಯಲ್ಲಿ ನೆಡು.

ನಾಟಿಕೆ (ನಾ). ೧. ನಾಟಕದಲ್ಲಿ ಒಂದು ಪ್ರಭೇದ. ೨. ನೆಡುವುದು; ನಾಟಿ.

ನಾಟ್ಯ (ನಾ). ೧. ನೃತ್ಯ; ಕುಣಿತ. ೨. ಅಭಿನಯ. ~ಗಾರ = ೧. ನರ್ತಿಸುವವನು. ೨. ಅಭಿನಯಿಸುವವನು; ನಟ. ~ಪ್ರದರ್ಶನ = ನೃತ್ಯ, ನಾಟಕ ಮುಂತಾದುವನ್ನು ಅಭಿನಯಿಸಿ ತೋರಿಸುವುದು. ~ಮಂದಿರ = ನೃತ್ಯ, ಅಭಿನಯಗಳನ್ನು ಪ್ರದರ್ಶಿಸುವ ಸ್ಥಳ. ~ರಂಗ = ನಾಟ್ಯಮಂದಿರ.

ನಾಡಿ (ನಾ). ೧. ನಳಿಕೆ; ಕೊಳವೆ. ೨. ನರ. ೩. ರಕ್ತನಾಳ. ೪. ಅಪಧಮನಿಗಳಲ್ಲಿ ರಕ್ತ ನುಗ್ಗಿ ಬರುವಾಗ ಉಂಟಾಗುವ ಮಿಡಿತ. ೫. ದೇಟು; ದಂಟು. ೬. ಒಂದು ಬಗೆಯ ಹುಣ್ಣು, –ವ್ರಣ. ೭. ಸಂಚು; ಮೋಸ. ೮. ಭವಿಷ್ಯವನ್ನು ತಿಳಿಸುವ ಗ್ರಂಥ. ~ನೋಡು = ನಾಡಿಯ ಮಿಡಿತವನ್ನು ಪರೀಕ್ಷಿಸು. ~ಹಿಡಿ = ನಾಡಿ ನೋಡು.

ನಾಡಿಂಧಮ (ನಾ). ಅಕ್ಕಸಾಲಿ.

ನಾಡಿಕೆ (ನಾ). ೧. ನಾಳ; ದೇಟು. ೨. ನಾಡಿವ್ರಣ. ೩. ಜಾಗಟೆ.

ನಾಡಿದು (ನಾ). ನಾಳೆಯ ಮರುದಿನ.
ನಾಡಿದ್ದು = ನಾಡಿದು.
ನಾಡು (ನಾ). ದೇಶ; ಪ್ರಾಂತ. ~ಆಡಿ = ೧. ಪಟ್ಟಣದಲ್ಲಿ ವಾಸಿಸುವವನು. ೨. ಹಳ್ಳಿಯವನು. ೩. ತಿಳಿಗೇಡಿ; ಹುಂಬ. ೪. ಸಾಮಾನ್ಯವಾದ; ಸಾಧಾರಣವಾದ. ~ಇಗ = ೧. ಹಳ್ಳಿಯ ಮುಖ್ಯಸ್ಥ. ೨. ಒಂದು ನಾಡಿಗೆ ಸಂಬಂಧಿಸಿದವನು. ~ಪ(ವ)ಡೆ = ಪ್ರಸಿದ್ಧಿಹೊಂದು; ಹೆಸರುವಾಸಿಯಾಗು. ~ಪಿ(ವಿ)ಡಿ = ಸ್ಥಿರವಾಗಿ ನೆಲಸು.
ನಾಡೆ (ಅ). ಅಧಿಕವಾಗಿ; ಹೆಚ್ಚಾಗಿ.
ನಾಣ್(ಣು) (ನಾ). ನಾಚಿಕೆ; ಲಜ್ಜೆ. ~ಇಲಿ = ನಾಚಿಕೆ ಇಲ್ಲದವನು; ಲಜ್ಜೆಗೇಡಿ. ~ಕಿ(ಗಿ)ಡಿಸು = ಅವಮಾನಮಾಡು; ಹೀನೈಸು.
ನಾಣ್ಚು (ಕ್ರಿ). ೧. ಸಂಕೋಚಗೊಳ್ಳು; ಲಜ್ಜೆತಾಳು. ೨. ಅವಮಾನಕ್ಕೊಳಗಾಗು. ~ಇಸು = ನಾಚಿಸು.
ನಾಣ್ಣುಡಿ (ನಾ). ಗಾದೆ; ಲೋಕೋಕ್ತಿ.
ನಾಣ್ಯ (ನಾ). ೧. ಬೆಲೆ; ಗೌರವ. ೨. ಉತ್ತಮವಾಗಿರುವಿಕೆ; ಚೆನ್ನಾಗಿರುವಿಕೆ. ೩. ಸರಿಯಾದುದು; ಒಪ್ಪಿಗೆಯಾದುದು. ೪. ದುಡ್ಡು; ಹಣ. ೫. ಹಣದ ಬಿಲ್ಲೆ, –ಬಟ್ಟು. ೬. ಬೆಲೆಯುಳ್ಳ ಬಟ್ಟೆ.
ನಾತ (ನಾ). ೧. ವಾಸನೆ; ಕಂಪು. ೨. ಸುವಾಸನೆ; ಪರಿಮಳ. ೩. ಕೆಟ್ಟವಾಸನೆ; ದುರ್ಗಂಧ.
ನಾಥ (ನಾ). ೧. ನಾಯಕ; ಮುಖಂಡ. ೨. ಪತಿ; ಗಂಡ. ೩. ಒಡೆಯ; ಸ್ವಾಮಿ.
ನಾದ (ನಾ). ೧. ಸಪ್ಪಳ; ಶಬ್ದ. ೨. ಮಧುರವಾದ ಧ್ವನಿ. ~ಮೂರ್ತಿ = ಶಿವ.
ನಾದಾರಿ (ನಾ). ದಿವಾಳಿಯಾದವನು; ಪಾಪರು ಚೀಟಿಯನ್ನು ತೆಗೆದುಕೊಂಡವನು.
ನಾದಿಗ (ನಾ). ಕ್ಷೌರಿಕ; ಹಜಾಮ.
ನಾದಿನಿ (ನಾ). ೧. ಗಂಡನ ಸಹೋದರಿ. ೨. ತಮ್ಮನ ಹೆಂಡತಿ.
ನಾದು (ಕ್ರಿ). ೧. ಮಿದಿ; ಕಲಸು. ೨. ಒದ್ದೆಮಾಡು; ತೋಯಿಸು.
ನಾದುನಿ = ನಾದಿನಿ.
ನಾದೇಯ (ನಾ). ೧. ಒಂದು ಬಗೆಯ ಉಪ್ಪು; ಸೈಂಧವಲವಣ. (ಗು). ೨. ನದಿಗೆ ಸಂಬಂಧಿಸಿದ.
ನಾದೇಯಿ (ನಾ). ೧. ನದಿಯ ದಡದಲ್ಲಿ ಬೆಳೆಯುವ ಒಂದು ಜಾತಿಯ ಬಿದಿರು. ೨. ಕಿತ್ತಳೆಗಿಡ.
ನಾನ್(ನು) (ಕ್ರಿ). ನೆನೆ; ಒದ್ದೆಯಾಗು.
ನಾನಲ್(ಲು) (ನಾ). ಲಾಳದ ಕಡ್ಡಿ; ಗಲಗು.
ನಾನಾ (ಗು). ೧. ಒಂದಕ್ಕಿಂತ ಹೆಚ್ಚಾದ; ಅನೇಕ. ೨. ಬಗೆಬಗೆಯ; ವಿವಿಧವಾದ.
ನಾಪಿತ = ನಾದಿಗ.
ನಾಭಿ (ನಾ). ೧. ಹೊಕ್ಕುಳು. ೨. ಕೇಂದ್ರಸ್ಥಾನ; ಮುಖ್ಯವಾದುದು. ೩. ಚಕ್ರದ ಮಧ್ಯಭಾಗ; ಗುಂಬ. ೪. ಕ್ಷತ್ರಿಯ.
ನಾಭಿಜ (ನಾ). ಹೊಕ್ಕುಳಲ್ಲಿ ಹುಟ್ಟಿದವನು; ಬ್ರಹ್ಮ.
ನಾಮ (ನಾ). ೧. ಹೆಸರು. ೨. ವ್ಯಾಕರಣದಲ್ಲಿ ವಸ್ತುವಿನ ಹೆಸರನ್ನು ಸೂಚಿಸುವ ಪದ; ನಾಮಪದ. ೩. ಹಣೆಯಲ್ಲಿ ಧರಿಸುವ ಲಾಂಛನ ಮತ್ತು ಅದಕ್ಕೆ ಉಪಯೋಗಿಸುವ ದ್ರವ್ಯ. ೪. ಮೋಸ. ~ಅಂಕಿತ = ಹೆಸರಾದ; ಪ್ರಸಿದ್ಧಿ ಪಡೆದ. ~ಕರಣ = ಮಗುವಿಗೆ ಹೆಸರಿಡುವ ಕಾರ್ಯ. ~ಹಾಕು = ೧. ನಾಮವನ್ನು ಧರಿಸು. ೨. ಮೋಸಮಾಡು.
ನಾಮಧಾರಿ (ನಾ). ೧. ಹೆಸರು ಪಡೆದವನು; ಪ್ರಸಿದ್ಧ. ೨. ನಾಮವನ್ನು ಧರಿಸಿದವನು.
ನಾಮಧೇಯ (ನಾ). ಹೆಸರು; ಬಿರುದು.

ನಾಮರ್ದಾ (ನಾ). ಹೇಡಿ; ಅಂಜುಬುರುಕ.

ನಾಮೆ (ನಾ). ೧. ದಾಖಲೆ; ದಸ್ತೈವಜು. ೨. ಹೆಸರು; ಕೀರ್ತಿ.

ನಾಯ್ (ನಾ). ಸೊಣಗ; ಶುನಕ.

ನಾಯಕ ೧. = ನಾಥ. ೨. ನಾಟಕ, ಕಾವ್ಯ ಮುಂತಾದುವುಗಳ ಮುಖ್ಯಪಾತ್ರ. ~ಪಾ(ನಾ)ಡಿ = ಹಳ್ಳಿಯ ಅಥವಾ ಪಂಗಡದ ಮುಖಂಡ. ~ಮಣಿ = ಸರದ ನಡುವಿನ ಮಣಿ; ಪದಕ. ~ಸಾನಿ = ಸೂಳೆ; ವೇಶ್ಯೆ.

ನಾಯಕಿ (ನಾ). ೧. ಒಡತಿ; ಸ್ವಾಮಿನಿ. ೨. ಹೆಂಡತಿ. ೩. ನಾಟಕ, ಕಾವ್ಯ ಮುಂತಾದುವುಗಳ ಮುಖ್ಯ ಸ್ತ್ರೀ ಪಾತ್ರ.

ನಾಯಬ (ನಾ). ಪ್ರತಿನಿಧಿ; ನಿಯೋಗಿಯಾದ ಅಧಿಕಾರಿ.

ನಾಯಿ = ನಾಯ್. ~ಕೆಮ್ಮು = ಮಕ್ಕಳಿಗೆ ಬರುವ ಒಂದು ಬಗೆಯ ಕೆಮ್ಮು. ~ತನ = ಹೀನಸ್ವಭಾವ. ~ಪಾಡು = ಕೆಟ್ಟಸ್ಥಿತಿ; ದುಃಸ್ಥಿತಿ.

ನಾಯಿಂದ = ನಾದಿಗ.

ನಾಯಿಕೆ = ನಾಯಕಿ.

ನಾಯಿಕೊಡೆ (ನಾ). ಒಂದು ಜಾತಿಯ ಸಸ್ಯ; ಅಣಬೆ; ಶಿಲೀಂಧ್ರ.

ನಾರ್(ರು) ೧. = ನಾಱು. (ನಾ). ೨. ಎಳೆ; ತಂತು. ೩. ಗುಂಜು. ೪. = ನಾರುಮಡಿ. ~ಮಡಿ = ನಾರಿನಿಂದ ಮಾಡಿದ ಬಟ್ಟೆ; ವಲ್ಕಲ.

ನಾರಂಗ (ನಾ). ಕಿತ್ತಳೆಯ ಮರ ಮತ್ತು ಅದರ ಹಣ್ಣು. ~ಬ(ವ)ಟ್ಟೆ = ಕಿತ್ತಳೆ ಬಣ್ಣದ ಬಟ್ಟೆ.

ನಾರಕ ೧. = ನಾರಕಿ. (ಗು). ೨. ನರಕಕ್ಕೆ ಸಂಬಂಧಿಸಿದ.

ನಾರಕಿ (ನಾ). ನರಕದಲ್ಲಿರುವವನು.

ನಾರಾಚ (ನಾ). ೧. ಬಾಣ. ೨. ಉಕ್ಕಿನ ಲೆಕ್ಕಣಿಕೆ; ಕಂಠ.

ನಾರಿ (ನಾ). ೧. ಬಿಲ್ಲಿನ ಹೆದೆ; ಮೌರ್ವಿ. ೨. ತಾಳೆಮರದ ಕಾಂಡದ ಮೇಲಿನ ಪೊರೆ. ೩. ಹೆಂಗಸು; ಸ್ತ್ರೀ.

ನಾರಿಕೇಲ(ಳ) (ನಾ). ತೆಂಗಿನ ಮರ ಮತ್ತು ಅದರ ಕಾಯಿ. ~ಪಾಕ = ತಿಳಿಯಲು ಕಠಿನವಾದ ಕಾವ್ಯಶೈಲಿ.

ನಾರಿವಾಣ = ನಾರಿಕೇಲ.

ನಾರಿವಾಳ = ನಾರಿಕೇಲ.

ನಾರುಂಬೇಳೆ (ನಾ). ಒಂದು ಬಗೆಯ ಔಷಧಿ ಸಸ್ಯ.

ನಾಱು(ರು) (ಕ್ರಿ). ೧. ಸುವಾಸನೆ ಬರು; ಪರಿಮಳಿಸು. ೨. ಕೆಟ್ಟವಾಸನೆ ಬರು; ದುರ್ಗಂಧ ಬೀರು. ೩. ನೆನೆಯಿಸು; ಒದ್ದೆ ಮಾಡು.

ನಾಲ್ (ನಾ). ನಾಲ್ಕು. ~ತೋ(ದೋ)ಳ್ = ನಾಲ್ಕು ತೋಳುಗಳು. ~ದೆಸೆ = ನಾಲ್ಕು ದಿಕ್ಕುಗಳು. ~ನೀರ್ = ನಾಲ್ಕುನೀರ್. ~ಬ(ವ)ಟ್ಟೆ = ೧. ನಾಲ್ಕು ರಸ್ತೆಗಳು. ೨. ನಾಲ್ಕು ರಸ್ತೆಗಳು ಕೂಡುವ ಸ್ಥಳ; ಚೌಕ. ~ಬೆ(ವೆ)ರಲ್ = ನಾಲ್ಕು ಬೆರಳುಗಳು. ~ಮೊಗ = ನಾಲ್ಕು ಮುಖಗಳುಳ್ಳವನು; ಬ್ರಹ್ಮ.

ನಾಲ(ಳ) (ನಾ). ೧. (ತಾವರೆ ಮೊದಲಾದುವುಗಳ) ದಂಟು; ದೇಟು. ೨. ನರ. ೩. ಹಿಡಿ; ಹಿಡಿಕೆ. ೪. ಹಳದಿ ಅರಿದಾಳ.

ನಾಲಗೆ (ನಾ). ೧. ಜಿಹ್ವೆ. ೨. ಗಂಟೆಯ ಧ್ವನಿ ಹೊರಡುವಂತೆ ಮಾಡುವ ಸಾಧನ.

ನಾಲಿ(ಳಿ) (ನಾ). ೧. ನಾಳ; ಕೊಳವೆ. ೨. ತಾವರೆ; ಕಮಲ. ೩. ನೇಕಾರನ ಮಗ್ಗದ ಲಾಳಿ. ೪. ಇಪ್ಪತ್ತುನಾಲ್ಕು ನಿಮಿಷಗಳ ಅವಧಿ; ಗಳಿಗೆ. ೫. ಒಂದು ಬಗೆಯ ಹುಣ್ಣು; ನಾಡಿಹುಣ್ಣು.

ನಾಲಿ(ಳಿ)ಕೇರ = ನಾರಿಕೇಲ.

ನಾಲಿಗೆ = ನಾಲಗೆ. ~ಕೆ(ಗೆ)ಡು = ಅನಾರೋಗ್ಯದಿಂದ ರುಚಿ ಇಲ್ಲದಂತಾಗು. ~ತಪ್ಪು = ಮಾತಿಗೆ ತಪ್ಪು.

ನಾಲೀಕ (ನಾ). ೧. ಬಾಣ; ನಾರಾಚ. ೨. ಕಮಲ ಮತ್ತು ಅದರ ದೇಟು.

ನಾಲಿ(ಳಿ)ಜಂಘ (ನಾ). ಉದ್ದವಾದ ಕಾಲುಗಳುಳ್ಳುದು; ಬಕ; ಕೊಕ್ಕರೆ.

ನಾಲೆ (ನಾ). ಕಾಲುವೆ; ತೋಡು. ~ಬಯಲು = ಕಾಲುವೆಯ ಆಸರೆಯಿಂದ ಬೆಳಸುವ ಗದ್ದೆ.

ನಾಲ್ಕು (ನಾ). ಒಂದು ಸಂಖ್ಯೆ; ನಾಕು. ~ನೀರ್(ರು) = ಬಹಿಷ್ಠೆಯಾದವಳು ನಾಲ್ಕನೆಯ ದಿನ ಮಾಡುವ ಸ್ನಾನ.

ನಾವಲಿ(ಳಿ)ಗ (ನಾ). ನಾಪಿತ; ಕ್ಷೌರಿಕ.

ನಾವಿ(ಂ)ದ = ನಾವಲಿಗ.

ನಾವಿಕ (ನಾ). ನಾವೆಯನ್ನು ನಡಸುವವನು.

ನಾವೀನ್ಯ (ನಾ). ಹೊಸತನ; ನವೀನತೆ.

ನಾವು (ನಾ). ದೋಣಿ; ಹಡಗು. ~ಅಡಿಗ = ನಾವಿಕ.

ನಾವೆ = ನಾವು.

ನಾಶ (ನಾ). ಹಾಳು; ಹಾನಿ; ಅಳಿವು.

ನಾಷ್ಟಾ (ನಾ). (ಬೆಳಗಿನ) ಉಪಹಾರ.

ನಾಸ (ನಾ). ಮೂಗು; ನಾಸಿಕ. ~ಅನಿಲ = ಉಸಿರು; ಶ್ವಾಸ.

ನಾಸಾಪುಟ (ನಾ). ಮೂಗಿನ ಹೊಳ್ಳೆ.

ನಾಸಿಕ = ನಾಸ.

ನಾಸ್ತಿಕ (ನಾ). ದೇವರು, ವೇದ ಮತ್ತು ಪುರಾಣಗಳನ್ನು ನಂಬದವನು; ನಿರೀಶ್ವರವಾದಿ.

ನಾಳ್ (ನಾ). ದಿನ; ದಿವಸ.

ನಾಳದ್ದು = ನಾಡಿದು.

ನಾಳೆ (ನಾ). ಈ ದಿನದ ಮರುದಿನ; ಮರುದಿವಸ.

ನಾಱ್(ಳ್) = ನಾಡು. ~ಕಡೆ = ನಾಡಿನ ಎಲ್ಲೆ, -ಮೇರೆ. ~ಗಾಮುಂಡ = ಗೌಡ; ಪ್ರಾಂತ್ಯದ ಅಧಿಕಾರಿ. ~ನುಡಿ = ಗಾದೆ; ನಾಣ್ನುಡಿ.

ನಾಟಿ(ಳ) (ನಾ). ೧. ಪೊಳ್ಳುಕಾಂಡ. ೨. ಗಂಟೆಯ ನಾಲಗೆ.

ನಾಟಿ(ಳ)ವಾಸಗೆ (ನಾ). ಮೋಸದ ದಾಳ.

ನಿಂದಕ (ನಾ). ನಿಂದಿಸುವವನು; ಜರೆಯುವವನು.

ನಿಂದೆ (ನಾ). ತೆಗಳಿಕೆ; ಬಯ್ಯುವಿಕೆ; ದೂಷಣೆ. ~ಇಸು = ಜರೆ; ಬಯ್ಯು.

ನಿಂದ್ಯ (ಗು). ನಿಂದಿಸಲ್ಪಡುವ; ದೂಷಣೆಗೆ ಯೋಗ್ಯವಾದ.

ನಿಂಬ (ನಾ). ಕಹಿಬೇವು; ಬೇವಿನಮರ.

ನಿಂಬಜೆ (ನಾ). ರಣಮಾರಿ; ಚಂಡಿದೇವತೆ.

ನಿಂಬೆ (ನಾ). ಈಳೆ ಜಾತಿಗೆ ಸೇರಿದ ಮರ ಮತ್ತು ಅದರ ಹಣ್ಣು; ಲಿಂಬೆ.

ನಿಕಟ (ನಾ). ೧. ಸಮೀಪ; ಹತ್ತಿರ. (ಗು). ೨. ಹತ್ತಿರದ; ಸಮೀಪದ.

ನಿಕಟವರ್ತಿ (ನಾ). ಹತ್ತಿರದವನು; ಆಪ್ತ.

ನಿಕರ (ನಾ). ೧. ಗುಂಪು; ರಾಶಿ. ೨. ತಿರುಳು; ಸಾರ. ೩. ಯೋಗ್ಯವಾದ ಪಾರಿತೋಷಕ; ಗೌರವದ ಕೊಡುಗೆ.

ನಿಕಷ (ನಾ). ಚಿನ್ನ ಬೆಳ್ಳಿಗಳನ್ನು ಪರೀಕ್ಷಿಸುವ ಕಲ್ಲು; ಒರೆಗಲ್ಲು.

ನಿಕಾಮ (ನಾ). ಆಸೆ; ಬಯಕೆ.

ನಿಕಾಯ (ನಾ). ೧. ಗುಂಪು; ವರ್ಗ. ೨. ಮನೆ; ವಾಸಸ್ಥಳ.

ನಿಕಾಲೆ (ನಾ). ಕೊನೆ; ಮುಕ್ತಾಯ.

ನಿಕಾಶ (ನಾ). ೧. ತೋರಿಕೆ. (ಗು). ೨. ಅದರಂತೆ ಕಾಣುವ; ಹೋಲುವ.

ನಿಕುಂಜ (ನಾ). ೧. ಪೊದೆ; ಮೆಳೆ; ಹೊದರು. ೨. ಬಳ್ಳಿಮಾಡ; ಲತಾಗೃಹ. ೩. ಗುಹೆ; ಗವಿ.

ನಿಕುರುಂಬ (ನಾ). ಗುಂಪು; ರಾಶಿ; ಸಮೂಹ.

ನಿಕೃತ (ಗು). ೧. ವಂಚಿಸಲ್ಪಟ್ಟ; ಮೋಸಗೊಳಿಸಲ್ಪಟ್ಟ. ೨. ತಿರಸ್ಕರಿಸಲ್ಪಟ್ಟ.

ನಿಕೃಷ್ಟ (ನಾ). ೧. ನೀಚ; ಕೀಳುಮನುಷ್ಯ. (ಗು). ೨. ಹೀನಸ್ಥಿತಿಗೆ ಬಂದ; ಕೀಳಾದ.

ನಿಕೇತನ (ನಾ). ವಾಸಸ್ಥಳ; ಮನೆ.

ನಿಕ್ಕುವ (ನಾ). ನಿಶ್ಚಯ; ಸತ್ಯ; ದಿಟ.

ನಿಕ್ಕುಳಿಸು (ಕ್ರಿ). ಒಯ್ಯಾರದಿಂದ ಒಲೆದಾಡು; ಬೆಡಗಿನಿಂದ ಬಾಗು.

ನಿಕ್ಷಿಪ್ತ (ಗು). ೧. ಇಟ್ಟ; ಇರಿಸಿದ. ೨.ಹೂಳಲ್ಪಟ್ಟ; ಹುದುಗಿಸಿದ.

ನಿಕ್ಷೇಪ (ನಾ). ಹುದುಗಿಟ್ಟ ಧನ; ಗುಪ್ತಧನ.

ನಿಖರ (ಗು). ಕರಾರುವಾಕ್ಕಾದ; ಹೆಚ್ಚುಕಡಮೆಯಿಲ್ಲದ.

ನಿಖಿಲ(ಳ) (ಗು). ಎಲ್ಲ; ಸಕಲ.

ನಿಗಡ (ನಾ). ೧. (ಆನೆಯ ಕಾಲಿಗೆ ತೊಡಿಸುವ) ಸಂಕೋಲೆ; ಸರಪಳಿ. ೨. ಕಾಲಿನ ಒಂದು ಆಭರಣ.

ನಿಗದಿ (ನಾ). ನಿಶ್ಚಯ; ನಿರ್ಣಯ. ~ಇಸು = ಗೊತ್ತುಮಾಡು; ನಿಶ್ಚಯಪಡಿಸು.

ನಿಗಮ (ನಾ). ೧. ವೇದ. ೨. ಪಟ್ಟಣ; ನಗರ. ೩. ಮಾರ್ಗ. ೪. ಪ್ರತಿಜ್ಞೆ. ೫. ವ್ಯಾಪಾರಿ. ೬. ಹಾವು; ಸರ್ಪ. ~ಗೋಚರ = ವೇದಗಳಿಗೆ ಕಾಣುವವನು; ದೇವರು.

ನಿಗರ (ನಾ). ಅತ್ಯುತ್ತಮವಾದುದು; ಮನೋಹರವಾದುದು.

ನಿಗರ್ವ (ನಾ). ೧. ಸೌಜನ್ಯ; ವಿನಯ. (ಗು). ೨. ಗರ್ವವಿಲ್ಲದ; ಹೆಮ್ಮೆಯಿಲ್ಲದ.

ನಿಗರ್ವಿ (ನಾ). ಹೆಮ್ಮೆ ಇಲ್ಲದವನು; ಗರ್ವವಿಲ್ಲದವನು.

ನಿಗಲ(ಳ) = ನಿಗಡ.

ನಿಗಾ (ನಾ). ಎಚ್ಚರ; ಲಕ್ಷ್ಯ.

ನಿಗಿನಿಗಿ (ಗು). ಹೊಳೆಯುವ; ಥಳಥಳಿಸುವ. ~ಇಸು = ಹೊಳೆ; ಪ್ರಕಾಶಿಸು.

ನಿಗುಂಬು (ಕ್ರಿ). ಗುಡ್ಡೆಹಾಕು; ರಾಶಿಮಾಡು. ~ಇಸು = ಗುಂಪುಗೂಡು; ಸಂದಣಿಸು.

ನಿಗುಚು (ಕ್ರಿ). ಉದ್ದವಾಗು; ಲಂಬವಾಗು.

ನಿಗುರ್(ರು) (ಕ್ರಿ). ೧. ಚಾಚು; ನೀಡು. ೨. ನೇರವಾಗು; ನೆಟ್ಟಗಾಗು. ೩. ಗರ್ವಪಡು; ಹೆಮ್ಮೆಪಡು. ~ಇಸು=೧. ದೀರ್ಘವಾಗಿಸು; ಉದ್ದಗೊಳಿಸು. ೨.= ನಿಗುಚು.

ನಿಗುರ್ಚು = ನಿಗುಚು.

ನಿಗೂಢ (ಗು). ಅಡಗಿದ; ಗುಪ್ತವಾದ.

ನಿಗ್ಗರ (ನಾ). ೧. ತಡೆ; ನಿಗ್ರಹ. ೨. ಬಲಾತ್ಕಾರ; ಒತ್ತಾಯ. ೩.ಕಾಟ; ಹಿಂಸೆ; ಪೀಡೆ.

ನಿಗ್ಗವ (ನಾ). ಗಜದಂತ; ಆನೆಯ ಕೋರೆ.

ನಿಗ್ಗು (ನಾ). ನಿಬಿಡತೆ; ದಟ್ಟಣೆ.

ನಿಗ್ಗೇಡಿ (ನಾ). ನಾಚಿಕೆಗೇಡಿ; ಲಜ್ಜೆಯಿಲ್ಲದವನು.

ನಿಗ್ರಹ (ನಾ). ೧. ಹಿಡಿತ; ಹತೋಟಿ; ಅಂಕೆ. ೨. ಹಿಂಸೆ; ಪೀಡೆ. ೩. ನಿಂದೆ; ತಿರಸ್ಕಾರ. ೪. ನಾಶ; ಅಳಿವು. ೫. ಶಿಕ್ಷೆ; ದಂಡನೆ. ~ಇಸು=೧. ತಡೆ; ನಿಯಂತ್ರಿಸು. ೨. ಶಿಕ್ಷಿಸು; ದಂಡಿಸು.

ನಿಘಂಟು (ನಾ). ಶಬ್ದಕೋಶ; ಶಬ್ದಾರ್ಥಸಂಗ್ರಹ; ಪದಗಳ ಅರ್ಥವನ್ನು ಹೇಳುವ ಪುಸ್ತಕ.

ನಿಘರ್ಷಣ (ನಾ). ತಿಕ್ಕುವಿಕೆ; ಉಜ್ಜುವಿಕೆ.

ನಿಘಾತ (ನಾ). ೧. ಹೊಡೆತ; ಪೆಟ್ಟು. ೨. ಕೊಲೆ; ವಧೆ.

ನಿಚಯ (ನಾ). ರಾಶಿ; ಗುಂಪು.

ನಿಚಿತ (ಗು). ರಾಶಿಮಾಡಿದ; ಗುಡ್ಡೆಹಾಕಿದ.

ನಿಚುಲ (ನಾ). ೧. ಮುಸುಕು; ಮರೆ. ೨. ಕವಚ; ಮೈಜೋಡು. ೩. ಒಂದು ಜಾತಿಯ ಮರ.

ನಿಚೋಲಕ (ನಾ). ಕವಚ; ಚಿಲಕುತ್ತು.

ನಿಚ್ಚ (ನಾ). ೧. ನಿತ್ಯ; ಪ್ರತಿದಿನ. (ಅ). ೨. ನಿರಂತರವಾಗಿ; ಒಂದೇಸಮನೆ.

ನಿಚ್ಚಟ (ನಾ). ೧. ಮೋಸವಿಲ್ಲದಿರುವುದು ; ಕಪಟವಿಲ್ಲದಿರುವುದು. ೨. ಬೆತ್ತಲೆ ; ನಗ್ನತೆ. ೩. ದೃಢಮನಸ್ಕ ; ಸ್ಥಿರಚಿತ್ತ. (ಗು). ೪. ಕಪಟವಿಲ್ಲದ. ೫. ಸ್ಥಿರವಾದ. ~ಇಕೆ(ಕ್ಕೆ) = ನಿಶ್ಚಲತ್ವ ; ಸ್ಥಿರತೆ. ~ಕ(ಗ)ಲಿ = ಕಡುಗಲಿ ; ಪರಾಕ್ರಮಿ.

ನಿಚ್ಚಣಿ (ನಾ). ಏಣಿ.

ನಿಚ್ಚಣಿಕೆ = ನಿಚ್ಚಣಿ.

ನಿಚ್ಚಣಿಗೆ = ನಿಚ್ಚಣಿ.

ನಿಚ್ಚಯ = ನಿಶ್ಚಯ.

ನಿಚ್ಚಲ(ಳ) = ನಿಶ್ಚಲ.

ನಿಜ (ನಾ). ೧. ಸತ್ಯ ; ದಿಟ. ೨. ತನ್ನದು ; ಸ್ವಂತವಾದುದು. (ಗು). ೩. ಕೃತ್ರಿಮವಲ್ಲದ ; ಸ್ವಾಭಾವಿಕ. ೪. ತನ್ನದಾದ ; ಸ್ವಂತ. ~ಪದ = ನಿಜವಾದ ಪದವಿ ; ಮೋಕ್ಷ. ~ಸ್ವರೂಪ = ಸ್ವಂತ ರೂಪ ; ನಿಜರೂಪ.

ನಿಜಾಮು (ನಾ). ೧. ಅರಸ ; ದೊರೆ. ೨. ಹೈದರಾಬಾದಿನ ದೊರೆಗಳಿಗೆ ಇದ್ದ ಹೆಸರು.

ನಿಟಲ(ಳ) (ನಾ). ಹಣೆ ; ಫಾಲ. ~ಅಂಬಕ = ಹಣೆಯಲ್ಲಿ ಕಣ್ಣಿರುವವನು ; ಶಿವ.

ನಿಟ್ಟೆಯದ್ದೆ = ನಿಟ್ಟೈದೆ.

ನಿಟ್ಟಾಲಿ (ನಾ). ೧. ನಿಡಿದಾದ ಆಲಿ ; ದೊಡ್ಡ ಕಣ್ಣು. ೨. ದೀರ್ಘದೃಷ್ಟಿ. ~ಕೊ(ಗೊ)ಳ್ = ಗಮನಿಸಿ ನೋಡು.

ನಿಟ್ಟೆ (ನಾ). ೧. ನಿಜಸ್ಥಿತಿ ; ವಾಸ್ತವಾಂಶ. ೨. ಶಾಶ್ವತ ; ನಿತ್ಯತೆ.

ನಿಟ್ಟಿಸು (ಕ್ರಿ). ಎವೆಯಿಕ್ಕದೆ ನೋಡು ; ಒಂದೇ ಸಮನೆ ನೋಡು.

ನಿಟ್ಟು (ನಾ). ೧. ಇಳಿಜಾರು ; ಇಳುಕಲು. ೨. ದಿಕ್ಕು ; ದೆಸೆ. ೩. ರಾಶಿ ; ಅಡಕಿಲು.

ನಿಟ್ಟುಡುಗೊಱೆ(ರೆ) (ನಾ). ಬೆಲೆಬಾಳುವ ಉಡುಗೊರೆ.

ನಿಟ್ಟುಪವಾಸ (ನಾ). ಕಠೋರವಾದ ಉಪವಾಸ.

ನಿಟ್ಟುರ (ನಾ). ಒರಟು ; ಕಠೋರ ; ನಿಷ್ಠುರ.

ನಿಟ್ಟುಸಿರು (ನಾ). ನಿಡಿದಾದ ಉಸಿರು ; ದೀರ್ಘಶ್ವಾಸ.

ನಿಟ್ಟೆ = ನಿಷ್ಠೆ.

ನಿಟ್ಟೆಲ್ವು (ನಾ). ನಿಡಿದಾದ ಎಲುಬು ; ಬೆನ್ನುಮೂಳೆ.

ನಿಟ್ಟೈದೆ (ನಾ). ದೀರ್ಘ ಸುಮಂಗಲಿ ; ಮುತ್ತೈದೆ.

ನಿಟ್ಟೋಟ (ನಾ). ನಿಡಿದಾದ ಓಟ.

ನಿಡಿ (ನಾ). ೧. ನೊರೆ ; ಬುರುಗು. ೨. ಕಟುವಾಸನೆ ; ಘಾಟು.

ನಿಡಿದು (ನಾ). ೧. ಉದ್ದವಾದುದು ; ಲಂಬವಾದುದು. (ಗು). ೨. ಉದ್ದವಾದ ; ದೀರ್ಘವಾದ ; ಎತ್ತರವಾದ. ೩. ದೊಡ್ಡ.

ನಿಡಿಯ (ನಾ). ೧. ಎತ್ತರವಾದವನು ; ಲಂಬು. (ಗು). ೨. ಎತ್ತರವಾದ.

ನಿಡು=ನಿಡಿದು. ~ಕ=ನಿಡಿಯ. ~ಕಿ(ಗಿ)ಚ್ಚು =ದೊಡ್ಡ ಉರಿ; ಜ್ವಾಲೆ. ~ಕೊ(ಗೊ)ಂಬು = ೧. ಉದ್ದವಾದ ಟೊಂಗೆ, -ರೆಂಬೆ. ೨. ದೊಡ್ಡ ಕಹಳೆ. ~ಕೊ(ಗೊ)ಡು = ೧. ಉದ್ದವಾದ ಕೋಡು, -ಶೃಂಗ. ೨. ನಿಡಿದಾದ ಕೊಂಬೆ. ~ನಿದ್ರೆ = ದೀರ್ಘನಿದ್ರೆ; ಸಾವು. ~ಪ(ವ)ಗೆ = ಕಡುಹಗೆ. ~ಪಯಣ = ದೀರ್ಘವಾದ ಪ್ರಯಾಣ. ~ಸುಯ್ = ೧. ನಿಟ್ಟುಸಿರು ಬಿಡು. ೨.=ನಿಡುಸುಯ್ಲು. ~ಸುಯ್ಲು=ನಿಡಿದಾದ ಉಸಿರು ; ನಿಟ್ಟುಸಿರು.

ನಿತಂಬ (ನಾ). ೧. ಸೊಂಟದ ಹಿಂದಿನ ಕೆಳಭಾಗ; ಪೊರವಾರು. ೨. ಸಾನು; ಬೆಟ್ಟದ ಇಳುಕಲು.

ನಿತಂಬಿನಿ (ನಾ). ೧. ಸುಂದರವಾದ ನಿತಂಬವುಳ್ಳವಳು ; ಚೆಲುವೆ. ೨. ಹೆಂಗಸು ; ಸ್ತ್ರೀ.

ನಿತಾಂತ (ಗು). ಅಧಿಕ ; ಬಹಳ.

ನಿತ್ತರಿಸು ೧. = ನಿಸ್ತರಿಸು. ೨. ದಾಟು ; ಪಾರಾಗು.

ನಿತ್ಯ (ನಾ). ೧. ಪ್ರತಿದಿನ; ನಿಚ್ಚ. ೨. ಶಾಶ್ವತ; ಅನಂತ. ೩. ಅನಿವಾರ್ಯವಾದುದು. ೪. ಸಮುದ್ರ. ~ಉತ್ಸವ = ದಿನವೂ ನಡೆಯುವ ಮಂಗಳಕಾರ್ಯ. ~ತೃಪ್ತ = ಸದಾ ತೃಪ್ತನಾಗಿರುವವನು. ~ಪದವಿ = ಮೋಕ್ಷ. ~ಮುತ್ತೈದೆ=ನಿತ್ಯ ಸುಮಂಗಲಿ. ~ಯಾತ್ರೆ = ದಿನವೂ ಭಿಕ್ಷೆಗಾಗಿ ಹೋಗುವುದು. ~ಸುಮಂಗಲಿ = ೧. ದೀರ್ಘಸುಮಂಗಲಿ. ೨. ವೇಶ್ಯೆ ; ಸೂಳೆ.

ನಿತ್ರಾಣ (ನಾ). ೧. ಅಶಕ್ತಿ ; ದೌರ್ಬಲ್ಯ. (ಗು). ೨. ಅಶಕ್ತವಾದ; ದುರ್ಬಲವಾದ.

ನಿತ್ರಾಣಿ (ನಾ). ಅಶಕ್ತ ; ದುರ್ಬಲ.

ನಿದರ್ಶನ (ನಾ).೧.ದೃಷ್ಟಾಂತ; ಉದಾಹರಣೆ. ೨. ಒಂದು ಕಾವ್ಯಾಲಂಕಾರ. ೩. ದೃಶ್ಯ ; ನೋಟ.

ನಿದಾಘ (ನಾ). ೧. ಬೇಸಗೆ. ೨.ಸೆಕೆ ; ಬೇಗೆ. ೩. ಬೆವರು ; ಘರ್ಮ.

ನಿದಾನ (ನಾ). ೧. ಹಗ್ಗ. ೨. ಮೂಲಕಾರಣ. ೩. ಕಾರಣವನ್ನು ಕಂಡುಹಿಡಿಯುವುದು. ೪. ರೋಗಪರೀಕ್ಷೆ; ರೋಗವನ್ನು ಗುರುತಿಸುವುದು. ೫. ಸಾವಕಾಶ; ನಿಧಾನ. ೬. ಶುದ್ಧಿ; ಶುಚಿ ಮಾಡುವುದು. ೭.ಅಂತ್ಯ; ಕೊನೆ.

ನಿದ್ದೆ (ನಾ). ಸುಷುಪ್ತಿ ; ನಿದ್ರೆ.

ನಿದ್ರೆ ೧. = ನಿದ್ದೆ. ೨.ಆಲಸ್ಯ; ಪಾಲುಮಾರಿಕೆ. ~ಇಸು = ನಿದ್ದೆಮಾಡು. ~ತಿಳಿ= ಎಚ್ಚರಾಗು ; ನಿದ್ದೆಯಿಂದೇಳು.

ನಿಧನ (ನಾ). ೧. ಸಾವು ; ಮರಣ. ೨.ಕೊನೆ ; ಅಂತ್ಯ. ೩. ಕುಲ. ೪. ನಿವಾಸ.

ನಿಧಾನ (ನಾ). ೧. ತಡ ; ಸಾವಕಾಶ. ೨. = ನಿಧಿ. ೩. ವಿಶ್ರಾಂತಿ ಸ್ಥಳ; ನೆಲೆ; ಆಶ್ರಯ. ೪. ತಾಳ್ಮೆ; ಸಹನೆ. ~ಇಸು =೧. ಸಾವಕಾಶಮಾಡು ; ತಡಮಾಡು. ೨. ತಾಳು ; ಸಹಿಸು.

ನಿಧಿ (ನಾ). ೧. ಸಂಪತ್ತು ; ಐಶ್ವರ್ಯ. ೨. ಹುದುಗಿಟ್ಟ ಧನ, -ದ್ರವ್ಯ. ೩. ಐಶ್ವರ್ಯವನ್ನು ಹುದುಗಿಟ್ಟ ಸ್ಥಳ ಅಥವಾ ಪಾತ್ರೆ. ೪. ಆಶ್ರಯಸ್ಥಾನ; ನೆಲೆ. ~ಈಶ್ವರ = ಐಶ್ವರ್ಯದ ಒಡೆಯ ; ಕುಬೇರ.

ನಿಧುವನ (ನಾ). ಸಂಭೋಗ ; ಸುರತ. ~ನಿಕೇತನ = ಮನ್ಮಥ; ಕಾಮ.

ನಿನದ (ನಾ). ನಾದ ; ಧ್ವನಿ.

ನಿನಾದ = ನಿನದ.

ನಿನ್ನೆ (ನಾ). ನೆನ್ನೆ ; ಇಂದಿಗೆ ಹಿಂದಿನ ದಿನ ; ಕಳೆದ ದಿನ.

ನಿಪತನ (ನಾ). ಕೆಳಕ್ಕೆ ಬೀಳುವಿಕೆ.

ನಿಪಾತ (ನಾ). ೧. ಹೀನಸ್ಥಿತಿ ; ಕೆಳಗಿಳಿಯುವಿಕೆ. ೨. ಹಾಳು ; ನಾಶ. ೩. ಆಶ್ಚರ್ಯ ಸೂಚಕ ಶಬ್ದ.

ನಿಪುಣ (ನಾ). ೧. ಜಾಣ ; ದಕ್ಷ. (ಗು). ೨. ನುರಿತ ; ಪ್ರವೀಣನಾದ.

ನಿಪ್ಪಟ್ಟು (ನಾ). ಒಂದು ಬಗೆಯ ಕರಿದ ತಿಂಡಿ.

ನಿಪ್ಪಟ್ಟೆ (ನಾ). ಉತ್ತಮವಾದ ರೇಷ್ಮೆಯ ಬಟ್ಟೆ.

ನಿಪ್ಪುಸರ (ನಾ). ಉರವಣೆ ; ನಿಷ್ಠುರತೆ ; ಕ್ರೌರ್ಯ.

ನಿಪ್ಪಾಳೆಯ (ನಾ). ಪಾಳೆಯವನ್ನು ತೆಗೆಯುವಿಕೆ ; ಊರು ಬರಿದಾಗುವಿಕೆ.

ನಿಪ್ಪೊಸತು (ನಾ). ಬಹಳ ಹೊಸತು ; ಹೊಚ್ಚ ಹೊಸದು.

ನಿಬಂಧ = ನಿಬಂಧನ.

ನಿಬಂಧನ (ನಾ). ೧. ರಚನೆ ; ಸಂಯೋಜನೆ. ೨. = ನಿಬಂಧನೆ.

ನಿಬಂಧನೆ (ನಾ). ಕಟ್ಟುಪಾಡು ; ನಿಯಮ.
ನಿಬಿಡ (ಗು). ೧. ದಟ್ಟವಾದ ; ಒತ್ತೊತ್ತಾದ; ಸಾಂದ್ರವಾದ. ೨. ತುಂಬಿದ.
ನಿಬ್ಬಣ (ನಾ). ೧. ಮದುವೆಯ ಮೆರವಣಿಗೆ; ದಿಬ್ಬಣ. ೨. ವಧೂವರರಿಗೆ ಕೊಡುವ ಉಡುಗೊರೆಗಳ ಪ್ರದರ್ಶನ. ~ಇಗ = ವರನ ಸಂಗಡಿಗ, -ಗೆಳೆಯ.
ನಿಬ್ಬರ = ನಿರ್ಝರ.
ನಿಬ್ಬರಿಸು (ಕ್ರಿ). ಹೊಳೆ ; ಪ್ರಕಾಶಿಸು.
ನಿಬ್ಬೆಗ (ನಾ). ಶಾಂತತೆ ; ಸೌಮ್ಯತೆ.
ನಿಬ್ಬೆಱ(ರ)ಗು (ನಾ). ಅತ್ಯಾಶ್ಚರ್ಯ; ಬಲು ಸೋಜಿಗ.
ನಿಭ (ನಾ). ೧. ನೆಪ ; ನೆವ. ೨. ಕಪಟ ; ವಂಚನೆ. ೩. ಬೆಳಕು ; ಪ್ರಭೆ. (ಗು). ೪. ಸಮಾನವಾದ ; ಎಣೆಯಾದ.
ನಿಭಾಯಿಸು (ಕ್ರಿ). ೧. ನಿರ್ವಹಿಸು ; ಪೂರೈಸು ; ಸಾಗಿಸಿಕೊಂಡು ಹೋಗು. ೨. ತಾಳು ; ಸೈರಿಸು.
ನಿಭೃತ (ಗು). ೧. ತುಂಬಿದ. ೨. ಮರೆ ಮಾಚಿದ. ೩. ಆವರಿಸಿದ.
ನಿಮಂತ್ರಣ (ನಾ). ಕರೆಯುವುದು ; ಆಮಂತ್ರಿಸುವುದು.
ನಿಮಗ್ನ (ಗು). ೧. ತೊಡಗಿದ. ೨. ಮುಳುಗಿದ; ತಲ್ಲೀನ.
ನಿಮಜ್ಜನ (ನಾ). ನೀರಿನಲ್ಲಿ ಮುಳುಗುವುದು.
ನಿಮಯ (ನಾ). ಬದಲಾವಣೆ ; ವಿನಿಮಯ.
ನಿಮಿ (ನಾ). ರೆಪ್ಪೆ ಬಡಿಯುವಿಕೆ.
ನಿಮಿತ್ತ (ನಾ). ೧. ನೆಪ ; ಕಾರಣ. ೨. ಗುರಿ; ಉದ್ದೇಶ. ೩. ಗುರುತು ; ಸಂಕೇತ. ೪. ಶಕುನ; ಕಣಿ. ~ಗಾರ = ಕಣಿ ಹೇಳುವವನು ; ಶಕುನ ಹೇಳುವವನು.
ನಿಮಿತ್ಯ = ನಿಮಿತ್ತ.
ನಿಮಿರ್(ರು) = ನಿಗುರ್.
ನಿಮಿರ್ಕೆ (ನಾ). ದೀರ್ಘವಾಗುವಿಕೆ.
ನಿಮಿರ್ಚು (ಕ್ರಿ). ೧. ನೀಳವಾಗುವಂತೆ ಮಾಡು. ೨. ವಿಸ್ತರಿಸು ; ಹರಡುವಂತೆ ಮಾಡು. ೩. ರಚಿಸು. ೪. ಉಂಟುಮಾಡು; ಒದಗಿಸು. ೫. ಮಾಡಿಸು. ೬. ಆಚರಿಸು.
ನಿಮಿಷ (ನಾ). ೧. ಕಣ್ಣು ಮುಚ್ಚಿ ತೆರೆಯುವುದು. ೨.=ನಿಮೇಷ. ೩. ಒಂದು ಗಂಟೆಯ ಅರುವತ್ತನೆಯ ಒಂದು ಭಾಗದಷ್ಟು ಕಾಲ.
ನಿಮಿಸ = ನಿಮಿಷ.
ನಿಮೀಲನ (ನಾ). ಎವೆಯನ್ನು ಮುಚ್ಚುವುದು.
ನಿಮೇಷ (ನಾ). ಕಣ್ಣುಮುಚ್ಚಿ ತೆಗೆಯುವಷ್ಟು ಕಾಲ ; ಅತಿ ಸ್ವಲ್ಪಕಾಲ.
ನಿಮ್ನ (ನಾ). ೧. ತಗ್ಗು ; ಆಳ ; ಕುಳಿ. (ಗು). ೨. ತಗ್ಗಾದ; ಆಳವಾದ. ~ಉನ್ನತ = ಉಬ್ಬು ತಗ್ಗಾದ ; ನಿರಿಳಿತಗಳುಳ್ಳ.
ನಿಮ್ನಗೆ (ನಾ). ಆಳವಾಗಿ ಹರಿಯುವುದು; ಹೊಳೆ, ನದಿ ಮುಂತಾದುವು.
ನಿಮ್ಮಳ = ನಿರ್ಮಲ.
ನಿಯಂತ್ರಣ (ನಾ). ಹತೋಟಿ; ಹಿಡಿತ ; ಕಟ್ಟುಪಾಡು.
ನಿಯತ (ಗು). ೧. ಅಚಲವಾದ ; ಸ್ಥಿರವಾದ. ೨. ಸ್ವಾಧೀನದಲ್ಲಿಟ್ಟುಕೊಂಡ ; ನಿಗ್ರಹಿಸಿದ. ೩. ನಿಶ್ಚಿತವಾದ ; ಗೊತ್ತುಪಡಿಸಿದ.
ನಿಯತಿ (ನಾ). ೧. ಗೊತ್ತಾದ ಕ್ರಮ ; ವಿಧಿ ; ನಿಯಮ. ೨. ಅದೃಷ್ಟ ; ದೈವ. ೩. ಸೈರಣೆ; ಸಂಯಮ. ೪. ನಿಸರ್ಗ.
ನಿಯತತ್ವ (ನಾ). ಪ್ರಾಮಾಣಿಕತೆ.
ನಿಯಮ (ನಾ). ೧. ಕಟ್ಟುಪಾಡು ; ಕ್ರಮ ; ಕಟ್ಟಳೆ. ೨. ನಿಗ್ರಹ ; ಹತೋಟಿ. ೩. ವ್ರತ. ~ಇಸು = ೧. ಹಿಡಿತದಲ್ಲಿಟ್ಟುಕೊಳ್ಳು ; ಅಂಕೆಯಲ್ಲಿಟ್ಟುಕೊಳ್ಳು. ೨. ಆಜ್ಞಾಪಿಸು. ೩. ನೇಮಕ ಮಾಡು.
ನಿಯಾಮಕ (ನಾ). ೧. ಅಜ್ಞೆ ಮಾಡುವವನು ; ಯಜಮಾನ. ೨. (ರಥ, ದೋಣಿ ಮುಂತಾದುವುಗಳನ್ನು) ನಡಸುವವನು ; ಚಾಲಕ.

ನಿಯಾಮಿಸು (ಕ್ರಿ). ಆಜ್ಞಾಪಿಸು; ಅಪ್ಪಣೆ ಕೊಡು.

ನಿಯುಕ್ತ (ಗು). ೧. ಜೋಡಿಸಿದ; ಕೂಡಿಸಿದ. ೨. ನಿಯಮಿಸಲ್ಪಟ್ಟ.

ನಿಯುಕ್ತಿ (ನಾ). ೧. ಹೊಂದಿಸಿದುದು; ಜೋಡಿಸಿದುದು. ೨. ಅಪ್ಪಣೆ; ಆಜ್ಞೆ. ೩. ನೇಮುಕ; ನಿಯೋಗ.

ನಿಯುತ (ನಾ). ೧. ಒಂದು ದೊಡ್ಡ ಸಂಖ್ಯೆ. (ಗು). ೨. ಸೇರಿದ; ನಿಯೋಜಿಸಲ್ಪಟ್ಟ.

ನಿಯುದ್ಧ (ನಾ). ಕುಸ್ತಿ; ಮಲ್ಲಯುದ್ಧ.

ನಿಯೋಗ (ನಾ). ೧. ಕೆಲಸ; ಉದ್ಯೋಗ. ೨. ಅಪ್ಪಣೆ; ಆಜ್ಞೆ. (ಗು). ೩. ಸೇರಿಸಲ್ಪಟ್ಟ.

ನಿಯೋಗಿ (ನಾ). ಒಂದು ವಿಶೇಷಕಾರ್ಯಕ್ಕಾಗಿ ನೇಮಿಸಲ್ಪಟ್ಟ ಅಧಿಕಾರಿ.

ನಿಯೋಜನ (ನಾ). ೧. ನೇಮಿಸುವುದು. ೨. ಆಜ್ಞಾಪಿಸುವುದು. ೩. ಒತ್ತಾಯಪಡಿಸುವುದು.

ನಿಯೋಜಿಸು (ಕ್ರಿ). ನೇಮುಕಮಾಡು; ನಿಯಮಿಸು.

ನಿರಂಕುಶ (ಗು). ಹಿಡಿತವಿಲ್ಲದ; ಹತೋಟಿಯಿಲ್ಲದ. ~ಪ್ರಭುತ್ವ=ಯಾವ ಅಂಕೆಯೂ ಇಲ್ಲದ ಆಡಳಿತ.

ನಿರಂಜನ (ನಾ). ೧. ಪರಮಾತ್ಮ; ದೇವರು. (ಗು). ೨. ಚೊಕ್ಕಟವಾದ; ಶುದ್ಧವಾದ.

ನಿರಂತರ (ಗು). ೧. ಎಡೆಯಿಲ್ಲದ; ಧಾರಾಕಾರವಾದ. (ಅ). ೨. ಯಾವಾಗಲೂ; ಎಡೆಬಿಡದೆ; ಸದಾ.

ನಿರಂಬಳ (ನಾ). ಆರಾಮು; ಬಿಡುವು. ~ಆ(ವಾ)ಗು=೧. ಆರಾಮು ಉಂಟಾಗು; ಬಿಡುವುಂಟಾಗು. ೨. ಅಂತ್ಯವಾಗು; ಸಾಯು.

ನಿರಕ್ಷರ (ನಾ). ೧. ಅಕ್ಷರಜ್ಞಾನ ಇಲ್ಲದವನು; ನಿರಕ್ಷರಕುಕ್ಷಿ. (ಗು). ೨. ಓದಲು ಬಾರದ; ಅಶಿಕ್ಷಿತ. ~ಕುಕ್ಷಿ= ಓದುಬರಹ ಬಾರದವನು; ಹುಂಬ.

ನಿರಜ್ಞ (ನಾ). ಅಜ್ಞನಲ್ಲದವನು; ಪಂಡಿತ.

ನಿರತ (ಗು). ೧. ಆಸಕ್ತ; ತಲ್ಲೀನವಾದ. ೨. ತೊಡಗಿದ.

ನಿರಪರಾಧಿ (ನಾ). ನಿರ್ದೋಷಿ; ತಪ್ಪುಮಾಡದವನು.

ನಿರಯು (ನಾ). ನರಕ.

ನಿರರ್ಗಲ(ಳ) (ಗು). ತಡೆಯಿಲ್ಲದ; ಸರಾಗವಾದ.

ನಿರರ್ಥಕ (ಗು). ಪ್ರಯೋಜನವಿಲ್ಲದ; ವ್ಯರ್ಥ.

ನಿರವದ್ಯ (ಗು). ತಪ್ಪಿಲ್ಲದ; ಕಲಂಕರಹಿತ.

ನಿರವಿಸು (ಕ್ರಿ). ನಿರೂಪಿಸು; ಹೇಳು.

ನಿರಶನ (ನಾ). ಆಹಾರವಿಲ್ಲದಿರುವುದು; ಉಪವಾಸ.

ನಿರಸ್ತ (ಗು). ೧. ಹೊರದೂಡಿದ; ನೂಕಲ್ಪಟ್ಟ. ೨. ಮೀರಿದ; ಸೋಲಿಸಿದ.

ನಿರಾಕರಣ (ನಾ). ತಿರಸ್ಕಾರ.

ನಿರಾಕರಿಸು (ಕ್ರಿ). ೧. ತಿರಸ್ಕರಿಸು. ೨. ಅಲ್ಲಗಳೆ.

ನಿರಾಕಾರ (ನಾ). ೧. ಆಕಾರವಿಲ್ಲದುದು. ೨. ಪರಮಾತ್ಮ; ದೇವರು. ೩. ದೂರು; ನಿಂದೆ.

ನಿರಾಕುಲ(ಳ) (ಗು). ಸಂಕಟವಿಲ್ಲದ; ಕ್ಲೇಶರಹಿತ.

ನಿರಾಜಿ (ನಾ). ಕಲಾಬತ್ತಿನ ಬಟ್ಟೆ; ಜರತಾರಿ ವಸ್ತ್ರ.

ನಿರಾತಂಕ (ಗು). ೧. ಅಡ್ಡಿಯಿಲ್ಲದ; ತೊಂದರೆಯಿಲ್ಲದ. ೨. ಆತಂಕವಿಲ್ಲದ; ನಿರ್ಭಯವಾದ.

ನಿರಾಶೆ (ನಾ). ಆಸೆಯನ್ನು ಕಳೆದುಕೊಂಡಿರುವಿಕೆ; ಆಶಾಭಂಗ.

ನಿರಾಳ (ನಾ). ೧. ಶಾಂತಿ; ನೆಮ್ಮದಿ. ೨. ಆಕಾಶ. (ಗು). ೩. ಚಿಂತೆಯಿಲ್ಲದ; ಪ್ರಶಾಂತವಾದ.

ನಿರೀಕ್ಷಣ (ನಾ). ೧. ಆಸೆಯಿಂದ ಇದಿರು ನೋಡುವುದು ; ಕಾಯುವುದು ; ಪ್ರತೀಕ್ಷೆ. ೨. ನೋಡುವಿಕೆ ; ಕಾಣುವಿಕೆ.

ನಿರೀಕ್ಷಣೆ = ನಿರೀಕ್ಷಣ.

ನಿರೀಕ್ಷೆ = ನಿರೀಕ್ಷಣ. ~ಇಸು = ಇದಿರು ನೋಡು ; ಕಾಯು.

ನಿರೀಶ್ವರ (ಗು). ೧. ಅತ್ಯಂತ ಪ್ರಧಾನವಾದ; ಅತ್ಯುಚ್ಚವಾದ. ೨. ದೇವರಲ್ಲಿ ನಂಬಿಕೆ ಇಲ್ಲದ ; ನಾಸ್ತಿಕ. ~ವಾದ = ದೇವರು ಇಲ್ಲವೆಂದು ಹೇಳುವ ಪಂಥ.

ನಿರುಕಿಸು = ನಿರೀಕ್ಷಿಸು.

ನಿರುಕ್ತ (ನಾ). ೧. ವೇದಾಂಗಗಳಲ್ಲಿ ಒಂದು ; ವೇದದ ಪದಗಳ ವ್ಯುತ್ಪತ್ತಿಯನ್ನು ತಿಳಿಸುವ ಶಾಸ್ತ್ರ. (ಗು). ೨. ಸುಸ್ಪಷ್ಟ ವಾಗಿ ಹೇಳಲ್ಪಟ್ಟ.

ನಿರುತ (ನಾ). ೧. ಸತ್ಯ ; ದಿಟ. ೨. ಧರ್ಮ ದಲ್ಲಿ ಶ್ರದ್ಧೆಯುಳ್ಳವನು.

ನಿರುತಿ (ನಾ). ೧. ನೈರುತ್ಯ ದಿಕ್ಕಿನ ಒಡೆಯ. ೨. ರಾಕ್ಷಸ ; ದೈತ್ಯ.

ನಿರುತ್ತರ (ನಾ). ೧. ಉತ್ತರವಿಲ್ಲದಿರುವಿಕೆ ; ಮೌನ. (ಗು). ೨. ಮೇಲಾದ; ಅಸಮಾನ.

ನಿರುದ್ಯೋಗ (ನಾ). ಉದ್ಯೋಗವಿಲ್ಲದಿರು ವುದು ; ಕೆಲಸವಿಲ್ಲದಿರುವುದು.

ನಿರುಪಮ (ಗು). ಸಮವಿಲ್ಲದ; ಸಾಟಿಯಿಲ್ಲದ.

ನಿರುಪಯೋಗಿ (ಗು). ಉಪಯೋಗವಿಲ್ಲದ ; ಕೆಲಸಕ್ಕೆ ಬಾರದ.

ನಿರೂಪ (ನಾ). ಅಪ್ಪಣೆ ; ಆಜ್ಞೆ. ~ಇಸು = ೧. ಆಜ್ಞಾಪಿಸು ; ವಿಧಿಸು. ೨. ತಿಳಿಯ ಪಡಿಸು.

ನಿರೂಪಣ (ನಾ). ವಿವರವಾಗಿ ಹೇಳುವಿಕೆ ; ವಿವರಿಸುವಿಕೆ.

ನಿರೂಪಣೆ = ನಿರೂಪಣ.

ನಿರೋಧ (ನಾ). ಅಡ್ಡಿ ; ತಡೆ ; ಪ್ರತಿಬಂಧ.

ನಿರೋಧಿಸು (ಕ್ರಿ). ತಡೆ ; ನಿಯಂತ್ರಿಸು.

ನಿಱು(ರಿ) (ಕ್ರಿ). ೧. ಸಿದ್ಧಪಡಿಸು. ೨. ಕ್ರಮ ವಾಗಿ ಜೋಡಿಸು. ೩. ಚಾಚು ; ನೀಡು. ೪. ಮುಗಿ; ಮುಚ್ಚು. (ನಾ). ೫. ಮಡಿಕೆ ; ನಿರಿಗೆ. ೬. ಸರಿಯಾದ ವ್ಯವಸ್ಥೆ. ೭. ಸೊಬಗು ; ಲಾವಣ್ಯ.

ನಿಱು(ರಿ)ಗ (ನಾ). ಸಿಹಿಮಾವು ; ಇಮ್ಮಾವು.

ನಿಱು(ರಿ)ಗೆ (ನಾ). ೧. ಮಡಿಕೆ ; ಪದರ ; ನೆರಿಗೆ. ೨. ಸರಿಯಾದ ವ್ಯವಸ್ಥೆ, -ಕ್ರಮ. ೩. ತೋರಿಕೆ ; ಪ್ರದರ್ಶನ.

ನಿಱು(ರಿ)ಸು (ಕ್ರಿ). ೧. ಇಡು ; ಮಡಗು. ೨. ಅಣಿಗೊಳಿಸು ; ಕ್ರಮಗೊಳಿಸು. ೩. ನೆಡು ; ನಾಟಿಹಾಕು. ೪. ಜೈನ ಯತಿಯನ್ನು ಭಿಕ್ಷೆಗಾಗಿ ನಿಲ್ಲಿಸಿಕೊಳ್ಳು. ೫. ಕಾಪಾಡಿಕೊಳ್ಳು ; ಉಳಿಸಿಕೊಳ್ಳು. (ನಾ). ೬. ಜೋಡಣೆ. ೭. ಪ್ರದರ್ಶನ.

ನಿಱು(ರು)ಗೆ = ನಿಱುಗೆ.

ನಿರ್ಗತಿ (ನಾ). ಅಸಹಾಯಕ ಸ್ಥಿತಿ; ಗತಿಯಿಲ್ಲ ದಿರುವಿಕೆ.

ನಿರ್ಗತಿಕ (ನಾ). ಗತಿಯಿಲ್ಲದವನು ; ಅಸಹಾ ಯಕ.

ನಿರ್ಗಮನ (ನಾ). ೧. ಹೋಗುವಿಕೆ; ಹೊರಡು ವಿಕೆ. ೨. ಬಾಗಿಲು ; ದ್ವಾರ.

ನಿರ್ಗುಣ (ನಾ). ೧. ಪರಮಾತ್ಮ. (ಗು). ೨. ಗುಣವಿಲ್ಲದ.

ನಿರ್ಘಾತ (ನಾ). ೧. ಬಲವಾದ ಪೆಟ್ಟು ; ಜೋರಾದ ಹೊಡೆತ. ೨. ಬಿರುಗಾಳಿ. ೩. ಸಿಡಿಲು.

ನಿರ್ಜನ (ಗು). ಜನವಸತಿಯಿಲ್ಲದ ; ಏಕಾಂತ ವಾದ.

ನಿರ್ಜರ (ನಾ). ೧. ದೇವತೆ. (ಗು). ೨. ಮುಪ್ಪಿಲ್ಲದ.

ನಿರ್ಜರೆ ೧. = ನಿರ್ಜರ. ೨. ನಾಶಮಾಡುವುದು; ಇಲ್ಲದಂತೆ ಮಾಡುವುದು.

ನಿರ್ಜೀವ (ಗು). ಜೀವವಿಲ್ಲದ; ಚೇತನವಿಲ್ಲದ

ನಿರ್ಝರ (ನಾ). ೧. ಪರ್ವತದ ಮೇಲಿನಿಂದ ಹರಿಯುವ ಝರಿ. ೨. ತಡಸಲು; ಜಲಪಾತ.

ನಿರ್ಣಯ (ನಾ). ತೀರ್ಮಾನ; ಕೊನೆಯ ಮಾತು. ~ಇಸು = ನಿರ್ಧರಿಸು; ತೀರ್ಮಾನಿಸು.

ನಿರ್ಣಾಯಕ (ಗು). ಗೊತ್ತುಪಡಿಸಬೇಕಾದ; ನಿರ್ಧರಿಸಬೇಕಾದ.

ನಿರ್ಣೀತ (ಗು). ನಿಶ್ಚಯಿಸಿದ; ತೀರ್ಮಾನಿಸಿದ.

ನಿರ್ದಯ ೧. = ನಿರ್ದಯೆ. (ಗು). ೨. ದಯೆಯಿಲ್ಲದ; ಕರುಣೆಯಿಲ್ಲದ.

ನಿರ್ದಯೆ (ನಾ). ಕನಿಕರವಿಲ್ಲದಿರುವುದು; ಕ್ರೌರ್ಯ.

ನಿರ್ದಾಕ್ಷಿಣ್ಯ (ನಾ). ೧. ಖಂಡತುಂಡವಾದುದು; ನಿಷ್ಕೃಷ್ಟವಾದುದು. (ಗು). ೨. ದಾಕ್ಷಿಣ್ಯಕ್ಕೆ ಒಳಗಾಗದ.

ನಿರ್ದಾಯ (ನಾ). ಸಂಪೂರ್ಣವಾದುದು; ಅಖಂಡವಾದುದು.

ನಿರ್ದಿಷ್ಟ (ಗು). ೧. ಗೊತ್ತುಮಾಡಲ್ಪಟ್ಟ. ೨. ಆಜ್ಞಾಪಿಸಲ್ಪಟ್ಟ.

ನಿರ್ದೇಶ (ನಾ). ೧. ತೋರಿಸುವುದು; ಸೂಚಿಸುವುದು. ೨. ಆಜ್ಞೆ; ಅಪ್ಪಣೆ.

ನಿರ್ದೋಷ (ಗು). ದೋಷವಿಲ್ಲದ; ಪರಿಶುದ್ಧ; ತಪ್ಪಿಲ್ಲದ.

ನಿರ್ದ್ರವ (ಗು). ಒಣಗಿದ.

ನಿರ್ಧರ = ನಿರ್ಧಾರ. ~ಇಸು = ನಿಶ್ಚಯಿಸು; ತೀರ್ಮಾನಿಸು.

ನಿರ್ಧಾರ (ನಾ). ನಿಶ್ಚಯ; ನಿರ್ಣಯ.

ನಿರ್ನಾಮ (ನಾ). ೧. ಹೆಸರಿಲ್ಲದಂತೆ ಆಗುವಿಕೆ; ಸಂಪೂರ್ಣನಾಶ. (ಗು). ೨. ಹೆಸರಿಲ್ಲದ; ನಾಶವಾದ.

ನಿರ್ನೆರ (ಅ). ಕಾರಣವಿಲ್ಲದೆ; ಸುಮ್ಮನೆ.

ನಿರ್ಬಂಧ (ನಾ). ೧. ಬಲಾತ್ಕಾರ; ಒತ್ತಾಯ. ೨. ಅಡ್ಡಿ; ತಡೆ. ೩. ಶಾಸನ; ಕಾಯಿದೆ. ೪. ಸ್ಥಿರತೆ; ದಾರ್ಢ್ಯ.

ನಿರ್ಭರ (ನಾ). ೧. ವೇಗ; ರಭಸ. (ಗು). ೨. ಸಂಪೂರ್ಣವಾದ; ತುಂಬಿದ. ೩. ಅತಿಶಯವಾದ; ವಿಶೇಷವಾದ.

ನಿರ್ಭಾಗ್ಯ (ನಾ). ಅದೃಷ್ಟಹೀನ; ದುರ್ದೈವಿ.

ನಿರ್ಮಲ(ಳ) (ನಾ). ೧. ಸ್ವಚ್ಛ; ಶುದ್ಧ. (ಗು). ೨. ಕೊಳೆಯಿಲ್ಲದ; ಶುದ್ಧವಾದ.

ನಿರ್ಮಾಣ (ನಾ). ಸೃಷ್ಟಿ; ರಚನೆ; ಉಂಟುಮಾಡುವಿಕೆ.

ನಿರ್ಮಾಲ್ಯ (ನಾ). ೧. ಪೂಜೆ ಮಾಡಿದ ನಂತರ ತೆಗೆದ ಬಾಡಿದ ಹೂವು. ೨. ಸ್ವಚ್ಛವಾದುದು.

ನಿರ್ಮಿಸು (ಕ್ರಿ). ಕಟ್ಟು; ರಚಿಸು.

ನಿರ್ಮೂಲನ (ನಾ). ಬುಡಸಹಿತ ಕೀಳುವಿಕೆ; ಬೇರುಸಹಿತ ಕಿತ್ತೆಸೆಯುವಿಕೆ.

ನಿರ್ಯಾಣ (ನಾ). ೧. ಹೊರಬೀಳುವುದು. ೨. ಪ್ರಯಾಣದಲ್ಲಿಯ ನಿಲುಗಡೆ. ೩. ಮಾಯವಾಗುವಿಕೆ; ಅದೃಶ್ಯವಾಗುವಿಕೆ. ೪. ಭಾಗ; ವಿಭಾಗ. ೫. ಸಾವು; ಮರಣ. ೬. ಆನೆಯ ಕಡೆಗಣ್ಣು. ೭. ದನದ ಕಾಲಿಗೆ ಕಟ್ಟುವ ಹಗ್ಗ.

ನಿರ್ಯಾತ (ನಾ). ೧. ಹೊರ ದೇಶಗಳಿಗೆ ಕಳುಹಿಸಿದುದು; ರಫ್ತು. (ಗು). ೨. ಕಳುಹಿಸಲ್ಪಟ್ಟ; ಹೊರಗೆ ಹಾಕಿದ.

ನಿರ್ಯಾಸ (ನಾ). ೧. ಅಂಟು; ಗೋಂದು. ೨. ಕಷಾಯ.

ನಿರ್ಲಕ್ಷ್ಯ (ನಾ). ಅಸಡ್ಡೆ; ಅನಾದರ.

ನಿರ್ಲಿಪ್ತ (ಗು). ೧. ಅಂಟಿಕೊಳ್ಳದ; ಹತ್ತದ. ೨. ಸಂಬಂಧವಿಲ್ಲದ; ಅನಾಸಕ್ತ.

ನಿರ್ಲೇಪ (ಗು). ಸಂಬಂಧವಿಲ್ಲದ; ಯಾವುದಕ್ಕೂ ಅಂಟಿಕೊಳ್ಳದ.

ನಿರ್ವರ್ತಿಸು (ಕ್ರಿ). ಮುಗಿಸು; ಪೂರೈಸು.

ನಿರ್ವಹಣ ೧. = ನಿರ್ವಹಣೆ. ೨. ಅಂತ್ಯ; ಮುಕ್ತಾಯ.

ನಿರ್ವಹಣೆ (ನಾ). ೧. ಹೊಣೆಗಾರಿಕೆ; ಜವಾಬ್ದಾರಿ. ೨. ಕೆಲಸವನ್ನು ನೆರವೇರಿಸುವಿಕೆ.

ನಿರ್ವಹಿಸು (ಕ್ರಿ). ೧. ಮಾಡು ; ಪೂರೈಸು. ೨. ನೆರವೇರಿಸು ; ನಿಭಾಯಿಸು.

ನಿರ್ವಾಣ (ನಾ). ೧. ಮೋಕ್ಷ ; ಕೈವಲ್ಯ. ೨. ಶಾಂತತೆ. ೩. ಶೂನ್ಯ. ೪. ಬೆತ್ತಲೆ. ೫. ಆನೆಯ ಸ್ನಾನ. ೬. ನಂದಿಹೋಗುವಿಕೆ. ೭. ಆತ್ಮ. ೮. ಸಾಯಂಕಾಲ. ೯. ಸಾವು ; ಮರಣ. ೧೦. ಉತ್ತರಕ್ರಿಯೆ ; ಅಂತ್ಯ ಕರ್ಮ.

ನಿರ್ವಾಹ (ನಾ). ೧. ತಪ್ಪಿಸಿಕೊಳ್ಳುವ ಮಾರ್ಗ; ಉಪಾಯ. ೨. ಪೂರೈಕೆ ; ಒದಗಿಸುವಿಕೆ. ೩. ಸಾಧನೆ; ಸಿದ್ಧಿ. ೪. ಆಧಾರ ; ಆಶ್ರಯ.

ನಿರ್ವಿಕಾರ (ಗು). ಬದಲಾಗದ ; ವಿಕಾರ ಹೊಂದದ ; ಯಥಾಸ್ಥಿತಿಯಲ್ಲಿರುವ.

ನಿರ್ವಿಘ್ನ (ಗು). ತೊಂದರೆಯಿಲ್ಲದ ; ಸರಾಗ ವಾದ.

ನಿರ್ವಿಣ್ಣ (ಗು). ದುಃಖದಿಂದ ಕೂಡಿದ ; ನಿರಾಶೆಗೊಂಡ.

ನಿರ್ವಿವಾದ (ಗು). ವಿವಾದವಿಲ್ಲದ.

ನಿರ್ವಿಶೇಷ (ಗು). ವಿಶೇಷವಿಲ್ಲದ ; ಅಂತರ ವಿಲ್ಲದ.

ನಿರ್ವೃತಿ (ನಾ). ೧. ಸುಖ ; ಸಂತೋಷ. ೨. ಮುಕ್ತಿ ; ಮೋಕ್ಷ.

ನಿರ್ವೇಗ (ನಾ). ೧. ವೈರಾಗ್ಯ ; ವಿರಕ್ತಿ. (ಗು). ೨. ವೇಗವಿಲ್ಲದ ; ಮಂದವಾದ ; ಪ್ರಶಾಂತ.

ನಿರ್ವೇದ (ನಾ). ೧. ವೈರಾಗ್ಯ ; ವಿರಕ್ತಿ. ೨. ಖೇದ ; ಉಮ್ಮಳ.

ನಿರ್ವೇಶ (ನಾ). ೧. ಲಾಭ; ಗಳಿಕೆ. ೨. ಕೂಲಿ; ಪಗಾರ. ೩. ಪ್ರಾಯಶ್ಚಿತ್ತ. ೪. ಉಪಭೋಗ; ಸುಖ.

ನಿಲ್(ಲು) (ಕ್ರಿ). ೧. ಗತಿಭಂಗವಾಗು ; ಚಲಿಸದಿರು. ೨. ಇರು. ೩. ನೆಲಸು ; ಸ್ಥಿರ ವಾಗಿರು. ೪. ತಂಗು. ೫. ತಡೆ. ೬. ಸಹಿಸು; ಸೈರಿಸು. ~ಇಸು = ೧. ನಿಲ್ಲುವಂತೆ ಮಾಡು ; ಸ್ಥಾಪಿಸು. ೨. ಗತಿಯನ್ನು ತಡೆ. ~ಕ(ಗ)ಡೆ = ೧. ವಿಶ್ರಾಂತಿ ; ಬಿಡುವು. ೨. ತಾಳ್ಮೆ ; ಸಹನೆ. ೩. ಮುಕ್ತಾಯ ; ಕೊನೆ. ೪. ಬಾಗಿಲಿನ ಚೌಕಟ್ಟು. ೫. ನಿರ್ಣಯ. ~ಕ(ಗ)ನ್ನಡಿ = ನಿಲುವು ಗನ್ನಡಿ. ~ತಾ(ದಾ)ಣ = ನಿಲ್ಲುವ ಸ್ಥಾನ ; ವಿಶ್ರಾಂತಿ ಸ್ಥಳ. ~ಮನೆ = ವಿಶ್ರಾಂತಿ ಗೃಹ ; ತಂಗುವ ಮನೆ.

ನಿಲ(ಳ)ಯ (ನಾ). ೧. ಮನೆ ; ವಾಸಸ್ಥಳ. ೨. ಅಡಗುವುದು.

ನಿಲವು (ನಾ). ೧. ನಿಲ್ಲುವಿಕೆ. ೨. ಸ್ಥಿತಿ ; ಅವಸ್ಥೆ. ೩. ಎತ್ತರ ; ಉನ್ನತಿ. ೪. ನೆಲೆ ; ನಿವಾಸ. ೫. ವಿಶ್ರಾಂತಿ ; ಬಿಡುವು. ೬. ಅಭಿಪ್ರಾಯ. ೭. ಉಳಿಕೆ ; ಶೇಷ. ~ಕನ್ನಡಿ = ದೊಡ್ಡ ಕನ್ನಡಿ.

ನಿಲಿ(ಳಿ)ಂಪ (ನಾ). ದೇವತೆ.

ನಿಲು(ಂ)ಬು (ಕ್ರಿ). ೧. ರಾಶಿಹಾಕು ; ಒಟ್ಟು ಗೂಡಿಸು. ೨. ಸುರುಳಿಸುತ್ತು ; ಇರಿಕೆ ಹಾಕು. ೩. ನೆಗೆ ; ಹಾರು ; ಕುಪ್ಪಳಿಸು. ೪. ಮುತ್ತು ; ಆವರಿಸು.

ನಿಲುಕು = ನಿಲ್ಕು.

ನಿಲುವು = ನಿಲವು.

ನಿಲ್ಕು(ಳ್ಕು) (ಕ್ರಿ). ೧. ಚಾಚು ; ನೀಡು. ೨. ತುದಿಗಾಲಿನಲ್ಲಿ ನಿಲ್ಲು; ಮೆಟ್ಟಂಗಾಲಿಡು. ೩. ಎಟುಕುವಂತಾಗು ; ಕೈಗೆ ಸಿಗು. ೪. ಹೊಂದು ; ಪಡೆ. ೫. ತೊಡಗು.

ನಿಲ್ಲು = ನಿಲ್.

ನಿವಡ (ನಾ). ಆರಿಸುವಿಕೆ ; ಹುಡುಕುವಿಕೆ. ~ಇಸು = ೧. ಆರಿಸು ; ಹುಡುಕು. ೨. ಎದ್ದುಕಾಣು ; ಸ್ಫುಟವಾಗು.

ನಿವರ್ತನ (ನಾ). ೧. ಹಿಂದಿರುಗುವಿಕೆ. ೨. ಮುಗಿಸುವಿಕೆ ; ಪೂರ್ತಿ ಮಾಡುವಿಕೆ. ೩. ಸಾಧನೆ ; ನಿರ್ವಹಣೆ. ೪. ಸಾಗುವಳಿ ಭೂಮಿಯ ಒಂದು ಅಳತೆ.

ನಿವರ್ತನೆ = ನಿವರ್ತನ.
ನಿವರ್ತಿಸು (ಕ್ರಿ). ೧. ಮುಗಿಸು. ೨. ಹಿಂದಿರುಗು. ೩. ಮಾಯವಾಗು.
ನಿವಹ (ನಾ). ಗುಂಪು ; ಸಮೂಹ ; ಸಂದಣಿ.
ನಿವಾತ (ನಾ). ೧. ಮನೆ ; ನಿವಾಸ. ೨. ಕವಚ. (ಗು). ೩. ಗಾಳಿಯಿಲ್ಲದ.
ನಿವಾರಣ (ನಾ). ೧. ಕಳೆಯುವಿಕೆ ; ಹೋಗಲಾಡಿಸುವಿಕೆ. ೨. ತಡೆಯುವಿಕೆ ; ನಿಲ್ಲಿಸುವಿಕೆ.
ನಿವಾರಣೆ = ನಿವಾರಣ.
ನಿವಾರಿಸು (ಕ್ರಿ). ೧. ಕಳೆ ; ತೆಗೆದುಹಾಕು. ೨. ತಡೆ ; ನಿರೋಧಿಸು.
ನಿವಾಸ (ನಾ). ವಾಸಸ್ಥಾನ ; ಬೀಡು.
ನಿವಾಸಿ (ನಾ). ೧. ವಾಸಮಾಡುವವನು. ೨. ನೆಲಸಿದವನು.
ನಿವಾಳಿ (ನಾ). ದೃಷ್ಟಿದೋಷ ತೆಗೆಯುವುದು ; ಇಳಿತೆಗೆಯುವುದು. ~ಇಸು = ದೃಷ್ಟಿದೋಷವನ್ನು ತೆಗೆ. ~ತೆಗೆ = ನಿವಾಳಿಸು.
ನಿವಿಷ್ಟ (ಗು). ಸೇರಿದ ; ಕೂಡಿದ.
ನಿವೃತ (ಗು). ಮುಸುಕಿದ ; ಆವರಿಸಿದ.
ನಿವೃತ್ತಿ (ನಾ). ೧. ವಿಶ್ರಾಂತಿ ; ಬಿಡುಗಡೆ. ೨. ಪರಮಸುಖ; ಅತ್ಯಾನಂದ. ~ಮಾರ್ಗ = ಮೋಕ್ಷಮಾರ್ಗ.
ನಿವೇದನ (ನಾ). ೧. ತಿಳಿಸುವಿಕೆ ; ವಿಜ್ಞಾಪನೆ. ೨. ಅರ್ಪಣೆ ; ಕೊಡುವಿಕೆ.
ನಿವೇದನೆ = ನಿವೇದನ.
ನಿವೇದಿಸು (ಕ್ರಿ). ೧. ತಿಳಿಸು ; ಹೇಳು. ೨. ಅರ್ಪಿಸು ; ಕೊಡು.
ನಿವೇಶ ೧. = ನಿವೇಶನ. ೨. ಸೈನ್ಯದ ಬೀಡು ; ಪಾಳೆಯ.
ನಿವೇಶನ (ನಾ). ೧. ಮನೆ ; ವಾಸಸ್ಥಳ. ೨. ಮನೆ ಮುಂತಾದ ಕಟ್ಟಡಗಳನ್ನು ಕಟ್ಟುವ ಸ್ಥಳ ; ಸೈಟು.
ನಿಷ್ಪಳ (ಗು). ವೆಚ್ಚ ಕಳೆದು ಉಳಿದ.
ನಿಶಾಂತ (ನಾ). ೧. ರಾತ್ರಿಯ ಕೊನೆ ; ಮುಂಜಾವ. ೨. ಶಾಂತ ; ಪ್ರಶಾಂತ. ೩. ಗೃಹ ; ಮನೆ.
ನಿಶಾಟ (ನಾ). ರಾತ್ರಿಯಲ್ಲಿ ಸಂಚರಿಸುವ ಪಿಶಾಚ, ಗೂಬೆ ಮುಂತಾದುವು.
ನಿಶಾನಿ (ನಾ). ಬಾವುಟ ; ಧ್ವಜ.
ನಿಶಿತ (ಗು). ಹರಿತವಾದ ; ತೀಕ್ಷ್ಣ.
ನಿಶೀಥ (ನಾ). ಮಧ್ಯರಾತ್ರಿ ; ನಡುರಾತ್ರಿ.
ನಿಶೆ (ನಾ). ೧. ರಾತ್ರಿ ; ಇರುಳು. ೨. ಅರಿಸಿನ.
ನಿಶ್ಚಯ (ನಾ). ೧. ನಿರ್ಣಯ ; ಗೊತ್ತುವಳಿ. ೨. ಸತ್ಯ ; ದಿಟ. ೩. = ನಿಶ್ಚಿತಾರ್ಥ. ~ಇಸು = ಗೊತ್ತುಮಾಡು ; ನಿರ್ಣಯಿಸು.
ನಿಶ್ಚಲ(ಳ) (ನಾ). ೧. ಭೂಮಿ. ೨. ಪರ್ವತ. (ಗು). ೩. ಚಲಿಸದೆ ಇರುವ ; ಅಚಲ.
ನಿಶ್ಚಿಂತ (ನಾ). ೧. ಶಾಂತ ಮನಸ್ಸಿನವನು. (ಗು). ೨. ಚಿಂತೆಯಿಲ್ಲದ ; ಶಾಂತಮನಸ್ಸಿನ.
ನಿಶ್ಚಿತ (ಗು). ೧. ಗೊತ್ತಾದ ; ನಿರ್ಣಯ ಮಾಡಲ್ಪಟ್ಟ. ೨. ನಿಜವಾದ. ~ಅರ್ಥ = ೧. ನಿರ್ಣಯಿಸಿದ ಮಾತು. ೨. ಮದುವೆಯನ್ನು ನಿಶ್ಚಯ ಮಾಡುವ ಒಂದು ವಿಧಿ.
ನಿಶ್ಚೇಷ್ಟ (ಗು). ಚಲನೆಯಿಲ್ಲದ ; ಅಲುಗಾಟವಿಲ್ಲದ.
ನಿಶ್ಚೇಷ್ಟತೆ (ನಾ). ಚಲನೆಯಿಲ್ಲದಿರುವಿಕೆ ; ಅಲುಗಾಟವಿಲ್ಲದಿರುವಿಕೆ.
ನಿಶ್ರೇಣಿ (ನಾ). ೧. ಏಣಿ ; ನಿಚ್ಚಣಿಗೆ. ೨. ಮೆಟ್ಟಲು ; ಸೋಪಾನ.
ನಿಶ್ವಾಸ (ನಾ). ೧. ಉಸಿರುಬಿಡುವುದು. ೨. ನಿಟ್ಟುಸಿರು.
ನಿಶ್ಶಂಕೆ (ನಾ). ಅನುಮಾನವಿಲ್ಲದಿರುವಿಕೆ.
ನಿಶ್ಶಬ್ದ (ನಾ). ಸದ್ದಿಲ್ಲದಿರುವಿಕೆ ; ಮೌನ ; ನೀರವತೆ.
ನಿಷಂಗ (ನಾ). ೧. ಸೇರಿಕೆ ; ಜೋಡಣೆ. ೨. ಬತ್ತಳಿಕೆ ; ತೂಣೀರ.

ನಿಷಣ್ಣ (ಗು). ಕುಳಿತ; ವಿಶ್ರಾಂತಿ ಪಡೆದ.

ನಿಷಾದ (ನಾ). ೧. ಬೇಡ; ಕಿರಾತ. ೨. ಹೊಲೆಯ. ೩. ಕೆಸರು; ಪಂಕ.

ನಿಷಿದ್ಧ (ಗು). ನಿಷೇಧಿಸಲ್ಪಟ್ಟ; ಬಹಿಷ್ಕರಿಸಿದ.

ನಿಷೇಕ (ನಾ). ೧. ಚಿಮುಕಿಸುವಿಕೆ; ಸಿಂಪಡಿಸುವಿಕೆ. ೨. ಶೋಭನ; ಪ್ರಸ್ತ.

ನಿಷೇಧ (ನಾ). ೧. ವಿರೋಧ; ಅಡ್ಡಿ. ೨. ತಿರಸ್ಕಾರ; ನಿರಾಕರಣೆ.

ನಿಷ್ಕ (ನಾ). ೧. ಕಂಠಾಭರಣ. ೨. ಚಿನ್ನ. ೩. ಚಿನ್ನದ ಒಂದು ನಾಣ್ಯ.

ನಿಷ್ಕಪಟ (ಗು). ಕಪಟವಿಲ್ಲದ; ಸರಳವಾದ.

ನಿಷ್ಕರುಣ (ಗು). ಕ್ರೂರ; ಉಗ್ರ.

ನಿಷ್ಕರ್ಮ (ನಾ). ೧. ಜಡತ್ವ; ಆಲಸ್ಯ. (ಗು). ೨. ಪಾಪವಿಲ್ಲದ; ದೋಷವಿಲ್ಲದ.

ನಿಷ್ಕರ್ಷೆ (ನಾ). ೧. ಮುಖ್ಯ ವಿಷಯ; ಸಾರ. ೨. ನಿರ್ಣಯ; ಗೊತ್ತುವಳಿ.

ನಿಷ್ಕಾಮ (ನಾ). ಅನಾಸಕ್ತಿ; ಆಸೆಯಿಲ್ಲದಿರುವಿಕೆ.

ನಿಷ್ಕುಟ (ನಾ). ೧. ಮರದ ಪೊಟರೆ. ೨. ತೋಟ.

ನಿಷ್ಕ್ರಮಣ (ನಾ). ಹೋಗುವಿಕೆ; ಹೊರಬೀಳುವಿಕೆ.

ನಿಷ್ಠುರ (ನಾ). ೧. ಬಿರುನುಡಿ; ದಯೆಯಿಲ್ಲದ ಮಾತು. (ಗು). ೨. ಕ್ರೂರವಾದ; ಕಠಿನವಾದ.

ನಿಷ್ಠೆ (ನಾ). ೧. ಇರುವಿಕೆ; ಸ್ಥಿತಿ. ೨. ಶ್ರದ್ಧೆ.

ನಿಷ್ಣಾತ (ನಾ). ಪಾರಂಗತ; ನಿಪುಣ.

ನಿಷ್ಪಕ್ಷಪಾತ (ನಾ). ಭೇದಭಾವವಿಲ್ಲದಿರುವಿಕೆ; ಸಮದೃಷ್ಟಿ.

ನಿಷ್ಪತ್ತಿ (ನಾ). ೧. ಹುಟ್ಟು; ವ್ಯುತ್ಪತ್ತಿ. ೨. ಮುಗಿಸುವಿಕೆ; ಪೂರ್ಣಗೊಳಿಸುವಿಕೆ.

ನಿಷ್ಪನ್ನ (ಗು). ೧. ಹುಟ್ಟಿದ; ಉಂಟಾದ. ೨. ಮುಗಿದ; ಪೂರ್ಣವಾದ.

ನಿಷ್ಪ್ರಯೋಜನ (ಗು). ಕೆಲಸಕ್ಕೆ ಬಾರದ; ಅಪ್ರಯೋಜಕ.

ನಿಷ್ಫಲ (ಗು). ಫಲವಿಲ್ಲದ; ಉಪಯೋಗಕ್ಕೆ ಬಾರದ.

ನಿಸದ (ನಾ). ನಿಜ; ಸತ್ಯ; ದಿಟ.

ನಿಸರ್ಗ (ನಾ). ೧. ಸೃಷ್ಟಿ. ೨. ಸ್ವಾಭಾವಿಕವಾದುದು; ಸಹಜ; ನೈಜ.

ನಿಸಿ (ಕ್ರಿ). ೧. ಬೆರಳುಗಳಿಂದ ಹಿಸುಕು, -ಹಿಂಡು. (ನಾ). ೨. ಇರುಳು; ನಿಶೆ.

ನಿಸಿದಿ = ನಿಸಿದಿಗೆ.

ನಿಸಿದಿಗೆ (ನಾ). ಜೈನಮುನಿಗಳ ಸಮಾಧಿ.

ನಿಸೇಕ = ನಿಷೇಕ.

ನಿಸ್ತರಿಸು (ಕ್ರಿ). ೧. ಕಾಲವನ್ನು ಕಳೆ. ೨. ತಾಳು; ಸಹಿಸು.

ನಿಸ್ತೇಜ (ಗು). ಕಳೆಗುಂದಿದ; ಬಾಡಿದ.

ನಿಸ್ತ್ರಿಂಶ (ನಾ). ೧. ಕತ್ತಿ; ಖಡ್ಗ. (ಗು). ೨. ಕ್ರೂರ; ಕಠೋರ.

ನಿಸ್ಪೃಹ (ಗು). ೧. ಆಸೆಯಿಲ್ಲದ; ಸ್ವಾರ್ಥವಿಲ್ಲದ. ೨. ಪಕ್ಷಪಾತವಿಲ್ಲದ.

ನಿಸ್ವನ (ನಾ). ಸ್ವರ; ಧ್ವನಿ.

ನಿಸ್ಸಂಶಯ (ಗು). ಸಂಶಯವಿಲ್ಲದ; ಸಂದೇಹವಿಲ್ಲದ.

ನಿಸ್ಸಾಣ = ನಿಸ್ಸಾಳ.

ನಿಸ್ಸಾಳ (ನಾ). ಒಂದು ಬಗೆಯ ಚರ್ಮವಾದ್ಯ.

ನಿಸ್ಸೀಮ (ನಾ). ೧. ದೇವರು. ೨. ಶ್ರೇಷ್ಠನಾದವನು. ೩. ಚತುರ; ನಿಪುಣ. (ಗು). ೪. ಮೇರೆಯಿಲ್ಲದ; ಎಲ್ಲೆಯಿಲ್ಲದ. ೫. ಅಸಮಾನವಾದ.

ನಿಹಿತ (ಗು). ಇಡಲ್ಪಟ್ಟ; ಇಟ್ಟ.

ನೀಂಟಿಸು = ನಿಟ್ಟಿಸು.

ನೀಕರಿಸು (ಕ್ರಿ). ತಿರಸ್ಕರಿಸು; ಧಿಕ್ಕರಿಸು.

ನೀಕಾಶ (ಗು). ಹೋಲುವ; ಸಮಾನವಾದ.

ನೀಗು (ಕ್ರಿ). ೧. ಬಿಡು; ಕಳೆ; ತೊಲಗಿಸು.

೨. ಸಾಧ್ಯವಾಗು ; ಈಡೇರು. ~ಆಡು = ಕಳೆದುಕೊಳ್ಳು ; ಬಿಟ್ಟುಬಿಡು.

ನೀಚ (ನಾ). ೧. ಕೆಡುಕ ; ದುಷ್ಟ. (ಗು). ೨. ಕೀಳಾದ ; ಕ್ಷುದ್ರ.

ನೀಟ (ನಾ). ವಿಸ್ತಾರ ; ನೀಳ ; ಲಂಬ.

ನೀಟು ೧. = ನೀಟ. ೨. ನಾಜೂಕು ; ಅಚ್ಚುಕಟ್ಟು. ೩. ಸೊಗಸು ; ಅಂದ. ೪. ಸರಳ.

ನೀಡ (ನಾ). ಹಕ್ಕಿಯ ವಾಸಸ್ಥಳ ; ಗೂಡು. ~ಉದ್ಭವ = ಗೂಡಿನಲ್ಲಿ ಹುಟ್ಟುವುದು ; ಪಕ್ಷಿ.

ನೀಡು (ಕ್ರಿ). ೧. ಚಾಚು ; ವಿಸ್ತರಿಸು. ೨. ದಾನಮಾಡು ; ಕೊಡು. ೩. ಬಡಿಸು ; ಊಟಕ್ಕೆ ಹಾಕು. (ನಾ). ೪. ಉದ್ದ ; ನೀಳ. ೫. ವಿಳಂಬ; ತಡ. (ಗು). ೬. ಉದ್ದವಾದ ; ಲಂಬವಾದ. ೭. ವಿಸ್ತರಿಸಿದ. ೮. ತಡೆಯುವ. (ಅ). ೯. ಹೆಚ್ಚಾಗಿ ; ಅಧಿಕವಾಗಿ.

ನೀಡುಂ (ಅ). ಬಹಳ ಹೊತ್ತಿನವರೆಗೆ.

ನೀತಿ (ನಾ). ೧. ಒಯ್ಯುವಿಕೆ. ೨. ಮಾರ್ಗದರ್ಶನ. ೩. ಒಳ್ಳೆಯ ನಡತೆ; ಶಿಷ್ಟಾಚಾರ. ~ಮಾರ್ಗ = ಒಳ್ಳೆಯ ನಡವಳಿಕೆ. ~ಶಾಸ್ತ್ರ = ರಾಜ್ಯದ ಆಡಳಿತ ಶಾಸ್ತ್ರ.

ನೀಪ (ನಾ). ೧. ಕದಂಬವೃಕ್ಷ ; ತಾಳೆಮರ. (ಗು). ೨. ಆಳವಾದ ; ತಗ್ಗಾದ.

ನೀರ್(ರು) (ನಾ). ೧. ಉದಕ ; ಜಲ. ೨. ಶಕ್ತಿ ; ಕೆಚ್ಚು. ೩. ಮುತ್ತು, ರತ್ನಗಳ ಕಾಂತಿ, -ತೇಜಸ್ಸು. ೪. = ನೀಱು. ~ಅಡಸು = ನೀರನ್ನು ಬಯಸು ; ಬಾಯಾರು. ~ಅಣುಗ=ಚಂದ್ರ. ~ಆಟ = ನೀರಿನಲ್ಲಿ ಆಡುವುದು ; ಜಲಕ್ರೀಡೆ. ~ಆರಂಬ = ನೀರಾವರಿಯ ಬೇಸಾಯ ; ತರಿವ್ಯವಸಾಯ. ~ಇಳಿ = ೧. ನೀರು ಕಡಮೆಯಾಗು. ೨. ಕಾಂತಿಹೀನವಾಗು. ೩. = ನೀರಿೞಿ. ~ಇೞಿ(ಳಿ) = ಸ್ನಾನ ಮಾಡು ; ಮೀಯು. ~ಉಳ್ಳಿ = ಈರುಳ್ಳಿ. ~ಏಱು(ರು) = ೧. ನೀರು ಮೇಲಕ್ಕೇರು, -ಹೆಚ್ಚಾಗು. ೨. ಸಂತೋಷಿಸು ; ಆನಂದಪಡು. ೩. ಕಾಂತಿಯನ್ನು ಹೊಂದು. ~ಒಳ್ಳೆ = ಒಂದು ಜಾತಿಯ ವಿಷವಿಲ್ಲದ ಹಾವು ; ನೀರು ಹಾವು. ~ಓಡು = ೧. ನೀರು ಬತ್ತಿಹೋಗು. ೨. ಕಾಂತಿಹೀನವಾಗು ; ಕಳೆಗುಂದು. ~ಕು(ಗು)ಡಿಸು =೧. ನೀರನ್ನು ಕುಡಿಯುವಂತೆ ಮಾಡು. ೨. ಪೀಡಿಸು ; ತೊಂದರೆಗೀಡುಮಾಡು. ~ಕು(ಗು)ಡು = ತರ್ಪಣವನ್ನು ಕೊಡು, -ಬಿಡು. ~ಗಂಟಿ = ಕೆರೆಗಳಿಂದ ಗದ್ದೆಗಳಿಗೆ ನೀರು ಬಿಡಲು ಸರ್ಕಾರದಿಂದ ನೇಮಕನಾದವನು. ~ತಾ(ದಾ)ಣ = ನೀರಿರುವ ಸ್ಥಳ ; ಕೆರೆ, ಕೊಳ ಮುಂತಾದುವು. ~ತಿ(ದಿ)ಗುರಿ = ನೀರಿನ ಸುಳಿ ; ಮಡು. ~ತೇ(ದೇ)ರ್ = ಮೋಡ ; ಮುಗಿಲು. ~ನಿಲ್ಲು = ಗರ್ಭಧಾರಣೆ ಮಾಡು. ~ಪ(ವ)ರಿ = ಕಾಲುವೆ; ತೋಡು. ~ಪೂ(ವೂ,ಹೂ) = ಕಮಲ ; ತಾವರೆ. ~ಮಾ(ವಾ)ನಸ = ಅರ್ಧ ಮನುಷ್ಯನ ಹಾಗೂ ಅರ್ಧ ಮೀನಿನ ರೂಪವುಳ್ಳವನು. ~ಮುಟ್ಟು=೧. ಮಲಮೂತ್ರಗಳನ್ನು ವಿಸರ್ಜಿಸು. ೨. ಮಲಮೂತ್ರಗಳನ್ನು ವಿಸರ್ಜಿಸಿದ ನಂತರ ನೀರಿನಿಂದ ಶುದ್ಧಿಮಾಡಿಕೊಳ್ಳು.

ನೀರ (ನಾ). ೧. ಒಂದು ಬಗೆಯ ಮದ್ಯ. ೨. = ನೀಱು.

ನೀರಂಜಿಸು (ಕ್ರಿ). ಹೊಳಪನ್ನುಂಟುಮಾಡು.

ನೀರಂಧ್ರ (ಗು). ೧. ಎಡೆಯಿಲ್ಲದ ; ರಂಧ್ರವಿಲ್ಲದ. ೨. ದಟ್ಟವಾದ.

ನೀರಜ (ನಾ). ೧. ಕಮಲ ; ತಾವರೆ. (ಗು). ೨. ದೋಷರಹಿತ. ~ಮಿತ್ರ = ಸೂರ್ಯ.

ನೀರಡಿಕೆ ೧. = ನೀರೞ್ಕೆ. ೨. ತೆಳ್ಳಗೆ ಕತ್ತರಿಸಿದ ಅಡಕೆ.

ನೀರದ (ನಾ). ೧. ನೀರನ್ನು ಕೊಡುವುದು; ಮೋಡ. (ಗು). ೨. ಹಲ್ಲಿಲ್ಲದ. ~ಮಾರ್ಗ = ಆಕಾಶ.
ನೀರಧಿ (ನಾ). ಸಮುದ್ರ; ಕಡಲು.
ನೀರರುಹ (ನಾ). ತಾವರೆ; ಕಮಲ.
ನೀರವ (ನಾ). ೧. ಮೌನ; ನಿಶ್ಶಬ್ದ. (ಗು). ೨. ನಿಶ್ಶಬ್ದವಾದ.
ನೀರಸ (ಗು). ರಸವಿಲ್ಲದ; ಒಣಗಿದ.
ನೀರಟಿಕ್ಕೆ(ಳ್ಕೆ) (ನಾ). ಬಾಯಾರಿಕೆ; ನೀರಡಿಕೆ.
ನೀರಾ (ನಾ). ಒಂದು ಬಗೆಯ ಮಾದಕ ಪಾನೀಯ.
ನೀರಾ(ಂ)ಜನ (ನಾ). ೧. ಆರತಿ ಎತ್ತುವುದು. ೨. ನೀಲಾಂಜನ; ದೀಪ.
ನೀರಾಜಿಸು (ಕ್ರಿ). ಆರತಿಯನ್ನು ಎತ್ತು.
ನೀರಾವರಿ (ನಾ). ೧. ನೀರನ್ನು ಒದಗಿಸುವುದು. ೨. = ನೀರಾರಂಬ.
ನೀರೇಜ (ನಾ). ಕಮಲ; ತಾವರೆ.
ನೀಱ(ರ) (ನಾ). ೧. ಚೆಲುವ; ಸುಂದರ. ೨. ಸಲ್ಲ; ಪ್ರಿಯ.
ನೀಱು(ರು) (ನಾ). ಪುಡಿ; ಧೂಳು.
ನೀಱೆ(ರೆ) (ನಾ). ೧. ಸುಂದರಿ; ಚೆಲುವೆ. ೨. ನಲ್ಲೆ; ಪ್ರಿಯತಮೆ.
ನೀಲ (ನಾ). ೧. ನೀಲಿಯ ಬಣ್ಣ. ೨. ಕಪ್ಪು ಬಣ್ಣ. ೩. ರತ್ನಗಳಲ್ಲಿ ಒಂದು; ಇಂದ್ರ ನೀಲ. ೪. ಕುಬೇರನ ನವನಿಧಿಗಳಲ್ಲಿ ಒಂದು. ೫. ರಾಮನ ಸೇನಾಪತಿಗಳಲ್ಲಿ ಒಬ್ಬ. ~ಅಂಬರ = ೧. ನೀಲಿಯ ಬಣ್ಣದ ಬಟ್ಟೆ. ೨. ಬಲರಾಮ. ೩. ಆಕಾಶ. ~ಉತ್ಪಲ = ನೀಲಿಯ ಬಣ್ಣದ ತಾವರೆ; ಕನ್ನೈದಿಲೆ. ~ಕಂಠ = ೧. ಶಿವ; ಈಶ್ವರ. ೨. ನೀಲಿ ಬಣ್ಣದ ಕೊರಳುಳ್ಳದು; ನವಿಲು. ~ಮಣಿ = ನೀಲಿ ಬಣ್ಣದ ರತ್ನ.
ನೀಲಂ (ನಾ). ಒಂದು ಜಾತಿಯ ಮಾವು.
ನೀಲಾಂಜನ = ನೀರಾಂಜನ.
ನೀಲಿ (ನಾ). ೧. ಒಂದು ಬಣ್ಣ. ೨. ಒಂದು ಜಾತಿಯ ಗಿಡ ಮತ್ತು ಅದರ ಎಲೆಯಿಂದ ತಯಾರಿಸುವ ಪುಡಿ.
ನೀವಾಕ (ನಾ). ಬರ; ಕ್ಷಾಮ; ದುರ್ಭಿಕ್ಷ.
ನೀವಾರ (ನಾ). ಕಾಡಿನಲ್ಲಿ ಬೆಳೆಯುವ ಬತ್ತ; ಕಾಡುಬತ್ತ.
ನೀವಿ (ನಾ). ೧. ಸೀರೆಯನ್ನು ಉಡುವಾಗ ಹಾಕುವ ಗಂಟು; ಬಾಳೆಕಾಯಿ. ೨. ಜೊತೆ; ಯುಗ್ಮ.
ನೀವು (ಕ್ರಿ). ಮೃದುವಾಗಿ ಸವರು; ನೇವರಿಸು.
ನೀಸು (ಕ್ರಿ). ೧. ನಿರ್ವಹಿಸು; ನಿಭಾಯಿಸು. ೨. ತೃಪ್ತಿಪಡಿಸು; ತಣಿಸು.
ನೀಹಾರ (ನಾ). ಹಿಮ; ಇಬ್ಬನಿ.
ನೀಳ್ (ಕ್ರಿ). ೧. ಉದ್ದವಾಗು; ನಿಡಿದಾಗು. ೨. ಚಾಚು; ವಿಸ್ತರಿಸು. (ನಾ). ೩. = ನೀಱ್.
ನೀಳ (ನಾ). ೧. ಉದ್ದ; ಲಂಬ. ೨. ವಿಸ್ತಾರ; ಹರವು.
ನೀಳ್ಪು = ನೀಱ್. ~ಪೆ(ವೆ)ಱ್(ರ್) = ಚಾಚು; ನೀಡು.
ನೀಟ್(ಳ್) (ನಾ). ಉದ್ದ; ಲಂಬ.
ನೀಟ್ಟ(ಳ್ಪ)ರಿಸು (ಕ್ರಿ). ೧. ಉದ್ದಮಾಡು; ನೀಡು. ೨. ತಡಮಾಡು; ನಿಧಾನಿಸು.
ನುಂಗಿ (ನಾ). ನುಂಗುವವನು; ನಾಶಮಾಡುವವನು.
ನುಂಗು (ಕ್ರಿ). ೧. ಕಬಳಿಸು. ೨. (ಹಣದ ವಿಷಯದಲ್ಲಿ) ಮೋಸಮಾಡು; ವಂಚಿಸು; ಅಪಹರಿಸು.
ನುಗಿ (ಕ್ರಿ). ೧. ಪುಡಿಮಾಡು; ಹುಡಿಗೊಳಿಸು. ೨. ಪುಡಿಯಾಗು.
ನುಗಿಚು (ಕ್ರಿ). ಜಾರು; ನುಣುಚಿಕೊಳ್ಳು; ನುಸುಳು.

ನುಗುಳ್ = ನುಗಿಚು.

ನುಗ್ಗಿ (ನಾ). ಒಂದು ಜಾತಿಯ ಮರ.

ನುಗ್ಗು (ಕ್ರಿ). ೧. ತಳ್ಳಿಕೊಂಡು ಹೋಗು; ರಭಸದಿಂದ ಮುಂದುವರಿ. ೨. ನುಸುಳು; ತೂರು; ಒಳಸೇರು. ೩. ಪುಡಿಮಾಡು. ೪. ಪುಡಿಯಾಗು; ನಾಶವಾಗು. (ನಾ). ೫. ಗುಂಪು; ಸಂದಣಿ. ೬. ಪುಡಿಯಾಗಿರುವುದು; ಹುಡಿ. (ಗು). ೭. ಕ್ಷುಲ್ಲಕವಾದ; ಕೀಳಾದ. ~ಆಗು = ೧. ಚೂರುಚೂರಾಗು; ಪುಡಿಯಾಗು. ೨. ಆಯಾಸಗೊಳ್ಳು.

ನುಗ್ಗೆ = ನುಗ್ಗಿ.

ನುಚ್ಚು (ನಾ). ೧. (ಧಾನ್ಯಗಳ) ಚೂರು, –ತರಿ. ೨. ಹಾಳಾಗುವಿಕೆ; ನಾಶ. ~ಕು(ಗು)ಟ್ಟು = ಪುಡಿಮಾಡು; ನಾಶಮಾಡು. ~ನುಱು(ರಿ) = ಪುಡಿಪುಡಿಯಾದುದು.

ನುಜುಗು (ಗು). ಕ್ಷುಲ್ಲಕ; ಸಾಮಾನ್ಯವಾದ.

ನುಡಿ (ಕ್ರಿ). ೧. ಮಾತನಾಡು; ಧ್ವನಿಹೊರಡಿಸು. ೨. ಕೆಟ್ಟ ಮಾತನಾಡು; ಪಲುಕು. (ನಾ). ೩. ಮಾತು. ೪. ಭಾಷೆ. ೫. ಆಣೆ; ವಚನ; ಪ್ರತಿಜ್ಞೆ. ೬. ಗಾದೆ; ನಾಣ್ಣುಡಿ. ೭. ಹಾಡಿನ ಒಂದು ಭಾಗ. ~ಇಸು = ೧. ಮಾತನಾಡುವಂತೆ ಮಾಡು. ೨. ಮಾತನಾಡಿಸು. ೩. ವಾದ್ಯಗಳನ್ನು ಬಾಜಿಸು, –ಧ್ವನಿಮಾಡು. ~ಕ(ಗ)ಟ್ಟು = ೧. ಮಾತಿನ ಜೋಡಣೆ, –ಒಕ್ಕಣೆ; ನುಡಿವಳಿ. ೨. ಗಾದೆ; ನಾಣ್ಣುಡಿ. ~ಕ(ಗ)ಬ್ಬ = ಓದುಗಬ್ಬ; ಹಾಡುಗಬ್ಬ. ~ಕಾ(ಗಾ)ಱ(ರ) = ಮಾತುಗಾರ; ವಾಗ್ಮಿ. ~ಕೆ(ಗೆ)ಡಿಸು = ೧. ಬೇರೆಯವರ ಮಾತನ್ನು ಕೆಡಿಸು. ೨. = ನುಡಿವಪ್ಪು. ~ಕೆ(ಗೆ)ಡು = ಮಾತಿಗೆ ತಪ್ಪು. ~ಜಾಣ = ನುಡಿಗಾಱ. ~ತ(ದ)ಪ್ಪು = ಸುಳ್ಳಾಡು. ~ಪ(ವ)ಕ್ಕಿ = ಮಾತನಾಡುವ ಹಕ್ಕಿ; ಗಿಣಿ. ~ಪೆ(ವೆ)ಣ್ = ಮಾತಿನ ಅಧಿದೇವತೆ; ಸರಸ್ವತಿ. ~ವಳಿ = ೧. ಮಾತಿನ ರೀತಿ, –ಗತ್ತು. ೨. ಭಾಷೆ; ವಾಗ್ವಾನ.

ನುಣ್ (ಗು). ನಯವಾದ; ಮೆದುವಾದ. ~ಇಸು = ನಯಗೊಳಿಸು; ಹದಮಾಡು. ~ಕೊ(ಗೊ)ರಲ್(ಲು) = ೧. ಮಧುರವಾದ ಧ್ವನಿ. ೨. ನುಣುಪಾದ ಕುತ್ತಿಗೆ. ~ದನಿ = ನುಣ್ಚರ. ~ಸ(ಚ)ರ = ಇಂಪಾದ ಧ್ವನಿ.

ನುಣುಚು (ಕ್ರಿ). ತಪ್ಪಿಸಿಕೊಳ್ಳು; ಪಾರಾಗು.

ನುಣುಪು (ನಾ). ನಯ; ಮೃದುವು.

ನುಣ್ಣಿತು (ನಾ). ನಯವಾದುದು; ನುಣುಪಾದುದು.

ನುಣ್ಪು = ನುಣುಪು.

ನುತ (ಗು). ಕೊಂಡಾಡಿದ; ಸ್ತುತಿಸಿದ.

ನುತಿ (ನಾ). ಹೊಗಳಿಕೆ; ಸ್ತೋತ್ರ. ~ಇಸು = ಸ್ತುತಿಸು; ಹೊಗಳು.

ನುತಿಯಿಸು = ನುತಿಸು.

ನುರಿ (ಕ್ರಿ). ೧. ಅನುಭವ ಪಡೆ. ೨. = ನುಱು.

ನುಱು(ರಿ) (ಕ್ರಿ). ೧. ಹುಡಿಯಾಗು; ಚೂರಾಗು. (ನಾ). ೨. ಚೂರಾದುದು; ತುಂಡು. ~ಇಸು = ಪುಡಿಮಾಡು; ಅರೆ; ಸಣ್ಣಿಸು.

ನುಱು(ರು)ಕು (ಕ್ರಿ). ೧. ಏಳಿಗೆಯಿಲ್ಲದಾಗು; ಹಾಳಾಗು. ೨. ಪುಡಿಮಾಡು. ೩. ಪುಡಿಯಾಗು; ಚೂರುಚೂರಾಗು.

ನುಱು(ರು)ಜು = ನೊಜಜು.

ನುಗುರ್ಗು (ಕ್ರಿ). ೧. ತಳ್ಳಿಕೊಂಡು ಹೋಗು; ರಭಸದಿಂದ ಮುಂದುವರಿ; ನುಗ್ಗು. ೨. ಪುಡಿಮಾಡು; ಚೂರ್ಣಮಾಡು. (ನಾ). ೩. ಹುಡಿಯಾದ ಸ್ಥಿತಿ; ಪುಡಿ.

ನುಚ್ಚುರ್ (ಕ್ರಿ). ೧. ಪುಡಿಮಾಡು. (ನಾ). ೨. (ಧಾನ್ಯಗಳ) ಪುಡಿ; ನುಚ್ಚು.

ನುಲಿ (ಕ್ರಿ). ೧. (ಹಗ್ಗದಂತೆ) ಹೊಸೆ, –ತಿರುಚು. ೨. ಹೊಟ್ಟೆಶೂಲೆಯಾಗು;

ಕರುಳಿನಲ್ಲಿ ನೋವುಂಟಾಗು. (ನಾ). ೩. = ನುಲಿಕೆ. ~ಕ(ಗ)ಡಗ = ಒಂದು ಬಗೆಯ ಆಭರಣ ; ತೋಳುಬಂದಿ.

ನುಲಿಕೆ (ನಾ). ೧. ನುಲಿಯುವಿಕೆ; ತಿರುಚುವಿಕೆ. ೨. ಹುರಿ ; ನೂಲು. ೩. ಹೊಟ್ಟೆನೋವು, –ಶೂಲೆ.

ನುಲಿಚು (ಕ್ರಿ). ತಿರುಚು ; ಹಿಂಡು.

ನುಸಿ (ಕ್ರಿ). ೧. ನುಸುಳು ; ತೂರು. (ನಾ). ೨. ಹುಡಿ ; ಧೂಳು. ೩. ಬಟ್ಟೆ, ಧಾನ್ಯಗಳನ್ನು ಹಾಳುಮಾಡುವ ಒಂದು ಬಗೆಯ ಸಣ್ಣ ಹುಳು. ೪. ನೊರಜು ; ದೋಮೆ. ~ಕೊ(ಗೊ)ಳ್=ಕಡೆಗಣಿಸು; ಧಿಕ್ಕರಿಸು.

ನುಸುಳ್(ಳು) (ಕ್ರಿ). ೧. ಜಾರು ; ತಪ್ಪಿಸಿಕೊಳ್ಳು ; ನುಣುಚು. ೨. ಅಡಗು ; ಮರೆಯಾಗು. (ನಾ). ೩. ನುಗ್ಗುವಿಕೆ. ೪. ಸುಳ್ಳು ; ಅಸತ್ಯ.

ನುಳ್ಗು (ಕ್ರಿ). ಪುಡಿಯಾಗು ; ಚೂರಾಗು.

ನೂ(ಂ)ಕು (ಕ್ರಿ). ೧. ದೂಡು ; ತಳ್ಳು. ೨. ಸಮಯ ಕಳೆ; ದಿನಕಳೆ. ೩. ಹಾಯು; ಮುನ್ನುಗ್ಗು. ೪. ಸಾಧ್ಯವಾಗು ; ಈಡೇರು. (ನಾ). ೫. ತಳ್ಳುವಿಕೆ; ದೂರ ಸರಿಸುವಿಕೆ. ~ನುಗ್ಗಲು = ನೂಕುನುಗ್ಗು. ~ನುಗ್ಗು = ಗದ್ದಲ ; ಗೊಂದಲ.

ನೂತನ (ಗು). ಇತ್ತೀಚಿನ; ನವೀನ; ಹೊಸದಾದ.

ನೂತಿ (ನಾ). ಒಂದು ಬಗೆಯ ಗುಹ್ಯರೋಗ.

ನೂನ = ನ್ಯೂನ.

ನೂನಂ (ಅ). ೧. ನಿಶ್ಚಿತವಾಗಿ ; ನಿಜವಾಗಿ. ೨. ಪ್ರಾಯಶಃ ; ಬಹುಶಃ.

ನೂಪುರ (ನಾ). ಕಾಲಂದುಗೆ; ನೇವುರ.

ನೂಱು(ರು) (ನಾ). ಒಂದು ಸಂಖ್ಯೆ; ಶತಕ. ~ಎಲೆ = ತಾವರೆ ; ಕಮಲ.

ನೂಲ್(ಲು) (ಕ್ರಿ). ೧. ರಾಟೆಯಿಂದ ದಾರವನ್ನು ತೆಗೆ. (ನಾ). ೨. ಎಳೆ ; ದಾರ. ೩. ಒಂದು ಬಗೆಯ ಆಭರಣ ; ಒಡ್ಯಾಣ. ~ಏಣಿ = ಹಗ್ಗದಿಂದ ಮಾಡಿದ ಏಣಿ. ~ಹಬ್ಬ= ನೂಲುಹುಣ್ಣಿಮೆ. ~ಹುಣ್ಣಿಮೆ = ಶ್ರಾವಣಮಾಸದಲ್ಲಿ ಬರುವ ಹಬ್ಬ.

ನೂಲಿಗ (ನಾ). ಒಂದು ಜಾತಿಯ ಹಾವು ; ಹಸಿರುಹಾವು.

ನೂಳ್(ಳು) (ನಾ). ಸುಳ್ಳು ; ಅಸತ್ಯ.

ನೂಳದು (ಅ). ಹಿರಿದಾಗಿ ; ಅತಿಶಯವಾಗಿ.

ನೃತ್ತ (ನಾ). ಕುಣಿತ ; ನರ್ತನ.

ನೃತ್ಯ = ನೃತ್ತ.

ನೃಪ (ನಾ). ಅರಸ ; ರಾಜ. ~ಪೀಠ = ರಾಜಗದ್ದುಗೆ ; ಸಿಂಹಾಸನ.

ನೃಪತಿ = ನೃಪ.

ನೃಪಾಲ = ನೃಪ.

ನೃಶಂಸ (ನಾ). ೧. ಕ್ರೂರಿ ; ಕಟುಕ. (ಗು). ೨. ಕ್ರೂರವಾದ ; ದುಷ್ಟವಾದ.

ನೆಂಟ = ನಂಟ.

ನೆಂಟಸ್ತನ (ನಾ). ಬಾಂಧವ್ಯ ; ಸಂಬಂಧ.

ನೆಂಟು = ನೆಂಟಸ್ತನ.

ನೆಕ್ಕು (ಕ್ರಿ). ೧. ನಾಲಗೆಯಿಂದ ಸವರು. ೨. ಬಾಡು ; ಕುಗ್ಗು. (ನಾ). ೩. ತಿನಿತ ; ನೂಕುವಿಕೆ.

ನೆಗಡಿ (ನಾ). ಶೀತದಿಂದುಂಟಾಗುವ ಬಾಧೆ.

ನೆಗಪು (ಕ್ರಿ). ೧. ಮೇಲಕ್ಕೆತ್ತು ; ಎಬ್ಬಿಸು. ೨. ಚಿಮ್ಮು ; ಹೊರಹೊಮ್ಮಿಸು.

ನೆಗವು ೧. = ನೆಗಪು. ೨. ಎತ್ತಿಹಾಕು ; ಅಪಹರಿಸು.

ನೆಗಹು ೧. = ನೆಗಪು. (ನಾ). ೨. ಮೇಲಕ್ಕೆ ಎತ್ತುವಿಕೆ. ೩. ಉತ್ಸಾಹ ; ಸಡಗರ.

ನೆಗಟ್(ಳ್,ಳು,ೞು) (ಕ್ರಿ). ೧. ಇರು. ೨. ಕೈಗೊಳ್ಳು ; ತೊಡಗು. ೩. ಮಾಡು. ೪. ಪ್ರಸಿದ್ಧಿಪಡೆ ; ಕೀರ್ತಿಯನ್ನು ಹೊಂದು. ೫. ಬಳಕೆಗೆ ಬರು. ೬. ಉಂಟಾಗು ; ಒದಗು. (ನಾ). ೭. ಮೊಸಳೆ ; ನಕ್ರ.

ನೆಗಟ್ಟಿ(ಳ್ತಿ) (ನಾ). ೧. ನಡತೆ; ಚಾರಿತ್ರ್ಯ; ಆಚರಣೆ. ೨. ಕೆಲಸ; ಉದ್ಯೋಗ. ೩. ಅಭ್ಯಾಸ; ರೂಢಿ. ೪. ಪ್ರಸಿದ್ಧಿ; ಕೀರ್ತಿ.

ನೆಗಟ್ದಿ(ಳ್ದಿ)ೀರ (ನಾ). ಮೊಸಳೆಯನ್ನು ವಾಹನವಾಗಿ ಉಳ್ಳವನು; ವರುಣ.

ನೆಗೆ (ಕ್ರಿ). ಜಿಗಿ; ಹಾರು; ಕುಪ್ಪಳಿಸು.

ನೆಗೆಣ್ಣಿ (ನಾ). ಭಾವ ಅಥವಾ ಮೈದುನನ ಹೆಂಡತಿ; ಓರಗಿತ್ತಿ.

ನೆಗೆತ (ನಾ). ಹಾರುವಿಕೆ; ಜಿಗಿತ.

ನೆಗ್ಗಿಲ್(ಲು) (ನಾ). ಒಂದು ಜಾತಿಯ ಗಿಡ ಮತ್ತು ಅದರ ಮುಳ್ಳು.

ನೆಗ್ಗು ೧. = ನಗ್ಗು. ೨. ಕುಗ್ಗು; ಕುಸಿ. ೩. ನಾಶಮಾಡು; ಹಾಳುಮಾಡು. ~ಎತ್ತು = ತಗ್ಗನ್ನು ಸರಿಮಾಡು.

ನೆಚ್ಚು = ನಚ್ಚು.

ನೆಟಿಕೆ = ನಟಿಕೆ.

ನೆಟ್ಟಗೆ (ಅ). ೧. ನೇರವಾಗಿ; ನೀಳವಾಗಿ. ೨. ಅಂದವಾಗಿ; ಚೆನ್ನಾಗಿ. ೩. ಸರಳವಾಗಿ; ಸ್ಪಷ್ಟವಾಗಿ. ~ಆಗು = ೧. ನೇರವಾಗು. ೨. (ರೋಗದಿಂದ) ಗುಣಹೊಂದು; ವಾಸಿಯಾಗು. ೩. ಲೇಸಾಗು; ಒಳಿತಾಗು.

ನೆಟ್ಟನೆ ೧. = ನೆಟ್ಟಗೆ. ೨. ಒಮ್ಮೆಲೆ; ತಕ್ಷಣ.

ನೆಟ್ಟು (ನಾ). ೧. ನೆಟಿಕೆ; ಲಟಿಕೆ. ೨. ನಾಟು; ನೆಡುವಿಕೆ.

ನೆಡು (ಕ್ರಿ). ೧. ನಿಲ್ಲಿಸು; ನಾಟು. ೨. ಚುಚ್ಚು.

ನೆಣ (ನಾ). ಕೊಬ್ಬು; ಮೇದಸ್ಸು. ~ಕೊ(ಗೊ)ಬ್ಬು = ಹೆಮ್ಮೆ; ಸೊಕ್ಕು.

ನೆತ್ತ (ನಾ). ೧. ಕಣ್ಣು; ನೇತ್ರ. ೨. ಜೂಜು; ಪಂದ್ಯ. ೩. ಪಗಡೆಯ ದಾಳ; ಲೆತ್ತ. ~ಪ(ವ)ಲಗೆ = ಪಗಡೆಯ ಹಾಸು.

ನೆತ್ತರ್(ರು) (ನಾ). ರಕ್ತ; ಕೆನ್ನೀರು.

ನೆತ್ತಿ (ನಾ). ೧. ಹಣೆ. ೨. ತಲೆಯ ಮಧ್ಯಭಾಗ. ೩. ತುದಿ; ಶಿಖರ.

ನೆನಕೆ (ನಾ). ಸ್ಮರಣೆ; ನೆನಪು.

ನೆನಪು = ನೆನಕೆ.

ನೆನಸು (ಕ್ರಿ). ೧. ಸ್ಮರಿಸು; ಜ್ಞಾಪಿಸಿಕೊಳ್ಳು. ೨. ಚಿಂತಿಸು; ಆಲೋಚಿಸು. ೩. ತೋರಿಯಿಸು; ಒದ್ದೆಮಾಡು. (ನಾ). ೪. ಸ್ಮೃತಿ; ಜ್ಞಾಪಕ. ೫. ಅನುಭವಕ್ಕೆ ಬಂದುದು; ದಿಟವಾದುದು; ನನಸು.

ನೆನಹು = ನೆನಕೆ.

ನೆನೆ (ಕ್ರಿ). ೧. ಸ್ಮರಿಸು; ಜ್ಞಾಪಿಸಿಕೊಳ್ಳು. ೨. ಚಿಂತಿಸು; ಯೋಚಿಸು. ೩. ಒದ್ದೆಯಾಗು; ತೋಯು.

ನೆನ್ನೆ = ನಿನ್ನೆ.

ನೆಪ (ನಾ). ಕಾರಣ; ಹೇತು; ವ್ಯಾಜ.

ನೆಪ್ಪು (ನಾ). ೧. ನೆನಪು; ಜ್ಞಾಪಕ. ೨. ಗುಂಪು; ಸಮೂಹ. ೩. ಸೇಡು. ಮುಯ್ಯಿ. ೪. ಕತ್ತರಿಸುವಿಕೆ.

ನೆಮರು (ಕ್ರಿ). ೧. ಜಗಿ; ಮೆಲುಕುಹಾಕು; ನಮಲು. (ನಾ). ೨. ಮೆಲುಕಾಟ; ಜಗಿಯುವಿಕೆ.

ನೆಮ್ಮದಿ (ನಾ). ಸಮಾಧಾನ; ಶಾಂತಿ.

ನೆಮ್ಮು (ಕ್ರಿ). ೧. ಒರಗು; ಆತುಕೊಳ್ಳು. ೨. ನಂಬು; ವಿಶ್ವಾಸವಿಡು. (ನಾ). ೩. ಒರಗು; ಆನಿಕೆ. ~ಇಸು = ೧. ಒರಗಿಸು. ೨. ಆರೋಪಿಸು; ಅಪಾದಿಸು.

ನೆಯ್ ೧. = ನೆಯ್ಯು. (ನಾ). ೨. ತುಪ್ಪ.

ನೆಯ್ಗೆ (ನಾ). ನೇಯುವುದು. ~ಕಾಱ(ರ) = ಬಟ್ಟೆ ನೇಯುವವನು; ನೇಕಾರ.

ನೆಯ್ದಿಲ್(ಲು) (ನಾ). ತಾವರೆ; ಕಮಲ.

ನೆಯ್ದಿಲೆ = ನೆಯ್ದಿಲ್.

ನೆಯ್ಯು (ಕ್ರಿ). ನೇಯು; ಹೆಣೆ.

ನೆರ (ನಾ). ೧. ಸಹಾಯ; ನೆರವು. ೨. = ನೆಱ. (ಗು). ೩. ಸಮೀಪದ; ಬಳಿಯ. ~(ಂ)ಪಾ(ಬಾ)ರ್ = ಸಹಾಯವನ್ನು ಅಪೇಕ್ಷಿಸು. ~ಮನೆ = ಪಕ್ಕದ ಮನೆ.

ನೆರಕೆ (ನಾ). ಬಿದಿರಿನ ಗೋಡೆ; ತಟ್ಟಿ.

ನೆರಪು (ಕ್ರಿ). ೧. ಗುಂಪುಗೂಡಿಸು ; ಒಟ್ಟು ಗೂಡಿಸು. ೨. = ನೆಱಪು.
ನೆರವಿ (ನಾ). ಗುಂಪು ; ಸಮೂಹ.
ನೆರವು ೧. = ನೆರವಿ. ೨. ಸಹಾಯ; ಬೆಂಬಲ.
ನೆರವೇರು (ಕ್ರಿ). ಈಡೇರು ; ಪೂರ್ಣವಾಗು.
ನೆರಹು = ನೆರಪು.
ನೆರಳ್(ಳು) (ನಾ). ೧. ಪ್ರತಿಬಿಂಬ. ೨ ಆಶ್ರಯ ; ಆಸರೆ.
ನೆರೆ (ಕ್ರಿ). ೧. ಗುಂಪುಸೇರು ; ಒಟ್ಟಾಗು. ೨. ಸಂಭೋಗಿಸು. ೩. ಕೂದಲು ಬೆಳ್ಳಗಾಗು. ೪. = ನೆಱೆ. (ನಾ). ೫. ಸಮೂಹ; ಗುಂಪು. ೬. ಕೂದಲು ಬೆಳ್ಳಗಾಗುವಿಕೆ. ೭. ಸಮೀಪ ; ಅಕ್ಕಪಕ್ಕ. (ಗು). ೮. ಸಮೀಪದ. ~ಊ(ಯೂ,ವೂ)ರು = ಪಕ್ಕದ ಊರು. ~ಮನೆ = ನೆರಮನೆ. ~ಹೊರೆ = ಅಕ್ಕಪಕ್ಕ.
ನೆಱ(ರ) (ನಾ). ೧. ಕೆಚ್ಚು ; ಸಾಮರ್ಥ್ಯ. ೨. ಮುಖ್ಯಸ್ಥಾನ ; ಮರ್ಮಸ್ಥಾನ ; ಆಯಕಟ್ಟು. ೩. ಗುಟ್ಟು ; ರಹಸ್ಯ.
ನೆಱ(ರ)ಪು (ಕ್ರಿ). ಪೂರ್ಣಗೊಳಿಸು ; ಪೂರೈಸು.
ನೆಱ(ರ)ಲ್ (ಕ್ರಿ). ಜೋಲು ; ಬಸವಳಿ.
ನೆಱ(ರ)ವಣಿಗೆ (ನಾ). ೧. ಪರಿಪೂರ್ಣವಾದುದು ; ಸಂಪೂರ್ಣ. ೨. ಚೊಕ್ಕತನ ; ಅಚ್ಚುಕಟ್ಟು.
ನೆಱಿ(ರಿ) (ನಾ). ೧. ಮಡಿಕೆ ; ಪದರ. (ಗು). ೨. ವ್ಯವಸ್ಥಿತವಾದ ; ಕ್ರಮವಾದ. ೩. ಸುಂದರವಾದ ; ಸೊಗಸಾದ.
ನೆಱೆ(ರೆ) (ಕ್ರಿ). ೧. ಪೂರ್ಣವಾಗು; ಪೂರ್ತಿಗೊಳ್ಳು. ೨. ಪ್ರಾಯಕ್ಕೆ ಬರು ; ಋತುಮತಿಯಾಗು. ೩. ಅಧಿಕವಾಗು; ಹೆಚ್ಚಾಗು; ಉಕ್ಕು. (ನಾ). ೪. ಮಹಾಪೂರ ; ತುಂಬು ಪ್ರವಾಹ. ೫. ಪೂರ್ಣವಾದುದು. (ಅ). ೬. ಚೆನ್ನಾಗಿ ; ಪೂರ್ಣವಾಗಿ. ~ಕೊ(ಗೊ)ಳ್= ೧. ಎಲ್ಲವನ್ನೂ ಕಸಿದುಕೊಳ್ಳು. ೨. ಮರ್ಮವನ್ನು ಛೇದಿಸು. ~ತಿ(ದಿ)ಂಗಳ್ = ಪೂರ್ಣಚಂದ್ರ; ಹುಣ್ಣಿಮೆಯ ಚಂದ್ರ.
ನೆಱೆವಣಿಗೆ = ನೆಱವಣಿಗೆ.
ನೆರ್ಮ (ನಾ). ಆಧಾರ ; ಆಶ್ರಯ.
ನೆರ್ಮು (ಕ್ರಿ). ಆಶ್ರಯಿಸು; ನೆಮ್ಮು ; ಒರಗು.
ನೆಲ್ (ನಾ). ಬತ್ತ.
ನೆಲ (ನಾ). ೧. ಭೂಮಿ ; ಭೂಪ್ರದೇಶ. ೨. ರಾಜ್ಯ ; ದೇಶ. ~ಕ(ಗ)ಟ್ಟು = ಸಮ ಮಾಡಿದ ನೆಲ ; ಕುಟ್ಟಿಮ. ~ಕ(ಗ)ಡಲೆ = ಕಡಲೆಕಾಯಿ ; ಶೇಂಗಾ. ~ಗುಮ್ಮ = ೧. ಒಂದು ಜಾತಿಯ ಪಕ್ಷಿ. ೨. ಕೋಟೆಗೋಡೆಯನ್ನೊಡೆಯುವ ಒಂದು ಯುದ್ಧ ಸಾಧನ. ೩. ಒಂದು ಬಗೆಯ ಕೀಟ. ~ಬ(ವ)ಲ = ಭೂಸೈನ್ಯ. ~ಮ(ವ)ನೆ = ನೆಲವಾಳಿಗೆ. ~ಮಾ(ವಾ)ಳಿಗೆ = ೧. ಹಗೇವು ; ಕಣಜ ೨. ನೆಲದ ಅಡಿಯಲ್ಲಿರುವ ಮನೆ ; ಗುಪ್ತಗೃಹ. ~ಸಮ = ನಾಶ ; ನಿರ್ನಾಮ.
ನೆಲಕಲ (ನಾ). ಲೋಭಿ ; ಜಿಪುಣ.
ನೆಲವತ್ತಿ (ನಾ). ಅಡಕೆಯಲ್ಲಿ ಒಂದು ಬಗೆ.
ನೆಲವು (ನಾ). ಪಾತ್ರೆಗಳನ್ನು ಇಡುವುದಕ್ಕೆ ಇಳಿಬಿಡುವ ಹಗ್ಗದ ಜಾಳಿಗೆ ; ನಿಲುವು.
ನೆಲಹು = ನೆಲವು.
ನೆಲೆ (ನಾ). ೧. ವಾಸಸ್ಥಳ ; ಮನೆ ; ಆಶ್ರಯ. ೨. ಮೂಲಸ್ಥಾನ ; ತಳ. ೩. ಗುಟ್ಟು ; ರಹಸ್ಯ. ೪. ನಿಲುವು ; ನಿಲ್ಲುವಿಕೆ. ೫. ಮಹಡಿ ; ಉಪ್ಪರಿಗೆ ; ಅಂತಸ್ತು. ~ಕ(ಗ)ಟ್ಟು=೧. ನೆಲಗಟ್ಟು ; ಕುಟ್ಟಿಮ. ೨. ಮೂಲಾಶ್ರಯ. ~ಕೆ(ಗೆ)ಡು = ಆಶ್ರಯಹೀನವಾಗು; ದುರ್ದೆಶೆಗೆ ಬರು.
ನೆಲ್ಲಿ (ನಾ). ಒಂದು ಜಾತಿಯ ಸಸ್ಯ ಮತ್ತು ಅದರ ಕಾಯಿ ; ಆಮಲಕ.

ನೆಲ್ಲು = ನೆಲ್.
ನೆವ = ನೆಪ.
ನೆವನ = ನೆಪ.
ನೆಸೆ (ಕ್ರಿ). ೧. ಜಿಗಿ; ಹಾರು. ೨. ಮೇಲಕ್ಕೆ ಎತ್ತು; ಎಬ್ಬಿಸು. ೩. ಹೊಳೆ; ಪ್ರಕಾಶಿಸು. (ನಾ). ೪. ಕಾಂತಿ; ಪ್ರಕಾಶ. ೫. = ನಸೆ.
ನೇಬ(ಳ)ಲ್)ಲು ೧. = ನೆರಳ್. ೨. ಒಂದು ಜಾತಿಯ ಮರ.
ನೇಬ್ಗ(ಳ್ಗ) (ಕ್ರಿ). ಮುಳುಗು; ಲೀನವಾಗು.
ನೇಕಾರ (ನಾ). ನೇಯುವವನು; ಜಾಡ.
ನೇಗಿಲ್(ಲು) (ನಾ). ಭೂಮಿಯನ್ನು ಉಳುವ ಸಾಧನ; ರೆಂಟೆ.
ನೇಜಕ (ನಾ). ಅಗಸ.
ನೇಜಯ (ನಾ). ಒಂದು ಬಗೆಯ ಆಯುಧ; ಭರ್ಜಿ.
ನೇಜಿ (ನಾ). ಸಸಿಗಳನ್ನು ಕಿತ್ತು ಮತ್ತೊಂದು ಕಡೆಯಲ್ಲಿ ನೆಡುವುದು; ನಾಟಿ. ~ಸೂಡಿ = ಬತ್ತದ ಸಸಿಗಳ ಕಟ್ಟು.
ನೇಣ್(ಣು) (ನಾ). ೧. ಹುರಿ; ಹಗ್ಗ. ೨. ಉರುಳು; ಪಾಶ.
ನೇತಾರ (ನಾ). ಮಾರ್ಗದರ್ಶಕ; ಮುಂದಾಳು.
ನೇತ್ರ (ನಾ). ೧. ಕಣ್ಣು; ನಯನ. ೨. ಲೆತ್ತ; ಪಗಡೆಯ ದಾಳ. ೩. ಮುಂದಾಳು; ನಾಯಕ. ೪. ಕಡೆಗೋಲಿನ ಹಗ್ಗ. ೫. ರೇಶ್ಮೆಯ ಬಟ್ಟೆ. ೬. ಅಡಕೆಯ ಮರ. ೭. ಸುಗುಣ; ಒಳ್ಳೆಯ ನಡತೆ. ~ಛ(ಚ್ಛ)ದ = ರೆಪ್ಪೆ; ಎವೆ. ~ತ್ರಯ = ಮೂರು ಕಣ್ಣುಗಳುಳ್ಳವನು; ಶಿವ. ~ಪುತ್ರಿಕೆ = ಕಣ್ಣಿನ ಗೊಂಬೆ, —ಪಾಪೆ.
ನೇಪಥ್ಯ (ನಾ). ೧. ರಂಗದ ಹಿಂಬದಿ. ೨. ತೊಡಿಗೆ; ಅಲಂಕಾರ. ೩. ನಾಟಕದಲ್ಲಿ ವೇಷ ಹಾಕಿಕೊಳ್ಳುವ ಸ್ಥಳ.
ನೇಮ (ನಾ). ನಿಯಮ; ಕಟ್ಟಳೆ; ವ್ರತ. ~ಇಸು = ೧. ಹತೋಟಿಯಲ್ಲಿಡು. ೨. ಗೊತ್ತುಮಾಡು; ನಿಯಮಿಸು. ೩. ನೇಮಕಮಾಡು.
ನೇಮಕ (ನಾ). ೧. ಗೊತ್ತುಮಾಡುವವನು; ನಿಯಾಮಕ. ೨. ಗೊತ್ತುಮಾಡುವಿಕೆ; ನಿಯಮಿಸುವಿಕೆ. ೩. ಕಟ್ಟಳೆ. ೪. = ನೇಮಣೂಕಿ.
ನೇಮಣೂಕಿ (ನಾ). ಕೆಲಸಕ್ಕೆ ನಿಯಮಿಸಿ ಕೊಳ್ಳುವುದು.
ನೇಮಿ (ನಾ). ೧. ಚಕ್ರದ ಹೊರಸುತ್ತು, —ಕಟ್ಟು. ೨. ರಾಟೆ; ಗಡಗಡೆ.
ನೇಯ್(ಯು) = ನೆಯ್ಯು.
ನೇಯ (ಗು). ೧. ನೆರವೇರಿಸಬೇಕಾದ; ನಡಸಬೇಕಾದ. ೨. ಅನ್ವಯಿಸಬೇಕಾದ. ~ಅರ್ಥ=ತಪ್ಪಾಗಿ ಅನ್ವಯ ಮಾಡುವುದು.
ನೇಯ್ಗೆ = ನೆಯ್ಗೆ.
ನೇರ್(ರು) (ಕ್ರಿ). ೧. ಕಡಿ; ಕತ್ತರಿಸು. ೨. ಒಪ್ಪು; ಸಮ್ಮತಿಸು. ೩. = ನೇಜ್. (ನಾ). ೪. ನೆಟ್ಟಗಿರುವಿಕೆ; ನೇರವಾಗಿರುವಿಕೆ. ೫. ಒಳ್ಳೆಯತನ; ಸಭ್ಯತೆ. ~ಕಿ(ಗಿ)ಱ(ರಿ)ಯ = ಹಿಂದೆಯೇ ಜನಿಸಿದವನು; ಕಿರಿಯ ತಮ್ಮ. ~ಪ(ವ)ಡು = ೧. ಹೊಂದು; ಸೇರು. ೨. ಔಚಿತ್ಯ.
ನೇರ (ನಾ). ೧. ನಿಡಿದು; ನೆಟ್ಟಗಿರುವುದು. ೨. ಸರಳವಾದುದು. ೩. ಉಚಿತವಾದುದು; ಯೋಗ್ಯವಾದುದು. ~ಮಾಡು = ೧. ನೆಟ್ಟಗೆ ಮಾಡು. ೨. ಸರಿಮಾಡು; ತಿದ್ದು.
ನೇರಾಣಿ (ನಾ). ೧. ಚಿನ್ನ; ಬಂಗಾರ. (ಗು). ೨. ಚೊಕ್ಕ; ಪರಿಶುದ್ಧ.
ನೇರಿತು (ಗು). ೧. ನೇರವಾದ. ೨. ಸರಳವಾದ. ೩. ಯೋಗ್ಯವಾದ; ಅರ್ಹವಾದ.
ನೇರಿತ್ತು = ನೇರಿತು.
ನೇರಿದು (ನಾ). ಔಚಿತ್ಯ.
ನೇರಿಳೆ = ನೇಱಲ್.

ನೇರೆ (ನಾ). ಬೆಳಗಿನ ಉಪಹಾರ.

ನೇಱ್(ರ್, ರು, ಱು) (ಕ್ರಿ). ತೂಗುಹಾಕು; ನೇತುಹಾಕು.

ನೇಱಿ(ರಿ)ಲ್(ಲು) (ನಾ). ಒಂದು ಬಗೆಯ ಮರ ಮತ್ತು ಅದರ ಹಣ್ಣು; ನೇರಳೆ; ಜಂಬು.

ನೇರ್ಪು (ನಾ). ೧. ಸರಿಯಾದ ಕ್ರಮ, -ರೀತಿ. ೨. ಒಳ್ಳೆಯತನ; ಪ್ರಾಮಾಣಿಕತೆ. ೩. ಅಂದ; ಚೆಲುವು. ೪. ಕೊಲೆ. ೫. ಸೇಡು; ಮುಯ್ಯಿ. ~ಕೊ(ಗೊ)ಳ್ =೧.ಪ್ರತಿಯಾಗಿ ಕೊಲೆ ಮಾಡು. ೨.ಸೇಡು ತೀರಿಸಿಕೊಳ್ಳು. ~ಪೆ(ವೆ)ಱ್(ರ್) =ಯೋಗ್ಯವಾಗು; ಉಚಿತವಾಗು.

ನೇಲ್(ಲು) (ಕ್ರಿ). ನೇತಾಡು; ತೂಗಾಡು.

ನೇವಣ (ನಾ). ೧. ಸರ; ಕಂಠಿಹಾರ. ೨. ಉಡಿದಾರ; ಕಟಿಸೂತ್ರ.

ನೇವರಿಸು (ಕ್ರಿ). ೧. ಸರಿಪಡಿಸು; ನೆಟ್ಟಗೆ ಮಾಡು. ೨. ಸವರು; ತಡವು.

ನೇವಳ = ನೇವಣ.

ನೇವುರ (ನಾ). ಅಂದುಗೆ; ನೂಪುರ.

ನೇಸಱ್(ರ್,ರು,ಱು) (ನಾ). ಸೂರ್ಯ. ~ಅಣುಗ = ಯಮ. ~ಕ(ಗ)ಲ್(ಲ್ಲು) =ಸೂರ್ಯಕಾಂತ ಶಿಲೆ. ~ಪಡು=ಹೊತ್ತು ಮುಳುಗು; ಸೂರ್ಯಾಸ್ತವಾಗು.

ನೇಹ (ನಾ). ೧. ಸ್ನೇಹ; ಕೆಳೆ. ೨. ಪ್ರೀತಿ; ಒಲುಮೆ. ೩. ಎಣ್ಣೆ; ತೈಲ. ~ಇಗ = ಗೆಳೆಯ; ಮಿತ್ರ. ~(೦)ಪ(ಬ)ಡೆ =ಪ್ರೀತಿಯನ್ನು ಹೊಂದು.

ನೈಋತ್ಯ (ನಾ). ದಕ್ಷಿಣ ಮತ್ತು ಪಶ್ಚಿಮ ದಿಕ್ಕುಗಳ ನಡುವಿನ ದಿಕ್ಕು.

ನೈಗಮ (ನಾ). ೧. ದಾರಿ. ೨. ಪಟ್ಟಣಿಗ; ನಾಗರಿಕ. ೩. ವ್ಯಾಪಾರಿ. (ಗು). ೪. ನಿಗಮಗಳಿಗೆ ಸಂಬಂಧಿಸಿದ; ವೇದಗಳಿಗೆ ಸಂಬಂಧಿಸಿದ.

ನೈಚಿಕೆ (ನಾ). ೧. ಉತ್ತಮವಾದ ಹಸು. ೨. ಎತ್ತಿನ ಹಣೆ.

ನೈಚ್ಯ (ನಾ). ಕೀಳುತನ; ನೀಚತನ.

ನೈಜ (ನಾ). ೧. ನನ್ನಿ; ಸತ್ಯ; ನಿಜವಾದುದು. (ಗು). ೨. ಸ್ವಾಭಾವಿಕವಾದ; ಸಹಜ; ನಿಜವಾದ.

ನೈದಿಲೆ = ನೆಯ್ದಿಲ್.

ನೈಪಥ್ಯ (ನಾ). ೧. ಉಡುಗೆ. ೨. ರಂಗದ ಹಿಂಬದಿ; ನೇಪಥ್ಯ.

ನೈಪುಣ್ಯ (ನಾ). ನಿಪುಣತೆ; ಜಾಣತನ.

ನೈಮಿತ್ತಿಕ (ನಾ). ೧. ಶಕುನ ಹೇಳುವವನು; ಜ್ಯೋತಿಷಿ. (ಗು). ೨. ಸಂಬಂಧಿಸಿದ; ನಿಮಿತ್ತವಾದ. ೩. ಆಕಸ್ಮಿಕವಾದ.

ನೈಯಾಯಿಕ (ನಾ). ನ್ಯಾಯಶಾಸ್ತ್ರವನ್ನು ಬಲ್ಲವನು.

ನೈರುತಿ (ನಾ). ನೈಋತ್ಯದಿಕ್ಕಿನ ದೇವತೆ; ನಿರುತಿ.

ನೈರ್ಮಲ್ಯ (ನಾ). ಸ್ವಚ್ಛತೆ; ಶುಭ್ರತೆ.

ನೈವೇದ್ಯ (ನಾ). (ತಿಂಡಿ, ತಿನಿಸು ಮುಂತಾದುವುಗಳನ್ನು) ದೇವರಿಗೆ ಅರ್ಪಿಸುವಿಕೆ; ಎಡೆಮಾಡುವಿಕೆ; ನಿವೇದಿಸುವಿಕೆ.

ನೈಶಾಟ (ಗು). ರಾಕ್ಷಸರಿಗೆ ಸಂಬಂಧಪಟ್ಟ.

ನೈಷ್ಕರ್ಮ್ಯ (ನಾ). ಫಲಾಪೇಕ್ಷೆ ಇಲ್ಲದೆ ಮಾಡುವ ಕೆಲಸ.

ನೈಷ್ಠಿಕ (ಗು). ನಿಷ್ಠೆಯುಳ್ಳ; ಅಚಲ.

ನೈಸರ್ಗಿಕ (ಗು). ಸ್ವಾಭಾವಿಕವಾದ; ಪ್ರಕೃತಿ ಸಹಜವಾದ.

ನೊಗ (ನಾ). ಎತ್ತುಗಳ ಹೆಗಲಿನ ಮೇಲೆ ಹೇರುವ ಮರದ ದಿಂಡು; ಯುಗ. ~ಹೊರು = ೧. ನೊಗವನ್ನು ಹೊರು; ಭಾರವನ್ನು ಹೊರು. ೨. ಜವಾಬ್ದಾರಿಯನ್ನು ಹೊರು.

ನೊಚ್ಚನೆ (ಅ). ನಯವಾಗಿ; ಹಿತವಾಗಿ.

ನೊಚ್ಚಿತು (ನಾ). ೧. ಹಗುರವಾದುದು. (ಗು). ೨. ಶ್ರೇಷ್ಠ; ಅಮೋಘ.

**ನೊಣ** (ನಾ). ಒಂದು ಬಗೆಯ ಕೀಟ; ಮಕ್ಷಿಕ.

**ನೊಣೆ** (ಕ್ರಿ). ೧. ನುಂಗು; ಕಬಳಿಸು. ೨. ನೆಕ್ಕು; ನಾಲಗೆಯಿಂದ ಸವರು.

**ನೊರಂಜು** (ನಾ). ಸಣ್ಣ ಜಾತಿಯ ಸೊಳ್ಳೆ; ದೋಮೆ.

**ನೊರಜು** ೧. = ನೊರಂಜು. ೨. = ನೊಱಜು.

**ನೊರೆ** (ಕ್ರಿ). ೧. ಬುರುಗು ಏಳು. (ನಾ). ೨. ಬುರುಗು; ಫೇನ.

**ನೊಱ(ರ)ಜು** (ನಾ). ಒಂದು ಬಗೆಯ ಕಲ್ಲು; ಬೆಣಚುಕಲ್ಲು.

**ನೊಸಲ್(ಲು)** (ನಾ). ಹಣೆ; ಲಲಾಟ. ~ಅಕ್ಕರ = ಹಣೆಬರಹ; ವಿಧಿಲಿಖಿತ. ~ಇಡು = ತಲೆಬಾಗು; ನಮಸ್ಕರಿಸು.

**ನೊಱ(ಳ)** = ನೊಣ.

**ನೊಱ(ಳ)ವು** = ನೊಣ.

**ನೋ** (ಕ್ರಿ). ೧. ವೇದನೆಗೊಳಗಾಗು; ಬಾಧೆ ಪಡು. ೨. ವ್ಯಥೆಪಡು; ದುಃಖಿಸು. ೩. ಬಾಧೆಯಾಗು.

**ನೋಂದಣಿ** (ನಾ). ದಾಖಲು ಮಾಡಿಸುವಿಕೆ.

**ನೋಂಪಿ** (ನಾ). ವ್ರತ; ನಿಯಮ.

**ನೋಟ** (ನಾ). ೧. ನೋಡುವಿಕೆ; ದೃಷ್ಟಿ ಚೆಲ್ಲುವಿಕೆ. ೨. ಪ್ರದರ್ಶನ. ೩. ಉದ್ದೇಶ; ಗುರಿ. ೪. ದೃಶ್ಯ. ~ಕ = ನೋಡುವವನು; ಪ್ರೇಕ್ಷಕ. ~ಕಾ(ಗಾ)ಱ(ರ) = ನೋಟಕ.

**ನೋಡು** (ಕ್ರಿ). ೧. ದೃಷ್ಟಿಸು; ಕಾಣು. ೨. ಪರಿಶೀಲಿಸು; ಪರೀಕ್ಷಿಸು.

**ನೋತ** (ನಾ). ನೋವು; ಬಾಧೆ.

**ನೋನ್(ನು)** (ಕ್ರಿ). ವ್ರತಮಾಡು. ~ಇಸು = ವ್ರತ ಕೈಗೊಳ್ಳುವಂತೆ ಮಾಡು.

**ನೋಯ್(ಯು)** = ನೋ. ~ಇಸು = ಘಾಸಿಗೊಳಿಸು; ನೋವುಂಟುಮಾಡು.

**ನೋವು** (ನಾ). ೧. ಶೂಲೆ; ಬೇನೆ. ೨. ವ್ಯಥೆ; ಅಳಲು.

**ನೋಹಿ** = ನೋಂಪಿ.

**ನೋಳ್** (ಕ್ರಿ). ನಾಯಕತ್ವ ವಹಿಸು; ಮುಂದಾಳಾಗು.

**ನೋಳ್ಪು** (ಕ್ರಿ). ಎದುರಾಗು; ಎದುರಿಸು.

**ನೌ** (ನಾ). ನೌಕೆ; ಹಡಗು; ನಾವೆ.

**ನೌಕರ** (ನಾ). ಆಳು; ಸೇವಕ.

**ನೌಕರಿ** (ನಾ). ಕೆಲಸ; ಚಾಕರಿ; ವೃತ್ತಿ.

**ನೌಕಾದಂಡ** (ನಾ). ದೋಣಿಯನ್ನು ನಡಸುವ ಹುಟ್ಟು.

**ನೌಕೆ** = ನೌ.

**ನೌಬತ್ತು** (ನಾ). ಒಂದು ವಾದ್ಯ ವಿಶೇಷ.

**ನ್ಯಗ್ರೋಧ** (ನಾ). ಆಲ; ವಟವೃಕ್ಷ.

**ನ್ಯಸನ** (ನಾ). ೧. ಇಡುವಿಕೆ. ೨. ಬಿಡುವಿಕೆ.

**ನ್ಯಸ್ತ** (ಗು). ಇಡಲ್ಪಟ್ಟ; ಇರಿಸಿದ.

**ನ್ಯಾಯ** (ನಾ). ೧. ಕಾನೂನು; ನಿಯಮ; ನೀತಿ. ೨. ಯೋಗ್ಯತೆ; ಅರ್ಹತೆ. ೩. ಜಗಳ; ತಂಟೆ. ೪. ನಿರ್ಣಯ; ತೀರ್ಮಾನ. ೫. ವಾದ; ಚರ್ಚೆ. ೬. ಷಡ್ದರ್ಶನಗಳಲ್ಲಿ ಒಂದು. ೭. ತರ್ಕ. ೮. ಸರಿಯಾದುದು; ನೀತಿಯುಕ್ತವಾದುದು. ೯. ಸಾಮತಿ. ~ಅಧಿಪತಿ = ನ್ಯಾಯವನ್ನು ತೀರ್ಮಾನಿಸುವವನು. ~ಅಧೀಶ = ನ್ಯಾಯಾಧಿಪತಿ. ~ಆಲಯ = ನ್ಯಾಯವನ್ನು ನಿರ್ಣಯಿಸುವ ಸ್ಥಳ. ~ಆಸ್ಥಾನ = ನ್ಯಾಯಾಲಯ.

**ನ್ಯಾಸ** (ನಾ). ೧. ಇಡಲ್ಪಟ್ಟುದು; ಇಡುವಿಕೆ. ೨. ಇಡುಗಂಟು. ೩. ಪ್ರಬಂಧ.

**ನ್ಯೂನ** (ಗು). ೧. ಕುಂದುಳ್ಳ; ಕೊರತೆಯುಳ್ಳ. ೨. ಹೀನ; ನೀಚ.

**ನ್ಯೂನತೆ** (ನಾ). ಕೊರತೆ; ಕುಂದು.

❋

ಪ (ನಾ). ಕನ್ನಡ ವರ್ಣಮಾಲೆಯ ನಲವತ್ತೊಂದನೆಯ ಅಕ್ಷರ.

ಪಂ (ಗು). ೧. ಹಸಿಯಾದ; ಆರ್ದ್ರವಾದ. ೨. ಹಸಿರಾದ; ಹಸಿರು ಬಣ್ಣದ. ~ತ(ದ)ಲೆ = ಆಗತಾನೆ ಕತ್ತರಿಸಿದ ತಲೆ; ಹಸಿಯ ತಲೆ. ~ತ(ದ)ಳಿರ್ = ಹೊಸ ಚಿಗುರು; ಎಳೆಯ ಕುಡಿ. ~ತೊ(ದೊ)ವಲ್(ಲು)=ಹಸಿಯ ಚರ್ಮ.

ಪಂಕ ೧. = ಪಂಖ. ೨. ಕೆಸರು; ಅರಲು. ೩. ಪಾಪ.

ಪಂಕಜ (ನಾ). ಕೆಸರಿನಲ್ಲಿ ಹುಟ್ಟಿದುದು; ತಾವರೆ. ~ಅಕ್ಷ = ವಿಷ್ಣು. ~ಅಸ್ತ್ರ = ಮನ್ಮಥ; ಕಾಮ. ~ಆಕರ = ಕಮಲಗಳಿಗೆ ಆಶ್ರಯವಾದುದು; ಕೊಳ. ~ಆಪ್ತ = ಸೂರ್ಯ. ~ಆಸನ = ಬ್ರಹ್ಮ. ~ವಿಷ್ಟರ = ಕಮಲವನ್ನು ಪೀಠವಾಗಿ ಉಳ್ಳವನು; ಬ್ರಹ್ಮ. ~ವೈರಿ = ಚಂದ್ರ.

ಪಂಕೇರುಹ = ಪಂಕಜ.

ಪಂಕಿಲ(ಳ) (ನಾ). ೧. ಕೆಸರು. (ಗು). ೨. ಕೆಸರಿನಿಂದ ಕೂಡಿದ.

ಪಂಕ್ತಿ (ನಾ). ೧. ಐದರ ಸಾಲು ಅಥವಾ ಗುಂಪು. ೨. ಸಾಲು; ಓಳಿ. ೩. ಗುಂಪು; ತಂಡ. ೪. ಪ್ರಸಿದ್ಧಿ; ಕೀರ್ತಿ. ೫. ಒಂದು ಸಂಖ್ಯೆ; ಹತ್ತು. ೬. ಊಟಕ್ಕೆ ಕುಳಿತಿರುವ ಜನರ ಸಾಲು. ~ಗ್ರೀವ = ಹತ್ತು ತಲೆಗಳುಳ್ಳವನು; ರಾವಣ. ~ಭೇದ = ಪಕ್ಷಪಾತ ಮಾಡುವುದು. ~ರಥ = ದಶರಥ.

ಪಂಖ (ನಾ). ಬೀಸಣಿಗೆ; ಆಲವಟ್ಟ.

ಪಂಗ (ನಾ). ಟಿಚಿಲು; ಕವಲು. ~ನಾಮ = ೧. ಹಣೆಯಲ್ಲಿ ಉದ್ದಕ್ಕೆ, ಕವಲಾಗಿ ಹಾಕುವ ನಾಮ. ೨. ಮೋಸ; ವಂಚನೆ.

ಪಂಗಡ (ನಾ). ಪ್ರತ್ಯೇಕವಾದ ಗುಂಪು, –ಬಣ.

ಪಂಗು (ನಾ). ೧. ದಾಕ್ಷಿಣ್ಯ; ಹಂಗು. ೨. ಕಾಲಿಲ್ಲದವನು; ಹೆಳವ. ೩. ಶನಿಗ್ರಹ. ~ಇಗ = ಹಂಗಿಗೆ ಒಳಗಾದವನು.

ಪಂಗುನಿ (ನಾ). ಫಾಲ್ಗುಣ ಮಾಸ.

ಪಂಚ (ನಾ). ೧. ಐದು ಎಂಬ ಸಂಖ್ಯೆ. ೨. ಪಂಚಾಯಿತಿಯ ಸದಸ್ಯ; ಪಂಚಾಯಿತ. (ಗು). ೩. ವಿಸ್ತಾರವಾದ; ಅಗಲವಾದ. ೪. ಭಯಂಕರವಾದ; ಭಯಾನಕ. ~ಅಂಗ = ೧. ತಿಥಿ, ವಾರ, ನಕ್ಷತ್ರ, ಕರಣ, ಯೋಗ ಇವುಗಳನ್ನು ತಿಳಿಸುವ ಪುಸ್ತಕ. ೨. ಐದು ಅಂಗಗಳನ್ನು ಉಳ್ಳುದು. ೩. ಐದು ಜನರಿಂದ ಕೂಡಿದ. ~ಅಮೃತ = ಹಾಲು, ಮೊಸರು, ತುಪ್ಪ, ಜೇನುತುಪ್ಪ ಮತ್ತು ಸಕ್ಕರೆಗಳ ಮಿಶ್ರಣ. ~ಅಸ್ತ್ರ = ಐದು ಅಸ್ತ್ರಗಳುಳ್ಳವನು; ಮನ್ಮಥ. ~ಆನನ = ೧. ಐದು ಮುಖಗಳುಳ್ಳವನು; ಶಿವ. ೨. ಭಯಂಕರವಾದ ಮುಖವುಳ್ಳುದು; ಸಿಂಹ. ~ಆರತಿ = ಐದು ಕಡೆಗಳಲ್ಲಿ ಬತ್ತಿಗಳನ್ನುಳ್ಳ ದೀಪದ ಆರತಿ. ~ಆಸ್ಯ =ಪಂಚಾನನ. ~ಇಂದ್ರಿಯ = ೧. ಕಣ್ಣು, ಕಿವಿ, ಮೂಗು, ನಾಲಗೆ ಮತ್ತು ಚರ್ಮವೆಂಬ ಐದು ಇಂದ್ರಿಯಗಳು, –ಐದು ಅಂಗಗಳು. ೨. ಶಬ್ದ, ಸ್ಪರ್ಶ, ರಸ, ರೂಪ ಮತ್ತು ಗಂಧವೆಂಬ ಐದು ಇಂದ್ರಿಯ ವಿಷಯಗಳು. ~ಕಜ್ಜಾಯ = ಅವಲಕ್ಕಿ, ಬೆಲ್ಲ, ಕೊಬ್ಬರಿ, ಕಡಲೆ ಮತ್ತು ಎಳ್ಳು ಇವುಗಳಿಂದ ಮಾಡುವ ತಿನಿಸು. ~ಗವ್ಯ = ೧. ಹಸುವಿನ ಹಾಲು, ಮೊಸರು, ತುಪ್ಪ, ಗಂಜಲ ಮತ್ತು ಸಗಣಿ ಎಂಬ ಐದು ವಸ್ತುಗಳು. ೨. ಪ್ರಾಯಶ್ಚಿತ್ತಕ್ಕಾಗಿ ಸೇವಿಸುವ ಈ ಐದು ವಸ್ತುಗಳ ಮಿಶ್ರಣ. ~ದ್ರಾವಿಡ =ಕನ್ನಡ, ತಮಿಳು, ತೆಲುಗು, ತುಳು ಮತ್ತು

ಮಲೆಯಾಳಗಳೆಂಬ ಐದು ಭಾಷೆಗಳು. ~ನಾಮೆ = ಪಂಚಾಯಿತರ ಸಮಕ್ಷಮದಲ್ಲಿ ಸಿದ್ಧಗೊಳಿಸಿದ ವರದಿ; ಮ ಹ ಜ ರು. ~ಪಾತ್ರೆ = ೧. ಪಂಚವಾಳ. ೨. ಅಗಲ ಬಾಯಿಯ ಲೋಹದ ಪಾತ್ರೆ. ~ಪ್ರಾಣ = ೧. ಪ್ರಾಣ, ಉದಾನ, ಸಮಾನ, ವ್ಯಾನ ಮತ್ತು ಅಪಾನಗಳೆಂಬ ಐದು ವಿಧವಾದ ಪ್ರಾಣವಾಯುಗಳು. ೨. ಅತ್ಯಂತ ಪ್ರಿಯವಾದುದು; ಸರ್ವಸ್ವ. ~ಬಾಣ=ಪಂಚಾಸ್ತ್ರ. ~ಭೂತ = ಭೂಮಿ, ಆಕಾಶ, ಅಗ್ನಿ, ಜಲ, ಗಾಳಿ ಎಂಬ ಐದು ಮೂಲವಸ್ತುಗಳು. ~ಮುಖ = ಪಂಚಾನನ.

**ಪಂಚಕ** (ನಾ). ೧. ಐದರ ಗುಂಪು, -ಸಮೂಹ. ೨. ಯುದ್ಧರಂಗ; ಕಣ.

**ಪಂಚತೆ** (ನಾ). ೧. ಐದು ವಸ್ತುಗಳಿಂದ ಕೂಡಿದುದು; ಪಂಚಭೂತಗಳಿಂದ ಕೂಡಿದುದು. ೨. ಸಾವು; ಮರಣ.

**ಪಂಚತ್ವ** = ಪಂಚತೆ.

**ಪಂಚಮ** (ನಾ). ೧. ಚಂಡಾಲ; ಹೊಲೆಯ. ೨. = ಪಂಚಮಸ್ವರ. (ಗು). ೩. ಐದನೆಯ. ~ಸ್ವರ = ಸಂಗೀತದ ಸಪ್ತ ಸ್ವರಗಳಲ್ಲಿ ಐದನೆಯದು.

**ಪಂಚಮಿ** (ನಾ). ೧. ಪಕ್ಷದ ಐದನೆಯ ದಿನ. ೨. ಒಂದು ವಿಭಕ್ತಿಯ ಹೆಸರು. ೩. ಚದುರಂಗದಾಟದ ಮಣೆ, -ಹಲಗೆ.

**ಪಂಚವಾಳ** (ನಾ). ಐದು ಬಟ್ಟಲುಗಳನ್ನು ಸೇರಿಸಿ ಮಾಡಿದ ಒಂದು ಬಗೆಯ ಪಾತ್ರೆ.

**ಪಂಚಾಯಿತ** (ನಾ). ಪಂಚಾಯಿತಿಯ ಸದಸ್ಯ; ಪಂಚ.

**ಪಂಚಾಯಿತಿ** (ನಾ). ೧. ನ್ಯಾಯ ನಿರ್ಣಯಕ್ಕೆ ರಚಿತವಾದ ಐದು ಜನರ ಸಮಿತಿ. ೨. ವ್ಯಾಜ್ಯವನ್ನು ಮಧ್ಯಸ್ಥಿಕೆಯ ಮೂಲಕ ತೀರ್ಮಾನ ಮಾಡಿಕೊಳ್ಳುವಿಕೆ. ೩. ಅನವಶ್ಯಕವಾದ ಗಲಾಟೆ, -ಗೊಂದಲ.

**ಪಂಚು** (ಕ್ರಿ). ೧. ಹಂಚು; ವಿಭಾಗಿಸು. (ನಾ). ೨. ಭಾಗ; ಪಾಲು. ೩. ಹಂಚಿಕೆ; ಹಂಚುವುದು. ೪. ಹೆಂಚು. ೫. ಕಾವಲಿ; ಓಡು; ತವೆ. ~ಇಕೆ = ೧. ಹಂಚಿಕೆ. ೨. ಪದ ವಿಭಾಗ.

**ಪಂಚೆ** (ನಾ). ಉಡುವ ವಸ್ತ್ರ; ದೋತರ.

**ಪಂಚೇರು** (ನಾ). ಐದು ಸೇರು.

**ಪಂಜ** (ನಾ). ಬೆಕ್ಕು ಮುಂತಾದ ಪ್ರಾಣಿಗಳ ಉಗುರುಸಹಿತವಾದ ಅಂಗಾಲು.

**ಪಂಜರ** (ನಾ). ೧. ಹಕ್ಕಿ, ಪ್ರಾಣಿ ಮುಂತಾದುವುಗಳನ್ನು ಇಡುವ ಗೂಡು; ಹಂಜರ. ೨. ಅಸ್ಥಿಪಂಜರ. ೩. = ಪಂಜ.

**ಪಂಜಾ** ೧. = ಪಂಜ. ೨. ಮುಸ್ಲಿಮರು ಮೊಹರಂ ಹಬ್ಬದಲ್ಲಿ ಪೂಜಿಸುವ ಹಸ್ತಗಳು.

**ಪಂಜಾರ** (ನಾ). ಒಂದು ಬಗೆಯ ಸಿಹಿತಿಂಡಿ.

**ಪಂಜಿ** (ನಾ). ೧. ಹತ್ತಿಯ ಉಂಡೆ; ಪಂಜಿ. ೨. ಪಂಚಾಂಗ. ೩. ದಿನಚರಿ ಪುಸ್ತಕ.

**ಪಂಜು** (ನಾ). ದೀವಟಿಗೆ; ಪತ್ತು; ಕೈಗೊಳ್ಳಿ. ~ಕ(ಗ)ಳ್ಳ = ದೀವಟಿಗೆಯನ್ನು ಹೊತ್ತಿಸಿಕೊಂಡು ಕಳ್ಳತನಕ್ಕೆ ಬರುವವನು.

**ಪಂಜೆ** (ನಾ). ೧. ದುರ್ಬಲ; ಶಕ್ತಿಯಿಲ್ಲದವನು. ೨. ದರಿದ್ರ; ಬಡವ. ೩. ಹೇಡಿ; ಅಂಜುಕುಳಿ. ೪. = ಪಂಜೆ. (ಗು). ೫. ದುರ್ಬಲವಾದ; ಅಶಕ್ತ.

**ಪಂಟ** (ನಾ). ಊಟ; ಭೋಜನ.

**ಪಂಟಿಗೆ** (ನಾ). ಊಟದ ಎಲೆ.

**ಪಂಟಿಸು** (ಕ್ರಿ). ೧. ಸುತ್ತುವರಿ. ೨. ಎದುರಿಸು; ಪ್ರತಿಭಟಿಸು.

**ಪಂಟು** (ನಾ). ೧. ಒಣಮಾತು; ಅಸಂಬದ್ಧ ಪ್ರಲಾಪ; ಹರಟೆ. ೨. ಜಂಬದ ಮಾತು; ಬಡಾಯಿ. ~ಬಡಿ = ೧. ಅರ್ಥವಿಲ್ಲದ ಮಾತನ್ನು ಆಡು; ಹರಟೆ ಕೊಚ್ಚು. ೨. ಬಡಾಯಿ ಕೊಚ್ಚು.

**ಪಂಟೆ** (ನಾ). ರೆಂಬೆ; ಗೆಲ್ಲು.

ಪಂಡ (ನಾ). ೧. ನಪುಂಸಕ; ಷಂಡ. ೨. ಕ್ಷೇತ್ರ ಪುರೋಹಿತ.

ಪಂಡಿತ (ನಾ). ೧. ವಿದ್ವಾಂಸ; ಜ್ಞಾನಿ. ೨. ವೈದ್ಯ. ~ಇಕೆ(ಕ್ಕೆ) = ಪಾಂಡಿತ್ಯ; ವಿದ್ವತ್ತು. ~ಪ(ವ)ಕ್ಕಿ = ಮಾತನಾಡುವ ಹಕ್ಕಿ; ಗಿಳಿ.

ಪಂತ ೧. = ಪಂದ್ಯ. ೨. ಪ್ರತಿಜ್ಞೆ; ಸಂಕಲ್ಪ. ೩. ಪಂಗಡ. ೪. ಪಂಡಿತ; ಜ್ಞಾನಿ. ೫. = ಪಂತೋಜಿ. ~(ಂ)ಕ(ಗ)ಟ್ಟು = ೧. ಪಣವನ್ನು ಒಡ್ಡು; ಬಾಜಿಕಟ್ಟು. ೨. ಸೆಣಸಲು ಸಿದ್ಧವಾಗು. ೩. ಪ್ರತಿಜ್ಞೆ ಮಾಡು.

ಪಂತಿ = ಪಂಕ್ತಿ.

ಪಂತೋಜಿ (ನಾ). ಶಾಲೆಯ ಉಪಾಧ್ಯಾಯ; ಶಾಲಾಶಿಕ್ಷಕ.

ಪಂಥ (ನಾ). ೧. ಪ್ರತಿಜ್ಞೆ; ಶಪಥ. ೨. ಸ್ಪರ್ಧೆ; ಜಿದ್ದು. ೩. ದಾರಿ; ಮಾರ್ಗ.

ಪಂದರ್ (ನಾ). ಚಪ್ಪರ; ಹಂದರ. ~ಇಸು = ಚಪ್ಪರವನ್ನಾಗಿ ಮಾಡು.

ಪಂದರ = ಪಂದರ್.

ಪಂದಲ್(ಲು) = ಪಂದರ್.

ಪಂದಿ (ನಾ). ಹಂದಿ; ವರಾಹ. ~ತ(ದ)ಲೆ = ೧. ಹಂದಿಯ ತಲೆ. ೨. ಒಂದು ಬಗೆಯ ಆಯುಧ.

ಪಂದೆ (ನಾ). ಹೇಡಿ; ಅಂಜುಬುರುಕ; ಹಂದೆ.

ಪಂದ್ಯ (ನಾ). ೧. ಸ್ಪರ್ಧೆ; ಪೈಪೋಟಿ. ೨. ಪಣ; ಜೂಜು; ಬಾಜಿ. ~ಕಟ್ಟು = ಪಣವನ್ನು ಒಡ್ಡು; ಬಾಜಿಕಟ್ಟು.

ಪಂಬಲ್(ಲು) (ನಾ). ತೀವ್ರವಾದ ಆಸೆ; ಹೆಬ್ಬಯಕೆ; ಹಂಬಲು. ~ಇಸು = ಉತ್ಕಟವಾಗಿ ಆಶಿಸು; ಹಂಬಲಿಸು.

ಪಂಬಲ = ಪಂಬಲ್.

ಪಂಸೆ (ನಾ). ಒಂದು ಜಾತಿಯ ಜಲಚರಪಕ್ಷಿ; ಹಂಸೆ.

ಪಕಳೆ (ನಾ). (ಹೂವಿನ) ದಳ, -ಎಸಳು; ರೇಕು.

ಪಕಾಲಿ (ನಾ). ಎತ್ತಿನಮೇಲೆ ನೀರು ಸಾಗಿಸಲು ಉಪಯೋಗಿಸುವ ಚರ್ಮದ ಚೀಲ.

ಪಕಾಸಿ (ನಾ). ದೂಲ; ಜಂತೆ.

ಪಕಾಸು = ಪಕಾಸಿ.

ಪಕೋಡ (ನಾ). ಒಂದು ಬಗೆಯ ಕರಿದ ತಿಂಡಿ.

ಪಕ್ಕ (ನಾ). ೧. ರೆಕ್ಕೆ; ಗರಿ. ೨. ಬದಿ; ಮಗ್ಗುಲು; ಪಕ್ಕೆ. ೩. ಸಾಮೀಪ್ಯ; ಸನಿಹ. ೪. ಬೆಂಬಲ; ಒತ್ತಾಸೆ. ೫. ಹದಿನೈದು ದಿವಸ; ಪಕ್ಷ. ೬. ಹುಣಿಸೆಬೀಜ. ೭. ಬಣ; ಪಂಗಡ. ~ಕೊ(ಗೊ)ಳ್ = ಪಕ್ಷವಹಿಸು; ಬೆಂಬಲಿಸು. ~ರಕ್ಕೆ = ಪಕ್ಕರೆ. ~ವಾದ್ಯ = ಗಾಯಕನೊಂದಿಗೆ ನುಡಿಸುವ ವಾದ್ಯಗಳು.

ಪಕ್ಕಡಿ (ನಾ). ಎದೆಯ ಕೆಳಗಿನ ಎರಡು ಮಗ್ಗುಲು; ಪಕ್ಕೆ.

ಪಕ್ಕಣ (ನಾ). ಬೇಡರು ವಾಸಿಸುವ ಹಳ್ಳಿ.

ಪಕ್ಕರಿಕೆ = ಪಕ್ಕರೆ.

ಪಕ್ಕರೆ (ನಾ). ಆನೆ, ಕುದುರೆಗಳ ಪಕ್ಕವನ್ನು ರಕ್ಷಿಸುವ ಸಾಧನ; ಹಕ್ಕರಿಕೆ.

ಪಕ್ಕಲೆ (ನಾ). ೧. ಒಂದು ಬಗೆಯ ಪಾತ್ರೆ. ೨. = ಪಕಾಲಿ.

ಪಕ್ಕಾ (ಗು). ೧. ಸಂಪೂರ್ಣವಾದ; ಸ್ಪಷ್ಟವಾದ. ೨. ಸಮರ್ಥನಾದ; ನುರಿತ. ೩. ಶುದ್ಧವಾದ; ಅಪ್ಪಟ; ಉತ್ತಮವಾದ.

ಪಕ್ಕಿ (ನಾ). ಹಕ್ಕಿ; ಪಕ್ಷಿ ~ಎ(ಯೆ)ಱೆ(ರೆ)ಯ = ಹಕ್ಕಿಗಳ ರಾಜ; ಗರುಡ.

ಪಕ್ಕಿದೇರ (ನಾ). ಗರುಡನನ್ನು ವಾಹನವಾಗಿ ಉಳ್ಳವನು; ವಿಷ್ಣು.

ಪಕ್ಕು (ನಾ). ೧. ಪಕ್ಕ; ರೆಕ್ಕೆ. ೨. ಆಶ್ರಯ; ನೆಲೆ. ೩. ಗುರಿ. ೪. ಆಸ್ಪದ; ಅವಕಾಶ. ೫. ಪಕ್ಕು; ಬಾಧ್ಯತೆ. ೬. ಪಕ್ವತೆ;

ಹದವಾದುದು. ~ಆಗು =೧. ಗುರಿಯಾಗು. ೨. ಪಕ್ವವಾಗು; ಮಾಗು. ~ಕಾ(ಗಾ)ಣ್ =ಹಕ್ಕನ್ನು ಪಡೆದುಕೊಳ್ಳು. ~ಕು(ಗು)ಡು = ಬೆಂಬಲಿಸು; ಪ್ರೋತ್ಸಾಹಿಸು. ~ಪಾ(ವಾ)ರ್ =ಸಹಾಯಕ್ಕಾಗಿ ಎದುರು ನೋಡು; ನೆರವಿಗಾಗಿ ನಿರೀಕ್ಷಿಸು.

ಪಕ್ಕುವಣಿ (ನಾ). ಬಂಧು; ನೆಂಟ.

ಪಕ್ಕೂವಣಿ = ಪಕ್ಕುವಣಿ.

ಪಕ್ಕೆ ೧. = ಪಟ್ಕೆ. ೨. ಆಶ್ರಯ; ನೆಲೆ; ಹಕ್ಕೆ. ೩. ಪಾರ್ಶ್ವ; ಪಕ್ಕಡಿ. ೪. ಗುರುತು; ಚಿಹ್ನೆ. ೫. ಹಸುಗಳ ಹಿಂಡು; ತುರುಮಂದೆ. ~ಮ(ವ)ನೆ = ಶಯ್ಯಾಗೃಹ; ಮಲಗುವ ಮನೆ.

ಪಕ್ವ (ಗು). ೧. ಚೆನ್ನಾಗಿ ಬೆಂದ. ೨. ಜೀರ್ಣವಾದ; ಜೀರ್ಣಿಸಿದ. ೩. ಮಾಗಿದ; ಕಳಿತ; ಹದವಾದ. ೪. ಪಳಗಿದ; ಸಿದ್ಧಿಪಡೆದ. ೫. ನಾಶವನ್ನು ಸಮೀಪಿಸಿದ. ~ಅನ್ನ =೧ ಬೇಯಿಸಿದ ಆಹಾರ. ೨. ಒಂದು ಬಗೆಯ ಸಿಹಿ ಭಕ್ಷ್ಯ.

ಪಕ್ಷ (ನಾ). ೧. ರೆಕ್ಕೆ; ಗರಿ; ಪಕ್ಕ. ೨. ಬಾಣದ ಗರಿ; ಪುಂಖ. ೩. ಮಗ್ಗುಲು; ಬದಿ; ಕರೆ. ೪. ಪಂಗಡ; ಬಣ. ೫. ಹತ್ತಿರ; ಸಾಮೀಪ್ಯ. ೬. ಹದಿನೈದು ದಿನಗಳ ಕಾಲ. ೭. ಸಮೂಹ; ಗುಂಪು. ~ಅಂತರ = ೧. ಬೇರೊಂದು ಪಕ್ಕ, -ಮಗ್ಗುಲು. ೨. ಒಂದು ಪಂಗಡದಿಂದ ಮತ್ತೊಂದು ಪಂಗಡಕ್ಕೆ ಸೇರುವುದು. ~ಪಾತ=೧. ಭೇದಭಾವ. ೨. ರೆಕ್ಕೆ ಬಡಿಯುವುದು. ~ಭೇದ = ೧. ಎರಡು ಬಣಗಳ ನಡುವಿನ ವೈಷಮ್ಯ. ೨. ಪಕ್ಷಪಾತ; ಭೇದಭಾವ. ~ವಾತ = ಪಾರ್ಶ್ವವಾಯು; ಲಕ್ವ.

ಪಕ್ಷಿ (ನಾ). ರೆಕ್ಕೆಯುಳ್ಳುದು; ಹಕ್ಕಿ. ~ರಾಜ = ಪಕ್ಷಿಗಳ ಒಡೆಯ; ಗರುಡ. ~ವಾಹನ = ಪಕ್ಕಿದೇರ.

ಪಕ್ಷ್ಮ (ನಾ). ೧. ರೆಕ್ಕೆ; ಗರಿ. ೨. ಕಣ್ಣಿನ ರೆಪ್ಪೆ; ಎವೆ. ೩. ಹೂವಿನ ಕೇಸರ, -ತಂತು. ೪. ತೆಳುವಾದ ದಾರ, -ಎಳೆ.

ಪಗಂಡು (ನಾ). ೧. ಎದ್ದು ಕಾಣುವಿಕೆ; ಪ್ರಕಟವಾಗುವಿಕೆ. ೨. ಹಬ್ಬುವಿಕೆ. ~ಇಱು(ರಿ) = ೧. ಎದ್ದುಕಾಣು; ಪ್ರಕಟವಾಗು. ೨. ಹಬ್ಬು; ವ್ಯಾಪಿಸು.

ಪಗಡದಸ್ತು = ಪಗದಸ್ತು.

ಪಗಡಿ (ನಾ). ೧. ಪಾಗು; ರುಮಾಲು. ೨. ಸದಭಿಪ್ರಾಯ ಸಂಪಾದನೆಗಾಗಿ ಕೊಡುವ ಹಣ.

ಪಗಡೆ (ನಾ). ೧. ಒಂದು ಜಾತಿಯ ಮರ. ೨. ಲೆತ್ತದ ಆಟ; ಜೂಜು. ೩. ಲೆತ್ತದಾಟದಲ್ಲಿ ಉಪಯೋಗಿಸುವ ದಾಳ ಮತ್ತು ಅದರ ಮೇಲಿರುವ ಗುರುತು. ~ಪಾ(ವಾ)ಸು = ಪಗಡೆಯಾಟದ ಹಾಸಂಗಿ.

ಪಗದಸ್ತು (ಗು). ೧. ಹಿಂದೆಗೆಯಲು ಬಾರದ. ೨. ಪುಷ್ಕಳ; ಪೊಗದಸ್ತು; ಭರ್ಜರಿಯಾದ.

ಪಗದಿ = ಪೊಗದಿ.

ಪಗರಣ (ನಾ). ೧. ನಾಟಕಗಳಲ್ಲಿ ಒಂದು ಭೇದ. ೨. ನಟನೆ; ಸೋಗು. ೩. ಗೊಂದಲ; ಹಗರಣ; ಗಲಾಟೆ; ತರಲೆ. ~ಇಗ = ಅಭಿನಯಿಸುವವನು; ನಟ.

ಪಗಲ್(ಲು) (ನಾ). ಹಗಲು; ದಿನ. ~ಅಣ್ಮ = ಸೂರ್ಯ. ~ಪ(ವ)ಕ್ಕಿ = ಚಕ್ರವಾಕ ಪಕ್ಷಿ.

ಪಗಾರ (ನಾ). ಸಂಬಳ; ವೇತನ.

ಪಗಿನ್(ನು) = ಪಗಿನ.

ಪಗಿನ (ನಾ). ಮರಗಳಿಂದ ಸ್ರವಿಸುವ ಜಿಗುಟಾದ ದ್ರವ; ಅಂಟು; ಹಗಿನ.

ಪಗಿಲ್ (ಕ್ರಿ). ೧. ಅಂಟಿಕೊಳ್ಳು; ಹತ್ತಿಕೊಳ್ಳು. ೨. ವೇದನೆಪಡು; ಸಂಕಟಪಡು.

ಪಗೆ (ನಾ). ೧. ಶತ್ರುತ್ವ; ಹಗೆತನ. ೨.= ಪಗೆವ.

ಪಗೆವ (ನಾ). ಶತ್ರು ; ವೈರಿ ; ಹಗೆ.

ಪಗೆವು (ನಾ). ಹಗೇವು ; ಕಣಜ.

ಪಗೋಡ (ನಾ). ಬೌದ್ಧರ ದೇವಾಲಯ.

ಪಗೋಡಾ (ನಾ). ಒಂದು ಬಗೆಯ ನಾಣ್ಯ.

ಪಚಡಿ (ನಾ). ಹಸಿಯ ತರಕಾರಿಗಳಿಂದ ಮಾಡುವ ಒಂದು ಬಗೆಯ ವ್ಯಂಜನ ಪದಾರ್ಥ.

ಪಚನ (ನಾ). ೧. ಅಡುಗೆ ಮಾಡುವುದು ; ಬೇಯಿಸುವುದು. ೨. ಅರಗಿಸುವುದು ; ಜೀರ್ಣಿಸುವುದು. ೩. ಬೆಂಕಿ ; ಅಗ್ನಿ. ೪. ಬೇಯಿಸುವ ಉಪಕರಣ ; ಬಾಣಲೆ. ~(ಂ)ಕೆ(ಗೆ)ಯ್ = ಬೇಯಿಸು ; ಪಕ್ವಗೊಳಿಸು. ~ಕಾರ್ಯ = ೧. ಅಡುಗೆಯ ಕೆಲಸ. ೨. ಜೀರ್ಣಕಾರ್ಯ ; ಅರಗುವಿಕೆ.

ಪಚಾರ (ನಾ). ಮೂದಲಿಸುವಿಕೆ; ಅವಹೇಳನ. ~ಇಸು = ೧. ಹೀಯಾಳಿಸು ; ನಿಂದಿಸು. ೨. ಎಚ್ಚರಿಸು.

ಪಚಿಸು (ಕ್ರಿ). ೧. ಸುಡು ; ಬೇಯಿಸು. ೨. ಜೀರ್ಣವಾಗು ; ಅರಗು.

ಪಚ್ಚೆ (ನಾ). ೧. ಹಸಿರು ಬಣ್ಣ. ೨. ಶೃಂಗಾರ; ಅಲಂಕಾರ. ೩. ಆಭರಣ ; ಒಡವೆ. ೪. ಉಡುಪು ; ಬಟ್ಟೆ. (ಗು). ೫. ಹಸಿಯಾದ ; ಆರ್ದ್ರವಾದ. ೬. ಅಪಕ್ವವಾದ ; ಎಳೆಯ. ೭. ಹಚ್ಚನೆಯ ; ಹಸಿರಾದ ~ಅಡಕೆ = ಹಸಿಯ ಅಡಕೆ. ~ಕರ್ಪೂರ = ಒಂದು ಬಗೆಯ ಕರ್ಪೂರ. ~ಗಾಱ(ರ) = ವಸ್ತ್ರಾಲಂಕಾರ ಮಾಡುವವನು. ~ಪಸಿ = ಅತ್ಯಂತ ಹಸಿಯಾದುದು. ~ಬಾಳೆ = ಬಾಳೆಯಲ್ಲಿ ಒಂದು ಜಾತಿ.

ಪಚ್ಚಡ (ನಾ). ಹೊದಿಕೆ; ಹಚ್ಚಡ; ದುಪ್ಪಟಿ. ~ಇಸು = ೧. ಹಚ್ಚಡವನ್ನು ಹೊದಿಸು. ೨. ವಸ್ತ್ರಾಲಂಕಾರ ಮಾಡು.

ಪಚ್ಚಡಿ = ಪಚಡಿ.

ಪಚ್ಚವಡ = ಪಚ್ಚಡ.

ಪಚ್ಚಳ (ನಾ). ೧. ನಿತಂಬ. ೨. ತೊಳೆಯುವಿಕೆ; ಪ್ರಕ್ಷಾಲನ. (ಗು). ೩. ನಡುಗುವ ; ಅಲ್ಲಾಡುವ.

ಪಚ್ಚಿ (ನಾ). ೧. ಹೋಳು ; ಭಾಗ ; ಅಂಶ. ೨. ನುಚ್ಚು ; ಸಣ್ಣ ಪುಡಿ. ೩. ರತ್ನಗಳನ್ನು ಚಿನ್ನದಲ್ಲಿ ಕೆಚ್ಚುವಿಕೆ.

ಪಚ್ಚು (ಕ್ರಿ). ೧. ಭಾಗ ಮಾಡು ; ಪಾಲು ಮಾಡು. ೨. ಪಿಸುಮಾತನಾಡು. (ನಾ). ೩. ಭಾಗ; ಪಾಲು. ೪. ಬೆಸುಗೆ. ೫. ಗುಳಿ; ತಗ್ಗು. ~ಅೞಿ(ಳಿ) = ಬೆಸುಗೆ ಇಲ್ಲದಂತಾಗು; ಸಂಬಂಧವನ್ನು ಕಳೆದುಕೊಳ್ಳು. ~ಕು(ಗು)ಡು=ಹಂಚಿಕೊಡು; ವಿಭಾಗಿಸು. ~ಗಂಟು = ಕೂದಲನ್ನು ಎರಡು ಭಾಗ ಮಾಡಿ ಹಾಕಿದ ಗಂಟು. ~ನುಡಿ = ಪಿಸುಮಾತು ; ಗುಟ್ಟಿನ ಮಾತು.

ಪಚ್ಚುಗೆ (ನಾ). ೧. ಗುಟ್ಟು ; ರಹಸ್ಯ. ೨. ಏಕಾಂತ ಸ್ಥಳ; ಗುಪ್ತಸ್ಥಳ.

ಪಚ್ಚೆ (ನಾ). ೧. ಹಸಿರು ಬಣ್ಣ. ೨. ಎಳೆಯ ಚಿಗುರು, ಧಾನ್ಯ ಮುಂತಾದುವು ಮತ್ತು ಅವುಗಳ ಬಣ್ಣ. ೩. ಎಳೆಯದು ; ಬಲಿಯದುದು. ೪. ನವರತ್ನಗಳಲ್ಲಿ ಒಂದು ; ಮರಕತ. ೫. ಕರ್ಪೂರ. ೬. ಕಳಿಲೆ ; ಎಳೆಯ ಬಿದಿರು. ೭. ಮೈಮೇಲೆ ಹಾಕಿಸಿಕೊಳ್ಳುವ ಹಸಿರುಗುರುತು; ಹಚ್ಚೆ. ೮. ವಸ್ತ್ರಾಲಂಕಾರ. ೯. ಕುಂಬಳಕಾಯಿ ಮುಂತಾದುವುಗಳ ಮೇಲಿನ ಸಿಪ್ಪೆ. ~ಕ(ಗ)ಬ್ಬಿನ = ಎಲೆ ಹಸಿರು ಬಣ್ಣದ ಲೋಹ ; ಚಿನ್ನ. ~ತೆನೆ = ಒಂದು ಜಾತಿಯ ಸುವಾಸನೆಯ ಗಿಡ ಮತ್ತು ಅದರಲ್ಲಿ ಬಿಡುವ ತೆನೆ. ~ತೊ(ದೊ)ರಣ = ಚಿಗುರುಗಳಿಂದ ಮಾಡಿದ ತೋರಣ.

ಪಜ್ಜ (ನಾ). ೧. ಶೂದ್ರ. ೨. ಅಜ್ಜನ ತಂದೆ ; ಮುತ್ತಜ್ಜ.

**ಪಜ್ಜಲ(ಳ)** (ನಾ). ೧. ಪ್ರಕಾಶ; ಹೊಳಪು. (ಗು). ೨. ಹೊಳೆಯುವ; ಪ್ರಜ್ವಲಿಸುವ. **~ಇಸು** = ಪ್ರಜ್ವಲಿಸು; ಪ್ರಕಾಶಿಸು.

**ಪಜ್ಜೆ** (ನಾ). ೧. ಹೆಜ್ಜೆ; ಪಾದ. ೨. ಹೆಜ್ಜೆಯ ಗುರುತು. **~ಕಾಜ(ರ)** = ಬೇಹಿನವನು; ಗೂಢಚಾರ. **~ಪಿ(ವಿ)ಡಿ** = ಸುಳಿವು ಹಿಡಿ; ಜಾಡು ಹಿಡಿ. **~ಬ(ವ)ಟ್ಟೆ** = ಕಾಲುದಾರಿ.

**ಪಟ** (ನಾ). ೧. ಬಟ್ಟೆ; ವಸ್ತ್ರ. ೨. ಉತ್ತಮವಾದ ಬಟ್ಟೆ; ರೇಷ್ಮೆವಸ್ತ್ರ. ೩. ಧ್ವಜ; ಬಾವುಟ. ೪. ತೆರೆ; ಪರದೆ. ೫. ಶಾಸನ, ಚಿತ್ರ ಮೊದಲಾದುವುಗಳನ್ನು ಬರೆಯಲು ಉಪಯೋಗಿಸುವ ಬಟ್ಟೆ ಅಥವಾ ತಗಡು. ೬. ಚಾವಣಿ; ಮಾಡು. ೭. ಗಾಳಿಪಟ. ೮. ದೋಣಿಯ ಹಾಯಿ. ೯. ಚಿತ್ರ. ೧೦. ಭೂಪಟ; ನಕ್ಷೆ. ೧೧. ಚದುರಂಗ ಮೊದಲಾದ ಆಟದ ಮಣೆ. **~ಅಂಗಣ** = ಮನೆಯ ಜಗುಲಿಗೆ ಹೊಂದಿಕೊಂಡಂತೆ ಇರುವ ಅಂಗಳ. **~ಕಾ(ಗಾ)ಱ(ರ)** =ಗಾಳಿಪಟವನ್ನು ಆಡಿಸುವವನು. **~ಕುಟಿ** =ಪಟಮಂದಿರ. **~ಮಂದಿರ** = ಗುಡಾರ; ಡೇರೆ. **~ವಾಸ** = ೧. ಪಟಮಂದಿರ. ೨. ಹೆಂಗಸರು ತೊಡುವ ಒಳ ಉಡುಪು; ಒಳಪಾವುಡೆ. ೩. ಪರಿಮಳದ ಪುಡಿ; ಸುವಾಸನೆಯುಳ್ಳ ಹುಡಿ. **~ಸಾಲೆ** = ೧. ಪಡಸಾಲೆ; ನಡುಮನೆ. ೨. ಜಗಲಿ; ಮನೆಯ ಮುಂದಿನ ಕಟ್ಟೆ. **~ಸ್ತಂಭ** = ಹಡಗಿನ ಕೂವೆಕಂಬ.

**ಪಟಿಕ** (ನಾ). ೧. ನೀರನ್ನು ಶುದ್ಧಿಮಾಡುವ ಒಂದು ಲವಣ; ಪಟಿಕ. ೨. ಹತ್ತಿಯ ಬಟ್ಟೆ. ೩. ತಲೆಗೆ ಸುತ್ತುವ ಮುಂಡಾಸು. ೪. ಬೀಡು; ಪಾಳೆಯ.

**ಪಟಿಕಾರ** (ನಾ). ೧. ಬಟ್ಟೆ ನೇಯುವವನು; ನೇಕಾರ. ೨. ಚಿತ್ರಗಾರ. ೩. ನೀರನ್ನು ಶುದ್ಧಿಮಾಡುವ ಒಂದು ವಸ್ತು; ಪಟಿಕ.

**ಪಟಕಾರು** (ನಾ). ಇಕ್ಕುಳ; ತಂಡಸ.

**ಪಟಚ್ಚರ** (ನಾ). ೧. ಕಳ್ಳ. ೨. ಹಳೆಯ ಬಟ್ಟೆ; ಚಿಂದಿಬಟ್ಟೆ.

**ಪಟಲ(ಳ)** (ನಾ). ೧. ಚಾವಣಿ; ಮಾಳಿಗೆ. ೨. ತೆರೆ; ಪರದೆ. ೩. ಕಣ್ಣಿನ ಪೊರೆ. ೪. ಗುಂಪು; ಸಮೂಹ. ೫. ಬುಟ್ಟಿ; ಕುಕ್ಕೆ. ೬. ಭಾವಚಿತ್ರವನ್ನು ತೆಗೆಯಲು ಉಪಯೋಗಿಸುವ ಸಾಧನ. ೭.=ಪಟೋಲ. ೮. ದಳ; ಪಕಳೆ.

**ಪಟಲಕ** ೧.=ಪಟಲಿಕೆ. ೨. ಹೂಜಿ. ೩. ಗುಂಪು; ಸಮೂಹ. ೪. ಗೌಸು; ಹೊದಿಕೆ; ಮುಸುಕು.

**ಪಟಲಿಕೆ** (ನಾ). ಒಂದು ಬಗೆಯ ಬುಟ್ಟಿ, —ಗೂಡೆ.

**ಪಟಹ** (ನಾ). ಒಂದು ಬಗೆಯ ಚರ್ಮವಾದ್ಯ; ನಗಾರಿ.

**ಪಟಾಕಿ** (ನಾ). ಪಟಾಸು; ಗರ್ನಾಲು.

**ಪಟಾಕ್ಷಿ** = ಪಟಾಕಿ.

**ಪಟಾಯಿಸಿತ** (ಗು). ನುರಿತ; ಕುಶಲ; ಜಾಣ.

**ಪಟಾಯಿಸು** (ಕ್ರಿ). ಮನಗಾಣಿಸು; ತಿಳಿಸು.

**ಪಟಾಲಂ** (ನಾ). ದಂಡು; ದಳ; ಗುಂಪು.

**ಪಟಾವಳಿ** (ನಾ). ೧. ಪಟ್ಟೆಗಳುಳ್ಳದು. ೨. ರೇಷ್ಮೆವಸ್ತ್ರ. **~ಕಬ್ಬು** = ಪಟ್ಟೆಗಳಿರುವ ಒಂದು ಜಾತಿಯ ಕಬ್ಬು.

**ಪಟಾಸು** = ಪಟಾಕಿ.

**ಪಟಿ** (ನಾ). ೧. ಒಂದು ಬಗೆಯ ಬಟ್ಟೆ; ಒರಟುಬಟ್ಟೆ. ೨. ಬಣ್ಣದ ಬಟ್ಟೆ. ೩. ತೆರೆ; ಪರದೆ.

**ಪಟಿಂಗ** = ಫಟಿಂಗ.

**ಪಟಿಕ** (ನಾ). ೧. ಹಳುಕು. ೨. ನೀರನ್ನು ಶುದ್ಧಿಮಾಡುವ ಒಂದು ಲವಣ; ಸ್ಫಟಿಕ

**ಪಟೀರ** (ನಾ). ೧. ಶ್ರೀಗಂಧ; ಚಂದನ. ೨. ಕಾಮ; ಮನ್ಮಥ. ೩. ಹೊಟ್ಟೆ; ಉದರ. ೪. ಹೊಲ; ಕ್ಷೇತ್ರ. ೫. ಮೋಡ; ಮುಗಿಲು

೬. ಎಳೆಯ ಬಿದಿರು ; ಕಳಿಲೆ. ೭. ಚೆಂಡು. ೮. ಎತ್ತರ ; ಔನ್ನತ್ಯ. ೯. ಸಂಧಿವಾತ. ೧೦. ಖದಿರ ; ಕಾಚು. ೧೧. ಜರಡಿ ; ಸಾರಣಿಗೆ.

ಪಟು (ಗು). ೧. ಬಲಿಷ್ಠವಾದ. ೨. ಉಗ್ರ ; ತೀಕ್ಷ್ಣ. ೩. ಚಟುವಟಿಕೆಯಿಂದ ಕೂಡಿದ ; ಚುರುಕಾದ. ೪. ಸಮರ್ಥವಾದ ; ದಕ್ಷ. ೫. ಹರಿತವಾದ ; ಮೊನಚಾದ. ೬. ವಿಸ್ತಾರ ವಾದ ; ದೊಡ್ಡ. ೭. ನಿಂದನೀಯವಾದ ; ತಿರಸ್ಕಾರಸೂಚಕವಾದ. ~ಭಟ =ಸಮರ್ಥ ನಾದ ಯೋಧ ; ಪರಾಕ್ರಮಿ. ~ಮತಿ = ಸಾಮರ್ಥ್ಯ ; ಬುದ್ಧಿವಂತಿಕೆ. ೨. ಬುದ್ಧಿ ಶಾಲಿ. ~ಮಾಡು = ಹುರಿಗೊಳಿಸು ; ಹುರಿ ದುಂಬಿಸು.

ಪಟುತ್ವ (ನಾ). ಸಾಮರ್ಥ್ಯ ; ದಕ್ಷತೆ.

ಪಟೇಲ (ನಾ). ಗ್ರಾಮದ ಮುಖ್ಯಾಧಿಕಾರಿ.

ಪಟೋಲ (ನಾ). ಪಡವಲ ಬಳ್ಳಿ ಮತ್ತು ಅದರ ಕಾಯಿ.

ಪಟ್ಟ (ನಾ). ೧. ಬಣ್ಣದ ಅಥವಾ ರೇಷ್ಮೆಯ ವಸ್ತ್ರ. ೨. ಪಟ್ಟಾಭಿಷೇಕದ ಸಮಯದಲ್ಲಿ ಹಣೆಯ ಮೇಲೆ ಧರಿಸುವ ಆಭರಣ. ೩. ನಾಲ್ಕು ರಸ್ತೆಗಳು ಕೂಡುವ ಜಾಗ ; ಚೌಕ. ೪. ಸಿಂಹಾಸನ ; ಗದ್ದುಗೆ. ೫. ಶಾಸನ, ಚಿತ್ರ ಮೊದಲಾದುವುಗಳನ್ನು ಬರೆಯಲು ಉಪಯೋಗಿಸುವ ಬಟ್ಟೆ, ತಗಡಿನ ಹಾಳೆ ಮುಂತಾದುವು. ೬. ಅಧಿ ಕಾರ ; ಪದವಿ. ೭. ಹನ್ನೆರಡು ವರ್ಷಗಳ ಅವಧಿ. ~ಅಭಿಷೇಕ = ಸಿಂಹಾಸನವನ್ನು ಏರುವ ಸಮಾರಂಭ ; ಕಿರೀಟಧಾರಣ ಮಹೋತ್ಸವ. ~(೦)ಕ(ಗ)ಟ್ಟು = ಗೌರವದ ಅಥವಾ ಅಧಿಕಾರದ ಕುರುಹಾಗಿ ಹಣೆಯ ಪಟ್ಟಿಯನ್ನು ಕಟ್ಟು. ~ಕೊ(ಗೊ)ಜಿ(ರೆ) = ರೇಷ್ಮೆ ಬಟ್ಟೆ. ~ಬಂಧನ = ಪಟ್ಟ ಕಟ್ಟುವುದು ; ಪಟ್ಟಾಭಿಷೇಕ. ~ಮ(ವ)ಣೆ = ೧. ಸಿಂಹಾ ಸನ ; ಗದ್ದುಗೆ. ೨. ಹಸೆಮಣೆ. ~ಮಹಿಷಿ = ಪಟ್ಟದರಾಣಿ. ~ವರ್ಧನ = ಪಟ್ಟದ ಆನೆ. ~ಶಾ(ಸಾ)ಲೆ = ರೇಷ್ಮೆ ಬಟ್ಟೆಯ ಅಂಗಡಿ. ~ಸಾಲಿಗ = ರೇಷ್ಮೆ ಬಟ್ಟೆಯನ್ನು ನೇಯು ವವನು.

ಪಟ್ಟಂಗ = ಪಟ್ಟಾಂಗ.

ಪಟ್ಟಕ (ನಾ). ಗದ್ದುಗೆಮಣೆ ; ಪೀಠ.

ಪಟ್ಟಗೆ (ನಾ). ರೇಷ್ಮೆವಸ್ತ್ರ.

ಪಟ್ಟಡೆ (ನಾ). ೧. ಕಮ್ಮಾರನು ಉಪಯೋಗಿ ಸುವ ಅಡಿಗಲ್ಲು ; ಅದ್ದಗಣಿ. ೨. ಶಿಲ್ಪಶಾಲೆ.

ಪಟ್ಟಣ (ನಾ). ಪುರ ; ನಗರ.

ಪಟ್ಟಣಿಗೆ (ನಾ). ಬಟ್ಟೆ ; ವಸ್ತ್ರ ; ಉಡುಗೆ.

ಪಟ್ಟಸ (ನಾ). ಒಂದು ಬಗೆಯ ಆಯುಧ ; ಈಟಿ.

ಪಟ್ಟಳಿಗೆ ೧. = ಪಟ್ಟಣಿಗೆ. ೨. ಹೂಜಿ.

ಪಟ್ಟಳೆ (ನಾ). ಕುದುರೆ, ಹೇರೆತ್ತು ಮುಂತಾ ದುವುಗಳ ಎದೆಗೆ ಬಿಗಿಯುವ ಹಗ್ಗ.

ಪಟ್ಟಾಂಗ (ನಾ). ಕಾಡುಹರಟೆ ; ವ್ಯರ್ಥ ವಾದ ಮಾತು.

ಪಟ್ಟಾವಳಿ = ಪಟಾವಳಿ.

ಪಟ್ಟಿ (ನಾ). ೧. ಒಂದು ಗುಂಪಿನವರು ವಾಸಿಸುವ ಸ್ಥಳ ; ಹಟ್ಟಿ. ೨. ರೊಪ್ಪ ; ಕೊಟ್ಟಿಗೆ. ೩. ಕುಗ್ರಾಮ ; ಚಿಕ್ಕಹಳ್ಳಿ. ೪. ಡಾಬು ; ಒಡ್ಯಾಣ. ೫. ಗೆರೆ ; ರೇಖೆ. ೬. ಕಾಗದ, ಲೋಹ, ಬಟ್ಟೆ ಮುಂತಾದುವು ಗಳ ನಿಯತಾಕಾರದಲ್ಲಿ ಕತ್ತರಿಸಿದ ತುಂಡು. ೭. ವಿವರಗಳನ್ನೊಳಗೊಂಡುದು ; ಯಾದಿ ; ಟಿಪ್ಪಣಿ. ೮. ಹೆಸರುಗಳ ಕ್ರಮವಾದ ಬರ ವಣಿಗೆ. ೯. ಬೀಡಾ ; ತಾಂಬೂಲ. ೧೦. ತೆರಿಗೆ. ೧೧. ಚಂದಾ. ೧೨. ಸಂಬಳ ; ವರಮಾನ. ~ಮಾಡು = ಅನುಕ್ರಮವಾಗಿ ಬರೆ ; ಯಾದಿಯನ್ನು ತಯಾರಿಸು. ~ಹಾಕು = ಪಟ್ಟಿಮಾಡು.

ಪಟ್ಟಿಕೆ (ನಾ). ೧. ಸರ; ಕಂಠಿಹಾರ. ೨. ಗಾಯ ಮೊದಲಾದುವುಗಳಿಗೆ ಕಟ್ಟುವ ಕಟ್ಟು. ೩. ಬಟ್ಟೆಯ ತುಂಡು. ೪. ಬಾಗಿಲಿನ ಅಡ್ಡಪಟ್ಟಿ. ೫. ದಾಖಲೆ; ಆಧಾರಪತ್ರ. ೬. ಗುರುತಿನ ಚೀಟಿ.

ಪಟ್ಟಿಗೆ (ನಾ). ೧. ವಾಸಸ್ಥಳ; ಆಶ್ರಯ. ೨. ಡಾಬು; ಒಡ್ಯಾಣ. ೩. ಹಾಸುಗಲ್ಲು; ಅಗಲವಾದ ಕಲ್ಲು.

ಪಟ್ಟಿಸ ೧. = ಪಟ್ಟಸ. ೨. ಮಲ್ಲಯುದ್ಧದಲ್ಲಿ ಒಂದು ವರಸೆ.

ಪಟ್ಟು (ನಾ). ೧. ಬಿಗಿಯಾದ ಹಿಡಿತ; ಬಿಗಿತ. ೨. ಹಠ; ಛಲ. ೩. ಸ್ವಭಾವ; ಚಾಳಿ. ೪. ನೋವನ್ನು ಹೋಗಲಾಡಿಸಲು ಬಳಿಯುವ ಲೇಪನ. ೫. ಹೊಂದಿಕೆ; ಸಾಂಗತ್ಯ. ೬. ಗಡ್ಡೆಕಟ್ಟಿದ ಜಾಗ; ಜಡ್ಡುಗಟ್ಟಿದುದು; ಬಾವು. ೭. ಸಲ; ಬಾರಿ. ೮. ವರಸೆ; ಗತ್ತು. ೯. ಗಡದ್ದು; ಸಂಪೂರ್ಣ. ~ಉಚು(ಳಿ) = ತಡೆಯಿಲ್ಲದಾಗು; ಹಿಡಿತ ಮೀರು. ~ಹಾಕು = ನೋವನ್ನು ಹೋಗಲಾಡಿಸಲು ಲೇಪನವನ್ನು ಹಾಕು. ~ಹಿಡಿ = ಮೊಂಡುತನ ಮಾಡು; ಹಠಹಿಡಿ.

ಪಟ್ಟೆ (ನಾ). ೧. ಮರದ ತೊಗಟೆ. ೨. ದಪ್ಪನೆಯ ಉದ್ದ ಗೆರೆ, -ರೇಖೆ. ೩. ರೇಷ್ಮೆ ಬಟ್ಟೆ; ದುಕೂಲ. ೪. ಭೂಮಿಯ ಬಗ್ಗೆ ಕೊಡುವ ಸನ್ನದುಪತ್ರ. ೫. ಉದ್ದ ಹೆಚ್ಚಾಗಿರುವಂತೆಯೂ, ಅಗಲ ಕಿರಿದಾಗಿರುವಂತೆಯೂ ವಿಂಗಡಿಸಿದ ಭೂಮಿ. ೬. ಅಡಕೆ, ಬಾಳೆ ಮೊದಲಾದುವುಗಳ ಹಾಳೆ. ೭. ತಲೆಗೂದಲು ಉದುರಿ ಬೋಳಾದ ಜಾಗ. ೮. ಅಗಲವಾದ ಪಟ್ಟಿ.

ಪಟ್ಟೆಯ (ನಾ). ಉದ್ದವಾದ ಕತ್ತಿ.

ಪಠನ (ನಾ). ೧. ಓದುವುದು; ವಾಚನ. ೨. ಕಂಠಪಾಠ ಮಾಡಿ ಹೇಳುವುದು. ೩. ವ್ಯಾಸಂಗ; ಅಭ್ಯಾಸ. ~ಆಗಾರ = ಶಾಲೆ.

ಪಠಿಸು (ಕ್ರಿ). ವಾಚನ ಮಾಡು; ಓದು.

ಪಠ್ಯ (ಗು). ೧. ಓದಬಹುದಾದ; ವಾಚನಕ್ಕೆ ಯೋಗ್ಯವಾದ. ೨. ಓದಬೇಕಾದ. ~ಪುಸ್ತಕ = ವಿದ್ಯಾರ್ಥಿಗಳಿಗೆ ಓದಲು ಗೊತ್ತುಪಡಿಸಿದ ಪುಸ್ತಕ.

ಪಡ (ನಾ). ೧. ಬಟ್ಟೆ; ವಸ್ತ್ರ. (ಗು). ೨. ಸಾಗುವಳಿಯಿಲ್ಲದ; ಬೆಳೆಯಿಲ್ಲದ.

ಪಡ(ಂ)ಗು (ನಾ). ಹಡಗು.

ಪಡಕು (ನಾ). ಕಿಟಕಿ ಅಥವಾ ಬಾಗಿಲಿನ ರೆಕ್ಕೆ.

ಪಡಕೆ (ನಾ). ಹಾಸುಗೆ.

ಪಡಖಾನೆ (ನಾ). ಸಾರಾಯಿ ಮನೆ; ಹೆಂಡದ ಅಂಗಡಿ.

ಪಡಗ (ನಾ). ಧ್ವಜ; ಬಾವುಟ.

ಪಡದೆ (ನಾ). ಪರದೆ; ಜವನಿಕೆ.

ಪಡಪು = ಪಡೆಪು.

ಪಡಪೋಸಿ (ನಾ). ೧. ಅಲಕ್ಷ್ಯ; ಉದಾಸೀನ. ೨. ಕೆಲಸಕ್ಕೆ ಬಾರದುದು; ನಿರುಪಯುಕ್ತ. ೩. ಕೆಲಸಕ್ಕೆ ಬಾರದವನು; ನಿಷ್ಪ್ರಯೋಜಕ. (ಗು). ೪. ಕೆಲಸಕ್ಕೆ ಬಾರದ; ನಿರುಪಯೋಗವಾದ.

ಪಡಲ ೧. = ಪಟೋಲ. ೨. ಲೇಪನ.

ಪಡಲಿಗೆ (ನಾ). ಹರಿವಾಣ; ತಟ್ಟೆ; ಹಡಲಿಗೆ.

ಪಡಲಿಡು = ಪಡಲ್ವಡು.

ಪಡಲ್ವಡು (ಕ್ರಿ). ಚೆಲ್ಲಾಪಿಲ್ಲಿಯಾಗು; ಚೆದರು.

ಪಡವಲ = ಪಟೋಲ.

ಪಡಸಾಲೆ (ನಾ). ೧. ಜಗಲಿ; ಮೊಗಸಾಲೆ; ಹೊರಚಾವಡಿ. ೨. ಹಜಾರ. ೩. ನಡುಮನೆ.

ಪಡಿ (ನಾ). ೧. ರೀತಿ; ಮಾರ್ಗ. ೨. ರಿಕಾಪು; ಅಂಕವಣಿ. ೩. ಒಂದು ಅಳತೆ; ಎರಡು ಸೇರಿನ ಅಳತೆ. ೪. ಕದ; ಕವಾಟ. ೫. ಅಕ್ಕಿ, ತರಕಾರಿ ಮುಂತಾದ ರೂಪಗಳಲ್ಲಿ

ಕೊಡುವ ಭತ್ಯ, –ಕೂಲಿ. ೬. ಪ್ರತಿ; ಸಮಾನ. ೭. ನಕಲು. ೮. ಇನ್ನೊಂದು; ಮತ್ತೊಂದು. ೯. ಮೆಟ್ಟಲು; ಸೋಪಾನ. ~ಅ(ಯ)ಚ್ಚು=ಮುದ್ರಣ ಮುಂತಾದುವುಗಳಲ್ಲಿ ಬಳಸುವ ಚಿತ್ರದ ಅಚ್ಚು; ಪ್ರತಿಕೃತಿ. ~ಕಟ್ಟು = ೧. (ತೂಕದಲ್ಲಿ) ಪೇರು ಕಟ್ಟು. ೨. ಹೋಲಿಸು; ತಾಳೆ ನೋಡು. ೩. ರೀತಿ; ಹದ. ~ಚಂದ=ಪ್ರತಿಬಿಂಬ; ಪ್ರತಿರೂಪ. ~ತೊ(ದೊ)ತ್ತು = ಒಬ್ಬನಿಗೆ ಪ್ರತಿಯಾಗಿ ಬರುವ ಮತ್ತೊಬ್ಬ ಆಳು; ಮಾರಾಳು. ~ದನಿ = ಮಾರ್ದನಿ; ಪ್ರತಿಧ್ವನಿ ~ನುಡಿ=ಪ್ರತ್ಯುತ್ತರ; ಮಾರುತ್ತರ. ~ನೆಟ(ಳ)ಲ್ = ಪಡಿಚಂದ. ~ಪ(ವ)ಡೆ ಪ್ರತಿಬಲ; ಶತ್ರುಸೈನ್ಯ. ~ಮಾ(ವಾ)ತು = ೧. ಪಡಿನುಡಿ. ೨. ಸದೃಶವಾದ ಮಾತು. ~ಮೊಗ = ೧. ಎದಿರು; ಸಮ್ಮುಖ. ೨. ಪ್ರತಿಬಿಂಬ. ~ವಳ = ಪಡಿಯಱ.

ಪಡಿಕೆ (ನಾ). ೧. ಅಮೇಧ್ಯದ ಕುಳಿ; ಕಕ್ಕಸು ಗುಂಡಿ. ೨. ದುರ್ಗಂಧ; ಹೇಸಿಗೆ; ಹಡಿಕೆ.

ಪಡಿಗ (ನಾ). ಉಗುಳುವ ಪಾತ್ರೆ; ಪೀಕದಾನಿ.

ಪಡಿಚ (ನಾ). ೧. ಸಾಲ ಮುಂತಾದುವನ್ನು ತೀರಿಸುವಿಕೆ. ೨. ಹಾಳು; ನಾಶ.

ಪಡಿತಳ (ನಾ). ೧. ಪ್ರಯತ್ನ. ೨. ಉತ್ಸಾಹ; ಹುರುಪು. ೩. ಮುತ್ತಿಗೆ; ಆಕ್ರಮಣ. ~ಇಸು =೧. ಪ್ರಯತ್ನಿಸು. ೨. ವಶಪಡಿಸಿಕೊಳ್ಳು ೩. ಮುತ್ತು; ಆಕ್ರಮಿಸು.

ಪಡಿಪಾಟಲು = ಪಡಿಪಾಟು

ಪಡಿಪಾಟು (ನಾ). ೧. ತೊಂದರೆ; ಕಷ್ಟ; ಪೇಚಾಟ. ೨. ದುಃಖ; ಅಳಲು.

ಪಡಿಯಱ(ರ) (ನಾ). ಬಾಗಿಲು ಕಾಯುವವನು; ದ್ವಾರಪಾಲಕ; ಪ್ರತಿಹಾರಿ. ~ಪ(ವ)ಕ್ಕಿ = ಕೋಗಿಲೆ.

ಪಡಿಯಱ(ರ)ತಿ (ನಾ). ಬಾಗಿಲು ಕಾಯುವವಳು.

ಪಡಿಸಣ (ನಾ). ೧. ಪರೀಕ್ಷೆ; ಒರೆಹಚ್ಚಿ ನೋಡುವಿಕೆ. ೨ ನಿರೀಕ್ಷೆ; ಪ್ರತೀಕ್ಷಣ.

ಪಡಿಸಣಿ (ನಾ). ಅಡುಗೆಯವನು; ಬಾಣಸಿಗ.

ಪಡಿಹಾಱ(ರ) = ಪಡಿಯಱ.

ಪಡು (ಕ್ರಿ). ೧. ಹೊಂದು; ತಳೆ. ೨. ವಿಶ್ರಾಂತಿ ಹೊಂದು; ಮಲಗು. ೩. ಸಂಭೋಗಿಸು; ಹಡು. ೪. ಅನುಭವಿಸು. ೫. ಮರಣಹೊಂದು; ಸಾಯು. ೬. ಮುಳುಗು; ಕಾಣದಾಗು. (ನಾ). ೭. ಸೂರ್ಯನು ಮುಳುಗುವ ದಿಕ್ಕು; ಪಶ್ಚಿಮ. ೮. ಪೊಟರೆ. ೯. ಸಾವು; ಮರಣ. ೧೦. ಬೆಳೆ ಬೆಳೆಯದ ನೆಲ; ಬೀಳು. ೧೧. ಹೊಂದುವುದು. ~ನೇಸಱು(ರು) = ಮುಳುಗುವ ಸೂರ್ಯ. ~ಭೂಮಿ = ಹಾಳುಬಿದ್ದ ಭೂಮಿ; ಬೀಳು ಭೂಮಿ.

ಪಡುಕೆ = ಪಡಿಕೆ

ಪಡುಪಾಟು = ಪಡಿಪಾಟು.

ಪಡುವ (ನಾ). ಪಶ್ಚಿಮ ದಿಕ್ಕು.

ಪಡುವಣ = ಪಡುವ. ~ಇಗ = ಪಶ್ಚಿಮ ದಿಕ್ಕಿನವನು, –ದೇಶದವನು.

ಪಡುವಲ್(ಲು) = ಪಡುವ.

ಪಡೆ (ಕ್ರಿ). ೧. ಹೊಂದು; ತಾಳು. ೨. ಗಳಿಸು; ಸಂಪಾದಿಸು. ೩. ಹೆರು; ಹಡೆ. ೪. ಅನುಭವಿಸು. (ನಾ). ೫. ಹೊಂದುವುದು. ೬. ಸಮೂಹ; ಗುಂಪು. ೭. ದಳ; ಸೈನ್ಯ. ೮. ಪೊಟರೆ; ಬಿಲ. ~ನುಡಿ = ಜನಬಳಕೆಯ ಮಾತು; ವಾಡಿಕೆಯ ಮಾತು. ~ಮಾ(ವಾ)ತು = ೧. ಪಡಿಮಾತು. ೨. ಸುದ್ದಿ; ವದಂತಿ; ಸಮಾಚಾರ. ~ವಳ(ಳ್) = ಸೇನಾಪತಿ; ದಳಪತಿ.

ಪಡೆಪು (ನಾ). ೧. ಹೊಂದುವಿಕೆ; ಪಡೆಯುವಿಕೆ. ೨. ಲಾಭ; ಗಳಿಕೆ; ಸಂಪಾದನೆ. ೩. ಸೊಬಗು; ಸೌಂದರ್ಯ. ೪. ದೊಡ್ಡಸ್ತಿಕೆ; ಠೀವಿ. ೫. ಸಂಬಳ; ವೇತನ. ~ಕಿ(ಗಿ)ಡು = ಲಾಭ ಕೆಡು; ಆದಾಯ ಹಾಳಾಗು.

ಪಡೆಯಿಲ (ನಾ). ಸೈನಿಕ; ಯೋಧ.

ಪಡ್ಡಳಿ (ನಾ). ಒಂದು ಬಗೆಯ ಹೂವಿನ ಗಿಡ; ಕಣಗಿಲೆ.

ಪಡ್ಡೆ (ನಾ). ಪ್ರಾಯ; ಹರೆಯ; ಯೌವನ.

ಪಣ್ (ಕ್ರಿ). ೧. ಹಣ್ಣಾಗು; ಮಾಗು. ೨. ಹಣ್ಣುಬಿಡು. ೩. ಕಳಿ; ಪಕ್ವವಾಗು. (ನಾ). ೪. ಕಳಿತ ಸ್ಥಿತಿ; ಪಕ್ವವಾದುದು. ೫. ಮಾಗಿದ ಫಲ; ಹಣ್ಣು. ~ಎಲೆ = ಹಣ್ಣಾದ ಎಲೆ; ಹಳದಿ ಬಣ್ಣಕ್ಕೆ ತಿರುಗಿದ ಎಲೆ. ~ಕಾ(ಗಾ)ಯ್ = ೧. ಸ್ವಲ್ಪ ಹಣ್ಣಾದ ಕಾಯಿ; ದೋರೆಗಾಯಿ. ೨. ಮಾಗಿದ ಹಣ್ಣು; ಕಳಿತ ಫಲ. ~ಪಸರ = ಹಣ್ಣಿನ ಅಂಗಡಿ.

ಪಣ (ನಾ). ೧. ಗುಂಪು; ಪಂಗಡ; ಬಣ. ೨. ಜೂಜು; ಪಂದ್ಯ. ೩. ಜೂಜಿಗೆ ಒಡ್ಡಿದ ವಸ್ತು; ಬಾಜಿ. ೪. ಹಣ; ದ್ರವ್ಯ. ೫. ಕೂಲಿ. ೬. ಬೆಲೆ; ಕ್ರಯ. ೭. ವ್ಯಾಪಾರ; ವಿಕ್ರಯ. ೮. ಒಂದು ಬಗೆಯ ನಾಣ್ಯ. ೯. ಅಂಗಡಿ. ೧೦. ಒಂದು ಅಳತೆ. ೧೧. ಪ್ರತಿಜ್ಞೆ; ಶಪಥ. ~ಅಂಗನೆ = ವೇಶ್ಯೆ; ಸೂಳೆ. ~ಕಟ್ಟು = ಪಂದ್ಯ ಕಟ್ಟು; ಬಾಜಿಕಟ್ಟು. ~ತೊಡು = ಪ್ರತಿಜ್ಞೆಮಾಡು; ದೃಢಸಂಕಲ್ಪಮಾಡು. ~ವಧು = ಪಣಾಂಗನೆ.

ಪಣಂಚು = ಪಳಂಚು.

ಪಣತ (ನಾ). ೧. ಧಾನ್ಯವನ್ನು ಸಂಗ್ರಹಿಸುವ ಸ್ಥಳ; ಕಣಜ. ೨. ತೂಕ.

ಪಣತಿ (ನಾ). ದೀಪವನ್ನು ಹಚ್ಚಿಡುವ ಮಣ್ಣಿನ ಬಟ್ಟಲು; ಹಣತೆ.

ಪಣವ (ನಾ). ೧. ಒಂದು ಬಗೆಯ ಚರ್ಮವಾದ್ಯ. ೨. ಓಂಕಾರ ಮಂತ್ರ; ಪ್ರಣವ.

ಪಣಿ (ನಾ). ೧. ಕೋಲು; ದೊಣ್ಣೆ. ೨. ಹಾವು; ಉರಗ. ೩. ಒಂದು ಜಾತಿಯ ಮರ; ಬಸರಿ.

ಪಣಿಗೆ (ನಾ). ಬಾಚಣಿಗೆ; ಹಣಿಗೆ.

ಪಣಿವಾರ = ಪನಿಯಾರ.

ಪಣೆ (ನಾ). ೧. ಹಣೆ; ನೊಸಲು. ೨. ಮರದಲ್ಲಿ ಕವಲೊಡೆಯುವ ಜಾಗ. ೩. ಕಾಡು ಪ್ರಾಣಿಗಳ ವಿಶ್ರಾಂತಿಸ್ಥಳ; ಇಕ್ಕೆ. ೪. ಬಂಡೆಯಿಂದ ಕಲ್ಲುಗಳನ್ನು ಎಬ್ಬಲು ಮಾಡಿದ ಹಳ್ಳ. ೫. ಒಂದು ಬಗೆಯ ಚರ್ಮವಾದ್ಯ. ೬. ಉತ್ತ ನೆಲ. ~ಅ(ಯ)ಕ್ಕರ = ಹಣೆಯ ಬರೆಹ; ವಿಧಿಲಿಖಿತ. ~ಕ(ಗ)ಟ್ಟು = ಹಣೆಯ ಮೇಲೆ ಧರಿಸುವ ಆಭರಣ. ~ಕ(ಗ)ಣ್(ಣ್ಣು) = ಹಣೆಯಲ್ಲಿರುವ ಕಣ್ಣು.

ಪಣೆಗಣ್ಣ (ನಾ). ಹಣೆಯಲ್ಲಿ ಕಣ್ಣುಳ್ಳವನು; ಶಿವ.

ಪಣ್ಣಿಕ (ನಾ). ೧. ಕ್ರಮವಾಗಿಡುವುದು; ಜೋಡಿಸುವುದು. ೨. ಹಣೆಯಲ್ಲಿಡುವ ಅಲಂಕಾರದ ಗುರುತು; ತಿಲಕ.

ಪಣ್ಣಿಸು (ಕ್ರಿ). ೧. ಸಿದ್ಧವಾಗುವಂತೆ ಮಾಡು. ೨. ಹಣ್ಣುಮಾಡು; ಪಕ್ವಗೊಳಿಸು.

ಪಣ್ಣು (ಕ್ರಿ). ೧. ಮಾಡು; ಏರ್ಪಡಿಸು. ೨. ಸಿದ್ಧಪಡಿಸು; ಸಜ್ಜುಗೊಳಿಸು. ೩. ಸಿದ್ಧವಾಗು. (ನಾ). ೪. ಮಾಗಿದ ಫಲ, –ಹಣ್ಣು. ೫. ಪಕ್ವವಾದುದು; ಕಳಿತ ಸ್ಥಿತಿ.

ಪಣ್ಣುಗೆ (ನಾ). ಅಲಂಕಾರ; ಶೃಂಗಾರ.

ಪಣ್ಣೆ (ನಾ). ೧. ಕ್ರಮ; ಸಾಲು. ೨. ಚಟ; ಅಭ್ಯಾಸ.

ಪಣ್ಣೆಯ (ನಾ). ಹೊಲ; ಭೂಮಿ.

ಪಣ್ಯ (ನಾ). ೧. ವ್ಯಾಪಾರದ ವಸ್ತು; ಸರಕು. ೨. ವ್ಯಾಪಾರದ ಸ್ಥಳ; ಅಂಗಡಿ. (ಗು). ೩. ಮಾರಬಹುದಾದ; ವಿಕ್ರಯಿಸಲ್ಪಡುವ. ~ಅಂಗನೆ = ವೇಶ್ಯೆ; ಸೂಳೆ. ~ವೀಥಿ = ಅಂಗಡಿಬೀದಿ; ಪೇಟೆ.

ಪತಂಗ ೧. = ಪತಗ. ೨. ಮಿಂಚುಹುಳು; ಮಿಣುಕುಹುಳು. ೩. ದೀಪಕ್ಕೆ

ಮುತ್ತುವ ಒಂದು ಬಗೆಯ ಹುಳು. ೪. ಚಿಟ್ಟೆ; ಪಾತರಗಿತ್ತಿ. ೫. ಬಾಣ; ಅಂಬು. ೬. ಸೂರ್ಯ; ನೇಸರು. ೭. ಗಾಳಿಪಟ. ೮. ಒಂದು ಜಾತಿಯ ಮರ. ~ವೃತ್ತಿ = ಚಂಚಲವೃತ್ತಿ; ಅಸ್ಥಿರ ಬುದ್ಧಿ.

ಪತಗ (ನಾ). ಹಕ್ಕಿ; ಪಕ್ಷಿ.

ಪತತ್ರ (ನಾ). ೧. ರೆಕ್ಕೆ; ಪಕ್ಷ. ೨. ಕವಚ.

ಪತತ್ರಿ (ನಾ). ೧. ಹಕ್ಕಿ; ಪಕ್ಷಿ. ೨. ಬಾಣ.

ಪತನ (ನಾ). ೧. (ಕೆಳಕ್ಕೆ) ಬೀಳುವುದು. ೨. ಅವನತಿ; ಕೀಳುದೆಸೆ.

ಪತಾಕಿನಿ (ನಾ). ಸೈನ್ಯ; ದಂಡು.

ಪತಾಕೆ (ನಾ). ಧ್ವಜ; ಬಾವುಟ.

ಪತಿ (ನಾ). ೧. ಒಡೆಯ; ಯಜಮಾನ. ೨. ಆಳುವವನು; ದೊರೆ. ೩. ಗಂಡ. ೪. ಪ್ರತಿ; ಸಮಾನ. ~ಬಿಂಬ = ನೆರಳು; ಪ್ರತಿಬಿಂಬ.

ಪತಿಂವರೆ (ನಾ). ಗಂಡನನ್ನು ತಾನೇ ಆರಿಸಿಕೊಳ್ಳುವವಳು.

ಪತಿಕರಿಸು (ಕ್ರಿ). ೧. ಸಹಾಯ ಮಾಡು. ೨. ದಯೆತೋರು; ಕರುಣೆಯಿಂದ ಕೂಡಿರು. ೩. ಸಮರ್ಥಿಸು; ಸರಿಯೆಂದು ತೋರಿಸು; ಸಾಧಿಸು. ೪. ಅಂಗೀಕರಿಸು; ಒಪ್ಪು. ೫. ಉಪಚರಿಸು; ಸತ್ಕಾರ ಮಾಡು; ಗೌರವಿಸು. ೬. ಪ್ರೀತಿಸು; ಒಲಿ.

ಪತಿತ (ನಾ). ೧. ಬಿದ್ದವನು. ೨. ಸೋಲಿಸಲ್ಪಟ್ಟವನು; ಪರಾಜಿತ. ೩. ಪಾಪ; ದುಷ್ಕೃತ್ಯ. ೪. ಪಾಪ ಮಾಡಿದವನು; ಪಾಪಿ. (ಗು). ೫. ಕೆಳಕ್ಕೆ ಬಿದ್ದ. ೬. ಸೋಲಿಸಲ್ಪಟ್ಟ; ಪರಾಜಿತನಾದ. ೭. ನೀಚನಾದ; ದುಷ್ಟನಾದ. ೮. ಶೀಲಭ್ರಷ್ಟ; ನೀತಿಗೆಟ್ಟ. ~ಪಾವನ = ಪಾಪಿಗಳನ್ನು ಉದ್ಧಾರ ಮಾಡುವವನು; ದೇವರು.

ಪತಿತ್ವ (ನಾ). ಯಜಮಾನಿಕೆ; ಒಡೆತನ.

ಪತಿವ್ರತೆ (ನಾ). ಗಂಡನ ಸೇವೆಯೇ ವ್ರತವಾಗಿ ಉಳ್ಳವಳು; ಗರತಿ; ಹದಿಬದೆ.

ಪತ್ತನ (ನಾ). ನಗರ; ಪಟ್ಟಣ.

ಪತ್ತಲ (ನಾ). ತೆಳುವಾದ ಸೀರೆ.

ಪತ್ತಳಿಕೆ (ನಾ). ೧. ಕಾಗದ; ಪತ್ರ. ೨. ಪತ್ರಿಕೆ. ೩. ಬತ್ತಳಿಕೆ.

ಪತ್ತಳಿ (ನಾ). ೧. ಎಂಜಲು; ಉಚ್ಛಿಷ್ಟ. ೨. ಪತ್ರ; ಓಲೆ.

ಪತ್ತಾರ (ನಾ). ಚಿನ್ನ, ಬೆಳ್ಳಿ ಕೆಲಸಮಾಡುವವನು; ಅಕ್ಕಸಾಲಿ.

ಪತ್ತಾರಿ (ನಾ). ಕಂದಾಯದ ಅಧಿಕಾರಿ.

ಪತ್ತಿ (ನಾ). ೧. ಹತ್ತಿ. ೨. ಸಂಬಂಧ; ನಂಟು. ೩. (ಸಂಘದ) ಪಾಲು, -ಭಾಗ. ೪. ಗತಿ; ಗಮನ. ೫. ಕಾಲಾಳು; ಪದಾತಿ. ೬. ಒಂದು ರಥ, ಒಂದು ಆನೆ, ಮೂರು ಕುದುರೆ ಮತ್ತು ಐದು ಕಾಲಾಳುಗಳಿಂದ ಕೂಡಿದ ಸೈನ್ಯದ ಒಂದು ತುಕಡಿ.

ಪತ್ತಿಗೆ (ನಾ). ೧. ಕತ್ತಿ. ೨. ಕತ್ತಿಯ ಅಲಗು, -ಬಾಯಿ. ೩. ಜೋಡಣೆ. ೪. ಗೋಡೆಯಲ್ಲಿ ಮಾಡಿದ ಗೂಡು; ಮಾಡು. ೫. ಪಾಲು; ಭಾಗ.

ಪತ್ತು (ಕ್ರಿ). ೧. ಅಡರು; ಏರು; ಹತ್ತು. ೨. ಹರಡು; ವ್ಯಾಪಿಸು. ೩. ಅಂಟಿಕೊಳ್ಳು; ಕಚ್ಚಿಕೊಳ್ಳು. ೪. ತೊಡಗು; ಆರಂಭಿಸು. ೫. ಎದುರಿಸು; ಹೋರಾಡು. ೬. ಮುಟ್ಟು; ಸ್ಪರ್ಶಿಸು. ೭. ಜ್ವಲಿಸು; ಉರಿ. ೮. ಬೆನ್ನಟ್ಟು; ಹಿಂಬಾಲಿಸು. (ನಾ). ೯. ಅಂಟಿಕೊಳ್ಳುವುದು; ಹೊಂದಿಕೊಳ್ಳುವುದು. ೧೦. ಸ್ನೇಹ; ಗೆಳೆತನ. ೧೧. ನಂಬಿಕೆ; ವಿಶ್ವಾಸ. ೧೨. ಜಗಳ; ಕದನ. ೧೩. ಆಸಕ್ತಿ. ೧೪. ಸಂಬಂಧ. ೧೫. ಪಂಜು; ದೀವಟಿಗೆ. ೧೬. ಹತ್ತು ಎಂಬ ಸಂಖ್ಯೆ.

~ಇಸು=೧. ಅಂಟಿಕೊಳ್ಳುವಂತೆ ಮಾಡು; ಸೇರಿಸು. ೨. ಬೆಂಕಿ ಹಚ್ಚು; ಉರಿಸು. ೩. ಮೇಲಕ್ಕೆ ಏರುವಂತೆ ಮಾಡು; ಏರಿಸು. ~ಬಿ(ವಿ)ಡು = ೧. ಸಂಬಂಧ ಕಡಿದುಕೊಳ್ಳು. ೨. ಬಿಟ್ಟುಹೋಗು; ತ್ಯಜಿಸು.

ಪತ್ತುಗೆ (ನಾ). ೧. ಹೊಂದಿಕೆ; ಜೋಡಣೆ. ೨. ಸಂಬಂಧ; ನಂಟು. ~ಕಾ(ಗಾ)ಱ(ರ) = ಹೊಂದಾಣಿಕೆಯುಳ್ಳವನು; ಜೊತೆಗಾರ.

ಪತ್ತೆ (ನಾ). ೧. ವಿಳಾಸ. ೨. ಸುಳಿವು; ಕುರುಹು. ೩. ಕಂಡುಹಿಡಿಯುವುದು; ಶೋಧನೆ. ~ದಾರ=ಗೊತ್ತುಹಚ್ಚುವವನು; ಶೋಧಕ. ~ಹಚ್ಚು = ಕಂಡುಹಿಡಿ; ಶೋಧಿಸು.

ಪತ್ತೆದಾರಿ (ನಾ). ೧. ಗೊತ್ತುಹಚ್ಚುವಿಕೆ. (ಗು). ೨. ಪತ್ತೆದಾರಿಕೆಗೆ ಸಂಬಂಧಿಸಿದ.

ಪತ್ತೇಮಾರಿ (ನಾ). ಹಾಯಿಹಡಗು.

ಪತ್ನಿ (ನಾ). ಹೆಂಡತಿ; ಸತಿ. ~ಶಾಲೆ = ರಾಣಿವಾಸ; ಅಂತಃಪುರ.

ಪತ್ರ (ನಾ). ೧. ಗರಿ; ರೆಕ್ಕೆ. ೨. ಪಕ್ಷಿ. ೩. ವಾಹನ. ೪. ಎಲೆ; ಪರ್ಣ. ೫. ಓಲೆಗರಿ. ೬. ಕಾಗದ; ಬರೆದು ಕಳಿಸಿದ ಓಲೆ. ೭. ಪುಸ್ತಕದ ಹಾಳೆ. ೮. ಕತ್ತಿಯ ಅಲಗು, –ಬಾಯಿ. ೯. ಕತ್ತಿ; ಖಡ್ಗ. ~ಆವಳಿ = ೧. ಎಲೆಗಳ ಸಮೂಹ, –ಗುಂಪು. ೨. ಊಟದ ಎಲೆ. ~ಆಶ್ರಯ = ಕಿವಿಯ ಮೆದುವಾದ ತಳಭಾಗ; ಹಾಲೆ. ~ಒಡೆ = ಕೆಸುವಿನ ಎಲೆಯಿಂದ ಮಾಡುವ ಒಂದು ಬಗೆಯ ಖಾರದ ಕಡುಬು. ~ಕರ್ತ = ವರ್ತಮಾನ ಪತ್ರಿಕೆಯನ್ನು ನಡಸುವವನು. ~ಪುಟಿಕೆ = ಎಲೆಗಳಿಂದ ಮಾಡಿದ ದೊನ್ನೆ. ~ಭಂಗ = ಸ್ತ್ರೀಯರು ಸುಗಂಧದ ಪುಡಿಯಿಂದ ಮುಖ ಮತ್ತು ದೇಹದ ಮೇಲೆ ಬರೆದುಕೊಳ್ಳುವ ಚಿತ್ರ; ಮಕರಿಕೆ. ~ರೇಖೆ = ಪತ್ರಭಂಗ. ~ವಾಹನ = ವಿಷ್ಣು. ~ವ್ಯವಹಾರ = ಅಂಚೆಯ ಮೂಲಕ ಮಾಡುವ ಕಾಗದ ಪತ್ರಗಳ ವಿನಿಮಯ.

ಪತ್ರಿ (ನಾ). ೧. ಗರಿಯುಳ್ಳುದು; ಹಕ್ಕಿ. ೨. ಗಿಡುಗ. ೩. ಬಾಣ; ಅಂಬು. ೪. ತಾಳೆ ಜಾತಿಯ ಮರ. ೫. ಜಾಯಿಕಾಯಿಯ ಮೇಲಿನ ಸಿಪ್ಪೆ. ~ಇಂದ್ರ = ಹಕ್ಕಿಗಳ ರಾಜ; ಗರುಡ.

ಪತ್ರಿಕಾಗೋಷ್ಠಿ (ನಾ). ಪತ್ರಿಕೆಗಳ ಪ್ರತಿನಿಧಿಗಳನ್ನು ಕರೆಸಿ ನಡಸುವ ಸಭೆ.

ಪತ್ರಿಕಾವ್ಯವಸಾಯ (ನಾ). ವರ್ತಮಾನ ಪತ್ರಿಕೆಗಳ ಉದ್ದಿಮೆ, –ವೃತ್ತಿ.

ಪತ್ರಿಕೆ (ನಾ). ೧. ಬರೆಯುವ ಕಾಗದ. ೨. ಕಾಗದ, ಪತ್ರ ಮುಂತಾದುವು. ೩. ವರ್ತಮಾನ ಪತ್ರ ಮುಂತಾದ ನಿಯತಕಾಲಿಕ. ೪. ಲಿಖಿತಪಟ್ಟಿ.

ಪತ್ರೆ (ನಾ). ೧. ಬಿಲ್ವ, ತುಳಸಿ ಮುಂತಾದ ಚಿಗುರು, –ದಳ. ೨. ಜಾಜಿಕಾಯಿಯ ಮೇಲಿನ ಸಿಪ್ಪೆ. ೩. ಗಾಂಜಾ, ಹೊಗೆಸೊಪ್ಪು ಮುಂತಾದ ಎಲೆ. ~ಸೇದು = ಗಾಂಜಾ ಹೊಗೆಯನ್ನು ಸೇದು.

ಪಥ (ನಾ). ದಾರಿ; ಹಾದಿ. ~ಆಲಯ=ದಾರಿಗರ ವಸತಿಗೃಹ; ಪ್ರವಾಸಿ ಮಂದಿರ. ~ಶ್ರಾಂತ = ಪ್ರಯಾಣದಿಂದ ಸುಸ್ತಾದ, –ಬಳಲಿದ.

ಪಥಿಕ (ನಾ). ದಾರಿಗ; ಪ್ರಯಾಣಿಕ.

ಪಥಿಸು (ಕ್ರಿ). ಒಗ್ಗು; ಹಿಡಿಸು; ಹಿತವಾಗು.

ಪಥ್ಯ (ನಾ). ೧. ಯೋಗ್ಯವಾದುದು; ಉಚಿತವಾದುದು. ೨. ಹಿತವಾದುದು. ೩. (ರೋಗಿಯ) ಆಹಾರದಲ್ಲಿಯ ಕಟ್ಟುಪಾಡು, –ನಿಯಮ. (ಗು). ೪. ಯೋಗ್ಯವಾದ. ೫. ಹಿತವಾದ. ~ಮಾಡು = ಆಹಾರ ಸೇವನೆಯಲ್ಲಿ ಕಟ್ಟುನಿಟ್ಟಾಗಿರು.

ಪದ (ನಾ). ೧. ಸಮಯ; ಸಂದರ್ಭ; ಸನ್ನಿವೇಶ. ೨. ಕಾಲು; ಚರಣ. ೩. ಹೆಜ್ಜೆ; ದಾಪು. ೪. ಪಾದದ ಗುರುತು; ಹೆಜ್ಜೆಯ ಗುರುತು. ೫. ಹದ; ಪಕ್ವತೆ. ೬. ಪದವಿ; ಸ್ಥಾನ. ೭. ನಿಲವು; ಸ್ಥಿತಿ. ೮. ಕಾರಣ; ನಿಮಿತ್ತ. ೯. ಆಶ್ರಯ; ರಕ್ಷಣೆ. ೧೦. ಪ್ರತ್ಯಯ ಸಹಿತವಾದ ಶಬ್ದ; ಮಾತು. ೧೧. ರೀತಿ; ಕ್ರಮ. ೧೨. ಹಾಡು. ~ಅರ್ಥ = ೧. ಶಬ್ದದ ಅರ್ಥ, –ಅಭಿಪ್ರಾಯ. ೨. ದ್ರವ್ಯ; ವಸ್ತು. ೩. ವ್ಯಂಜನ ಪದಾರ್ಥ; ಮೇಲೋಗರ. ~ಆಯುಧ = ಕಾಲನ್ನು ಆಯುಧವನ್ನಾಗಿ ಉಳ್ಳುದು; ಹುಂಜ. ~(ಂ)ಕು(ಗು)ಟ್ಟು = ಹೇಳು; ಉಚ್ಚರಿಸು. ~(ಂ)ಕೊ(ಗೊ)ಳಿಸು = ಸಮಂಜಸವಾದ ಸ್ಥಿತಿಗೆ ತರು; ಹದಗೊಳಿಸು. ~ಕೆ(ಗೆ)ಡು = ಕ್ರಮತಪ್ಪು; ಮೀರಿ ನಡೆ. ~ಚ್ಯುತಿ = ಅಧಿಕಾರ ಕಳೆದುಕೊಳ್ಳುವಿಕೆ. ~ಪ(ವ)ಡು = ಹದಕ್ಕೆ ಬರು. ~ಬಂಧ = ೧. ಕಾಲಿಗೆ ಹಾಕಿಕೊಳ್ಳುವ ಆಭರಣ. ೨. ಉತ್ತಮವಾದ ಪದಗಳ ಜೋಡಣೆ. ~ಮಸ್ತಕ = ಬಾವಲಿ; ಕಣ್ಣುಕಪ್ಪಡೆ; ಕಪ್ಪಟ. ~ಹಾಡು = ೧. ಹಾಡನ್ನು ಹೇಳು. ೨. ಮುಕ್ತಾಯ ಮಾಡು; ಮುಗಿಸು. ~ಹೇಳು = ೧. ಹಾಡನ್ನು ಹೇಳು. ೨. ಗೋಳಾಡು; ದುಃಖಿಸು.

ಪದಕ (ನಾ). ೧. ಹಾರ ಮೊದಲಾದುವುಗಳ ಮಧ್ಯದಲ್ಲಿ ಅಳವಡಿಸುವ ಅಲಂಕಾರ ಯುಕ್ತವಾದ ಬಿಲ್ಲೆ. ೨. ಬಹುಮಾನವಾಗಿ ಅಥವಾ ಬಿರುದಾಗಿ ಕೊಡುವ ಬಿಲ್ಲೆ; ಮೆಡಲು.

ಪದನು (ನಾ). ಸರಿಯಾದ ರೀತಿ; ಔಚಿತ್ಯ.

ಪದಪು (ನಾ). ೧. ಪ್ರೀತಿ; ಒಲವು. ೨. ಮನೋಹರವಾದುದು. ೩. ಉತ್ಸಾಹ; ಹುರುಪು. ~ಕಾ(ಗಾ)ಱ(ರ) = ಸೊಗಸುಗಾರ; ಚೆಲುವ.

ಪದರ (ನಾ). ೧. ಮಡಿಕೆ. ೨. ಹಾಳೆ; ಪೊರೆ. ೩. ಸ್ತರ.

ಪದರು ೧. = ಪದಱು. (ನಾ). ೨. = ಪದರ. ೩. ಆಶ್ರಯ; ನೆಲೆ.

ಪದಱು(ರು) (ಕ್ರಿ). ೧. ಉದ್ವಿಗ್ನನಾಗು; ದುಡುಕು. ೨. ಅಸಂಬದ್ಧವಾಗಿ ಮಾತನಾಡು; ಬಡಬಡಿಸು.

ಪದವಿ (ನಾ). ೧. ದಾರಿ; ಮಾರ್ಗ. ೨. ಸ್ಥಿತಿ; ಇರವು. ೩. ಅಂತಸ್ತು; ವರ್ಗ. ೪. ಅಧಿಕಾರ; ಸ್ಥಾನ. ೫. ವಿಶ್ವವಿದ್ಯಾಲಯದ ಒಂದು ಪರೀಕ್ಷೆಯಲ್ಲಿ ತೇರ್ಗಡೆಯಾದಾಗ ಕೊಡುವ ಪ್ರಶಸ್ತಿ.

ಪದವೀದಾನ (ನಾ). ವಿಶ್ವವಿದ್ಯಾಲಯವು ಘಟಿಕೋತ್ಸವದಲ್ಲಿ ಯೋಗ್ಯತಾ ಪತ್ರವನ್ನು ಕೊಡುವಿಕೆ.

ಪದಾತಿ (ನಾ). ೧. ಕಾಲುನಡಗೆಯವನು; ದಾರಿಗ. ೨. ಕಾಲಾಳು.

ಪದಿ (ನಾ). ಹತ್ತು. ~ಮೊಗ = ಹತ್ತು ಮುಖಗಳು.

ಪದಿರ್(ರು) (ನಾ). ೧. ಎರಡು ಅರ್ಥಗಳನ್ನು ಕೊಡುವ ಮಾತು; ಶ್ಲೇಷೆ. ೨. ಒಗಟು; ಸಮಸ್ಯೆ. ~ನುಡಿ = ೧. ಶ್ಲೇಷೆಯಿಂದ ಕೂಡಿದ ಮಾತು. ೨. ಒಗಟು.

ಪದಿರಪಱೆ(ರೆ) (ನಾ). ಒಂದು ವಾದ್ಯ ವಿಶೇಷ.

ಪದುಗು (ಕ್ರಿ). ಉಡುಗು; ಬಾಗು.

ಪದುಮ = ಪದ್ಮ.

ಪದುಳ (ನಾ). ೧. ಸೌಖ್ಯ; ಕ್ಷೇಮ. ೨. ಸಮಾಧಾನ; ನೆಮ್ಮದಿ. ~ಇಗ = ೧. ಕ್ಷೇಮದಿಂದಿರುವವನು. ೨. ಸಹನೆಯಿಂದಿರುವವನು; ಸೈರಣೆಯಿರುವವನು. ~ಇಸು = ೧. ಕ್ಷೇಮದಿಂದಿರು. ೨. ನೆಮ್ಮದಿ ಹೊಂದು; ಸಮಾಧಾನ ತಾಳು.

ಪದೆ (ಕ್ರಿ). ೧. ಆಸೆಪಡು; ಬಯಸು. ೨. ಅದಿರು; ಸ್ಪಂದಿಸು. (ನಾ). ೩. ಆಸೆ; ಬಯಕೆ. ~ಇ(ಯಿ)ಸು = ಆಸೆಯನ್ನು ಹುಟ್ಟಿಸು; ಬಯಕೆಯುನ್ನುಂಟು ಮಾಡು.

ಪದೆಪು = ಪದವು.

ಪದ್ದು = ಪರ್ದು.

ಪದ್ಧತಿ (ನಾ). ೧. ಹೆಜ್ಜೆ; ಅಡಿ. ೨. ಹೆಜ್ಜೆಯ ಗುರುತು. ೩. ಮಾರ್ಗ; ದಾರಿ. ೪. ಸಂಪ್ರದಾಯ; ರೂಢಿ. ೫. ಸಾಲು; ಪಂಕ್ತಿ. ೬. ಕ್ರಮ; ವಿಧಾನ; ರೀತಿ. ೭. ವ್ರತ ನಿಯಮ.

ಪದ್ಮ (ನಾ). ೧. ತಾವರೆ; ಕಮಲ. ೨. ನೈದಿಲೆ. ೩. ಆನೆಯ ಮೈಮೇಲೆ ಕಾಣುವ ಬಿಳಿಯ ಚಿಬ್ಬು. ೪. ನೀರು; ಜಲ. ೫. ಕುಬೇರನ ನವನಿಧಿಗಳಲ್ಲಿ ಒಂದು. ೬. ಅಷ್ಟ ಸರ್ಪಗಳಲ್ಲಿ ಒಂದು. ೭. ವಕ್ರತೆ; ಡೊಂಕು. ೮. ಕೊಳ; ಸರೋವರ. ೯. ಧೈರ್ಯಶಾಲಿ; ದಿಟ್ಟ. ೧೦. ಚಂದ್ರ. ೧೧. ಒಂದು ಸಂಖ್ಯೆ; ನೂರುಕೋಟಿ. ~ಆಕರ = ತಾವರೆಯ ಕೊಳ, –ಸರೋವರ. ~ಆಸನ = ೧. ಕುಳಿತುಕೊಳ್ಳುವ ಒಂದು ಭಂಗಿ; ಒಂದು ಬಗೆಯ ಯೋಗಾಸನ. ೨. ಬ್ರಹ್ಮ. ~ಉದರ = ಕಮಲವನ್ನು ನಾಭಿಯಲ್ಲಿ ಉಳ್ಳವನು; ವಿಷ್ಣು. ~ಬಂಧು = ಕಮಲದ ಗೆಳೆಯ; ಸೂರ್ಯ. ~ರಾಗ = ೧. ಕಮಲದ ಬಣ್ಣ. ೨. ರತ್ನಗಳಲ್ಲಿ ಒಂದು; ಮಾಣಿಕ್ಯ. ~ಲೋಚನ = ಕಮಲದಂತೆ ಕಣ್ಣುಳ್ಳವನು; ವಿಷ್ಣು. ~ವ್ಯೂಹ = ೧. ಒಂದು ರೀತಿಯ ಸೈನ್ಯ ರಚನೆ. ೨. ಕಮಲಗಳ ಸಮೂಹ. ~ಸದ್ಮ = ೧. ಪದ್ಮಾಕರ. ೨. ಬ್ರಹ್ಮ.

ಪದ್ಮಜ (ನಾ). ಕಮಲದಲ್ಲಿ ಹುಟ್ಟಿದವನು; ಬ್ರಹ್ಮ. ~ಅಂಡ = ಬ್ರಹ್ಮಾಂಡ; ವಿಶ್ವ.

ಪದ್ಮಿ (ನಾ). ೧. ಕಮಲಗಳನ್ನುಳ್ಳುವು. ೨. ಆನೆ. ೩. ವಿಷ್ಣು.

ಪದ್ಮಿನಿ (ನಾ). ೧. ತಾವರೆ; ಕಮಲ. ೨. ತಾವರೆ ಕೊಳ; ಕಮಲಸರೋವರ. ೩. ತಾವರೆಗಳ ಸಮೂಹ. ೪. ಹಸ್ತಿನಿ, ಶಂಖಿನಿ, ಚಿತ್ತಿನಿ ಮತ್ತು ಪದ್ಮಿನಿಯೆಂಬ ಸ್ತ್ರೀಯರ ನಾಲ್ಕು ಜಾತಿಗಳಲ್ಲಿ ಕೊನೆಯದು.

ಪದ್ಮೆ (ನಾ). ಲಕ್ಷ್ಮಿ.

ಪದ್ಯ (ನಾ). ೧. ಛಂದೋಬದ್ಧವಾದ ಪದ ರಚನೆ. ೨. ಶೂದ್ರ. (ಗು). ೩. ಪದಗಳಿಗೆ ಸಂಬಂಧಿಸಿದ. ೪. ಪಾದಕ್ಕೆ ಸಂಬಂಧಿಸಿದ.

ಪದ್ಯೆ (ನಾ). ದಾರಿ; ಮಾರ್ಗ.

ಪನ್ = ಪಂ. ~ನೇಱು(ರಿ)ಳೆ = ಒಂದು ಜಾತಿಯ ಮರ ಮತ್ತು ಅದರ ಹಣ್ಣು.

ಪನವು (ನಾ). ಗೊತ್ತುಮಾಡಿಕೊಂಡ ಸ್ಥಳ; ಸಂಕೇತಸ್ಥಳ.

ಪನಸ = ಪಲಸು.

ಪನಸು = ಪಲಸು.

ಪನಿ (ಕ್ರಿ). ೧. ಹನಿ ಹನಿಯಾಗಿ ಬೀಳು; ತೊಟ್ಟಿಕ್ಕು. (ನಾ). ೨. ಹನಿ; ತೊಟ್ಟು. ~ನೀರ್ = ೧. ಹನಿ ಹನಿಯಾಗಿ ಬೀಳುವ ನೀರು; ತೊಟ್ಟುನೀರು. ೨. = ಪನ್ನೀರು.

ಪನಿಯಾರ (ನಾ). ಪ್ರಸಾದ; ಚರುಪು.

ಪನಿವಾರ = ಪನಿಯಾರ.

ಪನೆ (ನಾ). ೧. ಮೊನೆ ಹಲ್ಲು; ಹರಿತವಾದ ಹಲ್ಲು. ೨. ತಾಳೆಯಮರ; ಹನೆಮರ. ~ಬೆಲ್ಲ = ತಾಟಿಬೆಲ್ಲ.

ಪನ್ನ (ನಾ). ೧. ಗರ್ವ; ಅಹಂಕಾರ. ೨. ಬಟ್ಟೆಯ ಅಗಲ.

ಪನ್ನಂಗ (ನಾ). ೧. ಪಲ್ಲಕ್ಕಿಯ ಮೇಲು ಹೊದಿಕೆ. ೨. = ಪನ್ನಗ.

ಪನ್ನಗ (ನಾ). ಹಾವು; ಸರ್ಪ. ~ಅರಿ = ಹಾವಿನ ಹಗೆ; ಗರುಡ. ~ಭೂಷಣ = ಹಾವನ್ನು ಆಭರಣವನ್ನಾಗಿ ಉಳ್ಳವನು;

ಶಿವ. ~ರಾಜ = ಹಾವುಗಳ ಒಡೆಯ; ಆದಿಶೇಷ. ~ಶಯನ=ಹಾವನ್ನು ಹಾಸಿಗೆಯಾಗಿ ಉಳ್ಳವನು; ವಿಷ್ಣು.

ಪನ್ನತ (ನಾ). ಶೂರ; ವೀರ.

ಪನ್ನತಿಕೆ (ನಾ). ಪರಾಕ್ರಮ; ಶೌರ್ಯ.

ಪನ್ನತಿಕ್ಕೆ = ಪನ್ನತಿಕೆ. ~ವೆ(ವೆ)ಱು(ರು) =ಪರಾಕ್ರಮವನ್ನು ಹೊಂದು; ಧೈರ್ಯಗೊಳ್ಳು.

ಪನ್ನಾಡೆ (ನಾ). ತೆಂಗು ಅಥವಾ ತಾಳೆಗರಿಗಳ ಬುಡದಲ್ಲಿಯ ನಾರು.

ಪನ್ನಿ (ನಾ). ಜಂಭ; ಒಣಹೆಮ್ಮೆ; ಬಿಂಕ.

ಪನ್ನೀರು (ನಾ). ಸುಗಂಧಯುಕ್ತವಾದ ನೀರು. ~ಗುಲಾಬಿ = ಒಂದು ಜಾತಿಯ ಗುಲಾಬಿ. ~ದಾನಿ = ಪನ್ನೀರನ್ನು ಹಾಕಿಡುವ ಪಾತ್ರೆ.

ಪನ್ನೆ (ನಾ). ೧. ಕರ್ಪೂರ. ೨. ಕಿವಿಯ ಮೇಲಿನ ಕೂದಲನ್ನು ಕತ್ತರಿಸುವ ಒಂದು ಬಗೆ.

ಪಪ್ಪ (ನಾ). ದುರಹಂಕಾರ; ಗರ್ವ; ದರ್ಪ.

ಪಪ್ಪಡ (ನಾ). ಹಪ್ಪಳ.

ಪಪ್ಪಳ = ಪಪ್ಪಡ.

ಪಪ್ಪಾಯಿ (ನಾ). ಪರಂಗಿ ಗಿಡ ಮತ್ತು ಅದರ ಹಣ್ಣು.

ಪಪ್ಪು (ನಾ). ಒಡೆದ ಕಾಳು; ಬೇಳೆ.

ಪಪ್ಪುಳಿಕೆ (ನಾ). ಬೇಟೆಯಲ್ಲಿ ಪೊದೆಗಳನ್ನು ಬಡಿಯುವುದು; ಬೇಟೆ ಎಬ್ಬಿಸುವುದು; ಸೋವುವುದು.

ಪಬ್ಬ (ನಾ). ಪುಣ್ಯದಿನ; ಹಬ್ಬ; ಪರ್ವ.

ಪಯ ೧. = ಪಯಸ್ಸು. ೨. ಅಡಿ; ಪಾದ. ~ದಳ = ಪದಾತಿ ಸೈನ್ಯ. ~ಪಾಡು = ನಡೆಯುವ ರೀತಿ, -ಭಂಗಿ.

ಪಯಃಪತಿ (ನಾ). ಸಮುದ್ರದ ಒಡೆಯ; ವರುಣ.

ಪಯಣ (ನಾ). ಸಂಚಾರ; ಪ್ರಯಾಣ. ~ಇಗ = ಪ್ರಯಾಣಿಕ; ಪ್ರವಾಸಿ. ~ಇಸು = ಸಂಚಾರಕ್ಕೆ ಹೊರಡು; ಪ್ರಯಾಣ ಮಾಡು.

ಪಯನು (ನಾ). ಹಾಲು ಕೊಡುವ ಹಸು, ಎಮ್ಮೆ ಮುಂತಾದುವು. ~ಆಗು=ಪ್ರಯೋಜನಕ್ಕೆ ಬರು; ಫಲಕೊಡು.

ಪಯಶ್ಚರ (ನಾ). ನೀರಿನಲ್ಲಿ ಸಂಚರಿಸುವ ಪ್ರಾಣಿ; ಮೀನು, ಮೊಸಳೆ ಮುಂತಾದುವು.

ಪಯಸ್ವಿನಿ (ನಾ). ೧. ಹಾಲು ಕರೆಯುವ ಹಸು. ೨. ನೀರುಳ್ಳುದು; ನದಿ.

ಪಯಸ್ಸು (ನಾ). ೧. ನೀರು; ಜಲ. ೨. ಹಾಲು; ಕ್ಷೀರ.

ಪಯಿಕ (ನಾ). ಪ್ರಾಂತ್ಯ; ಜಿಲ್ಲೆ; ಕಂಪಣ.

ಪಯಿರ್(ರು) (ನಾ). ಬೆಳೆ; ತೆನೆಕೊಡುವ ಬೆಳೆ.

ಪಯೋಜ (ನಾ). ೧. ತಾವರೆ; ಕಮಲ. ೨. ಮೋಡ; ಮುಗಿಲು. ~ಮಿತ್ರ = ಕಮಲದ ಗೆಳೆಯ; ಸೂರ್ಯ.

ಪಯೋದ (ನಾ). ನೀರನ್ನು ಕೊಡುವುದು; ಮೋಡ. ~ಆಗಮ = ಮೋಡಗಳ ಬರುವಿಕೆ; ಮಳೆಗಾಲ.

ಪಯೋಧರ ೧. = ಪಯೋದ. ೨. ಸ್ತನ; ಮೊಲೆ. ೩. ಕಡಲು; ಸಮುದ್ರ. ೪. ಕಣ್ಣು; ನಯನ.

ಪಯೋಧಿ (ನಾ). ನೀರಿಗೆ ಆಶ್ರಯವಾದುದು; ಸಮುದ್ರ.

ಪಯೋನಿಧಿ ೧. = ಪಯೋಧಿ. ೨. ಹಾಲಿನ ಸಮುದ್ರ; ಕ್ಷೀರಸಾಗರ.

ಪಯೋರುಹ (ನಾ). ನೀರಿನಲ್ಲಿ ಹುಟ್ಟಿದುದು; ತಾವರೆ.

ಪಯ್ಸರ (ನಾ). ೧. ಜಾರುವುದು. ೨. ನಷ್ಟ; ಹಾನಿ. ~ಇಸು = ೧. ಜಾರು. ೨. ಕಳೆದುಹೋಗು; ನಷ್ಟವಾಗು.

ಪರ (ನಾ). ೧. ಅನ್ಯ; ಹೊರಗಿನವನು. ೨. ಕೈವಲ್ಯ; ಮೋಕ್ಷ. ೩. ಪಕ್ಷ; ಗುಂಪು-

೪. ಪ್ರತಿಯಾದುದು ; ವಿರುದ್ಧವಾದುದು. ೫. ಮುಂದುಗಡೆ ; ಎದುರು. ೬. ಹಗೆ ; ಶತ್ರು. (ಗು). ೭. ದೂರದ; ಹತ್ತಿರವಲ್ಲದ. ೮. ಮುಂದಿನ ; ಭವಿಷ್ಯದ. ೯. ಬೇರೆಯ ; ಅನ್ಯ. ೧೦. ಪರಿಚಯವಿಲ್ಲದ. ೧೧. ಶ್ರೇಷ್ಠವಾದ ; ಉತ್ತಮವಾದ. ೧೨. ಮಗ್ನವಾದ; ತಲ್ಲೀನವಾದ. ೧೩. ಅನಂತರದ. ~ಅರ್ಥ =೧. ಅತ್ಯುತ್ತಮವಾದುದು. ೨. ಇನ್ನೊಂದು ಭಾಗ. ~ಅವಲಂಬಿ = ಬೇರೆಯವರನ್ನು ಆಶ್ರಯಿಸಿರುವವನು; ಪರಾಧೀನ. ~ಅಹ್ನ = ಹಗಲಿನ ಉತ್ತರಭಾಗ; ಅಪರಾಹ್ನ. ~ಆಯತ್ತ=ಅನ್ಯರಿಗೆ ಅಧೀನವಾದ; ಪರಾಧೀನವಾದ. ~ಆವರ್ತನ=೧. ಹಿಂತಿರುಗುವಿಕೆ; ತಿರುಗಿಬರುವಿಕೆ. ೨. ಅದಲುಬದಲು; ಪಲ್ಲಟ. ~ಉಪಕಾರ=ಪರಹಿತ. ~ಕಾಲ = ಶತ್ರುಗಳಿಗೆ ಯಮನಂತಿರುವವನು. ~ಚಕ್ರ=೧. ಶತ್ರುಗಳ ಸೈನ್ಯ. ೨. ಶತ್ರುರಾಜ್ಯ. ~ಚಿಂತೆ= ಬೇರೆಯವರ ವಿಷಯವಾಗಿ ಚಿಂತಿಸುವುದು. ~ತಂತ್ರ = ಇನ್ನೊಬ್ಬರಿಗೆ ಅಧೀನವಾಗಿರುವುದು ; ಪರಾವಲಂಬನೆ. ~ತತ್ತ್ವ = ಅತ್ಯುತ್ತಮವಾದ ತತ್ತ್ವ; ಮೋಕ್ಷತತ್ತ್ವ; ಪರಮಾರ್ಥ. ~ದಾರ = ಪರಸ್ತ್ರೀ. ~ದೇಶಿ(ಸಿ) = ೧. ಹೊರನಾಡಿನವನು ; ಪರದೇಶದವನು. ೨. ದಿಕ್ಕಿಲ್ಲದವನು ; ಅನಾಥ. ~ಪುಷ್ಟ = ೧.ಬೇರೆಯವರಿಂದ ಪೋಷಿಸಲ್ಪಟ್ಟವನು; ಅನಾಥ. ೨. ಅನ್ಯರಿಂದ ಸಲಹಲ್ಪಟ್ಟುದು; ಕೋಗಿಲೆ. ~ಬಲ = ಶತ್ರುಸೈನ್ಯ. ~ಬೊಮ್ಮ = ಪರಬ್ರಹ್ಮ; ಪರಮಾತ್ಮ. ~ಭಾಗ = ಶ್ರೇಷ್ಠತೆ; ಅತ್ಯುನ್ನತಿ ~ವಶ(ಸ) = ೧. ಬೇರೆಯವರಿಗೆ ಅಧೀನವಾಗಿರುವಿಕೆ. ೨. ಬೇರೆಯವರಿಗೆ ಅಧೀನವಾದ; ಬೇರೆಯವರ ಇಚ್ಛೆಯನ್ನು ಅವಲಂಬಿಸಿದ. ೩. ಮೈಮರೆತ ; ಮೂರ್ಛೆಹೋದ. ೪. ಬೇರೆಯ ಭಾವನೆಗೆ ಮಾರುಹೋದ. ~ಹಿಂಸೆ=ಇತರರಿಗೆ ನೋವುಂಟುಮಾಡುವುದು. ~ಹಿತ = ಬೇರೆಯವರಿಗೆ ಒಳ್ಳೆಯದನ್ನು ಮಾಡುವುದು; ಪರೋಪಕಾರ.

ಪರಂಗಿ (ನಾ). ೧. ಪಾಶ್ಚಾತ್ಯದೇಶದವನು. ೨. ಒಂದು ಬಗೆಯ ಹಣ್ಣು ; ಪಪ್ಪಾಯಿ. ೩. ಒಂದು ಬಗೆಯ ರೋಗ; ಮೇಹ. ~ಟೋಪಿ = ಪಾಶ್ಚಿಮಾತ್ಯರು ಧರಿಸುವ ಒಂದು ಬಗೆಯ ಟೋಪಿ.

ಪರಂಜ (ನಾ). ೧. ಕತ್ತಿಯ ಅಲಗು ; ಖಡ್ಗಧಾರೆ. ೨. ಎಣ್ಣೆಯ ಗಾಣ. ೩. ನೊರೆ; ಬುರುಗು.

ಪರಂಜಯ ೧. = ಪರಂತಪ. ೨. ವರುಣ.

ಪರಂಜ್ಯೋತಿ (ನಾ). ದಿವ್ಯ ತೇಜಸ್ಸುಳ್ಳವನು; ಪರಮಾತ್ಮ.

ಪರಂತಪ (ನಾ). ಶತ್ರುಗಳಿಗೆ ತಾಪವನ್ನುಂಟುಮಾಡುವವನು.

ಪರಂತು (ಅ). ಆದರೂ ; ಆದರೆ.

ಪರಂಧಾಮ (ನಾ). ಶ್ರೇಷ್ಠವಾದ ನೆಲೆ; ಸ್ವರ್ಗ.

ಪರಂಪರೆ (ನಾ). ೧. ಕುಲ; ವಂಶ. ೨. ಸಾಲು; ಪರಿವಿಡಿ. ೩. ಸಂಪ್ರದಾಯ.

ಪರಕರಿಸು = ಪರಕಲಿಸು.

ಪರಕಲಿಸು (ಕ್ರಿ). ವಿಸ್ತಾರವಾಗಿ ಹರಡು.

ಪರಕಾರ (ನಾ). ಲಾಡಿ ಇರುವ ಲಂಗ.

ಪರಕಾಳೆ (ನಾ). ಒಂದು ಬಗೆಯ ಬಟ್ಟೆ.

ಪರಕೀಯ (ನಾ). ೧. ಹೊರಗಿನವನು ; ಅಪರಿಚಿತ. (ಗು). ೨. ಬೇರೆಯ ; ಅನ್ಯ.

ಪರಕೆ (ನಾ). ೧. ಹರಕೆ; ಆಶೀರ್ವಾದ. ೨.ಮುಡಿಪು; ಮೀಸಲು. ೩.ಕಸಗುಡಿಸುವ ಸಾಧನ; ಕಸಬರಲು.

ಪರಗಣೆ (ನಾ). ನಾಡಿನ ಒಂದು ಭಾಗ; ಜಿಲ್ಲೆ.

ಪರಗು (ಕ್ರಿ). ಕುಂಟೆಯಿಂದ ಹರತೆ ಹೊಡೆ; ಹರಗು.

ಪರಚು (ಕ್ರಿ). ಉಗುರಿನಿಂದ ಕೆರೆ, –ಗೀರು.
ಪರಜು (ನಾ). ೧. ಕತ್ತಿಯ ಅಲಗು ; ಖಡ್ಗ ಧಾರೆ. ೨. ಕತ್ತಿಯ ಹಿಡಿ, –ಹಿಡಿಕೆ.
ಪರಟೆ (ನಾ). ೧. ಮಣ್ಣಿನ ಚಿಕ್ಕಪಾತ್ರೆ. ೨. (ತೆಂಗು ಮೊದಲಾದುವುಗಳ) ಚಿಪ್ಪು; ಕರಟ. ೩. ಚಮಚದ ಅಗಲವಾದ ಮುಂಭಾಗ. ೪. ಮನೆಯ ಸುತ್ತಲಿನ ಪ್ರಾಕಾರ; ಪೌಳಿ. ೫. ಒರಟು ; ಬಿರುಸು. ~ತ(ದ)ಲೆ = ಒರಟುಕೂದಲುಳ್ಳ ತಲೆ ; ಬಿರುಸು ಕೂದಲಿನ ತಲೆ.
ಪರಡಿ (ನಾ). ೧. ಒಂದು ಬಗೆಯ ಗೌಲಿ ಮತ್ತು ಅದರಿಂದ ಮಾಡಿದ ಪಾಯಸ. ೨. ತಕ್ಕಡಿಯ ತಟ್ಟೆ. ೩. ಹರಟೆ. ೪. ಮರ ವನ್ನು ಕಡೆಯುವ ಯಂತ್ರ.
ಪರಡು ೧. = ಪರಚು. ೨. ಹರವು; ವಿಸ್ತರಿಸು. ೩. ಹಬ್ಬು ; ವ್ಯಾಪಿಸು. (ನಾ). ೪. ಹಿಮ್ಮಡಿಯ ಗಂಟು ; ಹರಡು.
ಪರಡೆ (ನಾ). ೧.ಒಂದು ಜಾತಿಯ ನೀರುಹಕ್ಕಿ; ಕೊಕ್ಕರೆ. ೨. ತಕ್ಕಡಿಯ ತಟ್ಟೆ.
ಪರಣ (ನಾ). ಜೀವ ; ಹರಣ.
ಪರತ್ರ = ಪರತ್ರೆ.
ಪರತ್ರೆ (ನಾ). ಪರಲೋಕ.
ಪರದ (ನಾ). ವ್ಯಾಪಾರಿ ; ವರ್ತಕ. ~ಇತಿ = ಪರದಿ.
ಪರದಿ (ನಾ). ೧. ವರ್ತಕನ ಹೆಂಡತಿ. ೨. ವರ್ತಕರ ಹೆಂಗಸು.
ಪರದು (ನಾ). ವ್ಯಾಪಾರ ; ಕ್ರಯವಿಕ್ರಯ. ~ಆಟ = ತಳಮಳ ; ಚಿಂತೆ. ~ಆಡು = ೧. ವ್ಯಾಪಾರ ಮಾಡು. ೨. ಉದ್ವಿಗ್ನತೆ ಯಿಂದ ಸುತ್ತಾಡು, –ಅಲೆದಾಡು.
ಪರದೆ (ನಾ). ತೆರೆ ; ಜವನಿಕೆ.
ಪರಪು (ಕ್ರಿ). ೧. ಹರಡು ; ವಿಸ್ತರಿಸು. (ನಾ). ೨. ವಿಸ್ತಾರ ; ಹರವು. ೩. ಒಂದು ಬಗೆಯ ಮೇಲೋಗರ.
ಪರಭಾರೆ (ನಾ). ೧. ಇತರರಿಗೆ ವಹಿಸುವುದು; ಬೇರೆಯವರಿಗೆ ವಹಿಸಿಕೊಡುವುದು. (ಅ). ೨. ಬೇರೆಯ ರೀತಿಯಲ್ಲಿ.
ಪರಭೃತ (ನಾ). ಅನ್ಯರಿಂದ ಪೋಷಿಸಲ್ಪಟ್ಟುದು; ಕೋಗಿಲೆ.
ಪರಮ (ನಾ). ೧. ಪರಮಾತ್ಮ. (ಗು). ೨. ಅತ್ಯುತ್ತಮವಾದ ; ಅತ್ಯಂತ ಶ್ರೇಷ್ಠ ವಾದ. ೩. ಬಹುದೂರದ. ~ಅಣು = ವಿಭಜಿಸಲಾಗದ ಅತ್ಯಂತ ಚಿಕ್ಕ ಕಣ. ~ಅನ್ನ = ೧. ಪಾಯಸ. ೨. ಪಕ್ವಾನ್ನ. ~ಅರ್ಥ = ೧. ಅತ್ಯಂತ ಶ್ರೇಷ್ಠವಾದ ಸತ್ಯ. ೨. ಶ್ರೇಷ್ಠವಾದ ಗುರಿ ; ಮೋಕ್ಷ. ~ಅವಧಿ = ಅತ್ಯಂತ ಕೊನೆಯ ಮಿತಿ, –ಎಲ್ಲೆ. ~ಆತ್ಮ = ೧. ದೇವರು. ೨. ಸೂರ್ಯ. ~ಆಯು = ಬಹುಕಾಲ ಬಾಳುವವನು ; ದೀರ್ಘಾಯು. ~ಈಶ್ವರ =ಪರಮಪುರುಷ. ~ಗತಿ=ಅತ್ಯುತ್ತಮವಾದ ಸ್ಥಾನ ; ಮೋಕ್ಷ. ~ಪದ = ಪರಮಗತಿ. ~ಪುರುಷ = ದೇವಾಧಿದೇವ; ಪರಮಾತ್ಮ. ~ಹಂಸ = ಶ್ರೇಷ್ಠವರ್ಗದ ಸಂನ್ಯಾಸಿ.
ಪರಮಾಯಿಷಿ (ನಾ). ೧. ಉತ್ತಮವಾದುದು. ೨. ಇಷ್ಟವಾದುದು; ಪ್ರೀತಿಪಾತ್ರವಾದುದು. (ಗು). ೩. ಉತ್ತಮವಾದ. ೪. ಇಷ್ಟವಾದ ; ಮೆಚ್ಚಿನ.
ಪರಮೇಷ್ಠಿ (ನಾ). ೧. ಶ್ರೇಷ್ಠದೈವ; ಬ್ರಹ್ಮ. ೨. ಅರ್ಹಂತ, ಆಚಾರ್ಯ, ಉಪಾಧ್ಯಾಯ, ಸಾಧು ಮತ್ತು ಸಿದ್ಧರೆಂಬ ಐದು ಜನ ಜೈನ ಗುರುಗಳು.
ಪರಲ್(ಲು,ಳ್,ಳು) (ನಾ). ಹರಳು ; ಕಲ್ಲು. ~ಕಾ(ಗಾ)ಯಿ = ಚೆನ್ನಾಗಿ ಬಲಿಯದ ಕಾಯಿ.
ಪರವಾನಗಿ (ನಾ). ಅನುಮತಿ ; ಒಪ್ಪಿಗೆ.
ಪರವಾನಿಗೆ = ಪರವಾನಗಿ.
ಪರವಿ (ನಾ). ಮಣ್ಣಿನ ಬಾನಿ ; ಹರವಿ.

ಪರವೆ = ಪರಿವೆ.
ಪರಶು (ನಾ). ಕೊಡಲಿ; ಕುಠಾರ. ~ರಾಮ = ಜಮದಗ್ನಿಯ ಮಗ.
ಪರಶುಧರ (ನಾ). ೧. ಕೊಡಲಿಯನ್ನು ಹಿಡಿದವನು. ೨. = ಪರಶುರಾಮ. ೩. ಗಣಪತಿ.
ಪರಸು (ಕ್ರಿ). ೧. ಆಶೀರ್ವಾದ ಮಾಡು; ಹರಸು. (ನಾ). ೨. = ಪರಶು.
ಪರಸೆ (ನಾ). ಉತ್ಸವ, ಜಾತ್ರೆ ಮುಂತಾದ ಸಂದರ್ಭಗಳಲ್ಲಿ ಕೂಡಿದ ಜನಸಂದಣಿ; ಪರಿಸೆ.
ಪರಸ್ಪರ (ಗು). ೧. ಒಬ್ಬೊಬ್ಬರಿಗೆ ಸಂಬಂಧಪಟ್ಟ. (ಅ). ೨. ತಮ್ಮತಮ್ಮಲ್ಲಿ; ಒಬ್ಬೊಬ್ಬರಲ್ಲಿ; ಅನ್ಯೋನ್ಯ.
ಪರಸ್ವ (ನಾ). ಬೇರೆಯವರ ಸಂಪತ್ತು; ಇತರರ ಸೊತ್ತು. ~ಹರಣ = ಬೇರೆಯವರ ಸಂಪತ್ತನ್ನು ಕದಿಯುವುದು.
ಪರಳಿಗ (ನಾ). ವ್ಯಭಿಚಾರಿ; ಜಾರ; ಹಾದರಿಗ.
ಪರಾಂಬರಿಕೆ (ನಾ). ಗಮನಿಸುವಿಕೆ; ಪರಿಶೀಲನೆ.
ಪರಾಂಬರಿಸು (ಕ್ರಿ). ಗಮನಿಸು; ಪರಿಶೀಲಿಸು.
ಪರಾಕಾಷ್ಠೆ (ನಾ). ಪರಮಾವಧಿ; ತುತ್ತತುದಿ.
ಪರಾಕು (ನಾ). ೧. ಜಾಗರೂಕತೆ; ಎಚ್ಚರಿಕೆ. ೨. ಕಡೆಗಣಿಸುವಿಕೆ; ಅಲಕ್ಷ್ಯ. ೩. ಹೊಗಳಿಕೆ; ಸ್ತುತಿ. ~ಮಾಡು = ೧. ಗಮನಕ್ಕೆ ತರು; ಅವಧಾನಕ್ಕೆ ತರು. ೨. ಕಡೆಗಣಿಸು; ನಿರ್ಲಕ್ಷಿಸು.
ಪರಾಕ್ರಮ (ನಾ). ೧. ಮೇಲೆ ಬೀಳುವುದು; ದಂಡೆತ್ತಿ ಹೋಗುವುದು. ೨. ಕಲಿತನ; ಶೌರ್ಯ. ೩. ಪ್ರಯತ್ನ. ~ಶಾಲಿ = ಪರಾಕ್ರಮಿ.
ಪರಾಕ್ರಮಿ (ನಾ). ಶೌರ್ಯವುಳ್ಳವನು; ಶೂರ.
ಪರಾಗ (ನಾ). ೧. ಹೂವಿನ ಧೂಳಿ. ೨. ಧೂಳು; ಹುಡಿ. ೩. ಹೂವಿನ ಮಕರಂದ; ಮಧು. ೪. ಗಂಧ, ಬುಕ್ಕಿಟ್ಟು ಮುಂತಾದ ಸುಗಂಧದ ಪುಡಿ. ೫. ಕೆಂಪು ಬಣ್ಣ; ಅರುಣವರ್ಣ. ೬. ಚಿನ್ನ; ಹೊನ್ನು. ~(ಂ)ಪೊ(ಬೊ)ರೆ = ಸುಗಂಧವನ್ನು ಬಳಿ, -ಲೇಪಿಸು.
ಪರಾಙ್ಮುಖ (ಗು). ೧. ಮುಖವನ್ನು ತಿರುಗಿಸಿದ; ವಿಮುಖ. ೨. ಕಡೆಗಣಿಸಿದ; ನಿರ್ಲಕ್ಷ್ಯ ಮಾಡಿದ. ೩. ಸೋತುಹೋದ; ವಿಮುಖನಾದ.
ಪರಾಜಯ (ನಾ). ೧. ಸೋಲು; ಅಪಜಯ. ೨. ನಷ್ಟ; ಹಾನಿ. ೩. ವಿಜಯ; ಗೆಲವು.
ಪರಾಜಿತ (ನಾ). ೧. ಸೋಲಿಸಲ್ಪಟ್ಟವನು. (ಗು). ೨. ಸೋತುಹೋದ; ಸೋಲಿಸಲ್ಪಟ್ಟ. ೩. ನ್ಯಾಯಾಲಯದಲ್ಲಿ ತಿರಸ್ಕೃತವಾದ; ಕಾನೂನುವಿರುದ್ಧವಾದ.
ಪರಾತ (ನಾ). ಅಗಲವಾದ ಹರಿವಾಣ, -ತಟ್ಟೆ.
ಪರಾತ್ಪರ (ನಾ). ೧. ಅತ್ಯಂತ ಶ್ರೇಷ್ಠವಾದುದು; ಅತ್ಯಂತ ಪವಿತ್ರವಾದುದು. (ಗು). ೨. ಅತ್ಯಂತ ಶ್ರೇಷ್ಠವಾದ.
ಪರಾಭವ (ನಾ). ೧. ಸೋಲು; ಅಪಜಯ. ೨. ತಿರಸ್ಕಾರ; ಅಸಡ್ಡೆ. ೩. ಒಂದು ಸಂವತ್ಸರದ ಹೆಸರು.
ಪರಾಭೂತಿ (ನಾ). ೧. ಸೋಲು; ಅಪಜಯ. ೨. ಅತ್ಯಂತ ಐಶ್ವರ್ಯ. ~ಪೆ(ವೆ)ಱು(ರು) = ಪರಾಭವ ಹೊಂದು; ಸೋಲು.
ಪರಾಮರಿಕೆ ೧. = ಪರಾಂಬರಿಕೆ. ೨. ಉಪಚಾರ; ಆರೈಕೆ.
ಪರಾಮರಿಸು ೧. = ಪರಾಂಬರಿಸು. ೨. ಆತಿಥ್ಯ ಮಾಡು; ಸತ್ಕರಿಸು.
ಪರಾಮರ್ಶ (ನಾ). ೧. ಮೇಲೆ ಬೀಳುವುದು; ಮುತ್ತಿಗೆ. ೨. ಜ್ಞಾಪಕ; ನೆನಪು. ೩. ಯೋಗಕ್ಷೇಮವನ್ನು ವಿಚಾರಿಸುವುದು. ೪. ಪರಿಶೀಲನೆ; ಪರಾಮರಿಕೆ.

ಪರಾಮರ್ಶೆ = ಘರಾಮರ್ಶ. ~ಇಸು= ಪರಾಮರಿಸು.

ಪರಾಮೃಷ್ಟ (ನಾ). ಪರಾಮರ್ಶೆಗೆ ಒಳಗಾದದು; ಪರಾಮರ್ಶಿತವಾದುದು.

ಪರಾಯಣ (ನಾ). ೧. ಹೋಗುವುದು. ೨. ಪರಮಗುರಿ, -ಧ್ಯೇಯ. ೩. ಒಂದು ವಿಷಯದಲ್ಲಿ ಬಹಳವಾಗಿ ಆಸಕ್ತನಾದವನು. (ಗು). ೪. ಯಾವುದಾದರೊಂದು ವಿಷಯದಲ್ಲಿ ಅತ್ಯಂತ ಆಸಕ್ತಿ ಹೊಂದಿದ. ೫. ತೊಡಗಿದ; ನಿರತ.

ಪರಾಯಿ (ನಾ). ಅನ್ಯ; ಪರಕೀಯ.

ಪರಾರಿ (ನಾ). ೧. ಕಳೆದ ವರ್ಷದ ಹಿಂದಿನ ವರ್ಷ. ೨.ಓಡಿಹೋಗುವಿಕೆ; ಪಲಾಯನ.

ಪರಾವರ್ತಿಸು (ಕ್ರಿ). ಪಲ್ಲಟಗೊಳಿಸು; ಬದಲಾಯಿಸು.

ಪರಾವೃತ್ತ (ಗು).ಹಿಂತಿರುಗಿದ; ಹಿಮ್ಮೆಟ್ಟಿದ.

ಪರಾಶರಿ (ನಾ). ತಪಸ್ವಿ; ಭಿಕ್ಷು.

ಪರಾಸು (ಗು). ಮರಣ ಹೊಂದಿದ; ಸತ್ತ.

ಪರಿ (ಕ್ರಿ). ೧. ಮುಂದುವರಿ; ಚಲಿಸು. ೨. ಹರಿ; ಪ್ರವಹಿಸು. ೩. ನಿವಾರಣೆಯಾಗು; ಕಳೆ. ೪. ಪ್ರಸರಿಸು; ಹರಡು. ೫. ಸಾಧ್ಯವಾಗು; ನೀಗು. ೬. = ಪಜು. (ನಾ). ೭. ನಡೆ; ಓಡಾಟ. ೮. ನೀರಿನ ಪ್ರವಾಹ. ೯. ಕ್ರಮ; ರೀತಿ. ~ಕಾಱ(ಱ) = ಓಡುತ್ತ ಹೋಗಿ ಸುದ್ದಿಯನ್ನು ಮುಟ್ಟಿಸುವವನು; ಹರಿಕಾರ. ~ಕಾಲ್(ಲು) = ಹರಿಯುತ್ತಿರುವ ಕಾಲುವೆ. ~ಕಾ(ಗಾ)ಲುವೆ = ಪರಿಕಾಲ್. ~ಕೊ(ಗೊ)ಳ್ = ೧. ಓಡು; ಧಾವಿಸು. ೨. ಬೆನ್ನಟ್ಟು; ಹಿಂಬಾಲಿಸು.

ಪರಿಕರ (ನಾ). ೧. ಸಾಮಗ್ರಿ; ಸಲಕರಣೆ; ಉಪಕರಣ. ೨. ಅನುಯಾಯಿ. ೩. ಸುತ್ತುಮುತ್ತಲಿನ ಜನ; ಪರಿವಾರ. ೪. ನಡುಪಟ್ಟಿ. ೫. ಸಮೂಹ; ಗುಂಪು. ೬. ಸಿದ್ಧತೆ; ಸಜ್ಜು. ೭. ಪ್ರಾರಂಭ; ಮೊದಲು. ~ಇಸು = ಸಿದ್ಧತೆಮಾಡು.

ಪರಿಕರಣೆ (ನಾ). ಸಜ್ಜು; ವ್ಯವಸ್ಥೆ.

ಪರಿಕರ್ಮಿ (ನಾ). ೧. ಆಳು; ಸೇವಕ. ೨. ಸೇವೆ; ಕೈಂಕರ್ಯ. ೩. ಅಲಂಕರಿಸಿಕೊಳ್ಳುವುದು.

ಪರಿಕಲಿತ (ಗು). ಕೂಡಿದ; ಬೆರೆತ.

ಪರಿಕಲಿಸು (ಕ್ರಿ). ತುಂಬು; ವ್ಯಾಪಿಸು.

ಪರಿಕಲ್ಪ (ನಾ). ನಿಶ್ಚಯ; ತೀರ್ಮಾನ.

ಪರಿಕಲ್ಪಿತ (ಗು): ತೀರ್ಮಾನಿಸಿದ; ನಿಶ್ಚಯಿಸಿದ.

ಪರಿಕಾಂಕ್ಷೆ (ನಾ). ಹಿರಿಯ ಬಯಕೆ; ದೊಡ್ಡ ಆಸೆ.

ಪರಿಕಾರ ೧. = ಪರಕಾರ. ೨. ಆಹಾರವನ್ನು ಉಪ್ಪು, ಮೆಣಸು ಮುಂತಾದ ಸಂಬಾರ ಪದಾರ್ಥಗಳಿಂದ ಸಂಸ್ಕರಿಸುವುದು.

ಪರಿಕೂಟ (ನಾ). ಹೆಬ್ಬಾಗಿಲು; ಅಗಸೆ.

ಪರಿಕೆ (ನಾ). ೧. ಪರೀಕ್ಷೆ. ೨. = ಪರಿಖೆ. ~ಇಸು = ಒರೆಹಚ್ಚಿನೋಡು; ಪರೀಕ್ಷಿಸು.

ಪರಿಕ್ರಮಣ (ನಾ). ಸುತ್ತುವುದು; ಬಳಸುವುದು.

ಪರಿಕ್ರಿಯೆ (ನಾ). ಸುತ್ತುವರಿಯುವಿಕೆ.

ಪರಿಕ್ಷುಬ್ಧ (ಗು). ಅಲ್ಲೋಲಕಲ್ಲೋಲವಾದ; ಕದಡಿದ.

ಪರಿಕ್ಷೇಪ (ನಾ). ಸುತ್ತಲೂ ಎಸೆಯುವಿಕೆ; ರಭಸವಾಗಿ ಎಸೆಯುವಿಕೆ.

ಪರಿಖೆ (ನಾ). ಕಂದಕ; ಅಗಳ್ತೆ.

ಪರಿಖ್ಯಾತಿ (ನಾ). ಪ್ರಖ್ಯಾತಿ; ಪ್ರಸಿದ್ಧಿ.

ಪರಿಗಣನ (ನಾ). ಖಚಿತವಾದ ಲೆಕ್ಕಾಚಾರ.

ಪರಿಗಣನೆ = ಪರಿಗಣನ.

ಪರಿಗಣಿಸು (ಕ್ರಿ). ಲೆಕ್ಕಕ್ಕೆ ತೆಗೆದುಕೊಳ್ಳು.

ಪರಿಗತ (ಗು). ೧. ಸುತ್ತುವರಿದ; ಹರಡಿದ. ೨. ಹೊಂದಿದ; ಪಡೆದ. ೩. ಮರೆತ. ೪. ತಿಳಿದ; ಅರಿತುಕೊಂಡ.

ಪರಿಗಲಿ(ಳಿ)ತ (ಗು). ೧. ಉರುಳಿಬಿದ್ದ; ತಲೆಕೆಳಗಾದ. ೨. ಕರಗಿದ.

ಪರಿಗೂಢ (ಗು). ಅತ್ಯಂತ ಗೂಢನಾದ; ತಿಳಿಯಲು ಅಶಕ್ಯವಾದ.

ಪರಿಗೃಹೀತ (ನಾ). ೧. ತೆಗೆದುಕೊಂಡುದು. (ಗು). ೨. ತೆಗೆದುಕೊಂಡ.

ಪರಿಗೆ (ನಾ). ಥಾಲು; ಗುರಾಣಿ; ಹರಿಗೆ.

ಪರಿಗೋಲ್ = ಪಱುಗೋಲ್.

ಪರಿಗ್ರಹ (ನಾ). ೧. ಹಿಡಿಯುವುದು; ಗ್ರಹಿಸುವುದು. ೨. ಸ್ವೀಕರಿಸುವುದು; ಪಡೆಯುವುದು. ೩. ಕೊಡುಗೆ; ದಾನ. ೪. ಆಸ್ತಿ; ಸಂಪತ್ತು. ೫. ಮದುವೆ; ಪಾಣಿಗ್ರಹಣ. ೬. ಮನ್ನಣೆ. ೭. ಸುತ್ತುಮುತ್ತಲಿನ ಜನ; ಪರಿವಾರ. ೮. ಮಾಸಲು ಪಡೆ. ~ಇಸು = ೧. ಸ್ವೀಕರಿಸು. ೨. ವಶಪಡಿಸಿಕೊಳ್ಳು. ೩. ಮದುವೆಯಾಗು; ಕೈಹಿಡಿ.

ಪರಿಘ (ನಾ). ೧. ಅಗುಳಿ; ಲಾಳವಿಂಡಿಗೆ. ೨. ಒಂದು ಬಗೆಯ ಆಯುಧ. ೩. ಹೊಡೆತ; ಪೆಟ್ಟು.

ಪರಿಘಾತ (ನಾ). ೧. ಕೊಲ್ಲುವಿಕೆ. ೨. ಒಂದು ಬಗೆಯ ಆಯುಧ; ಕಬ್ಬಿಣದ ಗದೆ.

ಪರಿಚಯ (ನಾ). ಗುರುತು; ಸಲಿಗೆ; ಸದರ.

ಪರಿಚರ = ಪರಿಚಾರಕ.

ಪರಿಚರ್ಯೆ (ನಾ). ೧. ಸೇವೆ; ಶುಶ್ರೂಷೆ. ೨. ಪೂಜೆ; ಆರಾಧನೆ.

ಪರಿಚಾರ (ನಾ). ೧. ಸೇವೆ; ಶುಶ್ರೂಷೆ. ೨. = ಪರಿಚಾರಕ.

ಪರಿಚಾರಕ (ನಾ). ಸೇವಕ; ಆಳು.

ಪರಿಚಾರಿಕೆ (ನಾ). ೧. ಪರಿಚರ್ಯೆ; ಸೇವೆ. ೨. ಸೇವಕಿ; ದಾಸಿ.

ಪರಿಚಿತ (ನಾ). ೧. ಗುರುತುಳ್ಳವನು; ಪರಿಚಯವುಳ್ಳವನು. (ಗು). ೨. ಗುರುತುಳ್ಳ; ಪರಿಚಯವುಳ್ಳ. ೩. ತುಂಬಿದ; ರಾಶಿಯಾದ.

ಪರಿಚಿತಿ (ನಾ). ತಿಳಿವು; ಪರಿಚಯ.

ಪರಿಚ್ಛದ (ನಾ). ೧. ಹೊದೆಯುವ ವಸ್ತ್ರ; ಹೊದಿಕೆ. ೨. ಉಪಕರಣ; ಸಾಮುಗ್ರಿ. ೩. ಪರಿವಾರ.

ಪರಿಚ್ಛೇದ ೧. = ಪರಿಚ್ಛೇದನ. ೨. ಮಿತಿ; ಗಡಿ. ೩. ಪುಸ್ತಕದ ಸರ್ಗ, -ಅಧ್ಯಾಯ. ೪. ತೀರ್ಮಾನ; ನಿರ್ಧಾರ. ~ಇಸು = ತೀರ್ಮಾನಿಸು; ನಿರ್ಧರಿಸು.

ಪರಿಚ್ಛೇದನ (ನಾ). ಕತ್ತರಿಸುವುದು; ಕಡಿಯುವುದು.

ಪರಿಚ್ಯುತ (ಗು). ಕೆಳಗೆ ಬಿದ್ದ; ಕಳಚಿದ.

ಪರಿಜನ (ನಾ). ಸೇವಕವರ್ಗ; ಪರಿವಾರ.

ಪರಿಜು (ನಾ). ೧. ರೂಪು; ಆಕಾರ. ೨. ರೀತಿ; ಬಗೆ.

ಪರಿಜ್ಞಾನ (ನಾ). ಸರಿಯಾದ ಜ್ಞಾನ; ಪೂರ್ಣ ಅರಿವು.

ಪರಿಣತ (ಗು). ೧. ಬಾಗಿದ; ಬಗ್ಗಿದ. ೨. ವಯಸ್ಸಾದ; ಮುಪ್ಪಾದ. ೩. ಪಕ್ವವಾದ; ಪ್ರೌಢನಾದ. ೪. ನೈಪುಣ್ಯವುಳ್ಳ.

ಪರಿಣತಿ (ನಾ). ೧. ಬಾಗುವಿಕೆ; ಬಗ್ಗುವಿಕೆ. ೨. ನೈಪುಣ್ಯ; ಪ್ರೌಢಿಮೆ.

ಪರಿಣದ್ಧ (ಗು). ೧. ಕಟ್ಟಲ್ಪಟ್ಟ; ಬಂಧಿಸಲ್ಪಟ್ಟ. ೨. ವಿಶಾಲವಾದ; ಅಗಲವಾದ.

ಪರಿಣಮಿಸು (ಕ್ರಿ). ೧. ಫಲಕೊಡು; ಫಲಿಸು; ಪ್ರಾಪ್ತವಾಗು. ೨. ಬಾಗು; ಬಗ್ಗು. ೩. ಬದಲಾವಣೆ ಹೊಂದು; ಮಾರ್ಪಾಟಾಗು. ೪. ಪಕ್ವವಾಗು; ಮಾಗು. ೫. ಮುಪ್ಪಾಗು. ೬. ಕೊನೆಗಾಣು. ೭. ಹರ್ಷಗೊಳ್ಳು; ಸಂತೋಷಿಸು.

ಪರಿಣಯ (ನಾ). ವಿವಾಹ; ಮದುವೆ.

ಪರಿಣಾಮ (ನಾ). ೧. ಕಾರ್ಯದ ಫಲ; ಫಲಿತಾಂಶ. ೨. ತುದಿ; ಅಂತ್ಯ. ೩. ಮಾರ್ಪಾಟು; ಬದಲಾವಣೆ.

೪. ವಿಸ್ತಾರ; ಹರವು. ೫. ಬಾಗುವಿಕೆ; ಬಗ್ಗುವಿಕೆ. ೬. ಸಂತೋಷ.

ಪರಿತಪಿಸು (ಕ್ರಿ). ಅತಿಯಾಗಿ ಕಳವಳಪಡು; ಬಹಳವಾಗಿ ದುಃಖಿಸು.

ಪರಿತಾಪ (ನಾ). ೧. ಅತಿಯಾದ ದುಃಖ, -ತಳಮಳ. ೨. ಜ್ವರ; ತಾಪ. ೩. ಸುಡುವುದು; ಪ್ರಜ್ವಲಿಸುವುದು.

ಪರಿತೋಷ (ನಾ). ಅತ್ಯಂತ ಆನಂದ,-ಹಿಗ್ಗು.

ಪರಿತ್ಯಕ್ತ (ಗು). ಬಿಡಲ್ಪಟ್ಟ; ತ್ಯಜಿಸಿದ.

ಪರಿತ್ಯಜಿಸು (ಕ್ರಿ). ಬಿಡು; ತೊರೆ.

ಪರಿತ್ರಾಣ (ನಾ). ೧. ರಕ್ಷಣೆ; ಕಾಪಾಡುವಿಕೆ. ೨. ಆತ್ಮರಕ್ಷಣೆ.

ಪರಿದಲಿ(ಳಿ)ತ (ಗು). ೧. ಪೂರ್ಣವಾಗಿ ಅರಳಿದ. ೨. ಸೀಳಿದ; ತುಂಡರಿಸಿದ.

ಪರಿಧಾನ (ನಾ). ವಸ್ತ್ರ; ಉಡುಪು.

ಪರಿಧಾವನ (ನಾ). ಓಡುವುದು.

ಪರಿಧಿ (ನಾ). ೧. ಸುತ್ತುವರಿದಿರುವುದು; ಬೇಲಿ; ಆವರಣ. ೨. ಸೂರ್ಯ ಮತ್ತು ಚಂದ್ರನ ಸುತ್ತಲಿನ ಮಂಡಲ; ಪರಿವೇಷ. ೩. ದಿಗಂತ; ದಿಕ್ಕಿನ ತುದಿ. ೪. ಸುತ್ತುಗೆರೆ; ಆವರಣರೇಖೆ. ೫. ಮರ; ವೃಕ್ಷ. ೬. ನೀರು; ಜಲ.

ಪರಿಪಂಥಿ (ನಾ). ಶತ್ರು; ಹಗೆ.

ಪರಿಪಕ್ವ (ಗು). ೧. ಚೆನ್ನಾಗಿ ಮಾಗಿದ, -ಕಳಿತ. ೨. ಚೆನ್ನಾಗಿ ಬೆಂದ. ೩. ಚೆನ್ನಾಗಿ ತಿಳಿದ.

ಪರಿಪಾಕ (ನಾ). ಸಂಪೂರ್ಣವಾಗಿ ಪಕ್ವವಾಗಿರುವುದು.

ಪರಿಪಾಟ (ನಾ). ರೂಢಿ; ಪದ್ಧತಿ; ರೀತಿ.

ಪರಿಪಾಟಿ ೧. = ಪರಿಪಾಟ. ೨. ಸಾಲು; ಪಂಕ್ತಿ; ಶ್ರೇಣಿ.

ಪರಿಪಾಲ (ನಾ). ಕಾಪಾಡುವವನು; ರಕ್ಷಕ.

ಪರಿಪಾಲನ (ನಾ). ಕಾಪಾಡುವಿಕೆ; ರಕ್ಷಣೆ.

ಪರಿಪಾಲನೆ = ಪರಿಪಾಲನ.

ಪರಿಪಾಲಿಸು (ಕ್ರಿ). ಕಾಪಾಡು; ರಕ್ಷಿಸು; ಸಲಹು.

ಪರಿಪುಷ್ಟ (ಗು). ಪುಷ್ಟಿಗೊಂಡ; ಚೆನ್ನಾಗಿ ಬೆಳೆದ.

ಪರಿಪೂರ್ಣ (ಗು). ಸಂಪೂರ್ಣವಾದ; ಪೂರ್ತಿಯಾದ.

ಪರಿಭವ (ನಾ). ೧. ತಿರಸ್ಕಾರ; ಅನಾದರ. ೨. ಸೋಲು; ಪರಾಜಯ. ~ಇಸು = ೧. ಅವಮಾನಗೊಳಿಸು; ಅವಹೇಳನ ಮಾಡು. ೨. ಸೋಲಿಸು; ಪರಾಜಯಗೊಳಿಸು.

ಪರಿಭಾವ (ನಾ). ೧. ತಿರಸ್ಕಾರ. ೨. ಆಲೋಚನೆ; ಚಿಂತನೆ.

ಪರಿಭಾಷೆ (ನಾ). ೧. ನಿರೂಪಣೆ; ವಿವರಣೆ. ೨. ನಿಂದೆ; ಬಯ್ಗುಳು. ೩. ಪಾರಿಭಾಷಿಕ ಶಬ್ದ.

ಪರಿಭ್ರಮಣ (ನಾ). ತಿರುಗುವುದು; ಸುತ್ತುವುದು.

ಪರಿಮಲ(ಳ) (ನಾ). ಸುಗಂಧ; ಸುವಾಸನೆ. ~ಇಸು = ಸುವಾಸನೆಯನ್ನು ಬೀರು, -ಹರಡು.

ಪರಿಮಾಣ (ನಾ). ಪ್ರಮಾಣ; ಅಳತೆ.

ಪರಿಮಾರ್ಜನೆ (ನಾ). ತೊಳೆಯುವಿಕೆ; ಶುಚಿಮಾಡುವುದು.

ಪರಿಮಿತ (ಗು). ೧. ಅಳತೆಗೆ ಒಳಪಟ್ಟ; ಅಳೆದ. ೨. ಮಿತಿಯುಳ್ಳ; ಮೇರೆಯುಳ್ಳ.

ಪರಿಮಿತಿ (ನಾ). ೧. ಅಳತೆ. ೨. ಮೇರೆ; ಗಡಿ.

ಪರಿಮಿಲಿ(ಳಿ)ತ (ಗು). ಮಿಶ್ರವಾದ; ಬೆರೆತ.

ಪರಿಯಂಕ = ಪರ್ಯಂಕ.

ಪರಿಯಂತ = ಪರ್ಯಂತ.

ಪರಿಯಟನ = ಪರ್ಯಟನ.

ಪರಿಯಣ (ನಾ). ಹರಿವಾಣ; ಅಗಲವಾದ ತಟ್ಟೆ.

ಪರಿಯಾಣ = ಪರಿಯಣ.
ಪರಿರಂಭ (ನಾ). ಅಪ್ಪುಗೆ ; ಆಲಿಂಗನ. ~ಣಿಸು = ಅಪ್ಪಿಕೊಳ್ಳು ; ಆಲಿಂಗಿಸು.
ಪರಿರಂಭಣ = ಪರಿರಂಭ.
ಪರಿವರ್ತನ (ನಾ). ೧. ಬದಲಾವಣೆ ; ಮಾರ್ಪಾಟು. ೨. ವಿನಿಮಯ. ೩. ತಿರುಗುವಿಕೆ ; ಚಲಿಸುವಿಕೆ.
ಪರಿವರ್ತನೆ = ಪರಿವರ್ತನ.
ಪರಿವರ್ತಿಸು (ಕ್ರಿ). ೧. ತಿರುಗು ; ಚಲಿಸು. ೨. ಬದಲಾಯಿಸು ; ಪಲ್ಲಟಗೊಳಿಸು.
ಪರಿವರ್ಧಿನಿ (ನಾ). ೧. ಬೆಳೆಯುವುದು ; ವೃದ್ಧಿ. ೨. ಛಂದಸ್ಸಿನಲ್ಲಿ ಒಂದು ಷಟ್ಪದಿಯ ಹೆಸರು.
ಪರಿವಾದ (ನಾ). ನಿಂದೆ ; ಮೂದಲಿಕೆ.
ಪರಿವಾದಿನಿ (ನಾ). ಏಳು ತಂತಿಗಳುಳ್ಳ ವೀಣೆ.
ಪರಿವಾರ (ನಾ). ೧. ಸುತ್ತಲಿನ ಜನ ; ಪರಿಜನ. ೨. ಸೇನೆ ; ದಂಡು.
ಪರಿವು (ನಾ). ಓಟ ; ಚಲನೆ.
ಪರಿವೃಢ (ನಾ). ಒಡೆಯ ; ಪ್ರಭು.
ಪರಿವೃತ (ಗು). ಆವರಿಸಿದ ; ಸುತ್ತುವರಿದ.
ಪರಿವೃತ್ತಿ (ನಾ). ೧. ಹಿಂದಿರುಗುವುದು. ೨. ವಿನಿಮಯ; ಮಾರಾಟ. ೩. ಸುತ್ತುವರಿದಿರುವುದು ; ಸುತ್ತುಗಟ್ಟಿರುವುದು.
ಪರಿವೆ (ನಾ). ಅರಿವು ; ಜ್ಞಾನ.
ಪರಿವೇಷ (ನಾ). ೧. ಸುತ್ತುವರಿದಿರುವುದು ; ಆವರಿಸಿರುವುದು. ೨. ವೃತ್ತದ ಸುತ್ತಳತೆ ; ಪರಿಧಿ. ೩. ಸೂರ್ಯ ಅಥವಾ ಚಂದ್ರನ ಸುತ್ತಲಿನ ಪ್ರಭಾವಲಯ ; ಗುಡಿಕಟ್ಟು.
ಪರಿವೇಷಣ = ಪರಿವೇಷ.
ಪರಿವೇಷ್ಟಿಸು (ಕ್ರಿ). ಸುತ್ತುವರಿ ; ಆವರಿಸು.
ಪರಿವ್ರಾಜಕ (ನಾ). ಒಂದು ಕಡೆಯಲ್ಲಿ ನಿಲ್ಲದ ಸಂನ್ಯಾಸಿ.
ಪರಿಶಿಷ್ಟ (ನಾ). ೧. ಪುಸ್ತಕದಲ್ಲಿ ಕೊನೆಗೆ ಉಳಿದ ಅಂಶಗಳನ್ನು ಸೇರಿಸಿದ ಭಾಗ ; ಅನುಬಂಧ. (ಗು). ೨. ಉಳಿದ. ೩. ಪೂರ್ತಿಯಾದ.
ಪರಿಶೀಲನೆ (ನಾ). ಸೂಕ್ಷ್ಮವಾಗಿ ನೋಡುವುದು ; ಕೂಲಂಕಷವಾಗಿ ನೋಡುವುದು.
ಪರಿಶೀಲಿಸು (ಕ್ರಿ). ಸೂಕ್ಷ್ಮವಾಗಿ ನೋಡು.
ಪರಿಶುದ್ಧ (ಗು). ಅತ್ಯಂತ ಶುದ್ಧವಾದ ; ಕಲ್ಮಷವಿಲ್ಲದ.
ಪರಿಶೆ = ಪರಸೆ.
ಪರಿಶೋಧನೆ (ನಾ). ೧. ಕಂಡುಹಿಡಿಯುವಿಕೆ. ೨. ಶುದ್ಧಿಮಾಡುವಿಕೆ. ೩. ತಿದ್ದುಪಡಿ.
ಪರಿಶೋಧಿಸು (ಕ್ರಿ). ೧. ಸೂಕ್ಷ್ಮವಾಗಿ ಪರಿಶೀಲಿಸು ; ಕೂಲಂಕಷವಾಗಿ ನೋಡು. ೨. ಶುದ್ಧಗೊಳಿಸು.
ಪರಿಶೋಭಿಸು (ಕ್ರಿ). ಪ್ರಕಾಶಿಸು ; ಬೆಳಗು.
ಪರಿಶ್ರಮ (ನಾ). ೧. ಬಳಲಿಕೆ ; ಆಯಾಸ. ೨. ಅನುಭವ ; ತಿಳಿವಳಿಕೆ.
ಪರಿಷತ್ತು (ನಾ). ೧. ಸಂಘ ; ಸಂಸ್ಥೆ. ೨. ಸಭೆ ; ಸಮ್ಮೇಳನ.
ಪರಿಷೆ = ಪರಸೆ.
ಪರಿಷೇಕ (ನಾ). ಚಿಮುಕಿಸುವುದು ; ಸಿಂಚನ.
ಪರಿಷೇಚನ (ನಾ). (ಊಟದ ಎಲೆಯ) ಸುತ್ತಲೂ ನೀರನ್ನು ಸಿಂಪಡಿಸುವುದು.
ಪರಿಷ್ಕರಿಸು (ಕ್ರಿ). ಶುದ್ಧಗೊಳಿಸು ; ಒಪ್ಪಮಾಡು.
ಪರಿಷ್ಕಾರ (ನಾ). ೧. ಶುದ್ಧಿಗೊಳಿಸುವುದು ; ಒಪ್ಪಮಾಡುವುದು. ೨. ಅಲಂಕಾರ ; ಭೂಷಣ.
ಪರಿಷ್ಕೃತ (ಗು). ೧. ತಿದ್ದಿದ ; ಸರಿಪಡಿಸಿದ. ೨. ಅಂದವಾದ. ~ಮುದ್ರಣ = ಸರಿಗೊಳಿಸಿ ಮತ್ತೊಮ್ಮೆ ಅಚ್ಚುಮಾಡಿದುದು.
ಪರಿಷ್ವಂಗ (ನಾ). ಅಪ್ಪುಗೆ ; ಆಲಿಂಗನ.
ಪರಿಸಂಖ್ಯೆ (ನಾ) ೧. ಒಂದು ಅರ್ಥಾಲಂಕಾರ. ೨. ಒಟ್ಟುಸಂಖ್ಯೆ.
ಪರಿಸಮಾಪ್ತಿ (ನಾ). ಮುಕ್ತಾಯ ; ಕೊನೆ.

ಪರಿಸರ (ನಾ). ೧. ಸನ್ನಿವೇಶ; ಸುತ್ತುಮುತ್ತು. ೨. ಸಾಮೀಪ್ಯ. ೩. ಸಾವು; ಮರಣ. ೪. ನಿಯಮ; ವಿಧಿ. ೫. ಹರಹು; ವಿಸ್ತಾರ.

ಪರಿಸರಣ (ನಾ). ೧. ಓಟ; ಓಡುವುದು. ೨. ಆಚ್ಛಾದಿಸುಪಿಕೆ. ೩. ಪರಿಸರ; ಸನ್ನಿವೇಶ.

ಪರಿಸೆ = ಪರಸೆ.

ಪರಿಸ್ತರಣ (ನಾ). ೧. ಹಬ್ಬುವುದು; ವ್ಯಾಪಿಸುವುದು. ೨. ಮೇಜುಂಕಟ್ಟು; ಕಾರಣೆ.

ಪರಿಹರ = ಪರಿಹಾರ. ~ಇಸು = ನಿವಾರಿಸು; ಹೋಗಲಾಡಿಸು.

ಪರಿಹಾರ (ನಾ). ೧. ತ್ಯಜಿಸುವುದು; ತ್ಯಾಗ. ೨. ಪ್ರಾಯಶ್ಚಿತ್ತ. ೩. ತೆರಿಗೆಗಳಿಂದ ವಿನಾಯಿತಿ. ೪. ನಿವಾರಣೆ; ಹೋಗಲಾಡಿಸುವುದು.

ಪರಿಹಾರ್ಯ (ನಾ). ೧. ಕಂಕಣ; ಬಳೆ. (ಗು). ೨. ಬಿಡುವುದಕ್ಕೆ ಯೋಗ್ಯವಾದ; ಬಿಡಲ್ಪಡುವ.

ಪರಿಹಾಸ (ನಾ). ೧. ವಿನೋದ; ಸರಸ. ೨. ಅಪಹಾಸ್ಯ; ಗೇಲಿ; ಅಣಕ. ೩. = ಪರಿಹಾಸಕ.

ಪರಿಹಾಸಕ (ನಾ). ಕುಚೋದ್ಯಗಾರ; ವಿದೂಷಕ.

ಪರಿಹಾಸ್ಯ (ನಾ).೧. ಅಣಕ; ಪರಿಹಾಸ. (ಗು). ೨. ಹಾಸ್ಯಕ್ಕೆ ಯೋಗ್ಯವಾದ; ಹಾಸ್ಯಾಸ್ಪದ.

ಪರೀಕ್ಷಕ (ನಾ). ೧. ಪರೀಕ್ಷೆ ಮಾಡುವವನು; ತಜ್ಞ. (ಗು). ೨. ಕೂಲಂಕಷವಾಗಿ ನೋಡುವ.

ಪರೀಕ್ಷೆ (ನಾ). ೧. ಪರಿಶೀಲನೆ; ತಪ್ಪುಒಪ್ಪುಗಳ ವಿಮರ್ಶೆ. ೨. ಮೌಲ್ಯಮಾಪನ ಕ್ರಮ. ~ಇಸು = ಪರಿಕಿಸು.

ಪರುಟವ (ನಾ). ೧. ವಿಸ್ತಾರ; ಹರಹು. ೨. ಬೇಸರ ತರಿಸುವ ಮಾತು. ~ಇಸು = ೧. ಹಬ್ಬು; ಹರಡು. ೨. ವಿಸ್ತರಿಸಿ ಹೇಳು; ವಿವರವಾಗಿ ಹೇಳು.

ಪರುಠವಣೆ = ಪರುಟವ.

ಪರುವ = ಪರ್ವ.

ಪರುಷ (ನಾ). ೧. ಹಗೆ; ವೈರಿ. ೨. ಕಳ್ಳತನ; ಚೌರ್ಯ. ೩. ಧೈರ್ಯ; ದಿಟ್ಟತನ. ೪. ಚಿನ್ನ; ಹೊನ್ನು. ೫. ಶುದ್ಧವಾದದು; ಸ್ವಚ್ಛವಾದುದು. ೬. ಮುಟ್ಟಿದುದನ್ನು ಚಿನ್ನವನ್ನಾಗಿ ಮಾಡುವ ಶಿಲೆ; ಸ್ಪರ್ಶಮಣಿ. ೭. ಒರಟಾದುದು; ಕಠಿನವಾದುದು.

ಪರುಸ (ನಾ). ೧. ಸ್ಪರ್ಶ; ತಾಗುವುದು. ೨. ಸ್ಪರ್ಶಮಣಿ.

ಪರೆ (ಕ್ರಿ).೧. ಹರಡು; ವ್ಯಾಪಿಸು. ೨. ಚೆಲ್ಲಾಪಿಲ್ಲಿಯಾಗು; ಚೆದರು. ೩. ಸೂರ್ಯೋದಯವಾಗು; ಬೆಳಕು ಹರಿ. (ನಾ). ೪. = ಪಱೆ. ೫. ಪ್ರಾತಃಕಾಲ; ಬೆಳಗಿನ ಜಾವ. ೬. ವಿಸ್ತಾರ; ಹರಹು. ೭. ಪೊರೆ; ಪದರ.

ಪರೆಪು (ಕ್ರಿ). ೧. ಹರಡು; ವಿಸ್ತರಿಸು. (ನಾ). ೨. ಹರಡಿದುದು; ವಿಸ್ತರಿಸಿದುದು.

ಪರೇತ (ನಾ). ೧. ಹೆಣ; ಶವ. ೨. ಭೂತ; ಪ್ರೇತ. (ಗು). ೩. ಅಗಲಿದ; ದೂರವಾದ. ~ಪತಿ = ಪ್ರೇತಗಳ ಒಡೆಯ; ಯಮ. ~ವನ = ಸುಡುಗಾಡು; ಮಸಣ.

ಪರೋಕ್ಷ (ನಾ). ೧. ಕಣ್ಣಿಗೆ ಕಾಣದಿರುವುದು; ದೃಷ್ಟಿಗೆ ದೂರವಾಗಿರುವುದು. (ಗು). ೨. ದೃಷ್ಟಿಗೆ ದೂರವಾದ; ನೋಟಕ್ಕೆ ಮೀರಿದ.

ಪರೋಟಾ (ನಾ). ಒಂದು ಬಗೆಯ ಗೋಧಿ ರೊಟ್ಟಿ.

ಪಱ(ರ)ಮೆ (ನಾ). ದುಂಬಿ; ಭ್ರಮರ.

ಪಱ(ರ)ವೆ (ನಾ). ಹಕ್ಕಿ; ಪಕ್ಷಿ.

ಪಱಿ(ರಿ) (ಕ್ರಿ). ೧. ಕಡಿ; ಕತ್ತರಿಸು. ೨. ಕೀಳು; ಹರಿ. ೩. ಕತ್ತರಿಸಲ್ಪಡು. ೪. ಚೆದರು; ಚೆಲ್ಲಾಪಿಲ್ಲಿಯಾಗು. ೫. ಸಿಂಗರಿಸು; ಅಲಂಕರಿಸು.

(ನಾ). ೬. ಕತ್ತರಿಸುವಿಕೆ. ೭. ಹಾರುವುದು; ಕುಪ್ಪಳಿಸುವುದು; ನೆಗೆತ. ೮. ಚಲಿಸುವಿಕೆ; ಧಾವಿಸುವಿಕೆ. ೯. ಅಲಂಕಾರ; ಭೂಷಣ. ~ತ(ದ)ಲೆ=ಕತ್ತರಿಸಲ್ಪಟ್ಟ ತಲೆ. ~ಪಡು = ೧. ಕತ್ತರಿಸಲ್ಪಡು. ೨. ಚೆದರು. ೩. ನಿಂತು ಹೋಗು; ಮುಗಿ. ೪. ಅಲಂಕಾರಗೊಳ್ಳು; ಸಿಂಗರಿಸಲ್ಪಡು. ~ಬಾ(ವಾ)ಯ್ = ಹರಕುಬಾಯಿ; ಗುಟ್ಟು ನಿಲ್ಲದ ಬಾಯಿ.

ಪಱಿ(ರಿ)ಮುಱಿ(ರಿ) (ನಾ). ೧. ಒಂದು ಬಗೆಯ ಆಟ. ೨. ಸಂಭ್ರಮ; ಸಡಗರ.

ಪಱು(ರು)ಗೋಲ್ (ನಾ). ನೀರನ್ನು ದಾಟುವ ಸಾಧನ; ಹರಿಗೋಲು.

ಪಱೆ(ರೆ) (ಕ್ರಿ). ೧. ಚೆದರು; ಚೆಲ್ಲಾಪಿಲ್ಲಿಯಾಗು. (ನಾ). ೨. ಒಂದು ಬಗೆಯ ಚರ್ಮವಾದ್ಯ; ತಮಟೆ; ಹರೆ. ೩. ತೆಗಳಿಕೆ; ನಿಂದೆ. ೪. ಬಲಹೀನತೆ; ನಿತ್ರಾಣ. ೫. ಕಣ್ಣಿನ ರೆಪ್ಪೆ; ಎವೆ. ೬. ಕೃಶತ್ವ; ತೆಳ್ಳಗಿರುವುದು. ~ಕಾಱ(ರ) = ಹರೆ ಬಡಿಯುವವನು. ~ಕು(ಗು)ಟ್ಟು = ಹರೆಯನ್ನು ಬಾರಿಸು; ತಮಟೆ ಬಡಿ. ~ಪೊ(ವೊ)ೞ್ತು(ಳ್ತು) = ಹರೆಯನ್ನು ಬಾರಿಸುವ ಹೊತ್ತು; ಮುಂಜಾವ.

ಪರ್ಚು (ಕ್ರಿ). ೧. ಪಿಸುಮಾತನ್ನಾಡು; ಪಿಸುಗುಟ್ಟು. ೨. ಹಂಚು. (ನಾ). ೩. ಗುಟ್ಟು; ಪಿಸುಮಾತು.

ಪರ್ಜನ್ಯ (ನಾ). ೧. ಮಳೆ. ೨. ಮಳೆಯ ಮೋಡ; ಕಾರ್ಮೋಡ. ೩. ಗುಡುಗು. ೪. ಇಂದ್ರ. ೫. ಕಾಠಿನ್ಯ; ಒರಟುತನ. ~ಜಪ=ಮಳೆಗಾಗಿ ಮಾಡುವ ಪ್ರಾರ್ಥನೆ. ~ಮಾಪಕ = ಮಳೆಯ ಪ್ರಮಾಣವನ್ನು ಅಳೆಯುವ ಸಾಧನ.

ಪರ್ಣ (ನಾ). ೧. ರೆಕ್ಕೆ; ಗರಿ. ೨. ಎಲೆ. ೩. ಮುತ್ತುಗದ ಮರ. ~ಅಶನ=೧. ಎಲೆಗಳನ್ನು ತಿಂದು ಜೀವಿಸುವುದು. ೨. ಮೋಡ. ~ಕುಟಿ = ಎಲೆ ಮತ್ತು ಹುಲ್ಲಿನಿಂದ ಕಟ್ಟಿದ ಮನೆ. ~ಘಟಿಕೆ = ಎಲೆಯಿಂದ ಮಾಡಿದ ಪಾತ್ರೆ; ದೊನ್ನೆ. ~ವಿಕ್ರಯಿ = ಎಲೆಯನ್ನು ಮಾರುವ ವ್ಯಕ್ತಿ. ~ಶಾಲೆ = ಪರ್ಣಕುಟಿ.

ಪರ್ದು (ನಾ). ೧. ಒಂದು ಜಾತಿಯ ಪಕ್ಷಿ; ಹದ್ದು. ೨. ಗರುಡ.

ಪರ್ದುದೇರ (ನಾ). ಗರುಡನನ್ನು ವಾಹನವನ್ನಾಗುಳ್ಳವನು; ವಿಷ್ಣು.

ಪರ್ಪಕೆ (ನಾ). ಒರಟುತನ; ಕಾಠಿನ್ಯ; ಕರ್ಕಶತೆ.

ಪರ್ಪರೀಕ (ನಾ). ೧. ಸೂರ್ಯ; ನೇಸರು. ೨. ಅಗ್ನಿ; ಬೆಂಕಿ. ೩. ಕೊಳ; ಪುಷ್ಕರಿಣಿ.

ಪರ್ಬ = ಪರ್ವ.

ಪರ್ಬತ = ಪರ್ವತ.

ಪರ್ಬು (ಕ್ರಿ). ೧. ಹಬ್ಬು; ವ್ಯಾಪಿಸು. (ನಾ). ೨. = ಪರ್ಬುಗೆ.

ಪರ್ಬುಗೆ (ನಾ). ಹಬ್ಬುವಿಕೆ; ವಿಸ್ತರಿಸುವಿಕೆ.

ಪರ್ಯಂಕ (ನಾ). ೧. ಮೆತ್ತೆ; ಹಾಸುಗೆ. ೨. = ಪಲ್ಯಂಕ.

ಪರ್ಯಂತ (ನಾ). ೧. ಎಲ್ಲೆ; ಗಡಿ. (ಅ). ೨. ವರೆಗೆ; ತನಕ.

ಪರ್ಯಟನ (ನಾ). ಸಂಚಾರ; ತಿರುಗಾಟ.

ಪರ್ಯಟನೆ = ಪರ್ಯಟನ.

ಪರ್ಯಯ (ನಾ). ೧. ಪಲ್ಲಟ; ಬದಲಾವಣೆ. ೨. ಅವ್ಯವಸ್ಥೆ. ೩. ಕಾಲ ಸರಿಯುವಿಕೆ. ೪. ಸುತ್ತುಗಟ್ಟುವಿಕೆ; ಬಳಸುವಿಕೆ. ೫. ವಿರೋಧ. ೬. ಕರ್ತವ್ಯವನ್ನು ಅಲಕ್ಷಿಸುವುದು.

ಪರ್ಯವಸಾನ (ನಾ). ೧. ಅಂತ್ಯ; ಕೊನೆ. ೨. ನಿರ್ಣಯ.

ಪರ್ಯವಸಾಯಿ (ನಾ). ಕೊನೆಗೊಂಡುದು; ಮುಗಿದುದು.

ಪರ್ಯವಸ್ಥೆ (ನಾ). ವಿರೋಧ; ಪ್ರತಿಭಟನೆ.

ಪರ್ಯಷ್ಟಿ (ನಾ). ಆಹಾರ.

ಪರ್ಯಾಕುಲ (ನಾ). ೧. ಗಡಿಬಿಡಿ; ಗೊಂದಲ. (ಗು). ೨. ಕಳವಳಗೊಂಡ ; ಬೆದರಿದ.

ಪರ್ಯಾಣ ೧. = ಪರಿಯಣ. ೨. ಜೀನು ; ತಡಿ.

ಪರ್ಯಾಪ್ತ (ಗು). ೧. ಹೊಂದಿದ ; ಪಡೆದ. ೨. ಮುಗಿದ ; ಕೊನೆಗೊಂಡ. ೩. ತೃಪ್ತಿಗೊಂಡ ; ತಣಿದ.

ಪರ್ಯಾಪ್ತಿ (ನಾ). ೧. ಹೊಂದುವುದು ; ಪಡೆಯುವುದು. ೨. ಮುಕ್ತಾಯ ; ಕೊನೆ. ೩. ತೃಪ್ತಿ. ೪. ರಕ್ಷಣೆ.

ಪರ್ಯಾಯ (ನಾ). ೧. ತಿರುಗುವುದು ; ಸುತ್ತಾಡುವುದು. ೨. ಅನುಕ್ರಮ ; ಸರದಿ. ೩. ಅವಕಾಶ; ಸಂದರ್ಭ. ೪.=ಪರ್ಯಾಯ ಪದ. ~ಪದ=ಒಂದು ಪದದ ಅರ್ಥವನ್ನೇ ಕೊಡುವ ಮತ್ತೊಂದು ಪದ ; ಸಮಾನಾರ್ಥಕ ಪದ.

ಪರ್ಯಾಲೋಚನೆ (ನಾ). ಚೆನ್ನಾಗಿ ವಿಚಾರ ಮಾಡುವುದು ; ಕೂಲಂಕಷವಾಗಿ ಯೋಚಿಸುವಿಕೆ.

ಪರ್ಯಾಲೋಚಿಸು (ಕ್ರಿ). ಚೆನ್ನಾಗಿ ವಿಚಾರ ಮಾಡು ; ಕೂಲಂಕಷವಾಗಿ ಯೋಚಿಸು.

ಪರ್ಯಾಹಾರ (ನಾ). ೧. ಕಾವಡಿ ; ಅಡ್ಡೆ. ೨. ತಲೆಹೊರೆ.

ಪರ್ಬುಗ (ನಾ). ಋಣಾನುಬಂಧ ; ಸಂಬಂಧ.

ಪರ್ವ (ನಾ). ೧. ಹಬ್ಬ; ಉತ್ಸವ. ೨. ಗ್ರಂಥಿ; ಗಂಟು. ೩. ಅಧ್ಯಾಯ ; ವಿಭಾಗ. ೪. ಕಾಲವಿಭಾಗ. ೫. ಅವಕಾಶ; ಸಂದರ್ಭ. ೬. ಸಂಕ್ರಮಣಕಾಲ.

ಪರ್ವತ (ನಾ). ಬೆಟ್ಟ. ~ಆಶಯ=ಬೆಟ್ಟದ ಮೇಲೆ ತಂಗುವುದು; ಮೋಡ. ~ಉಪತ್ಯಕ = ಪರ್ವತದ ಕೆಳಗಿನ ಭೂಮಿ; ತಪ್ಪಲು.

ಪರ್ವಳಿಸು (ಕ್ರಿ). ಪಕ್ಕಕ್ಕೆ ಹೋಗು ; ಅರುಗಾಗು.

ಪರ್ವು = ಪರ್ಬು.

ಪಲ್ (ನಾ). ಹಲ್ಲು ; ದಂತ. ~ಇಲಿ =೧. ಹಲ್ಲಿಲ್ಲದುದು. ೨. ಹಲ್ಲು ಇಲ್ಲದಿರುವವನು. ~ಕ(ಗ)ಚ್ಚು = ಹಲ್ಲುಕಡಿ ; ಆಕ್ರೋಶಗೊಳ್ಳು. ~ಕಿ(ಗಿ)ಱು(ರಿ) =೧. ಹಲ್ಲನ್ನು ತೋರಿಸು. ೨. ಯಾಚಿಸು ; ಬೇಡು. ~ಸುಲಿ=ಹಲ್ಲುಜ್ಜು ; ಹಲ್ಲುತಿಕ್ಕು.

ಪಲ (ನಾ). ೧. ಒಂದು ತೂಕ ; ತೊಲದ ನೂರನೆಯ ಒಂದು ಭಾಗ. ೨. ಕಾಲದ ಒಂದು ಪರಿಗಣನೆ. ೩. ಮಾಂಸ ; ಬಾಡು. ೪. ಒಣಹುಲ್ಲು. (ಸ). ೫. = ಪಲವು. ~ಕಾ(ಗಾ)ಲ = ದೀರ್ಘಕಾಲ ; ಬಹುಕಾಲ.

ಪಲ(ಂ)ಬು = ಪಲುಂಬು.

ಪಲಗಂಡ (ನಾ). ಇಟ್ಟಿಗೆ ಅಥವಾ ಗಾರೆ ಕೆಲಸದವನು ; ಉಪ್ಪಾರ.

ಪಲಗಣ್ಣ (ನಾ). ಹಲವು ಕಣ್ಣುಗಳುಳ್ಳವನು; ಇಂದ್ರ.

ಪಲಗೆ (ನಾ). ೧. ಲೋಹದ ಅಥವಾ ಮರದ ಹಾಳೆ. ೨. ಚದುರಂಗ, ಪಗಡೆ ಮುಂತಾದುವುಗಳ ಹಾಸು. ೩. ಒಂದು ಬಗೆಯ ಚರ್ಮವಾದ್ಯ. ೪. ಗುರಾಣಿ ; ಹರಿಗೆ. ೫. ಬರೆಯುವ ಕಪ್ಪುಹಲಗೆ.

ಪಲಲ (ನಾ). ೧. ಮಾಂಸ ; ಬಾಡು. ೨. ಸಣ್ಣಕೊಳ ; ಕುಂಟೆ. ೩. ರಾಡಿ ; ಕೆಸರು. ೪. ರಾಕ್ಷಸ.

ಪಲವು (ಸ) ಹಲವು ; ಅನೇಕ.

ಪಲಸು (ನಾ). ಒಂದು ಜಾತಿಯ ಮರ ಮತ್ತು ಅದರ ಹಣ್ಣು ; ಹಲಸು.

ಪಲಾಂಡು (ನಾ). ಈರುಳ್ಳಿ ; ನೀರುಳ್ಳಿ.

ಪಲಾಯನ (ನಾ). ಓಟ ; ಓಡುವಿಕೆ ; ಪರಾರಿ.

ಪಲಾಲ (ನಾ). ಹುಲ್ಲು ; ಗರಿಕೆ.

ಪಲಾವು (ನಾ). ೧. ತರಕಾರಿಗಳಿಂದ ಮಾಡಿದ ಒಂದು ಬಗೆಯ ಭಾತು. ೨. ಬಿರಿಯಾನಿ.

ಪಲಾಶ (ನಾ). ೧. ಎಲೆ; ಪತ್ರ. ೨. ಮುಳ್ಳು ಮುತ್ತುಗದ ಮರ. ೩. ಒಗರು; ತಿಕ್ತ.

ಪಲಿ(ಳಿ)ತ (ನಾ). ೧. ನರೆತ ಕೂದಲು; ಬಿಳಿಯ ಕೂದಲು. ೨. ಮುಪ್ಪು; ವೃದ್ಧಾಪ್ಯ. ೩. ಒಂದು ಕಾಲಮಾನ. (ಗು). ೪. ಕೂದಲು ಬೆಳ್ಳಗಾದ, –ನರೆತ. ೫. ಮುಪ್ಪಾದ; ವಯಸ್ಸಾದ.

ಪಲು(ಂ)ಬು (ಕ್ರಿ). ದುಃಖಿಸು; ಹಲುಬು; ಕೊರಗು.

ಪಲುಕು (ಕ್ರಿ). ೧. ಕಂಪಿಸು; ಅದಿರು. ೨. ಮಾತನಾಡು; ನುಡಿ. ೩. ಕೆಟ್ಟ ಮಾತನಾಡು; ಅಪಶಕುನ ನುಡಿ. (ನಾ). ೪. ಕಂಪನ; ನಡುಕ.

ಪಲ್ಟಿ (ನಾ). ತಲೆಕೆಳಗಾಗುವಿಕೆ; ಲಾಗ. ~ಹಾಕು = ೧. ಬುಡಮೇಲಾಗು; ಲಾಗ ಹಾಕು. ೨. ಸೋಲು; ಪರಾಜಯ ಹೊಂದು. ~ಹೊಡೆ = ಪಲ್ಟಿಹಾಕು.

ಪಲ್ಯ (ನಾ). ೧. ಕಾಯಿಪಲ್ಲೆ; ತರಕಾರಿ. ೨. ತರಕಾರಿಯಿಂದ ಮಾಡುವ ಒಂದು ಬಗೆಯ ವ್ಯಂಜನ ಪದಾರ್ಥ.

ಪಲ್ಯಂಕ (ನಾ). ೧. ಮಂಚ. ೨. ಪಲ್ಲಕ್ಕಿ.

ಪಲ್ಲ (ನಾ). ೧. ಕೋರೆಗಳಿಂದ ಕೂಡಿದುದು; ಆನೆ. ೨. ಅಳಿ; ಭ್ರಮರ; ದುಂಬಿ. ೩. ಧಾನ್ಯದ ಒಂದು ಅಳತೆ; ೧ನೂರು ಸೇರುಗಳ ಅಳತೆ. ~ಮಣಿ(ರಿ) = ಆನೆಯ ಮರಿ.

ಪಲ್ಲಂಗ (ನಾ). ಮಂಚ.

ಪಲ್ಲಕ್ಕಿ (ನಾ). ಮೇಸೆ; ಡೋಲಿ.

ಪಲ್ಲಟ (ನಾ). ೧. ಬದಲಾವಣೆ; ವ್ಯತ್ಯಾಸ. ೨. ತಲೆಕೆಳಗು; ಅವ್ಯವಸ್ಥೆ.

ಪಲ್ಲಣ (ನಾ). ಜೀನು; ತಡಿ; ಹಲ್ಲಣ. ~ಇಸು = ಕುದುರೆಗೆ ಜೀನುಹಾಕು.

ಪಲ್ಲವ (ನಾ). ೧. ಚಿಗುರು; ತಳಿರು. ೨. ಹವಳ; ಪ್ರವಾಳ. ೩. ಮುತ್ತು; ಮೌಕ್ತಿಕ. ೪. ಒಂದು ತಂತಿವಾದ್ಯ. ೫. ಮೊಳಕೆ. ೬. ಜಾರ; ವಿಟ. ೭. ಆನೆಯ ಮರಿ. ೮. ಕೂದಲು; ಕೇಶ. ೯. ಜಲ್ಲರಿ; ಜಾಲರಿ. ~ಇಸು = ೧. ಚಿಗುರು; ಕುಡಿಯಿಡು. ೨. ವಿಸ್ತರಿಸು; ಹಬ್ಬು.

ಪಲ್ಲವಕ (ನಾ). ೧. ಜಾರ; ವಿಟ. ೨. ಒಂದು ಜಾತಿಯ ಮೀನು.

ಪಲ್ಲವಿ (ನಾ). ೧. ಹಾಡಿನ ಆರಂಭದಲ್ಲಿದ್ದು ನುಡಿಗೊಂದು ಸಲ ಪುನರಾವರ್ತನೆಗೊಳ್ಳುವ ಭಾಗ. ೨. ಚಿಗುರು; ತಳಿರು.

ಪಲ್ಲವಿತ (ಗು). ಚಿಗುರಿದ; ಮೊಳೆತ.

ಪಲ್ಲಿ (ನಾ). ೧. ಗೌಳಿ; ಹಲ್ಲಿ. ೨. ಹಳ್ಳಿ; ಗ್ರಾಮ. ೩. ಮನೆ; ನಿವಾಸ.

ಪಲ್ಲು = ಪಲ್.

ಪಲ್ವಲ (ನಾ). ಕೊಳ; ಸಣ್ಣ ಹೊಂಡ.

ಪವಡಿಸು (ಕ್ರಿ). ಮಲಗು; ನಿದ್ರಿಸು.

ಪವಣ್(ಣು) (ನಾ). ೧. ಅಳತೆ; ಪ್ರಮಾಣ; ಹವಣು. ೨. ಶಕ್ತಿ; ಸಾಮರ್ಥ್ಯ. ೩. ಕಟ್ಟಳೆ; ನಿಯಮ. ೪. ತಕ್ಕುದು; ಸರಿಯಾದುದು. ೫. ಶಕ್ಯತೆ; ಸಾಧ್ಯತೆ. ೬. ಕ್ರಮ; ರೀತಿ. ೭. ಹೊಂದಾವಣಿಕೆ; ಹೊಂದಿಕೆ. ~ಅಱಿ(ರಿ) = ೧. ಸಂಧರ್ಭವನ್ನು ತಿಳಿ. ೨. ನಿಜವನ್ನು ತಿಳಿ; ಕಾರಣವನ್ನು ತಿಳಿ.

ಪವಣಿಕೆ (ನಾ). ೧. ಜೋಡಣೆ; ಹೊಂದಿಕೆ. ೨. ಪ್ರಯತ್ನ; ಯೋಜನೆ; ಹವಣಿಕೆ.

ಪವಣಿಗೆ (ನಾ). ೧. ಪೋಣಿಸುವಿಕೆ. ೨. ಹೊಂದಿಕೆ; ಕೂಡಿಕೆ.

ಪವಣಿಸು (ಕ್ರಿ). ೧. ಪೋಣಿಸು; ಕೋ. ೨. ಹೊಂದಿಸು; ಕೂಡಿಸು; ಜೋಡಿಸು. ೩. ಚೆನ್ನಾಗಿ ತಿಳಿ, –ಅರಿ.

ಪವನ (ನಾ). ಗಾಳಿ; ವಾಯು. ~ಅಶನ = ಗಾಳಿಯನ್ನು ಆಹಾರವಾಗುಳ್ಳುದು; ಹಾವು.

ಪವನಜ (ನಾ). ೧. ವಾಯುವಿನ ಮಗ. ೨. ಆಂಜನೇಯ. ೩. ಭೀಮ.

ಪವನು (ನಾ). ಬಂಗಾರದ ನಾಣ್ಯ; ಸವರನ್ನು.

ಪವಮಾನ (ನಾ). ೧. ಗಾಳಿ; ಎಲರು. ೨. ಗಾರ್ಹಪತ್ಯವೆಂಬ ಅಗ್ನಿ. ~ಸೂನು = ಪವನಜ.

ಪವಳ (ನಾ). ಹವಳ; ಪ್ರವಾಳ.

ಪವಾಡ (ನಾ). ಆಶ್ಚರ್ಯಕರವಾದ ಘಟನೆ; ಅತಿಮಾನುಷ ಕಾರ್ಯ. ~ಪುರುಷ = ಪವಾಡಗಳನ್ನು ಮಾಡುವವನು.

ಪವಾಡಿ (ನಾ). ೧. ಹೊಗಳುಭಟ್ಟ; ಸ್ತುತಿ ಪಾಠಕ. ೨. = ಪವಾಡಪುರುಷ.

ಪವಿ (ನಾ). ೧. ಇಂದ್ರನ ವಜ್ರಾಯುಧ. ೨. ಸಿಡಿಲು. ~ಘಾತ = ವಜ್ರಾಯುಧದ ಪೆಟ್ಟು.

ಪವಿತ್ರ (ನಾ). ೧. ಶುದ್ಧೀಕರಿಸುವ ಸಾಧನ. ೨. ಒಂದು ಜಾತಿಯ ಹುಲ್ಲು; ದರ್ಭೆ. ೩. ಪವಿತ್ರಸಂದರ್ಭಗಳಲ್ಲಿ ತೊಡುವ ದರ್ಭೆಯ ಉಂಗುರ. ೪. ಚಿನ್ನದ ಉಂಗುರ. ೫. ಜನಿವಾರ; ಯಜ್ಞೋಪವೀತ. ೬. ಕಿವಿಯ ಒಂದು ಆಭರಣ. ೭. ಸ್ವಚ್ಛವಾದುದು; ಶುಚಿಯಾದುದು. ೮. ನಡುವಿನ ಬೆರಳು. ೯. ಉತ್ಸವ; ಸಮಾರಂಭ. (ಗು). ೧೦. ಶುದ್ಧವಾದ; ನಿರ್ಮಲವಾದ.

ಪವುಢ = ಪ್ರೌಢ.

ಪವುಢೆ = ಪ್ರೌಢೆ.

ಪವುಸೆ (ನಾ). ೧. ಅಲಂಕಾರಕ್ಕಾಗಿ ಹೆಂಗಸರು ಅಂಗಗಳ ಮೇಲೆ ಬರೆದುಕೊಳ್ಳುವ ಚಿತ್ರ; ಮಕರಿಕಾಪತ್ರ. ೨. ಒಂದು ಜಾತಿಯ ಮರ.

ಪವುಳಿ = ಪೌಳಿ.

ಪವ್ವನೆ (ಅ). ಆಕಸ್ಮಿಕವಾಗಿ; ಇದ್ದಕ್ಕಿದ್ದಂತೆ.

ಪಶು (ನಾ). ೧. ಸಾಕಿದ ಪ್ರಾಣಿ; ದನ. ೨. ಹಸು; ಆಕಳು. ೩. ಕ್ರೂರ ಪ್ರಾಣಿ. ೪. ಬಲಿಗಾಗಿ ಅರ್ಪಿಸುವ ಪ್ರಾಣಿ. ೫. ಪ್ರಮಥಗಣ. ~ಪತಿ = ಪ್ರಮಥಗಣದ ಒಡೆಯ; ಶಿವ. ~ಪಾಲಕ = ದನಕರು ಮುಂತಾದುವನ್ನು ನೋಡಿಕೊಳ್ಳುವವನು; ಗೋಪಾಲಕ. ~ಸಂಪತ್ತು = ದನಕರು ಮುಂತಾದ ಪ್ರಾಣಿಸಂಪತ್ತು; ಗೋಸಂಪತ್ತು.

ಪಶ್ಚಾತ್ತಾಪ (ನಾ). ಮಾಡಿದ ತಪ್ಪುಕೆಲಸಕ್ಕಾಗಿ ಮರುಗುವಿಕೆ, –ವಿಷಾದಿಸುವಿಕೆ.

ಪಶ್ಚಿಮ (ನಾ). ೧. ಹಿಂಬದಿ; ಹಿಂಭಾಗ. ೨. ಪಡುವಣ ದಿಕ್ಕು. ~ಘಟ್ಟ = ಪಶ್ಚಿಮ ದಿಕ್ಕಿನ ಬೆಟ್ಟಗಳ ಸಾಲು.

ಪಸ (ನಾ). ೧. ಬಯಕೆ; ಅಪೇಕ್ಷೆ. ೨.= ಪಸವು. ~ಪ(ವ)ಡು = ಹಂಬಲಿಸು; ಬಯಸು.

ಪಸಂದ್(ದು) (ಗು). ಚೆನ್ನಾದ; ಸೊಗಸಾದ.

ಪಸದನ (ನಾ). ೧. ಅಲಂಕಾರ; ಪ್ರಸಾಧನ. ೨. ಆಭರಣ. ~(ಂ) ಕೊ (ಗೊ) ಳ್ = ಅಲಂಕರಿಸಿಕೊಳ್ಳು.

ಪಸಯಿತ (ನಾ). ಉಡುಪುಗಳನ್ನು ಸಿದ್ಧಪಡಿಸುವವನು, –ಸಜ್ಜುಗೊಳಿಸುವವನು; ಪಸಾಯಿತ.

ಪಸರ (ನಾ). ೧. ಹರಡುವಿಕೆ; ವಿಸ್ತರಣ. ೨. ಸಮೂಹ; ಗುಂಪು. ೩. ಸಲಿಗೆ; ಸದರ. ೪. ಅಂಗಡಿ; ಹಸರ. ೫. ಸಂಭಾವನೆ; ಉಡುಗೊರೆ. ~ಇಕೆ = ೧. ಹರಡುವಿಕೆ. ೨. ಅಂಗಡಿಯಲ್ಲಿಯ ಸಾಮಾನು; ಸರಕು. ~ಇಸು = ೧. ಹರಡು; ವಿಸ್ತರಿಸು. ೨. ಅಧಿಕವಾಗು; ಹೆಚ್ಚಾಗು. ~(ಂ)ಪ(ಬ)ಡೆ = ೧. ವಿಸ್ತಾರವನ್ನು ಹೊಂದು; ಅತಿಶಯವಾಗು. ೨. ಗುಂಪಾಗು.

ಪಸರು (ಕ್ರಿ). ಹರಡು; ವಿಸ್ತರಿಸು.

ಪಸಲೆ (ನಾ). ೧. ಎಳೆಯ ಹುಲ್ಲು; ಹಸುರು ಹುಲ್ಲು. ೨. ಹುಲ್ಲು ಬೆಳೆದ ನೆಲ; ಹುಲ್ಲುಗಾವಲು; ಹಸಲೆ.

ಪಸವು (ನಾ). ಬರ; ಕ್ಷಾಮ.

ಪಸಾದ = ಪ್ರಸಾದ.

ಪಸಾಯ (ನಾ). ಉಡುಗೊರೆ; ಸಂಭಾವನೆ; ಬಹುಮಾನ. ~ದಾನ = ಮೆಚ್ಚಿಕೆಯ ಬಹುಮಾನ.

ಪಸಾಯತ (ನಾ). ೧. ಸಾಮಂತರಾಜ. ೨. = ಪಸಾಯಿತ.

ಪಸಾಯನ = ಪಸಾಯ.

ಪಸಾಯಿತ ೧.=ಪಸಯಿತ. (ಗು). ೨. ತಣಿದ; ತೃಪ್ತಿಗೊಂಡ.

ಪಸಾರ (ನಾ). ೧. ಹರಡಿರುವ ಸ್ಥಿತಿ. ೨. = ಪಸಾರೆ.

ಪಸಾರೆ (ನಾ). ಗ್ರಂದಿಗೆ ಅಂಗಡಿ.

ಪಸಿ (ಕ್ರಿ). ೧. ಹಸಿವು ಉಂಟಾಗು; ಆಹಾರವನ್ನು ಬಯಸು. (ನಾ). ೨. ತೇವ; ಹಸಿ. ~ಅ(ಯಾ)ಱ(ರು) = ಒಣಗು; ಬತ್ತು.

ಪಸಿರ್ (ನಾ). ಹಸುರು; ಹಸುರುಬಣ್ಣ. ~ಕ(ಗ)ಲ್(ಲ್ಲು) = ಮರಕತಮಣಿ.

ಪಸಿವು (ನಾ). ಹಸಿವು; ಕ್ಷುಧೆ.

ಪಸು (ಕ್ರಿ). ೧. ವಿಭಾಗಿಸು; ತುಂಡುಮಾಡು. ೨. ಹಂಚು. (ನಾ). ೩. ಹಸಿವು. ೪. ಹಸುರುಬಣ್ಣ. ೫. ಎಳೆತನ; ಎಳಮೆ. ೬. ಆಕಳು; ಹಸು. ೭. ಮೃಗ; ಪ್ರಾಣಿ. ~ಕೂ(ಗೂ)ಸು = ಎಳೆಯ ಮಗು; ಹಸುಗೂಸು.

ಪಸುಂಬ (ನಾ). ಒಂದು ಜಾತಿಯ ಪಕ್ಷಿ; ಹಸುಬ.

ಪಸು(ಂ)ಬೆ (ನಾ). ಹೆಗಲಿನ ಮೇಲೆ ಹಾಕಿಕೊಳ್ಳುವ ಉದ್ದನೆಯ ಚೀಲ; ಹಸುಬೆ. ~ವಳ = ಹಸುಬೆಯನ್ನು ಹೊರುವವನು.

ಪಸುಗೆ (ನಾ). ೧. ವಿಭಾಗ; ಹಂಚಿಕೆ; ಹಸುಗೆ. ೨. ವಿವೇಕ. ೩. ತಕ್ಕುದು; ಉಚಿತವಾದುದು. ~ಕಿ(ಗಿ)ಡು = ವಿವೇಕವನ್ನು ಕಳೆದುಕೊಳ್ಳು.

ಪಸುರ್(ರು) (ಕ್ರಿ). ೧. ಹಸುರಾಗು; ಹಸುರಿನಿಂದ ಕೂಡಿರು. (ನಾ). ೨. ಹಸುರು; ಮರಕತವರ್ಣ. ೩. ಎಳೆಯದು; ಬಲಿಯದಿರುವುದು. ೪. ಹಸುರು ಹುಲ್ಲು. ೫. ಒಂದು ಬಗೆಯ ರತ್ನ; ಪಚ್ಚೆ. ~ಏಱ್(ರ್,ರು,ಱು) = ಹಸುರಾಗು; ಹಸುರು ಬಣ್ಣವಾಗು. ~ಕ(ಗ)ಲ್(ಲ್ಲು) = ಮರಕತ ಮಣಿ. ~ಪ(ಪ)ಂದರ್ = ಹಸುರುವಾಣಿಯ ಚಪ್ಪರ; ಎಲೆಯ ಚಪ್ಪರ.

ಪಸುರ್ಪು (ನಾ). ಹಸುರು ಬಣ್ಣ.

ಪಸುಳೆ (ನಾ). ಹಸುಗೂಸು; ಹಸುಳೆ. ~ತನ = ಎಳಮೆ; ಬಾಲ್ಯ.

ಪಸೆ (ನಾ). ೧. ಶುಭಕಾರ್ಯಗಳಲ್ಲಿ ಹಾಸುವ ಪೀಠ; ಹಸೆಮಣೆ. ೨. ರಂಗವಲ್ಲಿಯಿಂದ ಮಾಡುವ ಚಿತ್ರರಚನೆ. ೩. ಹುರುಳಿಲ್ಲದ ಮಾತು; ಹಾಳುಹರಟೆ. ೪. ತೇವ; ಹಸಿ. ~ನಿಲ್ = ೧. ಹಸೆಮಣೆಯನ್ನು ಏರು. ೨. ತೇವದಿಂದ ಕೂಡಿರು; ಹಸಿಯಾಗಿರು.

ಪಹಣಿ (ನಾ). ೧. ಬೆಳೆಯ ಪ್ರಮಾಣವನ್ನು ಗುರುತಿಸುವುದು. ೨. ಜಮಾಬಂದಿಯ ಲೆಕ್ಕ. ೩. ಶಾನುಭೋಗರ ದಾಖಲೆ ಪುಸ್ತಕ; ಸರ್ಕಾರಿ ದಫ್ತರ.

ಪಹರಣೆ (ನಾ). ಮದ್ದಳೆ ಬಾರಿಸುವ ಗತ್ತುಗಳಲ್ಲಿ ಒಂದು.

ಪಹರಿ (ನಾ). ೧. ಕಾವಲು ಕಾಯುವುದು. ೨. ಕಾವಲು ಕಾಯುವವನು; ಕಾವಲುಗಾರ.

ಪಹರೆ ೧. = ಪಹರಿ. ೨. ಮೂರು ಗಂಟೆಗಳ ಅವಧಿ; ಜಾವ.

ಪಳ (ನಾ). ೧. ಒಂದು ಆಯುಧ ವಿಶೇಷ. ೨. ಕಾಲದ ಒಂದು ಪರಿಗಣನೆ. ೩. ಹಣ್ಣು; ಫಲ. ೪. = ಪಱ.

ಪಳಂಕು (ಕ್ರಿ). ೧. ರಭಸದಿಂದ ತಾಗು, –ಹೊಡೆ. ೨. ಗಟ್ಟಿಯಾಗಿ ಹಿಡಿ.

ಪಳಂಚು (ಕ್ರಿ). ೧. ರಭಸದಿಂದ ತಾಗು. ೨. ಎದುರಿಸು ; ಪ್ರತಿಭಟಿಸು. ೩. ಹೊಳೆ ; ಥಳಥಳಿಸು. (ನಾ). ೪. ತಾಗುವಿಕೆ. ೫. ವಿರೋಧ ; ಅಡ್ಡಿ ; ಪ್ರತಿಭಟನೆ. ~ಅಲೆ = ೧. ತಾಗು ; ಘಟ್ಟಿಸು. ೨. ಗರ್ವಪಡು. ೩. ಭಾಸವಾಗು.

ಪಳಕು (ನಾ). ಸ್ಫಟಿಕ ; ಹಳಕು.

ಪಳಕೆ (ನಾ). ಪರಿಚಯ ಉಳ್ಳುದು ; ಬಳಕೆಯಾದುದು.

ಪಳದಿ (ನಾ). ಅರಿಸಿನದ ಬಣ್ಣ ; ಹಳದಿ.

ಪಳದೆ (ನಾ). ಮೊಸರು ಅಥವಾ ಮಜ್ಜಿಗೆಯಿಂದ ತಯಾರಿಸುವ ಮೇಲೋಗರ ; ಮಜ್ಜಿಗೆಹುಳಿ.

ಪಳದ್ಯ = ಪಳದೆ.

ಪಳಯ (ನಾ). ಪ್ರಳಯ ; ನಾಶ.

ಪಳಯಿಸು (ಕ್ರಿ). ೧. ಪ್ರಲಾಪಿಸು ; ಅಳು. ೨. ಅರ್ಥವಿಲ್ಲದೆ ಹರಟು ; ಗಳಹು.

ಪಳವ (ನಾ). ಒಂದು ಚರ್ಮವಾದ್ಯ.

ಪಳವಳಿ (ನಾ). ಹಳಹಳಿ ; ವ್ಯಸನ. ~ಇಸು = ವ್ಯಸನಪಡು ; ದುಃಖಿಸು.

ಪಳವಿಸು = ಪಳಯಿಸು.

ಪಳಹರ (ನಾ). ೧. ಬಾವುಟ ; ಧ್ವಜ. ೨. ಒಂದು ಬಗೆಯ ಬೇಟೆ.

ಪಳಾರ (ನಾ). ೧. ಫಲಾಹಾರ ; ಹಣ್ಣುಗಳನ್ನು ಸೇವಿಸುವುದು. ೨. ಉಪಾಹಾರ ; ಅಲ್ಪಾಹಾರ.

ಪಳಾಳ (ನಾ). ಪೊಳ್ಳು ; ವ್ಯರ್ಥವಾದುದು.

ಪಳಿಕ = ಪಳಕು.

ಪಳಿಕು = ಪಳಕು.

ಪಳಿದ್ಯ = ಪಳದೆ.

ಪಳುಂಕು (ಕ್ರಿ). ನೂಕು ; ತಳ್ಳು.

ಪಳುಕು = ಪಳಕು.

ಪಳೆ = ಪಟಿ³. ~ಉ(ಯು)ಳಿಕೆ = ಹಿಂದಿನಿಂದ ಉಳಿದು ಬಂದುದು ; ಅವಶೇಷ.

ಪಳ್ಳ (ನಾ). ೧. ಹಳ್ಳ ; ತಗ್ಗು ; ಗುಣಿ. ೨. ಸಣ್ಣ ಜಲಪ್ರವಾಹ.

ಪಳ್ಳಿ (ನಾ). ೧. ಹಳ್ಳಿ ; ಗ್ರಾಮ. ೨. ಒಂದು ಬಗೆಯ ಆಟ. ~ಕೂಟ = (ಗ್ರಾಮದ) ಪಾಠಶಾಲೆ. ~ಪೊ(ವೊ)ೀಗು = ವಲಸೆ ಹೋಗು. ~ಬ(ವ)ರ್ = ಒಟ್ಟಾಗಿ ಬರು ; ಗುಂಪುಕೂಡಿ ಬರು.

ಪಳ್ಳಿರು (ಕ್ರಿ). ವಿಶ್ರಮಿಸು.

ಪಟಿ(ಳ) = ಪಟಿ³. ~ಕ(ಗ)ನ್ನಡ = ಹಳಗನ್ನಡ ; ಪ್ರಾಚೀನ ಕನ್ನಡ. ~ಮಾ(ವಾ)ತು = ಹಳೆಯ ಮಾತು ; ವೇದ. ~ಮಾ(ವಾ)ನಿಸ = ವಯಸ್ಸಾದವನು ; ಮುದುಕ.

ಪಟಿ(ಳ)ಂಗು (ಕ್ರಿ). ಕೃಶವಾಗು ; ನವೆ.

ಪಟಿ(ಳ)ಕ (ನಾ). ರೂಢಿ ; ಪದ್ಧತಿ. ~ಇಸು = ಒಗ್ಗು ; ಹೊಂದಿಕೊಳ್ಳು.

ಪಟಿ(ಳ)ಗ (ನಾ). ಒಣಗಿದ ಎಲೆ ; ತರಗು.

ಪಟಿ(ಳ)ಗು (ಕ್ರಿ). ೧. ಅಂಕೆಯಲ್ಲಿರು ; ಹತೋಟಿಗೆ ಬರು. ೨. ಹೊಂದಿಕೊಳ್ಳು ; ಬಳಕೆಯಾಗು. ~ಇಸು = ೧. ಹತೋಟಿಗೆ ತರು ; ತಿದ್ದು. ೨. ಉಪಯೋಗಕ್ಕೆ ತರು ; ಚಲಾವಣೆಗೆ ತರು ; ಬಳಸು.

ಪಟಿ(ಳ)ಪು (ನಾ). ನರೆತ ಕೂದಲಿಗೆ ಹಚ್ಚುವ ಕಪ್ಪುಬಣ್ಣ.

ಪಟಿ(ಳ)ಮೆ (ನಾ). ೧. ಪುರಾತನವಾದುದು ; ಪ್ರಾಚೀನತೆ. ೨. = ಪಟಿಮಾತು.

ಪಟಿ(ಳ)ಯಿಗೆ (ನಾ). ಬಾವುಟ ; ಧ್ವಜ.

ಪಟಿ(ಳ)ವಿಗೆ = ಪಟಿಯಿಗೆ.

ಪಟಿ(ಳ)ವೆ (ನಾ). ಹಳೆಯ ಸಂಬಂಧ.

ಪಟಿ(ಳ)ಸು (ಕ್ರಿ). ೧. ಹಳೆಯದಾಗು. ೨. ಹಳಸಿಹೋಗು ; ರುಚಿಕೆಡು. ೩. ನಾಶವಾಗು. ~ಕೂ(ಗೂ)ಟಿ(ಳು) = ಹಳಸಿದ ಆಹಾರ ; ತಂಗಳು.

ಪೞ(ಳ)ಹ (ನಾ). ೧. ಒಂದು ಬಗೆಯ ಚರ್ಮವಾದ್ಯ. ೨. ಬೇಟೆಯಲ್ಲಿ ಉಪಯೋಗಿಸುವ ತೆರೆ.

ಪೞಿ(ಳಿ) (ಕ್ರಿ). ೧. ದೂಷಿಸು ; ನಿಂದಿಸು ; ಬಯ್ಯು. (ನಾ). ೨. ನಿಂದೆ ; ದೂಷಣೆ. ೩. ತಪ್ಪು ; ದೋಷ. ೪. ನಾಯಿ. ೫. ನಾಯಿಯನ್ನು ಅಟ್ಟುವುದು. ೬. ಲೋಹದ ಕಂಬಿ. ೭. ರೇಷ್ಮೆಯ ಬಟ್ಟೆ. ೮. ಎಡೆ ; ಸಾಟಿ. ~ಕೆ(ಗೆ)ಯ್ = ೧. ನಿಂದಿಸು; ಹೀಯಾಳಿಸು. ೨. ತಪ್ಪು ಕೆಲಸವನ್ನು ಮಾಡು. ~ಪಾ(ವಾ)ವುಗೆ =ಪಾದರಕ್ಷೆ ; ಹಾವುಗೆ. ~ಹಸ್ತ=ಒಬ್ಬನಿಗೆ ಬದಲಾಗಿ ಬರುವವನು ; ಪ್ರತಿಹಸ್ತ.

ಪೞಿ(ಳಿ)ವು (ನಾ). ೧. ಹೀಯಾಳಿಕೆ ; ನಿಂದೆ. ೨. ದೋಷ.

ಪೞು(ಳು) (ನಾ). ೧. ಕಾಡು ; ಅರಣ್ಯ ; ಹಳು. ೨. ಕಸ ; ಹೊಲಸು. ೩. ಎಲ್ಲೆ ; ಮೇರೆ. ~ಕ(ಗ)ೞಿ(ಳಿ) =ಮೇರೆ ಮೀರು; ಎಲ್ಲೆ ಮೀರು. ~ಪ(ವ)ಡು = ಕಾಡನ್ನು ಪ್ರವೇಶಿಸು. ~ಬ(ವ)ಗೆ = ಕೆಟ್ಟ ಮನಸ್ಸು; ಕಾಡುಬುದ್ಧಿ. ~ಬ(ವ)ೞಿ(ಳಿ) = ೧. ಕಾಡಿನ ಮಾರ್ಗ, –ಜಾಡು. ೨. ದುರ್ಮಾರ್ಗ ; ಕೆಟ್ಟದಾರಿ.

ಪೞು(ಳು)ವ (ನಾ). ಕಾಡು ; ಅಡವಿ. ~ಕಿ(ಗಿ)ಚ್ಚು=ಕಾಡುಕಿಚ್ಚು; ಕಾಳ್ಗಿಚ್ಚು.

ಪೞೆ(ಳೆ) (ನಾ). ೧. ಹಳತು ; ಹಳೆಯುದು. (ಗು). ೨. ಹಳೆಯ ; ಪುರಾತನವಾದ. ~ಕ(ಗ)ರ್ಪಡ = ಹಳೆಯ ಬಟ್ಟೆ; ಜೀರ್ಣ ವಸ್ತ್ರ.

ಪೞೆ(ಳೆ)ಯ (ನಾ). ೧. ಮುದುಕ ; ವೃದ್ಧ. (ಗು). ೨. ಪುರಾತನವಾದ ; ಹಳೆಯ.

ಪೞ್ಕೆ(ಳ್ಕೆ) (ನಾ). ೧. ಮಲಗುವ ಜಾಗ. ೨. ಮಲಗುವಿಕೆ. ೩. ಹಾಸುಗೆ ; ಶಯ್ಯೆ. ೪. ಪಕ್ಕ ; ಮಗ್ಗುಲು. ೫. ಪಕ್ಕೆ, ೬. ಆಲಿಂಗನ ; ಅಪ್ಪುಗೆ. ೭. ಸಾಮೀಪ್ಯ ; ಹತ್ತಿರ. ~ಕೆ(ಗೆ)ಯ್ = ಆಲಿಂಗಿಸು ; ಅಪ್ಪಿಕೊಳ್ಳು.

ಪೞ್ತಿ(ಳ್ತಿ) (ನಾ). ಹತ್ತಿ.

ಪಾಂಕ್ತ (ನಾ). ೧. ಓರಣ ; ಅಚ್ಚುಕಟ್ಟು. ೨. ಸಂಪೂರ್ಣವಾದುದು; ಸಾಂಗವಾದುದು. (ಗು). ೩. ಸಾಲಾಗಿರುವ ; ಪಂಕ್ತಿಯ.

ಪಾಂಗಿತ = ಪಾಂಕ್ತ.

ಪಾಂಗು (ನಾ). ೧. ರೀತಿ; ಕ್ರಮ. ೨. ಹೋಲಿಕೆ; ಸಾದೃಶ್ಯ. ೩. ಪರಿಜು ; ಆಕಾರ; ರೂಪ. ೪. ಹೊಂದಿಕೆ; ಹೊಂದಾಣಿಕೆ. ೫. ಓರಣ; ಅಚ್ಚುಕಟ್ಟು. ~ಅಱಿ(ರಿ) = ಸರಿಯಾದ ಕ್ರಮವನ್ನು ತಿಳಿ. ~ಅೞಿ(ಳಿ) = ಕ್ರಮ ತಪ್ಪು ; ರೀತಿಗೆಡು.

ಪಾಂಚವಾರ್ಷಿಕ (ಗು). ಐದು ವರ್ಷಗಳಿಗೆ ಸಂಬಂಧಿಸಿದ. ~ಯೋಜನೆ = ಐದು ವರ್ಷಗಳ ಕಾಲದಲ್ಲಿ ಮಾಡಬೇಕಾದ ಕಾರ್ಯಕ್ರಮಗಳ (ಸರಾಸರಿ) ವಿಭಾಗದು.

ಪಾಂಚಾಲಿಕೆ (ನಾ). ಗೊಂಬೆ; ಪುತ್ಥಳಿ.

ಪಾಂಜ (ನಾ). ಒಂದು ಜಾತಿಯ ಅಳಿಲು.

ಪಾಂಡಿತ್ಯ (ನಾ). ವಿದ್ವತ್ತು ; ಜ್ಞಾನ.

ಪಾಂಡು (ನಾ). ೧. ಬಿಳಿಯ ಬಣ್ಣ. ೨. ಹಳದಿ ಮಿಶ್ರಿತವಾದ ಬಿಳಿಯ ಬಣ್ಣ. ೩. ಕಾಮಾಲೆ ರೋಗ; ಕಾಮಣಿ. ೪. ಪಾಂಡವರ ತಂದೆಯ ಹೆಸರು.

ಪಾಂಡುಕ (ನಾ). ೧. ಹಳದಿ ಮಿಶ್ರಿತವಾದ ಬಿಳಿಬಣ್ಣ. ೨. ಕಾಮಾಲೆರೋಗ ; ಅರಿಸಿನ ಮುಂಡಿಗೆ ರೋಗ. ೩. ಕುಬೇರನ ನವರತ್ನಗಳಲ್ಲಿ ಒಂದು.

ಪಾಂಡುರ (ನಾ). ೧. ಹಳದಿ ಮಿಶ್ರಿತ ಬಿಳಿ ಬಣ್ಣ ; ಮಾಸಲು ಬಿಳುಪು. ೨. ಕಾಮಾಲೆ; ಕಾಮಣಿರೋಗ. ೩. ಒಂದು ಬಗೆಯ ಚರ್ಮರೋಗ ; ಬಿಳಿತೊನ್ನು.

ಪಾಂಡುರತೆ (ನಾ). ಬಿಳುಪು ; ಧವಳತೆ.

ಪಾಂಥ (ನಾ). ಪ್ರಯಾಣಿಕ; ದಾರಿಗ. ~ಶಾಲೆ= ಪ್ರಯಾಣಿಕರು ತಂಗುವ ಸ್ಥಳ; ಧರ್ಮಛತ್ರ.

ಪಾ(ಂ)ಪು (ನಾ). ಕಾಲುವೆಯನ್ನು ದಾಟಲು ಹಾಕಿದ ಕಲ್ಲು ಅಥವಾ ಮರದ ತುಂಡು; ಸಾರ.

ಪಾಂಬ (ನಾ). ೧. ಹೆಡ್ಡ; ಮೂರ್ಖ. ೨. = ಪಾಣ್ಬ.

ಪಾಂಶು (ನಾ). ೧. ಧೂಳು; ಹುಡಿ. ೨. ಪಾಪ; ಕಳಂಕ.

ಪಾಂಶುಲೆ (ನಾ). ಜಾರೆ; ಹಾದರಗಿತ್ತಿ.

ಪಾಂಸು = ಪಾಂಶು. ~ಪಟಲ = ಧೂಳಿನ ಪರದೆ, –ಮುಸುಕು.

ಪಾಂಸುಲೆ(ಳೆ) = ಪಾಂಶುಲೆ.

ಪಾಂಸೆ = ಪಾಚಿ.

ಪಾಕ (ನಾ). ೧. ಬೇಯಿಸುವುದು. ೨. ಆಹಾರವನ್ನು ಸಿದ್ಧಪಡಿಸುವುದು; ಅಡುಗೆ ಮಾಡುವುದು. ೩. ಬೆಂದ ಆಹಾರ; ಅಡುಗೆ. ೪. ಬೆಂದಿರುವುದು. ೫. ಜೀರ್ಣ ವಾದುದು. ೬. ಸಕ್ಕರೆ ಅಥವಾ ಬೆಲ್ಲವನ್ನು ಕುದಿಸಿ ಮಾಡುವ ದ್ರವ್ಯ; ಸರಿ. ೭. ಯಾವುದಾದರೂ ಪ್ರಾಣಿಯ ಮರಿ, -ಪೋತ. ೮. ಕಾವ್ಯಶೈಲಿಯ ಒಂದು ರೀತಿ. ೯. ಪಕ್ವತೆ. ೧೦. ಒಬ್ಬ ರಾಕ್ಷಸನ ಹೆಸರು. ~ಕಾರ್ಯ = ಅಡುಗೆ. ~ರಿಪು = ಇಂದ್ರ. ~ಶಾಲೆ = ಅಡುಗೆ ಮನೆ. ~ಶಾಸನ = ಪಾಕರಿಪು. ~ಶಾಸ್ತ್ರ = ಅಡುಗೆಯ ವಿಧಾನವನ್ನು ಹೇಳುವ ಶಾಸ್ತ್ರ.

ಪಾಕಡ (ನಾ). ಘಾಟಿ; ಕದೀಮ.

ಪಾಕಲ್(ಲು) (ನಾ). ಗೋಡೆ; ಪ್ರಾಕಾರ.

ಪಾಕಲ(ಳ) (ನಾ). ಆನೆಗಳಿಗೆ ಬರುವ ಒಂದು ಬಗೆಯ ಜ್ವರ.

ಪಾಕು (ನಾ). ಅಡಕೆ.

ಪಾಕ್ಷಿಕ (ನಾ). ೧. ಹದಿನೈದು ದಿನಗಳ ಅವಧಿಯುಳ್ಳದು. (ಗು). ೨. ಪಕ್ಷಕ್ಕೆ ಸಂಬಂಧಿಸಿದ.

ಪಾಖಂಡ (ನಾ). ೧. ಸಂಪ್ರದಾಯ ವಿರೋಧಿ; ನಾಸ್ತಿಕ. (ಗು). ೨. ಸಂಪ್ರದಾಯಕ್ಕೆ ಹೊರತಾದ.

ಪಾಖಂಡಿ = ಪಾಖಂಡ.

ಪಾಗ (ನಾ). ಹಣವೆಂಬ ನಾಣ್ಯದ ಬೆಲೆಯ ನಾಲ್ಕನೆಯ ಒಂದು ಭಾಗ; ಹಾಗ.

ಪಾಗಡ (ನಾ). ಕಾಲುಕಡಗ; ಅಂದುಗೆ.

ಪಾಗಡೆ = ಪಾಗಡ.

ಪಾಗದ (ನಾ). ಪ್ರಾಕೃತ ಭಾಷೆ.

ಪಾಗರ = ಪಾಕಲ್.

ಪಾಗಲ್ = ಪಾಕಲ್.

ಪಾಗಲ ೧. = ಪಾಕಲ್. ೨. ಒಂದು ಜಾತಿಯ ಬಳ್ಳಿ ಮತ್ತು ಅದರ ಕಾಯಿ; ಹಾಗಲ.

ಪಾಗಾ (ನಾ). ಕುದುರೆಯ ಲಾಯ; ಅಶ್ವ ಶಾಲೆ.

ಪಾಗಾರ = ಪಾಕಲ್.

ಪಾಗು (ನಾ). ೧. ಮುಂಡಾಸು; ಪಗಡಿ; ರುಮಾಲು. ೨. ರೀತಿ; ಕ್ರಮ; ಪಾಂಗು.

ಪಾಗುಡ (ನಾ). ೧. ಉಡುಗೊರೆ; ಕಾಣಿಕೆ. ೨. = ಪಾಗೋಟಿ.

ಪಾಗೋಟಿ (ನಾ). ರುಮಾಲು; ಮುಂಡಾಸು.

ಪಾಚಕ (ನಾ). ೧. ಅಡುಗೆಯವನು; ಬಾಣಸಿಗ. ೨. ಅಗ್ನಿ; ಬೆಂಕಿ. (ಗು). ೩. ಜೀರ್ಣಕಾರಿಯಾದ; ಅರಗಿಸುವ.

ಪಾಚಿ (ನಾ). ಶೈವಾಲ; ಹಾವಸೆ.

ಪಾಚಿಸು (ಕ್ರಿ). ಅಡುಗೆ ಮಾಡು; ಬೇಯಿಸು.

ಪಾಜಿ (ನಾ). ೧. ಚಿಕ್ಕದು; ಸಣ್ಣದು. ೨. ನೀಚ; ಅಲ್ಪವ್ಯಕ್ತಿ.

ಪಾಟ (ನಾ). ೧. ಹಾಡು; ಗೀತೆ. ೨. ಹಾಡುವುದು. ೩. ಹರಹು; ವಿಸ್ತಾರ. ೪. ವಾಚನ; ಓದುವುದು. ೫. ಬೋಧನೆ; ಕಲಿಸುವಿಕೆ.

೬. ಪಠ್ಯಪುಸ್ತಕಗಳಲ್ಲಿಯ ಒಂದು ಭಾಗ; ಪಾಠ. ೭. ಗ್ರಂಥದಲ್ಲಿರುವ ಮಾತು. ೮. ರೂಢಿ; ಅಭ್ಯಾಸ. ~ಆಳಿ = ಪರಿಚಾರಕ; ಸೇವಕ. ~ಮಾಡು = ತಿದ್ದು; ನೇರ್ಪು ಮಾಡು.

ಪಾಟನ (ನಾ). ಒಡೆಯುವುದು; ಸೀಳುವುದು.

ಪಾಟಲ(ಳ) (ನಾ). ೧. ಎಳೆಗೆಂಪು ಬಣ್ಣ; ಗುಲಾಬಿಬಣ್ಣ. ೨. ಪಾದರಿಯಮರ ಮತ್ತು ಅದರ ಹೂವು.

ಪಾಟಲಿ(ಳಿ) ೧. = ಪಾಟ್ಲ. ೨. ಪಾದರಿಯ ಮರ ಮತ್ತು ಅದರ ಹೂವು.

ಪಾಟವ (ನಾ). ೧. ಹರಿತ; ತೀಕ್ಷ್ಣತೆ. ೨. ಜಾಣತನ; ಚುರುಕುತನ. ೩. ಚೈತನ್ಯ; ಶಕ್ತಿ.

ಪಾಟಿ (ನಾ). ೧. ರೀತಿ; ಕ್ರಮ. ೨. ಹರಹು; ವಿಸ್ತಾರ. ೩. ಹೊಂದಿಕೆ; ಔಚಿತ್ಯ. ೪. ಸಮಾನ; ಸಾಟಿ; ಹೋಲಿಕೆ. ೫. ಗಮನ; ಲಕ್ಷ್ಯ. ೬. ಬರೆಯುವ ಕಪ್ಪುಹಲಗೆ; ಸ್ಲೇಟು. ~ಕೆ(ಗೆ)ಡು = ಕ್ರಮ ತಪ್ಪು; ಔಚಿತ್ಯ ಮೀರು.

ಪಾಟಿಸವಾಲ್(ಲು) (ನಾ). ವಾದಿಯ ಪರವಾಗಿ ನಡೆಯುವ ಆಪಾದಿತನ ವಿಚಾರಣೆ.

ಪಾಟಿಸು (ಕ್ರಿ). ೧. ಹರಹು; ವಿಸ್ತರಿಸು. ೨. ಅಧಿಕವಾಗು; ಮೇರೆ ಮೀರು. ೩. ಕೀಳು; ತೆಗೆ. ೪. ಲಕ್ಷ್ಯಕೊಡು; ಗಮನಿಸು. ೫. ವಾಚನಮಾಡು; ಓದು. ೬. ಕಲಿಸು. ೭. ಆಸೆಪಡು; ಬಯಸು. ೮. ಸಂತೋಷಪಡಿಸು.

ಪಾಟೀಲ (ನಾ). ಪಟೇಲ; ಗೌಡ.

ಪಾಟು (ನಾ). ೧. ಬೀಳುವಿಕೆ; ಪತನ. ೨. (ಸಮುದ್ರದ) ಇಳಿತ, –ಇಳಿಮುಖ. ೩. ಪಾಡು; ಅವಸ್ಥೆ.

ಪಾಟ್ಲ (ನಾ). ಕೈಗೆ ಹಾಕಿಕೊಳ್ಳುವ ಒಂದು ಬಗೆಯ ಆಭರಣ; ಪಟ್ಟೆಬಳೆ.

ಪಾಠ (ನಾ). ೧. ವಾಚನ; ಓದುವುದು. ೨. ಬೋಧನೆ; ಕಲಿಸುವಿಕೆ. ೩. ಪಠ್ಯಪುಸ್ತಕಗಳಲ್ಲಿಯ ಒಂದು ಭಾಗ. ೪. ಗ್ರಂಥದಲ್ಲಿರುವ ಮಾತು. ೫. ಯಜ್ಞ; ಯಾಗ. ~ಅಂತರ = ಒಂದು ಗ್ರಂಥದ ಬೇರೆ ಬೇರೆ ಪ್ರತಿಗಳಲ್ಲಿ ಕಂಡುಬರುವ ಬೇರೆ ಬೇರೆ ಪಾಠ. ~ಆಳಿ = ಪಾಟಾಳಿ. ~ಕಲಿ = ಬುದ್ಧಿಕಲಿ. ~ಕಲಿಸು = ಬುದ್ಧಿ ಕಲಿಸು. ~ಕಾಱ(ರ) = ಹೊಗಳುಭಟ್ಟ; ಸ್ತುತಿಸುವವನು. ~ಮಾಡು = ೧. ಪಾಠ ಹೇಳು. ೨. ಕಂಠಪಾಠ ಮಾಡು; ಉರು ಹೊಡೆ. ~ಹೇಳು = ಪಾಠವನ್ನು ಹೇಳಿ ಕೊಡು; ಕಲಿಸು.

ಪಾಠಕ (ನಾ). ೧. ಓದುವವನು; ವಾಚಿಸುವವನು. ೨. ಪಾಠವನ್ನು ಕಲಿಸುವವನು; ಅಧ್ಯಾಪಕ.

ಪಾಠೀನ (ನಾ). ೧. ಭಾಷಣ ಮಾಡುವವನು; ಉಪನ್ಯಾಸಕ. ೨. ಒಂದು ಜಾತಿಯ ಮೀನು.

ಪಾಡಗ ೧. = ಪಾಗಡ. ೨. ಒಂದು ಜಾತಿಯ ಮರ; ತೇಗ.

ಪಾಡಿ (ನಾ). ೧. ಬೀಡು; ಪಾಳೆಯ. ೨. ಸಣ್ಣ ಗಿಡಗಳ ಕಾಡು. ೩. ಗ್ರಾಮ; ಹಳ್ಳಿ. ೪. ಒಂದು ಬಗೆಯ ಬೇಟೆಯ ಸಾಧನ. ೫. ಕೆಲಸಗಾರರ ಗುಂಪು.

ಪಾಡಿವ (ನಾ). ಪಕ್ಷದ ಮೊದಲನೆಯ ದಿನ; ಪಾಡ್ಯ.

ಪಾಡು (ಕ್ರಿ). ೧. ಗಾನಮಾಡು; ಹಾಡು. (ನಾ). ೨. ಗೀತೆ; ಹಾಡು. ೩. ತೊಂದರೆ; ಕಷ್ಟ. ೪. ಅವಸ್ಥೆ; ಸ್ಥಿತಿ. ೫. ಹೋಲಿಕೆ; ಸಮಾನತೆ. ೬. ಅವಕಾಶ; ತೆರಪು. ೭. ಹಣ್ಣಿಗೆ ಬಂದ ಸ್ಥಿತಿ. ೮. ದೋರೆಗಾಯಿ. ~ಅೞಿ(ಳಿ) = ೧. ಅಂದಗೆಡು; ರೂಪುಗೆಡು. ೨. ಸ್ಥಿತಿಗೆಡು; ಹದಗೆಡು. ~ಆಗು = ೧. ಚೆನ್ನಾಗು; ಅಂದವಾಗು.

೨. ಪಕ್ವವಾಗು ; ಮಾಗು. ~(ಂ)ಗಾಱ(ರ) = ಹಾಡುವವನು ; ಗಾಯಕ. ~ಕಾ (ಗಾ) ಯ್ = ಸ್ಥಿತಿಯನ್ನು ಕಾಪಾಡು. ~ಕಾ(ಗಾ)ಯಿ = ದೋರೆಗಾಯಿ. ~ಪಡು = ತೊಂದರೆಯನ್ನು ಅನುಭವಿಸು ; ಕಷ್ಟಪಡು. ~ಬೀಳು = ೧. ಕಷ್ಟಪಡು. ೨. ಬರಡು ಬೀಳು ; ಬಂಜರಾಗು.

ಪಾಡ್ದನ (ನಾ). ತುಳು ಜಾನಪದಗೀತೆ.

ಪಾಡ್ಯ = ಪಾಡಿವ.

ಪಾಡ್ಯಮಿ = ಪಾಡಿವ.

ಪಾಣ (ನಾ). ಸಂಗೀತ ಮತ್ತು ನೃತ್ಯಗಳಲ್ಲಿ ನಿಪುಣನಾದವನು.

ಪಾಣವಿಕ (ನಾ). ಪಣವ ಎಂಬ ವಾದ್ಯವನ್ನು ನುಡಿಸುವವನು.

ಪಾಣಿ (ನಾ). ೧. ಕೈ; ಹಸ್ತ. ೨. ನೀರು. ೩. = ಪಹಣಿ. ~ಗ್ರಹಣ = ೧. ಕೈಹಿಡಿಯುವುದು. ೨. ಮದುವೆಯಾಗುವುದು. ~ಪಂಚೆ = ಸ್ನಾನಮಾಡುವಾಗ ಉಡುವ ಪಂಚೆ. ~ಪ(ವ)ಟ್ಟ = ಹರಿನಾಳ ಸಹಿತವಾದ ಲಿಂಗಪೀಠ. ~ಬ(ವ)ಟ್ಟಲ್(ಲು) = ಪಾಣಿವಟ್ಟ. ~ಲಾಘವ = ೧. ಕೈಚಳಕ ; ಕೈ ಚಮತ್ಕಾರ. ೨. ಕೈ ಕುಲುಕುವುದು ; ಹಸ್ತಲಾಘವ.

ಪಾಣ್ಬ (ನಾ). ಜಾರ ; ವ್ಯಭಿಚಾರಿ.

ಪಾಣ್ಬೆ (ನಾ). ಜಾರೆ ; ವ್ಯಭಿಚಾರಿಣಿ.

ಪಾತ (ನಾ). ೧. ಬೀಳುವುದು. ೨. ಹಾರುವುದು. ೩. ಕಳಂಕ ; ದೋಷ.

ಪಾತಕ (ನಾ). ೧. ಪಾಪ ; ದೋಷ. ೨. ಬೀಳಿಸುವುದು ; ಬೀಳುವಂತೆ ಮಾಡುವುದು. ೩. = ಪಾತಕಿ.

ಪಾತಕಿ (ನಾ). ಪಾಪ ಮಾಡಿದವನು ; ಪಾಪಿಷ್ಠ.

ಪಾತರ (ನಾ). ೧. ನಟನೆ ; ಅಭಿನಯ. ೨. ನಾಟ್ಯ ; ಮೇಳ. ೩. ನಟಿಸುವವನು ; ನಟ. ~ಗಿತ್ತಿ = ೧. ನಟಿ ; ಅಭಿನೇತ್ರಿ. ೨. ಹಾದರಗಿತ್ತಿ; ವೇಶ್ಯೆ. ೩. ಚಿಟ್ಟೆ ; ಪತಂಗ.

ಪಾತಳಿ (ನಾ). ೧. (ಸಮತಟ್ಟಾದ) ಮೇಲ್ಭಾಗ, –ಮೇಲ್ಮೈ. ೨. ಮಟ್ಟ.

ಪಾತಾಲ(ಳ) (ನಾ). ಭೂಮಿಯ ಕೆಳಗಿನ ಲೋಕಗಳಲ್ಲಿ ಒಂದು ; ಅಧೋಲೋಕ.

ಪಾತಾಲ(ಳ)ಗರಡಿ (ನಾ). ೧. ಬಾವಿಯಲ್ಲಿ ಬಿದ್ದ ವಸ್ತುಗಳನ್ನು ಮೇಲೆ ಎತ್ತುವ ಸಾಧನ. ೨. ಹಾವಿನ ವಿಷವನ್ನು ಪರಿಹರಿಸುವ ಒಂದು ಮೂಲಿಕೆ.

ಪಾತಾಲ(ಳ)ಗರುಡ = ಪಾತಾಲಗರಡಿ.

ಪಾತಿ (ನಾ). ೧. ಮರ, ಗಿಡಗಳ ಬುಡದಲ್ಲಿ ನೀರು ನಿಲ್ಲಲು ಮಾಡಿರುವ ಕಟ್ಟೆ; ಆಲವಾಲ. ೨. ಬೀಜ ಬಿತ್ತಲು ಮಾಡಿರುವ ಮಡಿ. ೩. ದೋಣಿ.

ಪಾತಿವ್ರತ್ಯ (ನಾ). ಪತಿವ್ರತೆಯಾಗಿರುವಿಕೆ ; ಪತಿವ್ರತಾಧರ್ಮ ; ಹದಿಬದೆತನ.

ಪಾತೆ = ಪಾತಿ.

ಪಾತೇಲಿ (ನಾ). ಅಗಲವಾದ ಬಾಯುಳ್ಳ ಪಾತ್ರೆ ; ಡಬರಿ.

ಪಾತ್ರ ೧. = ಪಾತರ. ೨. ಪಾತ್ರೆ. ೩. ಯೋಗ್ಯವಾದ ವಸ್ತು ಅಥವಾ ವ್ಯಕ್ತಿ. ೪. ನದಿಯ ಒಡಲು. ೫. ನಾಟಕ ಮುಂತಾದುವುಗಳಲ್ಲಿ ವ್ಯಕ್ತಿ ವಹಿಸುವ ಕಾರ್ಯ. ~ದಾನ = ಯೋಗ್ಯನಾದವನಿಗೆ ಕೊಡುವ ದಾನ.

ಪಾತ್ರಿ (ನಾ). ೧. ಪಾತ್ರ ವಹಿಸುವವನು. ೨. ಅಲೌಕಿಕ ಶಕ್ತಿಗಳು ಮೈ ಮೇಲೆ ಬರುವ ವ್ಯಕ್ತಿ.

ಪಾತ್ರೆ (ನಾ). ಕೊಳಗ, ತಪ್ಪಲೆ ಮುಂತಾದ ಸಾಧನ; ಭಾಂಡ.

ಪಾಥಸ್ಸು (ನಾ). ನೀರು ; ಉದಕ.

ಪಾಥೇಯ (ನಾ). ೧. ಪ್ರಯಾಣದಲ್ಲಿ ಬೇಕಾಗುವ ಉಪಕರಣ ; ಪ್ರವಾಸ ಸಾಮಗ್ರಿ. ೨. ಬುತ್ತಿ.

ಪಾಥೋದ (ನಾ). ನೀರನ್ನು ಕೊಡುವುದು ; ಮುಗಿಲು.

ಪಾದ (ನಾ). ೧. ಅಡಿ; ಪದ. ೨. ಪದ್ಯದ ಒಂದು ಸಾಲು. ೩. ತಳ ; ಬುಡ. ೪. ನಾಲ್ಕನೆಯ ಒಂದು ಅಂಶ. ೫. ಕಿರಣ ; ಕದಿರು. ~ತ್ರಾಣ = ಪಾದರಕ್ಷೆ; ಮೆಟ್ಟು. ~ರಕ್ಷೆ = ಪಾದತ್ರಾಣ. ~ವಲ್ಮೀಕ= ಆನೆಕಾಲು ರೋಗ ತಗುಲಿದ ಪಾದ. ~ವಿನ್ಯಾಸ = ೧. ಪಾದಗಳ ಚಲನೆ; ಪದವಿನ್ಯಾಸ. ೨. ಕಿರಣಗಳನ್ನು ಪಸರಿಸುವುದು.

ಪಾದಚಾರಿ (ನಾ). ಕಾಲುನಡಗೆಯಿಂದ ಸಾಗುವವನು.

ಪಾದಜ (ನಾ). ಭಗವಂತನ ಪಾದಗಳಿಂದ ಜನಿಸಿದವನು ; ಶೂದ್ರ.

ಪಾದಪ (ನಾ). ಬೇರಿನಿಂದ ನೀರು ಕುಡಿಯುವುದು ; ಮರ, ಗಿಡ ಮುಂತಾದುವು. ~ಅಶನ = ಮರಗಳನ್ನು ನಾಶಮಾಡುವುದು ; ಬೆಂಕಿ.

ಪಾದರ (ನಾ). ವ್ಯಭಿಚಾರ ; ಹಾದರ. ~ಇಗ = ಜಾರ ; ಹಾದರಿಗ. ~ಇಸು = ಹಾದರ ಮಾಡು ; ವ್ಯಭಿಚಾರ ಮಾಡು.

ಪಾದರಸ (ನಾ). ದ್ರವರೂಪದ ಒಂದು ಬಗೆಯ ಲೋಹ ; ಪಾರಜ.

ಪಾದರಿ (ನಾ). ೧. ಒಂದು ಜಾತಿಯ ಮರ ಮತ್ತು ಅದರ ಹೂವು. ೨. ಸೂಳೆ ; ಹಾದರಗಿತ್ತಿ.

ಪಾದಾತ (ನಾ). ೧. ಕಾಲಾಳು ; ಸೇವಕ. ೨. ಕಾಲುದಳ ; ಪದಾತಿ ಸೈನ್ಯ.

ಪಾದಿ (ನಾ). ಹಾದಿ ; ದಾರಿ.

ಪಾದುಕೆ (ನಾ). (ಮರದಿಂದ ಮಾಡಿದ) ಪಾದರಕ್ಷೆ ; ಮೊಚ್ಚೆ ; ಹಾವುಗೆ.

ಪಾದ್ಯ (ನಾ). ೧. ಕಾಲು ತೊಳೆಯುವುದು. ೨. ಕಾಲು ತೊಳೆಯುವ ನೀರು. (ಗು). ೩. ಕಾಲಿಗೆ ಸಂಬಂಧಿಸಿದ.

ಪಾದ್ರಿ (ನಾ). ಕ್ರೈಸ್ತಗುರು.

ಪಾನ (ನಾ). ೧. ಕುಡಿಯುವಿಕೆ. ೨. ಕುಡಿಯುವ ಪದಾರ್ಥ. ೩. ಕುಡಿಯುವ ಪಾತ್ರೆ. ~ಪಾತ್ರೆ = ಕುಡಿಯುವ ಬಟ್ಟಲು.

ಪಾನಕ (ನಾ). ಬೆಲ್ಲ ಅಥವಾ ಸಕ್ಕರೆಯಿಂದ ತಯಾರಿಸಿದ ಪಾನೀಯ ; ಷರಬತ್ತು.

ಪಾನಿಗಟ್ಟು (ಕ್ರಿ). ಚರಿಗೆಗೆ ಬಂದ ಜೈನ ಸಂನ್ಯಾಸಿಗಳನ್ನು ಭಿಕ್ಷೆಗೆ ನಿಲ್ಲಿಸಿಕೊಳ್ಳು.

ಪಾನೀಯ (ನಾ). ಕುಡಿಯಲು ಯೋಗ್ಯವಾದುದು ; ನೀರು, ಪಾನಕ ಮುಂತಾದುವು. ~ಖೇಯ = ಅಗಳು ; ಕಂದಕ. ~ಮಂಡಪ = ಅರವಟ್ಟಿಗೆ.

ಪಾನು (ನಾ). ೧. ಎಲೆ. ೨. ಪುಟ ; ಹಾಳೆ.

ಪಾಪ (ನಾ). ೧. ಕೆಟ್ಟ ಕೆಲಸ; ಹೀನಕಾರ್ಯ. ೨. ಎಳೆಯ ಮಗು ; ಹಸುಗೂಸು. ೩. ಕಣ್ಣುಗುಡ್ಡೆ ; ಪಾಪೆ. ೪. ದುರ್ದೈವ; ದುರದೃಷ್ಟ. ೫. ಅನುಕಂಪೆಯನ್ನು ಸೂಚಿಸುವಾಗ ಬಳಸುವ ಮಾತು. ~ಆತ್ಮ = ದುಷ್ಟ ; ಪಾಪಿ. ~ಭೀರು = ಪಾಪಕ್ಕೆ ಹೆದರುವವನು. ~ಹರ = ಪಾಪವನ್ನು ನಾಶಮಾಡುವವನು.

ಪಾಪಾಸು (ನಾ). ಒಂದು ಬಗೆಯ ಪಾದರಕ್ಷೆ, -ಜೋಡು.

ಪಾಪಾಸುಕಳ್ಳಿ (ನಾ). ಒಂದು ಜಾತಿಯ ಮುಳ್ಳಿರುವ ಕಳ್ಳಿ ಸಸ್ಯ.

ಪಾಪಿ (ನಾ). ಕೆಟ್ಟಕೆಲಸವನ್ನು ಮಾಡಿದವನು; ದುಷ್ಟ.

ಪಾಪಿಷ್ಠ = ಪಾಪಿ.

ಪಾಪೆ (ನಾ). ೧. ಗೊಂಬೆ ; ಪುತ್ಥಳಿ. ೨. ಕಣ್ಣಿನ ಗೊಂಬೆ ; ಹಾಹೆ. ೩. ಗುರುತು ; ಚಿಹ್ನೆ.

ಪಾಪೋಸು = ಪಾಪಾಸು.

ಪಾಮ (ನಾ). ಒಂದು ಬಗೆಯ ಚರ್ಮರೋಗ.

ಪಾಮರ (ನಾ). ೧. ತಿಳಿವಳಿಕೆ ಇಲ್ಲದವನು ; ಅಸಂಸ್ಕೃತ. ೨. ಒಕ್ಕಲಿಗ; ರೈತ.

ಪಾಮರಿ (ನಾ). ೧. ತಿಳಿವಳಿಕೆ ಇಲ್ಲದವಳು; ಅಸಂಸ್ಕೃತೆ. ೨. ಒಕ್ಕಲಗಿತ್ತಿ; ರೈತ ಹೆಂಗಸು.

ಪಾಮಾಜಿ = ಪಾಚಿ.

ಪಾಯ್(ಯು) (ಕ್ರಿ). ೧. ಉತ್ತರಿಸು; ದಾಟು; ಹಾಯು. ೨. ಡಿಕ್ಕಿಹೊಡೆ; ತಾಗು; ಇರಿ; ತಿವಿ. ೩. ಮುಂದುವರಿ; ಹರಿ. ~ಇಸು = ೧. ದಾಟಿಸು; ಪಾರು ಮಾಡು. ೨. ನುಗ್ಗಿಸು; ಮುನ್ನಡಸು.

ಪಾಯ (ನಾ). ೧. ಪಾದ. ೨. ಬುನಾದಿ; ತಳಹದಿ. ~ದಳ = ಪದಾತಿ ಸೈನ್ಯ. ~ಪ(ವ)ಟ್ಟ=ಕಾಲಿನ ಆಭರಣ;ಪೆಂಡೆಯ. ~ಹಾಕು = ಬುನಾದಿ ಹಾಕು; ಅಡಿಗಲ್ಲು ಹಾಕು.

ಪಾಯಕ (ನಾ). ೧. ಕಾಲಾಳು; ಪದಾತಿ. ೨.ವೇಷಧಾರಿ. ೩.ವೀರ; ಪರಾಕ್ರಮಶಾಲಿ.

ಪಾಯಿಖಾನೆ (ನಾ). ಶೌಚಗೃಹ; ಕಕ್ಕಸು.

ಪಾಯಸ (ನಾ). ಹಾಲಿನಿಂದ ಸಿದ್ಧಪಡಿಸಿದ ಸಿಹಿಯಾದ ಭಕ್ಷ್ಯ ಅಥವಾ ಪಾನೀಯ.

ಪಾಯಿ (ನಾ). ೧. ಕುಡುಕ; ಕುಡಿಯುವವನು. ೨. ಪಾಪಿ; ಪಾಪಿಷ್ಠ. ೩. ಚಾಪೆ; ಮಂದಲಿಗೆ. ೪. ಸಸಿ; ಗಿಡ.

ಪಾಯಿಕು (ನಾ). ಕೊಂಡಾಟದ ಒಂದು ನುಡಿ.

ಪಾಯಿಜಾಮು (ನಾ). ಇಜಾರ; ಪೈಜಾಮ.

ಪಾಯ್ಕು (ಕ್ರಿ). ೧. ಎಸೆ; ಬಿಸುಡು. ೨.ಇಡು; ಮಡಗು; ಹಾಕು.(ನಾ). ೩. = ಪಾಯಿಕು.

ಪಾರ್ (ಕ್ರಿ). ೧. ನಿರೀಕ್ಷಿಸು; ಎದುರುನೋಡು. ೨. ಆಶಿಸು; ಹಾರೈಸು. ೩. ಲಕ್ಷಿಸು; ಗಮನಿಸು.

ಪಾರ (ನಾ). ೧. ದಡ; ತೀರ. ೨. ತುದಿ; ಕೊನೆ.

ಪಾರಂಗತ (ನಾ). ೧. ಚೆನ್ನಾಗಿ ಅರಿತವನು; ನಿಪುಣ. (ಗು). ೨. ಚೆನ್ನಾಗಿ ತಿಳಿದ; ನುರಿತ.

ಪಾರಂಪರ್ಯ (ನಾ). ಪರಂಪರೆಯಿಂದ ಬಂದಿರುವುದು; ಆನುವಂಶಿಕವಾದುದು.

ಪಾರಕ(ನಾ).ಒಂದು ಬಗೆಯ ಧಾನ್ಯ; ಹಾರಕ.

ಪಾರಕು = ಪಾರಕ.

ಪಾರಗ (ನಾ). ೧. ತೀರವನ್ನು ದಾಟಿದವನು. ೨. ಪಂಡಿತ; ನಿಪುಣ. ೩. ಕತ್ತಿವರಸೆಯಲ್ಲಿ ಒಂದು ಬಗೆ.

ಪಾರಜ = ಪಾದರಸ.

ಪಾರಣೆ (ನಾ). ಉಪವಾಸದ ನಂತರ ಮಾಡುವ ಊಟ.

ಪಾರತಂತ್ರ್ಯ (ನಾ). ಅನ್ಯರಿಗೆ ಅಧೀನವಾಗಿರುವುದು; ಪರಾಧೀನತೆ.

ಪಾರದ = ಪಾದರಸ.

ಪಾರದರ = ಪಾದರ.

ಪಾರದರ್ಶಕ (ಗು). ತನ್ನ ಮೂಲಕ ಆಚೆಯ ಪಕ್ಕವನ್ನು ಕಾಣಿಸುವಂತೆ ಬೆಳಕನ್ನು ಸಾಗಿಸುವ.

ಪಾರದಿ (ನಾ). ಬೇಟೆ.

ಪಾರಮಾರ್ಥಿಕ (ಗು). ಪರಮಾರ್ಥಕ್ಕೆ ಸಂಬಂಧಿಸಿದ.

ಪಾರಮ್ಯ (ನಾ). ೧. ಪರಾಕಾಷ್ಠೆ; ತುತ್ತತುದಿ. ೨. ಶ್ರೇಷ್ಠತೆ.

ಪಾರಯಿಸು = ಪಾರೈಸು.

ಪಾರಲೌಕಿಕ (ಗು). ಪರಲೋಕಕ್ಕೆ ಸಂಬಂಧಿಸಿದ.

ಪಾರಶವ (ನಾ). ೧. ಕಬ್ಬಿಣ; ಉಕ್ಕು. ೨. ಕಬ್ಬಿಣದ ಒಂದು ಆಯುಧ. ೩. ಬ್ರಾಹ್ಮಣನಿಂದ ಶೂದ್ರಸ್ತ್ರೀಯಲ್ಲಿ ಹುಟ್ಟಿದ ಮಗ.

ಪಾರಸಿ (ನಾ). ೧. ಪರ್ಷಿಯಾದೇಶದ ಭಾಷೆ. (ಗು). ೨ ಪರ್ಷಿಯಾದೇಶಕ್ಕೆ ಸಂಬಂಧಿಸಿದ.

ಪಾರಾಯಣ (ನಾ). ೧. ದಾಟುವುದು. ೨. ಮೊದಲಿನಿಂದ ಕೊನೆಯವರೆಗೆ ಓದುವುದು. ೩. ವಿಶೇಷವಾಗಿ ಓದಿದವನು.

ಪಾರಾವತ = ಪಾರಿವ.

ಪಾರಾವಾರ (ನಾ). ೧. ಸಮುದ್ರ ; ಕಡಲು. ೨. ಎಲ್ಲೆ ; ಮೇರೆ.

ಪಾರಿ (ನಾ). ೧. ಗಾಡಿಯ ಕಡಾಣಿ. ೨. ಲೋಟ. ೩. ಕಾವಲು ; ಪಹರೆ.

ಪಾರಿಖತ್ತು (ನಾ). ಕರಾರುಪತ್ರ.

ಪಾರಿಜಾತ (ನಾ). ಒಂದು ಜಾತಿಯ ಗಿಡ ಮತ್ತು ಅದರ ಹೂವು.

ಪಾರಿತಥ್ಯೆ (ನಾ). ಒಂದು ಆಭರಣ ; ಬೈತಲೆ ಬೊಟ್ಟು.

ಪಾರಿತೋಷಿಕ (ನಾ). ಬಹುಮಾನ ; ಕಾಣಿಕೆ; ಉಡುಗೊರೆ.

ಪಾರಿಪಾರ್ಶ್ವಕ (ನಾ). ೧. ಪರಿಜನ; ಪರಿವಾರ. ೨. ನಾಟಕದಲ್ಲಿ ನಾಂದಿಯನ್ನು ಹೇಳುವವನು.

ಪಾರಿಪ್ಲವ (ಗು). ಅಸ್ಥಿರ ; ಚಂಚಲ.

ಪಾರಿಭಾಷಿಕ (ಗು). ವಿಶಿಷ್ಟಾರ್ಥವುಳ್ಳ ; ತಾಂತ್ರಿಕವಾದ ಅರ್ಥವುಳ್ಳ.

ಪಾರಿಯ (ನಾ). ಒಂದು ಬಗೆಯ ಬಣ್ಣದ ಬಟ್ಟೆ.

ಪಾರಿವ (ನಾ). ಪಾರಿವಾಳ ; ಕಪೋತ.

ಪಾರಿವಾಣ ೧. = ಪಾರಿವ. ೨. ಒಂದು ಜಾತಿಯ ಮರ ; ಹಾಲಿವಾಣ.

ಪಾರಿವಾಳ = ಪಾರಿವ.

ಪಾರಿಷದ (ನಾ). ರಾಜ, ದೇವತೆ ಮುಂತಾದವರ ಸೇವಕ.

ಪಾರಿಸು (ಕ್ರಿ). ೧. ಉಪವಾಸದ ನಂತರ ಆಹಾರವನ್ನು ಸೇವಿಸು ; ಪಾರಣೆ ಮಾಡು. ೨. = ಪಾಱಿಸು.

ಪಾರಿಹಾರ್ಯ (ನಾ). ೧. ಕಂಕಣ ; ಬಳೆ. ೨. ಹಾನಿಯನ್ನು ತುಂಬಿಕೊಡುವಿಕೆ.

ಪಾರೀಣ (ನಾ). ೧. ದಾಟುವುದು. ೨. ಸಂಪೂರ್ಣ ಪರಿಚಯವನ್ನು ಪಡೆದಿರುವಿಕೆ ; ಪಾಂಡಿತ್ಯ. ೩. ವಿದ್ವಾಂಸ ; ಪಂಡಿತ.

ಪಾರು ೧. = ಪಾರ್. ೨. = ಪಾಱು. (ನಾ). ೩. ದಡ ; ತೀರ. ೪. ಸೂರಿನ ಇಳಿಜಾರು ಭಾಗ. ~ಆಗು = ೧. ದಾಟು. ೨. ತೊಂದರೆಯಿಂದ ತಪ್ಪಿಸಿಕೊಳ್ಳು. ~ಕಾ(ಗಾ)ಣಿಸು = ೧. ಆಚೆಯ ದಡವನ್ನು ಮುಟ್ಟಿಸು. ೨. ರಕ್ಷಿಸು; ಕಾಪಾಡು.

ಪಾರುಖಾಣೆ (ನಾ). ೧. ಬಹುಮಾನ ; ಉಡುಗೊರೆ. ೨. ಕರಣಿಕರು ಇಟ್ಟಿರುವ ಲೆಕ್ಕ. ೩. ವಿರಹ ; ತಾಪ. ೪. ಮರಣ.

ಪಾರುಪತ್ಯ (ನಾ). ೧. ಮೇಲ್ವಿಚಾರಣೆ. ೨. ಅಧಿಕಾರ. ೩. ದೊಡ್ಡಸ್ತಿಕೆ ; ಪ್ರತಿಷ್ಠೆ. ~ಗಾಜ(ರ) = ಮೇಲ್ವಿಚಾರಕ.

ಪಾರುವ (ನಾ). ಬ್ರಾಹ್ಮಣ ; ಹಾರುವ.

ಪಾರುಷ್ಯ (ನಾ). ಒರಟುತನ ; ಕಾಠಿನ್ಯ.

ಪಾರೆ (ನಾ). ೧. ಕಬ್ಬಿಣದ ಒಂದು ಉಪಕರಣ ; ಹಾರೆ. ೨. ಬಂಡೆ.

ಪಾರೈಸು (ಕ್ರಿ). ಅಪೇಕ್ಷೆಪಡು ; ಹಾರೈಸು.

ಪಾಱ(ರಿ) (ನಾ). ಸೂಳೆ; ವೇಶ್ಯೆ.

ಪಾಱು(ರು) (ಕ್ರಿ). ೧. ಹಾರು ; ನೆಗೆ ; ದಾಟು. ೨. ಓಡು ; ಹರಿ. ೩. ಡವಗುಟ್ಟು ; ತುಡಿ. (ನಾ). ೪. ಒಂದು ಬಗೆಯ ದೋಣಿ. ೫. ಓಡುವುದು ; ಚಲಿಸುವುದು. ೬. ವಿಮಾನ. ೭. ವ್ಯಭಿಚಾರ ; ಹಾದರ. ೮. ಸೂಳೆ; ಹಾದರಗಿತ್ತಿ. ೯. ಹಾರುವಿಕೆ; ಜಿಗಿತ. ೧೦. ಒಂದು ಅಳತೆ. ~ಅಱು(ಳಿ) = ಚಲನೆಯಿಲ್ಲದಾಗು ; ಸ್ತಿಮಿತಕ್ಕೆ ಬರು. ~ಇಸು = ಹಾರುವಂತೆ ಮಾಡು ; ಹಾರಿಸು. ~(ಂ)ಪ(ಬ)ನಿ = ತುಂತುರು ಮಳೆ. ~(ಂ)ಬಳೆ = ಒಂದು ಬಗೆಯ ಆಯುಧ; ಚಕ್ರಾಯುಧ. ~ಬೊಜ(ಂ)ಗ = ಚಂಚಲನಾದ ವಿಟ.

ಪಾರ್ಥಿವ (ನಾ). ೧. ಭೂಮಿಯನ್ನು ಆಳುವವನು ; ರಾಜ. ೨. ಮಣ್ಣಿನ ಪಾತ್ರೆ ; ಗಡಿಗೆ. ೩. ಶಿವ. ೪. ಮರ ; ವೃಕ್ಷ.

೫. ಆಕಾಶ; ಗಗನ. ೬. ಅರುವತ್ತು ಸಂವತ್ಸರಗಳಲ್ಲಿ ಒಂದು. (ಗು). ೭. ಮಣ್ಣಿಗೆ ಸಂಬಂಧಿಸಿದ; ಭೌತಿಕ. ೮. ರಾಜಮನೆತನದ.

ಪಾರ್ಬ = ಪಾರುವ. ~ಇಕೆ = ಬ್ರಾಹ್ಮಣಿಕೆ.

ಪಾರ್ವ = ಪಾರುವ. ~ಇತಿ = ಪಾರ್ವಂತಿ.

ಪಾರ್ವಂತಿ (ನಾ). ಬ್ರಾಹ್ಮಣ ಸ್ತ್ರೀ; ಹಾರುವರ ಹೆಂಗಸು.

ಪಾರ್ವಣ (ನಾ). ಪರ್ವಕಾಲದಲ್ಲಿ ಮಾಡುವ ಒಂದು ವಿಧಿ.

ಪಾರ್ಶ್ವ (ನಾ). ೧. ಪಕ್ಕ; ಮಗ್ಗುಲು. ೨. ಪಕ್ಕೆ. ೩. ಸಮೀಪ; ಹತ್ತಿರ. ~ವಾಯು = ಅರ್ಧಾಂಗವಾಯು; ಲಕ್ವ.

ಪಾರ್ಷ್ಣಿ (ನಾ). ೧. ಹಿಮ್ಮಡಿ. ೨. (ಸೇನೆಯ) ಹಿಂಭಾಗ.

ಪಾಲ್(ಲು) (ನಾ). ೧. ಹಾಲು; ಕ್ಷೀರ. ೨. ಕೆಲವು ಸಸ್ಯಗಳು ಸ್ರವಿಸುವ ಬಿಳಿಯ ದ್ರವ. ೩. ಭಾಗ; ಹಿಸ್ಸೆ. ~ಉಂಡೆ = ಹಾಲಿನಿಂದ ಮಾಡುವ ಒಂದು ಬಗೆಯ ಭಕ್ಷ್ಯ. ~ಕ(ಗ)ಡಲು = ಹಾಲಿನ ಸಮುದ್ರ; ಕ್ಷೀರಸಾಗರ. ~ಕು(ಗು)ಂಬಳ=ಕುಂಬಳಕಾಯಿಯಲ್ಲಿ ಒಂದು ಭೇದ; ಸಿಹಿಗುಂಬಳ. ~ಗಾರ = ಭಾಗಸ್ಥ; ಹಿಸ್ಸೆದಾರ. ~ತೆ(ದೆ)ನೆ = ಬಲಿಯದಿರುವ ತೆನೆ; ಎಳೆದೆನೆ.

ಪಾಲ(ಂ)ಕಿ (ನಾ). ಪಲ್ಲಕ್ಕಿ; ಮೇನೆ; ಆಂದಣ.

ಪಾಲಕ (ನಾ). ೧. ಕಾಪಾಡುವವನು; ರಕ್ಷಕ. ೨. = ಪಾಲನ.

ಪಾಲನ (ನಾ). ರಕ್ಷಿಸುವುದು; ಕಾಪಾಡುವುದು.

ಪಾಲನೆ = ಪಾಲನ.

ಪಾಲಾಶ ೧. = ಪಾಳಾಸ. ೨. ಹಸುರುಬಣ್ಣ.

ಪಾಲಿಕೆ (ನಾ). ೧. ರಕ್ಷಿಸುವುದು; ಕಾಪಾಡುವುದು. ೨. ಮಣ್ಣಿನ ಬಟ್ಟಲು, -ಪಾತ್ರೆ.

ಪಾಲಿಸು (ಕ್ರಿ). ೧. ರಕ್ಷಿಸು; ಕಾಪಾಡು. ೨. ಆಡಳಿತ ನಡಸು; ಆಳು. ೩. ಕರುಣಿಸು. ೪. ಜಾರಿಗೆ ತರು; ಅನುಸರಿಸು.

ಪಾಲುಮಾರು (ಕ್ರಿ). ಸೋಮಾರಿಯಾಗು; ಆಲಸ್ಯದಿಂದ ಕೂಡಿರು. ~ಇಕೆ = ಸೋಮಾರಿತನ; ಆಲಸ್ಯ.

ಪಾಲೆ (ನಾ). ೧. ಒಂದು ಜಾತಿಯ ಹಕ್ಕಿ; ಶಕುನದ ಹಕ್ಕಿ. ೨. ಒಂದು ಜಾತಿಯ ಮರ; ಹಾಲೆ. ೩. ಒಂದು ಜಾತಿಯ ಬಳ್ಳಿ. ೪. ಕಿವಿಯ ಕೆಳಗಿನ ಮೆದುವಾದ ಭಾಗ. ೫. ಹಳ್ಳಕ್ಕೆ ಹಾಕಿದ ಅಡ್ಡಗಲ್ಲು.

ಪಾವಕ (ನಾ). ೧. ಶುದ್ಧ ಮಾಡುವುದು. ೨. ಬೆಂಕಿ; ಅಗ್ನಿ. ೩. ಒಂದು ಬಗೆಯ ಮೂಲಿಕೆ; ಚಿತ್ರಮೂಲ. ~ಅಸ್ತ್ರ = ಅಗ್ನಿಯನ್ನು ಸುರಿಸುವ ಅಸ್ತ್ರ; ಆಗ್ನೇಯಾಸ್ತ್ರ. ~ನಯನ = ಶಿವ.

ಪಾವಟಿಗೆ (ನಾ). ಮೆಟ್ಟಿಲು; ಸೋಪಾನ.

ಪಾವಡ (ನಾ). ೧. ವಸ್ತ್ರ; ಬಟ್ಟೆ. ೨. ಉಡುಗೊರೆ. ೩. ಲಂಗ; ಪರಕಾರ.

ಪಾವತಿ (ನಾ). ೧. ಹಣವನ್ನು ಸಂದಾಯ ಮಾಡುವುದು. ೨. ಹಣ ಸಂದಾಯವಾದ ಮೇಲೆ ಕೊಡುವ ರಶೀತಿ.

ಪಾವನ (ನಾ). ೧. ಪವಿತ್ರಗೊಳಿಸುವುದು; ಪರಿಶುದ್ಧಗೊಳಿಸುವುದು. ೨. ಪರಿಶುದ್ಧವಾದುದು. ೩. ಬೆಂಕಿ; ಅಗ್ನಿ. ೪. ಶುದ್ಧೀಕರಣದ ಸಾಧನ.

ಪಾವನಿ = ಪವನಜ.

ಪಾವರಣೆ (ನಾ). ಒಂದು ಜಾತಿಯ ವಿಷಜಂತು; ಹಾವುರಾಣಿ.

ಪಾವಲಿ (ನಾ). ರೂಪಾಯಿಯ ನಾಲ್ಕನೆಯ ಒಂದು ಭಾಗ; ನಾಲ್ಕು ಅಣೆ.

ಪಾವಸೆ = ಪಾಚಿ. ~ಕೊ(ಗೊ)ಳ್ = ಹಾವಸೆಯಿಂದ ಆವರಿಸಲ್ಪಡು.

ಪಾವಿತ್ರ್ಯ (ನಾ). ಪರಿಶುದ್ಧತೆ.

ಪಾವು (ನಾ). ೧. ಹಾವು; ಉರಗ. ೨. ಸೇರಿನ ನಾಲ್ಕನೆಯ ಒಂದು ಭಾಗ; ಕಾಲುಸೇರು. ೩. ಕಾಲುಸೇರು ಹಿಡಿಯುವ ಒಂದು ಅಳತೆಯ ಸಾಧನ. ~ಆಡಿಗ = ಹಾವನ್ನು ಹಿಡಿದು ಆಡಿಸುವವನು; ಹಾವಾಡಿಗ. ~ಆಣೆ = ಒಂದು ನಾಣ್ಯ; ನಾಲ್ಕು ಆಣೆ; ಪಾವಲಿ.

ಪಾವುಗೆ = ಪಾದುಕೆ.

ಪಾವುಡ = ಪಾವಡ.

ಪಾವುಣಿ (ನಾ). ಹಾವನ್ನು ಆಹಾರವಾಗಿ ಉಳ್ಳುದು; ಗರುಡ, ಮುಂಗುಸಿ, ನವಿಲು ಮೊದಲಾದುವು.

ಪಾವುರಾಣಿ = ಪಾವರಣಿ.

ಪಾಶ (ನಾ). ೧ ಹಗ್ಗ; ಮಿಣಿ. ೨. ಬಂಧ; ನೇಣು. ೩. ಪ್ರಾಣಿಗಳನ್ನು ಹಿಡಿಯುವ ಬಲೆ. ~ಹರ = ಬಂಧನವನ್ನು ನಿವಾರಿಸುವುದು.

ಪಾಶಕ = ಪಾಸಂಗಿ.

ಪಾಶಧರ (ನಾ). ೧. ಹಗ್ಗವನ್ನು ಹಿಡಿದಿರುವವನು. ೨. ಯಮ. ೩. ವರುಣ. ೪. ಗಣಪತಿ.

ಪಾಶವೀವೃತ್ತಿ (ನಾ). ಮೃಗದ ನಡವಳಿಕೆ; ಪಶುವೃತ್ತಿ.

ಪಾಶಿ (ನಾ). ೧. ಪಾಶವನ್ನು ಹಿಡಿದಿರುವವನು. ೨. ಯಮ. ೩. ಬೇಟೆಗಾರ. ೪. ವರುಣ. ೫. ಗಲ್ಲಿಗೇರಿಸುವ ಶಿಕ್ಷೆ; ಫಾಸಿ.

ಪಾಶುಪತ (ನಾ). ೧. ಶಿವನಿಗೆ ಸಂಬಂಧಿಸಿದುದು. ೨. ಒಂದು ಶೈವಪಂಥ. ೩. ಒಂದು ಅಸ್ತ್ರದ ಹೆಸರು. ~ಅಸ್ತ್ರ = ಶಿವನಿಂದ ಅರ್ಜುನನಿಗೆ ಕೊಡಲ್ಪಟ್ಟ ಒಂದು ಬಾಣ.

ಪಾಶ್ಚಾತ್ಯ (ಗು). ೧. ಹಿಂದಿನ; ಹಿಂಭಾಗದ. ೨. ಪಶ್ಚಿಮ ದಿಕ್ಕಿನ.

ಪಾಷಂಡ = ಪಾಖಂಡ.

ಪಾಷಂಡಿ = ಪಾಖಂಡಿ.

ಪಾಷಾಣ (ನಾ). ೧. ಕಲ್ಲು; ಬಂಡೆ. ೨. ವಿಷ; ಗರಳ.

ಪಾಸಂಗಿ (ನಾ). ದಾಳ; ಲೆತ್ತ.

ಪಾಸಂಗೆ = ಪಾಸಂಗಿ.

ಪಾಸಗೆ (ನಾ). ೧. ಮೆತ್ತೆ; ಹಾಸುಗೆ. ೨. = ಪಾಸಂಗಿ. ೩. ಮಲ್ಲಯುದ್ಧದ ಒಂದು ಪಟ್ಟು.

ಪಾಸಟೆ (ನಾ). ಎಣೆ; ಸಾಟಿ; ಹೋಲಿಕೆ.

ಪಾಸಲೆ (ನಾ). ಅಕ್ಕಪಕ್ಕ; ಅಸುಪಾಸು.

ಪಾಸಾಲೆ (ನಾ). ಮಣ್ಣಿನ ದೊಡ್ಡ ಪಾತ್ರೆ.

ಪಾಸಿ ೧. = ಪಾಚಿ. ೨. ಬಲೆ.

ಪಾಸಿಗೆ (ನಾ). ಹಾಸುಗೆ; ಮೆತ್ತೆ.

ಪಾಸು (ಕ್ರಿ). ೧. ಹರಡು; ಹರಹು; ಹಾಸು. (ನಾ). ೨. ಹಾಸುಗೆ; ಶಯ್ಯೆ. ೩. ಪಲ್ಲಕ್ಕಿ; ಮೇನೆ. ~ಅಱೆ(ರೆ) = ಅಗಲವಾದ ಚಪ್ಪಡಿ; ಹಾಸುಗಲ್ಲು. ~(ಂ)ತೊ(ದೊ)ವಲ್ = ಹಾಸುವ ಚರ್ಮ; ಕೃಷ್ಣಾಜಿನ. ~(ಂ)ಪೊಕ್ಕು = ಮಗ್ಗದಲ್ಲಿ ಬರುವ ಉದ್ದವಾದ ಮತ್ತು ಅಡ್ಡವಾದ ಎಳೆ; ಹಾಸುಹೊಕ್ಕು. ~ಬ(ವ)ಲೆ = ಒಂದು ಬಗೆಯ ಬಲೆ.

ಪಾಳ (ನಾ). ಲೋಹದ ಕಂಬಿ, -ಪಟ್ಟಿ.

ಪಾಳತಿ (ನಾ). ಹೊಂಚುಹಾಕುವುದು; ಕಾಯುವುದು. ~ಗಾರ = ಹೊಂಚು ಹಾಕುವವನು; ಗೂಢಚಾರ.

ಪಾಳದಿವ್ಯ (ನಾ). ದಿವ್ಯಗಳಲ್ಲಿ ಒಂದು; ಕಾದ ಕಬ್ಬಿಣದ ಕಂಬಿಯನ್ನು ಹಿಡಿಯುವ ಪರೀಕ್ಷೆ.

ಪಾಳಯ (ನಾ). ಬೀಡು; ಶಿಬಿರ. ~ಪಟ್ಟು = ಪಾಳೆಯಗಾರನ ವಶದಲ್ಲಿರುವ ಪ್ರದೇಶ.

ಪಾಳಾಸ (ನಾ). ಮುತ್ತುಗದ ಮರದಿಂದ ಮಾಡಿದ ಕಂಬ.

ಪಾಳಿ (ನಾ). ೧. ಬದು; ಏರಿ. ೨. ಗುಂಪು; ಸಮೂಹ. ೩. ಮರದ ಬಟ್ಟಲು; ಮರಿಗೆ; ಕೊಣಬಿಗೆ. ೪. = ಪಾಱಿ.

ಪಾಳಿಸು ೧. = ಪಾಲಿಸು. ೨. ಕತ್ತರಿಸು; ಸೀಳು. ೩. ಸೇರಿಸು; ಕೂಡಿಸು. ೪. ತೆಗೆ; ಕೀಳು.

ಪಾಳಿ (ನಾ). ೧. ಹಾಳಿ; ಪಟ್ಟಿ. ೨. ಅಡಕೆ ಹೂವಿನ ಮುಸುಕು. ೩. ತುಂಡು; ಚೂರು.

ಪಾಳೆಯ = ಪಾಳಯ. ~ಇ(ವಿ)ಕ್ಕು=ಬೀಡು ಬಿಡು; ಬಿಡಾರ ಮಾಡು. ~ಗಾರ = ಸಣ್ಣ ಪ್ರಾಂತ್ಯದ ಮುಖಂಡ. ~ತೆ(ದೆ)ಗೆ = ಬಿಡಾರ ಎತ್ತು; ವಲಸೆ ಹೋಗು.

ಪಾಳ್ಯ ೧. = ಪಾಳಯ. ೨. ಗುಂಪು; ಬಣ.

ಪಾೞ್(ಳ್) (ನಾ). ೧. ಹಾಳು; ನಾಶ. ೨. ಹಾಳುಬಿದ್ದ ಸ್ಥಳ; ಬೀಳು; ಬಂಜರು ನೆಲ. (ಗು). ೩. ಉಪಯೋಗಕ್ಕೆ ಬಾರದ; ವ್ಯರ್ಥವಾದ. ~ಆಗು = ಹಾಳಾಗು; ನಾಶವಾಗು. ~ನೆಲ = ಬಂಜರು; ಬೀಳು ಭೂಮಿ. ~ಪೊ(ವೊ)ೕಗು = ನಾಶವಾಗು; ಹಾಳಾಗು.

ಪಾೞಿ(ಳಿ) (ನಾ). ೧. ಸಾಲು; ಪಂಕ್ತಿ. ೨. ಕ್ರಮ; ಸರದಿ. ೩. ನ್ಯಾಯ; ಧರ್ಮ. ೪. ಋಣ; ಹಂಗು. ~ಕಾ(ಗಾ)ಱ(ರ) = ಕ್ರಮಗೊಳಿಸುವವನು. ~ಕಿ(ಗಿ)ಡು = ನ್ಯಾಯವನ್ನು ಮೀರು; ಧರ್ಮವನ್ನು ಉಲ್ಲಂಘಿಸು.

ಪಾೞು(ಳು) ೧. = ಪಾೞ್. ೨. ಜಮೀನು; ಭೂಮಿ. ~ಭೂಮಿ = ಪಾೞ್ನೆಲ.

ಪಿಂ (ಗು). ಹಿಂಬದಿಯ; ಹಿಂಭಾಗದ. ~ಕ(ಗ)ಡೆ = ಪಿಂಗೊೞ್. ~ಕೊ(ಗೊ)ೞ್(ಳು) = ಹಿಂಭಾಗ; ಹಿಂದುಗಡೆ. ~ತೆ(ದೆ)ಗೆ = ಹಿಂದೆಗೆ; ಹಿಮ್ಮೆಟ್ಟು. ~ಪ(ಬ)ಗಲ್(ಲು) = ಹಗಲಿನ ಕಡೆಯ ಭಾಗ; ಸಂಜೆ. ~ಪೊ(ಬೊ)ೞ್ತು(ಳ್ತು) = ೧. ಸಂಜೆ; ಸಾಯಂಕಾಲ. ೨. ಮುಳುಗುವ ಸೂರ್ಯ; ಸಂಜೆಯ ಸೂರ್ಯ. ~ಬದಿ = ಪಿಂಗೊೞ್. ~ಬೆದೆ = ಬೀಜ ಬಿತ್ತಿದ ನಂತರದ ಕಾಲ; ಹಿಂಬೆದೆ. ~ಮೆಯ್ = ೧. ಮೈಯ ಹಿಂಭಾಗ. ೨. ಹಿಂದಿನ ಜನ್ಮ; ಪೂರ್ವ ಜನ್ಮ.

ಪಿಂಗ (ನಾ). ೧. ಕಂದು ಬಣ್ಣ. (ಗು). ೨. ಕಂದು ಬಣ್ಣದ. ~ಅಕ್ಷ = ೧. ದುರ್ಯೋಧನ. ೨. ಶಿವ. ೩. ಗೌಜು; ಕೌಜಲಹಕ್ಕಿ. ~ಚಕ್ಷು = ೧. ಏಡಿ. ೨. ದುರ್ಯೋಧನ.

ಪಿಂಗಲ(ಳ) (ನಾ). ೧. ಕಂದು ಬಣ್ಣ. ೨. ಅರುವತ್ತು ಸಂವತ್ಸರಗಳಲ್ಲಿ ಒಂದು. ೩. ಕುಬೇರನ ನವನಿಧಿಗಳಲ್ಲಿ ಒಂದು. ೪. ದೇಹದ ಒಂದು ನಾಡಿ. ೫. ಒಬ್ಬ ಋಷಿಯ ಹೆಸರು. ೬. ಒಂದು ಜಾತಿಯ ಪಕ್ಷಿ; ಹೊರಸು. (ಗು). ೭. ಕಂದು ಬಣ್ಣದ.

ಪಿಂಗಲಿ (ನಾ). ಒಂದು ಜಾತಿಯ ಗೂಬೆ.

ಪಿಂಗಾಣಿ (ನಾ). ೧. ಬಿಳಿಯ ಜೇಡಿಮಣ್ಣು. ೨. ಬಿಳಿಯ ಜೇಡಿಮಣ್ಣಿನಿಂದ ಮಾಡಿದ ಪಾತ್ರೆ.

ಪಿಂಗು (ಕ್ರಿ). ೧. ಹಿಂದಕ್ಕೆ ಸರಿ; ಹಿಮ್ಮೆಟ್ಟು. ೨. ಇಲ್ಲದಂತಾಗು; ಹಿಂಗು; ಬತ್ತು. ೩. ನಾಶವಾಗು; ನಿವಾರಣೆಯಾಗು. ~ಇಸು = ೧. ಹಿಂಗಿಸು; ಬತ್ತಿಸು. ೨. ದೂರಮಾಡು; ತೊಲಗಿಸು.

ಪಿಂಚಣಿ (ನಾ). ಕೆಲಸದಿಂದ ನಿವೃತ್ತಿಯಾದ ನಂತರ ಕೊಡುವ ಸಂಬಳ; ನಿವೃತ್ತಿ ವೇತನ. ~ದಾರ = ವಿಶ್ರಾಂತಿವೇತನವನ್ನು ಪಡೆಯುತ್ತಿರುವವನು.

ಪಿಂಚು (ಕ್ರಿ). ಹಿಂಚು; ಹಿಂದಾಗು; ಹಿಂದೆ ಉಳಿ.

ಪಿಂಛ (ನಾ). ನವಿಲುಗರಿ; ಪೀಲಿ.

ಪಿಂಜ (ನಾ). ೧. ಮನಸ್ಸಿನ ಗೊಂದಲ; ದಿಗ್ಭ್ರಮೆ. ೨. ಗಾಯ; ನೋವು.

೩. ಚಂದ್ರ; ಸೋಮ. ೪. ಶಕ್ತಿ. ೫. ಒಂದು ಬಗೆಯ ಕರ್ಪೂರ. ೬. ಅರಳೆ. ೭. ಮಂಕು. ೮. ಕೊಲೆ ಮಾಡುವಿಕೆ; ಕೊಲ್ಲುವಿಕೆ. (ಗು). ೯. ವ್ಯಾಕುಲಗೊಂಡ; ಕ್ಷುಬ್ಧ. ೧೦. ನೊಂದ; ಗಾಸಿಯಾದ.

ಪಿಂಜರ (ನಾ). ೧. ಬಂಗಾರ; ಚಿನ್ನ. ೨. ಪಂಜರ; ಬೋನು. ೩. ಎಲುಬಿನ ಗೂಡು; ಅಸ್ಥಿಪಂಜರ. ೪. ಒಂದು ಜಾತಿಯ ಹಕ್ಕಿ. ೫. ಒಂದು ಜಾತಿಯ ಕುದುರೆ. (ಗು). ೬. ಕಂದುಬಣ್ಣದ. ೭. ಹಳದಿ ಬಣ್ಣದ.

ಪಿಂಜರಿ (ಕ್ರಿ). ೧. ಹಿಂಜರಿ; ಹಿಮ್ಮೆಟ್ಟು. (ನಾ). ೨. ರಜತ; ಬೆಳ್ಳಿ. ~ಬೆ(ವೆ)ಟ್ಟು = ಬೆಳ್ಳಿಯ ಬೆಟ್ಟ; ರಜತಾದ್ರಿ.

ಪಿಂಜರಿತ (ಗು). ಹೊಂಬಣ್ಣವುಳ್ಳ; ಚಿನ್ನದ ಬಣ್ಣವುಳ್ಳ.

ಪಿಂಜಾರ (ನಾ). ಹತ್ತಿಯನ್ನು ಹಿಂಜುವವನು.

ಪಿಂಜಿ (ನಾ). ಅರಳೆಯ ಸುರುಳಿ; ಹಂಜಿ.

ಪಿಂಜು (ಕ್ರಿ). ೧. (ಹತ್ತಿಯನ್ನು ಬಿಡಿಸುವಂತೆ) ಹಿಂಜು; ಚೊಕ್ಕಟಮಾಡು. ೨. ವಿಭಾಗಿಸು; ಬೇರೆಮಾಡು. ೩. ಬಟ್ಟೆಯಲ್ಲಿ ಎಳೆಗಳು ದೂರವಾಗು; ಹಿಸಿ. (ನಾ). ೪. ಹೀಚುಗಾಯಿ; ಮಿಡಿ.

ಪಿಂಜೂಷ (ನಾ). ಕಿವಿಯ ಮಲ; ಗುಗ್ಗೆ.

ಪಿಂಜೆ (ನಾ). ೧. ಗಾಯ. ೨. ಅರಿಸಿನ. ೩. ಅರಳೆ. ೪. ಬೆತ್ತ; ಸೆಳೆ.

ಪಿಂಡ (ನಾ). ೧. ಗುಂಪು; ಸಮೂಹ. ೨. ಕಬಳ; ತುತ್ತು. ೩. ಶ್ರಾದ್ಧಗಳಲ್ಲಿ ಪಿತೃಗಳಿಗೆ ಇರಿಸುವ ಅನ್ನದ ಮುದ್ದೆ. ೪. ದೇಹ; ಕಾಯ. ೫. ಭ್ರೂಣ. ೬. ಕಬ್ಬಿಣ. ೭. ಗಟ್ಟಿಯಾದುದು. ೮. ಮುದ್ದೆ; ಉಂಡೆ. ~ಅಶನ = ಭಿಕ್ಷುಕ; ತಿರುಪೆಯವನು. ~ಪ್ರದಾನ = ಸತ್ತವರಿಗೆ ಶ್ರಾದ್ಧದಲ್ಲಿ ಪಿಂಡವನ್ನು ಅರ್ಪಿಸುವುದು.

ಪಿಂಡಾರಿ (ನಾ). ೧. ಒಂದು ಜನಾಂಗ; ಪೆಂಡಾರಿ. ೨. ಕಳ್ಳರ ಗುಂಪು; ತುಡುಗರ ಸಮೂಹ.

ಪಿಂಡಿ (ನಾ). ೧. ಪೆಂಡಿ; ಕಟ್ಟು; ಹೊರೆ. ೨. ಕಾಳುಗಳಿಂದ ಎಣ್ಣೆ ತೆಗೆದ ಮೇಲೆ ಉಳಿಯುವ ಸಿಪ್ಪೆ; ಹಿಂಡಿ. ೩. ಒಂದು ಬಗೆಯ ವ್ಯಂಜನ ಪದಾರ್ಥ.

ಪಿಂಡಿಕೆ (ನಾ). ೧. ಬಾವು; ಊತ. ೨. ಚಕ್ರದ ನಾಭಿ; ಗುಂಬ. ೩. ವಿಮಾನ ಖಂಡ; ಕಣಕಾಲು. ೪. ಪೀಠ; ಆಸನ.

ಪಿಂಡಿವಾಳ (ನಾ). ಒಂದು ಬಗೆಯ ಆಯುಧ.

ಪಿಂಡು (ಕ್ರಿ). ೧. ಹಿಸುಕಿ ರಸವನ್ನು ತೆಗೆ; ಹಿಂಡು; ಹಿಳಿ. (ನಾ). ೨. ಗುಂಪು; ಸಮೂಹ.

ಪಿಂಡೆ (ನಾ). ಅಂಡಿಗೆ; ಮೂಟೆ.

ಪಿಂತು (ನಾ). ೧. ಮುಂಚೆ; ಮೊದಲು. ೨. ಹಿಂಭಾಗ; ಹಿಂಬದಿ. ~ಇಕ್ಕು = ೧. ಹಿಂದೆ ಹಾಕು; ಹಿಂದೆ ಉಳಿಯುವಂತೆ ಮಾಡು. ೨. ಕಡೆಗಣಿಸು. ~ಇಲ್ = ಮನೆಯ ಹಿಂಭಾಗ; ಹಿತ್ತಿಲು.

ಪಿಂದು = ಪಿಂತು. ~ಕ(ಗ)ಳೆ = ತಿರಸ್ಕರಿಸು; ಹೀಗಳೆ. ~ಕೊ(ಗೊ)ಳ್ = ಹಿಂಬಾಲಿಸು; ಅನುಸರಿಸು.

ಪಿಂದೆ = ಪಿಂತು.

ಪಿಕ (ನಾ). ಕೋಗಿಲೆ. ~ಬಂಧು = ಕೋಗಿಲೆಗೆ ಆಶ್ರಯವಾದುದು; ಮಾವಿನ ಮರ.

ಪಿಕಾಸಿ (ನಾ). ನೆಲ ಅಗೆಯುವ ಸಾಧನ; ಸಲಿಕೆ.

ಪಿಕಾಸು = ಪಿಕಾಸಿ.

ಪಿಕ್ಕು ೧. = ಪಿರ್ಕು. ೨. ಬೇರ್ಪಡಿಸು; ಪ್ರತ್ಯೇಕಿಸು. ೩. ಆರಿಸು; ಹೆಕ್ಕು.

ಪಿಕ್ಕೆ = ಪಿಚಿಕ್ಕೆ.

ಪಿಚಂಡಿ (ನಾ). ತೊಡೆ; ಊರು.

ಪಿಚಕಾರಿ (ನಾ). ಜೀರ್ಕೊಳವೆ; ಜೀಕಳಿ.

ಪಿಚಾಡಿ (ನಾ). ಹಿಂಭಾಗ.
ಪಿಚುಮಂದ (ನಾ). ಬೇವಿನ ಮರ.
ಪಿಚುಲ (ನಾ). ೧. ಅರಳೆ. ೨. ಒಂದು ಜಾತಿಯ ಕಾಗೆ; ಸಂಬಾರಕಾಗೆ.
ಪಿಚ್ಚಟ (ನಾ). ೧. ಕಣ್ಣಿನ ಒಂದು ರೋಗ. ೨. ತವರ (ಗು). ೩. ಚಪ್ಪಟೆಯಾದ; ಅಗಲವಾದ.
ಪಿಚ್ಚು (ನಾ). ಕಣ್ಣಿನ ಕೊಳೆ; ಪಿಸುರು.
ಪಿಚ್ಛೆ (ನಾ). ೧. ಅಳತೆ ಅಥವಾ ತೂಕದಲ್ಲಿ ಕಡಮೆಯಿರುವುದು. ೨. ಭಿಕ್ಷೆ.
ಪಿಚ್ಛ ೧ = ಪಿಂಛ. ೨. ರೆಕ್ಕೆ; ಪಕ್ಕ.
ಪಿಚ್ಛಿಲ (ನಾ). ೧. ಕೆಸರಿನಿಂದ ಕೂಡಿದ ಜಾಗ. (ಗು). ೨. ಜಾರಿಕೆಯುಳ್ಳ; ಜಾರುವ.
ಪಿಟ (ನಾ). ೧. ಬಿದಿರಿನ ಬುಟ್ಟಿ. ೨. ಮನೆ. ೩. ಛಾವಣಿ; ಮಾಡು.
ಪಿಟಕ (ನಾ). ೧. ಒಂದು ಜಾತಿಯ ಪಕ್ಷಿ. ೨. ಪೆಟ್ಟಿಗೆ; ಪೆಟಾರಿ. ೩. ಗುಳ್ಳೆ; ಬೊಕ್ಕೆ.
ಪಿಟೀಲು (ನಾ). ಒಂದು ಬಗೆಯ ತಂತಿವಾದ್ಯ.
ಪಿಟ್ಟ (ನಾ). ಪಿಷ್ಟ; ಹಿಟ್ಟು.
ಪಿಟ್ಟು = ಪಿಟ್ಟ.
ಪಿಠರ (ನಾ). ೧. ಕುಂಭ; ಮಡಕೆ. ೨. ಕಡೆಗೋಲು; ಮಂತು.
ಪಿಡಿ (ಕ್ರಿ). ೧. (ಕೈಯಲ್ಲಿ) ಹಿಡಿದುಕೊಳ್ಳು; ಗ್ರಹಿಸು; ಹಿಡಿ. ೨. ಆಶ್ರಯಿಸು; ಮರೆಹೊಗು. ೩. ಸೆರೆಹಿಡಿ; ಬಂಧಿಸು. ೪. ಪ್ರಾರಂಭಿಸು; ಮೊದಲುಮಾಡು. (ನಾ). ೫. ಕಾವು; ಹಿಡಿಕೆ. ೬. ಮುಷ್ಟಿ; ಹಿಡಿ. ೭. ಒಂದು ಕೈಯಲ್ಲಿ ಹಿಡಿಯುವಷ್ಟು. ೮. (ಇಸ್ಪೀಟು ಎಲೆಗಳ) ಕಟ್ಟು. ೯. ಹೆಣ್ಣು ಆನೆ. ~ಅ(ಯಾ)ಳ್(ಳು) = ಸೆರೆಯಾಳು; ಬಂದಿ. ~ಇಸು = ಹಿಡಿಯುವಂತೆ ಮಾಡು. ಸೆರೆಹಿಡಿಸು. ~ಕುತ್ತು = ಒಂದು ಬಗೆಯ ಆಯುಧ. ~ಗುಂಡು = ಸಣ್ಣಗುಂಡು, –ಕಲ್ಲು.
ಪಿಡಿಕೆ (ನಾ). ಹಿಡಿಯಲ್ಪಟ್ಟುದು; ಹಿಡಿಕೆ. ~ಪೆ(ವೆ)ಱು(ರು) = ವಶವಾಗು; ಸೆರೆಸಿಕ್ಕು.
ಪಿಡುಗು (ಕ್ರಿ). ೧. ಸಿಡಿಲಿನ ಹಾಗೆ ಸಿಡಿ, –ಚಿಮ್ಮು. (ನಾ). ೨. ಸಿಡಿಲು. ೩. ತೊಂದರೆ; ಕಷ್ಟ; ಕಾರ್ಪಣ್ಯ. ೪. ಪ್ಲೇಗು ಮುಂತಾದ ಅಂಟುರೋಗ.
ಪಿಣಿಲ್(ಲು) (ಕ್ರಿ). ೧. ಜಡೆಹಾಕು; ಹೆಣೆ. (ನಾ). ೨. ಜಡೆ; ಹೆರಳು. ೩. ಹಿಣಿಲು; ಡುಬ್ಬ; ಇಣಿ. ೪. ಬಿಲ್ಲಿನ ಹೆದೆ; ನಾರಿ.
ಪಿಣ್ಯಾಕ (ನಾ). ೧. (ಎಣ್ಣೆ ತೆಗೆದ ಮೇಲೆ ಉಳಿಯುವ) ಹಿಂಡಿ. ೨. ಹಾಲುಮಡ್ಡಿ ಮುಂತಾದ ಸುಗಂಧದ್ರವ್ಯ.
ಪಿತ (ನಾ). ತಂದೆ; ಅಪ್ಪ.
ಪಿತರ (ನಾ). ಸ್ವರ್ಗಸ್ಥನಾದ ಹಿರಿಯ.
ಪಿತಾಮಹ (ನಾ). ೧. ತಂದೆಯ ತಂದೆ; ಅಜ್ಜ. ೨. ಬ್ರಹ್ಮ.
ಪಿತಾಮಹಿ (ನಾ). ತಂದೆಯ ತಾಯಿ; ಅಜ್ಜಿ.
ಪಿತೂರಿ (ನಾ). ಒಳಸಂಚು; ತಂತ್ರ. ~ಗಾರ = ಸಂಚುಗಾರ; ಮೋಸಗಾರ.
ಪಿತೃ ೧. = ಪಿತ. ೨. ಹಿಂದಿನವನು; ಪೂರ್ವಜ; ಹಿರಿಯ. ೩. = ಪಿತರ. ~ಕರ್ಮ = ಪಿತೃಗಳಿಗೆ ಪಿಂಡ ಮುಂತಾದುವನ್ನು ಅರ್ಪಿಸುವಿಕೆ. ~ತೀರ್ಥ = ಶ್ರಾದ್ಧಕ್ಕೆ ಪವಿತ್ರವಾದ ಸ್ಥಳ; ಗಯೆ. ~ದಿನ = ಶ್ರಾದ್ಧದ ದಿನ; ತಿಥಿ. ~ಪಕ್ಷ = ಭಾದ್ರಪದ ಕೃಷ್ಣಪಕ್ಷ; ಹಿರಿಯರಿಗೆ ತರ್ಪಣ ಕೊಡುವ ಕಾಲ. ~ಪತಿ = ಯಮ. ~ಭೋಜನ = ಶ್ರಾದ್ಧದ ಊಟ. ~ವನ = ಶ್ಮಶಾನ; ಸುಡುಗಾಡು. ~ಶೇಷ = ಪಿತೃಗಳಿಗೆ ಅರ್ಪಿಸಿದ ಆಹಾರದಲ್ಲಿ ಉಳಿದ ಭಾಗ.
ಪಿತೃವ್ಯ (ನಾ). ತಂದೆಯ ತಮ್ಮ; ಚಿಕ್ಕಪ್ಪ.
ಪಿತ್ತ (ನಾ). ೧. ಶರೀರದ ಮೂರು ಧಾತುಗಳಲ್ಲಿ ಒಂದು. ೨. ಹುಚ್ಚು. ೩. ಕೋಪ

~ಕಾಮಾಲೆ = ಅರಿಸಿನ ಮುಂಡಿಗೆ ರೋಗ; ಪಾಂಡುರೋಗ. ~ಗಂಥೆ = ಪಿತ್ತದಿಂದ ಉಂಟಾಗುವ ಗುಳ್ಳೆ; ತದ್ದು.

ಪಿತ್ತಲ ೧. = ಪಿತ್ತಳೆ. ೨. ಠಕ್ಕಿನ ನಡತೆ. (ಗು). ೩. ಪಿತ್ತಕ್ಕೆ ಸಂಬಂಧಿಸಿದ.

ಪಿತ್ತಳೆ (ನಾ). ಒಂದು ಬಗೆಯ ಲೋಹ; ಹಿತ್ತಾಳೆ.

ಪಿಶ್ಚಿಲ್ (ನಾ). ಮನೆಯ ಹಿಂದಿನ ಪ್ರದೇಶ; ಹಿತ್ತಲು.

ಪಿಧಾನ (ನಾ). ಹೊದಿಕೆ; ಮುಚ್ಚಳ; ಆವರಣ.

ಪಿನ್ = ಹಿಂ. ~ಎಣಿಕೆ = ಗತಕಾಲದ ಎಣಿಕೆ. ~ನೆಲೆ = ಹಿಂದಿನ ಸನ್ನಿವೇಶ; ಹಿನ್ನೆಲೆ. ~ನೋಯು = ಪಶ್ಚಾತ್ತಾಪ ಪಡು.

ಪಿನದ್ಧ (ಗು). ಬಂಧಿಸಲ್ಪಟ್ಟ; ಕಟ್ಟಲ್ಪಟ್ಟ.

ಪಿನಾಕ (ನಾ) ೧. ಶಿವನ ಒಂದು ಆಯುಧ; ತ್ರಿಶೂಲ ೨. ಶಿವನ ಧನುಸ್ಸು.

ಪಿನಾಕಿ (ನಾ). ೧. ಪಿನಾಕವನ್ನು ಹಿಡಿದವನು; ಶಿವ. ೨. ಒಂದು ವಾದ್ಯವಿಶೇಷ.

ಪಿಪಾಸು (ನಾ). ೧. ಬಾಯಾರಿಕೆಯುಳ್ಳವನು; ದಾಹದಿಂದ ಕೂಡಿದವನು. (ಗು). ೨. ಬಾಯಾರಿದ; ದಾಹದಿಂದ ಕೂಡಿದ.

ಪಿಪಾಸೆ (ನಾ). ಬಾಯಾರಿಕೆ; ದಾಹ.

ಪಿಪೀಲಿಕ (ನಾ). ಇರುವೆ.

ಪಿಪ್ಪಲ (ನಾ). ಒಂದು ಜಾತಿಯ ಮರ; ಅರಳಿ.

ಪಿಪ್ಪಲಿ (ನಾ). ಒಂದು ಜಾತಿಯ ಸಸ್ಯ ಮತ್ತು ಅದರ ಬೇರು; ಹಿಪ್ಪಲಿ.

ಪಿಯ (ಗು). ಪ್ರಿಯವಾದ; ಮೆಚ್ಚುಗೆಯ.

ಪಿರಂಗಿ (ನಾ). ದೊಡ್ಡ ಬಂದೂಕು; ತುಪಾಕಿ.

ಪಿರಿ (ಕ್ರಿ). ೧. ಹಿರಿ; ಕೀಳು; ಸೆಳೆ. ೨. ನಾಶವಾಗು. (ನಾ). ೩. = ಪಿಱು. (ಗು). ೪. ದೊಡ್ಡದಾದ. ೫. ಶ್ರೇಷ್ಠವಾದ; ಮುಖ್ಯವಾದ.

ಪಿರಿದು (ನಾ). ೧. ಘನವಾದದ್ದು; ಹಿರಿದು. (ಗು). ೨. ಶ್ರೇಷ್ಠವಾದ.

ಪಿರಿಯ (ನಾ). ೧. ದೊಡ್ಡವನು; ಹಿರಿಯ. ೨. ಯಜಮಾನ; ಮುಖಂಡ. (ಗು). ೩. ದೊಡ್ಡ; ಹಿರಿಯ. ~ಅಕ್ಕರ = ಒಂದು ಬಗೆಯ ಛಂದೋವೃತ್ತ.

ಪಿರ್ರೆ = ಪಿಱೆ.

ಪಿಱು(ರಿ) (ನಾ). ಮಾಂಸ; ಬಾಡು. ~ತಿನಿ = ಮರುಳು; ದೆವ್ವ.

ಪಿಱೆ(ರೆ) (ನಾ). ನಿತಂಬ; ಕುಂಡೆ.

ಪಿಕು (ಕ್ರಿ). ತಲೆಗೂದಲನ್ನು ಹಿಕ್ಕು; ಬಾಚು.

ಪಿಗ್ಗು ೧. = ಪಿಱ್ಗು. (ನಾ). ೨. ಹಿಗ್ಗು; ಸಂತೋಷ.

ಪಿಲ್ಲಣಿಗೆ (ನಾ). ಗದೆ; ಪರಿಘ.

ಪಿಲ್ಲಿ (ನಾ). ೧. ಒಂದು ಬಗೆಯ ಕಾಲುಂಗುರ. ೨. ಬೆಕ್ಕು.

ಪಿಶಂಗ (ನಾ). ೧. ಕಂದುಬಣ್ಣ (ಗು). ೨. ಕಂದುಬಣ್ಣವುಳ್ಳ. ~ಅಶ್ಮ = ಬೆಲೆ ಬಾಳುವ ಒಂದು ರತ್ನ; ಗೋಮೇದಕ.

ಪಿಶಾಚ (ನಾ). ಭೂತ; ದೆವ್ವ

ಪಿಶಾಚಿ = ಪಿಶಾಚ.

ಪಿಶಿತ (ನಾ). ಮಾಂಸ; ಬಾಡು.

ಪಿಶುನ (ನಾ). ೧. ಚಾಡಿ; ಹೂರು. ೨. ಚಾಡಿಕೋರ; ಪಿಸುಣ. ೩. ನೀಚ; ದುಷ್ಟ.

ಪಿಷ್ಟ (ನಾ). (ಧಾನ್ಯದ) ಪುಡಿ; ಹಿಟ್ಟು. ~ಪೇಷಣ = ಹಿಟ್ಟನ್ನು ಪುಡಿಪುಡಿ ಮಾಡುವುದು; ವ್ಯರ್ಥವಾದ ಕೆಲಸವನ್ನು ಮಾಡುವುದು.

ಪಿಷ್ಟಾತಕ (ನಾ). ಸುಗಂಧಯುಕ್ತವಾದ ಪುಡಿ.

ಪಿಷ್ಟ (ನಾ). ಮಣ್ಣಿನ ಹೆಂಟೆ.

ಪಿಸನಾಳಿ (ನಾ). ಚಿಪ್ಪಿಗ; ಶೋಧ.

ಪಿಸರು (ನಾ). ಕಣ್ಣಿನ ಕೊಳೆ; ಗೀಜು.

ಪಿಸಿ (ಕ್ರಿ). ೧. ಹಿಸಿ; ಸೀಳಾಗು. ೨. ತುಂಡು ಮಾಡು; ಅಗಲಿಸು.

ಪಿಸಿತ = ಪಿಶಿತ.
ಪಿಸು(ಂ)ಕು (ಕ್ರಿ). ೧. ಹಿಸುಕು; ಅಮುಕು. ೨. ಅವಮಾನಿಸು; ತಿರಸ್ಕರಿಸು.
ಪಿಸುಗುಟ್ಟು (ಕ್ರಿ). ಕಿವಿಯಲ್ಲಿ ಹೇಳು; ಮೆಲ್ಲನೆ ಹೇಳು.
ಪಿಸುಣ್(ಣು) (ನಾ). ೧. ಚಾಡಿ; ದೂರು. ೨. ಕೋಪ; ಸಿಟ್ಟು. ೩. ನೀಚ; ದುಷ್ಟ.
ಪಿಸುಣ = ಪಿಶುನ.
ಪಿಸುನುಡಿ (ನಾ). ಕಿವಿಮಾತು; ಗುಟ್ಟು.
ಪಿಸುಮಾತು = ಪಿಸುನುಡಿ.
ಪಿಸುರು = ಪಿಸರು.
ಪಿಸುಳ್(ಳ್) = ಪಿಳಿಗು.
ಪಿಸ್ತೂಲ್(ಲು) (ನಾ). ಸಣ್ಣ ತುಬಾಕಿ, – ಬಂದೂಕು.
ಪಿಹಿತ (ಗು). ಮುಚ್ಚಿದ; ಮರೆಮಾಡಿದ.
ಪಿಳಕಿಸು (ಕ್ರಿ). ಮಿಟಕಿಸು; ಅಲುಗಾಡಿಸು.
ಪಿಳಿಗು (ಕ್ರಿ). ಬಿರುಕುಂಟಾಗು; ಸೀಳು; ಹಿಸಿ.
ಪಿಳಿಲ್(ಲು) (ಕ್ರಿ). ೧. ಎಸೆ; ಬಿಸಾಡು. ೨. ಬಿಚ್ಚು; ಕಳಚು. (ನಾ). ೩. ಹಿಣಿಲು; ಡುಬ್ಬ.
ಪಿಳುಕು ೧. = ಪಿಳ್ಕು. ೨. ಮರಿ; ಪೋತ.
ಪಿಳ್ಕು (ನಾ). ೧. ಬಾಣದ ಹಿಂಭಾಗ; ಪುಂಖ. ೨. ಗೊಲೆ; ಬಿಲ್ಲಿನ ಕೊಪ್ಪು.
ಪಿಳ್ಳಂಗೋವಿ (ನಾ). ಕೊಳಲು; ವೇಣು.
ಪಿಳ್ಳಾರಿ (ನಾ). ಗಣೇಶ; ವಿನಕ.
ಪಿಳ್ಳೆ (ನಾ). ೧. ಚಿಕ್ಕದು; ಸಣ್ಣದು. ೨. ಮಗು. ೩. ಪೋತ; ಮರಿ.
ಪಿೞಿ(ಳಿ) (ಕ್ರಿ). ಹಿಸುಕಿ ದ್ರವವಿಲ್ಲದಂತೆ ಮಾಡು; ರಸವನ್ನು ತೆಗೆ; ಹಿಳಿ.
ಪಿೞ್ಕೆ(ಳ್ಕೆ) (ನಾ). ಪ್ರಾಣಿಗಳ ಹಿಕ್ಕೆ.
ಪಿೞ್ಗು(ಳ್ಗು) (ಕ್ರಿ). ಸಂತೋಷಪಡು; ಹಿಗ್ಗು.
ಪೀ (ನಾ). ಮಲ; ಅಮೇಧ್ಯ.
ಪೀಕದಾನಿ (ನಾ). ಉಗುಳುವ ಪಾತ್ರೆ; ಕಾಳಾಂಜಿ.
ಪೀಕಲಾಟ (ನಾ). ೧. ಜಗಳ; ಕಲಹ. ೨. ತೊಂದರೆ; ಕಷ್ಟ.
ಪೀಕು (ಕ್ರಿ). ೧. ಹೊರತೆಗೆ; ಕೀಳು. ೨. ತೆರು; ಕೊಡು. ೩. ನೋವುಂಟು ಮಾಡು. (ನಾ). ೪. ಬೆಳೆ; ಪೈರು.
ಪೀಚು (ಕ್ರಿ). ೧. (ಪಿಚಕಾರಿಯಿಂದ) ಚುರುಕಿ ಬಿಡು, – ಚಿಮುಕಿಸು. (ನಾ). ೨. ಚಿಮ್ಮುವಿಕೆ. ೩. ಎಳೆಯ ಕಾಯಿ; ಹೀಚು; ಮಿಡಿ. ೪. ಬಡಕಲು; ಸೊರಗಿದುದು. ~ಕೊ(ಗೊ)ಳವಿ = ಜೀಕೊರ್ಳವೆ; ಪಿಚಕಾರಿ.
ಪೀಠ (ನಾ). ೧. ಆಸನ; ಗದ್ದುಗೆ. ೨. ಬುನಾದಿ; ಅಸ್ತಿಭಾರ. ~ಮರ್ದಕ = ರಾಜನ ಜೊತೆಗಾರರಲ್ಲಿ ಒಬ್ಬ; ನರ್ಮ ಸಚಿವ.
ಪೀಠಿಕೆ ೧. = ಪೀಠ. ೨. ಪ್ರಸ್ತಾವನೆ; ಪ್ರಾರಂಭ; ಮುನ್ನುಡಿ.
ಪೀಡನ (ನಾ). ೧. ಒತ್ತುವಿಕೆ; ಹಿಸುಕು ವಿಕೆ. ೨. ತೊಂದರೆ; ಹಾನಿ; ಅಪಾಯ.
ಪೀಡಿ = ಪೀೞುಗೆ.
ಪೀಡೆ (ನಾ). ೧. ದುಃಖ; ಬಾಧೆ. ೨. ತೊಂದರೆ; ಹಿಂಸೆ. ೩. ಒಂದು ದುಷ್ಟಗ್ರಹ; ಪಿಶಾಚಿ. ~ಇಸು = ೧. ಕಾಡು; ಹಿಂಸಿಸು. ೨. ಹಿಂಡು; ಹಿಸುಕು.
ಪೀತ (ನಾ). ೧. ಹಳದಿ; ಹೊಂಬಣ್ಣ. ೨. ಅರಿಸಿನ; ಹರಿದ್ರೆ. ೩. ಸುವರ್ಣ; ಚಿನ್ನ. (ಗು). ೪. ಕುಡಿದ; ಹೀರಿದ. ೫. ಹಳದಿ ಬಣ್ಣವುಳ್ಳ. ~ಅಂಬರ = ೧. ಹಳದಿ ಬಟ್ಟೆ. ೨. ರೇಷ್ಮೆ ವಸ್ತ್ರ. ೩. = ಪೀತವಾಸ. ~ಕಾಂತ = ರತ್ನಗಳಲ್ಲಿ ಒಂದು; ಪುಷ್ಯ ರಾಗ. ~ದಾರು = ಒಂದು ಜಾತಿಯ ಮರ. ~ರಾಗ = ಹಳದಿಯ ಬಣ್ಣ. ~ವಾಸ = ಹಳದಿಬಣ್ಣದ ಬಟ್ಟೆಯನ್ನು ಧರಿಸಿದವನು; ಕೃಷ್ಣ; ವಿಷ್ಣು.

ಪೀನ (ಗು). ಕೊಬ್ಬಿದ; ಸೊಕ್ಕಿದ; ತುಂಬಿದ.

ಪೀನಸ (ನಾ). ೧. ನೆಗಡಿ. ೨. ಮೂಗನ್ನು ವಿಕಾರಗೊಳಿಸುವ ಒಂದು ರೋಗ.

ಪೀನಾಶಿ = ಪೀನಸ.

ಪೀಪಾಯಿ (ನಾ). ಮರ ಅಥವಾ ಲೋಹದ ದೊಡ್ಡ ಪಾತ್ರೆ; ಡ್ರಮ್ಮು.

ಪೀಪಿ (ನಾ). ೧. ಊದುವ ಒಂದು ಸಾಧನ; ಶಿಳ್ಳಿ; ಶೀಟಿ. ೨. ಓಲಗ; ನಾಗಸ್ವರ.

ಪೀಯೂಷ (ನಾ). ೧. ಎಳಗಂದಿ ಹಾಲು; ಗಿಣ್ಣುಹಾಲು. ೨. ಅಮೃತ.

ಪೀರ್(ರು) (ಕ್ರಿ). ೧. ದ್ರವವನ್ನು ಒಳಗೆ ಎಳೆದುಕೊಳ್ಳು; ಹೀರು; ಸುರಿದುಕೊಳ್ಳು. ೨. = ಪೀಱು.

ಪೀಱು(ರು) (ಕ್ರಿ). ೧. ಚೆಲ್ಲಾಡು; ಹರಡು. (ನಾ). ೨. ಹರಡಿರುವುದು; ಚೆಲ್ಲಿರುವುದು.

ಪೀಲಕ (ನಾ). ಗೊದ್ದ.

ಪೀಲಿ (ನಾ). ೧. ನವಿಲುಗರಿ; ಹೀಲಿ; ನವಿಲಿನ ಪುಚ್ಛ. ೨. ನವಿಲುಗರಿಯ ಕಣ್ಣು; ಚಂದ್ರಕ. ~ತ(ದ)ಟ್ಟೆ(ಳೆ) = ನವಿಲುಗರಿಗಳಿಂದ ಮಾಡಿದ ಕೊಡೆ. ~ಬಿ(ವಿ)ಜ್ಜಣಿಗೆ = ನವಿಲುಗರಿಗಳಿಂದ ಮಾಡಿದ ಬೀಸಣಿಗೆ.

ಪೀಲು (ನಾ). ೧. ಉಗುನಿ ಮರ; ಗೋಣಿ ಮರ. ೨. ಹೂವು; ಪುಷ್ಪ. ೩. ಬಾಣ; ಕಣೆ. ೪. ಆನೆ; ಗಜ. ೫. ಕ್ರಿಮಿ; ಕೀಟ. ೬. ಅಣು; ಪರಮಾಣು.

ಪೀವರ = ಪೀನ.

ಪೀೞಿ(ಳಿ)ಗೆ (ನಾ). ೧. ಪರಂಪರೆ. ೨. ಸಂತತಿ; ವಂಶ. ೩. ತಲೆಮಾರು.

ಪುಂಖ (ನಾ). ೧. ಗರಿಗಳಿಂದ ಕೂಡಿದ ಬಾಣದ ಹಿಂಭಾಗ; ಹಿಳುಕು. ೨. ಒಂದು ಜಾತಿಯ ಪಕ್ಷಿ; ಗಿಡುಗ. ~ಅನುಪುಂಖ = ೧. ಗರಿಯನ್ನು ಅನುಸರಿಸುವ ಗರಿ; ಬಾಣದ ಹಿಂದೆ ಬರುವ ಮತ್ತೊಂದು ಬಾಣ. ೨. ಒಂದಾದ ಮೇಲೊಂದರಂತೆ ಬರುವಿಕೆ; ಒಂದೇ ಸಮನೆ ಬರುವಿಕೆ.

ಪುಂಗವ (ನಾ). ೧. ಎತ್ತು; ಗೂಳಿ. ೨. ಶ್ರೇಷ್ಠವ್ಯಕ್ತಿ. ~ಧ್ವಜ = ಗೂಳಿಯ ಗುರುತುಳ್ಳ ಧ್ವಜವನ್ನು ಹೊಂದಿರುವವನು; ಶಿವ.

ಪುಂಗಿ (ನಾ). ಒಂದು ಊದುವ ವಾದ್ಯ. ~ಊ(ಯೂ)ದು = ೧. ಪುಂಗಿಯನ್ನು ಬಾರಿಸು. ೨. ಪುಸಲಾಯಿಸು.

ಪುಂಚ (ನಾ). ಹುತ್ತ.

ಪುಂಜ (ನಾ). ೧. ಗಂಡುಕೋಳಿ; ಹುಂಜ; ತಾಮ್ರಚೂಡ. ೨. ರಾಶಿ; ಗುಂಪು; ಸಮೂಹ. ~ಇಸು = ರಾಶಿಹಾಕು; ಗುಂಪುಗೂಡಿಸು.

ಪುಂಡ (ನಾ). ೧. ತಂಟೆಕೋರ; ತುಂಟ; ಉಡಾಳ. (ಗು). ೨. ತುಂಟತನದಿಂದ ಕೂಡಿದ.

ಪುಂಡರೀಕ (ನಾ). ೧ ಬಿಳಿಯ ತಾವರೆ. ೨. ಬೆಳ್ಗೊಡೆ; ಶ್ವೇತಚ್ಛತ್ರ. ೩. ದಿಗ್ಗಜಗಳಲ್ಲಿ ಒಂದು; ಆಗ್ನೇಯ ದಿಕ್ಕಿನ ಆನೆ. ೪. ಮುನಿ; ಯತಿ. ೫. ಹುಲಿ. ~ಅಕ್ಷ = ತಾವರೆಯಂತೆ ಕಣ್ಣುಳ್ಳವನು; ವಿಷ್ಣು; ಕೃಷ್ಣ.

ಪುಂಡಿ (ನಾ). ಒಂದು ಜಾತಿಯ ಸಸ್ಯ. ~ನಾರು = ಪುಂಡಿ ಸಸ್ಯದ ಎಳೆ, -ನಾರು.

ಪುಂಡು (ನಾ). ತುಂಟತನ; ಪುಂಡಾಟ. ~ಆಟ = ತುಂಟತನ; ದುಂಡಾವೃತ್ತಿ. ~ಏಳು=ದಂಗೆಯೇಳು; ದೊಂಬಿಯೇಳು. ~ಮಾತು = ಕೆಲಸಕ್ಕೆ ಬಾರದ ಮಾತು.

ಪುಂಡ್ರ (ನಾ). ೧. ಗಂಧದ ತಿಲಕ, -ಬೊಟ್ಟು. ೨. ಒಂದು ಜಾತಿಯ ಗೆರೆಯುಳ್ಳ ಕಬ್ಬು; ಪಟಾಪಟಿ ಕಬ್ಬು. ~ಇಕ್ಷು = ಬಿದಿರು ಗಬ್ಬು; ಕೆಂಪುಕಬ್ಬು.

**ಪುಂಯೋಗ** (ನಾ). ಪುರುಷರೊಡನೆ ಸಂಬಂಧ.

**ಪುಂಶ್ಚಲೆ(ಳಿ)** (ನಾ). ಜಾರೆ; ಹಾದರಗಿತ್ತಿ.

**ಪುಂಸ** (ನಾ). ಪುರುಷ; ಗಂಡಸು.

**ಪುಂಸವನ** (ನಾ). ಗರ್ಭಿಣಿ ಸ್ತ್ರೀಗೆ ಮಾಡುವ ಹದಿನಾರು ಸಂಸ್ಕಾರಗಳಲ್ಲಿ ಒಂದು.

**ಪುಂಸ್ಕೋಕಿಲ(ಳ)** (ನಾ). ಗಂಡುಕೋಗಿಲೆ

**ಪುಂಸ್ತ್ವ** (ನಾ). ೧. ಪುರುಷತ್ವ; ಗಂಡಸುತನ. ೨. = ಪುಲ್ಲಿಂಗ.

**ಪುಕಳಿ** = ಪುಕುಳಿ.

**ಪುಕಾರ್(ರು)** (ನಾ). ೧. ಕೂಗಾಟ; ಕಿರಿಚಾಟ. ೨. ಸುದ್ದಿ; ವರ್ತಮಾನ. ೩. ದೂರು; ಚಾಡಿ.

**ಪುಕುಳಿ** (ನಾ). ೧. ಸ್ತ್ರೀಯರ ಜನನಾಂಗ; ಯೋನಿ. ೨. ಕುಂಡೆ; ಪಿರ್ರೆ.

**ಪುಕ್ಕ** (ನಾ). ೧. ಹಕ್ಕಿಗಳ ಹಿಂಬದಿಯ ಗರಿ; ಪುಚ್ಛ. ೨. ಅಂಜುಬುರುಕ; ಹೇಡಿ.

**ಪುಕ್ಕಟೆ** (ಅ). ಬೆಲೆಯಿಲ್ಲದೆ; ಉಚಿತವಾಗಿ.

**ಪುಕ್ಕಲು** (ನಾ). ಹೇಡಿತನ; ಅಧೈರ್ಯ.

**ಪುಕ್ಕಸ** (ನಾ). ಚಂಡಾಲ.

**ಪುಕ್ಕು** ೧. = ಪುಕ್ಕಲು. ೨. ಸ್ತ್ರೀಯರ ಜನನಾಂಗ; ಯೋನಿ.

**ಪುಗಿಲ್(ಲು)** (ನಾ). ೧. ಕೋಗಿಲೆಯ ಧ್ವನಿ. ೨. ಪ್ರವೇಶ; ಆಗಮನ. ೩. ಬಾಗಿಲು; ದ್ವಾರ.

**ಪುಗು** (ಕ್ರಿ). ೧. ಹೊಗು; ಒಳಸೇರು; ಪ್ರವೇಶಿಸು. (ನಾ). ೨. ಒಳಸೇರುವಿಕೆ; ಪ್ರವೇಶ. ~ಇಸು = ಒಳಹೊಗುವಂತೆ ಮಾಡು.

**ಪುಗುತೆ** (ನಾ). ಪ್ರವೇಶಿಸುವುದು.

**ಪುಗುಳ್(ಳು)** (ನಾ). ಗುಳ್ಳೆ; ಹುಗುಳು.

**ಪುಗ್ಗಿ** = ಪುಗ್ಗ.

**ಪುಗ್ಗ** (ನಾ). ಗರ್ವ; ಹೆಮ್ಮೆ; ಪೊಗರು. ~ಆಳು = ಗರ್ವಿಷ್ಠ; ಹಮ್ಮುಗಾರ.

**ಪುಗ್ಗೆ** (ನಾ). ಒಂದು ಬಗೆಯ ಕರಿದ ತಿಂಡಿ.

**ಪುಚ್ಚವಣ** (ನಾ). ೧. ಪರೀಕ್ಷೆ. ೨. ಪೌರುಷ; ಪರಾಕ್ರಮ.

**ಪುಚ್ಚಳಿ(ಳಿ)** (ಕ್ರಿ). ೧. ಕೇಡು ಹೊಂದು; ಹಾನಿಗೆ ಒಳಗಾಗು. (ನಾ). ೨. ಕೇಡು; ಹಾನಿ; ನಾಶ.

**ಪುಚ್ಚಿ** (ನಾ). ಸ್ತ್ರೀಯರ ಜನನಾಂಗ. ಯೋನಿ.

**ಪುಚ್ಚು** (ನಾ). ೧. ಬುದ್ಧಿ ಪಲ್ಲಟ, ಹುಚ್ಚು; ಉನ್ಮಾದ. ೨. ದಡ್ಡತನ; ಮೌಢ್ಯ. ೩. ಅತ್ಯಾಸಕ್ತಿ; ತಲ್ಲೀನತೆ.

**ಪುಚ್ಛ** (ನಾ). ೧. ಬಾಲ. ೨. ನವಿಲಿನ ಗರಿ. ೩. ಹಿಂಭಾಗ. ೪. ತುದಿ; ಅಂತ್ಯ.

**ಪುಟ** (ನಾ). ೧. ಹಾರಾಟ; ಜಿಗಿತ. ೨. ಬೆಂಕಿಯನ್ನು ಹೊತ್ತಿಸುವುದು. ೩. ಮುಚ್ಚಳ. ೪. ಭರಣಿ; ಕರಂಡಕ. ೫. ಬುಟ್ಟಿ. ೬. ಲೋಹ ಮುಂತಾದುವನ್ನು ಕರಗಿಸಿ ಶುದ್ಧಮಾಡುವಿಕೆ. ೭. ಪದರು; ಮಡಿಕೆ. ೮. ಕುದುರೆಯ ಗೊರಸು. ೯. ಪುಸ್ತಕದ ಹಾಳೆ. ~ಇ(ವಿ)ಡು = ಬೆಂಕಿಯಲ್ಲಿಟ್ಟು ಶುದ್ಧವಾಗುವಂತೆ ಮಾಡು; ಮೆರುಗು ಕೊಡು. ~ಕೊಡು = ೧. ಪುಟವಿಡು. ೨. ಪುಷ್ಟಿಕೊಡು; ಬೆಂಬಲಿಸು. ~ನೆಗೆ = ಹಾರು; ಚಿಮ್ಮು; ಜಿಗಿ. ~ಪಾಕ = ೧. ಲೋಹ ಮುಂತಾದುವನ್ನು ಕರಗಿಸಿ ಶುದ್ಧ ಮಾಡುವ ಕ್ರಮ. ೨. ಔಷಧ ತಯಾರಿಕೆಯಲ್ಲಿ ಮುಚ್ಚಿ ಬೇಯಿಸುವ ಕ್ರಮ. ~ಮಾಡು = ಪ್ರೋತ್ಸಾಹಿಸು; ಪ್ರಚೋದಿಸು. ~ಹಾಕು = ಪುಟವಿಡು.

**ಪುಟಗೋಸಿ** (ನಾ). ಲಂಗೋಟಿ; ಕೌಪೀನ.

**ಪುಟಭೇದನ** (ನಾ). ಪಟ್ಟಣ; ನಗರ.

**ಪುಟಾಣಿ** (ನಾ). ೧. ಹುರಿಗಡಲೆ; ಕಡಲೆ. ೨. ಸಣ್ಣವನು; ಚಿಕ್ಕವನು. (ಗು). ೩. ಸಣ್ಣ; ಚಿಕ್ಕ.

**ಪುಟಿ** (ಕ್ರಿ). (ಚೆಂಡಿನಂತೆ ಮೇಲಕ್ಕೆ) ನೆಗೆ, –ಹಾರು, –ಚಿಮ್ಮು.

ಪುಟಿಕೆ (ನಾ). ೧. ಸಣ್ಣಬುಟ್ಟಿ. ೨. ಭರಣಿ; ಕರಂಡಕ.

ಪುಟ್ಟ (ನಾ). ೧. ಸಣ್ಣವನು; ಹುಡುಗ. (ಗು). ೨. ಸಣ್ಣ; ಚಿಕ್ಕ.

ಪುಟ್ಟಿ (ನಾ) ೧. ಬಿದಿರು ಅಥವಾ ತಾಳೆಯೆಲೆಯಿಂದ ಹೆಣೆದ ಬುಟ್ಟಿ, -ಗೂಡೆ. ೨. ಜೇನುಗೂಡು; ಹುಟ್ಟಿ. ೩. ಚಿಕ್ಕವಳು; ಹುಡುಗಿ.

ಪುಟ್ಟೆಗೆ (ನಾ). ಬಟ್ಟೆ; ವಸ್ತ್ರ.

ಪುಟ್ಟು (ಕ್ರಿ). ೧. ಹುಟ್ಟು; ಜನಿಸು. ೨. ಉಂಟಾಗು; ಆವಿರ್ಭವಿಸು. (ನಾ). ೩. ಜನ್ಮ; ಉತ್ಪತ್ತಿ. ೪. ಸಂತಾನ; ಸಂತತಿ. ೫. ದೋಣಿಯನ್ನು ನಡಸುವ ಸಾಧನ; ಹುಟ್ಟು. ೬. ಹಬೆಯಲ್ಲಿ ಬೇಯಿಸಿ ಮಾಡಿದ ತಿಂಡಿ. ೭. ಮರದ ಸೌಟು; ದರ್ವಿ. ೮. ಹುಟ್ಟುವಳಿ; ಆದಾಯ. ೯ ಜೇನು, ಕಡಜ ಮುಂತಾದ ಹುಳುಗಳ ಗೂಡು; ಹುಟ್ಟಿ. ~(೦)ಕು(ಗು)ರುಡ = ಹುಟ್ಟಿನಿಂದಲೇ ಕುರುಡನಾದವನು. ~ಬೆ(ವೆ)ಟ್ಟ = ಸೂರ್ಯನು ಹುಟ್ಟುವ ದಿಕ್ಕಿನ ಬೆಟ್ಟ; ಉದಯಾಚಲ.

ಪುಡಿ (ನಾ). ೧. ಹುಡಿ; ಹಿಟ್ಟು. ೨. ಧೂಳು; ಮಣ್ಣು. ೩. ಚಿಕ್ಕದು; ಸಣ್ಣದು ೪. ಚಿಲ್ಲರೆ; ಸಾಮಾನ್ಯವಾದುದು. ~ಕ(ಗ)ಡುಬು = ಹೂಸಲು ಗಡುಬು; ಕರ್ಜಿಕಾಯಿ. ~ಕಾ(ಗಾ)ಸು = ಚಿಲ್ಲರೆ ಹಣ. ~ಕುಟ್ಟು = ಧೂಳು ಮಾಡು; ಹುಡಿ ಮಾಡು. ~ಮಾಡು = ೧. ಹಿಟ್ಟುಮಾಡು. ೨. ನಾಶ ಮಾಡು.

ಪುಡಿಕೆ (ನಾ). ೧. ಭರಣಿ; ಕರಂಡಕ. ೨. ಸಣ್ಣ ಪೊಟ್ಟಣ.

ಪುಡು(೦)ಕು (ಕ್ರಿ). ೧. ಹುಡುಕು; ಅರಸು. ೨. ಕಂಡುಹಿಡಿ; ಶೋಧಿಸು. ೩. ಕುದಿ; ಬೇಯು. ~ನೀರ್(ರು) = ಕುದಿಯುವ ನೀರು; ಮರಳುವ ನೀರು.

ಪುಡುಕೆ = ಪುಡಿಕೆ.

ಪುಢಾರಿ (ನಾ). ನಾಯಕ; ಮುಂದಾಳು.

ಪುಣ್ (ನಾ). ವ್ರಣ; ಗಾಯ.

ಪುಣಗು = ಪುಣುಗು.

ಪುಣಿಜ (ನಾ). ಒಂದು ಜಾತಿಯ ಹುಳು.

ಪುಣಿಸೆ (ನಾ). ಹುಣಿಸೆಯ ಮರ ಮತ್ತು ಅದರ ಹಣ್ಣು.

ಪುಣುಂಬು (ನಾ). ಬಾಣ; ಶರ.

ಪುಣುಗು (ನಾ). ಒಂದು ಜಾತಿಯ ಸುಗಂಧ ದ್ರವ್ಯ.

ಪುಣುಸೆ = ಪುಣಿಸೆ.

ಪುಣ್ಣಿಮೆ = ಪುಣ್ಣಮೆ.

ಪುಣ್ಣಮೆ (ನಾ). ಪೂರ್ಣ ಚಂದ್ರನು ಕಾಣುವ ದಿನ; ಹುಣ್ಣಿಮೆ.

ಪುಣ್ಣೆಮೆ = ಪುಣ್ಣಮೆ.

ಪುಣ್ಣು = ಪುಣ್.

ಪುಣ್ಯ (ನಾ). ೧. ಸುಕೃತ; ಸಯ್ಯು. ೨. ಕಲಂಕವಿಲ್ಲದಿರುವಿಕೆ; ನೈರ್ಮಲ್ಯ. ೩. ಸೌಂದರ್ಯ; ಚೆಲುವು. (ಗು). ೪. ಸುಂದರವಾದ; ಮನೋಹರವಾದ. ೫. ಪವಿತ್ರವಾದ. ೬. ಸುಕೃತದಿಂದ ಕೂಡಿದ. ~ಅಂಗನೆ = ಪುಣ್ಯವನ್ನು ಮಾಡಿದವಳು. ~ಆತ್ಮ = ಪುಣ್ಯವಂತ. ~ಉದಯ = ಒಳಿತಾಗುವ ಕಾಲ. ~ಕಾಲ = ಶುಭಕಾಲ; ಸುಮುಹೂರ್ತ. ~ಕ್ಷಯ = ಪುಣ್ಯ ಕಡಮೆಯಾಗುವಿಕೆ. ~ಕ್ಷೇತ್ರ = ಪವಿತ್ರವಾದ ಸ್ಥಳ. ~ತೀರ್ಥ = ಪವಿತ್ರವಾದ ನದಿ, ಕೊಳ ಮುಂತಾದುವು. ~ಲೋಕ = ದೇವಲೋಕ; ಸ್ವರ್ಗ. ~ಶಾಲಿ = ಪುಣ್ಯವಂತ. ~ಶ್ಲೋಕ = ಹೊಗಳಿಕೆಗೆ ಪಾತ್ರನಾದವನು; ಸದ್ಗುಣಗಳಿಂದ ಕೂಡಿದವನು.

ಪುಣ್ಯವಂತ (ನಾ). ೧. ಪುಣ್ಯವುಳ್ಳವನು; ಪುಣ್ಯಾತ್ಮ. ೨. ಅದೃಷ್ಟಶಾಲಿ; ಸುದೈವಿ.

ಪುಣ್ಯಾಹ (ನಾ). ಶುಭದಿನ; ಮಂಗಳದ ದಿನ.
ಪುತ್ತ (ನಾ). ಹಾವಿನ ವಾಸಸ್ಥಾನ; ಹುತ್ತ.
ಪುತ್ತಳಿ(ಳಿ) (ನಾ). ಬೊಂಬೆ; ಪ್ರತಿಮೆ.
ಪುತ್ತಿಕೆ (ನಾ). ೧. ಗೆದ್ದಲು; ಒರಲೆ. ೨. ಸಣ್ಣ ಜಾತಿಯ ಜೇನು.
ಪುತ್ತಿಗೆ = ಪುತ್ತಳಿ.
ಪುತ್ತು = ಪುತ್ತ.
ಪುತ್ಥಳಿ = ಪುತ್ತಳಿ.
ಪುತ್ರ (ನಾ). ಮಗ; ಕುಮಾರ. ~ಉತ್ಸವ = ಮಗ ಹುಟ್ಟಿದಾಗ ಮಾಡುವ ಹಬ್ಬ. ~ಕಾಮೇಷ್ಟಿ = ಗಂಡು ಮಕ್ಕಳನ್ನು ಇಚ್ಛಿಸಿ ಮಾಡುವ ಯಾಗ, -ಯಜ್ಞ. ~ವಧು = ಮಗನ ಹೆಂಡತಿ; ಸೊಸೆ.
ಪುತ್ರಿ (ನಾ). ೧. ಮಗಳು; ಅಣುಗಿ. ೨. ಮಕ್ಕಳನ್ನು ಹೊಂದಿರುವವನು.
ಪುತ್ರಿಕೆ (ನಾ). ೧. ಮಗಳು; ಪುತ್ರಿ. ೨. = ಪುತ್ತಳಿ.
ಪುದಿ (ಕ್ರಿ). ೧. ಒಳಹೊಗು; ಪ್ರವೇಶಿಸು. ೨. ಮರೆಮಾಡು; ಮುಚ್ಚು. ೩. ವ್ಯಾಪಿಸು; ಹರಡು. ೪. ಕೂಡು; ಸೇರು. ೫. ಮುಚ್ಚಲ್ಪಡು; ಆವರಿಸಲ್ಪಡು. (ನಾ). ೬. ಬಾಗಿಲಿನ ಪಕ್ಕ, -ಮಗ್ಗುಲು.
ಪುದಿನ (ನಾ). ಒಂದು ಜಾತಿಯ ಸೊಪ್ಪು.
ಪುದಿವು (ನಾ). ಸಮೀಪ; ಹತ್ತಿರ.
ಪುದೀನ = ಪುದಿನ.
ಪುದು (ಕ್ರಿ). ೧. ಕೂಡು; ಸೇರು. (ನಾ). ೨. ಸೇರಿಕೆ; ಕೂಡಿಕೆ. ೩. ಅನ್ಯೋನ್ಯ ಸಂಬಂಧ; ಬಾಂಧವ್ಯ; ಹುದು. ೪. ಪಾಲು; ಭಾಗ. ೫. ತಿರುಳು; ಸತ್ತ್ವ. ೬. ಧರ್ಮಕಾರ್ಯಕ್ಕೆ ಕೊಟ್ಟ ಹಣ. ~(ಂ)ಕೊ(ಗೊ)ಳ್ = ಸೇರಿಸು; ಕೂಡಿಸು. ~ಬಾ(ವಾ)ಟು(ಳು) = ೧. ಅನ್ಯೋನ್ಯವಾಗಿ ಬಾಳು; ಕೂಡಿಬಾಳು. ೨. ಕೂಡಿಬಾಳುವಿಕೆ; ಅವಿಭಕ್ತ ಕುಟುಂಬ.
ಪುದುಕುಳಿ (ನಾ). ತೊಂದರೆ; ಕಷ್ಟ.
ಪುದುಂಗು (ಕ್ರಿ). ೧. ಅಡಗಿಸು; ಹುದುಗು. ೨. ಕುಂದಣಿಸು. ೩. ಸಂಕೋಚ ಮಾಡಿಕೊಳ್ಳು; ಮುದುರಿಕೊಳ್ಳು. ೪. ಕಾಪಾಡು; ರಕ್ಷಿಸು. ೫. ಮರೆಮಾಡು; ಮುಚ್ಚು. ~ಇಸು = ೧. ಹುದುಗಿಸು; ಅಡಗಿಸು. ೨. ಕಾಪಾಡು; ರಕ್ಷಿಸು.
ಪುದುವಟ್ಟು (ನಾ). ಧರ್ಮಕಾರ್ಯಗಳಿಗೆ ಕಾಯ್ದಿರಿಸಿದ ಹಣ.
ಪುದುವು (ನಾ). ೧. ಸಂಬಂಧ; ಹೊಂದಾಣಿಕೆ. ೨. ಆಶ್ರಯ.
ಪುದೆ (ನಾ). ೧. ದೊಣೆ; ಬತ್ತಳಿಕೆ. ೨. ಹೊದಿಕೆ; ಮುಚ್ಚಳ. ೩. ಛಾವಣಿ. ೪. ಕಟ್ಟು; ಹೊರೆ. ೫. ಪೊದೆ; ಹೊದರು.
ಪುದ್ಗಲ (ನಾ). ೧. ಜೈನಧರ್ಮದ ಐದು ಅಜೀವಗಳಲ್ಲಿ ಒಂದು. ೨. ಶರೀರ. ೩. ಒಡೆದುದು; ಚೂರಾದುದು. (ಗು). ೪. ಸುಂದರವಾದ; ಮನೋಹರವಾದ.
ಪುನಃ (ಅ). ತಿರುಗಿ; ಮತ್ತೆ.
ಪುನರಾಗಮನ (ನಾ). ಹಿಂದಿರುಗುವಿಕೆ; ಮರಳುವಿಕೆ.
ಪುನರಾವೃತ್ತಿ (ನಾ). ಮತ್ತೆ ಮತ್ತೆ ಉಂಟಾಗುವುದು.
ಪುನರುಕ್ತಿ (ನಾ). ಮತ್ತೆ ಮತ್ತೆ ಹೇಳುವುದು.
ಪುನರುತ್ಥಾನ (ನಾ). ಮತ್ತೆ ಉದಯಿಸುವುದು.
ಪುನರ್ಜನ್ಮ (ನಾ). ಮತ್ತೆ ಹುಟ್ಟುವುದು; ಮತ್ತೆ ಜನಿಸುವುದು.
ಪುನರ್ನವ (ನಾ). ೧. ಮತ್ತೆ ಹೊಸದಾಗುವುದು. ೨. ಉಗುರು
ಪುನರ್ಭವ ೧. = ಪುನರ್ಜನ್ಮ. ೨. ಉಗುರು, ಕೂದಲು ಮುಂತಾದುವು.
ಪುನರ್ವಸು (ನಾ). ಇಪ್ಪತ್ತೇಳು ನಕ್ಷತ್ರಗಳಲ್ಲಿ ಒಂದು ಮತ್ತು ಆ ನಕ್ಷತ್ರದಲ್ಲಿ ಬರುವ ಮಳೆ.

ಪುನರ್ವಿವಾಹ (ನಾ). ಎರಡನೆಯ ಮದುವೆ; ಮರುಮದುವೆ.

ಪುನೀತ (ಗು). ಪವಿತ್ರ; ಪರಿಶುದ್ಧ.

ಪುನುಗು = ಪುಣುಗು.

ಪುನ್ನಾಗ (ನಾ). ೧. ಶ್ರೇಷ್ಠ; ಮುಖ್ಯಸ್ಥ. ೨. ಶ್ರೇಷ್ಠವಾದ ಆನೆ; ಬಿಳಿಯ ಆನೆ. ೩. ಕೋಣ; ಲುಲಾಯ. ೪. ಸರ್ಪ; ಹಾವು. ೫. ಒಂದು ಜಾತಿಯ ಮರ; ಸುರಹೊನ್ನೆ.

ಪುಪ್ಪ (ನಾ). ಹೂವು; ಪುಷ್ಪ. ~ಸರ = ಮನ್ಮಥ; ಕಾಮ.

ಪುಬ್ಬ = ಪುರ್ವ.

ಪುಬ್ಬೆ (ನಾ). ಇಪ್ಪತ್ತೇಳು ನಕ್ಷತ್ರಗಳಲ್ಲಿ ಒಂದು ಮತ್ತು ಆ ನಕ್ಷತ್ರದಲ್ಲಿ ಬರುವ ಮಳೆ.

ಪುಯಲ್ (ಕ್ರಿ). ೧. ಹೊಡೆ; ಬಡಿ; ಹೊಯ್ಯು. ೨. ಇರಿ; ತಿವಿ. ೩. ಶಾಸನ, ಹಚ್ಚೆ ಮುಂತಾದುವನ್ನು ಬರೆ. ೪. ಸುರಿ. ೫. ಓಡಿಸು. ೬. ಎಸೆ.

ಪುಯಲ್ (ನಾ). ೧. ಹೊಡೆಯುವಿಕೆ; ಹೊಡೆತ. ೨. ಹುಯ್ಯಲು; ಆರ್ಭಟ. ೩. ಗೋಳಾಟ; ಅಳು. ೪. ಯುದ್ಧ; ಕಾಳಗ.

ಪುಯ್ಯಲ್ = ಪುಯಲ್.

ಪುರ (ನಾ). ೧. ಕಾಲುವೆ; ತೋಡು. ೨. ಕೋಟೆ; ದುರ್ಗ. ೩. ಪಟ್ಟಣ; ನಗರ. ೪. ದೇಹ; ಶರೀರ. ೫. ಒಬ್ಬ ರಾಕ್ಷಸನ ಹೆಸರು. ~ಅರಿ = ಪುರಧ್ವಂಸಿ. ~ದ್ವಾರ = ಅಗಸೆ ಬಾಗಿಲು; ಕೋಟೆ ಬಾಗಿಲು. ~ಧ್ವಂಸಿ = ಶಿವ. ~ಭಿತ್ತಿ = ಕೋಟೆಯ ಪ್ರಾಕಾರ. ~ಮರ್ದನ = ಶಿವ. ~ಹರ = ಪುರಮರ್ದನ.

ಪುರಂತ (ನಾ). (ವೀರಶೈವರ) ಪುರಾತನ ವ್ಯಕ್ತಿ.

ಪುರಂದರ (ನಾ). ೧. ಇಂದ್ರ. ೨. ಶಿವ.

ಪುರಂಧ್ರಿ (ನಾ). ೧. ಹಿರಿಯ ಮುತ್ತೈದೆ. ೨. ಗಂಡ ಮತ್ತು ಮಕ್ಕಳುಳ್ಳ ಹೆಂಗಸು. ೩. ಸ್ತ್ರೀ; ಹೆಂಗಸು.

ಪುರಲೆ (ನಾ). ಒಣಗಿದ ಸಣ್ಣ ಕಟ್ಟಿಗೆ; ಪುಳ್ಳೆ.

ಪುರವಣಿ (ನಾ). ಅನುಬಂಧ; ಪರಿಶಿಷ್ಟ.

ಪುರಸತ್ತು (ನಾ). ಬಿಡುವು; ವಿರಾಮ; ಪುರುಸೊತ್ತು.

ಪುರಸ್ಕರಿಸು (ಕ್ರಿ). ಸನ್ಮಾನಿಸು; ಗೌರವಿಸು.

ಪುರಸ್ಕಾರ (ನಾ). ಸನ್ಮಾನ; ಗೌರವ.

ಪುರಸ್ಕೃತ (ಗು). ೧. ಮುಂದೆ ಹಿಡಿದ. ೨. ಮರ್ಯಾದಿಸಲ್ಪಟ್ಟ; ಗೌರವಿಸಲ್ಪಟ್ಟ. ೩. ಶತ್ರುಗಳಿಂದ ಮುತ್ತಲ್ಪಟ್ಟ.

ಪುರಸ್ಸರ (ನಾ). ಮುಂದೆ ಹೋಗುವಿಕೆ; ಮುನ್ನಡೆ.

ಪುರಾಕೃತ (ಗು). ಹಿಂದೆ ಮಾಡಿದ; ಪೂರ್ವದಲ್ಲಿ ನಡಸಿದ.

ಪುರಾಣ (ನಾ). ೧. ಹಿಂದಿನದು; ಹಳೆಯದು. ೨. ಹಳೆಯ ಕಥೆ; ಪೂರ್ವಕಥೆ. ೩. ಪ್ರಾಚೀನ ಗ್ರಂಥ. ೪. ಅನವಶ್ಯಕ ವಿವರಣೆ (ಗು). ೫. ಹಳೆಯದಾದ; ಪ್ರಾಚೀನವಾದ. ೬. ಜೀರ್ಣವಾದ. ~ಪುರುಷ = ೧. ವಿಷ್ಣು. ೨. ಮುದುಕ.

ಪುರಾಣಿಕ (ನಾ). ೧. ಪುರಾಣವನ್ನು ಚೆನ್ನಾಗಿ ತಿಳಿದವನು. ೨. ಪುರಾಣವನ್ನು ಹೇಳುವವನು.

ಪುರಾತನ (ನಾ). ೧. ಪೂರ್ವದವನು; ಹಳಬ. ೨. ಪುರಾಣಪುರುಷ; ವಿಷ್ಣು. (ಗು). ೩. ಹಳೆಯ ಕಾಲದ; ಹಿಂದಿನ.

ಪುರಾವೆ (ನಾ). ಸಾಕ್ಷಿ; ರುಜುವಾತು.

ಪುರಿ (ಕ್ರಿ). ೧. ಕಾಳುಗಳನ್ನು ಬಾಣಲೆಯಲ್ಲಿ ಹಾಕಿ ತಾಳಿಸು; ಹುರಿ. (ನಾ). ೨. ಹುರಿಯುವಿಕೆ. ೩. ಹುರಿದು ಮಾಡಿದ ಪದಾರ್ಥ; ಚುರುಮುರಿ, ಮಂಡಕ್ಕಿ ಮುಂತಾದುವು

೪. ತಿರುಚುವಿಕೆ; ಸುಲಿಯುವಿಕೆ; ಹೊಸೆಯುವಿಕೆ. ೫. ಹೊಸೆದು ಮಾಡಿದ ದಾರ. ೬. ಸಾಮರ್ಥ್ಯ; ಪರಾಕ್ರಮ. ೭. ಹುರುಪು; ಉತ್ಸಾಹ. ೮. ಪಟ್ಟಣ; ಪುರ. ~ಓ(ಯೋ)ಡು = ಹುರಿಯುವ ಬಾಣಲೆ. ~ಕ(ಗ)ಡಲೆ = ಹುರಿದ ಕಡಲೆ; ಪುಟಾಣಿ. ~ಕೊ(ಗೊ)ಳ್ = ೧. ಹುರಿಗೊಳ್ಳು; ತೀವ್ರವಾಗು. ೨. ಹೊಸೆದುಕೊಳ್ಳು; ಸೇರು. ೩. ಉತ್ಸಾಹಗೊಳ್ಳು; ಹುರಿದುಂಬು.

ಪುರೀಷ (ನಾ). ಕಲ್ಮಷ; ಕೊಳೆ.

ಪುರುಡಿ (ನಾ). ಗಿಣಿ; ಪುರುಳಿ.

ಪುರುಡು (ನಾ). ೧. ಸ್ಪರ್ಧೆ; ಪೈಪೋಟಿ; ಹುರುಡು. ೨. ಅಸೂಯೆ; ಮತ್ಸರ. ೩. ಹೆರಿಗೆಯಿಂದುಂಟಾಗುವ ಮೈಲಿಗೆ; ವೃದ್ಧಿ. ~ಇಗ = ೧. ಎದುರಾಳಿ; ಪ್ರತಿಸ್ಪರ್ಧಿ. ೨. ಮತ್ಸರ ಪಡುವವನು; ಅಸೂಯಾಪರ. ~ಇಸು = ೧. ಸ್ಪರ್ಧಿಸು; ಹುರುಡಿಸು. ೨. ಅಸೂಯೆ ಪಡು; ದ್ವೇಷಿಸು.

ಪುರುಷ (ನಾ). ೧. ಮನುಷ್ಯ; ಆಳು. ೨. ಗಂಡಸು. ೩. ಆತ್ಮ. ೪. ಪರಮಾತ್ಮ. ~ಅರ್ಥ = ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳೆಂಬ ನಾಲ್ಕು ಗುರಿಗಳಲ್ಲಿ ಒಂದು. ~ಆಕಾರ = ಪುರುಷ ಪ್ರಯತ್ನ; ಸಾಹಸ. ~ಉತ್ತಮ = ೧. ಪುರುಷರಲ್ಲಿ ಉತ್ತಮನಾದವನು; ನರಶ್ರೇಷ್ಠ. ೨. ವಿಷ್ಣು; ಕೃಷ್ಣ. ~ಸೂಕ್ತ = ಋಗ್ವೇದದಲ್ಲಿ ಪರಮಾತ್ಮನನ್ನು ಕುರಿತು ಸ್ತೋತ್ರ ಭಾಗ.

ಪುರುಷತ್ವ (ನಾ). ೧. ಶೌರ್ಯ; ಸಾಹಸ; ಕೆಚ್ಚು. ೨. ಲಿಂಗ; ಶಿಶ್ನ.

ಪುರುಷಾಮೃಗ (ನಾ). ನಾಲ್ಕು ಕಾಲಿನ, ಮನುಷ್ಯ ಮುಖದ ಒಂದು ಕಾಲ್ಪನಿಕ ಪ್ರಾಣಿ.

ಪುರುಹೂತ (ನಾ). ಇಂದ್ರ; ದೇವೇಂದ್ರ.

ಪುರುಳ್(ಳು) (ನಾ). ೧. ಹುರುಳು; ಸಾರ. ೨. ಸಾಮರ್ಥ್ಯ; ಕೆಚ್ಚು; ಯೋಗ್ಯತೆ. ೩. ಸಂಪತ್ತು; ದ್ರವ್ಯ. ೪. ಜ್ಞಾನ. ೫. ಅರ್ಥ; ಅಭಿಪ್ರಾಯ.

ಪುರುಳಿ ೧. = ಪುರುಡಿ. ೨. ಗಿಣಿಯ ಮರಿ.

ಪುರೆ (ನಾ). ಗುಳ್ಳೆ; ಬೊಕ್ಕೆ.

ಪುರೋಗಮ (ನಾ). ೧. ಮುನ್ನಡಸುವಿಕೆ. ೨. = ಪುರೋಗಾಮಿ.

ಪುರೋಗಾಮಿ (ನಾ). ಮುಂದಾಳು.

ಪುರೋಡಾಶ(ನಾ). ೧. ಯಾಗದಲ್ಲಿ ಅರ್ಪಿಸುವ ಅಕ್ಕಿಯ ಹಿಟ್ಟು. ೨. ಹವಿಸ್ಸು.

ಪುರೋಭಾಗ (ನಾ). ೧ ಮುಂಭಾಗ; ಮುಂಬದಿ. ೨. ನಗರದ ಪ್ರವೇಶದ್ವಾರ. ೩. ದೋಷವನ್ನು ಎಣಿಸುವ ಬುದ್ಧಿ.

ಪುರೋಭಾಗಿ (ನಾ). ೧. ದೋಷವನ್ನು ಎಣಿಸುವವನು ೨. ಎರಡು ನಾಲಗೆಯವನು; ಸುಳ್ಳುಗಾರ.

ಪುರೋಹಿತ (ನಾ). ವೇದೋಕ್ತ ವಿಧಿಗಳನ್ನು ಮಾಡಿಸುವವನು.

ಪುಱು(ರು)ಲೆ (ನಾ). ಒಂದು ಜಾತಿಯ ಹಕ್ಕಿ.

ಪುರ್ಚು (ನಾ). ಮರುಳು; ಹುಚ್ಚು.

ಪುರ್ಬು = ಪುರ್ವು. ~ಇಕ್ಕು = ಹುಬ್ಬುಗಂಟು ಹಾಕು.

ಪುರ್ವು (ನಾ). ಹುಬ್ಬು; ಭ್ರೂ.

ಪುಲ್(ಲು) (ನಾ). ೧. ಹುಲ್ಲು; ತೃಣ. ೨. ಅಲ್ಪವಸ್ತು; ಕ್ಷುದ್ರವಸ್ತು. ~ಕ(ಗ)ಚ್ಚು = ೧. ಹುಲ್ಲನ್ನು ಕಡಿ. ೨. ಸೋಲನ್ನು ಒಪ್ಪಿಕೊಳ್ಳು; ಶರಣಾಗತನಾಗು. ~ಬ(ವ)ಗೆ = ಕೀಳು ಮನಸ್ಸು. ~ಮರುಳ್ = ಕ್ಷುದ್ರಪಿಶಾಚಿ; ಕೀಳು ದೆವ್ವ. ~ಮಾನಸ = ಕೀಳುಮನುಷ್ಯ.

ಪುಲ(ಳ)ಕ (ನಾ). ೧. ರೋಮಾಂಚನ; ನವಿರೇಳುವಿಕೆ. ೨. ಹುಳು; ಕ್ರಿಮಿ. ೩. ಅನ್ನದ ತುತ್ತು; ಕಬಳ.

ಪುಲ(ಳ)ಕಿತ (ಗು). ರೋಮಾಂಚನಗೊಂಡ ; ನವಿರೇರಿದ.

ಪುಲಾಕ (ನಾ). ೧. ಕೆಟ್ಟುಹೋದ ಧಾನ್ಯ ; ಜೊಳ್ಳು. ೨. ಅನ್ನದ ತುತ್ತು. ೩. ಸಂಕ್ಷೇಪ.

ಪುಲಿ (ನಾ). ಹುಲಿ ; ವ್ಯಾಘ್ರ. ~ಮುಖ = ೧. ಹುಲಿಯ ಮುಖ. ೨. ಹುಲಿಯ ಮುಖದ ಆಕಾರದಲ್ಲಿರುವ ಹೆಬ್ಬಾಗಿಲು, –ಪುರದ್ವಾರ.

ಪುಲಿ(ಂ)ಗಿಲ್(ಲು) (ನಾ). ಹುಲಿಗಿಲ ಮರ ; ಹೊಂಗೆ ಮರ ; ತಮಾಳ.

ಪುಲಿ(ಳಿ)ಂದ (ನಾ). ಬೇಡ ; ಕಿರಾತ.

ಪುಲಿ(ಳಿ)ಂದಿ = ಪುಲಿಂದಿನಿ.

ಪುಲಿ(ಳಿ)ಂದಿನಿ (ನಾ). ಬೇಡರ ಜಾತಿಯ ಹೆಂಗಸು ; ಶಬರಿ.

ಪುಲಿ(ಳಿ)ನ (ನಾ). ೧. ಉಸುಬಿನ ದಂಡೆ ; ಮರಳಿನ ದಡ. ೨. ದ್ವೀಪ.

ಪುಲ್ಕಸ (ನಾ). ಹೊಲೆಯ ; ಚಂಡಾಲ.

ಪುಲ್ಲ (ನಾ). ಹೂವು ; ಪುಷ್ಪ. ~ಅ(ವ)ಡಿಗ = ಹೂವು ಮಾರುವವನು ; ಹೂವಾಡಿಗ. ~ಶರ = ಕಾಮ ; ಮನ್ಮಥ.

ಪುಲ್ಲಿ (ನಾ). ಒಂದು ಬಗೆಯ ಬಟ್ಟೆ.

ಪುಲ್ಲಿಂಗ (ನಾ). ವ್ಯಾಕರಣದಲ್ಲಿ ಪುರುಷರನ್ನು ಸೂಚಿಸುವ ಲಿಂಗ ; ಪುರುಷವಾಚಕ ಲಿಂಗ.

ಪುಲ್ಲಿಗೆ (ನಾ). ಒಂದು ಬಗೆಯ ಭಕ್ಷ್ಯ ; ಹೋಳಿಗೆ.

ಪುಲ್ಲು = ಪುಲ್.

ಪುಲ್ಲೆ (ನಾ). ಹುಲ್ಲೆ ; ಚಿಗರೆ.

ಪುಲ್ಲೆಗ (ನಾ). ಹರಟುವವನು ; ಬಾಯಿಬಡಕ.

ಪುವ್ವು (ನಾ). ೧. ಹೂವು ; ಪುಷ್ಪ. ೨. ಒಂದು ಬಗೆಯ ನೇತ್ರರೋಗ.

ಪುಷ್ಕರ (ನಾ). ೧. ತಾವರೆ ; ಕಮಲ. ೨. ಆನೆಯ ಸೊಂಡಿಲಿನ ತುದಿ. ೩. ನೀರು ; ಉದಕ. ೪. ಕೊಳ ; ಸರೋವರ. ೫. ಅಲಗು ; ಧಾರೆ.

ಪುಷ್ಕರಿಣಿ (ನಾ). ೧. ಹೊಕ್ಕರಣೆ ; ಕೊಳ ; ಕಲ್ಯಾಣಿ. ೨. ಹೆಣ್ಣು ಆನೆ ; ಪಿಡಿ.

ಪುಷ್ಕಲ(ಳ) (ಗು). ೧. ಬಹಳ ; ವಿಪುಲ. ೨. ಶ್ರೇಷ್ಠ ; ಉತ್ತಮ.

ಪುಷ್ಟ (ಗು). ೧. ಚೆನ್ನಾಗಿ ಬೆಳೆದ ; ಕೊಬ್ಬಿದ. ೨. ಸಮೃದ್ಧ ; ವಿಪುಲವಾದ.

ಪುಷ್ಟಿ (ನಾ). ೧. ಚೆನ್ನಾಗಿ ಬೆಳೆದುದು ; ಕೊಬ್ಬಿ ಬೆಳೆದುದು. ೨. ಶಕ್ತಿ ; ಸಾಮರ್ಥ್ಯ. ೩. ಪೋಷಣೆ ; ಬೆಂಬಲ. ೪. ಬೆಳವಣಿಗೆ. ~ಕೊಡು = ಪ್ರೋತ್ಸಾಹ ಕೊಡು ; ಬೆಂಬಲಿಸು.

ಪುಷ್ಟೀಕರಿಸು (ಕ್ರಿ). ೧. ಬೆಂಬಲಿಸು ; ಸಮರ್ಥಿಸು. ೨. ಶಕ್ತಿ ಬರುವಂತೆ ಮಾಡು.

ಪುಷ್ಪ ೧. = ಪುವ್ವು. ೨. ಋತು ; ರಜಸ್ಸು. ~ಅಪಚಯ = ಹೂವುಗಳನ್ನು ಕೊಯ್ಯುವುದು, –ಸಂಗ್ರಹಿಸುವುದು. ~ಇಸು = ೧. ಹೂವಾಗು. ೨. ಋತುಮತಿಯಾಗು. ~ಕದಂಬ = ಹೂವಿನ ರಾಶಿ, –ಸಮೂಹ. ~ಕಳಂಬ = ಹೂವಿನ ಬಾಣವನ್ನು ಹೊಂದಿದವನು ; ಮನ್ಮಥ. ~ಚಾಪ = ೧. ಹೂವಿನ ಬಿಲ್ಲು. ೨. ಕಾಮ ; ಮನ್ಮಥ. ~ದಂತ = ಅಷ್ಟ ದಿಗ್ಗಜಗಳಲ್ಲಿ ಒಂದು. ~ದರ್ಶನ = ರಜಸ್ವಲೆಯಾಗುವಿಕೆ ; ಮುಟ್ಟು ವೆ. ~ಮಾಸ = ಹೂವುಗಳು ಅರಳುವ ಕಾಲ ; ವಸಂತಮಾಸ. ~ರಸ = ಮಧು ; ಜೇನು. ~ವಾಟ = ಹೂದೋಟ.

ಪುಷ್ಪಕ (ನಾ). ೧. ಹೂವು ; ಪುಷ್ಪ. ೨. ಕುಬೇರನ ವಿಮಾನ.

ಪುಷ್ಪವತಿ (ನಾ). ೧. ಮೈನೆರೆದವಳು. ೨. ಋತುಮತಿ ; ಮುಟ್ಟಾದವಳು.

ಪುಷ್ಯ (ನಾ). ೧. ಹೂವು ; ಕುಸುಮ. ೨. ನವರತ್ನಗಳಲ್ಲಿ ಒಂದು. ೩. ಇಪ್ಪತ್ತೇಳು ನಕ್ಷತ್ರಗಳಲ್ಲಿ ಒಂದು ಮತ್ತು ಆ ನಕ್ಷತ್ರದಲ್ಲಿ ಬರುವ ಮಳೆ. ೪. ಒಂದು ಚಾಂದ್ರಮಾನ

ತಿಂಗಳಿನ ಹೆಸರು. ~ರಾಗ = ಒಂದು ಬಗೆಯ ರತ್ನ.

ಪುಸಲಾಯಿಸು (ಕ್ರಿ). ೧. ಪ್ರೋತ್ಸಾಹಿಸು; ಹುರುಪುಗೊಳಿಸು. ೨. ಮಾತಿನಲ್ಲಿ ನಯವಾಗಿ ಒಪ್ಪಿಸು; ಉಬ್ಬಿಸು; ಮರುಳುಮಾಡು.

ಪುಸಲಾವಣೆ (ನಾ). ೧. ಪ್ರೋತ್ಸಾಹ; ಪ್ರೇರಣೆ. ೨. ಮಾತಿನಲ್ಲಿ ನಯವಾಗಿ ಒಪ್ಪಿಸುವಿಕೆ; ಉಬ್ಬಿಸುವಿಕೆ.

ಪುಸಿ (ಕ್ರಿ). ೧. ಸುಳ್ಳಾಗು; ಹುಸಿಯಾಗು. ೨. ಸುಳ್ಳು ಮಾತನಾಡು; ಸುಳ್ಳಾಡು. ೩. ಫಲವಿಲ್ಲದೆ ಹೋಗು; ನಿರರ್ಥಕವಾಗು. (ನಾ). ೪. ಸುಳ್ಳು; ಹುಸಿ. ೫. ಹರಟೆ; ವ್ಯರ್ಥಾಲಾಪ. ೬. ಪ್ರಯೋಜನವಿಲ್ಲದುದು; ನಿರರ್ಥಕತೆ. ೭. ಠಕ್ಕು; ಬೂಟಾಟಿಕೆ. ~ಕ=ಸುಳ್ಳು ಹೇಳುವವನು; ಸುಳ್ಳುಗಾರ.

ಪುಸಿಗ = ಪುಸಿಕ.

ಪುಸ್ತ (ನಾ). ೧. ಬಳಿಯುವುದು; ಸವರುವುದು. ೨. ಬರೆವಣಿಗೆ; ಬರೆಹ. ೩. ಮಣ್ಣು, ಮರ ಮೊದಲಾದುವುಗಳಿಂದ ತಯಾರಿಸಿದ ವಸ್ತು.

ಪುಸ್ತಂಗ (ನಾ). ನಡುಕಟ್ಟು; ಸೊಂಟಪಟ್ಟಿ.

ಪುಸ್ತಕ (ನಾ). ಗ್ರಂಥ; ಹೊತ್ತಗೆ. ~ಕೀಟ = ಪುಸ್ತಕವನ್ನು ಬಿಟ್ಟು ಬೇರೆಯದರಲ್ಲಿ ಆಸಕ್ತಿಯಿಲ್ಲದವನು.

ಪುಸ್ತಿ (ನಾ). ೧. ಒಂದು ಬಗೆಯ ಆಭರಣ. ೨. = ಪುಸ್ತಕ. ೩. ಪ್ರಗತಿಯನ್ನು ಸೂಚಿಸುವ ಪತ್ರ.

ಪುಸ್ತಿಕೆ = ಪುಸ್ತಕ.

ಪುಳಿ (ಕ್ರಿ). ೧. ಆಮ್ಲತೆಯಿಂದ ಕೂಡು; ಹುಳಿಯಾಗು. ೨. = ಪುೞಿ. (ನಾ). ೩. ಹುಳಿ; ಆಮ್ಲತೆ. ೪. ಹುಣಿಸೆಯ ಹಣ್ಣು. ೫. ಒಂದು ಬಗೆಯ ಮೇಲೋಗರ; ಸಾಂಬಾರು. ~ಓ(ಯೋ)ಗರ(ರೆ) = ಒಂದು ಬಗೆಯ ಕಲಸನ್ನ. ~ಚಾರು =೧. ಹುಳಿ, ಸಾರು ಮುಂತಾದ ಸಸ್ಯಾಹಾರ ಪದಾರ್ಥ. ೨. ಜಗಳದ ಸ್ವಭಾವವಿಲ್ಲದ; ನಿಸ್ಸತ್ತ್ವವಾದ. ~ಪಿ(ವಿ)ಡಿ=ಹುಳಿಹಿಂಡು.

ಪುಳಿಂಚು (ನಾ). ಬಳಿಯುವಿಕೆ; ಲೇಪನ.

ಪುಳುಂಬು = ಪುಣುಂಬು.

ಪುಳ್ಳಂಗಾಯಿಉಂಡೆ (ನಾ). ಗೋಧಿಯ ಹಿಟ್ಟು, ಬೆಲ್ಲ ಮುಂತಾದುವುಗಳಿಂದ ಮಾಡುವ ಒಂದು ಬಗೆಯ ಉಂಡೆ.

ಪುಳ್ಳಂಪುರಸಿ (ನಾ). ಒಂದು ಜಾತಿಯ ಗಿಡ.

ಪುಳ್ಳಂಪುರುಚೆ = ಪುಳ್ಳಂಪುರಸಿ.

ಪುಳ್ಳಿ = ಪುರಲೆ.

ಪುಳ್ಳೆ = ಪುರಲೆ.

ಪುೞಿ(ಳಿ) (ಕ್ರಿ). ಕಟ್ಟಿ ಹಿಡಿ; ಹುಳು ತಿನ್ನು; ನಾಶವಾಗು; ಹುಳಿತು ಹೋಗು.

ಪುೞಿ(ಳಿ)ಚಿಲ್ (ನಾ). ಕೊಳೆತುಹೋಗುವಿಕೆ; ಹುಳಿತುಹೋಗುವಿಕೆ.

ಪುೞಿ(ಳಿ)ಲ್ (ನಾ). ೧. ಮರಳು; ಉಸುಕು. ೨. ತೋಪು.

ಪುೞು(ಳು) (ನಾ). ೧. ಕ್ರಿಮಿ; ಕೀಟ; ಹುಳು. ೨. ಹಾವು. ೩. = ಪುೞುಕ. ~ಕೆ = ನೀಚ; ಕ್ಷುದ್ರ; ಅಲ್ಪ. ~ಪ(ವ)ಗೆ = ಕ್ಷುದ್ರದ್ವೇಷ. ~ಮಾ(ವಾ)ನಸ = ಕ್ಷುದ್ರ ಮನುಷ್ಯ; ಕೀಳು ಮನುಷ್ಯ.

ಪುೞು(ಳು)ಕು (ನಾ). ೧. ಹುಳುಕು; ಕಲೆ. ೨. ಹುಳುಗಳಿಂದ ನಾಶವಾದುದು; ಹುಳು ಹತ್ತಿದುದು. ೩. ಲೋಪ; ದೋಷ; ಕಳಂಕ. ೪. ಕ್ಷುದ್ರತನ; ಅಲ್ಪತನ. ೫. ವ್ರಣ; ಗಾಯ.

ಪುೞ್ಗಿ(ಳ್ಗಿ) (ನಾ). ಅಕ್ಕಿ ಮತ್ತು ಬೇಳೆಗಳಿಂದ ತಯಾರಿಸುವ ಒಂದು ಬಗೆಯ ಖಾದ್ಯ; ಹುಗ್ಗಿ.

ಪುೞ್ಗು(ಳ್ಗು) (ಕ್ರಿ). ಪಚಿಸು; ಸುಡು.

ಪೂ (ಕ್ರಿ). ೧. ಹೂವಾಗು; ಹೂವು ಬಿಡು. (ನಾ). ೨. ಹೂವು; ಪುಷ್ಪ. ~ಅ(ವ)ಡಿಗ = ಹೂವು ಮಾರುವವನು;

ಹೂವಾಡಿಗ. ~ಅ(ವಾ)ಡಿಗ=ಪೂವಡಿಗ. ~ಕ(ಗ)ಣೆ = ಹೂವಿನ ಬಾಣ. ~ಕು(ಗು)ಡಿ=ಹೂಗೊಂಚಲು; ಪುಷ್ಪಗುಚ್ಛ. ~ಕೋಲ್(ಲು) = ಪೂಗಣೆ. ~ತಂದಲ್(ಲು)=ಹೂಮಳೆ; ತುಂತುರುಮಳೆ. ~ಪ(ವ)ಕ್ಕಿ = ದುಂಬಿ; ಭ್ರಮರ. ~ಬ(ವ)ಲಿ = ಹೂವನ್ನು ಚೆಲ್ಲುವಿಕೆ. ~ವಲಿ = ಹೂವುಗಳಿಂದ ಮೂಡಿಸುವ ಅಲಂಕಾರದ ಚಿತ್ರ. ~ಸರ=೧. ಹೂಮಾಲೆ; ಹೂವಿನ ಹಾರ. ೨. ಹೂವಿನ ಬಾಣ; ಪುಷ್ಪಬಾಣ. ೩. ಕಾಮ; ಮನ್ಮಥ.

ಪೂಂಬೆ (ನಾ). ಬಾಳೆಯ ಹೂವು; ಮೋತೆ.

ಪೂಗ (ನಾ). ೧.ಗುಂಪು; ರಾಶಿ. ೨. = ಪೂಗಿ.

ಪೂಗಣೆಯ (ನಾ). ಕಾಮ; ಮನ್ಮಥ.

ಪೂಗಣ್ಣ (ನಾ). ೧. ವಿಷ್ಣು. ೨. ಒಂದು ಬಗೆಯ ಕಣ್ಣುರೋಗದಿಂದ ಕೂಡಿದವನು; ಹೂಗಣ್ಣ.

ಪೂಗಿ (ನಾ). ಅಡಕೆಯ ಮರ ಮತ್ತು ಅದರ ಕಾಯಿ.

ಪೂಚಿ (ನಾ). ಕ್ರಿಮಿ; ಹುಳು.

ಪೂಜಕ (ನಾ). ೧. ಪೂಜಿಸುವುದು. ೨. ಪೂಜಿಸುವವನು; ಅರ್ಚಕ; ಪೂಜಾರಿ.

ಪೂಜನ (ನಾ). ೧. ಪೂಜೆ; ಅರ್ಚನೆ. ೨. ಗೌರವ.

ಪೂಜನೀಯ (ಗು). ೧. ಪೂಜಿಸಲು ಯೋಗ್ಯವಾದ. ೨. ಗೌರವಾರ್ಹ.

ಪೂಜಾರಿ (ನಾ). ಪೂಜೆ ಮಾಡುವವನು; ಅರ್ಚಕ.

ಪೂಜೆ (ನಾ). ೧. ಅರ್ಚನೆ; ಆರಾಧನೆ. ೨ ಸೊನ್ನೆ; ಬಿಂದು. ~ಇಸು=೧. ಪೂಜೆ ಮಾಡು; ಆರಾಧಿಸು. ೨. ಗೌರವಿಸು.

ಪೂಜ್ಯ (ನಾ). ೧. ಗೌರವಕ್ಕೆ ಪಾತ್ರನಾದವನು. ೨. ಸೊನ್ನೆ. (ಗು). ೩. ಪೂಜಿಸಲು ತಕ್ಕ. ೪. ಗೌರವಕ್ಕೆ ಪಾತ್ರವಾದ; ಗೌರವಾರ್ಹ.

ಪೂಟು (ನಾ). ಸ್ವಲ್ಪಭಾಗ; ಚೂರು.

ಪೂಡು (ಕ್ರಿ). ೧. ಆರಂಭಿಸು; ಪ್ರಾರಂಭಿಸು; ಹೂಡು. ೨. ಸೇರಿಸು; ಹೊಂದಿಸು. ೩. ಸಿದ್ಧಗೊಳಿಸು; ಅಣಿಗೊಳಿಸು.

ಪೂಣ್ ೧. = ಪೂಡು. ೨. ಪ್ರತಿಜ್ಞೆ ಮಾಡು; ಆಣೆಮಾಡು. ೩. ಹೂಳು; ಚುಚ್ಚು; ಸೋಯಿಸು. ~ಇಗ = ೧. ಶೂರ; ಪರಾಕ್ರಮಿ. ೨. ಬಿಲ್ಲುಗಾರ. ೩. ಪ್ರತಿಜ್ಞೆಯನ್ನು ಮಾಡಿರುವವನು. ~ಇಸು =೧. ಪ್ರತಿಜ್ಞೆಮಾಡು; ಶಪಥ ಮಾಡು. ೨. ಹೂಡು; ಸೇರಿಸು; ಹೊಂದಿಸು.

ಪೂಣ್ಕೆ (ನಾ). ೧. ಪ್ರತಿಜ್ಞೆ; ಶಪಥ. ೨. ಅಂಗೀಕಾರ; ಒಪ್ಪಿಗೆ.

ಪೂತ (ಗು). ೧. ಪವಿತ್ರ; ಶ್ರೇಷ್ಠ. ೨. ಕೇರಿದ; ತೂರಿದ ೩. ಶುದ್ಧವಾದ.

ಪೂತಿ (ನಾ). ೧. ಪರಿಶುದ್ಧತೆ. ೨. ಕೆಟ್ಟವಾಸನೆ; ದುರ್ಗಂಧ. ೩. ಒಂದು ಬಗೆಯ ಸುಗಂಧವಸ್ತು. ~ಬೆ(ವೆ)ಕ್ಕು= ಪುನುಗಿನ ಬೆಕ್ಕು.

ಪೂತು (ನಾ). ಕೊಂಡಾಟದ ಒಂದು ನುಡಿ.

ಪೂಪ (ನಾ). ಒಂದು ಬಗೆಯ ಸಿಹಿಭಕ್ಷ್ಯ; ಅಪೂಪ.

ಪೂಯ (ನಾ). ಕೀವು; ರಸಿಕೆ.

ಪೂರ (ನಾ). ೧. ನೆರೆ; ಪ್ರವಾಹ. ೨.ತುಂಬಿರುವಿಕೆ; ಭರ್ತಿಯಾಗಿರುವಿಕೆ. ~ಇಸು =೧. ಪೂರಯಿಸು. ೨. ನಾಟು; ನೆಡು.

ಪೂರಕ (ನಾ). ೧. ತೃಪ್ತಿ; ಸಂತೋಷ. ೨. ಪ್ರಾಣಾಯಾಮದ ಮೂರು ಕ್ರಿಯೆಗಳಲ್ಲಿ ಒಂದು. (ಗು). ೩. ಪೂರ್ಣಗೊಳಿಸುವ; ತುಂಬಿಕೊಡುವ.

ಪೂರಣ (ನಾ). ೧. ಸಂಪೂರ್ಣ; ಮುಕ್ತಾಯ. ೨. ಪೂರ್ಣ ಮಾಡುವುದು; ತುಂಬುವುದು. ೩. ಊದುವುದು. ೪. ಹೂರಣ. ೫. ಗುಟ್ಟು; ರಹಸ್ಯ.

ಪೂರಯಿಸು (ಕಿ). ೧. ಪೂರ್ಣಮಾಡು; ಮುಗಿಸು. ೨. ಭರ್ತಿಮಾಡು; ತುಂಬಿಸು. ೩. (ಶಂಖವನ್ನು) ಊದು.

ಪೂರಾ (ಅ). ಪೂರ್ತಿಯಾಗಿ; ಸಂಪೂರ್ಣವಾಗಿ.

ಪೂರಾಯ (ನಾ). ೧. ಪೂರ್ಣತೆ; ಮುಕ್ತಾಯ. ೨. ವಿಶಾಲವಾದುದು; ದೊಡ್ಡದು.

ಪೂರಿ (ನಾ). ಒಂದು ಬಗೆಯ ಕರಿದ ತಿನಿಸು.

ಪೂರಿಗೆ (ನಾ). ಒಂದು ಬಗೆಯ ಸಿಹಿ ತಿಂಡಿ; ಹೂರಿಗೆ.

ಪೂರೈಕೆ (ನಾ). ೧. ಒದಗಿಸುವಿಕೆ; ಪೂರೈಸುವಿಕೆ. ೨. ಮುಗಿಸುವಿಕೆ.

ಪೂರೈಸು = ಪೂರಯಿಸು.

ಪೂರ್ಣ (ನಾ). ೧. ಹೋಳಿಗೆಯೊಳಗೆ ಹುದುಗಿಸಿದ ವಸ್ತು; ಹೂರಣ. (ಗು). ೨. ಕೊನೆಗೊಂಡ; ಮುಗಿದ. ೩. ಸಂಪೂರ್ಣವಾದ; ಸಮಗ್ರವಾದ. ೪. ತುಂಬಿದ; ವ್ಯಾಪ್ತವಾದ. ೫. ತೃಪ್ತಿಹೊಂದಿದ. ೬. ಬಾಗಿದ; ಬಗ್ಗಿದ. ~ಆಹುತಿ = ಯಜ್ಞದ ಕೊನೆಯಲ್ಲಿ ಮಾಡುವ ಅರ್ಪಣೆ. ~ಇಂದು = ಪೂರ್ಣಚಂದ್ರ; ಹುಣ್ಣಿಮೆಯ ಚಂದ್ರ. ~ಕುಂಭ = ಪವಿತ್ರವಾದ ನೀರನ್ನು ತುಂಬಿದ ಕಲಶ. ~ಪಾತ್ರ = ೧. ತುಂಬಿದ ಪಾತ್ರೆ. ೨. ಒಂದು ಅಳತೆ. ೩. ಸಮಾರಂಭದಲ್ಲಿ ಅತಿಥಿಗಳಿಗೆ ಕೊಡಲು ಇಟ್ಟುಕೊಂಡಿರುವ ಉಡುಗೊರೆ. ೪. ಹೋಮ ಮಾಡುವ ಕಾಲದಲ್ಲಿ ತುಪ್ಪವನ್ನು ತುಂಬಿಡುವ ಪಾತ್ರೆ. ~ವಿರಾಮ = ೧. ಪೂರ್ಣವಿಶ್ರಾಂತಿ; ಬಿಡುವು. ೨. ವಾಕ್ಯದ ಕೊನೆಯನ್ನು ಸೂಚಿಸುವ ಚಿಹ್ನೆ; ಚುಕ್ಕೆ. ೩. ಮುಕ್ತಾಯ.

ಪೂರ್ಣಿಮೆ (ನಾ). ಪೂರ್ಣಚಂದ್ರನಿರುವ ದಿವಸ; ಹುಣ್ಣಿಮೆ.

ಪೂರ್ತ (ನಾ). ೧. ತುಂಬಿರುವುದು; ಪೂರ್ಣವಾದುದು. ೨. ಪೂರ್ಣಮಾಡುವಿಕೆ; ಪೂರೈಕೆ. ೩. ಧಾರ್ಮಿಕ ಕಾರ್ಯಾಚರಣೆ. ೪. ತೃಪ್ತಿ; ತಣಿವು. (ಗು). ೫. ತುಂಬಿದ; ಪೂರ್ಣ. (ಅ). ೬. ತುಂಬ; ಪೂರ್ಣವಾಗಿ.

ಪೂರ್ತಿ (ನಾ). ೧. ಪೂರ್ಣ; ಎಲ್ಲ. ೨. ಸಮಗ್ರತೆ.

ಪೂರ್ವ (ನಾ). ೧. ಹಿಂದಿನದು; ಪ್ರಾಚೀನವಾದುದು. ೨. ಪೂರ್ವದಿಕ್ಕು; ಮೂಡಣ ದಿಕ್ಕು. ೩. ಹಳೆಯ ತಲೆಮಾರಿನವನು; ಪೂರ್ವಜ. ೪. ಹಿಂದಿನ ಪದ್ಧತಿ; ಪುರಾತನ ಸಂಪ್ರದಾಯ. (ಗು). ೫. ಮೊದಲಿನ; ಮುಂಚಿನ. ೬. ಪುರಾತನ; ಹಳೆಯ. ೭. ಪೂರ್ವದಿಕ್ಕಿಗೆ ಸಂಬಂಧಿಸಿದ. ~ಅಚಲ = ಪೂರ್ವದಿಕ್ಕಿನ ಪರ್ವತ. ~ಅಪರ = ೧. ಸೇರುವೆ; ಸಂಬಂಧ. ೨. ಹಿಂದಿನ ಮತ್ತು ಮುಂದಿನ. ೩. ಪೂರ್ವ ಮತ್ತು ಪಶ್ಚಿಮದ. ~ಅರ್ಧ = ಮೊದಲಿನ ಭಾಗ. ~ಅಹ್ನ=ದಿನದ ಮೊದಲ ಭಾಗ. ~ಆರ್ಜಿತ = ಹಿಂದಿನ ಜನ್ಮದಲ್ಲಿ ಸಂಪಾದಿಸಿದುದು. ~ಆಶ್ರಮ=ಸಂನ್ಯಾಸ ಸ್ವೀಕಾರಕ್ಕೆ ಮೊದಲಿನ ಜೀವನ; ಗೃಹಸ್ಥಾಶ್ರಮ. ~ಉಕ್ತ =ಮೊದಲೇ ಹೇಳಿದ. ~ಉತ್ತರ=೧. ಪೂರ್ವ ಮತ್ತು ಉತ್ತರ ದಿಕ್ಕಿನ ಮಧ್ಯಭಾಗ; ಈಶಾನ್ಯ. ೨. ಹಿಂದಣ ಮತ್ತು ಮುಂದಣ. ~ಉದಯ = ೧. ಮೊದಲೇ ಹುಟ್ಟಿದ. ೨. ಮೊದಲೇ ತಿಳಿದ. ~ಗ್ರಹ=ಮನಸ್ಸಿನಲ್ಲಿ ಮೊದಲೇ ಮಾಡಿಕೊಂಡ ಅಭಿಪ್ರಾಯ; ಅಭಿನಿವೇಶ. ~ಪಕ್ಷ= ೧. ಚಾಂದ್ರಮಾನ ತಿಂಗಳಿನ ಮೊದಲ ಅರ್ಧಭಾಗ. ೨. ವಾದದ ಮೊದಲನೆಯ ಭಾಗ; ಮುಂಡನೆ. ~ರಂಗ = ನಾಟಕದ ಆರಂಭ; ನಾಂದಿ.

ಪೂರ್ವಕ ೧.=ಪೂರ್ವಿಕ. (ಗು). ೨. ಮೊದಲಿನ; ಹಿಂದಿನ. ೩. ಹೊಂದಿಕೊಂಡು ಬರುವ.

ಪೂರ್ವಜ (ನಾ). ೧. ಹಿರಿಯ; ಪೂರ್ವಿಕ. ೨. ಅಣ್ಣ; ಅಗ್ರಜ. (ಗು). ೩. ಹಿಂದಿನ; ಪುರಾತನ.

ಪೂರ್ವಿಕ (ನಾ). ಹಳಬ; ಪೂರ್ವಜ.

ಪೂಲಿ (ನಾ). ೧. ಒಂದು ಜಾತಿಯ ಸಸ್ಯ. ೨. ಒಂದು ಬಗೆಯ ಬಟ್ಟೆ; ಪುಲ್ಲಿ. ೩. ಮೂರುವರೆ ರೂಪಾಯಿ ಬೆಲೆ ಬಾಳುವ ಒಂದು ನಾಣ್ಯ.

ಪೂಲು (ನಾ). ಸೇತುವೆ; ಸಂಕ.

ಪೂವು (ನಾ). ಹೂವು; ಪುಷ್ಪ.

ಪೂಷ (ನಾ). ೧. ಸೂರ್ಯ. ೨. ಚಂದ್ರನ ಹದಿನಾರು ಕಲೆಗಳಲ್ಲಿ ಒಂದು.

ಪೂಸು (ಕ್ರಿ). ೧. ಬಳಿ; ಸವರು; ಲೇಪಿಸು. (ನಾ). ೨. ಬಳಿಯುವಿಕೆ; ಸವರುವಿಕೆ.

ಪೂಳು(ಳು) (ಕ್ರಿ). ಹೂಳು; ಹುಗಿ.

ಪೃಚ್ಛನೆ (ನಾ). ೧. ಪ್ರಶ್ನೆ. ೨. ವಿಚಾರಣೆ.

ಪೃಚ್ಛೆ = ಪೃಚ್ಛನೆ.

ಪೃತನೆ (ನಾ). ೧. ಯುದ್ಧ. ೨. ಸೈನ್ಯ; ಪಡೆ.

ಪೃಥಕ್ಕರಣ (ನಾ). ಬೇರೆ ಬೇರೆ ಮಾಡುವಿಕೆ; ವಿಂಗಡಿಸುವಿಕೆ.

ಪೃಥಕ್ಕರಿಸು (ಕ್ರಿ). ವಿಂಗಡಿಸು; ವಿಭಾಗಿಸು.

ಪೃಥಿವಿ = ಪೃಥ್ವಿ. ~ಪತಿ = ರಾಜ.

ಪೃಥು (ಗು). ೧. ವಿಸ್ತಾರವಾದ; ವಿಶಾಲವಾದ; ದೊಡ್ಡ. ೨. ಅಸಂಖ್ಯವಾದ; ಲೆಕ್ಕವಿಲ್ಲದ. ~ಸ್ಕಂಧ = ೧. ದೊಡ್ಡ ಕೊಂಬೆ, -ಗೆಲ್ಲು. ೨. ದೊಡ್ಡ ಭುಜ; ಅಗಲವಾದ ಹೆಗಲು. ~ಸ್ಥಾನ = ನಗರ; ಪಟ್ಟಣ.

ಪೃಥುಕ (ನಾ). ೧. ಹುಡುಗ; ಬಾಲಕ. ೨. ಅವಲಕ್ಕಿ.

ಪೃಥುಲ(ಳ) = ಪೃಥು.

ಪೃಥ್ವಿ (ನಾ). ಭೂಮಿ; ಧರೆ. ~ಈಶ=ರಾಜ; ಅರಸ. ~ಗೃಹ = ಬಿಲ; ಡೊಗರು.

ಪೃಥ್ವಿಜ (ನಾ). ೧. ಮರಗಿಡ ಮುಂತಾದುವು. ೨. ಮಂಗಳಗ್ರಹ.

ಪೃಥ್ವಿಜೆ (ನಾ). ಭೂಮಿಯಿಂದ ಹುಟ್ಟಿದವಳು; ಸೀತೆ.

ಪೃಶ್ನಿ (ನಾ). ೧. ಕುಳ್ಳ; ಕುಬ್ಜ. ೨. ಕಿರಣ; ಕದಿರು. (ಗು). ೩. ನಾನಾ ಬಣ್ಣಗಳಿಂದ ಕೂಡಿದ; ಹಲವು ಬಣ್ಣದ ಚುಕ್ಕೆಗಳುಳ್ಳ.

ಪೃಷತ (ನಾ). ೧. ಮೈಮೇಲೆ ಚುಕ್ಕೆಗಳಿರುವ ಚಿಗರೆ. ೨. ತುಂತುರು; ಹನಿ.

ಪೃಷತ್ಕ (ನಾ). ಬಾಣ; ಶರ.

ಪೃಷ್ಠ (ನಾ). ೧. ಹಿಂಭಾಗ; ಹಿಂಬದಿ. ೨. ಶರೀರದ ಹಿಂದಿನ ಭಾಗ; ಬೆನ್ನು. ೩. ಪಿರ್ರೆ. ೪. ಪುಟ; ಹಾಳೆ.

ಪೆಂಕುಳಿ (ನಾ). ೧. ಹುಚ್ಚು; ಮರುಳು. ೨. ಹೆಣ್ಣಿಗ; ಹೇಡಿ. ~ಕೊ(ಗೊ)ಳ್ = ಹುಚ್ಚುಹಿಡಿ; ಮರುಳಾಗು.

ಪೆಂಗ (ನಾ). ಪೆದ್ದ; ದಡ್ಡ; ತಿಳಿಗೇಡಿ.

ಪೆಂಗು (ನಾ). ದಡ್ಡತನ; ಮಂಕುತನ.

ಪೆಂಗುರು (ನಾ). ಒಂದು ಜಾತಿಯ ದೊಡ್ಡ ಬಕಪಕ್ಷಿ.

ಪೆಂಗೂಸು (ನಾ). ಹೆಂಗಸು; ಸ್ತ್ರೀ.

ಪೆಂಚು (ನಾ). ಒಡೆದ ಮಡಕೆಯ ಚೂರು; ಹೆಂಚು.

ಪೆಂಚೆಯ (ನಾ). ನವಿಲುಗರಿ; ಪಿಂಛ.

ಪೆಂಟೆ (ನಾ). ೧. (ಮಣ್ಣು ಮೊದಲಾದುವುಗಳ) ಮುದ್ದೆ; ಹೆಂಟೆ. ೨. ಹೊರೆ; ಪಿಂಡಿ. ೩. ಧಾನ್ಯಗಳನ್ನು ತುಂಬುವ ಬಿದಿರಿನ ಸಾಧನ; ಪೆಟ್ಟಿ; ತೊಂಬೆ.

ಪೆಂಡ (ನಾ). ಹೆಂಡ; ಮದ್ಯ.

ಪೆಂಡತಿ (ನಾ). ಮಡದಿ; ಹೆಂಡತಿ.

ಪೆಂಡವಾಸ (ನಾ). ಅಂತಃಪುರ; ರಾಣಿವಾಸ.

ಪೆಂಡಳ (ನಾ). ಉರವಣೆ; ರಭಸ.

ಪೆಂಡಾರ = ಪೆಂಡೆಯ.

ಪೆಂಡಾರಿ = ಪಿಂಡಾರಿ.

ಪೆಂಡಿ (ನಾ). ಪಿಂಡಿ; ಹೊರೆ; ಕಟ್ಟು.

ಪೆಂಡಿತಿ = ಪೆಂಡತಿ.

ಪೆಂಡೆ ೧. = ಪೆಂಡೆಯ. ೨. = ಪೆಂಡಿ.

ಪೆಂಡೆಯ (ನಾ). ಕಾಲಿನ ಒಂದು ಆಭರಣ ; ಬಿರುದಿನ ಬಳೆ ; ಅಂದುಗೆ.

ಪೆಂತಱ(ರ) (ನಾ). ಪಿಶಾಚಿ; ದೆವ್ವ; ಬೆಂತರ.

ಪೆಂಪು (ನಾ). ೧. ಘನತೆ; ಕೀರ್ತಿ; ಗೌರವ. ೨. ಆಧಿಕ್ಯ; ಹೆಚ್ಚಳ. ~ಪೆ(ವೆ)ಱು(ರು) = ೧. ಕೀರ್ತಿಯನ್ನು ಹೊಂದು. ೨. ಅಧಿಕವಾಗು; ಹೆಚ್ಚಾಗು.

ಪೆಕ್ಕಣ (ನಾ). ಪ್ರೇಕ್ಷಣ ; ನೋಟ ; ಕಾಣ್ಕೆ.

ಪೆಕ್ಕಳ = ಪೆರ್ಕಳ.

ಪೆಕ್ಕಳಿಗ (ನಾ). ಒಂದು ಜಾತಿಯ ಹಕ್ಕಿ.

ಪೆಗಲ್(ಲು) (ನಾ). ಹೆಗಲು ; ಭುಜ.

ಪೆಗ್ಗ = ಪೆಂಗ.

ಪೆಗ್ಗಡೆ (ನಾ). ಹೆಗ್ಗಡೆ ; ನಾಯಕ.

ಪೆಗ್ಗಣ (ನಾ). ಇಲಿಯ ಜಾತಿಗೆ ಸೇರಿದ ಒಂದು ಪ್ರಾಣಿ ; ಹೆಗ್ಗಣ.

ಪೆಗ್ಗು ೧. = ಪೆಂಗ. ೨. = ಪೆಂಗು.

ಪೆಚ್ಚ (ನಾ). ದಡ್ಡ ; ಮೂರ್ಖ.

ಪೆಚ್ಚಿ (ನಾ). ದಡ್ಡಿ; ಮೂರ್ಖ ಹೆಂಗಸು.

ಪೆಚ್ಚು ೧. = ಪೆರ್ಚು. (ನಾ). ೨. ಕಾಂತಿ ಯಿಲ್ಲದಿರುವುದು ; ಮಂಕು. ೩. ಹೆಡ್ಡತನ; ದಡ್ಡತನ. ~ಆಗು = ೧. ಮಂಕಾಗು ; ಕಳೆಯಿಲ್ಲದಾಗು. ೨. ದಡ್ಡನಾಗು ; ಹೆಡ್ಡ ನಾಗು. ~ಮುಖ = ಸಪ್ಪಗಾದ ಮುಖ; ಕಳೆಯಿಲ್ಲದ ಮುಖ.

ಪೆಚ್ಚುಗೆ = ಪೆರ್ಚುಗೆ.

ಪೆಜ್ಜೆ = ಪಜ್ಜೆ. ~ಪಿ(ವಿ)ಡಿ = ಹೆಜ್ಜೆಯನ್ನು ಅನುಸರಿಸು.

ಪೆಟಾರಿ (ನಾ). ದೊಡ್ಡ ಪೆಟ್ಟಿಗೆ.

ಪೆಟ್ಟೆ = ಪೆಂಟೆ.

ಪೆಟ್ಟೆ = ಪೆಟ್ಟಿಗೆ.

ಪೆಟ್ಟಿಗೆ (ನಾ). ಸಂದೂಕ. ~ಕ(ಗ)ಟ್ಟು = ಬೀಳ್ಕೊಳ್ಳು ; ಹೊರಡು. ~ಗಾಡಿ = ಪೆಟ್ಟಿಗೆಯಾಕಾರದ ಎತ್ತಿನ ಗಾಡಿ, –ಬಂಡಿ.

ಪೆಟ್ಟು (ಕ್ರಿ). ೧. ಹೊಡೆ; ಬಡಿ. ೨. ಚುಚ್ಚು; ಇರಿ. ೩. ಹೆಟ್ಟು ; ಸಂಭೋಗಿಸು. (ನಾ). ೪. ಹೊಡೆತ; ಏಟು. ೫. ನೋವು; ಘಾಸಿ. ೬. ಸಾಹಸ; ಕೆಚ್ಚು. ೭. ಗರ್ವ; ಸೊಕ್ಕು. ~ತಿನ್ನು = ಅನುಭವಿಸು ; ಕಷ್ಟಪಡು. ~ಪೆ(ವೆ)ರ್ಚು = ಗರ್ವಪಡು.

ಪೆಟ್ಟೆ (ನಾ). ೧. ಮಣ್ಣಿನ ಮುದ್ದೆ ; ಹೆಂಟೆ. ೨. ಗಳಗೆ; ತೊಂಬೆ.

ಪೆಟ್ಲುಪ್ಪು (ನಾ). ಒಂದು ಬಗೆಯ ಉಪ್ಪು; ಬಂದೂಕಿಗೆ ಹಾಕುವ ಮದ್ದು.

ಪೆಠಾರಿ = ಪೆಟಾರಿ.

ಪೆಡ (ನಾ). ಹಿಂದುಗಡೆ; ಹಿಂಬದಿ; ಹಿಂಭಾಗ. ~(ಂ)ಕೆ(ಗೆ)ಯ್ = ಕೈಯ ಹಿಂಭಾಗ. ~(ಂ)ತ(ದ)ಲೆ = ತಲೆಯ ಹಿಂಭಾಗ; ಹಿಂದಲೆ. ~(ಂ)ಮೆಟ್ಟು = ೧. ಹಿಂದಕ್ಕೆ ಸರಿ; ಹಿಮ್ಮೆಟ್ಟು. ೨. ಹಿಂಭಾಗ; ಹಿಂಬದಿ. ~ಕ(ಗ)ಟ್ಟು = ೧. ಹಿಮ್ಮುಖವಾಗಿ ಕಟ್ಟು. ೨. ಹೆಡಮುರಿಗೆ; ಹಿಂಗಟ್ಟು. ~ಮುಡಿ = ತುರುಬು; ಗಂಟು. ~ಮುರಿ = ಹಿಂದಕ್ಕೆ ತಿರಿಚು ; ಹಿಂದಕ್ಕೆ ಬಾಗಿಸು.

ಪೆಡಂಭೂತ (ನಾ). ಬೃಹದಾಕಾರದ ಪ್ರಾಚೀನ ಕಾಲದ ಪ್ರಾಣಿ.

ಪೆಡಕು (ನಾ). ಕತ್ತಿನ ಹಿಂಭಾಗ; ಹೆಕ್ಕತ್ತು.

ಪೆಡಗುಡಿ (ನಾ). ಹಿಂಗಟ್ಟು ; ಹೆಡಮುರಿಗೆ. ~ಕ(ಗ)ಟ್ಟು = ಕೈಗಳನ್ನು ಹಿಮ್ಮುಖವಾಗಿ ಕಟ್ಟು.

ಪೆಡಗೆ (ನಾ). ದೊಡ್ಡ ಬುಟ್ಟಿ ; ಗೂಡೆ; ಹೆಡಿಗೆ.

ಪೆಡಸು (ನಾ). ೧. ಗಡುಸು; ಗಟ್ಟಿ. ೨. ಕಾಠಿನ್ಯ; ಉಗ್ರತೆ. ೩. ಹಗುರವಾದುದು ; ಭಂಗುರ ವಾದುದು. ೪. ಕಷ್ಟ; ಎಡರು. ~ಆಗು = ಕಠಿನವಾಗು ; ಗಟ್ಟಿಯಾಗು. ~ದಾರಿ = ಅಡಚಣೆಗಳಿಂದ ಕೂಡಿದ ದಾರಿ ; ಕಷ್ಟದ ದಾರಿ.

ಪೆಡಿಗೆ = ಪೆಡಗೆ.

ಪೆಡೆ (ನಾ). ಹಾವಿನ ಬಿಚ್ಚಿದ ಹೆಡೆ. ~ಮ(ವ)ಣಿ=ಹಾವಿನ ಹೆಡೆಯಲ್ಲಿರುವ ರತ್ನ; ನಾಗರತ್ನ.

ಪೆಣ್ (ನಾ). ಹೆಣ್ಣು; ಹೆಂಗಸು; ಸ್ತ್ರೀ. ~ಕೂ(ಗೂ)ಸು = ಪೆಂಗೂಸು. ~ಕೊ(ಗೊ)ಲೆ = ಹೆಂಗಸಿನ ಕೊಲೆ; ಸ್ತ್ರೀಹತ್ಯೆ. ~ಪ(ಬ)ಡೆ = ಹೆಂಗಸರ ಸೈನ್ಯ, -ದಳ. ~ಮರುಳ=ಸ್ತ್ರೀಲೋಲ; ಕಾಮುಕ.

ಪೆಣ (ನಾ). ಹೆಣ; ಕಳೇಬರ; ಶವ. ~ಕೂಱ್(ೞ್)= ಸತ್ತವರಿಗಾಗಿ ಹಾಕುವ ಕಾಕಪಿಂಡ. ~ತಿ(ದಿ)ನಿ = ಹೆಣವನ್ನು ತಿನ್ನುವ ಭೂತ, ಪಿಶಾಚಿ ಮುಂತಾದುವು.

ಪೆಣಗು (ಕ್ರಿ). ೧. ಶ್ರಮಪಡು; ಹೆಣಗು; ಹೋರಾಡು. ೨. = ಪೆಣರ್.

ಪೆಣರ್ (ಕ್ರಿ). ಹೆಣಗಾಡು; ಹೋರಾಡು.

ಪೆಣಲ್ (ನಾ). ಜಡೆ; ಹೆರಳು.

ಪೆಣೆ (ಕ್ರಿ). ೧. ಹೆಣೆ; ಹೊಸೆ; ತಳಕುಹಾಕು. ೨. ಒಂದುಗೂಡಿಸು; ಒಟ್ಟುಮಾಡು. ೩. ಹೊಂದಿಕೊಳ್ಳು; ಒಂದಾಗು; ತೊಡಕಿಕೊಳ್ಳು. (ನಾ). ೪. ಒಂದಾಗಿರುವಿಕೆ; ಜೊತೆಯಾಗಿರುವಿಕೆ. ೫. ಸಂಗ; ಜೊತೆ. ~ಪ(ವ)ಕ್ಕಿ = ಎಣೆವಕ್ಕಿ; ಚಕ್ರವಾಕ.

ಪೆಣ್ಣು = ಪೆಣ್.

ಪೆಣ್ಣಿಗ (ನಾ). ಹೆಣ್ಣಿಗ; ಸ್ತ್ರೈಣ.

ಪೆಣ್ಬಡೆಯ (ನಾ). ಹೆಂಗಸರನ್ನೇ ಸೈನ್ಯವಾಗಿ ಉಳ್ಳವನು; ಕಾಮ.

ಪೆದೆ (ನಾ). ಬಿಲ್ಲಿನ ದಾರ; ನಾರಿ; ಹೆದೆ.

ಪೆದ್ದ (ನಾ). ಮೂರ್ಖ; ದಡ್ಡ.

ಪೆದ್ದಿ (ನಾ). ಮೂರ್ಖ ಹೆಂಗಸು; ದಡ್ಡಿ.

ಪೆದ್ದು (ನಾ). ೧. ಹೆಡ್ಡತನ. ೨. = ಪೆದ್ದ.

ಪೆಪ್ಪಳಿಸು = ಪೆಳ್ಪಳಿಸು.

ಪೆಪ್ಪು (ನಾ). ಮೊಸರಾಗಲು ಹಾಲಿಗೆ ಬೆರಸುವ ಮಜ್ಜಿಗೆ ಅಥವಾ ಹುಳಿ; ಹೆಪ್ಪು.

ಪೆಬ್ಬಾವು (ನಾ). ಒಂದು ಜಾತಿಯ ಹಾವು; ಹೆಬ್ಬಾವು; ಅಜಗರ.

ಪೆಬ್ಬೆಟ್ಟು (ನಾ). ಕೈ ಮತ್ತು ಕಾಲುಗಳಲ್ಲಿರುವ ದಪ್ಪಬೆಟ್ಟು; ಹೆಬ್ಬೆಟ್ಟು.

ಪೆಮ್ಮರ (ನಾ). ದೊಡ್ಡಮರ; ಹೆಮ್ಮರ.

ಪೆರ್ ೧. = ಪೆಱು. (ಗು). ೨. ಹಿರಿಯ; ವಿಶಾಲವಾದ; ದೊಡ್ಡ. ~ಕು(ಗು)ಡಿ = ಹಿರಿಯ ಮನೆತನ; ದೊಡ್ಡ ವಂಶ. ~ತೊ(ದೊ)ಱೆ(ರೆ) = ದೊಡ್ಡ ನದಿ. ~ಪ(ಬ,ವ)ಡೆ = ದೊಡ್ಡ ಸೈನ್ಯ; ಹಿರಿಯ ಸೈನ್ಯ. ~ಪಾ(ಬಾ,ವಾ)ವು = ಪೆಬ್ಬಾವು. ~ಬಟ್ಟೆ = ರಾಜಮಾರ್ಗ; ಹೆದ್ದಾರಿ. ~ಬಲ = ಪೆರ್ಬಡೆ. ~ಮಗ = ಹಿರಿಯ ಮಗ; ಜ್ಯೇಷ್ಠಪುತ್ರ. ~ಮುಡಿ = ಉದ್ದವಾದ ಕೂದಲಿನ ಜಡೆ, -ಹೆಳಲು.

ಪೆರೆ (ನಾ). ೧. ಹಾವಿನ ಪೊರೆ. ೨. = ಪೆಱೆ. ~ಕ(ಗ)ಳೆ = ಪೊರೆಗಳಚು; ಪೊರೆಯನ್ನು ಬಿಡು.

ಪೆಱ(ರ) (ನಾ). ೧. ಹಿಂದುಗಡೆ; ಹಿಂಭಾಗ. ೨. ಇನ್ನೊಂದು ಪಕ್ಕ, -ಸ್ಥಳ. ೩. ಅನ್ಯ; ಪರಕೀಯ. ~ಕಾ(ಗಾ)ಲ್(ಲು) = ಹಿಂಗಾಲು. ~ತೆ(ದೆ)ಗೆ = ಹಿಂಜರಿ; ಹಿಮ್ಮೆಟ್ಟು. ~ಪಿಂಗು = ಪೆಱದೆಗೆ.

ಪೆಱ(ರ)ಗು (ನಾ). ೧. ಹಿಂಬದಿ; ಹಿಂಭಾಗ. (ಅ). ೨. ಅನಂತರ; ಆಮೇಲೆ.

ಪೆಱ(ರ)ತು (ನಾ). ಬೇರೆಯದು; ಮತ್ತೊಂದು.

ಪೆಱು(ರು) (ಕ್ರಿ). ೧. ಹೊಂದು; ಪಡೆ; ತಾಳು. ೨. ಸಂಪಾದಿಸು; ಗಳಿಸು. ೩. ಹೆರು; ಹಡೆ. ೪. ಹೆಪ್ಪುಗಟ್ಟು; ಹೆರೆಗಟ್ಟು.

ಪೆಱು(ರು)ಕು (ಕ್ರಿ). ಆಯು; ಹೆಕ್ಕು.

ಪೆಱೆ(ರೆ) (ನಾ). ಚಂದ್ರ; ತಿಂಗಳು. ~ಅ(ಯ)ಂಬು = ಒಂದು ಬಗೆಯ ಬಾಣ; ಚಂದ್ರಾಸ್ತ್ರ. ~ನೊಸಲ್(ಲು) = ಚಂದ್ರನಂತಿರುವ ಹಣೆ.

ಪೆಱೆ(ರೆ)ಗೊಡೆಯ (ನಾ). ಚಂದ್ರನನ್ನು ಕೊಡೆಯಾಗಿ ಉಳ್ಳವನು ; ಕಾಮ.

ಪೆಱೆ(ರೆ)ದಲೆಯ (ನಾ). ಚಂದ್ರನನ್ನು ತಲೆಯಲ್ಲಿ ಧರಿಸಿದವನು ; ಶಿವ.

ಪೆರ್ಗಳ (ನಾ). ೧. ಆಧಿಕ್ಯ ; ಹೆಚ್ಚಳ. ೨. ಗರ್ವ; ಹೆಮ್ಮೆ. ~ಇಸು = ೧. ಹೆಚ್ಚಾಗು; ಅಧಿಕವಾಗು. ೨. ಹೆಮ್ಮೆಪಡು ; ಹಿಗ್ಗು.

ಪೆರ್ಗಡೆ = ಪೆಗ್ಗಡೆ. ~ಇತಿ = ೧. ಹೆಗ್ಗಡೆಯ ಹೆಂಡತಿ. ೨. ಮುಖ್ಯಾಧಿಕಾರಿಣಿ ; ಹೆಗ್ಗಡಿತಿ.

ಪೆರ್ಗಣ = ಪೆಗ್ಗಣ.

ಪೆರ್ಚು (ಕ್ರಿ). ೧. ಅಧಿಕವಾಗು ; ಹೆಚ್ಚು. ೨. ಹೆಮ್ಮೆಪಡು ; ಗರ್ವಿಸು. (ನಾ). ೩. = ಪೆರ್ಚುಗೆ. ೪. ಪರಾಕ್ರಮ ; ಸಾಹಸ. ~ಇಸು = ಹೆಚ್ಚಿಸು ; ವೃದ್ಧಿಪಡಿಸು.

ಪೆರ್ಚುಗೆ (ನಾ). ೧. ಹೆಚ್ಚಳ; ಆಧಿಕ್ಯ; ಹೆಚ್ಚುಗೆ. ೨. ಹೆಮ್ಮೆ ; ಸೊಕ್ಕು.

ಪೆರ್ಮೆ (ನಾ). ೧. ಹೆಚ್ಚಳ; ಹಿರಿಮೆ ; ಘನತೆ. ೨. ಸೊಕ್ಕು ; ಹೆಮ್ಮೆ. ~ಕಿ(ಗಿ)ಡು = ಗರ್ವಭಂಗವಾಗು ; ಅಭಿಮಾನಗುಂದು. ~ಪ(ವ)ಡೆ = ಹಿರಿಮೆಯನ್ನು ಹೊಂದು ; ಘನತೆಯನ್ನು ಪಡೆ.

ಪೆಸರ್(ರು) (ನಾ). ೧. ಹೆಸರು ; ಅಂಕಿತ ; ನಾಮಧೇಯ. ೨. ಕೀರ್ತಿ; ಪ್ರಸಿದ್ಧಿ; ಹೆಸರುವಾಸಿ. ೩. = ಪೆಸಱು. ~ಆಗು = ೧. ಹೆಸರು ರೂಢಿಗೆ ಬರು. ೨. ಕೀರ್ತಿಯನ್ನು ಪಡೆ; ಹೆಸರುವಾಸಿಯಾಗು. ~ಇಡು = ೧. ನಾಮಕರಣ ಮಾಡು. ೨. ಹೊಗಳು ; ಸ್ತುತಿಸು. ೩. ದೋಷಾರೋಪ ಮಾಡು ; ನಿಂದಿಸು. ~ಕೊ(ಗೊ)ಳ್(ಳು) = ೧. ಹೆಸರಿಸು ; ಹೆಸರು ಹೇಳು. ೨ ಕೀರ್ತಿಪಡೆ ; ಪ್ರಸಿದ್ಧನಾಗು. ೩. ಹೆಸರನ್ನು ಆಲಿಸು, -ಕೇಳು.

ಪೆಸಱು(ರು) (ನಾ). ಒಂದು ಬಗೆಯ ದ್ವಿದಳ ಧಾನ್ಯ ; ಹೆಸರು.

ಪೆಸರ್ಪು (ಕ್ರಿ). ನಿಂದಿಸು ; ದೂಷಿಸು.

ಪೆಳಱು(ರು) ೧. = ಪೆಳ್ಪಳಿಸು. ೨. ನಡುಗು ; ತತ್ತರಿಸು. (ನಾ). ೩. ಹೆದರಿಕೆ ; ಭಯ. ~ಇಸು = ಭಯಪಡುವಂತೆ ಮಾಡು ; ಹೆದರಿಸು.

ಪೆಳ್ಪಳಿಸು (ಕ್ರಿ). ಭಯಪಡು ; ಹೆದರು.

ಪೆೞ(ಳ)ವ (ನಾ). ಕುಂಟ ; ಹೆಳವ.

ಪೆೞ(ಳ)ವಿ (ನಾ). ಕುಂಟಿ ; ಹೆಳವಿ.

ಪೆೞ(ಳ)ವು (ನಾ). ಕುಂಟತನ ; ಅಂಗವಿಕಲತೆ.

ಪೇ(ಂ)ಕುಳಿ (ನಾ). ೧. ಪಿಶಾಚಿ. ೨. ಆವೇಶ ; ಕೋಪೋದ್ರೇಕ. ೩. ಹುಚ್ಚು ; ಪೆಂಕುಳಿ. ~ಕೊ(ಗೊ)ಳ್ = ೧. ಆವೇಶಗೊಳ್ಳು. ೨. ಹುಚ್ಚುಹಿಡಿ; ಹುಚ್ಚಾಗು. ~ನಾಯ್(ಯಿ) = ಹುಚ್ಚುನಾಯಿ.

ಪೇಚಕ (ನಾ). ೧. ಗೂಬೆ. ೨. (ಆನೆಯ) ಬಾಲದ ಬುಡ. ೩. ಹೇನು.

ಪೇಚು (ನಾ). ೧. ತೊಡಕು ; ಮುಗ್ಗಟ್ಟು. ೨. ಪಟ್ಟು ; ಹಿಡಿತ. ~ಆಟ = ಪರದಾಟ ; ಇಕ್ಕಟ್ಟು. ~ಆಡು = ಕಷ್ಟಕ್ಕೊಳಗಾಗು ; ಒದ್ದಾಡು.

ಪೇಟ (ನಾ). ರುಮಾಲು ; ತಲೆಯುಡುಗೆ.

ಪೇಟಕ (ನಾ). ೧. ಪೆಟ್ಟಿಗೆ. ೨. ಬುಟ್ಟಿ. ೩ ಗುಂಪು ; ಸಮೂಹ. ೪. ಸೇವಕ ; ಆಳು.

ಪೇಟಿ ೧. = ಪೇಟಿಕೆ. ೨. ಒಂದು ವಾದ್ಯವಿಶೇಷ; ಹಾರ್ಮೋನಿಯಂ. ೩. ಬಟ್ಟೆಗಳ ಅಂಚಿನಲ್ಲಿ ಹೆಣೆದಿರುವ ಕಸೂತಿ.

ಪೇಟಿಕೆ (ನಾ). ಪೆಟ್ಟಿಗೆ ; ಸಂದೂಕ.

ಪೇಟೆ (ನಾ). ಅಂಗಡಿಗಳಿರುವ ಬೀದಿ ; ಮಾರುಕಟ್ಟೆ.

ಪೇಠಾ (ನಾ). ತಾಲ್ಲೂಕಿಗಿಂತ ಸಣ್ಣದಾದ ಆಡಳಿತ ವಿಭಾಗ.

ಪೇಡ (ನಾ). ಒಂದು ಬಗೆಯ ಸಿಹಿತಿಂಡಿ ; ಹಾಲುಖೋವ.

ಪೇಡಿ (ನಾ). ಅಂಜುಕುಳಿ; ಹೇಡಿ.
ಪೇಡೆ = ಪೇಡ.
ಪೇಢಿ (ನಾ). ವ್ಯವಹಾರ ಸಂಸ್ಥೆ; ಪಾಲುಗಾರಿಕೆಯ ಸಂಸ್ಥೆ.
ಪೇಣಿ = ಫೇಣಿ.
ಪೇತ (ನಾ). ೧. ಪ್ರೇತ; ಶವ; ಹೆಣ. ೨. ಪಿಶಾಚಿ; ಭೂತ.
ಪೇತು (ನಾ). ೧. ಗಡಿಬಿಡಿ; ಗೊಂದಲ. ೨. = ಪೇತ.
ಪೇದೆ (ನಾ). ೧. ಕಾಲಾಳು; ಪದಾತಿ. ೨. ಸೇವಕ; ಆಳು.
ಪೇನ್(ನು) (ಕ್ರಿ). ೧. ತಲೆಯಲ್ಲಿ ಹೇನು ಹೆಚ್ಚಾಗು. (ನಾ). ೨. ತಲೆಯಲ್ಲಿರುವ ಕ್ರಿಮಿ; ಹೇನು.
ಪೇಯ (ನಾ). ಕುಡಿಯಲು ಯೋಗ್ಯವಾದುದು; ಪಾನೀಯ, ಮದ್ಯ, ಪಾನಕ ಮುಂತಾದುವು.
ಪೇರ್ (ಗು). ವಿಶಾಲವಾದ; ದೊಡ್ಡ. ~ಅಡಿ = ೧. ದೊಡ್ಡಪಾದ. ೨. ಪೂಜ್ಯಪಾದ; ಗೌರವಾರ್ಹ. ೩. ನಾಯಿ. ~ಅಬ್ಬೆ(ದೆ) = ದೊಡ್ಡ ಬಂಡೆ. ~ಈಳೆ = ಒಂದು ಜಾತಿಯ ಮರ ಮತ್ತು ಅದರ ಹಣ್ಣು; ಹೇರೀಳೆ. ~ಉಸಿರು = ನಿಡಿದಾದ ಉಸಿರು; ನಿಟ್ಟುಸಿರು.
ಪೇರಣ (ನಾ). ನೃತ್ಯ; ನರ್ತನ; ಕುಣಿತ. ~ಇಗ = ನರ್ತಿಸುವವನು; ನರ್ತಕ.
ಪೇರಣಿ (ನಾ). ೧. ಕುಣಿತ; ನರ್ತನ. ೨. ಜಿಗಿಯುವಿಕೆ; ನೆಗೆತ. ೩. ದೊಡ್ಡ ಸೈನ್ಯ.
ಪೇರಣೆ = ಪೇರಣ.
ಪೇರಲ(ಳ) (ನಾ). ಒಂದು ಜಾತಿಯ ಮರ ಮತ್ತು ಅದರ ಹಣ್ಣು; ಸೀಬೆ.
ಪೇರಳೆ = ಪೇರಲ.
ಪೇರಿ = ಫೇರಿ.

ಪೇರು = ಪೇಱು. ~ಕಟ್ಟು = ತಕ್ಕಡಿಯ ತೂಕವನ್ನು ಸಮಮಾಡು.
ಪೇಱು(ರು) (ಕ್ರಿ). ೧. ಅಡಕು; ಒಟ್ಟು; ಹೇರು. ೨. ಹರಡು; ವ್ಯಾಪಿಸು. (ನಾ). ೩. ಒಟ್ಟಿಲು; ರಾಶಿ. ೪. ಹೊರೆ; ಭಾರ. ~ಇಸು = ೧. ಒಟ್ಟು; ರಾಶಿಮಾಡು. ೨. ಹೊರುವಂತೆ ಮಾಡು; ಹೊರಿಸು.
ಪೇರ್ಚು (ನಾ). ಹೆಗ್ಗಳಿಕೆ; ಅತಿಶಯ.
ಪೇರ್ವು = ಪೆರ್ಮೆ.
ಪೇಲ್(ಲು) (ಕ್ರಿ). ೧. ಮಲವನ್ನು ವಿಸರ್ಜಿಸು. (ನಾ). ೨. ಮಲ; ಹೇಲು.
ಪೇಲವ (ಗು). ೧. ಸಣ್ಣ; ಎಳೆಯ. ೨. ಕೋಮಲವಾದ; ಮೃದುವಾದ. ೩. ಮಸುಕಾದ.
ಪೇಲೆ (ನಾ). ಬಟ್ಟಲು.
ಪೇಶಲ (ಗು). ೧ ಸುಂದರವಾದ; ಮೋಹಕ. ೨. ಕೋಮಲವಾದ; ಮೃದುವಾದ. ೩. ದಕ್ಷತೆಯಿಂದ ಕೂಡಿದ. ೪. ಮೋಸದ; ಕುಟಿಲತನದ.
ಪೇಶವಾಯಿ (ನಾ). ಮರಾಟರಾಜ್ಯದ ಮುಖ್ಯಮಂತ್ರಿ.
ಪೇಶಿ (ನಾ). ೧. ಮಾಂಸದ ಪಿಂಡ, –ಮುದ್ದೆ. ೨. ಮೊಟ್ಟೆ; ತತ್ತಿ.
ಪೇಶ್ವೆ = ಪೇಶವಾಯಿ.
ಪೇಷಣ (ನಾ). ೧. ಹಿಟ್ಟು ಮಾಡುವುದು; ಬೀಸುವುದು. ೨. ಬೀಸುವ ಕಲ್ಲು. ~(ಂ)ಗೆಯ್ = ಹಿಟ್ಟುಮಾಡು; ಬೀಸು.
ಪೇಷ್ಕಾರ (ನಾ). ಕಂದಾಯ ವಸೂಲು ಮಾಡುವ ಒಬ್ಬ ಅಧಿಕಾರಿ.
ಪೇಸು (ಕ್ರಿ). ೧. ಅಸಹ್ಯಪಡು; ಜುಗುಪ್ಸೆ ಹೊಂದು; ಹೇಸು. (ನಾ). ೨. ಹೇಸಿಗೆ; ಅಸಹ್ಯ. ~ಇಕೆ(ಗೆ) = ಅಸಹ್ಯ; ಜುಗುಪ್ಸೆ. ~ಗೊಳ್(ಳ್,ಳು,ಉ) = ಜುಗುಪ್ಸೆಗೊಳ್ಳು; ಅಸಹ್ಯಪಡು.

ಪೇೞ್(ಳ್,ಳು,ಱು) (ಕ್ರಿ). ೧. ಅನ್ನು ; ಉಚ್ಚರಿಸು. ೨. ನಿರೂಪಿಸು ; ಹೇಳು. ೩. ಕಾವ್ಯ ರಚನೆ ಮಾಡು. ~ಇಸು = ೧. ಕಾವ್ಯವನ್ನು ಓದಿಸು. ೨. ಕಾವ್ಯವನ್ನು ಬರೆಸು.

ಪೇೞು(ಳಿ) = ಪೇಡಿ.

ಪೇೞು(ಳಿ)ಕೆ (ನಾ). ೧. ಹೇಳಿಕೆ ; ನಿರೂಪಣೆ. ೨. ಸಮಸ್ಯೆ ; ಒಗಟು.

ಪೇೞು(ಳಿ)ಗೆ (ನಾ). ೧. ಪೆಟ್ಟಿಗೆ ; ಸಂದೂಕ. ೨. (ಹಾವಿನ) ಬುಟ್ಟಿ.

ಪೈ (ನಾ). ಒಂದು ನಾಣ್ಯ ; ಬಿಡಿಕಾಸು.

ಪೈಕ (ನಾ). ೧. ವರ್ಗ ; ಗುಂಪು. ೨. ಹಣ.

ಪೈಕಿ (ಅ). ೧. ಒಳಗೆ. ೨. ಸಂಬಂಧದಲ್ಲಿ.

ಪೈಜಣ (ನಾ). ಕಿರುಗೆಜ್ಜೆಗಳಿಂದ ಕೂಡಿದ ಕಾಲಿನ ಆಭರಣ ; ಅಂದುಗೆ.

ಪೈಜಾಮು = ಪಾಯಿಜಾಮು.

ಪೈಜಾರ (ನಾ). ಮೆಟ್ಟು ; ಎಕ್ಕಡ.

ಪೈಜೆ (ನಾ). ಪ್ರತಿಜ್ಞೆ ; ಶಪಥ. ~ಕಾ(ಗಾ)ಱ(ರ) = ಪ್ರತಿಜ್ಞೆಯನ್ನು ಮಾಡಿದವನು.

ಪೈಟು (ಗು). ಸೊಗಸಾದ ; ಚೆನ್ನಾದ.

ಪೈತೃಕ (ನಾ). ೧. ಶ್ರಾದ್ಧ ; ತಿಥಿ. (ಗು). ೨. ತಂದೆಗೆ ಸಂಬಂಧಿಸಿದ ; ಪಿತೃವಿನ.

ಪೈತ್ಯ (ನಾ). ೧. ಪಿತ್ತದಿಂದುಂಟಾಗುವ ವಿಕಾರ ; ಪಿತ್ತ. ೨. ಹುಚ್ಚು. ~ಗಾರ = ಹುಚ್ಚ.

ಪೈತ್ರ (ನಾ). ೧. ಹೆಬ್ಬೆರಳು ಮತ್ತು ತೋರು ಬೆರಳುಗಳ ನಡುವಿನ ಅಂತರ ; ಚೋಟು. ೨. ರಥೋತ್ಸವ ಕಾಲದಲ್ಲಿ ನಡಸುವ ಪವಿತ್ರ ಕಾರ್ಯ ; ಪವಿತ್ರ. (ಗು). ೩. ಪಿತೃವಿಗೆ ಸಂಬಂಧಿಸಿದ.

ಪೈಪೋಟಿ (ನಾ). ಸ್ಪರ್ಧೆ ; ಮೇಲಾಟ.

ಪೈಮಾಯಿಷಿ (ನಾ). ಭೂಮಿಯನ್ನು ಅಳೆಯುವಿಕೆ.

ಪೈಮಾಷಿ = ಪೈಮಾಯಿಷಿ.

ಪೈರಣ (ನಾ). ಅಂಗಿ ; ಜುಬ್ಬ.

ಪೈರಣೆ = ಪೈರಣ.

ಪೈರು = ಪಯಿರು. ~ದಾರ = ಬೇಸಾಯಗಾರ ; ರೈತ.

ಪೈಲವಾನ (ನಾ). ಕುಸ್ತಿಮಾಡುವವನು ; ಜಟ್ಟಿ.

ಪೈಲು (ನಾ). ಮುಖ ; ಕೋನ.

ಪೈಶಾಚ (ನಾ). ೧. ಪಿಶಾಚಿ. (ಗು). ೨. ಅಸುರಿ ಸ್ವಭಾವದ ; ಘೋರವಾದ. ೩. ಪಿಶಾಚಕ್ಕೆ ಸಂಬಂಧಿಸಿದ.

ಪೈಶಾಚಿಕ (ನಾ). ೧. ಒಂದು ಭಾಷೆ. (ಗು). ೨. ಅಸುರಿ ಸ್ವಭಾವದ ; ಭಯಂಕರವಾದ. ೩. ಪಿಶಾಚಿಗೆ ಸಂಬಂಧಿಸಿದ.

ಪೈಶುನ್ಯ (ನಾ). ಚಾಡಿ ; ದೂರು ; ಪಿಸುಣು.

ಪೈಸರ (ನಾ). ೧. ವ್ಯಾಪನೆ ; ಹರಡುವಿಕೆ. ೨. ಹಿಮ್ಮೆಟ್ಟುವಿಕೆ. ೩. ವ್ಯರ್ಥವಾಗುವುದು ; ಹಾನಿ. ೪. ಪರಿಸರ ; ಪ್ರದೇಶ. ~ಇಸು = ಹಿಮ್ಮೆಟ್ಟು ; ಹಿಂಜರಿ. ~ಕೊ(ಗೊ)ಡು = ಊರೆಗೊಡು ; ಆಶ್ರಯವನ್ನು ಕೊಡು. ~ಪೊ(ವೊ)ೞಗು = ೧. ವ್ಯರ್ಥವಾಗು. ೨. = ಪೈಸರಿಸು.

ಪೈಸಲ್(ಲು) (ನಾ). (ದಾವೆ, ತಕರಾರು ಮುಂತಾದುವುಗಳ) ಕೊನೆ, –ತೀರ್ಮಾನ.

ಪೈಸಾ (ನಾ). ೧. ಹಣ ; ದುಡ್ಡು. ೨. ಕನಿಷ್ಠ ಬೆಲೆಯ ಒಂದು ನಾಣ್ಯ.

ಪೊಂ (ನಾ). ಹೊನ್ನು ; ಬಂಗಾರ. ~ಕ(ಗ)ದಿರ್ = ಹೊನ್ನಿನ ಬಣ್ಣದ ಕಿರಣ. ~ಕ(ಗ)ಳಶ = ೧. ಚಿನ್ನದ ಕೊಡ, –ಕುಂಭ. ೨. ಚಿನ್ನದ ಗೋಪುರ. ~ಕೆ(ಗೆ)ೞದಗೆ = ಚಿನ್ನದ ಬಣ್ಣದ ಕೇದಗೆ. ~ಕೊ(ಗೊ)ಡ = ಚಿನ್ನದ ಗಡಿಗೆ, –ಕುಂಭ. ~ತ(ದ)ಳಿರ್ = ಬಂಗಾರದ ಬಣ್ಣದ ಚಿಗುರು. ~ತೆ(ದೆ)ೞರ್ = ಚಿನ್ನದ ತೇರು.

~ಪ(ಬ)ಡಲಿಗೆ = ಚಿನ್ನದ ಬುಟ್ಟಿ. ~ಪ(ಬ)ರಿಯಣ = ಚಿನ್ನದ ಹರಿವಾಣ, -ತಟ್ಟೆ. ~ಬಣ್ಣ = ಚಿನ್ನದ ಬಣ್ಣ; ಹೊಂಬಣ್ಣ. ~ಬಿಸಿಲ್(ಲು) = ಎಳೆ ಬಿಸಿಲು; ಹೊಂಬಿಸಿಲು. ~ಬೆಟ್ಟ = ಚಿನ್ನದ ಬೆಟ್ಟ; ಮೇರುಪರ್ವತ. ~ಬೆಸ = ಚಿನ್ನದ ಕೆಲಸ. ~ಬೆಳಗು = ಹೊಂಬಣ್ಣದ ಬೆಳಕು. ~ಮದಿಲ್(ಲು) = ಚಿನ್ನದ ಗೋಡೆ. ~ಮರೆ = ಚಿನ್ನದ ಬಣ್ಣದ ಜಿಂಕೆ. ~ಸ(ಜ)ರಿಗೆ= ಒಂದು ಆಭರಣ; ಚಿನ್ನದ ವಂಕಿ. ~ಸ(ಜ)ಲಗೆ = ಚಿನ್ನದ ಕೋಲು; ಬಂಗಾರದ ಸಲಾಕೆ. ~ಸು(ಜು)ರಿಗೆ = ಬಂಗಾರದ ಕತ್ತಿ. ~ಸೆ(ಜೆ)ಳೆ = ಚಿನ್ನದ ಬೆತ್ತ.

**ಪೊಂಕ** (ನಾ). ಗರ್ವ; ಬಿಂಕ. ~ಕಿ(ಗಿ)ಡು = ಗರ್ವಭಂಗವಾಗು.

**ಪೊಂಗ** (ನಾ). ೧. ಅತಿ ಧೈರ್ಯಶಾಲಿ; ದಿಟ್ಟ. ೨. = ಪೊಂಗಯಿ.

**ಪೊಂಗಯಿ** (ನಾ). ದೋಣಿ; ನಾವೆ.

**ಪೊಂಗಲ್(ಲು)** (ನಾ). ಒಂದು ಬಗೆಯ ಖಾದ್ಯ; ಹುಗ್ಗಿ. ~ಹಬ್ಬ = ಸಂಕ್ರಾಂತಿ.

**ಪೊಂಗು** (ಕ್ರಿ). ೧. ಹೆಚ್ಚಾಗಿ ಕುದಿ, -ಮರಳು. ೨. ಉಕ್ಕು; ಹೊಮ್ಮು. ೩. ಬಿರಿ; ವಿಕಸಿಸು. ೪. ಸಂತೋಷಪಡು; ಹಿಗ್ಗು. ೫. ಜಂಬ ಕೊಚ್ಚಿಕೊಳ್ಳು; ಗರ್ವಿಸು. (ನಾ). ೬. ಹೆಚ್ಚಾದ ಕುದಿತ. ೭. ವಿಕಾಸ. ೮. = ಪೊಂಕ.

**ಪೊಂಚು** (ಕ್ರಿ). ಸಮಯ ಕಾಯು; ಹೊಂಚು.

**ಪೊಂದು** (ಕ್ರಿ). ೧. ಹೊಂದು; ಪಡೆ. ೨. ಸೇರು; ಕೂಡು. ೩. ಮರಣಹೊಂದು; ಸಾಯು. (ನಾ). ೪. ಸೇರಿಕೆ; ಸಂಯೋಗ. ೫. ಗುಂಪು; ಸಮೂಹ. ~ಇಕೆ = ೧. ಹೊಂದುವಿಕೆ; ಹೊಂದಾಣಿಕೆ. ೨. ಮರಣ; ಸಾವು.

**ಪೊಂಪುೞಿ(ಳಿ)** (ನಾ). ೧. ಆಧಿಕ್ಯ; ಹೆಚ್ಚಳ. ೨. ರೋಮಾಂಚನ; ಪುಳಕ. ~ಪೋ(ವೋ)ಗು = ೧. ಅಧಿಕವಾಗು; ಹೆಚ್ಚಾಗು. ೨. ರೋಮಾಂಚನಗೊಳ್ಳು; ನವಿರೇರು.

**ಪೊಂಬಸಿಱ(ರ)** (ನಾ). ಹಿರಣ್ಯಗರ್ಭ; ಬ್ರಹ್ಮ.

**ಪೊಂಬಾೞೆ(ಳೆ)** (ನಾ). ೧. ಒಂದು ಜಾತಿಯ ಬಾಳೆ. ೨. ಅಡಕೆ ಅಥವಾ ತೆಂಗಿನ ಹೂವು; ಹೊಂಬಾಳೆ.

**ಪೊಕ್ಕರಣೆ** (ನಾ). ಕೊಳ; ಪುಷ್ಕರಿಣಿ.

**ಪೊಕ್ಕುಳಿ** (ನಾ). ಕೋಗಿಲೆ.

**ಪೊಕ್ಕುೞ್(ಳ್,ಳು,ೞು)** = ಪೊರ್ಕುೞ್.

**ಪೊಗಡ** (ನಾ). ಒಂದು ಜಾತಿಯ ಮರ; ಪಗಡೆಯ ಮರ.

**ಪೊಗದಸ್ತು** = ಪಗದಸ್ತು.

**ಪೊಗದಿ** (ನಾ). ತೆರಿಗೆ; ಕರ; ಕಪ್ಪ.

**ಪೊಗರ್(ರು)** (ನಾ). ೧. ಹೊಳಪು; ಕಾಂತಿ; ಪ್ರಕಾಶ. ೨. ಗರ್ವ; ಸೊಕ್ಕು. ~ಉಗು = ಕಾಂತಿ ಪಸರಿಸು; ಹೊಳಪು ಸೂಸು. ~ಏಱು(ರು)=ಕಾಂತಿ ಹೆಚ್ಚಾಗು. ~ಪ(ವ)ಡು = ಕಾಂತಿಯನ್ನು ಹೊಂದು.

**ಪೊಗರೆ** = ಪೊಟರೆ.

**ಪೊಗಸು** (ನಾ). ೧. ವಿಸ್ತಾರ; ವ್ಯಾಪ್ತಿ. ೨. ಬೆಳಗು; ಮುಂಜಾವ.

**ಪೊಗೞ್(ಳ್,ಳು,ೞು)** (ಕ್ರಿ). ಹೊಗಳು; ಕೊಂಡಾಡು.

**ಪೊಗೞ್ಕೆ(ಳ್ಕೆ)**(ನಾ). ಹೊಗಳಿಕೆ; ಕೊಂಡಾಟ. ~ಪೆ(ವೆ)ಱು(ರು) = ಹೊಗಳಿಕೆಯನ್ನು ಪಡೆ, -ಹೊಂದು.

**ಪೊಗೞ್ತೆ(ಳ್ತೆ)** = ಪೊಗೞ್ಕೆ.

**ಪೊಗು** (ಕ್ರಿ). ಪ್ರವೇಶಿಸು; ಹೊಗು. ~ಇಸು = ಒಳಸೇರುವಂತೆ ಮಾಡು; ಪ್ರವೇಶಮಾಡಿಸು.

ಪೊಗೆ (ಕ್ರಿ). ೧. ಹೊಗೆ ಏಳು; ಹೊಗೆ ಮಾಡು. (ನಾ). ೨. ಹೊಗೆ; ಧೂಮ. ೩. ಆವಿ; ಉಗಿ; ಹಬೆ.

ಪೊಚ್ಚ (ನಾ). ೧. ನೂತನವಾದುದು; ಹೊಸದು. ೨. ಹೊಳೆ; ನದಿ. (ಗು). ೩. ಹೊಸದಾದ.

ಪೊಚ್ಚಱ್(ರ್,ರು,ಱು) (ಕ್ರಿ). ೧. ಕಾಣಿಸಿಕೊಳ್ಳು; ಗೋಚರಿಸು. (ನಾ). ೨. ಶೌರ್ಯ; ಪರಾಕ್ರಮ. ~ಇಸು = ೧. ಕಾಣಿಸಿಕೊಳ್ಳು; ಗೋಚರಿಸು. ೨. ಪರಾಕ್ರಮವನ್ನು ಹೊಂದು; ಕೆಚ್ಚಿನಿಂದ ಕೂಡಿರು.

ಪೊಜ್ಜಲಿಸು (ಕ್ರಿ). ಪ್ರಜ್ವಲಿಸು; ಹೊಳೆ.

ಪೊಟರೆ (ನಾ). (ಮರದ) ಡೊಗರು; ಹೋರು.

ಪೊಟ್ಟಣ (ನಾ). ೧. ಪುಡಿಕೆ; ಪೊಟ್ಟಳ. ೨. ದೊನ್ನೆ.

ಪೊಟ್ಟರೆ = ಪೊಟರೆ.

ಪೊಟ್ಟಳ ೧. = ಪೊಟ್ಟಣ. ೨. ಗರ್ವ; ಸೊಕ್ಕು; ಜಂಬ. ~ಇಸು = ಗರ್ವಿಸು; ಮೆರೆ.

ಪೊಟ್ಟಳಿಗೆ = ಪೊಟ್ಟಣ.

ಪೊಟ್ಟು (ನಾ). ೧. (ಧಾನ್ಯದ) ಹೊಟ್ಟು; ಉಮ್ಮಿ. ೨. ತಿರುಳಿಲ್ಲದುದು; ಜೊಳ್ಳು. ~ಕುಟ್ಟು = ವ್ಯರ್ಥವಾದ ಕೆಲಸವನ್ನು ಮಾಡು.

ಪೊಟ್ಟೆ (ನಾ). ೧. ಹೊಟ್ಟೆ; ಬಸಿರು. ೨. = ಪೊಟರೆ. ೩. ಮಾವಿನಹಣ್ಣಿನ ಬೀಜ; ಓಟೆ.

ಪೊಡಕರಿಸು (ಕ್ರಿ). ಗೋಚರಿಸು; ಕಾಣು.

ಪೊಡಣಿಗೆ (ನಾ). ಒಗ್ಗರಣೆ.

ಪೊಡಪು (ನಾ). ಹೊಳಪು; ತೇಜಸ್ಸು.

ಪೊಡಮಡು (ಕ್ರಿ). ನಮಸ್ಕಾರ ಮಾಡು; ವಂದಿಸು. ~ಇಕೆ = ನಮಸ್ಕಾರ; ವಂದನೆ.

ಪೊಡರ್(ರು) (ಕ್ರಿ). ೧. ಅದಿರು; ನಡುಗು. ೨. ಕಾಣಿಸಿಕೊಳ್ಳು; ಗೋಚರಿಸು. ೩. ಪ್ರಕಾಶಿಸು; ಹೊಳೆ. ೪. ಸಾಮರ್ಥ್ಯವನ್ನು ತೋರಿಸು; ಎದುರುಬೀಳು.

ಪೊಡರ್ಪು (ನಾ). ೧. ಕಾಂತಿ; ಹೊಳಪು. ೨. ಸ್ಫುರಣೆ; ಗೋಚರಿಸುವುದು. ೩. ಪರಾಕ್ರಮ; ಸಾಮರ್ಥ್ಯ.

ಪೊಡವಡು = ಪೊಡಮಡು.

ಪೊಡವಿ (ನಾ). ಭೂಮಿ; ನೆಲ; ಪೃಥ್ವಿ. ~ಅ(ಯಾ)ಣ್ಮ = ಪೊಡವಿಪ. ~ಪತಿ = ಪೊಡವಿಪ.

ಪೊಡವಿಪ (ನಾ). ಭೂಮಿಯ ಒಡೆಯ; ರಾಜ.

ಪೊಡೆ (ಕ್ರಿ). ೧. ಹೊಡೆ; ಬಡಿ. ೨. ಎಸೆ; ಬಿಸುಡು. ೩. ಅಟ್ಟು; ಓಡಿಸು. ೪. ಸುರಿ; ವರ್ಷಿಸು. ೫. ಹೋಗಲಾಡಿಸು; ಕಳೆ. ೬. ಕತ್ತರಿಸು; ಕಡಿ. ೭. ಬೀಳು; ಕೆಡೆ. ೮. ತಿನ್ನು; ಕಬಳಿಸು. ೯. ಕೊಳ್ಳೆ ಹೊಡೆ; ಸುಲಿ. (ನಾ). ೧೦. ಹೊಡೆತ; ಬಡಿತ. ೧೧. ತೆನೆ ಬರುವುದಕ್ಕಿಂತ ಇರುವ ಮೊದಲಿನ ಸ್ಥಿತಿ; ಹೊಡೆ. ೧೨. ಹೊಟ್ಟೆ; ಉದರ. ೧೩. ಗರ್ಭ; ಬಸಿರು. ೧೪. ಉಡಿ; ಮಡಿಲು. ೧೫. ಬಾಣದ ಗರಿ; ಪುಂಖ. ೧೬. ಹರವು; ವಿಸ್ತಾರ. ೧೭. ಮೇಲ್ಭಾವಣಿಯ ಮುಖ್ಯವಾದ ತೊಲೆ. ~ಕಿ(ಗಿ)ಚ್ಚು = ಹಸಿವು. ~ಕೆ(ಗೆ)ಡೆ = ಹೊಡೆದು ಕೆಡವು; ಬೀಳಿಸು. ~ಮರಳು = ೧. ತಿರುಗಿ ಬರು. ೨. ಮಗ್ಗುಲಾಗು; ಪಕ್ಕಕ್ಕೆ ಹೊರಳು. ~ಸೆಂಡು = ಚೆಂಡಿನಿಂದ ಆಡುವ ಒಂದು ಬಗೆಯ ಆಟ.

ಪೊಡೆತ (ನಾ). ಹೊಡೆತ; ಪೆಟ್ಟು; ಏಟು.

ಪೊಡೆಮಡು = ಪೊಡಮಡು.

ಪೊಡೆಯುರಲ (ನಾ). ವಿಷ್ಣು.

ಪೊಡೆಯುಲರ = ಪೊಡೆಯುರಲ.

ಪೊಡೆವಡು = ಪೊಡಮಡು.

ಪೊಣರ್(ರು) ೧. = ಪೊಣರ್ಚು. ೨. ಸಂಭೋಗಿಸು. (ನಾ). ೩. ಸೇರಿಕೆ; ಕೂಡಿಕೆ.

೪. ಜೊತೆ; ಜೋಡಿ. ೫. = ಪೊಣರ್ಕೆ. ~ಪ(ವ)ಕ್ಕಿ = ಎಣೆವಕ್ಕಿ; ಚಕ್ರವಾಕ.

**ಪೊಣರ್ಕೆ** (ನಾ). ಯುದ್ಧ; ಕಾಳಗ. ~ಆ(ಯಾ)ಳ್ = ಕಲಿ; ಶೂರ.

**ಪೊಣರ್ಚು** (ಕ್ರಿ). ೧. ಸೇರಿಸು; ಕೂಡಿಸು. ೨. ಸಂಧಿಸು; ಕೂಡು. ೩. ಯುದ್ಧ ಮಾಡು.

**ಪೊಣೆ** (ನಾ). ೧. ಜವಾಬ್ದಾರಿ; ಹೊಣೆ. ೨. ಜಾಮೀನುದಾರ; ಹೊಣೆಗಾರ.

**ಪೊಣ್ಮು** (ಕ್ರಿ). ೧. ಹೊಮ್ಮು; ಹೊರಚಿಮ್ಮು; ಸೂಸು. ೨. ಉಂಟಾಗು; ಹುಟ್ಟು; ಮೂಡು. ೩. ಹಬ್ಬು; ಹರಡು.

**ಪೊತ್ತ** (ನಾ). ಹಣದ ಚೀಲ; ಹಮ್ಮಿಣಿ.

**ಪೊತ್ತಗೆ** (ನಾ). ಪುಸ್ತಕ; ಹೊತ್ತಗೆ.

**ಪೊತ್ತಡಿ** = ಪೊತ್ತ.

**ಪೊತ್ತಱೆ(ರೆ)** (ನಾ). ನಸುಕು; ಹೊತ್ತಾರೆ.

**ಪೊತ್ತಾಱೆ(ರೆ)** = ಪೊತ್ತಱೆ.

**ಪೊತ್ತಿಗೆ** (ನಾ). ೧. ಬೆಂಕಿ; ಜ್ವಾಲೆ. ೨. ಉರಿಯುವಿಕೆ. ೩. = ಪೊತ್ತಗೆ.

**ಪೊತ್ತು** (ಕ್ರಿ). ೧. ಬೆಂಕಿತಾಗು; ಉರಿಹತ್ತು. ೨. ಸೀಯು; ಕರಿಕಾಗು; ತಳಹತ್ತು. (ನಾ). ೩. = ಪೊೞ್ತು. ~ಕ(ಗ)ಳೆ = ಪೊೞ್ತುಗಳೆ. ~ಪೋಕ = ವ್ಯರ್ಥವಾಗಿ ಕಾಲ ಕಳೆಯುವವನು.

**ಪೊದಕುಳಿ** (ನಾ). ಅಳಲು; ದುಃಖ; ನೋವು. ~ಕೊ(ಗೊ)ಳ್=ವ್ಯಥೆಪಡು; ದುಃಖಿಸು.

**ಪೊದಕೆ** (ನಾ). ೧. ಹೊದಿಕೆ; ಆಚ್ಛಾದನೆ. ೨. ಸೂರು; ಮೇಲ್ಛಾವಣಿ.

**ಪೊದಱ್(ರ್,ರು,ಱು)** (ನಾ). ಹೊದರು; ಪೊದೆ.

**ಪೊದೞ್(ಳ್,ಳು,ೞು)** (ಕ್ರಿ). ೧.ಹೊಮ್ಮು; ಪ್ರಕಟವಾಗು. ೨. ವ್ಯಾಪಿಸು; ಹಬ್ಬು. ೩. ಕೀರ್ತಿಗಳಿಸು; ಪ್ರಸಿದ್ಧಿಹೊಂದು. ೪. ಬಳಕೆಯಲ್ಲಿರು.

**ಪೊದೞ್ಕೆ(ಳ್ಕೆ)** (ನಾ). ೧. ಹೊರಹೊಮ್ಮುವಿಕೆ; ಹೊರಬರುವಿಕೆ. ೨. ಪ್ರಸಿದ್ಧಿ; ಖ್ಯಾತಿ. ೩. ಬೆಳಕು; ಹೊಳಪು. ೪. ವ್ಯಾಪ್ತಿ.

**ಪೊದಿಕೆ** = ಪೊದಕೆ.

**ಪೊದೆ** (ಕ್ರಿ). ೧. ಹೊದೆ; ಧರಿಸು. (ನಾ). ೨. ಬತ್ತಳಿಕೆ; ದೊಣೆ; ಮೂಡಿಗೆ. ೩. ಪೊದರು; ಹಿಂಡಿಲು. ~ಇಸು = ಹೊದಿಸು; ಆಚ್ಛಾದಿಸು.

**ಪೊದೆಯಿಸು** = ಪೊದಿಸು.

**ಪೊದ್ದು** (ಕ್ರಿ). ಹೊಂದು; ಸೇರು; ಕೂಡು.

**ಪೊನ್** (ನಾ). ೧. ಲೋಹ; ಧಾತು. ೨. ಬಂಗಾರ; ಹೊನ್ನು. ೩. ಬಂಗಾರದ ನಾಣ್ಯ. ~ಅಂಡೆ = ಚಿನ್ನದ ಜೀರ್ಕೊಳವಿ, -ಪಿಚಕಾರಿ. ~ಅಂದಣ(ಳ) = ಚಿನ್ನದ ಪಲ್ಲಕ್ಕಿ. ~ಒಡೆಯ = ಕುಬೇರ.

**ಪೊನಲ್(ಲು)** (ನಾ). ನದಿ; ಹೊೞೆ; ಹೊನಲು. ~ಇಡು = ಪ್ರವಾಹವಾಗಿ ಹರಿ.

**ಪೊನ್ನಗನ್ನೆ** (ನಾ). ಒಂದು ಜಾತಿಯ ಸೊಪ್ಪು; ಹೊನಗನ್ನೆ.

**ಪೊನ್ನೆ** (ನಾ). ಹೊನ್ನೆಮರ; ಪುನ್ನಾಗ.

**ಪೊಪ್ಪಳಿ** (ನಾ). ಚೌಕಾಕಾರವಾದುದು; ಚೌಕಳಿ.

**ಪೊಪ್ಪುಳಿ** = ಪೊಪ್ಪಳಿ.

**ಪೊಮ್ಮು** (ಕ್ರಿ). ಮೇಲಕ್ಕೆ ಬರು; ಹೊಮ್ಮು.

**ಪೊಯ್** (ಕ್ರಿ). ೧. ಹೊಡೆ; ಬಡಿ. ೨. ನೆಡು. ೩. ಸುರಿ; ಹೊಯ್ಯು. (ನಾ). ೪. ಹೊಡೆಯುವಿಕೆ. ೫. ಹೊಡೆತ; ಬಡಿತ. ೬. ಸುರಿಯುವಿಕೆ. ~ನೀರು = ಹುಯ್ದ ನೀರು; ಹೊಯ್ನೀರು.

**ಪೊಯಿಲ್(ಲು)** (ನಾ). ಹೊಡೆತ; ಪೆಟ್ಟು.

**ಪೊಯ್ಲು** = ಪೊಯಿಲ್.

**ಪೊರಕೆ** (ನಾ). ಕಸಗುಡಿಸುವ ಸಾಧನ; ಬರಲು. ~ಚುಕ್ಕೆ = ಧೂಮಕೇತು; ಬಾಲಚುಕ್ಕೆ.

ಪೊರಜು = ಪೊರಜೆ.
ಪೊರಜೆ (ನಾ). (ಆನೆಯನ್ನು ಕಟ್ಟುವ) ದಪ್ಪಹಗ್ಗ.
ಪೊರಸು (ನಾ). ೧. ಹಗ್ಗ ಅಥವಾ ಸುಲಿಯಿಂದ ಹೆಣೆದ ಮಂಚ; ಹೊರಸು. ೨. = ಪೊಱಸು.
ಪೊರಳ್(ಳು) (ಕ್ರಿ). ೧. ಹೊರಳು; ಉರುಳಾಡು. ೨. ಹಿಂದಿರುಗು; ಮರಳು.
ಪೊರಳಿ (ನಾ). ೧. ಗುಂಪು; ರಾಶಿ. ೨. ಮುದ್ದೆ; ಉಂಡೆ.
ಪೊರಳ್ಚು (ಕ್ರಿ). ಹೊರಳಿಸು; ಉರುಳಿಸು.
ಪೊರೆ (ಕ್ರಿ). ೧. ಪಾಲಿಸು; ಸಲಹು; ಕಾಪಾಡು. ೨. ಧರಿಸು; ತಾಳು. ೩. ಸೇರು; ಕೂಡು. ೪. ವ್ಯಾಪ್ತವಾಗು; ತುಂಬು. ೫. ಲೇಪಿಸು; ತೊಡೆ. ೬. = ಪೊಱೆ. (ನಾ). ೭. ರಕ್ಷಣೆ; ಕಾಪಾಡುವಿಕೆ. ೮. ಕೂಡುವಿಕೆ; ಸೇರುವಿಕೆ. ೯. ಸಮೀಪ; ಹತ್ತಿರ. ೧೦. ಹೊಣೆ; ಜಾಮೀನು. ೧೧. ಪದರ; ಮಡಿಕೆ; ಸ್ತರ. ೧೨. ಹಾವಿನ ಪೊರೆ; ನಿರ್ಮೋಕ. ೧೩. ವ್ರಣ; ಹುಣ್ಣು. ~ಏ(ಯೇ)ಱ್(ರ್,ರು,ಱು) =೧. ಉತ್ಸಾಹದಿಂದ ಕೂಡಿರು; ಹುರಿದುಂಬು. ೨. ರಕ್ಷಣೆ ಹೊಂದು. ~ಪೊ(ವೊ)ೇಗು = ಸಮೀಪಕ್ಕೆ ಹೋಗು; ಹತ್ತಿರಹೋಗು.
ಪೊಱ್(ರ್,ರು,ಱು) (ಕ್ರಿ). ೧. ಹೊತ್ತುಕೊಳ್ಳು; ಹೊರು. ೨. ಧರಿಸು; ತಾಳು.
ಪೊಱ(ರ) (ಗು). ಹೊರಗಿನ; ಬೇರೆಯ. ~ಕ(ಗ)ಡೆ = ಹೊರಗಡೆ; ಹೊರಭಾಗ. ~ಪೊಣ್ಮು = ಹೊರಹೊಮ್ಮು; ಹೊರಬರು. ~ಪೊ(ವೊ)ೞ(ಳ)ಲ್ = ಪಟ್ಟಣದ ಹೊರಭಾಗ. ~ಮಿಂಚು = ಹೊರನೋಟಕ್ಕೆ ಕಾಣುವ ಹೊಳಪು; ಥಳಕು. ~ಮುಯ್ಯು = ಹೆಗಲಿನ ತುದಿ, -ಕಡೆ. ~ವಲ(ಳ)ಯ = ಹೊರಭಾಗ; ಹೊರಪ್ರದೇಶ. ~ಸೂಸು = ಹೊರಸೂಸು; ಹೊರಚೆಲ್ಲು.
ಪೊಱ(ರ)ಂಡ (ನಾ). ಗೂನುಳ್ಳವನು; ಗೂನ.
ಪೊಱ(ರ)ಂಡು (ನಾ). ಬೆನ್ನು ಬಾಗಿರುವಿಕೆ; ಗೂನು.
ಪೊಱ(ರ)ಗು (ನಾ). ಹೊರಭಾಗ; ಹೊರಬದಿ.
ಪೊಱ(ರ)ಗೆ (ಅ). ಹೊರಗಡೆಯಲ್ಲಿ; ಹೊರಗೆ.
ಪೊಱ(ರ)ಡು = ಪೊಱಮಡು.
ಪೊಱ(ರ)ತು (ಅ). ಹೊರತು; ಅಲ್ಲದೆ.
ಪೊಱ(ರ)ಬಿಗ (ನಾ). ಹೊರಗಿನವನು; ಪರಕೀಯ.
ಪೊಱ(ರ)ಮಡು (ಕ್ರಿ). ಹೊರಡು; ಹೊರಬೀಳು. ~ಇಸು = ಹೊರಡಿಸು; ಹೊರಡುವಂತೆ ಮಾಡು.
ಪೊಱ(ರ)ಮಾಱ್(ರ್,ರು,ಱು) (ಕ್ರಿ). ೧. ಓಡಿಹೋಗು; ಪಲಾಯನ ಮಾಡು. (ನಾ). ೨. ಪಲಾಯನ; ಹಿಮ್ಮೆಟ್ಟುವಿಕೆ. ೩. ಜಘನ.
ಪೊಱ(ರ)ಪಾಱ್(ರು,ಱು) = ಪೊಱಮಾಱ್.
ಪೊಱ(ರ)ಸು (ನಾ). ಪಾರಿವಾಳದಂತಹ ಒಂದು ಪಕ್ಷಿ; ಕಪೋತ; ಹೊರಸು.
ಪೊಱ(ರಿ)ಗೆ (ನಾ). ೧. ಹೊಣೆಗಾರಿಕೆ; ಜವಾಬುದಾರಿ. ೨. ವ್ಯಾಪಾರ; ವ್ಯವಹಾರ.
ಪೊಱೆ(ರೆ) (ನಾ). ೧. ಹೊರೆ; ಭಾರ. ೨. ಒಬ್ಬನು ಹೊರಬಹುದಾದಷ್ಟು ತೂಕ. ~ಆ(ಯಾ)ಳು = ಹೊರೆಯನ್ನು ಹೊರುವವನು; ಹೊರೆಯಾಳು.
ಪೊರ್ಕುಳಿ (ನಾ). ೧. ಹೊಡೆದಾಟ; ಬಡಿದಾಟ. ೨. ಅಲೆ; ತೆರೆ. ೩. = ಪೊರ್ಕುೞಿ.
ಪೊರ್ಕುೞ್(ಳ್,ಳು,ೞು) (ನಾ). ನಾಭಿ; ಹೊಕ್ಕುಳು.
ಪೊರ್ಕುೞಿ(ಳಿ) (ನಾ). ಸುಳಿ; ಆವರ್ತ.
ಪೊರ್ದು = ಪೊಂದು.

**ಪೊರ್ದುಗೆ** (ನಾ). ೧. ಸೇರುವಿಕೆ; ಕೂಡುವಿಕೆ. ೨. ಹೊಂದಿಕೆ ; ಸಾಮರಸ್ಯ ; ಅನುಬಂಧ. ೩. ಸಾಮೀಪ್ಯ ; ಹತ್ತಿರ. ೪. ಸಾವು ; ಮರಣ. ~ಕಾ(ಗಾ)ಱ(ರ) = ಗೆಳೆಯ ; ಸ್ನೇಹಿತ ; ಸಂಗಡಿಗ.

**ಪೊಲ್** (ಕ್ರಿ). ೧. ಹೊಲಿಗೆ ಹಾಕು ; ಹೆಣೆ. ೨. ಯೋಗ್ಯವಾಗು ; ಒಗ್ಗು. ೩. ಅತಿಶಯವಾಗು; ಮೇಲಾಗು. (ನಾ). ೪. ಹೀನತನ; ಕೆಟ್ಟತನ. ೫. ಒಗ್ಗದಿರುವುದು ; ಯುಕ್ತವಲ್ಲದುದು. ೬. ಅಮಂಗಳ ; ಅಶುಭ.

**ಪೊಲ** (ನಾ). ೧. ಬೆಳೆ ಬೆಳೆಯುವ ಭೂಮಿ ; ಹೊಲ. ೨. ಸ್ಥಳ ; ಎಡೆ.

**ಪೊಲಂಬು** (ನಾ). ೧. ದಾರಿ ; ಮಾರ್ಗ. ೨. ರೀತಿ ; ಬಗೆ. ೩. ಸನ್ನಿವೇಶ ; ಪರಿಸರ. ~ಇಗ = ೧. ದಾರಿ ತೋರಿಸುವವನು ; ಮಾರ್ಗದರ್ಶಿ. ೨. ತನ್ನ ನೆಲೆಯನ್ನು ಅರಿತವನು. ~ಕಾ(ಗಾ)ಣ್ = ರೀತಿಯನ್ನು ತಿಳಿ ; ಸಂಗತಿಯನ್ನು ತಿಳಿ. ~ಕಿ(ಗಿ)ಡು = ಪೊಲಗಿಡು. ~ತ(ದ)ಪ್ಪು = ೧. ದಾರಿ ತಪ್ಪು; ಮಾರ್ಗ ಕಾಣದಾಗು. ೨. = ಪೊಲಗಿಡು.

**ಪೊಲಗಿಡು** (ಕ್ರಿ). ರೀತಿ ತಪ್ಪು ; ಕ್ರಮತಪ್ಪು.

**ಪೊಲಗೆಡು** = ಪೊಲಗಿಡು.

**ಪೊಲಗೇರಿ** (ನಾ). ಹೊಲೆಯರ ಓಣಿ, –ಬೀದಿ.

**ಪೊಲತಿ** (ನಾ). ಹೊಲೆಯರ ಹೆಂಗಸು ; ಹೊಲತಿ.

**ಪೊಲಸು** (ನಾ). ೧. ಅಶುದ್ಧಿ ; ಹೇಸಿಗೆ ; ಹೊಲಸು. ೨. ಅಶುದ್ಧವಾದುದು.

**ಪೊಲಿ** (ಕ್ರಿ). ೧. ಹೊಲಿ ; ಜೋಡಿಸು. (ನಾ). ೨. ಬಡ್ಡಿ.

**ಪೊಲಿಗೆ** (ನಾ). ೧. ಹೊಲಿಯುವಿಕೆ. ೨. ಹೊಲಿಗೆ ಹಾಕಿದುದು ; ಹೊಲಿಗೆ.

**ಪೊಲೆ** (ನಾ). ೧. ಮೈಲಿಗೆ ; ಹೊಲೆ. ೨. ಕೀಳುತನ ; ನೀಚತನ. ೩. ಪಾಪ; ದೋಷ. ~ಕ(ಗ)ಲಸು = ೧. ಹೊಲಸು ಮಾಡು. ೨. ಬೇರೆ ಜಾತಿಯವರೊಂದಿಗೆ ಕೂಡು ; ಜಾತಿಸಂಕರ ಮಾಡು. ~ತನ = ಕೊಳೆ ; ಅಶುಚಿ. ~ಪ(ವ)ಟ್ಟು = ಹೊಲೆಯರ ಬೀಡು, –ವಾಸಸ್ಥಳ. ~ಮಾ(ವಾ)ತು = ಕೀಳುಮಾತು ; ಕೆಟ್ಟ ಮಾತು.

**ಪೊಲೆಯ** (ನಾ). ಹೊಲೆಯ ; ಚಂಡಾಲ.

**ಪೊಲ್ಲ** (ನಾ). ೧. ನೀಚತನ ; ಕೆಟ್ಟತನ. (ಗು). ೨. ಹೀನವಾದ ; ನಿಂದ್ಯ. ~ಕೆ(ಗೆ)ಯ್ = ಕೆಟ್ಟಕೆಲಸವನ್ನು ಮಾಡು. ~ಕೆ(ಗೆ)ಯ್ಮೆ = ಕೆಟ್ಟ ಕೆಲಸ ; ನೀಚಕೆಲಸ. ~ವಾರ್ತೆ = ಕೆಟ್ಟಸುದ್ದಿ.

**ಪೊಲ್ಲದು** (ನಾ). ಹೀನವಾದುದು ; ಕೀಳು.

**ಪೊಲ್ಲಮೆ** (ನಾ). ೧. ಕೆಟ್ಟತನ. ೨. ದೋಷ; ತಪ್ಪು.

**ಪೊಸ** (ಗು). ಹೊಸದಾದ ; ನೂತನವಾದ. ~ಕ(ಗ)ನ್ನಡ = ಹೊಸಗನ್ನಡ. ~ಕಾ(ಗಾ)ರ್(ರು) = ಆರಂಭದ ಮಳೆ ; ಮುಂಗಾರು. ~ಚೀನ = ಹೊಸ ರೇಷ್ಮೆಯ ವಸ್ತ್ರ. ~ಜವ್ವನ = ಹೊಸ ಹರೆಯ ; ನವಯೌವನ. ~ದೇಸಿ = ಹೊಸ ಬೆಡಗು, –ಚೆಲುವು.

**ಪೊಸ(ಂ)ತಿಲ್(ಲು)** (ನಾ). ಹೊಸ್ತಿಲು ; ಹೊಸಲು ; ದೇಹಳಿ.

**ಪೊಸ(ಂ)ಬ** (ನಾ). ಅಪರಿಚಿತ ; ಹೊಸಬ.

**ಪೊಸತು** (ನಾ). ೧. ನೂತನವಾದುದು; ಹೊಸದು. ೨. ಸುಂದರವಾದುದು. ೩. ಸೋಜಿಗ.

**ಪೊಸದು** = ಪೊಸತು.

**ಪೊಸಬೆ** (ನಾ). ಹೊಸಬಳು ; ಅಪರಿಚಿತಳು.

**ಪೊಸಯಿಸು** (ಕ್ರಿ). ೧. ಕೂಡು ; ಸೇರು. ೨. ಸೇರಿಸು ; ಜೋಡಿಸು. ೩. = ಪೊಸೆಯಿಸು.

**ಪೊಸೆ** (ಕ್ರಿ). ೧. ಕಡೆ ; ಮಥಿಸು. ೨. ಕ್ಷೋಭೆಗೊಳಿಸು ; ಕಲಕು. ೩. (ಹಗ್ಗ) ಹೊಸೆ ;

ತಿರಿಚು. ೪. ತಿಕ್ಕು ; ಉಜ್ಜು. ೫. ಚುಚ್ಚು; ಕೊರೆ (ನಾ). ೬. ಕಡೆಗೋಲು ; ಮಂತು. ~ಇ(ಯಿ)ಸು = ೧. ಕಡೆ ; ಮಥಿಸು. ೨. ಕ್ಷೋಭೆಗೊಳಿಸು ; ಕಲಕು.

ಪೊಳಂಕು (ಕ್ರಿ). ೧. ಕಾಣು ; ಹೊಳೆ. ೨. ಅಗಿ ; ಜಗಿ.

ಪೊಳಕು ೧. = ಪೊಳಂಕು. (ನಾ). ೨. ಠಕ್ಕು; ವಂಚನೆ. ೩. = ಪೊಚಿಕು.

ಪೊಳಪು = ಪೊಳೆಪು.

ಪೊಳೆ (ಕ್ರಿ). ೧. ಹೊಳೆ ; ಮಿನುಗು. (ನಾ). ೨. = ಪೊಚಿ.

ಪೊಳೆಪು (ನಾ). ೧. ಕಾಂತಿ ; ಹೊಳಪು. ೨. ಸ್ವಚ್ಛವಾಗಿರುವುದು ; ಶುಭ್ರತೆ.

ಪೊಳ್ಳು (ನಾ). ೧. ತಿರುಳಿಲ್ಲದುದು ; ಟೊಳ್ಳು. ೨. ಮರದ ಪೊಟರೆ ; ಡೊಗರು. ೩. ಶಕ್ತಿ ಹೀನತೆ; ದುರ್ಬಲತೆ. ೪. ನಿಷ್ಪ್ರಯೋಜಕವಾದುದು. ~ಆಟ = ವ್ಯರ್ಥವಾದ ಪರಿಶ್ರಮ. ~ಕ(ಗ)ಳೆ = ಕಡೆಗಣಿಸು ; ಹೀನೈಸು. ~ಮಾತು = ವ್ಯರ್ಥವಾದ ಮಾತು. ~ವಾದ = ವ್ಯರ್ಥವಾದ ಚರ್ಚೆ.

ಪೊಱ(ಳ)ಕು (ನಾ). ಆಕೃತಿ ; ಆಕಾರ.

ಪೊಱ(ಳ)ಲ್(ಲು) (ನಾ). ೧. ಪಟ್ಟಣ ; ನಗರ. ೨. ನೆಲೆ; ಆಶ್ರಯ. ೩. = ಪೋಱಲ್. ~ಅಣ್ಮ = ಪಟ್ಟಣದ ಒಡೆಯ ; ರಾಜ.

ಪೊಱ(ಳ)ಲಿಚ (ನಾ). ನಗರದಲ್ಲಿರುವವನು ; ಪಟ್ಟಣಿಗ.

ಪೊಱೆ(ಳೆ) (ನಾ). ೧. ಹೊಳೆ ; ನದಿ. ೨. ದಾರಿ; ಮಾರ್ಗ. ~ಪ(ವ)ಕ್ಕಿ = ನೀರು ಹಕ್ಕಿ ; ಬೆಳ್ಳಕ್ಕಿ.

ಪೊಱ್ತು(ಳ್ತು)ಡೆ = ಪೊತ್ತುಱೆ.

ಪೊಱ್ತು(ಳ್ತು)ಱೆ(ರೆ) = ಪೊತ್ತುಱೆ.

ಪೊಱ್ತು(ಳ್ತು) (ನಾ). ೧. ಹೊತ್ತು ; ವೇಳೆ. ೨. ಸೂರ್ಯ ; ನೇಸರು. ~ಕ(ಗ)ಳೆ = ಕಾಲಹರಣ ಮಾಡು ; ಹೊತ್ತುಗಳೆ.

ಪೋ (ಕ್ರಿ). ೧. ಹೋಗು ; ಹೊರಬೀಳು. (ನಾ). ೨. ತಿರಸ್ಕಾರವನ್ನು ಸೂಚಿಸುವ ಒಂದು ಶಬ್ದ. ~ಕಳೆ = ಅಟ್ಟು ; ಹೊರ ಹಾಕು. ~ಬಗೆ = ಕೆಟ್ಟ ಮನಸ್ಸು.

ಪೋಂತ (ನಾ). ಹೋತ ; ಗಂಡಾಡು.

ಪೋ(ಂ)ತು = ಪೋಂತ.

ಪೋಕ (ನಾ). ೧. ಅಲೆಯುವವನು ; ಅಲೆಮಾರಿ. ೨. ನಿಷ್ಪ್ರಯೋಜಕ. ೩. ನೀಚ ; ದುಷ್ಟ. ೪. ಪೋಲಿ. ~ವಿದ್ಯೆ = ಕೆಟ್ಟ ವಿದ್ಯೆ; ದುಷ್ಟಚಾಳಿ.

ಪೋಕರಿ = ಪೋಕ.

ಪೋಕು (ನಾ). ೧. ಹುರುಳಿಲ್ಲದುದು ; ಟೊಳ್ಳು. ೨. ಕೆಡುಕು ; ಹಾಳು. ೩. ತಿರುಳಿಲ್ಲದವನು ; ಹುರುಳಿಲ್ಲದವನು.

ಪೋಗಂಡ (ನಾ). ೧. ಅಂಗಹೀನ ; ಅಂಗವಿಕಲ. ೨. ವಯಸ್ಸಿಗೆ ಬರದ ಬಾಲಕ ; ಪ್ರೌಢನಲ್ಲದವನು.

ಪೋಗು (ಕ್ರಿ). ೧. ಹೋಗು ; ತೆರಳು. ೨. ಕಳೆ ; ಸಾಗು. (ನಾ). ೩. ತೆರಳುವಿಕೆ ; ಹೋಗುವಿಕೆ. ~ಆಡು = ಕಳೆದುಕೊಳ್ಳು ; ನಷ್ಟಹೊಂದು.

ಪೋಚು (ಗು). ಅಲ್ಪ ; ತುಚ್ಛ.

ಪೋಟ (ನಾ). ೧. ಅಂಜುಬುರುಕ ; ಹೇಡಿ. ೨. = ಪೋಟಕ.

ಪೋಟಕ (ನಾ). ಸ್ವೇಚ್ಛಾಚಾರಿ ; ಪೋಕರಿ.

ಪೋಟಗಿ (ನಾ). ವರ್ಷಾಶನ ; ಜೀವನಾಂಶ.

ಪೋಟಿ (ನಾ). ೧. ಕೂಡುವುದು ; ಸೇರಿಕೆ. ೨. ಸಾಮ್ಯ ; ಹೋಲಿಕೆ. ೩. ಸ್ಪರ್ಧೆ ; ಪೈಪೋಟಿ. ೪. ಸೇರಿಸುವ ತುಂಡು ; ಜೋಡಿಸುವ ಚೂರು.

ಪೋಟಗೆ = ಪೋಟಗಿ.

ಪೋಟೆ (ನಾ). ೧. ಪೊಟರೆ ; ಡೊಗರು ; ಬಿಲ. ೨. ಪುರುಷ ಲಕ್ಷಣಗಳುಳ್ಳ ಹೆಂಗಸು. ೩. ದಾಸಿ ; ಸೇವಕಿ.

ಪೋಡಿ (ನಾ). ಚೂರು ; ತುಂಡು ; ತುಣುಕು.

ಪೋಡು (ಕ್ರಿ). ೧. ಸೀಳು ; ಭಾಗಮಾಡು. (ನಾ). ೨. ಹೋಳು ; ತುಂಡು. ೩. ಸೀಳುವಿಕೆ. ೪. ಆಸ್ತಿವಿಭಾಗದ ದಾಖಲೆ ಪತ್ರ. ~(ಂ)ಗಾಱ(ರ) = ಕಡಿಯುವವನು ; ಸೀಳುವವನು.

ಪೋಣಿಸು (ಕ್ರಿ). ಪವಣಿಸು ; ಸೇರಿಸು.

ಪೋತ ೧. = ಪೋತಕ. ೨. ನಾವೆ. ೩. ವಸ್ತ್ರ ; ಬಟ್ಟೆ.

ಪೋತಕ (ನಾ). ಯಾವುದಾದರೂ ಪ್ರಾಣಿಯ ಮರಿ ; ಶಾಬ.

ಪೋತ್ರ (ನಾ). ೧. ನೇಗಿಲಿನ ತುದಿ ; ರಂಟೆಯ ಕುಳ. ೨. ಗುದ್ದಲಿ; ಪಿಕಾಸಿ. ೩. ಹಂದಿಯ ಮುಖ.

ಪೋತ್ರಿ (ನಾ). ಹಂದಿ ; ಸೂಕರ.

ಪೋದಗೆ (ನಾ). ಒಂದು ಜಾತಿಯ ಪಕ್ಷಿ.

ಪೋರ್(ಱು) (ಕ್ರಿ). ೧. ಕಾದಾಡು ; ಹೋರಾಡು. ೨. ಮಲ್ಲಯುದ್ಧಮಾಡು ; ಕುಸ್ತಿ ಮಾಡು. (ನಾ). ೩. ಕಾದಾಟ ; ಹೋರಾಟ. ೪. ಕುಸ್ತಿ ; ಮಲ್ಲಯುದ್ಧ. ೫. ಪೊಟರೆ ; ಬಿಲ ; ಡೊಗರು. ~ಆಟ = ಹೊಡೆದಾಟ ; ಹೋರಾಟ. ~ಆಳ್ = ಹೋರಾಡುವವನು ; ಕಲಿ. ~ಇಸು = ಕಾದಾಡಿಸು ; ಹೋರಾಡಿಸು.

ಪೋರ (ನಾ). (ತುಂಟು) ಹುಡುಗ ; ಬಾಲಕ.

ಪೋರಗಿ (ನಾ). (ತುಂಟು) ಹುಡುಗಿ ; ಬಾಲಕಿ.

ಪೋರಟೆ (ನಾ). ಹೋರಾಟ ; ಕಾದಾಟ.

ಪೋರಿ (ನಾ). ೧. ಗಂಡುಕರು ; ಹೋರಿ. ೨. = ಪೋರಗಿ.

ಪೋರ್ಕುಳಿ (ನಾ). ೧. ಹೋರಾಟ ; ಕಲಹ. ೨. ಸ್ಪರ್ಧೆ ; ಹುರುಡು.

ಪೋರ್ಮೆ (ನಾ). ಹೋರಾಡುವಿಕೆ ; ಕಾದಾಡುವಿಕೆ.

ಪೋಲ್ (ಕ್ರಿ). ೧. ಸಾಮ್ಯಹೊಂದು ; ಹೋಲು. (ಅ). ೨. ಅಂತೆ ; ಹಾಗೆ. ~ಇಸು = ಹೋಲಿಸು.

ಪೋಲಕ (ನಾ). ಕುಪ್ಪಸ ; ರವಿಕೆ.

ಪೋಲಿ (ನಾ). ಪೋಕರಿ ; ಉಡಾಳ.

ಪೋಲಿಕೆ (ನಾ). ೧. ಹೋಲಿಕೆ ; ಸಾಮ್ಯ. ೨. ದುಂದುವೆಚ್ಚ ; ಅಪವ್ಯಯ.

ಪೋಲು (ಕ್ರಿ). ೧. ಹೋಲು ; ಸಾಮ್ಯ ಹೊಂದು. (ನಾ). ೨. ಅಪವ್ಯಯ; ಹಾಳು. ~ಮಾಡು = ದುಂದುಮಾಡು; ವ್ಯಯಿಸು.

ಪೋಲುಗ (ನಾ). ಹಾಳುಮಾಡುವವನು ; ದುಂದುಗಾರ.

ಪೋಲ್ವೆ (ನಾ). ಹೋಲಿಕೆ ; ಸಾಮ್ಯ.

ಪೋಷಕ (ನಾ). ೧. ರಕ್ಷಿಸುವವನು ; ಕಾಪಾಡುವವನು. (ಗು). ೨. ರಕ್ಷಿಸುವ; ಕಾಯುವ. ~ಜೀವಿ = ಕಾಪಾಡುವ ಜೀವಿ.

ಪೋಷಕಿ (ನಾ). ರಕ್ಷಿಸುವವಳು ; ಕಾಪಾಡುವವಳು.

ಪೋಷಣ (ನಾ). ಕಾಪಾಡುವಿಕೆ ; ಪಾಲನೆ.

ಪೋಷಣೆ = ಪೋಷಣ.

ಪೋಷಾಕು (ನಾ). ಉಡುಗೆ ; ತೊಡುಗೆ.

ಪೋಷಿಸು (ಕ್ರಿ). ಪಾಲಿಸು ; ಕಾಪಾಡು.

ಪೋಳಿಗೆ (ನಾ). ಹೋಳಿಗೆ ; ಒಬ್ಬಟ್ಟು.

ಪೋೞ್(ಳ್,ಳು,ೞು) (ಕ್ರಿ). ೧. ಹೋಳುಮಾಡು ; ತುಂಡುಮಾಡು. (ನಾ). ೨. ಹೋಳು; ತುಂಡು. ೩. = ಪೋೞಲ್.

ಪೋೞ(ಳ)ಲ್(ಲು) (ನಾ). ಮರದ ಪೊಟರೆ ; ಡೊಗರು.

ಪೌಂಚಿ (ನಾ). ಕೈಗೆ ತೊಡುವ ಒಂದು ಆಭರಣ.

ಪೌಂಡಿಮನೆ (ನಾ). ತೊಂಡುದನಗಳನ್ನು ಕೂಡುವ ಸ್ಥಳ ; ಕೊಂಡವಾಡ.

ಪೌಂಡು (ನಾ). ೧. ದೊಡ್ಡಿ ; ಕೊಟ್ಟಿಗೆ. ೨. ಒಂದು ತೂಕದ ಪ್ರಮಾಣ.

ಪೌಜು (ನಾ). ದಂಡು; ಸೇನೆ. ~ದಾರ =೧. ಸೈನ್ಯದ ನಾಯಕ. ೨. ಪೋಲೀಸು ಅಧಿಕಾರಿ.

ಪೌತ್ರ (ನಾ). ೧. ಮಗನ ಮಗ; ಮೊಮ್ಮಗ. (ಗು). ೨. ಮಕ್ಕಳಿಗೆ ಸಂಬಂಧಿಸಿದ.

ಪೌತ್ರಿ (ನಾ). ಮಗನ ಮಗಳು; ಮೊಮ್ಮಗಳು.

ಪೌರ (ನಾ). ೧. ನಾಗರಿಕನ ಹಕ್ಕುಬಾಧ್ಯತೆಗಳನ್ನು ಪಡೆದವನು; ನಾಗರಿಕ. (ಗು). ೨. ನಗರಕ್ಕೆ ಸಂಬಂಧಿಸಿದ. ~ಜನ = ನಾಗರಿಕ ವರ್ಗ; ಜನತೆ. ~ನೀತಿ =೧. ನಾಗರಿಕನ ಕಟ್ಟಳೆ. ೨. ಪೌರರ ಹಕ್ಕು ಬಾಧ್ಯತೆ, ಕರ್ತವ್ಯ ಮೊದಲಾದುವನ್ನು ವಿವರಿಸುವ ಶಾಸ್ತ್ರ. ~ಲೋಕ = ಪಟ್ಟಣಿಗರ ಗುಂಪು. ~ವನ = ಪಟ್ಟಣದ ತೋಟ; ಉದ್ಯಾನ.

ಪೌರಂಧ್ರಿ = ಪುರಂಧ್ರಿ.

ಪೌರಸ್ತ್ಯ (ನಾ). ೧. ಮುಂದಿರುವವನು; ಮೊದಲಿಗ. (ಗು). ೨. ಪೂರ್ವದಿಕ್ಕಿನಲ್ಲಿರುವ; ಪೂರ್ವಭಾಗಕ್ಕೆ ಸೇರಿದ. ೩. ಎಲ್ಲಕ್ಕೂ ಮುಂದಿರುವ.

ಪೌರಾಣ (ಗು). ೧. ಹಳೆಯ ಕಾಲಕ್ಕೆ ಸಂಬಂಧಿಸಿದ; ಪ್ರಾಚೀನ. ೨. ಪುರಾಣಕ್ಕೆ ಸಂಬಂಧಿಸಿದ.

ಪೌರಾಣಿಕ (ನಾ). ೧. ಪುರಾಣವನ್ನು ಹೇಳುವವನು. (ಗು). ೨. = ಪೌರಾಣ.

ಪೌರುಷ (ನಾ). ೧. ಶೌರ್ಯ; ಕೆಚ್ಚು. ೨. ಪ್ರಯತ್ನ; ಸಾಹಸ. ೩. ಒಂದು ಅಳತೆ; ಪುರುಷಪ್ರಮಾಣ. (ಗು). ೪. ಗಂಡಸಿಗೆ ಸಂಬಂಧಿಸಿದ.

ಪೌರುಸ = ಪೌರುಷ.

ಪೌರೋಹಿತ್ಯ (ನಾ). ೧. ಪುರೋಹಿತನ ಕೆಲಸ, –ವೃತ್ತಿ. ೨. ಮುಂದಾಳುತನ ವಹಿಸುವುದು.

ಪೌರ್ಣಮಿ (ನಾ). ಹುಣ್ಣಿಮೆ.

ಪೌಲಸ್ತ್ಯ (ನಾ). ೧. ಪುಲಸ್ತ್ಯ ವಂಶದವನು. ೨. ಕುಬೇರ. ೩. ವರುಣ. ೪. ರಾವಣ.

ಪೌಷ್ಟಿಕ (ನಾ). ೧. ಇಷ್ಟಪ್ರಾಪ್ತಿಗಾಗಿ ಮಾಡುವ ಕರ್ಮ; ಶಾಂತಿಹೋಮ. (ಗು). ೨. ಪುಷ್ಟಿಯನ್ನು ಕೊಡುವ; ಪುಷ್ಟಿದಾಯಕ.

ಪೌಳಿ (ನಾ). ಪ್ರಾಕಾರ; ಸುತ್ತುಗೋಡೆ.

ಪ್ರಕಂಪನ (ನಾ). ೧. ಬಲವಾದ ಗಾಳಿ; ಬಿರುಗಾಳಿ. ೨. ಅತಿಶಯವಾದ ಕಂಪನ. ೩. ಬಲವಾಗಿ ಹೆದರಿಸುವವನು.

ಪ್ರಕಟ (ನಾ). ೧. ಸ್ಪಷ್ಟವಾದುದು; ನಿಚ್ಚಳವಾದುದು. (ಗು). ೨. ಮುಚ್ಚುಮರೆಯಿಲ್ಲದ; ನಿಚ್ಚಳವಾದ. ೩. ಪ್ರಕಾಶಕ್ಕೆ ತಂದ; ಹೊರಗೆಡಹಿದ. ~ಆ(ವಾ)ಗು = ೧. ಸ್ಪಷ್ಟವಾಗು; ಬಹಿರಂಗವಾಗು. ೨. ಪ್ರಕಟಿಸಲ್ಪಡು. ~ಇಸು= ೧. ತೋರ್ಪಡಿಸು; ಪ್ರಸಿದ್ಧಪಡಿಸು. ೨. ಎಲ್ಲರಿಗೂ ತಿಳಿಯುವಂತೆ ಮಾಡು; ಬಹಿರಂಗಪಡಿಸು. ೩. ಪುಸ್ತಕ ಮೊದಲಾದುವನ್ನು ಪ್ರಕಾಶಿಸು, – ಹೊರತರು. ~ಕೊ(ಗೊ)ಳಿಸು = ಪ್ರಕಟಿಸು.

ಪ್ರಕಟಣೆ = ಪ್ರಕಟನ.

ಪ್ರಕಟನ (ನಾ). ೧. ಹೊರಗೆಡಹುವುದು; ಪ್ರಕಾಶಪಡಿಸುವುದು. ೨. ತಿಳಿಯಪಡಿಸುವುದು; ಬಹಿರಂಗಪಡಿಸುವುದು.

ಪ್ರಕಟನೆ = ಪ್ರಕಟನ.

ಪ್ರಕರ (ನಾ). ಗುಂಪು; ಸಮೂಹ; ರಾಶಿ.

ಪ್ರಕರಣ (ನಾ). ೧. ವಿಷಯ; ಘಟನೆ. ೨. ಭಾಗ. ೩. ಗ್ರಂಥಭಾಗ; ಅಧ್ಯಾಯ. ೪. ಸನ್ನಿವೇಶ; ಸಮಯ. ೫. ಮುನ್ನುಡಿ. ೬. ನಾಟಕದಲ್ಲಿ ಒಂದು ಪ್ರಭೇದ.

ಪ್ರಕರ್ಷ (ನಾ). ಉತ್ಕರ್ಷ; ಆಧಿಕ್ಯ.

ಪ್ರಕಾಂಡ (ನಾ). ೧. ಮರದ ಕಾಂಡ; ಬೊಡ್ಡೆ. ೨. ತಾವರೆಯ ದಂಟು; ಮೃಣಾಳ. ೩. ಕೈಯ ಮೇಲ್ಭಾಗ; ಮೊಳಕೈ. ೪. ರೆಂಬೆ; ಕೊಂಬೆ. ೫. ಕಾಲದ

ಒಂದು ಗಣನೆ. (ಗು). ೬. ಉತ್ತಮ; ಶ್ರೇಷ್ಠವಾದ.

ಪ್ರಕಾಮ (ಗು). ಬಹಳ; ಯಥೇಷ್ಟ.

ಪ್ರಕಾರ (ನಾ). ೧. ರೀತಿ; ಬಗೆ. ೨. ವಿಶಿಷ್ಟತೆ; ವೈಶಿಷ್ಟ್ಯ. ೩. ಸಾದೃಶ್ಯ; ಹೊಂದಾಣಿಕೆ.

ಪ್ರಕಾಶ (ನಾ). ೧. ತೇಜಸ್ಸು; ಹೊಳಪು. (ಗು). ೨. ನಿರ್ಮಲವಾದ; ಸ್ವಚ್ಛವಾದ. ೩. ಪ್ರಸಿದ್ಧವಾದ; ಬಹಿರಂಗವಾದ. ~ಿಸು = ೧. ಹೊಳೆ; ಹೊಳಪಿನಿಂದ ಕೂಡಿರು. ೨. ಪ್ರಸಿದ್ಧವಾಗು; ಹೆಸರುವಾಸಿಯಾಗು. ೩. ಪುಸ್ತಕ ಮೊದಲಾದುವನ್ನು ಹೊರತರು; ಪ್ರಕಟಿಸು.

ಪ್ರಕಾಶಕ (ನಾ). ೧. ಪ್ರಕಾಶಪಡಿಸುವವನು. ೨. ಪ್ರಕಟನಕಾರ; ಪ್ರಸಿದ್ಧಪಡಿಸುವವನು.

ಪ್ರಕೀರ್ಣ (ನಾ). ೧. ಕಲಬೆರಕೆ; ಹೊಂದಾಣಿಕೆ ಇಲ್ಲದ ವಸ್ತುಗಳ ಮಿಶ್ರಣ. (ಗು). ೨. ಚೆದರಿದ; ಹರಡಿದ. ೩. ಪ್ರಸಿದ್ಧಗೊಳಿಸಲ್ಪಟ್ಟ. ೪. ತುಂಬಿದ; ಕಿಕ್ಕಿರಿದ.

ಪ್ರಕೀರ್ಣಕ (ನಾ). ೧. ಚಾಮರ; ಚವರಿ. ೨. ಸಂಕೀರ್ಣವಾದುದು; ಕಲಬೆರಕೆ.

ಪ್ರಕೀರ್ತನ (ನಾ). ೧. ಹೊಗಳುವಿಕೆ; ಕೀರ್ತಿಸುವಿಕೆ. ೨. ಸಾರುವಿಕೆ; ಜಾಹೀರುಪಡಿಸುವುದು.

ಪ್ರಕೃತ (ಗು). ೧. ನೈಜವಾದ; ಮೂಲವಾದ. ೨. ಪ್ರಾರಂಭಿಸಿದ; ತೊಡಗಿದ. ೩. ಈಗಿನ; ಸದ್ಯದ. ೪. ವಿಷಯಕ್ಕೆ ಸಂಬಂಧಿಸಿದ; ಪ್ರಸ್ತುತ.

ಪ್ರಕೃತಿ (ನಾ). ೧. ಸಹಜವಾದ ಸ್ಥಿತಿಯಲ್ಲಿರುವುದು; ನೈಜವಾದುದು. ೨. ಸ್ವಭಾವ; ಗುಣ. ೩. ನಿಸರ್ಗ. ೪. ಪಂಚಭೂತಗಳು. ೫. ಸ್ವಾಮಿ, ಮಂತ್ರಿ, ಮಿತ್ರ, ಕೋಶ, ರಾಷ್ಟ್ರ, ದುರ್ಗ ಮತ್ತು ಸೈನ್ಯಗಳೆಂಬ ರಾಜ್ಯದ ಏಳು ಅಂಗಗಳು. ೬. ಸ್ತ್ರೀ; ಸ್ತ್ರೀಜಾತಿ. ೭. ಕಾರಣ; ನಿಮಿತ್ತ. ೮. ಶಕ್ತಿ; ಬಲ. ೯. ಜೀವ. ೧೦. ವ್ಯಾಕರಣದಲ್ಲಿ ಬರುವ ಶಬ್ದದ ಮೂಲರೂಪ. ೧೧. ದೇಹಸ್ಥಿತಿ.

ಪ್ರಕೃಷ್ಟ (ಗು). ೧. ಎಳೆಯಲ್ಪಟ್ಟ; ಜಗ್ಗಲ್ಪಟ್ಟ. ೨. ಶ್ರೇಷ್ಠವಾದ; ಉತ್ತಮವಾದ.

ಪ್ರಕೋಪ (ನಾ). ೧. ಕೋಪಾಟೋಪ; ರೌದ್ರಾವೇಶ. ೨. ಹೆಚ್ಚಳ; ಆಧಿಕ್ಯ.

ಪ್ರಕೋಷ್ಠ (ನಾ). ೧. ಮುಂಗೈ. ೨. ತೊಟ್ಟಿ; ಅಂಗಳ.

ಪ್ರಕ್ರಮ (ನಾ). ೧. ಪ್ರಾರಂಭ; ಆದಿ. ೨. ಮುಂದುವರಿಯುವಿಕೆ; ಮುನ್ನಡೆ.

ಪ್ರಕ್ರಿಯೆ (ನಾ). ೧. ಕ್ರಮ; ರೀತಿ. ೨. ಔನ್ನತ್ಯ; ಉತ್ಕರ್ಷ. ೩. ಪರಿವರ್ತನೆ.

ಪ್ರಕ್ಷಾಲ(ಳ)ನ (ನಾ). ೧. ತೊಳೆಯುವುದು; ಸ್ವಚ್ಛಗೊಳಿಸುವುದು. ೨. ತೊಳೆಯಲು ಬೇಕಾಗುವ ನೀರು.

ಪ್ರಕ್ಷಾಲಿ(ಳಿ)ಸು (ಕ್ರಿ). ಶುಭ್ರಮಾಡು; ತೊಳೆ.

ಪ್ರಕ್ಷಿಪ್ತ (ಗು). ೧. ಬಿಡಲ್ಪಟ್ಟ; ತೂರಿದ. ೨. ಹೊಸದಾಗಿ ಸೇರಿಸಲ್ಪಟ್ಟ, –ಕೂಡಿಸಿದ.

ಪ್ರಕ್ಷುಬ್ಧ (ಗು). ಕದಡಿದ; ಕ್ಷೋಭೆಗೊಂಡ.

ಪ್ರಕ್ಷೇಪ (ನಾ). ೧. ಎಸೆಯುವುದು. ೨. ಸೇರಿಸುವುದು.

ಪ್ರಕ್ಷೇಪಣ (ನಾ). ಹರಡುವಿಕೆ.

ಪ್ರಕ್ಷೋಭ (ನಾ). ಅಲ್ಲೋಲಕಲ್ಲೋಲ; ಪ್ರಕ್ಷುಬ್ಧ ಸ್ಥಿತಿ.

ಪ್ರಖರ (ಗು). ೧. ಅತಿತೀಕ್ಷ್ಣವಾದ; ಅತಿ ಉಜ್ವಲವಾದ. ೨. ಅತಿಖಾರವಾದ. ~ಕರ = ಸೂರ್ಯ.

ಪ್ರಖ್ಯಾತ (ನಾ). ೧. ಪ್ರಸಿದ್ಧನಾದವನು; ಕೀರ್ತಿವಂತ. (ಗು). ೨. ಹೆಸರುವಾಸಿಯಾದ; ಪ್ರಸಿದ್ಧವಾದ.

ಪ್ರಖ್ಯಾತಿ (ನಾ). ಕೀರ್ತಿ; ಪ್ರಸಿದ್ಧಿ.

ಪ್ರಗತಿ (ನಾ). ಏಳಿಗೆ; ಮುನ್ನಡೆ.

ಪ್ರಗಲ್ಭ (ನಾ). ೧. ಪ್ರೌಢ. ೨. ಆತ್ಮವಿಶ್ವಾಸವುಳ್ಳವನು. ೩. ಸಮರ್ಥ; ಉತ್ಸಾಹಶೀಲ. ೪. ಪಾಂಡಿತ್ಯಪೂರ್ಣವಾದುದು. (ಗು). ೫. ಪಾಂಡಿತ್ಯಪೂರ್ಣವಾದ; ಪ್ರೌಢವಾದ. ~ವಚನ = ಪಾಂಡಿತ್ಯಪೂರ್ಣವಾದ ಮಾತು.

ಪ್ರಗಲ್ಭೆ (ನಾ). ೧. ಪ್ರೌಢಳಾದ ಹೆಂಗಸು. ೨. (ನಾಟಕದ) ನಾಯಿಕೆಯರಲ್ಲಿ ಒಂದು ಪ್ರಭೇದ.

ಪ್ರಗಾಥ (ನಾ). ಒಂದು ಕಾವ್ಯಪ್ರಕಾರ.

ಪ್ರಗುಣ (ಗು). ೧. ಬೆಲೆಯುಳ್ಳ; ಯೋಗ್ಯತೆಯುಳ್ಳ. ೨. ಸರಿಯಾಗಿ ಇಡಲ್ಪಟ್ಟ.

ಪ್ರಗ್ರಹ (ನಾ). ೧. ಹಿಡಿಯುವಿಕೆ. ೨. ಸೆರೆ; ಬಂಧನ. ೩. ಹಗ್ಗ. ೪. ಲಗಾಮು; ಕಡಿವಾಣ. ೫. ಸೆರೆಯಾಳು.

ಪ್ರಘಟ್ಟ (ನಾ). ಸಮಾರಂಭ; ಉತ್ಸವ.

ಪ್ರಘಟ್ಟಕ ೧. = ಪ್ರಘಟ್ಟ. ೨. ತತ್ತ್ವ; ಸಿದ್ಧಾಂತ.

ಪ್ರಘಾತ (ನಾ). ಯುದ್ಧ; ಹೋರಾಟ.

ಪ್ರಚಂಡ (ನಾ). ೧. ಅಸಾಮಾನ್ಯ ವ್ಯಕ್ತಿ. (ಗು). ೨. ಕ್ರೂರವಾದ; ಭಯಂಕರವಾದ. ೩. ಬಲಶಾಲಿಯಾದ; ಸ್ಥೈರ್ಯವುಳ್ಳ. ೪. ಅತ್ಯಂತ ಉಷ್ಣವಾದ.

ಪ್ರಚಯ (ನಾ). ೧. ಒಟ್ಟುಗೂಡಿಸುವುದು; ಕಲೆಹಾಕುವುದು. ೨. ಸಮೂಹ; ಗುಂಪು.

ಪ್ರಚರ (ನಾ). ೧. ದಾರಿ; ಮಾರ್ಗ. ೨. ನಡವಳಿಕೆ; ಪದ್ಧತಿ.

ಪ್ರಚಲ (ಗು). ೧. ನಡುಗುವ; ಚಂಚಲವಾದ. ೨. ಬಳಕೆಯ; ರೂಢಿಯ.

ಪ್ರಚಲಿ(ಳಿ)ತ (ಗು). ಬಳಕೆಯಲ್ಲಿರುವ; ಚಾಲ್ತಿಯಲ್ಲಿರುವ.

ಪ್ರಚಾರ (ನಾ). ೧. ಪ್ರಸಾರ; ಹರಡುವಿಕೆ. ೨. ಚಲಾವಣೆ; ಬಳಕೆಗೆ ತರುವುದು. ೩. ಗತಿ; ಗಮನ; ಸಂಚಾರ.

ಪ್ರಚಾರಕ (ನಾ). ಪ್ರಚಾರ ಮಾಡುವವನು; ಸುದ್ದಿ ಹರಡುವವನು.

ಪ್ರಚುರ (ನಾ). ೧. ಆಧಿಕ್ಯ; ಹೆಚ್ಚಳ. ೨. ಪ್ರಸಿದ್ಧವಾದುದು. (ಗು). ೩. ಅಧಿಕವಾದ. ೪. ವಿಸ್ತಾರವಾದ. ~ಪಡಿಸು = ಪ್ರಸಿದ್ಧಗೊಳಿಸು; ಬಹಿರಂಗಪಡಿಸು.

ಪ್ರಚೇತಸ (ನಾ). ವರುಣ.

ಪ್ರಚೋದನ (ನಾ). ಪ್ರೇರಣೆ; ಉತ್ತೇಜನ.

ಪ್ರಚೋದನೆ = ಪ್ರಚೋದನ.

ಪ್ರಚೋದಿಸು (ಕ್ರಿ). ಹುರಿದುಂಬಿಸು; ಪ್ರೇರಿಸು.

ಪ್ರಚ್ಛದ (ನಾ). ಹೊದಿಕೆ; ಹಚ್ಚಡ.

ಪ್ರಚ್ಛನ್ನ (ನಾ). ೧. ಜಾಲರಿ; ಜಾಲಂದರ. ೨. ಗುಪ್ತದ್ವಾರ. (ಗು). ೩. ಮುಚ್ಚಲ್ಪಟ್ಟ; ಮರೆಮಾಡಿದ. ೪. ಗುಪ್ತವಾದ.

ಪ್ರಚ್ಛಾಯ (ನಾ). ದಟ್ಟವಾದ ನೆರಳು.

ಪ್ರಚ್ಯುತಿ (ನಾ). ಕೆಳಗೆ ಬೀಳುವಿಕೆ; ಸ್ಥಾನಭ್ರಷ್ಟತೆ.

ಪ್ರಜನ (ನಾ). ೧. ಹಸು ಎತ್ತುಗಳ ಕೂಟ. ೨. ಹಡೆಯುವುದು; ಹೆರುವುದು.

ಪ್ರಜಾಧಿಪತ್ಯ (ನಾ). ಪ್ರಜೆಗಳಿಂದ ನಡೆಯುವ ಆಡಳಿತ; ಪ್ರಜಾಪ್ರಭುತ್ವ.

ಪ್ರಜಾಪತಿ (ನಾ). ೧. ಬ್ರಹ್ಮ. ೨. ಪ್ರಜೆಗಳ ಒಡೆಯ; ರಾಜ. ೩. ಅತ್ರಿ ಮೊದಲಾದ ಋಷಿಗಳು. ೪. ಅರುವತ್ತು ಸಂವತ್ಸರಗಳಲ್ಲಿ ಒಂದು. ೫. ಪುರುಷನ ಜನನೇಂದ್ರಿಯ.

ಪ್ರಜಾಪ್ರತಿನಿಧಿ (ನಾ). ಜನರಿಂದ ಆರಿಸಲ್ಪಟ್ಟವನು; ಪ್ರಜೆಗಳನ್ನು ಪ್ರತಿನಿಧಿಸುವವನು.

ಪ್ರಜಾಪ್ರಭುತ್ವ = ಪ್ರಜಾಧಿಪತ್ಯ.

ಪ್ರಜೆ (ನಾ). ೧. ಜನಾಂಗ; ಜನತೆ. ೨. ಸಂತತಿ; ಪೀಳಿಗೆ. ೩. ಮಕ್ಕಳು.

ಪ್ರಜ್ಞ (ನಾ). ಬುದ್ಧಿವಂತ; ವಿದ್ವಾಂಸ.

ಪ್ರಜ್ಞಪ್ತಿ (ನಾ). ವಿಶೇಷವಾದ ಜ್ಞಾನ; ನೆನಪಿಗೆ ತಂದುಕೊಳ್ಳುವುದು.

ಪ್ರಜ್ಞಾನ (ನಾ). ೧. ಬುದ್ಧಿ; ಚಾತುರ್ಯ; ವಿವೇಕ. ೨. ಗುರುತು; ಚಿಹ್ನೆ.

ಪ್ರಜ್ಞೆ (ನಾ). ೧. ಎಚ್ಚರ; ಜಾಗರೂಕತೆ. ೨. ತಿಳಿವಳಿಕೆ; ಅರಿವು. ೩. ಬುದ್ಧಿ; ಜ್ಞಾನ.

ಪ್ರಜ್ವಲ (ಗು). ೧. ಹೊಳೆಯುವ. ೨. ಉರಿಯುವ; ಜ್ವಲಿಸುವ. ~ಇಸು=೧.ಉರಿ; ಜ್ವಲಿಸು. ೨. ಹೊಳೆ; ಪ್ರಕಾಶಿಸು.

ಪ್ರಜ್ವಲನ (ನಾ). ೧. ಹೊಳೆಯುವಿಕೆ. ೨. ಉರಿಯುವಿಕೆ.

ಪ್ರಣತ (ಗು). ೧. ಬಾಗಿದ; ವಕ್ರವಾದ. ೨. ನಮಸ್ಕರಿಸಿದ. ೩. ಸುರಿತ.

ಪ್ರಣತಿ (ನಾ). ೧. ಬಾಗುವಿಕೆ; ವಂದನೆ. ೨. =ಪ್ರಣತೆ.

ಪ್ರಣತೆ (ನಾ). ಮಣ್ಣಿನ ದೀಪ; ಹಣತೆ.

ಪ್ರಣಯ (ನಾ). ೧. ಪ್ರೀತಿ; ಪ್ರೇಮ. ೨. ಸ್ನೇಹ; ಗೆಳೆತನ. ೩. ಪರಿಚಯ; ನಿಕಟ ಬಾಂಧವ್ಯ. ೪. ಮಾರ್ಗದರ್ಶನ. ~ಕಲಹ=ಪ್ರೇಮಿಗಳ ಹುಸಿ ಜಗಳ. ~ಭಂಗ=ಪ್ರೇಮಭಂಗ; ಅನುರಾಗಹಾನಿ.

ಪ್ರಣಯಿ (ನಾ). ೧. ಪ್ರೇಮಿ; ಪ್ರೀತಿಪಾತ್ರ. ೨. ಒಡೆಯ; ಗಂಡ.

ಪ್ರಣಯಿನಿ (ನಾ). ೧. ಪ್ರೇಯಸಿ; ಪ್ರೀತಿ ಪಾತ್ರಳಾದವಳು. ೨. ಮಡದಿ; ಹೆಂಡತಿ.

ಪ್ರಣವ (ನಾ). ೧. ಓಂಕಾರವೆಂಬ ಮಂತ್ರ. ೨. ಒಂದು ಬಗೆಯ ಚರ್ಮವಾದ್ಯ; ಪಣವ.

ಪ್ರಣಾದ (ನಾ). ಧ್ವನಿ; ಘೋಷ.

ಪ್ರಣಾಮ (ನಾ). ನಮಸ್ಕಾರ; ವಂದನೆ.

ಪ್ರಣಾಲಿ(ಳಿ) (ನಾ). ೧. ಕೊಳವೆ; ನಾಳ. ೨. ಕಾಲುವೆ; ಚರಂಡಿ. ೩. ವಿಚಾರ ಮಾರ್ಗ, -ಕ್ರಮ.

ಪ್ರಣಾಲಿ(ಳಿ)ಕೆ = ಪ್ರಣಾಲಿ.

ಪ್ರಣಿಧಾನ (ನಾ). ೧. ಧ್ಯಾನ. ೨. ಪ್ರಯತ್ನ. ೩. ನಿಯಮಿಸುವಿಕೆ. ೪. ಉಪಯೋಗ; ಬಳಕೆ. ೫. ಗೌರವ; ನಡೆ.

ಪ್ರಣಿಧಿ (ನಾ). ೧. ಗೂಢಚಾರ; ಗುಪ್ತಚಾರ. ೨. ಮನವಿ; ಪ್ರಾರ್ಥನೆ. (ಗು). ೩. ಪರೀಕ್ಷಿಸುವ; ಗಮನಿಸುವ.

ಪ್ರಣಿಪಾತ (ನಾ). ಅಡ್ಡಬೀಳುವಿಕೆ; ನಮಸ್ಕಾರ.

ಪ್ರಣೀತ (ನಾ). ೧. ಯಜ್ಞ. ೨. ಸಂಸ್ಕಾರಗೊಳಿಸಿದ ಅಗ್ನಿ; ಮಂತ್ರಾಗ್ನಿ. (ಗು). ೩. ಮುಂದುವರಿಸಲ್ಪಟ್ಟ. ೪. ನಿರ್ಮಿಸಿದ; ಸಿದ್ಧಪಡಿಸಿದ; ರಚಿಸಿದ.

ಪ್ರಣುತ (ಗು). ಹೊಗಳಲ್ಪಟ್ಟ; ಸ್ತುತಿಸಿದ.

ಪ್ರಣೂತ = ಪ್ರಣುತ.

ಪ್ರತತಿ (ನಾ). ೧. ಹರಹು; ವಿಸ್ತಾರ. ೨. = ಪ್ರತಾನ.

ಪ್ರತಾನ (ನಾ). ಗುಂಪು; ಸಮೂಹ.

ಪ್ರತಾಪ (ನಾ). ೧. ತೇಜಸ್ಸು; ಕಾಂತಿ; ಹೊಳಪು. ೨. ಹೆಚ್ಚಾದ ತಾಪ. ೩. ಪರಾಕ್ರಮ; ಪೌರುಷ. ೪. ಒಂದು ನಾಣ್ಯ. ೫. ಹುರುಪು; ಹುಮ್ಮಸ್ಸು; ಉತ್ಸಾಹ.

ಪ್ರತಾರಕ (ನಾ). ವಂಚಕ; ಮೋಸಗಾರ.

ಪ್ರತಾರಣ (ನಾ). ೧. ವಂಚನೆ; ಮೋಸ. ೨. ದಾಟುವಿಕೆ; ದಾಟುವುದು; ತರಣ.

ಪ್ರತಿ (ನಾ). ೧. ಎದುರು; ವಿರುದ್ಧ. ೨. ಬದಲು. ೩. ನಕಲು. ೪. ಸಮಾನ; ಸಮ.

ಪ್ರತಿಕಕ್ಷಿ (ನಾ). ಎದುರಾಳಿ; ವಿರೋಧಿ.

ಪ್ರತಿಕರಿಸು (ಕ್ರಿ). ೧. ಹಿಂದಿರುಗಿಸು; ವಾಪಸ್ಸು ಮಾಡು. ೨. (ವೈದ್ಯನಂತೆ) ಶುಶ್ರೂಷೆ ಮಾಡು. ೩. ಸರಿಮಾಡು; ನೇರ್ಪುಮಾಡು.

ಪ್ರತಿಕಾರ ೧. = ಪ್ರತೀಕಾರ. ೨. ನಕಲು ಮಾಡುವವನು.

ಪ್ರತಿಕೂಲ (ನಾ). ೧. ವಿರೋಧ; ಪ್ರತಿಪಕ್ಷ. (ಅ). ೨. ದಂಡೆಗೆ ಇದಿರಾಗಿ, -ವಿರುದ್ಧವಾಗಿ.

ಪ್ರತಿಕೃತಿ (ನಾ). ೧. ನಕಲು; ಪ್ರತಿ. ೨. ಪ್ರತಿಮೆ; ವಿಗ್ರಹ; ಮೂರ್ತಿ. ೩. ಸೇಡು; ಮುಯ್ಯಿ.

ಪ್ರತಿಕ್ರಿಯೆ = ಪ್ರತೀಕಾರ.

ಪ್ರತಿಗಾಮಿ (ನಾ). ೧. ಪ್ರಗತಿಗೆ ವಿರುದ್ಧವಾಗಿ ನಡೆಯುವವನು. (ಗು). ೨. ಪ್ರಗತಿಗೆ ವಿರುದ್ಧವಾಗಿ ಹೋಗುವ.

ಪ್ರತಿಗ್ರಹ (ನಾ). ತೆಗೆದುಕೊಳ್ಳುವುದು; ಸ್ವೀಕರಿಸುವುದು; ದಾನ ಸ್ವೀಕಾರ ಮಾಡುವುದು. ~ಇಸು = ಸ್ವೀಕರಿಸು; ಹೊಂದು.

ಪ್ರತಿಜ್ಞೆ (ನಾ). ೧. ಶಪಥ; ಭಾಷೆ; ವಾಗ್ದಾನ. ೨. ಘೋಷಣೆ. ~ಗೆಯ್ = ಭಾಷೆಕೊಡು; ಶಪಥಮಾಡು.

ಪ್ರತಿಧ್ವನಿ (ನಾ). ಮಾರ್ದನಿ; ಮರುಧ್ವನಿ.

ಪ್ರತಿನಾಯಕ (ನಾ). ನಾಯಕನನ್ನು ವಿರೋಧಿಸುವವನು; ಖಳನಾಯಕ.

ಪ್ರತಿನಿಧಿ(ನಾ). ಒಬ್ಬ ವ್ಯಕ್ತಿಯ ಅಥವಾ ಒಂದು ಸಂಘದ ಪರವಾಗಿ ನೇಮಿಸಲ್ಪಟ್ಟವನು. ~ಇಸು = ಪ್ರತಿನಿಧಿಯಾಗಿರು.

ಪ್ರತಿಪಕ್ಷ (ನಾ). ೧. ವಿರುದ್ಧಪಕ್ಷ; ಶತ್ರುಪಕ್ಷ. ೨. ಶತ್ರು; ಹಗೆ.

ಪ್ರತಿಪತ್ತಿ (ನಾ). ೧. ಲಾಭಹೊಂದುವುದು; ಪಡೆದುಕೊಳ್ಳುವುದು; ಪ್ರಾಪ್ತಿ. ೨. ಜಾಣ್ಮೆ; ಗ್ರಹಣಶಕ್ತಿ. ೩. ಸಮ್ಮತಿ; ಅಂಗೀಕಾರ. ೪. ಗೌರವ; ಸತ್ಕಾರ. ೫. ಧೈರ್ಯ; ಕೆಚ್ಚು. ~ಗೆಯ್ = ಗೌರವಿಸು; ಸತ್ಕರಿಸು.

ಪ್ರತಿಪದಿ (ನಾ). ಪಾಡ್ಯಮಿ.

ಪ್ರತಿಪದೆ = ಪ್ರತಿಪದಿ.

ಪ್ರತಿಪನ್ನ (ಗು). ೧. ಪಡೆದ; ಹೊಂದಿದ. ೨. ಸಮೀಪಕ್ಕೆ ಬಂದ.

ಪ್ರತಿಪಾದನ (ನಾ). ೧. ಕೊಡುವಿಕೆ; ದಾನ ಮಾಡುವಿಕೆ. ೨. ಸಮರ್ಥಿಸುವಿಕೆ; ದೃಢಪಡಿಸುವಿಕೆ. ೩. ವಿವರಿಸುವಿಕೆ; ಬೋಧಿಸುವಿಕೆ. ೪. ಮಂಡಿಸುವಿಕೆ; ಮಂಡನೆ.

ಪ್ರತಿಪಾದಿಸು (ಕ್ರಿ). ಮಂಡಿಸು; ಸಮರ್ಥಿಸು.

ಪ್ರತಿಪಾಲಕ (ನಾ). ಕಾಪಾಡುವವನು; ಸಂರಕ್ಷಕ.

ಪ್ರತಿಪಾಲಿ(ಳಿ)ಸು (ಕ್ರಿ). ೧. ಕಾಪಾಡು; ರಕ್ಷಿಸು. ೨. ಆಚರಿಸು; ನಡಸು.

ಪ್ರತಿಫಲ (ನಾ). ೧. ಮಾಡಿದ ಕೆಲಸಕ್ಕೆ ದೊರೆತ ಲಾಭ; ಗಳಿಕೆ. ೨. ಫಲಿತಾಂಶ. ~ಇಸು = ಪ್ರತಿಬಿಂಬಿಸು; ಪ್ರತಿಯಾಗಿ ತೋರು.

ಪ್ರತಿಬಂಧ (ನಾ). ಅಡ್ಡಿ; ಅಡಚಣೆ; ವಿರೋಧ.

ಪ್ರತಿಬಂಧಕ ೧. = ಪ್ರತಿಬಂಧ. (ಗು). ೨. ಅಡ್ಡಿಮಾಡುವ; ತೊಂದರೆಪಡಿಸುವ.

ಪ್ರತಿಬದ್ಧ (ಗು). ೧. ಬಂಧನಕ್ಕೊಳಗಾದ; ತಡೆಹಿಡಿಯಲ್ಪಟ್ಟ. ೨. ನಿರಾಶನಾದ. ೩. ಕುಂದಣಿಸಿದ; ಹುದುಗಿಸಿದ.

ಪ್ರತಿಬಿಂಬ (ನಾ). ಪ್ರತಿಫಲಿತವಾದ ಬಿಂಬ; ಪ್ರತಿರೂಪ; ಪಡಿನೆಳಲು. ~ಇಸು = ಪ್ರತಿರೂಪವನ್ನು ತೋರು; ಪ್ರತಿಫಲಿಸು.

ಪ್ರತಿಬೋಧಕ (ನಾ). ಬೋಧಿಸುವವನು; ತಿಳಿಸುವವನು.

ಪ್ರತಿಬೋಧಿಸು (ಕ್ರಿ). ಜ್ಞಾನೋದಯವನ್ನುಂಟುಮಾಡು; ತಿಳಿಸು.

ಪ್ರತಿಭಟ (ನಾ). ಶತ್ರುಸೈನಿಕ; ವೈರಿ.

ಪ್ರತಿಭಟನೆ (ನಾ). ವಿರೋಧ.

ಪ್ರತಿಭಟಿಸು (ಕ್ರಿ). ವಿರೋಧಿಸು; ಎದುರುನಿಲ್ಲು.

ಪ್ರತಿಭಾನ (ನಾ). ಒಳ ಅರಿವು; ಅಂತರ್ದೃಷ್ಟಿ.

ಪ್ರತಿಭೆ (ನಾ). ೧. ಹೊಳಪು; ಪ್ರಕಾಶ. ೨. ಅತಿಶಯವಾದ ಬುದ್ಧಿವಂತಿಕೆ; ವಿಶೇಷ ಪ್ರಜ್ಞೆ.

ಪ್ರತಿಮಾನ (ನಾ). ೧. ಹೋಲಿಕೆ; ಸಮಾನ. ೨. ಆನೆಯ ದಂತಗಳ ಮಧ್ಯ ಪ್ರದೇಶ. ೩. ಪ್ರತಿಮೆ; ವಿಗ್ರಹ.

ಪ್ರತಿಮಾಯೋಗ (ನಾ). ವಿಗ್ರಹದಂತೆ ಅಚಲವಾಗಿ ನಿಲ್ಲುವಿಕೆ.

ಪ್ರತಿಮೆ ೧. = ಪ್ರತಿಮಾನ. ೨. ರೂಪಕ.

ಪ್ರತಿರವ = ಪ್ರತಿಧ್ವನಿ. ~(ಂ)ಕು(ಗು)ಡು = ಪ್ರತಿಧ್ವನಿಸು; ಮಾರ್ದನಿ ಗೊಡು.

ಪ್ರತಿರೂಪ (ನಾ). ಪ್ರತಿಬಿಂಬ; ಪಡಿನೆಳಲು.

ಪ್ರತಿರೋಧ (ನಾ). ೧. ಅಡ್ಡಿ; ಅಡಚಣೆ. ೨. ವಿರೋಧಿ; ಶತ್ರು. ೩. ಮುತ್ತಿಗೆ; ಆಕ್ರಮಣ. ೪. ಕಳವು; ಸುಲಿಗೆ.

ಪ್ರತಿಲಂಭನ (ನಾ). ಪಡೆಯುವುದು; ಹೊಂದುವುದು.

ಪ್ರತಿಲೋಮ (ಗು). ೧. ಕ್ರಮಕ್ಕೆ ವಿರುದ್ಧವಾದ; ಹಿಂದುಮುಂದಾದ. ೨. ಅಸಹ್ಯವಾದ; ಕೀಳಾದ.

ಪ್ರತಿವಚನ (ನಾ). ಪ್ರತ್ಯುತ್ತರ; ಮರುಮಾತು.

ಪ್ರತಿವಾದ ೧. = ಪ್ರತಿವಚನ. ೨. ಅಲ್ಲಗಳೆಯುವಿಕೆ; ನಿರಾಕರಣೆ.

ಪ್ರತಿವಾದಿ (ನಾ). ಎದುರಾಳಿ; ಪ್ರತಿಕಕ್ಷಿ.

ಪ್ರತಿವಿದ್ಯೆ (ನಾ). ಮಂತ್ರನಿರೋಧಕವಾದ ವಿದ್ಯೆ.

ಪ್ರತಿಷೇಧ (ನಾ). ೧. ತಡೆ; ಪ್ರತಿಬಂಧ. ೨. ತಿರಸ್ಕರಿಸುವಿಕೆ; ಅಲ್ಲಗಳೆಯುವಿಕೆ. ೩. ನಿಷೇಧ.

ಪ್ರತಿಷ್ಠಾಪನೆ (ನಾ). ನೆಲೆಗೊಳಿಸುವುದು.

ಪ್ರತಿಷ್ಠಾಪಿಸು (ಕ್ರಿ). ಸ್ಥಾಪಿಸು; ನೆಲೆಗೊಳಿಸು.

ಪ್ರತಿಷ್ಠಿತ (ನಾ). ೧. ಗಣ್ಯ; ಪ್ರಮುಖ. (ಗು). ೨. ಗಣ್ಯವಾದ. ೩. ಸ್ಥಾಪಿಸಲ್ಪಟ್ಟ.

ಪ್ರತಿಷ್ಠೆ (ನಾ). ೧. ಘನತೆ; ಗೌರವ. ೨. ಗರ್ವ; ಸೊಕ್ಕು. ೩. ಸ್ಥಾಪನೆ; ನೆಲೆಗೊಳಿಸುವುದು. ~ಇಸು = ಪ್ರತಿಷ್ಠಾಪಿಸು.

ಪ್ರತಿಸಂಧಾನ (ನಾ). ಹೊಂದಿಸುವಿಕೆ; ಕೂಡಿಸುವಿಕೆ.

ಪ್ರತಿಸಂಹಾರ (ನಾ). ೧. ತಿರುಗಿ ತೆಗೆದುಕೊಳ್ಳುವಿಕೆ; ಹಿಂದೆಗೆದುಕೊಳ್ಳುವಿಕೆ. ೨. ಸಂಗ್ರಹಿಸುವಿಕೆ; ಒಟ್ಟುಮಾಡುವಿಕೆ.

ಪ್ರತಿಸೃಷ್ಟಿ (ನಾ). ಬೇರೊಂದು ರೀತಿಯ ಸೃಷ್ಟಿ; ವಿಶ್ವಾಮಿತ್ರ ಸೃಷ್ಟಿ.

ಪ್ರತಿಸ್ಪರ್ಧಿ (ನಾ). ವಿರೋಧಿ; ಎದುರಾಳಿ.

ಪ್ರತಿಸ್ವರ = ಪ್ರತಿಧ್ವನಿ.

ಪ್ರತಿಹತ (ನಾ). ೧. ಎದಿರೇಟು. (ಗು). ೨. ಹಿಂದಿರುಗಿ ಹೊಡೆತ ಕೊಟ್ಟ, -ಪೆಟ್ಟು ಕೊಟ್ಟ. ೩. ಹಿಂದೂಡಿದ; ತಿರಸ್ಕರಿಸಲ್ಪಟ್ಟ. ೪. ಕೆಳಕ್ಕೆ ಬಿದ್ದ. ೫. ವಿರೋಧಿಸಲ್ಪಟ್ಟ.

ಪ್ರತಿಹಾರ (ನಾ). ಬಾಗಿಲು ಕಾಯುವವನು; ದ್ವಾರಪಾಲಕ.

ಪ್ರತಿಹಾರಿ ೧. = ಪ್ರತಿಹಾರ. ೨. ಬಾಗಿಲು ಕಾಯುವವಳು.

ಪ್ರತೀಕ (ನಾ). ೧. ಪ್ರತಿಬಿಂಬ; ಪ್ರತಿರೂಪ. ೨. ಚಿಹ್ನೆ; ಗುರುತು. (ಗು). ೩. ವಿರುದ್ಧವಾದ.

ಪ್ರತೀಕಾರ (ನಾ). ವಿರೋಧ; ಪ್ರತಿಭಟನೆ.

ಪ್ರತೀಕ್ಷಣ = ಪ್ರತೀಕ್ಷೆ.

ಪ್ರತೀಕ್ಷೆ (ನಾ). ಎದುರು ನೋಡುವುದು; ನಿರೀಕ್ಷಿಸುವುದು.

ಪ್ರತೀಚಿ (ನಾ). ಪಶ್ಚಿಮದಿಕ್ಕು.

ಪ್ರತೀತ (ಗು). ೧. ನಿರ್ಣಯಿಸಲ್ಪಟ್ಟ; ತೀರ್ಮಾನಿಸಲ್ಪಟ್ಟ. ೨. ಅನುಭವಿಸಿದ; ಅನುಭವಕ್ಕೆ ಬಂದ. ೩. ಪ್ರಸಿದ್ಧವಾದ; ಹೆಸರುವಾಸಿಯಾದ. ೪. ತೃಪ್ತಿಹೊಂದಿದ.

ಪ್ರತೀತಿ (ನಾ). ೧. ಜನಜನಿತವಾಗಿ ಬಂದ ತಿಳಿವಳಿಕೆ. ೨. ಪ್ರಸಿದ್ಧವಾದುದು.

ಪ್ರತೀಪ (ನಾ). ೧. ತಲೆಕೆಳಗು; ಅದಲು ಬದಲು. ೨. ಪ್ರವಾಹಕ್ಕೆ ಎದುರಾದುದು. ೩. ಕಾವ್ಯದಲ್ಲಿ ಬರುವ ಒಂದು ಅಲಂಕಾರ.

ಪ್ರತೀಹಾರ = ಪ್ರತಿಹಾರ.

ಪ್ರತೀಹಾರಕ = ಪ್ರತಿಹಾರ.

ಪ್ರತೀಹಾರಿ = ಪ್ರತಿಹಾರಿ.

ಪ್ರತೋಲಿ(ೞಿ) (ನಾ). ದೊಡ್ಡ ರಸ್ತೆ; ರಾಜಮಾರ್ಗ.

ಪ್ರತ್ನ (ಗು). ಹಳೆಯ ; ಪುರಾತನ.
ಪ್ರತ್ಯಕ್ಷ (ನಾ). ೧. ಕಣ್ಣೆದುರಿನದು ; ಕಣ್ಣಿಗೆ ಕಾಣುವುದು. (ಗು). ೨. ಇಂದ್ರಿಯ ಗೋಚರವಾದ ; ಕಣ್ಣಿಗೆ ಕಾಣುವ. ~ಆ(ವಾ)ಗು = ಕಣ್ಣಿಗೆ ಕಾಣು ; ಗೋಚರಿಸು. ~ಪ್ರಮಾಣ = ಇಂದ್ರಿಯ ಗೋಚರವಾದ ಪ್ರಮಾಣ; ಕಣ್ಣಿಗೆ ಕಾಣುವ ಸಂಗತಿ.
ಪ್ರತ್ಯಗಾತ್ಮ (ನಾ). ಆತ್ಮ ; ಜೀವಾತ್ಮ.
ಪ್ರತ್ಯಗ್ರ (ಗು). ಹೊಸದಾದ ; ನೂತನವಾದ.
ಪ್ರತ್ಯನೀಕ (ನಾ). ೧. ಶತ್ರು ; ವೈರಿ. ೨. ಶತ್ರುಸೈನ್ಯ. ೩. ಶತ್ರುತ್ವ ; ಹಗೆತನ.
ಪ್ರತ್ಯಯ (ನಾ). ೧. ನಂಬಿಕೆ ; ವಿಶ್ವಾಸ. ೨. ನಿಶ್ಚಯ ; ಖಂಡಿತ. ೩. ಅನುಭವ ; ಅರಿವು. ೪. ವ್ಯಾಕರಣ ಪ್ರಕ್ರಿಯೆಗೆ ಸಹಾಯಕವಾಗುವ ಅಕ್ಷರ ಅಥವಾ ಅಕ್ಷರ ಸಮುದಾಯ.
ಪ್ರತ್ಯರ್ಥಿ (ನಾ). ವೈರಿ ; ಹಗೆ ; ಶತ್ರು.
ಪ್ರತ್ಯವಾಯ (ನಾ). ೧. ಅಡ್ಡಿ ; ವಿರೋಧ. ೨. ವಿಯೋಗ ; ಅಗಲಿಕೆ. ೩. ಕುಂದು ; ಕೊರತೆ. ೪. ಪಾಪ ; ದೋಷ. ೫. ಅಪಜಯ ; ಸೋಲು.
ಪ್ರತ್ಯಹಂ (ಅ). ಪ್ರತಿದಿನ ; ದಿನಾಲು.
ಪ್ರತ್ಯಾಖ್ಯಾನ (ನಾ). ತಿರಸ್ಕಾರ ; ಅವಹೇಳನ.
ಪ್ರತ್ಯಾಗಮನ (ನಾ). ಹಿಂದಿರುಗಿ ಬರುವಿಕೆ ; ಪುನರಾಗಮನ.
ಪ್ರತ್ಯಾದಿಷ್ಟ (ಗು). ತಿರಸ್ಕರಿಸಲ್ಪಟ್ಟ ; ದೂರ ಮಾಡಲ್ಪಟ್ಟ.
ಪ್ರತ್ಯಾಮ್ನಾಯ (ನಾ). ೧. ವಿರುದ್ಧವಾದ ಪದ್ಧತಿ. ೨. ವಿರುದ್ಧವಾದ ನಿರ್ಧಾರ, -ನಿರ್ಣಯ.
ಪ್ರತ್ಯಾಲೀಢ (ನಾ). ಬಾಣ ಬಿಡುವಾಗ ನಿಲ್ಲುವ ಒಂದು ಭಂಗಿ.
ಪ್ರತ್ಯಾಶೆ (ನಾ). ಭರವಸೆ ; ಆಸೆ.
ಪ್ರತ್ಯಾಸನ್ನ (ನಾ). ಸಮೀಪ ; ಹತ್ತಿರ.
ಪ್ರತ್ಯುಕ್ತಿ = ಪ್ರತ್ಯುತ್ತರ.
ಪ್ರತ್ಯುತ್ತರ (ನಾ). ಮರುನುಡಿ ; ಜವಾಬು.
ಪ್ರತ್ಯುತ್ಥಾನ (ನಾ). ಇತರರ ಗೌರವಾರ್ಥವಾಗಿ ಎದ್ದು ನಿಲ್ಲುವುದು.
ಪ್ರತ್ಯುಪಕಾರ (ನಾ). ಉಪಕಾರಕ್ಕೆ ಪ್ರತಿಯಾಗಿ ಮಾಡುವ ಉಪಕಾರ.
ಪ್ರತ್ಯೂಷ (ನಾ). ಮುಂಜಾವ ; ಬೆಳಗು.
ಪ್ರತ್ಯೂಹ (ನಾ). ಅಡ್ಡಿ ; ಅಡಚಣೆ.
ಪ್ರತ್ಯೇಕ (ಅ). ೧. ಒಂದೊಂದು. ೨. ಬೇರೆ ಬೇರೆ ; ಒಂದೊಂದಾಗಿ.
ಪ್ರಥನ (ನಾ). ೧. ಹಬ್ಬುವಿಕೆ ; ವಿಸ್ತಾರ. ೨. ಕೀರ್ತಿ ; ಪ್ರಸಿದ್ಧಿ.
ಪ್ರಥಮ (ನಾ). ೧. ಯಜಮಾನ ; ನಾಯಕ. ೨. ಮೊದಲನೆಯ ವಸ್ತು ಅಥವಾ ವ್ಯಕ್ತಿ. (ಗು). ೩. ಮೊದಲನೆಯ ; ಪ್ರಧಾನವಾದ. ~ಚಿಕಿತ್ಸೆ = ಅಪಾಯಕರ ಸಂದರ್ಭಗಳಲ್ಲಿ ಮೊಟ್ಟಮೊದಲು ನಡಸಬೇಕಾದ ಶುಶ್ರೂಷೆ. ~ಪುರುಷ = ಕನ್ನಡದ ಪುರುಷವಾಚಕಗಳಲ್ಲಿ ಮೂರನೆಯದು.
ಪ್ರಥಮೆ (ನಾ). ವ್ಯಾಕರಣದ ಏಳು ವಿಭಕ್ತಿಗಳಲ್ಲಿ ಮೊದಲನೆಯದು.
ಪ್ರಥಿತ (ಗು). ೧. ವಿಸ್ತರಿಸಿದ. ೨. ತಿಳಿಯಪಡಿಸಿದ ; ಪ್ರಕಟಿಸಿದ. ೩. ಪ್ರಸಿದ್ಧವಾದ ; ಹೆಸರುವಾಸಿಯಾದ.
ಪ್ರಥೆ (ನಾ). ೧. ವಿಸ್ತರಣ ; ಹರಡುವಿಕೆ. ೨. ಪ್ರಸಿದ್ಧಿ ; ಹೆಸರುವಾಸಿ.
ಪ್ರದಕ್ಷಿಣ (ನಾ). ಗೌರವಸೂಚಕವಾಗಿ ದೇವತೆ ಅಥವಾ ಹಿರಿಯರನ್ನು ಬಲಗಡೆಯಿಂದ ಸುತ್ತುಹಾಕುವುದು. ~(ಂ)ಗೆಯ್ = ಪ್ರದಕ್ಷಿಣೆಯನ್ನು ಹಾಕು ; ಸುತ್ತುಬರು.
ಪ್ರದಕ್ಷಿಣೆ = ಪ್ರದಕ್ಷಿಣ.
ಪ್ರದರ (ನಾ). ೧. ಮುರಿಯುವಿಕೆ. ೨. ಬಾಣ. ೩. ಹೆಂಗಸರ ಒಂದು ಮುಟ್ಟು ರೋಗ.

**ಪ್ರದರ್ಶಕ** (ನಾ). ೧. ತೋರಿಸುವವನು; ಪ್ರದರ್ಶಿಸುವವನು. (ಗು). ೨. ತೋರಿಸುವ; ಪ್ರಕಟಗೊಳಿಸುವ. ೩. ತಿಳಿಸುವ.

**ಪ್ರದರ್ಶನ** (ನಾ). ೧. ಪ್ರದರ್ಶಿಸುವಿಕೆ; ತೋರಿಸುವಿಕೆ. ೨. ನೋಟ; ದೃಶ್ಯ. ೩. ಬೋಧಿಸುವುದು; ಕಲಿಸುವುದು. ೪. ದೃಷ್ಟಾಂತ; ಉದಾಹರಣೆ.

**ಪ್ರದರ್ಶಿಸು** (ಕ್ರಿ). ತೋರಿಸು; ಪ್ರಕಟಿಸು.

**ಪ್ರದಾನ** (ನಾ). ೧. ಕೊಡುವುದು; ಅರ್ಪಿಸುವುದು. ೨. ಕೊಡುಗೆ; ಬಹುಮಾನ.

**ಪ್ರದಾಯಕ** (ನಾ). ೧. ಕೊಡುವುದು. ೨. ಕೊಡುವವನು. (ಗು). ೩. ಕೊಡುವ; ಸಮರ್ಪಿಸುವ.

**ಪ್ರದಾರಿತ** (ಗು). ಸೀಳಲ್ಪಟ್ಟ; ಸೀಳಿದ.

**ಪ್ರದೀಪ** (ನಾ). ದೀಪ; ದೀವಿಗೆ.

**ಪ್ರದೇಶ** (ನಾ). ಜಾಗ; ಸ್ಥಳ; ಎಡೆ.

**ಪ್ರದೇಶಿನಿ** (ನಾ). ಸೂಚಿಸುವ ಬೆರಳು; ತೋರುಬೆರಳು.

**ಪ್ರದೋಷ** (ನಾ). ೧. ಅಪರಾಧ; ತಪ್ಪು. ೨. ರಾತ್ರಿಯ ಮೊದಲ ಭಾಗ; ಮುಸ್ಸಂಜೆ.

**ಪ್ರದ್ಯುಮ್ನ** (ನಾ). ಕಾಮ; ಮನ್ಮಥ.

**ಪ್ರದ್ಯೋತ** (ನಾ). ೧. ಕಾಂತಿ; ಪ್ರಕಾಶ. ೨. ಕಿರಣ; ರಶ್ಮಿ. (ಗು). ೩. ಪ್ರಕಾಶಿಸುವ; ಹೊಳೆಯುವ.

**ಪ್ರದ್ಯೋತಿ** = ಪ್ರದ್ಯೋತ.

**ಪ್ರಧನ** (ನಾ). ೧. ಯುದ್ಧ; ಹೋರಾಟ. ೨. ನಾಶ.

**ಪ್ರಧಾನ** (ನಾ). ೧. ಮುಂದಿರುವುದು. ೨. ಮುಖ್ಯವಾದುದು; ಪ್ರಮುಖವಾದುದು. ೩. ಪರಮಾತ್ಮ. ೪. ಪ್ರಕೃತಿ; ಮೂಲವಸ್ತು. ೫. ಬುದ್ಧಿವಂತ; ತಿಳಿದವನು. ೬. ಮಂತ್ರಿ. ~ಮಂತ್ರಿ = ಪ್ರಧಾನಿ.

**ಪ್ರಧಾನಿ** (ನಾ). ೧. ಮುಖ್ಯಮಂತ್ರಿ. ೨. ರಾಷ್ಟ್ರದ ಮುಖ್ಯಮಂತ್ರಿ.

**ಪ್ರಧ್ವಂಸ** (ನಾ). ಸಂಪೂರ್ಣನಾಶ.

**ಪ್ರಧ್ವಾನ** (ನಾ). ದೊಡ್ಡ ಶಬ್ದ, -ಧ್ವನಿ.

**ಪ್ರಪಂಚ** (ನಾ). ೧. ಹರಡುವುದು; ಬೆಳೆಯುವುದು. ೨. ಜಗತ್ತು; ವಿಶ್ವ. ೩. ಸಂಸಾರ. ೪. ಮೋಸ; ವಂಚನೆ. ೫. ರಾಶಿ; ಸಮೂಹ. ~ಇಸು = ವಿಸ್ತರಿಸು; ಹರಡು. ~ಮಾಡು = ೧. ಸಂಸಾರ ಮಾಡು, -ಹೂಡು. ೨. ವ್ಯತ್ಯಾಸ ಮಾಡು.

**ಪ್ರಪಂಚಿ** (ನಾ). ೧. ಸಂಸಾರದಲ್ಲಿ ಆಸಕ್ತಿ ಉಳ್ಳವನು; ಲೌಕಿಕ. ೨. ಮೋಸಗಾರ; ವಂಚಕ.

**ಪ್ರಪತ್ತಿ** (ನಾ). ಮರೆಹೊಗುವಿಕೆ; ಶರಣು ಹೋಗುವುದು.

**ಪ್ರಪದ** (ನಾ). ೧. ಕಾಲಿನ ಮುಂಭಾಗ. ೨. ಹೆಬ್ಬೆರಳಿನ ತುದಿ.

**ಪ್ರಪನ್ನ** (ನಾ). ಮರೆಹೊಕ್ಕವನು; ಶರಣಾಗತ.

**ಪ್ರಪಾಂಗನೆ** (ನಾ). ಅರವಟ್ಟಿಗೆಯಲ್ಲಿ ನೀರು ಕೊಡುವ ಹೆಂಗಸು.

**ಪ್ರಪಾತ** (ನಾ). ೧. ಕಡಿದಾದ ಕೊರಕಲು; ಕಣಿವೆ. ೨. ತಡಸಲು; ಜಲಪಾತ. ೩. ಆಕ್ರಮಣ; ಮುತ್ತಿಗೆ.

**ಪ್ರಪಾನ** (ನಾ). ಕುಡಿಯುವಿಕೆ.

**ಪ್ರಪಾಶಾಲೆ** (ನಾ). ಅರವಟ್ಟಿಗೆ.

**ಪ್ರಪಿತಾಮಹ** (ನಾ). ಮುತ್ತಜ್ಜ; ತಂದೆಯ ತಾತ.

**ಪ್ರಪೌತ್ರ** (ನಾ). ಮೊಮ್ಮಗನ ಮಗ.

**ಪ್ರಪೌತ್ರಿ** (ನಾ). ಮೊಮ್ಮಗನ ಮಗಳು.

**ಪ್ರಫುಲ್ಲ** (ಗು). ಅರಳಿದ; ವಿಕಸಿತವಾದ.

**ಪ್ರಬಂಧ** (ನಾ). ೧. ಬಾಂಧವ್ಯ; ಕಟ್ಟು. ೨. ಕಾವ್ಯ. ೩. ಆಧುನಿಕ ಗದ್ಯಸಾಹಿತ್ಯದ ಒಂದು ಪ್ರಕಾರ.

**ಪ್ರಬಲ** (ನಾ). ೧. ಮುಖ್ಯವಾದುದು; ಪ್ರಧಾನ. ೨. ಗಟ್ಟಿಗ; ಬಲಶಾಲಿ. (ಗು). ೩. ಶಕ್ತಿಯಿಂದ ಕೂಡಿದ; ಬಲವಾದ.

೪. ಬಿರುಸಾದ; ರಭಸದಿಂದ ಕೂಡಿದ. ~ಇಸು = ೧. ಸಮರ್ಥವಾಗು; ಮೇಲುಗೈಯಾಗು. ೨. ಹೆಚ್ಚಾಗು; ಬೆಳೆ.

ಪ್ರಬುದ್ಧ (ನಾ). ೧. ಪ್ರೌಢ; ಜ್ಞಾನಿ; ವಿದ್ವಾಂಸ. (ಗು). ೨. ಎಚ್ಚರಗೊಂಡ. ೩. ಅರಿವಿಗೆ ಬಂದ; ತಿಳಿದ. ೪. ಸಂಪೂರ್ಣವಾಗಿ ಅರಳಿದ.

ಪ್ರಬೋಧ (ನಾ). ೧. ಎಚ್ಚರಗೊಳ್ಳುವುದು; ಜಾಗೃತವಾಗುವುದು. ೨. ಅರಳುವಿಕೆ. ೩. ಪಾಂಡಿತ್ಯ; ಜ್ಞಾನ. (ಗು). ೪. ತಿಳಿಸುವ; ತಿಳಿಯುವಂತೆ ಮಾಡುವ.

ಪ್ರಭಂಜನ (ನಾ). ೧. ಮುರಿಯುವುದು; ಪುಡಿಪುಡಿಮಾಡುವುದು. ೨. ಬಿರುಸಾಗಿ ಬೀಸುವ ಗಾಳಿ; ಬಿರುಗಾಳಿ ~ಪ್ರಿಯ = ಬೆಂಕಿ; ಅಗ್ನಿ. ~ಸುತ = ವಾಯುವಿನ ಮಗ; ಭೀಮ.

ಪ್ರಭವ (ನಾ). ೧. ಹುಟ್ಟು; ಉತ್ಪತ್ತಿ. ೨. ಉತ್ಪತ್ತಿಸ್ಥಾನ; ಉಗಮಸ್ಥಾನ. ೩. ಮೂಲಕಾರಣ. ೪. ಬಲ; ಪರಾಕ್ರಮ. ೫. ಅರುವತ್ತು ಸಂವತ್ಸರಗಳಲ್ಲಿ ಒಂದು. (ಗು). ೬. ಪ್ರಮುಖವಾದ; ಮುಖ್ಯವಾದ. ~ಇಸು = ಉಂಟಾಗು; ಉತ್ಪನ್ನವಾಗು.

ಪ್ರಭಾಕರ (ನಾ). ೧. ಬೆಳಕನ್ನುಂಟುಮಾಡುವವನು. ೨. ಸೂರ್ಯ. ೩. ಚಂದ್ರ. ೪. ಬೆಂಕಿ; ಅಗ್ನಿ.

ಪ್ರಭಾತ (ನಾ). ಬೆಳಗು; ಪ್ರಾತಃಕಾಲ. ~ಫೇರಿ = ಬೆಳಗಿನ ಜಾವದಲ್ಲಿ ನಡಸುವ ಮೆರವಣಿಗೆ.

ಪ್ರಭಾವ (ನಾ). ೧. ಬಲ; ಪರಾಕ್ರಮ. ೨. ಘನತೆ; ಹಿರಿಮೆ. ೩. ಅತಿಮಾನುಷ ಶಕ್ತಿ. ೪. ವರ್ಚಸ್ಸು.

ಪ್ರಭಾವನ (ನಾ). ೧. ಶಕ್ತಿ; ಬಲ. ೨. ಹೆಚ್ಚಳ; ಆಧಿಕ್ಯ.

ಪ್ರಭಾವನೆ = ಪ್ರಭಾವನ.

ಪ್ರಭಾವಲಯ (ನಾ). ಕಾಂತಿಯ ಆವರಣ; ತೇಜೋವಲಯ.

ಪ್ರಭಾವಳಿ (ನಾ). ೧. ವಿಗ್ರಹಗಳ ಹಿಂಭಾಗದಲ್ಲಿ ಅಲಂಕಾರಕ್ಕಾಗಿ ಅಳವಡಿಸುವ ಕಮಾನಿನಾಕಾರದ ಒಂದು ಉಪಕರಣ. ೨. = ಪ್ರಭಾವಲಯ.

ಪ್ರಭು (ನಾ). ೧. ರಾಜ. ೨. ಯಜಮಾನ; ಸ್ವಾಮಿ.

ಪ್ರಭುತ್ವ (ನಾ). ೧. ಒಡೆತನ; ಸ್ವಾಮ್ಯ. ೨. ಹತೋಟಿ; ಹಿಡಿತ.

ಪ್ರಭೂತ (ಗು). ೧. ಸಮೃದ್ಧವಾದ; ಹೆಚ್ಚಾದ. ೨. ಪಕ್ವವಾದ.

ಪ್ರಭೃತಿ (ನಾ). ೧. ಶ್ರೇಷ್ಠ; ಉತ್ತಮ. ೨. ಶ್ರೇಷ್ಠಪುರುಷ; ದೊಡ್ಡ ವ್ಯಕ್ತಿ. (ಅ). ೩. ಮೊದಲಾಗಿ; ಮೊದಲುಗೊಂಡು.

ಪ್ರಭೆ (ನಾ). ಕಾಂತಿ; ಬೆಳಕು. ~ಪೆ(ವೆ)ಜ್(ರ್) = ಪ್ರಕಾಶಹೊಂದು.

ಪ್ರಭೇದ (ನಾ). ೧. ಒಡೆಯುವಿಕೆ; ಮುರಿಯುವಿಕೆ. ೨. ವಿಭಾಗ. ೩. ಪ್ರಕಾರ; ರೀತಿ. ೪. ವ್ಯತ್ಯಾಸ; ಭೇದ.

ಪ್ರಮತ್ತ (ಗು). ೧. ಸೊಕ್ಕಿದ; ಮದವೇರಿದ. ೨. ಅಜಾಗರೂಕ; ಎಚ್ಚರತಪ್ಪಿದ.

ಪ್ರಮಥ (ನಾ). ಶಿವನ ಪರಿವಾರದಲ್ಲಿ ಒಬ್ಬ. ~ನಾಥ = ೧. ಶಿವ ೨. ಗಣಪತಿ.

ಪ್ರಮದ (ನಾ). ೧. ಸಂತೋಷ; ಆನಂದ. (ಗು). ೨. ಮತ್ತೇರಿದ; ಸೊಕ್ಕಿದ.

ಪ್ರಮದೆ (ನಾ). ೧. (ಸುಂದರಳಾದ) ಯುವತಿ. ೨. ಹೆಂಡತಿ.

ಪ್ರಮಾಣ (ನಾ). ೧. ಅಳತೆ. ೨. ಪರಿಮಿತಿ. ೩. ನಿತ್ಯ; ಶಾಶ್ವತ. ೪. ವಿಧಿ; ನಿಯಮ. ೫. ಆಧಾರ; ಸಾಕ್ಷಿ. ೬. ಶಾಸ್ತ್ರ; ಆಗಮ. ೭. ಕಾರಣ; ಹೇತು ~ಇಸು = ೧. ಅಳೆ; ತೂಕಮಾಡು. ೨. ಅರಿ; ತಿಳಿ.

೩. ರುಜುವಾತು ಮಾಡು; ಸಾಕ್ಷಿಹೇಳು. ೪. ಪರೀಕ್ಷಿಸಿ ನೋಡು; ಪರಿಶೀಲಿಸು. ~ಗ್ರಂಥ = ಆಧಾರಗ್ರಂಥ. ~ಪತ್ರ = ಯೋಗ್ಯತಾ ಪತ್ರ; ಆಧಾರ ಪತ್ರ. ~ಪುರುಷ = ನ್ಯಾಯಾಧೀಶ; ನ್ಯಾಯಾಧಿಕಾರಿ. ~ವಚನ = ಅಧಿಕಾರ ಸ್ವೀಕಾರದ ಪ್ರಾರಂಭದಲ್ಲಿ ಮಾಡುವ ಪ್ರತಿಜ್ಞೆ.

ಪ್ರಮಾಣಿಕ (ನಾ). ೧. ನಂಬಿಕೆಗೆ ಅರ್ಹನಾದವನು. (ಗು). ೨. ಸತ್ಯವಾದ.

ಪ್ರಮಾದ (ನಾ). ೧ ಅಜಾಗರೂಕತೆ, ಅಲಕ್ಷ್ಯ. ೨. ದೋಷ; ತಪ್ಪು. ೩ ಹುಚ್ಚು; ಉನ್ಮಾದ.

ಪ್ರಮಿತಿ (ನಾ) ೧. ಅಳತೆ. ೨ ನಿಶ್ಚಿತಜ್ಞಾನ; ಯಥಾರ್ಥ ಜ್ಞಾನ.

ಪ್ರಮುಖ (ನಾ). ೧. ಒಡೆಯ; ಮುಖ್ಯಸ್ಥ. (ಗು). ೨. ಮುಂಭಾಗದಲ್ಲಿರುವ; ಸಮ್ಮುಖದ. ೩. ಪ್ರಧಾನವಾದ; ಮುಖ್ಯವಾದ.

ಪ್ರಮೇಯ (ನಾ). ೧. ಅಳೆಯ ಬೇಕಾದುದು. ೨. ಅಳೆಯಬಹುದಾದುದು; ಮಿತಿಯುಳ್ಳುದು. ೩. ಸಂದರ್ಭ; ಸನ್ನಿವೇಶ. ೪. ವಿಷಯ; ಸುದ್ದಿ. ೫. ರೇಖಾಗಣಿತದಲ್ಲಿ ಸಾಧನೀಯ ತತ್ತ್ವ, -ನಿಯಮ.

ಪ್ರಮೇಹ (ನಾ). ಒಂದು ಬಗೆಯ ಗುಹ್ಯರೋಗ; ಮೇಹ.

ಪ್ರಮೋದ (ನಾ). ೧. ಹಿಗ್ಗು; ಸಂತೋಷ. ೨. ಅರುವತ್ತು ಸಂವತ್ಸರಗಳಲ್ಲಿ ಒಂದು.

ಪ್ರಯತ (ಗು). ಪರಿಶುದ್ಧವಾದ; ಭಕ್ತಿಯಿಂದ ಕೂಡಿದ.

ಪ್ರಯತ್ನ (ನಾ). ೧. ಯತ್ನ; ಎತ್ತುಗಡೆ; ಉದ್ಯೋಗ. ೨. ಕಷ್ಟ; ತೊಂದರೆ. ೩. ಶ್ರಮ; ಆಯಾಸ. ~ಇಸು = ಯತ್ನಿಸು; ಉದ್ಯೋಗಿಸು.

ಪ್ರಯಾಗ (ನಾ) ೧. ಯಜ್ಞ. ೨. ಯಾಗಭೂಮಿ; ಯಜ್ಞ ನಡೆಯುವ ಸ್ಥಳ. ೩. ಒಂದು ಯಾತ್ರಾಸ್ಥಳ; ತ್ರಿವೇಣಿ ಸಂಗಮ.

ಪ್ರಯಾಣ (ನಾ). ೧. ಪಯಣ; ಸಂಚಾರ. ೨. ಸಾವು. ೩. ಅಭಿವೃದ್ಧಿ; ಪ್ರಗತಿ.

ಪ್ರಯಾಣಿಕ (ನಾ). ಪ್ರಯಾಣ ಮಾಡುವವನು; ಪಯಣಿಗ; ಪ್ರವಾಸಿ.

ಪ್ರಯಾಸ (ನಾ). ಶ್ರಮ; ತೊಂದರೆ. ~ಪಡು = ಕಷ್ಟಪಡು; ಶ್ರಮಪಡು.

ಪ್ರಯುಕ್ತ (ಗು). ೧. ಕೂಡಿದ; ಸೇರಿದ. (ಅ) ೨. ಕಾರಣವಾಗಿ; ಸಲುವಾಗಿ

ಪ್ರಯುತ (ನಾ). ೧. ಹತ್ತು ಲಕ್ಷ. (ಗು). ೨. ಸೇರಿದ; ಹೊಂದಿಕೊಂಡ.

ಪ್ರಯೋಗ (ನಾ). ೧ ಪರೀಕ್ಷೆ ಮಾಡಿ ನೋಡುವಿಕೆ. ೨. ನಿದರ್ಶನ; ದೃಷ್ಟಾಂತ; ಉದಾಹರಣೆ. ೩. ಬಳಕೆ; ಅನುಷ್ಠಾನ. ೪. ಧಾರ್ಮಿಕ ಕರ್ಮಗಳನ್ನು ಮಾಡಿಸುವ ಕ್ರಮ. ೫. ಒಂದಾಗಿ ಸೇರುವುದು. ೬. ಎಸೆಯುವುದು; ಹೊಡೆಯುವುದು. ~ಇಸು = ೧. ಉಪಯೋಗಿಸು; ಬಳಸು. ೨. ಎಸೆ; ಹೊಡೆ.

ಪ್ರಯೋಜಕ (ನಾ). ೧. ಕೆಲಸಕ್ಕೆ ತೊಡಗಿಸುವವನು, -ನಿಯೋಜಿಸುವವನು (ಗು). ೨. ಉಪಯುಕ್ತವಾದ.

ಪ್ರಯೋಜನ (ನಾ). ೧. ಉಪಯೋಗ; ಬಳಕೆ. ೨. ಲಾಭ. ೩. ಉದ್ದೇಶ; ಗುರಿ. ೪. ಆವಶ್ಯಕತೆ.

ಪ್ರರೂಢ (ಗು). ೧. ಬೆಳೆದ; ದೊಡ್ಡದಾದ; ವಿಕಾಸಗೊಂಡ. ೨. ಹೊರಹೊಮ್ಮಿದ.

ಪ್ರರೋಹ (ನಾ). ೧. ಬೆಳೆಯುವಿಕೆ; ಹುಲುಸಾಗುವಿಕೆ. ೨. ಮೊಳೆಯುವಿಕೆ. ೩. ಮೊಳಕೆ; ನನೆ.

ಪ್ರಲ(ಳ)ಂಬ (ನಾ). ೧. ಹಾರ; ಮಾಲೆ. ೨. ಒಬ್ಬ ರಾಕ್ಷಸನ ಹೆಸರು. (ಗು). ೩. ತೂಗುಬಿದ್ದ; ನೇತಾಡುವ.

ಪ್ರಲಪನ (ನಾ). ೧. ಮಾತನಾಡುವಿಕೆ. ೨. ಅಸಂಬದ್ಧ ಪ್ರಲಾಪ; ಬಡಬಡಿಸುವಿಕೆ. ೩. ಅಳುವಿಕೆ; ರೋದನ.

ಪ್ರಲಪಿಸು (ಕ್ರಿ). ೧. ಮಾತನಾಡು. ೨. ಹಾಳು ಹರಟೆ ಹೊಡೆ. ೩. ವಿಲಾಪಿಸು; ಅಳು.

ಪ್ರಲ(ಳ)ಯ (ನಾ). ೧. ನಾಶ; ಹಾಳು. ೨. ಪ್ರಪಂಚದ ನಾಶ, –ಅಳಿವು. ೩. ಮೂರ್ಛೆ; ವಿಸ್ಮೃತಿ. ೪. ಸಾವು; ಮರಣ. ~ಅಗ್ನಿ=ಪ್ರಳಯಕಾಲದ ಬೆಂಕಿ. ~ಕಾಲ=ಪ್ರಪಂಚದ ನಾಶದ ಕಾಲ; ಸಂವರ್ತ.

ಪ್ರಲಾ(ಳಾ)ಪ=ಪ್ರಲಪನ. ~ಇಸು=ಪ್ರಲಪಿಸು.

ಪ್ರಲೋಭನ (ನಾ). ಆಸೆಯನ್ನು ಹುಟ್ಟಿಸುವುದು; ಆಮಿಷ.

ಪ್ರಲೋಭನೆ=ಪ್ರಲೋಭನ.

ಪ್ರವಚನ (ನಾ). ೧. ಉತ್ತಮವಾದ ಮಾತು. ೨. ವ್ಯಾಖ್ಯಾನ; ವಿವರಣೆ. ೩. ಪವಿತ್ರವಾದ ಧಾರ್ಮಿಕ ರಚನೆ.

ಪ್ರವಣ (ನಾ). ೧. ಇಳಿಜಾರು; ಇಳುಕಲು. ೨. ನಾಲ್ಕು ದಾರಿಗಳು ಕೂಡುವ ಸ್ಥಳ; ಚೌಕ. ೩. ಆಸಕ್ತಿಯುಳ್ಳವನು; ತತ್ಪರನಾದವನು. (ಗು). ೪. ನಿಷ್ಠೆಯಿಂದ ಕೂಡಿದ. ೫. ಆಸಕ್ತನಾದ; ಒಲಿದ.

ಪ್ರವರ (ನಾ). ೧. ಮಂತ್ರ; ಸ್ತೋತ್ರ. ೨. ವಂಶಾವಳಿ; ಪರಂಪರೆ; ಸಂತತಿ. ೩. ಕುಲದ ಪೂರ್ವಜ. ೪. ಗೋತ್ರಗಳಲ್ಲಿ ಯಾವುದಾದರೂ ಒಂದು. ೫. ಉತ್ತಮ; ಶ್ರೇಷ್ಠ. ೬. ಅನವಶ್ಯಕ ವಿವರಣೆ.

ಪ್ರವರ್ತಕ (ನಾ). ೧. ಪ್ರೇರಕ; ಉತ್ತೇಜನ ಕೊಡುವವನು. ೨. ಮೊದಲಿಗ; ಮೂಲ ಪುರುಷ. (ಗು). ೩. ತೊಡಗಿಸುವ; ಪ್ರಾರಂಭಿಸುವ.

ಪ್ರವರ್ತಿಸು (ಕ್ರಿ). ಚೆನ್ನಾಗಿ ನಡಸು.

ಪ್ರವರ್ಧನ (ನಾ). ಏಳಿಗೆ; ಅಭಿವೃದ್ಧಿ.

ಪ್ರವಹ (ನಾ). ೧. ಹರಿಯುವಿಕೆ. ೨. ಮುಂದೆ ಎಳೆಯುವಿಕೆ; ಸಾಗಿಸುವಿಕೆ. ೩. ಗಾಳಿ. ~ಇಸು=ಮುಂದೆ ಸಾಗು; ಹರಿ.

ಪ್ರವಹಣ (ನಾ). ೧. ತೆರೆ ಹಾಕಿದ ಮೇನೆ, –ಪಲ್ಲಕ್ಕಿ. ೨. ಹಡಗು; ಜಹಜು. ೩. ಮುಂದುವರಿಯುವಿಕೆ.

ಪ್ರವಾದ (ನಾ). ೧. ಘೋಷಿಸುವುದು; ತಿಳಿಸುವುದು. ೨. ಗಾಳಿಸುದ್ದಿ; ಜನವಾದ. ೩. ಚರ್ಚೆ; ಸಂಭಾಷಣೆ.

ಪ್ರವಾದಿ (ನಾ). ೧. ಘೋಷಿಸುವವನು. ೨. ತತ್ತ್ವಜ್ಞಾನಿ; ದಾರ್ಶನಿಕ.

ಪ್ರವಾಲ(ಳ) (ನಾ). ೧. ಎಳೆಯ ಚಿಗುರು; ಪಲ್ಲವ. ೨. ಹಸುರುಬಣ್ಣ. ೩. ಕೆಂಪು ಬಣ್ಣ; ಅರುಣರಾಗ. ೪. ಹವಳ. ೫. ತಲೆಯ ಕೂದಲು. ೬. ಬಾಲ. ೭. ವೀಣೆಯ ಒಂದು ಭಾಗ.

ಪ್ರವಾಸ (ನಾ). ಸಂಚಾರ; ಪ್ರಯಾಣ. ~ಇಗ=ಪ್ರವಾಸಿ.

ಪ್ರವಾಸಿ (ನಾ). ಪಯಣಿಗ; ಪ್ರಯಾಣಿಕ.

ಪ್ರವಾಹ (ನಾ). ೧. ಹರಿಯುವಿಕೆ; ಮುಂದುವರಿಯುವಿಕೆ. ೨. ಹೊಳೆ; ನದಿ.

ಪ್ರವೀಣ (ನಾ). ಪರಿಣತ; ನಿಷ್ಣಾತ.

ಪ್ರವೀಣೆ (ನಾ). ನಿಪುಣೆ; ನಿಷ್ಣಾತೆ.

ಪ್ರವೀರ (ನಾ). ೧. ಶೂರ; ವೀರ. (ಗು). ೨. ಉತ್ತಮವಾದ; ಶ್ರೇಷ್ಠವಾದ. ೩. ಶಕ್ತಿಯುತವಾದ.

ಪ್ರವೃತ್ತ (ಗು). ೧. ಪ್ರಾರಂಭಿಸಿದ; ತೊಡಗಿದ; ಪ್ರವರ್ತಿಸಿದ. ೨. ಹುಟ್ಟಿದ; ಸುತ್ತಲ್ಪಟ್ಟ.

ಪ್ರವೃತ್ತಿ (ನಾ). ೧. ಏಳಿಗೆ; ಪ್ರಗತಿ. ೨. ಐಹಿಕ ಜೀವನದಲ್ಲಿ ಆಸಕ್ತಿ. ೩. ಸ್ವಭಾವ; ಗುಣ. ೪. ನಿರಂತರವಾಗಿ ಹರಿಯುವಿಕೆ. ೫. ಮನಸ್ಸಿನ ಒಲವು; ಲಹರಿ. ೬. ವಾರ್ತೆ; ಸುದ್ದಿ. ~ಮಾರ್ಗ=೧. ಪ್ರಗತಿಯ ಹಾದಿ;

ಏಳಿಗೆಯ ಮಾರ್ಗ. ೨. ಐಹಿಕಜೀವನದಲ್ಲಿ ಆಸಕ್ತಿ.

ಪ್ರವೃದ್ಧ (ಗು). ೧. ಪೂರ್ಣವಾಗಿ ಬೆಳೆದ. ೨. ವಿಸ್ತರಿಸಿದ; ಹರಡಿದ.

ಪ್ರವೃದ್ಧಿ (ನಾ). ಅಭಿವೃದ್ಧಿ; ಏಳಿಗೆ.

ಪ್ರವೇಶ (ನಾ). ೧. ಒಳಹೊಗುವಿಕೆ; ಒಳ ಸೇರುವಿಕೆ. ೨. ಸಮೀಪಿಸುವಿಕೆ. ೩. ಪ್ರಾರಂಭ; ಮೊದಲು. ೪. ಬಾಗಿಲು; ದ್ವಾರ. ೫. ನಾಟಕದಲ್ಲಿಯ ಒಂದು ದೃಶ್ಯ. ~ಇಸು = ಒಳಸೇರು; ಒಳಹೊಗು.

ಪ್ರಶಂಸೆ (ನಾ). ೧. ಹೊಗಳಿಕೆ; ಕೊಂಡಾಟ. ೨. ಕೀರ್ತಿ; ಪ್ರಸಿದ್ಧಿ. ~ಇಸು = ಹೊಗಳು; ಕೊಂಡಾಡು.

ಪ್ರಶಮನ (ನಾ). ೧. ಶಾಂತಿ; ಸಮಾಧಾನ; ಉಪಶಮನ. ೨. ಕೊಲೆ; ವಧೆ. (ಗು). ೩. ಉಪಶಮಿಸುವ; ಶಮನಮಾಡುವ. ೪. ಶಮನವಾಗುವ.

ಪ್ರಶಮಿಸು (ಕ್ರಿ). ಉಪಶಮನ ಮಾಡು; ಶಾಂತಪಡಿಸು.

ಪ್ರಶಸ್ತ (ನಾ). ೧. ಉತ್ತಮ; ಶ್ರೇಷ್ಠ. (ಗು). ೨. ಉತ್ತಮವಾದ; ಶ್ರೇಷ್ಠವಾದ.

ಪ್ರಶಸ್ತಿ (ನಾ). ೧. ಹೊಗಳಿಕೆ. ೨. ಬಿರುದು.

ಪ್ರಶಾಂತ (ಗು). ೧. ಅತ್ಯಂತ ಶಾಂತವಾದ. ೨. ಸ್ತಬ್ಧವಾದ.

ಪ್ರಶ್ನಾರ್ಥಕ (ಗು). ಪ್ರಶ್ನೆಯನ್ನು ಒಳಗೊಂಡ; ಪ್ರಶ್ನೆಯ ಅರ್ಥವುಳ್ಳ.

ಪ್ರಶ್ನೆ (ನಾ). ೧. ಕೇಳುವಿಕೆ; ಪೃಚ್ಛೆ. ೨. ಪ್ರತಿಭಟನೆ. ೩. ಸಂದೇಹ; ಸಂಶಯ. ೪. ಸಮಸ್ಯೆ. ~ಇಸು = ೧. ಕೇಳು. ೨. ಪ್ರತಿಭಟಿಸು.

ಪ್ರಶ್ರಯ (ನಾ). ನಮ್ರತೆ; ವಿನಯ.

ಪ್ರಷ್ಠ (ನಾ). ೧. ಮುಖಂಡ; ಮುಂದಾಳು. (ಗು). ೨. ಮುಂದೆ ಇರುವ. ೩. ಶ್ರೇಷ್ಠವಾದ; ಉತ್ತಮವಾದ.

ಪ್ರಸಂಗ (ನಾ). ೧. ಸಮಯ; ಸಂದರ್ಭ. ೨. ಘಟನೆ. ೩. ಸಂಭಾಷಣೆ; ಚರ್ಚೆ. ೪. ಯಕ್ಷಗಾನದಲ್ಲಿ ಕಥಾನಕ. ~ಅವಧಾನ = ಸಂದರ್ಭೋಚಿತವಾದ ಉಪಾಯಗಳನ್ನು ತಿಳಿದಿರುವುದು. ~ಇಸು = ಚರ್ಚೆಯನ್ನು ನಡಸು; ಚರ್ಚಿಸು

ಪ್ರಸಕ್ತ (ಗು). ತೊಡಗಿದ; ಆರಂಭಿಸಿದ.

ಪ್ರಸಕ್ತಿ (ನಾ). ೧. ತೊಡಗುವಿಕೆ; ಆರಂಭ. ೨. ಪ್ರಸಂಗ; ವಿಷಯ.

ಪ್ರಸನ್ನ (ನಾ). ೧. ಕಾವ್ಯದ ಹತ್ತು ಗುಣಗಳಲ್ಲಿ ಒಂದು. (ಗು). ೨. ತಿಳಿಯಾದ; ನಿರ್ಮಲವಾದ. ೩. ಕೃಪೆಯುಳ್ಳ; ದಯೆಯುಳ್ಳ. ೪. ಸಮಾಧಾನ ಚಿತ್ತದ; ಶಾಂತವಾದ. ೫. ಸಂತುಷ್ಟವಾದ; ತೃಪ್ತಿಹೊಂದಿದ

ಪ್ರಸನ್ನತೆ (ನಾ). ೧. ನೈರ್ಮಲ್ಯ; ಸ್ವಚ್ಛತೆ; ತಿಳಿಯಾಗಿರುವುದು. ೨. ಕರುಣೆ; ದಯೆ. ೩. ತೃಪ್ತಿ; ನೆಮ್ಮದಿ.

ಪ್ರಸಭ (ನಾ). ೧. ಬಲತ್ಕಾರ. ೨. ರಭಸ; ವೇಗ.

ಪ್ರಸರ (ನಾ). ೧. ಮುಂದುವರಿಯುವಿಕೆ; ಮುಂದಕ್ಕೆ ಚಲಿಸುವುದು. ೨. ಹರಡುವಿಕೆ. ೩. ವಿಸ್ತಾರ; ಹರಹು. ೪. ಗುಂಪು; ಸಮೂಹ. ೫. ಪ್ರವಾಹ. ~ಇಸು = ಹಬ್ಬು; ವಿಸ್ತರಿಸು.

ಪ್ರಸರಣ (ನಾ). ಹರಡುವಿಕೆ; ವಿಸ್ತರಿಸುವಿಕೆ.

ಪ್ರಸವ (ನಾ). ೧. ಹೆರಿಗೆ; ಹಡೆಯುವಿಕೆ. ೨. ಸಂತತಿ; ವಂಶ; ಪೀಳಿಗೆ. ೩. ಹೂವು; ಅಲರು. ೪. ಹಣ್ಣು; ಫಲ. ೫. ಅರಳುವುದು; ವಿಕಾಸ. ೬. ಬೆಳೆಯುದು. ~ಇಸು = ಜನ್ಮಕೊಡು; ಹೆರು.

ಪ್ರಸಾದ (ನಾ). ೧. ತಿಳಿಯಾಗುವಿಕೆ; ಸ್ಪಷ್ಟವಾಗುವಿಕೆ. ೨. ಅನುಗ್ರಹ; ದಯೆ. ೩. ಶಾಂತಿ; ಸಮಾಧಾನ. ೪. ಇನಾಮು; ಬಹುಮಾನ. ೫.= ಪ್ರಾಸಾದ. ೬. ದೇವರಿಗೆ

ಅರ್ಪಿಸಿ ಪಡೆಯುದು. ೭. ಕಾವ್ಯದಲ್ಲಿರ ಬೇಕಾದ ಹತ್ತುಗುಣಗಳಲ್ಲಿ ಒಂದು. ~ಇಸು = ಅನುಗ್ರಹಿಸು; ದಯೆತೋರು.

ಪ್ರಸಾಧನ (ನಾ). ೧. ಪೂರೈಸುವಿಕೆ; ನಿರ್ವಹಿಸುವಿಕೆ. ೨. ಜೋಡಿಸುವಿಕೆ; ಕ್ರಮವಾಗಿಡುವಿಕೆ. ೩. ಅಲಂಕರಿಸುವಿಕೆ ೪. ಅಲಂಕಾರ; ಶೃಂಗಾರ.

ಪ್ರಸಾರ (ನಾ). ಹರಡುವಿಕೆ; ಹಬ್ಬುವಿಕೆ.

ಪ್ರಸಾರಣ ೧. = ಪ್ರಸಾರ. ೨. ಪ್ರದರ್ಶನ.

ಪ್ರಸಿದ್ಧ (ನಾ). ೧ ಕೀರ್ತಿವಂತ; ಹೆಸರುವಾಸಿಯಾದವನು. (ಗು). ೨. ಏಳಿಗೆ ಹೊಂದಿದ; ಅಭಿವೃದ್ಧಿಪಡೆದ. ೩. ಹೆಸರು ಪಡೆದ; ಖ್ಯಾತಿಹೊಂದಿದ.

ಪ್ರಸಿದ್ಧಿ (ನಾ). ಯಶಸ್ಸು; ಖ್ಯಾತಿ.

ಪ್ರಸೂತ (ಗು). ೧. ಹುಟ್ಟಿದ. ೨. ಜನ್ಮ ಕೊಟ್ಟ; ಹೆತ್ತ.

ಪ್ರಸೂತಿ (ನಾ). ೧. ಹೆರಿಗೆ; ಪ್ರಸವ. ೨. ವಂಶ; ಮಕ್ಕಳು; ಸಂತತಿ. ೩. ತಾಯಿ. ~ಗೃಹ = ಹೆರಿಗೆಯ ಮನೆ.

ಪ್ರಸೂತಿ (ನಾ). ಜನ್ಮಕೊಟ್ಟವಳು; ತಾಯಿ.

ಪ್ರಸೂನ (ನಾ). ೧. ಹೂವು; ಪುಷ್ಪ. ೨. ಹಣ್ಣು; ಫಲ. ೩. ಹುಟ್ಟು; ಉತ್ಪತ್ತಿ.

ಪ್ರಸೃತಿ (ನಾ). ಬೊಗಸೆ; ಅಂಜಲಿ.

ಪ್ರಸ್ತ (ನಾ). ೧. ಸಂದರ್ಭ; ಪ್ರಸಂಗ. ೨ ಶುಭಸಮಾರಂಭ. ೩. ಸಮಾರಂಭದ ಊಟ ೪. ನಿಷೇಕ.

ಪ್ರಸ್ತರ (ನಾ). ೧ (ಹೂವಿನ) ಹಾಸಗೆ. ೨. ಸಮತಲಪ್ರದೇಶ; ಮೈದಾನ. ೩. ಕಲ್ಲು; ಬಂಡೆ.

ಪ್ರಸ್ತಾಪ (ನಾ). ೧. ಆರಂಭ; ಪ್ರಾರಂಭ. ೨. ಪೀಠಿಕೆ; ಮುನ್ನುಡಿ. ೩. ಸಂದರ್ಭ; ಅವಕಾಶ. ೪. ಉಲ್ಲೇಖ; ಪ್ರಸಂಗ. ~ಇಸು = ವಿಷಯವನ್ನು ಉಲ್ಲೇಖಿಸು; ಸೂಚಿಸು.

ಪ್ರಸ್ತಾರ (ನಾ). ೧. ಹರಡುವುದು; ವಿಸ್ತರಿಸುವುದು. ೨. ಹಾಸುಗೆ; ಶಯ್ಯೆ. ೩. ಮೈದಾನ; ಸಮತಟ್ಟಾದ ಸ್ಥಳ. ೪. ಕಾಡು; ಅರಣ್ಯ. ೫. ಛಂದಸ್ಸನ್ನು ಕಂಡು ಹಿಡಿಯಲು ಲಘುಗುರುಗಳನ್ನು ಹಾಕುವುದು. ~ಇಸು = ೧. ಹರಡು; ವಿಸ್ತರಿಸು. ೨. ಛಂದಸ್ಸಿನಲ್ಲಿ ಲಘುಗುರುಗಳನ್ನು ಗುರುತಿಸು.

ಪ್ರಸ್ತಾವ = ಪ್ರಸ್ತಾಪ.

ಪ್ರಸ್ತಾವನೆ (ನಾ). ೧. ತಿಳಿಸಲು ಅಥವಾ ಹೊಗಳಲು ಕಾರಣವಾಗುವುದು. ೨. ಆರಂಭ; ಪ್ರಾರಂಭ ೩ ಪೀಠಿಕೆ; ಮುನ್ನುಡಿ.

ಪ್ರಸ್ತುತ (ಗು). ೧. ಹೊಗಳಿದ; ಪ್ರಶಂಸಿಸಿದ. ೨. ಸಾಧಿಸಿದ; ಮಾಡಿದ. ೩. ಆರಂಭಿಸಿದ. ೪. ಬಯಸಿದ; ಅಪೇಕ್ಷಿಸಿದ. ೫. ತತ್ಕಾಲದ; ಸದ್ಯದ. ೬. ವಿಷಯಕ್ಕೆ ನೇರವಾಗಿ ಸಂಬಂಧಿಸಿದ; ಪ್ರಕೃತ

ಪ್ರಸ್ಥ (ನಾ). ೧. ಪ್ರತಿಷ್ಠೆ; ಗೌರವ. ೨. ಬೆಟ್ಟದ ತಪ್ಪಲುಪ್ರದೇಶ; ಸಾನು. ೩. ಒಂದು ಅಳತೆ.

ಪ್ರಸ್ಥಾನ (ನಾ). ೧. ಪ್ರಯಾಣ; ಸಂಚಾರ. ೨. ದಂಡಯಾತ್ರೆ; ಯುದ್ಧದ ಪ್ರಯಾಣ. ೩. ರೀತಿ; ಕ್ರಮ. ೪. ಮಾರ್ಗ; ಸಂಪ್ರದಾಯ. ೫. ಉತ್ತಮವಾದ ಸ್ಥಾನ. ~(ಂ)ಗೆಯ್ = ಪ್ರಯಾಣ ಮಾಡು.

ಪ್ರಸ್ಫುಟ (ಗು). ೧. ಅರಳಿದ; ವಿಕಸಿಸಿದ. ೨. ಸ್ಪಷ್ಟವಾದ; ನಿಶ್ಚಿತವಾದ.

ಪ್ರಸ್ಫುರಿತ (ಗು). ನಡುಗುವ; ಚಲಿಸುವ.

ಪ್ರಹತ (ಗು). ಹೊಡೆಯಲ್ಪಟ್ಟ.

ಪ್ರಹರ (ನಾ). ೧. ಹೊಡೆತ; ಪ್ರಹಾರ. ೨ ಮೇಲೆ ಬೀಳುವುದು; ಮುತ್ತಿಗೆ ಹಾಕುವುದು. ೩. ಮೂರು ಗಂಟೆಗಳ ಅವಧಿ; ದಿನದ ಎಂಟನೆಯ ಒಂದು ಭಾಗ. ~ಇಸು = ೧. ಹೊಡೆ; ಬಡಿ. ೨. ಹಿಮ್ಮೆಟ್ಟಿಸು.

ಪ್ರಹರಣ (ನಾ). ೧. ಹೊಡೆತ; ಬಡಿತ; ಏಟು. ೨. ಹೋರಾಟ; ಯುದ್ಧ.

ಪ್ರಹರಿ (ನಾ). ಕಾವಲುಗಾರ.

ಪ್ರಹರ್ಷ (ನಾ). ಅತಿಯಾದ ಸಂತೋಷ.

ಪ್ರಹಸನ (ನಾ). ೧. ಅತಿಯಾದ ನಗು; ಅಟ್ಟಹಾಸ. ೨. ರೂಪಕದ ಹತ್ತು ವಿಧಗಳಲ್ಲಿ ಒಂದು; ಹಾಸ್ಯನಾಟಕ. ೩. ವಿಡಂಬನೆ; ಪರಿಹಾಸ.

ಪ್ರಹಾರ (ನಾ). ೧. ಹೊಡೆಯುವಿಕೆ; ಬಡಿಯುವಿಕೆ. ೨. ಹೊಡತ, ಪೆಟ್ಟು.

ಪ್ರಹಿತ (ಗು). ೧. ಕಳುಹಿಸಿದ. ೨. ಇಟ್ಟ; ಇಡಲ್ಪಟ್ಟ. ೩. ತುಂಬ ಹಿತವಾದ.

ಪ್ರಹೇಲಿ(ಳ)ಕೆ (ನಾ). ಒಗಟು; ಸಮಸ್ಯೆ.

ಪ್ರಹ್ಲಾದ(ನಾ). ಅತ್ಯಂತ ಸಂತೋಷ,-ಆನಂದ.

ಪ್ರಹ್ಲಾದ (ನಾ). ೧. ಆನಂದ; ಸಂತಸ. ೨. ಸದ್ದು; ಗದ್ದಲ. ೩. ಹಿರಣ್ಯಕಶಿಪುವಿನ ಮಗನ ಹೆಸರು.

ಪ್ರಾಂಗಣ (ನಾ). ಅಂಗಳ; ಅಂಗಣ.

ಪ್ರಾಂತ ೧. = ಪ್ರಾಂತ್ಯ. ೨. ತುದಿ; ಅಂಚು. ೩. ಗಡಿ; ಎಲ್ಲೆ.

ಪ್ರಾಂತ್ಯ (ನಾ). ದೇಶದ ಒಂದು ಭಾಗ.

ಪ್ರಾಂಶು (ಗು). ೧. ಎತ್ತರವಾದ; ಉನ್ನತವಾದ. ೨. ಉದ್ದವಾದ; ನೀಳವಾದ.

ಪ್ರಾಕಾರ (ನಾ). ಪೌಳಿ; ಗೋಡೆ.

ಪ್ರಾಕು = ಪ್ರಾಕ್ಕು.

ಪ್ರಾಕೃತ (ನಾ). ೧. ಒಂದು ಭಾಷೆ. ೨. ಯಜ್ಞಪಶು. (ಗು). ೩. ಮೂಲವಾದ; ಸಹಜವಾದ. ೪. ಸಾಮಾನ್ಯವಾದ; ಸಾಧಾರಣವಾದ. ೫. ಸಂಸ್ಕರಿಸದ; ಮಾರ್ಪಾಟಾಗದ.

ಪ್ರಾಕೃತಿಕ (ಗು). ಪ್ರಕೃತಿಗೆ ಸಂಬಂಧಿಸಿದ; ನೈಸರ್ಗಿಕ; ಸ್ವಾಭಾವಿಕ.

ಪ್ರಾಕ್ಕು (ನಾ). ೧. ಮುಂಜಾನೆ; ಬೆಳಗು. ೨. ಪೂರ್ವಕಾಲ; ಹಿಂದಿನ ಕಾಲ. (ಗು). ೩. ಪೂರ್ವದ; ಹಿಂದಿನ.

ಪ್ರಾಕ್ತನ = ಪ್ರಾಚೀನ.

ಪ್ರಾಗಲ್ಭ್ಯ (ನಾ). ಪ್ರೌಢಿಮೆ; ಪ್ರಗಲ್ಭತೆ.

ಪ್ರಾಗ್ಜನ್ಮ (ನಾ). ಹಿಂದಿನ ಜನ್ಮ.

ಪ್ರಾಗ್ರ (ನಾ). ೧. ಅತ್ಯುನ್ನತವಾದುದು. (ಗ). ೨. ಅತ್ಯುನ್ನತವಾದ; ಅತಿ ಎತ್ತರದ.

ಪ್ರಾಗ್ವಂಶ (ನಾ). ವೇದಿಕೆಯ ಮುಂಭಾಗ.

ಪ್ರಾಙ್ಮುಖ (ಅ). ಎದಿರಾಗಿ; ಅಭಿಮುಖವಾಗಿ.

ಪ್ರಾಚಾರ್ಯ (ನಾ). ಆಚಾರ್ಯಪ್ರಮುಖ; ಪ್ರಧಾನ ಗುರು.

ಪ್ರಾಚೀನ (ನಾ). ೧. ಪೂರ್ವಾರ್ಜಿತ ಕರ್ಮ. (ಗು). ೨. ಹಿಂದಿನ; ಹಳೆಯ ಕಾಲದ. ೩. ಪೂರ್ವದಿಕ್ಕಿನ; ಪೂರ್ವದ.

ಪ್ರಾಚೀರ (ನಾ). ಆವರಣ; ಬೇಲಿ; ಗೋಡೆ.

ಪ್ರಾಚುರ್ಯ (ನಾ). ೧. ಹೆಚ್ಚಳ; ಆಧಿಕ್ಯ. ೨. ಗುಂಪು.

ಪ್ರಾಚ್ಯ (ಗು). ೧. ಮುಂದೆ ಇರುವ; ಸಮ್ಮುಖದ. ೨. ಪುರಾತನ; ಹಳೆಯ. ೩. ಪೂರ್ವದ; ಪೂರ್ವದಿಕ್ಕಿನ.

ಪ್ರಾಜ್ಞ (ನಾ). ೧. ವಿದ್ವಾಂಸ; ಪಂಡಿತ. (ಗು). ೨. ಬುದ್ಧಿವಂತಿಕೆಯುಳ್ಳ; ತಿಳಿವಳಿಕೆಯುಳ್ಳ.

ಪ್ರಾಜ್ಯ (ನಾ). ೧. ಪವಿತ್ರವಾದುದು; ಶ್ರೇಷ್ಠವಾದುದು. (ಗು). ೨. ಅಪಾರವಾದ; ಅಧಿಕವಾದ.

ಪ್ರಾಣ (ನಾ). ೧. ಹರಣ; ಜೀವ. ೨. ಪಂಚಪ್ರಾಣವಾಯುಗಳಲ್ಲಿ ಒಂದು. ೩. ಗಾಳಿ; ವಾಯು. ೪. ಬಲ; ಶಕ್ತಿ. ೫. ಅತ್ಯಂತ ಪ್ರಿಯವಾದುದು. ~ಆಯಾಮ = ಉಸಿರನ್ನು ಹತೋಟಿಯಲ್ಲಿ ಇಟ್ಟುಕೊಳ್ಳುವುದು. ~ಆಹುತಿ = ೧. ದೇಹವನ್ನು ಬಲಿಯಾಗಿ ಅರ್ಪಿಸುವುದು. ೨. ಊಟಕ್ಕೆ ಮೊದಲು ಪಂಚಪ್ರಾಣಗಳ ಹೆಸರಿನಿಂದ ಇಡುವ ಅನ್ನ. ~ಈಶ = ೧. ಜೀವದ ಒಡೆಯ. ೨. = ಪ್ರಾಣೇಶ್ವರ. ~ಈಶ್ವರ = ನಲ್ಲ;

ಕಾದಲ. ~ಈಶ್ವರಿ = ನಲ್ಲೆ; ಪ್ರಿಯತಮೆ. ~ತೆಗೆ = ೧. ಕೊಲ್ಲು. ೨.=ಪ್ರಾಣಹಿಂಡು. ~ದಾನ = ೧. ಜೀವವನ್ನು ಕೊಡುವುದು. ೨. ಅಧಿಕಾರ ಅಥವಾ ಅವಕಾಶವನ್ನು ವಿಸ್ತರಿಸುವುದು. ~ಪದಕ = ೧. ಬದುಕಿಗೆ ಅಲಂಕಾರಪ್ರಾಯವಾದ ವಸ್ತು. ೨.ಅತ್ಯಂತ ಪ್ರಿಯವಾದುದು. ~ಪ್ರಿಯ = ಅತ್ಯಂತ ಪ್ರೀತಿಪಾತ್ರ; ನಲ್ಲ. ~ಸಂಕಟ=ಅತ್ಯಂತ ಹಿಂಸೆ; ಪೇಚು; ಇಕ್ಕಟ್ಟು. ~ಹಿಂಡು = ಅತಿಯಾಗಿ ಹಿಂಸಿಸು.

**ಪ್ರಾಣಿ** (ನಾ). ೧. ಪ್ರಾಣವುಳ್ಳುದು; ಜೀವಿ. ೨. ಮೃಗ; ಪಶು.

**ಪ್ರಾತಃಕಾಲ** (ನಾ). ಮುಂಜಾವ; ಬೆಳಗು.

**ಪ್ರಾತಃಸ್ಮರಣೀಯ** (ಗು). ಬೆಳಗಿನ ಹೊತ್ತಿನಲ್ಲಿ ಸ್ಮರಿಸಲು ಯೋಗ್ಯವಾದ.

**ಪ್ರಾಥಮಿಕ** (ಗು). ಮೊದಲನೆಯ; ಆರಂಭದ. ~ಶಾಲೆ = ಪ್ರಾರಂಭದ ಶಿಕ್ಷಣ ಕೊಡುವ ವಿದ್ಯಾಲಯ. ~ಶಿಕ್ಷಣ = ಆರಂಭದ ವಿದ್ಯಾಭ್ಯಾಸ.

**ಪ್ರಾದುರ್ಭಾವ** (ನಾ). ೧. ಕಣ್ಣಿಗೆ ಕಾಣುವುದು; ಗೋಚರಿಸುವುದು. ೨. ಉಂಟಾಗುವುದು.

**ಪ್ರಾದೇಶ** (ನಾ). ೧. ಗೇಣು. ೨. ಚೋಟು.

**ಪ್ರಾದೇಶಿಕ** (ಗು). (ಒಂದು) ಪ್ರದೇಶಕ್ಕೆ ಸೇರಿದ, –ಸಂಬಂಧಿಸಿದ.

**ಪ್ರಾಧಾನ್ಯ** (ನಾ). ೧. ಪ್ರಧಾನತೆ; ಶ್ರೇಷ್ಠತೆ. ೨. ಮುಖ್ಯವಾದುದು.

**ಪ್ರಾಧ್ಯಾಪಕ** (ನಾ). ಪ್ರಧಾನ ಅಧ್ಯಾಪಕ; ಮುಖ್ಯ ಅಧ್ಯಾಪಕ.

**ಪ್ರಾಪಂಚಿಕ** (ಗು). ೧. ಪ್ರಪಂಚಕ್ಕೆ ಸಂಬಂಧಿಸಿದ. ೨. ಸಾಂಸಾರಿಕ; ಲೌಕಿಕ.

**ಪ್ರಾಪಣಿಕ** (ನಾ). ವ್ಯಾಪಾರಿ; ವರ್ತಕ.

**ಪ್ರಾಪ್ತ** (ಗು). ೧. ಪಡೆದ; ದೊರೆತ. ೨.ಉಂಟಾದ; ಒದಗಿದ. ೩.ಯೋಗ್ಯನಾದ; ಅರ್ಹನಾದ. ~ವಯಸ್ಕ = ಹರೆಯಕ್ಕೆ ಬಂದ; ಪ್ರಬುದ್ಧ ವಯಸ್ಸಿನ.

**ಪ್ರಾಪ್ತಿ** (ನಾ). ೧. ಹೊಂದುವಿಕೆ. ೨. ವಿಧಿ; ದೈವ. ೩. ಸುದೈವ. ೪. ಸಿದ್ಧಿಗಳಲ್ಲಿ ಒಂದು. ೫. ಗಳಿಕೆ; ಆದಾಯ.

**ಪ್ರಾಬಲ್ಯ** (ನಾ). ಹೆಚ್ಚಳ; ಆಧಿಕ್ಯ.

**ಪ್ರಾಭವ** (ನಾ). ಶ್ರೇಷ್ಠತೆ; ಪವಿತ್ರತೆ.

**ಪ್ರಾಮಾಣಿಕ** (ನಾ). ೧. ನಂಬಿಕೆಗೆ ಅರ್ಹನಾದವನು; ನಂಬಿಗಸ್ತ. (ಗು). ೨. ಸಾಧಿಸಿದ; ಸಿದ್ಧಪಡಿಸಿದ. ೩. ನಂಬಲರ್ಹವಾದ. ~ತನ = ಪ್ರಾಮಾಣಿಕತೆ.

**ಪ್ರಾಮಾಣಿಕತೆ** (ನಾ). ನಂಬಿಕೆಗೆ ಅರ್ಹವಾಗಿರುವಿಕೆ.

**ಪ್ರಾಮಾಣ್ಯ** (ನಾ). ೧. ಅಳತೆ. ೨. ಆಧಾರ; ಸಾಕ್ಷಿ. ೩. ವಿಶ್ವಾಸ.

**ಪ್ರಾಯ** (ನಾ). ೧. ಹರೆಯ; ಯೌವನ. ೨. ವಯಸ್ಸು. (ಗು). ೩. ಸಮಾನವಾದ. (ಅ). ೪. = ಪ್ರಾಯಿಕ.

**ಪ್ರಾಯತ** (ನಾ). ಸಂಯಮಿ.

**ಪ್ರಾಯತೆ** (ನಾ). ಸಂಯಮವನ್ನು ಉಳ್ಳವಳು.

**ಪ್ರಾಯಶಃ** (ಅ). ೧. ಬಹುಮಟ್ಟಿಗೆ; ಬಹುಶಃ. ೨. ಸಾಮಾನ್ಯವಾಗಿ.

**ಪ್ರಾಯಶ್ಚಿತ್ತ** (ನಾ). ತಾನು ಮಾಡಿದ ತಪ್ಪು ಕೆಲಸದ ಪರಿಹಾರಕ್ಕಾಗಿ ಮಾಡುವ ಕರ್ಮ, –ಕ್ರಿಯೆ.

**ಪ್ರಾಯಸ್ಥ** (ನಾ). ಯುವಕ; ಹರೆಯದವನು.

**ಪ್ರಾಯಸ್ಥೆ** (ನಾ). ಯುವತಿ; ಯೌವನೆ.

**ಪ್ರಾಯಿಕ** (ಅ). ಸಾಮಾನ್ಯವಾಗಿ.

**ಪ್ರಾಯೋಗಿಕ** (ಗು). ೧. ಪ್ರಯೋಗಕ್ಕೆ ಒಳಪಡಿಸುವ. ೨. ಪ್ರಯೋಗಗೊಳ್ಳುತ್ತಿರುವ.

**ಪ್ರಾಯೋಪಗಮ** = ಪ್ರಾಯೋಪವೇಶ.

**ಪ್ರಾಯೋಪಗಮನ** = ಪ್ರಾಯೋಪವೇಶ.

**ಪ್ರಾಯೋಪವೇಶ** (ನಾ). ಉಪವಾಸದಿಂದ ಮರಣಹೊಂದುವ ವ್ರತ.

ಪ್ರಾರಂಭ (ನಾ). ತೊಡಗುವಿಕೆ; ಆರಂಭ. ~ಇಸು = ಮೊದಲು ಮಾಡು; ತೊಡಗು.

ಪ್ರಾರಬ್ಧ (ನಾ). ೧. ವಿಧಿ; ದೈವ. (ಗು). ೨. ಆರಂಭಿಸಿದ; ಪ್ರಾರಂಭಿಸಿದ.

ಪ್ರಾರ್ಥನೆ (ನಾ). ೧. ಬೇಡುವುದು; ಯಾಚಿಸುವುದು. ೨. ದೇವತಾಸ್ತುತಿ.

ಪ್ರಾರ್ಥಿ (ನಾ). ಬೇಡುವವನು; ಯಾಚಕ.

ಪ್ರಾರ್ಥಿಸು (ಕ್ರಿ). ಬೇಡು; ಮೊರೆಯಿಡು.

ಪ್ರಾಲಂಬ (ನಾ). ೧. ಉದ್ದವಾದ ಹಾರ, -ಸರ. (ಗು). ೨. ಜೋತಾಡುವ; ನೇತಾಡುವ.

ಪ್ರಾಲೆ(ಳೆ)ಯ (ನಾ). ೧. ಹಿಮ; ಮಂಜು. ೨. ಪಚ್ಚಕರ್ಪೂರ. ~ಅಂಶು = ಪ್ರಾಲೇಯದ್ಯುತಿ. ~ದ್ಯುತಿ = ಚಂದ್ರ; ತಿಂಗಳು.

ಪ್ರಾವರಣ (ನಾ). ಮೇಲೆ ಹೊದೆಯುವ ಬಟ್ಟೆ; ಉತ್ತರೀಯ.

ಪ್ರಾವೃತ ೧. = ಪ್ರಾವರಣ. (ಗು). ೨. ಆವರಿಸಲ್ಪಟ್ಟ; ಸುತ್ತುಗಟ್ಟಲ್ಪಟ್ಟ.

ಪ್ರಾಶನ (ನಾ). ೧. ತಿನ್ನುವುದು. ೨. ತಿನ್ನಿಸುವುದು.

ಪ್ರಾಶಸ್ತ್ಯ (ನಾ). ಪ್ರಾಧಾನ್ಯ; ಮಹತ್ತ್ವ.

ಪ್ರಾಸ (ನಾ). ೧. ಪದ್ಯದ ನಿಯತಸ್ಥಳಗಳಲ್ಲಿ ಬರುವ ನಿಯತಾಕ್ಷರ. ೨. ಒಂದು ಬಗೆಯ ಆಯುಧ.

ಪ್ರಾಸಂಗಿಕ (ಗು). ಸನ್ನಿವೇಶದಿಂದುಂಟಾದ; ಪ್ರಸಂಗಕ್ಕೆ ಸಂಬಂಧಿಸಿದ.

ಪ್ರಾಸಾದ (ನಾ). ಮಹಲು; ಸೌಧ.

ಪ್ರಾಸ್ತಾವಿಕ (ಗು). ೧. ಪ್ರಾಸಂಗಿಕ; ಸಾಂದರ್ಭಿಕ. ೨. ಮೊದಲಿನ; ಪ್ರಾರಂಭದ.

ಪ್ರಾಹ್ಣ (ನಾ). ಹಗಲಿನ ಪೂರ್ವಭಾಗ; ಮುಂಜಾವ.

ಪ್ರಿಯ (ನಾ). ೧. ಪ್ರೀತಿಗೆ ಪಾತ್ರನಾದವನು. ೨. ಗಂಡ. ೩. ಬೆಲೆ ಏರಿಕೆ; ತುಟ್ಟಿ. (ಗು). ೪. ಪ್ರೀತಿಯ; ಮೆಚ್ಚಿನ. ~(ಂ)ಪ(ಬ)ಡಿಸು = ಸಂತೋಷಪಡಿಸು; ತೃಪ್ತಿಪಡಿಸು.

ಪ್ರಿಯಂಗು (ನಾ). ೧. ಒಂದು ಬಗೆಯ ಧಾನ್ಯ; ನವಣೆ. ೨. ಒಂದು ಜಾತಿಯ ಮರ.

ಪ್ರಿಯಂಕರ (ನಾ). ೧. ಪ್ರೀತಿಯನ್ನು ಉಂಟುಮಾಡುವವನು; ನಲ್ಲ; ಕಾದಲ. (ಗು). ೨. ಪ್ರೀತಿಗೆ ಪಾತ್ರವಾದ. ೩. ಪ್ರೀತಿಯನ್ನುಂಟುಮಾಡುವ.

ಪ್ರಿಯತಮ (ನಾ). ಅತ್ಯಂತ ಪ್ರೀತಿಪಾತ್ರನಾದವನು; ಪ್ರಿಯ; ನಲ್ಲ.

ಪ್ರಿಯತಮೆ (ನಾ). ಅತ್ಯಂತ ಪ್ರಿಯಳಾದವಳು; ನಲ್ಲೆ.

ಪ್ರಿಯೆ (ನಾ). ಪ್ರೀತಿಪಾತ್ರಳು; ನಲ್ಲೆ.

ಪ್ರೀಣನ (ನಾ). ಸಂತೋಷಗೊಳಿಸುವಿಕೆ; ಒಲಿಸುವಿಕೆ.

ಪ್ರೀತ (ಗು). ಸಂತೋಷಗೊಂಡ; ಸಂತುಷ್ಟ.

ಪ್ರೀತಿ ೧. = ಪ್ರೇಮ. ೨. ದಯೆ; ಕರುಣೆ. ೩. ತೃಪ್ತಿ; ತುಷ್ಟಿ. ~ಇಸು = ಪ್ರೀತಿಮಾಡು; ಪ್ರೇಮಿಸು. ~ಕೊ(ಗೊ)ಳಿಸು =೧. ಪ್ರೀತಿಯನ್ನು ತೋರಿಸು. ೨. ಸಂತೋಷವನ್ನುಂಟುಮಾಡು. ~ಪ(ಬ,ವ)ಡು = ಪ್ರೀತಿಯನ್ನು ಹೊಂದು. ~ಪಾತ್ರ = ಪ್ರೀತಿಗೆ ಅರ್ಹನಾದವನು; ಪ್ರಿಯ.

ಪ್ರೇಂಖ (ನಾ). ೧. ಉಯ್ಯಾಲೆ. (ಗು). ೨. ಓಲಾಡುವ; ತೂಗಾಡುವ.

ಪ್ರೇಕ್ಷಕ (ನಾ). ನೋಡುವವನು; ನೋಟಕ.

ಪ್ರೇಕ್ಷಣ (ನಾ). ೧. ನೋಟ; ನೋಡುವಿಕೆ. ೨. ಸಾರ್ವಜನಿಕ ಪ್ರದರ್ಶನ. ೩. ಪ್ರದರ್ಶನ ನಡೆಯುವ ಸ್ಥಳ. ~ಆಗಾರ = ಪ್ರೇಕ್ಷಕಾಂಗಣ; ಸಭಾಂಗಣ.

ಪ್ರೇಕ್ಷೆ (ನಾ). ೧. ನೋಟ; ದೃಶ್ಯ. ೨. ನೋಡುವುದು. ೩. ತಿಳಿವು; ಬುದ್ಧಿ. ~ಇಸು = ನೋಡು; ನಿರೀಕ್ಷಿಸು.

ಪ್ರೇತ (ನಾ). ೧. ದೇಹವನ್ನು ಬಿಟ್ಟ ಜೀವ; ವ್ಯಂತರ. ೨. ಹೆಣ; ಶವ. ೩. ಪಿಶಾಚಿ; ದೆವ್ವ. ~ಕರ್ಮ = ಅಂತ್ಯಕ್ರಿಯೆ; ಉತ್ತರ ಕ್ರಿಯೆ ~ಕಾರ್ಯ = ಪ್ರೇತಕರ್ಮ. ~ಕಾ(ಗಾ)ಹಿ = ಶ್ಮಶಾನದ ಕಾವಲುಗಾರ. ~ನಾಥ = ಯಮ. ~ಬಲಿ = ಉತ್ತರ ಕ್ರಿಯೆಯಲ್ಲಿ ಪ್ರೇತಕ್ಕೆ ಅರ್ಪಿಸುವ ಪಿಂಡದ ಅನ್ನ. ~ಮುದ್ರೆ = ೧. ಅಪ್ರಯೋಜಕ ವಾಗಿರುವ ಗುರುತು. ೨. ಕಾಂತಿಹೀನ ವಾಗಿರುವ ಸ್ಥಿತಿ. ~ವನ = ಶ್ಮಶಾನ; ಸುಡುಗಾಡು. ~ಸಂಸ್ಕಾರ = ಪ್ರೇತ ಕರ್ಮ ~ಸೂತಕ = ಶವದ ಸಂಸರ್ಗ ದಿಂದುಂಟಾಗುವ ಮೈಲಿಗೆ.

ಪ್ರೇಮ (ನಾ). ೧. ಪ್ರೀತಿ; ಅನುರಾಗ. ೨. ಸಂತೋಷ. ~ಇಸು = ಪ್ರೀತಿಸು. ~ಭಿಕ್ಷೆ = ಪ್ರೇಮವನ್ನು ಬೇಡುವುದು.

ಪ್ರೇಮಲ(ಳ) (ಗು). ಪ್ರೇಮಪೂರಿತ; ಪ್ರೀತಿ ಯಿಂದ ಕೂಡಿದ.

ಪ್ರೇಮಿ (ನಾ). ೧. ಪ್ರೀತಿಯುಳ್ಳವನು. ೨. ಪ್ರೀತಿಗೆ ಪಾತ್ರನಾದವನು; ಕಾದಲ.

ಪ್ರೇಯಸಿ (ನಾ). ಪ್ರಿಯೆ; ನಲ್ಲೆ.

ಪ್ರೇರಕ (ನಾ). ೧. ಪ್ರಚೋದಕ; ಪ್ರೇರೇಪಿಸು ವವನು. (ಗು). ೨. ಪ್ರಚೋದನೆ ಯನ್ನುಂಟು ಮಾಡುವ.

ಪ್ರೇರಣ (ನಾ). ಮುನ್ನುಗ್ಗುವಂತೆ ಮಾಡು ವಿಕೆ; ಪ್ರಚೋದನೆ.

ಪ್ರೇರಣೆ = ಪ್ರೇರಣ. ~ಇಸು = ಉತ್ತೇಜನ ಗೊಳಿಸು; ಹುರಿದುಂಬಿಸು.

ಪ್ರೇರಿಸು (ಕ್ರಿ). ಪ್ರಚೋದಿಸು; ಹುರುಪು ಗೊಳಿಸು.

ಪ್ರೇರೇಪಣೆ = ಪ್ರೇರಣ.

ಪ್ರೇರೇಪಿಸು = ಪ್ರೇರಿಸು.

ಪ್ರೇರ್ಯ (ನಾ). ಉತ್ತೇಜಿತನಾದವನು; ಹುರಿದುಂಬಿಸಲ್ಪಟ್ಟವನು.

ಪ್ರೇಷಣ (ನಾ). (ಆಳಿನ ಮುಖಾಂತರವಾಗಿ) ಸಂದೇಶ ಮುಂತಾದುವನ್ನು ಕಳುಹಿಸು ವುದು.

ಪ್ರೇಷ್ಯ (ನಾ). ೧. ಸಂದೇಶವನ್ನು ಕಳುಹಿಸು ವುದು. ೨. ಸಂದೇಶವನ್ನು ಒಯ್ಯುವವನು. (ಗು). ೩. ಕಳುಹಿಸಲ್ಪಡುವ.

ಪ್ರೋಕ್ತ (ಗು). ಹೇಳಲ್ಪಟ್ಟ; ಪ್ರಕಟಿಸಿದ.

ಪ್ರೋಕ್ಷಣ (ನಾ). (ನೀರನ್ನು) ಚಿಮುಕಿಸುವಿಕೆ, -ಸಿಂಪಡಿಸುವಿಕೆ.

ಪ್ರೋಕ್ಷಣೆ = ಪ್ರೋಕ್ಷಣ.

ಪ್ರೋಕ್ಷಿಸು (ಕ್ರಿ). (ನೀರನ್ನು) ಸಿಂಪಡಿಸು, -ಚಿಮುಕಿಸು.

ಪ್ರೋತ (ಗು). ೧. ಹೊಲಿದ; ಹೆಣೆದ. ೨. ಹೊರಹೊಮ್ಮಿದ.

ಪ್ರೋತ್ಸಾಹ (ನಾ). ಹುರಿದುಂಬಿಸುವಿಕೆ; ಉತ್ತೇಜನ.

ಪ್ರೋದ್ದಾಮ (ನಾ). ೧. ಶ್ರೇಷ್ಠತೆ; ಔನ್ನತ್ಯ. (ಗು). ೨. ಶ್ರೇಷ್ಠವಾದ; ಉನ್ನತವಾದ. ೩. ಎಲ್ಲೆಯಿಲ್ಲದ; ಮಿತಿಯಿಲ್ಲದ.

ಪ್ರೋದ್ಭವ (ಗು). ಹುಟ್ಟಿದ; ಉಂಟಾದ.

ಪ್ರೌಢ (ನಾ). ೧. ಪ್ರಬುದ್ಧನಾದವನು; ನಿಪುಣ. ೨. ಅನುಭವಿ; ಪಕ್ವತೆಯನ್ನು ಹೊಂದಿದವನು. ೩. ಪ್ರಾಯಕ್ಕೆ ಬಂದವನು; ವಯಸ್ಕ. (ಗು). ೪. ಅನುಭವಪೂರ್ಣ ವಾದ. ೫. ಮೇಲ್ಮಟ್ಟದ; ಉನ್ನತ. ~ಅವಸ್ಥೆ = ಬೆಳೆದ ಸ್ಥಿತಿ; ಅಭಿವೃದ್ಧಿ ಯಾದ ಸ್ಥಿತಿ. ~ಶಾಲೆ = ಕಾಲೇಜು ಶಿಕ್ಷಣದ ಹಿಂದಿನ ವಿದ್ಯಾಭ್ಯಾಸದ ಶಾಲೆ; ಹೈಸ್ಕೂಲು.

ಪ್ರೌಢಿ (ನಾ). ೧. ಬೆಳವಣಿಗೆ; ಅಭಿವೃದ್ಧಿ. ೨. ಮಾಗುವಿಕೆ; ಪಕ್ವವಾಗುವಿಕೆ. ೩. ಶ್ರೇಷ್ಠತೆ. ೪. = ಪ್ರೌಢಿಮೆ. ೫. ಧೈರ್ಯ; ಕೆಚ್ಚು. ೬. ಒಂದು ಕಾವ್ಯಗುಣ.

ಪ್ರೌಢಿಮೆ (ನಾ). ೧. ನೈಪುಣ್ಯ. ೨. ಪಾಂಡಿತ್ಯ-

ಪ್ರೌಢೆ (ನಾ). ೧. ಮಧ್ಯವಯಸ್ಸಿನ ಹೆಂಗಸು. ೨. ಚತುರೆ ; ಪರಿಣತೆ. ೩. ಅತ್ಯಾಸಕ್ತಳಾದ ಹೆಂಗಸು.

ಪ್ಲವ (ನಾ). ೧. ಈಜುವಿಕೆ. ೨. ತೇಲುವಿಕೆ. ೩. ನೆಗೆತ; ಜಿಗಿತ. ೪. ತೆಪ್ಪ; ಹರಿಗೋಲು. ೫. ಕಪ್ಪೆ. ೬. ಕೋತಿ. ೭. ಚಂಡಾಲ.

ಪ್ಲವಂಗ (ನಾ). ೧. ಕಪ್ಪೆ, ಕೋತಿ, ಕುದುರೆ ಮುಂತಾದ ಕುಪ್ಪಳಿಸಿಕೊಂಡು ಮುಂದೆ ಸರಿಯುವ ಪ್ರಾಣಿ. ೨. ಅರುವತ್ತು ಸಂವತ್ಸರಗಳಲ್ಲಿ ಒಂದು.

ಪ್ಲೀಹ (ನಾ). ೧. ಶರೀರದ ಒಂದು ಅಂಗ ; ಗುಲ್ಮ; ತೊರಳೆ. ೨. ಗುಲ್ಮಕ್ಕೆ ಸಂಬಂಧಿಸಿದ ಒಂದು ರೋಗ.

ಪ್ಲುತ (ನಾ). ೧. ಮೂರು ಮಾತ್ರೆಗಳ ಕಾಲವನ್ನು ಹೊಂದಿರುವ ಅಕ್ಷರ. ೨. ಕುದುರೆಯ ನಡಗೆಯಲ್ಲಿ ಒಂದು ಬಗೆ. (ಗು). ೩. ತೇಲುತ್ತಿರುವ. ೪. ಈಜುತ್ತಿರುವ. ೫ ಕುಪ್ಪಳಿಸುವ ; ನೆಗೆಯುವ. ೬. ಒದ್ದೆಯಾದ ; ತೇವವಾದ.

ಪ್ಲೋಷ (ನಾ). ಸುಡುವಿಕೆ.



# ಫ

ಫ (ನಾ). ಕನ್ನಡ ವರ್ಣಮಾಲೆಯ ನಲವತ್ತೆರಡನೆಯ ಅಕ್ಷರ.

ಫಕೀರ (ನಾ). ೧. ಮುಸಲ್ಮಾನ ಸಂನ್ಯಾಸಿ, –ಬೈರಾಗಿ. ೨. ಬಡವ; ನಿರ್ಗತಿಕ.

ಫಕ್ಕನೆ (ಅ). ೧. ಕೂಡಲೆ. ೨, ಆಕಸ್ಮಿಕವಾಗಿ.

ಫಜೀತಿ (ನಾ). ತೊಂದರೆ ; ಪೀಕಲಾಟ.

ಫಟಿಂಗ (ನಾ). ೧. ಸಮರ್ಥ ; ದಕ್ಷ. ೨. ನೀತಿಗೆಟ್ಟವನು ; ಬಂಡ ; ಪೋಕರಿ.

ಫಡ (ನಾ). ಮೂದಲಿಸುವಾಗ ಉಪಯೋಗಿಸುವ ಒಂದು ಶಬ್ದ.

ಫಡಕು ೧. = ಪಡಕು. ೨. ತುಂಡು ; ಸೀಳು.

ಫಡಪೋಶಿ = ಪಡಪೋಸಿ.

ಫಡಿ (ನಾ). ಕಲ್ಲು ; ಬಂಡೆ.

ಫಣ (ನಾ). ಹಾವಿನ ಹೆಡೆ.

ಫಣಿ (ನಾ). ಹೆಡೆ ಇರುವ ಜೀವಿ ; ಹಾವು. ~ಕುಂಡಲ = ಹಾವನ್ನು ಕಿವಿಯ ಆಭರಣವನ್ನಾಗಿ ಉಳ್ಳವನು ; ಶಿವ. ~ಕೇತನ = ಹಾವಿನ ಗುರುತನ್ನು ಧ್ವಜದಲ್ಲಿ ಉಳ್ಳವನು; ದುರ್ಯೋಧನ. ~ಪತಿ = ಆದಿಶೇಷ. ~ಶಯನ = ಹಾವನ್ನು ಹಾಸುಗೆಯಾಗಿ ಉಳ್ಳವನು ; ವಿಷ್ಣು.

ಫಣೆ = ಫಣ.

ಫತ್ತೆಮಾರಿ = ಪತ್ತೇಮಾರಿ.

ಫನ (ನಾ). ನಾಶ ; ಹಾಳು.

ಫರಂಗಿ = ಪರಂಗಿ.

ಫರಮಾಯಿಶಿ = ಪರಮಾಯಿಷಿ.

ಫರಾಳ = ಫಲಾಹಾರ.

ಫಲ(ಳ) (ನಾ). ೧. ಹಣ್ಣು. ೨. ಬೆಳೆ; ಪೈರು; ಫಸಲು. ೩. ಲಾಭ ; ಉತ್ಪತ್ತಿ. ೪. ಪರಿಣಾಮ ; ಫಲಿತಾಂಶ. ೫. ಪ್ರಯೋಜನ ; ಉಪಯೋಗ. ೬. ಗರ್ಭ. ೭. ಸಂತಾನ. ೮. ಗುರಾಣಿ; ಢಾಲು. ೯. ಕತ್ತಿಯ ಅಲಗು. ೧೦. ಬಾಣದ ತುದಿ. ~ಆಹಾರ = ೧. ಹಣ್ಣಿನ ಆಹಾರ. ೨. ಉಪಾಹಾರ. ~ಇಸು = ೧. ಹಣ್ಣು ಬಿಡು. ೨. ಪರಿಣಾಮವುಂಟಾಗು. ೩. ಪ್ರಯೋಜನವುಂಟಾಗು; ಲಾಭವಾಗು. ~ತೊ(ಬೊ)ಳು(ರು) = ೧. ಪರಿಣಮಿಸು. ೨. ಹಣ್ಣು ಬಿಡು.

~ದಾಯಕ = ಫಲವನ್ನು ಕೊಡುವ; ಯಶಸ್ಸನ್ನು ಕೊಡುವ. ~ಪೂಜೆ = ಶುಭ ಕಾರ್ಯದಲ್ಲಿ ತೆಂಗಿನಕಾಯಿಗಳನ್ನಿಟ್ಟು ಮಾಡುವ ಪೂಜೆ. ~ಶ್ರುತಿ=೧. ಕಾವ್ಯವನ್ನು ಓದಿದಾಗ ಅಥವಾ ಪುಣ್ಯಕಾರ್ಯವನ್ನು ಮಾಡಿದಾಗ ಉಂಟಾಗುವ ಫಲಗಳ ಹೇಳಿಕೆ. ೨. ಪರಿಣಾಮ; ಫಲಿತಾಂಶ.

ಫಲಕ (ನಾ). ೧. ಹಲಗೆ. ೨. ಢಾಲು; ಗುರಾಣಿ.

ಫಲದ (ಗು). ಫಲವನ್ನು ಕೊಡುವ.

ಫಲವತ್ತು (ನಾ). ಸಾರವತ್ತಾದುದು; ಸತ್ತ್ವ ಉಳ್ಳುದು.

ಫಲಿತ (ನಾ). ೧. ಪರಿಣಾಮ; ಫಲಿತಾಂಶ. (ಗು). ೨. ಹಣ್ಣಾದ; ಪಕ್ವವಾದ. ೩. ಕಾರ್ಯಕೈಗೂಡಿದ. ~ಅಂಶ = ಕಾರ್ಯದ ಫಲ; ಪರಿಣಾಮ.

ಫಲಾ(ಳಾ)ರ = ಫಲಾಹಾರ.

ಫಲ್ಗು (ಗು). ಸಾರವಿಲ್ಲದ; ಸತ್ತ್ವವಿಲ್ಲದ.

ಫಲ್ಯ (ನಾ). ಫಲಕ್ಕೆ ಕಾರಣವಾದುದು; ಹೂವು.

ಫಸಲು (ನಾ). ಬೆಳೆ; ಪೈರು.

ಫಾಯದೆ (ನಾ). ಲಾಭ; ಆದಾಯ.

ಫಾಯಿದೆ = ಫಾಯದೆ.

ಫಾಲ (ನಾ). ಹಣೆ; ನೊಸಲು. ~ಅಕ್ಷ = ಹಣೆಯಲ್ಲಿ ಕಣ್ಣುಳ್ಳವನು; ಶಿವ. ~ನಯನ = ಫಾಲಾಕ್ಷ. ~ಲೋಚನ = ಫಾಲಾಕ್ಷ.

ಫಾಲ್ಗುಣ (ನಾ). ಚಾಂದ್ರಮಾನ ವರ್ಷದ ಕೊನೆಯ ತಿಂಗಳು. ~ಸಂದೀಶ್ವರ = ಫಾಲ್ಗುಣಮಾಸದಲ್ಲಿ ಬರುವ ಒಂದು ಹಬ್ಬ ಮತ್ತು ಅಂದು ಮಾಡುವ ಪೂಜೆ.

ಫಾಲ್ಗುನ = ಫಾಲ್ಗುಣ.

ಫಾಶಿ (ನಾ). ಗಲ್ಲುಶಿಕ್ಷೆ; ನೇಣು.

ಫಿತೂರಿ = ಪಿತೂರಿ.

ಫಿರಂಗಿ = ಪಿರಂಗಿ.

ಫಿರಿಕಟ್ಟು (ನಾ). ಕಟ್ಟು; ದಿಗ್ಬಂಧನ.

ಫಿರ್ಕಾ (ನಾ). ವಿಭಾಗ; ಇಲಾಖೆ.

ಫಿರ್ಯಾದಿ (ನಾ). ದೂರು ಕೊಡುವವನು; ಅಹವಾಲುದಾರ.

ಫಿರ್ಯಾದು (ನಾ). ದೂರು; ಅಹವಾಲು.

ಫುಪ್ಪುಸ (ನಾ). ಶ್ವಾಸಕೋಶ.

ಫುಲ್ಲ ೧. = ಪುಲ್ಲ. (ಗು). ೨. ಅರಳಿದ; ವಿಕಸಿತ. ~ಅಂಬು = ಹೂವಿನ ಬಾಣ. ~ಶರ = ಕಾಮ; ಮನ್ಮಥ.

ಫುಲ್ಲನಾಭ (ನಾ). ಹೊಕ್ಕುಳಿನಲ್ಲಿ ಹೂವುಳ್ಳವನು; ಪದ್ಮನಾಭ.

ಫೂತ್ಕರಿಸು (ಕ್ರಿ). ಬುಸುಗುಟ್ಟು.

ಫೂತ್ಕಾರ (ನಾ). ಹಾವಿನ ಬುಸುಗುಟ್ಟುವಿಕೆ.

ಫೇಣಿ (ನಾ). ಒಂದು ಬಗೆಯ ಭಕ್ಷ್ಯ.

ಫೇನ (ನಾ). ನೊರೆ; ಬುರುಗು.

ಫೇರವ (ನಾ). ನರಿ; ಜಂಬುಕ.

ಫೇರಿ (ನಾ). ೧. ಸುತ್ತುಬರುವುದು; ಪ್ರದಕ್ಷಿಣೆ. ೨. ಮೆರವಣಿಗೆ. ~ಬಿಡು = ಓಟಕೀಳು; ಓಡಿಹೋಗು.

ಫೈಸಲ್(ಲು) = ಪೈಸಲ್.

ಫೌಜು = ಪೌಜು. ~ದಾರ = ಪೌಜುದಾರ.

ಬ (ನಾ). ಕನ್ನಡ ವರ್ಣಮಾಲೆಯ ನಲವತ್ತು ಮೂರನೆಯ ಅಕ್ಷರ.
ಬಂಕ (ನಾ). ಮನೆಯ ಮುಂದಿನ ಜಗಲಿ.
ಬಂಕು (ಕ್ರಿ). ೧. ಬಗ್ಗು ; ಬಾಗು. (ನಾ). ೨. = ಬಂಕುಡಿ.
ಬಂಕುಡಿ (ನಾ). ಬಾಗಿರುವ ಒಂದು ಬಗೆಯ ಸಣ್ಣ ಆಯುಧ; ಬಾಕು.
ಬಂಕೆ (ನಾ). ಗೋಂದು ; ಅಂಟು.
ಬಂಗ (ನಾ). ೧. ಕಠಿನವಾದ ಕೆಲಸ, -ಉದ್ಯೋಗ. ೨. = ಭಂಗ.
ಬಂಗಡೆ (ನಾ). ಒಂದು ಜಾತಿಯ ಮೀನು.
ಬಂಗಲೆ (ನಾ). ದೊಡ್ಡಮನೆ ; ಸೌಧ.
ಬಂಗಾರ (ನಾ). ೧. ಹೊನ್ನು ; ಚಿನ್ನ. ೨. ಒಡವೆ ; ಆಭರಣ.
ಬಂಗಾಳಿ (ನಾ). ೧. ಬಂಗಾಳ ದೇಶದ ಭಾಷೆ. ೨. ಮೋಸ ; ಕುಯುಕ್ತಿ. (ಗು). ೩. ಬಂಗಾಳದೇಶಕ್ಕೆ ಸಂಬಂಧಿಸಿದ.
ಬಂಗಿ (ನಾ). ೧ ಭಂಗಿ ; ರೀತಿ. ೨. ಗಾಂಜಾಗಿಡ ಮತ್ತು ಅದರಿಂದ ತಯಾರಿಸುವ ಮಾದಕ ಪದಾರ್ಥ. ~ಪೆ(ಪೆ)ಐ್(ರ್)=ಹೋಲು; ಸಾದೃಶ್ಯವನ್ನು ಹೊಂದು.
ಬಂಗು (ನಾ). ೧. ಚರ್ಮದ ಮೇಲೆ ಕಪ್ಪು ಚುಕ್ಕೆಗಳುಂಟಾಗುವ ಒಂದು ಬಗೆಯ ಚರ್ಮರೋಗ. ೨. ಬೂಜಲು ; ಬೂಷ್ಟು.
ಬಂಗ್ಲೆ = ಬಂಗಲೆ.
ಬಂಚ (ನಾ). ೧. ವಂಶ ; ಕುಲ. ೨. ಕೊಳಲು.
ಬಂಚನೆ (ನಾ). ವಂಚನೆ ; ಮೋಸ.
ಬಂಚರ (ನಾ). ಒಂದು ಬಗೆಯ ತಂತಿವಾದ್ಯ.
ಬಂಚಿಸು (ಕ್ರಿ) ವಂಚಿಸು ; ಮೋಸಮಾಡು.
ಬಂಜ (ನಾ). ಅಪ್ರಯೋಜಕ; ನಿಷ್ಪ್ರಯೋಜಕ.
ಬಂಜರ್(ರು) (ನಾ). ಪಾಳುಭೂಮಿ ; ಬೀಳು ನೆಲ.

ಬಂಜೆ (ನಾ). ೧. ಬರಡು ; ನಿಷ್ಫಲವಾದುದು. ೨. ಮಕ್ಕಳಿಲ್ಲದವಳು ; ಗೊಡ್ಡಿ. ~ಪ(ವ)ಡಿಸು = ೧. ಬರಡುಮಾಡು ; ವ್ಯರ್ಥಗೊಳಿಸು. ೨. ಶಮನಗೊಳಿಸು. ~ಮಾಡು = ಹಾಳುಮಾಡು ; ನಿಷ್ಫಲ ಗೊಳಿಸು.
ಬಂಟ (ನಾ). ೧. ದಾಸ ; ಸೇವಕ. ೨. ವೀರ ; ಶೂರ. ~ತನ = ೧. ಕಿಂಕರತೆ ; ದಾಸ್ಯ. ೨. ಪರಾಕ್ರಮ ; ಶೌರ್ಯ.
ಬಂಟು (ನಾ). ೧. ಕೆಚ್ಚು ; ಶೌರ್ಯ. ೨. ವೀರ ; ಶೂರ. ~ಕೆ(ಗೆ)ಡು = ಶೌರ್ಯ ಗೆಡು ; ಧೈರ್ಯವಿಲ್ಲದಾಗು. ~ತನ = ಶೌರ್ಯ ; ಕೆಚ್ಚು.
ಬಂಡ (ನಾ). ೧. ಉಣ್ಣೆ ; ತುಪ್ಪಟ. ೨. ಬಾಲ ವನ್ನು ಕಳೆದುಕೊಂಡ ಎತ್ತು. ೩. ದ್ರವ್ಯ ; ವಸ್ತು ; ಪದಾರ್ಥ. ೪. ಬಂಡವಾಳ ; ಸಂಪತ್ತು. ೫. ಸರಕು ; ಸಾಮುಗ್ರಿ. ೬. ಬೆಲೆ ; ಕ್ರಯ. ೭. ನಾಚಿಕೆಗೇಡಿ ; ನಿರ್ಲಜ್ಜ. ೮. ಅನ್ಯಾಯ ಮಾಡುವವನು. ೯. ನಪುಂಸಕ ; ಷಂಡ. ~ತನ = ನಾಚಿಕೆ ಗೇಡಿತನ ; ಬಂಡಾಟ. ~ಬಾಳು = ಹೀನ ಬದುಕು ; ಕೀಳು ಜೀವನ.
ಬಂಡಣ (ನಾ). ಯುದ್ಧ ; ಕಾಳಗ.
ಬಂಡಲು (ನಾ). ಕೆಸರು ; ರಾಡಿ.
ಬಂಡವಲ(ಳ) (ನಾ). ಅಸಲು ; ಮೂಲಧನ.
ಬಂಡವಲು = ಬಂಡವಲ.
ಬಂಡವಾಳ=ಬಂಡವಲ. ~ಗಾರ=ವ್ಯಾಪಾರಕ್ಕೆ ಹಣವನ್ನು ತೊಡಗಿಸಿದವನು.
ಬಂಡಸಾಲೆ (ನಾ). ಭವನ ; ಸೌಧ.
ಬಂಡಳಿಸು (ಕ್ರಿ). ಕಲಕಲಧ್ವನಿ ಮಾಡು ; ಕುಕಿಲು.
ಬಂಡಾಯ (ನಾ). ದಂಗೆ ; ಕ್ರಾಂತಿ.

ಬಂಡಾರ (ನಾ). ಬೊಕ್ಕಸ; ಖಜಾನೆ ; ಕೋಶ. ~ಇಸು = ೧. ಶೇಖರಿಸು; ಒಟ್ಟುಗೂಡಿಸು. ೨. ಒಳಸೇರು ; ಹೊಗು.

ಬಂಡಾರಿ (ನಾ). ಕೋಶಾಧಿಕಾರಿ; ಖಜಾಂಚಿ

ಬಂಡಿ (ನಾ). ೧. ಗಾಡಿ ; ಶಕಟ ; ಚಕ್ಕಡಿ. ೨. ಗಾಲಿ ; ಚಕ್ರ. ~ಬೋವ = ಗಾಡಿಯನ್ನು ನಡಸುವವನು ; ಸಾರಥಿ. ~ಪಾಳ = ಗಾಡಿಗಳು ತಂಗುವ ಸ್ಥಳ. ~ಹೋಕ = ಬಂಡಿಬೋವ.

ಬಂಡು (ನಾ). ೧. ಜೇನು ; ಮಕರಂದ ; ಮಧು. ೨. ಹೂವಿನ ಹುಡಿ ; ಪರಾಗ. ೩. ಕೀಳುನಡತೆ ; ಲಜ್ಜಾಸ್ಪದ ನಡವಳಿಕೆ ೪. ದಂಗೆ ; ಬಂಡಾಯ. ~ಆಗು = ೧. ತೊಂದರೆಗೊಳಗಾಗು. ೨. ನಿಷ್ಫಲವಾಗು. ~ಆಟ = ೧. ತೊಂದರೆ ; ಪೇಚಾಟ. ೨. ನಾಚಿಕೆಗೇಡು ; ಅವಮಾನ. ~ಆಡು = ಮಕರಂದ ಹೊರಹೊಮ್ಮು ; ಜೇನು ತುಂಬಿ ಸೂಸು. ~ಕೆ(ಗೆ)ಡೆ = ನಾಚಿಕೆಯಿಲ್ಲದೆ ಮಾತನಾಡು ; ಅಶ್ಲೀಲವಾಗಿ ಮಾತನಾಡು. ~ಗಾರ = ದಂಗೆ ಎಬ್ಬಿಸುವವನು ; ದಂಗೆಕೋರ. ~ಮಾಡು = ಅವಮಾನಿಸು ; ಧಿಕ್ಕರಿಸು.

ಬಂಡುಣಿ (ನಾ). ತುಂಬಿ ; ಭ್ರಮರ.

ಬಂಡೆ (ನಾ). ೧. ದೊಡ್ಡ ಕಲ್ಲು, –ಶಿಲೆ. ೨. = ಭಂಡೆ.

ಬಂತಿ (ನಾ). ಪಂಕ್ತಿ ; ಸಾಲು.

ಬಂತೆ = ಬೊಂತೆ.

ಬಂದ (ನಾ). ೧. ಕಟ್ಟು ; ನಿಯಮ ; ಬಂಧನ. ೨. ಸಂಪ್ರದಾಯ ; ಪದ್ಧತಿ.

ಬಂದಕಿ (ನಾ). ಜಾರೆ ; ವ್ಯಭಿಚಾರಿಣಿ.

ಬಂದಣಿಕೆ (ನಾ). ಬೇರೊಂದು ಸಸ್ಯವನ್ನು ಅವಲಂಬಿಸಿ ಜೀವಿಸುವ ಸಸ್ಯ; ಪರಾವಲಂಬಿ ಸಸ್ಯ.

ಬಂದರು (ನಾ). ಹಡಗು ನಿಲ್ಲುವ ಸ್ಥಳ; ರೇವು.

ಬಂದಳಿಕೆ = ಬಂದಣಿಕೆ.

ಬಂದಿ (ನಾ). ೧. ಬಂಧನಕ್ಕೊಳಗಾದವನು ; ಸೆರೆಯಾಳು. ೨. ತಡೆ ; ಅಡ್ಡಿ. ೩. ಲೂಟಿ; ಸೂರೆ. ೪. ತೋಳಿಗೆ ಧರಿಸುವ ಒಂದು ಬಗೆಯ ಆಭರಣ. ೫. ಹೊಗಳುಭಟ್ಟ ; ವಂದಿ. ~ಕಾ(ಗಾ)ಐ(ರ) = ೧. ಕಳ್ಳ ; ತುಡುಗ. ೨. ಬಂಧಿಸುವವನು. ~ಖಾನೆ = ಜೈಲು ; ಕಾರಾಗೃಹ. ~ಪಿ(ವಿ)ಡಿ = ೧ ಬಂಧಿಸು ; ಸೆರೆಹಿಡಿ. ೨. ದೋಚು ; ಲೂಟಿಮಾಡು.

ಬಂದಿಸು (ಕ್ರಿ). ವಂದಿಸು ; ನಮಸ್ಕರಿಸು.

ಬಂದುಗೆ (ನಾ). ಒಂದು ಜಾತಿಯ ಪೊದೆ ಮತ್ತು ಅದರ ಹೂವು.

ಬಂದೂಕ (ನಾ). ಕೋವಿ ; ತುಪಾಕಿ.

ಬಂದೂಕು = ಬಂದೂಕ.

ಬಂದೋಬಸ್ತು (ನಾ). ಭದ್ರತೆ ; ಸುವ್ಯವಸ್ಥೆ.

ಬಂಧ (ನಾ). ೧. ರಚನೆ; ಜೋಡಣೆ ೨. ತಡೆ; ನಿರ್ಬಂಧ. ೩. ಕಟ್ಟು; ನಿಯಮ. ೪. ಪಾಶ; ಹಗ್ಗ. ~ಇಸು = ೧. ಕಟ್ಟು ; ಬಿಗಿ. ೨. ಬಂಧನದಲ್ಲಿರಿಸು ; ಸೆರೆಹಿಡಿ.

ಬಂಧಕ (ನಾ). ೧. ಬಂಧಿಸುವವನು. ೨. ತಡೆ; ಅಡ್ಡಿ. ೩. ಒತ್ತೆ ; ಗಿರವಿ. ೪. ಪ್ರತಿಜ್ಞೆ ; ಶಪಥ. (ಗು). ೫. ತಡೆಗಟ್ಟುವ; ಪ್ರತಿಬಂಧಿಸುವ

ಬಂಧಕಿ = ಬಂದಕಿ.

ಬಂಧನ (ನಾ). ೧. ಕಟ್ಟು ; ಸಂಕೋಲೆ. ೨. ಸೆರೆಮನೆವಾಸ ; ಜೈಲುವಾಸ. ~ಆಲಯ = ಬಂದಿಖಾನೆ ; ಕಾರಾಗೃಹ.

ಬಂಧು (ನಾ). ನೆಂಟ ; ಸಂಬಂಧಿಕ.

ಬಂಧುರ (ಗು). ೧. ಮನೋಹರವಾದ ; ಸುಂದರವಾದ. ೨. ಹಳ್ಳತಿಟ್ಟುಗಳಿಂದ ಕೂಡಿದ ; ಸಮತಲವಲ್ಲದ. ೩. ಬಾಗಿದ ; ಬಗ್ಗಿದ.

ಬಂಧೂಕ = ಬಂದುಗೆ.

ಬಂಬಲ್(ಲು) (ನಾ). ೧. ಸಮೂಹ; ಗುಂಪು. ೨. ಗೊಂಚಲು; ಜೊಂಪೆ. ೩. ಎಳೆಯ ತೆಂಗಿನಕಾಯಿಯ ತಿರುಳು. ~ಕ(ಗ)ರುಳ್ = ಹೆಣೆದುಕೊಂಡಿರುವ ಕರುಳು. ~ಪ(ವ)ರಿ = ಗುಂಪಾಗಿ ಮುಂದುವರಿ. ~ಸರಿ = ಬಿರುಸಾದ ಮಳೆ; ಜಡಿಮಳೆ.

ಬಂಬು ೧. = ಬೊಂಬು. ೨. ಗಿರಣಿ ಮೊದಲಾದುವುಗಳ ಕೊಳವೆ; ಚಿಮಣಿ.

ಬಂಭರ (ನಾ). ತುಂಬಿ; ಭ್ರಮರ.

ಬಕ (ನಾ). ೧. ಒಂದು ಜಾತಿಯ ಜಲಚರ ಪಕ್ಷಿ. ೨. ಒಬ್ಬ ರಾಕ್ಷಸನ ಹೆಸರು. ~ಧ್ಯಾನ = ಇತರರನ್ನು ವಂಚಿಸಲು ಮಾಡುವ ಧ್ಯಾನ; ಸೋಗಿನ ಧ್ಯಾನ. ~ವಿಡಂಬನ = ತೋರಿಕೆಯ ಸೌಜನ್ಯ; ಸೋಗು. ~ವೃತ್ತಿ = ಮೋಸಗಾರಿಕೆ; ಕಪಟ. ~ವ್ರತ = ಬಕಧ್ಯಾನ.

ಬಕರ (ನಾ). ಆಡು; ಹೋತ.

ಬಕರಿ = ಬಕ್ಕರಿ.

ಬಕಾಳಭಾತು (ನಾ). ಮೊಸರನ್ನ.

ಬಕುತಿ = ಭಕ್ತಿ.

ಬಕುಲ(ಳ) (ನಾ). ಒಂದು ಜಾತಿಯ ಮರ; ನಾಗಕೇಸರ.

ಬಕೋಟ (ನಾ). ಕೊಕ್ಕರೆ; ಬಕ.

ಬಕ್ಕ (ಗು). ಆವರಣವಿಲ್ಲದ; ತೆರೆದ. ~(ಂ)ಬಯಲ್(ಲು) = ೧. ಬರಿದು; ಶೂನ್ಯತೆ. ೨. ಬರಿದಾದ ಜಾಗ; ಖಾಲಿ ಆವರಣ. ~ತಲೆ = ೧. ತಲೆಯ ಮೇಲೆ ಏನೂ ಇಲ್ಲದಿರುವಿಕೆ. ೨. ಬೋಳುತಲೆ ~ನೆತ್ತಿ=ಬಕ್ಕತಲೆ. ~ಜೋರಲು = ಬುಡ ಮೇಲು; ತಲೆಕೆಳಗು.

ಬಕ್ಕಟ = ಬಕ್ಕ.

ಬಕ್ಕಣ (ನಾ). ೧. ತಿಂಡಿ; ಭಕ್ಷ್ಯ. ೨. = ಬೊಕ್ಕಣ.

ಬಕ್ಕರಿ (ನಾ). ಜೋಳದ ರೊಟ್ಟಿ.

ಬಕ್ಕರಿಸು (ಕ್ರಿ). ತಿನ್ನು; ಭಕ್ಷಿಸು.

ಬಕ್ಕರೆ (ನಾ). ೧. ಮಣ್ಣಿನ ಪಾತ್ರೆ. ೨. ಮಡಕೆಯ ಚೂರು; ಓಡು.

ಬಕ್ಕುಡಿ (ಕ್ರಿ). ೧. ಬೆರಗಾಗು; ವಿಸ್ಮಯಗೊಳ್ಳು. (ನಾ). ೨. ಬೆರಗು; ವಿಸ್ಮಯ. ೩. ಅಂಜಿಕೆ; ಭಯ. ೪. ವಿವಾದ; ಚರ್ಚೆ. ~ಕು(ಗು)ಟ್ಟು=೧. ಭಯಪಡು; ಹೆದರು. ೨. ವಾದ ಮಾಡು; ಚರ್ಚಿಸು.

ಬಕ್ಕುಡೆಯ (ನಾ). ವಾದಿಸುವವನು; ವಾದಿ.

ಬಕ್ಕೆವಲಸು (ನಾ). ಒಂದು ಜಾತಿಯ ಹಲಸಿನ ಮರ ಮತ್ತು ಅದರ ಹಣ್ಣು.

ಬಕ್ಷಿ (ನಾ). ಅರಮನೆಯ ಮುಖ್ಯಾಧಿಕಾರಿ.

ಬಕ್ಷೀಸು (ನಾ). ಇನಾಮು; ಸಂಭಾವನೆ.

ಬಖೈರು (ನಾ). ಚಾರಿತ್ರಿಕ ಘಟನೆಗಳನ್ನು ಸೂಚಿಸುವ ವಿವರ.

ಬಗಟು (ಕ್ರಿ). ಕಾಲುಗಳನ್ನು ಅಗಲಿಸು.

ಬಗದಳ (ನಾ). ಹುಣ್ಣು; ವ್ರಣ.

ಬಗವಾಳ ೧. = ಬಗದಳ. ೨. ಕೀಳುಮಟ್ಟದ ಪದ್ಯ.

ಬಗನಿ (ನಾ). ೧. ತಾಳೆ ಜಾತಿಯ ಒಂದು ಮರ; ಹನೆಮರ. ೨. ಒಂದು ಜಾತಿಯ ಬಳ್ಳಿ. ~ಕಟ್ಟು = ಹೆಂಡಕ್ಕಾಗಿ ಹನೆಮರಕ್ಕೆ ಮಡಕೆಯನ್ನು ಕಟ್ಟು.

ಬಗರಗೆ (ನಾ). ೧. ನದಿ ಅಥವಾ ಹಳ್ಳದಲ್ಲಿ ನೀರಿಗಾಗಿ ತೋಡಿದ ಕುಳಿ; ಒರತೆ; ಕೂಪಕ. ೨. ಒಂದು ಬಗೆಯ ಪಾತ್ರೆ.

ಬಗರಿಗೆ = ಬಗರಗೆ.

ಬಗರು (ಕ್ರಿ). ಉಗುರಿನಿಂದ ಗೀರು; ಪರಚು.

ಬಗಲ್(ಲು) (ನಾ). ೧. ಕಂಕುಳು; ಕಕ್ಷ. ೨. ಮಗ್ಗುಲು; ಪಕ್ಕ.

ಬಗಲೆ (ನಾ). ಗದ್ದೆಯಲ್ಲಿ ಹೆಚ್ಚಿನ ನೀರು ಹೊರಹೋಗುವಂತೆ ಮಾಡಿದ ಚಿಕ್ಕ ಕಾಲುವೆ; ಜಿಗಳು.

ಬಗಸಿಗೆ (ನಾ). ಬೊಗಸೆ ; ಅಂಜಲಿ.

ಬಗಸಿರೆ = ಬಗಸಿಗೆ.

ಬಗಸು (ಕ್ರಿ). ಬಯಸು ; ಅಪೇಕ್ಷಿಸು.

ಬಗಸೆ = ಬಗಸಿಗೆ.

ಬಗಿ (ಕ್ರಿ). ೧. ವಿಭಾಗಿಸು ; ಬೇರ್ಪಡಿಸು. ೨. ಕತ್ತರಿಸು; ಸೀಳು. ೩. ತೋಡು; ಅಗೆ. (ನಾ). ೪. ಸೀಳುವಿಕೆ ; ಕತ್ತರಿಸುವಿಕೆ.

ಬಗಿನಿ = ಬಗನಿ.

ಬಗುಳ್(ಳು) (ಕ್ರಿ). ೧. (ನಾಯಿಗಳು) ಧ್ವನಿಮಾಡು ; ಬೊಗಳು. ೨. ಅನುಶಂಕೆಯಿಂದ ನರಳು. (ನಾ). ೩. ನಾಯಿಯ ಕೂಗು, -ಧ್ವನಿ.

ಬಗೆ (ಕ್ರಿ). ೧. ಯೋಚಿಸು ; ಆಲೋಚನೆ ಮಾಡು. ೨. ಲೆಕ್ಕಿಸು ; ಗಣಿಸು. ೩. ಅರಿ; ತಿಳಿ. ೪. ಊಹಿಸು ; ಅನುಮಾನಿಸು. ೫. ಅಭಿಪ್ರಾಯ ಪಡು. (ನಾ). ೬. ಮತ; ಅಭಿಪ್ರಾಯ. ೭. ರೀತಿ ; ಮಾರ್ಗ ; ಕ್ರಮ. ೮. ಗುರಿ ; ಲಕ್ಷ್ಯ. ೯. ವಿಭಾಗ ; ಭಾಗ. ೧೦. ಹೃದಯ ; ಮನಸ್ಸು. ~ಅ(ಯ)ಣುಗ = ಮನ್ಮಥ ; ಕಾಮ. ~ಅ(ಯ)ಱಿ(ರಿ) = ಮನಸ್ಸನ್ನು ತಿಳಿ ; ಭಾವವನ್ನು ಅರಿ. ~ಕಾ(ಗಾ)ಣ್(ಣು) = ೧. ಬಗೆಯಱಿ. ೨. ಮಾರ್ಗವನ್ನು ಕಂಡುಹಿಡಿ ; ಉಪಾಯವನ್ನು ಕಂಡುಕೊಳ್ಳು. ~ಕು(ಗು)ಂದು = ನಿರಾಶೆ ಹೊಂದು; ಬೇಸರಗೊಳ್ಳು. ~ಕೊ(ಗೊ)ಳ್ = ಮನಸ್ಸಿಗೆ ಬರು ; ಲಕ್ಷ್ಯಕ್ಕೆ ತೆಗೆದುಕೊಳ್ಳು. ~ಪು(ವು)ಗು = ಮನಸ್ಸನ್ನು ಪ್ರವೇಶಿಸು ; ಇಷ್ಟವಾಗು. ~ಹರಿ = ಇತ್ಯರ್ಥವಾಗು ; ತೀರ್ಮಾನವಾಗು.

ಬಗ್ಗ (ನಾ). ಹುಲಿ ; ವ್ಯಾಘ್ರ. ~(ಂ)ತೊ(ದೊ)ವಲ್ = ಹುಲಿಯ ಚರ್ಮ, -ತೊಗಲು.

ಬಗ್ಗಡ (ನಾ). ಕೆಸರು ; ಕೊಚ್ಚೆ.

ಬಗ್ಗಡಿಯ (ನಾ). ಅತಿಯಾಗಿ ಹರಟುವವನು; ಹರಟೆಮಲ್ಲ.

ಬಗ್ಗಡೆ = ಬಂಗಡೆ.

ಬಗ್ಗಣೆ (ನಾ). ಕೋಗಿಲೆಯ ಕೂಗು, -ಧ್ವನಿ.

ಬಗ್ಗರಿ = ಬಗ್ಗುರಿ.

ಬಗ್ಗರೆ = ಬಕ್ಕರೆ.

ಬಗ್ಗು (ಕ್ರಿ). ೧. ಬಾಗು ; ಮಣಿ; ಕೊಂಕಾಗು. ೨. ವಂದಿಸು ; ನಮಸ್ಕಾರ ಮಾಡು. (ನಾ). ೩. ಹಕ್ಕಿಗಳ ಕುಕಿಲು ; ಚಿಲಿಪಿಲಿ. ೪. ಹುಲಿ. ೫. ಭಾಗ್ಯ ; ಸಂಪತ್ತು. ~ಇಸು = ೧. ಹಕ್ಕಿಗಳು ಚಿಲಿಪಿಲಿ ಎಂದು ಧ್ವನಿ ಮಾಡು. ೨. ಅರಚು ; ಒದರು. ೩. ಗದರಿಸು; ಜಂಕಿಸು. ೪. ಬಗ್ಗುವಂತೆ ಮಾಡು ; ಬಾಗಿಸು. ~ಪೆ(ವೆ)ಣ್ = ಭಾಗ್ಯದೇವತೆ ; ಲಕ್ಷ್ಮಿ. ~ಬಡಿ =ಚೆನ್ನಾಗಿ ಥಳಿಸು, -ಹೊಡೆ.

ಬಗ್ಗುರಿ (ನಾ). ಎದೆಗೂಡು.

ಬಚಾಯಿಸು (ಕ್ರಿ). ಕಾಪಾಡು ; ರಕ್ಷಿಸು.

ಬಚಾವು (ನಾ). ಪಾರಾಗುವಿಕೆ.

ಬಚ್ಚ (ನಾ). ೧. ಆಟಕ್ಕೆ ಬಳಸುವ ಕಲ್ಲಿನ ಬಿಲ್ಲೆ. ೨. ಮಗು ; ವತ್ಸ. ೩. ಕರು. ೪. ವರ್ತಕ ; ವ್ಯಾಪಾರಿ. (ಗು). ೫. ತಿರುಳಿಲ್ಲದ ; ಹುರುಳಿಲ್ಲದ. ೬. ಕೆಟ್ಟ ; ಹಾಳಾದ. ೭. = ಬೊಜ್ಜ.

ಬಚ್ಚಣೆ (ನಾ). ೧. ಕತ್ತನೆ ; ಕಂಡರಣೆ. ೨. ಮುಸುಕು ; ಹೊದಿಕೆ.

ಬಚ್ಚಣೆ ೧. = ಬಚ್ಚಣೆ. ೨. ಕರುವಿನ ಮೇಲೆ ಪ್ರೀತಿಯುಳ್ಳ ಹಸು ; ವತ್ಸಲೆ. ~ಇಸು = ಕೆತ್ತಿಸು ; ಕಂಡರಿಸು. ~ಮಾ(ವಾ)ತು = ಕೃತಕವಾದ ಮಾತು ; ಕೃತ್ರಿಮನುಡಿ.

ಬಚ್ಚಲ್(ಲು) (ನಾ). ೧. ಮಿಾಯುವ ಸ್ಥಳ; ಸ್ನಾನದ ಮನೆ. ೨. ಮೋರಿ ; ಚರಂಡಿ.

ಬಚ್ಚಲೆ (ನಾ). ಒಂದು ಜಾತಿಯ ಸೊಪ್ಪು ; ಬಸಲೆ.

**ಬಚ್ಚಳಿ** (ನಾ). ೧. ಬತ್ತಳಿಕೆ; ತೂಣೀರ. ೨. ಕರುವಿನ ಮೇಲೆ ಪ್ರೀತಿಯುಳ್ಳ ಹಸು.

**ಬಚ್ಚಿಸು** (ಕ್ರಿ). ೧. ಕೆತ್ತು; ಕಂಡರಿಸು. ೨. = ಬರ್ಚಿಸು. ೩. ತಿನ್ನು; ಭಕ್ಷಿಸು.

**ಬಚ್ಚು** (ಕ್ರಿ). ೧. ಅಡಗಿಸು; ಮರೆಮಾಡು; ಬೈಚಿಡು. ೨. ಸೊರಗು; ಬತ್ತು; ಒಣಗು. ~ಇಡು = ಅಡಗಿಸು; ಮರೆಮಾಡು. ~ಕಡುಬು = ಒಂದು ಬಗೆಯ ಕಡುಬು.

**ಬಚ್ಚೆ** (ಗು). ಪ್ರಯೋಜನವಿಲ್ಲದ; ನಿಷ್ಫಲವಾದ. ~ಪೊ(ವೊ)ೞಗು =ವ್ಯರ್ಥವಾಗು; ನಿಷ್ಫಲವಾಗು.

**ಬಜಂತ್ರಿ** (ನಾ). ೧. ಒಂದು ಬಗೆಯ ಊದುವ ವಾದ್ಯ; ಓಲಗ. ೨. ಬಜಂತ್ರಿಯನ್ನು ಊದುವವನು; ಓಲಗದವನು.

**ಬಜಾಯಿಸು** (ಕ್ರಿ). ೧. ವಾದ್ಯವನ್ನು ನುಡಿಸು, –ಬಾಜಿಸು. ೨. ಕಟ್ಟುನಿಟ್ಟಾಗಿ ಹೇಳು. ೩. ಚಲಾಯಿಸು; ಜಾರಿಗೆ ತರು.

**ಬಜಾರ** (ನಾ). ಪೇಟೆ; ಅಂಗಡಿಬೀದಿ.

**ಬಜಾರಿ** (ನಾ). ೧. ಗಯ್ಯಾಳಿ. (ಗು). ೨. ಪೇಟೆಗೆ ಸಂಬಂಧಿಸಿದ. ೩. ಕೀಳಾದ; ಹೀನವಾದ.

**ಬಜಾರು** = ಬಜಾರ.

**ಬಜಾವಣೆ** (ನಾ). ವಾದ್ಯವನ್ನು ಬಾಜಿಸುವುದು, –ನುಡಿಸುವುದು.

**ಬಜೆ** (ನಾ). ಒಂದು ಜಾತಿಯ ಬೇರು; ಉಗ್ರಗಂಧ.

**ಬಜ್ಜರ** (ನಾ). ೧. ನವರತ್ನಗಳಲ್ಲಿ ಒಂದು; ವಜ್ರ. ೨. ಇಂದ್ರನ ವಜ್ರಾಯುಧ. ೩. ಸಿಡಿಲು.

**ಬಜ್ಜಿ** (ನಾ). ೧. ಒಂದು ಬಗೆಯ ಮೇಲೋಗರ. ೨. ಒಂದು ಬಗೆಯ ಕರಿದ ತಿಂಡಿ.

**ಬಟ** = ಭಟ.

**ಬಟವಾಡೆ** (ನಾ). ಸಂಬಳ ಮುಂತಾದುವನ್ನು ಹಂಚುವಿಕೆ.

**ಬಟವೆ** (ನಾ). (ಎಲೆ, ಅಡಕೆಗಳನ್ನು ಹಾಕಿಡುವ) ಕಿಸೆಗಳುಳ್ಳ ಚೀಲ.

**ಬಟಾಟೆ** (ನಾ). ಆಲೂಗೆಡ್ಡೆ.

**ಬಟಾಣಿ** (ನಾ). ಕಡಲೆ ಜಾತಿಯ ಒಂದು ಧಾನ್ಯ.

**ಬಟು** (ನಾ). ೧. ವೃತ್ತಾಕಾರವಾದುದು; ಗುಂಡಗೆ ಇರುವುದು. ೨. ಸಂಪೂರ್ಣ.

**ಬಟುವು** = ಬಟು.

**ಬಟ್ಟ** (ನಾ). ೧. ದುಂಡಗೆ ಇರುವುದು; ಬಟು. ೨. ಬರಿದು; ಶೂನ್ಯತೆ. ೩. = ಭಟ್ಟ. ೪. = ಭ್ರಷ್ಟ. (ಗು). ೫. ದುಂಡನೆಯ; ವೃತ್ತಾಕಾರದ. ~ಕ(ಗ)ಡಲೆ=ಬಟಾಣಿ. ~ಕೆ(ಗೆ)ಯ್ದು = ಚಕ್ರಾಯುಧ. ~ತಲೆ = ಬೋಳುತಲೆ. ~ತೆ(ದೆ)ನೆ = ಕೋಟೆಯ ಬುರುಜು. ~ಪೆ(ವೆ)ಱೆ(ರೆ) = ಪೂರ್ಣಚಂದ್ರ; ಹುಣ್ಣಿಮೆಯ ಚಂದ್ರ. ~ಬಯಲು = ಶೂನ್ಯವಾದ ಸ್ಥಳ. ~ಮೊಗ = ದುಂಡನೆಯ ಮುಖ.

**ಬಟ್ಟನೆ** (ಅ). ದುಂಡಗೆ; ವರ್ತುಲಾಕಾರವಾಗಿ.

**ಬಟ್ಟಲ್(ಲು)** (ನಾ). ದುಂಡಗಿನ ಸಣ್ಣ ಪಾತ್ರೆ.

**ಬಟ್ಟಿ** (ನಾ). ೧. ಹೊಟ್ಟೆ; ಉದರ. ೨. ಒಂದು ಬಗೆಯ ರೋಗ; ಅಂಡವಾಯು. ೩. ಮದ್ಯ ಮುಂತಾದುವನ್ನು ತಯಾರಿಸಲು ಬಳಸುವ ಹಬೆಯ ಸಾಧನ. ~ಇ(ಯಿ)ಳಿಸು =ಮದ್ಯ ಮುಂತಾದುವುಗಳ ಸಾರವನ್ನು ತೆಗೆ.

**ಬಟ್ಟಿತು** (ನಾ). ವರ್ತುಲ; ದುಂಡಗಿರುವುದು.

**ಬಟ್ಟಿತ್ತು** = ಬಟ್ಟಿತು.

**ಬಟ್ಟು** (ನಾ). ೧. ದುಂಡು; ವರ್ತುಲ. ೨. ಹಣೆಗೆ ಇಟ್ಟುಕೊಳ್ಳುವ ತಿಲಕ; ಬೊಟ್ಟು. ೩. ಪದಕ; ನಾಯಕಮಣಿ; ಬಿಲ್ಲೆ. ೪. ತೂಕ ಮಾಡಲು ಬಳಸುವ ಸಾಧನ; ತೂಕದ ಕಲ್ಲು. ೫. ಬೆರಳು; ಬೆಟ್ಟು. ೬. ತೊಟ್ಟು; ಹನಿ. ೭. ಮೂಗಿನಲ್ಲಿ ಧರಿಸುವ ಒಂದು ಆಭರಣ. ೮. ಒಂದು ಬಗೆಯ ಆಟ; ಬಿಲ್ಲೆಯಾಟ.

ಬಟ್ಟೆ (ನಾ). ೧. ದಾರಿ; ಮಾರ್ಗ. ೨. ವಸ್ತ್ರ; ಅರಿವೆ. ೩. ಋತುಸ್ರಾವ; ಆರ್ತವ. ~ಕ(ಗ)ಟ್ಟು = ದಾರಿಕಟ್ಟು; ಅಡ್ಡಗಟ್ಟು. ~ಕೆ(ಗೆ)ಡು =ದಾರಿತಪ್ಪು; ಮಾರ್ಗತಪ್ಪು. ~ಪಿ(ವಿ)ಡಿ = ಪ್ರಯಾಣಕ್ಕೆ ಹೊರಡು; ಹಾದಿಹಿಡಿ.

ಬಟ್ಟೆಗ (ನಾ). ಹಾದಿಹೋಕ; ದಾರಿಗ.

ಬಡ (ಗು). ೧. ಸೊರಗಿದ; ಕ್ಷೀಣವಾದ. ೨. ದಾರಿದ್ರ್ಯದಿಂದ ಕೂಡಿದ. ~ತನ =೧. ದಾರಿದ್ರ್ಯ; ಕಂಗಾಲುಸ್ಥಿತಿ. ೨. ಸೊರಗಿರುವಿಕೆ; ಸಣ್ಣಗಿರುವಿಕೆ. ~ನಡು=ತೆಳ್ಳಗಿನ ಸೊಂಟ. ~ಪ(ವ)ಡು = ೧. ಕೃಶವಾಗು; ಬಡಕಲಾಗು. ೨. ದಾರಿದ್ರ್ಯವನ್ನು ಹೊಂದು; ಬಡತನದಿಂದ ಕೂಡಿರು. ~ಪೆಟ್ಟು= ಅಲ್ಪಶ್ರಮ. ~ಮನ = ಕೀಳುಮನಸ್ಸು; ಅಲ್ಪಮನಸ್ಸು.

ಬಡಕಲು (ಗು). ದುರ್ಬಲವಾದ; ಸೊರಗಿದ.

ಬಡಗ (ನಾ). ಉತ್ತರದಿಕ್ಕು.

ಬಡಗಲ್(ಲು) = ಬಡಗ.

ಬಡಗಿ (ನಾ). ಮರಗೆಲಸವನ್ನು ಮಾಡುವವನು; ವರ್ಧಕಿ. ~ಬೆ(ವೆ)ಸ = ಬಡಗಿಯ ಕೆಲಸ; ಮರಗೆಲಸ.

ಬಡಗು = ಬಡಗ.

ಬಡತಿ (ನಾ). ಸಂಬಳ, ಹುದ್ದೆ ಮುಂತಾದುವುಗಳಲ್ಲಿಯ ಏರಿಕೆ.

ಬಡಪ (ನಾ). ನಿರಂತರವಾದ ಮಳೆ; ಧಾರಾಕಾರವಾದ ಮಳೆ; ಜಡಿಮಳೆ.

ಬಡಪಾಯಿ (ನಾ). ೧.ಅನಾಥ; ದಿಕ್ಕಿಲ್ಲದವನು. (ಗು). ೨. ದಿಕ್ಕಿಲ್ಲದ; ಅನಾಥವಾದ.

ಬಡಬ (ನಾ). ಸಮುದ್ರದ ಒಳಗಿನ ಬೆಂಕಿ; ವಡಬಾಗ್ನಿ. ~ಅಗ್ನಿ = ಬಡಬ.

ಬಡಬಡಿಸು (ಕ್ರಿ). ೧. ಅರ್ಥವಾಗದಂತೆ ಬೇಗಬೇಗನೆ ಮಾತನಾಡು; ವಟಗುಟ್ಟು. ೨. ನಿದ್ದೆಯಲ್ಲಿ ಮಾತನಾಡು; ಕನವರಿಸು.

ಬಡವ (ನಾ). ದರಿದ್ರ; ದೀನ.

ಬಡವು (ನಾ). ೧. ನಿಶ್ಶಕ್ತಿ; ದುರ್ಬಲತೆ. ೨. ಬಡಪ್ರಾಣಿ; ದಿಕ್ಕಿಲ್ಲದವನು. ~ಆಗು = ಕೃಶವಾಗು; ಸೊರಗು.

ಬಡವೆ (ನಾ). ಬಡಹೆಂಗಸು.

ಬಡಹ = ಬಡಪ.

ಬಡಾಯಿ (ನಾ). ಒಣಹೆಮ್ಮೆ; ಡೌಲು; ಜಂಬ. ~ಕೊಚ್ಚು = ಜಂಬದ ಮಾತನಾಡು. ~ಗಾರ = ಬಡಾಯಿ ಕೊಚ್ಚುವವನು; ಜಂಬಗಾರ. ~ಮಾತು = ಒಣಹೆಮ್ಮೆ ಮಾತು; ಜಂಬದ ನುಡಿ.

ಬಡಾಯಿಸು (ಕ್ರಿ). ೧. ಬೆಳೆ; ವೃದ್ಧಿಯಾಗು. ೨. ಬೆಳೆಯುವಂತೆ ಮಾಡು; ವೃದ್ಧಿಗೊಳಿಸು.

ಬಡಾವಣೆ (ನಾ). ೧. ವಿಸ್ತೀರ್ಣ; ವ್ಯಾಪ್ತಿ. ೨. ಮೊಹಲ್ಲಾ; ಕಾಲನಿ.

ಬಡಿ (ಕ್ರಿ). ೧. ಹೊಡೆ; ಪೆಟ್ಟುಕೊಡು. ೨. ಬಳಿ; ಹಚ್ಚು. ೩. ತಟ್ಟು. ೪. ಚುಕ್ಕುಬಡಿ; ಮೃದುವಾಗಿ ತಟ್ಟು. ೫. ಆವರಿಸು; ಹಿಡಿದುಕೊಳ್ಳು. (ನಾ). ೬. ಹೊಡೆತ; ಪೆಟ್ಟು. ೭.= ಬಡಿಗೋಲ್. ~ಕೊ(ಗೊ)ೕಲ್(ಲು) = ಬಡಿಗೆ; ದೊಣ್ಣೆ.

ಬಡಿಗ ೧. = ಬಡಗಿ. ೨. ಹೊಡೆಯುವವನು; ಬಡಿಯುವವನು.

ಬಡಿಗೆ (ನಾ). ೧. ಕೋಲು; ದೊಣ್ಣೆ. ೨. ಸುತ್ತಿಗೆ.

ಬಡಿವಾರ = ಬಡಾಯಿ.

ಬಡಿಶ (ನಾ). ಮೀನು ಹಿಡಿಯುವ ಗಾಳ.

ಬಡಿಸ = ಬಡಿಶ.

ಬಡಿಸು (ಕ್ರಿ). ೧. ಹೊಡೆಯಿಸು; ಬಡಿಯುವಂತೆ ಮಾಡು. ೨. = ಬಡ್ಡಿಸು.

ಬಡು (ನಾ). ೧. ಪ್ರಾಣಿಗಳ ಶವ, –ಹೆಣ. ೨. (ಸಾಮಾನುಗಳನ್ನಿಡಲು) ಗೋಡೆಯಲ್ಲಿ ಮುಂಚಾಚಿಕೊಂಡಿರುವಂತೆ ಮಾಡಿರುವ ಭಾಗ.

ಬಡೇಸೋಪು (ನಾ). ಒಂದು ಜಾತಿಯ ಔಷಧಿಯ ಸಸ್ಯ ಮತ್ತು ಅದರ ಬೀಜ.

ಬಡ್ಡ (ನಾ). ದಡ್ಡ ; ತಿಳಿಗೇಡಿ.

ಬಡ್ಡಿ (ನಾ). ೧. ಸೂಳೆ ; ಹಾದರಗಿತ್ತಿ. ೨. ಗೊಡ್ಡು ಹೆಂಗಸು ; ಬಂಜೆ. ೩. ಸಾಲದ ಹಣದ ಮೇಲೆ ಕೊಡುವ ಹೆಚ್ಚಿನ ಹಣ.

ಬಡ್ಡಿಸು (ಕ್ರಿ). ಊಟಕ್ಕೆ ನೀಡು, -ಹಾಕು.

ಬಡ್ಡು (ನಾ). ೧. ಪ್ರಯೋಜನವಿಲ್ಲದುದು ; ಬರಡು ; ಗೊಡ್ಡು. ೨. ದಡ್ಡತನ ; ತಿಳಿಗೇಡಿತನ. ೩. ದಡ್ಡ ; ಮೂರ್ಖ.

ಬಡ್ತಿ = ಬಡತಿ.

ಬಣ (ನಾ). ಪಂಗಡ ; ಗುಂಪು.

ಬಣ(ಂ)ಜು (ನಾ). ವ್ಯಾಪಾರ ; ಕ್ರಯ ವಿಕ್ರಯ. ~ಇಗ = ವ್ಯಾಪಾರಿ ; ವರ್ತಕ.

ಬಣ(ಂ)ಬೆ (ನಾ). ಮೆದೆ ; ಒಟ್ಟಿಲು ; ರಾಶಿ.

ಬಣಗು (ನಾ). ೧. ಅಲ್ಪನಾದವನು ; ಕ್ಷುದ್ರ. (ಗು). ೨. ಅಲ್ಪವಾದ ; ಕ್ಷುದ್ರವಾದ. ~ಕ(ಗ)ವಿ = ಅಲ್ಪಕವಿ ; ಕೆಟ್ಟ ಕವಿ. ~ತನ = ಅಲ್ಪತನ ; ಕ್ಷುಲ್ಲಕ ಬುದ್ಧಿ. ~ಮಾನವ = ಅಲ್ಪಮನುಷ್ಯ.

ಬಣವೆ = ಬಣಂಬೆ.

ಬಣಿತೆ (ನಾ). ಮಾತುಕತೆ ; ಸಂಭಾಷಣೆ.

ಬಣ್ಣ (ನಾ). ೧. ರಂಗು ; ವರ್ಣ. ೨. ಸೀರೆ. ೩. ಹಾಡು. ೪. ಗುಣಗಾನ ; ಹೊಗಳಿಕೆ. ೫. ಗುಣ ; ಮಟ್ಟ. ೬. ಪಂಗಡ ; ವರ್ಗ. ೭. ಒಂದು ಬಗೆಯ ನಾಣ್ಯ. ೮. ಅಂದ ; ಸೊಗಸು. ೯. ತೋರಿಕೆ ; ಹೊರವೇಷ. ~ಇಕೆ = ಹೊಗಳುವಿಕೆ ; ಸ್ತುತಿಸುವಿಕೆ. ~ಇಗ = ಬಣ್ಣಿಸುವವನು ; ಹೊಗಳುವವನು. ~ಇಸು=೧. ವರ್ಣಿಸು ; ಹೊಗಳು. ೨. ಬಣ್ಣ ಹಾಕು, -ಹಚ್ಚು. ~ಏ(ವೇ)ಉ(ರು) = ಕಳೆಯೇರು ; ಶೋಭಿಸು. ~(ಂ)ಕೆ(ಗೆ)ಡು = ರಂಗು ಇಲ್ಲವಾಗು ; ಕಳಾಹೀನವಾಗು. ~ಕ = ತೋರಿಕೆಯವನು ; ಥಳುಕಿನ ಮನುಷ್ಯ. ~ಕ(ಗ)ಟ್ಟು = ೧. ಬಣ್ಣವನ್ನು ಹಾಕು. ೨. ಕಳೆಯೇರು ; ರಂಗೇರು. ~ಕೂ(ಗೂ)ಳ್(ಳು)=ದೃಷ್ಟಿನಿವಾರಣೆಗಾಗಿ ಚೆಲ್ಲುವ ಬಣ್ಣದ ಅನ್ನ. ~ಗಾರ = ಬಣ್ಣ ಹಾಕುವವನು. ~ಬಯಲಾಗು = ನಿಜ ಸ್ವರೂಪ ಪ್ರಕಟವಾಗು. ~ಬಿಡು = ಬಣ್ಣ ಗೆಡು ; ಸ್ವರೂಪ ಬದಲಾಯಿಸು. ~ಮಾ(ವಾ)ತು = ಬೆಡಗಿನ ಮಾತು ; ತೋರಿಕೆಯ ಮಾತು. ~ಸರ = ಬಣ್ಣದ ಮಣಿಗಳ ಸರ ; ವರ್ಣಸರ.

ಬಣ್ಣನೆ (ನಾ). ವರ್ಣಿಸುವುದು ; ವರ್ಣನೆ.

ಬಣ್ಣಪುರ (ನಾ). ಬಣ್ಣ ತುಂಬುವುದು ; ವರ್ಣಪೂರ.

ಬಣ್ಣಿಗೆ (ನಾ). ಬಣ್ಣದ ಮಾತು.

ಬತ (ನಾ). ವ್ರತ ; ನಿಯಮ. ~ಕೆ(ಗೆ)ೀಡಿ = ೧. ವ್ರತವನ್ನು ಹಾಳು ಮಾಡುವವನು. ೨. ವ್ರತಭಂಗವಾದವನು ; ವ್ರತಭ್ರಷ್ಟ.

ಬತೇರಿ (ನಾ). ಕೋಟೆಯ ಮೇಲುಭಾಗ ; ಬುರುಜು ; ಕೊತ್ತಳ.

ಬತ್ತ (ನಾ). ಕಳಮೆ ; ನೆಲ್ಲು.

ಬತ್ತಲು ೧.=ಬತ್ತಲೆ. ೨. ಒಣಗಿಸಿದ ತರಕಾರಿ ಅಥವಾ ಹಣ್ಣು.

ಬತ್ತಲೆ (ನಾ). ೧. ನಗ್ನತೆ ; ದಿಗಂಬರತ್ವ. ೨. ಬರಿದು ; ಶೂನ್ಯ. (ಗು). ೩. ನಗ್ನವಾದ. ~ಇಗ = ಬತ್ತಲೆಗ.

ಬತ್ತಲೆಗ (ನಾ). ೧. ಬೆತ್ತಲೆಯಾಗಿರುವವನು ; ದಿಗಂಬರ. ೨. ಜೈನಸಂನ್ಯಾಸಿ.

ಬತ್ತಳಿಕೆ (ನಾ). ಬಾಣಗಳನ್ನಿಡುವ ಕೋಶ ; ದೊಣೆ ; ತೂಣೀರ.

ಬತ್ತಾಯ (ನಾ). ಭತ್ಯ ; ಉಂಬಳಿ.

ಬತ್ತಾಸು (ನಾ). ಒಂದು ಬಗೆಯ ಸಿಹಿತಿಂಡಿ.

ಬತ್ತಿ (ನಾ). ೧. ಹುರಿ ಮಾಡಿದ ಹತ್ತಿಯ ಎಳೆ ; ವರ್ತಿ. ೨. ಸಿಗರೇಟು, ಬೀಡಿ

ಮುಂತಾದುವು. ೩. ಎಳೆಯ ಮಗು; ಹಸುಳೆ. ~ಕೊಡು = ಮೋಸಮಾಡು; ವಂಚಿಸು.

ಬತ್ತೀಸ (ನಾ). ಮೂವತ್ತೆರಡು.

ಬತ್ತು (ಕ್ರಿ). ೧. ಒಣಗು; ಇಂಗು. ೨. ಕ್ಷೀಣಿಸು; ಸೊರಗು.

ಬತ್ತುಗೆ (ನಾ). ಒಣಗಿದುದು; ಶುಷ್ಕವಾದುದು.

ಬತ್ತೇರಿ = ಬತೇರಿ.

ಬದಗ (ನಾ). ೧. ನೀಚ; ಅಲ್ಪಮನುಷ್ಯ. ೨. ಜಾರ; ವ್ಯಭಿಚಾರಿ.

ಬದಗಿ (ನಾ). ೧. ಕೀಳು ಹೆಂಗಸು; ನೀಚ ಸ್ತ್ರೀ. ೨. ಜಾರೆ; ಸೂಳೆ.

ಬದಗು (ನಾ). ೧. ದುಡಿಮೆ; ಚಾಕರಿ. ೨. ಕೀಳು ಕೆಲಸ; ಹೀನಕಾರ್ಯ.

ಬದಗುಳಿಗ = ಬದಗ.

ಬದಣೆ (ನಾ). ಒಂದು ಜಾತಿಯ ಸಸ್ಯ ಮತ್ತು ಅದರ ಕಾಯಿ; ವಾರ್ತಾಕ.

ಬದನಿಕೆ = ಬಂದಣಿಕೆ.

ಬದನೆ = ಬದಣೆ.

ಬದರ (ನಾ). ಎಲಚಿಮರ ಮತ್ತು ಅದರ ಹಣ್ಣು; ಬೋರೆ.

ಬದರಿ ೧. = ಬದರ. ೨. ಹತ್ತಿಗಿಡ. ೩. ಹಿಮಾಲಯದಲ್ಲಿರುವ ಒಂದು ಪುಣ್ಯಕ್ಷೇತ್ರ.

ಬದಲ್(ಲು) (ನಾ). ೧. ಬದಲಾವಣೆ; ಮಾರ್ಪಾಡು. ೨. ಪ್ರತಿಯಾದುದು. ~ಆಗು = ವ್ಯತ್ಯಾಸವಾಗು; ಮಾರ್ಪಾಡಾಗು. ~ಇಸು = ಬದಲಾಯಿಸು. ~ಮಾಡು = ಬದಲಾಯಿಸು. ~ಮಾತು = ಪ್ರತಿಮಾತು; ಪ್ರತ್ಯುತ್ತರ.

ಬದಲಾಯಿಸು (ಕ್ರಿ). ಮಾರ್ಪಡಿಸು; ವ್ಯತ್ಯಾಸಮಾಡು.

ಬದಲಾವಣೆ (ನಾ). ಮಾರ್ಪಾಡು; ವ್ಯತ್ಯಾಸ.

ಬದಲಿ (ನಾ). ಬದಲಾಗಿ ಬಂದ ವಸ್ತು ಅಥವಾ ವ್ಯಕ್ತಿ.

ಬದಿ (ನಾ). ೧. ಕೆಸರು; ರಾಡಿ. ೨. ಪಕ್ಕ; ಪಾರ್ಶ್ವ; ಮಗ್ಗುಲು.

ಬದು (ನಾ). ಹೊಲ, ಗದ್ದೆಗಳ ಅಂಚಿನಲ್ಲಿ ರಚಿಸಿದ ಮಣ್ಣಿನ ಒಡ್ಡು.

ಬದುಂಕು = ಬರ್ದುಂಕು.

ಬದುಕು = ಬರ್ದುಕು. ~ಇಸು = ಪ್ರಾಣವನ್ನು ಉಳಿಸು; ಕಾಪಾಡು.

ಬದುವು = ಬದು.

ಬದೆಗ = ಬದಗ.

ಬದ್ದಣ = ಬದ್ದವಣ.

ಬದ್ದರ (ನಾ). ಆನೆ; ಗಜ.

ಬದ್ದವಣ (ನಾ). ಒಂದು ಬಗೆಯ ಮಂಗಳವಾದ್ಯ.

ಬದ್ದಿಕಾಲಿ(ರ) (ನಾ). ಸಹಾಯಕ; ಬೆಂಬಲಿಗ.

ಬದ್ದಿಗೆ ೧. = ಬದ್ದುಗೆ. ೨. ಕಟ್ಟು; ಬಂಧನ. ೩. ತುಲನೆ ಮಾಡುವುದು; ತಾಳೆ ನೋಡುವುದು.

ಬದ್ದಿಸು (ಕ್ರಿ). ಸರಿಹಚ್ಚಿ ನೋಡು.

ಬದ್ದು (ನಾ). ೧. ಜಾಣ್ಮೆ; ಪ್ರೌಢಿಮೆ. ೨. ಚಿಣ್ಣಿಕೋಲು, ಗೋಲಿ ಮುಂತಾದ ಆಟಗಳಿಗಾಗಿ ನೆಲದಲ್ಲಿ ತೋಡುವ ಗುಳಿ.

ಬದ್ದುಗೆ (ನಾ). ಸೆರಗಿನ ತುದಿಗೆ ನೇಯದೆ ಬಿಟ್ಟ ವಸ್ತ್ರದ ಎಳೆ; ಕರೆ.

ಬದ್ದೆ (ನಾ). ೧. ಜಾಣ್ಮೆ; ಪ್ರೌಢಿಮೆ. ೨. ಜಾಣೆ; ಪ್ರೌಢೆ.

ಬದ್ಧ (ಗು). ೧. ಕಟ್ಟಲ್ಪಟ್ಟ. ೨. ನಿಯಮಕ್ಕೆ ಒಳಪಟ್ಟ. ೩. ಸೆರೆಹಿಡಿಯಲ್ಪಟ್ಟ; ಬಂಧಿಸಲ್ಪಟ್ಟ. ೪. ದೃಢವಾದ; ಗಾಢವಾದ. ~ಅಂಜಲಿ=ಮುಗಿದ ಕೈ; ಜೋಡಿಸಿದ ಕೈ. ~ಕಂಕಣ=೧. ಗುರಿಯನ್ನು ನೆರವೇರಿಸಲು ಪ್ರತಿಜ್ಞಾಬದ್ಧನಾದವನು. ೨. ದೃಢನಿಶ್ಚಯ ಮಾಡುವಿಕೆ. ~ದ್ವೇಷ = ಕಡುವೈರ, –ಹಗೆತನ. ~ಭ್ರುಕುಟಿ = ಹುಬ್ಬುಗಂಟು. ~ವೈರ = ಬದ್ಧದ್ವೇಷ.

ಬಧಿರ (ನಾ). ಕಿವಿ ಕೇಳಿಸದವನು; ಕಿವುಡ.
ಬನ (ನಾ). ೧. ಅರಣ್ಯ; ವನ; ಕಾಡು. ೨. ತೋಟ; ಉದ್ಯಾನವನ.
ಬನಾತು (ನಾ). (ಕಸೂತಿ ಕೆಲಸದಿಂದ ಕೂಡಿದ) ಉಣ್ಣೆಯ ಬಟ್ಟೆ.
ಬನಿ (ನಾ). ೧. ಜಿಗಟು; ಅಂಟು; ಜಿಗಿ. ೨. ಸತ್ತ್ವ; ಸಾರ; ಕೆಚ್ಚು.
ಬನೀನು (ನಾ). ಒಳ ಅಂಗಿ.
ಬನ್ನ (ನಾ). ೧. ಕಷ್ಟ; ಕೇಡು; ತೊಂದರೆ. ೨. ಸೋಲು; ಅಪಜಯ. ೩. ಅವಮಾನ; ಭಂಗ. (ಗು). ೪. ಒಡೆದ; ಮುರಿದ. ~(ಂ)ಪ(ಬ)ಡು = ಕಷ್ಟಪಡು; ತೊಂದರೆ ಗೊಳಗಾಗು.
ಬನ್ನಂಗಾಯಿ (ನಾ). ಅರ್ಧ ಬಲಿತ ತೆಂಗಿನ ಕಾಯಿ.
ಬನ್ನಣೆ = ಬಣ್ಣನೆ.
ಬನ್ನಿ (ನಾ). ಒಂದು ಜಾತಿಯ ಮರ; ಶಮಿ.
ಬಪ್ಪ (ನಾ). ತಂದೆ; ಜನಕ; ಬೊಪ್ಪ.
ಬಬ್ಬುಲಿ(ಳಿ) = ಬೊಬ್ಬುಲಿ.
ಬಭ್ರು (ನಾ). ೧. ಬಂಗಾರದ ಬಣ್ಣ; ಹೊಂಬಣ್ಣ. ೨. ಮುಂಗುಸಿ; ಮುಂಗುಲಿ. ೩. ಬೆಂಕಿ. ೪. ಕೃಷ್ಣ. ೫. ಶಿವ.
ಬಯ್ (ಕ್ರಿ). ೧. ಒಟ್ಟುಗೂಡಿಸು; ಕೂಡಿಡು. ೨. ಅಡಗಿಸು; ಬಚ್ಚಿಡು. ೩. = ಬಯ್ಯು. (ನಾ). ೪. ಸಂಜೆ; ಬೈಗು. ೫. ನಿಂದಿಸುವಿಕೆ; ಹಳಿಯುವಿಕೆ.
ಬಯಕೆ = ಬಯ್ಕೆ.
ಬಯಲ್(ಲು) (ನಾ). ೧. ವಿಸ್ತಾರವಾದ ಜಾಗ; ಮೈದಾನ. ೨. ವ್ಯರ್ಥವಾದುದು; ನಿರರ್ಥಕವಾದುದು. ೩. ಪ್ರಕಟನೆ; ಗೋಚರಿಸುವುದು. ೪. ಶೂನ್ಯ; ಬರಿದು. ೫. ಶೂನ್ಯದಲ್ಲಿ ಒಂದಾಗುವುದು; ಐಕ್ಯ. ~ಆಗು=೧. ವ್ಯರ್ಥವಾಗು; ನಿಷ್ಪ್ರಯೋಜಕವಾಗು. ೨. ಗೋಚರಿಸು; ಪ್ರಕಟಗೊಳ್ಳು. ೩. ಲೀನವಾಗು; ಐಕ್ಯವಾಗು. ~ಆಟ =ಯಕ್ಷಗಾನದಲ್ಲಿ ಒಂದು ಪ್ರಕಾರ. ~ಆಡಂಬರ = ಒಣಹೆಮ್ಮೆ; ಪೊಳ್ಳು ಬಡಿವಾರ. ~ಇಗ = ಶೂನ್ಯದಲ್ಲಿ ಒಂದಾಗುವವನು. ~ಕಡೆ = ಬಹಿರ್ದೇಶ. ~ತೊ(ದೊ)ಱೆ(ರೆ) = ೧. ಬಯಲಿನಲ್ಲಿ ಹರಿಯುವ ನದಿ. ೨. ಬಿಸಿಲಿನಲ್ಲಿ ನೀರಿರುವಂತೆ ಕಂಡರೂ ನೀರಿಲ್ಲದಿರುವುದು; ಬಿಸಿಲುಗುದುರೆ; ಮರೀಚಿಕೆ. ~ಮಾಡು = ೧. ವ್ಯರ್ಥಮಾಡು; ಪೋಲು ಮಾಡು. ೨. ಬಹಿರಂಗಪಡಿಸು; ಪ್ರಕಟಗೊಳಿಸು.
ಬಯಸು (ಕ್ರಿ). ಅಪೇಕ್ಷಿಸು; ಹಂಬಲಿಸು.
ಬಯ್ಕೆ (ನಾ). ೧. ಗರ್ಭಿಣಿ ಸ್ತ್ರೀಗೆ ಉಂಟಾಗುವ ಆಸೆ, –ಹಂಬಲ. ೨. ಆಸೆ; ಅಪೇಕ್ಷೆ. ೩. ನಿಧಿ; ನಿಕ್ಷೇಪ.
ಬಯ್ಗಳು = ಬಯ್ಗುಳ್.
ಬಯ್ಗು (ನಾ). ಸಂಜೆ; ಸಾಯಂಕಾಲ.
ಬಯ್ಗುಳ್(ಳು) (ನಾ). ನಿಂದೆ; ತೆಗಳಿಕೆ.
ಬಯ್ಚು (ಕ್ರಿ). ಬಚ್ಚಿಡು; ಅಡಗಿಸು.
ಬಯ್ತಲೆ (ನಾ). ಬಾಚಿದ ತಲೆಯನ್ನು ವಿಭಾಗಿಸುವ ಗೆರೆಯಂತಹ ಭಾಗ; ಬೈತಲೆ. ~ಬೊಟ್ಟು = ಬೈತಲೆಗೆ ಧರಿಸುವ ಒಂದು ಆಭರಣ.
ಬಯ್ತು (ನಾ). ೧. ಸುರಕ್ಷಿತವಾಗಿಟ್ಟಿರುವುದಕ್ಕೆಂದು ಕೊಟ್ಟ ವಸ್ತು; ನ್ಯಾಸ. ೨. ಅಡಗಿಸಿಟ್ಟ ಹಂಬಲ, – ಬಯಕೆ.
ಬಯ್ಯು (ಕ್ರಿ). ನಿಂದಿಸು; ಜರೆ.
ಬರ್(ರು) (ಕ್ರಿ). ೧. ಆಗಮಿಸು; ಬಂದು ಸೇರು. ೨. ಉಂಟಾಗು; ಒದಗು. ೩. ಸಾಧ್ಯವಾಗು. ೪. ಯುಕ್ತವಾಗು; ಉಚಿತವಾಗು. ೫. ಚಿಗುರು; ಕೊನರು. ೬. ಫಲಪುಷ್ಪಗಳಿಂದ ಕೂಡಿರು; ಹೂವು ಹಣ್ಣುಗಳಿಂದ ತುಂಬಿರು.

ಬರ (ನಾ). ೧. ವರ; ಅನುಗ್ರಹ. ೨. = ಬಱ. (ಅ). ೩. ಅಲ್ಲಿಯವರೆಗೆ ; ಆವರೆಗೆ.
ಬರಕ (ನಾ). ಒಂದು ಜಾತಿಯ ಕಾಡುಪ್ರಾಣಿ.
ಬರಕತ್ತು (ನಾ). ಏಳಿಗೆ ; ಅಭಿವೃದ್ಧಿ.
ಬರಕಿ (ನಾ). ಪಕ್ಕ ; ಬದಿ. ~ಎ(ಯೆ)ಲುವು = ಪಕ್ಕೆಲುಬು ; ಪಕ್ಕೆಯ ಮೂಳೆ.
ಬರಖಾಸ್ತು (ನಾ). ಮುಕ್ತಾಯ ; ಕೊನೆ.
ಬರಗಲೆ (ನಾ). ಒಂದು ಬಗೆಯ ಆಭರಣ.
ಬರಗು (ಕ್ರಿ). ೧. ಬಾಚು. (ನಾ). ೨. ಒಂದು ಬಗೆಯ ಧಾನ್ಯ ; ನವಣೆ ; ಹಾರಕ. ೩. ಒಂದು ಜಾತಿಯ ಹುಲ್ಲು ; ದರ್ಭೆ.
ಬರಣಿ = ಭರಣಿ.
ಬರತಿ = ಭರತಿ.
ಬರಪ (ನಾ). ೧. ಬರೆದುದು ; ಬರವಣಿಗೆ. ೨. = ಬಱಪ.
ಬರಲ್(ಲು) (ನಾ). ಗುಡಿಸುವ ಸಾಧನ ; ಪೊರಕೆ.
ಬರವಣಿಗೆ (ನಾ). ಬರೆಯುವಿಕೆ ; ಬರೆಹ.
ಬರವಸ = ಭರವಸ.
ಬರವಸೆ = ಭರವಸ.
ಬರವು (ನಾ). ಬರುವಿಕೆ ; ಆಗಮನ.
ಬರಹ = ಬರಪ. ~ಗಾರ = ಬರೆಯುವವನು ; ಲೇಖಕ.
ಬರಾಬರಿ (ನಾ). ೧. ಸಮಾನತೆ ; ಸಾದೃಶ್ಯ. ೨. ಸರಿಯಾದುದು ; ಉಚಿತವಾದುದು. ೩. ಸಮನಾದುದು.
ಬರಿ (ನಾ). ೧. ಪಕ್ಕ ; ಬದಿ; ಮಗ್ಗುಲು. ೨. ಪಕ್ಕೆ ; ಅಳ್ಳೆ. ೩. = ಬಱಿ.
ಬರಿಸ (ನಾ). ೧. ವರ್ಷ ; ಸಂವತ್ಸರ. ೨. ಮಳೆ.
ಬರುಂಟು = ಬೆರಂಟು.
ಬರುಹಿ = ಬರ್ಹಿ.
ಬರೆ (ಕ್ರಿ). ೧. ಲೇಖಿಸು ; ಅಕ್ಷರದಲ್ಲಿರಿಸು. ೨. ಚಿತ್ರಿಸು. ೩. ಕಾವ್ಯರಚನೆ ಮಾಡು. ೪. = ಬಱೆ³. (ನಾ). ೫. ಕಾದ ಕುಳದಿಂದ ಮೈಮೇಲೆ ಹಾಕಿದ ಗೆರೆ, -ರೇಖೆ. ~ಹಾಕು = ಕಾದ ಲೋಹದಿಂದ ದೇಹದ ಮೇಲೆ ಗೆರೆ ಎಳೆ.
ಬರೆಪ = ಬರಪ. ~ಕಾಱ(ರ) = ಬರಹಗಾರ.
ಬರೆವಣಿಗೆ = ಬರವಣಿಗೆ.
ಬರೆಹ = ಬರಪ.
ಬಱ(ರ) (ನಾ). ೧. ಕ್ಷಾಮ ; ದುರ್ಭಿಕ್ಷ. ೨. ಒಣಗಿರುವುದು ; ಶುಷ್ಕವಾಗಿರುವುದು. ೩. ಅಭಾವ; ಕೊರತೆ. ೪. ಸೌದೆ ; ಕಟ್ಟಿಗೆ. ~ಕಾ(ಗಾ)ಲ = ದುರ್ಭಿಕ್ಷ; ಕ್ಷಾಮ. ~ಸಿಡಿಲ್(ಲು) = ಮಳೆಯಿಲ್ಲದೆಯೇ ಹೊಡೆಯುವ ಸಿಡಿಲು.
ಬಱ(ರ)ಟ (ನಾ). ಬೆರಣಿ ; ಕುರುಳು.
ಬಱ(ರ)ಡ (ನಾ). ೧. ಮಕ್ಕಳಿಲ್ಲದವನು. ೨. ನಿರುಪಯೋಗಿ; ಕೆಲಸಕ್ಕೆ ಬಾರದವನು.
ಬಱ(ರ)ಡು (ನಾ). ೧. ನಿಸ್ಸಾರವಾದುದು ; ಪೊಳ್ಳು. ೨. ಗೊಡ್ಡು ; ಬಂಜೆತನ. ೩. ಬರಿದು ; ಶೂನ್ಯತೆ. ~ಆಗು = ನಿರುಪಯುಕ್ತವಾಗು ; ಕೆಲಸಕ್ಕೆ ಬಾರದಾಗು.
ಬಱ(ರ)ಪ (ನಾ). ಒಣಗಿರುವಿಕೆ ; ಶುಷ್ಕವಾಗಿರುವಿಕೆ.
ಬಱಿ(ರಿ) (ಗು). ೧. ವ್ಯರ್ಥವಾದ ; ಕೆಲಸಕ್ಕೆ ಬಾರದ. ೨. ಶೂನ್ಯವಾದ ; ಖಾಲಿಯಾದ. ೩. ಅಷ್ಟುಮಾತ್ರದ ; ಕೇವಲ. ~ಕೆ(ಗೆ)ಯ್ = ೧. ಬರಿದು ಮಾಡು ; ಖಾಲಿಮಾಡು. ೨. ಏನೂ ಇಲ್ಲದ ಕೈ ; ಖಾಲಿ ಕೈ. ~ತೊ(ದೊ)ಱೆ³(ರೆ) = ಒಣಗಿದ ಹೊಳೆ.
ಬಱು(ರು) = ಬಱಿ. ~ಮಾ(ವಾ)ತು = ವ್ಯರ್ಥವಾದ ಮಾತು.
ಬಱು(ರು)(ಂ)ಬ (ನಾ). ೧. ಬರಿದಾದವನು. ೨. ನಿಸ್ಸಹಾಯಕ.
ಬಱು(ರು)ವ = ಬಱುಂಬ.

ಬಱಿ(ರೆ) (ಕ್ರಿ). ೧. ಒಣಗು; ಬತ್ತು; ಇಂಗು. ೨. ಸೊರಗು; ಕ್ಷೀಣವಾಗು. (ಗು). ೩. = ಬಱು.

ಬರ್ಕ = ಬರಕ.

ಬರ್ಕಡಿ (ನಾ). ೧. ವಿವಾದ; ಚರ್ಚೆ. ೨. ಕಲಹ; ಜಗಳ. ~ಕು(ಗು)ಟ್ಟು = ವ್ಯರ್ಥವಾಗಿ ಚರ್ಚಿಸು.

ಬರ್ಕೆವಲಸು = ಬಕ್ಕೆವಲಸು.

ಬರ್ಚಣೆ (ನಾ). ೧. ಬಣ್ಣ; ರಂಗು. ೨. ಬಣ್ಣ ಹಾಕುವಿಕೆ; ಚಿತ್ರಣ.

ಬರ್ಚಿ = ಬರ್ಜಿ.

ಬರ್ಚಿಸು (ಕ್ರಿ). ಬಣ್ಣಹಾಕು; ಚಿತ್ರಿಸು.

ಬರ್ಜಿ (ನಾ). ಒಂದು ಬಗೆಯ ಆಯುಧ; ಈಟಿ; ಸಬಳ.

ಬರ್ದಿಲ (ನಾ). ೧. ಸ್ವರ್ಗ; ದೇವಲೋಕ. ೨. ದೇವತೆ; ಸಾವಿಲ್ಲದವನು; ಅಮರ. ~ಆಳ್ = ದೇವೇಂದ್ರ.

ಬರ್ದು (ಕ್ರಿ). ೧. ಸಾಯು; ಮರಣಹೊಂದು. ೨. ನವೆ; ಕೃಶವಾಗು. ೩. ಬದುಕು; ಜೀವಿಸು. (ನಾ). ೪. ಸಾವು; ಮರಣ. ೫. ಪ್ರೌಢಿಮೆ; ಜಾಣ್ಮೆ.

ಬರ್ದುಂಕು (ಕ್ರಿ). ೧. ಜೀವಿಸು; ಬಾಳು; ಜೀವಧಾರಣೆ ಮಾಡು. ೨.ಜೀವನ ನಡೆಸು.

ಬರ್ದುಕು ೧.= ಬರ್ದುಂಕು.(ನಾ).೨.ಜೀವನ; ಬಾಳು. ೩. ಕಸಬು; ಉದ್ಯೋಗ. ೪. ಆಸ್ತಿ; ಸಂಪತ್ತು. ೫. ವಸ್ತು; ಸರಕು.~ಕೆ(ಗೆ)ಯ್ = ಜೀವನ ಸಾಗಿಸು; ಬಾಳುವೆ ಮಾಡು.

ಬರ್ದುಗ (ನಾ). ಪ್ರೌಢ; ಜಾಣ; ನಿಪುಣ.

ಬರ್ದುಗೆ (ನಾ). ಸಾವು; ಮರಣ.

ಬರ್ದೆ (ನಾ). ೧. ಪ್ರಬುದ್ಧಳಾದ ಹೆಂಗಸು; ಜಾಣೆ. ೨. ಮಧ್ಯವಯಸ್ಸಿನವಳು. ೩. ಸೂಳೆ; ವೇಶ್ಯೆ. ೪. ನಾಯಕಿಯರಲ್ಲಿ ಒಂದು ಪ್ರಕಾರ.

ಬರ್ಫ (ನಾ). ಮಂಜಿನ ಗಡ್ಡೆ.

ಬರ್ಫಿ (ನಾ). ಒಂದು ಬಗೆಯ ಸಿಹಿತಿಂಡಿ.

ಬರ್ಬರ (ನಾ). ೧. ಅನಾಗರಿಕ; ಸುಸಂಸ್ಕೃತ ನಲ್ಲದವನು. ೨. = ಬಬ್ಬೂರ.

ಬಬ್ಬೂರ (ನಾ). ಒಂದು ಜಾತಿಯ ಮರ; ಜಾಲಿ; ಬೊಬ್ಬುಲಿ.

ಬರ್ಹ (ನಾ). ೧. ನವಿಲು ಮುಂತಾದ ಪಕ್ಷಿಗಳ ಗರಿ, -ಸೋಗೆ. ೨. ಎಲೆ; ಪತ್ರ. ೩. ಪರಿವಾರ; ಪರಿಜನ.

ಬರ್ಹಿ (ನಾ). ೧. ನವಿಲು; ಮಯೂರ. ೨. ಒಂದು ಜಾತಿಯ ಮೊನಚಾದ ಹುಲ್ಲು; ದರ್ಭೆ. ೩. ಅಗ್ನಿ; ಬೆಂಕಿ.

ಬಲ್ (ಕ್ರಿ). ೧. ಬಲಿಷ್ಠವಾಗು; ಸಮರ್ಥವಾಗು. ೨.ಸಂಪೂರ್ಣವಾಗಿ ಬೆಳೆ; ಮಾಗು; ಕಳಿ. ೩. ಕೊಬ್ಬಿ ಬೆಳೆ; ಬಲಿ. ೪. ತಿಳಿ; ಅರಿತುಕೊಳ್ಳು. (ಗು).೫.= ಬಲು.~ಅಣಿ = ಬಲವಾದ ಸೈನ್ಯ, -ಪಡೆ. ~ಆಳ್ = ವೀರಯೋಧ; ಮಹಾಬಲಶಾಲಿ. ~ಕ(ಗ)ಂಡಿಕೆ= ಅತಿಶಯವಾದ ಶೌರ್ಯ, -ಸಾಹಸ. ~ಕ(ಗ)ತ್ತಲೆ = ದಟ್ಟವಾದ ಕತ್ತಲೆ; ಗಾಢಾಂಧಕಾರ. ~ಕ(ಗ)ರುಳ್ = ದೊಡ್ಡದಾದ ಕರುಳು. ~ಕಿ(ಗಿ)ಚ್ಚು = ದೊಡ್ಡ ಬೆಂಕಿ; ಮಹಾಜ್ವಾಲೆ. ~ಕೆ(ಗೆ)ಚ್ಚು=ಬಲ್ಗಂಡಿಕೆ.~ಕೆ(ಗೆ)ಯ್ತ = ಬಲ್ಗಂಡಿಕೆ. ~ತೊ(ದೊ)ಱೆ(ರೆ) = ದೊಡ್ಡಹೊಳೆ; ವಿಶಾಲವಾದ ನದಿ. ~ದಡಿಗ=ದಾಂಡಿಗ;ಟೊಣಪ. ~ಪಿ(ವಿ)ಡಿ = ೧. ಗಟ್ಟಿಯಾಗಿ ಹಿಡಿ; ಬಲವಾಗಿ ಹಿಡಿ. ೨. ಗಟ್ಟಿಯಾದ ಹಿಡಿತ. ~ಬಂಟ =ಬಲಿಷ್ಠನಾದ ಶೂರ; ಮಹಾವೀರ. ~ಮುಗುಳ್ = ದೊಡ್ಡ ಮೊಗ್ಗು. ~ಮುಡಿ = ದೊಡ್ಡ ತುರುಬು, -ಗಂಟು. ~ಸರಿ = ಬಲವಾದ ಮಳೆ; ಬಿರುಮಳೆ. ~ಸೋನೆ = ಒಂದೇ ಸಮನೆ ಬೀಳುವ ಮಳೆ; ಜಡಿ.

ಬಲ(ಳ) (ನಾ). ೧. ದಕ್ಷಿಣ ಭಾಗ. ೨.ಶಕ್ತಿ ; ಸಾಮರ್ಥ್ಯ. ೩.ಸಹಾಯ; ನೆರವು; ಬೆಂಬಲ. ೪. ಸೈನ್ಯ ; ದಂಡು ; ದಳ. ೫. ಒಬ್ಬ ರಾಕ್ಷಸನ ಹೆಸರು. ~ಆಢ್ಯ = ಶಕ್ತಿವಂತ ; ಬಲಿಷ್ಠ. ~ಇಕೆ = ಬಲವಾಗಿರುವಿಕೆ ; ದೃಢತೆ. ~(ಂ)ಕೊ(ಗೊ)ಳ್(ಳ್ಳು) = ೧. ಸಮರ್ಥವಾಗು ; ಸಾಮರ್ಥ್ಯವನ್ನು ಪಡೆ. ೨. ಸುತ್ತುಬರು ; ಪ್ರದಕ್ಷಿಣೆ ಹಾಕು. ~(ಂ)ಮುರಿ = ೧. ಬಲಗಡೆಗೆ ತಿರುಗು, -ಬಾಗು. ೨. ಬಲಗಡೆಗೆ ತಿರುಗಿಕೊಂಡಿರು ವುದು. ~ಕ(ಗ)ಡೆ = ಬಲಭಾಗ ; ದಕ್ಷಿಣ ಪಾರ್ಶ್ವ. ~ಕೆ(ಗೆ)ಯ್ = ೧. ಬಲಭಾಗದ ಕೈ;ದಕ್ಷಿಣ ಹಸ್ತ.೨.ನಂಬಿಕೆಯ ಸಹಾಯಕ. ೩. ಆದಿಕರ್ನಾಟಕರಲ್ಲಿ ಒಂದು ಪಂಗಡ. ~ಧ್ವಂಸಿ=ಬಲನೆಂಬ ರಾಕ್ಷಸನನ್ನು ಕೊಂದ ವನು; ಇಂದ್ರ. ~ಬ(ವ)ರ್(ರು) = ಬಲ ಗಡೆಯಿಂದ ಸುತ್ತುಹಾಕು; ಪ್ರದಕ್ಷಿಣೆ ಬರು. ~ವೈರಿ = ಬಲಧ್ವಂಸಿ. ~ಹೀನ = ಶಕ್ತಿ ಯನ್ನು ಕಳೆದುಕೊಂಡ ; ದುರ್ಬಲವಾದ.

ಬಲತಾಯಿ (ನಾ). ಮಲತಾಯಿ.

ಬಲವಂತ ೧. = ಬಲಶಾಲಿ. ೨. ಒತ್ತಾಯ ; ಬಲಾತ್ಕಾರ.

ಬಲಶಾಲಿ (ನಾ). ಶಕ್ತಿವಂತ ; ಬಲಾಢ್ಯ.

ಬಲಾ(ಳಾ)ಕ (ನಾ).ಒಂದು ಜಾತಿಯ ಜಲಚರ ಪಕ್ಷಿ; ಬೆಳ್ಳಕ್ಕಿ.

ಬಲಾತ್ಕರಿಸು (ಕ್ರಿ). ಒತ್ತಾಯಪಡಿಸು ; ಬಲ ವಂತ ಮಾಡು.

ಬಲಾತ್ಕಾರ (ನಾ). ಒತ್ತಾಯ ; ಬಲವಂತ.

ಬಲಾ(ಳಾ)ಹಕ (ನಾ). ಮೋಡ ; ಮುಗಿಲು.

ಬಲಿ (ಕ್ರಿ). ೧. ದೊಡ್ಡದಾಗು ; ಬೆಳೆ. ೨. ಹೆಚ್ಚಾಗು ; ಅಧಿಕವಾಗು. ೩.ಮಾಗು ; ಕಳಿ. ೪. ಬಿರುಸಾಗು ; ಕರ್ಕಶವಾಗು. ೫. ಬಲಿಷ್ಠವಾಗು. ೬. ಭದ್ರಪಡಿಸು ; ಬಲಪಡಿಸು. (ನಾ). ೭. ಆಹುತಿ. ೮.ಭೂತ ಯಜ್ಞ. ೯.ಎಂಜಲು ; ಉಚ್ಛಿಷ್ಟ. ೧೦.ಕರ; ಕಂದಾಯ. ೧೧. ಒಬ್ಬ ರಾಕ್ಷಸನ ಹೆಸರು. ~ಇ(ಯಿ)ಕ್ಕು = ಬಲಿಹಾಕು. ~ಕೆ(ಗೆ)ದಱ್(ರ್,ರು,ಱು) = ಬಲಿ ಯನ್ನು ಎರಚು, -ಹಾಕು. ~ಕೆ(ಗೆ)ಯ್ = ಬಲಿಗೊಡು. ~ಕೊ(ಗೊ)ಡು =ಆಹುತಿ ಯನ್ನು ಅರ್ಪಿಸು. ~ದಾನ = ಆಹುತಿ ಕೊಡುವುದು. ~ಪಾಡ್ಯ = ಕಾರ್ತಿಕ ಶುಕ್ಲ ಪಾಡ್ಯಮಿ ಮತ್ತು ಆ ದಿನ ಆಚರಿಸುವ ಹಬ್ಬ. ~ಪೀಠ = ಬಲಿ ಕೊಡುವ ಜಾಗ; ವಧಾಸ್ಥಾನ. ~ಹಾಕು = ೧. ಬಲಿಗೊಡು. ೨. ಸಂಹರಿಸು ; ಕೊಲ್ಲು.

ಬಲಿಭುಕ್ಕು (ನಾ). ಬಲಿಯನ್ನು ತಿನ್ನುವುದು ; ಕಾಗೆ.

ಬಲಿಮುಖ (ನಾ). ಕೋತಿ ; ಕಪಿ.

ಬಲಿಷ್ಠ (ನಾ). ಬಲಶಾಲಿ ; ಬಲಾಢ್ಯ.

ಬಲು (ಗು). ೧. ಬಹಳ; ತುಂಬ. ೨.ದೊಡ್ಡ; ವಿಶಾಲವಾದ.

ಬಲುಕರಿಸು (ಕ್ರಿ). ಬಲಾತ್ಕಾರ ಮಾಡು ; ಒತ್ತಾಯ ಮಾಡು.

ಬಲುಪು = ಬಲುಮೆ.

ಬಲುಮೆ (ನಾ). ೧. ಕೆಚ್ಚು ; ಸಾಮರ್ಥ್ಯ. ೨. ಒತ್ತಾಯ ; ಬಲವಂತ.

ಬಲುಹು = ಬಲುಮೆ.

ಬಲೆ (ನಾ). ಪ್ರಾಣಿ, ಪಕ್ಷಿ ಮುಂತಾದುವು ಗಳನ್ನು ಹಿಡಿಯುವ ಸಾಧನ; ಜಾಲ. ~ಗಾಱ(ರ) = ಬಲೆಯನ್ನು ಬೀಸುವವನು. ~ಬಿ(ವಿ)ೀಸು = ೧. ಬಲೆಯನ್ನು ಹರಡು. ೨. ಮೋಸದಲ್ಲಿ ಕೆಡವು ; ವಂಚಿಸು.

ಬಲ್ಕಣಿ (ನಾ). ಅತ್ಯಂತ ಶೌರ್ಯಕ್ಕೆ ಆಕರ ನಾದವನು ; ಮಹಾಸಾಹಸಿ.

ಬಲ್ಕೆ (ನಾ). ಬಲ ; ಸಾಮರ್ಥ್ಯ ; ಕೆಚ್ಚು.

ಬಲ್ಪು = ಬಲುಮೆ. ~ಕಿ(ಗಿ)ಡು = ಶಕ್ತಿ ಗುಂದು ; ದುರ್ಬಲವಾಗು.

ಬಲ್ಕೈ = ಬಲ್ಕೈ.
ಬಲ್ಲ (ನಾ). ವಿದ್ವಾಂಸ; ತಿಳಿದವನು.
ಬಲ್ಲವಿಕೆ (ನಾ). ತಿಳಿವಳಿಕೆ; ಜ್ಞಾನ.
ಬಲ್ಲಹ (ನಾ). ೧. ವಲ್ಲಭ; ಒಡೆಯ; ಸ್ವಾಮಿ. ೨. ಪಂಡಿತ; ವಿದ್ವಾಂಸ.
ಬಲ್ಲಿತು (ನಾ). ಬಲವಾದುದು; ದೃಢವಾದುದು.
ಬಲ್ಲಿದ (ನಾ). ೧. ಬಲಿಷ್ಠ; ಬಲಶಾಲಿ. ೨. ಪಂಡಿತ; ಜ್ಞಾನಿ.
ಬಲ್ಲೆ (ನಾ). ೧. ಪೊದೆ; ಹೊದರು. ೨. = ಭಲ್ಲೆಯ.
ಬಲ್ಲೆಯ = ಭಲ್ಲೆಯ.
ಬಲ್ಲೆಹ = ಭಲ್ಲೆಯ.
ಬವಣಿ (ನಾ). ೧. ತಿರುಗಾಟ; ಅಲೆದಾಟ. ೨. ತಲೆ ತಿರುಗುವುದು; ಬವಳಿ ಬರುವುದು. ೩. ಕಷ್ಟ; ತೊಂದರೆ. ೪. ದಿಗ್ಭ್ರಮೆ.
ಬವಣಿಗೆ = ಬವಣಿ.
ಬವಣೆ = ಬವಣಿ. ~ಕೊ(ಗೊ)ಳ್ಳು = ಬುದ್ಧಿವಿಕಾರಕ್ಕೆ ಒಳಗಾಗು; ದಿಗ್ಭ್ರಮೆಗೊಳ್ಳು. ~ಪ(ಬ)ಡು = ಬವಣೆಗೊಳ್ಳು.
ಬವನಾಸಿ (ನಾ). ೧. ಪಾತ್ರೆ. ೨. ದಾಸರು ಉಪಯೋಗಿಸುವ ಭಿಕ್ಷಾಪಾತ್ರೆ.
ಬವರ (ನಾ). ೧. ಯುದ್ಧ; ಕಾಳಗ. ೨. ತುಂಬಿ; ಅಳಿ; ಭ್ರಮರ. ~ಇಗ = ಸೈನಿಕ; ಯೋಧ. ~ಇಸು = ಯುದ್ಧ ಮಾಡು; ಹೋರಾಡು. ~(ಂ)ಕೆ(ಗೆ)ಯ್ = ಬವರಿಸು.
ಬವರಿ (ನಾ). ೧. ತಿರುಗಿಸುವುದು. ೨. ತಿರುಗುವುದು; ಸುತ್ತುವುದು. ೩. ಹೆಣ್ಣುದುಂಬಿ. ೪. ಒಂದು ಆಟಿಕೆ; ಬುಗುರಿ. ೫. ಕೆನ್ನೆಯ ಮೇಲಿನ ಕೂದಲು; ಪನ್ನೆ.
ಬವಸು (ನಾ). ಉದ್ಯೋಗ; ಕೆಲಸ.
ಬವಸೆ = ಬವಸು.
ಬವಳಿ (ನಾ). ಜ್ಞಾನ ತಪ್ಪುವುದು; ಮೂರ್ಛೆ.
ಬವಳಿಕೆ = ಬವಳಿ.
ಬಸ (ನಾ). ವಶ; ಹತೋಟಿ. ~ಅ(ವ)ಋ(ಳಿ) = ೧. ಆಯಾಸಪಡು; ದಣಿ. ೨. = ಬಸಗೆಡು. ~ಕೆ(ಗೆ)ಡು = ಹತೋಟಿ ತಪ್ಪು; ವಶತಪ್ಪು.
ಬಸಂತ (ನಾ). ಚೈತ್ರ ಮತ್ತು ವೈಶಾಖಮಾಸಗಳಲ್ಲಿ ಬರುವ ಋತು; ವಸಂತ.
ಬಸತಿ = ಬಸದಿ.
ಬಸದಿ (ನಾ). ಜೈನ ದೇವಾಲಯ ಅಥವಾ ಮಠ.
ಬಸನ (ನಾ). ೧. ವಸತಿ; ಮನೆ. ೨. ಬಟ್ಟೆ; ಉಡುಪು. ೩. ವ್ಯಸನ; ಕೆಟ್ಟ ಚಾಳಿ; ಅತ್ಯಾಸಕ್ತಿ. ~ಇಗ = ಬಸನಿ.
ಬಸನಿ (ನಾ). ದುಶ್ಚಟಕ್ಕೆ ಒಳಗಾದವನು; ವ್ಯಸನಿ.
ಬಸರಿ (ನಾ). ಒಂದು ಜಾತಿಯ ಮರ.
ಬಸಲೆ(ಳೆ) (ನಾ). ೧. ಒಂದು ಜಾತಿಯ ಬಳ್ಳಿ. ೨. ಬಾಯಿಯಲ್ಲಿ ಏಳುವ ಬೊಕ್ಕೆ, -ಗುಳ್ಳೆ.
ಬಸವ (ನಾ). ೧. ಗೂಳಿ; ವೃಷಭ. ೨. ದೇವರ ಹೆಸರಿನಲ್ಲಿ ಬಿಟ್ಟ ಗೂಳಿ. ೩. ಶಿವನ ವಾಹನ; ನಂದಿ.
ಬಸವಿ (ನಾ). ದೇವರ ಹೆಸರಿನಲ್ಲಿ ಬಿಟ್ಟ ಕನ್ಯೆ; ದೇವದಾಸಿ.
ಬಸಿ (ಕ್ರಿ). ೧. ಒಸರು; ಜಿನುಗು. ೨. ನೀರು ಸೋರುವಂತೆ ಮಾಡು; ನೀರನ್ನು ಇಳಿಸು. ೩. ಚೂಪಾಗಿರು; ಹರಿತವಾಗಿರು. ೪. ಹರಿತ ಮಾಡು; ಮಸೆ. (ನಾ). ೫. ಜಿನುಗುವುದು; ಸ್ರವಿಸುವುದು. ೬. ಮುಳ್ಳು, ಶೂಲ ಮುಂತಾದ ಚೂಪಾಗಿರುವ ವಸ್ತು. ೭. ದ್ರವ ಪದಾರ್ಥವನ್ನು ಬಸಿಯುವ ಪಾತ್ರೆ.
ಬಸಿಱ್(ರ್, ರು, ಱು) (ನಾ). ೧. ಹೊಟ್ಟೆ; ಉದರ. ೨. ಗರ್ಭ; ಗರ್ಭಾಶಯ. ೩. ಭ್ರೂಣ. ೪. ಒಳಭಾಗ; ಅಂತರ್ಯ.
ಬಸಿಱಿ(ರಿ) (ನಾ). ಗರ್ಭಿಣಿ.
ಬಸುರಿ ೧. = ಬಸರಿ. ೨. = ಬಸುಱಿ.

ಬಸುಜಿುರ್(ರ್,ರು,ಉ) = ಬಸಿಜುರ್. ~ನಿಲ್ = ಗರ್ಭವನ್ನು ಧರಿಸು; ಗರ್ಭವತಿಯಾಗು.

ಬಸುಜುಿ(ರಿ) = ಬಸಿಜು.

ಬಸೆ (ನಾ). ೧. ಬರಡು ಹಸು; ಗೊಡ್ಡು ಆಕಳು. ೨. ಹೆಣ್ಣಾನೆ; ಪಿಡಿ. ೩. ಕೊಬ್ಬು; ನೆಣ. ೪. ಪಯಿರನ್ನು ಕೊಯ್ದ ಬಳಿಕ ಉಳಿಯುವ ತುಂಡು; ಕೂಳೆ.

ಬಸ್ತಕ (ನಾ). ಹೋತ; ಗಂಡಾಡು.

ಬಹಲ(ಳ) (ನಾ). ೧. ಹೆಚ್ಚಳ; ಆಧಿಕ್ಯ. (ಗು). ೨. ಹೆಚ್ಚಾದ; ಅಧಿಕವಾದ. ~ಇಸು = ಹೆಚ್ಚಾಗು; ಅತಿಯಾಗು.

ಬಹಿತ್ರ (ನಾ). ತೆಪ್ಪ; ವಹಿತ್ರ.

ಬಹಿರಂಗ (ನಾ). ೧. ಹೊರಭಾಗ; ಹೊರವಲಯ. ೨. ಪ್ರಕಟಿಸುವಿಕೆ; ಪ್ರಕಟನೆ. ~ಆ(ವಾ)ಗು = ಪ್ರಕಟವಾಗು. ~ಮಾಡು = ಹೊರಗೆಡಹು; ಪ್ರಕಟಿಸು.

ಬಹಿರ್ದೆಸೆ = ಬಹಿರ್ದೇಶ.

ಬಹಿರ್ದೇಶ(ನಾ). ಶೌಚಕ್ರಿಯೆ; ಮಲಮೂತ್ರ ವಿಸರ್ಜನೆ.

ಬಹಿರ್ಮುಖ (ನಾ). ೧. ಹೊರಮುಖವಾಗಿರುವ ಸ್ಥಿತಿ. ೨. ವಿಮುಖನಾದವನು; ಹೊರಗಿನ ವಿಷಯಗಳಲ್ಲಿ ಆಸಕ್ತಿಯನ್ನುಳ್ಳವನು. (ಗು). ೩. ಮನಸ್ಸು ಹೊರಮುಖವಾಗಿರುವ.

ಬಹಿಷ್ಕರಿಸು (ಕ್ರಿ). ೧. (ಜಾತಿ, ದೇಶ ಮುಂತಾದುವುಗಳಿಂದ) ಹೊರಕ್ಕೆ ಹಾಕು. ೨. ಪ್ರಕಟಿಸಿಕೊಳ್ಳು; ಗೋಚರಿಸು.

ಬಹಿಷ್ಕಾರ (ನಾ). (ಜಾತಿ, ದೇಶ ಮುಂತಾದುವುಗಳಿಂದ) ಹೊಸಡೂಡುವಿಕೆ, –ಹೊರಹಾಕುವಿಕೆ.

ಬಹಿಷ್ಕೃತ (ನಾ). ೧. ಹೊರಕ್ಕೆ ಹಾಕಲ್ಪಟ್ಟವನು. (ಗು). ೨. ಹೊರಕ್ಕೆ ದೂಡಲ್ಪಟ್ಟ.

ಬಹಿಷ್ಠೆ (ನಾ). ಮುಟ್ಟಾದವಳು; ರಜಸ್ವಲೆ.

ಬಹು (ಗು). ಅಧಿಕ; ಬಹಳ; ಅನೇಕ. ~ಮಟ್ಟಿಗೆ = ಬಹುತೇಕ. ~ಮತ = ೧. ಅಧಿಕ ಸಂಖ್ಯೆಯ ವ್ಯಕ್ತಿಗಳ ಅಭಿಪ್ರಾಯ. ೨. ಗೌರವಿಸಲ್ಪಟ್ಟ. ~ರೂಪ=೧. ಊಸರವಳ್ಳಿ; ಗೋಸುಂಬೆ. ೨. ಸೂರ್ಯ. ೩. ನಾಟಕೀಯ ಪ್ರದರ್ಶನ. ೪. ಅನೇಕ ಆಕಾರಗಳಿಂದ ಕೂಡಿದ; ಬಹಳ ರೂಪವುಳ್ಳ. ~ವಚನ=ವ್ಯಾಕರಣದಲ್ಲಿ ಒಂದಕ್ಕಿಂತ ಹೆಚ್ಚಿನ ಸಂಖ್ಯೆಯನ್ನು ಸೂಚಿಸುವ ಪದ. ~ಶ್ರುತ = ಅನೇಕ ವಿಷಯಗಳನ್ನು ಅರಿತವನು; ವಿದ್ವಾಂಸ.

ಬಹುತೇಕ (ಅ). ಪ್ರಾಯಶಃ; ಬಹಳವಾಗಿ.

ಬಹುತ್ವ (ನಾ). ೧. ಆಧಿಕ್ಯ; ಹೆಚ್ಚಳ. ೨. = ಬಹುವಚನ.

ಬಹುಧಾನ್ಯ (ನಾ). ೧. ಬಹಳ ಧಾನ್ಯಗಳಿಂದ ಕೂಡಿದುದು. ೨. ಅರುವತ್ತು ಸಂವತ್ಸರಗಳಲ್ಲಿ ಒಂದು.

ಬಹುಮಾನ (ನಾ). ೧. ಗೌರವ; ಘನತೆ. ೨. ಸಂಭಾವನೆ; ಉಡುಗೊರೆ. ೩. ಪಾರಿತೋಷಕ; ಇನಾಮು.

ಬಹುಲ(ಳ) (ನಾ). ೧. ಕಪ್ಪು; ಕಪ್ಪುಬಣ್ಣ. ೨. ಕೃಷ್ಣಪಕ್ಷ. (ಗು). ೩. ಬಹಳ; ಅನೇಕ. ೪. ದಟ್ಟವಾದ; ನಿಬಿಡವಾದ. ೫. ವಿಶಾಲವಾದ; ವ್ಯಾಪಕವಾದ.

ಬಹುಲೆ(ಳೆ) (ನಾ). ೧. ಹಸು; ಆಕಳು. ೨. ಏಲಕ್ಕಿ.

ಬಹುವ್ರೀಹಿ (ನಾ). ವ್ಯಾಕರಣದಲ್ಲಿ ಒಂದು ಸಮಾಸದ ಹೆಸರು.

ಬಹುಶಃ = ಬಹುತೇಕ.

ಬಳ(ಂ)ಕು (ಕ್ರಿ). ಬಾಗು; ಅತ್ತಿತ್ತ ಒಲೆದಾಡು; ತೊನೆ.

ಬಳ(ಂ)ಚೆ = ಬಣಂಚೆ.

ಬಳಕೆ (ನಾ). ೧. ಪದ್ಧತಿ; ರೂಢಿ. ೨. ಪರಿಚಯ; ಗುರುತು. ೩. ಉಪಯೋಗ;

ಬಳಸುವಿಕೆ. ~ಗಾರ = ಬಳಸುವವನು; ಉಪಯೋಗಿಸುವವನು.

ಬಳಗ (ನಾ). ೧. ಗುಂಪು; ಸಮೂಹ. ೨. ಒಂದು ಮನೆ ಅಥವಾ ವಂಶಕ್ಕೆ ಸೇರಿದವರು.

ಬಳಚು (ಕ್ರಿ). ೧. ಲೇಪಿಸು; ಸವರು. ೨. ಜಾರಿಸು; ನುಣುಚಿಕೊಳ್ಳುವಂತೆ ಮಾಡು. ೩. ಕತ್ತರಿಸು; ತುಂಡರಿಸು.

ಬಳತ (ನಾ). ೧. ಕಣಜ. ೨. ತೆಳ್ಳಗಿನ ಗಳು; ಬಿದಿರಿನ ಸೀಳು; ದೆಬ್ಬೆ.

ಬಳಪ (ನಾ). ಕಪ್ಪುಹಲಗೆಯ ಮೇಲೆ ಬರೆಯಲು ಉಪಯೋಗಿಸುವ ಮಿದುವಾದ ಬಿಳಿಯ ಕಲ್ಲು.

ಬಳಮದ್ದು (ನಾ). ತುಪಾಕಿಗೆ ಉಪಯೋಗಿಸುವ ಮದ್ದು. ~ಇಕ್ಕು=ಸಿಡಿಮದ್ದಿಕ್ಕು; ಗುಂಡು ಹಾರಿಸು. ~ಕಾಱ(ರ) =ತುಪಾಕಿಯ ಮದ್ದನ್ನು ತಯಾರಿಸುವವನು.

ಬಳಯಿಸು = ಬಳೆಯಿಸು.

ಬಳರಿ (ನಾ). ಒಂದು ಕ್ಷುದ್ರದೇವತೆಯ ಹೆಸರು.

ಬಳವಿ (ನಾ). ೧. ಬೆಳವಣಿಗೆ; ಮೇಲೇರುವಿಕೆ; ಅಭಿವೃದ್ಧಿ. ೨. ಬೆಳೆಯುವ ಭೂಮಿ.

ಬಳವಿಗೆ (ನಾ). ಏಳಿಗೆ; ಅಭಿವೃದ್ಧಿ.

ಬಳಸು (ಕ್ರಿ). ೧.ಸುತ್ತುವರಿ; ಸುತ್ತುಗಟ್ಟು; ಆವರಿಸು. ೨. ಸುತ್ತಾಡು; ಅಲೆ; ತಿರುಗು. ೩. ಸುತ್ತುವರಿಯಲ್ಪಡು; ಆವರಿಸಲ್ಪಡು. ೪. ಉಪಯೋಗಿಸು. (ನಾ). ೫. ಆವರಿಸುವಿಕೆ. ೬. ಆವರಿಸಲ್ಪಟ್ಟುದು. ೭. ಸುತ್ತು; ಆವರ್ತ. ೮. ಕವಚ; ಚಿಲುಮಿತ್ತು. ~ದಾರಿ = ಸುತ್ತುದಾರಿ; ಹತ್ತಿರವಲ್ಲದ ದಾರಿ. ~ಮಾತು = ಸುತ್ತುಮಾತು; ನೇರವಲ್ಲದ ಮಾತು.

ಬಳಹ = ಬಳಪ.

ಬಳಾರಿ = ಬಳರಿ.

ಬಳಿಚು = ಬಳಚು.

ಬಳಿದು (ನಾ). ಇಳಿಜಾರು; ಇಳುಕಲು.

ಬಳು(ಂ)ಕು = ಬಳಂಕು.

ಬಳೆ (ಕ್ರಿ). ೧. ವೃದ್ಧಿಯಾಗು; ಹೆಚ್ಚಾಗು; ಬೆಳೆ. ೨. ಏಳಿಗೆ ಹೊಂದು; ಅಭಿವೃದ್ಧಿಯಾಗು. (ನಾ). ೩. ಕಡಗ; ಕಂಕಣ. ೪. ವರ್ತುಲಾಕಾರವಾದುದು. ೫. ಗಂಟಲಿನ ಮೂಳೆ, –ಎಲುವು. ೬. ಒಂದು ಜಾತಿಯ ಗಿಡ. ~ಇ(ಯಿ)ಸು =೧. ಬೆಳೆಯುವಂತೆ ಮಾಡು; ಬೆಳೆಸು. ೨. ಉಂಟುಮಾಡು. ~ಗಾಱ(ರ) = ಬಳೆಗಳನ್ನು ಮಾರುವವನು.

ಬಳ್ಕು (ಕ್ರಿ). ೧. ನಡುಗು; ಕಂಪಿಸು. ೨. = ಬಳಂಕು. ~ಇಸು = ಬಾಗುವಂತೆ ಮಾಡು; ಬಾಗಿಸು.

ಬಳ್ಕುಡಿ (ನಾ). ಅಂಜಿಕೆ; ಭಯ; ಬಕ್ಕುಡಿ.

ಬಳ್ಳಳ (ನಾ). ೧. ಬೆಳವಣಿಗೆ. ೨. ಬೀಸಾಟ; ಬೀಸುವಿಕೆ. ೩. ಬಲವಾದ ಸೈನ್ಯ, –ಪಡೆ. (ಅ). ೪. ಹೆಚ್ಚಾಗಿ; ಅಧಿಕವಾಗಿ. ~ಇಕೆ =೧. ಏಳಿಗೆ; ಅಭಿವೃದ್ಧಿ. ೨. ಅತಿಶಯವಾದ ಬೀಸಾಟ, –ಬೀಸುವಿಕೆ.

ಬಳ್ಳ (ನಾ). ೧. ಒಂದು ಅಳತೆಯ ಪ್ರಮಾಣ. ೨. ತಟ್ಟೆ; ತಳಿಗೆ. ೩. ಲೋಹದ ದೊಡ್ಡ ಪಾತ್ರೆ.

ಬಳ್ಳವಳ್ಳಿ (ನಾ). ೧. ಆಧಿಕ್ಯ; ಅತಿಶಯ. ೨. ಬಳುವಳಿ; ಉಡುಗೊರೆ.

ಬಳ್ಳಿ (ನಾ). ೧. ಲತೆ; ವಲ್ಲಿ. ೨. ವಂಶ; ಸಂತತಿ. ~ಕು(ಗು)ರುಳ್ = ಗುಂಗುರು ಕೂದಲು;ಸುಳಿಗೂದಲು. ~ಕೊ(ಗೊ)ಳ್ = ಹಬ್ಬು; ಆವರಿಸು. ~ವ(ವ)ರಿ = ಬಳ್ಳಿಗೊಳ್. ~ಮಾಡ = ಎಲೆಮನೆ; ಲತಾಗೃಹ.

ಬಳ್ಳು (ನಾ). ನರಿ; ಜಂಬುಕ. ~ಇಕ್ಕು = ಊಳಿಡು; ನರಿಯಂತೆ ಕೂಗು. ~ಕ(ಗ)ರೆ = ಬಳ್ಳಿಕ್ಕು.

ಬಱ(ಳ)ಲ್(ಲು) (ಕ್ರಿ). ೧. ದಣಿ ; ಆಯಾಸ ಹೊಂದು. ೨. ಜೋಲುಬೀಳು; ನೇತಾಡು. ~ಇಕೆ = ದಣಿವು ; ಆಯಾಸ. ~ಇಸು = ಆಯಾಸಪಡಿಸು; ಶ್ರಮಪಡಿಸು. ~ತು(ದು)ಱು(ರು)ಬು = ಸಡಿಲವಾಗಿ ಕಟ್ಟಿದ ಮುಡಿ, – ಗಂಟು. ~ಮುಡಿ = ಬಱಲ್ದುಱುಬು.

ಬಱ(ಳ)ಲ್ಕೆ (ನಾ). ಆಯಾಸ; ದಣಿವು.

ಬಱಿ(ಳಿ) (ಕ್ರಿ). ೧. ಗುಡಿಸು; ಸ್ವಚ್ಛ ಮಾಡು. ೨. ಸವರು; ತೊಡೆ; ಹಚ್ಚು. ೩. ನೆಲವನ್ನು ಸಾರಿಸು. ೪. ಗೋರು; ಬಾಚು. (ನಾ). ೫. ದಾರಿ; ಮಾರ್ಗ. ೬. ಜಾಗ; ತಾಣ. ೭. ಹತ್ತಿರ; ಸಾಮೀಪ್ಯ. ೮. ದೂತ; ಆಳು. ೯. ವಂಶ; ಸಂತತಿ. ೧೦. ಹಿಂದುಗಡೆ; ಹಿಂಭಾಗ. (ಅ). ೧೧. ಬಳಿಕ; ಅನಂತರ. ~ಅ(ಯು)ಟ್ಟು = ದೂತನನ್ನು ಕಳುಹಿಸು. ~ಓ(ಯೋ)ಜ = ಕುಲಗುರು. ~ಕೊ(ಗೊ)ಳ್ = ೧. ಸರಿಯಾದ ಮಾರ್ಗದಲ್ಲಿ ನಡೆ. ೨. ನೆಲೆಯಾಗಿ ನಿಲ್ಲು; ತಳವೂರು. ೩. ಹಿಂಬಾಲಿಸು; ಅನುಸರಿಸು. ~ತೊ(ದೊ)ತ್ತು = ವಂಶಪಾರಂಪರ್ಯವಾಗಿ ಬಂದ ಆಳು. ~ಪಿ(ವಿ)ಡಿ = ಹಿಂಬಾಲಿಸು; ಅನುಸರಿಸು.

ಬಱಿ(ಳಿ)ಕ (ಅ). ಅನಂತರ; ತರುವಾಯ.

ಬಱಿ(ಳಿ)ಕೆ = ಬಱಿಕ.

ಬಱಿ(ಳಿ)ಕ್ಕ = ಬಱಿಕ.

ಬಱಿ(ಳಿ)ಯಂ = ಬಱಿಕ.

ಬಱಿ(ಳಿ)ವಱಿ(ಳಿ) (ನಾ). ಕಾಣಿಕೆ; ಉಡುಗೊರೆ.

ಬಱು(ಳು)ವಱಿ(ಳಿ) = ಬಱಿವಱಿ.

ಬಱ್ದು(ಳ್ದು)ಂಕು (ಕ್ರಿ). ಬದುಕು; ಜೀವಿಸು.

ಬಾ (ಕ್ರಿ). ೧. ಊದಿಕೊಳ್ಳು; ಉಬ್ಬು. ೨. ಗರ್ವಿಸು; ಬೀಗು.

ಬಾಂ (ನಾ). ಆಕಾಶ; ಗಗನ. ~ಪಾ(ಬಾ)ವು = ರಾಹು. ~ಪೊ(ಬೊ)ಚ್ಚ = ಆಕಾಶದ ಹೊಳೆ; ದೇವಗಂಗೆ. ~ಪೊ(ಬೊ)ೞೆ(ಳೆ) = ಬಾಂಬೊಚ್ಚ. ~ಬಟ್ಟೆ = ಆಕಾಶಮಾರ್ಗ; ಗಗನಪಥ.

ಬಾಂಕಿ (ನಾ). ಒಂದು ವಾದ್ಯ ವಿಶೇಷ; ಕಹಳೆ.

ಬಾಂಕು = ಬಾಂಕಿ.

ಬಾಂಗಿ ೧. = ಭಾಂಗಿ. ೨. ಅಡ್ಡೆಯ ಎರಡು ಕಡೆಗಳಲ್ಲೂ ಮೂಟೆ ಕಟ್ಟಿದ ಸಾಮಾನು.

ಬಾಂಗುಲಿಗ (ನಾ). ಒಂದು ಜಾತಿಯ ಹಕ್ಕಿ.

ಬಾಂಡಲೆ (ನಾ). ಕರಿಯುವ ಅಥವಾ ಹುರಿಯುವ ಓಡು; ಬಾಣಲೆ.

ಬಾಂದಿ (ನಾ). ೧. ಸೇವಕಿ; ದಾಸಿ. ೨. ಸೂಳೆ; ಜಾರೆ.

ಬಾಂದು (ನಾ). ಕಟ್ಟೆ; ಒಡ್ಡು. ~ಕಲ್ಲು = ಜಮೀನಿನಲ್ಲಿ ಎಲ್ಲೆಕಟ್ಟನ್ನು ಖಚಿತಗೊಳಿಸಲು ನಿಲ್ಲಿಸುವ ಕಲ್ಲು; ಗಡಿಕಲ್ಲು.

ಬಾಂಧವ (ನಾ). ನಂಟ; ಬಂಧು; ಆಪ್ತ.

ಬಾಂಧವ್ಯ (ನಾ). ನಂಟಸ್ತಿಕೆ; ಬಂಧುತ್ವ.

ಬಾಂಬ (ನಾ). ೧. ಕುಂಬಾರ ೨. ಕುರುಬ.

ಬಾಕಿ (ನಾ). ಉಳಿದುದು; ಉಳಿಕೆ; ಶೇಷ. ~ದಾರ = ಉಳಿಕೆಯನ್ನು ನಿಲ್ಲಿಸಿಕೊಂಡವನು.

ಬಾಕು (ನಾ). ೧. ಕೊಂಕು; ಬಾಗುವಿಕೆ. ೨. ಒಂದು ಬಗೆಯ ಆಯುಧ; ಚೂರಿ. ೩. ಉದ್ದನೆಯ ಕಾಲುಮಣೆ; ಬೆಂಚು.

ಬಾಕುಳ (ನಾ). ೧. ಹೆಬ್ಬಯಕೆ; ಅತ್ಯಾಸೆ. ೨. ಅತ್ಯಾಸೆಯನ್ನು ಹೊಂದಿದವನು.

ಬಾಕುಳಿ = ಬಾಕುಳ.

ಬಾಗ (ನಾ). ೧. ಭಾಗ್ಯ; ಸಂಪತ್ತು. ೨. ಭಾಗ; ಪಾಲು.

ಬಾಗವಾನ (ನಾ). ತೋಟಗಾರ.

ಬಾಗಾಯುತಿ ೧. = ಬಾಗಾಯುತು. (ಗು). ೨. ತೋಟಕ್ಕೆ ಸಂಬಂಧಿಸಿದ.

ಬಾಗಾಯತು (ನಾ). ತೋಟ.
ಬಾಗಿ = ಭಾಗಿ.
ಬಾಗಿಣ = ಬಾಗಿನ.
ಬಾಗಿನ (ನಾ). ೧. ವ್ರತದ ಕೊನೆಯಲ್ಲಿ ಮುತ್ತೈದೆ, ಬ್ರಾಹ್ಮಣ ಮೊದಲಾದವರಿಗೆ ಕೊಡುವ ಕಾಣಿಕೆ, – ಉಡುಗೊರೆ. ೨. ಹಬ್ಬದ ದಿನಗಳಲ್ಲಿ ಕೊಡುವ ತಿಂಡಿ.
ಬಾಗಿಲ್(ಲು) (ನಾ). ಪ್ರವೇಶಿಸುವ ಮಾರ್ಗ; ದ್ವಾರ. ~ಕಾ(ಗಾ)ಹಿ = ಭಾಗಿಲು ಕಾಯುವವನು; ದ್ವಾರಪಾಲಕ. ~ವಾಡ = ಬಾಗಿಲಿನ ಚೌಕಟ್ಟು.
ಬಾಗು (ಕ್ರಿ). ೧. ಬಗ್ಗು; ಡೊಂಕಾಗು. ೨. ನಮಸ್ಕರಿಸು; ವಂದಿಸು. ೩. ಅನ್ನದ ಗಂಜಿಯನ್ನು ಬಸಿ. (ನಾ). ೪. ವಕ್ರತೆ; ಕೊಂಕು. ೫. ತಿರುವು. ೬. ಕಠಾರಿ; ಬಾಕು. ೭. ನಮಸ್ಕಾರ. ~ಇಸು = ೧. ಬಗ್ಗು. ೨. ಬಗ್ಗುವಂತೆ ಮಾಡು.
ಬಾಗುಳ (ನಾ). ವ್ಯಾಕುಲ; ಚಿಂತೆ; ಕಳವಳ. ~ಇಸು = ವ್ಯಾಕುಲಪಡು; ಚಿಂತಿಸು.
ಬಾಚಣಿಗೆ (ನಾ). ತಲೆಗೂದಲನ್ನು ಬಾಚಲು ಬಳಸುವ ಸಾಧನ; ಹಣಿಗೆ.
ಬಾಚಿ (ನಾ). ೧. ಕಂಚುಳ; ಕುಪ್ಪಸ. ೨. ಮರ ಕೆತ್ತುವ ಒಂದು ಸಾಧನ. ೩. ಒಂದು ಜಾತಿಯ ಮರ.
ಬಾಚಿಸು (ಕ್ರಿ). ಓದು; ವಾಚಿಸು.
ಬಾಚು ೧. = ಬಾರ್ಚು. ೨. ದೋಚು; ಸೆಳೆ.
ಬಾಜಣೆ (ನಾ). ವಾದ್ಯಗಳನ್ನು ನುಡಿಸುವಿಕೆ, –ಬಾರಿಸುವಿಕೆ.
ಬಾಜನೆ (ನಾ). ವಾಚನ; ಓದುವಿಕೆ. ~ಕ(ಗ)ಬ್ಬ = ಒಂದು ಕಾವ್ಯಜಾತಿ; ಓದುಗಬ್ಬ.
ಬಾಜಾ (ನಾ). ೧. ವಾದ್ಯ. ೨. ವಾದ್ಯವನ್ನು ಬಾರಿಸುವಿಕೆ. ~ಬಜಂತ್ರಿ = ಓಲಗದ ವಾದ್ಯಗಳನ್ನು ನುಡಿಸುವುದು.
ಬಾಜಿ (ನಾ). ಸ್ಪರ್ಧೆ; ಪಣ; ಪಂದ್ಯ. ~ಕಟ್ಟು = ಪಣವನ್ನು ಒಡ್ಡು.
ಬಾಜಿಸು (ಕ್ರಿ). ೧. ವಾದ್ಯವನ್ನು ನುಡಿಸು, –ಬಾರಿಸು. ೨. = ಬಾಚಿಸು.
ಬಾಜು (ನಾ). ೧. ಪಕ್ಕ; ಮಗ್ಗುಲು. ೨. ಪಕ್ಷ; ಬಣ. ೩. ಬಾಹು; ತೋಳು. ~ಆಗು = ಪಕ್ಕಕ್ಕೆ ಸರಿ; ಅರುಗಾಗು. ~ಬಂದ = ತೋಳಿಗೆ ಹಾಕಿಕೊಳ್ಳುವ ಒಂದು ಆಭರಣ; ಕೇಯೂರ.
ಬಾಟೆ (ನಾ). ದಾರಿ; ರಸ್ತೆ; ಮಾರ್ಗ.
ಬಾಡ (ನಾ). ಹಳ್ಳಿ; ಗ್ರಾಮ.
ಬಾಡಗೆ (ನಾ). ಮನೆ ಅಥವಾ ಯಾವುದಾದರೊಂದು ವಸ್ತುವನ್ನು ನಿಯಮಿತ ಅವಧಿಗೆ ಬೇರೆಯವರಿಗೆ ಕೊಟ್ಟಾಗ ಪಡೆಯುವ ಹಣ.
ಬಾಡಬ ೧. = ಬಾಡವ. ೨. ಕುದುರೆ; ಅಶ್ವ. ~ಅನಲ(ಳ) = ಬಡಬಾಗ್ನಿ; ಕಡಲ್ಗಿಚ್ಚು.
ಬಾಡವ (ನಾ). ೧. ಬಡಬಾಗ್ನಿ; ಕಡಲುಗಿಚ್ಚು. ೨. ಬ್ರಾಹ್ಮಣ; ಹಾರುವ.
ಬಾಡಿಗೆ = ಬಾಡಗೆ. ~ದಾರ = ಬಾಡಿಗೆಯ ಹಣವನ್ನು ತೆರುವವನು.
ಬಾಡು (ಕ್ರಿ). ೧. ಕುಗ್ಗು; ಸೊರಗು. ೨. ಕಳೆಗುಂದು; ಬಣ್ಣಗೆಡು. ೩. ಉತ್ಸಾಹಹೀನವಾಗು. ೪. ಒಣಗು; ಬತ್ತು. (ನಾ). ೫. ಮಾಂಸ; ಅಡಗು. ೬. ತರಕಾರಿ; ಕಾಯಿಪಲ್ಯೆ. ೭. ನಂಜಿಕೊಳ್ಳುವ ಪದಾರ್ಥ. ~ಇಸು = ೧. ಸೊರಗುವಂತೆ ಮಾಡು. ೨. ಸುಡು; ಬೇಯಿಸು. ೩. ನಂಜಿಕೊಳ್ಳು.
ಬಾಣ (ನಾ). ೧. ಶರ; ಕಣೆ. ೨. ಒಂದು ಬಗೆಯ ಸಿಡಿಮದ್ದು. ೩. ಒಬ್ಬ ರಾಕ್ಷಸನ ಹೆಸರು. ೪. ಒಂದು ಜಾತಿಯ ಗಿಡ; ಗೋರಂಟಿಗಿಡ. ~ಆಸನ = ೧. ಬಿಲ್ಲು; ಧನುಸ್ಸು. ೨. ಬಿಲ್ಲಿನ ದಾರ; ಹೆದೆ. ~ಸಂಧಾನ = ಬಾಣವನ್ನು ಹೂಡುವಿಕೆ.

ಬಾಣ(ಂ)ತಿ (ನಾ). ಹೆರಿಗೆಯಾದ ಹೆಂಗಸು ; ಪ್ರಸೂತೆ. ~ತನ = ಬಾಣಂತಿಗೆ ನಡಸುವ ಉಪಚಾರ, -ಆರೈಕೆ.

ಬಾಣಧಿ (ನಾ). ಬಾಣಗಳ ಕೋಶ; ಬತ್ತಳಿಕೆ.

ಬಾಣಲಿ = ಬಾಂಡಲೆ.

ಬಾಣಲೆ = ಬಾಂಡಲೆ.

ಬಾಣಸ (ನಾ). ೧. ಅಡುಗೆ; ಪಾಕಕ್ರಿಯೆ. ೨. ಅಡುಗೆ ಮನೆ ; ಪಾಕಶಾಲೆ.

ಬಾಣಸಿ (ನಾ). ಅಡುಗೆ ಮಾಡುವವನು.

ಬಾಣಸು = ಬಾಣಸ. ~ಇಗ = ಬಾಣಸಿ.

ಬಾಣೆ (ನಾ). ೧. ಮಾತು ; ನುಡಿ. ೨. ವಾಣಿ ; ಸರಸ್ವತಿ. ೩. ದೋಣಿಯ ಅಂಚು. ೪. = ಬಾನಿ.

ಬಾತಮಿ (ನಾ). ಸುದ್ದಿ ; ಸಮಾಚಾರ. ~ದಾರ = ಸುದ್ದಿಗಳನ್ನು ಸಂಗ್ರಹಿಸಿ ಒದಗಿಸುವವನು.

ಬಾತು (ನಾ). ಒಂದು ಜಾತಿಯ ಜಲಚರಪಕ್ಷಿ.

ಬಾತೆ (ನಾ). ೧. ಪ್ರಯೋಜನ; ಸಾಫಲ್ಯ. ೨. ಸಮಾಚಾರ; ವಾರ್ತೆ.

ಬಾದಣ (ನಾ). ೧. ಗವಾಕ್ಷಿ; ವಾತಾಯನ. ೨. ತೂತು ; ರಂಧ್ರ. ~ಇಸು = ರಂಧ್ರ ಮಾಡು ; ತೂತು ಮಾಡು. ~ಕಿ(ಗಿ)ವಿ = ತೂತು ಬಿದ್ದ ಕಿವಿ. ~ಕೊ(ಗೊ)ಱೆ(ರೆ) = ಬಾದಣಿಸು.

ಬಾದರಾಯಣ ಸಂಬಂಧ (ನಾ). ಬಹು ದೂರದ ನಂಟು, -ಬಾಂಧವ್ಯ.

ಬಾದಶಹ (ನಾ). ಮುಸಲ್ಮಾನರ ದೊರೆ; ಸುಲ್ತಾನ.

ಬಾದಳ = ಬಾದಣ.

ಬಾದಾಮಿ (ನಾ). ೧. ಒಂದು ಜಾತಿಯ ಮರ ಮತ್ತು ಅದರ ಬೀಜ. ೨. ಒಂದು ಊರಿನ ಹೆಸರು.

ಬಾದಿ (ನಾ). ೧. ಪೋಷಕ; ಸಹಾಯಕ. ೨. ಹೊರೆ ; ಭಾರ.

ಬಾದು (ನಾ). ೧. ಮಾತು; ನುಡಿ. ೨. ವಾದ; ಚರ್ಚೆ. ೩. ನಿರುಪಯೋಗವಾದುದು. ೪. ಕಳೆದುಹೋದುದು ; ಇಲ್ಲವಾದುದು. ~ಆಗು = ೧. ಇಲ್ಲವಾಗು ; ಖಾಲಿಯಾಗು. ೨. ಕೆಟ್ಟುಹೋಗು ; ಹಾಳಾಗು. ~ಕೆ(ಗೆ)ಯ್ = ವಾದ ಮಾಡು ; ಚರ್ಚೆ ಮಾಡು.

ಬಾಧ = ಬಾಧೆ.

ಬಾಧಕ (ನಾ). ೧. ತೊಂದರೆ; ಅಡ್ಡಿ. ೨. ಅಡ್ಡಿ ಪಡಿಸುವವನು.

ಬಾಧೆ (ನಾ). ೧. ತೊಂದರೆ ; ಹಿಂಸೆ. ೨. ನೋವು ; ಯಾತನೆ. ೩. ಅಡ್ಡಿ; ಆತಂಕ. ~ಇಸು = ೧. ಹಿಂಸೆಪಡಿಸು ; ತೊಂದರೆ ಕೊಡು. ೨. ನೋವುಂಟುಮಾಡು. ~ಪಡು = ಕಷ್ಟಪಡು ; ತೊಂದರೆಗೊಳಗಾಗು.

ಬಾಧ್ಯ (ನಾ). ೧. ಬಂಧು ; ಬಾಂಧವ. ೨. ಹಕ್ಕುದಾರ.

ಬಾಧ್ಯತೆ (ನಾ). ಹಕ್ಕು ; ಸ್ವಾಮ್ಯ.

ಬಾಧ್ಯತ್ವ = ಬಾಧ್ಯತೆ.

ಬಾಧ್ಯಸ್ತ (ನಾ). ಹಕ್ಕುಳ್ಳವನು ; ಸ್ವಾಮ್ಯವುಳ್ಳವನು.

ಬಾನ್(ನು) (ಕ್ರಿ). ೧. ಮಡಕೆಯನ್ನು ಮಾಡು. (ನಾ). ೨. ಆಕಾಶ ; ಗಗನ ; ಮುಗಿಲು. ೩. ರಾಶಿ; ಒಟ್ಟಿಲು. ~ಆಡಿ = ಒಂದು ಜಾತಿಯ ಪಕ್ಷಿ. ~ಉಲಿ = ೧. ಅಶರೀರವಾಣಿ. ೨. ಆಕಾಶವಾಣಿ ; ರೇಡಿಯೋ. ~ತ(ದ)ಳ=ಆಕಾಶ; ಗಗನ. ~ತೊ(ದೊ)ಱೆ(ರೆ) = ಆಕಾಶದ ಹೊಳೆ; ದೇವಗಂಗೆ. ~ಮಣಿ = ಸೂರ್ಯ.

ಬಾನ (ನಾ). ೧. ಬೋನ; ಅನ್ನ. ೨.=ಬಾನಿ. ೩. ರಾಶಿ; ಒಟ್ಟಿಲು.

ಬಾಸಲ್(ಲು) (ನಾ). ಕಳೆಗುಂದಿದುದು ; ಮ್ಲಾನವಾದುದು ; ಮಂಕಾದುದು.

ಬಾನಿ (ನಾ). ಅಗಲಬಾಯಿಯ ಮಣ್ಣಿನ ಪಾತ್ರೆ.

ಬಾನೆ = ಬಾನಿ.
ಬಾಪುರಿ = ಭಾಪುರಿ.
ಬಾಬತ್(ತು) (ನಾ). ೧. ಸಂಬಂಧಪಟ್ಟುದು. ೨. ವಿಷಯ; ಸಂಗತಿ.
ಬಾಬತ್ತು = ಬಾಬತ್.
ಬಾಬು = ಬಾಬತ್.
ಬಾಯ್ (ನಾ). ೧. ಆಹಾರವನ್ನು ತಿನ್ನುವ ಅಂಗ. ೨. (ಪಾತ್ರೆ, ಚೀಲ, ಬಿಲ ಮುಂತಾದುವುಗಳ) ಪ್ರವೇಶದ್ವಾರ. ೩. ಅಲಗು; ಧಾರೆ. ~ಅಳಿ(ಳಿ) = ೧. ಬಾಯಿ ಸೋತುಹೋಗು; ಮಾತಿಲ್ಲವಾಗು. ೨. ಅತಿಯಾಗಿ ದುಃಖಿಸು; ಪ್ರಲಾಪಿಸು. ~ಆಡಿಸು = ೧. ತಿನ್ನು. ೨. ಹೇಳು; ಮಾತನಾಡು. ~ಎಲರ್(ರು) = ಉಸಿರು. ~ಕಟ್ಟು = ೧. ವಾದದಲ್ಲಿ ವಿರೋಧಿಯನ್ನು ಸೋಲಿಸು; ಮಾತನಾಡದಿರುವಂತೆ ನಿರ್ಬಂಧಪಡಿಸು. ೨. ಬಾಯಿಯ ಅಪೇಕ್ಷೆಯನ್ನು ತಡೆ; ಪಥ್ಯ ಮಾಡು. ೩. ಮಾಟದ ಮೂಲಕ ಪ್ರಾಣಿಯ ಅಥವಾ ಮನುಷ್ಯನ ಬಾಯಿಯನ್ನು ಮುಚ್ಚಿಸು. ೪. ಪ್ರಾಣಿಯ ಬಾಯಿಗೆ ಕಟ್ಟುವ ಕುಕ್ಕೆ. ೫. ಮಂತ್ರ, ಮಾಟಗಳಿಂದ ಬಾಯಿಯನ್ನು ಮುಚ್ಚಿಸಿರುವಿಕೆ. ~ಕುಕ್ಕೆ = ಪ್ರಾಣಿಗಳು ತಿನ್ನದಂತೆ ಬಾಯಿಗೆ ಕಟ್ಟುವ ಕುಕ್ಕೆ. ~ಕೂ(ಗೂ)ಟ = ಮುತ್ತು; ಚುಂಬನ. ~ಕೂ(ಗೂ)ಡು = ೧. ಚುಂಬಿಸು; ಮುದ್ದಿಸು. ೨. ಮೊನಚಾಗು; ಹರಿತವಾಗು. ೩. ಸೇರು; ಒಂದಾಗು. ೪. (ವಯಸ್ಸಾದ) ದನದ ಹಲ್ಲುಗಳು ಸಮನಾಗಿ ಕೂಡಿರು. ~ಕೇಳಿಸು=ಆಜ್ಞೆಗೆ ಒಳಪಡಿಸು; ಮಾತು ಕೇಳುವಂತೆ ಮಾಡು. ~ತೆ(ದೆ)ರೆ = ೧. ತುಟಿ. ೨. = ಬಾಯ್ದೆಱೆ. ~ತೆ(ದೆ)ಱೆ(ರೆ)=೧.ಬಾಯಿಯನ್ನು ತೆಗೆ. ೨.ಬೇಡು; ಅಂಗಲಾಚು. ~ಪಾಠ=ಉರು ಹೊಡೆಯುವುದು; ಕಂಠಪಾಠ. ~ಬಡಿ = ಇತರರ ಬಾಯನ್ನು ಮುಚ್ಚಿಸು; ಮಾತನಾಡದಂತೆ ಮಾಡು. ~ಬಡಿಕ =ಬಡಾಯಿ ಕೊಚ್ಚುವವನು. ~ಬಸಲೆ(ಳೆ) = ಬಾಯಿಯಲ್ಲಿ ಏಳುವ ಹುಣ್ಣು. ~ಬಿಡು = ೧. ಬಾಯಿಯನ್ನು ತೆರೆ. ೨. ಆಸೆಯಿಂದ ನಿರೀಕ್ಷಿಸು. ೩. ಅತಿಯಾಗಿ ದುಃಖಿಸು. ೪. ಗುಟ್ಟನ್ನು ಹೇಳು. ~ಬೀಗ = ೧. ಮಾತನಾಡದಿರುವುದು; ಮೌನ. ೨. ಹರಕೆ ಹೊತ್ತು ಬಾಯಿಗೆ ಚುಚ್ಚಿಸಿಕೊಳ್ಳುವ ಬೀಗದಂತಹ ಒಂದು ಸಾಧನ. ~ಮಾಡು = ೧. ಬಯ್ಯು; ತೆಗಳು. ೨. ಪ್ರತಿಜ್ಞೆ ಮಾಡು; ಶಪಥಮಾಡು. ೩. ಗದರಿಸು; ಜಬರಿಸು. ೪. ಕೂಗಾಡು; ಗಲಾಟೆಮಾಡು. ~ಮಾ(ವಾ)ತು = ಶುಷ್ಕವಾದ ಮಾತು; ತೋರಿಕೆಯ ಮಾತು. ~ಹಾಕು = ಬೇರೆಯವರ ವಿಷಯದಲ್ಲಿ ಮಾತನಾಡು; ಬೇರೊಬ್ಬರ ಮಾತಿನಲ್ಲಿ ತಲೆಹಾಕು.
ಬಾಯರು (ನಾ). ೧. ನೀರು. ೨. ಕಲಗಚ್ಚು; ಮುಸುರೆ.
ಬಾಯಾಱು(ರು) (ಕ್ರಿ). ನೀರಡಿಕೆಯಾಗು; ದಾಹವುಂಟಾಗು. ~ಇಕೆ = ೧. ದಾಹ; ತೃಷ್ಣೆ. ೨. ದಾಹವನ್ನು ಅಡಗಿಸುವ ಪಾನೀಯ.
ಬಾಯಿ = ಬಾಯ್.
ಬಾಯಿನ = ಬಾಗಿನ.
ಬಾಯು (ಕ್ರಿ). ಊದು; ಬಾತುಕೊಳ್ಳು.
ಬಾರ್ (ಕ್ರಿ). ೧. ಚರ್ಮವನ್ನು ಪಟ್ಟಿಗಳಾಗಿ ಮಾಡಿ ಕತ್ತರಿಸು. ೨. ಸುರಿ; ಹೊಯ್ಯು. ೩. ಭೇದಿಯಾಗು. ೪. ಪರಚು. (ನಾ). ೫. ಚರ್ಮದಪಟ್ಟಿ. ೬. ಬಂದೂಕಿನಲ್ಲಿ ಮದ್ದು, ಗುಂಡುಗಳನ್ನು ತುಂಬುವಿಕೆ. ~ಸಿಪಾಯಿ = ಬಂದೂಕನ್ನು ಹಿಡಿದಿರುವ ಸಿಪಾಯಿ.

ಬಾರ (ನಾ). ೧. ಹನ್ನೆರಡು. ೨. = ಭಾರ.
ಬಾರಗಿ (ನಾ). ೧. ಪೊರಕೆ; ಕಸಬರಿಗೆ. ೨. = ಬಾರ್‌ಸಿಪಾಯಿ.
ಬಾರವಣೆ = ಭಾರಣೆ.
ಬಾರಾಬಲೂತಿ (ನಾ). ಗ್ರಾಮದ ಹನ್ನೆರಡು ಅಧಿಕಾರಿಗಳು.
ಬಾರಿ (ನಾ). ೧. ಸಲ; ಸೂಳು; ಸರದಿ. ೨. ಏತದ ಬಾವಿಯಿಂದ ನೀರೆತ್ತಲು ಎತ್ತುಗಳು ಓಡಾಡಲು ಮಾಡಿರುವ ಇಳುಕಲು; ಬಾವಿಯ ಮೊಟ್ಟೆ ಹೊಡೆಯುವ ಇಳಿಜಾರು. ೩. ಚರ್ಮದ ಪಟ್ಟಿ. ೪. ಪ್ರಾಣಿಗಳಿಗೆ ಉಂಟಾಗುವ ನಸೆ, -ಬೆದೆ. ೫. = ಭಾರಿ. ~ಕ = ೧. ಸರದಿಯನ್ನು ಎಚ್ಚರಿಸುವವನು. ೨. ಗ್ರಾಮದ ಒಬ್ಬ ಅಧಿಕಾರಿ; ತಳವಾರ.
ಬಾರಿಸು (ಕ್ರಿ). ೧. ತಡೆ; ಅಡ್ಡಿಮಾಡು; ಪ್ರತಿಬಂಧಿಸು. ೨. ನಡುಗಿಸು; ಕಂಪಿಸುವಂತೆ ಮಾಡು. ೩. ಹೊಡೆ; ಪೆಟ್ಟುಕೊಡು. ೪. ಬೆಳೆ; ವೃದ್ಧಿಯಾಗು. ೫. = ಬಾಜಿಸು.
ಬಾರು (ಕ್ರಿ). ೧. ನಡುಗು; ಕಂಪಿಸು. (ನಾ). ೨. ಚರ್ಮದ ಪಟ್ಟಿ; ತೊಗಲಿನ ಪಟ್ಟಿ. ೩. ಗೆರೆ; ಗೀರು. ೪. = ಬಾರ್‌ಸಿಪಾಯಿ. ~ಏಟು(ಳು) = (ಹೊಡೆತದಿಂದಾಗಿ) ಚರ್ಮದ ಮೇಲ್ಗೆ ಗೆರೆ ಮೂಡು; ಚಾಸು ಳೇಳು. ~ಕೋಲು = ಚಾವಟಿ; ಚಬಕ. ~ಮಾಡು = ಬಂದೂಕಿಗೆ ಮದ್ದು ಗುಂಡನ್ನು ತುಂಬು.
ಬಾಜಿ(-ರಿ)ಸು (ಕ್ರಿ). ವಾದ್ಯಗಳನ್ನು ನುಡಿಸು, -ಬಾಜಿಸು.
ಬಾಚುರ್ (ಕ್ರಿ). ೧. ಬಾಚು; ಹಿಕ್ಕು. ೨. ಗುಂಪುಮಾಡು; ರಾಶಿಮಾಡು; ಗೋರು.
ಬಾರ್ತೆ (ನಾ). ೧. ವಾರ್ತೆ; ಸುದ್ದಿ. ೨. ಲಕ್ಷ್ಯ; ಗುರಿ. ೩. = ಬಾಜಿತ್ತಿ. ~ಗೆಯ್ = ಸುದ್ದಿಯನ್ನು ಮುಟ್ಟಿಸು.

ಬಾಲ (ನಾ). ೧. ಮಗು; ಶಿಶು. ೨. ಮರಿ; ಪೋತ. ೩. (ಪ್ರಾಣಿಗಳ) ಲಾಂಗೂಲ, -ಪುಚ್ಛ. (ಗು). ೪. ಪೂರ್ಣ ಬಲಿಯದ; ಎಳೆಯ. ೫. ಪ್ರೌಢವಲ್ಲದ; ಬಾಲಿಶ. ~ಅರ್ಕ=ಆಗ ತಾನೇ ಹುಟ್ಟಿದ ಸೂರ್ಯ; ಎಳೆಯ ಸೂರ್ಯ. ~(ಂ)ಕ(ಗ)ಚ್ಚೆ = ಗಾಳಿಪಟವು ಹಾರುವಾಗ ಸಮತೋಲನಕ್ಕಾಗಿ ಕಟ್ಟುವ ಬಟ್ಟೆ ಅಥವಾ ಕಾಗದದ ಕುಚ್ಚು. ~ಕೇಲಿ(ಳಿ) = ಮಕ್ಕಳಾಟ; ಹುಡುಗಾಟಿಕೆ. ~ಗ್ರಹ = ಮಕ್ಕಳನ್ನು ಪೀಡಿಸುವ ರೋಗ. ~ಚುಕ್ಕೆ = ಧೂಮಕೇತು. ~ತು(ದು)ಡಿಗೆ = ಮಕ್ಕಳಿಗೆ ತೊಡಿಸುವ ಆಭರಣ. ~ಬಡಿ = ಹಿಂಬಾಲಿಸು; ಅನುಸರಿಸು. ~ಬಿಚ್ಚು = ಉದ್ಧಟತನದಿಂದ ವರ್ತಿಸು; ಉಚಾಯಿಸು. ~ಬೋಧೆ = ಮಕ್ಕಳಿಗೆ ಪ್ರಾರಂಭದಲ್ಲಿ ಕಲಿಸಲು ಇಟ್ಟಿರುವ ಪುಸ್ತಕ. ~ಲೀಲೆ = ಬಾಲಕೇಲಿ. ~ಹಿಡಿ = ಅನುಸರಿಸು; ಬೆಂಬಲಿಸು.
ಬಾಲಂಗೋಸಿ = ಬಾಲಂಗಚ್ಚೆ.
ಬಾಲಕ (ನಾ). ಹುಡುಗ.
ಬಾಲಕಿ (ನಾ). ಹುಡುಗಿ.
ಬಾಲಾಗಸಿ = ಬಾಲಂಗಚ್ಚೆ.
ಬಾಲಿಕೆ = ಬಾಲಕಿ.
ಬಾಲಿಶ (ನಾ). ೧. ಮೂರ್ಖ; ದಡ್ಡ. ೨. ಹುಡುಗಾಟ. ೩. ದಿಂಬು; ಲೋಡು. (ಗು). ೪. ಎಳೆಯ; ಬಲಿಯದ. ೫. ಮಗುವಿನಂತಹ. -೬. ಹುಡುಗುತನದ. ಮಕ್ಕಳಾಟಿಕೆಯ.
ಬಾಲೆ ೧. = ಬಾಲಕಿ. ೨. ಹೆಂಗಸು.
ಬಾಲೇಯಕ (ನಾ). ತಿಲಕ; ಬೊಟ್ಟು.
ಬಾಲ್ಯ (ನಾ). ಎಳೆತನ; ಶೈಶವ. ~ಅವಸ್ಥೆ = ಎಳವೆ; ಎಳೆಯತನ.
ಬಾವ = ಭಾವ.

**ಬಾವನ್ನ** (ನಾ). ಶ್ರೀಗಂಧ; ಚಂದನ. **~ತಿ(ದಿ)ಗುರು** = ಚಂದನದ ಲೇಪನ.

**ಬಾವಲಿ** (ನಾ). ೧. ಕಣ್ಣುಕಪ್ಪಡೆ; ಗಬ್ಬಿಲ. ೨. ಒಂದು ಬಗೆಯ ಕರ್ಣಾಭರಣ. ೩. ಪ್ರಶಸ್ತಿ.

**ಬಾವಳಿಸು** (ಕ್ರಿ). ಚಿಂತೆಮಾಡು; ವ್ಯಾಕುಲಿಸು.

**ಬಾವಾ** (ನಾ). ಫಕೀರ.

**ಬಾವಾಜಿ** = ಬಾವಾ.

**ಬಾವಿ** (ನಾ). ಕೂಪ; ವಾಪಿ.

**ಬಾವು** (ನಾ). ಬಾಯುವಿಕೆ; ಊತ.

**ಬಾವುಗ** (ನಾ). ಗಂಡುಬೆಕ್ಕು.

**ಬಾವುಟ** (ನಾ). ಪತಾಕೆ; ಧ್ವಜ.

**ಬಾವುಲಿ** = ಬಾವಲಿ.

**ಬಾಷ್ಕಳ** (ನಾ). ೧. ಉಪನಿಷತ್ತುಗಳಲ್ಲಿ ಒಂದು. ೨. ನಿರಾಧಾರವಾದ ಮಾತು; ಅಸಂಬದ್ಧವಾದ ಮಾತು. **~ಕೆ(ಗೆ)ಡೆ** = ಅಸಂಬದ್ಧವಾಗಿ ಮಾತನಾಡು.

**ಬಾಷ್ಪ** (ನಾ). ಕಣ್ಣೀರು; ಕಂಬನಿ. **~ಜಲ** = ಕಂಬನಿ. **~ವಾರಿ** = ಬಾಷ್ಪಜಲ.

**ಬಾಸಣ** (ನಾ). ಮುಚ್ಚಳ. **~ಇಸು**=ಮುಚ್ಚು; ಅವರಿಸು.

**ಬಾಸಣಿಗೆ** (ನಾ). ೧. ಮುಚ್ಚಳ; ಹೊದಿಕೆ. ೨. = ಬಾಚಣಿಗೆ.

**ಬಾಸಳು** = ಬಾಸುಳ್.

**ಬಾಸಿಂಗ** (ನಾ). ೧. ಹೂವಿನ ದಂಡೆ. ೨. ತಲೆಯಲ್ಲಿ ಧರಿಸುವ ಒಂದು ಆಭರಣ. ೩. ಮದುಮಕ್ಕಳ ಹಣೆಗೆ ತೊಡಿಸುವ ಒಂದು ಆಭರಣ.

**ಬಾಸಿಗ** ೧. = ಬಾಸಿಂಗ. ೨. ಮಾತುಗಾರ; ವಾಚಾಳಿ.

**ಬಾಸು** (ಕ್ರಿ). ೧. ಮಲವನ್ನು ವಿಸರ್ಜಿಸು. (ನಾ). ೨. ಹೊಲಸುವಾಸನೆ; ಕೆಟ್ಟನಾತ.

**ಬಾಸುಂಡೆ** = ಬಾಸುಳ್.

**ಬಾಸುಂದಿ** (ನಾ). ಒಂದು ಬಗೆಯ ಸಿಹಿ ತಿನಿಸು.

**ಬಾಸುಗಿ** (ನಾ). ಹಾವುಗಳ ಒಡೆಯ; ವಾಸುಕಿ.

**ಬಾಸುಳ್**(ಳ್,ಳು,ಳು) (ನಾ). ಹೊಡೆತದಿಂದ ಮೈಮೇಲೆ ಏಳುವ ಬಾವು, -ಊತ. **~ಏಳ್(ಳು)** = ಬಾಸುಂಡೆ ಮೂಡು, -ಉಂಟಾಗು.

**ಬಾಸುಳಿ(ಳೆ)** = ಬಾಸುಳ್.

**ಬಾಸೆ** (ನಾ). ೧. ನಾಭಿಯಿಂದ ಎದೆಯವರೆಗೆ ಇರುವ ಕೂದಲು. ೨. = ಭಾಷೆ. **~ಪ(ವ)ಕ್ಕಿ** = ಮಾತನಾಡುವ ಹಕ್ಕಿ; ಗಿಳಿ. **~ಪೆ(ವೆ)ಣ್** = ಭಾಷೆಯ ಅಧಿದೇವತೆ; ಸರಸ್ವತಿ.

**ಬಾಹತ್ತರ** (ನಾ). ಎಪ್ಪತ್ತೆರಡು.

**ಬಾಹಿಗೆ** (ನಾ). ಹೊರವಲಯ; ಹೊರಭಾಗ.

**ಬಾಹಿರ** (ನಾ). ೧. ಹೊರದೂಡಲ್ಪಟ್ಟವನು; ಬಹಿಷ್ಕರಿಸಲ್ಪಟ್ಟವನು. ೨. ಪರಕೀಯ; ಅನ್ಯ. ೩. ಹೀನಮನುಷ್ಯ; ನೀಚವ್ಯಕ್ತಿ. (ಗು). ೪. ಹೊರತಾದ; ಬಹಿಷ್ಕೃತ.

**ಬಾಹು** (ನಾ). ೧. ತೋಳು; ಭುಜ. ೨. = ಬಾವು. **~ಬಲ** = ತೋಳಿನ ಶಕ್ತಿ, -ಪರಾಕ್ರಮ. **~ಮೂಲ(ಳ)** = ತೋಳಿನ ಮೊದಲು; ಕಂಕುಳು. **~ಯುದ್ಧ** = ಮಲ್ಲಯುದ್ಧ; ಕುಸ್ತಿ. **~ರಕ್ಕೆ(ಕ್ಷೆ)** = ತೋಳಿಗೆ ತೊಡುವ ಕವಚ. **~ವಲ(ಳ)ಯ** = ಬಾಹುಪುರಿ.

**ಬಾಹುಜ** (ನಾ). ಕ್ಷತ್ರಿಯ.

**ಬಾಹುಪುರಿ** (ನಾ). ತೋಳುಬಂದಿ; ಕೇಯೂರ.

**ಬಾಹುಲ್ಯ(ಳ್ಯ)** (ನಾ). ಆಧಿಕ್ಯ; ಹೆಚ್ಚಳ.

**ಬಾಹೆ** ೧. = ಬಾಹಿಗೆ. ೨. ಪಕ್ಕ; ಪಾರ್ಶ್ವ.

**ಬಾಹ್ಯ** (ನಾ). ೧. ಹೊರಗಿನವನು; ಪರಕೀಯ. (ಗು). ೨. ಹೊರಗಿನ; ಹೊರಭಾಗದ.

**ಬಾಳ್(ಳು)** ೧. = ಬಾಳ್. (ನಾ). ೨. ಕತ್ತಿ; ಖಡ್ಗ. **~ಅಗಮ** = ಖಡ್ಗವಿದ್ಯೆ. **~ಮೊದಲ್** = ಕತ್ತಿಯ ಹಿಡಿ. **~ಮೊನೆ** = ಕತ್ತಿಯ ಅಲಗು, -ಧಾರೆ.

ಬಾೞ (ನಾ). ೧. ಹಣೆ; ನೊಸಲು. ೨. ಲಾವಂಚ; ಮುಡಿವಾಳ. ೩. = ಬಾಲ.

ಬಾೞ(ಂ)ತಿ = ಬಾಣಂತಿ.

ಬಾೞಕ (ನಾ). ೧. ಒಂದು ಬಗೆಯ ನಂಜಿಕೊಳ್ಳುವ ಪದಾರ್ಥ; ಉಪ್ಪು, ಮೊಸರು ಮುಂತಾದುವುಗಳೊಂದಿಗೆ ಕಲಸಿ, ಒಣಗಿಸಿದ ಮೆಣಸಿನಕಾಯಿ ಇತ್ಯಾದಿ. ೨. = ಬಾಲಕ.

ಬಾೞವಂದ (ನಾ). ಮಕ್ಕಳ ತೊಡಿಗೆ; ಬಾಲದೊಡಿಗೆ.

ಬಾೞಿಕೆ (ನಾ). ೧. ತಾೞಿಕೆ; ಬಹುಕಾಲ ಉಪಯೋಗಕ್ಕೆ ಬರುವುದು. ೨.= ಬಾಲಿಕೆ.

ಬಾೞುವೆ = ಬಾೞ್ಕೆ.

ಬಾೞೆ (ನಾ). ೧. ಒಂದು ಜಾತಿಯ ಮೀನು. ೨. = ಬಾೞೆ. ೩. = ಬಾಲೆ.

ಬಾೞ್(ೞ್,ಳು,ೞು) (ಕ್ರಿ). ೧. ಜೀವಿಸು; ಬದುಕು. ೨. ಜೀವನ ನಡಸು; ಬಾಳುವೆ ಮಾಡು. (ನಾ). ೩. ಜೀವನ; ಬದುಕು. ೪. ಜೀವನೋಪಾಯ. ೫. ಏಳಿಗೆ; ಅಭಿವೃದ್ಧಿ. ~ಇಸು = ಬದುಕಿಸು; ಬದುಕಲು ಸಹಾಯಮಾಡು. ~ಕೆ(ಗೆ)ಡು = ಬದುಕು ನಾಶವಾಗು, -ಹಾಳಾಗು. ~ಬೆ(ವೆ)ೞಿ = ೧. ಸ್ಥಿರವಾದ ಬೇಲಿ. ೨. ಬೆಳೆಯುವ ಬೇಲಿ. ~ಮ(ವ)ನೆ = ಸ್ಥಿರವಾದ ಮನೆ. ~ಮೊದಲ್ = ಜೀವನದ ಪ್ರಾರಂಭ,-ಆದಿ.

ಬಾೞೆ(ಳೆ) (ನಾ). ಒಂದು ಜಾತಿಯ ಸಸ್ಯ ಮತ್ತು ಅದರ ಹಣ್ಣು; ಕದಳಿ.

ಬಾೞ್ಕೆ(ಳ್ಕೆ) (ನಾ). ೧. ಬಾಳು; ಬದುಕು. ೨. ಉದ್ಯೋಗ; ಜೀವನೋಪಾಯ.

ಬಾೞ್ತೆ(ಳ್ತೆ) ೧. = ಬಾೞ್ಕೆ. ೨. ಪ್ರಯೋಜನ; ಲಾಭ. ೩. ಕೆಲಸ; ಕಾರ್ಯ.

ಬಾೞ್ವೆ(ಳ್ವೆ) = ಬಾೞ್ಕೆ.

ಬಿಂಕ (ನಾ). ೧. ಗರ್ವ; ಜಂಬ. ೨. ಬಿನ್ನಾಣ; ಬೆಡಗು. ೩.ಕಾಗೆಬಂಗಾರ; ಬಿಂಗ. ~(ಂ)ಪೆ(ಬೆ)ಱು(ರು) = ಬಿನ್ನಾಣದಿಂದ ಕೂಡಿರು; ಠೀವಿಯಿಂದಿರು. ~ಕಾಱ(ರ) = ಜಂಬಗಾರ; ಗರ್ವಿಷ್ಠ.

ಬಿಂಕಣ (ನಾ). ಬೀಸಣಿಗೆ; ವ್ಯಜನ.

ಬಿಂಕಣಗಿವಿಯ (ನಾ). ಬೀಸಣಿಗೆಯಂತಹ ಕಿವಿಗಳುಳ್ಳವನು; ಗಣಪತಿ.

ಬಿಂಕಣೆ = ಬಿಂಕಣ.

ಬಿಂಕು (ನಾ). ಕಪಟ; ಮೋಸ; ಕುಟಿಲತೆ.

ಬಿಂಗ (ನಾ). ೧. ಕಾಗೆಬಂಗಾರ; ಅಭ್ರಕ. ೨. ದುಂಬಿ; ಭ್ರಮರ.

ಬಿಂಗಾರ (ನಾ). ಚಿನ್ನದ ಹೂಜಿ, -ಕೂಜ.

ಬಿಂಗಾರಿ ೧. = ಬಿಂಗಾರ. ೨. ಚಿನ್ನದ ಗುಳಾಪು, -ಬುರುಡೆ. ೩. ಒನಪುಗಾತಿ; ಒಯ್ಯಾರಿ.

ಬಿಂಗು (ನಾ). ಕಾಗೆ ಬಂಗಾರ; ಅಭ್ರಕ.

ಬಿಂಜ (ನಾ). ೧. ವಿಂಧ್ಯಪರ್ವತ. ೨. ಕಾಡು; ಅಡವಿ. ~ಬೆ(ವೆ)ಟ್ಟು = ವಿಂಧ್ಯಪರ್ವತ.

ಬಿಂಡಿವಾಲ(ಳ) (ನಾ). ಒಂದು ಬಗೆಯ ಆಯುಧ.

ಬಿಂದ (ನಾ). ಗುಂಪು; ಸಮೂಹ; ಬೃಂದ.

ಬಿಂದಲಿ (ನಾ). ಚಿಕ್ಕಮಕ್ಕಳ ಮುಂಗೈಗೆ ತೊಡಿಸುವ ಒಂದು ಬಗೆಯ ಆಭರಣ.

ಬಿಂದಿಗೆ (ನಾ). ೧. ನೀರು ತುಂಬುವ ಪಾತ್ರೆ; ಕೊಡ. ೨. ಒಂದು ಜಾತಿಯ ಹೂವಿನ ಗಿಡ ಮತ್ತು ಅದರ ಹೂವು.

ಬಿಂದು (ನಾ).೧. ಹನಿ; ತೊಟ್ಟು. ೨. ಚುಕ್ಕೆ. ೩. ಸೊನ್ನೆ; ಅನುಸ್ವಾರ. ೪. ವೀರ್ಯ; ರೇತಸ್ಸು. ೫. ಆನೆಯ ದೇಹದ ಮೇಲಿನ ಬಿಳಿಯ ಮಚ್ಚೆ.

ಬಿಂದುಲಿ = ಬಿಂದಲಿ.

ಬಿಂಬ (ನಾ). ೧. ಪ್ರತಿರೂಪ; ಪಡಿನೆಳಲು. ೨. ವಿಗ್ರಹ; ಮೂರ್ತಿ. ೩. ಮಂಡಲ; ವೃತ್ತ. ೪. ಕನ್ನಡಿ. ೫. ತೊಂಡೆಯ ಬಳ್ಳಿ

ಮತ್ತು ಅದರ ಹಣ್ಣು. ~ಅಧರ = ತೊಂಡೆಯ ಹಣ್ಣಿನಂತೆ ಇರುವ ಕೆಂಪಾದ ತುಟಿ. ~ಇಸು = ೧. ಬೆಳಗು; ಪ್ರಕಾಶಿಸು. ೨. ಪ್ರತಿರೂಪವನ್ನು ತೋರಿಸು, -ಮೂಡಿಸು.

ಬಿಕನಾಸಿ (ನಾ). ೧. ಭಿಕ್ಷುಕ; ತಿರುಕ. ೨. ಅಲ್ಪ; ಕ್ಷುದ್ರ.

ಬಿಕರಿ (ನಾ). ಮಾರಾಟ; ವಿಕ್ರಯ. ~ಮಾಡು = ಮಾರು; ವಿಕ್ರಯಿಸು.

ಬಿಕಾರಿ (ನಾ). ಬೇಡುವವನು; ಭಿಕ್ಷುಕ. ~ತನ = ದಾರಿದ್ರ್ಯ; ಬಡತನ.

ಬಿಕ್ಕ (ನಾ). ೧. ಹತ್ತು ವರ್ಷದೊಳಗಿನ ಆನೆಯ ಮರಿ. ೨. ತಡೆದು ತಡೆದು ಮಾತನಾಡುವವನು; ಉಗ್ಗ.

ಬಿಕ್ಕಟ್ಟು (ನಾ). ತೊಂದರೆ; ಅಡಚಣೆ.

ಬಿಕ್ಕಲಂ (ನಾ). ಓದುಬರೆಹ ಬಾರದವರಿಗಾಗಿ ಬೇರೆಯವರು ಬರೆದುಕೊಟ್ಟುದು. ~ದಾರ = ಓದುಬರೆಹ ತಿಳಿಯದವರಿಗೆ ಬರೆದು ಕೊಡುವವನು.

ಬಿಕ್ಕಲು(ಳು) (ನಾ). ೧. ಧ್ವನಿಯಲ್ಲುಂಟಾಗುವ ನಡುಕ; ಗದ್ಗದ. ೨. ಉಗ್ಗುವಿಕೆ; ತೊದಲುವಿಕೆ. ೩. ಶ್ವಾಸದ್ವಾರವು ಥಟ್ಟನೆ ಮುಚ್ಚಿಕೊಳ್ಳುವುದು; ಬಿಕ್ಕಳಿಕೆ. ~ಇಕೆ = ಬಿಕ್ಕಲು. ~ಇಸು = ೧. ಗದ್ಗದಿಸು; ದುಃಖದಿಂದ ತಡವರಿಸು. ೨. ಉಗ್ಗು; ತೊದಲು. ೩. ಬಿಕ್ಕು; ಬಿಕ್ಕಳಿಕೆಯುಂಟಾಗು.

ಬಿಕ್ಕಿರಿ (ನಾ). ಸೊಳ್ಳೆ.

ಬಿಕ್ಕು (ಕ್ರಿ). ೧. ಮೇಲುಸಿರು ಬಿಡು; ಏದು. ೨. ಗದ್ಗದವುಂಟಾಗು. ೩. ಉಗ್ಗು; ತೊದಲು. (ನಾ). ೪. = ಬಿಕ್ಕಲು. ೫. = ಭಿಕ್ಷು. ೬. ಹೃದಯದ ಮಾಂಸ

ಬಿಕ್ಕುಳು = ಬಿಕ್ಕಲು.

ಬಿಕ್ಕೆ (ನಾ). ೧. ತಿರುಪೆ; ಭಿಕ್ಷೆ. ೨. = ಬಿಱಿಕ್ಕೆ.

ಬಿಕ್ಷು = ಭಿಕ್ಷು.

ಬಿಗಡಾಯಿಸು (ಕ್ರಿ). ೧. ಹದಗೆಡು; ಕೆಟ್ಟು ಹೋಗು. ೨. ಸಂಬಂಧ ತಪ್ಪಿಹೋಗು.

ಬಿಗಿ (ಕ್ರಿ). ೧. ಭದ್ರಮಾಡು. ೨. ಗಟ್ಟಿಯಾಗಿ ಕಟ್ಟು, -ಬಂಧಿಸು. ೩. ಬೀಗು; ಗರ್ವಿಸು. ೪. ಒತ್ತು; ಅಮುಕು. ೫. ಆವರಿಸು; ಮುಸುಕು. ೬. ಹೊಡೆ; ಥಳಿಸು. ೭. ಕುಗ್ಗು; ಸಂಕುಚಿಸು. (ನಾ). ೮. ಭದ್ರವಾಗಿರುವುದು; ಗಟ್ಟಿಯಾಗಿರುವುದು. ೯. ಕುದುರೆಯ ತಂಗುಪಟ್ಟಿ. ೧೦. ಗಾಂಭೀರ್ಯ; ಬಿಗುಮಾನ. ~ಆ(ಯಾ)ಗು = ೧. ಗಟ್ಟಿಯಾಗು; ದೃಢವಾಗು. ೨. ಬಿಗುವಿನಿಂದ ಕೂಡಿರು. ~ಪ(ವ)ಡೆ = ೧. ಕಟ್ಟು ಬೀಳು; ನಿರ್ಬಂಧಕ್ಕೆ ಒಳಗಾಗು. ೨. ಗರ್ವಿಸು. ~ವೊಗ = ಸಿಟ್ಟುಗೊಂಡ ಮುಖ; ಬಿಗಿದ ಮುಖ.

ಬಿಗಿತ (ನಾ). ೧. ಬಿಗಿಯುವಿಕೆ; ಗಟ್ಟಿಗೊಳಿಸುವಿಕೆ. ೨. ಗಟ್ಟಿಯಾದ ಹಿಡಿತ.

ಬಿಗಿಪು = ಬಿಗುಹು.

ಬಿಗು (ನಾ). ೧. ಗಟ್ಟಿಯಾದ ಹಿಡಿತ; ಬಿಗಿತ. ೨. ಗತ್ತು; ಗಾಂಭೀರ್ಯ. ೩. ಸದರ ಕೊಡದಿರುವುದು. ~ವೊಗ = ಬಿಗಿವೊಗ.

ಬಿಗುಪು = ಬಿಗುಹು.

ಬಿಗುಮಾನ (ನಾ). ಮಾತಿನಲ್ಲಿ ಹಿಡಿತ; ಮನಸ್ಸು ಬಿಚ್ಚಿ ಮಾತನಾಡದಿರುವಿಕೆ.

ಬಿಗುರ್(ರು) (ಕ್ರಿ). ೧. ಭಯಪಡು; ಅಂಜು. ೨. ಆಶ್ಚರ್ಯಪಡು. (ನಾ). ೩. ಅಂಜಿಕೆ; ಭಯ. ೪. ಬೆರಗು; ಆಶ್ಚರ್ಯ.

ಬಿಗುವು = ಬಿಗುಹು.

ಬಿಗುಹು ೧. = ಬಿಗು. ೨. ಬಿಗಿಯಾಗಿರುವುದು; ಗಟ್ಟಿಯಾಗಿರುವುದು. ೩. ಸಂಯಮ; ಹತೋಟಿ. ~ಕಾಱ(ರ) = ಸೊಕ್ಕಿನಿಂದ ಕೂಡಿದವನು; ಗರ್ವಿಷ್ಠ. ~ತೋಱು(ರು) = ಗಂಭೀರವಾಗು; ಗತ್ತಿನಿಂದ ಕೂಡಿರು.

ಬಿಘೆ (ನಾ). ಜಮೀನಿನ ಒಂದು ಅಳತೆ.

ಬಿಚಾಣಿ (ನಾ). ಚಾಪೆ ಮೊದಲಾದ ಹಾಸು.
ಬಿಚಾಣ = ಬಿಚಾಣಿ.
ಬಿಚಾಯಿಸು (ಕ್ರಿ). ಹರಡು ; ಹಾಸು.
ಬಿಚ್ಚ (ನಾ). ತಿರುಪೆ; ಭಿಕ್ಷೆ.
ಬಿಚ್ಚತ (ನಾ). ವಿಸ್ತಾರ; ಹರವು. ~ಇಕೆ(ಕ್ಕೆ) = ೧. ವಿಸ್ತಾರ; ಹರಹು; ಆಧಿಕ್ಯ. ೨. ಚಾತುರ್ಯ. ೩. ನಂಬಿಕೆ; ವಿಶ್ವಾಸ.
ಬಿಚ್ಚತಂ (ಅ). ಅಧಿಕವಾಗಿ ; ಹೆಚ್ಚಾಗಿ.
ಬಿಚ್ಚನೆ (ಅ). ರಭಸವಾಗಿ; ವೇಗವಾಗಿ.
ಬಿಚ್ಚರಿಕೆ = ಬಿಚ್ಚತ.
ಬಿಚ್ಚಳ(ಳ) = ಬಿಚ್ಚತ.
ಬಿಚ್ಚಳಿ(ಳಿ)ಸು (ಕ್ರಿ). ೧. ಹಬ್ಬು; ಹರಡು. ೨. ವ್ಯಾಪಿಸುವಂತೆ ಮಾಡು ; ಹಬ್ಬುವಂತೆ ಮಾಡು. ೩. ಕೂಗು ; ಧ್ವನಿಮಾಡು. ೪. ವಿಸ್ತಾರವಾಗಿ ಹೇಳು ; ಬಿತ್ತರಿಸು. ೫. ಹೊಗಳು ; ಸ್ತುತಿಸು.
ಬಿಚ್ಚು ೧. = ಬಿರ್ಚು. ೨. ವಿಸ್ತರಿಸು; ಅಗಲಿಸು. ೩. ಬಿರಿ ; ಸೀಳು. ೪. ವಿಭಾಗಿಸು; ವಿಂಗಡಿಸು. ೫. ಬಹಿರಂಗಪಡಿಸು; ಪ್ರಕಟಿಸು. ೬. ತೆರೆ; ತೆಗೆ. (ನಾ). ೭. ಬೌದ್ಧ ಸಂನ್ಯಾಸಿ ; ಭಿಕ್ಷು. ೮. ಪ್ರಕಟನೆ ; ಬಹಿರಂಗ ಪಡಿಸಿದುದು. (ಗು). ೯. ಕಳಚಿದ ; ತೆಗೆದ. ೧೦. ಅಗಲಿಸಿದ; ತೆರೆದ. ~ಓಲೆ = ಕಿವಿಗೆ ಹಾಕಿಕೊಳ್ಳಲು ಬಳಸುವ ಓಲೆಗರಿ. ~ಕ(ಗ)ಣ್(ಣ್ಣು) = ತೆರೆದ ಕಣ್ಣು ; ಬಿಚ್ಚಿರುವ ಕಣ್ಣು ~ಕ(ಗ)ತ್ತಿ = ಒರೆಯಿಂದ ಕಳಚಿದ ಕತ್ತಿ ; ಹಿರಿದ ಕತ್ತಿ. ~ನುಡಿ = ಮುಚ್ಚುಮರೆಯಿಲ್ಲದ ಮಾತು; ಸ್ಪಷ್ಟವಾದ ಮಾತು. ~ಮನಸ್ಸು = ಮುಚ್ಚುಮರೆಯಿಲ್ಲದ ಮನಸ್ಸು; ತೆರೆದ ಹೃದಯ. ~ಮೊಗ್ಗೆ = ಬಿರಿದ ಮೊಗ್ಗು.
ಬಿಜಯ (ನಾ). ೧. ಹೋಗುವಿಕೆ; ತೆರಳುವಿಕೆ. ೨. ದಯಮಾಡಿಸುವಿಕೆ; ಬರುವಿಕೆ. ~(ಂ)ಗೆಯ್ = ೧. ಹೋಗು ; ತೆರಳು. ೨. ಬರು ; ದಯಮಾಡು. ~ಮಾಡು = ಬಿಜಯಂಗೆಯ್.
ಬಿಜಾಗರಿ (ನಾ). ಕೀಲು ; ತಿರುಗಣೆ.
ಬಿಜ್ಜಣ = ಬಿಜ್ಜಣಿಗೆ.
ಬಿಜ್ಜಣಿಗೆ (ನಾ). ಬೀಸಣಿಗೆ.
ಬಿಜ್ಜಳ = ಬಿಜ್ಜಣಿಗೆ.
ಬಿಜ್ಜು (ನಾ). ೧. ವಿಪತ್ತು ; ಗಂಡಾಂತರ. ೨. ಒಂದು ಜಾತಿಯ ಹಕ್ಕಿ. ೩. ಹಕ್ಕಿಗಳ ಚಿಲಿಪಿಲಿ, –ಕೆಲೆತ. ~ಬಡಿ = ಆಪತ್ತು ಸಂಭವಿಸು.
ಬಿಜ್ಜೆ (ನಾ). ವಿದ್ಯೆ ; ಪಾಂಡಿತ್ಯ. ~ಪೆ(ವೆ)ಣ್ = ವಿದ್ಯೆಯ ಅಧಿದೇವತೆ; ಸರಸ್ವ[illegible] ~ವಳ = ೧. ವಿನಾಯಕ; ಗಣ[illegible] ೨. = ಬಿಜ್ಜೆಗ.
ಬಿಜ್ಜೆಗ (ನಾ). ವಿದ್ವಾಂಸ ; ಪಂಡಿತ.
ಬಿಜ್ಜೋದರ (ನಾ). ವಿದ್ಯಾಧರ; ದೇವತೆ.
ಬಿಜ್ಜೋದರಿ (ನಾ). ವಿದ್ಯಾಧರ ಸ್ತ್ರೀ.
ಬಿಟ್ಟಿ (ನಾ). ಒತ್ತಾಯದಿಂದ ಮಾಡಿಸುವ ಪುಕ್ಕಟೆ ಕೆಲಸ. ~ಅನ್ನ = ಪುಕ್ಕಟೆಯಾಗಿ ಸಿಗುವ ಊಟ. ~ಕೆಲಸ = ಬಿಟ್ಟಿಬೇಗಾರಿ. ~ಬೇಗಾರಿ = ಪುಕ್ಕಟೆ ಕೆಲಸ.
ಬಿಡದಿ (ನಾ). ಅತಿಥಿಗಳ ಬಿಡಾರಕ್ಕೆಂದು ತೆರವು ಮಾಡಿದ ಮನೆ ; ಬಿಡಾರ.
ಬಿಡಯ (ನಾ). ೧. ಸೆಣಸಾಟ; ಸ್ಪರ್ಧೆ. ೨. ದಾಕ್ಷಿಣ್ಯ ; ಭಿಡೆ. ೩. ಗುಂಪು ; ಸಮೂಹ. ೪. ಅವಕಾಶ; ಆಸ್ಪದ.
ಬಿಡಾರ (ನಾ). ತಂಗುವ ಸ್ಥಳ.
ಬಿಡಾಲ(ಳ) (ನಾ). ಬೆಕ್ಕು ; ಮಾರ್ಜಾಲ.
ಬಿಡಿ (ನಾ). ೧. ಒಂಟಿ; ಒಂದು. (ಗು) ೨. ಪ್ರತ್ಯೇಕವಾದ; ಚಿಲ್ಲರೆಯ. ~ಎ(ಯೆ)ಲೆ = ಹಚ್ಚದಿರುವ ಎಲೆ ಒಂಟಿ ಎಲೆ. ~ಕಾ(ಗಾ)ಸು = ೧. ಒಂದು ನಾಣ್ಯ. ೨. ಚಿಲ್ಲರೆಹಣ; ಪುಡಿಕಾಸು.

~ಮಾತು = ಸ್ವತಂತ್ರವಾದ ಶಬ್ದ ; ಬಿಡಿಯಾದ ಶಬ್ದ.

ಬಿಡು (ಕ್ರಿ). ೧. ತೊರೆ ; ತ್ಯಜಿಸು. ೨. ಕಳಚು; ಬಿಚ್ಚು. ೩. ಹೊಡೆ ; ಥಳಿಸು. ೪. ನೆಲಸು; ಬೀಡು ಬಿಡು. ೫. ಮುಂದೆ ಹೋಗಲು ಅವಕಾಶ ಮಾಡಿಕೊಡು. ೬. ತೆರೆ ; ತೆಗೆ. (ನಾ). ೭. ವಿಶ್ರಾಂತಿ ; ಬಿಡುವು. ~ಇಸು =೧. ಬಿಡುವಂತೆ ಮಾಡು ; ಬಿಚ್ಚು ; ಕಳಚು. ೨. ಕೀಳು ; ಕೊಯ್ಯು. ೩. ಬಂಧನದಿಂದ ತಪ್ಪಿಸು ; ಮುಕ್ತಗೊಳಿಸು. ೪. ಚಿತ್ರಿಸು ; ಬರೆ. ೫. ಹಾಸು; ಹರಡು. ೬. ಬೀಡು ಬಿಡುವಂತೆ ಮಾಡು ; ತಂಗಲು ಅನುವು ಮಾಡಿಕೊಡು. ೭. (ಲೆಕ್ಕ ಮೊದಲಾದ ಸಮಸ್ಯೆಯನ್ನು) ಬಗೆಹರಿಸು; -ಪರಿಹರಿಸು. ೮. ಕೊಡು ; ದಾನಮಾಡು. ೯. ಅವಕಾಶ ಕೊಡು. ~ಕ(ಗ)ಡೆ =ಬಂಧನದಿಂದ ಪಾರಾಗುವಿಕೆ; ವಿಮೋಚನೆ. ~ಕ(ಗ)ಣ್(ಣ್ಣು) = ಬಿಟ್ಟ ಕಣ್ಣು ; ತೆರೆದ ಕಣ್ಣು. ~ಕೈ(ಗೈ) = ತೆರೆದ ಹಸ್ತ; ಉದಾರತೆ. ~ತ(ದ)ಲೆ = ಬಿಡುಮುಡಿ. ~ತಾ(ದಾ)ಣ = ಬೀಡು ಬಿಡುವ ಸ್ಥಳ ; ಬಿಡಾರ. ~ನುಡಿ = ಸ್ವೇಚ್ಛೆಯಾದ ಮಾತು. ~ಮುಡಿ = ಬಿಚ್ಚಿದ ಮುಡಿ, -ತಲೆಗೂದಲು.

ಬಿಡುಗಣ್ಣ (ನಾ). (ಯಾವಾಗಲೂ) ತೆರೆದ ಕಣ್ಣುಗಳುಳ್ಳವನು ; ದೇವತೆ.

ಬಿಡುಗೆ (ನಾ). ೧. ಅವಕಾಶ ; ಅಸ್ಪದ. ೨. ಸೋಡಿ; ವಟ್ಟಾ. ~ಕು(ಗು)ಡು = ಕಳುಹಿಸು ; ಬೀಳ್ಕೊಡು. ~ಕೊ(ಗೊ)ಳ್ = ಬೀಳ್ಕೊಳ್ಳು ; ಮುಂದೆ ಸಾಗು.

ಬಿಡುತೆ (ನಾ). ಬಿಡುಗಡೆ.

ಬಿಡುವು (ನಾ). ೧. ಅವಕಾಶ ; ಎಡೆ. ೨. ವಿರಾಮ ; ವಿಶ್ರಾಂತಿ. ೩. ಆವರಣ ; ಬಯಲು.

ಬಿಡುಹು = ಬಿಡುವು.

ಬಿಡೆ ೧. = ಭಿಡೆ. ೨. ಹಣ್ಣಿನ ಒಂದು ಭಾಗ ; ತೊಳೆ. (ಅ). ೩. ವಿಶೇಷವಾಗಿ; ಅತಿಯಾಗಿ.

ಬಿಡೆಯ = ಭಿಡೆ.

ಬಿಡೌಜ (ನಾ). ಇಂದ್ರ ; ದೇವೇಂದ್ರ.

ಬಿಣ್ (ಗು). ೧. ಗಡುತರವಾದ ; ದಷ್ಟಪುಷ್ಟವಾದ. ೨. ಭಾರವಾದ. ೩. ದೊಡ್ಡದಾದ. ~ಕೆ(ಗೆ)ಚ್ಚಲ್ = ದಷ್ಟಪುಷ್ಟವಾದ ಕೆಚ್ಚಲು. ~ಗೊನೆ=ಗಡುತರವಾದ ಗೊನೆ. ~ನುಡಿ = ಕೆಚ್ಚಿನ ನುಡಿ. ~ಪೊಱೆ(ರೆ) = ಭಾರವಾದ ಹೊರೆ.

ಬಿಣ್ಣಿತು (ನಾ). ೧. ಗಡುತರವಾದುದು. ೨. ಭಾರವಾದುದು. ೩. ದೊಡ್ಡದು.

ಬಿಣ್ಪು (ನಾ). ೧. ಭಾರ ; ತೂಕ ; ಒಜ್ಜೆ. ೨. ಹಿರಿಮೆ ; ಅತಿಶಯ ; ಆಧಿಕ್ಯ. ೩. ವ್ಯಾಕರಣದಲ್ಲಿ ಎಳೆದು ಉಚ್ಚರಿಸುವ ಅಕ್ಷರ ; ದೀರ್ಘಾಕ್ಷರ. ~ಏಱು(ರು) = ಭಾರವಾಗು ; ತೂಕವಾಗು.

ಬಿತ್ತ (ನಾ). ಬೀಜ ; ಬಿತ್ತು.

ಬಿತ್ತನೆ (ನಾ). ಬೀಜವನ್ನು ಬಿತ್ತುವಿಕೆ ; ಬೀಜಾವಾಪ.

ಬಿತ್ತರ (ನಾ). ವಿಸ್ತಾರ ; ಹರವು. ~ಇಸು = ೧. ಹರಡು ; ಹಬ್ಬು. ೨. ಹೇಳು ; ನಿರೂಪಿಸು. ~(ಂ)ಗೆಯ್ = ಹರಡು ; ವಿಸ್ತರಿಸು.

ಬಿತ್ತರಿ (ನಾ). ಮೋಸಗಾತಿ ; ಸೋಗಲಾಡಿ.

ಬಿತ್ತರಿಗೆ (ನಾ). ೧. ಆಸನ ; ಪೀಠ. ೨. ಜಗಲಿ ; ವೇದಿಕೆ.

ಬಿತ್ತಿ (ನಾ). ಭಿತ್ತಿ ; ಗೋಡೆ.

ಬಿತ್ತಿಗ = ಬಿತ್ತೆಗ.

ಬಿತ್ತು = ಬಿಟ್ಟು.

ಬಿತ್ತೆ (ನಾ). ಜ್ಞಾನ ; ವಿದ್ವತ್ತು.

ಬಿತ್ತೆಗ (ನಾ). ಪಂಡಿತ; ಜ್ಞಾನಿ. ~ಪೆ(ಪೆ)ಣ್ = ಪಂಡಿತೆ ; ಪ್ರೌಢೆ.

ಬಿದಾಗಿ (ನಾ). ಬೀಳ್ಕೊಡುವಾಗ ಕೊಡುವ ಉಡುಗೊರೆ, –ಕಾಣಿಕೆ.

ಬಿದಿ (ನಾ). ೧. ಬ್ರಹ್ಮ. ೨. ವಿಧಿ; ಅದೃಷ್ಟ. ~ಆ(ಯಾ)ಟ = ದೈವದ ಆಟ; ವಿಧಿ ನಿಯಮ.

ಬಿದಿಗೆ (ನಾ). ಪಕ್ಷದ ಎರಡನೆಯ ದಿನ; ದ್ವಿತೀಯೆ. ~ಚಂದ್ರ = ಬಿದಿಗೆವೆಜ಼್. ~ಪೆ(ವೆ)ಜ಼್(ದೆ) = ಪಕ್ಷದ ಎರಡನೆಯ ದಿನದಲ್ಲಿ ಕಂಡುಬರುವ ಚಂದ್ರ.

ಬಿದಿರ್(ರು) (ಕ್ರಿ). ೧. ಚೆಲ್ಲಾಪಿಲ್ಲಿಮಾಡು; ಚೆದರಿಸು. ೨. ವಿಸ್ತರಿಸು; ಹರಡು. ೩. ಕೊಡಹು; ಜಾಡಿಸು. ೪. ಎಸೆ; ಬಿಸುಡು. ೫. ಬಾಗು; ಮಣಿ. ೬. ಹೊಯ್ದಾಡು. ೭. = ಬಿದುರ್. (ನಾ). ೮. ಗಳು; ಬೊಂಬು. ~ಅಕ್ಕಿ = ಬಿದಿರಿನ ಬೀಜ. ~ತಟ್ಟೆ = ಬಿದಿರಿನಿಂದ ಮಾಡಿದ ತಡಿಕೆ. ~ಮೆಳೆ = ಬಿದಿರಿನ ಪೊದೆ.

ಬಿದಿರ್ಚು (ಕ್ರಿ). ೧. ಹರಡು; ವ್ಯಾಪಿಸು. ೨. = ಬಿದುರ್.

ಬಿದು (ನಾ). ೧. ಆನೆಯ ಗಂಡಸ್ಥಳ; ಕುಂಭಸ್ಥಳ. ೨. ಚಂದ್ರ; ತಿಂಗಳು. ೩. ವಿಷ್ಣು. ~ಕ(ಗ)ಲ್ = ಚಂದ್ರಕಾಂತಶಿಲೆ.

ಬಿದುರ್ (ಕ್ರಿ). ಬಿಚ್ಚು; ಸಡಿಲಿಸು.

ಬಿದುರು = ಬಿದಿರ್.

ಬಿದ್ದ (ನಾ). ೧. ಆಕೃತಿ; ಆಕಾರ; ರೂಪ. (ಗು). ೨. ರಂಧ್ರಮಾಡಿದ; ತೂತು ಕೊರೆದ. ~(ಂ)ಪ(ಬ)ರಿ = ಒಳಹೊಗು; ಪ್ರವೇಶಿಸು. ~(ಂ)ಪೊ(ಬೊ)ೞಗು = ಬಿದ್ದಂಬರಿ. ~(ಂ)ಬೀೞ್(ಳ್) = ಬಿದ್ದಂಬರಿ.

ಬಿದ್ದಣ (ನಾ). ಔತಣ. ~(ಂ)ಪೆ(ಬೆ)ೞು = ಔತಣ ನೀಡು.

ಬಿದ್ದಿನ ೧. = ಬಿದ್ದಣ. ೨. = ಬಿರ್ದಿನ. ೩. ಬೀಗ; ಸಂಬಂಧಿ.

ಬಿದ್ದು = ಬಿರ್ದು.

ಬಿನದ (ನಾ). ೧. ವಿನೋದ; ತಮಾಷೆ. ೨. ಸಂತೋಷ. ~ಇಸು = ಬಿನದಗೊಳ್. ~ಕೊ(ಗೊ)ಳ್ = ಸಂತೋಷವನ್ನು ಪಡೆ; ಆನಂದಿಸು. ~ಪ(ವ)ಡಿಸು = ಹರುಷಗೊಳಿಸು; ಸಂತೋಷಪಡಿಸು.

ಬಿನದೆ (ನಾ). ಹಾಸ್ಯಪ್ರಿಯೆ; ವಿನೋದಪ್ರಿಯೆ.

ಬಿನಯ (ನಾ). ವಿನಯ; ನಮ್ರತೆ.

ಬಿನು(ಂ)ಗು (ನಾ). ೧. ಹೀನವ್ಯಕ್ತಿ; ಕ್ಷುದ್ರ. (ಗು). ೨. ಅಲ್ಪವಾದ; ಕ್ಷುದ್ರವಾದ. ~ಆಟ = ನೀಚತನ. ~ನುಡಿ = ಕೀಳು ಮಾತು. ~ಭಾವ = ಕ್ಷುದ್ರಭಾವನೆ.

ಬಿನ್ನ = ಬಿನ್ನಪ. ~ಇ(ಯಿ)ಸು = ಬಿನ್ನವಿಸು. ~ಪ(ವ)ತ್ರಲೆ(ಳೆ) = ಮಾನಪತ್ರ; ವಿಜ್ಞಾಪನಪತ್ರಿಕೆ.

ಬಿನ್ನಗೆ (ಅ). ಮೌನವಾಗಿ; ನೀರವವಾಗಿ; ಸುಮ್ಮನೆ. ~ಆಗು = ಮೌನತಾಳು.

ಬಿನ್ನಣ (ನಾ). ೧. ಪಾಂಡಿತ್ಯ; ವಿದ್ವತ್ತು; ವಿಜ್ಞಾನ. ೨. ಒನಪು; ಒಯ್ಯಾರ. ~ಇಗ = ಜಾಣ; ಪಂಡಿತ. ~ಇಸು=ಬಿನ್ನಣಂದೋಱು. ~(ಂ)ತೊ(ದೊ)ೞು(ರ್) = ನೈಪುಣ್ಯವನ್ನು ವ್ಯಕ್ತಪಡಿಸು. ~(ಂ)ಪ(ಬ)ಡೆ=ಕೌಶಲ್ಯವನ್ನು ಹೊಂದು.

ಬಿನ್ನಣಗಾರ್ತಿ (ನಾ). ಜಾಣೆ; ಚದುರೆ.

ಬಿನ್ನಣಿ (ನಾ). ವಿದ್ವಾಂಸ; ಜಾಣ; ಪಂಡಿತ.

ಬಿನ್ನನೆ = ಬಿನ್ನಗೆ.

ಬಿನ್ನಪ (ನಾ). ಮನವಿ; ವಿನಂತಿ; ವಿಜ್ಞಾಪನೆ. ~(ಂ)ಗೆಯ್ = ಬಿನ್ನವಿಸು.

ಬಿನ್ನವಿಸು (ಕ್ರಿ). ಅರಿಕೆ ಮಾಡಿಕೊಳ್ಳು; ಪ್ರಾರ್ಥಿಸು.

ಬಿನ್ನಹ = ಬಿನ್ನಪ. ~ಮಾಡು = ಬಿನ್ನವಿಸು.

ಬಿನ್ನಾಣ ೧. = ಬಿನ್ನಣ. ೨. ಪ್ರತ್ಯಕ್ಷ. ~ಗಿತ್ತಿ =೧. ಒಯ್ಯಾರಿ; ಒನಪುಗಾತಿ. ೨.= ಬಿನ್ನಣಗಾರ್ತಿ.

ಬಿನ್ನಾಣಿ ೧. = ಬಿನ್ನಾಣಗಿತ್ತಿ. ೨. = ಬಿನ್ನಣಿ.
ಬಿನ್ನೈಸು = ಬಿನ್ನವಿಸು.
ಬಿಪ್ಪಂಡ (ನಾ). ೧. ಹಕ್ಕಿಗಳ ಧ್ವನಿ. ೨. ಬೆದರಿಕೆ; ಜಬರ್ು. ~ಇಸು = ೧. ಗದರಿಸು ; ಬೆದರಿಸು. ೨. ನಿಂದಿಸು ; ಜರೆ.
ಬಿಬ್ಬಿ = ಬೀಬಿ.
ಬಿಬ್ಬೋಕ (ನಾ). ೧. ಹುಸಿಮುನಿಸು ; ಪ್ರಣಯಕೋಪ. ೨. ಅನಾದರ ; ಔದಾಸೀನ್ಯ.
ಬಿಮನ (ನಾ). ವಿಮಾನ.
ಬಿಮ್ಮಗೆ (ಅ). ೧. ಬಿಗಿಯಾಗಿ ; ದೃಢವಾಗಿ. ೨. ಗಂಭೀರವಾಗಿ. ೩. ಸೊಕ್ಕಿನಿಂದ ಕೂಡಿ.
ಬಿಮ್ಮನಸೆ (ನಾ). ಗರ್ಭಿಣಿ.
ಬಿಮ್ಮನೆ = ಬಿಮ್ಮಗೆ.
ಬಿಮ್ಮು (ನಾ). ೧. ದೊಡ್ಡತನ; ಘನತೆ; ಹಿರಿಮೆ. ೨. ಗರ್ವ ; ಅಹಂಕಾರ. ~ಅಳಿ = ಅಹಂಕಾರ ಕುಂದು; ಗರ್ವನಾಶವಾಗು. ~ಕೆ(ಗೆ)ಡು = ಬಿಮ್ಮಳಿ.
ಬಿಯ (ನಾ). ೧. ಖರ್ಚು ; ವೆಚ್ಚ ; ವ್ಯಯ. ೨. ದಾನ. ೩. ಗಣಿತದಲ್ಲಿ ಭಾಗಿಸಿ ಉಳಿದ ಶೇಷ. ~ಕಾಱ(ರ) = ದುಂದುಗಾರ.
ಬಿಯಗ = ಬೀಯಗ.
ಬಿಯದ (ನಾ). ಬೇಡ; ವ್ಯಾಧ. ~ಪೆ(ವೆ)ಣ್ = ಬೇಡಿತಿ ; ಬೇಟೆಗಾತಿ ; ಶಬರಿ.
ಬಿಯದಿ (ನಾ). ಕಾಯಿಲೆ ; ಬೇನೆ; ವ್ಯಾಧಿ.
ಬಿಯಸಂಗ (ನಾ). ವ್ಯಾಸಂಗ ; ಓದು.
ಬಿಯಳ (ನಾ). ಹಾವು; ಸರ್ಪ ; ವ್ಯಾಳ. ~ಕಟಕ = ಹಾವುಗಳನ್ನು ಆಭರಣವನ್ನಾಗಿ ಉಳ್ಳವನು ; ಶಿವ.
ಬಿಯ್ಯಗ = ಬೀಯಗ.
ಬಿರಟೆ = ಬಿರಡೆ.
ಬಿರಡೆ (ನಾ). ೧. ಸೀಸೆ ಮುಂತಾದುವುಗಳ ಮುಚ್ಚಳ ; ಬೂಜು. ೨. ಕೀಲು ; ಬೆಣೆ. ೩. (ಅಂಗಿಯ) ಗುಂಡಿ. ೪. ವಾದ್ಯಗಳನ್ನು ಶ್ರುತಿ ಮಾಡುವಾಗ ಬಿಗಿಗೊಳಿಸುವ ಸಾಧನ. ೫. ಒಂದು ಜಾತಿಯ ಔಷಧಿಯ ಗಿಡ.
ಬಿರಯ (ನಾ). ಅಗಲಿಕೆ ; ವಿರಹ. ~ಇಸು = ಅಗಲುವಂತೆ ಮಾಡು ; ವಿರಹತಾಪ ಕ್ಕೊಳಗು ಮಾಡು.
ಬಿರಯಿ (ನಾ). ವಿರಹಿ.
ಬಿರಹ = ಬಿರಯ.
ಬಿರಾಡ (ನಾ). ಸುಂಕ ; ತೆರಿಗೆ.
ಬಿರಿ (ಕ್ರಿ). ೧. ಒಡೆ ; ಸೀಳು ; ಬಿರುಕುಂಟಾಗು. ೨. ಅರಳು ; ಬಿಚ್ಚು. (ನಾ). ೩. = ಬಿಱಿ. ೪. ಬಿರುಕು; ಸೀಳು. ೫. ವಾಹನದ ವೇಗವನ್ನು ತಡೆಯುವ ಸಾಧನ; ತಡೆ; ಬ್ರೇಕು. ೬. ಬಿಗಿಗೊಳಿಸುವ ಸಾಧನ. ~ಮುಗುಳ್(ಳು) = ಅರಳಿದ ಮೊಗ್ಗು. ~ಹಾಕು = ತಡೆಯೊಡ್ಡು ; ಅಡ್ಡಿಮಾಡು.
ಬಿರಿಯಾನಿ (ನಾ). ಮಾಂಸಮಿಶ್ರಿತವಾದ ಒಂದು ಬಗೆಯ ಕಲಸನ್ನ.
ಬಿರು = ಬಿಱು. ~ಕ(ಗ)ಣ್ಣು = ಉಗ್ರವಾದ ಕಣ್ಣು. ~ಕೂ(ಗೂ)ದಲು = ಒರಟು ಕೂದಲು ; ಬಿರುಸಾದ ಕೂದಲು.
ಬಿರುಕು (ನಾ). ಒಡಕು ; ಸಂದು ; ಸೀಳು.
ಬಿರುಡೆ = ಬಿರಡೆ.
ಬಿರುದು (ನಾ). ಗೌರವಸೂಚಕವಾಗಿ ಕೊಡುವ ಹೆಸರು, -ಪದವಿ.
ಬಿರುಸು (ನಾ). ೧. ಒಂದು ಬಗೆಯ ಸಿಡಿಮದ್ದು. ೨. = ಬಿಱುಸು. ~ಆಗು = ೧. ಒರಟಾಗು. ೨. ಗಟ್ಟಿಯಾಗು.
ಬಿಱಿ(ರಿ) (ನಾ). ೧. ಗಟ್ಟಿಯಾದುದು ; ದೃಢವಾದುದು. ೨. ಬಿಗುಹು ; ಬಿಗಿತ.
ಬಿಱಿ(ರಿ)ಸು = ಬಿಱುಸು.
ಬಿಱು(ರು) (ಕ್ರಿ). ೧. ದಿಗ್ಭ್ರಮೆಗೊಳ್ಳು ; ಕಂಗೆಡು. (ನಾ). ೨. ಗಟ್ಟಿಯಾದುದು ;

ಒರಟಾದುದು; ಬಿರುಸಾದುದು. ೩. ದೊಡ್ಡದು. ೪. ಭಯ; ಅಂಜಿಕೆ. ~ಕು(ಗು)ಟ್ಟು = ಬಿರುಸಿನಿಂದ ನುಗ್ಗು; ರಭಸದಿಂದ ನುಗ್ಗು. ~ಗಾಳಿ=ಅತಿ ಬಿರುಸಿನಿಂದ ಬೀಸುವ ಗಾಳಿ; ಚಂಡಮಾರುತ. ~ದನಿ = ಒರಟುಧ್ವನಿ; ಗೊಗ್ಗರು ಧ್ವನಿ. ~ನಗೆ = ಕಠೋರವಾದ ನಗೆ. ~ನುಡಿ = ಬಿರುಸು ಮಾತು; ಒರಟಾದ ಮಾತು. ~ನೋಟ=ಮುರುಗುಟ್ಟಿಕೊಂಡು ನೋಡುವಿಕೆ. ~ಪೊ(ವೊ)ಯ್ಲು =ಕಠೋರವಾದ ಹೊಡೆತ. ~ಬೆದಱು(ರು) = ಬಹುವಾಗಿ ಹೆದರು, -ಅಂಜು. ~ಬೇಗೆ = ಉಗ್ರವಾದ ತಾಪ, -ಬಿಸಿ. ~ಮು(ಮ)ಳೆ = ರಭಸದಿಂದ ಸುರಿಯುವ ಮಳೆ.

ಬಿಱು(ರು)ಬು (ನಾ). ೧. ಬಿರುಸು; ಕಾಠಿನ್ಯ. ೨. ಆವೇಶ; ಉಗ್ರತೆ. ೩. ಹಿಂಸೆ; ಬಲಾತ್ಕಾರ.

ಬಿಱು(ರು)ಸು (ನಾ). ೧. ಗಟ್ಟಿಯಾದುದು. ೨. ಒರಟಾದುದು. ೩. ರಭಸವುಳ್ಳುದು.

ಬಿರ್ಚು (ಕ್ರಿ). ೧. ಬಿಡಿಸು; ಬಿಚ್ಚು. ೨. ಬಿಚ್ಚಿಹೋಗು; ಕಳಚಿಕೊಳ್ಳು.

ಬಿರ್ದಿ (ನಾ). ವೃದ್ಧಿ; ಮುದುಕಿ.

ಬಿರ್ದಿನ (ನಾ). ಔತಣಕ್ಕೆ ಪಾತ್ರನಾದವನು; ಅತಿಥಿ; ಅಭ್ಯಾಗತ.

ಬಿರ್ದು (ನಾ). ಔತಣ; ಭೋಜನ. ~ಇಕ್ಕು = ಔತಣ ನೀಡು. ~ಕೊ(ಗೊ)ಳ್=ಆತಿಥ್ಯವನ್ನು ಪಡೆ.

ಬಿಲ್(ಲು) (ಕ್ರಿ). ೧. ಮಾರು; ವಿಕ್ರಯಿಸು. ೨. ಕೊಂಡುಕೊಳ್ಳು. (ನಾ). ೩. = ಬಿಲ್ಲು. ೪. ಒಂದು ಬಿಲ್ಲಿನ ಪ್ರಮಾಣ. ~ಅಂತರ = ಒಂದು ಬಿಲ್ಲಿನ ಪ್ರಮಾಣ. ~ಅಣಿ =ಬಿಲ್ಲಾಳುಗಳ ಸೇನೆ,-ಪಡೆ. ~ಆಳ್(ಳು) = ಬಿಲ್ಗಾಱ. ~ಎಱೆ(ರೆ)ಯ = ೧. ಧನುರ್ವಿದ್ಯೆಯಲ್ಲಿ ಪ್ರವೀಣನಾದವನು. ೨. ದ್ರೋಣ. ~ಒಜ = ಬಿಲ್ಲೊಜೆಯ. ~ಕೊ(ಗೊ)ಳ್ = ಬಿಲ್ಲನ್ನು ಹಿಡಿ, -ತೆಗೆದುಕೊಳ್ಳು. ~ಗಾಱ(ರ) = ಬಿಲ್ಲು, ಬಾಣಗಳನ್ನು ಧರಿಸಿರುವವನು; ಧನುರ್ಧರ. ~ಜಾಣ = ಬಿಲ್ಲು ವಿದ್ಯೆಯಲ್ಲಿ ಪ್ರವೀಣನಾದವನು, -ನಿಪುಣನಾದವನು. ~ತಿ(ದಿ)ರುವು = ಹೆದೆ; ಮೌರ್ವಿ. ~ಬಲ್ಮೆ = ಧನುರ್ವಿದ್ಯೆಯಲ್ಲಿ ಜಾಣ್ಮೆ, -ಪ್ರೌಢಿಮೆ. ~ಬಿನ್ನಣ = ಬಿಲ್ಬಲ್ಮೆ. ~ವಿದ್ಯೆ = ಧನುರ್ವಿದ್ಯೆ.

ಬಿಲ್‌ಕುಲ್ (ಅ). ೧. ಸಂಪೂರ್ಣವಾಗಿ; ಪೂರ್ತಿಯಾಗಿ. ೨. ಖಡಾಖಂಡಿತವಾಗಿ.

ಬಿಲ (ನಾ). ಡೊಗರು; ಹೋರು. ~ಕನ್ನೆ = ನಾಗಕನ್ನಿಕೆ. ~ಪುರುಷ = ನಾಗಲೋಕದವನು.

ಬಿಲವಾರ (ನಾ). ಚಿನ್ನದ ಬಳೆ.

ಬಿಲಿ (ಕ್ರಿ). ೧. ಮಾರು; ವಿಕ್ರಯಿಸು. ೨. ಕೊಂಡುಕೊಳ್ಳು. (ನಾ). ೩. ಒಂದು ಜಾತಿಯ ಮರ. ೪. ಬೆಲೆ; ಧಾರಣೆ.

ಬಿಲೇಶಯ (ನಾ). ಬಿಲದಲ್ಲಿ ವಾಸಿಸುವ ಪ್ರಾಣಿ; ಸರ್ಪ, ಇಲಿ ಮುಂತಾದುವು.

ಬಿಲ್ಲು (ನಾ). ಧನುಸ್ಸು; ಚಾಪ.

ಬಿಲ್ಲೆ (ನಾ). ೧. ಚಪ್ಪಟೆಯಾದ ದುಂಡು ವಸ್ತು. ೨. ಲೋಹದ ಗುಂಡಾದ ವಸ್ತು. ೩. ಒಂದು ನಾಣ್ಯ; ಮೂರುಕಾಸು. ೪. ಲಾಂಛನ; ಗುರುತು.

ಬಿಲ್ವ (ನಾ). ಒಂದು ಜಾತಿಯ ಮರ; ಬಿಲ್ಲವತ್ತ. ~ಪತ್ರೆ = ಬಿಲ್ಲವತ್ತದ ಎಲೆ.

ಬಿಲ್ವಾರ = ಬಿಲವಾರ.

ಬಿಸ (ನಾ). ೧. ವಿಷ; ನಂಜು. ೨. ನೀರು. ೩. ಕಮಲದ ದಂಟು, -ದೇಟು. ~ಕಂಠ = ೧. ವಿಷಕಂಠ; ಶಿವ. ೨. ಬಲಾಕ; ಬೆಳ್ಳಕ್ಕಿ. ~ನಾಳ = ಕಮಲದ ದೇಟು. ~ಪ್ರಸೂನ = ತಾವರೆ; ಕಮಲ.

ಬಿಸಗೊರಲ (ನಾ). ವಿಷಕಂಠ; ಶಿವ.

ಬಿಸಜ (ನಾ). ನೀರಿನಲ್ಲಿ ಹುಟ್ಟಿದುದು; ಕಮಲ. ~ಅರಿ = ಕಮಲದ ಶತ್ರು; ಚಂದ್ರ. ~ಕರ್ಣಿಕೆ = ಕಮಲದೊಳಗಿನ ಬೀಜಕೋಶ. ~ಸಖ = ಕಮಲದ ಮಿತ್ರ; ಸೂರ್ಯ.

ಬಿಸಟೆಂಬರಿ (ಕ್ರಿ). ಸ್ವೇಚ್ಛೆಯಾಗಿ ವರ್ತಿಸು; ಬೀದಿವರಿ.

ಬಿಸದಳ (ನಾ). ಆಶ್ಚರ್ಯ; ವಿಸ್ಮಯ.

ಬಿಸರುಹ = ಬಿಸಜ. ~ಆಸನ = ಕಮಲವನ್ನು ಪೀಠವನ್ನಾಗಿ ಉಳ್ಳವನು; ಬ್ರಹ್ಮ. ~ಬಾಂಧವ = ಸೂರ್ಯ; ನೇಸರು. ~ವೈರಿ = ಚಂದ್ರ; ಶಶಿ.

ಬಿಸವಂದ = ಬಿಸದಳ.

ಬಿಸಸನ (ನಾ). ೧. ಯುದ್ಧ. ೨. ಹೊಡೆಯುವಿಕೆ. ೩. ನೋವು; ಬಾಧೆ.

ಬಿಸಾಕು = ಬಿಸುಡು.

ಬಿಸಾಡು = ಬಿಸುಡು.

ಬಿಸಿ ೧. = ಬಿಸುಪುರ್. (ಗು). ೨. ಬೆಚ್ಚಗಾದ. ೩. ಹೊಸದಾದ; ನೂತನ. ~ಆ(ಯಾ)ಗು = ೧. ಉಷ್ಣವಾಗು; ಕಾಯು. ೨. ಉದ್ರಿಕ್ತನಾಗು; ಸಿಟ್ಟುಗೊಳ್ಳು. ~ಉ(ಯು)ಸಿರು = ನಿಟ್ಟುಸಿರು. ~ಕ(ಗ)ದಿರ್ = ಶಾಖದಿಂದ ಕೂಡಿದ ಕಿರಣ. ~ಕು(ಗು)ಂದು = ಶಾಖ ಕಡಮೆಯಾಗು; ಆರು; ತಂಪಾಗು. ~ತಾಗು = ೧. ಕಾವು ಸೋಕು. ೨. ಕಷ್ಟಾನುಭವ ಬರು. ~ನೀರ್(ರು) = ಬೆಚ್ಚಗಾದ ನೀರು; ಕಾಯಿಸಿದ ನೀರು. ~ಮಾಡು = ಕಾಯಿಸು. ~ರಕ್ತ = ೧. ಶಾಖದಿಂದ ಕೂಡಿದ ರಕ್ತ. ೨. ಉತ್ಸಾಹ; ಹುರುಪು. ~ಸುದ್ದಿ = ತಾಜಾಸುದ್ದಿ; ಹೊಸಸುದ್ದಿ.

ಬಿಸಿಗಣ್ಣ (ನಾ). ಉರಿಯುವ ಕಣ್ಣುಳ್ಳವನು; ಶಿವ.

ಬಿಸಿಗದಿರ (ನಾ). ಉಷ್ಣವಾದ ಕಿರಣಗಳುಳ್ಳವನು; ಸೂರ್ಯ.

ಬಿಸಿನಿ (ನಾ). ತಾವರೆ; ಕಮಲ.

ಬಿಸಿಲ್(ಲು) (ನಾ). ಸೂರ್ಯನ ಕಾವು, -ಉಷ್ಣತೆ. ~ಅಡಿಗೆ = ಮದುವೆಯಲ್ಲಿ ಬೀಗರು ಬಂದಾಗ ಏರ್ಪಡಿಸುವ ಮೊದಲ ಊಟ. ~ಕು(ಗು)ದುರೆ = ಮರೀಚಿಕೆ; ಮೃಗಜಲ. ~ತೊ(ದೊ)ರೆ(ರೆ) = ಬಿಸಿಲ್ಗುದುರೆ. ~ಪ(ವ)ಕ್ಕಿ = ಚಕ್ರವಾಕ; ಎಡೆವಕ್ಕಿ. ~ಮಚ್ಚು = ಬಿಸಿಲು ಬೀಳುವಂತೆ ಇರುವ ಛಾವಣಿ, -ಮಾಳಿಗೆಯ ಮೇಲ್ಭಾಗ. ~ಮ(ವ)ಳೆ = ಬಿಸಿಲಿದ್ದಾಗ ಬರುವ ಮಳೆ. ~ಮಾಳಿಗೆ = ಬಿಸಿಲು ಮಚ್ಚು.

ಬಿಸು (ಕ್ರಿ). ೧. ಹೊಂದಿಸು; ಬೆಸುಗೆ ಹಾಕು; ಬೆಸೆ. (ನಾ). ೨. ಬೆಸುಗೆ; ಹೊಂದಿಕೆ. (ಗು). ೩. ತೀಕ್ಷ್ಣವಾದ; ಉಷ್ಣವಾದ. ~ಕ(ಗ)ಣ್ = ಉರಿಗಣ್ಣು. ~ಕ(ಗ)ದಿರ್ = ಬಿಸಿಗದಿರ್. ~ಕ(ಗ)ಲ್ = ಸೂರ್ಯಕಾಂತಶಿಲೆ. ~ಕು(ಗು)ದಿ = ೧. ಚೆನ್ನಾಗಿ ಕುದಿಯುವಿಕೆ. ೨. ತಳಮಳ; ಬೇಗುದಿ. ~ಗಾಳಿ = ಉಷ್ಣದಿಂದ ಕೂಡಿದ ಗಾಳಿ. ~ನೆತ್ತರ್ = ಬಿಸಿಯಾದ ರಕ್ತ. ~ಸುಯ್ = ೧. ಬಿಸಿಯುಸಿರು ಬಿಡು; ನಿಟ್ಟುಸಿರು ಬಿಡು. ೨. ಬಿಸಿಯಾದ ಉಸಿರು; ನಿಟ್ಟುಸಿರು.

ಬಿಸುಗಣ್ಣ = ಬಿಸಿಗಣ್ಣ.

ಬಿಸುಗದಿರ = ಬಿಸಿಗದಿರ.

ಬಿಸುಗೆ (ನಾ). ೧. ಬೆಸೆಯುವಿಕೆ; ಸೇರಿಸುವಿಕೆ; ಬೆಸುಗೆ. ೨. ಪಗಡೆ ಮೊದಲಾದ ಆಟಕ್ಕೆ ಉಪಯೋಗಿಸುವ ಕಾಯಿ. ೩. ಅಂಬಾರಿ.

ಬಿಸುಡು (ಕ್ರಿ). ಎಸೆ; ಒಗೆ; ಬಿಸಾಡು.

ಬಿಸುಪು = ಬಿಸುಪುರ್. ~ಏಱು(ರು) = ಬಿಸಿ ಹೆಚ್ಚಾಗು; ಕಾವು ಅಧಿಕವಾಗು.

ಬಿಸುಪುರ್ (ನಾ). ತಾಪ; ಕಾವು; ಉಷ್ಣತೆ.

ಬಿಸುವಳಿ (ನಾ). ಒಟ್ಟಾಗುವಿಕೆ ; ಸೇರುವಿಕೆ.
ಬಿಳಿ = ಬಿಳಿದು.
ಬಿಳಿಗಾರ (ನಾ). ಖನಿಜ ಲವಣ ; ಬೆಳುಗಾರ ; ಟಂಕಣ.
ಬಿಳಿಚು (ಕ್ರಿ). ಬೆಳ್ಳಗಾಗು ; ಕಾಂತಿ ಹೀನವಾಗು ; ನಿಸ್ತೇಜವಾಗು.
ಬಿಳಿದು (ನಾ). ಬಿಳಿಯ ಬಣ್ಣ ; ಬಿಳುಪು.
ಬಿಳಿಪು = ಬಿಳಿದು. ~ಏಱು(ರು) = ಬಿಳಿಚಿ ಕೊಳ್ಳು ; ಬಿಳಿಯ ಬಣ್ಣಕ್ಕೆ ತಿರುಗು.
ಬಿಳುಪು ೧. = ಬಿಳಿದು. ೨. ತೊನ್ನುರೋಗ.
ಬಿೞ(ಳ)ಲ್(ಲು) (ನಾ). ತೂಗಿಬಿದ್ದ ಆಲ ಮುಂತಾದ ಮರಗಳ ಜಟೆ.
ಬಿೞಿ(ಳಿ)ಲ್ = ಬಿಬಿಲ್.
ಬಿೞ್ಕೆ(ಳ್ಕೆ) (ನಾ). ಒಂದು ಜಾತಿಯ ಮರ ಮತ್ತು ಅದರ ಹಣ್ಣು ; ಬಿಕ್ಕೆ.
ಬಿೞ್ತು(ಳ್ತು) (ಕ್ರಿ). ೧. ಬಿತ್ತು ; ಬೀಜ ಹಾಕು. (ನಾ). ೨. ಬೀಜ ; ಬಿತ್ತ.
ಬೀ (ಕ್ರಿ). ೧. ನಷ್ಟವಾಗು ; ವ್ಯಯವಾಗು ; ಫಲವಿಲ್ಲವಾಗು. ೨. ನಾಶವಾಗು; ಸಾಯು. ೩. ಕುಂದು ; ಕುಗ್ಗು ; ಬಾಡು.
ಬೀಕಲ್(ಲು) (ನಾ). ೧. ಸುರುಟಿದುದು ; ಬಾಡಿದುದು. ೨. ಆರಿಸಿ ಉಳಿದುದು.
ಬೀಗ = ಬೀಯಗ. ~ಇತಿ = ಮದುವೆಯಿಂದ ಸಂಬಂಧ ಬೆಳೆಸಿದವಳು. ~ತನ = ವರನ ಮತ್ತು ವಧುವಿನ ಮನೆಯವರಿಗೆ ಮದುವೆ ಯಿಂದ ಉಂಟಾಗುವ ಪರಸ್ಪರ ಸಂಬಂಧ. ~ಮುದ್ರೆ=ಬೀಗವನ್ನು ಹಾಕಿ ಅರಗಿನಿಂದ ಮುದ್ರೆ ಹಾಕುವುದು.
ಬೀಗು (ಕ್ರಿ). ೧. ಊದು ; ಉಬ್ಬು ; ದೊಡ್ಡದಾಗು. ೨. ಗರ್ವಿಸು; ಹೆಮ್ಮೆಪಡು. ೩. ಸಂತೋಷಪಡು ; ಹರ್ಷಿಸು.
ಬೀಜ (ನಾ). ೧. ಧಾನ್ಯದ ಕಾಳು ; ಬಿತ್ತ. ೨. ಉತ್ಪತ್ತಿಸ್ಥಾನ; ಮೂಲಸ್ಥಾನ. ೩. ಕಾರಣ. ೪. ಅಂಡ ; ವೃಷಣ. ೫. ವೀರ್ಯ; ರೇತಸ್ಸು. ೬. = ಬೀಜಗಣಿತ. ~ಅಕ್ಷರ = ಮಂತ್ರದ ಮೂಲಾಕ್ಷರ. ~ಆವಾಪ = ಬೀಜವನ್ನು ಬಿತ್ತುವಿಕೆ. ~ಕೋಶ = ಹೂವಿನಲ್ಲಿ ಬೀಜಗಳಿರುವ ಭಾಗ. ~ಗಣಿತ = ಸಂಖ್ಯಾವಿಚಾರವನ್ನು ಅಕ್ಷರ ಸಂಖ್ಯೆಯ ಮೂಲಕ ಪ್ರತಿಪಾದಿಸುವ ಗಣಿತಶಾಸ್ತ್ರ. ~ಮಂತ್ರ = ೧. ಮುಖ್ಯವಾದ ಮಂತ್ರ. ೨. ಮುಖ್ಯವಾದ ಉಪಾಯ.
ಬೀಜಪೂರ (ನಾ). ಒಂದು ಜಾತಿಯ ಮರ ಮತ್ತು ಆದರ ಹಣ್ಣು ; ದೊಡ್ಡೀಳೆ.
ಬೀಜವರಿ (ನಾ). ಒಂದು ನಿರ್ದಿಷ್ಟ ಪ್ರಮಾಣದ ಬೀಜವನ್ನು ಬಿತ್ತಬಹುದಾದಷ್ಟು ಭೂಮಿ.
ಬೀಟೆ (ನಾ). ೧. ಒಂದು ಜಾತಿಯ ಕರಿಯ ಮರ. ೨. = ಬೀಡೆ.
ಬೀಡ (ನಾ). ಸಿದ್ಧಪಡಿಸಿದ ವೀಳ್ಯ.
ಬೀಡಾರ = ಬಿಡಾರ. ~ಮಾಡು = ಬೀಡು ಬಿಡು ; ತಂಗು.
ಬೀಡಿ (ನಾ). ಒಂದು ಬಗೆಯ ಸೇದುವ ಬತ್ತಿ ; ಒಂದು ಬಗೆಯ ಚುಟ್ಟ.
ಬೀಡು (ನಾ). ೧. ಬಾಣವನ್ನು ಬಿಡುವುದು ; ಬಾಣಪ್ರಯೋಗ. ೨. ತಂಗುವ ಸ್ಥಳ ; ಪಾಳೆಯ, ಮನೆ ಮುಂತಾದುವು. ೩. ಪರಿವಾರ ; ಪರಿಜನ. ೪. ಒಂದು ಬಗೆಯ ಕಬ್ಬಿಣ. ೫. ಫಲಬಿಡುವಿಕೆಯಲ್ಲಿ ಒಂದು ಆವೃತ್ತಿ. ೬. ಬಂಜರು ; ಬೀಳುಭೂಮಿ. ~ಅಡಿ = ನೆಲೆಯಿಲ್ಲದೆ ತಿರುಗುವವನು ; ಅಲೆಮಾರಿ. ~ಇಕೆ = ಬೀಡುದಾಣ. ~ಕಬ್ಬಿಣ = ಎರಕ ಹೊಯ್ದ ಕಬ್ಬಿಣ ; ತಾಂಡನಾಳ. ~ಕ(ಗ)ಲಹ = ಒಳಜಗಳ ; ಅಂತಃಕಲಹ. ~ಕೊ(ಗೊ)ಳ್ = ತಂಗು ; ನೆಲಸು. ~ತಾ(ದಾ)ಣ = ತಂಗುವ ಸ್ಥಳ ; ಬಿಡಾರ. ~ಬಿ(ವಿ)ಡು = ೧. ತಂಗು ; ಬಿಡಾರ ಹಾಕು. ೨. ಭೂಮಿಯನ್ನು ಪಾಳು ಬಿಡು.

ಬೀಡೆ (ನಾ). ಒಡಕು; ಬಿರುಕು; ಸೀಳು. ~ಒ(ಯೊ)ಡೆ = ಬಿರುಕುಂಟಾಗು; ಸೀಳು. ~ಬಿ(ವಿ)ರಿ = ಬೀಡೆಯೊಡೆ.

ಬೀಣೆ (ನಾ). ಒಂದು ಬಗೆಯ ತಂತಿವಾದ್ಯ; ವೀಣೆ. ~ಗಾಱ(ರ) = ವೀಣೆಯನ್ನು ನುಡಿಸುವವನು; ವೈಣಿಕ.

ಬೀದ = ಬಿಯದ.

ಬೀದಿ (ನಾ). ಹಾದಿ; ಮಾರ್ಗ. ~ಕ(ಗ)ಲಹ = ಮರ್ಯಾದೆ ಬಿಟ್ಟು ಆಡುವ ಜಗಳ. ~ಪ(ವ)ರಿ = ೧. ಸ್ವೇಚ್ಛೆಯಾಗಿ ಹರಿ, -ಮುನ್ನುಗ್ಗು. ೨. ಸ್ವೇಚ್ಛೆಯಾಗಿ ಹರಿಯುವಿಕೆ. ~ಪಾ(ವಾ)ಡು = ಬೀದಿಯಲ್ಲಿ ಹೇಳುವ ಹಾಡು; ಅಪ್ರೌಢವಾದ ಕಾವ್ಯ. ~ಬಸವ = ೧. ಬೀದಿಯಲ್ಲಿ ಸ್ವಚ್ಛಂದವಾಗಿ ತಿರುಗುವ ಗೂಳಿ. ೨. ಸ್ವೇಚ್ಛೆಯಾಗಿ ತಿರುಗುವವನು. ~ಸುದ್ದಿ = ನಿರಾಧಾರವಾದ ಸಂಗತಿ; ಗಾಳಿ ಮಾತು. ~ಹೋಕ = ಬೀದಿಯಲ್ಲಿ ತಿರುಗಾಡುವವನು; ದಾರಿಹೋಕ.

ಬೀಬಿ (ನಾ). ೧. ಮುಸಲ್ಮಾನ ಹೆಂಗಸು. ೨. ಹೆಂಡತಿ.

ಬೀಭತ್ಸ (ನಾ). ೧. ಜುಗುಪ್ಸೆ; ಅಸಹ್ಯ. ೨. ಕಾವ್ಯದ ನವರಸಗಳಲ್ಲಿ ಒಂದು. (ಗು). ೩. ಅಸಹ್ಯಕರವಾದ; ಜುಗುಪ್ಸೆಯನ್ನುಂಟುಮಾಡುವ.

ಬೀಯ (ನಾ). ೧. ತೌಡನ್ನು ತೆಗೆದ ಅಕ್ಕಿ. ೨. ಆಹಾರ; ಉಣಿಸು. ೩. ವ್ಯಯ; ನಷ್ಟ; ಹಾಳು. ~ಕಾಱ(ರ) = ಅತಿಯಾಗಿ ಖರ್ಚು ಮಾಡುವವನು. ~ಮಾಡು = ವ್ಯಯಮಾಡು; ಖರ್ಚು ಮಾಡು.

ಬೀಯಗ (ನಾ). ೧. (ಬಾಗಿಲು, ಪೆಟ್ಟಿಗೆ ಮುಂತಾದುವುಗಳನ್ನು) ಭದ್ರಪಡಿಸಲು ಹಾಕುವ ಸಾಧನ; ಕೀಲಿ. ೨. ಮದುವೆಯಿಂದ ಸಂಬಂಧ ಬೆಳಸಿದವನು.

ಬೀರ (ನಾ). ೧. ವೀರ; ಕಲಿ; ಶೂರ. ೨. ಶೌರ್ಯ; ಕಲಿತನ. ೩. ಒಬ್ಬ ದೇವತೆ; ವೀರಭದ್ರ. ~ಕ(ಗ)ಚ್ಚೆ = ವೀರಗಚ್ಚೆ; ವೀರಗಾಸೆ. ~ಕ(ಗ)ಲ್(ಲ್ಲು) = ಸತ್ತ ವೀರರ ನೆನಪಿಗಾಗಿ ನೆಡುವ ಕಲ್ಲು; ವೀರಗಲ್ಲು. ~ಪ(ವ)ಟ್ಟ = ಮುಖ್ಯ ಸೇನಾಪತಿಯ ಪಟ್ಟ, -ಪದವಿ; ವೀರಪಟ್ಟ.

ಬೀರು ೧. = ಬೀಱ್. (ನಾ). ೨. ಕಪಾಟು; ಅಲಮಾರು.

ಬೀಱ್(ರ್,ರು,ಱು) (ಕ್ರಿ). ೧. ಎಸೆ; ಬಿಸುಡು. ೨. ಎರಚು; ಚೆಲ್ಲು. ೩. ವ್ಯಾಪಿಸು; ಹರಡು. ೪. ಹಂಚು. (ನಾ). ೫. ಎಸೆಯುವುದು.

ಬೀವು (ನಾ). ೧. ದೆಬ್ಬೆಯನ್ನು ಬಿಗಿಯುವಾಗ ಉಪಯೋಗಿಸುವ ಹುರಿ. ೨. ನರ; ಸ್ನಾಯು. ೩. ಒಂದು ಬಗೆಯ ಪಾತ್ರೆ.

ಬೀವುಗಾತಿ (ನಾ). ಹುರಿಯನ್ನು ಮಾರುವವಳು.

ಬೀಸಣಿಕೆ (ನಾ). ಗಾಳಿ ಬೀಸಿಕೊಳ್ಳುವ ಒಂದು ಸಾಧನ; ವ್ಯಜನ; ಬಿಜ್ಜಣಿಗೆ.

ಬೀಸಣಿಗೆ = ಬೀಸಣಿಕೆ.

ಬೀಸರ (ನಾ). ೧. ಅಂತ್ಯ; ಕೊನೆ. ೨. ನಾಶ; ಹಾಳು. ೩. ವ್ಯರ್ಥವಾದುದು; ನಿಷ್ಪ್ರಯೋಜಕವಾದುದು.

ಬೀಸಿಗೆ (ನಾ). ೧. ಒಂದು ಅಳತೆಯ ಪ್ರಮಾಣ; ಇಪ್ಪತ್ತು ಪಲದ ಪ್ರಮಾಣ. ೨. ಇಪ್ಪತ್ತು ವರ್ಷಗಳ ಅವಧಿ. ೩. ಹರಡುವಿಕೆ; ವ್ಯಾಪಿಸಿರುವಿಕೆ.

ಬೀಸು (ಕ್ರಿ). ೧. ಬೀಸಣಿಗೆ, ಚಾಮರ ಮುಂತಾದುವುಗಳಿಂದ ಗಾಳಿ ಹಾಕು. ೨. (ಗಾಳಿಯಂತೆ) ತೀಡು, -ಸುಳಿ. ೩. ದೊಣ್ಣೆ, ಕತ್ತಿ ಮುಂತಾದ ಆಯುಧಗಳನ್ನು ವೇಗವಾಗಿ ತೂಗು, -ಝಳಪಿಸು. ೪. (ಬೀಸುವ ಕಲ್ಲಿನಲ್ಲಿ) ಹಿಟ್ಟುಮಾಡು;

ಪುಡಿಮಾಡು. ೫. ಎಸೆ; ಒಗೆ. (ನಾ). ೬. ತೂಗುವಿಕೆ. ೭. ಉದ್ದ; ಲಂಬ. ~ಆಗು = ಉದ್ದವಾಗು; ನೀಳವಾಗು. ~ಆಡು = ಎಸೆ; ಒಗೆ; ಬಿಸುಡು. ~ಕ(ಗ)ಲ್ಲು = ಧಾನ್ಯಗಳನ್ನು ಬೀಸಿ ಹಿಟ್ಟುಮಾಡಲು ಉಪಯೋಗಿಸುವ ಕಲ್ಲು. ~ಕಾ(ಗಾ)ಲು = ೧. ಉದ್ದವಾದ ಕಾಲು. ೨. ದೊಡ್ಡ ಹೆಜ್ಜೆ; ದಾಪುಗಾಲು. ~ಬ(ವ)ಲೆ = ಒಂದು ಬಗೆಯ ಬಲೆ. ~ಹೂರಿಗೆ = ಒಂದು ಬಗೆಯ ಭಕ್ಷ್ಯ.

ಬೀಳು ೧. = ಬೀೞ್. (ನಾ). ೨. ಪ್ರಾಣಿಗಳ ಹೆಣ. ~ಉಡೆ = ಉಟ್ಟು ಕಳಚಿದ ಬಟ್ಟೆ; ಮೈಲಿಗೆ ಬಟ್ಟೆ. ~ಕ(ಗ)ಳೆ = ಜರೆ; ಹೀಯಾಳಿಸು.

ಬೀಳುಕೊಳು = ಬೀೞ್ಕೊಳ್.

ಬೀೞ್(ೞ್,ೞು,ಱು) (ಕ್ರಿ). ೧. ಕೆಡೆ. ೨. ಪತನವಾಗು; ಕೆಳಮಟ್ಟಕ್ಕೆ ಬರು; ಸೋಲು. ೩. ಬೆಲೆ ಬಾಳು; ಬೆಲೆಯಾಗು. ೪. ಒದಗು; ಸಂಭವಿಸು. (ನಾ). ೫. ವ್ಯರ್ಥ; ಹಾಳು. ೬. ಪಾಳು ಭೂಮಿ; ಬಂಜರು; ಬೀಡು. ~ಅಕ್ಕರ = ವ್ಯಂಜನಾಕ್ಷರ. ~ಆಗು = ಪಾಳು ಬೀಳು; ಬಂಜರು ಬೀಳು; ನಿಷ್ಪ್ರಯೋಜಕವಾಗು.

ಬೀೞ(ಳ)ಲ್(ಲು) = ಬಿೞಲ್.

ಬೀೞ್ಕೊ(ಳ್ಕೊ)ಡು (ಕ್ರಿ). (ಅತಿಥಿ, ಬಂಧು ಮುಂತಾದವರನ್ನು) ಕಳುಹಿಸು; ನಿರೂಪ ಕೊಡು.

ಬೀೞ್ಕೊ(ಳ್ಕೊ)ಳ್ (ಕ್ರಿ). ಹೊರಡು; ಮುಂದೆ ಸಾಗು; ನಿರೂಪ ತೆಗೆದುಕೊಳ್ಳು.

ಬುಂಡೆ = ಬುರುಡೆ.

ಬುಂದಿ = ಬೂಂದಿ.

ಬುಂದು (ನಾ). ಕಾಫಿಯ ಬೀಜ.

ಬುಕಣಿ (ನಾ). ಪುಡಿ; ಹಿಟ್ಟು.

ಬುಕುಟು (ನಾ). ಬೂಷ್ಟು; ಬೂಜು.

ಬುಕ್ಕ (ನಾ). ೧. ಬೀಜವನ್ನು ಬಿತ್ತಲು ಉಪಯೋಗಿಸುವ ಬಿದಿರಿನ ನಳಿಕೆ; ಸಡ್ಡೆ. ೨. ಹೃದಯ; ಎದೆ. ೩. ಮೇಕೆ; ಆಡು.

ಬುಕ್ಕಿ = ಬುಕ್ಕಿಟ್ಟು. ~ಹಿಟ್ಟು = ಬುಕ್ಕಿಟ್ಟು.

ಬುಕ್ಕಿಟ್ಟು (ನಾ). ಸುವಾಸನೆಯಿಂದ ಕೂಡಿದ ಒಂದು ಬಗೆಯ ಪುಡಿ; ಸುಗಂಧದ ಪುಡಿ.

ಬುಗಟು (ನಾ). ಉಬ್ಬಿರುವುದು; ಬೋರು.

ಬುಗಟೆ = ಬುಗಟು.

ಬುಗಡಿ (ನಾ). ಕಿವಿಯಲ್ಲಿ ಧರಿಸುವ ಒಂದು ಬಗೆಯ ಆಭರಣ.

ಬುಗರಿ (ನಾ). ೧. ಒಂದು ಬಗೆಯ ಆಟದ ಸಾಮಾನು. ೨. ಬುಗರಿಯಾಕಾರದ ಕಾಯಿಗಳನ್ನು ಬಿಡುವ ಒಂದು ಜಾತಿಯ ಮರ. ~ಆಡಿಸು = ಹೇಳಿದಂತೆ ಕೇಳುವ ಹಾಗೆ ಮಾಡು; ಅಧೀನದಲ್ಲಿಟ್ಟುಕೊಳ್ಳು.

ಬುಗುಟು = ಬುಗಟು. ~ಪೊ(ಪೋ)ಗು = ಊದು; ಬೋರುಬರು. ~ಮಂಡೆ = ಬೋರು ಎದ್ದಿರುವ ತಲೆ.

ಬುಗುಟೆ = ಬುಗಟು.

ಬುಗುಡಿ ೧. = ಬುಗಡಿ. ೨. ಒಂದು ಜಾತಿಯ ಮರ.

ಬುಗುರಿ = ಬುಗರಿ.

ಬುಗ್ಗಿ (ನಾ). ೧. ಕೆನ್ನೆ; ಕಪಾಳ. ೨. ಬೂದಿ; ಭಸ್ಮ.

ಬುಗ್ಗೆ (ನಾ). ಚಿಲುಮೆ; ಊಟೆ.

ಬುಚಡ (ನಾ). ಎಣೆಗಂಟು.

ಬುಜ್ಜಣಿಗೆ (ನಾ). ಮುಚ್ಚಳವಿರುವ ಬುಟ್ಟಿ, -ಕುಕ್ಕೆ.

ಬುಜ್ಜಯಿಸು (ಕ್ರಿ). ೧. ಸಮಾಧಾನಗೊಳಿಸು; ಸಂತಯಿಸು. ೨. ಪುಸಲಾಯಿಸು.

ಬುಜ್ಜವಿಸು = ಬುಜ್ಜಯಿಸು.

ಬುಟ್ಟೆ (ನಾ). ಬಟ್ಟೆಯ ಮೇಲೆ ಹಾಕುವ ಜರಿಯ ಕಸೂತಿ. ~ಸೀರೆ = ಜರಿಯ ಕಸೂತಿಯಿಂದ ಕೂಡಿದ ಸೀರೆ.

ಬುಟ್ಟೆ (ನಾ). ಪುಟ್ಟಿ ; ಕುಕ್ಕೆ.

ಬುಡ (ನಾ). ೧. ಕೆಳಭಾಗ ; ತಳ. ೨. ವಂಶ ; ಮನೆತನ. ~ಕಟ್ಟು = ೧. ಅಡಿಪಾಯ ; ಬುನಾದಿ. ೨. ವಂಶ; ಮನೆತನ. ~ಕೇ(ಗೆ)ಡೆ = ಬೇರು ಸಹಿತ ಕಿತ್ತುಹಾಕು; ನಿರ್ಮೂಲನಮಾಡು. ~ಮೇಲು = ತಲೆ ಕೆಳಗು ; ಅಡಿಮೇಲು.

ಬುಡುಬುಡಿಕ (ನಾ). ಬುಡುಬುಡಿಕೆಯನ್ನು ಬಾರಿಸುವವನು.

ಬುಡುಬುಡಿಕೆ (ನಾ). ೧. ಡಮರುಗದಂತಹ ಒಂದು ಬಗೆಯ ಚಿಕ್ಕವಾದ್ಯ. ೨. ಒಂದು ಬಗೆಯ ಹಾವು. ೩. ಸುಳ್ಳು.

ಬುಡುಮೆ (ನಾ). ಒಂದು ಜಾತಿಯ ಮರ.

ಬುತ್ತಿ (ನಾ). ೧. ಕಟ್ಟಿಕೊಂಡು ಹೋಗುವ ಅನ್ನ ೨. ಮೊಸರನ್ನ.

ಬುದ್ದಣಿ = ಬುದ್ದಣಿಗೆ.

ಬುದ್ದಣಿಗೆ (ನಾ). ಎಣ್ಣೆ, ತುಪ್ಪ ಮೊದಲಾದುವುಗಳನ್ನು ತುಂಬಿಡುವ ಚರ್ಮದ ಚೀಲ ; ಬುದ್ದಲಿ.

ಬುದ್ದಲಿ = ಬುದ್ದಣಿಗೆ.

ಬುದ್ದಿ = ಬುದ್ಧಿ.

ಬುದ್ದಿವಂತ (ನಾ). ೧. ಎಣ್ಣೆಯನ್ನು ತುಂಬಲು ಬಳಸುವ ಒಂದು ಉಪಕರಣ ; ಲಾಳಿಕೆ ; ಆಲಿಕೆ. ೨. = ಬುದ್ಧಿವಂತ.

ಬುದ್ಧ (ನಾ). ೧. ತಿಳಿದವನು ; ವಿದ್ವಾಂಸ ; ಪಂಡಿತ ೨. ಬೌದ್ಧಧರ್ಮವನ್ನು ಸ್ಥಾಪಿಸಿದವನು ; ಸಿದ್ಧಾರ್ಥ. ~ಅವತಾರ = ವಿಷ್ಣುವಿನ ಒಂಬತ್ತನೆಯ ಅವತಾರ. ~ವಿಹಾರ = ಬೌದ್ಧರ ದೇವಾಲಯ.

ಬುದ್ಧಿ (ನಾ). ೧. ತಿಳಿಯುವ ಶಕ್ತಿ. ೨. ತಿಳಿವಳಿಕೆ ; ಅರಿವು. ೩. ಉಪದೇಶ. ೪. ಸ್ವಭಾವ. ~ಕ(ಗ)ಲಿ = ತಿಳಿವಳಿಕೆಯನ್ನು ಪಡೆ ; ಅನುಭವದಿಂದ ತಿಳಿದುಕೊಳ್ಳು. ~ಕ(ಗ)ಲಿಸು = ೧. ತಿಳಿವಳಿಕೆಯನ್ನುಂಟುಮಾಡು. ೨. ಶಿಕ್ಷೆಯ ಮೂಲಕ ತಿಳಿದುಕೊಳ್ಳುವಂತೆ ಮಾಡು. ~ಕೆ(ಗೆ)ಡು = ತಿಳಿವಳಿಕೆಯನ್ನು ಕಳೆದುಕೊಳ್ಳು ; ಮತಿಹೀನನಾಗು. ~ಕೆ(ಗೆ)ೀಡಿ = ತಿಳಿಗೇಡಿ ; ಮಂಕ. ~ಭ್ರಮಣೆ = ಬುದ್ಧಿಕೆಟ್ಟು ಹೋಗುವುದು ; ಹುಚ್ಚು. ~ವಿಕಲ್ಪ = ಬುದ್ಧಿಭ್ರಮಣೆ. ~ಶಕ್ತಿ = ತಿಳಿವಳಿಕೆ; ವಿವೇಕ ; ಮತಿ.

ಬುದ್ಧಿವಂತ (ನಾ). ಜ್ಞಾನಿ ; ಜಾಣ. ~ಇಕೆ = ಜಾಣತನ ; ಜ್ಞಾನ.

ಬುದ್ಧಿವಾದ (ನಾ). ಜ್ಞಾನವನ್ನು ಬೋಧಿಸುವುದು ; ತಿಳಿವಳಿಕೆಯನ್ನು ಹೇಳಿಕೊಡುವುದು ; ಉಪದೇಶ.

ಬುದ್ಬುದ (ನಾ). ನೀರಿನ ಮೇಲಿನ ಗುಳ್ಳೆ.

ಬುಧ (ನಾ). ೧. ಪಂಡಿತ ; ವಿದ್ವಾಂಸ. ೨. ನವಗ್ರಹಗಳಲ್ಲಿ ಒಂದು. ~ವಾರ = ವಾರದ ಏಳು ದಿನಗಳಲ್ಲಿ ಒಂದು.

ಬುಧ್ನ (ನಾ). ೧. ಬುಡ. ೨. ಆಳ. ೩. ಶಿವ.

ಬುನಾದಿ (ನಾ). ೧. ಪ್ರಾರಂಭ ; ಮೊದಲು. ೨. (ಕಟ್ಟಡ ಮುಂತಾದುವುಗಳ) ತಳಪಾಯ ; ಅಸ್ತಿವಾರ.

ಬುಭುಕ್ಷೆ (ನಾ). ಹಸಿವು ; ಕ್ಷುಧೆ.

ಬುರಕಿ (ನಾ). ಮುಸುಕು ; ಪರದೆ

ಬುರಬುರಿ (ನಾ). ಒಂದು ಬಗೆಯ ಕರಿದ ತಿಂಡಿ ; ಬಜ್ಜಿ.

ಬುರುಕಿ = ಬುರಕಿ.

ಬುರುಗಲು (ನಾ). ಪುರಿ ; ಮಂಡಕ್ಕಿ.

ಬುರುಗು (ನಾ). ೧. ನೊರೆ ; ಫೇನ. ೨. ಒಂದು ವಾದ್ಯ ವಿಶೇಷ. ೩. ವ್ಯರ್ಥವಾದುದು ; ನಿಷ್ಪ್ರಯೋಜಕವಾದುದು.

ಬುರುಜು (ನಾ). ಕೋಟೆಯ ಮೇಲಿನ ಕೊತ್ತಳ ; ಗುಮ್ಮಟ.

ಬುರುಡೆ ೧. = ಬುಜಡೆ. ೨. ಸುಳ್ಳುಮಾತು. ~ಉರುಳಿಸು = ತಲೆ ತೆಗೆ.

~ಬಿಡು = ಸುಳ್ಳು ಹೇಳು. ~ಮನುಷ್ಯ = ಸುಳ್ಳು ಹೇಳುವವನು. ~ಹೊಡೆ = ೧. ಜಂಬ ಕೊಚ್ಚಿಕೊಳ್ಳು; ಬಡಾಯಿ ಕೊಚ್ಚಿಕೊಳ್ಳು. ೨. ಸುಳ್ಳುಹೇಳು.

ಬುರುದೆ (ನಾ). ಕೆಸರು ; ರಾಡಿ.

ಬುರುಬುರಿ = ಬುರಬುರಿ.

ಬುರುಲಿ (ನಾ). ಒಂದು ಜಾತಿಯ ಹಕ್ಕಿ ; ಪುರುಲೆ.

ಬುರುಳೆ = ಬುರುಲಿ.

ಬುಜಿ(ರ)ಡೆ (ನಾ). ೧. ತಲೆಯ ಓಡು, -ಚಿಪ್ಪು. ೨. ಉರುಟು ಪಾತ್ರೆ. ೩. ಪೊಳ್ಳು ವಸ್ತು.

ಬುಜು(ರು)ಡೆ = ಬುಜಿಡೆ.

ಬುರ್ನಾಸು (ನಾ). ಕಳಪೆ ; ವ್ಯರ್ಥವಾದುದು.

ಬುಲಾಕು (ನಾ). ಮೂಗಿನ ಸಿಂಬೆಯಲ್ಲಿ ಧರಿಸುವ ಒಂದು ಬಗೆಯ ಆಭರಣ.

ಬುಲ್ಬುಲ್ (ನಾ). ಒಂದು ಜಾತಿಯ ಹಕ್ಕಿ.

ಬುಲ್ಲಯಿಸು (ಕ್ರಿ). ೧. ಉಪಾಯದಿಂದ ಒಪ್ಪಿಸು ; ಪುಸಲಾಯಿಸು ; ಉಬ್ಬಿಸು. ೨. ಉತ್ಸಾಹಗೊಳ್ಳು ; ಉಬ್ಬು.

ಬುಲ್ಲವಣೆ (ನಾ). ೧. ಮರುಳು ಮಾಡುವಿಕೆ ; ಪುಸಲಾಯಿಸುವಿಕೆ. ೨. ಉಬ್ಬುವಿಕೆ ; ಅಧಿಕವಾಗುವುದು.

ಬುಲ್ಲವಿಸು = ಬುಲ್ಲಯಿಸು.

ಬುಲ್ಲಿ (ನಾ). ಗಂಡಸಿನ ಜನನೇಂದ್ರಿಯ.

ಬುಲ್ಲೈಸು = ಬುಲ್ಲಯಿಸು.

ಬುವಿ (ನಾ). ಭೂಮಿ ; ನೆಲ.

ಬುಸುಗುಡು (ಕ್ರಿ). ೧. ಬುಸ್ ಎಂದು ಶಬ್ದ ಮಾಡು. ೨. ಕೆರಳು ; ಸಿಟ್ಟಿಗೇಳು.

ಬೂಂದಿ (ನಾ). ಕಡಲೆಯ ಹಿಟ್ಟಿನಿಂದ ಕರಿದು ಮಾಡಿದ ಒಂದು ಬಗೆಯ ಭಕ್ಷ್ಯ.

ಬೂಚು (ನಾ). ಬಿರಡೆ ; ಮುಚ್ಚಳ.

ಬೂಜು (ನಾ). ತೇವದಿಂದ ವಸ್ತುಗಳ ಮೇಲೆ ಉಂಟಾಗುವ ಬಿಳಿಯ ಪೊರೆ ; ಬೂಷ್ಟು.

ಬೂಟ ೧. = ಬೂಟಕ. ೨. = ಬುಟ್ಟ. ~ಆಟಿಕೆ = ಡಂಭ ; ಡೌಲು.

ಬೂಟಕ (ನಾ). ೧. ಮೋಸ ; ಕಪಟ. ೨. ಮೋಸಗಾರ; ಕಪಟಿ. ~ತನ = ಮೋಸಗಾರಿಕೆ.

ಬೂತ (ನಾ). ಭೂತ ; ಪಿಶಾಚಿ ; ದೆವ್ವ. ~ಆಟ = ಭೂತದ ಆಟ. ~ಕ(ಗ)ನ್ನಡಿ = ಭೂತಗನ್ನಡಿ.

ಬೂತಾಳೆ (ನಾ). ಬೇಲಿ ಹಾಕುವುದಕ್ಕಾಗಿ ಉಪಯೋಗಿಸುವ ಒಂದು ಜಾತಿಯ ಗಿಡ.

ಬೂತು (ನಾ). ೧. ನಾಚಿಗೆಗೇಡಿ ; ಬಂಡ. ೨. ಹೊಲಸು ನುಡಿ ; ಅಶ್ಲೀಲವಾದ ಮಾತು. ೩. = ಬೂತ. (ಗು). ೪. ಅಲ್ಪವಾದ ; ನಿಕೃಷ್ಟವಾದ. ~ಗೆಯ್ = ಅಪಹಾಸ್ಯಮಾಡು. ~ಮಾಡು = ೧. ವ್ಯರ್ಥಗೊಳಿಸು ; ಕೆಲಸಕ್ಕೆ ಬಾರದಂತೆ ಮಾಡು. ೨. ಮೋಸಮಾಡು ; ವಂಚಿಸು.

ಬೂದ (ಗು). ಬೂದಿಯ ಬಣ್ಣದ.

ಬೂದಿ (ನಾ). ಭಸ್ಮ ; ವಿಭೂತಿ. ~ಕು(ಗು)ಂಬಳ = ಒಂದು ಜಾತಿಯ ಕುಂಬಳಕಾಯಿ. ~ಬಡಕ = ಮೈಗೆಲ್ಲ ಭಸ್ಮವನ್ನು ಬಳಿದುಕೊಂಡಿರುವವನು ; ಶಿವ. ~ಬಾಳೆ = ಬಾಳೆಯಲ್ಲಿ ಒಂದು ಜಾತಿ.

ಬೂದು (ನಾ). ೧. ಒಂದು ಬಣ್ಣ ; ಬೂದಿಯ ಬಣ್ಣ. (ಗು). ೨. = ಬೂದ.

ಬೂರ (ನಾ). ಒಂದು ಜಾತಿಯ ಮರ ಮತ್ತು ಅದರಲ್ಲಿ ಬಿಡುವ ಹತ್ತಿ ; ಎಲವ.

ಬೂರಗ = ಬೂರ.

ಬೂರಾಸಕ್ಕರೆ (ನಾ). ಹಿಟ್ಟಿನಂತಿರುವ ಒಂದು ಜಾತಿಯ ಬಿಳಿಯ ಸಕ್ಕರೆ.

ಬೂರುಗ = ಬೂರ.

ಬೂಷ್ಟು = ಬೂಜು.

ಬೂಸ (ನಾ). ೧. ಹೊಟ್ಟು ; ಉಮ್ಮಿ. ೨. ನಿಷ್ಪ್ರಯೋಜಕವಾದುದು.

ಬೃಂದ (ನಾ). ಗುಂಪು; ವೃಂದ. ~ಗಾನ = ಸಾಮೂಹಿಕ ಗಾಯನ; ವೃಂದಗಾನ.

ಬೃಂದಾವನ (ನಾ). ೧. ತುಳಸಿಯ ಕಟ್ಟೆ. ೨. ಗೋಕುಲದ ಬಳಿಯ ಒಂದು ಪವಿತ್ರ ಕ್ಷೇತ್ರ. ೩. ವೈಷ್ಣವ ಸಂನ್ಯಾಸಿಗಳ ಸಮಾಧಿ ಸ್ಥಳ.

ಬೃಂಹಿತ (ನಾ). ಆನೆಯ ಕೂಗು; ಘೀಂಕಾರ. ~(ವ)ಗೆಯ್ = ಘೀಳಿಡು.

ಬೃಹತ್ತು (ನಾ). ೧. ದೊಡ್ಡದು; ಹಿರಿದು. (ಗು). ೨. ದೊಡ್ಡದಾದ; ಮಹತ್ತರವಾದ.

ಬೃಹಸ್ಪತಿ (ನಾ). ೧. ದೇವತೆಗಳ ಗುರು. ೨. ನವಗ್ರಹಗಳಲ್ಲಿ ಒಂದು; ಗುರು. ೩. ವಿದ್ವಾಂಸ; ಪಂಡಿತ. ೪. ದಡ್ಡ; ತಿಳಿಗೇಡಿ. ~ವಾರ = ಗುರುವಾರ.

ಬೆಂ (ಗು). ೧. ಉಷ್ಣದಿಂದ ಕೂಡಿದ; ಬಿಸಿಯಾಗಿರುವ. ೨. ಹಿಂಬದಿಯ; ಹಿಂಭಾಗದ. ~ಕ(ಗ)ಡೆ = ಹಿಂದುಗಡೆ; ಹಿಂಭಾಗ. ~ಕ(ಗ)ದಿರ್=ಬಿಸಿಯಾದ ಕಿರಣ, -ರಶ್ಮಿ. ~ಕ(ಗ)ಲ = ಮಡಕೆ. ~ಕಾ(ಗಾ)ಡು = ಸುಟ್ಟು ಕರಿಕಾದ ಕಾಡು. ~ಕಾ(ಗಾ)ಪು(ಹು) = ಬೆಂಗಾವಲ್. ~ಕಾ(ಗಾ)ವಲ್(ಲು) = ಬೆಂಬಲವಾದ ಕಾವಲು; ಅಂಗರಕ್ಷೆ. ~ಕು(ಗು)ಡು = ಬೆನ್ನು ತೋರಿಸು; ಹಿಮ್ಮೆಟ್ಟು. ~ಕೊ(ಗೊ)ಡು = ೧. ಆಧಾರವಾಗು; ಆಶ್ರಯವಾಗು. ೨. = ಬೆಂಗುಡು. ~ಕೊ(ಗೊ)ಳ್=ಬೆನ್ನಟ್ಟು; ಹಿಂಬಾಲಿಸು. ~ಕೊ(ಗೊ)ೞಲ್(ಲು) = ೧. ಚಾಟಿ; ಚಬಕ. ೨. ಆಗ್ನೇಯಾಸ್ತ್ರ. ~ಗುಂಡು = ಹಡಗನ್ನು ನಿಲ್ಲಿಸಲು ಇಳಿಬಿಡುವ ಭಾರ; ಲಂಗರು. ~ತ(ದ)ಗುಳ್=ಹಿಂಬಾಲಿಸು; ಬೆನ್ನಟ್ಟು. ~ಪ(ಬ)ತ್ತು = ಬೆಂಗೊಳ್. ~ಪಿ(ಬಿ)ಡಿ = ಅನುಸರಿಸು; ಹಿಂಬಾಲಿಸು. ~ಬಱಿ(ಳಿ) = ೧. ಹಿಂಬದಿ; ಹಿಂಭಾಗ. ೨. ಸಂಗ; ಜೊತೆ. ೩. ಹಿಂಬಾಲಿಸುವುದು. ೪. ಸಹಾಯ. ~ಬಿಡು = ಅಗಲು; ದೂರವಾಗು. ~ಬೀೞ್(ಳ್)=೧. ಮೊರೆ ಹೊಗು; ಶರಣಾಗು. ೨. ಅನುಸರಿಸು; ಹಿಂಬಾಲಿಸು. ೩. ಹಿಂಜರಿ; ಹಿಮ್ಮೆಟ್ಟು. ~ಬೂದಿ = ಬಿಸಿಯಾದ ಬೂದಿ.

ಬೆಂಕಿ (ನಾ). ೧. ಕಿಚ್ಚು; ಅಗ್ನಿ; ಉರಿ. ೨. ತಾಪ; ದಗೆ. ~ಆ(ಯಾ)ಗು =ಅತ್ಯಂತ ರೋಷದಿಂದ ಕೂಡಿರು; ಕೆರಳು. ~ಕಡ್ಡಿ = ತುದಿಯಲ್ಲಿ ಮದ್ದು ಲೇಪಿಸಿರುವ ಕಡ್ಡಿ; ದೀಪದ ಕಡ್ಡಿ. ~ಕಾರು = ೧. ಬೆಂಕಿಯನ್ನು ಉಗುಳು. ೨. ಸಿಟ್ಟಾಗು; ಕೆರಳು. ~ಪೊಟ್ಟಣ = ಬೆಂಕಿಕಡ್ಡಿಗಳನ್ನು ಇಟ್ಟಿರುವ ಪೆಟ್ಟಿಗೆ; ಕಡ್ಡಿಪೆಟ್ಟಿಗೆ.

ಬೆಂಕೆ = ಬೆಂಕಿ. ~ಕ(ಗ)ಣ್=ಬೆಂಕಿಯನ್ನು ಕಾರುವ ಕಣ್ಣು; ಕೆಂಡಗಣ್ಣು.

ಬೆಂಗದಿರ (ನಾ). ಬಿಸಿಯಾದ ಕಿರಣಗಳುಳ್ಳವನು; ಸೂರ್ಯ.

ಬೆಂಗರೆ (ನಾ). ಕಡಲಿನ ಪಕ್ಕದ ಉಸುಕಿನ ಪ್ರದೇಶ.

ಬೆಂಚೆ (ನಾ). ಚಿಕ್ಕಹೊಂಡ; ಕುಂಟೆ.

ಬೆಂಜನ (ನಾ). ೧. ನಂಜಿಕೊಳ್ಳುವ ಪದಾರ್ಥ; ವ್ಯಂಜನ. ೨. ವ್ಯಂಜನಾಕ್ಷರ.

ಬೆಂಟೆ (ನಾ). ಹುಲ್ಲಿನ ಹಗ್ಗ.

ಬೆಂಡು (ನಾ). ೧. ಜೋಳ ಮುಂತಾದ ದಂಟುಗಳ ಒಳಗಿನ ಭಾಗ. ೨. ತಿರುಳಿಲ್ಲದುದು; ಪೊಳ್ಳು. ೩. ಒಂದು ಬಗೆಯ ಸಿಹಿ ತಿಂಡಿ. ~ಆಗು = ಜೋಮು ಹಿಡಿ. ~ಏೞ್(ಳ್,ಳು,ಱು) = ೧. ತೇಲು. ೨. ಬೆಂಡಾಗು; ಜಡ್ಡುಗಟ್ಟು. ~ಓಲೆ=ಕಿವಿಗೆ ಧರಿಸುವ ಒಂದು ಆಭರಣ; ಓಲೆ. ~ಮರಲ್ = ಬೆಂಡಾಗು. ~ಹಿಡಿ = ಬೆಂಡಾಗು.

ಬೆಂಡೆ (ನಾ). ಒಂದು ಜಾತಿಯ ತರಕಾರಿ ಸಸ್ಯ ಮತ್ತು ಅದರ ಕಾಯಿ.

ಬೆಂತರ (ನಾ). ಪಿಶಾಚಿ ; ಭೂತ.

ಬೆಂತರಿ (ನಾ). ಹೆಣ್ಣು ಪಿಶಾಚಿ.

ಬೆಂಬಲ (ನಾ). ೧. ಹಿಂಭಾಗದ ಸೈನ್ಯ. ೨. ಒತ್ತಾಸೆ; ಪ್ರೋತ್ಸಾಹ ; ಉತ್ತೇಜನ. ~ಇಗ=ಪ್ರೋತ್ಸಾಹಿಸುವವನು. ~ಇಸು = ಅನುಮೋದಿಸು ; ಸಮರ್ಥಿಸು.

ಬೆಕ್ಕಸ (ನಾ). ವಿಸ್ಮಯ ; ಬೆರಗು. ~(ಂ)ಪ(ಬ,ವ)ಡು = ವಿಸ್ಮಯಪಡು ; ಆಶ್ಚರ್ಯ ಹೊಂದು. ~ಬೆಱ(ರ)ಗು = ಅತ್ಯಂತ ಆಶ್ಚರ್ಯ.

ಬೆಕ್ಕು (ನಾ). ಮಾರ್ಜಾಲ ; ಬಿಡಾಲ.

ಬೆಗಡು (ಕ್ರಿ). ೧. ಆಶ್ಚರ್ಯಪಡು ; ಚಕಿತವಾಗು. ೨. ಭಯಪಡು; ಅಂಜು; ಹಿಂದೆಗೆ. (ನಾ). ೩. ಆಶ್ಚರ್ಯ ; ಸೋಜಿಗ. ೪. ಭಯ ; ಅಂಜಿಕೆ. ~ಕೊ(ಗೊ)ಳ್ = ೧.ಆಶ್ಚರ್ಯಪಡು. ೨.ಹೆದರು; ಅಂಜು.

ಬೆಗಱ್ಪು(ಳ್ಪು) (ನಾ). ಭಯ ; ಹೆದರಿಕೆ.

ಬೆಚ್ಚಗೆ (ಅ). ೧. ಸ್ವಲ್ಪ ಬಿಸಿಯಿಂದ ಕೂಡಿ. ೨. ನೆಮ್ಮದಿಯಾಗಿ.

ಬೆಚ್ಚನೆ = ಬೆಚ್ಚಗೆ

ಬೆಚ್ಚರ = ಬೆಜ್ಜರ.

ಬೆಚ್ಚರು (ಕ್ರಿ). ದಿಗ್ಭ್ರಮೆಗೊಳ್ಳು; ಕಂಗೆಡು.

ಬೆಚ್ಚಲ್ (ನಾ). ಹುಲ್ಲು ಮುಂತಾದುವುಗಳಿಂದ ಮಾಡಿ, ಹೊಲದಲ್ಲಿ ನಿಲ್ಲಿಸುವ ಬೆದರುಗೊಂಬೆ ; ಬೆಚ್ಚಪ್ಪ.

ಬೆಚ್ಚಳಿಸು = ಬೆಚ್ಚರು.

ಬೆಚ್ಚು = ಬೆರ್ಚು. ~ಇಸು = ಹೆದರಿಸು ; ಅಂಜಿಸು. ~ನೀರ್(ರು) = ಮಕ್ಕಳಿಗೆ ಉಂಟಾದ ಭಯವನ್ನು ಹೋಗಲಾಡಿಸಲು ಚಿಮುಕಿಸುವ ನೀರು. ~ಬೀಳು=ಹೆದರಿಕೆಯಿಂದ ಮೆಟ್ಟಿಬೀಳು; ಗಾಬರಿಯಾಗು.

ಬೆಜ್ಜ (ನಾ). ೧. ವೈದ್ಯ; ಪಂಡಿತ. ೨. ವೆಜ್ಜ; ತೂತು ; ರಂಧ್ರ. ~ತನ = ವೈದ್ಯಕೀಯ ವೃತ್ತಿ.

ಬೆಜ್ಜರ (ನಾ). ಕಕ್ಕಾಬಿಕ್ಕಿ ; ತಬ್ಬಿಬ್ಬು.

ಬೆಜ್ಜು (ನಾ). ೧. ಪಕ್ಷಿಗಳ ಧ್ವನಿ. ೨. ಔಷಧ ; ಮದ್ದು.

ಬೆಟ್ಟ (ನಾ). ಗಿರಿ ; ಪರ್ವತ. ~ಅಣುಗಿ =ಪಾರ್ವತಿ; ಗಿರಿಜೆ. ~ತಾ(ದಾ)ವರೆ = ಒಂದು ಜಾತಿಯ ಗಿಡ ಮತ್ತು ಅದರ ಹೂವು ; ಕೊಸಗು. ~ನೆಲ್ಲಿ =ನೆಲ್ಲಿಕಾಯಿಯಲ್ಲಿ ಒಂದು ಜಾತಿ.

ಬೆಟ್ಟನೆ (ಅ). ಬಿರುಸಾಗಿ ; ಒರಟಾಗಿ.

ಬೆಟ್ಟಿ (ನಾ). ೧. ಒರಟುವ್ಯಕ್ತಿ. ೨. = ಭೆಟ್ಟಿ.

ಬೆಟ್ಟಿತು (ಗು). ಕಠೋರವಾದ ; ಉಗ್ರವಾದ.

ಬೆಟ್ಟಿತ್ತು = ಬೆಟ್ಟಿತು.

ಬೆಟ್ಟು (ಕ್ರಿ). ೧. ಚುಚ್ಚು; ನಾಟು. (ನಾ). ೨. ಬೆರಳು; ಅಂಗುಲಿ. ೩. = ಬೆಟ್ಟ. (ಗು). ೪. ಕಠೋರವಾದ ; ಬಿರುಸಾದ. ~ಅಡಕೆ = ದುಂಡನೆಯ ಅಡಕೆ ; ಬಟ್ಟಲು ಅಡಕೆ. ~ಆಗು=ಬೆಟ್ಟದಂತೆ ಕೂಡಿ ಬೀಳು; ರಾಶಿಯಾಗು. ~ಇಸು = ಚುಚ್ಚು ; ನಾಟಿಸು. ~(ಂ)ಪೊ(ಬೊ)ಱೆ(ರೆ) =ದೊಡ್ಡ ಹೊರೆ; ಭಾರವಾದ ಹೊರೆ ~ಕ(ಗ)ಚ್ಚು(ರ್ಚು) = ಆಶ್ಚರ್ಯಪಡು ; ಸೋಜಿಗಪಡು. ~ಕಾಡು = ಗುಡ್ಡಗಾಡು ಪ್ರದೇಶ. ~ಗದ್ದೆ = ಗುಡ್ಡಗಾಡು ಪ್ರದೇಶದಲ್ಲಿರುವ ಗದ್ದೆ ; ಮಳೆ ನೀರಿನಿಂದ ಬೆಳೆಯುವ ಗದ್ದೆ. ~ಚಿನ್ನ = ಅಶುದ್ಧವಾದ ಚಿನ್ನ.

ಬೆಟ್ಟುವಗೆಯ (ನಾ). ಬೆಟ್ಟದ ಶತ್ರು ; ಇಂದ್ರ.

ಬೆಟ್ಟುವಿಲ್ಲ (ನಾ). ಬೆಟ್ಟವನ್ನೆ ಬಿಲ್ಲನ್ನಾಗಿ ಉಳ್ಳವನು ; ಶಿವ.

ಬೆಟ್ಟೆ (ನಾ). ೧. ಉಗ್ರತೆ; ಬಿರುಸು. ೨. ಅಡಕೆಯಲ್ಲಿ ಒಂದು ಪ್ರಕಾರ. ~ನುಡಿ = ನಿರ್ದಾಕ್ಷಿಣ್ಯವಾದ ಮಾತು ; ಕಠೋರವಾದ ಮಾತು.

ಬೆಡ(ಂ)ಗ (ನಾ). ೧. ಚೆಲುವ ; ರೂಪವಂತ. ೨. ನಿಪುಣ ; ಚತುರ.

**ಬೆಡ(ಂ)ಗಿ** (ನಾ). ೧. ಸುಂದರಿ ; ಸೊಗಸುಗಾತಿ. ೨. ಒಯ್ಯಾರಿ ; ಒನಪುಗಾತಿ. ೩. ಚತುರೆ ; ನಿಪುಣೆ.

**ಬೆಡ(ಂ)ಗು** (ನಾ). ೧. ಅಂದ ; ಸೊಗಸು. ೨. ಒಯ್ಯಾರ ; ವಿಲಾಸ ; ಒನಪು. ೩. ಚಮತ್ಕಾರ ; ಕೌಶಲ. ೪. ರಹಸ್ಯ ; ಗುಟ್ಟು. ~ಅಡಸು=ಚೆಲುವು ಉಂಟಾಗು; ಸೊಗಸು ಬರು.

**ಬೆಣಚು** (ನಾ). ಹೊಳಪುಳ್ಳ ಬಿಳಿಯ ಬಣ್ಣದ ಕಲ್ಲು. ~ಕ(ಗ)ಲ್ಲು = ಬೆಣಚು.

**ಬೆಣತು** (ಗು). ಬಿಳಿಯ ; ಬೆಳ್ಳಗಿನ. ~ಅಕ್ಕಿ = ಕುಚ್ಚದೆ ಇರುವ ಅಕ್ಕಿ; ಬೆಳತಿಗೆ ಅಕ್ಕಿ.

**ಬೆಣೆ** (ನಾ). ೧. ಗೂಟ ; ದಸಿ. ೨. ಬೂಚು ; ಬಿರಡೆ.

**ಬೆಣ್ಣೆ** (ನಾ). ನವನೀತ. ~ಬಳಪ = ಕಪ್ಪು ಹಲಗೆಯ ಮೇಲೆ ಬರೆಯಲು ಉಪಯೋಗಿಸುವ ಮೃದುವಾದ ಬಳಪ. ~ಮಾತು = ನಯವಾದ ಮಾತು ; ಪುಸಲಾವಣೆಯ ನುಡಿ. ~ಹಚ್ಚು = ಪುಸಲಾಯಿಸು ; ಪ್ರೋತ್ಸಾಹಿಸು.

**ಬೆತೆ** (ನಾ). ವ್ಯಥೆ ; ದುಃಖ.

**ಬೆತ್ತ** (ನಾ). ಸೆಳೆ ; ವೇತ್ರ; ಬಳುಕುವ ಕಡ್ಡಿ.

**ಬೆತ್ತಲೆ** = ಬತ್ತಲೆ.

**ಬೆದಂಕು** (ಕ್ರಿ). ಹುಡುಕು ; ಶೋಧಿಸು.

**ಬೆದಂಡೆ** (ನಾ). ಒಂದು ಕಾವ್ಯಪ್ರಕಾರ.

**ಬೆದಕು** ೧. = ಬೆದಂಕು. ೨. ಚುಚ್ಚು ; ತಿವಿ. ೩. ಎತ್ತು ; ಮೇಲಕ್ಕೆ ಎಬ್ಬಿಸು. ೪. ನೋಯಿಸು ; ಹಿಂಸೆಪಡಿಸು. ೫. ಕೆದಕು.

**ಬೆದಱ್(ರ್,ರು,ಱು)** (ಕ್ರಿ). ೧. ಹೆದರು ; ಗಾಬರಿಯಾಗು. ೨. ಹೆದರಿಸು. (ನಾ). ೩. ಭಯ ; ಅಂಜಿಕೆ. ೪. ಬೆದರುಗೊಂಬೆ; ಬೆಚ್ಚಪ್ಪ. ~ಅಟ್ಟು = ಹೆದರಿಹೋಗುವಂತೆ ಬೆನ್ನಟ್ಟು. ~ಇಕೆ = ಹೆದರಿಕೆ ; ಭಯ. ~ಇಸು = ಹೆದರಿಸು ; ಗಾಬರಿಗೊಳಿಸು. ~ನೋಟ = ೧. ಬೆದರಿಸುವ ನೋಟ. ೨. ಹೆದರಿದ ದೃಷ್ಟಿ.

**ಬೆದೆ** (ನಾ) ೧. ಬೀಜ ಬಿತ್ತುವುದು ; ಬಿತ್ತನೆ. ೨. ಬಿತ್ತನೆಗೆ ಹದವಾದ ಭೂಮಿ. ೩. ಬಿತ್ತನೆಗೆ ಹದವಾದ ಕಾಲ. ೪. ಹದ ; ಪಕ್ವತೆ. ೫. ಕಾಮೋದ್ರೇಕ ; ನಸೆ. ~ಕಾ(ಗಾ)ಱ(ರ) = ಕಾಮಾತುರತೆಯುಳ್ಳವನು ; ಕಾಮುಕ. ~ಕಾ(ಗಾ)ಲ = ೧. ಬಿತ್ತನೆಯ ಕಾಲ. ೨. ಬೆದೆ ಉಂಟಾಗುವ ಕಾಲ.

**ಬೆದೆಗಾತಿ** (ನಾ). ಕಾಮುಕಿ ; ಕಾಮಾಸಕ್ತಳಾದ ಹೆಂಗಸು

**ಬೆದೆಗಾರ್ತಿ** = ಬೆದೆಗಾತಿ

**ಬೆದ್ದಲು** (ನಾ). ಮಳೆ ನೀರಿನಿಂದ ಬೆಳೆ ಬೆಳೆಯುವ ಭೂಮಿ ; ಕುಷ್ಕಿ.

**ಬೆನ್** ೧. = ಬೆನ್ನು. (ಗು). ೨. ಬಿಸಿಯಾದ; ಕಾದ. ~ಅಟ್ಟು = ಬೆನ್ನು ಹತ್ತು ; ಹಿಂಬಾಲಿಸು. ~ಇಕ್ಕು = ೧. ಹಿಮ್ಮೆಟ್ಟು ; ಓಡು. ೨. ರಕ್ಷಣೆಯನ್ನು ಕೊಡು ; ಆಶ್ರಯವನ್ನು ಕೊಡು. ~ಈಯ್(ಯು)=ಸೋತು ಓಡಿಹೋಗು ; ಬೆನ್ನು ತಿರುಗಿಸು. ~ನೀರ್ = ಬಿಸಿನೀರು ; ಕಾದ ನೀರು.

**ಬೆನಕ** ೧. = ಬೆನವ. ೨. ದುಂಡನೆಯ ಕಲ್ಲು.

**ಬೆನವ** (ನಾ). ವಿನಾಯಕ ; ಗಣಪತಿ.

**ಬೆನ್ನು** (ನಾ). ಶರೀರದ ಹಿಂಭಾಗ. ~ಕಟ್ಟು = ೧. ಪಕ್ಷವಹಿಸು ; ಸಮರ್ಥಿಸು. ೨. ಪುಸ್ತಕದ ಹೊದಿಕೆ ; ರಟ್ಟು. ~ಚಪ್ಪರಿಸು = ಬೆನ್ನುತಟ್ಟು. ~ತಟ್ಟು = ೧. ಬೆನ್ನಿನ ಮೇಲೆ ಹೊಡೆ, -ತಟ್ಟು. ೨. ಹುರಿದುಂಬಿಸು ; ಪ್ರೋತ್ಸಾಹಿಸು. ~ತೋರು = ಸೋತು ಓಡಿಹೋಗು ; ಹಿಮ್ಮೆಟ್ಟು. ~ಬೀಳು = ೧. ಆಶ್ರಯಿಸು ; ಅವಲಂಬಿಸು. ೨. ಹಿಂಬಾಲಿಸು ;

ಅನುಸರಿಸು. ~ಹತ್ತು = ಬೆನ್ನುಬೀಳು. ~ಹುರಿ = ಬೆನ್ನೆಲುಬು ; ಕಶೇರು.

ಬೆಪ್ಪ ೧. = ಬೆಳ್ಪ. ೨. ಬೆದರಿದವನು; ಹೆದರಿದವನು.

ಬೆಪ್ಪಳ (ನಾ). ೧. ಬೆರಗು; ವಿಸ್ಮಯ. ೨. ಗಾಬರಿ; ತಳಮಳ. ~ಇಸು = ಗಾಬರಿಯಾಗು; ತಲ್ಲಣಿಸು.

ಬೆಪ್ಪು (ನಾ). ೧. ದಿಗ್ಭ್ರಮೆ; ಕಂಗೇಡು. ೨. ತಿಳಿಗೇಡಿತನ; ಮೌಢ್ಯ. ೩. ಬೆರಗು; ಆಶ್ಚರ್ಯ. ~ಆಗು = ಕಂಗೆಡು; ದಿಙ್ಮೂಢನಾಗು. ~ತನ = ಮೂರ್ಖತನ; ಮೌಢ್ಯ.

ಬೆಪ್ಪುತಕ್ಕಡಿ (ನಾ). ತಿಳಿಗೇಡಿ.

ಬೆಬ್ಬರ (ನಾ). ಭಯ; ಅಂಜಿಕೆ. ~ಇಸು = ಭಯದಿಂದ ತಬ್ಬಿಬ್ಬಾಗು; ಕಂಗೆಡು. ~ಬೀಳು = ಗಾಬರಿಯಾಗು; ಮೆಟ್ಟಿಬೀಳು.

ಬೆಬ್ಬಳ = ಬೆಪ್ಪಳ. ~ಇಸು = ೧. ಸೋಜಿಗಪಡು; ಬೆರಗಾಗು. ೨. ಅಂಜು; ಗಾಬರಿಯಾಗು. ೩. ಮರುಳಾಗು; ಮೋಹಗೊಳ್ಳು. ೪. ಮರುಳುಗೊಳಿಸು; ಮೋಹಗೊಳಿಸು. ~ಪೊ(ವೊ)ೕಗು = ತಳಮಳಗೊಳ್ಳು; ಸಂತಾಪಗೊಳ್ಳು.

ಬೆಬ್ಬಳೆ = ಬೆಪ್ಪಳ.

ಬೆಮರ್(ರು) (ಕ್ರಿ). ೧. ಸ್ವೇದಗೊಳ್ಳು; ಬೆವರುಬಿಡು. ೨. ಭಯಪಡು; ಹೆದರು. (ನಾ). ೩. ಸ್ವೇದ; ಬೆವರು; ಘರ್ಮ. ~ಪ(ವ)ನಿ = ಬೆವರಿನ ಹನಿ; ಸ್ವೇದಜಲ.

ಬೆಮರ್ಚು (ಕ್ರಿ). ಬೆವರುವಂತೆ ಮಾಡು; ಬೆವರು ತರಿಸು.

ಬೆಮೆ (ನಾ). ಭ್ರಮೆ; ಭ್ರಾಂತಿ. ~ಕೊ(ಗೊ)ಳ್(ಳು) = ಭ್ರಮಿಸು; ಭ್ರಾಂತಿಗೊಳಗಾಗು.

ಬೆರಂಜು (ಕ್ರಿ). ಒಟ್ಟುಗೂಡಿಸು; ಕಲೆಹಾಕು.

ಬೆರ(ಂ)ಟು (ಕ್ರಿ). ೧. ಉಗುರಿನಿಂದ ಕೆರೆ; ಗೆಬರು. ೨. ಬೆರಳನ್ನು ಆಡಿಸು, -ಚಲಿಸು.

ಬೆರಕೆ (ನಾ). ೧. ಕೂಡಿರುವುದು; ಸೇರಿರುವುದು; ಮಿಶ್ರಣ. ೨. ಮೈಲಿಗೆ; ಅಶೌಚ. ~ಕ(ಗ)ಂಪು = ಬೇರೆ ಬೇರೆ ವಸ್ತುಗಳ ಮಿಶ್ರಣದಿಂದುಂಟಾದ ಸುವಾಸನೆ; ಮಿಶ್ರಗಂಧ. ~ಬೆ(ಪೆ)ಳಗು = ಮಿಶ್ರಕಾಂತಿ. ~ಮಾಡು = ಬೆರಸು; ಮಿಶ್ರಮಾಡು.

ಬೆರಗು (ಕ್ರಿ). ೧. ಅಶ್ಚರ್ಯಪಡು; ಸೋಜಿಗಪಡು. (ನಾ). ೨. ತ್ವರೆ; ಅವಸರ. ೩. ಉದ್ಧಟತನ; ಔದ್ಧತ್ಯ. ೪. = ಬೆಱಗು.

ಬೆರಲ್(ಲು) (ನಾ). ಬೆರಳು; ಬೆಟ್ಟು. ~ಅಚ್ಚು = ೧. ಬೆರಳಿನ ಗುರುತು, -ಮುದ್ರೆ. ೨. ಬೆರಳಿನಿಂದ ಅಕ್ಷರಗಳನ್ನು ಮುದ್ರಿಸುವ ಯಂತ್ರ; ಟೈಪ್‌ರೈಟರ್.

ಬೆರಸು (ಕ್ರಿ). ೧. ಕಲಸು; ಮಿಶ್ರಣಮಾಡು. ೨. ಕೂಡು; ಸೇರು. ೩. ಹೋರಾಡು; ಸೆಣಸು. ೪. ಕರಗು; ಲೀನವಾಗು. ೫. ನೆರೆ; ಸಂಭೋಗಿಸು. (ಅ). ೬. ಸಹಿತವಾಗಿ; ಒಡನೆ; ಸಂಗಡ.

ಬೆರಳ್(ಳು) ೧. = ಬೆರಲ್. ೨. ತುದಿ; ಏಣು. ~ಇಡು = ತೋರು; ನಿರ್ದೇಶಿಸು. ~ಕಚ್ಚು = ಸೋಜಿಗಪಡು; ಬೆರಗಾಗು. ~ಮುರಿ = ನಟಿಕೆ ತೆಗೆ.

ಬೆರೆ (ಕ್ರಿ). ೧. ಕೂಡು; ಸೇರು. ೨. ನೆರೆ; ಸಂಭೋಗಿಸು. ೩. = ಬೆಱೆ.

ಬೆಱ(ರ)ಗು (ನಾ). ೧. ಆಶ್ಚರ್ಯ; ವಿಸ್ಮಯ. ೨. ಭಯ; ದಿಗಿಲು. ೩. ದಾಕ್ಷಿಣ್ಯ. ೪. ಏನೂ ತಿಳಿಯದಿರುವ ಸ್ಥಿತಿ; ದಿಗ್ಭ್ರಮೆ. ~ಆಗು = ಆಶ್ಚರ್ಯಪಡು. ~ಪ(ವ)ಡು = ಬೆಱಗಾಗು.

ಬೆಱ(ರ)ಣಿ (ನಾ). ೧. ಸಗಣಿ; ಗೋಮಯ. ೨. ತಟ್ಟಿ ಒಣಗಿಸಿದ ಸಗಣಿ; ಕುರುಳು.

ಬೆಱ(ರೆ) (ಕ್ರಿ). ೧. ಸಡೆತುಕೊಳ್ಳು; ಸೆಟೆ. ೨. ಗರ್ವಪಡು ; ಸೊಕ್ಕು.

ಬೆರ್ಚು (ಕ್ರಿ). ೧. ಬೆದರು ; ಅಂಜು. (ನಾ). ೨. ಭಯ ; ಅಂಜಿಕೆ. ೩. = ಬೆಚ್ಚಲ್. ~ಇಸು = ಹೆದರಿಸು ; ಬೆಚ್ಚಿಸು.

ಬೆಲಗಸೆ (ನಾ). ಬೊಗಸೆ; ಅಂಜಲಿ.

ಬೆಲೆ (ನಾ). ೧. ಮೌಲ್ಯ; ಕ್ರಯ; ಕಿಮ್ಮತ್ತು. ೨. ಗೌರವ; ಘನತೆ. ~ಕ(ಗ)ಟ್ಟು =ಕ್ರಯವನ್ನು ಗೊತ್ತುಪಡಿಸು. ~ಕೊಡು =೧. ನಿಗದಿಯಾದ ಕ್ರಯವನ್ನು ತೆರು. ೨.ಗೌರವಿಸು. ~ಕೊ(ಗೊ)ಳ್=ಕ್ರಯಕ್ಕೆ ತೆಗೆದುಕೊಳ್ಳು; ಕೊಂಡುಕೊಳ್ಳು. ~ಪೆ(ವೆ)ಣ್(ಣ್ಣು)= ಸೂಳೆ; ವೇಶ್ಯೆ. ~ಬಾಳು =೧. ಹೆಚ್ಚಿನ ಮೌಲ್ಯವನ್ನು ಹೊಂದಿರು. ೨. ಮನ್ನಣೆಯನ್ನು ಪಡೆ.

ಬೆಲ್ಲ (ನಾ). ೧. ಕಬ್ಬಿನ ರಸದಿಂದ ತಯಾರಿಸಿದ ಪದಾರ್ಥ; ಗುಡ. ೨. ಮುತ್ತು; ಚುಂಬನ.

ಬೆಲ್ಲಪತ್ರೆ (ನಾ). ಒಂದು ಜಾತಿಯ ಮರ ಮತ್ತು ಪೂಜೆಗಾಗಿ ಉಪಯೋಗಿಸುವ ಅದರ ಎಲೆ; ಬಿಲ್ವಪತ್ರೆ.

ಬೆವರ್(ರು) ೧. = ಬೆಮರ್. ೨. ಧಾನ್ಯದಲ್ಲಿ ಜೊಳ್ಳನ್ನು ಬಿಟ್ಟು ಕಾಳನ್ನು ಗೋಚು, -ಗೋರು. ~ಸಾಲೆ= ಬಿಸಿಲಿನ ಜಳದಿಂದ ಉಂಟಾಗುವ ಒಂದು ಚರ್ಮ ರೋಗ; ಬೆವರುಗುಳ್ಳೆ.

ಬೆವಸಾಯ (ನಾ). ಬೇಸಾಯ ; ವ್ಯವಸಾಯ. ~(ಂ)ಗೆಯ್ = ೧.ವ್ಯವಸಾಯ ಮಾಡು ; ಕೃಷಿಮಾಡು. ೨. ಪ್ರಯತ್ನಿಸು; ತೊಡಗು.

ಬೆವಹಾರ (ನಾ). ೧. ಉದ್ಯೋಗ; ಕೆಲಸ. ೨. ವ್ಯಾಪಾರ; ವ್ಯವಹಾರ. ೩. ವ್ಯಾಪಾರದ ವಸ್ತು; ಸರಕು.

ಬೆವಹಾರಿ (ನಾ). ವ್ಯಾಪಾರಿ ; ವ್ಯವಹಾರಿ.

ಬೆಸ (ನಾ). ೧. ಅಪ್ಪಣೆ; ಆಜ್ಞೆ. ೨. ಪ್ರಶ್ನೆ. ೩. ಸೇವೆ; ಊಳಿಗ. ೪. ಕೆಲಸ; ಕಾರ್ಯ. ೫. ವಿಷಮಸಂಖ್ಯೆ. ~(ಂ)ಕೆ(ಗೆ)ಯ್ = ೧. ಮಾಡು; ನೆರವೇರಿಸು. ೨. ಸೇವೆಮಾಡು. ೩. ಕೆಲಸಮಾಡು; ಕಾರ್ಯ ಮಾಡು. ೪. ಗೌರವಿಸು. ~ಕೊ(ಗೊ)ಳ್(ಳು)=ಕೇಳು; ಪ್ರಶ್ನಿಸು. ~ಪೆ(ವೆ)ಣ್ = ದಾಸಿ; ಸೇವಕಿ. ~ಪೆ(ವೆ)ೞ್(ಳ್)= ಆಜ್ಞಾಪಿಸು; ಅಪ್ಪಣೆಕೊಡು. ~ಮಗ = ಕೆಲಸದವನು; ಆಳು.

ಬೆಸಣಿಕೆ (ನಾ). ಬಾಣಲೆ ; ಓಡು.

ಬೆಸಣಿಗೆ = ಬೆಸಣಿಕೆ.

ಬೆಸದ ೧.=ಬೆಸ್ತ. ೨. ಕೆಲಸಗಾರ; ಕಾರ್ಮಿಕ.

ಬೆಸನ (ನಾ). ೧. ಕೆಲಸ; ಕರ್ತವ್ಯ. ೨. ಆಜ್ಞೆ; ಅಪ್ಪಣೆ. ೩. ಚಿಂತೆ; ವ್ಯಸನ; ಕಳವಳ. ೪. ಆಸಕ್ತಿ; ಹಂಬಲ. ೫. ಚಟ; ಚಾಳಿ. ೬.ದುಶ್ಚಟ; ಕೆಟ್ಟಚಾಳಿ. ~ಇಗ = ಬೆಸನಿ.

ಬೆಸನಿ (ನಾ). ವ್ಯಸನವುಳ್ಳವನು; ದುಶ್ಚಟವುಳ್ಳವನು.

ಬೆಸಲ್ (ನಾ). ಹೆರಿಗೆ; ಪ್ರಸೂತಿ. ~ಆಗು = ಹೆರು; ಪ್ರಸವಿಸು.

ಬೆಸಲೆ (ನಾ). ೧. ಬಾಣಂತಿ. ೨. = ಬೆಸಲ್. ~ಅ(ಯಾ)ಗು = ಬೆಸಲಾಗು.

ಬೆಸಸು (ಕ್ರಿ). ೧. ಹೇಳು; ತಿಳಿಸು. ೨. ಆಜ್ಞಾಪಿಸು; ವಿಧಿಸು. ೩. ದಯಪಾಲಿಸು; ಅನುಗ್ರಹಿಸು.

ಬೆಸಳಿಗೆ= ಬೆಸಣಿಕೆ.

ಬೆಸಿಗೆ ೧. = ಬೆಸುಗೆ. ೨. ತೂಕದ ಒಂದು ಪ್ರಮಾಣ.

ಬೆಸು (ಕ್ರಿ). ಬೆಸುಗೆ ಹಾಕು; ಜೋಡಿಸು.

ಬೆಸುಗೆ (ನಾ). ಹೊಂದಿಕೆ; ಜೋಡಣೆ. ~ಕ(ಗ)ಳಚು = ೧. ಬೆಸುಗೆ ಬಿಚ್ಚು; ಸೀಳಿಹೋಗು. ೨. ಸ್ನೇಹ ನಾಶವಾಗು.

ಬೆಸೆ (ಕ್ರಿ). ೧. ಬೆಸುಗೆ ಹಾಕು; ಜೋಡಿಸು. ೨. ಗರ್ವಿಸು; ಬೀಗು; ಸೊಕ್ಕು.

೩. ಕೂಡು ; ಸೇರು. (ನಾ). ೪. ಅರಳೆಯನ್ನು ಹಿಂಜುವ ಬಿಲ್ಲು. ೫. ಹೊಡೆತ ; ಪೆಟ್ಟು. ೬. ಗತ್ತು ; ಬಿಂಕ. ೭. ಹೊಂದಾಣಿಕೆ. ~ಕೋಲ್ = ಅರಳೆ ಹೊಡೆಯುವ ಪಿಂಜಾರನ ಕೋಲು.

ಬೆಸ್ತ (ನಾ). ಮೀನುಗಾರ ; ಅಂಬಿಗ.

ಬೆಳ್ (ನಾ). ೧. ದಡ್ಡ ; ತಿಳಿಗೇಡಿ. (ಗು). ೨ = ಬೆಳು. ೩. ದಡ್ಡತನದಿಂದ ಕೂಡಿದ ~ಆಗು=ದಿಗ್ಭ್ರಮೆ ಹೊಂದು; ಬೆಪ್ಪಾಗು. ~ಆನೆ = ಐರಾವತ. ~ಆಳ್ = ಹೇಡಿ ; ಅಂಜುಬುರುಕ. ~ಉಳ್ಳಿ = ಒಂದು ಜಾತಿಯ ಗೆಡ್ಡೆ ; ಲಶುನ. ~ಕೊ(ಗೊ)ಡೆ = ಬಿಳಿಯ ಛತ್ರಿ; ಶ್ವೇತ ಚ್ಛತ್ರ. ~ಜಸ = ಶುಭ್ರವಾದ ಕೀರ್ತಿ. ~ತನ =ಮೌಢ್ಯ; ಮೂರ್ಖತನ. ~ತಾ(ದಾ)ವರೆ = ಬಿಳಿಯ ಬಣ್ಣದ ತಾವರೆ, -ಕಮಲ. ~ತಿ(ದಿ)ಂಗಳ್(ಳು) =ಚಂದ್ರಿಕೆ; ತಿಂಗಳ ಬೆಳಕು. ~ಪ(ವ)ಕ್ಕ = ಶುಕ್ಲಪಕ್ಷ. ~ಪ(ವ)ಕ್ಕಿ= ಬೆಳ್ಳಕ್ಕಿ; ಬಲಾಕ. ~ಮಡಿ = ಬಿಳಿಯ ಬಟ್ಟೆ ; ದುಕೂಲ. ~ಮಾಡು = ಮರುಳುಗೊಳಿಸು ; ಮೋಹಗೊಳಿಸು. ~ಮಿಗ = ಅಂಜುವ ಪ್ರಾಣಿ ~ಮುಗಿಲ್(ಲು) = ಬಿಳಿಯ ಮೋಡ. ~ಸರಿ = ಬಿಳಿಯ ಬಣ್ಣದ ಮಳೆ.

ಬೆಳಕಂಡಿ (ನಾ). ಗವಾಕ್ಷ ; ವಾತಾಯನ.

ಬೆಳಕಿಂಡಿ = ಬೆಳಕಂಡಿ.

ಬೆಳಕು (ನಾ). ೧. ಪ್ರಕಾಶ; ಹೊಳಪು. ೨. ದೀಪ ; ದೀವಿಗೆ.

ಬೆಳಗಾಯ್ (ನಾ). ಬೇಲದ ಕಾಯಿ.

ಬೆಳಗಾರ = ಬಿಳಿಗಾರ.

ಬೆಳಗು (ಕ್ರಿ). ೧. ಹೊಳೆ; ಪ್ರಕಾಶಿಸು. ೨. ಪ್ರಕಾಶಿಸುವಂತೆ ಮಾಡು ; ಬೆಳಗಿಸು. ೩. ಕೀರ್ತಿಯನ್ನು ತರು. ೪. ದೀಪವನ್ನು ಹಚ್ಚು, -ಹೊತ್ತಿಸು. ೫. ಪಾತ್ರೆಮುಂತಾದುವುಗಳನ್ನು ತಿಕ್ಕಿ ಸ್ವಚ್ಛಮಾಡು. (ನಾ). ೬. ಕಾಂತಿ ; ಹೊಳಪು. ೭. ಪ್ರಾತಃಕಾಲ ; ಮುಂಜಾವ. ~ಆಗು = ಬೆಳಕು ಹರಿ ; ಸೂರ್ಯೋದಯವಾಗು. ~ಇಸು = ೧. ಪ್ರಕಾಶಗೊಳಿಸು; ಉಜ್ವಲಗೊಳಿಸು. ೨. ದೀಪವನ್ನು ಹೊತ್ತಿಸು. ೩. ಕೀರ್ತಿ ಬರುವಂತೆ ಮಾಡು.

ಬೆಳ(ಂ)ತಿಗೆ (ನಾ). ಬಿಳುಪು ; ಧವಳತೆ. ~ಅ(ಯ)ಕ್ಕಿ = ಬಿಳಿಯ ಅಕ್ಕಿ ; ಬೆಣತಕ್ಕಿ. ~ಕ(ಗ)ಣ್ = ಹೊಳಪುಳ್ಳ ಕಣ್ಣು.

ಬೆಳರ್ (ಕ್ರಿ). ೧. ಬೆಳ್ಳಗಾಗು ; ಉಜ್ವಲವಾಗು. (ನಾ). ೨. ಕಾಂತಿ ; ಪ್ರಕಾಶ. ~ಕೆ(ಗೆ)ಂಪು = ಬಿಳಿಚಿಕೊಂಡ ಕೆಂಬಣ್ಣ. ~ಬಾ(ವಾ)ಯ್ = ಬಿಳಿಚಿಕೊಂಡ ಬಾಯಿ. ~ಮಾಡು = ಬಣ್ಣಗೆಡಿಸು ; ನಿಸ್ತೇಜಗೊಳಿಸು.

ಬೆಳರ್ಪು (ನಾ). ಬಿಳಿಯ ಬಣ್ಣ ; ಧವಳತೆ.

ಬೆಳರ್ವಣ್ಣ (ನಾ). ೧. ಶಿವ. ೨. = ಬೆಳರ್ಪು.

ಬೆಳಲ್(ಲು) (ನಾ). ಬೆಳವಲ ಮರ ಮತ್ತು ಅದರ ಹಣ್ಣು ; ಬೇಲ.

ಬೆಳವ (ನಾ). ೧. ಒಂದು ಜಾತಿಯ ಹಕ್ಕಿ ; ಕಾಡು ಪಾರಿವಾಳ. ೨. = ಬೆಳಲ್.

ಬೆಳವಣಿಗೆ (ನಾ). ಅಭಿವೃದ್ಧಿ ; ಏಳಿಗೆ.

ಬೆಳವಲ = ಬೆಳಲ್.

ಬೆಳವಾಗ (ನಾ). ನೀಚ ; ದುಷ್ಟ.

ಬೆಳವು (ನಾ). ೧. ಬೆಳೆಯುವಿಕೆ ; ಅಭಿವೃದ್ಧಿ. ೨. ಬಿಲ್ವವೃಕ್ಷ ; ಬೆಲ್ಲವತ್ತ. ~ಇಗೆ = ಅಭಿವೃದ್ಧಿ ; ಏಳಿಗೆ.

ಬೆಳಸಿ (ನಾ). ಎಳೆಯ ಕಾಳಿನ ತೆನೆ ; ಸೀತೆನೆ.

ಬೆಳಸು (ಕ್ರಿ). ೧. ಬೆಳೆಯಿಸು ; ಅಭಿವೃದ್ಧಿಗೊಳಿಸು. (ನಾ). ೨. ಬೆಳೆ ; ಫಸಲು. ೩. ಕಾಳು ; ತೆನೆ. ೪. ಬೆಳವಣಿಗೆ ; ವೃದ್ಧಿ.

ಬೆಳಸೆ = ಬೆಳಸಿ.

ಬೆಳು (ಗು). ಬಿಳುಪಾದ; ಶುಭ್ರವಾದ. ~ಕ(ಗ)ನ್ನಡ = ಅಚ್ಚಗನ್ನಡ; ಶುದ್ಧವಾದ ಕನ್ನಡ. ~ಕ(ಗ)ವತೆ = ಬೆಳಕಿನಲ್ಲಿ ಮಾಡುವ ದರೋಡೆ. ~ಕಾ(ಗಾ)ಲ = ಶರತ್ಕಾಲ. ~ಕೊ(ಗೊ)ಡೆ=ಬೆಳ್ಗೊಡೆ. ~ತಿ(ದಿ)ಂಗಳ್(ಳು) = ಬೆಳ್ದಿಂಗಳ್. ~ಬೆ(ವೆ)ಟ್ಟ = ಕೈಲಾಸ; ಹಿಮಾಲಯ ಪರ್ವತ.

ಬೆಳುಗಾರ = ಬಿಳಿಗಾರ.

ಬೆಳುಪು (ನಾ). ಬಿಳುಪು; ಬಿಳಿಯ ಬಣ್ಣ.

ಬೆಳುಮಾತು (ನಾ). ದಡ್ಡತನದ ಮಾತು; ಪೆಚ್ಚುಮಾತು.

ಬೆಳುವ = ಬೆಳವ.

ಬೆಳುವೆ (ನಾ). ಮರುಳು; ಮೋಹ.

ಬೆಳೆ (ಕ್ರಿ). ೧. ವೃದ್ಧಿಹೊಂದು; ದೊಡ್ಡದಾಗು. ೨. ಅಧಿಕವಾಗು; ಹೆಚ್ಚಾಗು. ೩. ಹುಟ್ಟು; ಮೂಡು; ಮೊಳೆ. ೪ ಫಸಲು ಪಡೆ. ೫. ಫಲಕೊಡು; ಸಸ್ಯಸಮೃದ್ಧವಾಗು. (ನಾ). ೬. ಬೆಳವಣಿಗೆ. ೭. ಪಯಿರು. ~ಇ(ಯಿ)ಸು = (ಸಸ್ಯ ಮೊದಲಾದುವುಗಳನ್ನು) ಅಭಿವೃದ್ಧಿಪಡಿಸು; ಕೃಷಿಮಾಡು. ~ಕೆ(ಗೆ)ಯ್ = ಪೈರು ತುಂಬಿದ ಭೂಮಿ.

ಬೆಳೆಸು = ಬೆಳೆಯಿಸು.

ಬೆಳ್ಕಱ್(ರ್,ರು,ಱು) (ಕ್ರಿ). ಭಯಪಡು; ಅಂಜು.

ಬೆಳ್ಕುಱ್(ರ್,ರು,ಱು) = ಬೆಳ್ಕಱ್.

ಬೆಳ್ಗದಿರ (ನಾ). ಬಿಳಿಯ ಕಿರಣಗಳುಳ್ಳವನು; ಚಂದ್ರ.

ಬೆಳ್ಪ (ನಾ). ದಡ್ಡ; ಮಂಕ; ಬೆಪ್ಪ.

ಬೆಳ್ಪಳ = ಬೆಪ್ಪಳ.

ಬೆಳ್ಪು (ನಾ). ೧. ಬಿಳುಪು; ಧವಳತೆ. ೨. ಹೊಳಪು; ಕಾಂತಿ. ~ಅಡರ್ = ಬೆಳ್ಳಗಾಗು; ಬಿಳುಪೇರು.

ಬೆಳ್ಳ ೧. = ಬೆಳ್ಪ. ೨. ಪ್ರವಾಹ; ಪೂರ. ~(ಂ)ಕೆ(ಗೆ)ಡೆ = ಪ್ರವಾಹವುಂಟಾಗು; ಉಕ್ಕೇರು. ~ವಾಸ = ಪ್ರವಾಹದ ನಡುವೆ ನಿಂತುಕೊಂಡು ತಪಸ್ಸು ಮಾಡುವುದು.

ಬೆಳ್ಳಕ್ಕರಿಗ (ನಾ). ನಿರಕ್ಷರಕುಕ್ಷಿ; ಅಜ್ಞ.

ಬೆಳ್ಳಕ್ಕಿ (ನಾ). ಒಂದು ಜಾತಿಯ ಜಲಚರ ಪಕ್ಷಿ; ಬಲಾಕ.

ಬೆಳ್ಳವಾರ (ನಾ). ಬಲೆ.

ಬೆಳ್ಳಾರ = ಬೆಳ್ಳವಾರ.

ಬೆಳ್ಳಿ (ನಾ). ೧. ಒಂದು ಬಗೆಯ ಲೋಹ; ರಜತ. ೨. ನವಗ್ರಹಗಳಲ್ಲಿ ಒಂದು; ಶುಕ್ರ. ~ಬೆ(ವೆ)ಟ್ಟ = ರಜತಾದ್ರಿ; ಕೈಲಾಸ.

ಬೇ (ಕ್ರಿ). ೧. ಸುಡು; ದಹಿಸು. ೨. ಕುದಿ; ಪಕ್ವವಾಗು. ೩. ಸಂತಾಪಪಡು; ಮರುಗು. ~ಕು(ಗು)ದಿ = ೧. ಅತಿಯಾದ ಉಷ್ಣ, -ಕಾವು. ೨. ತೀವ್ರವಾದ ಸಂತಾಪ.

ಬೇ(ಂ)ಟ (ನಾ). ೧. ಅಪೇಕ್ಷೆ. ೨. ಕಾಮಲಾಲಸೆ; ಕಾಮಾತುರತೆ. ~(ಂ)ಕೊ(ಗೊ)ಳ್ =ಕಾಮಾತುರತೆಯನ್ನು ಹೊಂದು, -ಪಡೆ. ~ಕಾ(ಗಾ)ಱ(ರ) = ಕಾಮುಕ.

ಬೇ(ಂ)ಟೆ (ನಾ). ೧. ಶಿಕಾರಿ; ಮೃಗಯೆ. ೨. ಬೇಟೆಗೆ ಗುರಿಯಾಗುವ ಪ್ರಾಣಿ. ~ಇಗ = ಬೇಂಟೆಕಾಱ. ~ಕಾ(ಗಾ)ಱ(ರ)=ಬೇಟೆಯಾಡುವವನು; ಬೇಡ; ಶಬರ. ~ಪ(ವ)ಱೆ(ರೆ) = ಬೇಟೆಯಲ್ಲಿ ಉಪಯೋಗಿಸುವ ಹಲಗೆ, -ಹರೆ.

ಬೇಂಟೆಗಾರ್ತಿ (ನಾ). ಶಬರಿ; ಬೇಡಿತಿ.

ಬೇಂಟೆಯ (ನಾ). ಬೇಡ; ಬೇಟೆಗಾರ.

ಬೇಕರಿ (ನಾ). ೧. ಬೆಂದು ಕರಿಕಾಗುವಿಕೆ. ೨. ರೊಟ್ಟಿ, ಬಿಸ್ಕತ್ತು ಮುಂತಾದುವುಗಳನ್ನು ಮಾರುವ ಅಂಗಡಿ. ~ಆ(ಯಾ)ಗು = ಬೆಂದು ಕರಿಕಾಗು; ಸೀದುಹೋಗು. ~ಪೋ(ವೋ)ಗು = ಬೇಕರಿಯಾಗು.

ಬೇಕಾಬಿಟ್ಟಿ (ಅ). ಅರೆಮನಸ್ಸಿನಿಂದ; ಮನಸ್ಸಿಲ್ಲದೆ.

ಬೇಕಾಯಿದೆಬೇಶಿರ್ (ಅ). ಕಾನೂನು ಬಾಹಿರವಾಗಿ; ಅಕ್ರಮವಾಗಿ.

ಬೇಕು (ನಾ). ೧. ಬಯಕೆ; ಇಚ್ಛೆ. ೨. ಅವಶ್ಯಕತೆ; ಅಗತ್ಯ. (ಅ). ೩. ಇಷ್ಟವನ್ನಾಗಲೀ ಅಗತ್ಯವನ್ನಾಗಲೀ ಸೂಚಿಸುವ ಅವ್ಯಯ. ~ಆಗು = ೧. ಬೇಕೆನಿಸು; ಇಷ್ಟವಾಗು. ೨. ಆವಶ್ಯಕತೆಯುಂಟಾಗು.

ಬೇಕೂಫ (ನಾ). ತಿಳಿಗೇಡಿ; ಮೂರ್ಖ.

ಬೇಗ (ನಾ). ೧. ತ್ವರೆ; ಶೀಘ್ರತೆ. ೨. ವೇಳೆ; ಸಮಯ; ಹೊತ್ತು. (ಅ). ೩. ವೇಗವಾಗಿ; ಶೀಘ್ರವಾಗಿ.

ಬೇಗಡ (ನಾ). ೧. ತೂತು; ರಂಧ್ರ. ೨. ತೂತು ಕೊರೆಯುವಿಕೆ; ರಂಧ್ರಮಾಡುವಿಕೆ.

ಬೇಗಡೆ (ನಾ). ೧. ವಜ್ಜ; ತೂತು. ೨. ಅಲಂಕಾರಕ್ಕಾಗಿ ಬಳಸುವ ಹೊಳಪಿನ ತಗಡು. ~ಇಸು = ರತ್ನದ ಹರಳು ಮೊದಲಾದುವುಗಳಿಗೆ ರಂಧ್ರವನ್ನು ಕೊರೆ. ~ಬೆ(ವೆ)ಸ = ರತ್ನಗಳಿಗೆ ವಜ್ಜಮಾಡುವ ಕೆಲಸ.

ಬೇಗಾರ (ನಾ). ೧. ಬಿಟ್ಟಿಯಾಗಿ ಮಾಡಿಸಿಕೊಳ್ಳುವ ಕೆಲಸ. ೨. ಬಿಟ್ಟಿಕೆಲಸ ಮಾಡುವವನು.

ಬೇಗಾರಿ = ಬೇಗಾರ.

ಬೇಗೆ (ನಾ). ೧. ಬೆಂಕಿ; ಉರಿ; ಜ್ವಾಲೆ. ೨. ಸಂಕಟ; ತಳಮಳ. ~ಕಿ(ಗಿ)ಚ್ಚು =ಕಾಳ್ಗಿಚ್ಚು; ದಾವಾನಲ. ~ಪೊ(ವೊ)ೇಗು = ಬೆಂಕಿಯಿಂದ ಸುಟ್ಟುಹೋಗು.

ಬೇಚರಾಕು (ನಾ). ೧. ಉಳದೆ ಇರುವ ಭೂಮಿ; ಬೀಳು. (ಗು). ೨. ನಿರ್ಜನವಾದ; ಪಾಳುಬಿದ್ದ.

ಬೇಜವಾಬ್ದಾರಿ (ನಾ). ಜವಾಬ್ದಾರಿ ಇಲ್ಲದಿರುವಿಕೆ; ಹೊಣೆಗೇಡಿತನ.

ಬೇಜಾರು = ಬೇಸಱ.

ಬೇಡ (ನಾ). ೧. ಬೇಟೆಗಾರ; ಶಬರ. ೨. ಹೇಡಿ; ಅಳ್ಳೆದೆಯವನು. ೩. ಅವಶ್ಯಕವಲ್ಲದ ವಸ್ತು. (ಅ). ೪. ಸಲ್ಲದು, ಯೋಗ್ಯವಲ್ಲ, ಬೇಕಾಗಿಲ್ಲ ಎಂಬುದನ್ನು ಸೂಚಿಸುವ ಅವ್ಯಯ. ~ಇತಿ = ಶಬರಿ; ಬೇಡಿತಿ. ~ಪ(ವ)ಟ್ಟ(ಟ್ಟು) = ಬೇಡರು ವಾಸಿಸುವ ಸ್ಥಳ; ಬೇಡರ ಹಟ್ಟಿ.

ಬೇಡಿ (ನಾ). ಸಂಕೋಲೆ; ಕೋಳ.

ಬೇಡು (ಕ್ರಿ). ೧. ಬಯಸು; ಆಶಿಸು. ೨. ಕೇಳು; ಯಾಚಿಸು. ~ಇಕೆ=ಕೋರಿಕೆ; ಪ್ರಾರ್ಥನೆ.

ಬೇಣ (ನಾ). ಹುಲ್ಲುಗಾವಲು; ಗೋಮಾಳ.

ಬೇತಾಲ(ಳ) (ನಾ). ಭೂತ; ಪಿಶಾಚಿ.

ಬೇತು (ನಾ). ಹಂಚಿಕೆ; ಯುಕ್ತಿ; ಉಪಾಯ. ~ಹಾಕು = ಹಂಚಿಕೆಮಾಡು.

ಬೇದ (ನಾ). ೧. ವೇದ. ೨. = ಭೇದ. ~ಅಕ್ಕರಿಗ = ವೇದವನ್ನು ಓದಿದವನು.

ಬೇದನೆ (ನಾ). ಸಂಕಟ; ವೇದನೆ.

ಬೇನ (ನಾ). ಕೊಳಲು; ವೇಣು.

ಬೇನೆ (ನಾ). ೧. ರೋಗ; ವ್ಯಾಧಿ. ೨. ನೋವು; ಯಾತನೆ. ~ಕು(ಗು)ದಿ = ಬಳಲು; ಸಂಕಟಪಡು. ~ಬೀಳು=ಕಾಯಿಲೆ ಬೀಳು; ರೋಗಕ್ಕೆ ಒಳಗಾಗು.

ಬೇಪತ್ತೆ (ನಾ). ಸುಳಿವು ಇಲ್ಲದಿರುವಿಕೆ; ನಾಪತ್ತೆ. ~ಆ(ಯಾ)ಗು = ಕಾಣದೆ ಹೋಗು; ನಾಪತ್ತೆಯಾಗು.

ಬೇಪಾರ = ಬೇಹಾರ.

ಬೇಯ್(ಯು) = ಬೇ. ~ಇಸು=೧. ಸುಡು; ದಹಿಸು. ೨. ಪಕ್ವಮಾಡು. ೩. ಮರುಗುವಂತೆ ಮಾಡು; ನೋಯಿಸು.

ಬೇರ್(ರು) (ನಾ). ಮರ, ಗಿಡ ಮುಂತಾದುವುಗಳ ಅಡಿಭಾಗ; ಮೂಲ. ~ಊಱು(ರು) = ಸ್ಥಿರವಾಗಿ ನೆಲಸು; ತಳವೂರು. ~ಕೊಯ್ಯು = ೧. ಬೇರನ್ನು ಕೀಳು.

೨. ಸಂಪೂರ್ಣವಾಗಿ ನಾಶಮಾಡು. ~ಕೊ(ಗೊ)ಲೆ = ಸಂಪೂರ್ಣನಾಶ; ಮೂಲವನ್ನೆ ನಾಶಮಾಡುವುದು. ~ಬಿಡು = ಬೇರೂಜು. ~ಬೆ(ವೆ)ರಸು = ಬೇರು ಸಹಿತವಾಗಿ.

ಬೇರ (ನಾ). ೧. ವೈರ; ಹಗೆತನ. ೨. ವ್ಯಾಪಾರ. ~ಇಗ = ಶತ್ರು; ವೈರಿ.

ಬೇರೀಜು (ನಾ). ೧. ಒಟ್ಟು ಮೊತ್ತ. ೨. ಒಟ್ಟು ಕಂಡಾಯದ ಮೊಬಲಗು, -ಮೊತ್ತ.

ಬೇಱೆ(ರೆ) (ನಾ). ೧. ಪ್ರತ್ಯೇಕವಾದುದು. (ಗು). ೨. ಪ್ರತ್ಯೇಕವಾದ.

ಬೇರ್ಪಡು (ಕ್ರಿ). ೧. ಬೇರೆಯಾಗು; ಪ್ರತ್ಯೇಕವಾಗು. ೨. ವಿಭಿನ್ನವಾಗು; ಬೇರೆ ರೀತಿಯಾಗು. ~ಇಸು = ೧. ಬೇರೆಬೇರೆ ಮಾಡು; ಪ್ರತ್ಯೇಕಿಸು. ೨. ವ್ಯತ್ಯಾಸ ಮಾಡು; ಭೇದ ತೋರಿಸು.

ಬೇಲ(ಳ) (ನಾ). ಒಂದು ಜಾತಿಯ ಮರ ಮತ್ತು ಅದರ ಹಣ್ಣು; ಬೆಳವಲ.

ಬೇಲಿ (ನಾ). ಗಿಡಗಳಿಂದ ಆದ ಸುತ್ತುಗೋಡೆ.

ಬೇವಸ (ನಾ). ಚಿಂತೆ; ದುಮ್ಮಾನ; ಉಮ್ಮಳ.

ಬೇವಾರ್ಸಿ (ನಾ). ೧. ಅನಾಥ; ದಿಕ್ಕಿಲ್ಲದವನು. (ಗು). ೨. ದಿಕ್ಕಿಲ್ಲದ; ಗತಿಯಿಲ್ಲದ.

ಬೇವು (ನಾ). ಒಂದು ಜಾತಿಯ ಮರ; ಕಹಿಬೇವು; ಪಿಚುಮಂದ.

ಬೇಶ್ (ನಾ). ೧. ಲೇಸು; ಒಳಿತು; ಒಳ್ಳೆಯದು. ೨. ಕೊಂಡಾಟದ ಒಂದು ಮಾತು.

ಬೇಷ್ = ಬೇಶ್.

ಬೇಸಗೆ (ನಾ). ಗ್ರೀಷ್ಮಕಾಲ; ಸೆಕೆಗಾಲ.

ಬೇಸನ್ (ನಾ). ಕಡಲೆಹಿಟ್ಟು. ~ಲಾಡು = ಕಡಲೆಹಿಟ್ಟಿನಿಂದ ಮಾಡಿದ ಲಾಡು.

ಬೇಸರಿ (ನಾ). ಮೂಗಿನಲ್ಲಿ ಧರಿಸುವ ಒಂದು ಆಭರಣ.

ಬೇಸಱ್(ರ್,ರು,ಱು) (ಕ್ರಿ). ೧. ದಣಿ; ಬಳಲು. ೨. ಬೇಜಾರುಪಡು; ಉತ್ಸಾಹಹೀನವಾಗು. (ನಾ). ೩. = ಬೇಸಱ. ~ಇಕೆ = ಬೇಜಾರು; ನಿರುತ್ಸಾಹ. ~ಇಸು = ೧. ಬೇಸರಹೊಂದು; ಉದಾಸವಾಗು. ೨. ಬೇಜಾರನ್ನುಂಟು ಮಾಡು. ೩. ಬಳಲಿಸು; ಆಯಾಸಪಡಿಸು.

ಬೇಸಱ(ರ) (ನಾ). ೧. ಬೇಜಾರು; ಉದಾಸೀನತೆ. ೨. ಆಯಾಸ; ದಣಿವು.

ಬೇಸಾಯ (ನಾ). ವ್ಯವಸಾಯ; ಕೃಷಿ. ~ಗಾರ = ವ್ಯವಸಾಯ ಮಾಡುವವನು; ಒಕ್ಕಲಿಗ.

ಬೇಸಿಗೆ = ಬೇಸಗೆ.

ಬೇಸ್ತು (ನಾ). ಮೋಸ. ~ಬೀಳು = ಮೋಸ ಹೋಗು.

ಬೇಹರ (ನಾ). ೧. ಮಹಾಪಂಡಿತ; ಘನ ವಿದ್ವಾಂಸ. ೨. = ಬೇಹಾರ.

ಬೇಹಾರ (ನಾ). ವ್ಯಾಪಾರ; ವ್ಯವಹಾರ. ~ಇಗ = ಬೇಹಾರಿ.

ಬೇಹಾರಿ (ನಾ). ವ್ಯಾಪಾರಿ; ವ್ಯವಹಾರಿ.

ಬೇಹು (ನಾ). ಗುಪ್ತಚಾರನ ಕೆಲಸ; ಗೂಢಚರ್ಯೆ. ~ಕಾ(ಗಾ)ಱ(ರ)=ಗೂಢಚಾರ; ಗುಪ್ತಚಾರ.

ಬೇಹುಷಾರಿ (ನಾ). ಎಚ್ಚರಗೇಡಿತನ; ನಿರ್ಲಕ್ಷ್ಯ.

ಬೇಳ್(ಳು) (ಕ್ರಿ). ೧. ಹೋಮದಲ್ಲಿ ಬಲಿಯನ್ನು ಅರ್ಪಿಸು, -ಆಹುತಿ ಕೊಡು. (ನಾ). ೨. ದಿಗ್ಭ್ರಾಂತಿ; ಕಕ್ಕಾಬಿಕ್ಕಿ; ಮರುಳು. ೩. ದಡ್ಡತನ. ~ಆಗು = ೧. ಬೆಪ್ಪಾಗು; ಮರುಳಾಗು. ೨. ತಳಮಳಗೊಳ್ಳು; ಕಳವಳಿಸು. ೩. ಬೂದಿಯಾಗು; ಭಸ್ಮವಾಗು. ~ಕೊ(ಗೊ)ಳ್ = ಅಗ್ನಿಗೆ ಆಹುತಿಯಾಗು.

ಬೇಳಂಬ (ನಾ). ೧. ಬಯಕೆ ; ಇಚ್ಛೆ. ೨. ಚಿಂತೆ ; ಆಲೋಚನೆ. ೩. ಹೋಮದಲ್ಲಿ ಅರ್ಪಿಸುವ ಆಹುತಿ. ೪. ಸುಟ್ಟು ನಾಶ ವಾಗುವಿಕೆ ; ಉಪಹತಿ.

ಬೇಳುವೆ ೧. = ಬೇಳ್ವೆ. ೨. ಚಿಂತೆ ; ಕಳವಳ.

ಬೇಳೆ (ನಾ). ೧. ದ್ವಿದಳಧಾನ್ಯದ ಒಡೆದ ಭಾಗ. ೨. ಒಂದು ನಾಣ್ಯ. ~ಬೇಯು = ೧. ಬೇಳೆ ಪಕ್ವವಾಗು. ೨. ಕೆಲಸವಾಗು; ಯುಕ್ತಿ ಸಫಲವಾಗು. ~ಮಣಿ=ತಾಳಿಯ ಜೊತೆಯಲ್ಲಿ ಹಾಕಿಕೊಳ್ಳುವ ಬೇಳೆ ಯಾಕಾರದ ಚಿನ್ನದ ಮಣಿ, –ಗುಂಡು.

ಬೇಳ್ವೆ (ನಾ). ೧. ಹೋಮ ; ಯಜ್ಞ. ೨. ಮರುಳು ; ಮಾಯೆ

ಬೈ (ಕ್ರಿ). ೧. ಬಯ್ಯು ; ನಿಂದಿಸು. ೨. ಮರೆ ಯಾಗು ; ಅಡಗು. (ನಾ). ೩. ಬೈಗುಳು ; ನಿಂದೆ

ಬೈಕ (ನಾ). ಭಿಕ್ಷೆ. ~(೦)ಕು(ಗು)ಳಿ =ಯಾಚಕ; ಭಿಕ್ಷುಕ. ~(೦)ಕೊ(ಗೊ)ಳ್ = ಭಿಕ್ಷೆ ಬೇಡು.

ಬೈಕೆ = ಬಯ್ಕೆ. ~ಕೊ(ಗೊ)ಡು=ಬಯಸು ; ಬೇಡು.

ಬೈಗು=ಬಯ್ಗು. ~(೦)ಪೊ(ಬೊ)ಲ್ತು(ಳ್ತು) = ಇಳಿಹೊತ್ತು ; ಸಾಯಂಕಾಲದ ವೇಳೆ.

ಬೈಗುಳ್(ಳು) = ಬಯ್ಗುಳ್.

ಬೈಠಕ್(ಕು) (ನಾ). ೧. ಸಭೆ ; ಅಧಿವೇಶನ. ೨. ಸಂಗೀತಗೋಷ್ಠಿ. ೩. ವಾಸ; ವಸತಿ. ~ಖಾನೆ = ಕುಳಿತುಕೊಳ್ಳುವ ಸ್ಥಳ; ದಿವಾನಖಾನೆ.

ಬೈತಲೆ = ಬಯ್ತಲೆ. ~ಮ(ವ)ಣಿ = ಬೈತಲೆಗೆ ಹಾಕಿಕೊಳ್ಳುವ ಆಭರಣ ; ಬೈತಲೆಬೊಟ್ಟು.

ಬೈತ್ರ = ಭೈತ್ರ.

ಬೈಬಲ್ (ನಾ). ಕ್ರೈಸ್ತರ ಧರ್ಮಗ್ರಂಥ.

ಬೈರಗಿ (ನಾ). ರಂಧ್ರ ಕೊರೆಯುವ ಸಾಧನ. ~ಬೀಟು(ಳ್) = ತೂತುಬೀಳು.

ಬೈರವ = ಭೈರವ.

ಬೈರಾಗಿ (ನಾ). ವಿರಾಗಿ ; ವಿರಕ್ತ.

ಬೈರಾಗಿಣಿ (ನಾ). ವಿರಾಗಿಣಿ.

ಬೈರಾಸ (ನಾ). ಮೈಮೇಲೆ ಹೊದೆಯುವ ವಸ್ತ್ರ ; ಉತ್ತರೀಯ.

ಬೈರಾಸು = ಬೈರಾಸ.

ಬೈರಿಗೆ ೧. = ಬೈರಗಿ. ೨. ಬೇಸರ ತರಿಸುವುದು ; ತಲೆಚಿಟ್ಟು ಹಿಡಿಸುವುದು. ೩. ಬೇಸರ ವನ್ನುಂಟು ಮಾಡುವವನು.

ಬೈರೂಪ (ನಾ). ಬಹುರೂಪ ; ಸೋಗು.

ಬೈಲು = ಬಯಲ್. ~ಆಗು = ಬಯಲಿಗೆ ಬರು; ಪ್ರಕಟವಾಗು. ~ಆಟ = ಬಯಲಿನಲ್ಲಿ ಅಟ್ಟಣೆ ಹಾಕಿ ಆಡುವ ನಾಟಕ; ಬಯಲಾಟ.

ಬೈಸಿಕೆ (ನಾ). ೧. ಶಿಖರ ; ತುದಿ. ೨. ಕುಳಿತು ಕೊಳ್ಳುವ ಒಂದು ಭಂಗಿ. ೩. ನೆಲೆ; ಆಶ್ರಯ. ೪. ಬೆಸುಗೆ; ಸಂಬಂಧ.

ಬೈಸಿಗೆ = ಬೈಸಿಕೆ. ~ತೆ(ದೆ)ಗೆ = ಕೂತು ಏಳು ; ಊಟುಬೈಸು ಮಾಡು.

ಬೈಹುಲ್ಲು (ನಾ). ಒಣಗಿದ ಹುಲ್ಲು.

ಬೊಂಕು (ಕ್ರಿ). ೧. ಸುಳ್ಳು ಹೇಳು ; ಅಸತ್ಯ ವನ್ನಾಡು. (ನಾ). ೨. ಸುಳ್ಳು ; ಹುಸಿ.

ಬೊಂಕೆ (ನಾ). ಅಂಟು ; ಗೋಂದು. ~ಮಣ್ಣು = ಜಿಗಟುಮಣ್ಣು ; ಉತ್ತಮ ದರ್ಜೆಯ ಮಣ್ಣು.

ಬೊಂಡ (ನಾ). ೧. ಎಳೆಯ ಕಾಯಿ. ೨. ಎಳೆಯ ತೆಂಗಿನಕಾಯಿ ; ಸೀಯಾಳ.

ಬೊಂತೆ (ನಾ). ಹರಿದ ಬಟ್ಟೆಗಳನ್ನು ಹೊಲಿದು ಮಾಡಿದ ಹಚ್ಚಡ ; ಕವುದಿ.

ಬೊಂದಿ (ನಾ). ೧. ಶರೀರ ; ದೇಹ ; ಮೈ. ೨. ಹುರಿ ಅಥವಾ ಹಗ್ಗ ; ಕತ್ತ.

ಬೊಂದುಕ (ನಾ). ೧. ಠಕ್ಕ ; ಮೋಸಗಾರ. ೨. ಬೊಂತೆಯನ್ನು ಧರಿಸಿದವನು.

ಬೊಂಪಳೆ (ನಾ). ೧. ನೊರೆ ; ಬುರುಗು. ೨. ಸಾರ ; ತಿರುಳು.

ಬೊಂಪು (ನಾ). ೧. ಒಂದು ಜಾತಿಯ ಮೀನು. ೨. ಅಂಟಾಗಿರುವುದು ; ಜಿಗಿಯುಳ್ಳದು.

ಬೊಂಬಡ (ನಾ). ಬೊಬ್ಬಾಟ ; ಚೀತ್ಕಾರ.

ಬೊಂಬಡಿ = ಬೊಂಬಡ. ~ಹೊಡೆ = ಬೊಬ್ಬಾಟ ಹಾಕು ; ಬೊಬ್ಬೆಮಾಡು ; ಗಲಾಟೆಮಾಡು.

ಬೊಂಬಾಳ (ನಾ). ೧. ಪ್ರಕಾಶಮಾನವಾಗಿರುವುದು ; ಹೊಳೆಯುವುದು. ೨. ಹೊಳೆಯುವ ಪಲ್ಲಕ್ಕಿ. ೩. ದೀಪವನ್ನು ಹಚ್ಚಿಸಲು ಕಂಬಕ್ಕೆ ಅಳವಡಿಸಿರುವ ಗೊಂಬೆಗಳ ಬೊಗಸೆ, -ಅಂಜಲಿ. ~ದೀವಿಗೆ = ಚಾಚಿದ ಬೊಗಸೆಗಳನ್ನುಳ್ಳ ಗೊಂಬೆಗಳನ್ನು ಅಳವಡಿಸಿರುವ ದೀಪದ ಕಂಬ.

ಬೊಂಬು (ನಾ). ಬಿದಿರಿನ ಗಳು ; ಬಂಬು.

ಬೊಂಬುಳಿ (ನಾ). ಒಂದು ವಾದ್ಯವಿಶೇಷ ; ಡೋಲು.

ಬೊಂಬೆ (ನಾ). ೧. ಗೊಂಬೆ ; ಪುತ್ಥಳಿ. ೨. ಕಣ್ಣಿನ ಪಾಪೆ. ~ಆ(ಯಾ)ಟ = ೧. ಗೊಂಬೆಗಳನ್ನಿಟ್ಟುಕೊಂಡು ಆಡುವ ಆಟ. ೨. ದಾರಗಳ ಸಹಾಯದಿಂದ ಗೊಂಬೆಗಳನ್ನು ಕುಣಿಸುವ ಆಟ ; ಸೂತ್ರದ ಗೊಂಬೆಯಾಟ.

ಬೊಕ್ಕ (ನಾ). ೧. ಹಲ್ಲಿಲ್ಲದವನು ; ಬಚ್ಚುಬಾಯಿಯವನು. ೨. ತಲೆಗೂದಲು ಉದುರಿದವನು. ೩. ಕೋಡಿಲ್ಲದ ಎತ್ತು. (ಗು). ೪. ಬರಿದಾದ ; ಖಾಲಿಯಾದ. ~ತ(ದ)ಲೆ = ೧. ಬರಿದಾದ ತಲೆ ; ಏನನ್ನೂ ಧರಿಸಿಲ್ಲದ ತಲೆ. ೨. ಬೋಳುತಲೆ. ~ಜೋರಲು = ಬಕ್ಕಜೋರಲು.

ಬೊಕ್ಕಣ (ನಾ). ೧. ಜೇಬು; ಕಿಸೆ. ೨. ಚೀಲ; ಜೋಳಿಗೆ. ೩. ಕುದುರೆಯ ಬಾಯಿಗೆ ಕಟ್ಟುವ ಆಹಾರದ ಚೀಲ ; ತೋಬರಿ. ೪. ತಿನ್ನುವಿಕೆ ; ಭಕ್ಷಣ.

ಬೊಕ್ಕಸ (ನಾ). ಕೋಶ ; ಖಜಾನೆ.

ಬೊಕ್ಕೆ (ನಾ). ೧. ಗುಳ್ಳೆ ; ಹುಗುಳು. ೨. ಬಿಲ ; ಹೋರು.

ಬೊಗರಿ = ಬುಗರಿ.

ಬೊಗರೆ = ಬುಗರಿ.

ಬೊಗಸೆ = ಬಗಸಿಗೆ. ~ಒ(ಯೊ)ಡ್ಡು = ೧. ಬೊಗಸೆಯನ್ನು ಚಾಚು; ಕೈಯೊಡ್ಡು. ೨. ಕೇಳಿಕೊಳ್ಳು ; ಯಾಚಿಸು.

ಬೊಗಳು (ಕ್ರಿ). ೧. ನಾಯಿಯಂತೆ ಧ್ವನಿಮಾಡು. ೨. ಬಾಯಿಗೆ ಬಂದಂತೆ ಮಾತನಾಡು ; ಗಳಹು. (ನಾ). ೩. ನಾಯಿಯ ಕೂಗು. ೪. ಅತಿಯಾಗಿ ಮಾತನಾಡುವಿಕೆ ; ಗಳಹುವಿಕೆ.

ಬೊಗಳೆ (ನಾ). ಸುಳ್ಳುಮಾತು ; ಬುರುಡೆ.

ಬೊಗ್ಗು (ಕ್ರಿ). ೧. ಬಾಗು ; ಮಣಿ. (ನಾ). ೨. ಮಣಿಯುವಿಕೆ; ಬಾಗುವಿಕೆ. ೩. ಒಂದು ಬಗೆಯ ವಾದ್ಯ.

ಬೊಚ್ಚ (ಗು). ಬರಿದಾದ ; ಬೋಡಾದ.

ಬೊಚ್ಚು (ನಾ). ೧. ಮೃದುವಾದ ಕೂದಲು; ತುಪ್ಪುಳು. (ಗು). ೨. ಬರಿದಾದ ; ಬೋಳಾದ. ~ಬಾಯಿ = ಹಲ್ಲುಗಳಿಲ್ಲದ ಬಾಯಿ ; ಬೋಳುಬಾಯಿ.

ಬೊಜ(ಂ)ಗ (ನಾ). ವಿಟ ; ಜಾರ.

ಬೊಜ್ಜ (ನಾ). ಶ್ರಾದ್ಧ ; ತಿಥಿ.

ಬೊಜ್ಜು (ನಾ). ಸತ್ತ್ವಹೀನವಾಗಿ ಬೆಳೆದಿರುವ ಮೈ ; ದಪ್ಪನೆಯ ದೇಹ.

ಬೊಜ್ಜುಗ (ನಾ). ಡೊಳ್ಳುಹೊಟ್ಟೆಯವನು.

ಬೊಜ್ಜೆ = ಬೊಜ್ಜು.

ಬೊಟ್ಟು (ನಾ). ೧. ಬೆರಳು ; ಬೆಟ್ಟು. ೨. ದುಂಡಾದ ಆಕೃತಿ ; ವೃತ್ತಾಕಾರವಾದುದು. ೩. ಹಣೆಗೆ ಇಟ್ಟುಕೊಳ್ಳುವ ತಿಲಕ. ೪. ತೊಟ್ಟು; ಹನಿ. ೫. ಕಾಲಾಣೆಯ ನಾಣ್ಯ ; ದುಡ್ಡು. ~ಆಡು = ನೇವರಿಸು; ಸವರು. ~ಇಡು = ತಿಲಕವನ್ನು ಇಡು. ~ಕಚ್ಚು = ಬೆರಗಾಗು ; ವಿಸ್ಮಯಪಡು.

~ಮಾಡು = ನಿರ್ದೇಶಿಸು; ಬೆರಳೆತ್ತಿ ತೋರಿಸು.

ಬೊಡ್ಡಿ (ನಾ). ೧. ಸೂಳೆ; ಬಡ್ಡಿ. ೨.=ಬೊಡ್ಡೆ.

ಬೊಡ್ಡು (ನಾ). ಹರಿತವಿಲ್ಲದಿರುವಿಕೆ; ಮೊಂಡಾಗಿರುವಿಕೆ.

ಬೊಡ್ಡೆ (ನಾ). ಮರದ ಕಾಂಡ.

ಬೊಪ್ಪ (ನಾ). ೧. ತಂದೆ. ೨. ತಾತ; ಅಜ್ಜ. ೩. ಸ್ವಾಮಿ; ಒಡೆಯ.

ಬೊಬ್ಬರ್ಯ (ನಾ). ಒಂದು ಕ್ಷುದ್ರದೇವತೆ; ದೆವ್ವ; ಭೂತ. ~ಕೋಲ = ಭೂತದ ವೇಷ ಧಾರಿ ಮಾಡುವ ನರ್ತನ; ಭೂತನರ್ತನ.

ಬೊಬ್ಬುಲಿ (ನಾ). ಒಂದು ಜಾತಿಯ ಮುಳ್ಳು ಗಿಡ; ಜಾಲಿ.

ಬೊಬ್ಬುಳಿ ೧.=ಬೊಬ್ಬುಲಿ. ೨.= ಬೊಬ್ಬುಳಿಕೆ. ~ಇಸು = ಗುಳ್ಳೆ ಏಳು; ಬುದ್ಬುದ ವುಂಟಾಗು.

ಬೊಬ್ಬುಳಿಕೆ (ನಾ). ನೀರುಗುಳ್ಳೆ; ಬುದ್ಬುದ.

ಬೊಬ್ಬೆ (ನಾ). ೧. ಬೊಕ್ಕೆ; ಗುಳ್ಳೆ. ೨. ಒದರಾಟ; ಚೀರಾಟ. ~ಆಟ = ಚೀರುವಿಕೆ; ಒದರುವಿಕೆ. ~ಇಡು = ಚೀರು; ಕೂಗಾಡು. ~ಇಱು(ರಿ) = ಬೊಬ್ಬಿಡು. ~ಹಾಕು = ಬೊಬ್ಬಿಡು.

ಬೊಮ್ಮ (ನಾ). ೧. ಬ್ರಹ್ಮ. ೨. ವಿಧಿ; ದೈವ. ~ಅಂಡ = ಬ್ರಹ್ಮಾಂಡ; ಜಗತ್ತು. ~ರಕ್ಕಸ = ಬ್ರಹ್ಮರಾಕ್ಷಸ.

ಬೊಮ್ಮಟೆ (ನಾ). ೧. ಎಳೆಯ ಮಗು; ಹಸುಗೂಸು. ೨. ಎಳೆಯದು; ಕೋಮಲ ವಾದುದು.

ಬೊಮ್ಮಡಿ = ಬೊಂಬಡ.

ಬೊಮ್ಮಿ (ನಾ). ಒಂದು ಜಾತಿಯ ವನಸ್ಪತಿ; ಬ್ರಾಹ್ಮಿ.

ಬೊಮ್ಮೋತಿ (ನಾ). ಬ್ರಾಹ್ಮಣನ ಕೊಲೆ; ಬ್ರಹ್ಮಹತ್ಯೆ. ~ಗಾಱ(ರ) = ಬ್ರಹ್ಮಹತ್ಯೆ ಯನ್ನು ಮಾಡಿದವನು.

ಬೊಲ್ಲ (ನಾ). ೧. ಒಂದು ಜಾತಿಯ ಕುದುರೆ. ೨. ಕೊಂಡಾಟದ ಒಂದು ಮಾತು.

ಬೊಳ್ಳಗ (ನಾ). ಮೋಸಗಾರ; ವಂಚಕ.

ಬೋಂಡ (ನಾ). ಕಡಲೆಹಿಟ್ಟಿನಿಂದ ಮಾಡುವ ಒಂದು ಬಗೆಯ ಕರಿದ ತಿಂಡಿ.

ಬೋಕಾಣಗಿತ್ತಿ (ನಾ). ಬೆಡಗಿ; ಒಯ್ಯಾರಿ.

ಬೋಕಾಣಿ = ಬೋಕಾಣಗಿತ್ತಿ.

ಬೋಕಿ (ನಾ). ಒಡೆದ ಮಡಕೆಯ ಚೂರು.

ಬೋಗರ (ನಾ). ಸುಳ್ಳು; ಹುಸಿ.

ಬೋಗಾರ (ನಾ). ೧. ಲೋಹದ ಕೆಲಸ ಮಾಡು ವವನು; ಲೋಹಕಾರ. ೨. ಒಂದು ಜಾತಿಯ ಹಕ್ಕಿ.

ಬೋಗುಣಿ (ನಾ). ಒಂದು ಬಗೆಯ ಅಗಲವಾದ ಪಾತ್ರೆ.

ಬೋಗೋಣಿ = ಬೋಗುಣಿ.

ಬೋಡ (ನಾ). ೧. ಹಲ್ಲಿಲ್ಲದವನು; ಬೊಚ್ಚು ಬಾಯಿಯವನು. ೨. ತಲೆಗೂದಲು ಉದುರಿದವನು.

ಬೋಡಿ (ನಾ). ೧. ಹಲ್ಲಿಲ್ಲದವಳು. ೨. = ಬೋಳಿ.

ಬೋಡು (ಗು). ಬೋಳಾದ; ಬರಿಯ.

ಬೋಣಿ (ನಾ). ವ್ಯಾಪಾರಿಯು ಮಾಡುವ ದಿನದ ಮೊದಲನೆಯ ನಗದುವ್ಯಾಪಾರ. ~ಮಾಡು =ನಗದಾಗಿ ಮೊದಲನೆಯ ವ್ಯಾಪಾರಮಾಡು.

ಬೋಣಿಗೆ = ಬೋಣಿ.

ಬೋದ (ನಾ). ಉಪದೇಶ; ಬೋಧನೆ.

ಬೋಪಣಿಗೆ = ಬೋಣಿ.

ಬೋದಿಗೆ (ನಾ). ಕಂಬದ ಮೇಲೆ ತೊಲೆಯನ್ನು ನಿಲ್ಲಿಸಲು ಮಾಡಿದ ಸಾಧನ.

ಬೋದು ೧. = ಬೋದಿಗೆ. ೨. ತಗ್ಗು; ಕುಳಿ. ೩. ತೂತು; ರಂಧ್ರ. ೪. ಒಂದು ಜಾತಿಯ ಹುಲ್ಲು. ೫. ತಿರುಳಿಲ್ಲದ ಹಣ್ಣು ಅಥವಾ ಕಾಯಿ.

ಬೋದುಗೆ = ಬೋದಿಗೆ.

ಬೋಧ (ನಾ). ೧. ಕಲಿಸುವಿಕೆ; ಬೋಧಿಸುವಿಕೆ. ೨. ಎಚ್ಚರ; ಸ್ಮೃತಿ. ೩. ಅರಿವು; ತಿಳಿವಳಿಕೆ. ~ದೃಷ್ಟಿ=ಜ್ಞಾನದೃಷ್ಟಿ.

ಬೋಧಕ (ನಾ). ಕಲಿಸುವವನು; ಶಿಕ್ಷಕ.

ಬೋಧನ (ನಾ). ಹೇಳಿಕೊಡುವಿಕೆ; ಕಲಿಸುವಿಕೆ.

ಬೋಧನೆ = ಬೋಧನ.

ಬೋಧಿ (ನಾ). ೧. ಶ್ರೇಷ್ಠವಾದ ಅರಿವು; ದಿವ್ಯಜ್ಞಾನ. ೨. ಒಂದು ಜಾತಿಯ ಮರ; ಅಶ್ವತ್ಥ.

ಬೋಧೆ = ಬೋಧ. ~ಇಸು = ಕಲಿಸು; ಹೇಳಿಕೊಡು.

ಬೋನ (ನಾ). ಅನ್ನ; ಆಹಾರ. ~ಗಿತ್ತಿ = ಬೋನಗಾರ್ತಿ.

ಬೋನಗಾರ್ತಿ (ನಾ). ಅಡುಗೆ ಮಾಡುವವಳು.

ಬೋನು (ನಾ). ಪಂಜರ; ಗೂಡು.

ಬೋಯಿ (ನಾ). ೧. ಪಲ್ಲಕ್ಕಿಯನ್ನು ಹೊರುವವನು. ೨. ಬೆಸ್ತ.

ಬೋಯಿತಿ (ನಾ). ಬೆಸ್ತರವಳು.

ಬೋರ (ನಾ). ೧. ಮಾಸಲುಗೆಂಪು ಬಣ್ಣ. ೨. ಮಾಸಲುಗೆಂಪುಬಣ್ಣದ ಕುದುರೆ.

ಬೋರಂಗಿ (ನಾ). ಬಣ್ಣದ ರೆಕ್ಕೆಗಳುಳ್ಳ ಒಂದು ಜಾತಿಯ ಹುಳು; ಜೀರುಮುಂಬಿ.

ಬೋರಲು (ಅ). ಬುಡಮೇಲಾಗಿ; ಮುಖ ಕೆಳಗಾಗಿ. ~ಹಾಕು = ಡಬ್ಬುಹಾಕು; ಕವಿಚು.

ಬೋರ್ = ಭೋರ್. ~ಆಡು = ದೊಡ್ಡ ಧ್ವನಿಯಲ್ಲಿ ಅಳು; ಗೋಳಾಡು.

ಬೋರೆ (ನಾ). ೧. ದಿಣ್ಣೆ; ತೆವರು. ೨. ಬುಗುಟೆ; ಊತ. ೩. ಒಂದು ಜಾತಿಯ ಮರ ಮತ್ತು ಅದರ ಹಣ್ಣು; ಎಲಚಿ.

ಬೋವ (ನಾ). ಬಂಡಿಹೊಡೆಯುವವನು; ಸಾರಥಿ.

ಬೋವಿ = ಬೋಯಿ.

ಬೋಸರ (ನಾ). ೧. ಕಪಟ; ವಂಚನೆ. ೨. ಹುಸಿಹೊಗಳಿಕೆ; ಮಿಥ್ಯಾಪ್ರಶಂಸೆ. ~ಇಗ = ೧. ಮೋಸಗಾರ; ವಂಚಕ. ೨. ಸುಳ್ಳು ಆದರವನ್ನು ತೋರಿಸುವವನು. ~ಇಸು = ೧. ಪ್ರೀತಿಸುವಂತೆ ನಟಿಸು; ಕಪಟ ಆದರವನ್ನು ತೋರಿಸು. ೨. ಪುಸಲಾಯಿಸು.

ಬೋಸಿ (ನಾ). (ಲೋಹದ) ಗುಂಡನೆಯ ಪಾತ್ರೆ.

ಬೋಹರಿಗೆ (ನಾ). ಪೊರಕೆ; ಕಸಬರಿಗೆ.

ಬೋಹರಿಸು (ಕ್ರಿ). ಗುಡಿಸು; ಸ್ವಚ್ಛಮಾಡು.

ಬೋಳ (ನಾ). ೧. ತಲೆಯಲ್ಲಿ ಕೂದಲಿಲ್ಲದವನು; ಬೋಡ. ೨. = ಬೋಟಿ.

ಬೋಳಯಿಸು (ಕ್ರಿ). ಸಂತೈಸು; ಸಮಾಧಾನಮಾಡು.

ಬೋಳವಿಸು = ಬೋಳಯಿಸು.

ಬೋಳಿ (ನಾ). ೧. ತಲೆಗೂದಲನ್ನು ತೆಗೆಸಿಕೊಂಡವಳು. ೨. ವಿಧವೆ.

ಬೋಳು (ನಾ). ಏನೂ ಇಲ್ಲದಿರುವಿಕೆ; ಬರಿದಾದ ಸ್ಥಿತಿ. ~ಇಸು = ೧. ಕ್ಷೌರಮಾಡು; ಕೂದಲನ್ನು ತೆಗೆ. ೨. ನಷ್ಟವಾಗು. ೩. ನಷ್ಟವುಂಟುಮಾಡು. ~ಪದ = ಅಂತ್ಯಪ್ರಾಸರಹಿತ ಪದ್ಯ; ಸರಳರಗಳೆ. ~ಮನೆ = ಛಾವಣಿಯಿಲ್ಲದ ಮನೆ.

ಬೋಳೆ ೧. = ಬೋಟಿ³. (ಗು). ೨. ಮುಗ್ಧ; ಏನೂ ತಿಳಿಯದ. ~ತನ = ಸರಳತೆ.

ಬೋಳೈಸು = ಬೋಳಯಿಸು.

ಬೋಟಿ(ಳ) (ನಾ). ೧. ಸಾವು; ಮೃತ್ಯು. ೨. ಒಂದು ಜಾತಿಯ ಔಷಧಿ ಸಸ್ಯ.

ಬೋಟಿ²(ಳೆ) (ನಾ). ಒಂದು ಬಗೆಯ ಬಾಣ.

ಬೋಟಿ³(ಳೆ)ಯು (ನಾ). ದೇವತೆ.

ಬೌದ್ಧ (ನಾ). ೧. ಬುದ್ಧಿಗೆ ಸಂಬಂಧಿಸಿದುದು. ೨. ಬುದ್ಧನಿಗೆ ಸಂಬಂಧಿಸಿದುದು. ೩. ಬುದ್ಧನ

ಅನುಯಾಯಿ. ೪. ವಿಷ್ಣುವಿನ ಒಂಬತ್ತನೆಯ ಅವತಾರ.

ಬೌದ್ಧಿಕ (ಗು). ಬುದ್ಧಿಗೆ ಸಂಬಂಧಿಸಿದ.

ಬ್ಯಗ್ರ (ಗು). ಗೊಂದಲಗೊಂಡ; ವ್ಯಗ್ರವಾದ.

ಬ್ಯಸನ (ನಾ). ವ್ಯಸನ; ಚಿಂತೆ.

ಬ್ಯಾಕುಲ (ನಾ). ಕಳವಳ; ವ್ಯಾಕುಲ.

ಬ್ರತ (ನಾ). ನಿಯಮ; ವ್ರತ. ~ಕೆ(ಗೆ)ೀಡಿ = ಬತಗೇಡಿ.

ಬ್ರತಿ (ನಾ). ವ್ರತವನ್ನು ಪಾಲಿಸುವವನು; ವ್ರತಿ.

ಬ್ರಯ (ನಾ). ಖರ್ಚು; ವ್ಯಯ; ವ್ರಯ.

ಬ್ರಹ್ಮ (ನಾ). ೧. ವೇದ; ವೇದಮಂತ್ರ. ೨. ಆಗಮ. ೩. ಒಳ್ಳೆಯ ನಡತೆ. ೪. ಜ್ಞಾನ. ೫. ನಿರ್ಮಲತೆ. ೬. ಮೋಕ್ಷ; ಮುಕ್ತಿ. ೭. ಆಹಾರ. ೮. ಅಧ್ಯಾತ್ಮ. ೯. ಬ್ರಾಹ್ಮಣ. ೧೦. ತ್ರಿಮೂರ್ತಿಗಳಲ್ಲಿ ಒಬ್ಬ; ಅಜ. ೧೧. ಪರಮಾತ್ಮ. ೧೨. ವಿಷ್ಣು. ೧೩. ಆದಿನಾಥ. ೧೪. ಪರತತ್ತ್ವ. ೧೫. ಮುಖ್ಯವಾದುದು. ~ಅಂಡ = ವಿಶ್ವ; ಜಗತ್ತು. ~ಅಸ್ತ್ರ = ಬ್ರಹ್ಮನೇ ಅಧಿದೇವತೆಯಾಗಿರುವ ಅಸ್ತ್ರ. ~ಆನಂದ = ಅತಿಶಯವಾದ ಹಿಗ್ಗು, –ಸಂತೋಷ. ~ಉಪದೇಶ = ಮುಂಜಿಯ ಸಮಯದಲ್ಲಿ ಮಾಡುವ ಗಾಯತ್ರಿ ಮಂತ್ರದ ಉಪದೇಶ. ~ಗಂಟು = ೧. [illegible] ಜನಿವಾರದಲ್ಲಿ ಹಾಕಿಕೊಳ್ಳುವ ವಿಶಿಷ್ಟವಾದ ಗಂಟು. ೨. ವಧೂವರರ ಸೆರಗನ್ನು ಸೇರಿಸಿ ಹಾಕುವ ಗಂಟು; ದಾಂಪತ್ಯ. ೩. ಬಿಡಿಸಲಾಗದ ಗಂಟು; ಕಗ್ಗಂಟು. ~ಚರ್ಯ(ರ್ಯೆ) = ೧. ಇಂದ್ರಿಯ ನಿಗ್ರಹ. ೨. ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ ಮತ್ತು ಸಂನ್ಯಾಸಗಳೆಂಬ ನಾಲ್ಕು ಅವಸ್ಥೆಗಳಲ್ಲಿ ಮೊದಲನೆಯದು. ~ಜ್ಞಾನ = ಆತ್ಮಜ್ಞಾನ. ~ಜ್ಞಾನಿ = ಬ್ರಹ್ಮಜ್ಞ; ಬ್ರಹ್ಮಜ್ಞಾನವನ್ನು ಪಡೆದವನು. ~ದಂಡ = ೧. ಬೆನ್ನೆಲುಬು. ೨. = ಬ್ರಹ್ಮಾಸ್ತ್ರ. ~ದಾರು = ಒಂದು ಜಾತಿಯ ಮರ. ~ನಾಡಿ = ದೇಹದ ಪ್ರಮುಖನಾಡಿಗಳಲ್ಲಿ ಒಂದು; ಸುಷುಮ್ನಾನಾಡಿ. ~ಪುರ(ರಿ) = ಬ್ರಾಹ್ಮಣರು ವಾಸಿಸುವ ಕೇರಿ; ಅಗ್ರಹಾರ. ~ಯಜ್ಞ = ೧. ಪಂಚಮಹಾಯಜ್ಞಗಳಲ್ಲಿ ಒಂದು. ೨. ವೇದಮಂತ್ರಗಳ ಪಠನ ಮತ್ತು ಅಧ್ಯಯನ. ~ರಂಧ್ರ = ನೆತ್ತಿಯಲ್ಲಿರುವ ರಂಧ್ರ. ~ರಾಕ್ಷಸ = ಮರಣದ ನಂತರ ಪಿಶಾಚಿಯಾದ ಬ್ರಾಹ್ಮಣ. ~ಲಿಪಿ = ೧. ಬ್ರಹ್ಮನಿಂದ ಬರೆಯಲ್ಪಟ್ಟುದು; ವಿಧಿಲಿಖಿತ; ಹಣೆಯ ಬರೆಹ. ೨. ಓದುವುದಕ್ಕೆ ಸಾಧ್ಯವಿಲ್ಲದಂತಿರುವ ಬರೆಹ. ~ವಿದ್ಯೆ = ೧. ಪರಮಾತ್ಮನ ಸ್ವರೂಪವನ್ನು ತಿಳಿಸುವ ವಿದ್ಯೆ. ೨. ಗಹನವಾದ ವಿದ್ಯೆ. ~ಸಂಕಲ್ಪ = ವಿಧಿನಿಯಮ; ಹಣೆಯ ಬರೆಹ. ~ಸೂತ್ರ = ೧. ಜನಿವಾರ; ಯಜ್ಞೋಪವೀತ. ೨. ವೇದಾಂತ ಸೂತ್ರ. ~ಹತ್ಯೆ = ಪಂಚಮಹಾಪಾತಕಗಳಲ್ಲಿ ಒಂದು; ಬ್ರಾಹ್ಮಣನನ್ನು ಕೊಲ್ಲುವುದು.

ಬ್ರಹ್ಮಚಾರಿ (ನಾ). ಬ್ರಹ್ಮಚರ್ಯವ್ರತವನ್ನು ಪಾಲಿಸುವವನು; ವಟು.

ಬ್ರಹ್ಮಜ್ಞ (ನಾ). ಬ್ರಹ್ಮಜ್ಞಾನವನ್ನು ಪಡೆದವನು; ಬ್ರಹ್ಮಜ್ಞಾನಿ.

ಬ್ರಹ್ಮರ್ಷಿ (ನಾ). ಶ್ರೇಷ್ಠನಾದ ಋಷಿ.

ಬ್ರಹ್ಮಾಣಿ (ನಾ). ಸರಸ್ವತಿ.

ಬ್ರಹ್ಮೇತಿ (ನಾ). ೧. ಬ್ರಹ್ಮಹತ್ಯೆ; ಬೊಮ್ಮೇತಿ. ೨. ಬ್ರಹ್ಮರಾಕ್ಷಸ. (ಗು). ೩. ಅತಿಶಯವಾದ; ಅಧಿಕವಾದ.

ಬ್ರಾತ (ನಾ). ಗುಂಪು; ಸಮೂಹ; ವ್ರಾತ.

ಬ್ರಾಹ್ಮಣ (ನಾ). ೧. ವಿಪ್ರ; ಹಾರುವ. ೨. ವೇದಮಂತ್ರಗಳ ವ್ಯಾಖ್ಯಾನ.

~ಇಕೆ=ಬ್ರಾಹ್ಮಣನ ಆಚಾರ, -ನಿಯಮ. ~ಇತಿ = ಬ್ರಾಹ್ಮಣ ಹೆಂಗಸು.

ಬ್ರಾಹ್ಮಣ್ಯ (ನಾ). ೧. ಬ್ರಾಹ್ಮಣನಾಗಿರುವಿಕೆ. ೨. ಬ್ರಾಹ್ಮಣನ ಆಚಾರ ; ಬ್ರಾಹ್ಮಣಿಕೆ. ೩. ಬ್ರಾಹ್ಮಣರ ಸಮೂಹ.

ಬ್ರಾಹ್ಮಿ (ನಾ). ೧. ಸುಮುಹೂರ್ತ ; ಶುಭ ಗಳಿಗೆ. ೨. ಆದಿಶಕ್ತಿ. ೩. ಸರಸ್ವತಿ. ೪. ಸಪ್ತ ಮಾತೃಕೆಯರಲ್ಲಿ ಒಬ್ಬಳು. ೫. ಭಾರತೀಯ ಭಾಷೆಗಳಿಗೆ ಮೂಲವಾದ ಒಂದು ಬಗೆಯ ಲಿಪಿ. ೬. ಒಂದು ಬಗೆಯ ವನಸ್ಪತಿ.



# ಭ

ಭ (ನಾ). ೧ ಕನ್ನಡ ವರ್ಣಮಾಲೆಯ ನಲವತ್ತುನಾಲ್ಕನೆಯ ವರ್ಣ. ೨. ಪ್ರಕಾಶ; ಬೆಳಕು. ೩. ಹೋಲಿಕೆ; ಸಾಮ್ಯ. ೪. ನಕ್ಷತ್ರ ; ತಾರೆ. ~ಗಣ = ನಕ್ಷತ್ರಗಳ ಗುಂಪು, -ಸಮೂಹ.

ಭಂಗ (ನಾ). ೧. ಮುರಿಯುವಿಕೆ; ಸೀಳುವಿಕೆ. ೨. ಬಿರುಕು; ಸೀಳು; ಚೂರು. ೩. ಸೋಲು; ಅಪಜಯ. ೪. ನಾಶ; ಅಳಿವು. ೫. ಕಷ್ಟ; ತೊಂದರೆ. ೬. ಅವಮಾನ. ೭. ಕೊಂಕು; ಬಾಗು; ವಕ್ರತೆ. ೮. ನಿರಿಗೆ; ಪದರ; ತೆರೆ. ೯. ಸುಳ್ಳು; ಮೋಸ. ~ಇಸು =೧. ಮುರಿ; ಸೀಳು. ೨. ಸೋಲಿಸು. ೩. ನಾಶಮಾಡು. ೪. ಕಡೆಗಣಿಸು; ತಿರಸ್ಕರಿಸು. ~(೦)ಪ(ಬ)ಡು = ೧. ಅವ ಮಾನಿತನಾಗು. ೨. ಕಷ್ಟಕ್ಕೊಳಗಾಗು. ~ಗಾ(ರ) = ವಂಚಕ; ಮೋಸಗಾರ.

ಭಂಗಾರ = ಬಂಗಾರ.

ಭಂಗಿ (ನಾ). ೧. ಮುರಿಯುವುದು ; ಸೀಳು ವುದು. ೨. ಅಲೆ ; ತೆರೆ. ೩. ಡೊಂಕು ; ವಕ್ರತೆ. ೪. ಉಪಾಯ; ತಂತ್ರ. ೫. ರೀತಿ; ಬಗೆ; ವಿಧಾನ. ೬. ಆಕಾರ ; ರೂಪ. ೭. = ಬಂಗಿ. ೮. ಅಮಲು; ಮತ್ತು; ಮಾದಕತೆ. ೯. ಕಕ್ಕಸ್ಸನ್ನು ಸ್ವಚ್ಛ ಮಾಡು ವವನು ; ಜಾಡಮಾಲಿ.

ಭಂಗುರ (ಗು). ೧. ಸುಲಭವಾಗಿ ಮುರಿಯ ಬಹುದಾದ. ೨. ಕ್ಷಣಿಕವಾದ; ನಶ್ವರವಾದ. ೩. ಡೊಂಕಾದ ; ವಕ್ರವಾದ. ೪. ವಂಚ ನೆಯ ; ಅಪ್ರಾಮಾಣಿಕವಾದ.

ಭಂಜಕ (ನಾ). ಮುರಿಯುವವನು ; ಸೀಳು ವವನು.

ಭಂಜನ (ನಾ). ಒಡೆಯುವುದು ; ಮುರಿಯು ವುದು.

ಭಂಜಿಕೆ (ನಾ). ಗೊಂಬೆ; ವಿಗ್ರಹ.

ಭಂಜಿಸು = ಭಂಗಿಸು.

ಭಂಟ = ಬಂಟ.

ಭಂಡ (ನಾ). ೧. ನಾಚಿಕೆ ಇಲ್ಲದವನು; ಲಜ್ಜೆಗೇಡಿ. ೨. ವಿದೂಷಕ; ಹಾಸ್ಯನಟ. ೩. ಸರಕು; ಸಾಮಾನು. ~ತನ = ನಾಚಿಕೆ ಯಿಲ್ಲದಿರುವಿಕೆ. ~ಬಾಳು = ಹೀನವಾದ ಜೀವನ ; ಕೀಳುಬಾಳುವೆ.

ಭಂಡಣ ೧. = ಬಂಡಣ. ೨. ಚಿಲುಖತ್ತು ; ಕವಚ.

ಭಂಡನ ೧. = ಭಂಡಣ. ೨. ಆಯುಧ ; ಶಸ್ತ್ರ.

ಭಂಡವಲ = ಬಂಡವಲ.

ಭಂಡವಾಳ = ಬಂಡವಲ. ~ಗಾರ = ವ್ಯಾಪಾ ರಕ್ಕೆ ಹಣ ತೊಡಗಿಸಿದವನು.

ಭಂಡಾರ ೧.=ಬಂಡಾರ. ೨. ದೇವರ ಪ್ರಸಾದ ರೂಪವಾಗಿ ಕೊಡುವ ಅರಿಸಿನ

ಮುಂತಾದುವು. ~ಇಸು = ಭಂಡಾರದಲ್ಲಿಡು; ಮುಚ್ಚಿಡು; ರಕ್ಷಿಸು.

ಭಂಡಾರಿ = ಬಂಡಾರಿ.

ಭಂಡಿ (ನಾ). ಗಾಡಿ; ಬಂಡಿ.

ಭಂಡು (ನಾ). ಅವಮಾನ; ಅಗೌರವ. ~ಗೆಡೆ=ತಿರಸ್ಕರಿಸು; ಅಪಮಾನಗೊಳಿಸು. ~ಮಾಡು = ಭಂಡುಗೆಡೆ.

ಭಂಡೆ (ನಾ). ನಾಚಿಕೆ ಇಲ್ಲದವಳು.

ಭಕುತ = ಭಕ್ತ.

ಭಕುತಿ = ಭಕ್ತಿ.

ಭಕ್ಕರಿ = ಬಕ್ಕರಿ.

ಭಕ್ತ (ನಾ). ೧. ಪೂಜಿಸುವವನು; ಆರಾಧಕ. ೨. ಅನ್ನ. ~ನಿಧಿ = ಭಕ್ತರಿಗೆ ಕೇಳಿದುದನ್ನು ಕೊಡುವವನು. ~ವತ್ಸಲ = ಭಕ್ತರಲ್ಲಿ ಪ್ರೀತಿಯುಳ್ಳವನು.

ಭಕ್ತಿ (ನಾ). ೧. ಶ್ರದ್ಧೆ; ನಿಷ್ಠೆಯಿಂದಿರುವುದು. ೨. ಪ್ರೀತಿ; ಅನುರಾಗ. ~ಮಾರ್ಗ = ಮುಕ್ತಿಸಾಧನೆಗಾಗಿ ದೇವರನ್ನು ಆರಾಧಿಸುವ ಬಗೆ. ~ಹೀನ = ೧. ಭಕ್ತಿ ಇಲ್ಲದಿರುವವನು. ೨. ಭಕ್ತಿ ಇಲ್ಲದಿರುವ.

ಭಕ್ಷ (ನಾ). ೧. ತಿನ್ನುವುದು. ೨. ತಿನ್ನುವವನು. ೩. = ಭಕ್ಷ್ಯ. ~ಇಸು = ತಿನ್ನು.

ಭಕ್ಷಕ (ನಾ). ೧. ತಿನ್ನುವವನು. ೨. ಹೊಟ್ಟೆಬಾಕ; ತಿನಾಳಿ.

ಭಕ್ಷಣೆ (ನಾ). ೧. ತಿನ್ನುವುದು. ೨. ವಿಶೇಷವಾದ ಆಹಾರ.

ಭಕ್ಷಿ = ಬಕ್ಷಿ.

ಭಕ್ಷೀಸು = ಬಕ್ಷೀಸು.

ಭಕ್ಷ್ಯ (ನಾ). ೧. ಆಹಾರ. ೨. ಕರಿದ ತಿಂಡಿ.

ಭಗ (ನಾ). ೧. ಸೂರ್ಯ. ೨. ಅದೃಷ್ಟ; ಭಾಗ್ಯ. ೩. ಘನತೆ. ೪. ಶಕ್ತಿ; ಸಾಮರ್ಥ್ಯ. ೫. ಪ್ರೀತಿ. ೬. ತೇಜಸ್ಸು. ೭. ಅರಿವು; ಜ್ಞಾನ. ೮. ಧರ್ಮ. ೯. ಪಾವಿತ್ರ್ಯ; ಪರಿಶುದ್ಧತೆ. ೧೦. ವೈರಾಗ್ಯ. ೧೧. ಯತಿ. ೧೨. ಜಪ. ೧೩. ಮುಕ್ತಿ. ೧೪. ಯೋನಿ. ೧೫. ದೇವತೆ.

ಭಗಂದರ (ನಾ). ಒಂದು ಬಗೆಯ ರೋಗ.

ಭಗವಂತ (ನಾ). ೧. ಪರಮಾತ್ಮ; ದೇವರು. ೨. ಪೂಜ್ಯರನ್ನು ಉದ್ದೇಶಿಸುವಾಗ ಬಳಸುವ ಮಾತು. (ಗು). ೩. ಪೂಜ್ಯ; ಅರ್ಹ.

ಭಗವತಿ (ನಾ). ೧. ಪಾರ್ವತಿ. ೨. ಲಕ್ಷ್ಮಿ.

ಭಗಿನಿ (ನಾ). ೧. ಒಡಹುಟ್ಟಿದವಳು; ಸೋದರಿ. ೨. ಹೆಂಗಸು.

ಭಗ್ನ (ಗು). ೧. ಮುರಿದ; ಒಡೆದ. ೨. ಸೋತ; ಪರಾಜಿತ. ೩. ನಿರಾಶೆಗೊಂಡ. ~ಮನೋರಥ = ನಿರಾಶೆ ಹೊಂದಿದವನು. ~ಹೃದಯ = ೧. ನಿರಾಶೆ ಹೊಂದಿದ ಮನಸ್ಸು. ೨. ನಿರಾಶೆಹೊಂದಿದವನು.

ಭಜಕ (ನಾ). ಪೂಜಿಸುವವನು.

ಭಜನೆ (ನಾ). ೧. ಭಾಗಮಾಡುವುದು. ೨. ಸೇವೆ ಮಾಡುವುದು; ಪೂಜಿಸುವುದು. ೩. ದೇವರ ಸ್ತುತಿಯನ್ನು ಹಾಡುವುದು. ೪. ಸ್ತೋತ್ರರೂಪವಾದ ಹಾಡು.

ಭಜಿ (ನಾ). ಒಂದು ಬಗೆಯ ಕರಿದ ತಿಂಡಿ; ಬಜ್ಜಿ.

ಭಜಿಸು (ಕ್ರಿ). ೧. ಪೂಜಿಸು; ಆರಾಧಿಸು. ೨. ದೇವರ ನಾಮಸ್ಮರಣೆಯನ್ನು ಮಾಡು; ಭಜನೆಮಾಡು.

ಭಟ (ನಾ). ೧. ಯೋಧ; ಸೈನಿಕ. ೨. ಸೇವಕ.

ಭಟಾರ (ನಾ). ೧. ಜೈನ ಸಂನ್ಯಾಸಿ; ಸವಣ. ೨. ಪೂಜ್ಯವ್ಯಕ್ತಿ; ಗೌರವಾರ್ಹನಾದವನು.

ಭಟ್ಟ (ನಾ). ೧. ಪಂಡಿತ; ವಿದ್ವಾಂಸ. ೨. ಅಡುಗೆಯವನು; ಬಾಣಸಿಗ. ೩. = ಭಟ್ಟಂಗಿ. ೪. ಪುರೋಹಿತ.

ಭಟ್ಟಂಗಿ (ನಾ). ಹೊಗಳುವವನು; ಸ್ತುತಿಪಾಠಕ.

ಭಟ್ಟಾರಕ = ಭಟಾರ.

ಭಟ್ಟಿ (ನಾ). ೧. ಮದ್ಯ ಮುಂತಾದುವನ್ನು ತಯಾರಿಸಲು ಬಳಸುವ ಹಬೆಯ ಸಾಧನ; ಬಟ್ಟಿ. ೨. ಒಂದು ಅಳತೆಯ ಪ್ರಮಾಣ.

ಭಟ್ಟಿನಿ (ನಾ). ೧. ಪಟ್ಟಮಹಿಷಿಯಲ್ಲದ ರಾಣಿ. ೨. ಶ್ರೇಷ್ಠಳಾದ ಹೆಂಗಸು.

ಭಣಗುಡು (ಕ್ರಿ). ಶೂನ್ಯವಾಗಿ ತೋರು; ಬರಿದಾಗಿ ಕಾಣು.

ಭಣಿತಿ = ಬಣಿತೆ.

ಭಣಿತೆ = ಬಣಿತೆ.

ಭತ್ತ = ಬತ್ತ.

ಭತ್ತೆ = ಭತ್ಯ.

ಭತ್ಯ (ನಾ). ಕೆಲಸಗಾರರಿಗೆ ಕೊಡುವ ವಿಶೇಷ ಸಂಭಾವನೆ.

ಭದ್ರ (ನಾ). ೧. ಸುಖ; ಶ್ರೇಯಸ್ಸು; ಸುರಕ್ಷಿತತೆ. ೨. ಶ್ರೇಷ್ಠತೆ. ೩. ಒಂದು ಜಾತಿಯ ಆನೆ. ೪. ಚಿನ್ನ. ೫. ಬಿರುಕು; ಅಂತರ. ೬. ಒಂದು ಬಗೆಯ ವಾದ್ಯ. ೭. ಉಪ್ಪರಿಗೆ; ಮಹಡಿ. ೮. ಎತ್ತು; ಗೂಳಿ. (ಗು). ೯. ಶುಭಕರವಾದ; ಮಂಗಳಕರವಾದ. ೧೦. ಶ್ರೇಷ್ಠವಾದ. ೧೧. ಅಂದವಾದ. ೧೨. ಸುರಕ್ಷಿತವಾದ. ೧೩. ಬಿಗಿಯಾದ; ಗಟ್ಟಿಯಾದ. ~ಆಕಾರ=ಸುಂದರವಾದ ರೂಪ. ~ಆಸನ = ೧. ಭದ್ರಪೀಠ. ೨. ಧ್ಯಾನಕ್ಕೆ ಕುಳಿತುಕೊಳ್ಳುವ ಒಂದು ಭಂಗಿ. ~ಗಜ = ಶುಭಲಕ್ಷಣಗಳಿಂದ ಕೂಡಿದ ಆನೆ; ಪಟ್ಟದ ಆನೆ. ~ಪೀಠ = ಉತ್ತಮವಾದ ಪೀಠ; ಸಿಂಹಾಸನ. ~ಮಂಟಪ = ಶುಭಕಾರ್ಯಕ್ಕಾಗಿ ಕಟ್ಟಿದ ಮಂಟಪ. ~ಮಾಡು =ಸುರಕ್ಷಿತವಾಗಿರಿಸು; ಜೋಪಾನ ಮಾಡು. ~ಲಕ್ಷಣ = ಮಂಗಳಕರವಾದ ಚಿಹ್ನೆ. ~ಶಾಲೆ = ಮಹಡಿ; ಉಪ್ಪರಿಗೆ.

ಭದ್ರಮುಸ್ತೆ (ನಾ). ಒಂದು ಬಗೆಯ ಔಷಧಿ ಮೂಲಿಕೆ.

ಭದ್ರಾಕರಣ (ನಾ). ೧. ಸುಂದರವಾಗಿ ಮಾಡುವುದು. ೨. ಕ್ಷೌರ ಮಾಡುವುದು.

ಭಯ (ನಾ). ೧. ಅಂಜಿಕೆ; ಹೆದರಿಕೆ. ೨. ಕಾವ್ಯದ ನವರಸಗಳಲ್ಲಿ ಒಂದು. ~(ಂ)ಕೊ(ಗೊ)ಳ್ = ಅಂಜು; ಹೆದರು.

ಭಯಂಕರ (ಗು). ಭಯವನ್ನುಂಟುಮಾಡುವ; ಉಗ್ರವಾದ.

ಭಯಾನಕ ೧. = ಭಯ. (ಗು). ೨. ಉಗ್ರವಾದ; ಭಯಂಕರ.

ಭರ (ನಾ). ೧. ಎತ್ತಿ ಹಿಡಿಯುವುದು; ಆಧರಿಸುವುದು. ೨. ಹೊರುವುದು; ಧರಿಸುವುದು. ೩. ಭಾರ; ಹೊರೆ. ೪. ಇಪ್ಪತ್ತು ತೊಲದ ತೂಕ, —ಪ್ರಮಾಣ. ೫. ಹೆಚ್ಚಳ; ಆಧಿಕ್ಯ. ೬. ಬಲವಾದ ಆಸೆ; ಉತ್ಕಟೇಚ್ಛೆ. ೭. ವೇಗ; ಆತುರ. ~ಇಸು = ವಹಿಸು; ಧರಿಸು; ಹೊರು. ~(ಂ)ಗೆಯ್ = ೧. ಆತುರಗೊಳ್ಳು; ರಭಸವನ್ನು ತೋರು. ೨. ಕಾರ್ಯಭಾರವನ್ನು ವಹಿಸಿಕೊಳ್ಳು.

ಭರಡಾ (ನಾ). ೧. ಒಂದು ಜಾತಿಯ ಅಡಕೆ. ೨. ನುಚ್ಚು; ತರಿ.

ಭರಣ (ನಾ). ೧. ವಹಿಸುವುದು; ಧರಿಸುವುದು. ೨. ಕಾಪಾಡುವುದು; ಪೋಷಿಸುವುದು. ೩. ಸಂಬಳ; ವೇತನ. ೪. ತುಂಬುವುದು; ಭರ್ತಿಮಾಡುವುದು. ೫. ತುಂಬಿಸುವ ವಸ್ತು, —ಪದಾರ್ಥ.

ಭರಣಿ (ನಾ). ೧. ಕರಡಿಗೆ; ಕರಂಡಕ. ೨. ಇಪ್ಪತ್ತೇಳು ನಕ್ಷತ್ರಗಳಲ್ಲಿ ಒಂದು ಮತ್ತು ಆ ನಕ್ಷತ್ರದಲ್ಲಿ ಬರುವ ಮಳೆ.

ಭರತ (ನಾ). ೧. ಅಭಿನಯಕಲೆ; ನಾಟ್ಯಶಾಸ್ತ್ರ. ೨. ಅಭಿನಯಿಸುವವನು; ನಟ. ೩. ನಾಟ್ಯಶಾಸ್ತ್ರವನ್ನು ಬರೆದ ಮುನಿ. ೪. ನದಿ ಅಥವಾ ಸಮುದ್ರದ ಉಬ್ಬರ. ೫. ಭಾರತದೇಶ. ~ಏ(ವೇ)ಳು=ಸಮುದ್ರವು

ಉಕ್ಕೇರು. ~ಖಂಡ = ಭಾರತದೇಶ. ~ವರ್ಷ = ಭರತಖಂಡ. ~ವಾಕ್ಯ =೧. ನಾಟಕದ ಕೊನೆಯಲ್ಲಿ ಬರುವ ಆಶೀರ್ವಚನದಿಂದ ಕೂಡಿದ ಶ್ಲೋಕ ೨. ಕೊನೆಯ ಮಾತು. ~ಶಾಸ್ತ್ರ = ನಾಟ್ಯ ಶಾಸ್ತ್ರ.

ಭರತಜ್ಞ (ನಾ). ನಾಟ್ಯ ಶಾಸ್ತ್ರವನ್ನು ತಿಳಿದವನು.

ಭರತಿ (ನಾ). ೧. ಸಮುದ್ರ ಅಥವಾ ನದಿಯ ಉಬ್ಬರ. ೨. ಪೂರ್ಣವಾಗಿರುವುದು; ಭರ್ತಿ.

ಭರದ್ವಾಜ (ನಾ). ೧. ಒಂದು ಜಾತಿಯ ಪಕ್ಷಿ. ೨. ಒಬ್ಬ ಋಷಿಯ ಹೆಸರು.

ಭರವಸ (ನಾ). ೧. ನಂಬಿಕೆ; ವಿಶ್ವಾಸ. ೨. ಅಭಯ; ಆಶ್ವಾಸನೆ.

ಭರವಸೆ = ಭರವಸ.

ಭರಾಟ (ನಾ). ೧. ವೇಗ; ರಭಸ. ೨. ಅಧಿಕ್ಯ; ಹೆಚ್ಚಳ.

ಭರಿಕ್ಕೆ (ನಾ). ಆನೆಯ ಸೊಂಡಿಲು.

ಭರ್ಗ (ನಾ). ೧. ಕಾಂತಿ; ಪ್ರಕಾಶ. ೨. ಶಿವ.

ಭರ್ಜರಿ(ಗು).೧.ಉತ್ತಮವಾದ; ಸೊಗಸಾದ. ೨. ದೊಡ್ಡ; ಭಾರಿಯಾದ.

ಭರ್ಜಿ = ಬರ್ಜಿ.

ಭರ್ತ = ಭರ್ತೃ.

ಭರ್ತಾರ = ಭರ್ತೃ.

ಭರ್ತಿ = ಭರತಿ.

ಭರ್ತೃ (ನಾ). ೧. ಪೋಷಿಸುವವನು; ಕಾಪಾಡುವವನು. ೨. ಒಡೆಯ; ಸ್ವಾಮಿ. ೩. ಗಂಡ. ~ನಿಂದಕ = ಒಡೆಯನನ್ನು ತೆಗಳುವವನು; ಸ್ವಾಮಿದ್ರೋಹಿ.

ಭರ್ತ್ಸನ (ನಾ). ೧. ಹೆದರಿಸುವುದು; ಅಂಜಿಸುವುದು. ೨. ಹೆದರಿಕೆ; ಭಯ. ೩. ನಿಂದೆ; ತೆಗಳಿಕೆ; ಧಿಕ್ಕಾರ.

ಭರ್ಮ (ನಾ). ೧. ಬೆಂಬಲ; ಆಧಾರ. ೨. ಸಂಬಳ; ಕೂಲಿ. ೩. ಬಂಗಾರ. ~ಹರ್ಮ್ಯ = ಬಂಗಾರದ ಸೌಧ, -ಭವನ.

ಭಲ (ನಾ). ಕೊಂಡಾಟದ ಒಂದು ಮಾತು.

ಭಲೆ = ಭಲ.

ಭಲ್ಲ (ನಾ). ೧. ಒಂದು ಬಗೆಯ ಬಾಣ. ೨. = ಭಲ್ಲೂಕ.

ಭಲ್ಲಾತಕ (ನಾ). ಗೇರುಮರ ಮತ್ತು ಅದರ ಬೀಜ.

ಭಲ್ಲಾತಕಿ = ಭಲ್ಲಾತಕ.

ಭಲ್ಲೂಕ (ನಾ). ಕರಡಿ.

ಭಲ್ಲೆ ೧. = ಭಲ್ಲೆಯ. ೨. ಜೋಳದ ದಂಟು.

ಭಲ್ಲೆಯ (ನಾ). ಒಂದು ಬಗೆಯ ಆಯುಧ.

ಭಲ್ಲೆಹ = ಭಲ್ಲೆಯ.

ಭವ (ನಾ). ೧. ಅಸ್ತಿತ್ವ; ಇರುವಿಕೆ. ೨. ವಾಸಸ್ಥಳ; ಮನೆ. ೩. ಹುಟ್ಟು; ಜನ್ಮ. ೪. ಸಂಸಾರ. ೫. ಪುನರ್ಜನ್ಮ; ಜನ್ಮಾಂತರ. ೬. ಶಿವ. (ಗು). ೭. ಹುಟ್ಟಿದ; ಉತ್ಪನ್ನವಾದ. ~ಅಂತರ = ಬೇರೆಯ ಜನ್ಮ; ಜನ್ಮಾಂತರ. ~ಆವಳಿ = ಹುಟ್ಟು ಸಾವುಗಳ ಪರಂಪರೆ ~ಇಸು = ಹುಟ್ಟು; ಜನಿಸು. ~ಕೆ(ಗೆ)ಡು = ೧. ಹುಟ್ಟು ಸಾವುಗಳಿಂದ ಪಾರಾಗು. ೨. ಹಾಳಾಗು; ನಾಶವಾಗು. ~ಕ್ಷಯ = ಹುಟ್ಟು ಸಾವುಗಳ ಬಂಧನವನ್ನು ನಾಶಮಾಡಿದವನು; ಮುಕ್ತ. ~ದೂರ = ಹುಟ್ಟು ಸಾವುಗಳಿಂದ ದೂರವಾದವನು; ಪರಮಾತ್ಮ. ~ಪಾಶ = ಸಂಸಾರ ಬಂಧನ. ~ಬಂಧನ = ಭವಪಾಶ. ~ಸ್ಮರಣೆ = ಪೂರ್ವಜನ್ಮದ ನೆನಪು.

ಭವಣಿ = ಬವಣಿ.

ಭವಣೆ = ಬವಣೆ.

ಭವನ (ನಾ). ೧. ಇರುವಿಕೆ; ಅಸ್ತಿತ್ವ. ೨. ಜನನ; ಉತ್ಪತ್ತಿ. ೩. ಸೌಧ; ಮನೆ.

ಭವಿ (ನಾ). ೧. ಸಂಸಾರ ಬಂಧನಕ್ಕೆ ಒಳಗಾದವನು. ೨. ವೀರಶೈವ ದೀಕ್ಷೆಯನ್ನು ಪಡೆಯದವನು. (ಗು). ೩. ಜೀವದಿಂದಿರುವ; ಬದುಕಿರುವ.

ಭವಿತವ್ಯ (ನಾ). ೧. ವಿಧಿ; ಅದೃಷ್ಟ. (ಗು). ೨. ಆಗಲಿರುವ.

ಭವಿಷ್ಯ (ಗು). ೧. ಮುಂದೆ ಬರಲಿರುವ ಕಾಲ; ಭವಿಷ್ಯತ್ತು. ೨. = ಭವಿತವ್ಯ.

ಭವಿಷ್ಯತ್ತು (ನಾ). ೧. ಬರಲಿರುವ ಕಾಲ; ಮುಂದಿನ ಕಾಲ. ೨. ಮುಂದಾಗುವ ಘಟನೆ. ೩. ವ್ಯಾಕರಣದಲ್ಲಿ ಬರುವ ಮೂರು ಕಾಲಗಳಲ್ಲಿ ಒಂದು. (ಗು). ೪. ಆಗಲಿರುವ; ಬರಲಿರುವ.

ಭವ್ಯ (ನಾ). ೧. ಮೋಕ್ಷಕ್ಕೆ ಅರ್ಹನಾದವನು. (ಗು). ೨. ಆಗುವ; ಆಗಲಿರುವ. ೩. ಯೋಗ್ಯವಾದ; ಉತ್ಕೃಷ್ಟವಾದ. ೪. ಚೆನ್ನಾದ; ಉತ್ತಮವಾದ.

ಭವ್ಯತೆ (ನಾ). ೧. ಮಂಗಳಕರವಾದುದು. ೨. ವೈಭವ; ಠೀವಿ. ೩. ಉತ್ಕೃಷ್ಟತೆ; ಉತ್ತಮತೆ.

ಭಷಕ (ನಾ). ೧. ನಾಯಿ. ೨. ಬೊಗಳುವವನು.

ಭಷಣ (ನಾ). ೧. ಬೊಗಳುವಿಕೆ. ೨. ನಾಯಿ.

ಭಸಿತ (ನಾ). ವಿಭೂತಿ; ಭಸ್ಮ.

ಭಸ್ತ್ರೆ (ನಾ). ೧. ತಿದಿ. ೨. ಚರ್ಮದ ಚೀಲ.

ಭಸ್ಮ (ನಾ). ೧. ಬೂದಿ. ೨. ವಿಭೂತಿ.

ಭಾಂಗಿ (ನಾ). (ಟಪಾಲು ಮೂಲಕ ಕಳಿಸುವ) ಕಟ್ಟಿದ ವಸ್ತು; ಪಾರ್ಸೆಲ್ಲು.

ಭಾಂಡ ೧. = ಭಾಂಡಿ. ೨. ಕುದುರೆಯ ಸಜ್ಜು, -ಸರಂಜಾಮು. ೩. ಒಡವೆ; ಆಭರಣ. ೪. ವ್ಯಾಪಾರದ ಸರಕಿನ ಮೂಟೆ, -ಗಂಟು. ೫. ವ್ಯಾಪಾರಿಯ ಸರಕು, -ದಾಸ್ತಾನು. ೬. ಹಾಸ್ಯ; ನಕಲಿ. ~ಆಗಾರ = ೧. ಉಗ್ರಾಣ; ಕಣಜ. ೨. ನಿಧಿ; ಸಂಪತ್ತು. ~ಶಕಲ = ಒಡೆದ ಮಡಕೆಯ ಚೂರು; ಓಡು.

ಭಾಂಡಿ (ನಾ). ಪಾತ್ರೆ.

ಭಾಂಡು (ನಾ). ಸೀರೆ.

ಭಾಕ್ತ (ಗು). ೧. ಪರಾಧೀನವಾದ; ಆಶ್ರಿತ. ೨. ತಿನ್ನಲು ಯೋಗ್ಯವಾದ. ೩. ಅಮುಖ್ಯವಾದ; ಗೌಣವಾದ.

ಭಾಗ (ನಾ). ೧. ಅಂಶ; ಪಾಲು. ೨. ಹಂಚಿಕೆ; ಹಂಚುವುದು. ೩. ಭಾಗ್ಯ; ಅದೃಷ್ಟ. ೪. ನಾಲ್ಕನೆಯ ಒಂದು ಅಂಶ; ಕಾಲು ಭಾಗ. ೫. ಗೊತ್ತಾದ ಸ್ಥಳ. ~ಇಸು = ಭಾಗಮಾಡು; ವಿಭಾಗಿಸು. ~ವಹಿಸು = ಪಾಲುಗೊಳ್ಳು; ಪಾತ್ರವಹಿಸು.

ಭಾಗಧೇಯ (ನಾ). ೧. ಪಾಲು; ವಿಭಾಗ. ೨. ವಿಧಿ; ದೈವ. ೩. ಅದೃಷ್ಟ; ಭಾಗ್ಯ. ೪. ಕರ; ತೆರಿಗೆ.

ಭಾಗವತ (ನಾ). ೧. ಹರಿದಾಸ; ವಿಷ್ಣುಭಕ್ತ. ೨. ಹದಿನೆಂಟು ಪುರಾಣಗಳಲ್ಲಿ ಒಂದು. ೩. ಬಯಲಾಟದಲ್ಲಿ ಅಭಿನಯವನ್ನು ಕಲಿಸುವವನು; ನಿರ್ದೇಶಕ. (ಗು). ೪. ಭಗವಂತನಿಗೆ ಸಂಬಂಧಿಸಿದ. ~ಸಂಪ್ರದಾಯ=ವೈಷ್ಣವ ಸಂಪ್ರದಾಯ.

ಭಾಗಶಃ (ಅ). ಭಾಗಭಾಗವಾಗಿ.

ಭಾಗಸ್ಥ (ನಾ). ೧. ಪಾಲುಗಾರ; ಭಾಗಿ. ೨. ಹಕ್ಕುದಾರ; ವಾರಸುದಾರ.

ಭಾಗಾಕಾರ (ನಾ). ಒಂದು ಸಂಖ್ಯೆಯನ್ನು ಮತ್ತೊಂದು ಸಂಖ್ಯೆಯಿಂದ ಭಾಗಿಸುವುದು.

ಭಾಗಾದಿ (ನಾ). ದಾಯಾದಿ.

ಭಾಗಾಹಾರ = ಭಾಗಾಕಾರ.

ಭಾಗಿ (ನಾ). ೧. ಭಾಗವನ್ನು ಹೊಂದಿದವನು; ಪಾಲುದಾರ. ೨. ಯಜಮಾನ; ಒಡೆಯ. ೩. ಹಕ್ಕುದಾರ; ವಾರಸುದಾರ. ೪. ಭಾಗ್ಯವಂತ; ಅದೃಷ್ಟಶಾಲಿ.

ಭಾಗಿನೇಯು (ನಾ). ಒಡಹುಟ್ಟಿದವಳ ಮಗ; ಸೋದರಳಿಯ.

ಭಾಗೆ (ನಾ). ಭಾಗ; ಪಾಲು; ವಿಭಾಗ.

ಭಾಗ್ಯ (ನಾ). ೧. ಭಾಗಮಾಡಲು ಯೋಗ್ಯವಾದುದು. ೨. ಕರ್ಮಫಲದಿಂದುಂಟಾಗುವ ಸುದೈವ ಅಥವಾ ದುರ್ದೈವ. ೩. ಸುಖ; ಶ್ರೇಯಸ್ಸು. ೪. ಐಶ್ವರ್ಯ; ಸಂಪತ್ತು.

ಭಾಗ್ಯಶಾಲಿ (ನಾ). ಭಾಗ್ಯವಂತ; ಸುದೈವಿ.

ಭಾಜಕ (ನಾ). ೧. ಭಾಗಮಾಡುವವನು. ೨. ಭಾಗಿಸುವ ಸಂಖ್ಯೆ.

ಭಾಜನ (ನಾ). ೧. ವಿಭಾಗಿಸುವುದು. ೨. ಪಾತ್ರೆ; ಭಾಂಡ. ೩. ಅರ್ಹ; ಯೋಗ್ಯನಾದವನು.

ಭಾಜ್ಯ (ನಾ). ೧. ಭಾಗ; ಪಾಲು; ಅಂಶ. ೨. ಗಣಿತದಲ್ಲಿ ಭಾಗಿಸಲ್ಪಡುವ ಸಂಖ್ಯೆ. (ಗು). ೩. ಭಾಗಿಸಲ್ಪಡುವ.

ಭಾಟ (ನಾ). ೧. ಸಂಬಳ; ವೇತನ; ಕೂಲಿ. ೨. ಬಾಡಿಗೆ.

ಭಾಟಾಮಾರ್ಗ (ನಾ). ರಾಜಮಾರ್ಗ; ಮುಖ್ಯರಸ್ತೆ; ಹೆದ್ದಾರಿ.

ಭಾಣ (ನಾ). ೧. ನಾಟಕದ ದಶರೂಪಕಗಳಲ್ಲಿ ಒಂದು. ೨. ಆಹಾರವಿರುವ ತಟ್ಟೆ. ೩. ಕುದುರೆಯ ಬಾಯಿಗೆ ಕಟ್ಟುವ ಆಹಾರದ ಚೀಲ; ತೋಬರಿ.

ಭಾತಿ (ನಾ). ಬೆಳಕು; ಪ್ರಕಾಶ; ಕಾಂತಿ.

ಭಾತು (ನಾ). ೧. ಬತ್ತ; ನೆಲ್ಲು. ೨. ಅನ್ನ; ಕಲಸಿದ ಅನ್ನ.

ಭಾದ್ರಪದ (ನಾ). ಚಾಂದ್ರಮಾನ ವರ್ಷದ ಅರನೆಯ ತಿಂಗಳು.

ಭಾನ (ನಾ). ೧. ಸ್ಪಷ್ಟವಾಗಿ ಕಾಣುವುದು, -ತೋರುವುದು. ೨. ಪ್ರಕಾಶ; ಹೊಳಪು. ೩. ಜ್ಞಾನ; ತಿಳಿವಳಿಕೆ. ~ತಪ್ಪು = ಎಚ್ಚರ ತಪ್ಪು; ಮೈಮರೆ.

ಭಾನಗಡಿ (ನಾ). ಅವ್ಯವಸ್ಥೆ; ಗೊಂದಲ.

ಭಾನು (ನಾ). ೧. ಪ್ರಕಾಶ; ಹೊಳಪು. ೨. ಸೂರ್ಯ; ನೇಸರು. ೩. ರಾಜ. ~ಬಿಂಬ = ಸೂರ್ಯಮಂಡಲ. ~ವಾರ = ವಾರದ ಏಳುದಿನಗಳಲ್ಲಿ ಒಂದು; ರವಿವಾರ.

ಭಾಪು (ನಾ). ಕೊಂಡಾಟದ ಒಂದು ಮಾತು.

ಭಾಪುರಿ (ನಾ). ತೋಳಿಗೆ ಧರಿಸುವ ಒಂದು ಬಗೆಯ ಆಭರಣ.

ಭಾಮಂಡಲ(ಳ) (ನಾ). ಸೂರ್ಯ ಮತ್ತು ಚಂದ್ರನ ಸುತ್ತಲೂ ಇರುವ ಬೆಳಕಿನ ವರ್ತುಲ.

ಭಾಮಿನಿ = ಭಾಮೆ.

ಭಾಮಿನೀಷಟ್ಪದಿ (ನಾ). ಕನ್ನಡದ ಅರು ಷಟ್ಪದಿಗಳಲ್ಲಿ ಒಂದು.

ಭಾಮೆ (ನಾ). ೧. ಹೆಂಗಸು. ೨. ಕೋಪಗೊಂಡಿರುವ ಹೆಂಗಸು; ಕೆರಳಿದ ಹೆಣ್ಣು.

ಭಾರ (ನಾ). ೧. ಹೊರುವುದು; ಧರಿಸುವುದು. ೨. ಹೊರೆ; ಹೇರು. ೩. ಒಜ್ಜೆ; ತೂಕ. ೪. ಆಧಿಕ್ಯ; ಹೆಚ್ಚಳ. ೫. ಹೊಣೆಗಾರಿಕೆ; ಜವಾಬ್ದಾರಿ. ~ಇಸು = ೧. ಹೆಚ್ಚಾಗು; ಅಧಿಕವಾಗು. ೨. = ಭಾರೈಸು.

ಭಾರಕ (ನಾ). ೧. ಹೊರೆ; ಭಾರ. ೨. ಭಾರವನ್ನು ಹೊರುವವನು.

ಭಾರಣೆ (ನಾ). ೧. ಹೊರೆ; ಭಾರ. ೨. ಆಧಿಕ್ಯ; ಹೆಚ್ಚಳ. ೩. ಘನತೆ; ಹಿರಿಮೆ.

ಭಾರತ (ನಾ). ೧. ಭರತನ ವಂಶದಲ್ಲಿ ಹುಟ್ಟಿದವನು. ೨. ಭರತಖಂಡ; ಹಿಂದುಸ್ತಾನ. ೩. ಭಾರತದೇಶದ ಒಂದು ಪ್ರಸಿದ್ಧ ಇತಿಹಾಸ ಕಾವ್ಯ. ೪. ನಟ. ~ವಾಚನ = ಭಾರತವನ್ನು ರಾಗಬದ್ಧವಾಗಿ ಓದುವುದು; ಗಮಕ.

ಭಾರತಿ (ನಾ). ೧. ಸರಸ್ವತಿ; ಶಾರದೆ. ೨. ವಿದ್ವಾಂಸ; ಪಂಡಿತ. ೩. ಕೆಲವು ಸಂನ್ಯಾಸಿಗಳ ಹೆಸರಿನ ಕಡೆಯಲ್ಲಿ ಸೇರಿಸಿಕೊಳ್ಳುವ ಒಂದು ಪದ.

ಭಾರತಿಕ (ನಾ). ನಟ; ನಟ್ಟುವ.

ಭಾರದ್ವಾಜ (ನಾ). ೧. ಭರದ್ವಾಜ ಋಷಿಗೆ ಸಂಬಂಧಿಸಿದುದು. ೨. ಭರದ್ವಾಜನ ಮಗ; ದ್ರೋಣಾಚಾರ್ಯ. ೩. ಸಪ್ತಋಷಿಗಳಲ್ಲಿ ಒಬ್ಬ. ೪. ಒಂದು ಜಾತಿಯ ಪಕ್ಷಿ; ಸಂಬಾರಕಾಗೆ.

ಭಾರಿ (ಗು). ೧. ಘನವಾದ; ತೂಕವುಳ್ಳ. ೨. ವಿಶೇಷವಾದ; ಮಹತ್ತ್ವದ; ದೊಡ್ಡ.

ಭಾರೈಸು (ಕ್ರಿ). ಭಾರವಾಗು; ತೂಕದಿಂದ ಕೂಡಿರು.

ಭಾರ್ಗವ (ನಾ). ೧. ಭೃಗುಮುನಿಯ ಮಗ. ೨. ಪರಶುರಾಮ. ೩. ಶುಕ್ರಗ್ರಹ.

ಭಾರ್ಗವಿ (ನಾ). ೧. ಲಕ್ಷ್ಮಿ. ೨. ಪಾರ್ವತಿ. ೩. ಒಂದು ಜಾತಿಯ ಹುಲ್ಲು; ಗರಿಕೆ.

ಭಾರ್ಯ (ನಾ). ೧. ಆಳು; ಸೇವಕ. (ಗು). ೨. ಹೊರಬೇಕಾದ. ೩. ಪೋಷಿಸಬೇಕಾದ.

ಭಾರ್ಯೆ (ನಾ). ಹೆಂಡತಿ; ಪತ್ನಿ.

ಭಾಲ(ಳ) (ನಾ). ಹಣೆ; ನೊಸಲು. ~ಅಂಬಕ = ೧. ಹಣೆಯಲ್ಲಿರುವ ಕಣ್ಣು. ೨. ಶಿವ. ~ನೇತ್ರ = ಭಾಳಾಂಬಕ. ~ಪಟ್ಟಿ = ೧. ಹಣೆ. ೨. ಯಜ್ಞಾಶ್ವದ ಹಣೆಗೆ ಕಟ್ಟುವ ಪಟ್ಟಿ.

ಭಾಲದಾರ (ನಾ). ಬಾಗಿಲು ಕಾಯುವವನು; ದ್ವಾರಪಾಲಕ.

ಭಾಲೆ (ನಾ). ಭರ್ಜಿ; ಭಲ್ಲೆಯ.

ಭಾವ (ನಾ). ೧. ಅಕ್ಕನ ಗಂಡ. ೨. ಗಂಡನ ಅಣ್ಣ. ೩. ಇರುವಿಕೆ; ಅಸ್ತಿತ್ವ. ೪. ಸ್ವರೂಪ; ತೋರಿಕೆ. ೫. ಮನಸ್ಸಿನ ಸ್ಥಿತಿ; ಚಿತ್ತವೃತ್ತಿ; ಸ್ವಭಾವ. ೬. ಅಭಿಪ್ರಾಯ. ೭. ಭಾವನೆ; ಆಲೋಚನೆ. ೮. ಹೃದಯ; ಮನಸ್ಸು. ೯. ಅಂಗಚಲನೆ; ಕ್ರಿಯೆ. ೧೦. ಒಂದು ವಸ್ತುವಿನ ಸ್ಥಿತಿಯನ್ನು ವರ್ಣಿಸುವ ಭಾವನಾಮದ ಅರ್ಥ. ೧೧. ಹುಟ್ಟು; ಮೂಲ. ೧೨. ರಸಪರಿಪೋಷಕವಾದ ಸಾಮಗ್ರಿ. ೧೩. ಒಂದು ಸಂವತ್ಸರದ ಹೆಸರು. ~ಅನುವಾದ = ಮೂಲಕೃತಿಯ ಮುಖ್ಯ ಅಭಿಪ್ರಾಯವನ್ನು ಅನುಸರಿಸಿರುವುದು. ~ಅಭಿವ್ಯಕ್ತಿ = ಮನಸ್ಸಿನ ಭಾವನೆಗಳನ್ನು ತೋರ್ಪಡಿಸುವುದು. ~ಆವೇಶ = ಚಿತ್ತವೃತ್ತಿಯ ತೀವ್ರತೆ; ಭಾವಪರವಶತೆ. ~ಇಸು = ೧. ದೊರಕು; ಪ್ರಾಪ್ತವಾಗು. ೨. ಯೋಚಿಸು; ಊಹಿಸು. ೩. ಕೂಡಿಸು; ಸೇರಿಸು. ೪. ನೆನೆಯಿಸು; ತೋಯಿಸು. ೫. ಲೇಪಿಸು; ತೊಡೆ. ~ಗೀತೆ = ಭಾವಪ್ರಧಾನವಾದ ಗೀತೆ. ~ಚಿತ್ರ = ತಸವೀರು; ಫೋಟೊ. ~ಜೀವಿ = ಭಾವನಾಮಯನಾದ ವ್ಯಕ್ತಿ. ~ಮಯ್ದುನ = ಹೆಂಡತಿಯ ಸಹೋದರ. ~ಶುದ್ಧಿ = ಮನಸ್ಸಿನ ಸ್ವಚ್ಛತೆ, -ನೈರ್ಮಲ್ಯ.

ಭಾವಕ (ನಾ). ೧. ಹಿತೈಷಿ; ಹಿತಚಿಂತಕ. ೨. ರಸಿಕ; ಸಹೃದಯ. ೩. ಪಂಡಿತ; ವಿದ್ವಾಂಸ. (ಗು). ೪. ಉಂಟುಮಾಡುವ; ಕಲ್ಪಿಸುವ.

ಭಾವಕಿ (ನಾ). ೧. ಸದಭಿರುಚಿಯುಳ್ಳ ಹೆಂಗಸು. ೨. ಸುಂದರಿ; ಚೆಲುವೆ.

ಭಾವಜ (ನಾ). ಕಾಮ; ಮನ್ಮಥ. ~ಅಂತಕ = ಮನ್ಮಥನಿಗೆ ಮೃತ್ಯುಸ್ವರೂಪನಾದವನು; ಶಿವ. ~ಜನಕ = ಮನ್ಮಥನ ತಂದೆ; ವಿಷ್ಣು.

ಭಾವಜ್ಞ (ನಾ). ೧. ಇತರರ ಭಾವನೆಗಳನ್ನು ಅರಿಯುವವನು; ಇಂಗಿತಜ್ಞ. ೨. ಜ್ಞಾನಿ; ಅನುಭಾವಿ.

ಭಾವನೆ (ನಾ). ೧. ಉಂಟುಮಾಡುವುದು; ಸೃಷ್ಟಿಸುವುದು. ೨. ಇತರರಿಗೆ ಹಿತವನ್ನು ಮಾಡುವುದು. ೩. ಊಹೆ; ಕಲ್ಪನೆ. ೪. ಅಭಿಪ್ರಾಯ; ವಿಚಾರ. ೫. ಧ್ಯಾನ. ೬. ಚೂರ್ಣವನ್ನು ದ್ರವದಲ್ಲಿ ನೆನೆಯಿಸುವುದು. ೭. ಹೂವು, ಗಂಧಾದಿಗಳಿಂದ

ಶೃಂಗರಿಸುವುದು. ~ಗೆಯ್ = ನೆನೆಹಾಕು; ನೆನೆಯಿಸು.

ಭಾವಿ ೧. = ಬಾವಿ. ೨. ಮುಂದೆ ಸಂಭವಿಸ ತಕ್ಕುದು ; ಭವಿಷ್ಯ. ೩. ಭವಿಷ್ಯತ್ಕಾಲ. (ಗು). ೪. ಮುಂದೆ ಆಗಲಿರುವ.

ಭಾವಿಕ (ನಾ). ೧. ತಿಳಿದವನು ; ಜ್ಞಾನಿ. ೨. (ಅಂಧಶ್ರದ್ಧೆಗಳಲ್ಲಿ) ನಂಬಿಕೆಯುಳ್ಳವನು. ೩. ಅರ್ಥಾಲಂಕಾರಗಳಲ್ಲಿ ಒಂದು. ೪. ಭಾವಪೂರ್ಣವಾದ ಮಾತು. (ಗು). ೫. ಸಹಜವಾದ; ಸ್ವಾಭಾವಿಕವಾದ. ೬. ಭಾವಪೂರ್ಣವಾದ. ೭. ಒಳ್ಳೆಯ ; ಚೆನ್ನಾದ.

ಭಾವಿತ (ಗು). ೧. ಸೃಷ್ಟಿಸಿದ; ಉಂಟು ಮಾಡಿದ; ಉತ್ಪಾದಿಸಿದ. ೨. ಪ್ರಕಟಿಸಲ್ಪಟ್ಟ ; ತೋರ್ಪಡಿಸಿದ. ೩. ಊಹಿಸಿದ ; ಭಾವಿಸಿದ. ೪. ಮಂಗಳಕರವಾದ; ಒಳ್ಳೆಯ. ೫. ನೆನೆಯಿಸಿದ; ತೊಯ್ದ. ೬. ಕಲಸಿದ; ಮಿಶ್ರಣ ಮಾಡಿದ. ೭. ಪರಿಮಳಗೊಳಿಸಿದ.

ಭಾವುಕ (ನಾ). ೧. ಅಕ್ಕನ ಗಂಡ; ಭಾವ. ೨. ಸಂತೋಷ. ೩. ಭಾವಜೀವಿ. (ಗು). ೪. ಸದಭಿರುಚಿಯುಳ್ಳ.

ಭಾವುಕತೆ (ನಾ). ೧. ಸೌಂದರ್ಯವನ್ನು ಆಸ್ವಾದಿಸುವ ಗುಣ; ರಸಿಕತೆ. ೨. ತಲ್ಲೀನತೆ.

ಭಾವೆ = ಭಾಮೆ.

ಭಾವ್ಯ (ನಾ). ೧. ಆಗತಕ್ಕುದು ; ಆಗಲಿರುವುದು. (ಗು). ೨. ಸಂಭವಿಸಲಿರುವ ; ಆಗಲಿರುವ.

ಭಾಷಣ (ನಾ). ೧. ಮಾತನಾಡುವುದು. ೨. ಉಪನ್ಯಾಸ.

ಭಾಷಣಕಾರ (ನಾ). ಉಪನ್ಯಾಸಕ.

ಭಾಷಾಂತರ (ನಾ). ಒಂದು ಭಾಷೆಯಿಂದ ಮತ್ತೊಂದು ಭಾಷೆಗೆ ಅನುವಾದ ಮಾಡುವುದು ; ತರ್ಜುಮೆ. ~ಇಸು = ಅನುವಾದ ಮಾಡು.

ಭಾಷಾಧೀಶ (ನಾ). ವಾಣಿಪತಿ ; ಬ್ರಹ್ಮ.

ಭಾಷಾಪತ್ರ (ನಾ). ಕರಾರು ಪತ್ರ ; ಒಪ್ಪಂದ.

ಭಾಷಾವಾರು (ಅ). ಭಾಷೆಗೆ ಅನುಗುಣವಾಗಿ.

ಭಾಷಿತ (ನಾ). ಮಾತು ; ಭಾಷೆ ; ನುಡಿ.

ಭಾಷೆ (ನಾ). ೧. ಮಾತು ; ನುಡಿ. ೨. ಭಾಷೆಯ ಅಧಿದೇವತೆ; ಸರಸ್ವತಿ. ೩. ಪ್ರತಿಜ್ಞೆ ; ವಚನ. ~ಕೆ(ಗೆ)ಡು = ಮಾತಿಗೆ ತಪ್ಪು ; ವಚನಭ್ರಷ್ಟನಾಗು. ~ಕೆ(ಗೆ)ಡುಕ = ಮಾತಿಗೆ ತಪ್ಪುವವನು; ಸುಳ್ಳ. ~ಕೊ(ಗೊ)ಡು = ಮಾತುಕೊಡು ; ಪ್ರತಿಜ್ಞೆ ಮಾಡು.

ಭಾಷ್ಯ (ನಾ). ವಿವರಣೆ ; ವ್ಯಾಖ್ಯಾನ.

ಭಾಷ್ಯಕಾರ (ನಾ). (ಯಾವುದಾದರೂ ಗ್ರಂಥದ ಬಗೆಗೆ) ವ್ಯಾಖ್ಯಾನವನ್ನು ಬರೆಯುವವನು; ವ್ಯಾಖ್ಯಾನಕಾರ.

ಭಾಸ (ನಾ). ೧. ಹೊಳಪು ; ಕಾಂತಿ. ೨. ತೋರಿಕೆ ; ಸ್ಫುರಣೆ. ೩. ಒಂದು ಜಾತಿಯ ಪಕ್ಷಿ; ಪಿಂಗಳಿ. ೪. ಹುಂಜ. ೫. ಹದ್ದು. ~ಆ(ವಾ)ಗು = ಸ್ಫುರಿಸು ; ತೋಚು. ~ಇಸು = ಹೊಳೆ ; ಪ್ರಕಾಶಿಸು.

ಭಾಸುರ (ನಾ). ೧. ಅಂದ ; ಸೊಗಸು ; ಚೆಲುವು. ೨. ಶೂರ ; ಕಲಿ. (ಗು). ೩. ಹೊಳೆಯುವ ; ಪ್ರಕಾಶಿಸುವ. ೪. ಅಂದವಾದ ; ಚೆಲುವಾದ.

ಭಾಸೆ = ಭಾಷೆ.

ಭಾಸ್ಕರ (ನಾ). ಸೂರ್ಯ ; ನೇಸರು.

ಭಿಂಗಾರಿ (ನಾ). ಚಿನ್ನದ ಪಾತ್ರೆ.

ಭಿಂಡಿವಾಲ(ಳ) = ಬಿಂಡಿವಾಲ.

ಭಿಕಾರಿ = ಬಿಕಾರಿ.

ಭಿಕ್ಕು (ನಾ). ಸಂನ್ಯಾಸಿ ; ಭಿಕ್ಷು.

ಭಿಕ್ಷ = ಭಿಕ್ಷೆ. ~ಅಟನ = ತಿರುಪೆಗಾಗಿ ಅ[ಲೆ]ಯುವುದು. ~ಅನ್ನ = ಭಿಕ್ಷೆಯಿಂ[ದ] ದೊರೆತ ಆಹಾರ.

ಭಿಕ್ಷು (ನಾ). ೧. ಭಿಕ್ಷುಕ ; ತಿರುಪೆಯುವನು. ೨. ಬೌದ್ಧ ಸಂನ್ಯಾಸಿ.

ಭಿಕ್ಷುಕ = ಭಿಕ್ಷು.

ಭಿಕ್ಷುಕಿ (ನಾ). ೧. ಭಿಕ್ಷೆಯನ್ನು ಬೇಡುವವಳು. ೨. ಸಂನ್ಯಾಸಿನಿ ; ಕಂತಿ.

ಭಿಕ್ಷುಣಿ = ಭಿಕ್ಷುಕಿ.

ಭಿಕ್ಷೆ (ನಾ). ೧. ತಿರುಪೆ ; ಯಾಚನೆ ; ಬೇಡುವುದು. ೨. ಭಿಕ್ಷೆಯಲ್ಲಿ ದೊರೆತ ಆಹಾರ. ೩. ಸಂನ್ಯಾಸಿಗಳಿಗೆ ಸಂಸಾರಿಗಳು ನೀಡುವ ಆಹಾರದಾನ. ~ಇಸು = ತಿರುಪೆ ಎತ್ತು ; ಭಿಕ್ಷೆ ಬೇಡು.

ಭಿಡೆ (ನಾ). ದಾಕ್ಷಿಣ್ಯ ; ಸಂಕೋಚ.

ಭಿತ್ತಿ (ನಾ). ೧. ಮುರಿಯುವುದು ; ಒಡೆಯುವುದು. ೨. ಚೂರು ; ತುಂಡು. ೩. ಬಿರುಕು; ಸೀಳು. ೪. ಗೋಡೆ. ೫. ಆಶ್ರಯ ; ಆಧಾರ. ~ಚಿತ್ರ = ಗೋಡೆಯ ಮೇಲೆ ಬರೆದ ಅಥವಾ ಅಂಟಿಸಿದ ಚಿತ್ರ.

ಭಿದುರ (ನಾ). ೧. ಸೀಳುವವನು ; ಒಡೆಯುವವನು. ೨. ಸಿಡಿಲು. (ಗು). ೩. ಮುರಿಯುವ ; ಒಡೆಯುವ.

ಭಿನ್ನ (ನಾ). ೧. ಚೂರು ; ತುಂಡು. ೨. ಭೇದ; ವ್ಯತ್ಯಾಸ. (ಗು). ೩. ಮುರಿದ ; ಒಡೆದ. ೪. ಅರಳಿದ ; ತೆರೆದ. ೫. ಬೇರೆಯಾದ ; ಪ್ರತ್ಯೇಕವಾದ. ~ಅಭಿಪ್ರಾಯ = ಬೇರೆಯ ಅಭಿಪ್ರಾಯ ; ಅಭಿಪ್ರಾಯಭೇದ. ~ಇಸು = ೧. ಮುರಿ; ಒಡೆ. ೨. ವ್ಯತ್ಯಾಸವನ್ನುಂಟು ಮಾಡು ; ಬದಲಾಯಿಸು. ೩. ಒಡೆದು ಚೂರಾಗು ; ಮುರಿದುಹೋಗು. ೪. ಬೇರೆಯಾಗು ; ವ್ಯತ್ಯಾಸವಾಗು. ~ಉದರ = ಮಲತಾಯಿಯ ಹೊಟ್ಟೆಯಲ್ಲಿ ಹುಟ್ಟಿದ ಗಂಡು ಅಥವಾ ಹೆಣ್ಣು. ~(ಂ)ಗೆಯ್ = ೧. ನಾಶಮಾಡು. ೨. ಬೇರೆಯೆಂದು ತಿಳಿ; ಭೇದವನ್ನೆಣಿಸು. ~ರಾಶಿ = ಪೂರ್ಣವಲ್ಲದ ಸಂಖ್ಯೆ ; ಅಪೂರ್ಣಾಂಕ.

ಭಿಲ್ಲ (ನಾ). ಬೇಡ ; ಕಿರಾತ.

ಭಿಲ್ಲಿ (ನಾ). ಬೇಡಿತಿ ; ಕಿರಾತೆ ; ಶಬರಿ.

ಭಿಷಕ್ಕು (ನಾ). ವೈದ್ಯ ; ಚಿಕಿತ್ಸಕ.

ಭಿಷಜ = ಭಿಷಕ್ಕು.

ಭಿಸ್ಸೆ (ನಾ). ಕುದುಪಲಕ್ಕಿ ; ಕುಚ್ಚಲಕ್ಕಿ.

ಭೀಕರ (ಗು). ಭಯವನ್ನುಂಟುಮಾಡುವ ; ಭಯಂಕರ. ~ಇಸು = ಭಯವನ್ನುಂಟು ಮಾಡು ; ಭೀಕರವಾಗು.

ಭೀಕರತೆ (ನಾ). ಭಯಂಕರತೆ.

ಭೀತ (ನಾ). ೧. ಹೆದರಿದವನು ; ಭಯಗೊಂಡವನು. (ಗು). ೨. ಅಂಜಿದ ; ಹೆದರಿದ.

ಭೀತಿ (ನಾ). ೧. ಭಯ ; ಹೆದರಿಕೆ. ೨. ಅಪಾಯ ; ಆಪತ್ತು. ~ಇಸು = ಅಂಜು ; ಹೆದರು.

ಭೀತೆ (ನಾ). ಅಂಜಿದವಳು ; ಹೆದರಿದವಳು.

ಭೀಮ (ನಾ). ೧. ಪಂಚಪಾಂಡವರಲ್ಲಿ ಎರಡನೆಯವನು. ೨. ಶೂರ ; ಪರಾಕ್ರಮಿ. ೩. ಶಿವ. ೪. ವಿಷ್ಣು. ೫. ಯಮ. (ಗು). ೬. ಭಯಂಕರವಾದ ; ಭೀಕರವಾದ. ~ಕಾಯ = ಭಾರಿಯಾದ ದೇಹವುಳ್ಳವನು.

ಭೀರು (ನಾ). ಹೆದರುವ ಸ್ವಭಾವದ ವ್ಯಕ್ತಿ ; ಅಂಜುಕುಳಿ.

ಭೀಷಣ (ನಾ). ೧. ಭಯ ; ಹೆದರಿಕೆ. ೨. ಒಂದು ಬಗೆಯ ವಾದ್ಯ. (ಗು). ೩. ಭಯಂಕರವಾದ ; ಭೀಕರವಾದ.

ಭೀಷ್ಮ (ನಾ). ೧. ಭಯ ; ಹೆದರಿಕೆ. ೨. ಕೌರವ ಮತ್ತು ಪಾಂಡವರ ತಾತ. (ಗು). ೩. ಭೀಕರವಾದ; ಭಯಂಕರವಾದ. ~ಇಸು = ಉಗ್ರವಾಗು ; ಭಯಂಕರವಾಗು. ~ಪ್ರತಿಜ್ಞೆ = ದೃಢವಾದ ಪ್ರತಿಜ್ಞೆ.

ಭುಂಜಕ (ನಾ). ತಿನ್ನುವವನು; ಭಕ್ಷಿಸುವವನು.

ಭುಂ(ಂ)ಜಿಸು (ಕ್ರಿ). ೧. ತಿನ್ನು ; ಉಣ್ಣು. ೨. ಅನುಭವಿಸು ; ಭೋಗಿಸು.

ಭುಂಭುಕ (ನಾ). ೧. ಗೊಂಚಲು ; ಕುಚ್ಚು. ೨. ವೈಭವ. (ಗು). ೩. ಆಶ್ಚರ್ಯಕರವಾದ.

ಭುಕ್ತ (ನಾ). ೧. ತಿನ್ನುವುದು. ೨. ಆಹಾರ ; ಉಣಿಸು. ೩. ಅನುಭವಿಸಿದವನು. (ಗು). ೪. ಅನುಭವಿಸಿದ. ೫. ತಿಂದ ; ಉಂಡ. ~ಶೇಷ = ಊಟ ಮಾಡಿದ ಮೇಲೆ ಉಳಿದುದು ; ಎಂಜಲು ; ಉಚ್ಛಿಷ್ಟ.

ಭುಕ್ತಿ (ನಾ). ೧. ತಿನ್ನುವುದು. ೨. ಸುಖಾನುಭವ ; ಉಪಭೋಗ. ೩. ಊಟ.

ಭುಗಿಲ್ (ನಾ). ಒಂದು ಅನುಕರಣ ಶಬ್ದ. ~ಇಡು = ೧. ಕೆರಳು ; ಆರ್ಭಟಿಸು. ೨. ಪ್ರಜ್ವಲಿಸು ; ಧಗಧಗಿಸು.

ಭುಗ್ನ (ಗು). ಕೊಂಕಾದ ; ಬಾಗಿರುವ.

ಭುಜ (ನಾ). ೧. ತೋಳು. ೨. ಕೊಂಕು ; ಬಾಗಿರುವುದು. ೩ ರೇಖಾಗಣಿತದಲ್ಲಿ ತ್ರಿಕೋನ, ಚತುರ್ಭುಜ ಮುಂತಾದ ರೇಖಾಚಿತ್ರಗಳ ಒಂದು ಪಕ್ಕದ ಗೆರೆ.

ಭುಜ(ಂ)ಗ (ನಾ). ೧. ಹಾವು ; ಸರ್ಪ. ೨. ಜಾರ ; ವಿಟ ; ಬೊಜಂಗ. ~ಇಂದ್ರ = ಆದಿಶೇಷ. ~ಲೋಕ = ನಾಗಲೋಕ ; ಪಾತಾಳ. ~ವಲಯ = ತೋಳಿಗೆ ಧರಿಸುವ ಒಂದು ಆಭರಣ. ~ಶಯನ = ಹಾವಿನ ಮೇಲೆ ಮಲಗಿರುವವನು; ವಿಷ್ಣು.

ಭುಜಂಗಮ (ನಾ). ಹಾವು.

ಭುಜಂಗಿ (ನಾ). ೧. ಹೆಣ್ಣು ಸರ್ಪ. ೨. ಜಾರೆ.

ಭುಜಕೀರ್ತಿ (ನಾ). ಭುಜಕ್ಕೆ ಧರಿಸುವ ಒಂದು ಬಗೆಯ ಅಲಂಕಾರ ; ಭುಜಕಿರೀಟ.

ಭುಜಿಷ್ಯ (ನಾ). ಗುಲಾಮ ; ದಾಸ.

ಭುಜಿಷ್ಯೆ (ನಾ). ದಾಸಿ ; ಸೇವಕಿ.

ಭುಲ್ಲಯಿಸು = ಬುಲ್ಲಯಿಸು.

ಭುಲ್ಲವಣೆ = ಬುಲ್ಲವಣೆ.

ಭುಲ್ಲವಿಸು = ಬುಲ್ಲಯಿಸು.

ಭುವನ (ನಾ). ೧. ಜಗತ್ತು ; ಪ್ರಪಂಚ. ೨. ಮನುಷ್ಯ. ೩. ಭೂಮಿ; ಕ್ಷಿತಿ. ೪. ನೀರು. ~ಅಭಿರಾಮ = ಲೋಕವೇ ಮೋಹಿಸುವ ರೂಪವುಳ್ಳವನು. ~ತ್ರಯ = ಸ್ವರ್ಗ, ಮರ್ತ್ಯ ಮತ್ತು ಪಾತಾಳಗಳೆಂಬ ಮೂರು ಲೋಕಗಳು. ~ನಯನ = ಲೋಕಕ್ಕೆ ಕಣ್ಣಿನಂತಿರುವವನು ; ಸೂರ್ಯ.

ಭುವನಜ (ನಾ). ನೀರಿನಲ್ಲಿ ಹುಟ್ಟಿದುದು ; ತಾವರೆ.

ಭುವನೇಶ್ವರಿ (ನಾ). ೧. ಲೋಕಗಳ ಒಡತಿ ; ಪಾರ್ವತಿ. ೨. ದೇವಸ್ಥಾನದ ಮೇಲ್ಛಾವಣಿಯಲ್ಲಿ ಕೆತ್ತನೆ ಕೆಲಸದಿಂದ ಕೂಡಿದ ಭಾಗ.

ಭುಸುಗುಡು = ಬುಸುಗುಡು.

ಭೂ (ನಾ). ೧. ಪಂಚಮಹಾಭೂತಗಳಲ್ಲಿ ಒಂದು ; ಪೃಥ್ವಿ ; ಭೂಮಿ. ೨. ನೆಲ ; ಮಣ್ಣು. ೩. ವಾಸಸ್ಥಾನ ; ನೆಲೆ. ~ಕಂಪ =ಭೂಮಿಯ ಅದಿರುವಿಕೆ, –ನಡುಗುವಿಕೆ. ~ಕಾಂತ=ರಾಜ; ದೊರೆ. ~ಗೋಲ(ಳ) = ೧. ಭೂಮಂಡಲ ; ಭೂಮಿ. ೨. ಭೂಮಿಯ ಹೊರಮೈಯ ವಿಚಾರವನ್ನು ತಿಳಿಸುವ ಶಾಸ್ತ್ರ. ~ಚಕ್ರ = ೧. ಭೂಮಿ ; ಪೃಥ್ವಿ. ೨. ಭೂಮಿಯ ಪಥ; ಕಕ್ಷೆ. ೩. ಸಿಂಹಾಸನಕ್ಕೆ ಜೋಡಿಸಿರುವ ಕೊಡೆ, –ಛತ್ರಿ. ೪. ರಾಷ್ಟ್ರ; ರಾಜ್ಯ. ೫. ಬಾಣ ಬಿರುಸುಗಳಲ್ಲಿ ಒಂದು ವಿಧ ; ನೆಲಚಕ್ರ. ~ಚರ = ಭೂಮಿಯ ಮೇಲೆ ಸಂಚರಿಸುವವನು ; ಮನುಷ್ಯ. ~ಜಾತ = ಭೂಜ. ~ದಾನ = ಭೂಮಿಯನ್ನು ದಾನವಾಗಿ ಕೊಡುವುದು. ~ನಾಥ = ಭೂಕಾಂತ. ~ಪಟ(ಠ) = ಭೂಪ್ರದೇಶಗಳ ಮೇಲ್ಮೈ ಲಕ್ಷಣ ಅಥವಾ ವಿಭಾಗ ಇತ್ಯಾದಿಗಳನ್ನು ಗುರುತಿಸಿರುವ ಪಟ ; ನಕ್ಷೆ. ~ಪತಿ = ಭೂಕಾಂತ. ~ಪ್ರದಕ್ಷಿಣೆ = ಭೂಮಿಯನ್ನು ಸುತ್ತುವುದು. ~ಭಾರ=ಭೂಮಿಗೆ ಹೊರೆಯಾಗಿರುವುದು. ~ಮಂಡಲ(ಳ) = ೧. ಭೂಗೋಳ; ಪೃಥ್ವಿ. ೨. ಭೂಭಾಗ;

ದೇಶ. ~ಲೋಕ = ಭೂಮಿ; ಪೃಥ್ವಿ. ~ವಲ್ಲಭ = ಭೂಕಾಂತ. ~ಶಿರ=ಸಮುದ್ರದೊಳಗೆ ಚಾಚಿಕೊಂಡಿರುವ ಭೂಭಾಗ. ~ಸುತ = ಭೂಮಿಯ ಮಗ; ಕುಜಗ್ರಹ. ~ಸುತೆ = ಭೂಮಿಯ ಮಗಳು; ಸೀತೆ. ~ಸುರ = ಬ್ರಾಹ್ಮಣ; ಹಾರುವ.

ಭೂಗತ (ನಾ). ೧. ಭೂಮಿಯ ಮೇಲೆ ಅಥವಾ ಒಳಗೆ ಇರುವುದು. ೨. ನೆಲಸಮವಾದುದು; ನಾಶವಾದುದು. (ಗು). ೩. ಅಡಗಿಕೊಂಡ. ~ಆಲಯ = ಭೂಮಿಯ ಒಳಗೆ ಕಟ್ಟಿದ ಮನೆ. ~ಮಾಡು = ನಾಶಮಾಡು; ನೆಲಸಮ ಮಾಡು.

ಭೂಗರ್ಭ (ನಾ). ಭೂಮಿಯ ಒಳವೈ, –ಒಳಪದರ. ~ಜಲ = ಭೂಮಿಯ ಒಳಪದರಗಳಲ್ಲಿ ಹರಿಯುವ ನೀರು; ಗುಪ್ತಜಲ. ~ಶಾಸ್ತ್ರ = ಭೂಮಿಯ ಪದರಗಳು ಮತ್ತು ಅವುಗಳ ವಿಷಯವಾದ ಶಾಸ್ತ್ರ.

ಭೂಜ (ನಾ). ಭೂಮಿಯಲ್ಲಿ ಹುಟ್ಟಿದುದು; ಮರ, ಗಿಡ ಮುಂತಾದುವು. ~ರಾಜಿ = ಮರಗಳ ಸಾಲು, –ಪಂಕ್ತಿ.

ಭೂತ (ನಾ). ೧. ಉಂಟಾಗುವುದು; ಹುಟ್ಟುವುದು. ೨. ಇರುವಿಕೆ; ಅಸ್ತಿತ್ವ. ೩. ಹಿಂದೆ ಆದುದು; ಕಳೆದುದು. ೪. ಜೀವಿ; ಪ್ರಾಣಿ. ೫. ದೆವ್ವ; ಪಿಶಾಚಿ. ~ಆಟಿಕೆ = ದೆವ್ವ ಅಥವಾ ಪಿಶಾಚಿಯ ಚೇಷ್ಟೆ, –ಲೀಲೆ. ~ಆತ್ಮ = ೧. ಮೂಲಭೂತವಾದ ತತ್ತ್ವ. ೨. ಜೀವಾತ್ಮ. ೩. ಪರಮಾತ್ಮ; ಪರಬ್ರಹ್ಮ. ~ಆರಾಧನೆ = ಭೂತಗಳಿಗೆ ಮಾಡುವ ಪೂಜೆ. ~ಕ(ಗ)ನ್ನಡಿ = ವಸ್ತುವನ್ನು ಇದ್ದುದಕ್ಕಿಂತ ದೊಡ್ಡದನ್ನಾಗಿ ಮಾಡಿ ತೋರಿಸುವ ಕನ್ನಡಿ; ರಾವುಗನ್ನಡಿ. ~ಕಾಲ = ೧. ಕಳೆದುಹೋದ ಕಾಲ. ೨. ವ್ಯಾಕರಣದಲ್ಲಿಯ ಮೂರು ಕಾಲಗಳಲ್ಲಿ ಒಂದು. ~ಕೋಲ=ಭೂತಗಳಿಗೆ ಸಲ್ಲಿಸುವ ಹರಕೆ ಮತ್ತು ಅಂದು ನಡೆಯುವ ಭೂತನರ್ತನ. ~ಗಣ = ೧. ರಾಕ್ಷಸರ ಅಥವಾ ಪಿಶಾಚಿಗಳ ಗುಂಪು. ೨. ಜೀವಿಗಳ ಸಮೂಹ. ~ಚೇಷ್ಟೆ = ದೆವ್ವ, ಪಿಶಾಚಿಗಳಿಂದ ಉಂಟಾಗಿರಬಹುದೆಂದು ಸಂಬಲಾದ ಹಿಂಸಾಕೃತ್ಯ. ~ದಯೆ = ಪ್ರಾಣಿಗಳ ಬಗೆಗೆ ಇರುವ ಅನುಕಂಪೆ, –ಕರುಣೆ. ~ನಾಥ = ಭೂತಗಣಗಳ ಒಡೆಯ; ಶಿವ. ~ಪತಿ=ಭೂತನಾಥ. ~ಬಲಿ=೧. ಕ್ಷುದ್ರಶಕ್ತಿಗಳಿಗೆ ಒಪ್ಪಿಸುವ ಅನ್ನ, –ಆಹಾರ. ೨.=ಭೂತಯಜ್ಞ. ~ಯಜ್ಞ=ಗೃಹಸ್ಥನು ನಿತ್ಯವೂ ಆಚರಿಸಬೇಕಾದ ಐದು ಬಗೆಯ ಯಜ್ಞಗಳಲ್ಲಿ ಒಂದು.

ಭೂತಲ(ಳ) (ನಾ). ಭೂಮಿ; ಪೃಥ್ವಿ. ~ಪತಿ = ಭೂಮಿಯ ಒಡೆಯ; ರಾಜ.

ಭೂತಾಳ (ನಾ). ಒಂದು ಜಾತಿಯ ಗಿಡ.

ಭೂತಾಳೆ = ಭೂತಾಳ.

ಭೂತಿ (ನಾ). ೧. ಇರುವಿಕೆ; ಅಸ್ತಿತ್ವ. ೨. ಹುಟ್ಟು; ಜನ್ಮ. ೩. ಸೌಖ್ಯ; ಕ್ಷೇಮ. ೪. ವಿಭೂತಿ; ಭಸ್ಮ. ೫. ಸುಟ್ಟಮಾಂಸ; ಸುಂಟಗೆ. ೬. ಐಶ್ವರ್ಯ.

ಭೂತಿಕ (ನಾ). ಮಾಂತ್ರಿಕ; ಐಂದ್ರಜಾಲಿಕ.

ಭೂಧರ (ನಾ). ೧. ಪರ್ವತ; ಬೆಟ್ಟ. ೨. ರಾಜ; ದೊರೆ. ೩. ವಿಷ್ಣು. ~ವಿರೋಧಿ=ಪರ್ವತಗಳ ವೈರಿ; ಇಂದ್ರ.

ಭೂನಾಗ (ನಾ). ೧. ಮಣ್ಣುಹುಳು; ಎರೆಹುಳು. ೨. ಒಂದು ಜಾತಿಯ ಸಸ್ಯ.

ಭೂಪ (ನಾ). ರಾಜ; ದೊರೆ.

ಭೂಭುಜ = ಭೂಪ.

ಭೂಭೃತ್ತು (ನಾ). ೧. ಭೂಮಿಯನ್ನು ಪಾಲಿಸುವವನು; ರಾಜ. ೨. ಪರ್ವತ; ಬೆಟ್ಟ. ೩. ವಿಷ್ಣು.

ಭೂಮ (ನಾ). ೧. ಜಗತ್ತು; ಪ್ರಪಂಚ. ೨. ಮಣ್ಣು; ನೆಲ. ೩. ಆಧಿಕ್ಯ; ಹೆಚ್ಚಳ.

೪. ಪರಮಾತ್ಮ. ೫. ಮದುವೆಯಲ್ಲಿ ವಧೂ ವರರಿಗೆ ಹಾಕುವ ವಿಶೇಷವಾದ ಊಟ. (ಗು). ೬. ಭವ್ಯವಾದ; ಮಹತ್ತ್ವವುಳ್ಳ.

ಭೂಮಿ (ನಾ). ೧. ಜಗತ್ತು; ಪ್ರಪಂಚ. ೨. ಮಣ್ಣು. ೩. ಭೂಪ್ರದೇಶ. ೪. ಹೊಲ, ಗದ್ದೆ ಮುಂತಾದ ಬೆಳೆಯುವ ಭೂಮಿ; ಜಮೀನು. ~ಕಂಪ = ಭೂಕಂಪ.

ಭೂಮಿಕೆ (ನಾ). ೧. ನೆಲ; ಭೂಮಿ. ೨.ಅಂತಸ್ತು; ಉಪ್ಪರಿಗೆ. ೩.ನಾಟಕದಲ್ಲಿಯ ಪಾತ್ರ ಮತ್ತು ಆ ಪಾತ್ರದ ವೇಷಭೂಷಣ. ೪. ಹಂತ; ಮಜಲು; ಮೆಟ್ಟಿಲು. ೫. ಗ್ರಂಥದ ಮುನ್ನುಡಿ, -ಪೀಠಿಕೆ. ೬. ಹಿನ್ನೆಲೆ; ಆವರಣ. ೭. ಗ್ರಂಥದ ಮೂಲ ಹಸ್ತಪ್ರತಿ.

ಭೂಮಿಜ (ನಾ). ೧. ಭೂಮಿಯಲ್ಲಿ ಹುಟ್ಟಿದುದು; ಮರ, ಗಿಡ ಮುಂತಾದುವು. ೨. ಕುಜಗ್ರಹ; ಅಂಗಾರಕ. ೩. ಒಬ್ಬ ರಾಕ್ಷಸ; ನರಕಾಸುರ.

ಭೂಮಿಜೆ (ನಾ). ಸೀತೆ.

ಭೂರಿ (ನಾ). ೧. ಚಿನ್ನ; ಹೊನ್ನು. ೨. ಕಟ್ಟಿಗೆ; ಕಾಷ್ಠ. ೩. ಅವಜ್ಞೆ; ಉದಾಸೀನತೆ. ೪. ವಿಶೇಷ ಸಂದರ್ಭಗಳಲ್ಲಿ ಕೊಡುವ ದಾನ; ದಕ್ಷಿಣೆ. (ಗು). ೫. ಹೆಚ್ಚಾದ; ಅಧಿಕವಾದ. ೬. ವಿಸ್ತಾರವಾದ; ವಿಶಾಲವಾದ. ~ದಕ್ಷಿಣೆ = ಹೇರಳವಾದ ದಕ್ಷಿಣೆ. ~ನಯನ = ಅನೇಕ ಕಣ್ಣುಗಳುಳ್ಳವನು; ಇಂದ್ರ. ~ಭೋಜನ = ಮೃಷ್ಟಾನ್ನ ಭೋಜನ; ಸವಿಭೋಜನ.

ಭೂರುಹ (ನಾ). ಭೂಮಿಯಲ್ಲಿ ಬೆಳೆಯುವುದು; ಮರ, ಗಿಡ ಮುಂತಾದುವು.

ಭೂರ್ಜ (ನಾ). ಒಂದು ಜಾತಿಯ ಮರ.

ಭೂಷಣ (ನಾ). ೧. ಅಲಂಕರಿಸುವುದು; ಶೃಂಗರಿಸುವುದು. ೨. ಅಲಂಕಾರ; ಶೃಂಗಾರ. ೩.ಆಭರಣ. ೪.ಶೋಭೆ; ಕಾಂತಿ. ~ಅಂಶು = ಆಭರಣಗಳಿಂದ ಹೊರಡುವ ಕಾಂತಿ, -ಹೊಳಪು.

ಭೂಷಿಸು (ಕ್ರಿ). ೧. ಅಲಂಕರಿಸು; ಶೃಂಗರಿಸು. ೨. ಹೊಗಳು; ಸ್ತುತಿಸು.

ಭೂಷೆ (ನಾ). ಅಲಂಕಾರ; ಆಭರಣ.

ಭೂಷ್ಯ (ನಾ). ೧. ಅಲಂಕರಿಸಲು ಯೋಗ್ಯವಾದುದು. ೨.ಹೊಗಳಿಕೆಗೆ ಪಾತ್ರವಾದುದು. (ಗು). ೩. ಅಲಂಕರಿಸಲು ಯೋಗ್ಯವಾದ. ೪. ಹೊಗಳಲು ತಕ್ಕ.

ಭೃಂಗ (ನಾ). ೧.ತುಂಬಿ; ಭ್ರಮರ. ೨. ಒಂದು ಜಾತಿಯ ಪಕ್ಷಿ. ೩. ಕಾಗೆಬಂಗಾರ; ಅಭ್ರಕ. ~ಕುಲ = ತುಂಬಿಗಳ ಹಿಂಡು.

ಭೃಂಗಾರ (ನಾ). ೧. ಚಿನ್ನದ ಕಲಶ, -ಕುಂಭ. ೨. ಚಿನ್ನ; ಹೊನ್ನು.

ಭೃಂಗಿ (ನಾ). ೧. ಒಂದು ಬಗೆಯ ಹುಳು; ಜೀರುಂಡೆ. ೨ ಹೆಣ್ಣುತುಂಬಿ. ೩. ಶಿವನ ಪರಿವಾರದಲ್ಲಿ ಒಬ್ಬ

ಭೃಗು (ನಾ). ೧. ನವಗ್ರಹಗಳಲ್ಲಿ ಒಂದು; ಶುಕ್ರ. ೨. ಒಬ್ಬ ಋಷಿಯ ಹೆಸರು. ೩. ಬೆಟ್ಟದ ಕಡಿದಾದ ಪಕ್ಕ; ಪ್ರಪಾತ. ~ವಾರ=ಶುಕ್ರವಾರ. ~ಸುತ=೧. ಭೃಗು ಮುನಿಯ ಮಗ; ಶುಕ್ರ. ೨. ಪರಶುರಾಮ.

ಭೃತಕ (ನಾ). ೧. ಕೂಲಿಯಾಳು. (ಗು). ೨. ಧರಿಸಲ್ಪಟ್ಟ; ತಳೆದ.

ಭೃತಿ (ನಾ). ೧. ಧರಿಸುವುದು. ೨. ಬೆಂಬಲ ಕೊಡುವುದು. ೩. ಬೆಂಬಲ; ಪೋಷಣೆ. ೪. ಸಂಬಳ; ಕೂಲಿ.

ಭೃತ್ಯ (ನಾ). ೧. ಸೇವಕ; ಕಿಂಕರ; ಆಳು. ೨. ಮಂತ್ರಿ; ಸಚಿವ. ~ಭಾವ = ದಾಸ್ಯ; ಸೇವಾವೃತ್ತಿ.

ಭೃತ್ಯೆ(ನಾ).೧. ರಕ್ಷಣೆ; ಪೋಷಣೆ. ೨. ಸಂಬಳ.

ಭೆಟ್ಟಿ (ನಾ). ಸಂದರ್ಶನ; ಪರಸ್ಪರ ಸಂಧಿಸುವುದು. ~ಆ(ಯಾ)ಗು = ಸಂಧಿಸು; ಸಮಾಗಮವಾಗು.

ಭೇಕ (ನಾ). ೧. ಕಪ್ಪೆ; ಮಂಡೂಕ. ೨. ಹೇಡಿ; ಅಂಜುಕುಳಿ. ~ವೈರಿ = ಕಪ್ಪೆಯ ಶತ್ರು; ಹಾವು.

ಭೇಟ (ನಾ). ಸಂದರ್ಶನ; ಭೆಟ್ಟಿ. ~ಕೊಡು = ಸಂದರ್ಶಿಸು; ಭೆಟ್ಟಿಯಾಗು.

ಭೇತಾಳ = ಬೇತಾಲ.

ಭೇದ (ನಾ). ೧. ಮುರಿಯುವುದು; ಒಡೆಯುವುದು. ೨. ಬಿರುಕು; ಸೀಳು. ೩. ವ್ಯತ್ಯಾಸ; ಅಂತರ. ೪. ಬಗೆ; ಪ್ರಕಾರ. ೫. ವಿಂಗಡಣೆ; ಹಂಚಿಕೆ. ೬. ಮಾರ್ಪಾಡು; ಬದಲಾವಣೆ. ೭. ಗುಟ್ಟನ್ನು ರಟ್ಟುಮಾಡುವುದು. ೮. ಭಿನ್ನಾಭಿಪ್ರಾಯ; ವೈಮನಸ್ಯ. ೯. ಚತುರೋಪಾಯಗಳಲ್ಲಿ ಒಂದು; ತಂತ್ರದಿಂದ ಕೆಲಸವನ್ನು ಸಾಧಿಸುವುದು. ~ಇಸು = ೧. ಒಡೆ; ಮುರಿ; ಸೀಳು. ೨. ಪ್ರತ್ಯೇಕಿಸು; ವಿಂಗಡಿಸು. ೩. ಭೇದವನ್ನು ಕಾಣು; ವ್ಯತ್ಯಾಸಮಾಡು. ೪. ಗುಟ್ಟನ್ನು ಬಯಲು ಮಾಡು, -ರಟ್ಟು ಮಾಡು. ೫. ಒಡಕನ್ನು ಹುಟ್ಟಿಸು; ವೈಮನಸ್ಯವನ್ನುಂಟುಮಾಡು. ~ಬುದ್ಧಿ = ಪಕ್ಷಪಾತದಿಂದ ಕೂಡಿದ ಮನೋಭಾವ.

ಭೇದಕ (ನಾ). ೧. ಮುರಿಯುವುದು; ಒಡೆಯುವುದು. ೨. ಮುರಿಯುವ ವ್ಯಕ್ತಿ ಅಥವಾ ವಸ್ತು. (ಗು). ೩. ಮುರಿಯುವ; ಸೀಳುವ; ಒಡೆಯುವ. ೪. ಪ್ರತ್ಯೇಕಿಸುವ; ವಿಂಗಡಿಸುವ. ೫. ಚುಚ್ಚುವ; ಇರಿಯುವ.

ಭೇದನ (ನಾ). ಒಡೆಯುವುದು; ಮುರಿಯುವುದು. ~(ಂ)ಗೆಯ್ = ೧. ಸೀಳು; ಒಡೆ. ೨. ನಾಶಮಾಡು.

ಭೇದಿ (ನಾ). ೧. ಮುರಿಯುವವನು ಅಥವಾ ಮುರಿಯುವ ವಸ್ತು. ೨. ಹಾರೆ. ೩. ವಿರೇಚನ. (ಗು). ೪. ಒಡೆಯುವ.

ಭೇದ್ಯ (ಗು). ೧. ಒಡೆಯಲ್ಪಡುವ; ಸೀಳಲ್ಪಡುವ. ೨. ದುಷ್ಟಪ್ರೇರಣೆಗೆ ಒಳಗಾಗುವ.

ಭೇರಿ (ನಾ). ಒಂದು ಬಗೆಯ ಚರ್ಮವಾದ್ಯ.

ಭೇರುಂಡ (ನಾ). ಎರಡು ತಲೆಗಳುಳ್ಳ ಒಂದು ಕಾಲ್ಪನಿಕ ಪಕ್ಷಿ.

ಭೇಷ್ = ಬೇಶ್.

ಭೇಷಜ (ನಾ). ೧. ಮದ್ದು; ಔಷಧ. (ಗು). ೨. ರೋಗವನ್ನು ಗುಣಪಡಿಸುವ; ರೋಗನಿವಾರಕ.

ಭೈಕ್ಷ (ನಾ). ೧. ಭಿಕ್ಷೆಯನ್ನು ಬೇಡುವುದು; ತಿರುಪೆ. ೨. ಭಿಕ್ಷೆಯಿಂದ ದೊರೆತ ಆಹಾರ ಮುಂತಾದುವು. ~ವೃತ್ತಿ = ಭಿಕ್ಷಾಟನೆ; ಯಾಚನೆ.

ಭೈತ್ರ (ನಾ). ದೋಣಿ; ಹಡಗು; ನಾವೆ. ~ಕಾಱ(ರ) = ಹಡಗನ್ನು ನಡಸುವವನು; ನಾವಿಕ.

ಭೈಮುಂಗು (ನಾ). ನೆಲಗಡಲೆ; ಶೇಂಗಾ.

ಭೈಮೂಗು = ಭೈಮುಂಗು.

ಭೈರವ (ನಾ). ೧. ಶಿವ. ೨. ಅರಸನಿಗಾಗಿ ತನ್ನ ಬಾಳನ್ನು ಮುಡುಪಾಗಿಡುವ ಸೇವಕ. (ಗು). ೩. ಭೀಕರವಾದ; ಭಯಂಕರವಾದ.

ಭೈರನಾಸ = ಬೈರಾಸ.

ಭೈರಿಗೆ = ಬೈರಿಗೆ.

ಭೈಷಜ್ಯ (ನಾ). ಮದ್ದು; ಔಷಧ.

ಭೋಂಕನೆ (ಅ). ಒಮ್ಮೆಲೆ; ಕೂಡಲೆ.

ಭೋಂಕರಿಸು (ಕ್ರಿ). ಮೊಳಗು; ಧ್ವನಿ ಮಾಡು; ಆರ್ಭಟಿಸು

ಭೋಂಗಾ (ನಾ). ಕಾರ್ಖಾನೆ, ಗಿರಣಿ ಮುಂತಾದುವುಗಳಲ್ಲಿ ಕೆಲಸಗಾರರನ್ನು ಎಚ್ಚರಿಸಲು ಹೊರಡಿಸುವ ಕೂಗು,-ಸಿಳ್ಳು.

ಭೋಕ್ತೃ (ನಾ). ೧. ತಿನ್ನುವವನು. ೨. ಸುಖ, ದುಃಖ ಮುಂತಾದುವನ್ನು ಅನುಭವಿಸುವವನು.

ಭೋಗ (ನಾ). ೧. (ಸುಖ, ದುಃಖಗಳ) ಅನುಭವ. ೨. ಸಂಭೋಗ. ೩. ಸುತ್ತು; ಸುರುಳಿ; ಇರಿಕೆ. ೪. ಹಾವಿನ ಹೆಡೆ.

೫. = ಭೋಗಷಟ್ಪದಿ. ~ಆಭೋಗ = ೧. ಭೋಗವಸ್ತುಗಳಿಂದ ದೊರೆಯುವ ಸುಖಾನುಭವ. ೨. ಹಾವಿನ ಹೆಡೆ. ~ಇಸು = ೧. ಸುಖದುಃಖಗಳನ್ನು ಅನುಭವಿಸು. ೨. ನೆರೆ; ಸಂಭೋಗಿಸು. ~ಪಟ್ಟೆ(ಟ್ಟಿ) = ಆಸ್ತಿಯನ್ನು ಅನುಭವಿಸುವ ಹಕ್ಕಿಗಾಗಿ ಬರೆದು ಕೊಟ್ಟ ಪತ್ರ. ~ಭೂಮಿ = ೧. ಸ್ವರ್ಗ. ೨. ಭೂಮಿಯಲ್ಲಿ ಅತ್ಯಂತ ಸಂತೋಷವನ್ನು ಪಡೆಯುವ ಸ್ಥಳ. ~ವಸ್ತು = ೧. ಸುಖಕ್ಕೆ ಸಾಧಕವಾದ ಪದಾರ್ಥ, -ಸಾಮಗ್ರಿ. ೨. ನಿತ್ಯಜೀವನಕ್ಕೆ ಆವಶ್ಯಕವಲ್ಲದ, ಬಹಳ ಬೆಲೆಬಾಳುವ ವಸ್ತು. ~ಷಟ್ಪದಿ = ಆರು ಬಗೆಯ ಷಟ್ಪದಿಗಳಲ್ಲಿ ಒಂದು.

ಭೋಗಾಧಿ (ನಾ). ಒತ್ತೆ; ಅಡವು; ಗಿರವಿ.

ಭೋಗಿ (ನಾ). ೧. ಸುಖಪುರುಷ; ಸುಖಿ. ೨. ವಿಷಯಾಸಕ್ತ; ವಿಲಾಸಿ. ೩. ಹಾವು; ಸರ್ಪ. ೪. ಸಂಕ್ರಾಂತಿ ಮೊದಲಾದ ಹಬ್ಬದ ಹಿಂದಿನ ದಿನ ಮತ್ತು ಅಂದು ಆಚರಿಸುವ ಹಬ್ಬ. ೫. ವಿಲಾಸಿನಿ. ~ಇಂದ್ರ = ಭೋಗಿಪ. ~ಕಟಕ = ಹಾವುಗಳನ್ನು ಕಂಕಣವನ್ನಾಗಿ ಧರಿಸಿರುವವನು; ಶಿವ. ~ಶಯನ = ಹಾವನ್ನು ಹಾಸುಗೆಯಾಗಿ ಉಳ್ಳವನು; ವಿಷ್ಣು.

ಭೋಗಿನಿ (ನಾ). ೧. ರಾಜನ ಉಪಪತ್ನಿ. ೨. ಹೆಣ್ಣುಹಾವು.

ಭೋಗಿಪ (ನಾ). ಹಾವುಗಳ ಒಡೆಯ; ಆದಿಶೇಷ.

ಭೋಗ್ಯ (ನಾ). ೧. ಸುಖಾನುಭವಕ್ಕೆ ಯೋಗ್ಯವಾದ ವಸ್ತು. ೨. ಆಧಾರ; ಈಡು; ಅಡಮಾನ. (ಗು). ೩. ಭೋಗಿಸಲು ಯೋಗ್ಯವಾದ. ~ಪತ್ರ = ಆಸ್ತಿಯ ಹಕ್ಕನ್ನು ಆಧಾರವಾಗಿ ವಹಿಸಿಕೊಡುವ ಕರಾರುಪತ್ರ.

ಭೋಜನ (ನಾ). ಆಹಾರವನ್ನು ತೆಗೆದುಕೊಳ್ಳುವುದು; ಊಟ. ~ಕೂಟ = ಊಟದ ಸಮಾರಂಭ; ಔತಣಕೂಟ. ~ಭೂಮಿ = ಊಟದ ಮನೆ; ಭೋಜನ ಶಾಲೆ.

ಭೋಜಿಸು (ಕ್ರಿ). ಅನುಭವಿಸು; ಭೋಗಿಸು.

ಭೋಜ್ಯ (ನಾ). ೧. ಸವಿಯೂಟ; ಮೃಷ್ಟಾನ್ನ ಭೋಜನ. ೨. ಅನುಭವಕ್ಕೆ ವಿಷಯವಾದ ವಸ್ತು; ಭೋಗವಸ್ತು. (ಗು). ೩. ಭೋಗಿಸಲು ಯೋಗ್ಯವಾದ.

ಭೋರ್ (ನಾ). ಒಂದು ಅನುಕರಣ ಶಬ್ದ. ~ಆಟ = ಆರ್ಭಟ; ಗರ್ಜನೆ; ಮೊರೆತ. ~ಆಡು = ಜೋರಾಗಿ ಅಳು; ಗೋಳಾಡು. ~ಕ(ಗ)ರೆ = ಭೋರೆಂದು ಶಬ್ದಮಾಡು; ಆರ್ಭಟಿಸು.

ಭೋಸಡಿ (ನಾ). ೧. ಯೋನಿ. ೨. ಜಾರೆ; ವ್ಯಭಿಚಾರಿಣಿ.

ಭೋಳೆ = ಬೋಳೆ.

ಭೌಗೋಳಿಕ (ಗು). ಭೂಗೋಳಕ್ಕೆ ಸಂಬಂಧಿಸಿದ.

ಭೌತ (ಗು). ಪೃಥ್ವಿ, ಅಪ್ಪು, ತೇಜಸ್ಸು, ವಾಯು ಮತ್ತು ಆಕಾಶಗಳೆಂಬ ಪಂಚಭೂತಗಳಿಗೆ ಸಂಬಂಧಿಸಿದ. ~ವಿಜ್ಞಾನ = ಪ್ರಕೃತಿಯ ಶಕ್ತಿಗಳನ್ನು ತಿಳಿಸುವ ಶಾಸ್ತ್ರ. ~ಶಾಸ್ತ್ರ = ಭೌತವಿಜ್ಞಾನ.

ಭೌತಿಕ ೧. = ಭೌತ. ೨. ಭೂತ, ಪಿಶಾಚಿಗಳಿಗೆ ಸಂಬಂಧಿಸಿದ.

ಭೌಮ (ನಾ). ೧. ಭೂಮಿಗೆ ಸಂಬಂಧಿಸಿದುದು. ೨. ಮಂಗಳಗ್ರಹ; ಕುಜ. ೩. ನರಕಾಸುರ. (ಗು). ೪. ಭೂಮಿಗೆ ಸಂಬಂಧಿಸಿದ. ~ಅಷ್ಟಮಿ = ಆಶ್ವಯುಜ ಶುದ್ಧ ಅಷ್ಟಮಿ; ದುರ್ಗಾಷ್ಟಮಿ. ~ವಾರ = ಮಂಗಳವಾರ. ~ವಿಹಾರ = ದೇವತೆಗಳು ಭೂಲೋಕದಲ್ಲಿ ಮಾಡುವ ಸಂಚಾರ.

ಭೌರಿಕ (ನಾ). ಕೋಶಾಧಿಕಾರಿ; ಭಂಡಾರಿ.

ಭ್ರಂಶ (ನಾ). ೧. ಬೀಳುವಿಕೆ; ಪತನ. ೨. ಹಾಳು; ನಾಶ. ೩. ಮಾರ್ಗ ಬಿಟ್ಟು ಹೋಗುವುದು; ಅಪಗತಿ. ೪. ಅಗಲಿಕೆ; ಬೇರೆಯಾಗುವುದು. ೫. ನಷ್ಟ.

ಭ್ರಮೆ (ನಾ). ೧. ತಿರುಗಾಟ; ಸುತ್ತಾಟ. ೨. ಚಕ್ರಾಕಾರವಾಗಿ ಸುತ್ತುವಿಕೆ; ಸುಳಿ; ಆವರ್ತ. ೩. ಭ್ರಾಂತಿ; ಗೊಂದಲ. ~ಇಸು = ೧. ದಿಕ್ಕು ತಪ್ಪು; ದಾರಿತಪ್ಪು. ೨. ಭ್ರಾಂತಿಗೆ ಒಳಗಾಗು; ತಪ್ಪಾಗಿ ಭಾವಿಸು. ೩. = ಭ್ರಮಿಯಿಸು. ~ನಿರಸನ=ಭ್ರಾಂತಿಯನ್ನು ಹೋಗಲಾಡಿಸುವುದು.

ಭ್ರಮಣ (ನಾ). ೧. ಚಕ್ರಾಕಾರವಾಗಿ ಸುತ್ತುವಿಕೆ. ೨. ಕಂಗೆಡುವಿಕೆ; ತೊಳಲಾಟ. ೩. ಭ್ರಾಂತಿ.

ಭ್ರಮಣೆ = ಭ್ರಮಣ.

ಭ್ರಮರ (ನಾ). ೧. ತುಂಬಿ; ಅಳಿ. ೨. ಕುಂಬಾರನ ಚಕ್ರ. ~ಅರಿ=ತುಂಬಿಯ ವೈರಿ; ಸಂಪಿಗೆ. ~ಆಳಿ = ತುಂಬಿಗಳ ಸಮೂಹ, -ಹಿಂಡು. ~ವೃತ್ತಿ = (ತುಂಬಿಯಂತೆ) ಚಂಚಲ ಸ್ವಭಾವ; ಅಸ್ಥಿರ ಬುದ್ಧಿ.

ಭ್ರಮರಕ (ನಾ). ೧. ತುಂಬಿ; ಭ್ರಮರ. ೨. ಮುಂಗುರುಳು.

ಭ್ರಮರಿ (ನಾ). ೧. ವೃತ್ತಾಕಾರವಾಗಿ ಚಲಿಸುವುದು; ತಿರುಗುವುದು. ೨. ತುಂಬಿ; ಅಳಿ.

ಭ್ರಮಿ (ನಾ). ೧. ಅಲೆಯುವ ಸ್ವಭಾವದವನು. ೨. ಭ್ರಮೆಯುಳ್ಳವನು. ೩. ಕುಂಬಾರನ ಚಕ್ರ. ೪. ಸೈನ್ಯದ ವೃತ್ತಾಕಾರವಾದ ರಚನೆ; ಚಕ್ರವ್ಯೂಹ. ೫. ಸುಳಿ; ಆವರ್ತ.

ಭ್ರಮಿತ (ನಾ). ೧. ದಾರಿತಪ್ಪಿದವನು; ಕಂಗೆಟ್ಟವನು. (ಗು). ೨. ಕಂಗೆಟ್ಟ; ದಿಕ್ಕುತಪ್ಪಿದ. ೩. ಹರಡಿದ; ಪ್ರಸರಿಸಿದ.

ಭ್ರಮಿಯಿಸು (ಕ್ರಿ). ಅಲೆ; ತಿರುಗಾಡು.

ಭ್ರಮಿಷ್ಟ (ನಾ). ಭ್ರಮೆಗೆ ಒಳಗಾದವನು; ಭ್ರಾಂತ.

ಭ್ರಮೀಷ್ಠ = ಭ್ರಮಿಷ್ಟ.

ಭ್ರಮೆ = ಭ್ರಮ. ~ಕ(ಗ)ವಿ = ದಿಕ್ಕು ತೋಚದಂತಾಗು; ಕಂಗೆಡು. ~ಕೊ(ಗೊ)ಳ್ = ೧. ಅಲೆ; ಸುತ್ತಾಡು. ೨. ವಿವೇಕವನ್ನು ಕಳೆದುಕೊಳ್ಳು; ಕಂಗೆಡು.

ಭ್ರಷ್ಟ (ನಾ). ೧. ಹೊರಕ್ಕೆ ಹಾಕಲ್ಪಟ್ಟವನು; ದೂರವಾದವನು. (ಗು). ೨. ಬಿದ್ದ. ೩. ದಾರಿತಪ್ಪಿದ; ಅಡ್ಡದಾರಿ ಹಿಡಿದ. ~ಆಚಾರ = ಅನೀತಿ; ದುರಾಚಾರ.

ಭ್ರಾಂತ (ನಾ). ೧. ಭ್ರಾಂತಿಗೆ ಒಳಗಾದವನು; ಮರುಳ. (ಗು). ೨. ಸುತ್ತುವ; ತಿರುಗುವ. ೩. ಗೊಂದಲಕ್ಕೊಳಗಾದ; ಕಂಗೆಟ್ಟ. ~ಚಿತ್ತ = ೧. ಗೊಂದಲಕ್ಕೊಳಗಾದ ಮನಸ್ಸು. ೨. ಮನಸ್ಸಿನ ಸ್ಥಿರತೆಯನ್ನು ಕಳೆದುಕೊಂಡವನು.

ಭ್ರಾಂತಿ (ನಾ). ೧. ತಿರುಗುವಿಕೆ; ಸುತ್ತುವಿಕೆ. ೨. ದಿಕ್ಕುತೋಚದಿರುವಿಕೆ; ಕಂಗೆಡುವಿಕೆ. ೩. ತಪ್ಪಾಗಿ ಗ್ರಹಿಸುವುದು. ೪. ಒಂದು ಕಾವ್ಯಾಲಂಕಾರ. ~ಇಸು = ಭ್ರಾಂತಿಗೊಳ್. ~ಕೊ(ಗೊ)ಳ್ = ೧. ಕಂಗೆಡು; ದಿಕ್ಕುತೋಚದಿರು. ೨. ತಪ್ಪಾಗಿ ತಿಳಿ; ಭ್ರಮಿಸು.

ಭ್ರಾಂತು (ನಾ). ೧. ದಿಕ್ಕುತೋಚದಿರುವಿಕೆ. ೨. ತಪ್ಪುತಿಳಿವಳಿಕೆ; ಭ್ರಮೆ. ೩. ಭ್ರಾಂತಿಗೆ ಒಳಗಾದವನು; ಭ್ರಮಿಷ್ಠ.

ಭ್ರಾಜಿತ (ನಾ). ೧. ಪ್ರಕಾಶಮಾನನಾದವನು; ಕಳೆಯಿಂದ ಕೂಡಿದವನು. (ಗು). ೨. ಪ್ರಕಾಶಮಾನವಾದ; ಕಾಂತಿಯುಕ್ತವಾದ.

ಭ್ರಾಜಿಷ್ಣು = ಭ್ರಾಜಿತ.

ಭ್ರಾತೃ (ನಾ). ಒಡಹುಟ್ಟಿದವನು; ಸಹೋದರ.

ಭ್ರಾಮಕ (ನಾ). ೧. ಭ್ರಮೆ; ಭ್ರಾಂತಿ. ೨. ಅಯಸ್ಕಾಂತ; ಲೋಹಚುಂಬಕ. (ಗು). ೩. ತಿರುಗುವಂತೆ ಮಾಡುವ.

೪. ಕಂಗೆಡಿಸುವ; ಭ್ರಮೆಗೊಳಿಸುವ. ~ಕೊ(ಗೊ)ಳ್=ಮೋಹಗೊಳ್ಳು; ಭ್ರಾಂತನಾಗು. ~ಪ(ವ)ಡೆ = ಭ್ರಾಮಕಗೊಳ್.

ಭ್ರುಕುಟಿ (ನಾ). ಹುಬ್ಬುಗಂಟು.

ಭ್ರೂ (ನಾ). ಹುಬ್ಬು. ~ಕುಂಚನ=ಹುಬ್ಬುಗಳನ್ನು ಸಂಕೋಚಗೊಳಿಸುವುದು. ~ಕೋಟಿ = ಹುಬ್ಬಿನ ತುದಿ. ~ಭಂಗ =ಹುಬ್ಬುಗಂಟು. ~ಲಾಸ್ಯ=ಭ್ರೂವಿಭ್ರಮ. ~ವಿಭ್ರಮ = ಹುಬ್ಬಿನ ವಿಲಾಸ, -ಬೆಡಗು.

ಭ್ರೂಕುಟಿ = ಭ್ರುಕುಟಿ.

ಭ್ರೂಣ (ನಾ). ೧. ಗರ್ಭದಲ್ಲಿರುವ ಶಿಶು. ೨. ಹುಡುಗ; ಬಾಲಕ. ೩. ಬಸಿರಿ; ಗರ್ಭಿಣಿ. ೪. ಬೆಂಕಿ. ~ಹತ್ಯೆ = ೧. ಗರ್ಭದಲ್ಲಿರುವ ಶಿಶುವನ್ನು ಕೊಲ್ಲುವುದು. ೨. ಎಳೆಯ ಹುಡುಗನನ್ನು ಕೊಲ್ಲುವುದು.



# ಮ

ಮ (ನಾ). ಕನ್ನಡ ವರ್ಣಮಾಲೆಯ ನಲವತ್ತೈದನೆಯ ಅಕ್ಷರ.

ಮಂಕ (ನಾ). ಹೆಡ್ಡ; ತಿಳಿಗೇಡಿ.

ಮಂಕಡ (ನಾ). ಕೋತಿ; ಮರ್ಕಟ.

ಮಂಕಣ (ನಾ). ನಾರು; ಕತ್ತ.

ಮಂಕಣಿ (ನಾ). ೧. ವಸ್ತುಗಳನ್ನು ಸಾಗಿಸಲು ಹೇರೆತ್ತಿನ ಮೇಲೆ ಹಾಕುವ ಬಿದಿರು ಅಥವಾ ಕಬ್ಬಿಣದ ಚೌಕಟ್ಟು. ೨. = ಮಂಕರಿ.

ಮಂಕರಿ (ನಾ). ಬುಟ್ಟಿ; ಹೆಡಿಗೆ.

ಮಂಕಿ (ನಾ). ಬುದ್ಧಿಯಿಲ್ಲದವಳು; ದಡ್ಡಿ.

ಮಂಕು (ನಾ). ೧. ಮಬ್ಬು; ಮಸುಕು; ಕಾಂತಿಯಿಲ್ಲದಿರುವಿಕೆ. ೨. ಹೆಡ್ಡತನ; ದಡ್ಡತನ. ೩. ಕಕ್ಕಾಬಿಕ್ಕಿ; ದಿಗ್ಭ್ರಮೆ. ~ಆಗು = ೧. ಕಾಂತಿಹೀನವಾಗು; ಕಳೆಯಿಲ್ಲದಾಗು. ೨. ದಿಗ್ಭ್ರಮೆಗೊಳಗಾಗು. ೩. ತಿಳಿವಳಿಕೆ ಇಲ್ಲದಾಗು. ~ಕವಿ=ದಿಗ್ಭ್ರಮೆ ಆವರಿಸು; ಕಕ್ಕಾಬಿಕ್ಕಿಯಾಗು. ~ಬೂದಿ = ೧. ದಿಗ್ಭ್ರಮೆಯುಂಟಾಗುವಂತೆ ಮಾಡುವ ಬೂದಿ. ೨. ಮರುಳುಗೊಳಿಸುವಿಕೆ.

ಮಂಕುದಿಣ್ಣೆ (ನಾ). ತಿಳಿಗೇಡಿ; ಹೆಡ್ಡ.

ಮಂಗ (ನಾ). ೧. ಕೋತಿ; ಕಪಿ. ೨. ಹಡಗಿನ ಮೇಲುಭಾಗ. ~ತನ = ೧. ಮಂಗನ ಸ್ವಭಾವ. ೨. ಹುಡುಗಾಟಿಕೆ; ಚಪಲತನ. ~ಮುಷ್ಟಿ=೧. ಕಪಿಯ ಹಿಡಿತ. ೨. ಏನನ್ನೂ ಬಿಟ್ಟು ಕೊಡದಿರುವಿಕೆ; ಕಪಿಮುಷ್ಟಿ.

ಮಂಗಮಾಯ (ನಾ). ಕಣ್ಣಿಗೆ ಕಾಣದೆ ಹೋಗುವುದು; ಅದೃಶ್ಯವಾಗುವುದು.

ಮಂಗರವಳ್ಳಿ (ನಾ). ಒಂದು ಜಾತಿಯ ಸಸ್ಯ.

ಮಂಗಲ(ಳ) (ನಾ). ೧. ಒಳಿತು; ಶುಭ. ೨. ಅದೃಷ್ಟ; ಸುದೈವ. ೩. ಶುಭಕಾರ್ಯಗಳ ಪ್ರಾರಂಭ ಮತ್ತು ಮುಕ್ತಾಯದಲ್ಲಿ ಮಾಡುವ ದೇವತಾಸ್ತುತಿ. ೪. ಶುಭಕಾರ್ಯ. ೫. ಗ್ರಹಗಳಲ್ಲಿ ಒಂದು; ಅಂಗಾರಕ. (ಗು). ೬. ಶುಭಕರವಾದ. ೭. ಸಂತೋಷಕರವಾದ. ೮. ಚೆಲುವಾದ. ~ಅಷ್ಟಕ=ಮದುವೆ, ಮುಂಜಿ ಮುಂತಾದ ಶುಭಕಾರ್ಯಗಳಲ್ಲಿ ಹೇಳುವ ಆಶೀರ್ವಾದ ರೂಪವಾದ ಎಂಟು ಶ್ಲೋಕಗಳು. ~ಆನಕ = ಮಂಗಳ ಸಮಾರಂಭದಲ್ಲಿ ಬಾರಿಸುವ

ಭೇರಿ, –ನಗಾರಿ. ~ಆರತಿ=ಶುಭಕಾರ್ಯ ದಲ್ಲಿ ಎತ್ತುವ ಆರತಿ. ~ಕಾರ್ಯ = ಮದುವೆ, ಮುಂಜಿ ಮುಂತಾದ ಶುಭ ಕಾರ್ಯ. ~ದ್ರವ್ಯ = ಮಂಗಳಕರವಾದ ಸಂದರ್ಭಗಳಲ್ಲಿ ಉಪಯೋಗಿಸುವ ಅರಿಸಿನ, ಕುಂಕುಮ ಮುಂತಾದುವು. ~ಪಾಠಕ = ಪ್ರಶಂಸೆ ಮಾಡಿ ಹಾಡುವವನು; ಸ್ತುತಿಪಾಠಕ. ~ಮಜ್ಜನ = ಶುಭಕಾರ್ಯ ದಲ್ಲಿ ವಿಧಿಪೂರ್ವಕವಾಗಿ ಮಾಡುವ ಸ್ನಾನ. ~ವಾದ್ಯ = ಶುಭಕಾರ್ಯಗಳಲ್ಲಿ ನುಡಿಸುವ ವಾದ್ಯ. ~ವಾರ =ವಾರದ ಏಳುದಿನಗಳಲ್ಲಿ ಒಂದು. ~ಶ್ಲೋಕ = ಕಾವ್ಯ, ನಾಟಕ ಮುಂತಾದುವುಗಳ ಕೊನೆಯಲ್ಲಿ ಮಾಡುವ ದೇವತಾಸ್ತುತಿ. ~ಸೂತ್ರ = ತಾಳಿ; ಮಾಂಗಲ್ಯ.

ಮಂಗಳಮಾಯ = ಮಂಗಮಾಯ.

ಮಂಗಳೆ (ನಾ). ೧. ಪತಿವ್ರತೆ; ಸಾಧ್ವಿ. ೨. ಪಾರ್ವತಿ.

ಮಂಗಾರೆ (ನಾ). ಒಂದು ಜಾತಿಯ ಮುಳ್ಳುಗಿಡ.

ಮಂಚ (ನಾ). ೧. ಪಲ್ಯಂಕ; ಪರ್ಯಂಕ. ೨. ಎತ್ತರವಾಗಿ ಕಟ್ಟಿದ ವೇದಿಕೆ; ಅಟ್ಟಣೆ. ~ಪ(ವ)ಲ್ಲಕ್ಕಿ= ಒಂದು ಬಗೆಯ ಪಾಲಕಿ.

ಮಂಚಲ್ (ನಾ). ವಂಚನೆ; ಮೋಸ. ~ಪಿ(ವಿ)ಡಿ = ಮೋಸಮಾಡು; ವಂಚಿಸು.

ಮಂಚಲು ೧. = ಮಂಚಲ್. ೨. ಡೋಲಿ; ಮೇನೆ.

ಮಂಚಿಕೆ (ನಾ). ಹೊಲ ಕಾಯಲು ಅಥವಾ ಬೇಟೆಯಾಡಲು ಹಾಕುವ ವೇದಿಕೆ; ಅಟ್ಟಣೆ.

ಮಂಚಿಗೆ = ಮಂಚಿಕೆ.

ಮಂಚಿಪತ್ರೆ (ನಾ). ಸುವಾಸನೆಯಿಂದ ಕೂಡಿದ ಒಂದು ಜಾತಿಯ ಸಸ್ಯ; ಮಾಚಿಪತ್ರೆ.

ಮಂಜರ (ನಾ). ಬೆಕ್ಕು; ಮಾರ್ಜಾಲ.

ಮಂಜರಿ (ನಾ). ೧. ಹೆಣ್ಣು ಬೆಕ್ಕು. ೨. ಗೊಂಚಲು; ಗುಚ್ಛ. ೩. ಚಿಗುರು; ಕುಡಿ.

ಮಂಜರಿಗ (ನಾ). ಒಂದು ಜಾತಿಯ ಮರ.

ಮಂಜಳ (ನಾ). ಅರಿಸಿನ.

ಮಂಜಾಡಿ (ನಾ). ಒಂದು ಜಾತಿಯ ಮರ.

ಮಂಜಿ (ನಾ). ೧. ಹಾಯಿಹಡಗು. ೨. ಒಂದು ಜಾತಿಯ ಹುಲ್ಲು.

ಮಂಜಿಷ್ಠ (ನಾ). ಅತ್ಯಂತ ಪ್ರಕಾಶಮಾನವಾದ ಕೆಂಪುಬಣ್ಣ.

ಮಂಜೀರ (ನಾ). ೧. ಕಡೆಗೋಲನ್ನು ಕಟ್ಟುವ ಕಂಬ. ೨. = ಮಂಜೀರಕ.

ಮಂಜೀರಕ (ನಾ). ಕಾಲುಕಡಗ; ಕಾಲಂದುಗೆ.

ಮಂಜು (ನಾ). ೧. ಹಿಮ; ಇಬ್ಬನಿ. ೨. ಕಾವಳ; ಮಬ್ಬು. (ಗು). ೩. ಸುಂದರ ವಾದ; ಚೆಲುವಾದ. ೪. ಇಂಪಾದ; ಮಧುರವಾದ. ~ಕ(ಗ)ಣ್ಣು = ಅಸ್ಪಷ್ಟ ವಾಗಿ ಕಾಣುವ ಕಣ್ಣು; ಮಬ್ಬುಗಣ್ಣು. ~ಕ(ಗ)ತ್ತಲೆ = ಮಬ್ಬು; ಮಸುಕು. ~ಗಡ್ಡೆ = ಆಲಿಕಲ್ಲು. ~ಗಿರಿ = ಮಂಜು ಬೆಟ್ಟ. ~ಬೆ(ವೆ)ಟ್ಟ = ಹಿಮಾಲಯ ಪರ್ವತ.

ಮಂಜುಲ(ಳ) (ಗು). ೧. ಮಧುರವಾದ; ಇಂಪಾದ. ೨. ಸುಂದರವಾದ; ಸೊಗಸಾದ.

ಮಂಜೂರು (ನಾ). ಒಪ್ಪಿಗೆ; ಅನುಮತಿ.

ಮಂಜೂಷ (ನಾ). ಪೆಟ್ಟಿಗೆ; ಸಂದೂಕ.

ಮಂಜೂಷೆ = ಮಂಜೂಷ.

ಮಂಟಪ (ನಾ). ೧. ವಿಶ್ರಾಂತಿಸ್ಥಳ. ೨. ಶುಭಕಾರ್ಯಗಳಿಗಾಗಿ ಕಟ್ಟುವ ಚಪ್ಪರ, –ಹಂದರ. ೩. ದೇವರನ್ನಿಡುವ ವಿಶೇಷ ರೀತಿಯ ರಚನೆ. ೪. ಗುಡಾರ; ಡೇರೆ.

ಮಂಟಿಕೆ = ಮೆಂಟಿಕೆ.

ಮಂಟಿಗೆ = ಮೆಂಟಿಕೆ.

ಮಂಡ (ನಾ). ೧. ಅಂಗಡಿಗಳಲ್ಲಿ ವರ್ತಕರು ಕುಳಿತುಕೊಳ್ಳುವ ಸ್ಥಳ; ಗಲ್ಲ. ೨. ಔಡಲ ಗಿಡ. ೩. ಕೆನೆ. ೪. ಗಂಜಿ.

ಮಂಡಕ (ನಾ). ಒಂದು ಬಗೆಯ ಭಕ್ಷ್ಯ; ಮಂಡಿಗೆ.

ಮಂಡಕಾಗೆ (ನಾ). ಒಂದು ಜಾತಿಯ ಕಾಗೆ.

ಮಂಡಕ್ಕಿ (ನಾ). ಪುರಿ; ಚುರುಮುರಿ.

ಮಂಡಗೆ = ಮಂಡಕ.

ಮಂಡನ (ನಾ). ೧. ಅಲಂಕಾರ; ಶೃಂಗಾರ. ೨. ಅಲಂಕರಿಸಿಕೊಳ್ಳುವುದು. ೩. ಒಡವೆ; ಆಭರಣ. ೪. ಪ್ರತಿಪಾದಿಸುವುದು; ಮಂಡಿಸುವುದು.

ಮಂಡಪ = ಮಂಟಪ.

ಮಂಡರಗಪ್ಪೆ (ನಾ). ಒಂದು ಜಾತಿಯ ದೊಡ್ಡ ಚೇಳು; ಎಮ್ಮೆಚೇಳು.

ಮಂಡಲ(ಳ) (ನಾ). ೧. ವರ್ತುಲಕಾರವಾದುದು; ದುಂಡಾಗಿರುವುದು. ೨. ನಾಡಿನ ಒಂದು ಭಾಗ. ೩. ಗುಂಪು; ಸಮೂಹ. ೪. ನಲವತ್ತೆಂಟು ದಿನಗಳ ಅವಧಿ ೫. ಋಗ್ವೇದದ ಒಂದು ಭಾಗ. ೬. ನೈವೇದ್ಯ ಮೊದಲಾದುವುಗಳನ್ನು ಇಡುವುದಕ್ಕಾಗಿ ನೆಲದ ಮೇಲೆ ಹಾಕುವ ರೇಖಾ ವಿನ್ಯಾಸ. ೭. ಮಂತ್ರಗಾರನು ಹಾಕುವ ಗೆರೆ. ೮. ಒಂದು ಜಾತಿಯ ವಿಷದ ಹಾವು; ಕೊಳೆ ಹಾವು. ೯. ಗದಾಯುದ್ಧ, ಮಲ್ಲಯುದ್ಧ ಮುಂತಾದುವುಗಳಲ್ಲಿ ಪ್ರಯೋಗಿಸುವ ಒಂದು ಪಟ್ಟು. ~ಅಧೀಶ = ಮಂಡಲಿಕ. ~ಇಸು = ಗುಂಪು ಸೇರು.

ಮಂಡಲಾ(ಳಾ)ಗ್ರ (ನಾ). ೧. ಒಂದು ಬಗೆಯ ಆಯುಧ; ಅಡಾಯುಧ. ೨. ದ್ವಂದ್ವಯುದ್ಧದ ಒಂದು ಪಟ್ಟು.

ಮಂಡಲಿ(ಳಿ) (ನಾ). ೧. ವೃತ್ತಾಕಾರವಾದುದು; ವರ್ತುಲ. ೨. ಗುಂಪು; ಸಮೂಹ. ೩. ಸಭೆ; ಗೋಷ್ಠಿ. ೪. ತಿರುಗುವಿಕೆ; ಸುತ್ತುವಿಕೆ. ೫. ಹಾವು; ಸರ್ಪ. ೬. ಒಂದು ಸರ್ಪವಿಶೇಷ; ಮಂಡಲದ ಹಾವು. ೭. ಬೆಕ್ಕು.

ಮಂಡಲಿ(ಳಿ)ಕ (ನಾ). ಪ್ರಾಂತವನ್ನು ಆಳುವವನು; ಮಾಂಡಲಿಕ.

ಮಂಡಲೀಕ = ಮಂಡಲಿಕ.

ಮಂಡವಿಗೆ (ನಾ). ೧. ಸಣ್ಣ ಮಂಟಪ. ೨. ಗುಡಾರ; ಡೇರೆ.

ಮಂಡಿ (ನಾ). ೧. ಮೊಳಕಾಲು. ೨. ಕಾಲಿಗೆ ಬರುವ ಒಂದು ಬಗೆಯ ವಾತರೋಗ. ೩. ಅಂಗಡಿ; ಮಳಿಗೆ. ~ಊ(ಯೂ)ರು = ೧. ಮೊಳಕಾಲು ಊರು. ೨. ಪ್ರಾರ್ಥಿಸು; ಬೇಡು.

ಮಂಡಿಗೆ = ಮಂಡಕ.

ಮಂಡಿಸು (ಕ್ರಿ). ೧. ಕುಳಿತುಕೊಳ್ಳು; ಆಸೀನನಾಗು. ೨. ವಿಷಯವನ್ನು ಮುಂದಿಡು; ಪ್ರತಿಪಾದಿಸು.

ಮಂಡೂಕ (ನಾ). ಕಪ್ಪೆ.

ಮಂಡೂರ (ನಾ). ಕಬ್ಬಿಣದ ತುಕ್ಕು, –ಜಂಗು.

ಮಂಡೆ (ನಾ). ೧. ತಲೆ; ಶಿರಸ್ಸು. ೨. ತಲೆಬುರುಡೆ. ~ಮಲಗು = ದಿಂಬು; ಲೋಡು. ~ಮೋಚು = ತಲೆಯನ್ನು ಬೋಳಿಸು. ~ಸುತ್ತು = ರುಮಾಲು.

ಮಂಡೆಕಾಗೆ = ಮಂಡಕಾಗೆ

ಮಂತಣ (ನಾ). ೧. ಆಲೋಚನೆ; ವಿಚಾರ. ೨. ಗುಟ್ಟು; ರಹಸ್ಯ. ೩. ಏಕಾಂತಸ್ಥಳ; ಗುಪ್ತಸ್ಥಳ. ೪. ರಹಸ್ಯವಾದ ಆಲೋಚನೆ; ಮಂತ್ರಾಲೋಚನೆ. ೫. ಗೋಷ್ಠಿ; ಸಭೆ. ~(ಂ)ಇರ್ = ಸಮಾಲೋಚಿಸು; ಚರ್ಚಿಸು. ~ಶಾ(ಸಾ)ಲೆ = ಮಂತ್ರಾಲೋಚನೆಯನ್ನು ನಡಸುವ ಸ್ಥಳ.

ಮಂತಣಿ (ನಾ). ಮೊಸರಿನ ಗಡಿಗೆ.

ಮಂತವ್ಯ (ನಾ). ೧. ಅಭಿಪ್ರಾಯ. (ಗು). ೨. ಮನನ ಮಾಡಲು ಯೋಗ್ಯವಾದ.

ಮಂತು (ನಾ). ೧. ಕಡೆಗೋಲು. ೨. ತಪ್ಪು; ದೋಷ. ೩. ಮಂತ್ರಿ.

ಮಂತ್ರ (ನಾ). ೧. ವೇದದಲ್ಲಿಯ ದೇವತಾ ಸ್ತೋತ್ರ ಭಾಗ. ೨. ಇಷ್ಟದೇವತೆಯನ್ನು ಕುರಿತು ಹೇಳುವ ಶ್ಲೋಕ. ೩. ಪವಿತ್ರವಾದ, ಅರ್ಥಸಹಿತವಾದ ವಾಕ್ಯ. ೪. ಮಾಟ; ಅಭಿಚಾರ. ೫. ಅಭಿಚಾರ ಕ್ರಿಯೆಯಲ್ಲಿ ಬಳಸುವ ಅಕ್ಷರಸಮೂಹ. ೬. ಉಪಾಯ; ತಂತ್ರ. ೭. ರಹಸ್ಯವಾದ ಆಲೋಚನೆ. ~ಅಕ್ಷತೆ=ಮಂತ್ರಪೂರ್ವಕವಾಗಿ ಹಾಕುವ ಅರಿಸಿನ ಅಥವಾ ಕುಂಕುಮದಲ್ಲಿ ಕಲಸಿದ ಅಕ್ಕಿ. ~ಅಸ್ತ್ರ=ಮಂತ್ರಪ್ರಭಾವದಿಂದ ಕೂಡಿರುವ ಬಾಣ. ~ಆಲೊ(ಲೋ)ಚನೆ = ರಹಸ್ಯವಾಗಿ ಕೂಡಿ ಮಾತನಾಡುವುದು; ಗುಪ್ತಾಲೋಚನೆ. ~ಇಸು = ೧. ಚರ್ಚಿಸು; ಸಮಾಲೋಚಿಸು. ೨. ಮಂತ್ರಗಳನ್ನು ಹೇಳು, -ಪಠಿಸು. ೩. ಮಂತ್ರದಿಂದ ಬಂಧಿಸು; ಮಾಟ ಮಾಡು. ~ಗಾರ = ಐಂದ್ರಜಾಲಿಕ; ಯಕ್ಷಿಣಿಗಾರ. ~ಶಕ್ತಿ = ೧. ಮಂತ್ರದ ಬಲ, -ಸಾಮರ್ಥ್ಯ. ೨. ರಾಜನಿಗಿರಬೇಕಾದ ಮೂರು ಬಗೆಯ ಶಕ್ತಿಗಳಲ್ಲಿ ಒಂದು; ಜ್ಞಾನಬಲ. ~ಶಾಲೆ = ಮಂತಣಶಾಲೆ. ~ಸಾನಿ = ಮಾಟ ಮಾಡುವವಳು; ಮಾಟಗಾತಿ

ಮಂತ್ರವಾದಿ (ನಾ). ೧. ಮಂತ್ರವನ್ನು ಹೇಳುವವನು, -ಪಠಿಸುವವನು. ೨. ಮಾಟಗಾರ.

ಮಂತ್ರಿ (ನಾ). ೧. ವೇದವನ್ನು ತಿಳಿದವನು. ೨. ಮಾಟಗಾರ; ಮಂತ್ರವಾದಿ. ೩. ರಾಜನಿಗೆ ಸಲಹೆಗಳನ್ನು ಕೊಡುವವನು; ಸಚಿವ. ೪. ಪ್ರಜಾತಂತ್ರದಲ್ಲಿ ರಾಜ್ಯದ ಆಡಳಿತಸೂತ್ರವನ್ನು ವಹಿಸುವವನು. ~ಮಂಡಲ(ಳ) = ಒಂದು ರಾಜ್ಯದಲ್ಲಿ ನೇಮಿಸಲ್ಪಟ್ಟ ಮಂತ್ರಿಗಳ ಸಮೂಹ.

ಮಂಥ (ನಾ). ೧. ಕಡೆಯುವುದು. ೨. ಕಡೆಗೋಲು.

ಮಂಥನ (ನಾ). ೧. ಕಡೆಯುವುದು; ಮಥಿಸುವುದು. ೨. ಯಾವುದಾದರೂ ವಿಷಯವನ್ನು ಚರ್ಚಿಸುವುದು, -ಆಲೋಚಿಸುವುದು.

ಮಂಥರ (ಗು). ೧. ಜಡವಾದ; ಚಟುವಟಿಕೆಯಿಲ್ಲದ. ೨. ನಿಧಾನವಾದ. ೩. ಬಾಗಿದ; ವಕ್ರವಾದ.

ಮಂಥರೆ (ನಾ). ೧. ಚಟುವಟಿಕೆಯಿಲ್ಲದವಳು; ಆಲಸಿ. ೨. ಕೈಕೆಯ ಗೂನುಬೆನ್ನಿನ ದಾಸಿ.

ಮಂಥಾನ (ನಾ). ಕಡೆಗೋಲು; ಮಂತು.

ಮಂದ (ನಾ). ೧. ನವಗ್ರಹಗಳಲ್ಲಿ ಒಂದು; ಶನಿ. ೨. ದಡ್ಡ; ತಿಳಿಗೇಡಿ. ೩. ಅಜೀರ್ಣ. (ಗು). ೪. ಜಡವಾದ; ಆಲಸ್ಯದಿಂದ ಕೂಡಿದ. ೫. ನಿಧಾನವಾದ. ೬. ಕ್ಷೀಣವಾದ; ಮಂಕಾದ. ೭. ಅಳ್ಳಕವಲ್ಲದ; ದಪ್ಪ. ~ಅಗ್ನಿ= ೧. ಅಜೀರ್ಣ; ಹಸಿವು ಇಲ್ಲದಿರುವುದು. ೨. ಹೆಚ್ಚು ಉರಿಯಿಲ್ಲದ ಬೆಂಕಿ. ~ಅನಿಲ(ಳ) = ೧. ಮಂದಮಾರುತ. ೨. ಒಂದು ವೃತ್ತದ ಹೆಸರು. ~ಇ(ಯಿ)ಸು =ಮಂದೈಸು. ~ಗತಿ = ನಿಧಾನವಾದ ನಡಗೆ, -ಚಲನೆ. ~ಜ್ವರ= ಅಜೀರ್ಣದಿಂದುಂಟಾಗುವ ಜ್ವರ ~ಪ್ರಕೃತಿ = ಆಲಸ್ಯ; ಜಡಸ್ವಭಾವ. ~ಬುದ್ಧಿ = ೧.ದಡ್ಡತನ; ತಿಳಿಗೇಡಿತನ ೨. ಮೂಢ; ಅಜ್ಞ. ~ಮಾರುತ = ಮೆಲ್ಲನೆ ಬೀಸುವ ಗಾಳಿ; ಮೆಲುಗಾಳಿ. ~ಸ್ಮಿತ = ಮೆಲುನಗೆ; ಮುಗುಳು ನಗೆ. ~ಹಾಸ = ಮಂದಸ್ಮಿತ.

ಮಂದಜ (ನಾ). ಕಮಲ; ತಾವರೆ. ~ಆಸನ = ಬ್ರಹ್ಮ.

ಮಂದಟ್ಟು (ನಾ). ಮನಸ್ಸಿಗೆ ಸ್ಪಷ್ಟವಾಗುವಿಕೆ.

ಮಂದರ (ನಾ). ೧. ಒಂದು ಪರ್ವತದ ಹೆಸರು. (ಗು). ೨. ವಿಶಾಲವಾದ, ದೊಡ್ಡದಾದ. ೩. ಗಾಢವಾದ.

ಮಂದರಿಗೆ = ಮಂದಲಿಗೆ.

ಮಂದಲಿಗೆ (ನಾ). ಚಾಪೆ.

ಮಂದಸ ೧. = ಮಂದಾಸನ. ೨. ಪೆಟ್ಟಿಗೆ; ಮಂಜೂಷ.

ಮಂದಸು = ಮಂದಸ.

ಮಂದಾರ (ನಾ). ೧. ಒಂದು ಜಾತಿಯ ಗಿಡ ಮತ್ತು ಅದರ ಹೂವು; ಪಾರಿಜಾತ. ೨. ಸ್ವರ್ಗಲೋಕದ ಕಲ್ಪವೃಕ್ಷ.

ಮಂದಾಸನ (ನಾ). ದೇವರನ್ನಿಡುವ ಮರದ ಮಂಟಪ.

ಮಂದಿ (ನಾ). ೧. ಜನತೆ; ಜನರ ಸಮೂಹ. ೨. ವ್ಯಾಪಾರದಲ್ಲಿ ಬೆಲೆಯ ಕುಸಿತ; ಅಗ್ಗವಾಗಿರುವಿಕೆ; ಸೋವಿ.

ಮಂದಿರ (ನಾ). ೧. ಮನೆ; ನಿವಾಸಸ್ಥಳ. ೨. ದೇವಾಲಯ; ಗುಡಿ.

ಮಂದಿಲ (ನಾ). ಜರಿ ಅಂಚಿನ ರುಮಾಲು.

ಮಂದಿವಾಳ (ನಾ). ೧. ಮದ; ಸೊಕ್ಕು. ೨. ಔಚಿತ್ಯವನ್ನು ಮೀರಿ ವರ್ತಿಸುವುದು; ಅಧಿಕಪ್ರಸಂಗ. ೩. ಅಹಂಕಾರಿ; ಗರ್ವಿ. ೪. ಅತಿಪರಿಚಿತ; ಸಲಿಗೆಯಿಂದಿರುವವನು. ~ತನ = ಅತಿ ಸಲಿಗೆ, -ಪರಿಚಯ.

ಮಂದು (ನಾ). ೧. ನಿವೇಶನ. ೨. ತೋಟದ ಒಂದು ಭಾಗ.

ಮಂದುರ (ನಾ). ಕುದುರೆಯ ಲಾಯ; ಅಶ್ವಶಾಲೆ. ~ಇಗ = ಕುದುರೆಯಲಾಯದ ಮೇಲ್ವಿಚಾರಕ; ಕಾಸ್ತಾರ.

ಮಂದುರೆ = ಮಂದುರ.

ಮಂಡೆ (ನಾ). ೧. ಕುರಿ, ದನ ಮೊದಲಾದುವುಗಳ ಹಿಂಡು. ೨. ಕೊಟ್ಟಿಗೆ; ಹಟ್ಟಿ.

ಮಂದೆವಾಳ = ಮಂದಿವಾಳ.

ಮಂದೈಸು (ಕ್ರಿ). ೧. ದಟ್ಟವಾಗು. ೨. ವ್ಯಾಪಿಸು. ೩. ಗಟ್ಟಿಯಾಗು; ಹೆಪ್ಪುಗಟ್ಟು. ೪. ಒಟ್ಟುಗೂಡು. ೫. ಅಧಿಕವಾಗು.

ಮಂದ್ರ (ನಾ). ೧. ತಗ್ಗುದನಿ. ೨. ಗಂಭೀರ ಧ್ವನಿ. (ಗು). ೩. ಆಳವಾದ; ಕೆಳಗಿನ. ೪. ಗಂಭೀರವಾದ.

ಮಂಪರ (ನಾ). ಜೊಂಪು; ತೂಕಡಿಕೆ.

ಮಂಪರು = ಮಂಪರ.

ಮಕಮಕ (ನಾ). ಮಂಕಾಗಿರುವುದನ್ನು ಸೂಚಿಸುವ ಒಂದು ಅನುಕರಣ ಶಬ್ದ. ~ಇಸು = ಮಂಕಾಗು; ಕಳೆಗುಂದು.

ಮಕಮಲ್ಲು (ನಾ). ಒಂದು ಬಗೆಯ ನಯವಾದ ಬಟ್ಟೆ.

ಮಕರ (ನಾ). ೧. ಮೊಸಳೆ; ನಕ್ರ. ೨. ಒಂದು ಜಾತಿಯ ಮೀನು. ೩. ಜ್ಯೋತಿಷ್ಯದ ಹನ್ನೆರಡುರಾಶಿಗಳಲ್ಲಿ ಒಂದು. ೪. ಕುಬೇರನ ನವನಿಧಿಗಳಲ್ಲಿ ಒಂದು. ೫. ಒಂದು ಬಗೆಯ ಆಯುಧ. ೬. ಅಲಂಕರಿಸಿದ ಮಂಟಪ. ~ಆಕರ = ಮೊಸಳೆಗಳ ಆಶ್ರಯಸ್ಥಾನ; ಮಡು. ~ಕುಂಡಲಿ = ಮೊಸಳೆಯ ಆಕಾರದ ಕರ್ಣಾಭರಣ. ~ಕೇತನ = ಮೀನಿನ ಚಿಹ್ನೆಯನ್ನು ಧ್ವಜದಲ್ಲಿ ಉಳ್ಳವನು; ಮನ್ಮಥ. ~ತೋರಣ = ಮೆರವಣಿಗೆಯಲ್ಲಿ ಹಿಡಿಯುವ ತೋರಣ. ~ಧ್ವಜ = ಮಕರಕೇತನ. ~ವೃತ್ತ = ಭೂಮಧ್ಯರೇಖೆಯ ದಕ್ಷಿಣಕ್ಕೆ ಸೂರ್ಯನು ಸಂಚರಿಸುವುದನ್ನು ಸೂಚಿಸುವಂತೆ ಗೋಳದ ಮೇಲೆ ಎಳೆದಿರುವ ಗೆರೆ. ~ಸಂಕ್ರಮಣ = ಸೂರ್ಯನು ಮಕರ ರಾಶಿಗೆ ಹೋಗುವ ಸಮಯ ಮತ್ತು ಅಂದು ಆಚರಿಸುವ ಹಬ್ಬ; ಪೊಂಗಲು. ~ಸಂಕ್ರಾಂತಿ = ಮಕರ ಸಂಕ್ರಮಣ.

ಮಕರಂದ (ನಾ). ಹೂವಿನ ರಸ; ಬಂಡು.

ಮಕರಿಕಾಪತ್ರ = ಮಕರಿಕೆ.

ಮಕರಿಕೆ (ನಾ). ಸ್ತ್ರೀಯರು ಕಪೋಲದ ಮೇಲೆ ಬಣ್ಣಗಳಿಂದ ಬರೆದುಕೊಳ್ಳುವ ಚಿತ್ರ.

ಮಕರಿಸು (ಕ್ರಿ). ೧. ವ್ಯಾಪಿಸು. ೨. ಮುಚ್ಚು.

**ಮಕುಟ** (ನಾ). ಕಿರೀಟ. ~ಬದ್ಧ = ಕಿರೀಟವನ್ನು ಧರಿಸಿದವನು; ರಾಜ.

**ಮಕ್ಕಡ** = ಮಂಕಡ.

**ಮಕ್ಕರಿ** ೧. = ಮಂಕರಿ. ೨. ಸಂನ್ಯಾಸಿ; ಯತಿ.

**ಮಕ್ಕಿಗದ್ದೆ** (ನಾ). ಎತ್ತರದಲ್ಲಿರುವ ನೀರಾವರಿ ಭೂಮಿ.

**ಮಕ್ಕು** (ನಾ). ಮಸಿ; ಕಪ್ಪು. ~ಹಿಡಿ = ಮಸಿಹಿಡಿ; ಕಪ್ಪಾಗು.

**ಮಕ್ತ** (ನಾ). ಗುತ್ತಿಗೆ; ಏಕಸ್ವಾಮ್ಯ. ~ದಾರ = ಗುತ್ತಿಗೆದಾರ.

**ಮಕ್ತ್ಯಾರ್** = ಮಕ್ತ್ಯಾರ.

**ಮಕ್ತ್ಯಾರ** (ನಾ). ೧. ಯಾವುದಾದರೊಂದು ಕರ್ತವ್ಯವನ್ನು ನಿರ್ವಹಿಸಲು ಕೊಟ್ಟ ಅಧಿಕಾರ. ೨. ಅಂತಹ ಅಧಿಕಾರವುಳ್ಳವನು.

**ಮಕ್ಷಿಕ** (ನಾ). ೧. ನೊಣ. ೨. ಜೇನುನೊಣ.

**ಮಖ** (ನಾ). ಯಾಗ; ಯಜ್ಞ. ~ಅಶ್ವ = ಯಾಗದ ಕುದುರೆ; ಯಜ್ಞಾಶ್ವ. ~ಧ್ವಂಸಿ = ದಕ್ಷನ ಯಜ್ಞವನ್ನು ನಾಶಮಾಡಿದವನು; ಶಿವ.

**ಮಖಜೆ** (ನಾ). ಯಜ್ಞಕುಂಡದಿಂದ ಹುಟ್ಟಿದವಳು; ದ್ರೌಪದಿ.

**ಮಖೆ** (ನಾ). ಇಪ್ಪತ್ತೇಳು ನಕ್ಷತ್ರಗಳಲ್ಲಿ ಒಂದು ಮತ್ತು ಆ ನಕ್ಷತ್ರದಲ್ಲಿ ಬರುವ ಮಳೆ.

**ಮಖ್ತೇಸರ** (ನಾ). ಮುಖ್ಯಾಧಿಕಾರಿ; ಮೊಖ್ತೇಸರ.

**ಮಗ** (ನಾ). ಪುತ್ರ; ನಂದನ.

**ಮಗಮಗ** (ನಾ). ಸುವಾಸನೆ; ಪರಿಮಳ; ಗಮಗಮ. ~ಇಸು = ಗಮಗಮಿಸು; ಸುವಾಸನೆ ಬೀರು.

**ಮಗರಿ** (ನಾ). ಒಂದು ಬಗೆಯ ಬಟ್ಟೆ.

**ಮಗರೂರಿ** (ನಾ). ಸೊಕ್ಕು; ಅಹಂಕಾರ.

**ಮಗವು** = ಮಗು.

**ಮಗಳ್(ಳು)** (ನಾ). ಪುತ್ರಿ; ನಂದನೆ.

**ಮಗಿ** (ನಾ). ಸುವಾಸನೆಯಿಂದ ಕೂಡಿದ ಒಂದು ಜಾತಿಯ ವೀಳ್ಯದೆಲೆ.

**ಮಗಿಲ್** = ಮದಿಲ್.

**ಮಗು** (ನಾ). ಕಂದ; ಕೂಸು.

**ಮಗುಚು** = ಮಗುಚ್ಚು. ~ಕೈ = ರೊಟ್ಟಿ, ದೋಸೆ ಮುಂತಾದುವುಗಳನ್ನು ತಿರುಗಿಸಿ ಹಾಕುವ ಸಾಧನ; ಕುರುಪೆ; ಖಡಚಿ.

**ಮಗುಟ** ೧. = ಮಕುಟ. ೨. ರೇಷ್ಮೆವಸ್ತ್ರ; ಪಟ್ಟೆಮಡಿ.

**ಮಗುಡ** = ಮಕುಟ.

**ಮಗುವು** = ಮಗು. ~ತನ = ಬಾಲ್ಯ; ಚಿಕ್ಕಂದು.

**ಮಗುಚ್(ಳ್)** (ಕ್ರಿ). ೧. ಅಡಿಮೇಲಾಗು; ಬೋರಲಾಗು. ೨. ಹಿಂತಿರುಗು; ಹಿಮ್ಮೆಟ್ಟು. ೩. ಬೀಳು; ಕೆಡೆ.

**ಮಗುಚ್ಚು(ಳ್ಚು)** (ಕ್ರಿ). ೧. ಹಿಂತಿರುಗು; ಮರಳು. ೨. ತಿರುವಿ ಹಾಕು; ಮಗುಚು. ೩. ಕವಿಚಬೀಳು; ಬೋರಲಾಗು. ೪. ತಲೆಕೆಳಗಾಗು; ಬುಡಮೇಲಾಗು. ೫. ಹಿಂತಿರುಗಿಸು.

**ಮಗೆ** (ನಾ). ೧. ಮಣ್ಣಿನಿಂದ ಮಾಡಿದ ಸಣ್ಣ ಪಾತ್ರೆ. ೨. = ಮಖೆ.

**ಮಗ್ಗ** (ನಾ). ಬಟ್ಟೆ ನೇಯುವ ಸಾಧನ; ನೆಯ್ಗೆಯಂತ್ರ.

**ಮಗ್ಗಲ್(ಲು)** = ಮಗ್ಗುಲ್.

**ಮಗ್ಗಾರೆ** = ಮಂಗಾರೆ.

**ಮಗ್ಗಿ** (ನಾ). (ಅಂಕಗಣಿತದ) ಕೋಷ್ಟಕ.

**ಮಗ್ಗು** (ಕ್ರಿ). ೧. ಕಳೆಗುಂದು; ನಿಸ್ತೇಜವಾಗು. ೨. ಆಯಾಸಗೊಳ್ಳು; ದಣಿ. ೩. ಸುರುಟಿಕೊಳ್ಳು; ಮುರುಟು. ೪. ಕಾಣದಾಗು; ಮರೆಯಾಗು. ೫. ನಾಶವಾಗು. ೬. = ಮಗುರ್.

ಮಗ್ಗುಲ್(ಲು) (ನಾ). ೧. ಪಕ್ಕ; ಬದಿ. ೨. ಪಕ್ಕೆಲುಬು. ~ಇಕ್ಕು = ಒಂದು ಪಕ್ಕಕ್ಕೆ ತಿರುಗಿ ಮಲಗು. ~ಹಾಸಿಗೆ = ಹಾಸುಗೆಯ ಮೇಲೆ ಹಾಸುವ ವಸ್ತ್ರ; ದುಪ್ಪಟಿ.

ಮಗ್ನ (ಗು). ೧. ಮುಳುಗಿದ. ೨. ಏಕಾಗ್ರತೆಯಿಂದ ಕೂಡಿದ; ತಲ್ಲೀನ.

ಮಗ್ನತೆ (ಸಾ). ತಲ್ಲೀನತೆ; ತತ್ಪರತೆ.

ಮಘವ (ನಾ). ದೇವೇಂದ್ರ.

ಮಘೆ = ಮಖೆ.

ಮಂಚವೆ (ನಾ). ದೋಣಿ; ಓಡ.

ಮಚ್ಚೆ (ನಾ). ೧. ದೇಹದ ಮೇಲಿರುವ ಕಪ್ಪು ಕಲೆ; ಮತ್ತಿ. ೨. ಗಾಯದ ಗುರುತು. ೩. ಗುರುತು; ಚಿಹ್ನೆ. ೪. ಒರೆ ಹಚ್ಚುವುದಕ್ಕಾಗಿ (ಅಕ್ಕಸಾಲಿಗನಿಂದ) ಪಡೆದುಕೊಂಡ ಚಿನ್ನ, ಬೆಳ್ಳಿ ಮುಂತಾದುವುಗಳ ಚೂರು. ೫. ಮೀನು; ಮತ್ಸ್ಯ.

ಮಚ್ಚರ = ಮತ್ಸರ. ~ಇಸು = ಹೊಟ್ಟೆಕಿಚ್ಚುಪಡು; ಅಸೂಯೆಪಡು.

ಮಚ್ಚರದಾಣಿ (ನಾ). ಸೊಳ್ಳೆಪರದೆ.

ಮಚ್ಚು ೧. = ಮೆಚ್ಚು. (ನಾ). ೨. ಕಪಟ; ಮೋಸ. ೩. ಮರುಳುಗೊಳಿಸಲು ಉಪಯೋಗಿಸುವ ಪುಡಿ; ಮಂಕುಬೂದಿ. ೪. ಭಾವಣಿ; ತಾರಸಿ. ೫. ಕಡಿಗತ್ತಿ. ೬. ನೊಣ. ~ಇಗೆ = ಒಪ್ಪಿಗೆ; ಸಮ್ಮತಿ. ~ಇಸು = ೧. ಒಪ್ಪುವಂತೆ ಮಾಡು; ಮೆಚ್ಚುವಂತೆ ಮಾಡು. ೨. ಸಂತೋಷಪಡಿಸು. ~ಕೊ(ಗೊ)ಡು = ೧. ಸಂತೋಷವನ್ನುಂಟು ಮಾಡು. ೨. ಬಹುಮಾನವನ್ನು ಕೊಡು.

ಮಚ್ಚೆ (ನಾ). ೧. ಮೈಮೇಲೆ ಇರುವ ಕಲೆ, ಚುಕ್ಕೆ. ೨. ಮೀನು. ೩. ಮೇಲ್ಛಾವಣಿ; ಬಿಸಿಲುಮಚ್ಚು.

ಮಜಕೂರು (ನಾ). ಸುದ್ದಿ; ಸಮಾಚಾರ.

ಮಜಡ (ನಾ). ೧. ದಡ್ಡ; ತಿಳಿಗೇಡಿ. (ಗು). ೨. ಜಡವಾದ; ಆಲಸ್ಯದಿಂದ ಕೂಡಿದ.

ಮಜಬೂತು (ಗು). ೧. ಭದ್ರವಾದ; ಗಟ್ಟಿಯಾದ. ೨. ದೊಡ್ಡದಾದ.

ಮಜಲು (ನಾ). ೧. ಹಂತ; ಘಟ್ಟ. ೨. ತಂಗುವಿಕೆ; ಬೀಡು ಬಿಡುವಿಕೆ. ೩. ಕುಷಿ ಭೂಮಿ; ಹೊಲ.

ಮಜಾ (ನಾ). ೧. ಸಂತೋಷ; ಆನಂದ. ೨. ರುಚಿ; ಆಸ್ವಾದ. ೩. ತಮಾಷೆ; ಮೋಜು.

ಮಜೂರಿ (ನಾ). ಕೂಲಿ; ವೇತನ.

ಮಜ್ಜ ೧. = ಮಜ್ಜೆ. ೨. ಮರದ ಕೆಚ್ಚು; ಚೇಗು.

ಮಜ್ಜನ (ನಾ). ಸ್ನಾನ; ಜಳಕ. ~(೦)ಪು(ಬು)ಗು = ಸ್ನಾನ ಮಾಡು; ಮೀಯು. ~ವಳ = ಸ್ನಾನ ಮಾಡಿಸುವವನು. ~ಶಾ(ಸಾ)ಲೆ = ಸ್ನಾನದ ಮನೆ.

ಮಜ್ಜಿಗೆ (ನಾ). ಕಡೆದ ಮೊಸರು; ತಕ್ರ. ~ಪಳಿದ್ಯ = ಮಜ್ಜಿಗೆಯಿಂದ ಮಾಡುವ ಒಂದು ಬಗೆಯ ಮೇಲೋಗರ. ~ಹುಳಿ = ಮಜ್ಜಿಗೆಪಳಿದ್ಯ.

ಮಜ್ಜೆ (ನಾ). ಮೂಳೆಯಲ್ಲಿರುವ ಮೆದುವಾದ ಕೊಬ್ಬಿನ ಪದಾರ್ಥ.

ಮಝು (ನಾ). ಕೊಂಡಾಟದ ಒಂದು ಮಾತು.

ಮಟ = ಮಠ.

ಮಟಮಾಯ (ನಾ). ಕಣ್ಣಿಗೆ ಕಾಣಿಸದಿರುವಿಕೆ; ಮಂಗಮಾಯ. ~ಗೆಯ್ = ೧. ಕಣ್ಣಿಗೆ ಬೀಳದಂತೆ ಮಾಡು; ಮರೆಮಾಡು. ೨. ಇಂದ್ರಜಾಲಮಾಡು; ಕಣ್ಣುಕಟ್ಟು ಮಾಡು.

ಮಟ್ಟ (ನಾ). ೧. ಸಮತಟ್ಟಾಗಿರುವುದು; ಸಪಾಟಾಗಿರುವುದು. ೨. ವಸ್ತುವಿನ ಸಮತಟ್ಟನ್ನು ಪರೀಕ್ಷಿಸುವ ಸಾಧನ; ರಸಮಟ್ಟ. ೩. ಅಳತೆ; ಪ್ರಮಾಣ. ೪. ಆಳ. ೫. ಹಂತ;

ಘಟ್ಟ. ೬. ದರ್ಜೆ; ತರಗತಿ. ೭. ನಾಶ; ಹಾಳು. ೮. ಕೀಳುದರ್ಜೆಗೆ ಸೇರಿದುದು. ೯. ಒಂದು ಬಗೆಯ ಆಯುಧ. (ಅ). ೧೦.=ಮಟ್ಟಗೆ. ~(ಂ)ಇರ್ = ನಿಷ್ಕ್ರಿಯವಾಗು; ಸುಮ್ಮನಿರು. ~ಕೊ(ಗೊ)ೞು = ನೆಲವನ್ನು ದಮ್ಮಸ್ಸು ಮಾಡಲು ಬಳಸುವ ಸಾಧನ. ~ಮಾಡು = ೧. ಸಮ ಮಾಡು. ೨. ಅಡಗಿಸು; ತಲೆಯೆತ್ತದಂತೆ ಮಾಡು. ~ರಗಳೆ = ಒಂದು ಜಾತಿಯ ಛಂದೋವೃತ್ತ. ~ಹಾಕು= ಮಟ್ಟಮಾಡು.

ಮಟ್ಟಸ (ನಾ). ಏರುತಗ್ಗಿಲ್ಲದಿರುವುದು; ಸಪಾಟು.

ಮಟ್ಟಿ (ನಾ). ಮಣ್ಣು.

ಮಟ್ಟಿಗೆ (ಅ). ವರೆಗೆ; ಪರ್ಯಂತ; ತನಕ.

ಮಟ್ಟು (ಕ್ರಿ). ೧. ಗೆಣ್ಣಿನಿಂದ ಹೊಡೆ; ಮೊಟ್ಟು. (ನಾ). ೨. ಮಿತಿ; ಎಲ್ಲೆ. ೩. ಹಾಡಿನ ಧಾಟಿ, –ರಾಗ. ೪. ಪೊದೆ; ಪೊದರು.

ಮಟ್ಟೆ = ಮೊಟ್ಟೆ.

ಮಠ (ನಾ). ೧. ಸಂನ್ಯಾಸಿ, ಗುರು ಮುಂತಾದವರ ವಾಸಸ್ಥಾನ. ೨. ಪಾಠಶಾಲೆ.

ಮಡ (ನಾ). ೧. ಪಾದದ ಹರಡು; ಹಿಮ್ಮಡಿ. ೨. ಗಾಡಿಯ ಅಚ್ಚಿನ ಹಿಂಭಾಗ. ೩. ಮಠ; ಪಾಠಶಾಲೆ. ~ಮುರಿ = ಹಿಮ್ಮೆಟ್ಟು; ಹಿಂಜರಿ.

ಮಡ(ಂ)ಗು (ಕ್ರಿ). ೧. ಇಡು; ಇರಿಸು. ೨. ಬಚ್ಚಿಡು; ಮರೆಮಾಡು.

ಮಡಂಬ (ನಾ). ಐನೂರು ಹಳ್ಳಿಗಳಿಗೆ ಮುಖ್ಯವಾದ ನಗರ.

ಮಡಕೆ (ನಾ). ೧. ಮಣ್ಣಿನ ಪಾತ್ರೆ. ೨. ಒಂದು ಬಗೆಯ ಧಾನ್ಯ; ಅವಡೆ.

ಮಡಗೂೞ್(ಳ್) (ನಾ). ತಿಂದು ಉಳಿದುದು; ಎಂಜಲು; ಉಚ್ಛಿಷ್ಟ.

ಮಡದಿ (ನಾ). ೧. ಹೆಂಗಸು. ೨. ಹೆಂಡತಿ.

ಮಡಲ್ (ಕ್ರಿ). ೧. ಅತಿಯಾಗಿ ಬೆಳೆ, –ವೃದ್ಧಿಯಾಗು. ೨. ಹರಡು; ವ್ಯಾಪಿಸು. (ನಾ). ೩. ಬೆಳೆಯುವಿಕೆ; ಅಭಿವೃದ್ಧಿ. ೪. ಪೊದೆ; ಪೊದರು. ೫. ತೆಂಗಿನಮರದ ಸೋಗೆ, –ಗರಿ. ~ಇಡು = ೧. ಬೆಳೆ. ೨. ಹಬ್ಬು; ಹರಡು. ~ಇಱು(ರಿ) = ಮಡಲಿಡು.

ಮಡಲು (ನಾ). ೧. ಉಡಿ; ಸೋಗಿಲು. ೨. ತೆಂಗಿನ ಗರಿ, –ಸೋಗೆ. ೩. ತೆಂಗಿನ ಗರಿಯಿಂದ ಮಾಡಿದ ಚಾಪೆ. ~ತುಂಬು = ಸೋಗಿಲಿಕ್ಕು; ಉಡಿತುಂಬು.

ಮಡಿ (ಕ್ರಿ). ೧. ಸಾಯು; ಮರಣಹೊಂದು. ೨. ಬಾಗು; ಮಣಿ. ೩. ಮಡಿಸು; ಮಡಿಕೆಯಾಗುವಂತೆ ಮಾಡು. (ನಾ). ೪. ಮಡಿಚುವಿಕೆ. ೫. ಮಡಿಕೆ; ಪದರ. ೬. ಸರದಿ; ಸಲ; ಬಾರಿ. ೭. ಉಡಿ; ಮಡಿಲು. ೮. ಪಾತಿ; ಆಲವಾಲ. ೯. ನೈರ್ಮಲ್ಯ; ಪರಿಶುದ್ಧತೆ. ೧೦. ರೇಷ್ಮೆಬಟ್ಟೆ; ಪಟ್ಟೆವಸ್ತ್ರ. ೧೧. ಒಗೆದು ಶುಭ್ರಮಾಡಿದ ಬಟ್ಟೆ. ೧೨. ಆಚಾರ; ಸಂಪ್ರದಾಯ. ೧೩. ಒಂದು ಬಗೆಯ ಗದ್ದೆ. (ಗು). ೧೪. ಚೊಕ್ಕಟವಾದ; ಪರಿಶುದ್ಧವಾದ. ~ಇಸು = ಮಡಿಚು. ~ಪಾ(ವಾ)ಸು = ಶುಭ್ರವಾದ ಹಾಸು. ~ಬಟ್ಟೆ = ಒಗೆದು ಶುಭ್ರಮಾಡಿದ ಅರಿವೆ. ~ವರ್ಗ = ೧. ರೇಷ್ಮೆಬಟ್ಟೆಗಳ ರಾಶಿ. ೨. ಒಗೆದ ಬಟ್ಟೆಗಳ ರಾಶಿ. ~ವಳ(ಳ್ಳ) = ಅಗಸ; ದೋಬಿ. ~ವಾಳ = ಮಡಿವಳ. ~ಸೀರೆ = ೧. ಒಗೆದ ಸೀರೆ. ೨. ರೇಷ್ಮೆ ಸೀರೆ. ೩. ಮಡಿಹೆಂಗಸರು ಉಡುವ ಕೆಂಪು ಬಣ್ಣದ ಸೀರೆ.

ಮಡಿಕೆ (ನಾ). ೧. ಮಡಿಸಿದುದು. ೨. ನಿರಿಗೆ; ಪದರ. ೩. ವ್ಯವಸಾಯದ ಒಂದು ಉಪಕರಣ; ಕುಂಟೆ. ೪. =ಮಡಕೆ.

ಮಡಿಚು (ಕ್ರಿ). ೧. ಪದರ ಮಾಡು; ಮಡಿಸು. ೨. ಬಾಗಿಸು; ಬಗ್ಗುನಂತೆ ಮಾಡು.

ಮಡಿಪು (ಕ್ರಿ). ೧. ಕೊಲ್ಲು; ಸಂಹರಿಸು. (ನಾ). ೨. ಮಡಿಕೆ; ಉದರ.

ಮಡಿಯಿಸು (ಕ್ರಿ). ಕೊಲ್ಲು; ಸಂಹರಿಸು.

ಮಡಿಲ್(ಲು) (ನಾ). ೧. ಉಡಿ; ಸೋಗಿಲು. ೨. ಆಶ್ರಯ. ~ಅಕ್ಕಿ = ಹೆಣ್ಣುಮಕ್ಕಳ ಉಡಿಗೆ ತುಂಬುವ ಬೆಲ್ಲ, ಅಕ್ಕಿ, ತೆಂಗಿನ ಕಾಯಿ ಮೊದಲಾದುವು; ಉಡಿಯಕ್ಕಿ.

ಮಡಿವಂತ (ನಾ). ಸಂಪ್ರದಾಯವನ್ನು ಅನುಸರಿಸುವವನು; ಆಚಾರವಂತ. ~ಇಕೆ = ೧. ಆಚಾರ; ಸಂಪ್ರದಾಯ. ೨. ಕಂದಾಚಾರ.

ಮಡು (ಕ್ರಿ). ೧. ಜೋಡಿಸು; ಹೊಂದಿಸು. (ನಾ). ೨. = ಮಡುವು. ೩. ಕೊಡಲಿ. ~ಕ(ಗ)ಟ್ಟು = ಆಳವಾಗಿ ನೀರು ನಿಲ್ಲು. ~ಕೊ(ಗೊ)ಳ್ = ಮಡುಗಟ್ಟು.

ಮಡುವು (ನಾ). ನದಿ, ಹೊಳೆ ಮುಂತಾದುವುಗಳ ಆಳವಾದ ನೀರಿರುವ ಪ್ರದೇಶ.

ಮಡುಹು (ಕ್ರಿ). ೧. ಕೊಲ್ಲು; ಸಂಹರಿಸು. (ನಾ). ೨. = ಮಡುವು. ~ಇಸು = ಕೊಲ್ಲಿಸು.

ಮಡೆ (ನಾ). ೧. ಒಡ್ಡು; ಅಣೆಕಟ್ಟು. ೨. ಗದ್ದೆಗಳಿಗೆ ನೀರು ಹಾಯಿಸಲು ನಾಲೆಯಲ್ಲಿ ಮಾಡಿದ ಕಂಡಿ; ತೂಬು. ೩. ಒಂದು ಬಗೆಯ ಭೂಮಿ.

ಮಡೆಯ (ನಾ). ತಿಳಿಗೇಡಿ; ದಡ್ಡ.

ಮಡೆಹೊರಳು (ಕ್ರಿ). ದೇವರ ಸೇವೆಗಾಗಿ ಎಂಜಲೆಲೆಯ ಮೇಲೆ ಹೊರಳು.

ಮಡ್ಡ ೧. = ಮಡೆಯ. (ಗು). ೨. ಬುದ್ಧಿಯಿಲ್ಲದ; ತಿಳಿವಳಿಕೆಯಿಲ್ಲದ.

ಮಡ್ಡಿ (ನಾ). ೧. ಗಸಿ; ಗಷ್ಟು. ೨. ಮುದ್ದೆಯಾಗಿರುವುದು; ಮಿಡ್ಡೆ. ೩. ಮೃದುವಾದ ಅಂಟನ್ನು ಕೊಡುವ ಒಂದು ಜಾತಿಯ ಮರ. ೪. ದಡ್ಡತನ. ೫. ತಿಳಿವಳಿಕೆಯಿಲ್ಲದ ವ್ಯಕ್ತಿ. ~ತನ = ದಡ್ಡತನ; ಮೌಢ್ಯ.

ಮಡ್ಡು (ನಾ). ೧. ಗಸಿ; ಮಡ್ಡಿ. ೨. ದಡ್ಡತನ; ಮೌಢ್ಯ. ೩. ಸೊಕ್ಕು; ಅಹಂಕಾರ. ೪. ಕರುವಿನ ಸಗಣಿ. ೫. ಒಂದು ಬಗೆಯ ಚರ್ಮವಾದ್ಯ.

ಮಣ್ (ನಾ). ೧. ಮೃತ್ತಿಕೆ. ೨. ಭೂಮಿ; ನೆಲ. ~ಉಳಿಗ = ಮಣ್ಣುಹುಳು.

ಮಣ (ನಾ). ತೂಕದ ಒಂದು ಪ್ರಮಾಣ.

ಮಣಕ ೧. = ಮಣಿಕ. ೨. ಮರಿ; ಪೋತ. ೩. ಚಿಕ್ಕ ಗಾತ್ರದ ಮೊಸಳೆ. ೪. ತ್ವರೆ; ಶೀಘ್ರತೆ.

ಮಣಕು (ನಾ). ೧. ಕೊಳೆ; ಹೊಲಸು. ೨. ಎಣ್ಣೆ ಮೊದಲಾದುವುಗಳ ವಾಸನೆ.

ಮಣಗು (ಕ್ರಿ). ಬಗ್ಗು; ಮಣಿ.

ಮಣಲ್(ಲು) (ನಾ). ಮರಳು; ಹೊಯಿಗೆ.

ಮಣಿ (ಕ್ರಿ). ೧. ಬಾಗು; ಬಗ್ಗು. ೨. ನಮಸ್ಕರಿಸು; ವಂದಿಸು. ೩. ಅಪಜಯ ಹೊಂದು; ಸೋಲು. (ನಾ). ೪. ಬೆಲೆಬಾಳುವ ಹರಳು; ರತ್ನ. ೫. ಪೋಣಿಸಲು ಬರುವ ಗಾಜು, ಮರ ಮುಂತಾದುವುಗಳಿಂದ ಮಾಡಿದ ಗೋಲಾಕಾರದ ವಸ್ತು. ೬. ಗಂಟೆಯ ನಾಲಗೆ. ~ಇಸು = ೧. ಬಗ್ಗುವಂತೆ ಮಾಡು; ಬಾಗಿಸು. ೨. ಸೋಲಿಸು. ~ಕಟಕ = ರತ್ನಗಳನ್ನು ಹುದುಗಿಸಿದ ಬಳೆ. ~ಕುಟ್ಟಿಮ = ರತ್ನಖಚಿತವಾದ ನೆಲಗಟ್ಟು. ~ಗಾಜಿ(ರ) = ಮಣಿಗಳನ್ನು ಮಾರುವವನು. ~ಚೌಕಟ್ಟು = ಮಕ್ಕಳಿಗೆ ಎಣಿಕೆಯನ್ನು ಹೇಳಿಕೊಡಲು ಉಪಯೋಗಿಸುವ ಮರದ ಮಣಿಗಳನ್ನು ಅಳವಡಿಸಿದ ಶಿಕ್ಷಣ ಸಾಧನ. ~ಮಕುಟ = ರತ್ನಕಿರೀಟ. ~ಹಾರ = ರತ್ನಗಳಿಂದ ಮಾಡಿದ ಸರ.

ಮಣಿಕ (ನಾ). ಪ್ರಾಯದ ಎಮ್ಮೆ ಅಥವಾ ಹಸು; ಕಡಸು; ಹಡ್ಡೆ.

ಮಣಿಕಟ್ಟು (ಕ್ರಿ). ೧. ಮಣಿಗಳನ್ನು ಸೇರಿಸು–ಪೋಣಿಸು. (ನಾ). ೨. = ಮಣಿಬಂಧ. ೩. = ಮಣಿಚೌಕಟ್ಟು.

**ಮಣಿಕೆ** (ನಾ). ಹೂಜಿ.

**ಮಣಿಬಂಧ** (ನಾ). ಪ್ರಕೋಷ್ಠ; ಮುಂಗೈ ಹರಡು.

**ಮಣಿಯ** (ನಾ). ೧. ದೇವಾಲಯ, ಮಠ, ಅರಮನೆ ಮುಂತಾದುವುಗಳ ಮೇಲ್ವಿಚಾರಣೆ. ೨. ತಹಸೀಲ್ದಾರನ ಅಧೀನದಲ್ಲಿರುವ ಕಂದಾಯದ ಕಚೇರಿ. ೩. ದೇವಸ್ಥಾನ ಅಥವಾ ಮಠದ ವ್ಯವಸ್ಥಾಪಕ.

**ಮಣಿಯಿಸು** = ಮಣಿಸು.

**ಮಣಿಹ** (ನಾ). ೧. ಕಾರ್ಯಭಾರ; ಉದ್ಯೋಗ. ೨. ನಮಸ್ಕಾರ. ~ಗಾಱ(ರ) = ಮಣಿಹಾಱ.

**ಮಣಿಹಾಱ(ರ)** (ನಾ). (ಅರಮನೆಯ) ಮೇಲ್ವಿಚಾರಕ, –ಪಾರುಪತ್ಯಗಾರ.

**ಮಣೆ** (ನಾ). (ಮರದಿಂದ ಮಾಡಿದ) ಪೀಠ; ಆಸನ. ~ಹಾಕು = ೧. ಮಣೆಯನ್ನು ಹಾಕು. ೨. ಗೌರವವನ್ನು ತೋರಿಸು.

**ಮಣೆಗಾಱ(ರ)** (ನಾ). ೧. ದೂತ; ಚಾರ. ೨. ಗ್ರಾಮಾಧಿಕಾರಿ.

**ಮಣ್ಣು** = ಮಣ್. ~ಆಗು = ೧. ಧೂಳಿನಿಂದ ಹೊಲಸಾಗು. ೨. ನಾಶವಾಗು; ಹಾಳಾಗು. ~ಎರಚು = ೧. ಮಣ್ಣನ್ನು ತೂರು. ೨. ಮೋಸಮಾಡು; ವಂಚಿಸು. ~ಕೂ(ಗೂ)ಡಿಸು = ಹಾಳುಮಾಡು; ನಾಶಮಾಡು. ~ಕೊಡು = ಸಮಾಧಿಮಾಡು. ~ಪಾಲು = ನಾಶ; ಹಾಳು. ~ಬೀಳು = ನಿರಾಸೆಯುಂಟಾಗು. ~ಮಾಡು = ೧. ಕೊಳೆಮಾಡು; ಹೊಲಸು ಮಾಡು. ೨. = ಮಣ್ಣುಗೂಡಿಸು. ೩. ಹೆಣವನ್ನು ಒಪ್ಪಮಾಡು; ಸಮಾಧಿಮಾಡು. ~ಮುಕ್ಕು = ಸೋಲು. ~ಹುಳು = ಮಣ್ಣಿನಲ್ಲಿ ವಾಸಿಸುವ ಹುಳು; ಎರೆಹುಳು.

**ಮಣ್ಣಿಗ** (ನಾ). ಮಣ್ಣಿನ ಕೆಲಸವನ್ನು ಮಾಡುವವನು.

**ಮಣ್ಮಱಿ(ಳಿ)** (ನಾ). ದೇಹವಿಕಾರದಿಂದಾಗುವ ಸಾವು. ~ಇಕೆ = ಭಯಂಕರವಾದ ಸಾವನ್ನು ಹೊಂದುವಿಕೆ.

**ಮತ** (ನಾ). ೧. ವಿಚಾರ; ಆಲೋಚನೆ. ೨. ಉದ್ದೇಶ; ಅಭಿಪ್ರಾಯ. ೩. ಒಪ್ಪಿಗೆ; ಅನುಮತಿ. ೪. ತತ್ತ್ವ; ಸಿದ್ಧಾಂತ. ೫. ಪಂಗಡ; ಪಂಥ. ೬. ಜಾತಿ. ೭. ಚುನಾವಣೆಯಲ್ಲಿ ಚೀಟಿಯ ಮೂಲಕ ಅಥವಾ ಬೇರೆ ವಿಧವಾಗಿ ತಮ್ಮ ಅಭಿಪ್ರಾಯವನ್ನು ತಿಳಿಸಿದುದು; ವೋಟು. ~ಅಂತರ = ಒಂದು ಪಂಥದಿಂದ ಮತ್ತೊಂದು ಪಂಥಕ್ಕೆ ಬದಲಾಯಿಸುವುದು. ~ಕಟ್ಟೆ = ಚುನಾವಣೆ ನಡೆಯುವ ಸ್ಥಳ. ~ಚೀಟಿ = ಚುನಾವಣೆಯಲ್ಲಿ ಅಭಿಪ್ರಾಯವನ್ನು ಬರೆದುಕೊಡುವ ಚೀಟಿ. ~ದಾನ = ಚುನಾವಣೆಯಲ್ಲಿ ಓಟು ಕೊಡುವುದು. ~ದಾರ = ಮತವನ್ನು ಚಲಾಯಿಸುವವನು. ~ಪ್ರದರ್ಶನ = ಜನರು ತಮ್ಮ ಅಭಿಪ್ರಾಯವನ್ನು ಮೆರವಣಿಗೆ ಮುಂತಾದುವುಗಳ ಮೂಲಕ ಪ್ರಕಟಿಸುವುದು.

**ಮತಂಗ** ೧. = ಮತಂಗಜ. ೨. ಮೋಡ; ಮುಗಿಲು. ೩. ಒಬ್ಬ ಋಷಿಯ ಹೆಸರು.

**ಮತಂಗಜ** (ನಾ). ೧. ಆನೆ; ಗಜ. ೨. ಒಬ್ಬ ರಾಕ್ಷಸನ ಹೆಸರು.

**ಮತಲಬು** (ನಾ). ಉದ್ದೇಶ; ಅಭಿಮತ.

**ಮತಾಪು** (ನಾ). ಒಂದು ಬಗೆಯ ಸುಡುಮದ್ದು.

**ಮತಿ** (ನಾ). ೧. ಬುದ್ಧಿ; ತಿಳಿವಳಿಕೆ. ೨. ಆಲೋಚನೆ. ೩. ಉದ್ದೇಶ; ಅಭಿಪ್ರಾಯ. ೪. ಉಪದೇಶ; ಬೋಧನೆ. ~ಕಿ(ಗಿ)ಡು = ಬುದ್ಧಿಹೀನನಾಗು; ಅವಿವೇಕಿಯಾಗು. ~ಕೆ(ಗೆ)ೞ್(ಳು) = ಬುದ್ಧಿವಾದವನ್ನು ಕೇಳು; ಕಿವಿಗೊಡು. ~ಭ್ರಮಣೆ = ಮನೋವಿಕಲ್ಪ; ಹುಚ್ಚು.

~ಹೀನ = ೧. ಬುದ್ಧಿಯಿಲ್ಲದಿರುವಿಕೆ. ೨. ದಡ್ಡ; ಬುದ್ಧಿಯಿಲ್ಲದವನು.

ಮತ್ಕುಣ (ನಾ). ತಿಗಣೆ.

ಮತ್ತ (ನಾ). ೧. ಸೊಕ್ಕಿದವನು. (ಗು). ೨. ಮತ್ತಿನಿಂದ ಕೂಡಿದ; ಅಮಲೇರಿದ. ೩. ವಿಷಯಾಭಿಲಾಷೆಯಿಂದ ಕೂಡಿದ; ಕಾಮಾತುರವುಳ್ಳ. ೪. ಸಂತೋಷದಿಂದ ಕೂಡಿದ. ೫. ಸೊಕ್ಕಿದ; ಗರ್ವದಿಂದ ಕೂಡಿದ. ~ಇಭ = ಮದಿಸಿದ ಆನೆ. ~ವಾರಣ = ೧. ಮದಿಸಿದ ಆನೆ. ೨. ಮನೆಯ ಮುಂದಿನ ಅಂಗಳ; ಕೈಸಾಲೆ.

ಮತ್ತಂ (ಅ). ೧. ಅಲ್ಲದೆ; ಇನ್ನೂ. ೨. ಪುನಃ; ಮತ್ತೆ.

ಮತ್ತಕಾಶಿನಿ (ನಾ). ಸುಂದರಿ; ಲಾವಣ್ಯವತಿ.

ಮತ್ತರ್(ರು) (ನಾ). ಭೂಮಿಯ ಒಂದು ಅಳತೆ ಅಥವಾ ಪ್ರಮಾಣ.

ಮತ್ತಿ (ನಾ). ೧. ಮಚ್ಚೆ. ೨. = ಮುತ್ತಿ.

ಮತ್ತು (ನಾ). ೧. ಅಮಲು; ಮಾದಕತೆ; ಮದ. (ಅ). ೨. = ಮತ್ತಂ.

ಮತ್ತೆ (ನಾ). ೧. ಮದಿಸಿದವಳು; ಉನ್ಮತ್ತೆ. (ಅ). ೨. = ಮತ್ತಂ.

ಮತ್ಸರ (ನಾ). ೧. ಮಾತ್ಸರ್ಯ; ಹೊಟ್ಟೆಕಿಚ್ಚು. ೨. ಹಗೆ; ದ್ವೇಷ. ೩. ಕೋಪ; ಸಿಟ್ಟು. ~ಇಸು = ೧. ಹೊಟ್ಟೆಕಿಚ್ಚುಪಡು. ೨. ದ್ವೇಷಿಸು. ~ಕೊ(ಗೊ)ಳ್(ಳ್ಳು) = ಮತ್ಸರಿಸು.

ಮತ್ಸ್ಯ (ನಾ). ೧. ಮೀನು. ೨. ವಿಷ್ಣುವಿನ ಹತ್ತು ಅವತಾರಗಳಲ್ಲಿ ಒಂದನೆಯದು. ೩. ಒಂದು ದೇಶದ ಹೆಸರು. ~ಧ್ವಜ = ಕಾಮ; ಮೀನಕೇತನ.

ಮಥನ (ನಾ). ೧. ಕಡೆಯುವುದು; ಮಥಿಸುವುದು. ೨. ಯಾವುದಾದರೊಂದು ವಿಷಯವನ್ನು ಕೂಲಂಕಷವಾಗಿ ಆಲೋಚನೆ ಮಾಡುವುದು. ೩. ಪುಡಿಮಾಡುವುದು. ೪. ನಾಶಮಾಡುವುದು. ೫. ತೊಂದರೆ; ಹಾನಿ. ೬. ಕಡೆಗೋಲು; ಮಂತು. ೭. ತಿಕ್ಕಾಟ; ಘರ್ಷಣೆ. ~ಇಸು=೧. ಕಡೆ; ಮಥಿಸು. ೨. ಒಂದು ವಿಷಯವನ್ನು ಕುರಿತು ವಿಚಾರ ಮಾಡು. ೩. ಜಗಳವಾಡು; ತಿಕ್ಕಾಡು.

ಮಥಿತ (ನಾ). ೧. ನೀರು ಬೆರಸದೆ ಕಡೆದ ಮಜ್ಜಿಗೆ. (ಗು). ೨. ಕಡೆಯಲ್ಪಟ್ಟ. ೩. ನಾಶಗೊಳಿಸಲ್ಪಟ್ಟ. ೪. ನೋಯಿಸಲ್ಪಟ್ಟ. ~ಅರ್ಥ = ಕೂಲಂಕಷವಾದ ಚರ್ಚೆಯಿಂದ ಸಿದ್ಧವಾದ ವಿಚಾರ; ತಾತ್ಪರ್ಯ.

ಮಥಿಸು ೧. = ಮಥನಿಸು. ೨. ಕೊಲ್ಲು; ಸಂಹರಿಸು.

ಮದ (ನಾ). ೧. ಮತ್ತು; ಅಮಲು. ೨. ಸೊಕ್ಕು; ಗರ್ವ. ೩. ಸಂತೋಷ; ಹಿಗ್ಗು. ೪. (ಆನೆಗೆ ಉಂಟಾಗುವ) ಕಾಮೋದ್ರೇಕ. ೫. ಆನೆಯ ಮದೋದಕ. ~ಅಂಧ = ಗರ್ವದಿಂದ ಕುರುಡಾಗಿರುವವನು; ವಿವೇಕವಿಲ್ಲದವನು. ~ಇಭ = ಸೊಕ್ಕಿದ ಆನೆ; ಮದಿಸಿದ ಆನೆ. ~ಇಸು = ೧. ಸೊಕ್ಕು; ಗರ್ವಿಸು. ೨. ಕೊಬ್ಬಿ ಬೆಳೆ; ಹುಲುಸಾಗಿ ಬೆಳೆ. ~ಉನ್ಮತ್ತ = ಮದವೇರಿದವನು; ಗರ್ವಿಷ್ಠ. ~ಏ(ವೇ)ಱು(ರು) = ೧. ಸೊಕ್ಕು; ಗರ್ವಿಸು. ೨. ಅಮಲೇರು; ಮತ್ತಿನಿಂದ ಕೂಡಿರು. ~(ಂ)ಕೆ(ಗೆ)ಡು = ಗರ್ವನಾಶವಾಗು. ~ಕರಿ = ಮದಿಸಿದ ಆನೆ. ~ಜಲ(ಳ) = ಆನೆಗೆ ಮದವುಂಟಾದಾಗ ಕುಂಭಸ್ಥಳದಿಂದ ಸುರಿಯುವ ದ್ರವ. ~ಪಟ್ಟಿಕೆ = ೧. ಆನೆಯ ಕಪೋಲತಲದಲ್ಲಿ ಮದಜಲ ಸುರಿಯುವುದರಿಂದ ಉಂಟಾಗುವ ಗೆರೆ, -ರೇಖೆ. ೨. ಆನೆಯ ಹಣೆಗೆ ಕಟ್ಟುವ ಒಂದು ಆಭರಣ.

~ಪ(ವ)ಟ್ಟೆ = ೧. ಪ್ರೀತಿಸೂಚಕವಾಗಿ ಕೆನ್ನೆಯ ಮೇಲೆ ಬರೆದುಕೊಳ್ಳುವ ಅಲಂಕಾರದ ರೇಖೆ. ೨. = ಮದಪಟ್ಟಿಕೆ. ~ವಾರಣ = ಮದಕರಿ.

ಮದಗ (ನಾ). ನೀರು ಹರಿಯಲು ಮಾಡಿರುವ ಕಾಲುವೆ; ತೂಬು.

ಮದಡ (ನಾ). ದಡ್ಡ ; ಮೂರ್ಖ.

ಮದಡು (ನಾ). ತಿಳಿಗೇಡಿತನ; ಮೌಢ್ಯ.

ಮದತ್ತು = ಮದ್ದತ್ತು.

ಮದನ (ನಾ). ೧. ವಿಷಯಾಸಕ್ತಿ ; ಕಾಮ. ೨. ಸೊಕ್ಕೇರಿದವನು ; ಮದೋನ್ಮತ್ತ. ೩. ಮನ್ಮಥ ; ಅನಂಗ. ೪. ಉಮ್ಮತ್ತದ ಗಿಡ. ~ಅರಿ = ಮನ್ಮಥನ ಹಗೆ ; ಶಿವ. ~ಕಲಹ = ಪ್ರಣಯಕಲಹ. ~ಕಲೆ(ಳೆ) = ಕಾಮಶಾಸ್ತ್ರ. ~ಕೇಲಿ(ಳಿ)=ರತಿಕ್ರೀಡೆ; ಸಂಭೋಗ. ~ಜ್ವರ = ವಿರಹಬಾಧೆಯಿಂದ ಉಂಟಾಗುವ ತಾಪ; ಕಾಮಜ್ವರ. ~ದಹನ = ಮನ್ಮಥನನ್ನು ಸುಟ್ಟವನು ; ಶಿವ. ~ಪಿತ=ವಿಷ್ಣು. ~ಸಖ = ವಸಂತ.

ಮದನಕೆಯ್ = ಮದನಕೈ.

ಮದನಕೈ (ನಾ). ೧. ಕಂಬದ ಬೋದಿಗೆಗೆ ಜೋಡಿಸಿರುವ ಅಲಂಕಾರಮಯವಾದ ಕೆತ್ತನೆಯಿಂದ ಕೂಡಿದ ಆಧಾರ, -ಊರೆ. ೨. = ಮದನಿಕೆ. ~ಬೊಂಬೆ = ಮದನಿಕೆ.

ಮದನಿ (ನಾ). ದುಂಡುಮಲ್ಲಿಗೆ.

ಮದನಿಕೆ (ನಾ). ದೇವಾಲಯ ಮುಂತಾದುವುಗಳ ಕಂಬಗಳ ಬೋದಿಗೆಯ ಮೇಲೆ ಕೆತ್ತಿರುವ ಸುಂದರವಿಗ್ರಹ.

ಮದರಂಗಿ (ನಾ). ಒಂದು ಜಾತಿಯ ಗಿಡ ಮತ್ತು ಅದರಿಂದ ಸಿದ್ಧಪಡಿಸುವ ಕೆಂಪು ಬಣ್ಣ ; ಗೋರಂಟಿ.

ಮದಲಿ(ಂ)ಗ = ಮದುವಣಿಗ.

ಮದವಣಿಗ = ಮದುವಣಿಗ.

ಮದವಳಿಗ = ಮದುವಣಿಗ.

ಮದವಳಿಗೆ (ನಾ). ಮದುವೆಯ ಹೆಣ್ಣು ; ವಧು.

ಮದಿಪು (ನಾ). ೧. ಬೆಲೆಕಟ್ಟುವುದು; ಮೌಲ್ಯಮಾಪನ. ೨. ಬೆಲೆ ; ಗೌರವ.

ಮದಿರೆ = ಮದ್ಯ.

ಮದಿಲ್(ಲು) (ನಾ). ಗೋಡೆ ; ಭಿತ್ತಿ.

ಮದಿವೆ = ಮದುವೆ.

ಮದುಮಗ = ಮದುವಣಿಗ.

ಮದುಮಗಳು = ಮದವಳಿಗೆ.

ಮದುಮನೆ (ನಾ). ಮದುವೆಯ ಮನೆ; ವಿವಾಹಗೃಹ.

ಮದುವಣಿಗ (ನಾ). ಮದುವೆಯ ಗಂಡು ; ವರ. ~ಇತ್ತಿ = ಮದವಳಿಗೆ.

ಮದುವಳಿಗ = ಮದುವಣಿಗ. ~ಇತ್ತಿ = ಮದವಳಿಗೆ.

ಮದುವೆ (ನಾ). ವಿವಾಹ ; ಲಗ್ನ. ~ನಿಲ್ = ವಿವಾಹವಾಗು. ~ಮಾಡು=೧. ವಿವಾಹ ಮಾಡು. ೨. ಶಿಕ್ಷಿಸು ; ದಂಡಿಸು.

ಮದೆವಳ್ = ಮದವಳಿಗೆ.

ಮದ್ದು (ನಾ). ೧. ನೀರುಕಾಗೆ. ೨. ಒಂದು ಜಾತಿಯ ಮೀನು.

ಮದ್ದತ್ತು (ನಾ). ನೆರವು ; ಸಹಾಯ.

ಮದ್ದಲೆ(ಳೆ) = ಮರ್ದಲೆ. ~ಇಗ = ಮದ್ದಳೆಯನ್ನು ಬಾರಿಸುವವನು.

ಮದ್ದಾನೆ (ನಾ). ಮತ್ತಗಜ; ಮದಿಸಿದ ಆನೆ.

ಮದ್ದು ೧. = ಮರ್ದು. ೨. ಬಂದೂಕಿಗೆ ತುಂಬುವ ಚರೆ ಮುಂತಾದ ಸ್ಫೋಟಕ ವಸ್ತು. ~ಅರೆ = ೧. ಔಷಧವನ್ನು ಪುಡಿ ಮಾಡು, -ತೇಯು. ೨. ಕೈಮುಸಕವನ್ನು ಅರೆ. ೩. ಪ್ರತಿಬಂಧವನ್ನು ಮಾಡು. ~ಇಕ್ಕು = ವಿಷವನ್ನು ಹಾಕು ; ಕೈಮುಸಕವನ್ನು ಹಾಕು.

ಮದ್ದುಗುಣಿಕೆ = ಮರ್ದುಗುಣಿಕೆ.

**ಮದ್ಯ** (ನಾ). ಹೆಂಡ ಮುಂತಾದ ಮಾದಕ ಪಾನೀಯ. ~ಪಾನ = ಹೆಂಡ ಮುಂತಾದುದನ್ನು ಕುಡಿಯುವಿಕೆ.

**ಮದ್ಯಪಿ** (ನಾ). ಹೆಂಡ ಕುಡಿಯುವವನು; ಕುಡಿಕ.

**ಮಧು** (ನಾ). ೧. ಸಿಹಿಯಾದುದು; ಇನಿದು. ೨. ಜೇನುತುಪ್ಪ. ೩. ಅಮೃತ. ೪. ಮಕರಂದ; ಬಂಡು. ೫. ಮಾದಕ ಪಾನೀಯ. ೬. ವಸಂತಋತು. ೭. ಚೈತ್ರಮಾಸ. ೮. ಒಬ್ಬ ರಾಕ್ಷಸನ ಹೆಸರು. ~ಚಂದ್ರ = ನೂತನದಂಪತಿಗಳು ಕೈಗೊಳ್ಳುವ ವಿಹಾರಯಾತ್ರೆ. ~ದೂತಿ = ವಸಂತಕಾಲದ ಬರವನ್ನು ಸೂಚಿಸುವ ಒಂದು ಜಾತಿಯ ಬಳ್ಳಿ ಮತ್ತು ಅದರ ಹೂವು. ~ಪಾನ = ಕಳ್ಳನ್ನು ಕುಡಿಯುವುದು; ಮದ್ಯಪಾನ. ~ಮಾಸ = ಚೈತ್ರಮಾಸ. ~ಮಿತ್ರ = ೧. ತುಂಬಿ. ೨. ವಸಂತ. ೩. ಮನ್ಮಥ. ೪. ಬಲಭದ್ರ. ೫. ಶಿವ. ~ವ್ರತ = ತುಂಬಿ; ಭ್ರಮರ. ~ಸೂದನ = ಮಧುವೆಂಬ ರಾಕ್ಷಸನನ್ನು ಕೊಂದವನು; ವಿಷ್ಣು.

**ಮಧುಕರ** (ನಾ). ತುಂಬಿ; ಭ್ರಮರ.

**ಮಧುಕರಿ** (ನಾ). ೧. ಹೆಣ್ಣುತುಂಬಿ. ೨. ಕುಷ್ಠರೋಗ. ~ವೃತ್ತಿ = ಭಿಕ್ಷಾನ್ನ ಎತ್ತುವುದು; ಕಂತೆಭಿಕ್ಷೆ.

**ಮಧುಪ** ೧. = ಮಧುಕರ. ೨. ಮದ್ಯಪಾನ ಮಾಡುವವನು; ಕುಡಿಕ.

**ಮಧುಪರ್ಕ** (ನಾ). ೧. ಮೊಸರು, ತುಪ್ಪ, ನೀರು, ಜೇನುತುಪ್ಪ ಮತ್ತು ಸಕ್ಕರೆ ಇವುಗಳಿಂದಾದ ಮಿಶ್ರಣ. ೨. ಅತಿಥಿಗಳನ್ನು ಬರಮಾಡಿಕೊಳ್ಳುವ ಸಮಾರಂಭ ಮತ್ತು ಆಗ ಅವರಿಗೆ ಕೊಡುವ ಅಂತಹ ಮಿಶ್ರಣ.

**ಮಧುರ** (ನಾ). ೧. ಸಿಹಿಯಾದುದು. ೨. ಕಾವ್ಯದ ಹತ್ತು ಗುಣಗಳಲ್ಲಿ ಒಂದು. ೩. ಒಂದು ಜಾತಿಯ ಕಬ್ಬು. (ಗು). ೪. ಸಿಹಿಯಾದ; ಇನಿದಾದ. ೫. ಇಂಪಾದ; ಕೇಳಲು ಹಿತಕರವಾದ. ~ಆಲಾ(ಳಾ)ಪ = ೧. ಇಂಪಾದ ಮಾತು. ೨. ಇಂಪಾಗಿ ಮಾತನಾಡುವವನು.

**ಮಧೂಕ** (ನಾ). ಒಂದು ಜಾತಿಯ ಮರ.

**ಮಧ್ಯ** (ನಾ). ೧. ನಡುವಣ ಭಾಗ, -ಸ್ಥಳ. ೨. ಸೊಂಟ; ಕಟಿ. (ಗು). ೩. ನಡುವಿನ; ಮಧ್ಯೆ ಇರುವ. ೪. ಮಧ್ಯಮ ದರ್ಜೆಯ; ನಡುತರದ. ~ಅಂತರ = ನಡುವೆ; ನಡುವಿನ ಕಾಲ. ~ಅಹ್ನ = ನಡುಹಗಲು.

**ಮಧ್ಯಮ** (ನಾ). ೧. ಸೊಂಟ; ಕಟಿ. ೨. ಸಾಧಾರಣವಾದುದು; ಸಾಮಾನ್ಯವಾದುದು. ೩. ನಡುವೆ ಇರುವವನು; ನಡುವಿನವನು. ೪. ಪಾಂಡವರಲ್ಲಿ ನಡುವಿನವನು; ಭೀಮ. (ಗು). ೫. ಮಧ್ಯದ; ನಡುವಿನ. ೬. ಸಾಧಾರಣದರ್ಜೆಯ; ನಡುತರದ. ~ಪುರುಷ = ವ್ಯಾಕರಣದಲ್ಲಿಯ ಪುರುಷವಾಚಕ ಸರ್ವನಾಮಗಳಲ್ಲಿ ಒಂದು.

**ಮಧ್ಯಮೆ** (ನಾ). ೧. ಪ್ರಾಯಕ್ಕೆ ಬಂದ ಹುಡುಗಿ; ಮೈನೆರೆದವಳು. ೨. ನಡುವಿನ ಬೆರಳು.

**ಮಧ್ಯಸ್ತ** (ನಾ). ೧. ಯಾವ ಪಕ್ಷಕ್ಕೂ ಸೇರದವನು. (ಗು). ೨. ಮಧ್ಯದಲ್ಲಿರುವ; ನಡುವಿನ. ೩. ಮಂದವಾದ; ಕ್ಷೀಣವಾದ. ~ಆ(ವಾ)ಗು = ೧. ಯಾವ ಕಡೆಗೂ ಸೇರದಿರು. ೨. ಮಂದವಾಗು; ಕ್ಷೀಣವಾಗು. ~ಇಕೆ = ಎರಡು ಪಕ್ಷಗಳ ಅಥವಾ ವ್ಯಕ್ತಿಗಳ ನಡುವೆ ಸಂಧಾನ ನಡಸುವುದು.

**ಮಧ್ಯಸ್ಥ** = ಮಧ್ಯಸ್ತ.

**ಮಧ್ಯೆ** (ನಾ). ೧. ಪ್ರಾಯಕ್ಕೆ ಬಂದ ಹುಡುಗಿ; ಮಧ್ಯಮೆ. ೨. ನಾಯಿಕೆಯರಲ್ಲಿ ಒಂದು ಪ್ರಕಾರ. (ಅ). ೩. ನಡುವೆ; ಮಧ್ಯದಲ್ಲಿ.

ಮನ=ಮನಸ್ಸು. ~ಅ(ವ)ರಿಕೆ = ತಿಳಿವಳಿಕೆ; ಅರಿವು. ~ಇ(ವಿ)ಳಿ =೧. ಧೈರ್ಯಗುಂದು. ೨. ಉತ್ಸಾಹವನ್ನು ಕಳೆದುಕೊಳ್ಳು. ~ಊ(ವೂ)ಱು(ರು)=ಮನಸ್ಸು ನೆಲಸು. ~(ಂ)ಕಾ(ಗಾ)ಣ್(ಣು)=ತಿಳಿ; ಗ್ರಹಿಸು. ~(ಂ)ಕಿ(ಗಿ)ಡು = ಮನಸ್ಸು ಕೆಟ್ಟು ಹೋಗು; ಮನಸ್ಸಿನ ಸ್ಥಿತಿ ಹಾಳಾಗು. ~(ಂ)ಕು(ಗು)ಡು = ಗಮನಿಸು; ಚಿತ್ತವಿಡು. ~(ಂ)ಕೊ(ಗೊ)ಳ್ ೧. ಮನಸ್ಸನ್ನು ಆಕರ್ಷಿಸು. ೨. ಮನಸ್ಸಿಗೆ ಬರು; ಇಷ್ಟವಾಗು. ~ಕತ = ಮನಸ್ಸಿನ ದುಃಖ; ಮನಃಕ್ಷತ. ~ಕು(ಗು)ಂದು = ಮನವಿಳಿ. ~ತ(ದ)ಟ್ಟು = ೧. ಮನಸ್ಸಿಗೆ ನಾಟು; ಮನೋಗತವಾಗು. ೨. ಮನಸ್ಸಿಗೆ ನಾಟುವುದು; ಚೆನ್ನಾಗಿ ತಿಳಿಯುವುದು. ~ಮುಟ್ಟು = ಮನಸ್ಸಿಗೆ ತಟ್ಟು, -ನಾಟು. ~ಮುಱಿ(ರಿ) = ೧. ಮನಸ್ಸು ಒಡೆದು ಹೋಗು; ಆಶಾಭಂಗವಾಗು. ೨. ದ್ವೇಷವುಂಟಾಗು. ~ಸೋಲ್(ಲು) = ಆಕರ್ಷಣೆಗೊಳಗಾಗು; ಪರವಶವಾಗು.

ಮನಃಪೂರ್ವಕ (ಅ). ಮನಸ್ಸು ಪೂರ್ತಿಯಾಗಿ; ಉದ್ದೇಶಪೂರ್ವಕವಾಗಿ.

ಮನನ (ನಾ). ವಿಚಾರ; ಚಿಂತನೆ.

ಮನವಿ (ನಾ). ೧. ಬೇಡಿಕೆ; ಕೇಳಿಕೆ. ೨. ಲಿಖಿತ ಮೂಲಕ ಮಾಡಿಕೊಳ್ಳುವ ಅರಿಕೆ; ಅರ್ಜಿ.

ಮನಶ್ಶಾಸ್ತ್ರ (ನಾ). ಮನಸ್ಸಿನ ವ್ಯಾಪಾರ ಮತ್ತು ಅವುಗಳ ಸ್ವರೂಪವನ್ನು ತಿಳಿಸುವ ಶಾಸ್ತ್ರ; ಮನೋವಿಜ್ಞಾನ.

ಮನಸಬದಾರ (ನಾ). ಅಶ್ವದಳದಲ್ಲಿ ಒಬ್ಬ ಅಧಿಕಾರಿ.

ಮನಸಿಜ (ನಾ). ಮನಸ್ಸಿನಲ್ಲಿ ಹುಟ್ಟಿದವನು; ಕಾಮ; ಮನ್ಮಥ. ~ಅಂತಕ = ಶಿವ. ~ಅರಿ = ಕಾಮನ ಶತ್ರು; ಶಿವ. ~ಆಪ್ತ = ಕಾಮನ ಗೆಳೆಯ; ವಸಂತ.

ಮನಸು = ಮನಸ್ಸು. ~ಕರಗು = ಮರುಳುಗೊಳ್ಳು; ಕನಿಕರಿಸು. ~ಕೂಡು= ಪರಸ್ಪರ ಅಭಿಪ್ರಾಯಗಳು ಹೊಂದಿಕೆಯಾಗು.

ಮನಸ್ತಾಪ (ನಾ). ೧. ದ್ವೇಷ; ಹಗೆತನ. ೨. ತಳಮಳ; ವ್ಯಥೆ. ೩. ಕೋಪ; ಮುನಿಸು. ೪. ವಿರಸ; ವೈಮನಸ್ಯ.

ಮನಸ್ವಿ (ನಾ). ೧. ಜಾಣ; ವಿದ್ವಾಂಸ. (ಗು). ೨. ಮನಸ್ಸಿಗೆ ಬಂದಂತೆ ನಡೆಯುವ; ಸ್ವೇಚ್ಛಾಚಾರದಿಂದ ಕೂಡಿದ.

ಮನಸ್ಸಾಕ್ಷಿ (ನಾ). ಅಂತರಂಗದ ಪ್ರೇರಣೆ; ಆತ್ಮಸಾಕ್ಷಿ.

ಮನಸ್ಸು (ನಾ). ೧. ಚಿತ್ತ; ಬುದ್ಧಿ. ೨. ಆಸೆ; ಆಕಾಂಕ್ಷೆ. ೩. ಗಮನ. ೪. ಒಲವು. ~ಕೊ(ಗೊ)ಡು=ಗಮನವಿಡು; ಲಕ್ಷಿಸು. ~ಮಾಡು = ಸಾಧಿಸು; ಪಟ್ಟುಹಿಡಿ.

ಮನಾಯಿ (ನಾ). ಅಡ್ಡಿ; ಪ್ರತಿಬಂಧ.

ಮನೀಷಿ (ನಾ). ಪಂಡಿತ; ವಿದ್ವಾಂಸ.

ಮನೀಷೆ (ನಾ). ೧. ಆಲೋಚನೆ; ಉದ್ದೇಶ. ೨. ತಿಳಿವಳಿಕೆ; ಅರಿವು.

ಮನು (ನಾ). ೧. ಮಂತ್ರ. ೨. ಮನುಷ್ಯಕುಲದ ಮೂಲಪುರುಷ. ೩. ಸ್ವಯಂಭು, ಸ್ವಾರೋಚಿತ, ಉತ್ತಮ, ತಾಮಸ, ರೈವತ, ಚಾಕ್ಷುಷ, ವೈವಸ್ವತ, ಸೂರ್ಯಸಾವರ್ಣಿ, ದಕ್ಷಸಾವರ್ಣಿ, ಬ್ರಹ್ಮಸಾವರ್ಣಿ, ಧರ್ಮಸಾವರ್ಣಿ, ರುದ್ರಸಾವರ್ಣಿ, ದೇವಸಾವರ್ಣಿ, ಮತ್ತು ಇಂದ್ರಸಾವರ್ಣಿ ಎಂಬ ಹದಿನಾಲ್ಕು ಮನುಗಳಲ್ಲಿ ಒಬ್ಬ; ಬ್ರಹ್ಮನ ಮಾನಸಪುತ್ರರಲ್ಲಿ ಒಬ್ಬ. ~ಕುಲ = ಮನುವಿನ ಸಂತತಿಗೆ ಸೇರಿದವರು; ಮನುಷ್ಯಜಾತಿ. ~ಸ್ಮೃತಿ = ಮನುವಿನಿಂದ ಬರೆಯಲ್ಪಟ್ಟ ಧರ್ಮಶಾಸ್ತ್ರ.

ಮನುಜ (ನಾ). ಮನುಷ್ಯ; ಮಾನವ.

ಮನುಜೆ (ನಾ). ಹೆಂಗಸು.

ಮನುಮಥ (ನಾ). ಮನ್ಮಥ.

ಮನುಷ್ಯ = ಮನುಜ.

ಮನೆ (ನಾ). ೧. ಆಶ್ರಯಸ್ಥಾನ; ಬೀಡು; ವಾಸಸ್ಥಳ. ೨. ಕುಲ; ಮನೆತನ. ~ಅ(ಯು)ಳಿಯ = ಅತ್ತೆಮಾವಂದಿರ ಮನೆಯಲ್ಲಿಯೇ ನೆಲಸಿರುವ ಅಳಿಯ. ~ಕೆ(ಗೆ)ಲಸ = ಮನೆಯಲ್ಲಿ ಮಾಡುವ ಕೆಲಸ; ಗೃಹಕೃತ್ಯ. ~ತನ = ೧. ಕುಲ; ವಂಶ. ೨. = ಮನೆಗೆಲಸ. ~ತ(ದ)ಪ್ಪು = ನೆಲೆಯಿಲ್ಲದಾಗು; ಆಶ್ರಯವನ್ನು ಕಳೆದುಕೊಳ್ಳು. ~ತು(ದು)ಂಬಿಸು = ವಧುವನ್ನು ಮನೆಗೆ ಬರಮಾಡಿಕೊಳ್ಳು; ಗೃಹಪ್ರವೇಶ ಮಾಡಿಸು. ~ತೊತ್ತು(ಳ್ತು,ೞ್ತು) = ಮನೆಗೆಲಸ ಮಾಡುವ ಆಳು. ~ದೇವರು = ಒಂದು ವಂಶದವರು ಪರಂಪರೆಯಾಗಿ ಪೂಜಿಸುವ ದೈವ; ಕುಲದೇವರು. ~ದೈವ = ಮನೆದೇವರು. ~ಪೆ(ವೆ)ಗ್ಗಡೆ = ಅರಮನೆ ಮುಂತಾದ ಕಡೆಗಳಲ್ಲಿ ಒಳಾಡಳಿತವನ್ನು ನೋಡಿಕೊಳ್ಳುವ ಅಧಿಕಾರಿ. ~ಪೆ(ವೆ)ರ್ಗಡೆ = ಮನೆವೆಗ್ಗಡೆ. ~ಬಾ(ವಾ)ೞ್(ಳ್,ಳು) = ಗೃಹಜೀವನ; ಸಂಸಾರ. ~ಬಾ(ವಾ)ೞ್ತೆ(ಳ್ತೆ) = ಮನೆವಾರ್ತೆ. ~ಮಾಡು = ೧. ಸಂಸಾರವನ್ನು ಹೂಡು. ೨. ನೆಲಸು; ವಾಸಿಸು. ~ಮಾತು = ೧. ಎಲ್ಲರಿಗೂ ತಿಳಿದ ವಿಷಯ. ೨. ಮಾತೃಭಾಷೆ; ತಾಯಿನುಡಿ. ~ಮುರುಕ = ಸಂಸಾರವನ್ನು ನಾಶಮಾಡುವವನು, -ಒಡೆಯುವವನು. ~ವಾರ್ತೆ = ಮನೆಯ ಕೆಲಸ; ಗೃಹಕೃತ್ಯ. ~ಹಾಳ = ಸಂಸಾರವನ್ನು ಕೆಡಿಸುವವನು, -ಹಾಳುಮಾಡುವವನು.

ಮನೆತನಸ್ಥ (ನಾ). ಗೃಹಸ್ಥ; ಕುಲೀನ.

ಮನೆಪಾಳ್ತನ (ನಾ). ಅಳಿಯನನ್ನು ಮನೆಯಲ್ಲಿಯೇ ಇಟ್ಟುಕೊಳ್ಳುವುದು.

ಮನೋಗತ (ನಾ). ಅಭಿಪ್ರಾಯ; ಉದ್ದೇಶ.

ಮನೋಗತಿ ೧. = ಮನೋಗತ. ೨. ಮನಸ್ಸಿನ ವೇಗ.

ಮನೋಗದ (ನಾ). ಮಾನಸಿಕವಾದ ರೋಗ; ಚಿಂತೆ.

ಮನೋಗ್ಲಾನಿ (ನಾ). ೧. ಮನಸ್ಸಿನ ಆಯಾಸ, -ದೌರ್ಬಲ್ಯ. ೨. ಮನೋವ್ಯಥೆ.

ಮನೋಜ = ಮನಸಿಜ.

ಮನೋಜಾಡ್ಯ (ನಾ). ಮನಸ್ಸಿನ ಆಲಸ್ಯ.

ಮನೋಜ್ಞ (ನಾ). ೧. ಪಂಡಿತ; ಜ್ಞಾನಿ. (ಗು). ೨. ಸುಂದರವಾದ; ಚೆಲುವಾದ. ೩. ಹೃದಯಂಗಮವಾದ.

ಮನೋಧರ್ಮ (ನಾ). ಮನಸ್ಸಿನ ರೀತಿ, -ಬಗೆ.

ಮನೋನಿಗ್ರಹ (ನಾ). ಮನಸ್ಸನ್ನು ಹತೋಟಿಯಲ್ಲಿಟ್ಟುಕೊಳ್ಳುವುದು.

ಮನೋಬಲ (ನಾ). ಮನಸ್ಸಿನ ಕೆಚ್ಚು; ಆತ್ಮಶಕ್ತಿ.

ಮನೋಭವ = ಮನಸಿಜ.

ಮನೋರಂಜನ (ನಾ). ಮನಸ್ಸನ್ನು ಸಂತೋಷಗೊಳಿಸುವುದು.

ಮನೋರಂಜನೆ = ಮನೋರಂಜನ.

ಮನೋರಥ (ನಾ). ೧. ಮನಸ್ಸಿನ ಬಯಕೆ, -ಇಚ್ಛೆ. ೨. ಬಯಸಿದುದು.

ಮನೋರಮ (ಗು). ಸುಂದರವಾದ; ಚೆಲುವಾದ.

ಮನೋರುಜೆ = ಮನೋಗದ.

ಮನೋರೋಗ = ಮನೋಗದ.

ಮನೋವಲ್ಲಭ (ನಾ). ಪ್ರೀತಿಪಾತ್ರನಾದವನು.

ಮನೋವಲ್ಲಭೆ (ನಾ). ಪ್ರೀತಿಪಾತ್ರಳಾದವಳು.

ಮನೋವಿಕಾರ (ನಾ). ಚಿತ್ತವಿಕಲ್ಪ; ಬುದ್ಧಿಭ್ರಮಣೆ.

ಮನೋವಿಜ್ಞಾನ = ಮನಶ್ಶಾಸ್ತ್ರ.

ಮನೋವಿಶ್ಲೇಷಣ (ನಾ). ಅಂತರಂಗವನ್ನು ವಿಭಜಿಸಿ ನೋಡುವುದು.

ಮನೋವೃತ್ತಿ = ಮನೋಧರ್ಮ.
ಮನೋವೇಧಕ (ನಾ). ೧. ಮನಸ್ಸಿಗೆ ನಾಟುವುದು. (ಗು). ೨. ಮನಸ್ಸಿಗೆ ನೋವು ಉಂಟುಮಾಡುವ; ಮನನಮುಟ್ಟುವ.
ಮನೋಹರ (ನಾ). ೧. ಸುಂದರನಾದವನು; ಚೆಲುವ. (ಗು). ೨. ಸೊಗಸಾದ; ರಮಣೀಯವಾದ. ೩. ಚೇತೋಹಾರಿಯಾದ.
ಮನೋಹರಿ (ನಾ). ಸುಂದರಿ; ಚೆಲುವೆ.
ಮನೋಹಾರಿ (ಗು). ಮನಸ್ಸನ್ನು ಸೆಳೆಯುವ; ಸಂತೋಷಪಡಿಸುವ.
ಮನ್ನಣೆ (ನಾ). ಮರ್ಯಾದೆ; ಗೌರವ. ~ಕಾಜ(ರ) = ೧. ಗೌರವಕ್ಕೆ ಪಾತ್ರನಾದವನು; ಗೌರವಾರ್ಹ. ೨. ಗೌರವವನ್ನು ತೋರಿಸುವವನು. ~ಪ(ವ)ಡೆ = ಗೌರವವನ್ನು ಹೊಂದು.
ಮನ್ನಾ (ನಾ). ಅಡ್ಡಿ; ಪ್ರತಿಬಂಧ. ~ಮಾಡು = ತಡೆಹಿಡಿ; ಪ್ರತಿಬಂಧಿಸು.
ಮನ್ನಿಸು (ಕ್ರಿ). ೧. ಗೌರವಿಸು; ಮರ್ಯಾದೆ ಮಾಡು. ೨. ಆರಿಸು; ಶಮನಗೊಳಿಸು. ೩. ತಪ್ಪನ್ನು ಎಣಿಕೆಗೆ ತೆಗೆದುಕೊಳ್ಳದಿರು; ಕ್ಷಮಿಸು.
ಮನ್ನೆಯ (ನಾ). ೧. ಗೌರವಕ್ಕೆ ಪಾತ್ರನಾದವನು; ಮನ್ನಣೆಗೆ ಯೋಗ್ಯನಾದವನು; ಮಾನ್ಯ. ೨. ನಾಯಕ; ಮುಖಂಡ.
ಮನ್ಮಥ (ನಾ). ೧. ಕಾಮ; ಅನಂಗ. ೨. ಅರುವತ್ತು ಸಂವತ್ಸರಗಳಲ್ಲಿ ಒಂದು.
ಮನ್ಯು (ನಾ). ೧. ಕೋಪ; ಸಿಟ್ಟು. ೨. ದುಃಖ; ಅಳಲು.
ಮನ್ವಂತರ (ನಾ). ೧. ಒಬ್ಬ ಮನುವಿನ ಕಾಲಾವಧಿ. ೨. ಪರಿವರ್ತನೆಯ ಕಾಲ; ಹೊಸಯುಗ.
ಮಬ್ಬು ೧.=ಮಬ್ಬು. ೨. ನಸುಗತ್ತಲೆ. ೩. ದಡ್ಡತನ; ಮೌಢ್ಯ. ~ಇಗ =೧. ಮಂಕು ಕವಿದವನು. ೨. ರಾಕ್ಷಸ. ~ಕ(ಗ)ಣ್ಣು = ಮಂಜುಗಣ್ಣು; ದೃಷ್ಟಿಪಾಟವವಿಲ್ಲದ ಕಣ್ಣು. ~ಕ(ಗ)ವಿ = ೧. ಮಂಕು ಆವರಿಸು. ೨. ಕತ್ತಲೆಯಾವರಿಸು. ~ಹರಿ = ೧. ಬೆಳಗಾಗು; ಬೆಳಕುಹರಿ. ೨. ಬುದ್ಧಿ ಬರು; ಮಂಕನ್ನು ಕಳೆದುಕೊಳ್ಳು.
ಮಮಕಾರ (ನಾ). ೧. ಎಲ್ಲವೂ ನನ್ನದೆಂಬ ಭಾವನೆ; ಸ್ವಾರ್ಥ. ೨. ಅಹಂಕಾರ. ೩. ಮೋಹ; ಪ್ರೀತಿ.
ಮಮಟಿ (ನಾ). ವ್ಯವಸಾಯದ ಒಂದು ಉಪಕರಣ; ಗುದ್ದಲಿ.
ಮಮತೆ = ಮಮಕಾರ.
ಮಮ್ಮು = ಮೊಮ್ಮು.
ಮಮ್ಮಲ (ನಾ). ಒಂದು ಅನುಕರಣ ಧ್ವನಿ. ~ಮಱು(ರು)ಗು=ಅತಿಯಾಗಿ ದುಃಖಿಸು; ಕೊರಗು.
ಮಮ್ಮಟಿ(ಳಿ) = ಮುಮ್ಮಟಿ.
ಮಯ್ = ಮೆಯ್.
ಮಯ (ನಾ). ೧. ಒಂದು ಜಾತಿಯ ಪಕ್ಷಿ. ೨. ಒಬ್ಬ ರಾಕ್ಷಸನ ಹೆಸರು; ರಾಕ್ಷಸರ ಶಿಲ್ಪಿ. ೩. ಒಂಟೆ. ೪. ಕುದುರೆ. (ಪ್ರ). ೫. ತುಂಬಿದ, ವ್ಯಾಪ್ತವಾದ ಎಂಬ ಅರ್ಥವನ್ನು ಕೊಡುವ ಪ್ರತ್ಯಯ.
ಮಯಣ (ನಾ). ೧. ಅಂಟುವ ಗುಣವುಳ್ಳ ಒಂದು ದ್ರವ್ಯ; ಮೇಣ. ೨. ಮನ್ಮಥ. ೩. ವಸಂತಕಾಲ. ೪. ಒಂದು ಜಾತಿಯ ಪಕ್ಷಿ.
ಮಯೂಖ (ನಾ). ೧. ಕೀಲು; ಗೂಟ. ೨. ಕಾಂತಿ; ಹೊಳಪು. ೩. ಕಿರಣ; ಕದಿರು.
ಮಯೂರ (ನಾ). ೧. ನವಿಲು. ೨. ದೇವತೆಗಳಲ್ಲಿ ಒಂದು ಪಂಗಡ. ೩. ಒಂದು ಜಾತಿಯ ಹೂವು. ~ಧ್ವಜ =ಕಾರ್ತಿಕೇಯ.
ಮಯೂರಕ (ನಾ). ೧. ನವಿಲು. ೨. ಒಂದು ಜಾತಿಯ ಹೂವು. ೩. ಮೈಲುತುತ್ಥ. ೪. ಒಂದು ಜಾತಿಯ ಗಿಡ.

ಮಯ್ದುನ (ನಾ). ೧. ಗಂಡನ ಅಥವಾ ಹೆಂಡತಿಯ ತಮ್ಮ. ೨. ತಂಗಿಯ ಗಂಡ.

ಮಯ್ಮೆ = ಮಹಿಮೆ.

ಮರ (ನಾ). ೧. ವೃಕ್ಷ. ೨. (ಬಡಗಿ ಕೆಲಸ ಮುಂತಾದುವಕ್ಕೆ ಉಪಯೋಗಿಸುವ) ಮರದ ತುಂಡು; ಚೌಬೀನೆ. ೩. ಒರಟು; ಬಿರುಸು. ~ಕ(ಗ)ಟ್ಟು = ೧. ಜೋಮು ಹಿಡಿ; ಜಡವಾಗು. ೨. ಈಚಲು, ತಾಳೆ ಮೊದಲಾದ ಮರಗಳಿಂದ ಹೆಂಡ ಇಳಿಸಲು ಮಡಕೆಯನ್ನು ಕಟ್ಟು. ೩. ಅಲವಾಲ; ಪಾತಿ. ~ಕ(ಗ)ಬ್ಬು = ೧. ಒಂದು ಜಾತಿಯ ಸುವಾಸನೆಯ ಹುಲ್ಲು. ೨. ಬಿರುಸಾದ ಕಬ್ಬು. ~ಕುಟಿಕ(ಗ) = ಮರವನ್ನು ಕೊರೆಯುವ ಒಂದು ಜಾತಿಯ ಪಕ್ಷಿ. ~ಕೆ(ಗೆ)ಲಸ = ಮರದಿಂದ ಸಾಮಾನುಗಳನ್ನು ತಯಾರಿಸುವಿಕೆ; ಬಡಗಿಯ ಕೆಲಸ. ~ಕೊ(ಗೊ)ೞಡು = ಮರದ ರೆಂಬೆ, -ಕೊಂಬೆ. ~ಕೋತಿ = ಮರಗೆರಸೆ. ~ಗೆಣಸು = ಗೆಣಸಿನಲ್ಲಿ ಒಂದು ಬಗೆ. ~ತಾ(ದಾ)ವರೆ = ಒಂದು ಜಾತಿಯ ಗಿಡ; ಬೆಟ್ಟದಾವರೆ. ~ತಿ(ದಿ)ಗುಡು = ಮರದ ತೊಗಟೆ, -ಸಿಪ್ಪೆ. ~ತು(ದು)ಱು(ರು)ಗಲ್ = ಮರಗಳ ಗುಂಪು; ತೋಪು. ~ಪ(ವ)ಡು = ೧. ಎಚ್ಚರತಪ್ಪು; ಮೈಮರೆ. ೨. = ಮಱಪಡು. ~ಪಾ(ವಾ)ವು = ಮರದಲ್ಲಿ ವಾಸಿಸುವ ಹಾವು. ~ಬೆ(ವೆ)ಸ = ಮರಗೆಲಸ. ~ಮಾ(ವಾ)ನಿಸ = ಯಾವ ವಿಧವಾದ ಭಾವನೆಯೂ ಇಲ್ಲದವನು; ಮರದಂತೆ ಜಡವಾಗಿರುವವನು. ~ಮುಟ್ಟು = ಮರದ ಸಾಮಾನು. ~ಮೊಗ = ಮರದಿಂದ ಮಾಡಿದ ಮುಖವಾಡ.

ಮರಂದ (ನಾ). ಜೇನು; ಮಕರಂದ.

ಮರಕತ (ನಾ). ನವರತ್ನಗಳಲ್ಲಿ ಒಂದು; ಪಚ್ಚೆ.

ಮರಕಾಲ್(ಲು) (ನಾ). ೧. ಧಾನ್ಯದ ಒಂದು ಅಳತೆ. ೨. ಮರದಿಂದ ಮಾಡಿದ ಕಾಲು.

ಮರಗೂಟ(ಳ) (ನಾ). ಮರವನ್ನೇ ಆಹಾರವಾಗಿ ಉಳ್ಳವನು; ಅಗ್ನಿ.

ಮರಗೆ (ನಾ). ಮರದಲ್ಲಿ ಮಾಡಿದ ಅಗಲ ಬಾಯಿಯ ಪಾತ್ರೆ.

ಮರಗೆರಸೆ (ನಾ). ಮರಕೋತಿಯಾಟ; ಗಿಡಮಂಗನ ಆಟ.

ಮರಗೊಡಲೆ (ನಾ). ಒಂದು ಜಾತಿಯ ಪಕ್ಷಿ.

ಮರಚು (ಕ್ರಿ). ಹಿಂತಿರುಗಿಸು; ಹಿಂದೆ ಹೋಗುವಂತೆ ಮಾಡು.

ಮರಣ (ನಾ). ಸಾವು; ಅಳಿವು. ~ಅತೀತ = ೧. ದೇವತೆ. ೨. ಸಾವನ್ನು ನಿವಾರಿಸಿದ, -ಜಯಿಸಿದ. ~ದಂಡನೆ = ಗಲ್ಲಿಗೆ ಹಾಕುವ ಶಿಕ್ಷೆ; ಫಾಸಿ. ~ಶಾಸನ = ಸಾಯುವ ಕಾಲದಲ್ಲಿ ಆಸ್ತಿಯ ಹಂಚಿಕೆಯ ಬಗ್ಗೆ ಬರೆದಿಡುವ ಪತ್ರ; ಮೃತ್ಯುಪತ್ರ; ಉಯಿಲು. ~ಸಂಕಟ = ಸಾಯುವ ಕಾಲದಲ್ಲಿ ಉಂಟಾಗುವ ತಳಮಳ.

ಮರಲ್(ಲು) (ಕ್ರಿ). ೧. ಹಿಂತಿರುಗಿ ಬರು; ವಾಪಸ್ಸು ಬರು. ೨. = ಮಲರ್.

ಮರಲ್ಚು(ಳ್ಚು) (ಕ್ರಿ). ೧. ಹಿಂತಿರುಗು; ೨. = ಮರಚು.

ಮರವಜ್ರ (ನಾ). ಒಂದು ಬಗೆಯ ಅಂಟು.

ಮರವಳಿ (ನಾ). ಮರದಿಂದ ದೊರಕುವ ಹಣ್ಣು, ಕಾಯಿ, ಎಲೆ ಮುಂತಾದುವು.

ಮರವೆ ೧. = ಮಱವೆ. ೨. ಕಣ್ಣಿಗೆ ಕಾಣದಾಗುವುದು; ಅದೃಶ್ಯವಾಗುವುದು.

ಮರಸು ೧. = ಮಱಸು. (ನಾ). ೨. ಮೋಸ; ವಂಚನೆ. ೩. ಬೇಟೆಯಲ್ಲಿ ಪ್ರಾಣಿಗಳಿಗಾಗಿ ಅಡಗಿಕೊಂಡು ಕೂಡುವುದು. ~ಬೇಟೆ = ಹೊಂಚುಹಾಕಿ ಮಾಡುವ ಬೇಟೆ.

ಮರಸುತ್ತು (ನಾ). ೧. ತಿರುಪು; ಮಲಸೂತ್ರ; ತಿರುಗಣೆ. ೨. ಒಂದು ಬಗೆಯ ಆಯುಧ.

ಮರಳ್ (ಕ್ರಿ). ೧. ಹಿಂತಿರುಗು ; ತಿರುಗಿ ಬರು. ೨. ಹಿಂಜರಿ; ಹಿಮ್ಮೆಟ್ಟು ; ಮರಳು. ೩. ಗಿರಗಿರನೆ ಸುತ್ತು ; ತಿರುಗು. (ನಾ). ೪. ಉಸುಕು ; ಹೊಯಿಗೆ.

ಮರಳು (ಕ್ರಿ). ೧. ಹಿಂತಿರುಗು ; ವಾಪಸ್ಸು ಬರು. ೨. ಸುತ್ತು ; ತಿರುಗು. ೩. ನೀರು ಮುಂತಾದ ದ್ರವಪದಾರ್ಥವು ಕುದಿ. (ನಾ). ೪. ಉಸುಕು ; ಹೊಯಿಗೆ. ~ಇಸು = ೧. ಹಿಂತಿರುಗಿಸು ; ಪುನಃ ಕೊಡು. ೨. ಹಿಂದಕ್ಕೆ ಹೋಗುವಂತೆ ಮಾಡು ; ಹಿಮ್ಮೆಟ್ಟಿಸು. ೩. ನೀರು ಮುಂತಾದ ದ್ರವಪದಾರ್ಥವನ್ನು ಚೆನ್ನಾಗಿ ಕುದಿಯುವಂತೆ ಮಾಡು. ~ಕಾ(ಗಾ)ಡು = ಮರುಭೂಮಿ. ~ದಿಬ್ಬ = ಉಸುಕಿನ ಗುಡ್ಡೆ ; ಮರಳುದಿಣ್ಣೆ.

ಮರಳುದಲೆ (ನಾ). ಹಿಂತಿರುಗುವಿಕೆ.

ಮರಾಟ (ನಾ). ಮಹಾರಾಷ್ಟ್ರದ ಜನ ಮತ್ತು ಅವರ ಭಾಷೆ.

ಮರಾಮತ್ತು (ನಾ). ದುರಸ್ತಿ ; ರಿಪೇರಿ. ~ಇಲಾಖೆ=ಲೋಕೋಪಯೋಗಿ ಇಲಾಖೆ; ಇಂಜನೀಯರಿಂಗ್ ಶಾಖೆ.

ಮರಾಲ(ಳ) (ನಾ). ೧. ಹಂಸ ; ಅಂಚೆ. ೨. ಕಾಡಿಗೆ ; ಅಂಜನ. (ಗು). ೩. ಮೃದುವಾದ ; ಕೋಮಲವಾದ. ~ಗಾಮಿನಿ = ಹಂಸದ ನಡಗೆಯಂತೆ ನಡೆಯುಳ್ಳವಳು. ~ತೂಳ = ಹಂಸದ ತುಪ್ಪುಳು. ~ವಾಹ =ಹಂಸವನ್ನು ವಾಹನವನ್ನಾಗಿ ಉಳ್ಳವನು; ಬ್ರಹ್ಮ.

ಮರಾಳಿ (ನಾ). ಹೆಣ್ಣು ಹಂಸ.

ಮರಿ ೧. = ಮಱಿ. ೨. ಮಠದಲ್ಲಿ ಸ್ವಾಮಿಗಳ ಉತ್ತರಾಧಿಕಾರಿ ಅಥವಾ ಪಟ್ಟಶಿಷ್ಯ. ~ಇ(ಯಿ)ಕ್ಕು=ಹೆರು ; ಹಡೆ. ~ಹಾಕು = ಮರಿಯಿಕ್ಕು.

ಮರಿಗೆ = ಮರಗೆ.

ಮರಿಚ (ನಾ). ಮೆಣಸು ; ಕರಿಮೆಣಸು.

ಮರಿಯಾದೆ = ಮರ್ಯಾದೆ.

ಮರೀಚ = ಮರಿಚ.

ಮರೀಚಿ (ನಾ). ೧. ಬೆಳಕು ; ಕಾಂತಿ. ೨. ಕಿರಣ ; ರಶ್ಮಿ. ೩. = ಮರೀಚಿಕೆ. ೪. ಪ್ರಜಾಪತಿಗಳಲ್ಲಿ ಒಬ್ಬನ ಹೆಸರು.

ಮರೀಚಿಕೆ (ನಾ). ಬಿಸಿಲುಗುದುರೆ; ಮೃಗಜಲ.

ಮರು (ನಾ). ೧. ಮರಳು ತುಂಬಿದ ಭೂಮಿ; ಮರಳುಗಾಡು. ೨. = ಮಱು. ~ಟಪಾಲು = ಪತ್ರ ಕೈಸೇರಿದ ಕೂಡಲೇ ಹಾಕುವ ಪ್ರತ್ಯುತ್ತರ. ~ದಿನ = ಮಾರನೆಯ ದಿನ ; ನಾಳೆ. ~ದಿಬ್ಬಣ = ಮದುವೆ ಮುಗಿಸಿಕೊಂಡು ಹಿಂತಿರುಗುವಾಗ ಮಾಡುವ ಮೆರವಣಿಗೆ. ~ಧರೆ =ಮರುಭೂಮಿ. ~ನುಡಿ = ೧. ಪ್ರತಿಯಾಗಿ ಮಾತನಾಡು. ೨. ಪ್ರತ್ಯುತ್ತರ. ~ಪ್ರಯಾಣ = ಪ್ರಯಾಣದಲ್ಲಿ ಒಂದು ಕಡೆ ತಂಗಿದ್ದು ಅನಂತರ ಮುಂದುವರಿಸುವ ಪ್ರಯಾಣ. ~ಬೆಳೆ = ವರ್ಷದಲ್ಲಿ ಬೆಳೆಯುವ ಎರಡನೆಯ ಫಸಲು. ~ಭೂಮಿ = ಮರಳು ತುಂಬಿದ ಭೂಮಿ.

ಮರುಕಳಿಸು = ಮಱುಕೊಳಿಸು.

ಮರುಕು = ಮಱುಕ.

ಮರುಗ (ನಾ). ಸುವಾಸನೆಯ ಎಲೆಗಳುಳ್ಳ ಒಂದು ಜಾತಿಯ ಸಸ್ಯ.

ಮರುಚು (ಕ್ರಿ). ಹಿಂತಿರುಗಿಸು.

ಮರುತ (ನಾ).೧.ಗಾಳಿ; ವಾಯು. ೨. ದೇವತೆ. ~ಅಶನ = ಗಾಳಿಯನ್ನೇ ಆಹಾರವಾಗಿ ಉಳ್ಳದು ; ಹಾವು. ~ಮಿತ್ರ = ಗಾಳಿಯ ಗೆಳೆಯ ; ಅಗ್ನಿ.

ಮರುತಜ (ನಾ).ವಾಯುಪುತ್ರ; ಹನುಮಂತ.

ಮರುತ್ತು = ಮರುತ.

ಮರುದ್ದೆಸೆ (ನಾ). ವಾಯುವಿನ ದಿಕ್ಕು; ವಾಯುವ್ಯ.

ಮರುನ್ನದಿ (ನಾ). ದೇವನದಿ; ಗಂಗೆ.
ಮರುವ ೧. = ಮರುಗ. ೨. ಒಂದು ಜಾತಿಯ ಮರ.
ಮರುವಕ = ಮರುವ.
ಮರುಳ್(ಳು) (ಕ್ರಿ). ೧. ಕಕ್ಕಾಬಿಕ್ಕಿಯಾಗು; ಭ್ರಾಂತಿಗೊಳ್ಳು. (ನಾ). ೨. ಕಕ್ಕಾಬಿಕ್ಕಿ; ದಿಗ್ಭ್ರಮೆ. ೩. ಹುಚ್ಚು; ಬುದ್ಧಿಭ್ರಮೆ. ೪. ಮೋಹ. ೫. ದಡ್ಡತನ; ಮೌಢ್ಯ. ೬. ಹುಚ್ಚ. ೭. ದಡ್ಡ; ತಿಳಿಗೇಡಿ. ೮. ಬುದ್ಧಿ ಮಂಕಾಗಿಸುವ ಮದ್ದು. ೯. ಭೂತ; ದೆವ್ವ. ~ಆಟ = ಅವಿವೇಕದ ವರ್ತನೆ; ಹುಚ್ಚಾಟ. ~ಆಡು = ಹುಚ್ಚನಂತೆ ವರ್ತಿಸು; ಹುಚ್ಚಾಟವಾಡು. ~ಇಕ್ಕು = ಬುದ್ಧಿಯನ್ನು ಮಂಕಾಗಿಸಲು ಮದ್ದನ್ನು ಹಾಕು. ~ಇಸು = ದಿಗ್ಭ್ರಮೆಗೊಳಗಾಗುವಂತೆ ಮಾಡು. ~ಕ(ಗ)ವಿ = ಮೂಢಕವಿ. ~ಕೈ(ಗೈ) = ೧. ಪಿಶಾಚಿಯ ಹಸ್ತ. ೨. ಕೋಟೆಕಾಳಗದಲ್ಲಿ ಉಪಯೋಗಿಸುತ್ತಿದ್ದ ಒಂದು ಆಯುಧ. ~ಕೊ(ಗೊ)ಳ್(ಳ್ಳು) = ೧. ಭ್ರಾಂತನಾಗು. ೨. ಮೋಹಗೊಳ್ಳು. ~ತನ = ಮಂಕುತನ; ಬೆಪ್ಪು. ~ಪೋ(ವೋ)ಗು = ಮೋಸಹೋಗು. ~ಮಾಡು = ೧. ಮೋಸ ಮಾಡು; ಮಂಕು ಕವಿಸು. ೨. ಮೋಹಗೊಳಿಸು. ~ಮಾತು = ಮಂಕು ಕವಿಯುವಂತೆ ಮಾಡುವ ಮಾತು.
ಮರುಳ (ನಾ). ೧. ದಡ್ಡ; ತಿಳಿಗೇಡಿ. ೨. ಹುಚ್ಚ.
ಮರುಳಿ (ನಾ). ೧. ಜಾಣತನವಿದ್ದೂ ಇಲ್ಲದಂತೆ ನಟಿಸುವ ವ್ಯಕ್ತಿ. ೨. ಹುಚ್ಚಿ. ೩. ಒಂದು ಜಾತಿಯ ಸಸ್ಯ.
ಮರುಳ್ಚು (ಕ್ರಿ). ಭ್ರಾಂತಿಗೊಳಿಸು; ಮರುಳು ಮಾಡು; ಆಶ್ಚರ್ಯಪಡಿಸು.
ಮರೆ ೧. = ಮಱೆ. (ನಾ). ೨. ಒಂದು ಜಾತಿಯ ಜಿಂಕೆ. ~ಕು(ಗು)ಳಿ = ಮರೆಯುವ ಸ್ವಭಾವವುಳ್ಳವನು. ~ಕೊಡು = ಆಶ್ರಯವನ್ನು ಕೊಡು. ~ಬೀಳು = ಆಶ್ರಯವನ್ನು ಹೊಂದು; ಬೆನ್ನಿಗೆ ಬೀಳು. ~ಮಾಚು = ಮುಚ್ಚಿಡು; ಗುಟ್ಟುಮಾಡು.
ಮಱ(ರ)ಕೆಂದು (ಕ್ರಿ). ಮೈಮರೆತು ಮಲಗು, -ನಿದ್ರಿಸು.
ಮಱ(ರ)ಪಡು (ಕ್ರಿ). ಮರೆಯಾಗು; ಕಾಣದಿರು.
ಮಱ(ರ)ಪು (ಕ್ರಿ). ೧. ಮೈ ಮರೆಯುವಂತೆ ಮಾಡು. (ನಾ). ೨. ಮರೆಯುವಿಕೆ; ಮರವೆ. ~ಇಕ್ಕು = ಮರವೆಯುನ್ನುಂಟು ಮಾಡು.
ಮಱ(ರ)ಲುಂದು = ಮಱಕೆಂದು.
ಮಱ(ರ)ವು (ನಾ). ಮರೆಯುವುದು; ನೆನಪಿನಲ್ಲಿ ಉಳಿಯದಿರುವುದು.
ಮಱ(ರ)ವೆ (ನಾ). ೧. ನೆನಪಿಲ್ಲದಿರುವಿಕೆ; ಮರೆಯುವಿಕೆ. ೨. ಒಂದು ಬಗೆಯ ನೇತ್ರರೋಗ.
ಮಱ(ರ)ಸನ (ನಾ). ಸೋಮಾರಿತನ; ಆಲಸ್ಯ.
ಮಱ(ರ)ಸು (ಕ್ರಿ). ೧. ಮುಚ್ಚು; ಮರೆ ಮಾಡು. ೨. ಮರೆಯಾಗು; ಕಾಣದಂತಾಗು. ೩. ಮೋಸಮಾಡು. ೪. ನೆನಪಿನಿಂದ ಹೋಗುವಂತೆ ಮಾಡು; ಮರೆಯುವಂತೆ ಮಾಡು.
ಮಱ(ರ)ಸುಂದು ೧. = ಮಱಕೆಂದು. (ನಾ). ೨. ಸಂಭೋಗ.
ಮಱ(ರ)ಹು ೧. = ಮಱವು. ೨. ತಪ್ಪು; ದೋಷ. ೩. ಮೈಮರೆಯುವಿಕೆ; ಜಡತೆ.
ಮಱಿ(ರಿ) (ನಾ). ೧. ಪೋತ; ಶಾಬಕ. ೨. ಎಳೆಯದು; ಚಿಕ್ಕದು. ~ತಿ(ದಿ)ಂಗಳು = ಎಳೆಯ ಚಂದ್ರ; ಬಾಲಚಂದ್ರ. ~ಮಗ = ಮೊಮ್ಮಗನ ಮಗ; ಪ್ರಪೌತ್ರ.
ಮಱು(ರು) (ಅ). ೧. ಬೇರೊಂದು; ಮತ್ತೊಂದು; ಇನ್ನೊಂದು. ೨. ಪ್ರತಿಯಾಗಿ.

~ಕ(ಗ)ಣೆ = ಬಾಣಕ್ಕೆ ಪ್ರತಿಯಾಗಿ ಪ್ರಯೋಗಿಸುವ ಬಾಣ. ~ಕೊಳೆ = ಒಂದು ಸಲ ತೆನೆಯನ್ನು ಕತ್ತರಿಸಿದ ಮೇಲೆ ಚಿಗುರಲು ಅನುಕೂಲವಾಗಿರುವ ಬುಡ. ~ದಿವಸ = ಮೂರನೆಯ ದಿನ. ~ದೆವಸ = ಮಱುದಿವಸ. ~ಪ(ವ)ಕ್ಕ = ಎದುರುಪಕ್ಷ; ಶತ್ರುಪಕ್ಷ. ~ಪು(ವು,ಹು)ಟ್ಟು = ಮಱುಭವ. ~ಬಾ(ವಾ)ೞ್(ಳ್) = ೧. ಎರಡನೆಯ ಮದುವೆ; ಪುನರ್ವಿವಾಹ. ೨.=ಮಱುಭವ. ~ಭವ = ಪುನರ್ಜನ್ಮ; ಮುಂದಿನ ಜನ್ಮ. ~ಮಾತು = ಉತ್ತರ; ಪ್ರತ್ಯುತ್ತರ. ~ಮೆಯ್ = ಮಱುಭವ. ~ಮೊನೆ = ಮತ್ತೊಂದು ತುದಿ, –ಕೊನೆ.

ಮಱು(ರು)ಕ (ನಾ). ೧. ದುಃಖ; ಅಳಲು. ೨. ಪ್ರೀತಿ. ೩. ಕನಿಕರ; ಅನುಕಂಪ.

ಮಱು(ರು)ಕಳಿಸು = ಮಱುಕೊಳಿಸು.

ಮಱು(ರು)ಕೊಳಿಸು (ಕ್ರಿ). ತಿರುಗಿಬರು; ಮತ್ತೆ ಬರು; ಮರಳಿ ಸಂಭವಿಸು.

ಮಱು(ರು)ಗು (ಕ್ರಿ). ೧. ದ್ರವ ಪದಾರ್ಥವು ಕುದಿ, –ಮರಳು. ೨. ಸುಡು; ಕಾಯು. ೩. ಕೊರಗು; ಸಂಕಟಪಡು. ೪. ಕನಿಕರವನ್ನು ತೋರಿಸು; ಮನಸ್ಸು ಕರಗು. ~ಇಸು = ೧. ಮರಳಿಸು; ಕುದಿಸು. ೨. ಕಷ್ಟಕ್ಕೊಳಗು ಮಾಡು.

ಮಱು(ರು)ಚಲ್(ಲು) (ನಾ). ೧. ಎರಡನೆಯ ಹೆರಿಗೆ. ೨. ಎರಡನೆಯ ಮಗು.

ಮಱು(ರು)ಜವಣಿ (ನಾ). ಸತ್ತವರನ್ನು ಬದುಕಿಸುವುದೆಂದು ನಂಬಲಾಗಿರುವ ಒಂದು ಜಾತಿಯ ಬಳ್ಳಿ; ಸಂಜೀವಿನಿ.

ಮಱು(ರು)ಜೇವಣಿ = ಮಱುಜವಣಿ.

ಮಱು(ರು)ಜೇವಣಿಗೆ = ಮಱುಜವಣಿ.

ಮಱೆ(ರೆ) (ಕ್ರಿ). ೧. ನೆನಪಿನಲ್ಲಿ ಉಳಿಯದಿರು; ವಿಸ್ಮೃತಿ ಹೊಂದು. ೨. ಜಡವಾಗು; ಮಂಕಾಗು. (ನಾ). ೩. ಕಾಣದಾಗುವಿಕೆ; ಅದೃಶ್ಯವಾಗುವುದು. ೪. ಮುಚ್ಚಿಡುವುದು. ೫. ಗುಟ್ಟು; ರಹಸ್ಯ. ೬. ಪರದೆ. ೭. ಹೊದಿಕೆ; ಮುಸುಕು. ೮. ಶರಣಾಗತಿ; ಶರಣು. ೯. ಆಶ್ರಯ. ~ಇಸು = ನೆನಪಿನಿಂದ ಹೋಗುವಂತೆ ಮಾಡು. ~ಕ(ಗ)ಡೆ = ಆಶ್ರಯ ಸಿಕ್ಕುವ ಸ್ಥಳ. ~ಕ(ಗ)ಳೆ = ಮುಸುಕನ್ನು ತೆಗೆ; ಮರೆಯನ್ನು ಹೋಗಲಾಡಿಸು. ~ಕಾಱ(ರ) = ನಡೆದ ಸಂಗತಿಯನ್ನು ಮುಚ್ಚಿಡುವವನು. ~ಕಾ(ಗಾ)ಳಗ = ಮರೆಯಾಗಿ ನಿಂತು ಮಾಡುವ ಯುದ್ಧ. ~ಕೊ(ಗೊ)ಳ್(ಳು) = ೧. ಕಾಣದಾಗು; ಮಾಯವಾಗು. ೨. ಆಶ್ರಯವನ್ನು ಪಡೆ, –ಹೊಂದು. ~ನುಡಿ = ೧. ಮುಚ್ಚುಮಾತು; ನೇರವಲ್ಲದ ಮಾತು. ೨. ಅಶರೀರವಾಣಿ. ~ಪು(ವು, ಹು)ಗು=ಆಶ್ರಯವನ್ನು ಪಡೆ; ಶರಣಾಗತನಾಗು. ~ಪೊ(ವೊ,ಹೊ)ಗು = ಮಱೆವುಗು. ~ಬಾ(ವಾ)ೞ್(ಳ್) = ೧. ಕದ್ದು ಹಾದರ ಮಾಡು. ೨. ಕಳ್ಳ ಹಾದರ. ~ಮಾಡು = ಕಣ್ಣಿಗೆ ಬೀಳದಂತೆ ಮಾಡು; ಮುಚ್ಚಿಡು. ~ಮಾತು = ಅಭಿಪ್ರಾಯವನ್ನು ಮುಚ್ಚಿಟ್ಟು ಆಡುವ ಮಾತು.

ಮಱೆ(ರೆ)ಯಿಸು = ಮಱೆಸು.

ಮರ್ಕಟ (ನಾ). ೧. ಕೋತಿ; ಮಂಗ. ೨. ಜೇಡರ ಹುಳು. ~ತನ = ೧. ಕಪಿಚೇಷ್ಟೆ. ೨. ಚಂಚಲಸ್ವಭಾವ. ~ಧ್ವಜ = ಕಪಿಯ ಲಾಂಛನವನ್ನು ಬಾವುಟದಲ್ಲಿ ಉಳ್ಳವನು; ಅರ್ಜುನ.

ಮರ್ಗು (ಕ್ರಿ). ತಗ್ಗು; ಮುಗ್ಗು.

ಮರ್ಚು (ಕ್ರಿ). ೧. ಮೆಚ್ಚು; ಇಷ್ಟಪಡು. (ನಾ). ೨. = ಮುರ್ಚುಗೆ. ೩. ಕಡಿಗತ್ತಿ; ಮುಚ್ಚು.

ಮರ್ಜುಗೆ (ನಾ). ಮೆಚ್ಚಿಗೆ; ಅಭಿಮಾನ.

ಮರ್ಜಿ (ನಾ). ೧. ಇಷ್ಟ; ಆಸಕ್ತಿ. ೨. ಸ್ವಭಾವ; ಲಹರಿ. ~ಹಿಡಿ = ಇಷ್ಟವನ್ನು ಅನುಸರಿಸು; ಅನುನಯಿಸು.

ಮರ್ತ್ಯ (ನಾ). ೧. ಮನುಷ್ಯ. ೨. ಮನುಷ್ಯಲೋಕ; ಭೂಲೋಕ. (ಗು). ೩. ಸಾವಿಗೊಳಗಾಗುವ. ~ಲೋಕ = ಭೂಲೋಕ.

ಮರ್ದನ (ನಾ). ೧. ಪುಡಿ ಮಾಡುವುದು. ೨. ಉಜ್ಜುವುದು; ನೀವುವುದು. ೩. ಒತ್ತುವುದು; ಹಿಸುಕುವುದು. ೪. ನಾಶಮಾಡುವುದು. ೫. ಹಿಂಸೆ; ತೊಂದರೆ.

ಮರ್ದಲೆ(ಳೆ) (ನಾ). ಒಂದು ಬಗೆಯ ಚರ್ಮವಾದ್ಯ; ಮದ್ದಳೆ.

ಮರ್ದಿಸು (ಕ್ರಿ). ೧. ಪುಡಿಮಾಡು; ಜಜ್ಜು. ೨. ಉಜ್ಜು; ತಿಕ್ಕು. ೩. ಒತ್ತು; ಅಮುಕು. ೪. ನಾಶಮಾಡು. ೫. ಪೀಡಿಸು; ಹಿಂಸಿಸು.

ಮರ್ದು (ನಾ). ೧. ಔಷಧ. ೨. ಆಹಾರದೊಡನೆ ಬೆರಸಿ ಕೊಡುವ ಒಂದು ಬಗೆಯ ಮಂದವಿಷ; ಕೈಮುಸಕ. ~ಕಾಜಿ(ರ) = ತುಪಾಕಿಯ ಮದ್ದನ್ನು ಅರೆಯುವವನು. ~ಪೇ(ವೇ)ಟ್(ಳ್) = ಚಿಕಿತ್ಸೆಗೆ ಸಲಹೆಯನ್ನು ಕೊಡು.

ಮರ್ದುಗುಣಿಕೆ (ನಾ). ಒಂದು ಜಾತಿಯ ಗಿಡ; ದತ್ತೂರ; ಉನ್ಮತ್ತ.

ಮರ್ಬು = ಮಬ್ಬು.

ಮರ್ಮ (ನಾ). ೧. ದೇಹದ ಆಯಕಟ್ಟಿನ ಸ್ಥಳ. ೨. ಕೀಲು; ಅಸ್ಥಿಸಂಧಿ. ೩. ರಹಸ್ಯ; ಗುಟ್ಟು. ೪. ಒಳ ಅರ್ಥ; ಗೂಢಾರ್ಥ. ~ಭೇದಕ = ೧. ಮನಸ್ಸಿಗೆ ತಾಗುವ. ೨. ಅಂತರಂಗಸ್ಪರ್ಶಿಯಾದ; ಮಾರ್ಮಿಕ.

ಮರ್ಮಜ್ಞ (ನಾ). ಗುಟ್ಟನ್ನು ತಿಳಿದವನು; ರಹಸ್ಯವನ್ನು ಅರಿತವನು.

ಮರ್ಮಿ (ನಾ). ೧. ವಿಷಯವನ್ನು ಗುಟ್ಟು ಮಾಡುವವನು. ೨. ಮೋಸಗಾರ.

ಮರ್ಯಾದಸ್ತ (ನಾ). ಘನತೆಯುಳ್ಳವನು; ಗಣ್ಯ; ಗೌರವಸ್ಥ.

ಮರ್ಯಾದೆ (ನಾ). ೧. ಎಲ್ಲೆ; ಗಡಿ. ೨. ಗೌರವ; ಮನ್ನಣೆ. ೩. ರೂಢಿ; ನಿಯಮ. ೪. ಒಳ್ಳೆಯ ನಡತೆ; ಶಿಷ್ಟಾಚಾರ.

ಮರ್ವು (ನಾ). ೧. ಕತ್ತಲೆ; ಮಬ್ಬು. ೨. ಜಡತೆ.

ಮರ್ಷ (ನಾ). ತಾಳ್ಮೆ; ಸಹನೆ.

ಮಲ(ಳ) (ನಾ). ೧. ಕೊಳೆ; ಹೊಲಸು. ೨. ದೇಹದಿಂದ ಹೊರಬರುವ ಮೂತ್ರ, ಅಮೇಧ್ಯ ಮುಂತಾದ ಹನ್ನೆರಡು ಬಗೆಯ ಅಶುಚಿ ದ್ರವ್ಯಗಳು. ೩. ಕಿಟ್ಟ; ತುಕ್ಕು; ಜಂಗು. ೪. ಪಾಪ; ದೋಷ. ~ತ್ರಯ = ೧. ಸ್ವೇದ, ಮೂತ್ರ, ಪುರೀಷಗಳೆಂಬ ಮೂರು ಬಗೆಯ ಶಾರೀರಕ ಅಶುಚಿ ದ್ರವ್ಯಗಳು. ೨. ಆಣವ, ಮಾಯ, ಕಾರ್ಮಿಕವೆಂಬ ಮೂರು ಬಗೆಯ ಮಲಗಳು. ~ಮಾಸ = ಧಾರ್ಮಿಕಕ್ರಿಯೆಗಳಿಗೆ ನಿಷಿದ್ಧವಾದ ತಿಂಗಳು; ಅಶುಭಮಾಸ.

ಮಲ(ಂ)ಗು (ಕ್ರಿ). ೧. ಒರಗು; ಅಡ್ಡಾಗು. ೨. ನಿದ್ರಿಸು; ಶಯನಿಸು. ೩. ಒಂದು ಪಕ್ಕಕ್ಕೆ ಬಾಗು; ವಾಲು. ೪. ಸಂಭೋಗಿಸು. ೫. ಅನಾರೋಗ್ಯದಿಂದ ಹಾಸುಗೆ ಹಿಡಿ. ೬. ತಬ್ಬು; ಆಲಿಂಗಿಸು. (ನಾ). ೭. ದಿಂಬು; ಲೋಡು. ~ಇಸು = ೧. ನಿದ್ರಿಸುವಂತೆ ಮಾಡು. ೨. ಒರೆಯಾಗಿಡು. ೩. ಬಲವಾಗಿ ನೆಡು. ~ಮೂಡೆ = ಒರಗುದಿಂಬು.

ಮಲಕು (ಕ್ರಿ). ೧. ಬಗ್ಗು; ಮಣಿ. ೨. ತಿರುವು; ಬಾಗಿಸು. ೩. ತಿರುಚು; ಹೊಸೆ. (ನಾ). ೪. ತಲೆಯಲ್ಲಿ ಧರಿಸುವ ಒಂದು ಬಗೆಯ ಆಭರಣ. ೫. ಒಂದು ಬಗೆಯ ಕಂಠಾಭರಣ. ೬. ಸರಗಂಟು; ಜೀರ್ಗುಣಿಕೆ. ೭. ಬಾಗು; ಕೊಂಕು.

ಮಲತಾಯಿ (ನಾ). ತಾಯಿಯ ಸವತಿ; ಬಲತಾಯಿ.

ಮಲಧಾರಿ (ನಾ). ಜೈನಯತಿ; ಸವಣ.

ಮಲಮಗ (ನಾ). ಸವತಿಯ ಮಗ; ಬಲಮಗ.

ಮಲಮಗಳು (ನಾ). ಸವತಿಯ ಮಗಳು; ಬಲಮಗಳು.

ಮಲ(ಳ)ಯ (ನಾ). ೧. ಸಪ್ತಕುಲಪರ್ವತಗಳಲ್ಲಿ ಒಂದು. ೨. ಮಲಬಾರು ದೇಶ. ~ಅನಿಲ(ಳ) = ಮಲಯಪರ್ವತದಿಂದ ಬೀಸುವ ತಣ್ಣನೆಯ ಗಾಳಿ, -ತಂಗಾಳಿ. ~ಮಾರುತ = ಮಲಯಾನಿಲ.

ಮಲ(ಳ)ಯಜ (ನಾ). ಮಲಯಪರ್ವತದಲ್ಲಿ ಹುಟ್ಟಿದುದು; ಚಂದನ; ಶ್ರೀಗಂಧ.

ಮಲರ್(ರು) (ಕ್ರಿ). ೧. ಮುಖವನ್ನು ಬೇರೊಂದೆಡೆಗೆ ತಿರುಗಿಸು; ವಿಮುಖವಾಗು. ೨. ಅರಳು; ವಿಕಾಸಹೊಂದು. (ನಾ). ೩. ಮರಳು; ಹೊಯಿಗೆ. ೪. ಹೂವು; ಪುಷ್ಪ. ~ಅಂಬು = ಹೂವಿನ ಬಾಣ. ~ಬಿಜು(ರು)=ಹೂವುಬಿಡು. ~ಪ(ವ)ಕ್ಕಿ = ತುಂಬಿ; ಭ್ರಮರ. ~ಪು(ವು)ಡಿ = ಹೂವಿನಲ್ಲಿರುವ ಹುಡಿ; ಪರಾಗ.

ಮಲರೋಗ (ನಾ). ಅಪಸ್ಮಾರ; ಮೂರ್ಛೆರೋಗ.

ಮಲಸೂತ್ರ (ನಾ). ತಿರುಗಣೆ; ಮರಸುತ್ತು.

ಮಲಾಮತ್ತು (ನಾ). ೧. ತೊಂದರೆ; ಉಪದ್ರವ. ೨. = ಮಲಾಮೆ.

ಮಲಾಮೆ (ನಾ). ಸೊಕ್ಕು; ಪೊಗರು.

ಮಲಾರ (ನಾ). ಬಳೆಗಳನ್ನು ಒಟ್ಟಾಗಿ ಕಟ್ಟಿದ ಗೊಂಚಲು. ~ಪೂಜೆ = ಗೌರಿಪೂಜೆಗೆ ಮೊದಲು ಮಲಾರಕ್ಕೆ ಮಾಡುವ ಪೂಜೆ.

ಮಲಿ(ಳಿ)ನ (ನಾ). ೧. ಕೊಳೆ; ಹೊಲಸು. ೨. ಪಾಪ; ದೋಷ. ೩. ಕೊಳಕಾದ ಬಟ್ಟೆ. ೪. ದೋಷಿ; ಪಾಪಿ. (ಗು). ೫. ಕೊಳೆಯಾದ; ಹೊಲಸಾದ. ೬. ದೋಷದಿಂದ ಕೂಡಿದ. ೭. ಮಂಕಾದ. ೮. ಕಪ್ಪುಬಣ್ಣದಿಂದ ಕೂಡಿದ.

ಮಲಿ(ಳಿ)ೀಮಸ (ನಾ). ೧. ಕೊಳೆ; ಹೊಲಸು. ೨. ದೋಷ; ಕುಂದು.

ಮಲೆ (ಕ್ರಿ). ೧. ಕೊನರು; ಚಿಗುರು. ೨. ಉದ್ಧಟತನದಿಂದ ವರ್ತಿಸು; ಗರ್ವಿಸು. ೩. ಎದುರಿಸು; ಪ್ರತಿಭಟಿಸು. ೪. ಛಲವನ್ನು ಸಾಧಿಸು. ೫. ಕೊಳೆಯಿಂದ ಕೂಡಿರು; ನಾರು. (ನಾ). ೬. = ಮಲೆಪು. ೭. ಬೆಟ್ಟ. ೮. ಕಾಡು. ~ನಾಡು = ಬೆಟ್ಟಗುಡ್ಡಗಳಿಂದ ಕೂಡಿದ ಪ್ರದೇಶ.

ಮಲೆಪು (ನಾ). ಸೊಕ್ಕು; ಗರ್ವ; ಅಹಂಕಾರ.

ಮಲ್ಲ (ನಾ). ೧. ಕುಸ್ತಿ ಮಾಡುವವನು; ಜಟ್ಟಿ. ೨. ಶೂರ; ವೀರ. ೩. ಬಲಿಷ್ಠ; ಗಟ್ಟಿಗ. ~ಕಳ = ಕುಸ್ತಿಯಾಡುವ ಕಣ, -ಮೈದಾನ. ~ಕಾ(ಗಾ)ಳಗ = ಮಲ್ಲಯುದ್ಧ; ಕುಸ್ತಿ. ~ಗಂಟು = ಮಲ್ಲಂತಿಗೆ. ~ಯುದ್ಧ = ಮಲ್ಲಗಾಳಗ.

ಮಲ್ಲಂತಿಗೆ (ನಾ). ಜಟ್ಟಿಗಳು ಕಟ್ಟಿಕೊಳ್ಳುವ ನಡುಕಟ್ಟು.

ಮಲ್ಲಣೆ (ನಾ). ೧. ದುಃಖ; ವ್ಯಥೆ; ಕ್ಷೋಭೆ. ೨. ಗುಂಪು; ಸಂದಣಿ. ~ಇಸು = ಸಂಕಟಪಡಿಸು; ಕೊರಗಿಸು. ~ಕೊ(ಗೊ)ಳ್ = ದುಃಖಪಡು; ವ್ಯಥೆಪಡು.

ಮಲ್ಲಲ್ (ನಾ). ಸೌಟು; ಸಟ್ಟುಗ.

ಮಲ್ಲಳಿ = ಮಲ್ಲಟಿ. ~ಕಾ(ಗಾ)ಱ(ರ) = ೧. ಕ್ಷೋಭೆಯನ್ನುಂಟು ಮಾಡುವವನು. ೨. ಆಕರ್ಷಿಸುವವನು.

ಮಲ್ಲಟಿ(ಳಿ) (ನಾ). ೧. ಅಲೆಯುವಿಕೆ; ತಿರುಗಾಟ; ಸುತ್ತಾಟ. ೨. = ಮಲ್ಲಣೆ. ೩. ಅಂಜಿಕೆ; ಭಯ. ~ಕೊ(ಗೊ)ಳ್ = ೧. ಹೆದರು; ಅಂಜು. ೨. ಹಿಮ್ಮೆಟ್ಟು; ಹಿಂಜರಿ.

ಮಲ್ಲಾಡು (ನಾ). ಮಲೆನಾಡು.

ಮಲ್ಲಾಮಲ್ಲಿ (ನಾ). ೧. ಜಟ್ಟಿಗಳ ಯುದ್ಧ; ಕುಸ್ತಿ. ೨. ನೂಕುನುಗ್ಗಲು; ಗುಂಪುಗದ್ದಲ.

ಮಲ್ಲಾರ ೧. = ಮಲಾರ. ೨. ಹೂ ಗೊಂಚಲು.
ಮಲ್ಲಿ = ಮಲ್ಲಿಗೆ.
ಮಲ್ಲಿಕೆ = ಮಲ್ಲಿಗೆ.
ಮಲ್ಲಿಗೆ (ನಾ). ಒಂದು ಜಾತಿಯ ಬಳ್ಳಿ ಮತ್ತು ಅದರ ಹೂವು.
ಮಲ್ಲೆ ೧. = ಮೊಲ್ಲೆ. ೨. ಕುಡಿಯುವ ಪಾತ್ರೆ.
ಮಲ್ಲೋಗರ = ಮಲರೋಗ.
ಮಶಕ (ನಾ). ಸೊಳ್ಳೆ.
ಮಶಾಲು (ನಾ). ದೀವಟಿಗೆ ; ಪಂಜು.
ಮಷಿ (ನಾ). ಮಸಿ ; ಶಾಯಿ.
ಮಷ್ಟು (ನಾ). ಗಸಿ ; ಗಷ್ಟು ; ಮಡ್ಡಿ.
ಮಸಕ (ನಾ). ೧. ಅಧಿಕ್ಯ ; ಹೆಚ್ಚಳ. ೨. ಕ್ಷೋಭೆ ; ತಳಮಳ. ೩. ಸಿಟ್ಟು ; ರೋಷ. ೪. ರಭಸ ; ಆವೇಗ. ೫. ಮಾಟ ; ಮಾಯೆ ; ಕಪಟ. ೬. ಆಹಾರದೊಡನೆ ಬೆರಸಿ ಕೊಡುವ ಒಂದು ಬಗೆಯ ಮಂದವಿಷ ; ಇಕ್ಕುಮದ್ದು. ~(೦)ಕು(ಗು)ಂದು=ರಭಸ ಕಡಮೆಯಾಗು.
ಮಸಕು ೧. = ಮುಸುಕು. ೨. ಕೆರಳುವಿಕೆ ; ರೇಗುವಿಕೆ.
ಮಸಗು (ಕ್ರಿ). ೧. ಹರಡು ; ವ್ಯಾಪಿಸು. ೨. ಆವಿರ್ಭವಿಸು ; ಪ್ರಕಟವಾಗು. ೩. ಕೆರಳು ; ರೇಗು. ೪. ವಿಜೃಂಭಿಸು ; ಅತಿಶಯಿಸು. ೫. ತೋರಿಸು ; ಪ್ರದರ್ಶಿಸು. ೬. ಉಜ್ಜು ; ತಿಕ್ಕು ; ಮಸೆ.
ಮಸಣ (ನಾ). ಸುಡುಗಾಡು ; ಶ್ಮಶಾನ. ~ಇಸು = ೧. ಸಾಯು. ೨. ಮಸುಳು ; ಕಳೆಗುಂದು ; ಮಸುಳಾಗು.
ಮಸಣವಟ್ಟಿಗೆ = ಮಸಣ.
ಮಸಣಿ (ನಾ). ಒಂದು ಕ್ಷುದ್ರದೇವತೆಯ ಹೆಸರು.
ಮಸಲ (ಅ). ಒಂದು ವೇಳೆ; ಅಕಸ್ಮಾತ್ತಾಗಿ.
ಮಸಲತ್ತು (ನಾ). ೧. ಯುಕ್ತಿ ; ಹಂಚಿಕೆ ; ಉಪಾಯ. ೨. ಪಿತೂರಿ.
ಮಸಾರ (ನಾ). ಹಸುರು ಬಣ್ಣದ ಹರಳು ; ಮರಕತ ; ಪಚ್ಚೆ.
ಮಸಾರಿ (ನಾ). ಕೆಂಪುಮಣ್ಣಿನ ಭೂಮಿ; ಕೆಬ್ಬೆ.
ಮಸಾಲೆ (ನಾ). ೧. ಆಹಾರ ಪದಾರ್ಥಗಳನ್ನು ರುಚಿಗೊಳಿಸಲು ಉಪಯೋಗಿಸುವ ಮೆಣಸು, ಜೀರಿಗೆ, ಧನಿಯ ಮಂತಾದುವು ಗಳನ್ನು ಹುರಿದು ಕುಟ್ಟಿದ ಪುಡಿ; ಸಂಬಾರ ದ್ರವ್ಯ. ೨. ಮಾತಿನ ಸೊಗಸು, -ಮೆರುಗು.
ಮಸಿ (ನಾ). ೧. ಇದ್ದಿಲು. ೨. ಶಾಯಿ. ೩. ಉರಿಯಿಂದ ಪಾತ್ರೆಯ ತಳಕ್ಕೆ ಅಂಟಿದ ಕಪ್ಪುಕಲೆ. ೪. ಅಂಜನ; ಕಾಡಿಗೆ. ೫. ಕಳಂಕ ; ದೋಷ. ~ಕಾಣಿಕೆ = ಹಳ್ಳಿಯಲ್ಲಿ ಶಾನುಭೋಗರು ಇಡುವ ಲೆಕ್ಕಕ್ಕೆ ರೈತರು ಕೊಡುವ ಹಣ. ~ಕುಡಿಕೆ = ಶಾಯಿಯನ್ನು ತುಂಬಿಡುವ ಸೀಸೆ ; ದೌತಿ. ~ಬಳಿ = ೧. ಶಾಯಿಯನ್ನು ಹಚ್ಚು, -ಲೇಪಿಸು. ೨. ಕೆಟ್ಟ ಹೆಸರನ್ನು ಉಂಟು ಮಾಡು ; ಕಳಂಕ ಹಚ್ಚು. ~ಹಚ್ಚು = ಮಸಿಬಳಿ.
ಮಸೀದಿ (ನಾ). ಮುಸಲ್ಮಾನರ ಪ್ರಾರ್ಥನಾ ಮಂದಿರ.
ಮಸುಕು (ನಾ). ೧. ಅಸ್ಪಷ್ಟವಾದುದು ; ಮಂಕು. (ಗು). ೨. ಅಸ್ಪಷ್ಟವಾದ ; ಮಂಕಾದ ; ಮಬ್ಬಾದ.
ಮಸುರಗೆ (ನಾ). ೧. ಸೊಳ್ಳೆಪರದೆ ; ಮಚ್ಚರದಾನಿ. ೨. ದಿಂಬು.
ಮಸುರಿಗೆ = ಮಸುರಗೆ.
ಮಸುಳ್(ಳು) (ಕ್ರಿ). ೧. ಮಂಕಾಗು ; ಕಾಂತಿಹೀನವಾಗು. ೨. ಮರೆಯಾಗು ; ಅಡಗು. ~ಇಸು = ೧. ಮಂಕಾಗು ; ಕಾಂತಿಹೀನವಾಗು. ೨. ಮಂಕಾಗುವಂತೆ ಮಾಡು ; ಕಾಂತಿಯನ್ನು ಹೋಗಲಾಡಿಸು.
ಮಸೂದೆ (ನಾ). ಅಂಗೀಕಾರಕ್ಕಾಗಿ ಬರುವ ಸೂಚನೆ ; ಠರಾವು.

ಮಸೂರ (ನಾ). ಒಂದು ಬಗೆಯ ದ್ವಿದಳ ಧಾನ್ಯ ; ಕಡಲೆ.
ಮಸೂರಿಕೆ (ನಾ). ೧. ಕಡಲೆ. ೨. ದೇಹದ ಮೇಲಿರುವ ಕಡಲೆಯಾಕಾರದ ಮಚ್ಚೆ ; ಸಂಗಾತಿ. ೩. ಸಿಡುಬು ; ವೈಲಿ. ೪. ತಲೆ ಹಿಡುಕಿ ; ಕುಂಟಣಿ. ೫. = ಮಸುರಗೆ.
ಮಸೃಣ (ಗು). ೧. ಮೃದುವಾದ; ಮೆತ್ತನೆಯ. ೨. ಜಿಡ್ಡಾದ ; ಸ್ನಿಗ್ಧ. ೩. ಹಿತಕರವಾದ. ೪. ಹೊಳೆಯುವ ; ಪ್ರಕಾಶಿಸುವ.
ಮಸೆ (ಕ್ರಿ). ೧. ಉಜ್ಜು ; ತಿಕ್ಕು. ೨. ಹರಿತ ಗೊಳಿಸು. ೩. ಒತ್ತಾಗಿ ಸೇರು, –ಕೂಡು. ೪. ಮೊನೆಯಿಂದ ಕೂಡಿರು ; ಹರಿತವಾಗು. ೫. ಹೋರಾಡು; ಕಾದು. ೬. ಹುರುಡಿಸು; ಸ್ಪರ್ಧಿಸು. (ನಾ). ೭. ಹರಿತವಾದುದು ; ಚೂಪಾಗಿರುವುದು. ೮. ಸಣ್ಣ ಗಾಯ. ೯. ಹೊಳಪು ; ಕಾಂತಿ. ೧೦. ಉದ್ರೇಕ. ೧೧. ವಿಷಯಾಭಿಲಾಷೆ ; ಕಾಮ. ~ಕಲ್ಲು = ಉಜ್ಜುವ ಕಲ್ಲು ; ಒರೆಗಲ್ಲು. ~ಕಾ(ಗಾ)ಜ್ = ಗಾಯಗೊಳ್ಳು. ~ಪೆ(ವೆ)ಱ್(ರ್) = ಹರಿತನಾಗು. ~ಜೆ(ವೆ)ಳಗು = ಉಜ್ಜುವುದರಿಂದ ಉಂಟಾಗುವ ಹೊಳಪು, –ಕಾಂತಿ.
ಮಸ್ಕರ (ನಾ). ಬಿದಿರು.
ಮಸ್ಕರಿ (ನಾ). ೧. ಸಂನ್ಯಾಸಿ. ೨. ಚಂದ್ರ. ೩. ತಮಾಷೆ ; ಗೇಲಿ.
ಮಸ್ತ (ನಾ). ತಲೆ.
ಮಸ್ತಕ ೧. = ಮಸ್ತ. ೨. ತುದಿ ; ಶಿಖರ ; ಮೇಲುಭಾಗ.
ಮಸ್ತಿ (ನಾ). ೧. ಸೊಕ್ಕು ; ಅಮಲು ; ಮದ. ೨. ಆನೆ ಮುಂತಾದ ಪ್ರಾಣಿಗಳ ಮದಾವಸ್ಥೆ.
ಮಸ್ತಿಷ್ಕ (ನಾ). ಮಿದುಳು ; ಮೆದುಳು.
ಮಸ್ತು (ನಾ). ೧. ಕೊಬ್ಬು ; ಮದ. ೨. ಮೊಸರಿನ ಮೇಲಿನ ಕೆನೆಯ ಅಂಶ. ೩. ಮಜ್ಜಿಗೆ. (ಅ). ೪. ಹೆಚ್ಚಾಗಿ ; ಅಧಿಕವಾಗಿ.
ಮಸ್ಲಿನ್ (ನಾ). ಒಂದು ಬಗೆಯ ತೆಳುವಾದ ಬಟ್ಟೆ.
ಮಹ (ನಾ). ೧. ಉತ್ಸವ. ೨. ಯಾಗ ; ಯಜ್ಞ.
ಮಹಂತ (ನಾ). ೧. ಹಿರಿಯ ; ಪೂಜ್ಯ. ೨. ದೇವಸ್ಥಾನ, ಮಠ ಮುಂತಾದುವುಗಳ ಮುಖ್ಯಸ್ಥ ; ಧರ್ಮಾಧಿಕಾರಿ.
ಮಹಜರ್(ರು) (ನಾ). ೧. ಪಂಚನಾಮೆ. ೨. ದಾವೆಯನ್ನು ಕುರಿತು ಮಾಡಿದ ನಿರ್ಣಯ. ೩. ಮನವಿಪತ್ರ. ~ನಾಮೆ = ಪಂಚಾಯಿತರ ಸಮಕ್ಷಮದಲ್ಲಿ ಸಿದ್ಧ ಗೊಳಿಸಿದ ವರದಿ.
ಮಹಡಿ (ನಾ). ಮಾಡು; ಉಪ್ಪರಿಗೆ; ಮಾಳ.
ಮಹತಾಪು = ಮತಾಪು.
ಮಹತಿ (ನಾ). ಹಿರಿಮೆ ; ಮಹತ್ತ್ವ.
ಮಹತ್ತಮ (ಗು). ಅತ್ಯಂತ ಹಿರಿದಾದ, –ಶ್ರೇಷ್ಠವಾದ.
ಮಹತ್ತರ (ನಾ). ೧. ಮಂತ್ರಿ. ೨. ಮುಖ್ಯಾಧಿಕಾರಿ ; ಹೆಗ್ಗಡೆ. ೩. ಜೈನರ ದೇಪತೆಗಳಲ್ಲಿ ಒಂದು ಪಂಗಡ. (ಗು). ೪. ಶ್ರೇಷ್ಠವಾದ ; ಮಿಗಿಲಾದ. ೫. ದೊಡ್ಡದಾದ.
ಮಹತ್ತು (ನಾ). ೧. ಮಹತ್ತ್ವ ; ಹಿರಿಮೆ. (ಗು). ೨. ದೊಡ್ಡ ; ಹಿರಿಯ. ೩. ಶ್ರೇಷ್ಠ ; ಉತ್ತಮ. ೪. ಅಧಿಕ ; ಹೆಚ್ಚಾದ.
ಮಹತ್ತ್ವ = ಮಹತ್ವ.
ಮಹತ್ವ (ನಾ). ೧. ಹಿರಿಮೆ ; ಘನತೆ. ೨. ಸಾಮರ್ಥ್ಯ. ೩. ದೊಡ್ಡದು ; ಹಿರಿದು. ~ಆಕಾಂಕ್ಷೆ=ಹಿರಿಯ ಆಸೆ ; ಹೆಬ್ಬಯಕೆ.
ಮಹನವಮಿ (ನಾ). ಅಶ್ವಯುಜ ಶುದ್ಧ ನವಮಿ ಮತ್ತು ಅಂದು ನಡೆಸುವ ಹಬ್ಬ.
ಮಹನೀಯ (ನಾ). ೧. ಗೌರವಕ್ಕೆ ಪಾತ್ರನಾದ ವನು; ಶ್ರೇಷ್ಠ; ಗಣ್ಯ. (ಗು). ೨. ಗೌರವಕ್ಕೆ ಪಾತ್ರನಾದ.

ಮಹಮನೆ (ನಾ). ೧. ಸೌಧ; ಭವನ. ೨. ಮಠ; ಗುರುಮನೆ.

ಮಹಮ್ಮದೀಯ (ನಾ). ಇಸ್ಲಾಂ ಮತದವನು; ಮುಸಲ್ಮಾನ.

ಮಹರ್ಲೋಕ (ನಾ). ಏಳು ಊರ್ಧ್ವಲೋಕಗಳಲ್ಲಿ ಒಂದು.

ಮಹರ್ಷಿ (ನಾ). ಶ್ರೇಷ್ಠನಾದ ಋಷಿ.

ಮಹಲ್(ಲು) (ನಾ). ಸೌಧ; ಭವನ.

ಮಹಸೂಲು (ನಾ). ೧. ತೆರಿಗೆ; ಕರ. ೨. ಜಮೀನಿನಿಂದ ಬರುವ ಹುಟ್ಟುವಳಿ.

ಮಹಳ (ನಾ). ಭಾದ್ರಪದ ಬಹುಳ ಅಮಾವಾಸ್ಯೆ ಮತ್ತು ಅಂದು ಸರ್ವಪಿತೃಗಳಿಗೆ ಮಾಡುವ ಶ್ರಾದ್ಧ.

ಮಹಾಂತ (ನಾ). ೧. ಪೂಜ್ಯ; ಹಿರಿಯ; ಗೌರವಾರ್ಹ. ೨. ದೊಡ್ಡದು; ವಿಶಾಲವಾದುದು. (ಗು). ೩. ದೊಡ್ಡದಾದ; ವಿಶಾಲವಾದ.

ಮಹಾಕಾಯ (ನಾ). ೧. ದೊಡ್ಡ ಶರೀರವುಳ್ಳವನು. ೨. ಒಬ್ಬ ರಾಕ್ಷಸನ ಹೆಸರು.

ಮಹಾಕಾಲ(ಳ) (ನಾ). ೧. ಅತ್ಯಂತ ಕಪ್ಪು ಬಣ್ಣವುಳ್ಳುದು. ೨. ಬಹಳ ಕಪ್ಪಾಗಿರುವವನು. ೩. ಶಿವ. ೪. ಶಿವನ ಪ್ರಮಥಗಣದಲ್ಲಿ ಒಂದು ಪಂಗಡ.

ಮಹಾಕಾವ್ಯ (ನಾ). ೧. ಶ್ರೇಷ್ಠವಾದ ಕಾವ್ಯ. ೨. ಹದಿನೆಂಟು ಬಗೆಯ ವರ್ಣನೆಗಳಿಂದ ಕೂಡಿರುವ ಕಾವ್ಯ.

ಮಹಾಜನ (ನಾ). ೧. ಜನರ ಗುಂಪು, –ಸಮೂಹ. ೨. ಊರಿನ ಹಿರಿಯರು; ಪಂಚರು; ಪಂಚಾಯತಿ ಸದಸ್ಯರು. ೩. ವ್ಯಾಪಾರಿ; ವರ್ತಕ.

ಮಹಾತಲ(ಳ) (ನಾ). ಪಾತಾಳ ಲೋಕಗಳಲ್ಲಿ ಒಂದು.

ಮಹಾತ್ಮ (ನಾ). ಘನವಂತ; ಶ್ರೇಷ್ಠ.

ಮಹಾತ್ಮೆ (ನಾ). ಮಹಿಮೆ; ಘನತೆ.

ಮಹಾದಾನ (ನಾ). ೧. ದೊಡ್ಡ ಕೊಡುಗೆ. ೨. ತುಲಾಪುರುಷ, ಹಿರಣ್ಯಗರ್ಭ, ಬ್ರಹ್ಮಾಂಡ, ಕಲ್ಪವೃಕ್ಷ, ಗೋಸಹಸ್ರ, ಸ್ವರ್ಣಕಾಮಧೇನು, ಸ್ವರ್ಣಾಶ್ವ, ಸ್ವರ್ಣಗಜ, ಸ್ವರ್ಣರಥ, ಪಂಚಲಾಂಗಲ, ಭೂ, ವಿಷ್ಣುಚಕ್ರ, ಕಲ್ಪಲತೆ, ಸಪ್ತಸಾಗರ, ರತ್ನಧೇನು ಮತ್ತು ಮಹಾಭೂತಘಟಗಳೆಂಬ ಹದಿನಾರು ಬಗೆಯ ದಾನ.

ಮಹಾದೇವಿ (ನಾ). ೧. ಪಾರ್ವತಿ. ೨. ರಾಜನ ಪಟ್ಟದ ರಾಣಿ; ಪಟ್ಟಮಹಿಷಿ.

ಮಹಾದ್ವಾರ (ನಾ). ಹೆಬ್ಬಾಗಿಲು; ಅಗಸೆ.

ಮಹಾನವಮಿ = ಮಹನವಮಿ.

ಮಹಾನಸ (ನಾ). ಅಡುಗೆಯ ಮನೆ; ಪಾಕಶಾಲೆ.

ಮಹಾನಸಿಕ (ನಾ). ಅಡುಗೆ ಮಾಡುವವನು; ಬಾಣಸಿಗ.

ಮಹಾನುಭಾವ (ನಾ). ೧. ಅತಿಶಯವಾದ ಸಾಮರ್ಥ್ಯ. ೨. ಶ್ರೇಷ್ಠನಾದವನು; ಗೌರವಸ್ಥ.

ಮಹಾಪದ್ಮ (ನಾ). ೧. ಕುಬೇರನ ನವನಿಧಿಗಳಲ್ಲಿ ಒಂದು. ೨. ಹದಿಮೂರು ಅಂಕೆಗಳಿಂದ ಕೂಡಿದ ಒಂದು ದೊಡ್ಡ ಸಂಖ್ಯೆ. ೩. ಅಷ್ಟಸರ್ಪಗಳಲ್ಲಿ ಒಂದು.

ಮಹಾಪುರುಷ (ನಾ). ಶ್ರೇಷ್ಠವ್ಯಕ್ತಿ; ಗಣ್ಯ.

ಮಹಾಪೂರ (ನಾ). ದೊಡ್ಡ ಪ್ರವಾಹ, –ನೆರೆ.

ಮಹಾಪ್ರಸ್ಥಾನ (ನಾ). ೧. ಸಾವು; ಮರಣ. ೨. ಮರಣದೀಕ್ಷೆಯನ್ನು ಕೈಗೊಂಡು ಉತ್ತರ ದಿಕ್ಕಿಗೆ ಮಾಡುವ ದೀರ್ಘಪ್ರಯಾಣ.

ಮಹಾಪ್ರಾಣ (ನಾ). ೧. ಒತ್ತಿ ಉಚ್ಚರಿಸುವುದು. ೨. ಒತ್ತಿ ಉಚ್ಚರಿಸುವ ಅಕ್ಷರ; ಗಂಡಕ್ಕರ.

ಮಹಾಬಲ(ಳ) (ನಾ). ೧. ಅತ್ಯಂತ ಪರಾಕ್ರಮಿ. ೨. ಶಿವ. ೩. ವಾಯು. (ಗು). ೪. ಅತ್ಯಂತ ಪರಾಕ್ರಮದಿಂದ ಕೂಡಿದ.

ಮಹಾಬಿಲ (ನಾ). ೧. ಆಕಾಶ. ೨. ದೊಡ್ಡ ಗುಹೆ.

ಮಹಾಭಾಗ (ನಾ). ೧. ಬಹಳ ಅದೃಷ್ಟವಂತ. ೨. ಅತ್ಯಂತ ಕೀರ್ತಿಶಾಲಿಯಾದವನು.

ಮಹಾಮನೆ = ಮಹಮನೆ.

ಮಹಾಮಹ (ನಾ). ದೊಡ್ಡ ಉತ್ಸವ; ಮಹೋತ್ಸವ.

ಮಹಾಮಾತ್ಯ (ನಾ). ಪ್ರಧಾನಮಂತ್ರಿ.

ಮಹಾಮಾತ್ರ ೧. = ಮಹಾಮಾತ್ಯ. ೨. ಮಾವಟಿಗ; ಮಾವುತ. ೩. ಆನೆಗಳ ಮೇಲ್ವಿಚಾರಕ.

ಮಹಾರಥ (ನಾ). ೧. ದೊಡ್ಡ ರಥ. ೨. ಒಬ್ಬನೇ ಹತ್ತುಸಾವಿರ ಬಿಲ್ಲುಗಾರರನ್ನು ಎದುರಿಸಬಲ್ಲ ಯೋಧ. ೩. ತನ್ನನ್ನೂ ತನ್ನ ಸಾರಥಿಯನ್ನೂ ತನ್ನ ಕುದುರೆಗಳನ್ನೂ ಕಾಪಾಡಿಕೊಂಡು ಯುದ್ಧಮಾಡುವ ರಥಿಕ.

ಮಹಾರಾಜ ೧. = ಮಹಾರಾಯ. ೨. ಅಡುಗೆಯವನು; ಬಾಣಸಿಗ.

ಮಹಾರಾಣಿ (ನಾ). ೧. ಚಕ್ರವರ್ತಿನಿ; ಸಾಮ್ರಾಜ್ಞಿ. ೨. ರಾಜನ ಪಟ್ಟಮಹಿಷಿ.

ಮಹಾರಾಯ (ನಾ). ಚಕ್ರವರ್ತಿ; ಸಾಮ್ರಾಟ.

ಮಹಾಲಯ (ನಾ). ೧. ದೊಡ್ಡನಾಶ, ಪ್ರಳಯ. ೨. = ಮಹಳ. ~ಅಮಾವಾಸ್ಯೆ = ಮಹಳ.

ಮಹಾಶಯ (ನಾ). ೧. ಮಹಾನುಭಾವ; ಮಹಾತ್ಮ. ೨. ಸಮುದ್ರ.

ಮಹಾಸತಿ (ನಾ). ಮಹಾ ಪತಿವ್ರತೆ, -ಸಾಧ್ವಿ; ಮಾಸ್ತಿ.

ಮಹಿ (ನಾ). ಭೂಮಿ; ಪೃಥ್ವಿ. ~ಚಕ್ರ = ಭೂಮಂಡಲ; ಸಾಮ್ರಾಜ್ಯ. ~ಜಾತ = ಮಹೀಜ. ~ತನಯ = ೧. ಭೂಮಿಯ ಮಗ. ೨. ಮಂಗಳಗ್ರಹ. ೩. ನರಕಾಸುರ. ~ಪತಿ = ಮಹಿಪ.

ಮಹಿಕೆ (ನಾ). ಮಂಜುಗಡ್ಡೆ; ಬರ್ಫ.

ಮಹಿತ (ನಾ). ೧. ಗೌರವಕ್ಕೆ ಅರ್ಹನಾದವನು; ಮಹಿಮೆಯನ್ನು ಹೊಂದಿದವನು. (ಗು). ೨. ಗೌರವಿಸಲ್ಪಟ್ಟ.

ಮಹಿಧರ (ನಾ). ೧. ಭೂಮಿಯನ್ನು ಹೊತ್ತಿರುವುದು; ಪರ್ವತ. ೨. ವಿಷ್ಣು.

ಮಹಿಪ (ನಾ). ಭೂಮಿಯನ್ನು ರಕ್ಷಿಸುವವನು; ರಾಜ.

ಮಹಿಮ (ನಾ). ೧. ಘನತೆಯನ್ನು ಹೊಂದಿರುವವನು; ಮಹಾತ್ಮ. ೨. ಅಷ್ಟಸಿದ್ಧಿಗಳಲ್ಲಿ ಒಂದು; ಬೇಕೆನಿಸಿದಾಗ ತನ್ನ ಆಕಾರವನ್ನು ಹೆಚ್ಚಿಸಿಕೊಳ್ಳಬಲ್ಲ ಶಕ್ತಿ.

ಮಹಿಮೆ (ನಾ). ೧. ಶ್ರೇಷ್ಠತೆ; ಹಿರಿಮೆ; ಮಹತ್ತ್ವ. ೨. ಪ್ರಭಾವ.

ಮಹಿಷ (ನಾ). ೧. ಕೋಣ. ೨. ಒಬ್ಬ ರಾಕ್ಷಸನ ಹೆಸರು. ~ನಾಥ = ಕೋಣಕ್ಕೆ ಅಧಿಪತಿಯಾದವನು; ಯಮ.

ಮಹಿಷಿ (ನಾ). ೧. ಎಮ್ಮೆ. ೨. ರಾಜನ ಪಟ್ಟದರಸಿ.

ಮಹಿಳೆ (ನಾ). ಹೆಂಗಸು; ಸ್ತ್ರೀ.

ಮಹೀಜ (ನಾ). ಭೂಮಿಯಲ್ಲಿ ಹುಟ್ಟಿದುದು; ಮರ, ಗಿಡ ಮುಂತಾದುವು.

ಮಹೀಧರ = ಮಹೀಧ್ರ.

ಮಹೀಧ್ರ (ನಾ). ಪರ್ವತ.

ಮಹೀರುಹ = ಮಹೀಜ.

ಮಹೇಂದ್ರ (ನಾ). ಇಂದ್ರ; ದೇವೇಂದ್ರ. ~ಜಾಲ(ಳ) = ೧. ಇಂದ್ರಜಾಲ; ಗಾರುಡಿ. ೨. ಮೋಸ; ವಂಚನೆ.

ಮಹೋತ್ಸವ (ನಾ). ದೊಡ್ಡ ಉತ್ಸವ, -ಸಮಾರಂಭ.

ಮಹೋತ್ಸಾಹ (ನಾ). ಹೆಚ್ಚಿನ ಹುರುಪು; ಅತ್ಯಧಿಕವಾದ ಲವಲವಿಕೆ.

ಮಹೋದಯ (ನಾ). ೧. ಅಭಿವೃದ್ಧಿ; ಏಳಿಗೆ. ೨. ಅಧಿಕವಾದ ಸುಖವನ್ನು ಹೊಂದುವುದು.

೩. ಪುಣ್ಯಶಾಲಿ; ಸುದೈವಿ. ೪. ಒಂದು ಪುಣ್ಯಕಾಲ.

ಮಹೋದರ (ನಾ). ೧. ದೊಡ್ಡಹೊಟ್ಟೆ. ೨. ಹೊಟ್ಟೆ ಉಬ್ಬಿಕೊಳ್ಳುವ ಒಂದು ಬಗೆಯ ರೋಗ; ಜಲೋದರ. ೩. ದೊಡ್ಡ ಹೊಟ್ಟೆಯುಳ್ಳವನು.

ಮಹೋನ್ನತಿ (ನಾ). ಅಧಿಕವಾದ ಏಳಿಗೆ, -ಅಭಿವೃದ್ಧಿ.

ಮಹೋಪಾಧ್ಯಾಯ (ನಾ). ೧. ಅಧ್ಯಾಪಕರಲ್ಲಿ ಹಿರಿಯ. ೨. ವಿದ್ವಾಂಸರಿಗೆ ಕೊಡುತ್ತಿದ್ದ ಒಂದು ಬಿರುದು.

ಮಹೌಷಧ (ನಾ). ೧. ಉತ್ತಮವಾದ ಮದ್ದು, -ಔಷಧಿ. ೨. ಶುಂಠಿ.

ಮಹೌಷಧಿ = ಮಹೌಷಧ.

ಮಳಮಳಿಸು ೧. = ಮಿಳಿಮಿಳಿಸು. ೨. ತಳಮಳಿಸು; ಸಂಕಟಪಡು. ೩. ಹೊಳೆ; ಪ್ರಕಾಶಿಸು. ೪. ಕೋಮಲವಾಗು; ಮೃದುವಾಗು.

ಮಳಲ್(ಲು) ೧. = ಮಿಳಿಲ್. (ನಾ). ೨. ಮರಳು; ಹೊಯಿಗೆ.

ಮಳವೆ (ನಾ). ಬಣವೆ; ಒಟ್ಟಿಲು.

ಮಳಿ (ನಾ). ೧. ಒಂದು ಜಾತಿಯ ಚಿಪ್ಪುಳ್ಳ ಪ್ರಾಣಿ. ೨. ಸಿಂಪು; ಕಪ್ಪೆಚಿಪ್ಪು.

ಮಳಿಗೆ (ನಾ). ೧. ಅಂಗಡಿ; ಮಂಡಿ. ೨. ದಾಸ್ತಾನು ಇಡುವ ಸ್ಥಳ; ಗುದಾಮು.

ಮಳೆ = ಮಳೆ. ~ಕ(ಗ)ಱೆ(ರೆ) = ಮಳೆಯನ್ನು ಸುರಿಸು; ವರ್ಷಿಸು. ~ಬಿಲ್ಲು = ಕಾಮನಬಿಲ್ಲು.

ಮಱ(ಳ)ಮಱ(ಳ)ಸು (ಕ್ರಿ). ಕೋಪದಿಂದ ಕೆಂಪಾಗು.

ಮಱ(ಳ)ಲ್ (ಕ್ರಿ). ಕಣ್ಣುಮಂಜಾಗು, -ಮಸುಕಾಗು.

ಮಱೆ(ಳೆ) (ನಾ). ಆಕಾಶದಿಂದ ಬೀಳುವ ನೀರು; ವೃಷ್ಟಿ. ~ಕಾ(ಗಾ)ಲ = ಮಳೆ ಬರುವ ಕಾಲ; ವರ್ಷಾಕಾಲ; ಕಾರ್ಗಾಲ. ~ಕೊ(ಗೊ)ಳ್ = ಮಳೆ ಬರು; ಮಳೆಯಾಗು.

ಮಱು(ಳ್ಗು) (ಕ್ರಿ). ೧. ಮಂಕಾಗು; ಕಳೆಗುಂದು. ೨. ಮಾಯವಾಗು; ಕಾಣದಾಗು. ೩. ನಾಶಮಾಡು; ಹಾಳುಮಾಡು. ೪. ಕುಂದು; ಮುಗ್ಗು; ಕಡಮೆಯಾಗು. ೫. ನಾಶವಾಗು. ~ಇಸು = ೧. ಕಡಮೆ ಮಾಡು; ಕುಗ್ಗಿಸು. ೨. ನಾಶಮಾಡು.

ಮಱ್ತಿ(ಳ್ತಿ) (ನಾ). ಒಂದು ಜಾತಿಯ ಮರ; ಮತ್ತಿ; ಅರ್ಜುನ ವೃಕ್ಷ.

ಮಾ (ನಾ). ೧. ಮಾವಿನ ಮರ ಮತ್ತು ಅದರ ಹಣ್ಣು. ೨. ಲಕ್ಷ್ಮಿ. ೩. ತಾಯಿ. ೪. ಕೊಂಡಾಟದ ಒಂದು ಮಾತು. (ಗು). ೫. ಮಹತ್ತಾದ; ದೊಡ್ಡ; ಹಿರಿಯ. ~ಕಾ(ಗಾ)ಯಿ = ಮಾಂಗಾಯ್. ~ಕುವರ = ಲಕ್ಷ್ಮಿಯ ಮಗ; ಮನ್ಮಥ. ~ಜಾತ=ಮಾಕುವರ. ~ಪ(ವ)ಣ್(ಣ್ಣು) = ಮಾವಿನ ಹಣ್ಣು. ~ಪತಿ = ವಿಷ್ಣು. ~ಮರ = ಮಾವಿನ ಮರ. ~ಮಸಕ = ಹೆಚ್ಚಾದ ಸಿಟ್ಟು; ಉಗ್ರಕೋಪ. ~ಮಿಡಿ=ಮಾವಿನ ಸಣ್ಣಕಾಯಿ; ಹೀಚು. ~ರಮಣ = ಮಾಪತಿ.

ಮಾಂಕರಣೆ (ನಾ). ಅಲ್ಲಗಳೆಯುವಿಕೆ; ತಿರಸ್ಕಾರ; ಉಪೇಕ್ಷೆ.

ಮಾ(ಂ)ಕರಿಸು (ಕ್ರಿ). ೧. ತಿರಸ್ಕರಿಸು; ಅವಹೇಳನ ಮಾಡು; ಕಡೆಗಣಿಸು. ೨. ಮೀರು.

ಮಾಂಗಲ್ಯ (ನಾ). ೧. ಮಂಗಳಕರವಾದುದು; ಶುಭ; ಒಳಿತು. ೨. ವಿವಾಹದಲ್ಲಿ ವರನು ವಧುವಿನ ಕೊರಳಿಗೆ ಕಟ್ಟುವ ಆಭರಣ; ತಾಳಿ. ~ಗೀತ = ಮಂಗಳಕರವಾದ ಹಾಡು. ~ತೂರ್ಯ = ಮಂಗಳವಾದ್ಯ. ~ಸೂತ್ರ = ತಾಳಿ ಮತ್ತು ಕರಿಮಣಿಗಳನ್ನು ಪೋಣಿಸಿದ ದಾರ; ಮಂಗಳಸೂತ್ರ.

ಮಾಂಗಾಯ್ (ನಾ). ೧. ಮಾವಿನಕಾಯಿ. ೨. ಮಾವಿನಕಾಯಿಯ ಆಕಾರದ ಒಂದು ಆಭರಣ.

ಮಾಂಗೊನರ್ (ನಾ). ಮಾವಿನ ಚಿಗುರು, -ಕುಡಿ.

ಮಾಂಜಿಷ್ಠ = ಮಂಜಿಷ್ಠ.

ಮಾಂಜು (ಕ್ರಿ). ಮರೆಯಿಸು; ಮುಚ್ಚಿಡು. ~ಇಸು = ಅಡಗಿಸು; ಮುಚ್ಚಿಡು.

ಮಾಂಟೆ (ನಾ). ಗುಡೆ; ಗವಿ.

ಮಾಂಡಲಿ(ಳಿ)ಕ ೧. = ಮಂಡಲಿಕ. (ಗು). ೨. ಮಂಡಲಕ್ಕೆ ಸಂಬಂಧಿಸಿದ.

ಮಾಂತ (ನಾ). ಮಹಂತ.

ಮಾಂತನ (ನಾ). ದೊಡ್ಡಸ್ತಿಕೆ; ಹಿರಿಮೆ.

ಮಾಂತ್ರಿಕ (ನಾ). ಮಂತ್ರಗಾರ; ಮಾಟಗಾರ.

ಮಾ(ಂ)ದಳಿರ್(ರು) = ಮಾಂಗೊನರ್.

ಮಾಂದು (ಕ್ರಿ). ೧. ತಡೆ; ಪ್ರತಿಬಂಧಿಸು. ೨. ಕೊನೆಗಾಣು; ಮುಗಿ. ~ಇಸು = ೧. ಅಡ್ಡಿಪಡಿಸು. ೨. ಕೊನೆಗಾಣುವಂತೆ ಮಾಡು.

ಮಾಂದೋಪು (ನಾ). ಮಾವಿನಮರಗಳ ಸಮೂಹ, -ತೋಪು.

ಮಾಂದ್ಯ (ನಾ). ೧. ಆಲಸ್ಯ; ಜಡತೆ. ೨. ಅನಾರೋಗ್ಯ. ೩. ನಿಶ್ಶಕ್ತಿ; ಬಲಹೀನತೆ; ದೌರ್ಬಲ್ಯ. ೪. ಮೂರ್ಖತನ.

ಮಾಂಬಳ (ನಾ). ೧. ಮಾವಿನ ಹಣ್ಣು. ೨. ಮಾವಿನ ಚಟ್ಟು.

ಮಾಂಸ (ನಾ). ಅಡಗು; ಬಾಡು. ~ಆಹಾರ = ಮಾಂಸದಿಂದ ತಯಾರಿಸಿದ ಆಹಾರ.

ಮಾಂಸಲ(ಳ) (ಗು). ೧. ಮಾಂಸದಿಂದ ತುಂಬಿದ; ಕೊಬ್ಬಿದ. ೨. ಬಲಿಷ್ಠವಾದ; ಶಕ್ತಿಯುತವಾದ.

ಮಾಂಸಾಹಾರಿ (ನಾ). ೧. ಮಾಂಸವನ್ನು ತಿನ್ನುವವನು; ಮಾಂಸಭಕ್ಷಕ. (ಗು). ೨. ಮಾಂಸವನ್ನು ತಿನ್ನುವ.

ಮಾಂಸಿಕ (ನಾ). ಪ್ರಾಣಿಗಳನ್ನು ಕೊಂದು ಜೀವಿಸುವವನು; ಕಟುಕ.

ಮಾಕಂದ (ನಾ). ಮಾವಿನ ಮರ.

ಮಾಕ್ಷಿಕ (ನಾ). ೧. ಜೇನುತುಪ್ಪ. ೨. ಜೇನು ಮೇಣ.

ಮಾಗ = ಮಾಘ.

ಮಾಗಣಿ (ನಾ). ೧. ತಾಲ್ಲೂಕಿನ ಒಂದು ಭಾಗ; ಹೋಬಳಿ. ೨. = ಮಾಗಳಿ.

ಮಾಗಧ (ನಾ). ೧. ಸ್ತುತಿಪಾಠಕ; ಹೊಗಳುಭಟ್ಟ. ೨. ಮಗಧದೇಶದ ದೊರೆ; ಜರಾಸಂಧ. (ಗು). ೩. ಮಗಧದೇಶಕ್ಕೆ ಸಂಬಂಧಿಸಿದ.

ಮಾಗಧಿ (ನಾ). ೧. ಪ್ರಾಕೃತ ಭಾಷಾವರ್ಗಕ್ಕೆ ಸೇರಿದ ಒಂದು ಭಾಷೆ. ೨. ಹೊಗಳುವವಳು; ಸ್ತುತಿಸುವವಳು. ೩. ಒಂದು ಜಾತಿಯ ಮಲ್ಲಿಗೆ. ೪. ಹಿಪ್ಪಲಿ.

ಮಾಗಳಿ (ನಾ). ಒಂದು ಜಾತಿಯ ಬೇರು.

ಮಾಗಿ (ನಾ). ಚಳಿಗಾಲ; ಶಿಶಿರ ಋತು.

ಮಾಗು (ಕ್ರಿ). ೧. ಪಕ್ವವಾಗು; ಹಣ್ಣಾಗು; ಕಳಿ. ೨. ಗಾಯ ಮುಂತಾದುವು ವಾಸಿಯಾಗು.

ಮಾಗುಳಿ = ಮಾಗಳಿ.

ಮಾಗೆ = ಮಾಗಿ.

ಮಾಘ (ನಾ). ಚಾಂದ್ರಮಾನದ ಹನ್ನೊಂದನೆಯ ತಿಂಗಳಿನ ಹೆಸರು.

ಮಾಚಿಪತ್ರೆ = ಮಂಚಿಪತ್ರೆ.

ಮಾಚು = ಮಾಂಜು.

ಮಾಜಿ (ನಾ). ೧. ತಾಯಿ; ಅಮ್ಮ. (ಗು). ೨. ಹಿಂದಿನ; ಮೊದಲಿನ; ನಿವೃತ್ತ.

ಮಾಜು ೧. = ಮಾಂಜು. ೨. ಮಸುಕಾಗು; ಮಂಕಾಗು.

ಮಾಟ (ನಾ). ೧. ಕೆಲಸ; ಕೃತ್ಯ. ೨. ರೀತಿ; ಬಗೆ. ೩. ರಚನೆ; ಅಚ್ಚುಕಟ್ಟು. ೪. ಚೆಲುವು; ಸೊಗಸು. ೫. ಮೋಸ; ವಂಚನೆ. ೬. ಇಂದ್ರಜಾಲ; ಕಣ್ಕಟ್ಟು; ಅಭಿಚಾರ.

∼ಕೂ(ಗೂ)ಲಿ = ಕೆಲಸ ಮಾಡಿದುದಕ್ಕೆ ಕೊಡುವ ಕೂಲಿ, –ಮಜೂರಿ. ∼ಗಾರ = ಯಕ್ಷಿಣಿವಿದ್ಯೆಯುನ್ನು ಬಲ್ಲವನು; ಐಂದ್ರಜಾಲಿಕ. ∼ಮಾಡು = ಮಂತ್ರ, ತಂತ್ರದಿಂದ ಬೇರೆಯವರಿಗೆ ಹಾನಿಯುಂಟಾಗುವಂತೆ ಮಾಡು.

ಮಾಡ (ನಾ). ೧. ಭವನ; ಸೌಧ. ೨. ಮಹಡಿ; ಉಪ್ಪರಿಗೆ. ೩. ವಸ್ತುಗಳನ್ನಿಡಲು ಗೋಡೆಯಲ್ಲಿ ಮಾಡಿದ ಗೂಡು. ೪. ಸಿದಿಗೆ; ಚಟ್ಟ; ವಿಮಾನ.

ಮಾಡಿ (ನಾ). ೧. ಮಹಡಿ; ಮಾಳಿಗೆ. ೨. ಗಾಡಿ; ಬಂಡಿ.

ಮಾಡು (ಕ್ರಿ). ೧. ರಚಿಸು; ತಯಾರಿಸು. ೨. (ಕೆಲಸವನ್ನು) ನಿರ್ವಹಿಸು, –ಸಾಧಿಸು; ಕಾರ್ಯರೂಪಕ್ಕೆ ತರು. ೩. ಧಾನ್ಯವನ್ನು ಶುದ್ಧಮಾಡು. ೪. ಆಚರಿಸು; ಜರುಗಿಸು. (ನಾ). ೫. ಗೂಡು; ಕಪಾಟು. ೬. ಛಾವಣಿ; ಸೂರು. ೭. ಮಹಡಿ; ಉಪ್ಪರಿಗೆ. ∼ಬೆ(ವೆ)ಟ್ಟ = ಕ್ರೀಡೆಗಾಗಿ ರಚಿತವಾದ ಬೆಟ್ಟ; ಕೃತಕಶೈಲ.

ಮಾಣ್(ಣು) (ಕ್ರಿ). ೧. ನಿಲ್ಲಿಸು. ೨. ಸುಮ್ಮನಿರು. ೩. ಕಡಮೆಯಾಗು; ಕುಗ್ಗು. ೪. ಗುಣವಾಗು; ವಾಸಿಯಾಗು. ೫. ಬಿಡು; ತ್ಯಜಿಸು. ೬. ತಪ್ಪಿಹೋಗು; ಇಲ್ಲವಾಗು. ∼ಇಸು = ತಡೆ; ನಿಲ್ಲಿಸು.

ಮಾಣವ (ನಾ). ಹುಡುಗ; ಬಾಲಕ.

ಮಾಣವಕ ೧. = ಮಾಣವ. ೨. ವಿದ್ಯಾರ್ಥಿ; ಶಿಷ್ಯ. ೩. ಇಪ್ಪತ್ತು ಎಳೆಗಳುಳ್ಳ ಹಾರ. ೪. ಒಂದು ವೃತ್ತದ ಹೆಸರು.

ಮಾಣಿ ೧. = ಮಾಣವ. ೨. ಬ್ರಹ್ಮಚಾರಿ; ವಟು. ೩. ಶಿಷ್ಯ. ೪. ಉಪಾಹಾರಗೃಹದಲ್ಲಿ ತಿಂಡಿ, ತೀರ್ಥಗಳನ್ನು ಒದಗಿಸುವವನು.

ಮಾಣಿಕ ೧. = ಮಾಣಿಕ್ಯ. ೨. ಮುಟ್ಟು; ರಜಸ್ಸು. ∼ಕಾ(ಗಾ)ಣ್ = ರಜಸ್ವಲೆಯಾಗು. ∼ಚಟ್ಟ(ಟ್ಟಿ) = ೧. ರತ್ನಪಡಿ ವ್ಯಾಪಾರಿ. ೨. ರತ್ನಪರೀಕ್ಷಕ. ∼ಪ(ವ)ಚ್ಚ = ಕೆಂಪು ಹರಳಿನಿಂದ ಕೂಡಿದ ಆಭರಣ.

ಮಾಣಿಕ್ಯ (ನಾ). ನವರತ್ನಗಳಲ್ಲಿ ಒಂದು; ಕೆಂಪು.

ಮಾತಂಗ (ನಾ). ೧. ಚಂಡಾಲ. ೨. ಆನೆ.

ಮಾತಂಗಿ (ನಾ). ೧. ಚಂಡಾಲ ಹೆಂಗಸು; ಚಂಡಾಲಿತಿ. ೨. ದುರ್ಗೆ.

ಮಾತರಿಶ್ವ (ನಾ). ವಾಯು; ಗಾಳಿ.

ಮಾತಾಮಹ (ನಾ). ತಾಯಿಯ ತಂದೆ; ಅಜ್ಜ.

ಮಾತಾಮಹಿ (ನಾ). ತಾಯಿಯ ತಾಯಿ; ಅಜ್ಜಿ.

ಮಾತು (ನಾ). ೧. ನುಡಿ; ವಚನ. ೨. ಆಣೆ; ಪ್ರಮಾಣ. ೩. ಅಪವಾದ; ನಿಂದೆ. ∼ಆಟ = ಮಾತನಾಡುವುದು; ಹರಟೆ. ∼ಆಡು = ನುಡಿ; ಹೇಳು. ∼ಆಳಿ = ಮಾತುಗ. ∼(ಂ)ಕು(ಗು)ಟ್ಟು = ಹರಟು; ಗಳಹು. ∼ಕಥೆ = ಸಂಭಾಷಣೆ. ∼ಕ(ಗ)ಳ್ಳ = ಮಾತಿಗೆ ತಪ್ಪುವವನು; ಸುಳ್ಳುಗಾರ. ∼ಕು(ಗು)ಳಿ = ಮಾತುಗ. ∼ಕೇ(ಗೇ)ಳ್(ಳು) = ಮಾತನ್ನು ಕೇಳು; ಸಮ್ಮತಿಸು. ∼ಕೊಡು = ವಾಗ್ದಾನ ಮಾಡು; ಭಾಷೆಕೊಡು. ∼ಗಾರ = ಮಾತುಗ. ∼ತಪ್ಪು = ಕೊಟ್ಟ ಮಾತಿನಂತೆ ನಡೆಯದಿರು; ವಚನಭಂಗ ಮಾಡು. ∼ತರು = ನಿಂದೆಯನ್ನು ತರು; ಅಪವಾದಕ್ಕೆ ಅಸ್ಪದ ಕೊಡು. ∼ಪೆ(ವೆ)ಣ್ = ಸರಸ್ವತಿ. ∼ಮುರಿ = ಮಾತುತಪ್ಪು. ∼ಹೊರಿಸು = ಅಪಾದನೆ ಮಾಡು; ನಿಂದಿಸು.

ಮಾತುಗ (ನಾ). ಮಾತುಗಾರ; ವಾಚಾಳಿ; ಹರಟೆಮಲ್ಲ.

ಮಾತುಲ(ಳ) (ನಾ). ತಾಯಿಯ ಒಡಹುಟ್ಟಿದವನು; ಸೋದರಮಾವ.

ಮಾತುಲ(ಳ)ಂಗ (ನಾ). ಒಂದು ಜಾತಿಯ ಮರ ಮತ್ತು ಅದರ ಹಣ್ಣು; ಮಾದಳ.

ಮಾತುಲಾನಿ (ನಾ). ಸೋದರಮಾವನ ಹೆಂಡತಿ; ಸೋದರತ್ತೆ.

ಮಾತುಲು(ಳು)ಂಗ = ಮಾತುಲಂಗ.

ಮಾತೃ (ನಾ). ತಾಯಿ; ಜನನಿ. ~ಭಾಷೆ = ಮನೆಯಲ್ಲಿ ಆಡುವ ಭಾಷೆ; ತಾಯಿನುಡಿ. ~ಭೂಮಿ = ಹುಟ್ಟಿದ ನೆಲ; ತಾಯ್ನಾಡು. ~ಮುಖ = ದಡ್ಡ; ತಿಳಿಗೇಡಿ.

ಮಾತೃಕೆ (ನಾ). ೧. ತಾಯಿ. ೨. ಬ್ರಾಹ್ಮಿ, ಮಾಹೇಶ್ವರಿ, ಕೌಮಾರಿ, ವೈಷ್ಣವಿ, ವಾರಾಹಿ, ಇಂದ್ರಾಣಿ ಮತ್ತು ಚಾಮುಂಡಿ ಎಂಬ ಸಪ್ತಮಾತೃಕೆಯರು. ೩. ವರ್ಣಮಾಲೆಯ ಮೂಲಾಕ್ಷರಗಳು. ೪. ಮಂತ್ರದ ಮೊದಲನೆಯ ಅಥವಾ ಮುಖ್ಯವಾದ ಅಕ್ಷರ. ೫. ಗ್ರಂಥದ ಮೂಲಪ್ರತಿ.

ಮಾತೆ = ಮಾತೃ.

ಮಾತ್ರ (ಅ). ಕೇವಲ.

ಮಾತ್ರಾಗಣ (ನಾ). ಛಂದಸ್ಸಿನಲ್ಲಿ ಮಾತ್ರೆಗಳಿಂದ ಎಣಿಕೆ ಮಾಡುವ ಗಣ.

ಮಾತ್ರೆ (ನಾ). ೧. ಸ್ವಲ್ಪಭಾಗ, –ಅಂಶ. ೨. ಗುಳಿಗೆ. ೩. ಛಂದಸ್ಸಿನಲ್ಲಿ ಒಂದು ಹ್ರಸ್ವಾಕ್ಷರವನ್ನು ಹೇಳುವಷ್ಟು ಕಾಲದ ಅವಧಿ.

ಮಾತ್ಸರಿಯ = ಮಾತ್ಸರ್ಯ.

ಮಾತ್ಸರ್ಯ (ನಾ). ಹೊಟ್ಟೆಕಿಚ್ಚು; ಮತ್ಸರ.

ಮಾದಕ (ಗು). ಅಮಲೇರಿಸುವ; ಮೈಮರೆಸುವ. ~ಪಾನೀಯ = ಕಳ್ಳು ಮುಂತಾದ ಅಮಲೇರಿಸುವ ಪಾನೀಯ, –ಪೇಯ.

ಮಾದಕತೆ (ನಾ). ಅಮಲು; ಮತ್ತು.

ಮಾದರಿ (ನಾ). ೧. ಅಚ್ಚು. ೨. ನಮೂನೆ; ರಚನೆ. ೩. ಅನುಕರಣೆಗೆ ಯೋಗ್ಯವಾದುದು; ಆದರ್ಶ; ಮೇಲ್ಪಂಕ್ತಿ. ೪. ರೀತಿ; ಕ್ರಮ.

ಮಾದಲ(ಳ) = ಮಾತುಲಂಗ.

ಮಾದಿಗ (ನಾ). ಹರಿಜನರಲ್ಲಿ ಒಂದು ಪಂಗಡ. ~ಇತ್ತಿ = ಮಾದಿಗರ ಹೆಂಗಸು.

ಮಾದುಫಲ(ಳ) (ನಾ). ಒಂದು ಬಗೆಯ ಹಣ್ಣು; ಮಾದಳ.

ಮಾದುರ (ನಾ). ೧. ಘೋರಯುದ್ಧ; ಭೀಕರವಾದ ಕಾಳಗ. ೨. ಸವಿಯಾದುದು; ಮಧುರವಾದುದು.

ಮಾದುರಿಯ = ಮಾಧುರ್ಯ.

ಮಾದೆಗ = ಮಾದಿಗ.

ಮಾದೆಗಿ = ಮಾದಿಗಿತ್ತಿ.

ಮಾದೇವಿ = ಮಹಾದೇವಿ.

ಮಾಧವ (ನಾ). ೧. ವಿಷ್ಣು. ೨. ವಸಂತಕಾಲ. ೩. ವೈಶಾಖ ಮಾಸ.

ಮಾಧವಿ (ನಾ). ೧. ಒಂದು ಜಾತಿಯ ಬಳ್ಳಿ ಮತ್ತು ಅದರ ಹೂವು. ೨. ಭೂಮಿ.

ಮಾಧುಕರಿ (ನಾ). ಮಧುಕರಿ; ಕಂತೆಭಿಕ್ಷೆ.

ಮಾಧುರ (ನಾ). ೧. ಸಿಹಿ; ಮಾಧುರ್ಯ. ೨. ಹುಳಿಯಾದ ಮಾದಕ ಪಾನೀಯ.

ಮಾಧುರಿ (ನಾ). ಮಧುರವಾದುದು; ಸಿಹಿಯಾದುದು.

ಮಾಧುರ್ಯ (ನಾ). ೧. ಸಿಹಿ; ಸವಿಯಾದುದು. ೨. ಕೋಮಲತೆ; ಮೃದುತ್ವ. ೩. ಅಂತಃಕರಣ; ಅ-ನು ಕಂ ಪ. ೪. = ಮಾಧುರ್ಯಗುಣ. ~ಗುಣ = ಶ್ಲೇಷೆ, ಪ್ರಸಾದ, ಸಮತೆ, ಮಾಧುರ್ಯ, ಸುಕುಮಾರತೆ, ಅರ್ಥವ್ಯಕ್ತಿ, ಉದಾರತ್ವ, ಓಜಸ್ಸು, ಕಾಂತಿ, ಸಮಾಧಿಗಳೆಂಬ ಕಾವ್ಯದ ಹತ್ತು ಗುಣಗಳಲ್ಲಿ ಒಂದು.

ಮಾಧ್ಯಮ (ನಾ). ೧. ಮತ್ತೊಬ್ಬರಿಗೆ ತಿಳಿಸಲು ಉಪಯೋಗಿಸುವ ಭಾಷೆ ಮೊದಲಾದ ಸಾಧನ. (ಗು). ೨. = ಮಾಧ್ಯಮಿಕ.

ಮಾಧ್ಯಮಿಕ (ಗು). ಮಧ್ಯವರ್ತಿಯಾದ; ನಡುವಿನ.

ಮಾಧ್ಯಾಹ್ನಿಕ (ನಾ). ಮಧ್ಯಾಹ್ನದಲ್ಲಿ ಮಾಡುವ ಸಂಧ್ಯಾವಂದನೆಯೇ ಮುಂತಾದ ನಿತ್ಯಕರ್ಮ.

ಮಾನ (ನಾ). ೧. ಅಳತೆ; ಪ್ರಮಾಣ. ೨. ಅಳತೆ ಮಾಡುವ ಪಾತ್ರೆ. ೩. ಗೌರವ; ಘನತೆ. ೪. ಅಭಿಮಾನ. ೫. ಕೋಪ. ೬. ನಾಚಿಕೆ; ಲಜ್ಜೆ. ೭. ಜನನೇಂದ್ರಿಯ; ಗುಹ್ಯ. ~ಕಳೆ = ಅವಮಾನ ಮಾಡು. ~ಕಾಯು = ಗೌರವವನ್ನು ಕಾಪಾಡು, -ಉಳಿಸು. ~ಕೆ(ಗೆ)ಡು = ಗೌರವವನ್ನು ಕಳೆದುಕೊಳ್ಳುವಿಕೆ. ~ದಂಡ = ಅಳತೆಗೋಲು. ~ಧನ = ಆತ್ಮಗೌರವವುಳ್ಳವನು; ಸ್ವಾಭಿಮಾನಿ. ~ನಿಧಿ = ಗೌರವಕ್ಕೆ ಆಕರನಾಗಿರುವವನು; ಅಭಿಮಾನಿ. ~ಪತ್ರ = ಬಿನ್ನವತ್ತಳೆ; ಅಭಿನಂದನೆಯ ಪತ್ರ. ~ಭಂಗ = ಅವಮಾನ; ತೇಜೋವಧೆ.

ಮಾನಂಗಿ (ನಾ). ಸಣ್ಣಬಾವಿ.

ಮಾನನೀಯ (ನಾ). ೧. ಗೌರವಾರ್ಹ; ಮಾನ್ಯ. (ಗು). ೨. ಗೌರವಾರ್ಹವಾದ; ಮನ್ನಣೆಗೆ ತಕ್ಕ.

ಮಾನವ (ನಾ). ೧. ಮನುಷ್ಯ. (ಗು). ೨. = ಮಾನವೀಯ.

ಮಾನವತಿ (ನಾ). ೧. ಗೌರವವುಳ್ಳ ಹೆಂಗಸು. ೨. ಸ್ವಾಭಿಮಾನಿ.

ಮಾನವರು (ನಾ). ಮನುಷ್ಯರು.

ಮಾನವೀಯ (ಗು). ಮನುಷ್ಯನಿಗೆ ಸಂಬಂಧಪಟ್ಟ.

ಮಾನವೀಯತೆ (ನಾ). ಮನುಷ್ಯತ್ವ; ಮನುಷ್ಯಧರ್ಮ.

ಮಾನಸ ೧. = ಮಾನವ. ೨. ಮನಸ್ಸು; ಪ್ರಜ್ಞೆ. ೩. ಹಿಮಾಲಯಪರ್ವತದಲ್ಲಿಯ ಒಂದು ಸರೋವರ. (ಗು). ೪. ಮನಸ್ಸಿಗೆ ಸಂಬಂಧಿಸಿದ. ~ಇಕೆ(ಕ್ಕೆ) = ೧. ಮಾನವೀಯತೆ. ೨. ಗೌರವ. ~ಪೂಜೆ = ಮನಸ್ಸಿನಲ್ಲಿಯೇ ಮಾಡುವ ಪೂಜೆ. ~ಬಾ(ವಾ)ಟ್(ಳ್) = ಮನುಷ್ಯನ ಬದುಕು, -ಜೀವನ. ~ಶಾಸ್ತ್ರ = ಮನಸ್ಸಿನ ವ್ಯಾಪಾರಗಳಿಗೆ ಸಂಬಂಧಿಸಿದ ಶಾಸ್ತ್ರ; ಮನಶ್ಶಾಸ್ತ್ರ. ~ಹಾನಿ = ಗೌರವ ನಾಶವಾಗುವುದು.

ಮಾನಸಿ (ನಾ). ಹೆಂಗಸು; ಸ್ತ್ರೀ.

ಮಾನಸಿಕ (ಗು). ಮನಸ್ಸಿಗೆ ಸಂಬಂಧಿಸಿದ.

ಮಾನಾವಿ = ಮುಹನವಮಿ.

ಮಾನಾಯ (ನಾ). ಧಾನ್ಯ ಅಳೆಯುವವನಿಗೆ ಕೊಡುವ ಧಾನ್ಯರೂಪದ ಕೂಲಿ; ಪಡಿ.

ಮಾನಿ (ನಾ). ಗೌರವಸ್ಥ; ಮಾನ್ಯ.

ಮಾನಿಗೆ (ನಾ). ಒಂದು ಅಳತೆಯ ಪ್ರಮಾಣ.

ಮಾನಿನಿ (ನಾ). ಹೆಂಗಸು; ಸ್ತ್ರೀ.

ಮಾನಿಷ್ಠ = ಮಾನಿ.

ಮಾನಿಸ (ನಾ). ಮನುಷ್ಯ.

ಮಾನಿಸಗಳ್ತಿ (ನಾ). ಮನಸ್ಸಿನಲ್ಲಿ ವಂಚಿಸುವವಳು.

ಮಾನಿಸು (ಕ್ರಿ). ೧. ಅಭಿಪ್ರಾಯ ಪಡು. ೨. ಅಳತೆ ಮಾಡಿ ನೋಡು. ೩. ದನವು ಗರ್ಭಧಾರಣೆ ಮಾಡಿ ಹಾಲು ಕೊಡದಿರು.

ಮಾನುಷ (ನಾ). ೧. ಮನುಷ್ಯ. (ಗು). ೨. ಮನುಷ್ಯನಿಗೆ ಸಂಬಂಧಿಸಿದ.

ಮಾನುಷಿ = ಮಾನವಿ.

ಮಾನೋವಿ = ಮುಹನವಮಿ.

ಮಾನ್ಯ (ನಾ). ೧. ಗೌರವಸ್ಥ; ಪೂಜ್ಯ. ೨. ದಾನವಾಗಿ ಕೊಡುವ ಭೂಮಿ; ಉಂಬಳಿ. (ಗು). ೩. ಹೊಂದತಕ್ಕ; ಒಪ್ಪತಕ್ಕ. ~ಮಾಡು = ಒಪ್ಪು; ಸಮ್ಮತಿಸು; ಊರ್ಜಿತಗೊಳಿಸು.

ಮಾನ್ಯತೆ (ನಾ). ಗೌರವ; ಪೂಜ್ಯತೆ.

ಮಾನ್ಯೆ (ನಾ). ಗೌರವಸ್ಥೆ; ಪೂಜ್ಯೆ.

ಮಾಪ (ನಾ). ಲಕ್ಷ್ಮೀಪತಿ; ವಿಷ್ಣು.

ಮಾಪಕ (ನಾ). ಅಳೆಯುವ ಸಾಧನ.
ಮಾಪನ (ನಾ). ಅಳೆಯುವಿಕೆ; ಅಳತೆ.
ಮಾಪು (ನಾ). ಅಳತೆಯ ಸಾಧನ.
ಮಾಫಿ = ಮಾಫು.
ಮಾಫು (ನಾ). ೧. ತಪ್ಪನ್ನು ಮನ್ನಿಸುವುದು; ಕ್ಷಮೆ. ೨. ರಿಯಾಯಿತಿ; ಸವಲತ್ತು.
ಮಾಮ (ನಾ). ಸೋದರ ಮಾವ.
ಮಾಮನಿ (ನಾ). ಮದುವೆಯಾದ ಬಳಿಕ ಬೀಗರನ್ನು ಕಳಿಸಿ ಕೊಡುವಾಗ ಹಾಕುವ ಊಟ; ಕಳುಹೂಟ.
ಮಾಮಲೆ (ನಾ). ತಾಲ್ಲೂಕಿನ ಕಂದಾಯವನ್ನು ವಸೂಲು ಮಾಡುವ ಉದ್ಯೋಗ; ತಹಸೀಲದಾರಿಕೆ. ~ದಾರ = ಕಂದಾಯವನ್ನು ವಸೂಲು ಮಾಡುವ ಅಧಿಕಾರಿ; ತಹಸೀಲದಾರ.
ಮಾಮಿ (ನಾ). ಸೋದರತ್ತೆ; ಸೋದರ ಮಾವನ ಹೆಂಡತಿ.
ಮಾಮೂಲ್(ಲು) (ನಾ). ೧. ಸಾಧಾರಣ ವಾಡುದು; ಸಾಮಾನ್ಯ. ೨.= ಮಾಮೂಲಿ. ೩. ಲಂಚ.
ಮಾಮೂಲಿ (ನಾ). ೧. ರೂಢಿ; ಸಂಪ್ರದಾಯ. ೨. ಕಚೇರಿಗಳಲ್ಲಿ ರೂಢಿಯಲ್ಲಿ ಕೊಡಬೇಕಾದ ಪ್ರತಿಫಲ.
ಮಾಯ್(ಯು) (ಕ್ರಿ). ೧. ಕಾಣದಾಗು; ಮರೆಯಾಗು. ೨. ಗುಣಹೊಂದು; ವಾಸಿಯಾಗು.
ಮಾಯ (ನಾ). ೧. ಕಾಣದಾಗುವಿಕೆ; ಮರೆಯಾಗುವಿಕೆ. ೨. ಯಕ್ಷಿಣಿವಿದ್ಯೆ; ಇಂದ್ರಜಾಲ. ~ಆ(ವಾ)ಗು = ಕಾಣದಾಗು; ಅದೃಶ್ಯವಾಗು. ~ಆಚಾರ = ಮೋಸ; ವಂಚನೆ. ~ಮಾಡು = ಕಾಣದಂತೆ ಮಾಡು; ಅದೃಶ್ಯವಾಗಿಸು.
ಮಾಯಕ (ನಾ). ಕಣ್ಕಟ್ಟು; ಮಾಯೆ.
ಮಾಯಕಾತಿ = ಮಾಯಾವಿನಿ.
ಮಾಯಕಾರ (ನಾ). ಮಾಯಾವಿ; ಐಂದ್ರಜಾಲಿಕ.
ಮಾಯಾಜಾಲ (ನಾ). ೧. ಇಂದ್ರಜಾಲ; ಕಣ್ಕಟ್ಟು. ೨. ಮೋಸದ ಬಲೆ; ವಂಚನೆ.
ಮಾಯಾವಿ (ನಾ). ೧. ಮಾಯಾಮಂತ್ರಗಳನ್ನು ತಿಳಿದವನು; ಯಕ್ಷಿಣಿಗಾರ; ಐಂದ್ರಜಾಲಿಕ. ೨. ಕಪಟಿ; ಮೋಸಗಾರ.
ಮಾಯಾವಿನಿ (ನಾ). ೧. ಇಂದ್ರಜಾಲವನ್ನು ಬಲ್ಲವಳು; ಮಾಟಗಾತಿ. ೨. ಮೋಸಗಾತಿ.
ಮಾಯಿ (ನಾ). ೧. ಯಕ್ಷಿಣಿಗಾರ; ಐಂದ್ರಜಾಲಿಕ. ೨. ತಾಯಿ.
ಮಾಯಿಕ ೧. = ಮಾಯಕ. ೨. ಮೋಸಗಾರ. ೩. ಐಂದ್ರಜಾಲಿಕ. (ಗು). ೪. ಮೋಸದಿಂದ ಕೂಡಿದ; ವಂಚನೆಯ. ೫. ಯಕ್ಷಿಣಿ ವಿದ್ಯೆಗೆ ಸಂಬಂಧಿಸಿದ.
ಮಾಯೆ (ನಾ). ೧. ಗಾರುಡಿ; ಇಂದ್ರಜಾಲ; ಯಕ್ಷಿಣಿವಿದ್ಯೆ. ೨. ಮೋಸ; ಕಪಟ. ೩. ಭ್ರಾಂತಿ; ಭ್ರಮೆ. ೪. ಪ್ರೀತಿ; ವ್ಯಾಮೋಹ. ೫. ದುರ್ಗೆ. ~ಪಾಶ = ಮಾಯಾಪಾಶ; ವ್ಯಾಮೋಹ.
ಮಾರ್(ರು) ೧. = ಮಾಜರ್. ೨. = ಮಾರು. (ನಾ). ೩. ಅಗಲವಾಗಿ ನೀಡಿದ ಎರಡು ಕೈಗಳಷ್ಟು ಅಳತೆ; ನಾಲ್ಕು ಮೊಳಗಳಷ್ಟು ಉದ್ದ. ~ಆಡು = ಪ್ರತಿಯಾಗಿ ಹೇಳು; ಎದುರಾಡು. ~ಣಿಸು = ಮಾರ್ಪಡಿಸು; ವ್ಯತ್ಯಾಸಮಾಡು. ~ಉಲಿ = ಪ್ರತಿಧ್ವನಿ; ಮಾರ್ದನಿ. ~ಓಲೆ = ಮರುಪತ್ರ; ಕೂಡಲೆ ಬರೆಯುವ ಉತ್ತರ. ~ಕಟ್ಟೆ = ಪದಾರ್ಥಗಳನ್ನು ಮಾರುವ ಸ್ಥಳ; ಪೇಟೆ. ~ಪಡಿಸು = ವ್ಯತ್ಯಾಸ ಮಾಡು; ಬದಲಾಯಿಸು. ~ಪಡು = ಬದಲಾಗು; ವ್ಯತ್ಯಾಸ ಹೊಂದು. ~ವೇಷ = ಬೇರೆ ವೇಷ; ಬದಲಾಯಿಸಿದ ವೇಷ. ~ಹೋಗು = ಮರುಳಾಗು; ಮನಸೋಲು.

ಮಾರ (ನಾ). ೧. ಕಾಮ; ಮನ್ಮಥ. ೨. ಕೊಲ್ಲುವಿಕೆ; ಸಂಹಾರ. ೩. ಕೊಲ್ಲುವವನು. ೪. ಸಾವು. ೫. ಸೈತಾನ. ~ಜನಕ = ಕಾಮನ ತಂದೆ; ವಿಷ್ಣು. ~ಮಥನ=ಕಾಮನನ್ನು ಸಂಹರಿಸಿದವನು; ಶಿವ. ~ಮರ್ದನ = ಮಾರಮಥನ. ~ಮಾರಣ = ಮಾರಮಥನ. ~ವೈರಿ = ಕಾಮನ ಹಗೆ; ಶಿವ. ~ಹರ = ಮಾರಮಥನ.

ಮಾರಕ (ನಾ). ೧. ಕೆಡುಕನ್ನು ಉಂಟುಮಾಡುವುದು; ಹಾನಿಕಾರಕವಾದುದು. ೨. ಧ್ವಂಸ ಮಾಡುವವನು; ನಾಶಮಾಡುವವನು.

ಮಾರಜಿತ್ತು (ನಾ). ೧. ಮನ್ಮಥನನ್ನು ಗೆದ್ದವನು; ಶಿವ. ೨. ಬುದ್ಧ.

ಮಾರಣ (ನಾ). ೧. ನಾಶ; ಅಳಿವು. ೨. ಕೊಲೆ; ಸಂಹಾರ. ೩. ಹಗೆಯನ್ನು ಕೊಲ್ಲಲು ಮಾಡುವ ಒಂದು ವಿಧಿ. ~ಹೋಮ=ಅನೇಕ ಜನರ ಭೀಕರ ಕೊಲೆ.

ಮಾರಮ್ಮ (ನಾ), ಒಂದು ಕ್ಷುದ್ರ ದೇವತೆಯ ಹೆಸರು.

ಮಾರವ (ಗು). ಮರುಭೂಮಿಗೆ ಸಂಬಂಧಿಸಿದ. ~ಕೂಪ = ಮರುಭೂಮಿಯಲ್ಲಿರುವ ಬಾವಿ.

ಮಾರವಾಡಿ (ನಾ). ೧. ರಾಜಾಸ್ಥಾನದ ಮಾರವಾಡ ದೇಶದವನು. ೨. ಜಿಪುಣ; ಲೋಭಿ.

ಮಾರಾಮಾರಿ (ನಾ). ಹೊಡೆದಾಟ; ಬಡಿದಾಟ.

ಮಾರಿ (ನಾ). ೧. ನಾಶ; ಅಳಿವು. ೨. ಕೊಲೆ. ೩. ಕಾಲರಾ, ಪ್ಲೇಗು ಮುಂತಾದ ಭಯಂಕರ ರೋಗ; ಪಿಡುಗು. ೪. ಉಪದ್ರವ; ಕೇಡು. ೫. ಮೃತ್ಯು. ೬. ಮೃತ್ಯುದೇವತೆ. ೭. ದುರ್ಗೆ. ೮. = ಮಾರಮ್ಮ. (ಗು). ೯. ದೊಡ್ಡ; ಹಿರಿಯ. ~ಕಾ(ಗಾ)ಲ = ಕೆಟ್ಟಕಾಲ; ಅಳಿಗಾಲ. ~ಕು(ಗು)ತ್ತ = ಮಾರಿಬೇನೆ; ಕಾಲರಾ. ~ಬಲೆ = ಮೀನು ಹಿಡಿಯುವ ದೊಡ್ಡ ಬಲೆ. ~ಮಳೆ = ಅತಿವೃಷ್ಟಿ; ಭಾರಿ ಮಳೆ.

ಮಾರಿಕಬ್ಬೆ = ಮಾರಮ್ಮ.

ಮಾರಿಫತ್ತು (ನಾ). ೧. ವಶ; ಅಧೀನ. (ಅ). ೨. ಮೂಲಕವಾಗಿ; ಮುಖಾಂತರ.

ಮಾರುತ (ನಾ). ಗಾಳಿ; ವಾಯು. ~ಆಪ್ತ = ಗಾಳಿಯ ಸ್ನೇಹಿತ; ಅಗ್ನಿ. ~ಬಂಧು = ಮಾರುತಾಪ್ತ. ~ಸುತ=೧. ವಾಯುವಿನ ಮಗ. ೨. ಹನುಮಂತ. ೩. ಭೀಮ.

ಮಾಱ್(ರ್) (ಕ್ರಿ). ೧. ಎದುರಿಸು; ಪ್ರತಿಭಟಿಸು. (ನಾ). ೨. ಪ್ರತಿ; ಇದಿರು; ಮರು. ~ಅಂಕ = ಪ್ರತಿಸ್ಪರ್ಧಿ; ಎದುರಾಳಿ. ~ಅಣಿ = ವೈರಿಪಡೆ; ಶತ್ರುಸೇನೆ. ~ಆನ್ = ಎದುರಿಸು; ಪ್ರತಿಭಟಿಸು. ~ಆಳ್ = ಹಗೆ; ಶತ್ರು. ~ಇಸು = ಇದಿರಾಗಿ ಬಾಣ ಹೊಡೆ; ಪ್ರತಿಬಾಣ ಹೂಡು. ~ಉತ್ತರ = ಪ್ರತ್ಯುತ್ತರ; ಜವಾಬು. ~ಉದ್ದ=೧. ಒಂದಕ್ಕೊಂದು ಉಜ್ಜು; ಪರಸ್ಪರ ತಿಕ್ಕು. ೨. ಎದುರುಬದುರಾಗಿ ಉಜ್ಜು; ಎದುರಾಗಿ ಉಜ್ಜು. ~ಒಡ್ಡು = ೧. ಪ್ರತಿಸ್ಪರ್ಧಿಯಾಗಿ ನಿಲ್ಲು; ಎದುರಿಸು. ೨. ಪ್ರತಿಬಲ; ಶತ್ರುಸೈನ್ಯ. ~ಕ(ಗ)ಣೆ = ಪ್ರತಿಯಾಗಿ ಬಿಟ್ಟ ಬಾಣ. ~ಕೊ(ಗೊ)ಡು = ವಶಪಡಿಸು; ವಶಕ್ಕೆ ಒಪ್ಪಿಸು. ~ಕೊಳ್ = ವಿರೋಧಿಸು; ಪ್ರತಿಭಟಿಸು. ~ಕೊ(ಗೊ)ೞ್(ಲು) = ಮಾರ್ಗಣೆ. ~ತಳೆ = ಪ್ರತಿಫಲಿಸು; ಪ್ರತಿಬಿಂಬಿಸು. ~ತಾಗು=ಪರಸ್ಪರ ಹೊಡೆ, -ಮುಟ್ಟು. ~ದನಿ = ಪ್ರತಿಧ್ವನಿ. ~ಸು[illegible] = ೧. ಪ್ರತ್ಯುತ್ತರ; ಜವಾಬು. ೨. ಎದುರು ಮಾತು; ಪ್ರತಿ ಮಾತು. ~ಪಡೆ = ಶತ್ರು

ಸೈನ್ಯ ; ವೈರಿದಳ. ~ಪೊಡೆ = ಪ್ರತಿಯಾಗಿ ಹೊಡೆ. ~ಪೊಳೆ = ಪ್ರತಿಬಿಂಬಿಸು. ~ಬ(ವ)ಲ = ಮಾರ್ಪಡೆ. ~ಮಲೆ = ಎದುರುಬೀಳು ; ಪ್ರತಿಭಟಿಸು.

ಮಾಱು(ರು) (ಕ್ರಿ). ೧. ವಿಕ್ರಯಿಸು. ೨. ಬದಲಾಯಿಸು ; ಮಾರ್ಪಡಿಸು. ೩. ಬದಲಾಗು ; ಮಾರ್ಪಾಟುಹೊಂದು. ~ಆಟೆ = ವಿಕ್ರಯ ; ಹಣಕ್ಕೆ ಬದಲಾಗಿ ವಸ್ತುವನ್ನು ಕೊಡುವುದು. ~ಆಳಿ = ವ್ಯಾಪಾರಿ ; ವರ್ತಕ. ~ಪೊ(ವೊ)ೀಗು = ೧. ವಶವಾಗು ; ಮರುಳಾಗು. ೨. ಮೋಹಗೊಳ್ಳು.

ಮಾರ್ಗ (ನಾ). ೧. ಹಾದಿ; ದಾರಿ. ೨. ರೀತಿ ; ಬಗೆ. ೩. ರೂಢಿ; ಸಂಪ್ರದಾಯ. ೪. ಕಾವ್ಯ, ನೃತ್ಯ, ಸಂಗೀತ ಮುಂತಾದುವುಗಳಲ್ಲಿಯ ಪ್ರೌಢವಾದ ಶೈಲಿ. ~ಆಯಾಸ = ಪ್ರಯಾಣದಿಂದುಂಟಾದ ಬಳಲಿಕೆ. ~ದರ್ಶಕ = ಹಾದಿಯನ್ನು ತೋರಿಸುವವನು. ~ದರ್ಶನ = ಹಾದಿಯನ್ನು ತೋರಿಸುವುದು.

ಮಾರ್ಗಗ (ನಾ). ದಾರಿಹೋಕ ; ಹಾದಿಗ.

ಮಾರ್ಗಣ(ನಾ). ೧. ಹುಡುಕುವಿಕೆ; ಶೋಧನೆ. ೨. ಯಾಚಕ ; ಬೇಡುವವನು. ೩. ಶತ್ರು ; ವೈರಿ. ೪. ಬಾಣ.

ಮಾರ್ಗಶಿರ (ನಾ). ಚಾಂದ್ರಮಾನ ವರ್ಷದ ಒಂಬತ್ತನೆಯ ತಿಂಗಳು.

ಮಾರ್ಗಶೀರ್ಷ = ಮಾರ್ಗಶಿರ.

ಮಾರ್ಗಸ್ಥ = ಮಾರ್ಗಗ.

ಮಾರ್ಜನ (ನಾ). ೧. ತೊಳೆಯುವುದು. ೨. ಚೊಕ್ಕಟಗೊಳಿಸುವುದು ; ಶುದ್ಧಗೊಳಿಸುವುದು.

ಮಾರ್ಜನಿ (ನಾ). ಕಸಬರಿಗೆ.

ಮಾರ್ಜನೆ = ಮಾರ್ಜನ.

ಮಾರ್ಜಾರ = ಮಾರ್ಜಾಲ.

ಮಾರ್ಜಾಲ (ನಾ). ಬೆಕ್ಕು ; ಬಿಡಾಲ.

ಮಾರ್ತಂಡ (ನಾ). ಸೂರ್ಯ ; ನೇಸರು. ~ಸುತ = ೧. ಸೂರ್ಯನ ಮಗ. ೨. ಶನಿ. ೩. ಯಮ. ೪. ಸುಗ್ರೀವ. ೫. ಕರ್ಣ.

ಮಾರ್ತಾಂಡ = ಮಾರ್ತಂಡ.

ಮಾರ್ದಂಗಿಕ (ನಾ). ಮೃದಂಗವನ್ನು ಬಾರಿಸುವವನು ; ಮದ್ದಳಿಗ.

ಮಾರ್ದವ (ನಾ). ಕೋಮಲತೆ; ಮೃದುತ್ವ; ಸುಕುಮಾರತೆ.

ಮಾರ್ದಳಿಕ = ಮಾರ್ದಂಗಿಕ.

ಮಾರ್ಪಾಟು (ನಾ). ಬದಲಾವಣೆ.

ಮಾರ್ಪಾಡು = ಮಾರ್ಪಾಟು.

ಮಾರ್ಪು (ನಾ). ವ್ಯತ್ಯಾಸ ; ಬದಲು.

ಮಾರ್ಮಿಕ (ಗು). ೧. ಮನಸ್ಸಿಗೆ ತಾಗುವ. ೨. ಮರ್ಮಕ್ಕೆ ಮುಟ್ಟುವ. ೩. ಅಂತರಂಗ ಸ್ಪರ್ಶಿಯಾದ.

ಮಾಲ(ಳ)ತಿ (ನಾ). ಮಲ್ಲಿಗೆ ಜಾತಿಗೆ ಸೇರಿದ ಒಂದು ಬಳ್ಳಿ ಮತ್ತು ಅದರ ಹೂವು ; ಜಾಜಿ.

ಮಾಲಾಕಾರ = ಮಾಲೆಗಾಱ.

ಮಾಲಿ (ನಾ). ೧. ಮಾಲೆಯನ್ನು ಧರಿಸಿಕೊಂಡಿರುವವನು. ೨. = ಮಾಲೆಗಾಱ. ೩. ತೋಟದ ಕೆಲಸ ಮಾಡುವವನು ; ತೋಟಿಗ.

ಮಾಲಿಕ = ಮಾಲೆಗಾಱ.

ಮಾಲಿ(ಳಿ)ಕೆ (ನಾ). ೧. ಹೂವಿನ ಹಾರ ; ಮಾಲೆ. ೨. ಸರ ; ಕಂಠಿಸರ. ೩. ಒಟ್ಟಾಗಿ ಸೇರಿಸಿದುದು; ಗುಂಪು. ೪. ಒಂದು ಜಾತಿಯ ಮಲ್ಲಿಗೆ.

ಮಾಲಿನಿ (ನಾ). ೧. ಹೂಮಾಲೆಯನ್ನು ಕಟ್ಟಿ ಮಾರುವವಳು; ಹೂವಾಡಗಿತ್ತಿ. ೨. ಒಂದು ವೃತ್ತದ ಹೆಸರು.

ಮಾಲಿನ್ಯ (ನಾ). ೧. ಕೊಳೆ; ಹೊಲಸು. ೨. ದೋಷ ; ಕುಂದು.

ಮಾಲೀಕ (ನಾ). ಯಜಮಾನ; ಒಡೆಯ.
ಮಾಲೀಸು (ನಾ). ಉಜ್ಜುವುದು; ತಿಕ್ಕುವುದು.
ಮಾಲು (ಕ್ರಿ). ೧. ಬಾಗು; ಓರೆಯಾಗು. (ನಾ). ೨. ಸರಕು; ಸಾಮಗ್ರಿ. ~ಇಸು = ೧. ಒಂದು ಕಡೆಗೆ ಬಾಗುವಂತೆ ಮಾಡು; ಓರೆಯಾಗಿಸು. ೨. ಕಡೆಗಣ್ಣಿನಿಂದ ನೋಡು. ೩. ಒಂದೇ ಸಮನೆ ನೋಡು; ದಿಟ್ಟಿಸಿ ನೋಡು. ~ಕ(ಗ)ಣ್ಣು = ಮೆಳ್ಳೆಗಣ್ಣು; ವಕ್ರದೃಷ್ಟಿಯುಳ್ಳ ಕಣ್ಣು.
ಮಾಲೆ(ಳೆ) (ನಾ). ೧.(ಹೂವಿನ)ಹಾರ, –ಸರ. ೨. ಶ್ರೇಣಿ; ಸಾಲು; ಪಂಕ್ತಿ. ~ಕ(ಗ)ಟ್ಟು =೧. ಹೂವುಗಳನ್ನು ಕಟ್ಟು; ಹಾರ ಮಾಡು. ೨. ಸಾಲುಗಟ್ಟು; ಶ್ರೇಣಿಯಾಗಿ ನಿಲ್ಲು. ~ಕಾ(ಗಾ)ಋ(ರ) = ಹೂವನ್ನು ಕಟ್ಟಿ ಮಾರುವವನು; ಹೂವಾಡಿಗ. ~ಕೊ(ಗೊ)ಳ್ = ಸಾಲುಗಟ್ಟು; ಒಂದರ ಹಿಂದೆ ಮತ್ತೊಂದು ಬರು. ~ಗೈ = ಕೂಡಿಸು; ಜೋಡಿಸು. ~ಹಾಕು = ೧. ಗೌರವಸೂಚಕವಾಗಿ ಹಾರವನ್ನು ಹಾಕು. ೨. ಮದುವೆಯಾಗು; ವರಿಸು.
ಮಾಲ್ಕಿ (ನಾ). ಒಡೆತನ; ಸ್ವಾಮ್ಯ.
ಮಾಲ್ಯ (ನಾ). ಹೂಮಾಲೆ; ಹಾರ.
ಮಾವ (ನಾ). ೧. ತಾಯಿಯ ಸಹೋದರ. ೨. ಗಂಡನ ಅಥವಾ ಹೆಂಡತಿಯ ತಂದೆ.
ಮಾವ(ಂ)ತ (ನಾ). ಆನೆಯನ್ನು ನಡಸುವವನು; ಮಾವಟಿಗ.
ಮಾವಟಿಗ = ಮಾವಂತ.
ಮಾವತಿಗ = ಮಾವಂತ.
ಮಾವು (ನಾ). ಒಂದು ಜಾತಿಯ ಮರ ಮತ್ತು ಅದರ ಹಣ್ಣು.
ಮಾವುತ = ಮಾವಂತ.
ಮಾವುರಿಗ (ನಾ). ಬೇಟೆಗಾರ; ಬೇಡ.
ಮಾವುಲಿಗ = ಮಾವುರಿಗ.
ಮಾಷ (ನಾ). ೧. ಒಂದು ಬಗೆಯ ದ್ವಿದಳ ಧಾನ್ಯ; ಉದ್ದು. ೨. = ಮಾಷಿ. ೩. ಮೂರ್ಖ.
ಮಾಸ (ನಾ). ಮೂವತ್ತು ದಿನಗಳ ಅವಧಿ; ತಿಂಗಳು. ~ಅಶನ = (ಜೀವನೋಪಾಯಕ್ಕಾಗಿ ಕೊಡುವ) ತಿಂಗಳ ಸಂಬಳ, –ವೇತನ. ~ಪತ್ರಿಕೆ = ತಿಂಗಳಿಗೊಮ್ಮೆ ಬರುವ ಪತ್ರಿಕೆ.
ಮಾಸತಿ = ಮಹಾಸತಿ. ~ಕಲ್ಲು = ಮಾಸ್ತಿಕಲ್ಲು.
ಮಾಸರ (ನಾ). ೧. ಆಧಿಕ್ಯ; ಬಾಹುಳ್ಯ. ೨. ಚೊಕ್ಕಟ; ಚೊಕ್ಕತನ. ೩. = ಮಾಸರಿ. ~ಇಕೆ = ಮಾಸರಿ.
ಮಾಸರಂ (ಅ). ಮನೋಹರವಾಗಿ; ಚೆಲುವಾಗಿ; ಚೆನ್ನಾಗಿ.
ಮಾಸರಿ (ನಾ). ಚೆಲುವು; ಸೊಗಸು.
ಮಾಸಲಾಣಿ (ನಾ). ಮದುವೆ ಮುಂತಾದ ಶುಭಕಾರ್ಯಗಳಾದ ಒಂದು ತಿಂಗಳಿಗೆ ನಡಸುವ ಒಂದು ಸಮಾರಂಭ; ತಿಂಗಳ ನಾಗೋಲಿ.
ಮಾಸಲು (ನಾ). ೧. ಮಾಸಿಹುದು; ಕೊಳೆ; ಹೊಲಸು. ೨. ಕಾಂತಿಯಿಲ್ಲದಿರುವಿಕೆ; ಮಂಕು.
ಮಾಸಲೆ (ನಾ). ೧. ಪ್ರಕಾರ; ರೀತಿ. ೨. ಮಾದರಿ; ಆಕಾರ.
ಮಾಸವಳ (ನಾ). ಶೂರ; ಸಾಹಸಿ; ವೀರ.
ಮಾಸಾದಿ (ನಾ). ಶ್ರೇಷ್ಠನಾದ ಕುದುರೆ ಸವಾರ.
ಮಾಸಾಳ್(ಳು) = ಮಾಸವಳ.
ಮಾಷಿ (ನಾ). ಒಂದು ತೂಕ; ಎಂಟು ಗುಂಜಿಗಳ ತೂಕ.
ಮಾಸಿಕ (ನಾ). ೧. ವ್ಯಕ್ತಿ ಸತ್ತ ಮೊದಲ ವರ್ಷದಲ್ಲಿ ತಿಂಗಳಿಗೆ ಒಂದು ಸಲ ಮಾಡುವ ಶ್ರಾದ್ಧ. ೨. ಮಾಸಪತ್ರಿಕೆ. (ಗು). ೩. ತಿಂಗಳಿಗೆ ಒಮ್ಮೆ ಬರುವ.

ಮಾಸು (ಕ್ರಿ). ೧. ಮಂಕಾಗು ; ಕಳೆಗುಂದು. ೨. ಕೊಳಕಾಗು ; ಹೊಲಸಾಗು. ೩. ದೋಷದಿಂದ ಕೂಡಿರು ; ಕಳಂಕಹೊಂದು. ೪. ಕೊಳಕು ಮಾಡು. (ನಾ). ೫. ಕೊಳೆ ; ಹೊಲಸು ; ಕಶ್ಮಲ. ೬. ದೋಷ ; ಪಾಪ. ೭. ಹೆರಿಗೆಯ ಸತ್ತೆ; ಕಸ.

ಮಾಸ್ತಿ = ಮಹಾಸತಿ. ~ಕಲ್ಲು = ಸಹಗಮನ ಮಾಡಿದ ಪತಿವ್ರತೆಯ ಸ್ಮಾರಕಶಿಲೆ.

ಮಾಹಳ = ಮಹಳ.

ಮಾಹಾತ್ಮ್ಯ (ನಾ). ೧. ಹಿರಿಮೆ ; ಘನತೆ. ೨. ಒಂದು ಸ್ಥಳದ ಅಥವಾ ವಸ್ತುವಿನ ಹಿರಿಮೆಯನ್ನು ಸಾರುವ ಐತಿಹ್ಯ ಮತ್ತು ಅಂತಹ ಗ್ರಂಥ.

ಮಾಹಾತ್ಮ್ಯ = ಮಾಹಾತ್ಮ್ಯ.

ಮಾಹಿತಿ (ನಾ). ೧. ತಿಳಿವಳಿಕೆ ; ಅರಿವು. ೨. ವಿವರಣೆ ; ಸಮಾಚಾರ.

ಮಾಹಿಷ (ಗು). ಎಮ್ಮೆ ಅಥವಾ ಕೋಣಕ್ಕೆ ಸಂಬಂಧಿಸಿದ.

ಮಾಹಿಷಿ (ನಾ). ಎಮ್ಮೆ.

ಮಾಹಿಷಿಕ (ನಾ). ಹೆಂಡತಿಯನ್ನು ವ್ಯಭಿಚಾರಕ್ಕೆ ಪ್ರೇರೇಪಿಸಿ, ಹಣ ಸಂಪಾದಿಸುವವನು ; ಜಾಯಾಜೀವ.

ಮಾಹುತ = ಮಾವಂತ.

ಮಾಹೆ (ನಾ). ತಿಂಗಳು ; ಮಾಸ.

ಮಾಹೇಯ (ನಾ). ೧. ಮಂಗಳಗ್ರಹ ; ಕುಜ. (ಗು). ೨. ಭೂಮಿಯ ; ನೆಲದ.

ಮಾಹೇಶ್ವರ (ನಾ). ೧. ಶಿವನನ್ನು ಪೂಜಿಸುವವನು ; ಶಿವನ ಉಪಾಸಕ. (ಗು). ೨. ಶಿವನಿಗೆ ಸಂಬಂಧಿಸಿದ.

ಮಾಳ (ನಾ). ೧. ಅಟ್ಟ; ಅಟ್ಟಣೆ. ೨. ವಿಶಾಲವಾದ ಜಾಗ ; ಬಯಲು. ೩. (ಉಪ್ಪನ್ನು ತಯಾರಿಸಲು) ಉಪ್ಪುನೀರನ್ನು ತಡೆದು ನಿಲ್ಲಿಸುವ ಪಾತಿ ; ಉಪ್ಪುಮಡಿ. ೪. ಏರಿ ; ದಿಣ್ಣೆ. ೫. = ಮಹಳ.

ಮಾಳಜಿಗೆ (ನಾ). ಒಂದು ಬಗೆಯ ಆಯುಧ.

ಮಾಳಬೆಕ್ಕು (ನಾ). ಕರಿಯ ಬಣ್ಣದ ಸ್ಥೂಲವಾದ ಬೆಕ್ಕು.

ಮಾಳಿ (ನಾ). ಅಗಸಗಿತ್ತಿ.

ಮಾಳಿಗೆ (ನಾ). ೧. ಮಹಡಿ ; ಉಪ್ಪರಿಗೆ. ೨. ಮನೆಯ ಮೇಲಿನ ಮಣ್ಣಿನ ಹೊದಿಕೆ. ~ಮನೆ = ೧. ಮಹಡಿ ಮನೆ ; ಉಪ್ಪರಿಗೆ ಮನೆ. ೨. ಮಣ್ಣಿನ ಮೇಲ್ಛಾವಣಿ ಇರುವ ಮನೆ.

ಮಾಟ್ಕಿ(ಳ್ಕೆ) (ನಾ). ೧. ರೀತಿ ; ಬಗೆ. ೨. ಆಚರಣೆ; ನಡವಳಿ. ೩. ಕೆಲಸ ; ಕಾರ್ಯ ; ಮಾಡುವಿಕೆ.

ಮಿಂಚು (ಕ್ರಿ). ೧. ಪ್ರಕಾಶಿಸು. ೨. ಆಕಾಶದಲ್ಲಿ ವಿದ್ಯುತ್ತಿನ ಬೆಳಕು ಕಾಣಿಸಿಕೊಳ್ಳು. ೩. ಮೇಲಾಗು; ಶ್ರೇಷ್ಠವಾಗು. ೪. ದಾಟು ; ಮೀರು. ೫. ವೇಗವಾಗಿ ಚಲಿಸು. ೬. ಸ್ಫುರಿಸು ; ಮಿನುಗು ; ಹೊಳೆ. (ನಾ). ೭. ಹೊಳಪು ; ಪ್ರಕಾಶ. ೮. ಮೋಡಗಳ ಘರ್ಷಣೆಯಿಂದ ಉಂಟಾಗುವ ಬೆಳಕು ; ವಿದ್ಯುತ್ತು. ೯. ಮುತ್ತೈದೆಯರು ಕಾಲಿನ ಬೆರಳಿಗೆ ಧರಿಸುವ ಒಂದು ಬಗೆಯ ಆಭರಣ. ~(ಂ)ಪು(ಬು)ಬು(ಳು) = ಮಿಣುಕುಹುಳು ; ಖದ್ಯೋತ. ~ಪ(ವ)ಡೆ = ಹೊಳಪನ್ನು ಹೊಂದು ; ಶೋಭಿಸು. ~ಹುಳು = ಮಿಂಚುಂಬುಳು.

ಮಿಂಟೆ (ನಾ). ೧. ಒಂದು ಬಗೆಯ ಬಾಣ. ೨. ಗೋಲಿ ; ಗುಂಡು. ೩. ಮುಷ್ಟಿ ಹೆಂಟೆ. ೪. ಒಂದು ಜಾತಿಯ ಕೀಟ ; ಮಿಡತೆ. ೫. ಗುಂಪು ; ಸಮೂಹ.

ಮಿಂಡ (ನಾ). ೧. ಉಪಪತಿ ; ಗೆಣೆಯ. ೨. ವಿಷಯಲಂಪಟ ; ಜಾರ. ೩. ಶೂರ ; ಕಲಿ. ೪. ಮೇಲಾದವನು. ~ಗಾಣ(ರ) = ಮಿಂಡ ; ಉಪಪತಿ. ~ಪ್ರಾಯ = ತಾರುಣ್ಯ ; ಯೌವನ.

ಮಿಂಡಿ (ನಾ). ೧. ಉಪಪತ್ನಿ; ಬಂಗಾರದವಳು. ೨. ಜಾರೆ; ಕುಲಟೆ. ೩. ತರುಣಿ; ಪ್ರಾಯದ ಹೆಂಗಸು.

ಮಿಂಡು (ನಾ). ೧. ಭೋಗಾಭಿಲಾಷೆ; ಕಾಮುಕತೆ. ೨. ಪ್ರಾಯ; ಹರಯ. ೩. ಉನ್ನತ ಸ್ಥಾನ, -ಪದವಿ. ~ಏಳ್(ಳು) = ೧. ಹರಯದ ಉತ್ಸಾಹದಿಂದ ಉಬ್ಬು. ೨. ಮೈಮರೆ; ಅಮಲೇರು.

ಮಿಂಡೆ = ಮಿಂಡಿ.

ಮಿಕ ೧. = ಮಿಗ. ೨. ಕಾಡುಹಂದಿ; ಸೂಕರ. ೩. ಮೋಸಕ್ಕೆ ಗುರಿಯಾಗುವ ವ್ಯಕ್ತಿ.

ಮಿಕ್ಕು (ಕ್ರಿ). ೧. ಅಧಿಕವಾಗು; ಹೆಚ್ಚಾಗು. ೨. ಶ್ರೇಷ್ಠವಾಗು. ೩. ದಾಟು; ಅತಿಕ್ರಮಿಸು.

ಮಿಗ (ನಾ). ೧. ಮೃಗ; ಪ್ರಾಣಿ. ೨. ಜಿಂಕೆ; ಚಿಗರೆ. ~ಪ(ವ)ಕ್ಕೆ = ಮೃಗಗಳು ಮಲಗಿಕೊಳ್ಳುವ ಸ್ಥಳ; ಹಕ್ಕೆ. ~ಪ(ವ)ಗೆ = ಜಿಂಕೆಯ ಶತ್ರು; ಹುಲಿ. ~ಬೇರ = ಮಿಗವಗೆ. ~ಲಚ್ಛಣ = ಜಿಂಕೆಯನ್ನು ಲಾಂಛನವನ್ನಾಗುಳ್ಳವನು; ಚಂದ್ರ.

ಮಿಗಗೆಯ್ಯ (ನಾ). ಜಿಂಕೆಯನ್ನು ಕೈಯಲ್ಲಿ ಹಿಡಿದವನು; ಶಿವ.

ಮಿಗದೇರ (ನಾ). ಜಿಂಕೆಯನ್ನು ವಾಹನವಾಗುಳ್ಳವನು; ವಾಯು.

ಮಿಗಸಿರ = ಮೃಗಶಿರೆ.

ಮಿಗಿಲ್(ಲು) (ನಾ). ೧. ಹೆಚ್ಚಾದುದು; ಅಧಿಕವಾದುದು. ೨. ಶ್ರೇಷ್ಠವಾದುದು; ಉತ್ತಮವಾದುದು. ~ಆಗು = ೧. ಮೀರು; ಹೆಚ್ಚಾಗು. ೨. ಮೇಲಾಗು; ಶ್ರೇಷ್ಠವಾಗು.

ಮಿಗು (ಕ್ರಿ). ೧. ಹೆಚ್ಚಾಗು; ಅಧಿಕವಾಗು. ೨. ಮೀರು; ದಾಟು. ೩. ಶ್ರೇಷ್ಠವಾಗು; ಮೇಲಾಗು. ೪. ಖರ್ಚಾಗಿ ಉಳಿ.

ಮಿಗೆ (ಅ). ಅಧಿಕವಾಗಿ; ಹೆಚ್ಚಾಗಿ.

ಮಿಟಕಲಾಡಿ (ನಾ). ಒಯ್ಯಾರಿ; ಸೋಗಲಾಡಿ.

ಮಿಟಕು (ಕ್ರಿ). ೧. ರೆಪ್ಪೆಯನ್ನು ಬಡಿ; ರೆಪ್ಪೆಯಾಡಿಸು. ೨. ರೆಪ್ಪೆಯಾಡಿಸುವುದರಿಂದ ಕಣ್ಸನ್ನೆ ಮಾಡು.

ಮಿಟುಕು = ಮಿಟಕು. ~ಇಸು = ಮಿಟಕು.

ಮಿಟ್ಟೆ (ನಾ). ೧. ಮಣ್ಣಿನ ಹೆಂಟೆ. ೨. (ಮಣ್ಣಿನ) ಗೋಲಿ. ೩. ದಿಣ್ಣೆ; ಏರಿ. ೪. ಎತ್ತರವಾದುದು; ಉನ್ನತವಾದುದು. ೫. ರಾಶಿ; ಸಮೂಹ. ೬. ಒಂದು ಬಗೆಯ ಬಾಣ. ೭. ಮೊಗ್ಗು; ಮುಗುಳು.

ಮಿಠಾಯಿ (ನಾ). ಒಂದು ಬಗೆಯ ಸಿಹಿತಿಂಡಿ. ~ಗಾರ = ಮಿಠಾಯಿಯನ್ನು ತಯಾರಿಸುವವನು ಅಥವಾ ಮಾರುವವನು.

ಮಿಠಾರಿ (ನಾ). ಚೆಲುವೆ; ರೂಪವತಿ.

ಮಿಡ = ಮೃಡ.

ಮಿಡಚಿ = ಮಿಡತೆ.

ಮಿಡತೆ (ನಾ). ಒಂದು ಜಾತಿಯ ಹಾರುವ ಹುಳು; ಶಿವನ ಕುದುರೆ.

ಮಿಡಿ (ಕ್ರಿ). ೧. ತಂತಿವಾದ್ಯಗಳನ್ನು ನುಡಿಸು; ಬೆರಳಿನಿಂದ ಮೀಟು. ೨. ಬಿಲ್ಲಿನ ಹೆದೆಯನ್ನು ಜಗ್ಗು; ಠೇಂಕರಿಸು. ೩. ಚಿಮ್ಮು; ಮೇಲಕ್ಕೆ ಹಾರಿಸು. ೪. ಚಿಟಿಕೆ ಹಾಕು; ಎರಡು ಬೆರಳುಗಳನ್ನು ಸೇರಿಸಿ ಶಬ್ದಮಾಡು. ೫. ಪುಟನೆಗೆ; ಹಾರು; ಕುಪ್ಪಳಿಸು. ೬. ಸ್ಪಂದಿಸು; ತವಕಿಸು. ೭. ಒರಸು; ತೊಡೆ. (ನಾ). ೮. ಹೀಚು; ಕಸುಗಾಯಿ. ೯. ಹಿಮ್ಮಡಿ; ಮಡ. ೧೦. ಚಬಕ; ಚಾಟಿ. (ಗು). ೧೧. ಸಣ್ಣ; ಚಿಕ್ಕ. ~ಕಾ(ಗಾ)ಯಿ = ಹೀಚು. ~ನಾಗ = ಸಣ್ಣ ಜಾತಿಯ ನಾಗರಹಾವು. ~ನಾಗರ = ಮಿಡಿನಾಗ. ~ಬಿ(ವಿ)ಲ್ = ಕಲ್ಲನ್ನು ಬೀರಲು ಉಪಯೋಗಿಸುವ ಬಿದಿರಿನ ಬಿಲ್ಲು.

ಮಿಡಿಚೆ ೧. = ಮಿಡತೆ. ೨. ಒಂದು ಜಾತಿಯ ಸಣ್ಣ ಮೀನು.

ಮಿಡಿತ (ನಾ). ಸ್ಪಂದನ ; ತುಡಿತ.

ಮಿಡಿತೆ = ಮಿಡತೆ.

ಮಿಡು(ಂ)ಕು (ಕ್ರಿ). ೧. ಅಲುಗು ; ಅಲ್ಲಾಡು. ೨. ಸಂಕಟಪಡು ; ಪೇಚಾಡು. ೩. ಹೆದರು ; ಭಯಪಡು. ೪. ಅಲುಗಿಸು ; ಕದಲಿಸು. ೫. ಚೇತನಗೊಳ್ಳು; ಚೈತನ್ಯವನ್ನು ಹೊಂದು. ೬. ಸ್ಪಂದಿಸು ; ತುಡಿ. ೭. ಅಳುಕು ; ಹಿಂಜರಿ. ೮. ಉತ್ಸಾಹವನ್ನು ಪಡೆ. ೯. ತವಕಿಸು; ಆತುರಪಡು. ೧೦. ನೆಗೆ; ಚಿಮ್ಮು. ೧೧. ಅನುಕಂಪವನ್ನು ತೋರು; ಮರುಗು. ೧೨. ಪಶ್ಚಾತ್ತಾಪ ಪಡು. (ನಾ). ೧೩. ಅಲುಗಾಟ; ಚಲನೆ. ೧೪. ದುಃಖ ; ಕಳವಳ. ೧೫. ಸಾಮರ್ಥ್ಯ ; ಕೆಚ್ಚು. ೧೬. ಚಟುವಟಿಕೆ ; ಲವಲವಿಕೆ. ~ಆಟ = ೧. ತುಡಿತ. ೨. ಆತುರ. ~ಆಡು = ೧. ದಿಟ್ಟತನದಿಂದ ವರ್ತಿಸು. ೨. ಸಂಕಟಪಡು ; ನೊಂದುಕೊಳ್ಳು. ~ಕು(ಗು)ಂದು = ಲವಲವಿಕೆ ಇಲ್ಲವಾಗು ; ಚೈತನ್ಯ ಕುಗ್ಗು.

ಮಿಡುಂಗು (ನಾ). ಅತಿಯಾದ ದುಃಖ, -ಅಳಲು.

ಮಿಡ್ಡೆ (ನಾ). ಬಹಳವಾಗಿ ಬೆಂದಿರುವುದು ; ಗಿಂಜಲು. ~ಕೂಳು = ಹೆಚ್ಚಾಗಿ ಬೆಂದ ಅನ್ನ; ಗಿಂಜಲನ್ನ.

ಮಿಣಕು (ಕ್ರಿ). ೧. ಹೊಳೆ ; ಪ್ರಕಾಶಿಸು. ೨. ಮಂದವಾಗಿ ಪ್ರಕಾಶಿಸು ; ಸಣ್ಣದಾಗಿ ಮಿಂಚು. (ನಾ). ೩. ಹೊಳೆಯುವಿಕೆ.

ಮಿಣಿ (ನಾ). (ಚರ್ಮದಿಂದ ಮಾಡಿದ) ಹಗ್ಗ; ಮಿಳಿ. ~ಬ(ವ)ಲೆ = ಹಗ್ಗದಿಂದ ಮಾಡಿದ ಬಲೆ.

ಮಿಣಿಕೆ (ನಾ). ಒಂದು ಜಾತಿಯ ಬಳ್ಳಿ ಮತ್ತು ಅದರ ಹಣ್ಣು.

ಮಿಣುಕು = ಮಿಣಕು. ~ಹುಳು = ಮಿಂಚುಹುಳು.

ಮಿಣುಗುಟ್ಟು (ಕ್ರಿ). ೧. ಪ್ರಕಾಶ ಬೀರು ; ಹೊಳೆ. ೨. ಮಂದವಾಗಿ ಉರಿ.

ಮಿಣ್ಣಗೆ (ಅ). ಮೌನವಾಗಿ ; ನಿಶ್ಶಬ್ದವಾಗಿ.

ಮಿಣ್ಣೆ (ನಾ). ೧. ಮರದ ಅಥವಾ ಲೋಹದ ಚಮಚ ; ಸಣ್ಣ ಸೌಟು. ೨. ನೀರು ಕುಡಿಯುವ ಸಣ್ಣ ಪಾತ್ರೆ ; ಥಾಲಿ.

ಮಿತ (ಗು). ೧. ಮಿತಿಗೆ ಒಳಪಟ್ಟ ; ಎಲ್ಲೆ ಮೀರದ. ೨. ಚಿಕ್ಕದಾದ ; ಸಣ್ಣದಾದ. ೩. ಪರೀಕ್ಷಿಸಲ್ಪಟ್ಟ. ೪. ಸತ್ತ ; ಮೃತಿ ಹೊಂದಿದ. ~ವಚನ = ೧. ಮಿತವಾದ ಮಾತು ; ತೂಕದ ಮಾತು. ೨. = ಮಿತಭಾಷಿ. ~ವಾದ = ಮಿತವ್ಯಯವನ್ನು ಮಾಡಬೇಕೆಂಬ ಅಭಿಪ್ರಾಯ. ~ವ್ಯಯ = ಹಿಡಿತದಿಂದ ಖರ್ಚು ಮಾಡುವಿಕೆ.

ಮಿತಭಾಷಿ (ನಾ). ಕಡಮೆ ಮಾತನಾಡುವವನು.

ಮಿತಿ (ನಾ). ೧. ಅಳತೆ; ಪ್ರಮಾಣ. ೨. ಎಲ್ಲೆ ; ಮೇರೆ. ~ಮೀರು = ೧. ಎಲ್ಲೆ ಮೀರು ; ಮೇರೆಯನ್ನು ದಾಟು. ೨. ಹಿಡಿತ ತಪ್ಪು ; ಅಂಕೆಗೆ ಸಿಗದಿರು.

ಮಿತ್ತು = ಮಿಲ್ತು.

ಮಿತ್ರ (ನಾ). ೧. ಗೆಳೆಯ ; ಸ್ನೇಹಿತ. ೨. ಸೂರ್ಯ; ನೇಸರು. ೩. ದ್ವಾದಶಾದಿತ್ಯರಲ್ಲಿ ಒಬ್ಬ. ೪. ರಾಜನ ಸಪ್ತಾಂಗಗಳಲ್ಲಿ ಒಂದು. ~ಖೇಟಕ = ಸೂರ್ಯನ ಆಕಾರದಲ್ಲಿರುವ ಗುರಾಣಿ, -ಹರಿಗೆ. ~ದ್ರೋಹ = ಗೆಳೆಯನಿಗೆ ಮಾಡುವ ವಂಚನೆ, -ಮೋಸ. ~ಭೇದ = ಗೆಳೆಯರಲ್ಲಿ ಒಡಕು ಉಂಟು ಮಾಡುವುದು.

ಮಿತ್ರೆ (ನಾ). ಗೆಳತಿ ; ಸ್ನೇಹಿತೆ.

ಮಿಥುನ (ನಾ). ೧. ಜೋಡಿ ; ಜತೆ; ಯುಗ್ಮ. ೨. ಸಂಭೋಗ ; ಮೈಥುನ. ೩. ಸೇರಿಕೆ ; ಜೋಡಣೆ. ೪. ಜ್ಯೋತಿಶ್ಚಕ್ರದ ಹನ್ನೆರಡು ರಾಶಿಗಳಲ್ಲಿ ಒಂದು.

ಮಿಥ್ಯ (ನಾ). ಸುಳ್ಳು ; ಹುಸಿ.

ಮಿಥ್ಯಾಜ್ಞಾನ (ನಾ). ನಿಜವಲ್ಲದ ಜ್ಞಾನ.

ಮಿಥ್ಯಾಜ್ಞಾನಿ (ನಾ). ನಿಶ್ಚಯಜ್ಞಾನವಿಲ್ಲದವನು.

ಮಿಥ್ಯಾದೃಷ್ಟಿ (ನಾ). ೧. ನಾಸ್ತಿಕತೆ. ೨. ನಾಸ್ತಿಕ.

ಮಿಥ್ಯಾವಾದಿ (ನಾ). ಸುಳ್ಳುಹೇಳುವವನು; ಸುಳ್ಳುಗಾರ.

ಮಿಥ್ಯೆ = ಮಿಥ್ಯ.

ಮಿದಿ (ಕ್ರಿ). ೧. (ಒನಕೆಯಿಂದ) ಕುಟ್ಟು. ೨. = ಮಿದ್ದು. ೩. ಅರೆ; ಪುಡಿಮಾಡು. ೪. ಕೊಲ್ಲು; ಸಂಹರಿಸು.

ಮಿದು (ಗು). ಮೃದುವಾದ; ಕೋಮಲವಾದ.

ಮಿದುಡು (ಕ್ರಿ). ೧. ತೊಳಸು; ಗೊಟಾಯಿಸು. (ನಾ). ೨. = ಮಿದುಳ್.

ಮಿದುಳ್(ಳ್,ಳು,ಳು) (ನಾ). ಮೆದುಳು; ಮಸ್ತಿಷ್ಕ.

ಮಿದ್ದು (ಕ್ರಿ). ನಾದು; ಮಿದಿ.

ಮಿದ್ದೆ (ನಾ). ೧. ಮಾಡ; ಮಾಳಿಗೆ. ೨. ಮಹಡಿಮನೆ.

ಮಿನಿಮಿನಿಸು (ಕ್ರಿ). ೧. ಬಹಳವಾಗಿ ಪ್ರಕಾಶಿಸು, –ಹೊಳೆ. ೨. ಮಂದವಾಗಿ ಹೊಳೆ, –ಕಾಂತಿಬೀರು.

ಮಿನು(ಂ)ಗು (ಕ್ರಿ). ೧. ಹೊಳೆ; ಪ್ರಕಾಶಿಸು; ಥಳಥಳಿಸು. (ನಾ). ೨. ಕಾಂತಿ; ಹೊಳಪು.

ಮಿನುಕು(ಕ್ರಿ). ೧. ಅಸ್ಪಷ್ಟವಾಗಿ ಮಾತನಾಡು. ೨. ಮನಸ್ಸಿಗೆ ಗೋಚರವಾಗು; ಸ್ಫುರಿಸು. ೩. = ಮಿನುಂಗು. (ನಾ). ೪. ಮೂಗಿನಲ್ಲಿ ಧರಿಸುವ ಒಂದು ಬಗೆಯ ಆಭರಣ.

ಮಿನ್ನು = ಮಿನುಂಗು.

ಮಿರಾಸು (ನಾ). ಹಳ್ಳಿಯಲ್ಲಿ ರೈತರಿಂದ ಧಾನ್ಯ ಅಥವಾ ಹಣವನ್ನು ಪಡೆಯುವ ಅನುವಂಶಿಕ ಹಕ್ಕು. ~ದಾರ = ಪರಂಪರೆಯಾಗಿ ಧಾನ್ಯ, ಹಣ ಮುಂತಾದುವನ್ನು ಪಡೆಯುವವನು; ಆಯಗಾರ.

ಮಿಱು(ರು)ಗು = ಮಿನುಂಗು.

ಮಿಱು(ರು)ಪು (ನಾ). ಹೊಳಪು; ಕಾಂತಿ.

ಮಿಲ(ಳ)ನ (ನಾ). ಕೂಟ; ಸೇರಿಕೆ.

ಮಿಲಾಕತ್ತು (ನಾ). ೧. ಸೇರಿಕೆ; ಜೋಡಣೆ. ೨. ಸಂದರ್ಶನ; ಭೇಟಿ.

ಮಿಲಾಯಿಸು (ಕ್ರಿ). ೧. ಕೂಡು; ಬೆರೆ. ೨. ಕೂಡಿಸು; ಬೆರಸು.

ಮಿಲಿ(ಳಿ)ಂದ (ನಾ). ತುಂಬಿ; ಭ್ರಮರ.

ಮಿಲಿ(ಳಿ)ತ (ಗು). ಸೇರಿದ; ಮಿಶ್ರವಾದ.

ಮಿಶ್ರ ೧. = ಮಿಶ್ರಣ. (ಗು). ೨. ಸೇರಿಸಿದ; ಬೆರಸಿದ. ೩. ನಾನಾಬಗೆಯ; ಹಲವು ವಿಧದ. ~ವರ್ಣ = ೧. ಬೇರೆ ಬೇರೆ ಜಾತಿಗಳು ಸೇರಿರುವುದು. ೨. ಬೇರೆಬೇರೆ ಬಗೆಯ ಬಣ್ಣ; ಬೆರಕೆಬಣ್ಣ. ~ವಿವಾಹ = ಅಂತರ್ಜಾತೀಯ ವಿವಾಹ.

ಮಿಶ್ರಣ (ನಾ). ಸೇರಿಕೆ; ಬೆರಕೆ.

ಮಿಷ (ನಾ). ೧. ನೆಪ; ವ್ಯಾಜ. ೨. ಮೋಸ; ಕಪಟ. ೩. ಸೋಗು; ತೋರಿಕೆ.

ಮಿಷ್ಟ (ಗು). ೧. ಸಿಹಿಯಾದ; ಸವಿಯಾದ. ೨. ಒದ್ದೆಮಾಡಲ್ಪಟ್ಟ; ತೋಯಿಸಲ್ಪಟ್ಟ. ~ಅನ್ನ = ರಸವತ್ತಾದ ಆಹಾರ, –ಭೋಜನ.

ಮಿಸಿಸು (ಕ್ರಿ). ೧. ಸ್ನಾನಮಾಡಿಸು; ಮಿಾಯಿಸು. ೨. ಹೊಳೆಯುವಂತೆ ಮಾಡು.

ಮಿಸುಂಕು (ಕ್ರಿ). ಕದಲು; ಅಲ್ಲಾಡು.

ಮಿಸುಕು ೧. = ಮಿಸುಗು. ೨. ಅಲೆದಾಡು; ಸುಳಿ. ೩. ಸ್ಪಂದಿಸು; ತುಡಿ. ೪. ಕದಲಿಸು; ಅಲುಗಿಸು. ೫. ಮಿಾರು; ಅತಿಕ್ರಮಿಸು. ~ಆಟ = ಅಲುಗಾಟ; ಚಲನೆ. ~ಆಡು = ಅಲುಗು; ಚಲಿಸು.

ಮಿಸುಗು (ಕ್ರಿ). ೧. ಹೊಳೆ; ಪ್ರಕಾಶಿಸು. ೨. ಶೋಭಿಸು; ಅಂದವಾಗು. ೩. = ಮಿಸುಂಕು.

ಮಿಸುನಿ (ನಾ). ಚಿನ್ನ; ಬಂಗಾರ.

ಮಿಸುಪು (ನಾ). ೧. ಹೊಳಪು; ಕಾಂತಿ. ೨. ಅಂದ; ಲಾವಣ್ಯ.

ಮಿಹಿರ (ನಾ). ಸೂರ್ಯ. ~ಅಧ್ವ = ಸೂರ್ಯನ ಮಾರ್ಗ; ಆಕಾಶ. ~ಸುತ = ೧. ಸೂರ್ಯನ ಮಗ. ೨. ಯಮ. ೩. ಶನಿ. ೪. ಕರ್ಣ. ೫. ಸುಗ್ರೀವ.

ಮಿಳಿ = ಮಿಣಿ.

ಮಿಳಿರ್(ರು) (ಕ್ರಿ). ೧. ಅಲುಗಾಡು; ಚಲಿಸು. ೨. ಉರುಳು; ಹೊರಳಾಡು. ೩. ಏಳಿಗೆಯಾಗು; ಅಭಿವೃದ್ಧಿಹೊಂದು.

ಮಿಳಿರ್ಚು (ಕ್ರಿ). ೧. ಅಲುಗಾಡು; ಚಲಿಸು. ೨. ಮೇಲಕ್ಕೆ ಎತ್ತು; ನಿಗುರಿಸು.

ಮಿಳ್ಳಿ = ಮಿಣ್ಣಿ.

ಮಿಳ್ಳಿಱು(ರಿ) (ಕ್ರಿ). ಸಾಗು; ಚಲಿಸು.

ಮಿಳ್ಳಿಸು (ಕ್ರಿ). ೧. ಸಾಗು; ಮುಂದುವರಿ. ೨. ನೆಗೆ; ಕುಪ್ಪಳಿಸು. ೩. = ಮಿಳಿರ್ಚು.

ಮಿಳ್ಳೆ ೧.=ಮಿಣ್ಣೆ. ೨. ಎಳೆಯ ತೆಂಗಿನಕಾಯಿ; ಕುರುಂಬೆ.

ಮಿಱುತ್ತು(ಳ್ತು) (ನಾ). ಮೃತ್ಯು; ಸಾವು.

ಮೀ (ಕ್ರಿ). ಸ್ನಾನಮಾಡು; ಜಳಕ ಮಾಡು.

ಮೀಂ=ಮೀನ್. ~ಕು(ಗು)ಲಿ=ಮೀಂಬುಲಿಗ. ~ಕು(ಗು)ಲಿಗ = ಮೀಂಬುಲಿಗ. ~ಗುಡಿ = ಮೀನಿನ ಗುರುತುಳ್ಳ ಬಾವುಟ. ~ಪ(ಬ)ಟ(ಳ)ಯಿಗೆ = ಮೀಂಗುಡಿ. ~ಪು(ಬು)ಱು(ಳು) = ಮೀನಂಬುಱು. ~ಪೊ(ಬೊ)ಣರ್ = ಮೀನುಗಳ ಜೋಡಿ, -ಯುಗ್ಮ. ~ಬಟ್ಟೆ = ನಕ್ಷತ್ರ ಮಾರ್ಗ; ಆಕಾಶ.

ಮೀಂಚುಳ್ಳಿ (ನಾ). ಮೀನು ಹಿಡಿಯುವ ಒಂದು ಜಾತಿಯ ಪಕ್ಷಿ.

ಮೀ(ಂ)ಟು (ಕ್ರಿ). ೧. (ಸನ್ನೆಕೋಲಿನಿಂದ) ಮೇಲಕ್ಕೆ ಎತ್ತು, -ಎಬ್ಬಿಸು. ೨. ಕೀಳು; ಉತ್ಪಾಟಿಸು. ೩. ಸ್ಪಂದಿಸು; ತುಡಿ. ೪. ಚಿಮ್ಮು; ನೆಗೆ. ೫. ತಂತಿವಾದ್ಯವನ್ನು ಮಿಡಿ, -ನುಡಿಸು. (ನಾ). ೬. ಭಾರವಾದ ವಸ್ತುವನ್ನು ಮೇಲಕ್ಕೆ ಎತ್ತಲು ಉಪಯೋಗಿಸುವ ಸಾಧನ; ಸನ್ನೆಕೋಲು. ೭. ಹೆಚ್ಚುಗಾರಿಕೆ; ಶ್ರೇಷ್ಠತೆ. ೮. ತಂತಿವಾದ್ಯವನ್ನು ನುಡಿಸುವಿಕೆ. ~ಆಗು = ಶ್ರೇಷ್ಠವಾಗು; ಉತ್ತಮವಾಗು.

ಮೀಂಟೆ (ನಾ). ೧. ಮಣ್ಣಿನ ಹೆಂಟೆ. ೨. ಲೋಹದ ಗುಂಡು, -ಗೋಲಿ.

ಮೀಂಬಟ(ಳ)ಯಿಗೆಯವ (ನಾ). ಮೀನಿನ ಗುರುತನ್ನು ಧ್ವಜದಲ್ಲಿ ಉಳ್ಳವನು; ಕಾಮ.

ಮೀಂಬುಲಿಗ (ನಾ). ೧. ಮೀನು ತಿನ್ನುವ ಕೊಕ್ಕರೆ, ಜಾಲಗಾರ ಹಕ್ಕಿ ಮುಂತಾದುವು. ೨. ಮೀನನ್ನು ಕೊಲ್ಲುವವನು; ಬೆಸ್ತ.

ಮೀಣ (ನಾ). ಮೀಹ; ಸ್ನಾನ.

ಮೀನ್(ನು) (ನಾ). ೧. ಒಂದು ಜಲಚರ ಪ್ರಾಣಿ; ಮತ್ಸ್ಯ. ೨. ನಕ್ಷತ್ರ. ~ಗಾರ = ಬೆಸ್ತ.

ಮೀನ (ನಾ). ೧. ಮೀನು; ಮತ್ಸ್ಯ. ೨. ಜ್ಯೋತಿಶ್ಚಕ್ರದ ಹನ್ನೆರಡು ರಾಶಿಗಳಲ್ಲಿ ಒಂದು. ~ಅಂಕ = ಕಾಮ; ಮನ್ಮಥ. ~(ಂ)ಪು(ಬು)ಱು(ಳು) = ಮಿಂಚು ಹುಳು; ಖದ್ಯೋತ. ~ಕೇತನ = ಮೀನಾಂಕ. ~ಕೇತು = ಮೀನಾಂಕ. ~ಧ್ವಜ = ಮೀನಾಂಕ.

ಮೀಮಾಂಸ = ಮೀಮಾಂಸೆ. ~ಮಾಡು = ಆಳವಾಗಿ ಪರೀಕ್ಷಿಸು, -ವಿಚಾರಮಾಡು.

ಮೀಮಾಂಸಕ (ನಾ). ೧. ಆಳವಾಗಿ ವಿಚಾರ ಮಾಡುವವನು; ಕೂಲಂಕಷವಾಗಿ ಶೋಧಿಸುವವನು. ೨. ಮೀಮಾಂಸಶಾಸ್ತ್ರವನ್ನು ಅನುಸರಿಸುವವನು.

ಮೀಮಾಂಸೆ (ನಾ). ೧. ವಿಚಾರ ಮಾಡುವುದು; ವಿವೇಚನೆ. ೨. ಆರು ಬಗೆಯ ದರ್ಶನಗಳಲ್ಲಿ ಒಂದು.

ಮೀಯ್(ಯು) = ಮೀ.

ಮೀಱು(ರು) (ಕ್ರಿ). ೧. ದಾಟು; ಮುಂದೆ ಹೋಗು. ೨. ಉಲ್ಲಂಘಿಸು; ಅತಿಕ್ರಮಿಸು. ೩. ಹೆಚ್ಚಾಗು; ಅತಿಯಾಗು.

ಮೀಲನ (ನಾ). ಮುಚ್ಚುವಿಕೆ.

ಮೀಸಲ್(ಲು) (ನಾ). ಪ್ರತ್ಯೇಕವಾಗಿ ತೆಗೆದಿರಿಸಿದ ಯಾವುದಾದರು ವಸ್ತು; ಮುಡಿಪು. ~ಅಳಿ = ಪಾವಿತ್ರ್ಯವನ್ನು ಕಳೆದುಕೊಳ್ಳು; ಅಪವಿತ್ರವಾಗು. ~ಇಡು = ಪ್ರತ್ಯೇಕವಾಗಿ ಕಾದಿರಿಸು; ಮುಡಿಪುಕಟ್ಟು. ~ಕಟ್ಟು = ಮೀಸಲಿಡು. ~ಕೆ(ಗೆ)ಡು = ಮೀಸಲಳಿ. ~ಪಡೆ = ವಿಶೇಷ ಸಂದರ್ಭಕ್ಕಾಗಿ ಕಾಯ್ದಿರಿಸಿದ ಸೈನ್ಯ. ~ಮುರಿ = ಮುಡಿಪಾಗಿರಿಸಿದುದನ್ನು ಬಳಸು; ಕಾದಿರಿಸಿದ ವಸ್ತುವನ್ನು ಉಪಯೋಗಿಸು.

ಮೀಸೆ (ನಾ). ಗಂಡಸಿನ ಮೇಲ್ತುಟಿಯ ಮೇಲಿರುವ ಕೂದಲು; ಕೂರ್ಚ; ಶ್ಮಶ್ರು. ~ಬರು = ಪ್ರಾಯಕ್ಕೆ ಬರು; ಯೌವನವನ್ನು ಹೊಂದು.

ಮೀಹ (ನಾ). ಸ್ನಾನ; ಜಳಕ.

ಮುಂ (ಗು). ೧. ಮುಂಭಾಗದ; ಮುಂದುಗಡೆಯ. ೨. ಹಿಂದಿನ; ಪೂರ್ವದ. ~ಕ(ಗ)ಟ್ಟು = ೧. ಮುಂಬದಿಯಲ್ಲಿರು. ೨. ಕೆರೆಯ ಕಲ್ಲಿನ ಏರಿಯ ಒಳಭಾಗ. ~ಕ(ಗ)ಡ = ಕೆಲಸಕ್ಕೆ ಮುಂಚಿತವಾಗಿಯೇ ತೆಗೆದುಕೊಳ್ಳುವ ದುಡ್ಡು; ಬಗಾವು. ~ಕ(ಗ)ಡೆ = ಮುಂಭಾಗ; ಮುಂಬದಿ. ~ಕ(ಗ)ತ್ತಲೆ = ಮುಚ್ಚಂಜೆಯ ಕತ್ತಲೆ; ನಸುಗತ್ತಲೆ. ~ಕ(ಗೈ)ಯ್ = ಕೈಯ ಮುಂಭಾಗ. ~ಕಾ(ಗಾ)ಣ್(ಣು) = ಮುಂದೆ ಆಗುವುದನ್ನು ತಿಳಿ. ~ಕಾ(ಗಾ)ರ್(ರು) = ೧. ವರ್ಷದಲ್ಲಿ ಬೀಳುವ ಮೊದಲನೆಯ ಮಳೆ. ೨. ಮಳೆಗಾಲದ ಪೂರ್ವಾರ್ಧ. ~ಕಾ(ಗಾ)ಲ್(ಲು) = ೧. ಕಾಲಿನ ಮುಂಭಾಗ. ೨. ಚತುಷ್ಪಾದಿಗಳಿಗೆ ಇರುವ ಮುಂಭಾಗದ ಕಾಲು. ~ಕು(ಗು)ಡಿ = ೧. ಬಳ್ಳಿಯ ತುದಿ, –ಅಂಕುರ. ೨. ಸೈನ್ಯದ ಮುಂಭಾಗ; ಮುಂಚೂಣಿ. ೩. ಮೊದಲನೆಯದು; ಚೊಚ್ಚಲು. ~ಕು(ಗು)ರುಳ್(ಳು) = ಮುಂದಲೆಯ ಕೂದಲು. ~ಕೆ(ಗೆ)ಡು = ದಿಕ್ಕುತೋಚದಾಗು; ಕಂಗೆಡು. ~ಕೆ(ಗೆ)ಯ್ = ಮುಂಗಯ್. ~ಕೊ(ಗೊ)ಳ್ = ೧. ಮುಂದುವರಿ; ಮುಂದೆಸಾಗು. ೨. ತವಕಿಸು; ಉತ್ಸಾಹಿಸು. ~ಕೋ(ಗೋ)ಪ = ಬೇಗ ಬರುವ ಸಿಟ್ಟು. ~ಕೋ(ಗೋ)ಪಿ = ಶೀಘ್ರಕೋಪಿ; ಕೂಡಲೆ ಸಿಟ್ಟಿಗೇಳುವವನು. ~ಕೋ(ಗೋ)ಳಿ = ನಸುಕಿನಲ್ಲಿ ಕೂಗುವ ಕೋಳಿ. ~ಗೋಟು = ಮುಂದಿನ ತುದಿ, –ಕೊನೆ. ~ಚೂಣಿ(ಣೆ) = ಮುಂಗೋಳ್. ~ಜಾಗ್ರತೆ = ಮೊದಲೇ ಎಚ್ಚರ ವಹಿಸುವಿಕೆ; ಮುನ್ನೆಚ್ಚರಿಕೆ. ~ಜಾವ(ವು) = ಮುಂಜಾನೆ. ~ಜೋಲಿ = ಮುಂದಕ್ಕೆ ಬಾಗಿರುವುದು. ~ಜೋಲು = ಮುಂದಕ್ಕೆ ಬಾಗು, –ಒಲೆ. ~ತ(ದ)ಲೆ = ತಲೆಯ ಮುಂಭಾಗ. ~ದಂಡೆ = ಮುಂದಿನ ತುದಿ, –ಅಂಚು. ~ದಳ = ಸೈನ್ಯದ ಮುಂಭಾಗದ ತುಕಡಿ. ~ದೂಡು = ಮುಂದಕ್ಕೆ ನೂಕು, –ತಳ್ಳು. ~ಪ(ಬ)ಗಲ್ = ಹಗಲಿನ ಮೊದಲಭಾಗ. ~ಪ(ಬ)ನಿ = ಪ್ರಾರಂಭದಲ್ಲಿ ಬೀಳುವ ಮಳೆಯ ಹನಿ. ~ಪ(ಬ)ರಿ = ಮುಂದುವರಿ; ಮುನ್ನುಗ್ಗು. ~ಬಗೆ = ಮುಂದಾಲೋಚನೆ ಮಾಡು. ~ಬದಿ = ಮುಂಗಡೆ. ~ಬಾಗಿಲ್(ಲು) = ೧. ಮನೆಯ ಮುಂದಿನ ಬಾಗಿಲು. ೨. ಬಾಗಿಲಿನ ಮುಂಭಾಗ; ಬಾಗಿಲಿನ ಮುಂದೆ. ~ಬಿಸಿಲ್(ಲು) = ಬೆಳಗಿನ ಬಿಸಿಲು. ~ಬೆದೆ = ಮೊದಲ ಬಿತ್ತನೆಯ

ಕಾಲ. ~ಬೆಳಗು = ಮುಂಜಾನೆ. ~ಭಾಗ = ಮುಂಗಡೆ. ~ಭಾರ = ಮುಂದುಗಡೆಯಲ್ಲಿ ಭಾರ ಹೆಚ್ಚಾಗಿರುವುದು. ~ಮಡ = ಹರಡಿನ ಮುಂಭಾಗ. ~ಮಾತು = ಮೊದಲಮಾತು; ಮುನ್ನುಡಿ. ~ಮೊನೆ = ೧. ತುತ್ತತುದಿ. ೨. ಹರಿತವಾದ ತುದಿ. ~ಸೂ(ಚೂ)ರ್(ರು) = ಮನೆಯ ಮುಂದಿನ ಸೂರು. ~ಸೆ(ಜೆ)ಱ(ರ)(ಂ)ಗು = ಸೆರಗಿನ ಮುಂಭಾಗ, –ತುದಿ.

ಮುಂಕಣಿ (ನಾ). ಮುಂಭಾಗ. ~ಇಸು = ೧. ಮುಂದೆ ಸಾಗು; ಮುಂದುವರಿ. ೨. ಚಾಚು; ನೀಡು.

ಮುಂಗಲಿ (ನಾ). ಹಾವಿನ ಶತ್ರುವೆಂದು ನಂಬಲಾಗಿರುವ ಒಂದು ಪ್ರಾಣಿ; ನಕುಲ.

ಮುಂಗಿಲಿ = ಮುಂಗಲಿ.

ಮುಂಗುಲಿ = ಮುಂಗಲಿ.

ಮುಂಗುಲಿ = ಮುಂಗಲಿ.

ಮುಂಗುಸಿ = ಮುಂಗಲಿ.

ಮುಂಗೋಳ್ (ನಾ). ಸೇನೆಯ ಮುಂಭಾಗ; ಮುಂಚೂಣಿ.

ಮುಂಚ (ನಾ). ಮೊದಲನೆಯವನು; ಮೊದಲಿಗ.

ಮುಂಚಿತ (ಅ). ಮೊದಲೆ; ಪೂರ್ವಭಾವಿಯಾಗಿ.

ಮುಂಚು (ಕ್ರಿ). ೧. ಮುಂಚಿತವಾಗು; ಮೊದಲಾಗು. ೨. ಮೀರು; ಉಲ್ಲಂಘಿಸು. (ಅ). ೩. ಮೊದಲು; ಮುಂಚೆ. ೪. ಮುಂದೆ; ಎದುರಿನಲ್ಲಿ.

ಮುಂಚೆ ೧. = ಮುಂಚಿತ. ೨. ಹಿಂದೆ; ಪೂರ್ವದಲ್ಲಿ.

ಮುಂಜ (ನಾ). ೧. ಒಂದು ಜಾತಿಯ ಹುಲ್ಲು. ೨. ಅಂತಹ ಹುಲ್ಲಿನಿಂದ ಮಾಡಿದ ಉಡಿದಾರ. ೩. ವ್ಯವಸಾಯದ ಒಂದು ಉಪಕರಣ; ನೇಗಿಲುಗುಳ.

ಮುಂಜಾನೆ (ನಾ). ಬೆಳಗಿನ ಜಾವ; ನಸುಕು.

ಮುಂಜಿ (ನಾ). ೧. ಉಪನಯನ. ೨. ಮುಂಜದಿಂದ ಮಾಡಿದ ಉಡಿದಾರ.

ಮುಂಡ (ನಾ). ೧. ತಲೆಯಿಲ್ಲದ ದೇಹ; ಅಟ್ಟೆ. ೨. ಕೈಕಾಲುಗಳಿಲ್ಲದವನು. ೩. = ಮುಂಡಕ. ೪. ಒಬ್ಬ ರಾಕ್ಷಸನ ಹೆಸರು. ~ಮೋಚು = ೧. ತಲೆಯನ್ನು ಬೋಳಿಸು. ೨. ನಾಶಮಾಡು; ಹಾಳುಮಾಡು. ೩. ಹಾಳಾಗು.

ಮುಂಡಕ (ನಾ). ೧. ಕೊಂಬೆಗಳನ್ನು ಕತ್ತರಿಸಿದ ಮರದ ಬೊಡ್ಡೆ, –ಕಾಂಡ. ೨. ಹಜಾಮ; ಕ್ಷೌರಿಕ. ೩. ತಲೆ.

ಮುಂಡನ (ನಾ). ತಲೆಗೂದಲನ್ನು ಬೋಳಿಸುವುದು; ಕ್ಷೌರ.

ಮುಂಡಾಸ (ನಾ). ರುಮಾಲು.

ಮುಂಡಾಸು = ಮುಂಡಾಸ.

ಮುಂಡಿ (ನಾ). ೧. ಸಂನ್ಯಾಸಿ. (ಗು). ೨. ಬೋಳಿಸಿದ; ಕತ್ತರಿಸಿದ.

ಮುಂಡಿಗೆ (ನಾ). ೧. ಒಗಟು; ಸಮಸ್ಯೆ. ೨. ಆಹ್ವಾನ; ಸವಾಲು. ೩. ಕಂಬ. ೪. ದಿಮ್ಮಿ; ತೊಲೆ.

ಮುಂಡು (ನಾ). ೧. ಮುದ್ದು; ಪ್ರೀತಿ. ೨. ರುಮಾಲಿನಂತೆ ಅಥವಾ ಪಂಚೆಯಂತೆ ಉಪಯೋಗಿಸುವ ತುಂಡುಬಟ್ಟೆ. ೩. ಚೂರು; ತುಂಡು. ೪. ತಲೆಯಿಲ್ಲದ ದೇಹ; ಮುಂಡ. ~ಆಟ = ಮುದ್ದಾಟ; ಲಲ್ಲೆ. ~ಆಡು = ೧. ಮುದ್ದಾಡು; ಪ್ರೀತಿಸು. ೨. ಸೋಂಕು; ಮುಟ್ಟು. ~ಪೊ(ವೊ)ೞಗು = ತುಂಡಾಗು; ಮೋಟಾಗು.

ಮುಂಡೆ (ನಾ). ವಿಧವೆ; ವಿತಂತು.

ಮುಂತು (ಅ). ೧. ಮುಂಚೆ; ಮೊದಲು. ೨. ಮುಂದೆ; ಮುಂಭಾಗದಲ್ಲಿ.

ಮುಂತೆ ೧. = ಮುಂತು. ೨. ಹಿಂದೆ; ಪೂರ್ವದಲ್ಲಿ.

ಮುಂಪರಿ (ಕ್ರಿ). ೧. ಮುಂದುವರಿ; ಮುಂದೆ ಸಾಗು. ೨. ಮೀರು; ಅತಿಕ್ರಮಿಸು.

ಮುಂದು = ಮುಂದೆ. ~ಆಗು = ಮೊದಲಿಗನಾಗು; ಮುಂದೆ ಇರು. ~ಆಳು = ನಾಯಕ; ಮುಖಂಡ. ~ಕ(ಗ)ಡೆ = ಮುಂಭಾಗ. ~ಕಾ(ಗಾ)ಣ್(ಣು) = ಮುಂಗಾಣ್. ~ಕೆ(ಗೆ)ಡು=ಮುಂಗೆಡು. ~ಕೊ(ಗೊ)ಳ್ = ೧. ಮುಂಭಾಗದಲ್ಲಿ ಇಡು, -ಇರಿಸು. ೨. ಮುಂದುವರಿ; ಮುಂದೆ ಸಾಗು. ~ಪ(ವ)ರಿ = ಮುಂದರಿ.

ಮುಂದೆ (ನಾ). ೧.ಮುಂಭಾಗ; ಮುಂದುಗಡೆ; ಎದುರು. ೨. ಮುಂದಿನದು; ಭವಿಷ್ಯ. (ಅ). ೩. ಮುಂಭಾಗದಲ್ಲಿ.

ಮುಂಬು (ನಾ). ೧. ಮುಂಭಾಗ; ಮುಂಬದಿ. ೨. ಒಬ್ಬ ಆಳು ಕೊಯ್ಯುವಾಗ ನಿಲುಕುವಷ್ಟು ಬೆಳೆಯ ಭಾಗ. ~ಇಗ =ಮೊದಲಿಗ; ಅಗ್ರಗಾಮಿ. ~ಕ(ಗ)ಳೆ = (ಸೈನ್ಯದ) ಮುಂಭಾಗವನ್ನು ನಾಶಮಾಡು.

ಮುಕ = ಮುಖ.

ಮುಕುಂದ (ನಾ). ೧. ವಿಷ್ಣು. ೨. ಒಂದು ಬಗೆಯ ವಾದ್ಯ. ೩. ಒಂದು ಜಾತಿಯ ಪಕ್ಷಿ.

ಮುಕುಟ (ನಾ). ಕಿರೀಟ; ಮಕುಟ. ~ವರ್ಧನ = ರಾಜ.

ಮುಕುತ = ಮುಕ್ತ.

ಮುಕುತಿ = ಮುಕ್ತಿ. ~ಬ(ವ)ಟ್ಟೆ = ಮೋಕ್ಷಮಾರ್ಗ.

ಮುಕುರ (ನಾ). ೧. ಕನ್ನಡಿ; ದರ್ಪಣ. ೨. ಮೂಗಿನಲ್ಲಿ ಧರಿಸುವ ಒಂದು ಬಗೆಯ ಆಭರಣ; ಸತ್ತು. ~ತೋರಣ = ಕನ್ನಡಿಗಳಿಂದ ಕೂಡಿದ ತೋರಣ.

ಮುಕುರು (ಕ್ರಿ). ಮುತ್ತು; ಮುಸುರು.

ಮುಕುಲ(ಳ) (ನಾ). ಮೊಗ್ಗು; ಮುಗುಳು. ~ಇಸು = ಮುಚ್ಚಿಕೊಳ್ಳು.

ಮುಕುಲಿ(ಳಿ)ತ (ಗು). ಮೊಗ್ಗಿನಂತೆ ಮುಚ್ಚಿಕೊಂಡಿರುವ. ~ಅಂಜಲಿ = ಮೊಗ್ಗಿನಂತೆ ಮುಚ್ಚಿಕೊಂಡಿರುವ ಕೈ; ಮುಗಿದ ಕೈ.

ಮುಕುಳಿ (ನಾ). ಆಸನ; ಗುದ.

ಮುಕ್ಕ (ನಾ). ೧. ಮೂರ್ಖ; ದಡ್ಡ. ೨. ಏನೂ ಅರಿಯದವನು; ಮುಗ್ಧ. ೩. ತಿನ್ನುವವನು; ಮುಕ್ಕುವವನು. (ಗು). ೪. ಒಡೆದ; ಮುರಿದುಹೋದ.

ಮುಕ್ಕಟ್ಟು (ನಾ). ೧. ಮೂರುಗಂಟು. ೨. = ಮುಗ್ಗಟ್ಟು. ೩. ಮೊದಲು; ಮುಂಚೆ.

ಮುಕ್ಕಡಿ (ನಾ). ಮೂರುಭಾಗ, -ತುಂಡು.

ಮುಕ್ಕಣ್ (ನಾ). ಮೂರುಕಣ್ಣು.

ಮುಕ್ಕಣ್ಣ (ನಾ). ಮೂರುಕಣ್ಣುಗಳುಳ್ಳವನು; ಶಿವ.

ಮುಕ್ಕರಿಸು (ಕ್ರಿ). ೧. ಮುತ್ತು; ಆವರಿಸು. ೨. = ಮುಕ್ಕಲಿಸು.

ಮುಕ್ಕಲಿಸು (ಕ್ರಿ). ಎಡವು; ಮುಗ್ಗರಿಸು.

ಮುಕ್ಕಳಿಸು = ಮುಕ್ಕುಳಿಸು.

ಮುಕ್ಕಾಮು (ನಾ). ಬೀಡುಬಿಡುವುದು; ಮೊಕ್ಕಾಮು.

ಮುಕ್ಕಾಲಿ (ನಾ). ಮೂರುಕಾಲುಗಳುಳ್ಳ ಪೀಠ; ತಿವಟಿಗೆ.

ಮುಕ್ಕಾಲು (ನಾ). ೧. ಮೂರುಕಾಲು. ೨. ನಾಲ್ಕನೆಯ ಮೂರುಭಾಗ. ೩. = ಮುಕ್ಕಾಲಿ. ~ಪಾ(ವಾ)ಡು = ಮೂರು ಸಾಲುಗಳುಳ್ಳ ಪದ್ಯ ಜಾತಿ; ತ್ರಿಪದಿ. ~ಮಣೆ = ಮುಕ್ಕಾಲಿ.

ಮುಕ್ಕಿ (ನಾ). ಮೂರ್ಖಹೆಂಗಸು; ದಡ್ಡಿ.

ಮುಕ್ಕು (ಕ್ರಿ). ೧. ಗಬಗಬನೆ ತಿನ್ನು; ಅವಸರದಿಂದ ಕಬಳಿಸು. ೨. ತಿಣುಕು; ಮುಕ್ಕಿರಿ. (ನಾ). ೩. ಭಂಗ; ನಾಶ. ೪. ತುಂಡು; ಚೂರು. ೫. ಮುರಿದುದು; ತುಂಡಾಗಿರುವುದು. ೬. ಪಾತ್ರೆ. ೭. ಬೀಸುವ

ಕಲ್ಲಿನಲ್ಲಿ ಒಂದು ಸಲಕ್ಕೆ ಹಿಡಿಯುವಷ್ಟು ಧಾನ್ಯ; ಒಂದು ಮುಷ್ಟಿ. ೮. ಒಂದು ಸಲಕ್ಕೆ ಕುಡಿಯುವಷ್ಟು ನೀರು. ~ಆಗು = ಊನವಾಗು; ಭಂಗವಾಗು. ~ಪೊ(ವೊ)ೀಗು = ಮುಕ್ಕಾಗು.

ಮುಕ್ಕುಪ್ಪೆ (ನಾ). ೧. ಮೂರುಕುಪ್ಪೆ, -ರಾಶಿ. ೨. ಜಮೀನಿನ ಉತ್ಪತ್ತಿಯನ್ನು ಮೂರು ಭಾಗಮಾಡಿ, ಒಂದು ಭಾಗವನ್ನು ಜಮೀನು ದಾರನಿಗೂ ಎರಡು ಭಾಗಗಳನ್ನು ರೈತ ನಿಗೂ ಕೊಡುವ ಪದ್ಧತಿ.

ಮುಕ್ಕುರಿ (ಕ್ರಿ). ೧. ಮುತ್ತು; ಮುಕುರು; ಆವರಿಸು. (ನಾ). ೨. ತೊಂದರೆ. ೩. ಚೂರು; ತುಂಡು.

ಮುಕ್ಕುಱಿ(ರಿ)ಕು = ಮುಕುರು.

ಮುಕ್ಕುಱಿ(ರಿ)ಕ್ಕು = ಮುಕುರು.

ಮುಕ್ಕುಱು(ರು) = ಮುಕುರು.

ಮುಕ್ಕುಳ್(ಳು) (ನಾ). ಬಾಯಿ ತೊಳೆದು ಕೊಳ್ಳುವುದು. ~ಇಸು = ಬಾಯಿಯಲ್ಲಿ ನೀರು ಹಾಕಿಕೊಂಡು ಮತ್ತೆ ಉಗುಳು. ~ಉದಕ =ಬಾಯಿ ಮುಕ್ಕುಳಿಸಿಕೊಂಡ ನೀರು; ಉಗುಳಿದ ನೀರು.

ಮುಕ್ಕೇಡು (ನಾ). ಆಧಿದೈವಿಕ, ಆಧಿಭೌತಿಕ ಮತ್ತು ಆಧ್ಯಾತ್ಮಿಕ ಎಂಬ ಮೂರು ಬಗೆಯ ಕೇಡುಗಳು; ತಾಪತ್ರಯ.

ಮುಕ್ಕೊಡೆ (ನಾ). ಮೂರು ಕೊಡೆ, -ಛತ್ರಿ.

ಮುಕ್ಕೊಡೆಯ (ನಾ). ಮೂರು ಕೊಡೆ ಗಳುಳ್ಳವನು; ಜಿನ.

ಮುಕ್ಕೋಟೆ (ನಾ). ಮೂರುಕೋಟೆ.

ಮುಕ್ತ (ನಾ). ೧. ಬಿಡುಗಡೆಹೊಂದಿದವನು. ೨. ಸಂಸಾರಬಂಧನದಿಂದ ಬಿಡುಗಡೆ ಹೊಂದಿದವನು. (ಗು). ೩. ಬಿಡಲ್ಪಟ್ಟ. ೪. ಬಿಡುಗಡೆ ಹೊಂದಿದ. ~ಹಸ್ತ = ೧. ಧಾರಾಳವಾಗಿ ದಾನಮಾಡುವ ಕೈ; ಕೊಡುಗೈ. ೨. ಕೈಬಿಚ್ಚಿ ಕೊಡುವವನು; ದಾನಿ.

ಮುಕ್ತಕ (ನಾ). ೧. ಅರ್ಥದ ದೃಷ್ಟಿಯಿಂದ ಸ್ವಯಂಪೂರ್ಣವಾದ ಪದ್ಯ ಅಥವಾ ಕಾವ್ಯ; ಬಿಡಿಪದ್ಯ. ೨. ಮುತ್ತುಗದ ಮರ. ೩. ಮುತ್ತು; ಮೌಕ್ತಿಕ.

ಮುಕ್ತಾಫಲ(ಳ) (ನಾ). ನವರತ್ನಗಳಲ್ಲಿ ಒಂದು; ಮುತ್ತು.

ಮುಕ್ತಾಭರಣ (ನಾ). ಮುತ್ತಿನಿಂದ ಮಾಡಿದ ಆಭರಣ.

ಮುಕ್ತಾಯ (ನಾ). ಕೊನೆ; ಅಂತ್ಯ.

ಮುಕ್ತಾವಲಿ(ಳಿ) (ನಾ). ಮುತ್ತಿನ ಸರ.

ಮುಕ್ತಿ (ನಾ). ೧. ಬಿಡುಗಡೆ; ವಿಮೋಚನೆ. ೨. ಮೋಕ್ಷ; ಕೈವಲ್ಯ. ~ಪಥ = ವಿಮೋಚನೆಯ ದಾರಿ; ಮೋಕ್ಷ ಮಾರ್ಗ.

ಮುಖ (ನಾ). ೧. ಬಾಯಿ. ೨. ಪಕ್ಷಿಯ ಕೊಕ್ಕು; ಚಂಚು. ೩. ಮೊಗ; ಮೋರೆ. ೪. ತುದಿ; ಅಗ್ರ. ೫. ಆರಂಭ; ಪ್ರಾರಂಭ. ೬. ಯುಕ್ತಿ; ಉಪಾಯ. ೭. ದಿಕ್ಕು. ~ಅಂತರ = ಮೂಲಕ; ಆ ಮಾರ್ಗವಾಗಿ. ~ಚರ್ಯೆ = ಮುಖದಲ್ಲಿ ತೋರಿಬರುವ ಭಾವ; ಮುಖಮುದ್ರೆ. ~ದ್ವಾರ = ಹೆಬ್ಬಾಗಿಲು. ~ಭಂಗ=ಅವಮಾನ; ಅಗೌರವ. ~ಭಾವ = ೧. ಮುಖಚರ್ಯೆ. ೨. = ಮುಖವಾಡ. ~ಮುದ್ರೆ = ಮುಖಚರ್ಯೆ. ~ಮುರಿ = ೧. ಮುಖವನ್ನು ಬೇರೊಂದೆಡೆಗೆ ತಿರುಗಿಸು. ೨. ಅವಮಾನ ಮಾಡು. ~ವಾಸ = ಬಾಯಿಯನ್ನು ಸುಗಂಧಗೊಳಿಸುವ ಒಂದು ಬಗೆಯ ಸುಗಂಧದ್ರವ್ಯ. ~ವಿಕಾರ = ಮುಖದಲ್ಲಾಗುವ ಬದಲಾವಣೆ. ~ವೀಣೆ = ಒಂದು ಬಗೆಯ ಊದುವ ವಾದ್ಯ. ~ಸ್ತುತಿ = ಒಬ್ಬರನ್ನು ಅವರ ಎದುರಿನಲ್ಲೇ ಹೊಗಳುವುದು. ~ಹೇಡಿ = ಸಂಕೋಚಪ್ರವೃತ್ತಿಯವನು; ಮುಸುಂಡಿ.

ಮುಖಂಡ (ನಾ). ಮುಂದಾಳು; ನಾಯಕ.
ಮುಖಜ (ನಾ). ೧. ಬ್ರಾಹ್ಮಣ. ೨. ಹಲ್ಲು.
ಮುಖರ (ನಾ). ೧. ಸತ್ತು; ಮುಕರ. (ಗು). ೨. ಅತಿಯಾಗಿ ಮಾತನಾಡುವ. ೩. ಕೆಟ್ಟ ಮಾತನಾಡುವ. ೪. ಗದ್ದಲದಿಂದ ಕೂಡಿದ. ~ಇಸು = ಅತಿಯಾಗಿ ಮಾತನಾಡು.
ಮುಖರತೆ (ನಾ). ಗಳಹುವಿಕೆ; ಹರಟೆ.
ಮುಖವಾಡ (ನಾ). ೧. ಮುಖಕ್ಕೆ ಧರಿಸಿಕೊಳ್ಳುವ ಆವರಣ; ಮೊಗವಾಡ. ೨.ದನಗಳ ಮುಖಕ್ಕೆ ಕಟ್ಟುವ ಹಗ್ಗ.
ಮುಖಾಬಿಲೆ (ನಾ). ೧. ಭೆಟ್ಟಿ; ಸಂದರ್ಶನ. ೨. ಲೆಕ್ಕವನ್ನು ತಾಳೆ ನೋಡುವುದು.
ಮುಖಾಮುಖಿ (ನಾ). ೧. ಭೇಟಿ; ಸಂದರ್ಶನ. (ಅ). ೨. ಎದುರೆದುರು.
ಮುಖ್ಯ ೧.= ಮುಖಂಡ. (ಗು). ೨. ಪ್ರಧಾನವಾದ; ಮಹತ್ತ್ವವುಳ್ಳ. ~ಮಂತ್ರಿ = ರಾಜ್ಯದ ಸಚಿವಮಂಡಲದ ನಾಯಕ.
ಮುಖ್ಯಸ್ಥ = ಮುಖಂಡ.
ಮುಗದಾಣ = ಮೂಗುದಾಣ.
ಮುಗಿ (ಕ್ರಿ). ೧.ಮುಚ್ಚು; ಮುಚ್ಚಿಕೊಳ್ಳು. ೨. ಮುಕ್ತಾಯಗೊಳ್ಳು; ಕೊನೆಗಾಣು. ~ಇಸು = ೧. ಮುಚ್ಚಿಸು; ಮುಚ್ಚುವಂತೆ ಮಾಡು. ೨. ಮುಕ್ತಾಯಗೊಳಿಸು.
ಮುಗಿತಾಯ = ಮುಕ್ತಾಯ.
ಮುಗಿಯಿಸು = ಮುಗಿಸು.
ಮುಗಿಲ್(ಲು) (ನಾ).೧.ಮೋಡ. ೨.ಆಕಾಶ. ~ಒಡ್ಡು = ಮೋಡಗಳ ಸಮೂಹ, –ಗುಂಪು. ~ಕ(ಗ)ಲ್ = ಆಲಿಕಲ್ಲು. ~ಕಿ(ಗಿ)ಚ್ಚು= ಮಿಂಚಿನ ಪ್ರಭೆ, –ಕಾಂತಿ. ~ದನಿ = ಗುಡುಗು. ~ಪ(ವ)ನಿ = ಮಳೆ. ~ಬ(ವ)ಟ್ಟೆ = ಆಕಾಶ.
ಮುಗಿಲ್ದೇರ (ನಾ). ಮೋಡವನ್ನು ವಾಹನವಾಗುಳ್ಳವನು; ಇಂದ್ರ.
ಮುಗಿವು = ಮುಕ್ತಾಯ.
ಮುಗುದ = ಮುಗ್ಧ.
ಮುಗುದಾಣ = ಮೂಗುದಾಣ.
ಮುಗುದೆ = ಮುಗ್ಧೆ.
ಮುಗುಳ್(ಳು) (ಕ್ರಿ). ೧. ಮುಚ್ಚಿಕೊಳ್ಳು. ೨. ಕುಡಿಯೊಡೆ; ಚಿಗುರು. (ನಾ). ೩. ಮೊಗ್ಗು; ಮುಕುಳ. ~ಅಂಬು = ಹೂವಿನಿಂದ ಮಾಡಿದ ಬಾಣ. ~ಅಕ್ಕಿ= ಅರ್ಧ ಬೆಂದ ಅಕ್ಕಿ. ~ಕ(ಗ)ಣೆ = ಮುಗುಳಂಬು. ~ಕಾ(ಗಾ)ಯ್ = ಹೂವಿನಿಂದ ಆದೇ ತಾನೆ ಬಂದ ಕಾಯಿ. ~ನಗೆ = ಮೆಲುನಗೆ; ಮಂದಹಾಸ.
ಮುಗುಳಂಬ (ನಾ). ಹೂವಿನ ಬಾಣವನ್ನುಳ್ಳವನು; ಕಾಮ.
ಮುಗುಳಿ (ನಾ). ಒಂದು ಜಾತಿಯ ಮುಳ್ಳು ಮರ; ಜಾಲಿ.
ಮುಗುಳುಗಣೆಯ = ಮುಗುಳಂಬ.
ಮುಗ್ಗಟ್ಟು (ನಾ). ಇಕ್ಕಟ್ಟಿನ ಸ್ಥಿತಿ; ಬಿಕ್ಕಟ್ಟು.
ಮುಗ್ಗರಿಸು (ಕ್ರಿ). ಎಡವು; ತಡವರಿಸು; ಮುಗ್ಗು.
ಮುಗ್ಗಲು (ನಾ). ೧.ಮುಗ್ಗಿದುದು; ಬೂಷ್ಟು. (ಗು). ೨. ಕೊಳೆತ; ಜೂಜು ಹಿಡಿದ.
ಮುಗ್ಗಾಲಿ (ನಾ). ಮೂರು ಚಕ್ರಗಳುಳ್ಳ ಗಾಡಿ, –ವಾಹನ.
ಮುಗ್ಗು (ಕ್ರಿ). ೧. ಎಡವು; ಮುಗ್ಗರಿಸು. ೨. ಕುಗ್ಗು; ಕುಸಿ. ೩. ಮುತ್ತು; ಮುಗಿಬೀಳು. ೪. ನಾಶವಾಗು. ೫. ಎರಗು; ನಮಸ್ಕರಿಸು. ೬. ಬೂಜುಹಿಡಿ; ಬೂಷ್ಟು ಹಿಡಿ. (ನಾ). ೭. = ಮುಗ್ಗಲು.
ಮುಗ್ಗುಡ್ಡೆ (ನಾ). ಮೂರುಗುಡ್ಡೆ, –ರಾಶಿ.
ಮುಗ್ಗುರಿಸು = ಮುಗ್ಗರಿಸು.
ಮುಗ್ಧ (ನಾ). ೧. ಕಪಟವನ್ನು ತಿಳಿಯದವನು; ಸರಳಸ್ವಭಾವದವನು. (ಗು). ೨. ಮೋಹಕ್ಕೊಳಗಾದ; ಆಕರ್ಷಿತನಾದ.

೩. ಕಪಟವಿಲ್ಲದ; ಸರಳ ಮನಸ್ಸಿನ. ೪. ಮೂಢತನದಿಂದಕೂಡಿದ. ೫. ಚೆಲುವಾದ.

ಮುಗ್ಧತೆ (ನಾ). ಸರಳತೆ; ನಿಷ್ಕಪಟತೆ.

ಮುಗ್ಧೆ (ನಾ). ಸರಳಸ್ವಭಾವದ ಹೆಂಗಸು; ಕಪಟವನ್ನು ತಿಳಿಯದವಳು.

ಮುಚ್ಚಂಜೆ (ನಾ). ಸೂರ್ಯಾಸ್ತದ ಸಮಯ; ಮೂರುಸಂಜೆ.

ಮುಚ್ಚಟೆ (ನಾ). ೧. ಪ್ರೀತಿ; ಮೋಹ. ೨. ಹಟ; ಮೊಂಡುತನ.

ಮುಚ್ಚಲಿ(ಳಿ)ಕೆ (ನಾ). ಕರಾರುಪತ್ರ; ಜಾಮೀನುಪತ್ರ.

ಮುಚ್ಚಲು (ನಾ). ೧. ಸಣ್ಣ ಆಕಾರದ ಮೊರ. ೨. = ಮುಚ್ಚಳ್.

ಮುಚ್ಚಳ್ (ನಾ). ಮುಚ್ಚುವ ಸಾಧನ.

ಮುಚ್ಚಳ = ಮುಚ್ಚಳ್.

ಮುಚ್ಚಳಿಗೆ = ಮುಚ್ಚಲಿಕೆ.

ಮುಚ್ಚಿಗ (ನಾ). ೧. ಗಾರೆ ಕೆಲಸದವನು; ಉಪ್ಪಾರ. ೨. ಚರ್ಮಗಾರ; ಚಮ್ಮಾರ.

ಮುಚ್ಚಿಗೆ (ನಾ). ೧. ಮಾಳಿಗೆ; ಮೇಲ್ಛಾವಣಿ. ೨. = ಮುಚ್ಚಳ್.

ಮುಚ್ಚು (ಕ್ರಿ). ೧. (ಬಾಗಿಲು, ಪೆಟ್ಟಿಗೆ ಮುಂತಾದುವುಗಳನ್ನು) ಹಾಕು. ೨. ಮರೆ ಮಾಡು; ಬಚ್ಚಿಡು. ೩. ತುಂಬು; ಕವಿ. (ನಾ). ೪. = ಮುಚ್ಚಳ್. ೫. ಮುಚ್ಚುವಿಕೆ. ~ಮಱೆ(ರೆ) = ೧. ಗುಟ್ಟು; ರಹಸ್ಯ. ೨. ಮೋಸ; ವಂಚನೆ.

ಮುಚ್ಚುಳ್(ಳು) = ಮುಚ್ಚಳ್.

ಮುಚ್ಚುಳ = ಮುಚ್ಚಳ್.

ಮುಚ್ಚೆ (ನಾ). ೧. ಮುಚ್ಚಳ. ೨. ಮೂರ್ಛೆ; ಬವಳಿ. ೩. ಮೊಚ್ಚೆ; ಎಕ್ಕಡ; ಕೆರ. ~ಪಡು = ಮೂರ್ಛೆಹೊಂದು. ~ಪೋ(ವೋ)ಗು = ಮುಚ್ಚೆಪಡು.

ಮುಚ್ಚೋರೆ (ನಾ). ಒಂದು ಬಗೆಯ ಕರಿದ ತಿಂಡಿ.

ಮುಜಗರ = ಮುಜುಗರ.

ಮುಜರಾಯಿ (ನಾ). ದೇವಸ್ಥಾನದ ದಾನಪತ್ತಿಗಳಿಗೆ ಸಂಬಂಧಿಸಿದ ಇಲಾಖೆ.

ಮುಜರೆ ೧. = ಮುಜರಾಯಿ. ೨. = ಮುಜುರೆ.

ಮುಜುಗರ (ನಾ). ೧. ಆಲಸ್ಯ; ಜಡತೆ. ೨. ಸಂಕೋಚ; ದಾಕ್ಷಿಣ್ಯ. ೩. ಹಿಂಸೆ.

ಮುಜುರೆ (ನಾ). ವಂದನೆ; ನಮಸ್ಕಾರ.

ಮುಜ್ಜು (ನಾ). ಕಪ್ಪುಮುಖದ ಕೋತಿ.

ಮುಟ್ಟ (ಅ). ವರೆಗೆ; ತನಕ.

ಮುಟ್ಟಯಿಸು (ಕ್ರಿ). ಸಮೀಪಿಸು; ಸೇರು.

ಮುಟ್ಟಲ್(ಲು) (ನಾ). ೧. ಸಂಪರ್ಕ. ೨. ಸ್ಪರ್ಶ; ಸೋಂಕು. ೩. = ಮುಟ್ಟಲೆ.

ಮುಟ್ಟಲುಮುರುಕ (ನಾ). ಮುಟ್ಟಿದ ಕೂಡಲೆ ಎಲೆಗಳು ಮುಚ್ಚಿಕೊಳ್ಳುವ ಒಂದು ಜಾತಿಯ ಗಿಡ; ಮುಟ್ಟಿದರೆ ಮುನಿ.

ಮುಟ್ಟಲೆ (ನಾ). ಮುಟ್ಟು; ರಜಸ್ಸು.

ಮುಟ್ಟವಿಸು = ಮುಟ್ಟಯಿಸು.

ಮುಟ್ಟನೆ = ಮುಟ್ಟಲೆ.

ಮುಟ್ಟಿ (ನಾ). ಮುಷ್ಟಿ; ಹಿಡಿ.

ಮುಟ್ಟಿಗೆ ೧. = ಮುಟ್ಟಿ. ೨. ಚಿತೆ.

ಮುಟ್ಟು (ಕ್ರಿ). ೧. ಸೋಕು; ಸ್ಪರ್ಶಿಸು; ತಾಕು. ೨. ತಲುಪು; ಸೇರು. (ನಾ). ೩. ಸೋಂಕು; ಸ್ಪರ್ಶ. ೪. ರಜಸ್ಸು. ೫. ತಾಯಿಯಲ್ಲದೆ ಬೇರೆಯ ಮುಟ್ಟಾದ ಹೆಂಗಸು ಮುಟ್ಟುವುದರಿಂದ ಮಗುವಿಗೆ ಬರುವ ರೋಗ; ಈರಲು. ೬. ಅಡ್ಡಿ; ಅಡಚಣೆ. ೭. ದಿಗ್ಭ್ರಮೆ. ೮. ಉಪಕರಣ; ಸಾಧನ. ~ಕ(ಗ)ಟ್ಟೆ = ಸೇರಬೇಕಾದ ಸ್ಥಾನ; ಗುರಿ. ~ಕಿ(ಗಿ)ಡು = ನಿಷ್ಪ್ರಯೋಜಕವಾಗು. ~ಕುಟ್ಟು = ಮುಟ್ಟಾಗುವುದಕ್ಕೆ ಮುಂಚೆ ಅಥವಾ ಅನಂತರ ಬರುವ ನೋವು. ~ಕೆ(ಗೆ)ಡು = ಮುಟ್ಟುಗಿಡು. ~ನೀರು = ಮುಟ್ಟಾದವಳು ನಾಲ್ಕನೆಯ ದಿನ ಮಾಡುವ ಸ್ನಾನ.

ಮುಟ್ಟುಗೋಲು(ಳು) (ನಾ). ಸ್ವಾಧೀನಕ್ಕೆ ತೆಗೆದುಕೊಳ್ಳುವುದು ; ಬೇರೆಯವರ ಅಧಿಕಾರವಿಲ್ಲದಂತೆ ಮಾಡುವುದು.

ಮುಟ್ಟುಚಟ್ಟು (ನಾ). ಮುಟ್ಟು, ಸೂತಕ ಮುಂತಾದುವುಗಳಿಂದ ಉಂಟಾಗುವ ಮೈಲಿಗೆ, –ಹೊಲೆ.

ಮುಟ್ಠಾಳ (ನಾ). ಮೂರ್ಖ ; ಹೆಡ್ಡ.

ಮುಡ (ನಾ). ಎತ್ತಿನ ಡುಬ್ಬ ; ಹಿಣಲು.

ಮುಡಹ (ನಾ). ಆಧಾರವಿಲ್ಲದವನು ; ಅಸಹಾಯಕ.

ಮುಡಿ (ಕ್ರಿ). ೧. ತಲೆಯಲ್ಲಿ ಹೂವನ್ನು ಧರಿಸು, –ಸೂಡು. ೨. ಮುಗಿ ; ಅಂತ್ಯವಾಗು. (ನಾ). ೩. ತಲೆ ; ಶಿರಸ್ಸು. ೪. ತುರುಬು ; ಗಂಟು. ೫. ಹೆರಳು ; ಜಡೆ. ೬. = ಮುಡಿವು. ೭. ಒಂದು ಅಳತೆ ; ನಲವತ್ತೆರಡು ಸೇರುಗಳ ಅಳತೆ. ~ಇಸು = ಹೂವನ್ನು ತಲೆಗೆ ಸೆಕ್ಕಿಸು, –ಸೂಡು. ~ಉ(ಯು)ಂಗುರ = ಮದುವೆಯಲ್ಲಿ ವಧುವಿಗೆ ತೊಡಿಸುವ ಉಂಗುರ. ~ಕ(ಗ)ಟ್ಟು = ೧. ಕೂದಲನ್ನು ಕಟ್ಟು ; ಗಂಟುಕಟ್ಟು. ೨. ಹುಲ್ಲಿನ ಹೊರೆಯನ್ನು ಕಟ್ಟು ; ಸಿವುಡುಗಟ್ಟು. ೩. ತುರುಬು ; ಗಂಟು. ೪. ತಲೆಗೆ ಧರಿಸುವ ಒಂದು ಬಗೆಯ ಆಭರಣ. ~ಬಿಡು = ೧. ಕೂದಲನ್ನು ಇಳಿಬಿಡು. ೨. ದೇವರ ಹರಕೆಯನ್ನು ಹೊತ್ತು ಕೂದಲನ್ನು ಬೆಳಸು.

ಮುಡಿಗೆ (ನಾ). ೧. ಕಿರೀಟ. ೨. ಸುರುಳಿ ; ಇರಿಕೆ. ೩. ದಂಡೆ; ಮಾಲೆ. ೪. ಪಣ; ಪಂದ್ಯ.

ಮುಡಿಪು (ಕ್ರಿ). ೧. ಕೊನೆಗಾಣು ; ಅಂತ್ಯಗೊಳ್ಳು. ೨. ಸಾಯು. (ನಾ). ೩. ಮೀಸಲಾಗಿಡುವ ವಸ್ತು ; ಮೀಸಲು.

ಮುಡಿಯಿಸು = ಮುಡಿಸು.

ಮುಡಿವಾಳ (ನಾ). ಒಂದು ಬಗೆಯ ಸುಗಂಧದ ಬೇರು ; ಲಾಮಂಚ.

ಮುಡಿವು (ನಾ). ಕೊನೆ ; ಮುಕ್ತಾಯ.

ಮುಡುಕು (ಕ್ರಿ). ೧. ಕುಗ್ಗು ; ಮುದುಡಿಕೊಳ್ಳು. ೨. ಬಗ್ಗಿಸು ; ಬಾಗುವಂತೆ ಮಾಡು. (ನಾ). ೩. ಮೂಲೆ ; ತಿರುವು.

ಮುಡುಂಗು = ಮುಡುಂಕು.

ಮುಡುಂಪು (ಕ್ರಿ). ೧. ಮೀಸಲಾಗಿಡು ; ಪ್ರತ್ಯೇಕವಾಗಿರಿಸು. (ನಾ). ೨. ಮೀಸಲು; ಮುಡಿಪು. ೩. ಹೆಗಲು ; ಭುಜ.

ಮುಡುಂಬ (ನಾ). ಅಂಗಹೀನ ; ಅಂಗವಿಕಲ.

ಮುಡುಂಬು (ಕ್ರಿ). ೧. ಮುದುರಿಕೊಳ್ಳು; ವಕ್ರವಾಗು. (ನಾ). ೨. ಹೆಗಲು ; ಭುಜ.

ಮುಡುಂಹ = ಮುಡಹ.

ಮುಡುಂಹು (ಕ್ರಿ). ೧. ಕೊಲ್ಲು ; ಸಂಹರಿಸು. (ನಾ). ೨. ಹೆಗಲು ; ಭುಜ.

ಮುಣು(ಂ)ಗು = ಮುಬುಂಕು.

ಮುತಾಲಿಕ (ನಾ). ೧. ನಿಯೋಗಿ ; ಪ್ರತಿನಿಧಿ. ೨. ಕಾರಭಾರಿ.

ಮುತುವರ್ಜಿ (ನಾ). ಆಸಕ್ತಿ ; ಶ್ರದ್ಧೆ. ~ವಹಿಸು = ಆಸಕ್ತಿವಹಿಸು ; ಗಮನ ಕೊಡು.

ಮುತ್ತ ೧.=ಮುಬ್ಬುಗ. ೨. ಮುದುಕ; ವೃದ್ಧ. (ಗು). ೩. ವಯಸ್ಸಾದ; ಹಿರಿಯ. ~ಅಜ್ಜ =ಅಜ್ಜಿಯ ಅಥವಾ ತಾತನ ತಂದೆ. ~ಅಜ್ಜಿ =ಅಜ್ಜಿಯ ಅಥವಾ ತಾತನ ತಾಯಿ. ~ಅಜ್ಜೆ = ಮುತ್ತಜ್ಜಿ. ~ಪೊಬ್ಬು(ಳ್ತು) = ಇಳಿಹೊತ್ತು.

ಮುತ್ತಗ = ಮುಬ್ಬುಗ.

ಮುತ್ತಿಗೆ (ನಾ). ಆಕ್ರಮಣ. ~ಹಾಕು = ಮುತ್ತು ; ಆಕ್ರಮಿಸು.

ಮುತ್ತು (ಕ್ರಿ). ೧. ಆವರಿಸು ; ಮುಸುರು. (ನಾ). ೨. ಮುತ್ತಿಗೆ; ಆಕ್ರಮಣ. ೩. ಮುದಿತನ; ವೃದ್ಧಾಪ್ಯ. ೪. ಮುತ್ತುಗದ ಮರ. ೫. ಚುಂಬನ; ಮುದ್ದು. ೬. ನವರತ್ನಗಳಲ್ಲಿ ಒಂದು ; ಮೌಕ್ತಿಕ.

ಮುತ್ತುಗ = ಮುಟ್ಟುಗ.
ಮುತ್ತೈದೆ (ನಾ). ೧. ವೃದ್ಧಳಾದ ಸುಮಂಗಲಿ. ೨. ಸುಮಂಗಲಿ.
ಮುತ್ಸದ್ದಿ (ನಾ). ೧. ನಿಯೋಗಿ; ರಾಯಭಾರಿ. ೨. ರಾಜಕಾರಣಪಟು. ೩. ಬುದ್ಧಿವಂತ; ಚಾಣಾಕ್ಷ.
ಮುದ (ನಾ). ಹಿಗ್ಗು; ಆನಂದ. ~ಏ(ವೇ)ಱು(ರು) = ಹಿಗ್ಗು ಹೆಚ್ಚಾಗು; ಅತ್ಯಂತ ಸಂತೋಷಗೊಳ್ಳು. ~(ಂ)ಪೆ(ಬೆ)ಱು(ರು) = ಸಂತೋಷವನ್ನು ಪಡೆ, -ಹೊಂದು.
ಮುದಪ = ಮುದುಪ.
ಮುದಶ್ರು (ನಾ). ಸಂತೋಷದಿಂದ ಬರುವ ಕಣ್ಣೀರು; ಆನಂದಬಾಷ್ಪ.
ಮುದಿ ೧.=ಮುದುಪ. (ಗು). ೨. ವಯಸ್ಸಾದ; ಮುಪ್ಪಾದ. ~ಗೂಡು = ವಯಸ್ಸಾದ ದೇಹ. ~ಗೊಡ್ಡು=ಹಳೆಯ ಕಂದಾಚಾರದ ಮುದುಕ. ~ತನ=ಮುಪ್ಪು. ~ಪ್ರಾಯ = ವೃದ್ಧಾಪ್ಯ; ಇಳಿವಯಸ್ಸು.
ಮುದಿಯ = ಮುದುಪ.
ಮುದಿರ್ (ಕ್ರಿ). ಮುದಿಯಾಗು; ವಯಸ್ಸಾಗು.
ಮುದು (ಕ್ರಿ). ೧. ಬೆಳೆ; ವೃದ್ಧಿಯಾಗು. ೨. = ಮುದಿರ್.
ಮುದುಕ = ಮುದುಪ.
ಮುದುಕಿ (ನಾ). ವಯಸ್ಸಾದವಳು; ವೃದ್ಧೆ.
ಮುದುಕೆ = ಮುದುಕಿ.
ಮುದುಗಣ್ = ಮುದುಪ.
ಮುದುಗರ = ಮುದ್ಗರ.
ಮುದುಡು (ಕ್ರಿ). ೧. ಸುರುಟಿಕೊಳ್ಳು; ಮುದುರು; ಸುಕ್ಕಾಗು. ೨. ಮಡಿಚಿಕೊಳ್ಳು. ೩. ಬಾಡು; ಒಣಗು. (ನಾ). ೪. = ಮುದುಡೆ.
ಮುದುಡೆ (ನಾ). ಮುದುರಿಕೊಂಡುದು; ಸುಕ್ಕಾಗಿರುವುದು.
ಮುದುಪ (ನಾ). ಮುದುಕ; ವೃದ್ಧ.
ಮುದುಪು (ನಾ). ವೃದ್ಧಾಪ್ಯ; ಮುದಿತನ.
ಮುದುರು = ಮುದುಡು.
ಮುದುವ = ಮುದುಪ.
ಮುದುವೆ = ಮುದುಕಿ.
ಮುದ್ಗ (ನಾ). ಒಂದು ಬಗೆಯ ದ್ವಿದಳ ಧಾನ್ಯ; ಹೆಸರು. ~ಅನ್ನ = ಹುಗ್ಗಿ; ಪೊಂಗಲು.
ಮುದ್ಗರ (ನಾ). ಒಂದು ಬಗೆಯ ಆಯುಧ; ಗದೆ.
ಮುದ್ದಣ (ನಾ). ಮೊಸವೆ; ಮೊಡವೆ.
ಮುದ್ದತು (ನಾ). ಕಾಲಾವಧಿ; ವಾಯಿದೆ.
ಮುದ್ದತ್ತು = ಮುದ್ದತು.
ಮುದ್ದಾಂ (ಅ). ೧. ಖುದ್ದಾಗಿ; ಸ್ವತಃ. ೨. ಉದ್ದೇಶಪೂರ್ವಕವಾಗಿ.
ಮುದ್ದಾಮು = ಮುದ್ದಾಂ.
ಮುದ್ದಿಗೆ (ನಾ). ೧. ದ್ರಾಕ್ಷಿ. ೨. ಮುದ್ರೆ; ಮುದ್ರಿಕೆ.
ಮುದ್ದು (ನಾ). ೧. ಪ್ರೀತಿ; ಒಲವು. ೨. ಚೆಲುವು; ಸೊಗಸು. ೩. ಮುತ್ತು; ಚುಂಬನ. ~ಆಗು = ಸುಂದರವಾಗು; ಚೆಲುವಾಗು. ~ಆಡು = ೧. ಪ್ರೀತಿಸು. ೨.= ಮುತ್ತಿಕ್ಕು. ~ಇಕ್ಕು = ಚುಂಬಿಸು; ಮುತ್ತಿಡು. ~ಇಸು = ಮುದ್ದಾಡು. ~ಕ(ಗ)ಜ್ಜ = ಪ್ರಿಯವಾದ ಕೆಲಸ. ~ಕ(ಗ)ರೆ = ಮುದ್ದುಗೆಯ್. ~ಗಾಱ(ರ) = ಚೆಲುವ; ಸುಂದರ. ~ಗೆಯ್ = ಪ್ರೀತಿಸು; ಲಲ್ಲೈಸು. ~ನುಡಿ = ಮುದ್ದುಮಾತು. ~ಮಾಡು = ಮುದ್ದುಗೆಯ್. ~ಮಾತು=ಸವಿಯಾದ ಮಾತು; ಮಕ್ಕಳ ಮಾತು.
ಮುದ್ದೆ (ನಾ). ೧. ಕರಡೆ; ಗಡ್ಡೆ. ೨. ರಾಗಿ ಹಿಟ್ಟನ್ನು ಬೇಯಿಸಿ ಮಾಡಿದ ಆಹಾರ; ಹಿಟ್ಟು. ~ಅ(ಯ)ನ್ನ=ಮುದ್ದೆಯಾಗಿರುವ

ಅನ್ನ. ~ಮಾಡು = ೧. ರಾಗಿಹಿಟ್ಟನ್ನು ಮಾಡು. ೨. ಮುದುಡೆಮಾಡು.

ಮುದ್ರಕ (ನಾ). ಮುದ್ರಿಸುವವನು; ಅಚ್ಚುಮಾಡುವವನು.

ಮುದ್ರಣ (ನಾ). ಅಕ್ಷರದ ಮೊಳೆಗಳನ್ನು ಜೋಡಿಸಿ ಮುದ್ರಿಸುವುದು; ಅಚ್ಚು. ~ಅಕ್ಷರ = ಅಚ್ಚು ಮಾಡಲು ಬಳಸುವ ಅಕ್ಷರಗಳುಳ್ಳ ಮೊಳೆ; ಅಚ್ಚುಮೊಳೆ. ~ಆಲಯ = ಅಚ್ಚುಕೂಟ; ಮುದ್ರಿಸುವ ಸ್ಥಳ.

ಮುದ್ರಾಂಕಿತ (ಗು). ಅಚ್ಚೊತ್ತಿದ; ಮುದ್ರಿಸಲ್ಪಟ್ಟ.

ಮುದ್ರಾಧಾರಣೆ (ನಾ). ದೇಹಶುದ್ಧಿಗಾಗಿ ಕೆಲವು ಮತಾಚಾರ್ಯರಿಂದ ಮುದ್ರೆಯನ್ನು ಹಾಕಿಸಿಕೊಳ್ಳುವಿಕೆ.

ಮುದ್ರಿಕೆ (ನಾ). ೧. ಮುದ್ರೆ; ಠಸ್ಸೆ. ೨. ಅಚ್ಚು. ೩. ಮುದ್ರೆಯುಳ್ಳ ಉಂಗುರ; ಸಂಕೇತವನ್ನು ಕೆತ್ತಿರುವ ಉಂಗುರ. ೪. ಬೆರಳುಗಳಿಂದ ಸೂಚಿಸುವ ಚಿಹ್ನೆ. ೫. ಕಾವ್ಯದ ಕೊನೆಯಲ್ಲಿ ಸೂಚಿಸುವ ಹೆಸರು; ಅಂಕಿತ. ೬. ಮೊಹರುಳ್ಳ ಕಾಗದ. ೭. ನಾಣ್ಯ.

ಮುದ್ರೆ ೧. = ಮುದ್ರಿಕೆ. ೨. ವೈಷ್ಣವರು ಧರಿಸುವ ಲಾಂಛನ. ~ಇಡು = ೧. ಮುದ್ರೆಯನ್ನು ಒತ್ತು. ೨. ಪುಸ್ತಕವನ್ನು ಅಚ್ಚುಹಾಕು, -ಮುದ್ರಿಸು. ೩. ವ್ಯಾಪಿಸು; ಆಕ್ರಮಿಸು. ೪. ನಾಣ್ಯವನ್ನು ಟಂಕಿಸು. ೫. ಮುಚ್ಚು. ~ಉ(ಯು)ಂಗುರ = ಸಂಕೇತವನ್ನುಳ್ಳ ಉಂಗುರ; ಮುದ್ರಿಕೆ.

ಮುನ್ = ಮುಂ. ~ಅಡಿ = ಪಾದದ ಮುಂಭಾಗ; ಮುಂಗಾಲು. ~ಇರುಳು = ರಾತ್ರಿಯ ಮೊದಲಭಾಗ; ಪ್ರದೋಷ. ~ಎಚ್ಚರಿಕೆ = ಮುಂಜಾಗ್ರತೆ. ~ಎಣಿಕೆ = ಮುಂದಿನ ಆಲೋಚನೆ; ಭವಿಷ್ಯ. ~ಒಡಲು = ಪೂರ್ವಜನ್ಮ; ಹಿಂದಿನ ಜನ್ಮ. ~ನಡೆ = ಏಳಿಗೆ; ಪ್ರಗತಿ. ~ಸುಗ್ಗು = ಮುಂದುವರಿ; ಮುಂದೆಸಾಗು. ~ಸುಡಿ = ಮೊದಲಮಾತು; ಆರಂಭದ ನುಡಿ. ~ನೇಸಱು(ರು) = ಪ್ರಾತಃಕಾಲ. ~ಸೂಚನೆ = ಮೊದಲೇ ತಿಳಿಯಪಡಿಸುವಿಕೆ.

ಮುನಶಿ (ನಾ). ೧. ಅರಬ್ಬಿ, ಪಾರ್ಸಿ ಮುಂತಾದ ಭಾಷೆಗಳನ್ನು ಕಲಿಸುವವನು. ೨. ಗುಮಾಸ್ತ; ಕಾರಕೂನ.

ಮುನಾಫೆ (ನಾ). ಲಾಭ; ಫಾಯಿದೆ.

ಮುನಿ (ಕ್ರಿ). ೧. ಸಿಟ್ಟಾಗು; ಕೋಪಗೊಳ್ಳು. (ನಾ). ೨. ತಪಸ್ವಿ; ಋಷಿ. ~ಇ(ಯಿ)ಸು = ರೇಗಿಸು; ಕೆರಳಿಸು.

ಮುನಿಯ (ನಾ). ಒಂದು ಜಾತಿಯ ಪಕ್ಷಿ; ಭಾರದ್ವಾಜ.

ಮುನಿಷಿ = ಮುನಶಿ.

ಮುನಿಸು (ನಾ). ಕೋಪ; ಸಿಟ್ಟು.

ಮುನೀಬ (ನಾ). ಗುಮಾಸ್ತ; ಕರಣಿಕ.

ಮುನ್ನ (ಅ). ೧. ಮೊದಲು; ಮುಂಚೆ. ೨. ಹಿಂದೆ; ಪೂರ್ವದಲ್ಲಿ.

ಮುನ್ನೀರ್(ರು) (ನಾ). ಕಡಲು; ಸಮುದ್ರ. ~ಅಣುಗ = ಚಂದ್ರ. ~ಅಣುಗಿ = ಸಮುದ್ರರಾಜನ ಮಗಳು; ಲಕ್ಷ್ಮಿ. ~ಎಱೆ(ರೆ)ಯ = ಸಮುದ್ರದ ಒಡೆಯ; ವರುಣ. ~ಮಗ = ಮುನ್ನೀರಣುಗ.

ಮುಪ್ಪಾಗ (ನಾ). ಹಣದ ಮುಕ್ಕಾಲುಭಾಗ; ಮೂರು ಭಾಗ.

ಮುಪ್ಪು (ನಾ). ಮುದಿತನ; ವೃದ್ಧಾಪ್ಯ.

ಮುಪ್ಪುರಿ (ನಾ). ೧. ಮೂರು ಹುರಿ; -ಎಳೆ. ೨. ಬಲವಾದುದು; ದೃಢವಾದುದು. ~ಕೊ(ಗೊ)ಳ್ = ೧. ಒಟ್ಟಾಗಿ ಸೇರು; ಕೂಡು. ೨. ಬಲವಾಗು; ಅತಿಶಯವಾಗು.

ಮುಮುಕ್ಷು (ನಾ). ೧. ಮೋಕ್ಷವನ್ನು ಬಯಸುವವನು. (ಗು). ೨. ಮೋಕ್ಷವನ್ನು ಬಯಸುವ.

ಮುಮೂರ್ಷು (ಗು). ಸಾಯುವ ಸ್ಥಿತಿಯಲ್ಲಿರುವ ; ಮರಣೋನ್ಮುಖವಾದ.

ಮುಮ್ಮಡಿ ೧. = ಮುಮ್ಮಡ. ೨. ಮೂರು ಪಟ್ಟು ; ಮೂರರಷ್ಟು.

ಮುಮ್ಮೊನೆ (ನಾ). ೧. ಮೂರು ತುದಿ. ೨. ಸೈನ್ಯದ ಮುಂಭಾಗ ; ಮುಂಚೂಣಿ.

ಮುಯಯ್ (ನಾ). ೧. ಹೆಗಲು ; ಭುಜ. ೨. ಉಡುಗೊರೆ ; ಕಾಣಿಕೆ. ೩. ಸೇಡು ; ಪ್ರತೀಕಾರ. ೪. ಮೂರು. ~ಅನ್ =೧. ಪ್ರತಿಭಟಿಸು ; ಸೆಣಸು. ೨. ಹೊಣೆಗಾರನಾಗು. ೩. ಸಲುಗೆಯನ್ನು ತೋರು. ೪. ಉಡುಗೊರೆಯನ್ನು ಹೊಂದು. ೫. ಆಶ್ರಯಿಸು ; ಅವಲಂಬಿಸು. ~ಆಳ್(ಳು) = ಒಬ್ಬನ ಪ್ರತಿಯಾಗಿ ಬರುವ ಮತ್ತೊಬ್ಬ ಆಳು ; ವಿನಿಮಯದ ಆಳು.

ಮುಯಿ (ನಾ). ೧. ಒಳ್ಳೆಯದನ್ನಾಗಲೀ ಕೆಟ್ಟದ್ದನ್ನಾಗಲೀ ಹಿಂತಿರುಗಿಸುವುದು. ೨. ಉಡುಗೊರೆ ; ಕಾಣಿಕೆ.

ಮುಯ್ಪು (ನಾ). ಹೆಗಲು ; ಭುಜ.

ಮುಯ್ಯಿ = ಮುಯಿ.

ಮುರ ೧. = ಮುರು. ೨. ಒಬ್ಬ ರಾಕ್ಷಸನ ಹೆಸರು. ~ಅರಿ = ಮುರನ ಶತ್ರು ; ಕೃಷ್ಣ ~ಕೆ(ಗೆ)ೞಿ = ಮುರನನ್ನು ನಾಶಮಾಡಿದವನು ; ಕೃಷ್ಣ.

ಮುರಕು = ಮುಱುಕು.

ಮುರಜ (ನಾ). ಒಂದು ಬಗೆಯ ಚರ್ಮವಾದ್ಯ ; ಮದ್ದಲೆ. ~ಬಂಧ = ಚಿತ್ರಕವಿತ್ವದಲ್ಲಿ ಒಂದು ಬಗೆ.

ಮುರಜೆ = ಮುರಜ.

ಮುರಬ್ಬ = ಮೊರಬ್ಬ.

ಮುರಲಿ(ಳಿ) (ನಾ). ಕೊಳಲು ; ವೇಣು.

ಮುರವತ್ತು (ನಾ). ದಾಕ್ಷಿಣ್ಯ ; ಸಂಕೋಚ.

ಮುರಿ (ಕ್ರಿ). ೧. ಬಾಗು ; ವಕ್ರವಾಗು. ೨. ಬಾಗಿಸು; ಡೊಂಕಾಗಿಸು. ೩. ಹಿಂತಿರುಗು. ೪. = ಮುಱಿ. (ನಾ). ೫. ತಿರುವು ; ಸುಳಿ; ಕೊಂಕು. ೬. ಒಂದು ಬಗೆಯ ಆಭರಣ. ೭. ಕುಸ್ತಿಯಲ್ಲಿ ಒಂದು ಪಟ್ಟು. ~ಇಸು = ೧. ಚಿಲ್ಲರೆ ಮಾಡಿಸು. ೨. = ಮುಱಿಸು. ~ಪಾತ್ರೆ = ಕಮಂಡಲು.

ಮುರಿಗೆ (ನಾ). ೧. ತಿರುಚಿಕೊಂಡಿರುವುದು ; ಸುಲಿಗೆ. ೨. ಕೈಗೆ ಧರಿಸುವ ಒಂದು ಆಭರಣ. ೩. = ಮುಱಿಗೆ.

ಮುರಿವು (ನಾ). ೧. ಬಾಗು ; ಕೊಂಕು. ೨. ಸುತ್ತುವಿಕೆ; ಬಳಸುವಿಕೆ. ೩. = ಮುಱಿವು.

ಮುರು (ನಾ). ೧. ಕಲಗಚ್ಚು ; ಮುಸುರೆ. ೨. = ಮುರುಗು.

ಮುರುಂಟು (ಕ್ರಿ). ೧. ಸುಕ್ಕು ; ಮುದುಡಿಕೊಳ್ಳು. ೨. ಬೆಂಕಿಯನ್ನು ಹೊತ್ತಿಸು, ಬೆಳಗಿಸು. ೩. ಬೆಂಕಿ ಹತ್ತಿಕೊಳ್ಳು ; ಸುಡು.

ಮುರುಕಗಾತಿ (ನಾ). ಒಯ್ಯಾರಿ ; ಬೆಡಗಿ.

ಮುರುಕು ೧. = ಮುಱುಕು. (ನಾ). ೨. ಮುರಿದುದು ; ತುಂಡು. ೩. ತಿರುವು ; ಬಾಗು. ~ನುಡಿ = ಒಯ್ಯಾರದ ಮಾತು.

ಮುರುಗು (ನಾ). ಕಿವಿಗೆ ಹಾಕಿಕೊಳ್ಳುವ ಒಂದು ಅಭರಣ.

ಮುರುಚು (ಕ್ರಿ). ನುಣುಚು; ತಪ್ಪಿಸಿಕೊಳ್ಳು.

ಮುರುಟು (ಕ್ರಿ). ೧. ಮುದುಡು ; ಸುರುಟಿಕೊಳ್ಳು. ೨. ಚಿವುಟು ; ಕತ್ತರಿಸು. ~ಕೂದಲು = ಸುರುಟಿಕೊಂಡ ಕೂದಲು. ~ರೋಗ = ಶರೀರವನ್ನು ಕುಗ್ಗಿಸುವ ಒಂದು ಬಗೆಯ ರೋಗ.

ಮುರುಡ (ನಾ). ಕುಗ್ಗಿದ ದೇಹವುಳ್ಳವನು ; ಗೂನ.

ಮುರುಡಿ (ನಾ). ಕೈಗೆ ಧರಿಸುವ ಒಂದು ಬಗೆಯ ಆಭರಣ.

ಮುರುಡು (ಕ್ರಿ). ೧. ಕುಗ್ಗು; ಮುದುಡು. (ನಾ). ೨. ಒರಟು; ನಯವಿಲ್ಲದಿರುವಿಕೆ.

ಮುರುವ (ನಾ). ೧. ಮೂರ್ಖ; ದಡ್ಡ. ೨. ಬುದ್ಧಿ ಬೆಳೆಯದವನು. ೩.=ಮುಱುವ.

ಮುರುವು ೧. = ಮುಱುವು. ೨. ಕಿವಿಗೆ ಧರಿಸುವ ಆಭರಣ; ಮುರು.

ಮುರುಹು (ಕ್ರಿ). ೧. ತಿರುಗಿಸು; ಬಾಗಿಸು. (ನಾ). ೨. ವಕ್ರತೆ; ಡೊಂಕು. ೩. ಒಂದು ಬಗೆಯ ಆಭರಣ. ೪. ಪುನರಾವೃತ್ತಿ.

ಮುರೆ (ಕ್ರಿ). ೧. ಮೊರೆ; ಝೇಂಕರಿಸು. (ನಾ). ೨. ಒಂದು ಬಗೆಯ ಸುಗಂಧದ್ರವ್ಯ.

ಮುಱಿ(ರಿ) (ಕ್ರಿ). ೧. ಒಡೆ; ಚೂರಾಗು. ೨. ತುಂಡು ಮಾಡು; ಕತ್ತರಿಸು. ೩. ಮುಗಿಸು; ಕೊನೆಗಾಣಿಸು. ೪. ತೊಲಗು; ಬಿಟ್ಟುಹೋಗು. ೫. ಸೋಲಿಸು; ಭಂಗಗೊಳಿಸು. (ನಾ). ೬. ಚೂರು; ತುಂಡು. ೭. ಮುರಿದ ಸ್ಥಿತಿ; ಮುಕ್ಕಾದ ಸ್ಥಿತಿ. ~ಇಸು = ಕೊನೆಗಾಣಿಸು; ಮುಗಿಸು. ~ಗೋಣ್ = ಕತ್ತರಿಸಿದ ಕೊರಳು.

ಮುಱಿ(ರಿ)ಕಿಲ್ (ನಾ). ೧. ಒಂದು ಜಾತಿಯ ಸಸ್ಯ. ೨. ಕೊಳಕು; ಅಶುಚಿ.

ಮುಱಿ(ರಿ)ಗೆ (ನಾ). ತುಂಡು; ಚೂರು.

ಮುಱಿ(ರಿ)ವು (ನಾ). ೧. ಕುಗ್ಗುವಿಕೆ; ಮುದುರುವಿಕೆ. ೨. ನಾಶ; ಅಳಿವು. ೩. ಒಂದು ಬಗೆಯ ಆಭರಣ.

ಮುಱು(ರು)ಕ (ನಾ). ೧. ವಕ್ರತೆ; ಡೊಂಕು. ೨. ಒಯ್ಯಾರ; ಬೆಡಗು.

ಮುಱು(ರು)ಕು (ಕ್ರಿ). ೧. ಮುಖವಿಕಾರ ಮಾಡು. (ನಾ). ೨. = ಮುಱುಕ. ~ಇಸು = ೧. ವಕ್ರಮಾಡು; ತಿರಿಚು. ೨. ಅಹಂಕಾರ ಪಡು.

ಮುಱು(ರು)ವ (ನಾ). ಅಂಗಹೀನ; ಅಂಗವಿಕಲ.

ಮುಱು(ರು)ವು (ನಾ). ೧. ಕಲಗಚ್ಚು; ಮುಸುರೆ. ೨. ಬಾಗು; ಕೊಂಕು.

ಮುರ್ಕ (ನಾ). ಗರ್ವ; ಸೊಕ್ಕು.

ಮುರ್ಛೆ (ನಾ). ಮೂರ್ಛೆ.

ಮುಲಾಜು (ನಾ). ದಾಕ್ಷಿಣ್ಯ.

ಮುಲಾಮು (ನಾ). ೧. ಗಾಯಗಳಿಗೆ ಲೇಪಿಸುವ ಔಷಧ. ೨. ಲೋಹಗಳಿಗೆ ಹಾಕುವ ಲೇಪನ; ಗಿಲೀಟು.

ಮುಲುಕು (ಕ್ರಿ). ೧. ಅಸಹ್ಯಪಡು; ಜುಗುಪ್ಸೆಗೊಳ್ಳು. ೨. ಮುಕ್ಕು; ತಿಣುಕು. (ನಾ). ೩. ಶ್ರಮ; ದಣಿವು. ೪. ಪ್ರಸವವೇದನೆಯನ್ನು ಅನುಭವಿಸುವಿಕೆ.

ಮುಲುಗು (ಕ್ರಿ). ನರಳು; ಮುಕ್ಕು.

ಮುಲುಗುಟ್ಟು (ಕ್ರಿ). ಹುಳುವಿನಂತೆ ಹೊರಳು; ಚಡಪಡಿಸು.

ಮುಲ್ಕಿ (ನಾ). ೧. ಏಳನೆಯ ತರಗತಿಯ ಪರೀಕ್ಷೆ. (ಗು). ೨. ಕಂದಾಯದ ಇಲಾಖೆಗೆ ಸಂಬಂಧಿಸಿದ. ೩. ಸ್ಥಳೀಯ; ದೇಶೀಯ. ~ಇಲಾಖೆ = ಕಂದಾಯದ ಇಲಾಖೆ.

ಮುಲ್ಲ (ನಾ). ಮುಹಮ್ಮದೀಯ ಪಂಡಿತ; ಮೌಲ್ವಿ.

ಮುಲ್ಲಂಗಿ = ಮೂಲಂಗಿ.

ಮುಲ್ಲಿಗ (ನಾ). ಬಡವ; ದರಿದ್ರ.

ಮುಷ್ಕ (ನಾ). ೧. ಅಂಡಕೋಶ; ವೃಷಣ. ೨. ಪುರುಷನ ಜನನೇಂದ್ರಿಯ. ೩. ಹಿಡಿತ; ಸಂಗ್ರಹ.

ಮುಷ್ಕರ (ನಾ). ಸತ್ಯಾಗ್ರಹ; ಸಂಪು.

ಮುಷ್ಟಿ (ನಾ). ೧. ಮುಚ್ಚಿದ ಅಂಗೈ. ೨. ಕೈತುಂಬ ಹಿಡಿಯಬಹುದಾದಷ್ಟು. ೩. ಶಕ್ತಿ ಮುಂತಾದುವುಗಳ ಹಿಡಿಕೆ. ~ಪ್ರಹಾರ = ಮುಷ್ಟಿಯಿಂದ ಕೊಡುವ

ಹೊಡೆತ; ಗುದ್ದು. ~ಬಲ = ಕೈಯ ಸಾಮರ್ಥ್ಯ; ತೋಳ್ಬಲ. ~ಯುದ್ಧ = ಮಲ್ಲಗಾಳಗ.

ಮುಸಂಡಿ = ಮುಸುಂಡಿ.

ಮುಸಱೆ(ರೆ) (ನಾ). ೧.ಬೇಯಿಸಿದ ಅಡುಗೆ. ೨. ಅಡುಗೆಗೆ ಬಳಸಿದ ಪಾತ್ರೆ. ೩. ಕೊಳೆ; ಜಿಡ್ಡು.

ಮುಸಲ (ನಾ). ೧. ಗದೆ. ೨. ಒನಕೆ. ೩. = ಮುಸಲ್ಮಾನ.

ಮುಸಲಮಾನ = ಮುಸಲ್ಮಾನ.

ಮುಸಲಿ (ನಾ). ೧. ಮುಸಲಾಯುಧವನ್ನು ಧರಿಸಿದವನು; ಬಲರಾಮ. ೨.=ಮುಸಲಿಕೆ.

ಮುಸಲಿಕೆ (ನಾ). ಹಲ್ಲಿ; ಗೌಳಿ.

ಮುಸಲ್ಮಾನ (ನಾ). ಇಸ್ಲಾಂ ಮತದವನು; ಮುಹಮ್ಮದೀಯ.

ಮುಸಿ (ನಾ). ೧. ಲೋಹವನ್ನು ಕರಗಿಸುವ ಬಟ್ಟಲು; ಮೂಸೆ. ೨. ತಂಬಾಕನ್ನು ಸೇದುವ ಮಣ್ಣಿನ ಸಾಧನ; ಚಿಲುಮೆ.

ಮುಸಿಯ = ಮುಜ್ಜು.

ಮುಸು = ಮುಜ್ಜು.

ಮುಸುಂಕು (ಕ್ರಿ). ೧. ಆವರಿಸು; ಕವಿ. ೨. ಮರೆಮಾಡು; ಬಚ್ಚಿಡು. (ನಾ). ೩. ಆವರಣ; ತೆರೆ.

ಮುಸುಂಡಿ (ನಾ). ೧. ಸಂಕೋಚಸ್ವಭಾವದವನು; ಮುಖಹೇಡಿ. ೨.ಒಂದು ಬಗೆಯ ಆಯುಧ. ~ತನ = ಮುಖಹೇಡಿತನ.

ಮುಸುಂಬು (ನಾ). ೧. ಮುಖ; ಮೋರೆ. ೨. ಮುಸುಕು; ತೆರೆ.

ಮುಸುಕು ೧. = ಮುಸುಂಕು. (ನಾ). ೨. ಗೋಪ್ಯ; ರಹಸ್ಯ. ೩. = ಮುಜ್ಜು. ~ಮಾತು = ಬಳಸುಮಾತು.

ಮುಸುಗರೆ (ಕ್ರಿ). ಮುಸುಮುಸು ಎಂದು ಶಬ್ದ ಮಾಡು.

ಮುಸುಗು = ಮುಸುಂಕು.

ಮುಸುಗುಡು = ಮುಸುಗರೆ.

ಮುಸುಡಿ ೧. = ಮುಸುಡು. ೨. ಒಂದು ಬಗೆಯ ಆಯುಧ.

ಮುಸುಡು (ನಾ). ಮುಖ; ಮೋರೆ. ~ತೆ(ದೆ)ಗೆ = ಮುಖವನ್ನು ಪಕ್ಕಕ್ಕೆ ತಿರುಗಿಸು.

ಮುಸುಱ್(ರ್,ರು,ಱು) (ಕ್ರಿ). ೧. ಕವಿ; ಆವರಿಸು. ೨. ಮೇಲೆ ಬೀಳು; ಆಕ್ರಮಿಸು. (ನಾ). ೩. ಹೊದಿಕೆ; ತೆರೆ.

ಮುಸುಱೆ(ರೆ) = ಮುಸಱೆ.

ಮುಸುರ್ಪು (ನಾ). ಮುತ್ತುವಿಕೆ; ಆವರಿಸುವಿಕೆ.

ಮುಸುವ = ಮುಜ್ಜು.

ಮುಸುಳಿ = ಮುಸುಡು.

ಮುಸ್ತೆ (ನಾ). ಒಂದು ಜಾತಿಯ ಗೆಡ್ಡೆ.

ಮುಸ್ತೈದು (ನಾ). ೧. ಸಿದ್ಧತೆ; ಸಜ್ಜು. ೨. ಸಲಕರಣೆ; ಸಾಮಗ್ರಿ.

ಮುಸ್ತೈದೆ = ಮುಸ್ತೈದು.

ಮುಸ್ಸಂಜೆ = ಮುಚ್ಚಂಜೆ.

ಮುಹೂರ್ತ (ನಾ). ೧. ಶುಭಸಮಯ, -ಗಳಿಗೆ. ೨. ನಿರ್ದಿಷ್ಟ ಸಮಯ; ಲಗ್ನ. ೩. ಕ್ಷಣಕಾಲ; ಅಲ್ಪಸಮಯ.

ಮುಹೂರ್ತಿಕ (ನಾ). ಜೋಯಿಸ; ಜ್ಯೋತಿಷಿ.

ಮುಳ್(ಳು) (ನಾ). ೧. ಕಂಟಕ. ೨. ಮೊನಚಾದ ತುದಿಯುಳ್ಳದು. ೩. ಪುಳಕ; ರೋಮಾಂಚನ. ~ಕ(ಗ)ತ್ತಿ=ಮುಳ್ಳನ್ನು ಸವರುವ ಕತ್ತಿ. ~ಕ(ಗ)ಳ್ಳಿ = ಒಂದು ಜಾತಿಯ ಕಳ್ಳಿ. ~ಕೋ(ಗೋ)ಲು = ಮುಳ್ಳುಗಳಿಂದ ಕೂಡಿರುವ ಕೋಲು. ~ಬ(ವ)ಟ್ಟೆ = ಮುಳ್ಳುಗಳು ತುಂಬಿರುವ ಹಾದಿ. ~ಮುತ್ತ = ಒಂದು ಜಾತಿಯ ಮುಳ್ಳಿನ ಮರ; ಮುಳ್ಳುಮುತ್ತುಗ. ~ಮೊನೆ = ಮುಳ್ಳಿನ ತುದಿ, -ಕೊನೆ.

ಮುಳಕ (ನಾ). ಹಲಸಿನ ಹಣ್ಣಿನಿಂದ ಮಾಡುವ ಒಂದು ಬಗೆಯ ಭಕ್ಷ್ಯ.

ಮುಳಿ (ಕ್ರಿ). ೧. ರೇಗು ; ಸಿಟ್ಟಾಗು. (ನಾ). ೨. ಮೊಳಕೆ ; ಅಂಕುರ. ೩. = ಮುಳಿವು. ೪. ಒಂದು ಜಾತಿಯ ಹುಲ್ಲು. ~ಇ(ಯಿ)ಸು = ರೇಗಿಸು ; ಸಿಟ್ಟಾಗುವಂತೆ ಮಾಡು. ~ಕೆಯ್ = ಸಿಟ್ಟಾಗು; ಕೋಪಿಸಿಕೊಳ್ಳು. ~ಮಾಡು = ಮುಳಿಹುಲ್ಲನ್ನು ಹೊದಿಸಿದ ಛಾವಣಿ.

ಮುಳಿವು (ನಾ). ಕಂಟಕ ; ಅಡ್ಡಿ.

ಮುಳಿಸು (ನಾ). ಕೋಪ ; ಸಿಟ್ಟು. ~ತಿಳಿ = ಸಿಟ್ಟು ಶಾಂತವಾಗು, –ಶಮನವಾಗು.

ಮುಳು(ಂ)ಗು = ಮುೞುಂಕು. ~ಇಸು = ೧. ಬೇರೊಬ್ಬರ ಹಣವನ್ನು ಸುಂಗಿ ಹಾಕು. ೨. ಹಾಳುಮಾಡು ; ನಾಶಪಡಿಸು. ೩. = ಮುೞುಂಗಿಸು.

ಮುಳುವು = ಮುಳಿವು.

ಮುಳ್ಳು = ಮುಳ್. ~ಏಳು=ರೋಮಾಂಚನಗೊಳ್ಳು. ~ಒತ್ತು = ೧. ಚಪ್ಪಲಿ ; ಮೆಟ್ಟು. ೨. ಕಂಟಕ ; ಅಡ್ಡಿ. ~ಕಂಟಿ = ಮುಳ್ಳುಗಳಿರುವ ಪೊದೆ. ~ಬೆ(ವೆ)ೀಲಿ = ಮುಳ್ಳು ಕಂಟಿಗಳಿಂದ ಹಾಕಿದ ಬೇಲಿ, –ಆವರಣ. ~ಮುಖ = ಸಿಡುಬೆದ್ದು ಗುಳಿ ಬಿದ್ದಿರುವ ಮುಖ. ~ಮುತ್ತುಗ = ಮುಳ್ಮುತ್ತ. ~ಮೊನೆ = ಮುಳ್ಮೊನೆ. ~ಹಂದಿ = ಮೈ ಮೇಲೆ ಮುಳ್ಳಿನಂತಹ ಗರಿಗಳಿರುವ ಒಂದು ಜಾತಿಯ ಹಂದಿ. ~ಹೊಯ್ಯಿಸು = ಬೀಸುವ ಕಲ್ಲು, ಗುಂಡುಕಲ್ಲು ಮುಂತಾದುವುಗಳ ಮೇಲು ಭಾಗವನ್ನು ಉಳಿಯಿಂದ ಹೊಡೆದು ಕರಕಲಾಗಿಸು.

ಮುೞು(ಳು)ಂಕು (ಕ್ರಿ). ೧. ನೀರಿನಲ್ಲಿ ಅಡಗು ; ಮುಳುಗು. ೨. ತಲ್ಲೀನವಾಗು ; ಮಗ್ನವಾಗು.

ಮುೞು(ಳು)(ಂ)ಗು=ಮುೞುಂಕು. ~ಇಸು = ನೀರಿನಲ್ಲಿ ಅಡಗುವಂತೆ ಮಾಡು.

ಮುೞು(ಳು)ಕು ೧. = ಮುೞುಂಕು. (ನಾ). ೨. ನೀರಿನಲ್ಲಿ ಅಡಗುವಿಕೆ ; ಮುಳುಗುವಿಕೆ.

ಮುೞ್ಕು(ಳ್ಕು) (ಕ್ರಿ). ಮುಳುಗು ; ಅಡಗು.

ಮುೞ್ಗು(ಳ್ಗು) (ಕ್ರಿ). ೧. ಬೀಳು ; ಕೆಡೆ. ೨. ನಮಸ್ಕರಿಸು.

ಮುೞ್ತು(ಳ್ತು)ಗ (ನಾ). ಒಂದು ಜಾತಿಯ ಮರ ; ಮುತ್ತುಗ ; ಪಲಾಶ.

ಮೂ (ನಾ). ೧. ಮೂರು. ೨. ಮೂಗು. ~ಕೊಱ(ರ)ತಿ = ಮೂಗು ಕತ್ತರಿಸಿ ಹೋದವಳು ; ಮೂಗಿಲ್ಲದವಳು. ~ಕೊಱೆ(ರೆ)ಯ = ಮೂಗು ಕತ್ತರಿಸಿ ಹೋದವನು. ~ಜಗ = ಸ್ವರ್ಗ, ಮರ್ತ್ಯ ಹಾಗು ಪಾತಾಳಗಳೆಂಬ ಮೂರು ಲೋಕಗಳು. ~ದೇವರ್(ರು) = ಬ್ರಹ್ಮ, ವಿಷ್ಣು ಮತ್ತು ಶಿವ; ತ್ರಿಮೂರ್ತಿ. ~ಬ(ವ)ಟ್ಟಲು = ೧. ಮೂರು ಬಟ್ಟಲು. ೨.ಜನನದ ಹತ್ತು ದಿನಗಳೊಳಗೆ ಮಗುವಿಗೆ ಮಾಡುವ ಒಂದು ಶುಭಕಾರ್ಯ. ~ಬ(ವ)ಟ್ಟೆ =ಮೂರು ದಾರಿ, –ಮಾರ್ಗ. ~ಬ(ವ)ಣ್ಣ = ಮೂರು ಬಣ್ಣ; ತ್ರಿವರ್ಣ. ~ಬಿ(ವಿ)ಟ್ಟಿ = ಪ್ರತಿಫಲಾಪೇಕ್ಷೆಯಿಲ್ಲದೆ ಮಾಡುವ ಶೋಧನಕರ್ಮ, ವಹನಕರ್ಮ ಮತ್ತು ಅಪನಯನಕರ್ಮಗಳೆಂಬ ಮೂರು ಬಗೆಯ ಸೇವೆ. ~ಮು(ವ)ಡಿ = ಮೂರು ಮಡಿ, –ಸಲ. ~ಲೋಕ = ಮೂಜಗ.

ಮೂಂಕಿಱು(ರಿ) (ಕ್ರಿ). ವಾಸನೆಯನ್ನು ನೋಡು ; ಮೂಸು.

ಮೂ(ಂ)ಕು (ನಾ). ಗಾಡಿ ಹೊಡೆಯುವವನು ಗಾಡಿಯಲ್ಲಿ ಕುಳಿತುಕೊಳ್ಳುವ ಸ್ಥಳ; ಮೂಕಿ.

ಮೂಕ (ನಾ). ೧. ಮಾತು ಬಾರದವನು ; ಮೂಗ. ೨. ಮಾತನಾಡಲಾರದವನು ; ಮೌನಿ. ~ಅರ್ಜಿ = ರುಜುವಿಲ್ಲದ ಅಹವಾಲು. ~ನೋವು = ವ್ಯಕ್ತಪಡಿಸಲಾಗದ

ನೋವು, -ಯಾತನೆ. ~ಸ್ವಪ್ನ= ವಿವರಿಸಲು ಬಾರದ ಕನಸು.

**ಮೂಕತೆ** (ನಾ). ಮಾತನಾಡದಿರುವಿಕೆ; ಮೌನ.

**ಮೂಕಿ** ೧. = ಮೂಂಕು. ೨. ಮಾತು ಬಾರದವಳು; ಮೂಗಿ.

**ಮೂಕುತಿ** = ಮೂಗುತಿ.

**ಮೂಗ** = ಮೂಕ.

**ಮೂಗಿ** (ನಾ). ೧. ಮಾತು ಬಾರದವಳು; ಮೂಕಿ. ೨. ಒಂದು ಜಾತಿಯ ಪಕ್ಷಿ.

**ಮೂಗಿಲಿ** (ನಾ). ೧. ಒಂದು ಜಾತಿಯ ಇಲಿ. ೨. = ಮೂಕೊಜಿತಿ.

**ಮೂಗು** (ನಾ). ೧. ವಾಸನೆಯನ್ನು ಗ್ರಹಿಸುವ ಇಂದ್ರಿಯ; ನಾಸಿಕ. (ಗು). ೨. ಮಾತನಾಡಲು ಬಾರದ; ಮೌನವಾದ. ~ಅಱು(ರಿ) = ೧. ಮೂಗನ್ನು ಕತ್ತರಿಸು. ೨. ಅವಮಾನಿಸು; ಮುಖಭಂಗ ಮಾಡು. ~ಅಟ್ಕೆ(ಳ್ಕೆ, ಕ್ಕೆ) = ಸದ್ದುಮಾಡದೆ ಅಳುವಿಕೆ; ಮೂಕರೋದನ. ~ಉಬ್ಬಸ = ತೊಂದರೆ; ತ್ರಾಸ. ~ಉರ್ಚು = ಮೂಗುದಾರವನ್ನು ಹಾಕು. ~ಏಟು = ಮೂಗುಪೆಟ್ಟು. ~ಏರಿಸು = ಅಹಂಕಾರಪಡು; ಗರ್ವಿಸು. ~ಚಾಚು = ಇನ್ನೊಬ್ಬರ ವಿಷಯದಲ್ಲಿ ಬಾಯಿಹಾಕು. ~ತಿಕ್ಕು = ೧. ಮೂಗನ್ನು ಉಜ್ಜು. ೨. ಶರಣುಬರು. ~ದಾರ = ೧. ದನಗಳನ್ನು ಹತೋಟಿಯಲ್ಲಿಟ್ಟುಕೊಳ್ಳಲು ಮೂಗಿಗೆ ಹಾಕುವ ದಾರ. ೨. ತಡೆ; ನಿಯಂತ್ರಣ. ~ನೇಣ್(ಣು) = ಮೂಗುದಾರ. ~ಪ(ವ)ಡು = ಸುಮ್ಮನಿರು; ಮೌನವಾಗು. ~ಪೆಟ್ಟು = ಒಳಗೇ ನೋವುಂಟುಮಾಡುವ ಗಾಯ; ಮೂಗುಗಾಯ. ~ಬೊಟ್ಟು = ಮೂಗುತಿ. ~ಮುರಿ = ತಿರಸ್ಕರಿಸು; ಧಿಕ್ಕರಿಸು. ~ಹಾಕು = ಮೂಗುಚಾಚು.

**ಮೂಗುತಿ** (ನಾ). ಮೂಗಿಗೆ ಧರಿಸುವ ಒಂದು ಆಭರಣ.

**ಮೂಗುದಾಣ** = ಮೂಗುದಾರ.

**ಮೂಗುರ್ಚಿ** (ನಾ). ಮೂಗುದಾರವನ್ನು ಹಾಕಿಸಿಕೊಂಡವನು.

**ಮೂಟೆ** (ನಾ). ಹೊರೆ; ಗಂಟು.

**ಮೂಡ** (ನಾ). ಸೂರ್ಯನು ಉದಯಿಸುವ ದಿಕ್ಕು; ಪೂರ್ವ.

**ಮೂಡಲ್(ಲು)** = ಮೂಡ. ~ಹರಿ = ಸೂರ್ಯೋದಯವಾಗು.

**ಮೂಡಾವಿ** (ನಾ). ದಿಂಬು; ಲೋಡು.

**ಮೂಡಾವೆ** = ಮೂಡಾವಿ.

**ಮೂಡಿಗೆ** (ನಾ). ೧. ಬತ್ತಳಿಕೆ; ತೂಣೀರ. ೨. ಕಂಬ.

**ಮೂಡು** (ಕ್ರಿ). ೧. ಹುಟ್ಟು; ಉದಯಿಸು. (ನಾ). ೨. = ಮೂಡ. ~ಬೆ(ವೆ)ಟ್ಟ = ಪೂರ್ವದಿಕ್ಕಿನ ಬೆಟ್ಟ; ಉದಯಾಚಲ.

**ಮೂಡೆ** (ನಾ). ೧. ಧಾನ್ಯಗಳನ್ನು ತುಂಬುವ ಪೆಂಟೆ. ೨. ಒಂದು ಅಳತೆ. ೩. = ಮೂಡಾವಿ.

**ಮೂಢ** (ನಾ). ೧. ಮೂರ್ಖ; ತಿಳಿಗೇಡಿ. (ಗು). ೨. ತಿಳಿವಳಿಕೆಯಿಲ್ಲದ. ~ನಂಬಿಕೆ = ವಿವೇಚನೆಯಿಲ್ಲದೆ ನಂಬುವುದು; ಕುರುಡು ನಂಬಿಕೆ.

**ಮೂಢಮತಿ** (ನಾ). ದಡ್ಡ; ಅವಿವೇಕಿ.

**ಮೂತಿ** (ನಾ). ಮೋರೆ; ಮುಸುಡು. ~ತಿವಿ = ಮೂದಲಿಸು; ಹೀಯಾಳಿಸು.

**ಮೂತ್ರ** (ನಾ). ಉಚ್ಚೆ. ~ಅಶ್ಮರಿ = ಮೂತ್ರಕಟ್ಟು. ~ಕಟ್ಟು = ಮೂತ್ರವಿಸರ್ಜನೆಯಾಗದಂತೆ ತಡೆಯುವ ಒಂದು ರೋಗ. ~ಶಂಕೆ = ಜಲಬಾಧೆ.

**ಮೂತ್ರಿ** (ನಾ). ಮೂತ್ರ ಮಾಡುವ ಸ್ಥಳ.

**ಮೂದಲೆ** (ನಾ). ೧. ಹೀಯಾಳಿಕೆ; ನಿಂದೆ. ೨. ಮೂರುತಲೆ. ~ಇಕೆ = ಹಂಗಿಸುವಿಕೆ; ಹೀಯಾಳಿಕೆ.

ಮೂದೇವಿ (ನಾ). ಚಟುವಟಿಕೆಯಿಲ್ಲದ ವ್ಯಕ್ತಿ; ಸೋಮಾರಿ.

ಮೂಬದಲು (ನಾ). ವಿನಿಮಯ; ಅದಲು ಬದಲು.

ಮೂಬದಲೆ = ಮೂಬದಲು.

ಮೂಮೆ = ಮೂರ್ಮೆ.

ಮೂರಾಬಟ್ಟೆ (ನಾ). ಅವ್ಯವಸ್ಥೆ; ಕೆಟ್ಟು ಹೋಗುವುದು; ದಿಕ್ಕುಪಾಲಾಗುವುದು.

ಮೂರಿ (ನಾ). ಬಿರುಕು; ಸೀಳು. ~ಬಿ(ವಿ)ಡು = ಸೀಳು; ಬಾಯಿಬಿಡು.

ಮೂರು = ಮೂಱು. ~ನಾಮ = ೧. ವೈಷ್ಣವರೇ ಮೊದಲಾದವರು ಹಣೆಯಲ್ಲಿ ಧರಿಸುವ ಒಂದು ಲಾಂಛನ. ೨. ಮೋಸ; ವಂಚನೆ. ~ಸಂಜೆ = ಮುಚ್ಚಂಜೆ.

ಮೂರುತಿ = ಮೂರ್ತಿ.

ಮೂಱು(ರು) (ನಾ). ಒಂದು ಸಂಖ್ಯೆ.

ಮೂರ್ಖ (ನಾ). ದಡ್ಡ; ತಿಳಿಗೇಡಿ. ~ಇಸು = ಬುದ್ಧಿಗೇಡಿಯಾಗು. ~ತನ = ತಿಳಿಗೇಡಿತನ; ಹೆಡ್ಡತನ. ~ಶಿಖಾಮಣಿ = ಅತಿ ದಡ್ಡ.

ಮೂರ್ಛನ (ನಾ). ೧. ಮೂರ್ಛೆ; ಬವಳಿ. ೨. ಸಂಗೀತದಲ್ಲಿ ಸಪ್ತಸ್ವರಗಳ ಆರೋಹಣ ಮತ್ತು ಅವರೋಹಣದ ಕ್ರಮ.

ಮೂರ್ಛನೆ = ಮೂರ್ಛನ. ~ತಿಳಿ = ಮೂರ್ಛೆಯಿಂದ ಎಚ್ಚರಗೊಳ್ಳು.

ಮೂರ್ಛೆ = ಮೂರ್ಛನ. ~ಇಸು = ಅರಿವು ತಪ್ಪು; ಮೈಮರೆ; ಮೂರ್ಛೆ ಬೀಳು. ~ಪೋ(ವೋ,ಹೋ)ಗು = ಮೂರ್ಛಿಸು. ~ರೋಗ = ಅಪಸ್ಮಾರ; ಮಲರೋಗ.

ಮೂರ್ತ (ನಾ). ೧. ಮುಹೂರ್ತ; ಗಳಿಗೆ. (ಗು). ೨. ರೂಪುಗೊಂಡ; ಆಕಾರ ತಳೆದ; ಪ್ರಕಟಗೊಂಡ. ~(೦)ಗೆಯ್ = ಆಸೀನನಾಗು; ಕುಳಿತುಕೊಳ್ಳು. ~ಕೊ(ಗೊ)ಳಿಸು =೧. ಕುಳ್ಳಿರಿಸು; ಕೂರಿಸು. ೨. ಪ್ರತಿಷ್ಠಾಪಿಸು; ಸ್ಥಾಪನೆಮಾಡು. ೩. ಮಂಡಿಸು; ಪ್ರತಿಪಾದಿಸು. ~ವಿದ್ಯೆ = ವಾಸ್ತುಶಿಲ್ಪ ಮುಂತಾದುವನ್ನು ಕುರಿತ ವಿದ್ಯೆ.

ಮೂರ್ತಿ (ನಾ). ೧. ರೂಪುಗೊಂಡುದು; ಆಕಾರ ತಳೆದುದು. ೨. ಪ್ರತಿಮೆ; ವಿಗ್ರಹ. ೩. ಶರೀರ; ದೇಹ. ~ಕೊ(ಗೊ)ಳ್(ಳ್ಳು) = ರೂಪು ತಾಳು; ಆಕಾರವನ್ನು ಪಡೆ. ~ಪೂಜೆ = ವಿಗ್ರಹಕ್ಕೆ ಮಾಡುವ ಪೂಜೆ; ವಿಗ್ರಹಾರಾಧನೆ. ~ಬಲ = ದೇಹದಾರ್ಢ್ಯ; ಶರೀರಬಲ. ~ವಿದ್ಯೆ = ಶಿಲ್ಪಕಲೆ.

ಮೂರ್ತಿಮಂತ (ಗು). ಆಕಾರ ತಳೆದ; ಪ್ರತ್ಯಕ್ಷ.

ಮೂರ್ತೀಕರಿಸು (ಕ್ರಿ). ಆಕಾರವನ್ನು ಕೊಡು; ರೂಪಿಸು.

ಮೂರ್ತೀಭವಿಸು (ಕ್ರಿ). ಆಕಾರವನ್ನು ಹೊಂದು; ರೂಪತಾಳು.

ಮೂರ್ಧ (ನಾ). ೧. ಮುಂದಲೆ. ೨. ತಲೆ. ೩. ತುದಿ; ಶಿಖರ. ~ಅಭಿಷೇಕ = ತಲೆಯ ಮೇಲೆ ನೀರು, ಹಾಲು ಮುಂತಾದುವನ್ನು ಧಾರೆ ಎರೆಯುವುದು; ಮಸ್ತಕಾಭಿಷೇಕ. ~ಪಿಂಡ = ಆನೆಯ ಕುಂಭಸ್ಥಳ.

ಮೂರ್ಧಜ (ನಾ). ಮುಂಗುರುಳು.

ಮೂರ್ಧನ್ಯ (ನಾ). ೧. ತಲೆಗೆ ಅಥವಾ ಮಿದುಳಿಗೆ ಸಂಬಂಧಿಸಿದುದು. ೨. ಬಾಯಿಯ ಮುಂಭಾಗದಲ್ಲಿ ಹುಟ್ಟುವ ಋ, ೠ, ಟವರ್ಗ, ರ, ಱ, ಷ, ಳ, ೞ ಎಂಬ ಅಕ್ಷರಗಳು.

ಮೂರ್ಮೆ (ನಾ). ಮೂರುಸಲ, -ಬಾರಿ.

ಮೂಲ (ನಾ). ೧. ಬೇರು. ೨. ಕೆಳಭಾಗ; ಬುಡ. ೩. ಹುಟ್ಟು; ನೆಲೆ; ಆಕರ. ೪. ಆದಿ; ಮೊದಲು. ೫. ಒಂದು ನಕ್ಷತ್ರದ ಹೆಸರು. ೬. ನಾಶ; ಮುಳಿವು. ೭. ಅಸಲು; ಮೂಲಧನ. ~ಇಗ = ೧. ಮೂಲಿಕೆಗಳನ್ನು ಮಾರುವವನು. ೨. ಆದಿವಾಸಿ.

~ಉತ್ಪಾಟನ(ನೆ) = ಬೇರು ಸಹಿತ ನಾಶ ಮಾಡುವುದು. ~ಕಾರಣ=ಮೊತ್ತಮೊದಲ ಕಾರಣ; ಮುಖ್ಯಕಾರಣ. ~ಗ್ರಂಥ=ಆಕರ ಗ್ರಂಥ. ~ತತ್ತ್ವ = ಸಿದ್ಧಾಂತದ ಸಾರ. ~ಧನ=ಬಂಡವಾಳ; ಅಸಲು. ~ಧಾತು = ವಿಭಜನೆ ಮಾಡಲಾಗದ ದ್ರವ್ಯಗಳಲ್ಲಿ ಒಂದು. ~ನಿವಾಸಿ=ಮೊದಲು ಬೀಡು ಬಿಟ್ಟವನು; ಆದಿವಾಸಿ. ~ಪಾಠ=೧. ಪ್ರಾರಂಭದಲ್ಲಿ ಕಲಿಯಬೇಕಾದ ಪಾಠ; ಬಾಲಶಿಕ್ಷೆ. ೨. ಗ್ರಂಥ ಸಂಪಾದನೆಯ ಮೂಲಪಾಠ. ~ಪುರುಷ = ಮೊದಲಿಗ. ~ಪ್ರತಿ = ಅಸಲು ಪ್ರತಿ; ಮಾತೃಕೆ. ~ರೋಗ = ಮೂಲವ್ಯಾಧಿ. ~ವ್ಯಾಧಿ = ಒಂದು ಬಗೆಯ ರೋಗ; ಮೊಳೆರೋಗ. ~ಸ್ಥಾನ =೧. ಮುಖ್ಯ ಪ್ರದೇಶ. ೨. ಹುಟ್ಟಿದ ಊರು; ಜನ್ಮಸ್ಥಳ.

ಮೂಲಂಗಿ (ನಾ). ಒಂದು ಬಗೆಯ ಗಡ್ಡೆ.

ಮೂಲಕ (ಅ). ಮುಖಾಂತರವಾಗಿ.

ಮೂಲತಃ (ಅ). ೧. ಮೊದಲಿನಿಂದಲೇ; ಆದಿಯಿಂದಲೇ. ೨. ಮುಖ್ಯವಾಗಿ.

ಮೂಲಭೂತ(ಗು). ಮೊದಲಿನಿಂದಲೂ ಇರುವ; ಸ್ವಭಾವಸಿದ್ಧವಾದ.

ಮೂಲಿಕೆ (ನಾ). ೧. ಬೇರು. ೨. ಔಷಧದ ಬೇರು.

ಮೂಲೆ (ನಾ). ೧. ಎರಡು ರೇಖೆಗಳು ಅಥವಾ ಸಮಕ್ಷೇತ್ರಗಳು ಸಂಧಿಸುವ ಸ್ಥಳ; ಕೋನ. ೨. ಸಂಧಿ; ಸಂದು. ~ಕಸ=ನಿಷ್ಪ್ರಯೋಜಕ ವಾದುದು. ~ಗುಂಪಾಗು=ಕೆಲಸಕ್ಕೆ ಬಾರದಾಗು. ನಿರುಪಯುಕ್ತವಾಗು. ~ಗುಂಪು =ವ್ಯರ್ಥ; ಹಾಳು. ~ಪಾಲು=ಮೂಲೆಕಸ. ~ಮಟ್ಟ = ಕೋನಗಳನ್ನು ಪರೀಕ್ಷಿಸಲು ಬಳಸುವ ಉಪ್ಪಾರನ ಒಂದು ಸಾಧನ. ~ಮನೆ = ಕಡೆಯ ಮನೆ. ~ಹಿಡಿ = ಮೂಲೆಗುಂಪಾಗು.

ಮೂಲ್ಯ (ನಾ). ೧. ಬೆಲೆ; ಕಿಮ್ಮತ್ತು; ಮೌಲ್ಯ. ೨. ಅಸಲು.

ಮೂವಳಸು (ಕ್ರಿ). ೧. ಮೂರು ಸುತ್ತು ಹಾಕು. ೨. ವ್ಯಾಪಿಸು. (ನಾ). ೩. ಮೂರು ಸುತ್ತು.

ಮೂಷಕ (ನಾ). ೧. ಇಲಿ. ೨. ಕಳ್ಳ; ತುಡುಗ. ~ವಾಹನ = ಇಲಿಯನ್ನು ವಾಹನವನ್ನಾಗಿ ಉಳ್ಳವನು; ಗಣಪತಿ.

ಮೂಷಿಕ = ಮೂಷಕ.

ಮೂಷಿಕೆ (ನಾ). ೧. ಹೆಣ್ಣು ಇಲಿ. ೨. = ಮೂಸೆ.

ಮೂಷೆ = ಮೂಸೆ.

ಮೂಸಂಡಿ (ನಾ). ಸಂಕೋಚಸ್ವಭಾವದ ವ್ಯಕ್ತಿ; ಮುಖಹೇಡಿ.

ಮೂಸಕ = ಮೂಷಕ.

ಮೂಸಕದೇರ (ನಾ). ಇಲಿಯನ್ನು ತೇರನ್ನಾಗಿ ಉಳ್ಳವನು; ಗಣಪತಿ.

ಮೂಸು (ಕ್ರಿ). ೧. ವಾಸನೆಯನ್ನು ನೋಡು; ಆಘ್ರಾಣಿಸು. (ನಾ). ೨. ಒಂದು ಜಾತಿಯ ಕೋತಿ; ಮುಸು.

ಮೂಸೆ (ನಾ). ಚಿನ್ನ, ಬೆಳ್ಳಿ ಮುಂತಾದ ಲೋಹಗಳನ್ನು ಕರಗಿಸುವ ಪಾತ್ರೆ.

ಮೂಳ (ನಾ). ೧. ಅಂಗಹೀನ. ೨. =ಮೂಟಿ.

ಮೂಳಿ (ನಾ). ೧. ಅಂಗಹೀನೆ. ೨. ಪಾತ್ರೆಯ ಮೂತಿ; ಜೂಳಿ. ೩. = ಮೂಟಿ.

ಮೂಳೆ (ನಾ). ಎಲುಬು; ಅಸ್ಥಿ. ~ರೋಗ = ಮೂಳೆಗಳು ಶಿಥಿಲವಾಗುವ ಒಂದು ಬಗೆಯ ರೋಗ.

ಮೂಟ(ಳ) (ನಾ). ೧. ಕಿವಿಹರಕ. ೨. ತಿಳಿಗೇಡಿ; ಬೆಪ್ಪ.

ಮೂಟಿ(ಳಿ) (ನಾ). ೧. ಕಿವಿಹರಕಿ. ೨. ತಿಳಿಗೇಡಿ, ಅಸಂಸ್ಕೃತೆ.

ಮೃಗ (ನಾ). ೧. ಯಾವುದಾದರು ಕಾಡು ಪ್ರಾಣಿ. ೨. ಬೇಟೆಯಾಡುವ ಪ್ರಾಣಿ.

೩. ಜಿಂಕೆ; ಎರಳೆ. ೪. ಒಂದು ಜಾತಿಯ ಆನೆ. ೫.=ಮೃಗಶಿರೆ. ~ಅಂಕ = ಜಿಂಕೆಯ ಗುರುತುಳ್ಳವನು; ಚಂದ್ರ. ~ಅಜಿನ = ಜಿಂಕೆಯ ಚರ್ಮ. ~ಅಧಿಪ = ಮೃಗರಾಜ. ~ಅರಿ = ೧. ಹುಲಿ. ೨. ಸಿಂಹ. ~ಆಲಯ = ಪ್ರಾಣಿಗಳನ್ನು ಪ್ರದರ್ಶನಕ್ಕಾಗಿ ಇರಿಸಿದ ಮನೆ; ಖಾಸ್ ಬಂಗ್ಲೆ. ~ಉದ್ಭವ = ಮೃಗದಿಂದ ದೊರೆತುದು; ಕಸ್ತೂರಿ. ~ಜಲ = ಬಿಸಿಲು ಗುದುರೆ; ಮರೀಚಿಕೆ. ~ಝುಲ್ಲಿ = ಕಸ್ತೂರಿಯ ಲೇಪನದ್ರವ್ಯ. ~ತೃಷ್ಣೆ =ಮೃಗಜಲ. ~ಪತಿ = ಮೃಗರಾಜ. ~ಪ್ರೋತ=೧. ಜಿಂಕೆಯ ಮರಿ. ೨. ಯಾವುದೇ ಪ್ರಾಣಿಯ ಮರಿ. ~ಮದ = ಕಸ್ತೂರಿ. ~ರಾಜ = ಕಾಡುಪ್ರಾಣಿಗಳ ಒಡೆಯ; ಸಿಂಹ. ~ರಿಪು = ಮೃಗಾರಿ. ~ಲಕ್ಷ್ಮ =ಮೃಗಾಂಕ. ~ಲಾಂಛನ=೧. ಜಿಂಕೆಯ ಗುರುತು, -ಚಿಹ್ನೆ. ೨. = ಮೃಗಾಂಕ. ~ವಾಹನ =ಜಿಂಕೆಯನ್ನು ವಾಹನವನ್ನಾಗಿ ಉಳ್ಳವನು; ವಾಯು.

ಮೃಗಧರ (ನಾ). ೧. ಚಂದ್ರ. ೨. ಶಿವ.

ಮೃಗನಾಭಿ (ನಾ). ೧. ಒಂದು ಬಗೆಯ ಸುಗಂಧದ್ರವ್ಯ; ಕಸ್ತೂರಿ. ೨. ಕಸ್ತೂರಿ ಮೃಗ.

ಮೃಗಯಾವ್ಯಸನ (ನಾ). ಬೇಟೆಯ ಹವ್ಯಾಸ.

ಮೃಗಯು (ನಾ). ಬೇಡ; ಶಬರ.

ಮೃಗಯೆ (ನಾ). ಬೇಟೆ.

ಮೃಗರೋಮಜ (ನಾ). ಮೃಗಗಳ ಕೂದಲಿನಿಂದ ತಯಾರಿಸಿದುದು; ಉಣ್ಣೆಯ ಬಟ್ಟೆ ಮೊದಲಾದುದು.

ಮೃಗವ್ಯ = ಮೃಗಯೆ.

ಮೃಗಶಿರ = ಮೃಗಶಿರೆ.

ಮೃಗಶಿರೆ (ನಾ). ಇಪ್ಪತ್ತೇಳು ನಕ್ಷತ್ರಗಳಲ್ಲಿ ಒಂದು ಮತ್ತು ಆ ನಕ್ಷತ್ರದಲ್ಲಿ ಬರುವ ಮಳೆ.

ಮೃಗಿ (ನಾ). ಹೆಣ್ಣುಜಿಂಕೆ; ಹರಿಣಿ.

ಮೃಗ್ಯ (ನಾ). ಅಪೇಕ್ಷಿಸಲು ಯೋಗ್ಯವಾದುದು; ಅಪೇಕ್ಷಣೀಯವಾದುದು.

ಮೃಡ (ನಾ). ಶಿವ. ~ಅದ್ರಿ = ಕೈಲಾಸ ಪರ್ವತ. ~ರಿಪು=ಶಿವನ ವೈರಿ; ಮನ್ಮಥ.

ಮೃಡಾಣಿ (ನಾ). ಪಾರ್ವತಿ; ಶಿವೆ.

ಮೃಣಾಲ(ಳ) (ನಾ). ತಾವರೆಯ ದೇಟು.

ಮೃಣ್ಮಯ (ಗು). ಮಣ್ಣಿನಿಂದಾದ; ಮಣ್ಣಿನಿಂದ ಮಾಡಿದ.

ಮೃತ (ಗು). ಮರಣಹೊಂದಿದ; ಸತ್ತ. ~ಆ(ವಾ)ಗು = ಸಾಯು. ~ಪತ್ರ = ಉಯಿಲು; ಮರಣಶಾಸನ. ~ಭಾಷೆ = ಬಳಕೆಯಲ್ಲಿಲ್ಲದೆ ಕೇವಲ ಗ್ರಂಥಸ್ಥವಾಗಿರುವ ಭಾಷೆ. ~ಸಂಜೀವ = ಸತ್ತವರನ್ನು ಬದುಕಿಸುವುದೆಂದು ನಂಬಲಾಗಿರುವ ಒಂದು ಜಾತಿಯ ಗಿಡ. ~ಸಂಜೀವಿನಿ = ೧. ಒಂದು ಮಂತ್ರವಿದ್ಯೆ. ೨. = ಮೃತಸಂಜೀವ. ~ಸಂಸ್ಕಾರ = ಶವಸಂಸ್ಕಾರ; ಉತ್ತರ ಕ್ರಿಯೆ. ~ಸ್ನಾನ = ಸೂತಕವು ಕಳೆದ ಮೇಲೆ ಮಾಡುವ ಸ್ನಾನ.

ಮೃತಕ (ನಾ). ಹೆಣ.

ಮೃತಿ (ನಾ). ಮರಣ; ಸಾವು.

ಮೃತ್ತಿಕೆ (ನಾ). ೧. ಮಣ್ಣು. ೨. ಪವಿತ್ರವಾದ ಮಣ್ಣು.

ಮೃತ್ತಿಗೆ = ಮೃತ್ತಿಕೆ.

ಮೃತ್ತು (ನಾ). ಮಣ್ಣು. ~ಇಸು = ಮಣ್ಣು ಮೆತ್ತು; ಲೆಪ್ಪಹಾಕು.

ಮೃತ್ಪಿಂಡ (ನಾ). ಮಣ್ಣಿನ ಮುದ್ದೆ, -ಉಂಡೆ.

ಮೃತ್ಯು (ನಾ). ೧. ಮರಣ; ಸಾವು. ೨. = ಮೃತ್ಯುದೇವತೆ. ~ದೇವತೆ =ಮರಣದ ಅಧಿದೇವತೆ; ಯಮ. ~ಪತ್ರ = ಮೃತಪತ್ರ.

ಮೃತ್ಯುಂಜಯ (ನಾ). ಯಮನನ್ನು ಜಯಿಸಿದವನು; ಶಿವ.

ಮೃದಂಗ (ನಾ). ೧. ಒಂದು ಬಗೆಯ ಚರ್ಮ ವಾದ್ಯ ; ಮದ್ದಲೆ. ೨. ಒಂದು ಜಾತಿಯ ಸಸ್ಯ.

ಮೃದು (ನಾ). ೧. ಕೋಮಲವಾದುದು. (ಗು). ೨. ಕೋಮಲವಾದ ; ಮೆದುವಾದ. ೩. ಮೆಲ್ಲನೆಯ ; ನಿಧಾನವಾದ. ~ಉಕ್ತಿ = ಸವಿಮಾತು. ~ಕ(ಗ)ನ್ನಡ=ತಿಳಿಗನ್ನಡ. ~ತಲ್ಪ = ಮೆತ್ತನೆಯ ಹಾಸುಗೆ. ~ಪದ = ೧. ಕೋಮಲವಾದ ಪಾದ, –ಚರಣ. ೨. ಕೋಮಲವಾದ ಅಕ್ಷರಗಳಿಂದ ಕೂಡಿದ ಪದ. ~ಬಂಧ = ಕೋಮಲವಾದ ಪದಗಳನ್ನು ಜೋಡಿಸಿದುದು. ~ಯಾನ = ಮಂದಗಮನ. ~ವಚನ = ಮೃದೂಕ್ತಿ. ~ಸ್ಮಿತ = ಮುಗುಳುನಗೆ ; ಮಂದಹಾಸ.

ಮೃದುಯಾನೆ (ನಾ). ಮೆಲ್ಲಗೆ ನಡೆಯುವವಳು; ಮಂದಗಮನೆ.

ಮೃದುಲ(ಳ) (ಗು). ೧. ಕೋಮಲವಾದ ; ಮಿದುವಾದ. ೨. ಶಾಂತವಾದ ; ಸೌಮ್ಯವಾದ.

ಮೃದ್ಭಾಂಡ (ನಾ). ಮಣ್ಣಿನ ಮಡಕೆ ; ಗಡಿಗೆ.

ಮೃದ್ಭಾಜನ = ಮೃದ್ಭಾಂಡ.

ಮೃದ್ವಂಗಿ (ನಾ). ೧. ಕೋಮಲಾಂಗಿ ; ಸುಕುಮಾರಿ. ೨. ಒಂದು ಜಾತಿಯ ಹುಳು. ೩. ಒಂದು ಜಾತಿಯ ಪಕ್ಷಿ.

ಮೃದ್ವಸ್ಥಿ (ನಾ). ಮಿದುವಾದ ಎಲುಬು.

ಮೃಷೆ (ನಾ). ಸುಳ್ಳು ; ಅಸತ್ಯ.

ಮೃಷ್ಟ (ನಾ). ೧. ಮೆಣಸಿನ ಕಾಳು; ಮೆಣಸು. (ಗು). ೨. ಸ್ವಚ್ಛವಾದ ; ಶುದ್ಧವಾದ. ೩. ಸವಿಯಾದ ; ರುಚಿಕರವಾದ. ~ಅನ್ನ = ೧. ರುಚಿಕರವಾದ ಭಕ್ಷ್ಯ. ೨. ಸವಿಯಾದ ಊಟ ; ರಸಕವಳ.

ಮೆಂಟಿಕೆ (ನಾ). ಕಾಲುಬೆರಳಿಗೆ ಹಾಕಿಕೊಳ್ಳುವ ಒಂದು ಬಗೆಯ ಆಭರಣ.

ಮೆಂಡು (ನಾ). ಆಧಿಕ್ಯ ; ಹೆಚ್ಚಳ.

ಮೆಂತೆಯ = ಮೆಂತ್ಯ.

ಮೆಂತ್ಯ (ನಾ). ಒಂದು ಬಗೆಯ ಸೊಪ್ಪು ಮತ್ತು ಅದರ ಕಾಳು.

ಮೆಂಥೆಯ = ಮೆಂತ್ಯ.

ಮೆಕ್ಕೆ (ನಾ). ಒಂದು ಜಾತಿಯ ಹಬ್ಬುವ ಬಳ್ಳಿ.

ಮೆಕ್ಕೆಜೋಳ (ನಾ). ಒಂದು ಬಗೆಯ ಜೋಳ.

ಮೆಚ್ಚವಣಿಗೆ (ನಾ). ಮೆಚ್ಚುಗೆಯಾದುದು ; ಮೆಚ್ಚುಗೆ.

ಮೆಚ್ಚು (ಕ್ರಿ). ೧. ಒಪ್ಪು ; ಸಮ್ಮತಿಸು. ೨. ಪ್ರೀತಿಸು; ಒಲಿ. ೩. ಸೇರು ; ಇಷ್ಟಪಡು. (ನಾ). ೪.=ಮೆಚ್ಚಿಕೆ. ೫. ಪ್ರೀತಿ; ಒಲುಮೆ. ~ಆಗು = ಮೆಚ್ಚುಗೆಯನ್ನು ಪಡೆ ; ಪ್ರಿಯವಾಗು. ~ಇಕೆ(ಗೆ) = ೧. ಒಪ್ಪಿಗೆ; ಅನುಮೋದನೆ. ೨. ತೃಪ್ತಿ ; ಸಂತೋಷ. ೩. ಬಹುಮಾನ ; ಉಡುಗೊರೆ. ~ಇಸು =೧. ಒಡಂಬಡಿಸು ; ಒಪ್ಪಿಸು. ೨. ಸಂತೋಷವನ್ನುಂಟುಮಾಡು ; ತೃಪ್ತಿಪಡಿಸು. ~ಕೆಯ್=ಒಪ್ಪು; ಅಂಗೀಕರಿಸು. ~ಕೊ(ಗೊ)ಡು = ಬಹುಮಾನವನ್ನು ಕೊಡು ; ಉಡುಗೊರೆಯನ್ನು ನೀಡು. ~ಮದ್ದು = ವಶೀಕರಣಕ್ಕಾಗಿ ಹಾಕುವ ಮದ್ದು.

ಮೆಚ್ಚುಗೆ = ಮೆಚ್ಚಿಕೆ.

ಮೆಟ್ಟಲ್(ಲು) (ನಾ). ಸೋಪಾನ ; ಪಾವಟಿಗೆ. ~ಹತ್ತು = ೧. ಸೋಪಾನವನ್ನು ಏರು. ೨. ಏಳಿಗೆ ಹೊಂದು ; ಅಭಿವೃದ್ಧಿಯಾಗು.

ಮೆಟ್ಟಂಗಾಲು (ನಾ). ಮೆಟ್ಟುಗಾಲು ; ತುದಿಗಾಲು.

ಮೆಟ್ಟಿಲ್(ಲು) = ಮೆಟ್ಟಲ್.

ಮೆಟ್ಟು (ಕ್ರಿ). ೧. ತುಳಿ ; ಕಾಲಿನಿಂದ ಒತ್ತು. ೨. ಹೆಜ್ಜೆಹಾಕು, –ಇಡು. ೩. ಕುಂದಣಿಸು; ಕೆಚ್ಚು. ೪. ಸಸಿಯನ್ನು ಹಾಕು ; ನಾಟು.

೫. ಪಾದರಕ್ಷೆಯನ್ನು ಹಾಕಿಕೊಳ್ಳು. ೬. ಪಿಶಾಚಿ, ದೆವ್ವ ಮೊದಲಾದುವು ಹಿಡಿ, –ಬಡಿ. ೭. ಸಂಭೋಗಿಸು. ೮. ನಾಶಮಾಡು; ಹಾಳುಗೆಡವು. ೯. ನರ್ತಿಸು; ಕುಣಿ. (ನಾ). ೧೦. ಹೆಜ್ಜೆ; ದಾಪು. ೧೧. ಸ್ಥಳ; ಜಾಗ. ೧೨. ತಂತಿವಾದ್ಯದಲ್ಲಿ ಸ್ವರವನ್ನು ಗುರುತಿಸಲು ಅಳವಡಿಸಿರುವ ಮನೆ, –ಪಂತ. ೧೩. =ಮೆಟ್ಟಡಿ. ೧೪. ಕಾಲುಂಗುರ. ೧೫. ಸಂಭೋಗ. ~ಅಕ್ಕಿ = ಮದುವೆಯಲ್ಲಿ ವಧೂವರರು ಮೆಟ್ಟುವುದಕ್ಕಾಗಿ ಹಾಕಿದ ಅಕ್ಕಿಯ ಗುಡ್ಡೆ. ~ಅಡಿ = ೧. ಸೋಪಾನ; ಪಾವಟಿಗೆ. ೨. ಜೋಡು; ಪಾದರಕ್ಷೆ. ~ಇಕ್ಕು= ೧. ತುದಿಗಾಲಿನ ಮೇಲೆ ನಿಲ್ಲು; ಮೆಟ್ಟುಂಗಾಲನ್ನಿಡು. ೨. ತುಳಿ; ಧ್ವಂಸಮಾಡು. ~ಇಗೆ = ೧. ಘಟ್ಟ; ಮಜಲು. ೨. ಸೋಪಾನ; ಮೆಟ್ಟಲು. ~ಕ(ಗ)ತ್ತಿ =ತರಕಾರಿಗಳನ್ನು ಕತ್ತರಿಸುವುದಕ್ಕೆ ಮಣೆಗೆ ಜೋಡಿಸಿರುವ ಕತ್ತಿ; ಈಳಿಗೆ. ~ಕ(ಗ)ಲ್ಲು = ಮೆಟ್ಟಲು; ಸೋಪಾನ. ~ಕಾ(ಗಾ)ಲು = ೧. ಮೆಟ್ಟುಂಗಾಲು. ೨. ಪಾದರಕ್ಷೆಯನ್ನು ಹಾಕಿಕೊಂಡಿರುವ ಕಾಲು. ~ಹಲಿಗೆ = ಬಾಗಿಲಿನ ಕೆಳಭಾಗದಲ್ಲಿರುವ ಪಟ್ಟಿ; ಹೊಸ್ತಿಲು.

ಮೆಟ್ರೆ (ನಾ). ಗಂಟಲು. ~ಕ(ಗ)ಟ್ಟು = ಗಂಟಲಿನ ಒಂದು ಬಗೆಯ ರೋಗ; ಗದ್ದಕಟ್ಟು; ಮಂಗನ ಬಾವು.

ಮೆಣಱು(ರು) (ಕ್ರಿ). (ತಡಿಕೆಯಂತೆ) ಹೆಣೆ.

ಮೆಣ್ಸು = ಮೆಣಸು. ~ಕಡಲೆ = ಕಾರ ಹಾಕಿದ ಕಡಲೆ; ಉಪ್ಪುಕಡಲೆ.

ಮೆತು (ಗು). ಮೃದುವಾದ; ಕೋಮಲವಾದ.

ಮೆತ್ತಗೆ (ಅ). ಮೃದುವಾಗಿ; ಕೋಮಲವಾಗಿ.

ಮೆತ್ತನೆ (ನಾ). ೧. ಗೋಡೆ ಮುಂತಾದುವುಗಳಿಗೆ ಬಳಿಯುವ ಗಾರೆ, ಸುಣ್ಣ ಇತ್ಯಾದಿಗಳ ಲೇಪನ. (ಅ). ೨. = ಮೆತ್ತಗೆ.

ಮೆತ್ತು (ಕ್ರಿ). ೧ ಬಳಿ; ಲೇಪಿಸು. ೨. ಗಿಡಿ; ಒತ್ತು; ತುರುಕು. ೩. ಹೊಡೆ; ಅಪ್ಪಳಿಸು. ~ಇಗೆ = ಲೇಪನ; ಬಳಿಯುವಿಕೆ.

ಮೆತ್ತೆ (ನಾ). ಹಾಸುಗೆ; ಸುಪ್ಪತ್ತಿಗೆ.

ಮೆದಡು = ಮೆದುಳ್.

ಮೆದಲು (ಕ್ರಿ). ಕದಲು; ಅಲುಗು.

ಮೆದು = ಮೆತು.

ಮೆದುಗ (ನಾ). ೧. ಮೃದುಸ್ವಭಾವದವನು. ೨. ನಿಧಾನಸ್ಥ. ೩. ಒಂದು ಜಾತಿಯ ಸೊಪ್ಪು.

ಮೆದುಗಿ (ನಾ). ಮೃದುಸ್ವಭಾವದವಳು.

ಮೆದುಳು = ಮಿದುಳ್.

ಮೆದೆ (ನಾ). ೧. ಹುಲ್ಲು ಮುಂತಾದುವುಗಳ ರಾಶಿ, –ಒಟ್ಟಿಲು. ೨. ಒಂದು ಜಾತಿಯ ಹುಲ್ಲು. ~ಕೆ(ಗೆ)ಡೆ = ರಾಶಿಯಾಗಿ ಬೀಳು; ಒಟ್ಟಾಗಿ ಬೀಳು. ~ಹಾಕು = ಹುಲ್ಲನ್ನು ಒಟ್ಟುಹಾಕು, –ರಾಶಿಹಾಕು.

ಮೆಯ್ (ನಾ). ೧. ದೇಹ; ಶರೀರ; ಮೈ. ೨. ಪಾರ್ಶ್ವ; ಪಕ್ಕ. ~ಅಱಿ(ರಿ) = ಎಚ್ಚರಾಗು; ತಿಳಿವನ್ನು ಹೊಂದು. ~ಇಕ್ಕು = ೧. ನಮಸ್ಕರಿಸು. ೨. ಕೆಡೆ; ಬೀಳು. ೩. ಸಾಯು; ಮರಣಹೊಂದು. ~ಇಳಿ = ೧. ಗರ್ಭಸ್ರಾವವಾಗು; ಹಲಿವುಳಿ. ೨. ಸೊರಗು; ಬಡವಾಗು. ~ಒಡ್ಡು = ಎದುರಿಸು. ~ಕ(ಗ)ಟ್ಟು = ದೇಹದ ರಚನೆ. ~ಕ(ಗ)ರೆ = ಮರೆಯಾಗು; ಅಡಗು. ~ಕ(ಗ)ಲಿ = ಶೂರ; ವೀರ. ~ಕ(ಗ)ಳ್ಳ = ಸೋಮಾರಿ; ಅಲಸಿ. ~ಕಾ(ಗಾ)ಣ್(ಣು) = ತೋರು; ಪ್ರಕಟವಾಗು. ~ಕಾ(ಗಾ)ಪು(ಹು) = ಮೈಗಾವಲು; ಅಂಗರಕ್ಷಣೆ. ~ಕಿ(ಗಿ)ಡ = ಸ್ವರೂಪವು ಕೆಡು. ~ಕು(ಗು)ಂದ = ಸೊರಗು; ಕೃಶವಾಗು. ~ಕೂ(ಗೂ)ಡ = ೧. ಮೈತುಂಬಿಕೊಳ್ಳು; ದೃಢನಾಗು. ೨. ನೆರೆ; ಸಂಭೋಗಿಸು. ೩. ಹೊಂದಿಕೊಳ್ಳು.

ರೂಢಿಯಾಗು. ~ಕೆ(ಗೆ)ಡು = ೧.ದೇಹಾರೋಗ್ಯವು ಕೆಡು. ೨. = ಮೆಯ್ಗಿಡು. ~ಕೊ(ಗೊ)ಡು = ೧. ಎದುರಿಸು. ೨. ಶ್ರಮಪಡು; ಮೈ ಮುರಿ. ~ಕೊ(ಗೊ)ಳ್ = ಮೈದೋರು; ಕಾಣಿಸಿಕೊಳ್ಳು. ~ಚಳಿ = ೧. ಭಯ; ಅಂಜಿಕೆ. ೨. ಸಂಕೋಚ; ನಾಚಿಕೆ. ~ಜೋಡು = ಚಿಲಖತ್ತು; ರಕ್ಷಾಕವಚ. ~ತ(ದ)ರ್ = ಮನಸ್ಸು ಮಾಡು; ಅನುಮತಿಕೊಡು. ~ತಿ(ದಿ)ಳಿ=ಮೆಯ್ಯಱಿ. ~ತು(ದು)ಂಬು = ೧. ದಷ್ಟಪುಷ್ಟವಾಗು. ೨. ಮೈ ಮೇಲೆ ದೇವರು ಬರು. ~ತೆ(ದೆ)ಗೆ = ೧. ಹೆದರು; ಅಂಜು. ೨. ಹಿಮ್ಮೆಟ್ಟು; ಮರೆಯಾಗು. ೩. ಕೃಶವಾಗು; ಸಣ್ಣಗಾಗು. ~ತೊ(ದೊ)ಳೆ=ಸ್ನಾನಮಾಡು; ಮೀಯು. ~ತೋ(ದೋ)ಱು(ರು) = ೧. ಕಾಣಿಸಿಕೊಳ್ಳು; ಪ್ರಕಟಗೊಳ್ಳು. ೨. ಪರಾಕ್ರಮವನ್ನು ತೋರಿಸು. ~ನೆಱೆ(ರೆ)=ಮೊದಲಬಾರಿಗೆ ರಜಸ್ವಲೆಯಾಗು; ಪ್ರಾಯಕ್ಕೆ ಬರು. ~ಪೆ(ವೆ)ರ್ಚು = ಉತ್ಸಾಹಗೊಳ್ಳು; ಉಬ್ಬು. ~ಬಗ್ಗಿಸು = ಶ್ರಮಪಡು. ~ಬ(ವ)ೞಿ(ಳಿ) = ವಶ; ಅಧೀನ. ~ಮಱೆ(ರೆ) = ೧. ಅರಿವು ಇಲ್ಲವಾಗು; ಮೂರ್ಛೆಹೊಂದು. ೨. ಗರ್ವದಿಂದ ಮತ್ತನಾಗು; ಲಕ್ಷ್ಯವಿಲ್ಲದಿರು. ~ಮುರಿ = ೧. ದೇಹವನ್ನು ತಿರಿಚು; ಸಡಿಲಿಸು. ೨. ಶ್ರಮಪಡು. ~ಸಾರ್(ರು) = ಸಮೀಪಿಸು; ಹತ್ತಿರಕ್ಕೆ ಬರು. ~ಸಿರಿ = ದೇಹದ ಸೊಬಗು, -ಸೌಂದರ್ಯ. ~ಸೊಕ(ಗ) = ದೇಹದ ಸುಖ. ~ಹತ್ತು=ಮೈಗೂಡು; ಮೈ ತುಂಬಿಕೊಳ್ಳು.

ಮೆಯ್ಗಣ್ಣ (ನಾ). ಶರೀರದಲ್ಲೆಲ್ಲ ಕಣ್ಣುಗಳುಳ್ಳವನು; ಇಂದ್ರ.

ಮೆಯ್ದುನ = ಮಯ್ದುನ.

ಮೆಯ್ಮೆ = ಮಹಿಮೆ.

ಮೆಯ್ಯಿ = ಮೆಯ್.

ಮೆರುಗು (ನಾ). ಹೊಳಪು; ಕಾಂತಿ.

ಮೆಱ(ರ)ವಣಿ = ಮೆಱವಣಿಗೆ.

ಮೆಱ(ರ)ವಣಿಗೆ (ನಾ). ಉತ್ಸವ ಕಾಲದಲ್ಲಿ ಊರಲ್ಲೆಲ್ಲ ಸುತ್ತಾಡಿಕೊಂಡು ಬರುವ ವೈಭವದ ಪ್ರದರ್ಶನ.

ಮೆಱೆ(ರೆ) (ಕ್ರಿ). ೧. ಹೊಳೆ; ಪ್ರಕಾಶಿಸು. ೨. ಎದ್ದು ತೋರು; ಸ್ಪಷ್ಟವಾಗಿ ಕಾಣಿಸಿಕೊಳ್ಳು. ೩. ಕೀರ್ತಿಗೊಳ್ಳು; ಖ್ಯಾತಿ ಹೊಂದು. ೪. ಪ್ರದರ್ಶಿಸು; ತೋರ್ಪಡಿಸು. ೫. ಅಲಂಕರಿಸು; ಸಿಂಗರಿಸು. (ನಾ). ೬. ಮೆರವಣಿಗೆ; ಪ್ರದರ್ಶನ. ೭. ಮೇಲಕ್ಕೆ ಎಸೆಯುವಿಕೆ; ಚಿಮ್ಮುವಿಕೆ. ~ಇಸು = ೧. ಆಚರಿಸು; ಮಾಡು. ೨. ಪ್ರದರ್ಶಿಸು. ೩. ಪ್ರಕಟಗೊಳಿಸು; ಪ್ರಸಿದ್ಧಪಡಿಸು. ~ಕೋ(ಗೋ)ಲ್(ಲು) = ಹೊಲಗದ್ದೆಗಳಲ್ಲಿ ಅತ್ತಿತ್ತ ಚೆಲ್ಲಿದ ಹುಲ್ಲನ್ನು ಶೇಖರಿಸಲು ಬಳಸುವ ಕೊಕ್ಕೆಗೋಲು.

ಮೆಱೆ(ರೆ)ಯಿಸು = ಮೆಱೆಸು.

ಮೆಲ್(ಲು) (ಕ್ರಿ). ೧. ತಿನ್ನು; ಕಬಳಿಸು. ೨.ಜಗಿ; ಮೆಲುಕಾಡಿಸು. (ಗು). ೩. ಮೃದುವಾದ; ಕೋಮಲವಾದ. ೪. ಸಾವಕಾಶವಾದ; ನಿಧಾನವಾದ. ~ಅಡಿ = ಮೃದುವಾದ ಪಾದ. ~ಇಸು=ತಿನ್ನಿಸು; ಉಣ್ಣಿಸು. ~ಉಲಿ = ಮೆಲುದನಿ. ~ಗಾಳಿ = ಮೃದುವಾಗಿ ಬೀಸುವ ಗಾಳಿ; ಮಂದಮಾರುತ. ~ದನಿ = ನಯವಾದ ಧ್ವನಿ; ಮೃದುವಾದ ಧ್ವನಿ. ~ನಗೆ = ಮೃದುವಾದ ನಗೆ; ಮುಗುಳ್ನಗೆ. ~ನಡೆ = ಮಂದವಾದ ನಡಗೆ. ~ನುಡಿ = ನಯವಾದ ಮಾತು. ~ಪಾ(ವಾ)ಸು = ಮೆತ್ತನೆಯ ಹಾಸುಗೆ; ಸುಪ್ಪತ್ತಿಗೆ. ~ಸರಿ=ತುಂತುರು ಮಳೆ; ಸಣ್ಣಮಳೆ.

ಮೆಲಕು = ಮೆಲುಕು.

ಮೆಲುಕು (ನಾ). ೧. ಅರ್ಧ ತಿಂದುದನ್ನು ಪುನಃ ನುರಿಸಿ ತಿನ್ನುವಿಕೆ. ೨. ಕೆಳದವಡೆ. ~ಹಾಕು = ೧. ಅರ್ಧ ತಿಂದ ಆಹಾರವನ್ನು ಪುನಃ ನುರಿಸು; ಜಗಿ. ೨. ಹಿಂದಿನ ವಿಷಯಗಳನ್ನು ಮತ್ತೆ ಸ್ಮರಿಸು.

ಮೆಲುಪು = ಮೆಲ್ಪು.

ಮೆಲ್ಕು = ಮೆಲುಕು.

ಮೆಲ್ಪು (ನಾ). ಕೋಮಲತೆ; ಮೃದುವಾಗಿರುವಿಕೆ; ಮಾರ್ದವ.

ಮೆಲ್ಲಗೆ (ಅ). ೧. ನಿಧಾನವಾಗಿ; ಸಾವಕಾಶವಾಗಿ. ೨. ಮೃದುವಾಗಿ; ನಯವಾಗಿ.

ಮೆಲ್ಲನೆ = ಮೆಲ್ಲಗೆ.

ಮೆಲ್ಲಿತು (ನಾ). ಮೃದುವಾದುದು; ಕೋಮಲವಾದುದು.

ಮೆಲ್ಲಿತ್ತು = ಮೆಲ್ಲಿತು.

ಮೆಲ್ಲಿದ (ನಾ). ಮೃದುಸ್ವಭಾವದವನು; ಸಾಧುಮನುಷ್ಯ.

ಮೆಲ್ಲು (ಕ್ರಿ). ೧. ವೇಗವಾಗಿ ತಿನ್ನು, -ಉಣ್ಣು. ೨. ಅಗಿ; ಜಗಿ.

ಮೆಲ್ವಾಡು (ನಾ). ಕನ್ನಡದ ಒಂದು ಕಾವ್ಯಪ್ರಕಾರ.

ಮೆಹನತು (ನಾ). ೧. ಪರಿಶ್ರಮ; ಪ್ರಯತ್ನ. ೨. ಸಂಭಾವನೆ; ಪ್ರತಿಫಲ.

ಮೆಳೆ (ನಾ). ದಟ್ಟವಾಗಿ ಬೆಳೆದ ಗಿಡಗಳ ಗುಂಪು; ಪೊದರು.

ಮೆಳ್ಪಡು (ಕ್ರಿ). ೧. ಮೋಸಹೋಗು; ವಂಚನೆಗೊಳಗಾಗು. ೨. ತಬ್ಬಿಬ್ಬಾಗು; ಗಾಬರಿಗೊಳ್ಳು. (ನಾ). ೩. ಮೋಸಹೋಗುವಿಕೆ.

ಮೆಳ್ಪಡೆ (ನಾ). ಭ್ರಾಂತಿ; ಹುಚ್ಚು.

ಮೆಳ್ಳ (ನಾ). ೧. ಮಾಲುಗಣ್ಣುಳ್ಳವನು; ಕೋಸುಗಣ್ಣಿನವನು. (ಗು). ೨. ಓರೆಯಾದ; ವಕ್ರವಾದ. ~ಕ(ಗ)ಣ್ಣು = ಮಾಲುಗಣ್ಣು; ವಕ್ರಗಣ್ಣು.

ಮೆಳ್ಳಿಸು (ಕ್ರಿ). ೧. ಸವರು; ಲೇಪಿಸು. ೨. ಕಣ್ಣುಗುಡ್ಡೆಯನ್ನು ಹೊರಳಿಸು.

ಮೆಳ್ಳೆಗಣ್ಣು = ಮೆಳ್ಳಗಣ್ಣು.

ಮೆಣ(ಳ)ಸು (ನಾ). ೧. ಕಾರವಾದ ಒಂದು ಬಗೆಯ ಕಾಳು; ಮೆಣಸು. ೨. ಮೆಣಸಿನ ಕಾಯಿ.

ಮೇ (ಕ್ರಿ). (ಪ್ರಾಣಿಗಳಂತೆ) ತಿನ್ನು; ಮೇಯು.

ಮೇ(ಂ)ಗಾಲ್(ಲು) (ನಾ). ಕಾಲಿನ ಮೇಲುಭಾಗ.

ಮೇಂಟಿ (ನಾ). ಕಣದಲ್ಲಿಯ ಕಂಬ; ಮೇಟಿ ಕಂಬ.

ಮೇಕು (ಕ್ರಿ). ೧. ಲೇಪಿಸು; ಸವರು. (ನಾ). ೨. ಡೇರೆ ಮುಂತಾದುವುಗಳನ್ನು ಹೊಡೆಯಲು ಉಪಯೋಗಿಸುವ ಗೂಟ, -ಬೆಣೆ. ೩. ಮಾತ್ಸರ್ಯ. ೪. ಮೇಲಾಟ; ಸ್ಪರ್ಧೆ. ೫. ಒನಪು; ಒಯ್ಯಾರ.

ಮೇಕೆ (ನಾ). ಹೆಣ್ಣು ಆಡು.

ಮೇಖಲೆ(ಳೆ) (ನಾ). ೧. ಒಡ್ಯಾಣ; ಡಾಬು. ೨. ಪರ್ವತದ ತಪ್ಪಲು. ೩. ಕತ್ತಿ ಮುಂತಾದುವನ್ನು ಸಿಕ್ಕಿಸುವ ಸೊಂಟದ ಪಟ್ಟಿ; ನಡುಕಟ್ಟು.

ಮೇಗಡೆ (ನಾ). ಮೇಲಿನ ಭಾಗ, -ತುದಿ.

ಮೇಗಾವಲು (ನಾ). ೧. ಮೇಲ್ವಿಚಾರಣೆ. ೨. ಮುಖ್ಯ ಕಾವಲು.

ಮೇಗಾಳಿ (ನಾ). ಮೇಲುಗಡೆಯ ದಿಕ್ಕಿನಿಂದ ಬೀಸುವ ಗಾಳಿ; ಬೇಟೆಗೆ ಗುರಿಯಾದ ಪ್ರಾಣಿಯಿಂದ ಬೇಟೆಯಾಡುವ ಮೃಗ ಅಥವಾ ಬೇಟೆಗಾರನ ದಿಕ್ಕಿಗೆ ಬೀಸುವ ಗಾಳಿ.

ಮೇಗು (ನಾ). ೧. ಮೇಲ್ಭಾಗ; ಮೇಲುಗಡೆ. ೨. ಮಿಗಿಲಾದುದು; ಶ್ರೇಷ್ಠವಾದುದು. ~ಉಸಿರ್ = ಮೇಲುಸಿರು; ಏದುಬ್ಬಸ. ~ಕಾ(ಗಾ)ಣ್(ಣು)=ಭವಿಷ್ಯವನ್ನು ತಿಳಿ; ಮುಂದಾಗುವುದನ್ನು ಕಾಣು.

ಮೇಗೆ (ಅ). ಮೇಲೆ; ಮೇಲುಭಾಗದಲ್ಲಿ.

ಮೇಘ (ನಾ). ೧. ಮೋಡ; ಮುಗಿಲು. ೨. ಗುಂಪು; ರಾಶಿ. ೩. ಪರಿಮಳವುಳ್ಳ ಒಂದು ಜಾತಿಯ ಹುಲ್ಲು. ~ಆಗಮ = ಮುಗಿಲುಗಳ ಬರುವಿಕೆ; ಮಳೆಗಾಲ. ~ಕುಸುಮ = ನೀರು; ಉದಕ. ~ಗರ್ಜನೆ = ಗುಡುಗು. ~ಡಂಬರ = ೧. ಮೋಡಗಳ ಸಮೂಹ. ೨. ಗುಡುಗು. ೩. ಕೊಡೆ; ಛತ್ರಿ. ~ನಾದ = ಮೇಘಗರ್ಜನೆ. ~ವರ್ಣ = ಮೋಡದ ಬಣ್ಣ. ~ವಹ್ನಿ = ಸಿಡಿಲು. ~ವಾಹನ = ಮೋಡವನ್ನು ವಾಹನವನ್ನಾಗಿ ಉಳ್ಳವನು; ಇಂದ್ರ.

ಮೇಚಕ (ನಾ). ೧. ಕಡುನೀಲಿ ಬಣ್ಣ; ದಟ್ಟವಾದ ನೀಲಿಯ ಬಣ್ಣ. ೨. ನವಿಲುಗರಿಯಲ್ಲಿರುವ ಕಣ್ಣು; ಚಂದ್ರಕ. ೩. ಬೇಡ; ಕಿರಾತ. ೪. ಬೆಳುದಿಂಗಳು; ಕೌಮುದಿ. ೫. ಮೋಡ; ಮುಗಿಲು.

ಮೇಜವಾನಿ (ನಾ). ಸತ್ಕಾರ.

ಮೇಜು (ನಾ). ೧. ಮರ, ಲೋಹ ಮುಂತಾದುವುಗಳಿಂದ ಮಾಡಿದ, ಬರೆವಣಿಗೆಗೆ ಉಪಯೋಗಿಸುವ ಎತ್ತರವಾದ ಉಪಕರಣ; ಟೇಬಲ್ಲು. ೨. ಇಸ್ಪೀಟು, ಜೂಜು ಮೊದಲಾದುವುಗಳಲ್ಲಿ ಪಂದ್ಯವಾಗಿಡುವ ಹಣ; ಒಡ್ಡು; ಪಣ.

ಮೇಜುಕಟ್ಟು (ಕ್ರಿ). ೧. ಪಣವನ್ನು ಒಡ್ಡು; ಪಂದ್ಯವನ್ನು ಕಟ್ಟು. (ನಾ). ೨. ಗೋಡೆಯ ಕೆಳಭಾಗದಲ್ಲಿ ಬರೆಯುವ ಬಣ್ಣದ ಗೆರೆ; ಕಾರಣೆ.

ಮೇಟಿ ೧. = ಮೇಂಟಿ. ೨. ಘನತೆ; ಶ್ರೇಷ್ಠತೆ; ದೊಡ್ಡಸ್ತಿಕೆ. ೩. ಮುಖ್ಯಸ್ಥ; ಮುಖ್ಯಾಧಿಕಾರಿ. ೪. ಮುಖ್ಯನಾದ ಸೇವಕ. ೫. = ಮೇಣಿ. ೬. ಬೇಸಾಯ; ಒಕ್ಕಲುತನ.

ಮೇಡಿ (ನಾ). ಒಂದು ಜಾತಿಯ ಮರ; ಉದುಂಬರ; ಅತ್ತಿ.

ಮೇಡು (ನಾ). ೧. ಎತ್ತರವಾದ ನೆಲ; ದಿಣ್ಣೆ; ದಿಬ್ಬ. ೨. ಹಿಣಿಲು; ಡುಬ್ಬ.

ಮೇಢ್ರ (ನಾ). ೧. ಟಗರು; ಗಂಡುಕುರಿ. ೨. ಪುರುಷನ ಜನನೇಂದ್ರಿಯ.

ಮೇಣ್(ಅು) (ಅ). ೧. ಇನ್ನು; ಮತ್ತು. ೨. ಅಥವಾ; ಇಲ್ಲವೆ.

ಮೇಣ (ನಾ). ೧. ಜೇನುಹುಟ್ಟಿನಿಂದ ಸಿಗುವ ಒಂದು ಬಗೆಯ ಅಂಟು; ಮಯಣ. ೨. ಕೆಲವು ಜಾತಿಯ ಮರಗಳಿಂದ ಸಿಗುವ ಒಂದು ಬಗೆಯ ಅಂಟು; ರಾಳ. ~ಕ(ಗ)ಪ್ಪಡ = ಎಣ್ಣೆ, ಮೇಣ ಮೊದಲಾದುವುಗಳಿಂದ ಪರಿಷ್ಕರಿಸಿ ನೀರಿಳಿಯದಂತೆ ಮಾಡಿದ ಬಟ್ಟೆ. ~ಬತ್ತಿ = ಮೋಂಬತ್ತಿ.

ಮೇಣಿ (ನಾ). ನೇಗಿಲಿನ ಹಿಡಿಕೆ.

ಮೇಣೆ (ನಾ). ಪಲ್ಲಕ್ಕಿ; ಡೋಲಿ.

ಮೇತ (ನಾ). ಮೇಯುವಿಕೆ; ಮೇಯುವುದು.

ಮೇದ (ನಾ). ಬಿದಿರಿನಿಂದ ಚಾಪೆ, ಬುಟ್ಟಿ ಮುಂತಾದುವುಗಳನ್ನು ಮಾಡುವವನು.

ಮೇದರ = ಮೇದ.

ಮೇದಸ್ಸು (ನಾ). ದೇಹದ ಸಪ್ತಧಾತುಗಳಲ್ಲಿ ಒಂದು; ಕೊಬ್ಬು.

ಮೇದಾರ = ಮೇದ.

ಮೇದಿನಿ (ನಾ). ಭೂಮಿ; ಇಳೆ.

ಮೇದಿಸು (ಕ್ರಿ). ೧. ನೆನೆಯಿಸು; ಅದ್ದು. ೨. ಲೇಪಿಸು; ಬಳಿ.

ಮೇದುರ (ಗು). ೧. ದಪ್ಪವಾದ; ದಟ್ಟವಾದ. ೨. ಮೃದುವಾದ; ನುಣುಪಾದ.

ಮೇಧ (ನಾ). ಯಾಗ; ಯಜ್ಞ.

ಮೇಧಾವಿ (ನಾ). ೧. ಬುದ್ಧಿವಂತ; ಕುಶಾಗ್ರಮತಿ. ೨. ಗೋಪಿಚಂದನ.

ಮೇಧಾಶಕ್ತಿ (ನಾ). ವಿಶೇಷವಾದ ಬುದ್ಧಿಶಕ್ತಿ.

ಮೇಧ್ಯ (ಗು). ೧. ಯಜ್ಞ, ಯಾಗಗಳಿಗೆ ಯೋಗ್ಯವಾದ. ೨. ನಿರ್ಮಲವಾದ; ಶುಚಿಯಾದ.

ಮೇನಾ = ಮೇಣೆ.
ಮೇನೆ = ಮೇಣೆ.
ಮೇಪು (ನಾ). ೧. ಜಾನುವಾರುಗಳನ್ನು ಮೇಯಿಸುವುದು. ೨. ಜಾನುವಾರುಗಳಿಗೆ ಹಾಕುವ ಆಹಾರ. ~ಕಾ(ಗಾ)ಡು = ದನಗಳು ಮೇಯುವ ಸ್ಥಳ; ಹುಲ್ಲು ಗಾವಲು.
ಮೇಯರ್(ಯುು) = ಮೇ. ~ಇಸು = ದನ ಕರುಗಳು ಆಹಾರವನ್ನು ತಿನ್ನುವಂತೆ ಮಾಡು.
ಮೇರು (ನಾ). ೧. ಸರದ ನಡುವಿನ ದೊಡ್ಡ ಮಣಿ; ನಾಯಕಮಣಿ. ೨. ಶ್ರೇಷ್ಠವಾದುದು; ಉತ್ತಮವಾದುದು. ೩. ಒಂದು ಪರ್ವತದ ಹೆಸರು. ~ಕೃತಿ = ಶ್ರೇಷ್ಠವಾದ ಕೃತಿ.
ಮೇರೆ (ನಾ). ೧. ಎಲ್ಲೆ; ಗಡಿ. ೨. ರೀತಿ; ಕ್ರಮ. ~ಕ(ಗ)ಲ್(ಲ್ಲು) = ಗಡಿಕಲ್ಲು; ಬಾಂದುಕಲ್ಲು. ~ಕೆ(ಗೆ)ಡು = ೧. ಎಲ್ಲೆಯನ್ನು ದಾಟು. ೨. ಅಳತೆಯನ್ನು ಮೀರು. ~ತ(ದ)ಪ್ಪು = ಮೇರೆಗೆಡು. ~ಮೀರು = ಮೇರೆಗೆಡು.
ಮೇಲ್(ಲು) (ನಾ). ೧. ಮೇಲುಗಡೆ; ಮೇಲ್ಭಾಗ. ೨. ಉತ್ತಮವಾದುದು; ಒಳ್ಳೆಯದು. (ಅ). ೩. ಮುಂದೆ; ಮುಂಭಾಗದಲ್ಲಿ. ೪. ಮೇಲೆ; ಎತ್ತರದಲ್ಲಿ. ~ಅಂತಸ್ತು = ಮೇಲುಪ್ಪರಿಗೆ; ಮಹಡಿ. ~ಅಧಿಕಾರಿ = ಅಧಿಕಾರಿವರ್ಗದಲ್ಲಿ ಮುಖಂಡ. ~ಅರಿ(ರಿ) = ಔಚಿತ್ಯವನ್ನು ತಿಳಿ; ಯುಕ್ತಾಯುಕ್ತವನ್ನು ಗ್ರಹಿಸು. ~ಆಗು=ಶ್ರೇಷ್ಠವಾಗು; ಅತಿಶಯವಾಗು. ~ಆಟ = ಪೈಪೋಟಿ; ಸ್ಪರ್ಧೆ. ~ಆಡು = ಹುರುಡಿಸು; ಸ್ಪರ್ಧಿಸು. ~ಆಯ = ೧. ಮೇಲುಭಾಗ. ೨. ಸಂಪಾದನೆಯ ಮೇಲೆ ಬರುವ ಹೆಚ್ಚಿನ ಆದಾಯ; ಮೇಲು ಸಂಪಾದನೆ. ~ಆಳ್(ಳು)= ೧. ಕುದುರೆ, ರಥ ಮುಂತಾದುವುಗಳ ಮೇಲೆ ಕುಳಿತು ಯುದ್ಧ ಮಾಡುವವನು. ೨. ಶ್ರೇಷ್ಠನಾದ ವೀರ. ~ಇಕ್ಕು = ೧. ತಪ್ಪು ಹೊರಿಸು; ಆಪಾದಿಸು. ೨. ಉನ್ನತಸ್ಥಾನದಲ್ಲಿರಿಸು; ಎತ್ತಿಹಿಡಿ. ೩. ಮೇಲೆಬೀಳು; ಎರಗು. ~ಉಸಿರ್(ರು) = ಮೇಲಿಂದ ಮೇಲೆ ಬರುವ ಉಸಿರು; ಏದುಸಿರು. ~ಎನಿಸು = ಶ್ರೇಷ್ಠವೆನಿಸು; ಮಿಗಿಲಾಗು. ~ಎಱ(ರ)ಗು = ಮುತ್ತು; ಆವರಿಸು; ಆಕ್ರಮಿಸು. ~ಏರು=೧. ಮೇಲುಗಡೆಗೆ ಹಬ್ಬು, -ವ್ಯಾಪಿಸು. ೨. ಏಳಿಗೆ ಹೊಂದು; ಅಭಿವೃದ್ಧಿಯಾಗು. ~ಓಗರ = ೧.ಅನ್ನದ ಜೊತೆಗೆ ಕಲಸಿಕೊಳ್ಳುವ ಸಾರು, ಹುಳಿ ಮುಂತಾದುವು; ವ್ಯಂಜನಪದಾರ್ಥ. ೨. ತರಕಾರಿ; ಕಾಯಿಪಲ್ಯ. ~ಕ(ಗ)ಟ್ಟು = ೧. ಬೆಂಬಲಿಸು; ಪಕ್ಷ ವಹಿಸು. ೨. ಸಿಂಹಾಸನ, ಮಂಟಪ ಮೊದಲಾದುವುಗಳ ಮೇಲೆ ಕಟ್ಟುವ ಬಟ್ಟೆ; ವಿತಾನ. ~ಕಾ(ಗಾ)ಣ್ = ಮುಂದೆ ಸಂಭವಿಸಬಹುದಾದುದನ್ನು ಕಾಣು, -ತಿಳಿ. ~ಕಾಳಗ = ಜಯಪ್ರದವಾದ ಯುದ್ಧ. ~ಕೆ(ಗೆ)ಲಸ = ಸುತ್ತುಗೆಲಸ; ಸಣ್ಣಪುಟ್ಟ ಕೆಲಸ. ~ಕೈ(ಗೈ)=೧. ಮೇಲಕ್ಕೆ ಎತ್ತಿರುವ ಕೈ. ೨. ಜಯ; ಗೆಲವು. ೩. ಮೇಲಾದವನು; ವಿಜಯಿ. ~ಗಾಳಿ = ಮೇಗಾಳಿ. ~ದನಿ = ಉಚ್ಚಸ್ವರ; ಏರುಧ್ವನಿ. ~ನೆಲೆ = ಮಹಡಿ; ಮಾಳಿಗೆ. ~ನೋಟ = ೧. ಮೇಲ್ವಿಚಾರಣೆ; ಉಸ್ತುವಾರಿ. ೨. ಮೇಲುಮುಖವಾಗಿ ನೋಡುವಿಕೆ. ೩. ಹೊರನೋಟ. ~ಪಂಕ್ತಿ=೧. ಉತ್ತಮವಾದ ಮಾದರಿ. ೨. ಮೇಲುಗಡೆಯಲ್ಲಿ ಎಳೆದ ಗೆರೆ. ೩. ಮೇಲಿನ ಸಾಲು; ಅಗ್ರಪಂಕ್ತಿ. ~ಪಾ(ವಾ)ಯ್ = ಮೇಲೆಜಿಗು. ~ಮಚ್ಚು=ಮೇಲಂತಸ್ತು.

~ಮಟ್ಟ= ೧. ಹೆಚ್ಚಿನ ಪ್ರಮಾಣ, -ಅಳತೆ. ೨. ಮೇಲಿನ ಸಮತಳ ಪ್ರದೇಶ. ೩. ಉತ್ತಮ ದರ್ಜೆ. ~ಮಾಡು = ೧. ಮೇಲಕ್ಕೆ ಹೊರಳಿಸು. ೨. ಸಹಾಯ ಮಾಡು; ಉದ್ಧರಿಸು. ೩. ಮನೆಯ ಮೇಲು ಹೊದಿಕೆ; ಛಾವಣಿ. ೪. ಮಹಡಿ; ಮಾಳಿಗೆ. ~ಮುದ್ದೆ= ಮಾಳಿಗೆಯ ಮೇಲೆ ಹಾಕುವ ಮಣ್ಣಿನ ಮೆತ್ತಿಗೆ. ~ಮುಸುಕು =೧. ಅವಕುಂಠನ. ೨. ವಧುವಿಗೆ ವರನ ಕಡೆಯವರು ಹೊದಿಸುವ ಸೀರೆ. ~ಮೈ = ಹೊರಮೈ; ಬಹಿರಂಗ.

ಮೇಳ(ಳ) (ನಾ). ೧. ಕೂಡುವಿಕೆ; ಕೂಟ. ೨. ವಿನೋದ; ಕೇಳಿ. ೩. ಸಭೆ; ಗೋಷ್ಠಿ; ಸಮ್ಮೇಳನ. ೪. ಜಾತ್ರೆ; ಸಂತೆ. ೫. ಗುಂಪು; ಸಂದಣಿ. ೬. ಹೊಂದಾಣಿಕೆ; ಹೊಂದಿಕೆ. ೭. ಸಂಗೀತಗಾರರು, ವಾದ್ಯಗಾರರು ಅಥವಾ ನರ್ತಕರು ಮತ್ತು ಅವರು ಮಾಡುವ ಕಲಾಪ್ರದರ್ಶನ. ~ಅ(ವಾ)ಡು =೧. ಹೋರಾಡು; ಕಾದಾಡು. ೨. ಸರಸ ವಾಡು. ~ಇಸು =೧. ಒಟ್ಟಾಗು; ಸೇರು. ೨. ಜೊತೆಗೊಳಿಸು; ಒಟ್ಟುಗೂಡಿಸು. ~(೦)ಕೆ(ಗೆ)ಯ್ = ಧ್ವನಿಮಾಡು; ಶಬ್ದ ಮಾಡು. ~(೦)ಕೊ(ಗೊ)ಳ್ = ಸೇರು; ಕೂಡು. ~ಕಾ(ಗಾ)ಳೆಗ =ಹುಸಿಕಾಳಗ, -ಯುದ್ಧ. ~ಗಾನ = ಸಮೂಹಗಾನ; ಗೋಷ್ಠಿಗಾನ; ವೃಂದಗಾನ.

ಮೇಲ(ಳ)ನ (ನಾ). ಒಟ್ಟುಗೂಡುವುದು; ಸೇರಿಕೆ.

ಮೇಲಾ(ಳಾ)ಪ (ನಾ). ೧. ಸೇರಿಕೆ; ಹೊಂದಿಕೆ. ೨. ಸಂದಣಿ; ಗುಂಪು. ~ಇಸು = ಕೂಡಿಸು; ಸಂಯೋಜಿಸು.

ಮೇಲುಂದು (ನಾ). ಮೇಲೆ ಹೊದೆಯುವ ಬಟ್ಟೆ ಮತ್ತು ಅದರ ಸೆರಗು; ಉತ್ತರೀಯ ಮುಂತಾದುದು.

ಮೇಲೆ (ಅ). ೧. ಮೇಲುಭಾಗದಲ್ಲಿ; ಮೇಲುಗಡೆಯಲ್ಲಿ. ೨. ಆಬಳಿಕ; ಆಮೇಲೆ. ೩. ಮತ್ತು; ಅದರೊಂದಿಗೆ; ಇನ್ನು. ೪. ಹೊರತು; ವಿನಾ. ~ಪಾ(ವಾ)ಯ್ = ಮೇಲೆ ಬೀಳು; ಆಕ್ರಮಿಸು. ~ಬೀಳ್(ಳು) = ೧. ಜಗಳವನ್ನು ಆರಂಭಿಸು; ಎರಗು. ೨. ಮುತ್ತು; ಆವರಿಸು.

ಮೇಲ್ಮೆ (ನಾ). ಏಳಿಗೆ; ಉನ್ನತಿ.

ಮೇವು = ಮೇಪು.

ಮೇಷ (ನಾ). ೧. ಕುರಿ; ಟಗರು. ೨. ಜ್ಯೋತಿಶ್ಚಕ್ರದ ಹನ್ನೆರಡು ರಾಶಿಗಳಲ್ಲಿ ಒಂದು. ೩. ಸೌರಮಾನದ ಒಂದು ಮಾಸ.

ಮೇಸ್ತ್ರಿ (ನಾ). ಕೆಲಸಗಾರರ ಮೇಲ್ವಿಚಾರಕ.

ಮೇಹ (ನಾ). ೧. ಮೂತ್ರ. ೨. ಒಂದು ಬಗೆಯ ಮೂತ್ರರೋಗ; ಅತಿಮೂತ್ರ.

ಮೇಹು = ಮೇಪು. ~ಕಾ(ಗಾ)ಡು = ಮೇಪುಗಾಡು.

ಮೇಳಂಬ (ನಾ). ತುಂಬಿ; ಭ್ರಮರ.

ಮೇಳಣೆ = ಮೇಲನ.

ಮೇಳಯಿಸು = ಮೇಳಿಸು.

ಮೇಳವ (ನಾ). ೧. ಗುಂಪು; ನೆರವಿ. ೨. ಸಭೆ; ಗೋಷ್ಠಿ. ೩. ಸಹವಾಸ; ಒಡನಾಟ. ೪. = ಮೇಳವಣೆ.

ಮೇಳವಣೆ (ನಾ). ೧. ಗಾನ, ವಾದ್ಯಗಳಿಂದ ಕೂಡಿದ ನೃತ್ಯ. ೨. ಹೊಂದಾಣಿಕೆ; ಸಾಮರಸ್ಯ.

ಮೇಳವಿಸು = ಮೇಳಿಸು.

ಮೇಳಿ = ಮೇಣಿ.

ಮೇಳೆ (ನಾ). ಗಂಟಲುಮಣಿ; ಗೋನಾಳಿ.

ಮೇಳೈಸು = ಮೇಳಿಸು.

ಮ್ಯೆ = ಮೆಯ್.

ಮ್ಯೆಂದವಾಟಿ(ಳೆ) (ನಾ). ಬಾಳೆಯಲ್ಲಿ ಒಂದು ಜಾತಿ.

ವೈತ್ರ (ನಾ). ೧. ಸ್ನೇಹ; ಗೆಳೆತನ. ೨. ಸ್ನೇಹಿತ; ಗೆಳೆಯ. (ಗು). ೩. ಗೆಳೆಯನಿಗೆ ಸಂಬಂಧಿಸಿದ.

ವೈತ್ರಾವರುಣ (ನಾ). ೧. ವಾಲ್ಮೀಕಿ. ೨. ಅಗಸ್ತ್ಯ. ೩. ವಸಿಷ್ಠ. (ಗು). ೪. ಮಿತ್ರ ಮತ್ತು ವರುಣರಿಗೆ ಸಂಬಂಧಿಸಿದ.

ವೈತ್ರಿ (ನಾ). ಸ್ನೇಹ; ಗೆಳೆತನ.

ವೈಥುನ (ನಾ). ೧. ಒಂದುಗೂಡುವುದು; ಸೇರುವುದು. ೨. ಮದುವೆ. ೩. ಸಂಭೋಗ; ಕೂಟ.

ವೈದಾನ (ನಾ). ಸಮತಟ್ಟಾದ ನೆಲ; ಬಯಲು.

ವೈದುನ = ಮಯ್ದುನ.

ವೈನ (ನಾ). ಒಂದು ಜಾತಿಯ ಪಕ್ಷಿ; ಶಾರಿಕೆ; ಗೊರವಂಕ.

ವೈಮೆ = ಮಹಿಮೆ. ~ಪೆ(ವೆ)ಱು(ರು) = ಘನತೆಯನ್ನು ಹೊಂದು.

ವೈರೇಯ (ನಾ). ಮದ್ಯ; ಸುರೆ.

ವೈಲಗೆ (ನಾ). ೧. ಹೊಲಸು; ಕೊಳೆ. ೨. ಸೂತಕ. ೩. ಉಟ್ಟು ಹೊಲಸಾದ ಬಟ್ಟೆ.

ವೈಲಿ (ನಾ). ೧. ಒಂದು ಬಗೆಯ ಸಾಂಕ್ರಾಮಿಕ ರೋಗ; ಸಿಡುಬು; ದೇವಿ. ೨. ದೇವಿ ಹಾಕುವಿಕೆ. ೩. ದೂರವನ್ನು ಅಳೆಯುವ ಒಂದು ಮಾನ; ವೈಲು. ~ಕ(ಗ)ಲ್ಲು = ೧. ಮಾರ್ಗದಲ್ಲಿ ದೂರವನ್ನು ಸೂಚಿಸಲು ದಾರಿಯ ಪಕ್ಕದಲ್ಲಿ ನೆಟ್ಟಿರುವ ಕಲ್ಲು. ೨. ಪ್ರಮುಖವಾದ ಘಟ್ಟ, -ಹಂತ. ~ಚುಚ್ಚು = ದೇವಿಹಾಕು.

ವೈಲಿಗೆ = ವೈಲಗೆ.

ವೈಲು (ನಾ). ೧. ದೂರವನ್ನು ಅಳೆಯುವ ಒಂದು ಮಾನ. ೨. ನವಿಲು; ಮಯೂರ. ~ವಾಹನ = ಸ್ಕಂದ; ಕುಮಾರಸ್ವಾಮಿ.

ವೈಲುತುತ್ತ (ನಾ). ಒಂದು ಬಗೆಯ ಖನಿಜ ಲವಣ.

ವೈಸೂರುಪಾಕು (ನಾ). ಕಡಲೆಹಿಟ್ಟಿನಿಂದ ಮಾಡುವ ಒಂದು ಬಗೆಯ ಸಿಹಿತಿಂಡಿ.

ಮೊಂಡ (ನಾ). ೧. ಹಟಮಾರಿ; ಛಲಗಾರ. ೨. ಮೋಟಾದ ಅಂಗಗಳುಳ್ಳವನು; ಅಂಗಹೀನ. (ಗು). ೩. ಹಟಮಾರಿಯಾದ. ೪. ಹರಿತವಲ್ಲದ; ಚೂಪಲ್ಲದ.

ಮೊಂಡಿ (ನಾ). ಹಟಮಾರಿಯಾದ ಹೆಂಗಸು.

ಮೊಂಡು (ನಾ). ೧. ಮೊನೆಯಿಲ್ಲದುದು. ೨. ಮೋಟಾದುದು; ಮೊಟಕು. ೩. ಹಟಮಾರಿತನ; ಛಲ. ~ಆಟ = ಹಿಡಿದ ಪಟ್ಟು ಬಿಡದಿರುವಿಕೆ. ~ತನ = ಹಟಮಾರಿತನ; ಚಂಡಿಹಿಡಿಯುವಿಕೆ. ~ವಾದ = ವಿವೇಚನೆಯಿಲ್ಲದೆ ಹಟದಿಂದ ಮಾಡುವ ಚರ್ಚೆ.

ಮೊಕದ್ದಮೆ (ನಾ). ವ್ಯಾಜ್ಯ; ಖಟ್ಲೆ.

ಮೊಕರರು (ಗು). ಗೊತ್ತುಮಾಡಿದ; ನಿಶ್ಚಯಿಸಲ್ಪಟ್ಟ.

ಮೊಕರರೂರು = ಮೊಕರರು.

ಮೊಕವಾಡ (ನಾ). ಮುಖವಾಡ; ಮುಸುಕು.

ಮೊಕಾಬಿಲೆ = ಮುಖಾಬಿಲೆ.

ಮೊಕ್ಕಳ (ನಾ). ೧. ಅಧಿಕ್ಯ; ಹೆಚ್ಚಳ. ೨. ಮೊತ್ತ; ಗುಂಪು; ರಾಶಿ. (ಗು). ೩. ಬಹಳ; ಹೆಚ್ಚಿನ.

ಮೊಕ್ಕಳಂ (ಅ). ಬಹಳವಾಗಿ; ವಿಶೇಷವಾಗಿ.

ಮೊಕ್ಕಾಂ (ನಾ). ತಂಗುವ ಸ್ಥಳ; ಬೀಡು.

ಮೊಕ್ಕಾಮು = ಮೊಕ್ಕಾಂ.

ಮೊಖ್ತಾ (ಅ). ಎದುರಿಗೆ; ಮುಖತಃ.

ಮೊಖ್ತೇಸರ (ನಾ). ಮುಖ್ಯಾಧಿಕಾರಿ; ನಾಯಕ.

ಮೊಗ (ನಾ). ೧. ಮುಖ; ಮೋರೆ. ೨. ಬಾಯಿ. ೩. ದಿಕ್ಕು; ಕಡೆ. ೪. ಎದುರು; ಸಮ್ಮುಖ. ~(ಂ)ಕಿ(ಗಿ)ಡು = ಮುಖಕೆಟ್ಟು ಹೋಗು, -ವಿಕಾರವಾಗು. ~ಕ(ಗ)ಳ್ತಲೆ = ಕತ್ತಲೆಯ ಮೊದಲು;

ರಾತ್ರಿಯ ಪ್ರಾರಂಭ. ~ಕೆ(ಗೆ)ಡಿಸು = ಮುಖಭಂಗ ಮಾಡು; ಅವಮಾನಿಸು. ~ತಿ(ದಿ)ರುಹು = ಉದಾಸೀನ ಮಾಡು; ವಿಮುಖವಾಗು. ~ಮಿಸೆ = ಚಿಗುರು ಮಿಸೆ. ~ರಾಗ = ಮುಖದ ಕಾಂತಿ, -ಹೊಳಪು. ~ವಾಸ = ಮುಖವಾಸ. ~ಶಾ(ಸಾ)ಲೆ = ಮನೆಯ ಮುಂದಿನ ಹಜಾರ; ಪಡಸಾಲೆ; ಮುಖಮಂಟಪ.

ಮೊಗಂ (ಅ). ಅಸ್ಪಷ್ಟವಾಗಿ; ಅನಿರ್ದಿಷ್ಟವಾಗಿ.

ಮೊಗಪು (ನಾ). ೧. ತುದಿ; ಮುಂಭಾಗ. ೨. ಸರ, ಡಾಬು ಮುಂತಾದ ಆಭರಣಗಳ ನಡುವಿನ ಭಾಗ; ಮೋಪು.

ಮೊಗಪೆ (ನಾ). ಮಣ್ಣಿನ ಸಣ್ಣ ಕುಡಿಕೆ.

ಮೊಗರಂಬ (ನಾ). ಆನೆ, ಕುದುರೆ ಮುಂತಾದುವುಗಳ ಮುಖಕ್ಕೆ ಹಾಕುವ ಬಟ್ಟೆ; ಮುಖವಾಡ.

ಮೊಗಚು(ರು) (ನಾ). ೧. ಎಳೆಯುದು; ಮಿಡಿ; ಹೀಚು. (ಗು). ೨. ಎಳೆಯದಾದ; ಕೋಮಲ.

ಮೊಗೆವಡ (ನಾ). ೧. ಮುಖಕ್ಕೆ ಹಾಕಿಕೊಳ್ಳುವ ಮುಸುಕು; ಮುಖವಾಡ. ೨. ಆಹಾರವನ್ನು ತಿನ್ನದಂತೆ ಪ್ರಾಣಿಗಳ ಬಾಯಿಗೆ ಕಟ್ಟುವ ಕುಕ್ಕೆ; ಬಾಯಿಕಲ್ಲಿ.

ಮೊಗವಾಡ (ನಾ). ೧. ಕುದುರೆ, ಎತ್ತು ಮೊದಲಾದುವುಗಳಿಗೆ ತೊಡಿಸುವ ಮುಖಪಟ್ಟಿ. ೨. ಮುಖವಾಡ; ಮುಸುಕು. ೩. ಮನೆಯ ಮುಂಭಾಗ; ಮೊಗಸಾಲೆ.

ಮೊಗಸು (ಕ್ರಿ). ೧. ತೊಡಗು; ಉಪಕ್ರಮಿಸು. ೨. ಪ್ರಯಾಣ ಹೊರಡು. ೩. ಎದುರಿಸು; ಪ್ರತಿಭಟಿಸು. ೪. ಸುತ್ತುವರಿ; ಆಕ್ರಮಿಸು. ೫. ಬಯಸು; ಅಪೇಕ್ಷಿಸು. ೬. ಮೇಲಕ್ಕೆ ಬರು. (ನಾ). ೭. ಬಯಕೆ; ಅಪೇಕ್ಷೆ. ೮. ಪ್ರಯತ್ನ; ಪರಿಶ್ರಮ.

ಮೊಗಳು (ನಾ). ಎಳೆಯ ತೆಂಗಿನಕಾಯಿಯ ತಿರುಳು; ಬಂಬಲು.

ಮೊಗುಂ = ಮೊಗಂ.

ಮೊಗುಚು = ಮಗುಚ್ಚು.

ಮೊಗೆ (ಕ್ರಿ). ೧. ದ್ರವಪದಾರ್ಥವನ್ನು ತೋಡು, -ತುಂಬಿಕೊಳ್ಳು. ೨. ಬಾಚು; ಗೋರು. ೩. ಕುಡಿ; ಈಂಟು. ೪. ಕವಿ; ಮೇಲೆಬೀಳು. (ನಾ). ೫. ಮಣ್ಣಿನಿಂದ ಮಾಡಿದ ಚಿಕ್ಕ ಪಾತ್ರೆ. ೬. ಹಳದಿ ಬಣ್ಣದಿಂದ ಕೂಡಿದ ಫಲವತ್ತಾದ ಭೂಮಿ.

ಮೊಗ್ಗರ (ನಾ). ೧. ಗುಂಪು; ರಾಶಿ. ೨. ದಂಡು; ಸೈನ್ಯ. ~(ಂ)ಪಾ(ಬಾ)ಯ್ = ಒಟ್ಟಾಗಿ ನುಗ್ಗು, -ಮೇಲೆ ಬೀಳು.

ಮೊಗ್ಗು (ಕ್ರಿ). ೧. ಬಾಗು; ನಮಸ್ಕರಿಸು. (ನಾ). ೨. ಸಾಧ್ಯತೆ; ಶಕ್ಯತೆ. ೩.=ಮೊಗ್ಗೆ. ~ಒಡೆ = ಮೊಗ್ಗು ಕಾಣಿಸಿಕೊಳ್ಳು.

ಮೊಗ್ಗೆ (ನಾ). ಮುಗುಳು; ಕುಟ್ಮಲ.

ಮೊಗ್ಗೆಗೋಲ (ನಾ). ಮನ್ಮಥ; ಕಾಮ.

ಮೊಚ್ಚೆ (ನಾ). ಜೋಡು; ಪಾದರಕ್ಷೆ. ~ಗಾಱ(ರ) = ಜೋಡುಗಳನ್ನು ಹೊಲಿಯುವವನು; ಮೋಚಿ.

ಮೊಚ್ಚೆಯ = ಮೊಚ್ಚೆ.

ಮೊಟಕು (ನಾ). ೧. ಮೊಂಡಾದುದು; ಮೋಟು. (ಗು). ೨. ಮೊಂಡಾದ; ತುಂಡಾದ.

ಮೊಟ್ಟನೆ (ಅ). ಮಟ್ಟವಾಗುವಂತೆ; ನೆಲಸಮವಾಗುವಂತೆ.

ಮೊಟ್ಟು (ಕ್ರಿ). ೧. ತಲೆಯನ್ನು ಮುಷ್ಟಿಯಿಂದ ತಿವಿ. (ನಾ). ೨. ಮುಷ್ಟಿಯಿಂದ ತಲೆಯ ಮೇಲೆ ತಿವಿಯುವಿಕೆ.

ಮೊಟ್ಟೆ (ನಾ). ೧. ತಾಳೆ, ತೆಂಗು ಮುಂತಾದ ಮರಗಳ ಗರಿ, -ಸೋಗೆ. ೨. ತೆಂಗಿನ ನಾರು; ಕತ್ತ. ೩. ಸುಣ್ಣ ಬಳಿಯಲು ಉಪಯೋಗಿಸುವ ತೆಂಗಿನ

ನಾರಿನಿಂದ ಮಾಡಿದ ಕುಂಚ; ಕುಚ್ಚುಮಟ್ಟೆ. ೪. (ಬಾವಿಯಿಂದ ನೀರನ್ನು ಎತ್ತುವ) ಚರ್ಮದ ಚೀಲ; ಕಪಿಲೆ; ಮಟ್ಟೆ. ೫. ಹೊರೆ; ಗಂಟು; ಮೂಟೆ. ೬. ತತ್ತಿ; ಅಂಡ. ~ಕಾ(ಗಾ)ಱ(ರ) = ಗಂಟು, ಮೂಟೆಗಳನ್ನು ಹೊರುವವನು; ಭಾರವಾಹಕ. ~ಹೊಡೆ = ಕಪಿಲೆಯ ಮೂಲಕ ಬಾವಿಯಿಂದ ನೀರನ್ನು ಎತ್ತು.

ಮೊಡವಿ (ನಾ). ಪ್ರಾಯಕ್ಕೆ ಬಂದಾಗ ಮುಖದ ಮೇಲೆ ಏಳುವ ಬೊಕ್ಕೆ; ಮುದ್ದಣ.

ಮೊಡವೆ = ಮೊಡವಿ.

ಮೊಡೆನಾತ (ನಾ). ಕೆಟ್ಟವಾಸನೆ; ದುರ್ಗಂಧ.

ಮೊಡೆನಾಱು(ರು) (ಕ್ರಿ). ಕೆಟ್ಟವಾಸನೆ ಬರು; ದುರ್ಗಂಧ ಬೀರು.

ಮೊಣಕಾಲ್(ಲು) (ನಾ). ಕಾಲು ಮತ್ತು ತೊಡೆ ಇವೆರಡೂ ಸೇರುವ ಭಾಗ; ಜಾನು.

ಮೊಣಕೈಯ್ (ನಾ). ಕೈಯಿನ ನಡುಗಂಟು; ಮೊಳಕೈ.

ಮೊತ್ತ (ನಾ). ೧. ರಾಶಿ; ಒಟ್ಟಿಲು. ೨. ಒಟ್ಟು. ೩. ಸಮೂಹ; ತಂಡ. ~(ಂ)ಕ(ಗ)ಟ್ಟು = ಒಟ್ಟುಗೂಡಿಸು; ಶೇಖರಿಸು.

ಮೊತ್ತು (ಕ್ರಿ). ಹೊಡೆ; ಏಟುಹಾಕು.

ಮೊದಲ್(ಲು) (ನಾ). ೧. ಆರಂಭ; ಆದಿ. ೨. ಮುಖ್ಯವಾದುದು; ಪ್ರಧಾನವಾದುದು. ೩. ಬೇರು; ಬುಡ. ೪. ತುದಿ; ಅಗ್ರಭಾಗ. ೫. ಮೂಲಧನ; ಬಂಡವಾಳ. (ಅ). ೬. ಪ್ರಾರಂಭದಲ್ಲಿ; ಪ್ರಥಮತಃ ~ಆಗು =೧. ಆರಂಭಗೊಳ್ಳು. ೨. ಪ್ರಥಮವಾಗು; ಮೊದಲಿಗೆ ಬರು. ~ಇಗ = ಅಗ್ರಗಣ್ಯ; ಪ್ರಮುಖ. ~ಕೆ(ಗೆ)ಡು=೧. ಬೇರುಸಹಿತ ನಾಶವಾಗು, –ಅಳಿ. ೨. ವ್ಯಾಪಾರದಲ್ಲಿ ಮೂಲಧನವನ್ನು ಕಳೆದುಕೊಳ್ಳು. ~ಕೊ(ಗೊ)ಳ್(ಳ್ಳು)=೧. ಪ್ರಾರಂಭಿಸು; ತೊಡಗು. ೨. ವ್ಯಾಪಾರಕ್ಕಾಗಿ ಬಂಡವಾಳವನ್ನು ಪಡೆದುಕೊಳ್ಳು.

ಮೊದೆ (ನಾ). ಒಂದು ಜಾತಿಯ ಹುಲ್ಲು; ಮುಂಜ.

ಮೊದ್ದ (ನಾ). ದಡ್ಡ; ಹೆಡ್ಡ.

ಮೊದ್ದು (ನಾ). ೧. ದಡ್ಡತನ; ಹೆಡ್ಡತನ. ೨. ದಡ್ಡವ್ಯಕ್ತಿ. (ಗು). ೩. ದಡ್ಡತನದಿಂದ ಕೂಡಿದ; ತಿಳಿಗೇಡಿಯಾದ.

ಮೊನಚು (ನಾ). ೧. ಚೂಪಾಗಿರುವಿಕೆ; ಹರಿತವಾಗಿರುವಿಕೆ. (ಗು). ೨. ಚೂಪಾದ; ಹರಿತವಾದ. ~ಕೊ(ಗೊ)ಳ್ = ತೀಕ್ಷ್ಣವಾಗು; ಹರಿತವಾಗು.

ಮೊನಸು (ಕ್ರಿ). ೧. ಮೂಡು; ಅಂಕುರಿಸು. ೨. ಮೊಳಕೆ ಏಳು.

ಮೊನೆ (ನಾ). ೧. ತುದಿ; ಕೊನೆ. ೨. ತೀಕ್ಷ್ಣತೆ; ಚೂಪಾಗಿರುವಿಕೆ. ೩. ಧೈರ್ಯ; ದಿಟ್ಟತನ. ೪. ಮುಂಭಾಗ; ಎದುರುಗಡೆ. ೫. ಯುದ್ಧ; ಕಾಳಗ. ೬. ಸೈನ್ಯ; ದಂಡು. (ಗು). ೭. ಚೂಪಾದ; ಹರಿತವಾದ. ~ಆ(ಯಾ)ಳ್(ಳು) = ಯೋಧ; ಸೈನಿಕ. ~ಕಾ(ಗಾ)ಱ(ರ) = ಮೊನೆಯಾಳ್. ~ಕು(ಗು)ತ್ತು = ಚೂಪಾದ ಆಯುಧದ ಇರಿತದಿಂದಾದ ಘಾಯ. ~ತೋ(ದೋ)ಱು(ರು)= ೧. ಆಯುಧದ ಚೂಪುತುದಿಯನ್ನು ತೋರಿಸು. ೨. ಆಯುಧದ ಚೂಪುತುದಿಯನ್ನು ಕಾಣು. ೩. ಮೊಳಕೆದೋರು; ಕಾಣಿಸಿಕೊಳ್ಳು. ೪. ಧೈರ್ಯವನ್ನು ತೋರು. ~ನಗೆ = ಮುಗುಳ್ನಗೆ; ಮಂದಹಾಸ. ~ಮಾ(ವಾ)ತು = ಚುಚ್ಚುಮಾತು; ಕೊಂಕುನುಡಿ.

ಮೊನೆಗಾತಿ (ನಾ). ಜಗಳವಾಡುವ ಸ್ವಭಾವದವಳು; ಜಗಳಗಂಟಿ.

ಮೊನೆಯೇಡು (ನಾ). ಇತ್ತೀಚೆಗೆ ಕಳೆದು ಹೋದ ಕಾಲ.

ಮೊನ್ನೆ (ನಾ). ೧. ನಿನ್ನೆಯ ಹಿಂದಿನ ದಿನ. (ಅ). ೨. ಇತ್ತೀಚೆಗೆ; ಕೆಲವೇ ಸಮಯದ ಹಿಂದೆ.

ಮೊಬಲಗು (ನಾ). ಹಣ.

ಮೊಬ್ಬು = ಮಬ್ಬು. ~ಕ(ಗ)ಣ್ಣು = ಮಂದ ದೃಷ್ಟಿಯುಳ್ಳ ಕಣ್ಣು.

ಮೊಮ್ಮ (ನಾ). ಮಗನ ಅಥವಾ ಮಗಳ ಮಗ; ಪ್ರಪೌತ್ರ.

ಮೊಮ್ಮಗ = ಮೊಮ್ಮ.

ಮೊಮ್ಮಗಳು (ನಾ). ಮಗನ ಅಥವಾ ಮಗಳ ಮಗಳು.

ಮೊರ = ಮೊಱ. ~ಕೂ(ಗೂ)ಸು = ಅದೇ ತಾನೇ ಹುಟ್ಟಿದ ಕೂಸು.

ಮೊರಕು (ಕ್ರಿ). ಸೊಕ್ಕಿನಿಂದ ತಲೆತಿರುಗು; ಗರ್ವದಿಂದ ಮತ್ತನಾಗು.

ಮೊರಗು (ನಾ). ಗರ್ಜನೆ; ಅಬ್ಬರದ ದನಿ.

ಮೊರಟು (ನಾ). ಮೋಟು; ಮೊಟಕು.

ಮೊರಡಿ (ನಾ). ೧. ಒಂದು ಜಾತಿಯ ಮರ. ೨. ಕಲ್ಲುಗುಡ್ಡ. ~ಅ(ಯ)ಣುಗಿ = ಪರ್ವತರಾಜನ ಮಗಳು; ಗಿರಿಜೆ.

ಮೊರಡು (ನಾ). ೧. ಒರಟುತನ; ಬಿರುಸು. ೨. ದಿಬ್ಬ; ಮೊರಡಿ. (ಗು). ೩. ಬಿರುಸಾದ; ಒರಟಾದ. ~ಬೀಳು = ಮೊಂಡಾಗು; ಒರಟಾಗು.

ಮೊರಬ್ಬ (ನಾ). ಹಣ್ಣುಗಳನ್ನು ಪಾಕದಲ್ಲಿ ಹಾಕಿ ಮಾಡಿದ ಒಂದು ಬಗೆಯ ಖಾದ್ಯ; ಮುರಬ್ಬ.

ಮೊರವು (ನಾ). ಮೊರೆತ; ಶಬ್ದ.

ಮೊರಹು (ನಾ). ೧. ಬಾಗು; ಕೊಂಕು; ತಿರುವು. ೨. = ಮೊರವು. ೩. ಸಿಟ್ಟು; ಕೋಪ.

ಮೊರೞ್(ಳು) (ಕ್ರಿ). ಮೊರೆ; ಝೇಂಕರಿಸು.

ಮೊರೆ (ಕ್ರಿ). ೧. (ತುಂಬಿಯಂತೆ) ಧ್ವನಿ ಮಾಡು; ಝೇಂಕರಿಸು. ೨. (ವಾದ್ಯದಂತೆ) ಶಬ್ದ ಮಾಡು, -ಘೋಷಿಸು. ೩. ಕಿರುಗುಟ್ಟು; ಕಿರ್ರೆಂದು ಸದ್ದುಮಾಡು. ೪. = ಮೊಱೆ. (ನಾ). ೫. (ತುಂಬಿಯ) ಝೇಂಕಾರ; ಮೊರೆತ. ~ಹೋಗು = ಮೊಱೆವುಗು.

ಮೊಱ(ರ) (ನಾ). ೧. ಕಾಳನ್ನು ಹಸನು ಮಾಡಲು ಉಪಯೋಗಿಸುವ ಬಿದಿರಿನ ಸಾಧನ; ಶೂರ್ಪ. ೨. ನೀರು ನಿಲ್ಲುವ ಸ್ಥಳ; ಜಲಾಶಯ. ~ಕಿ(ಗಿ)ವಿ = ಮೊರದಂತೆ ಅಗಲವಾದ ಕಿವಿ.

ಮೊಱ(ರ)ಗಿವಿಯ (ನಾ). ಮೊರದಂತಹ ಅಗಲವಾದ ಕಿವಿಗಳುಳ್ಳವನು; ಗಣಪತಿ.

ಮೊಱ(ರ)ಲೆ (ನಾ). ಒಂದು ಜಾತಿಯ ಮರ.

ಮೊಱೆ(ರೆ) (ಕ್ರಿ). ೧. (ಸಮುದ್ರ, ಸಿಂಹ ಮೊದಲಾದುವುಗಳಂತೆ) ಗರ್ಜಿಸು; ಆರ್ಭಟಿಸು. ೨. ಚೀರು; ಆರ್ತನಾದ ಮಾಡು. (ನಾ). ೩. ಅಬ್ಬರ; ಆರ್ಭಟ. ೪. ಆಕ್ರಂದನ; ಗೋಳಾಟ. ೫. ಆಶ್ರಯ; ಆಸರೆ. ೬. ಧರ್ಮ. ೭. ನಂಟು; ಸಂಬಂಧ. ~ಇ(ಯಿ)ಡು = ೧. ಗಟ್ಟಿಯಾಗಿ ಕಿರಿಚು; ಹುಯ್ಯಲಿಡು. ೨. ಆರ್ತನಾದ ಮಾಡು. ೩. ದೂರು; ಚಾಡಿಹೇಳು. ~ಕೆ(ಗೆ)ಡು = ನೀತಿಗೆಡು; ಕ್ರಮತಪ್ಪು. ~ಪು(ವು)ಗು = ಶರಣಾಗು; ಆಶ್ರಯವನ್ನು ಪಡೆ.

ಮೊಲ (ನಾ). ಒಂದು ಜಾತಿಯ ಪ್ರಾಣಿ; ಶಶ.

ಮೊಲಗಿವಿ (ನಾ). ಒಂದು ಜಾತಿಯ ಔಷಧಿ ಸಸ್ಯ.

ಮೊಲನಾಗರ (ನಾ). ಅಪಸ್ಮಾರ; ಮೂರ್ಛೆ ರೋಗ.

ಮೊಲೆ (ನಾ). ಕುಚ; ಸ್ತನ. ~ಊ(ಯೂ)ಡು = ಮಗುವಿಗೆ ಸ್ತನ್ಯಪಾನ ಮಾಡಿಸು. ~ಕೂ(ಗೂ)ಸು = ಹಸುಳೆ; ಹಸುಗೂಸು. ~ಬಾವು = ಎದೆಯ ಮೇಲೆ ಏಳುವ ಬಾವು; ಎದೆಬಾವು.

ಮೊಲ್ಲೆ (ನಾ). ಮಲ್ಲಿಗೆ ಜಾತಿಗೆ ಸೇರಿದ ಒಂದು ಬಳ್ಳಿ ಮತ್ತು ಅದರ ಹೂವು.

ಮೊಸರ್(ರು) (ನಾ). ಹೆಪ್ಪುಗಟ್ಟಿದ ಹಾಲು; ದಧಿ.

ಮೊಸಳೆ (ನಾ). ಒಂದು ಜಾತಿಯ ಜಲಚರ ಪ್ರಾಣಿ; ಮಕರ.

ಮೊಹರ (ನಾ). ಬಂಗಾರದ ನಾಣ್ಯ.

ಮೊಹರಂ (ನಾ). ಮಹಮ್ಮದೀಯರ ಒಂದು ಹಬ್ಬ.

ಮೊಹರಿ (ನಾ). ಚರಂಡಿ; ಗಟಾರು.

ಮೊಹರು (ನಾ). ಕಾಗದ, ಪತ್ರಗಳ ಮೇಲೆ ಮುದ್ರಿಸುವ ಗುರುತು ಮತ್ತು ಅಂತಹ ಮುದ್ರೆಯನ್ನು ಒತ್ತುವ ಸಾಧನ.

ಮೊಹಲ್ಲಾ (ನಾ). ಬಡಾವಣೆ; ಕೇರಿ; ಹರವು.

ಮೊಹಲ್ಲೆ = ಮೊಹಲ್ಲಾ.

ಮೊಳಕೆ (ನಾ). ೧. ಅಂಕುರ; ಕುಡಿ. ೨. ಪ್ರಾರಂಭ.

ಮೊಳೆ (ಕ್ರಿ). ೧. ಚಿಗುರು; ಕೊನರು; ಅಂಕುರಿಸು. ೨. ಮೂಡು; ಉದಯಿಸು. (ನಾ). ೩. = ಮೊಳಕೆ. ೪. ಮೂಲವ್ಯಾಧಿಯಲ್ಲಿ ಗುದಪ್ರದೇಶದಲ್ಲಿ ಕಾಣಿಸಿಕೊಳ್ಳುವ ಮೊಳಕೆ,-ಮುಳ್ಳು. ೫. ನೊಡವೆ ಮುಂತಾದ ಗುಳ್ಳೆಯ ಮಧ್ಯಭಾಗ. ೬. ಚೂಪಾದ ತುದಿಯುಳ್ಳ ಲೋಹದ ಉಪಕರಣ; ಆಣಿ. ೭. ಮುದ್ರಣಕ್ಕಾಗಿ ಉಪಯೋಗಿಸುವ ಅಕ್ಷರಗಳ ಗುರುತಿರುವ ಸಾಧನ. ~ಜೋಡಣೆ = ಮುದ್ರಣದಲ್ಲಿ ಅಚ್ಚಿನ ಮೊಳೆಗಳನ್ನು ಜೋಡಿಸುವಿಕೆ. ~ತೊ(ದೊ)ಱು(ರು) = ಅಂಕುರಿಸು; ಮೊಳಕೆಯೊಡೆ. ~ನಗೆ = ಮುಗುಳ್ನಗೆ; ನಸುನಗೆ. ~ನುಡಿ = ಪಿಸುಮಾತು. ~ಪೊ(ವೊ)ೞಗು = ಮೊಳೆದೋಱು. ~ರೋಗ = ಮೂಲವ್ಯಾಧಿ. ~ಹಲ್ಲು = ಆಗತಾನೇ ಹುಟ್ಟುತ್ತಿರುವ ಹಲ್ಲು.

ಮೊಳೈ (ನಾ). ೧. ಉಬ್ಬಿದ ಹೊಕ್ಕುಳು. (ಗು). ೨. ಉಬ್ಬಿದ.

ಮೊಱ(ಳ) (ನಾ). ಮೊಳಕೈಯಿಂದ ಹಸ್ತದ ತುದಿಯವರೆಗಿನ ಅಳತೆ; ಅರತ್ನಿ. ~(೦)ಕಾ(ಗಾ)ಲ್(ಲು) = ಮೊಣಕಾಲ್. ~ಕೆಯ್ = ಮೊಣಕೆಯ್.

ಮೊಱ(ಳ)ಗು (ಕ್ರಿ). ೧. (ವಾದ್ಯಗಳಂತೆ) ಧ್ವನಿಮಾಡು; ನಾದಮಾಡು. ೨. ಅಬ್ಬರಿಸು; ಗರ್ಜಿಸು. (ನಾ). ೩. ವಾದ್ಯಗಳಿಂದ ಹೊರಡುವ ಧ್ವನಿ; ವಾದ್ಯಘೋಷ. ೪. ಅಬ್ಬರ; ಆರ್ಭಟೆ; ಗುಡುಗು. ೫. ಒಂದು ಜಾತಿಯ ಮರ.

ಮೊಱ್ಗು(ಳ್ಗು) (ಕ್ರಿ). ೧. ಬಾಗು; ನಮಸ್ಕರಿಸು. ೨. ಕುಗ್ಗು; ಮಣಿ. (ನಾ). ೩. ನಮಸ್ಕಾರ; ವಂದನೆ. ೪. ಕುಗ್ಗುವಿಕೆ; ಮಣಿಯುವಿಕೆ.

ಮೋಂಬತ್ತಿ (ನಾ). ಮೇಣದಬತ್ತಿ.

ಮೋಕಳೀಕ (ಗು). ಬಂಧನಮುಕ್ತ; ಸ್ವತಂತ್ರವಾದ.

ಮೋಕಳೀಕು (ನಾ). ಬಿಡುಗಡೆ; ಸ್ವಾತಂತ್ರ್ಯ.

ಮೋಕು (ನಾ). ಮೇಲ್ಭಾಗ; ತುದಿ; ಶಿಖರ.

ಮೋಕ್ಷ (ನಾ). ೧. ಬಿಡುಗಡೆ; ವಿಮೋಚನೆ. ೨. ಮುಕ್ತಿ; ನಿರ್ವಾಣ.

ಮೋಘ (ನಾ). ೧. ವ್ಯರ್ಥವಾದುದು; ನಿಷ್ಪ್ರಯೋಜಕವಾದುದು. (ಗು). ೨. ವ್ಯರ್ಥವಾದ; ಉಪಯೋಗವಿಲ್ಲದ.

ಮೋಚಕ ೧. = ಮೋಚನೆ. ೨. ಬಿಡುಗಡೆ ಮಾಡುವವನು. ೩. ಬಿಡುಗಡೆ ಹೊಂದಿದವನು; ಮುಕ್ತ. ೪. ಬಾಳೆಯಗಿಡ. ೫. ನುಗ್ಗೆಗಿಡ. ೬. ಬೂರಲಮರ. (ಗು). ೭. ಬಂಧನದಿಂದ ಬಿಡುಗಡೆ ಮಾಡುವ.

ಮೋಚನೆ (ನಾ). ೧. ಬಿಡುಗಡೆ. ೨. ಮುಕ್ತಿ.

ಮೋಚಿ (ನಾ). ಚರ್ಮದ ಕೆಲಸಮಾಡುವವನು; ಚಮ್ಮಾರ.

ಮೋಚು (ಕ್ರಿ). ೧. ಕೂದಲು ತೆಗೆ; ತಲೆಯನ್ನು ಬೋಳಿಸು. (ನಾ). ೨. ಬೋಳಾದುದು; ಬೋಳು. ~ಇಕೆ = ಬೋಳಾಗಿಸುವಿಕೆ; ಕತ್ತರಿಸುವಿಕೆ.

ಮೋಚೆ (ನಾ). ಮೆಟ್ಟು; ಎಕ್ಕಡ.

ಮೋಜಣಿ (ನಾ). (ಭೂಮಿಯನ್ನು) ಅಳತೆ ಮಾಡುವಿಕೆ; ಸರ್ವೆ. ~ದಾರ = ಭೂಮಿಯನ್ನು ಅಳತೆಮಾಡುವವನು; ಚಾಂದಿನವನು.

ಮೋಜು (ನಾ). ೧. ಮನೋರಂಜನೆ; ವಿನೋದ; ತಮಾಷೆ. ೨. = ಮೋಚೆ.

ಮೋಟ (ನಾ). ೧. ಹೆಡ್ಡತನ; ದಡ್ಡತನ. ೨. ಕತ್ತರಿಸಿದ ಕೈ; ಮೋಟುಕೈ. ೩. ಕೈಯಿಲ್ಲದವನು; ಮೊಂಡ. ೪. ಕುಳ್ಳ; ಗಿಡ್ಡ. (ಗು). ೫. ಕತ್ತರಿಸಲ್ಪಟ್ಟ; ಮೊಂಡಾದ.

ಮೋಟು (ನಾ). ೧. ಮೊಂಡಾದುದು; ಮೊನೆಯಿಲ್ಲದುದು. ೨. ಕೊರತೆ; ನ್ಯೂನತೆ. ೩. ಕುಳ್ಳು; ಗಿಡ್ಡು. (ಗು). ೪. ಕತ್ತರಿಸಲ್ಪಟ್ಟ.

ಮೋಡ (ನಾ). ೧. ಮುಗಿಲು; ಮೇಘ. ೨. ದಡ್ಡತನ; ಅಜ್ಞಾನ. ೩. ಹೆಡ್ಡ; ತಿಳಿಗೇಡಿ.

ಮೋಡಿ (ನಾ). ೧. ಇಂದ್ರಜಾಲ; ಮಾಟ. ೨. ಸೊಗಸು; ಅಂದ. ೩. ರೀತಿ; ಶೈಲಿ. ೪. ಆಕರ್ಷಣೆ; ಸೆಳೆತ. ೫. ಬಿಗುಮಾನ; ಗರ್ವ. ೬. ಕೈಚಳಕ; ಕುಶಲತೆ. ೭. ಮುದ್ದಲೆ ಬಾರಿಸುವ ಒಂದು ಗತ್ತು. ೮. ಅಕ್ಷರಗಳನ್ನು ಒಂದಕ್ಕೊಂದು ಸೇರಿಸಿಕೊಂಡು ಬರೆಯುವ ಒಂದು ರೀತಿಯ ಬರೆವಣಿಗೆ. ~ಕಾರ = ಮಂತ್ರವಾದಿ; ಐಂದ್ರಜಾಲಿಕ.

ಮೋಡೆ (ನಾ). ದಡ್ಡಹೆಂಗಸು.

ಮೋತಿ (ನಾ). ಮುತ್ತು; ಮೌಕ್ತಿಕ.

ಮೋತಿಬಿಂದು (ನಾ). ಕಣ್ಣಿನ ಗುಡ್ಡೆಯ ಮೇಲೆ ಬಿಳಿಯ ಚುಕ್ಕೆ ಕಾಣಿಸಿಕೊಳ್ಳುವ ಒಂದು ಬಗೆಯ ರೋಗ; ಕಣ್ಣಿನಲ್ಲಿ ಹೂವು ಕಾಣಿಸಿಕೊಳ್ಳುವುದು.

ಮೋತೀಖಾನೆ (ನಾ). ಸೈನ್ಯಕ್ಕೆ ಆಹಾರ ಸಾಮಗ್ರಿ ಮುಂತಾದುವನ್ನು ಒದಗಿಸುವ ಇಲಾಖೆ.

ಮೋತೆ (ನಾ). ಬಾಳೆ, ತೆಂಗು ಮೊದಲಾದುವುಗಳ ಹೂವು.

ಮೋದ (ನಾ). ೧. ಸಂತೋಷ; ಆನಂದ. ೨. ಓಮು; ಅಜಮೋದ.

ಮೋದಕ ೧.=ಮೋದಗೆ. (ಗು). ೨. ಸಂತೋಷಗೊಳಿಸುವ; ಆನಂದದಾಯಕವಾದ.

ಮೋದಗೆ (ನಾ). ಒಂದು ಬಗೆಯ ಸಿಹಿತಿಂಡಿ; ಕಾಯಿಕಡುಬು.

ಮೋದನ (ನಾ). ೧. ಸಂತೋಷ; ಆನಂದ. ೨. ಆನಂದವನ್ನುಂಟುಮಾಡುವವನು.

ಮೋದಿಸು (ಕ್ರಿ). ೧. ಸಂತೋಷಪಡು; ಆನಂದಿಸು. ೨. ಸಂತೋಷಪಡಿಸು; ಆನಂದಗೊಳಿಸು. ೩. ಹೊಡೆಯಿಸು; ಬಡಿಯಿಸು.

ಮೋದು (ಕ್ರಿ). ೧. ಹೊಡೆ; ಬಡಿ; ತಾಗು. ೨. ತಿನ್ನು; ಭಕ್ಷಿಸು.

ಮೋನ = ಮೌನ.

ಮೋನಿ = ಮೌನಿ.

ಮೋಪು (ನಾ). ೧. ಹೊರೆ; ಭಾರ; ಒಜ್ಜೆ. ೨. ಪ್ರೇಮ; ಪ್ರೀತಿ. ೩. ಅವಕಾಶ; ಅಸ್ಪದ. ೪. ಕಟ್ಟಡಗಳನ್ನು ಕಟ್ಟಲು ಉಪಯೋಗಿಸುವ ಮರದ ದಿಮ್ಮಿ. ೫. ಚೆಲುವು; ಸೊಗಸು ೬. ಗಟ್ಟಿಮುಟ್ಟಾದುದು; ಕಟ್ಟುಮಸ್ತು ೭. ಸರ, ಡಾಬು ಮುಂತಾದುವುಗಳ ನಡುವಿನ ಭಾಗ; ಮೊಗಪು.

ಮೋರ (ನಾ). ಮಯೂರ; ನವಿಲು

ಮೋರಿ ೧. = ಮೊಹರಿ. ೨. = ಮೌರಿ.

ಮೋರು (ನಾ). ಮೊಸರು; ದಧಿ.

ಮೋರೆ = ಮೋಱೆ. ~ಆ(ಯಾ)ಗು = ಎದುರಾಗು; ಅಭಿಮುಖವಾಗು. ~ತಪ್ಪಿಸು = ತಲೆಮರೆಸಿಕೊಳ್ಳು; ಮರೆಯಲ್ಲಿರು. ~ಮುರಿ = ಬೇಸರ ಇಲ್ಲವೆ ತಿರಸ್ಕಾರದಿಂದ ಮುಖವನ್ನು ವಕ್ರವಾಗಿಸು.

ಮೋಱೆ(ರೆ) (ನಾ). ೧. ಮುಖ; ವದನ. ೨. ಮುಂಭಾಗ; ಇದಿರು; ಸಮ್ಮುಖ.

ಮೋರ್ಚೆ (ನಾ). ೧. ಕೊತ್ತಳ; ಬತೇರಿ. ೨. ಹಾರಿಸಲು ಸಿದ್ಧಪಡಿಸಿಟ್ಟ ಫಿರಂಗಿಗಳ ಸಾಲು ಮತ್ತು ಅದರಿಂದ ಸಜ್ಜಿತವಾದ ಸೈನ್ಯ. ೩. ಲಗ್ಗೆ; ದಾಳಿ. ೪. ಗುಂಪಾಗಿ ಹೋಗುವುದು.

ಮೋಷ (ನಾ). ೧. ಕಳ್ಳತನ; ಕಳವು. ೨. ಕದ್ದ ವಸ್ತು; ಕಳವಿನ ಮಾಲು. ೩. ಕಳ್ಳ; ಕುಡುಗ.

ಮೋಸ (ನಾ). ೧. ವಂಚನೆ; ಕಪಟ. ೨. ತಪ್ಪು; ಅಪರಾಧ. ೩. ಹಾನಿ; ಗಂಡಾಂತರ. ~ಕಾ(ಗಾ)ಱ(ರ) = ವಂಚಕ; ಮೋಸ ಮಾಡುವವನು.

ಮೋಸು (ನಾ). ೧. ಮೂಲ; ಆಶ್ರಯಸ್ಥಾನ. ೨. ಅಂಕುರ; ಮೊಳಕೆ.

ಮೋಹ (ನಾ). ೧. ಮೈಮರೆಯುವಿಕೆ; ಪರವಶವಾಗುವಿಕೆ. ೨. ತಿಳಿವಳಿಕೆಯಿಲ್ಲದಿರುವಿಕೆ; ಅಜ್ಞಾನ. ೩. ಅಕ್ಕರೆ; ಪ್ರೀತಿ. ೪. ಮಂತ್ರವಿದ್ಯೆ; ಇಂದ್ರಜಾಲ. ~ಕೊ(ಗೊ)ಳ್ಳು = ೧. ಭ್ರಾಂತಿಗೆ ಒಳಗಾಗು; ಬೆಪ್ಪಾಗು. ೨. ಮರುಳಾಗು; ಮುಗ್ಧನಾಗು.

ಮೋಹಕ (ನಾ). ೧. ಮಾಯಾಜಾಲ. (ಗು). ೨. ಮರುಳುಗೊಳಿಸುವ; ಆಕರ್ಷಕವಾದ ಮಂತ್ರ. (ಗು). ೩. ಮಂಕು ಕವಿಸುವ; ಮನಸೆಳೆಯುವ. ~ಅಸ್ತ್ರ = ೧. ಕಾಮನ ಐದು ಬಾಣಗಳಲ್ಲಿ ಒಂದು. ೨. ಮಂಕನ್ನು ಕವಿಸುವ ಅಸ್ತ್ರ. ~ತಿಲಕ = ವಶೀಕರಣಕ್ಕಾಗಿ ಇಟ್ಟುಕೊಳ್ಳುವ ತಿಲಕ.

ಮೋಹನ (ನಾ). ೧. ಆಕರ್ಷಕವಾದುದು; ಮೋಹಕವಾದುದು. ೨. ಮೈಮರೆಸುವಿಕೆ; ಮರುಳುಗೊಳಿಸುವಿಕೆ; ಪರವಶತೆ. ೩. ಸಂಭೋಗ; ಸುರತ. ೪. ಮಾಟ;

ಮೋಹನಾಂಗಿ (ನಾ). ಮೋಹಕವಾದ ರೂಪುಳ್ಳವಳು; ಸುಂದರಿ; ಚೆಲುವೆ.

ಮೋಹರ (ನಾ). ೧. ಗುಂಪು; ಸಂದಣಿ. ೨. ಸೈನ್ಯ; ದಂಡು. ೩. ಯುದ್ಧ; ಕಾಳಗ. ~ಇಸು = ೧. ಹೆಚ್ಚಾಗು; ಅತಿಶಯವಾಗು. ೨. ಸಂದಣಿಸು; ಗುಂಪುಗೂಡು. ೩. (ಕಾಳಗಕ್ಕೆ) ಸೈನ್ಯವನ್ನು ಸಜ್ಜುಗೊಳಿಸು; ವ್ಯೂಹವನ್ನು ರಚಿಸು. ~ತೆ(ದೆ)ಗೆ = ೧. ಒಟ್ಟಾಗು; ಗುಂಪುಗೂಡು. ೨. ಯುದ್ಧಮಾಡು.

ಮೋಹರಿ = ಮೌರಿ.

ಮೋಹಳ (ನಾ). ಕತ್ತಿ, ಕಠಾರಿ ಮೊದಲಾದುವುಗಳ ಹಿಡಿ.

ಮೋಹಿ (ನಾ). ೧. ಮೋಹಕ್ಕೆ ಒಳಗಾದವನು. ೨. ಮೋಹವನ್ನುಂಟು ಮಾಡುವವನು. ೩. ದಿಗಿಲನ್ನುಂಟು ಮಾಡುವವನು.

ಮೋಹಿನಿ (ನಾ). ೧. ಚೆಲುವೆ; ಸುಂದರಿ. ೨. ಸಮುದ್ರಮಥನಾನಂತರ ರಾಕ್ಷಸರನ್ನು ವಂಚಿಸಲು ವಿಷ್ಣುವು ಎತ್ತಿದ ಸ್ತ್ರೀಯ ಅವತಾರ. ೩. ಸುಂದರ ಸ್ತ್ರೀರೂಪದ ಒಂದು ಪಿಶಾಚಿ. ೪. ಮೂರ್ಛೆ ಬರಿಸುವ ಒಂದು ಬಗೆಯ ವಿದ್ಯೆ.

ಮೋಹಿಸು (ಕ್ರಿ). ೧. ಮೈಮರೆ; ಎಚ್ಚರದಪ್ಪು. ೨. ಬೆಪ್ಪಾಗು; ಭ್ರಾಂತಿಗೊಳ್ಳು. ೩. ಆಕರ್ಷಿತವಾಗು; ಮನಸೋಲು. ೪. ಮನಸ್ಸನ್ನು ಸೂರೆಗೊಳ್ಳು; ಆಕರ್ಷಿಸು. ೫. ಅಪ್ಪಳಿಸು; ಹೊಡೆ. ೬. ಗುರಿಯಿಡು.

ಮೋಹು (ಕ್ರಿ). ೧. ಮೋದು; ಹೊಡೆ. ೨. ಗುರಿಯಿಡು. ೩. ವ್ಯಾಪಿಸು; ಕವಿ.

ಮೋಳಿಗೆ (ನಾ). (ಸೌದೆಯ) ಹೊರೆ.

ಮೋಳೆ (ನಾ). ೧. ಒಡ್ಡುಗಳಲ್ಲಿ ಮಾಡಿದ ತೂತು, –ರಂಧ್ರ. ೨. ಉಪ್ಪನ್ನು ತಯಾರಿಸಲು ನೀರು ನಿಲ್ಲುವಂತೆ ಒಡ್ಡುಕಟ್ಟಿದ ನೆಲ. ೩. ಕೆರೆಯ ಏರಿಯಲ್ಲಿ ಉಂಟಾದ ಬಿರುಕು. ~ಪೊ(ಯೊ)ೕಗು = (ಕೆರೆ ಮುಂತಾದುವುಗಳ ಕಟ್ಟೆಯಲ್ಲಿ) ಒಡಕು ಉಂಟಾಗು, –ಬಿರುಕು ಬಿಡು.

ಮೌಂಜಿ (ನಾ). ೧. ಮುಂಜ ಹುಲ್ಲಿನಿಂದ ಮಾಡಿದ ದಾರ. ೨. ಮೌಂಜಿಯನ್ನು ಕಟ್ಟುವ ಸಂಸ್ಕಾರ; ಮುಂಜಿ.

ಮೌಕುಲಿ (ನಾ). ಆಡವಿಯ ಕಾಗೆ; ಡೊಂಬ ಕಾಗೆ.

ಮೌಕ್ತಿಕ (ನಾ). ನವರತ್ನಗಳಲ್ಲಿ ಒಂದು; ಮುತ್ತು.

ಮೌಢ್ಯ (ನಾ). ದಡ್ಡತನ; ತಿಳಿಗೇಡಿತನ.

ಮೌನ (ನಾ). ಮಾತನಾಡದಿರುವಿಕೆ; ನೀರವತೆ. ~(ಂ)ಕೊ(ಗೊ)ಳ್ = ಮಾತನಾಡದಿರು; ಸುಮ್ಮನಿರು. ~ವ್ರತ = ನಿಯಮಿತ ಕಾಲದ ವರೆಗೆ ಮಾತನಾಡದಿರುವುದು.

ಮೌನತೆ (ನಾ). ನೀರವತೆ; ನಿಶ್ಶಬ್ದ.

ಮೌನಿ (ನಾ). ೧. ಮೌನವ್ರತವನ್ನು ಆಚರಿಸುವವನು; ಮಾತನಾಡದಿರುವವನು. ೨. ಮುನಿ; ತಪಸ್ವಿ.

ಮೌರಜಿಕ (ನಾ). ಮುರಜವೆಂಬ ವಾದ್ಯವನ್ನು ಬಾರಿಸುವವನು.

ಮೌರಜಿಗ = ಮೌರಜಿಕ.

ಮೌರಿ (ನಾ). ಒಂದು ವಾದ್ಯವಿಶೇಷ.

ಮೌರ್ವಿ (ನಾ). ೧. ಮೂರ್ವಾ ಹುಲ್ಲಿನಿಂದ ಮಾಡಿದ ಉಡಿದಾರ. ೨. ಬಿಲ್ಲಿನ ಹೆದೆ.

ಮೌಲ (ನಾ). ೧. ಪರಂಪರೆಯಿಂದ ಬಂದ ರಾಜಸೇವಕ. (ಗು). ೨. ಮೂಲಭೂತವಾದ; ಪ್ರಾಚೀನವಾದ.

ಮೌಲಿ(ಳಿ) (ನಾ). ೧. ತಲೆ. ೨. ಶಿಖರ; ತುದಿ. ೩. ಕಿರೀಟ; ಮಕುಟ. ೪. ಜುಟ್ಟು; ಶಿಖೆ. ೫. ಸಿಂಗರಿಸಿದ ಮುಡಿ. ೬. ಒಡೆತನ; ಮುಖಂಡತ್ವ.

ಮೌಲಿಕ (ಗು). ಬೆಲೆಯುಳ್ಳ.

ಮೌಲ್ಯ (ನಾ). ೧. ಬೆಲೆ; ಕಿಮ್ಮತ್ತು. ೨. ಗೌರವ; ಘನತೆ. ೩. ಮನುಷ್ಯನು ತನ್ನ ಜೀವನದಲ್ಲಿ ಬೆಲೆಕೊಡುವ ಭಾವನೆ; ಪುರುಷಾರ್ಥ. (ಗು). ೪. ಮೂಲಭೂತವಾದ; ಕಾರಣೀಭೂತವಾದ.

ಮೌಹೂರ್ತಿಕ (ನಾ). ೧. ಜ್ಯೋತಿಷಿ; ಜೋಯಿಸ. (ಗು). ೨. ಮುಹೂರ್ತಕ್ಕೆ ಸಂಬಂಧಪಟ್ಟ. ೩. ಅಲ್ಪಕಾಲದ; ಕ್ಷಣಿಕ.

ಮ್ಲಾನ (ಗು). ೧. ಬಾಡಿದ; ಒಣಗಿದ. ೨. ಜುಗುಪ್ಸೆಗೊಂಡ. ೩. ಹೊಲಸಾದ; ಕೊಳಕಾದ. ೪. ಕೆಪ್ಪುಬಣ್ಣದ.

ಮ್ಲಾನತೆ (ನಾ). ಕಳಾಹೀನವಾದುದು; ಬಾಡಿದುದು.

ಮ್ಲೇ(ಂ)ಚ್ಛ (ನಾ). ೧. ವಿದೇಶೀಯ. ೨. ಅನಾರ್ಯ. ೩. ಅನಾಗರಿಕ. ~ಖಂಡ = ಪರದೇಶ; ವಿದೇಶ. ~ಭಾಷೆ = ಆರ್ಯರಲ್ಲದವರು ಮಾತನಾಡುವ ಭಾಷೆ.

❋

ಯ (ನಾ). ಕನ್ನಡ ವರ್ಣಮಾಲೆಯ ನಲವತ್ತಾರನೆಯ ಅಕ್ಷರ.

ಯಂತ್ರ (ನಾ). ೧. ಕಾರ್ಯನಿರ್ವಹಣೆ ಮಾಡುವ ಉಪಕರಣ; ಮಿಷೀನು. ೨. ಹತೋಟಿ; ಅಂಕೆ; ಕಟ್ಟು. ೩. ತಾಯಿತಿ; ಕಾಪು. ~ಆಗಾರ = ಯಂತ್ರವಿರುವ ಸ್ಥಳ. ~ಕರ್ಮಿ = ಯಂತ್ರಕಾರ. ~ಚಾಲಕ = ಯಂತ್ರವನ್ನು ನಡಸುವವನು. ~ಧಾರಾಗೃಹ = ಜಲ್ಲಡಿ ಫಲಕದ ಮೂಲಕ ಮಳೆಯಂತೆ ನೀರು ಬೀಳಲು ಜೋಡಿಸಿರುವ ಸಾಧನವುಳ್ಳ ಸ್ನಾನಗೃಹ. ~ವಾಹಕ = ಯಂತ್ರಚಾಲಕ. ~ಶಿಲ್ಪಿ = ಯಂತ್ರಗಳನ್ನು ರಚಿಸುವವನು.

ಯಂತ್ರಕಾರ (ನಾ). ಯಂತ್ರದ ಕೆಲಸವನ್ನು ಬಲ್ಲವನು; ಯಂತ್ರಿಗ.

ಯಃಕಶ್ಚಿತ್ತು (ಗು). ಸಾಮಾನ್ಯವಾದ; ಕ್ಷುಲ್ಲಕ.

ಯಕನಾತಿ = ಎಕ್ಕನಾತಿ.

ಯಕೃತ್ತು (ನಾ). ಈರೆ; ಪಿತ್ತಕೋಶ.

ಯಕ್ಷ (ನಾ). ೧. ದೇವತೆಗಳಲ್ಲಿ ಒಂದು ಪಂಗಡ. ೨. ಕುಬೇರನ ಸೇವಕ. ೩. ಕುಬೇರ. ೪. ಪಿಶಾಚಿ; ದೆವ್ವ. ~ಅಧಿಪ = ಯಕ್ಷಪ. ~ಇಂದ್ರ = ಯಕ್ಷಪ. ~ಲೋಕ = ೧. ದೇವಲೋಕ. ೨. ಮಾಯಾಲೋಕ.

ಯಕ್ಷಕರ್ದಮ (ನಾ). ಕರ್ಪೂರ, ಕಸ್ತೂರಿ ಮುಂತಾದ ಸುಗಂಧ ದ್ರವ್ಯಗಳಿಂದ ಮಾಡಿದ ಒಂದು ಬಗೆಯ ಲೇಪನದ್ರವ್ಯ.

ಯಕ್ಷಗಾನ (ನಾ). ಒಂದು ಬಗೆಯ ಮೇಳ; ಬಯಲಾಟ.

ಯಕ್ಷಪ (ನಾ). ಕುಬೇರ.

ಯಕ್ಷಿ (ನಾ). ೧. ಯಕ್ಷಸ್ತ್ರೀ. ೨. ಜೈನರಲ್ಲಿ ಒಂದು ದೇವತೆ. ೩. ಕುಬೇರನ ಹೆಂಡತಿ. ೪. ಮಾಟಗಾತಿ.

ಯಕ್ಷಿಣಿ ೧. = ಯಕ್ಷಿ. ೨. ಹೆಣ್ಣುಪಿಶಾಚಿ. ೩. ಇಂದ್ರಜಾಲವಿದ್ಯೆ. ~ಗಾರ = ಮಾಟಗಾರ; ಐಂದ್ರಜಾಲಿಕ. ~ವಿದ್ಯೆ = ಇಂದ್ರಜಾಲವಿದ್ಯೆ.

ಯಕ್ಷ್ಮ (ನಾ). ಕ್ಷಯರೋಗ.

ಯಜನ (ನಾ). ೧. ಯಜ್ಞಮಾಡುವಿಕೆ. ೨. = ಯಜ್ಞ. ~ಅಧಿಕಾರಿ = ಯಜ್ಞ ಮಾಡುವವನು; ಯಾಗಮಾಡುವವನು.

ಯಜಮಾನ (ನಾ). ೧. ಯಜ್ಞ, ಯಾಗಗಳನ್ನು ಮಾಡುವವನು. ೨. ಒಡೆಯ; ಸ್ವಾಮಿ. ೩. ಗಂಡ. ೪. ಹಿರಿಯ. ೫. ಮಾಲೀಕ. ~ಇಕೆ = ಒಡೆತನ. ~ಇತಿ = ಯಜಮಾನಿ.

ಯಜಮಾನಿ (ನಾ). ೧. ಒಡತಿ. ೨. ಹೆಂಡತಿ. ೩. ಹಿರಿಯಳು.

ಯಜಿಸು = ಯಾಜಿಸು.

ಯಜುರ್ವೇದ (ನಾ). ನಾಲ್ಕು ವೇದಗಳಲ್ಲಿ ಎರಡನೆಯದು.

ಯಜ್ಞ (ನಾ). ೧. ಹೋಮ; ಯಾಗ. ೨. ಪೂಜೆ. ~ಅಂಗ = ಯಜ್ಞಕ್ಕೆ ಬೇಕಾಗುವ ಸಾಧನ, -ಸಾಮಗ್ರಿ. ~ಈಶ್ವರ = ಯಜ್ಞಪುರುಷ. ~ಉಪವೀತ = ಜನಿವಾರ. ~ಕುಂಡ = ಹೋಮಕ್ಕಾಗಿ ರಚಿಸುವ ಅಗ್ನಿಯ ಕುಳಿ; ಅಗ್ನಿಕುಂಡ. ~ದೀಕ್ಷಿತ = ಯಾಗದ ದೀಕ್ಷೆಯನ್ನು ಹೊಂದಿದವನು. ~ದೀಕ್ಷೆ = ಯಜ್ಞ, ಯಾಗಾದಿ ಧಾರ್ಮಿಕವಿಧಿಗಳ ವ್ರತವನ್ನು ಹಿಡಿಯುವಿಕೆ. ~ಪಶು = ೧. ಯಜ್ಞದಲ್ಲಿ ಬಲಿಕೊಡುವ ಪ್ರಾಣಿ. ೨. ಮೋಸಕ್ಕೆ ಬಲಿಯಾಗುವವನು. ~ಪುರುಷ = ೧. ಅಗ್ನಿ.

೨. ವಿಷ್ಣು. ~ವೇದಿ=ಯಜ್ಞದಲ್ಲಿ ಪಶು ವನ್ನು ಬಲಿಕೊಡಲು ರಚಿಸಿರುವ ಎತ್ತರ ವಾದ ಸ್ಥಳ. ~ಸೂತ್ರ=ಯಜ್ಞೋಪವೀತ.

ಯತನ = ಯತ್ನ.

ಯತಿ (ನಾ). ೧. ಇಂದ್ರಿಯಗಳನ್ನು ಹಿಡಿತದಲ್ಲಿಟ್ಟುಕೊಂಡಿರುವವನು; ತಪಸ್ವಿ. ೨. ಪದ್ಯವನ್ನು ಹೇಳುವಾಗ ನಿಲ್ಲಬೇಕಾದ ಸ್ಥಳ; ಉಸಿದಾಣ. ~ಭಂಗ=ಪದ್ಯದಲ್ಲಿ ಯತಿಯನ್ನು ಮೀರುವಿಕೆ. ~ವಿಲುಂಘನ =ಯತಿಭಂಗ.

ಯತ್ನ (ನಾ). ಸಾಧನೆ; ಪ್ರಯತ್ನ.

ಯಥಾ (ಅ). ಹೇಗೆ; ಯಾವ ರೀತಿಯಲ್ಲಿ.

ಯಥಾಕಾಲ (ನಾ). ೧. ಉಚಿತವಾದ ಕಾಲ; ಸರಿಯಾದ ಸಮಯ (ಅ). ೨. ಕಾಲಕ್ಕೆ ಸರಿಯಾಗಿ; ಸಮಯಕ್ಕೆ ಹೊಂದುವಂತೆ.

ಯಥಾಕ್ರಮ (ಅ). ಪದ್ಧತಿಗನುಸಾರವಾಗಿ; ಕ್ರಮವಾಗಿ.

ಯಥಾಪ್ರಕಾರ (ಅ). ಎಂದಿನಂತೆ; ಮೊದಲಿನ ಹಾಗೆ.

ಯಥಾರ್ಥ (ನಾ). ೧. ನಿಶ್ಚಯವಾದುದು. ೨. ಸತ್ಯ; ದಿಟ.

ಯಥಾವತ್ತು (ಅ). ನಿಜವಾಗಿ; ಇದ್ದಂತೆ.

ಯಥಾಶಕ್ತಿ (ಅ). ಶಕ್ತ್ಯನುಸಾರವಾಗಿ.

ಯಥಾಸಂಖ್ಯ (ನಾ). ಸಂಖ್ಯೆಗನುಸಾರ ವಾದುದು.

ಯಥಾಸ್ಥಿತಿ (ನಾ). ಮೊದಲಿನ ಸ್ಥಿತಿ; ಪೂರ್ವದ ಸ್ಥಿತಿ.

ಯಥೇಚ್ಛ (ಅ). ೧. ವಿಪುಲವಾಗಿ; ಅಧಿಕ ವಾಗಿ. ೨. ಮನಬಂದಂತೆ.

ಯಥೇಷ್ಟ = ಯಥೇಚ್ಛ.

ಯಥೋಚಿತ (ಅ). ಯೋಗ್ಯವಾಗುವಂತೆ; ಉಚಿತವಾಗುವಂತೆ.

ಯದೃಚ್ಛೆ (ನಾ). ೧.ಸ್ವಚ್ಛಂದತೆ; ಪರಾಧೀನ ವಿಲ್ಲದಿರುವುದು. ೨. ದೈವ; ಅದೃಷ್ಟ.

ಯದ್ವಾತದ್ವಾ (ಅ). ಕ್ರಮವಿಲ್ಲದೆ; ಸಿಕ್ಕಾಪಟ್ಟೆ.

ಯಮ (ನಾ). ೧. ಇಂದ್ರಿಯನಿಗ್ರಹ; ಸಂಯಮ. ೨. ದೇವತೆಗಳಲ್ಲಿ ಒಬ್ಬ; ಧರ್ಮದೇವತೆ. ೩. ಜೊತೆ; ಯಮಳ. (ಗು). ೪. ಘೋರವಾದ; ಭೀಕರವಾದ. ~ಕೊ(ಗೊ)ಲೆ = ನರಕಯಾತನೆ. ~ತನಯ = ಧರ್ಮರಾಜ; ಯುಧಿಷ್ಠಿರ. ~ದೂತ = ೧. ಯಮನ ದೂತ, –ಆಳು. ೨. ಭಯಂಕರನಾದ ವ್ಯಕ್ತಿ. ~ನಂದನ =ಯಮತನಯ. ~ಭಗಿನಿ = ಯಮುನಾ ನದಿ. ~ಭಾರ =ಅತಿಯಾದ ಭಾರ, –ಹೊರೆ. ~ಯಾತನೆ = ಕಡುಬಾಧೆ; ಹೆಚ್ಚಾದ ನೋವು. ~ಲೋಕ=ಯಮನ ಪ್ರಪಂಚ. ~ಶಿಕ್ಷೆ= ಘೋರವಾದ ದಂಡನೆ.

ಯಮಕ (ನಾ). ೧. ಜೋಡಿ; ಜೊತೆ. ೨. ತಡೆ; ಸಂಯಮ. ೩. ಒಂದು ಶಬ್ದಾಲಂಕಾರ.

ಯಮಕು (ನಾ). ದಿಮಾಕು; ಒಯ್ಯಾರ.

ಯಮಲ(ಳ) (ನಾ). ೧. ಜೋಡಿ; ಜೊತೆ. ೨. ಅವಳಿಜವಳಿಗಳಲ್ಲಿ ಒಂದು. ~ನಕ್ಷತ್ರ = ಜೋಡಿ ನಕ್ಷತ್ರ; ಅಶ್ವಿನಿ.

ಯಮಿ (ನಾ). ೧. ಇಂದ್ರಿಯಗಳನ್ನು ನಿಗ್ರಹಿಸಿದವನು; ಯತಿ. ೨. ಯಮನ ಸಹೋದರಿ; ಯಮುನೆ.

ಯಯು (ನಾ). ೧. ಕುದುರೆ. ೨. ಯಜ್ಞಕ್ಕೆ ಅರ್ಹವಾದ ಕುದುರೆ; ಯಜ್ಞಾಶ್ವ.

ಯವ (ನಾ). ಒಂದು ಬಗೆಯ ಗೋಧಿ; ಜವೆ ಗೋಧಿ.

ಯವಕ್ಷಾರ (ನಾ). ಒಂದು ಬಗೆಯ ಔಷಧ ದ್ರವ್ಯ.

ಯವನ (ನಾ). ವಿದೇಶೀಯ; ಪರದೇಶದವನು.

ಯವನಾಲ(ಳ) (ನಾ). ಒಂದು ಬಗೆಯ ಧಾನ್ಯ; ಜೋಳ.

ಯುವನಿ (ನಾ). ಪರದೇಶದವಳು.
ಯುವನಿಕೆ (ನಾ). ತೆರೆ; ಪರದೆ; ಜವನಿಕೆ.
ಯುವಲ (ನಾ). ಬಿದಿರಿನ ಅಕ್ಕಿ.
ಯುವೆ = ಯುವ.
ಯುವ್ಯ (ನಾ). ಜೋಳ ಬೆಳೆಯುವ ಜಾಗ.
ಯುವ್ವನ = ಯೌವನ. ~ ಇಗ = ಯೌವನಿಕ.
ಯುವ್ವನೆ = ಯೌವನಿ.
ಯುಶ (ನಾ). ೧. ಕೀರ್ತಿ; ಶ್ರೇಯಸ್ಸು. ೨. ಗೆಲವು.
ಯುಶಸ್ಕರ (ಗು). ಕೀರ್ತಿಯನ್ನುಂಟುಮಾಡುವ; ಶ್ರೇಯಸ್ಸನ್ನುಂಟುಮಾಡುವ.
ಯುಶಸ್ವಿ (ನಾ). ೧. ಸುಪ್ರಸಿದ್ಧ. (ಗು). ೨. ಹೆಸರುವಾಸಿಯಾದ. ೩. ಗೆದ್ದ; ವಿಜಯಿಯಾದ.
ಯುಶಸ್ಸು = ಯುಶ.
ಯುಶೋರ್ಥಿ (ನಾ). ಯುಶಸ್ಸನ್ನು ಬಯಸುವವನು.
ಯುಷ್ಟಿ (ನಾ). ೧. ಬಡಿಗೆ; ಕೋಲು. ೨. ಗದೆ. ೩. ಎಳೆ; ದಾರ.
ಯುಷ್ಟಿಮಧುಕ (ನಾ). ಒಂದು ಬಗೆಯ ಮೂಲಿಕೆ; ಅತಿಮಧುರ.
ಯುಹೂದ್ಯ = ಯೆಹೂದ್ಯ.
ಯಾ (ಅ) ಅಥವಾ; ಇಲ್ಲವೆ.
ಯಾಂತ್ರಿಕ (ಗು). ೧. ಯಂತ್ರಕ್ಕೆ ಸಂಬಂಧಿಸಿದ. ೨. ಏಕರೀತಿಯ; ಯಂತ್ರದ ಹಾಗಿರುವ.
ಯಾಕೂತ (ನಾ). ಒಂದು ಬಗೆಯ ರತ್ನ.
ಯಾಗ = ಯಜ್ಞ. ~ ಮಂಟಪ = ಯಾಗ ಮಾಡುವ ಸ್ಥಳ; ಯಾಗಶಾಲೆ. ~ ಮುಖ = ಯಾಗದ ಆರಂಭ.
ಯಾಚಕ (ನಾ). ೧. ಬೇಡುವವನು; ಪ್ರಾರ್ಥಿಸುವವನು. ೨. ಭಿಕ್ಷುಕ.
ಯಾಚನೆ (ನಾ). ೧. ಬೇಡಿಕೆ; ಕೋರಿಕೆ. ೨. ಭಿಕ್ಷೆ.
ಯಾಚಿಸು (ಕ್ರಿ). ೧. ಬೇಡು; ಕೇಳಿಕೊಳ್ಳು. ೨. ತಿರುಪೆ ಎತ್ತು; ಭಿಕ್ಷೆಯನ್ನು ಬೇಡು.
ಯಾಜಕ (ನಾ). ೧. ಯಜ್ಞವನ್ನು ಮಾಡುವವನು. ೨. ಯಜ್ಞಪುರೋಹಿತ; ಋತ್ವಿಕ್ಕು.
ಯಾಜನ (ನಾ). ಯಜ್ಞಮಾಡಿಸುವಿಕೆ.
ಯಾಜಮಾನ್ಯ (ನಾ). ಯಜಮಾನಿಕೆ; ಒಡೆತನ.
ಯಾಜಿ (ನಾ). ೧. ಯಜ್ಞ; ಯಾಗ. ೨. ಯಜ್ಞಯಾಗಾದಿಗಳನ್ನು ಮಾಡುವವನು.
ಯಾಜಿಸು (ಕ್ರಿ). ಯಾಗವನ್ನು ಮಾಡು.
ಯಾಜ್ಞಿಕ (ನಾ). ೧. ಯಜ್ಞವನ್ನು ಮಾಡುವವನು. (ಗು). ೨. = ಯಾಜ್ಞೀಯ.
ಯಾಜ್ಞೀಯ (ಗು). ಯಜ್ಞಕ್ಕೆ ಸಂಬಂಧಿಸಿದ.
ಯಾತನೆ (ನಾ). ೧. ಬಾಧೆ; ನೋವು. ೨. ದುಃಖ; ಕಷ್ಟ.
ಯಾತುಧಾನ (ನಾ). ೧. ರಾಕ್ಷಸ. ೨. ಪಿಶಾಚಿ.
ಯಾತ್ರ (ನಾ). ೧. ಪಥಿಕ; ದಾರಿಹೋಕ. ೨. ರಥವನ್ನು ನಡಸುವವನು; ಸಾರಥಿ. ೩. ನಾದಿನಿ.
ಯಾತ್ರಿ = ಯಾತ್ರಿಕ.
ಯಾತ್ರಿಕ (ನಾ). ಯಾತ್ರೆ ಮಾಡುವವನು; ಪ್ರವಾಸಿ.
ಯಾತ್ರೆ (ನಾ). ೧. ಪ್ರಯಾಣ; ಸಂಚಾರ. ೨. ಪುಣ್ಯಕ್ಷೇತ್ರಗಳಿಗೆ ಪ್ರಯಾಣಮಾಡುವಿಕೆ.
ಯಾದಃಪತಿ (ನಾ). ೧. ಸಮುದ್ರ. ೨. ವರುಣ.
ಯಾದಿ (ನಾ). ೧. ಹೆಸರು ಮೊದಲಾದುವನ್ನು ಬರೆದಿರುವ ಪಟ್ಟಿ. ೨. ನೆನಪಿನ ಪಟ್ಟಿ.
ಯಾನ (ನಾ). ೧. ಸಂಚಾರ; ಪ್ರಯಾಣ. ೨. ವಾಹನ. ~ ಪಾತ್ರ = ದೋಣಿ; ನಾವೆ.
ಯಾನೆ (ಅ). ಅರ್ಥಾತ್; ಅಂದರೆ.
ಯಾಭ (ನಾ). ಸುರತ; ಸಂಭೋಗ.
ಯಾಮ (ನಾ). ೧. ಹತೋಟಿ; ಹಿಡಿತ. ೨. ಜಾವ; ದಿನದ ಎಂಟನೆಯ ಒಂದು ಭಾಗ. ೩. ಹೋಗುವಿಕೆ; ಚಲಿಸುವಿಕೆ.

ಯಾಮಿ ೧. = ಯಾಮಿನಿ. ೨. ಒಡಹುಟ್ಟಿದವಳು ; ಜಾಮಿ.

ಯಾಮಿಕ (ನಾ). ಕಾವಲುಗಾರ ; ಪಹರೆಯವನು.

ಯಾಮಿನಿ (ನಾ). ರಾತ್ರಿ ; ಇರುಳು.

ಯಾಮಿನೀಪತಿ (ನಾ). ರಾತ್ರಿಯ ಒಡೆಯ ; ಚಂದ್ರ.

ಯಾಮ್ಯ (ನಾ). ೧. ಯಮನ ಸೇವಕ. ೨. ದಕ್ಷಿಣ ದಿಕ್ಕು. (ಗು). ೩. ಯಮನಿಗೆ ಸಂಬಂಧಿಸಿದ.

ಯಾಯವಾರ (ನಾ). ಭಿಕ್ಷೆ ; ತಿರುಪೆ.

ಯಾಯಾವರ (ನಾ). ಅಲೆದಾಡುವ ತಿರುಕ.

ಯಾಲಪದ (ನಾ). ಒಂದು ಬಗೆಯ ದೇಶೀಯ ಪದ್ಯ ; ಏಲಾಪದ.

ಯಾಲಕ್ಕಿ (ನಾ). ಸುವಾಸನೆಯ ಕಾಳುಗಳುಳ್ಳ ಕಾಯಿ ; ಏಲಕ್ಕಿ.

ಯಾವ (ನಾ). ಅರಗು ; ರಾಳ.

ಯಾವಕ ೧. = ಯಾವ. ೨. ಅರಗಿನ ರಸ ; ಅಲತಗೆ. ೩. ಜವೆಗೋಧಿಯಿಂದ ಮಾಡಿದ ಗಂಜಿ. ೪ ಆಲಸಂದೆ.

ಯಾವಜ್ಜೀವ (ಅ). ಜೀವಮಾನಪರ್ಯಂತ.

ಯಾವತ್ತು (ನಾ). ೧. ಆದಿನ. ೨. ಯಾವದಿನ. (ಸ) ೩. ಸದಾ ; ಯಾವಾಗಲೂ. (ಅ). ೪. ಎಲ್ಲ ; ಸಮಸ್ತ.

ಯಾವನಾಳ = ಯವನಾಲ.

ಯಾಳಿ (ನಾ). ಸೊಂಡಿಲಿರುವ ಸಿಂಹಾಕಾರದ ಒಂದು ಕಾಲ್ಪನಿಕ ಪ್ರಾಣಿ.

ಯಾಬಿಳ್(ಳ್) (ನಾ). ಒಂದು ಬಗೆಯ ತಂತಿ ವಾದ್ಯ.

ಯುಕುತ = ಯುಕ್ತ.

ಯುಕುತಿ = ಯುಕ್ತಿ.

ಯುಕ್ತ (ನಾ). ೧. ತಕ್ಕುದು ; ಉಚಿತವಾದುದು. ೨. ತಕ್ಕವನು ; ಯೋಗ್ಯ. (ಗು). ೩. ಯೋಗ್ಯವಾದ ; ಉಚಿತವಾದ.

ಯುಕ್ತಿ (ನಾ). ೧. ಸೇರುವಿಕೆ ; ಕೂಡುವಿಕೆ. ೨. ಉಪಾಯ; ತಂತ್ರ. ೩. ಸಮಯೋಚಿತ ಜ್ಞಾನ; ಬುದ್ಧಿವಂತಿಕೆ; ಚಾತುರ್ಯ. ೪. ತರ್ಕ; ಕಾರಣ.

ಯುಗ (ನಾ). ೧. ಜೋಡಿ; ಜೊತೆ; ದ್ವಂದ್ವ. ೨. ಸೃಷ್ಟಿಯ ಕಾಲಮಾನ. ೩. ದೀರ್ಘ ಕಾಲಾವಧಿ. ೪. ಒಂದು ವರ್ಷದ ಅವಧಿ. ೫. ನೊಗ. ೬. ದಂಪತಿ. ೭. ಒಂದು ಅಳತೆ. ~ಅಂತ = ೧. ಒಂದು ಯುಗದ ಕೊನೆ. ೨. ಒಂದು ಪೀಳಿಗೆಯ ಕೊನೆ. ~ಅಂತರ = ಒಂದು ಯುಗಕ್ಕೂ ಮತ್ತೊಂದು ಯುಗಕ್ಕೂ ಇರುವ ನಡುವಿನ ಅಂತರ. ~ಆದಿ = ೧. ಸೃಷ್ಟಿಯ ಪ್ರಾರಂಭ. ೨. ವರ್ಷದ ಮೊದಲ ದಿನ ಮತ್ತು ಅಂದು ಆಚರಿಸುವ ಹಬ್ಬ ; ಉಗಾದಿ. ~ಪುರುಷ = ಒಂದು ಶತಮಾನಕ್ಕೆ ಪ್ರಮುಖನಾದ ಮಹಾವ್ಯಕ್ತಿ. ~ಪ್ರವರ್ತಕ = ಒಂದು ಜನಾಂಗವನ್ನು ಹೊಸಮಾರ್ಗದಲ್ಲಿ ನಡಸುವವನು.

ಯುಗಲ(ಳ) (ನಾ). ಜೊತೆ; ಜೋಡಿ. ~ರಸನ = ಜೋಡು ನಾಲಗೆಯುಳ್ಳದು ; ಹಾವು.

ಯುಗ್ಮ = ಯುಗಲ.

ಯುತಕ = ಯುಗಲ.

ಯುತಿ (ನಾ). ಹೊಂದಿಕೆ ; ಸೇರಿಕೆ.

ಯುದ್ಧ (ನಾ). ಕದನ; ಹೋರಾಟ. ~ತ್ರಾಣ = ಯುದ್ಧಕಾಲದಲ್ಲಿ ಸೈನಿಕರು ಧರಿಸುವ ಕವಚ; ಜಿರಲಿ ಖತ್ತು. ~ಭೂಮಿ = ಯುದ್ಧರಂಗ. ~ರಂಗ =ಸಮರಭೂಮಿ; ರಣಾಂಗಣ. ~ವಿರಾಮ = ಯುದ್ಧವನ್ನು ನಿಲ್ಲಿಸುವುದು ; ಕದನ ವಿರಾಮ. ~ಸಾಮಗ್ರಿ = ಯುದ್ಧದಲ್ಲಿ ಬಳಸುವ ಉಪಕರಣ.

ಯುನಾನಿ (ನಾ). ಯವನರ ವೈದ್ಯಪದ್ಧತಿ.

ಯುಯು (ನಾ). ಕುದುರೆ ; ಅಶ್ವ.

ಯುಯುತ್ಸು (ನಾ). ೧. ಯುದ್ಧ ಮಾಡುವುದ ರಲ್ಲಿ ಆಸಕ್ತಿ; ಕದನೋತ್ಸಾಹ. ೨ ಕೌರವನ ಸಹೋದರ.

ಯುವ (ನಾ). ೧. ತರುಣ; ಯುವಕ. ೨. ಅರುವತ್ತು ಸಂವತ್ಸರಗಳಲ್ಲಿ ಒಂದು. (ಗು). ೩. ಹರಯದ; ಪ್ರಾಯದ. ~ರಾಜ = ರಾಜನ ಉತ್ತರಾಧಿಕಾರಿ.

ಯುವಕ (ನಾ). ಹರಯದವನು; ತರುಣ.

ಯುವತಿ (ನಾ). ಹರಯದವಳು; ತರುಣಿ.

ಯೂಕ (ನಾ). ೧. ಹೇನು. ೨. ಕೂರೆ. ೩. ಒಂದು ಅಳತೆ.

ಯೂತಿಕೆ = ಯೂಥಿಕೆ.

ಯೂಥ ೧. = ಯೂಧ. ೨. ಸೈನ್ಯ; ಪಡೆ. ~ನಾಥ = ಯೂಥಪ.

ಯೂಥಪ (ನಾ). ೧. ಗುಂಪಿನ ನಾಯಕ. ೨. ಆನೆಗಳ ಹಿಂಡಿನ ಒಡೆಯ; ಸಲಗ.

ಯೂಥಿಕೆ (ನಾ). ಮಲ್ಲಿಗೆಯಲ್ಲಿ ಒಂದು ಜಾತಿ.

ಯೂಧ (ನಾ). ೧. ಗುಂಪು; ಸಮುದಾಯ. ೨. (ವಿಶೇಷವಾಗಿ) ಆನೆಗಳ ಹಿಂಡು.

ಯೂಪ (ನಾ). ಯಜ್ಞಪಶುವನ್ನು ಕಟ್ಟುವ ಕಂಬ. ~ಸ್ತಂಭ = ಯೂಪ.

ಯೆಹೂದ್ಯ (ನಾ). ಕ್ರೈಸ್ತರಲ್ಲಿ ಒಂದು ಪಂಗಡ.

ಯೋಗ (ನಾ). ೧. ಹೊಂದಿಕೆ; ಜೋಡಣೆ. ೨. ಕೂಡುವುದು; ಸೇರುವುದು; ಕೂಟ. ೩. ದೇವರಲ್ಲಿ ಐಕ್ಯವಾಗುವುದು. ೪. ಇಂದ್ರಿಯನಿಗ್ರಹ. ೫. ಏಕಾಗ್ರತೆ; ಧ್ಯಾನ. ೬. ಅದೃಷ್ಟ; ಸುದೈವ. ೭. ಒಳ್ಳೆಯ ಗುಣ; ಸದ್ಗುಣ. ೮. ವಿಧಾನ; ಕ್ರಮ. ೯. ವೇಷ; ಸೋಗು. ೧೦. ಉಚಿತವಾದುದು; ತಕ್ಕುದು. ೧೧. ಜ್ಯೋತಿಶ್ಶಾಸ್ತ್ರದಲ್ಲಿ ಒಂದು ಕಾಲಕ್ರಮ. ೧೨. ಉತ್ಸಾಹ; ಹುರುಪು. ೧೩. ಶಬ್ದನಿಷ್ಪತ್ತಿ; ವ್ಯುತ್ಪತ್ತಿ. ೧೪. ಷಡ್ದರ್ಶನ ಗಳಲ್ಲಿ ಒಂದು. ೧೫. ಪಡೆದುದು; ಪ್ರಾಪ್ತಿ. ~ಅಕ್ಷಿ = ಜ್ಞಾನದೃಷ್ಟಿ. ~ಅಭ್ಯಾಸ = ಯೋಗಶಾಸ್ತ್ರವನ್ನು ಅಭ್ಯಾಸ ಮಾಡು ವುದು. ~ಆಚಾರ್ಯ = ತಪಶ್ಚರ್ಯೆಯ ಯೋಗವನ್ನು ಬೋಧಿಸುವವನು. ~ಆಯೋಗ = ಅದೃಷ್ಟ ಕೂಡಿಬರುವುದು. ~ಆರೂಢ = ಯೋಗಾಭ್ಯಾಸದಲ್ಲಿ ನಿರತ ನಾದವನು. ~ಆಸನ = ಧ್ಯಾನಕ್ಕೆ ಕುಳಿತು ಕೊಳ್ಳುವ ಒಂದು ವಿಶೇಷ ಭಂಗಿ. ~ಕ್ಷೇಮ = ೧. ಸೌಖ್ಯ; ನೆಮ್ಮದಿ. ೨. ದೊರಕಿದುದರ ರಕ್ಷಣೆ. ~ದಂಡ = ಯೋಗಿಗಳು ಉಪಯೋಗಿಸುವ ದಂಡ. ~ದೃಷ್ಟಿ = ಧ್ಯಾನದಿಂದುಂಟಾಗುವ ಜ್ಞಾನ. ~ಧ್ಯಾನ = ಏಕಾಗ್ರತೆಯಿಂದ ಮಾಡುವ ದೈವಚಿಂತನೆ. ~ಪ(ವ)ಟ್ಟಿಗೆ = ಯೋಗಾಸನದಲ್ಲಿದ್ದಾಗ ಎರಡು ಮಂಡಿ ಗಳು ಮತ್ತು ಬೆನ್ನನ್ನು ಸೇರಿಸಿ ಕಟ್ಟುವ ಬಟ್ಟೆ. ~ಪೀಠ = ಯೋಗಾಸನ. ~ಸಮಾಧಿ = ಯೋಗಾಭ್ಯಾಸದಿಂದ ಪಡೆಯುವ ಸ್ಥಿತಿ.

ಯೋಗಸ್ಥ (ನಾ). ಸಮಚಿತ್ತವುಳ್ಳವನು; ಯೋಗಿ.

ಯೋಗಿ (ನಾ). ಯೋಗಾಭ್ಯಾಸವನ್ನು ಮಾಡು ವವನು; ಯತಿ.

ಯೋಗಿಣಿ = ಯೋಗಿನಿ.

ಯೋಗಿನಿ (ನಾ). ೧. ಯೋಗಾಭ್ಯಾಸ ಮಾಡುವವಳು. ೨. ಮಾಟಗಾತಿ.

ಯೋಗ್ಯ (ನಾ). ೧. ಅರ್ಹನಾದ ವ್ಯಕ್ತಿ; ತಕ್ಕವನು. (ಗು). ೨. ತಕ್ಕ; ಉಚಿತ.

ಯೋಗ್ಯತಾಪತ್ರ (ನಾ). ೧. ಪ್ರಮಾಣಪತ್ರ. ೨. ಪ್ರಶಸ್ತಿಪತ್ರ.

ಯೋಗ್ಯತೆ (ನಾ). ಅರ್ಹತೆ; ಸಾಮರ್ಥ್ಯ.

ಯೋಚನಾಪರ (ನಾ). ೧. ಚಿಂತಿಸುವವನು; ಆಲೋಚಿಸುವವನು. (ಗು). ೨. ಆಲೋಚನೆ ಮಾಡುವ.

ಯೋಚನೆ (ನಾ). ೧. ವಿಚಾರ; ಎಣಿಕೆ. ೨. ಚಿಂತೆ; ಕಳವಳ.

ಯೋಚಿಸು (ಕ್ರಿ). ೧. ವಿಚಾರಮಾಡು; ಆಲೋಚನೆಮಾಡು. ೨. ಚಿಂತಿಸು; ಕಳವಳಪಡು.

ಯೋಜಕ (ನಾ). ಯೋಜನೆ ಮಾಡುವವನು; ವ್ಯವಸ್ಥಾಪಕ.

ಯೋಜನ (ನಾ). ೧. ದೂರದ ಅಳತೆಯ ಒಂದು ಪ್ರಮಾಣ; ಸುಮಾರು ಹನ್ನೆರಡು ಮೈಲು. ೨. ಸೇರಿಸುವಿಕೆ; ಕೂಡಿಸುವಿಕೆ.

ಯೋಜನೆ (ನಾ). ಏರ್ಪಾಟು; ವ್ಯವಸ್ಥೆ.

ಯೋಜಿಸು (ಕ್ರಿ). ೧. ಹೊಂದಿಸು; ಕೂಡಿಸು. ೨. ವಿಚಾರಮಾಡು; ಎಣಿಕೆ ಹಾಕು. ೩. ಸಮ್ಮತಿಸು; ಅನುಮತಿ ಕೊಡು. ೪. ವ್ಯವಸ್ಥೆಮಾಡು.

ಯೋಧ (ನಾ). ಸೈನಿಕ; ಭಟ.

ಯೋಧನ (ನಾ). ಯುದ್ಧ; ಕಾಳಗ.

ಯೋನಿ (ನಾ). ೧. ಸ್ತ್ರೀಯರ ಜನನಾಂಗ. ೨. ಉತ್ಪತ್ತಿಸ್ಥಾನ.

ಯೋಷಿತೆ (ನಾ). ೧. ಸ್ತ್ರೀ; ಹೆಂಗಸು. ೨. ಹೆಂಡತಿ.

ಯೋಷೆ = ಯೋಷಿತೆ.

ಯೌಗಿಕ (ಗು). ಯೋಗಕ್ಕೆ ಸಂಬಂಧಿಸಿದ.

ಯೌತಕ (ನಾ). ಮದುವೆಯಲ್ಲಿ ಮದುಮಕ್ಕಳಿಗೆ ಕೊಡುವ ಬಳುವಳಿ.

ಯೌವನ (ನಾ). ತಾರುಣ್ಯ; ಹರೆಯ.

ಯೌವನಸ್ಥ = ಯೌವನಿಕ.

ಯೌವನಿ = ಯುವತಿ.

ಯೌವನಿಕ (ನಾ). ತರುಣ; ಜವ್ವನಿಗ.

ಯೌವರಾಜ್ಯ (ನಾ). ಯುವರಾಜನ ಪದವಿ, -ಅಧಿಕಾರ.



# ರ

ರ (ನಾ). ಕನ್ನಡ ವರ್ಣಮಾಲೆಯ ನಲವತ್ತೇಳನೆಯ ಅಕ್ಷರ.

ರಂಕ (ನಾ). ೧. ಬಡವ; ದರಿದ್ರ; ಕಂಗಾಲ. (ಗು). ೨. ಕೀಳಾದ; ಕ್ಷುಲ್ಲಕವಾದ. ೩. ಮಂದ; ನಿಧಾನವಾದ.

ರಂಕು (ನಾ). ಒಂದು ಜಾತಿಯ ಜಿಂಕೆ.

ರಂಕೆ (ನಾ). ಎತ್ತಿನ ಗುಟುರು, -ಡುರುಕಿ.

ರಂಗ (ನಾ). ೧. ಬಣ್ಣ. ೨. ನಾಟಕ ಮುಂತಾದ ಮನರಂಜನೆಯನ್ನು ಪ್ರದರ್ಶಿಸುವ ಸ್ಥಳ; ರಂಗಮಂಟಪ. ೩. ಯುದ್ಧಭೂಮಿ; ಕಣ. ೪. ವಿಷ್ಣು. ~ಆಜೀವ = ೧. ಬಣ್ಣದ ಕೆಲಸದಿಂದ ಜೀವಿಸುವವನು; ಬಣ್ಣಗಾರ. ೨. ನಾಟ್ಯಗಾರ; ಅಭಿನಯಕಾರ. ~(ಂ)ಪ(ಬ)ಡೆ ಬಣ್ಣವನ್ನು ಹೊಂದು. ~(ಂ)ಪು(ಬು)ಗು = ರಂಗಮಂಟಪವನ್ನು ಪ್ರವೇಶಿಸು. ~ತಾಲೀಮು = ನಾಟಕ, ನೃತ್ಯ ಮುಂತಾದುವುಗಳ ಅಭ್ಯಾಸ. ~ನಾಯಕಿ = ಲಕ್ಷ್ಮಿ. ~ಭೂಮಿ = ೧. ರಂಗಮಂಟಪ. ೨. ಯುದ್ಧಭೂಮಿ; ಕಳ. ~ಭೋಗ = ದೇವತಾಮೂರ್ತಿಗಳ ಮುಂದೆ ನಡೆಯುವ ನೃತ್ಯ. ~ಮಂಟಪ = ನಾಟಕ, ನೃತ್ಯ ಮುಂತಾದುವುಗಳನ್ನು ಪ್ರದರ್ಶಿಸುವ ಸ್ಥಳ; ರಂಗಮಂದಿರ. ~ವಲ್ಲಿ = ರಂಗವಲಿ. ~ಶಿಲ್ಪಿ = ರಂಗಸ್ಥಳದ ಕುಶಲನಾದ ಕೆಲಸಗಾರ. ~ಸ್ಥಳ = ರಂಗಮಂಟಪ.

ರಂಗವಲಿ (ನಾ). ಹಿಟ್ಟು ಮೊದಲಾದುವುಗಳಿಂದ ನೆಲದ ಮೇಲೆ ಮಾಡಿದ ಅಲಂಕಾರ; ಹಸೆ; ಕಡೆಯ.

ರಂಗವಾಲಿ = ರಂಗವಲಿ.

ರಂಗಳಿಸು (ಕ್ರಿ). ೧. ಕದಡು; ಮಿಶ್ರಮಾಡು. ೨. ಬಳಿದುಕೊಳ್ಳು.

ರಂಗಾಣಿ (ನಾ). ಮಕ್ಕಳ ಆಟಿಕೆಯ ವಸ್ತು; ಗಿಲಿಕೆ.

ರಂಗಾರಿ (ನಾ). ಬಣ್ಣಹಚ್ಚುವವನು; ಬಣ್ಣಗಾರ.

ರಂಗು (ನಾ). ೧. ಬಣ್ಣ; ವರ್ಣ. ೨. ಸೌಂದರ್ಯ; ಚೆಲುವು. ೩. ಠೀವಿ; ಜೋರು. ೪. ಕೆಂಪು ಬಣ್ಣ. ~ಅಗು = ೧. ಬಣ್ಣ ಹೆಚ್ಚಾಗು. ೨. ರೇಗು; ಕೆರಳು. ೩. ಕಳೆಯೇರು. ~ಇಸು = ೧. ಬಣ್ಣವೇರು; ಬಣ್ಣದಿಂದ ಕೂಡಿರು. ೨. ದ್ರವಿಸು; ಕರಗು. ~ಏರು = ರಂಗಾಗು; ಬಣ್ಣವೇರು. ~ಪ(ವ)ರಲ್ = ಒಂದು ಬಗೆಯ ಬೆಲೆಯುಳ್ಳ ಹರಳು; ಕೆಂಪುರತ್ನ. ~ಪಿ(ವಿ)ಡಿ = ಬಣ್ಣವನ್ನು ಹೊಂದು. ~ಮಾಣಿಕ =ರಂಗುವರಲ್.

ರಂಗೋಲಿ = ರಂಗವಲಿ.

ರಂಗೋಲೆ = ರಂಗವಲಿ.

ರಂಜಕ (ನಾ). ೧. ಒಂದು ಬಗೆಯ ಅಲೋಹ ಮೂಲಧಾತು. ೨. ಫಿರಂಗಿಮದ್ದು; ಸಿಡಿಮದ್ದು. ೩. ರಕ್ತಚಂದನ; ಶ್ರೀಗಂಧ. ೪. ಪ್ರೀತಿಸುವವನು; ನಲ್ಲ. ೫. ಸಂತೋಷ ಪಡಿಸುವವನು. (ಗು). ೬. ಚೆಲುವಾದ; ಮನೋಹರವಾದ. ೭. ಸಂತೋಷಗೊಳಿಸುವ; ಆನಂದಪಡಿಸುವ. ೮. ಬಣ್ಣ ಹಾಕಿದ.

ರಂಜಣಿಗೆ (ನಾ). ೧. ಪನ್ನೀರು, ಗಂಧ ಮುಂತಾದುವನ್ನು ತುಂಬಿಡುವ ಬಟ್ಟಲು. ೨. ದವಸ, ಧಾನ್ಯ ಮೊದಲಾದುವನ್ನು ತುಂಬುವ ಮಣ್ಣಿನ ದೊಡ್ಡ ಪಾತ್ರೆ; ಗುಡಾಣ.

ರಂಜನ (ನಾ). ೧. ಬಣ್ಣ ಹಾಕುವಿಕೆ. ೨. ಸಂತೋಷಗೊಳಿಸುವಿಕೆ. ೩. ವಿನೋದ; ಸಂತೋಷ. ೪. ಕೆಂಪುಚಂದನ.

ರಂಜನಿ (ನಾ). ನೀಲಿಯ ಬಣ್ಣವನ್ನು ತಯಾರಿಸಲು ಉಪಯೋಗಿಸುವ ಒಂದು ಜಾತಿಯ ಮರ.

ರಂಜನೆ (ನಾ). ೧. ಅಲಂಕಾರ; ಭೂಷಣ. ೨. ಸಂತೋಷ; ವಿನೋದ. ~ಪ(ವ)ಡೆ = ಮನೋಹರತೆಯನ್ನು ಹೊಂದು.

ರಂಜಲು (ನಾ). ಒಂದು ಜಾತಿಯ ಮರ ಮತ್ತು ಅದರ ಹೂವು.

ರಂಜಿಸು (ಕ್ರಿ). ೧. ಬಣ್ಣ ಹಾಕು. ೨. ಪ್ರಕಾಶಿಸು; ಹೊಳೆ; ಶೋಭಿಸು. ೩. ಉದ್ವೇಗಗೊಳ್ಳು; ಮನೋವಿಕಾರಕ್ಕೊಳಗಾಗು. ೪. ಸಂತೋಷಗೊಳ್ಳು; ಆನಂದಿಸು. ೫. ಹೊಳೆಯುವಂತೆ ಮಾಡು; ಬೆಳಗಿಸು.

ರಂಟೆ (ನಾ). ನೇಗಿಲು.

ರಂಡೆ (ನಾ). ೧. ಸೂಳೆ; ಜಾರೆ. ೨. ಗಂಡನನ್ನು ಕಳೆದುಕೊಂಡವಳು; ವಿಧವೆ. ೩. ಒಂದು ಜಾತಿಯ ಗಿಡ.

ರಂದಣಗಿತ್ತಿ (ನಾ). ಅಡುಗೆಯನ್ನು ಮಾಡುವ ಹೆಂಗಸು.

ರಂದವಣಿಗ (ನಾ). ಅಡುಗೆಯವನು; ಬಾಣಸಿಗ.

ರಂಧ್ರ (ನಾ). ೧. ಕಂಡಿ; ತೂತು; ವೆಜ್ಜ. ೨. ನ್ಯೂನತೆ; ದೋಷ. ~ಅನ್ವೇಷಣ = ತಪ್ಪುಗಳನ್ನು ಹುಡುಕುವುದು. ~ಪಾತ್ರೆ = ೧. ಹಿಂದಿನ ಕಾಲದಲ್ಲಿ ಕಾಲಗಣನೆಗೆ ಉಪಯೋಗಿಸುತ್ತಿದ್ದ ಒಂದು ಬಗೆಯ ಉಪಕರಣ; ಗಳಿಗೆಬಟ್ಟಲು. ೨. ಧಾರಾಪಾತ್ರೆ; ಗಲಂತಿಕೆ.

ರಂಧ್ರಾನ್ವೇಷಿ (ನಾ). ೧. ತಪ್ಪು ಹುಡುಕುವವನು. (ಗು). ೨. ತಪ್ಪು ಹುಡುಕುವ.

**ರಂಧ್ರಿ** (ನಾ). ರಂಧ್ರಗಳುಳ್ಳುದು; ಜರಡಿ; ಸಾರಣಿಗೆ.

**ರಂಪ** ೧. = ರಂಪು. ೨. ಚೂಪು ಹಲ್ಲುಗಳಿರುವ ಸಾಧನ; ಗರಗಸ. **~ಆಟ** = ರಂಬಾಟ.

**ರಂಪಿಗೆ** (ನಾ). ಸಮಗಾರರು ಚರ್ಮವನ್ನು ಕತ್ತರಿಸುವ ಸಾಧನ; ಚೂರಿ.

**ರಂಪು** (ನಾ). ಗದ್ದಲ; ಕೋಲಾಹಲ.

**ರಂಬಾಟ** (ನಾ). ೧. ರಂಪ; ಕೋಲಾಹಲ. ೨. ಸುಳ್ಳುದುಃಖವನ್ನು ತೋರಿಸುವುದು; ನಟನೆಯ ದುಃಖ.

**ರಂಬಿಸು** (ಕ್ರಿ). ಸಮಾಧಾನಪಡಿಸು; ಸಂತೈಸು; ರಮಿಸು.

**ರಂಬೆ** = ರೆಂಬೆ.

**ರಂಭಾಟ** = ರಂಬಾಟ.

**ರಂಭೆ** (ನಾ). ೧. ಬಾಳೆಯ ಗಿಡ. ೨. ಒಬ್ಬ ಅಪ್ಸರೆಯ ಹೆಸರು.

**ರಂಹಸ** (ನಾ). ವೇಗ; ತೀವ್ರತೆ.

**ರಕಂ** = ರಕಮು.

**ರಕಮು** (ನಾ). ೧. ತರಹ; ಬಗೆ. ೨. ನಮೂನೆ; ಮಾದರಿ. ೩. ಕಲಂ; ಬಾಬು. ೪. ಹಣ; ಮೊಬಲಗು.

**ರಕುತ** = ರಕ್ತ.

**ರಕ್ಕಸ** (ನಾ). ೧. ಅಸುರ; ರಾಕ್ಷಸ. ೨. ಕ್ರೂರಿ; ನಿರ್ದಯಿ. **~ಪ(ವ)ಗೆಯ** = ರಕ್ಕಸಬೇರ. **~ಪ(ವ)ಡೆ** = ರಾಕ್ಷಸರ ಸೈನ್ಯ, -ದಳ. **~ಬೇರ** = ರಾಕ್ಷಸರ ಹಗೆ; ವಿಷ್ಣು.

**ರಕ್ಕಸಿ** (ನಾ). ೧. ರಾಕ್ಷಸಿ; ದೈತ್ಯಸ್ತ್ರೀ. ೨. ಕ್ರೂರಳಾದವಳು.

**ರಕ್ಕೆ** ೧. = ರಕ್ಷೆ. ೨. ಜಾಗರೂಕತೆ; ಎಚ್ಚರಿಕೆ. **~ಅ(ಯಾ)ಳ್** = ಕಾವಲುಗಾರ; ಕಾಪಿನವನು. **~ಬೊ(ವೊ)ಟ್ಟು** = ರಕ್ಷೆಗಾಗಿ ಇಡುವ ತಿಲಕ. **~ಮ(ವ)ಣಿ** = ರಕ್ಷೆಗಾಗಿ ಧರಿಸುವ ಮಣಿ.

**ರಕ್ತ** (ನಾ). ೧. ನೆತ್ತರು. ೨. ಕೆಂಪುಬಣ್ಣ. ೩. ಒಂದು ಬಗೆಯ ಸುಗಂಧದ್ರವ್ಯ; ಕುಂಕುಮಕೇಸರಿ. (ಗು). ೪. ಬಣ್ಣ ಹಾಕಲ್ಪಟ್ಟ; ಬಣ್ಣದಲ್ಲಿ ಅದ್ದಿದ. ೫. ಕೆಂಪು ಬಣ್ಣದಿಂದ ಕೂಡಿದ. ೬. ಅಕ್ಕರೆಯ; ಪ್ರೀತಿಯ. **~ಅಂಗ** = ೧. ರಕ್ತವನ್ನು ಹೀರುವ ಕ್ರಿಮಿ; ತಿಗಣೆ. ೨. ಒಂದು ಜಾತಿಯ ಗಿಡ; ಕಾಂಪಿಲ್ಲ. **~ಅಂಬರ** = ೧. ಕೆಂಪುಬಣ್ಣದ ಬಟ್ಟೆ. ೨. ರಕ್ತದಲ್ಲಿ ತೊಯ್ದ ವಸ್ತ್ರ. ೩. ಕೆಂಪುಬಣ್ಣದಿಂದ ಕೂಡಿದ ಆಕಾಶ. **~ಆಶಯ** = ಹೃದಯ. **~ಉತ್ಪಲ(ಳ)** = ಕೆಂಪು ಕಮಲ. **~ಕ(ಗ)ಣ್ಣು** = ಒಂದು ಬಗೆಯ ನೇತ್ರವ್ಯಾಧಿ. **~ಕಮಲ** = ಕೆಂದಾವರೆ. **~ಕಾರು** = ೧. ರಕ್ತವನ್ನು ಕಕ್ಕು. ೨. ಕೋಪಗೊಳ್ಳು; ಸಿಟ್ಟಾಗು. **~ಕೊಡಿಗೆ** = ದೇಶಕ್ಕಾಗಿ ಪ್ರಾಣವನ್ನು ತೆತ್ತ ವೀರರಿಗೆ ಕೊಡುವ ಮಾನ್ಯದ ಭೂಮಿ; ನೆತ್ತರ ಗೊಡಗೆ. **~ಕ್ಷಯ** = ಬಿಳಿಚುರೋಗ. **~ಗತ** = ೧. ರಕ್ತದಲ್ಲಿ ಸೇರಿದ. ೨. ಸ್ವಭಾವದಲ್ಲಿ ಕೂಡಿದ. **~ಚಂದನ** = ಕೆಂಪು ಶ್ರೀಗಂಧ. **~ತುಂಡ** = ಕೆಂಪು ಕೊಕ್ಕುಳ್ಳುದು; ಗಿಣಿ. **~ಪುಚ್ಛ** = ಒಂದು ಜಾತಿಯ ಚೇಳು. **~ಬಾಂಧವ್ಯ** = ರಕ್ತಸಂಬಂಧ. **~ಮಂಡಲ** = ಒಂದು ಜಾತಿಯ ಹಾವು. **~ವರ್ಣ** = ಕೆಂಪುಬಣ್ಣ. **~ಸಂಬಂಧ** = ನಂಟಸ್ತಿಕೆ; ಬಾಂಧವ್ಯ. **~ಸಂಬಂಧಿ** = ಹತ್ತಿರದ ನಂಟ; ಬಂಧು. **~ಸ್ರಾವ** = ನೆತ್ತರು ಸುರಿಯುವಿಕೆ.

**ರಕ್ತತೆ** (ನಾ). ೧. ಕೆಂಪಾಗಿರುವಿಕೆ. ೨. ಅನುರಕ್ತನಾಗಿರುವಿಕೆ; ಆಸಕ್ತನಾಗಿರುವಿಕೆ.

**ರಕ್ತಾಕ್ಷ** (ನಾ). ೧. ಕೆಂಪಾದ ಕಣ್ಣುಗಳುಳ್ಳವನು. ೨. ಕೋಣ. (ಗು). ೩. ಕೆಂಪು ಕಣ್ಣಿನಿಂದ ಕೂಡಿದ.

ರಕ್ತಾಕ್ಷಿ (ನಾ). ೧. ಕೋಣ. ೨. ಒಂದು ಸಂವತ್ಸರದ ಹೆಸರು.

ರಕ್ತಿ (ನಾ). ಒಲವು; ಪ್ರೀತಿ.

ರಕ್ಷಕ (ನಾ). ಕಾಪಾಡುವವನು; ಪಾಲಕ.

ರಕ್ಷಣ (ನಾ). ಕಾಪಾಡುವಿಕೆ; ರಕ್ಷಿಸುವಿಕೆ.

ರಕ್ಷಣಾವಳಿ (ನಾ). ಕಾವಲುಪಡೆ; ಕಾಪಿನಸೈನ್ಯ.

ರಕ್ಷಣೀಯ (ಗು). ಕಾಪಾಡಬೇಕಾದ.

ರಕ್ಷಣೆ = ರಕ್ಷಣ.

ರಕ್ಷಾಕವಚ (ನಾ). ೧. ಕವಚ; ಚಿಲಖತ್ತು. ೨. = ರಕ್ಷಾಪತ್ರ.

ರಕ್ಷಾಪತ್ರ (ನಾ). ಪುಸ್ತಕದ ಮೇಲುಹೊದಿಕೆ; ರಟ್ಟು.

ರಕ್ಷಾಬಂಧನ (ನಾ). ಮಂಗಳಪ್ರಸಂಗಗಳಲ್ಲಿ ಮುಂಗೈಗೆ ಕಟ್ಟುವ ದಾರ.

ರಕ್ಷಾವಿಧಿ (ನಾ). ರಕ್ಷಣೆಗಾಗಿ ಮಾಡುವ ಧಾರ್ಮಿಕ ಕರ್ಮ.

ರಕ್ಷಿ = ರಕ್ಷಕ.

ರಕ್ಷೆ (ನಾ). ೧. ಕಾಪಾಡುವಿಕೆ; ಕಾಯುವಿಕೆ. ೨. ತಾಯಿತಿ; ಯಂತ್ರ. ೩. ಬೂದಿ; ಭಸ್ಮ. ~ಇಸು = ೧. ಪೊರೆ; ಕಾಪಾಡು. ೨. ಕಾಯ್ದುಕೊಂಡು ಹೋಗು.

ರಕ್ಷೋಗಣ (ನಾ). ರಾಕ್ಷಸರ ಸಮೂಹ.

ರಖಂ = ರಕಮು.

ರಗಟೆ (ನಾ). ಜರಕುಬಟ್ಟೆ; ಚಿಂದಿ.

ರಗಡು (ನಾ). ೧. ವಿಪುಲತೆ; ಯಥೇಚ್ಛವಾದುದು. (ಗು). ೨. ಅತ್ಯಧಿಕವಾದ; ವಿಪುಲವಾದ.

ರಗಳು (ಕ್ರಿ). ದುಃಖವನ್ನು ತೋಡಿಕೊಳ್ಳು.

ರಗಳೆ ೧. = ರಘಟೆ. ೨. ಒಣಮಾತು; ಕಾಡುಹರಟೆ. ೩. ಕಿರಿಕಿರಿ; ತೊಂದರೆ. ೪. ಬಗೆಹರಿಯದ ಸಮಸ್ಯೆ.

ರಘಟೆ (ನಾ). ಒಂದು ಬಗೆಯ ಪದ್ಯಜಾತಿ.

ರಚನೆ (ನಾ). ೧. ನಿರ್ಮಿಸುವುದು; ಕಟ್ಟುವುದು. ೨. ಸಿದ್ಧತೆ. ೩. ಅಲಂಕಾರ; ಶೃಂಗಾರ. ೪. ಅಚ್ಚುಕಟ್ಟು; ಓರಣ; ಅಣಿ.

ರಚಿಯಿಸು = ರಚಿಸು.

ರಚಿಸು (ಕ್ರಿ). ೧. ನಿರ್ಮಿಸು; ಕಟ್ಟು. ೨. ಸಿದ್ಧಮಾಡು; ಸಜ್ಜುಗೊಳಿಸು.

ರಚ್ಚು (ನಾ). ಹಟ; ಛಲ; ಸೇಡು.

ರಚ್ಚೆ ೧. = ರಚ್ಚು. ೨. ಮನಬಂದಂತೆ ಹರಟುವಿಕೆ. ೩. ಅರಚುವಿಕೆ. ೪. ರಂಪ; ರಗಳೆ. ೫. ಗುಟ್ಟನ್ನು ರಟ್ಟುಮಾಡುವಿಕೆ, -ಪ್ರಕಟಪಡಿಸುವಿಕೆ. ~ಕೆ(ಗೆ)ಲೆ = ಅವಾಚ್ಯ ಪದಗಳನ್ನಾಡು; ಕೆಟ್ಟಮಾತುಗಳನ್ನಾಡು. ~ಮಾಡು = ೧. ರಗಳೆ ಮಾಡು; ರಂಪ ಮಾಡು. ೨. ನಿಂದಿಸು; ದೂಷಿಸು. ೩. ಅರಚು; ಚೀರು. ~ಹಿಡಿ = ಹಟ ಹಿಡಿ; ರಂಪಮಾಡು.

ರಜ (ನಾ). ೧. ಧೂಳು; ಪುಡಿ. ೨. ಹೂವಿನಲ್ಲಿರುವ ಹುಡಿ; ಪರಾಗ. ೩. ಸಣ್ಣಕಣ; ಅಣು. ೪. ಕೆಂಪುಬಣ್ಣ. ೫. ತ್ರಿಗುಣಗಳಲ್ಲಿ ಒಂದು. ೬. ಮುಟ್ಟು; ರಜಸ್ಸು. ೭. = ರಜಾ. ~(ಂ)ಪೊ(ಬೊ)ರೆ = ೧. ಧೂಳನ್ನು ಲೇಪಿಸು. ೨. ರಜೋಗುಣವನ್ನು ಹೊಂದಿರು.

ರಜಕ (ನಾ). ಅಗಸ; ಮಡಿವಾಳ.

ರಜತ (ನಾ). ೧. ಪರಿಶುದ್ಧತೆ; ನೈರ್ಮಲ್ಯ. ೨. ಒಂದು ಬಗೆಯ ಲೋಹ; ಬೆಳ್ಳಿ. ೩. ಮುತ್ತಿನ ಹಾರ. (ಗು). ೪. ಬೆಳ್ಳಗಿನ; ಬಿಳಿಬಣ್ಣದ. ೫. ನಿರ್ಮಲವಾದ. ~ಅದ್ರಿ = ರಜತಗಿರಿ. ~ಇಂದ್ರ = ರಾತ್ರಿಯ ಅಧಿದೇವತೆ; ಚಂದ್ರ. ~ಉತ್ಸವ = ರಜತಮಹೋತ್ಸವ. ~ಗಿರಿ = ಬೆಳ್ಳಿಯ ಬೆಟ್ಟ; ಕೈಲಾಸ. ~ಮಹೋತ್ಸವ = ಸಂಘ, ಸಂಸ್ಥೆ ಮುಂತಾದುವಕ್ಕೆ ಇಪ್ಪತ್ತೈದು ವರ್ಷಗಳು ತುಂಬಿದ ಮೇಲೆ ಆಚರಿಸುವ ಹಬ್ಬ; ಬೆಳ್ಳಿಹಬ್ಬ.

ರಜನಿ (ನಾ). ೧. ರಾತ್ರಿ; ಇರುಳು. ೨. ಅರಿಸಿನ. ~ಮುಖ = ಕತ್ತಲೆಯ ಆರಂಭ ಕಾಲ; ಸಂಜೆ.

ರಜನಿಪ (ನಾ). ರಾತ್ರಿಯ ಒಡೆಯ; ಚಂದ್ರ.

ರಜನೀಕರ (ನಾ). ಚಂದ್ರ.

ರಜನೀಚರ (ನಾ). ೧. ರಾತ್ರಿಯಲ್ಲಿ ಸಂಚರಿಸುವವನು. ೨. ಚಂದ್ರ ೩. ರಾಕ್ಷಸ ೪. ಕಳ್ಳ. ೫. ಗೂಬೆ.

ರಜಸ್ವಲೆ (ನಾ). ಮುಟ್ಟಾದ ಹೆಂಗಸು; ಋತುಮತಿ.

ರಜಸ್ಸು (ನಾ). ೧. ಮಬ್ಬು; ಕಾವಳ. ೨. ಧೂಳು; ಹುಡಿ. ೩. ಹೂವಿನ ಪರಾಗ, ೪. ಮೂರುಗುಣಗಳಲ್ಲಿ ಒಂದು; ರಜೋಗುಣ. ೫. ಮುಟ್ಟು; ಋತುಸ್ರಾವ.

ರಜಾ (ನಾ). ೧. ವಿರಾಮ; ಅವಕಾಶ. ೨. ಸೂಟಿ; ಬಿಡುವು.

ರಜಾಯಿ (ನಾ). ೧. ಹಾಸುಗೆ; ಮೆತ್ತೆ; ಲೇಪು. ೨. ಮೇಲುಹೊದಿಕೆ.

ರಜೆ = ರಜಾ.

ರಜೋಗುಣ (ನಾ). ಸತ್ತ್ವ, ರಜಸ್ಸು ಮತ್ತು ತಮಸ್ಸೆಂಬ ಮೂರು ಗುಣಗಳಲ್ಲಿ ಒಂದು.

ರಜ್ಜು (ನಾ). ಹಗ್ಗ.

ರಟನ (ನಾ). ೧ ಕೂಗಾಟ; ಕಿರಿಚಾಟ. ೨. ತಿರುಗುವಿಕೆ; ಸುತ್ತಾಟ.

ರಟಿಸು (ಕ್ರಿ). ತಿರುಗು; ಸುತ್ತು.

ರಟ್ಟು (ನಾ). ೧. ದಪ್ಪನಾದ ಬಟ್ಟೆ; ಒರಟು ಅರಿವೆ. ೨. ಪುಸ್ತಕದ ಮೇಲುಹೊದಿಕೆ. ೩. ಬಯಲಾಗುದು; ಪ್ರಕಟವಾಗುದು. ೪. ಬರೆಯುವುದಕ್ಕೆ ಅನುಕೂಲವಾಗುವಂತೆ ಕಾಗದದ ಅಡಿಯಲ್ಲಿಟ್ಟುಕೊಳ್ಳುವ, ಕಾಗದದಿಂದ ಮಾಡಿದ ದಪ್ಪನೆಯ ವಸ್ತು.

ರಣ (ನಾ). ೧. ಕಾಳಗ; ಯುದ್ಧ. ೨. ಕಾಳಗದ ಕಣ; ಯುದ್ಧರಂಗ. ೩. ಕೆಟ್ಟಗ್ರಹ; ಭೂತ, ಬೆನ್ನ ಮುಂತಾದುವು. ೪. ಶಬ್ದ; ಧ್ವನಿ. ೫. ವ್ರಣ; ಗಾಯ. ~ಅಂಗಣ = ರಣಭೂಮಿ. ~ಅಜಿರ = ರಣಭೂಮಿ. ~ಉತ್ಸಾಹ = ಯುದ್ಧದ ಹುರುಪು. ~ಕಂಬ = ಜಾತ್ರೆಯಲ್ಲಿ ಪ್ರಾಣಿಗಳನ್ನು ಕಡಿಯುವುದಕ್ಕೆ ಕಟ್ಟುವ ಕಂಬ. ~ಕ(ಗ)ಲಿ = ಯುದ್ಧವೀರ. ~ಕಹಳೆ = ಯುದ್ಧವನ್ನು ಸಾರುವ ಕಹಳೆ. ~ಕೆ(ಗ)ಳ್ಳ = ಯುದ್ಧದಿಂದ ಓಡಿಹೋಗುವವನು; ಹೇಡಿ. ~ಖೇಡ = ರಣಹೇಡಿ. ~ತ(ದ)ವಕ = ಯುದ್ಧದ ಹಂಬಲ; ಯುದ್ಧಾಪೇಕ್ಷೆ. ~ತ(ದ)ವಕಿ = ಯುದ್ಧಾಪೇಕ್ಷೆಯುಳ್ಳವನು. ~ಬಿಸಿಲು = ಉರಿಬಿಸಿಲು; ತೀಕ್ಷ್ಣವಾದ ಬಿಸಿಲು. ~ಭೂಮಿ = ಯುದ್ಧಭೂಮಿ; ಕಳ. ~ಭೇರಿ = ಯುದ್ಧದ ನಗಾರಿ. ~ಮಾರಿ = ಒಂದು ಜಾತಿಯ ಪಿಶಾಚಿ. ~ರಂಗ = ರಣಭೂಮಿ. ~ರಂಪ = ಅತಿಯಾದ ಗಲಾಟೆ; ಕೋಲಾಹಲ. ~ಲಂಪಟ = ಕದನದಲ್ಲಿ ಅತ್ಯಾಸಕ್ತಿಯುಳ್ಳವನು. ~ವೈದ್ಯ = ಸಣ್ಣ ಗಾಯಗಳನ್ನು ದೊಡ್ಡದು ಮಾಡುವ ಚಿಕಿತ್ಸೆ. ~ಸನ್ನಿ = ಒಂದು ಬಗೆಯ ವಾತರೋಗ. ~ಹದ್ದು = ಒಂದು ಜಾತಿಯ ಕ್ರೂರವಾದ ಹದ್ದು; ಹಾಳಹದ್ದು. ~ಹೇಡಿ = ಯುದ್ಧಕ್ಕೆ ಹೆದರುವವನು. ~ಹೊಡೆ = ಭೂತ, ಪಿಶಾಚಿ ಮೊದಲಾದುವುಗಳಿಂದ ಬಾಧೆಗೊಳಗಾಗು.

ರಣಗುಡು (ಕ್ರಿ). ೧. ಝಳಪಿಸು; ತೀಕ್ಷ್ಣವಾಗು. ೨. ಶೂನ್ಯವಾಗು; ಭಣಗುಡು.

ರಣರಣಿಕೆ (ನಾ). ಅಗಲಿಕೆಯಿಂದುಂಟಾದ ನೋವು; ವಿರಹ; ಉತ್ಕಂಠೆ.

ರಣಿತ (ನಾ). ೧. ಧ್ವನಿ; ನಾದ. (ಗು). ೨. ಧ್ವನಿಸುವ; ಶಬ್ದಮಾಡುವ.

ರತ (ನಾ). ೧. ಸಂತೋಷ; ಆನಂದ. ೨. ಕೂಟ; ರತಿಕ್ರೀಡೆ. (ಗು).

೩. ಸಂತೋಷಗೊಂಡ. ೪. ತೃಪ್ತಿಗೊಂಡ; ತಣಿದ. ೫. ಆಸಕ್ತನಾದ; ಮಗ್ನನಾದ. ೬. ಪ್ರೀತಿಸಲ್ಪಟ್ಟ. ~ಕೇಲಿ(ಳಿ) = ಕೂಟ; ಸಂಭೋಗ.

ರತಿ (ನಾ). ೧. ಸಂತೋಷ; ಆನಂದ. ೨. ಒಲವು; ಪ್ರೀತಿ. ೩. ಸುರತ; ಸಂಭೋಗ. ೪. ಹಾತೊರೆಯುವಿಕೆ; ಹಂಬಲ. ೫. ಮನ್ಮಥನ ಹೆಂಡತಿ. ೬. ಚಂದ್ರನ ಹದಿನಾರು ಕಲೆಗಳಲ್ಲಿ ಒಂದು. ೭. ಒಂದು ತೂಕದ ಪ್ರಮಾಣ. ~ಕ್ರೀಡೆ = ಸುರತ; ಸಂಭೋಗ. ~ಪತಿ = ರತಿಪ.

ರತಿಪ (ನಾ). ರತಿಯ ಗಂಡ; ಕಾಮ.

ರತ್ನೂಡಿ (ನಾ). ಹಪ್ಪಳ, ಚಪಾತಿ ಮುಂತಾದುವನ್ನು ಲಟ್ಟಿಸುವ ಸಾಧನ; ಲಟ್ಟಣಿಗೆ.

ರತ್ನ (ನಾ). ೧. ವಜ್ರ, ಮಾಣಿಕ್ಯ ಮುಂತಾದ ಬೆಲೆಯುಳ್ಳ ಮಣಿ. ೨. ಅತ್ಯುತ್ತಮವಾದುದು; ಶ್ರೇಷ್ಠವಾದುದು. ~ಅರ್ಚಿ = ರತ್ನದ ಬೆಳಕು, -ಕಾಂತಿ. ~ಆಕರ = ರತ್ನಗಳ ಆಶ್ರಯಸ್ಥಾನ; ಸಮುದ್ರ, ಗಣಿ ಮುಂತಾದುವು. ~ಆತಪ=ರತ್ನಾರ್ಚಿ. ~ಕಂಬಲ(ಳ) = ರತ್ನಗಂಬಳಿ. ~ಕ(ಗ)ಂಬಳಿ(ಳಿ) = ಸೊಗಸಾದ ಚಿತ್ರಗಳನ್ನು ನೆಯ್ದಿರುವ ಬೆಲೆಬಾಳುವ ಕಂಬಳಿ. ~ಕನ್ನಡಿ = ರತ್ನದಿಂದ ಮಾಡಿದ ಕನ್ನಡಿ, -ಮುಕುರ. ~ಖಚಿತ = ಬೆಲೆಯುಳ್ಳ ಮಣಿಗಳನ್ನು ಕುಂದಣಿಸಿದ. ~ಗರ್ಭ = ೧. ರತ್ನಗಳನ್ನು ಹೊಂದಿರುವುದು; ಭೂಮಿ, ಸಮುದ್ರ ಮುಂತಾದುವು. ೨. ಕುಬೇರ. ~ತ್ರಯ = ೧. ಸಮ್ಯಗ್ದರ್ಶನ, ಸಮ್ಯಗ್ಜ್ಞಾನ, ಸಮ್ಯಗ್ಚಾರಿತ್ರ್ಯ ಎಂಬ ಮೂರು ತತ್ತ್ವಗಳು. ೨. ಪಂಪ, ಪೊನ್ನ, ರನ್ನರೆಂಬ ಕನ್ನಡದ ಮೂವರು ಶ್ರೇಷ್ಠಕವಿಗಳು. ~ಪಡಿ = ರತ್ನಖಚಿತವಾದ ವಸ್ತು. ~ಸಂಬಳಿಗೆ=ರತ್ನದಿಂದ ಮಾಡಿದ ಭರಣಿ.

ರತ್ನಿ (ನಾ). ಒಂದು ಅಳತೆ; ಮೊಳಕೈಯಿಂದ ಮುಚ್ಚಿದ ಅಂಗೈವರೆಗಿನ ಅಳತೆ.

ರಥ (ನಾ). ತೇರು; ಸ್ಯಂದನ. ~ಅಂಗ = ೧. ರಥದ ಯಾವುದಾದರೂ ಒಂದು ಭಾಗ. ೨. ರಥದ ಚಕ್ರ. ೩. ಚಕ್ರಾಯುಧ; ಸುದರ್ಶನಚಕ್ರ. ೪. ಚಕ್ರವಾಕ ಪಕ್ಷಿ; ಜಕ್ಕವಕ್ಕಿ. ~ಉತ್ಸವ=ದೇವರನ್ನು ರಥದಲ್ಲಿ ಕೂರಿಸಿ ಮಾಡುವ ಮೆರವಣಿಗೆ. ~ಗುಪ್ತಿ = ರಥದ ರಕ್ಷಣೆಗಾಗಿ ಸುತ್ತಲೂ ಹಾಕಿದ ಮರದ ಅಥವಾ ಕಬ್ಬಿಣದ ಕಟಾಂಜನ. ~ಚೋದಕ = ರಥವನ್ನು ನಡಸುವವನು; ಸಾರಥಿ. ~ನೇಮಿ = ರಥದ ಚಕ್ರದ ಹೊರಸುತ್ತು. ~ಸಪ್ತಮಿ = ಮಾಘ ಶುದ್ಧ ಸಪ್ತಮಿ ಮತ್ತು ಆದಿನ ಆಚರಿಸುವ ಹಬ್ಬ.

ರಥಕಾರ (ನಾ). ೧. ಸಾರಥಿ. ೨. ರಥವನ್ನು ರಚಿಸುವವನು.

ರಥಿ (ನಾ). ರಥದಲ್ಲಿ ಕುಳಿತು ಯುದ್ಧಮಾಡುವವನು.

ರಥಿಕ = ರಥಿ.

ರಥಿನಿ (ನಾ). ಸೈನ್ಯ; ದಂಡು.

ರಥ್ಯ (ನಾ). ರಥಕ್ಕೆ ಹೂಡಿದ ಕುದುರೆ.

ರಥ್ಯೆ (ನಾ). ೧. ರಥಗಳು ಹೋಗುವ ದಾರಿ; ರಾಜಬೀದಿ ೨. ರಥಗಳ ಸಮೂಹ.

ರದ (ನಾ). ೧. ಹಲ್ಲು; ದಂತ. ೨. ಆನೆಯ ದಾಡೆ; ಕೋರೆ. ~ಛ(ಚ್ಛ)ದ = ತುಟಿ; ಅಧರ.

ರದನ = ರದ.

ರದನಿ (ನಾ). ಕೋರೆಗಳನ್ನುಳ್ಳುದು; ಆನೆ.

ರದ್ದಿ (ಗು). ೧. ನಿರುಪಯುಕ್ತವಾದ; ಕೆಲಸಕ್ಕೆ ಬಾರದ. ೨. ಒರಟಾದ. ~ಕಾಗದ = ಒರಟು ಕಾಗದ; ಕತ್ತಿ ಕಾಗದ.

ರದ್ದು (ನಾ). ತೆಗೆದು ಹಾಕುವಿಕೆ; ವಜಾ ಮಾಡುವಿಕೆ. ~ಮಾಡು = ಇಲ್ಲದಂತೆ ಮಾಡು; ತೆಗೆದುಹಾಕು.

ರನ್ನ = ರತ್ನ. ~ಕ(ಗ)ಟ್ಟೆ = ೧. ರತ್ನಗಳನ್ನು ಮಾರುವ ಸ್ಥಳ. ೨. ರತ್ನಗಳನ್ನು ಖಚಿತಗೊಳಿಸಿ ಮಾಡಿದ ಪಾತಿಯ ಸುತ್ತ ಕಟ್ಟಿದ ಕಟ್ಟೆ. ~ಕ(ಗ)ರು = ರತ್ನದಿಂದ ಎರಕಹಾಕಿ ಮಾಡಿದ ಗೊಂಬೆ. ~ತೆ(ದೆ)ನೆ = ರತ್ನಖಚಿತವಾದ ಕೋಟೆಯ ತೆನೆ. ~ತೊ(ದೊ)ಡವು = ರನ್ನವಚ್ಚ. ~ಪ(ವ)ಚ್ಚ = ರತ್ನದಿಂದ ಮಾಡಿದ ಅಭರಣ. ~ಪ(ವ)ರದ = ರತ್ನಗಳನ್ನು ಮಾರುವವನು ; ರತ್ನಪಡಿವ್ಯಾಪಾರಿ. ~ಪ(ವ)ಸರ = ರತ್ನಗಳನ್ನು ಮಾರುವ ಅಂಗಡಿ. ~ಬ(ವ)ಸಿಱ್(ರ್) = ರತ್ನಗಳನ್ನು ಒಳಗೊಂಡಿರುವುದು ; ಭೂಮಿ.

ರಪಣ (ನಾ). ೧. ಐಶ್ವರ್ಯ ; ಆಸ್ತಿ. ೨. ಜೂಜಿನಲ್ಲಿ ಒಡ್ಡುವ ಪಣ. ೩. ಸಾಮರ್ಥ್ಯ.

ರಪಾಟ (ನಾ). ಜೋರಾದ ನಡಗೆ ; ಓಟ.

ರಪಾಟೆ = ರಪಾಟ.

ರಪ್ಪು (ನಾ). ಬಟ್ಟೆಯಲ್ಲಿ ತೂತುಬಿದ್ದ ಭಾಗವನ್ನು ದಾರದಿಂದ ಹೊಲಿಯುವಿಕೆ.

ರಫ್ತು (ನಾ). ಒಂದು ಪ್ರದೇಶದಿಂದ ಹೊರಗೆ ಕಳುಹಿಸುವ ವಸ್ತು ; ನಿರ್ಯಾತ.

ರಬ್ಬಳಿಕೆ (ನಾ). ಜೋಳದ ನುಚ್ಚಿನಿಂದ ಮಾಡಿದ ಅಂಬಲಿ ; ದೊಗ್ಗ.

ರಬ್ಬಳಿಗೆ = ರಬ್ಬಳಿಕೆ.

ರಬ್ಬು (ನಾ). ಆಡಂಬರ ; ವೈಭವ.

ರಭಸ (ನಾ). ೧. ವೇಗ ; ಜೋರು ; ಆವೇಶ. ೨. ಸಿಟ್ಟು ; ಕೋಪ. ೩. ಅರ್ಭಟ ; ಗರ್ಜನೆ.

ರಮು (ನಾ). ಇನಿಯ ; ಪ್ರಿಯ.

ರಮುಡೋಲು (ನಾ). ದೊಡ್ಡ ನಗಾರಿ.

ರಮಣ (ನಾ). ೧. ಮನೋಹರವಾದುದು ; ರಮಣೀಯವಾದುದು. ೨. ಪತಿ ; ಗಂಡ. ೩. ನಲ್ಲ ; ಪ್ರಿಯಕರ. ೪. ಆನಂದ ; ನಲಿವು. ೫. ಕಾಮ ; ಮನ್ಮಥ. ೬. ಕತ್ತೆ.

ರಮಣಿ (ನಾ). ೧. ಸುಂದರಳಾದ ಹೆಂಗಸು ; ಚೆಲುವೆ. ೨. ಹೆಂಡತಿ ; ಸತಿ. ೩. ನಲ್ಲೆ ; ಕಾದಲೆ. ೪. ಹೆಂಗಸು ; ಸ್ತ್ರೀ.

ರಮಣೀಯ (ಗು). ಚೆಲುವಾದ ; ಸುಂದರವಾದ.

ರಮಾಧವ (ನಾ). ಲಕ್ಷ್ಮಿಯ ಪತಿ ; ವಿಷ್ಣು.

ರಮಿಯಿಸು (ಕ್ರಿ). ಸಂಭೋಗಿಸು.

ರಮಿಸು (ಕ್ರಿ). ೧. ಸಂತೋಷಿಸು ; ಆನಂದಪಡು. ೨. ಆಡು ; ವಿಹರಿಸು. ೩. = ರಮಿಯಿಸು. ೪. ಸಂತೈಸು; ಸಮಾಧಾನಮಾಡು.

ರಮೆ (ನಾ). ೧. ಹೆಂಡತಿ ; ಸತಿ. ೨. ಹೆಂಗಸು; ಸ್ತ್ರೀ. ೩. ಲಕ್ಷ್ಮಿ. ೪. ಸಂಪತ್ತು; ಐಶ್ವರ್ಯ.

ರಮ್ಯ = ರಮಣೀಯ.

ರಮ್ಯತೆ (ನಾ). ಚೆಲುವು ; ಸೌಂದರ್ಯ. ~ಪ(ವ)ಡೆ = ಚೆಲುವನ್ನು ಪಡೆ ; ಸೊಗಸಾಗು.

ರಯ (ನಾ). ೧. ನೀರಿನ ಓಟ ; ಪ್ರವಾಹ. ೨. ರಭಸ ; ವೇಗ. ~ಪತಿ = ರಯುಗ.

ರಯುಗ (ನಾ). ಗಾಳಿ ; ವಾಯು. ~ಸಖ = ಅಗ್ನಿ ; ಬೆಂಕಿ.

ರಯಿಸು (ಕ್ರಿ). ೧. ನಾದತುಂಬು ; ಧ್ವನಿಮಾಡು. ೨. ಚೆಲುವಾಗು ; ಶೋಭಿಸು ; ಹೊಳೆ.

ರಯ್ಯ =ರಮ್ಯ. ~(ಂ)ಆಗು = ಚೆಲುವಾಗು ; ಮನೋಹರವಾಗು.

ರಲ್ಲಕ (ನಾ). ೧. ಉಣ್ಣೆಯ ಬಟ್ಟೆ. ೨. ಕಣ್ಣಿನ ರೆಪ್ಪೆಗೂದಲು.

ರವ (ನಾ). ೧. ಧ್ವನಿ ; ಶಬ್ದ. ೨. ಕೂಗು ; ಗರ್ಜನೆ. ~ಇಸು = ರವಂಗುಡು. ~(ಂ)ಕು(ಗು)ಡು = ಧ್ವನಿಸು ; ಶಬ್ದಮಾಡು. ~ಕು(ಗು)ಟ್ಟು = ರವಂಗುಡು.

ರವಡಿ (ನಾ). ಕೆಸರು ; ರಾಡಿ.

ರವಣ (ನಾ). ೧. ಕೂಗುವಿಕೆ ; ಒರಲುವಿಕೆ. ೨. ಪರಿಹಾಸ್ಯ ; ವಿನೋದ. ೩. ಕೋಗಿಲೆ.

೪. ಒಂಟೆ. ೫. ಜೂಜಿನಲ್ಲಿ ಒಡ್ಡುವ ಪಣ. (ಗು). ೬. ಚಪಲ; ಸ್ಥಿರವಲ್ಲದ. ೭. ಹರಿತವಾದ; ತೀಕ್ಷ್ಣವಾದ.

ರವಣಿ (ನಾ). ಯುದ್ಧೋತ್ಸಾಹ; ಕಾದಾಡುವ ಹುಮ್ಮಸ್ಸು.

ರವಣೆ ೧. = ರವಣಿ. ೨. ಶಬ್ದ; ಧ್ವನಿ.

ರವದಿ (ನಾ). ಒಣಗಿದ ಜೋಳ, ಸಜ್ಜೆ ಮೊದಲಾದ ಸೊಪ್ಪೆ.

ರವದೆ = ರವದಿ.

ರವಷ್ಟು (ನಾ). ಸ್ವಲ್ಪ; ಕೊಂಚ.

ರವಳಿ (ನಾ). ಅರಚುವಿಕೆ; ಬೊಬ್ಬೆ. ~ಇಸು = ಅರಚು; ಚೀರು.

ರವಳಿಗೆ (ನಾ). ಬಿದಿರಿನಿಂದ ಮಾಡಿದ ಸಣ್ಣ ಬುಟ್ಟಿ.

ರವಾನೆ (ನಾ). ೧. ಕಳುಹಿಸುವಿಕೆ; ಸಾಗಾಣಿಕೆ. ೨. ರಹದಾರಿ; ಅಪ್ಪಣೆಚೀಟಿ. ~ಇಸು = (ಸರಕು ಮುಂತಾದುವನ್ನು) ಕಳುಹಿಸು, -ಸಾಗಿಸು. ~ದಾರ = ಸರಕನ್ನು ಕಳುಹಿಸುವವನು.

ರವಿ (ನಾ). ೧. ನೇಸರು; ಸೂರ್ಯ. ೨. ಪರ್ವತ; ಬೆಟ್ಟ. ೩. ಸಂಪತ್ತು; ಐಶ್ವರ್ಯ. ~ಕಾಂತ = ಒಂದು ಬಗೆಯ ಸ್ಫಟಿಕಶಿಲೆ; ಸೂರ್ಯಕಾಂತಶಿಲೆ. ~ಕುಮಾರ = ೧. ಕರ್ಣ. ೨. ಸುಗ್ರೀವ. ೩. ಯಮ. ೪. ಶನಿ. ~ಕುಲ = ರಘುವಂಶ. ~ವಾರ = ಭಾನುವಾರ. ~ಸಿದ್ಧಾಂತ = ಜ್ಯೋತಿಶ್ಶಾಸ್ತ್ರ. ~ಸುತೆ = ಯಮುನೆ.

ರವೆ (ನಾ). ೧. ಸಣ್ಣ ಹರಳು; ಕಣ; ಚೂರು. ೨. ಗೋಧಿ ಮೊದಲಾದ ಧಾನ್ಯಗಳನ್ನು ಸಣ್ಣದಾಗಿ ಒಡೆದು ಮಾಡಿದುದು; ನುಚ್ಚು. ೩. ಬಂದೂಕಕ್ಕೆ ಹಾಕುವ ಸಣ್ಣ ಚೂರು; ಚರೆ. ೪. ಕಣದಷ್ಟು ಪ್ರಮಾಣವುಳ್ಳುದು; ತೀರಸ್ವಲ್ಪ. ~ಉ(ವು)ಂಡೆ = ರವೆ ಮತ್ತು ಸಕ್ಕರೆಗಳಿಂದ ಮಾಡಿದ ಸಿಹಿತಿಂಡಿ. ~ಕು(ಗು)ಂದು = ಸ್ವಲ್ಪ ಕೊರತೆಯಾಗು, -ಊನವಾಗು.

ರವೆಯು (ನಾ). ಚಿನ್ನದ ಎಳೆ, -ತಂತಿ.

ರಶನೆ (ನಾ). ೧. ಹಗ್ಗ. ೨. ಡಾಬು; ಒಡ್ಯಾಣ; ಉಡೆನೂಲು.

ರಶೀತಿ (ನಾ). ಸಲಿಕೆಯ ಚೀಟಿ; ಪಾವತಿಪತ್ರ.

ರಶೀದಿ = ರಶೀತಿ.

ರಶ್ಮಿ (ನಾ). ೧. ಕಿರಣ; ಕದಿರು. ೨. ದೀಪ್ತಿ; ಬೆಳಕು. ೩. ಕಡಿವಾಣ; ಲಗಾಮು. ೪. ರೆಪ್ಪೆಯ ಕೂದಲು. ~ಪುಂಜ = ಕಾಂತಿಯ ಸಮೂಹ. ~ವಿಕ್ಷೇಪ = ಕಿರಣಗಳನ್ನು ಪಸರಿಸುವಿಕೆ.

ರಸ (ನಾ). ೧. ಕಾಯಿಪಲ್ಲೆ ಅಥವಾ ಹಣ್ಣುಗಳ ಸಾರ, -ದ್ರವ. ೨. ಯಾವುದಾದರೊಂದು ವಸ್ತುವಿನ ಪ್ರಮುಖ ಅಂಶ; ಸತ್ತ್ವ; ತಿರುಳು. ೩. ನೀರು, ಹಾಲು, ಜೇನು ಮುಂತಾದ ದ್ರವಪದಾರ್ಥ. ೪. ಅಮೃತ. ೫. ಲೋಹ; ಖನಿಜ. ೬. ಪಾದರಸ; ಪಾರಜ. ೭. ವಿಷ. ೮. ಒಂದು ಬಗೆಯ ಗೋಂದು; ರಾಳ. ೯. ದೇಹದಲ್ಲಿ ಹರಿಯುವ ಸಪ್ತಧಾತುಗಳಲ್ಲಿ ಒಂದು. ೧೦. ರುಚಿ. ೧೧. ಕಾವ್ಯಶೋಭೆಗೆ ಕಾರಣ ಮಾಡುದು; ಕಾವ್ಯಸತ್ತ್ವ. ~ಅನುಭವ = ರಸಗಳಿಂದುಂಟಾದ ಅನುಭವ; ಆನಂದದ ಅನುಭವ. ~ಆಭಾಸ = ವಿರುದ್ಧ ರಸಗಳು ಕೂಡಿಕೊಳ್ಳುವುದು. ~ಆರ್ದ್ರ = ರಸದಿಂದ ತುಂಬಿದ. ~ಆವಿಷ್ಟ = ರಸದಲ್ಲಿ ತತ್ಪರನಾದವನು. ~ಆಸ್ವಾದನೆ = ರಸಾನುಭವ. ~ಇಕ್ಷು = ಕಬ್ಬಿನಲ್ಲಿ ಒಂದು ಜಾತಿ; ರಸದಾಳಿ. ~ಉಕ್ತಿ = ರಸವತ್ತಾದ ಮಾತು. ~ಋಷಿ=ರಸಾನುಭವವನ್ನುಂಟು ಮಾಡುವ ಕವಿ. ~(ಂ)ಕೊ(ಗೊ)ಳ್ = ಸಾರವನ್ನು ಹಸೆ. ~ಕವಳ = ಭರ್ಜರಿಯಾದ ಊಟ; ರಸವತ್ತಾದ ಭೋಜನ.

~ಕೆ(ಗೆ)ಡು = ಸತ್ತ್ವಗೆಡು ; ತಿರುಳಿಲ್ಲವಾಗು. ~ಗ್ರಹಣ = ಸಾರವನ್ನು ಗ್ರಹಿಸುವಿಕೆ. ~ತಂತ್ರ = ಕ್ಷುದ್ರ ಲೋಹಗಳನ್ನು ಚಿನ್ನವನ್ನಾಗಿ ಮಾರ್ಪಡಿಸುವ ಕಲೆ. ~ದಾನ = ೧. ಆನಂದದ ಅನುಭವವನ್ನು ಕೊಡುವುದು. ೨. ವಿಷ ಹಾಕುವುದು ; ಮದ್ದು ಹಾಕುವುದು. ~ಧಾನ್ಯ = ಎಳ್ಳು, ಕಡಲೆಕಾಯಿ ಮೊದಲಾದ ಎಣ್ಣೆ ಬೀಜಗಳು. ~ನಿಮಿಷ = ಆನಂದದ ಸಮಯ. ~ಬಾ(ವಾ)ಳೆ = ಬಾಳೆಯಲ್ಲಿ ಒಂದು ಜಾತಿ; ಶ್ರೇಷ್ಠವಾದ ಬಾಳೆ. ~ಬುರುಡೆ = ದುಂಡನೆಯ ಬಣ್ಣದ ವಸ್ತು ; ಗುಳೋಪು ; ರಸದ ಗುಂಡು. ~ಭಂಗ = ಆನಂದಾನುಭವಕ್ಕೆ ಅಡ್ಡಿ. ~ಮಟ್ಟ = ಪಾದರಸವುಳ್ಳ, ಸಮತಳವನ್ನು ಪರೀಕ್ಷಿಸಲು ಬಳಸುವ ಒಂದು ಉಪಕರಣ. ~ರಸಾಯನ = ಸವಿಯಾದ ಉಣಿಸು ; ರುಚಿಕರವಾದ ಆಹಾರ. ~ವಾದ = ರಸತಂತ್ರ. ~ವಿದ್ಯೆ = ರಸತಂತ್ರ. ~ಸಿದ್ಧ = ರಸವಾದಿ. ~ಸಿದ್ಧಿ = ರಸತಂತ್ರ. ~ಸ್ಪರ್ಶ = ಆನಂದಾನುಭವ.

ರಸಕಸಿ (ನಾ). ತಿಕ್ಕಾಟ ; ಘರ್ಷಣೆ.

ರಸಗುಲ್ಲ (ನಾ). ಒಂದು ಬಗೆಯ ಸಿಹಿತಿಂಡಿ.

ರಸಜ್ಞ (ನಾ). ೧. ರಸಗಳನ್ನು ಬಲ್ಲವನು ; ರಸಿಕ. ೨. ವೈದ್ಯ. ೩. = ರಸವಾದಿ.

ರಸಜ್ಞೆ (ನಾ). ೧. ರುಚಿಯನ್ನು ಗ್ರಹಿಸುವ ಇಂದ್ರಿಯ; ನಾಲಗೆ. ೨. ರಸಿಕಳಾದ ಹೆಂಗಸು.

ರಸದಾಳಿ (ನಾ). ಕಬ್ಬಿನಲ್ಲಿ ಒಂದು ಜಾತಿ.

ರಸನ ೧. = ರಸನೆ. ೨. ರುಚಿ ನೋಡುವಿಕೆ ೩. ಕೂಗು ; ಬೊಬ್ಬೆ. ~ಕೆ(ಗೆ)ಡು = ರುಚಿಯಿಲ್ಲವಾಗು; ಅರುಚಿಯುಂಟಾಗು.

ರಸನೆ (ನಾ). ನಾಲಗೆ ; ಜಿಹ್ವೆ.

ರಸವಾದಿ (ನಾ). ಕ್ಷುದ್ರಲೋಹಗಳನ್ನು ಚಿನ್ನವನ್ನಾಗಿ ಮಾರ್ಪಡಿಸುವವನು ; ರಸತಂತ್ರಜ್ಞ.

ರಸಾತಲ(ಳ) (ನಾ). ೧. ಭೂಮಿಯ ಕೆಳಗಿರುವ ಲೋಕಗಳಲ್ಲಿ ಒಂದು. ೨. ಭೂಮಿಯ ಮೇಲ್ಭಾಗ.

ರಸಾಯನ (ನಾ). ೧. ರುಚಿಕರವಾದುದು ; ಸವಿಯಾದುದು. ೨. ರಸದಿಂದ ಕೂಡಿದುದು. ೩. ಬಾಳೆಹಣ್ಣಿನಿಂದ ಮಾಡಿದ ಖಾದ್ಯ. ೪. ಮಧುರವಾದ ಪೇಯ. ೫. = ರಸತಂತ್ರ. ~ವಿಜ್ಞಾನ = ಮೂಲಧಾತುಗಳು ಮತ್ತು ಅವುಗಳಿಗೆ ಸಂಬಂಧಿಸಿದ ವಿಷಯಗಳನ್ನು ತಿಳಿಸುವ ಶಾಸ್ತ್ರ ; ಕೆಮಿಸ್ಟ್ರಿ. ~ಶಾಸ್ತ್ರ = ರಸಾಯನವಿಜ್ಞಾನ.

ರಸಾರುಹ (ನಾ). ಭೂಮಿಯಲ್ಲಿ ಹುಟ್ಟಿದುದು; ಮರ, ಗಿಡ ಮುಂತಾದುವು.

ರಸಾಲ(ಳ) (ನಾ). ೧. ಮಾವು. ೨. = ರಸದಾಳಿ.

ರಸಿಕ (ನಾ). ೧. ರಸಗಳನ್ನು ಬಲ್ಲವನು ; ರಸಜ್ಞ. ೨. ವ್ಯಭಿಚಾರಿ ; ವಿಷಯಲಂಪಟ. ೩. ಮರ್ಮ ; ರಹಸ್ಯ. (ಗು). ೪. ಸವಿಯಾದ ; ರುಚಿಯಾದ. ೫. ವಿಲಾಸದಿಂದ ಕೂಡಿದ ; ವಿನೋದವಾದ.

ರಸಿಕತೆ (ನಾ). ವಿಲಾಸಪ್ರಿಯತೆ ; ಸರಸವಾಗಿರುವಿಕೆ.

ರಸಿಕೆ (ನಾ). ೧. ಕೀವು. ೨. ಸಿಡುಬಿನ ಹಾಲು; ಲಸಿಕೆ.

ರಸಿಗೆ = ರಸಿಕೆ.

ರಸಿತ (ನಾ). ೧. ಗಲಾಟೆ ; ಗೊಂದಲ. (ಗು). ೨. ಸವಿದ ; ರುಚಿ ನೋಡಿದ. ೩. ಲೇಪಿಸಿದ; ಬಳಿದ. ೪. ಧ್ವನಿಮಾಡಿದ ; ಘೋಷಿಸಿದ.

ರಸೀತಿ = ರಶೀತಿ.

ರಸೀದಿ = ರಶೀತಿ.

ರಸೆ (ನಾ). ೧. ನೆಲ ; ಭೂಮಿ. ೨. ಪಾತಾಳಲೋಕ. ೩. ಒಂದು ಜಾತಿಯ ಗಿಡ ; ತಮಕಿನ ಗಿಡ.

ರಸ್ತು (ನಾ). ಸೈನ್ಯಕ್ಕಾಗಿ ಶೇಖರಿಸಿದ ದವಸ ಮುಂತಾದುದು.

ರಸ್ತೆ (ನಾ). ಹಾದಿ ; ಮಾರ್ಗ.
ರಸ್ಯ (ಗು). ರಸಭರಿತವಾದ ; ಸವಿಯಾದ.
ರಹ (ನಾ). ೧. ಸೋಜಿಗ ; ಆಶ್ಚರ್ಯ. ೨. ಗುಟ್ಟು ; ರಹಸ್ಯ. ೩. ಅವಕಾಶ ; ಆಸ್ಪದ. ೪. ರೀತಿ ; ಪ್ರಕಾರ.
ರಹಣ (ನಾ). ಬಿಟ್ಟುಹೋಗುವುದು ; ತ್ಯಜಿಸುವುದು.
ರಹಣಿ (ನಾ). ೧. ಹೊಂದಾಣಿಕೆ ; ಸಂಬಂಧ. ೨. ರೀತಿ ; ಕ್ರಮ.
ರಹದಾರಿ (ನಾ). ೧. ದೊಡ್ಡರಸ್ತೆ ; ರಾಜಮಾರ್ಗ. ೨. ಒಪ್ಪಿಗೆಪತ್ರ ; ಅಪ್ಪಣೆಚೀಟಿ. ~ಚೀಟು = ಅಪ್ಪಣೆಯ ಚೀಟಿ.
ರಹರತ (ನಾ). ಏಕಾಂತ.
ರಹಸ್ಯ (ನಾ). ೧. ಗುಟ್ಟು ; ಗೌಪ್ಯ. (ಗು) ೨. ಮುಚ್ಚಿಡಬೇಕಾದ ; ಗುಟ್ಟಾದ
ರಹಿ (ನಾ). ೧. ರೀತಿ; ಪ್ರಕಾರ. ೨. ವೈಭವ; ಆಡಂಬರ.
ರಹಿತ (ಗು). ಬಿಟ್ಟ ; ವಿಸರ್ಜಿಸಲ್ಪಟ್ಟ.
ರಾಕಟೆ = ರಾಗಟೆ.
ರಾಕಡಿ = ರಾಗಟೆ.
ರಾಕೆ (ನಾ). ೧. ಹದಿನಾರು ಕಲೆಗಳಿಂದ ಕೂಡಿದ ಪೌರ್ಣಮಿ ; ತುಂಬುಹುಣ್ಣಿಮೆ. ೨. ಮೈನೆರೆದ ಹುಡುಗಿ.
ರಾಕೇಂದು (ನಾ). ಹುಣ್ಣಿಮೆಯ ಚಂದ್ರ ; ಪೂರ್ಣಚಂದ್ರ.
ರಾಕ್ಷಸ (ನಾ). ೧ ದೈತ್ಯ; ರಕ್ಕಸ. ೨. ಅರುವತ್ತು ಸಂವತ್ಸರಗಳಲ್ಲಿ ಒಂದು. (ಗು). ೩. ಭಯಂಕರವಾದ ; ಭೀತಿಯನ್ನುಂಟುಮಾಡುವ. ~ಅಂತಕ= ರಾಕ್ಷಸರಿಗೆ ಯಮಸ್ವರೂಪನಾದವನು ; ವಿಷ್ಣು. ~ಅಧಿಪ =೧. ಯಕ್ಷರ ಒಡೆಯ ; ಕುಬೇರ. ೨. ರಾಕ್ಷಸರ ಒಡೆಯ ; ರಾವಣ. ~ಅರಿ =ರಾಕ್ಷಸರ ಹಗೆ; ವಿಷ್ಣು. ~ಕೃತ್ಯ=ಘೋರವಾದ ಕೆಲಸ. ~ವಿವಾಹ= ಹದಿನೆಂಟು ಬಗೆಯ ವಿವಾಹ ಪದ್ಧತಿಗಳಲ್ಲಿ ಒಂದು ; ಕನ್ಯೆಯನ್ನು ಕದ್ದೊಯ್ದು ಮಾಡಿಕೊಳ್ಳುವ ವಿವಾಹ.
ರಾಕ್ಷಸಿ (ನಾ). ೧. ದೈತ್ಯಕುಲದಲ್ಲಿ ಹುಟ್ಟಿದವಳು ; ರಕ್ಕಸಿ. ೨. ಒಂದು ಬಗೆಯ ಸುವಾಸನೆಯ ದ್ರವ್ಯ.
ರಾಖಿ (ನಾ). ಮಂಗಳ ಪ್ರಸಂಗಗಳಲ್ಲಿ ಕೈಗೆ ಕಟ್ಟುವ ದಾರ; ರಕ್ಷಾಬಂಧ.
ರಾಗ (ನಾ). ೧. ಬಣ್ಣ ; ರಂಗು. ೨. ಕೆಂಪು ಬಣ್ಣ. ೩. ಪ್ರೀತಿ ; ಒಲವು ; ಆಸಕ್ತಿ. ೪. ಸಂತೋಷ ; ಆನಂದ. ೫. ಕೋಪ ; ಸಿಟ್ಟು. ೬. ಚೆಲುವು; ಸೊಗಸು. ೭. ಹಾಡಿನ ಧಾಟಿ; ಮಟ್ಟು. ~ಆಲಾಪ=ರಾಗವಿಸ್ತಾರ ನಿರೂಪಣೆ. ~ಆವಿಲ(ಳ) =೧. ಅತ್ಯಾಸೆಯಿಂದ ಕೊಳಕಾದುದು ; ಮನೋವಿಕಾರದಿಂದ ಕೂಡಿದುದು. ೨. ಮನೋವಿಕಾರದಿಂದ ಕೂಡಿದ. ~ಇಸು = ೧. ಬಣ್ಣವೇರು; ಹೊಳೆ. ೨. ಬಣ್ಣವೇರಿಸು; ಹೊಳೆಯುವಂತೆ ಮಾಡು. ೩. ಪ್ರೀತಿಸು ; ಒಲವುದೋರು. ~(ಂ)ಕೆ(ಗೆ)ಡು = ಆಸಕ್ತಿಯನ್ನು ಕಳೆದುಕೊಳ್ಳು. ~(ಂ)ಪೆ(ಬೆ)ಱು(ರು) = ಪ್ರೀತಿಯನ್ನು ಹೊಂದು. ~ತೆಗೆ =೧. ವಿರುದ್ಧವಾಗಿ ಹೇಳು ; ಅಪಶ್ರುತಿ ತೆಗೆ. ೨. ಅಳು. ~ಪಿ(ವಿ)ಡಿ = ಬಣ್ಣವೇರು ; ಶೋಭಿಸು.
ರಾಗಟೆ (ನಾ). ಹೆಂಗಸರು ತಲೆಗೆ ಹಾಕಿಕೊಳ್ಳುವ ಒಂದು ಬಗೆಯ ಆಭರಣ.
ರಾಗಿ(ನಾ). ೧. ಒಂದು ಬಗೆಯ ಧಾನ್ಯ. ೨. ಕೆಂಪು ಬಣ್ಣದಿಂದ ಕೂಡಿದುದು. ೩. ಪ್ರೇಮಿ ; ಕಾದಲ. ~ಹಿಟ್ಟು= ೧. ರಾಗಿಯನ್ನು ಬೀಸಿ ಮಾಡಿದುದು. ೨. ರಾಗಿಯ ಹಿಟ್ಟನ್ನು ಬೇಯಿಸಿ ಮಾಡಿದ ಆಹಾರ ; ರಾಗಿಮುದ್ದೆ.
ರಾಗಿಣಿ (ನಾ). ೧. ಅನುರಾಗವುಳ್ಳವಳು ; ಪ್ರಣಯಿನಿ. ೨. ಉತ್ತರಾದಿಸಂಗೀತದಲ್ಲಿ ಬರುವ ಜನ್ಯರಾಗ.

ರಾಘೆ (ನಾ). ತೊಡೆ; ಊರು.

ರಾಚು (ಕ್ರಿ). ೧. ಹೊಡೆ; ಬಡಿ. ೨. ಎರಚು; ಚೆಲ್ಲು. ೩. ಚಾಚು; ಹರಡು.

ರಾಜ (ನಾ). ೧. ದೊರೆ; ಅರಸು. ೨. ಕ್ಷತ್ರಿಯ. ೩. ಚಂದ್ರ; ಶಶಿ. ೪. ಯತಿ; ಸಂಯಮಿ. ೫. ಮನೆ; ಆವಾಸ. ೬. ಮುಖ್ಯವಾದುದು. (ಗು). ೭. ಶ್ರೇಷ್ಠವಾದ. ~ಅಧಿರಾಜ =ಅರಸರಿಗೆ ಅರಸನಾದವನು; ಚಕ್ರವರ್ತಿ. ~ಅನ್ನ = ಒಂದು ಜಾತಿಯ ಶ್ರೇಷ್ಠವಾದ ಬತ್ತ. ~ಆಜ್ಞೆ = ಅರಸನ ಶಾಸನ. ~ಉಪಚಾರ = ವೈಭವದ ಉಪಚಾರ, -ಸೇವೆ. ~ಕಾರಣ = ೧. ರಾಜತಂತ್ರ; ಆಡಳಿತ ತಂತ್ರ. ೨. ರಾಜಕೀಯ ವ್ಯವಹಾರ. ~ಕಾರ್ಯ = ೧. ರಾಜ್ಯಕ್ಕೆ ಸಂಬಂಧಿಸಿದ ಕೆಲಸ. ೨. ಮಹಾಕಾರ್ಯ; ದೊಡ್ಡ ಕೆಲಸ. ~ಕೀರ = ಗಿಣಿಗಳಲ್ಲಿ ಶ್ರೇಷ್ಠವಾದುದು; ಅರಗಿಳಿ. ~ಕೇತನ = ಅರಮನೆ; ರಾಜಗೃಹ. ~ತಂತ್ರ =ವ್ಯವಹಾರ ಚಾತುರ್ಯ; ಆಡಳಿತ ತಂತ್ರ. ~ದಂಡ = ಅರಸೊತ್ತಿಗೆಯ ಸೂಚಕವಾಗಿ ರಾಜನು ಹಿಡಿಯುವ ಕೋಲು. ~ದ್ರೋಹ = ದೊರೆಗೆ ಅಥವಾ ಆಡಳಿತಕ್ಕೆ ಮಾಡುವ ವಿರೋಧ. ~ದ್ರೋಹಿ = ಅರಸನಿಗೆ ಅಥವಾ ಆಡಳಿತಕ್ಕೆ ಕೇಡು ಬಗೆಯುವವನು. ~ನೀತಿ = ರಾಜಕಾರಣ. ~ಬಾ(ವಾ)ಳೆ = ಉತ್ತಮಜಾತಿಯ ಬಾಳೆ. ~ಬೀದಿ = ಮುಖ್ಯರಸ್ತೆ; ಭಾಟಾಮಾರ್ಗ; ಹೆದ್ದಾರಿ. ~ಭಾಷೆ = ಆಡಳಿತ ಭಾಷೆ. ~ಮಾರ್ಗ = ರಾಜಬೀದಿ. ~ಮಾಷ =ಒಂದು ಬಗೆಯ ದ್ವಿದಳಧಾನ್ಯ; ಅಲಸಂದೆ. ~ಮುದ್ರೆ = ದೊರೆಯ ಒಪ್ಪವುಳ್ಳ ಮೊಹರು. ~ರಾಜ = ೧. ರಾಜಾಧಿರಾಜ. ೨. ಕುಬೇರ. ~ಶಾಸನ = ರಾಜಾಜ್ಞೆ. ~ಶೇಖರ = ೧. ರಾಜರಲ್ಲಿ ಶ್ರೇಷ್ಠನಾದವನು. ೨. ಚಂದ್ರನನ್ನು ಧರಿಸಿದವನು; ಶಿವ. ~ಶ್ರೀ = ೧. ಅರಸನ ಸಿರಿ, -ಸಂಪತ್ತು. ೨. ವ್ಯಕ್ತಿಗೆ ಗೌರವಸೂಚಕವಾಗಿ ಸೇರಿಸುವ ಶಬ್ದ. ~ಸಭೆ = ಒಡ್ಡೋಲಗ. ದರ್ಬಾರು. ~ಸೂಯ = ಚಕ್ರವರ್ತಿಯು ಮಾಡುವ ಯಾಗ. ~ಹಂಸೆ = ಶ್ರೇಷ್ಠವಾದ ಹಂಸ; ಅರಸಂಚೆ.

ರಾಜಕ (ನಾ). ೧. ದೊರೆ; ಅರಸು. ೨ ದೊರೆಗಳ ಸಮೂಹ. ೩. ಅರಸನ ಪ್ರಭಾವ.

ರಾಜಕಾರಣಿ (ನಾ). ರಾಜ್ಯದ ವ್ಯವಹಾರದಲ್ಲಿ ಚತುರನಾದವನು.

ರಾಜಕೀಯ (ನಾ). ೧. ರಾಜಕಾರಣ; ಆಡಳಿತ ವ್ಯವಸ್ಥೆ. ೨. ಒಳಜಗಳ; ಅಂತಃಕಲಹ. (ಗು). ೩. ರಾಜ್ಯಾಡಳಿತಕ್ಕೆ ಸಂಬಂಧಿಸಿದ; ಸರ್ಕಾರಕ್ಕೆ ಸಂಬಂಧಿಸಿದ.

ರಾಜಗಿರಿ (ನಾ). ಒಂದು ಜಾತಿಯ ಸೊಪ್ಪು; ಕೆಂಪುದಂಟು.

ರಾಜತ (ಗು). ಬೆಳ್ಳಿಯಿಂದ ಮಾಡಿದ. ~ಅದ್ರಿ = ರಜತಗಿರಿ; ಬೆಳ್ಳಿಯ ಬೆಟ್ಟ.

ರಾಜತ್ವ (ನಾ). ೧. ಅರಸೊತ್ತಿಗೆ; ದೊರೆತನ. ೨. ಸರ್ಕಾರ.

ರಾಜಧರ (ನಾ). ಚಂದ್ರನನ್ನು ಧರಿಸಿದವನು; ಶಿವ.

ರಾಜಧಾನಿ (ನಾ). ರಾಜ್ಯದ ಮುಖ್ಯ ಪಟ್ಟಣ, -ಪ್ರಮುಖ ನಗರ.

ರಾಜನ್ಯ (ನಾ). ಕ್ಷತ್ರಿಯ; ಅರಸು.

ರಾಜನ್ಯಕ (ನಾ). ಕ್ಷತ್ರಿಯರ ಸಮೂಹ; ಅರಸರ ಗುಂಪು.

ರಾಜನ್ವತಿ (ನಾ). ಒಳ್ಳೆಯ ರಾಜನನ್ನು ಪಡೆದಿರುವ ಭೂಮಿ.

ರಾಜರ್ಷಿ (ನಾ). ರಾಜನಾಗಿಯೂ ಋಷಿಯಂತೆ ಇರುವವನು.

ರಾಜಸ (ಗು). ೧. ರಜೋಗುಣಕ್ಕೆ ಸಂಬಂಧಪಟ್ಟ. ೨. ಧೂಳಿನಿಂದ ಕೂಡಿದ.

ರಾಜಾರೋಷ (ನಾ). ಮುಚ್ಚುಮರೆಯಿಲ್ಲದಿರುವುದು; ಬಹಿರಂಗವಾಗಿ ವ್ಯವಹರಿಸುವುದು.

ರಾಜಾವರ್ತ (ನಾ). ಒಂದು ಬಗೆಯ ರತ್ನ; ನೀಲಿಬಣ್ಣದ ರತ್ನ.

ರಾಜಿ (ನಾ). ೧. ಸಾಲು; ಪಂಕ್ತಿ. ೨. ಗುಂಪು; ಸಮೂಹ. ೩. ಒಪ್ಪಂದ; ಒಡಂಬಡಿಕೆ. ೪. ಒಪ್ಪಿಗೆ; ಕಬೂಲು. ~ನಾಮೆ = ರಾಜೀನಾಮೆ. ~ಪತ್ರ = ಒಪ್ಪಂದದ ಪತ್ರ.

ರಾಜಿಸು (ಕ್ರಿ). ಹೊಳೆ; ಪ್ರಕಾಶಿಸು.

ರಾಜೀನಾಮೆ (ನಾ). ಉದ್ಯೋಗದಿಂದ ಬಿಡುಗಡೆಯನ್ನು ಪಡೆಯುವಾಗ ಸ್ವಪ್ರೇರಣೆಯಿಂದ ಬರೆದುಕೊಡುವ ಪತ್ರ.

ರಾಜೀವ (ನಾ). ೧. ತಾವರೆ; ಕಮಲ. ೨. ಒಂದು ಜಾತಿಯ ಮೀನು. ೩. ಒಂದು ಜಾತಿಯ ಜಿಂಕೆ. ೪. ಗುಂಪು; ಸಮೂಹ. ೫. ತಲೆಗೂದಲು. ೬. ನೀರು; ಜಲ. ~ಮಿತ್ರ = ಸೂರ್ಯ; ಇನ. ~ರಿಪು = ಚಂದ್ರ. ~ಲೋಚನೆ = ತಾವರೆಯಂತೆ ಕಣ್ಣುಗಳುಳ್ಳವನು; ವಿಷ್ಣು.

ರಾಜ್ಞಿ (ನಾ). ರಾಣಿ; ಅರಸಿ.

ರಾಜ್ಯ (ನಾ). ೧. ದೇಶ; ರಾಜನ ಅಧಿಕಾರಕ್ಕೆ ಒಳಪಟ್ಟ ಪ್ರದೇಶ. ೨. ಅರಸೊತ್ತಿಗೆ; ದೊರೆತನ. ೩. ಸರ್ಕಾರ. ~ಅಂಗ = ೧. ಆಡಳಿತಕ್ಕೆ ಅವಶ್ಯಕವಾದ ಏಳು ವಿಭಾಗಗಳು; ಸಪ್ತಾಂಗ. ೨. ಆಡಳಿತದ ಸಂವಿಧಾನ, -ರಚನೆ. ~ಅಧ್ವರ =ರಾಜಸೂಯ. ~ಅನುಷ್ಠಾನ=ಆಡಳಿತಕ್ಕೆ ಸಂಬಂಧಿಸಿದ ವ್ಯವಹಾರ; ರಾಜಕಾರ್ಯ. ~ಅಭಿಷೇಕ = ರಾಜನನ್ನಾಗಿ ಮಾಡುವ ಸಮಾರಂಭ; ಪಟ್ಟಾಭಿಷೇಕ. ~(ಂ)ಕೆ(ಗೆ)ಯ್ = ರಾಜ್ಯಭಾರಮಾಡು. ~ದಾಹ = ಆಡಳಿತದ ವ್ಯಾಮೋಹ; ಬೇರೆಯ ರಾಷ್ಟ್ರಗಳನ್ನು ಅಧೀನಗೊಳಿಸಬೇಕೆಂಬ ಆಕಾಂಕ್ಷೆ. ~ಧರ್ಮ=ಆಡಳಿತಕ್ಕೆ ಸಂಬಂಧಿಸಿದ ನೀತಿ. ~ಭಾರ = ರಾಜ್ಯದ ಹೊಣೆಗಾರಿಕೆ; ಆಳ್ವಿಕೆ. ~ಭ್ರಷ್ಟ =ದೇಶದಿಂದ ಹೊರಕ್ಕೆ ಕಳುಹಿಸಲ್ಪಟ್ಟವನು. ~ಶಾಸ್ತ್ರ = ರಾಜನೀತಿಯನ್ನು ತಿಳಿಸುವ ಶಾಸ್ತ್ರ. ~ಸಭೆ = ಕೇಂದ್ರ ಸರ್ಕಾರದ ನೀತಿಯನ್ನು ರೂಪಿಸುವ ಸಭೆ. ~ಸೂತ್ರ = ಆಡಳಿತದ ಅಧಿಕಾರ.

ರಾಜ್ಯಕ (ನಾ). ರಾಜ್ಯವನ್ನು ಆಳುವವನು; ದೊರೆ.

ರಾಜ್ಯಪಾಲ (ನಾ). ಈಗಿನ ಆಡಳಿತದಲ್ಲಿ ಪ್ರಾಂತದ ಮುಖ್ಯಾಧಿಕಾರಿ; ಗೌರ್ನರ್.

ರಾಟಣ ೧.=ಜಾಟಣ. ೨. ನೂಲು ತೆಗೆಯುವ ಯಂತ್ರ; ಚರಕ. ೩. ವಿನೋದಕ್ಕಾಗಿ ಮಕ್ಕಳನ್ನು ಕೂರಿಸಿ ತಿರುಗಿಸುವ ಚಕ್ರಾಕಾರದ ಒಂದು ಸಾಧನ; ಗಿರಕಾಲೆ.

ರಾಟಳ ೧. = ರಾಟಣ. ೨. ಒಂದು ಬಗೆಯ ಯುದ್ಧಸಾಮಗ್ರಿ.

ರಾಟಾಲ(ಳ) = ರಾಟಣ.

ರಾಟೆ (ನಾ). ೧. ನೂಲುವ ಸಾಧನ; ಚರಕ. ೨. ನೀರೆತ್ತಲು ಬಾವಿಗೆ ಅಳವಡಿಸುವ ಗಾಲಿ, -ಚಕ್ರ; ಅರಟೆ.

ರಾಡಿ (ನಾ). ೧. ಕೆಸರು; ಪಂಕ. ೨. ಕೊಳೆ; ಕಶ್ಮಲ.

ರಾಣ (ನಾ). ಅರಸ; ದೊರೆ.

ರಾಣಿ = ರಾಜ್ಞಿ. ~ವಾಸ = ಅಂತಃಪುರ; ಜನಾನ.

ರಾಣುವೆ (ನಾ). ಸೈನ್ಯ; ಪಡೆ.

ರಾತಲು (ನಾ). ಒಂದು ಅಳತೆಯ ಮಾನ.

ರಾತೀಪು (ನಾ). ಪುಷ್ಟಿಯಾದ ಆಹಾರ; ಸತ್ತ್ವಯುತ ಆಹಾರ.

ರಾತೀಬು = ರಾತೀಪು.

ರಾತ್ರಿ (ನಾ). ಇರುಳು; ನಿಶೆ. ~ಈಶ =ಚಂದ್ರ. ~ರಾಣಿ=ರಾತ್ರಿಯಲ್ಲಿ ಅರಳುವ ಒಂದು ಜಾತಿಯ ಸುವಾಸನೆಯ ಹೂವು.

ರಾತ್ರೆ = ರಾತ್ರಿ.

ರಾದ್ಧಾಂತ (ನಾ). ೧. ಸಿದ್ಧಾಂತ; ತತ್ತ್ವ. ೨. ರಂಪ; ಗಲಾಟೆ.

ರಾಧೆ (ನಾ). ೧. ನಕ್ಷತ್ರಗಳಲ್ಲಿ ಒಂದು; ಅನೂರಾಧಾ ನಕ್ಷತ್ರ. ೨. ಕರ್ಣನ ಸಾಕು ತಾಯಿ. ೩. ಕೃಷ್ಣನ ಪ್ರೇಯಸಿ.

ರಾಧೇಯ(ನಾ). ರಾಧೆಯ ಸಾಕುಮಗ; ಕರ್ಣ.

ರಾಪು (ನಾ). ೧. ರಾಹು. ೨. ಗರ್ವ; ಸೊಕ್ಕು.

ರಾಮ (ನಾ). ೧. ಕಪ್ಪು; ಕರಿಯ ಬಣ್ಣ. ೨. ಪ್ರಿಯ; ನಲ್ಲ. ೩. ಬಿಳುಪು; ಧವಳತೆ. ೪. ವಿಷ್ಣುವಿನ ಏಳನೆಯ ಅವತಾರ. ೫. ಪರಶುರಾಮ. ೬. ಬಲರಾಮ. (ಗು). ೭. ಚೆಲುವಾದ; ಮನೋಹರವಾದ. ~ಅಯನ(ಣ) = ರಾಮನ ಚರಿತ್ರೆಯನ್ನು ಕುರಿತ ಕಾವ್ಯ. ~ಟಂಕೆ(ಕಿ) = ರಾಮನ ಪಟ್ಟಾಭಿಷೇಕದ ಚಿತ್ರವನ್ನೊಳಗೊಂಡ ಒಂದು ಬಗೆಯ ನಾಣ್ಯ. ~ದೂತ=ರಾಮನ ಬಂಟ; ಹನುಮಂತ. ~ನವಮಿ =ಚೈತ್ರಮಾಸದ ಒಂಬತ್ತನೆಯ ದಿನ ಮತ್ತು ಅಂದು ಆಚರಿಸುವ ರಾಮನ ಹುಟ್ಟುಹಬ್ಬ. ~ಬಾಣ = ೧. ಶ್ರೀರಾಮನ ಬಾಣ. ೨. ಗುರಿ ತಪ್ಪದ, ಪರಿಣಾಮಕಾರಿಯಾದ ಉಪಾಯ. ~ರಾಜ್ಯ=೧. ರಾಮನ ಆಳ್ವಿಕೆ. ೨. ಸುಖೀ ರಾಜ್ಯ.

ರಾಮಠ (ನಾ). ಇಂಗು; ಹಿಂಗು.

ರಾಮಣೀಯಕ (ನಾ). ಸುಂದರವಾದುದು; ಚೆಲುವಾದುದು.

ರಾಮಫಲ (ನಾ). ಒಂದು ಜಾತಿಯ ಮರ ಮತ್ತು ಅದರ ಹಣ್ಣು.

ರಾಮರಸ (ನಾ). ಒಂದು ಬಗೆಯ ಮಾದಕ ಪಾನೀಯ.

ರಾಮೆ (ನಾ). ೧. ಹೆಂಗಸು; ಸ್ತ್ರೀ. ೨. ಚೆಲುವೆ; ಸುಂದರಿ. ೩. ಲಕ್ಷ್ಮಿ.

ರಾಯ (ನಾ). ೧. ರಾಜ; ಅರಸ; ಒಡೆಯ. (ಗು). ೨. ಶ್ರೇಷ್ಠವಾದ; ದೊಡ್ಡ. ~ಅಂಚೆ = ರಾಜಹಂಸೆ. ~ಕಟಕ = ರಾಜನ ಸೈನ್ಯ; ಅರಸನ ಬಲ.

ರಾಯಗಿಡಿಗ (ನಾ). ಒಂದು ಬಗೆಯ ರಣ ವಾದ್ಯ; ದೊಡ್ಡ ನಗಾರಿ.

ರಾಯಗಿಡಿಬಿಡಿ = ರಾಯಗಿಡಿಗ.

ರಾಯಭಾರ (ನಾ). ೧. ರಾಜ್ಯಭಾರ; ಆಳ್ವಿಕೆ. ೨. ಸಂಧಾನ; ದೌತ್ಯ.

ರಾಯಭಾರಿ (ನಾ). ಬೇರೊಂದು ದೇಶಕ್ಕೆ ಕಳುಹಿಸಲ್ಪಡುವ ರಾಜಪ್ರತಿನಿಧಿ.

ರಾಯಸ (ನಾ). ೧. ರಾಜ, ಗುರು ಮುಂತಾದ ಹಿರಿಯರಿಂದ ಬರುವ ಪತ್ರ; ನಿರೂಪ. ೨. ಸರ್ಕಾರದ ಪರವಾದ ಕೆಲಸ. ~ಇಗ = ರಾಯಸವನ್ನು ಬರೆಯುವ ಅಥವಾ ಒಯ್ಯುವ ಅಧಿಕಾರಿ.

ರಾಯಿತ (ನಾ). ಮೊಸರಿನಿಂದ ಮಾಡುವ ಒಂದು ಬಗೆಯ ವ್ಯಂಜನಪದಾರ್ಥ; ಹಸಿ ಮಜ್ಜಿಗೆ ಹುಳಿ.

ರಾರಾಜಿಸು = ರಾಜಿಸು.

ರಾವ (ನಾ). ಧ್ವನಿ; ಕೂಗು.

ರಾವಣ (ನಾ). ೧. ಗಟ್ಟಿಯಾಗಿ ಕೂಗುವಿಕೆ; ಒದರುವಿಕೆ. ೨. ಗಟ್ಟಿಯಾಗಿ ಕೂಗುವವನು; ಬೊಬ್ಬೆಯಿಡುವವನು. ೩. ಲಂಕೆಯ ಒಬ್ಬ ದೊರೆ; ವಿಶ್ರವಸ್ಸು ಎಂಬುವವನ ಮಗ. ~ರಿಪು = ರಾವಣನ ಹಗೆ; ರಾಮ. ~ವೀಣೆ = ಒಂದು ಬಗೆಯ ವೀಣೆ. ~ಸಂನ್ಯಾಸಿ = ಸಾಧುವೇಷದಿಂದ ಜನರನ್ನು ವಂಚಿಸುವವನು; ಕಪಟಸಂನ್ಯಾಸಿ. ~ಹಸ್ತ = ರಾವಣವೀಣೆ.

ರಾವು (ನಾ). ೧. ನವಗ್ರಹಗಳಲ್ಲಿ ಒಂದು; ರಾಹು. ೨. ಗಾಬರಿ; ದಿಗ್ಭ್ರಮೆ. ೩. ದೆವ್ವ,

ಪಿಶಾಚಿ ಮುಂತಾದುವು ಹಿಡಿಯುವಿಕೆ. (ಗು). ೪. ಭಯಂಕರವಾದ; ಭೀಕರ. ~ಕ(ಗ)ಣ್ಣು = ಭಯಂಕರವಾದ ಕಣ್ಣು; ಕೆಟ್ಟ ಕಣ್ಣು. ~ಕ(ಗ)ನ್ನಡಿ=ಸಣ್ಣವಸ್ತುವನ್ನು ದೊಡ್ಡದನ್ನಾಗಿ ಮಾಡಿ ತೋರಿಸುವ ಕನ್ನಡಿ; ಭೂತಗನ್ನಡಿ. ~ತೆಗೆ=ಕೆಟ್ಟ ಗ್ರಹದಿಂದುಂಟಾದ ದೋಷವನ್ನು ಹೋಗಲಾಡಿಸು. ~ಬಡಿ=೧. ದಿಗ್ಭ್ರಮೆಗೊಳಗಾಗು. ೨. ದೆವ್ವ, ಪಿಶಾಚಿಗಳ ಬಾಧೆಗೊಳಗಾಗು. ~ಹಿಡಿ = ರಾವುಬಡಿ.

ರಾವುತ (ನಾ). ಕುದುರೆಯ ಸವಾರ; ಅಶ್ವಾರೋಹಿ. ~ಇಕೆ= ೧. ಕುದುರೆ ಸವಾರಿ; ಅಶ್ವಾರೋಹಣ. ೨. ಕುದುರೆಯ ಮೇಲೆ ಕುಳಿತು ಯುದ್ಧ ಮಾಡುವಿಕೆ.

ರಾವುತ್ತ = ರಾವುತ.

ರಾಶಿ (ನಾ). ೧. ಒಟ್ಟಿಲು; ಗುಪ್ಪೆ. ೨. ಗುಂಪು; ಸಮೂಹ. ೩. ಆಧಿಕ್ಯ; ಹೆಚ್ಚಳ. ೪. ಜ್ಯೋತಿಶ್ಚಕ್ರದಲ್ಲಿರುವ ಮೇಷ, ವೃಷಭ, ಮಿಥುನ, ಕರ್ಕಾಟಕ, ಸಿಂಹ, ಕನ್ಯೆ, ತುಲೆ, ವೃಶ್ಚಿಕ, ಧನು, ಮಕರ, ಕುಂಭ ಮತ್ತು ಮೀನ ಎಂಬ ಹನ್ನೆರಡು ವಿಭಾಗ. ~ಪೂಜೆ = ಕಣದಲ್ಲಿ ಧಾನ್ಯಗಳ ರಾಶಿಗೆ ಮಾಡುವ ಪೂಜೆ.

ರಾಶ್ಮೆ = ರಾಸ್ಮೆ.

ರಾಷ್ಟ್ರ (ನಾ). ಒಂದು ಆಡಳಿತಕ್ಕೆ ಒಳಪಟ್ಟ ಪ್ರದೇಶ. ~ಗೀತೆ = ರಾಷ್ಟ್ರದ ಹಿರಿಮೆಯನ್ನು ಕುರಿತ ಹಾಡು; ಪ್ರಧಾನ ಕಾರ್ಯಕ್ರಮದ ಪ್ರಾರಂಭ ಅಥವಾ ಅಂತ್ಯದಲ್ಲಿ ಹಾಡುವ ಹಾಡು. ~ಧ್ವಜ = ರಾಷ್ಟ್ರದ ಬಾವುಟ. ~ಪಕ್ಷಿ = ರಾಷ್ಟ್ರದ ಲಾಂಛನವಾದ ಪಕ್ಷಿ. ~ಪತಿ = ರಾಷ್ಟ್ರದ ಅತಿ ಉನ್ನತಾಧಿಕಾರಿ. ~ಪ್ರಜ್ಞೆ = ರಾಷ್ಟ್ರದ ಬಗ್ಗೆ ಇರುವ ಜಾಗೃತ ಬುದ್ಧಿ.

ರಾಷ್ಟ್ರಕ (ನಾ). ಒಂದು ರಾಜ್ಯದ ಪ್ರಜೆ.

ರಾಷ್ಟ್ರಿಯ (ನಾ). ರಾಜನ ಭಾವನ್ಮೈದುನ.

ರಾಷ್ಟ್ರೀಕರಣ (ನಾ). ಸಂಸ್ಥೆ ಮುಂತಾದುವುಗಳ ಹಕ್ಕಿನ ಮೇಲೆ ಸರ್ಕಾರವು ತನ್ನ ಸ್ವಾಮ್ಯವನ್ನು ಸ್ಥಾಪಿಸುವುದು.

ರಾಷ್ಟ್ರೀಯ ೧. = ರಾಷ್ಟ್ರಿಯ. (ಗು). ೨. ರಾಷ್ಟ್ರಕ್ಕೆ ಸಂಬಂಧಪಟ್ಟ; ದೇಶೀಯ.

ರಾಸ (ನಾ). ೧. ಸದ್ದು; ಗದ್ದಲ. ೨. = ರಾಸಕ್ರೀಡೆ. ~ಕ್ರೀಡೆ = ಕೃಷ್ಣ ಮತ್ತು ಗೋಪಿಕಾಸ್ತ್ರೀಯರ ಶೃಂಗಾರನರ್ತನ. ~ಲೀಲೆ = ರಾಸಕ್ರೀಡೆ.

ರಾಸಭ (ನಾ). ೧. ಕತ್ತೆ; ಗಾರ್ದಭ. (ಗು). ೨. ಅರಚುವ; ಒದರುವ.

ರಾಸಭಿ (ನಾ). ಹೆಣ್ಣುಕತ್ತೆ.

ರಾಸಭೆ = ರಾಸಭಿ.

ರಾಸಾಯನಿಕ (ನಾ). ೧. ರಸಾಯನ ಪ್ರಕ್ರಿಯೆಯಲ್ಲಿ ಉಪಯೋಗಿಸುವ ವಸ್ತು. (ಗು). ೨. ರಸಾಯನವಿಜ್ಞಾನಕ್ಕೆ ಸಂಬಂಧಿಸಿದ.

ರಾಸಿ = ರಾಶಿ.

ರಾಸು (ನಾ). ಜಾನುವಾರು; ದನ; ಕಾಲ್ನಡೆ.

ರಾಸ್ಮೆ (ನಾ). ಒಂದು ಬಗೆಯ ಔಷಧಿ ಸಸ್ಯ ಮತ್ತು ಅದರ ಬೇರು.

ರಾಹು ೧. = ರಾವು. ೨. ಒಂದು ಬಗೆಯ ಭಯಂಕರ ವಿಷ. ೩. ಅಗ್ನಿ; ಬೆಂಕಿ. ~ಕಾಲ = ಅಶುಭ ಘಳಿಗೆ; ಪ್ರಶಸ್ತವಲ್ಲದ ಕಾಲ. ~ಗ್ರಸ್ತ = ೧. ರಾಹುವೆಂಬ ಗ್ರಹದಿಂದ ಹಿಡಿಯಲ್ಪಟ್ಟ. ೨. ಕಷ್ಟಕ್ಕೆ ಸಿಕ್ಕಿದ.

ರಾಹುಟಿ (ನಾ). ಡೇರೆ; ಗುಡಾರ; ತಂಬೂ.

ರಾಹುತ = ರಾವುತ.

ರಾಹುತ್ತ = ರಾವುತ.

ರಾಳ (ನಾ). ೧. ಒಂದು ಜಾತಿಯ ಮರ ಮತ್ತು ಅದರ ರಸದಿಂದ ತಯಾರಿಸುವ ಸುಗಂಧ ದ್ರವ್ಯ; ಲೋಬಾನ. ೨. ಹಲವು ಮರಗಳಿಂದ ಹೊರಸೂಸುವ ಅಂಟು.

ರಿಂಗಣ (ನಾ). ೧. ಕುಣಿತ; ನರ್ತನ. ೨. ಸರಿಯುವಿಕೆ; ಹರಿದಾಡುವಿಕೆ. ೩. ಜಾರುವುದು; ಕಳಚುವುದು. ~ಕು(ಗು)ಣಿ = ನರ್ತಿಸು; ನಾಟ್ಯವಾಡು.

ರಿಕಾಪು (ನಾ). ಕುದುರೆಯನ್ನು ಏರುವಾಗ ಕಾಲನ್ನಿಡಲು ಜೀನಿಗೆ ಅಳವಡಿಸಿರುವ ಬಳೆ; ಅಂಕವಣಿ.

ರಿಕ್ತ (ನಾ). ೧. ಖಾಲಿ; ಬರಿದು; ಶೂನ್ಯತೆ. ೨. ಬಡವ; ದರಿದ್ರ. (ಗು). ೩. ಬರಿದಾದ; ಶೂನ್ಯವಾದ. ೪. ವ್ಯರ್ಥವಾದ; ಪೊಳ್ಳಾದ. ೫. ಬಡತನದಿಂದ ಕೂಡಿದ. ~ಕೊ(ಗೊ)ಳಿಸು = ತೆರವು ಮಾಡು; ಖಾಲಿಮಾಡು. ~ಹಸ್ತ = ೧. ಬರಿದಾದ ಕೈ; ಖಾಲಿ ಕೈ. ೨. ಬಡವ; ದರಿದ್ರ.

ರಿಕ್ಥ (ನಾ). (ಪಿತ್ರಾರ್ಜಿತವಾಗಿ ಬಂದ) ಆಸ್ತಿ.

ರಿಕ್ಷಾ (ನಾ). ಒಂದು ಬಗೆಯ ವಾಹನ.

ರಿಗ್ಗವಣೆ (ನಾ). ಒಂದು ಬಗೆಯ ವಾದ್ಯ; ಮೃದಂಗ.

ರಿಚೆ (ನಾ). ಮಂತ್ರ; ಋಕ್ಕು; ಋಚೆ.

ರಿಣ (ನಾ). ೧. ಸಾಲ; ಋಣ. ೨. ಹಂಗು. ೩. ಉಪಕಾರ.

ರಿತು (ನಾ). ವಸಂತ, ಗ್ರೀಷ್ಮ ಮೊದಲಾದ ಋತುಗಳಲ್ಲಿ ಒಂದು; ಒಂದು ಕಾಲಮಾನ.

ರಿಪು (ನಾ). ಹಗೆ; ವೈರಿ. ~ಚಕ್ರ = ಶತ್ರು ಸೇನೆ.

ರಿಯಾಯತಿ = ರಿಯಾಯಿತಿ.

ರಿಯಾಯಿತಿ (ನಾ). ಬಿಟ್ಟುಕೊಡುವುದು; ಸೋಡಿ.

ರಿವಾಜು (ನಾ). ಸಂಪ್ರದಾಯ; ರೂಢಿ.

ರಿಷಿ (ನಾ). ತಪಸ್ವಿ; ಋಷಿ.

ರಿಸಾಲೆ (ನಾ). ಕುದುರೆಗಳ ಸೈನ್ಯ; ಅಶ್ವದಳ.

ರಿಸಿ = ರಿಷಿ.

ರೀತಿ (ನಾ). ೧. ವಿಧಾನ; ಕ್ರಮ; ಪದ್ಧತಿ. ೨. (ಸಾಹಿತ್ಯರಚನೆಯಲ್ಲಿ) ಶೈಲಿ. ೩. ಗತಿ; ಚಲನೆ. ೪. ಪ್ರವಾಹ. ೫. ಎಲ್ಲೆ; ಗಡಿ. ೬. ಸ್ವಭಾವ. ೭. ಲಕ್ಷಣ. ೮. ಹಿತ್ತಾಳೆ. ೯. ಲೋಹಗಳಿಗೆ ಹಿಡಿಯುವ ಜಂಗು; -ತುಕ್ಕು.

ರೀಪು (ನಾ). ಮರದ ಅಥವಾ ಬಿದಿರಿನ ಸೀಳು; ರಿಪೀಸು.

ರುಂಜೆ (ನಾ). ಹಿತ್ತಾಳೆಯಿಂದ ಮಾಡಿದ ಒಂದು ಬಗೆಯ ನಗಾರಿ.

ರುಂಡ (ನಾ). ೧. ತಲೆಯಿಲ್ಲದ ದೇಹ; ಅಟ್ಟೆ; ಕಬಂಧ. ೨. ತಲೆಬುರುಡೆ; ಕಪಾಲ. ~ಆಭರಣ = ೧. ರುಂಡಮಾಲೆ. ೨. ತಲೆಬುರುಡೆಗಳನ್ನು ಹಾರವನ್ನಾಗಿ ಹಾಕಿಕೊಂಡವನು; ಶಿವ. ~ಮಾಲಿ = ೧. ಶಿವ. ೨. ಕಾಳಿ.

ರುಂದಿ (ನಾ). ಅಗಲ; ವಿಸ್ತಾರ.

ರುಂದ್ರ (ಗು). ವಿಶಾಲವಾದ; ವ್ಯಾಪಕವಾದ; ವಿಸ್ತಾರವಾದ.

ರುಂಹರಿ (ನಾ). ಭೂಮಿ; ಪೃಥ್ವಿ.

ರುಕ್ಕು (ನಾ). ವೇದದ ಮಂತ್ರ.

ರುಕ್ಮ (ನಾ). ೧. ಬಂಗಾರ; ಹೊನ್ನು. ೨. ಕಬ್ಬಿಣ. (ಗು). ೩. ಮಿರುಗುವ; ಪ್ರಕಾಶಿಸುವ. ~ಅಂಗದ = ೧. ಚಿನ್ನದ ತೋಳುಬಂದಿ. ೨. ಒಬ್ಬ ರಾಜನ ಹೆಸರು.

ರುಕ್ಷ (ನಾ). ೧. ಕರಡಿ; ಭಲ್ಲೂಕ. ೨. ನಕ್ಷತ್ರ; ತಾರೆ. (ಗು). ೩. ಒರಟಾದ; ಕಠಿನ; ಅನಾಗರಿಕ. ೪. ನೀರಸವಾದ.

ರುಖೋತ (ನಾ). ಮದುವೆಯ ಹಿಂದಿನ ದಿನ ಹೆಣ್ಣಿನವರು ಗಂಡಿನ ಕಡೆಯವರಿಗೆ ಹಾಕುವ ಭೋಜನ.

ರುಗ್ಣ (ಗು). ೧. ರೋಗಪೀಡಿತವಾದ; ಬೇನೆಯಿಂದ ಕೂಡಿದ. ೨. ಬಾಗಿದ; ಕೊಂಕಿದ. ~ಅವಸ್ಥೆ = ರೋಗಿಯ ಇರವು, -ಅವಸ್ಥೆ. ~ಆಲಯ = ಆಸ್ಪತ್ರೆ; ದವಾಖಾನೆ.

ರುಚಿ (ನಾ). ೧. ಹೊಳಪು; ಕಾಂತಿ. ೨. ಕಿರಣ; ಕದಿರು. ೩. ಆಸೆ; ಬಯಕೆ; ಆಸಕ್ತಿ.

೪. ಆಸ್ವಾದ; ಸವಿ. ~ಸು = ೧. ಆಸ್ವಾದಿಸು. ೨. ಸವಿಯಾಗು; ತಿನ್ನಲು ಯೋಗ್ಯವಾಗು. ೩. ಹೊಳೆ; ಪ್ರಕಾಶಿಸು. ೪. ಇಷ್ಟವಾಗು; ಸೇರು. ~ಕಟ್ಟು =ಆಸ್ವಾದನೆಗೆ ಯೋಗ್ಯವಾದುದು; ಸವಿಯಾದುದು. ~ಕೆ(ಗೆ)ಡು = ಸವಿಯಿಲ್ಲದಾಗು; ಅರುಚಿಯುಂಟಾಗು. ~ಪೆ(ವೆ)ಱು(ರು)=ಕಾಂತಿಯನ್ನು ಹೊಂದು; ಹೊಳಪೇರು.

ರುಚಿಕರ (ಗು). ೧. ಸವಿಯನ್ನುಂಟುಮಾಡುವ. ೨. ಸಂತೋಷವನ್ನು ಕೊಡುವ.

ರುಚಿರ (ಗು). ೧. ಮನೋಹರವಾದ; ಅಂದವಾದ. ೨. ಸ್ವಾದುವಾದ; ಸವಿಯಾದ.

ರುಚ್ಯ (ಗು). ಪ್ರಕಾಶಮಾನವಾದ; ಉಜ್ವಲವಾದ.

ರುಜ (ನಾ). ಕಾಯಿಲೆ; ರೋಗ; ಬೇನೆ.

ರುಜಿನ = ರುಜ.

ರುಜು (ನಾ). ೧. ಒಪ್ಪ; ಸಹಿ; ಅಂಕಿತ. ೨. ಪ್ರಮಾಣ; ಸಾಕ್ಷ್ಯ. (ಗು). ೩. ನೇರವಾದ; ಪ್ರಾಮಾಣಿಕವಾದ. ೪. ಆಡಂಬರವಿಲ್ಲದ; ಸರಳವಾದ. ~ಮಾಡು =೧. ಹಸ್ತಾಕ್ಷರವನ್ನು ಹಾಕು; ಸಹಿಹಾಕು. ೨. ಸ್ಥಿರಪಡಿಸು; ದೃಢಪಡಿಸು.

ರುಜುವಾತು (ನಾ). ೧. ದೃಢಪಡಿಸುವ ಸಾಧನ; ಪುರಾವೆ; ಸಾಕ್ಷ್ಯ. ೨. ಸಾಧಿಸುವಿಕೆ; ದೃಢಪಡಿಸುವಿಕೆ.

ರುಜೆ = ರುಜ.

ರುಣ = ರಿಣ.

ರುತ ೧. = ರುತಿ. (ಗು). ೨. ಧ್ವನಿಯಿಂದ ತುಂಬಿದ; ಶಬ್ದ ಮಾಡಲ್ಪಟ್ಟ.

ರುತಿ (ನಾ). (ಹಕ್ಕಿ ಮುಂತಾದುವುಗಳ) ಧ್ವನಿ.

ರುತು = ರಿತು.

ರುದಿತ (ನಾ). ೧. ಅಳು; ರೋದನ. (ಗು). ೨. ದುಃಖದಿಂದ ಕೂಡಿದ.

ರುದ್ಧ (ಗು). ತಡೆಯಲ್ಪಟ್ಟ; ಅಡ್ಡಿಮಾಡಲ್ಪಟ್ಟ.

ರುದ್ರ (ನಾ). ೧. ಆರ್ಭಟಿಸುವವನು; ಅರಚುವವನು. ೨. ಭಯಂಕರನಾದವನು. ೩. ಶಿವ. (ಗು). ೪. ಭೀಕರವಾದ; ಭಯಾನಕವಾದ. ~ಅವತಾರ = ೧. ಶಿವನ ಅಂಶದಿಂದ ಹುಟ್ಟಿದವನು. ೨. ಭಯಂಕರ ರೂಪ. ~ಗಂಟಿ=೧. ರುದ್ರಾಕ್ಷಿಯ ಆಕಾರದ ಅಂಚುಳ್ಳ ಸೀರೆ. ೨. ಒಂದು ಜಾತಿಯ ಹೂವಿನ ಗಿಡ. ~ಗಣ = ಶಿವನ ಪರಿವಾರ. ~ನಾಟಕ = ದುಃಖಾಂತವಾದ ನಾಟಕ; ದುರಂತನಾಟಕ. ~ನಾಯಕ = ರುದ್ರ ನಾಟಕದ ನಾಯಕ. ~ಭೂಮಿ= ಸುಡುಗಾಡು; ಶ್ಮಶಾನ. ~ವೀಣೆ = ಒಂದು ಬಗೆಯ ವೀಣೆ. ~ಸೂಕ್ತ = ಋಗ್ವೇದದಲ್ಲಿ ಶಿವನನ್ನು ಸ್ತುತಿಸುವ ಭಾಗ.

ರುದ್ರಾಕ್ಷ (ನಾ). ಒಂದು ಜಾತಿಯ ಮರ ಮತ್ತು ಅದರ ಕಾಯಿ. ~ಮಾಲೆ = ರುದ್ರಾಕ್ಷಿಗಳಿಂದ ಮಾಡಿದ ಸರ.

ರುದ್ರಾಕ್ಷಿ = ರುದ್ರಾಕ್ಷ.

ರುಧಿರ (ನಾ). ೧. ರಕ್ತ; ನೆತ್ತರು. ೨. ಕೆಂಪು ಬಣ್ಣ; ಕೆಂಬಣ್ಣ. ೩. ಮಂಗಳಗ್ರಹ; ಅಂಗಾರಕ. ~ಅಶನ = ರಕ್ತವನ್ನೇ ಆಹಾರವಾಗಿ ಉಳ್ಳವನು; ರಾಕ್ಷಸ. ~ಪುಷ್ಪ = ಕೆಂಪುದಾಸವಾಳ, ಕೆಂಪು ಕಣಗಿಲೆ ಮುಂತಾದ ಕೆಂಬಣ್ಣದ ಹೂವು.

ರುಪಾಯಿ = ರೂಪಾಯಿ.

ರುಬ್ಬು (ಕ್ರಿ). ಒರಳಿನಲ್ಲಿ ಹಾಕಿ ತಿರುವು; ಅರೆ; ನುಣ್ಣಗೆ ಆಗುವಂತೆ ಮಾಡು. ~ಕ(ಗ)ಲ್ಲು = ರುಬ್ಬುಗುಂಡು. ~ಗುಂಡು = ತಿರುವುವ ಕಲ್ಲು.

ರುಮಾಲು (ನಾ). ತಲೆಗೆ ಸುತ್ತಿಕೊಳ್ಳುವ ಬಟ್ಟೆ; ಮುಂಡಾಸು.

ರುಮೆ (ನಾ). ಉಪ್ಪಿನ ಗಣಿ.

ರುರು (ನಾ). ಒಂದು ಜಾತಿಯ ಜಿಂಕೆ.
ರುವ್ವಿ (ನಾ). ತಾಮ್ರದ ಸಣ್ಣನಾಣ್ಯ; ಕಾಸು.
ರುಷುವತ್ತು (ನಾ). ಲಂಚ.
ರುಷ್ಟ (ಗು). ಕೋಪಗೊಂಡ.
ರುಸುಮು (ನಾ). ಕೊಡತಕ್ಕ ಹಣ; ಶುಲ್ಕ.
ರುಳಿ (ನಾ). ಕಾಲಿಗೆ ಹಾಕಿಕೊಳ್ಳುವ ಬೆಳ್ಳಿಯ ಸರಪಳಿ; ಚೈನು; ಉಳಿ.
ರೂಕ್ಷ (ನಾ). ೧. ಒರಟು; ಕ್ರೂರಿ. ೨. ಒರಟುತನ; ಕಾಠಿನ್ಯ. (ಗು). ೩. ಒರಟಾದ; ಮೃದುವಲ್ಲದ. ~ಆಕಾರ = ೧. ಒರಟಾದ ಸ್ವರೂಪ. ೨. ಒರಟುಸ್ವರೂಪವುಳ್ಳವನು.
ರೂಡಿ = ರೂಢಿ. ~ಇಸು = ರೂಢಿಸು.
ರೂಢ (ಗು). ೧. ಬೆಳೆದ; ಬಲಿತ. ೨. ಬಳಕೆಯಲ್ಲಿರುವ; ಚಲಾವಣೆಯಲ್ಲಿರುವ. ೩. ಪ್ರಸಿದ್ಧವಾದ; ಹೆಸರುವಾಸಿಯಾದ. ೪. ಸರ್ವವಿದಿತವಾದ; ನಿಶ್ಚಿತವಾದ. ೫. ಹತ್ತಿದ; ಏರಿದ. ~ಮೂಲ = ದೃಢವಾಗಿ ನೆಲಸಿರುವ; ಬೇರೂರಿರುವ.
ರೂಢಿ (ನಾ). ೧. ಭೂಮಿ; ಧರೆ. ೨. ಏಳಿಗೆ; ಅಭಿವೃದ್ಧಿ. ೩. ಉಗಮ; ಹುಟ್ಟು. ೪. ಪ್ರಸಿದ್ಧಿ; ಕೀರ್ತಿ. ೫. ಬಳಕೆ; ಅಭ್ಯಾಸ. ~ಇಸು = ೧. ಬಳಸಲ್ಪಡು; ಉಪಯೋಗಿಸಲ್ಪಡು. ೨. ಹೆಸರುವಾಸಿಯಾಗು; ಪ್ರಸಿದ್ಧಿಹೊಂದು. ೩. ಏಳಿಗೆಹೊಂದು; ಅಭಿವೃದ್ಧಿಯಾಗು. ೪. ಬೆಳಸು; ಹೆಚ್ಚಾಗುವಂತೆ ಮಾಡು. ೫. ಹೆಚ್ಚು ಅಭ್ಯಾಸಮಾಡು; ಚಾಲ್ತಿಯಲ್ಲಿಟ್ಟುಕೊಳ್ಳು. ~ಪ(ವ)ಡೆ = ಪ್ರಸಿದ್ಧವಾಗು; ಹೆಸರುವಾಸಿಯಾಗು. ~ಪತಿ = ರಾಜ; ದೊರೆ. ~ವೆ(ವೆ)ಱ್(ರ್) = ರೂಢಿವಡೆ.
ರೂಪ ೧.= ರೂಪು, ೨. ಇರುವ ಸ್ಥಿತಿ; ಇರುವಿಕೆ. ೩. ಪ್ರತಿಮೆ; ಮೂರ್ತಿ. ೪. ರೀತಿ; ಬಗೆ; ಸ್ವಭಾವ. ~ಅಂತರ=ಬೇರೆ ರೂಪ; ಭಿನ್ನ ರೂಪ. ~(ಂ)ತ(ದ)ಳೆ = ರೂಪವನ್ನು ತಾಳು, -ಹೊಂದು. ~ಗ್ರಾಹಿ = ರೂಪವನ್ನು ಹಿಡಿಯುವ ಸಾಧನ; ಕ್ಯಾಮರಾ. ~ಪರಾವರ್ತನೆ = ರೂಪವನ್ನು ಬದಲಾಯಿಸುವುದು; ಬೇರೆ ರೂಪವನ್ನು ಧರಿಸುವುದು. ~ರೇಖೆ(ಷೆ) = ಒಂದು ಯೋಜನೆ ಅಥವಾ ವಿಷಯದ ಸ್ಥೂಲ ಸ್ವರೂಪ. ~ಸ್ತವ = ರೂಪವನ್ನು ಹೊಗಳುವುದು, -ಪ್ರಶಂಸೆ ಮಾಡುವುದು.
ರೂಪಕ (ನಾ). ೧. ಚೆಲುವು; ಸೊಗಸು. ೨. ನಾಟಕ, ಪ್ರಹಸನ ಮೊದಲಾದ ದೃಶ್ಯಕಾವ್ಯ. ೩. ಅರ್ಥಾಲಂಕಾರಗಳಲ್ಲಿ ಒಂದು.
ರೂಪಜೀವಿ = ರೂಪಾಜೀವಿ.
ರೂಪಧಾರಿ (ನಾ). ೧. ಆಕಾರವನ್ನು ಧರಿಸಿರುವವನು. ೨. ವೇಷ ಹಾಕಿಕೊಂಡಿರುವವನು.
ರೂಪವತಿ (ನಾ). ಚೆಲುವೆ; ಸುಂದರಿ.
ರೂಪಸಿ = ರೂಪವತಿ.
ರೂಪಾಜೀವಿ (ನಾ). ಸೌಂದರ್ಯದಿಂದ ಜನರನ್ನು ವಶಪಡಿಸಿಕೊಂಡು ಜೀವಿಸುವವಳು; ವೇಶ್ಯೆ; ಸೂಳೆ.
ರೂಪಾಜೀವೆ = ರೂಪಾಜೀವಿ.
ರೂಪಾಯಿ (ನಾ). ಒಂದು ಬೆಳ್ಳಿಯ ನಾಣ್ಯ ಮತ್ತು ಅದರ ಬೆಲೆಯುಳ್ಳ ಹಣ.
ರೂಪಿಣಿ = ರೂಪವತಿ.
ರೂಪಿತ (ಗು). ಆಕಾರ ಹೊಂದಿದ; ರೂಪವನ್ನು ಪಡೆದ.
ರೂಪು (ನಾ). ೧. ಚೆಲುವು; ಅಂದ. ೨. ಆಕಾರ; ಆಕೃತಿ. ~ಅಡಗು = ಕಾಣದಾಗು; ಕಣ್ಮರೆಯಾಗು. ~ಅಳಿ(ೞಿ) = ರೂಪುಗೆಡು. ~ಇಡು = ೧. ಕಾಣಿಸಿಕೊಳ್ಳು; ಕಣ್ಣಿಗೆ ಬೀಳು. ೨. ಕೋಪವನ್ನು ತೋರಿಸು; ಸಿಟ್ಟಿಗೇಳು. ~ಇಸು = ೧. ತಿಳಿಸು; ಪ್ರತಿಪಾದಿಸು. ೨. ಆಕಾರವನ್ನು ಕೊಡು; ಮೂರ್ತಗೊಳಿಸು. ೩. ಪರಿಶೀಲಿಸು; ವಿವೇಚಿಸು. ೪. ಕಾಣಿಸಿಕೊಳ್ಳು;

ಗೋಚರವಾಗು. ~ಕೆ(ಗೆ)ಡೆ = ರೂಪವು ಕಾಣದಂತಾಗು; ವೇಷಮರೆಸಿಕೊಳ್ಳು. ~ಕೆ(ಗೆ)ಡು =೧. ಆಕಾರ ವ್ಯತ್ಯಾಸವಾಗು. ೨. ಸೌಂದರ್ಯವು ಹಾಳಾಗು. ~ಕೊಡು =೧. ಆಕಾರವನ್ನು ಕೊಡು. ೨. ವ್ಯವಸ್ಥೆಗೆ ತರು; ರೂಪಿಸು. ~ಕೊ(ಗೊ)ಳ್ = ರೂಪವನ್ನು ಪಡೆ; ಆಕಾರವನ್ನು ಹೊಂದು.

ರೂಪ್ಯ (ನಾ). ೧. ಮುದ್ರೆ; ಅಂಕಿತ. ೨. = ರೂಪಾಯಿ. ೩. ಬೆಳ್ಳಿ. (ಗು). ೪. ಚೆಲುವಾದ; ಸೊಗಸಾದ. ೫. ಮುದ್ರೆಯಿಂದ ಕೂಡಿದ. ~ಅಚಲ = ಬೆಳ್ಳಿಯ ಬೆಟ್ಟ; ಕೈಲಾಸ.

ರೂಬರೂಬು (ಅ). ಮುಖಾಮುಖಿ; ಪ್ರತ್ಯಕ್ಷವಾಗಿ.

ರೂವಾರ (ನಾ). ಶಿಲ್ಪ; ಕೆತ್ತನೆಕೆಲಸ.

ರೂವಾರಿ (ನಾ). ಶಾಸನ, ಶಿಲ್ಪ ಮುಂತಾದುವುಗಳನ್ನು ಕೊರೆಯುವವನು; ಕಲ್ಲೋಜ.

ರೂವು = ರೂಪು.

ರೂಹ = ರೂಪು.

ರೂಹಾರ = ರೂವಾರ.

ರೂಹು = ರೂಪು.

ರೆಂಚೆ (ನಾ). ೧. ಒಂದು ಜಾತಿಯ ಮರ ಮತ್ತು ಅದರ ಹೂವು. ೨. = ಜೆಂಚೆ.

ರೆಂಬೆ (ನಾ). ಮರದ ಕೊಂಬೆ; ಗೆಲ್ಲು.

ರೆಕ್ಕೆ = ಜೆಂಕೆ. ~ಬಿಚ್ಚು = ೧. ಗರಿಗೆದರು. ೨. ಉತ್ಸಾಹದಿಂದ ಕೂಡಿರು.

ರೇಕು (ನಾ). ೧. ಯಾವುದಾದರೊಂದು ಲೋಹದ ಮೇಲೆ ಹಾಕುವ ಮತ್ತೊಂದು ಲೋಹದ ಹೊದಿಕೆ; ತಗಡು. ೨. ಹೂವಿನ ಪಕಳೆ; ಪಟಲ.

ರೇಕೆ = ರೇಖೆ.

ರೇಖಾಂಶ (ನಾ). ಗೋಳದಲ್ಲಿ ಉತ್ತರದಿಂದ ದಕ್ಷಿಣಕ್ಕೆ ಎಳೆದಿರುವ ಗೆರೆ; ಲಂಬರೇಖೆ.

ರೇಖಾಗಣಿತ (ನಾ). ಗಣಿತದಲ್ಲಿ ಒಂದು ಪ್ರಕಾರ; ಜ್ಯಾಮಿತಿ.

ರೇಖಾಚಿತ್ರ (ನಾ). ಬರಿಯ ಗೆರೆಗಳಿಂದ ರಚಿಸಿದ ಚಿತ್ರ.

ರೇಖಾವಿನ್ಯಾಸ (ನಾ). ಗೆರೆಗಳ ರಚನೆ.

ರೇಖೆ (ನಾ). ೧. ಗೆರೆ; ಗೀಟು. ೨. ಸಾಲು; ಓಳಿ. ೩. ತೃಪ್ತಿ; ತಣಿವು. ೪. ಮೋಸ; ವಂಚನೆ. ೫. ಅಲ್ಪ; ಸ್ವಲ್ಪ. ೬. ಅಂದ; ಚಂದ. ~ಇಸು = ೧. ಗೆರೆಯನ್ನು ಎಳೆ. ೨. ಗೆರೆಗಳಿಂದ ಚಿತ್ರವನ್ನು ಬರೆ. ೩. ಕಲ್ಪಿಸು; ಯೋಜಿಸು. ~ಕಾ(ಗಾ)ಣು = ಅಂದವಾಗಿ ಕಾಣು; ಶೋಭಿಸು. ~ಮಾಡು=ಧಾನ್ಯಗಳನ್ನು ಉಪಯೋಗಕ್ಕೆ ಸಿದ್ಧಪಡಿಸು, -ಹಸನುಮಾಡು.

ರೇಗಟ = ರಾಗಟೆ.

ರೇಗಟೆ = ರಾಗಟೆ.

ರೇಗು (ಕ್ರಿ). ೧. ಸಿಟ್ಟಾಗು; ಕೋಪಿಸಿಕೊಳ್ಳು; ಕೆರಳು. (ನಾ). ೨. ಕೋಪ; ಸಿಟ್ಟು. ೩. ಒಂದು ಜಾತಿಯ ಮರ; ಎಲಚಿ. ~ಇಸು = ಕೋಪಗೊಳ್ಳುವಂತೆ ಮಾಡು; ಕೆರಳಿಸು.

ರೇಚಕ (ನಾ). ೧. ಪ್ರಾಣಾಯಾಮದಲ್ಲಿ ಒಂದು ಪ್ರಕಾರ; ಉಸಿರನ್ನು ಹೊರಕ್ಕೆ ಬಿಡುವುದು. ೨. ಭೇದಿ ಮಾಡಿಸುವ ಔಷಧ; ವಿರೇಚಕ.

ರೇಚನ (ನಾ). ಭೇದಿ; ವಿರೇಚನ.

ರೇಚಿತ (ನಾ). ೧. ಕುದುರೆಯ ನಡಗೆಯಲ್ಲಿ ಒಂದು ಬಗೆ. (ಗು). ೨. ಹೊರಕ್ಕೆ ಕಳುಹಿಸಲ್ಪಟ್ಟ; ಹೊರದೂಡಿದ.

ರೇಚಿಸು (ಕ್ರಿ). ಪ್ರಾಣಾಯಾಮದಲ್ಲಿ ನಿರೋಧಿಸಿದ್ದ ವಾಯುವನ್ನು ಮೂಗಿನಿಂದ ಹೊರಬಿಡು.

ರೇಜಿಗೆ (ನಾ). ೧. ಜುಗುಪ್ಸೆ; ಹೇಸಿಗೆ. ೨. ಕಶ್ಮಲ; ಕೊಳೆ.

ರೇಣು (ನಾ). ೧. ಧೂಳಿನ ಕಣ. ೨. ಹೂವಿನ ಪರಾಗ. ೩. ಹೆಜ್ಜಾನೆ ; ಪಿಡಿ.

ರೇಣುಕೆ (ನಾ). ೧. ಒಂದು ಬಗೆಯ ಸುಗಂಧ ದ್ರವ್ಯ ; ತಕ್ಕೋಲ. ೨. ಜಮದಗ್ನಿ ಋಷಿಯ ಹೆಂಡತಿ. ೩. ಶಕ್ತಿದೇವತೆಯಾದ ಪಾರ್ವತಿಯ ಒಂದು ಸ್ವರೂಪ; ಎಲ್ಲಮ್ಮ.

ರೇತ ೧. = ರೇತಸ್ಸು. ೨. ಪಾದರಸ.

ರೇತಸ್ಸು (ನಾ). ವೀರ್ಯ.

ರೇತಿ (ನಾ). ಹಿಂದಿನ ಕಾಲದಲ್ಲಿ ಮಸಿಯನ್ನು ಆರಿಸಲು ಬಳಸುತ್ತಿದ್ದ ಒಂದು ಬಗೆಯ ಮರಳು.

ರೇಪಡಿಸು (ಕ್ರಿ). ಸವರು ; ಬಳಿ.

ರೇಫ (ನಾ). 'ರ' ಕಾರ.

ರೇಫೆ = ರೇಫ.

ರೇವಡಿ (ನಾ). ಒಂದು ಬಗೆಯ ಸಿಹಿತಿಂಡಿ. ~ಗಾರ=ಸಿಹಿತಿಂಡಿಯನ್ನು ಮಾಡುವವನು.

ರೇವತಿ (ನಾ). ೧. ಇಪ್ಪತ್ತೇಳು ನಕ್ಷತ್ರಗಳಲ್ಲಿ ಒಂದು ಮತ್ತು ಆ ನಕ್ಷತ್ರದಲ್ಲಿ ಬರುವ ಮಳೆ. ೨. ಬಲರಾಮನ ಹೆಂಡತಿ.

ರೇವು (ನಾ). ಹಡಗು, ದೋಣಿ ಮುಂತಾದುವು ಗಳು ಬಂದು ನಿಲ್ಲುವ ಸ್ಥಳ ; ಬಂದರು. ~ಪಟ್ಟಣ = ಹಡಗಿನ ನಿಲ್ದಾಣವನ್ನು ಹೊಂದಿರುವ ಪಟ್ಟಣ.

ರೇವೆ (ನಾ). ಸಣ್ಣಕಣ ; ರವೆ. ~ಮಣ್ಣು = ಮೆಕ್ಕಲುಮಣ್ಣು.

ರೇಶಿಮೆ (ನಾ). ಒಂದು ಜಾತಿಯ ಹುಳುವಿನ ಗೂಡಿನಿಂದ ಬರುವ ಎಳೆ.

ರೇಶ್ಮೆ = ರೇಶಿಮೆ. ~ಗೂಡು = ರೇಶಿಮೆಯ ಹುಳು ವಾಸಿಸುವ ಗೂಡು. ~ಬಟ್ಟೆ =ರೇಶಿಮೆಯ ಗೂಡಿನ ಎಳೆಗಳಿಂದ ನೆಯ್ದ ಬಟ್ಟೆ. ~ಹುಳು = ಕಂಬಳಿಹುಳುವಿನ ಜಾತಿಗೆ ಸೇರಿದ ಒಂದು ಜಾತಿಯ ಹುಳು.

ರೇಷೆ (ನಾ). ರೇಖೆ ; ಗೆರೆ.

ರೇಷ್ಮೆ = ರೇಶಿಮೆ.

ರೈ (ನಾ). ೧. ಐಶ್ವರ್ಯ ; ಸಂಪತ್ತು. ೨. ಹೊನ್ನು; ಚಿನ್ನ. ೩. ಕಾಂತಿ ; ಪ್ರಭೆ. ~ಇಸು = ಶೋಭಿಸು ; ಹೊಳೆ.

ರೈತ (ನಾ). ಬೇಸಾಯ ಮಾಡುವವನು ; ಒಕ್ಕಲಿಗ.

ರೈದ (ನಾ). ಧನವನ್ನು ಕೊಡುವವನು ; ಕುಬೇರ.

ರೈವತ (ನಾ). ೧. ಐಶ್ವರ್ಯದಿಂದ ಕೂಡಿದವನು ; ಧನಿಕ. ೨. ಒಂದು ಪರ್ವತದ ಹೆಸರು.

ರೊಂಕೆ (ನಾ). ಕಾಡುಕೋಣದ ಗುರುಗುಟ್ಟುವಿಕೆ. ~ಇಡು = ಕಾಡುಕೋಣದಂತೆ ಧ್ವನಿ ಮಾಡು.

ರೊಂಡಿ (ನಾ). ಕಟಿ ; ಟೊಂಕ ; ನಡು.

ರೊಂಡೆ (ನಾ). ಕೆಸರು ; ರಾಡಿ.

ರೊಕ್ಕ (ನಾ). ನಗದು ಹಣ ; ದುಡ್ಡು.

ರೊಕ್ಕಸ್ತ (ನಾ). ಧನಿಕ ; ಶ್ರೀಮಂತ.

ರೊಚ್ಚು (ನಾ). ೧. ಕೆಸರು ; ಪಂಕ. ೨. ಗಲೀಜು ; ರಾಡಿ. ೩. ಪಾಪ ; ದೋಷ. ೪. ಕೋಪ ; ಸಿಟ್ಟು.

ರೊಚ್ಚೆ (ನಾ). ಕೆಸರು ; ಪಂಕ.

ರೊಜ್ಜು = ರೊಚ್ಚೆ.

ರೊಟ್ಟಿ (ನಾ). ೧. ಒಂದು ಬಗೆಯ ತಿಂಡಿ. ೨. ಬ್ರೆಡ್ಡು.

ರೊಡ್ಡ (ನಾ). ೧. ಎಡಭಾಗ ; ವಾಮಭಾಗ. ೨. ಎಡಗೈಯಿಂದಲೇ ಕೆಲಸ ಮಾಡುವವನು ; ಎಡಚ.

ರೊಣಕು (ನಾ). ನೆಗೆತ ; ಜಿಗಿತ.

ರೋಕ (ನಾ). ೧. ರಂಧ್ರ; ಕಿಂಡಿ. ೨. ಬೆಳಕು; ಕಾಂತಿ. ೩. ಹಡಗು. ೪. ನಗದು.

ರೋಕು (ನಾ). ಕೋಪ; ರೋಷ.

ರೋಖು (ನಾ). ಹಣ ; ನಾಣ್ಯ. ~ವ್ಯಾಪಾರ =ನಗದು ವ್ಯಾಪಾರ. ~ಹಣ = ನಗದು ಹಣ ; ರೊಕ್ಕ.

ರೋಗ (ನಾ). ಬೇನೆ; ಕಾಯಿಲೆ; ಜಡ್ಡು. ~ಅಣು=ಕಾಯಿಲೆಗೆ ಕಾರಣವಾದ ಸೂಕ್ಷ್ಮ ಕ್ರಿಮಿ. ~ನಿದಾನ=ಕಾಯಿಲೆಯ ಕಾರಣದ ಶೋಧನೆ.

ರೋಗಿ (ನಾ). ರೋಗದಿಂದ ಪೀಡಿತನಾದವನು; ವ್ಯಾಧಿಗ್ರಸ್ತ.

ರೋಗಿಷ್ಠ = ರೋಗಿ.

ರೋಚಕ (ನಾ). ೧. ಉತ್ತೇಜನಕರವಾದ ಆಹಾರ. ೨. ಹಸಿವು; ಕ್ಷುಧೆ. (ಗು). ೩. = ರೋಚನ.

ರೋಚನ (ಗು). ೧. ಬೆಳಕನ್ನುಂಟುಮಾಡುವ; ಪ್ರಕಾಶಿಸುವ. ೨. ಹಸಿವೆಯನ್ನುಂಟು ಮಾಡುವ. ೩. ರುಚಿಯಾದ; ಸವಿಯಾದ.

ರೋಚಿ (ನಾ). ೧. ಬೆಳಕು; ಕಾಂತಿ. ೨. ಕಿರಣ; ಕದಿರು.

ರೋಚಿಸು (ಕ್ರಿ). ಇಷ್ಟಪಡು; ಆಸೆಪಡು.

ರೋಜ (ನಾ). ಒಂದು ಜಾತಿಯ ಮುಳ್ಳಿನ ಗಿಡ ಮತ್ತು ಅದರ ಹೂವು; ಗುಲಾಬಿ.

ರೋಜು (ನಾ). ೧. ದಿನ; ದಿವಸ. ೨. ದಿನಗೂಲಿ; ನಿತ್ಯ ಕೊಡುವ ಸಂಬಳ. ೩. ಕೆಲಸ; ಉದ್ಯೋಗ. ~ನಾಮೆ=ದಿನಚರಿ ಪುಸ್ತಕ; ಕಿರ್ದಿ.

ರೋಣು (ನಾ). ೧. ರಸ್ತೆ ಮುಂತಾದ ಕಡೆಗಳಲ್ಲಿ ನೆಲವನ್ನು ಗಟ್ಟಿಣೆ ಮಾಡಲು ಉರುಳಿಸುವ ದೊಡ್ಡಕಲ್ಲು. ೨. ಗಾರೆಯನ್ನು ಅರೆಯುವ ಕಲ್ಲು.

ರೋತೆ (ನಾ). ಕೊಳಕು; ಹೇಸಿಗೆ; ಗಲೀಜು.

ರೋದನ (ನಾ). ಅಳುವಿಕೆ; ಗೋಳಾಡುವುದು.

ರೋದನೆ = ರೋದನ.

ರೋದಸಿ = ರೋದಸ್ಸು.

ರೋದಸ್ಸು (ನಾ). ಭೂಮಿ ಮತ್ತು ಆಕಾಶ.

ರೋದಿಸು (ಕ್ರಿ). ಅಳು; ಗೋಳಾಡು.

ರೋದೋಂತ (ನಾ). ಆಕಾಶದ ಒಳಭಾಗ.

ರೋಧ (ನಾ). ೧. ಅಡ್ಡಿ; ತಡೆ. ೨. ನದಿ ಮುಂತಾದುವುಗಳ ದಡ, -ತೀರ. ~ಶಕ್ತಿ = ತಡೆಹಿಡಿಯುವ ಸಾಮರ್ಥ್ಯ.

ರೋಧೋವಕ್ತ್ರ (ನಾ). ಹೊಳೆ; ನದಿ.

ರೋಪಣ (ನಾ). ೧. ಏರಿಸುವಿಕೆ; ಎಬ್ಬಿಸುವಿಕೆ. ೨. ಬೆಳೆಯುವಂತೆ ಮಾಡುವಿಕೆ. ೩. ಬಾಣ; ಸರಳು.

ರೋಮ (ನಾ). ೧. ಮೈಮೇಲಿನ ಕೂದಲು. ೨. ತುಪ್ಪುಳು. ~ಉದ್ಗಮ = ರೋಮಾಂಚನ ಉಂಟಾಗುವುದು. ~ಹರ್ಷ = ರೋಮಾಂಚನವನ್ನುಂಟು ಮಾಡುವ ಹರ್ಷ.

ರೋಮಂಥ (ನಾ). ಹಸು ಮೊದಲಾದ ಪ್ರಾಣಿಗಳು ಮೆಲುಕು ಹಾಕುವಿಕೆ.

ರೋಮಕ (ಗು). ೧. ಮೈತುಂಬಾ ಕೂದಲುಗಳಿಂದ ಕೂಡಿದ. ೨. ರೋಂ ದೇಶಕ್ಕೆ ಸಂಬಂಧಿಸಿದ.

ರೋಮಶ (ನಾ). ೧. ಮೈತುಂಬ ಕೂದಲುಳ್ಳ ಕುರಿ, ಕರಡಿ ಮುಂತಾದ ಪ್ರಾಣಿವರ್ಗ. ೨. ಒಬ್ಬ ಋಷಿಯ ಹೆಸರು.

ರೋಮಾಂಚ (ನಾ). ನವಿರೇಳುವಿಕೆ; ಪುಳಕ.

ರೋಮಾಂಚನ = ರೋಮಾಂಚ.

ರೋಲಂಬ (ನಾ). ತುಂಬಿ; ಅರಡಿ; ದುಂಬಿ.

ರೋಷ (ನಾ). ಕೋಪ; ಕನಲಿಕೆ. ~ಆವೇಶ = ಕೋಪದ ಆಧಿಕ್ಯ, -ಆವೇಗ. ~(ಂ)ತ(ದ)ಟ್ಟು = ಕೋಪಗೊಳ್ಳು; ಸಿಟ್ಟಾಗು. ~ಸ್ಫುರಣ = ಕೋಪವು ಹೊರ ಹೊಮ್ಮುವಿಕೆ.

ರೋಷಿ (ಗು). ಕೋಪವುಳ್ಳ; ಕ್ರೋಧದಿಂದ ಕೂಡಿದ.

ರೋಸ = ರೋಷ.

ರೋಸು (ಕ್ರಿ). ೧. ಬೇಸರಿಸು; ಅಸಹ್ಯಪಡು. (ನಾ). ೨. = ರೋತೆ.

ರೋಹಣ (ನಾ). ೧. ಏರುವುದು ; ಹತ್ತುವುದು. ೨. ಬೆಳೆಯುವುದು. ೩. ಒಂದು ಬೆಟ್ಟದ ಹೆಸರು.

ರೋಹಿಣಿ (ನಾ). ೧. ಇಪ್ಪತ್ತೇಳು ನಕ್ಷತ್ರಗಳಲ್ಲಿ ಒಂದು ಮತ್ತು ಆ ನಕ್ಷತ್ರದಲ್ಲಿ ಬರುವ ಮಳೆ. ೨. ಹಸು ; ಆಕಳು. ೩. ಒಂದು ಜಾತಿಯ ಮರ ; ಚಂದನ. ೪. ಎಳೆಯ ವಯಸ್ಸಿನ ಹುಡುಗಿ. ೫. ಒಂದು ಬಗೆಯ ಕಂಠರೋಗ. ೬. ಚಂದ್ರನ ಹೆಂಡತಿ. ೭. ಬಲರಾಮನ ತಾಯಿ.

ರೋಹಿತ (ನಾ). ೧. ಕೆಂಪುಬಣ್ಣ. ೨. ಒಂದು ಜಾತಿಯ ಜಿಂಕೆ. ೩. ಒಂದು ಜಾತಿಯ ಮೀನು. ೪. ರಕ್ತ. ೫. ಕುಂಕುಮ ಕೇಸರಿ. ~ಅಶ್ವ = ಕೆಂಪುಕುದುರೆಗಳುಳ್ಳವನು ; ಅಗ್ನಿ.

ರೋಹಿಸು (ಕ್ರಿ). ಹತ್ತು ; ಏರು.

ರೌಕುಳ (ನಾ). ಆಧಿಕ್ಯ ; ಹೆಚ್ಚಳ.

ರೌಚ್ಯ (ನಾ). ೧. ಕಾಂತಿ ; ಬೆಳಕು. ೨. ಹದಿನಾಲ್ಕು ಮನುಗಳಲ್ಲಿ ಒಬ್ಬ.

ರೌದ್ರ (ನಾ). ೧. ಸಿಟ್ಟು ; ರೋಷ. ೨. ಉಷ್ಣತೆ ; ತಾಪ. ೩. ನವರಸಗಳಲ್ಲಿ ಒಂದು. ೪. ಅರುವತ್ತು ಸಂವತ್ಸರಗಳಲ್ಲಿ ಒಂದು. (ಗು). ೫. ರುದ್ರನಿಗೆ ಸಂಬಂಧಿಸಿದ. ೬. ಭೀಕರವಾದ ; ಭಯಂಕರವಾದ. ~ಅವತಾರ = ಭೀಕರವಾದ ಸ್ವರೂಪ.

ರೌದ್ರತೆ (ನಾ). ಭೀಕರತೆ ; ಪ್ರಚಂಡತೆ.

ರೌಪ್ಯ (ನಾ). ೧. ಬೆಳ್ಳಿ ; ರಜತ. (ಗು). ೨. ಬೆಳ್ಳಿಯಿಂದ ಮಾಡಿದ.

ರೌರವ (ನಾ). ೧. ಮೋಸ ; ಕಪಟ. ೨. ಒಂದು ಬಗೆಯ ಭಯಂಕರ ನರಕ. (ಗು). ೩. ರುರು ಎಂಬ ಜಿಂಕೆಯ ಚರ್ಮದಿಂದ ಮಾಡಿದ. ೪. ಭೀಕರವಾದ ; ಭಯಂಕರವಾದ.

ರೌಹಿಣೇಯ (ನಾ). ೧. ರೋಹಿಣಿಯ ಮಗ ; ಬುಧ. ೨. ಬಲರಾಮ. ೩. ನವರತ್ನಗಳಲ್ಲಿ ಒಂದು ; ಪಚ್ಚೆ.

ರೌಹಿಷ (ನಾ). ೧. ಒಂದು ಜಾತಿಯ ಜಿಂಕೆ. ೨. ಒಂದು ಜಾತಿಯ ಹುಲ್ಲು ; ಕಾಚಿಹುಲ್ಲು. ೩. ಒಂದು ಜಾತಿಯ ಮೀನು.



# ಱ

ಱ(ರ) (ನಾ). ಕನ್ನಡ ವರ್ಣಮಾಲೆಯ ನಲವತ್ತೆಂಟನೆಯ ಅಕ್ಷರ.

ಱ(ರ)ಂಚಿಕೆ (ನಾ). ಆನೆಯ ಮೇಲೆ ಕುಳಿತುಕೊಳ್ಳಲು ಹಾಕುವ ಭದ್ರಾಸನ ; ಅಂಬಾರಿ.

ಱ(ರ)ಂಚೆ = ಱಂಚೆ.

ಱ(ರ)ಂಜಿಕೆ = ಱಂಚಿಕೆ.

ಱ(ರ)ಟ್ಟೆ (ನಾ). ೧. ರೆಕ್ಕೆ ; ಪಕ್ಷ. ೨. ಮೊಳಕೈಯಿಂದ ಭುಜದವರೆಗಿನ ಕೈಯ ಭಾಗ.

ಱ(ರ)ವಕೆ (ನಾ). ಕುಪ್ಪಸ ; ಕಂಚುಕ.

ಱ(ರ)ವಿಕೆ = ಱವಕೆ.

ಱಟ (ನಾ). ಶಕಟರೇಫದನಂತರ ಬರುವ 'ಱ' ಎಂಬ ಅಕ್ಷರ.

ಱಾ(ರಾ)ಟಣ (ನಾ). ಬಾವಿಯಿಂದ ನೀರೆತ್ತುವ ಚಕ್ರ ಅಥವಾ ಯಂತ್ರ.

ಱಾ(ರಾ)ಟಳ = ಱಾಟಣ.

ಱಾ(ರಾ)ಟಾಳ = ಱಾಟಣ.

ಱಿ(ರಿ)ಕ್ಕಟೆ (ಅ). ವ್ಯರ್ಥವಾಗಿ ; ಸುಮ್ಮನೆ.

ಱೆ(ರೆ)ಂಕೆ (ನಾ). ರೆಕ್ಕೆ; ಗರಿ.

ಱೆ(ರೆ)ಂಚೆ (ನಾ). ಆನೆ, ಕುದುರೆಗಳ ಹಕ್ಕರಿಕೆ; ಗುಳ.

ಱೆ(ರೆ)ಕ್ಕೆ = ಱೆಂಕೆ.

ಱೆ(ರೆ)ಟ್ಟೆ = ಱಟ್ಟೆ.

ಱೆ(ರೆ)ಪ್ಪು (ಕ್ರಿ). ಹೊಡೆ; ಬಡಿ.

ಱೆ(ರೆ)ಪ್ಪೆ (ನಾ). ಕಣ್ಣಿನ ಹೊದಿಕೆ; ಎವೆ ~ಬಡಿ = ಎವೆ ಮಿಟುಕಿಸು.

ಱೊ(ರೊ)ಪ್ಪ (ನಾ). ೧. ಕುರಿ, ಹಂದಿ ಮೊದಲಾದ ಪ್ರಾಣಿಗಳನ್ನು ಕೂಡುವ ಜಾಗ; ದೊಡ್ಡಿ. ೨. ಆಶ್ರಯಸ್ಥಾನ; ನೆಲೆ.

ಱೊ(ರೊ)ಪ್ಪು (ಕ್ರಿ). ೧. ಗರ್ಜಿಸು; ಅಬ್ಬರಿಸು. (ನಾ). ೨. = ಱೊಪ್ಪ.

ಱೊ(ರೊ)ಜ್ಜೆ (ನಾ). ಕಶ್ಮಲ; ಕೊಳಕು.

ಱೋ(ರೋ)ಡಗ (ನಾ). ೧. ವಿನೋದಗಾರ; ವಿದೂಷಕ. ೨. ತೊಂದರೆಯನ್ನುಂಟು ಮಾಡುವವನು; ನಿಂದಕ. ~ತನ = ಚೇಷ್ಟೆ; ಅಣಕಾಟ.

ಱೋ(ರೋ)ಡು (ನಾ). ಅನಾದರ; ತಿರಸ್ಕಾರ. ~ಆಡು = ತಿರಸ್ಕರಿಸು; ಹೀಯಾಳಿಸು. ~ಇಸು = ಱೋಡಾಡು.

ಱೋ(ರೋ)ಡೆಗ (ನಾ). ೧. ವಿಕೃತದೇಹಿ. ೨. ಅವಿವೇಕಿ; ಮೂರ್ಖ.





ಲ (ನಾ). ಕನ್ನಡ ವರ್ಣಮಾಲೆಯ ನಲವತ್ತೊಂಬತ್ತನೆಯ ಅಕ್ಷರ.

ಲಂಗ (ನಾ). ಹೆಣ್ಣುಮಕ್ಕಳ ಒಂದು ಉಡುಗೆ; ಪರಕಾರ.

ಲಂಗಡಾ (ನಾ). ಕುಂಟ; ಹೆಳವ.

ಲಂಗರು (ನಾ). ಬಂದರಿನಲ್ಲಿ ಹಡಗನ್ನು ನಿಲ್ಲಿಸುವುದಕ್ಕಾಗಿ ಹಡಗಿನ ಪಕ್ಕದಲ್ಲಿ ಇಳಿಬಿಡುವ ಭಾರವಾದ ಕಬ್ಬಿಣದ ಸಲಕರಣೆ.

ಲಂಗಿಗ (ನಾ). ಗಳಿಯ ಮೇಲೆ ಕಸರತ್ತು ಮಾಡುವವನು; ಕೊಲ್ಲಟಿಗ; ಡೊಂಬ.

ಲಂಗಿಸು (ಕ್ರಿ). ಹಾರು; ಜಿಗಿ; ಕುಪ್ಪಳಿಸು.

ಲಂಗೋಟಿ (ನಾ). ಕೌಪೀನ; ಕೋವಣ.

ಲಂಘುಳ = ಲಂಗಿಗ.

ಲಂಘನ (ನಾ). ೧. ಹಾರುವಿಕೆ; ಜಿಗಿತ ೨. ಮೀರುವುದು. ೩. ಹದ್ದುಮೀರಿದ ವರ್ತನೆ. ೪. ಹತ್ತುವುದು; ಏರುವುದು. ೫. ಉಪವಾಸ; ನಿರಾಹಾರ.

ಲ(ಳ)ಂಘಿಸು (ಕ್ರಿ). ೧. ಹಾರು; ನೆಗೆ. ೨. ದಾಟು; ಮೀರು. ೩. ಮೀರಿನಡೆ.

ಲಂಚ (ನಾ). ಅಕ್ರಮವಾಗಿ ಪಡೆಯುವ ಹಣ; ರುಷುವತ್ತು. ~(ಂ)ಕು(ಗು)ಳಿ = ಲಂಚಗಾಱ. ~ಕಾ(ಗಾ)ಱ(ರ) = ಲಂಚವನ್ನು ಪಡೆಯುವವನು; ಲಂಚಗುಳಿ. ~ಖೋರ = ಲಂಚಗಾಱ.

ಲಂಜಿಕೆ (ನಾ). ವೇಶ್ಯೆ; ಸೂಳೆ; ಹಾದರಗಿತ್ತಿ.

ಲಂಜೆ = ಲಂಜಿಕೆ.

ಲಂಟಾನ (ನಾ). ಒಂದು ಜಾತಿಯ ಪೊದೆ; ಲಾಂಟಾನ.

ಲಂಡ (ನಾ). ೧. ಧರ್ಮಶ್ರದ್ಧೆಯಿಲ್ಲದವನು; ಪಾಷಂಡಿ. ೨. ದುಷ್ಟ; ಕೆಟ್ಟಮನುಷ್ಯ.

೩. ಒರಟ; ಉದ್ಧತ. ೪. ಲದ್ದಿ. (ಗು). ೫. ನಯವಿಲ್ಲದ; ಒರಟಾದ. ೬. ಮೊಂಡಾದ; ಮೊಟಕಾದ. ~ಅಂಗಿ =ಅರ್ಧ ತೋಳಿನ, ಉದ್ದ ಕಡಮೆಯಾದ ಅಂಗಿ. ~ಚಣ್ಣ = ಗಿಡ್ಡವಾದ ಚಡ್ಡಿ, -ಚಲ್ಲಣ. ~ತನ= ದುಷ್ಟತನ; ನೀಚತನ. ~ಪೆ(ವೆ)ಣ್=ಲಂಡೆ. ~ಬುದ್ಧಿ = ಹೀನವಾದ ಆಲೋಚನೆ.

ಲಂಡೆ (ನಾ). ನೀತಿ ನಿಯಮವಿಲ್ಲದವಳು; ದುಷ್ಟೆ.

ಲಂಡಣಿಗ = ರಂದವಣಿಗ. ~ಇತ್ತಿ = ರಂದಣಗಿತ್ತಿ.

ಲಂಪಟ (ನಾ). ೧. ಅತ್ಯಾಸಕ್ತಿಯುಳ್ಳವನು; ಲಾಲಸ. ೨. ಕಾಮುಕ. (ಗು). ೩. ಅತ್ಯಾಸಕ್ತಿಯಿಂದ ಕೂಡಿದ.

ಲಂಪಟತೆ (ನಾ). ೧. ಅತ್ಯಾಸಕ್ತಿ. ೨. ಕಾಮುಕತೆ.

ಲಂಪಟೆ (ನಾ). ೧. ಅತ್ಯಾಸಕ್ತೆ. ೨. ಕಾಮುಕಿ.

ಲಂಪಣ = ಲಂಪಟ.

ಲಂಪಳ = ಲಂಪಟ. ~ಇಕೆ = ವಿಷಯಾಸಕ್ತಿ.

ಲಂಬ (ನಾ). ೧. ಉದ್ದಳತೆ. ೨. ರೇಖಾಗಣಿತದಲ್ಲಿ ಸಮತಳರೇಖೆಯ ಮೇಲೆ ಸಮಕೋನವಾಗುವಂತೆ ಎಳೆದ ಗೆರೆ. ೩. ಒಬ್ಬ ರಾಕ್ಷಸನ ಹೆಸರು. (ಗು) ೪. ಜೋಲುವ; ನೇತಾಡುವ. ೫. ನೀಳವಾದ; ನೇರವಾದ. ೬. ವಿಶಾಲವಾದ ~ಇಸು = ೧. ಜೋಲಾಡು; ನೇತಾಡು. ೨. ವಿಸ್ತರಿಸು; ಹರಡು. ೩. ದೊಡ್ಡದನ್ನಾಗಿ ಮಾಡು; ಹಿಗ್ಗಿಸು; ಎಳೆ. ೪. ಒರಗು; ಆಶ್ರಯಿಸು. ~ಉದರ = ೧. ದೊಡ್ಡ ಹೊಟ್ಟೆಯುಳ್ಳವನು. ೨. ಗಣಪತಿ; ಗಣೇಶ. ~ಕರ್ಣ = ೧. ಉದ್ದವಾದ ಕಿವಿಯುಳ್ಳವನು. ೨. ಆನೆ. ೩. ಕತ್ತೆ. ~ಕೂರ್ಚ = ಉದ್ದವಾದ ಗಡ್ಡವುಳ್ಳವನು.

ಲಂಬಕ (ನಾ). ಹಾರ; ಸರ.

ಲಂಬಣ (ನಾ). ೧. ಕುಚ್ಚು; ಗೊಂಡೆ. ೨.=ಲಂಬಣಿಗೆ. (ಗು). ೩. ಜೋಲಾಡುವ; ನೇತಾಡುವ.

ಲಂಬಣಿಗೆ (ನಾ). ಉದ್ದವಾದ ಕೊರಳ ಹಾರ.

ಲಂಬನ ೧. = ಲಂಬಣಿಗೆ. (ಗು). ೨. ತೂಗಾಡುವ; ತೊನೆದಾಡುವ.

ಲಂಬಳ = ಲಂಬನ.

ಲಂಬಳಿಗೆ = ಲಂಬಣಿಗೆ.

ಲಂಬಾಡಿ = ಲಂಬಾಣಿ.

ಲಂಬಾಣಿ (ನಾ). ಒಂದು ಜನಾಂಗ.

ಲಂಬಿ (ಗು). ಜೋಲಾಡುವ; ನೇತಾಡುವ.

ಲಂಬಿಕೆ (ನಾ). ೧. ನೇತಾಡುವುದು; ತೂಗಾಡುವುದು ೨. ಕಿರುನಾಲಗೆ ೩. ಕಿವಿಯ ಹಾಲೆ.

ಲಂಬು (ನಾ). ೧. ಉದ್ದ; ನೀಳವಾದುದು. ೨. ಉದ್ದವಾಗಿರುವವನು; ಎತ್ತರವಾಗಿರುವವನು.

ಲಂಬೂಷ (ನಾ). ಏಳು ಎಳೆಗಳ ಸರ, -ಹಾರ.

ಲಕಲಕಿಸು (ಕ್ರಿ). ಮಿನುಗು; ಹೊಳೆ.

ಲಕುಚ (ನಾ). ಒಂದು ಜಾತಿಯ ಗಿಡ ಮತ್ತು ಅದರ ಹಣ್ಣು; ಗಜನಿಂಬೆ.

ಲಕುಟ = ಲಗುಡ.

ಲಕುಮಿ = ಲಕ್ಷ್ಮಿ.

ಲಕೋಟೆ (ನಾ). ೧. ಪತ್ರಗಳನ್ನು ಒಳಗಿಟ್ಟು ಕಳುಹಿಸಲು ಮಾಡಿರುವ ಕಾಗದದ ಚೀಲ; ಕವರು; ಲಿಫಾಫೆ. ೨. ಮುಚ್ಚಿದ ಅಥವಾ ಮುದ್ರಿಸಿದ ಪತ್ರ.

ಲಕ್ಕ ೧. = ಲಕ್ಷ. ೨. ಪ್ರಕಾಶ; ಹೊಳಪು. ೩. ಅರಗು; ಲಾಕ್ಷ. ೪. ಸುಂದರವಾದುದು; ಚೆಲುವಾದುದು. ~(ಂ)ಪ(ಬ)ಡೆ = ಹೊಳಪಿನಿಂದ ಕೂಡಿರು; ಥಳಥಳಿಸು.

ಲಕ್ಕಣ (ನಾ). ೧. ಗುರುತು; ಲಕ್ಷಣ. ೨. ವ್ಯಾಖ್ಯೆ; ವ್ಯಾಖ್ಯಾನ.

ಲಕ್ಕಣಿಕೆ = ಲೆಕ್ಕಣಿ.

ಲಕ್ಕರಿ = ಲಷ್ಕರು.

ಲಕ್ಕಿ (ನಾ). ೧. ಒಂದು ಜಾತಿಯ ಗಿಡ. ೨. ಸಂಪತ್ತು ; ಲಕ್ಷ್ಮಿ.

ಲಕ್ಕು (ನಾ). ಒಲವು ; ಆಸಕ್ತಿ.

ಲಕ್ಕೆ (ನಾ). ೧. ನೂರು ಸಾವಿರ; ಲಕ್ಷ. ೨. ಲಕ್ಷ್ಯ ; ಗುರಿ.

ಲಕ್ವ (ನಾ). ಅರ್ಧಾಂಗವಾಯು ; ಪಾರ್ಶ್ವ ವಾಯು.

ಲಕ್ಷ (ನಾ). ೧. ಗುರುತು ; ಚಿಹ್ನೆ. ೨. ಗುರಿ; ಧ್ಯೇಯ. ೩. ನಟನೆ ; ಸೋಗು. ೪. ನೂರು ಸಾವಿರ; ಲಕ್ಕ. ೫. ಗಮನ ; ಲಕ್ಷ್ಯ. ೬. ದೃಷ್ಟಿಗೆ ಗೋಚರವಾದುದು. ~ಅಧಿಕಾರಿ = ಲಕ್ಷಪರಿಮಿತಿಯ ಸಂಪತ್ತಿಗೆ ಒಡೆಯ ; ಐಶ್ವರ್ಯವಂತ. ~ಅಧಿಪತಿ = ಲಕ್ಷಾಧಿಕಾರಿ. ~ಅಧೀಶ್ವರ = ಲಕ್ಷಾಧಿಕಾರಿ. ~ಇಸು= ೧. ಗುರಿಯಿಡು. ೨. ಗಮನಿಸು ; ಲಕ್ಷ್ಯಕೊಡು. ~ಕೊ(ಗೊ)ಡು = ಗಮನಕೊಡು ; ಗಮನಿಸು.

ಲಕ್ಷಣ (ನಾ). ೧. ಗುರುತು; ಚಿಹ್ನೆ. ೨. ಶುಭ ಚಿಹ್ನೆ ; ಅನುಕೂಲಕರವಾದ ಸೂಚನೆ. ೩. (ರೋಗ ಮುಂತಾದುವುಗಳ) ಮುನ್ಸೂಚನೆ. ೪. ವಿಶಿಷ್ಟವಾದ ಗುಣ ; ವೈಶಿಷ್ಟ್ಯ. ೫. ದೃಷ್ಟಾಂತ; ಉದಾಹರಣೆ. ೬. ನಿಯಮ ; ಸೂತ್ರ. (ಗು). ೭. ಅಚ್ಚುಕಟ್ಟಾದ ; ಸೊಗಸಾದ ~ಗ್ರಂಥ = ಕಾವ್ಯ, ಭಾಷೆ ಮುಂತಾದುವುಗಳ ಲಕ್ಷಣವನ್ನು ಪ್ರತಿಪಾದಿಸುವ ಗ್ರಂಥ.

ಲಕ್ಷಣವಂತ (ನಾ). ೧. ಚೆಲುವ. ೨.ಅದೃಷ್ಟಶಾಲಿ.

ಲಕ್ಷ್ಮ (ನಾ). ೧.ಗುರುತು ; ಚಿಹ್ನೆ; ಕುರುಹು. ೨. ಕಳಂಕ ; ದೋಷ.

ಲಕ್ಷ್ಮಿ (ನಾ). ೧. ಸಂಪತ್ತು ; ಐಶ್ವರ್ಯ. ೨. ಯಶಸ್ಸು ; ಜಯ. ೩. ಶೋಭೆ ; ಕಾಂತಿ. ೪. ವಿಷ್ಣುವಿನ ಹೆಂಡತಿ ; ಐಶ್ವರ್ಯ ಮತ್ತು ಸೌಂದರ್ಯದ ಅಧಿದೇವತೆ.

ಲಕ್ಷ್ಮೀಪುತ್ರ (ನಾ). ೧. ಲಕ್ಷ್ಮಿಯ ಮಗ ; ಮನ್ಮಥ. ೨. ಧನಿಕ ; ಸಿರಿವಂತ.

ಲಕ್ಷ್ಯ (ನಾ). ೧. ಗುರಿ ; ಧ್ಯೇಯ. ೨.ಗಮನ; ಧ್ಯಾಸ. ೩. ಪಾತ, ಲಕ್ಷ್ಯ, ಶೀಘ್ರ, ಘಾತ ಮತ್ತು ಬಹುವೇಗವೆಂಬ ಐದು ಬಗೆಯ ಬಾಣಪ್ರಯೋಗಗಳಲ್ಲಿ ಒಂದು. ೪. ದೃಷ್ಟಾಂತ ; ನಿದರ್ಶನ ; ಉದಾಹರಣೆ. (ಗು). ೫. ಗುರುತಿಸಲ್ಪಡುವ. ೬. ಗುರಿಯಿಡಬೇಕಾದ. ೭. ಲಕ್ಷಣವನ್ನುಳ್ಳ.

ಲಗಡ ೧. = ಲಗಡಿ. ೨. = ಲಗಡು.

ಲಗಡಿ (ನಾ). ಮಲ್ಲಯುದ್ಧದಲ್ಲಿ ಒಂದು ವರಸೆ.

ಲಗಡು (ನಾ). ಒಂದು ಜಾತಿಯ ಪಕ್ಷಿ; ಡೇಗೆ; ಗಿಡುಗ.

ಲಗತು = ಲಗತ್ತು.

ಲಗತ್ತು (ನಾ). ಜೋಡಣೆ ; ಹೊಂದಿಕೆ. ~ಇಸು = ಜೋಡಿಸು ; ಅಂಟಿಸು.

ಲಗಳೆ (ನಾ). ಉದ್ದನೆಯ ಚರ್ಮದ ಚೀಲ ; ಪಕಾಲೆ.

ಲಗಾಟ (ನಾ). ಲಾಗ ; ಪಲ್ಟಿ. ~ಹಾಕು = ೧. ಲಾಗಹಾಕು ; ಪಲ್ಟಿಹೊಡೆ. ೨. ಸಾಯು. ೩. ಅಯಶಸ್ವಿಯಾಗು ; ತೇರ್ಗಡೆಯಾಗದಿರು.

ಲಗಾಮು (ನಾ). ೧. ಕಡಿವಾಣ ; ವಾಘೆ. ೨. ಅಂಕೆ ; ಹಿಡಿತ.

ಲಗಾಯಿಸು (ಕ್ರಿ). ೧. ಕೂಡಿಸು ; ಜೋಡಿಸು. ೨. ಹೊಡೆ ; ಬಾರಿಸು.

ಲಗಾವು (ನಾ). ಸೇರುವಿಕೆ ; ಹೊಂದಿಕೆ.

ಲಗು (ಅ) ಬೇಗನೆ ; ಶೀಘ್ರವಾಗಿ.

ಲಗುಡ (ನಾ). ಕೋಲು ; ಬಡಿಗೆ; ದೊಣ್ಣೆ.

ಲಗುಡೆ = ಲಗುಡ.

ಲಗುನೆ = ಲಗ್ನ.

ಲಗುಬಗೆ (ನಾ). ಚುರುಕು ; ಚಟುವಟಿಕೆ.

ಲಗ್ಗ (ನಾ). ಮಲ್ಲಯುದ್ಧದಲ್ಲಿ ಒಂದು ವರಸೆ.

ಲಗ್ಗಿಕ = ಲಗ್ಗಿಗ.

ಲಗ್ಗಿಗ (ನಾ). ಮುಹೂರ್ತವನ್ನು ತಿಳಿಸುವವನು ; ಜ್ಯೋತಿಷಿ.

ಲಗ್ಗೆ (ನಾ). ೧. ಹಲವು ವಾದ್ಯಧ್ವನಿಗಳ ಮೇಳ. ೨. ಕೋಲಾಹಲ; ಗದ್ದಲ. ೩. ಮುತ್ತಿಗೆ; ಅಕ್ರಮಣ. ೪. ಮಲ್ಲಯುದ್ಧದಲ್ಲಿ ಒಂದು ವರಸೆ. ೫. ಚೆಂಡಾಟದಲ್ಲಿ ಚೆಂಡನ್ನು ಎಸೆದು ಇಟ್ಟಿರುವ ಗುರಿ ಹಲಗೆ. ~ಚೆಂಡು = ಗುರಿ ಹಲಗೆಗೆ ಚೆಂಡನ್ನು ಎಸೆದು ಆಡುವ ಆಟ ಮತ್ತು ಆ ಆಟಕ್ಕೆ ಬಳಸುವ ಚೆಂಡು. ~ಪ(ವ)ರಿಗೆ = ಆತ್ಮರಕ್ಷಣೆಗಾಗಿ ಯುದ್ಧದಲ್ಲಿ ಬಳಸುವ ಢಾಲು ; ಅಡ್ಡಣಿಗೆ. ~ಪ(ವ)ಱೆ(ರೆ) = ಮುತ್ತಿಗೆ ಹಾಕಲು ಹೊರಡುವಾಗ ಬಾರಿಸುವ ನಗಾರಿ ; ರಣವಾದ್ಯ. ~ಸೂಳು = ಹಲವು ವಾದ್ಯಗಳ ಜೋರಾದ ಧ್ವನಿ. ~ಹತ್ತು = ಮುತ್ತಿಗೆ ಹಾಕು; ದಾಳಿ ಮಾಡು.

ಲಗ್ನ (ನಾ). ೧. ಮೇಷ ಮೊದಲಾದ ರಾಶಿಗಳ ಹುಟ್ಟುವಿಕೆ, —ಉದಯ. ೨. ಮದುವೆ; ವಿವಾಹ. ೩. ರಾಜನನ್ನು ನಿದ್ರೆಯಿಂದ ಎಚ್ಚರಗೊಳಿಸುವ ಸ್ತೋತ್ರಪಾಠಕ. ೪. ಮದಗಜ; ಮದಿಸಿದ ಆನೆ. (ಗು). ೫. ಅಂಟಿದ; ನಾಟಿದ; ಸಿಕ್ಕಿಕೊಂಡ. ೬. ಮಂಗಳಕರವಾದ. ೭. ಆಸಕ್ತಿಯುಳ್ಳ. ~ಅಧಿಪತಿ = ಆಯಾ ರಾಶಿಗೆ ಮುಖ್ಯಸ್ಥಾನದಲ್ಲಿರುವ ಗ್ರಹ. ~ಆ(ವಾ)ಗು = ೧. ಮದುವೆಯಾಗು ; ವಿವಾಹವಾಗು. ೨. = ಲಗ್ನಿಸು. ~ಇಗ = ಲಗ್ಗಿಗ. ~ಇಸು = ಒಂದಾಗು; ಬೆರೆ. ~ಕಾಲ = ೧. ಶುಭಮುಹೂರ್ತ ; ಒಳ್ಳೆಯ ಕಾಲ. ೨. ಮದುವೆಯ ಸಮಯ. ~ಪತ್ರಿಕೆ=೧. ಮದುವೆಗೆ ಮೊದಲು ಗಂಡು ಮತ್ತು ಹೆಣ್ಣಿನ ಕಡೆಯವರು ಸೇರಿ ಮುಹೂರ್ತವನ್ನು ನಿಶ್ಚಯಿಸಿ ಬರೆಯುವ ಪತ್ರಿಕೆ ಮತ್ತು ಆ ಪತ್ರಿಕೆಯನ್ನು ಬರೆಸುವ ಸಮಾರಂಭ. ೨. ಮದುವೆಯ ಕರೆಯೋಲೆ, —ಆಹ್ವಾನಪತ್ರಿಕೆ.

ಲಘಿಮ (ನಾ). ಅಲ್ಪವ್ಯಕ್ತಿ ; ಕೀಳುಮನುಷ್ಯ.

ಲಘಿಮೆ (ನಾ). ೧. ಹಗುರವಾಗಿರುವಿಕೆ ; ಭಾರವಿಲ್ಲದಿರುವಿಕೆ. ೨. ಅಣಿಮೆ, ಮಹಿಮೆ, ಗರಿಮೆ, ಲಘಿಮೆ, ಪ್ರಾಪ್ತಿ, ಪ್ರಾಕಾಮ್ಯ, ಈಶತ್ವ ಮತ್ತು ವಶಿತ್ವ ಎಂಬ ಎಂಟು ಬಗೆಯ ಸಿದ್ಧಿಗಳು.

ಲಘು (ನಾ). ೧. ಛಂದಸ್ಸಿನಲ್ಲಿ ಒಂದು ಮಾತ್ರೆಯನ್ನು ಹೊಂದಿರುವ ಅಕ್ಷರ; ಹ್ರಸ್ವಾಕ್ಷರ. (ಗು). ೨. ವೇಗದಿಂದ ಕೂಡಿದ ; ಶೀಘ್ರವಾದ. ೩. ಭಾರವಲ್ಲದ; ಹಗುರವಾದ. ೪. ಸಂಕ್ಷಿಪ್ತವಾದ; ಚಿಕ್ಕ. ೫. ಕ್ಷುಲ್ಲಕವಾದ; ಕೀಳಾದ. ೬. ಸ್ವಾರಸ್ಯವಿಲ್ಲದ ; ನಿಸ್ಸಾರವಾದ.

ಲಘುತ್ವ (ನಾ). ೧. ವೇಗ; ಶೀಘ್ರತೆ. ೨. ಹಗುರವಾಗಿರುವಿಕೆ. ೩. ಕೀಳುತನ ; ಸಣ್ಣತನ.

ಲಚಂಡ (ನಾ). ೧. ತೊಂದರೆ; ಅಡಚಣೆ. ೨. ಕಿತಾಪತಿ; ಉಪದ್ರವ.

ಲಚ್ಚ ೧. = ಲಚ್ಚಣ. ೨. ನೂರು ಸಾವಿರ; ಲಕ್ಷ.

ಲಚ್ಚಣ (ನಾ). ಗುರುತು ; ಲಕ್ಷಣ.

ಲಜ್ಜರಿಕೆ (ನಾ). ಒಂದು ಜಾತಿಯ ಸಸ್ಯ ; ಮುಟ್ಟಿದರೆ ಮುನಿ.

ಲಜ್ಜೆ (ನಾ). ನಾಚಿಕೆ; ಸಂಕೋಚ. ~ಇಸು = ನಾಚಿಕೊಳ್ಳು; ಸಂಕೋಚಪಟ್ಟುಕೊಳ್ಳು. ~ಕೇ(ಗೇ)ಡಿ = ನಾಚಿಕೆಯಿಲ್ಲದವನು ; ನಿರ್ಲಜ್ಜ. ~ಕೇ(ಗೇ)ಡು = ನಾಚಿಕೆಯಿಲ್ಲದಿರುವುದು; ಅವಮಾನಕರವಾದುದು.

ಲಟಕಟಿಸು (ಕ್ರಿ). ೧. ಉದ್ರೇಕಗೊಳ್ಳು; ಚಡಪಡಿಸು. ೨. ಚಕಿತವಾಗು.

ಲಟಲಟಿಸು (ಕ್ರಿ). ಭಯದಿಂದ ನಡುಗು; ತತ್ತರಿಸು.

ಲಟಹ (ನಾ). ಚೆಲುವು; ವಿಲಾಸ.

ಲಟಾಪಟಿ (ನಾ). ೧. ಜಗಳ; ತಂಟೆ. ೨. ಹೊಡೆದಾಟ.

ಲಟಿಕೆ (ನಾ). ಬೆರಳುಗಳನ್ನು ಮಡಿಸಿ ಲಟಕ್ಕೆಂದು ಶಬ್ದ ಮಾಡುವುದು; ನಟಿಕೆ. ~ತೆಗೆ=ದೃಷ್ಟಿತೆಗೆ; ನಿವಾಳಿಸು. ~ಮುರಿ =೧. ಕೈಯ ಬೆರಳುಗಳನ್ನು ಮಡಿಸಿ ಲಟಕ್ಕೆಂದು ಶಬ್ದಮಾಡು. ೨. ಶಪಿಸು,

ಲಟ್ಟಣಿಗೆ (ನಾ). ೧. ಹಪ್ಪಳ, ಚಪಾತಿ ಮುಂತಾದುವನ್ನು ಲಟ್ಟಿಸುವ ಉಪಕರಣ; ರತ್ತೂಡಿ. ೨. ಮುದ್ರಣಯಂತ್ರದಲ್ಲಿ ಜೋಡಿಸಿದ ಅಚ್ಚಿನ ಮೊಳೆಗಳಿಗೆ ಮಸಿಯನ್ನು ಹಚ್ಚುವ ಉರುಳುಕಂಬಿ.

ಲಟ್ಟಿಸು (ಕ್ರಿ). ಲಟ್ಟಣಿಗೆಯಿಂದ ಒತ್ತು, -ಹಾಳೆಮಾಡು.

ಲಟ್ಟಿ (ನಾ). ಒರಟು ಹೆಂಗಸು; ದಿಟ್ಟೆ.

ಲಟ್ಠ (ಗು). ಸ್ಥೂಲ; ದಪ್ಪವಾದ.

ಲಡಾಯಿ (ನಾ). ಯುದ್ಧ; ಕಾಳಗ; ಜಗಳ.

ಲಡಿ (ನಾ). ಪಾರದ ಉಂಡೆ.

ಲಡ್ಡಿಗೆ = ಲಾಡು.

ಲಡ್ಡು ೧. = ಲೊಡ್ಡು. ೨. = ಲಾಡು.

ಲಡ್ಡುಗೆ = ಲಾಡು.

ಲ(ಳ)ತಾಂಗಿ (ನಾ). ಬಳ್ಳಿಯಂತೆ ಬಳುಕುವ ಮೈಯುಳ್ಳವಳು; ಕೋಮಲೆ.

ಲತಾಂತ (ನಾ). ಹೂವು; ಪುಷ್ಪ. ~ಮಾಲೆ = ಹೂವಿನ ಮಾಲೆ; ಹಾರ. ~ವೃಷ್ಟಿ = ಹೂಮಳೆ; ಪುಷ್ಪವೃಷ್ಟಿ.

ಲತಾಕುಂಜ = ಲತಾಗೃಹ.

ಲತಾಗೃಹ (ನಾ). ಬಳ್ಳಿಮಾಡ; ಲತಾಮಂಟಪ.

ಲತಿಕೆ (ನಾ). ಸಣ್ಣಬಳ್ಳಿ.

ಲತೆ (ನಾ). ಬಳ್ಳಿ; ಹಂಬು. ~ಮ(ವ)ನೆ = ಲತಾಗೃಹ.

ಲತೆಯಿಜು(ರಿ) = ಲಟ್ಟಿಸು.

ಲತ್ತಗೆ (ನಾ). ಸ್ತ್ರೀಯರು ಅಲಂಕಾರಕ್ಕಾಗಿ ಅಂಗಾಲಿಗೆ ಹಚ್ಚುವ ಕೆಂಪುಬಣ್ಣ; ಅಲತಗೆ.

ಲತ್ತೆ (ನಾ). ಒದೆತ; ಹೊಡೆತ.

ಲದ್ದಿ (ನಾ). ಪ್ರಾಣಿಯ ಮಲ; ಲಂಡ.

ಲಪಟಾಯಿಸು (ಕ್ರಿ).ಎತ್ತಿಹಾಕು; ಅಪಹರಿಸು.

ಲಪನ (ನಾ). ೧. ಮಾತನಾಡುವುದು. ೨. ಮಾತು. ೩. ಬಾಯಿ; ವದನ.

ಲಪಿಸು (ಕ್ರಿ). ಮಾತನಾಡು; ಹೇಳು.

ಲಪೇಟಿ (ನಾ). ೧. ಸುತ್ತಿಕೊಳ್ಳುವ ಬಟ್ಟೆ. ೨. ಲುಂಗಿ.

ಲಪ್ಪಾಟಿ = ಲಪೇಟಿ.

ಲಫಂಗ (ನಾ). ಪುಂಡ; ದುರಾಚಾರಿ.

ಲಬ್ಧ ೧. = ಲಬ್ಧಿ. (ಗು). ೨. ಹೊಂದಿದ; ಪಡೆದ; ಪ್ರಾಪ್ತವಾದ.

ಲಬ್ಧಿ (ನಾ). ೧. ಗಣಿತದಲ್ಲಿ ಲೆಕ್ಕಾಚಾರದ ಪ್ರಕ್ರಿಯೆಗಳ ಮೂಲಕ ಬರುವ ಉತ್ತರ. ೨. ದೊರಕಿದುದು; ಪ್ರಾಪ್ತಿ. ೩. ಅದೃಷ್ಟ.

ಲಭಿಸು (ಕ್ರಿ). ದೊರಕು; ಪ್ರಾಪ್ತವಾಗು.

ಲಭ್ಯ (ನಾ). ೧. ಪ್ರಾಪ್ತಿ; ಅದೃಷ್ಟ. (ಗು). ೨.ಹೊಂದಬಹುದಾದ; ಪಡೆಯಬಹುದಾದ. ೩. ಉಚಿತವಾದ; ತಕ್ಕುದಾದ; ಯೋಗ್ಯವಾದ. ೪. ತಿಳಿಯಲಾಗುವ.

ಲಮಾಣಿ = ಲಂಬಾಣಿ.

ಲಯ (ನಾ). ೧. ನಾಶ; ಹಾಳು. ೨. ಪ್ರಳಯ. ೩. ಸಂಗೀತ ಮತ್ತು ನೃತ್ಯಗಳಲ್ಲಿಯ ಗತಿ. ೪. ಲಾಮಂಚ; ಬಾಳದ ಬೇರು. ~ಅಗ್ನಿ = ಪ್ರಳಯಕಾಲದಲ್ಲಿ ಉಂಟಾಗುವ ಬೆಂಕಿ; ಪ್ರಳಯಾಗ್ನಿ.

ಲಲನೆ (ನಾ). ಹೆಂಗಸು; ಸ್ತ್ರೀ.

ಲಲಾಟ (ನಾ). ಹಣೆ ; ನೊಸಲು. ~ನೇತ್ರ =ಹಣೆಯಲ್ಲಿ ಕಣ್ಣುಳ್ಳವನು ; ಶಿವ. ~ಪಟ್ಟ=೧. ಹಣೆ; ನೊಸಲು. ೨. ಹಣೆಗೆ ಅಲಂಕಾರಕ್ಕಾಗಿ ಕಟ್ಟುವ ಪಟ್ಟಿ. ೩. ತಲೆ ಬರೆಹ ; ಶೀರ್ಷಿಕೆ. ~ರೇಖೆ=೧. ಹಣೆಯ ಮೇಲಿನ ಗೆರೆ. ೨. ಹಣೆಬರಹ. ~ಲಿಖಿತ = ವಿಧಿ ; ಹಣೆಬರಹ.

ಲಲಾಟಿಕೆ (ನಾ). ೧. ಹಣೆಯ ಮೇಲೆ ಧರಿಸುವ ಆಭರಣ ; ಬೈತಲೆಬೊಟ್ಟು. ೨. ತಿಲಕ ; ಬೊಟ್ಟು.

ಲಲಾಮ (ನಾ). ೧. ತಿಲಕ ; ಬೊಟ್ಟು. ೨. ಚಿಹ್ನೆ ; ಗುರುತು. ೩. ಶುಭಲಕ್ಷಣ ; ಮಂಗಳಕರವಾದ ಗುರುತು. ೪. ಧ್ವಜ ; ಪತಾಕೆ. ೫. ಆಭರಣ ; ಒಡವೆ. ೬. ತುದಿ; ಅಗ್ರ.

ಲಲಿ(ಳಿ)ತ (ನಾ). ೧. ಸುಂದರವಾದುದು ; ಮನೋಹರವಾದುದು. ೨. ಸರಳವಾದುದು. ೩. ಛಂದಸ್ಸಿನಲ್ಲಿ ಒಂದು ವೃತ್ತದ ಹೆಸರು. ೪. ನೃತ್ಯದ ಒಂದು ಪ್ರಕಾರ. (ಗು). ೫. ಸುಂದರವಾದ ; ಮನೋಹರವಾದ. ೬. ಸರಳವಾದ. ೭. ಮೃದುವಾದ ; ಕೋಮಲವಾದ. ~ಕಲೆ = ಆನಂದ ವನ್ನುಂಟುಮಾಡುವ ಕಾವ್ಯ, ಸಂಗೀತ, ಚಿತ್ರ ಮುಂತಾದ ವಿದ್ಯೆಗಳು. ~ರಗಳೆ = ರಗಳೆ ಛಂದಸ್ಸಿನಲ್ಲಿ ಒಂದು ಪ್ರಭೇದ.

ಲಲಿತಾಂಗಿ (ನಾ). ಸುಂದರವಾದ ಶರೀರವುಳ್ಳ ವಳು ; ಚೆಲುವೆ.

ಲಲ್ಲಯಿಸು (ಕ್ರಿ). ಮುದ್ದುಮಾಡು; ಪ್ರೀತಿಸು; ರಮಿಸು.

ಲಲ್ಲೆ (ನಾ). ೧. ಮುದ್ದು ; ಪ್ರೀತಿ. ೨. ವಿನೋದ ; ಸರಸ. ~ಕ(ಗ)ಱೆ(ರೆ) =ಲಲ್ಲಯಿಸು. ~ಮಾ(ವಾ)ತು=ಪ್ರೀತಿಯ ಮಾತು. ~ಹೊಡೆ= ಸರಸವಾಡು.

ಲಲ್ಲೈಸು = ಲಲ್ಲಯಿಸು.

ಲವ (ನಾ). ೧. ಅಲ್ಪ ; ಸ್ವಲ್ಪ. ೨. ಅಂಶ ; ಭಾಗ. ೩. ತುಂಡು ; ಚೂರು. ೪. ಕಾಲದ ಒಂದು ಅವಧಿ. ೫. ರಾಮನ ಮಗನ ಹೆಸರು. ~ಲೇಶ = ಅತಿ ಸ್ವಲ್ಪ ; ತೀರ ಕೊಂಚ.

ಲವಂಗ (ನಾ). ಸುವಾಸನೆಯುಳ್ಳ ಒಂದು ಸಂಬಾರಪದಾರ್ಥ ; ದೇವಕುಸುಮ. ~ಪಟ್ಟೆ = ಲವಂಗಚಕ್ಕೆ ; ದಾಲ್ಚಿನ್ನಿ.

ಲವಡಿ = ಲವುಡಿ.

ಲವಣ (ನಾ). ೧. ಉಪ್ಪು ; ಕ್ಷಾರ. ೨. ಒಬ್ಬ ರಾಕ್ಷಸನ ಹೆಸರು. ~ಅಬ್ಧಿ = ಉಪ್ಪಿನ ಸಮುದ್ರ.

ಲವಣಿ (ನಾ). ೧. ಕಾಂತಿ; ಶೋಭೆ; ಸೊಗಸು. ೨. ಒಂದು ನೃತ್ಯಭಂಗಿ. ~ಇಸು=ಹೊಳೆ; ಪ್ರಕಾಶಿಸು.

ಲವಲವಿಕೆ (ನಾ). ಹುರುಪು ; ಚಟುವಟಿಕೆ ; ಉತ್ಸಾಹ.

ಲವಲವಿಸು (ಕ್ರಿ). ಹುರುಪಿನಿಂದ ಕೂಡಿರು ; ಚಟುವಟಿಕೆಯಿಂದಿರು.

ಲವಲಿ (ನಾ). ೧. ಒಂದು ಜಾತಿಯ ಮರ. ೨. ಒಂದು ಜಾತಿಯ ಬಳ್ಳಿ.

ಲವಾಜಮೆ (ನಾ). ೧. ಸಮಾರಂಭ ನೊಡ ಲಾದುವುಗಳಿಗೆ ಬೇಕಾದ ಸಾಧನಸಾಮಗ್ರಿ. ೨. ಪರಿವಾರ ; ಬಳಗ.

ಲವಿತ್ರ (ನಾ). ಕತ್ತರಿಸುವ ಆಯುಧ ; ಕುಡು ಗೋಲು.

ಲವುಕಿಕ = ಲೌಕಿಕ.

ಲವುಡಿ (ನಾ). ೧. ಕಬ್ಬಿಣದ ಒಂದು ಆಯುಧ. ೨. ದಾಸಿ ; ಸೇವಕಿ. ೩. ಹಾದರಗಿತ್ತಿ ; ಸೂಳೆ ; ಲೌಡಿ.

ಲಶುನ (ನಾ). ಬೆಳ್ಳುಳ್ಳಿ.

ಲಷ್ಕರು (ನಾ). ೧. ಸೈನ್ಯ; ದಂಡು. ೨. ಸೈನ್ಯ ವಿರುವ ಜಾಗ. ೩. ದೊಡ್ಡ ನಗರ.

ಲಸಿಕೆ = ರಸಿಕೆ.

ಲಹಣಿ (ನಾ). ಅಲೆ; ತರಂಗ.
ಲಹರಿ ೧. = ಲಹಣಿ. ೨. ಮನಸ್ಸಿನ ಒಲವು. ೩. ಬದಲಾಗತಕ್ಕ ಮನೋವೃತ್ತಿ. ೪. ಒಂದು ಬಗೆಯ ಮಾದಕಪದಾರ್ಥ; ಅಫೀಮು. ೫. ಅಮಲು; ಗುಂಗು.
ಲಳಿ (ನಾ). ೧. ಆವೇಶ; ಆವೇಗ; ರಭಸ. ೨. ಚಾಕಚಕ್ಯತೆ; ಚುರುಕು. ೩. ಉತ್ಸಾಹ; ಹುರುಪು. ೪. ಆನಂದ. ೫. ಶಕ್ತಿ; ಸಾಮರ್ಥ್ಯ. ೬. ಜಾಣತನ; ಕೌಶಲ. ೭. = ಲಹಣಿ.
ಲಳಿಗೆ (ನಾ). ನಳಿಕೆ; ನಾಳ; ಕೊಳವೆ.
ಲಾಂಗಲ (ನಾ). ೧. ನೇಗಿಲು. ೨. ಒಂದು ಜಾತಿಯ ಮರ.
ಲಾಂಗಲಿ (ನಾ). ನೇಗಿಲನ್ನು ಆಯುಧವನ್ನಾಗಿ ಉಳ್ಳವನು; ಬಲರಾಮ.
ಲಾಂಗೂಲ (ನಾ). ಬಾಲ; ಪುಚ್ಛ. ~ಚಾಲನ = ೧. ಬಾಲವನ್ನು ಅಲ್ಲಾಡಿಸುವುದು. ೨. ಬಾಲಬಡಿಕತನ.
ಲಾಂಛನ (ನಾ). ೧. ಗುರುತು; ಚಿಹ್ನೆ; ಮುದ್ರೆ. ೨. ಹೆಸರು. ೩. ಅಪಕೀರ್ತಿ; ಕಳಂಕ.
ಲಾಂಟಾನ = ಲಂಟಾನ.
ಲಾಂದರ (ನಾ). ಕಂದೀಲು; ಲಾಟೀನು.
ಲಾಂದ್ರ = ಲಾಂದರ.
ಲಾಂಪಟ್ಯ = ಲಂಪಟತೆ.
ಲಾಕುಳ (ನಾ). ೧. ದೊಣ್ಣೆ; ಬಡಿಗೆ. ೨. ಯೋಗದಂಡ.
ಲಾಕ್ಷೆ (ನಾ). ಅರಗು; ಕೀಲಕ.
ಲಾಕ್ಷಣಿಕ (ನಾ). ೧. ಕಾವ್ಯಲಕ್ಷಣಗಳನ್ನು ಬಲ್ಲವನು. (ಗು). ೨. ಆಲಂಕಾರಿಕವಾದ.
ಲಾಕ್ಷಾಗೃಹ (ನಾ). ಅರಗಿನ ಮನೆ.
ಲಾಕ್ಷಾರಸ (ನಾ) ಅರಗಿನಿಂದ ತಯಾರಿಸಿದ ರಸ; ಅಲತಗೆ.
ಲಾಕ್ಷೆ = ಲಾಕ್ಷ.
ಲಾಗ (ನಾ). ತಲೆಕೆಳಗು; ಪಲ್ಟಿ. ~ಹಾಕು = ೧. ಪಲ್ಟಿಹೊಡೆ. ೨. ಅಯಶಸ್ವಿಯಾಗು; ಸೋಲು. ~ಹೊಡೆ = ಲಾಗಹಾಕು.
ಲಾಗವಡು (ನಾ). ಖರ್ಚು; ವೆಚ್ಚ.
ಲಾಗಾಯಿತು (ನಾ). ೧. ಮೊದಲು; ಪ್ರಾರಂಭ. (ಅ). ೨. ಮೊದಲಿನಿಂದ; ಪ್ರಾರಂಭದಿಂದ.
ಲಾಗಾಯ್ತು = ಲಾಗಾಯಿತು.
ಲಾಗಿಸು (ಕ್ರಿ). ೧. ಹಾರು; ನೆಗೆ. ೨. ಚಾಚು; ನೀಡು.
ಲಾಗು (ನಾ). ೧. ಹೆಚ್ಚಳ; ಆಧಿಕ್ಯ. ೨. ಚಳಕ; ಕೌಶಲ; ಚಾತುರ್ಯ. ೩. ಗುರಿ; ಧ್ಯೇಯ. ೪. ಸುಲಭ; ಲಾಘವ. ೫. ಹಿಡಿತ; ಪಟ್ಟು.
ಲಾಗುಳ = ಲಾಕುಳ.
ಲಾಗೋಡು = ಲಾಗವಡು.
ಲಾಘವ (ನಾ). ೧. ತೀವ್ರತೆ; ಶೀಘ್ರತೆ. ೨. ಹಗುರತನ; ಲಘುತ್ವ. ೩. ಕೌಶಲ; ಚಳಕ. ೪. ತಿರಸ್ಕಾರ; ಅನಾದರ. ೫. ಸಣ್ಣತನ; ಕ್ಷುದ್ರತನ.
ಲಾಚಾರು (ನಾ). ೧. ಕೃಶತೆ; ಬಡಕಲು. (ಗು). ೨. ನಿಶ್ಶಕ್ತಿಯಿಂದ ಕೂಡಿದ; ದುರ್ಬಲವಾದ. ೩. ಅಸಹಾಯಕ; ಅಶಕ್ತ.
ಲಾಜ (ನಾ). ಬತ್ತದ ಅರಳು.
ಲಾಜಕ = ಲಾಜ.
ಲಾಜಾಹೋಮ (ನಾ). ಮದುವೆಯಲ್ಲಿ ವಧೂವರರಿಂದ ಅರಳನ್ನು ಅಗ್ನಿಗೆ ಹೋಮ ಮಾಡಿಸುವ ಒಂದು ವಿಧಿ.
ಲಾಜೆ = ಲಾಜ.
ಲಾಟೀನು = ಲಾಂದರ.
ಲಾಠಿ (ನಾ). ಬಡಿಗೆ; ದೊಣ್ಣೆ.
ಲಾಡಿ (ನಾ). ಬಟ್ಟೆಯ ಸಣ್ಣಪಟ್ಟಿ; ನವಾರು. ~ಹುಳು = ಕರುಳಿನಲ್ಲಿ ಉತ್ಪತ್ತಿಯಾಗುವ ಪಟ್ಟಿಯಾಕಾರದ ಒಂದು ಜಾತಿಯ ಹುಳು.

ಲಾಡು (ನಾ). ೧. ಉಂಡೆ. ೨. ಕಡಲೆಹಿಟ್ಟಿನಿಂದ ಮಾಡುವ ಒಂದು ಬಗೆಯ ಸಿಹಿಭಕ್ಷ್ಯ; ಲಡ್ಡು.

ಲಾತ = ಲತ್ತೆ.

ಲಾಪ (ನಾ). ಮಾತು ; ಸಂಭಾಷಣೆ.

ಲಾಭ (ನಾ). ೧. ಖರ್ಚು ಕಳೆದು ಉಳಿದುದು. ೨. ಗಳಿಕೆ ; ಹುಟ್ಟುವಳಿ. ೩. ಪ್ರಯೋಜನ. ೪. ಪ್ರಾಪ್ತಿ ; ಲಭ್ಯ ; ದೊರಕುವಿಕೆ. ~ಬಡುಕ=ನಿಗದಿಯಾದ ಬೆಲೆಗಿಂತ ಹೆಚ್ಚು ಹಣವನ್ನು ಬಯಸುವವನು.

ಲಾಮ(ಂ)ಚ (ನಾ). ಸುವಾಸನೆಯುಳ್ಳ ಒಂದು ಬಗೆಯ ಬೇರು ; ಬಾಳದ ಬೇರು.

ಲಾಯ (ನಾ). ಆನೆ, ಕುದುರೆಗಳನ್ನು ಕಟ್ಟುವ ಸ್ಥಳ. ~ವಳ್ಳ = ಲಾಯದ ಉಸ್ತುವಾರಿಯನ್ನು ನೋಡಿಕೊಳ್ಳುವವನು.

ಲಾಯಕ್ಕು (ನಾ). ಅರ್ಹತೆಯುಳ್ಳುದು ; ಯೋಗ್ಯವಾದುದು.

ಲಾಯಖು = ಲಾಯಕ್ಕು.

ಲಾಲನೆ (ನಾ). ಮುದ್ದುಮಾಡುವಿಕೆ.

ಲಾಲಸ ೧. = ಲಾಲಸೆ. ೨. ಅತ್ಯಾಸಕ್ತಿಯಿಂದ ಕೂಡಿರುವವನು.

ಲಾಲಸೆ (ನಾ). ೧. ಅತ್ಯಾಸಕ್ತಿ; ಉತ್ಕಟೇಚ್ಛೆ. ೨. ಗರ್ಭಿಣಿಯ ಬಯಕೆ ; ದೋಹದ. (ಗು). ೩. ಉತ್ಕಟವಾದ ಇಚ್ಛೆಯುಳ್ಳ ; ಅತ್ಯಾಸೆಯಿಂದ ಕೂಡಿದ.

ಲಾಲಾಂಬು (ನಾ). ಜೊಲ್ಲು ; ಲಾಲಾರಸ.

ಲಾಲಾಜಲ(ಳ) = ಲಾಲಾಂಬು.

ಲಾಲಿ (ನಾ). ಮಕ್ಕಳನ್ನು ಮಲಗಿಸುವಾಗ ಹಾಡುವ ಹಾಡು ; ಜೋಗುಳ.

ಲಾಲಿ(ಳಿ)ತ (ಗು). ೧. ಮಮತೆಯಿಂದ ಕೂಡಿದ ; ಪ್ರೀತಿಯ. ೨. ರಮಿಸಲ್ಪಟ್ಟ.

ಲಾಲಿತ್ಯ (ನಾ). ೧. ಸೌಂದರ್ಯ ; ಚೆಲುವು. ೨. ಮಾಧುರ್ಯ. ೩. ಸರಳತೆ. ೪. ಕಾವ್ಯದ ಹತ್ತು ಶಬ್ದಗುಣಗಳಲ್ಲಿ ಒಂದು.

ಲಾಲಿಸು (ಕ್ರಿ). ೧. ಮುದ್ದಿಸು ; ಪ್ರೀತಿಸು. ೨. ಮನಸ್ಸಿಟ್ಟು ಕೇಳು ; ಕಿವಿಗೊಡು.

ಲಾಲೆ(ಳೆ) = ಲಾಲಾಂಬು.

ಲಾವ = ಲಾವಗೆ.

ಲಾವಂಚ = ಲಾಮಂಚ.

ಲಾವಕ (ನಾ). ೧. ನೀಚ ; ಕೆಡುಕ. ೨. = ಲಾವಗೆ.

ಲಾವಕ್ಕಿ = ಲಾವಗೆ.

ಲಾವಗೆ (ನಾ). ಒಂದು ಜಾತಿಯ ಹಕ್ಕಿ.

ಲಾವಣ (ನಾ). ಸಮೂಹ ; ಗುಂಪು.

ಲಾವಣಿ ೧. = ಲಾವಣ. ೨. ರಾಶಿ ; ಒಟ್ಟಿಲು. ೩. ಜಾನಪದ ಹಾಡುಗಳಲ್ಲಿ ಒಂದು ಪ್ರಕಾರ. ೪. ರೈತನು ಭೂಮಿಯ ಒಡೆಯನಿಗೆ ಕೊಡುವ ಹಣ ; ಗೇಣಿ.

ಲಾವಣಿಗೆ ೧. = ಲಾವಳಿಗೆ. ೨. ಪ್ರಯೋಗ ಚಾತುರ್ಯ. ೩. ಪ್ರತಿಭಟನೆ. ೪. ಕೂಡುವಿಕೆ ; ಜೊಂದಾಣಿಕೆ. ೫. ಉಪ್ಪಿನಕಾಯಿ ಮುಂತಾದುದು. ೬. ಲಾವಣಿ ; ಗೇಣಿ. ೭. ಆಕರ್ಷಣೆ. ೮. ಮುತ್ತಿಗೆ.

ಲಾವಣ್ಯ (ನಾ). ೧. ಸೊಗಸು ; ಅಂದ ; ಸೌಂದರ್ಯ. ೨. ಸೊಬಗು ; ಒಯ್ಯಾರ. ೩. ಉಪ್ಪಿನ ರುಚಿಯಿಂದ ಕೂಡಿರುವುದು.

ಲಾವಳಿಗೆ ೧. = ಲಾವಣ. ೨. ರಾಶಿ ; ಒಟ್ಟಿಲು.

ಲಾವಿಗೆ = ಲಾವಗೆ.

ಲಾವುಕ = ಲಾವಕ.

ಲಾವುಗೆ = ಲಾವಗೆ.

ಲಾಸ = ಲಾಸ್ಯ.

ಲಾಸಕಿ (ನಾ). ನರ್ತಿಸುವವಳು ; ನರ್ತಕಿ.

ಲಾಸಿಕೆ = ಲಾಸಕಿ.

ಲಾಸ್ಯ (ನಾ). ೧. ನೃತ್ಯ ; ಕುಣಿತ ; ನಾಟ್ಯ. ೨. ಸ್ತ್ರೀಯರು ಮಾಡುವ ಶೃಂಗಾರ ಪ್ರಧಾನವಾದ ನರ್ತನ. ~ಮಂದಿರ = ನೃತ್ಯ ಮಾಡುವ ಸ್ಥಳ; ನಾಟ್ಯಮಂದಿರ.

ಲಾಳ (ನಾ). ೧. ಲೇಖನಿಯನ್ನು ಮಾಡಲು ಬಳಸುವ ಒಂದು ಜಾತಿಯ ಸಸ್ಯ; ಗಲಗು. ೨. ನಾಳ; ದಂಟು. ೩. ಕುದುರೆ, ಎತ್ತು ಮುಂತಾದುವುಗಳ ಪಾದಗಳಿಗೆ ರಕ್ಷಣೆಗಾಗಿ ಹಾಕುವ ಕಬ್ಬಿಣದ ಸಾಧನ ~ಕ=ಕುದುರೆ, ಎತ್ತು ಮುಂತಾದುವುಗಳ ಪಾದಗಳಿಗೆ ಲಾಳವನ್ನು ಜೋಡಿಸುವವನು.

ಲಾಳಮುಂಡಿಗೆ (ನಾ). ಅಗುಳಿ.

ಲಾಳನಿಂಡಿಗೆ ೧. = ಲಾಳಮುಂಡಿಗೆ. ೨. ಕಬ್ಬಿಣದ ಅಥವಾ ಮರದ ತುಂಡು ೩. ಒಂದು ಬಗೆಯ ಆಯುಧ.

ಲಾಳಿ (ನಾ). ೧. ನೆಯ್ಗೆಯಲ್ಲಿ ಬಳಸುವ ಒಂದು ಉಪಕರಣ; ಮಗ್ಗದಲ್ಲಿ ಹೊಕ್ಕಿನ ದಾರವನ್ನು ಸೇರಿಸುವ ಸಾಧನ. ೨. ಒಂದು ಬಗೆಯ ಆಯುಧ.

ಲಾಳಿಕೆ ೧. = ಲಳಿಗೆ. ೨. ಅಲಿಕೆ; ಬುದ್ಧಿವಂತ.

ಲಿಂಗ (ನಾ). ೧. ಗುರುತು; ಚಿಹ್ನೆ. ೨. ಶಿವನ ಒಂದು ಪ್ರತೀಕ. ೩. ಪ್ರಮಾಣ; ಪುರಾವೆ. ೪. ಪುರುಷನ ಜನನೇಂದ್ರಿಯ. ೫. ವ್ಯಾಕರಣದಲ್ಲಿಯ ಪುಲ್ಲಿಂಗ, ಸ್ತ್ರೀಲಿಂಗ, ಹಾಗು ನಪುಂಸಕಲಿಂಗ. ೬. ಮೂಲಪದ; ಪ್ರಕೃತಿ. ~ಐಕ್ಯ = ೧. ಶಿವನಲ್ಲಿ ಲೀನವಾಗುವುದು. ೨. ಶಿವನಲ್ಲಿ ಲೀನನಾದವನು. ೩. ಸತ್ತುಹೋದವನು. ~ಮುದ್ರೆ = ಲಿಂಗದ ಗುರುತು, -ಚಿಹ್ನೆ.

ಲಿಂಗಧಾರಿ (ನಾ). ಲಿಂಗವನ್ನು ಧರಿಸಿದವನು; ವೀರಶೈವ.

ಲಿಂಗಾಯತ = ಲಿಂಗಧಾರಿ.

ಲಿಂಗಾಯಿತ = ಲಿಂಗಧಾರಿ.

ಲಿಂಗವಂತ = ಲಿಂಗಧಾರಿ.

ಲಿಂಗಿ = ಲಿಂಗಧಾರಿ.

ಲಿಂಬ (ನಾ). ಒಂದು ಜಾತಿಯ ಗಿಡ ಮತ್ತು ಅದರ ಹಣ್ಣು; ನಿಂಬೆ.

ಲಿಂಬೆ = ಲಿಂಬ.

ಲಿಕುಚ = ಲಕುಚ.

ಲಿಕ್ಷೆ (ನಾ). ಹೇನಿನ ಮೊಟ್ಟೆ; ಸೀರು.

ಲಿಖಾವಟ್ಟು (ನಾ). ಬರೆವಣಿಗೆ; ಬರೆಹ.

ಲಿಖಿತ ೧. = ಲಿಖಾವಟ್ಟು. (ಗು). ೨. ಬರೆದ.

ಲಿಖಿಸು (ಕ್ರಿ). ಬರೆ.

ಲಿಗಾಡಿ (ನಾ). ಪೇಚು; ಪೀಕಲಾಟ; ತರಲೆ.

ಲಿಗಾಡು ೧. = ಲಿಗಾಡಿ. ೨. ನಷ್ಟಕ್ಕೆ ಕೊಡುವ ಪರಿಹಾರ.

ಲಿಪಿ (ನಾ). ೧. ಅಕ್ಷರ; ವರ್ಣ. ೨. = ಲಿಖಾವಟ್ಟು. ~ಕರ್ತೃ = ಲಿಪಿಕಾರ.

ಲಿಪಿಕಾರ (ನಾ). ಅಕ್ಷರಗಳನ್ನು ಬರೆಯುವವನು.

ಲಿಪ್ಸೆ (ನಾ). ದುರಾಸೆ.

ಲಿಫಾಫೆ (ನಾ). ಲಕೋಟೆ; ಕವರು.

ಲಿಲಾವು (ನಾ). ಹರಾಜು; ಏಲಂ. ~ದಾರ = ವಸ್ತುಗಳನ್ನು ಹರಾಜುಮಾಡುವವನು.

ಲೀನ (ಗು). ೧. ಮಗ್ನವಾದ; ಆಸಕ್ತವಾದ; ಮುಳುಗಿದ. ೨. ಕರಗಿದ. ೩. ಮಾಯವಾದ; ಕಾಣದಾದ. ೪. ಕೂಡಿಹೋದ; ಬೆರೆತ; ಐಕ್ಯವಾದ.

ಲೀಯ (ನಾ). ೧. ಐಕ್ಯ; ಬೆರೆತುಹೋಗುವಿಕೆ. (ಗು). ೨. ಬೆರೆತ; ಐಕ್ಯವಾದ.

ಲೀಲಾಜಾಲ (ನಾ). ೧. ಅತ್ಯಂತ ಸುಲಭವಾದುದು; ನಿರಾಯಾಸವಾದುದು. (ಗು). ೨. ಅತ್ಯಂತ ಸುಲಭವಾದ; ನಿರಾಯಾಸವಾದ.

ಲೀಲೆ(ಳೆ) (ನಾ). ೧. ಆಟ; ಕ್ರೀಡೆ. ೨. ವಿನೋದ; ವಿಲಾಸ. ೩. ಚೆಲ್ಲಾಟ. ೪. ದೇವರಿಗೆ ಸಂಬಂಧಿಸಿದ ಕತೆ, -ಚರಿತ್ರೆ. ೫. ಸೌಂದರ್ಯ; ಚೆಲುವು. ೬. ವೇಷ; ಸೋಗು. ~ಗಾಜಿ(ರ)=ಸುಂದರ; ಚೆಲುವ.

ಲುಂಗ (ನಾ). ಮಾದಳದ ಮರ ಮತ್ತು ಅದರ ಹಣ್ಣು.

ಲುಂಗಿ (ನಾ). ಲಪಾಟಿ; ಪಟ್ಟಿ.
ಲುಂಚ (ನಾ). ಕೂದಲನ್ನು ಕಿತ್ತುಕೊಳ್ಳುವಿಕೆ.
ಲುಂಛನ = ಲುಂಚ.
ಲುಂಟಿಸು(ಕ್ರಿ). ಕಿತ್ತುಹಾಕು; ನಾಶಮಾಡು.
ಲುಂಠಾಕ (ನಾ). ನಾಶಮಾಡುವವನು; ಕಂಟಕ.
ಲುಂಠಿಸು ೧. = ಲುಂಟಿಸು. ೨. ಹೊರಳು.
ಲುಂದು (ಕ್ರಿ). ೧. ಮಲಗು; ನಿದ್ರಿಸು. (ನಾ). ೨. ಮಲಗುವಿಕೆ; ನಿದ್ರಿಸುವಿಕೆ. ೩. ಸಂಭೋಗ; ಕೂಟ.
ಲುಕಸಾನು (ನಾ). ನಷ್ಟ; ಹಾನಿ.
ಲುಕ್ಸಾನು = ಲುಕಸಾನು.
ಲುಚ್ಚ (ನಾ). ೧. ದುಷ್ಟ; ನೀಚ. ೨. ಪುಂಡ; ಪೋಕರಿ. (ಗು). ೩. ಕೀಳಾದ; ಹೀನವಾದ. ~ತನ = ೧. ಕೀಳುತನ; ಹೀನತನ. ೨. ದುಷ್ಟತನ.
ಲುಚ್ಛಾ = ಲುಚ್ಚ.
ಲುಚ್ಛ = ಲುಚ್ಚ.
ಲುಟಾಯಿಸು (ಕ್ರಿ). ದೋಚು; ಲೂಟಿ ಮಾಡು.
ಲುಪ್ತ (ನಾ). ೧. ಲೋಪವಾದುದು; ಕಳೆದು ಹೋದುದು. (ಗು). ೨. ಒಡೆದ; ಮುರಿಯಲ್ಪಟ್ಟ. ೩. ಮರೆಯಾದ; ಕಾಣದಾದ. ೪. ಸೂರೆಮಾಡಿದ; ದೋಚಲ್ಪಟ್ಟ.
ಲುಪ್ತಿ (ನಾ). ಲೋಪವಾಗುವುದು; ನಾಶ; ಹಾಳು.
ಲುಬ್ಧ ೧. = ಲುಬ್ಧಕ. (ಗು). ೨. ಆತ್ಯಾಸಕ್ತಿಯುಂಟಾದ ಕೂಡಿದ; ಹೆಬ್ಬಯಕೆಯ.
ಲುಬ್ಧಕ (ನಾ). ೧. ಜಿಪುಣ; ಲೋಭಿ. ೨. ಬೇಡ; ವ್ಯಾಧ; ಬೇಟೆಗಾರ.
ಲುಲಾಯ (ನಾ). ಕೋಣ; ಮಹಿಷ.
ಲುಲಾಯಿ (ನಾ). ಎಮ್ಮೆ.
ಲುಲಿ(ಳಿ)ತ (ಗು). ೧. ಅಲುಗಾಡಿಸಲ್ಪಟ್ಟ. ೨. ಕೆದರಿದ; ಹರಡಿದ; ವ್ಯಾಪಿಸಿದ. ೩. ಸವರಿದ; ಲೇಪಿಸಿದ. ~ಅಲ(ಳ)ಕ = ಸುಳಿಪಾಡುವ ಕೂದಲು; ಸುಳಿಗೂದಲು.
ಲುಳಿ (ನಾ). ೧. ಚುರುಕು; ಚಾಕಚಕ್ಯತೆ. ೨. ಕೈಚಳಕ; ಹಸ್ತಚಾತುರ್ಯ. ೩. ಕಾಂತಿ; ಹೊಳಪು. ೪. ಸೊಗಸು. ೫. ಕಾಲಿಗೆ ಧರಿಸುವ ಒಂದು ಬಗೆಯ ಆಭರಣ; ರುಳಿ. ~ವೆ(ವೆ)ಱು(ರು) =೧. ಕಾಂತಿಯನ್ನು ಹೊಂದು; ಶೋಭಿಸು. ೨. ವೇಗವನ್ನು ಹೊಂದು.
ಲೂಟಿ (ನಾ). ಸುಲಿಗೆ; ದರೋಡೆ. ~ಇಸು = ಸುಲಿಗೆ ಮಾಡು. ~ಗಾರ = ಸುಲಿಗೆ ಮಾಡುವವನು; ಕೊಳ್ಳೆಹೊಡೆಯುವವನು.
ಲೂತಿ (ನಾ). ಒಂದು ಬಗೆಯ ಗುಹ್ಯ ರೋಗ; ನೂತಿ.
ಲೂನ (ಗು). ೧. ಕತ್ತರಿಸಲ್ಪಟ್ಟ; ಕಡಿದ. ೨. ಗಾಯಗೊಂಡ; ಘಾಸಿಯಾದ.
ಲೆಂಕ (ನಾ). ೧. ನಿಷ್ಠಾವಂತನಾದ ಸೇವಕ, -ದಾಸ. ೨. ಭಕ್ತ. ~ಇಗ = ಲೆಂಕವಾಳ. ~ಇತಿ = ಲೆಂಕಿ. ~ವಾಳ = ಆಪ್ತಸೇವಕ.
ಲೆಂಕಿ (ನಾ). ಆಪ್ತಸೇವಕಿ, -ದಾಸಿ.
ಲೆಂಕೆ = ಲೆಂಕಿ.
ಲೆಂಗಿ = ಲೆಂಕ.
ಲೆಂಡ (ನಾ). ೧. ತುಂಟ; ಪುಂಡ; ಲಂಡ. ೨. ಉದ್ಧತ; ಅಹಂಕಾರಿ. ~ತನ = ೧. ಅಹಂಕಾರ; ಸೊಕ್ಕು. ೨. ತುಂಟತನ.
ಲೆಕ್ಕ (ನಾ). ೧. ಅಂಕೆ; ಸಂಖ್ಯೆ. ೨. ಸಮಾನ; ಸಾಟಿ. ೩. ಲೆಕ್ಕಾಚಾರ; ಗಣನೆ. ೪. ಸಂಖ್ಯಾಶಾಸ್ತ್ರ; ಅಂಕಗಣಿತ. ೫. ಗಣಿತದಲ್ಲಿ ಒಂದು ಸಮಸ್ಯೆ. ೬. ಅಭಿಪ್ರಾಯ; ಎಣಿಕೆ. ೭. ಗಮನ; ಲಕ್ಷ್ಯ. ೮. ಗೌರವ; ಆದರ. ~ಆಚಾರ = ೧. ಲೆಕ್ಕಕ್ಕೆ ಸಂಬಂಧಪಟ್ಟುದು. ೨. ಯೋಚನೆ; ಎಣಿಕೆ. ~ಇಗ = ೧. ಗಣಿತಶಾಸ್ತ್ರಜ್ಞ. ೨. ಲೆಕ್ಕವನ್ನು

ಬರೆಯುವವನು ; ಕರಣಿಕ. ~ಇಸು = ೧. ಲೆಕ್ಕಮಾಡು. ೨. ಗಣನೆಗೆ ತರು ; ಲಕ್ಷಿಸು. ~(೦)ಕೊ(ಗೊ)ಳ್ = ಲೆಕ್ಕಿಸು. ~ಹಾಕು=೧. ಲೆಕ್ಕಮಾಡು. ೨. ಎಣಿಸು ; ಊಹಿಸು.

ಲೆಕ್ಕಣಿ (ನಾ). ಬರೆಯುವ ಸಾಧನ ; ಲೇಖನಿ.

ಲೆಕ್ಕಣಿಕೆ = ಲೆಕ್ಕಣಿ.

ಲೆಕ್ಕಣಿಗೆ = ಲೆಕ್ಕಣಿ.

ಲೆಕ್ಖ = ಲೆಕ್ಕ.

ಲೆಗ್ಗೆ (ನಾ). ಲಗ್ಗೆ ; ಮುತ್ತಿಗೆ.

ಲೆತ್ತ (ನಾ). ಪಗಡೆಯ ದಾಳ ಮತ್ತು ಅದರಿಂದಾಡುವ ಆಟ ; ನೆತ್ತ.

ಲೆಪ್ಪ (ನಾ). ೧. ಗೊಂಬೆ ; ಪುತ್ಥಳಿ. ೨. ಬಳಿಯುವ ವಸ್ತು ; ಲೇಪನ.

ಲೇಖ (ನಾ). ೧. ಬರೆಹ ; ಬರೆವಣಿಗೆ. ೨. ದೇವತೆ. ~ವಲ್ಲಭ = ದೇವತೆಗಳ ಒಡೆಯ ; ಇಂದ್ರ. ~ವಾಹ = ಪತ್ರವನ್ನು ಒಯ್ದು ಮುಟ್ಟಿಸುವವನು ; ಓಲೆಕಾರ. ~ವಾಹಕ = ಲೇಖವಾಹ.

ಲೇಖಕ (ನಾ). ಬರೆಯುವವನು ; ಬರೆಹಗಾರ.

ಲೇಖಣಿ = ಲೆಕ್ಕಣಿ.

ಲೇಖಣಿಕೆ = ಲೆಕ್ಕಣಿ.

ಲೇಖನ (ನಾ). ಬರೆವಣಿಗೆ ; ಬರೆಹ.

ಲೇಖನಿ = ಲೆಕ್ಕಣಿ.

ಲೇಖಿಕೆ (ನಾ). ಬರೆಯುವವಳು ; ಬರೆಹಗಾತಿ.

ಲೇಖೆ (ನಾ). ೧. ಸಾಲು ; ಪಂಕ್ತಿ ; ರೇಖೆ. ೨. ಬರೆಯುವುದು ; ಬರೆವಣಿಗೆ. ೩. ಚಂದ್ರನ ಕಲೆ. ~ಇಸು = ಬರೆ ; ರೇಖಿಸು.

ಲೇಖ್ಯ = ಲೇಖನ.

ಲೇಜಯ (ನಾ). ಬರ್ಜಿ ; ನೇಜಯ.

ಲೇಣೆ (ನಾ). ಸಾಲ ; ಕಡ. ~ದೇಣೆ = ಲೇವಾದೇವಿ.

ಲೇಪ (ನಾ). ೧. ಬಳಿಯುವಿಕೆ ; ಹಚ್ಚುವಿಕೆ. ೨. ಬಳಿಯುವ ವಸ್ತು ; ಮುಲಾಮು, ಗಿಲೀಟು ಮುಂತಾದುವು. ~ಇಸು = ೧. ಬಳಿ ; ಸವರು. ೨. ಅಂಟು ; ಹತ್ತಿಕೊಳ್ಳು.

ಲೇಪನ = ಲೇಪ.

ಲೇಪಾಳ (ನಾ). ಒಂದು ಜಾತಿಯ ಸಸ್ಯ ; ಜಾಪಾಳ.

ಲೇಪು (ನಾ). ತೆಳ್ಳಗಿನ ಹಾಸುಗೆ ; ರಜಾಯಿ.

ಲೇಪ್ಯ (ನಾ). ೧. ಲೇಪನವಸ್ತು ; ಲೆಪ್ಪ. (ಗು). ೨. ಬಳಿದ ; ಲೇಪಿಸಿದ.

ಲೇಲಿಹಾನ (ನಾ). ಹಾವು ; ಸರ್ಪ.

ಲೇವಡಿ (ನಾ). ೧. ಅಣಕ ; ಉಪಹಾಸ್ಯ. ೨. ತುಂಟಾಟ. ೩. ಒಂದು ಬಗೆಯ ಸಿಹಿ ತಿಂಡಿ ; ರೇವಡಿ.

ಲೇವಣ (ನಾ). ಸರ ; ಕಂಠಿಹಾರ.

ಲೇವಳ ೧. = ಲೇವಣ. ೨. ಡಾಬು ; ಒಡ್ಯಾಣ.

ಲೇವಾದೇವಿ (ನಾ). (ಹಣವನ್ನು) ಕೊಡ ಕೊಳ್ಳುವ ವ್ಯವಹಾರ.

ಲೇವೆ (ನಾ). ಜೇನು ; ತಡಿ.

ಲೇಶ (ನಾ). ಸ್ವಲ್ಪ ; ಚೂರು ; ತುಸು.

ಲೇಶ್ಯೆ (ನಾ). ಕಾಂತಿ ; ಹೊಳಪು.

ಲೇಸು (ನಾ). ೧. ಒಳ್ಳೆಯದು ; ಉತ್ತಮ ವಾದುದು. ೨. ಯೋಗ್ಯವಾದುದು ; ಸ ಯಾದುದು. ೩. ಅಂದ ; ಚೆಲುವು. ೪. ಶುಭ ಶ್ರೇಯಸ್ಸು. ~ಇಗ = ಒಳ್ಳೆಯ ಮನುಷ್ಯ ಯೋಗ್ಯ. ~ಗಾಱ(ರ) = ಚೆಲುವ ಸುಂದರ.

ಲೇಹ (ನಾ). ೧. ನೆಕ್ಕುವುದು. ೨. = ಲೇಹ ~ಇಸು = ನೆಕ್ಕು.

ಲೇಹ್ಯ (ನಾ). ನೆಕ್ಕಿ ತಿನ್ನಬಹುದಾದುದು.

ಲೈಂಗಿಕ (ಗು). ಲಿಂಗಕ್ಕೆ ಸಂಬಂಧಿಸಿ ~ವೃತ್ತಿ = ಹಾದರ ; ವ್ಯಭಿಚಾರ.

ಲೊಕ್ಕಿ (ನಾ). ಒಂದು ಜಾತಿಯ ಗಿಡ ; ಲ

ಲೊಚ (ನಾ). ಒಂದು ಅನುಕರಣ ಧ್ವನಿ. ~ಕು(ಗು)ಟ್ಟು = ಲೊಚಲೊಚ ಎಂದು ಶಬ್ದ ಮಾಡು.

ಲೊಟ (ನಾ). ಒಂದು ಅನುಕರಣ ಶಬ್ದ. ~ಕು(ಗು)ಟ್ಟು = ಲೊಟಕು.

ಲೊಟಕು (ಕ್ರಿ). ಒಟಗುಡು; ಗೊಣಗು.

ಲೊಟಪಾಟಿ (ನಾ). ವ್ಯರ್ಥವಾದುದು; ನಿರರ್ಥಕವಾದುದು.

ಲೊಟ್ಟೆ (ನಾ). ೧. ಬರಿದು; ಶೂನ್ಯತೆ. ೨. ಸುಳ್ಳು. ೩. ನಾಲಗೆಯಿಂದ ಮಾಡುವ ಒಂದು ಅನುಕರಣ ಧ್ವನಿ. ~ಹೊಡೆ = ಚಪ್ಪರಿಸು; ಲೊಚಗುಟ್ಟು.

ಲೊಡ್ಡು (ನಾ). ೧. ಪೊಳ್ಳು; ಜಳ್ಳು; ಹಳೆಯದು. ೨. ನಿಸ್ಸಾರವಾದುದು; ನಿಸ್ಸತ್ತ್ವವಾದುದು.

ಲೊದಣಿ = ಲೊದಳೆ.

ಲೊದಳೆ (ನಾ). ೧. ಕಫ; ಶ್ಲೇಷ್ಮ. ೨. ಜೊಲ್ಲು; ಲಾಲಾರಸ.

ಲೊಳಲೊಟ್ಟೆ (ನಾ). ಸಂಪೂರ್ಣ ವ್ಯರ್ಥವಾಗಿರುವುದು.

ಲೋಕ (ನಾ). ೧. ಜಗತ್ತು; ಪ್ರಪಂಚ. ೨. ಜನತೆ; ಮಾನವಕುಲ. ೩. ರೂಢಿ; ಸಂಪ್ರದಾಯ. ೪. ನೋಟ; ದೃಶ್ಯ; ಕಾಣ್ಕೆ. ~ಅಂತ = ೧. ಜಗತ್ತಿನ ಕೊನೆ, -ತುದಿ. ೨. ಎಲ್ಲರಿಗೂ ತಿಳಿದಿರುವುದು; ಬಹಿರಂಗವಾಗಿರುವುದು. ~ಅಪವಾದ = ಜನರ ನಿಂದೆ, -ಹೀಯಾಳಿಕೆ. ~ಅಭಿಪ್ರಾಯ = ಜನರ ಅಭಿಪ್ರಾಯ, -ಮತ. ~ಆಚಾರ = ಜಗತ್ತಿನ ರೂಢಿ, -ಸಂಪ್ರದಾಯ. ~ಇಗ = ಸಾಮಾನ್ಯ ಮನುಷ್ಯ. ~ಈಶ = ಬ್ರಹ್ಮ. ~ಉಕ್ತಿ = ಗಾದೆ; ನಾಣ್ಣುಡಿ. ~ಉತ್ತರ = ೧. ಶ್ರೇಷ್ಠನಾದವನು; ಮಿಗಿಲಾದವನು. ೨. ಅಸಾಮಾನ್ಯವಾದ; ಮಿಗಿಲಾದ; ದಿವ್ಯವಾದ. ~ಉಪಕಾರ = ಜನರಿಗೆ ಹಿತವನ್ನುಂಟು ಮಾಡುವುದು. ~ಕರ್ತ = ಸೃಷ್ಟಿಕರ್ತ. ~ತ್ರಯ = ಸ್ವರ್ಗ, ಮರ್ತ್ಯ ಮತ್ತು ಪಾತಾಳಗಳೆಂಬ ಮೂರು ಲೋಕಗಳು. ~ಧರ್ಮ = ಲೋಕಾಚಾರ. ~ನಾಥ = ೧. ಬ್ರಹ್ಮ. ೨. ರಾಜ. ~ಪ್ರಸಿದ್ಧಿ = ಜಗತ್ತಿನಲ್ಲೆಲ್ಲಾ ಹೆಸರುವಾಸಿಯಾಗಿರುವುದು; ಕೀರ್ತಿ. ~ರೂಢಿ = ಜನಸಾಮಾನ್ಯರ ಪದ್ಧತಿ. ~ವ್ಯವಹಾರ = ಪ್ರಪಂಚದ ಸೂಕ್ಷ್ಮಜ್ಞಾನ; ವ್ಯವಹಾರಜ್ಞಾನ. ~ಶಾಹಿ = ಪ್ರಜಾಸತ್ತಾತ್ಮಕವಾದ ಆಡಳಿತ. ~ಸಂಗ್ರಹ = ೧. ಜಗತ್ತನ್ನು ಸುತ್ತಿ ಅನುಭವವನ್ನು ಪಡೆಯುವುದು. ೨. ಲೋಕಕಲ್ಯಾಣ. ~ಸಭೆ = ಕೇಂದ್ರ ಸಂಸತ್ತಿನ ಉಭಯ ಸಭೆಗಳಲ್ಲಿ ಒಂದು.

ಲೋಕಜ್ಞ (ನಾ). ಪ್ರಪಂಚಜ್ಞಾನವನ್ನು ಪಡೆದವನು; ವ್ಯವಹಾರಚತುರ.

ಲೋಕಾಭಿರಾಮ (ಗು). ೧. ಯಾವ ಉದ್ದೇಶವೂ ಇಲ್ಲದ. ೨. ಸ್ವಾಭಾವಿಕವಾದ.

ಲೋಕಾಯತ (ನಾ). ೧. ನಾಸ್ತಿಕತೆ; ನಿರೀಶ್ವರವಾದ; ಚಾರ್ವಾಕವಾದ. (ಗು). ೨. ನಾಸ್ತಿಕತೆಯಿಂದ ಕೂಡಿದ.

ಲೋಗ (ನಾ). ೧. ಜನ; ಜನತೆ. ೨. ಬೇರೆಯವನು; ಪರಕೀಯ.

ಲೋಗು (ಕ್ರಿ). ಹಿಂಜರಿ; ಹಿಮ್ಮೆಟ್ಟು.

ಲೋಚನ (ನಾ). ಕಣ್ಣು; ನೇತ್ರ. ~ವಾರಿ = ಕಣ್ಣೀರು; ಕಂಬನಿ.

ಲೋಚು (ನಾ). ೧. ತಲೆಗೂದಲನ್ನು ಕೀಳುವುದು; ಲುಂಛನಕ್ರಿಯೆ. ೨. ತಲೆಗೂದಲನ್ನು ಕೀಳುವ ಚಿಮುಟ. ~ಮೋಡೆ = ಬೋಳುತಲೆ; ಬೋಡುದಲೆ.

ಲೋಟ (ನಾ). ನೀರು ಮುಂತಾದುವನ್ನು ಕುಡಿಯುವ ಪಾತ್ರೆ.

ಲೋಟಾ ೧. = ಲೋಟ. ೨. ಒಂದು ಜಾತಿಯ ಪಾರಿವಾಳ.

ಲೋಡಿಗೆ (ನಾ). ದಿಂಬು; ತಿವಾಸಿ.

ಲೋಡು ೧. = ಲೋಡಿಗೆ. ೨. ವ್ಯಾಯಾಮ ಮಾಡುವುದಕ್ಕಾಗಿ ತಿರುಗಿಸುವ ಮರದ ಸಾಧನ.

ಲೋದಲೆ = ಲೊದಳೆ.

ಲೋಧ್ರ (ನಾ). ಒಂದು ಜಾತಿಯ ಮರ.

ಲೋಪ (ನಾ). ೧. ಕುಂದು; ಕೊರತೆ; ಐಬು. ೨. ಉಚ್ಚಾರಣೆ, ಬರೆವಣಿಗೆ ಮುಂತಾದುವುಗಳಲ್ಲಿ ಕೆಲಭಾಗವು ಬಿಟ್ಟು ಹೋಗಿರುವುದು. ೩. ಲೂಟಿ; ಸುಲಿಗೆ. ೪. ಹಾಳು; ನಾಶ.

ಲೋಬಾನ (ನಾ). ಒಂದು ಬಗೆಯ ಸುಗಂಧ ದ್ರವ್ಯ.

ಲೋಭ (ನಾ). ೧. ಅತ್ಯಾಸೆ; ದುರಾಶೆ. ೨. ಕೃಪಣತೆ; ಜಿಪುಣತನ. ೩. ಪ್ರೀತಿ; ವಿಶ್ವಾಸ.

ಲೋಭಿ (ನಾ). ಜಿಪುಣ; ಕೃಪಣ.

ಲೋಮ = ರೋಮ.

ಲೋಯಿಸರ (ನಾ). ಒಂದು ಜಾತಿಯ ಸಸ್ಯ; ಲೋಳಿಸರ.

ಲೋಲ (ನಾ). ೧. ತಲ್ಲೀನನಾದವನು; ಆಸಕ್ತ. ೨. ಸಂತೋಷ. ೩. ಲಂಪಟ; ಲೋಲುಪ. (ಗು). ೪. ಅತ್ಯಾಸಕ್ತಿಯಿಂದ ಕೂಡಿದ. ೫. ತೂಗಾಡುವ; ನೇತಾಡುವ. ೬. ನಡುಗುವ; ಚಂಚಲವಾದ. ~ಆಪಾಂಗ = ಚಂಚಲವಾದ ನೋಟ. ~ಆಡು = ೧. ಸುಖಪಡು; ಓಲಾಡು. ೨. ತೂಗಾಡು; ನೇತಾಡು.

ಲೋಲಂಬ = ರೋಲಂಬ.

ಲೋಲಕ (ನಾ) ಅತ್ತಿತ್ತ ತೂಗಾಡುವ ವಸ್ತು.

ಲೋಲಾಕು (ನಾ). ಕಿವಿಯಲ್ಲಿ ನೇತಾಡುವಂತೆ ಧರಿಸುವ ಒಂದು ಆಭರಣ.

ಲೋಲಾಪ್ತಿ (ನಾ). ೧. ಅತ್ಯಾಸಕ್ತಿ; ಹೆಬ್ಬಯಕೆ. ೨. ಕಾಮುಕತೆ. ೩. ಸುಖ; ಸಂತೋಷ.

ಲೋಲುಪ (ನಾ). ೧. ಆಸಕ್ತಿಯುಳ್ಳವನು. (ಗು). ೨. ಅತ್ಯಾಸೆಯಿಂದ ಕೂಡಿದ.

ಲೋಲುಪತೆ = ಲೋಲಾಪ್ತಿ.

ಲೋಲುಪ್ತಿ = ಲೋಲಾಪ್ತಿ.

ಲೋವಿಸರ = ಲೋಯಿಸರ.

ಲೋವೆ (ನಾ). ಇಳಿಜಾರಾದ ಸೂರು; ಗೋಡೆಯಿಂದ ಮುಂಚಾಚಿದ ಭಾಗ.

ಲೋಷ್ಠ (ನಾ). ಮಣ್ಣು ಹೆಂಟೆ.

ಲೋಹ (ನಾ). ೧. ಉಕ್ಕು, ತಾಮ್ರ, ಚಿನ್ನ ಮುಂತಾದ ಧಾತು, –ಖನಿಜ. ೨. ಕಬ್ಬಿಣ. ೩. ರಕ್ತ. ೪ ಒಂದು ಬಗೆಯ ಆಯುಧ. (ಗು). ೫ ಕೆಂಪಾದ; ತಾಮ್ರ ವರ್ಣದಿಂದ ಕೂಡಿದ. ~ಆಸನ = ಲೋಹದಿಂದಾದ ಒಂದು ಬಗೆಯ ಪೀಠ ~ಕವಚ = ಲೋಹದಿಂದ ಮಾಡಿದ ರಕ್ಷಾಕವಚ; ಚಿಲಖತ್ತು. ~ಕಾಂತ = ಅಯಸ್ಕಾಂತ; ಸೂಜಿಗಲ್ಲು. ~ಕಿಟ್ಟ = ಕಬ್ಬಿಣಕ್ಕೆ ಹಿಡಿಯುವ ಜಂಗು, –ತುಕ್ಕು. ~ಚುಂಬಕ = ಲೋಹಕಾಂತ. ~ಚೂರ್ಣ = ಕಬ್ಬಿಣದ ಪುಡಿ. ~ದ್ರವ = ಲೋಹವನ್ನು ಕರಗಿಸಿ ಮಾಡಿದ ದ್ರವ. ~ಪಿಂಡ = ಕಬ್ಬಿಣದ ಗಟ್ಟಿ. ~ಪೃಷ್ಠ = ಕಠಿನವಾದ ಬೆನ್ನುಳ್ಳ ಒಂದು ಜಾತಿಯ ಪಕ್ಷಿ; ಹರಡೆ. ~ಭಸ್ಮ = ೧. ತುಕ್ಕು; ಕಿಟ್ಟ. ೨. ಕಬ್ಬಿಣದ ಕಿಟ್ಟದಿಂದ ತಯಾರಿಸಿದ ಔಷಧದ್ರವ್ಯ. ~ಮಾರ್ಗ = ಕಬ್ಬಿಣದಿಂದ ಮಾಡಿದ ಮಾರ್ಗ; ರೈಲು ಹಾದಿ. ~ಯುಗ = ಲೋಹವನ್ನು ಬಳಕೆಗೆ ತಂದಕಾಲ.

ಲೋಹಕ (ನಾ). ಕಬ್ಬಿಣದ ಆಯುಧವನ್ನು ಹಿಡಿದಿರುವವನು.

ಲೋಹಕಾರ (ನಾ). ಕಬ್ಬಿಣದ ಕೆಲಸ ಮಾಡುವವನು; ಕಮ್ಮಾರ.

ಲೋಹಮಂಡೂರ (ನಾ). ೧. ಗಾಜು ಮೊದಲಾದ ತಯಾರಿಕೆಯಲ್ಲಿ ಉಪಯೋಗಿಸುವ ಒಂದು ಬಗೆಯ ಕಪ್ಪು ಖನಿಜವಸ್ತು; ಮ್ಯಾಂಗನೀಸು. ೨. = ಲೋಹಕಿಟ್ಟ.

ಲೋಹಿತ (ನಾ). ೧. ಕೆಂಪುಬಣ್ಣ; ಕೆಂಬಣ್ಣ. ೨. ರಕ್ತ; ನೆತ್ತರು. ೩. ತಾಮ್ರ. (ಗು). ೪. ಕೆಂಪಾಗಿರುವ; ಕೆಂಬಣ್ಣದ. ~ಅಶ್ವ =೧. ಕೆಂಪುಬಣ್ಣದ ಕುದುರೆಗಳನ್ನು ಹೊಂದಿರುವವನು; ಅಗ್ನಿ. ೨. ಹರಿಶ್ಚಂದ್ರನ ಮಗನ ಹೆಸರು. ~ಜಲ(ಳ) = ರಕ್ತ.

ಲೋಳಿ = ಲೊಡಳೆ.

ಲೋಳಿಸರ = ಲೋಲಯಿಸರ.

ಲೋಳೆ = ಲೊಡಳೆ. ~ಬಾ(ವಾ)ಯ್ = ಜೊಲ್ಲು ಸುರಿಸುವ ಬಾಯಿ.

ಲೋಳೆಸರ = ಲೋಳಯಿಸರ.

ಲೌಕರಿ (ನಾ). ಉಣ್ಣೆಯ ದಾರ.

ಲೌಕಿಕ ೧. = ಲೌಕಿಗ. (ಗು). ೨. ಲೋಕಕ್ಕೆ ಸಂಬಂಧಿಸಿದ; ಐಹಿಕವಾದ. ೩. ಪ್ರಸಿದ್ಧವಾದ; ರೂಢಿಯಿಂದ ಬಂದ; ಬಳಕೆಯಲ್ಲಿರುವ. ~ವಾದ = ಪಂಚಭೂತಗಳಿಗೆ ಸಂಬಂಧಿಸಿದ ತತ್ತ್ವ. ~ವ್ಯವಹಾರ = ನಿತ್ಯರೂಢಿಯ ಕಾರ್ಯಕಲಾಪ.

ಲೌಕಿಗ (ನಾ). ಲೋಕಕ್ಕೆ ಸಂಬಂಧಿಸಿದವನು; ಸಾಮಾನ್ಯ ಮನುಷ್ಯ.

ಲೌಡಿ = ಲವುಡಿ.

ಲೌಡೆ (ನಾ). ಕಬ್ಬಿಣದಿಂದ ಮಾಡಿದ ಒಂದು ಬಗೆಯ ಆಯುಧ

ಲೌಲ್ಯ (ನಾ). ೧. ಚಂಚಲತೆ; ಅಸ್ಥಿರತೆ. ೨. ಹಂಬಲ; ಅತ್ಯಾಸೆ; ಉತ್ಕಟೇಚ್ಛೆ.

ಲೌಹಿತ್ಯ (ನಾ). ಕೆಂಪುಬಣ್ಣ.



# ವ

ವ (ನಾ). ಕನ್ನಡ ವರ್ಣಮಾಲೆಯ ಐವತ್ತನೆಯ ಅಕ್ಷರ.

ವಂಕ (ನಾ). ೧. ಡೊಂಕು; ಬಾಗು. ೨. ಪಕ್ಕ; ಮಗ್ಗುಲು. ೩. ಜೀನು; ತಡಿ. ~ದರ = ಡೊಂಕಾದ ಬಾಗಿಲು; ವಕ್ರದ್ವಾರ. ~ದಾರ = ವಂಕದರ. ~ಬಾರ = ವಂಕದರ.

ವಂಕಿ (ನಾ). ೧. ಒಂದು ಬಗೆಯ ಕೊಕ್ಕೆ. ೨. ಒಂದು ಬಗೆಯ ಆಯುಧ; ಮೇದರ ಕತ್ತಿ. ೩. ತೋಳುಬಂದಿ; ಕೇಯೂರ. ೪. ಭರಣಿ; ಕರಡಿಗೆ. ೫. ಸಂತಾನ ನಿರೋಧದ ಒಂದು ಸಾಧನ.

ವಂಕುಡಿ (ನಾ). ಒಂದು ಬಗೆಯ ಬಾಗಿದ ಆಯುಧ; ಕಠಾರಿ.

ವಂಗ (ನಾ). ೧. ತವರ. ೨. ಸೀಸ. ೩. ಒಂದು ದೇಶದ ಹೆಸರು; ಬಂಗಾಳ.

ವಂಗಡ ೧.= ವಂಗಡಣ. ೨. ಭೇದ; ವ್ಯತ್ಯಾಸ. ~ತೆ(ದೆ)ಗೆ = ಭೇದ ಮಾಡು; ವ್ಯತ್ಯಾಸ ಮಾಡು.

ವಂಗಡಣ (ನಾ). ಗುಂಪು; ಸಮೂಹ.

ವಂಗಿ (ನಾ). ಕುಸ್ತಿಯಲ್ಲಿ ಒಂದು ಪಟ್ಟು.

ವಂಚ (ನಾ). ೧. ಕರು; ವತ್ಸ. ೨. ವಂಶ; ಪೀಳಿಗೆ. ೩. ಬಿದಿರು. ೪. = ವಂಚಿ.

ವಂಚಕ (ನಾ). ೧. ತಕ್ಕ; ಮೋಸಗಾರ; ಕಪಟಿ. ೨. ನರಿ. (ಗು). ೩. ಮೋಸ ಮಾಡುವ; ವಂಚಿಸುವ.

ವಂಚಕಿ (ನಾ). ವಂಚಿಸುವವಳು; ಮೋಸಗಾತಿ.

ವಂಚನೆ (ನಾ). ೧. ಮೋಸ; ಕಪಟ. ೨. ಭ್ರಮೆ; ಭ್ರಾಂತಿ.

ವಂಚಿ (ನಾ). ಕೊಳಲು; ವೇಣು.

ವಂಚಿಗ (ನಾ). ಕೊಳಲನ್ನು ನುಡಿಸುವವನು.

ವಂಚಿಸು (ಕ್ರಿ). ೧. ಮೋಸಮಾಡು. ೨. ಅಲ್ಲಗಳೆ; ನಿರಾಕರಿಸು. ೩. ಕಣ್ಣು ತಪ್ಪಿಸು; ಮರೆಯಾಗಿರು.

ವಂಟೆ (ನಾ). ಒಂಟೆ; ಹತ್ತಕಡುಕು.

ವಂತಿಗೆ (ನಾ). ೧. ಚಂದಾಹಣ; ವರ್ಗಣಿ. ೨. ಸಹಾಯಧನ.

ವಂದನ = ವಂದನೆ. ~ಅರ್ಪಣೆ = ಕೃತಜ್ಞತೆಯನ್ನು ಸಲ್ಲಿಸುವುದು; ಆಭಾರ ಮನ್ನಣೆ.

ವಂದನಮಾಲೆ (ನಾ). ತೋರಣ.

ವಂದನೆ (ನಾ). ೧. ನಮಸ್ಕಾರ; ಪ್ರಣಾಮ. ೨. ಹೊಗಳಿಕೆ; ಸ್ತುತಿ.

ವಂದರಿ (ನಾ). ಒನಲಿ; ಜರಡಿ; ಸಾರಣಿಗೆ.

ವಂದಾರು (ನಾ). ೧. ಹೊಗಳುವವನು. ಸ್ತುತಿಪಾಠಕ. (ಗು). ೨. ಹೊಗಳುವ.

ವಂದಿ (ನಾ). ೧. ಹೊಗಳುಭಟ್ಟ; ಸ್ತುತಿಪಾಠಕ. ೨. ಸೆರೆಯಾಳು; ಬಂದಿ. ೩. ಕೊಳ್ಳೆ; ಲೂಟಿ.

ವಂದಿಸು (ಕ್ರಿ). ೧. ನಮಸ್ಕರಿಸು; ಪ್ರಣಾಮ ಮಾಡು. ೨. ಹೊಗಳು; ಸ್ತುತಿಸು.

ವಂದ್ಯ (ನಾ). ೧. ಗೌರವಿಸಲು ಯೋಗ್ಯನಾದವನು; ನಮಸ್ಕರಿಸಲು ಅರ್ಹನಾದವನು. (ಗು). ೨. ನಮಸ್ಕರಿಸಲು ತಕ್ಕ.

ವಂಧ್ಯ (ನಾ). ೧. ಮಕ್ಕಳಿಲ್ಲದವನು; ಅಪುತ್ರಕ. (ಗು). ೨. ನಿಷ್ಫಲವಾದ; ಬರಡಾದ.

ವಂಧ್ಯೆ (ನಾ). ಬಂಜೆ; ಗೊಡ್ಡು.

ವಂಶ (ನಾ). ೧. ಪೀಳಿಗೆ; ಕುಲ. ೨. ಬಿದಿರು; ಕಳಿಲೆ. ೩. ಕೊಳಲು; ವೇಣು. ೪. ಬೆನ್ನು ಮೂಳೆ; ಕಶೇರು. ೫. ಮುಳ್ಳುಮುತ್ತುಗದ ಮರ. ~ಛೇ(ಚ್ಛೇ)ದ = ೧. ಪೀಳಿಗೆಯನ್ನು ನಾಶಮಾಡುವುದು. ೨. ಬಿದಿರನ್ನು ಕತ್ತರಿಸುವುದು.

ವಂಶಜ (ನಾ). ೧. ವಂಶದಲ್ಲಿ ಹುಟ್ಟಿದವನು. ೨. ಉತ್ತಮ ಕುಲದಲ್ಲಿ ಹುಟ್ಟಿದವನು; ಕುಲೀನ. ೩. ಬಿದಿರಕ್ಕಿ.

ವಂಶಿ = ವಂಚಿ.

ವಕಾಲತ್ತು (ನಾ). ೧. ವಕೀಲನ ಕೆಲಸ; ವಕೀಲಿ. ೨. ಇನ್ನೊಬ್ಬನ ಪರವಾಗಿ ವಾದಿಸುವುದು; ಪಕ್ಷ ವಹಿಸುವುದು.

ವಕೀಲ (ನಾ). ವಕಾಲತ್ತು ಮಾಡುವವನು; ಲಾಯರು.

ವಕೀಲಿ = ವಕಾಲತ್ತು.

ವಕುಲ(ಳ) = ಬಕುಲ.

ವಕ್ಕಣೆ (ನಾ). ೧. ವ್ಯಾಖ್ಯಾನ; ಬಕ್ಕಣೆ; ವಿವರಣೆ. ೨. ಶೈಲಿ; ಸರಣಿ.

ವಕ್ಕರ = ವಕ್ರ. ~ಇಸು = ವಕ್ರಿಸು.

ವಕ್ಕಾಣ = ವಕ್ಕಣೆ.

ವಕ್ತಾರ (ನಾ). ೧. ವಾಗ್ಮಿ; ಚೆನ್ನಾಗಿ ಮಾತನಾಡುವವನು. ೨. ಭಾಷಣಕಾರ.

ವಕ್ತೃ = ವಕ್ತಾರ.

ವಕ್ತ್ರ (ನಾ). ೧. ಬಾಯಿ. ೨. ಮುಖ; ವದನ.

ವಕ್ರ ೧. = ವಕ್ರತೆ. ೨. ಮಂಗಳಗ್ರಹ. (ಗು). ೩. ಡೊಂಕಾದ; ಬಾಗಿದ. ೪. ತಪ್ಪಿಸಿಕೊಳ್ಳುವ; ನುಣುಚಿಕೊಳ್ಳುವ. ೫. ದ್ವಂದ್ವಾರ್ಥವುಳ್ಳ; ಎರಡು ಬಗೆಯ

ಅರ್ಥಗಳಿಂದ ಕೂಡಿದ. ~ಇಸು = ೧. ಅಡ್ಡಿಮಾಡು; ತೊಂದರೆ ಕೊಡು ೨. ಬಾಗು; ಡೊಂಕಾಗು. ೩. ಕೇಡೆಣಿಸು; ಕೆಡುಕನ್ನುಂಟುಮಾಡು. ೪. ಕೆಟ್ಟ ಪರಿಸ್ಥಿತಿ ಯುಂಟಾಗು; ದುರ್ಘಟನೆ ಸಂಭವಿಸು. ~ಉಕ್ತಿ = ೧. ವಕ್ರವಾದ ಮಾತು. ೨. ಕಾವ್ಯದಲ್ಲಿ ಒಂದು ಅಲಂಕಾರ. ~ಗತಿ = ೧. ಕೊಂಕು ನಡಗೆ, -ಚಲನೆ. ೨. ಕೆಟ್ಟ ನಡವಳಿಕೆ; ಅಪಮಾರ್ಗ. ~ಚಾರ = ವಕ್ರಗತಿ. ~ತುಂಡ = ೧. ಸೊಟ್ಟಗಿರುವ ಸೊಂಡಿಲುಳ್ಳವನು; ಗಣಪತಿ. ೨. ಸೊಟ್ಟಗಿರುವ ಕೊಕ್ಕುಳ್ಳುದು; ಗಿಣಿ. ~ದೃಷ್ಟಿ = ೧. ಸೊಟ್ಟಗಣ್ಣು. ೨. ಕ್ರೂರವಾದ ದೃಷ್ಟಿ.

ವಕ್ರತೆ (ನಾ). ೧. ಡೊಂಕು; ವಕ್ರವಾಗಿರುವಿಕೆ. ೨. ಮೋಸ; ಕುಟಿಲತೆ; ಕಪಟ.

ವಕ್ರಿಮ (ನಾ). ೧. ಧ್ವಂದ್ವಾರ್ಥದಿಂದ ಕೂಡಿರುವಿಕೆ. (ಗು). ೨. ಬಾಗಿದ; ಡೊಂಕಾದ.

ವಕ್ಷ (ನಾ). ಎದೆ.

ವಕ್ಷೋಜ (ನಾ). ಮೊಲೆ; ಸ್ತನ.

ವಖಾರ (ನಾ). ಉಗ್ರಾಣ; ಕೋಠಿ.

ವಗೈರೆ (ನಾ). ಇತ್ಯಾದಿ; ಮುಂತಾದುವು.

ವಗ್ಗ ೧. = ಬಗ್ಗ. ೨. ಗುಂಪು; ವರ್ಗ.

ವಚನ (ನಾ). ೧. ಮಾತನಾಡುವುದು; ಉಚ್ಚರಿಸುವುದು. ೨. ಮಾತು; ನುಡಿ; ಹೇಳಿಕೆ. ೩. ಪ್ರತಿಜ್ಞೆ; ನಾಗ್ದಾನ. ೪. ಗದ್ಯ. ೫. ಗದ್ಯಸಾಹಿತ್ಯದಲ್ಲಿ ಒಂದು ಪ್ರಕಾರ. ೬. ವ್ಯಾಕರಣದಲ್ಲಿ ನಾಮಪದ ಸಂಖ್ಯೆಯನ್ನು ಸೂಚಿಸುವ ಪದ. ~ಇಸು = ೧. ವಚಿಸು. ೨. ಭಾಷೆ ಕೊಡು; ಪ್ರತಿಜ್ಞೆ ಮಾಡು. ~ಚತುರ = ಮಾತನಾಡುವುದರಲ್ಲಿ ಜಾಣ. ~ಭಂಗ = ಕೊಟ್ಟ ಮಾತನ್ನು ಮುರಿಯುವುದು; ಮಾತಿಗೆ ತಪ್ಪುವುದು. ~ಭ್ರಷ್ಟ = ಮಾತಿಗೆ ತಪ್ಪುವವನು.

ವಚಿಸು (ಕ್ರಿ). ಹೇಳು; ವಿವರಿಸು; ತಿಳಿಯಪಡಿಸು.

ವಚ್ಛ ೧. = ವಕ್ಷ. ೨. ಕರು; ವತ್ಸ.

ವಜನ = ವಜನು.

ವಜನು (ನಾ). ತೂಕ; ಭಾರ; ಒಜ್ಜೆ. ~ದಾರ = ವರ್ಚಸ್ಸುಳ್ಳವನು; ವರ್ಚಸ್ವಿ.

ವಜಾ (ನಾ). ತೆಗೆದುಹಾಕುವಿಕೆ; ಕಳೆಯುವಿಕೆ.

ವಜೀರ (ನಾ). ೧. ಮಂತ್ರಿ; ಅಮಾತ್ಯ. ೨. ಅಶ್ವಾರೋಹಿ; ರಾವುತ. ೩. ಶ್ರೀಮಂತ. ~ಇಕೆ = ಕುದುರೆ ಸವಾರನ ಕೆಲಸ.

ವಜೆ ೧. = ವಜನು. ೨. = ಬಜೆ.

ವಜ್ಜರ = ವಜ್ರ.

ವಜ್ಜೆ = ವಜನು.

ವಜ್ರ (ನಾ). ೧. ನವರತ್ನಗಳಲ್ಲಿ ಒಂದು; ಹೀರ. ೨. = ವಜ್ರಾಯುಧ. ೩. ಸಿಡಿಲು. ೪. ರತ್ನಗಳನ್ನು ಕೊರೆಯಲು ಬಳಸುವ ಸಾಧನ. ೫. ಒಂದು ಬಗೆಯ ಬಿರುಸಾದ ಅಂಟು; ಮರವಜ್ರ. (ಗು). ೬. ಅತಿಕಠಿನವಾದ; ಗಟ್ಟಿಯಾದ. ೭. ಕ್ರೂರವಾದ; ಕರ್ಕಶವಾದ. ~ಅಭಿಘಾತ = ೧. ಸಿಡಿಲಿನ ಹೊಡೆತ. ೨. ಅತಿಕಠಿನವಾದ ತೊಂದರೆ, -ಕಷ್ಟ. ~ಆಯುಧ = ಇಂದ್ರನ ಆಯುಧ; ಕುಲಿಶ. ~ಉತ್ಸವ = ಸಂಘ, ಸಂಸ್ಥೆ ಮೊದಲಾದುವುಗಳಿಗೆ ಅರುವತ್ತು ವರ್ಷಗಳು ತುಂಬಿದಾಗ ಆಚರಿಸುವ ಉತ್ಸವ. ~ಕವಚ = (ಭೇದಿಸಲು ಕಷ್ಟವಾದ) ಲೋಹದ ಅಂಗಿ; ಚಿಲಖತ್ತು. ~ಕಾಯ = ೧. ಗಟ್ಟಿಮುಟ್ಟಾದ ದೇಹ; ಕಟ್ಟುಮಸ್ತಾದ ಶರೀರ. ೨. ಗಟ್ಟಿಗ; ದೇಹದಾರ್ಢ್ಯವುಳ್ಳವನು. ~ಕುಂಡಲ = ವಜ್ರಖಚಿತವಾದ ಕಿವಿಯ ಆಭರಣ. ~ಗಾರೆ = ಕಲ್ಲು, ಮರಳು, ಸುಣ್ಣ ಮುಂತಾದುವುಗಳ ಮಿಶ್ರಣದಿಂದ ಮಾಡಿದ ಗಟ್ಟಿಯಾದ ಲೇಪ. ~ತುಂಡ = ಕಠಿನವಾದ ಕೊಕ್ಕನ್ನುಳ್ಳುದು;

ರಣಹದ್ದು. ~ದಂಡ = ವಜ್ರಾಯುಧ. ~ಪಂಜರ = ೧. ಬಹಳ ಗಟ್ಟಿಯಾದ ಬೋನು. ೨. ಬಲವಾದ ರಕ್ಷೆ, -ಕಾವಲು. ~ಪಾತ = ವಜ್ರಾಭಿಘಾತ. ~ಮುಷ್ಟಿ = ೧. ಒಂದು ಬಗೆಯ ಆಯುಧ. ೨.ಬಲವಾದ ಹಿಡಿತ; ಬಿಗಿಮುಷ್ಟಿ. ~ಲೇಪ = ೧. ಮರವಜ್ರದಿಂದಾದ ಲೇಪನ. ೨.ದೃಢವಾದ ಲೇಪ. ~ಶರೀರ = ವಜ್ರಕಾಯ.

ವಜ್ರಿ (ನಾ). ೧. ವಜ್ರಾಯುಧವನ್ನುಳ್ಳವನು; ಇಂದ್ರ. ೨. ಒಂದು ಜಾತಿಯ ಸಸ್ಯ; ಎಲೆಗಳ್ಳಿ.

ವಟ (ನಾ). ಆಲದ ಮರ.

ವಟಕ (ನಾ). ೧. ಗುಳಿಗೆ; ಮಾತ್ರೆ; ಉಂಡೆ. ೨. ಒಂದು ತೂಕ. ೩. = ವಡೆ.

ವಟಗುಟ್ಟು (ಕ್ರಿ). ೧. (ಕಪ್ಪೆ ಮೊದಲಾದುವು) ಸದ್ದುಮಾಡು. ೨. ಒಂದೇ ಸಮನೆ ಮಾತನಾಡು; ಬಡಬಡಿಸು.

ವಟಗುಡು = ವಟಗುಟ್ಟು.

ವಟಾಯಿಸು (ಕ್ರಿ). ವಿನಿಮಯ ಮಾಡು.

ವಟಾರ = ವಠಾರ.

ವಟು (ನಾ). ೧. ಹುಡುಗ; ಬಾಲಕ. ೨. ಬ್ರಹ್ಮಚಾರಿ.

ವಟುಕ = ವಟು.

ವಟ್ಟ (ನಾ). ೧. ವೃತ್ತಾಕಾರವಾದುದು; ದುಂಡಗೆ ಇರುವುದು. ೨. ಆಟದ ಬಿಲ್ಲೆ; ಬಚ್ಚ. ೩. ಮುಂಗಡವಾಗಿ ಕೊಡುವ ಹಣದಲ್ಲಿ ಖೋತಮಾಡಿದ ಮೊಬಲಗು; ಸೋಡಿ; ತಳ್ಳುಪಡಿ. ೪. ದಳ್ಳಾಳಿ; ಕಮಿಷನ್ನು.

ವಠಾರ (ನಾ). ಕೆಲವು ಮನೆಗಳನ್ನೊಳಗೊಂಡ ಆವಾರ, -ಪ್ರದೇಶ.

ವಡಂಜಿ (ನಾ). ಒಂದು ಬಗೆಯ ಬಟ್ಟೆ.

ವಡಬ = ಬಡಬ. ~ಅಗ್ನಿ = ಬಡಬ. ~ಅನಲ(ಳ) = ಬಡಬ.

ವಡಿ (ನಾ). ಪಾದದ ಮೊದಲಕ್ಷರ ಮತ್ತು ಪಾದಮಧ್ಯದ ಯತಿಯ ಮುಂದಿನ ಅಕ್ಷರವು ಸಜಾತೀಯವಾಗಿರುವಿಕೆ.

ವಡೆ (ನಾ). ಒಂದು ಬಗೆಯ ಕರಿದ ತಿಂಡಿ.

ವಡ್ಡ (ನಾ). ೧. ವೃದ್ಧ; ಹಿರಿಯ. ೨. ಕಲ್ಲುಕುಟಿಗ; ಒಡ್ಡ. ೩. ಒರಟುಸ್ವಭಾವದವನು. ~ಆರಾಧನೆ=ವೃದ್ಧರ ಆರಾಧನೆ; ಹಿರಿಯರಿಗೆ ಮಾಡುವ ಪೂಜೆ.

ವಡ್ಡಂತಿ (ನಾ). ಹುಟ್ಟುಹಬ್ಬ; ವರ್ಧಂತಿ.

ವಡ್ಡವಾರ (ನಾ). ಮಂಗಳವಾರ.

ವಣಿಕ (ನಾ). ವ್ಯಾಪಾರಿ; ವರ್ತಕ.

ವಣಿಗ ೧. = ವಣಿಕ. (ಪ್ರ). ೨. ಒಂದು ತದ್ಧಿತಪ್ರತ್ಯಯ.

ವಣಿಗ್ವಾಟ (ನಾ). ವರ್ತಕರ ಬೀದಿ; ಅಂಗಡಿ ಬೀದಿ.

ವಣಿಜ = ವಣಿಕ.

ವಣ್ಣ (ನಾ). ೧. ಬಣ್ಣ; ವರ್ಣ. ೨. ಸ್ತುತಿ; ಹೊಗಳಿಕೆ. ~ಇಸು = ೧. ಬಣ್ಣಿಸು; ವಿವರಿಸು; ವರ್ಣಿಸು. ೨. ಬಣ್ಣಹಾಕು, -ಹಚ್ಚು.

ವತಂಸ (ನಾ). ಕರ್ಣಾಭರಣ; ಅವತಂಸ.

ವತನ (ನಾ). ೧. ವಂಶಪರಂಪರೆಯಾಗಿ ಬಂದ ಭೂಮಿ. ೨. ಸರ್ಕಾರದಿಂದ ಇನಾಮಾಗಿ ಪಡೆದ ಭೂಮಿ; ಜಹಗೀರು. ~ದಾರ = ಭೂಮಿ ಕಾಣಿಯುಳ್ಳವನು; ಆಸ್ತಿವಂತ.

ವತಿ (ನಾ). ಕಡೆ; ಪಕ್ಷ.

ವತ್ಸ ೧. = ವಚ್ಚ. ೨. ಮಗ; ಪುತ್ರ. ೩. ಚಿಹ್ನೆ; ಗುರುತು. ೪. = ವತ್ಸರ. ~ಕುಲ = ಕರುಗಳ ಗುಂಪು, -ಮಂದೆ.

ವತ್ಸನಾಭಿ (ನಾ). ಒಂದು ಬಗೆಯ ವಿಷಸಸ್ಯ ಮತ್ತು ಆ ಸಸ್ಯದಿಂದ ತಯಾರಿಸಿದ ವಿಷ; ಬಚನಾಗ.

ವತ್ಸರ (ನಾ). ವರ್ಷ; ಅಬ್ದ.

ವತ್ಸಲ(ಳ) (ಗು). ಪ್ರೀತಿಸುವ; ಒಲುಮೆಯಿಂದ ಕೂಡಿದ.

ವತ್ಸೆ (ನಾ). ೧. ಹೆಣ್ಣುಕರು. ೨. ಮಗಳು; ಪುತ್ರಿ.

ವದಂತಿ (ನಾ). ಗಾಳಿಸುದ್ದಿ; ವರ್ತಮಾನ.

ವದನ (ನಾ). ೧. ಮುಖ; ಮೋರೆ. ೨. ಬಾಯಿ. ೩. ಮಾತನಾಡುವಿಕೆ. ~ಕೊಟ = ಮುತ್ತು; ಚುಂಬನ. ~ರಸ = ಜೊಲ್ಲು; ಲಾಲಾಜಲ.

ವದಾನ್ಯ (ನಾ). ೧. ನಿರರ್ಗಳವಾಗಿ ಮಾತನಾಡುವವನು. ೨. ಹಿತವಾಗಿ ಮಾತನಾಡುವವನು. ೩. ಕೊಡುಗೈಯವನು; ದಾನಶೀಲ. (ಗು). ೪. ಹಿತವಾಗಿ ಮಾತನಾಡುವ. ೫. ಧಾರಾಳವಾದ; ಕೊಡುಗೈಯ.

ವದ್ಯ (ನಾ). ೧. ಕೃಷ್ಣಪಕ್ಷ. ೨. ಮಾತನಾಡುವುದು. (ಗು). ೩. ಮಾತನಾಡಲು ಯೋಗ್ಯವಾದ.

ವಧ (ನಾ). ಕೊಲ್ಲುವುದು; ಕೊಲೆ. ~ಇಸು = ಕೊಲ್ಲು; ಸಂಹರಿಸು.

ವಧಕಾರ (ನಾ). ಅಪರಾಧಿಗಳನ್ನು ಕೊಲ್ಲಲು ನಿಯುಕ್ತನಾದ ಆಳು.

ವಧು (ನಾ). ೧. ಮದುವಣಗಿತ್ತಿ; ಮದುಮಗಳು. ೨. ಹೆಂಗಸು. ೩. ಹೆಂಡತಿ. ೪. ಸೊಸೆ

ವಧೂಟಿ = ವಧು.

ವಧೂಟಿಕೆ = ವಧು.

ವಧೆ = ವಧ.

ವಧ್ಯ (ನಾ). ೧. ಕೊಲೆಗೆ ಅರ್ಹನಾದವನು. (ಗು). ೨. ಸಂಹರಿಸಲು ಯೋಗ್ಯವಾದ. ೩. ತ್ಯಜಿಸಲು ಯೋಗ್ಯವಾದ; ಬಿಡತಕ್ಕ.

ವನ (ನಾ). ೧ ಕಾಡು; ಅರಣ್ಯ. ೨. ತೋಟ. ೩. ನೀರು; ಜಲ. ~ಕೇಳಿ = ಕಾಡಿನಲ್ಲಿ ವಿಹರಿಸುವಿಕೆ. ~ಚರ = ೧. ಕಾಡಿನಲ್ಲಿ ಸಂಚರಿಸುವವನು; ಬೇಡ; ವ್ಯಾಧ. ೨. ಕಾಡು ಪ್ರಾಣಿ. ~ಜಾತ=ನೀರಿನಲ್ಲಿ ಹುಟ್ಟಿದುದು; ತಾವರೆ. ~ದುರ್ಗ = ದಟ್ಟವಾದ ಕಾಡಿನಲ್ಲಿ ರಚಿಸಿದ ಕೋಟೆ. ~ನಿಧಿ = ವನಧಿ. ~ಪಾಲಕ=೧. ಕಾಡನ್ನು ರಕ್ಷಿಸುವವನು; ಅರಣ್ಯರಕ್ಷಕ. ೨. ತೋಟವನ್ನು ನೋಡಿಕೊಳ್ಳುವವನು; ಮಾಲಿ. ~ಭೋಜನ = ವಿಹಾರಾರ್ಥವಾಗಿ ವನದಲ್ಲಿ ಮಾಡುವ ಊಟ. ~ಮಹತ್ತರ = ಉದ್ಯಾನದ ಮೇಲ್ವಿಚಾರಕ. ~ಮಹೋತ್ಸವ = ಮರಗಿಡಗಳ ಅಭಿವೃದ್ಧಿಗಾಗಿ ಸಸ್ಯಗಳನ್ನು ನೆಡುವ ಒಂದು ಸಮಾರಂಭ. ~ಮಾಲಿ(ಳಿ) = ವನಮಾಲೆಯನ್ನು ಧರಿಸಿದವನು; ಕೃಷ್ಣ. ~ಮಾಲೆ = ಕಾಡು ಹೂವುಗಳಿಂದ ಮಾಡಿದ ಹಾರ. ~ರಾಜ = ೧. ಕಾಡಿನ ಅರಸ; ಸಿಂಹ. ೨. ಒಂದು ಜಾತಿಯ ಹೂವಿನ ಗಿಡ ಮತ್ತು ಅದರ ಹೂವು. ~ರಾಶಿ = ದಟ್ಟವಾಗಿ ಬೆಳೆದ ಮರಗಳ ಗುಂಪು, –ಸಮೂಹ. ~ವಾಸ = ೧. ಕಾಡಿನಲ್ಲಿ ವಾಸಮಾಡುವುದು. ೨. ಕಷ್ಟ.

ವನಚರಿ (ನಾ). ಬೇಡರ ಹೆಂಗಸು; ಕಿರಾತೆ.

ವನಜ ೧. = ವನರುಹ. (ಗು). ೨. ಕಾಡಿನಲ್ಲಿ ಹುಟ್ಟಿದ. ~ಅರಿ = ತಾವರೆಯ ಶತ್ರು; ಚಂದ್ರ. ~ಭವ = ತಾವರೆಯಲ್ಲಿ ಹುಟ್ಟಿದವನು; ಬ್ರಹ್ಮ. ~ಮಿತ್ರ = ಸೂರ್ಯ. ~ಸಂಭವ = ವನಜಭವ.

ವನಜನಾಭ (ನಾ). ಹೊಕ್ಕುಳಿನಲ್ಲಿ ತಾವರೆಯ ಹೂವುಳ್ಳವನು; ವಿಷ್ಣು.

ವನಧಿ (ನಾ). ಕಡಲು; ಸಮುದ್ರ.

ವನಭೃತ್ತು (ನಾ). ನೀರನ್ನು ಹೊತ್ತಿರುವುದು; ಮೋಡ.

ವನರುಹ (ನಾ). ನೀರಿನಲ್ಲಿ ಹುಟ್ಟಿದುದು; ತಾವರೆ.

ವನಸ್ಪತಿ (ನಾ). ೧. ಮರ. ೨. ಹೂವಾಗದೆ ಹಣ್ಣುಗಳನ್ನು ಬಿಡುವ ಒಂದು ಜಾತಿಯ ಮರ. ೩. ಬೇರು; ಮೂಲಿಕೆ. ೪. ಸಸ್ಯಗಳಿಂದ ಸಿದ್ಧಪಡಿಸಿದ ಎಣ್ಣೆ.

ವನಿತೆ (ನಾ). ೧. ಹೆಂಗಸು; ಸ್ತ್ರೀ. ೨. ನಲ್ಲೆ; ಹೆಂಡತಿ.

ವನಿಪ= ವನೀಪಕ.

ವನೀಪಕ (ನಾ). ಬೇಡುವವನು; ಯಾಚಕ.

ವನೇಚರ = ವನಚರ.

ವನೇಚರಿ = ವನಚರಿ.

ವನೇಜ= ವನಜ.

ವನೌಕಸ (ನಾ). ೧. ಕಾಡಿನಲ್ಲಿ ವಾಸಿಸುವವನು; ತಪಸ್ವಿ. ೨. ಕಾಡುಪ್ರಾಣಿ. ೩. ಕೋತಿ; ಕೋಡಗ.

ವನ್ಯ (ನಾ). ೧. ಕಾಡುಮನುಷ್ಯ; ಒರಟ; ಅಸಂಸ್ಕೃತ. (ಗು). ೨. ಕಾಡಿಗೆ ಸಂಬಂಧಪಟ್ಟ. ~ಮೃಗ = ಕಾಡುಪ್ರಾಣಿ; ಕ್ರೂರ ಮೃಗ.

ವಪನ (ನಾ). ೧. ಕತ್ತರಿಸುವಿಕೆ; ಬೋಳಿಸುವಿಕೆ; ಮುಂಡನ. ೨. ಬೀಜವನ್ನು ಬಿತ್ತುವಿಕೆ.

ವಪು (ನಾ). ೧. ದೇಹ; ಶರೀರ; ಮೈ. ೨. ಆಕಾರ; ಸ್ವರೂಪ. ೩. ರಮಣೀಯವಾದ ರೂಪ.

ವಪೆ (ನಾ). ೧. ನೆಣ; ಚರಬಿ; ಕೊಬ್ಬು. ೨. ಕುಳಿ; ಹಳ್ಳ. ೩. ಎದೆ ಮತ್ತು ಹೊಟ್ಟೆಯಲ್ಲಿಯ ಅಂಗಗಳನ್ನು ಬೇರ್ಪಡಿಸುವ ಸೂಕ್ಷ್ಮವಾದ ಪದರ.

ವಪ್ತೃ (ನಾ). ೧. ಕ್ಷೌರಿಕ; ಕೆಲಸಿಗ. ೨. ಒಕ್ಕಲಿಗ.

ವಪ್ರ (ನಾ). ೧. ಹೊಲ; ಜಮೀನು. ೨. ಪ್ರಾಕಾರ. ೩. ಬೆಟ್ಟದ ಇಳುಕಲು ಪ್ರದೇಶ; ತಪ್ಪಲು. ೪. ಸೀಸ. ೫. ಧೂಳು; ಪುಡಿ. ೬. ಪಾಪ; ದೋಷ. ೭. ಆನೆ ಅಥವಾ ಹೋರಿ ಕೊಂಬಿನಿಂದ ಮಣ್ಣನ್ನು ಮೇಲಕ್ಕೆಸೆದುಕೊಳ್ಳುವ ಆಟ.

ವಮನ (ನಾ). ವಾಂತಿ; ಓಕರಿಕೆ.

ವಯಲ್(ಲು) (ನಾ). ಬಯಲು; ಮೈದಾನ.

ವಯಸು = ವಯಸ್ಸು.

ವಯಸ್ಕ (ನಾ). ವಯಸ್ಸಾದವನು; ಹಿರಿಯ.

ವಯಸ್ಯ (ನಾ). ೧. ಸಮವಯಸ್ಸಿನವನು. ೨. ಗೆಳೆಯ; ಜೊತೆಗಾರ. (ಗು). ೩. ವಯಸ್ಸಿಗೆ ಸಂಬಂಧಿಸಿದ.

ವಯಸ್ಯೆ (ನಾ). ೧. ಸಮವಯಸ್ಸಿನವಳು. ೨. ಜೊತೆಗಾತಿ; ಗೆಳತಿ.

ವಯಸ್ಸು (ನಾ). ೧. ಯೌವನ; ಹರಯ; ಪ್ರಾಯ. ೨. ಒಬ್ಬ ವ್ಯಕ್ತಿಯು ಹುಟ್ಟಿದ ಮೇಲೆ ಕಳೆದಿರುವ ಕಾಲ.

ವಯಿನ (ನಾ). ೧. ತಂತ್ರ; ಉಪಾಯ. ೨. ಅಚ್ಚುಕಟ್ಟು; ಓರಣ.

ವಯಿರ (ನಾ). ೧. ಹಗೆ; ವೈರ. ೨. ನವರತ್ನಗಳಲ್ಲಿ ಒಂದು; ವಜ್ರ. ~ಮುಡಿ = ವಜ್ರಗಳನ್ನು ಕುಂದಣಿಸಿದ ಕಿರೀಟ.

ವಯೋಗುಣ (ನಾ). ಆಯಾ ವಯಸ್ಸಿಗೆ ತಕ್ಕ ಗುಣ, -ರೀತಿ.

ವಯೋಧರ್ಮ (ನಾ). ೧. ಆಯಾ ವಯಸ್ಸಿಗೆ ತಕ್ಕ ಕರ್ತವ್ಯ, -ನಡತೆ, -ಸ್ವಭಾವ. ೨. = ವಯೋಗುಣ.

ವಯೋಧಿಕ (ನಾ). ವಯಸ್ಸಿನಿಂದ ಹಿರಿಯನಾದವನು; ವೃದ್ಧ.

ವಯೋವೃದ್ಧ = ವಯೋಧಿಕ.

ವಯ್ಯಾರ (ನಾ). ಬೆಡಗು; ಒಯ್ಯಾರ.

ವಯ್ಯಾರಿ (ನಾ). ಬೆಡಗಿ; ಒಯ್ಯಾರಿ.

ವರ (ನಾ). ೧. ಅನುಗ್ರಹ; ಕೊಡುಗೆ. ೨. ಮದುಮಗ; ಮದುವೆಯ ಗಂಡು. ೩. ಗಂಡ; ಪತಿ. ೪. ಬಯಕೆ; ಅಭೀಷ್ಟ. (ಗು). ೫. ಶ್ರೇಷ್ಠವಾದ; ಅತ್ಯುತ್ತಮವಾದ. ~ಅಂಗ=೧. ತಲೆ; ಉತ್ತಮಾಂಗ.

೨. ಯೋನಿ. ೩. ಉತ್ತಮವಾದ ಅಂಗ ಗಳಿಂದ ಕೂಡಿದ. ~ಅಂಗನೆ=ಶ್ರೇಷ್ಠಳಾದ ಹೆಂಗಸು. ~ಅನ್ವೇಷಣ(ಣೆ) = ಕನ್ಯೆಗೆ ಗಂಡನ್ನು ಹುಡುಕುವುದು. ~ಅರ್ಥಿ =೧. ಅನುಗ್ರಹವನ್ನು ಬಯಸುವವನು. ೨. ವರಾನ್ವೇಷಣೆ ಮಾಡುವವನು. ~ಇಸು =೧.ಆಯ್ಕೆಮಾಡು; ಆರಿಸು.೨.ಬಯಸು; ಆಸೆಪಡು. ೩.ಹೊಂದು; ಪಡೆ. ೪.ಮದುವೆ ಯಾಗು. ~ಉಪಚಾರ= ಮದುವೆಯಲ್ಲಿ ಕನ್ಯಾಪಿತೃ ವರನಿಗೆ ಕೊಡುವ ಉಡುಗೊರೆ. ~ಕವಿ = ಶ್ರೇಷ್ಠನಾದ ಕವಿ. ~ದಕ್ಷಿಣೆ = ಲಗ್ನದಲ್ಲಿ ವರನಿಗೆ ವಧುವಿನ ತಂದೆಯು ಕೊಡುವ ಹಣ. ~ಪೂಜೆ = ೧. ಶ್ರೇಷ್ಠವಾದ ಆರಾಧನೆ, -ಪೂಜೆ. ೨. ಮದುವೆಯಲ್ಲಿ ಹೆಣ್ಣಿನ ತಂದೆತಾಯಿಗಳು ವರನಿಗೆ ಮಾಡುವ ಪೂಜೆ. ~ಸಾಮ್ಯ = ವಧೂ ವರರು ಒಬ್ಬರಿಗೊಬ್ಬರು ಈಡುಜೋಡಾಗಿ ರುವುದು.

ವರಂ (ಅ). ವರೆಗೆ; ತನಕ.

ವರಟೆ (ನಾ). ೧. ಹಂಸೆ. ೨. ಒಂದು ಜಾತಿಯ ಹುಳು; ಕಡಜೀರಿಗೆ.

ವರಣ (ನಾ). ೧. ಆರಿಸುವುದು; ಆಯ್ಕೆ. ೨. ಗೋಡೆ; ಪ್ರಾಕಾರ. ೩. ಸೇತುವೆ; ಒಡ್ಡು. ೪. ಆವಾರ; ಅಂಗಳ. ೫. ಹೊದಿಕೆ; ಆಚ್ಛಾದನೆ. ೬. ಅಪೇಕ್ಷಿಸುವಿಕೆ. ~ಮಾಲಿಕೆ = ಸ್ವಯಂವರದಲ್ಲಿ ಹಾಕುವ ಮಾಲೆ; ಸಂಬಂಧಮಾಲೆ. ~ಮಾಲೆ = ವರಣಮಾಲಿಕೆ.

ವರದ (ಗು). ಅನುಗ್ರಹಿಸುವ; ವರವನ್ನು ದಯಪಾಲಿಸುವ.

ವರದಿ (ನಾ). ೧. ಸುದ್ದಿ; ಸಮಾಚಾರ. ೨. ಯಾವುದಾದರೂ ವಿಷಯ, ಘಟನೆ ಮುಂತಾದುವನ್ನು ಕುರಿತು ಪ್ರಕಟನೆಗಾಗಿ ಬರೆದಿರುವ ನಿರೂಪಣೆ. ~ಗಾರ = ಸುದ್ದಿಯನ್ನು ತಿಳಿಸುವವನು. ~ಮಾಡು = ನಿರೂಪಿಸು; ಹೇಳು.

ವರಮಾನ (ನಾ). ಉತ್ಪನ್ನ; ಆದಾಯ. ~ತೆರಿಗೆ = ಉತ್ಪನ್ನದ ಮೇಲೆ ವಿಧಿಸುವ ತೆರಿಗೆ; ಆದಾಯದ ತೆರಿಗೆ.

ವರಯಿಸು = ವರಿಸು.

ವರಲೆ (ನಾ). ಹೆಣ್ಣು ಹಂಸಪಕ್ಷಿ.

ವರಸೆ (ನಾ). ೧. ಸಾಲು; ಪಂಕ್ತಿ. ೨. ರೀತಿ; ಕ್ರಮ. ೩. ಪೀಳಿಗೆ; ವಂಶ. ೪. ಸಲ; ಬಾರಿ. ೫. ರಕ್ತಸಂಬಂಧ; ವಾವೆ. ೬. (ಕುಸ್ತಿ, ಕತ್ತಿ ತಿರುಗಿಸುವುದು, ವ್ಯಾಯಾಮ ಮುಂತಾದುವುಗಳಲ್ಲಿಯ) ಪಟ್ಟು. ೭. ಯುಕ್ತಿ; ಉಪಾಯ. ~ದಾರ = ಸಾಮು ಮಾಡುವವನು; ಅಂಗಸಾಧಕ.

ವರಹ (ನಾ). ವರಾಹಮುದ್ರೆಯಿಂದ ಕೂಡಿದ ಒಂದು ಚಿನ್ನದ ನಾಣ್ಯ; ಪಗೋಡ.

ವರಾಕ (ನಾ). ೧. ದುಃಖದಿಂದ ಕೂಡಿದ ವ್ಯಕ್ತಿ. (ಗು). ೨. ಹೀನಸ್ಥಿತಿಯಲ್ಲಿರುವ; ಶೋಚನೀಯ.

ವರಾಕೆ (ನಾ). ದುಃಖಿತೆ.

ವರಾಟ (ನಾ). ೧. ಕವಡೆ. ೨. ಹಗ್ಗ; ಮಿಣಿ.

ವರಾಡ (ನಾ). ತೆರಿಗೆ; ಸುಂಕ.

ವರಾತ (ನಾ). ಒತ್ತಾಯ; ಬಲಾತ್ಕಾರ.

ವರಾತು = ವರಾತ.

ವರಾಹ (ನಾ). ೧. ಹಂದಿ; ಸೂಕರ. ೨. ವಿಷ್ಣುವಿನ ಹತ್ತು ಅವತಾರಗಳಲ್ಲಿ ಮೂರನೆಯದು.

ವರಿ = ವರಾಡ.

ವರಿಷ್ಠ (ನಾ). ೧. ತಾಮ್ರ. ೨. ಹಿರಿಯ; ಮೇಲಧಿಕಾರಿ. (ಗು). ೩. ಅತ್ಯುತ್ತಮ ವಾದ; ಶ್ರೇಷ್ಠವಾದ. ೪. ವಿಶಾಲವಾದ; ದೊಡ್ಡ. ೫. ಎಲ್ಲಕ್ಕೂ ಹೆಚ್ಚಿನ.

ವರಿಸ (ನಾ). ವರ್ಷ; ಅಬ್ದ.

ವರಿಸೆ = ವರಸೆ.

ವರುಣ (ನಾ). ೧. ನೀರಿನ ಅಧಿದೇವತೆ; ಸಮುದ್ರರಾಜ. ೨. ಅಷ್ಟದಿಕ್ಪಾಲಕರಲ್ಲಿ ಒಬ್ಬ; ಪಶ್ಚಿಮದಿಕ್ಕಿನ ಒಡೆಯ. ~ಅಸ್ತ್ರ =ಜಲವನ್ನು ಅಭಿಮಂತ್ರಿಸಿ ಬಿಡುವ ಒಂದು ಬಗೆಯ ಅಸ್ತ್ರ. ~ದಿಕ್ಕು = ಪಶ್ಚಿಮ ದಿಕ್ಕು.

ವರುಣಾನಿ (ನಾ). ೧. ವರುಣನ ಹೆಂಡತಿ. ೨. ಪಶ್ಚಿಮದಿಕ್ಕು.

ವರುಷ = ವರ್ಷ.

ವರುಸ = ವರ್ಷ.

ವರೂಥ (ನಾ). ೧. ರಥ; ತೇರು. ೨. ರಥ ದಲ್ಲಿ ಕುಳಿತಿರುವವನಿಗೆ ಪೆಟ್ಟು ತಾಗದಂತೆ ಸುತ್ತಲೂ ಹಾಕಿರುವ ಕಟಾಂಜನ. ೩. = ವರೂಥಿನಿ.

ವರೂಥಿನಿ (ನಾ). ೧. ಸಮುದಾಯ; ಗುಂಪು. ೨. ಸೈನ್ಯ; ದಂಡು.

ವರೆಗೆ = ವರಂ.

ವರೇಣ್ಯ (ನಾ). ೧. ಶ್ರೇಷ್ಠನಾದವನು. (ಗು). ೨. ಅತ್ಯುತ್ತಮವಾದ; ಶ್ರೇಷ್ಠವಾದ.

ವರ್ಗ (ನಾ). ೧. ಒಂದೇ ಬಗೆಯ ವಸ್ತು, ವ್ಯಕ್ತಿ ಮೊದಲಾದುವುಗಳ ಗುಂಪು, —ಸಮೂಹ. ೨. ದರ್ಜೆ; ಅಂತಸ್ತು. ೩. ಅಧ್ಯಾಯ; ಪ್ರಕರಣ. ೪. ಜಾತಿ; ಪಂಥ. ೫. ಗಣಿತದಲ್ಲಿ ಒಂದು ಸಂಖ್ಯೆಯನ್ನು ಅದೇ ಸಂಖ್ಯೆಯಿಂದ ಗುಣಿಸಿದಾಗ ಬರುವ ಮೊತ್ತ. ೬. ವ್ಯವಹಾರದ ಮುಖ್ಯ ಲೆಕ್ಕದ ಪುಸ್ತಕ. ೭. ಇಯತ್ತೆ; ತರಗತಿ. ೮. ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಬದಲಾಯಿಸುವಿಕೆ; ಸ್ಥಳಾಂತರ. ~ಅಕ್ಷರ = ಕವರ್ಗದಿಂದ ಪವರ್ಗದ ವರೆಗಿನ ಇಪ್ಪತ್ತೈದು ಅಕ್ಷರಗಳು. ~ಆ(ವಾ)ಗು = ಸ್ಥಳಾಂತರವಾಗು. ~ಇಸು = ಅಧಿಕಗೊಳಿಸು; ದ್ವಿಗುಣಿಸು. ~ಮೂಲ = ಗಣಿತದಲ್ಲಿ ವರ್ಗಸಂಖ್ಯೆ ಬರಲು ಕಾರಣವಾದ ಸಂಖ್ಯೆ.

ವರ್ಗಣಿ (ನಾ). ವಂತಿಗೆ; ಚಂದಾ. ~ದಾರ = ಚಂದಾದಾರ; ಸದಸ್ಯ.

ವರ್ಗಾಯಿಸು (ಕ್ರಿ). ಬೇರೊಂದು ಸ್ಥಳಕ್ಕೆ ಕಳುಹಿಸು; ಸ್ಥಳಾಂತರಿಸು.

ವರ್ಗಾವಣೆ (ನಾ). ಸ್ಥಳಾಂತರ; ವರ್ಗ.

ವರ್ಗೀಕರಣ (ನಾ). ಗುಂಪುಗಳನ್ನು ವಿಂಗಡಿಸುವ ಕ್ರಮ.

ವರ್ಗೀಕರಿಸು (ಕ್ರಿ). ವಿಭಜಿಸು; ವಿಂಗಡಿಸು.

ವರ್ಗೀಯ (ಗು). ಒಂದು ವರ್ಗಕ್ಕೆ ಸೇರಿದ; ಒಂದು ಗುಂಪಿಗೆ ಸಂಬಂಧಿಸಿದ.

ವರ್ಚಸ್ವಿ (ನಾ). ೧. ಕಾಂತಿಯಿಂದ ಕೂಡಿದವನು; ತೇಜಸ್ವಿ. ೨. ಪ್ರಭಾವಶಾಲಿ; ಪ್ರತಿಭಾವಂತ; ಸಾಮರ್ಥ್ಯವುಳ್ಳವನು.

ವರ್ಚಸ್ಸು (ನಾ). ೧. ಕಾಂತಿ; ತೇಜಸ್ಸು. ೨. ಪ್ರಭಾವ; ಸಾಮರ್ಥ್ಯ.

ವರ್ಜನ (ನಾ). ೧. ಬಿಡುವಿಕೆ; ತ್ಯಜಿಸುವಿಕೆ. ೨. ಕೊಲ್ಲುವಿಕೆ; ಸಂಹರಿಸುವಿಕೆ.

ವರ್ಜಿತ (ನಾ). ೧. ಬಿಡಲ್ಪಟ್ಟುದು. (ಗು). ೨. ಬಿಡಲ್ಪಟ್ಟ; ತ್ಯಜಿಸಿದ.

ವರ್ಜಿಸು (ಕ್ರಿ). ತೊರೆ; ತ್ಯಜಿಸು; ಬಿಡು.

ವರ್ಜ್ಯ (ನಾ). ಬಿಡಲು ಯೋಗ್ಯವಾದುದು.

ವರ್ಣ (ನಾ). ೧. ಬಣ್ಣ; ರಂಗು. ೨. ಲೇಪನ. ೩. ಕಾಂತಿ; ಹೊಳಪು. ೪. ಬಣ; ಪಂಗಡ. ೫. ಜಾತಿ; ವರ್ಗ. ೬. ಅಕ್ಷರ. ೭. ರೂಪ; ಆಕಾರ. ೮. ಸ್ತುತಿ; ಹೊಗಳಿಕೆ. ೯. ಸಂಗೀತದ ಒಂದು ಪ್ರಕಾರ. ೧೦. ಅಲಂಕಾರ. ೧೧. ಬಟ್ಟೆ; ವಸ್ತ್ರ. ~ಅಂಧ = ಬೇರೆ ಬೇರೆ ಬಣ್ಣಗಳಲ್ಲಿ ವ್ಯತ್ಯಾಸವನ್ನು ಕಂಡುಹಿಡಿಯಲಾಗದವನು. ~ಅನುಕ್ರಮ = ಅಕ್ಷರಗಳನ್ನು ಅನುಕ್ರಮದಲ್ಲಿ ಜೋಡಿಸುವುದು. ~ಆಶ್ರಮ = ೧. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಎಂಬ ನಾಲ್ಕು ವರ್ಗಗಳು. ೨. ಬ್ರಹ್ಮಚರ್ಯ, ಗಾರ್ಹಸ್ಥ್ಯ,

ವಾನಪ್ರಸ್ಥ ಮತ್ತು ಸಂನ್ಯಾಸ ಎಂಬ ನಾಲ್ಕು ಬಗೆಯ ಆಶ್ರಮಗಳು. ~ಇಸು =೧. ವಿವರಿಸು; ವಿಸ್ತಾರವಾಗಿ ಹೇಳು; ಬಣ್ಣಿಸು. ೨. ಹೊಗಳು; ಸ್ತುತಿಸು. ~ಉತ್ತಮ=ಶ್ರೇಷ್ಠವಾದ ವರ್ಣದವನು. ~ಪಲ್ಲಟ=೧. ಬಣ್ಣಗಳು ಬದಲಾಗುವಿಕೆ. ೨. ಅಕ್ಷರಗಳ ಸ್ಥಾನ ಬದಲಾಗುವಿಕೆ. ~ಪೂರ =೧. ಬಣ್ಣ ಹಾಕುವುದು. ೨. ಬಣ್ಣಗಳನ್ನು ತುಂಬುವುದು; ಬಣ್ಣವುರ. ~ಮಾಲೆ = ಅಕ್ಷರಮಾಲೆ. ~ವಿಕಾರ =೧. ಅಕ್ಷರಗಳ ವ್ಯತ್ಯಾಸ. ೨. ಬಣ್ಣಗುಂದುವಿಕೆ. ~ವಿಲಾ(ಳಾ)ಸ=೧. ಬಣ್ಣಗಳ ವೈಭವ. ೨. ವಚೋವಿಲಾಸ; ಶಬ್ದವೈಚಿತ್ರ್ಯ. ~ಶಿಲ್ಪಿ = ಬಣ್ಣಗಳಿಂದ ಚಿತ್ರ ಬರೆಯುವವನು. ~ಸಂಕರ=೧. ಬೇರೆಬೇರೆ ಜಾತಿಗಳು ಬೆರೆತುಹೋಗುವಿಕೆ; ಜಾತಿಸಂಕರ. ೨. ಬೇರೆಬೇರೆ ಬಣ್ಣಗಳ ಬೆರಕೆ. ~ಸರ = ಬೇರೆಬೇರೆ ಮಣಿಗಳಿಂದ ಕೂಡಿದ ಸರ; ಬಣ್ಣಸರ.

ವರ್ಣಕ (ನಾ). ೧. ಕಾವ್ಯರಚನೆಯಲ್ಲಿ ಒಂದು ಪ್ರಕಾರ; ವಸ್ತುಕದಿಂದ ಬೇರೆಯಾದ ಕಾವ್ಯಪ್ರಕಾರ. ೨. ವರ್ಣನೆ; ಬಣ್ಣನೆ.

ವರ್ಣನ (ನಾ). ೧. ವಿವರಣೆ; ವ್ಯಾಖ್ಯಾನ. ೨. ಹೊಗಳಿಕೆ; ಕೊಂಡಾಟ.

ವರ್ಣನೆ = ವರ್ಣನ.

ವರ್ಣಿ (ನಾ). ೧. ಚತುರ್ವರ್ಣಗಳಲ್ಲಿ ಯಾವುದಾದರೂ ಒಂದು ವರ್ಣಕ್ಕೆ ಸೇರಿದವನು. ೨. ಬ್ರಹ್ಮಚಾರಿ. ೩. ಚಿತ್ರಗಾರ. ೪. ಬರೆಹಗಾರ. (ಗು). ೫. ಬಣ್ಣದಿಂದ ಕೂಡಿದ. ೬. ಜಾತಿಗೆ ಸಂಬಂಧಿಸಿದ.

ವರ್ಣಿಕೆ (ನಾ). ಚಿತ್ರಕಲೆ ಅಥವಾ ನಾಟ್ಯದಲ್ಲಿ ಬಣ್ಣಬಳಿಯುವಿಕೆ.

ವರ್ತಕ (ನಾ). ೧. ವ್ಯಾಪಾರ ಮಾಡುವವನು; ಹರದ. ೨ ಯಾವುದಾದರೊಂದು ತತ್ತ್ವವನ್ನು ಅನುಸರಿಸುವವನು. ೩. ಒಂದು ಜಾತಿಯ ಪಕ್ಷಿ. ~ಶಾಲೆ = ಕೋಠಿ; ಗುದಾಮು.

ವರ್ತನ (ನಾ). ೧. ತಿರುಗುವುದು; ಸುತ್ತುವುದು. ೨. ಗತಿ; ಚಲನೆ. ೩. ನಡತೆ; ಚಾರಿತ್ರ್ಯ.

ವರ್ತನೆ ೧. = ವರ್ತನ. ೨. ರೂಢಿ; ಸಂಪ್ರದಾಯ. ೩. ಒಂದು ಅಳತೆಯ ಪ್ರಮಾಣ. ೪. ಯಾವುದಾದರೊಂದು ವಸ್ತುವನ್ನು ದಿನವೂ ನಿಯಮಿತವಾಗಿ ಕೊಡುಕೊಳ್ಳುವ ಕ್ರಮ.

ವರ್ತಮಾನ (ನಾ). ೧. ಸುದ್ದಿ; ಸಮಾಚಾರ. ೨. ಇರುವಿಕೆ. ೩. ಈ ಕಾಲಕ್ಕೆ ಸಂಬಂಧಿಸಿದುದು. ೪. ವ್ಯಾಕರಣದಲ್ಲಿಯ ಮೂರು ಕಾಲಗಳಲ್ಲಿ ಒಂದು; ಸಂಪ್ರತಿ; ನಡೆಯುತ್ತಿರುವ ಕಾಲ. (ಗು). ೫. ಈಗಿನ; ಸದ್ಯದ. ೬. ಇರುವ. ~ಪತ್ರಿಕೆ = ಸಮಾಚಾರವನ್ನು ತಿಳಿಸುವ ಪತ್ರಿಕೆ; ವೃತ್ತಪತ್ರಿಕೆ.

ವರ್ತಿ (ನಾ). ೧. ಹತ್ತಿಯನ್ನು ಹೊಸೆದು ಮಾಡಿದುದು; ಬತ್ತಿ. ೨. ಹೊಳಪಿನ ಕಾಗದ; ಬೇಗಡೆ. ೩. ಸೆರಗಿನ ತುದಿ; ಕರೆ.

ವರ್ತಿಸು (ಕ್ರಿ). ೧. ಸುತ್ತು; ತಿರುಗು. ೨. ಚಲಿಸು; ಮುನ್ನಡೆ. ೩. ನೆಲಸು; ಇರು. ೪. ತೊಡಗು; ಆಚರಿಸು. ೫. ನಡೆದುಕೊಳ್ಳು; ವ್ಯವಹರಿಸು.

ವರ್ತುಲ(ಳ) (ನಾ). ೧. ದುಂಡಗಿರುವುದು; ವೃತ್ತ. (ಗು). ೨. ಗುಂಡನೆಯ; ದುಂಡಾಗಿರುವ. ~ವಾಯು = ಸುಂಟರಗಾಳಿ; ಸುಟ್ಟುರೆ.

ವರ್ತ್ಮ (ನಾ). ೧. ಆವರ್ತ; ಗೋಳಾಕಾರ. ೨. ಕಣ್ಣಿನ ಎವೆ; ರೆಪ್ಪೆ. ೩. ದಾರಿ; ಮಾರ್ಗ.

ವರ್ಧಂತಿ = ವರ್ಧ್ದಂತಿ.
ವರ್ಧಕ (ಗು). ೧. ವೃದ್ಧಿ ಪಡಿಸುವ; ಬೆಳಸುವ. ೨. ಕಡಿಯುವ; ಕತ್ತರಿಸುವ.
ವರ್ಧಕಿ (ನಾ). ಮರಗೆಲಸ ಮಾಡುವವನು; ಬಡಗಿ.
ವರ್ಧನ (ನಾ). ಬೆಳವಣಿಗೆ; ಅಭಿವೃದ್ಧಿ.
ವರ್ಧಮಾನ ೧. = ವರ್ಧನ. ೨. ಜೈನರ ತೀರ್ಥಂಕರರಲ್ಲಿ ಕೊನೆಯವನು; ಮಹಾವೀರ. ೩. ಔಡಲ ಗಿಡ; ಹರಳು ಗಿಡ. (ಗು). ೪. ಬೆಳೆಯುವ; ಹೆಚ್ಚಾಗುವ.
ವರ್ಧಿಷ್ಣು (ಗು). ಬೆಳೆಯುವ; ಹೆಚ್ಚಾಗುವ.
ವರ್ಧಿಸು (ಕ್ರಿ). ಬೆಳೆ; ಅಭಿವೃದ್ಧಿ ಹೊಂದು.
ವರ್ಮ (ನಾ). ೧. ಜಿರಲಿಖಿತ್ತು; ಕವಚ. ೨. ಮರ್ಮ; ಗುಟ್ಟು. ೩. ದ್ವೇಷ; ವೈರ. ೪. ಕಪಟ; ಮೋಸ. ೫. ಆಶ್ರಯ. ೬. ಕೆಲವರ ಹೆಸರಿನ ಕೊನೆಯಲ್ಲಿ ಬರತಕ್ಕ ಶಬ್ದ.
ವರ್ಷ (ನಾ). ೧. ಮಳೆ; ವೃಷ್ಟಿ. ೨. ಹನ್ನೆರಡು ತಿಂಗಳುಗಳ ಕಾಲಾವಧಿ; ಅಬ್ದ. ೩. ದಿನ; ದಿವಸ. ೪. ಆರು ಋತುಗಳಲ್ಲಿ ಒಂದು; ಮಳೆಗಾಲ. ೫. ಭೂಮಿಯ ಒಂದು ಖಂಡ. ~ಅಂಬು = ಮಳೆಯ ನೀರು. ~ಅಶನ = ವರ್ಷಕ್ಕೆ ಒಂದು ಸಲ ಕೊಡುದ ಉಂಬಳಿ; ಪೋಟಗಿ. ~ಆಗಮನ = ಮಳೆಯ ಪ್ರಾರಂಭ. ~ಋತು = ಮಳೆಗಾಲ. ~ಪರ್ವತ = ಪೃಥ್ವಿಯ ಖಂಡಗಳನ್ನು ವಿಭಜಿಸಿರುವುದೆಂದು ನಂಬಲಾಗಿರುವ ಪರ್ವತಶ್ರೇಣಿ. ~ಪ್ರಿಯ = ಚಾತಕಪಕ್ಷಿ. ~ಫಲ = ಆಯಾ ವರ್ಷದ ಭವಿಷ್ಯ.
ವರ್ಷಣ (ನಾ). ಮಳೆ; ವೃಷ್ಟಿ.
ವರ್ಷಧರ (ನಾ). ೧. ಮಳೆಯನ್ನು ಹೊಂದಿರುವುದು; ಮೋಡ. ೨. = ವರ್ಷವರ.
ವರ್ಷವರ (ನಾ). ರಾಣಿವಾಸದ ಕಾವಲುಗಾರ; ಕೊಜ್ಜ; ನಪುಂಸಕ.
ವರ್ಷಾಕಾಲ = ವರ್ಷಋತು.
ವರ್ಷಾಬ್ದಿಕ (ನಾ). ಪಿತೃಗಳಿಗೆ ವರ್ಷಕ್ಕೊಮ್ಮೆ ಮಾಡುವ ಶ್ರಾದ್ಧ.
ವರ್ಷಾಭು (ನಾ). ಮಳೆಗಾಲದಲ್ಲಿ ಹುಟ್ಟುವ ಕಪ್ಪೆ, ಎರೆಹುಳು ಮುಂತಾದುವು.
ವರ್ಷ್ಮ (ನಾ). ೧. ನಿಲವು; ಎತ್ತರ. ೨. ರೂಪ; ಆಕಾರ.
ವಲ (ಅ). ೧. ದಿಟವಾಗಿ; ನಿಶ್ಚಯವಾಗಿ. ೨. ಅಲ್ಲವೆ.
ವಲ(ಳ)ಕ್ಷ (ನಾ). ಬಿಳುಪು; ಬಿಳಿಯ ಬಣ್ಣ. ~ಪಕ್ಷ = ಶುಕ್ಲಪಕ್ಷ; ಹುಣ್ಣಿಮೆ.
ವಲ(ಳ)ನ (ನಾ). ಸರಿದಾಡುವಿಕೆ; ಚಲಿಸುವಿಕೆ.
ವಲ(ಳ)ಭಿ (ನಾ). ಇಳಿಜಾರಾದ ಛಾವಣಿ.
ವಲ(ಳ)ಯ (ನಾ). ೧. ವರ್ತುಲಾಕಾರವಾಗಿರುವುದು; ಗುಂಡಾಗಿರುವುದು. ೨. ಬಳೆ; ಕಡಗ. ೩. ಡಾಬು; ಒಡ್ಯಾಣ. ೪. ಪ್ರದೇಶ. ೫. ಮೇರೆ; ಎಲ್ಲೆ. ೬. ಒಂದು ಬಗೆಯ ಕಂಠರೋಗ.
ವಲಸೆ (ನಾ). ಗುಳೆ ಹೋಗುವುದು; ಒಕ್ಕಲು ಹೋಗುವುದು. ~ಗಾರ = ಗುಳೆ ಹೋಗುವವನು; ಬೇರೊಂದು ಸ್ಥಳಕ್ಕೆ ನೆಲಸಲು ಹೋಗುವವನು.
ವಲಿ(ಳಿ) (ನಾ). ೧. ಹೊಟ್ಟೆಯ ಮೇಲೆ ಅಡ್ಡಲಾಗಿರುವ ಮಡಿಕೆ ಮತ್ತು ಆ ಮಡಿಕೆಗಳ ಮಧ್ಯದ ಗೆರೆ. ೨. ತೆರೆ; ಅಲೆ. ೩. ಸಾಲು.
ವಲಿ(ಳಿ)ತ (ನಾ). ೧. ವಿಭಾಗ; ಪ್ರದೇಶ. ೨. ಅಧೀನತೆ; ಆಶ್ರಯ. ೩. ಅಧಿಕಾರ; ಆಳ್ವಿಕೆ. (ಗು). ೪. ಸುತ್ತುವರಿದ; ಆವರಿಸಲ್ಪಟ್ಟ. ೫. ಸುಕ್ಕುಗಟ್ಟಿದ.
ವಲಿಯ (ನಾ). ಒಂದು ಜಾತಿಯ ಪಕ್ಷಿ.
ವಲೀಮುಖ = ಬಲಿಮುಖ.
ವಲ್ಕ (ನಾ). ೧. ಮರದ ತೊಗಟೆ, -ಸಿಪ್ಪೆ. ೨. ನಾರುಮಡಿ; ನಾರಿನಿಂದ ಮಾಡಿದ ಬಟ್ಟೆ.
ವಲ್ಕಲ = ವಲ್ಕ.

ವಲ್ಗನ (ನಾ). ಕುಪ್ಪಳಿಸುವಿಕೆ; ನೆಗೆತ.

ವಲ್ಗು (ಗು). ಸುಂದರವಾದ; ಚೆಲುವಾದ.

ವಲ್ಮೀಕ (ನಾ). ೧. ಹುತ್ತ. ೨. ದೇಹದ ಯಾವುದಾದರೊಂದು ಭಾಗ ಊದಿಕೊಳ್ಳುವಿಕೆ.

ವಲ್ಲಕಿ (ನಾ). ಒಂದು ಬಗೆಯ ತಂತಿವಾದ್ಯ; ವೀಣೆ.

ವಲ್ಲಭ (ನಾ). ೧. ಗಂಡ; ಪತಿ. ೨. ಕಾದಲ; ನಲ್ಲ. ೩. ಒಡೆಯ; ಯಜಮಾನ.

ವಲ್ಲಭೆ (ನಾ). ೧. ಹೆಂಡತಿ; ಪತ್ನಿ. ೨. ಕಾದಲೆ; ನಲ್ಲೆ. ೩. ಒಡತಿ; ಯಜಮಾನಿ.

ವಲ್ಲರಿ (ನಾ). ೧. ಲತೆ; ಬಳ್ಳಿ. ೨. ಕುಡಿ; ಚಿಗುರು. ೩. ಗೊಂಚಲು; ಮಂಜರಿ.

ವಲ್ಲವ (ನಾ). ೧. ಅಡುಗೆ ಮಾಡುವವನು; ಬಾಣಸಿಗ. ೨. ಗೊಲ್ಲ; ಗೋಪಾಲ.

ವಲ್ಲವಿ (ನಾ). ದನಕಾಯುವವಳು; ಗೋವಳಗಿತ್ತಿ.

ವಲ್ಲಿ (ನಾ). ೧. ಬಳ್ಳಿ; ಲತೆ; ವಲ್ಲರಿ. ೨. ಮೇಲುಹೊದಿಕೆ; ಉತ್ತರೀಯ.

ವಶ (ನಾ). ೧. ಅಧೀನತೆ; ಕೈಕೆಳಗಿರುವುದು. ೨. ಅಂಕೆ; ಹತೋಟಿ. (ಗು). ೩. ಕೈಕೆಳಗಿನ; ಅಧೀನತೆಗೊಳಪಟ್ಟ. ೪. ಆಕರ್ಷಿಸಲ್ಪಟ್ಟ.

ವಶವರ್ತಿ (ನಾ). ಅಧೀನತೆಗೊಳಪಟ್ಟವನು; ವಶವಾದವನು.

ವಶಿ (ನಾ). ೧. ಹೆಣ್ಣು ಆನೆ; ಪಿಡಿ. ೨. ಜಿತೇಂದ್ರಿಯ. ೩. ವಶವಾದವನು.

ವಶಿತ್ವ (ನಾ). ೧. ಹತೋಟಿ; ಅಂಕೆ. ೨. ಅಷ್ಟಸಿದ್ಧಿಗಳಲ್ಲಿ ಒಂದು. ೩. = ವಶೀಕರಣ.

ವಶೀಕರಣ (ನಾ). (ಮಾಟ, ಮಂತ್ರ ಮುಂತಾದುವುಗಳಿಂದ) ವಶಪಡಿಸಿಕೊಳ್ಳುವುದು; ಸಮ್ಮೋಹನಕ್ಕೊಳಗುಮಾಡುವುದು. ~ಚೂರ್ಣ = ಮಂಕುಬೂದಿ.

ವಶೀಕರಿಸು (ಕ್ರಿ). ವಶಮಾಡಿಕೊಳ್ಳು; ಆಕರ್ಷಣೆಗೆ ಒಳಪಡಿಸು.

ವಶೀಲು = ವಸೀಲು.

ವಶೆ (ನಾ). ೧. ಹೆಂಗಸು. ೨. ಹೆಂಡತಿ. ೩. ಬಂಜೆ; ಗೊಡ್ಡಿ. ೪. ಹೆಣ್ಣಾನೆ; ಪಿಡಿ.

ವಶ್ಯ (ನಾ). ೧. ವಶೀಕರಣ ವಿದ್ಯೆ. (ಗು). ೨. ಅಧೀನಗೊಳಿಸಬಹುದಾದ; ಹತೋಟಿಯಲ್ಲಿಡಬಹುದಾದ. ~ಅಂಜನ = ಇತರರನ್ನು ವಶಪಡಿಸಿಕೊಳ್ಳಲು ಕಣ್ಣಿಗೆ ಹಚ್ಚುವ ಕಾಡಿಗೆ. ~ವಾಣಿ = ಆಕರ್ಷಿಸುವ ಮಾತನ್ನು ಬಲ್ಲವನು.

ವಷಟ್ಕಾರ (ನಾ). ಯಜ್ಞದಲ್ಲಿ ಹವಿಸ್ಸನ್ನು ಅಗ್ನಿಗೆ ಅರ್ಪಿಸುವಾಗ ಹೇಳುವ ಮಂತ್ರ.

ವಸ = ವಶ.

ವಸಂತ ೧. = ಬಸಂತ. ೨. ಓಕುಳಿ; ಬಣ್ಣದ ನೀರು. ~ಆ(ವಾ)ಡು = ಪರಸ್ಪರ ಓಕುಳಿಯನ್ನು ಎರಚುವ ಆಟವನ್ನಾಡು. ~ಉತ್ಸವ = ೧. ವಸಂತಋತುವಿನ ಆಗಮನವನ್ನು ಸೂಚಿಸಲು ಆಚರಿಸುವ ಹಬ್ಬ; ಮದನಮಹೋತ್ಸವ. ೨. ಓಕುಳಿಯನ್ನು ಎರಚುವ ಹಬ್ಬ. ~ದೂತ = ಕೋಗಿಲೆ; ಪಿಕ. ~ದೂತಿ = ಒಂದು ಜಾತಿಯ ಹೂವಿನ ಗಿಡ ಮತ್ತು ಅದರ ಹೂವು; ಮಾಧವಿ. ~ದ್ರುಮ = ಮಾವಿನ ಮರ. ~ಪ್ರಿಯ = ಮನ್ಮಥ; ಕಾಮ. ~ಮಂಟಪ = ವಸಂತಕಾಲದಲ್ಲಿ ವಿಹಾರಕ್ಕಾಗಿ ತೋಟದಲ್ಲಿ ರಚಿಸಿದ ಮಂಟಪ. ~ಮಾಸ = ಮಧುಮಾಸ; ಚೈತ್ರ. ~ಸಖ = ವಸಂತಪ್ರಿಯ.

ವಸಡು (ನಾ). ಹಲ್ಲುಗಳಿಗೆ ಆಧಾರವಾಗಿರುವ ಮಾಂಸಖಂಡ; ಒಸಡು.

ವಸತಿ ೧. = ವಸಥ. ೨. ಪರಸ್ಥಳದವರು ಇಳಿದುಕೊಳ್ಳುವ ಸ್ಥಳ; ಅತಿಥಿಗೃಹ. ೩. (ಪ್ರವಾಸದಲ್ಲಿ) ತಂಗುವಿಕೆ. ೪. = ಬಸದಿ.

ವಸಥ (ನಾ). ವಾಸಸ್ಥಳ; ಮನೆ; ನಿವಾಸ.
ವಸನ ೧. = ವಸಥ. ೨. ಬಟ್ಟೆ; ಉಡುಗೆ. ೩. ಮರೆಮಾಡುವ ವಸ್ತು; ಆಚ್ಛಾದನೆ.
ವಸಾರೆ (ನಾ). ಅಂಗಳ; ತೊಟ್ಟಿ.
ವಸಾಹತು (ನಾ). ಪಾಳೆಯ; ಬೀಡು.
ವಸಿಯಿಸು (ಕ್ರಿ). ವಾಸಮಾಡು; ನೆಲಸು.
ವಸಿಸು = ವಸಿಯಿಸು.
ವಸೀಲಿ = ವಸೂಲು.
ವಸೀಲು (ನಾ). ೧. ಪ್ರಭಾವ; ವರ್ಚಸ್ಸು. ೨. ಬೆಂಬಲ; ಸಹಾಯ. ೩. ಪ್ರೋತ್ಸಾಹ.
ವಸು (ನಾ). ೧. ಕಾಡು; ಅಡವಿ. ೨. ದೇವತೆಗಳಲ್ಲಿ ಒಂದು ವರ್ಗ; ಧರ, ಧ್ರುವ, ಸೋಮ, ಸಾವಿತ್ರ, ಅನಿಲ, ಅನಲ, ಪ್ರತ್ಯೂಷ ಮತ್ತು ಪ್ರಭಾಸ ಎಂಬ ಎಂಟು ಜನ ವಸುಗಳಲ್ಲಿ ಒಬ್ಬ. ೩. ರತ್ನ; ಮಣಿ. ೪. ಐಶ್ವರ್ಯ; ಸಂಪತ್ತು. ೫. ಪ್ರಕಾಶ; ಬೆಳಕು. ೬. ಬಂಗಾರ; ಹೊನ್ನು. ೭. ಅಗ್ನಿ; ಬೆಂಕಿ. ೮. ಮುಖ್ಯವಾದುದು. ೯. ಬಟ್ಟೆ. ~ಕರ = ಸೂರ್ಯ. ~ಗರ್ಭ = ಹಿರಣ್ಯಗರ್ಭ; ಬ್ರಹ್ಮ. ~ಧಾರೆ = ಬಂಗಾರದ ಮಳೆ; ಸುವರ್ಣವೃಷ್ಟಿ. ~ವಿಭೇದಕ = ಚಿನಿವಾರ; ಅಕ್ಕಸಾಲಿಗ. ~ಹೀನ = ಬಡವ; ನಿರ್ಗತಿಕ.
ವಸುಂಧರೆ (ನಾ). ದ್ರವ್ಯವನ್ನು ಹೊಂದಿರುವವಳು; ಭೂಮಿ.
ವಸುಧೆ (ನಾ). ಭೂಮಿ; ಪೃಥ್ವಿ; ವಸುಂಧರೆ.
ವಸುಧೇಶ (ನಾ). ಭೂಮಿಯ ಒಡೆಯ; ರಾಜ.
ವಸುಮತಿ = ವಸುಂಧರೆ.
ವಸೂಲಿ = ವಸೂಲು.
ವಸೂಲು (ನಾ). ೧. ಹಣ ಮುಂತಾದುವನ್ನು ತೆಗೆದುಕೊಳ್ಳುವುದು, –ಸಂಗ್ರಹಿಸುವುದು. ೨. ಹಣ ಮುಂತಾದುವನ್ನು ಒತ್ತಾಯದಿಂದ ಕೀಳುವುದು. ~ಮಾಡು = ೧. ಸಂಗ್ರಹಿಸು. ೨. ಕೀಳು; ಕಿತ್ತುಕೊಳ್ಳು.
ವಸೆ (ನಾ). ನೆಣ; ಕೊಬ್ಬು.
ವಸ್ತ = ಬಸ್ತಕ.
ವಸ್ತಾದ = ಉಸ್ತಾದ.
ವಸ್ತಾದಿ = ಉಸ್ತಾದ.
ವಸ್ತಿ ೧. = ವಸತಿ. ೨. (ನೆಲ, ಗೋಡೆಗಳಲ್ಲಿರುವ) ತೇವದ ಅಂಶ. ~ಕಾ(ಗಾ)ಜ(ರ) = ತಾತ್ಕಾಲಿಕವಾಗಿ ನೆಲಸಲು ಬಂದವನು; ಅತಿಥಿ.
ವಸ್ತು (ನಾ). ೧. (ಇಂದ್ರಿಯಗೋಚರವಾದ) ಪದಾರ್ಥ; ದ್ರವ್ಯ. ೨. ಅಸ್ತಿತ್ವ; ಸತ್ಯ. ೩. ಸಾರ; ತಿರುಳು; ಸತ್ತ್ವ. ೪. ಕಾವ್ಯ, ಕಾದಂಬರಿ ಮುಂತಾದುವುಗಳ ವಿಷಯ. ೫. ಪ್ರಾಣ. ~ಕೋಶ = ಪದ ಮತ್ತು ಅದರ ಅರ್ಥವನ್ನು ವಿವರಿಸುವ ಪುಸ್ತಕ. ~ಪ್ರದರ್ಶನ = ನಾನಾಬಗೆಯ ಪದಾರ್ಥಗಳನ್ನು ಜನರ ನೋಟಕ್ಕಾಗಿ ಜೋಡಿಸಿರುವುದು ಮತ್ತು ಹಾಗೆ ಜೋಡಿಸಿಟ್ಟಿರುವ ಸ್ಥಳ. ~ಸಂಗ್ರಹಾಲಯ = ಅಪೂರ್ವಪದಾರ್ಥಗಳನ್ನು ನೋಡಲೆಂದು ಸಂಗ್ರಹಿಸಿಟ್ಟಿರುವ ಸ್ಥಳ. ~ಸ್ಥಿತಿ = ವಾಸ್ತವ ಸಂಗತಿ; ನಿಜಸ್ಥಿತಿ.
ವಸ್ತುಕ (ನಾ). ೧. ವಸ್ತುಪ್ರಧಾನವಾದ ಕಾವ್ಯ; ಕಾಲ್ಪನಿಕವಲ್ಲದ ಕಾವ್ಯ; ವರ್ಣಕವಲ್ಲದ ಕಾವ್ಯ. (ಗು). ೨. ನೈಜವಾದ; ಕಾಲ್ಪನಿಕವಲ್ಲದ.
ವಸ್ತುತಃ (ಅ). ನಿಜವಾಗಿ; ದಿಟವಾಗಿ.
ವಸ್ತ್ರ (ನಾ). ೧. ಬಟ್ಟೆ; ಅರಿವೆ. ೨. ಕರವಸ್ತ್ರ; ಚೌಕ. ~ಗಾಳಿಸು = ಬಟ್ಟೆಯಿಂದ ಶೋಧಿಸು, –ಸೋಸು.
ವಸ್ತ್ರಭಿನ್ನಕ (ನಾ). ಬಟ್ಟೆಯನ್ನು ಕತ್ತರಿಸುವವನು; ಸಿಂಪಿಗ.
ವಹಣಿ (ನಾ). ೧. ಆಡಂಬರ; ಡಬಡ್ಡಾಳಿಕೆ. ೨. ಸಂಗೀತದಲ್ಲಿನ ಆಲಾಪನೆಯಲ್ಲಿ ಒಂದು ಕ್ರಮ.

ವಹನಮಾನ (ನಾ). ೧. ನಡತೆ; ಚಾರಿತ್ರ್ಯ. (ಗು). ೨. ಹೊರುವ; ಸಾಗಿಸುವ.

ವಹಿ (ನಾ). ೧. ಪುಸ್ತಕ. ೨. ಲೆಕ್ಕ ಮುಂತಾದುವನ್ನು ಬರೆದಿಡುವ ಪುಸ್ತಕ; ದಫ್ತರ.

ವಹಿತ್ರ = ಬಹಿತ್ರ.

ವಹಿಲ (ನಾ). ತ್ವರೆ; ಶೀಘ್ರತೆ; ವೇಗ.

ವಹಿವಾಟ = ವಹಿವಾಟು.

ವಹಿವಾಟು (ನಾ). ೧. ಅಡಳಿತ; ಕಾರ್ಯಭಾರ; ಯಜಮಾನಿಕೆ. ೨. ವ್ಯವಹಾರ; ಲೇವಾದೇವಿ. ೩. ಬಳಕೆ. ೪. ಸಂಬಂಧ; ಸಂಪರ್ಕ.

ವಹಿಸು (ಕ್ರಿ). ೧. ಹೊಂದು; ಪಡೆ; ಕೈಕೊಳ್ಳು. ೨. ಒಪ್ಪಿಸು; ಪರಭಾರೆ ಮಾಡು. ೩. ಬೀಸು; ಹರಿ. ೪. ಪಕ್ಷಪಾತ ತೋರಿಸು.

ವಹ್ನಿ (ನಾ). ಬೆಂಕಿ; ಅಗ್ನಿ. ~ಸಖ = ಗಾಳಿ; ವಾಯು.

ವಳಾವಳಿ (ನಾ). ತಳಮಳ; ಕಾತರ.

ವಳಿಗೆ (ನಾ). ತುತ್ತು; ಕಬಳ; ಗ್ರಾಸ.

ವಳೆಯ (ನಾ). ವೃತ್ತಾಕಾರವಾದುದು; ವಲಯ.

ವಾಂಗೀಭಾತು (ನಾ). ಬದನೆಕಾಯಿ ಮುಂತಾದ ತರಕಾರಿಗಳನ್ನು ಹಾಕಿ ತಯಾರಿಸಿದ ಒಂದು ಬಗೆಯ ಚಿತ್ರಾನ್ನ.

ವಾಂಛಲ್ಯ (ನಾ). ವಾತ್ಸಲ್ಯ; ಪ್ರೀತಿ.

ವಾಂಛಿತ (ನಾ). ೧. ಇಚ್ಛಿಸಿದ ವಸ್ತು, –ಪದಾರ್ಥ. ೨. = ವಾಂಛೆ. (ಗು). ೩. ಅಪೇಕ್ಷಿಸಲ್ಪಟ್ಟ; ಬಯಸಿದ.

ವಾಂಛೆ (ನಾ). ಬಯಕೆ; ಆಸೆ. ~ಇಸು = ಬಯಸು; ಆಶಿಸು.

ವಾಂತಿ (ನಾ). ಓಕರಿಕೆ; ವಮನ. ~ಭೇದಿ = ಒಂದು ಬಗೆಯ ರೋಗ; ಕಾಲರಾ.

ವಾಂಶ (ನಾ). ಬಿದಿರಿನಿಂದ ಮಾಡಿದ ವಾದ್ಯ; ಕೊಳಲು.

ವಾಂಶಿಕ (ನಾ). ೧. ಬಿದಿರಿನಲ್ಲಿ ವ್ಯವಹರಿಸುವವನು; ಮೇದ. ೨. ಕೊಳಲು ನುಡಿಸುವವನು. (ಗು). ೩. ಬಿದಿರಿಗೆ ಸಂಬಂಧಿಸಿದ. ೪. ವಂಶಕ್ಕೆ ಸಂಬಂಧಿಸಿದ.

ವಾಃಕಣ (ನಾ). ನೀರಿನ ಹನಿ; ಜಲಬಿಂದು.

ವಾಃಕೇಲಿ(ಳಿ) (ನಾ). ಜಲಕೇಳಿ; ನೀರಾಟ.

ವಾಕರಿಕೆ = ವಾಂತಿ.

ವಾಕು (ನಾ). ೧. ಮುಂಗೈಗೆ ತೊಡುವ ಒಂದು ಬಗೆಯ ಆಭರಣ. ೨. ಮಾತು; ನುಡಿ.

ವಾಕ್ಕಲಹ (ನಾ). ಮಾತಿನ ಜಗಳ; ವಾಗ್ವಾದ.

ವಾಕ್ಕು (ನಾ). ೧. ಮಾತು; ನುಡಿ. ೨. = ವಾಗ್ದೇವಿ.

ವಾಕ್ಕೋವಿದ (ನಾ). ಮಾತಿನಲ್ಲಿ ನಿಪುಣ.

ವಾಕ್ಚಾತುರ್ಯ (ನಾ). ಮಾತಿನ ಜಾಣತನ.

ವಾಕ್ಛ್ರೀ (ನಾ). ೧. ಮಾತಿನ ಸೌಂದರ್ಯ, –ಬೆಡಗು. ೨. ವಾಚಾಳತೆ. ೩. ಶಾರದೆ; ಸರಸ್ವತಿ.

ವಾಕ್ಪಟ (ನಾ). ಮಾತನಾಡುವ ಚಲನಚಿತ್ರ; ವಾಕ್ಚಿತ್ರ.

ವಾಕ್ಪತಿ = ವಾಚಸ್ಪತಿ.

ವಾಕ್ಪಾರುಷ್ಯ (ನಾ). ಮಾತಿನಲ್ಲಿ ತೋರುವ ಕಾಠಿನ್ಯ.

ವಾಕ್ಪೌರುಷ (ನಾ). ೧. ಮಾತಿನ ಕೆಚ್ಚು, –ಸಾಮರ್ಥ್ಯ. ೨. ಬಾಯಿ ಬಡಾಯಿ; ಬರಿಯ ಮಾತಿನ ಪೌರುಷ; ಕೋಳಿಜಂಬ.

ವಾಕ್ಪ್ರೌಢಿ (ನಾ). ಮಾತಿನ ನೈಪುಣ್ಯ.

ವಾಕ್ಯ (ನಾ). ೧. ಮಾತು; ನುಡಿ. ೨. ಪೂರ್ತಿಯಾದ ಅರ್ಥವನ್ನು ಕೊಡಬಲ್ಲ ಶಬ್ದಗಳ ಗುಂಪು. ೩. ಪ್ರಥವಚನ; ಪ್ರತಿಜ್ಞೆ. ೪. ಆಜ್ಞೆ; ನಿಯಮ; ಆಣತಿ. ~ರಚನೆ = ಅಭ್ಯಾಸಕ್ಕಾಗಿ ವಾಕ್ಯವೃಂದವನ್ನು ಬರೆಯುವುದು.

ವಾಕ್ಸರಣಿ (ನಾ). ಮಾತಿನ ರೀತಿ.
ವಾಕ್ಸ್ವಾತಂತ್ರ್ಯ (ನಾ). ಮಾತಿನ ಸ್ವಾತಂತ್ರ್ಯ.
ವಾಗತ್ಯ (ನಾ). ೧. ಅಸಹ್ಯ; ಜುಗುಪ್ಸೆ. ೨. ಆಡ್ಡಮಾತು. ೩. ಸ್ವಲ್ಪ ಕೆಟ್ಟವನ್ನು ದೊಡ್ಡದಾಗಿ ಮಾಡುವುದು; ಅಗಾತ್ಯ.
ವಾಗಾಡಂಬರ (ನಾ). ಮಾತಿನಲ್ಲಿಯ ತೋರಿಕೆ, –ಅಟ್ಟಹಾಸ.
ವಾಗೀಶ ೧. = ವಾಕ್ಕೋವಿದ. ೨. ಬೃಹಸ್ಪತಿ. ೩. ಬ್ರಹ್ಮ.
ವಾಗುರ = ವಾಗುರಿ.
ವಾಗುರಿ ೧. (ನಾ). ೧. ಬಲೆ; ಜಾಲ. ೨. ಬೇಟೆಗಾತಿ; ಶಬರಿ.
ವಾಗುರಿಕ (ನಾ). ಬಲೆಯಿಂದ ಮೃಗಗಳನ್ನು ಹಿಡಿಯುವವನು; ಬೇಟೆಗಾರ; ಶಬರ.
ವಾಗೆ = ವಾಘೆ.
ವಾಗ್ಗೇಯಕಾರ (ನಾ). ಸಂಗೀತಕೃತಿಗಳನ್ನು ರಚಿಸುವವನು.
ವಾಗ್ಜಾಲ (ನಾ). ಮಾತಿನ ಚಮತ್ಕಾರ.
ವಾಗ್ದಾನ (ನಾ). ವಚನ; ಮಾತು; ಭಾಷೆ. ~ಭಂಗ = ಕೊಟ್ಟ ಮಾತನ್ನು ಮೀರುವುದು. ~ಮಾಡು = ಮಾತುಕೊಡು; ವಚನ ಕೊಡು.
ವಾಗ್ದೇವಿ (ನಾ). ಮಾತಿನ ಅಧಿದೇವತೆ; ಸರಸ್ವತಿ.
ವಾಗ್ಮಿ (ನಾ). ಚೆನ್ನಾಗಿ ಮಾತನಾಡುವವನು; ವಾಚಾಳ.
ವಾಗ್ಯುದ್ಧ = ವಾಕ್ಕಲಹ.
ವಾಗ್ವರ (ನಾ). ೧. ಬ್ರಹ್ಮ. ೨. ಬೃಹಸ್ಪತಿ.
ವಾಗ್ವಾದ = ವಾಕ್ಕಲಹ.
ವಾಗ್ವಿಭವ (ನಾ). ಮಾತಿನಲ್ಲಿ ವೈಭವ, –ಸೊಗಸು.
ವಾಗ್ವೃತ್ತಿ (ನಾ). ಮಾತಿನ ರೀತಿ.
ವಾಘೆ (ನಾ). ಕಡಿವಾಣ; ಲಗಾಮು.
ವಾಙ್ಮಯ (ನಾ). ೧. ಮಾತಿನಿಂದ ತುಂಬಿದುದು. ೨. ಮಾತಿನ ಚಾತುರ್ಯ; ವಾಗ್ವೈಖರಿ. ೩. ಸಾಹಿತ್ಯ. ೪. ಶಾಸ್ತ್ರಗ್ರಂಥ.
ವಾಙ್ಮಲ (ನಾ). ಮಾತಿನ ದೋಷ; ವಾಕ್ಕಿನಲ್ಲಿ ಕಳಂಕ.
ವಾಚಕ (ನಾ). ೧. ಹೇಳಿಕೆ; ಸುದ್ದಿ; ಮಾತು. ೨. ಮಾತಿನಿಂದ ಹೊರಡುವ ಅರ್ಥ. ೩. ವಿಶೇಷಾರ್ಥವನ್ನು ಕೊಡುವ ಶಬ್ದ. ೪. ಓದುಗ; ಓದುವವನು. (ಗು). ೫. ಓದುವ; ವಾಚಿಸುವ. ೬. ಮಾತನಾಡುವ; ಹೇಳುವ. ೭. ತಿಳಿಸುವ; ಸೂಚಿಸುವ.
ವಾಚನ (ನಾ). ೧. ಓದುವುದು; ಪಠನ. ~ಆಲಯ = ಪತ್ರಿಕೆ, ನಿಯತಕಾಲಿಕ ಮುಂತಾದುವನ್ನು ಓದಲು ಅನುಕೂಲವಿರುವ ಸ್ಥಳ.
ವಾಚಸ್ಪತಿ (ನಾ). ೧. ಮಾತಿನ ಒಡೆಯ; ಬೃಹಸ್ಪತಿ. ೨. ಬ್ರಹ್ಮ. ೩. ವಿದ್ವಾಂಸ; ಪಂಡಿತ.
ವಾಚಾಟ (ಗು). ಅತಿಯಾಗಿ ಮಾತನಾಡುವ.
ವಾಚಾಮಗೋಚರ (ನಾ). ೧. ಮಾತಿಗೆ ನಿಲುಕದವನು; ದೇವರು. (ಗು). ೨. ಮಾತಿಗೆ ನಿಲುಕದ.
ವಾಚಾಲ(ಳ) (ನಾ). ೧. ಅತಿಯಾಗಿ ಮಾತನಾಡುವವನು; ವಾಚಾಳಿ. (ಗು). ೨. ಅತಿಯಾಗಿ ಮಾತನಾಡುವ.
ವಾಚಾಲ(ಳ)ತೆ (ನಾ). ಅತಿಯಾಗಿ ಮಾತನಾಡುವಿಕೆ.
ವಾಚಾಳಕ = ವಾಚಾಲ.
ವಾಚಾಳಿ (ನಾ). ಮಾತಿನಲ್ಲಿ ನಿಪುಣನಾದವನು; ವಾಗ್ಮಿ.
ವಾಚಿಕ (ನಾ). ೧. ಮಾತಿಗೆ ಸಂಬಂಧಿಸಿದುದು; ಶಾಬ್ದಿಕ. ೨. ಅಭಿನಯದ ಮೂರು ಬಗೆಯ

ಅಂಗಗಳಲ್ಲಿ ಒಂದು. (ಗು). ೩. ಬಾಯಿ ಮಾತಿನ.
ವಾಚಿಸು (ಕ್ರಿ). ೧. ಓದು; ವಾಚನಮಾಡು. ೨. ಓದಿಸು; ವಾಚನಮಾಡಿಸು. ೩. ವಿವರಿಸಿ ಹೇಳು; ಅರ್ಥೈಸು. ೪. ರಾಗಬದ್ಧವಾಗಿ ಓದು; ಗಮಕಿಸು.
ವಾಚ್ಯ (ನಾ). ೧. ಶಾಬ್ದಿಕವಾದ ಅರ್ಥ; ನೇರವಾದ ಅರ್ಥ. ೨. ನಿಂದೆ; ದೂಷಣೆ. (ಗು). ೩. ಸ್ಪಷ್ಟವಾದ; ವ್ಯಕ್ತವಾದ. ೪. ಹೇಳಬಹುದಾದ; ಹೇಳಲು ಯೋಗ್ಯವಾದ. ~ಅತೀತ=ಹೇಳಲು ಸಾಧ್ಯವಿಲ್ಲದ; ಮಾತಿಗೆ ನಿಲುಕದ. ~ಅರ್ಥ = ಶಬ್ದವನ್ನು ಕೇಳಿದೊಡನೆ ತೋರುವ ಅರ್ಥ.
ವಾಜ (ನಾ). ೧. ವೇಗ; ರಭಸ. ೨. ಕುದುರೆಯ ನಡಗೆ, –ಗತಿ. ೩. ಒಂದು ಜಾತಿಯ ಮರ. ೪. ಅಕ್ಕಸಾಲಿ; ಓಜ.
ವಾಜಪೇಯ (ನಾ). ಒಂದು ಬಗೆಯ ಯಜ್ಞ.
ವಾಜಮಿ (ಗು). ಸರಿಯಾದ; ಯೋಗ್ಯವಾದ.
ವಾಜಿ (ನಾ). ೧. ಕುದುರೆ; ತುರಗ. ೨. ಒಂದು ಜಾತಿಯ ಪಕ್ಷಿ. ೩. ಬಾಣ; ಅಂಬು. ೪. ಹಗೆ; ಶತ್ರು. ~ಮೇಧ= ಅಶ್ವಮೇಧ. ~ಶಾಲೆ = ಕುದುರೆಯ ಲಾಯ.
ವಾಜಿಪ (ನಾ). ಕುದುರೆಯ ಮೇಲ್ವಿಚಾರಕ; ಕಾಸ್ತಾರ.
ವಾಜಿಮಿ = ವಾಜಮಿ.
ವಾಜಿಸು (ಕ್ರಿ). ಬಾಜಿಸು; ನುಡಿಸು.
ವಾಟ (ನಾ). ೧. ಬೀದಿ; ಹಾದಿ. ೨. ತೋಟ; ವನ. ೩. ಮಠ. ೪. ಇಳಿಜಾರು; ಇಳುಕಲು. ೫. ಇಳಿಜಾರಾದ ಮಾಳಿಗೆ, –ಮೇಲ್ಛಾವಣಿ. ೬. ಊರಿನ ಒಂದು ಭಾಗ. ೭. ಆವರಣ; ಪ್ರಾಕಾರ. ~ಇಸು = ಆವರಿಸು; ಕವಿ.
ವಾಟಗ (ನಾ). ನೀರು ಕುಡಿಯುವ ಪಾತ್ರೆ; ಲೋಟ.
ವಾಟ (ನಾ). ೧. ತೋಟ. ೨. ಆಶ್ರಯಸ್ಥಾನ; ನೆಲೆ; ಹಕ್ಕೆ. ೩. ಟೊಂಕ; ನಡು. ೪. = ವಾಟಗ.
ವಾಟಿಕೆ (ನಾ). ೧. ತೋಟ; ಉದ್ಯಾನ. ೨. ಆವರಣ. ೩. ವಾಸಸ್ಥಾನ.
ವಾಟಿಬಾಳೆ (ನಾ). ಬಾಳೆಯಲ್ಲಿ ಒಂದು ಜಾತಿ.
ವಾಡಬ = ಬಡಬ. ~ಅನಲ = ಬಡಬ.
ವಾಡವ ೧. = ಬಡಬ. ೨. ಬ್ರಾಹ್ಮಣ. ೩. ಕುದುರೆ. ೪. ಪಾತಾಳಲೋಕ. ೫. ಕುದುರೆಯ ಲಾಯ. ~ಅಗ್ನಿ = ಬಡಬ.
ವಾಡವೇಯ (ನಾ). ಎತ್ತು; ವೃಷಭ.
ವಾಡಾ = ವಾಡೆ.
ವಾಡಿ (ನಾ). ೧. ಗೋಡೆ; ಪ್ರಾಕಾರ. ೨. ಬಿಡಾರ; ವಾಸಸ್ಥಳ. ೩. ನಗರದ ಒಂದು ಭಾಗ.
ವಾಡಿಕೆ (ನಾ). ೧. ಸಂಪ್ರದಾಯ; ರೂಢಿ. ೨. ನಿಯಮ; ಪದ್ಧತಿ.
ವಾಡೆ (ನಾ). ಭವ್ಯವಾದ ಗೃಹ, –ಸೌಧ.
ವಾಣ (ನಾ). ಒಂದು ಬಗೆಯ ತಂತಿವಾದ್ಯ.
ವಾಣಿ (ನಾ). ೧. ಮಾತು; ನುಡಿ. ೨. ಮಾತಿನ ಅಧಿದೇವತೆ; ಸರಸ್ವತಿ. ~ಈಶ = ೧. ಸರಸ್ವತಿಯ ಒಡೆಯ; ಬ್ರಹ್ಮ. ೨. ಶಿವನ ಪರಿಚಾರಕರಲ್ಲಿ ಒಬ್ಬ.
ವಾಣಿಜ (ನಾ). ವ್ಯಾಪಾರಿ; ಬಣಜಿಗ.
ವಾಣಿಜಿಕ = ವಾಣಿಜ.
ವಾಣಿಜ್ಯ (ನಾ). ವ್ಯಾಪಾರ. ~ನೌಕೆ = ಸರಕುಗಳನ್ನು ಸಾಗಿಸುವ ಹಡಗು. ~ಮಂಡಲಿ = ವ್ಯಾಪಾರಿಸಂಸ್ಥೆ.
ವಾಣಿಯ ೧. = ವಾಣಿಜ್ಯ. ೨. = ವಾಣಿಜ.
ವಾತ (ನಾ). ೧ ಗಾಳಿ; ವಾಯು. ೨. ಶರೀರದಲ್ಲಿರುವ ವಾತ, ಪಿತ್ತ, ಕಫಗಳೆಂಬ ಮೂರು ಧಾತುಗಳಲ್ಲಿ ಒಂದು. ೩.= ವಾತರೋಗ. (ಗು). ೪. ಬೀಸಿದ. ~ಅಯನ = ಕಿಟಕಿ; ಗವಾಕ್ಷ. ~ಅಶನ = ೧. ಗಾಳಿಯನ್ನು ಸೇವಿಸುವಿಕೆ. ೨. ಹಾವು.

~ಆಪ್ತ = ವಾಯುವಿನ ಗೆಳೆಯ; ಅಗ್ನಿ. ~ಆವರಣ = ೧. ಗಾಳಿಯಿಂದ ಕೂಡಿದ ಪ್ರದೇಶ; ವಾಯುಮಂಡಲ. ೨. ಹವಾಮಾನ; ವಾಯುಗುಣ. ೩. ಪರಿಸರ; ಸನ್ನಿವೇಶ. ~ಗವಾಕ್ಷ = ಗಾಳಿಯು ಬರಲು ಮಾಡಿರುವ ಕಂಡಿ; ವಾತಾಯನ. ~ಪೂರಣ = ೧. ಧ್ವಜ; ಪತಾಕೆ. ೨. ಗಾಳಿತುಂಬಿದ ವಸ್ತು; ಬೆಲೂನು. ~ರೋಗ = ಕೀಲುಗಳಲ್ಲಿ ಉಂಟಾಗುವ ಒಂದು ಬಗೆಯ ರೋಗ; ಸಂಧಿವಾತ. ~ಸುತ = ವಾತಜ.

ವಾತಜ (ನಾ). ೧. ವಾಯುದೇವನ ಮಗ. ೨. ಹನುಮಂತ. ೩. ಭೀಮ.

ವಾತಪ್ರಮಿ (ನಾ). ಒಂದು ಜಾತಿಯ ಜಿಂಕೆ.

ವಾತಾಯು = ವಾತಪ್ರಮಿ.

ವಾತಿ (ನಾ). ಹನುಮಂತ.

ವಾತೂಲಿ(ಳಿ)ಕೆ (ನಾ). ಸುಂಟರಗಾಳಿ; ಸುಟ್ಟುರೆ.

ವಾತ್ಯೆ = ವಾತೂಲಿಕೆ.

ವಾತ್ಸಲ್ಯ = ವಾಂಛಲ್ಯ.

ವಾದ (ನಾ). ೧. ತರ್ಕ; ಚರ್ಚೆ. ೨. ವಿವರಣೆ; ವ್ಯಾಖ್ಯಾನ. ೩. ಮಾತು; ಸಂಭಾಷಣೆ. ೪. ಫಿರ್ಯಾದು; ಆಪಾದನೆ. ೫. ಕುಳಿ; ಖೆಡ್ಡಾ. ೬. ಓಮದ ಗಿಡ ಮತ್ತು ಅದರ ಕಾಳು. ~ಅಕ್ಕಿ = ಓಮದ ಕಾಳು; ಓದಕ್ಕಿ. ~ಇಸು = ೧. ತರ್ಕಿಸು; ಚರ್ಚೆ ಮಾಡು. ೨. ವಾಕ್ಕಲಹ ಮಾಡು; ವಾಗ್ವಾದ ಮಾಡು. ೩. ನ್ಯಾಯಾಲಯದಲ್ಲಿ ಫಿರ್ಯಾದಿಯ ಅಥವಾ ಪ್ರತಿವಾದಿಯ ಪರವಾಗಿ ಮಾತನಾಡು. ~ಗ್ರಸ್ತ = ಚರ್ಚಾಸ್ಪದವಾದ; ವಾದಕ್ಕೆಗುರಿಯಾದ. ~ಸರಣಿ = ವಾದವನ್ನು ಮಂಡಿಸುವ ಕ್ರಮ, -ರೀತಿ. ~ಹೂಡು = ಚರ್ಚೆಗೆ ಆರಂಭಿಸು, -ತೊಡಗು.

ವಾದಕ (ನಾ). ೧. ವಾದ ಮಾಡುವವನು; ತರ್ಕಿಸುವವನು. ೨. ವಾದ್ಯವನ್ನು ನುಡಿಸುವವನು, -ಬಾಜಿಸುವವನು.

ವಾದಕಿ (ನಾ). ವಾದ್ಯವನ್ನು ನುಡಿಸುವವಳು, -ಬಾಜಿಸುವವಳು.

ವಾದನ (ನಾ). ವಾದ್ಯವನ್ನು ನುಡಿಸುವಿಕೆ, -ಬಾಜಿಸುವಿಕೆ. ~ದಂಡ = ವಾದ್ಯವನ್ನು ನುಡಿಸಲು ಉಪಯೋಗಿಸುವ ಕಮಾನು, ಕುಡುಹು ಮುಂತಾದುವು.

ವಾದಿ (ನಾ). ೧. ಮಾತನಾಡುವಿಕೆ. ೨. ವಾದಿಸುವವನು; ತರ್ಕ ಮಾಡುವವನು. ೩. ನ್ಯಾಯಾಸ್ಥಾನದಲ್ಲಿ ದಾವಾ ಹಾಕುವವನು; ಫಿರ್ಯಾದಿ.

ವಾದಿತ್ರ (ನಾ). ವಾದ್ಯ.

ವಾದು (ನಾ). ೧. ಮಾತು. ೨. ವಾದ; ಚರ್ಚೆ. ೩. ಅಧಿಕಾರ; ಹಕ್ಕು.

ವಾದ್ಯ (ನಾ). ನುಡಿಸುವ ಸಾಧನ; ವೀಣೆ, ತಬಲ ಮುಂತಾದುವು ~ಕಾ(ಗಾ)ರ = ವಾದ್ಯವನ್ನು ಬಾರಿಸುವವನು, -ನುಡಿಸುವವನು. ~ಗೋಷ್ಠಿ = ವಾದ್ಯಗಳ ಮೇಳವಾದನ. ~ಸಂಗೀತ = ವಾದ್ಯದಲ್ಲಿ ಹಾಡನ್ನು ನುಡಿಸುವಿಕೆ.

ವಾನ (ನಾ). ಒಣಗಿದ ಹಣ್ಣು.

ವಾನಪ್ರಸ್ಥ (ನಾ). ೧. ನಾಲ್ಕು ಆಶ್ರಮಗಳಲ್ಲಿ ಮೂರನೆಯದು. ೨. ಮೂರನೆಯ ಆಶ್ರಮದಲ್ಲಿ ಇರುವವನು. ೩. ಋಷಿ; ತಪಸ್ವಿ. ೪. ಒಂದು ಜಾತಿಯ ಮರ; ಮುತ್ತುಗ.

ವಾನರ (ನಾ). ಕಪಿ; ಮಂಗ. ~ಪತಾಕ = ಬಾವುಟದಲ್ಲಿ ಕಪಿಯ ಗುರುತನ್ನು ಉಳ್ಳವನು; ಅರ್ಜುನ.

ವಾನರಿ (ನಾ). ಹೆಣ್ಣುಮಂಗ.

ವಾಪಸು (ಅ). ತಿರುಗಿ; ಪುನಃ.

ವಾಪಸ್ಸು = ವಾಪಸು.

ವಾಪಿ (ನಾ). ೧. ಬಾವಿ; ಕೂಪ. ೨. ಹೊಲದಲ್ಲಿ ಬೀಜವನ್ನು ಬಿತ್ತುವ ಉಪಕರಣ; ಕೂರಿಗೆ.

ವಾಮ (ನಾ). ೧. ಎಡಭಾಗ. ೨. ಸುಂದರವಾದುದು; ಚೆಲುವಾದುದು. ೩. ಕೇಡು; ಹಾನಿ. (ಗು). ೪. ಸುಂದರವಾದ; ಚೆಲುವಾದ. ೫. ವಿರೋಧವಾದ; ಪ್ರತಿಕೂಲವಾದ. ೬. ಡೊಂಕಾದ; ವಕ್ರವಾದ. ೭. ಕೆಟ್ಟ; ದುಷ್ಟ. ೮. ಕುಳ್ಳಾದ; ಗಿಡ್ಡಾದ. ~ಅಂಗ = ೧. ದೇಹದ ಎಡಭಾಗ ೨. ಚೆಲುವ; ಸುಂದರ. ~ಅಂಘ್ರಿ = ಎಡಗಾಲು. ~ಅರ್ಧಾಂಗ = ಶಿವ; ಅರ್ಧನಾರೀಶ್ವರ. ~ಆಚಾರ = ೧. ಮಾಟ; ಅಭಿಚಾರ. ೨. ತಾಂತ್ರಿಕಪೂಜೆ. ೩. ದುರ್ಮಾರ್ಗ. ~ದೇವ = ೧. ಶಿವ. ೨. ಒಬ್ಬ ಋಷಿಯ ಹೆಸರು. ~ಪಂಥ = ವಾಮಪಕ್ಷ. ~ಪಕ್ಷ = ರಾಜಕೀಯದಲ್ಲಿ ಆಡಳಿತದ ಎದುರುಪಕ್ಷ. ~ಪಥ = ಅಡ್ಡದಾರಿ; ದುರ್ಮಾರ್ಗ. ~ಮಾರ್ಗ = ೧. ವಾಮ ಪಥ. ೨. = ವಾಮಾಚಾರ.

ವಾಮನ (ನಾ). ೧. ಕುಳ್ಳ; ಗಿಡ್ಡ. ೨. ವಿಷ್ಣುವಿನ ಹತ್ತು ಅವತಾರಗಳಲ್ಲಿ ಐದನೆಯದು. ೩. ಅಷ್ಟದಿಗ್ಗಜಗಳಲ್ಲಿ ಒಂದು (ಗು). ೪. ಕುಳ್ಳಾದ; ಗಿಡ್ಡಾದ.

ವಾಮಲೂರ (ನಾ). ಹುತ್ತ; ವಲ್ಮೀಕ.

ವಾಮಲೋಚನೆ (ನಾ). ೧. ಸುಂದರವಾದ ಕಣ್ಣುಗಳುಳ್ಳವಳು. ೨. ಸುಂದರಿ.

ವಾಮಾಂಗಿ (ನಾ). ೧. ಹೆಂಡತಿ; ಪತ್ನಿ. ೨. ಸುಂದರಿ; ಚೆಲುವೆ.

ವಾಮೆ (ನಾ). ೧. ಹುಲ್ಲಿನ ಮೆದೆ; ಬಣಬೆ. ೨. = ವಾಮಾಂಗಿ. ೩. ಹೆಂಗಸು; ಸ್ತ್ರೀ. ೪. ಶಕ್ತಿದೇವತೆ; ಪಾರ್ವತಿ.

ವಾಯ (ನಾ). ೧. ಮೋಸ; ಕಪಟ. ೨. ನೆಪ; ವ್ಯಾಜ. ೩. ನಿಷ್ಫಲತೆ; ವ್ಯರ್ಥತೆ. ೪. ಹಾಳು; ನಾಶ. ೫. ಮಾಯೆ; ತಂತ್ರ. ೬. ಜಂಬ; ಹೆಮ್ಮೆ. ೭. ನೇಯುವಿಕೆ; ನೆಯ್ಗೆ. ೮. ಹೊಲಿಗೆ; ಹೊಲಿಯುವಿಕೆ. ~ದಂಡ = ಮಗ್ಗ.

ವಾಯನ = ಬಾಗಿನ.

ವಾಯವ್ಯ (ನಾ). ೧. ಎಂಟು ದಿಕ್ಕುಗಳಲ್ಲಿ ಒಂದು. (ಗು). ೨. ವಾಯುವಿಗೆ ಸಂಬಂಧಿಸಿದ. ~ಅಸ್ತ್ರ = ವಾಯುವನ್ನು ಅಭಿಮಂತ್ರಿಸಿ ಬಿಡುವ ಒಂದು ಬಗೆಯ ಅಸ್ತ್ರ.

ವಾಯಸ (ನಾ). ಕಾಗೆ.

ವಾಯಿ (ನಾ). ಬಾವಿ; ವಾಪಿ

ವಾಯಿದೆ (ನಾ). ೧. ಒಪ್ಪಿಗೆ; ಒಡಂಬಡಿಕೆ. ೨. ವಾಗ್ದಾನ. ೩. ಗಡುವು; ಕಾಲಾವಧಿ. ~ಜ್ವರ=ನಿಯಮಿತ ದಿನಗಳವರೆಗೆ ಇರುವ ಜ್ವರ; ಕಟ್ಟಿನ ಜ್ವರ. ~ಪೇಟೆ = ಮುಂದಾಗಿಯೇ ದಿನಸಿಗಳ ಬೆಲೆಯನ್ನು ಗೊತ್ತುಪಡಿಸುವ ಸಂಸ್ಥೆ.

ವಾಯು (ನಾ). ೧. ಗಾಳಿ; ಅನಿಲ. ೨. ಶರೀರದಲ್ಲಿನ ಪ್ರಾಣ, ಅಪಾನ, ವ್ಯಾನ, ಉದಾನ ಮತ್ತು ಸಮಾನಗಳೆಂಬ ಐದು ಬಗೆಯ ವಾಯುಗಳಲ್ಲಿ ಒಂದು. ೩. ಗಾಳಿಯ ಅಧಿದೇವತೆ; ಮರುತ್ತು. ೪. ಒಂದು ಬಗೆಯ ರೋಗ; ಸಂಧಿವಾತ. ~ಗುಣ = ಹವಾಮಾನ; ವಾತಾವರಣ. ~ಗುಲ್ಮ =೧. ಸುಂಟರಗಾಳಿ. ೨. ಸಂಧಿವಾತ. ~ಪಥ = ಆಕಾಶಮಾರ್ಗ. ~ಪಥಿಕ=೧. ಆಕಾಶಮಾರ್ಗದಲ್ಲಿ ಸಂಚರಿಸುವವನು. ೨. ದೇವತೆ. ~ಪುತ್ರ = ವಾತಜ. ~ಭಕ್ಷಕ =೧. ಗಾಳಿಯನ್ನು ಸೇವಿಸುವವನು. ೨. ಹಾವು. ೩. ಒಬ್ಬ ಋಷಿಯ ಹೆಸರು. ~ಮಂಡಲ = ಆಕಾಶ. ~ಮೃಗ = ವಾತಪ್ರಮಿ. ~ರೇಚಕ = ಗಾಳಿಯನ್ನು ತುಂಬಿಸುವ ಸಾಧನೆ. ~ವಿಕಾರ = ವಾತದಿಂದ

ದೇಹದಲ್ಲಿ ಕಂಡುಬರುವ ರೋಗ. ~ವಿಹಾರ = ವಾಯುಸಂಚಾರ. ~ವೇಗ =೧. ಗಾಳಿಯ ಓಟ, -ಗಮನ. ೨. ಅತ್ಯಂತ ವೇಗ. ~ಶರೀರ = ವಾಯುವಿನ ವಿಕಾರಕ್ಕೆ ಒಳಗಾಗುವ ವ್ಯ. ~ಸಂಚಾರ = ೧. ಗಾಳಿಯ ಚಲನೆ; ಅಲುಗಾಟ. ೨. ತಿರುಗಾಟ; ಗಾಳಿ ಸಂಚಾರ. ~ಸಖ = ವಾಯುವಿನ ಗೆಳೆಯ; ಅಗ್ನಿ. ~ಸುತ = ವಾತಜ. ~ಸ್ತಂಭನ = ಗಾಳಿಯಲ್ಲಿ ನಿರಾಧಾರವಾಗಿ ದೇಹವನ್ನು ನಿಲ್ಲಿಸುವ ಒಂದು ಮಂತ್ರವಿದ್ಯೆ.

ವಾಯುಜ = ವಾತಜ.

ವಾಯುಭುಕ್ಕು (ನಾ). ಗಾಳಿಯನ್ನು ಆಹಾರ ವಾಗುಳ್ಳದು; ಹಾವು.

ವಾಯುವಿಳಂಗ (ನಾ). ಒಂದು ಜಾತಿಯ ಔಷಧಿ ಸಸ್ಯ ಮತ್ತು ಅದರ ಬೀಜ.

ವಾರ (ನಾ). ೧. ಭೂಮಿಯ ಒಡೆಯನಿಗೆ ಸಲ್ಲುವ ಧಾನ್ಯದ ಅಂಶ; ಕೋರು. ೨. ಹೊದಿಕೆ; ಆಚ್ಛಾದನೆ. ೩. ರಾಶಿ; ಒಟ್ಟಿಲು. ೪. ಗುಂಪು; ಸಮೂಹ. ೫. ಸರದಿ; ಸೂಳು. ೬. ಏಳು ದಿವಸಗಳ ಅವಧಿ; ಸಪ್ತಾಹ. ೭. ಏಳು ದಿವಸಗಳಲ್ಲಿ ಯಾವುದಾದರೊಂದು ದಿವಸ.ಉ.=ವಾರಾನ್ನ. ೮. ಅವಕಾಶ; ಆಸ್ಪದ. ~ಅಂಗನೆ = ವೇಶ್ಯೆ; ಸೂಳೆ. ~ಅನ್ನ = ವಾರದಲ್ಲಿ ಒಂದು ದಿನ ಸರದಿಯ ಪ್ರಕಾರ ಹಾಕುವ ಅಥವಾ ಪಡೆಯುವ ಊಟ. ~ಕಾಂತೆ = ವಾರಾಂಗನೆ. ~ಕೆ(ಗೆ)ೕರಿ=ಸೂಳೆಗೇರಿ; ವೇಶ್ಯಾವಾಟ. ~ಗಾರ = ಭೂಮಾಲಿಕನಿಗೆ ವಾರವನ್ನು ಕೊಡಲು ಒಪ್ಪಿ ಸಾಗುವಳಿ ಮಾಡುವವನು; ಗುತ್ತಿಗೆದಾರ. ~ಗುತ್ತಿಗೆ = ಫಸಲಿನಲ್ಲಿ ಒಂದು ಭಾಗವನ್ನು ಭೂಮಾಲಿಕನಿಗೆ ಕೊಟ್ಟು, ಅವನಿಂದ ರೈತನು ಉಳುಮೆಗೆ ಬೇಕಾಗುವ ಎತ್ತುಗಳನ್ನು ಮತ್ತು ಕಾಳನ್ನು ಪಡೆಯುವಂತೆ ಮಾಡಿಕೊಂಡ ಒಪ್ಪಂದ. ~ನಾರಿ=ವಾರಾಂಗನೆ. ~ಪತ್ರಿಕೆ = ಏಳುದಿನಗಳಿಗೊಮ್ಮೆ ಬರುವ ಪತ್ರಿಕೆ, ಪ್ರಕಟನೆ ಮುಂತಾದುವು; ಸಾಪ್ತಾಹಿಕ. ~ಪುರಂಧ್ರಿ = ವಾರಾಂಗನೆ. ~ಸ್ತ್ರೀ = ವಾರಾಂಗನೆ.

ವಾರಗಿತ್ತಿ = ಓರಗಿತ್ತಿ.

ವಾರಣ (ನಾ). ೧. ಆನೆ; ಗಜ. ೨. ಒಂಟೆ. ೩. ಮೋಡ. ೪. ಪ್ರತಿಭಟನೆ; ತಡೆಯುವಿಕೆ. ೫. ಅಂಕೆ; ಹತೋಟಿ. ~ಆಸ್ಯ = ಆನೆಯ ಮುಖವುಳ್ಳವನು; ಗಣಪತಿ. ~ಮುಖ = ವಾರಣಾಸ್ಯ. ~ಹಸ್ತ = ಆನೆಯ ಸೊಂಡಿಲು.

ವಾರತೆ = ವಾರ್ತೆ.

ವಾರಸು (ನಾ). ಒಡೆತನ; ಹಕ್ಕು; ಸ್ವಾಮ್ಯ. ~ದಾರ = ಬಾಧ್ಯಸ್ಥ; ಹಕ್ಕುದಾರ.

ವಾರಾಕರ (ನಾ). ನೀರಿಗೆ ಆಕರವಾದುದು; ಕಡಲು.

ವಾರಾಶಿ (ನಾ). ಸಮುದ್ರ; ಕಡಲು.

ವಾರಾಸಿ = ವಾರಾಶಿ.

ವಾರಾಹ (ನಾ). ೧. ಹಂದಿ; ವರಾಹ. (ಗು). ೨. ಹಂದಿಗೆ ಸಂಬಂಧಪಟ್ಟ.

ವಾರಿ (ನಾ). ೧. ಬಾರಿ; ಸರದಿ. ೨. ನೀರು; ಉದಕ. ೩. ಆನೆಯನ್ನು ಕಟ್ಟುವ ಸ್ಥಳ; ಕರೋಟಿ. ~ಕ(ಗ)ಲ್ಲು = ಆಲಿಕಲ್ಲು; ನೀರ್ಗಲ್ಲು. ~ಕೇಳಿ = ಜಲಕೇಳಿ; ನೀರಾಟ. ~ಚರ = ಜಲಚರಪ್ರಾಣಿ. ~ನಾಥ = ೧. ಸಮುದ್ರ; ಕಡಲು. ೨. ವರುಣ. ೩. ಮೋಡ; ಮೇಘ. ~ನಿಧಿ = ಸಾಗರ; ಸಮುದ್ರ. ~ರಾಶಿ=ವಾರಾಶಿ. ~ವಾಹ=ಮೋಡ. ~ಶಿಲೆ=ವಾರಿಗಲ್ಲು.

ವಾರಿಗೆ = ಓರಗೆ.

ವಾರಿಜ (ನಾ). ನೀರಿನಲ್ಲಿ ಹುಟ್ಟುವುದು; ತಾವರೆ. ~ಅಂಬಕ = ವಿಷ್ಣು; ಕೃಷ್ಣ.

~ಅಸ್ತ್ರ = ವಾರಿಜಾಂಬಕ. ~ಬಾಂಧವ = ಕಮಲದ ಮಿತ್ರ; ಸೂರ್ಯ. ~ಭವ = ಕಮಲದಲ್ಲಿ ಹುಟ್ಟಿದವನು; ಬ್ರಹ್ಮ. ~ರಿಪು = ಕಮಲದ ವೈರಿ; ಚಂದ್ರ.

ವಾರಿಜನಾಭ (ನಾ). ವಿಷ್ಣು.

ವಾರಿದ (ನಾ). ನೀರನ್ನು ಕೊಡುವಂತಹುದು; ಮೋಡ. ~ಪಥ = ಮೋಡಗಳು ಸಂಚರಿಸುವ ಮಾರ್ಗ; ಆಕಾಶ.

ವಾರಿಧರ (ನಾ). ನೀರನ್ನು ಧರಿಸಿರುವುದು; ಮೋಡ.

ವಾರಿಧಿ (ನಾ). ಸಮುದ್ರ; ಸಾಗರ. ~ಕನ್ಯೆ = ಸಮುದ್ರರಾಜನ ಮಗಳು; ಲಕ್ಷ್ಮಿ. ~ರಾಜ = ಸಮುದ್ರಾಧಿಪತಿ; ವರುಣ.

ವಾರಿರುಹ (ನಾ). ಕಮಲ; ತಾವರೆ.

ವಾರಿಸು (ಕ್ರಿ). ತಡೆ; ಅಡ್ಡಿಪಡಿಸು; ಜಾರಿಸು.

ವಾರು (ನಾ). ಬಟ್ಟೆ ಮೊದಲಾದುವುಗಳನ್ನು ಅಳೆಯುವ ಒಂದು ಅಳತೆ; ಗಜ.

ವಾರುಣ ೧. = ವಾರುಣಾಸ್ತ್ರ. ೨. ನೀರು; ಉದಕ (ಗು). ೩. ವರುಣನಿಗೆ ಸಂಬಂಧಿಸಿದ. ~ಅಸ್ತ್ರ = ವರುಣಮಂತ್ರದಿಂದ ಅಭಿಮಂತ್ರಿಸಿ ಬಿಡುವ ಒಂದು ಬಗೆಯ ಬಾಣ.

ವಾರುಣಿ (ನಾ). ೧. ವರುಣನು ಪಾಲಿಸುವ ದಿಕ್ಕು; ಪಶ್ಚಿಮ. ೨. ವರುಣನ ಹೆಂಡತಿ; ವರುಣಾನಿ. ೩. ಮದ್ಯ; ಸುರೆ. ೪. ಒಂದು ನಾಡಿಯ ಹೆಸರು. ೫. ಒಂದು ಜಾತಿಯ ಹುಲ್ಲು. ೬. ಒಂದು ನಕ್ಷತ್ರದ ಹೆಸರು.

ವಾರುಧಿ = ವಾರಿಧಿ.

ವಾರುವ (ನಾ). ಕುದುರೆ; ತುರಗ.

ವಾರೆ = ಓರೆ.

ವಾರ್ಚರ = ವಾರಿಚರ. ~ಧ್ವಜ = ಮೀನಕೇತನ; ಕಾಮ.

ವಾರ್ತಾಕ (ನಾ). ಬದನೆ ಗಿಡ ಮತ್ತು ಅದರ ಕಾಯಿ.

ವಾರ್ತಾಗೋಷ್ಠಿ (ನಾ). ಸಮಾಚಾರಸಮ್ಮೇಳನ.

ವಾರ್ತಾಚರ (ನಾ). ಸುದ್ದಿಯನ್ನು ತೆಗೆದುಕೊಂಡು ಹೋಗುವವನು; ಓಲೆಕಾರ.

ವಾರ್ತಾಚಿತ್ರ (ನಾ). ಸಮಾಚಾರವನ್ನು ತಿಳಿಸುವ ಚಿತ್ರ.

ವಾರ್ತಾತರಂಗ (ನಾ). ವಾಯುಮಾರ್ಗವಾಗಿ ಬರುವ ಸಮಾಚಾರ.

ವಾರ್ತಾಪತ್ರಿಕೆ (ನಾ). ಸುದ್ದಿಯನ್ನು ತಿಳಿಸುವ ಪತ್ರಿಕೆ; ಸಮಾಚಾರಪತ್ರಿಕೆ; ವೃತ್ತಪತ್ರ.

ವಾರ್ತಾವಹ (ನಾ). ೧. ಸುದ್ದಿಯನ್ನು ಕೊಡುವ ಪತ್ರ. ೨. ಸುದ್ದಿಯನ್ನು ಒಯ್ಯುವವನು; ಓಲೆಕಾರ.

ವಾರ್ತಾಹರ = ವಾರ್ತಾಚರ.

ವಾರ್ತಿಕ (ನಾ). ೧. ಸಮಾಚಾರವನ್ನು ತರುವವನು; ಸುದ್ದಿಗಾರ. ೨. ಮೂಲ ಗ್ರಂಥಕ್ಕೆ ವಿವರಣೆ ಕೊಡುವ ಟೀಕೆ, ಟಿಪ್ಪಣಿ; ಭಾಷ್ಯ. (ಗು). ೩. ವಾರ್ತೆಗೆ ಸಂಬಂಧಪಟ್ಟ; ಸುದ್ದಿಗೆ ಸಂಬಂಧಿಸಿದ. ~ಗ್ರಂಥ = ಟೀಕಾಗ್ರಂಥ; ಭಾಷ್ಯಗ್ರಂಥ.

ವಾರ್ತಿಕಕಾರ (ನಾ). ಟಿಪ್ಪಣಿಕಾರ.

ವಾರ್ತೆ ೧. = ವಾರ್ತೆ. ೨. ವೃತ್ತಿ; ಉದ್ಯೋಗ.

ವಾರ್ಧಕ (ನಾ). ೧. ಹೆಚ್ಚಳ; ವೃದ್ಧಿ. ೨. = ವಾರ್ಧಕ್ಯ. ೩. ಮುದುಕರ ಸಮೂಹ. ೪. = ವಾರ್ಧಕಷಟ್ಪದಿ. ~ಷಟ್ಪದಿ = ಷಟ್ಪದಿ ಛಂದಸ್ಸಿನಲ್ಲಿ ಒಂದು ಬಗೆ.

ವಾರ್ಧಕ್ಯ (ನಾ). ಮುದಿತನ; ಮುಪ್ಪು.

ವಾರ್ಧಿಕ = ವಾರ್ಧಕ.

ವಾರ್ಧುಷಿ (ನಾ). ಬಡ್ಡಿ ವ್ಯವಹಾರವನ್ನು ಮಾಡುವವನು.

ವಾರ್ಧುಷಿಕ = ವಾರ್ಧುಷಿ.

ವಾರ್ಷಿಕ (ಗು). ೧. ಮಳೆಗಾಲಕ್ಕೆ ಸಂಬಂಧಿಸಿದ. ೨. ಒಂದು ವರ್ಷದ; ವರ್ಷಾವಧಿಯ; ಆ ವರ್ಷಕ್ಕೆ ಸಂಬಂಧಿಸಿದ. ~ಕಾಣಿಕೆ = ವರ್ಷಾಶನ. ~ವೇತನ = ವರ್ಷದ ಲೆಕ್ಕದ ಮೇಲೆ ಕೊಡುವ ಸಂಬಳ.

ವಾಲ (ನಾ). ೧. ಕೂದಲು; ರೋಮ. ೨. ಬಾಲ; ಪುಚ್ಛ. ~ವ್ಯಜನ = ಕೂದಲಿನಿಂದ ಮಾಡಿದ ಚಾಮರ, –ಚವರಿ.

ವಾಲಗ (ನಾ). ಓಲಗ; ನಾಗಸ್ವರ.

ವಾಲಧಿ (ನಾ). ಕೂದಲು ಉಳ್ಳುದು; ಬಾಲ.

ವಾಲಪಾಶ್ಯೆ (ನಾ). ತಲೆಯಲ್ಲಿ ಧರಿಸುವ ಒಂದು ಬಗೆಯ ಆಭರಣ; ಬೈತಲೆಬೊಟ್ಟು.

ವಾಲು (ಕ್ರಿ). ೧. ಬಾಗು; ಓಲು. ೨. ಜೋತಾಡು; ನೇಲು.

ವಾಲು(ಳು)ಕ (ನಾ). ೧. ಉಸುಕು. ಮರಳು. ೨. ಸೌತೆಯಲ್ಲಿ ಒಂದು ಜಾತಿ. ೩. ಒಂದು ಜಾತಿಯ ಸುವಾಸನೆಯ ಸಸ್ಯ; ಕಾಮುಕಸ್ತೂರಿ. ೪. ಕರ್ಪೂರ.

ವಾಲೆ (ನಾ). ಕರ್ಣಾಭರಣ; ಓಲೆ.

ವಾಲ್ಮೀಕ (ಗು). ಹುತ್ತಕ್ಕೆ ಸಂಬಂಧಿಸಿದ.

ವಾವದೂಕ (ನಾ). ೧. ಬಹಳವಾಗಿ ಮಾತನಾಡುವವನು; ವಾಚಾಳಿ. ೨. ವಾಗ್ಮಿ; ವಾಕ್ಪಟು. (ಗು). ೩. ಬಹಳವಾಗಿ ಮಾತನಾಡುವ. ೪. ವಾಕ್ಚಾತುರ್ಯದಿಂದ ಕೂಡಿದ.

ವಾವೆ (ನಾ). ಸಂಬಂಧ; ನಂಟಸ್ತಿಕೆ.

ವಾಶಿ (ನಾ). ೧. ಒಂದು ಬಗೆಯ ಉಪಕರಣ; ಬಾಚಿ. ೨. ಶಬ್ದ; ಧ್ವನಿ.

ವಾಸ (ನಾ). ೧. ಕೊಳಲು; ವೇಣು. ೨. ಮನೆ; ವಾಸಸ್ಥಳ. ೩. ವಾಸ್ತವ್ಯ; ಇರುವಿಕೆ. ೪. ವಸ್ತ್ರ; ಬಟ್ಟೆ. ೫. ಒಂದು ಜಾತಿಯ ಗಿಡ; ಅಡುಸೋಗೆ. ೬. ವಾಸನೆ; ಗಂಧ. ೭. ಸುಗಂಧದ್ರವ್ಯ. ೮. ಸುಳಿವು; ಗುರುತು. ~ಇಗ = ಆಳು; ಸೇವಕ. ~ಇಸು = ೧. ವಾಸಮಾಡು; ನೆಲಸು. ೨. ಆಘ್ರಾಣಿಸುವಂತೆ ಮಾಡು. ೩. = ವಾಸನಿಸು. ~ಕಾ(ಗಾ)ಱ(ರ) = ಕೊಳಲು ಊದುವವನು; ವೇಣುವಾದಕ. ~ಸ್ಥಾನ = ಮನೆ; ನಿವಾಸ.

ವಾಸಂತ (ಗು). ವಸಂತ ಋತುವಿಗೆ ಸಂಬಂಧಿಸಿದ.

ವಾಸಂತಿ (ನಾ). ಒಂದು ಜಾತಿಯ ಬಳ್ಳಿ ಮತ್ತು ಅದರ ಹೂವು.

ವಾಸಂತಿಕ (ನಾ). ೧. ನಾಟಕದಲ್ಲಿಯ ವಿದೂಷಕ. ೨. ನಟಿ. (ಗು). ೩. ವಸಂತ ಕಾಲದ.

ವಾಸಂತಿಕೆ (ನಾ). ೧. ವಸಂತ ಋತು. ೨. = ವಾಸಂತಿ.

ವಾಸನೆ (ನಾ). ೧. ಸುವಾಸನೆ; ಸುಗಂಧ. ೨. ಕೆಟ್ಟನಾತ; ದುರ್ಗಂಧ. ೩. ಹಿಂದಿನ ಜನ್ಮದ ನೆನಪು, –ಸ್ಮರಣೆ. ೪. ಊಹೆ; ಕಲ್ಪನೆ. ೫. ಆಸೆ; ಬಯಕೆ. ~ಇಸು = ೧. ಸುವಾಸನೆಯುಸ್ನುಂಟುಮಾಡು. ೨. ಮೂಸಿನೋಡು; ಆಘ್ರಾಣಿಸು. ~ಕ(ಗ)ಟ್ಟು = ಸುವಾಸನೆಯ ದ್ರವ್ಯವನ್ನು ಹಾಕು; ಬಣ್ಣಕಟ್ಟು. ~ಪಿ(ವಿ,ಹಿ)ಡಿ = ೧. ವಾಸನೆಯುನ್ನು ಗ್ರಹಿಸು; ಮೂಸು. ೨. ಪತ್ತೆಹಚ್ಚು; ಕಂಡುಹಿಡಿ.

ವಾಸರ (ನಾ). ೧. ಹಗಲು; ಬೆಳಗು. ೨. ದಿನ; ದಿವಸ. ೩. ಜುಗುಪ್ಸೆ; ಬೇಸರ.

ವಾಸವ (ನಾ). ಇಂದ್ರ. ~ಆಶೆ = ಇಂದ್ರನ ದಿಕ್ಕು; ಪೂರ್ವ. ~ನಂದನ = ೧. ಇಂದ್ರನ ಮಗ. ೨. ಅರ್ಜುನ. ೩. ವಾಲಿ. ೪. ಜಯಂತ. ೫. ಇಂದ್ರನ ತೋಟ, –ವನ. ~ನಿವಾಸ = ಸ್ವರ್ಗ.

ವಾಸಸ್ಸು (ನಾ). ಬಟ್ಟೆ; ವಸ್ತ್ರ.

ವಾಸಿ (ನಾ). ೧. ವಚನ; ಆಣೆ; ಭಾಷೆ. ೨. ಭಾಗ; ಅಂಶ. ೩. ಸ್ಪರ್ಧೆ; ಮೇಲಾಟ. ೪. ಒಂದು ಬಗೆಯ ಆಯುಧ; ಬಾಚಿ. ೫. ಆರೋಗ್ಯ ಹೊಂದುವುದು; ಗುಣವಾಗುವುದು. ೬. ಮೇಲು; ಉತ್ತಮ. ೭. ಬಡ್ಡಿ. ೮. ವಾಸಿಸುವವನು; ಇರುವವನು.

ವಾಸು (ನಾ). ೧. ಆತ್ಮ. ೨. ವಿಷ್ಣು. ~ದೇವ = ಕೃಷ್ಣ.

ವಾಸುಕಿ (ನಾ). ಅಷ್ಟಸರ್ಪಗಳಲ್ಲಿ ಒಂದು. ~ಶಯನ = ವಿಷ್ಣು.

ವಾಸುಗಿ ೧. = ವಾಸುಕಿ. ೨. ಒಂದು ಬಗೆಯ ವೀಣೆ.

ವಾಸ್ತವ (ನಾ). ೧. ಅರ್ಥಾಲಂಕಾರಗಳಲ್ಲಿ ಒಂದು. (ಗು). ೨ = ವಾಸ್ತವಿಕ.

ವಾಸ್ತವಿಕ (ಗು). ೧. ನೈಜವಾದ; ನಿಜವಾಗಿ ಇರುವ. ೨. ಸ್ಥಿರವಾದ; ಊರ್ಜಿತವಾದ.

ವಾಸ್ತವ್ಯ (ನಾ). ೧. ವಾಸಿಸುವಿಕೆ; ತಂಗುವಿಕೆ; ಮೊಕ್ಕಾಮು. ೨. ಮನೆ; ನಿವಾಸ.

ವಾಸ್ತು (ನಾ). ೧. ಮನೆಯನ್ನು ಕಟ್ಟಲು ತಕ್ಕುದಾದ ಸ್ಥಳ; ನಿವೇಶನ. ೨. ಮನೆ; ವಾಸಸ್ಥಾನ. ೩. ಕಟ್ಟಡ, ಮನೆ ಮೊದಲಾದುವುಗಳನ್ನು ಕಟ್ಟುವ ಕಲೆ; ಗೃಹ ನಿರ್ಮಾಣ ಕಲೆ. ~ಕಲೆ = ಅರುವತ್ತು ನಾಲ್ಕು ಕಲೆಗಳಲ್ಲಿ ಒಂದು. ~ವಿದ್ಯೆ = ವಾಸ್ತುಕಲೆ. ~ಶಾಂತಿ = ಗೃಹಶಾಂತಿ. ~ಶಿಲ್ಪ = ವಾಸ್ತುಕಲೆ.

ವಾಹ ೧. = ವಾಹನ. ೨. ಭಾರವನ್ನು ಹೊರುವ ಆಳು. ೩. ಕುದುರೆ. ೪. ಪ್ರವಹಿಸುವುದು; ನದಿ. ೫. ಒಂದು ಅಳತೆ.

ವಾಹಕ (ನಾ). ೧. ಭಾರವನ್ನು ಹೊರುವ ಆಳು, –ಕೂಲಿ. ೨. ಚಾಲಕ; ಸಾರಥಿ. ೩. ಕುದುರೆಯ ಸವಾರ; ರಾವುತ. ೪. ಒಯ್ಯುವ ಮಾಧ್ಯಮ; ಸಾಗಿಸುವ ಸಾಧನ. ೫. ಒಯ್ಯುವವನು; ಸಾಗಿಸುವವನು. (ಗು). ೬. ಭಾರವನ್ನು ಹೊರುವ. ೭. ಒಯ್ಯುವ; ಸಾಗಿಸುವ.

ವಾಹನ (ನಾ). ೧. ಹೊರುವುದು; ಒಯ್ಯುವುದು. ೨. ಬಂಡಿ, ರೈಲು ಮುಂತಾದ ಯಾವುದೇ ಒಯ್ಯುವ ಸಾಧನ.

ವಾಹಸ (ನಾ). ಅಜಗರ; ಹೆಬ್ಬಾವು.

ವಾಹಳಿ = ವೈಹಾಳಿ.

ವಾಹಿನಿ (ನಾ). ೧. ಹರಿಯುವುದು; ನದಿ; ಪ್ರವಾಹ. ೨. ಸೈನ್ಯ; ದಳ. ೩. ಸೈನ್ಯದ ಒಂದು ತುಕಡಿ. ೪. ಗುಂಪು; ಸಮೂಹ.

ವಾಹಿನೀಪತಿ (ನಾ). ೧. ನದಿಯ ಒಡೆಯ; ಸಮುದ್ರ. ೨. ಸೇನಾನಾಯಕ; ಸೈನ್ಯಾಧಿಪತಿ.

ವಾಹ್ಯಾಳಿ = ವೈಹಾಳಿ.

ವಾಳ (ನಾ). ೧. ಗ್ರಂಥಿ; ಗಳಗಂಡ; ಗಡ್ಡೆ. ೨. = ವಾಲ.

ವಾಟ್ರ್ತೆ(ಳ್ತೆ) (ನಾ). ಸುದ್ದಿ; ವಾರ್ತೆ.

ವಿಂಗಡ (ನಾ). ೧. ಬೇರ್ಪಡಿಸುವಿಕೆ; ಪ್ರತ್ಯೇಕಿಸುವಿಕೆ. ೨. ವಿಭಾಗ; ವಿಭಜನೆ. ~ಇಸು = ವಿಭಾಗಿಸು; ವಿಭಜಿಸು.

ವಿಂಗಡಣೆ = ವಿಂಗಡ.

ವಿಂಧ್ಯ (ನಾ). ೧. ಬೇಡ; ವ್ಯಾಧ. ೨. ಏಳು ಕುಲಪರ್ವತಗಳಲ್ಲಿ ಒಂದು.

ವಿಂಶತಿ (ನಾ). ಇಪ್ಪತ್ತು.

ವಿಕಚ (ಗು). ೧. ಕೂದಲಿಲ್ಲದ; ಬೋಳಾದ. ೨. ಅರಳಿದ; ವಿಕಾಸಹೊಂದಿದ.

ವಿಕಟ (ಗು). ೧. ಪರಾಕ್ರಮದಿಂದ ಕೂಡಿದ; ಪ್ರಚಂಡ. ೨. ದೊಡ್ಡದಾದ; ಮಹತ್ತಾದ. ೩. ಅಸಹ್ಯರೂಪವುಳ್ಳ; ವಿಕಾರವಾದ. ೪. ಭಯಂಕರವಾದ; ಘೋರವಾದ. ೫. ವ್ಯಂಗ್ಯದಿಂದ ಕೂಡಿದ; ಕೊಂಕಿನಿಂದ ತುಂಬಿದ. ~ಅಂಗ = ಅಂದಗೇಡಿ; ಕುರೂಪಿ. ~ಕವಿ = ವಿಡಂಬನೆ ಮಾಡುವ ಕವಿ.

ವಿಕರಣ (ನಾ). ಬದಲಾವಣೆ; ವಿಕಾರ.

ವಿಕರಾಲ(ಳ) (ಗು). ಘೋರವಾದ; ಭಯಂಕರವಾದ.

ವಿಕರಿಸು (ಕ್ರಿ). ಬದಲಾಯಿಸು; ರೂಪಾಂತರಿಸು.

ವಿಕರ್ಣ (ನಾ). ಒಂದು ಬಗೆಯ ಬಾಣ, –ಶರ.

ವಿಕರ್ತನ (ನಾ). ನೇಸರು; ಸೂರ್ಯ.

ವಿಕರ್ಮ (ನಾ). ೧. ಮೋಸ; ಕುತಂತ್ರ. ೨. ನಿಷ್ಕ್ರಿಯತೆ.

ವಿಕಲ(ಳ) (ನಾ). ೧. ನ್ಯೂನತೆ; ಕೊರತೆ. (ಗು). ೨. ಅಪೂರ್ಣ; ಪೂರ್ಣವಲ್ಲದ. ೩. ಒಣಗಿದ; ಬಾಡಿದ. ೪. ಕಳವಳಗೊಂಡ; ಗಾಬರಿಯಾದ. ೫. ನಷ್ಟವಾದ; ಭ್ರಷ್ಟವಾದ. ~ವ್ರತ = ನಿಯಮವನ್ನು ಬಿಟ್ಟವನು.

ವಿಕಲ್ಪ (ನಾ). ೧. ಐಚ್ಛಿಕವಾದುದು; ಆಯ್ಕೆ ಮಾಡಬಹುದಾದುದು. ೨. ಅನಿಶ್ಚಿತವಾದುದು. ೩. ಸಂದೇಹ; ಅನುಮಾನ. ೪. ತಪ್ಪು; ದೋಷ. ೫. ಕೆಟ್ಟ ಯೋಚನೆ; ದುರಾಲೋಚನೆ. ೬. ಪಲ್ಲಟ; ಬದಲಾವಣೆ. ~ಇಸು = ೧. ಪರಿವರ್ತಿಸು; ಬದಲಾವಣೆ ಮಾಡು. ೨. ತಪ್ಪು ತಿಳಿದುಕೊಳ್ಳು.

ವಿಕಸನ (ನಾ). ಅರಳುವಿಕೆ; ವಿಕಾಸ.

ವಿಕಸಿಸು (ಕ್ರಿ). ಅರಳು; ವಿಕಾಸಹೊಂದು.

ವಿಕಾರ (ನಾ). ೧. ರೂಪಾಂತರ; ಬದಲಾವಣೆ. ೨. ಅಸಹ್ಯವಾದ ರೂಪು; ಕುರೂಪ. ೩. ರೂಪುಗೆಡುವುದು; ವಿದ್ರೂಪವಾಗುವುದು. ೪. ಅಸ್ವಾಸ್ಥ್ಯ; ರೋಗ. ೫. ಉದ್ವೇಗ; ತಳಮಳ. ~ಚೇಷ್ಟೆ = ಅಸಹ್ಯವರ್ತನೆ.

ವಿಕಾರಿ (ನಾ). ೧. ಅಂದಗೇಡಿ; ಕುರೂಪಿ. ೨. ದುಷ್ಟ; ದುರಾಚಾರಿ. ೩. ಅರುವತ್ತು ಸಂವತ್ಸರಗಳಲ್ಲಿ ಒಂದು. (ಗು). ೪. ಬದಲಾಗುವ; ವಿಕಾರ ಹೊಂದುವ.

ವಿಕಾಸ (ನಾ). ೧. ಅರಳುವಿಕೆ; ಬಿರಿಯುವಿಕೆ. ೨. ಪ್ರಕಟವಾಗುವಿಕೆ. ೩. ಹರ್ಷ; ಸಂತೋಷ. ~ವಾದ = ಜೀವವು ವಿಕಾಸವಾಗುವುದೆಂಬುದನ್ನು ತಿಳಿಸುವ ಸಿದ್ಧಾಂತ; ಉತ್ಕ್ರಾಂತಿವಾದ.

ವಿಕಾಳಿಸು (ಕ್ರಿ). ಭಯಂಕರವಾಗು; ಘೋರವಾಗು.

ವಿಕೀರ್ಣ (ಗು). ೧. ಚೆಲ್ಲಿದ; ಹರಡಿದ. ೨. ತುಂಬಿದ. ೩. ಪ್ರಸಿದ್ಧವಾದ; ಹೆಸರುವಾಸಿಯಾದ.

ವಿಕುರ್ವಣೆ ೧. = ವೈಕುರ್ವಣ. ೨. ಇಂದ್ರಜಾಲ; ಮಾಯೆ.

ವಿಕೃತ (ನಾ). ೧. ಬದಲಾವಣೆ. ೨. ಕುರೂಪ. ೩. ಅಸಹ್ಯ. (ಗು). ೪. ಬದಲಾವಣೆ ಹೊಂದಿದ; ರೂಪಾಂತರಗೊಂಡ. ೫. ವಿಕಾರವಾದ; ಕುರೂಪವಾದ. ೬. ಅಸ್ವಾಭಾವಿಕವಾದ; ವಿಲಕ್ಷಣವಾದ. ೭. ಅಸಹ್ಯವಾದ; ಜುಗುಪ್ಸೆಯನ್ನುಂಟು ಮಾಡುವ.

ವಿಕೃತಿ (ನಾ). ೧. ಬದಲಾವಣೆ; ರೂಪಾಂತರ. ೨. ಕುರೂಪ; ಅಂದಗೇಡಿತನ. ೩. ರೋಗ. ೪. ಒಂದು ಸಂವತ್ಸರದ ಹೆಸರು.

ವಿಕೇಂದ್ರೀಕರಣ (ನಾ). ಒಂದು ಕೇಂದ್ರದಲ್ಲಿ ನೆಲೆಸಿರುವ ಶಕ್ತಿ, ಅಧಿಕಾರ ಮುಂತಾದುವನ್ನು ಬೇರೆ ಬೇರೆಯಾಗಿ ವಿತರಣೆ ಮಾಡುವುದು.

ವಿಕೇಶಿ (ನಾ). ವಿಧವೆ.

ವಿಕೋಪ (ನಾ). ೧. ಮಿತಿಮೀರಿದ ಕೋಪ. ೨. ಅತಿರೇಕ.

ವಿಕ್ರಮ (ನಾ). ೧. ಗತಿ; ಗಮನ. ೨. ಹೆಜ್ಜೆ; ದಾಪು. ೩. ಸಾಮರ್ಥ್ಯ; ಪರಾಕ್ರಮ. ೪. ಯಶಸ್ಸು; ಸಾಧನೆ. ೫. ಅಪೂರ್ವವಾದ ದಾಖಲೆ. ೬. ವೀರ; ಧೀರ. ೭. ಒಬ್ಬ ರಾಜನ ಹೆಸರು; ವಿಕ್ರಮಾದಿತ್ಯ. ೮. ಒಂದು ಸಂವತ್ಸರದ ಹೆಸರು. ~ಅಂಕ = ೧. ಪಾದದ ಗುರುತು; ಹೆಜ್ಜೆಯ ಗುರುತು. ೨. ಪರಾಕ್ರಮದ ಗುರುತು. ~ಶಕೆ = ವಿಕ್ರಮಾದಿತ್ಯನ ಕಾಲದಿಂದ ಆರಂಭವಾದ ವರ್ಷ.

ವಿಕ್ರಯ (ನಾ). ಮಾರಾಟ; ಬಿಕರಿ. ~ಇಸು = ಮಾರು; ಖರೀದಿಗೆ ಕೊಡು.

ವಿಕ್ರಯಿ (ನಾ). ಮಾರುವವನು.

ವಿಕ್ರಾಂತ (ನಾ). ೧. ಪರಾಕ್ರಮ ; ಶೌರ್ಯ. ೨. ಕಲಿ; ವೀರ. ೩. ಹೆಜ್ಜೆ ; ದಾಪು. (ಗು). ೪. ಮುಂದುವರಿದ ; ಅತಿಕ್ರಮಿಸಿದ. ೫. ಕೆಚ್ಚೆದೆಯುಳ್ಳ ; ಸಾಮರ್ಥ್ಯದಿಂದ ಕೂಡಿದ.

ವಿಕ್ರಿಯೆ (ನಾ). ೧.ಬದಲಾವಣೆ ; ರೂಪಾಂತರ. ೨. ಚಿತ್ತಕ್ಷೋಭೆ ; ಮನೋವಿಕಾರ.

ವಿಕ್ರೀಡಿತ (ನಾ). ೧. ಆಟ ; ಕ್ರೀಡೆ. (ಗು). ೨. ಆಡಿದ ; ಕ್ರೀಡಿಸಿದ.

ವಿಕ್ಲಬ (ಗು). ಕಳವಳಗೊಂಡ ; ಕಕ್ಕಾಬಿಕ್ಕಿಯಾದ.

ವಿಕ್ಲವ ೧. = ವಿಕ್ಲಬ. ೨. ಕಷ್ಟಕ್ಕೊಳಗಾದ. ೩. ಜುಗುಪ್ಸೆಗೊಂಡ.

ವಿಕ್ಷಿಪ್ತ (ಗು). ೧. ಎಸೆದ ; ಚೆಲ್ಲಿದ. ೨. ಬಿಟ್ಟ; ತ್ಯಜಿಸಿದ. ೩. ಚಂಚಲವಾದ ; ಕಂಗೆಟ್ಟ.

ವಿಕ್ಷೇಪ (ನಾ). ೧. ಎಸೆಯುವಿಕೆ ; ಚೆಲ್ಲುವಿಕೆ. ೨. ಬಿಡುವುದು ; ತ್ಯಜಿಸುವುದು. ೩. ತಿರಸ್ಕರಿಸುವಿಕೆ ; ಅಲ್ಲಗಳೆಯುವಿಕೆ.

ವಿಕ್ಷೇಪಣ = ವಿಕ್ಷೇಪ.

ವಿಕ್ಷೋಭ (ನಾ). ೧. ಅಸ್ಥಿರತೆ ; ಚಂಚಲತೆ. ೨. ಚಿತ್ತಕ್ಷೋಭೆ.

ವಿಖಚಿತ (ಗು). ಚೆನ್ನಾಗಿ ಕೆತ್ತಿದ, -ಕುಂದಣಿಸಿದ.

ವಿಖ್ಯಾತ (ನಾ). ೧. ಪ್ರಸಿದ್ಧನಾದವನು. (ಗು). ೨. ಪ್ರಸಿದ್ಧವಾದ ; ಹೆಸರುವಾಸಿಯಾದ.

ವಿಖ್ಯಾತಿ (ನಾ). ಕೀರ್ತಿ ; ಪ್ರಸಿದ್ಧಿ.

ವಿಗಡ (ನಾ). ೧. ಸಾಹಸ ; ಶೌರ್ಯ. ೨. ಧೈರ್ಯ ; ಕೆಚ್ಚು. ೩. ಕ್ರೌರ್ಯ ; ಕ್ರೂರತನ. ೪. ಶೂರ ; ಪರಾಕ್ರಮಿ. ೫. ದುಗುಡ; ದುಃಖ. (ಗು). ೬. ಹಿರಿಯ; ದೊಡ್ಡ. ೭. ಕಠೋರವಾದ ; ಪ್ರಚಂಡವಾದ. ೮. ಭೀಕರವಾದ ; ಭಯಂಕರವಾದ. ೯. ದುಷ್ಟತನದಿಂದ ಕೂಡಿದ ; ಕೆಟ್ಟ. ೧೦. ಉದ್ಧಟತನದಿಂದ ಕೂಡಿದ. ~ಇಸು = ೧. ಕುಟಿಲತೆಯಿಂದ ಕೂಡಿರು. ೨. ಭಯುಗೊಳಿಸು; ಹೆದರಿಸು. ~ತನ=೧. ಶೌರ್ಯ ; ಸಾಹಸ. ೨. ಕ್ರೌರ್ಯ. ೩. ಧೂರ್ತತೆ ; ಉದ್ಧಟತನ.

ವಿಗಡೆ (ನಾ). ೧. ಸಮರ್ಥಳಾದ ಹೆಂಗಸು. ೨. ಕಪಟಸ್ವಭಾವದವಳು ; ಕುಟಿಲೆ.

ವಿಗತ (ಗು). ೧. ದೂರಹೋದ ; ಕಳೆದುಹೋದ. ೨. ಪ್ರತ್ಯೇಕಿಸಲ್ಪಟ್ಟ ; ಬೇರೆಯಾದ.

ವಿಗಲಿ(ಳಿ)ತ (ಗು). ೧. ಸೋರಿದ ; ಜಿನುಗಿದ. ೨. ಕರಗಿಹೋದ. ೩. ಬಿದ್ದುಹೋದ ; ಕಳಚಿದ.

ವಿಗುರ್ಬಣೆ = ವಿಗುರ್ವಣೆ.

ವಿಗುರ್ಬಿಸು = ವಿಗುರ್ವಿಸು.

ವಿಗುರ್ವಣೆ(ನಾ).೧.ಹಬ್ಬುವಿಕೆ; ಹೆಚ್ಚಾಗುವಿಕೆ. ೨.ಭಯ ; ಹೆದರಿಕೆ. ೩. ಭಯೋತ್ಪಾದಕತೆ. ೪. ಮಾಯೆಯಿಂದ ಸೃಷ್ಟಿಸುವುದು.

ವಿಗುರ್ವಿಸು (ಕ್ರಿ). ೧. ಭಯಪಡಿಸು ; ಭೀತಿಯನ್ನುಂಟುಮಾಡು. ೨. ಹೆಚ್ಚುಮಾಡು. ೩. ಮಾಯೆಯಿಂದ ಸೃಷ್ಟಿಮಾಡು. ೪. ವಿಕಾರಗೊಳಿಸು ; ರೂಪಾಂತರಮಾಡು.

ವಿಗ್ರಹ (ನಾ). ೧. ಮೂರ್ತಿ ; ಪ್ರತಿಮೆ. ೨. ಶರೀರ; ದೇಹ. ೩. ವಿಸ್ತರಣೆ ; ಹಬ್ಬುವುದು. ೪. ವಿಭಾಗಿಸುವಿಕೆ ; ಪ್ರತ್ಯೇಕಿಸುವಿಕೆ. ೫. ವಿಭಾಗ; ವಿಂಗಡಣೆ. ೬. ಯುದ್ಧ ; ಕಾಳಗ. ~ಆರಾಧನೆ = ಮೂರ್ತಿಪೂಜೆ. ~ಇಸು = ೧. ಬೇರೆ ಬೇರೆ ಮಾಡು ; ಪ್ರತ್ಯೇಕಿಸು. ೨. ಕಾದು; ಹೋರಾಡು. ~ಭೂಮಿ=ಯುದ್ಧಭೂಮಿ ; ರಣರಂಗ. ~ವಾಕ್ಯ = ವ್ಯಾಕರಣದಲ್ಲಿ ಸಮಸ್ತಪದವನ್ನು ವಿವರಿಸುವಾಗ ಅರ್ಥಾನುಸಾರವಾಗಿ ಪದಗಳನ್ನು ಬಿಡಿಸಿ ಹೇಳುವುದು. ~ವೀರ = ರಣಗಲಿ ; ಯುದ್ಧವೀರ.

ವಿಘಟನ (ನಾ). ೧. ಒಡೆಯುವಿಕೆ. ೨. ನಾಶ; ಅಳಿವು.
ವಿಘಟಿಸು (ಕ್ರಿ). ೧. ಬೇರೆಯಾಗು; ಬೇರ್ಪಡು. ೨. ಸ್ಪರ್ಧೆಮಾಡು; ಹುರುಡಿಸು. ೩. ನಾಶಗೊಳಿಸು.
ವಿಘಳಿಗೆ (ನಾ). ಗಳಿಗೆಯ ಅರುವತ್ತನೆಯ ಒಂದು ಭಾಗ.
ವಿಘಾತ (ನಾ). ೧. ವಿರೋಧ; ಅಡ್ಡಿ. ೨. ಹೊಡೆತ; ಪೆಟ್ಟು. ೩. ನಾಶ; ಹಾಳು. ೪. ಬಿಡುವಿಕೆ; ತ್ಯಜಿಸುವಿಕೆ.
ವಿಘಾತಿ (ನಾ). ೧. ವಿರೋಧ; ವಿಘ್ನ. ೨. ಹೊಡೆತ; ಪೆಟ್ಟು. ೩. ನಾಶ; ಅಳಿವು. ೪. ನಾಶಮಾಡುವವನು. ೫. ವಿರೋಧಿಸುವವನು; ಎದುರಿಸುವವನು.
ವಿಘೂರ್ಣಿಸು (ಕ್ರಿ). ೧. ಗರ್ಜಿಸು; ಅಬ್ಬರಿಸು. ೨. ವಿಜೃಂಭಿಸು; ಅಧಿಕವಾಗು.
ವಿಘ್ನ (ನಾ). ೧. ಅಡ್ಡಿ; ತಡೆ. ೨. ತೊಡಕು; ತೊಂದರೆ. ~ಈಶ್ವರ = ವಿಘ್ನಗಳನ್ನು ನಿಯಂತ್ರಿಸುವವನು; ಗಣೇಶ. ~ರಾಜ = ವಿಘ್ನೇಶ್ವರ.
ವಿಚಕಿಲ(ಳ) (ನಾ). ಒಂದು ಜಾತಿಯ ಮಲ್ಲಿಗೆ.
ವಿಚಕ್ಷಣ (ನಾ). ೧. ದೂರದೃಷ್ಟಿಯುಳ್ಳವನು. ೨. ಪಂಡಿತ; ವಿದ್ವಾಂಸ. ೩. ನಿಪುಣ; ಚತುರ.
ವಿಚಕ್ಷಣೆ (ನಾ). ಜಾಣತನ; ಕೌಶಲ.
ವಿಚಲ(ಳ) (ನಾ). ೧. ಚಂಚಲತೆ; ಅಸ್ಥಿರತೆ. (ಗು). ೨. ಚಂಚಲವಾದ.
ವಿಚಾರ (ನಾ). ೧. ವಿಷಯ; ಪ್ರಸ್ತಾಪ. ೨. ವಿವೇಚನೆ; ವಿಮರ್ಶೆ. ೩. ವಿವೇಕ. ೪. ಶಂಕೆ; ಸಂಶಯ. ೫. ಆಲೋಚನೆ. ೬. ಪಕ್ಷಿಗಳ ಓಡಾಟ,– ಸಂಚಾರ. ~ಇಸು =೧. ಪರೀಕ್ಷಿಸು; ಶೋಧನೆಮಾಡು. ೨. ಕೇಳು; ಪ್ರಶ್ನಿಸು. ೩. ಪರ್ಯಾಲೋಚಿಸು; ವಿಚಾರಮಾಡು. ೪. ಭಾವಿಸು; ಎಣಿಸು. ~ಕೆ(ಗೆ)ಡು = ೧. ನಿರ್ಣಯ ತಪ್ಪಿಹೋಗು. ೨. ಗಾಬರಿಗೊಳ್ಳು; ವ್ಯಾಕುಲಗೊಳ್ಳು. ~ಕೆ(ಗೆ)ಡಿ = ವಿವೇಕವನ್ನು ಕಳೆದುಕೊಂಡವನು; ಮತಿಗೇಡಿ. ~ಗೋಷ್ಠಿ = ವಿಚಾರ ವಿನಿಮಯ ಮಾಡಿಕೊಳ್ಳುವ ಸಭೆ; ಚರ್ಚಾಗೋಷ್ಠಿ. ~ವೇದಿಕೆ = ಚರ್ಚಿಸುವ ಸ್ಥಳ. ~ಶೀಲ = ವಿಚಾರವಂತ. ~ಸಂಕಿರಣ = ೧. ಒಂದು ವಿಷಯದ ಮೇಲೆ ಬೇರೆ ಬೇರೆ ಅಂಶಗಳ ನಿರೂಪಣೆ. ೨. = ವಿಚಾರಗೋಷ್ಠಿ. ~ಸರಣಿ = ಆಲೋಚನೆಯ ರೀತಿ; ವಿಚಾರಧಾರೆ.
ವಿಚಾರಣೆ (ನಾ). ೧. ಪರೀಕ್ಷೆ; ಶೋಧನೆ. ೨. ಪ್ರಶ್ನಿಸುವಿಕೆ; ಕೇಳುವಿಕೆ. ೩. ನ್ಯಾಯಾಲಯದಲ್ಲಿ ನಡೆಯುವ ತನಿಖೆ.
ವಿಚಾರವಂತ (ನಾ). ವಿವೇಕಶಾಲಿ; ವಿಚಾರಶೀಲ.
ವಿಚಿಕಿತ್ಸಕ (ಗು). ಸಂಶಯವನ್ನು ವ್ಯಕ್ತಪಡಿಸುವ; ಶಂಕೆಯಿಂದ ಕೂಡಿದ.
ವಿಚಿಕಿತ್ಸನ = ವಿಚಿಕಿತ್ಸೆ.
ವಿಚಿಕಿತ್ಸೆ (ನಾ). ಶಂಕೆ; ಸಂಶಯ.
ವಿಚಿತ್ರ (ನಾ). ೧. ಆಶ್ಚರ್ಯ; ಬೆರಗು. ೨. ವಿಲಕ್ಷಣವಾದುದು. (ಗು). ೩. ಆಶ್ಚರ್ಯಕರವಾದ. ೪. ಅನೇಕ ಬಣ್ಣಗಳಿಂದ ಕೂಡಿದ. ೫. ನಾನಾ ಬಗೆಯ. ೬. ಸುಂದರವಾದ. ೭. ಅವಲಕ್ಷಣವಾದ.
ವಿಚೇಷ್ಟೆ (ನಾ). ನಡವಳಿಕೆ; ವರ್ತನೆ.
ವಿಚ್ಛಾಯ (ನಾ). ೧. ರತ್ನ; ಮಣಿ. ೨. ಪಕ್ಷಿಯ ನೆರಳು. (ಗು). ೩. ನೆರಳು ಇಲ್ಲದ. ೪. ನಿಸ್ತೇಜವಾದ; ಕಾಂತಿಹೀನವಾದ.
ವಿಚ್ಛಿತ್ತಿ (ನಾ). ಬಿರುಕು; ಒಡಕು.
ವಿಚ್ಛಿದ್ರ (ಗು). ಚೂರುಚೂರಾದ; ಒಡೆದ.
ವಿಚ್ಛಿನ್ನ (ನಾ). ೧. ಅಗಲುವಿಕೆ. (ಗು). ೨. ಬೇರೆಬೇರೆಯಾದ; ಒಡೆದ. ೩. ನಾಶಮಾಡಲ್ಪಟ್ಟ. ೪. ಮುರಿದ; ತುಂಡರಿಸಿದ.

ವಿಚ್ಛುರಿತ (ಗು). ಬಳಿದ ; ಲೇಪಿಸಿದ.

ವಿಚ್ಛೇದ (ನಾ). ೧. ತುಂಡುಮಾಡುವಿಕೆ ; ಮುರಿಯುವಿಕೆ. ೨. ಅಗಲಿಕೆ ; ತೊರೆಯುವಿಕೆ. ~ಇಸು = ೧. ನಾಶಗೊಳಿಸು ; ಕೊನೆಗಾಣಿಸು. ೨. ವಿಭಜಿಸು ; ಭಾಗ ಮಾಡು. ೩. ಬೇರೆಯಾಗು.

ವಿಚ್ಛೇದನ = ವಿಚ್ಛೇದ.

ವಿಜನ (ಗು). ಜನವಿಲ್ಲದ ; ನಿರ್ಜನವಾದ.

ವಿಜಯ (ನಾ). ೧. ಗೆಲವು ; ಯಶಸ್ಸು. ೨. ಜಯಶಾಲಿಯಾದವನು ; ವಿಜಯಿ. ೩. ವೈಕುಂಠದ ದ್ವಾರಪಾಲಕರಲ್ಲಿ ಒಬ್ಬ. ೪. ಅರುವತ್ತು ಸಂವತ್ಸರಗಳಲ್ಲಿ ಒಂದು. ~ಉತ್ಸವ = ಗೆಲವು ದೊರೆತಾಗ ಆಚರಿಸುವ ಸಮಾರಂಭ. ~ದಶಮಿ = ಆಶ್ವಯುಜ ಶುದ್ಧದಶಮಿ ಮತ್ತು ಅಂದು ಆಚರಿಸುವ ಹಬ್ಬ ; ನವರಾತ್ರಿಯ ಕೊನೆಯ ದಿನ. ~ಪ್ರಸ್ಥಾನ = ವಿಜಯಯಾತ್ರೆ. ~ಯಾತ್ರೆ = ಗೆಲವನ್ನು ಗಳಿಸುವುದಕ್ಕಾಗಿ ಕೈಗೊಳ್ಳುವ ಪ್ರಯಾಣ ; ಜೈತ್ರಯಾತ್ರೆ.

ವಿಜಯಿ (ನಾ). ಜಯಶಾಲಿ ; ಗೆಲವನ್ನು ಪಡೆದವನು.

ವಿಜಾತಿ (ನಾ). ೧. ಬೇರೆಯ ಜಾತಿ ; ಅನ್ಯಜಾತಿ. ೨. ನೀಚಜಾತಿ ; ಹೀನಕುಲ. ೩. ಪಕ್ಷಿಕುಲ.

ವಿಜಾತೀಯ (ಗು). ಬೇರೆ ವರ್ಗದ ; ಭಿನ್ನ ಜಾತಿಯ.

ವಿಜಿಗೀಷು (ನಾ). ಜಯವನ್ನು ಬಯಸುವವನು.

ವಿಜೃಂಭ (ನಾ). ೧. ಪ್ರದರ್ಶನ ; ಆಡಂಬರ. ೨. ಹೆಚ್ಚಳ ; ಆಧಿಕ್ಯ.

ವಿಜೃಂಭಣ ೧. = ವಿಜೃಂಭ. ೨. ಬಿರಿಯುವಿಕೆ; ಅರಳುವಿಕೆ. ೩. ಆಕಳಿಸುವಿಕೆ ; ಆಗುಳಿಕೆ.

ವಿಜೃಂಭಣೆ ೧. = ವಿಜೃಂಭ. ೨. ಶೌರ್ಯ ; ಸಾಹಸ.

ವಿಜೃಂಭಿಸು (ಕ್ರಿ). ೧. ಶೋಭಿಸು ; ಹೊಳೆ. ೨. ಹರಡು ; ವಿಸ್ತರಿಸು. ೩. ಅರಳು ; ವಿಕಸಿಸು. ೪. ಆಕಳಿಸು.

ವಿಜೇತ (ನಾ). ೧. ಜಯಶಾಲಿ ; ವಿಜಯಿ. (ಗು). ೨. ಜಯಿಸಿದ ; ಗೆದ್ದ.

ವಿಜ್ಞ (ನಾ). ವಿದ್ವಾಂಸ ; ಪಂಡಿತ.

ವಿಜ್ಞಾನ (ನಾ). ೧. ಜ್ಞಾನ. ೨. ವಿಶೇಷವಾದ ಜ್ಞಾನ, -ತಿಳಿವಳಿಕೆ. ೩. ಶಾಸ್ತ್ರ. ೪. ಭೌತ, ರಸಾಯನ ಮುಂತಾದುವನ್ನು ಕುರಿತ ಶಾಸ್ತ್ರ. ೫. ಆಗಮಗಳಲ್ಲಿ ಒಂದು ಭೇದ.

ವಿಜ್ಞಾನಿ (ನಾ). ೧. ವಿಶೇಷಜ್ಞಾನವುಳ್ಳವನು. ೨. ವಿಜ್ಞಾನವನ್ನು ಬಲ್ಲವನು ; ವೈಜ್ಞಾನಿಕ.

ವಿಜ್ಞಾಪನ (ನಾ). ೧. ಮನವಿ ; ಬಿನ್ನಹ. ೨. ವಿವರಣೆ ; ಹೇಳಿಕೆ.

ವಿಜ್ಞಾಪನೆ = ವಿಜ್ಞಾಪನ.

ವಿಜ್ಞಾಪಿಸು (ಕ್ರಿ). ವಿನಯದಿಂದ ಕೇಳಿಕೊಳ್ಳು; ಬಿನ್ನವಿಸು.

ವಿಟ (ನಾ). ಕಾಮುಕ ; ಜಾರ. ~ಚೇಷ್ಟೆ = ಕಾಮುಕನ ಚೇಷ್ಟೆ.

ವಿಟಂಕ (ನಾ). ೧. ಗೂಡು ; ಪಂಜರ. ೨. ತುದಿ ; ಅಗ್ರ.

ವಿಟಪ (ನಾ). ೧. ಮರದ ಕೊಂಬೆ, -ಟೊಂಗೆ. ೨. ಹೊದರು; ಪೊದೆ. ೩. ಚಿಗುರು; ಕುಡಿ.

ವಿಟಪಿ (ನಾ). ೧. ಮರ. ೨. ಅತ್ತಿಯ ಮರ.

ವಿಟಾಳ (ನಾ). ಅಪವಿತ್ರತೆ ; ಅಶುದ್ಧತೆ. ~ಇಸು = ೧. ಮಲಿನವಾಗು. ೨. ಅಪವಿತ್ರ ಮಾಡು ; ಹೊಲೆಗೆಡಿಸು.

ವಿಟ್ಟಿ (ನಾ). ಸಂಬಳವಿಲ್ಲದ ಕೆಲಸ ; ಬಿಟ್ಟಿ ಕೆಲಸ.

ವಿಟ್ಟೆ (ನಾ). ಹಿಕ್ಕೆ ; ವಿಷ್ಠೆ.

ವಿಡ (ನಾ). ೧. ಒಂದು ಬಗೆಯ ಕೃತಕಲವಣ. ೨. ಚೂರು ; ತುಂಡು.

ವಿಡಂಗ (ನಾ). ಕ್ರಿಮಿನಾಶಕವಾದ ಒಂದು ಔಷಧಿ.

ವಿಡಂಬ = ವಿಡಂಬನ. ~ಇಸು = ೧. ಅಣಕಿಸು ; ಹಾಸ್ಯಮಾಡು. ೨. ಹೀಯಾಳಿಸು ; ನಿಂದಿಸು. ೩. ಮೋಸಗೊಳಿಸು ; ವಂಚಿಸು. ೪. ವಿಜೃಂಭಿಸು ; ಪ್ರಕಾಶಿಸು.

ವಿಡಂಬನ (ನಾ). ೧. ಅನುಕರಣೆ. ೨. ಸೋಗು; ನಟನೆ. ೩. ಪ್ರದರ್ಶನ ; ತೋರಿಕೆ ; ಆಡಂಬರ. ೪. ಪರಿಹಾಸ್ಯ ; ಅಣಕ. ೫. ತಿರಸ್ಕಾರ ; ಅಲ್ಲಗಳೆಯುವಿಕೆ. ೬. ಠಕ್ಕು ; ಮೋಸ. ೭. ಕಷ್ಟ ; ಪೀಡೆ. ~ಗೀತ = ಹಾಸ್ಯಗೀತ ; ಅಣಕವಾಡು. ~ಚಿತ್ರ = ವ್ಯಂಗ್ಯಚಿತ್ರ ; ನಗೆಚಿತ್ರ.

ವಿಡಂಬನೆ = ವಿಡಂಬನ.

ವಿಡಾ (ನಾ). ಬೀಡ ; ವೀಳೆಯ.

ವಿಡಾಯ (ನಾ). ೧. ತೋರಿಕೆ ; ಆಡಂಬರ. ೨. ಹೆಚ್ಚಳ ; ಆಧಿಕ್ಯ. ೩. ಶಕ್ತಿ ; ಬಲ.

ವಿಡಾಯಿ = ವಿಡಾಯ. ~ಕೆ(ಗೆ)ಡು = ಶಕ್ತಿಗುಂದು ; ಬಲಹೀನವಾಗು.

ವಿಡೂರಜ (ನಾ). ನವರತ್ನಗಳಲ್ಲಿ ಒಂದು ; ವೈಡೂರ್ಯ.

ವಿಡ್ವರ (ನಾ). ೧. ಹಗೆ ; ವೈರ. ೨. ಆಘಾತ; ಹಿಂಸೆ. ೩. ಅಡ್ಡಿ; ತೊಂದರೆ.

ವಿತಂಡ (ನಾ). ೧. ಅರ್ಥವಿಲ್ಲದ ಮಾತು ; ಒಣಹರಟೆ. ೨. ಒಂದು ಬಗೆಯ ಅಗುಳಿ. ೩. ಆನೆ ; ಕರಿ. ~ವಾದ = ಅಸಂಬದ್ಧವಾದ ಚರ್ಚೆ ; ವಿತರ್ಕ. ~ವಾದಿ = ಅಸಂಬದ್ಧವಾಗಿ ವಾದಿಸುವವನು.

ವಿತಂಡೆ (ನಾ). ೧. ಟೀಕೆ ; ವಿಮರ್ಶೆ. ೨. ಕಟುವಿಮರ್ಶೆ ; ದೋಷೈಕದೃಷ್ಟಿಯಿಂದ ಮಾಡಿದ ಟೀಕೆ ; ನಿಂದೆ.

ವಿತಂಸು (ನಾ). ವಿಧವೆ.

ವಿತಂದ್ರ (ಗು). ಆಯಾಸಗೊಳ್ಳದ ; ಶ್ರಮರಹಿತ.

ವಿತತ (ನಾ). ೧. ತಂತಿವಾದ್ಯ. (ಗು). ೨. ಹರಡಿದ ; ಹಬ್ಬಿದ. ೩. ಶ್ರೇಷ್ಠವಾದ.

ವಿತತಿ (ನಾ). ೧. ವಿಸ್ತಾರ ; ಹರವು. ೨. ಸಮೂಹ ; ಗುಂಪು. ೩. ಗೊಂಚಲು ; ಜೊಂಪೆ.

ವಿತಥ (ಗು). ೧. ಅಸತ್ಯವಾದ ; ನಿಜವಲ್ಲದ. ೨. ವ್ಯರ್ಥವಾದ ; ನಿಷ್ಫಲವಾದ.

ವಿತರಣ (ನಾ). ೧. ದಾಟುವುದು ; ಪಾರಾಗುವುದು. ೨. ಔದಾರ್ಯ ; ಉದಾರತೆ. ೩. ಕೊಡುಗೆ ; ದಾನ. ೪. ತ್ಯಾಗ. ೫. ಓರಣ ; ಅಚ್ಚುಕಟ್ಟು. ೬. ಹಂಚುವಿಕೆ. ೭. ಬಳಕೆ ; ಉಪಯೋಗ.

ವಿತರಣೆ = ವಿತರಣ.

ವಿತರಿಸು (ಕ್ರಿ). ೧. ದಾಟು ; ಪಾರಾಗು. ೨. ಹಂಚು.

ವಿತರ್ಕ (ನಾ). ೧. ವಿವಾದ ; ಚರ್ಚೆ. ೨. ಕಲ್ಪನೆ ; ಊಹೆ. ೩. ಶಂಕೆ ; ಸಂಶಯ.

ವಿತಲ(ಳ) (ನಾ). ಏಳು ಅಧೋಲೋಕಗಳಲ್ಲಿ ಒಂದು.

ವಿತಾನ (ನಾ). ೧. ಹಬ್ಬುವಿಕೆ ; ವಿಸ್ತಾರ. ೨. ಆಧಿಕ್ಯ ; ಹೆಚ್ಚಳ. ೩. ಸಮೂಹ ; ಮೊತ್ತ. ೪. ಮೇಲ್ಕಟ್ಟು. ೫. ಸಾಲು ; ಓಳಿ. ೬. ಯಜ್ಞ ; ಯಾಗ.

ವಿತಾನಕ (ನಾ). ಗುಂಪು ; ಸಮುದಾಯ.

ವಿತಾಳ (ನಾ). ೧. ಚಿಂತೆ ; ಅಳಲು. ೨. ಅಡೆತಡೆ ; ಪ್ರತಿಬಂಧ. ೩. ವಿಸ್ತಾರ ; ಹರವು. ~ಇಸು = ೧. ಹರಡು ; ಹಬ್ಬು. ೨. ಹೆಚ್ಚಾಗು ; ವೃದ್ಧಿಸು. ೩. ತಪ್ಪಿಹೋಗು ; ತಡೆಯುಂಟಾಗು. ೪. ಗರ್ವಿಸು; ಸೊಕ್ಕು. ೫. ತಲ್ಲೀನವಾಗು ; ಮುಳುಗು.

ವಿತೋಲನ (ನಾ). ಅಸ್ತವ್ಯಸ್ತತೆ.

ವಿತ್ತ (ನಾ). ೧. ಹಣ ; ಐಶ್ವರ್ಯ. (ಗು). ೨. ಪ್ರಸಿದ್ಧವಾದ ; ಕೀರ್ತಿ ಪಡೆದ. ೩. ವಿಮರ್ಶೆ ಮಾಡಲ್ಪಟ್ಟ. ೪. ಸಂಪಾದಿಸಿದ ; ಗಳಿಸಿದ. ೫. ಪರೀಕ್ಷಿಸಿದ ; ಶೋಧಿಸಿದ. ~ಅಧೀಶ = ವಿತ್ತಪ.

ವಿತ್ತಪ (ನಾ). ಕುಬೇರ.
ವಿತ್ತರ = ಬಿತ್ತರ.
ವಿತ್ತಿ (ನಾ). ೧. ಜ್ಞಾನ; ತಿಳಿವಳಿಕೆ. ೨. ವೃತ್ತಿ; ಉದ್ಯೋಗ.
ವಿತ್ಪನ್ನ (ನಾ). ೧. ಮೂಲಪುರುಷ; ಕಾರಣ ನಾದವನು. (ಗು). ೨. ಒದಗಿದ; ವ್ಯುತ್ಪನ್ನ.
ವಿತ್ರಸ್ತ (ಗು). ಅಂಜಿದ; ಹೆದರಿದ.
ವಿದಗ್ಧ (ನಾ). ೧. ತಿಳಿದವನು; ಪಂಡಿತ. (ಗು). ೨. ತಿಳಿದ; ಅರಿತ. ೩. ಸುಡಲ್ಪಟ್ಟ. ೪. ಬೇಯಿಸಿದ; ಪಕ್ವವಾದ. ೫. ಹಾಳಾದ; ನಾಶಗೊಂಡ. ೬. ಕಷ್ಟಕ್ಕೊಳಗಾದ; ನೊಂದ.
ವಿದಗ್ಧೆ (ನಾ). ೧.ಪ್ರೌಢೆ; ಜಾಣೆ; ಅನುಭವ ವುಳ್ಳವಳು. ೨. ನೊಂದವಳು; ದುಃಖಿತೆ.
ವಿದಲ(ಳ)ನ (ನಾ). ಒಡೆಯುವಿಕೆ; ಸೀಳುವಿಕೆ.
ವಿದಳಿಸು (ಕ್ರಿ). ೧. ಸೀಳು. ೨. ನಾಶಮಾಡು.
ವಿದಾಯ (ನಾ). ಬೀಳ್ಕೊಡುಗೆ.
ವಿದಾರಕ (ನಾ). ೧. ಸೀಳುವವನು; ಒಡೆಯುವವನು. ೨. ನಾಶಮಾಡುವವನು. ೩. ಸೀಳುವಿಕೆ; ಹೋಳುಮಾಡುವಿಕೆ. ೪. ಪ್ರವಾಹದ ಮಧ್ಯದಲ್ಲಿದ್ದು ಅದನ್ನು ವಿಭಾಗಿಸುವ ಮರ ಅಥವಾ ಬಂಡೆ. ೫. ಬತ್ತಿದ ನದಿಯಲ್ಲಿ ತೋಡಿದ ಹಳ್ಳ ಅಥವಾ ತಗ್ಗು; ಒರತೆ. (ಗು). ೬. ಹೋಳು ಮಾಡುವ; ಸೀಳುವ. ೭. ನಾಶಮಾಡುವ.
ವಿದಾರಣ (ನಾ). ೧. ಸೀಳುವಿಕೆ. ೨. ಕೊಲ್ಲುವಿಕೆ. ೩. ನಾಶಮಾಡುವವನು. ೪. ಕೊಲ್ಲುವವನು. ೫. ಯುದ್ಧ; ಕಾಳಗ. ೬. ಭೀಕರವಾದ ಕೊಲೆ; ಕಗ್ಗೊಲೆ. (ಗು). ೭. ವಿಭಾಗಿಸುವ; ಸೀಳುವ.
ವಿದಾರಿ (ನಾ). ೧. ನಾಶಮಾಡುವವನು. ೨. ಒಂದು ಜಾತಿಯ ಔಷಧಿ ಸಸ್ಯ. (ಗು). ೩. ಸೀಳುವ; ಒಡೆಯುವ.
ವಿದಾರಿಸು (ಕ್ರಿ). ೧. ಸೀಳು. ೨. ನಾಶಮಾಡು.
ವಿದಾಹ (ನಾ). ೧. ಸುಡುವಿಕೆ; ತಾಪ. ೨. ವಿಶೇಷವಾದ ದಾಹ; ಬಾಯಾರಿಕೆ.
ವಿದಿಕ್ಕು (ನಾ). ಎರಡು ದಿಕ್ಕುಗಳ ನಡುವಿನ ದಿಕ್ಕು; ಈಶಾನ್ಯ, ವಾಯುವ್ಯ ಮುಂತಾದ ಉಪದಿಕ್ಕು.
ವಿದಿತ (ನಾ). ೧. ಪ್ರಸಿದ್ಧವಾದುದು; ಎಲ್ಲರಿಗೂ ತಿಳಿದುದು. (ಗು). ೨. ತಿಳಿದ; ಬಲ್ಲ. ೩. ಪ್ರಸಿದ್ಧವಾದ; ಜನಜನಿತವಾದ.
ವಿದೀರ್ಣ (ಗು). ೧. ಹರಿದ; ಸೀಳಿದ. ೨. ಬಿರಿದ; ಅರಳಿದ.
ವಿದುರ (ನಾ). ೧. ತಿಳಿದವನು; ವಿದ್ವಾಂಸ. ೨.ಪಾಂಡುರಾಜನ ತಮ್ಮ. (ಗು). ೩. ತಿಳಿದ; ನಿಷ್ಣಾತ.
ವಿದುಷ (ನಾ). ಪಂಡಿತ; ವಿದ್ವಾಂಸ.
ವಿದುಷಿ (ನಾ). ಪಾಂಡಿತ್ಯವನ್ನು ಹೊಂದಿದವಳು; ಪಂಡಿತೆ.
ವಿದೂರ (ನಾ). ೧. ಬಹಳದೂರ; ಅತಿದೂರ. (ಗು). ೨. ಬೇರೆಯಾದ; ಭಿನ್ನವಾದ. ೩. ರಹಿತವಾದ; ಇಲ್ಲದ.
ವಿದೂಷಕ (ನಾ). ೧. ಹಾಸ್ಯಗಾರ; ವಿನೋದಗಾರ; ಸಬ್ಬವಕಾರ. ೨. ಸಂಸ್ಕೃತ ನಾಟಕಗಳಲ್ಲಿ ಬರುವ ನಾಯಕನ ಮಿತ್ರರಲ್ಲಿ ಒಬ್ಬ. ೩. ದೋಷವನ್ನುಂಟುಮಾಡುವವನು.
ವಿದೇಶ (ನಾ). ಬೇರೊಂದು ನಾಡು; ಪರದೇಶ.
ವಿದೇಶಿ (ನಾ). ೧.ಬೇರೆ ದೇಶದಿಂದ ಬಂದವನು; ಪರದೇಶಿ. (ಗು). ೨. ಬೇರೆ ದೇಶಕ್ಕೆ ಸೇರಿದ, –ಸಂಬಂಧಿಸಿದ. ~ವಸ್ತು=ಬೇರೆ ದೇಶದಲ್ಲಿ ತಯಾರಾದ ವಸ್ತು.
ವಿದೇಹ (ನಾ). ೧. ದೇಹವಿಲ್ಲದವನು; ಕಾಮ; ಮನ್ಮಥ. ೨. ಒಂದು ದೇಶದ ಹೆಸರು. (ಗು). ೩. ದೇಹವಿಲ್ಲದ; ಅಮೂರ್ತ.
ವಿದ್ದೆ = ವಿದ್ಯೆ.

ವಿದ್ಧ (ನಾ). ೧. ಗಾಯ; ವ್ರಣ. ೨. ಗಾಯಗೊಂಡವನು. ೩. ಆಕೃತಿ; ಆಕಾರ. ೪. ಚಿತ್ರಣ; ಚಿತ್ರಿಸುವಿಕೆ. (ಗು). ೫. ಚುಚ್ಚಿದ; ಇರಿದ. ೬. ಹೊಡೆದ; ಬಡಿದ. ೭. ಗಾಯಗೊಂಡ. ೮. ಸಾಮ್ಯವಿರುವ; ಹೋಲುವ.

ವಿದ್ಯ = ವಿದ್ಯೆ.

ವಿದ್ಯಮಾನ (ನಾ). ೧. ವಸ್ತುಸ್ಥಿತಿ. ೨. ಸಮಾಚಾರ; ಸಂಗತಿ.

ವಿದ್ಯಾಧರ (ನಾ). ೧. ಪಂಡಿತ; ವಿದ್ಯಾವಂತ. ೨. = ಬಿಜ್ಜೋದರ.

ವಿದ್ಯಾಧರಿ = ಬಿಜ್ಜೋದರಿ.

ವಿದ್ಯಾಭ್ಯಾಸ (ನಾ). ಓದು; ಕಲಿಕೆ.

ವಿದ್ಯಾರ್ಥಿ (ನಾ). ವಿದ್ಯೆಯನ್ನು ಬಯಸುವವನು; ಶಿಷ್ಯ. ~ನಿಲಯ = ಓದುವವರ ಸಲುವಾಗಿ ಕಟ್ಟಿದ ಊಟದ ಮತ್ತು ವಸತಿಯ ಗೃಹ. ~ವೇತನ = ವಿದ್ಯಾರ್ಥಿಗೆ ಕೊಡುವ ಸಹಾಯಧನ.

ವಿದ್ಯಾಲಯ (ನಾ). ಶಾಲೆ.

ವಿದ್ಯಾವಂತ (ನಾ). ಸುಶಿಕ್ಷಿತ; ಕಲಿತವನು.

ವಿದ್ಯಾಶಾಲೆ = ವಿದ್ಯಾಲಯ.

ವಿದ್ಯಾಶುಲ್ಕ (ನಾ). ಓದಿಗಾಗಿ ವಿದ್ಯಾರ್ಥಿಯು ತೆರುವ ಹಣ.

ವಿದ್ಯುಚ್ಛಕ್ತಿ (ನಾ). ವಿದ್ಯುತ್ತಿನಿಂದ ಉಂಟಾಗುವ ಶಕ್ತಿ; ಎಲೆಕ್ಟ್ರಿಸಿಟಿ.

ವಿದ್ಯುತ್ಕೋಶ (ನಾ). ವಿದ್ಯುತ್ತನ್ನು ಹಿಡಿದಿಟ್ಟಿರುವ ಕೋಶ; ವಿದ್ಯುತ್ಪಾತ್ರೆ.

ವಿದ್ಯುತ್ತು ೧. = ವಿದ್ಯುಚ್ಛಕ್ತಿ. ೨. ಮಿಂಚು.

ವಿದ್ಯೆ (ನಾ). ೧. ಜ್ಞಾನ; ತಿಳಿವಳಿಕೆ. ೨. ಓದು; ಕಲಿಕೆ.

ವಿದ್ಯೋತ (ಗು). ೧. ಹೊಳೆಯುವ; ಪ್ರಕಾಶಿಸುವ. ೨. ಪ್ರಸಿದ್ಧವಾದ; ಕೀರ್ತಿ ಪಡೆದ.

ವಿದ್ರಾವಕ (ಗು). ಕರಗುವ.

ವಿದ್ರಾವಣ (ನಾ). ೧. ಓಡಿಸುವಿಕೆ; ಬೆನ್ನಟ್ಟುವಿಕೆ. ೨. ಕರಗಿಸುವಿಕೆ.

ವಿದ್ರುತ (ನಾ). ನೀರಾದ ವಸ್ತು; ದ್ರವ.

ವಿದ್ರುಮ (ನಾ). ನವರತ್ನಗಳಲ್ಲಿ ಒಂದು; ಹವಳ. ~ಲತೆ = ೧. ಹವಳದ ಬಳ್ಳಿ. ೨. ಒಂದು ಬಗೆಯ ಸುಗಂಧದ್ರವ್ಯ.

ವಿದ್ರೂಪ (ನಾ). ೧. ವಿಕಾರಹೊಂದಿದ ರೂಪ; ಕುರೂಪ. (ಗು). ೨. ವಿಕಾರ ರೂಪಿನ; ಕುರೂಪದ.

ವಿದ್ರೋಹ (ನಾ). ೧. (ವಿಶೇಷವಾದ) ದ್ರೋಹ. ೨. ದಂಗೆ; ಬಂಡಾಯ.

ವಿದ್ವತ್ತು (ನಾ). ಪಾಂಡಿತ್ಯ; ಜ್ಞಾನ.

ವಿದ್ವಾಂಸ (ನಾ). ಪಂಡಿತ; ತಿಳಿದವನು.

ವಿದ್ವಿಷ (ನಾ). ೧. ಹಗೆತನ; ಶತ್ರುತ್ವ. ೨. ವೈರಿ; ಹಗೆ.

ವಿದ್ವಿಷ್ಟ ೧. = ವಿದ್ವಿಷ. (ಗು). ೨. ದ್ವೇಷಿಸಿದ.

ವಿದ್ವೇಷ (ನಾ). ಹಗೆತನ; ವೈರ.

ವಿದ್ವೇಷಿ (ನಾ). ಪ್ರಬಲವೈರಿ; ಕಡುಹಗೆ.

ವಿಧ (ನಾ). ರೀತಿ; ಬಗೆ.

ವಿಧರ್ಮ (ನಾ). ೧. ಪರಧರ್ಮ; ಅನ್ಯಧರ್ಮ. ೨. ಭಿನ್ನಗುಣ; ವಿರುದ್ಧಗುಣ.

ವಿಧರ್ಮಿ (ನಾ). ೧. ಬೇರೆ ಜಾತಿಯವನು. ೨. ಪರಮತದವನು.

ವಿಧವತೆ (ನಾ). ಗಂಡನಿಲ್ಲದಿರುವಿಕೆ; ವೈಧವ್ಯ.

ವಿಧವೆ (ನಾ). ಗಂಡನಿಲ್ಲದವಳು; ವಿತಂತು.

ವಿಧಾತ (ನಾ). ವಿಧಿ; ಬ್ರಹ್ಮ.

ವಿಧಾತೃ ೧. = ವಿಧಾತ. ೨. ಸೃಷ್ಟಿಸುವವನು.

ವಿಧಾನ (ನಾ). ೧. ನಿಯಮ; ನಿಬಂಧನೆ; ವಿಧಿ. ೨. ರೀತಿ; ಕ್ರಮ. ೩. ನಿರ್ಮಾಣ; ರಚನೆ. ೪. ತಂತ್ರ; ಉಪಾಯ. ೫. ಶೈಲಿ; ಸರಣಿ. ~ಪರಿಷತ್ತು = ರಾಜ್ಯದ ಶಾಸನ ಮಂಡಲ. ~ಮಂಡಲ = ವಿಧಾನಪರಿಷತ್ತು. ~ಸಭೆ = ರಾಜ್ಯದ ಚುನಾಯಿತ ಶಾಸಕರ ಮಂಡಲಿ. ~ಸೌಧ = ವಿಧಾನಸಭೆಯು

ಸೇರುವ ಮಹಲು ; ಸರ್ಕಾರದ ಕಾರ್ಯಾಲಯ.

ವಿಧಾಯಕ (ನಾ). ೧. ನಾಯಕ; ಮುಂದಾಳು. ೨. ನಿಯಮ ; ಶಾಸನ. (ಗು). ೩. ವಿಧಿಸುವ. ೪. ರಚನಾತ್ಮಕ ; ನಿಯಾಮಕ.

ವಿಧಿ (ನಾ). ೧. ನಿಯಮ ; ಕಟ್ಟಳೆ ; ಆಜ್ಞೆ. ೨. ವೇದ ; ಶ್ರುತಿ. ೩. ಸೃಷ್ಟಿಕರ್ತ ; ಬ್ರಹ್ಮ. ೪. ಅದೃಷ್ಟ; ಭಾಗ್ಯ. ೫. ಅಂತ್ಯ; ಪರ್ಯವಸಾನ. ~ಇಸು = ಆಜ್ಞೆಮಾಡು ; ಅಪ್ಪಣೆಮಾಡು. ~ಲಿಖಿತ = ಹಣೆಬರಹ. ~ವಶ = ೧. ಅದೃಷ್ಟವಶವಾದ ; ದೈವವಶವಾದ. ೨. ಸಾವಿಗೀಡಾದ ; ಅವಸಾನ ಹೊಂದಿದ. ~ವಾಕ್ಯ = ೧. ವೇದವಚನ ; ಶ್ರುತಿವಚನ. ೨. ನಿಯಮ ; ಆಜ್ಞೆ.

ವಿಧು (ನಾ). ೧. ಚಂದ್ರ; ಇಂದು. ೨. ವಿಷ್ಣು; ಕೃಷ್ಣ. ೩. ಪಚ್ಚಕರ್ಪೂರ. ~ಬಿಂಬ = ಚಂದ್ರಮಂಡಲ ; ಚಂದ್ರಬಿಂಬ. ~ಮೌಲಿ(ಳಿ) = ಚಂದ್ರನನ್ನು ತಲೆಯಲ್ಲಿ ಧರಿಸಿರುವವನು ; ಶಿವ.

ವಿಧುಂತುದ (ನಾ). ಚಂದ್ರನನ್ನು ನುಂಗುವವನು ; ರಾಹು.

ವಿಧುಧರ (ನಾ). ಚಂದ್ರನನ್ನು ಧರಿಸಿರುವವನು; ಶಿವ.

ವಿಧುರ (ನಾ). ೧. ಅಗಲಿಕೆ ; ವಿರಹ. ೨. ವಿರುದ್ಧ ; ಪ್ರತಿಕೂಲ. ೩. ಆಪತ್ತು ; ಗಂಡಾಂತರ. ೪. ಹೆಂಡತಿಯನ್ನು ಕಳೆದುಕೊಂಡವನು. (ಗು). ೫. ಅಗಲಿದ ; ಬೇರ್ಪಟ್ಟ. ೬. ವಿರುದ್ಧವಾದ. ೭. ತೊಂದರೆಗೊಳಗಾದ.

ವಿಧುರೆ (ನಾ). ಕಷ್ಟಕ್ಕೊಳಗಾದವಳು ; ದುಃಖಿನಿ.

ವಿಧೂತ (ಗು). ೧. ಅಲುಗಾಡಿಸಲ್ಪಡುವ ; ನಡುಗಿಸುವ. ೨. ಕಳಚಿದ ; ಬಿಚ್ಚಿದ. ೩. ತೊಳೆಯಲ್ಪಟ್ಟ.

ವಿಧೂಮ (ಗು). ಸ್ವಚ್ಛವಾದ ; ನಿಷ್ಕಳಂಕ.

ವಿಧೃತ (ಗು). ೧. ಪ್ರತ್ಯೇಕಿಸಿದ ; ದೂರ ಮಾಡಿದ. ೨. ಹಿಡಿಯಲ್ಪಟ್ಟ ; ಗ್ರಹಿಸಿದ.

ವಿಧೆ (ನಾ). ೧. ನಿಯಮ ; ತತ್ತ್ವ. ೨. ರೀತಿ; ಬಗೆ. ೩. ರೂಪ ; ಆಕಾರ. ೪. ಕ್ರಿಯೆ ; ಕರ್ಮ. ೫. ಸಿರಿವಂತಿಕೆ ; ಭಾಗ್ಯ. ೬. ಮಜೂರಿ ; ಕೂಲಿ. ೭. ಪ್ರಾಣಿಗಳ ಆಹಾರ ; ಮೇವು.

ವಿಧೇಯ (ನಾ). ೧. ಆಜ್ಞೆಯನ್ನು ಪಾಲಿಸುವವನು. (ಗು). ೨. ಮಾಡಬೇಕಾದ ; ಮಾಡಲು ಯೋಗ್ಯವಾದ. ೩. ಆಜ್ಞೆಗೆ ಒಳಪಟ್ಟ. ೪. ನಮ್ರತೆಯಿಂದ ಕೂಡಿದ.

ವಿಧೇಯಕ (ನಾ). ೧. ಕಾನೂನಿನ ಪೂರ್ವಪಾಠ. ೨. ನಿಯಮ.

ವಿಧೇಯತೆ (ನಾ). ನಮ್ರತೆ ; ವಿನಯ.

ವಿಧ್ಯರ್ಥ (ನಾ). ಆಜ್ಞೆ, ಅಪ್ಪಣೆ ಮೊದಲಾದ ಅರ್ಥಗಳನ್ನು ಸೂಚಿಸುವ ವಾಕ್ಯ.

ವಿಧ್ಯುಕ್ತ (ಗು). ೧. ವೇದಶಾಸ್ತ್ರ ಸಮ್ಮತವಾದ; ವಿಧಿವತ್ತಾದ. ೨. ನಿಯಮಾನುಸಾರವಾದ.

ವಿಧ್ವಂಸ (ನಾ). ನಾಶ ; ಹಾನಿ ; ಹಾಳು.

ವಿಧ್ವಂಸಕ (ನಾ). ೧. ನಾಶಮಾಡುವವನು ; ಹಾಳುಮಾಡುವವನು. (ಗು). ೨. ಹಾಳುಮಾಡುವ ; ನಾಶಕಾರಕ.

ವಿಧ್ವಂಸನ = ವಿಧ್ವಂಸ.

ವಿನಂತಿ (ನಾ). ಬಿನ್ನಹ ; ಕೋರಿಕೆ. ~ಇಸು = ಬೇಡಿಕೊಳ್ಳು ; ಕೋರು ; ಪ್ರಾರ್ಥಿಸು.

ವಿನತ (ನಾ). ೧. ನಮ್ರನಾದವನು ; ನಿಗರ್ವಿ. (ಗು). ೨. ಬಾಗಿದ ; ನಮ್ರವಾದ.

ವಿನತಿ (ನಾ). ೧. ನಮ್ರತೆ ; ಸೌಜನ್ಯ. ೨. ತಲೆಬಾಗಿಸುವಿಕೆ ; ಮಣಿಯುವಿಕೆ.

ವಿನಮ್ರ (ಗು). ಬಾಗಿದ ; ಮಣಿದ.

ವಿನಯ (ನಾ). ೧. ನಮ್ರತೆ ; ಸೌಜನ್ಯ. ೨. ಮಾರ್ಗದರ್ಶನ ; ಮುನ್ನಡೆಸುವಿಕೆ.

~ಪ(ವ)ತ್ರಿಕೆ = ವಿಜ್ಞಾಪನಾ ಪತ್ರ; ಬಿನ್ನವತ್ತಳೆ.

ವಿನಷ್ಟ (ನಾ). ೧. ನಾಶ; ಹಾಳು. (ಗು). ೨. ನಾಶಹೊಂದಿದ. ೩. ಅದೃಶ್ಯವಾದ.

ವಿನಾ (ಅ). ಹೊರತು; ಅಲ್ಲದೆ. ~ಇ(ಯಿ)ಸು = ೧. ಹೊರತಾಗು; ಅಪವಾದವಾಗು. ೨. ಸೋಡಿಬಿಡು; ರಿಯಾಯಿತಿ ತೋರಿಸು.

ವಿನಾಯಕ (ನಾ). ೧. ಬೆನಕ; ಗಣೇಶ. ೨. ಗುರು. ೩. ಬುದ್ಧ. ೪. ಜಿನ.

ವಿನಾಯತಿ = ವಿನಾಯಿತಿ.

ವಿನಾಯಿತಿ (ನಾ). ೧. ಕಡಮೆ ಮಾಡುವಿಕೆ; ರಿಯಾಯಿತಿ. ೨. ವಿಕಲ್ಪ; ಅಪವಾದ.

ವಿನಾಶ (ನಾ). ಸರ್ವನಾಶ.

ವಿನಿಮಯ (ನಾ). ೧. ಒಂದು ಪದಾರ್ಥಕ್ಕೆ ಬದಲಾಗಿ ಮತ್ತೊಂದನ್ನು ಕೊಡುವಿಕೆ; ಅದಲು ಬದಲು. ೨. ಒತ್ತೆ ಇಡುವಿಕೆ; ಅಡವು. ~ಇಸು=ಒಂದಕ್ಕೆ ಬದಲಾಗಿ ಮತ್ತೊಂದು ವಸ್ತುವನ್ನು ಕೊಡು ಅಥವಾ ತೆಗೆದುಕೊಳ್ಳು.

ವಿನಿಯಮ (ನಾ). ತಡೆ; ನಿರ್ಬಂಧ.

ವಿನಿಯೋಗ (ನಾ). ೧. ಬೇರ್ಪಡಿಸುವಿಕೆ; ವಿಂಗಡಣೆ. ೨. ಹಂಚಿಕೆ; ಉಪಾಯ. ೩. ಅಧಿಕಾರ; ಹುದ್ದೆ. ೪. ವೆಚ್ಚ; ವ್ಯಯ. ೫. ಉಪಯೋಗ; ಬಳಕೆ. ೬. ಕೆಲಸ; ಕಾರ್ಯ. ~ಇಸು = ೧. ಬಳಸು; ಉಪಯೋಗಿಸು. ೨. ನಿಯುಕ್ತಗೊಳಿಸು; ನೇಮಕಮಾಡು.

ವಿನಿರ್ಮಲ(ಳ)(ಗು). ಶುದ್ಧವಾದ; ಸ್ವಚ್ಛವಾದ.

ವಿನಿರ್ಮಿಸು (ಕ್ರಿ). ರಚಿಸು; ಸೃಷ್ಟಿಸು.

ವಿನಿಶ್ಚಲ(ಳ) (ಗು). ಸ್ಥಿರವಾದ; ಅಲುಗಾಡದ.

ವಿನಿಷ್ಠುರ (ಗು). ಕಠಿನವಾದ; ಬಿರುಸಾದ.

ವಿನಿಹತ (ಗು). ೧. ಹೊಡೆದ; ಬಡಿದ. ೨. ನಾಶಮಾಡಿದ. ೩. ಸಂಹಾರವಾದ; ಕೊಲ್ಲಲ್ಪಟ್ಟ.

ವಿನಿಹಿತ (ಗು). ಇಟ್ಟ; ಇಡಲ್ಪಟ್ಟ.

ವಿನೀತ (ನಾ). ೧. ಸರಳ; ನಿರಾಡಂಬರ ವ್ಯಕ್ತಿ. ೨. ಪಳಗಿಸಿದ ಕುದುರೆ. ೩. ವರ್ತಕ; ವ್ಯಾಪಾರಿ. (ಗು). ೪. ನಮ್ರತೆಯಿಂದ ಕೂಡಿದ; ಸೌಜನ್ಯದಿಂದ ಕೂಡಿದ. ೫. ಸುಶಿಕ್ಷಿತವಾದ; ಚೆನ್ನಾಗಿ ಪಳಗಿಸ. ೬. ಮಾರ್ಗದರ್ಶನ ಮಾಡಿದ; ದಾರಿ ತೋರಿದ. ೭. ನೆರವೇರಿಸಿದ; ಪೂರೈಸಿಸ. ೮. ಆತ್ಮಸಂಯಮವುಳ್ಳ; ಮನೋನಿಗ್ರಹವುಳ್ಳ.

ವಿನೀತಿ (ನಾ). ೧. ಒಳ್ಳೆಯ ಸ್ವಭಾವ; ಸದ್ಗುಣ. ೨. ಗೌರವ; ಆದರ.

ವಿನುತ (ಗು). ಹೊಗಳಲ್ಪಟ್ಟ; ಸ್ತುತಿಗೊಂಡ.

ವಿನೂತ = ವಿನುತ.

ವಿನೂತ್ನ (ಗು). ಹೊಸದಾದ; ನೂತನ.

ವಿನೇಯ (ನಾ). ೧. ಸಜ್ಜನ; ಶಿಷ್ಟ. ೨. ಶಿಷ್ಯ; ವಿದ್ಯಾರ್ಥಿ. ೩. ಜಿನಭಕ್ತ. (ಗು). ೪. ಸೌಜನ್ಯದಿಂದ ಕೂಡಿದ. ೫. ಮಾರ್ಗದರ್ಶನ ಮಾಡಲ್ಪಟ್ಟ. ೬. ಆಳಲು ತಕ್ಕುದಾದ.

ವಿನೋದ (ನಾ). ೧. ಆಟ; ಕೇಳಿ. ೨. ಸಂತೋಷ; ಆನಂದ. ೩. ಹಾಸ್ಯ; ತಮಾಷೆ. ~ಇಸು=೧. ಆಡು; ಕ್ರೀಡಿಸು. ೨. ಸಂತೋಷಿಸು; ಆನಂದಪಡು.

ವಿನೋದಿ (ನಾ). ೧. ಆನಂದಪಡುವವನು; ಸಂತೋಷಿಸುವವನು. ೨. ವಿಲಾಸಿ.

ವಿನ್ನಣ (ನಾ). ೧. ವಿಜ್ಞಾನ; ತಿಳಿವಳಿಕೆ. ೨. ಚಾತುರ್ಯ; ಕೌಶಲ.

ವಿನ್ನಣಿ (ನಾ). ವಿಜ್ಞಾನಿ; ಪಂಡಿತ.

ವಿನ್ಯಸ್ತ (ಗು). ೧. ಕೆಳಗೆ ಇಟ್ಟ, –ಮಡಗಿದ. ೨. ಕುಂದಣಿಸಿದ; ಕೆತ್ತಿದ. ೩. ಕೊಡಲ್ಪಟ್ಟ; ನೀಡಿದ.

ವಿನ್ಯಾಸ (ನಾ). ೧. ಇಡುವಿಕೆ. ೨. ರಚನೆ; ನಿರ್ಮಾಣ. ೩. ನಕ್ಷೆ; ಚಿತ್ರ. ೪. ಹಾವಭಾವಗಳಿಂದಾದ ಅಭಿನಯ.

ವಿಪಂಚಿ (ನಾ). ಒಂದು ಬಗೆಯ ತಂತಿವಾದ್ಯ; ವೀಣೆ.

ವಿಪಂಚಿಕೆ = ವಿಪಂಚಿ.

ವಿಪಕ್ಷ (ನಾ). ೧. ಪ್ರತಿಪಕ್ಷ; ಎದುರುಪಕ್ಷ. ೨. ಶತ್ರು; ಹಗೆ. ೩. ಪ್ರತಿವಾದಿ. (ಗು). ೪. ವಿರೋಧಿಯಾದ; ಎದುರುಪಕ್ಷದ.

ವಿಪಣಿ (ನಾ). ೧. ಅಂಗಡಿ; ಪಸರ. ೨. ಮಾರು ಕಟ್ಟೆ; ಪೇಟೆ. ~ವೀಥಿ = ಅಂಗಡಿ ಬೀದಿ; ಪೇಟೆ.

ವಿಪತ್ಕಾಲ (ನಾ). ಕಷ್ಟದ ಸಮಯ; ಆಪತ್ಕಾಲ.

ವಿಪತ್ತಿ (ನಾ). ಕೇಡು; ಆಪತ್ತು.

ವಿಪತ್ತು = ವಿಪತ್ತಿ.

ವಿಪಥ (ನಾ). ಅಡ್ಡದಾರಿ; ದುರ್ಮಾರ್ಗ.

ವಿಪದೆ ೧. = ವಿಪತ್ತಿ. ೨. ಕಷ್ಟದಲ್ಲಿರುವ ಹೆಂಗಸು.

ವಿಪನ್ನ (ಗು). ೧. ಅಡ್ಡಮಾರ್ಗ ಹಿಡಿದ; ತಪ್ಪುದಾರಿಗೆ ಹೋದ. ೨. ಕಷ್ಟಕ್ಕೆ ಗುರಿಯಾದ. ೩. ಕುಗ್ಗಿದ; ಸೋತ.

ವಿಪರೀತ (ನಾ). ೧. ವಿರುದ್ಧವಾದುದು; ತಿರುವುಮುರುವು. ೨. ಆಧಿಕ್ಯ; ಹೆಚ್ಚಳ. (ಗು). ೩. ವಿರುದ್ಧವಾದ; ವ್ಯತಿರಿಕ್ತವಾದ. ೪. ಅಸಾಧಾರಣವಾದ. ೫. ತಿರುವುಮುರುವಾದ; ಹಿಂದುಮುಂದಾದ. ೬. ಅತ್ಯಧಿಕವಾದ; ಅತಿಯಾದ. ೭. ಬುಡಮೇಲಾದ; ತಲೆಕೆಳಗಾದ.

ವಿಪರ್ಯಯ (ನಾ). ೧. ವಿರೋಧ; ಪ್ರತಿಕೂಲತೆ. ೨. ಹಗೆತನ; ವೈರ. ೩. ನಾಶ; ಹಾನಿ. ೪. ವಿನಿಮಯ; ಬದಲಾವಣೆ. ೫. ವಿಪತ್ತು; ಕಷ್ಟಕಾಲ.

ವಿಪರ್ಯಾಯ = ವಿಪರ್ಯಯ.

ವಿಪರ್ಯಾಸ (ನಾ). ೧. ವ್ಯತಿರಿಕ್ತವಾದುದು; ಪ್ರತಿಕೂಲವಾಗಿರುವಿಕೆ. ೨. ತಪ್ಪು ತಿಳಿವಳಿಕೆ. ೩. ಇಲ್ಲದಿರುವಿಕೆ; ಅನುಪಸ್ಥಿತಿ. ೪. ವ್ಯತ್ಯಾಸ; ಬದಲಾವಣೆ. ೫. ತಪ್ಪು; ಅಪರಾಧ.

ವಿಪಾಕ (ನಾ). ೧. ಚೆನ್ನಾಗಿ ಬೇಯಿಸುವಿಕೆ. ೨. ಮಾಗುವಿಕೆ; ಹಣ್ಣಾಗುವಿಕೆ. ೩. ಜೀರ್ಣವಾಗುವಿಕೆ; ಪಚನವಾಗುವಿಕೆ. ೪. ಫಲ; ಪರಿಣಾಮ. ೫. ಹದ. ೬. ವಿಪತ್ತು; ಕೇಡು.

ವಿಪಿನ (ನಾ). ಅಡವಿ; ಕಾಡು. ~ಅಶ್ವ = ೧. ಕಾಡು ಕುದುರೆ; ಅಡವಿಯ ಕುದುರೆ. ೨. ಒಂದು ಜಾತಿಯ ಜಿಂಕೆ; ಕಡವೆ. ~ಚರ = ೧. ಅಡವಿಯಲ್ಲಿ ಓಡಾಡುವುದು; ಕಾಡುಮೃಗ. ೨. ಬೇಡ; ಕಿರಾತ.

ವಿಪುಲ(ಳ) (ಗು). ೧. ದೊಡ್ಡ; ವಿಶಾಲವಾದ. ೨. ಯಥೇಚ್ಛ; ಬಹಳ. ೩. ಆಳವಾದ; ಘನವಾದ.

ವಿಪುಲೆ (ನಾ). ಭೂಮಿ; ಪೃಥ್ವಿ.

ವಿಪ್ರ (ನಾ). ೧. ವೇದಮಂತ್ರಗಳನ್ನು ಪಠಿಸುವವನು. ೨. ಬ್ರಾಹ್ಮಣ. ೩. ಜ್ಞಾನಿ. ೪. ಕಿರಣ; ರಶ್ಮಿ. ೫. ದರ್ಭೆ; ಕುಶ.

ವಿಪ್ರತಿಷಿದ್ಧ (ಗು). ನಿಷೇಧಿಸಲ್ಪಟ್ಟ; ಜಡೆ ಹಿಡಿದ.

ವಿಪ್ರಯೋಗ (ನಾ). ಅಗಲಿಕೆ; ವಿರಹ.

ವಿಪ್ರಲಂಭ (ನಾ). ೧. ವಂಚನೆ; ಮೋಸ. ೨. ಜಗಳ; ವೈಮನಸ್ಯ. ೩. ಭೇದ; ಒಡಕು. ೪. ಅಗಲಿಕೆ; ವಿರಹ. ~ಶೃಂಗಾರ = ಶೃಂಗಾರದಲ್ಲಿ ಒಂದು ಬಗೆ; ಅಗಲಿಕೆಯನ್ನು ನಿರೂಪಿಸುವುದು.

ವಿಪ್ರಲಾಪ (ನಾ). ೧. ಪೊಳ್ಳುಹರಟೆ; ವ್ಯರ್ಥಾಲಾಪ. ೨. ವಾಗ್ವಾದ; ಚರ್ಚೆ. ೩. ಜಗಳ; ಕದನ. ೪. ಮೋಸ; ವಂಚನೆ.

ವಿಪ್ರಿಯ (ನಾ). ೧. ಅಪರಾಧ; ತಪ್ಪು. ೨. ಪ್ರಿಯವಲ್ಲದುದು; ಅಹಿತಕರವಾದುದು. (ಗು). ೩. ತಪ್ಪಿನ; ಅಪರಾಧದ. ೪. ಪ್ರಿಯವಲ್ಲದ; ಅಹಿತಕರವಾದ.

ವಿಪ್ಲವ (ನಾ). ೧. ಆಂದೋಳನ; ಕ್ಷೋಭೆ. ೨. ದಂಗೆ; ದೊಂಬಿ. ೩. ಪೀಡೆ; ಉಪದ್ರವ.
ವಿಬುಧ (ನಾ). ೧. ಪಂಡಿತ; ವಿದ್ವಾಂಸ. ೨. ದೇವತೆ.
ವಿಬೋಧ (ನಾ). ೧. ಜ್ಞಾನ; ಅರಿವು. ೨. ಅನಾದರ; ಅಲಕ್ಷ್ಯ.
ವಿಭಂಗ (ನಾ). ೧. ಒಡೆಯುವಿಕೆ; ಮುರಿಯುವಿಕೆ. ೨. ಭಾಗ; ವಿಭಾಗ. ೩. ನಾಶಮಾಡುವಿಕೆ. ೪. ವಿರೋಧ; ಅಡ್ಡಿ. ೫. ಹಾವಭಾವಗಳಿಂದಾದ ಅಭಿನಯ. ~ಇಸು = ನಾಶಮಾಡು; ಧ್ವಂಸಮಾಡು.
ವಿಭಕ್ತಿ (ನಾ). ೧. ಬೇರೆಯಾಗುವುದು; ಹಿಸ್ಸೆಯಾಗುವುದು. ೨. ಪಾಲು; ಭಾಗ. ೩. ವ್ಯಾಕರಣದಲ್ಲಿ ಪ್ರಕೃತಿಗೆ ಪ್ರತ್ಯಯವು ಸೇರಿ ಸಿದ್ಧಿಸುವ ಅನ್ವಯ.
ವಿಭಜನೆ (ನಾ). ೧. ಬೇರೆಯಾಗುವಿಕೆ; ವಿಭಾಗ. ೨. ಪಾಲು; ಹಂಚಿಕೆ.
ವಿಭಜಿಸು (ಕ್ರಿ). ವಿಭಾಗಿಸು; ವಿಂಗಡಿಸು.
ವಿಭವ (ನಾ). ೧. ಪ್ರಕಟನೆ; ಪ್ರದರ್ಶನ. ೨. ಉತ್ಸಾಹ; ಸಡಗರ. ೩. ವೈಭವ; ಆಡಂಬರ. ೪. ಸೊಗಸು; ಸೌಂದರ್ಯ. ೫. ಅರುವತ್ತು ಸಂವತ್ಸರಗಳಲ್ಲಿ ಒಂದು.
ವಿಭಾಕರ (ನಾ). ಸೂರ್ಯ; ನೇಸರು.
ವಿಭಾಗ (ನಾ). ೧. ಭಾಗಮಾಡುವಿಕೆ; ವಿಂಗಡಣೆ. ೨. ಚೂರು; ತುಂಡು. ೩. ದೇಶದ ಒಂದು ಭಾಗ; ಪ್ರಾಂತ. ~ಇಸು = ವಿಭಜಿಸು.
ವಿಭಾಡ (ನಾ). ನಾಶಮಾಡುವವನು.
ವಿಭಾತ (ನಾ). ಬೆಳಗು; ಪ್ರಾತಃಕಾಲ.
ವಿಭಾತಿ (ನಾ). ಹೊಳಪು; ಕಾಂತಿ.
ವಿಭಾವ (ನಾ). ೧. ಭಾವವನ್ನು ಉದ್ದೀಪನಗೊಳಿಸುವ ವಸ್ತು ಅಥವಾ ಕಾರಣ. ೨. ನಿರ್ಣಯ; ತೀರ್ಮಾನ. ~ಇಸು = ನಿಶ್ಚಯಿಸು; ನಿರ್ಣಯಿಸು.
ವಿಭಾವನೆ (ನಾ). ೧. ನಿಶ್ಚಿತಜ್ಞಾನ; ವಿವೇಕ. ೨. ಊಹೆ. ೩. ಅರ್ಥಾಲಂಕಾರಗಳಲ್ಲಿ ಒಂದು.
ವಿಭಾವರಿ (ನಾ). ಇರುಳು; ರಾತ್ರಿ.
ವಿಭಾವಸು (ನಾ). ೧. ಕಾಂತಿಯಿಂದ ಕೂಡಿದುದು. ೨. ಸೂರ್ಯ. ೩. ಬೆಂಕಿ.
ವಿಭಾಸ (ನಾ). ಕಾಂತಿ; ಪ್ರಕಾಶ.
ವಿಭಿನ್ನ (ಗು). ೧. ಹೋಳು ಮಾಡಿದ; ಸೀಳಿದ. ೨. ಬೇರೆ ಬೇರೆಯಾದ; ಪ್ರತ್ಯೇಕಗೊಂಡ. ೩. ವ್ಯತ್ಯಾಸಹೊಂದಿದ; ಬದಲಾವಣೆ ಪಡೆದ.
ವಿಭೀಷಣ (ನಾ). ೧. ರಾವಣನ ಒಬ್ಬ ತಮ್ಮನ ಹೆಸರು. (ಗು). ೨. ಭಯವನ್ನು ಉಂಟು ಮಾಡುವ; ಭೀಕರವಾದ.
ವಿಭು (ನಾ). ೧. ದೇವರು; ಪರಮಾತ್ಮ. ೨. ದೊರೆ; ಅರಸು. ೩. ಯಜಮಾನ; ಒಡೆಯ. (ಗು). ೪. ಸರ್ವವ್ಯಾಪಿಯಾದ; ಎಲ್ಲ ಸ್ಥಳಗಳಲ್ಲಿಯೂ ಇರುವ.
ವಿಭೂತಿ (ನಾ). ೧. ಮಹಿಮೆ; ಮಹಾತ್ಮೆ. ೨. ವಿಜೃಂಭಣೆ; ವೈಭವ. ೩. ಯಶಸ್ಸು; ಕೀರ್ತಿ. ೪. ಅತಿಶಯವಾದ ಶಕ್ತಿ, –ಪರಾಕ್ರಮ. ೫. ಭಸ್ಮ; ಬೂದಿ. ~ಪುರುಷ = ಮಹಾಪುರುಷ. ~ಪೂಜೆ = ಮಹಾಪುರುಷನಿಗೆ ಮಾಡುವ ಆದರ, –ಸತ್ಕಾರ.
ವಿಭೂಷಣ (ನಾ). ೧. ಅಲಂಕಾರ; ಶೃಂಗಾರ. ೨. ಒಡವೆ; ಆಭರಣ.
ವಿಭೂಷೆ (ನಾ). ೧. ಅಲಂಕಾರ; ಶೃಂಗಾರ. ೨. ಕಾಂತಿ; ಶೋಭೆ. ೩. ಸೌಂದರ್ಯ; ಚೆಲುವು.
ವಿಭೃತಿ (ನಾ). ೧. ಮುನ್ನಡೆಸುವಿಕೆ; ಮಾರ್ಗದರ್ಶನ. ೨. ಎತ್ತಿಹಿಡಿಯುವಿಕೆ; ಉದ್ಧರಿಸುವುದು; ಉದ್ಧಾರ.
ವಿಭೇದ (ನಾ). ೧. ಒಡೆಯುವಿಕೆ; ಭಾಗಮಾಡುವಿಕೆ. ೨. ರೀತಿ; ಪ್ರಕಾರ; ಬಗೆ.

~ಇಸು = ೧. ವಿಭಾಗಿಸು ; ವಿಂಗಡಿಸು. ೨. ಬೇರೆಯಾಗು ; ಪ್ರತ್ಯೇಕವಾಗಿ ನಿಲ್ಲು.

ವಿಭೋಗ (ನಾ). ಸುಖಾನುಭವ ; ವಿಶೇಷ ಭೋಗ.

ವಿಭ್ರಮ (ನಾ). ೧. ಅಲೆದಾಟ ; ಸುತ್ತಾಟ. ೨. ಸಂಶಯ ; ಅನುಮಾನ. ೩. ಭ್ರಾಂತಿ; ತಪ್ಪುತಿಳಿವಳಿಕೆ. ೪. ಬೆಡಗು ; ಒಯ್ಯಾರ. ೫. ಲಾವಣ್ಯ.

ವಿಭ್ರಾಂತ (ಗು). ೧. ಚಲಿಸುವ ; ಅಲುಗುವ. ೨. ಭ್ರಾಂತಿಗೊಳಗಾದ ; ಗಾಬರಿಗೊಂಡ.

ವಿಭ್ರಾಂತಿ (ನಾ). ಗಾಬರಿ ; ಗೊಂದಲ.

ವಿಭ್ರಾಜ (ನಾ). ೧. ಕಾಂತಿ ; ಪ್ರಭೆ. (ಗು). ೨. ಹೊಳೆಯುವ ; ಉಜ್ವಲವಾದ.

ವಿಮಂಡಿತ (ಗು). ಅತಿಯಾಗಿ ಶೃಂಗರಿಸಿದ, –ಅಲಂಕರಿಸಿದ.

ವಿಮಗ್ನ (ಗು). ತಲ್ಲೀನವಾದ ; ತನ್ಮಯವಾದ.

ವಿಮರ್ದ (ನಾ). ೧. ಜಜ್ಜುವಿಕೆ ; ಪುಡಿಮಾಡುವಿಕೆ. ೨. ನಾಶಮಾಡುವಿಕೆ ; ಹಾಳುಮಾಡುವಿಕೆ. ೩. ಕಾಳಗ ; ಯುದ್ಧ. ೪. ಸ್ಪರ್ಶ ; ಸೋಂಕು. ~ಇಸು = ನಾಶಮಾಡು.

ವಿಮರ್ಶಕ (ನಾ). ವಿಮರ್ಶೆ ಮಾಡುವವನು ; ವಿವೇಚಿಸುವವನು.

ವಿಮರ್ಶನ = ವಿಮರ್ಶೆ.

ವಿಮರ್ಶೆ (ನಾ). ಗುಣದೋಷಗಳ ಪರಿಶೀಲನೆ; ತುಲನೆ. ~ಇಸು = ಗುಣದೋಷಗಳನ್ನು ಕಂಡುಹಿಡಿ ; ಟೀಕೆ ಮಾಡು ; ಪರಿಶೀಲನೆ ಮಾಡು.

ವಿಮಲ(ಳ) (ಗು). ಪವಿತ್ರವಾದ ; ನಿಷ್ಕಳಂಕವಾದ.

ವಿಮಾನ (ನಾ). ೧. ಅಪಮಾನ ; ಅವಮರ್ಯಾದೆ. ೨. ಒಂದು ಅಳತೆ, –ಪ್ರಮಾಣ. ೩. ದೇವಾಲಯದ ಗೋಪುರ. ೪. ದೇವರ ರಥ ; ಪುಷ್ಪಕ. ೫. ಆಕಾಶದಲ್ಲಿ ಚಲಿಸುವ ಒಂದು ವಾಹನ; ಏರೋಪ್ಲೇನು. ೬. ಹೆಣವನ್ನು ಸಾಗಿಸುವ ಮಂಟಪ. ೭. ಅರಮನೆ ; ರಾಜಗೃಹ. ೮. ಜೈನರ ಸ್ವರ್ಗಗಳಲ್ಲಿ ಒಂದು. ೯. ಮಾನವಿಲ್ಲದವನು ; ಲಜ್ಜೆಗೇಡಿ. ~ನಿಲ್ದಾಣ = ವಿಮಾನಗಳು ತಂಗುವ ಸ್ಥಳ. ~ಬಲ = ವಾಯುಪಡೆ.

ವಿಮಿಶ್ರ (ಗು). ಕೂಡಿದ ; ಬೆರೆತ.

ವಿಮಿಶ್ರಣ (ನಾ). ಬೆರಕೆ ; ಕೂಟ.

ವಿಮುಕ್ತ (ನಾ). ೧. ಬಿಡುಗಡೆಯನ್ನು ಹೊಂದಿದವನು. (ಗು). ೨. ಸ್ವತಂತ್ರಗೊಳಿಸಿದ ; ಬಿಡುಗಡೆಮಾಡಲ್ಪಟ್ಟ. ೩. ಎಸೆದ ; ಪ್ರಯೋಗಿಸಿದ.

ವಿಮುಕ್ತಿ (ನಾ). ೧. ಪಾರಾಗುವಿಕೆ ; ವಿಮೋಚನೆ ; ಬಿಡುಗಡೆ. ೨. ಮೋಕ್ಷ ; ಮುಕ್ತಿ.

ವಿಮುಖ (ಗು). ಮುಖವನ್ನು ತಿರುಗಿಸಿದ ; ಪರಾಙ್ಮುಖ.

ವಿಮೆ (ನಾ). ಯಾವುದಾದರೂ ನಷ್ಟವಾಗಬಹುದೆಂಬ ನಿರೀಕ್ಷೆಯಿಂದ ಪರಿಹಾರಧನಕ್ಕಾಗಿ ಕಂತುಗಳ ಮೂಲಕ ಹಣ ಶೇಖರಿಸುವ ಏರ್ಪಾಟು ; ಇನ್ಶೂರೆನ್ಸು. ~ದಾರ = ವಿಮೆಯನ್ನು ಮಾಡಿರುವವನು.

ವಿಮೋಕ್ಷ = ವಿಮುಕ್ತಿ.

ವಿಮೋಚನೆ ೧. = ವಿಮುಕ್ತಿ. ೨. ಎಸೆಯುವಿಕೆ ; ಬಿಸಾಡುವಿಕೆ. ೩. ವಿಸರ್ಜನೆ ; ತ್ಯಜಿಸುವಿಕೆ.

ವಿಮೋಹ (ನಾ). ಗೊಂದಲ ; ದಿಗ್ಭ್ರಾಂತಿ.

ವಿಯಚ್ಚರ (ನಾ). ೧. ಆಕಾಶದಲ್ಲಿ ಚಲಿಸುವುದು ; ಪಕ್ಷಿ. ೨. ವಿದ್ಯಾಧರ ; ಗಂಧರ್ವ.

ವಿಯಚ್ಚರಿ (ನಾ). ಖೇಚರಿ ; ವಿದ್ಯಾಧರಸ್ತ್ರೀ.

ವಿಯತ್ತಟ (ನಾ). ನಭೋಭಾಗ ; ಆಕಾಶ.

ವಿಯತ್ತಲ(ಳ) = ವಿಯತ್ತಟ.

ವಿಯದ್ಗಾಮಿ (ನಾ). ೧. ವಿದ್ಯಾಧರ ; ಖೇಚರ. (ಗು). ೨. ಆಕಾಶದಲ್ಲಿ ಸಂಚರಿಸುವ.

ವಿಯನ್ಮಂಡಲ = ವಿಯತ್ತಟ.

ವಿಯನ್ಮಣಿ (ನಾ). ನೇಸರು ; ಸೂರ್ಯ.

ವಿಯೋಗ (ನಾ). ಅಗಲಿಕೆ; ವಿರಹ.
ವಿಯೋಗಿ (ನಾ). ೧. ಅಗಲಿರುವವನು; ವಿರಹಿ. (ಗು). ೨. ಅಗಲಿದ; ಬೇರೆಯಾದ.
ವಿಯೋಗಿನಿ (ನಾ). ಅಗಲಿದವಳು; ವಿರಹಿಣಿ.
ವಿರಂಚಿ = ವಿರಿಂಚ.
ವಿರಕ್ತ (ನಾ). ೧. ವಿರಾಗಿ; ವೈರಾಗ್ಯವುಳ್ಳವನು. (ಗು). ೨. ಬಣ್ಣ ಬಿಟ್ಟ; ಬಣ್ಣಗೆಟ್ಟ. ೩. ಅನಾಸಕ್ತವಾದ; ವಿಮುಖಗೊಂಡ. ೪. ಅಗಲಿದ; ಬಿಟ್ಟ.
ವಿರಕ್ತಿ (ನಾ). ವೈರಾಗ್ಯ.
ವಿರಚನ (ನಾ). ರಚನೆ; ನಿರ್ಮಾಣ.
ವಿರಚನೆ = ವಿರಚನ.
ವಿರಚಿಸು (ಕ್ರಿ). ರಚಿಸು; ನಿರ್ಮಿಸು.
ವಿರಜ (ನಾ). ೧. ಒಂದು ವಾದ್ಯವಿಶೇಷ. (ಗು). ೨. ಧೂಳಿಲ್ಲದ. ೩. ನಿರ್ವಿಕಾರವಾದ; ವಿಕಾರರಹಿತವಾದ. ೪. ಋತುಮತಿಯಾಗದ; ಮುಟ್ಟಾಗದ.
ವಿರಡ (ನಾ). ೧. ದೊಡ್ಡ ಆಕೃತಿ, –ಆಕಾರ. (ಗು). ೨. ವಿರಾಡ್ರೂಪದ; ಅಸಾಧಾರಣ ರೂಪದ.
ವಿರತ (ನಾ). ೧. ವೈರಾಗ್ಯ; ವಿರಕ್ತಿ. (ಗು). ೨. ಮುಗಿದ; ಕೊನೆಗೊಂಡ. ೩. ನಿಷ್ಕ್ರಿಯವಾದ; ನಿಂತುಹೋದ. ೪. ಅತ್ಯಂತ ಆಸಕ್ತಿಯಿಂದ ಕೂಡಿದ. ೫. ಆಸಕ್ತಿಯಿಲ್ಲದ.
ವಿರತಿ ೧. = ವಿರಕ್ತಿ. ೨. ನಿಲುಗಡೆ; ಮುಕ್ತಾಯ.
ವಿರಥ (ಗು). ರಥವಿಲ್ಲದ; ರಥಹೀನವಾದ.
ವಿರಮಿಸು (ಕ್ರಿ). ೧. ವಿಶ್ರಾಂತಿಹೊಂದು; ವಿಶ್ರಮಿಸು. ೨. ಮುಕ್ತಾಯಹೊಂದು; ಅಂತ್ಯಗೊಳ್ಳು.
ವಿರಲ(ಳ) (ಗು). ೧. ಬಿಡಿ ಬಿಡಿಯಾದ; ನಿಬಿಡವಲ್ಲದ. ೨. ನಾಜೂಕಾದ; ನಯವಾದ. ೩. ಅಪರೂಪವಾದ; ದುರ್ಲಭವಾದ. ೪. ಅಲ್ಪಸ್ವಲ್ಪವಾದ; ಕೊಂಚ.
ವಿರಸ (ನಾ). ೧. ವಿರೋಧ; ವೈಮನಸ್ಯ. (ಗು). ೨. ರಸಹೀನವಾದ; ನಿರ್ದ್ರವವಾದ ೩. ಸತ್ತ್ವವಿಲ್ಲದ; ಸಾರರಹಿತವಾದ.
ವಿರಹ = ವಿಯೋಗ.
ವಿರಹಿ = ವಿಯೋಗಿ.
ವಿರಹಿಣಿ = ವಿಯೋಗಿನಿ.
ವಿರಾಗ (ನಾ). ೧. ವಿರಕ್ತಿ; ವೈರಾಗ್ಯ. ೨. ಬಣ್ಣಗೆಡುವಿಕೆ.
ವಿರಾಗಿ (ನಾ). ಬೈರಾಗಿ; ವಿರಕ್ತ.
ವಿರಾಜಿ (ನಾ). ಹೊಳಪುಳ್ಳುದು; ಪ್ರಕಾಶದಿಂದ ಕೂಡಿದುದು.
ವಿರಾಟ್ಪುರುಷ (ನಾ). ಸರ್ವಾಂತರ್ಯಾಮಿ; ಪರಮಾತ್ಮ.
ವಿರಾಡ = ಬಿರಾಡ.
ವಿರಾಡ್ರೂಪ (ನಾ). ವಿಶ್ವರೂಪ.
ವಿರಾಮ (ನಾ). ೧. ವಿಶ್ರಾಂತಿ; ಬಿಡುವು. ೨. ಯತಿ; ನಿಲುಗಡೆ. ೩. ಅಂತ್ಯ; ಕೊನೆ. ~ಆಸನ = ಒರಗುಪೀಠ; ಸುಖಾಸನ. ~ಚಿಹ್ನೆ = ವಾಕ್ಯದಲ್ಲಿ ನಿಲುಗಡೆಯನ್ನು ಸೂಚಿಸಲು ಬಳಸುವ ಚಿಹ್ನೆ. ~ಹಾಕು = ನಿಲ್ಲಿಸು; ತಡೆಯೊಡ್ಡು.
ವಿರಿಂಚ (ನಾ). ಬ್ರಹ್ಮ.
ವಿರಿಂಚಿ ೧. = ವಿರಿಂಚ. ೨. ವಿಷ್ಣು. ೩. ಶಿವ.
ವಿರುತಿ (ನಾ). ೧. ಚೀರಾಟ; ಕೂಗಾಟ. ೨. ಶಬ್ದ; ಧ್ವನಿ.
ವಿರುದ್ಧ (ನಾ). ೧. ಹಗೆತನ; ವೈರ; ವಿರೋಧ. ೨. ಪ್ರತಿಕೂಲವಾದುದು; ಹೊಂದಿಕೆಯಾಗದುದು. (ಗು). ೩. ಪ್ರತಿಯಾದ; ವಿರೋಧವಾದ. ೪. ತಡೆಗಟ್ಟಿದ; ಅಡ್ಡಿಮಾಡಲ್ಪಟ್ಟ. ೫. ಬಾಧೆಗೊಳಿಸುವ; ತೊಂದರೆ ಕೊಡುವ. ೬. ನಿಷಿದ್ಧವಾದ. ~ಅರ್ಥ = ೧. ವಿಪರೀತವಾದ ಅರ್ಥ;

ತಲೆಕೆಳಗಾದ ಅರ್ಥ. ೨.ಕಾವ್ಯದೋಷಗಳಲ್ಲಿ ಒಂದು.

ವಿರೂಕ್ಷ (ಗು). ೧. ಕಠಿನವಾದ ; ಕರ್ಕಶವಾದ. ೨. ಹೊಲಸಾದ ; ಮಾಸಿದ. ೩. ಒಣಗಿದ ; ಬತ್ತಿದ.

ವಿರೂಪ (ನಾ). ೧. ಕುರೂಪ ; ವಿಕಾರ. (ಗು). ೨. ಕೆಟ್ಟ ರೂಪದ ; ವಿಕಾರವಾದ.

ವಿರೂಪಾಕ್ಷ (ನಾ). ವಿಷಮಾಕ್ಷ ; ಶಿವ.

ವಿರೂಪೆ (ನಾ). ರೂಪವಿಲ್ಲದವಳು ; ಕುರೂಪಿ.

ವಿರೇಚಕ (ನಾ). ೧.ಭೇದಿಯಾಗಲು ಕೊಡುವ ಔಷಧ. (ಗು). ೨. ಭೇದಿ ಮಾಡಿಸುವ.

ವಿರೇಚನ (ನಾ). ೧. ಭೇದಿಯಾಗುವಿಕೆ. ೨. ಭೇದಿಯಾಗಲು ಕೊಡುವ ಔಷಧ.

ವಿರೋಚನ (ನಾ). ೧. ಸೂರ್ಯ ; ನೇಸರು. ೨. ಚಂದ್ರ. ೩. ಬೆಂಕಿ ; ಅಗ್ನಿ. ೪.ಮಗು; ಬಾಲಕ. ೫. ಒಬ್ಬ ರಾಕ್ಷಸನ ಹೆಸರು ; ಬಲಿಚಕ್ರವರ್ತಿಯ ತಂದೆ. (ಗು). ೬.ಹೊಳೆಯುವ ; ಪ್ರಕಾಶಿಸುವ.

ವಿರೋಧ (ನಾ). ೧. ಪ್ರತಿಭಟನೆ ; ತಡೆ. ೨. ಹಗೆತನ ; ವೈರ. ೩. ಪ್ರತಿಯಾದುದು; ವಿರುದ್ಧವಾದುದು. ೪. ಅಸಂಬದ್ಧತೆ ; ಅಸಾಂಗತ್ಯ. ~ಅಭಿಪ್ರಾಯ = ಭಿನ್ನಾಭಿಪ್ರಾಯ. ~ಆಭಾಸ = ೧. ಒಂದು ಬಗೆಯ ಅರ್ಥಾಲಂಕಾರ. ೨. ಪರಸ್ಪರ ವಿರುದ್ಧವಾಗಿರುವುದು.

ವಿರೋಧಿ (ನಾ). ೧. ವೈರಿ ; ಹಗೆ. ೨. ಅರುವತ್ತು ಸಂವತ್ಸರಗಳಲ್ಲಿ ಒಂದು. (ಗು). ೩. ಎದುರಿಸುವ ; ಪ್ರತಿಭಟಿಸುವ.

ವಿರ್ದು = ಬಿರ್ದು.

ವಿಲಂಘನ (ನಾ). ೧.ದಾಟುವಿಕೆ ; ಹಾರುವಿಕೆ. ೨. ಅತಿಕ್ರಮಿಸುವಿಕೆ ; ಉಲ್ಲಂಘಿಸುವಿಕೆ.

ವಿಲಂಘಿಸು (ಕ್ರಿ). ೧. ದಾಟು ; ಹಾರು ; ನೆಗೆ. ೨. ಉಲ್ಲಂಘಿಸು ; ಮೀರು.

ವಿಲ(ಳ)ಂಬ (ನಾ). ೧. ತಡ ; ಸಾವಕಾಶ. ೨. ಮಂದಗತಿ. (ಗು). ೩. ನೇತಾಡುವ.

ವಿಲ(ಳ)ಂಬಿ (ನಾ). ೧. ಅರುವತ್ತು ಸಂವತ್ಸರಗಳಲ್ಲಿ ಒಂದು. (ಗು). ೨. ಸಾವಕಾಶವಾದ ; ತಡಮಾಡುವ. ೩. ನೇತಾಡುವ ; ಜೋಲುವ.

ವಿಲ(ಳ)ಂಬಿತ (ನಾ). ೧. (ಸಂಗೀತದಲ್ಲಿ) ಮಂದಗತಿ. ೨. ಕುದುರೆಯ ನಡಗೆಯಲ್ಲಿ ಒಂದು ಬಗೆ. ೩. ಗದಾಯುದ್ಧದಲ್ಲಿ ಒಂದು ವರಸೆ. (ಗು). ೪. ತಡಮಾಡಿದ ; ನಿಧಾನಿಸಿದ. ೫. ನೇತಾಡುವ ; ಜೋಲುವ.

ವಿಲಕ್ಷಣ (ಗು). ೧. ಬೇರೆಯಾದ ; ವಿಭಿನ್ನವಾದ. ೨. ವಿಚಿತ್ರವಾದ. ೩. ಅಲೌಕಿಕವಾದ.

ವಿಲಗ (ನಾ). ೧. ಹೊಂದಿಕೆಯಿಲ್ಲದಿರುವಿಕೆ ; ಅಸಾಂಗತ್ಯ. ೨. ತೊಂದರೆ ; ಕಷ್ಟ.

ವಿಲಗ್ನ (ಗು). ಚೆನ್ನಾಗಿ ಕೂಡಿದ ; ಹೊಂದಿಕೊಂಡ.

ವಿಲ(ಳ)ಯ (ನಾ). ೧. ನಾಶ ; ಹಾಳು. ೨. ಪ್ರಪಂಚದ ಅಳಿವು ; ಪ್ರಳಯ.

ವಿಲಾ(ಳಾ)ಸ (ನಾ). ೧. ಕ್ರೀಡೆ ; ವಿಹಾರ. ೨. ಬೆಡಗು ; ಒಯ್ಯಾರ ; ಲಾವಣ್ಯ. ೩. ಚೆಲುವು ; ಸೌಂದರ್ಯ. ೪. ಉಲ್ಲಾಸ ; ವಿನೋದ. ೫. ಕಾಮಾತುರತೆ. ೬. ಪತ್ತೆ ; ಅಡ್ರೆಸ್ಸು. ~ವಾಸ = ವಿಹಾರಸ್ಥಳ.

ವಿಲಾ(ಳಾ)ಸಿ (ನಾ). ೧. ಕ್ರೀಡಾಶೀಲವ್ಯಕ್ತಿ ; ವಿನೋದವಾಗಿ ಕಾಲವನ್ನು ಕಳೆಯುವವನು. ೨. ಕಾಮುಕ. (ಗು). ೩. ಕ್ರೀಡಾಮನೋಭಾವವುಳ್ಳ. ೪.ಕಾಮುಕತೆಯಿಂದ ಕೂಡಿದ.

ವಿಲಾ(ಳಾ)ಸಿನಿ (ನಾ). ೧. ಹೆಂಗಸು. ೨. ಬೆಡಗಿ ; ಒಯ್ಯಾರಿ. ೩. ಸೂಳೆ ; ವೇಶ್ಯೆ.

ವಿಲಿ(ಳಿ)ಖಿತ (ಗು). ೧. ಕೆತ್ತಿದ ; ಕಂಡರಿಸಿದ. ೨. ಬರೆದ.

ವಿಲಿಪ್ತ (ಗು). ಲೇಪಿಸಿದ ; ಬಳಿದ.

ವಿಲಿವಿಲಿ (ನಾ). ಒಂದು ಅನುಕರಣ ಶಬ್ದ. ~ಇಸು = ಹುಳುವಿನಂತೆ ಒದ್ದಾಡು.

ವಿಲೀನ (ನಾ). ೧. ಐಕ್ಯನಾದವನು. (ಗು). ೨. ಆಸಕ್ತವಾದ ; ಮುಳುಗಿದ. ೩. ಐಕ್ಯ ನಾದ ; ಲೀನವಾದ. ೪. ಕರಗಿದ. ೫. ಕಣ್ಮರೆಯಾದ ; ಕಾಣದಾದ.

ವಿಲುಪ್ತ (ಗು). ನಾಶಮಾಡಲ್ಪಟ್ಟ.

ವಿಲುಪ್ತಿ (ನಾ). ನಾಶ ; ಅಳಿವು.

ವಿಲುಲಿ(ಳಿ)ತ (ಗು). ೧. ಅತ್ತಿತ್ತ ಚಲಿಸುವ ; ಚಂಚಲವಾದ. ೨. ತೂಗಾಡುವ ; ನೇಲುವ.

ವಿಲೂನ (ಗು). ಕಡಿದ ; ಕತ್ತರಿಸಲ್ಪಟ್ಟ.

ವಿಲೆ (ನಾ). ೧. ಕ್ರಮ; ಪರಿವಿಡಿ. ೨. ವ್ಯವಸ್ಥೆ; ಏರ್ಪಾಟು. ೩. ಮಾರಾಟ ; ವಿಕ್ರಯ.

ವಿಲೆವಾರಿ (ನಾ). ೧. ವ್ಯವಸ್ಥೆಗೊಳಿಸುವುದು ; ಏರ್ಪಾಟುಮಾಡುವುದು. ೨. ಹಂಚುವಿಕೆ.

ವಿಲೇಪನ (ನಾ). ೧. (ಸುಗಂಧದ್ರವ್ಯವನ್ನು) ಬಳಿಯುವಿಕೆ, –ಲೇಪಿಸುವಿಕೆ. ೨. ಸುಗಂಧ ದ್ರವ್ಯ.

ವಿಲೇವಾರಿ = ವಿಲೆವಾರಿ.

ವಿಲೋಕನ (ನಾ). ೧. ನೋಡುವಿಕೆ. ೨. ನೋಟ ; ದೃಷ್ಟಿ. ೩. ಪರಿಶೀಲನೆ.

ವಿಲೋ(ಲೊ)ಚನ (ನಾ). ಕಣ್ಣು ; ನೇತ್ರ. ~ಅಂಬು = ವಿಲೋಚನವಾರಿ. ~ವಾರಿ =ಕಣ್ಣೀರು ; ಕಂಬನಿ.

ವಿಲೋಮ (ನಾ). ೧. ವಿರುದ್ಧವಾದುದು ; ಪ್ರತಿಕೂಲವಾದುದು. (ಗು). ೨. ತಲೆಕೆಳ ಗಾದ ; ವ್ಯತಿರಿಕ್ತವಾದ. ೩. ವಿರುದ್ಧವಾದ.

ವಿಲೋ(ಲೊ)ಲ(ಳ) (ನಾ). ೧. ಚಂಚಲತೆ ; ಹೊಯ್ದಾಟ. (ಗು). ೨. ಅಲುಗುವ ; ಹೊಯ್ದಾಡುವ. ೩. ಹೊರಳುವ; ತಿರುಗುವ.

ವಿಲೋಲುಪ (ನಾ). ೧. ಹಂಬಲಿಸುವವನು ; ಬಯಸುವವನು. (ಗು). ೨. ಇಚ್ಛಿಸುವ ; ಬಯಸುವ.

ವಿವಂಚನೆ (ನಾ). ಮೋಸ ; ಅತಿವಂಚನೆ.

ವಿವಕ್ಷೆ (ನಾ). ೧. ಮಾತನಾಡುವ ಅಥವಾ ಪ್ರಕಟಗೊಳಿಸುವ ಬಯಕೆ. ೨. ಆಸೆ ; ಬಯಕೆ. ೩. ಕಾರಣ ; ಹೇತು. ೪. ಉದ್ದೇಶ.

ವಿವರ (ನಾ). ೧. ವಿಸ್ತಾರ ; ಹರಹು. ೨. ವಿವಿಧತೆ ; ವೈವಿಧ್ಯ. ೩. ವರದಿ ; ಒಕ್ಕಣೆ. ೪. ವಿಭಾಗ. ೫. ತೂತು ; ಕಂಡಿ. ೬. ಗುಹೆ ; ಬಿಲ. ೭. ಕುಂದು ; ದೋಷ. ೮. ಓರಣ ; ಅಚ್ಚುಕಟ್ಟು. ~ಇಸು =೧. ಬೇರೆಮಾಡು ; ವಿಭಾಗಿಸು. ೨. ಬಿಡಿಸಿ ಹೇಳು ; ವಿಶದವಾಗಿ ತಿಳಿಸು.

ವಿವರಣ (ನಾ). ೧. ತೆರೆಯುವುದು. ೨. ವಿವರಿಸು ವುದು ; ವರ್ಣಿಸುವುದು. ೩. ವ್ಯಾಖ್ಯಾನ ; ಟೀಕೆ. ೪. ವರದಿ ; ಒಕ್ಕಣೆ.

ವಿವರಣೆ = ವಿವರಣ.

ವಿವರ್ಣ (ನಾ). ೧. ಕೀಳಜಾತಿಯವನು. (ಗು). ೨. ಬಣ್ಣವಿಲ್ಲದ ; ವರ್ಣಹೀನವಾದ. ೩. ಬಣ್ಣಗೆಟ್ಟ ; ವಿಕಾರವಾದ. ೪. ಓದು ಬರೆಹ ಬಾರದ.

ವಿವರ್ಣಿಸು (ಕ್ರಿ). ೧. ವಿಶದಪಡಿಸು ; ವಿವರ ವಾಗಿ ತಿಳಿಸು. ೨. ಕಾಂತಿಹೀನವಾಗು ; ಬಣ್ಣಗೆಡು.

ವಿವರ್ತ (ನಾ). ೧. ಸುತ್ತುವಿಕೆ ; ಭ್ರಮಣ. ೨. ವಿಕಾಸಹೊಂದುವಿಕೆ ; ರೂಪಾಂತರ ವಾಗುವಿಕೆ.

ವಿವರ್ಧನ (ನಾ). ಅಭಿವೃದ್ಧಿ ; ಬೆಳವಣಿಗೆ.

ವಿವಶ (ಗು). ೧. ಅನಿರ್ಬಂಧಿತವಾದ ; ಅಂಕೆ ಯಲ್ಲಿರದ. ೨. ಎಚ್ಚರತಪ್ಪಿದ ; ನಿಶ್ಚೇಷ್ಟ ವಾದ.

ವಿವಸ್ವಂತ (ನಾ). ೧. ಸೂರ್ಯ. ೨. ಮನು ಗಳಲ್ಲಿ ಒಬ್ಬ.

ವಿವಹನ (ನಾ). ಮದುವೆ ; ವಿವಾಹ.

ವಿವಾದ (ನಾ). ೧. ವಾದ ; ಚರ್ಚೆ. ೨. ಜಗಳ; ಕಲಹ. ೩. ಸ್ಪರ್ಧೆ ; ಮೇಲಾಟ. ೪. ದಾವೆ; ಮೊಕದ್ದಮೆ.

ವಿವಾದಿ (ನಾ). ವಾದಿಸುವವನು.

ವಿವಾಹ=ವಿವಹನ. ~ವಿಚ್ಛೇದ=ಮದುವೆಯ ಬಂಧನವನ್ನು ಕಾನೂನಿಗನುಸಾರವಾಗಿ ರದ್ದುಮಾಡುವಿಕೆ ; ದಾಂಪತ್ಯವಿಚ್ಛೇದನ.

ವಿವಿಕ್ತ (ಗು). ೧. ಬೇರೆ ಮಾಡಲ್ಪಟ್ಟ ; ಪ್ರತ್ಯೇಕಿಸಲ್ಪಟ್ಟ. ೨. ಒಂಟಿಯಾದ. ೩. ಭಿನ್ನವಾದ ; ವಿಶಿಷ್ಟವಾದ. ೪. ಬದಲಾವಣೆ ಮಾಡಲ್ಪಟ್ಟ. ೫. ಪ್ರಸಿದ್ಧವಾದ ; ಪ್ರಖ್ಯಾತವಾದ.

ವಿವಿಧ (ಗು). ನಾನಾ ಬಗೆಯ ; ಬೇರೆಬೇರೆ ರೀತಿಯ.

ವಿವೇಕ (ನಾ). ೧. ಯುಕ್ತಾಯುಕ್ತ ವಿಚಾರ ; ವಿವೇಚನೆ. ೨. ಗುಣದೋಷ ಪರಿಶೀಲನೆ ; ವಿಮರ್ಶೆ. ೩. ನಿಶ್ಚಿತಜ್ಞಾನ ; ಸ್ಪಷ್ಟವಾದ ಅರಿವು. ~ಶೂನ್ಯ = ೧. ವಿವೇಕವನ್ನು ಕಳೆದುಕೊಂಡವನು; ಮೂರ್ಖ. ೨. ವಿಚಾರ ರಹಿತವಾದ ; ವಿವೇಚನೆಯಿಲ್ಲದ.

ವಿವೇಕಿ (ನಾ). ಯುಕ್ತಾಯುಕ್ತ ವಿವೇಚನೆಯುಳ್ಳವನು.

ವಿವೇಚನೆ (ನಾ). ಸಾರಾಸಾರ ವಿಚಾರ; ವಿವೇಕ.

ವಿವೇಚಿಸು (ಕ್ರಿ). ಸಾರಾಸಾರ ವಿಚಾರಮಾಡು ; ಕೂಲಂಕಷವಾಗಿ ವಿಮರ್ಶಿಸು.

ವಿಶಂಕೆ (ನಾ). ಅನುಮಾನ ; ಸಂಶಯ.

ವಿಶದ (ಗು). ೧. ಶುಭ್ರವಾದ ; ಸ್ವಚ್ಛವಾದ. ೨. ಸ್ಪಷ್ಟವಾದ ; ಸ್ಫುಟವಾಗಿ ತಿಳಿಯುವ ; ವಿವರವಾದ. ೩. ಸುಂದರವಾದ.

ವಿಶದೀಕರಿಸು (ಕ್ರಿ). ಸ್ಪಷ್ಟಪಡಿಸು ; ವಿಶದಪಡಿಸು.

ವಿಶಸನ (ನಾ). ೧. ಕತ್ತರಿಸುವಿಕೆ ; ಕಡಿಯುವಿಕೆ. ೨. ಕೊಲೆ ; ಸಂಹಾರ. ೩. ಯುದ್ಧ ; ಕಾಳಗ.

ವಿಶಾಖ (ನಾ). ೧. ಷಣ್ಮುಖ. ೨. = ವಿಶಾಖೆ. (ಗು). ೩. ಬಹಳ ಕೊಂಬೆಗಳಿರುವ. ೪. ಕೊಂಬೆಗಳಿಲ್ಲದ ; ಬೋಳಾದ.

ವಿಶಾಖೆ (ನಾ). ಇಪ್ಪತ್ತೇಳು ನಕ್ಷತ್ರಗಳಲ್ಲಿ ಒಂದು ಮತ್ತು ಆ ನಕ್ಷತ್ರದಲ್ಲಿ ಬರುವ ಮಳೆ.

ವಿಶಾಪ (ನಾ). ಶಾಪವಿಮೋಚನೆ.

ವಿಶಾರದ (ನಾ). ಪ್ರೌಢ ; ಪಂಡಿತ.

ವಿಶಾರದೆ (ನಾ). ಪ್ರೌಢೆ ; ಪರಿಣತೆ.

ವಿಶಾಲ(ಳ) (ಗು). ೧. ದೊಡ್ಡದಾದ; ಹಿರಿಯ. ೨. ಅಗಲವಾದ ; ವಿಸ್ತಾರವಾದ.

ವಿಶಿಖ (ನಾ). ೧. ಬಾಣ ; ಕಣೆ. (ಗು). ೨. ತುದಿಯಿಲ್ಲದ ; ಅಗ್ರಭಾಗವಿಲ್ಲದ.

ವಿಶಿಖೆ (ನಾ). ೧. ಗುದ್ದಲಿ ; ಸನಿಕೆ. ೨. ನೂಲನ್ನು ಸುತ್ತುವ ಸಾಧನ ; ಕದಿರು. ೩. ಅಗಲವಾದ ರಸ್ತೆ.

ವಿಶಿಷ್ಟ (ಗು). ೧. ಬೇರೆಯಾದ ; ಪ್ರತ್ಯೇಕವಾದ. ೨. ಅಸಾಧಾರಣವಾದ; ವಿಶೇಷವಾದ. ೩. ಶ್ರೇಷ್ಠವಾದ ; ಉತ್ತಮವಾದ. ~ಅದ್ವೈತ=ಅದ್ವೈತದ ಒಂದು ಪ್ರಕಾರ.

ವಿಶೀರ್ಣ (ಗು). ೧. ಭೇದಿಸಿದ ; ಚೂರು ಮಾಡಿದ. ೨. ಸೊರಗಿದ ; ಬತ್ತಿದ.

ವಿಶುದ್ಧ (ನಾ). ೧. ಯೋಗಶಾಸ್ತ್ರದ ಒಂದು ಪಾರಿಭಾಷಿಕ ಶಬ್ದ. (ಗು). ೨. ಸಂಪೂರ್ಣವಾಗಿ ಶುದ್ಧವಾದ, –ಸ್ವಚ್ಛವಾದ. ೩. ಪವಿತ್ರವಾದ ; ದೋಷವಿಲ್ಲದ.

ವಿಶೃಂಖಲ (ಗು). ಅನಿರ್ಬಂಧಿತವಾದ ; ಅಡೆತಡೆಯಿಲ್ಲದ.

ವಿಶೇಷ (ನಾ). ೧. ವ್ಯತ್ಯಾಸ; ಭೇದ. ೨. ಹೆಚ್ಚಿನ ಗುಣ ; ವೈಶಿಷ್ಟ್ಯ. ೩. ಪ್ರತ್ಯೇಕವಾದುದು; ವಿಭಿನ್ನವಾದುದು. ೪. ಹೆಚ್ಚುಗಾರಿಕೆ ; ಶ್ರೇಷ್ಠತೆ. ೫. ಸಂಭ್ರಮ. ೬. ಶ್ರಾದ್ಧ ; ಹೆಚ್ಚುಗಟ್ಟಳೆ. (ಗು). ೭. ಅಸಾಮಾನ್ಯವಾದ. ೮. ಅಧಿಕವಾದ ; ಹೆಚ್ಚಿನ. ~ಆತ್ಮ =ಪರಮಾತ್ಮ. ~ಇಸು=೧. ಪ್ರತ್ಯೇಕಿಸು ;

ನಿರ್ದಿಷ್ಟವಾಗಿ ಕಾಣು. ೨. ಅಧಿಕವಾಗು; ಹೆಚ್ಚು.
ವಿಶೇಷಕ (ನಾ). ೧. ಪ್ರಮುಖವ್ಯಕ್ತಿ; ಮುಖ್ಯಸ್ಥ. (ಗು). ೨. ಪ್ರತ್ಯೇಕವಾದ; ವಿಶಿಷ್ಟವಾದ.
ವಿಶೇಷಣ (ನಾ). ೧. ವಿಭಿನ್ನತೆ; ವೈಶಿಷ್ಟ್ಯ. ೨. ವ್ಯಾಕರಣದಲ್ಲಿ ಪದಗಳ ಗುಣವನ್ನು ತಿಳಿಸುವ ಪದ; ಗುಣವಾಚಕ.
ವಿಶೇಷ್ಯ (ನಾ). ೧. ವಿಶೇಷಣದಿಂದ ವಿವರಿಸಲ್ಪಡುವ ಪದ; ನಾಮಪದ. (ಗು). ೨. ಮುಖ್ಯವಾದ; ನಿರ್ದಿಷ್ಟವಾದ.
ವಿಶೋಧಿ (ನಾ). ನೈರ್ಮಲ್ಯ; ಪರಿಶುದ್ಧತೆ.
ವಿಶ್ರಮ (ನಾ). ೧. ವಿಶ್ರಾಂತಿ; ಬಿಡುವು. ೨. ಪದ್ಯಗಳಲ್ಲಿ ನಿಲುಗಡೆಯ ಸ್ಥಳ; ಯತಿ.
ವಿಶ್ರಮಣ = ವಿಶ್ರಮ.
ವಿಶ್ರಾಂತಿ = ವಿಶ್ರಮ. ~ಗೃಹ = ವಿಶ್ರಾಂತಿಯನ್ನು ಪಡೆಯುವುದಕ್ಕೋಸ್ಕರ ಕಟ್ಟಿದ ಮನೆ; ತಂಗುಮನೆ.
ವಿಶ್ರುತ (ಗು). ಪ್ರಖ್ಯಾತಿ ಹೊಂದಿದ; ಪ್ರಸಿದ್ಧವಾದ.
ವಿಶ್ಲಥ (ಗು). ಸಡಿಲಗೊಂಡ; ಅಳ್ಳಕವಾದ.
ವಿಶ್ಲೇಷ (ನಾ). ೧. ಭೇದ; ಒಡಕು. ೨. ಅಗಲಿಕೆ; ವಿಯೋಗ. ೩. ಕಾವ್ಯದೋಷಗಳಲ್ಲಿ ಒಂದು.
ವಿಶ್ಲೇಷಣೆ (ನಾ). ವಿಭಜನೆ; ವಿಂಗಡಿಸುವಿಕೆ.
ವಿಶ್ವ (ನಾ). ೧. ಜಗತ್ತು. ೨. ದೇವತೆಗಳಲ್ಲಿ ಒಂದು ಪಂಗಡ. ೩. ವಿಷ್ಣು. (ಗು). ೪. ಸಕಲ; ಸಂಪೂರ್ಣವಾದ. ~ಕರ್ತ =ಬ್ರಹ್ಮ; ಸೃಷ್ಟಿಕರ್ತ. ~ಕರ್ಮ =೧. ದೇವತೆಗಳ ಶಿಲ್ಪಿ. ೨. ಬ್ರಹ್ಮ. ೩. ಶಿವ. ೪. ಸೂರ್ಯ. ೫. ಮಂತ್ರಿ; ಸಚಿವ. ~ಕುಟುಂಬಿ=೧. ಪರಮಾತ್ಮ. ೨. ಜಗತ್ತೇ ತನ್ನ ಸಂಸಾರವೆಂದು ಭಾವಿಸುವ ವ್ಯಕ್ತಿ. ~ಕೋಶ = ಪ್ರಪಂಚದ ಸಮಸ್ತ ವಿಷಯಗಳನ್ನು ತಿಳಿಸುವ ಗ್ರಂಥ. ~ಪ್ರಯತ್ನ = ಅತಿಶಯವಾದ ಪ್ರಯತ್ನ; ಸರ್ವಪ್ರಯತ್ನ. ~ಮೇಧ = ಪ್ರಪಂಚದ ನಾಶ; ಪ್ರಳಯ. ~ರೂಪ = ೧. ವಿಷ್ಣು. ೨. ಸರ್ವವ್ಯಾಪಿಯಾದ; ಎಲ್ಲ ಕಡೆಗೂ ವ್ಯಾಪಿಸಿದ. ~ವಿದ್ಯಾನಿಲಯ = ಆಧುನಿಕ ಘಟಿಕಾಸ್ಥಾನ; ಉನ್ನತ ವಿದ್ಯಾಭ್ಯಾಸ ಸ್ಥಳ; ಯೂನಿವರ್ಸಿಟಿ. ~ಸಂಸಾರಿ = ವಿಶ್ವಕುಟುಂಬಿ.
ವಿಶ್ವಂಭರ (ನಾ). ೧. ಪರಮಾತ್ಮ. (ಗು). ೨. ಜಗತ್ತನ್ನು ಕಾಪಾಡುವ.
ವಿಶ್ವಂಭರೆ (ನಾ). ವಿಶ್ವವನ್ನು ಹೊತ್ತಿರುವುದು; ಭೂಮಿ.
ವಿಶ್ವತೋಮುಖ (ನಾ). ೧. ಎಲ್ಲ ಕಡೆಗಳಲ್ಲೂ ಮುಖಗಳುಳ್ಳವನು; ಶಿವ. ೨. ಎಲ್ಲ ದಿಕ್ಕು; ದೆಸೆ.
ವಿಶ್ವಸನೀಯ (ಗು). ನಂಬಿಕೆಗೆ ಯೋಗ್ಯವಾದ; ನಂಬಬಹುದಾದ.
ವಿಶ್ವಸಿಸು (ಕ್ರಿ). ನಂಬು; ವಿಶ್ವಾಸವಿಡು.
ವಿಶ್ವಸ್ತ (ನಾ). ವಿಧವೆ; ವಿತಂತು.
ವಿಶ್ವಸ್ಥ (ನಾ). ಧರ್ಮದರ್ಶಿ.
ವಿಶ್ವಾನರ (ನಾ). ಸೂರ್ಯ.
ವಿಶ್ವಾಸ (ನಾ). ೧. ನಂಬಿಕೆ; ಭರವಸೆ. ೨. ಪ್ರೀತಿ; ಸ್ನೇಹ. ೩. ಗುಟ್ಟು; ರಹಸ್ಯ. ~ಇಸು = ವಿಶ್ವಸಿಸು. ~ಘಾತ = ನಂಬಿದವರಿಗೆ ಮಾಡಿದ ದ್ರೋಹ; ವಂಚನೆ. ~ಘಾತಕ = ೧. ನಂಬಿಕೆಗೆ ದ್ರೋಹ ಮಾಡುವವನು. ೨. = ವಿಶ್ವಾಸಘಾತ.
ವಿಶ್ವಾಸಿ (ನಾ). ೧. ನಂಬಿಗಸ್ತ; ಪ್ರಾಮಾಣಿಕ. ೨. ಪ್ರೀತಿಯುಳ್ಳವನು. (ಗು). ೩. ನಂಬಿಕೆಗೆ ತಕ್ಕುದಾದ.
ವಿಷ (ನಾ). ೧. ನಂಜು; ಗರಳ. ೨. ಕಹಿ; ತಿಕ್ತ. ೩. ನೀರು. ೪. ಕ್ರೂರವಾದುದು. ~ಅಂಗನೆ = ವಿಷಕನ್ನಿಕೆ. ~ಉರಗ = ವಿಷವುಳ್ಳ ಸರ್ಪ.

~ಕಂಠ=ನೀಲಕಂಠ; ಶಿವ. ~ಕನ್ನಿಕೆ =ತನ್ನ ಸ್ಪರ್ಶದಿಂದ ಇತರರಿಗೆ ಸಾವುಂಟು ಮಾಡುವ ಹೆಂಗಸು. ~ಕನ್ಯೆ=ವಿಷಕನ್ನಿಕೆ. ~ಗಳಿಗೆ=೧. ಕೆಟ್ಟಗಳಿಗೆ; ಅಶುಭಕಾಲ. ೨. ದುರದೃಷ್ಟದ ಸಮಯ. ~ಗಾಳಿ = ೧. ವಿಷದಿಂದ ಕೂಡಿರುವ ಗಾಳಿ. ೨. ವಿರಸ; ವೈರ. ~ಚಕ್ರ=ಪರಸ್ಪರ ಕೆಟ್ಟ ಪರಿಣಾಮವನ್ನು ಹೊಂದಿರುವಿಕೆ. ~ನಿಮಿಷ= ವಿಷಗಳಿಗೆ. ~ಪರೀಕ್ಷೆ =೧. ವಿಷವನ್ನು ತಿಂದು ನೋಡುವುದು. ೨. ವಿಷವನ್ನು ಪರೀಕ್ಷೆಗೆ ಒಳಪಡಿಸುವುದು. ೩. ಗಂಡಾಂತರವನ್ನು ಮೈಮೇಲೆ ತಂದು ಕೊಳ್ಳುವುದು. ೪. ವಿಷವನ್ನು ಕೊಟ್ಟು ಪರೀಕ್ಷಿಸುವ ದಿವ್ಯ. ~ಪ್ರಯೋಗ = ವಿಷವನ್ನು ನೀಡುವುದು. ~ಪ್ರಾಶನ=೧. ವಿಷಪಾನ; ವಿಷವನ್ನು ಸೇವಿಸುವುದು. ೨. ವಿಷವನ್ನು ತೆಗೆದುಕೊಳ್ಳುವಂತೆ ಮಾಡುವುದು. ~ವೈದ್ಯ = ವಿಷಪರಿಹಾರಕ ಮದ್ದನ್ನು ಕೊಡುವವನು; ಜಾಂಗುಳಿಕ.

ವಿಷಣ್ಣ (ಗು). ೧. ಖಿನ್ನನಾದ; ಖೇದಗೊಂಡ. ೨. ಬಾಡಿದ; ಕುಗ್ಗಿದ.

ವಿಷದಿವ್ಯ (ನಾ). ದಿವ್ಯಗಳಲ್ಲಿ ಒಂದು.

ವಿಷಧರ (ನಾ). ೧. ಹಾವು. ೨. ಮೋಡ. ೩. ಶಿವ. ೪. ರಾಹು. ~ಅಹಿತ=೧. ಹಾವಿನ ಶತ್ರು. ೨. ಗರುಡ. ೩. ನವಿಲು; ಮಯೂರ. ೪. ಚಂದ್ರ.

ವಿಷಧಿ (ನಾ). ಸಮುದ್ರ; ಕಡಲು.

ವಿಷಮ (ನಾ). ೧. ಸಮನಾಗಿಲ್ಲದಿರುವುದು; ಬೆಸ. ೨. ಕಷ್ಟಪರಿಸ್ಥಿತಿ. ೩. ಕಾವ್ಯದೋಷಗಳಲ್ಲಿ ಒಂದು. ೪. ಅರ್ಥಾಲಂಕಾರಗಳಲ್ಲಿ ಒಂದು. (ಗು). ೫. ಸಮತಲವಿಲ್ಲದ; ಏರುಪೇರಾದ. ೬. ಬೆಸಸಂಖ್ಯೆಯ. ೭. ತಿಳಿಯಲು ಕಷ್ಟವಾದ. ೮. ಕಷ್ಟಕರವಾದ. ೯. ಅಸ್ವಾಭಾವಿಕವಾದ; ಸಹಜಸ್ಥಿತಿಗೆ ದೂರವಾದ. ೧೦. ಕೆಟ್ಟ; ದುಷ್ಟ. ೧೧. ಸಂತೋಷವಿಲ್ಲದ; ದುಃಖದಿಂದ ಕೂಡಿದ. ೧೨. ಭಯಂಕರವಾದ. ~ಅಕ್ಷ = ಬೆಸಸಂಖ್ಯೆಯ ಕಣ್ಣುಗಳುಳ್ಳವನು; ಶಿವ. ~ಅಸ್ತ್ರ= ವಿಷಮಬಾಣ. ~ಇಸು = ಪರಿಸ್ಥಿತಿ ಕೆಡು; ವಿಕೋಪಕ್ಕೆ ಹೋಗು. ~ಉರಗ = ಭಯಂಕರವಾದ ಹಾವು. ~ಕಾಲ = ೧. ಅನಾನುಕೂಲದ ಪರಿಸ್ಥಿತಿ. ೨. ಅಶುಭ ಕಾಲ; ಕೆಟ್ಟಕಾಲ. ~ಜ್ವರ = ಅನಿಶ್ಚಿತವಾಗಿ ಬರುವ ಜ್ವರ. ~ಬಾಣ = ಬೆಸಸಂಖ್ಯೆಯ ಬಾಣಗಳುಳ್ಳವನು; ಮನ್ಮಥ.

ವಿಷಯ (ನಾ). ೧. ಇಂದ್ರಿಯಗೋಚರವಾಗುವ ಶಬ್ದ, ಸ್ಪರ್ಶ, ರೂಪ, ರಸ ಮತ್ತು ಗಂಧಗಳೆಂಬ ಜ್ಞಾನೇಂದ್ರಿಯಗಳು. ೨. ಕಿವಿ, ನಾಲಗೆ, ಕಣ್ಣು, ಮೂಗು ಮತ್ತು ಚರ್ಮವೆಂಬ ಐದು ಕರ್ಮೇಂದ್ರಿಯಗಳು. ೩. ಬಯಕೆಯ ವಸ್ತು; ಇಷ್ಟದ ವಸ್ತು. ೪. ಭೋಗಾಭಿಲಾಷೆ; ಕಾಮ. ೫. ಗುರಿ; ಧ್ಯೇಯ. ೬. ಕಾವ್ಯ, ಕತೆ ಮುಂತಾದುವುಗಳ ಕಥಾವಸ್ತು. ೭. ದೇಶ; ನಾಡು. ೮. ಆಶ್ರಯ; ನೆಲೆ. ~ಅಧೀಶ = ನಾಡಿನ ಒಡೆಯ. ~ಅಭಿಲಾಷೆ = ಕಾಮುಕತೆ; ವಿಷಯಲಂಪಟತೆ. ~ಆಸಕ್ತಿ = ಇಂದ್ರಿಯಸುಖದಲ್ಲಿ ಆಸಕ್ತವಾಗಿರುವಿಕೆ. ~ಗ್ರಹಣ = ವಿಷಯವನ್ನು ಅರಿತುಕೊಳ್ಳುವಿಕೆ, – ಗ್ರಹಿಸುವಿಕೆ. ~ಲಂಪಟ = ವಿಷಯಾಸಕ್ತ; ಕಾಮುಕ.

ವಿಷಯಿ (ನಾ). ೧. ವಿಷಯಾಸಕ್ತನಾದವನು. ೨. ಇಂದ್ರಿಯ. ೩. ವಿಷಯವನ್ನು ಅರಿಯುವುದು; ಆತ್ಮ. (ಗು). ೪. ಇಂದ್ರಿಯಗೋಚರವಾದ.

ವಿಷಾಣ (ನಾ). ೧. ಕೋಡು; ಕೊಂಬು. ೨. ಆನೆಯ ಅಥವಾ ಹಂದಿಯ ಕೋರೆ.

ವಿಷಾದ (ನಾ). ೧. ಉತ್ಸಾಹಹೀನತೆ; ನಿರುತ್ಸಾಹ. ೨. ದುಃಖ; ಉಮ್ಮಳ. ೩. ನಂಜುಂಡ; ಶಿವ.

ವಿಷುವ (ನಾ). ಸೂರ್ಯನು ಭೂಮಧ್ಯರೇಖೆಯನ್ನು ಹಾಯುವ ಕಾಲ; ಹಗಲು ಇರುಳು ಒಂದೇ ಪ್ರಮಾಣದಲ್ಲಿರುವ ಕಾಲ.

ವಿಷುವದ್ಬಿಂದು (ನಾ). ಸಂಕ್ರಾಂತಿ ಬಿಂದು.

ವಿಷುವದ್ರೇಖೆ (ನಾ). ಸಮಭಾಜಕ ವೃತ್ತ; ಭೂಮಧ್ಯರೇಖೆ.

ವಿಷುವದ್ವೃತ್ತ = ವಿಷುವದ್ರೇಖೆ.

ವಿಷೂಚಿ (ನಾ). ವಾಂತಿಭೇದಿ; ಕಾಲರಾ.

ವಿಷೂಚಿಕೆ = ವಿಷೂಚಿ.

ವಿಷ್ಕಂಭ (ನಾ). ೧. ಪ್ರತಿಬಂಧ; ಅಡ್ಡಿ; ವಿಘ್ನ. ೨. ಅಗುಳಿ; ಲಾಳವಿಂಡಿಗೆ. ೩. ವಿಸ್ತಾರ; ಹರವು. ೪. ನಾಟಕ ಅಥವಾ ದೃಶ್ಯಕಾವ್ಯಗಳಲ್ಲಿ ಹಿಂದೆ ನಡೆದುಹೋದ ಮತ್ತು ಮುಂದೆ ನಡೆಯುವ ಕಥಾಂಶವನ್ನು ತಿಳಿಸುವ ದೃಶ್ಯ.

ವಿಷ್ಟ (ನಾ). ೧. ಅಶುಭ; ಅಮಂಗಳ. ೨. ಪಾಪ; ದೋಷ.

ವಿಷ್ಟಪ (ನಾ). ಜಗತ್ತು; ವಿಶ್ವ.

ವಿಷ್ಟರ (ನಾ). ೧. ಹಾಸುಗೆ. ೨. ಆಸನ; ಗದ್ದುಗೆ.

ವಿಷ್ಟಿ = ಬಿಟ್ಟಿ.

ವಿಷ್ಟೆ (ನಾ). ಮಲ; ಅಮೇಧ್ಯ.

ವಿಷ್ಣು (ನಾ). ತ್ರಿಮೂರ್ತಿಗಳಲ್ಲಿ ಒಬ್ಬ; ನಾರಾಯಣ. ~ನಕ್ಷತ್ರ = ವಿಷ್ಣುವಿನಿಂದ ಅಧಿಷ್ಠಿತವಾದ ನಕ್ಷತ್ರ; ಶ್ರವಣನಕ್ಷತ್ರ. ~ಪದ = ೧. ವೈಕುಂಠ; ಮೋಕ್ಷ. ೨. ಆಕಾಶ.

ವಿಷ್ಣುಕಾಂತಿ = ವಿಷ್ಣುಕ್ರಾಂತಿ.

ವಿಷ್ಣುಕ್ರಾಂತಿ (ನಾ). ಒಂದು ಜಾತಿಯ ಬಳ್ಳಿ ಮತ್ತು ಅದರ ಹೂವು.

ವಿಷ್ವಕ್ಸೇನ (ನಾ). ೧. ನಾರಾಯಣ. ೨. ಯಾದವರ ಒಬ್ಬ ಸೇನಾಪತಿ.

ವಿಸ (ನಾ). ೧. ನಂಜು; ವಿಷ. ೨. ತಾವರೆ ದಂಟಿನೊಳಗಿನ ಎಳೆ; ಬಿಸಜತಂತು.

ವಿಸಂಗತಿ (ನಾ). ಹೊಂದಾಣಿಕೆ ಇಲ್ಲದಿರುವಿಕೆ; ಅಸಂಬದ್ಧತೆ.

ವಿಸಂಚ (ನಾ). ೧. ಚಂಚಲವಾದುದು; ಅಸ್ಥಿರವಾದುದು. ೨. ಕಪಟ; ಮೋಸ.

ವಿಸಂಚಿಸು (ಕ್ರಿ). ೧. ಚೂರು ಮಾಡು; ತುಂಡುಮಾಡು. ೨. ಸಾಮರ್ಥ್ಯವನ್ನು ಕಳೆದುಕೊಳ್ಳು; ಶಕ್ತಿಗುಂದು.

ವಿಸಂಧಿ (ನಾ). ೧. ಹೊಂದಿಕೆಯಾಗದಿರುವಿಕೆ; ಸರಿಹೊಂದದೆ ಇರುವಿಕೆ. ೨. ಒಪ್ಪಂದ ಅಥವಾ ಕರಾರು ಮುರಿಯುವಿಕೆ. ೩. ವ್ಯಾಕರಣದಲ್ಲಿ ಸಂಧಿಯಾಗದಿರುವಿಕೆ.

ವಿಸಟ (ನಾ). ೧. ಸ್ವೇಚ್ಛಾಚಾರ. (ಅ). ೨. ಯಥೇಚ್ಛವಾಗಿ; ಮನಬಂದಂತೆ. ~(ಂ)ಪ(ಬ)ರಿ = ೧. ಹರಡು; ಹಬ್ಬು; ವ್ಯಾಪಿಸು. ೨. ಯಥೇಚ್ಛವಾಗಿ ಆಚರಿಸು; ಮನಬಂದಂತೆ ನಡಸು. ೩. ಮೇರೆಮೀರು; ಬೀದಿವರಿ. ೪. ಮನಸ್ಸು ಬಂದಂತೆ ನಡೆಯುವುದು; ಸ್ವೇಚ್ಛಾಚಾರ.

ವಿಸರ (ನಾ). ೧. ಹಬ್ಬುವುದು; ಹರಡುವುದು. ೨. ಗುಂಪು; ಸಮೂಹ. ೩. ಹಿಂಡು; ಮಂದೆ.

ವಿಸರುಹ = ಬಿಸರುಹ.

ವಿಸರ್ಗ (ನಾ). ೧. ಬಿಡುವಿಕೆ; ತ್ಯಜಿಸುವಿಕೆ. ೨. ನಾಶ. ೩. ನಾಲ್ಕು ಜಿಹ್ವಾಮೂಲೀಯಗಳಲ್ಲಿ ಒಂದು.

ವಿಸರ್ಜನೆ (ನಾ). ೧. ಬಿಡುವುದು; ತ್ಯಜಿಸುವುದು. ೨. ಕಳುಹಿಸುವುದು; ಬೀಳ್ಕೊಡುವುದು. ೩. ದಾನ; ಕೊಡುಗೆ.

ವಿಸರ್ಜಿಸು (ಕ್ರಿ). ೧. ತ್ಯಜಿಸು; ಬಿಡು. ೨. ಕಳುಹಿಸಿಕೊಡು; ಬೀಳ್ಕೊಡು.

ವಿಸರ್ಪ (ನಾ). ೧. ಹರಡುವಿಕೆ; ವ್ಯಾಪಿಸುವಿಕೆ. ೨. ಒಂದು ಬಗೆಯ ಚರ್ಮರೋಗ.

ವಿಸರ್ಪಣ ೧. = ವಿಸರ್ಪ. ೨. ಕಜ್ಜಿ ಮುಂತಾದುವು ವ್ಯಾಪಿಸುವಿಕೆ.

ವಿಸಸನ = ವಿಶಸನ.

ವಿಸುಮಯ = ವಿಸ್ಮಯ.

ವಿಸ್ತರ (ನಾ). ೧. ವಿಸ್ತಾರ; ವ್ಯಾಪ್ತಿ. ೨. ವಿವರಣೆ; ವ್ಯಾಖ್ಯಾನ. ೩. ಹಾಸಿಗುದು; ಹಾಸುಗೆ, ಚಾಪೆ ಮುಂತಾದುವು. ~ಇಸು = ೧. ಹಬ್ಬು; ಹರಡು. ೨. ಬೆಳಸು; ಹೆಚ್ಚಿಸು. ೩. ಬೆಳೆ; ವೃದ್ಧಿಹೊಂದು. ೪. ವಿವರಿಸು; ಬಣ್ಣಿಸು; ವರ್ಣಿಸು.

ವಿಸ್ತರಣ ೧. = ವಿಸ್ತರಣೆ. ೨. ಬಡಾವಣೆ.

ವಿಸ್ತರಣೆ (ನಾ). ವಿಸ್ತಾರ; ಹರಹು.

ವಿಸ್ತಾರ (ನಾ). ೧. ಹರಹು; ವಿಸ್ತೀರ್ಣ; ಹಬ್ಬಿರುವುದು. ೨. ವಿವರವಾದುದು; ವಿಶದವಾದುದು. ~ಇಸು = ವಿಸ್ತರಿಸು.

ವಿಸ್ತಾರಕ (ನಾ). ೧. ಬೆಳಸುವವನು; ವೃದ್ಧಿಪಡಿಸುವವನು. ೨. ವಿವರಿಸುವವನು; ವ್ಯಾಖ್ಯಾನವನ್ನು ಹೇಳುವವನು.

ವಿಸ್ತೀರ್ಣ (ನಾ). ಅಗಲ; ವಿಸ್ತಾರ.

ವಿಸ್ಫಾರ (ನಾ). ೧. ಬಿಲ್ಲಿನ ಹೆದೆಯ ಧ್ವನಿ; ಧನುಷ್ಟಂಕಾರ. ೨. = ವಿಸ್ಫುರಣ. ೩. ಅಗಲವಾಗಿ ತೆರೆಯುವುದು.

ವಿಸ್ಫುಟ (ಗು). ಸ್ಪಷ್ಟವಾದ; ಚೆನ್ನಾಗಿ ತಿಳಿಯುವ.

ವಿಸ್ಫುರಣ (ನಾ). ಹೊಳಪು; ಪ್ರಕಾಶ.

ವಿಸ್ಫುಲಿಂಗ (ನಾ). ಬೆಂಕಿಯ ಕಿಡಿ.

ವಿಸ್ಮಯ (ನಾ). ಆಶ್ಚರ್ಯ; ಅಚ್ಚರಿ.

ವಿಸ್ಮರಣ (ನಾ). ನೆನಪಿಲ್ಲದಿರುವಿಕೆ; ಮರವೆ.

ವಿಸ್ಮಿತ (ಗು). ಸೋಜಿಗಗೊಂಡ; ಆಶ್ಚರ್ಯಪಟ್ಟ.

ವಿಸ್ಮೃತಿ = ವಿಸ್ಮರಣ.

ವಿಸ್ರಂಭ (ನಾ). ನಂಬಿಕೆ; ವಿಶ್ವಾಸ.

ವಿಹ(ಂ)ಗ ೧. = ವಿಹಂಗಮ. ೨. ಮೋಡ; ಮೇಘ.

ವಿಹಂಗಮ (ನಾ). ೧. ಆಕಾಶದಲ್ಲಿ ಚಲಿಸುವುದು. ೨. ಪಕ್ಷಿ. ೩. ಸೂರ್ಯ. ~ನೋಟ = ಪಕ್ಷಿಗಳಂತೆ ಎತ್ತರದಿಂದ ನೋಡಿ ವಿಷಯವನ್ನು ಗ್ರಹಿಸುವ ನೋಟ; ಸ್ಥೂಲಾವಲೋಕನ.

ವಿಹರಣ (ನಾ). ೧. ತಿರುಗಾಟ; ಅಲೆದಾಟ. ೨. ವಿಹಾರ; ವಿನೋದವಾಗಿ ಕಾಲ ಕಳೆಯುವುದು.

ವಿಹರಿಸು (ಕ್ರಿ). ೧. ಅಲೆದಾಡು; ತಿರುಗಾಡು. ೨. ವಿನೋದವಾಗಿ ಕಾಲಕಳೆ; ವಿಹಾರ ಮಾಡು.

ವಿಹಾರ ೧. = ವಿಹರಣ. ೨. ಬೌದ್ಧ ಅಥವಾ ಜೈನ ಭಿಕ್ಷುಗಳ ವಾಸಸ್ಥಾನ; ಚೈತ್ಯಾಲಯ. ೩. ಅರಮನೆ.

ವಿಹಿತ (ಗು). ೧. ಇಟ್ಟ; ಇಡಲ್ಪಟ್ಟ. ೨. ಯೋಗ್ಯ; ಸರಿಯಾದ. ೩. ಕೂಡಿಸಿದ; ಹೊಂದಿಸಿದ.

ವಿಹೀನ (ಗು). ೧. ತೊರೆದ; ಬಿಟ್ಟ. ೨. ಇಲ್ಲದ; ಕಳೆದುಕೊಂಡ.

ವಿಹ್ವಲ(ಳ) (ನಾ). ೧. ಗಾಬರಿ; ದಿಗ್ಭ್ರಮೆ. (ಗು). ೨. ವ್ಯಾಕುಲಗೊಂಡ; ದುಃಖಿತ. ೩. ಗೊಂದಲದಲ್ಲಿ ಬಿದ್ದ; ಗಾಬರಿಗೊಂಡ.

ವಿಳಂಗ = ವಿಡಂಗ.

ವೀಕ್ಷಕ (ನಾ). ನೋಡುವವನು. ~ವಿವರಣೆ = ಯಾವುದಾದರೊಂದು ಕಾರ್ಯಕ್ರಮವು ನಡೆಯುತ್ತಿರುವಾಗಲೇ ಇತರರಿಗೆ ವಿವರವನ್ನು ಪ್ರಸಾರಮಾಡುವಿಕೆ.

ವೀಕ್ಷಣ (ನಾ). ೧. ನೋಟ; ದೃಷ್ಟಿ. ೨. ಪರಿಶೀಲನೆ.

ವೀಕ್ಷಣೆ = ವೀಕ್ಷಣ.

ವೀಕ್ಷೆ (ನಾ). ನೋಡುವಿಕೆ; ನೋಟ. ~ಇಸು = ೧. ನೋಡು. ೨. ನಿರೀಕ್ಷಿಸು; ಎದುರುನೋಡು.

ವೀಚಿ (ನಾ). ಅಲೆ; ತೆರೆ.

ವೀಜನ (ನಾ). ೧. ಬೀಸುವಿಕೆ. ೨. ಬೀಸಣಿಗೆ; ಆಲವಟ್ಟ.

ವೀಟಿ = ವೀಳಯ.

ವೀಟಿಕೆ = ವೀಳಯ.

ವೀಣೆ (ನಾ). ಒಂದು ಬಗೆಯ ತಂತಿವಾದ್ಯ.

ವೀತಿಹೋತ್ರ (ನಾ). ಅಗ್ನಿ ; ಬೆಂಕಿ.

ವೀಥಿ (ನಾ). ೧. ಓಳಿ ; ಸಾಲು ; ಪಂಕ್ತಿ. ೨. ಬೀದಿ ; ಮಾರ್ಗ ; ರಸ್ತೆ. ೩. ಗುಂಪು ; ಸಮೂಹ.

ವೀಪ್ಸೆ (ನಾ). ಪುನರುಕ್ತಿ ; ಆವೃ

ವೀರ (ನಾ). ೧. ಕಾವ್ಯದ ನವರಸಗಳಲ್ಲಿ ಒಂದು. ೨. ಪ್ರತಾಪ; ಪರಾಕ್ರಮ. ೩. ಶೂರ ; ಕಲಿ. ೪. ಅಗ್ನಿ ; ಬೆಂಕಿ. (ಗು). ೫. ಶೂರನಾದ. ೬. ಶಕ್ತಿಯುತವಾದ ; ಬಲಿಷ್ಠವಾದ. ೭. ಅತ್ಯುತ್ತಮವಾದ. ~ಆಸನ = ವೀರಮಂಡಿ. ~(೦)ಪೆ(ಬೆ)ಱು(ರು)=ಪರಾಕ್ರಮವನ್ನು ಹೊಂದು ; ಶೌರ್ಯವನ್ನು ತಾಳು. ~ಕಂಕಣ = ಶೌರ್ಯದ ಗುರುತಿಗಾಗಿ ಧರಿಸುವ ಕೈಬಳೆ. ~ಕ(ಗ)ಚ್ಚೆ = ವೀರರು ಹಾಕಿಕೊಳ್ಳುವ ಒಂದು ಬಗೆಯ ಕಚ್ಚೆ ; ವೀರಗಾಸೆ. ~ಕ(ಗ)ಲ್ಲು = ಯುದ್ಧದಲ್ಲಿ ಸತ್ತ ವೀರನ ನೆನಪಿಗಾಗಿ ನೆಟ್ಟ ಕಲ್ಲು. ~ಕಾವ್ಯ = ಶೌರ್ಯ ಸಾಹಸಗಳ ವರ್ಣನೆಯನ್ನು ಉಳ್ಳ ಕಾವ್ಯ. ~ಕಾ(ಗಾ)ಸೆ = ವೀರಗಚ್ಚೆ. ~ಗಾಥೆ = ವೀರರ ಶೌರ್ಯವನ್ನು ಕುರಿತ ಹಾಡು. ~ತ(ದ)ಂಬುಲ = ಯುದ್ಧಕ್ಕೆ ಹೊರಡುವ ಪೂರ್ವದಲ್ಲಿ ವೀರರಿಗೆ ಕೊಡುವ ವೀಳ್ಯ. ~ಪಟ್ಟ=ಸೇನಾಧಿಪತ್ಯ ; ಸೈನ್ಯದ ನಾಯಕತ್ವ. ~ಪ(ವ)ಱೆ(ರೆ) = ರಣವಾದ್ಯ. ~ಭಟ=ವೀರಯೋಧ ; ಶೂರ. ~ಮಂಡಿ = ಬಾಣಪ್ರಯೋಗ ಮಾಡಲು ಮಂಡಿಯೂರುವ ಒಂದು ಭಂಗಿ. ~ಮುದ್ರೆ = ೧. ವೀರಚರ್ಯೆ ; ಶೌರ್ಯರೂಪ. ೨. ವೀರರು ಕಾಲಿನಲ್ಲಿ ತೊಡುವ ಮುದ್ರಿಕೆ, –ಪೆಂಡೆಯ. ~ಶೈವ=೧. ಶೈವರಲ್ಲಿ ಒಂದು ಪ್ರಭೇದ. ೨. ಲಿಂಗವಂತ ; ಲಿಂಗಾಯಿತ. ~ಸೇಸೆ = ವೀರರ ಹಣೆಗೆ ಹಚ್ಚುವ ಅಕ್ಷತೆ.

ವೀರಣ (ನಾ). ೧. ಮಂಗಳಪ್ರಸಂಗಗಳಲ್ಲಿ ಬಾರಿಸುವ ಜೋಡು ತಮಟೆ. ೨. ಒಂದು ಜಾತಿಯ ಸುಗಂಧದ ಹುಲ್ಲು.

ವೀರ್ಯ (ನಾ). ೧. ಶಕ್ತಿ ; ಸಾಮರ್ಥ್ಯ ; ಪರಾಕ್ರಮ. ೨. ಧೈರ್ಯ ; ಸಾಹಸ. ೩.ಕಾಂತಿ ; ಹೊಳಪು. ೪.ರೇತಸ್ಸು; ಶುಕ್ಲ.

ವೀಸ (ನಾ). ೧. ಆಣೆಯ ಹದಿನಾರನೆಯ ಒಂದು ಭಾಗ; ಒಂದು ನಾಣ್ಯ. ೨. ಸ್ವಲ್ಪ ; ಕೊಂಚ. ೩. = ವೀಸೆ.

ವೀಸೆ (ನಾ). ಒಂದು ಅಳತೆಯ ಪ್ರಮಾಣ ; ಐದುಸೇರು.

ವೀಳಯ (ನಾ). ೧. ಒಂದು ಜಾತಿಯ ಬಳ್ಳಿ ಮತ್ತು ಅದರ ಎಲೆ. ೨. ತಾಂಬೂಲ.

ವೀಳಿಗೆ = ವೀಳಯ.

ವೀಳೆ = ವೀಳಯ.

ವೀಳೆಯ = ವೀಳಯ. ~(೦)ಕೊ(ಗೊ)ಡು = ೧. ತಾಂಬೂಲವನ್ನು ಕೊಡು. ೨. ಒಪ್ಪಿಗೆ ಕೊಡು ; ಸಮ್ಮತಿಸು. ೩. ಸನ್ಮಾನ ಮಾಡು. ೪. ಆಮಂತ್ರಿಸು ; ಕರೆ. ~ಶಾಸ್ತ್ರ = ಲಗ್ನ ನಿಶ್ಚಯದ ಸಮಾರಂಭ ; ನಿಶ್ಚಿತಾರ್ಥ.

ವೀಳ್ಯ = ವೀಳಯ.

ವೃಂತ (ನಾ). ೧. ದೇಟು ; ತೊಟ್ಟು. ೨. ಚೂಚುಕ. ~ಫಲ = ಬದನೆಕಾಯಿ.

ವೃಂತಾಕ (ನಾ). ಬದನೆ.

ವೃಂದ (ನಾ). ೧. ರಾಶಿ; ಮೊತ್ತ. ೨. ಸಮೂಹ; ಗುಂಪು. ~ಗಾನ = ಸಾಮೂಹಿಕ ಗಾಯನ.

ವೃಂದಾರಕ (ನಾ). ೧. ದೇವತೆ. ೨. ಆನೆ. ೩. ಮೋಡ ; ಮೇಘ. ೪. ಒಂದು ಜಾತಿಯ ಮರ. (ಗು). ೫. ಶ್ರೇಷ್ಠ; ಅತ್ಯುತ್ತಮವಾದ.

ವೃಂದಾವನ = ಬೃಂದಾವನ.

ವೃಕ (ನಾ). ತೋಳ. ~ಉದರ = ೧. ಭೀಮಸೇನ. ೨. ಹೊಟ್ಟೆಬಾಕ; ತಿನಾಳಿ.

ವೃಕ್ಷ (ನಾ). ಮರ; ಗಿಡ. ~ಮೂಲ=ಮರದ ಬೊಡ್ಡೆ, -ಕಾಂಡ. ~ವಾಟಿಕೆ=೧. ಮರಗಳ ಗುಂಪು; ತೋಪು. ೨. ಉಪವನ; ತೋಟ.

ವೃಜಿನ (ನಾ). ೧. ಪಾಪ; ಅಪರಾಧ. ೨. ದುಃಖ; ವೇದನೆ. ೩. ರೋಗ; ರುಜಿನ. ೪. ಗುಂಗುರು ಕೂದಲು; ಸುರುಳಿಗೂದಲು. (ಗು). ೫. ಬಾಗಿದ; ಕೊಂಕಿದ.

ವೃತಿ (ನಾ). ಬೇಲಿ; ಆವರಣ.

ವೃತ್ತ ೧. = ವೃತ್ತಾಂತ. ೨. ಉದ್ಯೋಗ; ವ್ಯವಹಾರ. ೩. ಸುತ್ತು; ಪರಿಧಿ. ೪. ಸೊನ್ನೆ; ಶೂನ್ಯ. ೫. ಗುಂಡಾಗಿರುವುದು; ವರ್ತುಲ. ೬. ಒಂದು ಪದ್ಯಜಾತಿ. (ಗು). ೭. ಬಳಸಿದ; ಸುತ್ತುವರಿದ. ೮. ಗುಂಡಗಿನ; ವರ್ತುಲಾಕಾರವಾದ. ~ಪತ್ರ=ಸಮಾಚಾರವನ್ನು ತಿಳಿಸುವ ಪತ್ರಿಕೆ. ~ಪತ್ರಿಕೆ = ವೃತ್ತಪತ್ರ.

ವೃತ್ತಕ (ನಾ). ೧. ಸಮಾಚಾರ; ಸಂಗತಿ. ೨. ಚರಿತ್ರೆ; ಕಥೆ. ೩. ಕಾರ್ಯ; ಉದ್ಯೋಗ.

ವೃತ್ತಾಂತ (ನಾ). ೧. ಸಮಾಚಾರ; ಸುದ್ದಿ. ೨. ಘಟನೆ; ಸಂಗತಿ. ~ಪತ್ರಿಕೆ = ವೃತ್ತಪತ್ರ.

ವೃತ್ತಿ (ನಾ). ೧. ತಿರುಗುವಿಕೆ. ೨. ವೃತ್ತ; ಪರಿಧಿ. ೩. ಸ್ಥಿತಿ; ಅವಸ್ಥೆ. ೪. ನಡತೆ; ಚರ್ಯೆ. ೫. ಟೀಕೆ; ವ್ಯಾಖ್ಯಾನ. ೬. ರೂಢಿ; ಉಪಯೋಗ. ೭. ಉದ್ಯೋಗ; ಕಸಬು. ೮. ಕಾವ್ಯದ ಒಂದು ಅರ್ಥವಿಶೇಷ; ಪದರಚನೆಯಿಂದ ಬೇರೆಯಾದುದು. ~ಶಿಕ್ಷಣ = ಉದ್ಯೋಗವನ್ನು ಕಲಿಸುವಿಕೆ.

ವೃಥಾ (ಅ). ೧. ನಿಷ್ಕಾರಣವಾಗಿ; ಸುಮ್ಮನೆ. ೨. ವ್ಯರ್ಥವಾಗಿ; ನಿಷ್ಪ್ರಯೋಜಕವಾಗಿ.

ವೃಥೆ = ವೃಥಾ. ~ಕ(ಗ)ಳೆ=ನಿಷ್ಫಲವಾಗಿಸು; ನಿಷ್ಪ್ರಯೋಜಕಗೊಳಿಸು.

ವೃದ್ಧ (ನಾ). ೧. ವಯಸ್ಸಾದವನು; ಮುದುಕ; ಹಿರಿಯ. ೨. ಗೌರವಕ್ಕೆ ಪಾತ್ರನಾದವನು; ಪೂಜ್ಯ. (ಗು). ೩. ಮುದಿಯಾದ; ಮುಪ್ಪಾದ. ೪. ಬೆಳೆದ; ವರ್ಧಿಸಿದ. ೫. ವಿವೇಕವುಳ್ಳ.

ವೃದ್ಧಾಪ್ಯ (ನಾ). ಮುಪ್ಪು; ಮುದಿತನ.

ವೃದ್ಧಿ (ನಾ). ೧. ಏಳಿಗೆ; ಬೆಳವಣಿಗೆ. ೨. ಆಧಿಕ್ಯ; ಹೆಚ್ಚಳ. ೩. ಬಡ್ಡಿ. ೪. ಲಾಭ; ಆದಾಯ. ೫. ಐಶ್ವರ್ಯ; ಸಂಪತ್ತು. ೬. ಮಗುವಿನ ಜನನ ಸಂಬಂಧವಾದ ಮೈಲಿಗೆ; ಪುರುಡು.

ವೃದ್ಧೆ (ನಾ). ವಯಸ್ಸಾದ ಹೆಂಗಸು; ಮುದುಕಿ.

ವೃಶ್ಚಿಕ (ನಾ). ೧. ಚೇಳು. ೨. ಜ್ಯೋತಿಶ್ಚಕ್ರದ ಹನ್ನೆರಡು ರಾಶಿಗಳಲ್ಲಿ ಒಂದು.

ವೃಷ ೧. = ವೃಷಭ. ೨. ಇಂದ್ರ. ೩. ಧರ್ಮ; ನೀತಿ. ೪. ಇಲಿ. ~ಕೇತು = ೧. ಶಿವ. ೨. ಗಣಪತಿ. ~ಧ್ವಜ = ವೃಷಕೇತು. ~ಮಾರ್ಗ = ಧರ್ಮಾಚಾರ.

ವೃಷಣ (ನಾ). ಅಂಡಕೋಶ; ತರುಡು.

ವೃಷಭ (ನಾ). ೧. ಎತ್ತು; ಗೂಳಿ. ೨. ಶಿವನ ವಾಹನ; ನಂದಿ. ೩. ಜ್ಯೋತಿಶ್ಚಕ್ರದ ಹನ್ನೆರಡು ರಾಶಿಗಳಲ್ಲಿ ಒಂದು. ೪. ಶ್ರೇಷ್ಠವಾದುದು; ಅತ್ಯುತ್ತಮವಾದುದು. ೫. ಶ್ರೇಷ್ಠನಾದವನು. ೬. ಜೈನತೀರ್ಥಂಕರರಲ್ಲಿ ಒಬ್ಬ.

ವೃಷಲ (ನಾ). ಶೂದ್ರ.

ವೃಷಲಿ(ಳಿ) (ನಾ). ೧. ಶೂದ್ರಸ್ತ್ರೀ. ೨. = ವೃಷಳಿ.

ವೃಷಳಿ (ನಾ). ಋತುಮತಿಯಾದ ಕನ್ಯೆ.

ವೃಷ್ಟಿ (ನಾ). ಮಳೆ.
ವೃಷ್ಯ (ಗು). ಕಾಮೋತ್ತೇಜಕವಾದ.
ವೆಂಗಿ (ನಾ). ೧. ತಿಳಿಗೇಡಿ; ಮೂಢ. ೨. ಒಂದು ನಾಡಿನ ಹೆಸರು.
ವೆಂಟಣಿಸು (ಕ್ರಿ). ೧. ಮುತ್ತು ; ಬಳಸು. ೨. ವ್ಯಾಪಿಸು ; ಹರಡು. ೩. ಅಭಿವೃದ್ಧಿ ಹೊಂದು ; ಬೆಳೆ. ೪. ಬಳಸಲ್ಪಡು ; ಆವರಿಸಲ್ಪಡು. ೫. ಸೀಳು ; ಒಡೆ. ೬. ನಮಸ್ಕರಿಸು ; ವಂದಿಸು.
ವೆಂಟೆಯ (ನಾ). ಒಂದು ಬಗೆಯ ಆಭರಣ.
ವೆಂಠಣಿಸು = ವೆಂಟಣಿಸು.
ವೆಂತರ = ಬೆಂತರ.
ವೆಕ್ಕಸ (ನಾ). ೧. ಒರಟು ; ದೊರಗು ; ಬಿರುಸು. ೨. ಕ್ರೌರ್ಯ ; ನಿರ್ದಯತೆ. ೩. ಬೆಕ್ಕಸ ; ಆಶ್ಚರ್ಯ. (ಗು). ೪. ಅಧಿಕವಾದ ; ಬಹಳ. ೫. ಕಠೋರವಾದ ; ಕ್ರೂರವಾದ.
ವೆಕ್ಕಸಂ (ಅ). ಅಧಿಕವಾಗಿ ; ಹೆಚ್ಚಾಗಿ.
ವೆಗಟು (ನಾ). ತಳಹತ್ತಿದ ವಾಸನೆ ; ಸೀಕಲು ವಾಸನೆ.
ವೆಗ್ಗಳ ೧. = ವೆಗ್ಗಳಿಕೆ. ೨. ಶ್ರೇಷ್ಠವ್ಯಕ್ತಿ ; ಗಣ್ಯ. ~ಇಕೆ = ೧. ಹೆಚ್ಚಳ ; ಆಧಿಕ್ಯ. ೨. ಶ್ರೇಷ್ಠತೆ; ಹೆಚ್ಚುಗಾರಿಕೆ.
ವೆಗ್ಗಳಿಯ (ನಾ). ಶ್ರೇಷ್ಠವ್ಯಕ್ತಿ.
ವೆಚ್ಚ (ನಾ). ವ್ಯಯ ; ಖರ್ಚು. ~ಇಸು = ವ್ಯಯಮಾಡು ; ಖರ್ಚು ಮಾಡು.
ವೆಜ್ಜ (ನಾ). ತೂತು ; ರಂಧ್ರ ; ಕಂಡಿ.
ವೆಡ್ಡೈಸು (ಕ್ರಿ). ಸುತ್ತುವರಿ ; ಮುತ್ತು.
ವೆಱ(ರ)ಂ (ಅ). ನಿಶ್ಚಯವಾಗಿ ; ಖಂಡಿತವಾಗಿ.
ವೆಸನಿ = ಬೆಸನಿ.
ವೇಗ (ನಾ). ೧. ತ್ವರೆ ; ಶೀಘ್ರತೆ. ೨. ರಭಸ ; ಆವೇಗ. ೩. ಒತ್ತಡ. ೪. ಒಂದು ಬಗೆಯ ವಿಷ. ~ಆಯ್ಲ = ೧. ವೇಗವುಳ್ಳವನು. ೨. ಓಡುತ್ತ ಹೋಗಿ ಸುದ್ದಿಯನ್ನು ಮುಟ್ಟಿಸುವವನು ; ಹರಿಕಾರ. ೩. ಅತಿಶಯವಾದ ಶೀಘ್ರತೆ.
ವೇಡಿಕೆ (ನಾ). ವಿನೋದ ; ತಮಾಷೆ.
ವೇಡಿಸು = ವೆಡ್ಡೈಸು.
ವೇಡೆ (ನಾ). ೧. ಆಕ್ರಮಣ ; ಮುತ್ತಿಗೆ. ೨. ಆವರಣ ; ಬೇಲಿ.
ವೇಡೆಯ ೧. = ವೇಡೆ. ೨. ಕುದುರೆಗಳನ್ನು ವರ್ತುಲಾಕಾರವಾಗಿ ನಿಲ್ಲಿಸುವುದು ; ಹಯ ಮಂಡಲ.
ವೇಡೈಸು = ವೆಡ್ಡೈಸು.
ವೇಣಿ (ನಾ). ೧. ಜಡೆ ; ಹೆರಳು. ೨. ನದಿ ; ಪ್ರವಾಹ.
ವೇಣೀಬಂಧ (ನಾ). ೧. ಜಡೆ ; ಹೆರಳು. ೨. = ವೇಣೀಸಂಹಾರ.
ವೇಣೀಸಂಹಾರ (ನಾ). ೧. ಜಡೆಯನ್ನು ಹೆಣೆಯುವಿಕೆ. ೨. ಕೂದಲನ್ನು ಕೂಡಿಸುವುದು.
ವೇಣು (ನಾ). ೧. ಬಿದಿರು ; ಕಳಲೆ. ೨. ಬಿದಿರಿನಿಂದ ಮಾಡಿದ ಒಂದು ಬಗೆಯ ವಾದ್ಯ ; ಕೊಳಲು.
ವೇತಂಡ (ನಾ). ಆನೆ ; ಗಜ.
ವೇತನ (ನಾ). ೧. ಸಂಬಳ ; ಪಗಾರ. ೨. ಯಾವುದಾದರೂ ಉದ್ದೇಶದಿಂದ ಕೊಡುವ ಸಹಾಯಧನ.
ವೇತಸ (ನಾ). ಬೆತ್ತ ; ವೇತ್ರ.
ವೇತಾಲ(ಳ) = ಬೇತಾಲ.
ವೇತ್ತೃ (ನಾ). ತಿಳಿದವನು ; ಜ್ಞಾನಿ.
ವೇತ್ರ ೧. = ವೇತಸ. ೨. ಕೋಲು ; ದಂಡ. ~ಇಗ = ವೇತ್ರಧರ.
ವೇತ್ರಧರ (ನಾ). ದ್ವಾರಪಾಲಕ ; ಕಟ್ಟಿಗೆಕಾರ.
ವೇದ (ನಾ). ೧. ತಿಳಿವಳಿಕೆ ; ಜ್ಞಾನ. ೨. ನಾಲ್ಕು ಆಗಮಗಳಲ್ಲಿ ಒಂದು. ೩. ಷಡ್ದರ್ಶನಗಳಲ್ಲಿ ಒಂದು. ೪. ಬ್ರಹ್ಮ. ೫. ಸೂರ್ಯ. ~ಅಂಗ = ಶಿಕ್ಷೆ, ಛಂದಸ್ಸು,

ವ್ಯಾಕರಣ, ನಿರುಕ್ತ, ಜ್ಯೋತಿಷ ಮತ್ತು ಕಲ್ಪಗಳೆಂಬ ವೇದಾಭ್ಯಾಸದ ಆರು ಭಾಗಗಳು. ~ಅಂತ = ವೇದದ ಕಡೆಯ ಭಾಗ. ~ಅತೀತ = ವೇದಕ್ಕೆ ನಿಲುಕದವನು; ಪರಮಾತ್ಮ. ~ಅಧ್ಯಯನ = ವೇದಗಳನ್ನು ಓದುವುದು. ~ಗರ್ಭ = ಬ್ರಹ್ಮ. ~ಜನಕ = ವಿಷ್ಣು. ~ಜನನಿ = ವೇದಗಳ ಜನನಿ; ಗಾಯತ್ರಿ. ~ಪಾರಂಗತ = ವೇದವನ್ನು ಚೆನ್ನಾಗಿ ತಿಳಿದವನು. ~ಪಾರಾಯಣ = ವೇದವನ್ನು ಓದುವಿಕೆ. ~ವಾಕ್ಯ = ೧. ವೇದದಲ್ಲಿಯ ಮಾತು. ೨. ಪ್ರಮಾಣ ವಾಕ್ಯ; ಆಧಾರಭೂತವಾದ ಮಾತು.

ವೇದನೆ (ನಾ). ೧. ತಿಳಿವಳಿಕೆ; ಜ್ಞಾನ. ೨. ನೋವು; ಬಾಧೆ.

ವೇದಾಂತಿ (ನಾ). ೧. ವೇದಾಂತದಲ್ಲಿ ಹೇಳಿದ ಆಧ್ಯಾತ್ಮತತ್ತ್ವಗಳನ್ನು ಅನುಸರಿಸುವವನು. ೨. ತಿಳಿದವನು; ಪಂಡಿತ.

ವೇದಿ (ನಾ). ೧. ತಿಳಿದವನು; ಪಂಡಿತ. ೨. = ವೇದಿಕೆ.

ವೇದಿಕೆ (ನಾ). ಎತ್ತರವಾದ ಪ್ರದೇಶ; ಜಗಲಿ; ಜಗತಿ.

ವೇದಿಸು (ಕ್ರಿ). ೧. ತಿಳಿಸು; ಪ್ರಸಿದ್ಧಪಡಿಸು. ೨. ನೋವನ್ನು ಅನುಭವಿಸು; ಬಾಧೆಪಡು.

ವೇದ್ಯ (ನಾ). ೧. ಜ್ಞಾನಿ; ಪಂಡಿತ. ೨. ತಿಳಿಯಲು ಸಾಧ್ಯವಾದುದು; ತಿಳಿಯಬಹುದಾದುದು. (ಗು). ೩. ತಿಳಿಯಲು ಯೋಗ್ಯವಾದ.

ವೇಧ (ನಾ). ೧. ತೂತು; ರಂಧ್ರ. ೨. ಕೊರೆಯುವಿಕೆ. ೩. ಸೂರ್ಯ, ಚಂದ್ರ ಮುಂತಾದ ಗ್ರಹಗಳ ಸ್ಥಾನವನ್ನು ಗುರುತಿಸುವಿಕೆ. ~ಇಸು = ೧. ಚುಚ್ಚು; ಒಳಸೇರು; ನಾಟು. ೨. ಚೂರ್ಣಮಾಡು. ~ಶಾಲೆ = ಖಗೋಳವನ್ನು ವೀಕ್ಷಿಸುವ ಪ್ರಯೋಗ ಮಂದಿರ.

ವೇಧೆ (ನಾ). ೧. ಕಷ್ಟ; ತೊಂದರೆ. ೨. ಬಾಧೆ; ನೋವು; ವೇದನೆ.

ವೇಪ (ನಾ). ನಡುಕ; ಕಂಪನ. ~ಇಸು = ನಡುಗು; ಕಂಪಿಸು.

ವೇಪನ = ವೇಪ.

ವೇಮಾಱು(ರು) (ಕ್ರಿ). ಏಮಾರು; ಮೋಸಹೋಗು; ವಂಚನೆಗೆ ಒಳಗಾಗು.

ವೇಲಾ(ಳಾ)ವನ (ನಾ). ಸಮುದ್ರದ ಅಂಚಿನಲ್ಲಿರುವ ವನ, -ಕಾನನ.

ವೇಲೆ(ಳೆ) (ನಾ). ೧. ಕಾಲ; ಸಮಯ. ೨. ಅವಕಾಶ; ಆಸ್ಪದ. ೩. ಬಿಡುವಿನ ಸಮಯ; ವಿಶ್ರಾಂತಿ. ೪. ಸಮುದ್ರದ ದಂಡೆ, -ತೀರ. ೫. ಗಡಿ; ಎಲ್ಲೆ. ೬. ನಿಶ್ಚಿತ ವ್ಯವಸ್ಥೆ. ೭. ಪ್ರತಿಜ್ಞೆ; ಮಾತು; ವಚನ. ~ಕಾಱ(ರ) = ಸಮುದ್ರದ ಮೇಲೆ ತಿರುಗುವ ವ್ಯಾಪಾರಿ. ~ಕೊ(ಗೊ)ಳ್ = ೧. ಸಮಯಪಾಲನೆ ಮಾಡು. ೨. ಅವಕಾಶವನ್ನು ಹೊಂದು, -ಪಡೆ. ~ಪಾ(ವಾ)ಳಿ = ೧. ಪ್ರತಿಜ್ಞೆಯನ್ನು ಅನುಸರಿಸಿ ನಡೆಯುವುದು. ೨. ಪ್ರತಿಜ್ಞೆಯನ್ನು ಪರಿಪಾಲಿಸುವವನು.

ವೇಶಿ = ವೇಶ್ಯೆ.

ವೇಶ್ಮ (ನಾ). ವಾಸಸ್ಥಳ; ಮನೆ.

ವೇಶ್ಯಾವಾಟ (ನಾ). ಸೂಳೆಗೇರಿ.

ವೇಶ್ಯೆ (ನಾ). ಸೂಳೆ; ಗಣಿಕೆ.

ವೇಷ (ನಾ). ೧. ಉಡುಗೆ; ಪೋಷಾಕು. ೨. ಗುರುತು ತಿಳಿಯದಂತೆ ರೂಪ ಬದಲಾವಣೆ ಮಾಡಿಕೊಳ್ಳುವುದು. ೩. ಅಲಂಕಾರ. ೪. ಬೂಟಾಟಿಕೆ; ಸೋಗು. ೫. ನಾಟಕದಲ್ಲಿಯ ಪಾತ್ರ. ~ಕಟ್ಟು = ೧. ನಾಟಕದಲ್ಲಿ ಪಾತ್ರವಹಿಸು. ೨. ಸೋಗು ಹಾಕು. ~ಹಾಕು = ವೇಷಕಟ್ಟು.

ವೇಷಧಾರಿ (ನಾ). ೧. ಅಭಿನಯಕಾರ; ನಟ. ೨. ವೇಷವನ್ನು ಮರೆಸಿಕೊಂಡವನು.

೩. ಬೂಟಾಟಿಕೆ ಮಾಡುವವನು; ಆಷಾಢಭೂತಿ.
ವೇಷ್ಟನ (ನಾ). ೧. ಆವರಣ; ಆಚ್ಛಾದನೆ. ೨. ರುಮಾಲು; ಪೇಟ.
ವೇಷ್ಟಿ (ನಾ). ಧೋತ್ರ; ಪಂಚೆ.
ವೇಷ್ಟಿಸು (ಕ್ರಿ). ಸುತ್ತುವರಿ; ಬಳಸು.
ವೇಸ = ವೇಷ.
ವೇಸರ (ನಾ). ೧.ಹೇಸರಗತ್ತೆ. ೨. ದೇವಾಲಯವನ್ನು ಮೂಲದಿಂದ ಶಿಖರದವರೆಗೂ ವೃತ್ತಾಕಾರವಾಗಿ ಕಟ್ಟುವ ಒಂದು ಪ್ರಕಾರ.
ವೇಸರಿ (ನಾ). ಹೆಣ್ಣು ಹೇಸರಗತ್ತೆ.
ವೇಸಿ ೧. = ವೇಶ್ಯೆ. ೨. ಹೆಬ್ಬಾಗಿಲು; ಅಗಸೆ.
ವೇಳಾಪಟ್ಟಿ (ನಾ). ೧. ಕಾರ್ಯಕ್ರಮ. ೨. ಕಾರ್ಯಕ್ರಮುವನ್ನು ತಿಳಿಸುವ ಪತ್ರ.
ವೇಳಾಯಿತ (ನಾ).ಸಮಯಕ್ಕೆ ಒದಗುವವನು.
ವೈಕಕ್ಷಕ (ನಾ). ಜನಿವಾರದ ರೀತಿಯಲ್ಲಿ ಧರಿಸಿರುವ ಹೂಮಾಲೆ.
ವೈಕರ್ತನ (ನಾ). ೧. ಯಮ. ೨. ಶನಿ. ೩. ಸುಗ್ರೀವ. ೪. ಕರ್ಣ.
ವೈಕಲ್ಯ (ನಾ). ೧. ಕುಂದು; ವಿಕಲತೆ. ೨. ಚಿಂತೆ; ತಳಮಳ.
ವೈಕುಂಠ (ನಾ). ೧. ವಿಷ್ಣು; ಕೃಷ್ಣ. ೨.ಇಂದ್ರ. ೩.ವಿಷ್ಣುವಿನ ನಿವಾಸ. ೪. ಮುಕ್ತಿ; ಮೋಕ್ಷ. ~ಯಾತ್ರೆ = ವೈಕುಂಠಕ್ಕೆ ಹೋಗುವಿಕೆ; ಸಾವು; ಮರಣ. ~ಸಮಾರಾಧನೆ = ಮರಣಾನಂತರ ಹದಿಮೂರನೆಯ ದಿನ ಮಾಡುವ ಒಂದು ಸಂತರ್ಪಣೆಯ ಕಾರ್ಯ.
ವೈಕುರ್ವಣ (ನಾ). ಬದಲಾವಣೆ; ರೂಪಪರಾವರ್ತನೆ.
ವೈಕೃತಿ (ನಾ). ವಿಕೃತಿ; ವಿರೂಪ.
ವೈಖರಿ (ನಾ). ೧. ರೀತಿ; ನಡೆ; ಶೈಲಿ. ೨. ಬೆಡಗು; ವಿಲಾಸ. ೩. ಮಾತು; ಉಕ್ತಿ.
ವೈಖಾನಸ (ನಾ). ವಾನಪ್ರಸ್ಥಾಶ್ರಮದಲ್ಲಿರುವ ಬ್ರಾಹ್ಮಣ.
ವೈಚಾರಿಕ (ಗು). ವಿಚಾರಕ್ಕೆ ಸಂಬಂಧಿಸಿದ; ವಿಚಾರ ಯೋಗ್ಯವಾದ.
ವೈಚಾರಿಕತೆ (ನಾ). ವಿಚಾರಮಾಡುವ ಶಕ್ತಿ.
ವೈಚಿತ್ರ್ಯ (ನಾ). ೧. ವೈವಿಧ್ಯ; ವಿವಿಧತೆ. ೨. ವಿಚಿತ್ರ; ಸೋಜಿಗ; ಬೆರಗು.
ವೈಜನನ (ನಾ).ಗರ್ಭವಾಸದ ಕಡೆಯ ತಿಂಗಳು.
ವೈಜಯಂತ (ನಾ). ೧. ಬಾವುಟ; ಧ್ವಜ. ೨. ಇಂದ್ರನ ಧ್ವಜ. ೩. ಇಂದ್ರನ ಅರಮನೆ.
ವೈಜಯಂತಿ (ನಾ). ೧. ಬಾವುಟ; ಪತಾಕೆ. ೨. ವಿಷ್ಣುವಿನ ಹಾರ; ತುಳಸಿಮಾಲೆ.
ವೈಜ್ಞಾನಿಕ (ನಾ). ೧. ವಿಜ್ಞಾನಿ. (ಗು). ೨. ವಿಜ್ಞಾನಕ್ಕೆ ಸಂಬಂಧಿಸಿದ.
ವೈಡೂರಿಯ = ವೈಡೂರ್ಯ.
ವೈಡೂರ್ಯ (ನಾ). ನವರತ್ನಗಳಲ್ಲಿ ಒಂದು.
ವೈಣವ (ನಾ). ಬಿದಿರಕ್ಕಿ.
ವೈಣವಿಕ (ನಾ). ಕೊಳಲನ್ನು ಊದುವವನು.
ವೈಣಿಕ (ನಾ). ೧. ವೀಣೆಯನ್ನು ನುಡಿಸುವವನು. ೨. = ವೈಣವಿಕ.
ವೈತರಣಿ (ನಾ). ನರಕದ ಬಳಿಯಲ್ಲಿ ಇರುವುದೆಂದು ನಂಬಲಾಗಿರುವ ಒಂದು ನದಿ.
ವೈತಾಲಿ(ಳಿ)ಕ (ನಾ). ಪ್ರಾತಃಕಾಲದಲ್ಲಿ ರಾಜನನ್ನು ಎಚ್ಚರಿಸುವ ಮಂಗಳಪಾಠಕ.
ವೈದಂಡಿಕ = ಬೆದಂಡೆ.
ವೈದರ್ಭಿ (ನಾ). ೧. ಕಾವ್ಯಶೈಲಿಗಳಲ್ಲಿ ಒಂದು ಭೇದ. ೨. ವಿದರ್ಭರಾಜನ ಮಗಳು; ದಮಯಂತಿ. ೩. ರುಕ್ಮಿಣಿ.
ವೈದಿಕ (ನಾ). ೧. ವೇದಗಳನ್ನು ಬಲ್ಲವನು; ಬ್ರಾಹ್ಮಣ. ೨. ಆಚಾರಗಳನ್ನು ಪಾಲಿಸುವವನು; ಆಚಾರವಂತ. ೩. ಶ್ರಾದ್ಧ; ತಿಥಿ. (ಗು). ೪. ವೇದಗಳಿಗೆ ಸಂಬಂಧಿಸಿದ. ~ಛಂದಸ್ಸು = ವೇದಗಳಲ್ಲಿ ಕಂಡುಬರುವ ಛಂದಸ್ಸು.
ವೈದೀಕ = ವೈದಿಕ.
ವೈದುಷ್ಯ (ನಾ). ಪಾಂಡಿತ್ಯ; ಜ್ಞಾನ.

ವೈದೃಶ್ಯ (ನಾ). ವೈಲಕ್ಷಣ; ವಿಭಿನ್ನತೆ.
ವೈದೇಹಿ (ನಾ). ೧. ಸೀತೆ; ಭೂಮಿಜೆ. ೨. ಹಿಪ್ಪಲಿ.
ವೈದ್ಯ (ನಾ). ೧. ವಿದ್ಯಾವಂತ; ಪಂಡಿತ. ೨. ವೇದವನ್ನು ಬಲ್ಲವನು. ೩. ರೋಗ ಚಿಕಿತ್ಸೆ. ೪. ರೋಗ ಚಿಕಿತ್ಸೆ ಮಾಡುವವನು; ಡಾಕ್ಟರು. ೫. ಔಷಧ. (ಗು). ೬. ವೇದಕ್ಕೆ ಸಂಬಂಧಿಸಿದ. ೭. ರೋಗ ಚಿಕಿತ್ಸೆಗೆ ಸಂಬಂಧಿಸಿದ. ~ನಾಥ=ಶಿವ. ~ಶಾಲೆ =ಆಸ್ಪತ್ರೆ; ದವಾಖಾನೆ. ~ಶಾಸ್ತ್ರ=ರೋಗ ನಿದಾನ ಹಾಗು ಚಿಕಿತ್ಸೆಯನ್ನು ತಿಳಿಸುವ ಶಾಸ್ತ್ರ.
ವೈದ್ಯಕೀಯ (ಗು). ರೋಗ ಚಿಕಿತ್ಸೆಗೆ ಸಂಬಂಧಿಸಿದ.
ವೈಧವ್ಯ (ನಾ). ಗಂಡನನ್ನು ಕಳೆದುಕೊಂಡ ಸ್ಥಿತಿ.
ವೈನ (ನಾ). ಸರಿಯಾದ ರೀತಿ; ಓರಣ; ಅಚ್ಚುಕಟ್ಟು.
ವೈನಿ (ನಾ). ಅಣ್ಣನ ಹೆಂಡತಿ; ಅತ್ತಿಗೆ.
ವೈನೋದಿಕ (ನಾ). ವಿನೋದದಲ್ಲಿ ಮುಕ್ತಾಯಗೊಳ್ಳುವ ನಾಟಕ; ಸುಖಾಂತ ನಾಟಕ.
ವೈಪಥ (ನಾ). ಅರಣ್ಯಮಾರ್ಗ.
ವೈಪರೀತ್ಯ (ನಾ). ೧. ವಿರೋಧ; ಪ್ರತಿಕೂಲತೆ. ೨. ಅಸಂಬದ್ಧತೆ; ವಿಸಂಗತಿ.
ವೈಪುಲ್ಯ (ನಾ). ವಿಪುಲವಾಗಿರುವಿಕೆ; ಅಧಿಕವಾಗಿರುವಿಕೆ.
ವೈಭವ (ನಾ). ೧. ಡೌಲು; ಆಡಂಬರ. ೨. ಐಶ್ವರ್ಯ; ಸಿರಿ. ೩. ಶಕ್ತಿ; ಸಾಮರ್ಥ್ಯ.
ವೈಭೋಗ = ವೈಭವ.
ವೈಮನಸು (ನಾ). ದ್ವೇಷ; ಹಗೆತನ.
ವೈಮನಸ್ಯ (ನಾ). ೧. ದುಃಖ; ಸಂಕಟ. ೨. = ವೈಮನಸು.
ವೈಮನಸ್ಸು = ವೈಮನಸು.
ವೈಮಾನಿಕ (ನಾ). ೧. ದೇವತೆ. ೨. ವಿಮಾನವನ್ನು ನಡಸುವವನು.
ವೈಯಕ್ತಿಕ (ಗು). ಒಂದೇ ವಸ್ತುವಿಗೆ ಅಥವಾ ವ್ಯಕ್ತಿಗೆ ಸಂಬಂಧಿಸಿದ.
ವೈಯಾಕರಣ ೧. = ವೈಯಾಕರಣಿ. (ಗು). ೨. ವ್ಯಾಕರಣಕ್ಕೆ ಸಂಬಂಧಿಸಿದ.
ವೈಯಾಕರಣಿ (ನಾ). ವ್ಯಾಕರಣವನ್ನು ತಿಳಿದವನು; ವ್ಯಾಕರಣಪಂಡಿತ.
ವೈಯಾರ = ವಯ್ಯಾರ.
ವೈರ (ನಾ). ದ್ವೇಷ; ಹಗೆತನ.
ವೈರಾಗ್ಯ (ನಾ). ಪ್ರಪಂಚದ ವಿಷಯಗಳಲ್ಲಿ ಅನಾಸಕ್ತಿ; ವಿರಕ್ತಿ.
ವೈರಿ (ನಾ). ಹಗೆ; ಶತ್ರು.
ವೈವಾಟು = ವಹಿವಾಟು.
ವೈವಾಹ = ವಿವಾಹ.
ವೈವಾಹಿಕ ೧.=ವಿವಾಹ. (ಗು). ೨. ವಿವಾಹಕ್ಕೆ ಸಂಬಂಧಿಸಿದ. ~ಜೀವನ = ದಾಂಪತ್ಯ.
ವೈವಿಧ್ಯ (ನಾ). ವಿವಿಧತೆ; ಬಗೆಬಗೆ.
ವೈಶಾಖ (ನಾ). ೧. ಬೇಸಗೆ; ನಿದಾಘ. ೨. ಒಂದು ಮಾಸದ ಹೆಸರು. (ಗು). ೩. ಷಣ್ಮುಖನಿಗೆ ಸಂಬಂಧಿಸಿದ.
ವೈಶಾಲ್ಯ (ನಾ). ವಿಸ್ತಾರ; ಹರಹು.
ವೈಶಿಕ (ನಾ). ೧. ಶೃಂಗಾರ ನಾಯಕರಲ್ಲಿ ಒಂದು ಪ್ರಭೇದ. (ಗು). ೨. ವೇಶ್ಯೆಯರಿಗೆ ಸಂಬಂಧಿಸಿದ.
ವೈಶಿಷ್ಟ್ಯ (ನಾ). ಹೆಚ್ಚುಗಾರಿಕೆ; ವಿಶೇಷ ಗುಣ.
ವೈಶೇಷಿಕ (ನಾ). ೧. ಕಣಾದನಿಂದ ಪ್ರತಿಪಾದಿಸಲ್ಪಟ್ಟ ತತ್ತ್ವ; ಷಡ್ದರ್ಶನಗಳಲ್ಲಿ ಒಂದು. ೨. ಅದನ್ನು ಅನುಸರಿಸುವವನು. (ಗು). ೩. ವಿಶೇಷವಾದ; ವಿಶಿಷ್ಟತೆಯಿಂದ ಕೂಡಿದ.
ವೈಶ್ಯ (ನಾ). ೧. ಚತುರ್ವರ್ಣಗಳಲ್ಲಿ ಮೂರನೆಯದು. ೨. ವ್ಯಾಪಾರಿ.

**ವೈಶ್ವದೇವ** (ನಾ). ದೇವತೆಗಳಿಗೆ ಸತ್ಯವ್ರೂ ಊಟಕ್ಕೆ ಮೊದಲು ಕೊಡುವ ಹವಿಸ್ಸು.

**ವೈಶ್ವಾನರ** (ನಾ). ಅಗ್ನಿ ; ಬೆಂಕಿ.

**ವೈಷಮ್ಯ** (ನಾ). ೧. ವಿಷಮತೆ ; ಸರಿಯಾಗಿಲ್ಲದಿರುವಿಕೆ ; ವ್ಯತ್ಯಾಸ. ೨. ದುಃಖ ; ಸಂಕಟ.

**ವೈಷ್ಣವ** (ನಾ). ೧. ವಿಷ್ಣುಭಕ್ತ ; ಹರಿದಾಸ. ೨. ವಿಷ್ಣುವಿನ ಮಾಯೆ. ೩. ವಿಷ್ಣುವನ್ನು ಅಭಿಮಂತ್ರಿಸಿ ಬಿಡುವ ಅಸ್ತ್ರ ; ನಾರಾಯಣಾಸ್ತ್ರ. (ಗು). ೪. ವಿಷ್ಣುವಿಗೆ ಸಂಬಂಧಿಸಿದ ; ವಿಷ್ಣುವಿನ.

**ವೈಸಿಕ** (ನಾ). ೧. ಮೋಸ ; ಠಕ್ಕು ; ವಂಚನೆ. ೨. ಸೋಗು ; ಡಾಂಭಿಕತನ.

**ವೈಹಾಯಸ** (ನಾ). ೧. ಗಗನ ; ಆಕಾಶ. (ಗು). ೨. ಆಕಾಶಕ್ಕೆ ಸಂಬಂಧಿಸಿದ.

**ವೈಹಾಳಿ**(ನಾ). ೧. ಕುದುರೆಸವಾರಿ. ೨. ಸಂಚಾರ; ವಿಹಾರ. ೩. ಕುದುರೆಯ ಸವಾರಿಯನ್ನು ಪ್ರದರ್ಶಿಸುವ ಸ್ಥಳ. ೪. ಕುದುರೆಗಳ ಸಾಲು, –ಪಂಕ್ತಿ. ~ಇಗ = ಕುದುರೆಯ ಸವಾರ ; ರಾವುತ.

**ವೋಲ್**(ಲು) (ಅ). ಅಂತೆ ; ಹಾಗೆ.

**ವ್ಯಂಗ್ಯ** (ನಾ). ೧. ಕೊಂಕು ; ಅಣಕ. ೨. ಕಾವ್ಯದಲ್ಲಿ ಧ್ವನಿತವಾಗುವ ಅರ್ಥ. **~ಚಿತ್ರ** = ಅಣಕಚಿತ್ರ ; ನಗೆಚಿತ್ರ. **~ನುಡಿ** = ಕೊಂಕುಮಾತು ; ಅಣಕನುಡಿ.

**ವ್ಯಂಜಕ** (ನಾ). ೧. ಕಾವ್ಯದಲ್ಲಿ ಧ್ವನಿಯನ್ನು ಸೂಚಿಸುವ ಪದ ಅಥವಾ ಅರ್ಥ. ೨. ಹಾವ ಭಾವಗಳಿಂದಾದ ಅಭಿನಯ. (ಗು). ೩. ಸ್ಪಷ್ಟಗೊಳಿಸುವ ; ವ್ಯಕ್ತಗೊಳಿಸುವ.

**ವ್ಯಂಜನ** (ನಾ). ೧. ಸ್ಪಷ್ಟಗೊಳಿಸುವಿಕೆ ; ಅಭಿವ್ಯಕ್ತಿ. ೨. 'ಕ'ಕಾರದಿಂದ ಹಿಡಿದು 'ಳ'ಕಾರದ ವರೆಗಿನ ಅಕ್ಷರಗಳ ಸಮೂಹ. ೩. = ವ್ಯಂಜನಪದಾರ್ಥ. ೪. ಚಿಹ್ನೆ ; ಗುರುತು. **~ಪದಾರ್ಥ** = ನಂಜಿಕೊಳ್ಳುವ ಪದಾರ್ಥ ; ಮೇಲೋಗರ.

**ವ್ಯಂಜನಾವೃತ್ತಿ** (ನಾ). ಕಾವ್ಯದ ಶಬ್ದಾರ್ಥಗಳ ಸಂಬಂಧದಲ್ಲಿ ಹೇಳುವ ಮೂರು ವೃತ್ತಿಗಳಲ್ಲಿ ಒಂದು.

**ವ್ಯಂಜಿಸು** (ಕ್ರಿ). ಪ್ರಕಟವಾಗು ; ತೋರು.

**ವ್ಯಂತರ** = ಬೆಂತರ.

**ವ್ಯಕ್ತ** (ಗು). ೧. ಪ್ರಕಟವಾದ; ಕಾಣಿಸಿಕೊಂಡ. ೨. ಸ್ಪಷ್ಟವಾದ. ೩. ಸ್ಪಷ್ಟವಾಗಿ ತಿಳಿದ; ನಿರ್ದಿಷ್ಟವಾಗಿರುವ. **~ಪಡಿಸು** = ಸ್ಪಷ್ಟಗೊಳಿಸು ; ಪ್ರಕಟಿಸು.

**ವ್ಯಕ್ತಿ** (ನಾ). ೧. ಸ್ಪಷ್ಟವಾಗಿ ತೋರಿಬರುವಿಕೆ; ನಿಚ್ಚಳವಾಗಿ ಕಾಣಿಸಿಕೊಳ್ಳುವಿಕೆ. ೨. ಮನುಷ್ಯ ; ಆಸಾಮಿ. **~ಸ್ವಾತಂತ್ರ್ಯ** = ಮನುಷ್ಯನಿಗೆ ಸ್ವಾಭಾವಿಕವಾಗಿ ಬರುವ ಅಧಿಕಾರ.

**ವ್ಯಕ್ತಿತ್ವ** (ನಾ). ತನ್ನದೇ ಆದ ವಿಶಿಷ್ಟಗುಣ ; ತನ್ನತನ.

**ವ್ಯಗ್ರ** ೧. = ವ್ಯಗ್ರತೆ. (ಗು). ೨. ಗಾಬರಿಯಾದ ; ಕಳವಳಗೊಂಡ. ೩. ಆಸಕ್ತನಾದ; ಮಗ್ನನಾದ.

**ವ್ಯಗ್ರತೆ** (ನಾ). ೧. ಕ್ಷೋಭೆ; ತಳಮಳ. ೨. ಆಸಕ್ತಿ ; ತಲ್ಲೀನತೆ.

**ವ್ಯಜನ** (ನಾ). ಬೀಸಣಿಗೆ ; ಆಲವಟ್ಟ.

**ವ್ಯತಿಕರ** (ನಾ) ೧. ಪರಸ್ಪರ ಕೊಡುಕೊಳ್ಳುವುದು. ೨. ಸೇರುವೆ ; ಜೋಡಣೆ. ೩. ವೃತ್ತಾಂತ ; ಪ್ರಸಂಗ ; ಸಂದರ್ಭ. ೪. ಆಪತ್ತು ; ವಿಪತ್ತು. ೫. ಕರಾರು ; ಒಪ್ಪಂದ. ೬. ತಡೆ ; ಅಡ್ಡಿ. ೭. ಹರಡುವಿಕೆ ; ಚೆದರುವಿಕೆ.

**ವ್ಯತಿಕ್ರಮ** (ನಾ). ೧. ಮೀರುವುದು ; ಉಲ್ಲಂಘನೆ. ೨. ವ್ಯತ್ಯಾಸ; ಅದಲು ಬದಲು. ೩. ಆಪತ್ತು ; ಗಂಡಾಂತರ. ೪. ವಿರೋಧ ; ಪ್ರತಿಭಟನೆ.

**ವ್ಯತಿರಿಕ್ತ** (ನಾ). ೧. ವಿರೋಧ ; ಎದುರು. ೨. ಅಡ್ಡಿ ; ತಡೆ. (ಗು). ೩. ದಾಟಿದ ;

ಮೀರಿದ. ೪. ಭಿನ್ನವಾದ ; ವಿರೋಧವಾದ. ೫. ತಡೆಹಿಡಿದ ; ಅಡ್ಡಿಪಡಿಸಿದ.

ವ್ಯತಿರೇಕ (ನಾ). ೧. ಮೀರುವಿಕೆ ; ಅತಿಕ್ರಮಣ. ೨. ಹೆಚ್ಚುಗಾರಿಕೆ ; ಶ್ರೇಷ್ಠತೆ. ೩. ಅಗಲಿಕೆ ; ವಿಯೋಗ. ೪. ವಿರೋಧ ; ವ್ಯತ್ಯಾಸ. ೫. ಕಾವ್ಯದಲ್ಲಿಯ ಒಂದು ಅರ್ಥಾಲಂಕಾರ.

ವ್ಯತಿಹಾರ (ನಾ). ವಿನಿಮಯ ; ಅದಲುಬದಲು.

ವ್ಯತೀತ (ಗು). ಕಳೆದುಹೋದ ; ಮುಗಿದುಹೋದ.

ವ್ಯತ್ಯಯ (ನಾ). ೧. ವಿರೋಧ. ೨. ಅಡ್ಡಿ ; ತಡೆ. ೩. ಪರಿವರ್ತನೆ ; ಬದಲಾವಣೆ.

ವ್ಯತ್ಯಸ್ತ (ನಾ). ೧. ವ್ಯತ್ಯಾಸ ; ಬದಲು. (ಗು). ೨. ಬದಲಾದ ; ಪಲ್ಲಟಗೊಂಡ.

ವ್ಯತ್ಯಾಸ (ನಾ). ೧. ಅದಲುಬದಲು ; ವಿಪರ್ಯಯ. ೨. ವಿರೋಧ ; ವಿರುದ್ಧ.

ವ್ಯಥೆ (ನಾ). ದುಃಖ ; ಅಳಲು. ~ಇಸು = ದುಃಖಿಸು ; ನೋಯು.

ವ್ಯಪದೇಶ (ನಾ). ೧. ನೆವ ; ನಿಮಿತ್ತ. ೨. ಹೆಸರು ; ಅಭಿಧಾನ. ೩. ಸೂಚನೆ ; ಗಮನ. ೪. ಕಪಟ; ಮೋಸ. ೫. ಉಪಾಯ; ಹಂಚಿಕೆ. ೬. ಉಪಮೆಗಳಲ್ಲಿ ಒಂದು.

ವ್ಯಪಾಯ (ನಾ). ೧. ಹೊರಡುವಿಕೆ ; ನಿರ್ಗಮನ. ೨. ಅದೃಶ್ಯವಾಗುವಿಕೆ ; ಇಲ್ಲದಂತಾಗುವಿಕೆ. ೩. ವಿಘ್ನ ; ತಡೆ.

ವ್ಯಪೇತ (ನಾ). ೧. ದೂರೀಕರಿಸಿದವನು ; ತೊರೆದವನು. (ಗು). ೨. ಬೇರೆಯಾದ ; ಅಗಲಿದ. ೩. ವಿರುದ್ಧವಾದ; ವಿರೋಧವಾದ.

ವ್ಯಭಿಚರಿಸು (ಕ್ರಿ). ಹಾದರಮಾಡು.

ವ್ಯಭಿಚಾರ (ನಾ). ಹಾದರ ; ಸೂಳೆಗಾರಿಕೆ.

ವ್ಯಭಿಚಾರಿ (ನಾ). ಹಾದರಿಗ ; ಜಾರ.

ವ್ಯಭಿಚಾರಿಣಿ (ನಾ). ಹಾದರಗಿತ್ತಿ ; ಜಾರೆ.

ವ್ಯಯ (ನಾ). ೧. ನಷ್ಟ ; ಪೋಲು. ೨. ವೆಚ್ಚ ; ಖರ್ಚು. ೩. ಅರುವತ್ತು ಸಂವತ್ಸರಗಳಲ್ಲಿ ಒಂದು. ~ಇಸು = ೧. ನಾಶಮಾಡು. ೨. ಖರ್ಚುಮಾಡು.

ವ್ಯರ್ಥ (ನಾ). ೧. ನಿರುಪಯುಕ್ತತೆ ; ನಿಷ್ಪ್ರಯೋಜಕತೆ. (ಗು). ೨. ನಿರುಪಯುಕ್ತವಾದ ; ಅಪ್ರಯೋಜಕವಾದ. ~ಆಲಾಪ = ನಿಷ್ಪ್ರಯೋಜಕವಾದ ಮಾತು ; ಹಾಳುಹರಟೆ.

ವ್ಯವಕಲನ (ನಾ). ಗಣಿತದಲ್ಲಿ ಒಂದು ಸಂಖ್ಯೆಯಿಂದ ಮತ್ತೊಂದು ಸಂಖ್ಯೆಯನ್ನು ಕಳೆಯುವುದು.

ವ್ಯವಧಾನ (ನಾ). ೧. ಸಾವಕಾಶ ; ಬಿಡುವು ; ವಿರಾಮ. ೨. ವಿರೋಧ ; ಅಡೆತಡೆ. ೩. ಸಮಾಧಾನ ; ತಾಳ್ಮೆ.

ವ್ಯವಸಾಯ (ನಾ). ೧. ಪರಿಶ್ರಮ ; ಪ್ರಯತ್ನ. ೨. ಕಸಬು ; ಉದ್ಯೋಗ. ೩. ಸಾಗುವಳಿ; ಬೇಸಾಯ. ~ಗಾರ = ರೈತ ; ಒಕ್ಕಲಿಗ.

ವ್ಯವಸಾಯಿ (ನಾ). ೧. ಕಾರ್ಯಶೀಲ ; ಉದ್ಯೋಗಿ. ೨. ರೈತ.

ವ್ಯವಸ್ಥಾಪಕ (ನಾ). ಕೆಲಸವನ್ನು ವ್ಯವಸ್ಥೆಗೊಳಿಸುವವನು.

ವ್ಯವಸ್ಥೆ (ನಾ). ೧. ಓರಣ ; ಅಚ್ಚುಕಟ್ಟು. ೨. ಏರ್ಪಾಡು ; ಏರ್ಪಾಟು. ೩. ಕಟ್ಟಳೆ ; ನಿಯಮ. ೪. ಇರವು ; ಸ್ಥಿತಿ.

ವ್ಯವಹರಿಸು (ಕ್ರಿ). ೧. ಉದ್ಯೋಗಿಸು ; ತೊಡಗು. ೨. ವ್ಯವಹಾರ ಮಾಡು ; ವಹಿವಾಟು ನಡಸು. ೩. ಉಂಟಾಗು ; ಪ್ರಾಪ್ತವಾಗು. ೪. ಬಳಸು ; ಚಾಲ್ತಿಗೆ ತರು.

ವ್ಯವಹಾರ (ನಾ). ೧. ಕೆಲಸ ; ಉದ್ಯೋಗ. ೨. ಕಾರ್ಯಭಾರ ; ವಹಿವಾಟು. ೩. ನಡತೆ; ವರ್ತನೆ. ೪. ವ್ಯಾಜ್ಯ ; ದಾವೆ. ೫. ರೂಢಿ ; ಬಳಕೆ.

ವ್ಯವಹೃತಿ (ನಾ). ೧. ಉದ್ಯೋಗ ; ಕಸಬು. ೨. ವ್ಯಾಪಾರ ; ವ್ಯವಹಾರ.

ವ್ಯಷ್ಟಿ (ನಾ). ೧. ವ್ಯಕ್ತಿತ್ವ ; ವೈಶಿಷ್ಟ್ಯ. ೨. ಸಮಷ್ಟಿಯಿಂದ ಬೇರೆಯಾಗಿರುವುದು ; ಬಿಡಿಬಿಡಿಯಾಗಿರುವುದು.

ವ್ಯಸನ (ನಾ). ೧. ದುಃಖ; ಅಳಲು. ೨. ಚಾಳಿ; ಅಭ್ಯಾಸ ; ಗೀಳು. ೩. ದುರಭ್ಯಾಸ ; ಕೆಟ್ಟ ಚಟ. ೪. ಚಿಂತೆ ; ಧ್ಯಾಸ.

ವ್ಯಸನಿ (ನಾ). ೧. ದುರ್ವ್ಯಸನಿ ; ದುಃಖಿ. ೨. ಕೆಟ್ಟಚಟವುಳ್ಳವನು ; ದುರಭ್ಯಾಸಿ. ೩. ಅತ್ಯಾಸಕ್ತಿಯುಳ್ಳವನು ; ತಲ್ಲೀನ.

ವ್ಯಾಕರಣ (ನಾ). ೧. ವಿಭಜನೆ ; ವಿಶ್ಲೇಷಣೆ. ೨. ಆರು ವೇದಾಂಗಗಳಲ್ಲಿ ಒಂದು ; ಭಾಷೆಯ ನಿಯಮಗಳನ್ನು ತಿಳಿಸುವ ಶಾಸ್ತ್ರ. ೩. ಶಾಸ್ತ್ರ.

ವ್ಯಾಕರಣಕಾರ (ನಾ). ವ್ಯಾಕರಣಶಾಸ್ತ್ರವನ್ನು ರಚಿಸುವವನು ; ವೈಯಾಕರಣಿ.

ವ್ಯಾಕೀರ್ಣ (ಗು). ಅವ್ಯವಸ್ಥಿತವಾದ ; ದಿಕ್ಕು ದಿಕ್ಕಿಗೆ ಚೆಲ್ಲಲ್ಪಟ್ಟ.

ವ್ಯಾಕುಲ(ಳ) ೧. = ವ್ಯಾಕುಲತೆ. ೨. ಗಾಬರಿ ; ಗೊಂದಲ.

ವ್ಯಾಕುಲ(ಳ)ತೆ (ನಾ). ೧. ದುಃಖ ; ಅಳಲು ; ವ್ಯಥೆ. ೨. ಚಿಂತೆ.

ವ್ಯಾಕೃತಿ (ನಾ). ವ್ಯಾಕರಣಶಾಸ್ತ್ರ.

ವ್ಯಾಖ್ಯಾಕಾರ (ನಾ). ಟೀಕೆಯನ್ನು ಬರೆಯುವವನು ; ಟೀಕಾಕಾರ.

ವ್ಯಾಖ್ಯಾನ ೧. = ವ್ಯಾಖ್ಯೆ. ೨. ಭಾಷಣ ; ಉಪನ್ಯಾಸ. ~ಇಸು = ೧. ಟೀಕೆಮಾಡು ; ವಿಮರ್ಶಿಸು. ೨. ಭಾಷಣಮಾಡು. ೩. ವಿವರಿಸು ; ವ್ಯಾಖ್ಯಾನಮಾಡು.

ವ್ಯಾಖ್ಯಾನಕಾರ = ವ್ಯಾಖ್ಯಾಕಾರ.

ವ್ಯಾಖ್ಯೆ (ನಾ). ೧. ವಿವರಣೆ; ವ್ಯಾಖ್ಯಾನ; ಟೀಕೆ. ೨. ವಿಮರ್ಶೆ.

ವ್ಯಾಘಾತ (ನಾ). ೧. ಹೊಡೆತ ; ಪೆಟ್ಟು. ೨. ವಿರೋಧವಾದ ಹೇಳಿಕೆ. ೩. ಒಂದು ಅರ್ಥಾಲಂಕಾರ.

ವ್ಯಾಘ್ರ (ನಾ). ಹುಲಿ. ~ಅಜಿನ = ಹುಲಿಯ ಚರ್ಮ. ~ನಖ = ೧. ಹುಲಿಯ ಉಗುರು. ೨. ಒಂದು ಬಗೆಯ ಸುಗಂಧ ದ್ರವ್ಯ.

ವ್ಯಾಘ್ರಿ (ನಾ). ಹೆಣ್ಣು ಹುಲಿ.

ವ್ಯಾಜ (ನಾ). ೧. ಕಪಟ ; ಮೋಸ. ೨. ನೆವ ; ಕಾರಣ. ~ನಿಂದೆ=ಒಂದು ಅರ್ಥಾಲಂಕಾರ; ಒಬ್ಬನನ್ನು ನಿಂದಿಸುವ ನೆವದಿಂದ ಇನ್ನೊಬ್ಬನನ್ನು ನಿಂದಿಸುವಿಕೆ. ~ಸ್ತುತಿ = ಒಂದು ಅರ್ಥಾಲಂಕಾರ ; ಸ್ತುತಿಸಿದಂತೆ ಮಾಡಿ ನಿಂದಿಸುವುದು.

ವ್ಯಾಜ್ಯ (ನಾ). ೧. ಜಗಳ ; ಕಲಹ. ೨. ದಾವೆ; ಮೊಕದ್ದಮೆ. ~ಹೂಡು = ಮೊಕದ್ದಮೆಯನ್ನು ದಾಖಲುಮಾಡು.

ವ್ಯಾಥ = ಬಿಯದ.

ವ್ಯಾಧಿ = ಬಿಯದಿ.

ವ್ಯಾಧಿಸ್ಥ (ನಾ). ಕಾಯಿಲೆ ಮನುಷ್ಯ; ರೋಗಿ.

ವ್ಯಾನ (ನಾ). ಪಂಚಪ್ರಾಣವಾಯುಗಳಲ್ಲಿ ಒಂದು.

ವ್ಯಾಪಕ (ಗು). ೧. ಹರಡುವ ; ಆವರಿಸುವ. ೨. ಎಲ್ಲ ಕಾಲಕ್ಕೂ ಸತ್ಯವಾಗಿರುವ ; ನಿತ್ಯವಾದ.

ವ್ಯಾಪನೆ (ನಾ). ಹರಡುವಿಕೆ ; ಪಸರಿಸುವಿಕೆ.

ವ್ಯಾಪಾರ (ನಾ). ೧. ಉದ್ಯೋಗ; ವ್ಯವಹಾರ. ೨. ಪರಿಶ್ರಮ; ಕಾರ್ಯಶಕ್ತಿ. ೩. ವಾಣಿಜ್ಯ; ಕೊಳ್ಳುವ ಮಾರುವ ವ್ಯವಹಾರ ; ವಿನಿಮಯ.

ವ್ಯಾಪಾರಸ್ಥ = ವ್ಯಾಪಾರಿ.

ವ್ಯಾಪಾರಿ (ನಾ). ೧. ಯಾವುದಾದರೊಂದು ಕೆಲಸದಲ್ಲಿ ತೊಡಗಿರುವವನು ; ಉದ್ಯೋಗಸ್ಥ. ೨. ವರ್ತಕ ; ಹರದ.

ವ್ಯಾಪಿಸು (ಕ್ರಿ). ಹಬ್ಬು; ಹರಡು ; ಆವರಿಸು.

ವ್ಯಾಪೃತಿ (ನಾ). ೧. ಕಾರ್ಯದಲ್ಲಿ ತೊಡಗಿರುವಿಕೆ ; ಕಾರ್ಯಮಗ್ನತೆ. ೨. ಉದ್ಯೋಗ ; ಕಸಬು.

ವ್ಯಾಪ್ತಿ (ನಾ). ೧. ವ್ಯಾಪಿಸಿರುವಿಕೆ ; ಹರಹು. ೨. ಪ್ರಭಾವ; ವರ್ಚಸ್ಸು. ೩. ಸಂಪೂರ್ಣತೆ; ಪರಿಪೂರ್ಣತೆ.

ವ್ಯಾಮ (ನಾ). ಒಂದು ಅಳತೆ ; ಮಾರು.

ವ್ಯಾಮೋಹ (ನಾ). ಅತಿಶಯವಾದ ಮೋಹ, -ಪ್ರೀತಿ.

ವ್ಯಾಯಾಮ (ನಾ). ೧. ಅಂಗಸಾಧನೆ; ಕಸರತ್ತು. ೨. ದೇಹಪರಿಶ್ರಮ. ~ಶಾಲೆ = ಗರುಡಿಮನೆ.

ವ್ಯಾಲ(ಳ) (ನಾ). ೧. ಹಾವು; ಸರ್ಪ. ೨. ಕ್ರೂರ ಮೃಗ; ಹಿಂಸ್ರಪಶು. ೩. ವಂಚಕ; ಮೋಸಗಾರ. ೪. ಸೊಕ್ಕಿದ ಆನೆ. ~ಅರಿ = ಹಾವಿನ ಹಗೆ; ಗರುಡ. ~ಕುಂಡಲ = ಹಾವುಗಳನ್ನೇ ಕಿವಿಯ ಆಭರಣವಾಗುಳ್ಳವನು ; ಶಿವ.

ವ್ಯಾಲಗ್ನ (ಗು). ವಿಶೇಷವಾಗಿ ಕೂಡಿದ, -ಬೆರೆತ.

ವ್ಯಾಲೋಲ (ಗು). ಹೊಯ್ದಾಡುವ ; ಚಂಚಲವಾದ.

ವ್ಯಾವರ್ಣಿಸು (ಕ್ರಿ). ವಿಸ್ತಾರವಾಗಿ ಬಣ್ಣಿಸು, -ವಿವರಿಸು.

ವ್ಯಾವಹಾರಿಕ (ಗು). ೧. ವ್ಯವಹಾರಕ್ಕೆ ಸಂಬಂಧಿಸಿದ. ೨. ಪ್ರಯೋಗಯೋಗ್ಯವಾದ; ಬಳಕೆಯ ; ರೂಢಿಯ. ~ಭಾಷೆ = ರೂಢಿಯಲ್ಲಿರುವ ಭಾಷೆ; ಬಳಕೆಯಲ್ಲಿರುವ ಮಾತು.

ವ್ಯಾವೃತ್ತಿ (ನಾ). ಪ್ರತ್ಯೇಕತೆ.

ವ್ಯಾಸ (ನಾ). ೧. ವಿಸ್ತಾರ ; ಹರವು. ೨. ಗಣಿತದಲ್ಲಿ ವರ್ತುಲವನ್ನು ಸಮವಾಗಿ ವಿಭಾಗಿಸುವ ರೇಖೆ. ೩. ಭಾಗ ಮಾಡುವುದು ; ಹಂಚುವುದು. ೪. ಒಬ್ಬ ಮುನಿಯ ಹೆಸರು ; ಪಾರಾಶರ. ೫. ಸಂಕಲಿಸುವವನು ; ಒಟ್ಟುಗೂಡಿಸುವವನು. ~ಅರ್ಧ = ವರ್ತುಲದ ಅರ್ಧ ; ತ್ರಿಜ್ಯ. ~ಕೂಟ = ವ್ಯಾಸರಾಯರ ಅನುಯಾಯಿಗಳ ಪಂಥ. ~ಪೀಠ = ಪುಸ್ತಕದ ಹಾಳೆಗಳನ್ನು ಒರಗಿಸಿಡಲು ಮಾಡಿದ ಒಂದು ಸಾಧನ.

ವ್ಯಾಸಂಗ (ನಾ). ೧. ಆಸಕ್ತಿ ; ಒಲವು ; ಗೀಳು. ೨. ತತ್ಪರತೆಯಿಂದ ಮಾಡುವ ವಿದ್ಯಾಭ್ಯಾಸ. ೩. ಆಯಾಸ ; ಶ್ರಮ. ~ಗೋಷ್ಠಿ = ಚರ್ಚಾಗೋಷ್ಠಿ. ~ಮಗ್ನ = ವ್ಯಾಸಂಗದಲ್ಲಿ ತಲ್ಲೀನನಾದವನು. ~ವೇತನ = ವಿಶೇಷ ಅಭ್ಯಾಸಕ್ಕಾಗಿ ಪ್ರೋತ್ಸಾಹರೂಪವಾಗಿ ಕೊಡುವ ವೇತನ.

ವ್ಯಾಹಾರ (ನಾ). ೧. ಉಚ್ಚಾರಣೆ. ೨. ಶಬ್ದ ; ಧ್ವನಿ.

ವ್ಯುತ್ಪತ್ತಿ (ನಾ). ೧. ಶಬ್ದಗಳ ಹುಟ್ಟು, -ಮೂಲ ; ಉತ್ಪತ್ತಿ. ೨. ಪರಿಣತಿ ; ನೈಪುಣ್ಯ. ೩. ಪಾಂಡಿತ್ಯ.

ವ್ಯುತ್ಪನ್ನ (ಗು). ೧. ನಿಷ್ಪನ್ನವಾದ ; ಪ್ರಾಪ್ತವಾದ. ೨. ಪ್ರಾವೀಣ್ಯದಿಂದ ಕೂಡಿದ ; ನೈಪುಣ್ಯವುಳ್ಳ.

ವ್ಯೂಢ (ಗು). ೧. ವಿಶಾಲವಾದ ; ವಿಸ್ತಾರವಾದ. ೨. ಸನ್ನಾಹಗೊಳಿಸಿದ ; ಯೋಜಿಸಿದ.

ವ್ಯೂಹ (ನಾ). ೧. ಗುಂಪು ; ಸಮೂಹ. ೨. ಸೈನ್ಯ ; ಪಡೆ. ೩. ಸೈನ್ಯದ ರಚನೆ, -ವ್ಯವಸ್ಥೆ. ೪. ತಂತ್ರ ; ಕೈವಾಡ.

ವ್ಯೋಕಾರ (ನಾ). ಕಮ್ಮಾರ ; ಬೋಗಾರ.

ವ್ಯೋಮ (ನಾ). ೧. ಆಕಾಶ ; ಗಗನ. ೨. ವಾಯುಮಂಡಲ ; ವಾತಾವರಣ. ~ಕೇಶ = ಶಿವ. ~ನದಿ = ದೇವನದಿ ; ಆಕಾಶಗಂಗೆ.

ವ್ಯೋಮಗ (ನಾ). ಆಕಾಶದಲ್ಲಿ ಸಂಚರಿಸುವಂತಹುದು ; ದೇವತೆ, ಪಕ್ಷಿ, ಗ್ರಹ ಮುಂತಾದುವು.

ವ್ರಜ (ನಾ). ೧. ಸಮೂಹ ; ಗುಂಪು. ೨. ಕರುಹಟ್ಟಿ ; ಕೊಟ್ಟಿಗೆ.

ವ್ರಣ (ನಾ). ಗಾಯ ; ಹುಣ್ಣು.

ವ್ರತ (ನಾ). ೧. ನಿಯಮ; ನೋಂಪಿ. ೨. ಯಜ್ಞ; ಯಾಗ. ~ಕೆ(ಗೆ)ಡು=ನಿಯಮದಿಂದ ದೂರವಾಗು; ವ್ರತಭ್ರಷ್ಟವಾಗು. ~ಕೆ(ಗೆ)ೇಡಿ = ಬತಗೇಡಿ.

ವ್ರತತಿ (ನಾ). ೧. ಹರವು; ವಿಸ್ತಾರ. ೨. ಸಮೂಹ; ಗುಂಪು. ೩. ಬಳ್ಳಿ; ಲತೆ.

ವ್ರತಿ (ನಾ). ೧. ವ್ರತವನ್ನು ಕೈಕೊಂಡವನು. ೨. ಯತಿ; ಯೋಗಿ.

ವ್ರಯ (ನಾ). ಖರ್ಚು; ವೆಚ್ಚ; ವ್ಯಯ.

ವ್ರಾತ (ನಾ). ೧. ಗುಂಪು; ಸಮೂಹ. ೨. ಶಾರೀರಿಕ ಶ್ರಮ; ದೇಹಶ್ರಮ.

ವ್ರಾತ್ಯ (ನಾ). ೧. ಜಾತಿಬಾಹಿರ. ೨. ಹೀನ; ನೀಚ.

ವ್ರೀಡೆ (ನಾ). ಲಜ್ಜೆ; ನಾಚಿಕೆ.

ವ್ರೀಹಿ (ನಾ). ನೆಲ್ಲು; ಬತ್ತ.

ವ್ರೈಹೇಯ (ನಾ). ಬತ್ತದ ಗದ್ದೆ; ಶಾಲಿವನ.



# ಶ

ಶ (ನಾ). ಕನ್ನಡ ವರ್ಣಮಾಲೆಯ ಐವತ್ತೊಂದನೆಯ ಅಕ್ಷರ.

ಶಂಕರ (ನಾ). ೧. ಆನಂದವನ್ನುಂಟು ಮಾಡುವವನು. ೨. ಶಿವ; ಪರಮೇಶ್ವರ. (ಗು). ೩. ಆನಂದವನ್ನುಂಟುಮಾಡುವ; ಮಂಗಳಕರವಾದ. ~ಅರಿ = ಶಿವನ ಶತ್ರು; ಮನ್ಮಥ.

ಶಂಕರಗಂಡ (ನಾ). ಒಂದು ಬಗೆಯ ಧಾನ್ಯ; ಜೋಳ.

ಶಂಕರಪಾಳಿ (ನಾ). ಒಂದು ಬಗೆಯ ಕರಿದ ತಿಂಡಿ.

ಶಂಕರಪೋಳಿ = ಶಂಕರಪಾಳಿ.

ಶಂಕರಿ (ನಾ). ೧. ಸುಖವನ್ನುಂಟುಮಾಡುವವಳು; ಮಂಗಳಕಾರಿಣಿ. ೨. ಶಿವೆ; ಪಾರ್ವತಿ. ೩. ಧಾರೆಬಟ್ಟೆಲು; ಗಳಿಗೆಬಟ್ಟಲು.

ಶಂಕಿನಿ (ನಾ). ನಾಲ್ಕು ಬಗೆಯ ಸ್ತ್ರೀಜಾತಿಗಳಲ್ಲಿ ಒಂದು.

ಶಂಕು (ನಾ). ೧. ಗೂಟ; ಬೆಣೆ. ೨. ಕಂಬ; ಸ್ತಂಭ. ೩. ಈಟಿ; ಸಬಳ. ೪. ಕೊರಡು; ಮರದ ತುಂಡು. ೫. ಅಡಿಯಲ್ಲಿ ಅಗಲವಾಗಿದ್ದು ತುದಿಯಲ್ಲಿ ಚೂಪಾಗಿರುವ ಆಕೃತಿ. ೬. ಭೂಮಿಯನ್ನು ಅಳೆಯುವ ಒಂದು ಸಾಧನ. ೭. ಶಂಖ; ಕಂಬು.

ಶಂಕುಸ್ಥಾಪನೆ (ನಾ). ಕಟ್ಟಡವನ್ನು ಕಟ್ಟುವ ಪ್ರಾರಂಭದಲ್ಲಿ ಅಡಿಗಲ್ಲನ್ನು ಇಡುವ ಕಾರ್ಯ.

ಶಂಕೆ (ನಾ). ೧. ಸಂದೇಹ; ಸಂಶಯ. ೨. ಭಯ; ಅಂಜಿಕೆ. ೩. ಅಳುಕು; ಹಿಂಜರಿತ. ೪. ವಾದದಲ್ಲಿ ಎತ್ತುವ ಆಕ್ಷೇಪ. ~ಇಸು = ೧. ಸಂದೇಹಕ್ಕೊಳಗಾಗು; ಸಂಶಯಪಡು. ೨. ಹೆದರು; ಅಂಜು.

ಶಂಖ (ನಾ). ೧. ಸಮುದ್ರದಲ್ಲಿ ಸಿಗುವ ಒಂದು ಬಗೆಯ ಚಿಪ್ಪು; ಕಂಬು. ೨. ಹಣೆಯಲ್ಲಿರುವ ಮೂಳೆ. ೩. ಕುಬೇರನ ನವನಿಧಿಗಳಲ್ಲಿ ಒಂದು. ೪. ಒಂದು ಬಗೆಯ ಸುಗಂಧ ದ್ರವ್ಯ. ೫. ಬಿಳುಪು; ಶ್ವೇತವರ್ಣ. ೬. ಒಂದು ಸಂಖ್ಯೆ; ನೂರು ದಶಲಕ್ಷ. ~ಊದು = ಗೋಳಾಡು; ರಂಪಮಾಡು. ~ಪಾಷಾಣ = ಒಂದು ಬಗೆಯ ವಿಷವುಳ್ಳ

ಬಿಳಿಯ ಖನಿಜ. ~ಪುಷ್ಪ = ಒಂದು ಜಾತಿಯ ಬಳ್ಳಿ ಮತ್ತು ಅದರ ಹೂವು. ~ವಾದ್ಯ = ೧. ಪೂಜೆಯಲ್ಲಿ ಬಳಸುವ ವಾದ್ಯಗಳಲ್ಲಿ ಒಂದು. ೨. ಬೊಬ್ಬೆ; ಒದರಾಟ.

ಶಂಖಿನಿ ೧. = ಶಂಕಿನಿ. ೨. ಒಂದು ಜಾತಿಯ ಹುಲ್ಲು.

ಶಂಪೆ (ನಾ). ಮಿಂಚು.

ಶಂಬ (ನಾ). ೧. ಇಂದ್ರನ ವಜ್ರಾಯುಧ; ಕುಲಿಶ. ೨. ಹಡಗು. ~ಪಾಣಿ = ಇಂದ್ರ.

ಶಂಬರ (ನಾ). ೧. ನೀರು; ಉದಕ. ೨. ಮೋಡ; ಮುಗಿಲು. ೩. ಒಂದು ಜಾತಿಯ ಜಿಂಕೆ. ೪. ಒಬ್ಬ ರಾಕ್ಷಸನ ಹೆಸರು. ~ಅರಿ = ಕಾಮ; ಮನ್ಮಥ. ~ಜಾತ = ತಾವರೆ; ಕಮಲ.

ಶಂಭು (ನಾ). ೧. ಸುಖವನ್ನುಂಟುಮಾಡುವುದು. ೨. ಸಂತೋಷವಾಗಿರುವವನು. ೩. ಬ್ರಹ್ಮ. ೪. ವಿಷ್ಣು. ೫. ಶಿವ. ೬. ಯುಧಿಷ್ಠಿರ. ೭. ಅರ್ಹಂತ.

ಶಕ (ನಾ). ೧. ನಿರ್ದಿಷ್ಟವಾದ ಕಾಲದಿಂದ ಆರಂಭಿಸುವ ಕಾಲಗಣನೆ; ಯುಗಾರಂಭ. ೨. ಪರಿವರ್ತನೆಯ ಕಾಲ. ~ವರ್ಷ = ಶಾಲಿವಾಹನ ಮೊದಲಾದ ಕಾಲಗಣನೆಯ ಪ್ರಾರಂಭದ ವರ್ಷ.

ಶಕಟ (ನಾ). ೧. ರಥ; ಬಂಡಿ; ಗಾಡಿ. ೨. ಕೃಷ್ಣನಿಂದ ಕೊಲ್ಲಲ್ಪಟ್ಟ ಒಬ್ಬ ರಾಕ್ಷಸನ ಹೆಸರು. ೩. ಇಪ್ಪತ್ತೇಳು ನಕ್ಷತ್ರಗಳಲ್ಲಿ ಒಂದು; ರೋಹಿಣಿ.

ಶಕಲ(ಳ) (ನಾ). ೧. ಚೂರು; ತುಂಡು. ೨. ತಲೆಯ ಬುರುಡೆ; ಕಪಾಲ. ೩. ತೊಗಟೆ; ಹೊರಚಿಪ್ಪು. ೪. ಚರ್ಮ; ತೊಗಲು.

ಶಕುಂತ (ನಾ). ೧. ಹಕ್ಕಿ; ಪಕ್ಷಿ. ೨. ಒಂದು ಜಾತಿಯ ಡೇಗೆ. ೩. ಸಣ್ಣ ಜಾತಿಯ ಗೂಬೆ; ಹಾಲಕ್ಕಿ.

ಶಕುತಿ = ಶಕ್ತಿ.

ಶಕುನ (ನಾ). ೧. ಹಕ್ಕಿ; ಪಕ್ಷಿ. ೨. ಭವಿಷ್ಯವನ್ನು ಹೇಳುವುದೆಂದು ನಂಬಲಾಗಿರುವ ಹಕ್ಕಿ; ಉಳಿಗ; ಸಗುಣ. ೩. ಮುಂದಾಗುವುದನ್ನು ತಿಳಿಸುವುದು; ನಿಮಿತ್ತ. ~ಇಗ = ಶಕುನಗಳ ಸಹಾಯದಿಂದ ಭವಿಷ್ಯವನ್ನು ಹೇಳುವವನು.

ಶಕುನಿ ೧. = ಶಕುಂತ. ೨. ಕೌರವರ ಸೋದರ ಮಾವ. ೩. ಭೇದೋಪಾಯ ನಿಪುಣ. ೪. ಮೋಸಗಾರ; ವಂಚಕ.

ಶಕುಲ(ಳ) (ನಾ). ಒಂದು ಜಾತಿಯ ಮೀನು.

ಶಕೃತ್ತು (ನಾ). ೧. ಸಗಣಿ. ೨. ಮಲ; ಅಮೇಧ್ಯ.

ಶಕೆ = ಶಕ.

ಶಕ್ಕುಲಿ = ಚಕ್ಕುಲಿ.

ಶಕ್ತ (ನಾ). ೧. ಶಕ್ತಿಯುಳ್ಳವನು; ಬಲಿಷ್ಠ. ೨. ಶೂರ. (ಗು). ೩. ಶಕ್ತಿಯಿಂದ ಕೂಡಿದ; ಬಲಿಷ್ಠವಾದ. ೪. ದಕ್ಷತೆಯುಳ್ಳ.

ಶಕ್ತಿ (ನಾ). ೧. ಕೆಚ್ಚು; ಬಲ. ೨. ಪ್ರತಿಭೆ. ೩. ದುರ್ಗೆ; ಪಾರ್ವತಿ. ೪. ಈಟಿ; ಸಬಳ. ~ಕು(ಗು)ಂದು = ಬಲ ಕಡಮೆಯಾಗು; ಬಲಹೀನವಾಗು. ~ತ್ರಯ = ರಾಜನಲ್ಲಿರಬೇಕಾದ ಪ್ರಭು, ಮಂತ್ರ ಮತ್ತು ಉತ್ಸಾಹಗಳೆಂಬ ಮೂರು ಶಕ್ತಿಗಳು. ~ಪಾಣಿ = ಈಟಿಯನ್ನು ಕೈಯಲ್ಲಿ ಹಿಡಿದಿರುವವನು; ಷಣ್ಮುಖ.

ಶಕ್ಯ (ನಾ). ೧. ಸಾಧ್ಯವಾದುದು. (ಗು). ೨. ಮಾಡಬಹುದಾದ; ಸಾಧ್ಯವಾಗಬಹುದಾದ.

ಶಕ್ರ (ನಾ). ೧. ಬಲಿಷ್ಠ; ಬಲಾಢ್ಯ. ೨. ದೇವತೆಗಳ ಒಡೆಯ; ಇಂದ್ರ. ೩. ವಿಷ್ಣು. ೪. ಯಮ. ೫. ಪರ್ಣಶಾಲೆ; ಎಲೆಮನೆ. ~ಆಶೆ = ಇಂದ್ರನ ದಿಕ್ಕು; ಪೂರ್ವ. ~ಚಾಪ = ಕಾಮನ ಬಿಲ್ಲು; ಇಂದ್ರಚಾಪ. ~ತನುಜ = ೧. ಇಂದ್ರನ

ಮಗ. ೨. ಜಯಂತ. ೩. ಅರ್ಜುನ. ೪. ವಾಲಿ. ~ಧನು = ಶಕ್ರಚಾಪ.

ಶಕ್ವರಿ (ನಾ). ೧. ಅಕ್ಷರಛಂದಸ್ಸಿನಲ್ಲಿ ಒಂದು ಪ್ರಕಾರ. ೨. ಹಸು; ಗೋವು. ೩. ವೇದಾಂತ.

ಶಠ (ನಾ). ೧. ಔದ್ಧತ್ಯ; ಉದ್ಧಟತನ. ೨. ಮೋಸ; ಕಪಟ. ೩. ಉದ್ಧಟ. ೪. ಮೋಸಗಾರ; ಕಪಟಿ. ೫. ಮೂರ್ಖ; ದಡ್ಡ. (ಗು). ೬. ಕೆಟ್ಟ; ದುಷ್ಟ. ೭. ಕಪಟದಿಂದ ಕೂಡಿದ.

ಶಣ (ನಾ). ಒಂದು ಜಾತಿಯ ಗಿಡ; ಸಣಬು; ಪುಂಡಿ. ~ಸೂತ್ರ = ಸಣಬಿನಿಂದ ಮಾಡಿದ ಹಗ್ಗ, –ಬಲೆ.

ಶತ (ನಾ). ೧. ಒಂದು ಸಂಖ್ಯೆ; ನೂರು. (ಗು). ೨. ಅಧಿಕವಾದ; ಅನೇಕ. ~ಅಂಗ = ರಥ; ಬಂಡಿ. ~ಅಂಬಕ = ಅನೇಕ ಕಣ್ಣುಗಳುಳ್ಳವನು; ಇಂದ್ರ. ~ಕೋಟಿ = ೧. ನೂರು ಕೋಟಿ. ೨. ನೂರು ಅಲಗುಗಳುಳ್ಳ ಇಂದ್ರನ ವಜ್ರಾಯುಧ. ~ಕ್ರತು = ೧. ನೂರು ಯಾಗಗಳು. ೨. ನೂರು ಯಾಗಗಳನ್ನು ಮಾಡಿದವನು; ಇಂದ್ರ. ~ಛಿ(ಚ್ಛಿ)ದ್ರ = ಅನೇಕ ರಂಧ್ರಗಳಿಂದ ಕೂಡಿದುದು. ~ದಲ(ಳ) = ಅನೇಕ ಎಸಳುಗಳಿಂದ ಕೂಡಿರುವುದು; ತಾವರೆ. ~ಪತ್ರ = ೧. ನವಿಲು. ೨. ಸೇವಂತಿಗೆ. ೩. = ಶತದಲ. ~ಪರ್ವ = ಅನೇಕ ಗಿಣ್ಣುಗಳಿಂದ ಕೂಡಿದುದು; ಬಿದಿರು. ~ಮಖ = ಶತಕ್ರತು. ~ಮಾನ = ೧. ನೂರು ವರ್ಷಗಳ ಕಾಲ, –ಅವಧಿ. ೨. ನೂರರ ಅಳತೆ. ~ಮೂರ್ಖ = ಬಹಳ ದಡ್ಡ; ಅತಿಮೂರ್ಖ.

ಶತಕ (ನಾ). ೧. ನೂರರ ಗುಂಪು, –ಮೊತ್ತ. ೨. ನೂರು ವರ್ಷಗಳ ಅವಧಿ; ಶತಮಾನ. ೩. ನೂರು ಬಿಡಿಪದ್ಯಗಳಿಂದ ಕೂಡಿದ ಕಾವ್ಯರೂಪ.

ಶತಘ್ನಿ (ನಾ). ಒಂದು ಬಗೆಯ ಆಯುಧ; ಫಿರಂಗಿ; ತೋಫು.

ಶತಪದ (ನಾ). ನೂರು ಹೆಜ್ಜೆ ನಡೆಯುವುದು; ಅತ್ತಿಂದಿತ್ತ ತಿರುಗುವುದು, –ಅಡ್ಡಾಡುವುದು.

ಶತಪದಿ (ನಾ). ನೂರು ಕಾಲುಗಳುಳ್ಳ ಹುಳು; ಝರಿ; ಲಕ್ಷ್ಮೀಚೇಳು.

ಶತರಂಜಿ (ನಾ). ವಿವಿಧ ಬಣ್ಣಗಳಿಂದ ಕೂಡಿದ ರತ್ನಗಂಬಳಿ.

ಶತಾಯು (ನಾ). ನೂರು ವರ್ಷಗಳ ಕಾಲ ಬದುಕುವವನು.

ಶತಾವರಿ (ನಾ). ಒಂದು ಬಗೆಯ ಸಸ್ಯ; ಆಷಾಢಿ.

ಶತ್ರು (ನಾ). ಹಗೆ; ವೈರಿ.

ಶತ್ರುಂಜಯ (ನಾ). ೧. ವೈರಿಗಳನ್ನು ಗೆಲ್ಲುವುದಕ್ಕಾಗಿ ಮಾಡುವ ಹೋಮ ಮುಂತಾದ ವಿಧಿ. ೨. ದ್ರುಪದನ ಮಗ. ೩. ಒಂದು ಪರ್ವತದ ಹೆಸರು.

ಶನಿ (ನಾ). ನವಗ್ರಹಗಳಲ್ಲಿ ಒಂದು. ~ಕಾಟ = ೧. ಶನಿಗ್ರಹದಿಂದುಂಟಾಗುವ ದೀರ್ಘಕಾಲದ ಹಿಂಸೆ. ೨. ಹಿಂಸೆ; ಪೀಡೆ. ~ವಾರ = ವಾರದ ಏಳುದಿನಗಳಲ್ಲಿ ಒಂದು.

ಶನೈಶ್ಚರ (ನಾ). ನಿಧಾನವಾಗಿ ಚಲಿಸುವ ಗ್ರಹ; ಶನಿ.

ಶಪಥ (ನಾ). ೧. ದೃಢಸಂಕಲ್ಪ; ಪ್ರತಿಜ್ಞೆ. ೨. ದೇವರ ಹೆಸರಿನಲ್ಲಿ ಮಾಡುವ ಆಣೆ; ಪ್ರಮಾಣ. ೩. ಶಾಪ.

ಶಪನ (ನಾ). ೧. ಶಾಪ. ೨. ಆಣೆ; ಪ್ರಮಾಣ. ೩. ಬಯ್ಗುಳು; ನಿಂದೆ.

ಶಪಿಯಿಸು = ಶಪಿಸು.

ಶಪಿಸು (ಕ್ರಿ). ೧. ಶಾಪಕೊಡು; ಶಾಪಕ್ಕೆ ಗುರಿಯಾಗುವಂತೆ ಮಾಡು. ೨. ಬಯ್ಯು; ನಿಂದಿಸು.

ಶಫ (ನಾ). ಗೊರಸು; ಕೊಳಗು.

ಶಫರ (ನಾ). ಒಂದು ಜಾತಿಯ ಮೀನು.

ಶಬ = ಶವ.
ಶಬರ (ನಾ). ೧. ಬೇಡ ; ಕಿರಾತ. ೨. ಶಿವ.
ಶಬರಿ (ನಾ). ಬೇಡಿತಿ ; ಕಿರಾತೆ.
ಶಬಲ(ಳ) (ನಾ). ೧. ನಾನಾ ಬಣ್ಣಗಳಿಂದ ಕೂಡಿರುವುದು. ೨. ಚುಕ್ಕೆಗಳಿಂದ ಕೂಡಿರುವುದು. (ಗು). ೩. ನಾನಾ ಬಣ್ಣಗಳಿಂದ ಕೂಡಿದ. ೪. ಚುಕ್ಕೆಗಳಿಂದ ಕೂಡಿದ.
ಶಬ್ದ (ನಾ). ೧. ಧ್ವನಿ ; ನಾದ. ೨. ಸದ್ದು ; ಸಪ್ಪುಳ. ೩. ಅರ್ಥವನ್ನು ತಿಳಿಸುವ ಅಕ್ಷರಗಳ ಸಮುದಾಯ; ಪದ. ~ಅಲ(ಳ)ಂಕಾರ = ಅನುಪ್ರಾಸ, ಯಮಕ ಮುಂತಾದ ಶಬ್ದ ಪ್ರಧಾನವಾದ ಅಲಂಕಾರಗಳು. ~ಕೋಶ = ಪದಗಳನ್ನು ಅಕಾರಾದಿಯಾಗಿ ಕೊಟ್ಟು ಅವುಗಳ ಅರ್ಥವನ್ನು ವಿವರಿಸುವ ಗ್ರಂಥ ; ನಿಘಂಟು. ~ಚಿತ್ರ = ಶಬ್ದಗಳ ಮೂಲಕ ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ ವಸ್ತು ಅಥವಾ ವಿಷಯ. ~ವಿದ್ಯೆ = ವ್ಯಾಕರಣಶಾಸ್ತ್ರ. ~ಸಂಗ್ರಹ = ಪದಗಳನ್ನು ಒಟ್ಟುಗೂಡಿಸುವುದು.
ಶಬ್ದಜ್ಞ (ನಾ). ವ್ಯಾಕರಣವನ್ನು ಬಲ್ಲವನು ; ವೈಯಾಕರಣ.
ಶಬ್ದವೇದಿ = ಶಬ್ದಜ್ಞ.
ಶಬ್ದವೇಧಿ (ನಾ). ೧. ಕಣ್ಣಿಗೆ ಕಾಣದಿರುವ ವಸ್ತುವಿನ ಕಡೆಗೆ, ಕೇವಲ ಶಬ್ದವನ್ನು ಅನುಸರಿಸಿ ಬಾಣವನ್ನು ಪ್ರಯೋಗಿಸುವವನು. ೨. ಶಬ್ದ ಬಂದ ಕಡೆಗೆ ಬಾಣವನ್ನು ಪ್ರಯೋಗಿಸುವ ವಿದ್ಯೆ.
ಶಮ (ನಾ). ೧. ನೆಮ್ಮದಿ; ಶಾಂತಸ್ಥಿತಿ. ೨. ಆತ್ಮಸಂಯಮ ; ಮನೋನಿಗ್ರಹ.
ಶಮನ (ನಾ). ೧. (ರೋಗ ಮೊದಲಾದುವನ್ನು) ಗುಣಪಡಿಸುವಿಕೆ, –ಪರಿಹರಿಸುವಿಕೆ. ೨. ಸಮಾಧಾನಮಾಡುವಿಕೆ; ಶಾಂತಗೊಳಿಸುವಿಕೆ. ೩. ನೆಮ್ಮದಿ; ಸಮಾಧಾನ. ೪. ನಾಶ; ಹಾಳು. ೫. ಯಮ.
ಶಮಲ (ನಾ). ೧. ಮಲ ; ಅಮೇಧ್ಯ. ೨. ಪಾಪ ; ದೋಷ ; ಕುಂದು.
ಶಮಿ (ನಾ). ೧. ಒಂದು ಜಾತಿಯ ಮರ ; ಬನ್ನಿ ; ಜಂಬಿ. ೨. ಶಾಂತಗುಣವುಳ್ಳವನು ; ಯೋಗಿ.
ಶಮೆ = ಶಮ. ~ಇಸು = ೧. ಶಾಂತಗೊಳ್ಳು. ೨. ಶಾಂತಗೊಳಿಸು ; ಸಮಾಧಾನಪಡಿಸು. ೩. ಮನಸ್ಸನ್ನು ನಿಗ್ರಹಿಸು.
ಶಮ್ಯೆ (ನಾ). ೧. ನೇಗಿಲಿನ ಗೂಟ, –ಬೆಣೆ. ೨. ಒಂದು ಬಗೆಯ ತಾಳವಾದ್ಯ.
ಶಯನ (ನಾ). ೧. ವಿಶ್ರಮಿಸುವುದು. ೨. ಮಲಗುವುದು; ನಿದ್ರಿಸುವುದು. ೩. ನಿದ್ರೆ. ೪. ಹಾಸುಗೆ ; ಗಾದಿ. ೫. ಕೂಟ ; ಸಂಭೋಗ. ~ಇಸು = ೧. ವಿಶ್ರಮಿಸು. ೨. ಮಲಗು ; ನಿದ್ರೆಮಾಡು. ~ಗೃಹ = ಶಯ್ಯಾಗೃಹ. ~ಸದನ=ಶಯ್ಯಾಗೃಹ.
ಶಯು (ನಾ). ಹೆಬ್ಬಾವು ; ಅಜಗರ.
ಶಯ್ಯಾಗೃಹ (ನಾ). ಮಲಗುವ ಮನೆ ; ಸೆಜ್ಜೆಮನೆ.
ಶಯ್ಯೆ (ನಾ). ೧. ಹಾಸುಗೆ ; ಸೆಜ್ಜೆ. ೨. ನಿದ್ರೆ.
ಶರ (ನಾ). ೧. ಒಂದು ಜಾತಿಯ ಹುಲ್ಲು ; ಲಾಳ. ೨. ಬಾಣ; ಸರಳು. ೩. ಹಾಲಿನ ಕೆನೆ. ೪. ನೀರು ; ಉದಕ. ೫. ಸರೋವರ ; ಕೊಳ. ೬.=ಶರಷಟ್ಪದಿ. ~ಜನ್ಮ=ಲಾಳದ ಕಡ್ಡಿಯ ಪೊದರಿನಲ್ಲಿ ಹುಟ್ಟಿದವನು ; ಷಣ್ಮುಖ. ~ನಿಧಿ = ೧. ನೀರಿಗೆ ಆಶ್ರಯಸ್ಥಾನವಾದುದು ; ಸಮುದ್ರ. ೨. ಬಾಣಗಳಿಗೆ ಆಶ್ರಯಸ್ಥಾನವಾದುದು ; ಬತ್ತಳಿಕೆ ; ಮೂಡಿಗೆ. ~ಪಂಜರ = ೧. ಬಾಣಗಳಿಂದ ರಚಿಸಿದ ಗೂಡು, –ಹಂಜರ. ೨. ಬಾಣಗಳ ಸಮೂಹ. ~ವರ್ಷ=ಮಳೆಯಂತೆ ಒಂದೇ ಸಮನೆ ಬಿಡುವ ಬಾಣಗಳ ಸಮೂಹ. ~ಷಟ್ಪದಿ = ಕನ್ನಡದ ಆರು ಷಟ್ಪದಿಗಳಲ್ಲಿ ಒಂದು. ~ಸಂಧಾನ = ಬಾಣವನ್ನು

ಬಿಲ್ಲಿಗೆ ಹೂಡುವುದು. ~ಸಂನ್ಯಾಸ =ಬಾಣವನ್ನು ಬಿಡುವುದಿಲ್ಲವೆಂದು ಸಂಕಲ್ಪಿಸುವುದು. ~ಸ್ತಂಬ = ಲಾಳದ ಕಡ್ಡಿ; ಜೊಂಡು.

ಶರಚ್ಚಂದ್ರ (ನಾ). ಶರದೃತುವಿನಲ್ಲಿ ಮೂಡುವ ಚಂದ್ರ.

ಶರಣ (ನಾ). ೧. ಕಾಪಾಡುವವನು; ಪಾಲಕ. ೨. ಕಾಪು; ರಕ್ಷಣೆ. ೩. ಆಶ್ರಯವನ್ನು ಬಯಸಿದವನು; ಮರೆಹೊಕ್ಕವನು. ೪. ಭಕ್ತ. ೫. ಶೈವ; ವಿರಕ್ತ; ಜಂಗಮ. ೬. ಮನೆ; ವಾಸಸ್ಥಳ. ~ಅರ್ಥಿ = ೧. ವಂದನೆ; ನಮಸ್ಕಾರ. ೨. = ಶರಣಾಗತ. ~ಆಗತ = ಆಶ್ರಯವನ್ನು ಬೇಡುವವನು. ~ಆಗತಿ =೧. ಮೊರೆ ಹೋಗುವುದು; ಆಶ್ರಯವನ್ನು ಬಯಸುವುದು. ೨. ಸೋಲನ್ನು ಒಪ್ಪಿಕೊಳ್ಳುವುದು.

ಶರಣು (ನಾ). ೧. ರಕ್ಷಣೆ; ಕಾಪು. ೨. ವಂದನೆ; ನಮಸ್ಕಾರ. ~ಬೀಳು = ಶರಣುಹೊಡೆ. ~ಹೊಗು = ಶರಣು ಬೀಳು; ಮೊರೆ ಹೊಗು. ~ಹೊಡೆ =೧. ಮೊರೆಹೊಗು. ೨. ನಮಸ್ಕರಿಸು.

ಶರಣೆ (ನಾ). ಶಿವಭಕ್ತೆ.

ಶರಣ್ಯ (ನಾ). ೧. ರಕ್ಷಿಸಲು ತಕ್ಕವನು; ಕಾಪಾಡಲು ಯೋಗ್ಯನಾದವನು. ೨. ರಕ್ಷಣೆ. ೩. ಮನೆ; ಆವಾಸ. (ಗು). ೪. ಕಾಪಾಡಲು ತಕ್ಕುದಾದ; ರಕ್ಷಿಸಲು ಯೋಗ್ಯವಾದ.

ಶರತ್ಕಾಲ (ನಾ). ಮಳೆಗಾಲದ ಅನಂತರದ ಕಾಲ; ಆಶ್ವಯುಜ, ಕಾರ್ತಿಕಮಾಸಗಳನ್ನೊಳಗೊಂಡಿರುವ ಕಾಲ.

ಶರದ ೧.=ಶರತ್ಕಾಲ. ೨. ವರ್ಷ; ಸಂವತ್ಸರ.

ಶರದೃತು = ಶರತ್ಕಾಲ.

ಶರಧಿ ೧. = ಶರನಿಧಿ. ೨. ಕಾಡು; ಅಡವಿ. ~ಶಯನ = ಸಮುದ್ರದ ಮೇಲೆ ಮಲಗಿರುವವನು; ವಿಷ್ಣು. ~ಸಂಭವ = ಸಮುದ್ರದಲ್ಲಿ ಹುಟ್ಟಿದವನು; ಚಂದ್ರ. ~ಸುತೆ = ಸಮುದ್ರದಲ್ಲಿ ಹುಟ್ಟಿದವಳು; ಲಕ್ಷ್ಮಿ.

ಶರಬತ್ತು = ಷರಬತ್ತು.

ಶರಭ (ನಾ). ೧. ಎಂಟು ಕಾಲುಗಳುಳ್ಳ ಒಂದು ಕಾಲ್ಪನಿಕ ಪ್ರಾಣಿ. ೨. ಶಿವನ ಅವತಾರಗಳಲ್ಲಿ ಒಂದು; ವೀರಭದ್ರ. ~ರಿಪು = ಗಂಡಭೇರುಂಡ.

ಶರಾಬು (ನಾ). ಮದ್ಯ; ಸುರೆ.

ಶರಾಯಿ = ಷರಾಯಿ.

ಶರಾವ = ಶ್ರಾವೆ.

ಶರಾವೆ = ಶ್ರಾವೆ.

ಶರೀಫ (ನಾ). ೧. ಸಭ್ಯಮನುಷ್ಯ; ಕುಲೀನ. ೨. ಮುಸಲ್ಮಾನರ ಮುಖಂಡ.

ಶರೀರ (ನಾ). ಮೈ; ದೇಹ. ~ತ್ಯಾಗ = ಶರೀರವನ್ನು ಬಿಡುವುದು; ಮರಣ ಹೊಂದುವುದು. ~ದಂಡನೆ = ವ್ರತೋಪವಾಸಗಳಿಂದ ದೇಹವನ್ನು ನಿಗ್ರಹಿಸುವುದು. ~ಧರ್ಮ = ದೇಹದ ಸ್ವಭಾವ, –ಪ್ರಕೃತಿ.

ಶರೀರಜ (ನಾ). ೧. ಮಗ; ಪುತ್ರ. ೨. ಆಸೆ; ಬಯಕೆ. ೩. ರೋಗ; ಕಾಯಿಲೆ.

ಶರೀರಿ (ನಾ). ೧. ಶರೀರವುಳ್ಳುದು; ಮನುಷ್ಯ, ಪ್ರಾಣಿ ಮುಂತಾದುವು. ೨. ದೇಹವನ್ನು ಧರಿಸುವವನು; ಆತ್ಮ.

ಶರ್ಕರಾವರ್ತ (ನಾ). ಸಣ್ಣಸಣ್ಣ ಕಲ್ಲುಗಳಿಂದ ಕೂಡಿದ ಸುಂಟರಗಾಳಿ.

ಶರ್ಕರೆ (ನಾ). ೧. ಕಬ್ಬಿನಿಂದ ತಯಾರಿಸುವ ಒಂದು ಬಗೆಯ ಸಿಹಿ ಪದಾರ್ಥ; ಸಕ್ಕರೆ. ೨. ಸಣ್ಣಕಲ್ಲು; ನೊರಜು.

ಶರ್ಮ (ನಾ). ೧. ಸಂತೋಷ; ಆನಂದ. ೨. ಆಶ್ರಯ; ಆಸರೆ. (ಗು). ೩. ಸಂತೋಷವನ್ನು ಕೊಡುವ.

ಶರ್ವ (ನಾ). ಶಿವ; ಶಂಕರ.

ಶರ್ವರಿ (ನಾ). ಇರುಳು; ರಾತ್ರಿ.

ಶರ್ವಾಣಿ (ನಾ). ಶಿವೆ; ಪಾರ್ವತಿ.

**ಶಲ** (ನಾ). ಮುಳ್ಳುಹಂದಿಯ ಮೈಮೇಲಿರುವ ಮುಳ್ಳು.

**ಶಲದಿ** (ನಾ). ೧. ಜೇಡರ ಹುಳು; ಸೆಲದಿ. ೨. ಒಂದು ಬಗೆಯ ಚರ್ಮರೋಗ.

**ಶಲಭ** (ನಾ). ೧. ಮಿಡಿತೆ; ಪತಂಗ. ೨. ದೀಪದ ಹುಳು; ಮಿಂಚುಹುಳು.

**ಶಲಾಕೆ** (ನಾ). ೧. ಒಂದು ಬಗೆಯ ಆಯುಧ; ಸಲಾಕೆ. ೨. ಸೂಜಿ, ಮೊಳೆ ಮುಂತಾದ ಮೊನೆಯುಳ್ಳ ವಸ್ತು. ೩. ಮೂಳೆ; ಎಲುಬು. ೪. ಸರಳು; ಕಂಬಿ.

**ಶಲಾಟು** (ನಾ). ೧. ಎಳೆಯ ಕಾಯಿ; ಮಿಡಿ. ೨. ಒಣಗಿದ ಕಾಯಿ; ವಾಸ. (ಗು). ೩. ಎಳೆಯದಾದ; ಬಲಿಯದ.

**ಶಲ್ಕ** (ನಾ). ತುಂಡು; ಚೂರು. ೨. ತೊಗಟೆ; ಸಿಪ್ಪೆ; ಚಕ್ಕೆ. ೩. ಮೀನಿನ ಚಿಪ್ಪು.

**ಶಲ್ಯ** (ನಾ). ೧. ಈಟಿ; ಸಲಾಕೆ. ೨. ಚೂಪಾದ ಮೊನೆಯುಳ್ಳ ವಸ್ತು. ೩. ಮುಳ್ಳುಹಂದಿ. ೪. ತುಂಡು; ಚೂರು. ೫. ತೊಂದರೆ; ಗಂಡಾಂತರ. ೬. ಹೊದೆಯುವ ತೆಳ್ಳಗಿನ ವಸ್ತ್ರ; ಉತ್ತರೀಯ. ೭. ಮದ್ರದೇಶದ ದೊರೆಯ ಹೆಸರು.

**ಶವ** (ನಾ). ಹೆಣ; ಕುಣಪ. **~ಪರೀಕ್ಷೆ** = (ಸಾವಿಗೆ ಕಾರಣವನ್ನು ಕಂಡುಹಿಡಿಯಲು ಮಾಡುವ) ಹೆಣದ ವೈದ್ಯಪರೀಕ್ಷೆ. **~ಸಂಸ್ಕಾರ** = ಮರಣಾನಂತರ ದೇಹವನ್ನು ಒಪ್ಪಮಾಡುವುದು; ಹೂಳುವುದು ಅಥವಾ ಸುಡುವುದು.

**ಶಶ** ೧. = ಶಶಕ. ೨. ಚಂದ್ರನಲ್ಲಿರುವ ಮೊಲದಾಕಾರದ ಗುರುತು. **~ಅಂಕ** = ಮೊಲದ ಗುರುತನ್ನು ಹೊಂದಿರುವವನು; ಚಂದ್ರ.

**ಶಶಕ** (ನಾ). ಮೊಲ.

**ಶಶಿ** (ನಾ). ಚಂದ್ರ. **~ಕಾಂತ** = ಚಂದ್ರಕಾಂತ. **~ಮಣಿ** = ಚಂದ್ರಕಾಂತ. **~ಮೌಲಿ(ಳಿ)** = ಶಶಿಚೂಡ.

**ಶಶಿಚೂಡ** (ನಾ). ತಲೆಯಲ್ಲಿ ಚಂದ್ರನನ್ನು ಧರಿಸಿದವನು; ಶಿವ.

**ಶಷ್ಕುಲಿ** = ಚಕ್ಕುಲಿ.

**ಶಸ್ತ** (ಗು). ೧. ಹೇಳಲ್ಪಟ್ಟ. ೨. ಸ್ತುತಿ ಮಾಡಿದ; ಹೊಗಳಲ್ಪಟ್ಟ. ೩. ಶ್ರೇಷ್ಠವಾದ.

**ಶಸ್ತ್ರ** (ನಾ). ಆಯುಧ. **~ಆಗಾರ** = ಆಯುಧಗಳನ್ನಿಡುವ ಕಟ್ಟಡ. **~ಚಿಕಿತ್ಸೆ** = ರೋಗ ಅಥವಾ ಅಂಗವಿಕಲತೆಯನ್ನು ಶಸ್ತ್ರಗಳಿಂದ ಗುಣಪಡಿಸುವಿಕೆ. **~ವೈದ್ಯ** = ೧. ಶಸ್ತ್ರಗಳ ಸಹಾಯದಿಂದ ದೇಹದ ತೊಂದರೆ, ರೋಗ ಮುಂತಾದುವನ್ನು ಗುಣಪಡಿಸುವವನು. ೨. = ಶಸ್ತ್ರಚಿಕಿತ್ಸೆ.

**ಶಹ** (ನಾ). ೧. ಉತ್ತೇಜನ; ಪ್ರೋತ್ಸಾಹ. ೨. = ಷಹ.

**ಶಹನಾಯಿ** (ನಾ). ಒಂದು ಬಗೆಯ ಊದುವ ವಾದ್ಯ.

**ಶಹಭಾಸ್** (ನಾ). ಒಂದು ಕೊಂಡಾಟದ ಮಾತು.

**ಶಹರ್(ರು)** (ನಾ). ಪಟ್ಟಣ; ನಗರ.

**ಶಹಾಮೃಗ** (ನಾ). ೧. ಒಂದು ಜಾತಿಯ ಪಕ್ಷಿ; ಉಷ್ಟ್ರ. ೨. ಒಂದು ಜಾತಿಯ ರಣಹದ್ದು.

**ಶಾಂಡಿಲ್ಯಕ** (ನಾ). ೧. ಒಂದು ಜಾತಿಯ ಮರ; ಬಿಲ್ವಪತ್ರೆ. ೨. ಒಬ್ಬ ಋಷಿಯ ಹೆಸರು.

**ಶಾಂತ** (ನಾ). ೧. ಕಾವ್ಯದ ನವರಸಗಳಲ್ಲಿ ಒಂದು. ೨. ಪ್ರಶಾಂತತೆ; ಕ್ಷೋಭೆಯಿಲ್ಲದಿರುವಿಕೆ. ೩. ಇಂದ್ರಿಯಗಳನ್ನು ನಿಗ್ರಹಿಸಿದವನು; ಯೋಗಿ. (ಗು). ೪. ಸಮಾಧಾನಗೊಂಡ; ಉಪಶಮನಗೊಂಡ. ೫. ಮೌನವಾದ; ಸದ್ದಿಲ್ಲದ.

**ಶಾಂತಿ** (ನಾ). ೧. ಮೌನ; ನೀರವತೆ. ೨. ನೆಮ್ಮದಿ; ಸಮಾಧಾನ. ೩. = ಶಾಂತಿಕರ್ಮ. **~ಕರ್ಮ** = ಅನಿಷ್ಟಪರಿಹಾರಕ್ಕಾಗಿ ಮಾಡುವ ಜಪ, ಹೋಮ

ಮುಂತಾದುವು. ~ಪಾಲಕ = ನೆಮ್ಮದಿಯನ್ನು ಕಾಪಾಡಲು ನಿಯುಕ್ತನಾದವನು.
ಶಾಂಬರಿ (ನಾ). ಇಂದ್ರಜಾಲ ; ಕಣ್ಕಟ್ಟು.
ಶಾಂಭವ (ಗು). ಶಿವನಿಗೆ ಸಂಬಂಧಿಸಿದ.
ಶಾಂಭವಿ (ನಾ). ಪಾರ್ವತಿ.
ಶಾಕ (ನಾ). ೧. ತರಕಾರಿ ; ಕಾಯಿಪಲ್ಯ. ೨. ವ್ಯಂಜನಪದಾರ್ಥ ; ಮೇಲೋಗರ. ೩. ಬಿಸಿ ; ಕಾವು ; ಸೇಕ. ೪. ಶಕ್ತಿ ; ಸಾಮರ್ಥ್ಯ. ~ಆಹಾರ = ಸಸ್ಯಾಹಾರ. ~ಶಾಕಟ = ತರಕಾರಿಯನ್ನು ಬೆಳೆಯುವ ಭೂಮಿ ; ತರಕಾರಿ ತೋಟ.
ಶಾಕಟ (ನಾ). ೧. ನೊಗಕ್ಕೆ ಹೂಡಿದ ಎತ್ತು, ಕೋಣ ಮುಂತಾದುವು. ೨. ಭೂಮಿ ; ಕ್ಷೇತ್ರ. (ಗು). ೩. ಬಂಡಿಗೆ ಸಂಬಂಧಿಸಿದ.
ಶಾಕಾಹಾರಿ (ನಾ). ಸಸ್ಯಗಳಿಂದ ದೊರೆಯುವ ಆಹಾರವನ್ನು ಮಾತ್ರ ಸೇವಿಸುವವನು ; ಸಸ್ಯಾಹಾರಿ.
ಶಾಕಿನಿ (ನಾ). ಒಂದು ಕ್ಷುದ್ರದೇವತೆ.
ಶಾಕ್ತ (ನಾ). ೧. ಶಕ್ತಿದೇವತೆಯನ್ನು ಪೂಜಿಸುವವನು ; ದುರ್ಗೆಯ ಉಪಾಸಕ. (ಗು). ೨. ದುರ್ಗೆಗೆ ಸಂಬಂಧಿಸಿದ.
ಶಾಕ್ವರ (ನಾ). ಎತ್ತು ; ಗೂಳಿ.
ಶಾಖ (ನಾ). ೧. ತರಕಾರಿ. ೨. ಕೊಂಬೆ ; ಗೆಲ್ಲು. ೩. ಬಿಸಿ ; ಉಷ್ಣತೆ. ~ಮಾಪಕ =ಉಷ್ಣದಪ್ರಮಾಣವನ್ನು ಕಂಡುಹಿಡಿಯುವ ಸಾಧನ.
ಶಾಖಾಚರ (ನಾ). ಕೊಂಬೆಯಿಂದ ಕೊಂಬೆಗೆ ಓಡ್ಯಾಡುವ ಪ್ರಾಣಿ ; ಕೋತಿ.
ಶಾಖೆ (ನಾ). ೧. ಕೊಂಬೆ ; ಟೊಂಗೆ. ೨.ಸಂಸ್ಥೆಯೊಂದರ ವಿಭಾಗ ; ಉಪಸಂಸ್ಥೆ. ೩. ಪಂಗಡ ; ಪಕ್ಷ.
ಶಾಟಿ (ನಾ). ೧. ಬಟ್ಟೆ ; ವಸ್ತ್ರ. ೨. ಸಂನ್ಯಾಸಿಗಳು ಉಡುವ ಕೆಂಪುಬಟ್ಟೆ ; ಕಾವಿ ; ಕಾಷಾಯ.
ಶಾಠ್ಯ (ನಾ). ೧. ಔದ್ಧತ್ಯ ; ಧೂರ್ತತೆ. ೨. ಮೋಸ ; ಕಪಟ.
ಶಾಡ್ವಲ (ನಾ). ಹಸುರು ಹುಲ್ಲುಗಾವಲು.
ಶಾಣ (ನಾ). ೧. ಸಾಣೆ ಹಿಡಿಯುವ ಕಲ್ಲು. ೨. ಒರೆಗಲ್ಲು. ೩. ಜಾಣ ; ಬುದ್ಧಿವಂತ.
ಶಾಣೆ (ನಾ). ಜಾಣೆ.
ಶಾತ (ಗು). ೧. ಹರಿತವಾದ ; ಚೂಪಾದ. ೨. ಸೂಕ್ಷ್ಮವಾದ ; ನವುರಾದ. ೩. ಕೃಶವಾದ ; ಸೊರಗಿದ. ೪. ಸುಂದರವಾದ.
ಶಾತಕುಂಭ (ನಾ). ಚಿನ್ನ ; ಹೊನ್ನು.
ಶಾತ್ರವ (ನಾ). ೧. ದ್ವೇಷ ; ಹಗೆತನ. ೨. ವೈರಿ ; ಹಗೆ. ೩. ಶತ್ರುಸಮೂಹ. (ಗು). ೪. ಶತ್ರುವಿಗೆ ಸಂಬಂಧಿಸಿದ.
ಶಾದ (ನಾ). ೧. ಎಳೆಯ ಹುಲ್ಲು. ೨. ಕೆಸರು; ಪಂಕ.
ಶಾದ್ವಲ = ಶಾಡ್ವಲ.
ಶಾನುಭಾಗ (ನಾ). ಹಳ್ಳಿಯ ಲೆಕ್ಕಪತ್ರಗಳನ್ನು ಬರೆಯುವವನು; ಸೇನಬೋವ; ಕುಲಕರ್ಣಿ.
ಶಾನುಭೋಗ = ಶಾನುಭಾಗ. ~ಇಕೆ = ಸೇನಬೋವನ ಕೆಲಸ; ಲೆಕ್ಕಪತ್ರವನ್ನು ಬರೆಯುವುದು.
ಶಾಪ (ನಾ). ೧. ಕೆಡುಕಾಗಲೆಂದು ಬಯಸಿ ಹೇಳುವ ಮಾತು. ೨. ನಿಂದೆ ; ಬಯ್ಗುಳು. ~ಇಸು = ೧. ಶಾಪವನ್ನು ಕೊಡು; ಶಪಿಸು. ೨. ಬಯ್ಯು ; ನಿಂದಿಸು. ~ಗ್ರಸ್ತ = ಶಾಪವನ್ನು ಹೊಂದಿದವನು. ~ಮೋಕ್ಷ = ಶಾಪದಿಂದ ಬಿಡುಗಡೆಯಾಗುವುದು. ~ವಿಮೋಚನೆ = ಶಾಪಮೋಕ್ಷ.
ಶಾಬ = ಶಾಬಕ.
ಶಾಬಕ (ನಾ). (ಯಾವುದಾದರೂ ಪ್ರಾಣಿಯ) ಮರಿ ; ಪೋತ.
ಶಾಬರ (ನಾ) ೧. ಇಂದ್ರಜಾಲ ; ಕಣ್ಕಟ್ಟು. ೨. ಬೇಡ ; ಕಿರಾತ. ೩. ಒಂದು ಜಾತಿಯ ಮರ. (ಗು). ೪. ಬೇಡನಿಗೆ ಸಂಬಂಧಿಸಿದ.

**ಶಾಬ್ದಿಕ** (ನಾ). ೧. ವ್ಯಾಕರಣಶಾಸ್ತ್ರವನ್ನು ತಿಳಿದವನು ; ವೈಯಾಕರಣ. (ಗು). ೨. ಶಬ್ದಕ್ಕೆ ಸಂಬಂಧಿಸಿದ. ೩. ಬಾಯಿಮಾತಿನ ; ಆಡುಮಾತಿನ.

**ಶಾಮ** = ಶ್ಯಾಮ.

**ಶಾಮಕ** (ಗು). ಅಡಗಿಸುವ ; ಕಡಮೆಮಾಡುವ.

**ಶಾಮೆ** (ನಾ). ಒಂದು ಜಾತಿಯ ಗಿಡ ಮತ್ತು ಅದರ ಗೆಡ್ಡೆ ; ಸಾಮೆ.

**ಶಾಯಿ** (ನಾ). ಮಸಿ ; ಇಂಕು.

**ಶಾರದ** (ಗು) ೧. ಶರತ್ಕಾಲಕ್ಕೆ ಸಂಬಂಧಿಸಿದ. ೨. ಬಿಳಿಯ ಬಣ್ಣವುಳ್ಳ ; ಶ್ವೇತವರ್ಣದ. **~ನೀರದ** = ಶರತ್ಕಾಲದ ಬಿಳಿಯ ಮೋಡ.

**ಶಾರದೆ** (ನಾ). ವಿದ್ಯೆಯ ಅಧಿದೇವತೆ ; ಸರಸ್ವತಿ.

**ಶಾರಿ** (ನಾ). ಪಗಡೆ ಅಥವಾ ಚದುರಂಗದಾಟದಲ್ಲಿ ಉಪಯೋಗಿಸುವ ಕಾಯಿ. **~ಫಲಕ** =ಪಗಡೆಯ ಅಥವಾ ಚದುರಂಗದಾಟದ ಹಾಸು.

**ಶಾರೀರ** (ನಾ). ೧. ನಾದಮಾಧುರ್ಯ. (ಗು). ೨. = ಶಾರೀರಿಕ.

**ಶಾರೀರಕ** (ನಾ). ೧. ದೇಹ. ೨. ಮಗು; ಶಿಶು. ೩. ಆತ್ಮ. (ಗು). ೪. = ಶಾರೀರಿಕ.

**ಶಾರೀರಿಕ** (ಗು). ಶರೀರಕ್ಕೆ ಸಂಬಂಧಿಸಿದ ; ದೈಹಿಕ. **~ಶಿಕ್ಷಣ** = ವ್ಯಾಯಾಮ ; ಕಸರತ್ತು.

**ಶಾರ್ಙ್ಗ** (ನಾ). ೧. ಬಿಲ್ಲು. ೨. ವಿಷ್ಣುವಿನ ಬಿಲ್ಲು. (ಗು). ೩. ಕೊಂಬಿನಿಂದ ಮಾಡಿದ.

**ಶಾರ್ದೂಲ** (ನಾ). ೧. ಹುಲಿ ; ವ್ಯಾಘ್ರ. ೨. ಒಬ್ಬ ರಾಕ್ಷಸನ ಹೆಸರು. ೩. =ಶಾರ್ದೂಲವಿಕ್ರೀಡಿತ. **~ವಿಕ್ರೀಡಿತ** = ಅಕ್ಷರವೃತ್ತಗಳಲ್ಲಿ ಒಂದು.

**ಶಾರ್ವರಿ** ೧. = ಶರ್ವರಿ. ೨. ಅರುವತ್ತು ಸಂವತ್ಸರಗಳಲ್ಲಿ ಒಂದು. ೩. ಶಕ್ತಿದೇವತೆಗಳಲ್ಲಿ ಒಬ್ಬಳು.

**ಶಾಲ** (ನಾ). ೧. ಮರ ; ವೃಕ್ಷ. ೨. ಒಂದು ಜಾತಿಯ ಮರ ಮತ್ತು ಅದರಿಂದ ಉತ್ಪನ್ನವಾಗುವ ಅಂಟು. ೩. ಕೋಟೆಯ ಗೋಡೆ, –ಪ್ರಾಕಾರ. ೪. ಶಕ್ತಿ ; ಸಾಮರ್ಥ್ಯ. (ಗು). ೫. ವಿಸ್ತಾರವಾದ ; ವಿಶಾಲವಾದ. **~ಭಂಜಿಕೆ** =೧. (ಮರದ) ಗೊಂಬೆ, –ಪುತ್ಥಳಿ. ೨. ಸೂಳೆ. ೩. ಒಂದು ಬಗೆಯ ಆಟ.

**ಶಾಲಿ(ಳಿ)** (ನಾ). ಬತ್ತ ; ನೆಲ್ಲು. **~ಅಕ್ಷತ** = ಮಂತ್ರಾಕ್ಷತೆ. **~ಅನ್ನ** = ಶಾಲಿನೆಲ್ಲಿ ಅಕ್ಕಿಯನ್ನು ಬೇಯಿಸಿ ಮಾಡುವ ಒಂದು ಬಗೆಯ ಭಕ್ಷ್ಯ. **~ವನ** = ಶಾಲೇಯ.

**ಶಾಲಿಕೆ** (ನಾ). ಕಿರುಮನೆ ; ಕೋಣೆ.

**ಶಾಲಿಹೋತ್ರ** (ನಾ). ಕುದುರೆ ; ತುರಗ.

**ಶಾಲೀನತೆ** (ನಾ). ವಿನಯ ; ನಮ್ರತೆ.

**ಶಾಲು** (ನಾ). ಉಣ್ಣೆಯಿಂದ ಮಾಡಿದ ಹೊದಿಕೆ.

**ಶಾಲೂಕ** (ನಾ). ಕಮಲದ ಗೆಡ್ಡೆ ; ತಾವರೆ ಗೆಡ್ಡೆ.

**ಶಾಲೂರ** (ನಾ). ಕಪ್ಪೆ ; ಭೇಕ.

**ಶಾಲೆ** (ನಾ). ೧. ಸೀರೆ ; ಸೇಲೆ. ೨. ಪಾಠಶಾಲೆ ; ಸ್ಕೂಲು. ೩. ಮನೆ ; ಕಟ್ಟಡ.

**ಶಾಲೇಯ** (ನಾ). ೧. ಬತ್ತದ ಗದ್ದೆ. ೨. ಒಂದು ಜಾತಿಯ ಸೊಪ್ಪು.

**ಶಾಲ್ಮಲಿ** (ನಾ). ಒಂದು ಜಾತಿಯ ಮರ ; ಎಲವ ; ಬೂರುಗ.

**ಶಾವಂತಿಕೆ** (ನಾ). ಒಂದು ಜಾತಿಯ ಗಿಡ ಮತ್ತು ಅದರ ಹೂವು.

**ಶಾವಂತಿಗೆ** = ಶಾವಂತಿಕೆ.

**ಶಾವಕ** = ಶಾಬಕ.

**ಶಾವಿಗೆ** (ನಾ). (ಪಾಯಸ ಮುಂತಾದುವುಗಳಿಗೆ ಉಪಯೋಗಿಸುವ) ರವೆಯಿಂದ ಮಾಡುವ ಎಳೆಎಳೆಯಾಗಿರುವ ಒಂದು ಪದಾರ್ಥ ; ಸೇವಗೆ. ೨. ಅಕ್ಕಿಹಿಟ್ಟಿನಿಂದ ಮಾಡುವ ಸೇವಗೆ ಮತ್ತು ಅದರಿಂದ ತಯಾರಿಸುವ ಖಾದ್ಯ.

ಶಾಶ್ವತ (ನಾ). ೧. ಸ್ವರ್ಗ. ೨. ಶಿವ. (ಗು). ೩. ಸ್ಥಿರವಾದ; ಎಂದೆಂದೂ ಇರುವ. ~ಪದ = ಸ್ಥಿರವಾದ ನೆಲೆ; ಮೋಕ್ಷ.

ಶಾಸಕ (ನಾ). ೧. ಆಳುವವನು; ಶಾಸನವನ್ನು ಮಾಡುವವನು. ೨. ಶಾಸನ ಸಭೆಯ ಸದಸ್ಯ.

ಶಾಸನ (ನಾ). ೧. ಆಳಿಕೆ; ಅಧಿಕಾರವನ್ನು ಚಲಾಯಿಸುವಿಕೆ. ೨. = ಶಾಸ್ತಿ. ೩. ಆಜ್ಞೆ; ಅಪ್ಪಣೆ. ೪. ತಾಮ್ರದ ತಗಡು ಅಥವಾ ಕಲ್ಲಿನ ಮೇಲೆ ದಾನ, ದತ್ತಿ ಮುಂತಾದುವುಗಳ ಬಗೆಗೆ ಕೊರೆದಿಟ್ಟ ಬರೆಹ. ೫. ಒಪ್ಪಂದ; ಕರಾರು. ~ಮಾಡು = ಶಾಸಿಸು. ~ಸಭೆ = ರಾಜ್ಯಕ್ಕೆ ಸಂಬಂಧಿಸಿದ ಶಾಸನಗಳನ್ನು ಮಾಡುವ ಪ್ರಜಾಪ್ರತಿನಿಧಿಗಳ ಸಭೆ; ವಿಧಾನಸಭೆ.

ಶಾಸಿಸು (ಕ್ರಿ). ೧. ಆಜ್ಞಾಪಿಸು; ಅಪ್ಪಣೆ ಮಾಡು. ೨. ದಂಡಿಸು; ಶಿಕ್ಷಿಸು. ೩. ಹತೋಟಿಯಲ್ಲಿಡು; ಅಂಕೆಯಲ್ಲಿಡು.

ಶಾಸೆ = ಶೇಷೆ.

ಶಾಸ್ತಿ (ನಾ). ೧. ಶಿಕ್ಷೆ; ದಂಡನೆ. ೨. ನಿಯಮ; ಕಟ್ಟಳೆ.

ಶಾಸ್ತ್ರ (ನಾ). ೧. ಸಂಪ್ರದಾಯ; ನಿಯಮ; ವಿಧಿ. ೨. ಶುಭಾಶುಭಕಾರ್ಯಗಳಲ್ಲಿ ನಡಸುವ ಆಚರಣೆ. ೩. ವಿಜ್ಞಾನ. ೪. ಮತ, ವಿಜ್ಞಾನ ಮುಂತಾದುವುಗಳ ಬಗೆಗೆ ಬರೆದ ಗ್ರಂಥ. ೫. ಮುಂದಾಗುವುದನ್ನು ತಿಳಿಸುವುದು; ಭವಿಷ್ಯ. ~ಅಂಧ = ವಿವೇಚಿಸದೆ ಸಂಪ್ರದಾಯವನ್ನು ನಂಬುವವನು; ಶಾಸ್ತ್ರದಲ್ಲಿ ಮೂಢನಂಬಿಕೆಯುಳ್ಳವನು.

ಶಾಸ್ತ್ರಜ್ಞ (ನಾ). ಶಾಸ್ತ್ರವನ್ನು ತಿಳಿದವನು; ವಿದ್ವಾಂಸ.

ಶಾಸ್ತ್ರಿ = ಶಾಸ್ತ್ರಜ್ಞ.

ಶಾಸ್ತ್ರೀಯ (ಗು). ಶಾಸ್ತ್ರಕ್ಕೆ ಅನುಸಾರವಾದ; ಶಾಸ್ತ್ರೋಕ್ತವಾದ.

ಶಾಸ್ತ್ರೋಕ್ತ (ಗು). ಶಾಸ್ತ್ರದಲ್ಲಿ ಪ್ರತಿಪಾದಿಸಲ್ಪಟ್ಟ.

ಶಾಹಿ (ನಾ). ೧. ಅಧಿಕಾರ; ಹಕ್ಕು. (ಗು). ೨. ರಾಜನಿಗೆ ಅಥವಾ ರಾಜ್ಯಕ್ಕೆ ಸಂಬಂಧಿಸಿದ.

ಶಿಂಜಿತ (ನಾ). ೧. ಧ್ವನಿ; ನಾದ. (ಗು). ೨. ಧ್ವನಿಯಿಂದ ಕೂಡಿದ; ಸಿಂಜಿತ.

ಶಿಂಪು (ನಾ). ಚಿಪ್ಪು; ಸಿಂಪು.

ಶಿಂಪೆ = ಶಿಂಪು.

ಶಿಂಶುಪ (ನಾ). ಒಂದು ಜಾತಿಯ ಮರ; ಅಶೋಕ; ಅಸುಗೆ.

ಶಿ(ಂ)ಶುಮಾರ (ನಾ). ಮೊಸಳೆ; ನೆಗಳು.

ಶಿಂಶುಮಾರಕ = ಶಿಂಶುಮಾರ.

ಶಿಕಾರಿ (ನಾ). ೧. ಬೇಟೆ. ೨. ಬೇಟೆಗೆ ಗುರಿಯಾಗುವ ಪ್ರಾಣಿ.

ಶಿಕ್ಕಾ (ನಾ). ಮುದ್ರೆ; ಮೊಹರು.

ಶಿಕ್ಯ (ನಾ). ಪಾತ್ರೆ ಮುಂತಾದುವುಗಳನ್ನು ತೂಗುಹಾಕಲು ಬಳಸುವ ಸಾಧನ; ನೆಲುವು.

ಶಿಕ್ಷಕ (ನಾ). ವಿದ್ಯೆಯನ್ನು ಕಲಿಸುವವನು; ಗುರು; ಉಪಾಧ್ಯಾಯ.

ಶಿಕ್ಷಕಿ (ನಾ). ವಿದ್ಯೆಯನ್ನು ಕಲಿಸುವವಳು; ಉಪಾಧ್ಯಾಯಿನಿ.

ಶಿಕ್ಷಣ (ನಾ). ವಿದ್ಯೆಯನ್ನು ಕಲಿಸುವಿಕೆ. ~ಮಾಧ್ಯಮ = ವಿದ್ಯಾಸಂಸ್ಥೆಯಲ್ಲಿ ಬೋಧಿಸಲು ಬಳಸುವ ಭಾಷೆ. ~ಶಾಖೆ = ವಿದ್ಯಾಭ್ಯಾಸವನ್ನು ನೋಡಿಕೊಳ್ಳುವ ಇಲಾಖೆ. ~ಶುಲ್ಕ = ವಿದ್ಯೆಯನ್ನು ಕಲಿಯುವುದಕ್ಕಾಗಿ ಶಾಲೆಗೆ ಅಥವಾ ಗುರುವಿಗೆ ಕೊಡುವ ಹಣ.

ಶಿಕ್ಷಾರ್ಹ (ನಾ). ೧. ದಂಡನೆಗೆ ಯೋಗ್ಯನಾದವನು. (ಗು). ೨. ದಂಡನೆಗೆ ಯೋಗ್ಯವಾದ.

ಶಿಕ್ಷಿತ (ನಾ). ೧. ವಿದ್ವಾಂಸ; ಜಾಣ. (ಗು). ೨. ಕಲಿಸಲ್ಪಟ್ಟ; ಬೋಧಿಸಲ್ಪಟ್ಟ. ೩. ತಿದ್ದಲ್ಪಟ್ಟ; ಪಳಗಿಸಲ್ಪಟ್ಟ.

ಶಿಕ್ಷೆ (ನಾ). ೧. ಕಲಿಯುವುದು; ಜ್ಞಾನಾರ್ಜನೆ. ೨. ಕಲಿಸುವುದು; ಬೋಧನೆ. ೩. ದಂಡನೆ. ೪. ವೇದದ ಮಂತ್ರಗಳ ಸರಿಯಾದ

ಉಚ್ಚಾರಣೆಯನ್ನು ತಿಳಿಸುವ ಒಂದು ವೇದಾಂಗ. ~ಇಸು = ೧. ಕಲಿಸು; ಹೇಳಿಕೊಡು; ಬೋಧಿಸು. ೨. ಹತೋಟಿಯಲ್ಲಿಡು; ನಿಯಂತ್ರಿಸು. ೩. ದಂಡಿಸು; ಶಿಕ್ಷೆಗೆ ಗುರಿಪಡಿಸು.

**ಶಿಖಂಡ** (ನಾ). ೧. ಜುಟ್ಟು; ಶಿಖೆ. ೨. ನವಿಲು ಮುಂತಾದ ಪಕ್ಷಿಗಳ ತಲೆಯ ಮೇಲೆ ಇರುವ ತುರಾಯಿ; ಕೊಟ್ಟು. ೩. ತುದಿ; ಶಿಖರ. ೪. ನವಿಲಿನ ಗರಿ; ಸೋಗೆ.

**ಶಿಖಂಡಿ** (ನಾ). ೧. ನವಿಲು; ಮಯೂರ. ೨. ಒಂದು ಜಾತಿಯ ಹಾವು; ರಾಜಿಲ. ೩. ನಪುಂಸಕ; ಷಂಡ. (ಗು). ೪. ಜುಟ್ಟನ್ನು ಹೊಂದಿರುವ.

**ಶಿಖರ** (ನಾ). ಮರ, ಬೆಟ್ಟ ಮುಂತಾದುವುಗಳ ತುದಿ, ‒ಅಗ್ರಭಾಗ.

**ಶಿಖರಿ** (ನಾ). ೧. ತುದಿಯುಳ್ಳುದು; ಅಗ್ರಭಾಗವುಳ್ಳುದು. ೨. ಪರ್ವತ. ೩. ಮರ. ೪. ಕಾಡು; ಅರಣ್ಯ. ೫. ಒಂದು ಜಾತಿಯ ಹಕ್ಕಿ; ಟಿಟ್ಟಿಭ.

**ಶಿಖರಿಣಿ** (ನಾ). ೧. ಶ್ರೇಷ್ಠಳಾದ ಹೆಂಗಸು. ೨. ಮೊಸರು ಮತ್ತು ಸಕ್ಕರೆಗಳಿಂದ ತಯಾರಿಸುವ ಒಂದು ಬಗೆಯ ಭಕ್ಷ್ಯ. ೩. ಅಕ್ಷರವೃತ್ತಗಳಲ್ಲಿ ಒಂದು.

**ಶಿಖಾಮಣಿ** (ನಾ). ಮುಡಿಯಲ್ಲಿ ಧರಿಸುವ ಚೂಡಾ ರತ್ನ; ಶಿರೋಭೂಷಣ.

**ಶಿಖಿ** (ನಾ). ೧. ತುದಿ; ಅಗ್ರ. ೨. = ಶಿಖೆ. ೩. ಜುಟ್ಟನ್ನುಳ್ಳುದು; ನವಿಲು. ೪. ತಲೆ. ೫. ಮರದ ಅಗ್ರಭಾಗ. ೬. ಬೆಂಕಿ; ಅಗ್ನಿ. ೭. ಬೆಂಕಿಯ ಜ್ವಾಲೆ. ೮. ಬಾಣ; ಸರಳು. ೯. ಬ್ರಾಹ್ಮಣ; ವಿಪ್ರ. ೧೦. ಕೃಷ್ಣ ಸರ್ಪ. ೧೧. ನವಗ್ರಹಗಳಲ್ಲಿ ಒಂದು; ಕೇತು. (ಗು). ೧೨. ಮೊನಚಾದ ತುದಿಯಿಂದ ಕೂಡಿದ. ~ನಯನ=ಅಗ್ನಿಯನ್ನು (ಮೂರನೆಯ) ಕಣ್ಣಾಗಿ ಉಳ್ಳವನು; ಅಗ್ನಿನಯನ; ಶಿವ. ~ವಾಹನ = ನವಿಲನ್ನು ವಾಹನವನ್ನಾಗಿ ಉಳ್ಳವನು; ಷಣ್ಮುಖ.

**ಶಿಖೆ** (ನಾ). ಜುಟ್ಟು.

**ಶಿತ** (ಗು). ಹರಿತವಾದ; ಚೂಪಾದ.

**ಶಿತಿ** (ನಾ). ೧. ಬಿಳುಪು; ಧವಳತೆ. ೨. ಕಪ್ಪು; ಕರಿಯಬಣ್ಣ. ~ಕಂಠ = ೧. ಕಪ್ಪಾದ ಕೊರಳುಳ್ಳವನು; ಶಿವ. ೨. ನವಿಲು; ಮಯೂರ.

**ಶಿಥಿಲ** (ನಾ). ೧. ಸಡಿಲ; ಬಿಗಿಯಾಗಿಲ್ಲದಿರುವುದು. ೨.=ಶಿಥಿಲದ್ವಿತ್ವ. (ಗು). ೩. ಸಡಿಲವಾದ; ಬಿಗಿಯಾಗಿಲ್ಲದ. ೪. ನಾಶವಾದ; ಹಾಳಾದ. ೫. ಕೃಶವಾದ; ಬಲಹೀನವಾದ. ~ದ್ವಿತ್ವ = ತೇಲಿಸಿ ಉಚ್ಚರಿಸುವ ಒತ್ತಕ್ಷರ.

**ಶಿಥಿಲತೆ** (ನಾ). ೧. ಸಡಿಲವಾಗಿರುವಿಕೆ; ಬಿಗಿಯಿಲ್ಲದಿರುವಿಕೆ. ೨. ಬಹಳ ಹಳೆಯದಾಗಿರುವಿಕೆ; ಗಳಿತವಾಗಿರುವಿಕೆ.

**ಶಿಫಾರಸ್ಸು** (ನಾ). ೧. ಪ್ರಭಾವವನ್ನು ಬೀರುವುದು. ೨. ಯೋಗ್ಯತೆಯನ್ನು ಸೂಚಿಸುವುದು; ಮೆಚ್ಚುಗೆ. ~ಪತ್ರ = ಯಾರಾದರೊಬ್ಬರ ಯೋಗ್ಯತೆಯನ್ನು ತಿಳಿಸಿ ಬರೆದು ಕೊಡುವ ಕಾಗದ.

**ಶಿಬಿಕೆ** (ನಾ). ೧. ಪಲ್ಲಕ್ಕಿ; ಮೇನೆ; ಅಂದಣ. ೨. ಚಟ್ಟ; ಸಿದಿಗೆ.

**ಶಿಬಿರ** (ನಾ). ಸೈನ್ಯವು ಬೀಡು ಬಿಡುವ ಸ್ಥಳ; ಪಾಳೆಯ; ಠಾಣ್ಯ.

**ಶಿರ** (ನಾ). ೧. ತಲೆ; ಮಸ್ತಕ. ೨. ತುದಿ; ಮೇಲುಭಾಗ; ಶಿಖರ. ~(ಂ)ತೂ(ದೂ)ಗು = ಸಮ್ಮತಿ ಸೂಚಕವಾಗಿ ತಲೆಯನ್ನು ಆಡಿಸು; ತಲೆದೂಗು. ~ಬಾಗು = ನಮಸ್ಕರಿಸು.

**ಶಿರಪೇಷ್**(ಷು) (ನಾ). ೧. ಪೇಟ. ೨. ಪೇಟದ ಮೇಲೆ ಧರಿಸುವ ಒಂದು ಬಗೆಯ ಆಭರಣ.

**ಶಿರಸು** = ಶಿರಸ್ಸು.

ಶಿರಸ್ತೆ (ನಾ). ಕಂದಾಯ, ತೆರಿಗೆ ಮುಂತಾದುವುಗಳನ್ನು ನೋಡಿಕೊಳ್ಳುವ ಇಲಾಖೆ. ～ದಾರ = ಕಂದಾಯದ ಅಧಿಕಾರಿ.

ಶಿರಸ್ತ್ರಾಣ (ನಾ). ೧. ತಲೆಯನ್ನು ಕಾಪಾಡುವುದು; ಸೀಸಕ. ೨. ರುಮಾಲು. ೩. ಟೋಪಿ.

ಶಿರಸ್ಸು (ನಾ). ೧. ತಲೆ ; ಶಿರ. ೨. ಕಿರೀಟ ; ಮುಕುಟ. ೩. ಶಿಖೆ ; ಜುಟ್ಟು.

ಶಿರಾ (ನಾ). ರವೆಯಿಂದ ಮಾಡಿದ ಸಿಹಿಭಕ್ಷ್ಯ ; ಸಜ್ಜಿಗೆ.

ಶಿರೀಷ (ನಾ). ಒಂದು ಜಾತಿಯ ಮರ ಮತ್ತು ಅದರ ಹೂವು ; ಬಾಗೆ.

ಶಿರೆ (ನಾ). ನಾಡಿ ; ಧಮನಿ ; ಸೆರೆ.

ಶಿರೋಜ (ನಾ). ತಲೆಯಲ್ಲಿ ಹುಟ್ಟಿದುದು ; ಕೂದಲು.

ಶಿರೋಧಿ (ನಾ). ಕತ್ತು ; ಕೊರಳು.

ಶಿರೋನಾಮೆ (ನಾ). ಗ್ರಂಥ, ಲೇಖನ ಮೊದಲಾದುವುಗಳ ಪ್ರಾರಂಭದಲ್ಲಿ ಬರೆಯುವ ಬರೆಹ ; ತಲೆಬರೆಹ ; ಶೀರ್ಷಿಕೆ.

ಶಿರೋಮಣಿ (ನಾ). ೧. ತಲೆಯಲ್ಲಿ ಧರಿಸುವ ಒಂದು ರತ್ನ ; ಚೂಡಾಮಣಿ. ೨. ಶ್ರೇಷ್ಠನಾದವನು ; ಉತ್ತಮ.

ಶಿರೋರುಹ = ಶಿರೋಜ.

ಶಿಲ (ನಾ). ಹೊಲದಲ್ಲಿ ಬಿದ್ದಿರುವ ಧಾನ್ಯದ ತೆನೆ ; ಹಕ್ಕಲು.

ಶಿಲಾಕರ್ಮ (ನಾ). ಕಲ್ಲಿನ ಕೆತ್ತನೆ ಕೆಲಸ; ಶಿಲ್ಪ.

ಶಿಲಾಜಿತು (ನಾ). ಕಪ್ಪುಬಣ್ಣದ ಒಂದು ಖನಿಜ; ಶಿಲಾಧಾತು.

ಶಿಲಾಬಾಲಿಕೆ (ನಾ). ಕಲ್ಲಿನಲ್ಲಿ ಕಡೆದ ಸ್ತ್ರೀ ವಿಗ್ರಹ.

ಶಿಲಾಭೇದಿ (ನಾ). (ಕಲ್ಲುಕುಟಿಗರು ಉಪಯೋಗಿಸುವ) ಉಳಿ ; ಚಾಣ.

ಶಿಲಾಮುದ್ರಣ (ನಾ). ಒಂದು ವಿಧವಾದ ಮಸಿಯಿಂದ ಅಕ್ಷರಗಳನ್ನು ಬರೆದು ಪ್ರತಿಗಳನ್ನು ತೆಗೆಯಲು ಉಪಯೋಗಿಸುವ ಕಲ್ಲಿನ ಸಾಧನ ಮತ್ತು ಅದರಿಂದ ಮಾಡುವ ಮುದ್ರಣ; ಕಲ್ಲಚ್ಚು.

ಶಿಲಾಯುಗ (ನಾ). ಕಲ್ಲಿನ ಉಪಕರಣಗಳೂ ಆಯುಧಗಳೂ ಬಳಕೆಯಲ್ಲಿದ್ದ ಕಾಲ.

ಶಿಲಾರಸ (ನಾ). ಜ್ವಾಲಾಮುಖಿಯಿಂದ ಹೊರಹೊಮ್ಮುವ ಧಾತುಗಳ ರಸ ; ಲಾವಾರಸ.

ಶಿಲಾಶಾಸನ (ನಾ). ಕಲ್ಲಿನಲ್ಲಿ ಕೆತ್ತಿರುವ ಶಾಸನ.

ಶಿಲೀಂಧ್ರ (ನಾ). ನಾಯಿಕೊಡೆ ; ಅಣಬೆ.

ಶಿಲಿ(ಳಿ)ೀಮುಖ (ನಾ). ೧. ಬಾಣ ; ಸರಳು. ೨. ತುಂಬಿ ; ಆರಡಿ.

ಶಿಲುಕು (ನಾ). ಬಾಕಿ ; ಉಳಿಕೆ ; ಸಿಲ್ಕು.

ಶಿಲುಬೆ (ನಾ). ೧. ಕ್ರಿಸ್ತನನ್ನು ಕೊಲ್ಲಲು ನಿರ್ಮಿಸಿದ ಮರದ ಒಂದು ಸಾಧನ. ೨. ಕ್ರೈಸ್ತರು ಧರಿಸುವ ಒಂದು ಧಾರ್ಮಿಕ ಲಾಂಛನ ; ಕ್ರೂಜೆ.

ಶಿಲೆ (ನಾ). ಕಲ್ಲು ; ಅಶ್ಮ.

ಶಿಲೋಚ್ಚಯ (ನಾ). ಕಲ್ಲುಗಳಿಂದ ಕೂಡಿದುದು; ಬೆಟ್ಟ.

ಶಿಲ್ಕು = ಶಿಲುಕು.

ಶಿಲ್ಪ (ನಾ). ೧. ಲಲಿತಕಲೆ ; ಕುಶಲವಿದ್ಯೆ. ೨. ಕಟ್ಟಡ, ಸೇತುವೆ ಮೊದಲಾದುವನ್ನು ನಿರ್ಮಿಸುವ ವಿಜ್ಞಾನ; ವಾಸ್ತುಕಲೆ. ೩. ಕೆತ್ತನೆಯ ಕೆಲಸ ; ಕಂಡರಣೆ. ～ಇಗ = ೧. ಕಲ್ಲಿನಲ್ಲಿ ವಿಗ್ರಹ ಮುಂತಾದುವನ್ನು ಕಡೆಯುವವನು ; ಕಲ್ಲೋಜ. ೨. ಸೇತುವೆ, ಕಟ್ಟಡ ಮುಂತಾದುವುಗಳ ನಿರ್ಮಾಣ ಕಾರ್ಯದ ನಿರ್ದೇಶಕ ; ಇಂಜಿನೀಯರು.

ಶಿಲ್ಪಿ ೧. = ಶಿಲ್ಪಿಗ. ೨. ಊದುವ ಒಂದು ಸಾಧನ ; ಸೀಟಿ.

ಶಿವ (ನಾ). ೧. ಸಂತೋಷ; ಆನಂದ. ೨. ಏಳಿಗೆ; ಅಭ್ಯುದಯ. ೩. ಈಶ್ವರ. (ಗು). ೪. ಮಂಗಳಕರವಾದ ; ಶ್ರೇಯಸ್ಕರವಾದ. ～ಕಲೆ(ಳೆ) = ಶಿವನ ಅಂಶ. ～ಗಣ = ಶಿವನ ಪರಿವಾರ ; ಪ್ರಮಥರ ಸಮೂಹ.

~ದಾರ = ವೀರಶೈವರು ಇಷ್ಟಲಿಂಗದ ಕರಡಿಗೆಯನ್ನು ಧರಿಸುವ ದಾರ, –ಸೂತ್ರ. ~ಭಕ್ತ=ಶಿವನಲ್ಲಿ ಭಕ್ತಿಯುಳ್ಳವನು ; ಶಿವನ ಉಪಾಸಕ. ~ರಾತ್ರಿ(ತ್ರೆ) = ಮಾಘ ಮಾಸದ ಕೃಷ್ಣಪಕ್ಷದ ಚತುರ್ದಶಿಯ ರಾತ್ರಿ ಮತ್ತು ಅಂದು ಆಚರಿಸುವ ವ್ರತ. ~ಶರಣ = ವೀರಶೈವ.

ಶಿವಂಗಿ (ನಾ). ಚಿರತೆ ಜಾತಿಗೆ ಸೇರಿದ ಒಂದು ಪ್ರಾಣಿ ; ಸಿವಂಗಿ.

ಶಿವದಾನ (ನಾ). ಕಡೆದ ಮೊಸರು ; ಮಜ್ಜಿಗೆ.

ಶಿವರಸ = ಶಿವದಾನ.

ಶಿವಾಯಿ (ಅ). ಹೊರತು ; ಅಲ್ಲದೆ.

ಶಿವಿಕೆ = ಶಿಬಿಕೆ.

ಶಿವಿಗೆ = ಶಿಬಿಕೆ.

ಶಿವೆ (ನಾ). ೧.ಪಾರ್ವತಿ. ೨.ನಲ್ಲಿಯಮರ ಮತ್ತು ಅದರ ಕಾಯಿ. ೩. ಅಳಲೆಕಾಯಿ. ೪. ನರಿ.

ಶಿಶಿರ (ನಾ). ೧. ಆರು ಋತುಗಳಲ್ಲಿ ಒಂದು ; ಚಳಿಗಾಲ. ೨. ತಂಪು ; ಶೈತ್ಯ. (ಗು). ೩. ತಂಪಾದ; ಶೀತಲವಾದ. ~ಉಪಚಾರ =ದೇಹಕ್ಕೆ ತಂಪಾದ ವಸ್ತುಗಳಿಂದ ಮಾಡುವ ಶುಶ್ರೂಷೆ ; ಶೈತ್ಯೋಪಚಾರ. ~ಕರ =೧. ತಂಪಾದ ಕಿರಣ. ೨. ತಂಪಾದ ಕಿರಣಗಳುಳ್ಳವನು ; ಚಂದ್ರ.

ಶಿಶು (ನಾ). ೧. ಮಗು ; ಹಸುಳೆ. ೨. ಮರಿ ; ಶಾಬ. ~ವಿಹಾರ = ಚಿಕ್ಕ ಮಕ್ಕಳ ಮನಸ್ಸನ್ನು ವಿಕಾಸಪಡಿಸುವ ಪಾಠಶಾಲೆ.

ಶಿಶ್ನ (ನಾ). ಪುರುಷನ ಜನನೇಂದ್ರಿಯ.

ಶಿಷ್ಟ (ನಾ). ೧. ಜ್ಞಾನಿ ; ಸುಸಂಸ್ಕೃತ. ೨. ಯೋಗ್ಯಮನುಷ್ಯ ; ಸಜ್ಜನ. (ಗು) ೩. ಆಜ್ಞಾಪಿಸಿದ ; ಅಪ್ಪಣೆ ಮಾಡಲ್ಪಟ್ಟ. ೪. ಉಳಿದ ; ಶೇಷ. ~ಆಚಾರ =ಅನೂಚಾನವಾಗಿ ಬಂದಿರುವ ಸತ್ಸಂಪ್ರದಾಯ, –ಒಳ್ಳೆಯ ನಡತೆ. ~ಪಾಲಕ = ಒಳ್ಳೆಯವರನ್ನು ಕಾಪಾಡುವವನು.

ಶಿಷ್ಟಿ (ನಾ). ೧. ಕಟ್ಟಳೆ ; ಅಪ್ಪಣೆ. ೨.ದಂಡನೆ; ಶಿಕ್ಷೆ.

ಶಿಷ್ಯ (ನಾ). ೧. ವಿದ್ಯಾರ್ಥಿ ; ಗುಡ್ಡ. ೨.ಕೆಲಸವನ್ನು ಕಲಿಯುತ್ತಿರುವವನು ; ಅಭ್ಯಾಸಿ. ~ವೃತ್ತಿ =೧.ಕಲಿಯುವಿಕೆ ; ವಿದ್ಯಾಭ್ಯಾಸ ಮಾಡುವಿಕೆ. ೨. ವಿದ್ಯಾರ್ಥಿಗಳಿಗೆ ಕೊಡುವ ಸಹಾಯಧನ ; ವಿದ್ಯಾರ್ಥಿವೇತನ.

ಶಿಷ್ಯೆ (ನಾ). ವಿದ್ಯಾರ್ಥಿನಿ.

ಶಿಸ್ತು (ನಾ). ೧. ಅಲಂಕಾರ ; ಶೃಂಗಾರ. ೨. ಕಟ್ಟುಪಾಡು ; ಕಟ್ಟಳೆ. ೩. ಓರಣ ; ಕ್ರಮ ; ಅಚ್ಚುಕಟ್ಟು. ೪ ಕಂದಾಯ ; ತೆರಿಗೆ. ~ಗಾರ = ಚೆನ್ನಾಗಿ ಅಲಂಕಾರ ಮಾಡಿಕೊಳ್ಳುವವನು ; ಷೋಕಿಲಾಲ.

ಶೀಕರ (ನಾ). ೧. ಸಣ್ಣಮಳೆ ; ತುಂತುರು. ೨. ಹನಿ ; ತೊಟ್ಟು.

ಶೀಘ್ರ (ನಾ). ೧. ತ್ವರೆ ; ತ್ವರಿತ. ೨. ಬಾಣ ಪ್ರಯೋಗದಲ್ಲಿ ಒಂದು ರೀತಿ. (ಗು). ೩. ವೇಗವುಳ್ಳ ; ಜೋರಾದ. (ಅ). ೪. ಬೇಗನೆ ; ತ್ವರಿತವಾಗಿ. ~ಲಿಪಿ = ಸಂಕ್ಷಿಪ್ತ ಲಿಪಿ.

ಶೀತ (ನಾ). ೧. ಚಳಿ ; ತಂಪು. ೨. ಶೈತ್ಯದಿಂದ ಉಂಟಾಗುವ ಒಂದು ಬಗೆಯ ರೋಗ ; ನೆಗಡಿ. (ಗು). ೩. ತಂಪಾದ ; ತಣ್ಣಗಿನ. ೪. ಜಡವಾದ ; ಆಲಸ್ಯದಿಂದ ಕೂಡಿದ. ೫. ಉದಾಸೀನತೆಯಿಂದ ಕೂಡಿದ. ~ಅಂಶು = ತಂಪಾದ ಕಿರಣಗಳಿಂದ ಕೂಡಿದವನು ; ಚಂದ್ರ. ~ಕರ = ಶೀತಾಂಶು. ~ಕೊಠಡಿ = ವಸ್ತುಗಳು ಕೆಡದಂತೆ ಇಡಲು ಮಾಡಿರುವ ತಂಪುಕೊಠಡಿ ; ಶೈತ್ಯಾಗಾರ. ~ವಲಯ = ಅತ್ಯಂತ ತಂಪುಹವೆಯುಳ್ಳ ಭೂಭಾಗ.

ಶೀತಕ (ನಾ). ೧. ಬಿಸಿಯಾದ ದ್ರವವನ್ನು ತಣ್ಣಗೆ ಮಾಡುವ ಪಾತ್ರೆ. (ಗು). ೨. ತಂಪಾದ ; ಶೀತಲವಾದ. ೩. ಜಡವಾದ.

ಶೀತಲ(ಳ) (ನಾ). ೧. ತಂಪು ; ಶೈತ್ಯ. ೨. ಒಂದು ಜಾತಿಯ ಮರ. (ಗು). ೩. ತಂಪಾಗಿರುವ ; ತಣ್ಣಗಿನ.

ಶೀತಲೆ (ನಾ). ಒಂದು ಬಗೆಯ ಮೈಲಿ ಬೇನೆ ; ಸಣ್ಣ ಸಿಡುಬು ; ಸೀತಾಳೆ.

ಶೀಧು (ನಾ). ಒಂದು ಬಗೆಯ ಮದ್ಯ.

ಶೀರ್ಣ (ಗು). ೧. ಸೊರಗಿದ ; ಬಾಡಿದ. ೨. ನಾಶವಾದ ; ಹಾಳಾದ. ೩. ಚೆದರಿದ ; ಚೆಲ್ಲಾಪಿಲ್ಲಿಯಾದ ; ಕೆದರಿದ.

ಶೀರ್ಷ (ನಾ). ತಲೆ ; ಶಿರಸ್ಸು.

ಶೀರ್ಷಕ (ನಾ). ೧. ತಲೆಬುರುಡೆ ; ಕಪಾಲ. ೨. ಶಿರಸ್ತ್ರಾಣ ; ಸೀಸಕ. ೩. ರುಮಾಲು. ೪. ತಲೆಗೆ ಮಾಡಿಕೊಳ್ಳುವ ಹೂವಿನ ಅಲಂಕಾರ.

ಶೀರ್ಷಿಕೆ (ನಾ). ತಲೆಬರೆಹ ; ಶಿರೋನಾಮೆ.

ಶೀಲ (ನಾ). ೧. ನಡತೆ ; ರೀತಿ ; ಚಾರಿತ್ರ್ಯ. ೨. ಒಳ್ಳೆಯ ಗುಣ; ಸದಾಚಾರ. ೩. ಚೆಲುವು; ಸೌಂದರ್ಯ.

ಶೀಷೆ (ನಾ). ಔಷಧ ಮುಂತಾದುವನ್ನು ತುಂಬುವ ಗಾಜಿನ ಸಾಧನ ; ಸೀಸೆ ; ಬಾಟಲು.

ಶುಂಠ (ನಾ). ಹೆಡ್ಡ ; ಮೂರ್ಖ ; ತಿಳಿಗೇಡಿ.

ಶುಂಠಿ (ನಾ). ಒಂದು ಜಾತಿಯ ಬೇರು ; ಅಲ್ಲ; ಕಾರಗೆಣಸು.

ಶುಂಡ (ನಾ). ೧. ಆನೆಯ ಸೊಂಡಿಲು. ೨. ಆನೆಯ ಮದೋದಕ. ೩. ಕಪ್ಪೆ ; ಭೇಕ.

ಶುಂಡಾಲ(ಳ) (ನಾ). ೧. ಸೊಂಡಿಲು. ೨. ಸೊಂಡಿಲನ್ನುಳ್ಳುದು ; ಆನೆ.

ಶುಂಭ (ನಾ). ೧. ಮಂಕ ; ಹೆಡ್ಡ. ೨. ಒಬ್ಬ ರಾಕ್ಷಸನ ಹೆಸರು.

ಶುಕ (ನಾ). ೧. ಗಿಣಿ ; ಗಿಳಿ. ೨. ಮಾವಿನ ಮರ. ೩. ವ್ಯಾಸನ ಮಗನಾದ ಒಬ್ಬ ಋಷಿಯ ಹೆಸರು. ೪. ಶಿವ. **~ತುಂಡ** = ಗಿಣಿಯ ಕೊಕ್ಕು.

ಶುಕ್ತಿ (ನಾ). ೧. ಕಪ್ಪೆಚಿಪ್ಪು ; ಶಿಂಪೆ. ೨. ಒಂದು ಬಗೆಯ ಸುಗಂಧ ದ್ರವ್ಯ.

ಶುಕ್ತಿಕೆ (ನಾ). ೧. ಕಪ್ಪೆಚಿಪ್ಪು ; ಶಿಂಪೆ. ೨. ಚಿಪ್ಪಿನ ಆಕಾರದಲ್ಲಿ ಮಾಡಿದ ಭರಣಿ.

ಶುಕ್ತಿಜ (ನಾ). ಚಿಪ್ಪಿನಲ್ಲಿ ಹುಟ್ಟಿದುದು ; ಮುತ್ತು.

ಶುಕ್ರ (ನಾ). ೧. ಬಿಳುಪು ; ಶ್ವೇತ. ೨. ಅಗ್ನಿ ; ಬೆಂಕಿ. ೩. ನವಗ್ರಹಗಳಲ್ಲಿ ಒಂದು. ೪. ರೇತಸ್ಸು; ವೀರ್ಯ. ೫. ಜ್ಯೇಷ್ಠಮಾಸ. (ಗು). ೬. ಹೊಳೆಯುವ ; ಬೆಳಗುವ. **~ಆಚಾರ್ಯ**= ದೈತ್ಯರ ಗುರು; ಭಾರ್ಗವ. **~ದಶೆ** = ಒಳ್ಳೆಯ ಫಲವುಂಟಾಗುವ ಕಾಲ. **~ವಾರ** = ವಾರದ ಏಳು ದಿನಗಳಲ್ಲಿ ಒಂದು.

ಶುಕ್ಲ (ನಾ). ೧. ಬಿಳಿಯ ಬಣ್ಣ ; ಧವಳತೆ. ೨. ತಿಂಗಳಿನ ಮೊದಲನೆಯ ಅರ್ಧ ಭಾಗ ; ಅಮಾವಾಸ್ಯೆಯಿಂದ ಹಿಡಿದು ಹದಿನೈದು ದಿನಗಳ ಕಾಲ. ೩. ಅರುವತ್ತು ಸಂವತ್ಸರಗಳಲ್ಲಿ ಒಂದು. ೪. ವೀರ್ಯ ; ರೇತಸ್ಸು. ೫. ಕಣ್ಣು ; ನೇತ್ರ. ೬. ಕಣ್ಣಿನ ಒಂದು ಬಗೆಯ ರೋಗ. **~ಪಕ್ಷ** = ತಿಂಗಳಿನ ಮೊದಲನೆಯ ಅರ್ಧಭಾಗ.

ಶುಚಿ (ನಾ). ೧. ಬಿಳುಪು ; ಧವಳತೆ. ೨. ನೈರ್ಮಲ್ಯ ; ಚೊಕ್ಕಟ. ೩. ಪಾವಿತ್ರ್ಯ. ೪. ಬೆಂಕಿ ; ಅಗ್ನಿ.

ಶುದ್ಧ (ಗು). ೧. ಚೊಕ್ಕಟವಾದ ; ಸ್ವಚ್ಛವಾದ. ೨. ಕಪಟವಿಲ್ಲದ ; ನಿಷ್ಕಳಂಕ. ೩. ಸರಿಯಾದ ; ನೇರವಾದ. ೪. ಸರಳವಾದ. ೫. ಬರಿಯ ; ಕೇವಲ. ೬. ಸಂಪೂರ್ಣ ; ಪೂರ್ತಿಯಾದ. **~ಅಂಗ** = ಸಂಪೂರ್ಣವಾಗಿ ; ಪೂರ್ತಿಯಾಗಿ. **~ಅಂತ** = ಅಂತಃಪುರ ; ರಾಣಿವಾಸ. **~ಆಚಾರ** = ಒಳ್ಳೆಯ ನಡತೆ.

ಶುದ್ಧಗೆ (ನಾ). ಮೂಲಾಕ್ಷರ ; ಶುದ್ಧಾಕ್ಷರ.

**ಶುದ್ಧಿ** (ನಾ). ೧. ಸ್ವಚ್ಛತೆ ; ನೈರ್ಮಲ್ಯ. ೨. = ಶುದ್ಧೀಕರಣ. ೩. ಒಳ್ಳೆಯ ನಡತೆ ; ಸದಾಚಾರ. ೪. ಎಚ್ಚರ ; ಪರಿವೆ. ೫. ಸುದ್ದಿ ; ಸಮಾಚಾರ.

**ಶುದ್ಧೀಕರಣ** (ನಾ). ಚೊಕ್ಕಟ ಮಾಡುವಿಕೆ ; ಹಸನುಗೊಳಿಸುವಿಕೆ.

**ಶುದ್ಧೀಕರಿಸು** (ಕ್ರಿ). ಶುದ್ಧಮಾಡು ; ಹಸನುಗೊಳಿಸು.

**ಶುನಕ** (ನಾ). ನಾಯಿ ; ಸೊಣಗ.

**ಶುನಕಿ** (ನಾ). ಹೆಣ್ಣುನಾಯಿ.

**ಶುನಿ** ೧. = ಶುನಕಿ. ೨. = ಶುನಕ.

**ಶುಭ** (ನಾ). ೧. ಚೆಲುವಾದುದು ; ಸುಂದರವಾದುದು. ೨. ಒಳ್ಳಿತು ; ಕ್ಷೇಮ. ೩. ಪರಾಕ್ರಮ ; ಶೌರ್ಯ. (ಗು). ೪. ಸುಂದರವಾದ ; ಚೆಲುವಾದ. ೫. ಒಳ್ಳೆಯ ; ಮಂಗಳಕರವಾದ. ೬. ಸಂತೋಷಕರವಾದ. ೭. ನಿರ್ಮಲವಾದ. **~ಆಶಯ** = ಒಳ್ಳೆಯದಾಗಲೆಂದು ಹಾರೈಸುವಿಕೆ. **~ಕರ್ಮ** = ಮದುವೆ, ಮುಂಜಿ ಮುಂತಾದ ಮಂಗಳಕಾರ್ಯ. **~ಕಾರ್ಯ** = ಒಳ್ಳೆಯ ಕೆಲಸ ; ಮಂಗಳಕರವಾದ ಕೆಲಸ. **~ಗಳಿಗೆ** = ಒಳ್ಳೆಯ ಗಳಿಗೆ, ಮುಹೂರ್ತ. **~ದಿನ** = ಮಂಗಳಕರವಾದ ದಿನ ; ಒಳ್ಳೆಯ ದಿನ. **~ವಾರ್ತೆ** = ಸಂತೋಷಕರವಾದ ಸುದ್ದಿ. **~ಸ್ವೀಕಾರ** = ಅಪರಕರ್ಮಗಳಾದ ನಂತರ ಶುಭಕಾರ್ಯಕ್ಕಾಗಿ ಅಧಿಕಾರವನ್ನು ಸ್ವೀಕರಿಸುವುದು.

**ಶುಭದ** (ನಾ). ಒಳ್ಳೆಯ ಫಲವನ್ನು ಕೊಡುವುದು.

**ಶುಭಾಂಗಿ** (ನಾ). ಸುಂದರಿ ; ಚೆಲುವೆ.

**ಶುಭ್ರ** (ನಾ). ೧. ಬಿಳುಪು ; ಧವಳತೆ. (ಗು). ೨. ಹೊಳೆಯುವ ; ಪ್ರಜ್ವಲಿಸುವ. **~ಅಂಶು** = ಬಿಳಿಯ ಕಿರಣಗಳಿಂದ ಕೂಡಿದವನು ; ಚಂದ್ರ. **~ಆತಪತ್ರ** = ಬೆಳ್ಗೊಡೆ ; ಶ್ವೇತಚ್ಛತ್ರ.

**ಶುರು** (ನಾ). ಪ್ರಾರಂಭ ; ಮೊದಲು.

**ಶುಲ್ಕ** (ನಾ). ೧. ಸುಂಕ ; ತೆರಿಗೆ. ೨. ಗುರುದಕ್ಷಿಣೆ. ೩. ವಿದ್ಯಾಭ್ಯಾಸಕ್ಕಾಗಿ ಕೊಡುವ ಹಣ ; ಫೀಸು. ೪. ಹೆಣ್ಣಿಗೆ ತೆರುವ ಹಣ ; ತೆರ. ೫. ವಟ್ಟಾ ; ಸಂಚಕಾರ. **~ಇಗ** = ಸುಂಕವನ್ನು ವಸೂಲು ಮಾಡುವ ಅಧಿಕಾರಿ. **~ವಿನಾಯಿತಿ** = ಕೊಡಬೇಕಾದ ಹಣಕ್ಕೆ ಮಾಫಿಮಾಡುವಿಕೆ ; ರಿಯಾಯಿತಿ.

**ಶುಶ್ರೂಷಣೆ** (ನಾ). ೧. ವಿಧೇಯತೆ ; ವಿನೀತಭಾವ. ೨. ಸೇವೆ ; ಉಪಚಾರ.

**ಶುಶ್ರೂಷೆ** = ಶುಶ್ರೂಷಣೆ.

**ಶುಷ್ಕ** (ನಾ). ೧. ಒಣಕಲು ; ತೇವವಿಲ್ಲದಿರುವುದು. ೨. ವ್ಯರ್ಥವಾದುದು ; ಕೆಲಸಕ್ಕೆ ಬಾರದುದು. (ಗು). ೩. ಒಣಗಿದ ; ನೀರಸವಾದ. ೪. ಹುರುಳಿಲ್ಲದ ; ಸಾರವಿಲ್ಲದ. **~ಪಾಂಡಿತ್ಯ** = ಒಣಪಾಂಡಿತ್ಯ ; ನೀರಸವಾದ ವಿದ್ಯೆ.

**ಶೂದ್ರ** (ನಾ). ನಾಲ್ಕು ವರ್ಣಗಳಲ್ಲಿ ನಾಲ್ಕನೆಯದು ಮತ್ತು ಆ ವರ್ಣಕ್ಕೆ ಸೇರಿದವನು.

**ಶೂನ್ಯ** (ನಾ). ೧. ಪೊಳ್ಳು ; ಜಳ್ಳು. ೨. ನಿರ್ಜನವಾದ ಪ್ರದೇಶ. ೩. ಆಕಾಶ ; ಗಗನ. ೪. ಸೊನ್ನೆ ; ಬಿಂದು ; ಅನುಸ್ವಾರ. ೫. ಮಾಟ ; ಅಭಿಚಾರ. ೬. ನಾಸ್ತಿಕತೆ ; ನಾಸ್ತಿಕವಾದ. (ಗು). ೭. ಪೊಳ್ಳಾದ ; ಏನೂ ಇಲ್ಲದ. ೮. ಸಂಪೂರ್ಣವಾಗಿ ಕಳೆದುಕೊಂಡ. ೯. ಹಾಳಾದ ; ನಾಶವಾದ. ೧೦. ಏಕಾಂಗಿಯಾದ ; ಒಂಟಿಯಾದ. ೧೧. ಬೆತ್ತಲೆಯಾದ ; ಬರಿದಾದ. ೧೨. ಅರ್ಥಹೀನವಾದ. **~ಗಾರ** = ಮಾಟ, ಮಂತ್ರ ಮುಂತಾದುವನ್ನು ಮಾಡುವವನು. **~ವಾದ** = ಎಲ್ಲವೂ ಶೂನ್ಯವೆಂಬ ತರ್ಕ ; ನಿರೀಶ್ವರವಾದ.

**ಶೂರ** (ನಾ). ಧೀರ ; ಪರಾಕ್ರಮಿ.

**ಶೂರ್ಪ** (ನಾ). ೧. ಧಾನ್ಯಗಳನ್ನು ಹಸನು ಮಾಡಲು ಬಳಸುವ ಒಂದು ಸಾಧನ ;

ಮೊರ. ೨. ಗೆರಸೆ; ಬುಟ್ಟಿ. ೩. ಒಂದು ಅಳತೆಯ ಮಾನ. ~ಕರ್ಣ = ೧. ಮೊರದಂತೆ ಅಗಲವಾದ ಕಿವಿಗಳುಳ್ಳವನು; ವಿನಾಯಕ. ೨. ಆನೆ.

ಶೂಲ (ನಾ). ೧. ಚೂಪಾದ ತುದಿಯುಳ್ಳ ಒಂದು ಬಗೆಯ ಆಯುಧ; ಈಟಿ. ೨.ಶಿವನ ಆಯುಧ; ತ್ರಿಶೂಲ. ೩. ತಪ್ಪಿತಸ್ಥರನ್ನು ಕೊಲ್ಲಲು ನೆಡುತ್ತಿದ್ದ ಚೂಪಾದ ಆಯುಧ. ~ಪಾಣಿ = ಶೂಲಿ.

ಶೂಲಿ (ನಾ). ೧. ಶೂಲವನ್ನು ಕೈಯಲ್ಲಿ ಹಿಡಿದಿರುವವನು. ೨. ಶಿವ.

ಶೂಲೆ (ನಾ). ತೀಕ್ಷ್ಣವಾದ ನೋವು, ವೇದನೆ.

ಶೃಂಖಲಕ ೧. = ಶೃಂಖಲೆ. ೨. ಒಂಟೆ. ೩. ಒಂಟೆಯ ಮರಿ.

ಶೃಂಖಲೆ (ನಾ). ಸರಪಣಿ; ಸಂಕೋಲೆ.

ಶೃಂಗ (ನಾ). ೧. ಕೋಡು; ಕೊಂಬು. ೨. ಪರ್ವತದ ತುದಿ; ಶಿಖರ. ೩. ಎತ್ತರ; ಔನ್ನತ್ಯ. ೪. ಒಂದು ಬಗೆಯ ವಾದ್ಯ. ೫. ಒಬ್ಬ ಋಷಿಯ ಹೆಸರು; ಋಷ್ಯಶೃಂಗ.

ಶೃಂಗರಿಸು (ಕ್ರಿ). ಅಲಂಕರಿಸು; ಸಿಂಗರಿಸು.

ಶೃಂಗಾಟಕ (ನಾ). ೧. ನಾಲ್ಕು ರಸ್ತೆಗಳು ಕೂಡುವ ಸ್ಥಳ; ಚೌಕ. ೨.ಒಂದು ಜಾತಿಯ ಸಸ್ಯ; ಕೊಳವಂಕೆ.

ಶೃಂಗಾರ (ನಾ). ೧. ಕಾವ್ಯದ ನವರಸಗಳಲ್ಲಿ ಒಂದು. ೨. ಅಲಂಕಾರ; ಸಿಂಗಾರ. ೩.ಪ್ರಣಯ; ಪ್ರೀತಿ. ೪.ಚೆಲುವು; ಶೋಭೆ. ~ಇಸು = ಶೃಂಗರಿಸು. ~ಚೇಷ್ಟೆ=ಪ್ರಣಯವನ್ನು ವ್ಯಕ್ತಪಡಿಸುವ ಹಾವಭಾವ.

ಶೃಂಗಿ (ನಾ). ೧. ಕೊಂಬನ್ನು ಹೊಂದಿರುವುದು; ಕೋಡುಳ್ಳ ಪ್ರಾಣಿ. ೨. ತುದಿಯುನ್ನುಳ್ಳುದು; ಪರ್ವತ. ೩. ಚಿನ್ನ; ಹೊನ್ನು. ೪. ಮೈಮೇಲೆ ಚುಕ್ಕೆಗಳಿರುವ ಒಂದು ಜಾತಿಯ ಜಿಂಕೆ. ೫. ಒಂದು ಜಾತಿಯ ವಿಷಪೂರಿತವಾದ ಮೂಲಿಕೆ.

ಶೃಗಾಲ (ನಾ). ನರಿ; ಜಂಬುಕ.

ಶೆಟ್ಟಿ (ನಾ). ವ್ಯಾಪಾರಿ; ಶ್ರೇಷ್ಠಿ.

ಶೆಲೆ (ಕ್ರಿ). ೧. ಒದ್ದೆಯಲ್ಲಿ ಬಹುಕಾಲವಿರುವುದರಿಂದ ಚರ್ಮವು ಬಿಳುಪಾಗು. (ನಾ). ೨. ತುಣುಕು; ಚೂರು.

ಶೇಂಗಾ (ನಾ). ನೆಲಗಡಲೆ; ಕಡಲೆಕಾಯಿ.

ಶೇಕಡ (ನಾ). ನೂರಕ್ಕೆ ಇಷ್ಟು; ನೂರಕ್ಕೆ ದರ.

ಶೇಕಡಾ = ಶೇಕಡ.

ಶೇಕದಾರ (ನಾ). ಜಿಲ್ಲೆಯ ಕಂದಾಯದ ಅಧಿಕಾರಿ.

ಶೇಖರ (ನಾ). (ಹೂವು, ಮಣಿ ಮುಂತಾದುವುಗಳಿಂದ ಮಾಡಿದ) ತಲೆಯಲ್ಲಿ ಧರಿಸುವ ಆಭರಣ; ಶಿರೋಭೂಷಣ; ಬಾಸಿಂಗ.

ಶೇಖರಣೆ (ನಾ). ಒಟ್ಟುಗೂಡಿಸುವುದು; ಸಂಗ್ರಹಣೆ.

ಶೇಖರಿಸು (ಕ್ರಿ). ಒಟ್ಟುಗೂಡಿಸು; ಸಂಗ್ರಹಿಸು.

ಶೇಲೆ = ಸೇಲೆ.

ಶೇವಂತಿಕೆ = ಶಾವಂತಿಕೆ.

ಶೇವಲ (ನಾ). ಪಾಚಿ; ಹಾವಸೆ.

ಶೇಷ (ನಾ). ೧. ಉಳಿದುದು; ಉಳಿಕೆ; ಬಾಕಿ. ೨. ಪ್ರಸಾದ. ೩. ಆದಿಶೇಷ. ೪. ಬಲರಾಮ. ೫. ಲಕ್ಷ್ಮಣ, (ಗು). ೬. ಉಳಿದ; ಉಳಿಕೆಯ. ~ಅಕ್ಷತ(ತೆ) = ಶೇಷೆ. ~ಧಾಮ = ಹಾವನ್ನು ವಿಶ್ರಾಂತಿಸ್ಥಾನವನ್ನಾಗಿ ಮಾಡಿಕೊಂಡವನು; ವಿಷ್ಣು. ~ಪ್ರಶ್ನೆ = ಪರಿಹಾರ ಕಾಣದೆ ಉಳಿದೇ ಇರುವ ಸಮಸ್ಯೆ; ಬಗೆಹರಿಯದ ಪ್ರಶ್ನೆ.

ಶೇಷಧರ (ನಾ). ಹಾವನ್ನು ಆಭರಣವನ್ನಾಗಿ ಧರಿಸಿದವನು; ಶಿವ.

ಶೇಷಶಾಯಿ (ನಾ). ಹಾವಿನ ಮೇಲೆ ಮಲಗಿರುವವನು; ವಿಷ್ಣು.

ಶೇಷೆ (ನಾ). ಮಂಗಳಾಕ್ಷತೆ; ಮಂತ್ರಾಕ್ಷತೆ.

ಶೈಕ್ಷಣಿಕ (ಗು). ಶಿಕ್ಷಣಕ್ಕೆ ಸಂಬಂಧಿಸಿದ; ವಿದ್ಯಾಭ್ಯಾಸಕ್ಕೆ ಸಂಬಂಧಿಸಿದ.

**ಶೈತ್ಯ** (ನಾ). ೧. ತಂಪು ; ಚಳಿ. ೨. ತೇವ ; ಒದ್ದೆ. **~ಉಪಚಾರ** = ದೇಹಕ್ಕೆ ತಂಪಾದ ವಸ್ತುಗಳಿಂದ ಮಾಡುವ ಶುಶ್ರೂಷೆ ; ಶಿಶಿರೋಪಚಾರ. **~ಕೊ(ಗೊ)ಳ್(ಳ್ಳು)** =೧. ತಣ್ಣಗಾಗು ; ತಂಪಾಗು. ೨. ಧೈರ್ಯಗೆಡು ; ಎದೆಗುಂದು.

**ಶೈಥಿಲ್ಯ** (ನಾ). ೧. ಸಡಿಲವಾಗಿರುವಿಕೆ ; ಅಳ್ಳಕವಾಗಿರುವಿಕೆ. ೨. ದುರ್ಬಲತೆ ; ಶಕ್ತಿಹೀನತೆ. ೩. = ಶಿಥಿಲದ್ವಿತ್ವ.

**ಶೈಲ(ಳ)** (ನಾ). ೧. ಗಿರಿ ; ಬೆಟ್ಟ. (ಗು). ೨. ಕಲ್ಲಿಗೆ ಸಂಬಂಧಿಸಿದ. ೩. ಕಲ್ಲುಗಳಿಂದ ತುಂಬಿದ. **~ಇಂದ್ರ** = ಶೈಲಪ. **~ಚಾಪ** = ಬೆಟ್ಟವನ್ನು ಬಿಲ್ಲಿನಂತೆ ಬಳಸಿದವನು ; ಶಿವ.

**ಶೈಲಜೆ** (ನಾ). ಹಿಮವಂತನ ಮಗಳು ; ಗಿರಿಜೆ.

**ಶೈಲಪ** (ನಾ).ಬೆಟ್ಟಗಳ ಒಡೆಯ; ಹಿಮಾಲಯ.

**ಶೈಲಾಲಿ** (ನಾ). ೧.ನಟ ; ಅಭಿನಯಿಸುವವನು. ೨. ನರ್ತಿಸುವವನು ; ನರ್ತಕ.

**ಶೈಲಿ** (ನಾ). ೧. ಕ್ರಮ ; ಧಾಟಿ ; ವಿಧಾನ. ೨. ಕಾವ್ಯರಚನೆಯಲ್ಲಿಯ ರೀತಿ, –ಮಾರ್ಗ.

**ಶೈಲೂಷ** (ನಾ). ೧.ಅಭಿನಯಿಸುವವನು ; ನಟ. ೨. ನರ್ತಕ. ೩. ಬಿಲ್ವಪತ್ರೆಯ ಮರ. ೪. ಮೋಸಗಾರ ; ಕಪಟಿ.

**ಶೈಲೇಯ** (ನಾ). ೧.ಒಂದು ಬಗೆಯ ಸುಗಂಧ ವಸ್ತು ; ಗುಗ್ಗುಳ. ೨. ಶಿಲಾರಸ ; ಶಿಲಾಜಿತು. (ಗು). ೩. ಕಲ್ಲಿನಿಂದ ದೊರಕುವ.

**ಶೈವ** (ನಾ). ೧. ಶಿವನ ಆರಾಧಕ ; ಶಿವಭಕ್ತ. (ಗು). ೨. ಶಿವನಿಗೆ ಸಂಬಂಧಿಸಿದ.

**ಶೈವಲ(ಳ)** = ಶೇವಲ.

**ಶೈವಲಿನಿ** (ನಾ). ಹಾವಸೆಯಿಂದ ಕೂಡಿದುದು; ನದಿ, ಕೊಳ ಮುಂತಾದುವು.

**ಶೈವಾಲ(ಳ)** = ಶೇವಲ.

**ಶೈಶವ** (ನಾ). ೧. ಬಾಲ್ಯ ; ಹಸುಳೆತನ. ೨. ಹಸುಳೆ ; ಶಿಶು.

**ಶೋಕ** (ನಾ).೧.ಕಾವ್ಯದ ನವರಸಗಳಲ್ಲಿ ಒಂದು. ೨. ದುಃಖ ; ಅಳಲು. **~ಅಂಧ** =೧.ದುಃಖದಿಂದ ಕಂಗೆಟ್ಟವನು. ೨. ದುಃಖದಿಂದ ಕಂಗೆಟ್ಟಿರುವ. **~ಗೀತೆ** = ವಿಯೋಗದ ಅಳಲನ್ನು ವ್ಯಕ್ತಪಡಿಸುವ ಹಾಡು.

**ಶೋಚನೀಯ** (ಗು). ದುಃಖವನ್ನುಂಟುಮಾಡುವ ; ದುಃಖಕ್ಕೆ ಕಾರಣವಾದ.

**ಶೋಚ್ಯ** = ಶೋಚನೀಯ.

**ಶೋಣ** (ನಾ). ೧. ಕೆಂಪು ; ಕೆಂಬಣ್ಣ. ೨. ಕೆಂಪುಬಣ್ಣದ ಕುದುರೆ. (ಗು). ೩. ಕೆಂಪಾದ ; ಅರುಣ ರಾಗದ. **~ಮಣಿ** = ಮಾಣಿಕ್ಯ ; ಪದ್ಮರಾಗ.

**ಶೋಣಿತ** (ನಾ). ೧.ರಕ್ತ ; ನೆತ್ತರು. ೨.ಋತುಸ್ರಾವ ; ಆರ್ತವ. **~ಜಲ** = ರಕ್ತ ; ಕೆನ್ನೀರು.

**ಶೋಧ** (ನಾ). ೧. ಶೋಧನೆ ; ಕಂಡುಹಿಡಿಯುವಿಕೆ. ೨. ತಪ್ಪನ್ನು ತಿದ್ದುವಿಕೆ. ೩. ಸ್ವಚ್ಛಮಾಡುವಿಕೆ. ೪. ಹತ್ತಿಯನ್ನು ಹಿಂಜಲು ಉಪಯೋಗಿಸುವ ಒಂದು ಉಪಕರಣ. **~ಇಸು** = ೧. ಸೋಸು ; ಸ್ವಚ್ಛಮಾಡು. ೨. ಹುಡುಕು ; ಕಂಡುಹಿಡಿ. ೩. ತಿದ್ದು ; ಸರಿಪಡಿಸು. ೪. ಪರೀಕ್ಷಿಸು.

**ಶೋಧಕ** (ನಾ). ೧. ಹುಡುಕುವವನು ; ಕಂಡುಹಿಡಿಯುವವನು. ೨. ಒಪ್ಪ ಮಾಡುವವನು; ಸರಿಪಡಿಸುವವನು. ೩. ಪರೀಕ್ಷಿಸುವವನು. (ಗು). ೪. ಶುಭ್ರಗೊಳಿಸುವ ; ಶುದ್ಧ ಮಾಡುವ.

**ಶೋಧನ** (ನಾ). ೧. ಕಂಡುಹಿಡಿಯುವಿಕೆ ; ಹುಡುಕುವಿಕೆ. ೨. ಸ್ವಚ್ಛಗೊಳಿಸುವಿಕೆ ; ಶುದ್ಧಮಾಡುವಿಕೆ. ೩. ತಪ್ಪನ್ನು ಸರಿಪಡಿಸುವಿಕೆ ; ತಿದ್ದುವಿಕೆ. ೪. ಹಣವನ್ನು ಕೊಡುವುದು.

**ಶೋಧನೆ** = ಶೋಧನ.

**ಶೋಫ** (ನಾ). ಬಾವು ; ಊತ.

**ಶೋಭನ** (ನಾ). ೧. ಮಂಗಳಕರವಾದುದು. ೨. ಹೊಳಪು; ಕಾಂತಿ. ೩. ಚೆಲುವು; ಅಂದ. ೪. ಮಂಗಳಗೀತೆ; ಸೋಬಾನೆ. ೫. ನಿಷೇಕ; ಪ್ರಸ್ತ.

**ಶೋಭೆ** (ನಾ). ೧. ಕಾಂತಿ; ಹೊಳಪು. ೨. ಚೆಲುವು; ಸೌಂದರ್ಯ. ೩. = ಶೋಷ.

**ಶೋಷ** (ನಾ). ೧. ಒಣಗುವಿಕೆ; ಶುಷ್ಕವಾಗುವಿಕೆ. ೨. ಶ್ವಾಸಕೋಶಕ್ಕೆ ಸಂಬಂಧಿಸಿದ ಕ್ಷಯ. **~ಇಸು** = ೧. ಒಣಗು; ಬಾಡು. ೨. ಒಣಗಿಸು; ಸೊರಗಿಸು.

**ಶೋಷಣೆ** (ನಾ). ೧. ಬತ್ತಿಹೋಗುವಿಕೆ; ನಿರ್ಜಲತೆ. ೨. ಆಯಾಸ; ಬಳಲಿಕೆ. ೩. ಸ್ವಾರ್ಥಕ್ಕೆ ಉಪಯೋಗಿಸಿಕೊಳ್ಳುವುದು.

**ಶೌಂಡ** (ಗು). ೧. ಸಾಮರ್ಥ್ಯವುಳ್ಳ; ಶಕ್ತಿಯುಳ್ಳ. ೨. ಕೌಶಲ್ಯವುಳ್ಳ; ನೈಪುಣ್ಯವುಳ್ಳ. ೩. ಮದ್ಯಸೇವನೆಯಿಂದ ಅಮಲೇರಿದ.

**ಶೌಕ್ತಿಕೇಯ** (ನಾ). ಮುತ್ತು; ಮೌಕ್ತಿಕ.

**ಶೌಚ** (ನಾ). ೧. ಸ್ವಚ್ಛತೆ; ನೈರ್ಮಲ್ಯ. ೨. ಸ್ವಚ್ಛಗೊಳಿಸುವಿಕೆ. ೩. =ಶೌಚಾಚಾರ. ೪. ಮಲವಿಸರ್ಜನೆ. **~ಆಚಾರ**=ಪರಿಶುದ್ಧವಾದ ನಡತೆ; ಸದಾಚಾರ. **~ಕೂಪ** = ಪಾಯಖಾನೆ; ಕಕ್ಕಸು. **~ಗೃಹ** = ಶೌಚಕೂಪ.

**ಶೌರಿ** (ನಾ). ೧. ಕೃಷ್ಣ; ವಿಷ್ಣು. ೨. ನವಗ್ರಹಗಳಲ್ಲಿ ಒಂದು; ಶನಿ.

**ಶೌರಿಯ** = ಶೌರ್ಯ.

**ಶೌರ್ಯ** (ನಾ). ಪರಾಕ್ರಮ; ಕೆಚ್ಚು.

**ಶ್ಮಶಾನ** (ನಾ). ಸುಡುಗಾಡು; ಮಸಣ. **~ವಾಸಿ** = ಮಸಣದಲ್ಲಿ ನೆಲಸಿರುವವನು; ಶಿವ. **~ವೈರಾಗ್ಯ** = ತೋರಿಕೆಯ ವಿರಕ್ತಿ; ಸ್ಥಿರವಲ್ಲದ ವೈರಾಗ್ಯ.

**ಶ್ಮಶ್ರು** (ನಾ). ೧. ಗಡ್ಡ. ೨. ಮೀಸೆ.

**ಶ್ಯಾನುಭಾಗ** = ಶಾನುಭಾಗ.

**ಶ್ಯಾನುಭೋಗ** = ಶಾನುಭಾಗ.

**ಶ್ಯಾಮ** (ನಾ). ೧. ಕಪ್ಪುಬಣ್ಣ; ಕಡುನೀಲಿ. ೨. ಒಂದು ಜಾತಿಯ ಸಸ್ಯ; ಪ್ರಿಯಂಗು. (ಗು). ೩. ಕಪ್ಪನೆಯ; ಕಡುನೀಲಿಯ. **~ಕಂಧರ** =೧.ಶಿವ. ೨.ನವಿಲು. ೩.ಹಾವು.

**ಶ್ಯಾಮಲ(ಳ)** (ಗು). ಕಪ್ಪನೆಯ; ಕಡುನೀಲಿ ಬಣ್ಣದಿಂದ ಕೂಡಿದ. **~ಅಂಗ** = ೧. ಕಪ್ಪುಬಣ್ಣದ ಮೈಯುಳ್ಳವನು. ೨. ವಿಷ್ಣು. ೩. ಯಮ. ೪. ಬುಧಗ್ರಹ.

**ಶ್ಯಾಮಲೆ(ಳೆ)** (ನಾ). ೧. ಕಾಳಿ; ದುರ್ಗೆ. ೨. ಯಮನ ಹೆಂಡತಿಯ ಹೆಸರು.

**ಶ್ಯಾಮೆ** (ನಾ). ೧. ಇರುಳು; ರಾತ್ರಿ. ೨. ಒಂದು ಜಾತಿಯ ಸಸ್ಯ; ಪ್ರಿಯಂಗು. ೩. ಸುಂದರಿ; ಚೆಲುವೆ.

**ಶ್ಯಾಲ** (ನಾ). ಹೆಂಡತಿಯ ತಮ್ಮ; ಭಾವಮೈದುನ.

**ಶ್ಯಾಲಕ** = ಶ್ಯಾಲ.

**ಶ್ಯೇನ** (ನಾ). ಗಿಡುಗ; ಡೇಗೆ.

**ಶ್ರದ್ಧಾಲು(ಳು)** (ನಾ). ೧. ಬಯಕೆಯುಳ್ಳ ಗರ್ಭಿಣಿ. (ಗು). ೨. ವಿಶ್ವಾಸವುಳ್ಳ. ೩. ಆಸೆಯುಳ್ಳ; ಬಯಕೆಯುಳ್ಳ.

**ಶ್ರದ್ಧೆ** (ನಾ). ೧. ವಿಶ್ವಾಸ; ನಂಬಿಕೆ. ೨. ಗೌರವ; ಮನ್ನಣೆ. ೩. ಆಸೆ; ಬಯಕೆ. ೪. ಬಸಿರಿಯ ಬಯಕೆ; ದೋಹಳ.

**ಶ್ರಮ** (ನಾ). ೧. ಆಯಾಸ; ಬಳಲಿಕೆ. ೨. ಕಷ್ಟ; ತೊಂದರೆ. ೩. ಸಾಧನೆ; ಪ್ರಯತ್ನ. ೪. ಕೆಲಸ; ದುಡಿತ. **~ಜೀವಿ** =೧. ಕಷ್ಟದಿಂದ ಜೀವಿಸುವವನು. ೨. ದೇಹಶ್ರಮದಿಂದ ಜೀವಿಸುವವನು.

**ಶ್ರಮಣ** = ಸವಣ.

**ಶ್ರಮಣೆ** (ನಾ). ಸಂನ್ಯಾಸಿನಿ; ಭಿಕ್ಷುಣಿ.

**ಶ್ರಮಿಕ** (ನಾ). ದೇಹಶ್ರಮದಿಂದ ಜೀವಿಸುವವನು; ಶ್ರಮಜೀವಿ.

**ಶ್ರಯ** (ನಾ). ೧. ಏಳಿಗೆ; ಅಭಿವೃದ್ಧಿ. ೨. ಸಾಗುವಳಿಯಿಂದ ಆಗುವ ಭೂಮಿಯ

ಅಭಿವೃದ್ಧಿ. ೩.ಕಡಮೆ ಕಂದಾಯದ ಕರಾರಿನ ಮೇಲೆ ಸಾಗುವಳಿಗೆ ಕೊಟ್ಟ ಭೂಮಿ. ೪. ಆಸರೆ; ರಕ್ಷಣೆ. ೫. ರಕ್ಷಣೆಯನ್ನು ಪಡೆಯುವಿಕೆ.

**ಶ್ರವ** ೧. = ಶ್ರಮ. ೨. ಕಿವಿ; ಕರ್ಣ. ೩. ಕೇಳುವಿಕೆ; ಆಲಿಸುವಿಕೆ. ೪. ಹೆಣ; ಶವ.

**ಶ್ರವಣ** (ನಾ). ೧. ಕಿವಿ. ೨. ಕೇಳುವಿಕೆ; ಆಲಿಸುವಿಕೆ. ೩. ಇಂಪಾದ ಗಾನ. ೪. ಜೈನ ಸಂನ್ಯಾಸಿ; ಸವಣ. ೫. ಇಪ್ಪತ್ತೇಳು ನಕ್ಷತ್ರಗಳಲ್ಲಿ ಒಂದು. ೬. ಅಕ್ಕಸಾಲಿಗ ಮೊದಲಾದವರು ಉಪಯೋಗಿಸುವ ಚಿಮ್ಮಟಿಗೆ. **~ಇಂದ್ರಿಯ** = ಕಿವಿ. **~ಶೂಲ** = ೧. ಕಿವಿಯ ನೋವು. ೨. ಕಿವಿಗೆ ಶೂಲದಂತೆ ಇರಿಯುವುದು; ಕರ್ಣಕಠೋರವಾದುದು. **~ಸೇವ್ಯ** = ಕೇಳಲು ಯೋಗ್ಯವಾದುದು; ಶ್ರಾವ್ಯವಾದುದು.

**ಶ್ರವ್ಯ** (ನಾ). ೧. ಕೇಳಲು ಯೋಗ್ಯವಾದ ಕಾವ್ಯ. (ಗು). ೨. = ಶ್ರಾವ್ಯ. **~ಕಾವ್ಯ** = ಹಾಡುಗಬ್ಬ.

**ಶ್ರಾಂತ** (ನಾ). ೧. ಇಂದ್ರಿಯನಿಗ್ರಹಿ; ಯತಿ; ಯೋಗಿ. (ಗು). ೨. ಬಳಲಿದ; ದಣಿದ. ೩. ಶಾಂತವಾದ; ಸಮಾಧಾನಗೊಂಡ.

**ಶ್ರಾಂತಿ** (ನಾ). ಬಳಲಿಕೆ; ಆಯಾಸ; ದಣಿವು.

**ಶ್ರಾದ್ಧ** (ನಾ). ೧. ಪಿತೃಗಳಿಗೆ ಶಾಸ್ತ್ರೋಕ್ತವಾಗಿ ಮಾಡುವ ಕರ್ಮ; ತಿಥಿ. (ಗು). ೨. ಶ್ರದ್ಧೆಯಿಂದ ಮಾಡಲ್ಪಡುವ; ವಿಶ್ವಾಸಪೂರ್ವಕವಾದ. **~ದೇವ** = ಯಮ.

**ಶ್ರಾವಕ** (ನಾ). ೧. ಕೇಳುವವನು; ಶ್ರೋತೃ. ೨. ಶಿಷ್ಯ; ವಿದ್ಯಾರ್ಥಿ. ೩. ಜೈನ ಸಂಸಾರಿ, –ಗೃಹಸ್ಥ.

**ಶ್ರಾವಣ** (ನಾ). ೧. ಚಾಂದ್ರಮಾನದ ಐದನೆಯ ತಿಂಗಳು. ೨.ಹೊಸ ಜನಿವಾರವನ್ನು ಧರಿಸುವ ದಿನ; ಜನಿವಾರದ ಹಬ್ಬ; ಉಪಾಕರ್ಮ. ೩. ಕೇಳುವಿಕೆ; ಆಲಿಸುವಿಕೆ. (ಗು). ೪. ಕಿವಿಗೆ ಸಂಬಂಧಿಸಿದ. ೫. ಕೇಳತಕ್ಕ. ೬. ಶ್ರವಣನಕ್ಷತ್ರಕ್ಕೆ ಸಂಬಂಧಿಸಿದ.

**ಶ್ರಾವೆ** (ನಾ). ಮಣ್ಣಿನ ಮುಚ್ಚಳ.

**ಶ್ರಾವ್ಯ** (ಗು). ಕೇಳಲು ತಕ್ಕುದಾದ; ಇಂಪಾದ.

**ಶ್ರಿತ** (ಗು). ೧. ಆಶ್ರಯಿಸಿದ; ರಕ್ಷಣೆಯಲ್ಲಿರುವ. ೨. ಆಧಾರವಾಗಿ ಹೊಂದಿದ.

**ಶ್ರೀ** (ನಾ). ೧. ಏಳಿಗೆ; ಅಭ್ಯುದಯ. ೨. ಹಿರಿಮೆ; ಔನ್ನತ್ಯ. ೩. ಕೀರ್ತಿ; ಪ್ರಸಿದ್ಧಿ. ೪. ಚೆಲುವು; ಕಾಂತಿ; ಸೊಗಸು. ೫. ಐಶ್ವರ್ಯ; ಸಿರಿ. ೬. ಲಕ್ಷ್ಮಿ. ೭. ಅಲಂಕಾರ; ಶೃಂಗಾರ. ೮. ಒಳ್ಳಿತು; ಮಂಗಳಕರವಾದುದು. ೯. ಗೌರವಸೂಚಕವಾಗಿ ವ್ಯಕ್ತಿಯ ಹೆಸರಿನ ಹಿಂದೆ ಸೇರಿಸುವ ಪದ. ೧೦. ವಿಷ; ನಂಜು. **~ಕಂಠ** = ಕೊರಳಲ್ಲಿ ವಿಷವನ್ನುಳ್ಳವನು; ಶಿವ. **~ಕಾಂತ** = ಲಕ್ಷ್ಮಿಯ ಒಡೆಯ; ವಿಷ್ಣು. **~ಗೃಹ** = ಧನಾಗಾರ; ಖಜಾನೆ. **~ನಂದನ** = ಲಕ್ಷ್ಮಿಯ ಮಗ; ಮನ್ಮಥ. **~ನಿವಾಸ**=ಲಕ್ಷ್ಮಿಗೆ ಆಸರೆಯಾಗಿರುವವನು; ವಿಷ್ಣು. **~ವತ್ಸ** = ೧. ವಿಷ್ಣುವಿನ ಎದೆಯ ಮೇಲಿರುವ ಮಚ್ಚೆ. ೨. ಆ ಮಚ್ಚೆಯನ್ನು ಹೊಂದಿರುವವನು; ವಿಷ್ಣು. **~ವಧು** = ಲಕ್ಷ್ಮಿ. **~ವರ** = ವಿಷ್ಣು. **~ವೃಕ್ಷ** = ೧. ಅರಳಿಮರ. ೨. ಕುದುರೆಯ ಎದೆ ಮತ್ತು ಹಣೆಯ ಮೇಲಿರುವ ಸುರುಳಿಗೂದಲು. **~ವೈಷ್ಣವ** = ವಿಷ್ಣುಭಕ್ತರಲ್ಲಿ ಒಂದು ಪಂಗಡ.

**ಶ್ರೀಕರ** (ನಾ). ೧. ವಿಷ್ಣು. ೨. ಕೆಂದಾವರೆ. (ಗು). ೩. ಮಂಗಳಕರವಾದ; ಶ್ರೇಯಸ್ಕರ.

**ಶ್ರೀಕಾರ** (ನಾ). ಆರಂಭ; ಪ್ರಾರಂಭ.

**ಶ್ರೀಖಂಡ** (ನಾ). ೧. ಶ್ರೀಗಂಧ; ಚಂದನ. ೨. ಒಂದು ಬಗೆಯ ಸಿಹಿ ಭಕ್ಷ್ಯ.

ಶ್ರೀಗಂಧ (ನಾ). ಚಂದನದ ಮರ ಮತ್ತು ಅದರಿಂದ ತಯಾರಿಸುವ ಸುಗಂಧದ್ರವ್ಯ.

ಶ್ರೀದ (ನಾ). ಸಂಪತ್ತನ್ನು ಕೊಡುವವನು ; ಕುಬೇರ.

ಶ್ರೀಫಲ (ನಾ). ಬಿಲ್ವಮರ.

ಶ್ರೀಮಂತ (ನಾ). ೧. ಧನಿಕ ; ಐಶ್ವರ್ಯವಂತ. ೨. ಗರ್ಭಿಣಿ ಸ್ತ್ರೀಗೆ ಮಾಡುವ ಒಂದು ಸಂಸ್ಕಾರ; ಸೀಮಂತ. (ಗು). ೩. ಸಂಪತ್ತುಳ್ಳ. ~ಇಕೆ = ಸಿರಿವಂತಿಕೆ.

ಶ್ರೀಮತಿ (ನಾ). ಗೌರವಸೂಚಕವಾಗಿ ಹೆಂಗಸಿನ ಹೆಸರಿನ ಹಿಂದೆ ಸೇರಿಸುವ ಪದ.

ಶ್ರೀಮುಖ (ನಾ). ೧. ಗುರು ಅಥವಾ ಹಿರಿಯರಿಂದ ಬಂದ ಪತ್ರ. ೨. ಅರುವತ್ತು ಸಂವತ್ಸರಗಳಲ್ಲಿ ಒಂದು.

ಶ್ರುತ (ನಾ). ೧. ವೇದ. (ಗು). ೨. ಕೇಳಿದ ; ಕೇಳಲ್ಪಟ್ಟ. ೩. ಪ್ರಸಿದ್ಧವಾದ. ೪. ತಿಳಿದ ; ತಿಳಿಯಲ್ಪಟ್ಟ. ~ಕೀರ್ತಿ = ಯಶಸ್ಸನ್ನು ಪಡೆದ ; ಪ್ರಸಿದ್ಧವಾದ. ~ದೇವಿ = ಶಾಸ್ತ್ರಗಳ ಅಧಿದೇವತೆ ; ಸರಸ್ವತಿ. ~ಪಡಿಸು = ತಿಳಿಯಪಡಿಸು ; ನಿವೇದಿಸು.

ಶ್ರುತಿ (ನಾ). ೧. ಕೇಳುವಿಕೆ ; ಆಲಿಸುವಿಕೆ. ೨. ಕಿವಿ ; ಕರ್ಣ. ೩. ಕೇಳಲ್ಪಟ್ಟುದು. ೪. ವೇದ. ೫. ಧ್ವನಿ ; ನಾದ. ೬. ಓಲಗದ ಜೊತೆಯಲ್ಲಿ ಬಾರಿಸುವ ಒಂದು ವಾದ್ಯ. ೭. ಗಾಯಕನ ಧ್ವನಿಯ ಸ್ಥಾಯಿಗೂ ವಾದ್ಯದ ಸ್ಥಾಯಿಗೂ ಇರುವ ಹೊಂದಾಣಿಕೆ. ~ಕಷ್ಟ = ಕೇಳುವುದಕ್ಕೆ ಅಸಹ್ಯವಾಗಿರುವುದು. ~ಕೂ(ಗೂ)ಡಿಸು =೧. ವಾದ್ಯದ ನಾದದೊಂದಿಗೆ ಧ್ವನಿಯನ್ನು ಸೇರಿಸು. ೨. ಅನುಮೋದಿಸು ; ದನಿಗೂಡಿಸು. ~ಪೆಟ್ಟಿಗೆ = ಒಂದೇ ಸ್ಥಾಯಿಯಲ್ಲಿ ಹಾಡುವುದಕ್ಕಾಗಿ ಬಳಸುವ ಒಂದು ವಾದ್ಯ. ~ಸಹ್ಯ = ಕೇಳಲು ಹಿತಕರವಾದುದು ; ಶ್ರಾವ್ಯವಾದುದು.

ಶ್ರೇಣಿ (ನಾ). ೧. ಸಾಲು ; ಪಂಕ್ತಿ. ೨. ಗುಂಪು; ಸಮೂಹ. ೩. ಬೇರೆ ಬೇರೆ ವೃತ್ತಿಯವರ ಸಂಘ ; ಕೊತ್ತಳಿ.

ಶ್ರೇಯ = ಶ್ರೇಯಸ್ಸು.

ಶ್ರೇಯಸ್ಕರ (ಗು). ೧. ಸುಖಕರವಾದ; ಸಂತೋಷಕರವಾದ. ೨. ಮಂಗಳಕರವಾದ.

ಶ್ರೇಯಸ್ಸು (ನಾ). ೧. ಏಳಿಗೆ ; ಅಭ್ಯುದಯ. ೨. ಮಂಗಳಕರವಾದುದು ; ಶುಭ. ೩. ಉತ್ತಮವಾದುದು ; ಶ್ರೇಷ್ಠವಾದುದು.

ಶ್ರೇಯಾಂಸ (ನಾ). ಹಣವುಳ್ಳವನು ; ಧನಿಕ.

ಶ್ರೇಯೋಭಿಲಾಷೆ (ನಾ). ಒಳ್ಳೆಯದಾಗಲಿ ಎಂಬ ಬಯಕೆ.

ಶ್ರೇಷ್ಠ (ನಾ). ೧. ಉತ್ತಮವಾದುದು ; ಮೇಲುಮಟ್ಟಕ್ಕೆ ಸೇರಿದುದು. ೨. ಮುಖ್ಯಸ್ಥ ; ಮುಖಂಡ. ೩. ಬ್ರಹ್ಮ. (ಗು). ೪. ಯೋಗ್ಯವಾದ ; ಒಳ್ಳೆಯ.

ಶ್ರೇಷ್ಠಿ (ನಾ). ೧. ಮುಂದಾಳು ; ಮುಖ್ಯಸ್ಥ. ೨. = ಶೆಟ್ಟಿ.

ಶ್ರೋಣಿ (ನಾ). ಜಘನ ; ನಿತಂಬ.

ಶ್ರೋಣಿತ (ನಾ). ರಕ್ತ; ನೆತ್ತರು ; ಶೋಣಿತ.

ಶ್ರೋತೃ (ನಾ). ಕೇಳುವವನು ; ಆಲಿಸುವವನು.

ಶ್ರೋತ್ರ (ನಾ). ೧. ಕೇಳುವ ಅಂಗ ; ಕಿವಿ. ೨. ಆನೆಯ ಸೊಂಡಿಲಿನ ತುದಿ. (ಗು). ೩. ಅತಿ ಕಠೋರವಾದ ; ಅತ್ಯಂತ ಕಠಿನವಾದ.

ಶ್ರೋತ್ರಿಯ (ನಾ). ವೇದಾಭ್ಯಾಸ ಮಾಡಿದ ಬ್ರಾಹ್ಮಣ ; ವೈದಿಕ.

ಶ್ರೌತ ೧. = ಶ್ರೋತ್ರಿಯ. (ಗು). ೨. ಕಿವಿಗೆ ಸಂಬಂಧಿಸಿದ. ೩. ವೇದಗಳಿಗೆ ಸಂಬಂಧಿಸಿದ. ೪. ವೇದಗಳಿಂದ ಅನುಮೋದಿಸಲ್ಪಟ್ಟ.

ಶ್ರೌತಿ = ಶ್ರೋತ್ರಿಯ.

ಶ್ಲಾಘಿಸು (ಕ್ರಿ). ಹೊಗಳು ; ಕೊಂಡಾಡು.

ಶ್ಲಾಘ್ಯ (ನಾ). ೧. ಹೊಗಳಲು ಯೋಗ್ಯವಾದುದು. (ಗು). ೨. ಹೊಗಳಲು ಯೋಗ್ಯವಾದ; ಪ್ರಶಂಸಾರ್ಹವಾದ.

ಶ್ಲಿಷ್ಟ (ಗು). ೧. ಸೇರಿದ; ಹೊಂದಿಕೊಂಡ. ೨. ಶ್ಲೇಷಾಲಂಕಾರದಿಂದ ಕೂಡಿದ.

ಶ್ಲೇಷ (ನಾ). ೧. ಸೇರುವಿಕೆ; ಜೋಡಣೆ. ೨. ಅಪ್ಪುಗೆ; ಆಲಿಂಗನ. ೩. = ಶ್ಲೇಷೆ.

ಶ್ಲೇಷೆ (ನಾ). ೧. ಎರಡು ಅರ್ಥಗಳನ್ನು ಹೊಂದಿರುವುದು. ೨. ಕಾವ್ಯದ ಅರ್ಥಾಲಂಕಾರಗಳಲ್ಲಿ ಒಂದು.

ಶ್ಲೇಷ್ಮ (ನಾ). ೧. ತ್ರಿದೋಷಗಳಲ್ಲಿ ಒಂದು; ಕಫ; ಲೋಳೆ. ೨. ನೆಗಡಿ.

ಶ್ಲೋಕ (ನಾ). ೧. ಒಂದು ಪದ್ಯ ಭೇದ. ೨. ಅನುಷ್ಟುಪ್ ಛಂದಸ್ಸಿನ ಪದ್ಯಜಾತಿ. ೩. ಪದ್ಯಗಳ ಮೂಲಕ ಹೊಗಳುವುದು, ಸ್ತುತಿಸುವುದು. ೪. ಯಶಸ್ಸು; ಕೀರ್ತಿ.

ಶ್ವಪಚ (ನಾ). ೧. ಕೀಳು ಜಾತಿಯವನು. ೨. ಹೊಲೆಯ.

ಶ್ವಯು (ನಾ). ಹೆಬ್ಬಾವು; ಅಜಗರ.

ಶ್ವಶುರ (ನಾ). ಹೆಂಡತಿಯ ಅಥವಾ ಗಂಡನ ತಂದೆ; ಮಾವ.

ಶ್ವಶ್ರು (ನಾ). ಹೆಂಡತಿಯ ಅಥವಾ ಗಂಡನ ತಾಯಿ; ಅತ್ತೆ.

ಶ್ವಸನ (ನಾ). ೧. ಉಸಿರು; ಶ್ವಾಸ. ೨. ಉಸಿರಾಡುವಿಕೆ; ಉಸಿರಾಟ. ೩. ವಾಯು; ಗಾಳಿ.

ಶ್ವಸಿತ (ನಾ). ೧. ಉಸಿರು; ಶ್ವಾಸ. (ಗು). ೨. ಉಸಿರಾಡುವ.

ಶ್ವಾನ (ನಾ). ನಾಯಿ; ಸೊಣಗ.

ಶ್ವಾಪದ (ನಾ). ೧. ಕ್ರೂರಮೃಗ; ಹಿಂಸ್ರಪ್ರಾಣಿ. ೨. ಹುಲಿ. (ಗು). ೩. ಕ್ರೂರವಾದ.

ಶ್ವಾಸ ೧. = ಶ್ವಸನ. ೨. ಉಬ್ಬಸ; ದಮ್ಮು. ~ಕಾಸ = ಗೂರಲು; ಉಬ್ಬಸ. ~ಕೋಶ = ಉಸಿರಾಟಕ್ಕೆ ಸಹಾಯಕವಾದ ಅಂಗ; ಫುಪ್ಪುಸ.

ಶ್ವಿತ್ರ (ನಾ). ಒಂದು ಬಗೆಯ ಚರ್ಮರೋಗ; ತೊನ್ನು.

ಶ್ವೇತ (ನಾ). ೧. ಬಿಳುಪು; ಬಿಳಿಯ ಬಣ್ಣ. ೨. ಬೆಳ್ಳಿ; ರಜತ. ೩. ಬಿಳಿಯ ಬಣ್ಣದ ಕುದುರೆ. (ಗು). ೪. ಬಿಳುಪಾದ; ಬಿಳಿಯದಾದ. ~ಅಂಗ = ೧. ಬಿಳಿಯ ದೇಹ. ೨. ಬಿಳಿಯ ದೇಹವುಳ್ಳವನು; ಚಂದ್ರ. ~ಅಂಬರ = ೧. ಬಿಳಿಯ ಬಣ್ಣದ ಬಟ್ಟೆ. ೨. ಜೈನರಲ್ಲಿ ಒಂದು ಪಂಗಡ. ~ಆತಪತ್ರ = ಬೆಳ್ಗೊಡೆ; ಶ್ವೇತಚ್ಛತ್ರ. ~ಛ(ಚ್ಛ)ತ್ರ = ಶ್ವೇತಾತಪತ್ರ. ~ವಾಹನ = ೧. ಬಿಳಿಯ ಕುದುರೆಗಳನ್ನು ಹೊಂದಿರುವವನು; ಚಂದ್ರ. ೨. ಅರ್ಜುನ.



# ಷ

ಷ (ನಾ). ಕನ್ನಡ ವರ್ಣಮಾಲೆಯ ಐವತ್ತೆರಡನೆಯ ಅಕ್ಷರ.

ಷಂಡ (ನಾ). ೧. ಗುಂಪು; ನೆರವಿ; ಸಮೂಹ. ೨. ಅಡವಿ; ಕಾಡು. ೩. ನಪುಂಸಕ; ಕೊಜ್ಜ. ೪. ಗೂಳಿ. ~ಕೋಪ = ವ್ಯರ್ಥವಾದ ಕೋಪ. ~ತನ = ನಪುಂಸಕತ್ವ.

ಷಕ್ಕು (ನಾ). ೧. ಅನುಮಾನ; ಶಂಕೆ. ೨. ತಪ್ಪು; ದೋಷ.

ಷಟ್ಕ (ನಾ). ಆರರಿಂದ ಕೂಡಿರುವುದು ; ಆರರ ಗುಂಪು.

ಷಟ್ಕರ್ಮ (ನಾ). ೧. ಬ್ರಾಹ್ಮಣನಿಗೆ ವಿಧಿಸಿರುವ ಯಜನ, ಯಾಜನ, ಅಧ್ಯಯನ, ಅಧ್ಯಾಪನ, ದಾನ ಮತ್ತು ಪ್ರತಿಗ್ರಹಗಳೆಂಬ ಆರು ಕರ್ಮಗಳು. ೨. ಲೇಖನ, ವ್ಯವಹಾರ, ಕೃಷಿ, ಖಡ್ಗ, ಗೋಪಾಲ ಮತ್ತು ಯಾಚನೆ ಗಳೆಂಬ ಆರು ಬಗೆಯ ಜೀವನೋಪಾಯ ಗಳು.

ಷಟ್ಕರ್ಮಿ (ನಾ). ಷಟ್ಕರ್ಮಗಳನ್ನು ಅನುಸರಿಸುವವನು.

ಷಟ್ಖಂಡ (ನಾ). (ಪ್ರಪಂಚದ) ಆರು ಭೂಭಾಗ ಗಳು. ~ಮಂಡಿತ = ಆರು ಭೂಭಾಗ ಗಳಿಂದ ಕೂಡಿದ, -ಅಲಂಕೃತವಾದ.

ಷಟ್ಚರಣ (ನಾ). ೧. ಆರು ಕಾಲುಗಳಿಂದ ಕೂಡಿರುವುದು. ೨. ತುಂಬಿ ; ಆರಡಿ.

ಷಟ್ತರ್ಕ (ನಾ). ಸಾಂಖ್ಯ, ಯೋಗ, ನ್ಯಾಯ, ವೈಶೇಷಿಕ, ಮೀಮಾಂಸೆ, ವೇದಾಂತಗಳೆಂಬ ಆರು ಶಾಸ್ತ್ರಗಳು.

ಷಟ್ತ್ರಿಂಶ (ನಾ). ಮೂವತ್ತಾರು.

ಷಟ್ಪದ (ನಾ). ತುಂಬಿ ; ಅಳಿ.

ಷಟ್ಪದಿ (ನಾ). ೧. ಹೆಣ್ಣುತುಂಬಿ. ೨. ದೇಸಿ ಪದ್ಯ ಜಾತಿಯಲ್ಲಿ ಒಂದು ಬಗೆ; ಒಂದು ಕನ್ನಡ ಛಂದಸ್ಸು.

ಷಟ್ಸ್ಥಲ(ಳ) (ನಾ). ವೀರಶೈವ ಧರ್ಮದಲ್ಲಿ ಆತ್ಮಸಾಧನೆಯ ಆರು ಹಂತಗಳು ; ಭಕ್ತ, ಮಾಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯಗಳೆಂಬ ಆರು ವೀರಶೈವ ಸ್ಥಲಗಳು.

ಷಡಂಗ (ನಾ). ೧. ಆರು ಅಂಗಗಳನ್ನು ಹೊಂದಿರುವುದು. ೨. ಶಿಕ್ಷೆ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ್ಯ ಮತ್ತು ಕಲ್ಪ ಎಂಬ ವೇದಾಭ್ಯಾಸಕ್ಕೆ ಆವಶ್ಯಕವಾದ ಆರು ಅಂಗಗಳು. ೩. ಸಂಗೀತ ಶಾಸ್ತ್ರದಲ್ಲಿ ತಾಳಕ್ಕೆ ಸಂಬಂಧಿಸಿದ ಆರು ವಿಧಗಳು. ೪. ಮೂಲಬಲ, ಸೇವಕ, ಸ್ನೇಹಿತ, ಶ್ರೇಣಿ, ಶತ್ರು ಮತ್ತು ಚತುರಂಗಬಲವೆಂಬ ರಾಜನ ಆರು ಅಂಗಗಳು. ೫. = ಷಟ್ಸ್ಥಲ.

ಷಡಕಿ (ನಾ). ಎತ್ತಿನ ಕೊಂಬಿಗೆ ಅಲಂಕಾರ ಕ್ಕಾಗಿ ಕಟ್ಟುವ ರೇಷ್ಮೆಯ ಕುಚ್ಚು.

ಷಡಕ್ಷರ (ನಾ). 'ಓಂ ನಮಃ ಶಿವಾಯ' ಎಂಬ ಆರು ಅಕ್ಷರಗಳ ಸಮೂಹ.

ಷಡಭಿಜ್ಞ (ನಾ). ಆರು ಬಗೆಯ ವಿದ್ಯೆಗಳನ್ನು ತಿಳಿದವನು ; ಬುದ್ಧ.

ಷಡರಿ (ನಾ). ಕಾಮ, ಕ್ರೋಧ, ಲೋಭ, ಮೋಹ, ಮದ ಮತ್ತು ಮತ್ಸರಗಳೆಂಬ ಮನುಷ್ಯನ ಆರು ಆಂತರಿಕ ಶತ್ರುಗಳು.

ಷಡಾನನ (ನಾ). ಆರು ಮುಖಗಳನ್ನು ಹೊಂದಿರುವವನು ; ಷಣ್ಮುಖ.

ಷಡೂರ್ಮಿ (ನಾ). ಹಸಿವು, ಬಾಯಾರಿಕೆ, ಶೋಕ, ಮೋಹ, ಮುಪ್ಪು ಮತ್ತು ಸಾವು ಗಳೆಂಬ ಆರು ಬಗೆಯ ಕ್ಲೇಶಗಳು.

ಷಡೃತು (ನಾ). ವಸಂತ, ಗ್ರೀಷ್ಮ, ವರ್ಷ, ಶರತ್ತು, ಹೇಮಂತ, ಶಿಶಿರಗಳೆಂಬ ಆರು ಋತುಗಳು.

ಷಡ್ಗವ್ಯ (ನಾ). ಹಸುವಿನಿಂದ ದೊರೆಯುವ ಗಂಜಲ, ಸಗಣಿ, ಹಾಲು, ತುಪ್ಪ, ಮೊಸರು ಮತ್ತು ಗೋರೋಚನಗಳೆಂಬ ಆರು ವಸ್ತುಗಳು.

ಷಡ್ಗುಣ (ನಾ). ೧. ಆರುಪಾಲು ; ಆರುಪಟ್ಟು. ೨. ರಾಜನು ಇತರ ರಾಜರಿಗೆ ಸಂಬಂಧ ಪಟ್ಟಂತೆ ಅನುಸರಿಸಬೇಕಾದ ಸಂಧಿ, ವಿಗ್ರಹ, ಯಾನ, ಆಸನ, ದ್ವೈಧೀಭಾವ, ಸಂಶ್ರಯ ಗಳೆಂಬ ಆರು ನಿಯಮಗಳು. ೩. ಐಶ್ವರ್ಯ, ಜ್ಞಾನ, ಯಶಸ್ಸು, ಸಂಪತ್ತು, ವೈರಾಗ್ಯ, ಧರ್ಮಗಳೆಂಬ ಆರು ಬಗೆಯ ಅತ್ಯುತ್ತಮ ವಾದ ಲಕ್ಷಣಗಳು.

ಷಡ್ಡಕ = ಹೆಂಡತಿಯ ಸೋದರಿಯ ಗಂಡ.

ಷಡ್ದರ್ಶನ = ಷಟ್ತರ್ಕ.
ಷಡ್ರಸ (ನಾ). ಮಧುರ, ಕಟು, ಆಮ್ಲ, ತುವರ, ತಿಕ್ತ, ಲವಣಗಳೆಂಬ ಆರು ಬಗೆಯ ರುಚಿಭೇದಗಳು.
ಷಡ್ರಿಪು = ಷಡರಿ.
ಷಡ್ವೈರಿ = ಷಡರಿ.
ಷಣ್ಮುಖ(ನಾ). ೧. ಕಾರ್ತಿಕೇಯ; ಸುಬ್ರಹ್ಮಣ್ಯ. ೨. ಅಗ್ನಿ.
ಷರತ್ತು (ನಾ). ೧. ಪಂದ್ಯ ; ಜೂಜು. ೨. ಒಪ್ಪಂದ ; ಕರಾರು.
ಷರಬತ್ತು (ನಾ). ಒಂದು ಬಗೆಯ ತಂಪಾದ ಪಾನೀಯ ; ನಿಂಬೆಹಣ್ಣಿನ ಪಾನಕ.
ಷರಾ (ನಾ). ದಾಖಲೆ, ಪತ್ರ ಮುಂತಾದವುಗಳ ಕೊನೆಯಲ್ಲಿ ಸೇರಿಸುವ ವಿಶೇಷಾಂಶ, –ಅಭಿಪ್ರಾಯ.
ಷರಾಬು (ನಾ). ಮದ್ಯಸಾರ ಹೆಚ್ಚಾಗಿರುವ ಸಾರಾಯಿ, –ಹೆಂಡ.
ಷರಾಯಿ (ನಾ). ಗಂಡಸರು ತೊಡುವ ಉಡುಪು ; ಇಜಾರ.
ಷಷ್ಟಿ = ಷಷ್ಠಿ.
ಷಷ್ಠಿ (ನಾ). ೧. ಅರುವತ್ತು. ೨. ಪಕ್ಷದ ಆರನೆಯ ದಿನ. ೩. ವ್ಯಾಕರಣದ ಏಳುವಿಭಕ್ತಿಗಳಲ್ಲಿ ಒಂದು. ~ಅಬ್ದ = ಷಷ್ಠಿಪೂರ್ತಿ. ~ಪೂರ್ತಿ = ಅರುವತ್ತು ವರ್ಷಗಳು ತುಂಬಿದಾಗ ಮಾಡುವ ಸಮಾರಂಭ, –ಶಾಂತಿ.
ಷಹ (ನಾ). ಚದುರಂಗದಾಟದಲ್ಲಿ ಎದುರು ಪಕ್ಷದ ದೊರೆಯ ಚಲನಕ್ಕೆ ತಡೆಹಾಕುವುದು.
ಷಹರ್(ರು) (ನಾ). ಪಟ್ಟಣ ; ನಗರ.
ಷಾಡ್ಗುಣ್ಯ (ನಾ). ಷಡ್ಗುಣಗಳನ್ನು ಹೊಂದಿರುವುದು.
ಷಾಣ್ಮಾತುರ (ನಾ). ಆರುಜನ ತಾಯಂದಿರನ್ನುಳ್ಳವನು ; ಕಾರ್ತಿಕೇಯ.
ಷಿಕಾರಿ (ನಾ). ೧. ಬೇಟೆ ; ಮೃಗಯಾವಿಹಾರ. ೨. ಬೇಟೆಗೆ ಗುರಿಯಾಗುವ ಪ್ರಾಣಿ. ೩. ಬೇಟೆಗಾರ.
ಷೋಕಿ (ನಾ). ೧. ಬೆಡಗು ; ಒಯ್ಯಾರ. ೨. ಅಲಂಕಾರದಲ್ಲಿ ಆಸಕ್ತಿ. ೩. ವಿಲಾಸ ; ಸುಖಭೋಗ.
ಷೋಡಶ (ನಾ). ೧. ಒಂದು ಸಂಖ್ಯೆ ; ಹದಿನಾರು. (ಗು). ೨. ಹದಿನಾರನೆಯ. ~ಉಪಚಾರ = ದೇವರು ಅಥವಾ ಅತಿಥಿಗಳಿಗೆ ಮಾಡುವ ಹದಿನಾರು ಬಗೆಯ ಉಪಚಾರ; ಆಸನ, ಸ್ವಾಗತ, ಪಾದ್ಯ, ಅರ್ಘ್ಯ, ಆಚಮನೀಯ, ಮಧುಪರ್ಕ, ಆಚಮನ, ಸ್ನಾನ, ವಸನ, ಆಭರಣ, ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯ, ನಂಪನೆ ಎಂಬುವು. ~ದಾನ = ಗೋ, ಭೂ, ಹಿರಣ್ಯ, ವಸ್ತ್ರ, ಆಭರಣ, ಛತ್ರ, ಚಾಮರ, ಶಯ್ಯೆ, ವ್ಯಜನ, ಸಾಲಗ್ರಾಮ, ಧನ, ಧಾನ್ಯ, ದೀಪ, ಪಾದುಕೆ, ಆಜ್ಯ, ಕನ್ಯೆ ಎಂಬ ಹದಿನಾರು ಬಗೆಯ ದಾನಗಳು. ~ಸಂಸ್ಕಾರ = ಗರ್ಭಾದಾನ, ಪುಂಸವನ, ಸೀಮಂತ, ಜಾತಕರ್ಮ, ನಾಮಕರಣ, ಅನ್ನಪ್ರಾಶನ, ಚೌಲ, ಉಪನಯನ, ಪ್ರಾಜಾಪತ್ಯ, ಸಾಮ್ಯ, ಆಗ್ನೇಯ; ವೈಶ್ವದೇವ, ಗೋದಾನ, ಸಮಾವರ್ತನ, ವಿವಾಹ ಮತ್ತು ಅಂತ್ಯೇಷ್ಟಿಗಳೆಂಬ ಹದಿನಾರು ಬಗೆಯ ಸಂಸ್ಕಾರಗಳು.

ಸ (ನಾ). ಕನ್ನಡದ ವರ್ಣಮಾಲೆಯ ಐವತ್ತು ಮೂರನೆಯ ಅಕ್ಷರ.

ಸಂಕ (ನಾ). ೧. ಶಂಖ. ೨. ಸೇತುವೆ; ಪೂಲು.

ಸಂಕಟ (ನಾ). ೧. ದುಃಖ; ಅಳಲು ೨. ಕಷ್ಟ; ತೊಂದರೆ. ೩. ಯಾತನೆ; ನೋವು. ೪. ಗಂಡಾಂತರ; ವಿಪತ್ತು. (ಗು) ೫. ಕಿರಿದಾದ; ಇಕ್ಕಟ್ಟಾದ; ಸಂಕುಚಿತ. ~ಪಡು = ಕಷ್ಟಕ್ಕೊಳಗಾಗು; ತೊಂದರೆಯನ್ನನುಭವಿಸು.

ಸಂಕಟ = ಸಂಗಟ.

ಸಂಕಥನ (ನಾ). ೧. ವಿವರಿಸುವಿಕೆ; ವಿಶದಪಡಿಸುವಿಕೆ. ೨. ವಿವರಣೆ; ಹೇಳಿಕೆ.

ಸಂಕಥೆ (ನಾ). ಮಾತುಕತೆ; ಸಂಭಾಷಣೆ.

ಸಂಕರ (ನಾ). ೧. ಬೆರೆತುಕೊಂಡಿರುವಿಕೆ; ಮಿಶ್ರಣ; ಕಲಬೆರಕೆ. ೨. ಕಾವ್ಯದಲ್ಲಿಯ ಮಿಶ್ರಾಲಂಕಾರ. ೩. ಶಂಕರ; ಶಿವ.

ಸಂಕರ್ಷಣ (ನಾ). ೧. ಸೆಳೆತ; ಆಕರ್ಷಣೆ. ೨. ಉಳುವಿಕೆ; ಸಾಗುವಳಿ. ೩. ಬಲರಾಮ.

ಸಂಕಲನ (ನಾ). ೧. ಒಟ್ಟುಗೂಡಿಸುವುದು; ಕಲೆಹಾಕುವುದು. ೨. ಕೂಡುವ ಲೆಕ್ಕ.

ಸಂಕಲನೆ = ಸಂಕಲನ.

ಸಂಕಲಿಕೆ (ನಾ). ಶುಭಸಮಯದಲ್ಲಿ ಉಡುವ ಜೋಡಿವಸ್ತ್ರ—ಪಂಚೆ.

ಸಂಕಲೆ (ನಾ). ೧. ಸಂಕೋಲೆ; ಸರಪಳಿ. ೨. ಕೈಕೋಳ; ಬೇಡಿ. ~ಬೀ(ವೀ)ಡು = ಸೆರೆಮನೆ; ಕಾರಾಗೃಹ. ~ಮ(ವ)ನೆ = ಸಂಕಲೆವೀಡು.

ಸಂಕಲ್ಪ (ನಾ). ೧. ಉದ್ದೇಶ; ಇಚ್ಛೆ; ಅಭಿಪ್ರಾಯ ೨. ನಿರ್ಧಾರ; ಪ್ರತಿಜ್ಞೆ. ೩. ಶಾಸ್ತ್ರವಿಧಿಗಳನ್ನು ಕೈಗೊಳ್ಳುವ ಮೊದಲು ಮಾಡುವ ಪವಿತ್ರಕಾರ್ಯ. ~ಇಸು = ೧. ನಿಶ್ಚಯಪಡಿಸಿಕೊಳ್ಳು; ನಿರ್ಧರಿಸು. ೨. ಬಯಸು; ಇಚ್ಛಿಸು. ೩. ಉದ್ದೇಶಿಸು; ಅಭಿಪ್ರಾಯಪಡು. ~ಸಿದ್ಧಿ = ಕಾರ್ಯವು ಕೈಗೂಡುವಿಕೆ. ~ಹಾನಿ = ನಿರ್ಧಾರವು ಭಂಗವಾಗುವುದು. ~ಹಿಂಸೆ = ನಿಜವಾದ ಹಿಂಸೆಯ ಬದಲಾಗಿ ಅಚೇತನಗಳನ್ನು ಹಿಂಸಿಸುವುದು.

ಸಂಕಲ್ಪಿತ (ಗು). ೧. ಉದ್ದೇಶಪಟ್ಟ. ೨. ನಿರ್ಣಯಿಸಿದ; ತೀರ್ಮಾನಿಸಿದ.

ಸಂಕಾಶ (ನಾ). ೧. ಕಾಂತಿ; ಹೊಳಪು. ೨. ತೋರಿಕೆ. ೩. ಸಾಮೀಪ್ಯ; ಹತ್ತಿರ. (ಗು). ೪. ಸದೃಶವಾದ.

ಸಂಕೀರ್ಣ (ಗು). ೧. ಬೆರೆತ; ಮಿಶ್ರವಾದ. ೨. ಇಕ್ಕಟ್ಟಾದ; ಕಿಕ್ಕಿರಿದ. ೩. ಅಸ್ಪಷ್ಟವಾದ; ಮಂಕಾದ. ೪. ಚೆದರಿದ; ಹರಡಿದ. ೫. ನಾನಾ ಬಗೆಯ; ವಿಧವಿಧವಾದ. ೬. ಜಟಿಲವಾದ.

ಸಂಕೀರ್ತನ (ನಾ). ಸ್ತುತಿ; ಹೊಗಳಿಕೆ. ~(ಂ)ಗೆಯ್ = ಹೊಗಳು; ಸ್ತುತಿಸು.

ಸಂಕೀರ್ತನೆ = ಸಂಕೀರ್ತನ.

ಸಂಕು (ನಾ). ೧. ಬೆಣೆ; ಗೂಟ. ೨. ಶಂಖ. ೩. ಕಠಾರಿ; ಕಿರುಗತ್ತಿ.

ಸಂಕುಚನ (ನಾ). ಕುಗ್ಗುವಿಕೆ; ಮುದುರುವಿಕೆ.

ಸಂಕುಚಿತ (ಗು). ಕುಗ್ಗಿದ; ಮುದುರಿಕೊಂಡ.

ಸಂಕುಲ(ಳ) (ನಾ). ಗುಂಪು; ಸಮೂಹ.

ಸಂಕೆ (ನಾ). ೧. ಅನುಮಾನ; ಸಂಶಯ. ೨. ದಿಗಿಲು; ಹೆದರಿಕೆ. ೩. ಒಂದು ಜಾತಿಯ ಸಸ್ಯ. ~ಇಸು = ಅನುಮಾನಿಸು; ಸಂದೇಹಪಡು.

ಸಂಕೇತ (ನಾ). ೧. ಸೂಚನೆ; ಸುಳಿವು; ಸಂಜ್ಞೆ. ೨. ಗುರುತು; ಚಿಹ್ನೆ. ~ಇಸು = ಸುಳಿವು ಕೊಡು; ಸೂಚಿಸು. ~ಸ್ಥಲ(ಳ) = ಗುರುತು

ಮಾಡಿಕೊಂಡ ಜಾಗ; ನಿರ್ದೇಶಿತ ಸ್ಥಳ.

ಸಂಕೋಚ (ನಾ). ೧. ಕುಗ್ಗುವುದು; ಮುದುಡಿಕೊಳ್ಳುವುದು. ೨. ಮುಚ್ಚಿಕೊಳ್ಳುವುದು. ೩. ಭಯ; ಅಂಜಿಕೆ. ೪. ದಾಕ್ಷಿಣ್ಯ; ನಾಚಿಕೆ; ಭಿಡೆಯ. ೫. ಕುಂಕುಮಕೇಸರಿ. ೬. ಒಂದು ಜಾತಿಯ ಮೀನು. ~ಇಸು = ೧. ಕುಗ್ಗು; ಬಾಡು. ೨. ಮುಚ್ಚಿಕೊಳ್ಳು. ೩. ಮುಚ್ಚಿಸು. ೪. ಕುಗ್ಗಿಸು.

ಸಂಕೋಲೆ = ಸಂಕಲೆ.

ಸಂಕ್ರಂದನ (ನಾ). ಇಂದ್ರ.

ಸಂಕ್ರಮ (ನಾ). ಚಲನೆ; ಗತಿ. ~ಇಸು = ಮುಂದುವರಿ; ಚಲಿಸು; ನಡೆ.

ಸಂಕ್ರಮಣ (ನಾ). ೧. ಒಟ್ಟಿಗೆ ಹೋಗುವಿಕೆ, -ಚಲಿಸುವಿಕೆ. ೨. ಮುನ್ನಡೆ; ಪ್ರಗತಿ. ೩. = ಸಂಕ್ರಾಂತಿ. ೪. ವ್ಯತ್ಯಾಸಗೊಳ್ಳುತ್ತಿರುವ ಸಮಯ; ಸಂಧಿಕಾಲ.

ಸಂಕ್ರಾಂತಿ (ನಾ). ೧. ಸೂರ್ಯನು ಒಂದು ರಾಶಿಯಿಂದ ಮತ್ತೊಂದು ರಾಶಿಗೆ ಚಲಿಸುವಿಕೆ ಮತ್ತು ಚಲಿಸುವ ಸಮಯ, -ಕಾಲ. ೨. ಮಕರಸಂಕ್ರಾಂತಿಯಂದು ಆಚರಿಸುವ ಹಬ್ಬ; ಪೊಂಗಲು. ~ವೃತ್ತ = ಸಂಕ್ರಾಂತಿಯನ್ನು ಗುರುತಿಸುವ ಗೆರೆ.

ಸಂಕ್ಲಿಷ್ಟ (ನಾ). ತೊಂದರೆ; ಕ್ಲೇಶ.

ಸಂಕ್ಲೇಶ = ಸಂಕ್ಲಿಷ್ಟ.

ಸಂಕ್ಷಿಪ್ತ (ನಾ). ೧. ಸಂಗ್ರಹಮಾಡಿದುದು; ಅಡಕಗೊಳಿಸಿದುದು. (ಗು). ೨. ಸಂಕ್ಷೇಪ ಮಾಡಲ್ಪಟ್ಟ; ಕುಗ್ಗಿಸಲ್ಪಟ್ಟ.

ಸಂಕ್ಷೇಪ (ನಾ). ಸಂಗ್ರಹ; ಅಡಕ. ~ಇಸು= ಸಂಗ್ರಹಿಸು; ಅಡಕಮಾಡು; ಮೊಟಕುಗೊಳಿಸು.

ಸಂಕ್ಷೋಭ (ನಾ). ೧. ಕಲಕಿಹೋಗಿರುವಿಕೆ; ಅಲ್ಲೋಲವಾಗಿರುವಿಕೆ. ೨. ತಳಮಳ; ಚಿತ್ತಚಾಂಚಲ್ಯ. ೩. ಕಂಪನ; ನಡುಗುವಿಕೆ.

ಸಂಖಿನ್ನ (ಗು). ತೀಪ್ರನಾದ ನೋವುಗೊಳಗಾದ.

ಸಂಖೆ = ಸಂಖ್ಯೆ.

ಸಂಖ್ಯಾನ = ಸಂಖ್ಯೆ.

ಸಂಖ್ಯಾವಾಚಕ (ನಾ). ಸಂಖ್ಯೆಯನ್ನು ತಿಳಿಸುವ ಪದ.

ಸಂಖ್ಯಾವಾಚಿ = ಸಂಖ್ಯಾವಾಚಕ.

ಸಂಖ್ಯೆ (ನಾ). ೧. ಅಂಕೆ; ಅಂಕಿ. ೨. ಎಣಿಸುವುದು; ಗಣನೆ; ಲೆಕ್ಕಮಾಡುವುದು.

ಸಂಖ್ಯೇಯ (ಗು). ೧. ಸಂಖ್ಯೆಗೆ ಸಂಬಂಧಿಸಿದ. ೨. ಎಣಿಸಬಹುದಾದ.

ಸಂಗ (ನಾ). ೧. ಹೊಂದಿಕೆ; ಸಾಮರಸ್ಯ. ೨. ಜೊತೆ; ಸಹವಾಸ. ೩. ಗೆಳೆತನ; ಮೈತ್ರಿ. ೪. ಸೇರಿಕೆ; ಸಂಗಮ. ೫. ಸಂಭೋಗ; ಕೂಟ. ~ಇಸು =೧. ಹೊಂದಿಸು; ಕೂಡಿಸು. ೨. ನೆರೆ; ಸಂಭೋಗಿಸು. ೩. ಸೇರು; ಕೂಡು.

ಸಂಗಟ (ನಾ). ವ್ಯಥೆ; ಸಂಕಟ.

ಸಂಗಟಿ (ನಾ). ತೆಳುವಾದ ಗಂಜಿ, -ಅಂಬಲಿ.

ಸಂಗಡ (ನಾ). ೧. ಜೊತೆ; ಸಹವಾಸ; ಒಡನಾಟ. ೨. ಜೋಡು ದೋಣಿ, -ತೆಪ್ಪ. (ಅ). ೩. ಜೊತೆಯಾಗಿ; ಒಟ್ಟಾಗಿ; ಕೂಡ. ~ಇಕೆ = ಸೇರುವಿಕೆ; ಒಂದಾಗುವಿಕೆ. ~ಇಗ = ೧. ಜೊತೆಗಾರ; ಒಡನಾಡಿ. ೨. ಸ್ನೇಹಿತ; ಗೆಳೆಯ. ~ಇತಿ = ಸಂಗಡಗಿತ್ತಿ. ~ಇಸು = ೧. ಒಂದಾಗು; ಬೆರೆ; ಸೇರು. ೨. ಗುಂಪುಗೂಡು; ಪಟ್ಟೈಸು. ೩. ಸೇರಿಸು; ಹೊಂದಿಸು. ~ಗಿತ್ತಿ=ಜೊತೆಗಾತಿ. ~ಪ(ಬ)ಡು = ಸುಖಪಡು.

ಸಂಗಡಿ (ನಾ). ೧. ಸಂಗಡಿಗ; ಜೊತೆಗಾರ. ೨. ಈಜುವಾಗ ಕಟ್ಟಿಕೊಳ್ಳುವ ಒಂದು ಸಾಧನ; ಈಜುಬುರುಡೆ.

ಸಂಗತ (ನಾ). ೧. ಸಹವಾಸ; ಜೊತೆ. ೨. ಯೋಗ್ಯವಾದುದು; ತಕ್ಕುದು.

(ಗು). ೩. ಸೇರಿದ ; ಕೂಡಿದ. ೪. ಯೋಗ್ಯ ವಾದ ; ತಕ್ಕ ; ಯುಕ್ತ.

ಸಂಗತಿ (ನಾ). ೧. ಸಹವಾಸ ; ಒಡನಾಟ. ೨. ಸಂಬಂಧ ; ಬಾಂಧವ್ಯ. ೩. ಪ್ರಸಂಗ ; ಘಟನೆ. ೪. ಸುದ್ದಿ ; ಸಮಾಚಾರ. ೫. ವಿಚಾರ ; ವಿಷಯ. ೬. = ಸಾಂಗತ್ಯ. ೭. ಹಾಡುವಾಗ ಒಂದೇ ಸಾಲನ್ನು ಸ್ವರ ವ್ಯತ್ಯಾಸದೊಂದಿಗೆ ಪುನಃ ಪುನಃ ಹಾಡುವುದು. ೮. ಒಳ್ಳೆಯ ಗತಿ, –ನಡಗೆ. (ಅ). ೯. ಕೂಡ ; ಒಟ್ಟಿಗೆ.

ಸಂಗಮು (ನಾ). ೧. ಕೂಡುವುದು ; ಸಮಾಗಮು. ೨. ನದಿಗಳು ಕೂಡುವ ಸ್ಥಳ. ~ಈಶ್ವರ = ಕೂಡಲ ಸಂಗಮುದಲ್ಲಿರುವ ಶಿವನ ಹೆಸರು.

ಸಂಗಮುವರಿ (ನಾ). ಒಂದು ಬಗೆಯ ನಯುವಾದ ಕಲ್ಲು ; ಅಮೃತಶಿಲೆ.

ಸಂಗರ (ನಾ). ಯುದ್ಧ ; ಕಾಳಗ. ~ಅಜಿರ = ಯುದ್ಧರಂಗ ; ರಣರಂಗ.

ಸಂಗಳಿಸು (ಕ್ರಿ). ೧. ಕೂಡು ; ಸೇರು ; ಬೆರೆ. ೨. ತೋರುವಂತೆ ಮಾಡು ; ಪ್ರಕಟಿಸು. ೩. ತೋರು ; ಕಾಣು. ೪. ಉಂಟು ಮಾಡು. ೫. ಪ್ರಯೋಗವಾಗು ; ಬಳಕೆಯಾಗು.

ಸಂಗಾತ (ಅ). ಸಂಗಡ ; ಜೊತೆಯಲ್ಲಿ ; ಕೂಡ.

ಸಂಗಾತಿ (ನಾ). ೧. ಜೊತೆಗಾರ ; ಒಡನಾಡಿ. ೨. ಜೊತೆಗಾತಿ ; ಗೆಳತಿ. ೩. (ಮನುಷ್ಯರ ಚರ್ಮದ ಮೇಲಿರುವ) ಚಿಕ್ಕ ಕರಿಯ ಮಚ್ಚೆ ; ಕಾರೆಳ್ಳು.

ಸಂಗಿ (ಗು). ೧. ಸಂಗದಲ್ಲಿರುವವನು ; ಒಡನಾಡಿ. ೨. ಪ್ರಪಂಚಕ್ಕೆ ಅಂಟಿಕೊಂಡಿರುವವನು.

ಸಂಗೀತ (ನಾ). ೧. ಹಾಡುವ ಕಲೆ ; ಗಾಯನ ಕಲೆ. ೨. ಹಾಡುವಿಕೆ ; ಗಾಯನ. ೩. ವಾದ್ಯ, ನೃತ್ಯ ಮತ್ತು ಗಾಯನಗಳ ಮೇಳ. (ಗು). ೪. ಹಾಡಲ್ಪಟ್ಟ. ~ಗಾರ = ಹಾಡುವವನು ; ಗಾಯಕ.

ಸಂಗೀತಕ (ನಾ). ಗಾಯನ ; ಹಾಡುಗಾರಿಕೆ.

ಸಂಗೀತಿ (ನಾ). ೧. ಕೂಡಿ ಹಾಡುವುದು ; ವೃಂದಗಾನ. ೨. ಮಾತುಕತೆ ; ಸಂಭಾಷಣೆ.

ಸಂಗೊಳಿಸು (ಕ್ರಿ). ಕೂಡಿಸು ; ಸೇರಿಸು.

ಸಂಗೋಪನ (ನಾ). ಕಾಪಾಡುವಿಕೆ ; ರಕ್ಷಣೆ.

ಸಂಗೋಷ್ಠಿ (ನಾ). ಸಹವಾಸ ; ಸಂಗ.

ಸಂಗ್ರಹ (ನಾ). ೧. ವಶ ; ಹಿಡಿತ. ೨. ಕಲೆ ಹಾಕುವುದು ; ಒಟ್ಟುಗೂಡಿಸುವುದು. ೩. ಕಲೆಹಾಕಿದ ಸಾಮುಗ್ರಿ ; ದಾಸ್ತಾನು. ೪. ರಾಶಿ; ಸಮೂಹ. ೫. ಒಟ್ಟು ; ಮೊತ್ತ. ೬. ಸಂಕ್ಷಿಪ್ತವಾದುದು ; ಮೊಟಕಾದುದು. ೭. ಉಗ್ರಾಣ ; ಕೋಠಿ. ~ಆಲಯ = ವಸ್ತು ಮುಂತಾದುವನ್ನು ಕೂಡಿಸಿ ಇಡುವ ಸ್ಥಳ. ~ಇಸು = ೧. ಸೇರಿಸು ; ಒಟ್ಟುಗೂಡಿಸು ; ಕಲೆಹಾಕು. ೨. ಅಡಕ ಮಾಡಿಕೊಳ್ಳು ; ಒಳಕೊಳ್ಳು. ೩. ಸಂಕ್ಷಿಪ್ತಗೊಳಿಸು ; ಮೊಟಕು ಮಾಡು.

ಸಂಗ್ರಹಣ (ನಾ). ೧. ಅಕ್ರಮಿಸುವುದು ಪರಿಗ್ರಹಿಸುವುದು. ೨. ಕಲೆ ಹಾಕುವಿಕೆ ಶೇಖರಣೆ.

ಸಂಗ್ರಹಣಿ (ನಾ). ಆಮಶಂಕೆ.

ಸಂಗ್ರಹಣೆ = ಸಂಗ್ರಹ.

ಸಂಗ್ರಹಿಣಿ = ಸಂಗ್ರಹಣಿ.

ಸಂಗ್ರಾಮು (ನಾ). ಯುದ್ಧ ; ಕಾಳಗ.

ಸಂಗ್ರಾಹ (ನಾ). ೧. ಹಿಡಿತ ; ಗ್ರಹಿಸುವಿಕೆ ೨. ಹಿಡಿ ; ಮುಷ್ಟಿ. ೩. ಗುರಾಣಿಯ ಹಿಡಿಕೆ.

ಸಂಗ್ರಾಹಕ (ನಾ). ಕಲೆಹಾಕುವವನು ; ಸಂಗ್ರಹಿಸುವವನು.

ಸಂಘ (ನಾ). ೧. ಗುಂಪು ; ಸಮೂಹ ೨. ಒಕ್ಕೂಟ ; ಸಂಸ್ಥೆ ; ಸಮಿ

೩. ಸಮಾಜ. ೪. = ಸಂಗ. ~ಆರಾಮ = ಬೌದ್ಧಸಂನ್ಯಾಸಿಗಳ ವಾಸಸ್ಥಳ; ವಿಹಾರ.

ಸಂಘಟ (ನಾ). ೧. ಸೇರುವುದು ; ಕೂಡುವುದು. ೨. ತಾಗುವುದು ; ಮುಟ್ಟುವುದು. ೩. ಯುದ್ಧ ; ಕಾಳಗ. ೪. ಉಜ್ಜುವಿಕೆ; ಘರ್ಷಣೆ. ~ಇಸು = ೧. ಒದಗು ; ಸಂಭವಿಸು ; ಉಂಟಾಗು. ೨. ಕೂಡಿಸು ; ಸೇರಿಸು.

ಸಂಘಟನೆ (ನಾ). ೧. ಹೊಂದಿಸುವಿಕೆ; ಜೋಡಿಸುವಿಕೆ. ೨. ಹೊಂದಿಕೆ ; ಜೋಡಣೆ; ಸಂಯೋಗ. ೩. ತಾಗುವಿಕೆ; ಘರ್ಷಣೆ.

ಸಂಘಟ್ಟನ = ಸಂಘಟ.

ಸಂಘರ್ಷ ೧. = ಸಂಘರ್ಷಣೆ. ೨. ಮೇಲಾಟ; ಸ್ಪರ್ಧೆ.

ಸಂಘರ್ಷಣೆ (ನಾ). ತಿಕ್ಕಾಟ ; ಘರ್ಷಣೆ.

ಸಂಘಾಟ (ನಾ). (ಬೌದ್ಧಭಿಕ್ಷುಗಳು ಉಡುವ) ಬಟ್ಟೆ, –ವಸ್ತ್ರ.

ಸಂಘಾತ (ನಾ). ೧. ಹೊಂದಿಕೆ ; ಸಾಮರಸ್ಯ. ೨. ಸಮೂಹ ; ಗುಂಪು. ೩. ಲೋಳೆ ; ಕಫ. ೪. ಹೊಡೆತ ; ಪೆಟ್ಟು. ೫. ಅಧೋಲೋಕಗಳಲ್ಲಿ ಒಂದು.

ಸಂಚ (ನಾ). ೧. ಉಪಾಯ ; ತಂತ್ರ ; ಸಂಚು. ೨. ಒಟ್ಟುಗೂಡಿಸಿದುದು ; ಸಂಗ್ರಹ. ೩. ಸಂಚಿ ; ಚೀಲ. ೪.ಗುಟ್ಟು; ರಹಸ್ಯ. ~ಇಸು = ೧. ಸಂಗ್ರಹವಾಗು ; ಕೂಡಿಕೊಳ್ಳು. ೨.ಸೇರಿಸು; ಒಟ್ಟುಗೂಡಿಸು.

ಸಂಚಕ = ಸಂಚಗಾರ.

ಸಂಚಕರ = ಸಂಚಗಾರ.

ಸಂಚಕಾರ ೧.=ಸಂಚಗಾರ. ೨.ಹಾನಿ; ಕೇಡು.

ಸಂಚಗಾರ (ನಾ). ಮುಂಗಡ ಹಣ ; ಅಗಾವು.

ಸಂಚಯ (ನಾ). ೧. ಸಂಗ್ರಹಿಸುವುದು ; ಒಟ್ಟುಗೂಡಿಸುವುದು. ೨. ಸಮೂಹ ; ರಾಶಿ ; ಒಟ್ಟಲು. ~ಇಸು = ಕೂಡಿಸು ; ಸಂಗ್ರಹಿಸು.

ಸಂಚಯನ (ನಾ). ೧. ಒಟ್ಟುಗೂಡಿಸುವುದು ; ಕಲೆಹಾಕುವುದು. ೨. ಶವಸಂಸ್ಕಾರವಾದ ನಂತರ ಎಲುಬು ಮತ್ತು ಬೂದಿಯನ್ನು ಸಂಗ್ರಹಿಸಿ ಪವಿತ್ರ ಜಲದಲ್ಲಿ ವಿಸರ್ಜಿಸುವುದು.

ಸಂಚರ (ನಾ). ತಿರುಗಾಟ ; ಸಂಚಾರ. ~ಇಸು = ಸಂಚಾರಿಸು.

ಸಂಚರಣ ೧. = ಸಂಚರ. ೨. ಸಂಪ್ರದಾಯ ; ರೂಢಿ. ~(೦)ಪೆ(ಬೆ)ಡ್(ರ್) = ಅನುಷ್ಠಾನಕ್ಕೆ ತರು ; ಕಾರ್ಯಗತಮಾಡು.

ಸಂಚಲ(ಳ) (ನಾ). ೧. ಅಸ್ಥಿರತೆ ; ಚಂಚಲತೆ. (ಗು). ೨. ತೂಗಾಡುವ ; ಅತ್ತಿಂದಿತ್ತ ಓಲಾಡುವ. ~ಇಸು = ೧. ಅತ್ತಿಂದಿತ್ತ ಚಲಿಸು, –ತಿರುಗಾಡು. ೨. ನಡುಗು ; ಕಂಪಿಸು.

ಸಂಚಲ(ಳ)ತೆ (ನಾ). ೧. ಅಲುಗಾಟ ; ಚಲನೆ. ೨. ನಡುಕ ; ಕಂಪನ.

ಸಂಚಲನ = ಸಂಚಲತೆ.

ಸಂಚಲೆ(ಳೆ) (ನಾ). ಚಪಲಸ್ವಭಾವದ ಹೆಂಗಸು; ಚಂಚಲೆ.

ಸಂಚಾರ (ನಾ). ೧. ತಿರುಗಾಟ ; ಅಡ್ಡಾಡುವುದು. ೨. ಪ್ರಯಾಣ ; ಪ್ರವಾಸ. ~ಇಸು = ೧.ತಿರುಗು; ಅಡ್ಡಾಡು. ೨.ಲೇಪಿಸು; ಬಳಿ.

ಸಂಚಾರಕ (ನಾ). ೧. ಮುಂದಾಳು ; ನಾಯಕ. ೨. ದೂತ ; ಚಾರ.

ಸಂಚಾರಿ (ನಾ). ೧. ತಿರುಗುವವನು ; ಸಂಚರಿಸುವವನು. ೨. ದೂತಿ; ದಾಸಿ. ೩.ಕುಂಟಣಿ. (ಗು). ೪. ಚಲಿಸುವ ; ತಿರುಗಾಡುವ.

ಸಂಚಾಲಕ (ನಾ). ನಡೆಸಿಕೊಂಡು ಹೋಗುವವನು ; ವ್ಯವಸ್ಥಾಪಕ.

ಸಂಚಿ (ನಾ). ೧. ಚೀಲ. ೨. ಎಲೆ, ಅಡಕೆಯ ಚೀಲ.

ಸಂಚಿಕೆ (ನಾ). ೧. ಬೇರೆಬೇರೆಯಾಗಿ ಪ್ರಕಟಗೊಳ್ಳುವ ವಿಸ್ತಾರವಾದ ಗ್ರಂಥದ

ಒಂದು ಭಾಗ. ೨. ನಿಯತಕಾಲಿಕಗಳ ಒಂದು ಪ್ರಕಟನೆ.

ಸಂಚಿತ (ಗು). ೧. ಕೂಡಿಟ್ಟ; ಶೇಖರಿಸಿದ. ೨. ಹೇರಳವಾದ; ಅಧಿಕವಾದ. ~ಕರ್ಮ = ಜನ್ಮಾಂತರಗಳಿಂದ ಕೂಡಿಕೊಂಡು ಬಂದ ಕರ್ಮ.

ಸಂಚು (ಕ್ರಿ). ೧. ಯುಕ್ತಿಹೂಡು; ಉಪಾಯ ಮಾಡು. ೨. ಅವಕಾಶಕ್ಕಾಗಿ ಕಾಯು; ಹೊಂಚುಹಾಕು. (ನಾ). ೩. ಉಪಾಯ; ಯುಕ್ತಿ. ೪. ಹಂಚಿಕೆ; ಪಿತೂರಿ. ೫. ಜಾಣತನ; ನೈಪುಣ್ಯ. ೬. ಜಾಡು; ಕುರುಹು. ~ಗಾಜ(ರ) = ೧. ಉಪಾಯಗಾರ; ಯುಕ್ತಿವಂತ. ೨. ಗೂಢಚಾರ; ಬೇಹುಗಾರ.

ಸಂಚೂರ್ಣ (ನಾ). ಪುಡಿ; ಹುಡಿ.

ಸಂಚೂಳಿಕ (ನಾ). ತುದಿ; ಶಿಖರ.

ಸಂಛನ್ನ (ಗು). ೧. ಸಂಪೂರ್ಣವಾಗಿ ಮುಚ್ಚಲ್ಪಟ್ಟ, -ಮರೆಮಾಡಲ್ಪಟ್ಟ. ೨. ಆವರಿಸಲ್ಪಟ್ಟ; ಬಳಸಲ್ಪಟ್ಟ.

ಸಂಜನನ (ನಾ). ಹುಟ್ಟು; ಜನನ.

ಸಂಜನಿಯಿಸು (ಕ್ರಿ). ೧. ಹುಟ್ಟು; ಜನಿಸು. ೨. ಕಾಣು; ತೋರು; ಪ್ರಕಟಗೊಳ್ಳು.

ಸಂಜನಿಸು = ಸಂಜನಿಯಿಸು.

ಸಂಜಾತ (ನಾ). ೧. ಸಮೂಹ; ರಾಶಿ; ಒಟ್ಟಿಲು. (ಗು). ೨. ಹುಟ್ಟಿದ; ಜನಿಸಿದ. ೩. ಮೂಡಿದ; ಕಾಣಿಸಿಕೊಂಡ.

ಸಂಜಾಪು (ನಾ). ನೆತ್ತಿಯ ಮೇಲೆ ಮಾತ್ರ ಕೂದಲನ್ನುಳಿಸಿ ಮಾಡುವ ಕ್ಷೌರ, -ಮುಂಡನ.

ಸಂಜಾರ (ನಾ). ಆನೆಗಳನ್ನು ಕಟ್ಟುವ ಸ್ಥಳ; ಕರೋಟಿ.

ಸಂಜೀವ (ನಾ). ೧. ಮರಳಿ ಜೀವವನ್ನು ತುಂಬಿಸುವವನು. (ಗು). ೨. ಮರಳಿ ಜೀವವನ್ನು ತುಂಬಿಸುವ.

ಸಂಜೀವನ (ನಾ). ೧. ಪುನಃ ಪ್ರಾಣವನ್ನು ಕೊಡಬಲ್ಲ ವಸ್ತು. (ಗು). ೨. ಮರಳಿ ಜೀವವನ್ನು ತುಂಬಿಸುವ.

ಸಂಜೀವಿನಿ (ನಾ). ಜೀವವನ್ನು ಕೊಡಬಲ್ಲುದೆಂದು ನಂಬಲಾಗಿರುವ ಒಂದು ಮೂಲಿಕೆ.

ಸಂಜೆ (ನಾ). ಸಾಯಂಕಾಲ; ಬೈಗು; ~ಕ(ಗ)ಣ್ಣು = ಸಂಜೆಯಲ್ಲಿ ಕಣ್ಣುಕಾಣದಿರುವ ಒಂದು ಬಗೆಯ ಕಣ್ಣಿನ ಬೇನೆ; ಇರುಳುಗಣ್ಣು. ~ಕ(ಗ)ತ್ತಲೆ = ಸಾಯಂಕಾಲದ ಮಬ್ಬುಗತ್ತಲೆ. ~ಕೆ(ಗೆ)ಂಪು = ಸಾಯಂಕಾಲದ ಕೆಂಬಣ್ಣ. ~ಪ(ವ)ಱೆ(ರೆ) = ಸಾಯಂಕಾಲದಲ್ಲಿ ಬಾರಿಸುವ ನಗಾರಿ, -ಹರೆ. ~ಬಾ(ವಾ)ರಿಸು = ಸಾಯಂಕಾಲದಲ್ಲಿ ಅರ್ಘ್ಯವನ್ನು ಕೊಡು. ~ಮಲ್ಲಿಗೆ = ಸಾಯಂಕಾಲದಲ್ಲಿ ಮಾತ್ರ ಅರಳುವ ಒಂದು ಜಾತಿಯ ಹೂವು.

ಸಂಜೋಗ (ನಾ). ೧. ಕವಚ; ಚಿಲಕುತ್ತು. ೨. ಸರಕು; ಸಾಮಗ್ರಿ. ೩. ಸಿದ್ಧತೆ; ತಯಾರು. ~ಇಸು = ಸಿದ್ಧಮಾಡು; ತಯಾರಿಸು.

ಸಂಜೋನಿಗೆ (ನಾ). ಒಂದು ಬಗೆಯ ತಿನಿಸು.

ಸಂಜ್ಞಾನ (ನಾ). ೧. ತಿಳಿವಳಿಕೆ; ಸಂವೇದನೆ. ೨. ಆಗಮಗಳಲ್ಲಿ ಒಂದು.

ಸಂಜ್ಞಿ (ನಾ). ಆಹಾರ, ಮೈಥುನ, ಭಯ, ಪರಿಗ್ರಹ ಎಂಬ ನಾಲ್ಕು ಬಗೆಯ ಸಂಜ್ಞೆಗಳಿಂದ ಕೂಡಿದ ಜೀವಿ.

ಸಂಜ್ಞೆ (ನಾ). ೧. ಪರಿವೆ; ಎಚ್ಚರ. ೨. ತಿಳಿವಳಿಕೆ; ಜ್ಞಾನ; ಪ್ರಜ್ಞೆ. ೩. ಸೂಚನೆ; ಸುಳಿವು. ೪. ಸಂಕೇತ; ಗುರುತು; ಅಕ್ಷರ. ೫. ಹೆಸರು; ನಾಮಧೇಯ. ೬. ಚತುರಂಗಬಲ.

ಸಂಜ್ವರ (ನಾ). ೧. ಕಾವು; ಬಿಸುಪು. ೨. ಜ್ವರದ ತಾಪ.

ಸಂಡ (ನಾ). ೧. ಸಮೂಹ; ಗುಂಪು. ೨. ನಪುಂಸಕ; ಷಂಡ.

ಸಂಡಗೆ (ನಾ). ಅಕ್ಕಿ, ಅರಳು, ಅವಲಕ್ಕಿ ಮುಂತಾದುವುಗಳಿಂದ ತಯಾರಿಸಿ ಕರಿಯುವ ಒಂದು ಬಗೆಯ ನಂಚಿಕೊಳ್ಳುವ ವಸ್ತು.

ಸಂಡಾಸ (ನಾ). ಕಕ್ಕಸು ; ಪಾಯಖಾನೆ.

ಸಂಡಿಗೆ = ಸಂಡಗೆ.

ಸಂಡೀನ (ನಾ). ಪಕ್ಷಿಗಳ ಹಾರಾಟದಲ್ಲಿ ಒಂದು ಬಗೆ ; ಕೆಳಕ್ಕೆ ಇಳಿಯುವುದು.

ಸಂತ(ನಾ).೧. ಸಾಧು.೨. ಶಾಂತಿ; ಸಮಾಧಾನ. (ಗು). ೩. ಶಾಂತವಾದ. ೪. ಮೃದುವಾದ ; ಮೆದುವಾದ. ೫. ಪೂಜ್ಯನಾದ; ಗೌರವಾರ್ಹನಾದ. ~ಇ(ವಿ)ಡು = ೧. ಸಮಾಧಾನಗೊಳಿಸು ; ಉಪಶಮಿಸು. ೨. ಅಡಗಿಸು ; ಒಳಕೊಳ್ಳು. ~ಇ(ಯಿ)ಸು = ಸಂತೈಸು.

ಸಂತಂ (ಅ). ೧. ಹಾಯಾಗಿ ; ಶಾಂತವಾಗಿ. ೨. = ಸಂತತ.

ಸಂತತ (ಅ). ೧. ಎಡೆಬಿಡದೆ ; ಯಾವಾಗಲೂ. ೨. ಶಾಶ್ವತವಾಗಿ ; ಚಿರಸ್ಥಾಯಿಯಾಗಿ.

ಸಂತತಿ (ನಾ). ೧. ವಂಶ ; ಪೀಳಿಗೆ. ೨. ಮಗ ಅಥವಾ ಮಗಳು ; ಸಂತಾನ ; ಅಪತ್ಯ. ೩. ಸಮೂಹ ; ಗುಂಪು.

ಸಂತಪ (ನಾ). ಉಮ್ಮಳ ; ಸಂತಾಪ. ~ಇಸು = ದುಃಖಿಸು ; ಕಳವಳಪಡು.

ಸಂತಪ್ತ (ಗು). ೧.ಅತಿಯಾಗಿ ಕಾದ; ಅತ್ಯಂತ ಬಿಸಿಯಾದ. ೨. ಬಹಳವಾಗಿ ನೊಂದ ; ಬೇಗುದಿಗೊಂಡ. ೩. ಬೇಸತ್ತ ; ಬಳಲಿದ.

ಸಂತಮಸ (ನಾ). ಅತ್ಯಧಿಕವಾದ ಕತ್ತಲೆ ; ಗಾಢಾಂಧಕಾರ.

ಸಂತರಿಸು (ಕ್ರಿ). ೧. ಸಮಾಧಾನ ಪಡಿಸು. ೨. ಕೂಡಿಸು ; ಕಲೆಹಾಕು.

ಸಂತರ್ಪಣ (ನಾ). ತೃಪ್ತಿಪಡಿಸುವುದು.

ಸಂತರ್ಪಣೆ ೧. = ಸಂತರ್ಪಣ. ೨. ಬಹುಜನಕ್ಕೆ ನೀಡುವ ಸಂತೃಪ್ತಿಕರವಾದ ಭೋಜನ, –ಅನ್ನದಾನ.

ಸಂತವಿಸು = ಸಂತೈಸು.

ಸಂತಸ = ಸಂತೋಷ. ~ಇಕೆ = ಹಿಗ್ಗು ; ಸಂತೋಷ. ~ಇಗ=ಸಂತೋಷವನ್ನುಂಟು ಮಾಡುವವನು. ~(ಂ)ಕೆ(ಗಿ)ಡು = ಸಂತೋಷವನ್ನು ಕಳೆದುಕೊಳ್ಳು. ~(ಂ)ಕೊ(ಗೊ)ಳ್=ಹಿಗ್ಗು ; ಆನಂದಿಸು. ~ಕ(ಗ)ಂಬನಿ = ಸಂತೋಷದ ಆಧಿಕ್ಯದಿಂದ ಬರುವ ಕಣ್ಣೀರು ; ಆನಂದ ಬಾಷ್ಪ. ~ಪ(ವ)ಱ(ರೆ) = ಸಂತೋಷದ ಸಮಯದಲ್ಲಿ ಬಾರಿಸುವ ಹರೆ, –ನಗಾರಿ.

ಸಂತಾನ ೧. = ಸಂತತಿ. ೨. ಪರಂಪರೆ ; ಸಾಲು.

ಸಂತಾನಕ (ನಾ). ೧. ಸಮೂಹ ; ಗುಂಪು. ೨. ಸ್ವರ್ಗದಲ್ಲಿಯ ಒಂದು ಜಾತಿಯ ಮರ ಮತ್ತು ಅದರ ಹೂವು.

ಸಂತಾಪ (ನಾ). ೧. ಅತಿಯಾದ ತಾಪ, –ಉಷ್ಣ. ೨. ಬೇಗುದಿ ; ದುಃಖ ; ಅಳಲು. ೩. ಪಶ್ಚಾತ್ತಾಪ. ~ಇಸು = ೧. ದುಃಖಪಡು ; ವೇದನೆಯನ್ನನುಭವಿಸು. ೨. ನೋವನ್ನುಂಟುಮಾಡು ; ಚಿಂತೆಗೊಳಗುಮಾಡು.

ಸಂತುಷ್ಟ (ನಾ). ೧. ಸಂತೋಷಗೊಂಡವನು ; ತೃಪ್ತಿಹೊಂದಿದವನು. (ಗು). ೨. ಸಂತೋಷಗೊಂಡ ; ತೃಪ್ತಿಗೊಂಡ.

ಸಂತುಷ್ಟಿ (ನಾ). ಆನಂದ ; ತಣಿವು.

ಸಂತುಷ್ಟೆ (ನಾ). ತೃಪ್ತಿಗೊಂಡವಳು.

ಸಂತೃಪ್ತಿ = ಸಂತುಷ್ಟಿ.

ಸಂತೆ (ನಾ). ೧. ಗುಂಪು ; ಸಂದಣಿ. ೨. ನಿಯಮಿತ ಕಾಲಾವಧಿಗೆ ಕೊಡುಕೊಳ್ಳುವುದಕ್ಕಾಗಿ ಸೇರುವ ಜನರ ಗುಂಪು,–ಸಮೂಹ. ೩. ಸಂತೆ ಸೇರುವ ಸ್ಥಳ ; ಮಾರುಕಟ್ಟೆ. ೪. ದೊಂಬಿ ; ಗದ್ದಲ. ೫. ಬಾಯಿಪಾಠ ಮಾಡುವುದು ; ಕಂಠಪಾಠ ; ಉರು. ೬. ಬಾಯಿಪಾಠ ಮಾಡಬೇಕಾದ ಭಾಗ.

~ಮಾತು = ಗಾಳಿಸುದ್ದಿ. ~ಮಾಳ = ಸಂತೆ ನಡೆಯುವ ಸ್ಥಳ. ~ಸೇರು = ಗುಂಪುಗೂಡು; ಸಂಡಣಿಸು. ~ಹೇಳು = ಉರುಹೊಡೆ; ಕಂಠಪಾಠ ಮಾಡು.

ಸಂತೈಕೆ (ನಾ). ಸಮಾಧಾನ.

ಸಂತೈಸು (ಕ್ರಿ). ಸಮಾಧಾನಗೊಳಿಸು; ಸಾಂತ್ವನಗೊಳಿಸು.

ಸಂತೋಷ (ನಾ). ೧. ಹಿಗ್ಗು; ಆನಂದ. ೨. ತಣಿವು; ತೃಪ್ತಿ. ~ಇಸು = ೧. ಹಿಗ್ಗು; ಆನಂದಿಸು. ೨. ತಣಿ; ತೃಪ್ತಿಹೊಂದು.

ಸಂತೋಸ = ಸಂತೋಷ.

ಸಂತ್ರಾಣಿ (ನಾ). ಕಾಪಾಡುವ ವ್ಯಕ್ತಿ.

ಸಂದಂಶ (ನಾ). ಇಕ್ಕುಳ; ತಂಡಸ.

ಸಂದಣಿ (ನಾ). ಗುಂಪು; ಸಮೂಹ. ~ಇಸು = ೧. ಗುಂಪುಗೂಡು; ಒಟ್ಟಾಗು. ೨. ಒಂದುಗೂಡಿಸು; ಕಲೆಹಾಕು.

ಸಂದಯ = ಸಂದೇಹ.

ಸಂದರುಶನ = ಸಂದರ್ಶನ.

ಸಂದರ್ಭ (ನಾ). ೧. ಹೆಣೆಯುವಿಕೆ; ನೇಯುವಿಕೆ. ೨. ಕೂಡಿಸುವಿಕೆ; ಮಿಶ್ರಮಾಡುವಿಕೆ. ೩. ರಚನೆ; ನಿರ್ಮಾಣ. ೪. ಸಮಯ; ಕಾಲ. ೫. ಅವಕಾಶ; ಆಸ್ಪದ; ಎಡೆ. ೬. ವಿಷಯ; ಪ್ರಕರಣ.

ಸಂದರ್ಶನ (ನಾ). ೧. ನೋಡುವುದು. ೨. ನೋಟ; ಪ್ರದರ್ಶನ; ಕಾಣ್ಕೆ. ೩. ಪರಸ್ಪರ ಸಂಧಿಸುವುದು; ಭೇಟಿ.

ಸಂದರ್ಶಿಸು (ಕ್ರಿ). ೧. ನೋಡು; ಕಾಣು. ೨. ಸಂಧಿಸು; ಭೇಟಿಯಾಗು.

ಸಂದಳಿ (ಕ್ರಿ). ೧. ವ್ಯತ್ಯಾಸವಿಲ್ಲದಾಗು; ಭೇದವಿಲ್ಲದಾಗು. ೨. ಒಟ್ಟಾಗು. (ನಾ). ೩. = ಸಂದಣಿ.

ಸಂದಾಯ (ನಾ). ಸಲ್ಲಿಸುವುದು; ಸಲುವಳಿ; ಪಾವತಿ. ~ಕ = ಪಾವತಿಮಾಡುವವನು; ಸಲ್ಲಿಸುವವನು.

ಸಂದಿ = ಸಂಧಿ.

ಸಂದಿಗ್ಧ (ಗು). ೧. ಅಸ್ಪಷ್ಟವಾದ; ಅನುಮಾನಾಸ್ಪದವಾದ. ೨. ಜಟಿಲವಾದ; ಕಷ್ಟಕರವಾದ. ೩. ಅಪಾಯಕರವಾದ.

ಸಂದಿಗ್ಧತೆ (ನಾ). ಜಟಿಲವಾದ ಪರಿಸ್ಥಿತಿ; ಇಕ್ಕಟ್ಟು.

ಸಂದಿಸು = ಸಂಧಿಸು.

ಸಂದು (ನಾ). ೧. (ವಸ್ತುಗಳು) ಕೂಡುವ ಸ್ಥಳ; ಸಂಧಿಸ್ಥಾನ. ೨. ಮೂಲೆ; ಕೋನ. ೩. ಕೀಲು; ಗೆಣ್ಣು. ೪. ಬಿರುಕು; ಸೀಳು. ೫. ಕಿರಿದಾದ ಓಣಿ; ಗಲ್ಲಿ. ೬. ಅವಕಾಶ; ಸಂದರ್ಭ. ೭. ವ್ಯತ್ಯಾಸ; ಭೇದ. ೮. ಶೀತದಿಂದ ಮಕ್ಕಳಿಗೆ ಬರುವ ಒಂದು ಖಾಯಿಲೆ. ~ಕ(ಗ)ಟ್ಟು = ೧. ಸುಸಮಯ; ಸರಿಯಾದ ಅವಕಾಶ. ೨. ಆಯಕಟ್ಟು; ಮರ್ಮಸ್ಥಾನ. ೩. ಎರಡು ರಸ್ತೆಗಳು ಸೇರುವ ಸ್ಥಳ. ~ಹಾಕು = ರೋಗನಿವಾರಣೆಗಾಗಿ ಮಕ್ಕಳಿಗೆ ಚಿಟಿಕೆ ಹಾಕು.

ಸಂದುಕ (ನಾ). ದೊಡ್ಡ ಪೆಟ್ಟಿಗೆ; ಪೆಠಾರಿ.

ಸಂದೂಕ = ಸಂದುಕ.

ಸಂದೆ (ನಾ). ಸಂಜೆ; ಸಾಯಂಕಾಲ.

ಸಂದೇಗ = ಸಂದೇಹ.

ಸಂದೆಯ = ಸಂದೇಹ.

ಸಂದೆಹ = ಸಂದೇಹ.

ಸಂದೇಶ (ನಾ). ೧. ಸುದ್ದಿ; ಸಮಾಚಾರ. ೨. ಅಪ್ಪಣೆ; ನಿರೂಪ. ೩. ಒಂದು ಬಗೆಯ ಸಿಹಿತಿಂಡಿ. ~ಇಸು = ಸಮಾಚಾರವನ್ನು ಹೇಳು.

ಸಂದೇಹ (ನಾ). ಅನುಮಾನ; ಸಂಶಯ; ಗುಮಾನಿ. ~ಇಸು = ಅನುಮಾನಿಸು; ಸಂಶಯಪಡು. ~ಗ್ರಸ್ತ = ಸಂದೇಹಿ.

ಸಂದೇಹಿ (ನಾ). ಸಂಶಯ ಪಡುವವನು.

ಸಂದೋಹ (ನಾ). ಗುಂಪು; ಸಮೂಹ.

ಸಂದೋಹಕ = ಸಂದೋಹ.

ಸಂಧಾನ (ನಾ). ೧. ಸೇರಿಸುವುದು ; ಕೂಡಿಸುವುದು ; ಹೊಂದಿಸುವುದು. ೨. ರಾಜಿ ; ಒಪ್ಪಂದ ; ಒಡಂಬಡಿಕೆ. ೩. ಹಗ್ಗ ; ಮಿಣಿ. ೪. ಬಾಣವನ್ನು ಹೂಡುವುದು. ~ಇಸು = ೧. ಬಾಣವನ್ನು ತೊಡು, -ಹೂಡು. ೨. ಕೂಡಿಸು ; ಉಂಟುಮಾಡು.

ಸಂಧಿ (ನಾ). ೧. ಸಂಯೋಗ ; ಸೇರಿಕೆ. ೨. ರಾಜಿ ; ಕೌಲು. ೩. ಸಂದು ; ಕೀಲು. ೪. ಬಿರುಕು ; ಸೀಳು. ೫. ವ್ಯಾಕರಣದಲ್ಲಿ ಒಂದು ಪದದ ಅಂತ್ಯಾಕ್ಷರ ಮತ್ತೊಂದು ಪದದ ಪ್ರಾರಂಭದ ಅಕ್ಷರದೊಂದಿಗೆ ಸೇರುವ ಕ್ರಿಯೆ. ೬. ಸುಸಮಯ ; ಸರಿಯಾದ ಕಾಲ. ೭. ಎಡೆ ; ಆಸ್ಪದ. ೮. ಕಾವ್ಯದ ಒಂದು ಭಾಗ ; ಪರಿಚ್ಛೇದ. ೯. ವಿಶ್ರಾಂತಿ ; ಬಿಡುವು. ~ಕಾರ್ಯ = ಎರಡು ಪದಗಳು ಅಥವಾ ಪದಪ್ರತ್ಯಯಗಳು ಕೂಡುವಾಗ ಆಗುವ ಕ್ರಿಯೆ. ~ಕಾಲ = ಎರಡು ಯುಗಗಳ ನಡುವಿನ ಕಾಲ. ~ವಾತ = ದೇಹದ ಕೀಲುಗಳಿಗೆ ಬರುವ ಒಂದು ಬಗೆಯ ರೋಗ.

ಸಂಧಿವಿಗ್ರಹಿ (ನಾ). ವಿದೇಶಾಂಗ ಸಚಿವ.

ಸಂಧಿಸು (ಕ್ರಿ). ೧. ಕೂಡಿಸು ; ಸೇರಿಸು. ೨. ಸೇರು ; ಕೂಡು. ೩. ಭೇಟಿಯಾಗು ; ಎದುರಾಗು. ೪. ಸಂದರ್ಶಿಸು. ೫. ಬಾಣವನ್ನು ಹೂಡು ; ಶರಸಂಧಾನ ಮಾಡು. ೬. ಎದುರಿಸು ; ತಾಗು. ೭. ಉಂಟಾಗು ; ಒದಗು.

ಸಂಧ್ಯಾಕಾಲ (ನಾ). ಸಂಜೆ ; ಬೈಗು.

ಸಂಧ್ಯಾನ (ನಾ). ಪ್ರತಿದಿನವೂ ಕ್ಲುಪ್ತ ಕಾಲದಲ್ಲಿ ಮಾಡುವ ಜಪ ಮುಂತಾದ ನಿತ್ಯಕರ್ಮ ; ಆಹ್ನಿಕ.

ಸಂಧ್ಯಾರಾಗ (ನಾ). ೧. ಸಂಜೆಗೆಂಪು ; ಸಾಯಂಕಾಲದಲ್ಲಿ ಕಂಡುಬರುವ ಕೆಂಬಣ್ಣ. ೨. ಒಂದು ಬಗೆಯ ಸೀರೆ.

ಸಂಧ್ಯಾವಂದನೆ = ಸಂಧ್ಯಾನ.

ಸಂಧ್ಯೆ (ನಾ). ೧. ಸಂಜೆ ; ಬೈಗು. ೨. ದಿನದ ಮೂರು ಸಂಧಿಕಾಲಗಳು ; ಬೆಳಗು, ಮಧ್ಯಾಹ್ನ ಮತ್ತು ಸಂಜೆ. ೩. ಆ ಕಾಲಗಳಲ್ಲಿ ಮಾಡುವ ಸಂಧ್ಯಾವಂದನೆ. ೪. ಎರಡು ಯುಗಗಳ ನಡುವಿನ ಕಾಲ ; ಸಂಧಿಕಾಲ.

ಸ(ಂ)ನ್ಯಸನ (ನಾ). ವೈರಾಗ್ಯ ; ವಿರಕ್ತಿ. ~ವಿಧಿ=ಸಂನ್ಯಾಸಿಯಾಗುವವನು ಆಚರಿಸಬೇಕಾದ ನಿಯಮ.

ಸ(ಂ)ನ್ಯಾಸ (ನಾ). ೧. ತ್ಯಜಿಸುವಿಕೆ ; ತೊರೆಯುವಿಕೆ. ೨. = ಸಂನ್ಯಸನ. ~ಆಶ್ರಮ = ಬ್ರಹ್ಮಚರ್ಯೆ, ಗಾರ್ಹಸ್ಥ್ಯ, ವಾನಪ್ರಸ್ಥ ಮತ್ತು ಸಂನ್ಯಾಸಗಳೆಂಬ ನಾಲ್ಕು ಆಶ್ರಮಗಳಲ್ಲಿ ಕೊನೆಯದು.

ಸ(ಂ)ನ್ಯಾಸನ = ಸಂನ್ಯಸನ.

ಸ(ಂ)ನ್ಯಾಸಿ (ನಾ). ೧. ವಿರಕ್ತ ; ಯೋಗಿ. ೨. ಸಂನ್ಯಾಸಾಶ್ರಮವನ್ನು ಸ್ವೀಕರಿಸಿದವನು.

ಸಂಪಗೆ (ನಾ). ಒಂದು ಜಾತಿಯ ಮರ ಮತ್ತು ಅದರ ಹೂವು ; ಚಂಪಕ.

ಸಂಪಣ (ನಾ). ದೋಸೆ, ಕಡುಬು ಮೊದಲಾದುವು ಮೆದುವಾಗಿರಲು ಅಕ್ಕಿಯೊಡನೆ ಸೇರಿಸುವ ಉದ್ದು, ಮೆಂತ್ಯ ಮುಂತಾದುವು; ಹುದುಗು.

ಸಂಪತ್ತಿ = ಸಂಪದ.

ಸಂಪತ್ತು = ಸಂಪದ. ~ ಇಗ = ಧನಿಕ ; ಸಿರಿವಂತ.

ಸಂಪತ್ಪದ (ನಾ). ಸಿರಿವಂತಿಕೆ ; ಶ್ರೀಮಂತಿಕೆ.

ಸಂಪದ (ನಾ). ೧. ಐಶ್ವರ್ಯ ; ಸಿರಿ. ೨. ಏಳಿಗೆ ; ಉತ್ಕರ್ಷ.

ಸಂಪನ್ನ (ನಾ). ೧. ಶ್ರೀಮಂತ ; ಧನಿಕ. ೨. ಸಜ್ಜನ ; ಸತ್ಪುರುಷ. (ಗು). ೩. ಪರಿಪೂರ್ಣವಾದ ; ಪೂರ್ಣಗೊಂಡ. ೪. ಯುಕ್ತವಾದ ; ಅರ್ಹವಾದ.

ಸಂಪನ್ನತೆ (ನಾ). ೧. ಶ್ರೀಮಂತಿಕೆ. ೨. ಸಾಮರ್ಥ್ಯ; ಶಕ್ತಿ. ೩. ಸೌಜನ್ಯ; ಒಳ್ಳೆಯತನ.

ಸಂಪನ್ನೆ (ನಾ). ಸಂಭಾವಿತೆ; ಶ್ರೇಷ್ಠಳಾದವಳು.

ಸಂಪರ್ಕ (ನಾ). ೧. ಸಂಬಂಧ; ಸೇರಿಕೆ. ೨. ಸ್ಪರ್ಶ; ಸೋಂಕು. ~ಸಾಧನ = ಒಂದು ಕಡೆಯಿಂದ ಮತ್ತೊಂದು ಕಡೆಗೆ ಸಂಬಂಧವನ್ನು ಉಂಟುಮಾಡುವ ಉಪಾಯ.

ಸಂಪಳ = ಸಂಪಣ.

ಸಂಪಳಿಗೆ = ಸಂಪಣ.

ಸಂಪಳೆ = ಸಂಪಣ.

ಸಂಪಾತ (ನಾ). ಇಳಿಯುವುದು; ಅವರೋಹಣ.

ಸಂಪಾದಕ (ನಾ). ಪ್ರಕಟಿಸಬೇಕಾದ ಸುದ್ದಿ ಅಥವಾ ಗ್ರಂಥವನ್ನು ಸಂಗ್ರಹಿಸಿ ಪರಿಷ್ಕರಿಸುವವನು.

ಸಂಪಾದಕೀಯ (ನಾ). (ವೃತ್ತಪತ್ರಿಕೆಗಳಲ್ಲಿ) ಸಂಪಾದಕನ ಲೇಖನ; ಅಗ್ರಲೇಖನ.

ಸಂಪಾದನ = ಸಂಪಾದನೆ.

ಸಂಪಾದನೆ (ನಾ). ೧. ಗಳಿಕೆ; ಆದಾಯ. ೨. ಗ್ರಂಥಪಾಠ ಪರಿಷ್ಕರಣ.

ಸಂಪಾದಿಸು (ಕ್ರಿ). ೧. ಗಳಿಸು; ಆದಾಯ ಹೊಂದು. ೨. ಸಾಧಿಸು; ಪ್ರಯತ್ನಿಸು. ೩. ಪ್ರಕಟಿಸಬೇಕಾದ ಸುದ್ದಿ, ಗ್ರಂಥ ಮೊದಲಾದುವನ್ನು ಸಂಗ್ರಹಿಸಿ ಪರಿಷ್ಕರಿಸು.

ಸಂಪಾದ್ಯ (ನಾ). ಗಳಿಕೆ; ಸಂಪಾದನೆ.

ಸಂಪಿಗೆ = ಸಂಪಗೆ.

ಸಂಪು (ನಾ). ೧. ಸೊಂಪು; ಸೊಗಸು. ೨. ಮುಷ್ಕರ; ಚಳುವಳಿ.

ಸಂಪುಟ (ನಾ). ೧. ಭರಣಿ; ಕರಡಿಗೆ. ೨. ಹಸ್ತಪ್ರತಿಯ ಅಥವಾ ಮುದ್ರಿತ ಹಾಳೆಗಳನ್ನು ಸೇರಿಸಿ ಮಾಡಿದ ಗ್ರಂಥ. ೩. ಮಂತ್ರಿಮಂಡಲ.

ಸಂಪೂರ್ಣ (ಗು). ೧. ತುಂಬಿದ; ಪೂರ್ತಿಯಾದ. (ಅ) ೨. ಪೂರ್ತಿಯಾಗಿ.

ಸಂಪೂರ್ತಿ (ನಾ). ಪೂರ್ಣವಾಗಿರುವಿಕೆ; ಪೂರ್ತಿಯಾಗಿರುವಿಕೆ.

ಸಂಪ್ರತಿ (ನಾ). ೧. ಸದ್ಯದ ಪರಿಸ್ಥಿತಿ; ಪ್ರಕೃತ ಕಾಲ; ವರ್ತಮಾನ ಕಾಲ. ೨. ಸಂಧಾನ; ಒಪ್ಪಂದ. (ಅ). ೩. ತಕ್ಷಣ; ಕೂಡಲೆ. ೪. ಈಗ; ಸದ್ಯದಲ್ಲಿ.

ಸಂಪ್ರದಾನ (ನಾ). ೧. ಕೊಡುವುದು; ದಾನ ಮಾಡುವುದು. ೨. ಕಾಣಿಕೆ; ಉಡುಗೊರೆ.

ಸಂಪ್ರದಾಯ (ನಾ). ಪದ್ಧತಿ; ರೂಢಿ; ಪರಂಪರೆ. ~ಶರಣ = ಸಂಪ್ರದಾಯಸ್ಥ.

ಸಂಪ್ರದಾಯಸ್ಥ (ನಾ). ಹಿಂದಿನಿಂದ ಬಂದ ರೂಢಿಗಳಲ್ಲಿ ನಂಬಿಕೆಯುಳ್ಳವನು; ಸಂಪ್ರದಾಯದಂತೆ ನಡೆದುಕೊಳ್ಳುವವನು.

ಸಂಪ್ರಾಪ್ತಿ (ನಾ). ೧. ಸಾಧಿಸುವುದು; ಪಡೆಯುವುದು. ೨. ಗಳಿಕೆ; ಸಂಪಾದನೆ.

ಸಂಪ್ರೀತಿ (ನಾ). ಅತಿಶಯವಾದ ಪ್ರೀತಿ,– ಒಲವು.

ಸಂಪ್ರೋಕ್ಷಣ (ನಾ). ಶುದ್ಧಿಗಾಗಿ ಮಂತ್ರಜಲವನ್ನು ಚಿಮುಕಿಸುವುದು.

ಸಂಪ್ರೋಕ್ಷಣೆ = ಸಂಪ್ರೋಕ್ಷಣ.

ಸಂಪ್ರೋಕ್ಷಿಸು (ಕ್ರಿ). ಮಂತ್ರಜಲವನ್ನು ಚಿಮುಕಿಸು.

ಸಂಪ್ಲವ (ನಾ). ನಾಶ; ಪ್ರಳಯ. ~ಇಸು = ೧. ಮುಳುಗಿಸು; ನಾಶಮಾಡು. ೨. ಆವರಿಸು; ವ್ಯಾಪಿಸು.

ಸಂಬಂಧ (ನಾ). ೧. ಜೋಡಣೆ; ಸಂಯೋಗ. ೨. ಬಾಂಧವ್ಯ; ನೆಂಟು. ೩. ಹೊಂದಿಕೆ; ಹೊಂದಾಣಿಕೆ. ೪. ಅರ್ಹತೆ; ಯೋಗ್ಯತೆ. ~ಇಸು = ೧. ಸೇರಿಸು; ಕೂಡಿಸು. ೨. ಸೇರು; ಕೂಡು.

ಸಂಬಂಧಿ (ನಾ). ನೆಂಟ; ಬಂಧು.

ಸಂಬಂಧಿಕ = ಸಂಬಂಧಿ.

ಸಂಬರ (ನಾ). ೧. ನೀರು ; ಜಲ. ೨. ಒಂದು ಜಾತಿಯ ಜಿಂಕೆ. ೩. = ಸಂಬಾರ. ೪. ಒಬ್ಬ ರಾಕ್ಷಸನ ಹೆಸರು.

ಸಂಬರಿಸು (ಕ್ರಿ). ಕಳೆ ; ನಿವಾರಿಸು.

ಸಂಬಲ (ನಾ). ಬುತ್ತಿ ; ಊಟದ ಗಂಟು.

ಸಂಬಳ (ನಾ). ೧. ವೇತನ ; ಪಗಾರ. ೨. = ಸಂಬಲ.

ಸಂಬಳಿಗೆ (ನಾ). ೧. ಓಲೆಗರಿ ಮುಂತಾದುವು ಗಳಿಂದ ಮಾಡುವ ಸಂಪುಟ,– ಭರಣಿ. ೨. ಒಂದು ಬಗೆಯ ಪಾತ್ರೆ.

ಸಂಬಳಿಸು (ಕ್ರಿ). ೧. ಹೋಳು ಮಾಡು ; ತುಂಡರಿಸು. ೨. ಸಮಾಧಾನಪಡಿಸು. ೩. ಸಮಾಧಾನಗೊಳ್ಳು ; ಶಾಂತವಾಗು. ೪. ಜತನಗೊಳಿಸು ; ಜೋಪಾನ ಮಾಡು.

ಸಂಬಾರ (ನಾ). ಮಸಾಲೆ ವಸ್ತು ; ಉಪಸ್ಕರ. ~ಬೀಜ = ಧನಿಯ ; ಕೊತ್ತಂಬರಿ. ~ಸೊಪ್ಪು = ಕೊತ್ತುಂಬರಿ ಸೊಪ್ಪು.

ಸಂಬಾರಕಾಗೆ (ನಾ). ಒಂದು ಜಾತಿಯ ಪಕ್ಷಿ ; ಭಾರದ್ವಾಜ.

ಸಂಬಾಳ (ನಾ). ಒಂದು ವಾದ್ಯ ವಿಶೇಷ.

ಸಂಬಾಳಿ (ನಾ). ೧. ಸಮೂಹ ; ಗುಂಪು. ೨. = ಸಂಬಾಳ.

ಸಂಬಾಳಿಸು (ಕ್ರಿ). ೧. ನಿಭಾಯಿಸು ; ನಿರ್ವಹಿಸು. ೨. ಸಮಾಧಾನಮಾಡು. ೩. ಜತನಮಾಡು ; ಸಂರಕ್ಷಿಸು. ೪. ಹತೋಟಿಯಲ್ಲಿಡು ; ಅಂಕೆಯಲ್ಲಿರಿಸು.

ಸಂಬೋಧನ (ನಾ). ೧. ಕರೆಯುವಿಕೆ ; ಕೂಗುವಿಕೆ. ೨. ಇತರರನ್ನು ಉದ್ದೇಶಿಸಿ ಹೇಳುವುದು ; ಉಪದೇಶ. ~ ವಿಭಕ್ತಿ = ವ್ಯಾಕರಣದ ಎಂಟು ವಿಭಕ್ತಿಗಳಲ್ಲಿ ಒಂದು.

ಸಂಬೋಧೆ = ಸಂಬೋಧನ. ~ ಇಸು = ೧. ತಿಳಿಯಪಡಿಸು ; ಹೇಳು. ೨. ಹೆಸರು ಹಿಡಿದು ಕರೆ ; ಕೂಗು.

ಸಂಭವ (ನಾ). ೧. ಹುಟ್ಟು ; ಉಗಮ. ೨. ಇರುವಿಕೆ. ೩. ಕಾರಣ ; ಮೂಲ. ೪. ಸಂದರ್ಭ ; ಸಾಧ್ಯತೆ. ~ಇಸು = ೧. ಹುಟ್ಟು ; ಜನ್ಮತಾಳು. ೨. ಒದಗಿ ಬರು ; ಉಂಟಾಗು.

ಸಂಭಾರ ೧. = ಸಂಬಾರ. ೨. ಲವಾಜಮೆ ; ಸಾಮಗ್ರಿ.

ಸಂಭಾವನೆ (ನಾ). ೧. ಯೋಗ್ಯತೆ ; ಅರ್ಹತೆ. ೨. ಭಾವನೆ ; ಆಲೋಚನೆ ; ಕಲ್ಪನೆ. ೩. ಗೌರವ ; ಮನ್ನಣೆ ; ಸನ್ಮಾನ. ೪. ಕಾಣಿಕೆ ; ಗೌರವ ಧನ.

ಸಂಭಾವಿತ (ನಾ). ೧. ಯೋಗ್ಯನಾದವನು ; ಸಭ್ಯ. (ಗು). ೨. ಊಹಿಸಿದ ; ಕಲ್ಪಿಸಿದ. ೩. ಅರ್ಹವಾದ ; ಸೂಕ್ತವಾದ. ೪. ಗೌರವಾರ್ಹವಾದ.

ಸಂಭಾವಿಸು (ಕ್ರಿ). ೧. ಯೋಚನೆಮಾಡು ; ಆಲೋಚಿಸು. ೨. ಗೌರವಿಸು ; ಆದರಿಸು ; ಮರ್ಯಾದೆ ಮಾಡು. ೩. ಒದಗಿಬರು ; ಉಂಟಾಗು.

ಸಂಭಾವ್ಯ (ನಾ). ೧. ಯೋಗ್ಯತೆಯುಳ್ಳವನು. (ಗು). ೨. ಅರ್ಹವಾದ; ಯೋಗ್ಯವಾದ. ೩. ಉಂಟಾಗಬಹುದಾದ; ಒದಗಬಹುದಾದ.

ಸಂಭಾವ್ಯೆ (ನಾ). ಯೋಗ್ಯಳಾದ ಹೆಂಗಸು.

ಸಂಭಾಷಣ (ನಾ). ಮಾತುಕತೆ ; ಸಲ್ಲಾಪ.

ಸಂಭಾಷಣೆ = ಸಂಭಾಷಣ.

ಸಂಭಾಷೆ = ಸಂಭಾಷಣ ~ ಇಸು = ಮಾತನಾಡು ; ಸಂಭಾಷಣೆ ಮಾಡು.

ಸಂಭಾಳಿಸು (ಕ್ರಿ). ನಿಭಾಯಿಸು ; ನಿರ್ವಹಿಸು.

ಸಂಭೂತ (ಗು). ಸಂಭವಿಸಿದ ; ಹುಟ್ಟಿದ ; ಉಂಟಾದ.

ಸಂಭೃತ (ಗು). ೧. ಒಟ್ಟುಗೂಡಿಸಿದ ; ಕಲೆ ಹಾಕಿದ. ೨. ಸಜ್ಜುಗೊಳಿಸಿದ ; ಸಿದ್ಧಪಡಿಸಿದ. ೩. ತುಂಬಿದ ; ಪೂರ್ಣವಾದ. ೪. ಪಡೆದ ; ಗಳಿಸಿದ.

**ಸಂಭೋಗ** (ನಾ). ೧. ಅನುಭವಿಸುವುದು; ಅನುಭೋಗ. ೨. ಕೂಟ; ಸುರತ.

**ಸಂಭ್ರಮ** (ನಾ). ೧. ಸುತ್ತುವುದು; ಭ್ರಮಣ. ೨. ಸಡಗರ; ಉತ್ಸಾಹ. ೩. =ಸಂಭ್ರಾಂತಿ. ೪. ವೈಭವ; ಆಡಂಬರ. ~ಇಸು = ೧. ಉತ್ಸಾಹಗೊಳ್ಳು; ಸಡಗರಿಸು. ೨. ದಿಗ್ಭ್ರಮೆಗೊಳಗಾಗು; ಕಕ್ಕಾಬಿಕ್ಕಿಯಾಗು.

**ಸಂಭ್ರಾಂತಿ** (ನಾ). ದಿಗ್ಭ್ರಮೆ; ಕಕ್ಕಾಬಿಕ್ಕಿ.

**ಸಂಯತ** (ನಾ). ೧. ಇಂದ್ರಿಯಗಳನ್ನು ಹತೋಟಿಯಲ್ಲಿಟ್ಟುಕೊಂಡಿರುವವನು; ಜಿತೇಂದ್ರಿಯ. (ಗು). ೨. ಅಂಕೆಗೆ ಒಳಪಟ್ಟ; ಹತೋಟಿಯಲ್ಲಿರುವ.

**ಸಂಯಮ** (ನಾ). ೧. ಹತೋಟಿ; ಅಂಕೆ; ಹಿಡಿತ. ೨. ಇಂದ್ರಿಯನಿಗ್ರಹ.

**ಸಂಯಮನ** = ಸಂಯಮ.

**ಸಂಯಮಿ** (ನಾ). ಸಂಯಮವುಳ್ಳವನು.

**ಸಂಯುಕ್ತ** (ಗು). ಸೇರಿದ; ಕೂಡಿದ.

**ಸಂಯುಗ** = ಸಯ್ಯುಗ.

**ಸಂಯೋಗ** (ನಾ). ೧. ಸೇರುವಿಕೆ; ಬೆರೆಯುವಿಕೆ. ೨. ಸಂಬಂಧ; ಸಂಪರ್ಕ. ೩. ಸಂಭೋಗ; ಕೂಟ.

**ಸಂಯೋಜಕ** (ನಾ). ೧. ಜೊತೆಗೂಡಿಸುವವನು; ಹೊಂದಿಸುವವನು. ೨. ಕ್ರಮಪಡಿಸುವವನು.

**ಸಂಯೋಜನೆ** (ನಾ). ೧. ಮಿಶ್ರಮಾಡುವಿಕೆ; ಬೆರಸುವಿಕೆ. ೨. ಮಿಶ್ರಣ; ಬೆರಕೆ. ೩. ಕ್ರಮಪಡಿಸುವಿಕೆ.

**ಸಂಯೋಜಿತ** (ಗು). ೧. ಒಟ್ಟುಗೂಡಿದ; ಸೇರಿದ. ೨. ಕ್ರಮಗೊಂಡ.

**ಸಂಯೋಜಿಸು** (ಕ್ರಿ). ೧. ಒಟ್ಟುಗೂಡಿಸು; ಸೇರಿಸು. ೨. ಕ್ರಮಪಡಿಸು.

**ಸಂರಕ್ಷಕ** (ನಾ). ೧. ರಕ್ಷಿಸುವವನು; ಪೋಷಕ. (ಗು). ೨. ಸಲಹುವ; ಕಾಪಾಡುವ.

**ಸಂರಕ್ಷಣೆ** (ನಾ). ಕಾಪಾಡುವಿಕೆ; ಸಲಹುವಿಕೆ.

**ಸಂರಕ್ಷಿಸು** (ಕ್ರಿ). ಕಾಪಾಡು; ರಕ್ಷಿಸು; ಸಲಹು.

**ಸಂರಂಭ** (ನಾ). ಸಡಗರ; ಸಂಭ್ರಮ.

**ಸಂರಾವ** (ನಾ). ಗದ್ದಲ; ಗಲಾಟೆ.

**ಸಂಲಗ್ನ** (ಗು). ಗಟ್ಟಿಯಾಗಿ ಅಂಟಿಕೊಂಡ; ದೃಢವಾಗಿ ಸೇರಿಕೊಂಡ.

**ಸಂಲಬ್ಧ** (ಗು). ಹೊಂದಿದ; ಪಡೆದ.

**ಸಂವತ್ಸರ** (ನಾ). ಹನ್ನೆರಡು ತಿಂಗಳುಗಳ ಅವಧಿ; ವರ್ಷ.

**ಸಂವರ** (ನಾ). ಕರ್ಮಗಳನ್ನು ತಡೆಗಟ್ಟುವುದು; ಕರ್ಮನಿರೋಧ.

**ಸಂವರಣ** (ನಾ). ೧. ಮರೆಮಾಡುವುದು; ಮುಚ್ಚುವುದು. ೨. ರಹಸ್ಯ; ಗುಟ್ಟು. ೩. ಮಾರುವೇಷ.

**ಸಂವರಣಮಾಲಿಕೆ** (ನಾ). ಮದುವೆಯಲ್ಲಿ ವಧೂವರರು ಪರಸ್ಪರ ಹಾಕುವ ಹಾರ; ಸಂಬಂಧಮಾಲೆ.

**ಸಂವರಣೆ** (ನಾ). ೧. ಒಟ್ಟುಗೂಡಿಸುವುದು; ಕಲೆಹಾಕುವುದು. ೨. ಸನ್ನಾಹ; ಸಜ್ಜು; ಅಣಿ. ೩. ಪಾಲನೆ; ಸಲಹುವಿಕೆ.

**ಸಂವರಿಸು** (ಕ್ರಿ). ೧. ಒಟ್ಟುಗೂಡಿಸು; ಕಲೆಹಾಕು. ೨. ಸಜ್ಜುಗೊಳಿಸು; ಸಿದ್ಧಮಾಡು. ೩. ಕಾಪಾಡು; ಸಲಹು. ೪. = ಸಂಬರಿಸು.

**ಸಂವರ್ತ** (ನಾ). ೧. ಅಭಿಮುಖವಾಗಿ ಚಲಿಸುವುದು. ೨. = ಸಂವರ್ತನ. ೩. ಸಂವತ್ಸರ; ವರ್ಷ.

**ಸಂವರ್ತಕ** (ನಾ). ಪ್ರಳಯಕಾಲದ ಬೆಂಕಿ; ಪ್ರಳಯಾಗ್ನಿ.

**ಸಂವರ್ತನ** (ನಾ). ಪ್ರಳಯ; ನಾಶ.

**ಸಂವರ್ಧನ** (ನಾ). ಏಳಿಗೆ; ಅಭ್ಯುದಯ.

**ಸಂವಾಜ** (ನಾ). ಕಲಹ; ವಿವಾದ.

**ಸಂವಾದ** (ನಾ). ೧. ಸಂಭಾಷಣೆ; ಚರ್ಚೆ. ೨. ಸುದ್ದಿ; ಸಮಾಚಾರ. ೩. ಹೊಂದಿಕೆ; ಸಮನ್ವಯ. ~ಅರ್ಥಿ = ವಾದಮಾಡುವ

ಅಪೇಕ್ಷೆಯುಳ್ಳವನು. ~ಇಸು = ೧. ವಾದಿಸು ; ಚರ್ಚೆಮಾಡು. ೨. ಹೇಳು. ೩. ಸೆಣಸು; ಹೋರಾಡು. ~ಕೊ(ಗೊ)ಳಿಸು = ೧. ವಾದಮಾಡು ; ಚರ್ಚಿಸು. ೨. ಸಮನ್ವಯಗೊಳಿಸು ; ಹೊಂದಿಸು.

ಸಂವಾದಿ (ನಾ). ೧. ವಾದಮಾಡುವವನು. (ಗು). ೨. ಸರಿಸಮವಾಗಿರುವ ; ಸಮಾನವಾಗಿರುವ.

ಸಂವಾಸ (ನಾ). ಸಹವಾಸ ; ಒಡನಾಟ.

ಸಂವಾಸಿ (ನಾ). ಸಹವಾಸಿ ; ಒಡನಾಡಿ.

ಸಂವಾಹ (ನಾ). ಹಳ್ಳಿ ; ಗ್ರಾಮ.

ಸಂವಾಹನ = ಸಂವಾಹ.

ಸಂವಿಧಾನ (ನಾ). ೧. ವಿನ್ಯಾಸ ; ರಚನೆ, ೨. ಯೋಜನೆ. ೩. ವಿಧಿ; ಕಟ್ಟಳೆ, ನಿಯಮ.

ಸಂವಿಭಾಗ (ನಾ). ವಿಭಾಗ ; ವಿಂಗಡಣೆ.

ಸಂವೀಕ್ಷಣ (ನಾ). ಶೋಧನೆ ; ತಪಾಸಣೆ.

ಸಂವೃತ (ಗು). ೧. ಆವರಿಸಲ್ಪಟ್ಟ ; ಮುಚ್ಚಿದ; ಬಚ್ಚಿಟ್ಟ. ೨. ತುಂಬಿದ ; ಭರ್ತಿಯಾದ. ೩. ಸೇರಿದ ; ಕೂಡಿದ.

ಸಂವೇಗ (ನಾ). ೧. ಉದ್ರೇಕ ; ಕಾತರ. ೨. ಹುರುಪು ; ಉತ್ಸಾಹ. ೩. ಆತುರ; ತ್ವರೆ ; ಗಡಿಬಿಡಿ. ೪. ಗರ್ವ ; ಸೊಕ್ಕು.

ಸಂವೇದ (ನಾ). ೧. ಅನಿಸಿಕೆ ; ಅನುಭವ. ೨. ಅರಿವು ; ತಿಳಿವಳಿಕೆ. ~ಇಸು = ಹೇಳು.

ಸಂವೇದನೆ = ಸಂವೇದ.

ಸಂವೇದ್ಯ (ಗು). ಚೆನ್ನಾಗಿ ತಿಳಿಯಲ್ಪಡುವ.

ಸಂವೇಶ (ನಾ). ೧. ಪ್ರವೇಶಿಸುವುದು ; ಒಳಹೊಗುವುದು. ೨. ಸುರತ ; ಸಂಭೋಗ. ೩. ಕನಸು. ೪. ಪೀಠ. ~ಇಸು = ಒಳಹೊಗು ; ಪ್ರವೇಶಿಸು.

ಸಂವ್ಯಾನ (ನಾ). ಮೇಲುಹೊದಿಕೆ; ಉತ್ತರೀಯ.

ಸಂಶಯ (ನಾ). ೧. ಅನುಮಾನ ; ಶಂಕೆ. ೨. ಒಂದು ಕಾವ್ಯಾಲಂಕಾರ.

ಸಂಶೋಧನ (ನಾ). ಅನ್ವೇಷಣೆ ; ತಪಾಸಣೆ.

ಸಂಶೋಧನೆ = ಸಂಶೋಧನ.

ಸಂಶೋಧಿಸು (ಕ್ರಿ). ಪೂರ್ತಿಯಾಗಿ ಕಂಡುಹಿಡಿ; ಅನ್ವೇಷಿಸು.

ಸಂಶ್ಲಿಷ್ಟ (ಗು). ೧. ಚೆನ್ನಾಗಿ ಸೇರಿದ ; ಭದ್ರವಾಗಿ ಕೂಡಿದ. ೨. ಅಲಿಂಗಿಸಿದ ; ಅಪ್ಪಿದ.

ಸಂಸಕ್ತ (ಗು). ೧. ಆಸಕ್ತಿಯುಳ್ಳ ; ಮಗ್ನನಾದ. ೨. ಸಂಪೂರ್ಣವಾಗಿ ಸೇರಿದ, ಕೂಡಿದ.

ಸಂಸಂಗ (ನಾ). ನಿಕಟ ಸಂಪರ್ಕ ; ಹತ್ತಿರದ ಸಂಬಂಧ.

ಸಂಸಂಗಿ (ನಾ). ಹತ್ತಿರದವನು ; ನಿಕಟವರ್ತಿ; ಆಪ್ತ.

ಸಂಸತ್ತು (ನಾ). ೧. ಸಭೆ ಸೇರುವಿಕೆ; ಅಧಿವೇಶನ. ೨. ಸಭಾಗೃಹ ; ಸಭೆ.

ಸಂಸರಣ (ನಾ). ೧. ಚಲನೆ; ಗತಿ. ೨. ಸಂಸಾರ.

ಸಂಸರಿಸು (ಕ್ರಿ). ಚಲಿಸು ; ಸಾಗು. ೨. ಸಂಸಾರ ಮಾಡು.

ಸಂಸರ್ಗ (ನಾ). ೧. ನಿಕಟ ಸಂಪರ್ಕ ; ಸಹವಾಸ. ೨. ಕೂಟ ; ಸಂಭೋಗ.

ಸಂಸಾರ (ನಾ). ೧. ಮಾರ್ಗ; ಪಥ. ೨. ಜನನ, ಮರಣಗಳ ಚಕ್ರ. ೩. ಕುಟುಂಬ. ೪. ಪತ್ನಿ; ಹೆಂಡತಿ. ೫. ಲೌಕಿಕ ಜೀವನ ; ಗೃಹಜೀವನ ; ಮನೆವಾರ್ತೆ. ~ಇಗ = ಸಂಸಾರದಿಂದ ಕೂಡಿದವನು ; ಸಂಸಾರವಂದಿಗ.

ಸಂಸಾರಿ (ನಾ). ಕುಟುಂಬಿ ; ಗೃಹಸ್ಥ.

ಸಂಸಾರಿಕ ೧. = ಸಂಸಾರಿ. (ಗು). ೨. ಲೌಕಿಕ; ಪ್ರಪಂಚಕ್ಕೆ ಸೇರಿದ.

ಸಂಸಿದ್ಧ (ನಾ). ೧. ಗುರಿಯನ್ನು ಮುಟ್ಟಿದವನು; ಸಿದ್ಧಿಯನ್ನು ಪಡೆದವನು. (ಗು). ೨. ಪೂರ್ಣಗೊಂಡ ; ಪೂರ್ತಿಯಾದ.

ಸಂಸಿದ್ಧಿ (ನಾ). ೧. ಪೂರ್ತಿಯಾಗುವಿಕೆ ; ಪೂರ್ಣಗೊಳ್ಳುವಿಕೆ. ೨. ಮೋಕ್ಷ ; ಮುಕ್ತಿ.

ಸಂಸೃತಿ (ನಾ). ಜನನ ಮರಣಗಳ ಚಕ್ರ; ಭವಾವಳಿ; ಸಂಸಾರ.

ಸಂಸೇವ್ಯ (ಗು). ಸೇವೆಗೆ ಯೋಗ್ಯವಾದ; ಸೇವಿಸಲು ತಕ್ಕುದಾದ.

ಸಂಸ್ಕರಣ (ನಾ). ೧. ತಿದ್ದುಪಡಿ; ಸುಧಾರಣೆ. ೨. ಗ್ರಂಥದ ಆವೃತ್ತಿ; ಪುನರ್ಮುದ್ರಣ.

ಸಂಸ್ಕರಿಸು (ಕ್ರಿ). ೧. ತಿದ್ದು; ಸರಿಪಡಿಸು. ೨. ಸಜ್ಜುಗೊಳಿಸು; ಸಿದ್ಧಪಡಿಸು. ೩. ಶುದ್ಧಗೊಳಿಸು; ಚೊಕ್ಕಟಮಾಡು. ೪. ಅಲಂಕರಿಸು. ೫. ಪಾವನಗೊಳಿಸು; ಪರಿಶುದ್ಧಗೊಳಿಸು. ೬. ಪರಿಷ್ಕರಿಸು; ಸಂಸ್ಕಾರಗೊಳಿಸು. ೭. ಅಂತ್ಯಸಂಸ್ಕಾರವನ್ನು ಮಾಡು; ಉತ್ತರಕ್ರಿಯೆಯನ್ನು ನಡಸು.

ಸಂಸ್ಕಾರ (ನಾ). ೧. ಸಹಜಪ್ರವೃತ್ತಿ; ಸಂಸ್ಕೃತಿ. ೨. ನೈರ್ಮಲ್ಯ; ಚೊಕ್ಕಟ. ೩. ಪವಿತ್ರಗೊಳಿಸುವುದು. ೪. ತಿದ್ದುಪಾಟು; ಪರಿಷ್ಕರಣ. ೫. ನಾಮಕರಣ, ಮುಂಜಿ ಮುಂತಾದ ಧಾರ್ಮಿಕ ವಿಧಿ. ೬. ಉತ್ತರಕ್ರಿಯೆ.

ಸಂಸ್ಕೃತ (ನಾ). ೧. ಸಂಸ್ಕಾರಗೊಂಡವನು; ವಿದ್ಯಾವಂತ; ಪಂಡಿತ. ೨. ಒಂದು ಭಾಷೆ; ಗೀರ್ವಾಣಭಾಷೆ. (ಗು). ೩. ನಿರ್ದಿಷ್ಟವಾಗಿ ರೂಪಿಸಿದ. ೪. ಸಿದ್ಧಪಡಿಸಿದ; ಸಜ್ಜುಗೊಳಿಸಿದ. ೫. ಸುಧಾರಿಸಿದ; ನಯಗೊಳಿಸಿದ. ೬. ಅಲಂಕರಿಸಿದ; ಶೃಂಗರಿಸಿದ. ೭. ಶ್ರೇಷ್ಠವಾದ; ಅತ್ಯುತ್ತಮವಾದ. ೮. ಪಕ್ವಗೊಳಿಸಿದ.

ಸಂಸ್ಕೃತಿ (ನಾ). ೧. ಬುದ್ಧಿವಿಕಾಸ; ಮಾನಸಿಕ ಪಕ್ವತೆ. ೨. ಒಂದು ದೇಶದ ಮಾನಸಿಕವಾದ ಸಾಧನೆ; ನಾಗರಿಕತೆಯ ಬೌದ್ಧಿಕ ಸಾಧನೆ.

ಸಂಸ್ತವ = ಸಂಸ್ತವನ.

ಸಂಸ್ತವನ (ನಾ). ಹೊಗಳಿಕೆ; ಸ್ತುತಿ.

ಸಂಸ್ತುತಿ = ಸಂಸ್ತವನ.

ಸಂಸ್ಥಾನ (ನಾ). ೧. ಒಟ್ಟಾಗಿರುವಿಕೆ; ಸಾಹಚರ್ಯ. ೨. ಒಟ್ಟಿಲು; ರಾಶಿ. ೩. ತೆರೆದ ಸ್ಥಳ; ಬಯಲು. ೪. ದೇಶದ ಒಂದು ವಿಭಾಗ; ರಾಜ್ಯ.

ಸಂಸ್ಥಾನಿಕ (ನಾ). ಸಂಸ್ಥಾನದ ಅಧಿಪತಿ.

ಸಂಸ್ಥಾಪಿಸು (ಕ್ರಿ). ನೆಲೆಗೊಳಿಸು; ಸ್ಥಾಪನೆ ಮಾಡು.

ಸಂಸ್ಥಿತಿ (ನಾ). ೧. ರಾಶಿ; ಒಟ್ಟಿಲು. ೨. ಸಾಮೀಪ್ಯ; ಸಂಪರ್ಕ. ೩. ದೃಢವಾದ ನೆಲೆ; ಭದ್ರವಾದ ಸ್ಥಿತಿ.

ಸಂಸ್ಥೆ (ನಾ). ೧. ಸಂಘ; ಸಮಿತಿ; ಕೂಟ. ೨. ವ್ಯಾಪಾರಕೇಂದ್ರ; ವ್ಯವಹಾರ ಸ್ಥಳ.

ಸಂಸ್ಪರ್ಶ (ನಾ). ೧. ನಿಕಟ ಸಂಪರ್ಕ; ಸಂಬಂಧ. ೨. = ಸಂಸ್ಪರ್ಶನ.

ಸಂಸ್ಪರ್ಶನ (ನಾ). ಮುಟ್ಟುವಿಕೆ; ಸ್ಪರ್ಶ.

ಸಂಸ್ಮರಣ (ನಾ). ನೆನಪು; ಸ್ಮೃತಿ. ~ ಸಂಚಿಕೆ = ವ್ಯಕ್ತಿ, ವಸ್ತು ಅಥವಾ ಘಟನೆಯ ನೆನಪಿಗಾಗಿ ಪ್ರಕಟಿಸುವ ಸಂಚಿಕೆ.

ಸಂಸ್ಮರಣೆ = ಸಂಸ್ಮರಣ.

ಸಂಸ್ಮರಿಸು (ಕ್ರಿ). ೧. ಜ್ಞಾಪಿಸಿಕೊಳ್ಳು; ಸ್ಮರಿಸು. ೨. ಪ್ರಾರ್ಥಿಸು.

ಸಂಹನನ (ನಾ). ೧. ತಾಕುವಿಕೆ; ಸಂಘಟ್ಟನೆ. ೨. ಸಂಹರಿಸುವುದು; ಕೊಲ್ಲುವುದು. ೩. ನಾಶ; ಅಳಿವು. ೪. (ಜಡೆ) ಹೆಣೆಯುವಿಕೆ.

ಸಂಹರ (ನಾ). ೧. ಪರಸ್ಪರ ಆಕರ್ಷಣೆ. ೨. ಹೊಂದಿಕೆ; ಸೇರುವೆ. ೩. ನಾಶ; ಅಳಿವು. ~ ಇಸು = ೧. ಕಲೆಹಾಕು; ಕೂಡಿಸು. ೨. ನಾಶಮಾಡು; ಕೊಲ್ಲು.

ಸಂಹರಣ (ನಾ). ನಾಶ; ಅಳಿವು.

ಸಂಹಾರ (ನಾ). ೧. ಮುಕ್ತಾಯ; ಸಮಾಪ್ತಿ. ೨. ನಾಶ; ಕೊನೆ. ೩. ಕೊಲೆ; ವಧೆ. ೪. ಕೂಡಿಸಿ ಕಟ್ಟುವಿಕೆ; ಹೆಣೆಯುವಿಕೆ.

ಸಂಹಾರಕ = ಸಂಹಾರಿ.

ಸಂಹಾರಿ (ನಾ). ನಾಶಮಾಡುವವನು; ಸಂಹಾರಕ.

ಸಂಹಿತೆ (ನಾ). ೧. ಸೇರಿಕೆ; ಸಂಯೋಗ. ೨. ವೇದಗಳಿಂದ ಸಂಗ್ರಹಿಸಿದ ಭಾಗ.

ಸಂಹೃತಿ (ನಾ). ಸಂಹಾರ; ನಾಶ.

ಸಕತ್ (ಗು). ತೀವ್ರವಾದ; ಉಲ್ಬಣವಾದ.

ಸಕರ್ಮಕ (ನಾ). ೧. ವ್ಯಾಕರಣದಲ್ಲಿ ಕರ್ಮ ಪದವನ್ನು ಪಡೆಯುವ ಕ್ರಿಯಾಪದ. (ಗು). ೨. ಕರ್ಮವನ್ನು ಅಪೇಕ್ಷಿಸುವ.

ಸಕಲ(ಳ) (ಗು). ೧. ಭಾಗಗಳಿಂದ ಕೂಡಿದ; ಭಾಗ ಸಹಿತವಾದ. ೨. ಸಂಪೂರ್ಣ; ಸಮಗ್ರ. ~ಈಶ = ಎಲ್ಲಕ್ಕೂ ಒಡೆಯನಾದವನು; ದೇವಾಧಿದೇವ.

ಸಕಲಜ್ಞ (ನಾ). ಎಲ್ಲವನ್ನೂ ತಿಳಿದಿರುವವನು; ಬಲ್ಲಿದ.

ಸಕಲಾತಿ (ನಾ). ೧. ಒಂದು ಬಗೆಯ ಶ್ರೇಷ್ಠವಾದ ಉಣ್ಣೆಬಟ್ಟೆ. ೨. ನಕ್ಕಿ ಕೆಲಸಮಾಡಿದ ಬಟ್ಟೆ.

ಸಕಾರಣ (ಗು). ಕಾರಣದಿಂದ ಕೂಡಿದ; ಕಾರಣಸಹಿತವಾದ.

ಸಕಾಲ (ನಾ). ಸರಿಯಾದ ಕಾಲ; ಯೋಗ್ಯ ಸಮಯ.

ಸಕಾಲಿಕ (ಗು). ಕಾಲಕ್ಕೆ ಸರಿಯಾದ; ಸಮಯಕ್ಕೆ ಸರಿಯಾದ.

ಸಕುಟುಂಬ (ಅ). ಸಂಸಾರ ಸಹಿತವಾಗಿ.

ಸಕುತಿ = ಶಕ್ತಿ.

ಸಕುನ = ಶಕುನ. ~ಇಗ = ಶಕುನಿಗ.

ಸಕುನಿ = ಶಕುನಿ.

ಸಕೃತು (ಅ). ಒಮ್ಮೆ; ಒಂದು ಬಾರಿ.

ಸಕೇಶಿ (ನಾ). ಕೂದಲು ತೆಗೆಸಿಕೊಳ್ಳದ ವಿಧವೆ.

ಸಕ್ಕ (ನಾ). ೧. ಸಮ; ಸಮತೆ. ೨. = ಚಕ್ಕೆ. ~ಸಮ = ಸಮಾನತೆ; ಸರಿಸಮ.

ಸಕ್ಕಜ (ನಾ). ೧. ಸ್ನೇಹ; ಗೆಳೆತನ. ೨. ಸ್ನೇಹಿತ; ಗೆಳೆಯ. ೩. ಪ್ರೀತಿಯ ಕಾಣಿಕೆ. ೪. = ಸಕ್ಕದ.

ಸಕ್ಕದ (ನಾ). ಸಂಸ್ಕೃತಭಾಷೆ.

ಸಕ್ಕರೆ (ನಾ). ಕಬ್ಬಿನ ರಸದಿಂದ ತಯಾರಿಸಿದ ಸಿಹಿಯಾದ ಪದಾರ್ಥ; ಶರ್ಕರೆ. ~ಕಡ್ಡಿ = ಕಡ್ಡಿಗೆ ಹೊಂದಿದಂತೆ ಮಾಡಿರುವ ಬತ್ತಾಸು ಮುಂತಾದ ಸಿಹಿತಿನಿಸು. ~ಕಾ(ಗಾ)ಯ್ = ಸಕ್ಕರೆಪಾಕದಲ್ಲಿ ಬೆರಸಿದ ಮಾವು, ನೆಲ್ಲಿ ಮುಂತಾದ ಕಾಯಿ; ಗುಳಂಬ; ಮುರಬ್ಬ. ~ಕು(ಗು)ಂಬಳ = ಸಿಹಿಕುಂಬಳಕಾಯಿ. ~ಕು(ಗು)ತ್ತಿ = ಬಾಯಿ ಹೊಲಿದಿರುವ ಚೀಲದಿಂದ ಧಾನ್ಯವನ್ನು ಪರೀಕ್ಷೆಗಾಗಿ ಹೊರತೆಗೆಯುವ ಒಂದು ಸಾಧನ.

ಸಕ್ಕರೆಬಿಲ್ಲ = ಸಕ್ಕರೆವಿಲ್ಲ.

ಸಕ್ಕರೆವಿಲ್ಲ (ನಾ). ಕಬ್ಬಿನ ಬಿಲ್ಲನ್ನು ಹಿಡಿದಿರುವವನು; ಮನ್ಮಥ.

ಸಕ್ಕಿ (ನಾ). ಸಾಕ್ಷಿ; ರುಜುವಾತು.

ಸಕ್ಕೆ = ಚಕ್ಕೆ.

ಸಕ್ತಿ (ನಾ). ೧. ಸಂಬಂಧ; ಹೊಂದಿಕೆ. ೨. ಶ್ರದ್ಧೆ; ಆಸಕ್ತಿ.

ಸಕ್ರಮ (ಗು). ಕ್ರಮಬದ್ಧವಾದ.

ಸಕ್ರಿಯ (ಗು). ಚಟುವಟಿಕೆಯಿಂದ ಕೂಡಿದ; ಕ್ರಿಯಾತ್ಮಕವಾದ.

ಸಖ (ನಾ). ಸ್ನೇಹಿತ; ಗೆಳೆಯ.

ಸಖಿ ೧. = ಸಖ. ೨. ಜೊತೆಗಾತಿ; ಗೆಳತಿ.

ಸಖ್ಯ (ನಾ). ಗೆಳೆತನ; ಸ್ನೇಹ.

ಸಗಟ = ಸಗಟು.

ಸಗಟು (ನಾ). ಒಟ್ಟು ಮೊತ್ತ; ರಾಶಿ. ~ವ್ಯಾಪಾರಿ = ವಸ್ತುಗಳನ್ನು ಒಟ್ಟಾಗಿ ಮಾರುವವನು; ಮಂಡಿವ್ಯಾಪಾರಿ. ~ಸರಕು = ಒಟ್ಟು ಸರಕು; ಮಂಡಿ ವ್ಯಾಪಾರದ ಸರಕು.

ಸಗಣ = ಸಗಣಿ.

ಸಗಣಿ (ನಾ). ಗೋಮಯ; ತೊಪ್ಪೆ.

ಸಗಾಡ (ನಾ). ಆಧಿಕ್ಯ; ಹೆಚ್ಚಳ. ~ಇಕೆ = ಅತಿಶಯ; ಆಧಿಕ್ಯ.

ಸಗಾಢ ೧. = ಸಗಾಡ. ೨. ರಭಸ ; ವೇಗ. ~ಇಕೆ = ಸಗಾಡಿಕೆ.

ಸಗುಣ (ನಾ). ೧. ಒಂದು ಜಾತಿಯ ಹಕ್ಕಿ ; ಶಕುನದ ಹಕ್ಕಿ. (ಗು). ೨. ಯೋಗ್ಯಗುಣಗಳಿಂದ ಕೂಡಿದ.

ಸಗೋತ್ರ (ನಾ). ೧. ಒಂದೇ ಗೋತ್ರಕ್ಕೆ ಸೇರಿದುದು. ೨. ಒಂದೇ ವಂಶದವನು ; ಸಂಬಂಧಿ. (ಗು). ೩. ಒಂದೇ ಗೋತ್ರಕ್ಕೆ ಸೇರಿದ.

ಸಗ್ಗ (ನಾ). ನಾಕ ; ಸ್ವರ್ಗ. ~ಇಗ = ಸ್ವರ್ಗದಲ್ಲಿ ವಾಸಿಸುವವನು ; ದೇವತೆ. ~ತು(ದು)ಱು(ರು) = ದೇವಲೋಕದ ಹಸು ; ಕಾಮಧೇನು. ~ಪ(ವ)ಱೆ(ರೆ) = ದೇವದುಂದುಭಿ ; ದೇವಲೋಕದ ವಾದ್ಯ. ~ಪೆ(ವೆ)ಣ್ = ದೇವಲೋಕದಸ್ತ್ರೀ; ಅಪ್ಸರೆ. ~ಪೊ(ವೊ)ನಲ್ = ದೇವನದಿ ; ಗಂಗೆ.

ಸಗ್ಗಲೆ(ಳೆ) (ನಾ). ನೀರು ತುಂಬುವ ಚರ್ಮದ ಚೀಲ.

ಸಗ್ಗು (ಕ್ರಿ). ೧. ಬಾಗು ; ಮಣಿ. ೨. ಹಿಂಜರಿ ; ಹಿಮ್ಮೆಟ್ಟು. ~ಇಸು = ಮಣಿಯುವಂತೆ ಮಾಡು ; ಬಾಗಿಸು.

ಸಘಾಟ (ನಾ). ೧. ಸೈನ್ಯದ ಮುಂಚೂಣಿ. ೨. ದರ್ಪ ; ಠೀವಿ. ~ಇಕೆ = ೧. ಧೈರ್ಯ ; ಸಾಹಸ. ೨. ಧಾರ್ಷ್ಟ್ಯ ; ದರ್ಪ. ೩. ಡೌಲು ; ಆಡಂಬರ.

ಸಘಾಡ = ಸಗಾಡ. ~ಇಕೆ = ಸಗಾಡಿಕೆ.

ಸಚರ (ಗು). ಚಲನೆಯಿಂದ ಕೂಡಿದ ; ಅಲುಗಾಟದ ; ಚಲಿಸುವ. ~ಅಚರ = ೧. ಸ್ಥಾವರ ಹಾಗು ಜಂಗಮವಸ್ತುಗಳಿಂದ ಕೂಡಿದ ಜಗತ್ತು. ೨. ಸ್ಥಾವರ ಹಾಗು ಜಂಗಮವಸ್ತುಗಳು. ೩. ಚಲಿಸುವ ಮತ್ತು ಚಲಿಸದಿರುವ ; ಚರಾಚರ.

ಸಚಿತ್ರ (ಗು). ಚಿತ್ರದಿಂದ ಕೂಡಿದ ; ಚಿತ್ರಸಹಿತವಾದ.

ಸಚಿವ (ನಾ). ೧. ಮಂತ್ರಿ ; ಅಮಾತ್ಯ. ೨. ಪ್ರಜಾತಂತ್ರ ರಾಜ್ಯದ ಆಡಳಿತ ಸೂತ್ರವನ್ನು ವಹಿಸುವವನು. ೩. ಮಿತ್ರ ; ಗೆಳೆಯ. ~ಸಂಪುಟ = ಮಂತ್ರಿಮಂಡಲ.

ಸಚಿವೆ (ನಾ). ಮಂತ್ರಿ ಸ್ಥಾನದಲ್ಲಿರುವವಳು.

ಸಚೇತನ (ನಾ). ೧. ಚೇತನವುಳ್ಳುದು. (ಗು). ೨. ಎಚ್ಚರಹೊಂದಿರುವ. ೩. ಜೀವಂತವಾದ.

ಸಚೇಲ (ಗು). ವಸ್ತ್ರದಿಂದ ಕೂಡಿದ. ~ಸ್ನಾನ = ಉಟ್ಟ ಬಟ್ಟೆಯೊಂದಿಗೆ ಮಾಡುವ ಸ್ನಾನ.

ಸಚ್ಚರಿತ (ನಾ). ೧. ಒಳ್ಳೆಯ ನಡವಳಿಕೆ ; ಸಂಪನ್ನತೆ. ೨. ಶೀಲವಂತ ; ಸಂಪನ್ನ.

ಸಚ್ಚರಿತೆ (ನಾ). ೧. ಒಳ್ಳೆಯ ನಡವಳಿಕೆ ; ಸದಾಚಾರ. ೨. ಒಳ್ಳೆಯ ನಡವಳಿಕೆಯುಳ್ಳವಳು.

ಸಜಾ (ನಾ). ೧. ದಂಡನೆ ; ಶಿಕ್ಷೆ. ೨. ಜೈಲುವಾಸ ; ಕಾರಾಗೃಹವಾಸ.

ಸಜಾತಿ (ಗು). ಒಂದೇ ಜಾತಿಗೆ ಸೇರಿದ.

ಸಜಾತೀಯ = ಸಜಾತಿ.

ಸಜೀವ (ಗು). ಜೀವವುಳ್ಳ ; ಜೀವಂತವಾದ.

ಸಜ್ಜಕ (ನಾ). ರವೆ ; ಸೋಜಿ.

ಸಜ್ಜನ (ನಾ). ೧. ತಯಾರು ಮಾಡುವಿಕೆ. ೨. ಪಾಳೆಯದ ಕಾವಲು. ೩. ಕವಚ ಮೊದಲಾದುವನ್ನು ಹಾಕಿಕೊಳ್ಳುವಿಕೆ. ೪. ಸಂಭಾವಿತ ಮನುಷ್ಯ ; ಸಭ್ಯ. ೫. ಕುಲವಧು. ೬. ಹೆಂಡತಿ ; ಪತ್ನಿ. ~ಇಕೆ = ೧. ಸೌಜನ್ಯ ; ಒಳ್ಳೆಯತನ. ೨. ಪಾತಿವ್ರತ್ಯ. ~ಗಿತ್ತಿ = ಸಾಧ್ವಿ ; ಗರತಿ.

ಸಜ್ಜನೆ (ನಾ). ೧. ಪತಿವ್ರತೆ ; ಸಾಧ್ವಿ. ೨. ಹೆಂಡತಿ ; ಪತ್ನಿ. ೩. ಅಲಂಕರಣ ; ವೇಷಭೂಷಣ. ೪. ಸಜ್ಜುಗೊಳಿಸುವಿಕೆ. ೫. ಆನೆಗೆ ರೆಂಚೆ ಮೊದಲಾದುವುಗಳನ್ನು ಅಳವಡಿಸುವಿಕೆ.

ಸಜ್ಜರಸ (ನಾ). ಅರಗಿನ ರೀತಿಯ ಒಂದು ಬಗೆಯ ಅಂಟು ; ರಾಳ.
ಸಜ್ಜಾಯಿಕ (ನಾ). ಕಂಬಳಿಯನ್ನು ಮಾಡುವವನು.
ಸಜ್ಜಾಯಿಗ = ಸಜ್ಜಾಯಿಕ.
ಸಜ್ಜಿಕೆ (ನಾ). ಲಿಂಗವನ್ನು ಇಡುವ ಭರಣಿ ; ಕರಡಿಗೆ.
ಸಜ್ಜಿಗೆ (ನಾ). ೧. ರವೆ. ೨. ರವೆಯಿಂದ ಮಾಡಿದ ಸಿಹಿತಿಂಡಿ ; ಸಿರಾ.
ಸಜ್ಜೀಕಾರ (ನಾ). ಒಂದು ಬಗೆಯ ಲವಣ.
ಸಜ್ಜು (ನಾ). ಸಿದ್ಧತೆ ; ತಯಾರಿ. ~ಆಗು = ತಯಾರಾಗು.
ಸಜ್ಜುಕ (ನಾ). ಮೊಗ್ಗು ; ಮುಗುಳು.
ಸಜ್ಜೆ (ನಾ). ೧. ಹಾಸುಗೆ ; ತಲ್ಪ. ೨.=ಸಜ್ಜಿಕೆ. ೩. ಒಂದು ಬಗೆಯ ಧಾನ್ಯ ; ಸೆಜ್ಜೆ. ~ಮು(ವ)ನೆ = ಮಲಗುವ ಮನೆ ; ಶಯ್ಯಾಗೃಹ. ~ವಳ = ಶಯನಗೃಹದ ಸೇವಕ.
ಸಟ (ನಾ). ಕೇಸರ ; ಅಯಾಲು.
ಸಟೆ (ನಾ). ೧. ಹುಸಿ ; ಸುಳ್ಳು. ೨. ಜಟೆಗಟ್ಟಿದ ಕೂದಲು ; ಜಟೆ. ೩. = ಸಟ.
ಸಟೆಗ (ನಾ). ಸುಳ್ಳು ಹೇಳುವವನು ; ಹುಸಿಕ.
ಸಟ್ಟುಗ (ನಾ). ೧. ಸೌಟು. ೨. ಹುಟ್ಟು.
ಸಡಕು (ನಾ). ೧. ಕುಚ್ಚು ; ಗೊಂಡೆ. ೨. ಮಾರ್ಗ ; ರಸ್ತೆ.
ಸಡಗರ (ನಾ). ಉತ್ಸಾಹ ; ಹುರುಪು ; ಸಂಭ್ರಮ. ~ಇಸು = ಉತ್ಸಾಹಗೊಳ್ಳು ; ಸಂಭ್ರಮಪಡು.
ಸಡಲ್(ಲು) = ಸಡಿಲ್. ~ಇಸು = ಸಡಿಲಗೊಳಿಸು ; ಅಳ್ಳಕಗೊಳಿಸು.
ಸಡಿಲ್(ಲು) (ಕ್ರಿ). ೧. ಅಳ್ಳಕವಾಗು ; ಶಿಥಿಲವಾಗು ; ಬಿಗಿಯನ್ನು ಕಳೆದುಕೊಳ್ಳು. (ನಾ). ೨. = ಸಡಿಲ.
ಸಡಿಲ (ನಾ). ಶಿಥಿಲವಾದುದು; ಅಳ್ಳಕವಾದುದು.
ಸಡಿಲ್ಸು (ಕ್ರಿ). ಕಳಚು ; ಶಿಥಿಲಗೊಳಿಸು.
ಸಡುಗುಡು(ನಾ). ಒಂದು ಬಗೆಯ ಆಟ; ಕಬಡ್ಡಿ.
ಸಡ್ಡಕ (ನಾ). ಹೆಂಡತಿಯ ಅಕ್ಕನ ಅಥವಾ ತಂಗಿಯ ಗಂಡ ; ಷಡ್ಡಕ.
ಸಡ್ಡಾಳು (ನಾ). ಕಟ್ಟಾಳು ; ಕಲಿ.
ಸಡ್ಡು (ನಾ). ಲಕ್ಷ್ಯ ; ಗಮನ.
ಸಡ್ಡುಹೊಡೆ (ಕ್ರಿ). ೧. ಭುಜ ಅಥವಾ ತೊಡೆಯನ್ನು ತಟ್ಟು, ಚಪ್ಪರಿಸು. ೨. ಸವಾಲುಹಾಕು; ಸ್ಪರ್ಧೆಗೆ ನಿಲ್ಲು.
ಸಡ್ಡೆ ೧. = ಸಡ್ಡು. ೨. ಶ್ರದ್ಧೆ. ೩. ಬೀಜವನ್ನು ಬಿತ್ತಲು ಉಪಯೋಗಿಸುವ ಒಂದು ಉಪಕರಣ.
ಸಣ(ಂ)ಬು (ನಾ). ಒಂದು ಜಾತಿಯ ಗಿಡ ಮತ್ತು ಅದರ ನಾರು.
ಸಣಕಲು (ಗು). ತೆಳ್ಳಗಿನ ; ಕೃಶವಾದ.
ಸಣ್ಣ (ನಾ). ೧. ಸೂಕ್ಷ್ಮವಾದುದು. ೨. ಕೃಶವಾದುದು ; ಬಡಕಲಾದುದು. ೩. ಚಿಕ್ಕದು. ೪. ಚಿಕ್ಕವನು ; ಕಿರಿಯ. ೫. ಆಕಾರದಲ್ಲಿ ಕಿರಿದಾಗಿರುವ ಅಕ್ಕಿ. ೬. ಒಂದು ಬಗೆಯ ನುಣುಪಾದ ಬಟ್ಟೆ. ೭. ತರಕಾರಿಗಳನ್ನು ತುರಿದು ಮಾಡಿದ ಒಂದು ಬಗೆಯ ವ್ಯಂಜನ ಪದಾರ್ಥ. ೮. ಚೂರು ; ತುಂಡು. (ಗು). ೯. ಚಿಕ್ಕದಾದ. ೧೦. ಅಲ್ಪ ; ಕ್ಷುಲ್ಲಕ. ~ಆಗು = ಕೃಶವಾಗು ; ಬಡವಾಗು. ~ಇಸು = ೧. ಪುಡಿಮಾಡು ; ನುರಿಸು. ೨. ಕೊರಗು ; ಬಡವಾಗು. ೩. ಕೊರಗಿಸು; ಸೊರಗುವಂತೆ ಮಾಡು. ~ಕೆಲಸ =೧. ಚಿಕ್ಕ ಕೆಲಸ. ೨. ಸೂಕ್ಷ್ಮವಾದ ಕೆಲಸ ; ಕುಸುರಿಗೆಲಸ. ೩. ಹೀನಕಾರ್ಯ ; ಅಲ್ಪವಾದ ಕೆಲಸ. ~ತನ = ೧. ಬಾಲ್ಯ ; ಚಿಕ್ಕಂದು. ೨. ಕೀಳುತನ ; ಅಲ್ಪತನ.
ಸಣ್ಣಗೆ (ಅ). ೧. ಕೃಶವಾಗಿ. ೨. ಸ್ವಲ್ಪ.
ಸಣ್ಣನೆ (ಗು). ೧. ಚಿಕ್ಕದಾದ ; ಪುಟ್ಟ. ೨. ಬಡವಾದ. (ಅ). ೩. ಕೃಶವಾಗಿ.

ಸಣ್ಣಿಗೆ (ನಾ). ಅರೆಯುವ ಕಲ್ಲು ; ಸಾಣೆ ಕಲ್ಲು.

ಸಣ್ಣಿತು (ನಾ). ಸಣ್ಣದು ; ಚಿಕ್ಕದು.

ಸಣ್ಣಿತ್ತು = ಸಣ್ಣಿತು.

ಸತತ (ಗು). ೧. ನಿರಂತರ ; ಅಡೆತಡೆಯಿಲ್ಲದ. (ಅ). ೨. ಸದಾ ; ಯಾವಾಗಲೂ. ~ಗತಿ =೧. ಯಾವಾಗಲೂ ಚಲಿಸುವಂತಹುದು. ೨. ಗಾಳಿ ; ವಾಯು.

ಸತಾಯಿಸು (ಕ್ರಿ). ತೊಂದರೆ ಕೊಡು ; ಪೀಡಿಸು ; ಹಿಂಸಿಸು.

ಸತಿ (ನಾ). ೧. ಪತಿವ್ರತೆ ; ಗರತಿ. ೨. ಹೆಂಡತಿ; ಮಡದಿ. ೩. ಹೆಂಗಸು ; ಸ್ತ್ರೀ. ೪. ಸಹ ಗಮನ ; ಗಂಡನ ಶವದೊಡನೆ ಚಿತೆಯೇರು ವುದು. ೫. ಸಲ; ಬಾರಿ. ~ಹೋಗು = ಸಹ ಗಮನ ಮಾಡು.

ಸತೀತ್ವ (ನಾ). ಪಾತಿವ್ರತ್ಯ.

ಸತೀರ್ಥ (ನಾ). ಸಹಪಾಠಿ ; ಸಹಾಧ್ಯಾಯಿ.

ಸತು = ಸತುವು. ~ಕುಂ(ಗು)ಂದು = ಶಕ್ತಿ ಗುಂದು ; ಸತ್ತ್ವಹೀನವಾಗು. ~ಕೆ(ಗೆ)ಡು =ಸತುಗುಂದು.

ಸತುಪಾತ್ರ = ಸತ್ಪಾತ್ರ.

ಸತುವು (ನಾ). ೧. ಒಂದು ಬಗೆಯ ಲೋಹ. ೨. ಶಕ್ತಿ ; ಸತ್ತ್ವ.

ಸತ್ಕಥೆ (ನಾ). ಒಳ್ಳೆಯ ಕಥೆ.

ಸತ್ಕರಿಸು (ಕ್ರಿ). ಆದರಿಸು ; ಉಪಚರಿಸು ; ಗೌರವಿಸು.

ಸತ್ಕರ್ಮ (ನಾ). ಒಳ್ಳೆಯ ಕೆಲಸ.

ಸತ್ಕವಿ (ನಾ). ಒಳ್ಳೆಯ ಕವಿ ; ಸುಕವಿ.

ಸತ್ಕಾರ (ನಾ). ಗೌರವ ; ಮನ್ನಣೆ ; ಆದರ.

ಸತ್ಕಾರ್ಯ = ಸತ್ಕರ್ಮ.

ಸತ್ಕುಲ (ನಾ). ಶ್ರೇಷ್ಠಕುಲ ; ಉತ್ತಮವಾದ ಕುಲ. ~ಪ್ರಸೂತ = ಸತ್ಕುಲಜ.

ಸತ್ಕುಲಜ (ನಾ). ಒಳ್ಳೆಯ ಕುಲದಲ್ಲಿ ಹುಟ್ಟಿದ ವನು.

ಸತ್ಕುಲೀನ. ೧. = ಸತ್ಕುಲಜ. (ಗು). ೨. ಒಳ್ಳೆಯ ಕುಲದಲ್ಲಿ ಹುಟ್ಟಿದ.

ಸತ್ಕೃತಿ ೧. = ಸತ್ಕರ್ಮ. ೨. ಒಳ್ಳೆಯ ಕಾವ್ಯ.

ಸತ್ತಮ (ಗು). ಶ್ರೇಷ್ಠ ; ಉತ್ತಮ.

ಸತ್ತವೆ (ನಾ). ಪಕ್ಷದ ಏಳನೆಯ ದಿನ; ಸಪ್ತಮಿ.

ಸತ್ತಿಗೆ (ನಾ). ಕೊಡೆ ; ಛತ್ರಿ.

ಸತ್ತು (ನಾ). ೧. ಪೂಜ್ಯವಾದುದು ; ಶ್ರೇಷ್ಠ ವಾದುದು. ೨. ಒಂದು ಬಗೆಯ ಲೋಹ ; ಸತುವು.

ಸತ್ತುಗ = ಸತ್ವಿಕ.

ಸತ್ತುವ = ಸತ್ವ.

ಸತ್ತೆ (ನಾ). ೧. ಕಸಕಡ್ಡಿ ; ಕೊಳೆ. ೨. ಆಳಿಕೆ ; ಪ್ರಭುತ್ವ. ೩. ಅಸ್ತಿತ್ವ ; ಇರುವಿಕೆ.

ಸತ್ತ್ವ = ಸತ್ವ.

ಸತ್ಪಥ (ನಾ). ಸನ್ಮಾರ್ಗ ; ಒಳ್ಳೆಯ ಮಾರ್ಗ.

ಸತ್ಪಾತ್ರ (ನಾ). (ದಾನವನ್ನು ತೆಗೆದುಕೊಳ್ಳಲು) ಯೋಗ್ಯನಾದವನು.

ಸತ್ಪುರುಷ (ನಾ). ಸಜ್ಜನ ; ಯೋಗ್ಯ.

ಸತ್ಯ (ನಾ). ೧. ನಿಜ ; ದಿಟ. ೨. ಸಜ್ಜನ; ಸಭ್ಯ. ೩. ಪರಮಾತ್ಮತತ್ತ್ವ. ೪. = ಸತ್ಯವಂತ. ೫. ಏಳು ಊರ್ಧ್ವ ಲೋಕಗಳಲ್ಲಿ ಒಂದು ; ಬ್ರಹ್ಮಲೋಕ. ೬. =ಸತ್ಯಯುಗ. ~ಅಂಶ = ವಾಸ್ತವಾಂಶ ; ನಿಜಾಂಶ. ~ಅನ್ವೇಷಣ=ಸತ್ಯವನ್ನು ಹುಡುಕುವಿಕೆ. ~ಅರ್ಥ = ನಿಜವಾದುದು ; ದಿಟವಾದುದು. ~ಅರ್ಥಿ = ಸತ್ಯವನ್ನು ಬಯಸುವವನು. ~ಆಗ್ರಹ=೧. ನ್ಯಾಯಕ್ಕಾಗಿ ಒತ್ತಾಯ ಪಡಿಸುವುದು. ೨. ಮುಷ್ಕರ ; ಸಂಪು. ~ಯುಗ = ನಾಲ್ಕು ಯುಗಗಳಲ್ಲಿ ಮೊದಲನೆಯದು ; ಕೃತಯುಗ. ~ಲೋಕ = ಬ್ರಹ್ಮಲೋಕ.

ಸತ್ಯವಂತ (ನಾ). ನಿಜವನ್ನು ನುಡಿಯುವವನು ; ನನ್ನಿಗಾರ.

ಸತ್ಯವಾದಿ = ಸತ್ಯವಂತ.
ಸತ್ಯಸಂಧ = ಸತ್ಯವಂತ.
ಸತ್ಯಾಗ್ರಹಿ (ನಾ). ೧. ಸತ್ಯಾಗ್ರಹವನ್ನು ಮಾಡುವವನು. ೨. ಸಂಪುಹೂಡುವವನು ; ಮುಷ್ಕರ ಹೂಡುವವನು.
ಸತ್ರ (ನಾ). ೧. ಯಾಗ ; ಯಜ್ಞ. ೨. ಧರ್ಮ ಶಾಲೆ ; ಛತ್ರ. ೩. ಪ್ರವಾಸಿ ಮಂದಿರ.
ಸತ್ರಾಣ (ನಾ). ೧. ಬಲದಿಂದ ಕೂಡಿರುದು ; ಶಕ್ತಿಯುತವಾದುದು. (ಗು). ೨. ಬಲ ಸಹಿತವಾದ ; ಶಕ್ತಿಯುತವಾದ. ~ಇಸು = ೧. ಶಕ್ತಿ, ಬರುವಂತೆ ಮಾಡು. ೨. ಶಕ್ತಿಯನ್ನು ಹೊಂದು.
ಸತ್ರಾಣಿ (ನಾ). ಬಲಶಾಲಿ ; ಶಕ್ತಿವಂತ.
ಸತ್ವ (ನಾ). ೧. ಇರುವಿಕೆ; ಅಸ್ತಿತ್ವ. ೨. ಸಾರ; ತಿರುಳು. ೩. ಜೀವಿ ; ಪ್ರಾಣಿ. ೪. ಭ್ರೂಣ. ೫. ಬಲ ; ಸಾಮರ್ಥ್ಯ. ೬. ಪ್ರಜ್ಞೆ ; ವಿವೇಕ. ೭. ದ್ರವ್ಯ ; ವಸ್ತು. ೮. ಪಂಚ ಮಹಾಭೂತಗಳಲ್ಲಿ ಒಂದು. ೯. ಕುದುರೆ ; ವಾಜಿ. ೧೦. = ಸತ್ವಗುಣ. ~ಗುಣ = ತ್ರಿಗುಣಗಳಲ್ಲಿ ಒಂದು ; ಸಾತ್ವಿಕಗುಣ. ~ಹೀನ = ಬಲಹೀನ ; ದುರ್ಬಲ.
ಸತ್ವಕ (ನಾ). ೧. ಸಾರ ; ತಿರುಳು. ೨. ವೈದಿಕ ಕರ್ಮಗಳ ಹೋಮಾಂತ್ಯದಲ್ಲಿ ನೈವೇದ್ಯಕ್ಕಾಗಿ ಸಿದ್ಧಪಡಿಸುವ ಹಿಟ್ಟು, ಬಾಳೆಹಣ್ಣು ಮುಂತಾದುವುಗಳ ಮಿಶ್ರಣ. ೩. ಮೊಸರಲ್ಲಿ ಕಲಸಿದ ಹುರಿಹಿಟ್ಟು.
ಸತ್ತ್ವೆ (ನಾ). ಬಸಿರಿ ; ಗರ್ಭಿಣಿ.
ಸತ್ಸಂಗ (ನಾ). ಸಜ್ಜನರ ಸಹವಾಸ.
ಸಥಿ (ನಾ). ೧. ಪ್ರಭಾವ; ವರ್ಚಸ್ಸು. ೨.=ಸಥೆ.
ಸಥೆ (ನಾ). ಆತ್ಮೀಯತೆ ; ಸಲಿಗೆ ; ಸದರ.
ಸದಕು (ಕ್ರಿ). ೧. ಹೊಡೆ ; ಬಡಿ ; ತದುಕು. ೨. ಕುಟ್ಟು ; ಪುಡಿಮಾಡು
ಸದಗುಪ್ಪೆ (ನಾ). ಔಷಧಿಗಾಗಿ ಉಪಯೋಗಿಸುವ ಒಂದು ಜಾತಿಯ ಸಸ್ಯ ; ನಾಗದಾಳಿ.
ಸದನ (ನಾ). ಮನೆ ; ವಸತಿ.
ಸದಭಿಮತ (ನಾ). ೧. ಪಂಡಿತ ; ವಿದ್ಯಾವಂತ. ೨. ಒಳ್ಳೆಯ ಅಭಿಪ್ರಾಯ. (ಗು). ೩. ಅನುಮೋದಿಸಿದ ; ಒಪ್ಪಿದ. ೪. ಸಜ್ಜನರಿಗೆ ಒಪ್ಪಿಗೆಯಾದ.
ಸದಮಲ(ಳ) (ಗು). ಪವಿತ್ರವಾದ ; ನಿರ್ಮಲವಾದ.
ಸದಯ (ನಾ). ೧. ದಯೆ; ಕರುಣೆ. ೨. ಕರುಣೆ; ದಯೆಯಿಂದ ಕೂಡಿದವನು. (ಗು). ೩. ದಯೆಯಿಂದ ಕೂಡಿದ.
ಸದರ್(ರು) (ನಾ). ೧. ವಿಶೇಷ ನ್ಯಾಯಾಲಯ. ೨. ಮುಂದಾಳು; ಮುಖಂಡ. ೩. ಶೀರ್ಷಿಕೆ; ಶಿರೋನಾಮೆ.
ಸದರ (ನಾ). ೧. ಸಲಿಗೆ; ಸಸಾರ. ೨. ಸಲೀಸು; ಸುಲಭ ; ಸರಾಗ.
ಸದರಿ (ಗು). ಮೇಲೆ ನಮೂದಿಸಿದ; ಪ್ರಸ್ತುತ.
ಸದಸ್ಯ (ನಾ). ಸಮಿತಿ, ಸಂಘ ಮುಂತಾದ ಘಟಕಗಳಲ್ಲಿ ಕಾನೂನು ಮೂಲಕವಾದ ಸಂಬಂಧ ಹೊಂದಿರುವವನು. ~ತನ = ಸದಸ್ಯನಾಗಿರುವಿಕೆ ; ಸದಸ್ಯತ್ವ.
ಸದಸ್ಸು (ನಾ). ಸಭೆ ; ಓಲಗ.
ಸದಾ (ಅ). ಎಡೆಬಿಡದೆ ; ಯಾವಾಗಲೂ.
ಸದಾಚಾರ (ನಾ). ಒಳ್ಳೆಯ ನಡತೆ, –ಆಚಾರ.
ಸದಾಚಾರಿ (ನಾ). ಒಳ್ಳೆಯ ನಡತೆಯುಳ್ಳವನು; ಸಭ್ಯ.
ಸದಾನಂದ (ನಾ). ನಿರಂತರವಾಗಿ ಇರುವ ಸಂತೋಷ.
ಸದುಗತಿ = ಸದ್ಗತಿ.
ಸದುಗುಣ = ಸದ್ಗುಣ.
ಸದೃಕ್ಷ = ಸದೃಶ.
ಸದೃಶ (ನಾ). ೧. ಸಮಾನವಾದುದು ; ಸಾಟಿಯಾದುದು. (ಗು). ೨. ಸಾಟಿಯಾದ; ಸಮಾನವಾದ.

ಸದೆ (ಕ್ರಿ). ೧. ಹೊಡೆ ; ಬಡಿ. ೨. ಕುಟ್ಟು ; ಜಜ್ಜು. (ನಾ). ೩. ಕಸ ; ಹೊಲಸು. ~ಕು(ಗು)ಟ್ಟು = ೧. ಪುಡಿಮಾಡು ; ನುರಿಸು. ೨. = ಸದೆಬಡಿ. ~ಬಡಿ=ಕೊಲ್ಲು; ನಾಶಮಾಡು.

ಸದೆಗ (ನಾ). ಅಲ್ಪ ; ಕ್ಷುದ್ರ.

ಸದ್ಗತಿ (ನಾ). ಒಳ್ಳೆಯ ಗತಿ ; ಮೋಕ್ಷ.

ಸದ್ಗುಣ (ನಾ). ೧. ಒಳ್ಳೆಯ ಗುಣ ; ಸದಾಚಾರ. (ಗು). ೨. ಒಳ್ಳೆಯ ಗುಣವುಳ್ಳ.

ಸದ್ಗುಣಿ (ನಾ). ಒಳ್ಳೆಯ ಗುಣಗಳುಳ್ಳವನು ; ಸದಾಚಾರಿ.

ಸದ್ಗುರು (ನಾ). ಒಳ್ಳೆಯ ಗುರು ; ಶ್ರೇಷ್ಠನಾದ ಉಪಾಧ್ಯಾಯ.

ಸದ್ಗೃಹಸ್ಥ (ನಾ). ಒಳ್ಳೆಯ ಗೃಹಸ್ಥ; ಕುಲೀನ.

ಸದ್ದು (ನಾ). ಗದ್ದಲ ; ಶಬ್ದ.

ಸದ್ಭಕ್ತಿ (ನಾ). ಶ್ರೇಷ್ಠವಾದ ಭಕ್ತಿ.

ಸದ್ಭಾವ (ನಾ). ೧. ಇರುವಿಕೆ ; ಅಸ್ತಿತ್ವ. ೨. ಒಳ್ಳೆಯ ಸ್ವಭಾವ ; ಒಳ್ಳೆಯತನ.

ಸದ್ಭಾವನೆ (ನಾ). ಒಳ್ಳೆಯ ಅಭಿಪ್ರಾಯ.

ಸದ್ಮ (ನಾ). ೧. ಆಸನ ; ಪೀಠ. ೨. ಮನೆ ; ನಿವಾಸ. ೩. ದೇವಾಲಯ ; ಗುಡಿ.

ಸದ್ಯ (ಅ). ಪ್ರಕೃತ ; ಈಗ.

ಸದ್ಯೋಜಾತ (ನಾ). ೧. ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ ಮತ್ತು ಈಶಾನ ವೆಂಬ ಶಿವನ ಪಂಚಮುಖಗಳಲ್ಲಿ ಒಂದು. ೨. ಆಗ ತಾನೇ ತೆಗೆದ ಬೆಣ್ಣೆ ; ನವನೀತ. (ಗು). ೩. ಆಗತಾನೇ ಹುಟ್ಟಿದ ; ನವಜಾತ.

ಸಧರ್ಮ (ಗು). ೧. ಒಂದೇ ಧರ್ಮಕ್ಕೆ ಸೇರಿದ. ೨. ಒಂದೇ ಸ್ವಭಾವದ.

ಸಧರ್ಮಿ (ನಾ). ಒಂದೇ ಧರ್ಮಕ್ಕೆ ಸೇರಿದವನು; ಸಮಾನಧರ್ಮವುಳ್ಳವನು.

ಸಧವೆ (ನಾ). ಸುಮಂಗಲಿ ; ಮುತ್ತೈದೆ.

ಸಧಾರ (ನಾ). ಬಲಶಾಲಿ ; ಶೂರ. ~ತನ = ಕಲಿತನ ; ಪರಾಕ್ರಮ.

ಸನಗು (ನಾ). ಸರಕು ; ಮಾಲು.

ಸನದು (ನಾ). ಅಧಿಕಾರ ಪತ್ರ ; ರಾಯಸ ; ನಿರೂಪ.

ಸನಾತನ (ನಾ). ೧. ಹಳಬ ; ಪುರಾತನ ವ್ಯಕ್ತಿ. ೨. ವಿಷ್ಣು. ೩. ಬ್ರಹ್ಮ. ೪. ಶಿವ. (ಗು). ೫. ಹಳೆಯ ; ಪುರಾತನವಾದ. ೬. ಶಾಶ್ವತವಾದ.

ಸನಾಥ (ಗು). ಒಡೆಯನುಳ್ಳ ; ಯಜಮಾನನಿರುವ.

ಸನಾದಿ (ನಾ). ಒಂದು ವಾದ್ಯವಿಶೇಷ ; ಶಹನಾಯಿ.

ಸನಾಭಿ (ನಾ). ೧. ಆಪ್ತಬಂಧು. ೨. ಸಹೋದರ. ೩. ಹೋಲುವೆ ; ಸಾದೃಶ್ಯ.

ಸನಾಯಿ = ಸನಾದಿ.

ಸನಿ (ನಾ). ನವಗ್ರಹಗಳಲ್ಲಿ ಒಂದು ; ಶನಿ.

ಸನಿಕೆ (ನಾ). ಕಬ್ಬಿಣದ ಒಂದು ಸಾಧನ; ಸಲಿಕೆ.

ಸನಿಯ (ನಾ). ಸಮೀಪ ; ಹತ್ತಿರ.

ಸನಿಹ = ಸನಿಯ.

ಸನೀನು (ನಾ). ಬಂದೂಕಿನ ಕೋವಿಗೆ ತೊಡಿಸುವ ಅಲಗು.

ಸನುಮತ (ನಾ). ಸಮ್ಮತ ; ಒಪ್ಪಿಗೆ.

ಸನ್ನಣ (ನಾ). ೧. ಸನ್ನಾಹ; ಸಜ್ಜು. ೨. ಕವಚ; ಚಿಲಖತ್ತು.

ಸನ್ನದು = ಸನದು.

ಸನ್ನದ್ಧ (ನಾ). ೧. ಕವಚವನ್ನು ತೊಟ್ಟವನು; ಯುದ್ಧಕ್ಕೆ ಸಿದ್ಧನಾದವನು. (ಗು). ೨. ಬಿಗಿದ ; ಕಟ್ಟಿದ. ೩. ಸಿದ್ಧವಾದ ; ಸಜ್ಜಾದ.

ಸನ್ನಹ (ನಾ). ೧. ಸಿದ್ಧತೆ ; ಸಜ್ಜು. ೨. ಉಪಕರಣ ; ಸಾಮಗ್ರಿ.

ಸನ್ನಾಹ ೧. = ಸನ್ನಣ. ೨. ಯುದ್ಧಕ್ಕೆ ಸನ್ನದ್ಧವಾದ ಸೇನೆ. ೩. ಗುಂಪು ; ರಾಶಿ.

ಸನ್ನಿ (ನಾ). ಅಧಿಕವಾದ ಜ್ವರದಿಂದುಂಟಾಗುವ ಪರಿಣಾಮ ; ಬುದ್ಧಿಭ್ರಮಣೆ.

ಸನ್ನಿಕಾಶ (ಗು). ಸಮಾನವಾದ.
ಸನ್ನಿದ (ನಾ). ಹತ್ತಿರ ; ಸಮೀಪ.
ಸನ್ನಿಧಾನ (ನಾ). ೧. ಒಟ್ಟಿಗೆ ಇಡುವುದು. ೨. = ಸನ್ನಿಧಿ. ೩. ಎದುರು ; ಸಮ್ಮುಖ.
ಸನ್ನಿಧಿ (ನಾ). ೧. ಸಮೀಪ; ಸಾನ್ನಿಧ್ಯ. ೨. ರಾಜರು ಮುಂತಾದ ಹಿರಿಯ ವ್ಯಕ್ತಿಗಳನ್ನು ಕುರಿತು ಹೇಳುವಾಗ ಬಳಸುವ ಮಾತು.
ಸನ್ನಿಪಾತ (ನಾ). ೧.ಕೆಳಗೆ ಬೀಳುವುದು; ಪತನ. ೨. ಕೂಟ ; ಸಂಯೋಗ. ೩. = ಸನ್ನಿ. ~ಜ್ವರ = ಸನ್ನಿಯಿಂದ ಕೂಡಿದ ಜ್ವರ.
ಸನ್ನಿಭ = ಸದೃಶ.
ಸನ್ನಿವೇಶ (ನಾ). ೧. ಪರಿಸರ ; ವಾತಾವರಣ. ೨. ಸ್ಥಾನ ; ಜಾಗ. ೩. ಸಂದರ್ಭ ; ಘಟನೆ.
ಸನ್ನಿಹಿತ (ಗು). ೧. ಹತ್ತಿರದಲ್ಲಿರುವ ; ಸಮೀಪದಲ್ಲಿರುವ. ೨. ಸಜ್ಜಾದ ; ಸಿದ್ಧವಾದ.
ಸನ್ನುಡಿ (ನಾ). ಒಳ್ಳೆಯ ಮಾತು.
ಸನ್ನುತ (ಗು). ಹೊಗಳಿದ ; ಸ್ತುತಿಸಿದ.
ಸನ್ನುತಿ (ನಾ). ಅತಿಶಯವಾದ ಹೊಗಳಿಕೆ. ~ಇಸು = ಹೊಗಳು ; ಸ್ತುತಿಸು.
ಸನ್ನೆ ೧. = ಸನ್ನೆಗೋಲು. ೨.ಸುಳಿವು ; ಸಂಜ್ಞೆ. ೩. ಒಂದು ಬಗೆಯ ವಾದ್ಯವಿಶೇಷ. ~ಕ(ಗ)ಟ್ಟಿಗೆ = ಸನ್ನೆಗೋಲು. ~ಕೊ(ಗೊ)ೀಲು = ಭಾರವಾದ ಅಥವಾ ಹೂತಿರುವ ವಸ್ತುವನ್ನು ಮೀಟಿ ಮೇಲಕ್ಕೆ ಎತ್ತುವ ಕೋಲು ; ಮೀಟುಗೋಲು.
ಸನ್ಮತ (ನಾ). ೧. ಒಳ್ಳೆಯ ಮನಸ್ಸು ; ಸದ್ಭಾವ. ೨. ಸಮ್ಮತಿ; ಒಪ್ಪಿಗೆ. ೩. ಒಳ್ಳೆಯ ಅಭಿಪ್ರಾಯ ; ಸದಭಿಪ್ರಾಯ.
ಸನ್ಮಾನ (ನಾ). ಮನ್ನಣೆ ; ಪುರಸ್ಕಾರ. ~ಇಸು = ಮನ್ನಣೆ ಮಾಡು ; ಪುರಸ್ಕರಿಸು.
ಸನ್ಮಾನಿ (ನಾ). ಮನ್ನಣೆಯನ್ನು ಪಡೆದವನು ; ಆದರಕ್ಕೆ ಪಾತ್ರನಾದವನು.
ಸನ್ಮಾನ್ಯ ೧. = ಸನ್ಮಾನಿ. (ಗು). ೨.ಆದರಕ್ಕೆ ಪಾತ್ರನಾದ.
ಸನ್ಮಾರ್ಗ (ನಾ). ಸರಿಯಾದ ರೀತಿ ; ಸದಾಚಾರ.
ಸನ್ಮೋಹನ = ಸಮ್ಮೋಹ. ~ಅಸ್ತ್ರ = ಸಮ್ಮೋಹನಾಸ್ತ್ರ.
ಸಪಕ್ಷ (ಗು). ೧. ರೆಕ್ಕೆಗಳುಳ್ಳ. ೨. ಒಂದೇ ಗುಂಪಿಗೆ ಸೇರಿದ.
ಸಪತ್ನ = ಸಾಪತ್ನ.
ಸಪತ್ನಿ = ಸವತಿ.
ಸಪದಿ (ಅ). ಕೂಡಲೆ ; ತಕ್ಷಣ.
ಸಪರ್ಯ = ಸಪರ್ಯೆ.
ಸಪರ್ಯೆ (ನಾ). ಸೇವೆ ; ಪೂಜೆ.
ಸಪಾಟು (ನಾ). ಮಟ್ಟಸವಾದುದು ; ಚಪ್ಪಟೆ.
ಸಪಾಯಿ (ನಾ). ೧. ಗಿಲೀಟು ; ಮೆರುಗು. ೨. ನಯ ; ನುಣುಪು. ೩. ಸ್ವಚ್ಛತೆ ; ಶುಭ್ರತೆ. ೪.ತೀರಿಸುವುದು; ಮುಗಿಸುವುದು. ~ಮಾಡು = ೧. ಮಟ್ಟಮಾಡು ; ಸಮಮಾಡು. ೨. ಸ್ವಚ್ಛಮಾಡು. ೩. ತೀರಿಸು ; ಮುಟ್ಟಿಸು.
ಸಪಿಂಡ (ನಾ). ೧. ಒಂದೇ ಗೋತ್ರಕ್ಕೆ ಸೇರಿದವನು ; ಜ್ಞಾತಿ. (ಗು). ೨. ಒಂದೇ ಗೋತ್ರದ.
ಸಪುರ (ನಾ). ೧. ನವುರಾದ ಒಂದು ಬಗೆಯ ಬಟ್ಟೆ, –ವಸ್ತ್ರ. (ಗು). ೨. = ಸಪೂರ.
ಸಪೂರ (ಗು). ೧. ತೆಳ್ಳಗಿನ ; ನವುರಾದ. ೨. ನಾಜೂಕಾದ; ಸೂಕ್ಷ್ಮವಾದ. ೩. ಸಣ್ಣ; ಬಡಕಲಾದ.
ಸಪ್ತ (ನಾ). ಒಂದು ಸಂಖ್ಯೆ ; ಏಳು. ~ಅಂಗ = ಸ್ವಾಮಿ, ಅಮಾತ್ಯ, ಜನಪದ, ದುರ್ಗ, ಕೋಶ, ಸೈನ್ಯ ಮತ್ತು ಮಿತ್ರ ಎಂಬ ರಾಜ್ಯಾಡಳಿತದ ಏಳು ಅಂಗಗಳು. ~ಅರ್ಚಿ =ಕಾಳಿ, ಕರಾಳಿ, ಮನೋಜವೆ,ಸುಲೋಹಿತೆ, ಸುಧೂಮ್ರವರ್ಣೆ, ಉಗ್ರೆ ಮತ್ತು ಪ್ರದೀಪ್ತೆ

ಎಂಬ ಬೆಂಕಿಯ ಏಳು ನಾಲಗೆಗಳು. ~ಅಶ್ವ =೧. ಅಮೃತಸಂಭವ, ಬಾಷ್ಪಸಂಭವ, ವಹ್ನಿಸಂಭವ, ವೇದಸಂಭವ, ಅಂಡಸಂಭವ, ಗರ್ಭಸಂಭವ ಮತ್ತು ಸಾಮಸಂಭವ ಎಂಬ ಸೂರ್ಯನ ಏಳು ಕುದುರೆಗಳು. ೨. ಗಾಯತ್ರಿ, ಬೃಹತಿ, ಉಷ್ಣಿಕ್ಕು, ಜಗತಿ, ತ್ರಿಷ್ಟುಪ್ಪು, ಅನುಷ್ಟುಪ್ಪು ಮತ್ತು ಪಂಕ್ತಿ ಎಂಬ ಏಳು ಛಂದೋರೂಪವಾದ ಕುದುರೆಗಳು. ೩. ಏಳು ಕುದುರೆಗಳನ್ನು ಹೊಂದಿದವನು; ಸೂರ್ಯ. ~ಕುಲಾಚಲ =ಮಹೇಂದ್ರ, ಮಲಯ, ಸಹ್ಯ, ಶುಕ್ತಿಮತ್ತು, ಋಕ್ಷ, ವಿಂಧ್ಯ ಮತ್ತು ಪಾರಿಯಾತ್ರವೆಂಬ ಏಳು ಕುಲಪರ್ವತಗಳು. ~ಛ(ಚ್ಛ)ದ =ಬಾಳೆಯ ಗಿಡದಲ್ಲಿ ಒಂದು ಜಾತಿ; ಏಳೆಲೆ ಬಾಳೆ. ~ತಂತು = ಯಾಗ; ಯಜ್ಞ. ~ದಿವ್ಯ = ಕೋಶ, ರವಿ, ತಂಡುಲ, ಅಗ್ನಿ, ತಪ್ತಮಾಷ, ಜಲ ಮತ್ತು ವಿಷವೆಂಬ ಏಳು ದಿವ್ಯಗಳು. ~ದ್ವೀಪ = ಜಂಬು, ಶಾಲ್ಮಲಿ, ಕುಶ, ಕ್ರೌಂಚ, ಶಾಕ, ಪ್ಲಕ್ಷ ಮತ್ತು ಪುಷ್ಕರವೆಂಬ ಏಳು ಭೂಭಾಗಗಳು. ~ಧಾತು = ದೇಹದಲ್ಲಿರುವ ರಸ, ರಕ್ತ, ಮಾಂಸ, ಮೇದಸ್ಸು, ಮಜ್ಜೆ, ಅಸ್ಥಿ ಮತ್ತು ಶುಕ್ಲವೆಂಬ ಏಳು ಧಾತುಗಳು. ~ಪರ್ಣ =ಸಪ್ತಚ್ಛದ. ~ಮದ = ಕುಲ, ಯೌವನ, ಸ್ತ್ರೀ, ಅನ್ನ, ದಾನ, ವಿದ್ಯೆ ಮತ್ತು ಉದ್ಯೋಗವೆಂಬುವಕ್ಕೆ ಸಂಬಂಧಿಸಿದ ಏಳು ಮದಗಳು. ~ಮಾತೃಕೆ = ಬ್ರಾಹ್ಮಿ, ಮಾಹೇಶ್ವರಿ, ಕೌಮಾರಿ, ವೈಷ್ಣವಿ, ವಾರಾಹಿ, ಇಂದ್ರಾಣಿ ಮತ್ತು ಚಾಮುಂಡಿ ಎಂಬ ಏಳು ಜನ ಮಾತೃಕೆಯರು. ~ಲೋಕ = ಭೂಲೋಕ, ಭುವರ್ಲೋಕ, ಸ್ವರ್ಲೋಕ, ಮಹರ್ಲೋಕ, ಜನಲೋಕ, ತಪೋಲೋಕ ಮತ್ತು ಸತ್ಯಲೋಕವೆಂಬ ಏಳು ಊರ್ಧ್ವಲೋಕಗಳು. ~ವರ್ಣ = ಶುಕ್ಲ, ನೀಲ, ಪೀತ, ರಕ್ತ, ಹರಿತ, ಕಪಿಶ ಮತ್ತು ಚಿತ್ರವೆಂಬ ಏಳು ಬಣ್ಣಗಳು. ~ವಾರಿಧಿ = ಕ್ಷಾರ, ಕ್ಷೀರ, ದಧಿ, ಘೃತ, ಇಕ್ಷುರಸ, ಮದ್ಯ ಮತ್ತು ಸಿಹಿನೀರು ಎಂಬ ಏಳು ಸಮುದ್ರಗಳು. ~ವ್ಯಸನ = ಸ್ತ್ರೀ, ಅಕ್ಷ, ಮೃಗಯೆ, ಪಾನ, ವಾಕ್ಪಾರುಷ್ಯ, ದಂಡಪಾರುಷ್ಯ ಮತ್ತು ಅರ್ಥದೂಷಣೆ ಎಂಬ ಸಪ್ತವ್ಯಸನಗಳು. ~ಸಪ್ತಿ = ಸಪ್ತಾಶ್ವ. ~ಸ್ವರ = ಷಡ್ಜ, ಋಷಭ, ಗಾಂಧಾರ, ಮಧ್ಯಮ, ಪಂಚಮ, ಧೈವತ ಮತ್ತು ನಿಷಾದವೆಂಬ ಏಳು ಸ್ವರಗಳು.

ಸಪ್ತಕ (ನಾ). ಏಳರಿಂದ ಕೂಡಿದುದು; ಏಳರ ಗುಂಪು.

ಸಪ್ತತಿ (ನಾ). ಏಳು ಹತ್ತುಗಳ ಮೊತ್ತ; ಎಪ್ಪತ್ತು.

ಸಪ್ತಪದಿ (ನಾ). ವಿವಾಹಕಾಲದಲ್ಲಿ ವಧೂವರರು ಏಳು ಹೆಜ್ಜೆಗಳನ್ನಿಟ್ಟು ಹೋಮಕುಂಡವನ್ನು ಪ್ರದಕ್ಷಿಣೆ ಮಾಡುವ ಒಂದು ವಿಧಿ.

ಸಪ್ತಮಿ (ನಾ). ೧. ಪಕ್ಷದ ಏಳನೆಯ ದಿನ. ೨. ವ್ಯಾಕರಣದಲ್ಲಿಯ ಒಂದು ವಿಭಕ್ತಿಯ ಹೆಸರು.

ಸಪ್ತರ್ಷಿ (ನಾ). ವಿಶ್ವಾಮಿತ್ರ, ಜಮದಗ್ನಿ, ಭರದ್ವಾಜ, ಗೌತಮ, ಅತ್ರಿ, ವಸಿಷ್ಠ ಮತ್ತು ಕಶ್ಯಪ ಎಂಬ ಏಳು ಜನ ಋಷಿಗಳು. ~ಮಂಡಲ = ಯಾವಾಗಲೂ ಉತ್ತರ ಮುಖಿಯಾಗಿ ಪ್ರಶ್ನಾರ್ಥಕಚಿಹ್ನೆಯ ಆಕಾರದಲ್ಲಿ ಹೊಂದಿಕೊಂಡಿರುವ ಏಳು ನಕ್ಷತ್ರಗಳ ಗುಂಪು.

ಸಪ್ತಲೆ (ನಾ). ಒಂದು ಜಾತಿಯ ಮಲ್ಲಿಗೆ.

ಸಪ್ತಾಹ (ನಾ). ೧. ಏಳು ದಿನಗಳು; ಒಂದು ವಾರ. ೨. ಏಳು ದಿನಗಳು ನಡೆಯುವ ಒಂದು ಉತ್ಸವ, –ಕಾರ್ಯಕ್ರಮ.

ಸಪ್ತಿ (ನಾ). ಕುದುರೆ; ವಾಜಿ.

ಸಪ್ಪ (ನಾ). ಹಾವು; ಸರ್ಪ.

ಸಪ್ಪಗೆ (ಅ). ೧. ರುಚಿಯಿಲ್ಲದೆ. ೨. ಸಂತೋಷ ವಿಲ್ಲದೆ.
ಸಪ್ಪಳ = ಸಪ್ಪುಳ್.
ಸಪ್ಪುಳ್(ಳು) (ನಾ). ಶಬ್ದ; ಸದ್ದು.
ಸಪ್ಪುಳ = ಸಪ್ಪುಳ್.
ಸಪ್ಪೆ (ನಾ). ರುಚಿಯಿಲ್ಲದುದು; ನಿಸ್ಸಾರವಾದುದು; ಚಪ್ಪೆ. ~ಊಟ = ಖಾರ, ಉಪ್ಪು, ಹುಳಿ ಇಲ್ಲದ ಪಥ್ಯದ ಊಟ. ~ಮುಖ = ಪೆಚ್ಚುಮುಖ.
ಸಪ್ರಮಾಣ (ಗು). ೧. ಪ್ರಮಾಣಸಹಿತವಾದ; ರುಜುವಾತಾದ. ೨. ಸರಿಯಾದ ಅಳತೆಯಿಂದ ಕೂಡಿದ.
ಸಪ್ರಾಣ (ಗು). ಪ್ರಾಣದಿಂದ ಕೂಡಿದ; ಜೀವಂತವಾದ. ~ಇಸು = ೧. ಚೈತನ್ಯವನ್ನು ಹೊಂದು. ೨. ಚೈತನ್ಯ ಒದಗಿಸು; ಜೀವ ಬರುವಂತೆ ಮಾಡು.
ಸಫಲ (ಗು). ಯಶಸ್ವಿಯಾದ; ಫಲವನ್ನು ಪಡೆದ; ಸಾರ್ಥಕವಾದ.
ಸಫಲತೆ (ನಾ). ಸಾರ್ಥಕ್ಯ; ಯಶಸ್ಸು.
ಸಫಾಯಿ = ಸಪಾಯಿ.
ಸಬ (ನಾ). ಶವ; ಕಳೇಬರ.
ಸಬಕಾರ (ನಾ). ಸಾಬೂನು; ಸೋಪು.
ಸಬರ (ನಾ). ೧. ಎತ್ತಿನ ಬೆನ್ನಿನ ಮೇಲೆ ಹಾಕುವ ಹೊದಿಕೆ; ಕವುದಿ. ೨. ಬೇಡ; ಶಬರ. ~ಪ(ವ)ಡೆ = ಬೇಡರ ಪಡೆ, –ಗುಂಪು.
ಸಬರಿ (ನಾ). ಶಬರಿ; ಬೇಡಿತಿ.
ಸಬಲ (ನಾ). ೧. ಬಲಶಾಲಿ; ಶಕ್ತಿವಂತ. (ಗು). ೨. ಶಕ್ತಿಯಿಂದ ಕೂಡಿದ. ೩. ಸೈನ್ಯದಿಂದ ಕೂಡಿದ.
ಸಬಲೆ (ನಾ). ಬಲಿಷ್ಠಳಾದವಳು; ಗಟ್ಟಿಗಿತ್ತಿ.
ಸಬಳ ೧. = ಸಬಲ. ೨. ಈಟಿ. ~ಇಗ=ಈಟಿಯನ್ನು ಆಯುಧವನ್ನಾಗಿ ಉಳ್ಳವನು.
ಸಬುದ = ಶಬ್ದ.
ಸಬೂಬು (ನಾ). ಕಾರಣ; ನೆಪ.
ಸಬ್ಬ = ಸರ್ವ. ~ಲಗ್ಗೆ = ಸರ್ವಲಗ್ಗೆ.
ಸಬ್ಬಕ್ಕಿ (ನಾ). ಸೀಮೆಅಕ್ಕಿ; ಸಾಬುಅಕ್ಕಿ.
ಸಬ್ಬವ = ಸರ್ಬವ. ~ಕಾ(ಗಾ)ಱ(ರ)=ಹಾಸ್ಯಗಾರ; ವಿದೂಷಕ.
ಸಬ್ಬವಕಾರ್ತಿ (ನಾ). ೧. ಮೇಳದ ಹೆಂಗಸು. ೨. ಹಾಸ್ಯಗಾತಿ.
ಸಬ್ಬಸಗಿ = ಸಬ್ಬಸಿಗೆ.
ಸಬ್ಬಸಿಗೆ (ನಾ). ಒಂದು ಜಾತಿಯ ಸೊಪ್ಪು.
ಸಬ್ಬಸೀಗೆ = ಸಬ್ಬಸಿಗೆ.
ಸಭಾಕಂಪ (ನಾ). ಸಭೆಯ ಮುಂದೆ ನಿಂತಾಗ ಭಯದಿಂದ ಉಂಟಾಗುವ ನಡುಕ.
ಸಭಾಗೃಹ (ನಾ). ಸಭೆ ಸೇರುವ ಮನೆ; ಸಭಾಂಗಣ.
ಸಭಾಜನ (ನಾ). ಸಭೆಯಲ್ಲಿರುವ ಜನರು; ಸಭಾಸದರು.
ಸಭಾತ್ಯಾಗ (ನಾ). ಸಭೆಯನ್ನು ವರ್ಜಿಸುವುದು; ಸಭೆಯನ್ನು ಬಿಟ್ಟುಹೋಗುವುದು.
ಸಭಾಧ್ಯಕ್ಷ (ನಾ). ಸಭೆಯ ಮುಖ್ಯಸ್ಥ.
ಸಭಾಪತಿ = ಸಭಾಧ್ಯಕ್ಷ.
ಸಭಾಸದ (ನಾ). ಸಭೆಯ ಸದಸ್ಯ; ಸಭಿಕ.
ಸಭಿಕ = ಸಭಾಸದ.
ಸಭೆ (ನಾ). ೧. ಪರಿಷತ್ತು; ಗೋಷ್ಠಿ. ೨. ಓಲಗ; ದರ್ಬಾರು. ~ಕೊ(ಗೊ)ಡು = ಸಭೆಯನ್ನು ಏರ್ಪಡಿಸು; ಓಲಗವನ್ನು ಜರುಗಿಸು.
ಸಭ್ಯ (ನಾ). ೧. ಸಭಿಕ; ಸಭಾಸದ. ೨. ಶಿಷ್ಟ; ಸುಸಂಸ್ಕೃತನಾದ ವ್ಯಕ್ತಿ. (ಗು). ೩. ಶಿಷ್ಟತೆಯಿಂದ ಕೂಡಿದ; ಸೌಜನ್ಯವುಳ್ಳ.
ಸಮ (ನಾ). ೧. ಪಾತಳಿ; ಮಟ್ಟಸ. ೨. ಸಜ್ಜು; ಸಿದ್ಧತೆ. ೩. ಎರಡರಿಂದ ಭಾಗಿಸಲ್ಪಡಬಹುದಾದ ಸಂಖ್ಯೆ; ಬೆಸವಲ್ಲದ ಸಂಖ್ಯೆ. ೪. ವರ್ಷ; ಸಂವತ್ಸರ. ೫. ಚರ್ಮ; ತೊಗಲು. ೬. ಒಂದು ಬಗೆಯ ಅರ್ಥಾಲಂಕಾರ.

(ಗು). ೭. ಸಮಾನವಾದ; ಓರಗೆಯ. ೮. ಮಟ್ಟಸವಾದ; ಏರುಪೇರಿಲ್ಲದ. ೯. ತಟಸ್ಥವಾದ; ನಿಶ್ಚಲವಾದ. ೧೦. ಸಾರ್ವತ್ರಿಕವಾದ. (ಅ). ೧೧. ಸೊಗಸಾಗಿ; ಚೆನ್ನಾಗಿ. ~ಕ(ಗ)ಟ್ಟು = ೧. ಎಣೆಯಾಗು; ಸಾಟಿಯಾಗು. ೨. ಏರ್ಪಡಿಸು; ಸಿದ್ಧಗೊಳಿಸು. ೩. ಏರ್ಪಾಡು; ಸಿದ್ಧತೆ. ೪. ಔಚಿತ್ಯ; ಯುಕ್ತತೆ. ೫. ನಿರ್ಣಯ; ನಿರ್ಧಾರ. ~ಕೊ(ಗೊ)ಳಿಸು = ೧. ತಿದ್ದು; ಸರಿಪಡಿಸು. ೨. ಏರ್ಪಡಿಸು; ಏರ್ಪಾಡು ಮಾಡು. ೩. ತಿಳಿಸು; ಮುಟ್ಟಿಸು. ೪. ತಾಳು; ವಹಿಸು. ~ಕೋನ = ತೊಂಬತ್ತು ಅಂಶದ ಕೋನ; ಕಾಟಕೋನ. ~ಗಾಜು(ರ) = ಚಮತ್ಕಾರ; ಮೋಜು. ~ತಟ್ಟು = ಮಟ್ಟಸವಾದುದು; ತಗ್ಗುದಿಣ್ಣೆಗಳಿಲ್ಲದುದು. ~ತೂಕ = ೧. ಏರುಪೇರಿಲ್ಲದ ಸ್ಥಿತಿ. ೨. ಸಮಚಿತ್ತ. ೩. ಸಮಾನ ಪ್ರಮಾಣ. ~ದಂಡಿ = ೧. ತಕ್ಕಡಿಯ ಕೋಲು. ೨. ಸಾಟಿ; ಸಮಾನ; ಎಣೆ.

**ಸಮಂಜಸ** (ಗು). ೧. ಸರಿಯಾದ; ಸೂಕ್ತವಾದ. ೨. ನ್ಯಾಯವಾದ; ಪ್ರಾಮಾಣಿಕವಾದ.

**ಸಮಂತು** (ನಾ). ೧. ಸೌಂದರ್ಯ; ಸೊಬಗು. ೨. ಓರಣ; ಅಚ್ಚುಕಟ್ಟು. (ಅ). ೩. ಚೆನ್ನಾಗಿ; ಸೊಗಸಾಗಿ. ೪. ಹಾಗೆ; ಅಂತೆ.

**ಸಮಕಲು** = ಸವಕಲು.

**ಸಮಕಾಲೀನ** (ನಾ). ೧. ಒಂದೇ ಕಾಲದಲ್ಲಿದ್ದವನು. (ಗು). ೨. ಒಂದೇಕಾಲದ.

**ಸಮಕ್ಷ** ೧. = ಸಮಕ್ಷಮ. (ಗು). ೨. ಮುಂದುಗಡೆಯಲ್ಲಿರುವ.

**ಸಮಕ್ಷಮ** (ನಾ). ಮುಂದುಗಡೆ; ಪ್ರತ್ಯಕ್ಷ.

**ಸಮಗಾನ** (ನಾ). ಏಕತಾನ; ಸಮಶ್ರುತಿ.

**ಸಮಗೋಷ್ಠಿ** (ನಾ). ಜೊತೆಯವರು ಆಡುವ ಮಾತು.

**ಸಮಗ್ರ** ೧. = ಸಮಗ್ರತೆ. (ಗು). ೨. ಸಕಲ; ಎಲ್ಲ.

**ಸಮಗ್ರತೆ** (ನಾ). ಸಂಪೂರ್ಣತೆ.

**ಸಮಜ** (ನಾ). ಪ್ರಾಣಿಗಳ ಗುಂಪು.

**ಸಮಜಾಯಿಷಿ** (ನಾ). ೧. ಒಪ್ಪಿಸುವಿಕೆ; ತಿಳಿಸುವಿಕೆ. ೨. ಸಮಾಧಾನ; ಸಾಂತ್ವನ.

**ಸಮಜಾಯಿಸು** (ಕ್ರಿ). ೧. ತಿಳಿಯಪಡಿಸು; ಒಪ್ಪಿಸು. ೨. ಸಮಾಧಾನಪಡಿಸು.

**ಸಮಟಿಗೆ** = ಚಮ್ಮಟಿಕೆ.

**ಸಮತಲ(ಳ)** = ಸಮತಟ್ಟು. ~ಇಸು = ೧. ಸಮತಟ್ಟುಮಾಡು; ಮಟ್ಟಮಾಡು. ೨. ಸಮತಟ್ಟಾಗಿರು.

**ಸಮತೆ** (ನಾ). ೧. ಸಾದೃಶ್ಯ; ಹೋಲಿಕೆ. ೨. ಓರಗೆ; ಸಮಾನ. ೩. ಗುರುತು; ಚಿಹ್ನೆ. ೪. ಒಗ್ಗಟ್ಟು; ಐಕ್ಯ. ೫. ಯುಕ್ತತೆ; ಔಚಿತ್ಯ. ೬. ಸೌಂದರ್ಯ; ಚೆಲುವು. ೭. ನಿಷ್ಪಕ್ಷಪಾತತೆ. ~ಕಟ್ಟು = ಗುಂಪುಗೂಡು; ಒಂದೆಡೆ ಸೇರು. ~ಕೆ(ಗೆ)ಡು = ಸ್ಥಿರತೆಯನ್ನು ಕಳೆದುಕೊಳ್ಳು.

**ಸಮತೋಲ** = ಸಮತೂಕ.

**ಸಮತೋಲನ** = ಸಮತೂಕ.

**ಸಮದತ್ತಿ** (ನಾ). ತನ್ನ ಸಮಾನನಾದವನಿಗೆ ಕೊಡುವ ದಾನ.

**ಸಮದರ್ಶಿ** (ನಾ). ಸಮಾನವಾದ ದೃಷ್ಟಿಯುಳ್ಳವನು; ನಿಷ್ಪಕ್ಷಪಾತಿ.

**ಸಮದರ್ಶಿತ್ವ** (ನಾ). ೧. ಸಮನಾಗಿ ನೋಡುವ ಶಕ್ತಿ. ೨. ಸಮಸ್ಥಿತಿಯುಳ್ಳ ಮನಸ್ಸು,—ಚಿತ್ತ.

**ಸಮನಂತರ** (ನಾ). ತರುವಾಯ; ತದನಂತರ.

**ಸಮನಿಕೆ** (ನಾ). ಸಂಗಮ; ಸೇರುವೆ.

**ಸಮನಿಸು** (ಕ್ರಿ). ೧. ಸಿದ್ಧವಾಗು; ಅಣಿಯಾಗು. ೨. ಪಡೆ; ಹೊಂದು. ೩. ದೊರಕು; ಸಿಕ್ಕು. ೪. ಉಂಟುಮಾಡು; ನಿರ್ಮಿಸು. ೫. ಉಂಟಾಗು; ಒದಗು; ಸಂಭವಿಸು. ೬. ಮಾಡು.

**ಸಮುನೆ** = ಸವನೆ.

**ಸಮನ್ವಯ** (ನಾ). ೧. ಹೊಂದಿಕೆ; ಹೊಂದಾಣಿಕೆ. ೨. ಕುಲ; ಮನೆತನ.

**ಸಮನ್ವಿತ** (ಗು). ಹೊಂದಿಕೊಂಡ; ಸೇರಿದ.

**ಸಮಭಾಜಕ** (ಗು). ಸಮಾನವಾಗಿ ವಿಭಾಗಿಸುವ.

**ಸಮಯ** (ನಾ). ೧. ಜೊತೆಗೂಡಿ ಸಂಚರಿಸುವುದು. ೨. ಗುಂಪು; ಸಮೂಹ. ೩. ಒಡಂಬಡಿಕೆ; ಒಪ್ಪಂದ. ೪. ವೇಳೆ; ಹೊತ್ತು; ಕಾಲ. ೫. ಸಂದರ್ಭ; ಅವಕಾಶ. ೬. ಸಿದ್ಧಾಂತ; ತತ್ತ್ವ. ೭. ಸಂಪ್ರದಾಯ; ಕಟ್ಟು; ಕಟ್ಟಳೆ. ೮. ಧರ್ಮ; ಮತ. ೯. ಸಂಕೇತ; ಸಂಜ್ಞೆ. ~ಅಧೀನ = ಸಂದರ್ಭಕ್ಕೆ ವಶವಾದ, –ಒಳಗಾದ. ~ಅನುಸಾರ = ಸಂದರ್ಭಕ್ಕೆ ಅನುಗುಣವಾದ; ಸಮಯಕ್ಕೆ ಉಚಿತವಾದ. ~ಉಚಿತ = ಸಮಯಾನುಸಾರ. ~(೦)ತ(ದ)ಪ್ಪು = ಕ್ರಮ ತಪ್ಪು; ನಿಯಮ ತಪ್ಪು. ~ಸ್ಫೂರ್ತಿ = ಸಂದರ್ಭಕ್ಕೆ ಸರಿಯಾಗಿ ಆಗಿಂದಾಗಲೇ ಹೊಳೆಯುವ ವಿಚಾರ; ಪ್ರಸಂಗಾವಧಾನ.

**ಸಮಯಿ** (ನಾ). ೧. ಒಂದು ಮತಕ್ಕೆ ಸೇರಿದವನು. ೨. ಯಾವುದಾದರೊಂದು ಸಿದ್ಧಾಂತವನ್ನು ಅನುಸರಿಸುವವನು. ೩. ದೀಪಮಾಲೆ ಕಂಬ; ಸಮೆ.

**ಸಮಯಿಸು** (ಕ್ರಿ). ನಿರ್ಮಿಸು; ಕಟ್ಟಿಸು; ಮಾಡಿಸು.

**ಸಮರ** (ನಾ). ಯುದ್ಧ; ಕಾಳಗ. ~ಅಂಕಣ = ಸಮರಂಗ. ~ಅಂಗಣ = ಸಮರಂಗ. ~ಆಕರ = ಸಮರಂಗ.

**ಸಮರಂಗ** (ನಾ). ಯುದ್ಧಭೂಮಿ; ಸಮರಾಂಗಣ.

**ಸಮರಸ** (ನಾ). ಸಮನಾಗಿ ಬೆರೆಯುವಿಕೆ; ಸಾಮರಸ್ಯ.

**ಸಮರಾತ್ರಿ** (ನಾ). ಅರ್ಧರಾತ್ರಿ; ಮಧ್ಯರಾತ್ರಿ.

**ಸಮರು(ರು)** (ಕ್ರಿ). ೧. ಹಸನುಮಾಡು; ಓರಣಗೊಳಿಸು. ೨. ಕತ್ತರಿಸು; ಕೊಚ್ಚು. ೩. ಅಂದಗೊಳಿಸು; ಅಲಂಕರಿಸು. (ನಾ). ೪. ಅಲಂಕಾರ; ಶೃಂಗಾರ. ~ಕ(ಗ)ತ್ತರಿ = ಗಿಡ, ಪೊದೆ ಮುಂತಾದುವುಗಳನ್ನು ಕತ್ತರಿಸುವ ಸಾಧನ.

**ಸಮರ್ಚನ** (ನಾ). ಪೂಜೆ; ಅರ್ಚನೆ.

**ಸಮರ್ಚನೆ** = ಸಮರ್ಚನ.

**ಸಮರ್ಥ** (ನಾ). ೧. ಗಟ್ಟಿಗ; ದಕ್ಷ. ೨. ಐಶ್ವರ್ಯವಂತ; ಶ್ರೀಮಂತ. ೩. ಬುದ್ಧಿವಂತ; ಬಲ್ಲಿದ. ೪. ಶಕ್ತಿವಂತ; ಬಲಶಾಲಿ. (ಗು). ೫. ಬಲಶಾಲಿಯಾದ. ೬. ದಕ್ಷತೆಯಿಂದ ಕೂಡಿದ. ೭. ಅರ್ಥವತ್ತಾದ. ೮. ಯೋಗ್ಯವಾದ. ~ಇಕೆ = ಶಕ್ತಿ; ಸಾಮರ್ಥ್ಯ.

**ಸಮರ್ಥಕ** (ನಾ). ಯೋಗ್ಯನಾದವನು; ಅರ್ಹನಾದವನು.

**ಸಮರ್ಥತೆ** (ನಾ). ೧. ಸಾಮರ್ಥ್ಯ; ಶಕ್ತಿ. ೨. ಕಾವ್ಯದಲ್ಲಿ ಅರ್ಥಗಾಂಭೀರ್ಯ, –ಭಾವಪ್ರಾಚುರ್ಯ.

**ಸಮರ್ಥನ** (ನಾ). ೧. ಬೆಂಬಲಕೊಡುವಿಕೆ; ಪುಷ್ಟೀಕರಿಸುವಿಕೆ. ೨. ದೃಢಪಡಿಸುವಿಕೆ. ೩. ಅರ್ಹತೆ; ಯೋಗ್ಯತೆ. ೪. ನಿರ್ಧಾರ; ನಿರ್ಣಯ.

**ಸಮರ್ಥನೆ** = ಸಮರ್ಥನ.

**ಸಮರ್ಥಿಸು** (ಕ್ರಿ). ೧. ದೃಢಪಡಿಸು. ೨. ಪುಷ್ಟಿಕೊಡು.

**ಸಮರ್ಪಕ** (ನಾ). ೧. ಸೂಕ್ತವಾದುದು; ಸರಿಯಾದುದು. (ಗು). ೨. ಜೊತೆಗೂಡಿ ಹೋಗುವ ಅಥವಾ ಬರುವ. ೩. ಸೂಕ್ತವಾದ; ಸರಿಯಾದ.

**ಸಮರ್ಪಣ** (ನಾ). ೧. ಕೂಡಿಸುವಿಕೆ; ಸೇರಿಸುವಿಕೆ. ೨. ನೀಡುವಿಕೆ; ಅರ್ಪಿಸುವಿಕೆ.

**ಸಮರ್ಪಣೆ** = ಸಮರ್ಪಣ.

ಸಮರ್ಪಿಸು (ಕ್ರಿ). ನೀಡು ; ಅರ್ಪಿಸು.

ಸಮವರ್ತಿ ೧. = ಸಮದರ್ಶಿ. ೨. ಯಮ.

ಸಮವಸರಣ (ನಾ). ಕೇವಲಜ್ಞಾನಿಯಾದ ನಂತರ ತೀರ್ಥಂಕರನು ಬೋಧೆಮಾಡಲು ಕುಬೇರನಿಂದ ರಚಿತವಾದ ಮಂಟಪ. ~ಭೂಮಿ = ಸಮವಸರಣವಿರುವ ಸ್ಥಳ.

ಸಮವಾಯ ೧. = ಸಮವಾಯಿ. ೨. ಕೂಡಿಕೆ; ಸೇರಿಕೆ ; ಸಂಯೋಗ. ೩. ಗುಂಪು ; ಸಮೂಹ.

ಸಮವಾಯಿ (ನಾ). ಅವಿನಾಸಂಬಂಧ ; ಬೇರೆ ಮಾಡಲಾಗದ ಸಂಬಂಧ.

ಸಮಷ್ಟಿ (ನಾ). ೧. ಸಂಪೂರ್ಣವಾದುದು ; ಸಮಗ್ರತೆ. ೨. ಒಟ್ಟು ; ಮೊತ್ತ. ~ರೂಪ = ಸಮಗ್ರರೂಪ ; ಒಟ್ಟುರೂಪ.

ಸಮಸಂಸ್ಕೃತ (ನಾ). ಶಬ್ದರೂಪವು ಹೆಚ್ಚು ವ್ಯತ್ಯಾಸವಿಲ್ಲದೆ ಕನ್ನಡದಲ್ಲಿ ಬಳಸುವ ಸಂಸ್ಕೃತಶಬ್ದ.

ಸಮಸ್ತ (ನಾ). ೧. ಮುಖಂಡ ; ಯಜಮಾನ; ಪಂಚ. (ಗು). ೨. ಸಕಲ ; ಸಂಪೂರ್ಣ. ೩. ಕೂಡಿಸಿದ ; ಸೇರಿಸಿದ.

ಸಮಸ್ಥಿತಿ (ನಾ). ೧. ಸಮಾಧಾನಕರವಾದ ಸ್ಥಿತಿ. ೨. ಏರುಪೇರಿಲ್ಲದ ಸ್ಥಿತಿ.

ಸಮಸ್ಯಾತ್ಮಕ (ಗು). ಸಮಸ್ಯೆಯಿಂದ ಕೂಡಿದ; ಬಗೆಹರಿಸಲಾಗದ.

ಸಮಸ್ಯೆ (ನಾ). ೧. ಕಗ್ಗಂಟು ; ಇಕ್ಕಟ್ಟು. ೨. ಪದ್ಯದ ಒಂದು ಸಾಲನ್ನು ಕೊಟ್ಟು ಪೂರೈಸುವಂತೆ ಹೇಳುವುದೇ ಮುಂತಾದ ಒಗಟು. ೩. ಬಿಡಿಸಲು ಕಷ್ಟವಾದ ಪ್ರಶ್ನೆ ; ಪದಿರು.

ಸಮಾಕಲಿತ (ಗು). ೧. ಕಟ್ಟಿದ ; ಬಿಗಿದ ; ಬಂಧಿಸಿದ. ೨. = ಸಮಾಕೀರ್ಣ.

ಸಮಾಕೀರ್ಣ (ಗು). ಕೂಡಿಕೊಂಡ ; ಸೇರಿದ.

ಸಮಾಖ್ಯೆ (ನಾ). ೧. ಕೀರ್ತಿ ; ಯಶಸ್ಸು. ೨. ಹೆಸರು ; ಅಭಿಧಾನ.

ಸಮಾಗತ (ಗು). ಚೆನ್ನಾಗಿ ಕೂಡಿಕೊಂಡ, –ಸೇರಿದ.

ಸಮಾಗಮ (ನಾ). ೧. ಸೇರಿಕೆ ; ಸಂಯೋಗ. ೨. ಸಂಭೋಗ. ೩. ಸಹವಾಸ.

ಸಮಾಚಾರ (ನಾ). ೧. ಸರಿಯಾದ ನಡವಳಿಕೆ ; ಸದ್ವರ್ತನೆ. ೨. ವಿಷಯ ; ಸಂಗತಿ. ೩. ವರ್ತಮಾನ ; ಸುದ್ದಿ.

ಸಮಾಜ (ನಾ). ೧. ಸಂಸ್ಥೆ ; ಸಂಘ. ೨. ಸಾಂಘಿಕ ಜೀವನ ; ಕೂಡಿಬಾಳುವುದು. ~ಘಾತುಕ = ಸಮಾಜಕ್ಕೆ ದ್ರೋಹವನ್ನು ಬಗೆಯುವವನು ; ಸಮಾಜದ್ರೋಹಿ. ~ವಾದ = ಸಾಮ್ಯವಾದ. ~ಶಾಸ್ತ್ರ = ಮಾನವಜನಾಂಗದ ಹುಟ್ಟು, ಬೆಳವಣಿಗೆ ಮೊದಲಾದುವನ್ನು ಕುರಿತಶಾಸ್ತ್ರ. ~ಸುಧಾರಣೆ= ಸಮಾಜವನ್ನು ತಿದ್ದುವುದು.

ಸಮಾಜವಾದಿ (ನಾ). ಸಮಾಜವಾದವನ್ನು ಅನುಸರಿಸುವವನು.

ಸಮಾಧಾನ (ನಾ). ೧. ಶಾಂತಿ ; ನೆಮ್ಮದಿ. ೨. ತೃಪ್ತಿ ; ತಣಿವು. ೩. ತಾಳ್ಮೆ ; ಸಹನೆ. ೪. ಸಂತೈಕೆ ; ಉಪಶಮನ. ೫. ಪರಿಹಾರ.

ಸಮಾಧಿ (ನಾ). ೧. ಏಕಾಗ್ರತೆ ; ತನ್ಮಯತೆ. ೨. ಸತ್ತವರನ್ನು ಹೂಳುವ ಜಾಗ; ಗೋರಿ. ೩. ಹತ್ತು ಕಾವ್ಯಗುಣಗಳಲ್ಲಿ ಒಂದು. ೪. ಯೋಗದಲ್ಲಿ ಒಂದು ಅವಸ್ಥೆ. ~ಮರಣ =ಯೋಗದಿಂದ ಶರೀರತ್ಯಾಗಮಾಡುವುದು ; ಸಲ್ಲೇಖನ.

ಸಮಾನ (ನಾ). ೧. ಎಣೆ ; ಸಾಟಿ. ೨. ಪಂಚ ಪ್ರಾಣವಾಯುಗಳಲ್ಲಿ ಒಂದು. ೩. ಓರಗೆಯವನು ; ಸಮಾನವಯಸ್ಕ. (ಗು). ೪. ಯೋಗ್ಯ ; ತಕ್ಕ. ೫. ಒಂದೇ ಬಗೆಯ; ಒಂದೇ ರೀತಿಯ.

ಸಮಾನತೆ = ಸಮಾನತ್ವ.

ಸಮಾನತ್ವ (ನಾ). ೧. ಹೋಲಿಕೆ ; ಸಾದೃಶ್ಯ. ೨. ಸರಿಸಮವಾಗಿರುವಿಕೆ.

ಸಮಾಪ್ತ (ಗು). ಮುಗಿದ ; ಕೊನೆಗೊಂಡ.
ಸಮಾಪ್ತಿ (ನಾ). ಕೊನೆ ; ಮುಕ್ತಾಯ.
ಸಮಾಮ್ನಾಯ (ನಾ). ೧. ಸಂಪ್ರದಾಯ ; ಪದ್ಧತಿ. ೨. ಕಂಠಪಾಠ; ಉರು. ೩. ಒಟ್ಟು; ಮೊತ್ತ.
ಸಮಾರಂಭ (ನಾ). ೧. ಮೊದಲು ಮಾಡುವಿಕೆ ; ಆರಂಭ. ೨. ವ್ಯವಸ್ಥೆ ; ಏರ್ಪಾಡು. ೩. ಉತ್ಸವ ; ಹಬ್ಬ.
ಸಮಾರಾಧನೆ (ನಾ). ೧. ತೃಪ್ತಿಪಡಿಸುವಿಕೆ. ೨. ಸೇವೆ; ಪೂಜೆ. ೩. ಸಾಮೂಹಿಕ ಭೋಜನಕೂಟ ; ಅನ್ನಸಂತರ್ಪಣೆ.
ಸಮಾರೂಢ (ನಾ). ೧. ತತ್ತ್ವಜ್ಞ; ದಾರ್ಶನಿಕ. (ಗು). ೨. ಏರಿದ ; ಹತ್ತಿದ. ೩. ಪಡೆದ.
ಸಮಾರೋಪ (ನಾ). ಮುಕ್ತಾಯ ; ಕೊನೆ. ~ಭಾಷಣ = ಮುಕ್ತಾಯ ಭಾಷಣ.
ಸಮಾರ್ಜನ = ಸಮುರ್ಜನ.
ಸಮಾಲೋಕ (ನಾ). ನೋಟ ; ಸಮೀಕ್ಷೆ.
ಸಮಾಲೋಚಕ (ನಾ). ೧. ಚೆನ್ನಾಗಿ ಆಲೋಚಿಸುವವನು. ೨. ಪರೀಕ್ಷಕ ; ವಿಮರ್ಶಕ.
ಸಮಾಲೋಚನೆ (ನಾ). ೧. ಆಲೋಚನೆ; ಚಿಂತನೆ. ೨. ವಿಮರ್ಶೆ ; ಪರಿಶೀಲನೆ.
ಸಮಾಲೋಚಿಸು (ಕ್ರಿ). ೧. ಚಿಂತಿಸು; ಆಲೋಚಿಸು. ೨. ವಿಮರ್ಶಿಸು; ಪರಿಶೀಲಿಸು.
ಸಮಾವರ್ತನ (ನಾ). ೧. ಹಿಂದಿರುಗುವುದು. ೨. ವಿದ್ಯಾಭ್ಯಾಸದ ನಂತರ ಗುರುಕುಲದಿಂದ ಹಿಂದಿರುಗುವುದು.
ಸಮಾವರ್ತನೆ = ಸಮಾವರ್ತನ.
ಸಮಾವಿಷ್ಟ (ಗು). ಚೆನ್ನಾಗಿ ಕೂಡಿಕೊಂಡಿರುವ. ~ಆ(ವಾ)ಗು = ಲೀನವಾಗು ; ಐಕ್ಯವಾಗು.
ಸಮಾವೇಶ (ನಾ). ೧. ಒಳಸೇರುವಿಕೆ ; ಪ್ರವೇಶ. ೨. ಒಟ್ಟುಗೂಡುವಿಕೆ; ಸೇರುವಿಕೆ.
ಸಮಾಸ (ನಾ). ೧. ಒಟ್ಟುಗೂಡಿಸಿದುದು ; ಒಂದಾಗಿ ಸೇರಿಸಿದುದು. ೨. ಎರಡು ಅಥವಾ ಹಲವು ಪದಗಳು ಕೂಡಿ ಆದ ಸಂಯುಕ್ತ ಪದ. ೩. ಸಮುದಾಯ. ೪. ಒಟ್ಟು; ಮೊತ್ತ.
ಸಮಾಹಿತ (ಗು). ೧. ಒಟ್ಟುಗೂಡಿಸಿದ ; ಸಂಗ್ರಹಿಸಿದ. ೨. ಒಟ್ಟಿಗೆ ಇರಿಸಿದ.
ಸಮಾಳಿಸು (ಕ್ರಿ). ನಿಭಾಯಿಸು ; ಸಂಬಾಳಿಸು.
ಸಮಿತಿ (ನಾ). ೧. ಸಂಘ ; ಸಭೆ. ೨. ಗುಂಪು ; ಸಮೂಹ. ೩. ಯಾವುದಾದರೂ ಉದ್ದೇಶಕ್ಕಾಗಿ ರಚಿತವಾದ ಉಪಸಭೆ ; ಕಮಿಟಿ.
ಸಮಿತೆ = ಸಮಿತ್ತು.
ಸಮಿತ್ತು (ನಾ). ೧. ಹೋಮಕ್ಕೆ ಬೇಕಾಗುವ ಅತ್ತಿ, ಅರಳಿ ಮುಂತಾದ ಮರಗಳ ಪುಳ್ಳೆ. ೨. ಕಟ್ಟಿಗೆ ; ಸೌದೆ.
ಸಮಿಧೆ = ಸಮಿತ್ತು.
ಸಮೀಕ (ನಾ). ಕಾಳಗ ; ಯುದ್ಧ.
ಸಮೀಕರಿಸು (ಕ್ರಿ). ೧. ಸಮಗೊಳಿಸು ; ಮಟ್ಟಮಾಡು. ೨. ಹೊಂದಿಸು ; ಜೋಡಿಸು.
ಸಮೀಕ್ಷಕ (ನಾ). ಸೂಕ್ಷ್ಮವಾಗಿ ನೋಡುವವನು, ಪರಿಶೀಲಿಸುವವನು.
ಸಮೀಕ್ಷಣೆ = ಸಮೀಕ್ಷೆ.
ಸಮೀಕ್ಷೆ (ನಾ). ಸೂಕ್ಷ್ಮವಾಗಿ ನೋಡುವುದು; ಪರಿಶೀಲನೆ.
ಸಮೀಚೀನ (ಗು). ೧. ಯೋಗ್ಯವಾದ ; ಸರಿಯಾದ. ೨. ಸಮೃದ್ಧವಾದ ; ಯಥೇಚ್ಛವಾದ.
ಸಮೀಪ (ನಾ). ೧. ಹತ್ತಿರ ; ಸಾಮೀಪ್ಯ ; ಬಳಿ. (ಗು). ೨. ಹತ್ತಿರದ ; ಸಮೀಪದ. ~ಇಸು = ಬಳಿಸಾರು ; ಹತ್ತಿರಕ್ಕೆ ಬರು.
ಸಮೀಪವರ್ತಿ (ನಾ). ೧. ಆಪ್ತ ; ನಿಕಟವರ್ತಿ. (ಗು). ೨. ಹತ್ತಿರದಲ್ಲಿರುವ ; ನಿಕಟವರ್ತಿಯಾದ.
ಸಮೀರ (ನಾ). ಗಾಳಿ ; ವಾಯು. ~ಕುಮಾರ = ಸಮೀರಜ

ಸಮೀರಜ (ನಾ). ೧. ವಾಯುವಿನ ಮಗ. ೨. ಹನುಮಂತ. ೩. ಭೀಮ.

ಸಮೀರಣ = ಸಮೀರ.

ಸಮೀಹಿತ (ನಾ). ಬಯಸಿದುದು ; ಅಪೇಕ್ಷಿಸಿದುದು.

ಸಮುಖ = ಸಮ್ಮುಖ.

ಸಮುಚಿತ (ನಾ). ೧. ಯೋಗ್ಯವಾದುದು. (ಗು). ೨. ಯೋಗ್ಯವಾದ.

ಸಮುಚ್ಚಯ (ನಾ). ೧. ಗುಂಪು ; ಸಮೂಹ; ಸಮುದಾಯ. ೨. ಜೋಡಣೆ ; ಹೊಂದಿಕೆ. ೩. ಅರ್ಥಾಲಂಕಾರಗಳಲ್ಲಿ ಒಂದು. ೪. ವ್ಯಾಕರಣದಲ್ಲಿ ಪದ ಅಥವಾ ವಾಕ್ಯಗಳ ಗುಂಪು. ~ಅಕ್ಷರ = ಒತ್ತಕ್ಷರ; ಸಂಯುಕ್ತಾಕ್ಷರ. ~ಪ್ರತ್ಯಯ = ಎರಡು ಅಥವಾ ಹೆಚ್ಚಿನ ನಾಮಪದಗಳಿಗೆ ಒಂದೇ ಕ್ರಿಯೆಯು ಅನ್ವಯಿಸುವಾಗ ಬಳಸುವ ಪ್ರತ್ಯಯ.

ಸಮುಚ್ಛಿನ್ನ (ಗು). ಸಂಪೂರ್ಣ ನಾಶವಾದ.

ಸಮುಜ್ಜ್ವಲ(ಳ) (ಗು). ಅತ್ಯುಜ್ಜ್ವಲವಾದ ; ಪ್ರಕಾಶಮಾನವಾದ. ~ಇಸು = ಕಾಂತಿಯುತವಾಗು ; ಹೊಳೆ ; ಪ್ರಕಾಶಿಸು.

ಸಮುತ್ಕಟ (ಗು). ಅಧಿಕವಾದ ; ಹೆಚ್ಚಾದ.

ಸಮುತ್ಖಾತ (ಗು). ಚೆನ್ನಾಗಿ ತೋಡಿದ, –ಅಗೆದ.

ಸಮುತ್ತರಣ (ನಾ). ದಾಟುವಿಕೆ.

ಸಮುತ್ತುಂಗ (ಗು). ಅತ್ಯುನ್ನತವಾದ ; ಬಹಳ ಎತ್ತರವಾದ.

ಸಮುತ್ಥಾನ (ನಾ). ಮೇಲಕ್ಕೆ ಏಳುವುದು ; ಮೂಡುವುದು.

ಸಮುತ್ಪತ್ತಿ (ನಾ). ಹುಟ್ಟುವಿಕೆ; ಮೂಡುವಿಕೆ.

ಸಮುತ್ಪನ್ನ (ಗು). ಹುಟ್ಟಿದ ; ಮೂಡಿದ.

ಸಮುತ್ಪಾಟನ (ನಾ). ಕೀಳುವುದು ; ಉತ್ಪಾಟನ.

ಸಮುತ್ಪಾದಿಸು (ಕ್ರಿ). ಉಂಟುಮಾಡು ; ಒದಗಿಸು.

ಸಮುತ್ಸಾರಿತ (ಗು). ೧. ಹೊರಡಿಸಿದ. ೨. ತ್ಯಜಿಸಿದ ; ಬಿಟ್ಟ.

ಸಮುದಗ್ರ (ಗು). ೧. ಬಹಳ ಎತ್ತರವಾದ ; ಉನ್ನತವಾದ. ೨. ಮೇಲಕ್ಕೆತ್ತಿದ ; ಮೇಲೇರಿಸಿದ.

ಸಮುದಯ (ನಾ). ೧. ಮೂಡುವಿಕೆ ; ಹುಟ್ಟುವಿಕೆ. ೨. = ಸಮುದಾಯ.

ಸಮುದಾಯ (ನಾ). ಗುಂಪು ; ಸಮೂಹ.

ಸಮುದಿತ (ಗು). ೧. ಮೇಲೆದ್ದ ; ಮೂಡಿದ. ೨. ಚೆನ್ನಾಗಿ ಕಂಡ. ೩. ಉಂಟಾದ.

ಸಮುದ್ಗತ (ಗು). ಮೇಲೆದ್ದ ; ಮೇಲೇರಿದ.

ಸಮುದ್ಧರಣ (ನಾ). ೧. ಎತ್ತಿ ಹಿಡಿಯುವಿಕೆ ; ಉದ್ಧಾರ ಮಾಡುವಿಕೆ. ೨. ಹೊರತೆಗೆಯುವಿಕೆ. ೩. ವಿಮೋಚನೆ ; ಬಿಡುಗಡೆ.

ಸಮುದ್ಧರಿಸು (ಕ್ರಿ). ೧. ಉದ್ಧರಿಸು. ೨. ವಿಮೋಚನೆ ಮಾಡು ; ಬಿಡುಗಡೆ ಮಾಡು.

ಸಮುದ್ಭವ (ನಾ). ಹುಟ್ಟು ; ಉದ್ಭವ. ~ಇಸು = ೧. ಉಂಟಾಗು. ೨. ಹುಟ್ಟು; ಉದ್ಭವಿಸು.

ಸಮುದ್ರ (ನಾ). ಕಡಲು ; ಸಾಗರ. ~ಘೋಷ = ೧. ಸಮುದ್ರದ ಮೊರೆತ, –ಗರ್ಜನೆ. ೨. ವಾದ್ಯವಿಶೇಷಗಳಲ್ಲಿ ಒಂದು. ~ಫೇನ = ಸಮುದ್ರದ ನೊರೆ; ಕಡಲುನಾಲಗೆ. ~ಮಥನ = ಕಡಲನ್ನು ಕಡೆಯುವಿಕೆ. ~ಯಾನ = ಕಡಲಿನ ಮೇಲೆ ಮಾಡುವ ಪ್ರಯಾಣ. ~ವಹ್ನಿ = ಸಮುದ್ರದ ಬೆಂಕಿ; ವಡಬಾನಲ. ~ವ್ಯಾಪಾರ = ಹಡಗಿನ ಮೂಲಕ ನಡಸುವ ವ್ಯಾಪಾರ.

ಸಮುದ್ರಜ (ನಾ). ಸಮುದ್ರದಲ್ಲಿ ಹುಟ್ಟಿದುದು; ಉಪ್ಪು.

ಸಮುನ್ನತ (ಗು). ೧.ಎತ್ತರವಾದ. ೨.ಮೇಲಕ್ಕೆತ್ತಿದ. ೩. ಮುಖ್ಯವಾದ ; ಪ್ರಧಾನವಾದ. ೪. ಘನತೆಯುಳ್ಳ ; ಗೌರವದ.

ಸಮುನ್ನತಿ (ನಾ). ೧. ಎತ್ತರ; ಔನ್ನತ್ಯ. ೨. ಗೌರವ; ಘನತೆ.

ಸಮುಪಜಾತ (ಗು). ಹುಟ್ಟಿದ; ಜನಿಸಿದ.

ಸಮುಪಸ್ಥಿತ (ಗು). ಹತ್ತಿರದಲ್ಲಿರುವ; ಸಮೀಪಕ್ಕೆ ಬಂದ.

ಸಮುಪಾತ್ತ (ಗು). ೧. ಪಡೆದ; ಹೊಂದಿದ. ೨. ತೆಗೆದುಕೊಂಡ; ಸ್ವೀಕರಿಸಿದ.

ಸಮುಲ್ಲಾಸ (ನಾ). ಅತಿಯಾದ ಆನಂದ, –ಸಂತೋಷ.

ಸಮೂಲ (ಗು). ಮೂಲಸಹಿತವಾದ; ಬೇರು ಸಹಿತವಾದ.

ಸಮೂಹ (ನಾ). ೧. ಸಮುದಾಯ; ಗುಂಪು. ೨. ರಾಶಿ; ಒಟ್ಟಿಲು.

ಸಮೃದ್ಧ (ಗು). ೧. ವೃದ್ಧಿಹೊಂದಿದ; ಏಳಿಗೆ ಪಡೆದ. ೨. ಹುಲುಸಾಗಿ ಬೆಳೆದ; ದಷ್ಟಪುಷ್ಟವಾದ. ೩. ಅಧಿಕವಾದ; ಹೆಚ್ಚಾದ.

ಸಮೃದ್ಧಿ (ನಾ). ೧. ಐಶ್ವರ್ಯ; ಸಂಪತ್ತು. ೨. ಅಭಿವೃದ್ಧಿ; ಏಳಿಗೆ. ೩. ವಿಪುಲತೆ; ಆಧಿಕ್ಯ.

ಸಮೆ (ಕ್ರಿ). ೧. ಮಾಡು; ರಚಿಸು. ೨. ಕೆತ್ತು; ಕಂಡರಿಸು. ೩. ಸವೆ; ಸೊರಗು. ೪. ಆಲೋಚಿಸು; ಚಿಂತಿಸು. ೫. ಮುಗಿಸು; ಪೂರೈಸು. (ನಾ). ೬. ವರ್ಷ; ಸಂವತ್ಸರ. ೭. ದೀಪಮಾಲೆ ಕಂಬ. ~ಇಸು = ಸವೆಸು; ವ್ಯಯಿಸು.

ಸಮೆಯಿಸು (ಕ್ರಿ). ೧. ಮಾಡಿಸು; ರಚಯಿಸು. ೨. ಮುಗಿ; ಪೂರೈಸು. ೩. = ಸಮೆಸು. ೪. ಕ್ಷೀಣಿಸು; ಕ್ಷಯಿಸು; ಸವೆದು ಹೋಗು.

ಸಮೇತ (ಗು). ಕೂಡ; ಸಂಗಡ; ಸಹಿತ.

ಸಮೇಲ(ಳ) (ನಾ). ೧. ಜೊತೆಯಾಗಿ ಬರುವುದು; ಮೇಳಸಹಿತವಾಗಿರುವುದು. ೨. ಸಂಭೋಗ. ೩. ಸೇರಿಕೆ; ಸಂಯೋಗ.

ಸಮೇಲ(ಳ)ನ = ಸಮ್ಮೇಲನ.

ಸಮ್ಮ (ನಾ). ೧. ಚರ್ಮ; ತೊಗಲು. ೨. ಕ್ಷೇಮ; ಸುಖ; ಶರ್ಮ. ~ಕಂಕರಿ = ಚರ್ಮದ ಚಾಟಿ, –ಚಾವಟಿ. ~ಕಾ(ಗಾ)ಜ(ರ) = ಸಮಗಾಜ.

ಸಮ್ಮಟಿಗೆ = ಚಮ್ಮಟಿಕೆ.

ಸಮ್ಮತ ೧. = ಸಮ್ಮತಿ. ೨. ಅಭಿಪ್ರಾಯ; ಆಲೋಚನೆ.

ಸಮ್ಮತಿ (ನಾ). ಒಪ್ಪಿಗೆ; ಒಡಂಬಡಿಕೆ.

ಸಮ್ಮದ (ನಾ). ಹರ್ಷ; ಉಲ್ಲಾಸ.

ಸಮ್ಮನ (ನಾ). ೧. ಒಳ್ಳೆಯ ಮನಸ್ಸು. ೨. ಆದರ; ಸನ್ಮಾನ.

ಸಮ್ಮನಿಸು (ಕ್ರಿ). ೧. ಮನ್ನಣೆ ಮಾಡು; ಸನ್ಮಾನಿಸು. ೨. ಒಪ್ಪು; ಒಡಂಬಡು. ೩. ಉಂಟಾಗು; ಸಂಭವಿಸು.

ಸಮ್ಮರ್ದ (ನಾ). ೧. ತಿಕ್ಕಾಟ; ಘರ್ಷಣೆ. ೨. ನೆರವಿ; ಸಮೂಹ.

ಸಮ್ಮಾನ = ಸನ್ಮಾನ. ~ಇಸು = ಸನ್ಮಾನಿಸು.

ಸಮ್ಮಾರ್ಜನ (ನಾ). ೧. ಗುಡಿಸುವುದು; ಉಡುಗುವುದು. ೨. ಶುದ್ಧಿ ಮಾಡುವುದು. ೩. ತೊಳೆಯುವುದು; ಪ್ರಕ್ಷಾಲನೆ. ೪. ಸಾರಿಸುವುದು.

ಸಮ್ಮಾರ್ಜನಿ (ನಾ). ಪೊರಕೆ; ಕಸಬರಲು.

ಸಮ್ಮಾರ್ಜನೆ = ಸಮ್ಮಾರ್ಜನ.

ಸಮ್ಮಾರ್ಜಿಸು (ಕ್ರಿ). ತೊಳೆ; ಪ್ರಕ್ಷಾಲಿಸು.

ಸಮ್ಮಾವುಗೆ (ನಾ). ಚರ್ಮದ ಪಾದುಕೆ; ಚಮ್ಮಾವುಗೆ.

ಸಮ್ಮಿಲನ (ನಾ). ಒಂದುಗೂಡುವಿಕೆ; ಒಟ್ಟಾಗುವಿಕೆ.

ಸಮ್ಮಿಶ್ರ (ಗು). ಬೆರೆತ; ಮಿಶ್ರವಾದ.

ಸಮ್ಮಿಶ್ರಣ (ನಾ). ಬೆರಕೆ; ಮಿಶ್ರಣ.

ಸಮ್ಮುಖ (ನಾ). ೧. ಎದುರು; ಮುಂಭಾಗ. ೨. ಸನ್ನಿಧಿ; ಸನ್ನಿಧಾನ. ೩. ರಾಜರು ಮುಂತಾದ ಹಿರಿಯ ವ್ಯಕ್ತಿಗಳನ್ನು ಕುರಿತು ಹೇಳುವಾಗ ಬಳಸುವ ಮಾತು. (ಗು).

೪. ಎದುರಿಗಿರುವ; ಅಭಿಮುಖವಾಗಿರುವ. ~(ಂ)ಗೆಯ್ = ಎದುರಿಗೆ ನಿಲ್ಲು; ಅಭಿಮುಖವಾಗಿರು. ~ಕೊ(ಗೊ)ಳಿಸು = ಸನ್ನಿಧಾನಕ್ಕೆ ಬರುವಂತೆ ಮಾಡು. ~ಪೆ(ವೆ)ಱು(ರು) = ಸಮ್ಮುಖಂಗೆಯ್.

ಸಮ್ಮುಗೆ (ನಾ). ಅನುರೂಪವಾದುದು; ಸರಿಹೊಂದಿದುದು.

ಸಮ್ಮುದ (ನಾ). ಅತಿಯಾದ ಆನಂದ, –ಸಂತೋಷ.

ಸಮ್ಮೇಲ(ಳ) = ಸಮ್ಮೇಲನ.

ಸಮ್ಮೇಲ(ಳ)ನ (ನಾ). ೧. ಸೇರುವಿಕೆ; ಕೂಡುವಿಕೆ. ೨. ಸಭೆ; ಗೋಷ್ಠಿ; ಕೂಟ.

ಸಮ್ಮೋದ = ಸಮ್ಮುದ.

ಸಮ್ಮೋಹ (ನಾ). ೧. ಅತಿಶಯವಾದ ಮೋಹ, –ಮರುಳು. ೨. ಎಚ್ಚರ ತಪ್ಪುವುದು; ಮೈಮರವೆ. ~ಇಸು = ೧. ಮೋಹಿಸು; ಮರುಳಾಗು. ೨. ಮೋಹಗೊಳಿಸು; ಮರುಳುಮಾಡು.

ಸಮ್ಮೋಹನ ೧. = ಸಮ್ಮೋಹ. ೨. ಒಂದು ಬಗೆಯ ಆಯುಧ; ಮಂಕು ಕವಿಸುವ ಅಸ್ತ್ರ. ೩. ಮನ್ಮಥನ ಪಂಚಬಾಣಗಳಲ್ಲಿ ಒಂದು.

ಸಮ್ಯಕ್‌ಚಾರಿತ್ರ (ನಾ). ಒಳ್ಳೆಯ ನಡತೆ.

ಸಮ್ಯಕ್ತ್ವ = ಸಮ್ಯಗ್‌ಜ್ಞಾನ.

ಸಮ್ಯಗ್‌ಜ್ಞಾನ (ನಾ). ಸಂಪೂರ್ಣಜ್ಞಾನ, –ತಿಳಿವಳಿಕೆ.

ಸಮ್ಯಗ್‌ದರ್ಶನ = ಸಮ್ಯಗ್‌ಜ್ಞಾನ.

ಸಮ್ಯಗ್‌ದೃಷ್ಟಿ = ಸಮ್ಯಗ್‌ಜ್ಞಾನ.

ಸಮ್ರಾಜ (ನಾ). ಚಕ್ರವರ್ತಿ; ಸಾಮ್ರಾಟ.

ಸಯ್ = ಸೈ. ~ಅಱಿ(ರಿ) = ಸರಿಯಾಗಿ ತಿಳಿದುಕೊಳ್ಳು. ~ಕ(ಗ)ಱೆ(ರೆ) = ಎಡೆಬಿಡದೆ ಸುರಿ; ಒಂದೇ ಸಮನೆ ವರ್ಷಿಸು. ~ಕೆ(ಗೆ)ಡೆ = ದೊಪ್ಪನೆ ಬೀಳು, –ಕೆಡೆ. ~ಪ(ವ)ರಿ = ಚೆನ್ನಾಗಿ ಹರಿ, –ಪ್ರವಹಿಸು. ~ಬೆ(ವೆ)ಱ(ರ)ಗು = ಅತಿಯಾದ ಆಶ್ಚರ್ಯ, –ಸೋಜಿಗ.

ಸಯಂಬರ = ಸ್ವಯಂವರ. ~ಸಾಲೆ = ಸ್ವಯಂವರವು ನಡೆಯುವ ಮಂಟಪ.

ಸಯ್ಗೆ (ನಾ). ಸನ್ನೆ; ಸಂಜ್ಞೆ.

ಸಯ್ತು = ಸೈತು. ~ಇಡು = ೧. ಕ್ರಮಗೊಳಿಸು; ನೇರ್ಪುಮಾಡು. ೨. ಸಮಾಧಾನ ಮಾಡು; ಶಾಂತಗೊಳಿಸು.

ಸಯ್ದ (ನಾ). ಋಜುಬುದ್ಧಿಯುಳ್ಳವನು; ಪ್ರಾಮಾಣಿಕ.

ಸಯ್ಪು = ಸೈಪು. ~ಕ(ಗ)ಜ್ಜ = ಒಳ್ಳೆಯ ಕೆಲಸ; ಸತ್ಕಾರ್ಯ.

ಸಯ್ಯಮ = ಸಂಯಮ.

ಸಯ್ಯಮಿ = ಸಂಯಮಿ.

ಸಯ್ಯುಗ (ನಾ). ಯುದ್ಧ; ಕಾಳಗ.

ಸರ (ನಾ). ೧. ಉಲಿ; ಧ್ವನಿ; ಸ್ವರ. ೨. ಸರಳು; ಅಂಬು; ಶರ. ೩. ಕೊಳ; ಸರಸ್ಸು. ೪. ಮಾಲೆ; ಹಾರ; ಕಂಠಾಭರಣ. ೫. ಹಗ್ಗ; ನೇಣು. ೬. ಜಂತೆಗೆ ಅಳವಡಿಸುವ ಮರದ ಉದ್ದನೆಯ ಪಟ್ಟಿ. (ಗು). ೭. ಎಡೆಬಿಡದ; ನಿರಂತರವಾದ. ~(ಂ)ಕು(ಗು)ಡು = ಧ್ವನಿಮಾಡು; ಉಲಿ. ~(ಂ)ಕೊ(ಗೊ)ಳಿಸು = ೧. ಬಾಣವನ್ನಾಗಿ ಪ್ರಯೋಗಿಸು. ೨. ಹಾರವನ್ನಾಗಿ ಮಾಡು; ಪೋಣಿಸು. ೩. ಸಾಲುಗೊಳಿಸು. ~(ಂ)ತೊ(ದೊ)ಱು(ರು) = ಧ್ವನಿಮಾಡು; ಸ್ವರಹೊರಡಿಸು. ~ಕು(ಗು)ಣಿಕೆ = ಸುಲಭವಾಗಿ ಬಿಚ್ಚಬಹುದಾದ ಗಂಟು; ಮಲುಕು. ~ಗಂಟು = ಸರಗುಣಿಕೆ. ~ತ(ದ)ಪ್ಪು = ಸಾಲುಸಾಲಾಗಿ ಮಾಡುವ ತಪ್ಪು; ಸಂಪೂರ್ಣವಾದ ತಪ್ಪು. ~ಮಂಡಲ = ಸ್ವರಮಂಡಲ.

ಸರಂಜಾಮ ೧. = ಸರಂಜಾಮು. ೨. ದುರ್ಗರಕ್ಷಣೆ, ಸೈನ್ಯ ಮೊದಲಾದುವುಗಳಿಗಾಗಿ

ಕೊಟ್ಟ ಇನಾಮು ಭೂಮಿ. ~ದಾರ = ಸರಂಜಾಮಿಗಾಗಿ ಭೂಮಿಯನ್ನು ಪಡೆದವನು.

ಸರಂಜಾಮು (ನಾ). ಸಾಮಗ್ರಿ; ಉಪಕರಣ.

ಸರಕಟಿಸು (ಕ್ರಿ). ರಭಸದಿಂದ ಮುನ್ನುಗ್ಗು.

ಸರಕಾರ (ನಾ). ರಾಜ್ಯವನ್ನು ಆಳುವ ವ್ಯವಸ್ಥೆ, —ಏರ್ಪಾಟು.

ಸರಕಾರಿ (ಗು). ರಾಜ್ಯದ ಸರ್ಕಾರಕ್ಕೆ ಸಂಬಂಧಿಸಿದ.

ಸರಕು (ನಾ). ೧. ಸಾಮಗ್ರಿ; ಸಾಮಾನು; ಉಪಕರಣ. ೨. ಗೌರವ; ಮನ್ನಣೆ. ೩. ಗಮನ; ಲಕ್ಷ್ಯ. ~ಕೊ(ಗೊ)ಳ್ = ೧. ಗೌರವಿಸು; ಮನ್ನಿಸು. ೨. ಲಕ್ಷಿಸು; ಗಮನಿಸು. ~ತೆ(ದೆ)ಗೆ = ಓಡಿಹೋಗು; ಕಂಬಿಕೀಳು. ~ಮಾಡು = ಸರಕುಗೊಳ್.

ಸರಕುಟವಕ್ಕಿ (ನಾ). ಒಂದು ಜಾತಿಯ ಹಕ್ಕಿ; ಮರಕುಟಿಗ.

ಸರಕ್ಕನೆ (ಅ). ತಕ್ಷಣ; ಕೂಡಲೆ.

ಸರಕ್ತ (ಗು). ಕೆಂಪಾದ; ಕೆಂಬಣ್ಣದ.

ಸರಗ (ನಾ). ಕವಚ; ಚಿಲಖತ್ತು.

ಸರಗು (ನಾ). ಕಾಳಿನ ಪೊಳ್ಳು ಭಾಗ; ಜೊಳ್ಳು.

ಸರಟ (ನಾ). ೧. ಊಸರವಳ್ಳಿ; ಓತಿಕೇತ. ೨. ಸುಳ್ಳುಗಾರ.

ಸರಣ (ನಾ). ೧. ಹೋಗುವುದು; ಚಲಿಸುವುದು. ೨. ಶರಣ; ಶೈವ. ೩. ಹೆಣವನ್ನು ಸುಡಲು ಒಟ್ಟಿದ ಕಟ್ಟಿಗೆಯ ರಾಶಿ.

ಸರಣಿ (ನಾ). ೧. ಹಾದಿ; ದಾರಿ. ೨. ಕ್ರಮ; ಪದ್ಧತಿ. ೩. ಸಾಲು; ಪಂಕ್ತಿ. ೪. ಮೆಟ್ಟಿಲು; ಸೋಪಾನ ಮಾರ್ಗ. ೫. = ಸರತಿ.

ಸರಣು = ಶರಣು.

ಸರತಿ (ನಾ). ೧. ಬಾರಿ; ಸಲ. ೨. ಸರದಿ; ಪಾಳಿ.

ಸರದ (ನಾ). ಶರತ್ಕಾಲ; ಶರದ.

ಸರದಾರ (ನಾ). ೧. ಮುಖ್ಯಸ್ಥ; ಮುಖಂಡ; ಅಧಿಕಾರಿ. ೨. ಶೂರ; ವೀರ.

ಸರದಿ = ಸರತಿ.

ಸರದೇಶಮುಖ (ನಾ). ಪ್ರಾಂತ್ಯದ ಅಧಿಕಾರಿ.

ಸರದೇಶಮುಖಿ (ನಾ). ಒಂದು ಬಗೆಯ ತೆರಿಗೆ; ಸರ್ಕಾರಕ್ಕೆ ಕೊಡಬೇಕಾದ ಉತ್ಪನ್ನದ ಹತ್ತನೆಯ ಒಂದು ಭಾಗ.

ಸರಪಂಚ (ನಾ). ಗ್ರಾಮಪಂಚಾಯತಿಯ ಅಧ್ಯಕ್ಷ.

ಸರಪಣಿ (ನಾ). ಸಂಕೋಲೆ; ಚೈನು. ~ಹೊಲಿಗೆ = ಸರಪಳಿಯ ಆಕಾರದಲ್ಲಿ ಹಾಕುವ ಹೊಲಿಗೆ.

ಸರಪರಾಜು = ಸರಬರಾಜು.

ಸರಪಳಿ = ಸರಪಣಿ.

ಸರಫರಾಜಿ = ಸರಫರಾಜು.

ಸರಫರಾಜು (ನಾ). ೧. ಅಭಿವೃದ್ಧಿ; ಏಳಿಗೆ. ೨. ಬಡ್ತಿ ಕೊಡುವುದು.

ಸರಬ (ನಾ). ಒಂದು ಜಾತಿಯ ಕಾಲ್ಪನಿಕ ಪ್ರಾಣಿ; ಶರಭ.

ಸರಬರಾಜು (ನಾ). ಪೂರೈಕೆ; ಒದಗಿಸುವಿಕೆ.

ಸರಬರಾಯಿ = ಸರಬರಾಜು.

ಸರಬು (ನಾ). ಹೊರೆ; ಕಟ್ಟು.

ಸರಲ್(ಲು,ಳ್,ಳು) (ನಾ). ೧. ಅಂಬು; ಬಾಣ; ಕಣೆ. ೨. ಕಬ್ಬಿಣದ ಸಲಾಕೆ.

ಸರಲ(ಳ) (ನಾ). ೧. ನೇರವಾದುದು; ನೆಟ್ಟಗಿರುವುದು. ೨. ನಿಷ್ಕಪಟ; ಸಾಧುಸ್ವಭಾವದವನು. ೩. ಒಂದು ಜಾತಿಯ ಮರ; ದೇವದಾರು. ೪. ಒಂದು ಜಾತಿಯ ಹಕ್ಕಿ. ೫. ಒಂದು ಜಾತಿಯ ಮೃಗ; ಚಮರಿ. (ಗು). ೬. ನೇರವಾದ; ನೆಟ್ಟಗಿರುವ. ೭. ಕಪಟವಿಲ್ಲದ. ೮. ಹಗುರವಾದ; ಸುಲಭವಾದ. ~ಅನುವಾದ = ಸುಲಭವಾದ ಅನುವಾದ, —ಭಾಷಾಂತರ. ~ತನ = ಆಡಂಬರವಿಲ್ಲದಿರುವಿಕೆ; ನಿರಾಡಂಬರತೆ.

~ಬಡ್ಡಿ = ವರ್ಷವರ್ಷಕ್ಕೆ ಅಸಲಿನ ಮೇಲೆ ಮಾತ್ರ ಹಾಕುವ ಬಡ್ಡಿ. ~ರೇಖೆ = ನೇರವಾದ ಗೆರೆ; ವಕ್ರವಲ್ಲದ ರೇಖೆ.
ಸರಲಸ್ಕರ (ನಾ). ಸೇನಾಪತಿ; ದಂಡನಾಯಕ.
ಸರಲೆ (ನಾ). ೧. ಒಂದು ಜಾತಿಯ ಬಳ್ಳಿ. ೨. ಒಂದು ಜಾತಿಯ ಹಕ್ಕಿ.
ಸರವಂದ (ನಾ). ಬಾಣವನ್ನು ಹೂಡುವುದು; ಶರಬಂಧ. ~ಇಗ =ಕಣೆಗಳನ್ನು ಜೋಡಿಸುವವನು.
ಸರವಣ (ನಾ). ಕುಶವೆಂಬ ಹುಲ್ಲಿನ ಗುಂಪು, –ಪೊದರು.
ಸರವರ = ಸರೋವರ.
ಸರವಳಿಗೆ (ನಾ). ಸೇವಿಗೆ.
ಸರವಾದಿ (ನಾ). ಗಾಯಕ; ಸಂಗೀತಗಾರ.
ಸರವಿ (ನಾ). ೧.ಬೇಟೆ; ಶಿಕಾರಿ. ೨. = ಸರವೆ.
ಸರವು ೧. = ಸರವೆ. ೨. = ಸರಹು. ೩. ಮಳೆಯ ಧಾರೆ, –ಸೆಳಕು.
ಸರವೆ (ನಾ). (ಹುಲ್ಲಿನ) ಹಗ್ಗ; ಹುರಿ.
ಸರಸ (ನಾ).೧.ಸಲ್ಲಾಪ; ಚೆಲ್ಲಾಟ; ವಿನೋದ. ೨. ತಮಾಷೆ; ಹಾಸ್ಯ. ೩. ಸಹೃದಯ; ರಸಿಕ. (ಗು). ೪. ರಸವತ್ತಾದ; ರಸಭರಿತವಾದ. ೫. ಹೊಸದಾದ; ನೂತನವಾದ. ೬. ಪ್ರೀತಿಯಿಂದ ಕೂಡಿದ. ೭. ಸುಂದರವಾದ; ಚೆಲುವಾದ. ~ಆ(ವಾ)ಡು =ಸಲ್ಲಾಪ ಮಾಡು; ವಿನೋದಿಸು; ಚೆಲ್ಲಾಟವಾಡು. ~ಉಕ್ತಿ = ಪ್ರೀತಿಯ ಮಾತು. ~ಕವಿ = ರಸಿಕನಾದ ಕವಿ. ~ಕೇಲಿ(ಳಿ) = ವಿನೋದ; ಚೆಲ್ಲಾಟ. ~ಗಾಜ(ರ) = ರಸಿಕ. ~ಸಲ್ಲಾಪ = ಸಂತೋಷದಿಂದೊಡಗೂಡಿದ ಮಾತುಕತೆ.
ಸರಸತಿ = ಸರಸ್ವತಿ.
ಸರಸರಿಸು (ಕ್ರಿ). ಉತ್ಸಾಹದಿಂದ ಕೂಡಿರು; ಲವಲವಿಸು.
ಸರಸವತಿ (ನಾ). ರಸಿಕಳಾದ ಹೆಂಗಸು.
ಸರಸಿ (ನಾ). ೧. ಸರಸದಿಂದ ಕೂಡಿರುವವನು; ರಸಿಕ. ೨. ಸರೋವರ; ಕೊಳ. ~ಜಾತ = ಸರಸಿಜ.
ಸರಸಿಜ (ನಾ). ಕೊಳದಲ್ಲಿ ಹುಟ್ಟಿದುದು; ತಾವರೆ. ~ಭವ = ಬ್ರಹ್ಮ. ~ಮಿತ್ರ = ಸೂರ್ಯ.
ಸರಸಿರುಹ = ಸರಸಿಜ.
ಸರಸ್ವತಿ (ನಾ). ೧. ನದಿ; ಹೊಳೆ. ೨. ಒಂದು ನದಿಯ ಹೆಸರು. ೩. ವಿದ್ಯಾಧಿದೇವತೆ; ಶಾರದೆ.
ಸರಹದ್ದು (ನಾ). ಮೇರೆ; ಗಡಿ; ಎಲ್ಲೆ.
ಸರಹು (ನಾ). ಸಣ್ಣಪ್ರವಾಹ; ಝುರಿ.
ಸರಳಿಗೆ (ನಾ). ೧. ಕಡ್ಡಿ; ಪುರಲೆ. ೨. = ಸರವಳಿಗೆ.
ಸರಳಿಸು (ಕ್ರಿ). ನೆಗೆ; ಹಾರು.
ಸರಳೆ (ನಾ). ೧. ನೇರವಾದ ನಡತೆಯುಳ್ಳವಳು; ಋಜುಸ್ವಭಾವದ ಹೆಂಗಸು. ೨. ಸಂಗೀತದಲ್ಲಿಯ ಸಪ್ತಸ್ವರಗಳ ವಿವಿಧ ಮೇಳ.
ಸರಾಗ (ನಾ). ೧. ಸುಲಭ; ಸಲೀಸು. (ಗು). ೨. ಪ್ರೀತಿಯಿಂದ ಕೂಡಿದ. ೩. ಅಡ್ಡಿಯಿಲ್ಲದ; ನಿರಾತಂಕವಾದ. ೪. ಸುಲಭವಾದ; ಸಲೀಸಾದ.
ಸರಾಡ (ನಾ). ಗಡಿ; ಸರಹದ್ದು.
ಸರಾತಿ (ನಾ). ಡೇರೆಗೆ ಸುತ್ತ ಉಪಯೋಗಿಸುವ ಬಟ್ಟೆ.
ಸರಾದಿ = ಸರಾತಿ.
ಸರಾಫ (ನಾ). ೧. ಚಿನ್ನದ ವ್ಯಾಪಾರಿ; ಅಕಸಾಲಿ. ೨. ಲೇವಾದೇವಿ ಮಾಡುವವನು; ಬಡ್ಡಿ ವ್ಯವಹಾರ ಮಾಡುವವನು. ೩. ಸಂಸ್ಥೆ ಅಥವಾ ಅಂಗಡಿಯಲ್ಲಿ ಹಣದ ಮೇಲ್ವಿಚಾರಣೆಯನ್ನು ನೋಡಿಕೊಳ್ಳುವವನು.
ಸರಾಯು (ನಾ). ಮದ್ಯ; ಮದಿರೆ.
ಸರಾಯಿ = ಸರಾಯು.
ಸರಾವ = ಶ್ರಾವ.
ಸರಾವೆ = ಶ್ರಾವೆ.

ಸರಾಸರಿ (ನಾ). ಸುಮಾರು; ಅಂದಾಜು.

ಸರಿ (ಕ್ರಿ). ೧. ಹೋಗು; ಚಲಿಸು. ೨. ಪಕ್ಕಕ್ಕೆ ಹೋಗು; ಅರುಗಾಗು. ೩. ಜಾರು; ಕಳಚು. ೪. ಓಡು; ಪಲಾಯನ ಮಾಡು. ೫. ಪಕ್ಕಕ್ಕೆ ತಳ್ಳು, –ಇಡು. ೬. ಕ್ರಮವಾಗಿ ಜೋಡಿಸು. (ನಾ). ೭. ಯೋಗ್ಯವಾದುದು; ಉಚಿತವಾದುದು. ೮. ಸಮ; ಸಾಟಿ; ಎಣೆ. ೯. ಸಮಸಂಖ್ಯೆಯುಳ್ಳುದು; ವಿಷಮವಲ್ಲದುದು. ೧೦. ಮಳೆ; ವೃಷ್ಟಿ. ೧೧. ಗುಂಪು; ರಾಶಿ. ೧೨. ಒಪ್ಪಿಗೆಯನ್ನು ಸೂಚಿಸುವಾಗ ಹೇಳುವ ಮಾತು. ೧೩. = ಸಜಿ. ~ಆ(ಯಾ)ಗು=೧. ನೇರವಾಗು; ಉಚಿತವಾಗು. ೨. ಹೋಲು; ಎಣೆಯಾಗು; ಸಮಾನವಾಗು. ~ಆ(ಯಾ)ಳು = ೧. ಸರಿಸಮಾನವಾದ ಸ್ಥಾನವುಳ್ಳವನು. ೨. ದೊಡ್ಡ ಆಳು; ಹಷ್ಟಪುಷ್ಟ ವ್ಯಕ್ತಿ. ~ಒ(ಯೊ)ರೆ = ಸರಿಸಮ. ~ಕ(ಗ)ಟ್ಟು =೧. ಎಣೆಯಾಗು; ಸಮಾನವಾಗು. ೨. = ಸರಿಗಾಣ್. ~ಕಾ(ಗಾ)ಣ್(ಣು) =೧. ಸಮಾನವಾಗಿ ನೋಡು; ಏಕರೀತಿಯಲ್ಲಿ ನೋಡು. ೨. ಯೋಗ್ಯವೆಂದು ತೋರು; ಸಮವೆನಿಸು. ~ಗೆಳತಿ = ಓರಗೆಯ ಸಖಿ, –ಸ್ನೇಹಿತೆ. ~ಜೋಡಿ = ಸಮಾನವಾದ ಜೊತೆ. ~ತೂ(ದೂ)ಗಿಸು = ನಿಭಾಯಿಸು; ನಿರ್ವಹಿಸು; ಸಾಗಿಸು. ~ತೂ(ದೂ)ಗು = ಸಮವಾಗು; ಸಮತೋಲನದಿಂದ ಕೂಡಿರು. ~ದೊರೆ = ಸರಿಸಮಾನ; ಸಾಟಿ. ~ನೋಡು = ಹೋಲಿಸು; ತುಲನೆಮಾಡು. ~ಪಡಿಸು =ಸರಿಗೊಳಿಸು; ನೇರ್ಪು ಮಾಡು. ~ಪ(ವ)ರೆಯ = ಸಮಪ್ರಾಯ; ಓರಗೆ. ~ಪಾಲ್(ಲು) = ಸಮಭಾಗ; ಸರಿಯಾದ ಭಾಗ. ~ಬ(ವ)ರ್(ರು) = ೧. ಸಮಾನವಾಗು; ಹೋಲು. ೨. ಸರಿಯಾಗು; ಯೋಗ್ಯವಾಗು; ಉಚಿತವಾಗು. ೩. = ಸರಿಬೀಳು. ~ಬೀಳು = ಮನಸ್ಸಿಗೆ ಒಪ್ಪಿಗೆಯಾಗು. ~ಮ(ವ)ಟೆ(ಳೆ) = ಒಂದೇ ಸಮನಾಗಿ ಸುರಿಯುವ ಮಳೆ; ಧಾರಾಕಾರವಾದ ಮಳೆ. ~ಮಾಡು = ೧. ತಿದ್ದು; ಕ್ರಮಗೊಳಿಸು. ೨. ಸಮಮಾಡು; ಮಟ್ಟಮಾಡು. ~ರಾತ್ರಿ = ಮಧ್ಯರಾತ್ರಿ; ನಡುರಾತ್ರಿ. ~ಸಮ = ಒಂದೇ ಓರಗೆ. ~ಸಾಟಿ = ಸರಿಸಮ. ~ಸುಮಾರು=ಹೆಚ್ಚುಕಡಮೆ; ಅಜಮಾಸು. ~ಹಗಲು = ಮಧ್ಯಾಹ್ನ; ನಡುಹಗಲು. ~ಹೊತ್ತು = ಸರಿರಾತ್ರಿ.

ಸರಿಕ (ನಾ). ಓರಗೆಯವನು; ಸರಿಸಮಾನನಾದವನು. ~ತನ = ಓರಗೆ; ಸರಿಸಮಾನತೆ.

ಸರಿಗ = ಸರಿಕ.

ಸರಿಗೆ (ನಾ). ೧. ಒಂದು ಬಗೆಯ ಕಂಠಾಭರಣ. ೨. ಜರಿ; ಕಲಾಬತ್ತು. ೩. ಲೋಹದ ತಂತಿ; ಕಂಬಿ.

ಸರಿತ್ತು (ನಾ). ನದಿ; ಹೊಳೆ.

ಸರಿತ್ಪತಿ (ನಾ). ನದಿಗಳ ಒಡೆಯ; ಸಮುದ್ರ.

ಸರಿತ್ಸುತ (ನಾ). ನದಿಯ ಮಗ; ಭೀಷ್ಮ.

ಸರಿವು = ಸರುವು.

ಸರಿಸ (ನಾ). ೧. ಯೋಗ್ಯವಾದುದು; ಉಚಿತವಾದುದು. ೨. ಸರಳವಾದುದು; ನೇರವಾದುದು. ೩. ರೀತಿ; ಕ್ರಮ. ೪. ಸಾಟಿ; ಸಮಾನತೆ. ೫. ಸಾನಿಧ್ಯ; ಹತ್ತಿರ. ೬. ಮುಂಭಾಗ; ಎದುರು. ೭. ನಿರಾತಂಕವಾದುದು; ಸುಗಮವಾದುದು. ೮. ಸಾಲು; ಪಂಕ್ತಿ.

ಸರಿಸಪ = ಸರ್ಪ.

ಸರಿಸೃಪ = ಸರೀಸೃಪ.

ಸರೀಕ = ಸರಿಕ.

ಸರೀಸೃಪ (ನಾ). ಹಾವು; ಸರ್ಪ.

ಸರು (ನಾ). ೧.ಮೃಗಗಳು ಓಡಾಡುವ ಜಾಡು, -ಮಾರ್ಗ. ೨. ಕಣಿವೆ ; ಕಂದರ.
ಸರುಜ (ನಾ). ೧. ರೋಗಿ ; ವ್ಯಾಧಿಗ್ರಸ್ತ. (ಗು). ೨. ರೋಗದಿಂದ ನರಳುತ್ತಿರುವ.
ಸರುವ (ಗು). ಎಲ್ಲ ; ಸಕಲ ; ಸರ್ವ.
ಸರುವು (ನಾ). ೧. ಮೃಗಗಳು ಓಡಾಡುವ ಜಾಡು; ಸರು. ೨. ಸಣ್ಣ ಪ್ರವಾಹ; ಝರಿ. ~ಕ(ಗ)ಟ್ಟು = ಧಾರಾಕಾರವಾಗು.
ಸರುಸಪ = ಸರ್ಷಪ.
ಸರುಹು = ಸರು.
ಸರೂಪ (ನಾ). ೧. ರೂಪ ; ಚೆಲ್ವಿಕೆ. (ಗು). ೨. ಚೆಲುವಾದ ; ಸುಂದರವಾದ.
ಸರೋಗ = ಸರುಜ.
ಸರೋಜ(ನಾ). ನೀರಿನಲ್ಲಿ ಹುಟ್ಟಿದುದು; ಕಮಲ. ~ಆಸನ = ಬ್ರಹ್ಮ. ~ಗರ್ಭ = ತಾವರೆಯಲ್ಲಿ ಹುಟ್ಟಿದವನು ; ಬ್ರಹ್ಮ. ~ಮಿತ್ರ = ಸೂರ್ಯ. ~ರಿಪು = ಚಂದ್ರ. ~ಸಖ = ಸರೋಜಮಿತ್ರ.
ಸರೋಜಾತ = ಸರೋಜ.
ಸರೋಜಿನಿ (ನಾ). ೧. ಕಮಲದ ಹೂವು ಮತ್ತು ಅದರ ಬಳ್ಳಿ. ೨. ಕಮಲಗಳ ಸಮೂಹ. ೩. ಕಮಲಗಳಿಂದ ಕೂಡಿದ ಸರೋವರ.
ಸರೋದ್ (ನಾ). ಒಂದು ಬಗೆಯ ತಂತಿವಾದ್ಯ.
ಸರೋಧಿ (ನಾ). ಸಮುದ್ರ ; ಕಡಲು.
ಸರೋನಿಧಿ = ಸರೋಧಿ.
ಸರೋಭವ = ಸರೋಜ.
ಸರೋರುಹ = ಸರೋಜ.
ಸರೋರುಹಿಣಿ (ನಾ). ತಾವರೆ ; ಕಮಲಿನಿ.
ಸರೋವನ (ನಾ). ಸರೋವರದ ನೀರು.
ಸರೋವರ (ನಾ). ಕೊಳ ; ಸರಸ್ಸು.
ಸಱ(ರ)ಡು (ನಾ). ಸಾಲು ; ಪಂಕ್ತಿ.
ಸಱ(ರಿ) (ನಾ). ೧. ಕೊಳ್ಳ ; ಕಂದಕ. ೨. ಅಂಟು; ಗೋಂದು. ೩.ಗಂಜಿ; ಅಂಬಲಿ. ೪. ದೋಸೆ, ಕಡುಬು ಮುಂತಾದುವು ಮೆದುವಾಗಲು ಅಕ್ಕಿಯೊಡನೆ ಸೇರಿಸುವ ಉದ್ದು, ಮೆಂತ್ಯ ಮುಂತಾದುವು; ಹುದುಗು. ೫. ಬಂಡೆ ; ಅರೆ. ~ಮಿ(ವಿ)ಂಡಿ = ತರುಣಿ; ಮೈನೆರೆದವಳು.
ಸರ್ಕರೆ = ಸಕ್ಕರೆ.
ಸರ್ಕಾರ = ಸರಕಾರ.
ಸರ್ಕಾರಿ = ಸರಕಾರಿ.
ಸರ್ಗ (ನಾ). ಪುಸ್ತಕದ ಒಂದು ಭಾಗ ; ಅಧ್ಯಾಯ.
ಸರ್ತಿ = ಸರತಿ.
ಸರ್ದಾರ = ಸರದಾರ.
ಸರ್ಪ (ನಾ). ಹಾವು ; ಉರಗ. ~ಅಸ್ತ್ರ = ಹಾವಿನ ಮಂತ್ರವನ್ನು ಅಭಿಮಂತ್ರಿಸಿ ಪ್ರಯೋಗಿಸುವ ಅಸ್ತ್ರ. ~ಉಪಜೀವಿ = ಹಾವುಗಳನ್ನು ಹಿಡಿದು ಆಡಿಸುವವನು ; ಹಾವಾಡಿಗ. ~ಕಂಕಣ = ೧. ಹಾವಿನಿಂದ ಮಾಡಿದ ಕಡಗ. ೨. ಹಾವನ್ನು ಕಡಗವನ್ನಾಗಿ ಧರಿಸಿದವನು ; ಶಿವ. ~ಕನ್ಯೆ = ನಾಗಲೋಕದ ಸ್ತ್ರೀ ; ನಾಗಕನ್ನಿಕೆ. ~ಕಾವಲು = ಅತಿ ಎಚ್ಚರಿಕೆಯಿಂದ ಕಾಯುವ ಕಾವಲು, -ಪಹರೆ. ~ದಷ್ಟ = ೧. ಹಾವಿನ ಕಡಿತ. ೨. ಹಾವಿನಿಂದ ಕಡಿಯಲ್ಪಟ್ಟವನು. ~ಧ್ವಜ = ೧. ಹಾವಿನ ಗುರುತುಳ್ಳ ಬಾವುಟ. ೨. ಹಾವಿನ ಗುರುತಿನ ಬಾವುಟವುಳ್ಳವನು ; ದುರ್ಯೋಧನ. ~ಭೂಷಣ = ಹಾವುಗಳಿಂದ ಅಲಂಕೃತನಾದವನು ; ಶಿವ. ~ಮತ್ಸರ = ತೀವ್ರವಾದ ಹಗೆತನ ; ಬದ್ಧದ್ವೇಷ. ~ರಾಜ = ಹಾವುಗಳ ಒಡೆಯ ; ವಾಸುಕಿ.
ಸರ್ಪಿ (ನಾ). ೧. ತುಪ್ಪ ; ಘೃತ. (ಗು). ೨. ಹಾವಿನಂತೆ ಚಲಿಸುವ.
ಸರ್ಪಿಣಿ (ನಾ). ಹೆಣ್ಣುಹಾವು.
ಸರ್ಬ = ಸರ್ವ. ~ಮಾನ್ಯ = ಸರ್ವಮಾನ್ಯ. ~ಲಗ್ಗೆ = ಸರ್ವಲಗ್ಗೆ.

ಶರ್ಬವ (ನಾ). ಹಾಸ್ಯ ; ಅಣಕ ; ಸಬ್ಬವ.
ಶರ್ಬಸ್ವ = ಸರ್ವಸ್ವ.
ಶರ್ವ (ನಾ). ೧. ಶಿವ ; ಶರ್ವ. (ಗು). ೨. ಎಲ್ಲ ; ಸಕಲ. ~ಅಂತರ್ಯಾಮಿ = ಎಲ್ಲ ಎಡೆಗಳಲ್ಲೂ ನೆಲಸಿರುವವನು ; ಪರಮಾತ್ಮ. ~ಅಧಿಕಾರ=ಸಂಪೂರ್ಣವಾದ ಅಧಿಕಾರ, –ಆಡಳಿತ. ~ಅನುಮತ = ಎಲ್ಲರ ಅಂಗೀಕಾರ, –ಒಪ್ಪಿಗೆ. ~ಅಪರಾಧ =ಎಲ್ಲ ಬಗೆಯ ತಪ್ಪು, –ದೋಷ. ~ಅಪರಾಧಿ =ಎಲ್ಲ ವಿಧವಾದ ತಪ್ಪುಗಳನ್ನು ಮಾಡಿ ದವನು. ~ಅರ್ಥ = ಸಕಲವಸ್ತು ; ಐಶ್ವರ್ಯ. ~ಈಶ್ವರ = ಎಲ್ಲಕ್ಕೂ ಒಡೆಯ; ದೇವರು. ~ಗ್ರಾಸ = ಸಂಪೂರ್ಣವಾಗಿ ಆವರಿಸುವುದು. ~ಗ್ರಾಹಿ = ೧. ಪ್ರಯಾಣ ಕಾಲದಲ್ಲಿ ಬಟ್ಟೆಬರೆ ಮುಂತಾದುವನ್ನು ಒಳ ಗೊಳ್ಳುವ ಒರಟು ಬಟ್ಟೆಯ ಚೀಲ ; ಹೋಲ್ಡಾಲು. ೨.ಎಲ್ಲವನ್ನೂ ಒಳಗೊಳ್ಳುವ. ~ನಾಮ = ವ್ಯಾಕರಣದಲ್ಲಿ ನಾಮಪದದ ಬದಲು ಉಪಯೋಗಿಸುವ ಶಬ್ದ. ~ನಾಶ = ಸಂಪೂರ್ಣ ಹಾನಿ. ~ಭಕ್ಷಕ =೧. ಅಗ್ನಿ. ೨. ಎಲ್ಲವನ್ನೂ ಕಬಳಿಸುವ. ~ಮಂಗಲ(ಳ) = ಅತ್ಯಂತ ಶುಭಕರವಾದ; ಒಳ್ಳೆಯ. ~ಮಂಗಲೆ(ಳೆ) = ಪಾರ್ವತಿ. ~ಮಾನ್ಯ = ಎಲ್ಲ ಬಗೆಯ ತೆರಿಗೆಗಳಿಂದ ಹೊರತಾದ ಭೂಮಿ. ~ಲಗ್ಗೆ = ನಾನಾ ವಾದ್ಯಗಳ ಘೋಷ. ~ವ್ಯಾಪಕ =೧. ಎಲ್ಲ ಕಡೆಗಳಲ್ಲೂ ವ್ಯಾಪಿಸಿರುವವನು; ಪರಮಾತ್ಮ. ೨. ಎಲ್ಲ ಕಡೆಗಳಿಗೂ ವ್ಯಾಪಿ ಸಿರುವ. ~ಸನ್ನಾಹ = ಎಲ್ಲ ಬಗೆಯ ಸಿದ್ಧತೆ, –ಸಜ್ಜು. ~ಸಾಮಾನ್ಯ = ಎಲ್ಲರಿಗೂ ಅನ್ವಯಿಸುವ, –ಸರಿ ಹೊಂದುವ.
ಶರ್ವಂಸಹೆ (ನಾ). ಎಲ್ಲವನ್ನು ಸಹಿಸುವವಳು; ಭೂಮಿ.
ಸರ್ವಗ (ನಾ). ೧. ಎಲ್ಲ ಕಡೆಗಳಲ್ಲೂ ಗಮಿಸು ವವನು ; ಪರಮಾತ್ಮ. (ಗು). ೨. ಸರ್ವ ವ್ಯಾಪಿಯಾದ.
ಸರ್ವಜ್ಞ (ನಾ). ೧. ಎಲ್ಲವನ್ನೂ ತಿಳಿದವನು ; ಜ್ಞಾನಿ. ೨. ಶಿವ. ೩. ಬುದ್ಧ. ೪. ಜಿನ.
ಸರ್ವಜ್ಞತೆ (ನಾ). ಎಲ್ಲವನ್ನೂ ತಿಳಿದು ಕೊಂಡಿರುವಿಕೆ.
ಸರ್ವತೋಭದ್ರ (ನಾ). ೧. ಚೌಕಾಕಾರದ ಅರಮನೆ ಅಥವಾ ದೇವಾಲಯ. ೨. ಒಂದು ಬಗೆಯ ಚಿತ್ರಕಾವ್ಯ. ೩. ಒಂದು ಬಗೆಯ ಪೂಜೆ. (ಗು). ೪. ಎಲ್ಲೆಡೆಯೂ ಇರುವ. ೫. ಮಂಗಳಕರವಾದ.
ಸರ್ವತೋಮುಖ (ನಾ). ೧. ಎಲ್ಲ ದಿಕ್ಕು ಗಳಲ್ಲೂ ಮುಖವುಳ್ಳವನು ; ಶಿವ. (ಗು). ೨. ಎಲ್ಲ ಕಡೆಗಳಲ್ಲೂ ಹರಡಿರುವ; ಸರ್ವ ವ್ಯಾಪ್ತವಾದ.
ಸರ್ವತ್ರ (ಅ). ೧. ಎಲ್ಲ ಕಡೆಗಳಲ್ಲಿಯೂ. ೨. ಎಂದಿಗೂ ; ಯಾವಾಗಲೂ.
ಸರ್ವಥಾ (ಅ). ೧. ಸಂಪೂರ್ಣವಾಗಿ ; ಒಟ್ಟಿ ನಲ್ಲಿ. ೨. ಎಂದೆಂದಿಗೂ. ೩. ಖಂಡಿತ ವಾಗಿಯೂ ; ನಿಜವಾಗಿಯೂ. ೪. ಅತಿಶಯ ವಾಗಿ.
ಸರ್ವದಾ (ಅ). ಯಾವಾಗಲೂ ; ಎಲ್ಲ ಕಾಲ ಗಳಲ್ಲಿಯೂ.
ಸರ್ವಧುರೀಣ (ಗು). ಎಲ್ಲ ಋತುಗಳಿಗೂ ಅನ್ವಯಿಸುವ.
ಸರ್ವಸ್ವ (ನಾ). ೧. ಒಬ್ಬನಿಗೆ ಸೇರಿದ ಎಲ್ಲ ವಸ್ತು, –ಆಸ್ತಿ. ೨. ಸಾರ; ತಿರುಳು.
ಸರ್ವಾಂಗೀಣ (ಗು). ಎಲ್ಲ ಭಾಗಗಳಿಗೂ ವ್ಯಾಪಿಸಿದ, –ಹರಡಿದ.
ಸರ್ವೇಸಾಧಾರಣ (ನಾ). ತೀರ ಸಾಮಾನ್ಯ ವಾದುದು ; ನಾಡಾಡಿ.
ಸರ್ಷಪ (ನಾ). ಒಂದು ಬಗೆಯ ಧಾನ್ಯ ; ಸಾಸುವೆ.

ಸಲ್(ಲು) (ಕ್ರಿ). ೧. ಪ್ರವೇಶಿಸು ; ಒಳಹೊಗು. ೨. ಸೇರು ; ಕೂಡು. ೩. ಸಂದಾಯವಾಗು ; ಸಲುವಳಿಯಾಗು ; ಮುಟ್ಟು. ೪. ಚಲಾವಣೆಗೆ ಬರು ; ಜಾರಿಗೆ ಬರು. ೫. ಯೋಗ್ಯವಾಗು ; ಉಚಿತವಾಗು. ೬. ಕಳೆದುಹೋಗು ; ತೀರು. ೭. ಸಾಯು; ಮರಣಹೊಂದು. ೮. ಒಪ್ಪು ; ಸಮ್ಮತಿಸು. ೯. ಕೀರ್ತಿಯನ್ನು ಪಡೆ; ಯಶಸ್ಸನ್ನು ಗಳಿಸು. ~ಇಸು = ೧. ಪ್ರವೇಶಿಸುವಂತೆ ಮಾಡು. ೨. ಜರುಗಿಸು; ನೆರವೇರಿಸು. ೩. ಅನುಷ್ಠಾನಕ್ಕೆ ತರು ; ಪಾಲಿಸು. ೪. ಪೂರೈಸು ; ಪೂರ್ಣಗೊಳಿಸು. ೫. ಸಂದಾಯ ಮಾಡು; ಒಪ್ಪಿಸು; ಕೊಡು. ೬. (ಕಾಲದಂತೆ) ಕಳೆ, —ವ್ಯಯ ಮಾಡು. ೭. ತೃಪ್ತಿಪಡಿಸು ; ತಣಿಸು.

ಸಲ (ನಾ). ಬಾರಿ ; ಸರದಿ.

ಸಲಕರಣೆ (ನಾ). ಉಪಕರಣ ; ಸಾಮಗ್ರಿ.

ಸಲಕ್ಷಣ (ನಾ). ೧. ಒಳ್ಳೆಯ ಗುರುತು, —ಚಿಹ್ನೆ. (ಗು). ೨. ಒಂದೇ ಬಗೆಯ ಲಕ್ಷಣಗಳಿಂದ ಕೂಡಿದ. ೩. ಚಿಹ್ನೆಗಳುಳ್ಳ. ೪. = ಸಲ್ಲಕ್ಷಣ.

ಸಲಗ (ನಾ). ೧. ಆನೆಯ ಹಿಂಡಿನ ಮುಖಂಡ ; ಗಂಡಾನೆ. ೨. ಗೂಳಿ.

ಸಲಗು (ನಾ). ಒಂದು ಬಗೆಯ ಆಯುಧ ; ಶಲಾಕೆ.

ಸಲಗೆ ೧. = ಸಲಗು. ೨. ಒಂದು ನಿರ್ದಿಷ್ಟವಾದ ಅಳತೆ ; ಸೊಲಿಗೆ.

ಸಲಪು = ಸಲಹು.

ಸಲವು (ನಾ). ೧. ಪ್ರವೇಶ. ೨. = ಸಲ್ಗೆ.

ಸಲಹು (ಕ್ರಿ). ಕಾಪಾಡು ; ರಕ್ಷಿಸು.

ಸಲಹೆ (ನಾ). ೧. ಸೂಚನೆ ; ಅಭಿಪ್ರಾಯ. ೨. ಬುದ್ಧಿವಾದ ; ಮಂತಣ ; ಆಲೋಚನೆ. ~ಗಾರ = ಆಲೋಚನೆಗಳನ್ನು ತಿಳಿಸುವವನು.

ಸಲಾಂ (ನಾ). ನಮಸ್ಕಾರ ; ವಂದನೆ.

ಸಲಾಕೆ = ಸಲಗು.

ಸಲಾಮತ್ತು (ನಾ). ಅಪಾಯದಿಂದ ಪಾರಾಗುವಿಕೆ.

ಸಲಾಮು = ಸಲಾಂ.

ಸಲಾಯಿಸು (ಕ್ರಿ). ಸಂದಾಯಮಾಡು ; ಸಲ್ಲಿಸು.

ಸಲಿಕೆ ೧. = ಸಲಗು. ೨. ಮಣ್ಣು ಅಗೆಯುವ ಸಾಧನ ; ಗುದ್ದಲಿ. ೩. ಸಲ್ಲಿಸುವುದು ; ಸಂದಾಯ.

ಸಲಿಗೆ (ನಾ). ೧. ಅತಿಪರಿಚಯ ; ನಿಕಟ ಸಂಪರ್ಕ. ೨. ಔಚಿತ್ಯವನ್ನು ಮೀರಿದ ಸ್ನೇಹ ; ಸದರ. ೩. ತಂತಿ ; ಎಳೆ ; ಸರಿಗೆ.

ಸಲಿಪು = ಸಲಹು.

ಸಲಿಯಿಸು (ಕ್ರಿ). ಕೊಡು ; ದಯಪಾಲಿಸು.

ಸಲಿ(ಳಿ)ಲ(ಳ) (ನಾ). ನೀರು ; ಜಲ. ~ಆಶಯ = ನೀರಿಗೆ ಆಶ್ರಯವಾದ ಕೆರೆ, ಕೊಳ ಮುಂತಾದುವು ; ಜಲಾಶಯ. ~ಕ್ರೀಡೆ = ಜಲಕ್ರೀಡೆ ; ನೀರಾಟ. ~ವ್ಯಾಳ = ನೀರುಹಾವು.

ಸಲೀಸು (ನಾ). ಸರಳವಾದುದು ; ಸರಾಗ.

ಸಲುಗೆ = ಸಲಿಗೆ. ~ಆ(ಯಾ)ಳ್ = ತೀರ ಪರಿಚಯವುಳ್ಳವನು. ~ವಾಳ = ಸಲುಗೆಯಾಳ್.

ಸಲುವಳಿ (ನಾ). ೧. ಚಲಾವಣೆ ; ಬಳಕೆ. ೨. ಯೋಗ್ಯವಾದುದು ; ಉಚಿತವಾದುದು. ೩. ಸಲ್ಲುವುದು ; ಸಂದಾಯ.

ಸಲುವು (ನಾ). ಕಾರಣ ; ನಿಮಿತ್ತ.

ಸಲೆ (ಅ). ೧. ಒಂದೇ ಸಮನೆ ; ಏಕಪ್ರಕಾರವಾಗಿ. ೨. ಉತ್ತಮವಾಗಿ ; ಚೆನ್ನಾಗಿ. ೩. ಸರಿಯಾಗಿ ; ಯೋಗ್ಯವಾಗಿ. ೪. ಸಂಪೂರ್ಣವಾಗಿ ; ಪೂರ್ತಿಯಾಗಿ.

ಸಲ್ಗೆ (ನಾ). ಸಲಿಗೆ ; ಸದರ.

ಸಲ್ಲಕಿ (ನಾ). ಒಂದು ಜಾತಿಯ ಮರ; ಆನೆಬೇಲ.

ಸಲ್ಲಕ್ಷಣ (ಗು). ಒಳ್ಳೆಯ ಲಕ್ಷಣಗಳಿಂದ ಕೂಡಿದ.

ಸಲ್ಲಗಳೆ (ಕ್ರಿ). ತಿರಸ್ಕರಿಸು ; ಧಿಕ್ಕರಿಸು.

ಸಲ್ಲಲಿತ (ನಾ). ೧. ಚೆಲುವು ; ಸೊಬಗು. (ಗು). ೨. ಚೆಲುವಾದ ; ಸುಂದರವಾದ.

ಸಲ್ಲವಿಡು (ಕ್ರಿ). ನಿಗ್ರಹಿಸು ; ತಡೆ.

ಸಲ್ಲಾ ೧. = ಸಲಹೆ. ೨. ರಾಜಿ; ಸಂಧಿ ; ಕೌಲು. ~ಗಾರ = ಸಲಹೆಗಾರ.

ಸಲ್ಲಾಪ (ನಾ). ಸರಸವಾದ ಮಾತುಕತೆ. ~ಯಂತ್ರ = ದೂರವಾಣಿ ; ಟೆಲಿಫೋನು.

ಸಲ್ಲಾಪಿ (ನಾ). ಸರಸವಾಗಿ ಮಾತನಾಡುವವನು.

ಸಲ್ಲಾಮು = ಸಲಾಂ.

ಸಲ್ಲೀಲೆ (ನಾ). ಸರಸ ; ವಿನೋದ.

ಸಲ್ಲು = ಸಲ್. ~ಇಸು = ೧. ಉಂಟುಮಾಡು. ೨. ಕೊಡು ; ನೀಡು ; ಸಂದಾಯ ಮಾಡು. ೩. ಒಪ್ಪಿಸು ; ಅರ್ಪಿಸು. ೪. ಮಾಡು. ೫. ತಲುಪಿಸು.

ಸಲ್ಲೆಯ (ನಾ). ಒಂದು ಬಗೆಯ ಆಯುಧ; ಶಲ್ಯ.

ಸಲ್ಲೆಹ = ಸಲ್ಲೆಯ.

ಸಲ್ಲೇಖ = ಸಲ್ಲೇಖನ.

ಸಲ್ಲೇಖನ (ನಾ). ಜೈನರು ಆಚರಿಸುವ ಒಂದು ವ್ರತ; ಸಾಯುವವರೆಗೆ ಉಪವಾಸವನ್ನು ಕೈಗೊಳ್ಳುವುದು ; ಆಮರಣಾಂತ ಉಪವಾಸ.

ಸವ (ನಾ). ೧. ಎಣೆ ; ಸಮಾನ. ೨. ಪಾತಳಿ ; ಮಟ್ಟಸ. ೩. ಶವ ; ಹೆಣ. ೪. ಶ್ರಮ ; ಕಷ್ಟ.

ಸವ(ಂ)ಗೆ (ನಾ). ಮೈಜೋಡು ; ಕವಚ.

ಸವಕಟ್ಟು (ಕ್ರಿ). ೧. ಸಿದ್ಧಪಡಿಸು ; ಸಜ್ಜುಗೊಳಿಸು. (ನಾ). ೨. ಏರ್ಪಾಡು ; ಸಿದ್ಧತೆ. ೩. ಕ್ರಮ ; ರೀತಿ.

ಸವಕಲು (ನಾ). ಸವೆದುಹೋದುದು.

ಸವಕಳಿ = ಸವಕಲು.

ಸವಡಿ (ನಾ). ೧. ಜೋಡಿ ; ಜೊತೆ ; ಯುಗ್ಮ. ೨. ಸೇರಿಕೆ ; ಸಂಯೋಗ ; ಸಂಗಮ. ~ಇಸು = ಕೂಡಿಸು ; ಹೊಂದಿಸು ; ಅಧಿಕಗೊಳಿಸು. ~ನುಡಿ = ಇಬ್ಬಗೆಯ ಮಾತು ; ದ್ರೋಹದ ಮಾತು. ~ಮಾ(ವಾ)ತು = ಸವಡಿನುಡಿ.

ಸವಡು (ನಾ). ಬಿಡುವು ; ವಿರಾಮ.

ಸವಣ (ನಾ). ಜೈನಸಂನ್ಯಾಸಿ ; ಕ್ಷಪಣಕ.

ಸವಣಿ (ನಾ). ಜೈನಸಂನ್ಯಾಸಿನಿ ; ಕಂತಿ.

ಸವಣ್ಮನೆ (ನಾ). ಚೈತ್ಯಾಲಯ ; ಬಸದಿ.

ಸವತಳಿಸು (ಕ್ರಿ). ಸವರು ; ತೀಡು.

ಸವತಿ (ನಾ). ತನ್ನ ಗಂಡನ ಇನ್ನೊಬ್ಬಳು ಹೆಂಡತಿ ; ಸಪತ್ನಿ.

ಸವತೆ = ಸವುತೆ.

ಸವದಳಿಸು (ಕ್ರಿ). ಸಮಮಾಡು ; ಮಟ್ಟಸ ಮಾಡು.

ಸವನ (ನಾ). ಮಂಗಳಸ್ನಾನ ; ಅಭಿಷೇಕ. ~ಉತ್ಸವ = ಅಭಿಷೇಕದ ಸಮಾರಂಭ.

ಸವನಿಸು (ಕ್ರಿ). ದೊರಕು ; ಪ್ರಾಪ್ತವಾಗು.

ಸವನೆ (ಅ). ಏಕಪ್ರಕಾರವಾಗಿ.

ಸವರಣೆ (ನಾ). ೧. ಒಟ್ಟುಗೂಡಿಸುವುದು. ೨. ಸಿದ್ಧತೆ ; ಸಜ್ಜು ; ತಯಾರಿ.

ಸವರಸ್ನು(ನಾ). ಚಿನ್ನದ ಒಂದು ತೂಕ; ಪವನು.

ಸವರು (ಕ್ರಿ). ೧. ಏರುಪೇರಿಲ್ಲದಂತೆ ಮಾಡು ; ಸಮಮಾಡು. ೨. ಬಳಿ ; ಹಚ್ಚು. ೩. ತಡವು; ನೇವರಿಸು. ೪. ತೀಡು ; ಉಜ್ಜು. ೫. = ಸವಱು.

ಸವಱು(ರು) (ಕ್ರಿ). ೧. ಕಡಿ ; ಕತ್ತರಿಸು. ೨. ನಾಶಮಾಡು ; ಧ್ವಂಸಮಾಡು.

ಸವರ್ಣ(ನಾ). ೧. ಒಂದೇ ಗುಂಪಿಗೆ ಸೇರಿದ ಸ್ವರಗಳು. (ಗು). ೨. ಒಂದೇ ಬಣ್ಣದ. ೩. ಒಂದೇ ಜಾತಿಗೆ ಸೇರಿದ.

ಸವರ್ಣೀಯ (ನಾ). ಕಪ್ಪುಜನಾಂಗಕ್ಕೆ ಸೇರಿದವನು.

ಸವಲತ್ತು (ನಾ). ೧. ಅನುಕೂಲತೆ; ಸೌಕರ್ಯ. ೨. ಅವಕಾಶ ; ಆಸ್ಪದ.

ಸವಸು (ಕ್ರಿ). ೧. ವ್ಯಯಿಸು ; ಖರ್ಚುಮಾಡು. ೨. ನಿರ್ಮಿಸು.

ಸವಳ (ನಾ). ಈಟಿ ; ಸಬಳ.

ಸವಾರ (ನಾ). ಪ್ರಾಣಿ, ವಾಹನ ಮುಂತಾದುವನ್ನು ಏರಿದವನು ; ಆರೋಹಿ.

ಸವಾರಿ (ನಾ). ೧. ಹತ್ತುವಿಕೆ ; ಏರಾಟ. ೨. ಪ್ರಾಣಿ, ವಾಹನ ಮುಂತಾದುವುಗಳ ಮೇಲೆ ಕುಳಿತು ಹೋಗುವುದು. ೩. ಮೆರವಣಿಗೆ. ೪. ರಾಜರು ಮುಂತಾದ ಹಿರಿಯ ವ್ಯಕ್ತಿಗಳನ್ನು ಉದ್ದೇಶಿಸುವಾಗ ಬಳಸುವ ಮಾತು. ೫. ಮಲ್ಲಯುದ್ಧದಲ್ಲಿ ಒಂದು ವರಸೆ.

ಸವಾಲ್(ಲು) (ನಾ). ಕೇಳುವಿಕೆ ; ಪ್ರಶ್ನೆ. ~ಹಾಕು = ೧. ಪ್ರಶ್ನಿಸು ; ಕೇಳು. ೨. ಸ್ಪರ್ಧೆಗೆ ಕರೆ ; ಆಹ್ವಾನಿಸು.

ಸವಿ (ಕ್ರಿ). ೧. ತಿನ್ನು ; ರುಚಿನೋಡು. ೨. ಕುಡಿ ; ಈಂಟು. ೩. ಅನುಭವಿಸು. (ನಾ). ೪. ರುಚಿ ; ಮಾಧುರ್ಯ. (ಗು). ೫. ರುಚಿಯಾದ ; ಇಂಪಾದ. ~ಕ(ಗ)ಡಲ್(ಲು) = ಕ್ಷೀರಸಮುದ್ರ ; ಇಂಗಡಲು. ~ಕ(ಗ)ನಸು = ಮಧುರವಾದ ಕನಸು,–ಸ್ವಪ್ನ. ~ಕಾ(ಗಾ)ಣ್(ಣು) = ೧. ರುಚಿ ನೋಡು ; ತಿನ್ನು. ೨. ಅನುಭವಿಸು. ~ಕಾ(ಗಾ)ಱ(ರ) = ಸೊಗಸುಗಾರ ; ರಸಿಕ. ~ಕೆ(ಗೆ)ಡು = ರುಚಿಯು ಇಲ್ಲದಾಗು ; ಅರುಚಿಯುಂಟಾಗು. ~ಕೊ(ಗೊ)ಳ್ = ಸವಿನೋಡು. ~ಕೊ(ಗೊ)ಳಿಸು = ರುಚಿಯುಂಟಾಗುವಂತೆ ಮಾಡು. ~ತು(ದು)ತ್ತು = ರುಚಿಯಾದ ತುತ್ತು, –ಗ್ರಾಸ. ~ತೊ(ದೊ)ಱು(ರು) = ರುಚಿಯಾಗು ; ಇನಿದಾಗು. ~ನುಡಿ = ಮಧುರವಾದ ಮಾತು ; ಇಂಪಾದ ಮಾತು. ~ನೋಟ = ೧. ಹಿತಕರವಾದ ನೋಟ, –ದೃಶ್ಯ. ೨. ಪ್ರೀತಿಯ ನೋಟ. ~ನೋಡು = ರುಚಿನೋಡು. ~ಮಾ(ವಾ)ತು = ಸವಿನುಡಿ. ~ಹತ್ತು = ೧. ರುಚಿಯುಂಟಾಗು. ೨. ಅತ್ಯಾಸಕ್ತಿಯುಂಟಾಗು.

ಸವಿತ = ಸವಿತಾರ.

ಸವಿತಾರ (ನಾ). ಸೂರ್ಯ ; ನೇಸರು.

ಸವಿತೃ ೧. = ಸವಿತಾರ. (ಗು). ೨. ಉಂಟುಮಾಡುವ.

ಸವಿತ್ರಿ (ನಾ). ತಾಯಿ ; ಜನನಿ.

ಸವಿನಯ (ನಾ). ೧. ನಮ್ರತೆ ; ಸೌಜನ್ಯ. (ಗು). ೨ ವಿನಯದಿಂದ ಕೂಡಿದ.

ಸವಿಸು (ಕ್ರಿ). ೧. ತಿನ್ನು ; ಆಸ್ವಾದಿಸು. ೨. ತಿನ್ನುವಂತೆ ಮಾಡು.

ಸವಿಸ್ತಾರ (ಗು). ವಿಶಾಲವಾದ.

ಸವು(ಂ)ತೆ (ನಾ). ಒಂದು ಜಾತಿಯ ಬಳ್ಳಿ ಮತ್ತು ಅದರ ಕಾಯಿ ; ಸೌತೆ.

ಸವುಟು (ನಾ). ಸೌಟು ; ಸಟ್ಟುಗ.

ಸವುಡು ೧. = ಸನಡು. ೨. = ಸೊನಡು.

ಸವುದೆ (ನಾ). ಕಟ್ಟಿಗೆ ; ಸೌದೆ ; ಸಮಿಧೆ.

ಸವುಳು = ಚೌಳು. ~ಉಪ್ಪು = ಒಂದು ಬಗೆಯ ಉಪ್ಪು ; ಚೌಳುಪ್ಪು. ~ನೀರು = ಉಪ್ಪುನೀರು. ~ಮಣ್ಣು = ಉಪ್ಪಿನ ಅಂಶವುಳ್ಳ ಭೂಮಿ ; ಚೌಳುನೆಲ.

ಸವೆ (ಕ್ರಿ). ೧. ಮಾಡು ; ನಿರ್ಮಿಸು ; ರಚಿಸು. ೨. ಕೆತ್ತು ; ಕಂಡರಿಸು. ೩. ನಶಿಸು ; ಕ್ಷೀಣಿಸು ; ತೇದುಹೋಗು. ೪. ವ್ಯಯವಾಗು. ~ಇಸು = ಸವೆಯಿಸು.

ಸವೆಯಿಸು (ಕ್ರಿ). ೧. ನಿರ್ಮಿಸು ; ರಚಿಸು. ೨. ಕ್ಷಯಿಸುವಂತೆ ಮಾಡು. ೩. ವ್ಯಯಮಾಡು.

ಸವ್ಯ (ನಾ). ೧. ಎಡಗಡೆ ; ವಾಮಭಾಗ. ೨. ಎಡಗೈ. (ಗು). ೩. ದಕ್ಷಿಣಭಾಗದ. ೪. ವಿರುದ್ಧವಾದ.

ಸವ್ಯಸಾಚಿ (ನಾ). ೧. ಎಡಗೈಯಿಂದಲೂ ಬಾಣವನ್ನು ಬಿಡುವವನು ; ಅರ್ಜುನ. ೨. ಎಲ್ಲದರಲ್ಲೂ ನಿಪುಣನಾದವನು.

ಸವ್ಯಾಕುಲ(ಳ) (ಗು). ಹೆದರಿದ; ತಲ್ಲಣಗೊಂಡ.

ಸವ್ಯಾನ (ನಾ). ಮೇಲುಹೊದಿಕೆ; ಉತ್ತರೀಯ.

ಸಶಬ್ದ (ಗು). ಶಬ್ದಸಹಿತವಾದ.

ಸಶರೀರ (ಗು). ದೇಹದಿಂದ ಕೂಡಿದ.

ಸಶಸ್ತ್ರ (ಗು). ಆಯುಧಗಳಿಂದ ಸಜ್ಜುಗೊಂಡ.

ಸಶೇಷ (ನಾ). ಉಳಿಕೆಯನ್ನು ಹೊಂದಿರುವುದು; ಅಪೂರ್ಣವಾದುದು.

ಸಸ (ನಾ). ಮೊಲ; ಶಶ.

ಸಸಂಭ್ರಮ (ಗು). ೧. ಗಲಿಬಿಲಿಗೊಂಡ; ಕಂಗೆಟ್ಟ. ೨. ಉತ್ಸಾಹದಿಂದ ಕೂಡಿದ; ಸಡಗರದಿಂದ ಕೂಡಿದ.

ಸಸಾರ (ನಾ). ೧. ಸುಲಭ; ಸಲೀಸು. ೨. ಸಲಿಗೆ; ಸದರ.

ಸಸಾರಜನಕ(ಗು). ಸಾರಜನಕಕ್ಕೆ ಸಂಬಂಧಿಸಿದ.

ಸಸಿ (ಕ್ರಿ). ೧. ಕೀಳು; ಉತ್ಪಾಟಿಸು. ೨. ಹಿಂಜು; ಎಕ್ಕು. ೩. ಕತ್ತರಿಸು. ೪. ಚೆಲ್ಲಾಪಿಲ್ಲಿಯಾಗು; ಚೆದರು. (ನಾ). ೫. ಚಂದ್ರ; ಶಶಿ. ೬. ಎಳೆಯ ಗಿಡ. ~ಅ(ಯ)ಡಕೆ = ಎಳೆಯದಾದ ಅಡಕೆ; ಬಲಿಯದ ಅಡಕೆ. ~ಕ(ಗ)ಲ್(ಲ್ಲು) = ಸಸಿಕಾಂತ. ~ಕಾಂತ = ಚಂದ್ರಕಾಂತ ಶಿಲೆ. ~ಪ(ವ)ಚ್ಚ=ಚಂದ್ರನನ್ನು ಆಭರಣವಾಗಿ ಧರಿಸಿದವನು; ಶಿವ. ~ಮ(ವ)ಣಿ = ಸಸಿಕಾಂತ.

ಸಸಿದಲೆಯ (ನಾ). ಚಂದ್ರನನ್ನು ತಲೆಯಲ್ಲಿ ಧರಿಸಿದವನು; ಶಿವ.

ಸಸಿನ (ನಾ). ೧. ಸರಳವಾದುದು; ನೇರವಾದುದು. ೨. ಯೋಗ್ಯವಾದುದು; ಉಚಿತವಾದುದು. ೩. ಕ್ಷೇಮ; ಸೌಖ್ಯ.

ಸಸಿನೆ (ಅ). ೧. ನೇರವಾಗಿ; ಸರಳವಾಗಿ. ೨. ಯೋಗ್ಯವಾಗಿ. ೩. ಕ್ಷೇಮವಾಗಿ. ೪. ಸುಮ್ಮನೆ; ಮೌನವಾಗಿ. ~ಗೆಯ್ = ಸರಿಪಡಿಸು; ನೇರ್ಪುಮಾಡು.

ಸಸಿಲೆ (ನಾ). ಒಂದು ಜಾತಿಯ ಮೀನು.

ಸಸ್ತನಪ್ರಾಣಿ (ನಾ). ಮರಿಗಳಿಗೆ ಮೊಲೆಯೂಡುವ ಪ್ರಾಣಿವರ್ಗ.

ಸಸ್ತನಿ (ಗು). ಮೊಲೆಗಳಿಂದ ಕೂಡಿದ.

ಸಸ್ತಾ (ಗು). ಅಗ್ಗವಾದ; ಸೋವಿಯಾದ.

ಸಸ್ಯ (ನಾ). ೧. ಗಿಡ ಅಥವಾ ಬಳ್ಳಿ. ೨. ಒಂದು ಬಗೆಯ ರತ್ನ. ~ಆಹಾರ = ತರಕಾರಿ, ಸೊಪ್ಪು ಮುಂತಾದುವು; ಶಾಖಾಹಾರ. ~ಜನ್ಯ = ಗಿಡಗಳಿಂದ ದೊರಕಿದ. ~ಶಾಸ್ತ್ರ = ಸಸ್ಯಗಳಿಗೆ ಸಂಬಂಧಿಸಿದ ವಿಷಯವನ್ನು ತಿಳಿಸುವ ಶಾಸ್ತ್ರ. ~ಸಂಪತ್ತು = ಗಿಡಮರಗಳ ಸಂಪತ್ತು.

ಸಸ್ಯಾಹಾರಿ (ನಾ). ೧. ಸಸ್ಯಾಹಾರವನ್ನು ಉಪಯೋಗಿಸುವವನು; ಶಾಖಾಹಾರಿ. (ಗು). ೨. ಸಸ್ಯಾಹಾರದಿಂದ ಜೀವಿಸುವ.

ಸಹ (ಅ). ಜೊತೆ; ಸಂಗಡ; ಕೂಡ.

ಸಹಕರಿಸು (ಕ್ರಿ). ನೆರವು ನೀಡು; ಕೂಡಿ ಕೆಲಸ ಮಾಡು; ಸಹಾಯಮಾಡು.

ಸಹಕಾರ (ನಾ). ೧. ಸಹಾಯ; ನೆರವು; ಒತ್ತಾಸೆ. ೨. ಮಾವಿನ ಮರ.

ಸಹಕಾರಿ (ನಾ). ೧. ಬೇರೆಯವರ ನೆರವಿಗೆ ಬರುವವನು; ಸಹಾಯಕ. (ಗು). ೨. ನೆರವಾಗುವ; ಸಹಕರಿಸುವ; ಕೂಡಿ ದುಡಿಯುವ.

ಸಹಗಮನ (ನಾ). ಗತಿಸಿದ ಪತಿಯೊಡನೆ ಹೆಂಡತಿಯು ಚಿತೆಯೇರುವುದು; ಸತಿಹೋಗುವುದು.

ಸಹಚರಿ (ನಾ). ೧. ಹೆಂಡತಿ. ೨. ಗೆಳತಿ; ಒಡನಾಡಿ. ೩. ಒಂದು ಜಾತಿಯ ಗಿಡ.

ಸಹಜ (ನಾ). ೧. ನಿಜ; ದಿಟ. ೨. ಸ್ವಾಭಾವಿಕವಾದುದು; ನೈಜವಾದುದು. ೩. = ಸಹಜಿ. (ಗು). ೪. ಸ್ವಭಾವಸಿದ್ಧವಾದ; ನೈಜವಾದ. ೫. ಯೋಗ್ಯವಾದ; ತಕ್ಕ.

ಸಹಜಾತ (ನಾ). ೧. ಒಡಹುಟ್ಟಿದವನು ; ಸೋದರ. (ಗು). ೨. ಸ್ವಭಾವಸಿದ್ಧವಾದ ; ಹುಟ್ಟಿನಿಂದ ಬಂದ.

ಸಹಜಿ (ನಾ). ಸಹಜವಾದ ಗುಣವುಳ್ಳವನು ; ನಿಷ್ಕಪಟಿ.

ಸಹಜೀವನ (ನಾ). ಕೂಡಿಬಾಳುವಿಕೆ.

ಸಹಣಿ = ಸಾಹಣಿ.

ಸಹಣಿ = ಸಾಹಣಿ.

ಸಹದೇವಿ (ನಾ). ಒಂದು ಜಾತಿಯ ಔಷಧಿ ಸಸ್ಯ.

ಸಹಧರ್ಮಿ (ನಾ). ೧. ತನಗೆ ಸಮಾನವಾದ ಮತವನ್ನು ಅನುಸರಿಸುವವನು. ೨. ಸಮಾನವಾದ ಗುಣವುಳ್ಳವನು.

ಸಹಧರ್ಮಿಣಿ (ನಾ). ೧. ಹೆಂಡತಿ; ಧರ್ಮಪತ್ನಿ. ೨.ತನ್ನದೇ ಧರ್ಮವನ್ನು ಅನುಸರಿಸುವವಳು.

ಸಹನ (ನಾ). ತಾಳ್ಮೆ ; ಸೈರಣೆ.

ಸಹನೆ = ಸಹನ.

ಸಹಪಂಕ್ತಿ (ನಾ). ಒಂದೇ ಸಾಲಿನಲ್ಲಿರುವುದು.

ಸಹಪಂತಿ = ಸಹಪಂಕ್ತಿ.

ಸಹಪಾಠಿ (ನಾ). ಜೊತೆಯಲ್ಲಿ ಪಾಠ ಕಲಿಯುವವನು.

ಸಹಭವ (ನಾ). ೧. ಸೋದರ ; ಒಡಹುಟ್ಟಿದವನು. (ಗು). ೨. ಒಟ್ಟಿಗೆ ಹುಟ್ಟಿದ.

ಸಹಭಾಗಿ (ನಾ). ಸಮನಾಗಿ ಹಂಚಿಕೊಳ್ಳುವವನು ; ಪಾಲುದಾರ.

ಸಹಭೋಜನ (ನಾ). ಒಂದೇ ಪಂಕ್ತಿಯಲ್ಲಿ ಕುಳಿತು ಮಾಡುವ ಊಟ. ~ಇಗ = ಜೊತೆಯಲ್ಲಿ ಊಟ ಮಾಡುವವನು.

ಸಹವರ್ತಿ (ನಾ). ಸಂಗಡಿಗ ; ಜೊತೆಗಾರ.

ಸಹವಾಸ (ನಾ). ೧. ಜೊತೆಯಲ್ಲಿ ವಾಸಿಸುವುದು. ೨. ಸ್ನೇಹ ; ಗೆಳೆತನ ; ಒಡನಾಟ.

ಸಹವಾಸಿ = ಸಾವಾಸಿ.

ಸಹಸ (ನಾ). ಕಸುವು ; ಸಾಮರ್ಥ್ಯ; ಸಾಹಸ. ~ಇಗ = ಸಹಸಿ.

ಸಹಸಾ (ಅ). ೧. ಕೂಡಲೆ ; ಒಮ್ಮೆಲೆ ; ಇದ್ದಕ್ಕಿದ್ದಂತೆ. ೨. ರಭಸವಾಗಿ ; ವೇಗವಾಗಿ.

ಸಹಸಿ (ನಾ). ಸಾಹಸಿ ; ಸಮರ್ಥ.

ಸಹಸ್ರ (ನಾ). ಒಂದು ಸಂಖ್ಯೆ ; ಸಾವಿರ. ~ಅಕ್ಷ = ಸಹಸ್ರನಯನ. ~ಕರ = ಸಾವಿರ ಕಿರಣಗಳುಳ್ಳವನು. ~ಕಿರಣ = ಸಹಸ್ರಕರ. ~ದಲ(ಳ) = ತಾವರೆ ; ಕಮಲ. ~ನಯನ=ಇಂದ್ರ. ~ಪತ್ರ=ಸಹಸ್ರದಲ. ~ಪಾದ = ೧. ವಿಷ್ಣು. ೨. ಸೂರ್ಯ. ~ಫಣ = ಸಾವಿರ ಹೆಡೆಗಳುಳ್ಳವನು ; ಆದಿಶೇಷ. ~ಬಾಹು = ೧. ಶಿವ. ೨. ಕಾರ್ತವೀರ್ಯ. ~ಶೀರ್ಷ = ಸಾವಿರ ತಲೆಗಳನ್ನು ಹೊಂದಿರುವವನು ; ಪರಮಾತ್ಮ.

ಸಹಾಧ್ಯಾಯಿ = ಸಹಪಾಠಿ.

ಸಹಾನುಭೂತಿ (ನಾ). ಅನುಕಂಪ ; ದಯೆ.

ಸಹಾಯ (ನಾ). ೧. ಸಹಕಾರ ; ನೆರವು. ೨. = ಸಹಾಯಿ. ~ಇಗ = ಸಹಾಯಿ. ~ಧನ = ಧರ್ಮಕಾರ್ಯಕ್ಕಾಗಿ ಕೊಡುವ ಹಣ ; ದತ್ತಿ ; ಕೊಡುಗೆ.

ಸಹಾಯಕ ೧. = ಸಹಾಯಿ. (ಗು). ೨. ನೆರವನ್ನು ನೀಡುವ ; ಸಹಕರಿಸುವ.

ಸಹಾಯಿ (ನಾ). ನೆರವು ನೀಡುವವನು.

ಸಹಿ (ನಾ). ರುಜು ; ದಸ್ಕತ್ತು ; ಹಸ್ತಾಕ್ಷರ.

ಸಹಿತ (ಗು). ೧. ಹಿತವಾದ ; ಒಳ್ಳೆಯ. (ಅ). ೨. ಒಡನೆ ; ಒಟ್ಟಿಗೆ.

ಸಹಿಷ್ಣು (ನಾ). ೧. ಸಹನೆಯುಳ್ಳವನು ; ತಾಳ್ಮೆಯುಳ್ಳವನು. (ಗು). ೨. ಸಹಿಸಲು ಸಾಧ್ಯವಾದ.

ಸಹಿಷ್ಣುತೆ (ನಾ). ಸಹನೆ ; ತಾಳ್ಮೆ ; ಸೈರಣೆ.

ಸಹಿಸು (ಕ್ರಿ). ಸೈರಿಸು ; ತಾಳು.

ಸಹೃದಯ (ನಾ). ೧. ಅಂತಃಕರಣದಿಂದ ಕೂಡಿದವನು. ೨. ಗುಣಗಳನ್ನು ಗ್ರಹಿಸುವವನು ; ಅಭಿರುಚಿಯುಳ್ಳವನು. ೩. ಕವಿಗೆ

ಸಮಾನವಾದ ಹೃದಯವುಳ್ಳವನು. (ಗು). ೪. ಸಹಾನುಭೂತಿಯುಳ್ಳ. ೫. ಹೃತ್ಪೂರ್ವಕ ವಾದ.

ಸಹೃದಯತೆ (ನಾ). ೧. ಒಳ್ಳೆಯ ಹೃದಯ, –ಭಾವನೆ. ೨. ಕವಿಗೆ ಸಂವಾದಿಯಾದ ಭಾವನೆ.

ಸಹೋದರ (ನಾ). ಒಡಹುಟ್ಟಿದವನು; ಸೋದರ.

ಸಹೋದರಿ (ನಾ). ಒಡಹುಟ್ಟಿದವಳು; ಸೋದರಿ.

ಸಹೋದ್ಯೋಗಿ (ನಾ). ಜೊತೆಯಲ್ಲಿ ಕೆಲಸ ಮಾಡುವವನು.

ಸಹ್ಯ (ನಾ). ೧. ಏಳು ಕುಲಪರ್ವತಗಳಲ್ಲಿ ಒಂದು; ಸಹ್ಯಾದ್ರಿ. (ಗು). ೨. ಸಹಿಸಲು ಸಾಧ್ಯವಾದ; ಸಹನೀಯ.

ಸಳಿ (ಕ್ರಿ). ೧. ಕುಗ್ಗು; ಸೆಡೆ. (ನಾ). ೨. ಚಳಿ; ಶೈತ್ಯ. ೩. ಕಂಬಿ; ಸರಳು; ಸಲಾಕೆ.

ಸಳಿಗದಿರ (ನಾ). ಚಂದ್ರ.

ಸಳ್ಳಕ (ನಾ). ೧. ಅಳ್ಳಕ; ಸಡಿಲು. ೨. ಸದರ; ಸಲಿಗೆ.

ಸಾ ೧. = ಸಾಯ್. (ಅ). ೨. = ಸಹ. ~ಕು(ಗು)ದುರೆ = ಮರಣೋನ್ಮುಖವಾದ ಕುದುರೆ; ಸಾಯುತ್ತಿರುವ ಕುದುರೆ.

ಸಾಂಕರ್ಯ (ನಾ). ಬೆರಕೆ; ಮಿಶ್ರಣ; ಸಂಕರ.

ಸಾಂಕೇತಿಕ (ಗು). ೧. ಸಂಜ್ಞೆಯ ಮೂಲಕ ತಿಳಿಯಪಡಿಸುವ, –ಸೂಚಿಸುವ. ೨. ಗುರುತನ್ನು ಹೊಂದಿರುವ.

ಸಾಂಕ್ರಾಮಿಕ (ಗು). ಒಂದು ವಸ್ತು ಅಥವಾ ಒಬ್ಬ ವ್ಯಕ್ತಿಯಿಂದ ಮಿಕ್ಕವುಗಳಿಗೆ ಹರಡುವ, –ಸೋಂಕುವ. ~ರೋಗ = ಒಬ್ಬರಿಂದೊಬ್ಬರಿಗೆ ಹರಡುವ ರೋಗ; ಸೋಂಕುರೋಗ.

ಸಾಂಖ್ಯ (ನಾ). ೧. ಷಡ್ದರ್ಶನಗಳಲ್ಲಿ ಒಂದು; ಕಪಿಲಋಷಿ ಬರೆದ ದರ್ಶನಶಾಸ್ತ್ರ. ೨. ಸಾಂಖ್ಯಮತವನ್ನು ಅನುಸರಿಸುವವನು; ಕಾಪಿಲ. (ಗು). ೩. ಸಂಖ್ಯೆಗಳಿಗೆ ಸಂಬಂಧಪಟ್ಟ. ೪. ಎಣಿಸಲ್ಪಡುವ; ಗಣಿಸಲು ಸಾಧ್ಯವಾದ.

ಸಾಂಗ (ಗು). ೧. ವಿಭಾಗಗಳಿಂದ ಕೂಡಿದ; ಅಂಗಗಳನ್ನು ಹೊಂದಿದ. ೨. ಸಂಪೂರ್ಣವಾದ; ಪೂರ್ತಿಯಾದ. ~ಉಪಾಂಗ = ಎಲ್ಲ ಅಂಗಗಳಿಂದ ಕೂಡಿದ. ~ಕೊ(ಗೊ)ಳಿಸು = ಸಮರ್ಪಕವಾಗಿ ಮುಕ್ತಾಯ ಮಾಡು.

ಸಾ(ಂ)ಗಡ (ನಾ). ಹಲಗೆಯ ಸಹಾಯದಿಂದ ಜೋಡಿಸಿರುವ ಎರಡು ದೋಣಿಗಳು; ಜೋಡುತೆಪ್ಪ; ಜಂಗಾಲ್.

ಸಾಂಗತ್ಯ (ನಾ). ೧. ಹೊಂದಿಕೆ; ಮೇಳ. ೨. ಒಂದು ಜಾತಿಯ ಛಂದಸ್ಸು.

ಸಾಂಗು (ನಾ). ಕಬ್ಬಿಣದ ಈಟಿ.

ಸಾಂಗ್ಯ (ನಾ). ದೃಷ್ಟಿದೋಷವನ್ನು ತೆಗೆಯುವಿಕೆ; ನಿವಾಳಿಸುವಿಕೆ.

ಸಾಂಗ್ರಾಮಿಕ (ಗು). ಕಾಳಗಕ್ಕೆ ಸಂಬಂಧಿಸಿದ.

ಸಾಂಘಿಕ (ಗು). ೧. ಸಂಘಕ್ಕೆ ಸೇರಿದ; ಸಂಸ್ಥೆಗೆ ಸಂಬಂಧಪಟ್ಟ. ೨. ಸಮುದಾಯಕ್ಕೆ ಸಂಬಂಧಿಸಿದ; ಸಾಮಾಜಿಕ.

ಸಾಂಚಲ್ಯ (ನಾ). ಚಂಚಲತೆ.

ಸಾಂತಪನ (ನಾ). ಉಗ್ರತಪಸ್ಸು; ಕಠೋರವಾದ ತಪಸ್ಸು.

ಸಾಂತಿ = ಶಾಂತಿ.

ಸಾಂತ್ವ ೧. = ಸಾಂತ್ವನ. (ಗು). ೨. ಸಮಾಧಾನದ; ಉಪಶಮನದ.

ಸಾಂತ್ವನ (ನಾ). ೧. ಸಮಾಧಾನ; ಉಪಶಮನ. ೨. ಸಮಾಧಾನ ಮಾಡುವಿಕೆ; ರಮಿಸುವಿಕೆ.

ಸಾಂದರ್ಭಿಕ (ಗು). ೧. ಸಂದರ್ಭಕ್ಕೆ ಅನುಗುಣವಾದ. ೨. ಸಂದರ್ಭಕ್ಕೆ ಸಂಬಂಧಿಸಿದ.

ಸಾ(ಂ)ದು (ನಾ). ೧. ಒಂದು ಬಗೆಯ ಸುಗಂಧ ದ್ರವ್ಯ. ೨. ಹಣೆಗೆ ಬೊಟ್ಟಿಡಲು ಬಳಸುವ ಕಪ್ಪುಬಣ್ಣದ ವಸ್ತು.

**ಸಾಂದ್ರ** (ಗು). ೧. ದಟ್ಟವಾದ ; ಕಿಕ್ಕಿರಿದ. ೨. ಹೆಚ್ಚಾದ; ಅಧಿಕವಾದ. ೩. ಮೃದುವಾದ; ಕೋಮಲವಾದ. ~ಇಸು=೧. ದಟ್ಟೈಸು ; ನಿಬಿಡವಾಗು. ೨. ವ್ಯಾಪಕವಾಗು. ~ಕೊ(ಗೊ)ಳಿಸು = ಬಲಪಡಿಸು ; ದೃಢಪಡಿಸು.

**ಸಾಂದ್ರತೆ** (ನಾ). ನಿಬಿಡತೆ ; ದಟ್ಟಣೆ.

**ಸಾಂಧ್ಯ** (ಗು). ಸಾಯಂಕಾಲಕ್ಕೆ ಸಂಬಂಧಪಟ್ಟ.

**ಸಾಂಪತ್ತಿಕ** (ಗು). ಸಂಪತ್ತಿಗೆ ಸಂಬಂಧಪಟ್ಟ.

**ಸಾಂಪರಾಯ** (ನಾ). ೧. ಯುದ್ಧ ; ಕಾಳಗ. ೨. ಮುಂದಿನ ಜೀವನಕ್ಕೆ ಸಂಬಂಧಿಸಿದುದು; ಭವಿಷ್ಯ. (ಗು). ೩. ಕಾಳಗಕ್ಕೆ ಸಂಬಂಧಿಸಿದ. ೪. ಭವಿಷ್ಯತ್ತಿಗೆ ಸೇರಿದ.

**ಸಾಂಪ್ರತ** (ನಾ). ೧. ವರ್ತಮಾನಕಾಲ ; ಸದ್ಯದ ಸಮಯ. (ಗು). ೨. ಸದ್ಯದ ; ಈಗಿನ.

**ಸಾಂಪ್ರದಾಯ** (ನಾ). ಪದ್ಧತಿ; ಸಂಪ್ರದಾಯ; ಕಟ್ಟಳೆ.

**ಸಾಂಪ್ರದಾಯಿಕ** (ಗು). ಸಂಪ್ರದಾಯಕ್ಕನುಸಾರವಾದ ; ನಿಯಮಕ್ಕನುಗುಣವಾದ.

**ಸಾಂಬ** (ನಾ). ೧. ಶಿವ. ೨. ಕೃಷ್ಣನ ಮಗನ ಹೆಸರು.

**ಸಾಂಬರ** (ನಾ). ಕಡವೆ ; ಸಾರಂಗ.

**ಸಾಂಬಾರ್(ರು)** (ನಾ). ಒಂದು ಬಗೆಯ ಮೇಲೋಗರ ; ಹುಳಿ.

**ಸಾಂಬಾರ** (ನಾ). ಅಡುಗೆಗೆ ರುಚಿಕೊಡಲು ಬಳಸುವ ಪದಾರ್ಥ ; ಮಸಾಲೆ.

**ಸಾಂಬ್ರಾಣಿ** (ನಾ). ೧. ಒಂದು ಬಗೆಯ ಸುಗಂಧದ್ರವ್ಯ. ೨. ಒಂದು ದೇಶದ ಹೆಸರು. ೩. ಒಂದು ಜಾತಿಯ ಕುದುರೆ. ~ಗಡ್ಡೆ = ಒಂದು ಜಾತಿಯ ತರಕಾರಿಗೆಡ್ಡೆ.

**ಸಾಂಯಾತ್ರಿಕ** (ನಾ). ಸಮುದ್ರದ ಮೂಲಕ ವ್ಯಾಪಾರ ಮಾಡುವವನು ; ಸಮುದ್ರ ವ್ಯಾಪಾರಿ.

**ಸಾಂಯುಗೀನ** (ಗು). ೧.ಕಾಳಗಕ್ಕೆ ಸಂಬಂಧಿಸಿದ. ೨. ಕಾಳಗದಲ್ಲಿ ಪರಿಣತಿಯುಳ್ಳ.

**ಸಾಂವತ್ಸರಿಕ** (ನಾ). ೧. ಜ್ಯೋತಿಷಿ ; ಭವಿಷ್ಯವನ್ನು ತಿಳಿಸುವವನು. (ಗು). ೨. ಸಂವತ್ಸರಕ್ಕೆ ಸಂಬಂಧಿಸಿದ ; ವಾರ್ಷಿಕ.

**ಸಾಂಶ** (ಗು). ಅಂಶದಿಂದ ಕೂಡಿದ.

**ಸಾಂಸರ್ಗಿಕ** (ಗು). ಸಂಪರ್ಕದಿಂದುಂಟಾಗುವ; ಸಹವಾಸದಿಂದಾಗುವ.

**ಸಾಂಸಾರಿಕ** (ಗು). ಸಂಸಾರಕ್ಕೆ ಸಂಬಂಧಿಸಿದ; ಕೌಟುಂಬಿಕ.

**ಸಾಂಸಿದ್ಧಿಕ** (ಗು). ಸ್ವಭಾವಸಿದ್ಧವಾದ ; ಸ್ವಾಭಾವಿಕ.

**ಸಾಂಸ್ಕೃತಿಕ** (ಗು). ಸಂಸ್ಕೃತಿಗೆ ಸಂಬಂಧಪಟ್ಟ.

**ಸಾಕಣೆ** (ನಾ). ಬೆಳಸುವುದು ; ಸಾಕುವುದು.

**ಸಾಕಲ್ಯ** (ನಾ). ಪರಿಪೂರ್ಣತೆ ; ಪೂರ್ಣವಾದುದು.

**ಸಾಕಳಿ** (ನಾ). ಅಳತೆಯ ಒಂದು ಮಾನ ; ನಲವತ್ತೊಂದು ಮೊಳ.

**ಸಾಕಾರ** (ನಾ). ೧. ಆಕಾರದಿಂದ ಕೂಡಿರುವುದು. (ಗು). ೨. ಆಕಾರಸಹಿತವಾದ. ೩. ಸುಂದರವಾದ.

**ಸಾಕು** (ಕ್ರಿ). ೧. ಕಾಪಾಡು ; ಪೋಷಿಸು ; ಬೆಳಸು. (ನಾ). ೨. ಅಗತ್ಯ ಪೂರೈಸಿರುವುದನ್ನು ಸೂಚಿಸಲು ಬಳಸುವ ಒಂದು ಮಾತು. ೩. ಬೇಡ, ನಿಲ್ಲಿಸು ಎಂಬುದನ್ನು ಸೂಚಿಸುವ ಒಂದು ಮಾತು. ~ಆಗು = ೧. ತೃಪ್ತಿಹೊಂದು ; ತಣಿ. ೨. ಸರಿಯಾಗು ; ಹೊಂದಿಕೊಳ್ಳು. ೩. ಆಯಾಸವಾಗು ; ಬಳಲು. ೪. ಬೇಸರವಾಗು ; ಬೇಜಾರುಂಟಾಗು. ~ಮಗ = ಬೇರೆಯವರಿಂದ ಸಾಕಲು ತೆಗೆದುಕೊಂಡ ಮಗ ; ದತ್ತುಪುತ್ರ. ~ಮಾಡು = ೧. ತೃಪ್ತಿಪಡಿಸು; ತಣಿಸು. ೨. ಬಿಟ್ಟುಬಿಡು; ತೊರೆ. ೩. ಕಾಡು;

ಪೀಡಿಸು ; ಬೇಸರ ಬರುವಂತೆ ಮಾಡು. ೪. ನಿಲ್ಲಿಸು ; ತಡೆಹಾಕು. ೫. ಪೂರೈಸು.

ಸಾಕೂತ (ಗು). ಅಭಿಪ್ರಾಯಸಹಿತವಾದ.

ಸಾಕ್ಷರ (ನಾ). ೧. ಅಕ್ಷರಜ್ಞಾನವುಳ್ಳವನು ; ವಿದ್ಯಾವಂತ. ೨. ಪಂಡಿತ; ವಿದ್ವಾಂಸ. (ಗು). ೩. ಅಕ್ಷರಗಳಿಂದ ಕೂಡಿದ.

ಸಾಕ್ಷರತೆ (ನಾ). ಓದುಬರೆಹಗಳನ್ನು ತಿಳಿದಿರುವಿಕೆ; ಅಕ್ಷರಜ್ಞಾನ.

ಸಾಕ್ಷರಿಕ (ನಾ). ೧. ವಿದ್ವಾಂಸ; ಪಂಡಿತ. (ಗು). ೨. ವಿದ್ವತ್ತಿನ ; ಪಾಂಡಿತ್ಯದ.

ಸಾಕ್ಷಾತ್ಕರಿಸು (ಕ್ರಿ). ೧. ಮನಸ್ಸಿಗೆ ಹಿಡಿಯುವಂತೆ ಮಾಡು ; ಸ್ಪಷ್ಟಪಡಿಸು. ೨. ಪ್ರತ್ಯಕ್ಷವಾಗು ; ಗೋಚರಿಸು.

ಸಾಕ್ಷಾತ್ಕಾರ (ನಾ). ೧. ಕಾಣುವಿಕೆ; ನೋಡುವಿಕೆ. ೨. ಅನುಭವ; ತಿಳಿವಳಿಕೆ. ೩. ಹೊಳೆಯುವಿಕೆ; ಸ್ಫುರಿಸುವಿಕೆ. ೪. ಗೋಚರಿಸುವುದು; ಪ್ರತ್ಯಕ್ಷ. ~ಆ(ವಾ)ಗು = ೧. ಹೊಳೆ ; ಸ್ಫುರಿಸು. ೨. ಪ್ರತ್ಯಕ್ಷವಾಗು ; ಗೋಚರಿಸು.

ಸಾಕ್ಷಾತ್ತು (ಅ). ೧. ಪ್ರತ್ಯಕ್ಷವಾಗಿ ; ಕಣ್ಣೆದುರಿನಲ್ಲಿ. ೨. ನೇರವಾಗಿ; ಮುಖಾಮುಖಿಯಾಗಿ.

ಸಾಕ್ಷಿ ೧. = ಸಾಕ್ಷ್ಯ. ೨. ರುಜುವಾತು ಮಾಡುವವನು ; ಕಣ್ಣಿನಿಂದ ನೋಡಿದವನು. ~ಕಟ್ಟೆ = ೧. ನ್ಯಾಯಾಲಯ ಮುಂತಾದ ಕಡೆಗಳಲ್ಲಿ ಸಾಕ್ಷಿ ಹೇಳುವವನು ನಿಲ್ಲಲು ಮಾಡಿದ ಕಟಕಟೆ. ೨. ನ್ಯಾಯಾಲಯ. ~ಗಾರ = ರುಜುವಾತು ಪಡಿಸುವವನು. ~ಹೇಳು = ರುಜುವಾತುಮಾಡು ; ಸಾಕ್ಷ್ಯವನ್ನು ಕೊಡು.

ಸಾಕ್ಷ್ಯ (ನಾ). ಪ್ರಮಾಣ ; ಪುರಾವೆ ; ರುಜುವಾತು.

ಸಾಗಡೆ (ನಾ). ಒಂದು ಜಾತಿಯ ಮರ.

ಸಾಗಣೆ (ನಾ). ಸಾಗಿಸುವುದು; ಕಳುಹಿಸುವುದು.

ಸಾಗರ (ನಾ). ೧. ಕಡಲು ; ಸಮುದ್ರ. ೨. ಜಲಾಶಯ. ೩. ಕಾಲದ ಒಂದು ಗಣನೆ. ~ಪ(ವ)ರಿ = ೧. ಸಮುದ್ರಕ್ಕೆ ಅಭಿಮುಖವಾಗಿ ಹರಿ. ೨. = ಸಾಗರಬೀಳು. ~ಬೀಳು = ಮೈಚಾಚಿ ಮುಂದೆ ಬೀಳು.

ಸಾಗವಾನಿ (ನಾ). ಒಂದು ಜಾತಿಯ ಮರ ; ತೇಗ.

ಸಾಗಾಣಿಕೆ = ಸಾಗಣೆ.

ಸಾಗು (ಕ್ರಿ). ೧. ಮುಂದಕ್ಕೆ ಹೋಗು ; ಮುಂದುವರಿ ; ಚಲಿಸು. ೨. ನೆರವೇರು ; ಆಗು ; ಜರುಗು. ೩. ಲಂಬಿಸು; ವಿಸ್ತರಿಸು. (ನಾ). ೪. ಅಭಿವೃದ್ಧಿ ; ಬೆಳವಣಿಗೆ ; ಮುನ್ನಡೆ. ೫. ನಡವಳಿ ; ವ್ಯವಹಾರ. ೬. ಬೇಸಾಯ ; ಕೃಷಿ. ೭. ಬೀಳ್ಕೊಡಿಗೆ ; ಕಳುಹಿಸಿಕೊಡುವುದು. ೮. ನಾನಾ ಬಗೆಯ ತರಕಾರಿಗಳಿಂದ ತಯಾರಿಸಿದ ಒಂದು ಬಗೆಯ ಮೇಲೋಗರ. ೯. = ಸಬ್ಬಕ್ಕಿ. ~ಇಸು =೧. ಜೋಪಾನಮಾಡು ; ಪೋಷಿಸು. ೨. ಕಳುಹಿಸು; ಬೀಳ್ಕೊಡು. ೩. ನಿಭಾಯಿಸು; ನಿರ್ವಹಿಸು. ೪. = ಸಾಗುಮಾಡು. ~ಮಾಡು = ೧. ಬೇಸಾಯಮಾಡು ; ಉಳು. ೨. ನೆರವೇರಿಸು ; ಜರುಗಿಸು. ೩. ಮುನ್ನಡಸು.

ಸಾಗುವಳಿ (ನಾ). ೧. ಬೇಸಾಯ ; ಕೃಷಿ. ೨. ಸಾಗಿಸುವಿಕೆ ; ಕಳಿಸುವಿಕೆ.

ಸಾಗುವಾನಿ = ಸಾಗವಾನಿ.

ಸಾಚ (ನಾ). ೧. ನಂಬಿಕೆಗೆ ಅರ್ಹವಾದುದು, ಯೋಗ್ಯವಾದುದು. (ಗು). ೨. ಪ್ರಾಮಾಣಿಕವಾದ.

ಸಾಚಾ = ಸಾಚ.

ಸಾಚಿ (ನಾ). ೧. ಓರೆ ; ಕೊಂಕು ; ವಕ್ರತೆ. ೨. ಒಂದು ಪಕ್ಕದಿಂದ ಕಾಣುವ ನೋಟ ; ಪಾರ್ಶ್ವದೃಶ್ಯ. (ಗು). ೩. ಓರೆಯಾದ ; ಡೊಂಕಾದ.

ಸಾಜ = ಸಹಜ.

ಸಾಜಿಂದಿ (ನಾ). ವಾದ್ಯವನ್ನು ನುಡಿಸುವವನು; ವಾದಕ.

ಸಾಟ (ನಾ). ೧. ಸಮಾನ; ಎಣೆ. ೨. ಸಂನ್ಯಾಸಿಯು ಉಡುವ ಬಟ್ಟೆ; ಕಾವಿ ಶಾಟಿ. ೩. (ವ್ಯಾಪಾರ ಮುಂತಾದುವುಗಳಲ್ಲಿ) ವಿನಿಮಯ, –ಅದಲುಬದಲು. ೪. ಒಂದು ಸಂಖ್ಯೆ; ಅರುವತ್ತು. ~ಮಾಡು = ೧. ಹೋಲಿಸು; ತುಲನೆಮಾಡು. ೨. ಅದಲುಬದಲು ಮಾಡು; ವಿನಿಮಯ ಮಾಡು.

ಸಾಠಾ (ನಾ). ಸಂಗ್ರಹ; ಶೇಖರಣೆ.

ಸಾಡೆ (ನಾ). ೧. ಮದುವೆಯಾದ ಮೇಲೆ ವಧೂವರರಿಗೆ ಉಡುಗೊರೆಗಳನ್ನು ಅರ್ಪಿಸುವ ವಿಧಿ; ನಾಗೋಲಿ. ೨. ಮದುವೆಯ ಮುಕ್ತಾಯ, –ಕೊನೆ.

ಸಾಡೇಸಾತ್(ತು) (ನಾ). ೧. ಶನಿಯಿಂದ ಉಂಟಾಗುವ ಏಳೂವರೆ ವರ್ಷಗಳ ಹಿಂಸೆ, –ಕಾಟ. ೨. ಸತದೃಷ್ಟ; ದುರ್ದೈವಿ.

ಸಾಡೇಸಾತಿ = ಸಾಡೇಸಾತ್.

ಸಾಣ (ನಾ). ೧. ಒಂದು ಆಯುಧವಿಶೇಷ. ೨. ಭಾರವಾದ ವಸ್ತುಗಳನ್ನೆತ್ತುವ ಸಾಧನ; ಸನ್ನೆಗೋಲು.

ಸಾಣಿ ೧. = ಸಾಹಣಿ. ೨. = ಸಾಣೆ. ~ಬಳೆ = ಯಾವ ಕೆತ್ತನೆಯೂ ಇಲ್ಲದ ಬಳೆ; ಸಾದಾಬಳೆ.

ಸಾಣಿಗ = ಸಾಹಣಿ.

ಸಾಣಿಗೆ ೧. = ಸಾಣೆ. ೨. = ಸಾರಣಿಗೆ.

ಸಾಣೆ (ನಾ). ತೇಯುವ ಕಲ್ಲು; ಶಾಣ. ~ಪಿ(ವಿ, ಹಿ)ಡಿ = ಹರಿತಮಾಡು; ತೀಕ್ಷ್ಣಗೊಳಿಸು.

ಸಾತತ್ಯ (ನಾ). ಅವಿಚ್ಛಿನ್ನವಾಗಿರುವುದು; ಸತತವಾಗಿರುವುದು.

ಸಾತಲೆ (ನಾ). ಸೀಗೆಯ ಮೆಳೆ.

ಸಾತಾಳಿಸು (ಕ್ರಿ). ಹದವರಿತು ತಾಳಿಸು; ಹದವಾಗುವಂತೆ ಬಾಡಿಸು.

ಸಾತಿ (ನಾ). ೧. ಇಪ್ಪತ್ತೇಳು ನಕ್ಷತ್ರಗಳಲ್ಲಿ ಒಂದು ಮತ್ತು ಆ ನಕ್ಷತ್ರದಲ್ಲಿ ಬರುವ ಮಳೆ; ಸ್ವಾತಿ. ೨. ಸಂಪಾದನೆ; ಗಳಿಕೆ. ೩. ಕೊಡುಗೆ. ೪. ಮುಕ್ತಾಯ; ಕೊನೆ. ೫. ನಾಶ; ಧ್ವಂಸ. ೬. ತೀಕ್ಷ್ಣವಾದ ನೋವು.

ಸಾತ್ತುಕುಡಿ (ನಾ). ಒಂದು ಜಾತಿಯ ಮರ ಮತ್ತು ಅದರ ಹಣ್ಣು; ಮೋಸಂಬಿ.

ಸಾತ್ತ್ವಿಕ = ಸಾತ್ವಿಕ.

ಸಾತ್ವತಿ (ನಾ). ಭಾರತಿ, ಸಾತ್ವತಿ, ಕೈಶಿಕಿ ಮತ್ತು ಆರಭಟಿಗಳೆಂಬ ನಾಟಕದ ನಾಯಕ ಸ್ವಭಾವಗಳನ್ನು ತಿಳಿಸುವ ನಾಲ್ಕು ಬಗೆಯ ವೃತ್ತಿಗಳಲ್ಲಿ ಒಂದು; ಸತ್ಯ, ಶೌರ್ಯ, ತ್ಯಾಗ ಮುಂತಾದುವುಗಳಿಂದ ಕೂಡಿರುವುದು.

ಸಾತ್ವಿಕ (ನಾ). ೧. ಒಳ್ಳೆಯ ಗುಣದಿಂದ ಕೂಡಿದವನು; ಸಾಧುಮನುಷ್ಯ. (ಗು). ೨. ನಿಜವಾದ; ಪ್ರಾಮಾಣಿಕವಾದ. ೩. ಉತ್ತಮ ತರಗತಿಯ; ಶ್ರೇಷ್ಠವಾದ. ೪. ಸತ್ತ್ವಗುಣದಿಂದ ಕೂಡಿದ; ಶಕ್ತಿಯುತವಾದ. ~ಗುಣ = ಸಾತ್ವಿಕತನ. ~ತನ = ವಿಶ್ವಾಸ; ಒಳ್ಳೆಯತನ; ಸದ್ಗುಣ.

ಸಾಥಿ (ನಾ). ಒಡನಾಡಿ; ಸಹವಾಸಿ; ಸಂಗಡಿಗ.

ಸಾದ = ಸಾದಾ.

ಸಾದರ (ನಾ). ೧. ಆದರ; ಗೌರವ; ಮನ್ನಣೆ. (ಗು). ೨. ಆದರಪೂರ್ವಕವಾದ.

ಸಾದರಪಡಿಸು (ಕ್ರಿ). ಮಂಡಿಸು; ನಿವೇದಿಸು; ನಿರೂಪಿಸು.

ಸಾದಾ (ಗು). ೧. ಸಾಧಾರಣವಾದ; ಸಾಮಾನ್ಯವಾದ. ೨. ನಿಷ್ಕಪಟವಾದ; ಸರಳವಾದ.

ಸಾದಿ (ನಾ). ೧. ಸವಾರ; ಸವಾರಿ ಮಾಡುವವನು. ೨. ರಥವನ್ನು ನಡಸುವವನು. ೩. ಮಾವುತ; ಮಾವಟಿಗ. ೪. ಆದಿಯಿರುವುದು; ಅರ್ವಾಚೀನವಾದುದು.

ಸಾದಿಲ್ವಾರ್(ರು) (ನಾ). (ಶಾಲೆ, ಕಚೇರಿ ಮುಂತಾದ ಕಡೆಗಳಲ್ಲಿ) ಶಾಯಿ, ಕಾಗದ ಮುಂತಾದುವಕ್ಕೆ ಬಳಸುವ ಚಿಲ್ಲರೆ ಖರ್ಚು; ಸಣ್ಣಪುಟ್ಟ ವೆಚ್ಚ.

ಸಾದೃಶ್ಯ (ನಾ). ೧. ಹೋಲಿಕೆ; ಎಣೆ; ಸಾಟಿ. ೨. ಪ್ರತಿಬಿಂಬ; ಪ್ರತೀಕ.

ಸಾದ್ಯಂತ (ಗು). ಆದಿ ಮತ್ತು ಅಂತ್ಯಗಳಿಂದ ಕೂಡಿದ; ಸಮಗ್ರವಾದ.

ಸಾಧಕ (ನಾ). ೧. ಸಹಾಯ; ನೆರವು. ೨. ಅಭ್ಯಾಸ; ಸಾಧನೆ. ೩. ನಿಪುಣ; ಕುಶಲ; ಜಾಣ. ೪. ಅಭ್ಯಾಸಿಸುವವನು; ಅಭ್ಯಾಸಿ. ೫. ಮೇಲೋಗರ; ವ್ಯಂಜನ ಪದಾರ್ಥ. (ಗು). ೬. ಸಹಾಯಕವಾದ; ನೆರವನ್ನು ನೀಡುವ. ೭. ಪರಿಣಾಮಕಾರಿಯಾದ.

ಸಾಧನ ೧. = ಸಾಧನೆ. ೨. ಪಡೆ; ಸೈನ್ಯ. ೩. ಸಹಾಯ; ನೆರವು.

ಸಾಧನೆ (ನಾ). ೧. (ಯಾವುದಾದರೊಂದು ಅಭ್ಯಾಸದಲ್ಲಿ) ಗುರಿ ಮುಟ್ಟುವುದು; ಸಿದ್ಧಿಯನ್ನು ಪಡೆಯುವುದು. ೨. ಸಾಧಿಸಿದುದು; ಸಿದ್ಧಿ. ೩. ಅಭ್ಯಾಸ; ಪರಿಶ್ರಮ. ೪. ಸಲಕರಣೆ; ಸಾಮಗ್ರಿ; ಉಪಕರಣ. ~ಮಾಡು = ೧. ಅಭ್ಯಾಸಮಾಡು. ೨. ಸಾಧಿಸು; ಗುರಿಯನ್ನು ಮುಟ್ಟು.

ಸಾಧಾರ (ನಾ). ೧. ಆಧಾರದಿಂದ ಕೂಡಿದುದು; ಸಮರ್ಥನೆಗೆ ಯೋಗ್ಯವಾದುದು. (ಗು). ೨. ಆಧಾರಸಹಿತವಾದ.

ಸಾಧಾರಣ (ನಾ). ೧. ಏಕರೂಪವಾದ ನಿಯಮ, –ಕಟ್ಟಳೆ. ೨. ಅರುವತ್ತು ಸಂವತ್ಸರಗಳಲ್ಲಿ ಒಂದು. (ಗು). ೩. ಎಲ್ಲರಿಗೂ ಅನ್ವಯಿಸುವ; ಸಾಮಾನ್ಯವಾದ. ೪. ಸುಮಾರಾದ; ಮಧ್ಯಮದರ್ಜೆಯ.

ಸಾಧಾರಣೀಕರಿಸು (ಕ್ರಿ). ಸಾಮಾನ್ಯಸೂತ್ರಕ್ಕೆ ಅಳವಡಿಸು.

ಸಾಧಾರಣೆ (ನಾ). ಸ್ವಕೀಯೆ, ಪರಕೀಯೆ ಮತ್ತು ಸಾಧಾರಣೆ ಎಂಬ ನಾಯಿಕೆಯರ ಮೂರು ಪ್ರಕಾರಗಳಲ್ಲಿ ಒಂದು.

ಸಾಧಿತ (ಗು). ೧. ಗುರಿಮುಟ್ಟಿದ; ಸಾಧಿಸಿದ; ಸಿದ್ಧಿಯನ್ನು ಪಡೆದ. ೨. ಮುಗಿಸಿದ; ಪೂರ್ಣಗೊಳಿಸಿದ. ೩. ರುಜುವಾತು ಮಾಡಿದ; ದೃಢಪಡಿಸಿದ. ೪. ದೊರೆತ; ಪಡೆದ. ~ನಾಮ = ವ್ಯಾಕರಣದಲ್ಲಿ ಪ್ರತ್ಯಯಗಳನ್ನು ಸೇರಿಸಿ ಮಾಡಿಕೊಂಡ ನಾಮಪದ.

ಸಾಧಿಸು (ಕ್ರಿ). ೧. ಮಾಡು; ನಿರ್ವಹಿಸು. ೨. ನೆರವೇರಿಸು; ಮುಗಿಸು; ಈಡೇರಿಸು. ೩. ಸಮರ್ಥಿಸು. ೪. (ಇನ್ನೊಬ್ಬರಿಗೆ ಕೊಟ್ಟುದನ್ನು) ವಶಕ್ಕೆ ತೆಗೆದುಕೊಳ್ಳು, –ಮರಳಿ ಪಡೆ. ೫. ಹೊಂದು; ಪಡೆ. ೬. ಗೆಲ್ಲು; ಯಶಸ್ವಿಯಾಗು. ೭. ಅಭ್ಯಾಸ ಮಾಡು; ಸಾಧನೆ ಮಾಡು.

ಸಾಧು (ನಾ). ೧. ಸರಳಸ್ವಭಾವದವನು. ೨. ಯತಿ; ಯೋಗಿ. ೩. ಜೈನಸಂನ್ಯಾಸಿ. ೪. ಕೊಂಡಾಟದ ಒಂದು ನುಡಿ. (ಗು). ೫. ಉತ್ತಮವಾದ; ಒಳ್ಳೆಯ. ೬. ನಂಬಿಕೆಗೆ ಯೋಗ್ಯವಾದ; ವಿಶ್ವಾಸಾರ್ಹವಾದ. ೭. ಪಳಗಿದ; ಹತೋಟಿಗೆ ತಂದ. ೮. ಶುದ್ಧವಾದ; ಸರಿಯಾದ. ೯. ಸುಂದರವಾದ; ಚೆಲುವಾದ.

ಸಾಧ್ಯ (ನಾ). ೧. ಸಾಧಿಸಿ ತೋರಿಸಬೇಕಾದುದು. (ಗು). ೨. ಮಾಡಬಹುದಾದ; ನೆರವೇರಿಸಬಹುದಾದ. ೩. ಹೊಂದತಕ್ಕ; ಪಡೆಯತಕ್ಕ. ೪. ಗುಣಮುಖವಾಗಬಹುದಾದ. ೫. ವಶವಾಗುವ; ಅಧೀನವಾಗುವ. ೬. ಸಹಜವಾದ; ನೈಜವಾದ.

ಸಾಧ್ವಸ (ನಾ). ೧. ಅಂಜಿಕೆ; ಭಯ. ೨. ಸಡಗರ; ಸಂಭ್ರಮ.

ಸಾಧ್ವಿ (ನಾ). ಪತಿವ್ರತೆ; ಗರತಿ.

ಸಾನ (ನಾ). ೧. ನಾಯಿ ; ಶ್ವಾನ. ೨. ಜಳಕ ; ವಿಾಹ. ೩. ಸ್ಥಾನ ; ಜಾಗ.

ಸಾನಂದ (ನಾ). ೧. ಹಿಗ್ಗು ; ಸಂತೋಷ. ೨. ಒಬ್ಬ ಋಷಿಯ ಹೆಸರು. (ಗು). ೩. ಆನಂದದಿಂದ ಕೂಡಿದ.

ಸಾನಿ (ನಾ). ೧. ಜೊತೆಯಾಗಿ ಕೆಲಸ ಮಾಡುವವನು ; ಸಹೋದ್ಯೋಗಿ. ೨. ಸ್ವಾಮಿನಿ ; ಒಡತಿ. ೩. ವೇಶ್ಯೆ ; ಸೂಳೆ.

ಸಾನು (ನಾ). ೧. ಬೆಟ್ಟದ ತಪ್ಪಲು ; ಕಿಬ್ಬಿ. ೨. ಕೋಡು ; ತುದಿ ; ಶಿಖರ.

ಸಾನುಭೂತಿ (ನಾ). ಅನುಕಂಪ ; ಸಹಾನುಭೂತಿ.

ಸಾನುರಾಗ (ನಾ). ೧. ಪ್ರೀತಿ ; ಅಕ್ಕರೆ. (ಗು). ೨. ಪ್ರೀತಿಯಿಂದ ಕೂಡಿದ.

ಸಾನ್ನಾಯು (ನಾ). ಯಜ್ಞಯಾಗಾದಿಗಳಲ್ಲಿ ಅರ್ಪಿಸುವ ಹವಿಸ್ಸು ; ಚರು.

ಸಾನ್ನಿಧ್ಯ (ನಾ). ೧. ಹತ್ತಿರ ; ಸಾಮೀಪ್ಯ. ೨. ಎದುರು ; ಸನ್ನಿಧಿ.

ಸಾಪ = ಶಾಪ.

ಸಾಪತ್ನ (ನಾ). ೧. ಮಲಮಗ ; ಸವತಿಯ ಮಗ. ೨. ಹಗೆ ; ಶತ್ರು.

ಸಾಪತ್ನಿ = ಸವತಿ.

ಸಾಪತ್ನ್ಯ ೧. = ಸಾಪತ್ನ. ೨. ವೈರ ; ಹಗೆತನ.

ಸಾಪು (ನಾ). ೧. ಚೊಕ್ಕಟ ; ಒಪ್ಪ. ೨. ನೆಲಸಮ ; ಧ್ವಂಸ. (ಅ). ೩. ಸ್ಪಷ್ಟವಾಗಿ. ೪. ಸರಳವಾಗಿ. ೫. ಮುಟ್ಟಸವಾಗಿ.

ಸಾಪೇಕ್ಷ (ನಾ). ೧. ಅವಲಂಬಿಸಿರುವುದು ; ಆಶ್ರಯಿಸಿರುವುದು. (ಗು). ೨. ಅವಲಂಬಿಸಿರುವ ; ಆಶ್ರಯಿಸಿರುವ.

ಸಾಪೇಕ್ಷೆ (ನಾ). ಅಪೇಕ್ಷೆಯಿಂದ ಕೂಡಿದುದು; ಬಯಕೆಯುಳ್ಳುದು.

ಸಾಪ್ತಪದೀನ ೧. = ಸಪ್ತಪದಿ. ೨. ಸಲಿಗೆ ; ಸ್ನೇಹ. ೩. ಗೆಳೆಯ ; ಸ್ನೇಹಿತ. (ಗು). ೪. ಸಪ್ತಪದಿಗೆ ಸಂಬಂಧಿಸಿದ.

ಸಾಪ್ತಾಹಿಕ (ನಾ). ೧. ವಾರಪತ್ರಿಕೆ. (ಗು). ೨. ಏಳು ದಿನಗಳಿಗೆ ಸಂಬಂಧಿಸಿದ.

ಸಾಫ = ಸಾಪು.

ಸಾಫಲ್ಯ (ನಾ). ಸಫಲತೆ; ಸಾರ್ಥಕತೆ; ಯಶಸ್ಸು.

ಸಾಫು = ಸಾಪು.

ಸಾಬಾಣ (ನಾ). ಸಬಕಾರ ; ಸಾಬೂನು ; ಸೋಪು.

ಸಾಬೀತು (ನಾ). ೧. ನಿಶ್ಚಿತವಾದುದು ; ಖಚಿತವಾದುದು. ೨. ರುಜುವಾತು ; ಸಾಕ್ಷಿ. (ಗು). ೩. ಸ್ಥಿರೀಕರಿಸಿದ ; ರುಜುವಾತು ಮಾಡಿದ.

ಸಾಬುಅಕ್ಕಿ = ಸಬ್ಬಕ್ಕಿ.

ಸಾಬುದಾಣ = ಸಬ್ಬಕ್ಕಿ.

ಸಾಬುದಾಣೆ = ಸಬ್ಬಕ್ಕಿ.

ಸಾಬೂನು = ಸಾಬಾಣ.

ಸಾಭಿಪ್ರಾಯ (ಗು). ಅಭಿಪ್ರಾಯಸಹಿತವಾದ.

ಸಾಮ (ನಾ). ೧. ಚತುರೋಪಾಯಗಳಲ್ಲಿ ಒಂದು. ೨. ನಾಲ್ಕು ವೇದಗಳಲ್ಲಿ ಒಂದು. ೩. ಒಪ್ಪಂದ ; ಒಡಂಬಡಿಕೆ. ೪. ತಾಳ್ಮೆ ; ಸಹನೆ. (ಗು). ೫. ಸಮಾಧಾನ ಮಾಡಿದ ; ಉಪಶಮಿಸಿದ. ~ಗಾನ = ಸಾಮವೇದದ ಋಕ್ಕುಗಳ ಗಾಯನ.

ಸಾಮಂಜಸ್ಯ (ನಾ). ಹೊಂದಾಣಿಕೆ ; ಅನ್ಯೋನ್ಯತೆ.

ಸಾಮಂತ (ನಾ). ೧. ಒಬ್ಬ ರಾಜನಿಗೆ ಅಧೀನನಾಗಿರುವ ರಾಜ; ಮಾಂಡಲಿಕ. ೨. ನೆರೆಯಲ್ಲಿರುವವನು ; ಪಕ್ಕದಲ್ಲಿರುವವನು. ೩. ನೆರೆಹೊರೆ ; ಅಕ್ಕಪಕ್ಕ.

ಸಾಮಗ್ರಿ (ನಾ). ಉಪಕರಣ ; ಸಲಕರಣೆ.

ಸಾಮಜ (ನಾ). ೧. ಸಾಮವೇದದಿಂದ ಹುಟ್ಟಿದುದು. ೨. ಆನೆ ; ಗಜ. ೩. ಒಬ್ಬ ರಾಕ್ಷಸನ ಹೆಸರು ; ಗಜಾಸುರ.

ಸಾಮತಿ (ನಾ). ೧. ಹೋಲಿಕೆ ; ಸಾದೃಶ್ಯ. ೨. ದೃಷ್ಟಾಂತ ; ಉದಾಹರಣೆ. ೩. ಉಪಮೆ. ೪. ಗಾದೆ ; ಪ್ರಹೇಳಿಕೆ.

ಸಾಮಯಿಕ (ನಾ). ೧. ಜೈನರು ಆಚರಿಸುವ ಒಂದು ಬಗೆಯ ವ್ರತ. ೨. ಆ ವ್ರತವನ್ನು ಆಚರಿಸುವವನು. (ಗು). ೩. ಸಂಪ್ರದಾಯಕ್ಕೆ ಸಂಬಂಧಿಸಿದ; ಸಾಂಪ್ರದಾಯಿಕ. ೪. ನಿಯತವಾದ ; ಗೊತ್ತಾದ. ೫. ಸಮಯೋಚಿತವಾದ ; ಕಾಲಾನುಸಾರವಾದ. ೬. ಕವಿಸಮಯಕ್ಕೆ ಸಂಬಂಧಿಸಿದ.

ಸಾಮರಸ್ಯ (ನಾ). ಹೊಂದಾಣಿಕೆ ; ಚೆನ್ನಾಗಿ ಬೆರೆಯುವುದು.

ಸಾಮರ್ಥ್ಯ (ನಾ). ೧. ಕೆಚ್ಚು; ಬಲ ; ಶಕ್ತಿ. ೨. ಅರ್ಹತೆ ; ಯೋಗ್ಯತೆ.

ಸಾಮವೇದಿ (ನಾ). ಸಾಮವೇದವನ್ನು ಅಭ್ಯಾಸ ಮಾಡಿದವನು.

ಸಾಮಾಜಿಕ (ನಾ). ೧. ಸಮಾಜದಲ್ಲಿರುವವನು. ೨. ಸಭಿಕ ; ಸಭಾಸದ. ೩. ಯಾವುದಾದರೊಂದು ಸಂಘದ ಸದಸ್ಯ. (ಗು). ೪. ಸಮಾಜಕ್ಕೆ ಸಂಬಂಧಿಸಿದ.

ಸಾಮಾನಿಕ (ನಾ). ೧. ಜೈನ ದೇವತೆಗಳಲ್ಲಿ ಒಂದು ವರ್ಗ. (ಗು). ೨. ಸಮಾನವಾದ ; ಓರಗೆಯ.

ಸಾಮಾನು (ನಾ). ೧. ಸಾಮಗ್ರಿ ; ಸಲಕರಣೆ. ೨. ವಸ್ತು. ೩. ಸರಕು.

ಸಾಮಾನ್ಯ (ನಾ). ೧. ಸಾಧಾರಣನಾದವನು. (ಗು). ೨. ಸಾರ್ವಜನಿಕವಾದ ; ಸಾರ್ವತ್ರಿಕವಾದ. ೩. ಸಾಧಾರಣವಾದ ; ವಿಶೇಷವಲ್ಲದ. ~ ನಿರ್ವಾಚನ = ಇಡಿಯ ದೇಶಕ್ಕೆ ಅನ್ವಯಿಸುವ ಚುನಾವಣೆ ; ಮಹಾಚುನಾವಣೆ.

ಸಾಮಾನ್ಯೆ (ನಾ). ೧. ಸಾಧಾರಣಳಾದ ಹೆಂಗಸು; ಹೆಚ್ಚು ತಿಳಿವಳಿಕೆಯಿಲ್ಲದವಳು. ೨. ನಾಯಿಕೆಯರಲ್ಲಿ ಒಂದು ಪ್ರಕಾರ.

ಸಾಮಿ (ನಾ). ೧. ಒಡೆಯ; ಸ್ವಾಮಿ. ೨. ಅರ್ಧ; ಅರೆಪಾಲು. ~ ಪಕ್ವ = ಅರ್ಧ ಮಾಗಿದ.

ಸಾಮಿಧೇನಿ (ನಾ). ಹೋಮಾಗ್ನಿಗೆ ಸಮಿತ್ತನ್ನು ಅರ್ಪಿಸುವಾಗ ಹೇಳುವ ಮಂತ್ರ.

ಸಾಮೀಪ್ಯ (ನಾ). ೧. ಹತ್ತಿರ ; ಸನಿಹ. ೨. ಮೋಕ್ಷದ ನಾಲ್ಕು ಪ್ರಕಾರಗಳಲ್ಲಿ ಒಂದು.

ಸಾಮಿಲ್(ಲು) (ನಾ). ೧. ಒಳಗೊಳ್ಳುವುದು; ಸೇರಿಸಿಕೊಳ್ಳುವುದು. ೨. ಸೇರಿಕೊಳ್ಳುವುದು. ೩. ಅಪರಾಧದಲ್ಲಿ ಮಾಡುವ ನೆರವು, –ಒತ್ತಾಸೆ.

ಸಾಮು (ನಾ). ಸಾಧನೆ ; ಕಸರತ್ತು.

ಸಾಮುದಾಯಿಕ (ಗು). ಸಮುದಾಯಕ್ಕೆ ಸಂಬಂಧಿಸಿದ; ಸಮೂಹಕ್ಕೆ ಸಂಬಂಧಪಟ್ಟ.

ಸಾಮುದ್ರ (ನಾ). ೧. ಸಮುದ್ರದ ಮೇಲೆ ಸಂಚರಿಸುವವನು ; ನಾವಿಕ. ೨. ಉಪ್ಪು. ೩. ಅಂಗೈ ಮತ್ತು ಮೈ ಮೇಲೆ ಇರುವ ಗೆರೆ, –ಚಿಹ್ನೆ. (ಗು). ೪. ಸಮುದ್ರದಿಂದ ಹುಟ್ಟಿದ ; ಕಡಲಿಗೆ ಸಂಬಂಧಿಸಿದ.

ಸಾಮುದ್ರಿಕ (ನಾ). ೧. ಅಂಗೈ ಮತ್ತು ಮೈಮೇಲೆ ಇರತಕ್ಕ ಗೆರೆ, –ಚಿಹ್ನೆ. ೨. ಜ್ಯೋತಿಷ್ಯ ; ಮೈಕೈಗಳ ಮೇಲಿರುವ ಚಿಹ್ನೆಗಳನ್ನು ನೋಡಿ ಭವಿಷ್ಯ ನುಡಿಯುವುದು. ೩. ಭವಿಷ್ಯವನ್ನು ಹೇಳುವವನು ; ಜ್ಯೋತಿಷಿ. (ಗು). ೪. ಸಮುದ್ರಕ್ಕೆ ಸಂಬಂಧಿಸಿದ.

ಸಾಮೂಹಿಕ = ಸಾಮುದಾಯಿಕ.

ಸಾಮೆ (ನಾ). ೧. ಒಂದು ಬಗೆಯ ಧಾನ್ಯ; ಸಾವೆ. ೨. ಒಂದು ಜಾತಿಯ ಸಸ್ಯ ಮತ್ತು ಅದರ ಗೆಡ್ಡೆ ; ಪ್ರಿಯಂಗು.

ಸಾಮ್ಯ (ನಾ). ೧. ಹೋಲಿಕೆ ; ಎಣೆ ; ಸಾಟಿ. ೨. ಹೊಂದಿಕೆ ; ಮೇಳ. ೩. ಒಡೆತನ ; ಸ್ವಾಮ್ಯ. ~ ವಾದ = ಎಲ್ಲರೂ ಸಮವೆಂದು ಹೇಳುವ ತತ್ತ್ವ; ಸಮತಾವಾದ.

ಸಾಮ್ರಾಜ್ಞಿ (ನಾ). ಚಕ್ರವರ್ತಿನಿ.

ಸಾಮ್ರಾಜ್ಯ (ನಾ). ೧. ಸಾರ್ವಭೌಮ ರಾಜ್ಯ ; ಸಾಮ್ರಾಟನ ರಾಜ್ಯ. ೨. ಸಾರ್ವಭೌಮಾಧಿಕಾರ.

ಸಾಮ್ರಾಣಿ (ನಾ). ಒಂದು ಬಗೆಯ ಸುಗಂಧ ವಸ್ತು ; ಸಾಂಬ್ರಾಣಿ.

ಸಾಯ್(ಯು) (ಕ್ರಿ). ಗತಿಸು ; ಮರಣ ಹೊಂದು. ~ಇಸು = ೧. ಕೊಲ್ಲು. ೨. ಕೊಲ್ಲಿಸು ; ಸಾಯುವಂತೆ ಮಾಡು.

ಸಾಯಂಕಾಲ (ನಾ). ಸಂಜೆ ; ಇಳಿಹೊತ್ತು.

ಸಾಯಕ (ನಾ). ೧. ಬಾಣ ; ಅಂಬು. ೨. ಕತ್ತಿ ; ಖಡ್ಗ.

ಸಾಯರು (ನಾ). ಸುಂಕ ; ಜಕಾತಿ.

ಸಾಯಸ (ನಾ). ೧. ತೊಂದರೆ ; ಕಾಟ. ೨. ಬಳಲಿಕೆ; ದಣಿವು. ~ಕೊ(ಗೊ)ಳ್(ಳ್ಳು) = ೧. ಕಷ್ಟಪಡು ; ತೊಂದರೆಗೊಳಗಾಗು. ೨. ಬಳಲು ; ದಣಿ.

ಸಾಯಾಹ್ನ = ಸಾಯಂಕಾಲ.

ಸಾಯಿ = ಸಾಯ್.

ಸಾಯಿರ (ನಾ). ಒಂದು ಸಂಖ್ಯೆ ; ಸಹಸ್ರ.

ಸಾಯುಜ್ಯ (ನಾ). ಪರಮಾತ್ಮನಲ್ಲಿ ಐಕ್ಯವನ್ನು ಹೊಂದುವುದು ; ಮೋಕ್ಷದ ನಾಲ್ಕು ಪ್ರಕಾರಗಳಲ್ಲಿ ಒಂದು.

ಸಾರ್(ರು) (ಕ್ರಿ). ೧. ಹತ್ತಿರಕ್ಕೆ ಬರು ; ಸಮೀಪಿಸು. ೨. ಕೂಡು ; ಸೇರು. ೩. ಉಂಟಾಗು ; ಒದಗು. ೪. ಪಕ್ಕಕ್ಕೆ ಸರಿ ; ಅರುಗಾಗು. ೫. = ಸಾಱು.

ಸಾರ (ನಾ). ೧. ಸೇತುವೆ ; ಕಟ್ಟೆ. ೨. = ಸಾರಾಂಶ. ೩. ಮರದ ಕೆಚ್ಚು ; ಚೇಗು. ೪. ಶೌರ್ಯ ; ಪರಾಕ್ರಮ. ೫. ದಿಟ ; ಸತ್ಯ. ೬. ನೀರು. ೭. ಗೊಬ್ಬರ. ೮. = ಸಾರಣ್. ~ಅಂಶ = ೧. ತಿರುಳು ; ಸತ್ತ್ವ. ೨. ತಾತ್ಪರ್ಯ. ~(ಂ)ಕೆ(ಗೆ)ಡು = ೧. ರುಚಿಯಿಲ್ಲದಾಗು ; ಅರುಚಿಯುಂಟಾಗು. ೨. ಸತ್ತ್ವಹೀನವಾಗು. ~ಗಾನ = ಅತ್ಯುತ್ತಮವಾದ ಸಂಗೀತ. ~ಜನಕ = ಒಂದು ಬಗೆಯ ರಾಸಾಯನಿಕ ವಸ್ತು ; ನೈಟ್ರೊಜೆನ್.

ಸಾರಂಗ ೧. = ಸಾರಗ. ೨. ದೊಡ್ಡ ಜಾತಿಯ ತುಂಬಿ. ೩. ನಾನಾ ಬಣ್ಣಗಳಿಂದ ಕೂಡಿದುದು. ೪. ಒಂದು ಜಾತಿಯ ಕುದುರೆ.

ಸಾರಂಗಿ (ನಾ). ಒಂದು ಬಗೆಯ ತಂತಿವಾದ್ಯ.

ಸಾರಂಗಿಕ (ನಾ). ಪಕ್ಷಿಗಳನ್ನು ಬೇಟೆಯಾಡುವವನು.

ಸಾರಗ (ನಾ). ೧. ಜಿಂಕೆ. ೨. ಮೈಮೇಲೆ ಚುಕ್ಕೆಗಳಿರುವ ಒಂದು ಜಾತಿಯ ಜಿಂಕೆ ; ಚುಕ್ಕೆದುಪ್ಪಿ.

ಸಾರಜ್ಞ (ನಾ). ಸಾರವನ್ನು ತಿಳಿದವನು ; ಸತ್ತ್ವವನ್ನು ಕಂಡುಕೊಂಡವನು.

ಸಾರಣ್ (ನಾ). ಸಾಮೀಪ್ಯ ; ಹತ್ತಿರ.

ಸಾರಣಿಗೆ (ನಾ). ಜರಡಿ ; ಒಂದರಿ ; ಒನಲಿ.

ಸಾರಣೆ (ನಾ). ೧. ನೆಲವನ್ನು ಗೋಮಯದಿಂದ ಸಾರಿಸುವುದು. ೨. = ಸಾರವಣೆ.

ಸಾರಥಿ (ನಾ). ರಥವನ್ನು ನಡಸುವವನು. ~ತನ = ಸಾರಥ್ಯ.

ಸಾರಥ್ಯ (ನಾ). ೧. ರಥವನ್ನು ನಡಸುವುದು. ೨. ಮುಂದಾಳುತನ ; ಮುಖಂಡತ್ವ.

ಸಾರದೆ = ಶಾರದೆ. ~ಅ(ಯಾ)ಣ್ಮ = ಸರಸ್ವತಿಯ ಒಡೆಯ ; ಬ್ರಹ್ಮ.

ಸಾರಮಾರಿ (ನಾ). ಕೋಟೆಕಾಳಗದಲ್ಲಿ ಉಪಯೋಗಿಸುತ್ತಿದ್ದ ಒಂದು ಸಾಧನ.

ಸಾರಮೇಯ (ನಾ). ೧. ನಾಯಿ ; ಸೊಣಗ. ೨. ಕಶ್ಯಪ ಮತ್ತು ಸರಮೆಯರ ಮಗ. ~ಶಿಶು = ನಾಯಿಮರಿ.

ಸಾರವಣೆ (ನಾ). ೧. ಬಳಿಯುವುದು ; ಲೇಪಿಸುವುದು. ೨. = ಸಾಱವಣೆ.

ಸಾರಸ (ನಾ). ೧. ಒಂದು ಜಾತಿಯ ನೀರುಹಕ್ಕಿ ; ಕೊಕ್ಕರೆ. ೨. ಹಂಸೆ ; ಅಂಚೆ. ೩. ತಾವರೆ ; ಕಮಲ. ೪. ಒಂದು ಜಾತಿಯ ಗಿಡ ; ಬೆಟ್ಟದಾವರೆ. ೫. = ಸಾರಸನ. (ಗು). ೬. ನೀರಿಗೆ ಸಂಬಂಧಿಸಿದ.

~ಅರಿ = ತಾವರೆಯ ಶತ್ರು; ಚಂದ್ರ. ~ನಯನ = ವಿಷ್ಣು; ಕಮಲಾಕ್ಷ.
ಸಾರಸನ (ನಾ). ಡಾಬು; ಒಡ್ಯಾಣ; ನಡುಪಟ್ಟಿ.
ಸಾರಸ್ವತ (ನಾ). ೧. ವಿದ್ವತ್ತು; ಪಾಂಡಿತ್ಯ. ೨. ವಿದ್ವಾಂಸ; ಪಂಡಿತ. ೩. ಕರಾವಳಿಯಲ್ಲಿ ವಾಸಿಸುವ ಒಂದು ಪಂಗಡದ ಜನ. (ಗು). ೪. ಸರಸ್ವತಿಗೆ ಸಂಬಂಧಿಸಿದ. ೫. ವಿದ್ವತ್ತಿನಿಂದ ಕೂಡಿದ; ವಾಕ್ಪಟುತ್ವವುಳ್ಳ. ೬. ಸರಸ್ವತಿನದಿಗೆ ಸಂಬಂಧಿಸಿದ.
ಸಾರಾಯ (ನಾ). ೧. ಸಾರಾಂಶ; ಸಾರ. ೨. = ಸಾರಾಯಿ. (ಗು). ೩. ಸಾರವತ್ತಾದ.
ಸಾರಾಯಿ (ನಾ). ಒಂದು ಬಗೆಯ ಮದ್ಯ; ಹೆಂಡ.
ಸಾರಾಸಗಟು (ಗು). ಒಟ್ಟಾದ; ರಾಶಿಯ.
ಸಾರಿ (ನಾ). ೧. ಸಲ; ಬಾರಿ; ಸರದಿ. ೨. = ಶಾರಿ. ೩. ಚಲಿಸುವುದು. ೪. ಗತಿ; ಗಮನ.
ಸಾರಿಕೆ (ನಾ). ೧. ಒಂದು ಜಾತಿಯ ಹಕ್ಕಿ; ಮೈನಾ. ೨. ಹೆಣ್ಣುಗಿಣಿ. ೩. ಗರತಿ; ಪತಿವ್ರತೆ.
ಸಾರಿಗೆ (ನಾ). ೧. ಸರಕುಗಳನ್ನು ಸಾಗಿಸುವುದು; ಸಾಗಾಣಿಕೆ. ೨. ವಾಹನ. ೩. ಒಂದು ಬಗೆಯ ತೆರಿಗೆ. ೪. ಸಲ; ಸರದಿ; ಬಾರಿ. ೫. ಹೆಣ್ಣುಗಿಣಿ. ~ಸಾಧನ = ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಒಯ್ಯುವ ವಾಹನ ಮುಂತಾದುವು.
ಸಾರಿಸು (ಕ್ರಿ). ೧. ಬಳಿ; ಲೇಪಿಸು. ೨. ನಯಗೊಳಿಸು; ನುಣುಪುಮಾಡು. ೩. ನೀರಿನಿಂದ ಚೊಕ್ಕಟಮಾಡು, -ಸ್ವಚ್ಛಗೊಳಿಸು. ೪. = ಸಾಱಿಸು.
ಸಾರುವೆ (ನಾ). ೧. ಸೇತುವೆ; ಸಂಕ. ೨. ಕಟ್ಟಡ ಮುಂತಾದುವನ್ನು ಹತ್ತಲು ಮಾಡಿದ ಮರದ ಸಾಧನ.
ಸಾರೂಪ್ಯ (ನಾ). ೧. ಸಾಮ್ಯ; ಹೋಲಿಕೆ. ೨. ಇಷ್ಟದೇವರಿಗೆ ಸಮನಾದ ರೂಪವನ್ನು ಪಡೆಯುವಿಕೆ; ಮೋಕ್ಷದ ನಾಲ್ಕುಪ್ರಕಾರಗಳಲ್ಲಿ ಒಂದು.
ಸಾರೆ = ಸಾರಣೆ.
ಸಾರೋಟ್(ಟು) (ನಾ). ಜೋಡುಕುದುರೆಗಳನ್ನು ಹೂಡಿದ ಗಾಡಿ.
ಸಾಱ(ರ)ವಣೆ (ನಾ). ಬಹಿರಂಗ ಪಡಿಸುವುದು; ಘೋಷಿಸುವುದು.
ಸಾಱು(ರು) (ಕ್ರಿ). ೧. ಘೋಷಿಸು; ಪ್ರಕಟಪಡಿಸು; ಗಟ್ಟಿಯಾಗಿ ಹೇಳು. (ನಾ). ೨. ಅನ್ನದೊಂದಿಗೆ ಕಲಸಿಕೊಳ್ಳಲು ಬಳಸುವ ಒಂದು ಬಗೆಯ ನೀರಾದ ಅಡುಗೆ. ೩. ವ್ಯಂಜನಪದಾರ್ಥ; ಎಸರು. ~ಇಸು = ಡಂಗುರಹೊಡೆ; ಪ್ರಸಿದ್ಧಪಡಿಸು.
ಸಾರ್ಕೆ (ನಾ). ೧. ಸಮೀಪಿಸುವಿಕೆ; ಹತ್ತಿರಕ್ಕೆ ಹೋಗುವಿಕೆ. ೨. = ಸಾರಣೆ.
ಸಾರ್ಚು (ಕ್ರಿ). ೧. ಸಮೀಪಿಸು; ಬಳಿಸಾರು. ೨. ಹತ್ತಿರದಲ್ಲಿ ಇಡು. ೩. ಸೇರಿಸು; ಹೊಂದಿಸು. ೪. ಪಕ್ಕಕ್ಕೆ ತಳ್ಳು; ಸರಿಸು. ೫. ಧರಿಸು; ತೊಡು. ೬. ನೀಡು; ಚಾಚು. ೭. ತೊಡಿಸು; ಹಾಕು. ~(ಂ)ತೊ(ದೊ)ಲೆ = ಕೋಟೆಯನ್ನು ಏರುವಾಗ ಬಳಸುತ್ತಿದ್ದ ಮರದ ದಿಮ್ಮಿ.
ಸಾರ್ಥ (ನಾ). ೧. ಧನಿಕ; ಹಣವುಳ್ಳವನು. ೨. ವರ್ತಕರ ಸಮೂಹ. ೩. ಯಾವುದಾದರೂ ಪ್ರಾಣಿಗಳ ಗುಂಪು. (ಗು). ೪. ಉದ್ದೇಶದಿಂದ ಕೂಡಿದ. ೫. ಅರ್ಥಪೂರ್ಣವಾದ. ೬. ಐಶ್ವರ್ಯದಿಂದ ಕೂಡಿದ. ~ವಾಹ=ವರ್ತಕರ ಗುಂಪಿನ ಮುಂದಾಳು, -ನಾಯಕ.
ಸಾರ್ಥಕ (ನಾ). ೧. ಫಲದಿಂದ ಕೂಡಿದುದು; ಒಳ್ಳೆಯ ಪರಿಣಾಮವುಳ್ಳುದು. (ಗು). ೨. ಅರ್ಥಸಹಿತವಾದ. ೩. ಪ್ರಯೋಜನವುಳ್ಳ. ೪. ಫಲಕಾರಿಯಾದ; ಸಫಲವಾದ.

ಸಾರ್ಥಕತೆ (ನಾ). ೧. ಪ್ರಯೋಜನ; ಲಾಭ; ಉಪಯೋಗ. ೨. ಸಫಲತೆ.

ಸಾರ್ಥಕ್ಯ = ಸಾರ್ಥಕತೆ.

ಸಾರ್ದ್ರ (ಗು). ತೇವದಿಂದ ಕೂಡಿದ; ಆರ್ದ್ರತೆಯಿಂದ ಕೂಡಿದ. ~ಹೃದಯ=ಅನುಕಂಪದಿಂದ ಕೂಡಿದ ಮನಸ್ಸು.

ಸಾರ್ವಕಾಲಿಕ (ಗು). ಎಲ್ಲ ಸಮಯಕ್ಕೂ ಅನ್ವಯಿಸುವ; ಸರ್ವಕಾಲೀನ.

ಸಾರ್ವಜನಿಕ (ಗು). ಸಮಾಜದ ಎಲ್ಲರಿಗೂ ಸಂಬಂಧಿಸಿದ.

ಸಾರ್ವತ್ರಿಕ (ಗು). ೧. ಎಲ್ಲ ಸ್ಥಳಗಳಿಗೆ ಸಂಬಂಧಿಸಿದ. ೨. ಎಲ್ಲ ಕಡೆಗೂ ಇರುವ.

ಸಾರ್ವಭೌಮ (ನಾ). ೧. ರಾಜಾಧಿರಾಜ; ಚಕ್ರವರ್ತಿ. ೨. ಅಷ್ಟದಿಗ್ಗಜಗಳಲ್ಲಿ ಒಂದು. (ಗು). ೩. ಭೂಮಿಗೆಲ್ಲ ಸಂಬಂಧಿಸಿದ.

ಸಾರ್ವರ್ತುಕ = ಸರ್ವರ್ತುಕ.

ಸಾಲ್(ಲು) (ಕ್ರಿ). ೧. ಸಮರ್ಥವಾಗು; ಶಕ್ತವಾಗು. ೨. ಸಾಕಾಗು; ತೃಪ್ತಿಗೊಳ್ಳು; ತಣಿ. ೩. ಯೋಗ್ಯವಾಗು. (ನಾ). ೪. ಓಳಿ; ಪಂಕ್ತಿ; ಶ್ರೇಣಿ. ೫. ವರ್ಷ; ಅಬ್ದ; ಇಸವಿ. ~ಕೊ(ಗೊ)ಳ್ = ಸಾಲಾಗಿ ನಿಲ್ಲು; ಕ್ರಮವಾಗಿರು. ~ಮರ = (ರಸ್ತೆಯ ಅಕ್ಕಪಕ್ಕಗಳಲ್ಲಿ) ಸಾಲಾಗಿ ಬೆಳಸಿದ ಮರಗಳು.

ಸಾಲ (ನಾ). ೧. ಕಡ; ಉದ್ದರಿ. ೨. ಮರ; ವೃಕ್ಷ. ೩. ಒಂದು ಜಾತಿಯ ಮರ; ಮತ್ತಿ. ೪. ಎತ್ತರವಾದ ಗೋಡೆ, –ಪ್ರಾಕಾರ. ~(ಂ)ಕು(ಗು)ಳಿ = ಉದ್ದರಿಯನ್ನು ಪಡೆಯುವುದೇ ಅಭ್ಯಾಸವಾಗುಳ್ಳವನು. ~ಗಾರ =೧. ಸಾಲವನ್ನು ಮಾಡಿದವನು. ೨. ಸಾಲವನ್ನು ಕೊಟ್ಟವನು. ~ಭಂಜಿಕೆ= ಬೊಂಬೆ; ಪುತ್ಥಳಿ; ವಿಗ್ರಹ.

ಸಾಲಂಕಾರ (ನಾ). ೧. ಅಲಂಕಾರದಿಂದ ಕೂಡಿದುದು. (ಗು). ೨. =ಸಾಲಂಕೃತ.

ಸಾಲಂಕೃತ (ಗು). ಆಭರಣಗಳಿಂದ ಸಿಂಗರಿಸಿದ; ಅಲಂಕಾರಸಹಿತವಾದ.

ಸಾಲಕ (ನಾ). ಗಂಡ ಅಥವಾ ಹೆಂಡತಿಯ ತಮ್ಮ; ಮೈದುನ; ಶಾಲಕ.

ಸಾಲಗ್ರಾಮ = ಸಾಲಿಗ್ರಾಮ.

ಸಾಲಡಿ = ಸೆಲಂದಿ.

ಸಾಲಿಗ (ನಾ). ೧. ಸಾಲವನ್ನು ಕೊಟ್ಟವನು. ೨. ಸಾಲವನ್ನು ಪಡೆದವನು. ೩. ನೇಕಾರ.

ಸಾಲಿಗ್ರಾಮ (ನಾ). ಪೂಜಾಯೋಗ್ಯವಾದ ಒಂದು ಬಗೆಯ ದುಂಡಾದ ಶಿಲೆ.

ಸಾಲಿಯಾನ (ಗು). ವಾರ್ಷಿಕ; ವರ್ಷದ.

ಸಾಲೆ (ನಾ). ೧. ವಸ್ತ್ರ; ಬಟ್ಟೆ. ೨. ಸೀರೆ. ೩. ಬಟ್ಟೆಯನ್ನು ನೇಯುವವನು; ನೇಕಾರ. ೪. ಅಂಗಳ; ಪ್ರಾಂಗಣ. ೫. ಮನೆ; ಬೀಡು. ೬. ಶಿಕ್ಷಣಾಲಯ; ವಿದ್ಯಾಲಯ.

ಸಾಲೋಕ್ಯ (ನಾ). ೧. ಒಂದೇ ಲೋಕದಲ್ಲಿ ಇರುವಿಕೆ. ೨. ಯಾವಾಗಲೂ ಇಷ್ಟದೈವದ ಎದುರಿಗೇ ಇರುವಿಕೆ; ಮೋಕ್ಷದ ನಾಲ್ಕು ಪ್ರಕಾರಗಳಲ್ಲಿ ಒಂದು.

ಸಾವಂತ = ಸಾಮಂತ.

ಸಾವಂತಿಗೆ = ಶಾವಂತಿಕೆ.

ಸಾವಕಾರ (ನಾ). ಶ್ರೀಮಂತ; ಧನಿಕ.

ಸಾವಕಾಶ (ನಾ). ೧. ಬಿಡುವು; ವಿರಾಮ. ೨. ತಡ; ವಿಳಂಬ. (ಗು). ೩. ಅವಕಾಶವಿರುವ; ಬಿಡುವಿರುವ. (ಅ). ೪. ತಡವಾಗಿ; ನಿಧಾನವಾಗಿ.

ಸಾವಗಿಸು (ಕ್ರಿ). ೧. ಸರಿಪಡಿಸು; ತಿದ್ದು; ನೇರ್ಪುಮಾಡು. ೨. ಸುಮ್ಮನಾಗು; ಮೌನವಾಗು.

ಸಾವಧಾನ (ನಾ). ೧. ಎಚ್ಚರದಿಂದಿರುವಿಕೆ; ಲಕ್ಷ್ಯದಿಂದಿರುವಿಕೆ. ೨. ಎಚ್ಚರಿಕೆ; ಲಕ್ಷ್ಯ. ೩. ತಾಳ್ಮೆ; ಶಾಂತಿ; ಸಮಾಧಾನ. (ಗು). ೪. ಎಚ್ಚರಿಕೆಯಿಂದ ಕೂಡಿದ.

ಸಾವಧಾನಿ (ನಾ). ಅವಧಾನದಿಂದ ಕೂಡಿದವನು ; ಎಚ್ಚರವುಳ್ಳವನು.

ಸಾವಯವ (ನಾ). ೧. ಅವಯವಗಳಿಂದ ಕೂಡಿರುವುದು ; ಸಾಕಾರವಾದುದು. (ಗು). ೨. ಅಂಗಗಳಿಂದ ಕೂಡಿದ.

ಸಾವರಿಸು (ಕ್ರಿ). ಚೇತರಿಸಿಕೊಳ್ಳು ; ಸುಧಾರಿಸಿಕೊಳ್ಳು.

ಸಾವಾಸ = ಸಹವಾಸ.

ಸಾವಾಸಿ (ನಾ). ೧. ಜೊತೆಯಲ್ಲಿ ವಾಸಿಸುವವನು ; ಸಂಗಡಿಗ. ೨. ಅಂತಃಪುರದ ರಕ್ಷಕನಾದ ಹಿರಿಯ.

ಸಾವಿಗೆ = ಶಾವಿಗೆ.

ಸಾವಿತ್ರಿ (ನಾ). ೧. ಸೂರ್ಯಕಿರಣಗಳ ಸಮೂಹ. ೨. ಋಗ್ವೇದದಲ್ಲಿ ಸೂರ್ಯನ ಸ್ತೋತ್ರವುಳ್ಳ ಭಾಗ ; ಗಾಯತ್ರೀ ಮಂತ್ರ. ೩. ಸತ್ಯವಾನ ದೊರೆಯ ಹೆಂಡತಿ. ೪. ಪಾರ್ವತಿಯ ಹೆಸರುಗಳಲ್ಲಿ ಒಂದು.

ಸಾವಿರ = ಸಾಯಿರ. ~ಅಕ್ಷ = ಸಾವಿರ ಕಣ್ಣುಗಳುಳ್ಳವನು ; ಇಂದ್ರ.

ಸಾವು (ನಾ). ಮೃತ್ಯು ; ಮರಣ.

ಸಾವುಕಾರ = ಸಾವಕಾರ.

ಸಾವೆ = ಸಾಮೆ.

ಸಾಷ್ಟಾಂಗ (ನಾ). ಎಂಟು ಅಂಗಗಳನ್ನು ನೆಲಕ್ಕೆ ತಾಗಿಸಿ ಮಾಡುವ ನಮಸ್ಕಾರ, ಪ್ರಣಾಮ. ~ಎ(ವೆ)ಱ(ರ)ಗು = ಅಡ್ಡ ಬೀಳು ; ನಮಸ್ಕರಿಸು. ~ನಮಸ್ಕಾರ = ಉದ್ದಂಡನಮಸ್ಕಾರ. ~ಪ್ರಣಾಮ = ಸಾಷ್ಟಾಂಗನಮಸ್ಕಾರ.

ಸಾಸ = ಸಾಹಸ. ~ಇಗ = ಸಾಸಿ.

ಸಾಸವೆ (ನಾ). ೧. ಒಂದು ಬಗೆಯ ಕಾಳು ; ಸರ್ಷಪ. ೨. ಒಂದು ಬಗೆಯ ವ್ಯಂಜನ ಪದಾರ್ಥ.

ಸಾಸಿ (ನಾ). ಸಾಹಸಿ ; ಪರಾಕ್ರಮಿ.

ಸಾಸಿಮೆ = ಸಾಸವೆ.

ಸಾಸಿರ = ಸಾಯಿರ.

ಸಾಸಿವೆ = ಸಾಸವೆ.

ಸಾಸುವೆ = ಸಾಸವೆ.

ಸಾಸ್ನೆ (ನಾ). ದನಗಳ ಕುತ್ತಿಗೆಯ ಕೆಳಗಿನ ತೆಳುವಾದ ಚರ್ಮ ; ಗಂಗೆದೊಗಲು.

ಸಾಹಚರ್ಯ (ನಾ). ಒಡನಾಟ ; ಸಹವಾಸ.

ಸಾಹಣ (ನಾ). ೧. ಕುದುರೆಗಳನ್ನು ಸಾಕುವುದು, ಪಳಗಿಸುವುದು. ೨. ಕುದುರೆಗಳನ್ನು ಕಟ್ಟುವ ಲಾಯ ; ಅಶ್ವಶಾಲೆ. ~ಇಗ = ಸಾಹಣಿ.

ಸಾಹಣಿ (ನಾ). ಕುದುರೆಗಳನ್ನು ಪಳಗಿಸುವವನು ; ಕಾಸ್ತಾರ.

ಸಾಹಸ (ನಾ). ೧. ಪರಾಕ್ರಮ ; ಶೌರ್ಯ. ೨. ದುಡುಕುತನ. ೩. ರಭಸ ; ಜೋರು. ~ಅಂಕ = ಪರಾಕ್ರಮಿ ; ಸಾಹಸಿ. ~ಇಗ = ಸಾಹಸಾಂಕ.

ಸಾಹಸಿ (ನಾ). ೧. ಪರಾಕ್ರಮಿ ; ಶೂರ. (ಗು). ೨. ಶೌರ್ಯದ ; ಸಾಹಸದ. ೩. ದುಡುಕಿನ. ೪. ರಭಸದ ; ಆವೇಗದ.

ಸಾಹಸಿಕ = ಸಾಹಸಿ.

ಸಾಹಾಯ್ಯ = ಸಹಾಯ.

ಸಾಹಿತಿ (ನಾ). ಸಾಹಿತ್ಯವನ್ನು ರಚಿಸುವವನು ; ಕವಿ ; ಬರೆಹಗಾರ.

ಸಾಹಿತ್ಯ (ನಾ). ೧. ಸಾಹಚರ್ಯ ; ಸಂಬಂಧ. ೨. ಕಾವ್ಯ, ನಾಟಕ ಮುಂತಾದ ರಚನೆ. ೩. ಸಲಕರಣೆ ; ಸಾಮಗ್ರಿ. ~ಅನುಭವ = ಕಾವ್ಯ, ನಾಟಕ ಮುಂತಾದುವುಗಳ ಆಸ್ವಾದನೆಯಿಂದುಂಟಾಗುವ ಅನುಭವ. ~ಗೋಷ್ಠಿ = ಸಾಹಿತ್ಯವನ್ನು ಕುರಿತ ಚರ್ಚಾಗೋಷ್ಠಿ.

ಸಾಹುಕಾರ = ಸಾವಕಾರ.

ಸಾಹೇಬ (ನಾ). ಅಧಿಕಾರಿ ; ಒಡೆಯ.

ಸಾಳ (ನಾ). ಒಂದು ಜಾತಿಯ ಮರ ; ಸಾಲ. ~ಭಂಜಿಕೆ = ಸಾಲಭಂಜಿಕೆ.

ಸಾಳಿಗೆ (ನಾ). ಬತ್ತ ; ನೆಲ್ಲು.

ಸಾಳುವ (ನಾ). ಬೇಟೆಗಾಗಿ ಪಳಗಿಸುವ ಒಂದು ಜಾತಿಯ ಹಕ್ಕಿ ; ಗಿಡುಗ.

ಸಾಳ್ವ = ಸಾಳುವ.

ಸಿಂಗ (ನಾ). ೧. ಸಿಂಹ ; ಕೇಸರಿ. ೨. ಬೆಟ್ಟದ ತುದಿ ; ಶೃಂಗ. ~ವು(ವ)ಣೆ = ಗದ್ದುಗೆ ; ಸಿಂಹಾಸನ.

ಸಿಂಗಡಿ ೧.=ಸಿಂಗಾಡಿ. ೨. ತೇಲಿಸುವ ಸಾಧನ; ಈಜುಗುಂಬಳಕಾಯಿ.

ಸಿಂಗರ = ಶೃಂಗಾರ. ~ಇಗ = ೧. ಅಲಂಕಾರ ಮಾಡುವವನು. ೨. ಅಲಂಕರಿಸಿಕೊಂಡವನು. ~ಇಸು = ೧. ಅಲಂಕರಿಸು. ೨. ಅಲಂಕಾರವನ್ನು ಮಾಡಿಕೊಳ್ಳು.

ಸಿಂಗಳೀಕ (ನಾ). ಕಪ್ಪುಮುಸುಡಿನ ಕೋತಿ ; ಮುಸುವ.

ಸಿಂಗಾಡಿ (ನಾ). ಬಿಲ್ಲು ; ಧನುಸ್ಸು.

ಸಿಂಗಾರ ೧. = ಶೃಂಗಾರ. ೨. ಅಡಕೆಯ ಹೂವಿನ ಗೊಂಚಲು ; ಹೊಂಬಾಳೆ. ~ಇಸು = ಸಿಂಗರಿಸು.

ಸಿಂಗಿ (ನಾ). ೧. ಹೆಣ್ಣುಸಿಂಹ ; ಸಿಂಹಿಣಿ. ೨. ಒಂದು ಬಗೆಯ ಘೋರವಿಷ.

ಸಿಂಜಿನಿ (ನಾ). ೧. ಬಿಲ್ಲಿನ ಹೆದೆ ; ಮೌರ್ವಿ. ೨. ಅಂದುಗೆ ; ಕಡಗ.

ಸಿಂಡರಿಸು (ಕ್ರಿ). ಕೋಪ, ಜುಗುಪ್ಸೆ ಮೊದಲಾದುವುಗಳಿಂದ ಹುಬ್ಬುಗಂಟಿಕ್ಕು, –ಅಸಹ್ಯಪಡು.

ಸಿಂಡು (ನಾ). ೧. ಕೆಟ್ಟನಾತ ; ದುರ್ವಾಸನೆ. ೨. ಕುರಿ, ದನ ಮೊದಲಾದುವುಗಳ ನಾತ.

ಸಿಂದ = ಸಿಂಧ.

ಸಿಂದಿ (ನಾ). ಈಚಲುಮರ ಮತ್ತು ಅದರಿಂದ ತಯಾರಿಸುವ ಹೆಂಡ ; ಸೇಂದಿ.

ಸಿಂದು (ಕ್ರಿ). ತೊಡೆದುಹಾಕು ; ಅಳಿಸು.

ಸಿಂದುರ (ನಾ). ೧. ಆನೆ; ಗಜ. ೨. = ಸಿಂಧುವಾರ. ೩. = ಸಿಂದೂರ.

ಸಿಂದೂರ (ನಾ). ಮಂಗಳದ್ರವ್ಯವಾದ ಕೇಸರಿ ಬಣ್ಣದ ಪುಡಿ; ಚಂದ್ರ.

ಸಿಂಧ (ನಾ). ಪತಾಕೆ ; ಬಾವುಟ.

ಸಿಂಧು (ನಾ). ೧. ಸಮುದ್ರ ; ಸಾಗರ. ೨. ಪ್ರವಾಹ ; ನದಿ. ೩. ಒಂದು ನದಿಯ ಹೆಸರು. ೪. ಒಂದು ದೇಶದ ಹೆಸರು. ೫. ಶಾಸ್ತ್ರಬದ್ಧವಾದುದು; ನಿಯಮಾನುಸಾರವಾದುದು.

ಸಿಂಧುರ (ನಾ). ೧. ಆನೆ; ಗಜ. ೨. ಒಬ್ಬ ರಾಕ್ಷಸನ ಹೆಸರು ; ಗಜಾಸುರ.

ಸಿಂಧುವಾರ (ನಾ). ಒಂದು ಜಾತಿಯ ಮರ ಮತ್ತು ಅದರ ಹೂವು ; ಲೊಕ್ಕಿ.

ಸಿಂಧೂರ (ನಾ). ೧. ಆನೆ; ಗಜ. ೨. = ಸಿಂದೂರ.

ಸಿಂಪಡಿಸು (ಕ್ರಿ). ಚಿಮುಕಿಸು ; ತಳಿ.

ಸಿಂಪಿ = ಸಿಂಪಿಗ.

ಸಿಂಪಿಗ (ನಾ). ದರ್ಜಿ ; ಚಿಪ್ಪಿಗ.

ಸಿಂಪಿಣಿ (ನಾ). ಚಿಮುಕಿಸುವುದು ; ಸಿಂಪಡಿಸುವುದು. ~ಆ(ಯಾ)ಡು = ಮೈಮೇಲೆ ಬಣ್ಣದ ನೀರನ್ನು ಎರಚಾಡು ; ಓಕುಳಿಯಾಡು.

ಸಿಂಪಿಸು = ಸಿಂಪಡಿಸು.

ಸಿಂಪು = ಶಿಂಪು.

ಸಿಂಬಳ = ಸಿಂಬುಳ್.

ಸಿಂಬಿ (ನಾ). ೧. ಪಾತ್ರೆಗಳ ತಳಕ್ಕೆ ಇಡುವ ಸುರುಳಿ ; ಸಿವುಡು. ೨. ಹಾವಿನ ಸುರುಳಿ, –ಇರಿಕೆ. ೩. ಪೇಟ ; ರುಮಾಲು. ೪. ಕುರೂಪಿ ; ಅಂದಗೇಡಿ.

ಸಿಂಬುಳ್(ಳು) (ನಾ). ಗೊಣ್ಣೆ ; ಸಿಂಬಳ.

ಸಿಂಬೆ ೧. = ಸಿಂಬಿ. ೨. ಒಂದು ಬಗೆಯ ಕಾಯಿಪಲ್ಯೆ.

ಸಿಂಹ (ನಾ). ೧. ಕೇಸರಿ; ಸಿಂಗ. ೨. ಜ್ಯೋತಿಶ್ಚಕ್ರದ ಹನ್ನೆರಡು ರಾಶಿಗಳಲ್ಲಿ ಒಂದು. ೩. ಶ್ರೇಷ್ಠವಾದುದು ; ಉತ್ತಮವಾದುದು.

೪. ಶ್ರೇಷ್ಠನಾದವನು. (ಗು). ೫. ಭಯಂಕರವಾದ. ~ಅವಲೊ(ಲೋ)ಕನ = ಹಿಂದೆ ನಡೆದುದನ್ನು ಮತ್ತೊಮ್ಮೆ ವಿವರವಾಗಿ ನೋಡುವುದು ; ಹಿನ್ನೋಟ. ~ಆಸನ = ಸಿಂಹಪೀಠ. ~ಗರ್ಜನೆ = ೧. ಸಿಂಹದ ಕೂಗು. ೨. ಅಬ್ಬರದ ಧ್ವನಿ ; ಭಯಂಕರವಾದ ಕೂಗು. ~ಧ್ವಜ = ೧. ಸಿಂಹದ ಗುರುತಿರುವ ಬಾವುಟ. ೨. ಸಿಂಹದ ಗುರುತಿರುವ ಬಾವುಟವನ್ನುಳ್ಳವನು ; ಭೀಮ. ~ಪೀಠ = ಸಿಂಹಾಸನ; ಗದ್ದುಗೆ. ~ವಿಷ್ಟರ = ಸಿಂಹಪೀಠ. ~ಸ್ವಪ್ನ = ಅತಿಯಾದ ಭಯ, –ಅಂಜಿಕೆ.

ಸಿಂಹಿಕೆ (ನಾ). ೧. ಹೆಣ್ಣುಸಿಂಹ. ೨. ರಾಹುವಿನ ತಾಯಿಯ ಹೆಸರು.

ಸಿಕತ (ನಾ). ೧. ಮರಳು ; ಉಸುಕು. ೨. ಮರಳಿನ ತೀರ, –ದಡ.

ಸಿಕತಿಲ(ಳ) (ಗು). ಮರಳಿನಿಂದ ಕೂಡಿದ.

ಸಿಕಲ = ಸಿಕಲಿ.

ಸಿಕಲಿ (ನಾ). ಸಾಣೆಹಿಡಿಯುವುದು.

ಸಿಕೆ (ನಾ). ತುದಿ ; ಅಗ್ರಭಾಗ ; ಶಿಖಿ.

ಸಿಕ್ಕ ೧. = ಶಿಕ್ಯ. ೨. ಸಿಖ್ ಜನಾಂಗಕ್ಕೆ ಸೇರಿದವನು.

ಸಿಕ್ಕಟಿಗೆ (ನಾ). ಕೂದಲ ಸಿಕ್ಕನ್ನು ಬಿಡಿಸುವ ಸಾಧನ ; ಹಲ್ಲುಗಳು ದಪ್ಪನಾಗಿ ದೂರದೂರವಾಗಿರುವ ಹಣಿಗೆ.

ಸಿಕ್ಕಾಪಟ್ಟೆ (ಅ). ಮನಸ್ಸಿಗೆ ತೋರಿದಂತೆ ; ಮನಸ್ವೀ.

ಸಿಕ್ಕಾಬಟ್ಟೆ = ಸಿಕ್ಕಾಪಟ್ಟೆ.

ಸಿಕ್ಕು ೧.=ಸಿರ್ಕು. ೨. ದೊರಕು ; ಪ್ರಾಪ್ತಿಯಾಗು. (ನಾ). ೩. ಬಂಧನ ; ಸೆರೆ. ೪. ಕೂದಲು ಗಂಟುಗಂಟಾಗಿರುವುದು ; ಗೋಜು. ~ಇಸು = ೧. ಒಳಸೇರಿಸು ; ತುರುಕು. ೨. ಬಂಧನಕ್ಕೊಳಗಾಗುವಂತೆ ಮಾಡು ; ತೊಡರಿಸು.

ಸಿಕ್ಥ (ನಾ). ೧. ತುತ್ತು ; ಗ್ರಾಸ. ೨. ಜೇನುಮೇಣ.

ಸಿಕ್ಥಕ = ಸಿಕ್ಥ.

ಸಿಖ್ (ನಾ). ಪಂಜಾಬಿನ ಒಂದು ಜನಾಂಗ ಮತ್ತು ಆ ಜನಾಂಗಕ್ಕೆ ಸೇರಿದವನು.

ಸಿಗಿ (ಕ್ರಿ). ಸೀಳು ; ಕತ್ತರಿಸು.

ಸಿಗು (ಕ್ರಿ). ೧. ದೊರಕು ; ಲಭಿಸು. ೨. ಎಟುಕು ; ನಿಲುಕು.

ಸಿಗುಜ್(ರ್,ರು,ಜು) (ನಾ). ಸಿಬುರು; ಚೆಕ್ಕೆ.

ಸಿಗ್ಗು (ನಾ). ೧. ಲಜ್ಜೆ ; ನಾಚಿಕೆ. ೨. ಅವಮಾನ ; ಭಂಗ. ~ಆಳಿ = ನಾಚಿಕೆಪಡುವವನು ; ಲಜ್ಜಾಶೀಲ.

ಸಿಚಯ (ನಾ). ಬಟ್ಟೆ ; ವಸ್ತ್ರ.

ಸಿಟ್ಟು (ನಾ). ಕೋಪ ; ಕನಲಿಕೆ. ~ಗಾರ = ಸಿಟ್ಟುಗೊಂಡವನು ; ಕೋಪಿಷ್ಠ.

ಸಿಡಿ (ಕ್ರಿ). ೧. ಚಿಮ್ಮು ; ನೆಗೆ. ೨. ಚೆಲ್ಲಾಪಿಲ್ಲಿಯಾಗು ; ಹರಡು. ೩. ಬಿರಿ ; ಒಡೆ. ೪. ಯಾತನೆಯಿಂದ ಸ್ನಾಯುಗಳು ಮಿಡಿ, –ತುಡಿ. ೫. ಸುರಿಸು; ಕರೆ. ೬. ಸಿಟ್ಟಿಗೇಳು. (ನಾ). ೭. ಗ್ರಾಮದೇವತೆಗೆ ಮಾಡುವ ಒಂದು ಬಗೆಯ ಸೇವೆ. ೮. ಪ್ರಾಣಿಗಳನ್ನು ಹಿಡಿಯುವ ಸಾಧನ ; ಕೊಕ್ಕೆ, ಬಲೆ ಮುಂತಾದುವು. ೯. ಆನೆಯ ಮದಜಲ. ೧೦. ಸಸ್ಯಗಳಿಗೆ ಬರುವ ಒಂದು ಬಗೆಯ ರೋಗ. ~ಗುಂಡು = ಫಿರಂಗಿ ಗುಂಡು ; ಬಾಂಬು. ~ತ(ದ)ಲೆ = ೧. ದೇಹದಿಂದ ಬೇರೆಯಾಗಿ ಚಿಮ್ಮುತ್ತಿರುವ ತಲೆ. ೨. ಹರಕೆಗಾಗಿ ತಲೆಯನ್ನು ಅರ್ಪಿಸುವ ವಿಧಿ. ~ಬಲೆ = ಬೇಟೆಗೆ ಉಪಯೋಗಿಸುವ ಒಂದು ಬಗೆಯ ಬಲೆ. ~ಮದ್ದು = ೧. ಬಂಡೆಯನ್ನು ಒಡೆಯಲು ಬಳಸುವ ಮದ್ದಿನ ಸಾಧನ; ಡೈನಮೈಟು. ೨. ಪಟಾಸ್ ಮದ್ದು ; ಪಟಾಕಿ. ~ಸೋನೆ = ತುಂತುರು ಮಳೆ.

ಸಿಡಿತ (ನಾ). ಸ್ನಾಯುಗಳ ಮಿಡಿತ, –ಹೊಡೆತ.

ಸಿಡಿಮಿಡಿ (ನಾ). ಕೋಪ; ಸಿಟ್ಟು. ~ಕೊ(ಗೊ)ಳ್(ಳ್ಳು) = ಸಿಟ್ಟಾಗು; ಕೋಪಗೊಳ್ಳು.

ಸಿಡಿಲ್(ಲು) (ಕ್ರಿ). ೧. ಚೆದರು; ಚೆಲ್ಲಾಪಿಲ್ಲಿಯಾಗು. ೨. ಕಳಚಿಕೊಳ್ಳು; ಸಡಿಲಾಗು. (ನಾ). ೩. ಮಳೆಗಾಲದಲ್ಲಿ ಆಕಾಶದಿಂದ ಭೂಮಿಯ ಕಡೆಗೆ ಹರಿದು ಬರುವ ವಿದ್ಯುತ್ಪ್ರವಾಹ; ಅಶನಿ.

ಸಿಡುಂಬು (ನಾ). ಮೆಳೆ; ಪೊದೆ.

ಸಿಡುಕ (ನಾ). ಮುಂಗೋಪಿ; ಕೋಪಿಷ್ಠ.

ಸಿಡುಕಿ (ನಾ). ಸಿಡುಕಿನಿಂದ ಕೂಡಿರುವವಳು; ಕೋಪಿಷ್ಠೆ.

ಸಿಡುಕು (ಕ್ರಿ). ೧. ರೇಗು; ಕನಲು. (ನಾ). ೨. ಕೋಪ; ಸಿಟ್ಟು.

ಸಿಡುಗುಟ್ಟು(ಕ್ರಿ). ಸಿಡುಕಿ ಮಾತನಾಡು; ರೇಗು.

ಸಿಡುಬು (ನಾ). ೧. ಒಂದು ಬಗೆಯ ಮೈಲಿ ಬೇನೆ; ದೇವಿ. ೨. ಮೈಲಿಬೇನೆಗೆ ಹಾಕುವ ಔಷಧ; ಲಸಿಕೆ.

ಸಿತ (ನಾ). ೧. ಬಿಳುಪು; ಧವಳತೆ. ೨. ಬೆಳ್ಳಿ. ೩. ಶುಕ್ರಗ್ರಹ. ೪. ಸಕ್ಕರೆ. (ಗು). ೫. ಬಿಳಿಯ; ಶ್ವೇತವರ್ಣದ. ~ಅಂಗ =೧. ಶುಕ್ರಗ್ರಹ. ೨. ಶಿವ. ೩. ಬಿಳಿಚಿಕೊಂಡಿರುವ ದೇಹ. ~ಕರಿ=ಬಿಳಿಯ ಆನೆ; ಐರಾವತ. ~ಗಲ(ಳ)=ಶಿವ. ~ಛ(ಚ್ಛ)ತ್ರ = ಶ್ವೇತಚ್ಛತ್ರ; ಬೆಳ್ಗೊಡೆ. ~ಪಕ್ಷ =೧. ತಿಂಗಳಿನ ಮೊದಲನೆಯ ಅರ್ಧಭಾಗ; ಶುಕ್ಲಪಕ್ಷ. ೨. ಬಿಳಿಯ ರೆಕ್ಕೆಗಳನ್ನುಳ್ಳುದು; ಹಂಸ. ~ಭಾನು = ಚಂದ್ರ. ~ವಾಹನ = ಬಿಳಿಯ ಕುದುರೆಯನ್ನು ವಾಹನವನ್ನಾಗಿ ಉಳ್ಳವನು; ಅರ್ಜುನ.

ಸಿತಗ (ನಾ). ೧. ಹಾದರಿಗ; ಜಾರ. ೨. ನೀಚ; ಅಲ್ಪ. ೩. ಕ್ರೂರ; ದುಷ್ಟ. ~ತನ = ಹಾದರ; ವ್ಯಭಿಚಾರ.

ಸಿತಗೆ (ನಾ). ಜಾರೆ; ಸೂಳೆ.

ಸಿತಾರ್ (ನಾ). ಒಂದು ಬಗೆಯ ತಂತಿವಾದ್ಯ.

ಸಿತಾಳ = ಸೀಯಾಳ.

ಸಿದಿಗೆ (ನಾ). ೧. ಚಿತೆ. ೨. ಚಟ್ಟ.

ಸಿದುಗು (ಕ್ರಿ). ಕೈಯಿಂದ ಹುಡುಕು; ತಡಕಾಡು.

ಸಿದ್ದಾಯ (ನಾ). ತೆರಿಗೆ; ಕಂದಾಯ.

ಸಿದ್ದಿಗೆ (ನಾ). ೧. ಎಣ್ಣೆ, ತುಪ್ಪ ಮುಂತಾದುವನ್ನು ಒಯ್ಯುವ ಚರ್ಮದ ಚೀಲ; ಬುದ್ದಲಿ. ೨. = ಸಿದಿಗೆ.

ಸಿದ್ದೆ (ನಾ). ೧. ದ್ರವಪದಾರ್ಥಗಳನ್ನು ಅಳೆಯುವ ಒಂದು ಪ್ರಮಾಣ. ೨. ಒಂದು ಅಳತೆಯ ಪಾತ್ರೆ.

ಸಿದ್ಧ (ನಾ). ೧. ಸಾಧಿಸಿದವನು; ಸಿದ್ಧಿಯನ್ನು ಪಡೆದವನು. ೨. ದೇವತೆಗಳಲ್ಲಿ ಒಂದು ಪಂಗಡ. ೩. ಸಮರ್ಥ; ನಿಪುಣ. (ಗು). ೪. ನಿರ್ವಹಿಸಿದ; ನೆರವೇರಿಸಿದ. ೫. ಅಣಿಯಾದ; ತಯಾರಾದ. ೬. ಉಂಟಾದ; ಒದಗಿದ. ೭. ಸ್ಪಷ್ಟವಾದ. ೮. ಪೂರ್ಣತೆಯನ್ನು ಪಡೆದ; ಕೊನೆಗೊಂಡ. ೯. ಜಯಶೀಲನಾದ; ಯಶಸ್ವಿಯಾದ. ~ಇಸು =೧. ಪೂರ್ಣವಾಗು; ಈಡೇರು. ೨. ಪ್ರಾಪ್ತವಾಗು; ದೊರಕು. ~ಉಡುಪು = ಹೊಲಿದು ಸಿದ್ಧಪಡಿಸಿರುವ ಬಟ್ಟೆ. ~ಔಷಧ = ಪ್ರಭಾವಶಾಲಿಯಾದ ಔಷಧ. ~ಕೊ(ಗೊ)ಳಿಸು = ೧. ಅಣಿಗೊಳಿಸು; ತಯಾರುಮಾಡು. ೨. ದೃಢಪಡಿಸು; ಸ್ಥಿರೀಕರಿಸು. ~ಧಾತು = ೧. ಪಾದರಸ. ೨. ಲೋಹದ ಅದುರು. ೩. ಕ್ರಿಯಾಪದದ ಮೂಲರೂಪ. ~ಪತ್ರೆ = ಗಾಂಜಾ; ಬಂಗಿಸೊಪ್ಪು. ~ಪದವಿ=ಸರ್ವೋತ್ಕೃಷ್ಟವಾದ ಪದವಿ, –ಸ್ಥಾನ. ~ಪುರುಷ = ಸಾಧನೆಯಿಂದ ಸಿದ್ಧಿಯನ್ನು ಪಡೆದವನು.

~ರಸ=೧. ಪಾದರಸ; ಪಾರಜ. ೨. ಲೋಹವನ್ನು ಬಂಗಾರವನ್ನಾಗಿ ಮಾಡುವುದಕ್ಕೆ ಉಪಯೋಗಿಸುವುದೆಂದು ನಂಬಲಾಗಿರುವ ಒಂದು ದ್ರವ. ~ವಸ್ತು=೧. ಕಚ್ಚಾ ಮಾಲುಗಳಿಂದ ತಯಾರಾದ ಪದಾರ್ಥ. ೨. ಕಾವ್ಯದಲ್ಲಿಯ ಮೂಲವಸ್ತು. ~ಹಸ್ತ = ನಿಪುಣ ; ಚತುರ.

ಸಿದ್ಧತೆ (ನಾ). ಸಜ್ಜು ; ತಯಾರು.

ಸಿದ್ಧಾಂತ (ನಾ). ೧. ನಿರ್ಣಯ ; ನಿರ್ಧಾರ. ೨. ಸ್ಥಾಪಿತವಾದ ತತ್ತ್ವ.

ಸಿದ್ಧಾಂತಿ (ನಾ). ೧. ಸಿದ್ಧಾಂತಗಳನ್ನು ಸ್ಥಾಪಿಸುವವನು. ೨. ವಿಜ್ಞಾನಿ. ೩. ಭವಿಷ್ಯವನ್ನು ಹೇಳುವವನು ; ಜ್ಯೋತಿಷಿ.

ಸಿದ್ಧಾಯ = ಸಿದ್ದಾಯ.

ಸಿದ್ಧಾರ್ಥ (ನಾ). ೧. ಗುರಿಯನ್ನು ಮುಟ್ಟಿದವನು ; ಸಿದ್ಧಿಯನ್ನು ಪಡೆದವನು. ೨. ಬುದ್ಧ. ೩. ಬಿಳಿಯ ಸಾಸುವೆ. ೪. ಅಕ್ಷತೆ.

ಸಿದ್ಧಿ (ನಾ). ೧. ಸಾಧನೆ; ಗುರಿಯನ್ನು ಮುಟ್ಟುವಿಕೆ. ೨. ಮೋಕ್ಷ; ಮುಕ್ತಿ. ೩. ಸಿದ್ಧತೆ. ೪. ಮಾಂತ್ರಿಕಶಕ್ತಿಯನ್ನು ಪಡೆಯುವಿಕೆ. ~ಪ್ರದಾಯಕ = ಗಣೇಶ.

ಸಿಧ್ಮ (ನಾ). ಒಂದು ಬಗೆಯ ಚರ್ಮರೋಗ ; ಚಿಬ್ಬು.

ಸಿನೆ (ನಾ). ೧. ಹಾಳು ; ಶೂನ್ಯ. (ಗು). ೨. ವ್ಯರ್ಥವಾದ. (ಅ). ೩. ಪೂರ್ಣವಾಗಿ.

ಸಿಪಾಯಿ (ನಾ). ೧. ಸೈನಿಕ ; ಯೋಧ. ೨. ಪೋಲೀಸು ಪೇದೆ. ೩. ಆಳು ; ಜವಾನ.

ಸಿಪಾಯಿದೆಬ್ಬೆ (ನಾ). ಗಾಡಿ ಹೊಡೆಯುವವನು ಗಾಡಿಯಲ್ಲಿ ಕುಳಿತುಕೊಳ್ಳುವ ಜಾಗ ; ಮೂಕಿ.

ಸಿಪಿಲೆ (ನಾ). ಒಂದು ಜಾತಿಯ ಹಕ್ಕಿ.

ಸಿಪ್ಪಿಗ = ಸಿಂಪಿಗ.

ಸಿಪ್ಪು = ಸಿಪ್ರ್ರ.

ಸಿಪ್ಪೆ (ನಾ). ೧. ಹಣ್ಣು, ಕಾಯಿ ಮೊದಲಾದುವುಗಳ ಮೇಲಿನ ಪದರ ; ತೊಗಟೆ. ೨. ಚರ್ಮ; ತೊಗಲು. ೩. ರಸವಿಲ್ಲದುದು; ಸತ್ತ್ವಹೀನವಾದುದು.

ಸಿಫಾರಸು = ಶಿಫಾರಸ್ಸು.

ಸಿಬಿಗೆ = ಶಿಬಿಕೆ.

ಸಿಬಿರ = ಶಿಬಿರ.

ಸಿಬುಱು(ರು) = ಸಿಗುಜರ್.

ಸಿಬ್ಬ = ಸಿಧ್ಮ.

ಸಿಬ್ಬಂದಿ (ನಾ). ಕಚೇರಿಯ ನೌಕರವರ್ಗ.

ಸಿಬ್ಬು = ಸಿಧ್ಮ.

ಸಿಮ್ಮು (ಕ್ರಿ). ಚಿಮ್ಮು ; ಹಾರು.

ಸಿರ ೧. = ಶಿರೆ. ೨. = ಶಿರ.

ಸಿರಕಲು (ನಾ). ಸಣ್ಣ ಕೊರಕಲು.

ಸಿರಪೇಷ್(ಷು) = ಶಿರಪೇಷ್.

ಸಿರಾ (ನಾ). ರವೆಯಿಂದ ಮಾಡುವ ಒಂದು ಬಗೆಯ ಸಿಹಿ ತಿಂಡಿ ; ಸಜ್ಜಿಗೆ.

ಸಿರಿ = ಶ್ರೀ. ~ಕ(ಗ)ಂಪು = ಸುಗಂಧ ; ಪರಿಮಳ. ~ಕ(ಗ)ನ್ನಡ = ಸಂಪದ್ಯುಕ್ತವಾದ ಕನ್ನಡ. ~ಕು(ಗು)ವರ = ಮನ್ಮಥ. ~ಗಿರಿ = ಶ್ರೀಶೈಲಪರ್ವತ. ~ತನ = ಸಿರಿವಂತಿಕೆ. ~ದಿನ = ಒಳ್ಳೆಯ ದಿವಸ ; ಶುಭದಿನ. ~ದೇವಿ = ಲಕ್ಷ್ಮಿ. ~ಬ(ವ)ಣ್ಣ = ಒಂದು ಬಗೆಯ ಬಣ್ಣದ ಸೀರೆ. ~ಮುಡಿ = ೧. ಸುಂದರವಾದ ತುರುಬು. ೨. ಸಂಪದ್ಯುಕ್ತವಾದ ಕಿರೀಟ.

ಸಿರಿಕಂಡ (ನಾ). ಶ್ರೀಗಂಧ ; ಚಂದನ.

ಸಿರಿಧರ (ನಾ). ಲಕ್ಷ್ಮಿಯನ್ನು ಧರಿಸಿರುವವನು ; ವಿಷ್ಣು ; ಶ್ರೀಧರ.

ಸಿರಿವಂತ (ನಾ). ಧನಿಕ ; ಶ್ರೀಮಂತ.

ಸಿರಿವಂತಿಕೆ (ನಾ). ಶ್ರೀಮಂತಿಗೆ ; ಐಶ್ವರ್ಯ.

ಸಿರಿವಂತಿಗೆ ೧. = ಸಿರಿವಂತಿಕೆ. ೨. ಹುರಿಯುವ ಓಡು.

ಸಿರಿಸ = ಶಿರೀಷ.

ಸಿರೆ = ಶಿರೆ.

ಸಿಱು(ರು)ಂಬುಳ್ = ಸೀಱುಂಬುಳ್. ~ಆಡು = ಸೀಱುಂಬುಳಾಡು.

ಸಿರ್ಕು (ಕ್ರಿ). ೧. ತೊಡರಿಕೊಳ್ಳು; ಕಟ್ಟು ಬೀಳು; ಸಿಕ್ಕು. (ನಾ). ೨. ಕಷ್ಟ; ತೊಂದರೆ. ೩. ಗೋಜು; ಗಂಟುಗಂಟಾದುದು.

ಸಿರ್ಪು (ನಾ). ೧. ಮುತ್ತು; ಮೌಕ್ತಿಕ. ೨. ಮುತ್ತಿನ ಚಿಪ್ಪು; ಸಿಂಪು. ೩. ತೆಂಗಿನ ಕಾಯಿ ಮುಂತಾದುವುಗಳ ಕರಟ. ೪. ಭರಣಿ; ಕರಂಡಕ. ೫. ಚೂರು; ಚೆಕ್ಕೆ.

ಸಿಲುಂಕು = ಸಿಲ್ಕು.

ಸಿಲುಬೆ = ಶಿಲುಬೆ.

ಸಿಲುವು (ನಾ). ತೆಳ್ಳಗಿರುವುದು.

ಸಿಲೆ (ನಾ). ೧. ಶಿಲೆ; ಬಂಡೆ. ೨. ಒಂದು ಬಗೆಯ ಆಯುಧ.

ಸಿಲ್ಕು (ಕ್ರಿ). ೧. ತೊಡರಿಕೊಳ್ಳು; ಸಿಕ್ಕಿ ಕೊಳ್ಳು. (ನಾ). ೨. ಗೋಜು; ಸಿಕ್ಕು. ೩. = ಶಿಲುಕು. ೪. ರೇಷ್ಮೆ.

ಸಿವ = ಶಿವ.

ಸಿವಂಗಿ = ಶಿವಂಗಿ.

ಸಿವಡಿ (ನಾ). ೧. ತಾಳೆಗರಿಯ ಸಿಂಬಿ, ಸುರುಳಿ. ೨. ರಾಶಿ; ಮೊತ್ತ. ೩. ಲೆಕ್ಕದ ಪುಸ್ತಕ; ಕಿರ್ದಿ.

ಸಿವಡು (ನಾ). ೧. ಸಿಂಬಿ; ಸುರುಳಿ; ಸುತ್ತು. ೨. ಎಲೆ, ಹುಲ್ಲು ಮುಂತಾದುವುಗಳ ಕಂತೆ.

ಸಿವದಿಡು (ಕ್ರಿ). ಶಿವಘೋ ಎಂದು ಕೂಗಿ ಕೊಳ್ಳು.

ಸಿವಿಗೆ (ನಾ). ಪಲ್ಲಕ್ಕಿ; ಶಿಬಿಕೆ.

ಸಿವುಡಿ = ಸಿವಡಿ.

ಸಿವುಡು = ಸಿವಡು.

ಸಿವುರು ೧.= ಸಿವುಱು. (ನಾ). ೨. = ಸಿಗುಱ್.

ಸಿವುಱು(ರು) (ಕ್ರಿ). ಗೀರು; ಪರಚು.

ಸಿಸಿರ = ಶಿಶಿರ.

ಸಿಸಿಲ್(ಲು) (ನಾ). ಒಂದು ಜಾತಿಯ ಮೀನು.

ಸಿಸು = ಶಿಶು.

ಸಿಸ್ತು = ಶಿಸ್ತು.

ಸಿಹಿ (ನಾ). ಷಡ್ರಸಗಳಲ್ಲಿ ಒಂದು; ಮಧುರ.

ಸಿಳೀಮುಖ = ಶಿಲೀಮುಖ.

ಸಿಳ್ಳು (ನಾ). ೧. ಸೀಟಿ ಹಾಕುವುದು. ೨. ಕಣ್ಣಿನ ಕಿಸುರು; ಗೀಜು.

ಸಿಳ್ಳೆ (ನಾ). ೧. ಕವೆ; ಕವಲು. ೨. = ಸಿಳ್ಳು.

ಸಿಳ್ಳೆಕೇತ (ನಾ). ಬಯಲಾಟಗಳಲ್ಲಿ ಬರುವ ಹಾಸ್ಯಪಾತ್ರ.

ಸೀ = ಸೀಯಱ್. ~ಕು(ಗು)ಂಬಳ = ಒಂದು ಜಾತಿಯ ಕುಂಬಳಕಾಯಿ; ಸಿಹಿಗುಂಬಳ.

ಸೀ(ಂ)ಟು (ಕ್ರಿ). ೧. ಒರಸು; ತೊಡೆ. ೨. ನೆಲದ ಮೇಲೆ ಕುಳಿತು ತೆವಳು. ೩. ಉಜ್ಜು; ತಿಕ್ಕು.

ಸೀಕರ = ಶೀಕರ.

ಸೀಕರಣೆ (ನಾ). ಮಾವಿನಹಣ್ಣು ಮುಂತಾದುವು ಗಳಿಂದ ಮಾಡುವ ಒಂದು ಬಗೆಯ ಸಿಹಿಯಾದ ದ್ರವರೂಪದ ಅಡುಗೆ.

ಸೀಕರಿ (ನಾ). ಸುಟ್ಟುಹೋದುದು; ಕರಿಕು. ~ಕೊ(ಗೊ)ಳ್ = ಸೀದುಹೋಗು; ಕರಿಕಾಗು. ~ಪೊ(ವೊ)ೞಗು = ಸೀಕರಿಗೊಳ್.

ಸೀಕಲು = ಸೀಕರಿ.

ಸೀಕು ೧. = ಸೀಕರಿ. ೨. ಕಾಯಿಲೆ; ಜಡ್ಡು.

ಸೀಗಡಿ (ನಾ). ಒಂದು ಜಾತಿಯ ಸಣ್ಣ ಮೀನು.

ಸೀಗುಡಿ ೧. = ಸೀಗಡಿ. ೨. = ಸೀಗುರಿ.

ಸೀಗುರಿ (ನಾ). ಚಾಮರ; ಚವರಿ.

ಸೀಗೆ (ನಾ). ಒಂದು ಜಾತಿಯ ಮೆಳೆ ಮತ್ತು ಅದರ ಕಾಯಿ. ~ಪುಡಿ = ಸೀಗೆಯ ಕಾಯಿಯಿಂದ ಮಾಡಿದ ಪುಡಿ.

ಸೀಟಿ (ನಾ). ಸಿಳ್ಳಿನಂತಹ ಧ್ವನಿ ಹೊರಡಿಸುವ ಒಂದು ಸಣ್ಣ ಸಾಧನ; ಶಿಲ್ಪಿ.

ಸೀತ (ನಾ). ತಂಪು; ಶೀತ.

ಸೀತಾಫಲ (ನಾ). ಒಂದು ಜಾತಿಯ ಗಿಡ ಮತ್ತು ಅದರ ಹಣ್ಣು.

ಸೀತಾಳ = ಶೀತಲೆ.

ಸೀತಾಳೆ ೧. = ಶೀತಲೆ. ೨. ಒಂದು ಜಾತಿಯ ಮರ.

ಸೀತೆ (ನಾ). ೧. ಉತ್ತ ಭೂಮಿ; ಸಾರವತ್ತಾದ ಭೂಮಿ. ೨. ಉತ್ತ ಗೆರೆ; ಉಕ್ಕೆಸಾಲು. ೩. ಜನಕನ ಮಗಳು; ರಾಮನ ಹೆಂಡತಿ.

ಸೀತ್ಕಾರ (ನಾ). ಕೂಗುವಿಕೆ; ಚೀತ್ಕಾರ.

ಸೀಘು = ಶೀಘು.

ಸೀದಾ (ನಾ). ೧. ಪಡಿತರ; ರೇಷನ್ನು. ೨. ಉಚಿತವಾಗಿ ಕೊಡುವ ಆಹಾರ ಪದಾರ್ಥ; ಉಲುಪೆ. (ಅ). ೩. ನೇರವಾಗಿ; ನೆಟ್ಟಗೆ.

ಸೀದು = ಶೀಧು.

ಸೀಧು = ಶೀಧು.

ಸೀನ್(ನು) (ಕ್ರಿ). ೧. ನೆಗಡಿ, ಘಾಟು ಮುಂತಾದುವುಗಳ ಪರಿಣಾಮವಾಗಿ ಮೂಗಿನಿಂದ ಸಶಬ್ದವಾಗಿ ಉಸಿರುಬಿಡು. (ನಾ). ೨. ನೆಗಡಿ, ಘಾಟು ಮುಂತಾದುವುಗಳಿಂದ ಮೂಗಿನ ಮೂಲಕ ಸಶಬ್ದವಾಗಿ ಉಸಿರು ಬಿಡುವುದು.

ಸೀಪು (ಕ್ರಿ). ೧. ಚೀಪು; ಹೀರು. (ನಾ). ೨. = ಸೀಪೆ.

ಸೀಪೆ (ನಾ). ಸಿಹಿ.

ಸೀಬು (ನಾ). ಬಿದಿರು ಅಥವಾ ಬೆತ್ತದ ಸೀಳು.

ಸೀಬೆ (ನಾ). ಒಂದು ಜಾತಿಯ ಮರ ಮತ್ತು ಅದರ ಹಣ್ಣು; ಚೇಪೆ; ಪೇರಳೆ.

ಸೀಮಂತ (ನಾ). ೧. ಬೈತಲೆ. ೨. ಚೊಚ್ಚಿಲು ಬಸಿರಿಗೆ ಮಾಡುವ ಸಂಸ್ಕಾರಗಳಲ್ಲಿ ಒಂದು. ~ಪುತ್ರ = ಚೊಚ್ಚಿಲು ಮಗ; ಹಿರಿಯ ಮಗ. ~ಮಣಿ = ೧. ಬೈತಲೆಗೆ ಹಾಕಿಕೊಳ್ಳುವ ಒಂದು ಬಗೆಯ ಆಭರಣ; ಚೂಡಾರತ್ನ. ೨. ಶ್ರೇಷ್ಠವಾದ ವ್ಯಕ್ತಿ ಅಥವಾ ವಸ್ತು.

ಸೀಮಂತಿನಿ (ನಾ). ಹೆಂಗಸು; ಸ್ತ್ರೀ.

ಸೀಮಾಪುರುಷ (ನಾ). ಅಸಾಮಾನ್ಯ ವ್ಯಕ್ತಿ; ಅತಿ ಶ್ರೇಷ್ಠವ್ಯಕ್ತಿ.

ಸೀಮಾರೇಖೆ (ನಾ). ಎಲ್ಲೆ; ಗಡಿ.

ಸೀಮಿತ (ಗು). ಎಲ್ಲೆಗೆ ಒಳಗಾದ; ಮಿತಿಗೆ ಒಳಪಟ್ಟ. ~ಕೊ(ಗೊ)ಳಿಸು = ಸಂಕೋಚಗೊಳಿಸು; ಮಿತಿಗೊಳಿಸು

ಸೀಮೆ (ನಾ). ೧. ಎಲ್ಲೆ; ಗಡಿ; ಮೇರೆ. ೨. ಗಡಿಕಲ್ಲು; ಬಾಂದುಕಲ್ಲು. ೩. ಕ್ಷೇತ್ರ; ಪ್ರದೇಶ. ೪. ದೇಶ; ಊರು. ೫. ವಿದೇಶ; ಹೊರದೇಶ. ~ಅಕ್ಕಿ = ಸಬ್ಬಕ್ಕಿ. ~ಎ(ಯೆ)ಣ್ಣೆ = ಕಲ್ಲೆಣ್ಣೆ; ಚಿಮಣಿಎಣ್ಣೆ. ~ಕಮಲ = ಕೃತಕವಾದ ಬಿಳಿಹರಳು. ~ಕ(ಗ)ಳೆ=ಮೇರೆಮೀರು; ಅತಿಕ್ರಮಿಸು. ~ಕೋಳಿ = ಒಂದು ಜಾತಿಯ ಕೋಳಿ. ~ಬದನೆಕಾಯಿ = ಒಂದು ಬಗೆಯ ಕಾಯಿಪಲ್ಯೆ; ಚೌಚೌ. ~ಸುಣ್ಣ= ಕರಿಹಲಗೆಯ ಮೇಲೆ ಬರೆಯಲು ಉಪಯೋಗಿಸುವ ಸಾಧನ; ಕಡು. ~ಹಸು = ವಿದೇಶಿ ತಳಿಯ ಹಸು.

ಸೀಯ್(ಯು) (ಕ್ರಿ). ೧. ಹೆಚ್ಚಾಗಿ ಸುಡು; ಕರಿಕಾಗು. (ನಾ). ೨. = ಸಿಹಿ.

ಸೀಯುದರ = ಸೀಯುಬಾರ.

ಸೀಯುಬಾರ (ನಾ). ಹೆಬ್ಬಾಗಿಲು; ಅಗಸೆ.

ಸೀಯಾಳ (ನಾ). ಎಳನೀರು; ಬೊಂಡ.

ಸೀರ್(ರು) ೧. = ಸೀಱ್. ೨. ಹೇನಿನ ಮೊಟ್ಟೆಯನ್ನು ತೆಗೆ, –ಬಾಚು. (ನಾ). ೩. ಹೇನಿನ ಮೊಟ್ಟೆ, –ತತ್ತಿ. ೪. ಸಣ್ಣದು. ೫. ತೆಳುವಾದುದು; ನವುರಾದುದು; ಸೂಕ್ಷ್ಮವಾದುದು. ~ಮೀನು = ಸಣ್ಣಮೀನು; ಚಿಕ್ಕಮೀನು. ~ಮುತ್ತು = ಸಣ್ಣಮುತ್ತು; ಚಿಕ್ಕಮುತ್ತು.

ಸೀರ (ನಾ). ನೇಗಿಲು. ~ಪಾಣಿ = ನೇಗಿಲನ್ನು ಹಿಡಿದವನು; ಬಲರಾಮ.

ಸೀರಣ (ನಾ). ಸಣ್ಣ ಉಳಿ; ಚಾಣ.

ಸೀರಣಿಗೆ (ನಾ). ಹೇನಿನ ಮೊಟ್ಟೆಯನ್ನು ಬಾಚಿ ತೆಗೆಯಲು ಉಪಯೋಗಿಸುವ ಮರದ ಹಣಿಗೆ.

ಸೀರಣೆ (ನಾ). ಎರಚುವಿಕೆ; ತೂರುವಿಕೆ.

ಸೀರಿ = ಸೀರಪಾಣಿ.

ಸೀರುಂಡೆ (ನಾ). ಸೂರೆ; ಲೂಟಿ.

ಸೀರೆ (ನಾ). ೧. ಬಟ್ಟೆ; ವಸ್ತ್ರ. ೨. (ಹೆಂಗಸರು) ಉಡುವ ಬಟ್ಟೆ; ಸಾಲೆ. ೩. ಒಂದು ಜಾತಿಯ ಮರ ಮತ್ತು ಆ ಮರದಿಂದ ತಯಾರಿಸುವ ಮದ್ಯ.

ಸೀಱ್(ರ್,ರು,ಱು) (ಕ್ರಿ). ೧. ಎರಚು; ಚೆಲ್ಲು. ೨. ರೋಷಗೊಳ್ಳು; ಸಿಟ್ಟಿಗೇಳು. ೩. ಜಗಳವಾಡು. ೪. ಚೀರು; ಕಿರಿಚು. ~ಕರಡಿ = ಒಂದು ಜಾತಿಯ ಕರಡಿ. ~ನಾಯಿ = ಒಂದು ಜಾತಿಯ ನಾಯಿ; ಕಾಡು ನಾಯಿ. ~ಪನಿ = ತುಂತುರು ಹನಿ.

ಸೀಱು(ರು)ಂಬುಳ್ (ನಾ). ಎರಚುವಿಕೆ; ಚೆಲ್ಲಾಪಿಲ್ಲಿಯಾಗಿ ಎಸೆಯುವಿಕೆ. ~ಆಡು = ಎರಚು; ಎಸೆ.

ಸೀಱು(ರು)ಡು (ನಾ). ಚೀರುಂಡೆ.

ಸೀರ್ಣ = ಸೀರಣ.

ಸೀವನ (ನಾ). ೧. ಹೊಲಿಯುವುದು. ೨. ಹೊಲಿದುದು; ಹೊಲಿಗೆ.

ಸೀವನಿ (ನಾ). ೧. ಒಂದು ಜಾತಿಯ ಮರ. ೨. ಸೂಜಿ.

ಸೀವರ = ಶೀಕರ.

ಸೀವರಿಸು (ಕ್ರಿ). ೧. ಚೀರು; ಫೂತ್ಕರಿಸು. ೨. ಜುಗುಪ್ಸೆಹೊಂದು; ಬೇಸರಿಸು.

ಸೀವು (ಕ್ರಿ). ಅಲಂಕರಿಸು.

ಸೀಸ (ನಾ). ೧. ದೇಶೀಯ ಛಂದಸ್ಸಿನಲ್ಲಿ ಒಂದು ಪ್ರಕಾರ. ೨. ಒಂದು ಬಗೆಯ ಲೋಹ. ೩. ಕುಸ್ತಿಯಲ್ಲಿ ಒಂದು ಪಟ್ಟು. ೪.= ಶೀಷೆ. ~ಕಡ್ಡಿ = ಬರೆಯಲು ಉಪಯೋಗಿಸುವ ಒಂದು ಬಗೆಯ ಸಾಧನ; ಪೆನ್ಸಿಲ್ಲು.

ಸೀಸಕ (ನಾ). ಶಿರಸ್ತ್ರಾಣ; ಕಬ್ಬಿಣದ ಅಥವಾ ಉಕ್ಕಿನ ಟೋಪಿ.

ಸೀಸೆ = ಶೀಷೆ.

ಸೀಳ್(ಳು) (ಕ್ರಿ). ೧. ಸಿಗಿ; ಬಗಿ; ಹೋಳು ಮಾಡು. (ನಾ). ೨. ಹೋಳು; ತುಂಡು. ೩. ಕೂಗುವುದು; ಸೀಟಿ ಹೊಡೆಯುವುದು. ೪. ನೂಲಿನ ಲಡಿ. ೫. ಉಕ್ಕೆ; ಉಳುಮೆ. ೬. ಜಮೀನಿನ ಒಂದು ಸಣ್ಣ ಭಾಗ, ತುಂಡು. ~ಇಕೆ = ಬಿರುಕುಬಿಟ್ಟಿದು; ಭಾಗವಾದುದು. ~ದಾರಿ = ೧. ಬೇರೆ ದಿಕ್ಕಿಗೆ ಕವಲೊಡೆದಿರುವ ದಾರಿ; ಕವಲು ದಾರಿ. ೨. ಹತ್ತಿರದ ದಾರಿ; ನೇರವಾದ ದಾರಿ. ~ನಾಯಿ = ಒಂದು ಜಾತಿಯ ನಾಯಿ.

ಸುಂಕ (ನಾ). ತೆರಿಗೆ; ತೆರ. ~ಇಗ = ತೆರಿಗೆಯನ್ನು ವಸೂಲು ಮಾಡುವವನು; ಸುಂಕದ ಅಧಿಕಾರಿ. ~(ಂ)ಕೊ(ಗೊ)ಳ್ = ತೆರಿಗೆಯನ್ನು ವಸೂಲುಮಾಡು. ~ಕ(ಗ)ಳ್ಳ = ತೆರಿಗೆಯನ್ನು ಕೊಡದೆ ವಸ್ತುಗಳನ್ನು ಕಳ್ಳತನದಿಂದ ಸಾಗಿಸುವವನು.

ಸುಂಕು (ನಾ). ೧. ಸುತ್ತು; ಸುರುಳಿ; ಇರಿಕೆ. ೨. ಮಡಿಕೆ; ಪದರ. ೩. ಸೋಂಕು; ಸಂಪರ್ಕ. ೪. ಧಾನ್ಯದ ಊಬು; ಕಂಕೆ. ~ರೋಗ = ಅಂಟುರೋಗ; ಸೋಂಕು ರೋಗ.

ಸುಂಟ = ಶುಂಠ.

ಸುಂಟಗೆ (ನಾ). ಸುಟ್ಟಮಾಂಸ; ಸುಡುಬಾಡು. ~ಕೊ(ಗೊ)ಲ್ = ಮಾಂಸವನ್ನು ಸಿಕ್ಕಿಸಿ ಬೇಯಿಸಲು ಬಳಸುವ ಕೋಲು; ಚುಚ್ಚು ಗೋಲು.

ಸುಂಟರಗಾಳಿ (ನಾ). ವರ್ತುಲಾಕಾರವಾಗಿ ಸುತ್ತಿಸುತ್ತಿ ಬರುವ ಗಾಳಿ; ಸುಟ್ಟುರೆ.

ಸುಂಟರುಗಾಳಿ = ಸುಂಟರಗಾಳಿ.

ಸುಂಟಿ = ಶುಂಠಿ.

ಸುಂಟಿಗೆ ೧. = ಸುಂಟಗೆ. ೨. ಹೃದಯ; ಗುಂಡಿಗೆ. ~ಅ(ಯು)ಡಗು = ಹೃದಯದ ಮಾಂಸ.
ಸುಂಟುರೆ = ಸುಂಟರಗಾಳಿ.
ಸುಂಟೆ (ನಾ). ಚೂರು; ತುಂಡು.
ಸುಂಠಿ = ಶುಂಠಿ.
ಸುಂಡ (ನಾ). ೧. ಒಂದು ಜಾತಿಯ ಇಲಿ; ಮೂಗಿಲಿ; ಚುಂಚಿಲಿ. ೨. ಇಲಿಯ ಮರಿ.
ಸುಂಡಲ್(ಲು) (ನಾ). ಆನೆಯ ಸೊಂಡಿಲು.
ಸುಂಡಾಲ(ಳ) = ಶುಂಡಾಲ.
ಸುಂಡಿಲ್(ಲು) = ಸುಂಡಲ್.
ಸುಂಡಿಲಿ = ಸುಂಡ.
ಸುಂಡು (ಕ್ರಿ). ಆವಿಯಾಗುವಂತೆ ಮಾಡು; ಅಟ್ಟಿಸು. ~ಇಸು = ಕುದಿಸಿ ಕಡಮೆಯಾಗುವಂತೆ ಮಾಡು.
ಸುಂಡೆ (ನಾ). ಒಂದು ಜಾತಿಯ ಸಸ್ಯ ಮತ್ತು ಅದರ ಕಾಯಿ; ಸೊಂಡೆ.
ಸುಂದರ (ನಾ). ೧. ಚೆಲುವು; ಸೌಂದರ್ಯ. ೨. ಚೆಲುವ; ಸೊಬಗ. (ಗು). ೩. ಚೆಲುವಾದ; ಅಂದವಾದ. ~ಅಂಗ = ಮನೋಹರವಾದ ದೇಹವುಳ್ಳವನು; ಚೆಲುವ. ~ಇಸು = ಚೆಲುವಾಗಿಸು; ಮನೋಹರಗೊಳಿಸು.
ಸುಂದರಿ (ನಾ). ಚೆಲುವೆ; ಅಂದಗಾತಿ.
ಸುಂದು (ಕ್ರಿ). ೧. ಮಲಗು; ವಿಶ್ರಮಿಸು. ೨. ಕೂಡು; ಸಂಭೋಗಿಸು. (ನಾ). ೩. ಕೂಟ; ಸಂಭೋಗ. ೪. ಕಾಂತಿಹೀನತೆ; ಮುಂಕು. ~ಬಡಿ = ಮುಂಕಾಗು; ಕಳೆಗುಂದು.
ಸುಂಬ (ನಾ). ಆಲಸಿ; ಜಡ.
ಸುಂಬು (ನಾ). ನಾರಿನಿಂದ ಮಾಡಿದ ಸಿಂಬಿ.
ಸುಕ (ನಾ). ೧. ಗಿಣಿ; ಶುಕ. ೨. = ಸುಖ.
ಸುಕಂಠ (ನಾ). ಮಧುರವಾದ ಕಂಠ; ಇನಿದನಿ.
ಸುಕನಾಸಿ (ನಾ). ದೇವಾಲಯದಲ್ಲಿರುವ ಗರ್ಭಗುಡಿಯ ಮುಂಭಾಗದ ಅಂಕಣ.
ಸುಕನ್ಯೆ (ನಾ). ೧. ಒಳ್ಳೆಯ ಹುಡುಗಿ. ೨. ಚ್ಯವನಋಷಿಯ ಹೆಂಡತಿ.
ಸುಕರ ೧. = ಸುಕರತೆ. (ಗು). ೨. ಸುಲಭವಾದ; ಸರಾಗವಾದ. ೩. ಸುಂದರವಾದ.
ಸುಕರತೆ (ನಾ). ದಯಾಪರತೆ; ಉಪಕಾರಬುದ್ಧಿ.
ಸುಕಲೆ (ನಾ). ೧. ಉತ್ತಮವಾದ ಕಲೆ, –ವಿದ್ಯೆ. ೨. ಪವಿತ್ರವಾದ ಗುರುತು, –ಚಿಹ್ನೆ.
ಸುಕವಿ (ನಾ). ಶ್ರೇಷ್ಠಕವಿ; ಉತ್ತಮಕವಿ.
ಸುಕಾಣ (ನಾ). ಚುಕ್ಕಾಣಿ.
ಸುಕಾಣು = ಸುಕಾಣ.
ಸುಕಾರ್ಯ (ನಾ). ಒಳ್ಳೆಯ ಕೆಲಸ; ಪುಣ್ಯಕಾರ್ಯ.
ಸುಕುಮಾರ (ನಾ). ೧. ಸುಂದರ; ಚೆಲುವ. ೨. ಕೋಮಲವಾದ ಶರೀರವುಳ್ಳವನು. ೩. ಒಳ್ಳೆಯ ಮಗ; ಸುಪುತ್ರ. ೪. ಕಾವ್ಯಗುಣಗಳಲ್ಲಿ ಒಂದು. (ಗು). ೫. ಮೃದುವಾದ; ಕೋಮಲವಾದ; ನಾಜೂಕಾದ.
ಸುಕುಮಾರತೆ (ನಾ). ೧. ಚೆಲುವು; ಅಂದ; ಸೌಂದರ್ಯ. ೨. ಕೋಮಲತೆ; ಸವುರು; ನಾಜೂಕು.
ಸುಕುಮಾರಿ (ನಾ). ೧. ಚೆಲುವೆ; ಸುಂದರಿ. ೨. ಕೋಮಲವಾದ ಶರೀರವುಳ್ಳವಳು; ಕೋಮಲಾಂಗಿ. ೩. ಒಳ್ಳೆಯ ಮಗಳು; ಸುಪುತ್ರಿ.
ಸುಕೃತ (ನಾ). ೧. ಪುಣ್ಯ; ಸೈಪು. ೨. ಪವಿತ್ರವಾದ ಕೆಲಸ; ಪುಣ್ಯಕಾರ್ಯ. ೩. ಅದೃಷ್ಟ; ಭಾಗ್ಯ. ೪. ಅದೃಷ್ಟಶಾಲಿ; ಪುಣ್ಯವಂತ. (ಗು). ೫. ಚೆನ್ನಾಗಿ ಮಾಡಿದ. ೬. ಪವಿತ್ರವಾದ; ಮಂಗಳಕರವಾದ. ~ಕರ್ಮಿ = ಪುಣ್ಯಕಾರ್ಯಗಳನ್ನು ಮಾಡುವವನು. ~ಫಲ = ಪುಣ್ಯದ ಫಲ.
ಸುಕೃತಿ (ನಾ). ೧. ಒಳ್ಳೆಯ ಕೆಲಸ; ಸತ್ಕಾರ್ಯ. ೨. ಸದ್ಗುಣ; ಒಳ್ಳೆಯ ಗುಣ. ೩. ಪುಣ್ಯವಂತೆ; ಅದೃಷ್ಟಶಾಲಿನಿ.

**ಸುಕೇಶಿ** (ನಾ). ೧. ಸುಂದರವಾದ ತಲೆಗೂದಲನ್ನುಳ್ಳವಳು. ೨. ಅಪ್ಸರಸ್ತ್ರೀಯರಲ್ಲಿ ಒಬ್ಬಳು.

**ಸುಕ್ಕಿನುಂಡೆ** (ನಾ). ಒಂದು ಬಗೆಯ ಸಿಹಿ ಭಕ್ಷ್ಯ.

**ಸುಕ್ಕು** = ಸುರ್ಕು. **~(ಂ)ಕು(ಗು)ರುಳ್** = ಸುರುಳಿಗೂದಲು; ಉಂಗುರಗೂದಲು. **~ಕ(ಗ)ಟ್ಟು** = ಮುದುಡು; ಮುರುಟಿಕೊಳ್ಳು.

**ಸುಕ್ಷೇತ್ರ** (ನಾ). ೧. ಫಲವತ್ತಾದ ಭೂಮಿ; ಸಾರವತ್ತಾದ ಭೂಮಿ. ೨. ಪವಿತ್ರಸ್ಥಳ; ಪುಣ್ಯಸ್ಥಳ.

**ಸುಖ** (ನಾ). ೧. ಸಂತೋಷ; ಆನಂದ; ಸೊಗ. ೨. ಸಮಾಧಾನ; ನೆಮ್ಮದಿ. **~ಅಂತ** = ಆನಂದದಲ್ಲಿ ಕೊನೆಗೊಳ್ಳುವ. **~ಅಶ್ರು** = ಸಂತೋಷದಿಂದ ಬರುವ ಕಣ್ಣೀರು; ಆನಂದಬಾಷ್ಪ. **~ಆಸನ** = ವಿಶ್ರಾಂತಿಯನ್ನು ಕೊಡುವ ಆಸನ, –ಪೀಠ. **~ಉದ್ದೀಪನ** = ಆನಂದವನ್ನು ಹೆಚ್ಚಿಸುವಿಕೆ. **~ಜಲ** = ಸುಖಾಶ್ರು.

**ಸುಖನಾಸಿ** = ಸುಕನಾಸಿ.

**ಸುಖಿ** (ನಾ). ೧. ಸಂತೋಷವಾಗಿರುವವನು. ೨. ಆಡನ್ನು ಮೇಯಿಸುವವನು; ಅಜಾಜೀವಿ.

**ಸುಗಂಧ** (ನಾ). ೧. ಸುವಾಸನೆ; ಪರಿಮಳ. (ಗು). ೨. ಸುವಾಸನೆಯಿಂದ ಕೂಡಿದ; ಪರಿಮಳವುಳ್ಳ. **~ತೈಲ** = ಸುವಾಸನೆಯ ಎಣ್ಣೆ. **~ರಾಜ** = ಒಂದು ಜಾತಿಯ ಗಿಡ ಮತ್ತು ತೀಕ್ಷ್ಣವಾದ ಸುವಾಸನೆಯುಳ್ಳ ಅದರ ಹೂವು. **~ಲೇಪನ** = ಪರಿಮಳ ದ್ರವ್ಯವನ್ನು ಲೇಪಿಸುವಿಕೆ.

**ಸುಗಂಧಿ** (ನಾ). ೧. ಸುಗಂಧದಿಂದ ಕೂಡಿದುದು; ಸುವಾಸನೆಯುಳ್ಳುದು. ೨. ಸುವಾಸನೆ; ನರುಗಂಪು. ೩. ಒಂದು ಬಗೆಯ ಸುಗಂಧದ್ರವ್ಯ; ಏಲಾವಾಲುಕ. ೪. ಸುಗಂಧವಸ್ತುಗಳನ್ನು ತಯಾರಿಸುವವನು.

**ಸುಗತ** (ನಾ). ೧. ಬುದ್ಧ. (ಗು). ೨. ಒಳ್ಳೆಯ ರೀತಿಯಲ್ಲಿ ಮುಂದುವರಿದ, –ಚಲಿಸಿದ.

**ಸುಗತಿ** (ನಾ). ೧. ಒಳ್ಳೆಯ ಗತಿ; ಸದ್ಗತಿ; ಮೋಕ್ಷ. ೨. ಒಳ್ಳೆಯ ನಡಗೆ; ಮೋಹಕವಾದ ನಡಗೆ.

**ಸುಗಮ** (ಗು). ಸರಾಗವಾದ; ಸಲೀಸಾದ.

**ಸುಗಿ** (ಕ್ರಿ). ೧. ಹರಿ; ಚೂರುಮಾಡು. ೨. (ಚರ್ಮ, ಸಿಪ್ಪೆ ಮುಂತಾದುವುಗಳಂತೆ) ಸುಲಿ, –ಎಡೆ. ೩. ಸುಲಿಗೆ ಮಾಡು; ದೋಚು. ೪. ಅಂಜು; ಹೆದರು.

**ಸುಗುಡ** (ನಾ). ೧. ನಪುಂಸಕ; ಷಂಡ. ೨. ವಿಷಯಾಸಕ್ತ; ಕಾಮುಕ.

**ಸುಗುಡಿ** (ನಾ). ೧. ಮೈನೆರೆಯದ ಹೆಂಗಸು. ೨. ಹೆಣ್ಣುತನವಿಲ್ಲದವಳು; ಗಂಡುಬೀರಿ.

**ಸುಗುಡು** (ನಾ). ೧. ಆಸೆ; ಬಯಕೆ. ೨. ವಿಷಯಲಂಪಟತೆ; ಕಾಮುಕತೆ. **~ತನ** = ಸುಗುಡು.

**ಸುಗುಣ** (ನಾ). ೧. ಒಳ್ಳೆಯ ಗುಣ; ಸದಾಚಾರ. ೨. = ಸುಗುಣಿ.

**ಸುಗುಣಿ** (ನಾ). ಒಳ್ಳೆಯ ಗುಣಗಳಿಂದ ಕೂಡಿರುವವನು; ಗುಣಸಂಪನ್ನ.

**ಸುಗುಣೆ** (ನಾ). ಸದ್ಗುಣಗಳಿಂದ ಕೂಡಿದ ಹೆಂಗಸು.

**ಸುಗ್ಗಿ** (ನಾ). ೧. ಚೈತ್ರಮಾಸ; ವಸಂತಕಾಲ. ೨. ಧಾನ್ಯಗಳ ಕೊಯ್ಲಿನ ಕಾಲ, –ಕಟಾವಿನ ಕಾಲ. ೩. ಹಬ್ಬ; ಪರ್ವ. ೪. ಹೆಚ್ಚಳ; ಸಮೃದ್ಧಿ. **~ಕಾಲ** = ಬೆಳೆಯನ್ನು ಕೊಯ್ಯುವ ಕಾಲ. **~ಗೆಳೆಯ** = ಕಾಮ; ಮನ್ಮಥ. **~ಪ(ವ)ಕ್ಕಿ** = ಕೋಗಿಲೆ; ಪಿಕ. **~ಪ(ವ)ಡೆ** = ಅಧಿಕವಾಗು; ಹೇರಳವಾಗು.

**ಸುಗ್ಗಿನುಂಡೆ** = ಸುಕ್ಕಿನುಂಡೆ.

ಸುಗ್ಗು (ನಾ). ಅಕ್ಕಿಯ ಹಿಟ್ಟು, ಬೆಲ್ಲ ಮತ್ತು ತೆಂಗಿನಕಾಯಿಗಳ ಮಿಶ್ರಣ.

ಸುಗ್ರಾಸ (ನಾ). ರುಚಿಕರವಾದ ತಿನಿಸು. ~ಭೋಜನ = ರುಚಿಕರವಾದ ಭೋಜನ; ಭರ್ಜರಿಯಾದ ಊಟ.

ಸುಗ್ರೀವ (ನಾ). ೧. ಸುಂದರವಾದ ಕಂಠ; ಚೆಲುವಾದ ಕುತ್ತಿಗೆ. ೨. ಕಿಷ್ಕಿಂಧೆಯ ಒಬ್ಬ ರಾಜನ ಹೆಸರು. ~ಆಜ್ಞೆ = ಕಟ್ಟುನಿಟ್ಟಾದ ಅಪ್ಪಣೆ; ಉಗ್ರಶಾಸನ.

ಸುಗ್ರೀವೆ (ನಾ). ಸುಂದರವಾದ ಕೊರಳುಳ್ಳವಳು.

ಸುಚರಿತ (ನಾ). ೧. ಸದ್ಗುಣ; ಒಳ್ಳೆಯ ನಡತೆ. ೨. ಸದ್ಗುಣಿ; ಸಂಪನ್ನ. (ಗು). ೩. ಒಳ್ಳೆಯ ನಡತೆಯಿಂದ ಕೂಡಿದ.

ಸುಚರಿತ್ರ = ಸುಚರಿತ.

ಸುಚರಿತ್ರೆ (ನಾ). ೧. ಸದಾಚಾರ; ಸಚ್ಚಾರಿತ್ರ್ಯ. ೨. ಸದಾಚಾರದಿಂದ ಕೂಡಿರುವವಳು.

ಸುಚಾಯಿಸು (ಕ್ರಿ). ತೋರು; ಸ್ಫುರಿಸು; ಹೊಳೆ.

ಸುಚಾರಿತ್ರ (ನಾ). ಒಳ್ಳೆಯ ಕಥೆ; ಸತ್ಕಥೆ.

ಸುಚಿ (ನಾ). ಶುಚಿ; ನೈರ್ಮಲ್ಯ.

ಸುಚಿತ್ತ (ನಾ). ಒಳ್ಳೆಯ ಮನಸ್ಸು.

ಸುಚಿತ್ತೆ (ನಾ). ಒಳ್ಳೆಯ ಮನಸ್ಸುಳ್ಳವಳು.

ಸುಜನ (ನಾ). ೧. ಸಭ್ಯ; ಸಜ್ಜನ. (ಗು). ೨. ಸಜ್ಜನಿಕೆಯಿಂದ ಕೂಡಿದ; ಒಳ್ಳೆಯ.

ಸುಜನತೆ (ನಾ). ಒಳ್ಳೆಯ ನಡತೆ; ಸದ್ಗುಣ.

ಸುಜಾಣ (ನಾ). ತಿಳಿದವನು; ವಿದ್ವಾಂಸ.

ಸುಜಾಣೆ (ನಾ). ಬುದ್ಧಿವಂತೆ; ಚತುರೆ.

ಸುಜಾತ (ನಾ). ಒಳ್ಳೆಯ ಕುಲದಲ್ಲಿ ಹುಟ್ಟಿದವನು; ಕುಲೀನ.

ಸುಜ್ಜಲು (ನಾ). ಒಂದು ಜಾತಿಯ ಮರ; ಜುಜ್ಜಲು.

ಸುಜ್ಞಾನ (ನಾ). ಉತ್ತಮವಾದ ತಿಳಿವಳಿಕೆ; ವಿಶೇಷಜ್ಞಾನ.

ಸುಜ್ಞಾನಿ (ನಾ). ವಿಶೇಷವಾದ ಅರಿವುಳ್ಳವನು.

ಸುಟಿ (ನಾ). ೧. ಚುರುಕುತನ; ಲವಲವಿಕೆ. (ಗು). ೨. ಚತುರತೆಯುಳ್ಳ; ಚಾಕಚಕ್ಯತೆಯುಳ್ಳ. ೩. ಶಕ್ತಿಯುಳ್ಳ; ದಕ್ಷತೆಯುಳ್ಳ. ~ಪೆ(ವೆ)ಱು(ರು) = ಚುರುಕಾಗು.

ಸುಟ್ಟು (ಕ್ರಿ). ಬೆರಳಿನಿಂದ ತೋರಿಸು, –ಸೂಚಿಸು. ~ಇಸು=ಬೆರಳಿಟ್ಟು ತೋರಿಸು.

ಸುಟ್ಟುಂಬೆ (ನಾ). ತೋರುಬೆರಳು; ತರ್ಜನಿ.

ಸುಟ್ಟುರೆ = ಸುಂಟರಗಾಳಿ. ~ಗಾಳಿ=ಸುಂಟರಗಾಳಿ.

ಸುಡಾಳ (ನಾ). ಅತ್ಯಂತ ಕಾಂತಿ; ಅಧಿಕವಾದ ಹೊಳಪು.

ಸುಡು (ಕ್ರಿ). ೧. ಬೇಯುವಂತೆ ಮಾಡು; ಅಡು. ೨. ದಹಿಸು; ಸುಟ್ಟುಹಾಕು. ೩. ಶಾಖದಿಂದ ಬಿಸಿಯಾಗು. ~ಕಾ(ಗಾ)ಡು=೧. ಹೆಣಗಳನ್ನು ಸುಡುವ ಸ್ಥಳ; ಮಸಣ. ೨. ಉಪಯೋಗಕ್ಕೆ ಬಾರದುದು; ಅಪ್ರಯೋಜಕವಾದುದು. ~ನೀರು = ಕಾದ ನೀರು; ಬಿಸಿನೀರು. ~ಬಲಿ = ಶ್ಮಶಾನ; ಮಸಣ. ~ಮಾಂಸ = ಸುಂಟಿಗೆ.

ಸುಣ್ಣ (ನಾ). ಹರಳು, ಕಪ್ಪೆಚಿಪ್ಪು ಮುಂತಾದುವುಗಳನ್ನು ಸುಟ್ಟು ತಯಾರು ಮಾಡಿದುದು; ಚೂರ್ಣ; ಕ್ಷಾರ. ~ಪ(ವ)ರಲ್ = ಸುಣ್ಣದ ಹರಳು.

ಸುತ (ನಾ). ಮಗ; ಪುತ್ರ.

ಸುತರಾಂ (ಅ). ೧. ಬಹಳವಾಗಿ; ಬಹುಮಟ್ಟಿಗೆ. ೨. ಪೂರಾ; ಸಂಪೂರ್ಣವಾಗಿ. ೩. ಖಂಡಿತವಾಗಿ; ನಿಶ್ಚಯವಾಗಿ.

ಸುತಲ(ಳ) (ನಾ). ಏಳು ಅಧೋಲೋಕಗಳಲ್ಲಿ ಒಂದು.

ಸುತಾನ (ನಾ). ಒಳ್ಳೆಯ ಧ್ವನಿ.

ಸುತಿ (ನಾ). ೧. ವೇದ; ಶ್ರುತಿ. ೨. ಗಾಯಕನ ಮತ್ತು ವಾದ್ಯದ ನಾದಗಳ ಹೊಂದಾಣಿಕೆ.

ಸುತೆ (ನಾ). ಮಗಳು ; ಪುತ್ರಿ.
ಸುತ್ತ = ಸುತ್ತಲ್.
ಸುತ್ತಲ್(ಲು) (ಅ). ಎಲ್ಲ ಕಡೆಗಳಲ್ಲೂ ; ಚಕ್ರಾಕಾರವಾಗಿ.
ಸುತ್ತಿ (ನಾ). ಮುತ್ತಿನ ಚಿಪ್ಪು ; ಶುಕ್ತಿ.
ಸುತ್ತಿಗೆ (ನಾ). ೧. ಒಂದು ಬಗೆಯ ಕಬ್ಬಿಣದ ಸಾಧನ ; ಚಮ್ಮಟಿಗೆ. ೨. ಎಳೆ ; ಸೂತ್ರಿಕೆ.
ಸುತ್ತು (ಕ್ರಿ). ೧. ಬಳಸು ; ಆವರಿಸು. ೨. ಚಕ್ರಾಕಾರವಾಗಿ ಚಲಿಸು ; ತಿರುಗು. ೩. ಅಲೆ ; ತಿರುಗಾಡು. ೪. ಉಡು ; ಧರಿಸು. ೫. ಸುರುಳಿಮಾಡು. (ನಾ). ೬. ತಿರುಗುವಿಕೆ ; ಚಕ್ರಾಕಾರವಾಗಿ ಚಲಿಸುವಿಕೆ. ೭. ಬಳಸುವಿಕೆ ; ಪ್ರದಕ್ಷಿಣೆ. ೮. ಮಂಡಲ ; ವರ್ತುಳ. ೯. ಸುರುಳಿ ; ಇರಿಕೆ. ೧೦. ಕಾಲುಬೆರಳಿಗೆ ಹಾಕಿಕೊಳ್ಳುವ ಒಂದು ಬಗೆಯ ಆಭರಣ. ೧೧. ಪರಿಸರ ; ಸುತ್ತುಮುತ್ತು. (ಅ). ೧೨. = ಸುತ್ತಲ್. ~ಅಳತೆ = ಸುತ್ತಲಿನ ಅಳತೆ ; ಪರಿಧಿ. ~ಆಟ = ಅಲೆದಾಟ ; ತಿರುಗಾಟ. ~ಇಱಿ(ರಿ) = ಬಳಸು ; ಸುತ್ತುಗಟ್ಟು. ~ಇಸು = ೧. ಅಲೆದಾಡಿಸು. ೨. ಸುರುಳಿ ಮಾಡಿಸು. ~ಓಲೆ = ಅನೇಕ ಮಂದಿಗೆ ಹಂಚುವುದಕ್ಕಾಗಿ ಪ್ರತಿಮಾಡಿದ ಪತ್ರ ; ಪರಿಪತ್ರ. ~(ಂ)ಕು(ಗು)ರುಳ್ = ಸುರುಳಿ ಗೂಡಲು ; ಗುಂಗುರುಕೂದಲು. ~(ಂ)ಕೊ(ಗೊ)ಳ್ = ಸುತ್ತಿಱಿ. ~ಕ(ಗ)ಟ್ಟು = ೧. ಆವರಿಸಲ್ಪಡು. ೨. = ಸುತ್ತಿಱಿ. ~ಕೆ(ಗೆ)ಲಸ = ಸುತ್ತು ಮುತ್ತಲಿನ ಕೆಲಸ ; ಮೇಲುಗೆಲಸ. ~ಕೊ(ಗೊ)ೞಂಟೆ = ಊರಿನ ಸುತ್ತಲೂ ಇರುವ ಕೋಟೆ. ~ಗೋಡೆ = ಪ್ರಾಕಾರ ; ಪೌಳಿ. ~ಪ(ವ)ರಿ = ಸುತ್ತಿಱಿ. ~ಮುತ್ತು = ೧. ಪರಿಸರ ; ಅಕ್ಕಪಕ್ಕ. ೨. ನಾಲ್ಕು ಕಡೆಗಳಲ್ಲೂ ; ಸುತ್ತಲೂ. ~ವಲ(ಳ)ಯು = ಸುತ್ತಲೂ ಆವರಿಸಿರುವುದು ; ಆವರಣ. ~ಹಾಕು = ಬಳಸು ; ಪ್ರದಕ್ಷಿಣೆಮಾಡು.
ಸುತ್ರಾಮ (ನಾ). ಇಂದ್ರ ; ದೇವೇಂದ್ರ.
ಸುದತಿ (ನಾ). ಸುಂದರವಾದ ಹಲ್ಲುಗಳನ್ನುಳ್ಳವಳು ; ಸುಂದರಿ.
ಸುದರ್ಶನ (ನಾ). ೧. ನೋಡಲು ಸುಂದರವಾಗಿರುವುದು. ೨. ಸುಂದರಪುರುಷ. ೩. ವಿಷ್ಣುವಿನ ಕೈಯಲ್ಲಿರುವ ಚಕ್ರಾಯುಧ. ೪. ಹಂಸಧ್ವಜನ ಒಬ್ಬ ಮಗನ ಹೆಸರು. ~ಪಾಣಿ = ಚಕ್ರಾಯುಧವನ್ನು ಹಿಡಿದಿರುವವನು ; ವಿಷ್ಣು ; ಕೃಷ್ಣ.
ಸುದಾಮ (ನಾ). ೧. ಧಾರಾಳವಾಗಿ ದಾನ ಮಾಡುವವನು ; ದಾನಶೂರ. ೨. ಕೃಷ್ಣನ ಒಬ್ಬ ಸ್ನೇಹಿತ ; ಕುಚೇಲ.
ಸುದಿನ (ನಾ). ಒಳ್ಳೆಯ ದಿನ ; ಮಂಗಳಕರವಾದ ದಿವಸ.
ಸುದೈವ (ನಾ). ಒಳ್ಳೆಯ ಅದೃಷ್ಟ.
ಸುದ್ದ (ನಾ). ಶುದ್ಧವಾದುದು. ~ಕ(ಗ)ನ್ನಡ = ಶುದ್ಧವಾದ ಕನ್ನಡ.
ಸುದ್ದಗೆ = ಶುದ್ಧಗೆ.
ಸುದ್ದಿ (ನಾ). ೧. ಸಮಾಚಾರ ; ವಾರ್ತೆ. ೨. ತಂಟೆ ; ಗೊಡವೆ. ~ಗಾರ = ವಾರ್ತೆಯನ್ನು ತಿಳಿಸುವವನು.
ಸುದ್ದೈಸು (ಕ್ರಿ). ಶುದ್ಧೀಕರಿಸು ; ಚೊಕ್ಕಟ ಮಾಡು.
ಸುಧನ್ವ (ನಾ). ೧. ಒಳ್ಳೆಯ ಬಿಲ್ಲುಗಾರ. ೨. ಹಂಸಧ್ವಜನ ಒಬ್ಬ ಮಗ.
ಸುಧರ್ಮ (ನಾ). ಒಳ್ಳೆಯ ಧರ್ಮ; ಸದ್ಧರ್ಮ.
ಸುಧರ್ಮೆ (ನಾ). ದೇವತೆಗಳ ಸಭೆ, –ಗೋಷ್ಠಿ.
ಸುಧಾಂಗ (ನಾ). ಚಂದ್ರ.
ಸುಧಾಂಶು (ನಾ). ೧. ಅಮೃತಕಿರಣಗಳಿಂದ ಕೂಡಿದವನು ; ಚಂದ್ರ. ೨. ಅಗ್ನಿಯ ಏಳು ನಾಲಗೆಗಳಲ್ಲಿ ಒಂದು.

ಸುಧಾಕರ = ಸುಧಾಂಗ. ~ಮೌಳಿ = ಚಂದ್ರನನ್ನು ತಲೆಯಲ್ಲಿ ಧರಿಸಿದವನು ; ಶಿವ.

ಸುಧಾಗೃಹ (ನಾ). ಸುಣ್ಣವನ್ನು ಬಳಿದ ಮನೆ; ಧವಳಾಗಾರ.

ಸುಧಾಬ್ಧಿ (ನಾ). ಇಂಗಡಲು ; ಕ್ಷೀರ ಸಾಗರ.

ಸುಧಾರಕ (ನಾ). ಲೋಪದೋಷಗಳನ್ನು ಸರಿಪಡಿಸುವವನು, _ಸುಧಾರಿಸುವವನು.

ಸುಧಾರಣೆ (ನಾ). ೧. ಸರಿಮಾಡಿದುದು ; ತಿದ್ದುಪಡಿ. ೨. ಅಭಿವೃದ್ಧಿ ; ಏಳಿಗೆ. ೩. ಸಹನೆ; ತಾಳ್ಮೆ.

ಸುಧಾರಿಸು (ಕ್ರಿ). ೧. ಸರಿಮಾಡು ; ತಿದ್ದು ; ಸಂಸ್ಕರಿಸು. ೨. ವಿಶ್ರಮಿಸು. ೩. ಸಹಿಸು ; ತಾಳು. ೪. ನಿಭಾಯಿಸು ; ಸಂಬಾಳಿಸು. ೫. ಚೇತರಿಸಿಕೊಳ್ಳು.

ಸುಧಾಶನ (ನಾ). ಅಮೃತವನ್ನು ಸೇವಿಸುವವನು ; ದೇವತೆ.

ಸುಧಾಸೂತಿ (ನಾ). ಕ್ಷೀರಸಾಗರದಲ್ಲಿ ಹುಟ್ಟಿದವನು ; ಚಂದ್ರ.

ಸುಧಿ (ನಾ). ೧. ಒಳ್ಳೆಯ ಬುದ್ಧಿ. ೨. ತಿಳಿವಳಿಕೆಯುಳ್ಳವನು ; ಪಂಡಿತ. (ಗು). ೩. ತಿಳಿವಳಿಕೆಯಿಂದ ಕೂಡಿದ.

ಸುಧೆ (ನಾ). ೧. ಅಮೃತ ; ಸೊದೆ. ೨.ಹಾಲು; ಕ್ಷೀರ. ೩. ಸುಣ್ಣ; ಚೂರ್ಣ.

ಸುನಕ = ಶುನಕ.

ಸುನಾಯಾಸ (ನಾ). ದಣಿವಿಲ್ಲದಿರುವಿಕೆ ; ನಿರಾಯಾಸ.

ಸುನಾವಣೆ (ನಾ). ನ್ಯಾಯಾಲಯದಲ್ಲಿ ಫಿರ್ಯಾದಿಯ ಅರ್ಜಿಯನ್ನು ಓದುವಿಕೆ.

ಸುನಾಸೀರ (ನಾ). ಇಂದ್ರ ; ದೇವೇಂದ್ರ.

ಸುನಿ (ನಾ). ಹೆಣ್ಣುನಾಯಿ ; ಶುನಿ.

ಸುನೀತ (ನಾ). ೧. ವಿವೇಕ ; ಜಾಣತನ. ೨. ಒಳ್ಳೆಯ ನಡತೆ. ೩. ಹದಿನಾಲ್ಕು ಸಾಲುಗಳಿಂದ ಕೂಡಿದ ಒಂದು ಪದ್ಯಜಾತಿ ; ಸಾನೆಟ್ಟು. (ಗು). ೪. ಒಳ್ಳೆಯ ಆಚರಣೆಯಿಂದ ಕೂಡಿದ.

ಸುನೀತಿ (ನಾ). ೧. ಒಳ್ಳೆಯ ನಡತೆ; ಸದಾಚಾರ. ೨. ಧ್ರುವನ ತಾಯಿಯ ಹೆಸರು.

ಸುನೇರಿ (ನಾ). ೧. ತಾಮ್ರ ಮತ್ತು ಸತುವಿನ ಮಿಶ್ರಣದಿಂದಾದ ಒಂದು ಲೋಹ. ೨. ಚಿನ್ನದ ಬಣ್ಣದ ಕಾಗದ ; ಬೇಗಡೆ. ೩. ಚಿನ್ನದ ಬಣ್ಣದ ಲೋಹದ ಪುಡಿ.

ಸುನ್ನ (ನಾ). ಶೂನ್ಯ ; ಬರಿದು.

ಸುಪಥ (ನಾ). ೧. ಒಳ್ಳೆಯ ಹಾದಿ, _ಮಾರ್ಗ. ೨. ಒಳ್ಳೆಯ ನಡತೆ ; ಸದಾಚಾರ.

ಸುಪನಾತಿ (ನಾ). ಒಯ್ಯಾರಿ ; ಸೋಗಲಾಡಿ.

ಸುಪರ್ಣ (ನಾ). ೧. ಉತ್ತಮವಾದ ಗರಿಗಳನ್ನು ಹೊಂದಿರುವವನು ; ಗರುಡ. ೨. ಹಕ್ಕಿಯ ಗರಿಗಳಂತಿರುವ ಎಲೆಗಳುಳ್ಳ ಒಂದು ಜಾತಿಯ ಸಸ್ಯ. ~ವಾಹನ=ವಿಷ್ಣು.

ಸುಪರ್ದು (ನಾ). ಅಂಕೆ; ಅಧೀನ ; ಹತೋಟಿ.

ಸುಪರ್ಬ = ಸುಪರ್ವ.

ಸುಪರ್ವ (ನಾ). ದೇವತೆ ; ಅಮರ. ~ನಾಥ = ದೇವೇಂದ್ರ. ~ವಧು = ದೇವತಾಸ್ತ್ರೀ.

ಸುಪಾರಿ (ನಾ). ಅಡಕೆ.

ಸುಪುತ್ರ (ನಾ). ಒಳ್ಳೆಯ ಮಗ ; ಸತ್ಪುತ್ರ.

ಸುಪುತ್ರಿ (ನಾ). ಒಳ್ಳೆಯ ಮಗಳು ; ಸತ್ಪುತ್ರಿ.

ಸುಪ್ತ (ನಾ). ೧.ಗಾಢನಿದ್ರೆ. ೨.ಮಲಗಿದವನು; ನಿದ್ರೆಯಲ್ಲಿರುವವನು. (ಗು). ೩. ನಿದ್ರಿಸಿದ ; ಮಲಗಿದ. ೪. ಗುಪ್ತವಾದ; ಪ್ರಕಟವಾಗದ. ೫. ಜಡವಾದ ; ಮರಗಟ್ಟಿದ. ~ಅವಸ್ಥೆ = ೧. ನಿದ್ರಾವಸ್ಥೆ. ೨. ಗುಪ್ತವಾಗಿರುವ ಸ್ಥಿತಿ ; ಅಡಗಿರುವ ಸ್ಥಿತಿ. ~ಚೇತನ = ಪ್ರಕಟವಾಗದಿರುವ ಶಕ್ತಿ ; ಅಂತಶ್ಶಕ್ತಿ.

ಸುಪ್ತಿ (ನಾ). ೧. ನಿದ್ರೆ ; ನಿದ್ದೆ. ೨. ಆಲಸ್ಯ ; ಜಡತೆ.

ಸುಪ್ಪತಿಗೆ = ಸುಪ್ಪತ್ತಿಗೆ.

ಸುಪ್ಪತ್ತಿಗೆ (ನಾ). ಹಾಸುಗೆ ; ಗಾದಿ ; ತಲ್ಪ.

ಸುಪ್ಪಲ್(ಲು) (ನಾ). ಉಪ್ಪು ಹಾಕಿದ ಒಂದು ಬಗೆಯ ಖಾದ್ಯ ; ಚಾಕಣ.

ಸುಪ್ಪಾಣಿ (ನಾ). ೧. ಶ್ರೇಷ್ಠವಾದುದು. ೨. ಶ್ರೇಷ್ಠವ್ಯಕ್ತಿ. (ಗು). ೩. ಶ್ರೇಷ್ಠವಾದ; ಉತ್ತಮವಾದ. ~ಮುತ್ತು = ಶ್ರೇಷ್ಠವಾದ ಮುತ್ತು ; ಕಟ್ಟಾಣಿ.

ಸುಪ್ರತಿಷ್ಠೆ (ನಾ). ೧. ಪ್ರಖ್ಯಾತಿ ; ಪ್ರಸಿದ್ಧಿ. ೨. ದೇವರ ಮೂರ್ತಿಯನ್ನು ಪ್ರತಿಷ್ಠಾಪಿಸುವುದು.

ಸುಪ್ರತೀಕ(ನಾ). ೧. ಒಳ್ಳೆಯ ಆಕಾರವುಳ್ಳುದು. ೨. ಅಷ್ಟದಿಗ್ಗಜಗಳಲ್ಲಿ ಒಂದು.

ಸುಪ್ರಭಾತ (ನಾ). ೧. ಸುಂದರವಾದ ಅರುಣೋದಯ, –ಬೆಳಗು. ೨. ಮುಂಜಾವದಲ್ಲಿ ಹಾಡುವ ಸ್ತೋತ್ರ.

ಸುಪ್ರಸಿದ್ಧ (ನಾ). ೧. ಕೀರ್ತಿವಂತ ; ಹೆಸರುವಾಸಿಯಾದವನು. (ಗು). ೨. ಅತ್ಯಂತ ಹೆಸರುವಾಸಿಯಾದ, –ಪ್ರಖ್ಯಾತಿಹೊಂದಿದ.

ಸುಬೇದಾರ (ನಾ). ೧. ತಾಲ್ಲೂಕಿನ ಮುಖ್ಯಾಧಿಕಾರಿ. ೨. ಸೈನ್ಯದ ಒಬ್ಬ ಅಧಿಕಾರಿ.

ಸುಬ್ಬುಲು (ನಾ). ನಯವಿಲ್ಲದುದು ; ಒರಟಾದುದು.

ಸುಬ್ಬುಲೆ = ಸುವ್ವಲೆ.

ಸುಬ್ರತ = ಸುವ್ರತ.

ಸುಬ್ರಹ್ಮಣ್ಯ (ನಾ). ೧. ಯಾಗ ಮುಂತಾದ ಪವಿತ್ರಕಾರ್ಯಗಳಲ್ಲಿ ಭಾಗವಹಿಸುವ ಹದಿನಾರು ಋತ್ವಿಕ್ಕುಗಳಲ್ಲಿ ಒಬ್ಬ. ೨. ಕಾರ್ತಿಕೇಯ ; ಸ್ಕಂದ. ೩. ಒಂದು ಪುಣ್ಯಕ್ಷೇತ್ರದ ಹೆಸರು.

ಸುಭಗ (ನಾ). ೧. ಒಳ್ಳೆಯ ಅದೃಷ್ಟವನ್ನು ಹೊಂದಿರುವುದು. ೨. ಚೆಲುವು; ಸೌಂದರ್ಯ. ೩. ಚೆಲುವ ; ಸುಂದರ. ೪. ಅದೃಷ್ಟವಂತ. (ಗು). ೫. ಸಂತೋಷಕರವಾದ ; ಆನಂದದಾಯಕ. ೬. ಚೆಲುವಾದ. ೭. ಗೌರವಾರ್ಹವಾದ ; ಮನ್ನಣೆಗೆ ಯೋಗ್ಯವಾದ.

ಸುಭಗೆ (ನಾ). ೧. ಸೌಭಾಗ್ಯದಿಂದ ಕೂಡಿದವಳು. ೨. ಗೌರವಕ್ಕೆ ಪಾತ್ರಳಾದ ಹೆಂಗಸು.

ಸುಭಟ (ನಾ). ೧. ಶ್ರೇಷ್ಠನಾದ ಕಲಿ; ವೀರಯೋಧ. ೨. ಉತ್ತಮ ಸೇವಕ.

ಸುಭದ್ರ (ಗು). ಮಂಗಳಕರವಾದ ; ಶುಭಕರವಾದ.

ಸುಭದ್ರೆ (ನಾ). ೧. ಉಪ್ಪಿನಕಾಯಿ ಹಾಕಲು ಬಳಸುವ ಒಂದು ಜಾತಿಯ ಗೆಡ್ಡೆ. ೨. ಅರ್ಜುನನ ಹೆಂಡತಿ; ಕೃಷ್ಣನ ಸಹೋದರಿ.

ಸುಭಾಷಿಣಿ (ನಾ). ಮಧುರವಾಗಿ ಮಾತನಾಡುವವಳು.

ಸುಭಾಷಿತ (ನಾ). ೧. ಒಳ್ಳೆಯ ಮಾತು; ಸೂಕ್ತಿ. ೨. ನೀತಿವಾಕ್ಯ. (ಗು). ೩. ವಾಕ್ಪಟುತ್ವವುಳ್ಳ.

ಸುಭಿಕ್ಷ (ನಾ). ೧. ದವಸಧಾನ್ಯಗಳು ಸಮೃದ್ಧಿಯಾಗಿರುವ ಕಾಲ. ೨. ಒಂದು ಜಾತಿಯ ಮರ.

ಸುಮ (ನಾ). ಹೂವು ; ಪುಷ್ಪ.

ಸುಮಂಗಲಿ (ನಾ). ೧. ಅದೃಷ್ಟವನ್ನು ತರುವವಳು. ೨. ಗಂಡನುಳ್ಳ ಹೆಂಗಸು ; ಮುತ್ತೈದೆ.

ಸುಮಂಗಲೆ = ಸುಮಂಗಲಿ.

ಸುಮತಿ (ನಾ). ೧. ಒಳ್ಳೆಯ ಬುದ್ಧಿ, –ಮನಸ್ಸು. ೨. ಬುದ್ಧಿವಂತ ; ಜಾಣ.

ಸುಮಧುರ (ಗು). ಬಹಳ ಇಂಪಾದ, –ಇನಿದಾದ.

ಸುಮನ (ನಾ). ೧. ದೇವತೆ ; ಅಮರ. ೨. = ಸುಮ. ೩. ಶುದ್ಧವಾದ ಮನಸ್ಸುಳ್ಳವನು ; ನಿರ್ಮಲಚಿತ್ತ. (ಗು). ೪. ಸುಂದರವಾದ ; ಚೆಲುವಾದ. ೫. ತಣಿದ ; ತೃಪ್ತಿಗೊಂಡ. ~ಸಾರ = ಮಕರಂದ ; ಮಧು.

ಸುಮನಸ = ಸುಮನ.

ಸುಮನೋಬಾಣ (ನಾ). ಹೂವುಗಳ ಬಾಣವನ್ನುಳ್ಳವನು ; ಮನ್ಮಥ.

ಸುಮನೋರತ (ಗು). ೧. ಹೂವಿನಲ್ಲಿ ಆಸಕ್ತಿ ಹೊಂದಿದ. ೨. ದೇವರಿಗೆ ನಿವೇದಿಸಿದ.

ಸುಮನೋಹರ (ನಾ). ೧. ಶಿವ. ೨. ಹೂವುಗಳನ್ನು ಕಟ್ಟುವವನು; ಮಾಲೆಗಾರ. ೩. ರಾಕ್ಷಸ. (ಗು). ೪. ಅತ್ಯಂತ ಚೆಲುವಾದ, –ಸುಂದರವಾದ.

ಸುಮಾನ =ಸುಮ್ಮಾನ. ~ಗಾರ= ೧. ಸಂತೋಷದಿಂದಿರುವವನು. ೨. ಸೊಗಸುಗಾರ; ಒನಪುಗಾರ.

ಸುಮಾರು (ನಾ). ೧. ಹೆಚ್ಚುಕಡಮೆ; ಅಜಮಾಸು. ೨. ಸಾಧಾರಣವಾದುದು; ಸಾಮಾನ್ಯವಾದುದು. ೩. ಅಪಮಾನ; ಮಾನಭಂಗ. (ಗು). ೪. ಹೆಚ್ಚಾದ; ಅಧಿಕವಾದ. ೫. ಕಳಪೆಯಾದ; ಕೆಟ್ಟ.

ಸುಮುಖ (ನಾ). ೧. ಸುಂದರವಾದ ಮುಖ. ೨. ನಗು; ಹಾಸ. ೩. ಚೆಲುವ; ಸುಂದರ. ೪. ಪಂಡಿತ; ವಿದ್ವಾಂಸ. ೫. ಸರಾಗ; ಸುಲಭ. (ಗು). ೬. ಪ್ರೀತಿಯಿಂದ ಕೂಡಿದ; ಒಲವುಳ್ಳ. ೭. ಸಂತೋಷಕರವಾದ.

ಸುಮುಹೂರ್ತ (ನಾ). ಒಳ್ಳೆಯ ಗಳಿಗೆ; ಶುಭಗಳಿಗೆ.

ಸುಮ್ಮಗೆ (ಅ). ೧. ಮೌನವಾಗಿ; ಸದ್ದಿಲ್ಲದೆ. ೨. ಕಾರಣವಿಲ್ಲದೆ; ನಿಷ್ಕಾರಣವಾಗಿ. ೩. ಕೆಲಸವಿಲ್ಲದೆ. ೪. ವ್ಯರ್ಥವಾಗಿ.

ಸುಮ್ಮನ = ಸುಮ್ಮಾನ.

ಸುಮ್ಮನೆ = ಸುಮ್ಮಗೆ.

ಸುಮ್ಮಾನ (ನಾ). ೧. ಸಂತೋಷ; ಹಿಗ್ಗು. ೨. ತೃಪ್ತಿ; ತಣಿವು.

ಸುಮ್ಮಾನಿ(ನಾ).೧.ಸಂತೋಷದಿಂದ ಕೂಡಿರುವ ವ್ಯಕ್ತಿ. ೨. ತೃಪ್ತಿಯನ್ನು ಹೊಂದಿದವನು; ತುಷ್ಟ.

ಸುಯ್ (ಕ್ರಿ). ೧. ಉಸಿರು ಬಿಡು; ಶ್ವಾಸ ಬಿಡು. ೨. ಚಿಂತೆ, ಆಯಾಸ ಮೊದಲಾದುವುಗಳಿಂದ ನಿಟ್ಟುಸಿರು ಬಿಡು. (ನಾ). ೩.= ಸುಯಿಲ್. ~ಎಲರ್ = ೧. ಉಸಿರಿನ ಗಾಳಿ. ೨. ನಿಟ್ಟುಸಿರಿನ ಗಾಳಿ. ~ಕ(ಗ)ಂಪು = ಉಸಿರಿನ ಸುವಾಸನೆ, –ಪರಿಮಳ. ~ಕು(ಗು)ಡು = ನಿಟ್ಟುಸಿರು ಬಿಡು; ನಿಡುಸುಯ್ಯು.

ಸುಯಿ = ಸುಯ್.

ಸುಯಿದಾನ (ನಾ). ೧. ಕಾಪು; ಕಾವಲು; ರಕ್ಷಣೆ; ಜೋಪಾನ. ೨. ಎಚ್ಚರಿಕೆ; ಜಾಗರೂಕತೆ. ೩. = ಸುಯಿದಾನಿ.

ಸುಯಿದಾನಿ (ನಾ). ಕಾವಲುಗಾರ; ಪಹರೆಯವನು.

ಸುಯಿಧಾನ = ಸುಯಿದಾನ.

ಸುಯಿಧಾನಿ = ಸುಯಿದಾನಿ.

ಸುಯಿಲ್(ಲು) (ನಾ). ೧. ಉಸಿರು; ಶ್ವಾಸ. ೨. ನಿಡಿದಾದ ಉಸಿರು; ನಿಟ್ಟುಸಿರು.

ಸುಯೋಗ (ನಾ). ೧. ಒಳ್ಳೆಯ ಯೋಗ. ೨. ಅದೃಷ್ಟ; ಸುದೈವ.

ಸುಯೋಧನ (ನಾ). ೧. ಚೆನ್ನಾಗಿ ಹೋರಾಡುವವನು. ೨. ದುರ್ಯೋಧನ; ಧೃತರಾಷ್ಟ್ರನ ಹಿರಿಯ ಮಗ.

ಸುಯ್ಯತಾಣ = ಸುಯ್ಯಾಣ.

ಸುಯ್ಯಲ್(ಲು) = ಸುಯಿಲ್.

ಸುಯ್ಯಾಣ (ನಾ). ಕಸೂತಿ ಕೆಲಸ.

ಸುಯ್ಲು = ಸುಯಿಲ್.

ಸುರ (ನಾ). ೧. ದೇವತೆ; ಅಮರ. ೨. ಒಂದು ಜಾತಿಯ ಮರ. ~ಅಂಗನೆ = ಅಪ್ಸರೆ. ~ಇಂದ್ರ = ಸುರಪ. ~ಕನ್ಯೆ = ದೇವತೆ. ~ಕರಿ = ಐರಾವತ. ~ಕುಜ = ಕಲ್ಪವೃಕ್ಷ. ~ಗಿರಿ=ಮೇರುಪರ್ವತ. ~ಗುರು = ಸುರೇಜ್ಯ. ~ಚಾಪ = ಕಾಮನ ಬಿಲ್ಲು; ಇಂದ್ರಚಾಪ. ~ಜ್ಯೇಷ್ಠ = ದೇವತೆಗಳ ಹಿರಿಯ; ಬ್ರಹ್ಮ. ~ತರು = ಸುರಕುಜ. ~ದ್ರುಮ = ಸುರಕುಜ. ~ಧನು = ಸುರಚಾಪ. ~ಧೇನು = ಕಾಮಧೇನು.

~ಪತಿ = ೧. ದೇವೇಂದ್ರ. ೨. ಒಂದು ಜಾತಿಯ ಪಕ್ಷಿ. ~ಮುನಿ = ನಾರದ. ~ಲೋಕ = ಸ್ವರ್ಗ. ~ವರ್ಧಕಿ = ದೇವಲೋಕದ ಬಡಗಿ; ವಿಶ್ವಕರ್ಮ. ~ಸಿಂಧು = ದೇವನದಿ; ಗಂಗೆ. ~ಸುಂದರಿ = ಲೋಕೋತ್ತರವಾದ ಸೌಂದರ್ಯವುಳ್ಳವಳು. ~ಹೊನ್ನೆ = ಸುರಯಿ.

**ಸುರಂಗ** (ನಾ). ೧. ಕಳ್ಳತನ ಮಾಡಲು ಗೋಡೆಯಲ್ಲಿ ಕೊರೆದ ತೂತು; ಕನ್ನ. ೨. = ಸುರಂಗಮಾರ್ಗ. ೩. ಸಿಡಿಮದ್ದು. ೪. ಪ್ರಕಾಶ; ಹೊಳಪು. ೫. ಅತಿಶಯವಾದ ಪ್ರೀತಿ. ~ಇಸು = ಕಾಂತಿಬೀರು; ಪ್ರಕಾಶಿಸು. ~ಮಾರ್ಗ = ನೆಲದಲ್ಲಿ ಅಥವಾ ಬೆಟ್ಟದಲ್ಲಿ ಕೊರೆದು ಮಾಡಿದ ದಾರಿ; ಗುಪ್ತಮಾರ್ಗ.

**ಸುರಂಗಿ** (ನಾ). ಒಂದು ಜಾತಿಯ ಪ್ರಾಣಿ.

**ಸುರಕ್ಷಿತ** (ನಾ). ೧. ಕ್ಷೇಮ; ಸೌಖ್ಯ. (ಗು). ೨. ಚೆನ್ನಾಗಿ ಕಾಪಾಡಿದ, –ಸಂರಕ್ಷಿಸಿದ.

**ಸುರಗಿ** ೧. = ಸುರಯಿ. ೨. ಕಠಾರಿ; ಸಣ್ಣ ಕತ್ತಿ; ಸುರಿಗೆ. ೩. ಒಂದು ಜಾತಿಯ ಪಕ್ಷಿ. ~ಕಾಱ(ರ) = ಕಠಾರಿಯನ್ನು ಹಿಡಿದಿರುವವನು.

**ಸುರತ** (ನಾ). ಸಂಭೋಗ; ರತಿ.

**ಸುರಪ** (ನಾ). ದೇವತೆಗಳ ಒಡೆಯ; ಇಂದ್ರ.

**ಸುರಭಿ** (ನಾ). ೧. ಸುಗಂಧ; ಪರಿಮಳ. ೨. ಸರಸ್ವತಿ. ೩. ಉತ್ತಮವಾದ ಗುಣಗಳಿಂದ ಕೂಡಿದವನು. ೪. ದೇವಲೋಕದ ಹಸು; ಕಾಮಧೇನು. ೫. ವಸಂತಕಾಲ; ಚೈತ್ರ. ೬. ಪಂಡಿತ; ವಿದ್ವಾಂಸ.

**ಸುರಮ** (ನಾ). ಕಾಡಿಗೆ; ಅಂಜನ.

**ಸುರಯಿ** (ನಾ). ಒಂದು ಜಾತಿಯ ಮರ ಮತ್ತು ಅದರ ಹೂವು; ಸುರಹೊನ್ನೆ.

**ಸುರಳಿತ** (ಗು). ೧. ಸಲೀಸಾದ; ಸರಾಗವಾದ. ೨. ಚೆಲುವಾದ; ಅಂದವಾದ; ಸುಲಲಿತವಾದ. ೩. ಸಾಧಾರಣವಾದ; ಸಾಮಾನ್ಯವಾದ.

**ಸುರಾಜ** (ನಾ). ಆಧಿಕ್ಯ; ಹೆಚ್ಚಳ.

**ಸುರಾಪಾನ** (ನಾ). ಹೆಂಡವನ್ನು ಕುಡಿಯುವುದು; ಮದ್ಯಪಾನ.

**ಸುರಿ** (ಕ್ರಿ). ೧. (ಮಳೆ, ಕಣ್ಣೀರು ಮುಂತಾದುವುಗಳಂತೆ) ಹರಿ, –ಕೆಳಕ್ಕೆ ಬೀಳು. ೨. ಕೆಳಕ್ಕೆ ಹರಿಯುವಂತೆ ಮಾಡು; ಧಾರೆಯಾಗಿ ಬೀಳಿಸು. ೩. ಯಥೇಚ್ಛವಾಗಿ ಕೊಡು; ಎರಚು; ಈಡಾಡು. ೪. = ಸುಱು.

**ಸುರಿಗೆ** (ನಾ). ೧. ಸಣ್ಣಕತ್ತಿ; ಬಾಕು; ಕಠಾರಿ. ೨. ಮದುವೆ ಅಥವಾ ಉಪನಯನ ಕಾಲದಲ್ಲಿ ಮದುಮಕ್ಕಳಿಗೆ ಅಥವಾ ವಟುವಿಗೆ ಮಾಡಿಸುವ ವಿಶಿಷ್ಟ ಸ್ನಾನ.

**ಸುರು(ಂ)ಟು** (ಕ್ರಿ). ೧. ಮುದುರಿಕೊಳ್ಳು; ಸುಕ್ಕಾಗು. ೨. ಸುತ್ತಿಕೊಳ್ಳು; ಸುರುಳಿಯಾಗು. (ನಾ). ೩. ಸುತ್ತು; ಸುರುಳಿ. ೪. ಒಂದು ಬಗೆಯ ಹೊಗೆಬತ್ತಿ; ಚುರುಟು.

**ಸುರುಗು** (ನಾ). ಒಣಗಿ ಮುದುಡಿದ ಬಾಳೆಯೆಲೆಯ ತುಂಡು.

**ಸುರುಚಿರ** (ಗು). ೧. ಬಹಳ ಸುಂದರವಾದ. ೨. ಕಾಂತಿಯುಳ್ಳ; ಹೊಳಪುಳ್ಳ.

**ಸುರುತಾಳ** = ಸುಲ್ತಾನ.

**ಸುರುಳ್(ಳು)** (ಕ್ರಿ). ೧. ಕುಗ್ಗು; ಸಂಕೋಚವಾಗು; ಮುದುಡು. ೨. ಸುತ್ತಿಕೊಳ್ಳು; ಸುರುಳಿಯಾಗು. ೩. ಹೆದರು; ಅಂಜು. (ನಾ). ೪. = ಸುರುಳೆ.

**ಸುರುಳಿ** = ಸುರುಳೆ. ~ಕು(ಗು)ರುಳ್ = ಗುಂಗುರುಕೂದಲು.

**ಸುರುಳೆ** (ನಾ). ಸುತ್ತಿಕೊಂಡುದು; ಸುತ್ತು; ಇರಿಕೆ.

**ಸುರುಳ್ಚು** (ಕ್ರಿ). ೧. ಸುತ್ತು; ಸುರುಳಿಮಾಡು. ೨. ಸಂಕುಚಿತಗೊಳಿಸು.

ಸುರೂಪ (ನಾ). ೧. ಚೆಲುವು ; ಅಂದ. (ಗು). ೨. ಅಂದವಾದ ; ಸುಂದರವಾದ.

ಸುರೂಪಿ (ನಾ). ಚೆಲುವ.

ಸುರೂಪೆ (ನಾ). ಒಂದು ಜಾತಿಯ ಮರ ; ಚೆನ್ನಂಗಿ.

ಸುರೆ (ನಾ). ಮದ್ಯ ; ಕಳ್ಳು ; ಸಾರಾಯಿ. ~ಕುಽ(ಗು)ಡುಹಿ = ಮದ್ಯಪಾನಾಸಕ್ತ ; ಹೆಂಡಕುಡುಕ.

ಸುರೇಖೆ (ನಾ). ಸುಂದರವಾದ ಗೆರೆ, –ರೇಖೆ.

ಸುರೇಜ್ಯ (ನಾ). ದೇವತೆಗಳಿಂದ ಪೂಜಿಸಲ್ಪಟ್ಟವನು ; ದೇವತೆಗಳ ಗುರು ; ಬೃಹಸ್ಪತಿ.

ಸುಱಿ(ರಿ) (ಕ್ರಿ). ಸಪ್ಪಳವಾಗುವಂತೆ ಹೀರು, –ಕುಡಿ.

ಸುಱು(ರು)ಕು (ನಾ). ೧. ಒಂದು ಸಲ ಹೀರುವಷ್ಟು ; ಗುಟುಕು. ೨. ಹೀರುವಾಗ ಉಂಟಾಗುವ ಸದ್ದು. ೩. ಸುರಿದುಕೊಳ್ಳುವಿಕೆ ; ಸಶಬ್ದವಾಗಿ ಹೀರಿಕೊಳ್ಳುವಿಕೆ.

ಸುರ್ಕಿ (ನಾ). ೧. ಸುಣ್ಣವನ್ನು ನಿರ್ದಿಷ್ಟ ಪ್ರಮಾಣದಲ್ಲಿ ಬೆರೆಸಿದ ಗಾರೆ. ೨. ನಿರ್ದಿಷ್ಟ ಪ್ರಮಾಣದಲ್ಲಿ ಒಡೆದು ಸುಣ್ಣದಲ್ಲಿ ಕೂಡಿಸಿದ ಇಟ್ಟಿಗೆಯ ಚೂರು.

ಸುರ್ಕು (ಕ್ರಿ). ೧. ಮುದುರು ; ಮುರುಟಿಕೊಳ್ಳು ; ಮುದುಡೆಯಾಗು. (ನಾ). ೨. ಸುಕ್ಕು ; ಮಡಿಕೆ. ೩. ನರಿಗೆ ; ಪದರ. ~ಉಸಿರ್ = ತಡೆದು ತಡೆದು ಬರುವ ಉಸಿರು. ~(ಂ)ಕುಽ(ಗು)ರುಳ್ = ಸುಳಿಗೂದಲು ; ಗುಂಗುರುಕೂದಲು.

ಸುರ್ವು (ನಾ). ೧. ಸೊಂಪು ; ಹುಲುಸು. ೨. ಸಮೂಹ ; ಮೊತ್ತ. ~ಕೊ(ಗೊ)ಳ್ = ಹುಲುಸಾಗು.

ಸುಲಕ್ಷಣ (ನಾ). ೧. ಒಳ್ಳೆಯ ಗುರುತು ; ಶುಭಲಕ್ಷಣ. ೨. ಶ್ರೇಷ್ಠವಾದುದನ್ನು ಹೊಂದಿರುವಿಕೆ. (ಗು). ೩. ಒಳ್ಳೆಯ ಲಕ್ಷಣಗಳುಳ್ಳ.

ಸುಲಗ್ನ (ನಾ). ಒಳ್ಳೆಯ ಸಮಯ ; ಶುಭಮುಹೂರ್ತ.

ಸುಲಭ (ನಾ). ೧. ಸರಾಗ; ಸಲೀಸು; ಹಗುರ. (ಗು). ೨. ಸರಾಗವಾದ ; ಸಲೀಸಾದ. ~ಉಪಾಯ = ಸರಾಗವಾದ ಹಂಚಿಕೆ ; ಕಷ್ಟಕರವಲ್ಲದ ಮಾರ್ಗ.

ಸುಲಲಿತ (ಗು). ೧. ಅತ್ಯಂತ ಸೂಕ್ಷ್ಮವಾದ, –ನವುರಾದ. ೨. ಅತ್ಯಾನಂದ ಹೊಂದಿದ. ೩. ಸುಂದರವಾದ ; ಚೆಲುವಾದ.

ಸುಲಾಲಿತ (ನಾ). ಚೆಲುವು; ಅಂದ ; ಸೊಗಸು.

ಸುಲಾಲಿತೆ (ನಾ). ಚೆಲುವೆ ; ಸುಂದರಿ.

ಸುಲಾವಣೆ = ಸುನಾವಣೆ.

ಸುಲಿ (ಕ್ರಿ). ೧. (ಸಿಪ್ಪೆ, ತೊಗಟೆ, ಚರ್ಮ ಮುಂತಾದುವನ್ನು) ಎಡೆ, –ಕಳಚು. ೨. ದೋಚು ; ಲೂಟಿಮಾಡು. ೩. ಶುಚಿಗೊಳಿಸು; ಶುದ್ಧಮಾಡು. ~ಕೊ(ಗೊ)ಳ್ = ದೋಚು ; ಕೊಳ್ಳೆಹೊಡೆ. ~ಪ(ವ)ಲ್(ಲ್ಲು) = ಚೆನ್ನಾಗಿ ಉಜ್ಜಿದ ಹಲ್ಲು ; ಶುಭ್ರವಾದ ಹಲ್ಲು.

ಸುಲಿಗೆ (ನಾ). ಕೊಳ್ಳೆ ; ಲೂಟಿ ; ಸೂರೆ. ~ಗಾರ = ದರೋಡೆಕಾರ ; ಲೂಟಿಮಾಡುವವನು. ~ಪ(ವ)ಡೆ=ಲೂಟಿಗೆ ಒಳಗಾಗು.

ಸುಲೋಚನ (ನಾ). ೧. ಸುಂದರವಾದ ಕಣ್ಣು. ೨. ಕನ್ನಡಕ ; ಚಾಳೀಸು.

ಸುಲ್ತಾನ (ನಾ). ಮುಹಮ್ಮದೀಯರ ದೊರೆ.

ಸುಲ್ಲ (ನಾ). ಒಂದು ಬಗೆಯ ಲೋಹ; ತಾಮ್ರ.

ಸುವರ್ಣ (ನಾ). ೧. ಒಳ್ಳೆಯ ಬಣ್ಣ. ೨. ಹೊನ್ನು; ಬಂಗಾರ. ೩.=ಸುವರ್ಣಗೆಡ್ಡೆ. ~ಅಂಬರ = ಚಿನ್ನದ ಬಣ್ಣದ ಬಟ್ಟೆ ; ರೇಷ್ಮೆ ಬಟ್ಟೆ. ~ಕಾಲ = ಸಮೃದ್ಧಿಯ ಕಾಲ ; ಸುಭಿಕ್ಷದ ಕಾಲ. ~ಗೆಡ್ಡೆ = ಒಂದು ಬಗೆಯ ತರಕಾರಿ ಗೆಡ್ಡೆ ; ಚೂರ್ಣಗೆಡ್ಡೆ. ~ಮೃಗ = ಚಿನ್ನದ ಬಣ್ಣದ ಜಿಂಕೆ ; ಹೊನ್ಮೃಗ. ~ಯುಗ = ಸುವರ್ಣಕಾಲ.

ಸುವರ್ಣಕಾರ (ನಾ). ಅಕ್ಕಸಾಲಿ; ಚಿನಿವಾರ.

ಸುವರ್ಲೋಕ (ನಾ). ಏಳು ಊರ್ಧ್ವಲೋಕಗಳಲ್ಲಿ ಒಂದು; ಸ್ವರ್ಗ.

ಸುವಾರ (ನಾ). ಅಡುಗೆ ಮಾಡುವವನು; ಬಾಣಸಿಗ.

ಸುವಾರಿ (ನಾ). ನಿರ್ಮಲವಾದ ನೀರು; ಶುದ್ಧೋದಕ.

ಸುವಾರ್ತೆ (ನಾ). ೧. ಒಳ್ಳೆಯ ಸುದ್ದಿ; ಶುಭ ಸಮಾಚಾರ. ೨. ಏಸುಕ್ರಿಸ್ತನ ಉಪದೇಶ, –ಬೋಧನೆ.

ಸುವಾಸನೆ (ನಾ). ಸುಗಂಧ; ಪರಿಮಳ.

ಸುವಾಸಿನಿ (ನಾ). ೧. ಸುಮಂಗಲಿ; ಮುತ್ತೈದೆ. ೨. ತಂದೆಯ ಮನೆಯಲ್ಲಿರುವ ಮಗಳು.

ಸುವಿಚಾರ (ನಾ). ಯೋಗ್ಯವಾದ ಆಲೋಚನೆ.

ಸುವಿದಾನ = ಸುಯಿದಾನ.

ಸುವಿದಾನಿ = ಸುಯಿದಾನಿ.

ಸುವಿಧಿ (ನಾ). ೧. ಒಳ್ಳೆಯ ನಿಯಮ. ೨. ಮಲ್ಲಯುದ್ಧದ ಒಂದು ಪಟ್ಟು.

ಸುವೃಷ್ಟಿ (ನಾ). ಒಳ್ಳೆಯ ಮಳೆ.

ಸುವ್ಯಕ್ತ (ಗು). ಚೆನ್ನಾಗಿ ತಿಳಿದ; ಸ್ಪಷ್ಟವಾಗಿ ಗೋಚರಿಸಿದ.

ಸುವ್ಯವಸ್ಥೆ (ನಾ). ಉತ್ತಮರೀತಿಯ ವ್ಯವಸ್ಥೆ; ಅಚ್ಚುಕಟ್ಟು.

ಸುವ್ರತ (ನಾ). ೧. ಶ್ರೇಷ್ಠವಾದ ವ್ರತ. ೨. ಧಾರ್ಮಿಕವಿಧಿಗಳನ್ನು ಕಟ್ಟುನಿಟ್ಟಾಗಿ ಆಚರಿಸುವವನು. ೩. ಜೈನರ ಇಪ್ಪತ್ತನೆಯ ತೀರ್ಥಂಕರ; ಮುನಿ ಸುವ್ರತ.

ಸುವ್ರತೆ (ನಾ). ೧. ಸಾಧ್ವಿ; ಪತಿವ್ರತೆ. ೨. ಸರಾಗವಾಗಿ ಹಾಲುಕೊಡುವ ಹಸು.

ಸುವ್ವಲೆ (ನಾ). ಮಂಗಳಪ್ರಸಂಗಗಳಲ್ಲಿ ಹೆಣ್ಣುಮಕ್ಕಳು ಒಟ್ಟಿಗೆ ಹಾಡುವ ಹಾಡು; ಸೋಬಾನೆ.

ಸುವ್ವಾರ = ಸುವಾರ.

ಸುವ್ವಾಲೆ = ಸುವ್ವಲೆ.

ಸುವ್ವಿ ೧.=ಸುವ್ವಲೆ. ೨. ಕುಟ್ಟುವಾಗ ಅಥವಾ ಬೀಸುವಾಗ ಹಾಡುವ ಹಾಡು.

ಸುಶಿಕ್ಷಿತ (ನಾ). ೧. ಒಳ್ಳೆಯ ಶಿಕ್ಷಣವನ್ನು ಪಡೆದವನು; ಬಲ್ಲವನು; ಜಾಣ. (ಗು). ೨. ಉತ್ತಮರೀತಿಯಲ್ಲಿ ಕಲಿಸಿದ. ೩. ಚೆನ್ನಾಗಿ ಪಳಗಿಸಿದ.

ಸುಶೀಲ (ನಾ). ೧. ಒಳ್ಳೆಯ ನಡತೆ; ಸದಾಚಾರ. ೨. ಸದ್ಗುಣಿ; ಸದಾಚಾರ ಸಂಪನ್ನ. (ಗು). ೩. ಒಳ್ಳೆಯ ಗುಣದಿಂದ ಕೂಡಿದ.

ಸುಶೀಲೆ (ನಾ). ಒಳ್ಳೆಯ ನಡತೆಯುಳ್ಳವಳು.

ಸುಶ್ರಾವ್ಯ (ನಾ). ೧. ಕೇಳಲು ಹಿತಕರವಾಗಿರುವುದು, –ಇಂಪಾಗಿರುವುದು. (ಗು). ೨. ಕೇಳಲು ಹಿತಕರವಾದ.

ಸುಶ್ರುತ (ನಾ). ೧. ವೇದಗಳನ್ನು ಚೆನ್ನಾಗಿ ಬಲ್ಲವನು; ವೇದಪಾರಂಗತ. ೨. ಪ್ರಾಚೀನ ಭಾರತೀಯ ವೈದ್ಯನ ಹೆಸರು. (ಗು). ೩. ಚೆನ್ನಾಗಿ ಕೇಳಿದ.

ಸುಷಮೆ (ನಾ). ಅತ್ಯಧಿಕವಾದ ಚೆಲುವು, –ಸೌಂದರ್ಯ.

ಸುಷಿರ ೧. = ಸುಸಿರ. ೨. ಕೊಳಲು ಮುಂತಾದ ಊದುವ ವಾದ್ಯ. (ಗು). ೩. ರಂಧ್ರಗಳಿಂದ ತುಂಬಿದ. ~ವಾದ್ಯ = ರಂಧ್ರಗಳಿಂದ ಕೂಡಿದ ವಾದ್ಯ; ಕೊಳಲು ಮುಂತಾದುವು.

ಸುಷುಪ್ತಿ (ನಾ). ಗಾಢನಿದ್ರೆ. ~ಕೊ(ಗೊ)ಳ್ಳು = ಗಾಢನಿದ್ರೆಮಾಡು.

ಸುಷುಮ್ನೆ (ನಾ). ದೇಹದ ಪ್ರಮುಖನಾಡಿಗಳಲ್ಲಿ ಒಂದು.

ಸುಷ್ಠು (ನಾ). ೧. ಸಮರ್ಥ; ದಕ್ಷ. (ಅ). ೨. ಅಧಿಕವಾಗಿ; ಹೆಚ್ಚಾಗಿ. ೩. ಚೆನ್ನಾಗಿ; ಉತ್ತಮವಾಗಿ. ೪. ನಿಶ್ಚಯವಾಗಿ; ನಿಜವಾಗಿ. ೫. ಸ್ಪಷ್ಟವಾಗಿ.

ಸುಸಂಧಿ (ನಾ). ಒಳ್ಳೆಯ ಅವಕಾಶ, –ಸಂದರ್ಭ.

ಸುಸಂಬದ್ಧ (ಗು). ಸೂಕ್ತವಾಗಿ ಹೆಣೆದ

ಸುಸಂಸ್ಕೃತ (ನಾ). ೧. ಒಳ್ಳೆಯ ಸಂಸ್ಕೃತಿಯಿಂದ ಕೂಡಿರುವವನು ; ಸಭ್ಯ. (ಗು). ೨. ಚೆನ್ನಾಗಿ ಸುಧಾರಿಸಿದ, –ಸಂಸ್ಕಾರವನ್ನು ಪಡೆದ.

ಸುಸಜ್ಜಿತ (ಗು). ಚೆನ್ನಾಗಿ ಸಜ್ಜುಗೊಂಡ, –ಸಿದ್ಧವಾದ.

ಸುಸರ (ನಾ). ೧. ಸರಾಗವಾಗಿ ಮುಂದೆ ಹೋಗುವುದು. ೨. ಸ್ನೇಹ; ಗೆಳೆತನ; ಹೊಂದಾಣಿಕೆ.

ಸುಸಿರ (ನಾ). ರಂಧ್ರ; ಕಂಡಿ.

ಸುಸಿಲ್(ಲು) (ನಾ). ೧. ಮುಂಜಾವ; ಪ್ರಭಾತ. ೨. ಸಂಭೋಗ ; ರತಿ.

ಸುಸೂತ್ರ (ನಾ). ೧. ಸರಾಗ; ಸಲೀಸು. (ಗು). ೨. ಅಡೆತಡೆಯಿಲ್ಲದ ; ಸರಳವಾದ.

ಸುಸ್ತು (ನಾ). ಆಯಾಸ ; ಬಳಲಿಕೆ ; ದಣಿವು.

ಸುಸ್ಥ (ಗು). ಒಳ್ಳೆಯ ಸ್ಥಿತಿಯಲ್ಲಿರುವ.

ಸುಸ್ಥತೆ (ನಾ). ಒಳ್ಳೆಯ ಸ್ಥಿತಿ ; ಸ್ವಸ್ಥತೆ.

ಸುಸ್ಥಿತಿ (ನಾ). ಒಳ್ಳೆಯ ಸ್ಥಿತಿ, –ಅವಸ್ಥೆ.

ಸುಸ್ಥಿರ (ಗು). ಅಚಲವಾದ; ನಿಶ್ಚಲವಾದ.

ಸುಸ್ವಪ್ನ (ನಾ). ಒಳ್ಳೆಯ ಅಥವಾ ಶುಭ ಸೂಚಕವಾದ ಕನಸು. ~(ಂ)ಕಾ(ಗಾ)ಣು = ಒಳ್ಳೆಯ ಕನಸನ್ನು ಕಾಣು.

ಸುಸ್ವರ (ನಾ). ಇಂಪಾದ ಧ್ವನಿ.

ಸುಹಾಸ (ನಾ). ಮೋಹಕವಾದ ನಗೆ.

ಸುಹಾಸಿನಿ (ನಾ). ಮೋಹಕವಾದ ನಗೆಯುಳ್ಳವಳು.

ಸುಹೃತ್ಕುಲ (ನಾ). ಸ್ನೇಹಿತರ ಸಮೂಹ; ಗೆಳೆಯರ ಗುಂಪು.

ಸುಹೃತ್ತು (ನಾ). ೧. ಗೆಳೆಯ ; ಮಿತ್ರ. ೨. ಸಭ್ಯ ; ಗುಣವಂತ. ೩. ವಿದ್ವಾಂಸ; ಪಂಡಿತ. (ಗು). ೪. ಸ್ನೇಹದಿಂದ ಕೂಡಿದ; ಒಲವುಳ್ಳ.

ಸುಹೃದ (ನಾ). ಗೆಳೆಯ ; ಮಿತ್ರ.

ಸುಹೃದಯ (ನಾ). ಒಳ್ಳೆಯ ಮನಸ್ಸಿನವನು.

ಸುಳಾದಿ (ನಾ). ಒಂದು ಬಗೆಯ ಹಾಡು.

ಸುಳಿ = ಸುೞಿ. ~ಕೊ(ಗೊ)ಳ್ = ೧. ಚಿಗುರೆಲೆಗಳಿಂದ ಕೂಡಿರು. ೨. ಆವರಿಸು ; ಬಳಸು. ೩. = ಸುೞಿಗೊಳ್. ~ಗಾಳಿ = ಮುಂದವಾಗಿ ಬೀಸುವ ಗಾಳಿ. ~ತೆ(ದೆ)ಗೆ =ಮೊಳಕೆಯೊಡೆ ; ಅಂಕುರಿಸು. ~ನುಡಿ = ಬಳಸು ಮಾತು ; ಸುತ್ತುಮಾತು. ~ನೆತ್ತಿ = ಮಗುವಿನ ತಲೆಯ ಸೂಕ್ಷ್ಮಭಾಗ; ಅಳಿನೆತ್ತಿ. ~ಬಾ(ವಾ)ಳೆ = ಬಾಳೆಯ ಕುಡಿಯೆಲೆ.

ಸುಳುವು (ನಾ). ೧. ಜಾಡು ; ಕುರುಹು. ೨. ಚಲನೆ; ಸಂಚಾರ.

ಸುಳುಹು = ಸುಳುವು. ~ತೊ(ದೊ)ೞು(ರು) = ಗುರುತನ್ನು ಕಾಣಿಸು ; ಜಾಡನ್ನು ತೋರಿಸು.

ಸುಳ್ಳ (ನಾ). ಸುಳ್ಳು ಹೇಳುವವನು ; ಹುಸಿಕ.

ಸುಳ್ಳು (ನಾ). ಹುಸಿ ; ಸಟೆ ; ಅಸತ್ಯ. ~ಗಾರ = ಸುಳ್ಳ. ~ಚಾಡಿ = ವೃಥಾ ದೂರುವುದು; ಮಿಥ್ಯಾಪವಾದ.

ಸುೞಿ(ಳಿ) (ಕ್ರಿ). ೧. ಚಕ್ರಾಕಾರವಾಗಿ ಸುತ್ತು; ಗುಂಡಾಗಿ ತಿರುಗು. ೨. ಅಲೆ ; ಸಂಚರಿಸು. ೩. ಅತ್ತಿಂದಿತ್ತ ತೂಗಾಡು ; ಸಂಚಲಿಸು. (ನಾ). ೪. ಚಕ್ರಾಕಾರವಾಗಿ ಸುತ್ತುವಿಕೆ. ೫. ಗುಂಗುರುಕೂದಲು. ೬. ಚಕ್ರದಂತೆ ತಿರುಗುವ ನೀರು; ಜಲಾವರ್ತ. ೭. =ಸುೞಿಯೆಲೆ. ೮. ದೇಹದ ಮೇಲೆ ಕೂದಲು ಚಕ್ರಾಕಾರವಾಗಿರುವ ಸ್ಥಳ. ೯. ಸೋಮಾರಿ ; ಅಲಸಿ; ಮೈಗಳ್ಳ. ೧೦. ಮೋಸ ; ಕಪಟ. ೧೧. ಜಾಡು ; ಕುರುಹು ; ಸುಳುವು. ~ಇಸು = ನಡಸು ; ಚಲಿಸುವಂತೆ ಮಾಡು. ~ಎ(ಯೆ)ಲೆ = ೧. ಬಾಳೆ ಮುಂತಾದ ಗಿಡಗಳಲ್ಲಿ ಸುರುಳಿಯಾಗಿ ಸುತ್ತಿಕೊಂಡಿರುವ ಚಿಗುರೆಲೆ. ೨. ಗಿಡದ ತುದಿ ; ಕುಡಿ; ಕೊನರು. ~ಕು(ಗು)ರುಳ್ = ಗುಂಗುರು ಕೂದಲು ; ಸುರುಳಿಗೂದಲು.

~ಕೊ(ಗೊ)ಳ್ = ಸುತ್ತಿಕೊಳ್ಳು; ಸುರುಳಿಯಾಗು.

ಸುಳಿ(ಳಿ)ಯಿಸು = ಸುಳಿಸು.

ಸುಳಿ(ಳಿ)ವು (ನಾ). ೧. ಚಲನೆ; ತಿರುಗಾಟ. ೨. ಕ್ಷಣಿಕವಾದ ಕಾಂತಿ, –ಪ್ರಕಾಶ. ೩. ತಾತ್ಕಾಲಿಕವಾಗಿ ಪಡೆಯುವ ಅನುಭವ. ೪. ಸೂಕ್ಷ್ಮವಾದ ಗುರುತು, –ಕುರುಹು.

ಸೂಂಟಗೆ = ಸುಂಟಗೆ.

ಸೂಕರ (ನಾ). ಹಂದಿ; ವರಾಹ.

ಸೂಕಲ(ಳ) (ನಾ). ಅಗಡು ಕುದುರೆ; ತುಂಟುಕುದುರೆ.

ಸೂಕ್ತ ೧. = ಸೂಕ್ತಿ. ೨. ಯೋಗ್ಯವಾದುದು; ತಕ್ಕುದು. (ಗು). ೩. ಯುಕ್ತವಾಗಿ ಹೇಳಿದ; ಸರಿಯಾಗಿ ತಿಳಿಸಿದ. ೪. ಯೋಗ್ಯವಾದ; ತಕ್ಕ. ~ಕಾರ್ಯ = ಯೋಗ್ಯವಾದ ಕೆಲಸ. ~ಮಾರ್ಗ = ಸರಿಯಾದ ರೀತಿ, –ಕ್ರಮ.

ಸೂಕ್ತಿ (ನಾ). ೧. ಒಳ್ಳೆಯ ಮಾತು; ಹಿತವಚನ. ೨. ವೇದದಲ್ಲಿಯ ಸ್ತೋತ್ರಭಾಗ.

ಸೂಕ್ಷ್ಮ (ನಾ). ೧. ಅತಿ ಚಿಕ್ಕ ಕಣ; ಅಣು. ೨. ಪರಮಾತ್ಮ. ೩. ಯುಕ್ತಿ; ಚತುರತೆ. (ಗು). ೪. ಅತ್ಯಂತ ಸಣ್ಣದಾದ. ೫. ನವುರಾದ; ತೆಳ್ಳಗಿನ. ೬. ಕೋಮಲವಾದ. ೭. ನಿರ್ದಿಷ್ಟವಾದ; ಕರಾರುವಾಕ್ಕಾದ. ೮. ಹರಿತವಾದ; ತೀಕ್ಷ್ಣವಾದ. ೯. ಅಶಕ್ತವಾದ. ೧೦. ಸಂಗ್ರಹವಾದ. ~ದರ್ಶಕ = ಸಣ್ಣವಸ್ತುಗಳನ್ನು ದೊಡ್ಡದನ್ನಾಗಿ ಮಾಡಿ ತೋರಿಸುವ ಯಂತ್ರ. ~ದೃಷ್ಟಿ = ಚುರುಕು ನೋಟ; ತೀಕ್ಷ್ಣವಾದ ದೃಷ್ಟಿ. ~ಪ್ರಕೃತಿ = ನಾಜೂಕಾಗಿರುವ ಸ್ವಭಾವ, –ಗುಣ. ~ಬುದ್ಧಿ = ಚುರುಕು ಬುದ್ಧಿ; ಕುಶಾಗ್ರಮತಿ.

ಸೂಕ್ಷ್ಮದರ್ಶಿ (ನಾ). ೧. ತೀಕ್ಷ್ಣವಾದ ಗ್ರಹಣ ಶಕ್ತಿಯುಳ್ಳವನು; ಕುಶಾಗ್ರಮತಿ. (ಗು). ೨. ತೀಕ್ಷ್ಣವಾದ ನೋಟದಿಂದ ಕೂಡಿದ.

ಸೊಗುರಿಸು (ಕ್ರಿ). ದಿಗ್ಭ್ರಮೆಗೊಳ್ಳು; ಕಂಗಾಲಾಗು.

ಸೂಚ (ನಾ). ಹುಲ್ಲಿನ ಊಬು.

ಸೂಚಕ (ನಾ). ೧. ಸುಳಿವು; ಸೂಚನೆ. ೨. ಹೇಳುವವನು; ತಿಳಿಯಪಡಿಸುವವನು. (ಗು). ೩. ಸೂಚನೆಯನ್ನು ಕೊಡುವ. ೪. ಸುಳಿವನ್ನು ಕೊಡುವ; ಜಾಡನ್ನು ತಿಳಿಸುವ.

ಸೂಚನೆ (ನಾ). ೧. ತಿಳಿಸುವಿಕೆ; ನಿರ್ದೇಶಿಸುವಿಕೆ. ೨. ಸಂಜ್ಞೆಗಳ ಮೂಲಕ ತಿಳಿಯಪಡಿಸುವಿಕೆ. ೩. ಗುರುತು; ಸುಳಿವು; ಜಾಡು. ೪. ವಿಷಯ; ಸುದ್ದಿ. ೫. ಎಚ್ಚರಿಕೆ. ೬. ಕಾವ್ಯದ ಪ್ರತಿ ಸಂಧಿಯ ಪ್ರಾರಂಭದಲ್ಲಿ ಬರುವ ಸಾರಾಂಶಸೂಚಕವಾದ ಪದ್ಯ.

ಸೂಚಿ ೧. = ಸೂಜಿ. ೨. ಯಾವುದಾದರೂ ವಸ್ತುವಿನ ಮೊನಚಾದ ತುದಿ. ೩. ಗ್ರಂಥದಲ್ಲಿ ಕೊಡುವ ಅಕಾರಾದಿ ಪಟ್ಟಿ.

ಸೂಚಿಕೆ (ನಾ). ವಿವರಣೆಯ ಪಟ್ಟಿ; ಮುಖ್ಯಾಂಶ ಸೂಚಿ.

ಸೂಚಿಸು (ಕ್ರಿ). ೧. ತಿಳಿಸು; ಹೇಳು. ೨. ಮಾರ್ಗದರ್ಶನ ಮಾಡು; ನಿರ್ದೇಶಿಸು.

ಸೂಚೀಯಾನ (ನಾ). ಬಟ್ಟೆಯನ್ನು ಹೊಲಿಯುವಾಗ ಸೂಜಿಯು ಸಾಗುವಂತೆ ಸೈನ್ಯವು ಸಾಲಾಗಿ ಸಾಗುವುದು.

ಸೂಜಿ (ನಾ). ಬಟ್ಟೆ ಹೊಲಿಯುವ ಸಾಧನ; ಸೀವನಿ. ~ಕ(ಗ)ಣ್ಣು = ಸೂಜಿಯಲ್ಲಿ ದಾರ ಪೋಣಿಸಲು ಮಾಡಿರುವ ರಂಧ್ರ. ~ಕ(ಗ)ಲ್(ಲ್ಲು) = ಕಬ್ಬಿಣವನ್ನು ಸೆಳೆಯುವ ಶಕ್ತಿಯುಳ್ಳ ಕಲ್ಲು; ಅಯಸ್ಕಾಂತ. ~ಕಾಯಕ = ಹೊಲಿಗೆಯ ಕೆಲಸ; ಸಿಂಪಿಗ ವೃತ್ತಿ. ~ಕೊ(ಗೊ)ಳ್ = ಸೂಜಿಯಿಂದ ಚುಚ್ಚಲ್ಪಡು. ~ಮದ್ದು = ಚುಚ್ಚು

ಮದ್ದು ; ಇಂಜೆಕ್ಷನ್ನು. ~ಮಲ್ಲಿಗೆ = ಒಂದು ಜಾತಿಯ ಮಲ್ಲಿಗೆಯ ಬಳ್ಳಿ ಮತ್ತು ಅದರ ಹೂವು.

ಸೂಜಿಗ (ನಾ). ಒಂದು ಜಾತಿಯ ಮೀನು.

ಸೂಟ (ನಾ). ೧. ಚುರುಕುತನ ; ಚೂಟಿ. ೨. = ಸೂಠಿ. ೩. ಉಪಾಯ ; ಹಂಚಿಕೆ. ೪. ರಜೆ ; ಬಿಡುವು.

ಸೂಟು (ನಾ). ವಿನಾಯಿತಿ ; ಸೋಡಿ.

ಸೂಟೆ (ನಾ). ಪಂಜು ; ದೊಂದಿ ; ದೀಪಟಿಗೆ.

ಸೂಠಿ (ನಾ). ವೇಗ ; ರಭಸ.

ಸೂಡಗ (ನಾ). ಬಳೆ ; ಕಡಗ.

ಸೂಡಿ (ನಾ). ೧. ಹುಲ್ಲಿನ ಕಂತೆ, –ಹೊರೆ. ೨. ವೀಳೆಯದೆಲೆಯ ಕಟ್ಟು ; ಕವಳಿಗೆ. ೩. = ಸೂಟೆ. ೪. ಪೊರಕೆ ; ಕಸಬರಿಗೆ. ~ಕ(ಗ)ಟ್ಟು=ಗಂಟುಕಟ್ಟು ; ಜಟೆಯಾಗು.

ಸೂಡು (ಕ್ರಿ). ೧. ಹೂವು ಮುಂತಾದುವನ್ನು ತಲೆಯಲ್ಲಿ ಧರಿಸು. ೨. ತೊಡು ; ಹಾಕಿಕೊಳ್ಳು. ೩. ಹೊಂದು ; ಪಡೆ. ೪. ಗಂಟುಕಟ್ಟು ; ಹೊರೆಕಟ್ಟು. ೫. ತಲೆಯ ಮೇಲೆ ಹಿಡಿ. (ನಾ). ೬. ಕಂತೆ ; ಹೊರೆ. ೭. ಸುಡುವಿಕೆ ; ದಹಿಸುವಿಕೆ. ೮. ಬಿಸುಪು ; ಕಾವು. ೯. ಮಕ್ಕಳ ಬೇನೆಗೆ ಬಳೆಯ ಚೂರು ಮುಂತಾದುವುಗಳಿಂದ ಹಾಕುವ ಬರೆ ; ಚಿಟಿಕೆ.

ಸೂತ (ನಾ). ೧. ರಥವನ್ನು ನಡಸುವವನು ; ಸಾರಥಿ. ೨. ಹೊಗಳುವವನು ; ವಂದಿಮಾಗಧ. ೩. ಬಡಗಿ ; ಮರಗೆಲಸದವನು. ೪. ಬೆಸ್ತ ; ಅಂಬಿಗ. ೫. ಪುರಾಣಗಳನ್ನು ಬೋಧಿಸಿದ ಒಬ್ಬ ಋಷಿಯ ಹೆಸರು. ೬. ಪಾದರಸ; ಪಾರಜ. (ಗು). ೭. ಪ್ರಸವಿಸಿದ; ಹೆತ್ತ. ~ಪುತ್ರ = ಕರ್ಣ ; ರಾಧೇಯ.

ಸೂತಕ (ನಾ). ೧. ಹುಟ್ಟು; ಜನನ. ೨. ಜನನ, ಮರಣಗಳಿಂದುಂಟಾಗುವ ಮೈಲಿಗೆ.

ಸೂತಕಿ ೧. = ಸೂತಿಕೆ. ೨. ಮೈಲಿಗೆಯಿಂದ ಕೂಡಿದವನು ; ಕಳಂಕಿತನಾದವನು.

ಸೂತಿ (ನಾ). ೧. ಹುಟ್ಟು ; ಜನನ. ೨. ಹೆರಿಗೆ ; ಪ್ರಸವ. ೩. ಮಗು ; ಕೂಸು.

ಸೂತಿಕಾಗೃಹ (ನಾ). ಬಾಣಂತಿಯ ಕೋಣೆ ; ಹೆರಿಗೆಮನೆ.

ಸೂತಿಕೆ (ನಾ). ಬಾಣಂತಿ.

ಸೂತ್ರ (ನಾ). ೧. ದಾರ ; ನೂಲು. ೨. ಕಟ್ಟಳೆ; ವಿಧಿ ; ನಿಯಮ. ೩. ಅಲ್ಪಾಕ್ಷರವಾಗಿದ್ದು ಅಸಂದಿಗ್ಧವಾದ ಮತ್ತು ಸಾರವತ್ತಾದ ಅರ್ಥವನ್ನು ಹೊಂದಿರುವ ಹೇಳಿಕೆ. ~ಇಸು =೧. ಕಟ್ಟು; ಬಂಧಿಸು. ೨. ಪೋಣಿಸು; ಕೋ. ೩. ಧರಿಸು ; ತೊಡು. ೪. ಹೇಳು; ಸೂಚನೆಯನ್ನು ನೀಡು. ~ಗೊಂಬೆ = ದಾರವನ್ನು ಕಟ್ಟಿ ಆಡಿಸುವ ಗೊಂಬೆ. ~ಯಂತ್ರ = ೧. ದಾರವನ್ನು ಉಪಯೋಗಿಸಿ ನಡಸುವ ಸಾಧನ ; ರಾಟೆ, ಹೊಲಿಗೆಯ ಯಂತ್ರ ಮುಂತಾದುವು. ೨. ಬಟ್ಟೆ ನೇಯುವ ಮಗ್ಗ.

ಸೂತ್ರಧಾರ (ನಾ). ೧. ನಾಟಕದ ನಿರ್ದೇಶಕ ಅಥವಾ ಮುಖ್ಯನಟ. ೨. ತೆರೆಯ ಹಿಂದೆ ನಿಂತು ಬೊಂಬೆಗಳಿಗೆ ದಾರವನ್ನು ಕಟ್ಟಿ ಆಡಿಸುವವನು.

ಸೂತ್ರಧಾರಿ = ಸೂತ್ರಧಾರ.

ಸೂತ್ರಿಕೆ (ನಾ). ದಾರ ; ನೂಲು ; ಎಳೆ.

ಸೂದ (ನಾ). ೧. ಅಡುಗೆ ಮಾಡುವುದು. ೨. ಅಡುಗೆಯವನು ; ಬಾಣಸಿಗ. ೩. ಅನ್ನದೊಂದಿಗೆ ಕಲಸಿಕೊಳ್ಳುವ ವ್ಯಂಜನ ಪದಾರ್ಥ ; ಮೇಲೋಗರ. ~ಆಗಾರ = ಸೂದಾರ. ~ಕರ್ಮ = ಅಡುಗೆ ಮಾಡುವುದು.

ಸೂದನ (ನಾ). ೧. ನಾಶ ; ಧ್ವಂಸ. ೨. ನಾಶಮಾಡುವವನು ; ಧ್ವಂಸಕ.

ಸೂದಾರ (ನಾ). ಅಡುಗೆಯ ಮನೆ; ಪಾಕಶಾಲೆ. ~ವಿದ್ಯೆ = ಅಡುಗೆ ಮಾಡುವ ಕಲೆ ; ಪಾಕಶಾಸ್ತ್ರ.

ಸೂದ್ರ = ಸೂತ್ರ.

ಸೂನ (ನಾ). ೧. ಹೂವು ; ಪುಷ್ಪ. (ಗು). ೨. ಅರಳಿದ ; ವಿಕಸಿಸಿದ. ೩. ಹುಟ್ಟಿದ.
ಸೂನಂಗಿ = ಸೂಲಂಗಿ.
ಸೂನಗಿ = ಸೂನಗೆ.
ಸೂನಗೆ (ನಾ). ಒಂದು ಬಗೆಯ ಆಯುಧ.
ಸೂನಿ (ನಾ). ಕಟುಕ ; ಕಸಾಯಿಗಾರ.
ಸೂನಿಗೆ = ಸೂನಗೆ.
ಸೂನು (ನಾ). ಮಗ ; ಪುತ್ರ.
ಸೂನೃತ (ನಾ). ೧. ಪ್ರಾಮಾಣಿಕವಾದ ಮಾತು. ೨. ಪ್ರಿಯವಾದ ಮಾತು. (ಗು). ೩. ಸತ್ಯವಾದ ; ಪ್ರಾಮಾಣಿಕವಾದ. ೪. ಪ್ರಿಯವಾದ ; ಕರುಣೆಯಿಂದ ಕೂಡಿದ.
ಸೂನೆ (ನಾ). ಪ್ರಾಣಿಗಳನ್ನು ಕೊಲ್ಲುವ ಸ್ಥಳ ; ಯಜ್ಞಶಾಲೆ, ಕಸಾಯಿಖಾನೆ ಮುಂತಾದುವು. ~ಕಾ(ಗಾ)ಜ(ರ) = ಸೂನಿ.
ಸೂಪ (ನಾ). ೧. ಸಾರು, ತೊವ್ವೆ ಮುಂತಾದ ವ್ಯಂಜನಪದಾರ್ಥ. ೨. = ಸೂಪಕಾರ. ~ಶಾಸ್ತ್ರ = ಅಡುಗೆಯ ವಿಧಾನವನ್ನು ತಿಳಿಸುವ ಶಾಸ್ತ್ರ.
ಸೂಪಕಾರ (ನಾ). ಅಡುಗೆಯವನು ; ಬಾಣಸಿಗ.
ಸೂಪು (ನಾ). ಒಂದು ಬಗೆಯ ವಸ್ತ್ರ.
ಸೂಯ (ನಾ). ಯಜ್ಞ, ಯಾಗಗಳಲ್ಲಿ ಸೋಮರಸವನ್ನು ಅರ್ಪಿಸುವುದು.
ಸೂಯಣ = ಸುಯ್ಯಾಣ.
ಸೂಯಾಣ ೧. = ಸುಯ್ಯಾಣ. ೨. = ಸೂಚೀಯಾಸ. ೩. ಅಡುಗೆಮನೆ ; ಪಾಕಶಾಲೆ.
ಸೂರ್(ರು) (ನಾ). ೧. ಸ್ವರ ; ಧ್ವನಿ. ೨. ಛಾವಣಿ ಮತ್ತು ಅದರ ಇಳಿಜಾರಾದ ಪಕ್ಕ.
ಸೂರ (ನಾ). ೧. ಸೂರ್ಯ ; ನೇಸರು. ೨. = ಶೂರ.
ಸೂರಣ (ನಾ). ಒಂದು ಜಾತಿಯ ತರಕಾರಿ ಗೆಡ್ಡೆ ; ಚೂರ್ಣಗೆಡ್ಡೆ.
ಸೂರಿ (ನಾ). ವಿದ್ವಾಂಸ ; ಬಲ್ಲಿದ.
ಸೂರಿಯ = ಸೂರ್ಯ.
ಸೂರುಳ್(ಳು) (ಕ್ರಿ). ೧. ಶಪಥಮಾಡು ; ಪ್ರತಿಜ್ಞೆಮಾಡು. (ನಾ). ೨. ಶಪಥ; ಭಾಷೆ. ~ಇಸು = ಪ್ರತಿಜ್ಞೆಯನ್ನು ಕೈಗೊಳ್ಳು ; ಶಪಥಮಾಡು. ~ಕೊ(ಗೊ)ಳ್ = ಸೂರುಳಿಸು.
ಸೂರೆಪಾನ (ನಾ). ದೇವರ ಅಥವಾ ರಾಜರ ಮೆರವಣಿಗೆಯಲ್ಲಿ ಗೌರವಾರ್ಥವಾಗಿ ಕೊಂಡೊಯ್ಯುವ ಒಂದು ಬಗೆಯ ಫಲಕ.
ಸೂಱೆ(ರೆ) (ನಾ). ಸುಲಿಗೆ ; ಲೂಟಿ; ಕೊಳ್ಳೆ. ~ಆ(ಯಾ)ಡು = ದೋಚು ; ಸುಲಿಗೆ ಮಾಡು. ~ಕಾ(ಗಾ)ಱ(ರ) = ೧. ಲೂಟಿ ಮಾಡುವವನು ; ಕೊಳ್ಳೆಹೊಡೆಯುವವನು. ೨. ಕೊಡುಗೈಯವನು ; ಉದಾರಿ. ~ಕೊ(ಗೊ)ಡು = ಯಥೇಚ್ಛವಾಗಿ ಕೊಡು ; ಧಾರಾಳವಾಗಿ ನೀಡು. ~ಕೊ(ಗೊ)ಳ್(ಳ್ಳು) = ೧. ಲೂಟಿಗೆ ಒಳಗಾಗು. ೨. ಲೂಟಿ ಮಾಡು ; ಕೊಳ್ಳೆ ಹೊಡೆ. ~ಮಾಡು = ೧. ಕೊಳ್ಳೆಹೊಡೆ ; ಲೂಟಿಮಾಡು . ೨. ಧಾರಾಳವಾಗಿ ಖರ್ಚು ಮಾಡು. ~ಹೋಗು=ಲೂಟಿಗೆ ಒಳಗಾಗು.
ಸೂಱೆ(ರೆ)ಗ (ನಾ). ಲೂಟಿಮಾಡುವವನು ; ಕೊಳ್ಳೆಹೊಡೆಯುವವನು.
ಸೂರ್ತಿ (ಗು). ಸೂರತ್‌ನಗರದಲ್ಲಿ ತಯಾರಿಸಿದ.
ಸೂರ್ಪ (ನಾ). ಕೇರುವ ಸಾಧನ ; ಮೊರ ; ಶೂರ್ಪ.
ಸೂರ್ಯ (ನಾ). ನೇಸರು ; ರವಿ. ~ಅಸ್ತ =ಸೂರ್ಯನು ಮುಳುಗುವುದು. ~ಆವರ್ತ = ಸೂರ್ಯನ ದಿಕ್ಕಿಗೆ ತಿರುಗುವ ಹೂವುಗಳನ್ನು ಬಿಡುವ ಒಂದು ಜಾತಿಯ ಗಿಡ ; ಸೂರ್ಯಕಾಂತಿ. ~ಉದಯ = ಹೊತ್ತು ಮೂಡುವುದು ; ಬೆಳಗಾಗುವುದು. ~ಕಾಂತ = ಬಿಸಿಲಿಗೆ ಕಿಡಿ ಕಾರುವುದೆಂದು ನಂಬಲಾದ ಒಂದು ಬಗೆಯ ಕಲ್ಲು ; ಸ್ಫಟಿಕ. ~ಕಾಂತಿ = ಸೂರ್ಯಾವರ್ತ.

~ತನಯ = ೧. ಸೂರ್ಯನ ಮಗ. ೨.ಶನಿ. ೩.ಯಮ. ೪.ಕರ್ಣ. ೫.ಸುಗ್ರೀವ. ~ಸ್ನಾನ = ರೋಗಚಿಕಿತ್ಸೆಗಾಗಿ ಬಿಸಿಲಿಗೆ ಮೈಯೊಡ್ಡುವುದು.

ಸೂರ್ಯಪಾನ ೧. = ಸೂರೆಪಾನ. ೨. = ಸೂರ್ಯಾವರ್ತ.

ಸೂಲ್(ಲು) (ನಾ). ೧. (ದನ ಮುಂತಾದುವು) ಗರ್ಭಧಾರಣೆ ಮಾಡುವುದು. ೨. ಹೆರಿಗೆ; ಪ್ರಸವ. ೩. ಉಸಿರು; ಶ್ವಾಸ.

ಸೂಲ(ಳ) ೧. = ಶೂಲ. ೨. ಕಣ್ಣು ಮತ್ತು ಕಿವಿಗಳ ನಡುವಿನ ಭಾಗ. ೩. ಹುಟ್ಟು; ಜನನ. ~ಗಿತ್ತಿ = ಹೆರಿಗೆಯ ಸಮಯದಲ್ಲಿ ಸಹಾಯಮಾಡುವವಳು.

ಸೂಲಂಗಿ (ನಾ). ಕಬ್ಬಿನ ಹೂವು.

ಸೂಲಿ(ಳಿ) = ಶೂಲಿ.

ಸೂಲಿಕೆ (ನಾ). ಈಟಿ; ಶೂಲ.

ಸೂಲಿಗೆ = ಸೂಲಿಕೆ.

ಸೂಲೆ=ಶೂಲೆ. ~ಪೆ(ವೆ)ಱು(ರು)=ನೋವನ್ನು ಅನುಭವಿಸು.

ಸೂವಾರ = ಸೂಪಕಾರ. ~ವಿದ್ಯೆ=ಸೂಪಶಾಸ್ತ್ರ.

ಸೂಸಕ (ನಾ). ಬೈತಲೆಗೆ ಧರಿಸುವ ಒಂದು ಬಗೆಯ ಆಭರಣ; ಬೈತಲೆಮಣಿ.

ಸೂಸಲ್(ಲು) (ನಾ). ೧. ಕಾಣಿಸಿಕೊಳ್ಳುವಿಕೆ; ಗೋಚರಿಸುವಿಕೆ. ೨. ಎಳ್ಳು, ಕಡಲೆ ಮುಂತಾದುವುಗಳನ್ನು ಸೇರಿಸಿ ಮಾಡಿದ ಖಾದ್ಯ.

ಸೂಸು (ಕ್ರಿ). ೧. ಕಾಣಿಸಿಕೊಳ್ಳು; ಪ್ರಕಟವಾಗು. ೨. ಹರಡು; ವ್ಯಾಪಿಸು. ೩. ತುಳುಕು; ಹೊರಚೆಲ್ಲು. ೪. ಹರಿ; ಪ್ರವಹಿಸು. ೫.ಬೀಳು; ಕಳಚು. ೬.ಕೆದರು; ಚೆದರು. ೭. ಸಿಂಪಡಿಸು; ಚಿಮುಕಿಸು. ೮. ಕಳೆ; ಸಾಗು. ~ಕಿ(ಗಿ)ಡಿ = ಚೆದರಿ ಬಿದ್ದ ಕಿಡಿ. ~ಕ(ಗು)ರುಳ್(ಳು) = ಇಳಿಬಿದ್ದ ಕೂದಲು.

ಸೂಸುಕ = ಸೂಸಕ.

ಸೂಹು (ಕ್ರಿ). ಅಟ್ಟು; ಸೋಹು.

ಸೂಳ್(ಳು) (ನಾ). ೧. ಯಾವುದಾದರೂ ಸೂಚನೆಗಾಗಿ ಮಾಡುವ ಶಬ್ದ. ೨. = ಸೂಱ್. ~ಅಗಿ = ಬೊಬ್ಬೆಹಾಕು; ಗರ್ಜಿಸು. ~ಅಡಸು = ಶಬ್ದವು ಆವರಿಸು. ~ನುಡಿ = ೧. ಪ್ರತಿಯಾಗಿ ಮಾತನಾಡು. ೨. ಪ್ರತಿಮಾತು; ಪ್ರತ್ಯುತ್ತರ. ೩. ತಿರುಳುಳ್ಳ ಮಾತು; ತತ್ತ್ವ. ೪. = ಸೂಱ್ನುಡಿ. ~ಪ(ವ)ಡೆ = ಸೂಳಗಿ.

ಸೂಳಯಿಸು (ಕ್ರಿ). ೧. ಗಟ್ಟಿಯಾಗಿ ಧ್ವನಿಮಾಡು. ೨. ಹೊಡೆ; ಬಾರಿಸು.

ಸೂಳವಿಸು = ಸೂಳಯಿಸು.

ಸೂಳೆ (ನಾ). ವೇಶ್ಯೆ; ಗಣಿಕೆ. ~ಕೆ(ಗೆ)ಯ್ = ವ್ಯಭಿಚಾರ ಮಾಡು; ಹಾದರ ಮಾಡು. ~ಕೆ(ಗೆ)ೞರಿ = ವೇಶ್ಯೆಯರು ವಾಸಿಸುವ ಬೀದಿ. ~ತನ = ಸೂಳೆಗಾರಿಕೆ. ~ವಳ =೧. ಜಾರ; ವಿಟ. ೨. ಸೂಳೆಯರ ಮೇಲ್ವಿಚಾರಕ. ~ವಾಳ = ಸೂಳೆವಳ.

ಸೂಳೆಗ (ನಾ). ಹಾದರಿಗ; ವ್ಯಭಿಚಾರಿ.

ಸೂಳೆಗಾರಿಕೆ (ನಾ). ಹಾದರ; ವ್ಯಭಿಚಾರ.

ಸೂಳೈಸು = ಸೂಳಯಿಸು.

ಸೂಱ್(ಳ್,ಳು,ಱು) (ನಾ). ೧. ಹೊತ್ತು; ವೇಳೆ. ೨. ಸರದಿ; ಪಾಳಿ. ೩. ಸಕಾಲ; ಸುಸಮಯ. ~ಅಱಿ(ರಿ) = ೧. ಸರಿಯಾದ ಸಮಯವನ್ನು ತಿಳಿ. ೨. ಸರದಿಯನ್ನು ತಿಳಿದುಕೊಳ್ಳು. ~ಆಯ್ತ = ೧. ಓಲೆಕಾರ; ಹರಿಕಾರ. ೨. ಡಂಗುರವನ್ನು ಸಾರುವವನು. ~ಇಱಿ(ರಿ) = ಮತ್ತೆ ಮತ್ತೆ ಚುಚ್ಚು, —ತಿವಿ. ~ನುಡಿ = ಸಂಭಾಷಣೆ. ~ಮಳೆ = ಸರದಿಯಂತೆ ಬರುವ ಮಳೆ.

ಸೂಱಯಾ(ಳಾ)ಯ್ತ (ನಾ). ಪರಿಚಾರಿಕೆ; ದೂತಿ.

ಸೃಕ್ವ (ನಾ). ಬಾಯಿಯ ಕೊನೆ; ಕಟಬಾಯಿ.
ಸೃಗ (ನಾ). ಒಂದು ಬಗೆಯ ಆಯುಧ.
ಸೃಗಾಲ(ಳ) = ಶೃಗಾಲ.
ಸೃಜನ (ನಾ). ಹುಟ್ಟು; ಸೃಷ್ಟಿ ; ಉತ್ಪತ್ತಿ.
ಸೃಜಯಿಸು = ಸೃಜಿಸು.
ಸೃಜಿಸು (ಕ್ರಿ). ಸೃಷ್ಟಿಮಾಡು ; ಹುಟ್ಟಿಸು.
ಸೃಣಿ (ನಾ). ೧. ಆನೆಯನ್ನು ಅಂಕೆಯಲ್ಲಿಡಲು ಉಪಯೋಗಿಸುವ ಸಾಧನ; ಅಂಕುಶ. ೨. ಕೊಡಲಿ ; ಮಚ್ಚು.
ಸೃಷ್ಟಿ (ನಾ). ೧. ಉತ್ಪತ್ತಿ; ಹುಟ್ಟು. ೨. ರಚನೆ; ನಿರ್ಮಾಣ. ೩. ಜಗತ್ತು ; ಪ್ರಪಂಚ. ೪. ಪ್ರಕೃತಿ; ನಿಸರ್ಗ. ~ಕರ್ತ = ನಿರ್ಮಾಣ ಮಾಡುವವನು ; ರಚಿಸುವವನು. ~ಪಾಲಕ = ಜಗತ್ತನ್ನು ಪಾಲಿಸುವವನು ; ದೇವರು.
ಸೆಂಡು = ಚೆಂಡು. ~ಆಡು = ಚೆಂಡಾಡು. ~ಕೊ(ಗೊ)ಲ್ = ಒಂದು ಬಗೆಯ ಆಯುಧ.
ಸೆಂದುರ = ಸಿಂಧೂರ.
ಸೆಕಳಿ (ನಾ) ಬಿಸುಪು; ಕಾವು.
ಸೆಕೆ ೧. = ಸೆಕಳಿ. ೨. ಬೇಸಗೆ; ಗ್ರೀಷ್ಮ. ೩. ಬೇಸಗೆಯ ತಾಪ, –ಧಗೆ. ೪. ಉರಿ ; ಜ್ವಾಲೆ. ~ಉಂಡಲಿಗೆ = ಹಬೆಯಲ್ಲಿ ಬೇಯಿಸಿ ಮಾಡಿದ ಒಂದು ಬಗೆಯ ತಿಂಡಿ. ~ಹಾಕು = ಕಾಯಿಗಳನ್ನು ಹಣ್ಣು ಮಾಡುವುದಕ್ಕಾಗಿ ಅಡೆಹಾಕು.
ಸೆಕ್ಕು (ಕ್ರಿ). ೧. ಒಳಸೇರಿಸು ; ತುರುಕು. ೨. ನೆಡು ; ನಾಟಿಸು. ೩. ಹೊಂದಿಸು ; ಜೋಡಿಸು.
ಸೆಕ್ಕೆ = ಚಕ್ಕೆ. ~ಹಾರು = ೧. ಬಿರುಕು ಬಿಡು ; ಸೀಳು. ೨. ಚೂರು ಸಿಡಿ.
ಸೆಖೆ = ಸೆಕೆ.
ಸೆಗಣ = ಸಗಣಿ.
ಸೆಗಣಿ = ಸಗಣಿ.
ಸೆಗಳಿ = ಸೆಕಳಿ.
ಸೆಗಳಿಕೆ = ಸೆಕಳಿ.
ಸೆಗಳಿಗದಿರ (ನಾ). ಉಷ್ಣವಾದ ಕಿರಣಗಳಿಂದ ಕೂಡಿದವನು ; ಸೂರ್ಯ.
ಸೆಗಳು = ಸೆಕಳಿ.
ಸೆಜ್ಜರ (ನಾ). ೧. ಮಲಗುವ ಮನೆ; ಶಯ್ಯಾಗೃಹ. ೨. ಹಾಸುಗೆ.
ಸೆಜ್ಜೆ = ಸಜ್ಜೆ. ~ಓ(ಯೊ)ೀವರಿ = ಮಲಗುವ ಕೋಣೆ. ~ಮ(ವ)ನೆ = ಸೆಜ್ಜೆಯೋವರಿ. ~ವಳ(ಳ್ಳ) = ಮಲಗುವ ಮನೆಯ ಸೇವಕ.
ಸೆಜ್ಜೆವಳ್ತಿ (ನಾ). ಮಲಗುವ ಮನೆಯನ್ನು ನೋಡಿಕೊಳ್ಳುವ ದಾಸಿ.
ಸೆಟೆ (ಕ್ರಿ). ೧. ಮುದುರಿಕೊಳ್ಳು ; ಸೆಡೆ. ೨. ನಿಮಿರು ; ನೆಟ್ಟಗೆ ನಿಲ್ಲು. ~ಬೇನೆ = ಸ್ನಾಯುಗಳು ಸೆಡೆತುಕೊಳ್ಳುವ ರೋಗ ; ಸೆಳವು.
ಸೆಟ್ಟಿ = ಶೆಟ್ಟಿ.
ಸೆಟ್ಟಿಗ = ಶೆಟ್ಟಿ.
ಸೆಟ್ಟಿಗುತ್ತ (ನಾ). ವ್ಯಾಪಾರಿ ಸಂಘದ ಸದಸ್ಯ.
ಸೆಟ್ಟು (ನಾ). ಗೋಡುಮಣ್ಣು ; ಮೆಕ್ಕಲು.
ಸೆಡಕು ೧. = ಸೆಡವು. ೨. ಧ್ವಜದ ಸುತ್ತಲೂ ಅಲಂಕಾರಕ್ಕಾಗಿ ಕಟ್ಟುವ ಕುಚ್ಚು, –ಗೊಂಡೆ. ~ನೋಟ = ವಕ್ರದೃಷ್ಟಿ.
ಸೆಡಕುಗಾರ್ತಿ (ನಾ). ಅಹಂಕಾರಿ; ಗರ್ವಿಷ್ಠೆ.
ಸೆಡವು (ನಾ). ೧. ಗರ್ವ; ಅಹಂಕಾರ. ೨. ಮುನಿಸು ; ಕೋಪ. ೩. ತಂಟೆ ; ಹಟಮಾರಿತನ. ೪. = ಸೆಡಹು.
ಸೆಡಹು (ನಾ). ೧. ಬಿಗುಮಾನ; ಬಿಂಕ. ೨. ಕೊಂಕು ; ವಕ್ರತೆ.
ಸೆಡು (ಕ್ರಿ). ೧. ಹೊಲಿ. ೨. ತೇಪೆಹಾಕು.
ಸೆಡೆ ೧. = ಸೆಟೆ. ೨. ಉಬ್ಬು ; ದಪ್ಪವಾಗು. ೩. ಹೆದರು ; ಅಂಜು. ೪. ಗರ್ವಿಸು ; ಅಹಂಕಾರ ಪಡು. ೫. ಬಾಗು ; ಡೊಂಕಾಗು.

(ನಾ). ೬. ಹೆದರಿಕೆ ; ಭಯ. ೭. ಡೊಂಕು; ವಕ್ರತೆ. ೮. ಧಾನ್ಯವನ್ನು ಬಿತ್ತುವ ಒಂದು ಉಪಕರಣ; ಸಡ್ಡೆ. ೯. ಒಂದು ಅಳತೆ.

**ಸೆಣ(ಂ)ಬು** = ಸಣಂಬು.

**ಸೆಣಸು** (ಕ್ರಿ). ೧. ಸ್ಪರ್ಧಿಸು. ೨. ಹೋರಾಡು; ಕಾದಾಡು. ೩. ಹೊಟ್ಟೆಕಿಚ್ಚುಪಡು ; ಕರುಬು. (ನಾ). ೪. ಸ್ಪರ್ಧೆ. ೫. ವಿರೋಧ; ಪ್ರತಿಭಟನೆ. ೬. ಕೋಪ ; ಸಿಟ್ಟು. ೭. ಮತ್ಸರ ; ಅಸೂಯೆ. ~ಆಟ = ೧. ಸ್ಪರ್ಧೆ ; ಪೈಪೋಟಿ. ೨. ಹೋರಾಟ; ಜಗಳ. ~ಕಾಱ(ರ) = ಹುರುಡಿಸುವವನು; ಸ್ಪರ್ಧಿ.

**ಸೆಣೆ** (ಕ್ರಿ). ೧. ಜಗ್ಗು ; ಎಳೆ. ೨. ಕೋಪಗೊಳ್ಳು ; ಸಿಟ್ಟಾಗು. ೩. ಬೀಸು.

**ಸೆತ್ತೆ** (ನಾ). ೧. ಕಸ ; ಕಲ್ಮಷ. ೨. ಮಾಸು ; ಸತ್ತೆ. ೩. ಪಾಪ ; ದೋಷ.

**ಸೆಬೆ** (ನಾ). ಹಕ್ಕಿಯನ್ನು ಹಿಡಿಯುವ ಸಾಧನ; ಬಲೆ. ~ಒ(ಯೊ)ಡ್ಡು = ಬಲೆಯನ್ನು ಬೀಸು.

**ಸೆರಗು** ೧. = ಸೆಱಂಗು. ೨. ಭಯ ; ಅಂಜಿಕೆ.

**ಸೆರೆ** (ಕ್ರಿ). ೧. ತುರಿ; ಹೆರೆ. (ನಾ). ೨. ರಕ್ತನಾಳ; ನರ. ೩. ಹೆಂಡ; ಮದ್ಯ. ೪. = ಸೇರೆ. ೫. = ಸೆಱೆ². ~ಕಾ(ಗಾ)ರ = ೧. ಸೆರೆಯಾಳು ; ಬಂದಿ. ೨. = ಸೆರೆಗುಡುಕ. ~ಕು(ಗು)ಡುಕ = ಮದ್ಯಪಾನ ಮಾಡುವವನು ; ಹೆಂಡಗುಡುಕ. ~ತೆ(ದೆ)ಗೆ = ನರವು ಸೆಳೆದುಕೊಳ್ಳು, —ಎಳೆದುಕೊಳ್ಳು. ~ಬಿಗಿ = ಗಂಟಲಿನ ನರವು ಉಬ್ಬು; ಗದ್ಗದಿತವಾಗು. ~ಬೀ(ವೀ)ಗು = ೧. ನರವು ಉಬ್ಬು ; ನರವು ದಪ್ಪವಾಗು. ೨. = ಸೆರೆದೆಗೆ. ~ಹಾಕು = ಸೆರೆಮನೆಯಲ್ಲಿಡು ; ಬಂಧಿಸು.

**ಸೆಱ(ರ)(ಂ)ಗು** (ನಾ). ೧. ಸೀರೆಯಲ್ಲಿ ಹೊದೆಯುವ ಭಾಗ ; ಮೇಲುದು. ೨. ಅಂಚು ; ತುದಿ ; ಪಕ್ಕ. ೩. ಆಶ್ರಯ ; ಸಹಾಯ. ~ಆಗು = ಆಶ್ರಯವಾಗು ; ರಕ್ಷಣೆಯನ್ನು ನೀಡು. ~ಒಡ್ಡು = ಬೇಡು ; ಯಾಚಿಸು. ~ಪಾ(ವಾ)ರ್(ರು) = ಸಹಾಯವನ್ನು ನಿರೀಕ್ಷಿಸು, —ಅಪೇಕ್ಷಿಸು.

**ಸೆಱ(ರ)ಪು** (ನಾ). ೧. ಆತಿಥ್ಯ ; ಸತ್ಕಾರ. ೨. ಗೌರವ ; ಮರ್ಯಾದೆ. ~ಗೆಯ್ = ಸತ್ಕಾರಮಾಡು ; ಆತಿಥ್ಯವನ್ನು ನೀಡು.

**ಸೆಱೆ²(ರೆ)** (ನಾ). ೧. ಬಂಧನ. ೨. ಬಂಧಿಸಿಡುವ ಸ್ಥಳ ; ಕಾರಾಗೃಹ. ೩. ಬಂದಿ ; ಖೈದಿ. ~ಅ(ಯಾ)ಗು = ಸೆರೆಸಿಕ್ಕು; ಬಂಧನಕ್ಕೊಳಗಾಗು. ~ಅ(ಯಾ)ಳ್(ಳು) = ೧. ಸೆರೆಯಲ್ಲಿ ಸಿಲುಕಿಸು ; ಬಂಧನಕ್ಕೊಳಪಡಿಸು. ೨. ಬಂಧನದಲ್ಲಿರುವವನು ; ಬಂದಿ; ಖೈದಿ. ~ಕೊ(ಗೊ)(ಳ್)ಳು=೧. ಸೆರೆಹಿಡಿ; ಬಂಧನಕ್ಕೊಳಪಡಿಸು. ೨. ಮುಚ್ಚಿಕೊಳ್ಳು. ~ಮ(ವ)ನೆ = ಕಾರಾಗೃಹ ; ಬಂದಿಖಾನೆ.

**ಸೆರ್ಕು** = ಸೆಕ್ಕು.

**ಸೆಲ(ಂ)ದಿ** (ನಾ). ಜೇಡರ ಹುಳು.

**ಸೆಲಬೆ** = ಸೆಲಂದಿ.

**ಸೆಲವು** (ನಾ). ೧. ಅಪ್ಪಣೆ ; ಅನುಮತಿ. ೨. ಸಲಿಗೆ; ಸದರ. ೩. ಚಿಲುಮೆ ; ಊಟೆ.

**ಸೆಲೆ** (ನಾ). ೧. ಶಬ್ದ ; ಧ್ವನಿ. ೨. ಪ್ರತಿಧ್ವನಿ. ೩. ನೀರು ಒಸರುವ ಜಾಗ. ೪. ತೇವದಿಂದ ಉಂಟಾದ ಹುಣ್ಣು. ೫. ಕಲ್ಲು ; ಶಿಲೆ. ೬. ನರ ; ರಕ್ತನಾಳ. ೭. ಗುರುತು ; ಸುಳಿವು. ~ಆ(ಯಾ)ಡು = ಜಿನುಗು ; ಒಸರು. ~ಒ(ಯೊ)ಡೆ = ಸೆಲೆಯಾಡು.

**ಸೆಲ್ಲೆ** (ನಾ). ಉತ್ತರೀಯ ; ಶಲ್ಯ.

**ಸೆಲ್ಲೆಯ** ೧.= ಸೆಲ್ಲೆ. ೨. = ಸಲ್ಲೆಯ.

**ಸೆಲ್ಲೆಹ** = ಸಲ್ಲೆಯ.

**ಸೆಳಕು** (ನಾ). ೧. ಎಳೆತ ; ಆಕರ್ಷಣೆ. ೨. ಹೊಳಪು; ಮಿಂಚು. ೩. ಒಂದು ಸಲಕ್ಕೆ ಆಗುವಷ್ಟು ; ಒಂದು ಒಬ್ಬೆ. ೪. ಶೀತದಿಂದ

ಉಂಟಾಗುವ ಸ್ನಾಯುವಿನ ಬಿಗಿತ; ಎಳೆತ.

ಸೆಳತ = ಸೆಳವು.

ಸೆಳಮೆ (ನಾ). ಸೆಳೆಯುವಿಕೆ; ಎಳೆತ.

ಸೆಳವು(ನಾ). ೧. ಆಕರ್ಷಿಸುವಿಕೆ. ೨. ಪ್ರವಾಹದ ಎಳೆತ, –ಸೆಳೆತ. ೩. ಶೀತದಿಂದ ಉಂಟಾಗುವ ನರಗಳ ಬಿಗಿತ; ಸ್ನಾಯು ಸಂಕೋಚನ. ೪. = ಸೆಳವುರೋಗ. ~ರೋಗ = ಒಂದು ಬಗೆಯ ರೋಗ; ಸೆಟೆರೋಗ.

ಸೆಳವೆ (ನಾ). ಬೆತ್ತ; ಕೋಲು.

ಸೆಳಸು (ಕ್ರಿ). ೧. ಎಳೆಯುವಂತೆ ಮಾಡು; ಸೆಳೆಯುವಂತೆ ಮಾಡು. ೨. ಸೆಣಸು; ಕಾದಾಡು. (ನಾ). ೩. ವಿರೋಧ; ಹಗೆ.

ಸೆಳೆ (ಕ್ರಿ). ೧. ಆಕರ್ಷಿಸು; ಎಳೆ. ೨. ಜಗ್ಗು; ಕೀಳು. ೩. ವಶಪಡಿಸಿಕೊಳ್ಳು. ೪. ಕೋಲಿನಿಂದ ಹೊಡೆ, ಥಳಿಸು. ೫. ಬಟ್ಟೆಯನ್ನು ಒಗೆ; ಸೆಡೆ. (ನಾ). ೬. ಎಳೆಯುವಿಕೆ; ಎಳೆತ. ೭. ಕಂಬಿ; ಸರಳು. ೮. = ಸೆಳವೆ. ೯. ಸಣ್ಣರೆಂಬೆ. ೧೦. ಬೇಟೆಯಲ್ಲಿ ಪ್ರಾಣಿಗಳನ್ನು ಹಿಡಿಯಲು ತರಬೇತಿ ಕೊಟ್ಟಿರುವ ಪ್ರಾಣಿ; ದೀಹದ ಪ್ರಾಣಿ. ~ಕೊ(ಗೊ)ಂಬು =ಸಣ್ಣಕೊಂಬೆ. ~ಕೊಳ್=೧. ಆಕರ್ಷಿಸು. ೨. ಲಪಟಾಯಿಸು; ಕಿತ್ತುಕೊಳ್ಳು. ~ಖಾನೆ = ಮೇಜಿನ ಅರೆ; ಡ್ರಾಯರು. ~ಮಂಚ = ತೂಗುಮಂಚ. ~ಮಿಂಚು = ಕೋಲ್ಮಿಂಚು.

ಸೆಳೆತ ೧. = ಸೆಳವು. ೨. ಹೊಡೆತ; ಪೆಟ್ಟು.

ಸೆಳ್ಳ (ನಾ). ಒಂದು ಜಾತಿಯ ಮರ ಮತ್ತು ಅದರ ಹಣ್ಣು; ಚಳ್ಳೆ.

ಸೆಳ್ಳಗೊಂಬು = ಸೆಳೆಗೊಂಬು.

ಸೆಳ್ಳು ೧.=ಸೆಳ್ಳ. ೨. ಒಂದು ಬಗೆಯ ಮೂಲಿಕೆ. ೩. ವ್ಯವಸಾಯದ ಒಂದು ಉಪಕರಣ. ೪. ತೀಕ್ಷ್ಣವಾದುದು; ಮೊನಚಾದುದು. ೫. ಉದ್ದವಾದ ತೆಳುರೆಂಬೆ. ~ಉಗುರ್(ರು) = ಚೂಪಾದ ಉಗುರು; ಮೊನಚಾದ ಉಗುರು.

ಸೆಳ್ಳೆ = ಸೆಳ್ಳ.

ಸೆಳ್ಳೆಗೊಂಬು (ನಾ). ತುದಿಯ ಕೊಂಬೆ.

ಸೇಂಗಾ = ಶೇಂಗಾ.

ಸೇಂದಿ (ನಾ). ಈಚಲು ಮರದಿಂದ ತೆಗೆದ ಹೆಂಡ.

ಸೇಂದು (ಕ್ರಿ). ೧. ಉಸಿರನ್ನು ಒಳಗೆ ಎಳೆದುಕೊಳ್ಳು. ೨.(ಬಾವಿ ಮೊದಲಾದುವುಗಳಿಂದ) ನೀರನ್ನು ಮೇಲಕ್ಕೆ ಎತ್ತಿ ತೆಗೆ.

ಸೇಕ (ನಾ). ೧. ಕಾವು; ಶಾಖ. ೨. ಸೇಚನ; ಚಿಮುಕಿಸುವಿಕೆ.

ಸೇಕಡಾ = ಶೇಕಡಾ.

ಸೇಕದಾರ = ಶೇಕದಾರ.

ಸೇಗುಡಿತೆ (ನಾ). ಒಂದು ಬಗೆಯ ಮೂಲಿಕೆ.

ಸೇಚನ (ನಾ). ೧. ಚಿಮುಕಿಸುವಿಕೆ; ಸಿಂಪಡಿಸುವಿಕೆ. ೨. ಸುರಿಯುವಿಕೆ. ~(೦)ಗೆಯ್ = ಸಿಂಪಡಿಸು; ಚಿಮುಕಿಸು.

ಸೇಡು (ನಾ). ೧. ಸೆಡೆಯುವಿಕೆ; ಮುದುಡುವಿಕೆ. ೨. ಬಾಗಿರುವಿಕೆ. ೩. ವೈರ; ಮುಯ್ಯಿ. ~(೦)ಕೊ(ಗೊ)ಳ್ = ಸುಕ್ಕು; ಸುರುಟಿಕೊಳ್ಳು. ~ತೀರಿಸು = ವೈರ ತೀರಿಸಿಕೊಳ್ಳು; ದ್ವೇಷ ಸಾಧಿಸಿಕೊಳ್ಳು.

ಸೇಣಿ (ನಾ). ಗುಂಪು; ಸಮೂಹ; ಶ್ರೇಣಿ. ~ಪತಿ = ನಾಯಕ; ದಳವಾಯಿ.

ಸೇತ (ನಾ). ಶುಭ್ರತೆ; ಬಿಳಿದು.

ಸೇತು (ನಾ). ಸೇತುವೆ; ಸಂಕ. ~ಬಂಧ = ಸೇತು.

ಸೇತುವೆ = ಸೇತು.

ಸೇದು ೧. = ಸೇಂದು. ೨. ಕುಗ್ಗು; ಸುರುಟಿಕೊಳ್ಳು. ೩. ಸಿಗರೇಟು, ಬೀಡಿ ಮುಂತಾದುವನ್ನು ಕುಡಿ. ೪. ದ್ರವಪದಾರ್ಥವನ್ನು ಹೀರಿಕೊಳ್ಳು. ~ಬತ್ತಿ=ಹೊಗೆ ಕುಡಿಯುವ ಸಾಧನ; ಬೀಡಿ, ಸಿಗರೇಟು ಮುಂತಾದುವು.

ಸೇದೆ (ನಾ). ೧. ದಣಿವು; ಆಯಾಸ. ೨. ಬೆವರು; ಸ್ವೇದ. ೩. ಹಗ್ಗ ; ಮಿಣಿ. ~ಕಿ(ಗಿ)ಡು = ಆಯಾಸಪಡು ; ದಣಿವನ್ನು ಹೊಂದು. ~ನೀರ್(ರು) = ಬೆವರು ; ಘರ್ಮಜಲ. ~ಪ(ವ)ಡು = ಆಯಾಸಪಡು ; ದಣಿ.

ಸೇನ ೧.=ಶ್ಯೇನ. ೨. ಕಂದಾಯದ ಅಧಿಕಾರಿ.

ಸೇನಬೋವ = ಶಾನುಭಾಗ.

ಸೇನಾಧಿಪತಿ = ಸೇನಾನಿ.

ಸೇನಾಧಿಪತ್ಯ = ಸೇನಾಪತ್ಯ.

ಸೇನಾನಿ (ನಾ). ಸೈನ್ಯದ ಮುಖಂಡ; ದಳವಾಯಿ ; ಸೇನಾಧಿಪತಿ.

ಸೇನಾಪತಿ = ಸೇನಾನಿ.

ಸೇನಾಪತ್ಯ (ನಾ). ಸೇನಾಪತಿಯ ಕೆಲಸ; ಸೈನ್ಯಾಧಿಪತ್ಯ.

ಸೇನಾಮುಖ (ನಾ). ಮೂರು ಆನೆ, ಮೂರು ರಥ, ಒಂಬತ್ತು ಕುದುರೆ ಮತ್ತು ಹದಿನೈದು ಜನ ಕಾಲಾಳುಗಳಿಂದ ಕೂಡಿದ ಸೇನೆಯ ಒಂದು ವಿಭಾಗ.

ಸೇನೆ (ನಾ). ದಂಡು ; ಸೈನ್ಯ.

ಸೇಬು (ನಾ). ಒಂದು ಜಾತಿಯ ಮರ ಮತ್ತು ಅದರ ಹಣ್ಣು.

ಸೇಬ್ಯ (ಗು). ಸೇವೆಗೆ ಅರ್ಹವಾದ ; ಭಕ್ತಿಗೆ ಯೋಗ್ಯವಾದ ; ಸೇವ್ಯ.

ಸೇಮ (ನಾ). ಸುಖ ; ಕ್ಷೇಮ.

ಸೇರ್(ರು) (ಕ್ರಿ). ೧. ತಲುಪು ; ಸಮೀಪಿಸು. ೨. ಕೂಡು ; ನೆರೆ. ೩. ಹೊಂದಿಕೊಳ್ಳು. ೪. ಒಂದಾಗು ; ಒಟ್ಟುಗೂಡು ; ಬೆರೆ. ೫. ಒಗ್ಗು ; ಹಿಡಿಸು. (ನಾ). ೬. ನಾಲ್ಕು ಪಾವಿನ ಒಂದು ಅಳತೆ. ೭. ಅಳೆಯುವ ಒಂದು ಸಾಧನ. ೮. ಕಲಸಿದ ಮಣ್ಣು. ~ಇಕೆ = ೧. ಹೊಂದಿಕೆ ; ಸಾಮರಸ್ಯ ; ಮೇಳ. ೨. ಮೆಚ್ಚುಗೆ ; ಇಷ್ಟ. ~ಇಸು = ೧. ತಲುಪಿಸು ; ಮುಟ್ಟಿಸು. ೨. ಒಟ್ಟು ಗೂಡಿಸು ; ಸಂಗ್ರಹಿಸು. ೩. ಹೊಂದಿಸು.

ಸೇರುವೆ ೧. = ಸೇರಿಕೆ. ೨. ಸಹವಾಸ ; ಒಡನಾಟ. ೩. ಗುಂಪು ; ಸಮೂಹ.

ಸೇರುವೆಗಾಱ(ರ) = ಸೇರೆಗಾರ.

ಸೇರೆ (ನಾ). ೧.ಬೊಗಸೆ ; ಅಂಜಲಿ. ೨.ಬೊಗಸೆಯಲ್ಲಿ ತುಂಬುವಷ್ಟು. ~ಕ(ಗ)ಣ್ = ಅಗಲವಾದ ಕಣ್ಣು ; ಬೊಗಸೆಗಣ್ಣು.

ಸೇರೆಗಾರ (ನಾ). ಮೇಸ್ತ್ರಿ ; ಮೇಲ್ವಿಚಾರಕ.

ಸೇರ್ಪಡೆ (ನಾ). ಸೇರಿಕೊಳ್ಳುವಿಕೆ ; ಒಂದುಗೂಡುವಿಕೆ.

ಸೇಲೆ (ನಾ). ಬಟ್ಟೆ ; ವಸ್ತ್ರ. ~ಇಗ = ಬಟ್ಟೆ ನೇಯುವವನು ; ನೇಕಾರ.

ಸೇವ = ಸೇಮ.

ಸೇವಂತಿ = ಶಾವಂತಿಕೆ.

ಸೇವ(ಂ)ತಿಗೆ = ಶಾವಂತಿಕೆ.

ಸೇವಕ (ನಾ). ಊಳಿಗದವನು ; ಆಳು.

ಸೇವಕಿ (ನಾ). ಊಳಿಗದವಳು ; ದಾಸಿ.

ಸೇವಗೆ = ಶಾವಿಗೆ. ~ಒರಳು = ಅಕ್ಕಿ, ರಾಗಿ ಮುಂತಾದ ಸೇವಗೆಯನ್ನು ಒತ್ತಲು ಬಳಸುವ ಸಾಧನ.

ಸೇವನೆ (ನಾ). ೧. ಊಳಿಗ ; ಸೇವೆ. ೨. ತಿನ್ನುವಿಕೆ. ೩. ಕುಡಿಯುವುದು. ೪. ಅನುಭವಿಸುವಿಕೆ.

ಸೇವಾಳ = ಶೇವಲ.

ಸೇವಿಕೆ = ಸೇವಕಿ.

ಸೇವಿಗೆ = ಶಾವಿಗೆ.

ಸೇವೆ (ನಾ). ೧. ಊಳಿಗ ; ಚಾಕರಿ. ೨. ಉಪಚಾರ. ೩. ಪೂಜೆ ; ಉಪಾಸನೆ. ~ಇಸು = ೧. ಸೇವೆಮಾಡು; ಪೂಜಿಸು. ೨. ತಿನ್ನು ; ಸೇವನೆಮಾಡು. ~ಗೆಯ್ = ೧. ಉಪಚರಿಸು. ೨. ಪೂಜಿಸು ; ಸೇವೆ ಮಾಡು.

ಸೇವ್ಯ (ನಾ). ೧. ಪೂಜಿಸಲು ಯೋಗ್ಯವಾದುದು,-ಅರ್ಹವಾದುದು. ೨. ಸೇವಿಸಲು ಯೋಗ್ಯನಾದವನು. (ಗು). ೩. ಉಪಯೋಗಿಸಲು ಯೋಗ್ಯವಾದ; ಅನುಭವಿಸಲು

ತಕ್ಕುದಾದ. ೪. ಪೂಜಿಸಲು ಯೋಗ್ಯವಾದ.

ಸೇಷ (ನಾ). ೧. ಉಳಿಕೆ; ಬಾಕಿ. ೨. ಅದಿಶೇಷ.

ಸೇಸೆ (ನಾ). ೧. ಮಂತ್ರಾಕ್ಷತೆ. ೨. ತೆರಿಗೆ; ಸುಂಕ. ~ಅಕ್ಕಿ = ಮಂಗಳಕಾರ್ಯದಲ್ಲಿ ಉಪಯೋಗಿಸುವ ಅಕ್ಕಿ; ಅಕ್ಷತೆ. ~ಇ(ಯಿ)ಕ್ಕು = ಮಂತ್ರಾಕ್ಷತೆಯನ್ನು ಹಾಕು; ಆಶೀರ್ವದಿಸು. ~ತ(ದ)ಳಿ = ಸೇಸೆಯಿಕ್ಕು.

ಸೇಳೆ (ನಾ). ಬೆಡಗು; ಒನಪು.

ಸೈ (ನಾ). ೧. ನೇರವಾದುದು; ಸರಿಯಾದುದು. ೨. ಒಪ್ಪಿಗೆ ಅಥವಾ ಮೆಚ್ಚುಗೆಯನ್ನು ಸೂಚಿಸುವ ಮಾತು. ~ಕೆ(ಗೆ)ಡಹು = ಸಾಷ್ಟಾಂಗವಾಗಿ ಬೀಳುವಂತೆ ಮಾಡು. ~ಕೆ(ಗೆ)ಡೆ = ೧. ನಮಸ್ಕರಿಸು; ಸಾಷ್ಟಾಂಗ ಬೀಳು. ೨. ಕೆಳಕ್ಕೆ ಬೀಳು; ಉರುಳು. ~ಕೊ(ಗೊ)ಡು = ಒಪ್ಪು; ಸಮ್ಮತಿಸು. ~ನಡೆ = ನೇರವಾಗಿ ನಡೆ; ನೆಟ್ಟಗೆ ನಡೆ. ~ನುಡಿ = ನೇರವಾದ ಮಾತು; ಸ್ಪಷ್ಟವಾದ ಮಾತು. ~ಪ(ವ)ರಿ = ೧. ನೇರವಾಗಿ ನಡೆ, –ಹೋಗು. ೨. ವ್ಯಾಪಿಸು; ಹರಡು. ೩. ಹರಿ; ಪ್ರವಹಿಸು. ~ಬ(ವ)ಳಿ = ಸರಿಯಾದ ದಾರಿ, –ಮಾರ್ಗ. ~ಬೆ(ವೆ)ಱ(ರ)ಗು = ಅತಿಯಾದ ಆಶ್ಚರ್ಯ. ~ಬೆ(ವೆ)ಳಗು = ಅತಿಯಾದ ಕಾಂತಿ; ಹೆಚ್ಚಾದ ಕಾಂತಿ. ~ಮರುಗು = ಹೆಚ್ಚಾಗಿ ಕಳವಳಗೊಳ್ಳು, –ವ್ಯಥೆಪಡು.

ಸೈಂಧವ (ನಾ). ೧. ಒಂದು ಬಗೆಯ ಉಪ್ಪು. ೨. ಸಿಂಧುದೇಶ ಮತ್ತು ಅಲ್ಲಿಯ ಜನ. ೩. ಒಂದು ಜಾತಿಯ ಕುದುರೆ. ೪. ಮಹಾಭಾರತದ ಒಬ್ಬ ಪರಾಕ್ರಮಿ; ದುಶ್ಶಲೆಯ ಗಂಡ; ಜಯದ್ರಥ. (ಗು). ೫. ಸಮುದ್ರಕ್ಕೆ ಸೇರಿದ, –ಸಂಬಂಧಿಸಿದ. ೬. ಸಿಂಧುದೇಶಕ್ಕೆ ಸಂಬಂಧಿಸಿದ.

ಸೈಂಹಿಕೇಯ (ನಾ). ಸಿಂಹಿಕೆಯ ಮಗ; ರಾಹು.

ಸೈಕತ (ನಾ). ಮರಳು; ಉಸುಕು.

ಸೈಗೆ (ನಾ). ಸನ್ನೆ; ಸೂಚನೆ.

ಸೈತಾನ (ನಾ). ೧. ದುಷ್ಟಶಕ್ತಿ; ಪಾಪಪ್ರೇರಕ ಶಕ್ತಿ. ೨. ಪಿಶಾಚಿ. ೩. ದುಷ್ಟವ್ಯಕ್ತಿ.

ಸೈತು (ನಾ). ೧. ನೇರ್ಪು; ಸರಿಯಾದ ರೀತಿ, –ಕ್ರಮ. ೨. ನೇರವಾದುದು. ೩. ಒಳ್ಳೆಯ ನಡವಳಿಕೆ; ಸಚ್ಚಾರಿತ್ರ್ಯ. ೪. ಸುಮ್ಮನಿರುವಿಕೆ; ಮೌನ. ೫. ಹಗುರ; ಸುಲಭ. (ಅ). ೬. ಸುಮ್ಮನೆ; ಮೌನವಾಗಿ. ೭. ಚೆನ್ನಾಗಿ; ಸರಿಯಾಗಿ. ~ಇಕ್ಕು = ನೇರಮಾಡು; ಸರಿಯಾಗಿಡು. ~ಇರು = ಸುಮ್ಮನಿರು.

ಸೈದ = ಸಯ್ದ.

ಸೈದ್ಧಾಂತಿ (ನಾ). ಸಿದ್ಧಾಂತವನ್ನು ತಿಳಿದವನು; ಸಿದ್ಧಾಂತಿ.

ಸೈದ್ಧಾಂತಿಕ ೧. = ಸೈದ್ಧಾಂತಿ. (ಗು). ೨. ಸಿದ್ಧಾಂತಕ್ಕೆ ಸಂಬಂಧಿಸಿದ.

ಸೈನಿಕ (ನಾ). ಯೋಧ; ಭಟ.

ಸೈನ್ಯ (ನಾ). ದಂಡು; ಪಡೆ; ಬಲ. ~ಅಧಿಪತಿ = ಸೇನಾನಿ.

ಸೈಪು (ನಾ). ೧. ನೇರ್ಪು; ಸರಿಯಾದ ಕ್ರಮ. ೨. ಪುಣ್ಯ; ಸುಕೃತ. ೩. ಮೌನ; ನಿಶ್ಶಬ್ದತೆ. ~ಗಾಱ(ರ) = ಪುಣ್ಯವಂತ.

ಸೈಮಿನಿ (ನಾ). ಯಮಲೋಕ.

ಸೈರಂಧ್ರಿ (ನಾ). ೧. ಅಂತಃಪುರದ ದಾಸಿ. ೨. ಗಂಧವನ್ನು ಅರೆಯುವವಳು.

ಸೈರಣೆ (ನಾ). ತಾಳ್ಮೆ; ಸಹನೆ. ~ಕೆ(ಗಿ)ಡು = ತಾಳ್ಮೆ ತಪ್ಪು; ಸಹನೆಯನ್ನು ಕಳೆದುಕೊಳ್ಳು. ~ಕೊ(ಗೊ)ಳ್ = ಸೈರಿಸು.

ಸೈರಿಭ (ನಾ). ಕೋಣ; ಲುಲಾಯ.

ಸೈರಿಸು (ಕ್ರಿ). ತಾಳು; ಸಹಿಸು; ತಾಳ್ಮೆಯನ್ನು ಹೊಂದು.

ಸೈಲು (ನಾ). ೧. ಸಡಿಲವಾದುದು ; ಅಳ್ಳಕವಾದುದು. ೨. ಸಲಿಗೆ ; ಸದರ. ~ಬಿಡು = ೧. ಸಡಿಲಬಿಡು. ೨. ಸದರಕೊಡು.

ಸೊಂಕು ೧. = ಸೋಂಕು. ೨. ಗಿಡಮರಗಳ ಎಲೆಗಳ ಮೇಲಿರುವ, ಮುಟ್ಟಿದರೆ ನವೆಯುಂಟುಮಾಡುವ ವಸ್ತು. ~ರೋಗ = ಸೋಂಕುರೋಗ.

ಸೊಂಟ (ನಾ). ಟೊಂಕ ; ನಡು. ~ಕ(ಗ)ಟ್ಟು = ಕಂಕಣಬದ್ಧವಾಗು ; ಸಿದ್ಧವಾಗು. ~ಪಟ್ಟಿ = ೧. ನಡುವಿಗೆ ಕಟ್ಟುವ ಪಟ್ಟಿ. ೨. ಡಾಬು ; ಒಡ್ಯಾಣ.

ಸೊಂಟಿ = ಶುಂಠಿ.

ಸೊಂಡಗೆ = ಸಂಡಗೆ.

ಸೊಂಡಿಗೆ = ಸಂಡಗೆ.

ಸೊಂಡಿಲ್(ಲು) = ಸುಂಡಲ್.

ಸೊಂಡು (ನಾ). ತಲೆಯಲ್ಲಿ ಹೊಟ್ಟು ಉಂಟಾಗುವ ಒಂದು ಬಗೆಯ ರೋಗ.

ಸೊಂಡೆ ೧. = ಸುಂಡೆ. ೨. ಮುಖ ; ಮೋರೆ ; ಮೂತಿ. ೩. ಸೊಂಡಿಲು.

ಸೊಂದಿ (ನಾ). ಜಾರ ; ಹಾದರಿಗ.

ಸೊಂಪು (ನಾ). ೧. ಚೆಲ್ವಿಕೆ ; ಸೊಗಸು. ೨. ಸಮೃದ್ಧಿ ; ಹೆಚ್ಚಳ. ೩. ಹಿಗ್ಗು ; ಸಂತೋಷ. ~ಆಗು = ೧. ಚೆನ್ನಾಗು ; ಸೊಗಸಾಗು. ೨. ಸಮೃದ್ಧಿಯಾಗು ; ಹುಲುಸಾಗು. ~ಏಱು(ರು) = ೧. ಸೊಗಸಾಗು ; ಚೆಲುವಾಗು. ೨. ಆನಂದಿಸು ; ಸಂತೋಷಪಡು. ~ಕ(ಗ)ಱೆ(ರೆ) = ಸೌಂದರ್ಯವನ್ನು ಸೂಸು ; ಸೊಬಗಿನಿಂದ ಕೂಡಿರು.

ಸೊಂಬ = ಸುಂಬ.

ಸೊಂಬು (ನಾ). ಆಲಸ್ಯ ; ಜಡತೆ.

ಸೊಕ (ನಾ). ಸುಖ ; ಆನಂದಾನುಭವ.

ಸೊಕ್ಕು=ಸೊರ್ಕು. ~ಅಡಕೆ=೧. ಅಮಲನ್ನು ಉಂಟುಮಾಡುವ ಅಡಕೆ. ೨. ಗಂಟಲಲ್ಲಿ ಹಿಡಿತವನ್ನುಂಟುಮಾಡುವ ಅಡಕೆ. ~ಇಸು = ೧. ಗರ್ವವನ್ನುಂಟುಮಾಡು ; ಸೊಕ್ಕು ಬರಿಸು. ೨. ಅಮಲು ಬರುವಂತೆ ಮಾಡು. ೩. ಎಚ್ಚರ ತಪ್ಪಿಸು. ~ಏಱು(ರು) = ೧. ಗರ್ವವು ಹೆಚ್ಚಾಗು ; ಬೀಗು. ೨. ಅಮಲು ಬರು. ೩. ಎಚ್ಚರ ತಪ್ಪು. ~ಜವ್ವನ = ಉಕ್ಕುತ್ತಿರುವ ಹರಯ ; ಏರುಜವ್ವನ. ~ಮುರಿ = ಗರ್ವಭಂಗ ಮಾಡು.

ಸೊಗ=ಸೊಕ. ~ಕ(ಗ)ಂಬನಿ=ಆನಂದಬಾಷ್ಪ.

ಸೊಗಡು ೧. = ಸೊವಡು. ೨. ಮಾಧುರ್ಯ ; ಇಂಪು. ೩. ಆಲಸ್ಯ ; ಔದಾಸೀನ್ಯ. ೪. ಸಂಪರ್ಕ ; ಸೋಂಕು. ೫. ಉತ್ಸಾಹ ; ಹುರುಪು. ೬. ಮದ ; ಅಮಲು. ~ರೋಗ = ಸೋಂಕುರೋಗ.

ಸೊಗದೆ (ನಾ). ಒಂದು ಔಷಧಿ ಮೂಲಿಕೆ.

ಸೊಗಯಿಸು (ಕ್ರಿ). ಒಪ್ಪು ; ಅಂದವಾಗಿ ಕಾಣು ; ಕಂಗೊಳಿಸು.

ಸೊಗಸು ೧. = ಸೊಗಯಿಸು. ೨. ಸಂತೋಷಗೊಳ್ಳು. ೩. ಸಂತೋಷಗೊಳಿಸು ; ಸಂತೋಷಪಡುವಂತೆ ಮಾಡು. ೪. ಒಪ್ಪು ; ಅಂಗೀಕರಿಸು. (ನಾ). ೫. = ಸೊಗಸಿಕೆ. ೬. ಸುಖ ; ಆನಂದ. ~ಇಕೆ = ಚೆಲುವು ; ಅಂದ. ~ಗಾರ = ೧. ಒನಪುಗಾರ. ೨. ರಸಿಕ. ~ಪ(ವ)ಡೆ = ೧. ಚೆಲುವಾಗು ; ಶೋಭಿಸು. ೨. ಸುಖವನ್ನು ಪಡೆ.

ಸೊಜ್ಜಿಗೆ = ಸೋಜಿ.

ಸೊಟ್ಟ (ನಾ). ೧. ಡೊಂಕು ; ವಕ್ರತೆ. ೨. ಕ್ಷುಲ್ಲಕವಾದುದು ; ತುಚ್ಛವಾದುದು. ೩. ಅಂಗವಿಕಲ ; ಹೆಳವ. (ಗು). ೪. ನೇರವಲ್ಲದ ; ಡೊಂಕಾದ. ೫. ಕ್ಷುಲ್ಲಕವಾದ ; ತುಚ್ಛವಾದ. ~ಕ(ಗ)ಣ್ಣು=೧. ಓರೆಗಣ್ಣು ; ಕೋಸುಗಣ್ಣು. ೨. ಅಮಂಗಳಕರವಾದ ಕಣ್ಣು. ~ಬಾಯಿ = ೧. ವಕ್ರವಾಗಿರುವ

ಬಾಯಿ. ೨. ಕೆಟ್ಟಮಾತನಾಡುವ ಬಾಯಿ. ~ಮುಖ = ೧. ವಿಕಾರವಾದ ಮುಖ. ೨. ಅಮಂಗಳಕರವಾದ ಮುಖ.

ಸೊಟ್ಟಗೆ (ಅ). ವಕ್ರವಾಗಿ ; ಓರೆಯಾಗಿ.

ಸೊಟ್ಟು (ನಾ). ಡೊಂಕಾಗಿರುವುದು.

ಸೊಡಬಲಿ (ನಾ). ಶ್ಮಶಾನ ; ಸುಡುಗಾಡು.

ಸೊಡರ್(ರು) (ನಾ). ದೀಪ ; ದೀವಿಗೆ.

ಸೊಡಲು = ಸೊಡರ್.

ಸೊಡವಲಿ = ಸೊಡಬಲಿ.

ಸೊಡ್ಡು (ಗು). ವಿಕಾರವಾದ ; ಕುರೂಪಿಯಾದ.

ಸೊಣಕ = ಶುನಕ.

ಸೊಣಗ = ಶುನಕ.

ಸೊಣೆ (ಕ್ರಿ). ಬೆರಳುಗಳಿಂದ ಹೊಡೆ ; ಮೊಟ್ಟು.

ಸೊತ್ತ (ನಾ). ಅಂಗಹೀನ ; ಹೆಳವ ; ಚೊತ್ತ.

ಸೊತ್ತಿ = ಚೊತ್ತಿ.

ಸೊತ್ತು (ನಾ). ೧. ಸಂಪತ್ತು ; ಐಶ್ವರ್ಯ ; ಸ್ವತ್ತು. ೨. ಸೊಟ್ಟಗಾಗಿರುವುದು ; ವಿಕೃತವಾದುದು.

ಸೊದೆ = ಸುಧೆ.

ಸೊನ (ನಾ). ಸ್ವನ ; ಶಬ್ದ.

ಸೊನಯಿ = ಶಹನಾಯಿ.

ಸೊನೆ (ನಾ). ೧. ಹೂವು ಅಥವಾ ಕಾಯಿಗಳ ತೊಟ್ಟಿನಿಂದ ಒಸರುವ ದ್ರವ ; ಹಾಲು. ೨. ಗಾಯದಿಂದ ಒಸರುವ ನೀರು. ೪. ಆನೆಯ ಮದಜಲ. ~ಹುಣ್ಣು = ಸೊನೆ ತಗುಲಿ ಉಂಟಾಗುವ ಹುಣ್ಣು.

ಸೊನೆಗಾಜ(ರ) (ನಾ). ಕಟುಕ ; ಕೊಲೆಗಡಿಕ.

ಸೊನ್ನ (ನಾ). ಸ್ವರ್ಣ; ಚಿನ್ನ. ~ಕೆ(ಗೆ)ೇದಗೆ = ಹೊಂಬಣ್ಣದ ತಾಳೆಹೂವು. ~ಗಾರ = ಸೊನ್ನಾರಿ.

ಸೊನ್ನಾರ (ನಾ). ೧. ಚಿನ್ನದ ಮುಲಾಮು, ಗಿಲೀಟು. ೨. = ಸೊನ್ನಾರಿ.

ಸೊನ್ನಾರಿ (ನಾ). ಅಕ್ಕಸಾಲಿ.

ಸೊನ್ನೆ (ನಾ). ೧. ಸುವರ್ಣ; ಚಿನ್ನ. ೨. ಬಿಂದು; ಅನುಸ್ವಾರ. ೩. ಏನೂ ಇಲ್ಲದುದು ; ಬರಿದು; ಶೂನ್ಯ. ೪. ಸನ್ನೆಗೋಲು; ಮೀಟುಗೋಲು. ~ಬೀಳು = ಇಲ್ಲವಾಗು ; ಅಭಾವವಾಗು. ~ಬೆ(ವೆ)ಟ್ಟು = ಚಿನ್ನದ ಬೆಟ್ಟ ; ಮೇರು.

ಸೊಪ್ನ = ಸ್ವಪ್ನ.

ಸೊಪ್ಪು (ಕ್ರಿ). ೧. ತಡೆ ; ನಿವಾರಿಸು ; ನಿರೋಧಿಸು. (ನಾ). ೨. ಎಲೆ ; ತೊಪ್ಪಲು. ೩. ಗರ್ವ ; ಸೊಕ್ಕು. ~ಅಡಗು = ಸೊಕ್ಕು ಇಲ್ಲದಾಗು; ಅಹಂಕಾರವಿಲ್ಲದಾಗು. ~ಆಗು = ೧. ಮೆತ್ತಗಾಗು ; ಬಾಡು. ೨. ಕುಗ್ಗು ; ಕಡಮೆಯಾಗು. ~ಇಸು = ಶಕ್ತಿಗುಂದಿಸು; ಮೆತ್ತಗಾಗುವಂತೆ ಮಾಡು. ~ಕಡಲೆ = ಕಡಲೆಯ ಗಿಡ ಮತ್ತು ಅದರ ಕಾಯಿ. ~ಕು(ಗು)ಟ್ಟು = ೧. ಬೇಟೆಗಾಗಿ ಪ್ರಾಣಿಗಳನ್ನು ಪೊದೆಗಳಿಂದ ಹೊರಡಿಸು ; ಸೋವು. ೨. ನಿತ್ರಾಣಗೊಳಿಸು. ~ಹಾಕು =ಗಣಿಸು ; ಲಕ್ಷಿಸು.

ಸೊಪ್ಪುಳ್(ಳು) = ಸಪ್ಪುಳ್.

ಸೊಪ್ಪೆ (ನಾ). ತೆನೆಯನ್ನು ಬೇರ್ಪಡಿಸಿದ ಮೇಲೆ ಉಳಿಯುವ ಗಿಡದ ಭಾಗ.

ಸೊಬಗ (ನಾ). ಚೆಲುವ ; ಸುಂದರ.

ಸೊಬಗಿ (ನಾ). ಚೆಲುವೆ ; ಸುಂದರಿ.

ಸೊಬಗು (ನಾ). ೧. ಲಾವಣ್ಯ ; ಅಂದ. ೨. ಲಾಲಿತ್ಯ ; ಮಾಧುರ್ಯ.

ಸೊಬಗೆ = ಸೊಬಗಿ.

ಸೊಮ್ಮು (ನಾ). ೧. ಸ್ವತ್ತು ; ಐಶ್ವರ್ಯ. ೨. ಸಂಬಂಧ ; ನಂಟು. ೩. ಸೊಬಗು ; ಚೆಲುವು. ೪. ರೀತಿ ; ಬಗೆ.

ಸೊಯಂಬರ = ಸ್ವಯಂವರ.

ಸೊಯಂವರ = ಸ್ವಯಂವರ.

ಸೊರಗು (ಕ್ರಿ). ಬಾಡು ; ಬತ್ತು ; ಕುಂದು.

ಸೊರಹು (ಕ್ರಿ). ೧. ಮಾತನಾಡು. ೨. ಗಳಹು; ಹರಟು. ೩. ಜಂಭ ಕೊಚ್ಚಿಕೊಳ್ಳು. ೪. = ಸೊರಗು. (ನಾ). ೫. ಗಳಹುವಿಕೆ; ಹರಟುವಿಕೆ. ೬. = ಸೊರು.

ಸೊರು (ನಾ). ಕೆಚ್ಚಲಿನಲ್ಲಿ ಹಾಲು ತುಂಬಿಕೊಳ್ಳುವುದು. ~ಬಿಡು = ಕೆಚ್ಚಲಿನಿಂದ ಹಾಲು ಬಿಡು.

ಸೊರೆ ೧. = ಸೊಱೆ. (ನಾ). ೨. ಒಂದು ಜಾತಿಯ ಬಳ್ಳಿ ಮತ್ತು ಅದರ ಕಾಯಿ; ಸೋರೆ. ೩. ವೀಣೆ, ತಂಬೂರಿ ಮೊದಲಾದ ವಾದ್ಯಗಳ ಬುರುಡೆ.

ಸೊಱೆ(ರೆ) = ಸುಱೆ.

ಸೊರ್ಕು (ಕ್ರಿ). ೧. ಬೀಗು; ಗರ್ವಿಸು. ೨. ಅಮಲೇರು; ಮತ್ತುಬರು. (ನಾ). ೩. ಗರ್ವ; ಹೆಮ್ಮೆ. ೪. ಅಮಲು; ಮತ್ತು. ೫. ಮತ್ತುಬರಿಸುವ ಔಷಧ. ೬. ಮದೋದಕ; ಮದಜಲ. ~(ಂ)ಕ(ಗ)ಣ್=ಮಾದಕವಾದ ಕಣ್ಣು. ~(ಂ)ಜವ್ವನ = ಸೊಕ್ಕುಜವ್ವನ. ~ನುಡಿ = ಗರ್ವದ ಮಾತು; ಅಹಂಕಾರದ ಮಾತು. ~ಮರ್ದು = ಅಮಲು ಬರಿಸಲು ಹಾಕುವ ಔಷಧ.

ಸೊಲ್ (ಕ್ರಿ). ೧. ಮಾತನಾಡು; ಹೇಳು. (ನಾ). ೨. ಮಾತು; ನುಡಿ. ~ಪೆ(ವೆ)ಣ್ = ವಾಗ್ದೇವಿ; ಸರಸ್ವತಿ.

ಸೊಲಗೆ (ನಾ). ಒಂದು ಅಳತೆಯ ಪ್ರಮಾಣ.

ಸೊಲಿಗೆ = ಸೊಲಗೆ.

ಸೊಲ್ಲಗೆ = ಸೊಲಗೆ.

ಸೊಲ್ಲಿಗೆ = ಸೊಲಗೆ.

ಸೊಲ್ಲು = ಸೊಲ್. ~ಇಸು = ೧. ಹೇಳು; ಮಾತನಾಡು. ೨. ಮಾತನಾಡುವಂತೆ ಮಾಡು; ಹೇಳಿಸು.

ಸೊವಡು (ನಾ). ೧. ಕಂಪು; ವಾಸನೆ. ೨. ಕಟುವಾಸನೆ; ತೀಕ್ಷ್ಣವಾದ ವಾಸನೆ. ೩. ಸುವಾಸನೆ; ಪರಿಮಳ.

ಸೊಸೆ (ನಾ). ಮಗನ ಹೆಂಡತಿ.

ಸೊಳಸ = ಸೊಳಸಿಗೆ.

ಸೊಳಸಿಗೆ (ನಾ). ಒಂದು ಅಳತೆಯ ಪ್ರಮಾಣ.

ಸೊಳೆ (ನಾ). ೧. ಮೂಗಿನ ಹೊರಳೆ; ಸೊಳ್ಳೆ. ೨. ಕಿತ್ತಲೆ, ಹಲಸು ಮೊದಲಾದ ಹಣ್ಣುಗಳ ತೊಳೆ.

ಸೊಳ್ಳೆ (ನಾ). ೧. ಮೂಗಿನ ಹೊಳ್ಳೆ; ಸೊಳೆ. ೨. ಒಂದು ಜಾತಿಯ ಕೀಟ; ಮಶಕ. ~ಪರದೆ = ಸೊಳ್ಳೆಗಳನ್ನು ನಿವಾರಿಸಲು ಕಟ್ಟುವ ಪರದೆ; ಮಚ್ಛರದಾನಿ.

ಸೋ (ಕ್ರಿ). ೧. ಅಟ್ಟು; ಓಡಿಸು. ೨. (ಬೇಟೆಗಾಗಿ) ಶೋಧಿಸು; ಹುಡುಕು. ೩. ಬೇಟೆಗಾಗಿ ಕಾಡಿನ ಪ್ರಾಣಿಗಳನ್ನು ಎಬ್ಬಿಸಿ ಹೊರಡಿಸು.

ಸೋಂಕಿಲ್ = ಸೋಗಿಲ್.

ಸೋ(ಂ)ಕು (ಕ್ರಿ). ೧. ತಾಗು; ಮುಟ್ಟು; ಸ್ಪರ್ಶಿಸು. (ನಾ). ೨. ಸ್ಪರ್ಶ; ಮುಟ್ಟುವಿಕೆ. ~ರೋಗ = ಸಂಸರ್ಗದಿಂದುಂಟಾಗುವ ರೋಗ; ಅಂಟುರೋಗ.

ಸೋಂಬ = ಸುಂಬ.

ಸೋಂಬು ೧. = ಸೊಂಬು. ೨. ಜೀರಿಗೆ ಜಾತಿಗೆ ಸೇರಿದ ಒಂದು ಬಗೆಯ ಕಾಳು; ಸೋಪು.

ಸೋಂಬೆ (ನಾ). ಜಡಸ್ವಭಾವದ ಹೆಂಗಸು.

ಸೋಂಬೇರಿ = ಸುಂಬ.

ಸೋಗಲ್(ಲು) = ಸೋಗಿಲ್. ~ಅಕ್ಕಿ = ಉಡಿಯಕ್ಕಿ; ಮಡಿಲಕ್ಕಿ.

ಸೋಗಲಾಡಿ (ನಾ). ಒಯ್ಯಾರಿ; ಒನಪುಗಾತಿ.

ಸೋಗಿಲ್(ಲು) (ನಾ). ಉಡಿ; ಮಡಿಲು.

ಸೋಗು (ನಾ). ೧. ವೇಷ; ನಟನೆ. ೨. ಒಯ್ಯಾರ; ಒನಪು. ೩. ನೆಪ; ನೆವ. ೪. = ಸೋಗಿಲ್. ~ಗಾರ = ವೇಷ ಹಾಕುವವನು. ~ಹಾಕು = ನಟನೆ ಮಾಡು; ನಟಿಸು.

ಸೋಗೆ (ನಾ). ೧. ಕಣ್ಣಿನ ತುದಿಯಲ್ಲಿ ತಿದ್ದಿದ ಕಾಡಿಗೆಯ ಗೆರೆ. ೨. ತೆಂಗು, ಅಡಕೆ

ಮೊದಲಾದುವುಗಳ ಗರಿ. ೩. ಗಂಡುನವಿಲು. ೪. ನವಿಲಿನ ಪುಚ್ಛ, –ಬಾಲ. ೫. ನವಿಲಿನ ಗರಿ, –ಪುಕ್ಕ. ೬. = ಸೋಗಿಲ್. ~ಕ(ಗ)ಣ್(ಣ್ಣ) = ಕಾಡಿಗೆಯ ಗೆರೆಯಿಂದ ಕೂಡಿದ ಕಣ್ಣು. ~ನವಿಲ್(ಲು) = ಗಂಡುನವಿಲು. ~ಪೆ(ಪೆ)ಣ್ = ಹೆಣ್ಣು ನವಿಲು.

ಸೋಜಿ (ನಾ). ರವೆ; ಸಜ್ಜಿಗೆ.

ಸೋಜಿಗ (ನಾ). ೧. ವಿಸ್ಮಯ; ಆಶ್ಚರ್ಯ. ೨. ಆಶ್ಚರ್ಯಕರವಾದ ಘಟನೆ.

ಸೋಟಾ (ನಾ). ೧. ಬಡಿಗೆ; ಕೋಲು. ೨. ಒಂದು ವಿಧವಾದ ತಂಬೂರಿ.

ಸೋಟೆ (ನಾ). ೧. ಬಾಯಿಯ ತುದಿ; ಜಟ ಬಾಯಿ. ೨. ಕೋಲು. ~ತಿವಿ=೧. ಮೂತಿಯನ್ನು ತಿವಿ. ೨. ಅವಮಾನ ಮಾಡು.

ಸೋಡ (ನಾ). ೧. ಅಡುಗೆಗೆ ಉಪಯೋಗಿಸುವ ಒಂದು ಬಗೆಯ ಕ್ಷಾರ. ೨. ಒಂದು ಬಗೆಯ ಪಾನೀಯ.

ಸೋಡಚೀಟಿ (ನಾ). ಗಂಡಹೆಂಡಿರ ವೈವಾಹಿಕ ಬಂಧವನ್ನು ಬಿಡಿಸುವ ಪತ್ರ; ಘಟಸ್ಫೋಟ.

ಸೋಡಿ (ನಾ). ೧. ಬರಬೇಕಾದ ಮೊಬಲಗಿನಲ್ಲಿ ತೋರಿಸುವ ರಿಯಾಯಿತಿ. ೨. ವಟ್ಟಾ; ದಳ್ಳಾಳಿ; ಕಮಿಷನ್ನು. ೩. ಒಂದು ಬಗೆಯ ಆಟ.

ಸೋಣೆ (ನಾ). ೧. ಶ್ರಾವಣಮಾಸ. ೨. ಶ್ರಾವಣದಲ್ಲಿ ಗದ್ದೆಯ ಅಂಚಿನಲ್ಲಿ ಬೆಳೆಯುವ ಒಂದು ಜಾತಿಯ ಹೂವಿನ ಗಿಡ.

ಸೋದನ (ನಾ). ಶೋಧನೆ; ಹುಡುಕುವಿಕೆ. ~ದೀವಿಗೆ=ಹುಡುಕುವುದಕ್ಕಾಗಿ ಬಳಸುವ ದೀಪ.

ಸೋದರ = ಸಹೋದರ. ~ಇಕೆ = ಒಡಹುಟ್ಟಿದ ಸಂಬಂಧ; ಭ್ರಾತೃಭಾವ. ~ಇಗ = ಸಹೋದರ.

ಸೋದರಿ = ಸಹೋದರಿ.

ಸೋದಾಹರಣ (ಗು). ಉದಾಹರಣೆಯಿಂದ ಕೂಡಿದ; ಉದಾಹರಣೆ ಸಹಿತವಾದ.

ಸೋದಿಗೆ (ನಾ). ರವೆಯಿಂದ ಮಾಡಿದ ಒಂದು ಬಗೆಯ ಭಕ್ಷ್ಯ.

ಸೋದಿಸು = ಶೋಧಿಸು.

ಸೋನ ೧. = ಶ್ವಾನ. ೨. ಚಿನ್ನ; ಹೊನ್ನು.

ಸೋನಾಮಣಿ (ನಾ). ಒಂದು ಜಾತಿಯ ಔಷಧಿ ಸಸ್ಯ.

ಸೋನಾಮುಖಿ (ನಾ). ವಿರೇಚನಕ್ಕಾಗಿ ಕೊಡುವ ಒಂದು ಬಗೆಯ ಸೊಪ್ಪು.

ಸೋನೆ (ನಾ). ೧. ಜಿನುಗು; ಎಡೆಬಿಡದೆ ಸುರಿಯುವ ಮಳೆ. ೨. ತುಂತುರು; ಹನಿ. ೩. ಹಣ್ಣು, ಹೂವುಗಳಿಂದ ಒಸರುವ ರಸ; ಸೊನೆ.

ಸೋಪಾನ (ನಾ). ಮೆಟ್ಟಿಲು; ಪಾವಟಿಗೆ.

ಸೋಪು (ನಾ). ೧. ಒಂದು ಜಾತಿಯ ಗಿಡ ಮತ್ತು ಅದರ ಬೀಜ. ೨. ಒಂದು ಜಾತಿಯ ಹಕ್ಕಿ. ೩. ಸಾಬೂನು; ಸಬಕಾರ.

ಸೋಬತಿ (ನಾ). ೧. ವಶ; ಅಧೀನ. ೨. ಸಹವಾಸ; ಒಡನಾಟ. ೩. ಒಡನಾಡಿ; ಸಂಗಾತಿ.

ಸೋಬಾನ (ನಾ). ಮಂಗಳಪ್ರಸಂಗಗಳಲ್ಲಿ ಹಾಡುವ ಹಾಡು; ಶೋಭಾನೆ.

ಸೋಬಾನೆ = ಸೋಬಾನ.

ಸೋಮ (ನಾ). ೧. ಅಮೃತ; ಸುಧೆ. ೨. ಶಿವ. ೩. ಚಂದ್ರ. ೪. ಕುಬೇರ. ೫. ಯಮ. ೬. ಗಾಳಿ. ೭. ನೀರು. ೮. ಕರ್ಪೂರ. ೯. ಒಂದು ಜಾತಿಯ ಬಳ್ಳಿ ಮತ್ತು ಅದರಿಂದ ತಯಾರಿಸುವ ಮದ್ಯ. ~ಪಾನ = ಸೋಮರಸವನ್ನು ಕುಡಿಯುವುದು. ~ಯಾಗ = ಒಂದು ಬಗೆಯ ಯಜ್ಞ. ~ವಾರ = ವಾರದ ಏಳು ದಿನಗಳಲ್ಲಿ ಒಂದು. ~ವೀಥಿ = ಪಟ್ಟಣದ ಮಧ್ಯಭಾಗದಲ್ಲಿ ಹಾಯ್ದು ಹೋಗುವ

ದಕ್ಷಿಣೋತ್ತರವಾದ ಬೀದಿ. ~ಸಾಲೆ = ಬಿಸಿಲುಮುಚ್ಚು; ಚಂದ್ರಶಾಲೆ.
ಸೋಮಧರ = ಸೋಮಧಾರಿ.
ಸೋಮಧಾರಿ(ನಾ). ಚಂದ್ರನನ್ನು ಧರಿಸಿದವನು; ಶಿವ.
ಸೋಮಯಾಜಿ (ನಾ). ಸೋಮಯಾಗವನ್ನು ಮಾಡಿದವನು.
ಸೋಮಾರಿ (ನಾ). ಮೈಗಳ್ಳ; ಅಲಸಿ. ~ಕಟ್ಟೆ = ಸಮಯ ಕಳೆಯುವುದಕ್ಕಾಗಿ ಹರಟುತ್ತಾ ಕುಳಿತುಕೊಳ್ಳುವ ಕಟ್ಟೆ. ~ತನ = ಆಲಸ್ಯ; ಜಡತೆ.
ಸೋಯ್(ಯು) = ಸೋ.
ಸೋರ್(ರು) (ಕ್ರಿ). ೧. ತೊಟ್ಟಿಕ್ಕು; ಒಸರು; ಜಿನುಗು. ೨. ಹರಿ; ಪ್ರವಹಿಸು. ೩. ಜೋತುಬೀಳು; ಜೋಲು. ೪. ಕಳಚು; ಸಡಿಲಗೊಳ್ಳು. ~ಇಸು = ಸೋರುವಂತೆ ಮಾಡು. ~ಕ(ಗ)ಣ್ = ೧. ನೀರು ಸುರಿಯುವ ಒಂದು ಬಗೆಯ ನೇತ್ರರೋಗ. ೨. ಸದಾ ಅಳುತ್ತಿರುವ ಕಣ್ಣು. ~ಮುಡಿ = ಸಡಿಲವಾಗಿ ಕಟ್ಟಿದ ತುರುಬು.
ಸೋರೆ (ನಾ). ೧. ಒಂದು ಜಾತಿಯ ಬಳ್ಳಿ ಮತ್ತು ಅದರ ಕಾಯಿ. ೨. ವೀಣೆ, ತಂಬೂರಿ ಮುಂತಾದುವುಗಳ ಬುರುಡೆ. ೩. ಒಂದು ಜಾತಿಯ ಹಕ್ಕಿ; ಬೆಳುವನಹಕ್ಕಿ. ೪. ಮಣ್ಣಿನ ಪಾತ್ರೆ; ಗಡಿಗೆ.
ಸೋರ್ಚು (ಕ್ರಿ). ಸೋರಿಹೋಗುವಂತೆ ಮಾಡು.
ಸೋಲ್(ಲು) (ಕ್ರಿ). ೧. ಅಪಜಯವನ್ನು ಹೊಂದು; ಪರಾಭವಗೊಳ್ಳು. ೨. ಮೋಹಕ್ಕೊಳಗಾಗು; ಆಕರ್ಷಿಸಲ್ಪಡು. ೩. ಬಲಹೀನವಾಗು; ನಿತ್ರಾಣವಾಗು. (ನಾ). ೪. ಅಪಜಯ; ಪರಾಭವ. ~ಇಸು = ೧. ಪರಾಜಯಗೊಳಿಸು. ೨. ಮೋಹಗೊಳಿಸು.
ಸೋಲ (ನಾ). ೧. ಅಪಜಯ. ೨. ಸೋಲುಂಟಾದಾಗ ಕೊಡಬೇಕಾದ ಪಣ. ೩. ನಷ್ಟ. ೪. ಆಸಕ್ತಿ; ಮೋಹ. ೫. ಆಯಾಸ.
ಸೋಲೆ (ನಾ). ೧. ಸಿಪ್ಪೆ; ಹೊರಪದರ. ೨. ಹಾವಿನ ಪೊರೆ. ೩. ಹಲಸಿನ ಹಣ್ಣಿನಲ್ಲಿ ತೊಳೆಗಳ ಸುತ್ತ ಇರುವ ನಾರು; ಕಿರುತೊಳೆ. ೪. ಮರಗಳ ಗುಂಪು. ೫. ಒಂದು ಜಾತಿಯ ಮರ; ಅಮಸೋಲು.
ಸೋವತ (ನಾ). ಬಲಿ; ಚರು.
ಸೋವಳಿ (ನಾ). ಅಟ್ಟುವಿಕೆ.
ಸೋವಾಸಿಣಿ (ನಾ). ಸುವಾಸಿನಿ; ಮುತ್ತೈದೆ.
ಸೋವಿ (ನಾ). ಅಗ್ಗ; ಕಡಮೆ ಬೆಲೆ.
ಸೋವು ೧. = ಸೋ. (ನಾ). ೨. ಬೇಟೆಯಲ್ಲಿ ಪ್ರಾಣಿಗಳನ್ನು ಅಟ್ಟುವಿಕೆ, ಓಡಿಸುವಿಕೆ. ೩. ಸೂಚನೆ; ಸುಳಿವು.
ಸೋವುಗ (ನಾ). ಬೇಟೆಗಾಗಿ ಮೃಗಗಳನ್ನು ಎಬ್ಬಿಸಿ ಹೊರಡಿಸುವವನು.
ಸೋಷ್ಣ (ಗು). ಉಷ್ಣತೆಯಿಂದ ಕೂಡಿದ; ಬಿಸಿಯಾದ. ~ಜಲ(ಳ) = ಬಿಸಿನೀರು.
ಸೋಸು ೧.=ಶೋಧಿಸು. ೨. ಸಹಿಸು; ಸೈರಿಸು.
ಸೋಹಂ (ನಾ). ತಾನೇ ಪರಮಾತ್ಮ ಎಂಬ ಭಾವನೆ.
ಸೋಹು = ಸೋವು. ~ಮೃಗ = ಬೇಟೆಯಲ್ಲಿ ಪ್ರಾಣಿಗಳನ್ನು ಹಿಡಿಯಲು ಬಳಸುವ ಪ್ರಾಣಿ; ಸೆಳೆ.
ಸೌ(ಂ)ತೆ = ಸವುಂತೆ.
ಸೌಂದರ = ಸೌಂದರ್ಯ.
ಸೌಂದರಿ (ನಾ). ಚೆಲುವೆ; ಸುಂದರಿ.
ಸೌಂದರಿಯ = ಸೌಂದರ್ಯ.
ಸೌಂದರ್ಯ (ನಾ). ಚೆಲುವು; ಸೊಬಗು.
ಸೌಕರ್ಯ (ನಾ). ಸೌಲಭ್ಯ; ಅನುಕೂಲತೆ.
ಸೌಕುಮಾರ್ಯ (ನಾ). ೧. ಸುಕುಮಾರತೆ; ಮೃದುತ್ವ; ಕೋಮಲತೆ. ೨. ಹತ್ತು ಬಗೆಯ ಕಾವ್ಯಗುಣಗಳಲ್ಲಿ ಒಂದು.

ಸೌಖ್ಯ (ನಾ). ೧. ನೆಮ್ಮದಿ. ೨. ಸಂತೋಷ. ೩. = ಸೌಕರ್ಯ.

ಸೌಗಂಧ = ಸುಗಂಧ.

ಸೌಗಂಧಿ (ನಾ). ೧. ಚಂದನದ ಮರ. (ಗು). ೨. ಪರಿಮಳವುಳ್ಳ.

ಸೌಗಂಧಿಕ (ನಾ). ೧. ಪರಿಮಳವುಳ್ಳುದು; ಸುವಾಸನೆಯಿಂದ ಕೂಡಿರುವುದು. ೨. ಒಂದು ಬಗೆಯ ಖನಿಜ; ಗಂಧಕ. ೩. ಒಂದು ಜಾತಿಯ ಹೂವು; ಚೆನ್ನೈದಿಲೆ.

ಸೌಜನ್ಯ (ನಾ). ೧. ಒಳ್ಳೆಯತನ; ವಿನಯ. ೨. ಉದಾರತ್ವ; ಔದಾರ್ಯ.

ಸೌಟು = ಸವುಟು.

ಸೌದಾಮಿನಿ (ನಾ). ಮಿಂಚು; ವಿದ್ಯುತ್ತು.

ಸೌದೆ = ಸವುದೆ.

ಸೌಧ (ನಾ). ೧. ಸುಣ್ಣ ಬಳಿದ ಮನೆ; ಧವಳಾಗಾರ. ೨. ಮಹಲು; ಭವನ; ಅರಮನೆ.

ಸೌಧರ್ಮ (ನಾ). ಸ್ವರ್ಗ. ~ಇಂದ್ರ=ಸ್ವರ್ಗದ ಅಧಿಪತಿ; ದೇವೇಂದ್ರ.

ಸೌಧರ್ಮಿಣಿ = ಸುಧರ್ಮ.

ಸೌನಿಕ = ಸೂನಿ.

ಸೌಪರ್ಣ (ನಾ). ಗರುಡ; ಸುಪರ್ಣ. ~ವಾಹ = ವಿಷ್ಣು.

ಸೌಪ್ತಿಕ (ನಾ). ೧. ರಾತ್ರಿಯಲ್ಲಿ ಮಾಡುವ ಆಕ್ರಮಣ, –ಮುತ್ತಿಗೆ. (ಗು). ೨. ನಿದ್ರೆಗೆ ಸಂಬಂಧಿಸಿದ.

ಸೌಭಾಗ್ಯ (ನಾ). ೧. ಮಂಗಳ; ಶುಭ. ೨. ಸುದೈವ; ಒಳ್ಳೆಯ ಅದೃಷ್ಟ. ೩. ಮುತ್ತೈದೆತನ.

ಸೌಭಾಗ್ಯವತಿ (ನಾ). ೧. ಅದೃಷ್ಟವಂತಳಾದ ಹೆಂಗಸು. ೨. ಮುತ್ತೈದೆ; ಸುಮಂಗಲಿ. ೩. ಹೆಂಡತಿ.

ಸೌಮಂಗಲ್ಯ(ಳ್ಯ) (ನಾ). ೧. ಮಂಗಳಕರವಾದುದು. ೨. ಮುತ್ತೈದೆತನ.

ಸೌಮ್ಯ (ನಾ). ೧. ನವಗ್ರಹಗಳಲ್ಲಿ ಒಂದು; ಬುಧ. ೨. ಚೆಲುವು; ಅಂದ. ೩. ಸೈರಣೆಯುಳ್ಳವನು; ನಿಧಾನಿ. ೪. ಅರುವತ್ತು ಸಂವತ್ಸರಗಳಲ್ಲಿ ಒಂದು. (ಗು). ೫. ಚಂದ್ರನಿಗೆ ಸಂಬಂಧಿಸಿದ. ೬. ಚೆಲುವಾದ; ಸುಂದರವಾದ. ೭. ತಾಳ್ಮೆಯಿಂದ ಕೂಡಿದ; ಶಾಂತವಾದ. ೮. ತೀಕ್ಷ್ಣವಲ್ಲದ. ೯. ಹಿತವಾದ.

ಸೌರ (ನಾ). ೧. ಸೂರ್ಯನ ಮಗ. ೨. ಶನಿ. ೩. ಯಮ. ೪. ಸೂರ್ಯನ ಗತಿಯನ್ನು ಅನುಸರಿಸಿ ದಿನ ಮತ್ತು ಮಾಸಗಳನ್ನು ಲೆಕ್ಕ ಮಾಡುವ ಕ್ರಮ. ೫. ಸೂರ್ಯೋಪಾಸಕ. (ಗು). ೬. ಸೂರ್ಯನಿಗೆ ಸಂಬಂಧಿಸಿದ.

ಸೌರಂಭ = ಸಂಭ್ರಮ.

ಸೌರಣೆ = ಸಂವರಣೆ.

ಸೌರಭ (ನಾ). ಪರಿಮಳ; ಸುವಾಸನೆ.

ಸೌರಭ್ಯ = ಸೌರಭ.

ಸೌಲತ್ತು = ಸವಲತ್ತು.

ಸೌಲಭ್ಯ = ಸೌಕರ್ಯ.

ಸೌವರ್ಣ (ಗು). ಚಿನ್ನದಿಂದ ಮಾಡಿದ; ಬಂಗಾರದ.

ಸೌವಾಗ್ಯ = ಸೌಭಾಗ್ಯ.

ಸೌವಿದ (ನಾ). ಅಂತಃಪುರದ ಕಾವಲುಗಾರ; ಕಂಚುಕಿ.

ಸೌವಿದಲ್ಲ = ಸೌವಿದ.

ಸೌಶೀಲ್ಯ (ನಾ). ಒಳ್ಳೆಯ ನಡತೆ; ಸದಾಚಾರ.

ಸೌಷ್ಠವ (ನಾ). ೧. ಸೊಗಸು; ಅಂದ. ೨. ಆಧಿಕ್ಯ; ಹೆಚ್ಚಳ. ೩. ಸಾಮರ್ಥ್ಯ; ದಕ್ಷತೆ.

ಸೌಸವ (ನಾ). ಕಂಪು; ಸುವಾಸನೆ.

ಸೌಹಾರ್ದ (ನಾ). ಸಹೃದಯತೆ; ಸೌಜನ್ಯ.

ಸೌಹೃದ = ಸೌಹಾರ್ದ.

ಸೌಳು = ಚೌಳು. ~ನೀರು = ಉಪ್ಪುನೀರು. ~ಮ(ವ)ಣ್ಣು = ಉಪ್ಪಿನ ಅಂಶವಿರುವ ಮಣ್ಣು.

ಸ್ಕಂದ (ನಾ). ೧. ಹಾರುವಿಕೆ. ೨. ಗುಹ; ಕಾರ್ತಿಕೇಯ. ೩. ಶರೀರ. ೪. ಪಂಡಿತ.

ಸ್ಕಂಧ (ನಾ). ೧. ಹೆಗಲು; ಭುಜಾಗ್ರ. ೨. ಮರದಲ್ಲಿ ಕವಲೊಡೆಯುವ ಭಾಗ. ೩. ಅಧ್ಯಾಯ; ಪರಿಚ್ಛೇದ. ೪. ಗುಂಪು; ಸಮೂಹ. ೫. ಸೈನ್ಯ; ದಳ. ೬. ಒಂದು ಪದ್ಯ ಪ್ರಕಾರ; ಕಂದ. ~ಆವಾರ =೧. ದಂಡು; ಸೈನ್ಯ. ೨. ಬೀಡು; ಪಾಳೆಯ. ೩. ರಾಜಧಾನಿ.

ಸ್ಖಲನ (ನಾ). ೧. ಬೀಳುವುದು; ಜಾರುವುದು. ೨. ತಪ್ಪು; ಪ್ರಮಾದ.

ಸ್ಖಲನೆ = ಸ್ಖಲನ.

ಸ್ಖಲಿ(ಳಿ)ತ (ನಾ). ೧. ತಪ್ಪು; ಸ್ಖಾಲಿತ್ಯ. (ಗು). ೨. ಕೆಳಗೆ ಬಿದ್ದ; ಜಾರಿಬಿದ್ದ. ೩. ಅಲುಗುವ; ನಡುಗುವ. ೪. ಎಡವುವ; ತಡವರಿಸುವ.

ಸ್ಖಾಲಿತ್ಯ (ನಾ). ೧. ಹಲ್ಲಟವಾಗುವುದು; ಬೀಳುವುದು. ೨. ದೋಷ; ತಪ್ಪು.

ಸ್ತಂಬ (ನಾ). ೧. ರಾಶಿ; ಸುಡೆ. ೨. ಪೊದೆ; ಪೊದರು. ೩. = ಸ್ತಂಭ.

ಸ್ತಂಬಕರಿ (ನಾ). ಬತ್ತ ಮೊದಲಾದ ಧಾನ್ಯ.

ಸ್ತಂಬೇರಮ (ನಾ). ಆನೆ; ಕರಿ.

ಸ್ತಂಭ (ನಾ). ಕಂಬ.

ಸ್ತಂಭನ (ನಾ). ೧. ತಡೆಯುವಿಕೆ; ನಿಲ್ಲಿಸುವಿಕೆ. ೨. ತಡೆ; ನಿಲುಗಡೆ.

ಸ್ತಂಭಿಸು (ಕ್ರಿ). ೧. ಬಲವಾಗಿ ನೆಡು; ನೆಲೆಗೊಳಿಸು. ೨. ತಡೆ; ನಿಲ್ಲಿಸು. ೩. ಜಡವಾಗು; ನಿಶ್ಚಲವಾಗು.

ಸ್ತನ (ನಾ). ಮೊಲೆ; ಕುಚ.

ಸ್ತನಿತ (ನಾ). ೧. ಮೋಡದ ಗರ್ಜನೆ; ಗುಡುಗು. (ಗು). ೨. ಗುಡುಗುವ; ಗರ್ಜಿಸುವ.

ಸ್ತನ್ಯ (ನಾ). ಮೊಲೆಹಾಲು.

ಸ್ತಬಕ (ನಾ). ಗೊಂಚಲು; ಕುಚ್ಚು.

ಸ್ತಬ್ಧ (ಗು). ಅಲುಗಾಡದ; ನಿಶ್ಚಲವಾದ.

ಸ್ತರ (ನಾ). ೧. ಪದರ; ಮಡಿಕೆ. ೨. ಹಂತ; ಘಟ್ಟ.

ಸ್ತವ (ನಾ). ೧. ಸ್ತುತಿಸುವುದು; ಕೊಂಡಾಡುವುದು. ೨. = ಸ್ತುತಿ.

ಸ್ತವನ = ಸ್ತವ.

ಸ್ತಿಮಿತ (ಗು). ೧. ನಿಶ್ಚಲವಾದ; ಸ್ತಬ್ಧವಾದ. ೨. ಒಂದೇ ರೀತಿಯಲ್ಲಿರುವ; ಅಲುಗಾಡದಿರುವ.

ಸ್ತುತಿ (ನಾ). ಹೊಗಳಿಕೆ; ಕೊಂಡಾಟ; ಪ್ರಶಂಸೆ. ~ಇಸು = ಸ್ತುತಿಯಿಸು. ~ಪಾಠಕ = ಹೊಗಳುವವನು; ಪ್ರಶಂಸೆ ಮಾಡುವವನು.

ಸ್ತುತಿಯಿಸು (ಕ್ರಿ). ೧. ಹೊಗಳು. ೨. ಸ್ತೋತ್ರ ಮಾಡು; ಭಜಿಸು.

ಸ್ತುತ್ಯ (ಗು). ಹೊಗಳಿಕೆಗೆ ತಕ್ಕುದಾದ; ಪ್ರಶಂಸೆಗೆ ಯೋಗ್ಯವಾದ.

ಸ್ತೂಪ (ನಾ). ೧. ರಾಶಿ; ಗುಡ್ಡೆ. ೨. ಬುದ್ಧನ ಅವಶೇಷಗಳನ್ನು ಪೂಜೆಗಾಗಿ ಇಟ್ಟಿರುವ ಕಟ್ಟಡ. ೩. ಬೌದ್ಧರ ಮತಕ್ಕೆ ಸಂಬಂಧಿಸಿದ ಸ್ಮಾರಕಮಂದಿರ. ೪. ಜೈನಮಠವಿರುವ ಸ್ಥಳ.

ಸ್ತೇನ (ನಾ). ಕಳ್ಳ; ತುಡುಗ.

ಸ್ತೇಯ (ನಾ). ಕಳ್ಳತನ; ಚೌರ್ಯ.

ಸ್ತೋಕ (ಗು). ಅಲ್ಪ; ಸ್ವಲ್ಪ. ~ಪುಣ್ಯ = ಅಲ್ಪ ಪುಣ್ಯವುಳ್ಳವನು. ~ಸುಖ = ಅಲ್ಪ ಸುಖ.

ಸ್ತೋತ್ರ = ಸ್ತುತಿ.

ಸ್ತೋಭ (ನಾ). ತಡೆ; ಸ್ತಂಭನ. ~(ಂ)ಕೊ(ಗೊ)ಳ್ = ತಡೆಯಾಗು; ಅಡ್ಡಿಹೊಂದು.

ಸ್ತೋಮ (ನಾ). ೧. ಗುಂಪು; ಸಮೂಹ. ೨. ರಾಶಿ; ಗುಡ್ಡೆ. ~ಸಂಗೀತ = ಮೇಳಗೀತ; ವೃಂದಗಾನ.

ಸ್ತ್ರೀ (ನಾ). ೧. ಹೆಂಗಸು; ನಾರಿ. ೨. = ಸ್ತ್ರೀಲಿಂಗ. ~ಧನ = ಹೆಂಗಸಿಗೆ ವಿಶೇಷವಾಗಿ

ಸಂದಿರುವ ಧನ, –ಸ್ವತ್ತು. ~ಲಿಂಗ =ವ್ಯಾಕರಣದಲ್ಲಿ ಸ್ತ್ರೀಯನ್ನು ಸೂಚಿಸುವ ಲಿಂಗ; ಸ್ತ್ರೀವಾಚಕಲಿಂಗ. ~ಹತ್ಯೆ=ಪಂಚ ಮಹಾಪಾತಕಗಳಲ್ಲಿ ಒಂದು ; ಹೆಂಗಸನ್ನು ಕೊಲ್ಲುವುದು.

ಸ್ತ್ರೀತ್ವ (ನಾ). ಹೆಂಗಸಿನ ಸ್ವಭಾವ; ಹೆಣ್ಣುತನ.

ಸ್ತ್ರೈಣ ೧. = ಸ್ತ್ರೀತ್ವ. ೨. ಹೆಂಗಸರ ಗುಂಪು. ೩. ಹೆಣ್ಣಿಗ. ೪. ಹೆಣ್ಣಿಗತನ; ಹೇಡಿತನ. (ಗು). ೫. ಹೆಂಗಸಿಗೆ ಸಂಬಂಧಿಸಿದ.

ಸ್ಥಂಡಿಲ (ನಾ). ೧. ಸಮ ಮಾಡಿದ ನೆಲ. ೨. ಯಾಗವೇದಿಕೆ.

ಸ್ಥಪತಿ (ನಾ). ೧. ರಾಜ; ದೊರೆ. ೨. ಶಿಲ್ಪಿ. ೩. ಅಂತಃಪುರದ ಕಾವಲುಗಾರ; ಕಂಚುಕಿ.

ಸ್ಥಲ(ಳ) (ನಾ). ೧. ನೆಲ ; ಭೂಮಿ. ೨.=ಸ್ಥಳಿ. ೩. ಜಮೀನು ; ಹೊಲ. ೪. ಗ್ರಂಥದ ಒಂದು ಭಾಗ ; ಪರಿಚ್ಛೇದ. ೫. ಮೆಟ್ಟಲು ; ಹಂತ. ~ಅಂತರ=ಬೇರೊಂದು ಪ್ರದೇಶ, –ಜಾಗ. ~ಕಮಲ(ಳ) = ನೆಲದಾವರೆ ; ಬೆಟ್ಟದಾವರೆ. ~ಪುರಾಣ = ಒಂದು ಸ್ಥಳಕ್ಕೆ ಸಂಬಂಧಿಸಿದ ಸಂಪ್ರದಾಯದ ಕಥೆ.

ಸ್ಥಲಿ(ಳಿ) (ನಾ). ಸ್ಥಳ ; ಜಾಗ ; ಎಡೆ.

ಸ್ಥಲಿ(ಳಿ)ೀಕ (ನಾ). ೧. ಒಂದು ಸ್ಥಳದಲ್ಲಿ ಇರುವವನು ; ಸ್ಥಳವಂದಿಗ. ೨. = ಸ್ಥಲಿ.

ಸ್ಥವಿರ (ನಾ). ೧. ಮುದುಕ ; ವೃದ್ಧ. ೨. ಬೌದ್ಧಭಿಕ್ಷು. (ಗು). ೩. ಸ್ಥಿರವಾದ ; ನೆಲೆಯಾಗಿ ನಿಂತ. ೪. ವಯಸ್ಸಾದ ; ಮುದಿಯಾದ.

ಸ್ಥವಿರೆ (ನಾ). ಮುದುಕಿ ; ವೃದ್ಧೆ.

ಸ್ಥಾಣು (ನಾ). ೧. ಶಿವ. ೨. ಕಂಬ ; ಸ್ತಂಭ. ೩. ಮೋಟುಮರ. ೪. ಭರ್ಜಿ; ಈಟಿ. (ಗು). ೫. ನೆಲೆಯಾಗಿ ನಿಂತಿರುವ ; ಸ್ಥಿರವಾದ.

ಸ್ಥಾನ (ನಾ). ೧. ನೆಲೆ ; ಸ್ಥಿತಿ. ೨. ಎಡೆ ; ಸ್ಥಳ ; ಜಾಗ. ೩. ಪದವಿ ; ಹುದ್ದೆ. ~ದೀಪಿಕೆ = ನಂದಾದೀಪ ; ತಾಣದೀವಿಗೆ. ~ಪಲ್ಲಟ = ಬೇರೊಂದು ಸ್ಥಳಕ್ಕೆ ಹೋಗುವಿಕೆ ; ಸ್ಥಳಾಂತರವಾಗುವುದು. ~ಬದ್ಧತೆ = ಬೇರೆಡೆಗೆ ಹೋಗದಂತೆ ತಡೆಹಿಡಿಯುವಿಕೆ. ~ಭ್ರಷ್ಟ = ತಾಣಬಟ್ಟ.

ಸ್ಥಾನಿಕ (ನಾ). ೧. ಸ್ಥಳಕ್ಕೆ ಸಂಬಂಧಿಸಿದವನು; ಸ್ಥಳೀಕ. ೨. ದೇವಸ್ಥಾನದ ಸೇವಕ. ೩. ಪದವಿಯನ್ನು ಪಡೆದವನು ; ಅಧಿಕಾರಿ. (ಗು). ೪. ಸ್ಥಳಕ್ಕೆ ಸಂಬಂಧಿಸಿದ ; ಸ್ಥಳೀಯ.

ಸ್ಥಾಪಕ (ನಾ). ೧. ನೆಲೆಗೊಳಿಸುವವನು ; ಪ್ರತಿಷ್ಠಾಪಿಸುವವನು. ೨. ನಾಟಕದ ಸೂತ್ರಧಾರ.

ಸ್ಥಾಪನ = ತಾಪಣೆ. ~ಆಚಾರ್ಯ = ನೆಲೆಗೊಳಿಸಿದವನು ; ಪ್ರತಿಷ್ಠಾಪಿಸಿದವನು.

ಸ್ಥಾಪನೆ ೧.=ತಾಪಣೆ. ೨. ನಾಟಕದ ಪ್ರಾರಂಭದಲ್ಲಿ ಬರುವ ಒಂದು ದೃಶ್ಯ.

ಸ್ಥಾಪಿಸು (ಕ್ರಿ). ನೆಲೆಗೊಳಿಸು ; ಪ್ರತಿಷ್ಠಾಪಿಸು.

ಸ್ಥಾಯಿ (ನಾ). ೧. ಸ್ಥಿರವಾದುದು ; ನಿಶ್ಚಲವಾದುದು. (ಗು). ೨. ಸ್ಥಿರವಾದ ; ಅಚಲವಾದ.

ಸ್ಥಾಲಿ (ನಾ). ಲೋಹದ ಗುಂಡನೆಯ ಪಾತ್ರೆ ; ಥಾಲಿ.

ಸ್ಥಾವರ (ನಾ). ಚರವಲ್ಲದುದು; ಸ್ಥಿರವಾದುದು.

ಸ್ಥಾಸಕ (ನಾ). ಮೈಗೆ ಸುಗಂಧದ್ರವ್ಯವನ್ನು ಲೇಪಿಸಿಕೊಳ್ಳುವಿಕೆ.

ಸ್ಥಿತಿ (ನಾ). ೧. ಇರವು ; ಅಸ್ತಿತ್ವ. ೨. ಒಳ್ಳೆಯ ಸ್ಥಾನ, –ಪದವಿ. ೩. ಅವಸ್ಥೆ ; ನೆಲೆ. ೪. ಸಂಪತ್ತು ; ಶ್ರೀಮಂತಿಕೆ.

ಸ್ಥಿರ (ಗು). ೧. ಶಾಶ್ವತವಾದ ; ಯಾವಾಗಲೂ ಇರುವ. ೨. ಕದಲದ ; ಅಚಲವಾದ. ೩. ಶಾಂತವಾದ; ನಿರ್ವಿಕಾರವಾದ. ~ಚಿತ್ತ = ೧. ದೃಢವಾದ ಮನಸ್ಸು. ೨. ದೃಢವಾದ ಮನಸ್ಸುಳ್ಳವನು.

~ಪದ = ಮೋಕ್ಷ; ಕೈವಲ್ಯ. ~ಸ್ವತ್ತು =ಸ್ಥಿರಾಸ್ತಿ; ಜಮಾನು, ಮನೆ ಮುಂತಾದುವು.

ಸ್ಥಿರವಾರ (ನಾ). ಶನಿವಾರ.

ಸ್ಥಿರೀಕರಿಸು (ಕ್ರಿ). ದೃಢಪಡಿಸು.

ಸ್ಥಿರೆ (ನಾ). ೧. ದೃಢವಾದ ಮನಸ್ಸುಳ್ಳವಳು. ೨. = ತಿರೆ.

ಸ್ಥೂಲ (ಗು). ೧. ಗಟ್ಟಿಯಾದ; ಬಲವಾದ. ೨. ದಪ್ಪವಾದ; ತೋರವಾದ. ೩. ಜಡವಾದ; ಮಂದವಾದ. ೪. ನಿಖರವಲ್ಲದ; ಸರಿಸುಮಾರಾದ. ~ನೋಟ = ಹೊರನೋಟ; ಮೇಲುನೋಟ. ~ಮತಿ =೧.ಅಜ್ಞಾನ; ತಿಳಿಗೇಡಿತನ. ೨.ತಿಳಿಗೇಡಿ; ದಡ್ಡ.

ಸ್ಥೈರ್ಯ (ನಾ). ೧. ಧೈರ್ಯ; ಕೆಚ್ಚು. ೨. ದೃಢತೆ; ಸ್ಥಿರವಾಗಿರುವಿಕೆ.

ಸ್ಥೌಲ್ಯ (ನಾ). ದಪ್ಪವಾಗಿರುವುದು; ಸ್ಥೂಲವಾಗಿರುವುದು.

ಸ್ನಪನ (ನಾ). ೧. ಸ್ನಾನ ಮಾಡಿಸುವಿಕೆ. ೨. ಅಭಿಷೇಕ ಮಾಡುವಿಕೆ. ೩. ಅಭಿಷೇಕ. ~ಕಾರಿಕೆ = ಸ್ನಾನವನ್ನು ಮಾಡಿಸುವವಳು; ಮಿಾಯಿಸುವವಳು. ~ಮಂಡಪ = ಸ್ನಾನ ಮಾಡುವುದಕ್ಕಾಗಿ ಕಟ್ಟಿರುವ ಮಂಟಪ.

ಸ್ನಾತ (ಗು). ೧. ಮಿಂದ; ಜಳಕಮಾಡಿದ. ೨. ವಿದ್ಯಾಭ್ಯಾಸವನ್ನು ಮುಗಿಸಿದ; ಪಾರಂಗತನಾದ.

ಸ್ನಾತಕ (ನಾ). ೧. ಬ್ರಹ್ಮಚರ್ಯ ವ್ರತವನ್ನು ಮುಗಿಸಿದವನು. ೨. ವಿದ್ಯಾಭ್ಯಾಸವನ್ನು ಮುಗಿಸಿದವನು; ಪದವೀಧರ. ೩. ಭಿಕ್ಷೆಯಿಂದ ಜೀವಿಸುವ ಬ್ರಾಹ್ಮಣ. ೪.ಗೃಹಸ್ಥ.

ಸ್ನಾನ (ನಾ). ಮಿಾಹ; ಜಳಕ. ~ಘಟ್ಟ = ನದಿಯಲ್ಲಿ ಸ್ನಾನಕ್ಕಾಗಿ ನಿರ್ಮಿಸಿದ ಸೋಪಾನ, –ಮೆಟ್ಟಲು.

ಸ್ನಾನೀಯ (ನಾ). ಸ್ನಾನಕ್ಕಾಗಿ ಉಪಯೋಗಿಸುವ ಸುಗಂಧದ ಪುಡಿ.

ಸ್ನಾಪಕ (ನಾ). ಸ್ನಾನ ಮಾಡಿಸುವವನು.

ಸ್ನಾಯು (ನಾ). ೧. ನರ. ೨. ಮಾಂಸಖಂಡ.

ಸ್ನಿಗ್ಧ (ನಾ). ೧. ನುಣುಪಾದುದು. ೨. ಸ್ನೇಹದಿಂದ ಕೂಡಿದುದು. (ಗು). ೩. ಜಿಡ್ಡಾದ; ಜಿಗುಟಾದ. ೪. ನಯವಾದ; ನುಣುಪಾದ. ೫. ಒದ್ದೆಯಾದ; ನೆನೆದ. ೬. ಮನೋಹರವಾದ. ೭. ಸ್ನೇಹದಿಂದ ಕೂಡಿದ.

ಸ್ನೇಹ (ನಾ). ೧. ಜಿಡ್ಡು; ಜಿಗುಟು. ೨. ಜಿಡ್ಡಿನ ಪದಾರ್ಥ. ೩. ಎಣ್ಣೆ. ೪. ತೇವ; ಹಸಿ. ೫. ಗೆಳೆತನ; ಮೈತ್ರಿ.

ಸ್ನೇಹಿತ (ನಾ). ಮಿತ್ರ; ಗೆಳೆಯ.

ಸ್ಪಂದ = ಸ್ಪಂದನ. ~ಇಸು = ಅದಿರು; ಕಂಪಿಸು.

ಸ್ಪಂದನ (ನಾ). ಅಲುಗಾಟ; ಕಂಪನ.

ಸ್ಪರುಶ = ಸ್ಪರ್ಶ.

ಸ್ಪರುಶನ = ಸ್ಪರ್ಶನ.

ಸ್ಪರ್ಧಿ (ನಾ). ೧. ಪೈಪೋಟಿ ಮಾಡುವವನು. (ಗು). ೨. ಪೈಪೋಟಿ ಮಾಡುವ; ಹುರುಡಿಸುವ.

ಸ್ಪರ್ಧೆ (ನಾ). ಮೇಲಾಟ; ಹುರುಡು; ಪೈಪೋಟಿ. ~ಇಸು = ಹುರುಡಿಸು; ಪೈಪೋಟಿಮಾಡು.

ಸ್ಪರ್ಶ (ನಾ). ಮುಟ್ಟುವಿಕೆ; ಸೋಂಕುವಿಕೆ. ~ಇಸು = ಮುಟ್ಟು. ~ಮಣಿ = ಮುಟ್ಟಿದುದನ್ನು ಚಿನ್ನವನ್ನಾಗಿ ಮಾಡುವ ಶಿಲೆ; ಪರುಷ.

ಸ್ಪರ್ಶನ ೧. = ಸ್ಪರ್ಶ. ೨. ಸ್ಪರ್ಶೇಂದ್ರಿಯ; ಚರ್ಮ. ೩. ಗಾಳಿ; ವಾಯು.

ಸ್ಪಷ್ಟ (ಗು). ೧. ನಿಶ್ಚಿತವಾದ; ನಿಖರವಾದ. ೨. ಗೋಚರವಾದ.

ಸ್ಪಷ್ಟೀಕರಣ (ನಾ). ವಿಶದಪಡಿಸುವಿಕೆ; ಸ್ಪಷ್ಟಪಡಿಸುವಿಕೆ.

ಸ್ಪಷ್ಟೀಕರಿಸು (ಕ್ರಿ). ವಿವರಿಸು; ವಿಶದಪಡಿಸು

ಸ್ಪೃಹೆ (ನಾ). ೧. ಅಭಿಲಾಷೆ; ಇಚ್ಛೆ; ಹಂಬಲ. ೨. ಸ್ವಾರ್ಥ.

ಸ್ಫಟಿ (ನಾ). ಹಾವಿನ ಬಿಚ್ಚಿಡ ಹೆಡೆ.

ಸ್ಫಟಿಕ ೧. = ಪಟಿಕ. ೨. ಒಂದು ಜಾತಿಯ ಗಿಡ ಮತ್ತು ಅದರ ಹೂವು; ಗೊರಟೆ. ~ಅದ್ರಿ = ಕೈಲಾಸಪರ್ವತ.

ಸ್ಫಾರ (ನಾ). ೧. ಹೆಚ್ಚಾಗಿರುವುದು; ಹೇರಳವಾಗಿರುವುದು. ೨. = ಸ್ಫುರಣ. (ಗು). ೩. ವಿಸ್ತಾರವಾದ.

ಸ್ಫಾಲನ (ನಾ). ಹೊಡೆತ; ಆಸ್ಫಾಲನ.

ಸ್ಫುಟ (ಗು). ೧. ಒಡೆದ; ಬಿರುಕುಬಿಟ್ಟ. ೨. ಅರಳಿದ; ವಿಕಾಸಗೊಂಡ. ೩. ಸ್ಪಷ್ಟವಾದ; ವ್ಯಕ್ತವಾದ.

ಸ್ಫುಟನ (ನಾ). ಬಿರಿಯುವಿಕೆ; ಒಡೆಯುವಿಕೆ.

ಸ್ಫುಟಿಕೆ (ನಾ). ದೊನ್ನೆ; ಪುಟಿಕೆ.

ಸ್ಫುರಣ (ನಾ). ೧. ಅಲುಗಾಟ; ಕಂಪನ; ಮಿಡಿತ. ೨. ಮಿಂಚು; ಹೊಳಪು. ೩. ಒಮ್ಮೆಲೆ ತಿಳಿಯುವಿಕೆ; ಬುದ್ಧಿಗೆ ಗೋಚರಿಸುವಿಕೆ.

ಸ್ಫುರದ್ರೂಪಿ (ನಾ). ಅತ್ಯಂತ ಚೆಲುವ, –ರೂಪವಂತ.

ಸ್ಫುರಿಸು (ಕ್ರಿ). ೧. ಹೊಳೆ; ಪ್ರಕಾಶಿಸು. ೨. ಬುದ್ಧಿಗೆ ಗೋಚರಿಸು, –ತಿಳಿ.

ಸ್ಫುಲಿಂಗ (ನಾ). ಬೆಂಕಿಯ ಕಿಡಿ; ಅಗ್ನಿಕಣ.

ಸ್ಫೂರ್ತಿ (ನಾ). ೧. (ಬುದ್ಧಿಗೆ) ಪ್ರಕಟವಾಗುವುದು, –ಸ್ಫುರಿಸುವುದು. ೨. ಪ್ರೋತ್ಸಾಹ; ಉತ್ತೇಜನ. ೩. ಪ್ರೇರಣೆ; ಪ್ರಚೋದನೆ.

ಸ್ಫೋಟ (ನಾ). ೧. ಒಡೆಯುವಿಕೆ; ಬಿರಿಯುವಿಕೆ. ೨. ಗುಳ್ಳೆ; ಬೊಕ್ಕೆ. ~ಇಸು = ೧. ಸಿಡಿ; ಹಾರು; ಚಿಮ್ಮು. ೨. ಚಿಮ್ಮಿಸು; ಉಡಾಯಿಸು.

ಸ್ಫೋಟಕ (ನಾ). ೧. ಕುರು; ಬೊಕ್ಕೆ. (ಗು). ೨. ಸಿಡಿಯುವ.

ಸ್ಫೋಟನ = ಸ್ಫೋಟ.

ಸ್ಮಯ (ನಾ). ಆಶ್ಚರ್ಯ; ವಿಸ್ಮಯ.

ಸ್ಮರ (ನಾ). ಮನ್ಮಥ; ಕಾಮ. ~ಹರ=ಶಿವ.

ಸ್ಮರಣ (ನಾ). ೧. ನೆನಪು; ಜ್ಞಾಪಕ. ೨. ಧ್ಯಾನ; ಚಿಂತನೆ.

ಸ್ಮರಣೆ = ಸ್ಮರಣ.

ಸ್ಮರಿಯಿಸು = ಸ್ಮರಿಸು.

ಸ್ಮರಿಸು (ಕ್ರಿ). ೧. ನೆನಪು ಮಾಡಿಕೊಳ್ಳು; ಜ್ಞಾಪಕ ಮಾಡಿಕೊಳ್ಳು. ೨. ಧ್ಯಾನಿಸು; ಚಿಂತನೆ ಮಾಡು.

ಸ್ಮಶಾನ = ಶ್ಮಶಾನ.

ಸ್ಮಾರಕ (ನಾ). ಜ್ಞಾಪಕಾರ್ಥವಾಗಿ ಇಟ್ಟ ವಸ್ತು, ಪ್ರತಿಮೆ ಮುಂತಾದುವು. ~ಸ್ತಂಭ = ಯಾವುದಾದರೂ ಘಟನೆಯ ನೆನಪಿಗಾಗಿ ನೆಟ್ಟ ಕಂಭ.

ಸ್ಮಾರ್ತ (ನಾ). ೧. ಬ್ರಾಹ್ಮಣರಲ್ಲಿ ಒಂದು ಪಂಗಡ. ೨. ಅದ್ವೈತಿ. ೩. ಸ್ಮೃತಿಯಲ್ಲಿ ಹೇಳಿರುವ ವಿಧಿ. (ಗು). ೪. ಸ್ಮೃತಿಯಲ್ಲಿ ಹೇಳಿರುವ.

ಸ್ಮಿತ ೧. = ಸ್ಮೇರ. (ಗು). ೨. ಮುಗುಳುನಗೆಯಿಂದ ಕೂಡಿದ. ~ಕುಸುಮ = ಅರಳಿದ ಹೂವು.

ಸ್ಮೃತಿ (ನಾ). ೧. ನೆನಪು; ಸ್ಮರಣೆ. ೨. ಧ್ಯಾನ; ಚಿಂತನೆ. ೩. ಮನು ಮೊದಲಾದವರಿಂದ ರಚಿತವಾದ ಧರ್ಮಶಾಸ್ತ್ರ.

ಸ್ಮೇರ (ನಾ). ೧. ಮುಗುಳುನಗೆ; ಮಂದಹಾಸ. (ಗು). ೨. ಅರಳಿದ; ವಿಕಾಸಹೊಂದಿದ.

ಸ್ಯಂದನ (ನಾ). ೧. ರಥ; ತೇರು. ೨. ಸ್ರವಿಸುವಿಕೆ; ಜಿನುಗುವಿಕೆ.

ಸ್ಯಂದಿ (ನಾ). ೧. ಸ್ರವಿಸುವಿಕೆ; ಜಿನುಗುವಿಕೆ. ೨. ಹನಿ; ತುಂತುರು. (ಗು). ೩. ಒಸರುವ; ಜಿನುಗುವ.

ಸ್ರಗ್ಧರೆ (ನಾ). ಛಂದಸ್ಸಿನಲ್ಲಿ ಒಂದು ವೃತ್ತ.

ಸ್ರವಂತಿ = ಸ್ರೋತ.

ಸ್ರವಣ (ನಾ). ಸೋರುವಿಕೆ; ಸ್ರವಿಸುವಿಕೆ.

ಸ್ರವಿಸು (ಕ್ರಿ). ಒಸರು; ಜಿನುಗು.

ಸ್ರಸ್ತ (ಗು). ೧. ಜಗುಳಿದ; ಕಳಚಿದ. ೨. ಜೋಲಾಡುವ; ನೇತಾಡುವ. ೩. ಅಗಲಿದ; ಬೇರೆಯಾದ.

ಸ್ರಾವ (ನಾ). ೧. ಹರಿಯುವಿಕೆ; ಪ್ರವಾಹ. ೨. ಒಸರುವಿಕೆ.

ಸ್ರಾವೆ = ಶ್ರಾವೆ.

ಸ್ರೋತ (ನಾ). ಪ್ರವಾಹ; ನದಿ; ಹೊಳೆ.

ಸ್ರೋತಃಪತಿ (ನಾ). ನದಿಗಳ ಒಡೆಯ; ಸಮುದ್ರ.

ಸ್ರೋತಸ್ವಿನಿ = ಸ್ರೋತ.

ಸ್ವಂತ (ಗು).೧.ವ್ಯಕ್ತಿಗತ; ಖಾಸಗಿ.೨.ತನ್ನದೇ ಆದ; ತನಗೆ ಸೇರಿದ; ಸ್ವಕೀಯವಾದ. ~ಇಕೆ = ತನ್ನತನ; ತನ್ನದೇ ಆದ ವೈಶಿಷ್ಟ್ಯ.

ಸ್ವಕಪೋಲಕಲ್ಪನೆ (ನಾ). ತಾನೇ ಊಹಿಸಿದುದು; ತಾನೇ ರಚಿಸಿದುದು.

ಸ್ವಕರ್ಮ (ನಾ). ಸ್ವಂತಕಾರ್ಯ, –ಕೆಲಸ.

ಸ್ವಕಾರ್ಯ = ಸ್ವಕರ್ಮ.

ಸ್ವಕೀಯ (ಗು). ಸ್ವಂತದ; ತನಗೆ ಸಂಬಂಧಿಸಿದ.

ಸ್ವಗತ (ನಾ). ತನಗೆ ತಾನೇ ಮಾತನಾಡಿಕೊಳ್ಳುವುದು; ಆತ್ಮಗತ.

ಸ್ವಗೃಹ (ನಾ). ಸ್ವಂತಮನೆ.

ಸ್ವಚ್ಛ = ಸ್ವಾಚ್ಛ.

ಸ್ವಚ್ಛಂದ (ನಾ). ೧. ಮನಬಂದಂತೆ ನಡೆದುಕೊಳ್ಳುವುದು; ಸ್ವೇಚ್ಛೆ. (ಗು). ೨. ಮನಬಂದಂತೆ ನಡೆದುಕೊಳ್ಳುವ; ಹತೋಟಿಯಿಲ್ಲದ. ~ಛಂದ = ಪ್ರಾಸ, ಗಣ ಮೊದಲಾದ ನಿಯಮಗಳಿಗೆ ಒಳಪಡದ ಒಂದು ಕಾವ್ಯರಚನೆ; ಮುಕ್ತಛಂದಸ್ಸು. ~ಪ್ರವೃತ್ತಿ=ಮನಬಂದಂತೆ ವರ್ತಿಸುವುದು.

ಸ್ವಚ್ಛತೆ (ನಾ). ಕೊಳೆಯಿಲ್ಲದಿರುವಿಕೆ; ಪರಿಶುದ್ಧವಾಗಿರುವಿಕೆ.

ಸ್ವಜನ (ನಾ). ನಂಟ; ಬಂಧು; ತಮ್ಮವನು.

ಸ್ವತಂತ್ರ ೧.= ಸ್ವತಂತ್ರಿ. (ಗು). ೨.ಪರಾಧೀನವಲ್ಲದ. ೩. ಸ್ವೇಚ್ಛೆಯಿಂದ ಕೂಡಿದ; ಸ್ವಚ್ಛಂದಪ್ರವೃತ್ತಿಯ. ~ಇಕೆ=ಸ್ವಾತಂತ್ರ್ಯ. ~ಇಸು = ಸ್ವಾತಂತ್ರ್ಯವನ್ನು ತೆಗೆದುಕೊಳ್ಳು; ಸ್ವೇಚ್ಛೆಯಾಗಿ ವರ್ತಿಸು.

ಸ್ವತಂತ್ರಿ (ನಾ). ಸ್ವಾತಂತ್ರ್ಯದಿಂದ ಕೂಡಿದವನು.

ಸ್ವತಃ (ಅ). ತಾನಾಗಿ; ಖುದ್ದಾಗಿ.

ಸ್ವತ್ತು (ನಾ). ಆಸ್ತಿ; ಸಂಪತ್ತು.

ಸ್ವತ್ವ ೧. = ಸ್ವಾತಂತ್ರ್ಯ. ೨. ತನ್ನತನ.

ಸ್ವದೇಶ (ನಾ). ಸ್ವಂತದೇಶ; ತಾಯ್ನಾಡು. ~ಅಭಿಮಾನ = ತಾಯ್ನಾಡಿನ ಬಗೆಗೆ ಇರುವ ಅಭಿಮಾನ, –ಗೌರವ.

ಸ್ವಧರ್ಮ (ನಾ). ಸ್ವಂತಧರ್ಮ; ತನ್ನ ಧರ್ಮ.

ಸ್ವನ (ನಾ). ಸಪ್ಪಳ; ಶಬ್ದ.

ಸ್ವನಾಯ = ಶಹನಾಯಿ.

ಸ್ವನಾಯಿ = ಶಹನಾಯಿ.

ಸ್ವಪಕ್ಷ (ನಾ). ಸ್ವಂತಗುಂಪು; ತನ್ನ ಪಂಗಡ.

ಸ್ವಪ್ನ (ನಾ). ಕನಸು. ~ಅವಸ್ಥೆ = ಕನಸು ಕಾಣುವ ಸ್ಥಿತಿ. ~ಜೀವಿ = ಕನಸಿನಲ್ಲೇ ತಲ್ಲೀನನಾದವನು.

ಸ್ವಪ್ರತಿಷ್ಠೆ (ನಾ). ಸ್ವಂತದ ಬಗ್ಗೆ ಹೆಮ್ಮೆಪಡುವುದು.

ಸ್ವಪ್ರಶಂಸೆ (ನಾ). ತನ್ನನ್ನು ತಾನೇ ಹೊಗಳಿಕೊಳ್ಳುವುದು; ಆತ್ಮಪ್ರಶಂಸೆ.

ಸ್ವಪ್ರೇರಣೆ (ನಾ). ಆಂತರಿಕ ಪ್ರೇರಣೆ; ಸ್ವಂತ ಪ್ರೇರಣೆ.

ಸ್ವಭಾವ (ನಾ). ಹುಟ್ಟುಗುಣ; ಸಹಜಗುಣ. ~ಉಕ್ತಿ = ಅರ್ಥಾಲಂಕಾರಗಳಲ್ಲಿ ಒಂದು.

ಸ್ವಭಾಷೆ (ನಾ). ತನ್ನ ಭಾಷೆ; ತಾಯ್ನುಡಿ.

ಸ್ವಯಂ (ಅ). ತನಗೆ ತಾನೇ; ಸ್ವತಃ. ~ಕೃತ = ತಾನೇ ಮಾಡಿದ. ~ಚಾಲಿತ = ಸ್ವತಃ ಚಲಿಸುವ. ~ಬುದ್ಧ = ಸ್ವತಃ ತಿಳಿದವನು.

~ವಧು = ಗಂಡನನ್ನು ತಾನೇ ಆರಿಸಿಕೊಳ್ಳುವ ಹೆಣ್ಣು. ~ಸಿದ್ಧ = ತನ್ನಷ್ಟಕ್ಕೆ ತಾನೇ ಸ್ಪಷ್ಟವಾದ. ~ಸೇವಕ = ವೇತನವಿಲ್ಲದೆ ಸ್ವಾಪೇಕ್ಷೆಯಿಂದ ಕೆಲಸಮಾಡುವವನು.

ಸ್ವಯಂಬರ = ಸ್ವಯಂವರ.

ಸ್ವಯಂಭು (ನಾ). ೧. ತನ್ನಿಂದ ತಾನೇ ಉಂಟಾದವನು; ಬ್ರಹ್ಮ, ವಿಷ್ಣು, ಶಿವ ಮೊದಲಾದವರು. ೨. ಸ್ವಂತ ಸಾಮರ್ಥ್ಯವುಳ್ಳವನು; ಯಾರ ಅಂಕೆಗೂ ಒಳಪಡದವನು. ೩. ಅರ್ಹಂತ. (ಗು). ೪. ತನ್ನಿಂದ ತಾನೇ ಮೂಡಿದ.

ಸ್ವಯಂವರ (ನಾ). ೧. ಹೆಣ್ಣು ತನ್ನ ಗಂಡನನ್ನು ತಾನೇ ಆರಿಸಿಕೊಳ್ಳುವುದು. ೨. ಒಂದು ಬಗೆಯ ವಿವಾಹಪದ್ಧತಿ.

ಸ್ವಯತ್ನ (ನಾ). ತನ್ನದೇ ಆದ ಸಾಹಸ, –ಶ್ರಮ.

ಸ್ವಯಾರ್ಜಿತ (ಗು). ಸ್ವಂತವಾಗಿ ಗಳಿಸಿದ, –ಸಂಪಾದಿಸಿದ. ~ಆಸ್ತಿ = ಸ್ವಂತವಾಗಿ ಗಳಿಸಿದ ಸಂಪತ್ತು.

ಸ್ವರ (ನಾ). ೧. ನಾದ; ಧ್ವನಿ. ೨. ವರ್ಣಮಾಲೆಯಲ್ಲಿ ಸ್ವತಂತ್ರವಾಗಿ ಉಚ್ಚರಿಸುವ ವರ್ಣ. ೩. ಸಂಗೀತದಲ್ಲಿಯ ಸ, ರಿ, ಗ, ಮ, ಪ, ಧ ಮತ್ತು ನಿ ಎಂಬ ಏಳು ಸ್ವರ. ೪. (ವೇದಗಳನ್ನು ಹೇಳುವಾಗ) ಉಚ್ಚರಿಸುವ ಬಗೆ, –ಧಾಟಿ. ~ಅಂತ = ಸ್ವರವನ್ನು ಕೊನೆಯಲ್ಲಿ ಹೊಂದಿರುವ ಪದ. ~ಎ(ವೆ)ತ್ತು = ಧ್ವನಿಯನ್ನು ಹೊರಡಿಸು. ~ತೆಗೆ = ೧. ಅಳು. ೨. ಅಪಶಕುನ ನುಡಿ. ~ದೋಷ = (ವೇದಗಳನ್ನು ಹೇಳುವಾಗ) ಉದಾತ್ತ, ಅನುದಾತ್ತ ಮೊದಲಾದ ಸ್ವರಗಳನ್ನು ತಪ್ಪಾಗಿ ಉಚ್ಚರಿಸುವುದು. ~ಪ್ರಸ್ತಾರ = ಸಂಗೀತದಲ್ಲಿ ಸಾಹಿತ್ಯಕ್ಕೆ ಹೊಂದಿಕೆಯಾಗುವಂತೆ ಸ್ವರಗಳನ್ನು ಸೂಚಿಸುವಿಕೆ. ~ಮಂಡಲ = ಒಂದು ವಾದ್ಯವಿಶೇಷ. ~ಮೇಲ(ಳ) = ಸ್ವರಗಳು ಹೊಂದಿಕೆಯಾಗುವುದು. ~ಸಂಧಿ = ವ್ಯಾಕರಣದಲ್ಲಿ ಬರುವ ಸಂಧಿಗಳಲ್ಲಿ ಒಂದು; ಸ್ವರಕ್ಕೆ ಸ್ವರ ಪರವಾಗಿ ಆಗುವ ವ್ಯಾಕರಣಕ್ರಿಯೆ.

ಸ್ವರಬತ್ತು (ನಾ). ಒಂದು ವಾದ್ಯವಿಶೇಷ.

ಸ್ವರಾಜ್ಯ (ನಾ). ಸ್ವತಂತ್ರವಾದ ರಾಜ್ಯ.

ಸ್ವರಿತ (ನಾ). (ವೇದಗಳನ್ನು ಹೇಳುವಾಗ) ಮಧ್ಯಮದಲ್ಲಿ ಉಚ್ಚರಿಸುವ ಒಂದು ಸ್ವರ.

ಸ್ವರು (ನಾ). ಸಿಡಿಲು; ಅಶನಿ.

ಸ್ವರೂಪ (ನಾ). ೧. ನಿಜರೂಪ; ಸ್ವಂತರೂಪ. ೨. ಆಕೃತಿ; ಆಕಾರ. ೩. ಸ್ವಭಾವ. ೪. ಚೆಲುವು; ಲಾವಣ್ಯ. (ಗು). ೫. ಸುಂದರವಾದ; ಚೆಲುವಾದ.

ಸ್ವರೂಪಿ (ಗು). ೧. ಒಳ್ಳೆಯ ರೂಪವನ್ನು ಹೊಂದಿರುವ. ೨. ತನ್ನದೇ ಆದ ರೂಪವನ್ನು ಹೊಂದಿರುವ.

ಸ್ವರ್ಗ (ನಾ). ೧. ದೇವತೆಗಳ ವಾಸಸ್ಥಾನ; ಸುರಲೋಕ; ನಾಕ. ೨. ಸುಖ; ಸಂತೋಷ. ~ಪತಿ = ಇಂದ್ರ. ~ವಾಸಿ = ೧. ಸ್ವರ್ಗದಲ್ಲಿ ವಾಸಿಸುವವನು; ದೇವತೆ. ೨. ದಿವಂಗತ; ತೀರಿಕೊಂಡವನು. ~ಸಂಭವ = ಸ್ವರ್ಗದಲ್ಲಿ ಹುಟ್ಟಿದವನು; ದೇವತೆ.

ಸ್ವರ್ಗಸ್ಥ ೧.=ಸ್ವರ್ಗವಾಸಿ. (ಗು). ೨. ಮರಣ ಹೊಂದಿದ; ಸತ್ತ.

ಸ್ವರ್ಗೀಯ (ಗು). ಸ್ವರ್ಗಕ್ಕೆ ಸಂಬಂಧಪಟ್ಟ.

ಸ್ವರ್ಗೌಕಸ (ನಾ). ಸ್ವರ್ಗವನ್ನೇ ಮನೆಯನ್ನಾಗಿ ಉಳ್ಳವನು; ದೇವತೆ.

ಸ್ವರ್ಣ (ನಾ). ಹೊನ್ನು; ಬಂಗಾರ. ~ಗಿರಿ = ಮೇರುಪರ್ವತ. ~ಪ್ರಭೆ = ಚಿನ್ನದ ಕಾಂತಿ. ~ಯುಗ = ಜನರ ಬಾಳು ಭವ್ಯವಾಗಿರುವ ಕಾಲ; ಸುವರ್ಣಯುಗ.

ಸ್ವರ್ಣದಿ (ನಾ). ದೇವಗಂಗೆ; ಆಕಾಶಗಂಗೆ.

ಸ್ವರ್ಧಾಮ (ನಾ). ದೇವತೆಗಳ ವಾಸಸ್ಥಳ; ಸ್ವರ್ಗ.

ಸ್ವರ್ಧುನಿ = ಸ್ವರ್ಣದಿ.

ಸ್ವರ್ಭಾನು (ನಾ). ೧. ರಾಹು. ೨. ಒಬ್ಬ ರಾಕ್ಷಸನ ಹೆಸರು.

ಸ್ವರ್ಮಣಿ (ನಾ). ಸೂರ್ಯ; ರವಿ.

ಸ್ವಲ್ಪ (ನಾ). ೧. ಅಲ್ಪ; ಕ್ಷುದ್ರ. (ಗು). ೨. ಕೊಂಚ; ತುಸು.

ಸ್ವಸಾಧ್ಯ (ಗು). ತಾನು ಮಾಡಬಹುದಾದ.

ಸ್ವಸ್ತ = ಸ್ವಸ್ಥ.

ಸ್ವಸ್ತಿ (ನಾ). ೧. ಕ್ಷೇಮ; ಒಳಿತು. ೨. ಒಳ್ಳೆಯದಾಗಲಿ ಎಂಬುದನ್ನು ಸೂಚಿಸುವ ಮಾತು. ೩. ದೇವಸ್ಥಾನದಲ್ಲಿ ಹೇಳುವ ಒಂದು ಬಗೆಯ ಮಂತ್ರ. ೪. ಮಂಗಳವಾಚನ. ~ವಾಚನ = ಶುಭವನ್ನು ಹೇಳುವುದು.

ಸ್ವಸ್ತಿಕ (ನಾ). ಮಂಗಳಸೂಚಕವಾದ ಒಂದು ಬಗೆಯ ತಾಂತ್ರಿಕ ಚಿಹ್ನೆ.

ಸ್ವಸ್ಥ (ಗು). ೧. ನೆಮ್ಮದಿಯಿಂದಿರುವ; ಶಾಂತವಾದ. ೨. ಆರೋಗ್ಯದಿಂದಿರುವ.

ಸ್ವಸ್ಥಾನ (ನಾ). ಸ್ವಂತ ಸ್ಥಳ.

ಸ್ವಹಸ್ತ (ನಾ). ೧. ತನ್ನ ಕೈ; ಸ್ವಂತ ಕೈ. ೨. = ಸ್ವಹಸ್ತಾಕ್ಷರ. ~ಅಕ್ಷರ = ರುಜು; ಸಹಿ.

ಸ್ವಹಿತ (ನಾ). ಸ್ವಂತ ಹಿತ.

ಸ್ವಾಂತ (ನಾ). ೧. ಮನಸ್ಸು; ಚಿತ್ತ; ಅಂತಃಕರಣ. ೨. ಅಂತಃಕರಣವುಳ್ಳವನು.

ಸ್ವಾಗತ (ನಾ). ಆದರದಿಂದ ಬರಮಾಡಿಕೊಳ್ಳುವುದು; ಸುಖಾಗಮನವನ್ನು ಬಯಸುವುದು. ~ಇಸು = ಬರಮಾಡಿಕೊಳ್ಳು. ~ಭಾಷಣ = ಸಭೆಯಲ್ಲಿ ಅತಿಥಿಗೆ ಸುಖಾಗಮನವನ್ನು ಬಯಸುವ ಭಾಷಣ.

ಸ್ವಾಚ್ಛ (ಗು). ಶುದ್ಧವಾದ; ಸ್ವಚ್ಛವಾದ.

ಸಾಚ್ಛಂದ್ಯ (ನಾ). ಮನಸ್ಸಿಗೆ ಬಂದಂತೆ ನಡೆಯುವುದು; ಸ್ವಚ್ಛಂದವೃತ್ತಿ.

ಸ್ವಾತಂತ್ರ್ಯ (ನಾ). ತನ್ನಿಚ್ಛೆಯಂತೆ ಇರುವುದು; ಸ್ವತಂತ್ರತೆ. ~ಸಂಗ್ರಾಮ = ಸ್ವಾತಂತ್ರ್ಯಕ್ಕಾಗಿ ಮಾಡುವ ಯುದ್ಧ.

ಸ್ವಾತಿ (ನಾ). ಇಪ್ಪತ್ತೇಳು ನಕ್ಷತ್ರಗಳಲ್ಲಿ ಒಂದು ಮತ್ತು ಆ ನಕ್ಷತ್ರದಲ್ಲಿ ಬರುವ ಮಳೆ.

ಸ್ವಾದ (ನಾ). ರುಚಿ; ಸವಿ. ~ಇಸು = ರುಚಿನೋಡು; ಸವಿ.

ಸ್ವಾದನೀಯ (ಗು). ಆಸ್ವಾದಿಸಲು ಯೋಗ್ಯವಾದ; ರಸಾನುಭವಕ್ಕೆ ತಕ್ಕುದಾದ.

ಸ್ವಾದು (ನಾ). ೧. ಸಿಹಿ. ೨. ಮನೋಹರವಾದುದು; ಮಧುರವಾದುದು. ೩. ಸವಿಯಾದುದು; ರುಚಿಯಾದುದು. (ಗು). ೪. ರುಚಿಯಾದ; ಸವಿಯಾದ.

ಸ್ವಾಧೀನ (ನಾ). ಹಿಡಿತ; ವಶ; ಅಂಕೆ.

ಸ್ವಾಧ್ಯಾಯ (ನಾ). ೧. ತನ್ನಷ್ಟಕ್ಕೆ ತಾನೇ ಓದಿಕೊಳ್ಳುವುದು. ೨. ವೇದಾಧ್ಯಯನ. ೩. ವೇದ.

ಸ್ವಾಧ್ಯಾಯಿ (ನಾ). ೧. ತನ್ನಷ್ಟಕ್ಕೆ ತಾನೇ ಓದಿಕೊಳ್ಳುವವನು. ೨. ವೇದಾಧ್ಯಯನ ಮಾಡಿದವನು.

ಸ್ವಾನುಭವ (ನಾ). ಸ್ವತಃ ತನ್ನ ಜೀವನದಲ್ಲಿ ಉಂಟಾದ ಘಟನೆಗಳಿಂದ ಪಡೆದ ಅರಿವು; ಸ್ವಂತ ಅನುಭವ.

ಸ್ವಾಭಾವಿಕ (ಗು). ನೈಸರ್ಗಿಕವಾದ; ಪ್ರಕೃತಿನಿಯಮಕ್ಕೆ ಒಳಪಟ್ಟ.

ಸ್ವಾಭಿಮಾನ (ನಾ). ತನ್ನ ಬಗೆಗೆ ಇರುವ ಅಭಿಮಾನ; ಆತ್ಮಗೌರವ.

ಸ್ವಾಭಿಮಾನಿ (ನಾ). ತನ್ನಲ್ಲೇ ಅಭಿಮಾನವುಳ್ಳವನು; ಆತ್ಮಗೌರವವುಳ್ಳವನು.

ಸ್ವಾಮಿ (ನಾ). ೧. ಒಡೆಯ; ಯಜಮಾನ. ೨. ರಾಜ; ಪ್ರಭು. ೩. ಗುರು. ೪. ಪತಿ; ಗಂಡ. ೫. ಶಿವನ ಮಗ; ಸ್ಕಂದ. ~ಕಾರ್ಯ = ಒಡೆಯನ ಕೆಲಸ.

~ದ್ರೋಹ = ಒಡೆಯನಿಗೆ ಬಗೆಯುವ ದ್ರೋಹ. ~ದ್ರೋಹಿ =ಒಡೆಯನಿಗೆ ಕೇಡು ಬಗೆಯುವವನು.

ಸ್ವಾಮಿತ್ವ (ನಾ). ಒಡೆತನ; ಯಜಮಾನಿಕೆ.

ಸ್ವಾಮಿನಿ (ನಾ). ಒಡತಿ; ಯಜಮಾನಿ.

ಸ್ವಾಮ್ಯ (ನಾ). ಒಡೆತನ; ಹಕ್ಕು.

ಸ್ವಾಯಂಭುವ (ನಾ). ೧. ಸ್ವಯಂಭುವಿನ ಮಗ; ಒಬ್ಬ ಮನು.(ಗು). ೨. ಸ್ವಯಂಭುವಿಗೆ ಸಂಬಂಧಿಸಿದ.

ಸ್ವಾಯುತ (ಗು). ತನ್ನ ಅಧೀನದಲ್ಲಿರುವ.

ಸ್ವಾಯತ್ತ = ಸ್ವಾಯುತ.

ಸ್ವಾಯತ್ತತೆ (ನಾ). ಸ್ವಾತಂತ್ರ್ಯ.

ಸ್ವಾರ (ನಾ). ಸವಾರ.

ಸ್ವಾರಸ್ಯ (ನಾ). ೧. ಮನೋಹರತೆ; ರಸಪೂರ್ಣತೆ. ೨. ಚಮತ್ಕಾರ. ೩. ವಿನೋದಪೂರ್ಣವಾದುದು.

ಸ್ವಾರಿ (ನಾ). ಸವಾರಿ.

ಸ್ವಾರ್ಥ (ನಾ). ಸ್ವಪ್ರಯೋಜನ; ಸ್ವಹಿತ. ~ಅಂಧ =ಸ್ವಾರ್ಥಸಾಧನೆಯಲ್ಲಿ ವಿವೇಕವಿಲ್ಲದೆ ವರ್ತಿಸುವವನು.

ಸ್ವಾವಲಂಬನ (ನಾ). ಪರಾಧೀನವಾಗದಿರುವುದು.

ಸ್ವಾವಲಂಬನೆ = ಸ್ವಾವಲಂಬನ.

ಸ್ವಾವಲಂಬಿ (ನಾ). ಯಾರ ಆಶ್ರಯಕ್ಕೂ ಒಳಗಾಗದವನು.

ಸ್ವಾಸ್ಥ್ಯ (ನಾ). ೧. ಸ್ವಸ್ಥತೆ; ಆರೋಗ್ಯ; ಕ್ಷೇಮ. ೨. ಸ್ವಾತಂತ್ರ್ಯ. ೩. ಅಧೀನದಲ್ಲಿರುವ ದೇಶ.

ಸ್ವಾಹಾ (ನಾ). ೧.ಅಗ್ನಿಯ ಹೆಂಡತಿ. ೨.ಹೋಮದಲ್ಲಿ ದೇವತೆಗಳಿಗೆ ಆಹುತಿಯನ್ನು ಅರ್ಪಿಸುವಾಗ ಹೇಳುವ ಶಬ್ದ. ~ಮಾಡು = ನುಂಗು; ಕಬಳಿಸು.

ಸ್ವಾಹಾಪತಿ (ನಾ). ಅಗ್ನಿ.

ಸ್ವೀಕರಣ (ನಾ). ೧. ಅಂಗೀಕರಿಸುವಿಕೆ; ತೆಗೆದುಕೊಳ್ಳುವಿಕೆ. ೨. ಒಪ್ಪಿಗೆ; ಅನುಮತಿ.

ಸ್ವೀಕರಿಸು (ಕ್ರಿ). ೧. ಅಂಗೀಕರಿಸು; ತೆಗೆದುಕೊಳ್ಳು. ೨. ಒಪ್ಪು; ಅನುಮತಿಯನ್ನು ಕೊಡು.

ಸ್ವೀಕಾರ = ಸ್ವೀಕರಣ.

ಸ್ವೇಚ್ಛಾಚಾರ (ನಾ). ಇಷ್ಟಬಂದಂತೆ ನಡೆಯುವಿಕೆ; ಸ್ವೈರಾಚಾರ; ಸ್ವಚ್ಛಂದಪ್ರವೃತ್ತಿ.

ಸ್ವೇಚ್ಛಾಮರಣ (ನಾ). ಇಷ್ಟ ಬಂದಾಗ ಮರಣವನ್ನು ಪಡೆಯುವುದು.

ಸ್ವೇಚ್ಛಾಮರಣಿ (ನಾ). ೧. ಇಷ್ಟಬಂದಾಗ ಮರಣವನ್ನು ಪಡೆಯುವವನು; ಇಚ್ಛಾಮರಣಿ. ೨. ಭೀಷ್ಮ.

ಸ್ವೇಚ್ಛಾವೃತ್ತಿ = ಸ್ವೇಚ್ಛಾಚಾರ.

ಸ್ವೇಚ್ಛೆ (ನಾ). ೧. ಮನಸ್ಸು ಬಂದಂತಿರುವಿಕೆ; ಸ್ವಚ್ಛಂದತೆ. ೨. ತನ್ನ ಇಚ್ಛೆ.

ಸ್ವೇದ (ನಾ). ಬೆವರು; ಘರ್ಮಜಲ.

ಸ್ವೈರ (ನಾ). ೧. ಸ್ವಂತ ಇಚ್ಛೆ, -ಒಲವು. (ಗು). ೨. ಮನಬಂದಂತೆ ನಡೆಯುವ; ತನ್ನಿಚ್ಛೆಯ. ~ಆಚಾರ = ಸ್ವೇಚ್ಛಾಚಾರ. ~ವೃತ್ತಿ = ಸ್ವೇಚ್ಛಾಚಾರ.

ಸ್ವೈರಾಚಾರಿ (ನಾ). ತನ್ನ ಇಚ್ಛೆಯಂತೆ ನಡೆಯುವವನು.

ಸ್ವೈರಿಣಿ (ನಾ). ಮನಬಂದಂತೆ ನಡೆಯುವವಳು; ವ್ಯಭಿಚಾರಿಣಿ.

ಸ್ವೋಪಜ್ಞತೆ (ನಾ). ತನ್ನಿಂದ ತಾನೇ ಕಂಡುಕೊಂಡುದು, -ಅರಿತುದು.

❋

ಹ (ನಾ). ಕನ್ನಡ ವರ್ಣಮಾಲೆಯ ಐವತ್ತು ನಾಲ್ಕನೆಯ ಅಕ್ಷರ.

ಹಂಕಣಿ (ಗು). ಕೆದರಿದ. ~ತ(ದ)ಲೆ = ಕೆದರಿದ ತಲೆ.

ಹಂಕರ (ನಾ). ಅಹಂಕಾರ; ಗರ್ವ.

ಹಂಕಲು (ನಾ). ಬೀಳುಭೂಮಿ; ಪಾಳು.

ಹಂಕೃತಿ = ಹಂಕರ.

ಹಂಗ (ನಾ). ೧. ಶಕುನದ ಹಕ್ಕಿ. ೨. ಕಳಿಂಗ ಪಕ್ಷಿ.

ಹಂಗಡ (ನಾ). ಹಗ್ಗ; ರಜ್ಜು.

ಹಂಗಣೆ (ನಾ). ಹೀಯಾಳಿಕೆ; ಹಂಗಿಸುವಿಕೆ.

ಹಂಗರಕ (ನಾ). ಒಂದು ಜಾತಿಯ ಮರ.

ಹಂಗರಲು = ಹಂಗರಕ.

ಹಂಗರು (ನಾ). ಒಂದು ಜಾತಿಯ ಸಸ್ಯ.

ಹಂಗಾಮು(ನಾ). ಹದಕ್ಕೆ ಬರುವ ಕಾಲ; ಋತು.

ಹಂಗಾಮಿ (ಗು). ಖಾಯಂ ಅಲ್ಲದ; ತಾತ್ಕಾಲಿಕ.

ಹಂಗಾಮು ೧. = ಹಂಗಾಮು. ೨. ದೊಂಬಿ; ಗಲಾಟೆ.

ಹಂಗು (ನಾ). ೧. ದಾಕ್ಷಿಣ್ಯ; ಋಣ. ೨. ಆಸೆ; ಹಂಬಲ. ~ಇಗ = ಪಂಗಿಗ. ~ಇಸು=೧. ಕರ್ತವ್ಯಚ್ಯುತಿಯನ್ನು ಸೂಚಿಸಿ ಹೀಯಾಳಿಸು. ೨. ಮೂದಲಿಸು.

ಹಂಗುಳಿ (ನಾ). ಆಸನ; ಪೀಠ.

ಹಂಗುಳಿಕೆ = ಹಂಗುಳಿ.

ಹಂಚಿ (ನಾ). ೧. ಒಂದು ಜಾತಿಯ ಹುಲ್ಲು. ೨. ಪಗಡೆಯಾಟದಲ್ಲಿ ಬೀಳುವ ಐದರ ಗರ. ~ಕಡ್ಡಿ = ೧. ಹಂಚಿಹುಲ್ಲಿನ ಕಡ್ಡಿ. ೨. ಕೆಲಸಕ್ಕೆ ಬಾರದುದು. ~ಬರಲು = ಪಂಚಿಹುಲ್ಲಿನಿಂದ ಮಾಡಿದ ಕಸಬರಿಗೆ.

ಹಂಚು (ಕ್ರಿ). ೧. ವಿಭಾಗಿಸು; ಪಾಲು ಮಾಡು; ವಿತರಿಸು. (ನಾ). ೨.=ಹೆಂಚು. ~ಇಕೆ = ೧. ಭಾಗ ಮಾಡುವಿಕೆ; ಪಾಲು ಮಾಡುವಿಕೆ. ೨. ಭಾಗ; ಪಾಲು. ೩. ಯುಕ್ತಿ; ಉಪಾಯ. ೪. ಯೋಜನೆ; ಏರ್ಪಾಡು.

ಹಂಜಕ್ಕಿ (ನಾ). ೧. ನವಣೆ ಅಕ್ಕಿ. ೨. ಅರ್ಧ ಬೆಂದ ಅನ್ನ.

ಹಂಜರ (ನಾ). ೧. ಪಂಜರ; ಗೂಡು. ೨. ಅಸ್ಥಿಪಂಜರ. ೩. = ಹಂಜಱ.

ಹಂಜಱ(ರ) (ನಾ). ಸೀಳಿದ ಬಿದಿರು, ದಬ್ಬೆ. ~ಕೊ(ಗೂ)ಳಿ = ಮೀನು ಹಿಡಿಯಲು ಉಪಯೋಗಿಸುವ ಬಿದಿರಿನ ಬುಟ್ಟಿ; ಕೂಳೆ.

ಹಂಜಿ (ನಾ). ಅರಳೆಯ ಉಂಡೆ; ಪಂಜಿ. ~ಕು(ಗು)ಕ್ಕೆ = ಅರಳೆಯನ್ನಿಡುವ ಸಣ್ಣ ಬಿದಿರಿನ ಬುಟ್ಟಿ. ~ಕೊ(ಗೊ)ೞಲು =ನೂಲುವಾಗ ಅರಳೆಯನ್ನು ಸುತ್ತುವುದಕ್ಕೆ ಉಪಯೋಗಿಸುವ ಕೋಲು.

ಹಂಡ (ನಾ). ೧. ನಪುಂಸಕ; ಷಂಡ. ೨. ಬಿಳುಪು; ಶ್ವೇತವರ್ಣ. ~ನಾಯಿ = ಬಿಳಿಯ ಬಣ್ಣದ ನಾಯಿ.

ಹಂಡಬಂಡ (ಗು). ಮಿಶ್ರವರ್ಣದ.

ಹಂಡೆ (ನಾ). ಅಗಲವಾದ ಬಾಯುಳ್ಳ ಲೋಹದ ದೊಡ್ಡ ಪಾತ್ರೆ.

ಹಂತ (ನಾ). ೧. ಮೆಟ್ಟಿಲು; ಸೋಪಾನ. ೨. ಘಟ್ಟ; ಮಟ್ಟ. ೩. = ಪಂಥ.

ಹಂತಕ (ನಾ). ಕೊಲೆಗಾರ.

ಹಂತವ್ಯ (ಗು). ಕೊಲ್ಲಲು ಯೋಗ್ಯವಾದ.

ಹಂತಿ (ನಾ). ೧. ಸಾಲು; ಪಂಕ್ತಿ. ೨. ಕಣದಲ್ಲಿ ತೆನೆಯನ್ನು ತುಳಿಸಲು ಕಟ್ಟುವ ದನಗಳ ಸಾಲು. ~ಊ(ಯೂ)ಟ = ಸಾಲಾಗಿ ಕುಳಿತು ಮಾಡುವ ಊಟ; ಪಂಕ್ತಿಭೋಜನ. ~ಕ(ಗ)ಟ್ಟು = ೧. ತೆನೆಯನ್ನು ತುಳಿಸಲು ಎತ್ತುಗಳನ್ನು ಸಾಲಾಗಿ ಕಟ್ಟು. ೨. ಸಾಲುಗೊಳ್ಳು; ಪಂಕ್ತಿಯಲ್ಲಿರು.

~ಕಾ(ಗಾ)ಱ(ರ) = ಸಾಲಿನಲ್ಲಿರುವವನು ; ಸರದಿಯಲ್ಲಿರುವವನು. ~ಹೊಡೆ = ಹಂತಿ ಕಟ್ಟಿ ಎತ್ತುಗಳನ್ನು ತಿರುಗಿಸು.

ಹಂದರ್(ರು) = ಪಂದರ್. ~ಇಕ್ಕು = ಚಪ್ಪರವನ್ನು ಕಟ್ಟು ; ಚಪ್ಪರಹಾಕು.

ಹಂದಿ = ಪಂದಿ. ~ಗೆಡ್ಡೆ = ಒಂದು ಜಾತಿಯ ಗೆಡ್ಡೆ. ~ಮೀನು = ಒಂದು ಜಾತಿಯ ಮೀನು.

ಹಂದು (ಕ್ರಿ). ಅಲುಗಾಡು ; ಚಲಿಸು.

ಹಂದೆ = ಪಂದೆ.

ಹಂದೆಗ ೧. = ಪಂದೆ. ೨. ಒಂದು ಜಾತಿಯ ಮೀನು.

ಹಂದೊಗಲು = ಪಂದೊವಲ್.

ಹಂಪು (ನಾ). ಹೆಚ್ಚಳ ; ಸಮೃದ್ಧಿ. ~ಕಾ(ಗಾ)ಲ = ಸಮೃದ್ಧಿಯ ಕಾಲ ; ಸುಗ್ಗಿ.

ಹಂಬಲ ೧.= ಪಂಬಲ್. ೨. ಚಿಂತೆ ; ಕಳವಳ. ~ಇಕೆ = ಹಂಬಲ. ~ಇಸು = ೧. ಚಿಂತಿಸು; ಯೋಚನೆ ಮಾಡು. ೨. = ಪಂಬಲಿಸು.

ಹಂಬಲು = ಪಂಬಲ್.

ಹಂಬು (ಕ್ರಿ). ೧. ವ್ಯಾಪಿಸು ; ಹರಡು. (ನಾ). ೨. ನೀಳೆಯದೆಲೆ ಮುಂತಾದುವುಗಳ ಬಳ್ಳಿ.

ಹಂಸ (ನಾ). ೧. ಒಂದು ಜಾತಿಯ ಪಕ್ಷಿ; ಅಂಚೆ. ೨. ಪರಮಾತ್ಮ. ೩. ಶಿವ. ೪. ಬ್ರಹ್ಮ. ೫. ವಿಷ್ಣು. ೬. ಸೂರ್ಯ. ೭. ಚಂದ್ರ. ೮. ಒಬ್ಬ ರಾಕ್ಷಸನ ಹೆಸರು. ೯. ಕಾಮ. ೧೦. ಮುನಿ. ೧೧. ಅರಿತವನು ; ಮಹಾತ್ಮ. ೧೨. ಶಕ್ತಿಶಾಲಿ. ೧೩. ತಾವರೆ ; ಕಮಲ. ೧೪. ಕಿರಣ ; ಕದಿರು. ೧೫. ಕಣ್ಣು ; ನೇತ್ರ. ೧೬. ಕುದುರೆ ; ಅಶ್ವ. (ಗು). ೧೭. ಶ್ರೇಷ್ಠವಾದ ; ಉತ್ತಮವಾದ. ~ತೂಲ = ಹಂಸಪಕ್ಷಿಯ ತುಪ್ಪಳು. ~ಪಾದ = ೧. ಹಂಸದ ಕಾಲು. ೨. ಬರವಣಿಗೆಯಲ್ಲಿ ಬಿಟ್ಟು ಹೋದ ಭಾಗವನ್ನು ಸೇರಿಸಿದುದನ್ನು ಸೂಚಿಸುವ ಚಿಹ್ನೆ.

ಹಂಸಕ (ನಾ). ೧. ಹಂಸ ; ಅಂಚೆ. ೨. ನೂಪುರ ; ಅಂದುಗೆ.

ಹಂಸತ್ವ (ನಾ). ಬ್ರಹ್ಮಪದವಿ ; ಮೋಕ್ಷ.

ಹಂಸಪಾದಿ (ನಾ). ಒಂದು ಬಗೆಯ ಮೂಲಿಕೆ.

ಹಂಸಿ (ನಾ). ಹೆಣ್ಣು ಅಂಚೆ.

ಹಂಸೆ ೧. = ಹಂಸಿ. ೨. = ಪಾಂಸೆ.

ಹಕಾರಿ (ನಾ). ಜೋರಾದ ಕೂಗು ; ಗಟ್ಟಿಯಾದ ಧ್ವನಿ. ~ಹೊಡೆ = ಜೋರಾಗಿ ಕೂಗು.

ಹಕೀಕತ್(ತು) (ನಾ). ೧. ನಡೆದ ಘಟನೆ, ಸಂಗತಿ. ೨. ಹೇಳಿಕೆ ; ವರದಿ ; ವಿವರಣೆ. ೩. ಉಪಾಯ ; ಸಂಚು.

ಹಕೀಕತ್ತು = ಹಕೀಕತ್.

ಹಕೀಮು (ನಾ). ಯುನಾನಿ ವೈದ್ಯ.

ಹಕ್ಕರಿ = ಪಕ್ಕರೆ.

ಹಕ್ಕರಿಕೆ ೧. = ಪಕ್ಕರೆ. ೨. = ಹಗಜಿಕೆ.

ಹಕ್ಕರಿಕ್ಕೆ = ಪಕ್ಕರೆ.

ಹಕ್ಕರಿಗೆ = ಪಕ್ಕರೆ.

ಹಕ್ಕರೆ = ಪಕ್ಕರೆ.

ಹಕ್ಕಲ್(ಲು) (ನಾ). ಬೆಳೆ ಕೊಯ್ದ ಜಮೀನು. ~ಆಯು = ಕೊಯ್ಲಾದ ಮೇಲೆ ಹೊಲದಲ್ಲಿ ಉಳಿದ ತೆನೆ, ಕಾಳು ಮೊದಲಾದುವನ್ನು ಆರಿಸಿಕೊಳ್ಳು.

ಹಕ್ಕಳೆ (ನಾ). ಬಿರುಕು ಬಿಟ್ಟು ಮೇಲೆ ಎದ್ದಿರುವ ಪದರ.

ಹಕ್ಕಿ = ಪಕ್ಕಿ. ~ನೋಟ = ದೂರದಿಂದ ಕಾಣುವ ಸಮಗ್ರನೋಟ; ಸೂಕ್ಷ್ಮನೋಟ; ಅಧಿಕ ವಿವರಣೆಗಳು ಕಾಣದ ನೋಟ. ~ರೋಗ = ಮೂಳೆಗಳು ಮೆತುವಾಗುವ, ಮಕ್ಕಳಿಗೆ ಬರುವ ಒಂದು ಬಗೆಯ ರೋಗ. ~ಶಕುನ = ಪಕ್ಷಿಯ ಸಹಾಯದಿಂದ ಹೇಳುವ ಶಕುನ.

ಹಕ್ಕಿಪಿಕ್ಕಿ (ನಾ). ಪಕ್ಷಿಗಳನ್ನು ಬೇಟೆಯಾಡುವ ಒಂದು ಅಲೆಮಾರಿ ಜನಾಂಗ.

ಹಕ್ಕಿಬಿಕ್ಕಿ = ಹಕ್ಕಿಪಿಕ್ಕಿ.

ಹಕ್ಕು (ನಾ). ೧. ಕಣ್ಣು, ಮೂಗು ಮುಂತಾದುವುಗಳ ಮಲ; ಪಿಚ್ಚು. ೨. =ಹಕ್ಕುದಾರಿ. ~ದಾರ = ವಾರಸುದಾರ; ಒಡೆಯ.

ಹಕ್ಕುದಾರಿ (ನಾ). ಒಡೆತನ; ಸ್ವಾಮ್ಯ.

ಹಕ್ಕೆ (ನಾ). ೧. ಆಶ್ರಯ; ನೆಲೆ; ಇಕ್ಕೆ. ೨. ಹಾಸುಗೆ; ಶಯ್ಯೆ. ~ಕೊ(ಗೊ)ಳ್ = ಆಶ್ರಯವನ್ನು ಪಡೆ. ~ಶ(ದ)ಲೆ = ಪ್ರಾಣಿಗಳು ವಿಶ್ರಮಿಸುವ ಮುಖ್ಯಸ್ಥಳ. ~ಹಿಡಿ = ನೆಲೆಯನ್ನು ಗೊತ್ತುಹಚ್ಚು.

ಹಗ = ಪಗೆವು.

ಹಗರಣ ೧. = ಪಗರಣ. ೨. ಕೆಲಸಕ್ಕೆ ಬಾರದ ಮಾತು; ಹರಟೆ. ~ಇಗ = ಪಗರಣಿಗ. ~ಇಸು = ಕಳವಳಪಡು; ಗೊಂದಲಗೊಳ್ಳು.

ಹಗರು (ನಾ). ೧. ತಲೆಗೂದಲಿನ ಬುಡದಲ್ಲಿ ಉಂಟಾಗುವ ಒಣಗಿದ ಚರ್ಮದ ಹೊಟ್ಟು; ಹುರುಪು. ೨. = ಹಗಱ್.

ಹಗಱ್(ರ್, ರು, ಱು) (ನಾ). ಬಿದಿರಿನ ಸೀಳು; ದಬ್ಬೆ. ~ಇಕ್ಕು = ೧. ಸೀಳಿದ ಬಿದಿರನ್ನು ಕಟ್ಟು, –ಜೋಡಿಸು. ೨. ಇಕ್ಕಟ್ಟಿನಲ್ಲಿ ಸಿಕ್ಕಿಸು.

ಹಗಱೆ(ರೆ) (ನಾ). ಒಂದು ಜಾತಿಯ ಸೊಪ್ಪು.

ಹಗಲು = ಪಗಲ್. ~ಎಱೆ(ರೆ)ಯ = ಸೂರ್ಯ. ~ಒಡೆಯ = ಹಗಲೆಱೆಯ. ~ಕ(ಗ)ನಸು = ಗಾಳಿಗೋಪುರ; ಕೈಗೂಡದ ಆಸೆ. ~ಕ(ಗ)ನ್ನ = ಹಗಲುಹೊತ್ತಿನಲ್ಲಿ ಮಾಡುವ ಕಳ್ಳತನ. ~ಕ(ಗ)ಳ್ಳ = ೧. ಹಗಲಿನಲ್ಲಿ ಕಳ್ಳತನ ಮಾಡುವವನು. ೨. ಯಾವ ಹೆದರಿಕೆಗೂ ಒಳಗಾಗದೆ ದೋಚುವವನು. ~ಚುಕ್ಕೆ = ಸೂರ್ಯ. ~ದರೋಡೆ = ಬಹಿರಂಗವಾದ ಲೂಟಿ; ಮುಚ್ಚುಮರೆಯಿಲ್ಲದೆ ಕಿತ್ತುಕೊಳ್ಳುವುದು. ~ದೀವಟಿಗೆ = ಹಗಲಿನಲ್ಲಿ ನಡೆಯುವ ಮೆರವಣಿಗೆಯ ಮುಂಭಾಗದಲ್ಲಿ ಗೌರವ ಸೂಚಕವಾಗಿ ಹಿಡಿದುಕೊಂಡು ಹೋಗುವ ಪಂಜು.

ಹಗವ = ಪಗೆವು.

ಹಗವು = ಪಗೆವು.

ಹಗಹ = ಪಗೆವು.

ಹಗಿನ = ಪಗಿನ.

ಹಗಿನು = ಪಗಿನ.

ಹಗುರ (ನಾ). ೧. ಭಾರವಿಲ್ಲದುದು; ತೂಕವಿಲ್ಲದುದು. ೨. ಸುಲಭವಾದುದು. ೩. ಅಲ್ಪವಾದುದು; ಕ್ಷುಲ್ಲಕವಾದುದು.

ಹಗುರು = ಹಗುರ.

ಹಗೆ (ಕ್ರಿ). ೧. ವೈರಸಾಧಿಸು; ದ್ವೇಷಿಸು. (ನಾ). ೨.=ಪಗೆ. ೩.=ಪಗೆವು. ~ಕೆ(ಗೆ)ಡು = ದ್ವೇಷವನ್ನು ಕಳೆದುಕೊಳ್ಳು. ~ಕೊ(ಗೊ)ಳ್ಳು = ದ್ವೇಷಿಸು. ~ತನ = ಶತ್ರುತ್ವ; ವೈರ. ~ತೀರಿಸು = ದ್ವೇಷ ಸಾಧಿಸು; ಸೇಡು ತೀರಿಸು. ~ಹರಿ = ದ್ವೇಷ ಕೊನೆಗೊಳ್ಳು.

ಹಗೆಯ = ಪಗೆವ.

ಹಗೆವ = ಪಗೆವ.

ಹಗೆವು = ಪಗೆವು.

ಹಗೇವು = ಪಗೆವು.

ಹಗ್ಗ (ನಾ). ನಾರು ಅಥವಾ ನೂಲನ್ನು ಹೊಸೆದು ತಯಾರಿಸಿದ ಹುರಿ; ರಜ್ಜು.

ಹಗ್ಗಿ (ನಾ). ಅಗ್ನಿ; ಬೆಂಕಿ.

ಹಚಡ = ಪಚ್ಚಡ.

ಹಚ್ಚ (ಗು). ೧. ಹಸುರಾದ. ೨. ಹಸಿಯದಾದ.

ಹಚ್ಚಗೆ (ಗು). ೧. ಹಸುರು ಬಣ್ಣದಿಂದ ಕೂಡಿದ. (ಅ). ೨. ಹಸುರುಬಣ್ಣದಿಂದ ಕೂಡಿ.

ಹಚ್ಚಡ = ಪಚ್ಚಡ. ~ಇಸು = ಪಚ್ಚಡಿಸು.

ಹಚ್ಚಡಿಕೆ = ಪಚ್ಚಡ.

ಹಚ್ಚನೆ = ಹಚ್ಚಗೆ.
ಹಚ್ಚು (ಕ್ರಿ). ೧. ಬಳಿ; ಲೇಪಿಸು; ಪೂಸು. ೨. ಅಂಟಿಸು; ಜೋಡಿಸು. ೩. ಪ್ರಾರಂಭಿಸುವಂತೆ ಮಾಡು; ತೊಡಗಿಸು. ೪. ತೊಡಗು; ಪ್ರಾರಂಭಿಸು. ೫. ಜ್ವಲಿಸು; ಹತ್ತಿಸು. ೬. ನೆಡು; ನಾಟು. ೭. ತುಂಡರಿಸು; ಹೆಚ್ಚು. ೮. ನೇಮಿಸು; ಇಡು.
ಹಚ್ಚೆ (ನಾ). ಮೈ ಮೇಲೆ ಅಲಂಕಾರವಾಗಿ ಚಿತ್ರ ಬರೆದು ಹಸುರುಬಣ್ಣ ತುಂಬಿ ಮುಳ್ಳಿನಿಂದ ಚುಚ್ಚುವುದು ಮತ್ತು ಹಾಗೆ ಚುಚ್ಚುವುದರಿಂದ ಉಂಟಾದ ಗುರುತು.
ಹಜಾಮ (ನಾ). ನಾಯಿಂದ; ಕ್ಷೌರಿಕ.
ಹಜಾಮತಿ (ನಾ). ೧. ತಲೆ ಬೋಳಿಸುವಿಕೆ; ಕ್ಷೌರ. ೨. ಸಂಪೂರ್ಣವಾಗಿ ದೋಚುವಿಕೆ.
ಹಜಾರ (ನಾ). ೧. ಪಡಸಾಲೆ. ೨. ನಡುಮನೆ.
ಹಜ್ಜೆ = ಪಜ್ಜೆ. ~ಪಿ(ವಿ)ಡಿ = ಪಜ್ಜೆವಿಡಿ.
ಹಟ = ಹಠ.
ಹಟಮಾರಿ (ನಾ). ೧. ಮೊಂಡುತನ ಮಾಡುವ ವ್ಯಕ್ತಿ; ಮೊಂಡ. (ಗು). ೨. ಛಲಸ್ವಭಾವದ; ಹಿಡಿದ ಅಭಿಪ್ರಾಯವನ್ನು ಬಿಡದ.
ಹಟ್ಟಿ (ನಾ). ೧. ಕೊಟ್ಟಿಗೆ. ೨. ಚಿಕ್ಕಹಳ್ಳಿ. ೩. ಒಂದು ಗುಂಪಿನವರು ವಾಸಿಸುವ ಸ್ಥಳ. ೪. ಮನೆ; ಬೀಡು. ೫. ಮನೆಯ ಮುಂಭಾಗ; ಅಂಗಳ. ~ಕಾಜಿ(ರ) = ದನಗಾಹಿ; ಗೊಲ್ಲ. ~ಹಬ್ಬ = ದೀಪಾವಳಿ ಹಬ್ಬ.
ಹಠ (ನಾ). ೧. ಬಲಾತ್ಕಾರ; ಒತ್ತಾಯ. ೨. ಮೊಂಡುತನ; ಛಲ. ~ಗಾರ=ಮೊಂಡ; ಹಠವಾದಿ.
ಹಠವಾದಿ = ಹಠಗಾರ.
ಹಠಾತ್ತನೆ = ಹಠಾತ್ತು.
ಹಠಾತ್ತು (ಅ). ತಟ್ಟನೆ; ಒಮ್ಮಿಂದೊಮ್ಮೆಲೆ.
ಹಡಕ = ಹಡುಕ.
ಹಡಕಿ (ನಾ). ಸೂಳೆ; ವೇಶ್ಯೆ.
ಹಡಕು (ನಾ). ಹೊಲಸು; ಹೇಸಿಗೆ. ~ಇಗ = ಹೊಲಸಿನಲ್ಲಿ ವರ್ತಿಸುವವನು.
ಹಡಕೆ = ಪಡಿಕೆ.
ಹಡಗ = ಪಡಂಗು.
ಹಡಗು = ಪಡಂಗು. ~ಕಟ್ಟೆ = ಹಡಗು ನಿಲ್ಲುವ ಸ್ಥಳ; ಬಂದರು.
ಹಡದಿ (ನಾ). ೧. ಮಡಿಬಟ್ಟೆ; ಒಗೆದ ಬಟ್ಟೆ. ೨. ನಡೆಯುವಾಗ ಕಾಲು ನೆಲಕ್ಕೆ ತಾಕದಂತೆ ಹಾಸುವ ಮಡಿಬಟ್ಟೆ; ನಡೆಮಡಿ. ೩. = ಹಡದೆ.
ಹಡದೆ (ನಾ). ಗ್ರಾಮದ ಅಗಸ, ನಾಯಿಂದ ಮೊದಲಾದವರಿಗೆ ಗ್ರಾಮಸ್ಥರು ಕೊಡುವ ವರ್ಷಾವಧಿ ಸಂಭಾವನೆ; ಪಡಿ.
ಹಡಪ (ನಾ). ೧. ಅಡಕೆಎಲೆಯ ಚೀಲ; ಸಂಚಿ. ೨. ಕೈಚೀಲ. ೩. ಕ್ಷೌರಿಕನ ಸಲಕರಣೆಯ ಚೀಲ. ~ಆಳಿ = ಹಡವಳ. ~ಇಗ = ೧. ಕ್ಷೌರಿಕ; ನಾಯಿಂದ. ೨.=ಹಡವಳ.
ಹಡಪು (ನಾ). ಒಂದು ಬಗೆಯ ಚರ್ಮರೋಗ; ನಾಯಿಕಜ್ಜಿ; ಅಡಪು.
ಹಡಬೆ = ಹಡಕಿ.
ಹಡಲ = ಪಟೋಲ.
ಹಡಲಿಗೆ = ಪಟಲಿಕೆ.
ಹಡಲು (ನಾ). ಕೆಸರು; ಪಂಕ; ಅಟ್ಟು.
ಹಡವಳ (ನಾ). ತನ್ನ ಒಡೆಯನ ಅಡಕೆಎಲೆಯ ಚೀಲವನ್ನು ಹಿಡಿದು ಸೇವೆ ಮಾಡುವವನು.
ಹಡಿ (ನಾ). ಬಾಗಿಲು; ಕದ; ಪಡಿ.
ಹಡಿಕೆ = ಪಡಿಕೆ. ~ನಾತ = ಹೊಲಸು ವಾಸನೆ; ದುರ್ಗಂಧ. ~ನಾಱು(ರು) = ಹೊಲಸುವಾಸನೆ ಬರು.
ಹಡಿಲು (ನಾ). ೧. ಹುಲ್ಲಿನ ರಾಶಿ; ಮೆದೆ. ೨. ಸಸ್ಯ ಬೆಳೆಯದ ಭೂಮಿ; ಬಂಜರು. ~ಬೀಳು = ಬಂಜರಾಗು; ಪಡಬೀಳು.
ಹಡು (ಕ್ರಿ). ಸಂಭೋಗಿಸು; ಕೂಡು.
ಹಡುಕ (ನಾ). ವ್ಯಭಿಚಾರಿ; ಜಾರ.

ಹಡುಕು = ಹಡಕು. ~ನಾತ = ಹಡಿಕೆನಾತ.

ಹಡುವ = ಪಡುವ.

ಹಡುವಲು = ಪಡುವ.

ಹಡುವು (ನಾ). ಹೊಲಸುಪದಾರ್ಥ.

ಹಡೆ (ಕ್ರಿ). ೧. ಹೊಂದು; ಪಡೆ. ೨. ಹೆರು; ಪ್ರಸವಿಸು.

ಹಣ (ನಾ). ೧. ದ್ರವ್ಯ; ಧನ. ೨. ಒಂದು ಬಗೆಯ ನಾಣ್ಯ; ಪಣ. ~ಗಾರ=ಹಣವಂತ.

ಹಣಕು (ಕ್ರಿ). ಇಣಿಕಿನೋಡು; ಕದ್ದುನೋಡು.

ಹಣಜಿ (ನಾ). ಒಂದು ಜಾತಿಯ ಸಸ್ಯ.

ಹಣತೆ ೧. = ಪಣತಿ. ೨. ಬಾಳೆಹಣ್ಣಿನ ಚಿಪ್ಪು.

ಹಣವಂತ (ನಾ). ಧನಿಕ; ಸಾವುಕಾರ.

ಹಣಾಹಣಿ (ನಾ). ಉಗ್ರವಾದ ಹೊಡೆದಾಟ.

ಹಣಿ (ಕ್ರಿ). ೧. ಹೊಡೆ; ಥಳಿಸು. ೨. ಹರಿತ ಮಾಡು. ೩. ಬಾಗು; ಮಣಿ.

ಹಣಿಕು = ಹಣಕು.

ಹಣಿಗು = ಹಣಕು.

ಹಣಿಗೆ ೧.=ಪಣಿಗೆ.೨.ಬಾಳೆಹಣ್ಣಿನ ಚಿಪ್ಪು.

ಹಣಿತೆ = ಪಣತಿ.

ಹಣಿಸು (ಕ್ರಿ). ೧. ಬಡಿದು ಹರಿತಗೊಳಿಸು; ಚೂಪುಮಾಡು. ೨. ಸುರಿ; ಹನಿಸು.

ಹಣುಂಗು ೧.=ಹಣಕು. (ನಾ). ೨.ಅಡಗುವಿಕೆ; ಮರೆಯಾಗುವಿಕೆ.

ಹಣುಗು ೧. = ಹಣಕು. ೨. ಅಡಗು; ಮರೆಯಾಗು.

ಹಣೆ (ನಾ). ೧. ನೊಸಲು. ೨. ಕಾಡುಮೃಗಗಳ ವಿಶ್ರಾಂತಿ ಸ್ಥಳ; ಪಣೆ. ೩. ಮರದ ಕಾಂಡದ ಮೇಲುಭಾಗ. ~ಕ(ಗ)ಣ್ಣು =ಪಣೆಗಣ್. ~ಪಟ್ಟ = ೧. ಹಣೆಯ ಮೇಲೆ ಧರಿಸುವ ಆಭರಣ. ೨. ತಲೆಬರೆಹ; ಶೀರ್ಷಿಕೆ. ~ಬರಹ = ವಿಧಿಲಿಖಿತ; ಅದೃಷ್ಟ. ~ಬೊಟ್ಟು=ಬೈತಲೆಗೆ ಧರಿಸುವ ಒಂದು ಆಭರಣ; ಬೈತಲೆಬೊಟ್ಟು. ~ಹಚ್ಚು = ತಲೆಬಾಗು; ನಮಸ್ಕರಿಸು.

ಹಣೆಗಣ್ಣು = ಪಣೆಗಣ್ಣು.

ಹಣ್ಣು = ಪಣ್ಣು. ~ಆಗು = ೧. ಪಕ್ವವಾಗು; ಮಾಗು. ೨. ಮೆತ್ತಗಾಗು. ೩. ಬಳಲು; ಸೊರಗು. ೪. ನೆರೆ; ಬೆಳ್ಳಗಾಗು. ~ಇಸು =೧. ಸಿದ್ಧಪಡಿಸು; ಏರ್ಪಾಡುಮಾಡು. ೨. ಪಕ್ವವಾಗಿಸು; ಮಾಗಿಸು. ~ಎಲೆ = ಪಣ್ಣೆಲೆ. ~ಮಾಡು = ೧. ಹಣ್ಣಾಗಿಸು. ೨. ಮೆತ್ತಗಾಗುವಂತೆ ಮಾಡು; ಬಳಲಿಸು. ~ಮುದುಕ = ತುಂಬ ವಯಸ್ಸಾದವನು; ಅತಿವೃದ್ಧ. ~ಮುದುಕಿ = ಬಹಳ ವಯಸ್ಸಾದವಳು; ಅತಿವೃದ್ಧೆ.

ಹತ (ಗು). ೧. ಕೊಂದ. ೨. ಹೊಡೆದ; ಘಾಸಿಗೊಳಿಸಿದ. ೩. ನಿರಾಶೆಗೊಳಿಸಿದ. ~ಆಶೆ = ನಿರಾಶೆ. ~ಆಹತಿ = ಎಡೆಬಿಡದ ಹೊಡೆತ. ~ಆಹುತ = ಹೊಡೆತಕ್ಕೆ ಆಹುತಿಯಾದ; ಬಲಿಯಾದ. ~ಬಲ = ೧. ಶಕ್ತಿಯನ್ನು ಕಳೆದುಕೊಂಡವನು. ೨. ಶಕ್ತಿಯಿಲ್ಲದ; ನಿತ್ರಾಣವಾದ. ~ಭಾಗ್ಯ = ಭಾಗ್ಯವನ್ನು ಕಳೆದುಕೊಂಡವನು; ಅದೃಷ್ಟಹೀನ.

ಹತಾರ (ನಾ). ಕೈದು; ಆಯುಧ; ಶಸ್ತ್ರ.

ಹತಾರು = ಹತಾರ.

ಹತಿ (ನಾ). ೧. ಹೊಡೆತ; ಪೆಟ್ಟು. ೨. ಕೊಲೆ; ಸಂಹಾರ. ~ಇಸು=೧. ಹೊಡೆ; ಘಾತಿಸು. ೨. ಕೊಲ್ಲು; ಸಂಹರಿಸು.

ಹತಿಯಾರು = ಹತಾರ.

ಹತಿಯಿಸು = ಹತಿಸು.

ಹತೋಟಿ (ನಾ). ಅಂಕೆ; ಹಿಡಿತ.

ಹತ್ತ (ನಾ). ಹಸ್ತ; ಕೈ.

ಹತ್ತಕಟ್ಟು (ನಾ). ೧. ಕಡಗ; ಕಂಕಣ. ೨. = ಹತ್ತಸರ.

ಹತ್ತಕಡಕು (ನಾ). ಕಿವಿಗೆ ಧರಿಸುವ ಒಂದು ಬಗೆಯ ಆಭರಣ; ಒಂಟಿ.

ಹತ್ತಡಿ = ಹತ್ತರಿ.

ಹತ್ತರಿ (ನಾ). ಉಜ್ಜುಗೊರಡು ; ಕೀಸುಳಿ ; ತೋಳಪಡ. ~ ನೊಡೆ=ಉಜ್ಜುಗೊರಡಿನಿಂದ ನಯಗೊಳಿಸು.

ಹತ್ತಸರ (ನಾ). ಒಂದು ಬಗೆಯ ಕಂಠಾಭರಣ.

ಹತ್ತಳ (ನಾ). ಚಾವಟಿ ; ಚಬುಕು.

ಹತ್ತಿ = ಪಟ್ಟಿ.

ಹತ್ತಿಕ್ಕು (ಕ್ರಿ). ದಮನಮಾಡು ; ಹತೋಟಿಯಲ್ಲಿಡು.

ಹತ್ತಿಗ (ನಾ). ನಂಟ ; ಆಪ್ತ.

ಹತ್ತಿರ (ನಾ). ಸಮೀಪ ; ಬಳಿ.

ಹತ್ತು (ಕ್ರಿ). ೧. ಅಡರು ; ಏರು. ೨. ಅಂಟಿಕೊಳ್ಳು. ೩. ತೊಡಗು ; ಆರಂಭಿಸು. ೪. ಮುಟ್ಟು ; ಸ್ಪರ್ಶಿಸು. ೫. ಉರಿ ; ಜ್ವಲಿಸು. ೬. ಬೆನ್ನಟ್ಟು ; ಹಿಂಬಾಲಿಸು. ೭. ಬೇರುಬಿಡು. (ನಾ). ೮. ಅಂಟಿಕೊಳ್ಳುವುದು ; ಹೊಂದಿಕೊಳ್ಳುವುದು. ೯. ಸ್ನೇಹ; ಗೆಳೆತನ. ೧೦. ಆಸಕ್ತಿ. ೧೧. ಒಂದು ಸಂಖ್ಯೆ; ದಶ. ~ ಇಸು = ಹತ್ತಿಸು. ~ ಕ(ಗ)ಡೆ = ನಂಟು ; ಸಂಬಂಧ.

ಹತ್ತುಗೆ = ಪತ್ತುಗೆ.

ಹತ್ತೆ = ಹತ್ತಿರ.

ಹತ್ಯಾಕಾಂಡ (ನಾ). ಕಗ್ಗೊಲೆಯ ಪ್ರಸಂಗ, –ಘಟನೆ.

ಹತ್ಯಾರ = ಹತಾರ.

ಹತ್ಯೆ (ನಾ). ಕೊಲೆ ; ವಧೆ.

ಹದ (ನಾ). ೧. ರೀತಿ; ಕ್ರಮ. ೨. ನಿಲವು; ಸ್ಥಿತಿ. ೩. ಪಕ್ವತೆ ; ಪದನು. ೪. ಅನುಕೂಲತೆ. ~ಕೆ(ಗೆ)ಡು=ಹಾಳಾಗು ; ಕೆಟ್ಟುಹೋಗು. ~ಕೊ(ಗೊ)ಳಿಸು = ಪದಂಗೊಳಿಸು. ~ಗಾಣ(ರ) = ರೀತಿಯನ್ನು ಅರಿತವನು ; ಜಾಣ. ~ಬರು = ಅನುಕೂಲವಾದ ಸ್ಥಿತಿಗೆ ಬರು. ~ಬಿ(ವಿ)ಲ್ಲು = ಯೋಗ್ಯವಾದ ಬಿಲ್ಲು. ~ಬೆದೆ = ಬಿತ್ತಲು ಯೋಗ್ಯವಾದ ಸಮಯ. ~ಮು(ವ)ಳೆ = ಅನುಕೂಲಕರವಾದ ಮಳೆ. ~ಮೀರು = ೧. ಕ್ರಮವನ್ನು ಉಲ್ಲಂಘಿಸು. ೨. ಪಕ್ವತೆಯನ್ನು ಕಳೆದುಕೊಳ್ಳು.

ಹದಗ (ನಾ). ದೀಪದ ಹುಳು ; ಪತಂಗ.

ಹದಗಪಲೆ (ನಾ). ಕಂಕುಳು, ತೊಡೆಸಂದು ಮೊದಲಾದ ಕಡೆಗಳಲ್ಲಿ ಉಂಟಾಗುವ ನೋವಿನ ಗೆಡ್ಡೆ.

ಹದಡು (ನಾ). ಮಣಿಗಂಟು ; ಮಣಿಕಟ್ಟು.

ಹದನ ೧. = ಪದನು. ೨. ಶೀಕ್ಷ್ಣತೆ ; ಹರಿತವಾದುದು.

ಹದನು = ಹದನ.

ಹದರು ೧. = ಹದಡು. ೨. ಎಳೆಯ ಕಾಯಿ ; ಮಿಡಿ.

ಹದಹು (ನಾ). ೧. ಪ್ರೀತಿ; ಒಲವು. ೨. ಉತ್ಸಾಹ ; ಹುರುಪು.

ಹದಿ (ಕ್ರಿ). ೧. ಅಡಿಪಾಯ ಹಾಕು ; ಬುನಾದಿಯನ್ನು ಹಾಕು. ೨. ತಗ್ಗುತೋಡು ; ಹಳ್ಳಮಾಡು. ೩. ಮೆಟ್ಟು ; ಕೂರಿಸು. (ನಾ). ೪. ಬುನಾದಿ ; ತಳಪಾಯ. ೫. = ಪದಿ. ~ಕಟ್ಟು = ೧. ಅಸ್ತಿವಾರವನ್ನು ಹಾಕು ; ಬುನಾದಿಯನ್ನು ಹಾಕು. ೨. ಬುನಾದಿಯನ್ನು ಹಾಕುವುದಕ್ಕಾಗಿ ಹಸಿನೆಲದಲ್ಲಿ ಮಾಡಿದ ಚೌಕಟ್ಟು.

ಹದಿಟೆ (ನಾ). ಪ್ರತಿಷ್ಠೆ.

ಹದಿಬತೆ = ಪತಿವ್ರತೆ.

ಹದಿಬದೆ = ಪತಿವ್ರತೆ.

ಹದಿರ್(ರು) (ನಾ). ೧. ಹೀಚು ; ಎಳೆಗಾಯಿ. ೨. ಮಣಿಕಟ್ಟು. ೩. = ಪದಿರ್. ~ಗಾಱ(ರ)=ಚಮತ್ಕಾರದ ಮಾತುಗಳನ್ನು ಆಡುವವನು. ~ನುಡಿ= ಪದಿರ್ನುಡಿ.

ಹದುಗು = ಪದುಗು. ~ಇಸು = ಒತ್ತು ; ಅಮುಕು ; ಕುಗ್ಗಿಸು.

ಹದುಳ = ಪದುಳ. ~ಇಗ = ಪದುಳಿಗ. ~ಇಸು = ಪದುಳಿಸು.

ಹದ್ದು ೧. = ಹದ್ದು. ೨. ಗಡಿ; ಸೀಮೆ; ಎಲ್ಲೆ. ೩. = ಹದ್ದುಬಸ್ತು. ~ಕ(ಗ)ಣ್ಣು =೧. ಹದ್ದಿನ ಕಣ್ಣು. ೨. ತೀಕ್ಷ್ಣದೃಷ್ಟಿ. ~ಕೆ(ಗೆ)ಡು = ಎಲ್ಲೆಮೀರು; ಮಿತಿ ಮೀರು. ~ಮೀರು = ಹದ್ದುಗೆಡು.

ಹದ್ದುಬಸ್ತು (ನಾ). ಅಂಕೆ; ಹತೋಟಿ.

ಹನನ (ನಾ). ೧. ಕೊಲೆಮಾಡುವಿಕೆ; ವಧೆ ಮಾಡುವಿಕೆ. ೨. ಕೊಲೆ; ವಧೆ. ೩. ಗಾಯ ಗೊಳಿಸುವಿಕೆ; ಘಾಸಿಮಾಡುವಿಕೆ.

ಹನಸು (ನಾ). ೧. ಹೇಳಿಕೆ. ೨. ವೇದದ ಉಕ್ತಿ.

ಹನಿ ೧. = ಪನಿ. ೨. ಕಳಿ; ಪಕ್ವವಾಗು. ~ಆ(ಯಾ)ಡು = ನೀರು ಕಾಣಿಸಿಕೊಳ್ಳು. ~ಇಸು = ೧. ಸಿಂಪಡಿಸು; ಚಿಮುಕಿಸು. ೨. ಸುರಿ; ಎರೆ. ~ಕ(ಗ)ಟ್ಟು = ಹನಿಗಳಿಂದ ಆವರಿಸು; ಹನಿಗೂಡು. ~ಕ(ಗ)ಣ್ಣು = ಹನಿಗಳಿಂದ ಕೂಡಿದ ಕಣ್ಣು; ನೀರಿನಿಂದ ತುಂಬಿದ ಕಣ್ಣು. ~ಕೂ(ಗೂ)ಡು = ೧. ಹನಿಗಟ್ಟು. ೨. ಒಟ್ಟುಸೇರು. ~ಮಳೆ = ಸಣ್ಣಮಳೆ; ತುಂತುರು.

ಹನು (ನಾ). ೧. ಕೇಡು ಮಾಡತಕ್ಕ ವಸ್ತು. ೨. ದವಡೆ; ಅವುಡು.

ಹನುಮಿಸು (ಕ್ರಿ). ನೆಗೆ; ಹಾರು; ಲಂಘಿಸು.

ಹನೆ = ಪನೆ. ~ಗರಿ = ತಾಳೆಗರಿ.

ಹನ್ನ (ನಾ). ೧. ಅಮೇಧ್ಯ; ಮಲ. ೨. ಹೊಲಸು ಮಾತು; ಅಶ್ಲೀಲವಾದ ಮಾತು.

ಹಪಾಹಪಿ (ನಾ). ೧. ಆತುರ; ಹಂಬಲ. ೨. ಆತುರವುಳ್ಳವನು.

ಹಪ್ತೆ (ನಾ). ೧. ತೆರಿಗೆ; ಕಂದಾಯ. ೨. ತೆರಿಗೆ, ಕಂದಾಯಗಳನ್ನು ಸಲ್ಲಿಸುವ ಅವಧಿ. ೩. ವಾರ; ಏಳುದಿವಸಗಳ ಕಾಲ.

ಹಪ್ಪಳ = ಪಪ್ಪಡ.

ಹಪ್ಪಳಿಕೆ ೧. = ಪಪ್ಪಡ. ೨. ಚಪ್ಪಟೆಯಾದುದು.

ಹಪ್ಪಳಿಗೆ = ಪಪ್ಪಡ.

ಹಪ್ಪಳೆ (ನಾ). ಚಪ್ಪಡಿ; ಹಾಸುಗಲ್ಲು.

ಹಪ್ಪು (ನಾ). ಮಾಂಸ.

ಹಪ್ಪುಕಳ (ನಾ). ಹೆಣವನ್ನು ತಿನ್ನುವ ಹದ್ದು; ರಣಹದ್ದು.

ಹಬು (ನಾ). ಪ್ರಭು; ಒಡೆಯ.

ಹಬೆ (ನಾ). ೧. ಕಾಂತಿ; ಪ್ರಭೆ. ೨. ಆವಿ; ಉಗಿ. ~ಕ(ಗ)ಣ್ಣು = ಒಂದು ಬಗೆಯ ಕಣ್ಣಿನ ರೋಗ.

ಹಬ್ಬ = ಪಬ್ಬ.

ಹಬ್ಬು = ಪರ್ಬು.

ಹಬ್ಬುಗೆ = ಪರ್ಬುಗೆ.

ಹಬ್ಬೆ (ನಾ). ಬೆತ್ತ; ವೇತ್ರ.

ಹಮಾಲ(ನಾ). ಭಾರವನ್ನು ಹೊರುವ ಕೂಲಿಯ ಆಳು.

ಹಮಾಲಿ (ನಾ). ೧. ಹಣ; ಕೂಲಿ. ೨. ಕೂಲಿ ಕೆಲಸ; ಸೇವಾವೃತ್ತಿ. ೩. = ಹಮಾಲ.

ಹಮ್ಮದ (ನಾ). ೧. ಮೈಮರೆಯುವಿಕೆ; ಮೂರ್ಛೆ. ೨. ಬೆರಗು; ದಿಗ್ಭ್ರಮೆ. ~(೦)ಪೊ(ಬೊ)ೞಗು = ಹಮ್ಮಯಿಸು.

ಹಮ್ಮಯಿಸು (ಕ್ರಿ). ಮೂರ್ಛೆ ಹೊಂದು; ಎಚ್ಚರತಪ್ಪು.

ಹಮ್ಮನಿಸು = ಹಮ್ಮಯಿಸು.

ಹಮ್ಮಳ = ಹಮ್ಮದ. ~ಇಸು = ಹಮ್ಮಯಿಸು.

ಹಮ್ಮಿಣಿ (ನಾ). ಹಣದ ಚೀಲ; ಥೈಲಿ.

ಹಮ್ಮೀಣಿ = ಹಮ್ಮಿಣಿ.

ಹಮ್ಮೀರ (ನಾ). ಧೈರ್ಯಶಾಲಿ; ದಿಟ್ಟ.

ಹಮ್ಮು (ಕ್ರಿ). ೧. ಕಾರ್ಯರೂಪಕ್ಕೆ ತರು; ಯೋಜಿಸು; ಹೂಡು. ೨. ಹೆಣೆ; ಹೊಸೆ. (ನಾ). ೩. ಯೋಜನೆ; ಏರ್ಪಾಡು. ೪. ಸೊಕ್ಕು; ಗರ್ವ; ಮದ. ೫. ಕೆಚ್ಚು; ಉತ್ಸಾಹ. ~ಇಕೆ = ಗರ್ವ; ಅಹಂಕಾರ. ~ಇಗ=ಹಮ್ಮುಗ. ~ಕೆ(ಗೆ)ಡು=ಸೊಕ್ಕು ಅಡಗು; ಗರ್ವಭಂಗವಾಗು.

ಹಮ್ಮುಗ (ನಾ). ಸೊಕ್ಕಿನ ಮನುಷ್ಯ ; ಗರ್ವಿಷ್ಠ.
ಹಮ್ಮುಗೆ (ನಾ). ಹಗ್ಗ ; ಹುರಿ.
ಹಮ್ಮೈಸು (ಕ್ರಿ). ೧. ಗರ್ವಿಸು ; ಅಹಂಕಾರ ಪಡು. ೨. ಕಾತರಿಸು ; ಹಂಬಲಿಸು. ೩. = ಹಮ್ಮಯಿಸು.
ಹಯ (ನಾ). ಕುದುರೆ ; ವಾಜಿ. ~ಆರೂಢ = ಕುದುರೆಯ ಸವಾರ ; ಅಶ್ವಾರೋಹಿ. ~ಗ್ರೀವ =೧. ಹಯವದನ. ೨. ವೇದಗಳನ್ನು ಕದ್ದೊಯ್ದ ಒಬ್ಬ ರಾಕ್ಷಸನ ಹೆಸರು. ೩. ಕಡಲೆಯ ಬೇಳೆ ಹಾಗು ಬೆಲ್ಲಗಳನ್ನು ಬೇಯಿಸಿ ಮಾಡುವ ಒಂದು ಬಗೆಯ ಸಿಹಿ ಖಾದ್ಯ. ~ದಳ = ಚತುರಂಗಬಲಗಳಲ್ಲಿ ಒಂದು ; ಅಶ್ವಬಲ. ~ಮೇಧ = ಕುದುರೆಯನ್ನು ಬಲಿಕೊಡುವ ಒಂದು ಯಾಗ ; ಅಶ್ವಮೇಧ. ~ವದನ = ೧. ಕುದುರೆಯ ಮುಖ. ೨. ವಿಷ್ಣುವಿನ ಒಂದು ಅವತಾರ.
ಹಯನ (ನಾ). ಹಾಲು, ಬೆಣ್ಣೆ ಮೊದಲಾದುವು.
ಹಯನು ೧. = ಪಯನು. ೨. = ಹಯನ. ೩. ನೀರು.
ಹಯ್ಯಂಗವೀನ (ನಾ). ಆಗ ತಾನೇ ತೆಗೆದ ಬೆಣ್ಣೆ ; ನವನೀತ.
ಹರ (ನಾ). ೧. ನಾಶಮಾಡುವವನು. ೨. ಶಿವ. ೩. ಈಶಾನ್ಯದಿಕ್ಕು. ~ಅದ್ರಿ = ಹರಗಿರಿ. ~ಗಿರಿ = ಕೈಲಾಸಪರ್ವತ. ~ಪ್ರಯತ್ನ = ವಿಶ್ವಪ್ರಯತ್ನ ; ಅತಿಯಾದ ಸಾಹಸ. ~ಪ್ರಿಯ = ಕುಬೇರ. ~ಸಮಯ = ವೀರಶೈವಧರ್ಮ.
ಹರಕತ್ತು (ನಾ). ಅಡ್ಡಿ ; ತಡೆ.
ಹರಕರಿಸು = ಪರಕಲಿಸು.
ಹರಕಲಿಸು = ಪರಕಲಿಸು.
ಹರಕು (ನಾ). ಹರಿದುದು ; ಚಿಂದಿ. ~ಚಿಂದಿ = ಚೂರು ಚೂರಾದ ಬಟ್ಟೆ. ~ತನ = ೧. ಬಡತನ. ೨. ಗಾಂಭೀರ್ಯವಿಲ್ಲದಿರುವಿಕೆ. ~ಬಾಯಿ=೧. ಒಡಕುಬಾಯಿ ; ಗುಟ್ಟು ನಿಲ್ಲದ ಬಾಯಿ. ೨. ಹರಟುವ ಬಾಯಿ.
ಹರಕೆ (ನಾ). ೧. ಆಶೀರ್ವಾದ. ೨. ದೇವರಿಗೆ ಮಾಡುವ ಸೇವೆಯ ನಿರ್ಧಾರ, -ಸಂಕಲ್ಪ. ೩. ಮುಡಿಪು ; ಮಾಸಲು. ~ಕಟ್ಟು = ಮುಡಿಪು ಕಟ್ಟು ; ಮಾಸಲಿರಿಸು. ~ತೀರಿಸು = ದೇವರ ಸೇವೆಯ ಬಗೆಗೆ ಮಾಡಿಕೊಂಡ ಸಂಕಲ್ಪವನ್ನು ಪೂರೈಸು.
ಹರಗಣೆ (ನಾ). ಸಾಗುವಳಿ ಮಾಡುವಿಕೆ ; ಹರಗುವಿಕೆ.
ಹರಗು ೧. = ಪರಗು. ೨. ಹರಡು ; ಚೆಲ್ಲು ; ಹರಹು.
ಹರಟು (ಕ್ರಿ). ೧. ಕೆಲಸಕ್ಕೆ ಬಾರದ ಮಾತನಾಡು ; ಗಳಹು. ೨. ಅಸಂಬದ್ಧವಾಗಿ ಮಾತನಾಡು.
ಹರಟೆ (ನಾ). ೧. ಕೆಲಸಕ್ಕೆ ಬಾರದ ಮಾತನಾಡುವಿಕೆ ; ಗಳಹುವಿಕೆ. ೨. ಅಸಂಬದ್ಧವಾಗಿ ಮಾತನಾಡುವಿಕೆ. ೩. ಪ್ರಬಂಧದಲ್ಲಿ ಒಂದು ಪ್ರಕಾರ. ~ಗಾರ = ೧. ಲಲಿತಪ್ರಬಂಧವನ್ನು ಬರೆಯುವವನು. ೨. = ಹರಟೆಗಾಱ. ~ಗಾಱ(ರ) = ಅತಿಯಾಗಿ ಮಾತನಾಡುವವನು. ~ಮಲ್ಲ = ಹರಟೆಗಾಱ. ~ಮಲ್ಲಿ = ಅತಿಯಾಗಿ ಮಾತನಾಡುವವಳು.
ಹರಡು = ಪರಡು. ~ಇಕೆ = ಪಸರಿಸುವಿಕೆ ; ವಿಸ್ತಾರವಾಗುವಿಕೆ.
ಹರಡೆ (ನಾ). ೧. ಒಂದು ಜಾತಿಯ ನೀರುಹಕ್ಕಿ ; ಪರಡೆ. ೨. ಒಂದು ಜಾತಿಯ ಮರ ; ಅಣಿಲೆ.
ಹರಣ ೧. = ಪರಣ. ೨. ನಾಶ. ೩. ಕಿತ್ತುಕೊಳ್ಳುವುದು. ~ವಲ್ಲಭ = ಪ್ರಾಣವಲ್ಲಭ ; ಪ್ರೀತಿಪಾತ್ರ.
ಹರತಾಳ (ನಾ). ೧. ಸಂಪು ; ಮುಷ್ಕರ ೨. = ಹರಿತಾಲ.

ಹರತೆ (ನಾ). ಕುಂಟೆ ಹೊಡೆಯುವಿಕೆ; ಹರಗುವಿಕೆ.

ಹರದ ೧. = ಪರದ. ೨. ಕೆದರಿಹೋಗಿರುವುದು; ಚೆಲ್ಲಾಪಿಲ್ಲಿಯಾಗಿರುವುದು. ~ಇಕೆ = ವ್ಯಾಪಾರ; ವಾಣಿಜ್ಯ.

ಹರದಾರಿ (ನಾ). ಮೂರು ಮೈಲುಗಳ ಒಂದು ಅಳತೆ.

ಹರದಿ = ಹರದೆ.

ಹರದು = ಪರದು. ~ಇಗ = ಪರದ.

ಹರದೆ (ನಾ). ಮುತ್ತೈದೆ; ಗರತಿ.

ಹರಯ (ನಾ). ತಾರುಣ್ಯ; ಪ್ರಾಯ.

ಹರಲು = ಪರಲ್.

ಹರವಡಿ (ನಾ). ಪ್ರದರ್ಶನ; ತೋರಿಕೆ.

ಹರವರಿ (ನಾ). ವ್ಯಾಪ್ತಿ; ಹರವು.

ಹರವಸ (ನಾ). ಮೈ ಮರೆಯುವಿಕೆ; ಪರವಶ. ~(ಂ)ಪೊ(ಬೊ)ೀಗು = ಎಚ್ಚರತಪ್ಪು; ಮೈಮರೆ.

ಹರವಿ = ಪರವಿ.

ಹರವು (ಕ್ರಿ). ೧. ವ್ಯಾಪಿಸು; ಹರಡು. ೨. ಹರಡುವಂತೆ ಮಾಡು; ಹರಹು. (ನಾ). ೩. ವ್ಯಾಪ್ತಿ; ವಿಸ್ತಾರ. ೪. ಬಡಾವಣೆ; ವಿಸ್ತರಣೆ.

ಹರಸು (ಕ್ರಿ). ೧. ಆಶೀರ್ವಾದ ಮಾಡು. ೨. ಹಾರೈಸು. ೩. ದೇವರಿಗೆ ಹರಕೆಯನ್ನು ಹೊರು.

ಹರಹು = ಹರವು.

ಹರಳ (ನಾ). ಜಾರ; ವಿಟ. ~ಇಗ = ಹರಳ. ~ಇಸು = ಕಾಮಿಸು; ಬಯಸು.

ಹರಳು ೧. = ಪರಲ್. ೨. ಔಡಲಗಿಡ ಮತ್ತು ಅದರ ಬೀಜ. ೩. ಒಂದು ಜಾತಿಯ ಮೀನು. ~ಉಪ್ಪು = ಹಳುಕಾಗಿರುವ ಉಪ್ಪು. ~ಎಣ್ಣೆ = ಔಡಲೆಣ್ಣೆ; ಕೈಯೆಣ್ಣೆ. ~ಓಲೆ = ಬೆಲೆಯುಳ್ಳ ಮಣಿಗಳಿಂದ ಮಾಡಿದ ಓಲೆ.

ಹರಾಜು (ನಾ). ಲಿಲಾವು; ಏಲಂ.

ಹರಾಮ (ನಾ). ೧. ಅನುಚಿತವಾದುದು; ಕೆಟ್ಟದು. ೨. ಕೃತಘ್ನ. ೩. ಕೆಟ್ಟವನು; ದುಷ್ಟ.

ಹರಾಮಿ (ನಾ). ೧. ಕೆಟ್ಟ ಹೆಂಗಸು; ದುಷ್ಟೆ. (ಗು). ೨. ಕೀಳುನಡತೆಯ.

ಹರಾಹುರಿ (ನಾ). ಅನಿರ್ಬಂಧತೆ; ಸ್ವೇಚ್ಛಾವೃತ್ತಿ.

ಹರಿ (ಕ್ರಿ). ೧. ಪ್ರವಹಿಸು. ೨. ಓಡು; ಧಾವಿಸು. ೩. ಹರಡು; ವ್ಯಾಪಿಸು. ೪. ಕೀಳು; ಕೊಯ್ಯು. ೫. = ಹಜಿ. (ನಾ). ೬. ಪ್ರವಾಹ. ೭. ಹರಡಿರುವುದು; ಚೆದರಿರುವುದು. ೮. ದಂಡು; ಸೈನ್ಯ. ೯. ಅಂದ; ರೀತಿ. ೧೦. ಬೀದಿ; ಸಾಲು. ೧೧. ಅಗ್ನಿ. ೧೨. ಹಸುರು ಬಣ್ಣ. ೧೩. ಚಿನ್ನದ ಬಣ್ಣ; ಹಳದಿ. ೧೪. ಚಿನ್ನ. ೧೫. ಚಂದ್ರ. ೧೬. ಸೂರ್ಯ. ೧೭. ಕಿರಣ; ರಶ್ಮಿ. ೧೮. ಗಾಳಿ; ವಾಯು. ೧೯. ಇಂದ್ರ. ೨೦. ವಿಷ್ಣು; ಕೃಷ್ಣ. ೨೧. ಶಿವ. ೨೨. ಬ್ರಹ್ಮ. ೨೩. ಸಿಂಹ. ೨೪. ಕುದುರೆ. ೨೫. ಕಪ್ಪೆ. ೨೬. ಗಿಣಿ. ೨೭. ಕಪಿ. ೨೮. ಹಾವು. ೨೯. ನವಿಲು. ೩೦. ದಿಕ್ಕು; ದಿಶೆ. ೩೧. ನೀರು. ~ಇಸು=೧. ಓಡುವಂತೆ ಮಾಡು; ಮುನ್ನುಗ್ಗಿಸು. ೨. ಮುಂದಕ್ಕೆ ಪ್ರವಹಿಸುವಂತೆ ಮಾಡು. ೩. ದೂರಮಾಡು; ನಿವಾರಿಸು; ಕಳೆ. ೪. ನಾಶಮಾಡು. ~ಒ(ಯೊ,ವೊ)ಲೆ=ಹಲವು ಪಾತ್ರೆಗಳನ್ನು ಏಕಕಾಲದಲ್ಲಿ ಇಡಲು ಅನುಕೂಲವಾಗಿರುವಂತೆ ಇರುವ ಉದ್ದವಾದ ಒಲೆ. ~ಕಂಠ = ನವಿಲು. ~ಕ(ಗ)ಂಡಿ = ನೀರು ಹರಿಯಲು ಮಾಡಿರುವ ಕಂಡಿ. ~ಕ(ಗ)ಡಿ =೧. ಸಾಲು ನಿಂತುಹೋಗು. ೨. ಕತ್ತರಿಸು. ~ಕಥೆ = ೧. ದೇವರ ಕಥೆ. ೨. ಹಾಡು, ಸ್ತೋತ್ರ ಮುಂತಾದುವುಗಳನ್ನು ಸೇರಿಸಿ ಭಕ್ತಿಯನ್ನುಂಟುಮಾಡಲು ಹೇಳುವ ಒಂದು ಬಗೆಯ ಕಥೆ; ಪುರಾಣಪ್ರಸಂಗ;

ಕಥಾಕಾಲಕ್ಷೇಪ. ~ಕಾಱ(ರ) = ೧. ತಿರುಗಾಡುವ ವ್ಯಾಪಾರಿ. ೨. ಗೂಢಚಾರ; ಬೇಹಿನವನು. ೩. = ಪರಿಕಾಱ. ~ಕೆ(ಗೆ)ಡು =೧. ದಿಕ್ಕುಗೆಟ್ಟು ಓಡು. ೨. ತುಂಡಾಗು ; ಕತ್ತರಿಸಲ್ಪಡು. ~ಚಂದನ = ೧. ಒಂದು ಬಗೆಯ ಶ್ರೀಗಂಧ. ೨. ದೇವಲೋಕದ ಮರಗಳಲ್ಲಿ ಒಂದು. ~ಜನ = ಹೊಲೆಯ ; ಅಂತ್ಯಜ. ~ದಾಸ = ವಿಷ್ಣುಭಕ್ತ. ~ದಿನ = ಏಕಾದಶಿ. ~ನೀಲ(ಳ)=ಒಂದು ಬಗೆಯ ರತ್ನ; ಇಂದ್ರನೀಲ. ~ಪದ = ವೈಕುಂಠ; ಮೋಕ್ಷ. ~ಪೀಠ = ಸಿಂಹಾಸನ; ಗದ್ದುಗೆ. ~ಬಲ = ರಾವುತರ ಸೈನ್ಯ ; ಅಶ್ವಬಲ. ~ಭೂಮ=ಮದುವೆಯಲ್ಲಿ ಗಂಡುಹೆಣ್ಣನ್ನು ಕೂಡಿಸಿ ಊಟ ಮಾಡಿಸುವ ಒಂದು ಶಾಸ್ತ್ರ. ~ಮೇಖಲೆ(ಳೆ) = ೧. ರತ್ನದ ಡಾಬು. ೨. ಇಂದ್ರಜಾಲ; ಕಣ್ಕಟ್ಟು. ~ವಾಸ =೧. ವಿಷ್ಣುವು ವಾಸವಾಗಿರುವಿಕೆ. ೨. ಕಪ್ಪೆಯು ವಾಸವಾಗಿರುವಿಕೆ. ~ವಾಸರ = ಹರಿದಿನ. ~ವಿಷ್ಟರ=ಹರಿಪೀಠ. ~ಶರ = ೧. ನಾರಾಯಣಾಸ್ತ್ರ. ೨. ಶಿವ. ~ಹಾಯು = ಮೇಲೆ ಬೀಳು ; ರೇಗು.

ಹರಿಗೆ = ಪರಿಗೆ. ~ಕಾಱ(ರ) = ಗುರಾಣಿಯನ್ನು ಹಿಡಿದಿರುವವನು.

ಹರಿಗೋಲು = ಪಱುಗೋಲ್.

ಹರಿಜ (ನಾ). ಬ್ರಹ್ಮ.

ಹರಿಣ (ನಾ). ೧. ಮಾಸಲು ಬಿಳುಪು. ೨. ಹುಲ್ಲೆ ; ಚಿಗರೆ. ~ಅಂಕ = ಜಿಂಕೆಯ ಗುರುತನ್ನು ಹೊಂದಿರುವವನು ; ಚಂದ್ರ. ~ಪಕ್ಷ = ಶುಕ್ಲಪಕ್ಷ. ~ರಿಪು = ಜಿಂಕೆಯ ಶತ್ರು ; ಹುಲಿ.

ಹರಿಣಧರ (ನಾ). ಜಿಂಕೆಯನ್ನು ಧರಿಸಿದವನು; ಚಂದ್ರ.

ಹರಿಣಿ (ನಾ). ೧. ಹಸುರುಬಣ್ಣ. ೨. ಹೆಣ್ಣು ಜಿಂಕೆ ; ಎರಳೆ. ೩. ಒಂದು ವೃತ್ತದ ಹೆಸರು.

ಹರಿತ (ನಾ). ೧. ಹಸುರುಬಣ್ಣ ; ಮರಕತ ವರ್ಣ. ೨. ಹರಿಯುವಿಕೆ ; ಪ್ರವಹಿಸುವಿಕೆ. ೩. ತೀಕ್ಷ್ಣತೆ; ಚೂಪು. (ಗು). ೪. ಚೂಪಾದ; ತೀಕ್ಷ್ಣವಾದ.

ಹರಿತಕ (ನಾ). ೧. ಹಸುರು ತರಕಾರಿ ; ಕಾಯಿಪಲ್ಯೆ. ೨. ಅಳಲೆಕಾಯಿ.

ಹರಿತಾಲ(ಳ) (ನಾ). ಒಂದು ಬಗೆಯ ಹಳದಿ ಲೋಹ ; ಅರಿದಾಳ.

ಹರಿದಂತ (ನಾ). ದಿಕ್ಕಿನ ಕೊನೆ ; ದಿಗಂತ.

ಹರಿದಶ್ವ (ನಾ). ಸೂರ್ಯ ; ನೇಸರು.

ಹರಿದಳ = ಹರಿತಾಲ.

ಹರಿದಾರಿ = ಹರದಾರಿ.

ಹರಿದ್ರೆ (ನಾ). ಹಳದಿಬಣ್ಣದ ಪುಡಿ ; ಅರಿಸಿನ.

ಹರಿನಾಳಿ (ನಾ). ನೀರು ಹರಿದುಹೋಗಲು ಮಾಡಿರುವ ಕೊಳವೆ ; ದೋಣಿ.

ಹರಿನಾಳಿಗೆ = ಹರಿನಾಳಿ.

ಹರಿನ್ಮಣಿ (ನಾ). ನವರತ್ನಗಳಲ್ಲಿ ಒಂದು ; ಪಚ್ಚೆ.

ಹರಿಬ (ನಾ). ೧. ಸಮೂಹ ; ಗುಂಪು. ೨. ಕಾರ್ಯ ; ಕರ್ತವ್ಯ. ೩. ಸಂಕಷ್ಟ ; ಬವಣೆ. ೪. ಹಗೆ ; ದ್ವೇಷ. ೫. ಉಪಾಯ ; ಹಂಚಿಕೆ. ~ಕಾಱ(ರ) = ಕಾರ್ಯಕ್ಕೆ ಒದಗುವವನು ; ಸಹಾಯಕ.

ಹರಿಯಕ್ಷ = ಹರ್ಯಕ್ಷ.

ಹರಿಯಣ = ಪರಿಯಣ.

ಹರಿಯಾಣ = ಪರಿಯಣ

ಹರಿವಣ = ಪರಿಯಣ.

ಹರಿವಾಣ = ಪರಿಯಣ.

ಹರಿವು ೧. = ಪರಿವು. ೨. = ಹಱುವು.

ಹರಿವೆ = ಹರುವೆ.

ಹರಿಸ = ಹರುಷ.

ಹರುಕು = ಹರಕು.

ಹರುವು (ನಾ). ೧. ಯೋಚನೆ ; ಎಣಿಕೆ. ೨. ವ್ಯಾಪ್ತಿ. ೩. = ಹಱುವು.

ಹರುವೆ (ನಾ). ಒಂದು ಜಾತಿಯ ಸೊಪ್ಪು.

ಹರುಷ (ನಾ). ನಲಿವು; ಸಂತೋಷ. ~ಅಶ್ರು = ಸಂತೋಷದ ಕಣ್ಣೀರು; ಆನಂದಬಾಷ್ಪ. ~ಪುಳಕ = ಸಂತೋಷದಿಂದುಂಟಾಗುವ ರೋಮಾಂಚನ.

ಹರುಸ = ಹರುಷ.

ಹರುಹು (ನಾ). ವಿಸ್ತಾರ; ವ್ಯಾಪ್ತಿ.

ಹರೆ (ಕ್ರಿ). ೧. ಹರಡು; ವ್ಯಾಪಿಸು. ೨. ಚೆದರು; ಚೆಲ್ಲಾಪಿಲ್ಲಿಯಾಗು. (ನಾ). ೩. ಅರುಣೋದಯ; ಬೆಳಗಿನ ಜಾವ. ೪. = ಹಱೆ. ೫. ಟಿಸಿಲು; ಕೊಂಬೆ. ೬. ಏರಿ; ಬದು. ೭. ಪೊರೆ; ಪದರ. ೮. = ಹರಯ.

ಹರೆಯ = ಹರಯ.

ಹಱ(ರ)ಲೆ (ನಾ). ಅಪವಾದ; ಅಪಾದನೆ.

ಹಱಿ(ರಿ) (ಕ್ರಿ). ೧. ಕತ್ತರಿಸು; ತುಂಡು ಮಾಡು. ೨. ಕತ್ತರಿಸಿಹೋಗು; ತುಂಡಾಗು. ೩. ಸಾಧ್ಯವಾಗು; ನೆರವೇರು. ~ತ(ದ)ಲೆ = ಪಱುದಲೆ.

ಹಱಿ(ರಿ)ವು (ನಾ). ೧. ಸೀಳುವಿಕೆ. ೨. ಕೊನೆ; ಅಂತ್ಯ.

ಹಱು(ರು)ಕ (ನಾ). ಹೇಡಿ; ಪುಕ್ಕಲ.

ಹಱು(ರು)ಗೋಲ್(ಲು) = ಪಱುಗೋಲ್.

ಹಱು(ರು)ವು (ನಾ). ೧. ಉಪಾಯ; ಯುಕ್ತಿ. ೨. ಅನುಕೂಲತೆ; ಅವಕಾಶ. ೩. ನಾಶ; ಕೊನೆ.

ಹಱೆ(ರೆ) (ನಾ). ಒಂದು ಬಗೆಯ ಚರ್ಮವಾದ್ಯ; ಪರೆ; ತಮಟೆ. ~ಕಾ(ಗಾ)ಱ(ರ) = ಪಱೆಕಾಱ. ~ಕು(ಗು)ಟ್ಟು = ಪಱೆಗುಟ್ಟು.

ಹರ್ಮ್ಯ (ನಾ). ಭವನ; ಸೌಧ.

ಹರ್ಯಕ್ಷ (ನಾ). ಸಿಂಹ.

ಹರ್ಷ = ಹರುಷ. ~ಅಂಬು = ಹರುಷಾಶ್ರು.

ಹರ್ಷಣ (ನಾ). ೧. ಕಣ್ಣಿನ ಒಂದು ಬಗೆಯ ರೋಗ. (ಗು). ೨. ರೋಮಾಂಚನವಾಗುವಂತೆ ಮಾಡುವ; ನವಿರೇಳಿಸುವ. ೩. ಸಂತೋಷದಾಯಕವಾದ; ಆನಂದದ.

ಹಲ್(ಲು) = ಪಲ್. ~ತಿ(ದಿ)ನ್ = ಕೋಪದಿಂದ ಅವುಡುಗಚ್ಚು.

ಹಲ (ನಾ). ೧. ಉಳುವ ಒಂದು ಸಾಧನ; ನೇಗಿಲು. ೨. ಒಂದು ತೂಕ. (ಸ). ೩. = ಪಲವು. ~ಆಯುಧ = ೧. ನೇಗಿಲು. ೨. ನೇಗಿಲನ್ನು ಆಯುಧವನ್ನಾಗಿ ಉಳ್ಳವನು; ಬಲರಾಮ. ~ಕಾ(ಗಾ)ಲ = ಪಲಗಾಲ. ~ದಂಡ = ನೇಗಿಲ ಈಸು. ~ಹಸ್ತ = ನೇಗಿಲನ್ನು ಕೈಯಲ್ಲಿ ಹಿಡಿದಿರುವವನು; ಬಲರಾಮ.

ಹಲಕು (ಕ್ರಿ). ೧. ಮರವನ್ನು ಹತ್ತು, –ಏರು. (ನಾ). ೨. ಗಲ್ಲದ ಕೆಳಭಾಗ; ಮೆಲುಕು.

ಹಲಗೆ = ಪಲಗೆ. ~ಕಾಱ(ರ) = ಹಲಗೆಯನ್ನು ಬಾರಿಸುವವನು.

ಹಲಚಿ (ಗು). ಚಪ್ಪಟೆಯಾದ; ಸಪಾಟಾದ.

ಹಲಧರ = ಹಲಹಸ್ತ.

ಹಲಪಿ (ನಾ). ಆಟಕ್ಕೆ ಉಪಯೋಗಿಸುವ ವರ್ತುಳಾಕಾರದ ಬಿಲ್ಲೆ; ಬಚ್ಚ.

ಹಲಪೆ = ಹಲಪಿ.

ಹಲವಳಿ (ಕ್ರಿ). ಗರ್ಭಸ್ರಾವವಾಗು; ಮೈಯಿಳಿ.

ಹಲವು = ಪಲವು.

ಹಲಸಂದೆ (ನಾ). ಒಂದು ಬಗೆಯ ದ್ವಿದಳ ಧಾನ್ಯ; ಅಲಸಂದೆ.

ಹಲಸು = ಪಲಸು.

ಹಲಾಕು (ನಾ). ೧. ಹಿಂಸೆ; ತೊಂದರೆ; ಕಾಟ. ೨. ನಾಶ; ಹಾನಿ. ೩. ಬಡವಾದುದು.

ಹಲಾಲ (ನಾ). ಕಸಗುಡಿಸುವವನು; ಭಂಗಿ. ~ಖೋರ = ೧. ಮೋಸಗಾರ; ತಕ್ಕ. ೨. = ಹಲಾಲ.

ಹಲಿ (ನಾ). ಬಲರಾಮ.

ಹಲಿಕೆ = ಹಲುಬೆ.

ಹಲಿಯುಳಿ = ಹಲವಳಿ.

ಹಲಿವ್ರುಳಿ = ಹಲವಳಿ.

ಹಲು(ಂ)ಬು = ಪಲುಂಬು.

ಹಲುಬೆ (ನಾ). ಉತ್ತ ಮೇಲೆ ನೆಲವನ್ನು ಮಟ್ಟ ಮಾಡುವ ಒಂದು ಉಪಕರಣ. ~ಹೊಡೆ = ಹರತೆಹೊಡೆ ; ಹರಗು ; ಸಮಗೊಳಿಸು.

ಹಲ್ಕಟ್ (ನಾ). ೧. ನೀಚವ್ಯಕ್ತಿ ; ಅಲ್ಪವ್ಯಕ್ತಿ. (ಗು). ೨. ಕೀಳಾದ ; ಕ್ಷುದ್ರವಾದ.

ಹಲ್ಕಾ ೧. = ಹಲ್ಕಟ್. (ಗು). ೨. ಹಗುರವಾದ ; ತೂಕವಿಲ್ಲದ. ~ಸಹವಾಸ = ಅಲ್ಪರ ಒಡನಾಟ.

ಹಲ್ಮ (ನಾ). ೧. ನೇಗಿಲು ಹೊಡೆಯಬೇಕಾಗಿರುವ ಭೂಮಿ. ೨. ಉತ್ತ ಭೂಮಿ. ೩. ಕುರೂಪ ; ಅಂದಗೇಡಿತನ.

ಹಲ್ಲಕ (ನಾ). ಕೆಂಪು ಕಮಲ ; ಕೆಂದಾವರೆ.

ಹಲ್ಲಣ = ಪಲ್ಲಣ. ~ಇಸು = ೧. ಸಜ್ಜಾಗು ; ಸಿದ್ಧವಾಗು. ೨. ಸಜ್ಜುಗೊಳಿಸು ; ಸಿದ್ಧಪಡಿಸು. ೩. = ಪಲ್ಲಣಿಸು. ೪. ಮುಂದೆ ಹೋಗು ; ಸಾಗು. ೫. ಕೆನೆ ; ಹೇಷಾರವ ಮಾಡು.

ಹಲ್ಲಣಿಗೆ = ಪಲ್ಲಣ.

ಹಲ್ಲಾ (ನಾ). ಮುತ್ತಿಗೆ ; ದಾಳಿ. ~ಹತ್ತು = ಮುತ್ತಿಗೆ ಹಾಕು ; ದಾಳಿಮಾಡು.

ಹಲ್ಲಿ (ನಾ). ಗೌಳಿ ; ಪಲ್ಲಿ.

ಹಲ್ಲು ೧. = ಪಲ್. ೨. ಗರಗಸ ಮುಂತಾದುವುಗಳ ಚೂಪಾದ ತುದಿ. ೩. ನಿಚ್ಚಣಿಕೆಯ ಮೆಟ್ಟಲು. ~ಕಡಿ = ಪಲ್ಗಚ್ಚು. ~ಕಿ(ಗಿ)ಱಿ(ರಿ) = ಪಲ್ಗಿಱಿ. ~ಗಿಂಜು = ಯಾಚಿಸು; ಬೇಡು. ~ಪುಡಿ = ಹಲ್ಲುಜ್ಜಲು ಉಪಯೋಗಿಸುವ ಪುಡಿ ; ದಂತಚೂರ್ಣ.

ಹಲ್ಲೆ (ನಾ). ೧. ಕಿವಿಯ ಕೆಳಭಾಗ ; ಹಾಲೆ. ೨. ಮುಗುಚುವ ಕೈಯ ಮುಂಭಾಗ. ೩. ಕುದುರೆ ಅಥವಾ ಎತ್ತುಗಳ ಕಾಲಿಗೆ ಬಡಿಯುವ ಲಾಳ. ೪. ಆಟದ ಬಿಲ್ಲೆ. ೫. ಹಲಗೆ ; ಮುಚ್ಚಳ. ೬. ತುಂಡು ; ಚೂರು. ೭. ತಕ್ಕಡಿಯ ಬಟ್ಟಲು, –ಪರಡೆ. ೮. ದಾಳಿ ; ಆಕ್ರಮಣ. ~ಕ(ಗ)ಡುಬು = ಚಪ್ಪಟೆಯಾದ ಬಿಲ್ಲೆಯಾಕಾರದ ಕಡುಬು. ~ಗಾರ = ಕುದುರೆ, ಎತ್ತು ಮುಂತಾದುವುಗಳಿಗೆ ಲಾಳ ಕಟ್ಟುವವನು.

ಹಲ್ವ (ನಾ). ಒಂದು ಬಗೆಯ ಸಿಹಿ ತಿಂಡಿ.

ಹವ = ಹವಾ.

ಹವಣ್(ಣು) = ಪವಣ್. ~ಅಱಿ(ರಿ) = ಪವಣಱಿ. ~ಇಕೆ = ೧. ಮಿತಿ; ಅಳತೆ. ೨. ಹಂಚಿಕೆ ; ಉಪಾಯ ; ಯೋಜನೆ. ~ಇಸು = ೧. ಸಿದ್ಧಮಾಡು ; ಅಣಿಗೊಳಿಸು. ೨. ಎಣಿಕೆಹಾಕು; ಯೋಜಿಸು. ೩. ಮಾಡು; ಆರಂಭಿಸು. ೪. ಪ್ರಯತ್ನಿಸು; ಉದ್ಯಮಿಸು. ೫. ಅಳತೆಮಾಡು ; ತೂಗು. ೬. ಒದಗಿಸು ; ಪೂರೈಸು.

ಹವನ (ನಾ). ೧. ಅಗ್ನಿಗೆ ಕೊಡುವ ಆಹುತಿ. ೨. ಹೋಮ ; ಯಾಗ.

ಹವಳ = ಪವಳ.

ಹವಾ (ನಾ). ೧. ಗಾಳಿ; ವಾಯು. ೨. ವಾಯುಗುಣ ; ವಾತಾವರಣ. ~ಗುಣ = ಗಾಳಿಯ ಸ್ಥಿತಿಗತಿ ; ವಾಯುಗುಣ.

ಹವಾಲದಾರ (ನಾ). ಸೈನ್ಯದ ಒಬ್ಬ ಅಧಿಕಾರಿ.

ಹವಾಲು (ನಾ). ವಶ ; ಸುಪರ್ದು.

ಹವಾಲೆ = ಹವಾಲು.

ಹವಿ (ನಾ). ಯಜ್ಞದಲ್ಲಿ ಅಗ್ನಿಗೆ ಆಹುತಿ ಕೊಡುವ ಹಾಲು, ತುಪ್ಪ, ಧಾನ್ಯ ಮೊದಲಾದುವು ; ಹವಿಸ್ಸು. ~ಪ್ರದಾನ = ಅಗ್ನಿಗೆ ಆಹುತಿಯನ್ನು ಕೊಡುವುದು.

ಹವಿಕ = ಹವ್ಯಕ.

ಹವಿರ್ಭಾಗ (ನಾ). ಹವಿಸ್ಸಿನ ಭಾಗ.

ಹವಿರ್ಭುಜ (ನಾ). ಅಗ್ನಿ.

ಹವಿಲ್ದಾರ = ಹವಾಲದಾರ.

ಹವಿಷ್ಯ = ಹವಿ.

ಹವಿಸ್ಸು = ಹವಿ.

ಹವೀಜ (ನಾ). ಕೊತ್ತುಂಬರಿ ಬೀಜ ; ಧನಿಯ.

ಹವೆ = ಹವಾ.

ಹವೇಲಿ (ನಾ). ಸೌಧ ; ಭವನ; ಮಹಡಿಮನೆ.

ಹವ್ಯ (ನಾ). ೧. ಅಗ್ನಿಗೆ ಆಹುತಿ ಕೊಡಲು ಯೋಗ್ಯವಾದುದು. ೨. ದೇವತೆಗಳಿಗೆ ಅರ್ಪಿಸುವ ಬಲಿ. ~ವಾಹನ = ಹವಿಸ್ಸನ್ನು ಒಯ್ಯುವವನು ; ಅಗ್ನಿ.

ಹವ್ಯಕ (ನಾ). ೧. ಯಜ್ಞದಲ್ಲಿ ಅಗ್ನಿಗೆ ಆಹುತಿಯನ್ನು ಕೊಡುವವನು. ೨. ಕರಾವಳಿಯ ಬ್ರಾಹ್ಮಣರಲ್ಲಿ ಒಂದು ಪಂಗಡ.

ಹವ್ಯಾಸ (ನಾ). ೧. ಹಂಬಲ ; ಆಸಕ್ತಿ. ೨. ಚಟ ; ಅಭ್ಯಾಸ.

ಹವ್ಯಾಸಿ (ನಾ). ೧. ಹಂಬಲವುಳ್ಳವನು ; ಆಸಕ್ತಿಯುಳ್ಳವನು. ೨. ಅಭ್ಯಾಸವುಳ್ಳವನು.

ಹವ್ವನೆ = ಪವ್ವನೆ.

ಹವ್ವಳಿಸು (ಕ್ರಿ). ಅಂಜು ; ಹೌಹಾರು ; ಹೆದರು.

ಹಸ ೧. = ಹಸನು. ೨. = ಪಸವು. ~(ಂ)ಕೆ(ಗೆ)ಡು = ವಿಕಾರವಾಗು ; ಅಂದಗೆಡು. ~ಕಾ(ಗಾ)ಲ = ಕ್ಷಾಮ ; ಬರಗಾಲ. ~ಕೆ(ಗೆ)ಯರ್ = ಶುದ್ಧಮಾಡು; ನಿರ್ಮಲಗೊಳಿಸು.

ಹಸನ ೧. = ಹಸನು. ೨. ನಗು ; ಹಾಸ.

ಹಸನು (ನಾ). ೧. ನೈರ್ಮಲ್ಯ ; ಸ್ವಚ್ಛತೆ. ೨. ಶುದ್ಧವಾದುದು. ೩. ಒಳ್ಳಿತು ; ಶುಭ. ೪. ಶ್ರೇಷ್ಠವಾದುದು. ೫. ರುಚಿಯಾದುದು.

ಹಸನ್ಮುಖ (ನಾ). ನಗೆಯಿಂದ ಕೂಡಿದ ಮುಖ.

ಹಸನ್ಮುಖಿ (ನಾ). ೧. ನಗುಮುಖದಿಂದ ಕೂಡಿದ ವ್ಯಕ್ತಿ. (ಗು). ೨. ನಗೆಯಿಂದ ಅರಳಿದ ಮುಖವುಳ್ಳ.

ಹಸರ (ನಾ). ೧. ಹರಡುವಿಕೆ ; ಪ್ರಸಾರ. ೨. ಸಮೂಹ ; ಗುಂಪು. ೩. ಅಂಗಡಿ ; ಪಸರ. ~ಇಕೆ = ಹರಡುವಿಕೆ ; ಪಸರಿಸುವಿಕೆ. ~ಇ(ವಿ)ಕ್ಕು = ಪ್ರಚಾರಗೊಳಿಸು. ~ಇಗ = ಪ್ರಸಾರಮಾಡುವವನು.

ಹಸರು = ಪಸರು.

ಹಸಲೆ = ಪಸಲೆ.

ಹಸವು = ಪಸವು.

ಹಸಾದ (ನಾ). ಅನುಗ್ರಹ ; ಪ್ರಸಾದ.

ಹಸಿ = ಪಸಿ. ~ಅ(ಯ)ಡಕೆ = ಬೇಯಿಸದೆ ಇರುವ ಅಡಕೆ. ~ದಡ್ಡ = ಶುದ್ಧದಡ್ಡ ; ಶತಮೂರ್ಖ. ~ಶುಂಠಿ = ಅಲ್ಲ.

ಹಸಿಗೆ (ನಾ). ಹಂಚಿಕೆ ; ವಿಭಾಗ.

ಹಸಿತ (ನಾ). ೧. ನಗೆ ; ಹಾಸ. (ಗು). ೨. ಅರಳಿದ ; ವಿಕಸಿತವಾದ.

ಹಸಿಬೆ = ಪಸುಂಬೆ.

ಹಸಿರು = ಪಸಿರ್.

ಹಸಿವು = ಪಸಿವು.

ಹಸಿವೆ = ಪಸಿವೆ.

ಹಸು (ನಾ). ೧. ಎಳೆಯತನ ; ಎಳಮೆ. ೨. ಆವು ; ಆಕಳು. ~ಕೂ(ಗೂ)ಸು = ಪಸುಗೂಸು. ~ತನ = ಬಾಲ್ಯ. ~ಮಗ = ಪಸುಗೂಸು.

ಹಸು(ಂ)ಬ = ಪಸುಂಬ.

ಹಸು(ಂ)ಬೆ = ಪಸುಂಬೆ.

ಹಸುಕು (ನಾ). ಹಸಿಯಿಂದ ಉಂಟಾಗುವ ಒಂದು ಬಗೆಯ ವಾಸನೆ ; ಕೊಳೆತ ವಾಸನೆ.

ಹಸುಗೆ = ಪಸುಗೆ.

ಹಸುರು = ಪಸಿರ್. ~ಕಲ್ಲು = ಪಸಿರ್ಗಲ್. ~ಹಾವು = ಒಂದು ಜಾತಿಯ ಹಾವು.

ಹಸುರುವಾಣಿ (ನಾ). ೧. ಹಸುರಾಗಿರುವ ಎಲೆ. ೨. ಹಸುರುಚಪ್ಪರದ ಕೆಳಗೆ ಮಾಡುವ ಮದುವೆಯ ಒಂದು ಶಾಸ್ತ್ರ. ~ಚಪ್ಪರ = ಹಸುರಾಗಿರುವ ಬಾಳೆಯ ಎಲೆ, ತೆಂಗಿನ ಗರಿ, ಮಾವಿನಸೊಪ್ಪು ಮುಂತಾದುವುಗಳಿಂದ ಅಲಂಕರಿಸಿದ ಚಪ್ಪರ.

ಹಸುಳೆ ೧. = ಪಸುಳೆ. ೨. ಏನೂ ತಿಳಿಯದವನು ; ಮುಗ್ಧ. ~ತನ = ಪಸುಳೆತನ. ~ಪೆ(ವೆ)ಱೆ(ರೆ) = ಬಾಲಚಂದ್ರ. ~ಬಿಸಿಲು = ಎಳೆಬಿಸಿಲು.

ಹಸೆ (ನಾ). ೧. ಶುಭಕಾರ್ಯಗಳಲ್ಲಿ ಹಾಕುವ ಪೀಠ. ೨. ರಂಗವಲ್ಲಿಯಿಂದ ಮಾಡುವ ಚಿತ್ರರಚನೆ. ೩. ಹಾಸುಗೆ. ~ನಿಲ್ಲು=೧. ಹಸೆಮಣೆಯನ್ನು ಏರು. ೨. ಮದುವೆಯಾಗು. ~ಮ(ವ)ಣೆ=ಶುಭಕಾರ್ಯಗಳಲ್ಲಿ ಹಾಕುವ ಪೀಠ, –ಮಣೆ.

ಹಸ್ತ (ನಾ). ೧. ಕೈ ; ಕರ. ೨. ಆನೆಯ ಸೊಂಡಿಲು. ೩. ತಿದಿ. ೪. ಮಣಿಕಟ್ಟಿನಿಂದ ನಡುಬೆರಳಿನ ತುದಿಯವರೆಗಿನ ಅಳತೆ. ೫. ಏಳು ಗೇಣಿನ ಅಳತೆ. ೬. ಇಪ್ಪತ್ತೇಳು ನಕ್ಷತ್ರಗಳಲ್ಲಿ ಒಂದು ಮತ್ತು ಆ ನಕ್ಷತ್ರದಲ್ಲಿ ಬರುವ ಮಳೆ. ೭. ಮೊತ್ತ; ರಾಶಿ. ೮. ಒಬ್ಬ ರಾಕ್ಷಸನ ಹೆಸರು. ೯. ನಾಟ್ಯದಲ್ಲಿ ಸೂಚಿಸುವ ಒಂದು ಮುದ್ರೆ. ~ಅಂತರ = ಒಬ್ಬರ ಕೈಯಿಂದ ಮತ್ತೊಬ್ಬರ ಕೈಗೆ ಬದಲಾಯಿಸುವಿಕೆ. ~ಅಕ್ಷರ = ೧. ಕೈಬರೆಹ. ೨. ರುಜು ; ಸಹಿ. ~ಉದಕ = ೧. ಕೈಗೆ ಹಾಕುವ ನೀರು. ೨. ಪವಿತ್ರಜಲ ; ತೀರ್ಥ. ೩. ಸಂಕಲ್ಪಮಾಡಿ ನೀಡುವ ದಾನ. ~ಕಂಕಣ = ಕಡಗ; ಬಳೆ. ~ಕೌಶಲ = ಕೈಚಳಕ ; ನೈಪುಣ್ಯ. ~ಕ್ಷೇಪ=ಮಧ್ಯೆ ಪ್ರವೇಶಿಸುವಿಕೆ ; ಮೂಗು ಹಾಯಿಸುವಿಕೆ. ~ಗುಣ=೧. ಪ್ರಭಾವ; ಕೈಗುಣ. ೨. ವೈದ್ಯ ಮೊದಲಾದುವುಗಳಿಗೆ ಸಂಬಂಧಪಟ್ಟಂತೆ ಕಾಣುವ ಸತ್ಪರಿಣಾಮ. ~ಪತ್ರಿಕೆ = ಕರಪತ್ರ ; ಕೈಯಿಂದ ಹಂಚಲು ಮುದ್ರಣ ಮಾಡಿದ ಪತ್ರ. ~ಪ್ರತಿ = ಕೈಬರೆಹದ ಪ್ರತಿ. ~ಲಾಘವ = ೧. ಹಸ್ತಕೌಶಲ. ೨. ಕೈಕುಲುಕುವಿಕೆ. ~ಸರ = ಒಂದು ಬಗೆಯ ಆಭರಣ; ಕೈಸರ. ~ಸಾಮುದ್ರಿಕೆ = ಅಂಗೈರೇಖೆಗಳನ್ನು ನೋಡಿ ಭವಿಷ್ಯ ಹೇಳುವುದು.

ಹಸ್ತಕ (ನಾ). ಬೆಂಬಲಿಗ ; ಅನುಯಾಯಿ.

ಹಸ್ತಿ (ನಾ). ಆನೆ; ಗಜ. ~ಶಾಲೆ = ಆನೆ ಕರೋಟಿ ; ಗಜಶಾಲೆ.

ಹಸ್ತಿನಿ (ನಾ). ೧. ಹೆಣ್ಣಾನೆ ; ಪಿಡಿ. ೨. ನಾಲ್ಕು ಬಗೆಯ ಸ್ತ್ರೀಯರಲ್ಲಿ ಒಂದು ಬಗೆಯವಳು.

ಹಳ (ನಾ). ೧. ನೇಗಿಲು ; ಹಲ. ೨. = ಹೞ.

ಹಳಕು = ಪಳಕು.

ಹಳಚಿಕೆ (ನಾ). ಹೊಳಪು ; ಕಾಂತಿ.

ಹಳಚು (ಕ್ರಿ). ೧. ರಭಸದಿಂದ ತಾಗು, –ಅಪ್ಪಳಿಸು. ೨. ಎದುರಿಸು ; ಪ್ರತಿಭಟಿಸು. ೩. ಸೇರು ; ಕೂಡು. ೪. ಪ್ರಕಾಶಿಸು ; ಹೊಳೆ.

ಹಳದಿ ೧. = ಪಳದಿ. ೨. ಅರಿಸಿನದ ಪುಡಿ. ~ಜ್ವರ = ಅರಿಸಿನಮುಂಡಿಗೆ ; ಕಾಮಾಲೆ.

ಹಳಬ (ನಾ). ೧. ಅನುಭವಸ್ಥ ; ಹಿರಿಯ. ೨. ತಳವಾರ; ಕಾವಲುಗಾರ. ೩.=ಹೞೆಯ.

ಹಳಮೆ (ನಾ). ಪ್ರಾಚೀನತೆ ; ಹಳೆಯದು.

ಹಳಯಿಗೆ = ಪೞಯಿಗೆ.

ಹಳವಂಡ ೧. = ಹಳಹಳಿ. ೨. ಭ್ರಮೆ.

ಹಳವಳಿಕೆ (ನಾ). ೧. ತಾಕಲಾಟ ; ಹೊಯ್ದಾಟ. ೨. = ಪಳವಳಿ.

ಹಳವಳಿಸು (ಕ್ರಿ). ೧. ಪ್ರಕ್ಷುಬ್ಧಗೊಳ್ಳು ; ಹೊಯ್ದಾಡು. ೨. = ಪಳವಳಿಸು.

ಹಳವಿಸು = ಹಳವಳಿಸು.

ಹಳವೆ = ಪೞವೆ.

ಹಳಸು = ಪೞಸು.

ಹಳಹಳಿ (ನಾ). ೧. ಬಯಕೆ ; ಹಂಬಲ. ೨. = ಪಳವಳಿ.

ಹಳಹಳಿಕೆ ೧. = ಹಳವಳಿಕೆ. ೨. ಹೊಳಪು ; ಕಾಂತಿ.

ಹಳಹಳಿಸು ೧. = ಹಳವಳಿಸು. ೨. ಪ್ರಕಾಶಿಸು; ಥಳಥಳಿಸು.

ಹಳಿ (ಕ್ರಿ). ೧. ದೂಷಿಸು ; ನಿಂದಿಸು ; ಬಯ್ಯು. (ನಾ). ೨.=ಪೞಿವು. ೩.ಲೋಹದ ಕಂಬಿ. ೪. ರೈಲುಕಂಬಿ. ೫. ತುಂಡು ; ಚೂರು ; ಹಳಕು. ೬. ಜೇನುಗೂಡು, –ಹುಟ್ಟಿ. ೭. = ಹಲಿ.

ಹಳಿವು = ಪೞಿವು.

ಹಳು = ಪೞುವ.

ಹಳುಕು = ಪಳಕು.

ಹಳುವು = ಪೞುವ.

ಹಳೆ = ಪೞೆ. ~ಕ(ಗ)ನ್ನಡ = ಪ್ರಾಚೀನವಾದ ಕನ್ನಡ.

ಹಳೆಯ = ಪೞೆಯ.

ಹಳ್ಳ = ಪಳ್ಳ. ~(ಂ)ಪ(ಬ)ಱಿ(ರಿ) = ಹಳ್ಳವಾಗಿ ಹರಿ. ~ಹಿಡಿ = ವ್ಯರ್ಥವಾಗು ; ಹಾಳಾಗು.

ಹಳ್ಳಿ (ನಾ). ಚಿಕ್ಕ ಊರು ; ಗ್ರಾಮ ; ಪಳ್ಳಿ. ~ಇಗ = ಹಳ್ಳಿಕಾಱ. ~ಕಾ(ಗಾ)ಡು = ಹಳ್ಳಿಯ ಪ್ರದೇಶ. ~ಕಾಱ(ರ)=ಹಳ್ಳಿಯಲ್ಲಿ ವಾಸಿಸುವವನು ; ಗ್ರಾಮಸ್ಥ.

ಹಳ್ಳಿಕಾರ್ (ನಾ). ಗ್ರಾಮಾಂತರಗಳಲ್ಲಿ ದೊರಕುವ ದನದ ತಳಿ.

ಹೞ(ಳ) = ಪೞ.

ಹೞ(ಳ)ಯಿಗೆ = ಪೞಯಿಗೆ.

ಹೞು(ಳು)ವ = ಪೞುವ.

ಹೞೆ(ಳೆ)ಯ (ನಾ). ಪೂರ್ವಿಕ ; ಹಳಬ.

ಹಾ(ಂ)ಗೆ = ಅಪಂಗೆ.

ಹಾಂಸೆ = ಪಾಂಸೆ.

ಹಾಕು ೧. = ಹಾಯ್ಕು. ೨. ಸೇರಿಸು ; ಕೂಡಿಸು. ೩. ಎಸೆ ; ಒಗೆ.

ಹಾಗ ೧. = ಪಾಗ. ೨. ಕಾಲು ಭಾಗ ; ನಾಲ್ಕನೆಯ ಒಂದು ಪಾಲು.

ಹಾಗಲ್(ಲು) (ನಾ). ಒಂದು ಜಾತಿಯ ಬಳ್ಳಿ ಮತ್ತು ಅದರ ಕಾಯಿ.

ಹಾಗಲ = ಹಾಗಲ್.

ಹಾಜರ್(ರು) (ನಾ). ಇರುವಿಕೆ ; ಉಪಸ್ಥಿತವಾಗಿರುವಿಕೆ. ~ಪಟ್ಟಿ = ಕಚೇರಿ, ಶಾಲೆ ಮುಂತಾದ ಕಡೆಗಳಲ್ಲಿ ದಿನನಿತ್ಯ ಬಂದಿರುವವರನ್ನು ಸೂಚಿಸುವ ಪಟ್ಟಿ.

ಹಾಜರಾತಿ = ಹಾಜರ್.

ಹಾಜರಿ = ಹಾಜರ್.

ಹಾಟಕ (ನಾ). ೧. ಚಿನ್ನ ; ಹೊನ್ನು. ೨. ಉತ್ತಮವಾದ ನೆಲ, –ಭೂಮಿ. ೩. ಒಂದು ಬಗೆಯ ಆಯುಧ. ೪. ಒಂದು ಜಾತಿಯ ಸೇಬು.

ಹಾಡ (ನಾ). ೧. ಒಂದು ಅಳತೆಯ ಮಾನ. ೨. ಎಣ್ಣೆಯ ಗಡಿಗೆ, –ಪಾತ್ರೆ.

ಹಾಡಂಗಿ (ನಾ). ಒಂದು ಜಾತಿಯ ಮರ.

ಹಾಡಿ (ನಾ). ಹಳ್ಳಿ ; ಪಾಡಿ ; ಗ್ರಾಮ.

ಹಾಡಿಯ = ಪಾಡಿವ.

ಹಾಡು (ಕ್ರಿ). ೧. ಗಾನ ಮಾಡು. ೨. ಹೊಗಳು; ಸ್ತುತಿಸು. (ನಾ). ೩.ಗಾನ; ಗೀತೆ. ೪.ಕಷ್ಟ; ತೊಂದರೆ. ೫. ಅವಸ್ಥೆ ; ಸ್ಥಿತಿ. ~ಕ(ಗ)ಬ್ಬ = ಹಾಡಲು ಯೋಗ್ಯವಾದ ಕಾವ್ಯ ; ಗೇಯ ಕಾವ್ಯ. ~ಗಾರ = ಪಾಡುಂಗಾಱ.

ಹಾಡುಗ (ನಾ). ಒಕ್ಕಲು ; ನಿವಾಸಿ.

ಹಾಡ್ಯ (ನಾ). ೧. ಮನೆಯ ಹಿಂಭಾಗ ; ಹಿತ್ತಿಲು. ೨. ಒಂದು ಬಗೆಯ ಕುರುಚಲು ಕಾಡು.

ಹಾಣಾಹಾಣಿ = ಪಣಾಪಣಿ.

ಹಾತೆ (ನಾ). ಒಂದು ಜಾತಿಯ ಹುಳು; ಜಿರಲೆ; ಜೊಂಡಿಗ.

ಹಾತೊರೆ (ಕ್ರಿ). ೧. ಆತುರಪಡು; ಕಾತರಿಸು. ೨. ಹಂಬಲಿಸು ; ಬಯಸು.

ಹಾದರ = ಪಾದರ. ~ಆ(ವಾ)ಡು = ವ್ಯಭಿಚಾರಮಾಡು. ~ಇಗ = ಪಾದರಿಗ. ~ಗಿತ್ತಿ = ವ್ಯಭಿಚಾರಿಣಿ ; ಜಾರೆ.

ಹಾದರಿ (ನಾ). ಒಂದು ಜಾತಿಯ ಮರ ಮತ್ತು ಅದರ ಹೂವು ; ಪಾದರಿ.

ಹಾದಿ ೧. = ಪಾದಿ. ೨. ಕ್ರಮ ; ರೀತಿ. ~ಇಗ = ಪ್ರಯಾಣಿಕ ; ದಾರಿಗ. ~ಕಾಯು = ಎದುರುನೋಡು ; ನಿರೀಕ್ಷಿಸು. ~ಕಾರ = ಹಾದಿಗ. ~ಕೆ(ಗೆ)ಡು =೧. ದಾರಿ ತಿಳಿಯದಾಗು. ೨. ರೀತಿ ತಪ್ಪು ; ಕೆಟ್ಟ ಕ್ರಮವನ್ನನುಸರಿಸು. ~ತೆ(ದೆ)ಗೆ =೧. ಹೋಗು ; ಸಾಗು. ೨. ದಾರಿಮಾಡು. ~ಸುದ್ದಿ = ಬೀದಿಮಾತು ; ಗುಲ್ಲು. ~ಹಿಡಿ = ೧. ಅನುಸರಿಸು ; ಹಿಂಬಾಲಿಸು. ೨. ಹೋಗು; ಸಾಗು. ~ಹೋಕ=ಹಾದಿಗ.

ಹಾನಿ (ನಾ). ೧. ಹಾಳು ; ನಾಶ. ೨. ಕುಂದು; ಕೊರತೆ. ೩. ಖರ್ಚು ; ವ್ಯಯ. ೪. ಕೇಡು; ಅಪಾಯ. ೫. ನಷ್ಟ.

ಹಾನೆ (ನಾ). ಒಂದು ಬಗೆಯ ಅಳತೆ.

ಹಾಯ್ ೧.=ಪಾಯ್. (ನಾ). ೨. ಸಂತೋಷ, ಸಮಾಧಾನ, ದುಃಖ ಮುಂತಾದುವನ್ನು ಸೂಚಿಸುವ ಮಾತು. ~ಆಗು=ಹಿತವೆನಿಸು; ಸಂತೋಷವುಂಟಾಗು. ~ಇಸು=ಪಾಯಿಸು. ~ಕ(ಗ)ಡ = ಹೊಳೆಯನ್ನು ದಾಟುವ ಸ್ಥಳ ; ಕಡವು.

ಹಾಯನ (ನಾ). ೧. ವರ್ಷ ; ಸಂವತ್ಸರ. ೨. ಕಿರಣ ; ರಶ್ಮಿ. ೩. ಒಂದು ಬಗೆಯ ಕೆಂಬಣ್ಣದ ಅಕ್ಕಿ.

ಹಾಯಿ ೧. = ಹಾಯ್. (ನಾ). ೨. ದೋಣಿಯ ಕಂಬಕ್ಕೆ ಕಟ್ಟುವ ಬಟ್ಟೆ, ~ಪಟ. ೩. ಹರಿಗೋಲು ; ದೋಣಿ. ~ಕೊ(ಗೊ)ಳ್ = ಸಂತೋಷದಿಂದಿರು ; ಸುಖವಾಗಿರು. ~ಹಡಗು = ಪಟವನ್ನು ಕಟ್ಟಿ ನಡಸುವ ದೋಣಿ.

ಹಾಯಿಕು = ಹಾಯ್ಕು.

ಹಾಯು = ಪಾಯ್.

ಹಾಯ್ಕು (ಕ್ರಿ). ಇಡು ; ಮಡಗು ; ಹಾಕು.

ಹಾರ್ (ಕ್ರಿ). ೧. ನಿರೀಕ್ಷಿಸು ; ಎದುರು ನೋಡು. ೨. ಬಯಸು ; ಆಶಿಸು.

ಹಾರ (ನಾ). ೧. ಸರ ; ಮಾಲೆ. ೨. ಬಲಿ ; ಎಡೆ. ೩. ಗಾಡಿ ; ಬಂಡಿ.

ಹಾರಂಗಿ (ನಾ). ಒಂದು ಬಗೆಯ ಯುದ್ಧ ಸಾಮಗ್ರಿ.

ಹಾರಕ = ಪಾರಕ.

ಹಾರಕು = ಪಾರಕ.

ಹಾರಟೆ (ನಾ). ಯುದ್ಧ ; ಹೋರಾಟ.

ಹಾರಯಿಸು = ಪಾರೈಸು.

ಹಾರವ = ಪಾರುವ. ~ಗಿತ್ತಿ = ಪಾರ್ವಂತಿ.

ಹಾರವಾಣ = ಪಾರಿವಾಣ.

ಹಾರವಿಸು = ಪಾರೈಸು.

ಹಾರಿಕೆ = ಹಾಱಿಕೆ. ~ಮಾತು = ವಿಷಯವನ್ನು ಮರೆಸಿ ಹೇಳುವ ಮಾತು.

ಹಾರಿದ್ರ ೧. = ಹಾರಿದ್ರಕ. ೨. ಹಳದಿಯ ಬಣ್ಣ.

ಹಾರಿದ್ರಕ (ನಾ). ಒಂದು ಜಾತಿಯ ಬೇರು; ಅರಿಸಿನ.

ಹಾರಿವಾಣ = ಹಾರಿವಾಳ.

ಹಾರಿವಾಳ (ನಾ). ಒಂದು ಜಾತಿಯ ಮರ ; ಪಾರಿವಾಣ.

ಹಾರೀತ (ನಾ). ಹೊರಸು ; ಕಪೋತ.

ಹಾರೀತಕ = ಹಾರೀತ.

ಹಾರು ೧. = ಪಾರ್. ೨. = ಹಾಱು. (ನಾ). ೩. ಸೂರು ; ಛಾವಣಿ. ೪. ಅಗಲ ; ವಿಸ್ತಾರ. ~ಆಟ = ೧. ನೆಗೆತ ; ಜಿಗಿತ. ೨. ಅಬ್ಬರ ; ಗಲಾಟೆ. ~ಆಡು=೧. ನೆಗೆ ; ಜಿಗಿ. ೨. ಅಬ್ಬರಿಸು; ಆರ್ಭಟಿಸು ; ಕೋಪದಿಂದ ಮಾತನಾಡು. ~ಇಸು=೧. ಸಿಡಿಸು; ಸ್ಫೋಟಿಸು. ೨. ಎತ್ತಿಕೊಂಡುಹೋಗು ; ಅಪಹರಿಸು. ೩. = ಹಾಱಿಸು. ~ಮಾತು = ಗಾಳಿ ವರ್ತಮಾನ. ~ಸುದ್ದಿ = ಹಾರುಮಾತು.

ಹಾರುವ ೧. = ಪಾರುವ. ೨. ಒಂದು ಜಾತಿಯ ಮೀನು. ~ಇತಿ(ತ್ತಿ) = ಪಾರ್ವಂತಿ.

ಹಾರೆ (ನಾ). ಒಂದು ಬಗೆಯ ಕಬ್ಬಿಣದ ಉಪಕರಣ; ಪಾರೆ. ~ಕೊ(ಗೊ)ೞಲು =ಗಡಾರಿ; ಪಾರೆ.

ಹಾರೈಕೆ (ನಾ). ಬಯಕೆ; ಅಪೇಕ್ಷೆ; ಹಂಬಲ.

ಹಾರೈಸು = ಪಾರೈಸು.

ಹಾಱು(ರು) (ಕ್ರಿ). ೧. ನೆಗೆ; ಕುಪ್ಪಳಿಸು; ಜಿಗಿ. ೨. ಓಡು; ಧಾವಿಸು. ೩. ಅಲುಗು; ತುಡಿ. ೪. ಕಳೆ; ದೂರಸರಿ. ೫. ಇಲ್ಲವಾಗು; ನಾಶವಾಗು. (ನಾ). ೬. ಮಿಡಿಯುವಿಕೆ; ತುಡಿತ. ~ಇಕೆ = ನೆಗೆಯುವಿಕೆ; ಜಿಗಿತ. ~ಇಸು = ೧. ಜಿಗಿಯುವಂತೆ ಮಾಡು. ೨.ಕಳೆ; ತ್ಯಜಿಸು. ~ಕು(ಗು)ಪ್ಪೆ = ಒಂದು ಬಗೆಯ ಜಿಗಿಯುವ ಆಟ.

ಹಾರ್ದಿಕ (ಗು). ಆತ್ಮೀಯವಾದ; ಮನಃಪೂರ್ವಕವಾದ.

ಹಾರ್ವ = ಪಾರುವ.

ಹಾಲ್(ಲು) (ನಾ). ೧. ಕ್ಷೀರ. ೨. ಗಿಡಗಳಿಂದ ಬರುವ ರಸ; ಸೊನೆ. ೩. ತೆಂಗಿನಕಾಯಿ, ಕಬ್ಬು, ಧಾನ್ಯ ಮುಂತಾದುವುಗಳ ರಸ. ೪. ಲಸಿಕೆ; ಸಿಡುಬಿನ ಹಾಲು. ~ಅಡಕೆ = ಹಸಿಯ ಅಡಕೆ. ~ಉಂಡೆ = ಪಾಲುಂಡೆ. ~ಓಗರ = ಹಾಲಿನಲ್ಲಿ ಬೇಯಿಸಿ ಮಾಡುವ ಒಂದು ಬಗೆಯ ಅನ್ನ. ~ಕ(ಗ)ಡಗ = ಚಿಕ್ಕಮಕ್ಕಳಿಗೆ ತೊಡಿಸುವ ಕಾಲುಬಳೆ. ~ಕ(ಗ)ಡಲು =ಪಾಲ್ಗಡಲು. ~ಕ(ಗ)ಲ್ಲು = ಬಿಳಿಯ ಶಿಲೆ. ~ಕೀರು = ಒಂದು ಬಗೆಯ ಪಾಯಸ. ~ಕು(ಗು)ಂಬಳ = ಪಾಲ್ಗುಂಬಳ. ~ಗಲ್ಲ = ಎಳೆಯ ನುಣುಪಾದ ಗಲ್ಲ. ~ತುಪ್ಪ = ಸತ್ತವರಿಗೆ ಮೂರನೆಯ ದಿನದಂದು ಮಾಡುವ ಒಂದು ಸಂಸ್ಕಾರ. ~ಪ(ವ)ಕ್ಕಿ=ಒಂದು ಜಾತಿಯ ಹಕ್ಕಿ; ಪಿಂಗಳ. ~ಬತ್ತ = ರಸ ತುಂಬಿದ ಬತ್ತ; ಎಳೆಯ ಬತ್ತ. ~ಮಗು = ಎಳೆ ಮಗು; ಹಸುಗೂಸು; ಹಾಲು ಕುಡಿಯುವ ಮಗು. ~ಮಡ್ಡಿ = ಒಂದು ಬಗೆಯ ಸುವಾಸನೆಯ ವಸ್ತು. ~ಹಲ್ಲು = ಚಿಕ್ಕಂದಿನಲ್ಲಿ ಹುಟ್ಟಿ ಬಿದ್ದುಹೋಗುವ ಹಲ್ಲು; ಎಳೆಯ ಹಲ್ಲು.

ಹಾಲಸಿಗ (ನಾ). ವೈದ್ಯ.

ಹಾಲ(ಳ)ಹಲ(ಳ) (ನಾ). ಘೋರವಾದ ವಿಷ; ಮಹಾವಿಷ.

ಹಾಲಾ(ಳಾ)ಹಲ(ಳ) ೧. = ಹಾಲಹಲ. ೨. ಮದ್ಯಸಾರವುಳ್ಳ ಪಾನೀಯ. ೩. ಒಂದು ಜಾತಿಯ ಹಲ್ಲಿ.

ಹಾಲಿ (ಅ). ಈಗ; ಸದ್ಯದಲ್ಲಿ; ಪ್ರಕೃತ.

ಹಾಲಿವಾಣ = ಹಾರಿವಾಳ.

ಹಾಲುಣ್ಣಿ (ನಾ). ಚರ್ಮದ ಮೇಲೇಳುವ ಸಣ್ಣ ಗಂತಿ; ನರಹುಲಿ.

ಹಾಲುಬಾಯಿ (ನಾ). ಗೋದಿ, ಅಕ್ಕಿ, ರಾಗಿ ಮುಂತಾದುವುಗಳ ಹಾಲಿನಿಂದ ಮಾಡುವ ಒಂದು ಬಗೆಯ ಸಿಹಿತಿಂಡಿ.

ಹಾಲೆ (ನಾ). ೧. ಕಿವಿಯ ಮೆದುವಾದ ಕೆಳಭಾಗ; ಆಲೆ. ೨. ಕಣ್ಣಿನ ಪಾಪೆ; ಕಣ್ಣುಗುಡ್ಡೆ. ೩. ಒಂದು ಜಾತಿಯ ಮರ. ೪. ಒಂದು ಜಾತಿಯ ಪಕ್ಷಿ; ಶಕುನದ ಹಕ್ಕಿ. ೫. ಒಂದು ಜಾತಿಯ ಸೌತೆಯ ಬಳ್ಳಿ.

ಹಾವ(ನಾ). ೧. ಅಂಗವಿನ್ಯಾಸದಿಂದ ಪ್ರಕಟಿಸುವ ಭಾವ. ೨. ಶೃಂಗಾರಚೇಷ್ಟೆ. ೩. ಬೆಡಗು; ವಿಲಾಸ.

ಹಾವಚೆ = ಪಾವಸೆ.

ಹಾವರಣೆ = ಪಾವರಣೆ.

ಹಾವಸೆ ೧. = ಪಾವಸೆ. ೨. ಒಂದು ಬಗೆಯ ಔಷಧವಸ್ತು. ~ಕ(ಗ)ಟ್ಟು = ಪಾಚಿ ಯುಂಟಾಗು. ~ಮನ = ಅಶುದ್ಧವಾದ ಮನಸ್ಸು; ಮಲಿನ ಮನ.

ಹಾವಳಿ (ನಾ). ತೊಂದರೆ; ಕಾಟ; ಉಪದ್ರವ.

ಹಾವಾಡಿಗ = ಪಾವಡಿಗ.

ಹಾವಿಗೆ = ಪಾದುಕೆ.
ಹಾವು (ನಾ). ಸರ್ಪ; ಉರಗ. ~ಅಡಿಗ = ಪಾವಡಿಗ. ~ಮೀನು =ಹಾವಿನ ಆಕಾರದ ಒಂದು ಜಾತಿಯ ಮೀನು.
ಹಾವುಗೆ = ಪಾದುಕೆ.
ಹಾವುದಲೆಗ (ನಾ). ಒಂದು ಜಾತಿಯ ಹಕ್ಕಿ.
ಹಾವುಮೆಕ್ಕೆ (ನಾ). ಒಂದು ಜಾತಿಯ ಗಿಡ; ಇಂದ್ರವಾರುಣಿ.
ಹಾವುರಾಣಿ = ಪಾವರಣಿ.
ಹಾಸ (ನಾ). ೧. ಬಂಧನ; ಪಾಶ. ೨.=ಹಾಸ್ಯ. ~ಇಸು = ಅಣಕಿಸು; ಹಾಸ್ಯಮಾಡು.
ಹಾಸಂಗಿ = ಪಾಸಂಗಿ.
ಹಾಸಲ್(ಲು) (ನಾ). ಪ್ರಯಾಣ, ಅಂಚೆ ಮುಂತಾದುವುಗಳ ವೆಚ್ಚ.
ಹಾಸಿಕೆ = ಹಾಸುಗೆ.
ಹಾಸಿಗೆ= ಹಾಸುಗೆ. ~ಹಿಡಿ = ರೋಗಪೀಡಿತನಾಗು; ಕಾಯಿಲೆಬೀಳು. ~ಹುಣ್ಣು = ಒಂದೇ ಸಮನೆ ಮಲಗುವುದರಿಂದ ದೇಹದ ಮೇಲೆ ಉಂಟಾಗುವ ವ್ರಣ.
ಹಾಸು (ಕ್ರಿ). ೧. ಹರಡು; ಹರವು. (ನಾ). ೨. = ಹಾಸುಗೆ. ೩. ನೆಯ್ಗೆಯ ಮಗ್ಗದಲ್ಲಿ ಉದ್ದುದ್ದವಾಗಿ ಹಾಕಿದ ನೂಲು. ೪. ಪಗಡೆ, ಚದುರಂಗ ಮುಂತಾದ ಆಟಗಳಿಗೆ ಬಳಸುವ ಚೌಕಗಳುಳ್ಳ ಬಟ್ಟೆ ಅಥವಾ ಮಣೆ. ೫. ಬಂಧನ; ಕಟ್ಟು; ಸಂಕೋಲೆ; ಪಾಶ. ೬. ಇಸ್ಪೀಟಾಟದಲ್ಲಿ ಉಪಯೋಗಿಸುವ ಎಲೆಗಳಲ್ಲಿ ಒಂದು; ಎಕ್ಕ. ~ಅಕ್ಕಿ=ಮದುವೆ ಚಪ್ಪರದಲ್ಲಿ ಚಿತ್ರ ಬಿಡಿಸಲು ಹರಡಿರುವ ಅಕ್ಕಿ. ~ಅರೆ= ಪಾಸಜಿ. ~ಕ(ಗ)ಲ್ಲು=ಪಾಸಜಿ. ~ಕ(ಗ)ಳೆ= (ನಾಯಿಯ) ಕೊರಳಿನ ಹಗ್ಗವನ್ನು ಬಿಚ್ಚು. ~ಕಾ(ಗಾ)ಯ್(ಯಿ) = ಉದ್ದವಾಗಿ ಸೀಳಿರುವ ಕಾಯಿ. ~ಕೊ(ಗೊ)ಳ್ = ಬಂಧನಕ್ಕೆ ಒಳಗಾಗು; ಕಟ್ಟುಬೀಳು. ~ನೂಲು = ನೆಯ್ಗೆಯಲ್ಲಿ ಉದ್ದುದ್ದವಾಗಿ ಬರುವ ಎಳೆ. ~ಬ(ಪ)ಲೆ = ಒಂದು ಬಗೆಯ ಬಲೆ. ~ಮರ = ಬಾಗಿಲು ವಾಡ, ಕಿಟಕಿಗಳ ಮೇಲುಭಾಗದಲ್ಲಿ ಹಾಕುವ ಪಟ್ಟಿ. ~ಹೊಕ್ಕು = ೧. ಹೊಂದಾಣಿಕೆ; ಸಾಮರಸ್ಯ. ೨. = ಪಾಸುಂಪೊಕ್ಕು. ~ಹೊಯ್ಯು = ೧. ಮಗ್ಗದ ಹಾಸನ್ನು ಸಿದ್ಧಗೊಳಿಸು. ೨. ತೂಗಾಡು; ಅತ್ತಿತ್ತ ಓಲಾಡು.
ಹಾಸುಗೆ (ನಾ). ೧. ಹಾಸಿದುದು; ಹರಡಿದುದು. ೨. ಗಾದಿ; ಶಯ್ಯೆ.
ಹಾಸ್ತಿಕ (ನಾ). ೧. ಆನೆಯ ಹಿಂಡು, -ಸಮೂಹ. ೨. ಆನೆಯನ್ನು ನಡಸುವವನು; ಮಾವಟಿಗ. ~ಸಾಧನ = ಆನೆಗಳಿಂದ ಕೂಡಿದ ಸೈನ್ಯ; ಗಜಬಲ.
ಹಾಸ್ಯ (ನಾ). ೧. ಕಾವ್ಯದ ನವರಸಗಳಲ್ಲಿ ಒಂದು. ೨. ನಗು; ಹಾಸ. ೩. ಉಲ್ಲಾಸ; ವಿನೋದ. ೪. ಅಣಕ; ಅಪಹಾಸ್ಯ. ~ಆಸ್ಪದ = ನಗೆಗೀಡಾದುದು. ~ಗಾರ = ೧. ನಗಿಸುವವನು. ೨. ವಿದೂಷಕ. ೩. ಕುಚೋದ್ಯಮಾಡುವವನು; ಅಪಹಾಸ್ಯ ಮಾಡುವವನು. ~ಚಿತ್ರ = ನಗೆಚಿತ್ರ; ವ್ಯಂಗ್ಯಚಿತ್ರ.
ಹಾಸ್ಯಕ = ಹಾಸ್ಯಗಾರ.
ಹಾಹಾಕಾರ (ನಾ). ಪ್ರಲಾಪ; ಗೋಳಾಟ.
ಹಾಹೆ (ನಾ). ೧. ಗೊಂಬೆ; ಪುತ್ಥಳಿ. ೨. ಕಣ್ಣುಗುಡ್ಡೆ; ಪಾಪೆ.
ಹಾಳ (ನಾ). ನಾಯಿ; ಶುನಕ.
ಹಾಳತ (ನಾ). ೧. ಔಚಿತ್ಯ; ಯುಕ್ತತೆ. ೨. ಸರಿಯಾದ ಪ್ರಮಾಣ, -ಅಳತೆ. ೩. ಹಿಡಿತ; ಮಿತಿ. ೪. ಹದವಾದ ಸ್ಥಿತಿ; ಪಕ್ವತೆ.
ಹಾಳಿ (ನಾ). ೧. ಗದ್ದೆಯ ತುಂಡು, -ಭಾಗ, -ಜಮೀನು. ೨. = ಹಾಟಿ. ~ಕೆ(ಗೆ)ಡು =ಕ್ರಮತಪ್ಪು; ರೀತಿಗೆಡು.
ಹಾಳಿತ = ಹಾಳತ.

ಹಾಳು = ಪಾಟು. ~ಆಗು=೧. ನಾಶವಾಗು; ಅಳಿ. ೨. ಹದಗೆಡು ; ಪ್ರಯೋಜನವಿಲ್ಲದಾಗು. ೩. ಸೊರಗು ; ಕ್ಷೀಣವಾಗು. ~ಊರು = ಪಾಳು ಬಿದ್ದ ಊರು. ~ಒಡಲ್(ಲು) = ನಿರರ್ಥಕವಾದ ದೇಹ ; ನಿಂದ್ಯವಾದ ದೇಹ. ~ಕ(ಗ)ರೆ=ಶೂನ್ಯವಾಗಿ ತೋರು ; ಬರಿದಾಗಿರು. ~ಕೆ(ಗೆ)ಡಹು = ನಾಶಮಾಡು ; ಧ್ವಂಸಮಾಡು. ~ಬಿಡಿ =೧. ಕೆಡು ; ನಾಶವಾಗು. ೨.=ಹಾಳುಗರೆ. ~ಬಾವಿ = ಹಾಳಾದ ಬಾವಿ ; ಪಾಳು ಬಿದ್ದ ಬಾವಿ. ~ಮಾಡು = ೧. ಪಂಡಮಾಡು ; ಪೋಲುಮಾಡು. ೨. ಕೆಡಿಸು ; ಶೀಲಭಂಗ ಮಾಡು. ೩. = ಹಾಳುಗೆಡಹು. ~ಮೂಳಿ = ಕೆಟ್ಟ ಹೆಂಗಸು. ~ಸುರಿ = ಹಾಳುಗರೆ. ~ಹಣೆ= ೧.ಯಾವ ಬಗೆಯ ಲಾಂಛನವೂ ಇಲ್ಲದಿರುವ ಹಣೆ ; ಬೋಳು ಹಣೆ. ೨. ಕುಂಕುಮವಿಲ್ಲದಿರುವ ಹಣೆ. ~ಹರಟೆ =ವ್ಯರ್ಥವಾದ ಮಾತು ; ಪ್ರಯೋಜನವಿಲ್ಲದ ಮಾತು.

ಹಾಳೆ (ನಾ). ೧. ಅಡಕೆಪಟ್ಟೆ ; ಅಡಕೆಸೋಗೆಯ ಕೆಳಭಾಗ. ೨. ಬರೆಯುವ ಕಾಗದ. ೩.ಎರಡು ಪುಟಗಳು ಸೇರಿ ಆಗುವ ಪುಸ್ತಕದ ಒಂದು ಭಾಗ. ೪. ಲೋಹದ ತಗಡು. ೫. ಭೂಮಿಯ ಒಂದು ಭಾಗ, –ಸೀಳು.

ಹಾಟಿ್(ಳ್,ಳು,ಟು) = ಪಾಟ್.

ಹಾಟಿ(ಳಿ) (ನಾ). ಕ್ರಮ ; ರೀತಿ ; ಪಾಳಿ.

ಹಿಂ = ಪಿಂ. ~ಕ(ಗ)ಚ್ಚೆ = ನಡುಪಟ್ಟಿಯ ಹಿಂಭಾಗಕ್ಕೆ ಸಿಕ್ಕಿಸಿದ ಪಂಚೆಯ ಅಥವಾ ಸೀರೆಯ ತುದಿ. ~ಕ(ಗ)ಟ್ಟು=೧. ಹಿಂಬದಿ; ಹಿಂಭಾಗ. ೨.ಕೈಗಳನ್ನು ದೇಹದ ಹಿಂಭಾಗದಲ್ಲಿ ಸೇರಿಸಿ ಹಾಕುವ ಕಟ್ಟು; ಹೆಡಮುರಿಗೆ. ೩.ಕೊಳದ ಒಡ್ಡಿನ ಹೊರಭಾಗ. ~ಕ(ಗ)ಡೆ = ಪಿಂಗಡೆ. ~ಕ(ಗ)ತೆ =ಮೂಲಕತೆಗೆ ಹಿನ್ನೆಲೆಯಾಗಿ ಬರುವ ಕತೆ ; ಪೂರ್ವಕಥೆ. ~ಕಾ(ಗಾ)ರು = ೧. ವರ್ಷದಲ್ಲಿ ಬೀಳುವ ಕೊನೆಯ ಮಳೆ. ೨. ಮಳೆಗಾಲದ ಉತ್ತರಾರ್ಧ. ~ಕಾ(ಗಾ)ಲ್(ಲು) = ೧. ಪಾದದ ಹಿಂಭಾಗ ; ಹಿಮ್ಮಡಿ. ೨. ಚತುಷ್ಪಾದಿಗಳಿಗೆ ಇರುವ ಹಿಂಭಾಗದ ಕಾಲು. ~ಕೈ(ಗೈ) =ಕೈಯ ಹಿಂಭಾಗ, –ಹಿಂಬದಿ. ~ಗೋಟು = (ದೋಣಿಯ) ಹಿಂಭಾಗದ ತುದಿ, –ಕೊನೆ. ~ಚೂಣಿ = ೧. ಹಿಂಭಾಗ ; ಹಿಂಬದಿ. ೨. ಯುದ್ಧದಲ್ಲಿ ಹಿಂಭಾಗದಲ್ಲಿ ನಿಲ್ಲುವ ಸೈನ್ಯ. ~ಜಾವ = ರಾತ್ರಿಯ ಕಡೆಯ ಭಾಗ ; ಪ್ರಾತಃಕಾಲದ ಹಿಂದಿನ ಜಾವ. ~ತ(ದ)ಲೆ = ೧.ಹಿಮ್ಮುಖವಾಗಿರುವುದು; ಹಿಂಭಾಗದಲ್ಲಿರುವುದು. ೨. ತಲೆಯ ಹಿಂಭಾಗ ; ಹೆಡತಲೆ. ~ತಿ(ದಿ)ರುಗು = ೧. ಹಿಮ್ಮುಖವಾಗು. ೨. ವಾಪಸು ಬರು. ~ತೆ(ದೆ)ಗೆ=ಪಿಂದೆಗೆ. ~ಪ(ಬ)ಗಲು = ಪಿಂಬಗಲ್. ~ಬಡತಿ = ಬಡತಿಯಲ್ಲಿ ಖೋತಾ ಮಾಡುವಿಕೆ ; ಕೆಳಗಿನ ದರ್ಜೆಗೆ ವರ್ಗಾಯಿಸುವುದು. ~ಬದಿ = ಪಿಂಬದಿ. ~ಬಲ = ಒತ್ತಾಸೆ ; ಬೆಂಬಲ. ~ಬಾಗಿಲು = ೧. ಹಿಂದಿನ ಬಾಗಿಲು. ೨. ಕೆಟ್ಟಹಾದಿ ; ಅಪಮಾರ್ಗ. ೩. ಮುಚ್ಚುಮರೆ ; ಮೋಸ. ~ಭಾಗ = ಹಿಂದುಗಡೆ ; ಹಿಂಬದಿ. ~ಮಗ್ಗುಲು = ಹಿಂಭಾಗ. ~ಮುಖ = ೧. ಹಿಂಬದಿಯಾಗಿ ತಿರುಗಿರುವುದು. ೨. ಹಿಂಜರಿತ; ಹಿಮ್ಮೆಟ್ಟುವಿಕೆ. ~ಮೆಟ್ಟು = ಹಿಂಜರಿ ; ಹಿಮ್ಮೆಟ್ಟು. ~ಮೆಯ್ = ಮೈಯ ಹಿಂಭಾಗ. ~ಮೇಳ = ನಾಟಕ, ನೃತ್ಯ ಮುಂತಾದುವುಗಳಿಗೆ ಸಹಾಯಕವಾಗಿ ಹಾಡುವ ಗಾಯಕರ ಗುಂಪು, –ಗೋಷ್ಠಿ. ~ಮೊಗ = ಹಿಮ್ಮುಖ.

ಹಿಂಕಾರ (ನಾ). ೧. ಸಾಮುಗಾನದಲ್ಲಿ ಒಂದು ಪ್ರಭೇದ. ೨. ವಿಷ್ಣುವಿನ ಹೆಸರುಗಳಲ್ಲಿ ಒಂದು.

ಹಿಂಗಣ್ಣು (ನಾ). ದೊಂಬರು ಹಾಕುವ ಒಂದು ಬಗೆಯ ವರಸೆ ; ಹಿಮ್ಮುಖವಾಗಿ ಹಾಕುವ ಲಾಗ.

ಹಿಂಗಾರ (ನಾ). ಅರ್ಧ ಬಿರಿದ ಅಡಕೆ ಹೂವಿನ ಕೋಶ.

ಹಿಂಗಾಷ್ಟಕ (ನಾ). ಜ್ವರ, ತಲೆನೋವು ಮುಂತಾದುವುಗಳ ನಿವಾರಣೆಗಾಗಿ ಕೊಡುವ ಒಂದು ಬಗೆಯ ಚೂರ್ಣ.

ಹಿಂಗು ೧. = ಪಿಂಗು. ೨. ಕಳೆ ; ಸಾಗು. ೩. ತೊರೆ ; ಬಿಡು. ೪. ತೃಪ್ತಿಹೊಂದು ; ಸಂತೋಷಿಸು. (ನಾ). ೫. ಒಂದು ಜಾತಿಯ ಸಸ್ಯ. ೬. ಅಡುಗೆಗೂ ಔಷಧಕ್ಕೂ ಉಪಯೋಗಿಸುವ, ಒಂದು ಜಾತಿಯ ಮರದ ಹಾಲಿನಿಂದ ತಯಾರಿಸುವ ವಸ್ತು ; ಇಂಗು. ~ಇಸು=ಪಿಂಗಿಸು. ~ಕ(ಗ)ಣ್ಣು = ಒಂದು ಬಗೆಯ ನೇತ್ರರೋಗ.

ಹಿಂಗುರು (ನಾ). ಒಂದು ಜಾತಿಯ ಹಕ್ಕಿ.

ಹಿಂಚು ೧. = ಪಿಂಚು. (ನಾ). ೨. ಹಿಮ್ಮೆಟ್ಟಿಸುವಿಕೆ ; ಹಿಂಜರಿಸುವಿಕೆ ; ಸೋಲಿಸುವಿಕೆ. ೩. ತಡೆದು ಬರುವಿಕೆ.

ಹಿಂಚೆ (ಅ). ಅನಂತರ ; ಆಮೇಲೆ.

ಹಿಂಜರಿ = ಪಿಂಜರಿ.

ಹಿಂಜಿ = ಪಿಂಜಿ.

ಹಿಂಜು (ಕ್ರಿ). ೧. (ಹತ್ತಿಯನ್ನು) ಎಕ್ಕು ; ಕಸರು ತೆಗೆ. ೨. ಪಾಲು ಮಾಡು ; ವಿಭಾಗಿಸು. ೩. ಬಟ್ಟೆಯಲ್ಲಿ ಎಳೆಗಳು ದೂರವಾಗು ; ಹಿಸಿ.

ಹಿಂಡಲು = ಹಿಂಡಿಲ್.

ಹಿಂಡಿ (ನಾ). ೧. ಕಾಳಿನಿಂದ ಎಣ್ಣೆಯನ್ನು ತೆಗೆದ ಮೇಲೆ ಉಳಿಯುವ ಸಿಪ್ಪೆ ; ಚರಟ. ೨. ಒಂದು ಬಗೆಯ ಚಟ್ನಿ ; ತೊಕ್ಕು.

ಹಿಂಡಿತೆ (ನಾ). ಒಟ್ಟಾದುದು ; ಸಮೂಹ.

ಹಿಂಡಿಲ್(ಲು) (ನಾ). ಗಿಡಗಳ ಗುಂಪು ; ಪೊದರು.

ಹಿಂಡು ೧. = ಪಿಂಡು. ೨. ತಿರುಚು ; ಕಿವಿಚು. ೩. ಹಾಲನ್ನು ಕರೆ. ೪. ಹಾಲನ್ನು ಕೊಡು. ೫. ಕಾಡು ; ಪೀಡಿಸು. ೬. ಸಂಕಟಪಡು ; ದುಃಖಿಸು. ~ಏಳ್ = ಗುಂಪಾಗಿ ಮೇಲಕ್ಕೆ ಬರು. ~ಒಡೆ = ೧. ಗುಂಪಿನಿಂದ ಬೇರೆಯಾಗು, –ಪ್ರತ್ಯೇಕವಾಗು. ೨. ಗುಂಪಿನಿಂದ ಬೇರ್ಪಡಿಸು. ~ಕ(ಗ)ಂಕಣ = ಬಳೆಗಳ ರಾಶಿ, –ಸಂಗ್ರಹ. ~ಕ(ಗ)ಟ್ಟು = ಒಂದುಗೂಡು ; ಗುಂಪಾಗು. ~ಕೂ(ಗೂ)ಡು = ಹಿಂಡುಗಟ್ಟು.

ಹಿಂಡುದಲೆಯ (ನಾ). ಹೆಚ್ಚು ಸಂಖ್ಯೆಯ ತಲೆಗಳುಳ್ಳವನು ; ರಾವಣ.

ಹಿಂಡೆ (ನಾ). ಶ್ರಾದ್ಧದಲ್ಲಿ ಪಿತೃಗಳಿಗೆ ಅರ್ಪಿಸುವ ಅನ್ನದ ಮುದ್ದೆ ; ಪಿಂಡ. ~ಕೂಳು =ಪಿಂಡದ ಅನ್ನ.

ಹಿಂತಾಲ(ಳ) (ನಾ). ಒಂದು ಜಾತಿಯ ತಾಳೆಯ ಮರ ; ಕಿರುತಾಳೆ.

ಹಿಂದಿ (ನಾ). ಒಂದು ಭಾಷೆಯ ಹೆಸರು.

ಹಿಂದೀಯ (ನಾ). ಹಿಂದುದೇಶಕ್ಕೆ ಸೇರಿದವನು.

ಹಿಂದು (ನಾ). ೧. ಹಿಂಬದಿ ; ಹಿಂಭಾಗ. ೨. ಹಿಂದೆ ನಡೆದುದು, –ಆದುದು. ೩. = ಹಿಂದೀಯ. (ಗು). ೪. ಭಾರತ ದೇಶಕ್ಕೆ ಸೇರಿದ. ~ಅಟ್ಟು = ೧. ಹಿಂಬಾಲಿಸು ; ಬೆನ್ನು ಹತ್ತು. ೨. ಹಿಂದಕ್ಕೆ ಕಳುಹಿಸು ; ಅಟ್ಟು. ~ಇಕ್ಕು = ೧. ಕಾಪಾಡು ; ಪೊರೆ. ೨. ಹಿಮ್ಮೆಟ್ಟಿಸು ; ಹಿಂದೂಡು. ~ಇಡು = ೧. ಹಿಮ್ಮೆಟ್ಟು ; ಹಿಂಜರಿ. ೨. ಮರೆಮಾಚು ; ಅಡಗಿಸು. ~ಉಳಿ = ೧. ಹಿಂದೆ ನಿಲ್ಲು ; ಹಿಂದಾಗು. ೨. ಕೆಳಮಟ್ಟದಲ್ಲಿರು ; ಹೀನಸ್ಥಿತಿಯಲ್ಲಿರು. ~ಏಟು = ಹಿಮ್ಮೆಟ್ಟುವಿಕೆ ; ಹಿಂಜರಿತ. ~ಕ(ಗ)ಡೆ = ೧. ಹಿಂಭಾಗ. ೨. ಅನಂತರ ; ಆ ಬಳಿಕ. ~ಕ(ಗ)ಳೆ = ೧. ಹಿಮ್ಮೆಟ್ಟು ; ಹಿಂಜರಿ.

೨. ಉಲ್ಲಂಘಿಸು; ಅಲಕ್ಷಿಸು. ~ಕೊ(ಗೊ)ಳ್ = ಪಿಂದುಗೊಳ್.
ಹಿಂದುಸ್ತಾನ (ನಾ). ಭಾರತ ; ಇಂಡಿಯಾ.
ಹಿಂದುಸ್ತಾನಿ (ನಾ). ಒಂದು ಭಾಷೆಯ ಹೆಸರು.
ಹಿಂದೆ (ಅ). ೧. ಹಿಂಭಾಗದಲ್ಲಿ ; ಹಿಂಬದಿಯಲ್ಲಿ. ೨. ಮೊದಲು ; ಮುಂಚೆ. ೩. ಅನಂತರ ; ಆ ಬಳಿಕ.
ಹಿಂದೋಲ (ನಾ). ಉಯ್ಯಾಲೆ ; ಜೋಕಾಲಿ.
ಹಿಂಬಡ (ನಾ). ಪಾದದ ಹಿಂಭಾಗ ; ಹಿಮ್ಮಡಿ.
ಹಿಂಬರಿಕೆ (ನಾ). ೧. ಹಿಂದಿನ ಮಾರ್ಗ, -ಪಥ. (ಅ). ೨. ಹಿಮ್ಮುಖವಾಗಿ.
ಹಿಂಬಾಲಕ (ನಾ). ಅನುಯಾಯಿ ; ಅನುಚರ.
ಹಿಂಬಾಲಿಸು (ಕ್ರಿ). ಅನುಸರಿಸು ; ಹಿಂದೆ ಹೋಗು.
ಹಿಂಸಕ (ನಾ). ೧. ಕೆಡುಕನ್ನುಂಟು ಮಾಡುವವನು ; ಅಪಾಯಕಾರಿ. ೨. ಕೊಲ್ಲುವವನು; ಕೊಲೆಗಾರ. (ಗು). ೩. ಪೀಡಿಸುವ ; ಕೆಡುಕು ಮಾಡುವ. ~ಪ್ರಾಣಿ = ಕ್ರೂರವಾದ ಮೃಗ.
ಹಿಂಸಾಚಾರ (ನಾ). ಹಿಂಸೆ ಮಾಡುವಿಕೆ ; ಪೀಡಿಸುವಿಕೆ.
ಹಿಂಸೆ (ನಾ). ಹಾನಿ ; ಕೇಡು. ~ಇಸು = ಪೀಡಿಸು ; ಕಾಡು.
ಹಿಂಸ್ರ (ನಾ). ೧. ಕೊಲ್ಲುವವನು ; ಕೊಲೆಗಾರ. (ಗು). ೨. ಕೇಡೆಣಿಸುವ ; ಪೀಡಿಸುವ. ೩. ಕೊಲ್ಲುವ ; ಸಂಹರಿಸುವ. ~ಜಂತು = ದುಷ್ಟಮೃಗ ; ಕ್ರೂರಪ್ರಾಣಿ.
ಹಿಕಮತ್ತು (ನಾ). ಸಂಚು; ತಂತ್ರ; ಉಪಾಯ. ~ಗಾರ = ಉಪಾಯಗಾರ.
ಹಿಕ್ಕ (ನಾ). ಬಿಕ್ಕಲು ; ಬಿಕ್ಕಳಿಕೆ.
ಹಿಕ್ಕಟಿಪ್ಪ (ನಾ). ೧. ಹಿಂಭಾಗ ; ಹಿಂದುಗಡೆ. ೨. ತಡವಾದುದು ; ವಿಳಂಬವಾದುದು.
ಹಿಕ್ಕಲು (ನಾ). ಗದ್ದೆ, ತೋಟ ಮುಂತಾದ ಕಡೆಗಳಲ್ಲಿ ನೀರು ಹರಿಯಲು ಮಾಡಿರುವ ಸಣ್ಣ ತೋಡು, -ಕಾಲುವೆ.
ಹಿಕ್ಕು ೧. = ಪಿಕ್ಕು. ೨. ಉಜ್ಜು ; ತೀಡು. (ನಾ). ೩. ಗೋಜು ; ಸಿಕ್ಕು.
ಹಿಕ್ಕೆ = ಪಿಚಿಕೆ.
ಹಿಕ್ಮತ್ತು = ಹಿಕಮತ್ತು.
ಹಿಗ್ಗಲಿಕೆ (ನಾ). ಅಗಲವಾಗಿ ತೆರೆಯುವಿಕೆ ; ಹಿಗ್ಗಿಸುವಿಕೆ.
ಹಿಗ್ಗಲಿಸು (ಕ್ರಿ). ೧. ಅಗಲವಾಗಿ ತೆರೆ ; ಹಿಗ್ಗು. ೨. ಅಗಲವಾಗಿ ತೆರೆಯುವಂತೆ ಮಾಡು ; ಅಗಲಗೊಳಿಸು.
ಹಿಗ್ಗಾಮುಗ್ಗಾ (ಅ). ಹಿಂದಕ್ಕೆ ಮುಂದಕ್ಕೆ.
ಹಿಗ್ಗು ೧. = ಪಿಟ್ಗು. ೨. ದೊಡ್ಡದಾಗು ; ಬೆಳೆ. (ನಾ). ೩. ಸಂತೋಷ ; ಆನಂದ. ೪. ಗರ್ವ ; ಹೆಮ್ಮೆ. ~ಇಸು = ೧. ಸಂತೋಷಪಡಿಸು. ೨. = ಹಿಗ್ಗಲಿಸು.
ಹಿಚಿಕೆ = ಪಿಚಿಕ್ಕೆ.
ಹಿಚುಕು (ಕ್ರಿ). ಹಿಂಡು ; ಹಿಸುಕು.
ಹಿಜರಿ (ನಾ). ಮಹಮ್ಮದೀಯರ ಕಾಲಗಣನೆ.
ಹಿಜಿರ = ಹಿಜರಿ.
ಹಿಟ್ಟು (ನಾ). ೧. ಧಾನ್ಯಗಳನ್ನು ಬೀಸಿ ಮಾಡಿದ ನಯವಾದ ಪುಡಿ ; ಪಿಷ್ಟ. ೨. ಆಹಾರ ; ಉಣಿಸು. ೩. ರಾಗಿಯ ಹಿಟ್ಟನ್ನು ಬೇಯಿಸಿ ಮಾಡಿದ ಪದಾರ್ಥ ; ರಾಗಿಮುದ್ದೆ. ೪. ಪ್ರಾಚೀನ ಕರ್ನಾಟಕದಲ್ಲಿ ಗ್ರಾಮಗಳಲ್ಲಿದ್ದ ಬೇರೆ ಬೇರೆ ವೃತ್ತಿಗಳ ಗುಂಪು. ~ಕ(ಗ)ಲ್ಲು = ಒಂದು ಬಗೆಯ ಮೃದುವಾದ ಕಲ್ಲು. ~ಕಾಅ(ರ) = ಕಾರ್ಯನಿರ್ವಾಹಕ ಮಂಡಲಿಯ ಮುಖ್ಯಸ್ಥ. ~ಕು(ಗು)ಟ್ಟು = ೧. ಪುಡಿಮಾಡು. ೨. ನಾಶಮಾಡು ; ಧ್ವಂಸಮಾಡು.
ಹಿಡ (ನಾ). ವೃಷಣ. ~ಬಡಿ = ವೀರ್ಯಗುಂದಿಸು. ~ಮಾಡು = ಹಿಡಬಡಿ.

ಹಿಡಗಲು (ನಾ). ಪೊರಕೆ ; ಕಸಬರಲು.

ಹಿಡಿ ೧.=ಪಿಡಿ. ೨. ಮುತ್ತು ; ಆಕ್ರಮಿಸು. ೩. ಪಡೆ; ಹೊಂದು. ೪. ಸಾಕಾಗು ; ಒಳಗೊಳ್ಳು. ೫. ತಗಲು ; ಹತ್ತು ; ಬೇಕಾಗು. ೬. ಅಂಗೀಕರಿಸು; ಅನುಸರಿಸು. ೭. ತಡೆ; ನಿರೋಧಿಸು. ೮. ಒಪ್ಪು; ಮನ್ನಿಸು. ೯. ಒಗ್ಗು ; ಸರಿಬೀಳು. ೧೦. ಒತ್ತು; ಹಿಸುಕು. (ನಾ). ೧೧. = ಹಿಡಗಲು. ೧೨.=ಹಿಡ. ~ಆ(ಯಾ)ನೆ=ಹೆಣ್ಣಾನೆ. ~ಆ(ಯಾ)ಳ್(ಳು) = ಪಿಡಿಯಾಳ್. ~ಇಸು = ೧. ತೊಡಗು ; ಪ್ರಾರಂಭಿಸು. ೨. ಸಾಕಾಗು ; ಒಳಗೊಳ್ಳು. ೩. ಒಪ್ಪಿಗೆಯಾಗು ; ಮನಸ್ಸಿಗೆ ಬರು. ೪. ಬಂಧನದಲ್ಲಿರಿಸುವಂತೆ ಮಾಡು. ~ಎ(ಯೆ)ರಲೆ(ಳೆ) = ಬೇಟೆಯಲ್ಲಿ ಇತರ ಪ್ರಾಣಿಗಳನ್ನು ಆಕರ್ಷಿಸಲು ತರಬೇತು ಮಾಡಿದ ಜಿಂಕೆ. ~ಕಟ್ಟು = ಹಿಡಿತ ; ಬಂಧನ. ~ಕ(ಗ)ವಡಿಕೆ = ಒಂದು ಬಗೆಯ ಆಟ ; ಕವಡೆಯ ಆಟ. ~ಕ(ಗ)ವಡೆ = ಹಿಡಿಗವಡಿಕೆ. ~ಕುಂಟೆ = ಪೊರಕೆ ; ಕಸಬರಿಗೆ. ~ಕೆ(ಗೆ)ಯ್ = ೧. ಮುಷ್ಟಿಯನ್ನು ಮುಚ್ಚು. ೨. ಮುಚ್ಚಿದಕೈ. ~ಕೋಲ್(ಲು) = ೧. ನಡೆಯುವಾಗ ಹಿಡಿದುಕೊಳ್ಳುವ ಬೆತ್ತ ; ಊರುಗೋಲು. ೨. ಹಿಡಿಕೆಯಿಂದ ಕೂಡಿದ ಬೆತ್ತ. ೩. ಒಂದು ಬಗೆಯ ಆಯುಧ ; ಕಡಿಗತ್ತಿ. ~ಪ(ವ)ಡೆ =ಬಂಧನಕ್ಕೆ ಒಳಗಾಗು ; ಸೆರೆಸಿಕ್ಕು. ~ಬಂದಿ = ಪಿಡಿಯಾಳ್. ~ಬಿಟ್ಟ = ಆಶ್ರಯವಿಲ್ಲದ ಸ್ಥಿತಿ ; ಅನಾಥತೆ. ~ಮೃಗ = ಕ್ರೂರಪ್ರಾಣಿಗಳನ್ನು ಬೇಟೆಯಾಡಲು ತರಬೇತು ಪಡೆದಿರುವ ಪ್ರಾಣಿ; ದೀಹದ ಪ್ರಾಣಿ. ~ಸೂಡಿ = ೧. ಕಸಬರಿಗೆ. ೨. ಹುಲ್ಲಿನ ಸಣ್ಣ ಕಂತೆ.

ಹಿಡಿಕು (ನಾ). ೧. ಹಿಡಿತ ; ಹಿಡಿಯುವಿಕೆ. ೨. ಜಿಪುಣತನ. ೩. = ಹಿಡ. ~ಇಸು = ಒತ್ತು ; ಹಿಸುಕು.

ಹಿಡಿಕೆ (ನಾ). ೧. ಯಾವುದಾದರೂ ವಸ್ತುವನ್ನು ಹಿಡಿದುಕೊಳ್ಳಲು ಅಳವಡಿಸಿರುವ ಸಾಧನ ; ಕೈ ; ಹಿಡಿ. ೨. ಮುಷ್ಟಿ ; ಮುಟಿಗೆ.

ಹಿಡಿತ (ನಾ). ೧. ಹತೋಟಿ ; ಅಂಕೆ. ೨. ಪಟ್ಟು ; ವರಸೆ ; ಪೇಚು.

ಹಿಡಿಹು (ನಾ). ೧. ಹಿಡಿತ ; ಹತೋಟಿ. ೨. ಬೊಗಸೆ ; ಅಂಜಲಿ. ~ಕೊ(ಗೊ)ಳ್ = ವಶವಾಗು ; ಅಂಕೆಗೆ ಒಳಪಡು.

ಹಿಡುಗಲು = ಹಿಡಗಲು.

ಹಿಡುವಳಿ (ನಾ). ೧. ಒಡೆತನ; ಸ್ವಾಮ್ಯ. ೨. ಬೇಸಾಯ ; ಒಕ್ಕಲುತನ. ~ದಾರ = (ಭೂಮಿಯ) ಒಡೆಯ, –ಯಜಮಾನ.

ಹಿಣಿ = ಇಣಿ.

ಹಿಣಿಜು (ನಾ). ಮೀನಿನ ಈಜುರೆಕ್ಕೆ.

ಹಿಣಿಲ್(ಲು) ೧. = ಇಣಿ. ೨. ಹೆರಳು ; ಜಡೆ. ೩. ನವಿಲಿನ ಗರಿ, –ಸೋಗೆ. ~ಇಕ್ಕು(ರಿ) = ಜಡೆಹಾಕು ; ಹೆಣಿ.

ಹಿತ (ನಾ). ೧. ಒಳಿತು ; ಬೇಕಾದುದು. ೨. ಆನಂದಕರವಾದುದು. ೩. ಪ್ರಿಯಕರವಾದುದು. ೪. = ಹಿತವ. ~ಉಪದೇಶ = ಒಳ್ಳೆಯ ಬೋಧನೆ, –ಉಪದೇಶ. ~ಚಿಂತಕ = ಹಿತವನ್ನು ಕುರಿತು ಚಿಂತಿಸುವವನು. ~ತನ = ಒಳ್ಳೆಯತನ; ಸದ್ಗುಣ. ~ವಚನ = ಬುದ್ಧಿಮಾತು ; ಒಳ್ಳೆಯದನ್ನು ಹೇಳುವುದು. ~ಶತ್ರು = ತೋರಿಕೆಗೆ ಸ್ನೇಹಿತನಂತಿದ್ದು ಮರೆಯಲ್ಲಿ ಹಗೆ ಸಾಧಿಸುವವನು.

ಹಿತವ (ನಾ). ಒಳ್ಳೆಯದನ್ನು ಮಾಡುವವನು ; ಸ್ನೇಹಿತ.

ಹಿತವಂತ = ಹಿತವ.

ಹಿತವೆ (ನಾ). ಒಳ್ಳೆಯದನ್ನು ಬಯಸುವವಳು ; ಸ್ನೇಹಿತೆ.

ಹಿತಸ್ಥ = ಹಿತವ.

ಹಿತೇಚ್ಛು = ಹಿತವ.
ಹಿತೈಷಿ = ಹಿತವ.
ಹಿತ್ತಲ್(ಲು) = ಪಿತ್ತಿಲ್.
ಹಿತ್ತಳೆ = ಪಿತ್ತಳೆ.
ಹಿತ್ತಾಳೆ = ಪಿತ್ತಳೆ. ~ಕಿವಿ = ಚಾಡಿಮಾತಿಗೆ ಒಲಿಯುವ ಕಿವಿ.
ಹಿತ್ತಿಲ್(ಲು) = ಪಿತ್ತಿಲ್.
ಹಿದಯ (ನಾ). ಹೃದಯ ; ಮನಸ್ಸು.
ಹಿದುಕು (ಕ್ರಿ). ೧. ಹಿಸುಕು ; ಚಿದಕು. (ನಾ). ೨. ಹಿಸುಕಿ ಸಿಪ್ಪೆ ತೆಗೆದುದು. ~ಅವರೆ = ಸಿಪ್ಪೆಯನ್ನು ತೆಗೆದ ಅವರೆಯ ಕಾಳು ; ಚಿದಕವರೆ.
ಹಿದ್ಮ (ನಾ).ಒಂದು ಬಗೆಯ ರೋಗ; ಬಿಕ್ಕಲು.
ಹಿಧ್ಮ = ಹಿದ್ಮ.
ಹಿನ್ = ಹಿಂ. ~ನಡೆ=೧. ಹಿಂದಕ್ಕೆ ಸರಿ; ಹಿಮ್ಮೆಟ್ಟು. ೨. ಹಿಂದೆ ಸರಿಯುವಿಕೆ; ಹಿಂಜರಿತ. ~ನುಡಿ = ಗ್ರಂಥದ ಉಪ ಸಂಹಾರ ಭಾಗ ; ಕಡೆಮಾತು. ~ನೆಲ = ಹಿಂಭಾಗ ; ಹಿಂಬದಿ. ~ನೆಲೆ =೧. ಹಿನ್ನೆಲ. ೨. ಯುದ್ಧರಂಗದಲ್ಲಿ ಹಿಂಭಾಗದಲ್ಲಿ ಸೈನ್ಯವು ಇಳಿದುಕೊಳ್ಳುವ ಸ್ಥಳ. ೩. ಹಿಂದಿನ ಸನ್ನಿವೇಶ, –ಸಂದರ್ಭ. ೪. ವಸ್ತು ; ವಿಷಯ. ~ನೋಟ = ಹಿಂದಕ್ಕೆ ತಿರುಗಿ ನೋಡುವ ನೋಟ.
ಹಿನ್ನಿ (ನಾ). ೧. ಬಾಣದ ಗರಿ ; ಪುಂಖ. ೨. ರಂಧ್ರ ; ತೂತು.
ಹಿಪ್ಪನೇರಿಳೆ (ನಾ). ಒಂದು ಜಾತಿಯ ಮರ ಮತ್ತು ಅದರ ಹಣ್ಣು.
ಹಿಪ್ಪಲಿ = ಪಿಪ್ಪಲಿ.
ಹಿಪ್ಪೆ (ನಾ). ೧. ಸತ್ತ್ವವನ್ನು ತೆಗೆದ ಮೇಲೆ ಉಳಿದುದು ; ಚರಟ. ೨. ಒಂದು ಜಾತಿಯ ಮರ ; ಮಧೂಕ ; ಇಪ್ಪೆ. ~ಆ(ಯಾ)ಗು = ಸಾರವನ್ನು ಕಳೆದುಕೊಳ್ಳು ; ನಿಸ್ಸತ್ತ್ವ ವಾಗು.
ಹಿಪ್ಪೆಗ (ನಾ). ಸತ್ತ್ವಗುಂದಿದವನು; ನಿತ್ರಾಣಿ.
ಹಿಮ (ನಾ). ೧. ಮಂಜಿನ ಹನಿ ; ಇಬ್ಬನಿ. ೨. ಮಂಜುಗಡ್ಡೆ ; ಬರ್ಫ. ೩. ಚಳಿ ; ಕುಳಿರು. ೪. ಚಳಿಗಾಲ ; ಶಿಶಿರ. ೫. ಹಿಮಾಲಯಪರ್ವತ. ೬. ಪಚ್ಚಕರ್ಪೂರ. ೭. ಶಿವ. ೮. ಚಂದ್ರ. ~ಅಂಶು = ೧. ಹಿಮ ಕಿರಣ. ೨. ಒಂದು ಬಗೆಯ ಸುಗಂಧವಸ್ತು ; ಕರ್ಪೂರ. ~ಅಚಲ=ಹಿಮದಿಂದ ಕೂಡಿದ ಪರ್ವತ ; ಹಿಮಾಲಯ. ~ಅನಿಲ = ತಂಪಾದ ಗಾಳಿ ; ತಂಗಾಳಿ ; ತಂಬೆಲರು. ~ಆಲಯ = ಹಿಮಾಚಲ. ~ಉಪಳ = ಚಂದ್ರಕಾಂತ ಶಿಲೆ. ~ಕರ=ಹಿಮಾಂಶು. ~ಕಿರಣ = ತಂಪಾದ ಕಿರಣಗಳುಳ್ಳವನು ; ಚಂದ್ರ. ~ಗಿರಿ=ಹಿಮಾಚಲ. ~ಚೂರ್ಣ = ಪಚ್ಚಕರ್ಪೂರ. ~ನಗ = ಹಿಮಾಚಲ. ~ನದಿ = ಮಂಜುಗಡ್ಡೆಗಳಿಂದ ಕೂಡಿದ ನದಿ ; ನೀರ್ಗಲ್ಲ ನದಿ. ~ಪವನ = ಹಿಮಾನಿಲ. ~ಮಣಿ = ಮಂಜಿನ ಹನಿ. ~ವಾರಿ = ೧. ಮಂಜಿನ ನೀರು ; ಇಬ್ಬನಿ. ೨. ಹೂವುಗಳಿಂದ ತೆಗೆದ ಸಾರ; ಪನ್ನೀರು. ~ವಾಲುಕ = ಹಿಮಚೂರ್ಣ. ~ಸಾರಂಗ = ಶೀತವಲಯದಲ್ಲಿ ವಾಸಿಸುವ ಒಂದು ಜಾತಿಯ ಜಿಂಕೆ. ~ಹಿಡಿ = ತಣ್ಣಗಾಗು ; ಆರು.
ಹಿಮಗು (ನಾ). ೧. ಚಂದ್ರ; ಶಶಿ. ೨. ಚಂದ್ರ ಕಾಂತ ಶಿಲೆ.
ಹಿಮವಂತ ೧.=ಹಿಮವದ್ಗಿರಿ. ೨. ಹಿಮಾಲಯ ಪರ್ವತದ ಒಡೆಯ ; ಪರ್ವತರಾಜ.
ಹಿಮವದ್ಗಿರಿ (ನಾ). ಹಿಮಾಲಯಪರ್ವತ.
ಹಿಮಾನಿ (ನಾ). ಮಂಜಿನ ರಾಶಿ, –ಒಟ್ಟಿಲು.
ಹಿಮ್ಮಡ (ನಾ). ೧. ಪಾದದ ಹಿಂಭಾಗ ; ಹಿಂಗಾಲು. ೨. ಚಪ್ಪಲಿಯ ಅಡಿಯ ಚರ್ಮ ; ಅಟ್ಟೆ.
ಹಿಮ್ಮಡಿ = ಹಿಮ್ಮಡ.

ಹಿಮ್ಮಣಿ = ಹಮ್ಮಿಣಿ.
ಹಿಮ್ಮತ್ತು (ನಾ). ೧. ಧೈರ್ಯ; ಸಾಹಸ; ಶೌರ್ಯ. ೨. ಉತ್ಸಾಹ; ಉಮೇದು.
ಹಿಯ್ಯಾಳಿ (ನಾ). ತೆಗಳಿಕೆ; ನಿಂದೆ; ತಿರಸ್ಕಾರ. ~ಇಕೆ = ನಿಂದೆ; ತೆಗಳಿಕೆ. ~ಇಸು = ನಿಂದಿಸು; ತೆಗಳು.
ಹಿರಣ್ಮಯ (ಗು). ಚಿನ್ನದಿಂದ ಮಾಡಿದ.
ಹಿರಣ್ಯ (ನಾ). ೧. ಚಿನ್ನ; ಬಂಗಾರ. ೨. ಬಂಗಾರದಿಂದ ಮಾಡಿದ ಒಂದು ಬಗೆಯ ನಾಣ್ಯ. ೩. ಒಬ್ಬ ವಿದ್ಯಾಧರನ ಹೆಸರು. ~ಗರ್ಭ = ಬ್ರಹ್ಮ. ~ದಾನ = ಚಿನ್ನದ ದಾನ. ~ರೇತ = ೧. ಅಗ್ನಿ. ೨. ಶಿವ.
ಹಿರಣ್ಯಾಕ (ನಾ). ರಾಕ್ಷಸರ ಒಡೆಯ; ಹಿರಣ್ಯ ಕಶಿಪು. ~ಹರ = ವಿಷ್ಣು.
ಹಿರಾಕಸ (ನಾ). ಕಬ್ಬಿಣ ಮತ್ತು ಗಂಧಕಾಮ್ಲಗಳ ಮಿಶ್ರಣದಿಂದಾದ ಒಂದು ಬಗೆಯ ಲವಣ; ಕಾಸೀಸ.
ಹಿರಿ (ಕ್ರಿ). ೧. ಭಾಗಮಾಡು; ಹೋಳುಮಾಡು. ೨. ಸುಲಿ; ಕಿತ್ತುಕೊಳ್ಳು. ೩. (ಒರೆಯಿಂದ ಕತ್ತಿಯನ್ನು) ಎಳೆ,-ಸೆಳೆ. (ಗು).೪. ದೊಡ್ಡದಾದ. ೫. ಶ್ರೇಷ್ಠವಾದ; ಮುಖ್ಯವಾದ. ~ಅ(ಯ)ರಸಿ = ಪಟ್ಟದ ರಾಣಿ. ~ಗಡಿ = ಮುಖಂಡ; ಮುಂದಾಳು. ~ತನ = ಹಿರಿಮೆ. ~ಮಣಿ = ೧. ಹಿರೇಮಣಿ. ೨. ಹಳ್ಳಿಯ ಅಥವಾ ಸಮಾಜದ ಮುಖಂಡ. ~ಹಿಗ್ಗು = ೧. ಅತಿಯಾಗಿ ಆನಂದಪಡು. ೨. ವಿಶೇಷವಾದ ಆನಂದ,-ಸಂತೋಷ.
ಹಿರಿದು = ಪಿರಿದು.
ಹಿರಿಮೆ (ನಾ). ಹೆಚ್ಚುಗಾರಿಕೆ; ಮೇಲ್ಮೆ.
ಹಿರಿಯ = ಪಿರಿಯ. ~ತನ = ಹಿರಿಮೆ.
ಹಿರೀಕ (ನಾ). ಹಿರಿಯ; ದೊಡ್ಡವನು.
ಹಿರೇಕಸ = ಹಿರಾಕಸ.
ಹಿರೇಮಣಿ (ನಾ). ತರಗತಿಯ ಮುಖಂಡ; ಮಾನಿಟರು.
ಹಿಲ (ನಾ). ಒಂದು ಜಾತಿಯ ಮರ.
ಹಿಲಾಲು (ನಾ). ಬಟ್ಟೆಯನ್ನು ಎಣ್ಣೆಯಲ್ಲಿ ಅದ್ದಿ ಉರಿಸುವ ಕೈದೀಪ; ಪಂಜು; ದೀವಟಿಗೆ.
ಹಿಲ್ಲಾಲ = ಹಿಲಾಲು.
ಹಿವ (ನಾ). ೧. ಹಿಮ; ಮಂಜು. ೨. ಕರ್ಪೂರ.
ಹಿವಗದಿರ (ನಾ). ಚಂದ್ರ.
ಹಿಸಾಬು (ನಾ). ೧. ಗಣನೆ; ಎಣಿಕೆ. ೨. ದಾಖಲೆ ಪುಸ್ತಕ.
ಹಿಸಿ = ಪಿಸಿ.
ಹಿಸುಕು (ಕ್ರಿ). ೧. ಒತ್ತು; ಅದುಮು; ಪಿಸುಕು. ೨. ಪರೀಕ್ಷಿಸು; ಸೂಕ್ಷ್ಮವಾಗಿ ನೋಡು.
ಹಿಸುಣ = ಪಿಶುನ. ~ಆಡು = ಚಾಡಿಹೇಳು; ದೂರು. ~ಇಕೆ = ಹಿಸುಣತೆ. ~ಇಗ = ಚಾಡಿಕೋರ.
ಹಿಸುಣತೆ (ನಾ). ಚಾಡಿ ಹೇಳುವುದು; ದೂರು.
ಹಿಸೆ (ನಾ). ಪಾಲು; ಭಾಗ.
ಹಿಸ್ಸೆ = ಹಿಸೆ. ~ದಾರ = ಪಾಲುಗಾರ; ಭಾಗಸ್ಥ.
ಹಿಳಲು = ಹಿಳಿಲ್.
ಹಿಳಿ ೧. = ಹಿೞಿ. ೨. ಬಿರಿ; ಒಡೆ. ೩. ಇಲ್ಲವಾಗು; ಮರೆಯಾಗು. ೪. ನಾಶಮಾಡು; ಧ್ವಂಸಮಾಡು.
ಹಿಳಿಕು = ಹಿಳುಕು.
ಹಿಳಿಲ್(ಲು) (ನಾ). ಹಿಣಿಲು; ಡುಬ್ಬ.
ಹಿಳುಕು = ಪಿಳುಕು. ~ಗರಿ = ಬಾಣದ ಗರಿ.
ಹಿಳ್ಗು (ಕ್ರಿ). ೧. ಬಿರಿ; ಒಡೆ. (ನಾ). ೨. ಸಂತೋಷ; ಹಿಗ್ಗು.
ಹಿಳ್ಳಯಿಸು (ಕ್ರಿ).ಅಗಲವಾಗಿ ತೆರೆ; ಹಿಗ್ಗಿಸು.
ಹಿಳ್ಳಿ (ನಾ). ಕೊಂಬೆ; ಟಿಸಿಲು. ~ಇಸು =ಹಿಳ್ಳಯಿಸು. ~ಒ(ಯೊ)ಡೆ=ಕವಲಾಗು; ಟಿಸಿಲೊಡೆ.
ಹಿಳ್ಳು (ನಾ). ೧. ಮರಿ; ಶಾಬ; ಪೋತ. ೨. ಒಂದು ಬಗೆಯ ಆಟ.

ಹಿಳ್ಳೆ (ನಾ). ೧. ಮರಿ ; ಪಿಳ್ಳೆ. ೨. ಒಂದು ಬಗೆಯ ಆಟಕ್ಕೆ ಬಳಸುವ ಕೋಲು; ಚಿಣ್ಣೆ. ೩. = ಹಿಳ್ಳಿ. ~ಕಾ(ಗಾ)ಲ್(ಲು) =ಬಡಕಲಾದ ಕಾಲು ; ಸೊರಗಿದ ಕಾಲು.

ಹಿಱು(ಳಿ) = ಪಿಱು.

ಹೀ(ಂ)ಗೆ = ಇಹಗೆ.

ಹೀಗಳೆ (ಕ್ರಿ). ೧. ಹಂಗಿಸು ; ಹೀನಾಯ ಮಾಡು. ೨. ನಿರಾಕರಿಸು ; ಅಲ್ಲಗಳೆ.

ಹೀಚು (ನಾ). ಮಿಡಿ ; ಎಳೆಗಾಯಿ.

ಹೀಜು (ಕ್ರಿ). ಬಟ್ಟೆಯಲ್ಲಿ ಎಳೆಗಳು ದೂರ ವಾಗು ; ಹಿಂಜು ; ಹಿಸಿ.

ಹೀದೆ (ನಾ). ಸತ್ತ್ವವನ್ನು ತೆಗೆದ ಮೇಲೆ ಉಳಿದುದು ; ಹಿಪ್ಪೆ.

ಹೀನ (ನಾ). ೧. ಕೆಟ್ಟಕೆಲಸ ; ದುಷ್ಕೃತ್ಯ. ೨. ಕೀಳುಮನುಷ್ಯ ; ಅಲ್ಪವ್ಯಕ್ತಿ. (ಗು). ೩. ಕೀಳಾದ ; ಅಲ್ಪವಾದ. ೪. ಕೆಟ್ಟ ; ದುಷ್ಟ. ೫. ತೊರೆದ ; ತ್ಯಜಿಸಿದ. ~ಅಂಗ = ೧. ಅಂಗವಿಕಲ ; ಹೆಳವ. ೨. ಅಂಗವನ್ನು ಕಳೆದುಕೊಂಡ. ~ಇಂದು = ಕ್ಷೀಣವಾದ ಚಂದ್ರ. ~ಇಸು = ಜರೆ ; ಹಂಗಿಸು. ~ಗುಣ = ದುಷ್ಟಗುಣ ; ಕ್ಷುಲ್ಲಕಬುದ್ಧಿ. ~ಚಾಳಿ = ಕೆಟ್ಟ ಅಭ್ಯಾಸ; ದುಶ್ಚಟ. ~ಜಾತಿ = ೧. ಕೀಳುಜಾತಿ. ೨. ಕೆಳಮಟ್ಟ; ಕೆಳವರ್ಗ. ~ತನ = ಕೀಳು ತನ ; ಅಲ್ಪತೆ. ~ದಶೆ = ಕೀಳಾದ ಸ್ಥಿತಿ. ~ನುಡಿ=ಕೆಟ್ಟ ಮಾತು. ~ಸುಳಿ = ದೇಹದ ಮೇಲಿರುವ ಅಶುಭಸೂಚಕವಾದ ಸುಳಿ.

ಹೀನತೆ = ಹೀನತನ.

ಹೀನಯಿಸು = ಹೀನಿಸು.

ಹೀನಾಮಾನ (ಅ). ಅಪಮಾನವಾಗುವಂತೆ ; ಹೀಯಾಳಿಕೆಯಿಂದ ಕೂಡಿ.

ಹೀನಾಯ (ನಾ). ೧. ಅವಮರ್ಯಾದೆ ; ಅವಮಾನ. ೨. ಕ್ಷುದ್ರತನ ; ಅಲ್ಪತೆ. ೩. ಕೊರತೆ ; ನ್ಯೂನತೆ.

ಹೀನೈಸು = ಹೀನಿಸು.

ಹೀಯಾಳಿಕೆ = ಹಿಯ್ಯಾಳಿಕೆ.

ಹೀಯಾಳಿಸು = ಹಿಯ್ಯಾಳಿಸು.

ಹೀರ್(ರು) (ಕ್ರಿ). ೧. ದ್ರವವನ್ನು ಬಾಯಿ ಯೊಳಗೆ ಎಳೆದುಕೊಳ್ಳು, –ಸೇದಿಕೊಳ್ಳು. ೨. ಕುಡಿ ; ಗ್ರಹಿಸು.

ಹೀರ ೧. = ಹೀರಕ. ೨. ಹಾವು. ೩. ಸಿಂಹ. ೪. ಸಿಡಿಲು. ~ಆವಳಿ = ವಜ್ರಗಳಿಂದ ಮಾಡಿದ ಸರ.

ಹೀರಕ (ನಾ). ನವರತ್ನಗಳಲ್ಲಿ ಒಂದು; ವಜ್ರ.

ಹೀರೆ (ನಾ). ಒಂದು ಜಾತಿಯ ಬಳ್ಳಿ ಮತ್ತು ಅದರ ಕಾಯಿ.

ಹೀಲಿ = ಪೀಲಿ. ~ಕೆ(ಗೆ)ದಱು(ರು)=೧. ಗರಿ ಗಳನ್ನು ಹರಡು, –ಕೆದರು. ೨. ಹಿಗ್ಗು ; ಸಂತೋಷಪಡು. ~ಕೊ(ಗೊ)ಡೆ = ಪೀಲಿದಟಿ. ~ತ(ದ)ಳೆ = ಪೀಲಿದಟಿ.

ಹೀಹಾಳಿ (ನಾ). ೧. ನಿಂದೆ; ತೆಗಳಿಕೆ. ೨. ಸ್ಪರ್ಧೆ; ಹುರುಡು. ~ಇಕೆ = ಹಿಯ್ಯಾಳಿಕೆ.

ಹುಂ = ಹೂಂ.

ಹುಂಕರಿಸು (ಕ್ರಿ). ಹುಂ ಎಂದು ಶಬ್ದಮಾಡು; ಒಪ್ಪಿಗೆಯನ್ನು ಸೂಚಿಸು ; ಹೂಗುಡು.

ಹುಂಕಾರ (ನಾ). ೧. ಹುಂ ಎನ್ನುವುದು. ೨. = ಹೂಂಕಾರ.

ಹುಂಕೃತಿ = ಹೂಂಕೃತಿ.

ಹುಂಜ (ನಾ). ಗಂಡು ಕೋಳಿ ; ಕುಕ್ಕುಟ.

ಹುಂಡ = ಪುಂಡ.

ಹುಂಡಿ (ನಾ). ೧. ಸಣ್ಣಹಳ್ಳಿ ; ಕೊಪ್ಪಲು. ೨. ಹಣದ ದಾಖಲೆ; ಹವಾಲೆಪತ್ರ. ೩. ಹಣ ವನ್ನು ಸಂಗ್ರಹಿಸಿಡುವ ಡಬ್ಬಿ ; ಗೋಲಕ. ೪. ಹಣದ ಚೀಟಿ ; ಚೆಕ್ಕು. ೫. ಬರೆದು ಕೊಟ್ಟ ಹೇಳಿಕೆ.

ಹುಂಡು (ನಾ). ೧. ಸಣ್ಣಚೂರು ; ಖಂಡ. ೨. ಮಿಶ್ರವರ್ಣ.

ಹುಂಬ (ನಾ). ಅವಿವೇಕಿ ; ದಡ್ಡ.

ಹುಕುಂ (ನಾ). ಅಪ್ಪಣೆ ; ಆಜ್ಞೆ.
ಹುಕುಮು = ಹುಕುಂ.
ಹುಕ್ಕಾ (ನಾ). ತಂಬಾಕು ಸೇದುವ ಒಂದು ಸಾಧನ.
ಹುಕ್ಕೆ = ಹುಕ್ಕಾ.
ಹುಗಲು (ನಾ). ತೂತು ; ರಂಧ್ರ ; ವೆಜ್ಜ.
ಹುಗಿ (ಕ್ರಿ). ೧. ನೆಲದಲ್ಲಿ ಮುಚ್ಚಿಡು ; ಹೂಳು. ೨. ಮುಚ್ಚಿಹೋಗು ; ಹೂತು ಹೋಗು.
ಹುಗಿಲ್(ಲು) (ನಾ). ೧. ಸೀಳಿರುವಿಕೆ ; ತುಂಡಾಗಿರುವಿಕೆ. ೨. = ಹುಗಲು. ~ಇಱಿ(ರಿ)=ಸೀಳುವಂತೆ ತಿವಿ, –ಚುಚ್ಚು. ~ಕ(ಗ)ಳೆ = ಸೀಳು ; ಸಿಗಿ.
ಹುಗಿಸು (ಕ್ರಿ). ೧. ಒಳಹೊಗುವಂತೆ ಮಾಡು. ೨. ಹೂಳುವಂತೆ ಮಾಡು.
ಹುಗು (ಕ್ರಿ). ಒಳಹೊಗು ; ಪ್ರವೇಶಿಸು.
ಹುಗುಳು = ಪುಗುಳ್. ~ಏಳು = ಬೊಕ್ಕೆ ಯುಂಟಾಗು ; ಗುಳ್ಳೆಯಾಗು.
ಹುಗ್ಗಿ = ಪುಗ್ಗಿ.
ಹುಗ್ಗಿಗ (ನಾ). ಸೊಕ್ಕಿನಿಂದ ಕೂಡಿರುವವನು; ಗರ್ವಿಷ್ಠ.
ಹುಚ್ಚ (ನಾ). ೧. ಬುದ್ಧಿ ಪಲ್ಲಟವಾಗಿರುವವನು; ಮರುಳ. ೨. ತಿಳಿಗೇಡಿ ; ಮಂಕ ; ದಡ್ಡ.
ಹುಚ್ಚಾಪಟ್ಟೆ (ಅ). ಮಿತಿಯಿಲ್ಲದೆ; ಸಿಕ್ಕಾಬಟ್ಟೆ.
ಹುಚ್ಚಾಬಟ್ಟೆ = ಹುಚ್ಚಾಪಟ್ಟೆ.
ಹುಚ್ಚಿ (ನಾ). ೧. ಹುಚ್ಚು ಹಿಡಿದಿರುವವಳು ; ಬುದ್ಧಿ ಕೆಟ್ಟಿರುವವಳು. ೨. ತಿಳಿಗೇಡಿ; ದಡ್ಡಿ.
ಹುಚ್ಚು ೧. = ಪುಚ್ಚು. ೨. ಗೀಳು ; ಚಟ ; ಹವ್ಯಾಸ. ~ಆಟ=೧. ಹುಚ್ಚನ ನಡವಳಿಕೆ. ೨. ಮನಬಂದಂತೆ ವರ್ತಿಸುವುದು ; ಸ್ವಚ್ಛಂದಪ್ರವೃತ್ತಿ. ~ಇಡು = ಕಳೆಗುಂದು ; ವಿವರ್ಣವಾಗು. ~ಕೊ(ಗೊ)ಳ್ = ಬುದ್ಧಿ ಭ್ರಮಣೆಗೆ ಒಳಗಾಗು. ~ಗಾಳಿ = ಭಯಂಕರವಾದ ಗಾಳಿ ; ಬಿರುಗಾಳಿ. ~ತನ=ಬುದ್ಧಿ ಭ್ರಮಣೆ ; ಪೈತ್ಯ. ~ಮಳೆ = ಧಾರಾಕಾರವಾದ ಮಳೆ ; ಅತಿಶಯವಾದ ವೃಷ್ಟಿ. ~ಹಿಡಿ = ಬುದ್ಧಿ ಪಲ್ಲಟವಾಗು. ~ಹೊಳೆ = ದಡವನ್ನು ಅತಿಯಾಗಿ ಮೀರಿ ಹರಿಯುವ ನದಿ.
ಹುಚ್ಚೆಳ್ಳು (ನಾ). ಒಂದು ಜಾತಿಯ ಎಳ್ಳು ; ಗುರೆಳ್ಳು.
ಹುಜರಾತಿ (ನಾ). ದೊರೆಯ ಅಂಗರಕ್ಷಕದಳ.
ಹುಜರೆ = ಹುಜರಾತಿ.
ಹುಜೂರ್(ರು) (ನಾ). ೧. ಒಡೆಯ; ಅಧಿಕಾರಿ. ೨. ಹಿರಿಯ ಅಧಿಕಾರಿಗಳನ್ನು ಸಂಬೋಧಿಸುವಾಗ ಬಳಸುವ ಮಾತು.
ಹುಟ್ಟಗೆ = ಪುಟ್ಟಗೆ.
ಹುಟ್ಟಿ (ನಾ). ಜೇನಿನ ಗೂಡು; ಜೇನುಹುಟ್ಟು.
ಹುಟ್ಟಿಗೆ ೧. = ಪುಟ್ಟಗೆ. ೨. (ಹರಕೆಗಾಗಿ ತೊಡುವ) ಬೇವಿನ ಸೊಪ್ಪಿನಿಂದ ಮಾಡಿದ ಉಡುಗೆ.
ಹುಟ್ಟು (ಕ್ರಿ). ೧. ಜನಿಸು ; ಜನ್ಮತಾಳು. ೨. ಮೂಡು ; ಆವಿರ್ಭವಿಸು. ೩. ಮೊಳಕೆ ಯೊಡೆ ; ಚಿಗುರು. (ನಾ). ೪. ಜನ್ಮ ; ಉತ್ಪತ್ತಿ. ೫. ಕುಲ ; ಸಂತಾನ ; ವಂಶ. ೬. ಮರದಿಂದ ಮಾಡಿದ ಸೌಟು. ೭. ದೋಣಿ ಯನ್ನು ನಡಸುವ ಸಾಧನ. ೮.=ಹುಟ್ಟುವಳಿ. ೯. = ಹುಟ್ಟಿ. ~ಅಡಗಿಸು = ಇಲ್ಲದಂತೆ ಮಾಡು ; ಸಂಪೂರ್ಣವಾಗಿ ಧ್ವಂಸಮಾಡು. ~ಅರಿವು=ಜನ್ಮಸಿದ್ಧವಾಗಿ ಬಂದ ತಿಳಿವಳಿಕೆ; ಸಹಜಜ್ಞಾನ. ~ಅಳಿ = ೧. ಸಂಪೂರ್ಣವಾಗಿ ನಾಶವಾಗು, –ಹಾಳಾಗು. ೨. ಮುಕ್ತವಾಗು. ~ಇಸು = ಉಂಟುಮಾಡು ; ಸೃಷ್ಟಿಸು ; ಜನ್ಮವನ್ನು ಕೊಡು. ~ಊರು = ಹುಟ್ಟಿದ ಊರು ; ಜನ್ಮಸ್ಥಳ. ~ಕ(ಗ)ನ್ನಡ = ಶುದ್ಧವಾದ ಕನ್ನಡ; ಅಚ್ಚಗನ್ನಡ. ~ಕು(ಗು)ಟ್ಟು = ಹುಟ್ಟಡಗಿಸು. ~ಕು(ಗು)ರುಡ = ಪುಟ್ಟುಂಗುರುಡ.

~ಕೆ(ಗೆ)ಡು=ಹುಟ್ಟಳಿ. ~ಕೊ(ಗೊ)ಲು = ದೋಣಿಯನ್ನು ನಡಸುವ ಕೋಲು. ~ಗುಣ = ಜನ್ಮದಿಂದ ಬಂದಿರುವ ಸ್ವಭಾವ. ~ಚಾಳಿ = ಹುಟ್ಟುಗುಣ. ~ಮನೆ = ಜನಿಸಿದ ಮನೆ; ತವರುಮನೆ. ~ಹಬ್ಬ = ಹುಟ್ಟಿದ ದಿನದ ನೆನಪಿಗಾಗಿ ಮಾಡುವ ಹಬ್ಬ; ವರ್ಧಂತಿ. ~ಹಾಕು = ೧. ಗಿಡವನ್ನು ನೆಡು. ೨. ಕೋಲಿನಿಂದ ದೋಣಿಯನ್ನು ಮುನ್ನಡಸು.

ಹುಟ್ಟುವಳಿ (ನಾ). ಆದಾಯ; ಉತ್ಪತ್ತಿ; ಲಾಭ.

ಹುಡದಿ (ನಾ). ೧. ಒಂದು ಬಗೆಯ ಗುಂಪಿನ ಆಟ. ೨. ಗಲಾಟೆ; ಗದ್ದಲ.

ಹುಡಿ = ಪುಡಿ. ~ಕ(ಗ)ಳೆ = ಪುಡಿಮಾಡು. ~ಕು(ಗು)ಟ್ಟು = ಪುಡಿಮಾಡು. ~ಕೆ(ಗೆ)ಮ್ಮು = ಕಫವಿಲ್ಲದ ಕೆಮ್ಮು; ಒಣಕೆಮ್ಮು. ~ಮಾಡು = ಪುಡಿಮಾಡು. ~ಮುಕ್ಕ = ೧. ಮಣ್ಣನ್ನು ತಿನ್ನುವವನು. ೨. ನಿರ್ಭಾಗ್ಯ; ಸತದೃಷ್ಟ. ~ಹಾರಿಸು = ೧. ಧೂಳೆಬ್ಬಿಸು. ೨. ಧನವ್ಯಯಮಾಡಿ ಆಡಂಬರದಿಂದ ಕಾರ್ಯವನ್ನು ಜರುಗಿಸು. ೩. ನಾಶಮಾಡು.

ಹುಡಿಗೆ = ಹುಡುಗಿ.

ಹುಡುಕು ೧.=ಪುಡುಂಕು. (ನಾ). ೨. ಕಂಡುಹಿಡಿದುದು; ಸಂಶೋಧನೆ. ೩.=ಹುಡುಕ್ಕ. ~ಆಟ = ೧. ಹುಡುಕುವುದು; ಅರಸುವುದು. ೨. ಪರೀಕ್ಷಿಸುವುದು. ~ನೀರ್(ರು) = ಪುಡುಂಕುನೀರ್. ~ನೋಟ = ಪರೀಕ್ಷೆ ಮಾಡುವ ನೋಟ.

ಹುಡುಕ್ಕ(ನಾ). ಒಂದು ಬಗೆಯ ಚರ್ಮವಾದ್ಯ.

ಹುಡುಗ (ನಾ). ಎಳೆವಯಸ್ಸಿನವನು; ಬಾಲಕ; ಎಳೆಯ.

ಹುಡುಗಿ (ನಾ). ಎಳೆವಯಸ್ಸಿನವಳು; ಬಾಲಿಕೆ; ಬಾಲೆ.

ಹುಡುಗು (ನಾ). ಬಾಲ್ಯ; ಎಳೆತನ. ~ಆಟ = ೧. ಬಾಲ್ಯದ ಚೇಷ್ಟೆ, -ವಿನೋದ. ೨. ಕುಚೋದ್ಯ; ಕುಚೇಷ್ಟೆ. ~ತನ = ೧. ಮಕ್ಕಳಂತೆ ವರ್ತಿಸುವುದು. ೨.=ಹುಡುಗಾಟ. ~ಬುದ್ಧಿ=ಅಪ್ರಬುದ್ಧತೆ.

ಹುಡುಗೆ = ಹುಡುಗಿ.

ಹುಡುತುತ್ತು (ನಾ). ಒಂದು ಬಗೆಯ ಆಟ; ಕಬಡ್ಡಿ.

ಹುಡೆ (ನಾ). ಕೋಟೆಯ ಅಗ್ರಭಾಗ; ಬುರುಜು.

ಹುಣ್ = ಪುಣ್.

ಹುಣಗು (ಕ್ರಿ). ಹೆದರು; ಭಯಪಡು.

ಹುಣಸೆ = ಪುಣಿಸೆ.

ಹುಣಿ (ನಾ). ಬದುವು; ಒಡ್ಡು.

ಹುಣಿಸೆ = ಪುಣಿಸೆ.

ಹುಣ್ಣಮೆ = ಪುಣ್ಣಮೆ.

ಹುಣ್ಣಿಮೆ = ಪುಣ್ಣಮೆ.

ಹುಣ್ಣಿಮೆ = ಪುಣ್ಣಮೆ.

ಹುಣ್ಣಿವೆ = ಪುಣ್ಣಮೆ.

ಹುಣ್ಣು = ಪುಣ್.

ಹುತ (ನಾ). ೧. ಯಜ್ಞ, ಯಾಗಗಳಲ್ಲಿ ಅಗ್ನಿಗೆ ಅರ್ಪಿಸಿದುದು; ಹವಿಸ್ಸು. (ಗು). ೨.ಅಗ್ನಿಯಲ್ಲಿ ಅರ್ಪಿಸಿದ; ಹೋಮ ಮಾಡಿದ. ~ಅಗ್ನಿ = ಹೋಮಾಗ್ನಿಯುಳ್ಳವನು; ಯಾಗದೀಕ್ಷಿತ. ~ಅಶನ = ಹವಿಸ್ಸನ್ನು ತಿನ್ನುವವನು; ಅಗ್ನಿ. ~ಆತ್ಮ = ಒಳ್ಳೆಯ ಕೆಲಸಕ್ಕಾಗಿ ತನ್ನ ಪ್ರಾಣವನ್ನು ಅರ್ಪಿಸಿದವನು.

ಹುತವಹ (ನಾ). ಹವಿಸ್ಸನ್ನು ದೇವತೆಗಳಿಗೆ ಒಯ್ಯುವವನು; ಅಗ್ನಿ.

ಹುತುತು = ಹುಡುತುತ್ತು.

ಹುತ್ತ = ಪುತ್ತ.

ಹುತ್ತರಿ (ನಾ). ೧. ಹೊಸ ಅಕ್ಕಿ. ೨. ಕೊಡಗಿನ ಸುಗ್ಗಿ ಹಬ್ಬ.

ಹುದಲು (ನಾ). ಕೆಸರು; ರಾಡಿ.

ಹುದಿ = ಪುದಿ.

ಹುದಿಗೆ (ನಾ). ಸಮಾಧಿ ; ಗೋರಿ.

ಹುದಿಲು = ಹುದಲು.

ಹುದು (ನಾ). ೧. ಪಾಲು ; ಭಾಗ ; ಪಸುಗೆ. ೨. ಬಾಂಧವ್ಯ ; ನಂಟು. ೩. ಹೊಂದಿಕೆ ; ಸೇರಿಕೆ. ೪. ತಿರುಳು ; ಸತ್ತ್ವ. ~ಬಾ(ವಾ)ೞ್(ಳ್) = ಪುದುವಾೞು.

ಹುದುಂಗು (ಕ್ರಿ). ಅಡಗು ; ಮರೆಯಾಗು.

ಹುದುಗು ೧. = ಹುದುಂಗು. ೨. ಮುದುರಿಕೊಳ್ಳು ; ಸಂಕೋಚ ಮಾಡಿಕೊಳ್ಳು. ೩. ಕಾಪಾಡು ; ರಕ್ಷಿಸು. ೪. ಸೇರಿಸು ; ಮಿಶ್ರಮಾಡು. ೫. ಮುಚ್ಚು; ಮರೆಮಾಡು. (ನಾ). ೬. ಒಳಹೊಗುವುದು ; ಪ್ರವೇಶ. ೭. ರಕ್ಷಣೆ ; ಕಾಪು. ೮. ದೋಸೆ, ಇಡ್ಲಿ ಮೊದಲಾದುವು ಮೆದುವಾಗಲು ಅಕ್ಕಿಯೊಂದಿಗೆ ಸೇರಿಸುವ ಉದ್ದು, ಮೆಂತ್ಯ ಮೊದಲಾದುವು ; ಒದಗು. ೮. ಒದಗುವಿಕೆ; ಉಬ್ಬುವಿಕೆ.

ಹುದುಲು = ಹುದಲು.

ಹುದುವು = ಹುದು.

ಹುದುಳು (ನಾ). ಉಪ್ಪನ್ನು ತಯಾರಿಸುವ ಸ್ಥಳ ; ಮಾಳ.

ಹುದ್ದರಿ (ನಾ). ೧. ಒಳ್ಳೆಯ ಆಟಗಾರ. ೨. ಸ್ಪರ್ಧಿ ; ಸ್ಪರ್ಧಾಳು.

ಹುದ್ದೆ (ನಾ). ೧. ಕೆಲಸ ; ನೌಕರಿ. ೨. ಅಧಿಕಾರ ; ಪದವಿ. ~ದಾರ = ೧. ಉದ್ಯೋಗಸ್ಥ ; ನೌಕರ. ೨. ಅಧಿಕಾರಿ.

ಹುನಾರು (ನಾ). ೧. ಯುಕ್ತಿ ; ಉಪಾಯ. ೨. ಚಾತುರ್ಯ ; ಕುಶಲತೆ.

ಹುನ್ನರು = ಹುನಾರು.

ಹುಬ್ಬು = ಪುರ್ಬು. ~ಗಂಟಿಕ್ಕು = ಕೋಪಗೊಳ್ಳು.

ಹುಬ್ಬೆ = ಪುಬ್ಬೆ.

ಹುಮ್ಮಸ್ಸು (ನಾ). ಉತ್ಸಾಹ ; ಹುರುಪು.

ಹುಯ್ (ಕ್ರಿ). ೧. ಹೊಡೆ ; ಬಡಿ. ೨. ಸುರಿ. ೩. ಶಾಸನ, ಹಚ್ಚೆ ಮುಂತಾದುವನ್ನು ಬರೆ; ಕೆತ್ತು. ೪. ಕಡಿ ; ಕತ್ತರಿಸು. ~ಇಸು = ೧. ಹೊಡೆಸು. ೨. ಸುರಿಯುವಂತೆ ಮಾಡು. ೩. ಕೆತ್ತಿಸು; ಬರೆಸು. ೪. ಕತ್ತರಿಸಿ ಹೋಗು ; ತುಂಡಾಗು.

ಹುಯೀಗಡುಬು (ನಾ). ಒಂದು ಬಗೆಯ ಕಡುಬು.

ಹುಯಿಲ್(ಲು) (ನಾ). ೧. ಗಲಾಟೆ ; ಗದ್ದಲ. ೨. ಕೂಗಾಟ ; ಬೊಬ್ಬೆ ; ಅಳು. ೩. ಕದನ ; ಯುದ್ಧ. ~ಇಡು = ಬೊಬ್ಬೆ ಹಾಕು ; ಕೂಗಾಡು. ~ಎಬ್ಬಿಸು = ಹುಯಿಲಿಡು. ~ಕ(ಗ)ಹಳೆ = ಯುದ್ಧಪ್ರಾರಂಭದಲ್ಲಿ ಊದುವ ಕಹಳೆ.

ಹುಯ್ಯಲ್(ಲು) = ಹುಯಿಲ್. ~ಇಡು = ಹುಯಿಲಿಡು.

ಹುಯ್ಯು = ಹುಯ್.

ಹುಯ್ಲು = ಹುಯಿಲ್.

ಹುರ (ನಾ). ಪಟ್ಟಣ ; ಪುರ.

ಹುರಕು (ನಾ). ೧. ಚರ್ಮವು ಒರಟಾಗಿರುವ ಸ್ಥಿತಿ. ೨. ಗುಳ್ಳೆಗಳು ಏಳುವ ಒಂದು ಬಗೆಯ ಚರ್ಮರೋಗ.

ಹುರಪಳಿಸು (ಕ್ರಿ). ಕಾಳು ಮುಂತಾದುವನ್ನು ಹುರಿ, –ಬಾಡಿಸು.

ಹುರಮಂಜಿ (ನಾ). ೧. ಮಾಸಲು ಕಂದು ಬಣ್ಣ. ೨. ಕೆಮ್ಮಣ್ಣು.

ಹುರಿ (ಕ್ರಿ). ೧. ಕಾಳು ಮುಂತಾದುವನ್ನು ಬಾಣಲೆಯಲ್ಲಿ ಹಾಕಿ ತಾಳಿಸು, –ಬಾಡಿಸು. ೨. ಹಿಂಸೆಕೊಡು ; ಪೀಡಿಸು. (ನಾ). ೩. ಹೊಸೆದುದು ; ಹೆಣೆದುದು. ೪. ದಾರ ; ನೂಲು. ೫. ಬಲ; ಕೆಚ್ಚು. ೬. ಉತ್ಸಾಹ; ಹುರುಪು. ೭. ಬೆನ್ನೆಲುಬು ; ಕಶೇರು. ~ಆ(ಯಾ)ಳ್(ಳು)=ಸ್ಪರ್ಧಿ; ಹುರುಡಿಗ. ~ಓ(ಯೋ)ಡು = ಪುರಿಯೋಡು.

~ಕಟ್ಟು = ೧. ಧೈರ್ಯ ಹೊಂದು. ೨. ಹುರುಪುಗೊಳ್ಳು. ೩. ಧೈರ್ಯ ತಾಳುವಿಕೆ. ೪. ಹುರಿಗೊಂಡುದು; ಗಟ್ಟಿಯಾದುದು. ~ಕ(ಗ)ಡಲೆ = ಪುರಿಗಡಲೆ. ~ಕಾ(ಗಾ)ತಿ = ತೆಂಗಿನ ನಾರಿನಿಂದ ಮಾಡಿದ ಹುರಿ, ನಾರು. ~ಕಾ(ಗಾ)ಳು = ಹೆಸರು, ಕಡಲೆ ಮುಂತಾದ ಕಾಳುಗಳನ್ನು ಹುರಿದು ಉಪ್ಪು, ಕಾರ ಸೇರಿಸಿ ಮಾಡಿದ ಒಂದು ಬಗೆಯ ಕುರುಕಲು ತಿಂಡಿ. ~ಕೂ(ಗೂ)ಡು = ೧. ಕೈಗೂಡು; ನೆರವೇರು. ೨. ಉತ್ಸಾಹಗೊಳ್ಳು. ~ಕೊ(ಗೊ)ಳ್ಳು = ೧. ಹೆಚ್ಚು; ಹೊರಹೊಮ್ಮು. ೨. ಉತ್ಸಾಹಗೊಳ್ಳು. ~ಬಾಡು = ಹುರಿದ ಮಾಂಸ. ~ಮಂಚ = ಹಗ್ಗದಿಂದ ಮಾಡಿದ ಮಂಚ; ಹೊರಸು. ~ಹಿಟ್ಟು = ರಾಗಿ, ಗೋಧಿ ಮೊದಲಾದ ಧಾನ್ಯಗಳನ್ನು ಹುರಿದು ಮಾಡಿದ ಹಿಟ್ಟು; ಹುರಿಟ್ಟು.

**ಹುರುಕಲು** (ನಾ). ಹೆಸರು, ಕಡಲೆ ಮುಂತಾದ ಕಾಳುಗಳನ್ನು ಹುರಿದು ಉಪ್ಪು, ಕಾರ ಹಾಕಿ ಮಾಡಿದ ಒಂದು ಬಗೆಯ ತಿಂಡಿ.

**ಹುರುಕು** = ಹುರಕು.

**ಹುರುಡು** (ನಾ). ೧. ಸ್ಪರ್ಧೆ; ಪೈಪೋಟಿ. ೨. ಹೊಟ್ಟೆಕಿಚ್ಚು; ಮತ್ಸರ. ~ಇಗ = ಪುರುಡಿಗ. ~ಇಸು = ಪುರುಡಿಸು.

**ಹುರುಪು** (ನಾ). ೧. ಉತ್ಸಾಹ; ಹುಮ್ಮಸ್ಸು. ೨. ಪದರ; ಪೊರೆ. ೩. = ಹುರಕು.

**ಹುರುಮಂಜಿ** = ಹುರಮಂಜಿ.

**ಹುರುಳ್**(ಳು) (ನಾ). ೧. ತಿರುಳು; ಸಾರ; ಸತ್ತ್ವ. ೨. ಸಾಮರ್ಥ್ಯ; ಯೋಗ್ಯತೆ. ೩. ಬಲ; ಕೆಚ್ಚು. ~ಕಾ(ಗಾ)ಣ್ = ಸತ್ತ್ವಾಂಶವನ್ನು ತಿಳಿ. ~ಕೆ(ಗೆ)ಡಿಸು = ಬಲವನ್ನು ನಾಶಮಾಡು.

**ಹುರುಳಿ** (ನಾ). ಒಂದು ಬಗೆಯ ದ್ವಿದಳ ಧಾನ್ಯ. ~ಕಟ್ಟು = ಹುರುಳಿಯನ್ನು ಬೇಯಿಸಿ ತೆಗೆದ ಸಾರ. ~ಕಾಯಿ = ಒಂದು ಬಗೆಯ ತರಕಾರಿ.

**ಹುಲಿ** ೧. = ಪುಲಿ. ೨. ಬಡ್ಡಿ; ಪೊಲಿ. ~ಕಲ್ಲು = ಕಲ್ಲುಗಳಿಂದ ಆಡುವ ಒಂದು ಬಗೆಯ ಆಟ. ~ಮುಖ = ಪುಲಿಮುಖ. ~ವೇಷ = ಹುಲಿಯಂತೆ ವೇಷ ಹಾಕಿಕೊಳ್ಳುವುದು ಮತ್ತು ಹಾಗೆ ವೇಷ ಹಾಕಿಕೊಂಡು ಕುಣಿಯುವ ಕುಣಿತ.

**ಹುಲಿಗಿಲ್**(ಲು) = ಪುಲಿಂಗಿಲ್.

**ಹುಲು** = ಪುಲ್. ~ಕ(ಗ)ಚ್ಚು = ಆಶ್ರಯವನ್ನು ಕೋರು. ~ಕಾ(ಗಾ)ಣ್(ಣು) = ಅಲ್ಪವಾಗಿ ಕಾಣು; ತುಚ್ಛೀಕರಿಸು. ~ನರ=ಅಲ್ಪಮನುಷ್ಯ; ಕ್ಷುದ್ರಮನುಷ್ಯ. ~ಪಿ(ವಿ)ಡಿ = ಸೋಲನ್ನು ಒಪ್ಪಿಕೊಳ್ಳು; ಶರಣುಹೊಗು. ~ಬಯಕೆ = ನೀಚವಾದ ಅಪೇಕ್ಷೆ. ~ಮನುಜ = ಹುಲುನರ. ~ಮೊರಡಿ=ಸಣ್ಣ ಗುಡ್ಡ. ~ಸರವಿ=ಹುಲ್ಲಿನಿಂದ ಮಾಡಿದ ಹಗ್ಗ.

**ಹುಲುಸು** (ನಾ). ಹೆಚ್ಚಳ; ಸಮೃದ್ಧಿ.

**ಹುಲ್ಲು** = ಪುಲ್. ~ಕಾ(ಗಾ)ವಲು = ಹುಲ್ಲಿನ ಮೈದಾನ.

**ಹುಲ್ಲೆ** = ಪುಲ್ಲೆ.

**ಹುವ್ವಾಡಿಗ** (ನಾ). ಹೂವು ಮಾರುವವನು; ಹೂವಾಡಿಗ.

**ಹುವ್ವು** (ನಾ). ಪುಷ್ಪ; ಹೂವು.

**ಹುಷಾರ್**(ರು) ೧. = ಹುಷಾರಿ. ೨. ಆರೋಗ್ಯ; ಸ್ವಸ್ಥವಾಗಿರುವಿಕೆ.

**ಹುಷಾರಿ** (ನಾ). ೧. ಜಾಣತನ; ಬುದ್ಧಿವಂತಿಕೆ. ೨. ಎಚ್ಚರಿಕೆ; ಜಾಗರೂಕತೆ.

**ಹುಸಿ** = ಪುಸಿ. ~ಕ = ಪುಸಿಕ. ~ಕಾಳಗ = ವ್ಯರ್ಥವಾದ ಹೋರಾಟ. ~ಗುಂಡು = ಕೇವಲ ಎಚ್ಚರಿಕೆಗಾಗಿ ಹಾರಿಸುವ, ಅಪಾಯಕರವಲ್ಲದ ಗುಂಡು. ~ನಗು =೧. ತೋರಿಕೆಗಾಗಿ ನಗುವ ನಗು; ಕೃತ್ರಿಮ

ನಗು. ೨. ಮೆದುನಗೆ; ನಸುನಗು. ~ನುಡಿ =ಸುಳ್ಳು. ~ಮರಳು = ಮೇಲುನೋಟಕ್ಕೆ ಗಟ್ಟಿಯಾಗಿಯೇ ಕಂಡು, ಕಾಲಿಟ್ಟೊಡನೆಯೇ ಒಳಗೆ ಎಳೆದುಕೊಳ್ಳುವ ಮರಳು; ಕಳ್ಳ ಕೆಸರು. ~ಮುನಿಸು = ಸುಳ್ಳುಕೋಪ; ಪ್ರಣಯಕೋಪ. ~ಹೋಗು = ೧. ಸುಳ್ಳಾಗು. ೨. ವ್ಯರ್ಥವಾಗು.

ಹುಸಿಗ = ಪುಸಿಕ.

ಹುಳಿ ೧. = ಪುಳಿ. ೨. ಜಂಬ; ಪೊಗರು. ~ಕ(ಗ)ಟ್ಟು = ೧. ಕೆಡು; ಹುಳುಬೀಳು. ೨. ಹುಳಿಯಾಗು; ಆಮ್ಲತೆಯಿಂದ ಕೂಡು. ~ತೆ(ದೆ)ೀಗು = ಅಜೀರ್ಣದಿಂದ ಬರುವ ತೇಗು; ಕಮರುತೇಗು. ~ಪಲ್ಯ= ಒಂದು ಬಗೆಯ ಮೇಲೋಗರ. ~ಮುಖ=ಬೇಜಾರಿನಿಂದ ಕೂಡಿದ ಮುಖ; ಹುಳ್ಳಗೆ ಮಾಡಿದ ಮುಖ. ~ಸೊಪ್ಪು = ೧. ಒಂದು ಬಗೆಯ ಸೊಪ್ಪು. ೨. ಸೊಪ್ಪಿನಿಂದ ಮಾಡುವ ಒಂದು ಬಗೆಯ ವ್ಯಂಜನಪದಾರ್ಥ. ~ಹಿಂಡು =೧. ಆಮ್ಲತೆಯನ್ನುಂಟುಮಾಡು. ೨. ಕೆಲಸವನ್ನು ನಾಶಪಡಿಸು, ಹಾಳುಮಾಡು.

ಹುಳು = ಹುೞು. ~ಬೀಳು = ಕುಟ್ಟೆಹಿಡಿ; ಹುಳುತಿನ್ನು.

ಹುಳುಂಬು = ಪುಳುಂಬು.

ಹುಳುಕಡ್ಡಿ (ನಾ). ಒಂದು ಬಗೆಯ ಚರ್ಮರೋಗ.

ಹುಳುಕು = ಪುೞುಕು. ~ಬುದ್ಧಿ= ದುರ್ಬುದ್ಧಿ; ಕೆಟ್ಟಬುದ್ಧಿ; ಕೆಡುಕು ಮಾಡುವ ಬುದ್ಧಿ. ~ಮೋ(ಮು)ರೆ = ಸಿಡುಬಿನ ಕಲೆಗಳಿಂದ ಕೂಡಿದ ಮುಖ. ~ಹಲ್ಲು = ಹುಳುಬಿದ್ದು ಹಾಳಾದ ಹಲ್ಲು.

ಹುಳ್ಳಿ (ನಾ). ಸಣ್ಣಕಟ್ಟಿಗೆ; ಪುರಲೆ; ಪುಳ್ಳೆ.

ಹುೞು(ಳು) = ಪುೞು.

ಹೂ ೧. = ಪೂ. ೨. = ಹೂಂ. ~ಕ(ಗ)ಣೆ =ಪೂಗಣೆ. ~ಕ(ಗ)ಣ್ಣು =ಕಣ್ಣುಗುಡ್ಡೆಯ ಮೇಲೆ ಬಿಳಿಯ ಪಾರದರ್ಶಕವಾದ ಪರೆ ಬೆಳೆದು ದೃಷ್ಟಿ ಮಂದವಾಗುವ ಒಂದು ಬಗೆಯ ರೋಗ. ~ಕು(ಗು)ಟ್ಟು=ಒಪ್ಪು; ಸಮ್ಮತಿಸು. ~ಕೆ(ಗೆ)ಲಸಿ = ೧. ತುಂಬಿ; ಭ್ರಮರ. ೨. = ಪೂವಡಿಗ. ~ಕೋಸು = ಒಂದು ಬಗೆಯ ಕಾಯಿಪಲ್ಯೆ. ~ಗಾರ = ಪೂವಡಿಗ. ~ದಾನಿ=ಹೂವುಗಳನ್ನಿಡುವ ಪಾತ್ರೆ; ಪುಷ್ಪಕರಂಡ. ~ಬತ್ತಿ=೧. ದೇವರ ದೀಪಕ್ಕಾಗಿ ಹತ್ತಿಯನ್ನು ಹೊಸೆದು ಹೂವಿನ ಆಕಾರದಲ್ಲಿ ಮಾಡಿದ ಬತ್ತಿ. ೨. ಪಟಾಕಿಯಲ್ಲಿ ಒಂದು ಬಗೆ. ~ಬಾಣ=೧. ಹೂವುಗಳಿಂದ ಮಾಡಿದ ಬಾಣ. ೨. ಮನ್ಮಥ; ಕಾಮ. ೩. ಬಣ್ಣಬಣ್ಣದ ಕಿಡಿಗಳನ್ನು ಹಾರಿಸುವ ಒಂದು ಬಗೆಯ ಸಿಡಿಮದ್ದು. ~ಬಿಸಿಲು = ಎಳೆಯ ಬಿಸಿಲು. ~ಮಾಲೆ = ಹೂವಿನ ಹಾರ. ~ಮುಡಿ=೧. ತಲೆಯಲ್ಲಿ ಹೂವನ್ನು ಧರಿಸು. ೨. ಹೂವುಗಳಿಂದ ಅಲಂಕೃತವಾದ ತಲೆ. ~ವಲಿ=ಪೂವಲಿ. ~ವೀಳ್ಯ=ಶುಭ ಕಾರ್ಯಗಳ ಪ್ರಾರಂಭದಲ್ಲಿ ಮುತ್ತೈದೆಯರಿಗೆ ಹೂವು ಹಾಗು ವೀಳ್ಯವನ್ನು ಕೊಡುವ ಒಂದು ಆಚರಣೆ.

ಹೂಂ (ನಾ). ಒಪ್ಪಿಗೆ, ತಿರಸ್ಕಾರ ಮುಂತಾದುವುಗಳನ್ನು ಸೂಚಿಸುವ ಶಬ್ದ. ~ಕೊಳ್ = ಸಮ್ಮತಿಯನ್ನು ಸೂಚಿಸು; ಒಪ್ಪು.

ಹೂಂಕರಿಸು (ಕ್ರಿ). ರೋಷದಿಂದ ಕೂಗು; ಅಬ್ಬರಿಸು.

ಹೂಂಕಾರ (ನಾ). ಕೋಪದಿಂದ ಮಾಡುವ ಧ್ವನಿ; ಗರ್ಜನೆ. ~(೦)ಗೆಯ್ = ಹೂಂಕರಿಸು.

ಹೂಂಕೃತಿ = ಹೂಂಕಾರ.

ಹೂಜಿ ೧. = ಹೂಜೆ. ೨. ಭತ್ತಕ್ಕೆ ಬೀಳುವ ಒಂದು ಜಾತಿಯ ಕೀಟ.

ಹೂಜೆ (ನಾ). ಮಣ್ಣು ಅಥವಾ ಲೋಹದಿಂದ ಮಾಡಿದ ನೀರು ತುಂಬಿಡುವ ಪಾತ್ರೆ; ಕೂಜ.

ಹೂಟ (ನಾ). ೧. ಏರ್ಪಾಡು; ಸಿದ್ಧತೆ. ೨. ಯುಕ್ತಿ; ಉಪಾಯ; ಹಂಚಿಕೆ. ೩. ಪಿತೂರಿ; ಕುತಂತ್ರ. ೪. = ಹೂಟೆ. ~ಗಾರ = ಮೋಸಗಾರ; ವಂಚಕ.

ಹೂಟೆ (ನಾ). ೧. ಉಳುವುದು. ೨. ಆರಂಭ; ತೊಡಗುವಿಕೆ.

ಹೂಡು ೧. = ಪೂಡು. ೨. ಬಾಣವನ್ನು ಹೆದೆಗೇರಿಸು. ೩. ಎತ್ತು ಮೊದಲಾದುವುಗಳನ್ನು ಬಂಡಿ ಅಥವಾ ನೊಗಕ್ಕೆ ಕಟ್ಟು. ~ಇಕೆ = ತೊಡಗಿಸುವಿಕೆ; ಪ್ರಾರಂಭಿಸುವಿಕೆ. ~ಇಸು=೧. ಆರಂಭಿಸು; ತೊಡಗಿಸು. ೨. ಗಾಡಿಗೆ ಎತ್ತು ಮುಂತಾದುವುಗಳನ್ನು ಕಟ್ಟು.

ಹೂಡೆ (ನಾ). ಕೋಟೆಯ ತೆನೆ; ಬುರುಜು.

ಹೂಣಿ (ನಾ). ಪ್ರತಿಜ್ಞೆ; ಶಪಥ.

ಹೂಣು (ಕ್ರಿ). ೧. ಹೂಳು; ಹುಗಿ. ೨. ಬಲವಾಗಿ ನೆಡು, –ನಾಟು. ೩. ಶಪಥ ಮಾಡು; ಪ್ರತಿಜ್ಞೆ ಮಾಡು. ~ಇಕೆ = ಹೂಣಿ. ~ಇಗ = ಪ್ರತಿಜ್ಞೆಯನ್ನು ಕೈಗೊಂಡವನು.

ಹೂನ್ಯ (ನಾ). ಪುಣ್ಯ; ಸುಕೃತ.

ಹೂರ (ನಾ). ೧. ನದಿ; ಹೊಳೆ. ೨. ಪ್ರವಾಹ; ಪೂರ.

ಹೂರಣ (ನಾ). ೧. ಹೋಳಿಗೆ, ಕಡುಬು ಮುಂತಾದುವುಗಳಲ್ಲಿ ಹುದುಗಿಸುವ ಬೆಲ್ಲ ಕೊಬ್ಬರಿ ಮುಂತಾದುವುಗಳ ಮಿಶ್ರಣ; ಪೂರಣ. ೨.ಸಾರ; ಸತ್ತ್ವ. ~ಕ(ಗ)ಡುಬು = ಹೂರಣವನ್ನು ತುಂಬಿಸಿ ಮಾಡುವ ಕಡುಬು.

ಹೂರಿಗೆ = ಪೂರಿಗೆ.

ಹೂಲಿ (ನಾ). ೧. ಒಂದು ಜಾತಿಯ ಗಿಡ; ಪೂಲಿ. ೨. ಗದ್ದಲ; ಗೊಂದಲ; ಹುಯಿಲು. ~ಎಬ್ಬಿಸು = ಗಲಾಟೆಮಾಡು; ಗೊಂದಲವೆಬ್ಬಿಸು.

ಹೂವಾಡಿಗ = ಪೂವಡಿಗ.

ಹೂವು = ಪೂವು. ~ಅಡಿಗ = ಪೂವಡಿಗ.

ಹೂಸಕ (ನಾ). ೧.ಸುಳ್ಳು; ಹುಸಿ. ೨.ಸುಳ್ಳಾಡುವವನು; ಹುಸಿಕ. ೩. ಬಳಿಯುದು; ಲೇಪನ.

ಹೂಸಣಂಬ (ನಾ). ಒಂದು ಬಗೆಯ ಭಕ್ಷ್ಯ.

ಹೂಸು (ಕ್ರಿ). ೧. ತೊಡೆ; ಹಚ್ಚು; ಪೂಸು. ೨. ಅಧೋವಾಯುವನ್ನು ಬಿಡು. (ನಾ). ೩. ಅಪಾನವಾಯು.

ಹೂಹೆ (ನಾ). ೧. ಹಸುಳೆ; ಎಳೆಯ ಮಗು. ೨. = ಹಾಹೆ.

ಹೂಳ್(ಳು) = ಪೂೞು. ~ಕಾ(ಗಾ)ಡು = ಶ್ಮಶಾನ; ಸುಡುಗಾಡು.

ಹೃತ್ಕ್ರಿಯೆ (ನಾ). ಹೃದಯದ ಕೆಲಸ, –ಚಟುವಟಿಕೆ.

ಹೃತ್ಪೂರ್ವಕ (ಗು). ಆತ್ಮಸಂತೋಷದಿಂದ ಮಾಡಿದ; ಮನಃಪೂರ್ವಕವಾದ.

ಹೃದಯ (ನಾ). ೧. ದೇಹಕ್ಕೆ ರಕ್ತಸಂಚಾಲನವನ್ನು ಒದಗಿಸುವ ರಕ್ತಕೋಶ. ೨. ಮನಸ್ಸು; ಅಂತರಂಗ. ೩. ಅಂತಃಕರಣ; ಪ್ರೀತಿ. ೪. ತಿರುಳು; ಸತ್ತ್ವ. ~ಅಂತರಾಳ =ಮನಸ್ಸಿನ ಒಳಭಾಗ. ~(ಂ)ಕೊ(ಗೊ)ಳ್ =ಮನಸ್ಸಿಗೆ ತಂದುಕೊಳ್ಳು; ಹೃದ್ಗತಮಾಡಿಕೊಳ್ಳು. ~ಕ್ರಿಯೆ = ಹೃತ್ಕ್ರಿಯೆ. ~ತ(ದ)ಟ್ಟು = ಮನಸ್ಸಿಗೆ ತಾಗು; ಮನವರಿಕೆಯಾಗು. ~ವಿದ್ರಾವಕ = ಮನಸ್ಸನ್ನು ಕರಗಿಸುವ; ಎದೆ ಕರಗಿಸುವ. ~ಸಂವೇದ್ಯ=ಅನುಭವಕ್ಕೆ ಬರುವ; ಮನಸ್ಸಿಗೆ ಗೋಚರವಾಗುವ. ~ಸ್ತಂಭನ = ಹೃದಯದ ಬಡಿತ ನಿಂತುಹೋಗುವಿಕೆ. ~ಸ್ಪರ್ಶಿ = ಹೃದಯಂಗಮ.

ಹೃದಯಂಗಮ (ಗು). ಮನಮುಟ್ಟುವ; ಹೃದಯಸ್ಪರ್ಶಿಯಾದ.

ಹೃದಯವಂತಿಕೆ (ನಾ). ಸಹೃದಯತೆ; ದಯಾಮಯತೆ; ಕಾರುಣ್ಯ.

ಹೃದಯಾಲು (ಗು). ಪ್ರೀತಿಯುಳ್ಳ; ಒಲವುಳ್ಳ.

ಹೃದ್ಗತ (ನಾ). ೧. ಮನಸ್ಸಿಗೆ ಬರುವುದು; ಮನವರಿಕೆ. (ಗು). ೨. ಮನದಟ್ಟಾದ.

ಹೃದ್ಗೋಚರ (ಗು). ಮನಸ್ಸಿಗೆ ತಿಳಿಯುವ; ಮನಮುಟ್ಟುವ.

ಹೃದ್ಯ (ಗು). ೧. ಸುಂದರವಾದ; ಚೆಲುವಾದ. ೨. ಮನಸ್ಸಿನಲ್ಲಿ ಹುಟ್ಟುವ. ೩. ಮನ ಮುಟ್ಟುವ.

ಹೃದ್ರೋಗ (ನಾ). ೧. ಹೃದಯಕ್ಕೆ ಸಂಬಂಧಿಸಿದ ರೋಗ; ಎದೆಬೇನೆ. ೨. ಮನಸ್ಸಿನ ರೋಗ; ಚಿಂತೆ.

ಹೃಷೀಕ (ನಾ). ಜ್ಞಾನೇಂದ್ರಿಯ.

ಹೃಷೀಕೇಶ (ನಾ). ೧. ಜ್ಞಾನೇಂದ್ರಿಯಗಳಿಗೆ ಗೋಚರಿಸುವವನು; ಪರಮಾತ್ಮ. ೨. ವಿಷ್ಣು.

ಹೃಷ್ಟ (ಗು). ಸಂತೋಷಗೊಂಡ; ಆನಂದಿಸಿದ. ~ಪುಷ್ಟ = ಸುಖ ಮತ್ತು ಬಲದಿಂದ ಕೂಡಿರುವವನು. ~ಮಾನಸ = ಸಂತೋಷ ವಾಗಿರುವವನು; ಸುಖಿ.

ಹೆಂ (ಗು). ೧. ದೊಡ್ಡದಾದ; ಹಿರಿದಾದ. ೨. ಹೆಂಗಸಿಗೆ ಸಂಬಂಧಿಸಿದ. ೩. ಮೃದು ವಾದ; ಕೋಮಲವಾದ. ~ಕ(ಗ)ರುಳು =೧. ಹೆಂಗಸಿನ ಮನಸ್ಸು. ೨. ಮೃದುವಾದ ಮನಸ್ಸು. ~ಕ(ಗ)ಳ್ಳ=ಹೆಂಗಸನ್ನು ಕದ್ದು ಕೊಂಡೊಯ್ಯುವವನು. ~ಕೂ(ಗೂ)ಸು = ಪೆಂಗೂಸು. ~ಕೊ(ಗೊ)ಲೆ = ಪಂಚ ಮಹಾಪಾತಕಗಳಲ್ಲಿ ಒಂದು; ಸ್ತ್ರೀಹತ್ಯೆ. ~ಪೆ(ಬೆ)ೇಡಿ =ಅತಿಯಾಗಿ ಹೆದರುವವನು; ಹೇಡಿ. ~ಮಗ = ಪೆರ್ಮಗ. ~ಮಗಳು = ಹೆಣ್ಣುಮಗಳು. ~ಮರ = ೧. ಒಂದು ಜಾತಿಯ ಮರ. ೨. = ಪೆಮ್ಮರ. ~ಮರೆ = ದೊಡ್ಡ ಜಿಂಕೆ. ~ಮಳೆ=ದೊಡ್ಡ ಮಳೆ; ಜೋರಾದ ಮಳೆ. ~ಮೀನ್(ನು)=ದೊಡ್ಡ ಜಾತಿಯ ಮೀನು; ತಿಮಿಂಗಿಲ. ~ಮೆಳೆ = ದೊಡ್ಡ ಮೆಳೆ, -ಪೊದರು.

ಹೆಂಗಸು = ಪೆಂಗೂಸು.

ಹೆಂಗುರು = ಪೆಂಗುರು.

ಹೆಂಗುಸು = ಪೆಂಗೂಸು.

ಹೆಂಗೆ = ಎಹಂಗೆ.

ಹೆಂಚು (ನಾ). ೧. ಮೇಲ್ಛಾವಣಿಗೆ ಹೊದಿಸುವ ಹಂಚು; ಓಡು. ೨. ಕಾವಲಿ. ೩. ಒಡೆದ ಮಡಕೆಯ ಚೂರು; ಬೋಕಿ.

ಹೆಂಟೆ ೧. = ಹೆಟ್ಟೆ. ೨. ಸುಡದೆ ಇರುವ ಇಟ್ಟಿಗೆ.

ಹೆಂಟೆಗೊದ್ದ (ನಾ). ಉಡುವಿನ ಜಾತಿಗೆ ಸೇರಿದ ಒಂದು ಸಣ್ಣಪ್ರಾಣಿ; ಗೋಸುಂಬೆ; ಓತಿಕೇತ.

ಹೆಂಡ = ಪೆಂಡ. ~ಗಾಱ(ರ) = ಮದ್ಯವನ್ನು ಸೇವಿಸುವವನು; ಕುಡಿಕ.

ಹೆಂಡತಿ = ಪೆಂಡತಿ.

ಹೆಂಡಿತಿ = ಪೆಂಡಿತಿ.

ಹೆಂದು (ಕ್ರಿ). ೧. ಕುಗ್ಗು; ಕುಂದು. ೨. ಹಿಂಜರಿ; ಹಿಮ್ಮೆಟ್ಟು. ೩. ಅಲ್ಲಾಡು; ಅಲುಗು.

ಹೆಂಪು =ಪೆಂಪು. ~ಅಳಿ =ಆಧಿಕ್ಯ ನಾಶವಾಗು; ಕುಗ್ಗು.

ಹೆಕ್ಕತ್ತು (ನಾ). ಕತ್ತಿನ ಹಿಂಭಾಗ.

ಹೆಕ್ಕಳ ೧. = ಪೆಕ್ಕಳ. ೨. ಪ್ರವಾಹ; ಪೂರ. ೩. ಉತ್ಸಾಹ; ಸಂತೋಷ. ೪. ಹಿರಿಯ ಸ್ಥಾನ; ಗೌರವ. ~ಇಸು = ೧. ಗರ್ವಿಸು; ಅಹಂಕಾರಪಡು. ೨. ಹೆಚ್ಚಾಗು; ಅಧಿಕ ವಾಗು.

ಹೆಕ್ಕಳಿಕೆ (ನಾ). ೧. ಉತ್ಸಾಹ; ಸಂತೋಷ. ೨. = ಹೆಕ್ಕಳ.

ಹೆಕ್ಕಳೆ (ನಾ). ಗಾಯ ಮುಂತಾದುವುಗಳ ಒಣಗಿದ ಮೇಲುಭಾಗ.

ಹೆಕ್ಕು (ಕ್ರಿ). ಆಯು; ಆರಿಸಿಕೊಳ್ಳು.

ಹೆಗಲ್ = ಪೆಗಲ್. ~ಎಣೆ = ಸರಿಸಮಾನ; ಸಾಟಿ. ~ಕೊಡು = ಸಹಾಯ ಮಾಡು; ನೆರವು ನೀಡು.

ಹೆಗ್ಗ (ನಾ). ಎಗ್ಗ ; ದಡ್ಡ.
ಹೆಗ್ಗಡಲು (ನಾ). ದೊಡ್ಡಸಮುದ್ರ.
ಹೆಗ್ಗಡೆ = ಪೆಗ್ಗಡೆ. ~ಇತಿ = ಪೆರ್ಗಡಿತಿ.
ಹೆಗ್ಗಣ = ಪೆಗ್ಗಣ.
ಹೆಗ್ಗಣ್ಣು (ನಾ). ೧. ಬಟ್ಟಲುಗಣ್ಣು ; ದೊಡ್ಡ ಕಣ್ಣು. ೨. ಮುಖ್ಯಭಾಗ ; ಕೇಂದ್ರ ಸ್ಥಾನ.
ಹೆಗ್ಗತ್ತಲೆ (ನಾ). ಗಾಢಾಂಧಕಾರ.
ಹೆಗ್ಗತ್ತು = ಹೆಕ್ಕತ್ತು.
ಹೆಗ್ಗರ (ನಾ). ದೊಡ್ಡಗ್ರಹ.
ಹೆಗ್ಗರಡಿ (ನಾ). ದೊಡ್ಡ ಕರಡಿ.
ಹೆಗ್ಗರುಳು (ನಾ). ದೊಡ್ಡ ಕರುಳು.
ಹೆಗ್ಗಹಳೆ = ಹೆಗ್ಗಾಳೆ.
ಹೆಗ್ಗಳ (ನಾ). ಆಧಿಕ್ಯ ; ಹೆಚ್ಚಳ. ~ಇಕೆ = ಹೆಗ್ಗಳ.
ಹೆಗ್ಗಾಉ(ರ) (ನಾ). ಒಂದು ಜಾತಿಯ ಪಕ್ಷಿ.
ಹೆಗ್ಗಾಳೆ (ನಾ). ದೊಡ್ಡ ಕಹಳೆ.
ಹೆಗ್ಗುರುತು (ನಾ). ಪ್ರಮುಖವಾದ ಗುರುತು.
ಹೆಚ್ಚಳ ೧. = ಹೆಗ್ಗಳ. ೨. ಹೆಮ್ಮೆ; ಬೀಗುವಿಕೆ.
ಹೆಚ್ಚಾಳು (ನಾ). ಹಿರಿಮೆಯುಳ್ಳವನು ; ಮೇಲ್ಮೆಯುಳ್ಳವನು. ~ತನ=೧.ಸಂತೋಷ; ಹರ್ಷ. ೨. ಅಹಂಕಾರ ; ಗರ್ವ.
ಹೆಚ್ಚು (ಕ್ರಿ). ೧. ಹೆಚ್ಚಾಗು ; ಅಭಿವೃದ್ಧಿಯಾಗು ; ಬೆಳೆ. ೨. ಅಹಂಕಾರಪಡು ; ಗರ್ವಿಸು. ೩. ಸಂತೋಷಪಡು ; ಹರ್ಷಪಡು. ೪. (ಮಂಗಳವಸ್ತುಗಳ ವಿಷಯದಲ್ಲಿ ಹೇಳುವಾಗ) ಕಡಮೆಯಾಗು. ೫. (ತರಕಾರಿ ಮೊದಲಾದುವುಗಳನ್ನು) ಚೂರು ಮಾಡು, – ಹೋಳುಮಾಡು. (ನಾ). ೬. ವೃದ್ಧಿ ; ಆಧಿಕ್ಯ. ~ಇಕೆ(ಗೆ) = ಹೆಚ್ಚಳ; ವೃದ್ಧಿ. ~ಕ(ಗ)ಟ್ಟಲೆ = ೧. ವಿಶೇಷ ಸಂದರ್ಭ. ೨. ಶ್ರಾದ್ಧ ; ತಿಥಿ. ~ಕುಂದು = ೧. ಬಹಳ ದೋಷ; ಹೆಚ್ಚಾದ ದೋಷ. ೨. ಹೆಚ್ಚು ಕಡಮೆ ; ವ್ಯತ್ಯಾಸ.
ಹೆಚ್ಚುಗೆ (ನಾ). ೧. ಬೆಳವಣಿಗೆ; ವೃದ್ಧಿ. ೨. ಹಿರಿಮೆ ; ಮೇಲ್ಮೆ.
ಹೆಜ್ಜಾಜಿ (ನಾ). ಒಂದು ಜಾತಿಯ ದೊಡ್ಡ ಜಾಜಿ.
ಹೆಜ್ಜಾಲ (ನಾ). ಒಂದು ಜಾತಿಯ ಮರ; ಕದಂಬ.
ಹೆಜ್ಜಾಲಿ (ನಾ). ಜಾಲಿಮರದಲ್ಲಿ ಒಂದು ಬಗೆ; ಗೊಬ್ಬಳಿ.
ಹೆಜ್ಜೆ = ಪಜ್ಜೆ.
ಹೆಜ್ಜೇನ್(ನು) (ನಾ). ದೊಡ್ಡ ಜೇನು.
ಹೆಜ್ಜೊಡರ್(ರು) (ನಾ). ದೊಡ್ಡ ಸೊಡರು, –ದೀಪ.
ಹೆಟ್ಟ (ನಾ). ೧. ಎಣ್ಣೆಯನ್ನು ತೆಗೆದ ಮೇಲೆ ಉಳಿಯುವ ಗಷ್ಟು; ಹಿಂಡಿ. ೨. = ಹೆಟ್ಟೆ.
ಹೆಟ್ಟಗೆ (ನಾ). ೧. ಗಟ್ಟಿಯಾದ ತೊಲೆ. ೨. ಹೆಣ್ಣು ; ಸ್ತ್ರೀ.
ಹೆಟ್ಟು (ಕ್ರಿ). ೧. ಹೊಡೆ; ಬಡಿ. ೨. ಹಾಕು ; ಇಡು. ೩. ಚುಚ್ಚು. ೪. ಸಂಭೋಗಿಸು. (ನಾ). ೫. ಹೊಡೆತ.
ಹೆಟ್ಟುಗೆ (ನಾ). ೧. ಗೆಳತಿ ; ಸಖಿ. ೨. ಹೆಂಗಸು; ಸ್ತ್ರೀ. ೩. ನಲ್ಲೆ ; ಪ್ರಿಯತಮೆ. ೪. ಪತ್ನಿ ; ಹೆಂಡತಿ.
ಹೆಟ್ಟೆ (ನಾ). ಹೆಂಟೆ; ಮಣ್ಣಿನ ಮುದ್ದೆ.
ಹೆಡ = ಪೆಡ. ~ಕ(ಗ)ಟ್ಟು = ಪೆಡಗಟ್ಟು. ~ಕತ್ತು = ಹೆಕ್ಕತ್ತು. ~ಕ(ಗ)ಯ್ = ಪೆಡಂಗೆಯ್. ~ತಲೆ =ಕತ್ತಿನ ಹಿಂಭಾಗ. ~ಮುಡಿ = ಪೆಡಮುಡಿ.
ಹೆಡಕು ೧. = ಪೆಡಕು. ೨. ಕೋಟೆಯ ಹಿಂಭಾಗ.
ಹೆಡಗುಡಿ = ಪೆಡಗುಡಿ.
ಹೆಡಗೆ = ಪೆಡಗೆ.
ಹೆಡಮುರಿಗೆಕಟ್ಟು = ಪೆಡಗಟ್ಟು.
ಹೆಡಲು (ನಾ). ಬಾಳೆ, ತೆಂಗು ಮೊದಲಾದುವುಗಳ ಎಲೆ.

ಹೆಡಸು (ನಾ). ೧. ಜಿಡ್ಡು ; ಕೊಬ್ಬು; ಪೆಡಸು. ೨. ಬಿಂಕ ; ಗರ್ವ.

ಹೆಡಿಗೆ = ಪೆಡಗೆ. ~ಜಾತ್ರೆ = ದೇವಸ್ಥಾನಕ್ಕೆ ಮೆರವಣಿಗೆಯಲ್ಲಿ ಹೋಗುವ ಜಾತ್ರೆ.

ಹೆಡೆ ೧. = ಪೆಡೆ. ೨. ತುದಿ ; ಅಗ್ರಭಾಗ. ೩. ತೆಂಗಿನ ಸೋಗೆ. ~ಮಟ್ಟೆ = ತೆಂಗಿನ ಗೊದಮಟ್ಟೆ. ~ಮ(ವ)ಣಿ = ಪೆಡೆಮಣಿ. ~ಸೆಡೆ = ೧. ಹೆಡೆಯನ್ನು ಕಿರಿದು ಮಾಡು. ೨. ಹಿಂಜರಿ ; ಹಿಮ್ಮೆಟ್ಟು.

ಹೆಡೆಗಟ್ಟು = ಪೆಡಗಟ್ಟು.

ಹೆಡೆಗೆ = ಪೆಡಗೆ.

ಹೆಡ್ಡ (ನಾ). ಎಗ್ಗ ; ದಡ್ಡ. ~ತನ = ದಡ್ಡತನ ; ಮೌಢ್ಯ.

ಹೆಡ್ಡಿ (ನಾ). ದಡ್ಡಹೆಂಗಸು ; ಪೆದ್ದಿ.

ಹೆಡ್ಡು (ನಾ). ಹೆಡ್ಡತನ ; ದಡ್ಡತನ.

ಹೆಡ್ಡೈಸು (ಕ್ರಿ). ಹಿಂದೆಗೆ ; ಹೆದರು.

ಹೆಣ್ = ಪೆಣ್.

ಹೆಣ = ಪೆಣ. ~ತಿ(ದಿ)ನಿ = ಪೆಣದಿನಿ.

ಹೆಣಕು = ಪೆಣಗು.

ಹೆಣಗು = ಪೆಣಗು. ~ಆಟ = ೧. ಬಡಿದಾಟ ; ಹೋರಾಟ. ೨. ಕಷ್ಟ ; ತೊಂದರೆ. ೩. ಪ್ರಯತ್ನ. ~ಆಡು = ಪೆಣಗು.

ಹೆಣಿಕೆ (ನಾ). ೧. ಹೆಣೆಯುವಿಕೆ. ೨. ಹೆಣೆದುದು; ನೆಯ್ಗೆ.

ಹೆಣಿಗೆ = ಹೆಣಿಕೆ.

ಹೆಣಿಲು = ಪೆಣಲ್.

ಹೆಣೆ (ಕ್ರಿ). (ಬಿದಿರು ಮೊದಲಾದುವುಗಳನ್ನು) ಜೋಡಿಸು ; ಒಂದುಗೂಡಿಸು ; ಹೆಣಿಕೆ ಹಾಕು.

ಹೆಣ್ಣು = ಪೆಣ್. ~ಆಗು = ಪುಷ್ಪವತಿಯಾಗು ; ದೊಡ್ಡವಳಾಗು ; ಮೈನೆರೆ. ~ಆಳು = ಕೂಲಿ ಮಾಡುವ ಹೆಂಗಸು. ~ಇಗ = ೧. ಹೆಣ್ಣಿನಂತೆ ನಡದುಕೊಳ್ಳುವವನು. ೨. ನಪುಂಸಕ ; ಷಂಡ. ೩. ಹೇಡಿ ; ಅಂಜುಬುರುಕ. ~ಕ(ಗ)ರುಳು = ಹೆಂಗರುಳು. ~ಮರುಳ = ಪೆಣ್ಮರುಳ.

ಹೆದರು = ಹೆದಱು. ~ಇಕೆ = ಅಂಜಿಕೆ ; ಭಯ.

ಹೆದಱು(ರು) (ಕ್ರಿ). ೧. ಅಂಜು ; ಭಯಪಡು. (ನಾ). ೨. ಭಯ ; ಅಂಜಿಕೆ. ~ಇಸು = ಅಂಜಿಸು ; ಭಯಪಡಿಸು.

ಹೆದೆ = ಪೆದೆ. ~ಏ(ಯೇ)ಱಿ(ರಿ)ಸು = ೧. ಹೆದೆ ಕಟ್ಟು. ೨. = ಹೆದೆಗೊಳಿಸು. ~ಕಟ್ಟು = ಬಿಲ್ಲಿನ ಹಗ್ಗವನ್ನು ಇನ್ನೊಂದು ಕೊಪ್ಪಿಗೆ ಕಟ್ಟು. ~ಕೊ(ಗೊ)ಳಿಸು = ಬಾಣವನ್ನು ಹೂಡು.

ಹೆದೆಯು = ಹಿದಯು.

ಹೆದ್ದ = ಹೆದ್ನ.

ಹೆದ್ದಾರಿ (ನಾ). ದೊಡ್ಡದಾರಿ ; ರಾಜಮಾರ್ಗ.

ಹೆದ್ದುಂಬಿ (ನಾ). ೧. ದೊಡ್ಡ ತುಂಬಿ. ೨. ಜೀರುಂಡೆ.

ಹೆದ್ದುಂಬೆ (ನಾ). ದೊಡ್ಡ ಜಾತಿಯ ತುಂಬೆಯ ಗಿಡ.

ಹೆದ್ದೆರೆ (ನಾ). ದೊಡ್ಡಅಲೆ, –ತೆರೆ.

ಹೆದ್ನ (ನಾ). ೧. ರಥವನ್ನು ಸರಿಯಾಗಿ ಚಲಿಸುವಂತೆ ಮಾಡಲು ಉಪಯೋಗಿಸುವ ಸಾಧನ. ೨. ರಥದ ಚಕ್ರಗಳ ವೇಗವನ್ನು ತಡೆಯುವ ಸಾಧನ. ೩. ಊರೆ ; ಆಧಾರ.

ಹೆನ್ನರ (ನಾ). ಮುಖ್ಯವಾದ ರಕ್ತನಾಳ.

ಹೆನ್ನೆ (ನಾ). ಸ್ತ್ರೀಯರ ಮುಟ್ಟಿಗೆ ಸಂಬಂಧಿಸಿದ ಒಂದು ಬಗೆಯ ರೋಗ.

ಹೆನ್ನೆತ್ತರು = ಹೆನ್ನೆ.

ಹೆಪ್ಪಳಿಸು = ಪೆಪ್ಪಳಿಸು.

ಹೆಪ್ಪು (ಕ್ರಿ). ೧. ಗಟ್ಟಿಯಾಗು ; ಘನೀಭೂತವಾಗು. (ನಾ). ೨. = ಪೆಪ್ಪು. ೩. ಗಟ್ಟಿಯಾದುದು; ಘನೀಭೂತವಾದುದು. ೪. ಹಿರಿಮೆ ; ದೊಡ್ಡತನ. ~ಅಟು(ಳಿ) = ಬೇರೆ ರೂಪವಾಗಿ ಪರಿವರ್ತನೆಯಾಗು ;

ರೂಪುಗೆಡು. ~ಇಡು = ೧. ಹೆಪ್ಪುಹಾಕು. ೨. ಗಟ್ಟಿಯಾಗು; ಹೆಪ್ಪಾಗು. ~ಕ(ಗ)ಟ್ಟು = ೧. ಹೆಪ್ಪಾಗು; ಗೆಡ್ಡೆಕಟ್ಟು. ೨. ಒಂದಾಗು; ಒಂದುಗೂಡು. ~ಹಾಕು = ಹೆಪ್ಪಾಗಲು ಹಾಲಿಗೆ ನೊಸರನ್ನು ಬೆರಸು.

**ಹೆಬಗ** (ನಾ). ೧. ದಡ್ಡ; ತಿಳಿಗೇಡಿ. ೨. ಟೊಣಪ; ದಾಂಡಿಗ.

**ಹೆಬ್ಬಟ್ಟೆ** = ಪೆರ್ಬಟ್ಟೆ.

**ಹೆಬ್ಬಡಿಕೆ** (ನಾ). ಹೆಚ್ಚಾದ ದುರ್ವಾಸನೆ; ಹಡಿಕೆನಾತ.

**ಹೆಬ್ಬಯಕೆ** (ನಾ). ದೊಡ್ಡ ಬಯಕೆ; ಹಿರಿಯ ಆಸೆ; ಮಹತ್ಕಾಂಕ್ಷೆ.

**ಹೆಬ್ಬಱೆ(ರೆ)** (ನಾ). ದೊಡ್ಡಹರೆ, -ತಮಟೆ.

**ಹೆಬ್ಬಲ** = ಪೆರ್ಬಲ.

**ಹೆಬ್ಬಲೆ** (ನಾ). ದೊಡ್ಡಬಲೆ.

**ಹೆಬ್ಬಲ್ಲು** (ನಾ). ದೊಡ್ಡಹಲ್ಲು; ಕೋರೆಹಲ್ಲು.

**ಹೆಬ್ಬಾಗಿಲ್(ಲು)** (ನಾ). ಮುಖ್ಯದ್ವಾರ; ಮಹಾದ್ವಾರ.

**ಹೆಬ್ಬಾವು** = ಪೆಬ್ಬಾವು.

**ಹೆಬ್ಬುಲಿ** (ನಾ). ದೊಡ್ಡಹುಲಿ.

**ಹೆಬ್ಬೆಟ್ಟು** ೧. = ಪೆಬ್ಬೆಟ್ಟು. ೨. ದೊಡ್ಡ ಪರ್ವತ.

**ಹೆಬ್ಬೆರಳ್(ಳು)** = ಪೆಬ್ಬೆಟ್ಟು.

**ಹೆಬ್ಬೆಳಸು** (ನಾ). ೧. ಉತ್ತಮವಾದ ಬೆಳೆ. ೨. ಹೆಚ್ಚಾದುದು; ವೃದ್ಧಿಯಾದುದು.

**ಹೆಬ್ಬೊತ್ತಗೆ** (ನಾ). ದೊಡ್ಡಗ್ರಂಥ; ಪ್ರಧಾನ ಕೃತಿ.

**ಹೆಬ್ಬೊತ್ತಿಗೆ** = ಹೆಬ್ಬೊತ್ತಗೆ.

**ಹೆಮ್ಮೆ** ೧. = ಪೆರ್ಮೆ. ೨. ಅಭಿಮಾನ; ಆದರ. ೩. ಸಂತೋಷ; ಹಿಗ್ಗು. ~ಕಾಱ(ರ) = ಅಭಿಮಾನಿ.

**ಹೆರಕು** = ಪೆಱುಕು.

**ಹೆರತು** = ಪೆಱತು.

**ಹೆರಲ್(ಲು,ಳ್,ಳು)** = ಪೆಣಲ್. ~ಭಂಗಾರ = ತಲೆಗೆ ಇಟ್ಟುಕೊಳ್ಳುವ ಒಂದು ಬಗೆಯ ಆಭರಣ.

**ಹೆರಿಗೆ** = ಹೆಱುಗೆ. ~ಮನೆ = ಸೂತಿಕಾಗೃಹ.

**ಹೆರೆ** (ಕ್ರಿ). ೧. ತೆಂಗಿನಕಾಯಿ ಮೊದಲಾದುವನ್ನು ತುರಿ. ೨. ತರಕಾರಿಯ ಸಿಪ್ಪೆ, ಸೀಸದಕಡ್ಡಿ ಮುಂತಾದುವನ್ನು ಒರೆದು ಹಾಕು, -ತೆಗೆದುಹಾಕು. (ನಾ). ೩. ಹಾವಿನ ಪೊರೆ. ೪. = ಹೆಱೆ. ೫. (ಗಾಡಿಗೆ ಹಾಕುವ) ಕೀಲೆಣ್ಣೆ. ೬. ಸಮೀಪ; ಹತ್ತಿರ. ~ಕ(ಗ)ಳೆ = ಪೆರೆಗಳೆ. ~ಮಣೆ = ಕೊಬ್ಬರಿ ಮುಂತಾದುವನ್ನು ತುರಿಯುವ ಮಣೆ. ~ಹಚ್ಚು = ೧. ಸಾಮೀಪ್ಯವನ್ನು ಹೊಂದು. ೨. ಮನಸ್ಸಿಗೆ ಹಚ್ಚಿಕೊಳ್ಳು. ೩. (ಗಾಡಿಯ ಚಕ್ರಕ್ಕೆ) ಕೀಲೆಣ್ಣೆಯನ್ನು ಬಳಿ, -ಸವರು.

**ಹೆಱ(ರ)** = ಪೆಱ. ~ತೆಗೆ = ಪೆಱದೆಗೆ. ~ಸಾರ್(ರು) = ಪೆಱದೆಗೆ.

**ಹೆಱು(ರಿ)ಗೆ** (ನಾ). ಹಡೆಯುವಿಕೆ; ಪ್ರಸವಿಸುವಿಕೆ.

**ಹೆಱು(ರು)** (ಕ್ರಿ). ೧. ಪ್ರಸವಿಸು; ಹಡೆ. ೨. ಗಟ್ಟಿಯಾಗು; ಹೆಪ್ಪುಗಟ್ಟು.

**ಹೆಱೆ(ರೆ)** (ಕ್ರಿ). ೧. ಗಟ್ಟಿಯಾಗು; ಘನೀಭವಿಸು. (ನಾ). ೨. ಗಟ್ಟಿಯಾದುದು. ೩. ಹಿಂದುಗಡೆಯಲ್ಲಿರುವುದು; ಹಿಂಬದಿಯಲ್ಲಿರುವುದು. ೪. ಒಂದು ಬಗೆಯ ಆಭರಣ. ೫. = ಪೆಱೆ. ~ತುಪ್ಪ = ಹೆಪ್ಪುಗಟ್ಟಿದ ತುಪ್ಪ. ~ತೆ(ದೆ)ಗೆ = ಪೆಱದೆಗೆ. ~ನೊಸಲು = ಪೆಱೆನೊಸಲ್. ~ಹಿಂಗು = ೧. ಅಳಿಸಿಹೋಗು. ೨. = ಪೆಱದೆಗೆ.

**ಹೆಱೆ(ರೆ)ದಲೆಗ** = ಪೆಱೆದಲೆಯ.

**ಹೆಱೆ(ರೆ)ದಲೆಯ** = ಪೆಱೆದಲೆಯ.

**ಹೆರ್ಗಡೆ** = ಪೆರ್ಗಡೆ.

**ಹೆಲ್ಲರ** (ನಾ). ಒಂದು ಜಾತಿಯ ಮೀನು.

ಹೆಸರ್(ರು) (ನಾ). ೧. ನಾಮಧೇಯ; ಅಂಕಿತ. ೨. ಕೀರ್ತಿ; ಪ್ರಸಿದ್ಧಿ. ೩.=ಹೆಸಱ್. ~ಆಗು=ಪೆಸರಾಗು. ~ಇಡು=ಪೆಸರಿಡು. ~ಇಸು = ೧. ಹೇಳು; ನಿರೂಪಿಸು. ೨. = ಪೆಸರಿಡು.

ಹೆಸಱ್(ರ್, ರು, ಱು) = ಪೆಸಱು.

ಹೆಳಲು = ಪೆಣಲ್.

ಹೆೞ(ಳ)ವ = ಪೆೞವ.

ಹೆೞ(ಳ)ವು = ಪೆೞವು.

ಹೇ(ಂ)ಗೆ = ಎಹಂಗೆ.

ಹೇ(ಂ)ಟೆ (ನಾ). ಹೆಣ್ಣುಕೋಳಿ.

ಹೇಕರಿಸು (ಕ್ರಿ). (ಕುದುರೆಯಂತೆ) ಕೆನೆ; ಹೇಷಾರವವನ್ನು ಮಾಡು.

ಹೇಕುಳಿ (ನಾ). ೧. ಅಮೇಧ್ಯದ ಕುಳಿ, –ಗುಂಡಿ. ೨. ಹೆಣ್ಣಿಗ; ಹೇಡಿ.

ಹೇಗ (ನಾ). ಎಗ್ಗ; ದಡ್ಡ. ~ತನ=ದಡ್ಡತನ; ಮೂರ್ಖತನ.

ಹೇಜೀಬ (ನಾ). ಸೇವಕ; ಆಳು.

ಹೇಡಿ = ಪೇಡಿ. ~ತನ = ಪುಕ್ಕಲುತನ; ಹಂದೆತನ.

ಹೇಡೈಸು (ಕ್ರಿ). ೧. ಹೆದರು; ಭಯಪಡು. ೨. ಜುಗುಪ್ಸೆಪಡು; ಬೇಸರಪಡು.

ಹೇತಿ (ನಾ). ೧. ಆಯುಧ; ಶಸ್ತ್ರ. ೨. ಕಾಂತಿ; ಪ್ರಕಾಶ. ೩. ಬೆಂಕಿಯ ಜ್ವಾಲೆ; ಉರಿ. ೪. ಸೂರ್ಯನ ಕಿರಣ.

ಹೇತು (ನಾ). ಉದ್ದೇಶ; ಕಾರಣ; ನಿಮಿತ್ತ.

ಹೇದೆ (ನಾ). ಭೂತ; ಪಿಶಾಚಿ.

ಹೇನ್(ನು) (ನಾ). ತಲೆಯ ಕೂದಲಿಗೆ ಹತ್ತುವ ಕ್ರಿಮಿ; ಯೂಕ.

ಹೇಮ (ನಾ). ೧. ಚಿನ್ನ; ಹೊನ್ನು. ೨. ಕಂದು ಬಣ್ಣದ ಕುದುರೆ; ಕಪ್ಪು ಕುದುರೆ. ೩. = ಹೇಮಂತ. (ಗು). ೪. ಹಳದಿಬಣ್ಣದ. ~ಅಂಗ = ೧. ಬಂಗಾರದ ಬಣ್ಣದ ಶರೀರ. ೨. ಗರುಡ. ೩. ಸಿಂಹ. ೪. ಬ್ರಹ್ಮ. ೫. ವಿಷ್ಣು. ೬. ಮೇರುಪರ್ವತ. ~ಅಂಬರ =೧. ಹಳದಿಯ ಬಣ್ಣದ ವಸ್ತ್ರ; ಪೀತಾಂಬರ. ೨. ಕೃಷ್ಣ. ~ಆಸನ = ಚಿನ್ನದ ಪೀಠ, –ಗದ್ದುಗೆ. ~ಕಂಕಣ = ಚಿನ್ನದ ಬಳೆ. ~ಗರ್ಭ = ಬ್ರಹ್ಮ. ~ಸಿಚಯ = ಹಳದಿ ಬಣ್ಣದ ಬಟ್ಟೆಯನ್ನು ಧರಿಸಿದವನು; ಕೃಷ್ಣ.

ಹೇಮಂತ (ನಾ). ೧. ಆರು ಋತುಗಳಲ್ಲಿ ಒಂದು. ೨. ಚಳಿಗಾಲ.

ಹೇಯ (ನಾ). ೧. ಬಿಡಲು ಯೋಗ್ಯವಾದುದು. ೨. ದುಃಖ. ೩. ಅಸಹ್ಯ. ೪. ದುಃಖ, ರೋಗ ಮುಂತಾದುವುಗಳಿಗೆ ಮೂಲವಾದುದು. (ಗು). ೫. ಬಿಡುವುದಕ್ಕೆ ಯೋಗ್ಯವಾದ; ತ್ಯಾಜ್ಯ. ೬. ಅಲ್ಪವಾದ; ಕ್ಷುದ್ರಪ್ರಾಯ.

ಹೇರ್ ೧.=ಪೇರ್. ೨. = ಹೇಱ್. ~ಅಡವಿ = ಹಿರಿದಾದ ಕಾಡು; ಹೆಗ್ಗಾಡು. ~ಆನೆ = ದೊಡ್ಡ ಆನೆ; ಹಿರಿಯ ಆನೆ. ~ಆಸೆ = ಹಿರಿಯ ಆಸೆ. ~ಈಳೆ = ಪೇರೀಳೆ. ~ಒಡಲು = ದೊಡ್ಡ ಶರೀರ.

ಹೇರಂಬ (ನಾ). ೧. ಗಣಪತಿ; ವಿನಾಯಕ. ೨. ಕೋಣ; ಲುಲಾಯ.

ಹೇರಳ (ಗು). ಅಧಿಕ; ಯಥೇಚ್ಛ; ಬಹಳ.

ಹೇರಳೆ = ಪೇರೀಳೆ.

ಹೇರಾಸಿ (ನಾ). ದೊಡ್ಡರಾಶಿ, –ಒಟ್ಟಿಲು.

ಹೇರಾಳ = ಹೇರಳ.

ಹೇರಿಗ (ನಾ). ಗೂಢಚಾರ; ಬೇಹುಗಾರ.

ಹೇರಿಳೆ = ಪೇರೀಳೆ.

ಹೇರು = ಹೇಱು. ~ಎತ್ತು = ಭಾರ ಹೊರುವ ಎತ್ತು.

ಹೇಱ್(ರ್) (ನಾ). ಹೊರೆ; ಭಾರ.

ಹೇಱು(ರು) = ಪೇಱು.

ಹೇಲು = ಪೇಲ್.

ಹೇವ (ನಾ). ೧. ಲಜ್ಜೆ; ನಾಚಿಕೆ. ೨. ಅನಾದರ; ತಿರಸ್ಕಾರ. ೩. ಅಸಹ್ಯ; ಜುಗುಪ್ಸೆ.

೪. ಅಳಲು ; ದುಃಖ. ೫. ಅವಮಾನ ; ಅಪಮಾನ. ೬. ದೋಷ; ಕುಂದು. ೭. ಹಗೆ; ವೈರ ; ಮತ್ಸರ. ~ಕೆ(ಗೆ)ಡಿಸು =ಅವಮಾನ ಗೊಳಿಸು ; ತಿರಸ್ಕರಿಸು. ~ಕೊ(ಗೊ)ಳಿಸು = ಅವಮಾನ ಮಾಡು.

ಹೇವರ (ನಾ). ಜುಗುಪ್ಸೆ ; ಹೇಸಿಕೆ. ~ಇಕೆ = ಹೇವರ. ~ಇಸು = ಜುಗುಪ್ಸೆಪಡು ; ಅಸಹ್ಯಪಡು.

ಹೇಷಾರವ (ನಾ). (ಕುದುರೆಯು) ಕೆನೆತ.

ಹೇಷಿತ = ಹೇಷಾರವ.

ಹೇಷೆ = ಹೇಷಾರವ.

ಹೇಸರ (ನಾ).ಒಂದು ಜಾತಿಯ ಕತ್ತೆ; ಪೇಸರ. ~ಕ(ಗ)ತ್ತೆ = ಹೇಸರ.

ಹೇಸಿ (ನಾ). ೧. ಜುಗುಪ್ಸೆಯನ್ನುಂಟು ಮಾಡುವ ವ್ಯಕ್ತಿ. (ಗು). ೨. ಜುಗುಪ್ಸೆ ಯನ್ನುಂಟುಮಾಡುವ ; ಅಸಹ್ಯಕರ.

ಹೇಸು = ಪೇಸು. ~ಇಕೆ(ಗೆ) = ಪೇಸಿಕೆ.

ಹೇಹ (ನಾ). ಅಸಹ್ಯ ; ಜುಗುಪ್ಸೆ.

ಹೇಳಿಗೆ = ಪೇೞಿಗೆ.

ಹೇಳೆ (ನಾ). ಲೀಲೆ ; ವಿನೋದ ; ಕ್ರೀಡೆ.

ಹೇೞ್(ಳ್,ಳು,ೞು) = ಪೇೞ್. ~ಇಕೆ =೧.ನಿರೂಪಣೆ; ಹೇಳುವುದು.೨.ಅಭಿಪ್ರಾಯ; ಉದ್ದೇಶ. ೩. ಆಜ್ಞೆ ಮಾಡುವುದು ; ವಿಧಿಸುವುದು.

ಹೈತಿಗೆ (ನಾ). ೧. ಶ್ರಾದ್ಧ ; ತಿಥಿ ; ಪೈತೃಕ. ೨. ಪಿತ್ತದಿಂದ ಮೈಮೇಲೆ ಏಳುವ ಗಂದೆ. (ಗು). ೩. ತಂದೆಗೆ ಸಂಬಂಧಿಸಿದ; ತಂದೆಯ ಕಡೆಯ.

ಹೈದ (ನಾ). ಹುಡುಗ ; ಬಾಲಕ.

ಹೈನು (ನಾ). ೧. ಹಾಲು, ಮೊಸರು ಮೊದಲಾದ ವಸ್ತುಗಳು. ೨. = ಪಯನು.

ಹೈಮ (ಗು). ೧. ಚಿನ್ನಕ್ಕೆ ಸಂಬಂಧಿಸಿದ. ೨. ಶಿಶಿರಋತುವಿಗೆ ಸಂಬಂಧಿಸಿದ. ~ಅಂಬರ = ಹೇಮಾಂಬರ.

ಹೈಮಂತ (ನಾ). ೧. ಚಳಿಗಾಲ ; ಹೇಮಂತ ಋತು. (ಗು). ೨. ಹೇಮಂತಋತುವಿಗೆ ಸಂಬಂಧಿಸಿದ.

ಹೈಮವತ (ಗು). ೧. ಹಿಮದಿಂದ ಕೂಡಿದ, –ತುಂಬಿದ. ೨.ಹಿಮಾಲಯಕ್ಕೆ ಸಂಬಂಧಿಸಿದ.

ಹೈಯಂಗವೀನ = ಹಯ್ಯಂಗವೀನ.

ಹೈರಾಣ (ಗು). ದುರ್ಬಲವಾದ.

ಹೊಂ = ಪೊಂ. ~ಕ(ಗ)ಡಗ = ಚಿನ್ನದ ಬಳೆ, –ಕಂಕಣ. ~ಕ(ಗ)ರಗ = ಚಿನ್ನದ ಕಲಶ. ~ಕ(ಗ)ರೆ = ಚಿನ್ನದ ಎಳೆಗಳುಳ್ಳ ಅಂಚು; ಜರತಾರಿ. ~ಕ(ಗ)ಲಸ = ಹೊಂಗರಗ. ~ಕೆ(ಗೆ)ೞದಗೆ = ಪೊಂಗೇೞದಗೆ. ~ಕೊ(ಗೊ)ಡ = ಪೊಂಗೊಡ. ~ಗದ್ದುಗೆ =ಚಿನ್ನದ ಸಿಂಹಾಸನ. ~ಗಱಿ(ರಿ)=ಚಿನ್ನದ ಬಣ್ಣದ ಗರಿ. ~ಗೆಜ್ಜೆ = ಬಂಗಾರದ ಗೆಜ್ಜೆ. ~ತಾ(ದಾ)ವರೆ = ಚಿನ್ನದ ಬಣ್ಣದ ತಾವರೆ ; ಪೊಂದಾವರೆ. ~ತೆ(ದೆ)ೕರ್(ರು) = ಪೊಂದೇರ್. ~ತೊ(ದೊ)ಡವು =ಚಿನ್ನದ ಒಡವೆ, –ಆಭರಣ. ~ಪ(ಬ)ರಿಯಣ = ಪೊಂಬರಿಯಣ. ~ಪ(ಬ)ೞಿ(ಳಿ) =ಜರತಾರಿ ಬಟ್ಟೆ. ~ಪು(ಬು)ತ್ತಳಿ=ಚಿನ್ನದ ಗೊಂಬೆ. ~ಬಟ್ಟೆ = ಪೀತಾಂಬರ ; ರೇಷ್ಮೆ ವಸ್ತ್ರ. ~ಬಣ್ಣ = ಪೊಂಬಣ್ಣ. ~ಬರಹ = ಚಿನ್ನದ ಬರೆಹ ; ಸುವರ್ಣಾಕ್ಷರ. ~ಬಿಸಿಲು = ಪೊಂಬಿಸಿಲ್. ~ಬೆಟ್ಟ =ಪೊಂಬೆಟ್ಟ. ~ಬೆಳಕು(ಗು)=ಪೊಂಬೆಳಗು. ~ಮರಾಲ = ಚಿನ್ನದ ಬಣ್ಣದ ಹಂಸ. ~ಮರೆ = ಪೊಮ್ಮರೆ. ~ಮಳೆ = ಚಿನ್ನದ ಮಳೆ ; ಸುವರ್ಣವೃಷ್ಟಿ. ~ಮಾಡ = ೧. ಚಿನ್ನದ ವಿಮಾನ. ೨. ಚಿನ್ನದ ಅರಮನೆ, –ಸೌಧ. ~ಮಿಗ = ಪೊಮ್ಮರೆ. ~ಮಿಣಿ = ಚಿನ್ನದ ಮೆರುಗನ್ನು ಹಾಕಿದ ಹಗ್ಗ. ~ಮೀನು = ಒಂದು ಜಾತಿಯ ಮೀನು. ~ಮುಗುಳು = ಹಳದಿಯ

ಹೂವುಗಳನ್ನು ಬಿಡುವ ಒಂದು ಜಾತಿಯ ಔಷಧಿ ಸಸ್ಯ. ~ಮೂಡಿಗೆ = ಚಿನ್ನದ ಬತ್ತಳಿಕೆ, _ಡೊಣೆ. ~ಸು(ಜು)ರಿಗೆ = ಪೊಂಜುರಿಗೆ.

ಹೊಂಗರ (ನಾ). ಒಂದು ಜಾತಿಯ ಮರ; ಚೆನ್ನೆಮರ.

ಹೊಂಗು (ಕ್ರಿ). ೧. ಉಬ್ಬು; ದೊಡ್ಡದಾಗು. ೨. ಉಕ್ಕು; ಹೊಮ್ಮು. ೩. ಹಿಗ್ಗು; ಸಂತೋಷಿಸು.

ಹೊಂಗೆ (ನಾ). ಒಂದು ಜಾತಿಯ ಮರ; ಹುಲಿಗಿಲುಮರ; ತಮಾಳವೃಕ್ಷ. ~ಎ(ಯೆ)ಣ್ಣೆ = ಹೊಂಗೆಬೀಜದಿಂದ ತಯಾರಿಸಿದ ಎಣ್ಣೆ.

ಹೊಂಚು(ಕ್ರಿ).೧.(ದಾಳಿಗೆ ಸರಿಯಾದ ಸಮಯ ವನ್ನು) ನಿರೀಕ್ಷಿಸು; ಎದುರುನೋಡು. ೨. ಯಾರಿಗೂ ಕಾಣದಂತೆ ಗುಪ್ತವಾಗಿರು; ಬೇಹು ಮಾಡು. (ನಾ). ೩. ಸಮಯ ವನ್ನು ಕಾಯುವಿಕೆ. ೪. ಗೂಢಚರ್ಯೆ; ಬೇಹು. ~ಗಾರ = ಗೂಢಚಾರ; ಬೇಹುಗಾರ. ~ಹಾಕು = ಸಮಯ ಕಾಯು.

ಹೊಂಡ (ನಾ). ೧. ಕುಣಿ; ಗುಳಿ; ತಗ್ಗು. ೨. ಕೊಳ; ಸರೋವರ.

ಹೊಂತಕಾರಿ (ನಾ). ೧. ಪರಾಕ್ರಮಿ. ೨.ಬುದ್ಧಿ ವಂತ; ಕಾರ್ಯದಕ್ಷ. ೩. ಮೋಸಗಾರ.

ಹೊಂದಾಣಿಕೆ (ನಾ). ೧. ಹೊಂದಿಕೆ; ಮೇಳ. ೨. ಸ್ನೇಹ; ನಂಟು.

ಹೊಂದು (ಕ್ರಿ). ೧.ಸೇರು; ಕೂಡು. ೨.ಒಪ್ಪು; ಒಗ್ಗು. ೩. ಪಡೆ; ಗಳಿಸು. ೪. ಅನು ಭವಿಸು; ಭೋಗಿಸು. ೫.ಸಾಯು; ಮರಣ ಹೊಂದು. (ನಾ). ೬. ಸಾವು; ಮರಣ. ~ಇಕೆ = ಹೊಂದಾಣಿಕೆ. ~ಇಗ = ಆಪ್ತ; ಗೆಳೆಯ.

ಹೊಂಪು (ನಾ). ಉಕ್ಕುವಿಕೆ; ಹೊರಸೂಸುವಿಕೆ.

ಹೊಂಪುಳಿ (ನಾ). ರೋಮಾಂಚನ; ಪುಳಕ.

ಹೊಂಬಾಳೆ = ಪೊಂಬಾೞೆ.

ಹೊಕ್ಕರಣೆ = ಪೊಕ್ಕರಣೆ.

ಹೊಕ್ಕು (ನಾ). ನೇಯುವಾಗ ಹಾಕುವ ಅಡ್ಡ ನೂಲು; ಓತ.

ಹೊಕ್ಕುಳು = ಪೊಕ್ಕುೞ್.

ಹೊಗರ್(ರು) (ನಾ). ಕಾಂತಿ; ಪ್ರಕಾಶ; ಪೊಗರು. ~ಅಂಬು = ಕಾಂತಿಯುಕ್ತವಾದ ಬಾಣ. ~ಅಲಗು = ಹೊಳೆಯುವ ಕತ್ತಿ. ~ಉಗು = ಪೊಗರುಗು. ~ಏಱು(ರು) = ಪೊಗರೇಱು. ~ಏಳು=೧. ಉತ್ಸಾಹಿಸು; ಹುರಿಗೊಳ್ಳು. ೨. = ಪೊಗರೇಱು.

ಹೊಗಳತೆ = ಪೊಗೞ್ತೆ.

ಹೊಗಳು ೧. = ಪೊಗೞ್. (ನಾ). ೨. = ಪೊಗೞ್ಕೆ. ~ಇಕೆ = ಪೊಗೞ್ಕೆ. ~ಭಟ್ಟ = ಸ್ತುತಿಪಾಠಕ; ಭಟ್ಟಂಗಿ; ಮುಖಸ್ತುತಿಮಾಡುವವನು.

ಹೊಗಳ್ತೆ = ಪೊಗೞ್ತೆ.

ಹೊಗು = ಪೊಗು. ~ಇಸು = ಪೊಗಿಸು. ~ಮನೆ = ಸೇರಿದ ಮನೆ; ಅತ್ತೆಯ ಮನೆ.

ಹೊಗೆ ೧. = ಪೊಗೆ. ೨. ಧೂಮವನ್ನು ಉಂಟು ಮಾಡು. ೩. ಸಿಟ್ಟಿಗೇಳು; ರೋಷಗೊಳ್ಳು. ೪. ಅಸಮಾಧಾನಗೊಳ್ಳು; ಅಸಂತುಷ್ಟ ವಾಗು. ~ಆ(ಯಾ)ಡು = ೧. ಧೂಮ ವುಂಟಾಗು. ೨.ಒಳಗೊಳಗೇ ದ್ವೇಷ ತೋರು. ~ತೊ(ದೊ)ಱು(ರು) = ೧. ಹೊಗೆಯು ಕಾಣಿಸಿಕೊಳ್ಳು. ೨. ಸಿಟ್ಟಾಗು; ಕೋಪ ಗೊಳ್ಳು. ~ಬಂಡಿ = ರೈಲು; ಉಗಿಬಂಡಿ. ~ಬತ್ತಿ = ಹೊಗೆಸೊಪ್ಪು ಸೇದಲು ಎಲೆ ಯನ್ನು ಸುತ್ತಿ ಮಾಡಿದ ಸುರುಳಿ; ಚುಟ್ಟಾ. ~ಸೊಪ್ಪು = ತಂಬಾಕು. ~ಹಾಕು = ೧. ಹೊಗೆಯನ್ನು ಎಬ್ಬಿಸು. ೨. ತೊಂದರೆ ಯನ್ನು ಕೊಡು; ಪೀಡಿಸು.

ಹೊಚ್ಚು (ಕ್ರಿ). ಹೊದಿಸು ; ಮುಚ್ಚು.

ಹೊಟ್ಟು = ಪೊಟ್ಟು. ~ಕು(ಗು)ಟ್ಟು=ಪೊಟ್ಟುಗುಟ್ಟು. ~ಬಡಿವಾರ = ಒಣಆಡಂಬರ; ತೋರಿಕೆಯ ವೈಭವ.

ಹೊಟ್ಟೆ (ನಾ). ೧. ಬಸಿರು ; ಜಠರ ; ಉದರ. ೨. ಬಾವು ; ಊತ. ೩. ಪೊಟರೆ ; ಹೋರು. ~ಇ(ಯಿ)ಳಿ = ಗರ್ಭಸ್ರಾವವಾಗು ; ಮೈ ಇಳಿ. ~ಉ(ಯು)ರಿ = ೧. ಹೊಟ್ಟೆಯಲ್ಲಿ ಸಂಕಟವಾಗು. ೨. ಹೊಟ್ಟೆಯಲ್ಲಿ ಉಂಟಾಗುವ ಕಡಿತ, –ನವೆ. ೩. = ಹೊಟ್ಟೆಗಿಚ್ಚು. ~ಕ(ಗ)ಟ್ಟು = ೧. ಕಡಮೆ ಆಹಾರವನ್ನು ಸೇವಿಸು ; ಅರೆಹೊಟ್ಟೆ ತಿನ್ನು. ೨. ಮಲಬದ್ಧತೆಯುಂಟಾಗು. ೩. ಮಲಬದ್ಧತೆ. ~ಕಡಿ = ಹೊಟ್ಟೆನೋಯು, –ನುಲಿ. ~ಕಳೆ = ಭೇದಿಯಾಗು. ~ಕಿ(ಗಿ)ಚ್ಚು= ಈರ್ಷೆ ; ಮಾತ್ಸರ್ಯ. ~ಕೆರೆ = ಹಸಿವುಂಟಾಗು. ~ಚೀಲ = ಎಲೆ ಅಡಕೆ ಮುಂತಾದುವುಗಳನ್ನು ಹಾಕಿ ಕುತ್ತಿಗೆಗೆ ನೇತು ಹಾಕಿಕೊಳ್ಳುವ ಚೀಲ. ~ಜಾಡಿಸು=ಹೊಟ್ಟೆಕಳೆ. ~ತೊಳಸು = ಉಬ್ಬಳಿಸು ; ಓಕರಿಕೆ ಬರುವಂತಾಗು. ~ಪಾಡು = ಜೀವನೋಪಾಯ ; ಬದುಕು. ~ಬಾಕ = ಮಿತಿಮೀರಿ ತಿನ್ನುವವನು ; ತಿನ್ನಾಳಿ. ~ಮರ = ಗಾಡಿಯ ಚಕ್ರದ ಸುತ್ತು ಇರುವ ಮರದ ಪಟ್ಟಿ. ~ಹೊರೆ = ೧. ಹೊಟ್ಟೆತುಂಬಿಕೊಳ್ಳು. ೨. ಬದುಕು ; ಜೀವಿಸು.

ಹೊಡಕರಿಸು = ಪೊಡಕರಿಸು.

ಹೊಡಕೆ (ನಾ). ಒಂದು ಜಾತಿಯ ಹುಲ್ಲು ; ಆನೆಹುಲ್ಲು.

ಹೊಡಬಾಳು (ನಾ). ಕಷ್ಟದಿಂದ ಹೊಟ್ಟೆ ಹೊರೆಯುವುದು ; ಜಂಜಾಟದ ಬದುಕು.

ಹೊಡಮಡು = ಪೊಡಮಡು.

ಹೊಡವಡು = ಪೊಡಮಡು.

ಹೊಡೆ (ಕ್ರಿ). ೧. ಬಡಿ ; ತಾಗು. ೨. ಬಾಜಿಸು ; ಶಬ್ದಮಾಡು. ೩. ಎಸೆ ; ಬಿಸುಡು. ೪. ಅಟ್ಟು ; ಓಡಿಸು. ೫. ಸುರಿ ; ವರ್ಷಿಸು. ೬. ತಿನ್ನು ; ಕಬಳಿಸು. ೭. ಲಪಟಾಯಿಸು ; ಸುಲಿ. (ನಾ). ೮. ಪೈರಿನಲ್ಲಿ ತೆನೆ ಬರುವುದಕ್ಕಿಂತ ಮೊದಲು ಇರುವ ಸ್ಥಿತಿ. ೯. ಹೊಟ್ಟೆ; ಉದರ. ೧೦. ಹರವು; ವಿಸ್ತಾರ. ೧೧. ಮೇಲ್ಬಾವಣಿಯ ಮುಖ್ಯವಾದ ತೊಲೆ. ೧೨. ಗುಡ್ಡದ ಇಳಿಜಾರು. ~ಅ(ಯ)ಕ್ಕಿ = ಸಂಪೂರ್ಣವಾಗಿ ಬಲಿಯದ ಬತ್ತದಿಂದ ತೆಗೆದ ಅಕ್ಕಿ. ~ಕ(ಗ)ಚ್ಚು = ತೆನೆಬಿಡು ; ಕದಿರು ಹಾಯು. ~ಕುಟ್ಟು = ನಾಶಮಾಡು ; ಧ್ವಂಸಮಾಡು. ~ಕೆ(ಗೆ)ಡೆ =೧. ಹೊಡೆದು ಕೆಳಕ್ಕೆ ಬೀಳಿಸು. ೨. ಬೀಳು; ಕೆಡೆ. ೩. ಉದ್ದಕ್ಕೆ ಬೀಳು ; ಸಾಷ್ಟಾಂಗ ನಮಸ್ಕಾರ ಮಾಡು. ~ಬಾಳು = ಹೊಡಬಾಳು. ~ಮರಳು = ಹೊಟ್ಟೆಮೇಲಾಗು ; ತಿರುಗು. ~ಸೆ(ಚೆ)ಂಡು = ಪೊಡೆಸೆಂಡು.

ಹೊಡೆತ = ಪೊಡೆತ.

ಹೊಣಕು (ಕ್ರಿ). ೧. ಕಾದು ; ಹೋರಾಡು ; ಯುದ್ಧಮಾಡು. ೨. ನಾಶಮಾಡು ; ಧ್ವಂಸಮಾಡು. ~ಇಗ = ಯುದ್ಧವೀರ ; ಕಲಿ.

ಹೊಣಕೆ ೧. = ಪೊಣರ್ಕೆ. ೨. ಸ್ಪರ್ಧೆ ; ಹುರುಡು. ೩. ಶೌರ್ಯ ; ಅದಟು. ೪. ಪ್ರತಿಜ್ಞೆ ; ಶಪಥ. ~ಪಿ(ವಿ)ಡಿ = ಪ್ರತಿಜ್ಞೆ ಮಾಡು ; ಶಪಥ ಮಾಡು.

ಹೊಣರು (ಕ್ರಿ). ಹೋರಾಡು ; ಕಾದು.

ಹೊಣೆ = ಪೊಣೆ. ~ಕಾ(ಗಾ)ಱ(ರ) = ೧. ಜಾಮೀನಾಗಿ ನಿಲ್ಲುವವನು ; ಬಾಧ್ಯತೆ ಹೊತ್ತವನು. ೨. ಜವಾಬುದಾರಿಯನ್ನು ಹೊತ್ತವನು. ~ಕೇ(ಗೇ)ಡಿ = ಜವಾಬುದಾರಿ ಇಲ್ಲದವನು ; ಬೇಜವಾಬುದಾರಿ ಮನುಷ್ಯ. ~ಮಾಡು = ಗುರಿಮಾಡು ; ಜವಾಬುದಾರಿಯನ್ನು ಹೊರಿಸು.

ಹೊಣ್ಮ = ಪೊಣ್ಮ.
ಹೊತ್ತಗೆ = ಪೊತ್ತಗೆ.
ಹೊತ್ತಱು(ರು) = ಪೊತ್ತಱೆ.
ಹೊತ್ತಱೆ(ರೆ) = ಪೊತ್ತಱೆ.
ಹೊತ್ತಾಱೆ(ರೆ) = ಪೊತ್ತಱೆ.
ಹೊತ್ತಿಗೆ = ಪೊತ್ತಗೆ. ~ಕೇಳು = ಭವಿಷ್ಯವನ್ನು ಕೇಳು ; ಶಾಸ್ತ್ರಕೇಳು. ~ಮು(ವ)ನೆ = ಗ್ರಂಥಾಲಯ ; ಪುಸ್ತಕಭಂಡಾರ.
ಹೊತ್ತಿರುಗ (ನಾ). ಸೂರ್ಯನಿರುವ ದಿಕ್ಕಿಗೆ ತಿರುಗುವ ಹೂವು ; ಸೂರ್ಯಕಾಂತಿ ; ಸುರೇಪಾನ.
ಹೊತ್ತು ೧. = ಪೊತ್ತು. (ನಾ). ೨. ಸೀದು ಹೋದುದು ; ಕರಿಕು. ~ಇಸು = ೧. ಉರಿಮಾಡು ; ಬೆಂಕಿಹಚ್ಚು. ೨. ಸೀಯುವಂತೆ ಮಾಡು ; ಕರಿಕಾಗಿಸು. ~ಇ(ಯಿ)ಳಿ = ಸೂರ್ಯ ಮುಳುಗು ; ಸಂಜೆಯಾಗು. ~ಏಱು(ರು) = ಸೂರ್ಯ ಮೇಲಕ್ಕೇರು. ~ಕ(ಗ)ಳೆ = ಪೊತ್ತುಗಳೆ. ~ಕ(ಗ)ಳ್ಳ = ಪೊತ್ತುಪೋಕ. ~ಮೂಡು = ಬೆಳಗಾಗು; ಸೂರ್ಯೋದಯವಾಗು. ~ಹೋಕ = ಪೊತ್ತುಪೋಕ.
ಹೊದಕುಳಿ = ಪೊದಕುಳಿ. ~ಕೊ(ಗೊ)ಳ್ = ಪೊದಕುಳಿಗೊಳ್.
ಹೊದಕೆ = ಪೊದಕೆ.
ಹೊದಪು (ನಾ). ಹೊದೆಯುವ ವಸ್ತ್ರ, –ಬಟ್ಟೆ.
ಹೊದರು (ನಾ). ೧. ಮರದ ಪೊಟರೆ, –ಹೋರು. ೨. ನೆಲದೊಳಗಿನ ಬಿಲ, –ಕಂಡಿ. ೩. = ಹೊದಱು.
ಹೊದಱು(ರು) ೧. = ಪೊದಱ್. ೨. ಗುಂಪು ; ಸಮೂಹ. ೩. ರಾಶಿ ; ಒಟ್ಟಿಲು. ~ಇಕ್ಕು = ಗುಂಪುಗೂಡು ; ಒಟ್ಟಾಗು. ~ಏಳು = ೧. ಹೆಚ್ಚಾಗು ; ಅಧಿಕವಾಗು. ೨. = ಹೊದಱಿಕ್ಕು. ~ಕ(ಗ)ಟ್ಟು = ಗುಂಪುಗೂಡು ; ರಾಶಿಯಾಗು. ~ಕಿ(ಗಿ)ಡಿ = ದಟ್ಟವಾಗಿ ಹೊರಸೂಸುವ ಕಿಡಿ. ~ತಿ(ದಿ)ವಿ = ಭಾರಿಯಾದ ಹೊಡೆತ, –ಪೆಟ್ಟು.
ಹೊದೆ = ಪೊದೆ. ~ಇಕೆ = ಪೊದಕೆ. ~ಇಸು = ಪೊದಿಸು. ~ಒ(ಯೊ)ತ್ತು = ಬತ್ತಳಿಕೆ; ತೂಣೀರ. ~ಕೊ(ಗೊ)ಲು = (ಬತ್ತಳಿಕೆಯಲ್ಲಿರುವ) ಬಾಣ.
ಹೊದ್ದು = ಪೊದ್ದು. ~ಇಕೆ(ಗೆ) = ೧. ಹೊಂದಾಣಿಕೆ. ೨. = ಪೊದಕೆ. ~ಇಗ = ಪ್ರಿಯನಾದವನು ; ಹೊಂದಿಕೆಯುಳ್ಳವನು. ~ಇಸು = ೧. ಕೂಡಿಸು ; ಜೋಡಿಸು. ೨. = ಪೊದಿಸು.
ಹೊದ್ದುಗೆ = ಪೊರ್ದುಗೆ.
ಹೊನ್ = ಪೊನ್. ~ಅಂಡೆ = ಪೊನ್ನಂಡೆ. ~ಅಂದಣ = ಪೊನ್ನಂದಣ. ~ಅಗಸೆ = ಚಿನ್ನದ ಹೆಬ್ಬಾಗಿಲು. ~ಅವರೆ = ಹಳದಿಯ ಬಣ್ಣದ ಹೂವುಗಳನ್ನು ಬಿಡುವ ಒಂದು ಜಾತಿಯ ಕುರುಚಲು ಗಿಡ. ~ಆಯುಗ = (ಕತ್ತಿಯ) ಬಂಗಾರದ ಹಿಡಿಕೆ. ~ಆವರಿಕೆ = ಹೊನ್ನವರೆ.
ಹೊನಗ (ನಾ). ಚಿರತೆ ; ಕಿರುಬ.
ಹೊನಗೊನೆ = ಪೊನ್ನಗನ್ನೆ.
ಹೊನಲ್(ಲು) = ಪೊನಲ್. ~ಇಡು = ಪೊನಲಿಡು. ~ಏಱು(ರು) = ಪ್ರವಾಹದಂತೆ ಉಕ್ಕಿಹರಿ.
ಹೊನಹು (ನಾ). ೧. ಒನಪು ; ಒಯ್ಯಾರ. ೨. ಚೆಲುವು ; ಸೌಂದರ್ಯ.
ಹೊನ್ನಾರು (ನಾ). ಮುಂಗಾರಿನಲ್ಲಿ ಮಾಡುವ ಮೊದಲನೆಯ ಉಳುಮೆ.
ಹೊನ್ನು = ಪೊನ್.
ಹೊನ್ನೆ ೧. = ಪೊನ್ನೆ. ೨. ಹರಳು ; ಔಡಲ.
ಹೊನ್ನೊಡಲ (ನಾ). ಹಿರಣ್ಯಗರ್ಭ ; ಬ್ರಹ್ಮ.
ಹೊಪ್ಪಳೆ (ನಾ). ಸುಟ್ಟಗಾಯದಿಂದಾದ ಬೊಬ್ಬೆ. ~ಇಸು = ಬೊಬ್ಬೆಯೇಳು.

ಹೊಮ್ಮು = ಪೊಣ್ಮು.
ಹೊಯ್ ೧.=ಪೊಯ್. ೨.ಕೆತ್ತು; ಕಂಡರಿಸು. ~ಇಸು=೧.ಹೊಡೆಯಿಸು; ಪೆಟ್ಟು ಬೀಳುವಂತೆ ಮಾಡು. ೨.ಕತ್ತರಿಸುವಂತೆ ಮಾಡು; ಕಡಿಸು. ೩. ಎರಕವನ್ನು ಹಾಕಿಸು. ೪. ಸುರಿಸು; ಹನಿಸು. ~ಕಂಬಿ =ಹೊಡೆಯುವ ಕೋಲು, _ಬಡಿಗೆ.
ಹೊಯಿ = ಪೊಯ್. ~ಕ(ಗ)ಡುಬು=ಹುಯಿಗಡುಬು. ~ಕೆಯ್ = ೧. ಕಾದಾಟ; ಸೆಣಸು. ೨. ಎಣೆ; ಸಮಾನತೆ. ೩. ಎರಕ ಹೊಯ್ಯುವಿಕೆ.
ಹೊಯಿಗೆ (ನಾ). ಮರಳು; ಉಸುಕು.
ಹೊಯಿಲು ೧. = ಪೊಯಿಲ್. ೨. ಗಜಿಬಿಜಿ; ಗಲಾಟೆ.
ಹೊಯ್ಯಾಲಿ (ನಾ). ಜಗಳಗಂಟಿ; ಗಯ್ಯಾಳಿ.
ಹೊಯ್ಯಾಲೆ ೧. = ಹೊಯ್ಯಾಲಿ. ೨. ತಿರಸ್ಕಾರ; ಅಪಮಾನ.
ಹೊಯ್ಯು (ಕ್ರಿ). ೧. ಹೊಡೆ; ಬಡಿ. ೨. ಸುರಿ; ವರ್ಷಿಸು.
ಹೊಯ್ಲು = ಪೊಯಿಲ್.
ಹೊರ = ಹೊಱ. ~ಕ(ಗ)ಡೆ=೧. ಹೊರಗಡೆ; ಹೊರಭಾಗ. ೨. ಕಕ್ಕಸು; ಪಾಯಖಾನೆ. ೩. ಮಲವಿಸರ್ಜನೆ. ~ಕೆ(ಗೆ)ಡವು = ೧. ಹೊರದಬ್ಬು; ಆಚೆಗೆ ತಳ್ಳು. ೨. ಪ್ರಕಟಿಸು; ಬಹಿರಂಗಪಡಿಸು. ~ಕೆ(ಗೆ)ಲಸ = ೧. ಸುತ್ತುಮುತ್ತಲಿನ ಕೆಲಸ. ೨. ಮನೆಯ ಹೊರಗಿನ ಕೆಲಸ. ~ಕೋಣೆ = ಮನೆಯ ಹೊರಭಾಗದಲ್ಲಿರುವ ಕೊಠಡಿ. ~ತರು = ಪ್ರಕಾಶಕ್ಕೆ ಬರುವಂತೆ ಮಾಡು; ಪ್ರಕಟಿಸು. ~ನೋಟ=ಮೇಲು ನೋಟ. ~ಪಡು = ಬಹಿರಂಗವಾಗು; ಪ್ರಕಟಗೊಳ್ಳು. ~ಬೀಳು = ೧. ಹೊರಕ್ಕೆ ಬರು; ಹೊರಡು. ೨. = ಹೊರಪಡು. ~ಮಿಂಚು = ೧. ಬಾಹ್ಯಸೌಂದರ್ಯ. ೨. ಆಡಂಬರ; ಡೌಲು. ~ಸಂಚಾರ = ಹೊರಗಿನ ಸಂಚಾರ; ವಾಯುವಿಹಾರ.
ಹೊರಕುಳಿ (ನಾ). ಪರಾವಲಂಬಿ; ಇತರರನ್ನು ಆಶ್ರಯಿಸುವವನು.
ಹೊರಗೆ=ಪೊಱಗೆ. ~ಆಗು=೧. ಮುಟ್ಟಾಗು; ರಜಸ್ವಲೆಯಾಗು. ೨. = ಹೊಱಗಾಗು.
ಹೊರಜಿ = ಪೊರಜೆ.
ಹೊರಜೆ = ಪೊರಜೆ.
ಹೊರಟ = ಪೊಱಂಡ.
ಹೊರಟು = ಪೊಱಂಡು.
ಹೊರಡು (ಕ್ರಿ). ೧. ಹೊರಳು; ಉರುಳಾಡು. ೨. = ಹೊಱಡು. (ನಾ). ೩. = ಪೊಱಂಡು. ~ಬೆನ್ನು = ಗೂನುಬೆನ್ನು.
ಹೊರಪು (ನಾ). ೧. ಚೆದರುವಿಕೆ. ೨. ಬೆಳಕುಂಟಾಗುವಿಕೆ.
ಹೊರವು (ನಾ). ಸೊಂಪು; ಹುಲುಸು.
ಹೊರಸು (ಕ್ರಿ). ೧. ಸವರು; ಬಳಿ; ಲೇಪಿಸು. (ನಾ). ೨. = ಹೊಱಸು.
ಹೊರಳಿ = ಪೊರಳಿ. ~ಒ(ಯೊ)ಡೆ=ಹೊರಳಿಗಳಿ. ~ಕ(ಗ)ಟ್ಟು = ೧. ಗುಂಪುಗೂಡು; ಒಟ್ಟಾಗು. ೨. ರಾಶಿಹಾಕು. ~ಕ(ಗ)ಳೆ =ಚೆದರು; ಚೆಲ್ಲಾಪಿಲ್ಲಿಯಾಗು. ~ಕಿ(ಗಿ)ಡಿ = ಕಿಡಿಗಳ ಗುಂಪು, _ಸಮೂಹ.
ಹೊರಳು ೧. = ಪೊರಳ್. ೨. ಜಾರಿಕೊಳ್ಳು; ನುಣುಚಿಕೊಳ್ಳು. (ನಾ). ೩. ತಿರುವು; ಬಾಗು. ~ನುಡಿ = ನುಣುಚಿಕೊಳ್ಳುವ ಮಾತು.
ಹೊರ್ಳೆ (ನಾ). ಮೂಗಿನ ಹೊಳ್ಳೆ, _ರಂಧ್ರ.
ಹೊರಿಗೆ (ನಾ). ೧. ಹೋರಾಟ; ಸ್ಪರ್ಧೆ. ೨. = ಹೊಱಿಗೆ.
ಹೊರೆ (ಕ್ರಿ). ೧. ಸಲಹು; ಕಾಪಾಡು. ೨. ಸೇರು; ಕೂಡು. ೩. ಸಮೀಪಿಸು. ೪. ಲೇಪಿಸು; ಸವರು. (ನಾ). ೫. ರಕ್ಷಣೆ; ಪಾಲನೆ. ೬. ಕೂಡುವಿಕೆ; ಸೇರುವಿಕೆ.

೭. ಸಮೀಪ ; ಹತ್ತಿರ. ೮. ಪದರ; ಪರೆ ; ಹೊದಿಕೆ. ೯. ತಪ್ಪು; ದೋಷ. ೧೦. ಕಪಟ; ಮೋಸ. ೧೧. ಉತ್ಸಾಹ. ೧೨. ಕೆಚ್ಚು ; ಧೈರ್ಯ. ೧೩. = ಹೊಱೆ. ೧೪. ಹೊಣೆ ; ಜವಾಬುದಾರಿ. ~ಏ(ಯೇ)ಱು(ರು) = ಉತ್ಸಾಹಗೊಳ್ಳು ; ಹುರುಪುಗೊಳ್ಳು.

ಹೊಱ(ರ) = ಪೊಱ. ~ಪಾಳೆಯ=ಹೊರಗಿನ ಬೀಡು, —ಠಾಣ್ಯ. ~ವಳಯ = ಪೊಱವಳಯ. ~ಸೂಸು = ಪೊಱಸೂಸು. ~ಹೊಮ್ಮು = ಪೊಱಪೊಣ್ಮು.

ಹೊಱ(ರ)ಗು = ಪೊಱಗು.

ಹೊಱ(ರ)ಗೆ = ಪೊಱಗೆ. ~ಆಗು=೧. ದೂರವಾಗು ; ಎರವಾಗು. ೨. ಬಿಡುಗಡೆಯನ್ನು ಹೊಂದು ; ಪಾರಾಗು. ೩. ಅಯಶಸ್ವಿಯಾಗು ; ಸೋಲು.

ಹೊಱ(ರ)ಡು ೧. = ಪೊಱಡು. ೨. ಕಾಣಿಸಿಕೊಳ್ಳು; ಹೊಮ್ಮು. ~ಇಸು=೧. ಹೊರಬರುವಂತೆ ಮಾಡು. ೨. ಮುನ್ನಡಸು.

ಹೊಱ(ರ)ತು = ಪೊಱತು. ~ಪಡಿಸು=ಬೇರೆ ಮಾಡು ; ಕೈಬಿಡು.

ಹೊಱ(ರ)ಬಿಗ = ಪೊಱಬಿಗ.

ಹೊಱ(ರ)ವಡು = ಪೊಱಮಡು.

ಹೊಱ(ರ)ಸು = ಪೊಱಸು.

ಹೊಱಿ(ರಿ)ಗೆ = ಪೊಱಿಗೆ. ~ವಾಳ =ಹೊಱೆಗಾಱ.

ಹೊಱು(ರು) = ಪೊಱ್. ~ಇಸು=೧. ತಲೆಯ ಮೇಲೆ ಭಾರವನ್ನು ಒಯ್ಯುವಂತೆ ಮಾಡು ; ಒಜ್ಜೆಯನ್ನು ಹೇರು. ೨. ಆಪಾದಿಸು ; ತಪ್ಪನ್ನು ಹೇರು.

ಹೊಱೆ(ರೆ) = ಪೊಱೆ. ~ಕ(ಗ)ಟ್ಟು=ಸೌದೆ, ಹುಲ್ಲು ಮುಂತಾದುವನ್ನು ಒಟ್ಟಾಗಿ ಕಟ್ಟು; ಕಂತೆಗಟ್ಟು. ~ಕಾ(ಗಾ)ಱ(ರ) = ಭಾರವನ್ನು ಹೊರುವವನು.

ಹೊರ್ದುಗೆ = ಪೊರ್ದುಗೆ.

ಹೊಲ್ (ನಾ). ನೀಚವಾದುದು ; ಕೆಟ್ಟುದು.

ಹೊಲ ೧. = ಪೊಲ. ೨. = ಪೊಲಂಬು. ~ಕಾ(ಗಾ)ಹಿ = ಹೊಲವನ್ನು ಕಾಯುವವನು. ~ಕೆ(ಗೆ)ಡು = ದಾರಿತಪ್ಪು.

ಹೊಲಗೇರಿ ೧.=ಪೊಲಗೇರಿ. ೨. ಕೊಳಕಿನಿಂದ ತುಂಬಿದ ಸ್ಥಳ ; ಹೊಲಸಾದ ಜಾಗ.

ಹೊಲತಿ = ಪೊಲತಿ.

ಹೊಲಬು = ಪೊಲಂಬು. ~ಇಗ = ಹೊಲಬುಗಾಱ. ~ಕೆ(ಗೆ)ಡಿಸು = ದಾರಿತಪ್ಪಿಸು ; ಕೆಟ್ಟಮಾರ್ಗಕ್ಕಿಳಿಯುವಂತೆ ಮಾಡು. ~ಕೆ(ಗೆ)ಡು = ಪೊಲಂಬುದಪ್ಪು. ~ಗಾಱ(ರ) = ಸರಿಯಾದ ಮಾರ್ಗವನ್ನು ತಿಳಿದವನು. ~ತ(ದ)ಪ್ಪು = ಪೊಲಂಬುದಪ್ಪು.

ಹೊಲಸು = ಪೊಲಸು. ~ತನ = ಅಶುದ್ಧವಾಗಿರುವಿಕೆ ; ಕೊಳಕಿನಿಂದ ಕೂಡಿರುವಿಕೆ. ~ನಾತ = ಕೆಟ್ಟವಾಸನೆ. ~ಮಾತು=ಕೆಟ್ಟಮಾತು ; ಕೀಳುಮಾತು.

ಹೊಲಿ (ಕ್ರಿ). ದಾರದಿಂದ ಕೂಡಿಸು ; ಹೆಣೆ ; ಹೊಲಿಗೆಹಾಕು.

ಹೊಲಿಗೆ ೧. = ಪೊಲಿಗೆ. ೨. ಕಾಳಿನ ರೂಪದಲ್ಲಿ ಕೊಡುವ ಬಡ್ಡಿ ; ಹೆಚ್ಚುಗೆ.

ಹೊಲೆ ೧.=ಪೊಲೆ. ೨. ಮುಟ್ಟು. ೩. ಮಾಸು; ಕಸ. ~ಕ(ಗ)ಲಸು = ಪೊಲೆಗಲಸು. ~ಕಾ(ಗಾ)ಣ್ = ರಜಸ್ವಲೆಯಾಗು ; ಮುಟ್ಟಾಗು. ~ಕೆ(ಗೆ)ಲಸ=ಕೀಳುಕೆಲಸ ; ನೀಚಕೆಲಸ. ~ಕೇ(ಗೇ)ರಿ = ಹೊಲಗೇರಿ. ~ಪಾಡು = ೧. ಕೆಟ್ಟಸ್ಥಿತಿ ; ಅವ್ಯವಸ್ಥೆ. ೨.ಕೆಟ್ಟತನ; ನೀಚತನ. ~ಮನೆ=ಹೆರಿಗೆಯ ಮನೆ; ಸೂತಿಕಾಗೃಹ.

ಹೊಲೆಯ = ಪೊಲೆಯ.

ಹೊಲ್ಲ = ಪೊಲ್ಲ. ~ನುಡಿ = ಕೆಟ್ಟಮಾತು ; ಕೀಳುಮಾತು.

ಹೊಲ್ಲಮೆ = ಪೊಲ್ಲಮೆ.

ಹೊಲ್ಲಹ = ಪೊಲ್ಲಮೆ.
ಹೊಲ್ಲೆಹ = ಪೊಲ್ಲಮೆ.
ಹೊಸ = ಪೊಸ. ~ಕ(ಗ)ನ್ನಡ = ಪೊಸಗನ್ನಡ. ~ಗತಿ = ನೂತನ ಮಾರ್ಗ, –ರೀತಿ. ~ತನ = ನಾವೀನ್ಯ. ~ಹರೆಯ = ನವಯೌವನ.
ಹೊಸ(ಂ)ತಿಲ್(ಲು) = ಪೊಸಂತಿಲ್.
ಹೊಸಕು (ಕ್ರಿ). ಕೈ ಅಥವಾ ಕಾಲುಗಳಿಂದ ಉಜ್ಜು, –ತೀಡು. ~ಆಡು = ಒದ್ದಾಡು; ಚಡಪಡಿಸು.
ಹೊಸಗು = ಹೊಸಕು.
ಹೊಸತು = ಪೊಸತು.
ಹೊಸಬ = ಪೊಸಂಬ. ~ಇಗ = ಪೊಸಂಬ.
ಹೊಸಬಿ (ನಾ). ಅಪರಿಚಿತಳು ; ಪರಕೀಯಳು.
ಹೊಸಲು = ಪೊಸಂತಿಲ್. ~ದಾಟು=೧. ಬಾಗಿಲನ್ನು ದಾಟು ; ಹೊಸ್ತಿಲನ್ನು ದಾಟು. ೨. ರೀತಿ ತಪ್ಪು ; ಕ್ರಮತಪ್ಪು.
ಹೊಸಿಲು = ಪೊಸಂತಿಲ್.
ಹೊಸೆ (ಕ್ರಿ). ೧. ಹಗ್ಗವನ್ನು ತಿರಿಚು, –ನುಲಿ. ೨. ತಿಕ್ಕು ; ಉಜ್ಜು. ೩. ಕಡೆ ; ಮಥಿಸು. ೪. ಕ್ಷೋಭೆಗೊಳಿಸು ; ಕಲಕು.
ಹೊಸ್ತಿಲು = ಪೊಸಂತಿಲ್.
ಹೊಳಕು (ಕ್ರಿ). ೧. ಕಾಣು ; ಹೊಳೆ. (ನಾ). ೨. = ಹೊಳಕೆ. ~ಇಸು = ಕಾಣುವಂತೆ ಮಾಡು.
ಹೊಳಚು (ಕ್ರಿ). ೧. ಕೆತ್ತು ; ಸವರು ; ಹೆರೆ. ೨. ಇಣುಕು ; ಹಣಿಕಿನೋಡು.
ಹೊಳಪು = ಪೊಳೆಪು.
ಹೊಳಲ್(ಲು) (ನಾ). ೧. ಪ್ರತಿಧ್ವನಿ. ೨. ನಗರ; ಪಟ್ಟಣ. ~ಕು(ಗು)ಡು = ಪ್ರತಿಧ್ವನಿಯನ್ನುಂಟುಮಾಡು.
ಹೊಳವು = ಪೊಳೆಪು.
ಹೊಳಹು ೧.= ಪೊಳೆಪು. ೨. ವೀಣೆಯ ದಂಡದ ಮುಂಭಾಗ. ೩. ಸುಳಿವು ; ಗುರುತು. ~ಕಾ(ಗಾ)ಣ್ = ಸೂಚನೆಯನ್ನು ತಿಳಿ ; ಸುಳಿವನ್ನು ತಿಳಿ. ~ಕೆ(ಗೆ)ಡು = ಕಾಂತಿಗುಂದು ; ಹೊಳಪಿಲ್ಲದಾಗು. ~ಹಾಕು = ೧. ಹೊಳಪು ಹಾಕು ; ಒಪ್ಪವಿಡು. ೨. ಹೊಂಚುಹಾಕು.
ಹೊಳೆ ೧. = ಪೊಳೆ. ೨. ಗೋಚರಿಸು ; ಸ್ಫುರಿಸು.
ಹೊಳ್ಳು ೧. = ಪೊಳ್ಳು. ೨. ಕೆಲಸಕ್ಕೆ ಬಾರದವನು ; ಅಪ್ರಯೋಜಕ ; ಹೇಡಿ. ~ಇಸು = ಪೊಳ್ಳಾಗಿಸು ; ಜೊಳ್ಳುಮಾಡು. ~ಎದೆ = ಹೇಡಿತನ. ~ಕ(ಗ)ಳೆ = ೧. ಕಡೆಗಣಿಸು ; ಹೀನಾಯಮಾಡು. ೨. ಶಕ್ತಿಯನ್ನು ಕಳೆದುಕೊಳ್ಳು ; ಬಲಹೀನವಾಗು. ~ನುಡಿ = ಪೊಳ್ಳುಮಾತು. ~ಪಾ(ವಾ)ಋ(ರು) = ವ್ಯರ್ಥವಾಗು ; ನಿಷ್ಪ್ರಯೋಜಕವಾಗು. ~ಮಾ(ವಾ)ತು = ಪೊಳ್ಳುಮಾತು. ~ಮಾನಸ = ಹೊಳ್ಳುಗ.
ಹೊಳ್ಳುಗ (ನಾ). ದುರ್ಬಲ ; ಶಕ್ತಿಹೀನ.
ಹೊಳ್ಳೆ = ಹೊರಳೆ.
ಹೋ(ಂ)ತು = ಪೋಂತು.
ಹೋಕ = ಪೋಕ.
ಹೋಕಾಯಂತ್ರ (ನಾ). ದಿಕ್ಕನ್ನು ಸೂಚಿಸುವ ಯಂತ್ರ ; ದಿಕ್ಸೂಚಿ.
ಹೋಕು ೧. = ಪೋಕು. ೨. ಕಳೆದುದು ; ಕಳಚಿದುದು.
ಹೋಕೆ (ನಾ). ೧. ಕಪಟ ; ಮೋಸ. ೨. ಯುಕ್ತಿ ; ಉಪಾಯ. ~ತನ = ಕಾಪಟ್ಯ ; ಮೋಸ.
ಹೋಗು ೧. = ಪೋಗು. ೨. ನೆರೆ ; ಕೂಡು. (ನಾ). ೩. = ಹೋಗೊಲೆ. ~ಒಲೆ = ಒಂದೇ ಜಗಲಿಯಲ್ಲಿ ಮೂರು ಅಥವಾ ನಾಲ್ಕು ಒಲೆಗಳಿದ್ದು ಮಧ್ಯದ ಒಲೆಯ ಮೂಲಕ ಉರಿಹೋಗುವಂತೆ ಮಾಡಿರುವ ಒಲೆ.
ಹೋತ = ಪೋಂತ.

ಹೋತವ್ಯ (ನಾ). ಯಜ್ಞಕಾಲದಲ್ಲಿ ಅರ್ಪಿಸುವ ಹವಿಸ್ಸು.

ಹೋತಾರ = ಹೋತೃ.

ಹೋತೃ (ನಾ). ಹೋಮಮಾಡುವವನು.

ಹೋಬಳಿ (ನಾ). ತಾಲ್ಲೂಕಿನ ಒಂದು ವಿಭಾಗ. ~ದಾರ = ತಾಲ್ಲೂಕಿನ ಅಧಿಕಾರಿ.

ಹೋಮ (ನಾ). ೧. ಯಜ್ಞ ; ಯಾಗ. ೨. ಬಲಿ ; ಆಹುತಿ. ~ಅಗ್ನಿ = ಹೋಮಕ್ಕಾಗಿ ಸಿದ್ಧಪಡಿಸಿದ ಬೆಂಕಿ. ~ಇಸು = ಯಾಗಮಾಡು. ~ಕುಂಡ = ಯಜ್ಞದಲ್ಲಿ ಅಗ್ನಿಯನ್ನು ನಿರ್ಮಿಸಲು ಮಾಡಿದ ಕುಳಿ ; ಅಗ್ನಿಕುಂಡ.

ಹೋರ್(ರು) = ಪೋರ್. ~ಆಟ=೧. ಜಗಳ; ಕಾಳಗ. ೨. ಹೆಣಗಾಟ ; ಪ್ರಯತ್ನ. ~ಇಕೆ = ಕಾದಾಟ ; ಯುದ್ಧ. ~ಇಗ = ಪೋರಾಳ್. ~ಇಸು = ಪೋರಿಸು.

ಹೋರಟೆ = ಪೋರಟೆ.

ಹೋರಿ (ನಾ). ವೃಷಭ ; ಗೂಳಿ ; ಗಂಡುದನ.

ಹೋರೆ (ನಾ). ೧. ಜ್ಯೋತಿಷ್ಯದಲ್ಲಿ ಲಗ್ನದ ಅರ್ಧಭಾಗ. ೨. ಅದೃಷ್ಟ ; ದೈವ. ೩. = ಹೋಜಡೆ.

ಹೋಜಡೆ(ರೆ) (ನಾ). ಕೆಲಸ ; ಕಸಬು.

ಹೋಲ್(ಲು) (ಕ್ರಿ). ಸಾಮ್ಯಹೊಂದು ; ಸಾದೃಶ್ಯಹೊಂದು. ~ಇಕೆ = ಪೋಲ್ಕೆ. ~ಇಸು = ಸಾಮ್ಯವನ್ನು ತೋರು.

ಹೋಲುವೆ = ಪೋಲ್ಕೆ.

ಹೋಳಿ (ನಾ). ೧. ಫಾಲ್ಗುಣ ಮಾಸದ ಕಾಮದಹನದ ಹಬ್ಬ ; ಓಕುಳಿ ಹಬ್ಬ. ೨. ಒಬ್ಬ ರಾಕ್ಷಸಿಯ ಹೆಸರು.

ಹೋಳಿಗೆ ೧. = ಪೋಳಿಗೆ. ೨. ಹೊಪ್ಪಳೆ ; ಚೊಕ್ಕೆ.

ಹೋಳು (ಕ್ರಿ). ೧. ತುಂಡುಮಾಡು ; ಚೂರುಮಾಡು. (ನಾ). ೨. ಸೀಳು ; ತುಂಡು. ~ಇಸು = ತುಂಡುಮಾಡು ; ಚೂರುಮಾಡು. ~ಕ(ಗ)ಳೆ = ಹೋಳಿಸು.

ಹೋಟಿ(ಳ)ಲ್ = ಪೋಟಿಲ್.

ಹೌದಾ (ನಾ). ಆನೆಯ ಮೇಲೆ ಕುಳಿತುಕೊಳ್ಳಲು ಹಾಕುವ ಅಂಬಾರಿ.

ಹೌದು (ನಾ). ೧. ನೀರಿನ ತೊಟ್ಟಿ. ೨. ಒಪ್ಪಿಗೆಯನ್ನು ಸೂಚಿಸುವ ಮಾತು.

ಹೌಸು (ನಾ). ೧. ಗೀಳು ; ಹಂಬಲ. ೨. ಉತ್ಸಾಹ.

ಹೌಹಾರು (ಕ್ರಿ). ಗಾಬರಿಯಾಗು ; ಬೆಚ್ಚಿಬೀಳು.

ಹ್ರದ (ನಾ). ೧. ಕಿರಣ ; ಕದಿರು. ೨. ಆಳವಾದ ನೀರಿನ ಪ್ರದೇಶ ; ಮಡು.

ಹ್ರಸ್ವ (ನಾ). ೧. ದೀರ್ಘವಲ್ಲದ ಸ್ವರ ; ಲಘು ಅಕ್ಷರ. (ಗು). ೨. ಕಿರಿದಾದ ; ಚಿಕ್ಕದಾದ.

ಹ್ರಾದ (ನಾ). ಶಬ್ದ ; ಧ್ವನಿ.

ಹ್ರಾದಿನಿ (ನಾ). ೧. ಇಂದ್ರನ ವಜ್ರಾಯುಧ. ೨. ಸಿಡಿಲು. ೩. ನದಿ ; ಹೊಳೆ.

ಹ್ರಾಸ (ನಾ). ೧. ಶಬ್ದ ; ಸದ್ದು ; ಗದ್ದಲ. ೨. ಕುಂದು ; ಕೊರತೆ. ೩. ಕ್ಷಯ ; ನಾಶ.

ಹ್ಲಾದ (ನಾ). ಆನಂದ ; ಸಂತೋಷ.

ಹ್ಲಾದಿನಿ ೧. = ಹ್ರಾದಿನಿ. ೨. ಒಂದು ಜಾತಿಯ ಮರ; ಸಲ್ಲಕಿ. ೩. ಸಂತೋಷ ಕೊಡುವವಳು.

❋

